# ಲಘುಸಿದ್ಧಾಂತ ಕೌಮುದೀ

ಸಂಪುಟ-1



ಸಚ್ಚಿದಾನಂದ ಅದ್ವೈತ ಆಶ್ರಮ, ಬೆಂಗಳೂರು

ಶ್ರೀ ವರದರಾಜ ವಿರಚಿತ

# ಲಘುಸಿದ್ಧಾಂತ ಕೌಮುದೀ

## (ತುಳಸೀ-ಕನ್ನಡ ವ್ಯಾಖ್ಯಾನ ಸಹಿತ)

### ಸಂಪುಟ-1

(ಪೂರ್ವಾರ್ಧದ ಸಂಜ್ಞಾಪ್ರಕರಣ, ಸಂಧಿಪ್ರಕರಣ, ಸುಬನ್ತಪ್ರಕರಣ, ಅವ್ಯಯ; ಉತ್ತರಾರ್ಧದ 14ನೇ ಪ್ರಕರಣ ಜುಹೋತ್ಯಾದಿ ವರೆಗೆ)


ಪ್ರಧಾನ ಸಂಪಾದಕರು

ಶ್ರೀ ಶ್ರೀ ಶ್ರೀ ಅದ್ವಯಾನಂದೇಂದ್ರ ಸರಸ್ವತೀ ಸ್ವಾಮೀ

ಕನ್ನಡಾನುವಾದ

ಡಾ॥ ಆರ್. ಸತ್ಯನಾರಾಯಣನ್,
M.A. Sanskrit, M.A. Philosophy, D.Litt., Vidya Vachaspati

ಡಾ॥ ಶ್ರೀವತ್ಸಾಚಾರ್ಯ ವಿ. ಕೋದಂಡಿ,
Vyakarana Vidwan, M.A., B.Ed., Ph.D.

ಸಂಪಾದಕರು

ಡಾ॥ ಶ್ರೀಮತಿ ಸುಜಾತ, ಎಂ.ಎನ್.
M.A. Sanskrit, Ph.D., PG Diploma in Jainalogy

ಡಾ॥ ಶ್ರೀಮತಿ ಸುಧಾ ಎಚ್.ಎಸ್.
M.Com, M.A. Sanskrit (Ph.D.)







ಪ್ರಕಾಶಕರು

ಸಚ್ಚಿದಾನಂದ ಅದ್ವೈತಾಶ್ರಮ ಟ್ರಸ್ಟ್ (ರಿ.)

ನಂ. 155, 6ನೇ ಅಡ್ಡರಸ್ತೆ, 19ನೇ ಮುಖ್ಯ ರಸ್ತೆ,
ರಾಜಾಜಿನಗರ 1ನೇ 'ಎನ್' ಬ್ಲಾಕ್, ಬೆಂಗಳೂರು-10.
ಇ-ಮೇಲ್: advaitashrama@gmail.com



**SRI VARADARAJA'S LAGHU SIDDANTHA KOUMUDI:** *(with Tulasi Kannada Translation). Editor-in-Chief:* **Sri Sri Sri Adwayanandendra Saraswathi Swami.** *Kannada Translation by:* **Dr. R. Satyanarayanan & Dr. Srivatsacharya V. Kodandi.** *Edited by:* **Dr. Smt. Sujatha M.N.** and **Smt. Sudha H.S.** *Published by:* **Sacchidananda Advaita Ashrama Trust (R),** No. 155, 6th Cross, 1st `N' Block, Rajaji Nagar, Bangalore-560 010. Ph.: 9036073505. **Volume: 1** pp: xxiv+776=800

1/8 Demy 80 gsm NS Maplitho. Case Binding

First Impression: 2018



Price: ₹ 800/-

Printed by:
**Achyuta Sankethi,**
**Omkar Hi-Prints**
# 31, 4th Cross, Nethaji Road,
T.R. Nagar, Bangalore-560028.
(M) 9448086811/9480184985

# ಮೊದಲ ಮಾತು



ಪ್ರಿಯ ವಾಚಕ ವೃಂದವೇ, ತಮಗೆಲ್ಲರಿಗೂ ನಾರಾಯಣ ಸ್ಮರಣೆಗಳು. ಬಹುದಿನಗಳಿಂದ ನಾನು ಕನವರಿಸುತ್ತಿದ್ದ ನನ್ನ ಆಶೆಯು ಇಂದು ನನಸಾಗುತ್ತಿದೆ.

ಸಂಪೂರ್ಣ ಸಿದ್ಧಾಂತ ಕೌಮುದಿಯು ಕನ್ನಡಕ್ಕೆ ಅನುವಾದವಾಗಬೇಕು, ಅದು ತುಂಬ ಸರಳವಾಗಿಯೂ, ಸುಲಲಿತವಾಗಿಯೂ ಸರ್ವರಿಗೂ ಸುಗಮವಾಗಿಯೂ ಇರಬೇಕೆಂದು ನನ್ನ ಹೆಬ್ಬಯಕೆಯಾಗಿತ್ತು. ಅದಕ್ಕೆ ಸರಿಯಾದ, ತಕ್ಕ ಯೋಗ್ಯ ವಿದ್ವಾಂಸರನ್ನು ಅನ್ವೇಷಣೆ ಮಾಡುತ್ತಿದ್ದೆನು. ಈಗ ಸುಮಾರು ನಾಲ್ಕೈದು ವರ್ಷಗಳ ಹಿಂದೆ ಒಂದು ವೇದಾಂತ ಸಪ್ತಾಹಕ್ಕಾಗಿ ನಾನು ಧಾರವಾಡಕ್ಕೆ ಹೋಗಿದ್ದೆ. ಅಲ್ಲಿ ನಮ್ಮ ಮತ್ತೂರಿನವವರೇ ಆದ ಸಾತ್ವಿಕ ದಂಪತಿಗಳಾದ ಶ್ರೀಮತಿ ಸುಜಾತಾ ಎಂ. ಎನ್. ಮುಕುಂದ ಎಲ್.ಕೆ ಅವರ ಮನೆಯಲ್ಲಿ ತಂಗಿದ್ದೆ. ಅಲ್ಲಿ ಅವರ ಮನೆಗೆ ಅದೇ ಊರಿನವರಾದ ವಿದ್ವಾನ್ ಶ್ರೀ ಸತ್ಯನಾರಾಯಣಾಚಾರ್ ಅವರ ಪರಿಚಯವಾಯಿತು. ಅವರು ಅತ್ಯಂತ ಸಾತ್ವಿಕರು ಸರಳರು, ವಿದ್ಯಾನಿಧಿಗಳು ಅವರ ಹತ್ತಿರ ಈ ವ್ಯಾಕರಣದ ಅನುವಾದದ ವಿಷಯವಾಗಿ ಅರಿಕೆ ಮಾಡಿಕೊಂಡೆನು. ಅಂದು ಅವರು ಬಹಳ ಸಂತೋಷದಿಂದ ಒಪ್ಪಿಕೊಂಡರು. ನನಗೂ ತುಂಬಾ ಸಂತೋಷವಾಯಿತು.

ಆದರೆ 'ಶ್ರೇಯಾಂಸಿ ಬಹು ವಿಘ್ನಾನಿ' ಎಂಬ ಪ್ರಾಚೀನೋಕ್ತಿಯಿಂದ ಈ ಅನುವಾದದ ಕೆಲಸವು ಕೂರ್ಮಗತಿಯಲ್ಲಿ ನಡೆಯಿತು. ನಾನು ಈ ಅನುವಾದದ ಕೆಲಸ ಎಲ್ಲಿಗೆ ಬಂತು ಎಂದು ದೂರವಾಣಿ ಮಾಡಿದಾಗಲೆಲ್ಲ ಅವರಿಗೆ ತುಂಬಾ ಸಂಕೋಚವೂ ಮುಜುಗರವೂ ಆಗುತ್ತಿತ್ತು. ನಿಜವಾಗಲೂ ಆಚಾರ್‌ರವರು ತುಂಬಾ ನಿಯತ್ತಿನವರು. ಖಂಡಿತವಾಗಿಯೂ ಅವರು ನನ್ನ ವಿಷಯಕ್ಕೆ ಅನ್ಯಥಾ ಭಾವಿಸಬಾರದೆಂದು ಅವರಲ್ಲಿ ಕೇಳಿಕೊಳ್ಳುತ್ತೇನೆ. ಈ ಇಳಿವಯಸ್ಸಿನಲ್ಲಿಯೂ ಯಾವ ಹೆಚ್ಚಿನ ಸಹಾಯವಿಲ್ಲದೆ ಅವರು ಈ ಗ್ರಂಥವನ್ನು ಅನುವಾದ ಮಾಡಿಕೊಟ್ಟಿದ್ದಾರೆ. ಆದರೆ ನಮ್ಮ ಅಪೇಕ್ಷೆಯಂತೆ ಸಿದ್ಧಾಂತ ಕೌಮುದಿಯ ಅನುವಾದವಾಗಲಿಲ್ಲ. **ಲಘುಸಿದ್ಧಾಂತ ಕೌಮುದೀಯ** ಅನುವಾದವನ್ನು ಮಾಡಿಕೊಟ್ಟಿದ್ದಾರೆ. ಅವರಿಗೆ ನಮ್ಮ ಸಂಸ್ಥೆಯ ವತಿಯಿಂದ ತುಂಬಾ ಆಭಾರಿಯಾಗಿರುತ್ತೇನೆ. ಅವರ ವ್ಯಕ್ತಿತ್ವವನ್ನು ಎಷ್ಟು ಕೊಂಡಾಡಿದರೂ ಕಡಿಮೆಯೇ. ಸದ್ಯಕ್ಕೆ ವಾಚಕರು ಈ ಲಘುಸಿದ್ಧಾಂತ ಕೌಮುದೀಯಿಂದಲೇ ತೃಪ್ತರಾಗಬೇಕೆಂದು ವಿನಂತಿಸಿಕೊಳ್ಳುತ್ತೇನೆ.

ಹಿಂದೆ ವಿದ್ವಾನ್ ಶ್ರೀ ವಿಷ್ಣುಮೂರ್ತಿಭಟ್ಟರವರು 1956ರಲ್ಲಿ ಲಘುಸಿದ್ಧಾಂತ ಕೌಮುದಿಯನ್ನು ಕನ್ನಡಕ್ಕೆ ಅನುವಾದ ಮಾಡಿದ್ದರು. ಅವರು ಸಿದ್ಧಾಂತ ಕೌಮುದಿಯನ್ನೂ ಸಹ ಅನುವಾದ ಮಾಡಲು ಪ್ರಾರಂಭಿಸಿ ಕಾರಕಾಂತದವರೆಗೆ ಮಾತ್ರ ಮಾಡಿದ್ದರು. ಆಮೇಲೆ ಅದೂ ನಿಂತೇ ಹೋಯಿತು. ಪೂರ್ಣವಾಗಲೇ ಇಲ್ಲ. ಇಂದು ಆ ಗ್ರಂಥಗಳೂ ಉಪಲಬ್ಧವಾಗುತ್ತಿಲ್ಲ. ಅದೂ ಸಹ ವಿದ್ವತ್ಪೂರ್ಣವಾದ ಅನುವಾದವೇ ಆಗಿತ್ತು. ಆದರೆ ಶ್ರೀಮಾನ್ ಸತ್ಯನಾರಾಯಣ ಆಚಾರ್‌ರವರ ವಿವರಣೆಯು ಇನ್ನೂ ವಿಸ್ತಾರವಾದುದ್ದೆಂದು ಹೇಳಬಹುದು. ಉದಾಹರಣೆ, ದೃಷ್ಟಾಂತಗಳನ್ನು ಜಾಸ್ತಿಯಾಗಿ ಕೊಟ್ಟಿದ್ದಾರೆ. ವಿವರಣೆಯೂ ಸಹ ತುಂಬಾ ಚೆನ್ನಾಗಿದೆ. ಅವಶ್ಯವಾಗಿ ಇದರ ಉಪಯೋಗವನ್ನು ಕನ್ನಡನಾಡಿನವರು ಮಾಡಿಕೊಳ್ಳಬೇಕೆಂದು ವಿನಂತಿಸಿಕೊಳ್ಳುತ್ತೇನೆ.

ಈ ಲಘುಸಿದ್ಧಾಂತ ಕೌಮುದಿಯು ಹಿಂದಿ, ತಮಿಳು, ತೆಲುಗು, ಇಂಗ್ಲೀಷ್ ಮುಂತಾದ ಅನೇಕ ಭಾಷೆಗಳಲ್ಲಿ ಬಹಳ ಜನರು ಅನುವಾದಮಾಡಿದ್ದರೂ ಕನ್ನಡದಲ್ಲಿ ಮಾತ್ರ ತೀರ ವಿರಳವಾಗಿದೆ. ಈಗಿನ ಕಾಲದಲ್ಲಿ ಇದನ್ನು ಅಧ್ಯಯನ ಮಾಡುವವರೂ ಸಹ ತುಂಬಾ ಕಮ್ಮಿಯಾಗಿದ್ದಾರೆ. ಆದರೆ **'ಮೀಮಾಂಸಾ ಪಾಣಿನೀಯಂ ಚ ಸರ್ವಶಾಸ್ತ್ರೋಪಕಾರಕಮ್'** ಎಂಬ ಉಕ್ತಿಯನ್ನು ಮನಗಂಡರೆ ವೇದಾಂಗಗಳಲ್ಲೆಲ್ಲ ವ್ಯಾಕರಣವೆಂಬುದು ಮೂರ್ಧನ್ಯಗ್ರಂಥವೆಂದು ಕರೆಯಲ್ಪಡುತ್ತದೆ. ಈ ಶಾಸ್ತ್ರವನ್ನು ಕರಗತ ಮಾಡಿಕೊಳ್ಳುವವನಿಗೆ ನಮ್ಮ ಪ್ರಾಚೀನ ಸಮಸ್ತ ಸಂಸ್ಕೃತವಾಙ್ಮಯದಲ್ಲೆಲ್ಲ ಸುಲಭವಾದ ಪ್ರವೇಶವು ಸಾಧ್ಯವಾಗುತ್ತದೆ. ವೇದಗಳು, ಸ್ಮೃತಿಗಳು, ಪುರಾಣಗಳು, ಧರ್ಮಶಾಸ್ತ್ರಗಳು, ರಾಮಾಯಣ ಮಹಾಭಾರತಾದಿ ಗ್ರಂಥಗಳು, ಕಾವ್ಯನಾಟಕಾದಿಸಮಸ್ತ ಗ್ರಂಥಗಳೂ ಅರ್ಥವಾಗುತ್ತದೆ. ಆದ್ದರಿಂದ ಅವಶ್ಯವಾಗಿ ಪ್ರತಿಯೊಬ್ಬ ಮಾನವರು ಇದನ್ನು ಕಲಿಯಬೇಕು ಆದರೆ ವ್ಯಾಕರಣ ಅಧ್ಯಯನವು ಕ್ಲಿಷ್ಟಕರವಾದದ್ದು ಅದನ್ನು ಗುರುಗಳ ಸಮ್ಮುಖದಲ್ಲಿಯೇ ಕಲಿಯಬೇಕು. ಆದರೆ ಅಭ್ಯಾಸಿಗಳು ಹತ್ತಿರವಿರುವ ಯಾರನ್ನಾದರೂ ಗುರುಗಳನ್ನು ಹುಡುಕಿಕೊಂಡು 6 ತಿಂಗಳು ಅಥವಾ 1 ವರ್ಷಕಾಲ ಚೆನ್ನಾಗಿ ಅಭ್ಯಾಸವನ್ನು ಮಾಡಿದರೆ ಈ ಶಾಸ್ತ್ರವು ಕೈವಶವಾಗುವುದರಲ್ಲಿ ಆಶ್ಚರ್ಯವೇನಿಲ್ಲ. ಪ್ರಕೃತವಾದ ಈ ಲಘುಸಿದ್ಧಾಂತ ಕೌಮುದಿಯನ್ನೇ ಚೆನ್ನಾಗಿ ಕಲಿತರೆ ವ್ಯಾಕರಣದ ಬಹುಭಾಗವು ಜಿತವಾಗುವುದು. ಆದ್ದರಿಂದ ನಾವು ಸದ್ಯಕ್ಕೆ ಇದನ್ನೇ ಮಾಡಿಸುತ್ತಿದ್ದೇವೆ.

ಕೆಲವರು **ಕಾಣಾದಂ ಪಾಣಿನೀಯಂ ಚ ಸರ್ವಶಾಸ್ತ್ರೋಪಕಾರಕಮ್** ಎಂದು ಶ್ಲೋಕವನ್ನು ಹೇಳುತ್ತಾರೆ. ಆದರೆ ಕಾಣಾದಶಾಸ್ತ್ರವು ಉಪಕಾರಕವೆಂಬುದು ಹಸಿಸುಳ್ಳು. ಅದು ಬುದ್ಧಿಗೆ ಮಾರಕವೇ ಹೊರತು ಪೂರಕವಲ್ಲವೆಂಬುದು ಬೇರೆ ವಿಷಯ. ಒಟ್ಟು ಈ ಸಂಪುಟದ ಪೂರ್ವಾರ್ಧದಲ್ಲಿ 11 ಪ್ರಕರಣಗಳು ಹಾಗೂ ಉತ್ತರಾರ್ಧದ 3 ಪ್ರಕರಣಗಳಿವೆ.

ಸದ್ಯಕ್ಕೆ ಈ ಲಘುಸಿದ್ಧಾಂತ ಕೌಮುದಿಯಲ್ಲಿ ಒಟ್ಟು 60 ಪ್ರಕರಣಗಳಿವೆ. ಇವುಗಳಲ್ಲಿ ಮುಂದುಮುಂದಿನ ಪ್ರಕರಣಗಳಿಗೆ ಹಿಂದುಹಿಂದಿನ ಪ್ರಕರಣದ ಸಾಪೇಕ್ಷೆಯಿರುವುದರಿಂದ ಇದರ ಕ್ರಮವು ಸರಿಯಾಗಿದೆ. ಸಂಜ್ಞಾಪ್ರಕರಣವು ಎಲ್ಲಾ ಪ್ರಕರಣಗಳಿಗೂ

ಬೇಕಾಗಿರುವುದರಿಂದ ಅದನ್ನು ಮೊದಲು ಹೇಳಿದೆ. ಅನಂತರ ಸಂಧಿಯ ನಂತರ ಸುಬಂತವು. ನಾಮಪದದ ಮೇಲೂ ತಿಜ್ ಪ್ರತ್ಯಯಗಳನ್ನು ಹೇಳಿರುವುದರಿಂದ ತಿಜನ್ತಕ್ಕಿಂತ ಮೊದಲು ಸುಬನ್ತವು ಬಂದಿರುತ್ತದೆ. ಧಾತುಗಳ ಮೇಲೆ ಕೃತ್ ಪ್ರತ್ಯಯವನ್ನು ವಿಧಾನ ಮಾಡಿರುವುದರಿಂದ ತಿಜನ್ತವಾದ ಮೇಲೆ ಕೃದನ್ತ ಪ್ರಕರಣದ ವಿವರಣೆಯಿದೆ. ನಾಮ ಪದದ ಮೇಲೆ ತದ್ಧಿತ ಪ್ರತ್ಯಯಗಳನ್ನು ವಿಧಾನಮಾಡುವುದರಿಂದ ತದ್ಧಿತ ಪ್ರಕರಣವನ್ನು ಅನಂತರ ತೆಗೆದುಕೊಂಡಿದೆ. ಸ್ತ್ರೀಪ್ರತ್ಯಯಗಳನ್ನು ಸಮಾಸವಾದ ಮೇಲೆ ಹೇಳುವುದರಿಂದ ಸಮಾಸವಾದ ನಂತರ ಸ್ತ್ರೀ ಪ್ರತ್ಯಯಗಳ ವಿಚಾರ ಬಂದಿರುತ್ತದೆ. ಹೀಗೆ ಕ್ರಮವಿದ್ದರೂ ಇದರ ಆಳವಾದ ಅಧ್ಯಯನಕ್ಕೆ ಸಿದ್ಧಾಂತ ಕೌಮುದಿಯ ವ್ಯಾಸಂಗವು ಬೇಕೇಬೇಕಾದರೂ ಸಾಮಾನ್ಯ ಸಂಸ್ಕೃತಾಧ್ಯಯನಕ್ಕೆ ಲಘುಸಿದ್ಧಾಂತ ಕೌಮುದಿಯೇ ಸಾಕಾಗುತ್ತದೆ. ಆದ್ದರಿಂದಲೇ ಸದ್ಯಕ್ಕೆ ನಾವು ಈ ಒಂದು ಗ್ರಂಥವು ಮುದ್ರಿತವಾಗಲಿ. ಮುಂದೆ ಸಿದ್ಧಾಂತ ಕೌಮುದಿಯ ಅನುವಾದ ಕಾರ್ಯವನ್ನು ಮುಂದೆ ನೋಡೋಣವೆಂದು ತೀರ್ಮಾನಕ್ಕೆ ಬಂದಿರುವೆವು.

ಏನೇ ಆಗಲಿ, ಶ್ರೀ ಸತ್ಯನಾರಾಯಣಾಚಾರ್‌ರವರು, ಅವರಿಗೆ ಸಹಕರಿಸಿದ ಪ್ರೊ॥ ಶ್ರೀವತ್ಸಾಚಾರ್ಯ ವಿ. ಕೋದಂಡಿ ಹಾಗೂ ಸಹಾಯಕ ಮಂಡಳಿಯ ಸದಸ್ಯರು ಬಹಳ ಶ್ರಮವಹಿಸಿ ಈ ಗ್ರಂಥವನ್ನು ಅನುವಾದ ಮಾಡಿಕೊಟ್ಟಿದ್ದಾರೆ. ಅವರಿಗೆ ತುಂಬಾ ಧನ್ಯವಾದಗಳು.

'ಲಘು ಸಿದ್ಧಾಂತ ಕೌಮುದೀ'ಯ ಪ್ರಕಾಶನದಲ್ಲಿ ಸರ್ವತೋಮುಖವಾಗಿ ನೆರವು ನೀಡಿ, ಅತ್ಯಲ್ಪ ಅವಧಿಯಲ್ಲಿ ಅಂದವಾಗಿ ಮುದ್ರಿಸಿದ 'ಓಂಕಾರ್ ಹೈಪ್ರಿಂಟ್ಸ್'ನ ಶ್ರೀ ಅಚ್ಯುತ 'ಸಂಕೇತಿ' ಅವರಿಗೆ ನಾವು ಆಭಾರಿಗಳಾಗಿದ್ದೇವೆ.

ಪರಮಾತ್ಮನು ಎಲ್ಲರಿಗೂ ಇತೋಪ್ಯತಿಶಯವಾಗಿ ಆಯುರಾರೋಗ್ಯೈಶ್ವರ್ಯಾದಿ ಸಕಲಸನ್ಮಂಗಳವನ್ನು ಉಂಟುಮಾಡಲೆಂದು ನಾವು ಹೃತ್ಪೂರ್ವಕವಾಗಿ ಪ್ರಾರ್ಥನೆಯನ್ನು ಮಾಡುತ್ತೇವೆ. ಅನಂತಾನಂತ ನಾರಾಯಣ ಸ್ಮರಣೆಗಳು ಎಲ್ಲರ ಮೇಲೆ ಯಾವಾಗಲೂ ಇರುತ್ತದೆ.

ಇಂತೀ,

**ಶ್ರೀ ಶ್ರೀ ಶ್ರೀ ಅದ್ವಯಾನಂದೇಂದ್ರ ಸರಸ್ವತೀಸ್ವಾಮೀ**

ಪ್ರಧಾನ ಸಂಪಾದಕರು ಹಾಗೂ ಪ್ರಕಾಶಕರು

# ಸಹಾಯಕ ಮಂಡಲಿ



## ಶ್ರೀ ಪ್ರಹ್ಲಾದಾಚಾರ್ಯ. ಜಿ. ಕುಬೇರ್

ಇವರು 1940ನೇ ಇಸ್ವಿಯಲ್ಲಿ ಹುಬ್ಬಳ್ಳಿಯಲ್ಲಿ ಜನಿಸಿದರು. ನಂತರ ಸ್ವಗ್ರಾಮವಾದ ಶಿರಹಟ್ಟಿಯಲ್ಲಿ ವಿದ್ಯಾಭ್ಯಾಸವನ್ನು ಮುಗಿಸಿ, ಕೃಷಿ ಇಲಾಖೆಯಲ್ಲಿ 1962 ರಿಂದ 1996ರ ವರೆಗೆ ಸಹಾಯಕ ಕೃಷಿ ಅಧಿಕಾರಿಗಳಾಗಿ ಸೇವೆಯನ್ನು ಸಲ್ಲಿಸಿರುತ್ತಾರೆ. ಇವರು ಉದ್ಯೋಗದಿಂದ ನಿವೃತ್ತರಾದಮೇಲೆ, ಧಾರವಾಡದಲ್ಲಿ ನೆಲೆಸಿ ಪಂ॥ ಭೀಮಸೇನಾಚಾರ್ಯ ಕಲ್ಲಾಪುರ್ ಇವರಲ್ಲಿ ಶಾಸ್ತ್ರಾಧ್ಯಯನ ಮಾಡಿ, ವಿದ್ಯಾವಾಚಸ್ಪತಿ ಡಾ॥ ಆರ್. ಸತ್ಯನಾರಾಯಣನ್ ಇವರಲ್ಲಿ ವ್ಯಾಕರಣ ಶಾಸ್ತ್ರದ ಅಧ್ಯಯನವನ್ನು ಮಾಡಿರುತ್ತಾರೆ. ನಂತರ ಪಂಡಿತಕೇಸರಿ ತರ್ಕತೀರ್ಥ ಡಾ॥ ರಂಗನಾಥಾಚಾರ್ಯ ಮುಂಡರಗಿ ಇವರಲ್ಲಿ ತರ್ಕಶಾಸ್ತ್ರದ ಅಧ್ಯಯನ ಮಾಡುತ್ತಿದ್ದಾರೆ. 78ರ ವಯಸ್ಸಿನಲ್ಲೂ ಯುವಕರಂತೆ ಉತ್ಸಾಹದಿಂದ 'ಲಘು ಕೌಮುದೀ'ಯ ಅನುವಾದ ಮಾಡಿದ್ದನ್ನು ಹಸ್ತಲಿಖಿತ ಪ್ರತಿಗಳನ್ನು ತಯಾರಿಸಿ ನಂತರ ಮುದ್ರಣದೋಷಗಳನ್ನು ತಿದ್ದಿ ಈ ಗ್ರಂಥಕ್ಕೆ ಒಂದು ರೂಪವನ್ನು ತಂದುಕೊಟ್ಟಿದ್ದಾರೆ. ಸಂಶಯ ಬಂದ ಸ್ಥಳದಲ್ಲಿ ಮೂಲಗ್ರಂಥಗಳನ್ನು ಅವಲೋಕಿಸಿ ತಿದ್ದುಪಡಿಯನ್ನು ಮಾಡಿದ್ದಾರೆ ಎಂಬುದು ಶ್ಲಾಘನೀಯ ವಿಷಯವಾಗಿದೆ. ಇವರಿಗೆ ಪರಮಾತ್ಮನು ಆಯುರಾರೋಗ್ಯ ಐಶ್ವರ್ಯಾದಿಗಳನ್ನು ಕರುಣಿಸಲೆಂದು ಪ್ರಾರ್ಥಿಸುತ್ತೇವೆ.

## ಶ್ರೀ ಗೋವರ್ಧನಾಚಾರ್ಯ. ವಿ. ವಡವಿ



ಇವರು ಹಾವೇರಿ ಜಿಲ್ಲೆಯ ಕರಜಗಿ ಗ್ರಾಮದಲ್ಲಿ 1947ನೇ ಇಸವಿಯಲ್ಲಿ ಜನಿಸಿದರು. ನಂತರ ವಿದ್ಯಾಭ್ಯಾಸವನ್ನು ಮುಗಿಸಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಸಂಸ್ಥೆಯಲ್ಲಿ 1971 ರಿಂದ 2003 ರ ವರೆಗೆ ಮೆರಿಟ್ ಗ್ರೇಡ್ ಡ್ರಾಫ್ಟ್‌ಮನ್ ಆಗಿ ಸೇವೆಯನ್ನು ಸಲ್ಲಿಸಿರುತ್ತಾರೆ. ಪ್ರಕೃತ ಪಂ. ಸುರೇಶಾಚಾರ್ಯ ರಾಯಚೂರ್ ಇವರಲ್ಲಿ ಶಾಸ್ತ್ರಾಧ್ಯಯನ ಮಾಡುತ್ತಿದ್ದು ಮತ್ತು ವಿದ್ಯಾವಾಚಸ್ಪತಿ ಡಾ॥ ಆರ್. ಸತ್ಯನಾರಾಯಣನ್ ಇವರಲ್ಲಿ ವ್ಯಾಕರಣಶಾಸ್ತ್ರದ ಅಧ್ಯಯನವನ್ನು ಮಾಡುತ್ತಿದ್ದಾರೆ. ಗಣಕ ಯಂತ್ರದಲ್ಲಿ 'ಲಘುಸಿದ್ಧಾಂತ ಕೌಮುದೀ'ಯನ್ನು ಕನ್ನಡದ ಕನ್ನಡಿಯಲ್ಲಿ ತರಲು ಕಳೆದ ಆರು ವರ್ಷಗಳಿಂದ ಶ್ರಮಿಸಿದ್ದಾರೆ. ಬಿಸಿಲು, ಮಳೆ ಗಾಳಿಗಳನ್ನು ಲೆಕ್ಕಿಸದೇ ಪ್ರತಿದಿನ ಸತತವಾಗಿ ಬಂದು ಇವರು ಸಹಕರಿಸಿದ್ದರಿಂದಲೇ ಈ ಗ್ರಂಥವು ಹೊರಗೆ ಬರುತ್ತಿದೆ. ಈ 69ರ

ವಯಸ್ಸಿನಲ್ಲೂ ಉತ್ಸಾಹದಿಂದ ಮಾಡಿರುವ ಇವರ ಸೇವೆ ಪ್ರಶಂಸನೀಯ. ಇವರಿಗೆ ನಮ್ಮ ಹೃತ್ಪೂರ್ವಕ ಧನ್ಯವಾದಗಳು. ಇವರಿಗೆ ಪರಮಾತ್ಮನು ಆಯುರಾರೋಗ್ಯ ಐಶ್ವರ್ಯಾದಿಗಳನ್ನು ಕರುಣಿಸಲೆಂದು ಪ್ರಾರ್ಥಿಸುತ್ತೇವೆ.



**ಡಾ|| ಶ್ರೀಮತಿ ಸುಜಾತಾ ಎಂ.ಎನ್.**

**(ಎಂ.ಎ. ಸಂಸ್ಕೃತ, ಪಿಎಚ್.ಡಿ)**

ಇವರು ಕರ್ನಾಟಕ ಕಲಾ ವಿದ್ಯಾಲಯದ ಸಂಸ್ಕೃತ ವಿಭಾಗದಲ್ಲಿ ಪ್ರಾಧ್ಯಾಪಕರಾಗಿದ್ದು ಹಲವು ಗ್ರಂಥಗಳನ್ನು ರಚಿಸಿ ಅನುವಾದ ಮಾಡಿದ್ದಾರೆ. ಇವರು ನಮ್ಮ ಈ ಗ್ರಂಥದ ಸಂಪಾದಕರಾಗಿದ್ದು ಗ್ರಂಥಕ್ಕೆ ಸರ್ವತೋಮುಖ ಶೋಭೆಯನ್ನು ತಂದುಕೊಡುವುದಕ್ಕೆ ಪರಿಶ್ರಮವನ್ನು ವಹಿಸಿದ್ದಾರೆ ಇವರಿಗೆ ಹೃತ್ಪೂರ್ವಕ ಧನ್ಯವಾದಗಳು.



**ಡಾ|| ಶ್ರೀಮತಿ ಸುಧಾ ಎಚ್.ಎಸ್.**

**(ಎಂ.ಕಾಂ., ಎಂ.ಎ., ಪಿಎಚ್.ಡಿ)**

ಇವರು ಕರ್ನಾಟಕ ವಿಶ್ವವಿದ್ಯಾಲಯದ ಸಂಸ್ಕೃತ ವಿಭಾಗದಲ್ಲಿ ಪಿಎಚ್.ಡಿ ವ್ಯಾಸಂಗ ಮಾಡಿದ್ದು, ನಮ್ಮ ಗ್ರಂಥದ ಅನುವಾದವನ್ನು ಮುದ್ರಿಸುವುದಕ್ಕೆ ಸಂಪಾದಕರಾಗಿದ್ದು ಸಹಾಯ ಮಾಡಿ ಗ್ರಂಥಕ್ಕೆ ಶೋಭೆ ತಂದು ಕೊಟ್ಟಿದ್ದಾರೆ. ಇವರಿಗೆ ಹೃತ್ಪೂರ್ವಕ ಧನ್ಯವಾದಗಳು.



**ಶ್ರೀ ರಾಜೇಶ. ಬಿ. ಉಪಕಾರಿ**

**(ಬಿ.ಕಾಂ, ಎಲ್ಎಲ್.ಬಿ)**

ಇವರು ಕಳೆದ ಎರಡು ವರ್ಷಗಳಿಂದ ಪ್ರಕೃತ ಗ್ರಂಥದ ಡಿ.ಟಿ.ಪಿ ಕೆಲಸವನ್ನು ಅಂದವಾಗಿ ಮಾಡಿಕೊಡುವದರಲ್ಲಿ ಸಹಕರಿಸಿದ್ದಾರೆ. ಇವರಿಗೆ ಹೃತ್ಪೂರ್ವಕ ಧನ್ಯವಾದಗಳು.

ಪ್ರತ್ಯಕ್ಷವಾಗಿಯೂ ಅಪ್ರತ್ಯಕ್ಷವಾಗಿಯೂ ಸಹಕರಿಸಿರುವ ನನ್ನ ಶಿಷ್ಯ ವರ್ಗದವರಿಗೂ, ಮಿತ್ರವರ್ಗದವರಿಗೂ ಧನ್ಯವಾದಗಳನ್ನು ಸಲ್ಲಿಸುತ್ತೇವೆ.

# ಸಮರ್ಪಣೆ

ಕೌಕೂರು ತುಳಸೀಬಾಯೀ
ರಕ್ಷಕೀ ಪಿತೃಸೋದರೀ।
ಅನುವಾದಜಪುಣ್ಯೇನ ಯಾತು
ಪುಣ್ಯಾಮ್ ಗತಿಮ್ ಸ್ಥಿರಾಮ್॥

## ಪುಸ್ತಕ ಮುದ್ರಣಕ್ಕೆ ಧನಸಹಾಯ
## ನೀಡಿದ ದಾನಿಗಳು

| | | |
|---|---|---|
| 1. | ಶ್ರೀಮಾನ್ ಸತ್ಯವಿನಾಯಕ ಭಟ್ | 10,000/– |
| 2. | ಶ್ರೀಮಾನ್ ಆನಂದರಾಮ್ | 10,000/– |
| 3. | ಶ್ರೀಮಾನ್ ಶಿವಮೂರ್ತಿ | 10,000/– |
| 4. | ಶ್ರೀಮಾನ್ ಬಿ.ಎಸ್. ಶ್ರೀನಿವಾಸ | 5,000/– |
| 5. | ಶ್ರೀಮಾನ್ ಶ್ರೀಧರ | 5,000/– |
| 6. | ಶ್ರೀಮತಿ ವನಜಾಕ್ಷಿ | 5,010/– |
| 7. | ಶ್ರೀಮಾನ್ ಶ್ರೀನಿವಾಸ ಸಹೋದರರ ಸಂಘ | 5,000/– |
| 8. | ಶ್ರೀಮಾನ್ ಅನಂತೇಶ | 5,000/– |
| 9. | ಶ್ರೀಮಾನ್ ಶ್ರೀರಾಮ್‌ಪ್ರಸಾದ್ | 4,000/– |
| 10. | ಶ್ರೀಮಾನ್ ಆನಂದ್ | 4,000/– |

# ಮುನ್ನುಡಿ

"ವಾಚಾಮೇವ ಪ್ರಸಾದೇನ ಲೋಕಯಾತ್ರಾ ಪ್ರವರ್ತತೇ" ಎಂಬ ದಂಡಿಯ ನುಡಿಯಂತೆ ಭಾಷೆಯು ಮಾನವನ ಇಂಗಿತವನ್ನು ಪ್ರಕಟಗೊಳಿಸುವ ಅತ್ಯಮೂಲ್ಯವಾದ ಸಾಧನವೆಂಬುದನ್ನು ಮರೆಯುವಂತಿಲ್ಲ. ಆದರೆ ಆದಿಮಾನವನಿಗೆ ಭಾಷೆಯ ಕಲ್ಪನೆಯಿಲ್ಲದ ಸಂದರ್ಭದಲ್ಲೂ ತನ್ನ ದಿನನಿತ್ಯದ ವ್ಯವಹಾರವನ್ನು ತನಗೆ ಅನೂಕೂಲವಾಗುವ ರೀತಿಯಲ್ಲಿ ಶಾರೀರಿಕ ಹಾವಭಾವಗಳ ಮೂಲಕ ಮುಂದುವರೆಸಿದ್ದರಿಂದ ಜಗತ್ತಿನಾದ್ಯಂತ ಮನುಷ್ಯರು ಉಪಯೋಗಿಸುತ್ತಿರುವ 'ಭಾಷೆ'ಯ ರೀತಿ, ನೀತಿ,ಧ್ವನಿ, ಯತಿ, ಪ್ರಾಸ, ಲಯ ಮುಂತಾದವು ವಿಭಿನ್ನವಾಗಿ ಬೆಳೆದು ಬಂದಿವೆ. ಇಂದಿಗೂ ಸಹ ಕೆಲ ಭಾಷೆಗಳಿಗೆ ಲಿಪಿಯನ್ನು ಸಂಶೋಧನೆ ಮಾಡಬೇಕಿದೆ. 'ವಾಚಾ ವಿರೂಪ ನಿತ್ಯಯಾ' ಎಂಬ ಕೃತಿಯ ವಾಕ್ಯದಂತೆ ಬದಲಾವಣೆ, ಬೆಳವಣಿಗೆ, ಭಾಷೆಯ ಗುಣಧರ್ಮವಾಗಿದೆ. ಭಾಷೆಯ ಮೂಲವನ್ನು ಹುಡುಕುತ್ತಾ ಮುನ್ನಡೆದರೆ ಸಂಸ್ಕೃತ ಭಾಷೆಯು ಪ್ರಾಚೀನವೆಂಬುದರಲ್ಲಿ ಸಂದೇಹವಿಲ್ಲ. ಪತಂಜಲಿ ಮಹರ್ಷಿಗಳು ತಿಳಿಸುವಂತೆ ಶಬ್ದಗಳು ನಾಲ್ಕು ಭಾಗಗಳಲ್ಲಿ ವಿಂಗಡಿತಗೊಂಡಿದ್ದು, 'ಕ್ರಿಯೆ'ಯೇ ಶಬ್ದೋತ್ಪತ್ತಿಗೆ ಕಾರಣವೆಂದಿದ್ದಾರೆ. ಪ್ರಕೃತಿ ಪ್ರತ್ಯಯ ಹಾಗೂ ಗಣವಿಕರಣಗಳಿಂದ ಶಬ್ದೋತ್ಪತ್ತಿ ಸಂಸ್ಕೃತ ಭಾಷೆಯಲ್ಲಿ ಜನಿಸಿ, ಸಂದೇಹಕ್ಕೆಡೆಯಿಲ್ಲದಂತೆ ಅರ್ಥವನ್ನು ಕೊಡುತ್ತದೆ.ಇದು ಸಂಸ್ಕೃತ ಭಾಷೆಯ ವಿಶಿಷ್ಟವಾದ ಕೊಡುಗೆ ಕಾಳಿದಾಸನು ಹೇಳುವಂತೆ "ವಾಗರ್ಥಾವಿವ ಸಂಪೃಕ್ತೌ ವಾಗರ್ಥಪ್ರತಿಪತ್ತಯೇ । ಜಗತಃಪಿತರೌ ವಂದೇ ಪಾರ್ವತೀ ಪರಮೇಶ್ವರೌ" ಎಂದು ಶಬ್ದ ಮತ್ತು ಅರ್ಥಗಳು ಅತ್ಯಂತ ಸಮರ್ಥವಿಧಿಯಿಂದ ಕೂಡಿರಬೇಕೆಂದು ನುಡಿಯುತ್ತಾನೆ. ಭಾಷಾ ಸಾಹಿತ್ಯಸಮೂಹವನ್ನೇ 'ಕಾವ್ಯ'ವೆಂದು ನುಡಿದು ಅದರ ಪ್ರಯೋಜನವನ್ನು ಹೇಳುವರು. "ಕಾವ್ಯಂ ಯಶಸೇ ಅರ್ಥಕೃತೇ, ವ್ಯವಹಾರವಿದೇ, ಶಿವೇತರಕ್ಷತಯೇ ಕಾಂತಾ-ಸಮ್ಮಿತತಯಾ ಉಪದೇಶಯುಜೇ" ಎಂದು, ಯಶಸ್ಸು, ಸಂಪತ್ತು, ವ್ಯವಹಾರ, ಜ್ಞಾನ ಹಾಗೂ ಮನಸ್ಸಿನ ಶಾಂತ ಸ್ವಭಾವಕ್ಕೆ ಕಲ್ಮಷವಲ್ಲದ ಸುಲಲಿತ, ಅರ್ಥಬದ್ಧ ಕಾವ್ಯವು ವ್ಯಾಕರಣದಿಂದಲೇ ಸಾಧ್ಯ. ಮನ್ನಣೆ ಪಡೆದ ಭಾಷಯೇ ಎಲ್ಲ ವಿದ್ವಾಂಸರು ಸಮ್ಮಿತಿಸುವರೆಂಬುದು ನಿರ್ವಿವಾದ.

ನಾವಿಂದು ವರ್ತಮಾನಕಾಲದಲ್ಲಿ ಬದುಕುತ್ತಿದ್ದೇವೆ ಎಂಬುದು ನಿಶ್ಚಿತವಾದರೂ, ಭೂತಕಾಲದ ಆಧಾರಪಡೆದು, ಭವಿಷತ್‌ಕಾಲಕ್ಕೆ ಕೊಡುಗೆ ಕೊಡಬೇಕಿದೆ. ಬಾಳುವೆಯೆಂಬುದು ಕೇವಲ ಉಣ್ಣುವ, ತಿನ್ನುವ ಮತ್ತು ಮಲಗುವ ಕ್ರಿಯೆಯಾಗಿರದೆ, ಈ ಮೂರನ್ನು ಮೀರಿದ ಪ್ರಕ್ರಿಯೆಯೇ ಆಗಿದೆ. ಇದು ಆ ಸಮಾಜದ ಹಾಗೂ ರಾಷ್ಟ್ರದ ನೈತಿಕ ಹಾಗೂ ಆಧ್ಯಾತ್ಮಿಕ ಶಕ್ತಿ-ಯುಕ್ತಿಗಳನ್ನು ಅವಲಂಬಿಸಿರುತ್ತದೆ. ಈ ಮಾರ್ಗದಲ್ಲಿ ಡಾ॥ ಆರ್. ಸತ್ಯನಾರಾಯಣನ್ ಅವರ **'ಕನ್ನಡ ಅನುವಾದ ಸಹಿತ ಲಘುಸಿದ್ಧಾಂತ ಕೌಮುದೀ'** ಗ್ರಂಥವು ಶಕ್ತಿ-ಯುಕ್ತಿಗಳಿಂದ ಹೊರಬಂದು ಸಂಸ್ಕೃತ ಭಾಷೆ ಪ್ರೇಮಿಗಳಿಗೆ ಸಾರಸ್ವತ ಲೋಕಕ್ಕೆ ಅಮೂಲ್ಯವಾದ ಕೊಡುಗೆಯಾಗುವುದೆಂದು ಅದನ್ನು ಅವಲೋಕಿಸಿದ ನನಗೆ ಮನವರಿಕೆಯಾಗಿದೆ.

ಲೇಖಕರು ಮದ್ರಾಸಿನವರಾದರೂ ಇಂಗ್ಲೀಷ್, ತಮಿಳು, ಮರಾಠಿ, ತೆಲುಗು, ಕನ್ನಡ, ಹಿಂದಿ ಹಾಗೂ ಸಂಸ್ಕೃತವನ್ನು ಸಂಪೂರ್ಣವಾಗಿ ತಿಳಿದವರಾಗಿದ್ದಾರೆ. ಈಗಾಗಲೇ ನೀಲಕಂಠ ವಿಜಯ ಚಂಪೂ ಕನ್ನಡ ಅನುವಾದವನ್ನು 1987ರಲ್ಲಿ ರಚಿಸಿ ವಿದ್ವಾಂಸರಿಗೆಲ್ಲ ಚಿರಪರಿಚಿತರಾಗಿದ್ದಾರೆ. 2014 ರಲ್ಲಿ ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದಿಂದ ಡಿ.ಲಿಟ್ ಪದವಿಯನ್ನು ಪಡೆದಿರುವರು. 78ನೇ ವರ್ಷದಲ್ಲಿ ಕರ್ನಾಟಕ ವಿಶ್ವವಿದ್ಯಾಲಯದಿಂದ ಫಿಲಾಸಫಿ ಎಂ.ಎ. ಪದವಿಯನ್ನು ಪಡೆದಿರುವರು ಎಂದು ತಿಳಿದು ಆನಂದವಾಗುತ್ತದೆ. 200ಕ್ಕೂ ಅಧಿಕ ಸನ್ಮಾನ ಪಡೆದ ಸನ್ಮಾನ್ಯರು ನಿಗರ್ವಿ. ಸಂಪನ್ನರಾಗಿದ್ದು ಸಂಸ್ಕೃತ ನಾಟಕಗಳನ್ನು ಪ್ರದರ್ಶಿಸಿದ್ದಾರೆ. ಸಂದರ್ಭಕ್ಕೆ ತಕ್ಕಂತೆ ಕಾವ್ಯರಚನಾ ಸಾಮರ್ಥ್ಯ ಪಡೆದ ಇವರು ಎರಡು ದಶಕಗಳನ್ನು ಮೀರಿ ಸಂಸ್ಕೃತ ಪ್ರಾಧ್ಯಪಕರಾಗಿ ಸೇವೆ ಸಲ್ಲಿಸಿದ್ದಾರೆ. ಸರಕಾರದ ಪ್ರಥಮ ದರ್ಜೆ ಮಹಾವಿದ್ಯಾಲಯದ ಪ್ರಾಂಶುಪಾಲರಾಗಿ 1994ರಲ್ಲಿ ಸೇವಾ ನಿವೃತ್ತಿ ಪಡೆದರೂ ಎಡಬಿಡದ ಪಾಠ ಪ್ರವಚನಗಳಲ್ಲಿ ಇಂದಿಗೂ ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ. ಇಂತಹ ಹಿರಿಯರೂ, ಪೂಜ್ಯರೂ ಆದ ಡಾ॥ ಆರ್ . ಸತ್ಯನಾರಾಯಣನ್‌ರವರ **'ಕನ್ನಡ ಅನುವಾದ ಸಹಿತ ಲಘುಸಿದ್ಧಾಂತ ಕೌಮುದೀ'** ಪುಸ್ತಕಕ್ಕೆ ಮುನ್ನುಡಿ ಬರೆಯುವುದೊಂದು ಪವಿತ್ರ ಕಾಯಕವೆಂದೇ ಭಾವಿಸುವೆ.

ಪುಸ್ತಕವು ಎರಡು ಭಾಗದಲ್ಲಿದ್ದು, ಪೂರ್ವಾರ್ಧದಲ್ಲಿ ಸಂಜ್ಞಾ ಪ್ರಕರಣದಿಂದ ಆರಂಭಿಸಿ ಅವ್ಯಯಪ್ರಕರಣ ದವರೆಗೆ ಹನ್ನೊಂದು ವಿಷಯಗಳ ಮೇಲೆ ಸಂಸ್ಕೃತ ಸೂತ್ರಗಳೊಂದಿಗೆ ಅನುವಾದ ಮಾಡುತ್ತಾ ವಿವರಣೆಯನ್ನು ನೀಡಿದ್ದಾರೆ. ಉತ್ತರಾರ್ಧದಲ್ಲಿ ತಿಜನ್ತ ಪ್ರಕರಣದಲ್ಲಿ ನಲವತ್ತೊಂಭತ್ತು ಉಪವಿಭಾಗದಿಂದ ಸ್ತ್ರೀಪ್ರತ್ಯಯಾಂತದವರೆಗೆ ಕೊನೆಗೊಳ್ಳುತ್ತದೆ ಇಂತಹ ವಿದ್ವತ್ ಪೂರ್ಣವಾದ ಗ್ರಂಥವನ್ನು ಸಾರಸ್ವತಲೋಕಕ್ಕೆ ನೀಡಿದ ಶ್ರೀ ಡಾ॥ ಆರ್. ಸತ್ಯನಾರಾಯಣನ್‌ರವರು ತಮ್ಮ ಜೀವಕಾಲದುದ್ದಕ್ಕೂ ವಿದ್ಯಾರ್ಥಿಗಳೊಂದಿಗೆ ಬೆಳೆದು, ಬೆಸೆಯುತ್ತಾ ಬಂದಿದ್ದಾರೆ. ಸುತ್ತಮುತ್ತಲಿನ ಎಲ್ಲ ವಿದ್ಯಮಾನಗಳನ್ನು ತಿಳಿದವರಾಗಿದ್ದು ಆಡಳಿತ ನಿಪುಣರಾಗಿದ್ದಾರೆ. ಶ್ರೇಷ್ಠ ಶಿಕ್ಷಣ ತಜ್ಞರಾದ ಲೇಖಕರು ಭಾರತೀಯ ಸಂಸ್ಕೃತಿಯ ಸದ್ವಿದ್ಯೆಯ ಉಪಾಸಕರಾಗಿದ್ದಾರೆ. ಆ ಉಪಾಸನೆಯ ಒಂದು ಫಲವೇ ಈ ಗ್ರಂಥದ ಮೂಲಕ ನಮಗೆ ಲಭ್ಯವಾಗಿದೆ. ಈ ಗ್ರಂಥವನ್ನು ಪೋಷಕರು ಅಧ್ಯಾಪಕರು ಮತ್ತು ವಿದ್ಯಾರ್ಥಿಗಳು ಓದಬೇಕು. ಇಂಥ ಗ್ರಂಥ ನೀಡಿದ ಹಿರಿಯರೂ, ವಿದ್ವಾಂಸರೂ ಆದ ಡಾ॥ ಆರ್. ಸತ್ಯನಾರಾಯಣನ್ ರವರಿಗೆ ನನ್ನ ಶುಭಾಶಂಸನಗಳು.

ಧಾರವಾಡ
06–04–2017

**ಪ್ರೊ. ಮ.ನಾ.ಜೋಶಿ**
ಕುಲಸಚಿವರು, ಪ್ರಾಧ್ಯಾಪಕರು
ಕ.ವಿ.ವಿ.

# ನಿವೇದನೆ

ಸಂಸ್ಕೃತ ಮತ್ತು ಶಾಸ್ತ್ರ ಅಭ್ಯಾಸ ಮಾಡುವವರಿಗೆ ತರ್ಕ ಮತ್ತು ವ್ಯಾಕರಣ ಇವೆರಡೂ ಎರಡು ಕಣ್ಣುಗಳಂತಿವೆ. 'ಚೆನ್ನಾಗಿ ಪ್ರಯೋಗಿಸಿದ ಸುಶಬ್ದವು ಸ್ವರ್ಗಲೋಕದಲ್ಲಿ ಕಾಮಧೇನುವಿನಂತೆ ಮನೋಭೀಷ್ಟವನ್ನು ಪೂರೈಸುತ್ತದೆ' ಎಂಬ ಮಾಹಾಭಾಷ್ಯದ ವಚನದಂತೆ ವ್ಯಾಕರಣ ಶಾಸ್ತ್ರವು ಸರ್ವ ಶಾಸ್ತ್ರಗಳ ಅಧ್ಯಯನಕ್ಕೆ ಉಪಕಾರಕವಾಗಿದೆ. "ಪ್ರಥಮೇ ಹಿ ವಿದ್ವಾಂಸಃ ವೈಯ್ಯಾಕರಣಾಃ" ಎಂಬ ಧ್ವನ್ಯಾಲೋಕಕಾರರ ಮಾತು ಅವಿಸ್ಮರಣೀಯ.

ಬಾಲ್ಯದಿಂದಲೇ ಸಂಸ್ಕೃತ ಅಭ್ಯಾಸ ಮಾಡಿದ ನನಗೆ ವ್ಯಾಕರಣವನ್ನು ಕಲಿಸಿದ ಗುರುಗಳನ್ನು ಸ್ಮರಿಸಿ ನಂತರ ಈ ಗ್ರಂಥದ ಅನುವಾದದ ಬಗ್ಗೆ ಎರಡು ಮಾತುಗಳನ್ನು ಹೇಳುತ್ತೇನೆ. ವಿದ್ಯಾಸಾಗರ ಪ್ರೊ. ಕೆ. ಎಲ್. ವ್ಯಾಸರಾಜ ಶಾಸ್ತ್ರೀ ಎಂಬುವವರು ಸಾಹಿತ್ಯ ವ್ಯಾಕರಣಗಳಲ್ಲಿ ಅತಿ ಪ್ರಸಿದ್ಧ ಪಂಡಿತರು. 'ಪ್ರಥಮಾದರ್ಶ' ಮೊದಲಾದ ಗ್ರಂಥಗಳ ಪ್ರಸಿದ್ಧಿಯೇ ಅವರ ವೈಶಿಷ್ಟ್ಯವನ್ನು ಸಾರುತ್ತವೆ. ಅವರಿಗೆ ನಾನು ಅತ್ಯಂತ ಪ್ರೀತಿಪಾತ್ರನಾದ ಶಿಷ್ಯ. ಸಂಸ್ಕೃತವನ್ನು ಸರಳವಾಗಿ ಮಾತನಾಡುವ ಸಾಮರ್ಥ್ಯವನ್ನು ಮತ್ತು ಕವಿತಾ ರಚನೆಯ ನೈಪುಣ್ಯವನ್ನು ತಂದು ಕೊಟ್ಟವರಲ್ಲಿ ಅವರು ಚಿರಸ್ಮರಣೀಯರು.

ಎರಡನೆಯದಾಗಿ ಶ್ರೀವೈಷ್ಣವ ಪಂಡಿತರಾದ 'ಪಂಡಿತರತ್ನ ಶ್ರೀ ಎ. ಆರ್. ಕೃಷ್ಣಮಾಚಾರ್ಯಾ' ಎಂಬ ವಿದ್ವಾಂಸರು ಸಾಹಿತ್ಯ, ವ್ಯಾಕರಣ ಮತ್ತು ತರ್ಕಶಾಸ್ತ್ರವನ್ನು ಕಲಿಸಿರುವರು. ಚತುಃಶಾಸ್ತ್ರವಿದ್ವಾಂಸರಾದ ಇವರಲ್ಲಿ 'ಸಿದ್ಧಾಂತಕೌಮುದೀ'ಯನ್ನು ವಿಶೇಷವಾಗಿ ಅಧ್ಯಯನ ಮಾಡಿದ್ದನ್ನು ನಾನು ಎಂದೂ ಮರೆಯಲಾರೆ.

ಮದ್ರಾಸಿನ 'ವಿವೇಕಾನಂದ ಕಲಾಶಾಲೆ'ಯಲ್ಲಿ ಬಿ.ಎ. ಆನರ್ಸ್ ಮೂರು ವರ್ಷಗಳು ಮತ್ತು ಅದೇ ಕಲಾಶಾಲೆಯಲ್ಲಿ ನ್ಯೂ ಎಂ.ಎ. ಕೋರ್ಸನ್ನು ಓದಿದಾಗಲೂ ಅದ್ವೈತಪಿತಾಮಹ ಎಂದು ಪ್ರಸಿದ್ಧರಾದ ಪಂಡಿತ ಶ್ರೀ ವರಗೂರು ಕಲ್ಯಾಣಸುಂದರ ಶಾಸ್ತ್ರಿಗಳು ಮತ್ತು ಪಂಡಿತ ಶ್ರೀ ವಾಸುದೇವ ಶರ್ಮಾ ಇವರಲ್ಲಿ ಮಾಡಿದ 'ಸಿದ್ಧಾಂತಕೌಮುದೀ'ಯ ಅಭ್ಯಾಸವು ನನಗೆ ವಿದ್ಯಾರ್ಥಿಗಳಿಗೆ ಪಾಠ ಹೇಳುವದರಲ್ಲಿ ಸಾಮರ್ಥ್ಯವನ್ನು ಉಂಟುಮಾಡಿದೆ ಎಂಬುದರಲ್ಲಿ ಯಾವ ಅತಿಶಯೋಕ್ತಿಯೂ ಇಲ್ಲ. ನಾನು ಉದ್ಯೋಗದಿಂದ ನಿವೃತ್ತನಾದ ಮೇಲೆ ಧಾರವಾಡದ ಮಾಳಮಡ್ಡಿಯಲ್ಲಿ ವನವಾಸೀ ರಾಮಮಂದಿರದ ಪಾಠಶಾಲೆಯಲ್ಲಿ ಪ್ರಧಾನಾಧ್ಯಾಪಕರಾಗಿರುವ ವೈಯ್ಯಾಕರಣಭೂಷಣ ವಿದ್ವಾನ್ ಶ್ರೀ ನಾಗರಾಜಭಟ್ ಇವರಲ್ಲಿಯೂ ಮಾಡಿದ ಮಹಾಭಾಷ್ಯದ ಅಧ್ಯಯನವನ್ನು ಈ ಸಂದರ್ಭದಲ್ಲಿ ಸ್ಮರಿಸುತ್ತಾ ನಾನು ಅವರಿಗೂ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಮರ್ಪಿಸುತ್ತೇನೆ.

ಪ್ರಕೃತ 'ಲಘುಕೌಮುದೀ'ಯ ಕನ್ನಡ ವ್ಯಾಖ್ಯಾನವನ್ನು ವಿದ್ವಾನ್ ಜಿ. ವಿಷ್ಣುಮೂರ್ತಿಭಟ್ಟರು ಹಿಂದೆಯೇ ಮಾಡಿರುವರು. 'ಮಣೌ ವಜ್ರಸಮುತ್ಕೀರ್ಣೇ ಸೂತ್ರಸ್ಯೇವಾಸ್ತಿ ಮೇ ಗತಿಃ' ಎಂಬಂತೆ ನನಗೆ ಅವರ ವ್ಯಾಖ್ಯಾನವು

ಮಾರ್ಗದರ್ಶಕವಾಗಿದೆ. ಇದರ ಹೊರತು ಬೇರೆಯ ಭಾಷೆಗಳಲ್ಲಿ ಮಾಡಿರುವ ವ್ಯಾಖ್ಯಾನಗಳನ್ನೂ ಅವಲೋಕಿಸಿ ಅವುಗಳಿಂದ ಪ್ರಭಾವಿತನಾಗಿ ಈ 'ತುಳಸೀ' ಎಂಬ ಕನ್ನಡ ವ್ಯಾಖ್ಯಾನವನ್ನು ರಚಿಸಿರುವೆನು. ಹಲವಾರು ವಿಘ್ನಗಳ ಪರಂಪರೆಯಲ್ಲಿ ಹೇಗೋ ಈ ಕೃತಿಯನ್ನು 6 ವರ್ಷಗಳಲ್ಲಿ ಮುಗಿಸಿರುವೆನು. ಈ ಕೃತಿಯ ಅನುವಾದದಲ್ಲಿ ಹಲವಾರು ಭಾಗಗಳನ್ನು ನನ್ನ ಶಿಷ್ಯರಾದ ಪ್ರೊ. ಶ್ರೀವತ್ಸಾಚಾರ್ಯ ವಿ. ಕೋದಂಡಿ ಇವರು ಸಹಕರಿಸಿದ್ದರಿಂದ ಈ ನನ್ನ ಕೆಲಸ ಸಮಾಪ್ತವಾಯಿತು. ಈ ನಮ್ಮ ಕನ್ನಡ ಅನುವಾದವು ಪಂಡಿತರಿಗೂ, ವಿದ್ಯಾರ್ಥಿಗಳಿಗೂ ಕನ್ನಡಾಭಿಮಾನಿಗಳಿಗೂ ಅತ್ಯಂತ ಉಪಕಾರಕವಾಗಿ ಇರುವದು ಎಂದು ಭಾವಿಸುತ್ತೇನೆ.

'ಗಚ್ಛತಃ ಸ್ಖಲನಂ ನ ದೋಷಾಯ' ಎಂಬ ಸುಭಾಷಿತದಂತೆ ಅಲ್ಲಲ್ಲಿ ಕಣ್ತಪ್ಪಿ ಏನಾದರೂ ಪ್ರಮಾದಗಳಾಗಿದ್ದರೆ ಅದನ್ನು ಸಹೃದಯರು ಕ್ಷಮಿಸಿ ದೋಷಗಳನ್ನು ತೋರಿಸಿಕೊಟ್ಟರೆ ಪುನರ್ಮುದ್ರಣದಲ್ಲಿ ಈ ದೋಷಗಳನ್ನು ಸರಿಪಡಿಸಿಕೊಳ್ಳುವೆನು. 'ಸಂಸ್ಕೃತ ವ್ಯಾಕರಣ ಪರಂಪರೆ' ಎಂಬ ಉಪೋದ್ಘಾತವನ್ನು ಬರೆದು ಕೊಟ್ಟು ಈ ಗ್ರಂಥದ ಶೋಭೆಯನ್ನು ಹೆಚ್ಚು ಮಾಡಿರುವ ಕರ್ನಾಟಕ ಕಲಾಮಹಾವಿದ್ಯಾಲಯದ ಮರಾಠೀ ವಿಭಾಗದ ಮುಖ್ಯಸ್ಥ ರಾದ ಪ್ರೊ. ಶ್ರೀ. ಎ. ಆರ್. ಯಾರ್ದಿ ಇವರಿಗೂ ಅನಂತಾನಂತ ಧನ್ಯವಾದಗಳು. ಹೊಳೆನರಸಿಂಹಪುರದ ಶ್ರೀ 1008 ಶ್ರೀ ಅದ್ವಯಾನಂದೇಂದ್ರ ಸರಸ್ವತೀ ಸ್ವಾಮಿಗಳವರು ನನ್ನನ್ನು ಪ್ರೋತ್ಸಾಹಿಸಿ ಈ ಗ್ರಂಥವನ್ನು ಬರೆಯಲು ಆಜ್ಞಾಪಿಸಿದ್ದರಿಂದ ನಾನು ನನ್ನ ಶಿಷ್ಯನ ಜೊತೆಗೆ ಈ ಗ್ರಂಥಾನುವಾದವನ್ನು ಮಾಡಿರುವೆನು. ಪರಮ ಪೂಜ್ಯ ಶ್ರೀಗಳವರಿಗೆ ಅನಂತಾನಂತ ಸಮಸ್ಕಾರಪೂರ್ವಕ ಧನ್ಯವಾದಗಳು.

ಶ್ರೀ. ಇತಿ, ಸಜ್ಜನ ವಿಧೇಯ,

**ಡಾ॥ ಆರ್. ಸತ್ಯನಾರಾಯಣನ್, ಡಿ.ಲಿಟ್.**

# ಸಂಸ್ಕೃತ ವ್ಯಾಕರಣದ ಪರಂಪರೆ

ವಿಶ್ವ ಸಾಹಿತ್ಯದಲ್ಲಿ ವೇದಗಳು ಅತ್ಯಂತ ಪ್ರಾಚೀನವಾಗಿವೆ ಎಂಬುದು ಸರ್ವಸಮ್ಮತವಾಗಿದೆ. ಆದಕಾರಣ ಭಾರತೀಯ ಪರಂಪರೆಯಲ್ಲಿ ಎಲ್ಲ ವಿಷಯಗಳನ್ನು ವೇದಗಳೊಂದಿಗೆ ಹೋಲಿಸುವ ಪ್ರಯತ್ನ ಮಾಡಲಾಗುತ್ತದೆ. ವ್ಯಾಕರಣ ಶಾಸ್ತ್ರದ ಮೂಲ ಸ್ರೋತವನ್ನು ಹುಡುಕಬೇಕಾದರೆ, ವೇದಗಳ ಬಗ್ಗೆ ವಿಚಾರ ಮಾಡುವದು ಅನಿವಾರ್ಯ. ವೇದಾಂಗ ಎಂಬ ಹೆಸರಿನಿಂದ ಸ್ಪಷ್ಟವಾಗುವುದೇನೆಂದರೆ, ಶಿಕ್ಷಾ, ಕಲ್ಪ, ಛಂದ, ನಿರುಕ್ತ, ವ್ಯಾಕರಣ ಮತ್ತು ಜ್ಯೋತಿಷ ಈ ಆರು ಅಂಗಗಳನ್ನು ಬೇರೆ ಬೇರೆಯಾಗಿ ಪರಿಗಣಿಸಬೇಕು. ವೇದಗಳು ಸಂಹಿತಾ ರೂಪವಾಗಿದ್ದರಿಂದ, ಸ್ವಾಧ್ಯಾಯ ಪ್ರವೃತ್ತಿಯು ಸಾಧ್ಯವಾಯಿತು. ವೈದಿಕ ಚಿಂತನೆಯ ಜೊತೆಗೆ ಅರ್ಥಾನುಸಂಧಾನಕ್ಕಾಗಿ ಶಬ್ದಗಳ ವಿಶ್ಲೇಷಣೆ ಮಾಡುವದು ಆವಶ್ಯಕವಾಗಿತ್ತು. ಇದರ ಪರಿಣಾಮವಾಗಿ ಈ ವ್ಯಾಕರಣವು ಒಂದು ಅಂಗವಾಯಿತು. ಆರು ಅಂಗಗಳಲ್ಲಿ ಇರುವ ಇದರ ಪ್ರಾಧಾನ್ಯತೆಯನ್ನು ಕೂಡ ಒಪ್ಪಿಕೊಳ್ಳಲಾಯಿತು. 'ಮುಖಂ ವ್ಯಾಕರಣಂ ಸ್ಮೃತಂ' ಎಂದು ಹೇಳುತ್ತಾರೆ. 'ಶಿಕ್ಷಾ' ಮತ್ತು 'ನಿರುಕ್ತ' ಗಳಲ್ಲಿ ಉಲ್ಲೇಖಿಸಲಾದ ಅನೇಕ ಸಂಗತಿಗಳು ವರ್ತಮಾನಕಾಲದ ಪ್ರಚಲಿತ ವ್ಯಾಕರಣದಲ್ಲಿ ಒಳಗೊಂಡಿವೆ. ಶಿಕ್ಷಾ ಮತ್ತು ನಿರುಕ್ತ ಈ ಎರಡು ವೇದಾಂಗಗಳ ಗ್ರಂಥಗಳಲ್ಲಿ, ಪಾಣಿನೀಯ ವ್ಯಾಕರಣಕ್ಕೆ ಸರಿಸಮಾನವಾದ ಅನೇಕ ವಚನಗಳಿವೆ. ಈ ರೀತಿ ವ್ಯಾಕರಣ, ಶಿಕ್ಷಾ, ನಿರುಕ್ತ ಈ ಮೂರೂ ಅಂಗಗಳು ಪರಸ್ಪರ ಸಂಬದ್ಧವಾಗಿವೆ. ಶಿಕ್ಷಾ ಮತ್ತು ನಿರುಕ್ತ ಇವು, ಒಂದು ರೀತಿಯಲ್ಲಿ ವ್ಯಾಕರಣಕ್ಕೆ ಪೂರಕವಾದ ಅಂಗಗಳಾಗಿವೆ.

## ವೈದಿಕ ವ್ಯಾಕರಣ : ಪ್ರಾತಿಶಾಖ್ಯ

ವೈದಿಕ ಶಾಖೆಗಳಿಗೆ ಸಂಬಂಧಿಸಿದ ಎಲ್ಲ ವಿವರಣೆ ಪ್ರಾತಿಶಾಖ್ಯದಲ್ಲಿ ಲಭ್ಯವಿರುತ್ತದೆ. ಇವು ನೇರವಾಗಿ ವೇದಗಳಿಗೆ ಸಂಬಂಧಿಸಿವೆ. ಅಂತೆಯೇ ಇವುಗಳಿಗೆ ಪ್ರಾತಿಶಾಖ್ಯ ಎಂದು ಕರೆಯಲಾಗುತ್ತದೆ. ಪ್ರಾತಿಶಾಖ್ಯಗಳಲ್ಲಿ ವೇದಗಳ ವಿಭಿನ್ನ ಶಾಖೆಗಳಿಗೆ ಸಂಬಂಧಿಸಿದ ವ್ಯಾಕರಣದ ನಿಯಮಗಳನ್ನು ಕೊಡಲಾಗಿದೆ. ಇವುಗಳಲ್ಲಿ ವರ್ಣ-ಉಚ್ಚಾರಣ ಶಿಕ್ಷಾ, ಸಂಹಿತೆಯ ಪದಪಾಠಗಳನ್ನು ಸಂಹಿತೆಯಲ್ಲಿ ಪರಿವರ್ತಿಸುವುದು, ಸಂಧಿವಿಜ್ಞಾನ, ಸ್ವರವಿಧಾನ, ಪದಗಳ ವಿಭಜನೆ ಮತ್ತು ಸ್ವರಸಂಚಾರ ಇಂಥ ವಿಷಯಗಳ ವಿವೇಚನೆ ಮಾಡಲಾಗಿದೆ. ಇದರೊಂದಿಗೆ ಪ್ರಾತಿಶಾಖ್ಯಗಳಲ್ಲಿ ವ್ಯಾಕರಣದ ಪಾರಿಭಾಷಿಕ ಶಬ್ದಗಳು ಕೂಡ ಸಿಗುತ್ತವೆ. ಪ್ರಾತಿಶಾಖ್ಯಗಳಲ್ಲಿ 'ಋಕ್‌ಪ್ರಾತಿಶಾಖ್ಯ' ಎಂಬುದು ಎಲ್ಲಕ್ಕಿಂತ ಪ್ರಾಚೀನವಾದುದು ಎಂಬ ನಂಬಿಕೆ ಇದೆ. ವಾಜಸನೇಯ ಪ್ರಾತಿಶಾಖ್ಯ, ಸಾಮ - ಪ್ರಾತಿಶಾಖ್ಯ, ತೈತ್ತಿರೀಯ - ಪ್ರಾತಿಶಾಖ್ಯ, ಮೈತ್ರಾಯಣೀಯ ಪ್ರಾತಿಶಾಖ್ಯ ಮತ್ತು ಅಥರ್ವ-ಪ್ರಾತಿಶಾಖ್ಯ ಇವು ಸುಪರಿಚಿತವಾಗಿವೆ. ಪ್ರಾತಿಶಾಖ್ಯಕ್ಕಿಂತ ಹಳೆಯದಾದ ಬ್ರಾಹ್ಮಣ-ಗ್ರಂಥಗಳಲ್ಲಿ ಕೂಡ ಕೆಲವು ಸಂಗತಿಗಳು ಕಂಡುಬರುತ್ತಿದ್ದು, ಅದರ ಪ್ರಕಾರ, ಆ ಕಾಲದಲ್ಲಿ ವ್ಯಾಕರಣಶಾಸ್ತ್ರದ ಬಗ್ಗೆ ಸಾಕಷ್ಟು ಚರ್ಚೆ ನಡೆಯುತ್ತಿತ್ತು

ಎಂದು ತಿಳಿದು ಬರುತ್ತದೆ.

ಪಾಣಿನಿಯವರು ತಮ್ಮ ಅಷ್ಟಾಧ್ಯಾಯಿಯಲ್ಲಿ ವಾಜಸನೇಯಿ-ಪ್ರಾತಿಶಾಖ್ಯದಿಂದ ಉಪಧಾ, ಉದಾತ್ತ, ಅನುದಾತ್ತ, ಸ್ವರಿತ ಮತ್ತು ಆಮ್ರೇಡಿತ ಮುಂತಾದ ಪಾರಿಭಾಷಿಕ ಶಬ್ದಗಳನ್ನು ಯಥಾವತ್ತಾಗಿ ಸ್ವೀಕರಿಸಿದ್ದಾರೆ. ಮತ್ತು ಕೆಲವು ಸೂತ್ರಗಳಲ್ಲಿ ಕೆಲವು ಬದಲಾವಣೆಗಳನ್ನು ಮಾಡಿ ಅವುಗಳನ್ನು ಸ್ವೀಕರಿಸಿದ್ದಾರೆ.

ಯಾಸ್ಕಾಚಾರ್ಯರು ಈ ಪ್ರಸಂಗದಲ್ಲಿ ಯಾಸ್ಕರ ನಿರುಕ್ತ ಗ್ರಂಥದ ಚರ್ಚೆ ಆವಶ್ಯಕವೆನಿಸುತ್ತದೆ.'ನಿರುಕ್ತ' ಗ್ರಂಥವು ನೇರವಾಗಿ ವ್ಯಾಕರಣಕ್ಕೆ ಸಂಬಂಧಿಸಿರದಿದ್ದರೂ ಅದರಲ್ಲಿ ಶಬ್ದಗಳ ವ್ಯುತ್ಪತ್ತಿಗೆ ಸಂಬಂಧಿಸಿದ ಚರ್ಚೆ ಮಾಡಿರುವದರಿಂದ, ಅದು ವ್ಯಾಕರಣಕ್ಕೆ ಸರಿಸಮಾನವಾಗಿದೆ. ಪ್ರಾತಿಶಾಖ್ಯದ ಪ್ರಕಾರ, ಶಬ್ದಗಳಲ್ಲಿ – ನಾಮ, ಆಖ್ಯಾತ, ಉಪಸರ್ಗ ಮತ್ತು ನಿಪಾತ, ಎಂದು ನಾಲ್ಕು ಭೇದಗಳಿವೆ. ಪಾಣಿನಿಯವರಿಗಿಂತ ಮೊದಲು, ಯಾಸ್ಕಾಚಾರ್ಯರು ಭಾಷಾ ವಿಜ್ಞಾನ ಕ್ಷೇತ್ರದಲ್ಲಿ ಸಾಕಷ್ಟು ಕಾರ್ಯ ಮಾಡಿದ್ದಾರೆ. ಆಧುನಿಕ ಇತಿಹಾಸಕಾರರ ಪ್ರಕಾರ ಯಾಸ್ಕಾಚಾರ್ಯರು ಕ್ರಿಶ. ಪೂರ್ವ 800ರ ಕಾಲಖಂಡದಲ್ಲಿ ಆಗಿ ಹೋದರು.

ಈ ಪ್ರಕಾರವಾಗಿ ಪಾಣಿನಿಯವರಗಿಂತ ಮೊದಲೇ ವ್ಯಾಕರಣಶಾಸ್ತ್ರದ ಪೂರ್ವಪೀಠಿಕೆ ಸಿದ್ಧವಾಗಿತ್ತು. ಇದು ಈ ಶಾಸ್ತ್ರದ ಸೃಜನಾತ್ಮಕ ಕಾಲಖಂಡವಾಗಿತ್ತು. ಈ ಕಾಲಘಟ್ಟದಲ್ಲಿ ಪಾಣಿನಿ, ಕಾತ್ಯಾಯನ ಮತ್ತು ಪತಂಜಲಿಯವರು ತಮ್ಮ ರಚನೆಗಳಿಂದ ವ್ಯಾಕರಣದ ಮೌಲಿಕ ಕೃತಿಗಳನ್ನು ರಚಿಸಿದರು. ವ್ಯಾಕರಣ ಶಾಸ್ತ್ರದಲ್ಲಿ ಮಹರ್ಷಿ ಪಾಣಿನಿ, ಕಾತ್ಯಾಯನ ಮತ್ತು ಪತಂಜಲಿ ಇವರೆಲ್ಲರ ಕೊಡುಗೆಯಿಂದ ವ್ಯಾಕರಣವು ಪ್ರೌಢತೆಯನ್ನು ಪಡೆದುಕೊಂಡಿತು.

## ತ್ರಿಮುನಿ ವ್ಯಾಕರಣ

ಸಂಸ್ಕೃತ ವ್ಯಾಕರಣದ ಕ್ಷೇತ್ರದಲ್ಲಿ ಪಾಣಿನಿಯವರು ಯುಗಪುರುಷರ ರೂಪದಲ್ಲಿ ಅವತರಿಸಿದರು. ಅವರು ತಮ್ಮ ಪೂರ್ವಜರ ಪರಂಪರೆಯ ಸಹಾಯದಿಂದ ಒಂದು ಅದ್ಭುತ ವ್ಯಾಕರಣವನ್ನು ರಚಿಸಿದರು. ಇದರಿಂದ ಭವಿಷ್ಯದಲ್ಲಿ ಉಪಯುಕ್ತವಾಗುವಂತಹ ಸಂಸ್ಕೃತ ಭಾಷೆಗೆ ಮಾರ್ಗದರ್ಶನ ದೊರೆಯಿತು. ತಮ್ಮ ಪೂರ್ವಜರ ವೈದಿಕ ಮತ್ತು ಲೌಕಿಕ ಸಾಹಿತ್ಯದ ಸೂಕ್ಷ್ಮ ಹಾಗೂ ವಿವೇಚನಾತ್ಮಕ ಅಧ್ಯಯನ ಮಾಡಿ ಇವೆರಡರ ನಡುವೆ ತಾದಾತ್ಮ್ಯವನ್ನು ಸ್ಥಾಪಿಸಿದರು. ಅದು ಸಂಸ್ಕೃತ ಭಾಷೆಯ ಹೊಸ ರೂಪಕ್ಕೆ ಚಿರಸ್ಥಾನ ಕೊಡುವಲ್ಲಿ ಮಹತ್ವದ ಪಾತ್ರ ವಹಿಸಿದೆ. ವೈದಿಕ ಪ್ರಯೋಗಗಳಿಗೆ ಮಾನ್ಯತೆ ಕೊಡುವುದರ ಜೊತೆಗೆ ಪಾಣಿನಿಯವರು, ಲೌಕಿಕ ಸಂಸ್ಕೃತವಕ್ಕೂ ಕೂಡ ನಿಯಮಗಳನ್ನು ಹಾಕಿಕೊಟ್ಟರು. ಈ ವಿಷಯದಲ್ಲಿ ಅವರ ದೃಷ್ಟಿಕೋನವು ವಿಶಾಲವಾಗಿತ್ತು. ತಮ್ಮ ಕಾಲಘಟ್ಟದವರೆಗೆ ಸಂಸ್ಕೃತದಲ್ಲಿ ಪ್ರಚಲಿತವಾಗಿದ್ದ ಎಲ್ಲ ಸುಶಬ್ದಗಳನ್ನು ಅವರು ಅಳವಡಿಸಿಕೊಂಡರು. ಇದು ಅಭೂತಪೂರ್ವ ಪ್ರಯತ್ನವಾಗಿತ್ತು. ಇದರ ಪರಿಣಾಮವಾಗಿ ಪಾಣಿನೀಯ ವ್ಯಾಕರಣ ಒಂದೇ ಸಂಸ್ಕೃತ ವ್ಯಾಕರಣ ಎಂದು

ಜನಸಾಮಾನ್ಯರಲ್ಲಿ ನಂಬಿಕೆಯನ್ನು ಮೂಡಿಸಿತು. ಇದರ ಒಂದೇ ಒಂದು ಕಾರಣ ಅಂದರೆ ಅವರ ಅಷ್ಟಾಧ್ಯಾಯೀ. ಈ ಅಷ್ಟಾಧ್ಯಾಯಿಯನ್ನು ಜಗತ್ತಿನ ವ್ಯಾಕರಣ ಗ್ರಂಥಗಳಲ್ಲಿ, ಪ್ರೌಢ ಮತ್ತು ಪ್ರಾಮಾಣಿಕ ವ್ಯಾಕರಣ ಗ್ರಂಥ ಎಂದು ಒಮ್ಮತದಿಂದ ಒಪ್ಪಲಾಯಿತು.

ಪಾಣಿನಿಯವರ ಪ್ರಭಾವದ ಪರಿಣಾಮವಾಗಿ ಅವರಿಗಿಂತ ಮೊದಲು ಆಗಿ ಹೋದ ವೈಯಾಕರಣಿಗಳ ಪ್ರಭಾವ ಕಡಿಮೆಗೊಂಡಿತು. ಅದೇ ರೀತಿ ಪ್ರಾಚೀನ ವೈಯಾಕರಣಗಳ ಗ್ರಂಥಗಳೂ ಕೂಡ ತಮ್ಮ ಮಹತ್ವವನ್ನು ಕಳೆದುಕೊಂಡವು. ಅವರಲ್ಲಿ ಕೆಲವರ ಹೆಸರುಗಳು ಮಾತ್ರ ಉಳಿದಿವೆ. ಆದರೂ ಪಾಣಿನಿಯವರು ತಮ್ಮ ಪೂರ್ವಜರಲ್ಲಿ ಹತ್ತು ಜನರ ಹೆಸರುಗಳನ್ನು ತಮ್ಮ ಸೂತ್ರಗಳಲ್ಲಿ ಅಲ್ಲಲ್ಲಿ ಉಲ್ಲೇಖಿಸಿದ್ದಾರೆ. ಅವು ಈ ರೀತಿ ಇವೆ: ಆಪಿಶಲಿ, ಕಾಶ್ಯಪ, ಗಾರ್ಗ್ಯ, ಗಾಲವ, ಚಾಕ್ರವರ್ಮಣ, ಭಾರದ್ವಾಜ, ಶಾಕಟಾಯನ, ಶಾಕಲ್ಯ, ಸೇನಕ ಮತ್ತು ಸ್ಫೋಟಾಯನ. ಇವರಲ್ಲಿ ಇಬ್ಬರು ವೈಯಾಕರಣಿಗಳ ವಿಶೇಷ ಪ್ರಭಾವ ಉಳಿದಿತ್ತು. ಯಾಸ್ಕಾಚಾರ್ಯರು ಕೂಡ ತಮ್ಮ ನಿರುಕ್ತದಲ್ಲಿ ಅವರನ್ನು ಉಲ್ಲೇಖಿಸಿದ್ದಾರೆ. ಗಾರ್ಗ್ಯ ಮತ್ತು ಶಾಕಟಾಯನ ಇವರಿಬ್ಬರು ತಮ್ಮ ವಿಭಿನ್ನ ಮತಗಳಿಗಾಗಿ ಭಾಷಾ ವಿಜ್ಞಾನದ ಕ್ಷೇತ್ರದಲ್ಲಿ ಇಂದಿಗೂ ಚಿರಪರಿಚಿತರಾಗಿದ್ದಾರೆ. ಭಾಷೆಯ ಸಂಕ್ರಮಣಾವಸ್ಥೆಯಲ್ಲಿ ಪಾಣಿನಿಯವರು ಅಷ್ಟಾಧ್ಯಾಯಿಯನ್ನು ರಚಿಸಿ ಸಂಸ್ಕೃತ ಭಾಷೆಗೆ ವ್ಯಾಕರಣದ ರೂಪದಲ್ಲಿ ಒಂದು ಮಹಾನ್ ಕೊಡುಗೆಯನ್ನು ನೀಡಿದರು.

ಕೆಲವು ವರ್ಷಗಳ ನಂತರ ಪಾಣಿನಿಯವರ ಮಹತ್ವ ಬಲ್ಲವರಾದ ಕಾತ್ಯಾಯನರು, ಈ ಕೆಲಸ ಮುಂದುವರೆಸಿ, ವಾರ್ತಿಕಗಳನ್ನು ರಚಿಸಿದರು. ಅಷ್ಟಾಧ್ಯಾಯಿಗೆ ಪೂರಕವಾಗಿ ವಾರ್ತಿಕ ಗ್ರಂಥವು ವಿಶೇಷರೂಪವನ್ನು ಪಡೆದುಕೊಂಡಿತು ಆಕಾರಗೊಂಡಿತು. ಅನೇಕರಿಗೆ ಅದರ ಬಗ್ಗೆ ಅಸಂತೋಷವಾಗಿದ್ದರೂ, ಕಾತ್ಯಾಯನ ಅವರು ಪಾಣಿನಿಯವರ ವ್ಯಾಕರಣದ ಬಗ್ಗೆ ವಿಮರ್ಶೆ ಮಾಡಿದ್ದಾರೆ. ಈ ಪ್ರಕಾರವಾಗಿ ಅವರು 1500 ವಾರ್ತಿಕಗಳನ್ನು ಬರೆದರು.

ಪಾಣಿನಿ ಮತ್ತು ಕಾತ್ಯಾಯನರಿವರಿಬ್ಬರ ಪ್ರಯತ್ನಗಳ ಮಹತ್ವವನ್ನರಿಯಲು ಒಬ್ಬ ಅಂತರ್‌ದೃಷ್ಟಿಯುಳ್ಳ ವ್ಯಕ್ತಿಯ ಅವಶ್ಯಕತೆ ಇತ್ತು. ಅದನ್ನು ಶೇಷಾವತಾರರಾದ ಪತಂಜಲಿಯವರು ಅರ್ಥೈಸಿಕೊಂಡರು. ಕಾತ್ಯಾಯನರ ಅನೇಕ ವಾರ್ತಿಕಗಳಿಲ್ಲದಿದ್ದರೂ ಪಾಣಿನಿಯವರ ಸೂತ್ರಗಳ ಮಹತ್ವ ಕಡಿಮೆಯಾಗದು ಎಂದು ಪತಂಜಲಿಯವರು ತಿಳಿದುಕೊಂಡರು. ಪತಂಜಲಿಯವರು ಒಂದು ಹೆಜ್ಜೆ ಮುಂದೆ ಹೋಗಿ ಒಂದು ಕೆಲಸ ಆರಂಭಿಸಿದರು. ಪಾಣಿನಿಯವರ ಬರಹದಲ್ಲಿ ಎಲ್ಲೆಲ್ಲಿ ದ್ವಿರುಕ್ತಿ/ಪುನರುಕ್ತಿ ಇತ್ತೋ, ಅದನ್ನು ಅನವಶ್ಯಕ ಎಂದು ಹೇಳಿದರು. ಅವರು ಪಾಣಿನಿಯವರ ಸೂತ್ರಗಳ ಮೇಲೆ ಪ್ರತ್ಯಾಖ್ಯಾನ ಬರೆದು ತಮ್ಮ ಬುದ್ಧಿವಂತಿಕೆಯನ್ನು ತೋರಿಸಿಕೊಟ್ಟರು. ಪಾಣಿನಿಯವರ ಬರಹದಲ್ಲಿ ಯಾವುದೇ ನ್ಯೂನ್ಯತೆ ಇರಕೂಡದು ಎಂದು ಅವರ ಆಶಯವಾಗಿತ್ತು. ಪತಂಜಲಿಯವರು ಪಾಣಿನಿಯವರ ಜೊತೆ ಕಾತ್ಯಾಯನರನ್ನು ಅಲ್ಲಲ್ಲಿ ಪ್ರಶಂಶಿಸಿದ್ದಾರೆ.

ಈ ರೀತಿ ನೀರ–ಕ್ಷೀರ ವಿವೇಕದಿಂದ ಪತಂಜಲಿಯವರ ಮಹತ್ವ ಮತ್ತಿಷ್ಟು ಹೆಚ್ಚಾಯಿತು. ಇದರ ಪರಿಣಾಮವಾಗಿ ಪಾಣಿನಿ, ಕಾತ್ಯಾಯನ ಮತ್ತು ಪತಂಜಲಿಯವರು ಪ್ರತಿಪಾದಿಸಿದ ಸಿದ್ಧಾಂತಗಳಲ್ಲಿ, ಪತಂಜಲಿಯವರ ಸಿದ್ಧಾಂತಕ್ಕೆ ಹೆಚ್ಚು ಮಾನ್ಯತೆ ದೊರಕಿತು. ಇದರಿಂದಾಗಿ ಪತಂಜಲಿ ಮಹಾಭಾಷ್ಯಕ್ಕೆ ಒಂದು ಅಪೂರ್ವ ಕೃತಿಯ ಸ್ಥಾನ ಲಭಿಸಿತು.

**"ಮಹಾಭಾಷ್ಯಂ ವಾ ಪಠನೀಯಂ ಮಹಾರಾಜ್ಯಂ ವಾ ಶಾಸನೀಯಮ್"**[1] ಎಂಬ ಪ್ರಶಂಶೆಗೆ ಪತಂಜಲಿಯವರು ಪಾತ್ರರಾದರು. ಪಾಣಿನಿ ಮುನಿಗಳು ಪಾಣಿನಿಯವರ ಕಾಲಮಾನ ಯಾವುದು ಎಂಬುದರ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಶ್ರೀ ಯುಧಿಷ್ಠಿರ–ಮೀಮಾಂಸಕರ ಪ್ರಕಾರ ಪಾಣಿನಿಯವರ ಕಾಲಘಟ್ಟ ಕ್ರಿ.ಶ.ಪೂ 1800 ಎಂದು ನಿರ್ಧಾರಿತವಾಗಿದೆ. ಮಹಾಮಹೋಪಾಧ್ಯಾಯ–ಪಂಡಿತ–ಗಿರಿಧರಶರ್ಮಾ–ಚರ್ತುರ್ವೇದಿಯವರ ಪ್ರಕಾರ ಪಾಣಿನಿಯವರ ಕಾಲಘಟ್ಟ ಕ್ರಿ.ಶ.ಪೂ 1200 ಎಂದು ನಿರ್ಧಾರಿತವಾಗಿದೆ. ಇವರು ಮಂಡಿಸಿದ ಅಭಿಪ್ರಾಯದ ಪ್ರಕಾರ ಪಾಣಿನಿ, ಕಾತ್ಯಾಯನ ಮತ್ತು ಪತಂಜಲಿ ಇವರಲ್ಲಿ ಪ್ರತ್ಯೇಕವಾಗಿ 500 ವರ್ಷಗಳ ಅಂತರವಿರಬೇಕು. ಪತಂಜಲಿ ಕ್ರಿ.ಶ. 200 ಎಂದು ಒಪ್ಪಿದರೆ, ಕಾತ್ಯಾಯನ ಕ್ರಿ.ಶ.ಪೂ 700 ಮತ್ತು ಪತಂಜಲಿಯವರ ಕಾಲ ಕ್ರಿ.ಶ.ಪೂ 1200 ಎಂದು ನಿರ್ಧಾರಿತವಾಗುತ್ತದೆ. ಪಾಣಿನಿಯವರು ತಮ್ಮ ಪ್ರತಿಭೆಯ ಬಲದಿಂದ ಅಷ್ಟಾಧ್ಯಾಯಿಯನ್ನು ರಚಿಸಿದರು. ಇದರಲ್ಲಿ ಎಂಟು ಅಧ್ಯಾಯಗಳಿವೆ. ಪ್ರತಿಯೊಂದರಲ್ಲಿ ನಾಲ್ಕು ಚರಣಗಳಿವೆ. ಪ್ರತಿಯೊಂದು ಚರಣದ ಸೂತ್ರಗಳ ಸಂಖ್ಯೆ ಭಿನ್ನವಾಗಿದೆ. ಇಡೀ ಅಷ್ಟಾಧ್ಯಾಯಿಯಲ್ಲಿ ಸುಮಾರು 4000 ಸೂತ್ರಗಳಿವೆ. ವ್ಯಾಕರಣದ ದೃಷ್ಟಿಯಿಂದ ನೋಡಿದರೆ ಅಷ್ಟಾಧ್ಯಾಯದಲ್ಲಿ ಮೂರು ವಿಭಾಗಗಳನ್ನು ಮಾಡಬಹುದು.

1. ವಾಕ್ಯ ಪದಗಳ ಸಂಕಲನ (1–2 ಅಧ್ಯಾಯಗಳು)
2. ಪದಗಳ ಪ್ರಕೃತಿ ಪ್ರತ್ಯಯ ವಿಭಾಗ (3–5 ಅಧ್ಯಾಯಗಳು)
3. ಪ್ರಕೃತಿ ಪ್ರತ್ಯಯ ವಿಭಾಗಗಳೊಡನೆ ಆದೇಶ–ಆಗಮಗಳನ್ನು ಕೂಡಿಸಿ ಪದಗಳ ರಚನೆ (6–8 ಅಧ್ಯಾಯಗಳು).

ಈ ಪ್ರಕಾರವಾಗಿ ಅಷ್ಟಾಧ್ಯಾಯಿಯ ಮೊದಲನೇಯ ಅಧ್ಯಾಯದಲ್ಲಿ ಶಾಸ್ತ್ರೀಯ ಮತ್ತು ವ್ಯವಹಾರಕ್ಕೆ ಉಪಯುಕ್ತವಾಗುವಂತಹ ಸಂಜ್ಞೆಗಳ ಸಂಕಲನವಿದೆ. ಇವುಗಳನ್ನು ಹೊರತುಪಡಿಸಿ, ಉಪಪದ ಮುಂತಾದ ಸಂಜ್ಞೆಗಳನ್ನು ಆಯಾ ಪ್ರಕರಣಗಳಲ್ಲಿ ಕೂಡಿಸಲಾಗಿದೆ. ಎರಡನೆಯ ಅಧ್ಯಾಯದಲ್ಲಿ, ಸಮಾಸ ಮತ್ತು ಕಾರಕ ಪ್ರಕರಣಗಳಿವೆ. ಮೂರನೇ ಅಧ್ಯಾಯದಲ್ಲಿ ಕೃತ್ಯ ಮತ್ತು ಕೃತ್ ಪ್ರತ್ಯಯಗಳು ಇವೆ. ನಾಲ್ಕನೇ ಮತ್ತು ಐದನೇಯ ಅಧ್ಯಾಯಗಳಲ್ಲಿ ತದ್ಧಿತ ಪ್ರತ್ಯಯಗಳನ್ನು ವಿವರಿಸಲಾಗಿದೆ. ಆರನೇ ಅಧ್ಯಾಯದಲ್ಲಿ ತಿಙಂತ, ಸಂಧಿ ಮತ್ತು ಸ್ವರಗಳ ಬಗ್ಗೆ ನಿಯಮಗಳ ವಿವರಣೆ ಇದೆ. ಏಳನೇ ಅಧ್ಯಾಯದಲ್ಲಿ ಅಂಗಾಧಿಕಾರ (ಸುಬನ್ತ ಮತ್ತು ತಿಙನ್ತ) ಗಳ ವಿವರಣೆ ಇದೆ. ಕೊನೆಯ ಅಧ್ಯಾಯವಾದ ಎಂಟನೇ ಅಧ್ಯಾಯದಲ್ಲಿ ದ್ವಿತ್ವ–ವಿಧಾನ ಸ್ವರ–ವೈದಿಕ ಪ್ರಕ್ರಿಯೆ, ಸಂಧಿ ಪ್ರಕರಣ ಷತ್ವ ಮತ್ತು ಣತ್ವಗಳ ಬಗೆಗಿನ ಸೂತ್ರಗಳು ಸಮಾವೇಶಗೊಂಡಿವೆ.

ಅಧ್ಯಾಯದ ಕೊನೆಯ ಮೂರು ಪಾದಗಳು 'ತ್ರಿಪಾದಿ' ಎಂದೇ ಪ್ರಸಿದ್ಧವಾಗಿವೆ. ಅಷ್ಟಾಧ್ಯಾಯಿಯ ಪರಿಶಿಷ್ಟವಾಗಿ ಧಾತುಪಾಠ, ಗಣಪಾಠ, ಉಣಾದಿಸೂತ್ರ, ಲಿಂಗಾನುಶಾಸನ ಮತ್ತು ಶಿಕ್ಷಾಸೂತ್ರ ಇವು ಬರುತ್ತವೆ. ಇವುಗಳಲ್ಲಿ ಶಾಕಟಾಯನ ರಚಿತ ಉಣಾದಿ ಸೂತ್ರಗಳನ್ನು ಬಿಟ್ಟು ಉಳಿದವುಗಳನ್ನು ಪಾಣಿನಿಯವರೇ ರಚಿಸಿದ್ದಾರೆ ಎಂದು ನಂಬಲಾಗುತ್ತದೆ. ಇವರು 'ಜಾಂಬುವತೀ ವಿಜಯ' ಎಂಬ ಕಾವ್ಯವನ್ನು ಕೂಡ ರಚಿಸಿದ್ದಾರೆ.

ಪಾಣಿನಿಯವರನ್ನು 'ಶಾಲಾತುರೀಯ' ಎಂದು ಕರೆಯಲಾಗುತ್ತದೆ. ಇವರ ಪೂರ್ವಜರು ಶಲಾತುರ ಗ್ರಾಮದ ನಿವಾಸಿಗಳಾಗಿದ್ದರು. ಪುರಾತತ್ವ ವಿಭಾಗದ ವಿದ್ವಾಂಸರ ಪ್ರಕಾರ **ಪೇಶಾವರದ ಅಟಕ** ಎಂಬ ಗ್ರಾಮದ ಸಮೀಪ 'ಲಾಹುರ' ಎಂಬ ಊರು ಇದೆ. ಅದೆ ಹಳೆಯ ಶಲಾತುರವಾಗಿದೆ. ಇವರ ಗುರುಗಳು ಉಪವರ್ಷಾಚಾರ್ಯರು. ಇವರು ತಕ್ಷಶಿಲೆಯಲ್ಲಿ ವಿದ್ಯಾಭ್ಯಾಸವನ್ನು ಮಾಡಿದವರು. ಪಾಣಿನಿಯವರು ತ್ರಯೋದಶೀ ದಿನದಂದು ನಿಧನ ಹೊಂದಿದ್ದಕ್ಕಾಗಿ ವೈಯಾಕರಣಿಗಳು ತ್ರಯೋದಶೀ ದಿನದಂದು ಅಧ್ಯಯನ ಮಾಡುವುದಿಲ್ಲ ಎಂದು ನಂಬಿಕೆ ಇದೆ.

## ಕಾತ್ಯಾಯನರು

ಪಾಣಿನಿ ಮತ್ತು ಪತಂಜಲಿ ಇವರಿಬ್ಬರ ವಿಚಾರದಲ್ಲಿ ಸಮನ್ವಯ ಸಾಧಿಸುವ ಕಾರ್ಯ ಕಾತ್ಯಾಯನರು ಮಾಡಿದರು. ಇವರು ವಾರ್ತಿಕಗಳನ್ನು ಬರೆದರು. ಸಧ್ಯದಲ್ಲಿ ವಾರ್ತಿಕಗಳ ನಿಜವಾದ ರೂಪ ದೊರಕುವುದಿಲ್ಲ. ಮಹಾಭಾಷ್ಯದ ಸಹಾಯದಿಂದ ಮಾತ್ರ ಕಾತ್ಯಾಯನರ ವಾರ್ತಿಕಗಳನ್ನು ಗುರುತಿಸಲಾಗುತ್ತದೆ. ಕಾತ್ಯಾಯನರು ದಕ್ಷಿಣ ದೇಶದವರಾಗಿದ್ದರು. ಪತಂಜಲಿಯವರ ವಾಕ್ಯಗಳೇ ಇದಕ್ಕೆ ಆಧಾರ. 'ಪ್ರಿಯತದ್ಧಿತೌ ದಾಕ್ಷಿಣಾತ್ಯಾಃ ಲೋಕೆ ವೇದೆ ಇತಿ ಪ್ರಯೋಕ್ತವ್ಯೇ ಲೌಕಿಕ ವೈದಿಕೇಷು ಇತಿ ಪ್ರಯುಞ್ಜತೆ'.

ವಾರ್ತಿಕಗಳೆಂದರೆ ಒಂದು ರೀತಿಯಲ್ಲಿ ಸೂತ್ರಗಳ ವ್ಯಾಖ್ಯಾನವಾಗಿವೆ. ಕಾತ್ಯಾಯನರು ತಮ್ಮ ವಾರ್ತಿಕಗಳಲ್ಲಿ ಪ್ರಕ್ರಿಯೆಗಳನ್ನಷ್ಟೇ ಅಲ್ಲ, ವ್ಯಾಕಾರಣದ ದಾರ್ಶಿನಕತೆಯ ಬಗ್ಗೆ ಕೂಡ ವಿಚಾರ ಮಾಡಿದ್ದಾರೆ. ವಾರ್ತಿಕಗಳನ್ನು ಬಿಟ್ಟು ಕಾತ್ಯಾಯನರ ಇನ್ನಿತರ ರಚನೆಗಳು ಈ ರೀತಿ ಇವೆ–1. ಸ್ವರ್ಗಾರೋಹಣ ಕಾವ್ಯ 2. ಕಾತ್ಯಾಯನ ಸ್ಮೃತಿ 3. ಉಭಯಸಾರಿಕಾ ಭಾಣ (ನಾಟಕ) ಮತ್ತು 4. ಭ್ರಾಜ ಶ್ಲೋಕ. ಪಾಣಿನಿಯವರು ಬರೆದ 'ಜಾಂಬವತೀವಿಜಯ'ದ ಜೊತೆಗೆ ಸ್ಪರ್ಧಿಸಲೆಂದೇ ಕಾತ್ಯಾಯನರು 'ಸ್ವರ್ಗಾರೋಹಣ' ಎಂಬ ಕಾವ್ಯವನ್ನು ಬರೆದರು ಎಂಬ ನಂಬಿಕೆ ಇದೆ. ಇವರ ಕಾವ್ಯದ ಬಗ್ಗೆ ಪತಂಜಲಿಯವರು ಮಹಾಭಾಷ್ಯದಲ್ಲಿ 'ವಾರರುಚಂ ಕಾವ್ಯಮ್' ಎಂದು ಉಲ್ಲೇಖಿಸಿದ್ದಾರೆ.

## ಪತಂಜಲಿ ಮುನಿಗಳು

ಪಾಣಿನಿಯವರ ವ್ಯಾಕರಣವನ್ನು ಸರ್ವಾಂಗೀಣವಾಗಿಸುವಲ್ಲಿ ಪತಂಜಲಿಯವರ

ಕೊಡುಗೆ ಅಪಾರವಾಗಿದೆ. ಅದು ಎಂದಿಗೂ ಮರೆಯಲಾಗದು. ಇವರು ಗೋಣಿಕಾ-ಪುತ್ರ ಎಂದು ಪರಿಚಿತರು. ಗೋನರ್ದ (ಗೊಂಡಾ) ದ ನಿವಾಸಿಗರು. ಇವರು ಶೇಷನಾಗನ ಅವತಾರ ಎಂದು ನಂಬಿಕೆ ಇದೆ. ಭೋಜರಾಜನ ಸುಪ್ರಸಿದ್ಧ ಉಕ್ತಿಯ ಅನುಸಾರ, ಯೋಗಸೂತ್ರಪ್ರಣೇತೃ ಪತಂಜಲಿ, ವ್ಯಾಕರಣ ಭಾಷ್ಯಕಾರ ಪತಂಜಲಿ ಮತ್ತು ಚರಕ ಸಂಹಿತೆಯನ್ನು ಬರೆದ ಪತಂಜಲಿ ಇವರು ಮೂವರೂ ಒಬ್ಬರೇ. ಇದಕ್ಕೆ ಈ ಕೆಳಗಿನ ಶ್ಲೋಕವೇ ಪ್ರಮಾಣವಾಗಿದೆ.

**ಯೋಗೇನ ಚಿತ್ತಸ್ಯ ಪದೇನ ವಾಚಾ**
**ಮಲಂ ಶರೀರಸ್ಯ ಚ ವೈದ್ಯಕೇನ।**
**ಯೋ ವ್ಯಾಕರೋತ್ ತಂ ಪ್ರವರಂ ಮುನೀನಾಂ**
**ಪತಂಜಲಿಂ ಪ್ರಾಂಜಲಿರಾನತೋऽಸ್ಮಿ॥**

ಮಹಾಭಾಷ್ಯದಲ್ಲಿ ಉಲ್ಲೇಖಿಸಲಾದ ಅನೇಕ ವಾಕ್ಯಗಳನ್ನಾಧರಿಸಿ ವಿದ್ವಾಂಸರು ಪತಂಜಲಿಯವರ ಕಾಲಘಟ್ಟವನ್ನು ನಿರ್ಧರಿಸಿದ್ದಾರೆ. ಮಹಾಭಾಷ್ಯದ ಎರಡು ವಾಕ್ಯಗಳಲ್ಲಿ 'ಲಙ್' ಲಕಾರದ ಪ್ರಯೋಗ ಮಾಡಿದ್ದರಿಂದ ಐತಿಹಾಸಿಕ ವಿದ್ವಾಂಸರು, ಪತಂಜಲಿಯವರು ಪುಷ್ಯಮಿತ್ರ ಶುಂಗನ ಸಮಕಾಲೀನರು ಎಂಬ ಅಭಿಪ್ರಾಯ ಪಟ್ಟಿದ್ದಾರೆ. ಆ ಎರಡು ವಾಕ್ಯಗಳು ಈ ರೀತಿ ಇವೆ:

1) ಅರುಣದ್ ಯವನಃ ಸಾಕೇತಮ್ ತಥಾ ಅರುಣದ್ ಯವನಃ ಮಾಧ್ಯಮಿಕಾಮ್
2) ಪುಷ್ಯಮಿತ್ರೊ ಜಯತೇ.

ಇವುಗಳ ಆಧಾರದಿಂದ ಪುಷ್ಯಮಿತ್ರ ಮತ್ತು ಪತಂಜಲಿ ಇವರಿಬ್ಬರೂ ಸಮಕಾಲೀನರು ಎಂದು ಸಿದ್ಧವಾಗುತ್ತದೆ.

ಪತಂಜಲಿಯವರು ಪಾಣಿನಿಯ ರಚನೆಗಳನ್ನೆಲ್ಲ ಚೆನ್ನಾಗಿ ಅರ್ಥೈಸಿಕೊಂಡಿದ್ದಾರೆ. ಕಾತ್ಯಾಯನರ ವಾರ್ತಿಕಗಳನ್ನು ಪಾಣಿನಿಯವರ ಸೂತ್ರಗಳಿಗೆ ಪೂರಕವಾಗಿ ನೋಡಿದ್ದಾರೆ. ಔಚಿತ್ಯ ಮತ್ತು ಅನೌಚಿತ್ಯಗಳ ಬಗ್ಗೆ ವಿಚಾರ ಮಂಡಿಸಿದ್ದಾರೆ. ಪಾಣಿನಿಯವರ ಸೂತ್ರಗಳ ಸ್ಪಷ್ಟವಾದ ವ್ಯಾಖ್ಯೆ ಮಾಡಿ ಅವುಗಳ ತತ್ವಗಳನ್ನು ನಿರೂಪಿಸುವದೇ ಭಾಷ್ಯಾಕಾರರ ಮುಖ್ಯ ಉದ್ದೇಶವಾಗಿತ್ತು. ಅವರ ಅಧ್ಯಯನ ಆಳವಾಗಿತ್ತು. ಅವರು ಬರೆದ ಮಹಾಭಾಷ್ಯದಲ್ಲಿ ವೇದ ಶಾಸ್ತ್ರ, ಕಾವ್ಯ ಇತಿಹಾಸ ಮತ್ತು ದರ್ಶನಗ್ರಂಥಗಳ ಸಂದರ್ಭಗಳು ಬರುತ್ತವೆ.

### ಭಟ್ಟೋಜೀ ದೀಕ್ಷಿತರು

ಭಟ್ಟೋಜೀ ದೀಕ್ಷಿತರವರು 'ವೈಯ್ಯಾಕರಣ ಸಿದ್ಧಾಂತ ಕೌಮುದೀ' ಎಂಬ ಗ್ರಂಥವನ್ನು ರಚನೆ ಮಾಡಿದ್ದಾರೆ. ಇವರಿಗಿಂತ ಪೂರ್ವದಲ್ಲಿದ್ದ ವೈಯ್ಯಾಕರಣಿಗಳಿಂದ ಇವರು ಪ್ರೇರಣೆಯನ್ನು ಪಡೆದಿದ್ದರೂ, ಇವರ ಮೇಲೆ ರಾಮಚಂದ್ರರವರು ಬರೆದ 'ಪ್ರಕ್ರಿಯಾ-ಕೌಮುದಿಯ' ಪ್ರಭಾವ ಬೀರಿದೆ. ಪಾಣಿನೀಯ ಸೂತ್ರಗಳಿಂದ ಸಿದ್ಧವಾಗದ ಒಂದು ನೂರಕ್ಕೂ ಹೆಚ್ಚು ಶಬ್ದಗಳನ್ನು ರಾಮಚಂದ್ರಾಚಾರ್ಯರು ಸಿದ್ಧಮಾಡಿ ತೋರಿಸಿದ್ದಾರೆ.

ಭಟ್ಟೋಜೀ ದೀಕ್ಷಿತರ ಕಾಲಘಟ್ಟದ ಬಗ್ಗೆ ಕೂಡ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಆದರೂ ಇವರ ರಚನೆಗಳು ಮತ್ತು ಹಸ್ತಾಕ್ಷರಗಳನ್ನಾಧರಿಸಿ ಇವರ ಕಾಲಘಟ್ಟ ನಿಶ್ಚಯಿಸಲಾಗಿದೆ. ಬಂಗಾಲದಲ್ಲಿನ ಹಸ್ತಪ್ರತಿಗಳ ಸೂಚಿಪತ್ರದಲ್ಲಿ ಮಹಾಮಹೋಪಾಧ್ಯಾಯ ಪಂಡಿತ ಹರಿಪ್ರಸಾದ ಶಾಸ್ತ್ರೀಯವರು, ಭಟ್ಟೋಜಿಯವರ 'ಶಬ್ದಕೌಸ್ತುಭ'ದ ಹಸ್ತಪ್ರತಿಯ ಉಲ್ಲೇಖವಾಗಿದೆ. ಅದು ಕ್ರಿ.ಶ. 1633ರಲ್ಲಿ ಬರೆಯಲಾಗಿದೆ. ಆದ್ದರಿಂದ ದೀಕ್ಷಿತರ ಕಾಲಘಟ್ಟ ಇದಕ್ಕೆ ಮೊದಲೇ ಇರಬಹುದೆಂದು ತಿಳಿಯಬೇಕು. ಕ್ರಿ.ಶ. 1560 ರಿಂದ ಕ್ರಿ.ಶ. 1610 ಇದರ ಮಧ್ಯದಲ್ಲಿ ಅವರ ಕಾಲಮಾನವನ್ನು ನಿರ್ಧರಿಸಬಹುದು. ಇವರು ದಕ್ಷಿಣ ದೇಶದವರು. ಇವರ ಇಡೀ ಕುಟುಂಬವೇ ವಿದ್ಯಾವಂತರ ಕುಟುಂಬವಾಗಿತ್ತು. ಇವರ ಮನೆತನದಲ್ಲಿ ಅನೇಕ ವ್ಯಾಕರಣ ಶಾಸ್ತ್ರ ಪಂಡಿತರು ಹುಟ್ಟಿದ್ದಾರೆ. ಲಕ್ಷ್ಮೀಧರ ಭಟ್ಟ ಇವರು ಭಟ್ಟೋಜಿಯವರ ತಂದೆ, ರಂಗೋಜಿಭಟ್ಟ ಇವರ ಸೋದರ, ಭಾನುದೀಕ್ಷಿತ ಇವರ ಮಗ, ಹರಿದೀಕ್ಷಿತ ಇವರ ಮೊಮ್ಮಗ. ತಮ್ಮ ಗುರುಗಳಾದ ಶೇಷಕೃಷ್ಣರಿಂದ ವ್ಯಾಕರಣ ಮತ್ತು ಧರ್ಮಶಾಸ್ತ್ರಗಳ ಅಧ್ಯಯನ ಮಾಡಿದರು. ನೃಸಿಂಹಾಶ್ರಮಿಗಳಿಂದ ವೇದಾಂತವನ್ನೂ ಮತ್ತು ಅಪ್ಪಯ್ಯ ದೀಕ್ಷಿತರಿಂದ ಮೀಮಾಂಸಾವನ್ನೂ ಅಧ್ಯಯನ ಮಾಡಿದರು. ಭಟ್ಟೋಜಿ ದೀಕ್ಷಿತರು ಬರೆದ ಗ್ರಂಥಗಳು ಈ ರೀತಿ ಇವೆ.

1. ಸಿದ್ಧಾಂತ ಕೌಮುದೀ
2. ಪ್ರೌಢ ಮನೋರಮಾ
3. ಶಬ್ದ ಕೌಸ್ತುಭ
4. ವೈಯ್ಯಾಕರಣಭೂಷಣಕಾರಿಕಾ
5. ತತ್ವಕೌಸ್ತುಭ (ವೇದಾಂತ)
6. ತ್ರಿಸ್ಥಲೀಸೇತು (ಧರ್ಮಶಾಸ್ತ್ರ)
7. ತಿಥಿ ನಿರ್ಣಯ (ಧರ್ಮಶಾಸ್ತ್ರ)
8. ಪ್ರವರ ನಿರ್ಣಯ (ಧರ್ಮಶಾಸ್ತ್ರ)
9. ಚತುರ್ವಿಂಶತಿಮತವ್ಯಾಖ್ಯಾ (ಧರ್ಮಶಾಸ್ತ್ರ)

ವ್ಯಾಕರಣದಲ್ಲಿ ಅತ್ಯಂತ ಜನಪ್ರಿಯವಾದ ಇವರ ಗ್ರಂಥ ಅಂದರೆ ಸಿದ್ಧಾಂತ ಕೌಮುದೀ. ಇದರಲ್ಲಿ 'ಅಷ್ಟಾಧ್ಯಾಯೀ'ಯಲ್ಲಿನ ಎಲ್ಲ ಸೂತ್ರಗಳನ್ನು ಸಂಕಲಿತ ಮಾಡಲಾಗಿದೆ. ಈ ಗ್ರಂಥವು ಪೂರ್ವಾರ್ಧ ಮತ್ತು ಉತ್ತರಾರ್ಧ ಈ ರೀತಿ ವಿಂಗಡಿಸಲಾಗಿದೆ.

**ಪೂರ್ವಾರ್ಧದಲ್ಲಿ–**

1. ಸಂಜ್ಞಾ 2. ಪರಿಭಾಷೆ 3. ಸಂಧಿ 4. ಸುಬಂತ 5. ಅವ್ಯಯ 6. ಸ್ತ್ರೀಪ್ರತ್ಯಯ 7. ಕಾರಕ 8. ಸಮಾಸ, 9. ತದ್ಧಿತ ಪ್ರಕರಣ. ಈ ಪ್ರಕಾರ

9. ಪ್ರಕರಣಗಳಿವೆ.

**ಉತ್ತರಾರ್ಧದಲ್ಲಿ ತಿಙಂತ ಶಬ್ದಗಳ ಬಗ್ಗೆ**

1. ತಿಙಂತ 2. ಣ್ಯಂತಾದಿ ಪ್ರಕ್ರಿಯೆಗಳು 3. ಕೃದಂತ ಪ್ರಕರಣ, 4. ವೈದಿಕ ಪ್ರಕರಣ 5. ಸ್ವರ ಪ್ರಕರಣ. ಈ ರೀತಿ 5 ಪ್ರಕರಣಗಳಿವೆ. ಒಟ್ಟು ಇಡೀ ಗ್ರಂಥದಲ್ಲಿ 14 ಪ್ರಕರಣಗಳಿವೆ.

ಸಿದ್ಧಾಂತ ಕೌಮುದಿಯಲ್ಲಿ ಅಷ್ಟಾಧ್ಯಾಯಿಯ 3978 ಸೂತ್ರಗಳನ್ನು ವ್ಯಾಖ್ಯಾನಿಸಲಾಗಿದೆ. ಅದರಲ್ಲಿನ 3386 ಸೂತ್ರಗಳು ಲೌಕಿಕ ಪ್ರಕ್ರಿಯೆಗೆ ಸಂಬಂಧಿಸಿವೆ. 329 ಸೂತ್ರಗಳು ಸ್ವರ ಪ್ರಕ್ರಿಯೆಗೆ ಸಂಬಂಧಿಸಿವೆ. 14 ಮಾಹೇಶ್ವರ ಸೂತ್ರಗಳನ್ನು ಒಳಗೊಂಡರೆ ಈ ಸಂಖ್ಯೆ 3992 ಆಗುತ್ತದೆ. ಇವನ್ನು ಹೊರತುಪಡಿಸಿ ಕೊನೆಯಲ್ಲಿ ನಾಲ್ಕು ಪರಿಶಿಷ್ಟಗಳನ್ನು ಜೋಡಿಸಲಾಗಿದೆ. ಅವು ಈ ಕೆಳಗಿನಂತಿವೆ.

1. ಪಾಣಿನೀಯ ಶಿಕ್ಷಾ, 2. ಗಣಪಾಠ, 3. ಧಾತುಪಾಠ 4. ಲಿಂಗಾನುಶಾಸನ

**ನಾರಾಯಣಭಟ್ಟರು**

ನಾರಾಯಣಭಟ್ಟರು ಭಟ್ಟೋಜಿ ದೀಕ್ಷಿತರ ಸಮಕಾಲೀನರು. ತ್ರಿವೇಂದ್ರಮ್‌ನ ಶ್ರೀರಾಮಸ್ವಾಮಿ ಶಾಸ್ತ್ರಿಗಳು ನಿರ್ಧರಿಸಿದ ಪ್ರಕಾರ ನಾರಾಯಣಭಟ್ಟರ ಕಾಲಘಟ್ಟ ಕ್ರಿ.ಶ. 1560–ಕ್ರಿ.ಶ. 1660ರ ನಡುವೆ ಇದೆ.

ನಾರಾಯಣಭಟ್ಟರು 'ಪ್ರಕ್ರಿಯಾಸರ್ವಸ್ವ' ಎಂಬ ಗ್ರಂಥವನ್ನು ರಚಿಸಿದ್ದಾರೆ. ಇವರು ಮೂಲತಃ ಕೇರಳದ ನಿವಾಸಿಗಳಾಗಿದ್ದರು. ಇವರ ಮೂರು ಗ್ರಂಥಗಳು ವ್ಯಾಕರಣಕ್ಕೆ ಸಂಬಂಧಿಸಿವೆ.

1. ಪ್ರಕ್ರಿಯಾಸರ್ವಸ್ವ, 2. ಧಾತು ಕಾವ್ಯ 3. ಅಪಾಣಿನೀಯಪ್ರಮಾಣತಾ

ಪ್ರಕ್ರಿಯಾಸರ್ವಸ್ವ ಈ ಗ್ರಂಥ 20 ಕಾಂಡಗಳಲ್ಲಿ ವಿಂಗಡಿಸಲಾಗಿದೆ. ಪಾಣಿನಿಯ ಎಲ್ಲ ಸೂತ್ರಗಳು ಇದರಲ್ಲಿ ಸಮಾವೇಶಗೊಂಡಿವೆ. ಪಾಣಿನಿಯರನ್ನು ಹೊರತುಪಡಿಸಿ ಇನ್ನಿತರರ ಅಭಿಪ್ರಾಯಗಳನ್ನು ಕೂಡ ಇದರಲ್ಲಿ ಆದರಪೂರ್ವಕವಾಗಿ ಸ್ಮರಿಸಲಾಗಿದೆ.

**ವರದರಾಜರು**

ಭಟ್ಟೋಜಿ ದೀಕ್ಷಿತರ ನಂತರ ಇನ್ನೊಬ್ಬ ಮಹತ್ವದ ವ್ಯಾಕರಣಕಾರರೆಂದರೆ ವರದರಾಜರು. 'ಮಧ್ಯ ಸಿದ್ಧಾಂತಕೌಮುದೀ' ಈ ಗ್ರಂಥದ ಅಧ್ಯಯನ ಮಾಡಿದಾಗ, ಇವರು ಭಟ್ಟೋಜಿ ದೀಕ್ಷಿತರ ಶಿಷ್ಯರು ಎಂದು ಗೊತ್ತಾಗುತ್ತದೆ. 17ನೇ ಶತಮಾನ ಇವರ ಕಾಲಘಟ್ಟವಿರಬಹುದು. ಇವರ ತಂದೆ ದುರ್ಗಾತನಯ ಎಂದು. 'ಸಾರ ಸಿದ್ಧಾಂತಕೌಮುದೀ' ಗ್ರಂಥದಿಂದ ಗೊತ್ತಾಗುತ್ತದೆ. ಇವರು ರಚಿಸಿದ ನಾಲ್ಕು ಗ್ರಂಥಗಳು ಲಭ್ಯ ಇವೆ. ಅವುಗಳೆಂದರೆ: ಲಘು ಸಿದ್ಧಾಂತ ಕೌಮುದೀ (ಲಘು ಕೌಮುದಿ ಎಂದು ಕರೆಯುತ್ತಾರೆ), ಮಧ್ಯಮ ಸಿದ್ಧಾಂತ ಕೌಮುದೀ, ಗೀರ್ವಾಣ ಪದಮಂಜರಿ ಮತ್ತು ಸಾರಸಿದ್ಧಾಂತ ಕೌಮುದೀ. ಇವುಗಳು ಲಘು ಸಿದ್ಧಾಂತ ಕೌಮುದೀ, ಮಧ್ಯಮ

ಸಿದ್ಧಾಂತ ಕೌಮುದೀ ಮತ್ತು ಸಾರ 'ಸಿದ್ಧಾಂತಕೌಮುದೀ'ಗಳ ಸಂಕ್ಷಿಪ್ತ ಸಂಸ್ಕರಣಗಳಾಗಿವೆ. ಸಂಸ್ಕೃತ ವ್ಯಾಕರಣದ ಆರಂಭಿಕ ಅಧ್ಯಯನ ಮಾಡುವವರಿಗೆ 'ಲಘು ಸಿದ್ಧಾಂತಕೌಮುದೀ' ಉಪಯುಕ್ತವಿದೆ. ಇದರಲ್ಲಿ ಕಠಿಣವಾದ ಮತ್ತು ಅನಾವಶ್ಯಕ ಸೂತ್ರಗಳನ್ನು ತೆಗೆದುಹಾಕಲಾಗಿದೆ. ಕೇವಲ ಲೌಕಿಕ ಸಂಸ್ಕೃತಕ್ಕೆ ಸಂಬಂಧಿಸಿದ ನಿಯಮಗಳನ್ನು ಮಾತ್ರ ಇದರಲ್ಲಿ ಸಂಗ್ರಹಿಸಲಾಗಿವೆ. ಮಧ್ಯಮ ಸಿದ್ಧಾಂತಕೌಮುದೀ ಇದಕ್ಕಿಂತ ಸವಿಸ್ತಾರವಾಗಿದ್ದು, ಅದರಲ್ಲಿ ವೈದಿಕ ವ್ಯಾಕರಣಕ್ಕೆ ಸಂಬಂಧಿಸಿದ ನಿಯಮಗಳನ್ನು ಸೇರಿಸಲಾಗಿದೆ. 'ಸಾರ ಸಿದ್ಧಾಂತ ಕೌಮುದೀ' ಈ ಗ್ರಂಥ ತೀರ ಸಂಕ್ಷಿಪ್ತವಾಗಿದೆ. ಇವರ ನಾಲ್ಕನೇಯ ಗ್ರಂಥವಾದ 'ನಿರ್ವಾಣಪದ ಮಂಜರಿ' ಸಾಹಿತ್ಯಿಕ, ಸಾಮಾಜಿಕ ಮತ್ತು ಇನ್ನಿತರ ವಿಷಯಗಳನ್ನೊಳಗೊಂಡಿದ್ದು, ಪ್ರಶ್ನೋತ್ತರ ರೂಪದಲ್ಲಿ ಬರೆಯಲಾಗಿದೆ. ಇವರ ನಾಲ್ಕು ಗ್ರಂಥಗಳಲ್ಲಿ 'ಲಘು ಸಿದ್ಧಾಂತ ಕೌಮುದೀ' ಗ್ರಂಥದ ಪ್ರಸಾರ ಹೆಚ್ಚಿನ ಪ್ರಮಾಣದಲ್ಲಿ ಆಯಿತು. ಇಂದಿಗೂ ಪಾಣಿನಿಯವರ ವ್ಯಾಕರಣದ ಮೇಲಿನ ಸರ್ವೋತ್ತಮ ಗ್ರಂಥವೆಂದು ಇದಕ್ಕೆ ಮನ್ನಣೆ ಇದೆ. ವರದರಾಜರು ವ್ಯಾಕರಣದ ಕ್ಷೇತ್ರದಲ್ಲಿ ಯಾವುದೇ ಮೌಲಿಕವಾದ ಗ್ರಂಥ ರಚನೆ ಮಾಡಿದ್ದರೂ, ತಮ್ಮ 'ಲಘು ಸಿದ್ಧಾಂತಕೌಮುದೀ' ಈ ಗ್ರಂಥದ ಮುಖಾಂತರ ಪಾಣಿನೀಯ ವ್ಯಾಕರಣವನ್ನು ಅತ್ಯಂತ ಜನಪ್ರಿಯಗೊಳಿಸಿದರು. ಒಂದು ರೀತಿಯಲ್ಲಿ ಇವರು ಸಂಪಾದಕರು ಎಂದು ಹೇಳಬಹುದು.

**ಡಾ|| ಎ.ಆರ್. ಯಾರ್ಡಿ**
ಮುಖ್ಯಸ್ಥರು, ಮರಾಠಿ ವಿಭಾಗ,
ಕರ್ನಾಟಕ ಕಲಾ ಕಾಲೇಜು, ಧಾರವಾಡ

## ಸಂಪುಟ–1

# ಪೂರ್ವಾರ್ಧ



# ಉತ್ತರಾರ್ಧ

# ಲಘು ಸಿದ್ಧಾಂತ ಕೌಮುದೀ : : ದ್ವಿತೀಯ ಸಂಪುಟ

## ವಿಷಯ ಸೂಚಿ

***

॥ ಹರಿಃ ಓಂ ಶ್ರೀ ಗುರುಭ್ಯೋನಮಃ॥

# ಕನ್ನಡ ಲಘು ಸಿದ್ಧಾಂತಕೌಮುದೀ

# ಪೂರ್ವಾರ್ಧಮ್

## 1. ಸಂಜ್ಞಾಪ್ರಕರಣಮ್ (ಸೂತ್ರ 1-14 ರವರೆಗೆ)

ನತ್ವಾ ಸರಸ್ವತೀಂ ದೇವೀಂ ಶುದ್ಧಾಂ ಗುಣ್ಯಾಂ ಕರೋಮ್ಯಹಮ್।
ಪಾಣಿನೀಯ-ಪ್ರವೇಶಾಯ ಲಘುಸಿದ್ಧಾಂತ-ಕೌಮುದೀಮ್॥

**ಅರ್ಥ:** ಅತ್ಯಂತ ಪರಿಶುದ್ಧಳೂ ಗುಣವಂತಳೂ ಆದ ಶ್ರೀ ಸರಸ್ವತೀ ದೇವಿಯನ್ನು ನಮಸ್ಕರಿಸಿ, ವಿದ್ಯಾರ್ಥಿಗಳಿಗೆ ಪಾಣಿನೀಯ ಶಾಸ್ತ್ರದಲ್ಲಿ ಸುಲಭವಾಗಿ ಪ್ರವೇಶವನ್ನು ಹೊಂದುವುದಕ್ಕೆ **ಲಘುಸಿದ್ಧಾಂತಕೌಮುದೀ** ಎಂಬ ಗ್ರಂಥವನ್ನು ನಾನು (ವರದರಾಜನು) ರಚಿಸುತ್ತೇನೆ.

**(ಅಕ್ಷರಸಮಾಮ್ನಾಯಃ ಅಥವಾ ಶಿವಸೂತ್ರಾಣಿ*)**

1. ಅ ಇ ಉಣ್। 2. ಋ ಲೃಕ್। 3. ಏ ಓಙ್। 4. ಐ ಔಚ್। 5. ಹ ಯ ವ ರಟ್। 6. ಲಣ್। 7. ಞ ಮ ಙ ಣ ನಮ್। 8. ಝ ಭಞ್। 9. ಘ ಢ ಧಷ್। 10. ಜ ಬ ಗ ಡ ದಶ್। 11. ಖ ಫ ಛ ಠ ಥ ಚ ಟ ತವ್। 12. ಕ ಪಯ್। 13. ಶ ಷ ಸರ್। 14. ಹಲ್।

ವರದರಾಜೀಯಾ ವೃತ್ತಿಃ - ಇತಿ ಮಾಹೇಶ್ವರಾಣಿ ಸೂತ್ರಾಣಿ ಅಣಾದಿ ಸಂಜ್ಞಾರ್ಥಾನಿ। ಏಷಾಂ ಅಂತ್ಯಾ ಇತಃ। 'ಹ' ಕಾರಾದಿಷು 'ಅ'ಕಾರ ಉಚ್ಚಾರಣಾರ್ಥಃ। ಲಣ್ ಮಧ್ಯೇ ತು ಇತ್ಸಂಜ್ಞಕಃ।

**ಅರ್ಥ:** ಈ ಹದಿನಾಲ್ಕು ಮಾಹೇಶ್ವರ ಸೂತ್ರಗಳು ಅಣ್ (ಅಕ್, ಅಚ್, ಇಕ್, ಹಲ್, ಝಲ್) ಮೊದಲಾದ ಪ್ರತ್ಯಾಹಾರಗಳನ್ನು (ಸಂಜ್ಞೆಗಳನ್ನು) ಉಪಯೋಗಿಸುವ ಸಲುವಾಗಿ ಮಹೇಶ್ವರನ ಡಮರುವಿನಿಂದ ಅಭಿವ್ಯಕ್ತವಾಗಿವೆ. ಈ ಸೂತ್ರಗಳ ಕೊನೆಯಲ್ಲಿರುವ ಹದಿನಾಲ್ಕು ವ್ಯಂಜನಗಳೂ (ಣ್,ಕ್,ಚ್ ಮೊದಲಾದವು) 'ಇತ್'ಗಳೆಂದು ಕರೆಯಲ್ಪಡುತ್ತವೆ. (ಸಂಜ್ಞೆಗಳಾಗಿರುತ್ತವೆ). ಹಯವರಟ್। ಮೊದಲಾದ ಹತ್ತು ಸೂತ್ರಗಳಲ್ಲಿ ವ್ಯಞ್ಜನಗಳಜೊತೆಗೆ ಕೂಡಿರುವ 'ಅ' ಕಾರವು ಉಚ್ಚಾರಣದ ಅನುಕೂಲಕ್ಕಾಗಿ ಇವೆ.(ಅವುಗಳನ್ನು ಲೆಕ್ಕಕ್ಕೆ ತೆಗೆದುಕೊಳ್ಳಬಾರದು. 'ಹಯವರ' ಎಂದರೆ ಹ್,ಯ್,ವ್,ರ್ ಎಂದು ತಿಳಿಯಬೇಕು.

---

*ನೃತ್ತಾವಸಾನೇ ನಟರಾಜರಾಜೋ ನನಾದ ಢಕ್ಕಾಂ ನವಪಞ್ಚವಾರಮ್।
ಉದ್ಧರ್ತುಕಾಮಃ ಸನಕಾದಿ ಸಿದ್ಧಾನ್ ಏತದ್ವಿಮರ್ಶೇ ಶಿವಸೂತ್ರಜಾಲಮ್॥
ನನ್ದಿಕೇಶ್ವರರು ತಮ್ಮ ಕಾರಿಕೆಯಲ್ಲಿ ಈ ಶ್ಲೋಕವನ್ನು ಉದಾಹರಿಸಿರುವರು.

ಆದರೆ 'ಲಣ್'-ಎಂಬ ಸೂತ್ರದಲ್ಲಿ ಮಾತ್ರ 'ಲ್' ಕಾರದನಂತರ ಇರುವ 'ಅ' ಕಾರವು ಅನುನಾಸಿಕವಾದ್ದರಿಂದ (ಮೂಗಿನಿಂದ ಉಚ್ಚರಿಸಲ್ಪಟ್ಟಿರುವುದರಿಂದ) ಅದು ಅನುನಾಸಿಕ ಎಂದು ಕರೆಯಲ್ಪಡುತ್ತದೆ. ಮತ್ತು ಅದು 'ಇತ್' ಆಗಿ ಇರುತ್ತದೆ. ("ಉಪದೇಶೇ ಅಜನುನಾಸಿಕ ಇತ್" (1.3.2) ಎಂಬ ಸೂತ್ರವು ಇದಕ್ಕೆ ಪ್ರಮಾಣ). ಏತಿ ಗಚ್ಛತಿ ಇತಿ 'ಇತ್' (ಈ ಇತ್ ವರ್ಣವು ಲೆಕ್ಕಕ್ಕೆ ಬಾರದೇ ಲೋಪವಾಗುವುದರಿಂದ 'ಇತ್' ಎಂದು ಎನಿಸಿಕೊಳ್ಳುತ್ತದೆ).

**(ಅನ್ತ್ಯವರ್ಣಕ್ಕೆ ಇತ್ ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ-1: ಹಲನ್ತ್ಯಮ್ (ಪಾಣಿನೀಯ-ಸೂತ್ರ-ಸಂಖ್ಯಾ 1.3.3)**

ವೃತ್ತಿಃ – ಉಪದೇಶೇ ಅಂತ್ಯಂ ಹಲ್ ಇತ್ ಸ್ಯಾತ್। ಉಪದೇಶಃ ಆದ್ಯೋಚ್ಚಾರಣಮ್। ಸೂತ್ರೇಷು ಅದೃಷ್ಟಂ ಪದಂ ಸೂತ್ರಾನ್ತರಾತ್ ಅನುವರ್ತನೀಯಂ ಸರ್ವತ್ರ।

ಪ.ಚ್ಛೇ–ಹಲ್, ಅನ್ತ್ಯಮ್।

ಅನುವೃತ್ತಿ–("ಉಪದೇಶೇ ಅಜನುನಾಸಿಕ ಇತ್" (1.3.2) ಎಂಬ ಸೂತ್ರದಿಂದ 'ಉಪದೇಶೇ' ಮತ್ತು 'ಇತ್' ಎಂಬ ಶಬ್ದಗಳು ಅನುವೃತ್ತವಾಗುತ್ತವೆ.

ಅರ್ಥ– ಉಪದೇಶದಲ್ಲಿ ಅಂದರೆ– ಪ್ರತಿ ಶಿವಸೂತ್ರದಲ್ಲಿ ಕೊನೆಯ ವ್ಯಂಜನವು 'ಇತ್' ಎಂಬ ಸಂಜ್ಞೆಯನ್ನು ಪಡೆಯುತ್ತದೆ. ಉಪದೇಶವೆಂದರೆ ಮುನಿತ್ರಯರ 'ಮೊಟ್ಟಮೊದಲನೆಯ ಉಚ್ಚಾರಣ'ವೆಂದರ್ಥ. (ಅವರ ಕೃತಿಗಳೆಂದರ್ಥ). ಶಿವಸೂತ್ರಗಳು ಮೊಟ್ಟಮೊದಲಾಗಿ ಶಿವನ ಡಮರುವಿನಿಂದ ಅಭಿವ್ಯಕ್ತವಾದ್ದರಿಂದ ಅವುಗಳೂ ಉಪದೇಶಗಳೆಂದು ಎನಿಸಿಕೊಳ್ಳುತ್ತವೆ.

ವ್ಯಾಕರಣ ಶಾಸ್ತ್ರವನ್ನು ಪೂರ್ಣಗೊಳಿಸಿರುವ ಸೂತ್ರಕಾರರಾದ ಪಾಣಿನಿ ಮುನಿಗಳು, ವಾರ್ತಿಕಕಾರರಾದ ವರರುಚಿಗಳು (ಕಾತ್ಯಾಯನರು) ಮತ್ತು ಮಹಾಭಾಷ್ಯಕಾರರಾದ ಪತಂಜಲಿ ಮುನಿಗಳು (ಮುನಿತ್ರಯರು). ಇವರು ಆದ್ಯಾಚಾರ್ಯರಾಗುತ್ತಾರೆ. ಇವರ ವಾಕ್ಯಗಳೂ ಸಹ ಉಪದೇಶಗಳೆನಿಸಿಕೊಳ್ಳುತ್ತವೆ. ಇದರ ಹೊರತು ಕೆಳಗಿನ ಶ್ಲೋಕದಲ್ಲಿರುವ ಧಾತು ಮೊದಲಾದವುಗಳೂ ಸಹ ವ್ಯಾಕರಣಶಾಸ್ತ್ರದಲ್ಲಿ ಉಪದೇಶಗಳೆಂದು ಹೆಸರಿಸಲ್ಪಟ್ಟಿವೆ.

**ಧಾತು-ಸೂತ್ರ-ಗಣೋಣಾದಿ- ವಾಕ್ಯ-ಲಿಂಗಾನುಶಾಸನಮ್।**

**ಆಗಮ-ಪ್ರತ್ಯಯಾದೇಶಾಃ ಉಪದೇಶಾಃ ಪ್ರಕೀರ್ತಿತಾಃ॥**

(ಧಾತುಗಳು, ಸೂತ್ರಗಳು ಮತ್ತು ಗಣಪಾಠದಲ್ಲಿರುವ ಶಬ್ದಗಳು, ಉಣಾದಿ ಸೂತ್ರಗಳು, ವಾಕ್ಯವೆಂದರೆ ವಾರ್ತಿಕಗಳು, ಲಿಂಗಾನುಶಾಸನ, ಆಗಮಗಳು, ಪ್ರತ್ಯಯಗಳು ಮತ್ತು ಆದೇಶಗಳು ಇವುಗಳಿಗೂ ಉಪದೇಶವೆಂದು ಹೆಸರು).

ಸೂತ್ರಗಳನ್ನು ವ್ಯಾಖ್ಯಾನಮಾಡುವಾಗ, ವೃತ್ತಿಗಳಲ್ಲಿ ಎಲ್ಲೆಡೆಯಲ್ಲೂ ಕೆಲವು ಶಬ್ದಗಳು ವಾಕ್ಯ ಪೂರ್ಣಮಾಡುವುದಕ್ಕಾಗಿ, ಪಾಣಿನಿ ಮುನಿಯ ಬೇರೆ ಸೂತ್ರಗಳಿಂದ ಶಬ್ದಗಳನ್ನು

ಅನುವೃತ್ತಿ ಮಾಡಿಕೊಳ್ಳಬೇಕು(ತೆಗೆದುಕೊಳ್ಳಬೇಕು) ಎಂಬುದನ್ನು "ಸೂತ್ರಾನ್ತರಾತ್ ಅನುವರ್ತನೀಯಂ" ಎಂದು ಹೇಳಲಾಗಿದೆ.

**(ಲೋಪಸಂಜ್ಞಾವಿಧಾಯಕ ಸೂತ್ರ)**

**ಸೂತ್ರ-2: ಅದರ್ಶನಂ ಲೋಪಃ (1.1.60)**

**ವೃತ್ತಿ-ಪ್ರಸಕ್ತಸ್ಯ ಅದರ್ಶನಂ ಲೋಪಸಂಜ್ಞಂ ಸ್ಯಾತ್।**

ಅ. ವೃ.-"ಸ್ಥಾನೇನ್ತರತಮಃ। (1.1.50)" ಎಂಬ ಸೂತ್ರದಿಂದ 'ಸ್ಥಾನೇ' ಎಂಬ ಶಬ್ದವನ್ನು ಅನುವೃತ್ತಿ ಮಾಡಿಕೊಂಡು 'ಸ್ಥಾನಸ್ಯ' ಎಂದು ವಿಭಕ್ತಿ ಪರಿಣಾಮ ಮಾಡಲಾಗಿದೆ.

**ಅರ್ಥ**: ಉಚ್ಚಾರಣೆಗೆ ಪ್ರಸಕ್ತವಾದ (ಉಚ್ಚರಿಸಲ್ಪಡಬೇಕಾದ) ವರ್ಣಗಳು (ಕೇಳಲು ಯೋಗ್ಯವಾದ ವರ್ಣಗಳು) ಅದೃಶ್ಯವಾಗುವದಕ್ಕೆ (ಕೇಳದೇ ಇರೋಣದ್ದರಿಂದ ಅವು ಬರೆಯಲ್ಪಡುವದಿಲ್ಲ ಅವು ಅದೃಶ್ಯವಾಗುತ್ತವೆ) ಲೋಪವೆಂದು ಹೆಸರು (ಸಂಜ್ಞೆ). (ಹೆಸರು ಎಂದರೆ ಸಂಜ್ಞೆ ಎಂದು ಎಲ್ಲೆಡೆಯಲ್ಲಿಯೂ ತಿಳಿದುಕೊಳ್ಳಬೇಕು).

**(ಇತ್-ಗೆ ಲೋಪವನ್ನು ಹೇಳುವ ಸೂತ್ರ)**

**ಸೂತ್ರ -3: ತಸ್ಯ ಲೋಪಃ (1.3.9)**

**ವೃತ್ತಿ-ತಸ್ಯ ಇತಃ ಲೋಪಃ ಸ್ಯಾತ್। ಣಾದಯಃ ಅಣಾದ್ಯರ್ಥಾಃ।**

ಅ. ವೃ. -"ಉಪದೇಶೇ ಅಜನುನಾಸಿಕ ಇತ್" (1.3.2) ಎಂಬ ಸೂತ್ರದಿಂದ 'ಇತ್' ಎಂಬುದು ಅನುವೃತ್ತವಾಗಿ ಷಷ್ಠ್ಯನ್ತವಾಗಿದೆ.

**ಅರ್ಥ**- ಮೇಲೆ ಹೇಳಿದ ಇತ್ ಸಂಜ್ಞೆಯುಳ್ಳ ವರ್ಣಕ್ಕೆ ಲೋಪವು ಬರುವುದು. (ಆ 'ಇತ್'ವರ್ಣವನ್ನು ಲೆಕ್ಕಕ್ಕೆ ತೆಗೆದುಕೊಳ್ಳಬಾರದೆಂದು ಅರ್ಥ). ಅಇಉಣ್। ಋಲೃಕ್। ಮೊದಲಾದ ಸೂತ್ರಗಳ ಕೊನೆಯಲ್ಲಿರುವ ಣ್,ಕ್ ಮೊದಲಾದ ವ್ಯಞ್ಜನ ರೂಪದಲ್ಲಿರುವ ಮತ್ತು ಲಣ್ ಸೂತ್ರದ ಮಧ್ಯದಲ್ಲಿರುವ 'ಅ' ಎಂಬ ಸ್ವರ ವರ್ಣವೂ ಸೇರಿ 15 ವರ್ಣಗಳು 'ಇತ್' ಎಂದು ಎನಿಸಿಕೊಳ್ಳುತ್ತವೆ. ಈ ವರ್ಣಗಳು ಅಕ್,ಅಚ್,ಹಲ್ ಮೊದಲಾದ ಪ್ರತ್ಯಾಹಾರಗಳನ್ನು ಮಾಡುವುದಕ್ಕಾಗಿ ಇವೆ. ಆದರೆ ಇವುಗಳಲ್ಲಿ 'ಇತ್' ವರ್ಣಗಳು ಮಾತ್ರ ಲೋಪವಾಗುತ್ತವೆ. ಆದ್ದರಿಂದ ಅವು ಗಣನೆಗೆ ಬರುವದಿಲ್ಲ. ಉದಾ- 'ಅಣ್' ಎಂದರೆ ಅ,ಇ,ಉ ವರ್ಣಗಳೆಂದರ್ಥ.

ಲಣ್ ಎಂಬ ಸೂತ್ರದಲ್ಲಿ,'ಲ್' ಕಾರೋತ್ತರ 'ಅ' ಕಾರವು ಅನುನಾಸಿಕ ವಾದ್ದರಿಂದ, ಅದು ಇತ್ ಸಂಜ್ಞೆಯನ್ನು ಹೊಂದುತ್ತದೆ. ["ಉಪದೇಶೇ ಅಜನುನಾಸಿಕ ಇತ್" (1.3.2) ಎಂಬ ಸೂತ್ರವನ್ನು ನೊಡಿರಿ]. 'ಇತ್' ಸಂಜ್ಞೆಯ ಪ್ರಯೋಜನವೆಂದರೆ ಪ್ರತ್ಯಾಹಾರಗಳನ್ನು ಮಾಡುವುದೇ. ಪಾಣಿನಿ ಮುನಿಗಳು ಇಡೀ ಅಷ್ಟಾಧ್ಯಾಯೀ ಸೂತ್ರಗಳಲ್ಲಿ 'ಲಣ್' ಎಂಬ ಒಂದು ಸೂತ್ರದಲ್ಲಿ ಮಾತ್ರ 'ಅ' ಕಾರವನ್ನು 'ಇತ್' ಆಗಿಟ್ಟುಕೊಂಡು 'ರ' ಎಂಬ ಪ್ರತ್ಯಾಹಾರವನ್ನು ಮಾಡಿರುವರು. ಅದು "ಉರಣ್

ರಪರಃ"(1.1.51) ಎಂಬ ಸೂತ್ರ, ರಪರಃ ಎಂದರೆ 'ರ'– ಪ್ರತ್ಯಾಹಾರಪರಃ ಎಂದರ್ಥ. 'ರ' ಎಂಬ ಪ್ರತ್ಯಾಹಾರದಲ್ಲಿ ಆದಿ ವರ್ಣವು "ಹಯವರಟ್" ಎಂಬ ಸೂತ್ರದಲ್ಲಿರುವ ಉಚ್ಚಾರಣಾರ್ಥವಾಗಿರುವ 'ಅ'ಕಾರರಹಿತ ರೇಫ (ರ್). 'ಇತ್' ಆಗಿರುವ ಅನ್ತ್ಯ ವರ್ಣವೆಂದರೆ, 'ಲಣ್' ಸೂತ್ರದಲ್ಲಿರುವ 'ಲ್'ಕಾರೋತ್ತರ 'ಅ'ಕಾರ. ಆ ಆದಿವರ್ಣವಾದ 'ರ್' ವನ್ನು 'ಇತ್' ಆದ 'ಅ'ಕಾರದ ಜೊತೆಗೆ ಸೇರಿಸಿದರೆ, 'ರ' ಎಂಬ ಪ್ರತ್ಯಾಹಾರವು ಸಿಗುತ್ತದೆ. (ಈ ಪ್ರತ್ಯಾಹಾರದಲ್ಲಿ (ರಟ್) ನಲ್ಲಿ ರೇಫ (ರ್), ಮತ್ತು 'ಲಣ್'ನಲ್ಲಿ 'ಲ್' ಕಾರಗಳು ಮಾತ್ರ ಉಳಿಯುತ್ತವೆ. ರೇಫೋತ್ತರ 'ಅ' ಕಾರವು ಉಚ್ಚಾರಣಾರ್ಥ. 'ಟ್' ಕಾರವು 'ಇತ್', 'ಲ್'ಕಾರೊತ್ತರ 'ಅ'ಕಾರ 'ಇತ್' (ಅನುನಾಸಿಕವಾಗಿ ಇರುವುದರಿಂದ), "ತಸ್ಯ ಲೋಪಃ" (1.3.9) ಎಂಬ ಸೂತ್ರದಿಂದ 'ಟ್'ಕಾರ, ಅನುನಾಸಿಕ 'ಅ'ಕಾರ ಮತ್ತು 'ಣ್'ಕಾರಗಳು ಲೋಪವಾಗುತ್ತವೆ.

**(ಪ್ರತ್ಯಾಹಾರವನ್ನು ಹೇಳುವ ಸೂತ್ರ)**

**ಸೂತ್ರ 4: ಆದಿರನ್ತ್ಯೇನ ಸಹೇತಾ (1.1.71)**

ವೃತ್ತಿ–ಅನ್ತ್ಯೇನ ಇತಾ ಸಹಿತಃ ಆದಿಃ; ಮಧ್ಯಗಾನಾಂ ಸ್ವಸ್ಯ ಚ ಸಂಜ್ಞಾ ಸ್ಯಾತ್। ಯಥಾ 'ಅಣ್' ಇತಿ ಅ ಇ ಉ ವರ್ಣಾನಾಂ ಸಂಜ್ಞಾ ಏವಂ 'ಅಕ್' 'ಅಚ್' 'ಅಲ್' 'ಹಲ್' ಇತ್ಯಾದಯಃ।

ಪ.ಚ್ಛೇ – ಆದಿಃ, ಅನ್ತ್ಯೇನ, ಸಹ, ಇತಾ।

ಅ.ವೃ.–"ಸ್ವಂ ರೂಪಂ ಶಬ್ದಸ್ಯ ಅಶಬ್ದ–ಸಂಜ್ಞಾ" (1.1.68) ಎಂಬ ಸೂತ್ರದಿಂದ 'ಸ್ವಂ' ಎಂಬ ಪದವು ಅನುವೃತ್ತವಾಗಿ ಷಷ್ಠ್ಯನ್ತವಾಗಿ 'ಸ್ವಸ್ಯ' ಎಂದಾಗಿರುತ್ತದೆ.

**ಅರ್ಥ**– ಕೊನೆಯಲ್ಲಿರುವ 'ಇತ್' ವರ್ಣದ ಜೊತೆಗೆ ಸಂಬಂಧಿಸಿದ ಪ್ರತ್ಯಾಹಾರದ ಆದಿ ವರ್ಣವು (ಆದಿ–ಅನ್ತ್ಯಗಳು ಹೇಳಲ್ಪಟ್ಟಿರೋಣದ್ದರಿಂದ) ಅವುಗಳ ಮಧ್ಯದಲ್ಲಿರುವ ವರ್ಣಗಳಿಗೂ ತನಗೂ (ಅಂದರೆ ಆದಿವರ್ಣಕ್ಕೂ ಸೇರಿ) ಸಂಜ್ಞೆಯಾಗುವದು. [ಕೊನೆಯ 'ಇತ್' ವರ್ಣಕ್ಕೆ ಗ್ರಹಣವಿಲ್ಲದಿರುವದಕ್ಕೆ ಕಾರಣ "ತಸ್ಯ ಲೋಪಃ(1.3.9)" ಎಂಬ ಸೂತ್ರ, ಉದಾ– 'ಅಚ್' ಎಂಬ ಪ್ರತ್ಯಾಹಾರದ ಆದಿವರ್ಣವಾದ 'ಅ' ವರ್ಣವು. ಇದು 'ಚ್' ಎಂಬ ಅನ್ತ್ಯವಾದ 'ಇತ್' ವರ್ಣದಜೊತೆಗೆ ಕೂಡಿದೆ. (ಆದಿ ಅನ್ತ್ಯಗಳಾದ) 'ಅ' ಮತ್ತು 'ಚ್' ಗಳ ಮಧ್ಯದಲ್ಲಿರುವ ಇ,ಉ,ಋ,ಲೃ,ಏ,ಓ,ಐ,ಔ ಎಂಬ ಎಂಟು ವರ್ಣಗಳಿಗೂ ಮತ್ತು ಆದಿ ವರ್ಣವಾದ ತನಗೂ (ಅಂದರೆ, 'ಅ' ವರ್ಣಕ್ಕೂ ಸೇರಿ) ಸಂಜ್ಞೆಯಾಗುತ್ತದೆ. 'ಚ್' ವರ್ಣವು 'ಇತ್' ಆದದ್ದರಿಂದ, ಲೋಪವಾಗುತ್ತದೆ. ಹೀಗಾಗಿ 'ಅಚ್' ಎಂಬುದರಿಂದ ಅ,ಇ,ಉ,ಋ,ಲೃ,ಏ,ಓ,ಐ,ಔ ಎಂಬ ಒಂಬತ್ತು ಸ್ವರಗಳು ಗೃಹೀತವಾಗುತ್ತವೆ. ಈ ಒಂದೊಂದು ವರ್ಣಕ್ಕೂ 'ಅಚ್' ಎಂದು ಹೆಸರು. ಹೀಗಾಗಿ 'ಅಚ್' ವರ್ಣಗಳು ಎಂದರೆ, ಒಂಬತ್ತು ಸ್ವರಗಳು ಎಂದರ್ಥ.

'ಅಣ್' ಎಂದರೆ ಅ,ಇ,ಉ ವರ್ಣಗಳಿಗೆ ಸಂಜ್ಞೆ ಎಂದು ತಿಳಿಯಬೇಕು. ಹಾಗೆಯೇ 'ಅಣ್' ಎಂದು ಪರ 'ಣ್' ಕಾರದಿಂದ ಗ್ರಹಿಸಿದಾಗ, 14 (ಅ, ಇ, ಉ, ಋ, ಲೃ,

ಏ, ಓ, ಐ, ಔ, ಹ್,ಯ್,ವ್,ರ್,ಲ್) ವರ್ಣಗಳಿಗೂ ಸಂಜ್ಞೆಯಾಗುವದು.

(ಪ್ರತ್ಯಾಹಾರ ಎಂಬ ಶಬ್ದವನ್ನು ಪಾಣಿನಿಯವರು ತಮ್ಮ ಸೂತ್ರಗಳಲ್ಲಿ ಬಳಸಿಲ್ಲ ಎಂಬುದು ಗಮನಾರ್ಹ). ಇದೇ ರೀತಿಯಲ್ಲಿ 'ಅಕ್' 'ಅಚ್' 'ಅಲ್' 'ಹಲ್' ಮೊದಲಾದ ಪ್ರತ್ಯಾಹಾರಗಳನ್ನೂ ತಿಳಿದುಕೊಳ್ಳಬೇಕು.

**(ಹ್ರಸ್ವ-ದೀರ್ಘ-ಪ್ಲುತ ಸಂಜ್ಞಾ ವಿಧಾಯಕ ಸೂತ್ರ)**

**ಸೂತ್ರ 5: ಊಕಾಲೋऽಜ್ಝ್ರಸ್ವ-ದೀರ್ಘ-ಪ್ಲುತಃ (1.2.27)**

ವೃತ್ತಿ-ಉಶ್ಚ, ಊಶ್ಚ, ಊ3ಶ್ಚ ವಃ। ವಾಂ ಕಾಲಃ ಇವ ಕಾಲೋ ಯಸ್ಯ ಸಃ ಅಚ್ ಕ್ರಮಾತ್ ಹ್ರಸ್ವ-ದೀರ್ಘ-ಪ್ಲುತ-ಸಂಜ್ಞಃ ಸ್ಯಾತ್। ಸ ಪ್ರತ್ಯೇಕಂ ಉದಾತ್ತಾದಿ-ಭೇದೇನ ತ್ರಿಧಾ।

ಪ.ಚ್ಛೇ- ಊ-ಕಾಲಃ, ಅಚ್, ಹ್ರಸ್ವ-ದೀರ್ಘ-ಪ್ಲುತಃ।

ಅರ್ಥ- ಒಂದು ಮಾತ್ರೆಯ ಕಾಲಾವಕಾಶದಲ್ಲಿ ಉಚ್ಚರಿಸುವ 'ಉ' ಕಾರ ಮತ್ತು ಎರಡು ಮಾತ್ರೆಯ ಕಾಲಾವಕಾಶದಲ್ಲಿ ಉಚ್ಚರಿಸುವ 'ಊ' ಕಾರ ಮತ್ತು ಮೂರು ಮಾತ್ರೆಯ ಕಾಲಾವಕಾಶದಲ್ಲಿ ಉಚ್ಚರಿಸುವ 'ಊ3' ಕಾರ ಇವುಗಳನ್ನು ಗುರುತಿಸುವ ಪ್ರಥಮಾ ಬಹುವಚನ ರೂಪವು 'ವಃ' ಎಂದು ಆಗುತ್ತದೆ. (ಹೇಗೆ ಗುರುಶ್ಚ ಗುರುಶ್ಚ ಗುರುಶ್ಚ ಎಂದರೆ ಗುರವಃ ಎಂದಾಗುತ್ತದೆಯೋ ಹಾಗೆಯೇ ಪ್ರಾಯಶಃ ಇದರ ಇತರ ವಿಭಕ್ತಿಗಳ ರೂಪವನ್ನೂ ಗುರು ಶಬ್ದದ ಕೊನೆಯ 'ಉ' ಕಾರದ ವಿಕಾರಗಳಂತೆಯೇ ರೂಪಗಳನ್ನು ಹೊಂದುತ್ತವೆ. ಆದರೆ ಷಷ್ಠೀ ವಿಭಕ್ತಿಯಲ್ಲಿ ಮಾತ್ರ ಬೇರೆ ಸೂತ್ರಗಳ ನಿಯಮದಿಂದ 'ಗುರೂಣಾಮ್' ಎಂದಾಗಿದೆ. ಇಲ್ಲಿ ಮಾತ್ರ ಸಾದೃಶ್ಯವಿಲ್ಲ). (ವಾಮ್ ಎಂದರೆ 'ಉ+ಆಮ್=ವಾಂ' ಇದು ಷಷ್ಠೀ ಬಹುವಚನದ ರೂಪ। 'ಉ' ಕಾರಗಳ ಕಾಲದಂತೆ ಕಾಲವು ಯಾವ ಅಚ್ ವರ್ಣಕ್ಕಿದೆಯೋ ಎಂದರ್ಥ। ಅದು ಎಂತಹ 'ಉ' ಕಾರಗಳದ್ದೂ ಆಗಬಹುದು. ಕಾರಣ 'ಉ' ಕಾರಗಳು ಹ್ರಸ್ವ-ದೀರ್ಘ-ಪ್ಲುತಗಳಾಗಿ 3 ವಿಧವಾಗಿವೆ.

ಆದರೆ ಇಲ್ಲಿ ವಿವಕ್ಷಿತವಾದ 3 'ಉ' ಕಾರಗಳು ಯಾವವೆಂದರೆ, ಒಂದು ಏಕಮಾತ್ರಾತ್ಮಕ 'ಉ' ಕಾರ, ಒಂದು ದ್ವಿಮಾತ್ರಾತ್ಮಕ 'ಉ' ಕಾರ ಮತ್ತು ಒಂದು ತ್ರಿಮಾತ್ರಾತ್ಮಕ 'ಉ' ಕಾರ। ಇವುಗಳ ಷಷ್ಠಿಯೇ 'ವಾಂ' ಎಂಬುದು। ಇಂತಹ "ಮೂರುವಿಧ 'ಉ' ಕಾರಗಳ" ಎಂಬ ಅರ್ಥವನ್ನು ವಾಂ ಎಂಬ ಶಬ್ದದಿಂದ ಗ್ರಹಿಸಬೇಕು)। ಏಕಮಾತ್ರಾತ್ಮಕ 'ಉ' ಕಾರ, ದ್ವಿಮಾತ್ರಾತ್ಮಕ 'ಉ' ಕಾರ ಮತ್ತು ತ್ರಿಮಾತ್ರಾತ್ಮಕ 'ಉ3' ಕಾರ। ಇಂತಹ 'ಉ' ಕಾರಗಳನ್ನು ಉಚ್ಚರಿಸುವ ಕಾಲಗಳಂತೆಯೇ ಕಾಲಗಳುಳ್ಳ ಇತರ ಸ್ವರಗಳಿಗೂ (ಅಚ್) ಗಳಿಗೂ ಕ್ರಮೇಣ ಹ್ರಸ್ವ-ದೀರ್ಘ-ಪ್ಲುತಗಳೆಂದು ಹೆಸರು। (ಹ್ರಸ್ವ-ದೀರ್ಘ-ಪ್ಲುತಗಳಾದ) ಆ ಒಂದೊಂದು ಸ್ವರವೂ ಉದಾತ್ತ,ಅನುದಾತ್ತ, ಮತ್ತು ಸ್ವರಿತ ಎಂದೂ ಕ್ರಮವಾಗಿ ಮೂರು ಮೂರು ಸಂಜ್ಞೆಗಳನ್ನು ಪಡೆಯುತ್ತವೆ.

**(ಉದಾತ್ತ ಸಂಜ್ಞೆಯನ್ನು ಹೇಳುವ ಸೂತ್ರ)**

**ಸೂತ್ರ 6: ಉಚ್ಚೈರುದಾತ್ತಃ (1.2.29)**

ವೃತ್ತಿ–ತಾಲ್ವಾದಿಷು ಸಭಾಗೇಷು ಊರ್ಧ್ವಭಾಗೇ ನಿಷ್ಪನ್ನಃ ಅಚ್ ಉದಾತ್ತ– ಸಂಜ್ಞಃ ಸ್ಯಾತ್।

ಪ.ಚ್ಛೇ– ಉಚ್ಚೈಃ, ಉದಾತ್ತಃ।

ಅರ್ಥ– ತಾಲು (ಬಾಯಂಗಳದಲ್ಲಿ ದಂತಗಳ ಮೇಲ್ಭಾಗ) ಮೊದಲಾದ ವರ್ಣೋತ್ಪತ್ತಿ ಸ್ಥಾನಗಳ ಮೇಲ್ಭಾಗಗಳಲ್ಲಿ ಉತ್ಪನ್ನವಾಗುವ ಸ್ವರವು ಉದಾತ್ತವೆನಿಸಿಕೊಳ್ಳುತ್ತದೆ.

**(ಅನುದಾತ್ತ ಸಂಜ್ಞೆ ಹೇಳುವ ಸೂತ್ರ)**

**ಸೂತ್ರ 7: ನೀಚೈರನುದಾತ್ತಃ ( 1.2.30)**

ವೃತ್ತಿ–ತಾಲ್ವಾದಿಷು ಸಭಾಗೇಷು ಸ್ಥಾನೇಷು ಅಧೋಭಾಗೇ ನಿಷ್ಪನ್ನಃ ಅಚ್ ಅನುದಾತ್ತ–ಸಂಜ್ಞಃ ಸ್ಯಾತ್।

ಪ.ಚ್ಛೇ – ನೀಚೈಃ, ಅನುದಾತ್ತಃ।

ಅರ್ಥ– ತಾಲು (ಬಾಯಂಗಳದಲ್ಲಿ ದಂತಗಳ ಮೇಲ್ಭಾಗ) ಮೊದಲಾದ ವರ್ಣೋತ್ಪತ್ತಿ ಸ್ಥಾನಗಳ ಕೆಳಭಾಗಗಳಲ್ಲಿ ಉತ್ಪನ್ನವಾಗುವ ಸ್ವರವು ಅನುದಾತ್ತವೆನಿಸಿಕೊಳ್ಳುತ್ತದೆ।

**(ಸ್ವರಿತ ಸಂಜ್ಞೆಯನ್ನು ಹೇಳುವ ಸೂತ್ರ)**

**ಸೂತ್ರ 8: ಸಮಾಹಾರಃ ಸ್ವರಿತಃ ( 1.2.31)**

ವೃತ್ತಿ–ಉದಾತ್ತಾನುದಾತ್ತತ್ವೇ ವರ್ಣಧರ್ಮೌ ಸಮಾಹ್ರಿಯೇತೇ ಯಸ್ಮಿನ್ ಸಃ ಅಚ್ ಸ್ವರಿತಸಂಜ್ಞಃ ಸ್ಯಾತ್।

ಸ ನವವಿಧೋಽಪಿ ಪ್ರತ್ಯೇಕಂ ಅನುನಾಸಿಕ–ಅನನುನಾಸಿಕತ್ವಾಭ್ಯಾಂ ದ್ವಿಧಾ।

ಅ. ವೃ.–'ಉದಾತ್ತ' ಮತ್ತು 'ಅನುದಾತ್ತ' ಎಂಬ ಎರಡು ಶಬ್ದಗಳು, ಕ್ರ. ಸಂ 6 ಮತ್ತು 7 ಸೂತ್ರಗಳಿಂದ ಅನುವೃತ್ತವಾಗಿ 'ಉದಾತ್ತಸ್ಯ' ಮತ್ತು 'ಅನುದಾತ್ತಸ್ಯ' ಎಂದು ಷಷ್ಠ್ಯನ್ತವಾಗಿ ಪರಿಣಾಮ ಹೊಂದಿವೆ.

ಅರ್ಥ–ಉದಾತ್ತತ್ವ ಮತ್ತು ಅನುದಾತ್ತತ್ವ ಎಂಬ ಉಚ್ಚಾರಣ ಧರ್ಮಗಳು ಯಾವ ಒಂದು 'ಅಚ್' ವರ್ಣದಲ್ಲಿ ಸೇರಿಕೊಂಡಿವೆಯೋ ಆ 'ಅಚ್' ವರ್ಣವು ಸ್ವರಿತವೆನಿಸಿಕೊಳ್ಳುತ್ತದೆ.

ಆ ಒಂಭತ್ತು ವಿಧವಾದ ಒಂದೊಂದು ಸ್ವರವೂ ಪ್ರತ್ಯೇಕವಾಗಿ (ಮೂಗಿನಿಂದ ಉಚ್ಚರಿಸಲ್ಪಟ್ಟರೆ) ಅನುನಾಸಿಕವೆಂದೂ ಮೂಗಿನಿಂದ ಉಚ್ಚರಿಸಲ್ಪಡದೇ ಸಾಧಾರಣವಾಗಿ ಉಚ್ಚರಿಸಲ್ಪಟ್ಟರೆ), ಅನನುನಾಸಿಕವೆಂದೂ, ಎರಡು ವಿಧವಾಗುತ್ತವೆ। ( ಹ್ರಸ್ವ–ದೀರ್ಘ–

ಪ್ಲುತಗಳೆಂದು ಮೂರು ವಿಧವಾದ ಒಂದೊಂದು ಸ್ವರವೂ ಉದಾತ್ತ, ಅನುದಾತ್ತ ಮತ್ತು ಸ್ವರಿತಗಳೆಂದೂ ಮೂರುವಿಧ. ಹೀಗಾಗಿ ಒಂಬತ್ತು ರೂಪಗಳು. ಇವೇ ಅಕ್ಷರಗಳು ಅನುನಾಸಿಕ-ಅನನುನಾಸಿಕಗಳೆಂದು ಎರಡು ವಿಧ. ಹೀಗಾಗಿ (ಪ್ರಾಯಶಃ)ಸ್ವರಗಳು ಹದಿನೆಂಟು ವಿಧ.

(ಕೆಲವು ವರ್ಣಗಳಿಗೆ ಹನ್ನೆರಡೇ ರೂಪಗಳಿರುವುದನ್ನು ಮುಂದೆ ವಿವರಿಸಲಾಗುವದು).

**(ಅನುನಾಸಿಕ ಸಂಜ್ಞೆ ಹೇಳುವ ಸೂತ್ರ)**

**ಸೂತ್ರ 9: ಮುಖನಾಸಿಕಾವಚನೋಽನುನಾಸಿಕಃ ( 1.1.8)**

ವೃತ್ತಿ-ಮುಖಸಹಿತ – ನಾಸಿಕಯಾ ಉಚ್ಚಾರ್ಯಮಾಣೋ ವರ್ಣಃ ಅನುನಾಸಿಕ-ಸಂಜ್ಞಃ ಸ್ಯಾತ್। ತದಿತ್ಥಂ ಅ,ಇ,ಉ,ಋ ಏಷಾಂ ವರ್ಣಾನಾಂ ಪ್ರತ್ಯೇಕಮಷ್ಟಾದಶ ಭೇದಾಃ। 'ಲೃ' ವರ್ಣಸ್ಯ ದ್ವಾದಶ; ತಸ್ಯ ದೀರ್ಘಾಭಾವಾತ್। ಏಚಾಮಪಿ ದ್ವಾದಶ, ತೇಷಾಂ ಹ್ರಸ್ವಾಭಾವಾತ್।

ಪ.ಚ್ಛೇ – ಮುಖನಾಸಿಕಾ-ವಚನಃ, ಅನುನಾಸಿಕಃ।

ಅರ್ಥ– ಬಾಯಿಯಲ್ಲಿರುವ ಒಂದು(ಅಥವಾ ಎರಡು) ನಿರ್ದಿಷ್ಟ ಸ್ಥಾನದಿಂದಲೂ ಮತ್ತು ಮೂಗಿನಿಂದಲೂ ಯಾವ ಸ್ವರವು ಉಚ್ಚರಿಸಲ್ಪಡುತ್ತದೆಯೋ ಆ ವರ್ಣವು ಅನುನಾಸಿಕ ಎಂಬ ಹೆಸರನ್ನು ಪಡೆಯುತ್ತದೆ. ಎಲ್ಲ ಸ್ವರಗಳಿಗೂ ಅನುನಾಸಿಕ ರೂಪಗಳಿರುತ್ತವೆ ಎಂದು ಹಿಂದೆಯೇ ಹೇಳಲಾಗಿದೆ. ಸ್ವರ ಮತ್ತು ವ್ಯಞ್ಜನಸೂತ್ರಗಳ ಮಧ್ಯದಲ್ಲಿ 'ಹಯವರಟ್' ಮತ್ತು 'ಲಣ್' ಎಂಬ ಸೂತ್ರಗಳು ಇರೋಣದ್ದರಿಂದ ಅವುಗಳಿಗೆ ಅಂತಃಸ್ಥಗಳು ಎಂದು ಹೆಸರು. ಅಂತಃಸ್ಥಗಳಾದ ಯ್,ವ್,ರ್,ಲ್ ಗಳಲ್ಲಿ ರೇಫ(ರ್)ವನ್ನು ಬಿಟ್ಟು ಉಳಿದ ಮೂರು(ಯ್,ವ್,ಲ್) ವರ್ಣಗಳಿಗೆ ಅನುನಾಸಿಕ ರೂಪಗಳೂ ಇವೆ. ಅವು ವ್ಯಞ್ಜನಗಳು. ಈ ವ್ಯಞ್ಜನಗಳಿಗೆ (ಯ್,ವ್,ಲ್) ಅನುನಾಸಿಕಧರ್ಮವು (ಸ್ವರಗಳಿಗಿದ್ದಂತೆ), ಇದ್ದು ಇವು ಸ್ವರ-ವ್ಯಞ್ಜನಗಳ ಮಧ್ಯದಲ್ಲಿ (ಶಿವಸೂತ್ರಗಳಲ್ಲಿ) ಇವೆ. ಆದ್ದರಿಂದಲೇ ಇವುಗಳನ್ನು ಅಂತಃಸ್ಥಗಳೆಂದು ಕರೆಯುತ್ತಾರೆ. (ಇವನ್ನು ಆಂಗ್ಲ ಭಾಷೆಯಲ್ಲಿ ಸೆಮಿಒವ್ವಲ್ ಎಂದು ಕರೆಯುತ್ತಾರೆ). ರೇಫ(ರ್) ವು ಅನುನಾಸಿಕವಾಗಿ ಇಲ್ಲದಿದ್ದರೂ 'ಋ' ಕಾರದ ಅಂಶವನ್ನು ಹೊಂದಿರುತ್ತದೆ. ಆದ್ದರಿಂದ ಅದು ಅಂತಃಸ್ಥವೆನಿಸಿಕೊಳ್ಳುತ್ತದೆ. ಅನುಸ್ವಾರ ಮಾತ್ರ ಕೇವಲ ಮೂಗಿನಿಂದ ಉಚ್ಚರಿಸಲ್ಪಡುತ್ತದೆ. ಉಳಿದ ಅನುನಾಸಿಕ ವರ್ಣಗಳು (ಞ್,ಮ್,ಙ್,ಣ್,ನ್) ಬಾಯಿಯಲ್ಲಿರುವ ವರ್ಣೋತ್ಪತ್ತಿ ಹೀಗಾಗಿ 'ಅ,ಇ,ಉ ಮತ್ತು 'ಋ' ಈ ವರ್ಣಗಳಿಗೆ ಪ್ರತ್ಯೇಕವಾಗಿ 18 ರೂಪಗಳಿವೆ. 'ಲೃ' ವರ್ಣಕ್ಕೆ 12 ರೂಪಗಳು. ಕಾರಣ ಅದಕ್ಕೆ ದೀರ್ಘದ ಆರು ರೂಪಗಳು ಇಲ್ಲ. (ನಾವಾಗಿ ದೀರ್ಘ 'ಲೃ' ವರ್ಣವನ್ನು ಉಚ್ಚಾರಮಾಡಿದರೂ ಅದು ಪ್ರಯೋಗದಲ್ಲಿ ಇಲ್ಲವಾದ್ದರಿಂದ ಅದು ಗ್ರಾಹ್ಯವಲ್ಲ. "ಪ್ರಯೋಗ-ಶರಣಾಃ ವೈಯಾಕರಣಾಃ" ಎಂಬ ಮಾತೇ ಇದಕ್ಕೆ ಪ್ರಮಾಣ). ಏಚ್

(ಏ,ಓ,ಐ,ಔ) ವರ್ಣಗಳಿಗೂ ಹ್ರಸ್ವದ ಆರು ರೂಪಗಳಿಲ್ಲ. ಆದ್ದರಿಂದ ಹನ್ನೆರಡೇ ರೂಪಗಳಿರುವವು.

**(ಸವರ್ಣ ಸಂಜ್ಞೆ ಹೇಳುವ ಸೂತ್ರ)**

**ಸೂತ್ರ 10: ತುಲ್ಯಾಸ್ಯಪ್ರಯತ್ನಂ ಸವರ್ಣಮ್ (1.1.9)**

ವೃತ್ತಿ–ತಾಲ್ವಾದಿಸ್ಥಾನಂ ಆಭ್ಯಂತರ–ಪ್ರಯತ್ನಶ್ಚ ಇತ್ಯೇತದ್ದ್ವಯಂ ಯಸ್ಯ (ವರ್ಣಸ್ಯ) ಯೇನ (ಅನ್ಯೇನ ವರ್ಣೇನ) ತುಲ್ಯಂ ತನ್ಮಿಥಃ (ತಯೋಃ ಪರಸ್ಪರಂ) ಸವರ್ಣಸಂಜ್ಞಂ ಸ್ಯಾತ್। ***ವಾರ್ತಿಕಂ–ಋ–ಲೃ–ವರ್ಣಯೋಃ ಮಿಥಃ ಸಾವರ್ಣ್ಯಂ ವಾಚ್ಯಮ್*** ಅಕುಹವಿಸರ್ಜನೀಯಾನಾಂ ಕಣ್ಠಃ। ಇಚುಯಶಾನಾಂ ತಾಲು। ಋಟುರಷಾಣಾಂ ಮೂರ್ಧಾ। ಲೃತುಲಸಾನಾಂ ದನ್ತಾಃ। ಉಪೂಪಧ್ಮಾನೀಯಾನಾಂ ಓಷ್ಠೌ। ಞಮಙಣನಾನಾಂ ನಾಸಿಕಾ ಚ। ಏದೈತೋಃ ಕಣ್ಠತಾಲು। ಓದೌತೋಃ ಕಣ್ಠೋಷ್ಠಮ್। ವಕಾರಸ್ಯ ದನ್ತೋಷ್ಠಂ। ಜಿಹ್ವಾಮೂಲೀಯಸ್ಯ ಜಿಹ್ವಾಮೂಲಂ। ನಾಸಿಕಾ ಅನುಸ್ವಾರಸ್ಯ।

ಯತ್ನಃ ದ್ವಿಧಾ– ಆಭ್ಯನ್ತರೋ ಬಾಹ್ಯಶ್ಚ । ಆದ್ಯಃ ಪಞ್ಚಧಾ– ಸ್ಪೃಷ್ಟ, ಈಷತ್‌ಸ್ಪೃಷ್ಟ, ಈಷದ್ವಿವೃತ, ವಿವೃತ, ಸಂವೃತಭೇದಾತ್। ತತ್ರ ಸ್ಪೃಷ್ಟಂ ಪ್ರಯತನಂ–ಸ್ಪರ್ಶಾನಾಮ್। ಈಷತ್–ಸ್ಪೃಷ್ಟಂ–ಅಂತಃಸ್ಥಾನಾಮ್। ಈಷದ್ವಿವೃತಂ ಊಷ್ಮಣಾಮ್। ವಿವೃತಂ ಸ್ವರಾಣಾಮ್। ಹ್ರಸ್ವಸ್ಯ 'ಅ'–ವರ್ಣಸ್ಯ ಪ್ರಯೋಗೇ ಸಂವೃತಮ್। ಪ್ರಕ್ರಿಯಾದಶಾಯಾಂ ತು ವಿವೃತಮೇವ। ಬಾಹ್ಯಪ್ರಯತ್ನಸ್ತು ಏಕಾದಶಧಾ– 1. ವಿವಾರಃ, 2. ಸಂವಾರಃ, 3. ಶ್ವಾಸಃ, 4. ನಾದಃ 5. ಘೋಷಃ, 6. ಅಘೋಷಃ, 7. ಅಲ್ಪಪ್ರಾಣಃ, 8. ಮಹಾಪ್ರಾಣಃ, 9. ಉದಾತ್ತಃ, 10. ಅನುದಾತ್ತಃ, 11. ಸ್ವರಿತಶ್ಚೇತಿ।

| | | | |
|---|---|---|---|
| ಖರಃ– | 1. ವಿವಾರಾಃ, | 3. ಶ್ವಾಸಾಃ | 6. ಅಘೋಷಾಶ್ಚ। |
| ಹಶಃ – | 2. ಸಂವಾರಾಃ, | 4. ನಾದಾಃ, | 5. ಘೋಷಾಶ್ಚ। |

ವರ್ಗಾಣಾಂ ಪ್ರಥಮ–ತೃತೀಯ–ಪಞ್ಚಮಾಃ ಯಣಶ್ಚ ಅಲ್ಪಪ್ರಾಣಾಃ।

ವರ್ಗಾಣಾಂ ದ್ವಿತೀಯ–ಚತುರ್ಥೌ ಶಲಶ್ಚ ಮಹಾಪ್ರಾಣಾಃ।

ಕಾದಯೋ ಮಾವಸಾನಾಃ ಸ್ಪರ್ಶಾಃ। ಯಣೋನ್ತಃಸ್ಥಾಃ। ಶಲಃ ಊಷ್ಮಾಣಃ। ಅಚಃ ಸ್ವರಾಃ। ಅ><ಕಃ, ಅ><ಖಃ ಇತಿ ಕ–ಖಾಭ್ಯಾಂ ಪ್ರಾಕ್ ಅರ್ಧವಿಸರ್ಗಸದೃಶೌ ಜಿಹ್ವಾಮೂಲೀಯೌ। ಅ><ಪಃ, ಅ><ಫಃ ಇತಿ ಪ–ಫಾಭ್ಯಾಂ ಪ್ರಾಕ್ ಅರ್ಧವಿಸರ್ಗಸದೃಶೌ ಉಪಧ್ಮಾನೀಯೌ। "ಅಂ, ಅಃ" ಇತ್ಯಚಃ ಪರೌ ಅನುಸ್ವಾರ–ವಿಸರ್ಗೌ।

ಪ.ಚ್ಛೇ – ತುಲ್ಯಾಸ್ಯ, ಪ್ರಯತ್ನಂ, ಸವರ್ಣಮ್।

ಅರ್ಥಃ–ಯಾವ ಒಂದು ವರ್ಣಕ್ಕೆ (ಬಾಯಿಯ ಒಳಭಾಗದಲ್ಲಿರುವ) ತಾಲು ಮೊದಲಾದವುಗಳಲ್ಲಿ ಒಂದು ವರ್ಣೋತ್ಪತ್ತಿ ಸ್ಥಾನವು ಮತ್ತು ಪ್ರಯತ್ನವು ಇರುವುದೋ ಅಂತಹದ್ದೇ ಸ್ಥಾನ ಮತ್ತು ಪ್ರಯತ್ನವೂ ಮತ್ತೊಂದು ವರ್ಣಕ್ಕೂ ಸಮಾನವಾಗಿದ್ದರೆ

ಆಗ ಆ ಎರಡು ವರ್ಣಗಳು ಪರಸ್ಪರ ಸವರ್ಣಗಳಾಗುವವು.

ವಾರ್ತಿಕ– ಋ ಮತ್ತು ಲೃ ವರ್ಣಗಳೆರಡೂ (ಸಮಾನ ಸ್ಥಾನ–ಪ್ರಯತ್ನಗಳನ್ನು ಉಳ್ಳದ್ದಾಗಿ ಇಲ್ಲದಿದ್ದರೂ) ಅವು ಪರಸ್ಪರ ಸವರ್ಣಗಳೆಂದು ಹೇಳಬೇಕು(ಗ್ರಹಿಸಬೇಕು)*.

'ಅ'ವರ್ಣ ಕ–ವರ್ಗ (ಕ್,ಖ್,ಗ್,ಘ್,ಙ್), ಹ–ಕಾರ ಮತ್ತು ವಿಸರ್ಗ ಇವುಗಳಿಗೆ ಕಣ್ಠವು ಉತ್ಪತ್ತಿಸ್ಥಾನವಾಗಿದೆ.

ಸೂಚನೆ – 'ಮುನೀನಾಂ ಉತ್ತರೋತ್ತರಂ ಪ್ರಾಮಾಣ್ಯಂ' ಎಂಬ ವಚನದ ಪ್ರಕಾರ ಪಾಣಿನಿಯವರ ನಿಯಮಕ್ಕಿಂತ ಭಿನ್ನವಾಗಿದ್ದರೂ ಇದನ್ನು ಪ್ರಮಾಣವೆಂದು ಗ್ರಹಿಸಬೇಕು. (ಪಾಣಿನಿಯವರ ದೃಷ್ಟಿಯಲ್ಲಿ ಬಿಟ್ಟುಹೋಗಿರುವ ಪ್ರಯೋಗವನ್ನು ವಾರ್ತಿಕಕಾರರು ಸೇರಿಸಿದ್ದಾರೆ ಎಂದು ತಿಳಿಯಬೇಕು).

ಇ–ವರ್ಣ, ಚ–ವರ್ಗ, (ಚ್,ಛ್,ಜ್,ಝ್,ಞ್) ಯ–ಕಾರ ಮತ್ತು ಶ–ಕಾರ ಇವುಗಳಿಗೆ ತಾಲು ಉತ್ಪತ್ತಿಸ್ಥಾನವಾಗಿದೆ. (ಬಾಯಂಗಳದ ದಂತಗಳ ಮೇಲ್ಭಾಗ).

ಋ–ವರ್ಣ, ಟ–ವರ್ಗ(ಟ್,ಠ್,ಡ್,ಢ್,ಣ್) ರೇಫ(ರ್), ಮತ್ತು ಷ–ಕಾರ ಇವುಗಳಿಗೆ, ಮೂರ್ಧಾ ಉತ್ಪತ್ತಿಸ್ಥಾನವಾಗಿದೆ. (ಮೂರ್ಧಾ ಎಂದರೆ, ಬಾಯಿಯೊಳಗಿನ ಅಂಗಳದ ಮೇಲ್ಭಾಗ).

'ಲೃ' ವರ್ಣ, ತ–ವರ್ಗ( ತ್,ಥ್,ದ್,ಧ್,ನ್), ಲ–ಕಾರ ಮತ್ತು ಸ–ಕಾರ ಇವುಗಳಿಗೆ ದನ್ತಗಳು ಉತ್ಪತ್ತಿಸ್ಥಾನವಾಗಿವೆ. (ಹಲ್ಲುಗಳಿಲ್ಲದವರಿಗೆ ಒಸಡು ಉತ್ಪತ್ತಿಸ್ಥಾನವೆಂದು ತಿಳಿಯಬೇಕು).

ಉ–ವರ್ಣ, ಪ–ವರ್ಗ(ಪ್,ಫ್,ಬ್,ಭ್,ಮ್), ಉಪಧ್ಮಾನೀಯ (<>) ಇವುಗಳಿಗೆ ಎರಡೂ ತುಟಿಗಳು ಉತ್ಪತ್ತಿಸ್ಥಾನವಾಗಿವೆ.

ಞ್,ಮ್,ಙ್,ಣ್,ನ್ ಐದು ವರ್ಣಗಳಿಗೆ, ಆಯಾವರ್ಗದ ವರ್ಣೋತ್ಪತ್ತಿ ಸ್ಥಾನದ ಜೊತೆಗೆ ಮೂಗೂ ಉತ್ಪತ್ತಿ ಸ್ಥಾನವಾಗಿದೆ. ಆದ್ದರಿಂದ ಅನುನಾಸಿಕಗಳೂ ಆಗಿವೆ.

'ಏ'(ತ್) ಮತ್ತು 'ಐ'(ತ್) ಇವು ಒಂದೊಂದಕ್ಕೂ ಕಣ್ಠ ಮತ್ತು ತಾಲು ಇವೆರಡೂ ಉತ್ಪತ್ತಿ ಸ್ಥಾನಗಳು. 'ಓ'(ತ್) ಮತ್ತು 'ಔ' (ತ್) ಇವು ಒಂದೊಂದಕ್ಕೂ ಕಣ್ಠ ಮತ್ತು ಓಷ್ಠ ಗಳು ಇವು ಉತ್ಪತ್ತಿ ಸ್ಥಾನಗಳು. [ಏ,ಐ,ಓ,ಔ ಈ ವರ್ಣಗಳ ನಂತರ 'ತ್' ಸೇರಿಸಲಾಗಿದೆ. ಇದು ತಪರಕರಣವಲ್ಲ. (ಅಂದರೆ ಆ ವರ್ಣವು ಯಾವ ಕಾಲದಲ್ಲಿ ಉಚ್ಚರಿಸಲ್ಪಟ್ಟಿದೆಯೋ ಅದನ್ನು ಮಾತ್ರ ಗ್ರಹಿಸುತ್ತದೆ ಎಂದಲ್ಲ). ಹಾಗಾದರೆ ಅದು ಏ ಮತ್ತು ಐ ಹಾಗೆಯೇ ಓ ಮತ್ತು ಔ ಗಳನ್ನು ಬೇರೆ ಬೇರೆಯಾಗಿ ಉಚ್ಚರಿಸುವುದಕ್ಕಾಗಿ ಇರುವದು. ಇಲ್ಲದಿದ್ದರೆ ಏ+ಐ = ಐ ಎಂದೂ ಓ+ಔ= ಔ ಎಂದೂ ಸಂಧಿನಿಯಮದಿಂದ ಉಚ್ಚರಿಸಬೇಕಾಗುವದು. ಆಗ ಐ ಮತ್ತು ಔ ಗಳಲ್ಲಿ ಎರಡು ವರ್ಣಗಳಿವೆ ಎಂದು ತಿಳಿಯಲು ಸಾಧ್ಯವಾಗುವದಿಲ್ಲ]. 'ವ'ಕಾರಕ್ಕೆ ದನ್ತ ಮತ್ತು ಓಷ್ಠಗಳು ಸ್ಥಾನ. ಜಿಹ್ವಾಮೂಲೀಯಕ್ಕೆ ಜಿಹ್ವಾಮೂಲವು (ನಾಲಿಗೆಯ ಬುಡ) ಸ್ಥಾನ. ಅನುಸ್ವಾರಕ್ಕೆ ಮೂಗು ಸ್ಥಾನ. ಅಕ್ಷರಗಳನ್ನು ಉಚ್ಚಾರ ಮಾಡುವದಕ್ಕೆ, ಆಭ್ಯನ್ತರ

ಮತ್ತು ಬಾಹ್ಯ ಎಂಬ ಎರಡು ತರಹದ ಪ್ರಯತ್ನಗಳು ಅಪೇಕ್ಷಿತವಾಗಿವೆ. (ಎಲ್ಲ ವರ್ಣಗಳೂ ಆಭ್ಯನ್ತರ ಪ್ರಯತ್ನಗಳಿಂದಲೂ ಮತ್ತು ಬಾಹ್ಯಪ್ರಯತ್ನಗಳಿಂದಲೂ ಆಯಾ ಸ್ಥಾನಗಳಲ್ಲಿ ಹುಟ್ಟುತ್ತವೆ. ಯಾವ ಯಾವ ಅಕ್ಷರಗಳಿಗೆ ಯಾವಯಾವ ಪ್ರಯತ್ನಗಳು ಬೇಕು ಎಂಬುದನ್ನು ಕೆಳಗೆ ಕೊಡಲಾಗಿದೆ).

ಮೊದಲನೆಯದು ಆಭ್ಯನ್ತರ ಪ್ರಯತ್ನ. ಅದು 5 ವಿಧ.

(ಭಟ್ಟೋಜಿ ದೀಕ್ಷಿತರು ಸಿದ್ಧಾನ್ತ ಕೌಮುದಿಯಲ್ಲಿ ಈ ಪ್ರಯತ್ನಗಳನ್ನು 4 ವಿಧವಾಗಿ ವಿಙ್ಗಡಿಸಿದ್ದಾರೆ). ಅವು 1.ಸ್ಪೃಷ್ಟ ಪ್ರಯತ್ನ, 2.ಈಷತ್-ಸ್ಪೃಷ್ಟ ಪ್ರಯತ್ನ, 3.ಈಷದ್ವಿವೃತ ಪ್ರಯತ್ನ, 4.ವಿವೃತ ಮತ್ತು 5.ಸಂವೃತ ಪ್ರಯತ್ನ ಎಂಬ ರೀತಿಯಿಂದ 5 ವಿಧ. ಅವುಗಳಲ್ಲಿ ಸ್ಪರ್ಶಾಕ್ಷರಗಳಿಗೆ (ವರ್ಗೀಯ 25 ವರ್ಣಗಳಿಗೆ) ಸ್ಪೃಷ್ಟ ಪ್ರಯತ್ನವು. ಯ್,ರ್,ಲ್,ವ್ ಎಂಬ ಅನ್ತಃಸ್ಥ-ವರ್ಣಗಳಿಗೆ ಈಷತ್-ಸ್ಪೃಷ್ಟ ಪ್ರಯತ್ನವು.

ಶ್,ಷ್,ಸ್,ಹ್, ಎಂಬ ಊಷ್ಮ-ವರ್ಣಗಳಿಗೆ ಈಷದ್ವಿವೃತವು ಪ್ರಯತ್ನ.

ಸ್ವರಗಳಿಗೆ (ಅಚ್ ವರ್ಣಗಳಿಗೆ) ವಿವೃತ ಪ್ರಯತ್ನವು.

(ಆರು ವಿಧವಾದ) ಹ್ರಸ್ವ 'ಅ' ವರ್ಣಗಳನ್ನು ಉಚ್ಚರಿಸುವಾಗ ಸಂವೃತ ಪ್ರಯತ್ನವಿದ್ದು ವ್ಯಾಕರಣ ಪ್ರಯೋಗ ಪ್ರಕ್ರಿಯೆಯಲ್ಲಿ, ವಿವೃತವೆಂದು ತಿಳಿಯಬೇಕು.

ಉಳಿದ 12 'ಅ'ಕಾರಗಳಿಗೂ ಇತರ 8 ಸ್ವರ (ಇ,ಉ,ಋ,ಲೃ,ಏ,ಓ,ಐ,ಔ) ಗಳಿಗೂ, ಯಾವಾಗಲೂ (ಪ್ರಕ್ರಿಯಾ ದೆಸೆಯಲ್ಲಿಯೂ ಮತ್ತು ಪ್ರಯೋಗ ದೆಸೆಯಲ್ಲಿಯೂ) ವಿವೃತ ಪ್ರಯತ್ನವೇ ಇರುತ್ತದೆ. [ಸಂಧಿ ಮಾಡುವದಕ್ಕೆ ಪೂರ್ವದೆಸೆಯಲ್ಲಿ ಮಾನಸಿಕವಾಗಿ ಅಕ್ಷರಗಳನ್ನು ಸೇರಿಸುವಾಗ, ಸಂಧಿಯೋಗ್ಯತೆ ಬರುವುದಕ್ಕಾಗಿ, ಅವುಗಳಿಗೆ ಸಾವರ್ಣ್ಯವಿದೆಯೇ ಎಂದು ನೋಡುತ್ತೇವೆ. ಆ ಅವಸ್ಥೆಯಲ್ಲಿ ಸಾವರ್ಣ್ಯವಿದ್ದರೆ (ಆ ಪ್ರಕ್ರಿಯಾದೆಸೆಯಲ್ಲಿಯೇ) ಸಂಧಿ ಮಾಡುತ್ತೇವೆ. ಅಂದರೆ, ಪ್ರಯೋಗದೆಸೆಯಲ್ಲಿ (ಉಚ್ಚರಿಸುವಾಗ) ತನ್ನಿಮಿತ್ತಕವಾದ ವಿಕಾರವು ಅಕ್ಷರಗಳಲ್ಲಿ ಉಂಟಾಗಿರುತ್ತದೆ.

ಈ ಹ್ರಸ್ವ 'ಅ' ಕಾರಕ್ಕೆ ಪ್ರಯೋಗದೆಸೆಯಲ್ಲಿ ಸಂವೃತ ಪ್ರಯತ್ನವಿರೋಣದ್ದರಿಂದ ಇತರ 12 ವಿಧವಾದ ವಿವೃತ ಪ್ರಯತ್ನದ 'ಅ' ಕಾರಗಳು ಸವರ್ಣವಾಗುವದಿಲ್ಲ. ಈ ಕಾರಣದಿಂದ ಅವುಗಳಿಗೆ ಸಂಧಿಯೋಗ್ಯತೆ ಉಂಟಾಗುವದಕ್ಕಾಗಿ (ಪೂರ್ವಾವಸ್ಥೆಯಲ್ಲಿ) ಪ್ರಕ್ರಿಯಾದೆಸೆಯನ್ನು ಒಪ್ಪಿರುವರು. ಪ್ರಕ್ರಿಯಾದೆಸೆಯಲ್ಲಿ ವರ್ಣಗಳು ಸವರ್ಣವಾಗಿದ್ದರೆ, ಸಂಧಿ ಉಂಟಾಗುತ್ತದೆ. ಆ ಸಂಧಿ ಪ್ರಯುಕ್ತವಾಗಿ ವಿಕಾರಹೊಂದಿರುವ ವರ್ಣವು ಸಂವೃತವಾಗಿ ಇರುತ್ತದೆ. ಆದರೆ ಉಚ್ಚರಿಸಲ್ಪಡುವುದಿಲ್ಲ. ಸಂಧಿಕಾರ್ಯವಿಲ್ಲದಿದ್ದಾಗ, 'ಅ' ಕಾರಾನ್ತವಾಗಿಯೋ, 'ಅ'ಕಾರಾದಿಯಾಗಿಯೋ ಹ್ರಸ್ವ 'ಅ' ಕಾರವು ಉಚ್ಚರಿಸಲ್ಪಟ್ಟರೆ, ಅದು ಸಂವೃತವಾಗಿರುತ್ತದೆ. ಈ ಹ್ರಸ್ವ ಸಂವೃತ 'ಅ' ಕಾರವು ಸಂಧಿಯನ್ನು ಅಪೇಕ್ಷಿಸುವಾಗ ಮಾತ್ರ ಪೂರ್ವಾವಸ್ಥೆಯಾದ ಪ್ರಕ್ರಿಯಾ ದೆಸೆಯ ದೃಷ್ಟಿಯಿಂದ ಅದಕ್ಕೆ ವಿವೃತಪ್ರಯತ್ನವಿರೋಣದ್ದರಿಂದ, ಇತರ 12 ವಿಧವಾದ ವಿವೃತ 'ಅ'ಕಾರಗಳ ಜೊತೆಗೆ ಸಂಧಿ ಆಗಿಯೇ ಉಚ್ಚರಿಸಲ್ಪಡೋಣದ್ದರಿಂದ, ಅದು ಬಿಡಿಯಾಗಿ ಉಚ್ಚರಿಸಲ್ಪಡುವದಿಲ್ಲ.

(ಆದ್ದರಿಂದ ಸಂವೃತವಾಗಿ ಇರುವದಿಲ್ಲ). ಸಂಧಿಯಿಂದ ಸವರ್ಣದೀರ್ಘ ಉಂಟಾದಾಗ, ಆದೇಶರೂಪವಾದ 'ಆ' ಕಾರವು ವಿವೃತವಾಗಿಯೇ ಇರುತ್ತದೆ. ಪ್ರತ್ಯೇಕವಾಗಿ ಹ್ರಸ್ವ 'ಅ' ಕಾರಕ್ಕೆ (ಸವರ್ಣದೀರ್ಘ ಸಂಧಿಯಾಗಿರೋಣದ್ದರಿಂದ) ಸಂವೃತ ಪ್ರಯತ್ನದಿಂದ ಉಚ್ಚಾರಣೆ ಮಾಡುವ ಅವಕಾಶವೇ ಇರುವದಿಲ್ಲ. ಈ ಕಾರಣದಿಂದ, ಎರಡು ದೆಸೆಗಳನ್ನು ವೈಯಾಕರಣಿಗಳು ಅಙ್ಗೀಕರಿಸಿ ಸವರ್ಣದೀರ್ಘ ಸಂಧಿಯನ್ನು ರಕ್ಷಿಸಿರುವರು. ಇಲ್ಲದಿದ್ದರೆ, ಇಂಥ ಪ್ರಸಂಗಗಳಲ್ಲಿ ಸವರ್ಣದೀರ್ಘ ಸಂದಿಗೆ ಅವಕಾಶವೇ ಇಲ್ಲದಾಗುತ್ತಿತ್ತು].

ಎರಡನೇಯದಾದ ಬಾಹ್ಯ ಪ್ರಯತ್ನವಾದರೋ 11 ವಿಧವಾಗಿ ಇರುತ್ತದೆ. 1.ವಿವಾರಃ, 2.ಸಂವಾರಃ, 3.ಶ್ವಾಸಃ, 4.ನಾದಃ, 5.ಘೋಷಃ, 6.ಅಘೋಷಃ, 7.ಅಲ್ಪಪ್ರಾಣಃ, 8.ಮಹಾಪ್ರಾಣಃ, 9.ಉದಾತ್ತಃ, 10.ಅನುದಾತ್ತಃ, 11. ಸ್ವರಿತಃ– ಎಂದು.ಹಶ್– ವರ್ಣಗಳಿಗೆ ಸಂವಾರ, ನಾದ ಮತ್ತು ಘೋಷ ಇವು ಮೂರು ಪ್ರಯತ್ನಗಳು. [ವ್ಯಙ್ಜನಗಳು 33 ಇವೆ. ಅವೇ ಖರ್ ಮತ್ತು ಹಶ್ ವರ್ಣಗಳು. ಮೇಲೆ ಹೇಳಿದ ಮೂರು ಪ್ರಯತ್ನಗಳ ಹೊರತು ನಾಲ್ಕನೆಯ ಪ್ರಯತ್ನವಾದ ಮಹಾಪ್ರಾಣ ಅಥವಾ ಅಲ್ಪಪ್ರಾಣ ಪ್ರಯತ್ನವನ್ನು ಅವುಗಳ ಜೊತೆಗೆ ಸೇರಿಸಿಕೊಳ್ಳಬೇಕು. ಒಟ್ಟು ವ್ಯಙ್ಜನಗಳಿಗೆ ನಾಲ್ಕು ಪ್ರಯತ್ನಗಳೆಂದು ಗೊತ್ತಾಗುತ್ತದೆ. ಖರ್, ಮತ್ತು ಹಶ್ ಪ್ರತ್ಯಾಹಾರಗಳಲ್ಲಿ ಮಹಾಪ್ರಾಣ ವರ್ಣಗಳೂ ಇವೆ. ಹಾಗೆಯೇ ಅಲ್ಪಪ್ರಾಣ ವರ್ಣಗಳೂ ಇವೆ. ಆಯಾ ಮಹಾಪ್ರಾಣ ವರ್ಣಗಳಿಗೆ ಮಹಾಪ್ರಾಣ ಪ್ರಯತ್ನವನ್ನೂ, ಆಯಾ ಅಲ್ಪಪ್ರಾಣ ವರ್ಣಗಳಿಗೆ ಅಲ್ಪಪ್ರಾಣ ಪ್ರಯತ್ನವನ್ನೂ ಸೇರಿಸಿ ನಾಲ್ಕು ಪ್ರಯತ್ನಗಳನ್ನೂ ಹೇಳಬೇಕು. ಯಾವ ವರ್ಣಗಳು ಮಹಾಪ್ರಾಣಗಳು ಯಾವ ವರ್ಣಗಳು ಅಲ್ಪಪ್ರಾಣಗಳು ಎಂಬುದನ್ನು ಪರಿವಿಡಿಯಲ್ಲಿ ಕೊಡಲಾಗಿದೆ].

ವರ್ಗೀಯ ವರ್ಣಗಳಲ್ಲಿ ಮೊದಲನೆಯ, ಮೂರನೆಯ ಮತ್ತು ಐದನೆಯ ವರ್ಣಗಳೂ, ಮತ್ತು 'ಯಣ್' (ಯ್,ವ್,ರ್,ಲ್) ವರ್ಣಗಳು ಅಲ್ಪಪ್ರಾಣ ಪ್ರಯತ್ನ ಉಳ್ಳವುಗಳು. ಆದುದರಿಂದಲೇ ಅವು ಅಲ್ಪಪ್ರಾಣಗಳೆಂದೆನಿಸಿಕೊಳ್ಳುತ್ತವೆ. ವರ್ಗೀಯ ವರ್ಣಗಳಲ್ಲಿ ಎರಡನೆಯ ಮತ್ತು ನಾಲ್ಕನೆಯ ವರ್ಣಗಳೂ ಮತ್ತು ಶಲ್(ಶ್,ಷ್,ಸ್,ಹ್) ಊಷ್ಮಾಣ ವರ್ಣಗಳು ಮಹಾಪ್ರಾಣ ಪ್ರಯತ್ನವುಳ್ಳವುಗಳು. ಆದ್ದರಿಂದ ಅವು ಮಹಾಪ್ರಾಣಗಳು ಎಂದೆನಿಸಿಕೊಳ್ಳುತ್ತವೆ. (ಈ ಎರಡುವಿಧ ಪ್ರಯತ್ನಗಳಲ್ಲಿ ಒಂದೊಂದನ್ನು ಆಯಾ ಸಂಬಂಧಿಸಿದ ವರ್ಣಗಳಿಗೆ ನಾಲ್ಕನೆಯ ಪ್ರಯತ್ನವನ್ನಾಗಿ ಸೇರಿಸಿಕೊಳ್ಳಬೇಕು). ಕೊನೆಯ ಮೂರು ಬಾಹ್ಯ ಪ್ರಯತ್ನಗಳಾದ ಉದಾತ್ತ,ಅನುದಾತ್ತ ಮತ್ತು ಸ್ವರಿತ ಎಂಬ ಪ್ರಯತ್ನಗಳು ಸ್ವರಗಳಿಗೆ ಮಾತ್ರ (ಅಚ್ ವರ್ಣಗಳಿಗೆ ಮಾತ್ರ) ಸಂಬಂಧಿಸಿದ್ದು.[ ಇದಕ್ಕೆ ಮೊದಲು, ಸ್ವರಗಳು 18 ವಿಧವೆಂದು ಹೇಳುವಾಗ ಉದಾತ್ತ, ಅನುದಾತ್ತ ಮತ್ತು ಸ್ವರಿತಗಳೆಂದು ಅಲ್ಲಿ ವರ್ಣವಿಭಾಗ ಮಾಡಲಾಗಿದೆ. ಈಗ ಈ ಉದಾತ್ತ, ಅನುದಾತ್ತ ಮತ್ತು ಸ್ವರಿತಗಳೆಂಬವೂ ಪ್ರಯತ್ನಗಳಾಗಿವೆ. ಪ್ರಯತ್ನಗಳಿಗೂ ಸ್ವರವರ್ಣಗಳಿಗೂ ಸಮಾನವಾದ ನಾಮಧೇಯ ಇರೋಣದ್ದರಿಂದ, ನಾವು

ವರ್ಣಗಳಬಗ್ಗೆ ಹೇಳುತ್ತೇವೆಯೋ ಅಥವಾ ವರ್ಣಗಳ ಉಚ್ಚಾರಣ-ಪ್ರಯತ್ನಗಳಬಗ್ಗೆ ಹೇಳುತ್ತೇವೆಯೋ ಎಂಬುದನ್ನು ಸೂಕ್ಷ್ಮವಾಗಿ ಲಕ್ಷಿಸಬೇಕು. ಸ್ವರ ವರ್ಣಗಳು ಬೇರೆ, ಅವುಗಳನ್ನು ಉಚ್ಚರಿಸುವ ಪ್ರಯತ್ನಗಳು ಬೇರೆ; ಆದರೆ, ಇವುಗಳೆಲ್ಲಕ್ಕೂ ಸಮಾನವಾದ ಹೆಸರಿರುವದರಿಂದ, ಸಂಶಯಕ್ಕೆ ಅವಕಾಶವಿರುತ್ತದೆ].

'ಕ್' ಕಾರದಿಂದ 'ಮ್' ಕಾರವರೆಗಿನ 25 ವರ್ಗೀಯ ವ್ಯಞ್ಜನಗಳು ಸ್ಪರ್ಶ ವರ್ಣಗಳೆಂದ ಎನಿಸಿಕೊಳ್ಳುತ್ತವೆ.

ಯ್,ವ್,ರ್,ಲ್ ವರ್ಣಗಳು ಅಂತಃಸ್ಥಗಳು. (ಅಂದರೆ ಇವು ಸ್ವರ ಮತ್ತು ವ್ಯಞ್ಜನಗಳ ಮಧ್ಯದಲ್ಲಿ ಇವೆ. ಇವುಗಳಿಗೆ ಸ್ವರ ಧರ್ಮಗಳೂ ಇವೆ. ವ್ಯಞ್ಜನ ಧರ್ಮಗಳೂ ಇವೆ ಎಂದರ್ಥ. ಇವುಗಳಲ್ಲಿ ಯ್,ವ್,ಲ್‌ಗಳಿಗೆ ಮಾತ್ರ ಅನುನಾಸಿಕತ್ವ ಧರ್ಮವಿದೆ. ರೇಫ(ರ್)ಕ್ಕೆ ಅನುನಾಸಿಕ ಧರ್ಮವಿರುವದಿಲ್ಲ ಎಂಬುದನ್ನು ಹಿಂದೆಯೇ ಹೇಳಿದ್ದೇವೆ).

ಶ್, ಷ್, ಸ್ ಮತ್ತು ಹ್ ಈ ವರ್ಣಗಳಿಗೆ ಊಷ್ಮ ವರ್ಣಗಳೆಂದು ಹೆಸರು. (ಇವುಗಳನ್ನು ಉಚ್ಚರಿಸುವಾಗ, ಚಳಿಗಾಲದಲ್ಲಿ ಬಾಯಿಯಿಂದ ಉಗಿ ಬರುವದನ್ನು ಕಾಣಬಹುದು).

ಅ,ಇ,ಉ,ಋ,ಲೃ,ಏ,ಓ,ಐ,ಔ ಈ ವರ್ಣಗಳಿಗೆ (ಅಚ್ ವರ್ಣಗಳಿಗೆ) ಸ್ವರಗಳೆಂದು ಹೆಸರು. ><ಕ್, ><ಖ್ ಎಂಬ ವರ್ಣಗಳಲ್ಲಿ 'ಕ' ಕಾರ 'ಖ' ಕಾರಗಳ ಪೂರ್ವದಲ್ಲಿ ಉಚ್ಚರಿಸಲ್ಪಡುವ ಅರ್ಧವಿಸರ್ಗದಿಂದ ಗುರುತಿಸಲ್ಪಡುವ ವರ್ಣಗಳಿಗೆ ಜಿಹ್ವಾಮೂಲೀಯವೆಂದು ಹೆಸರು.

<>ಪ್, <>ಫ್ ಎಂಬ ವರ್ಣಗಳಲ್ಲಿ 'ಪ' ಕಾರ ಮತ್ತು 'ಫ' ಕಾರಗಳ ಪೂರ್ವದಲ್ಲಿ ಉಚ್ಚರಿಸಲ್ಪಡುವ ಅರ್ಧವಿಸರ್ಗದಂತೆ ಇರುವ ವರ್ಣಕ್ಕೆ ಉಪಧ್ಮಾನೀಯವೆಂದು ಹೆಸರು.

'ಅಂ' 'ಅಃ' ಎಂಬಲ್ಲಿ 'ಅ' ಕಾರ (ಅಥವಾ 'ಅಚ್' ವರ್ಣಗಳ) ನಂತರ ಉಚ್ಚರಿಸಲ್ಪಡುವ ವರ್ಣಗಳಿಗೆ ಕ್ರಮವಾಗಿ ಅನುಸ್ವಾರ ಮತ್ತು ವಿಸರ್ಗಗಳೆಂದು ಹೆಸರು. (ಹರಿಂ, ಹರಿಃ- ಇಲ್ಲಿ 'ಇ'ಕಾರದನಂತರ ಕ್ರಮವಾಗಿ ಅನುಸ್ವಾರ- ವಿಸರ್ಗಗಳಿವೆ).

**(ಸವರ್ಣ ಗ್ರಾಹಕ ಸೂತ್ರ)**

**ಸೂತ್ರ 11: ಅಣುದಿತ್ ಸವರ್ಣಸ್ಯ ಚಾಪ್ರತ್ಯಯಃ (1.1.69)**

ವೃತ್ತಿ – ಪ್ರತೀಯತೇ ವಿಧೀಯತೇ ಇತಿ ಪ್ರತ್ಯಯಃ। ಅವಿಧೀಯಮಾನಃ ಅಣ್ ಉದಿಚ್ಚ ಸವರ್ಣಸ್ಯ ಸಂಜ್ಞಾ ಸ್ಯಾತ್। ಅತ್ರೈವ ಅಣ್, ಪರೇಣ ಣ-ಕಾರೇಣ। ಕುಚುಟುತುಪು ಏತೇ ಉದಿತಃ। ತದೇವಮ್ – 'ಅ' ಇತಿ ಅಷ್ಟಾದಶಾನಾಂ ಸಂಜ್ಞಾ ತಥಾ 'ಇ'ಕಾರ-'ಉ'ಕಾರೌ। 'ಋ'ಕಾರಃ ತ್ರಿಂಶತಃ। ಏವಮ್ 'ಲೃ'ಕಾರೋಽಪಿ। ಏಚಃ ದ್ವಾದಶಾನಾಮ್। ಅನುನಾಸಿಕ-ಅನನುನಾಸಿಕಭೇದೇನ ಯ-ವ-ಲಾಃ ದ್ವಿಧಾ। ತೇನ ಅನನುನಾಸಿಕಾಃ ತೇ, ದ್ವಯೋರ್ದ್ವಯಾಃ ಸಂಜ್ಞಾ

ಪ.ಚ್ಛೇ – ಅಣ್, ಉದಿತ್, ಸವರ್ಣಸ್ಯ, ಚ, ಅಪ್ರತ್ಯಯಃ ।

ಅ. ವ್ಯ. – "ಸ್ವಂ ರೂಪಂ ಶಬ್ದಸ್ಯ ಅಶಬ್ದ ಸಂಜ್ಞಾ" (1.1.68) ಎಂಬ ಸೂತ್ರದಿಂದ 'ಸ್ವಂ' ಎಂಬ ಪದವು ಅನುವೃತ್ತವಾಗಿ ಷಷ್ಠ್ಯನ್ತವಾಗಿ 'ಸ್ವಸ್ಯ' (ಸವರ್ಣಸ್ಯ) ಎಂದಾಗಿರುತ್ತದೆ.

ಅರ್ಥ– (ಪ್ರತೀಯತೇ ಎಂದರೆ ವಿಧಿಸಲ್ಪಡುತ್ತದೆ ಎಂದು ಅರ್ಥ. ವಿಧಿಸಲ್ಪಡು ವಂತಹ ವರ್ಣಗಳು ಪ್ರತ್ಯಯವಾಗಿಯೋ ಆಗಮವಾಗಿಯೋ ಆದೇಶವಾಗಿಯೋ ಇರಬಹುದು). ವಿಧಿಸಲ್ಪಡದಿರುವ 'ಅಣ್' ವರ್ಣಗಳೂ ಮತ್ತು ವಿಧಿಸಲ್ಪಡುವ ಅಥವಾ ವಿಧಿಸಲ್ಪಡದೇ ಇರುವ ಉದಿತ್(ಕು, ಚು, ಟು, ತು, ಪು ಅಥವಾ ವರ್ಗೀಯ ವ್ಯಞ್ಜನ) ವರ್ಣಗಳು ಸವರ್ಣ ಸಂಜ್ಞೆಯನ್ನು ಹೊಂದುತ್ತವೆ. (ತಮಗೆ ಬದಲಾಗಿ ತಮ್ಮ ಸವರ್ಣಗಳು ಯಾವದೇ ಸವರ್ಣ ಕಾರ್ಯವನ್ನು ನಿರ್ವಹಿತ್ತವೆ ಎಂದರ್ಥ. ವರ್ಣಗಳು ಸವರ್ಣಸಂಜ್ಞೆಯನ್ನು ಹೊಂದಿದ್ದರೂ, 'ಅಣ್' ಆಗಿದ್ದರೆ, ವಿಧಿಸಲ್ಪಟ್ಟಾಗ ಸವರ್ಣ ಕಾರ್ಯವನ್ನು ನಿರ್ವಹಿಸಲಾರದು. ಕಾರಣ ಅವಿಧೀಯಮಾನತ್ವವೆಂಬ ಧರ್ಮವು 'ಅಣ್'ಗೆ ಮಾತ್ರ ಸಂಬಂಧಪಟ್ಟಿರುತ್ತದೆ).

ಉದಾ– ಅಣ್ ವರ್ಣಗಳು (ಅ,ಇ,ಉ,ಋ,ಌ,ಏ,ಓ,ಐ,ಔ ಮತ್ತು ಹ್,ಯ್,ವ್,ರ್,ಲ್ ಎಂಬ 14 ವರ್ಣಗಳು). ವಿಧಿಸಲ್ಪಡುವ ಅವಸ್ಥೆಯಲ್ಲಿದ್ದಾಗ ವಿಧಿಸಲ್ಪಡುವ ಅಣ್ ವರ್ಣಗಳೇ ಆಯಾ ಕಾರ್ಯವನ್ನು ನಿರ್ವಹಿಸುತ್ತವೆ. ಅವುಗಳ ಸವರ್ಣಗಳು ಮಾತ್ರ ಅವುಗಳಿಗೆ ಬದಲಾಗಿ ಆಯಾ ಕಾರ್ಯವನ್ನು ಮಾಡುವದಿಲ್ಲ. ಯಣ್ ಸಂಧಿಯಲ್ಲಿ, ಇಕ್(ಇ,ಉ,ಋ,ಌ) ವರ್ಣಗಳಿಗೆ ಯಣ್ (ಯ್,ವ್,ರ್,ಲ್) ವರ್ಣಗಳೇ ಆದೇಶವಾಗಿ ಬರುತ್ತವೆ ಹೊರತು, ಅವುಗಳ ಸವರ್ಣಗಳು ಅಲ್ಲಿ ಕೆಲಸ ಮಾಡುವದಿಲ್ಲ. ಯಣ್ ಎಂಬುದು ಅಣ್ ಪ್ರತ್ಯಾಹಾರದ ವರ್ಣಗಳು. ಇವು ವಿಧಿಸಲ್ಪಡುವ ಅವಸ್ಥೆಯಲ್ಲಿ ಇರುವುದರಿಂದಲೇ ಯ್,ವ್,ರ್,ಲ್,ಗಳೇ ಆದೇಶವಾಗಿ ಬರುತ್ತವೆ. ಆದರೆ, ಅದೇ ಅಣ್ ಪ್ರತ್ಯಾಹಾರದಲ್ಲಿರುವ ಇಕ್ ವರ್ಣಗಳು ವಿಧಿಸಲ್ಪಡದೇ ಇರುವ ಅವಸ್ಥೆಯಲ್ಲಿ ಇರೋಣದ್ದರಿಂದ (ಸ್ಥಾನಿಗಳಾಗಿ ಇರೋಣದ್ದರಿಂದ), ಯಣ್ ಸಂಧಿಕಾರ್ಯದಲ್ಲಿ ಅವುಗಳ ಸವರ್ಣಗಳಿಗೂ ಅಲ್ಲಿ ಅವಕಾಶವಿರುತ್ತದೆ. ಉದಾ– ನದೀ+ಅತ್ರ = ನದ್ಯತ್ರ ಎಂದೂ ಸಪದಿ+ಅತ್ರ = ಸಪದ್ಯತ್ರ ಎಂದು ಎರಡು ಸ್ಥಳಗಳಲ್ಲಿಯೂ ಇಕ್ ಗೆ ಯಣ್ ಬರುತ್ತದೆ. ನದೀ ಎಂಬಲ್ಲಿ 'ಈ' ಕಾರವೂ, ಸಪದಿ ಎಂಬಲ್ಲಿ 'ಇ' ಕಾರವೂ ಸ್ಥಾನಿಗಳಾಗಿ ಇರುತ್ತವೆ. ಆದ್ದರಿಂದ ಈಕಾರ ಮತ್ತು 'ಇ' ಕಾರಗಳಿದ್ದರೂ ಅವುಗಳು ಸವರ್ಣವಾಗಿರುವುದರಿಂದ, ಅವಿಧೀಯಮಾನ ಅವಸ್ಥೆಯಲ್ಲಿ ಯಣ್ ಸಂಧಿ ಬರುತ್ತದೆ. ವಿಧೀಯಮಾನ ಅವಸ್ಥೆಯಲ್ಲಿ ಅಣ್ ವರ್ಣಗಳಾದ ಯಣ್(ಯಣ್ ವರ್ಣಗಳು ಅಣ್ ಪ್ರತ್ಯಾಹಾರದಲ್ಲಿವೆ) ವರ್ಣಗಳಿಗೆ ಸವರ್ಣಗಳಿದ್ದರೂ, ಇಲ್ಲಿ ಉಪಯೋಗಕ್ಕೆ ಬಾರದ್ದರಿಂದ, ಯಣ್ ವರ್ಣಗಳೇ ಆದೇಶವಾಗಿ ಬರುತ್ತವೆ ಹೊರತು ಅವುಗಳ ಸವರ್ಣಗಳು ಆದೇಶವಾಗಿ ಬರುವದಿಲ್ಲ.

ಈ ಸೂತ್ರದಲ್ಲಿ ಮಾತ್ರ 'ಅಣ್' ವರ್ಣಗಳೆಂದರೆ, ಮೇಲೆ ಹೇಳಲಾದ 14 ವರ್ಣಗಳೇ

ಗೃಹೀತವಾಗುತ್ತವೆ. ಈ ಪ್ರತ್ಯಾಹಾರದಲ್ಲಿರುವ 'ಣ್' ಎಂಬ ಇತ್ ವರ್ಣವು 'ಲಣ್' ಎಂಬ ಸೂತ್ರದಲ್ಲಿರುವ ಪರ 'ಣ್' ಕಾರ. ಉಳಿದ ಎಲ್ಲ ಸ್ಥಳಗಳಲ್ಲಿಯೂ 'ಅಣ್'ಎಂದರೆ, "ಅ ಇ ಉಣ್" ಎಂಬ ಸೂತ್ರದಲ್ಲಿರುವ ಪೂರ್ವ 'ಣ್'ಕಾರವೆಂದು ತಿಳಿಯಬೇಕು. (ಅಂದರೆ, ಅ ಇ ಉ ವರ್ಣಗಳೆಂದು ತಿಳಿಯಬೇಕು.) (ಹಾಗೆಯೇ 'ಇಣ್' ಎಂದರೆ, ಇಉಋಲೃಏಓಐಔ ಹ್ಯ್ವ್ರ್ಲ್ ಎಂಬ 13 ವರ್ಣಗಳು).*

**ಪರೇಣೈವ ಇಣ್ ಗ್ರಹಾಃ ಸರ್ವೇ, ಪೂರ್ವೇಣೈವ ಅಣ್ಗ್ರಹಾ ಮತಾಃ।**
**ಋತೇಽಣುದಿತ್ ಸವರ್ಣಸ್ಯೇತ್ಯೇತದೇಕಂ ಪರೇಣ ತು॥**

### (ಸಂಹಿತಾ ಸಂಜ್ಞೆಯನ್ನು ಹೇಳುವ ಸೂತ್ರ)

**ಸೂತ್ರ 12: ಪರಃ ಸನ್ನಿಕರ್ಷಃ ಸಂಹಿತಾ (1.4.109)**

ವೃತ್ತಿ –ವರ್ಣಾನಾಮ್ ಅತಿಶಯಿತಃ ಸನ್ನಿಧಿಃ ಸಂಹಿತಾಸಂಜ್ಞಃ ಸ್ಯಾತ್।

ಅರ್ಥ– ವರ್ಣಗಳ ಪರಸ್ಪರ ಅತ್ಯಂತ ಸಾಮೀಪ್ಯ ಉಚ್ಚಾರಣಕ್ಕೆ ಸಂಹಿತಾ ಎಂದು ಹೆಸರು. (ಎರಡು ವರ್ಣಗಳ ಉಚ್ಚಾರಣ ಕಾಲಗಳ ಮಧ್ಯದಲ್ಲಿರುವ ಕಾಲಸಾಮೀಪ್ಯವೆಂದರೆ, ಅರ್ಧ ಮಾತ್ರಾ ಕಾಲವು ಎಂದು ತಿಳಿಯಬೇಕು. ಇದನ್ನೇ ಪರಸನ್ನಿಕರ್ಷವೆಂದು ಹೇಳುತ್ತಾರೆ).

### (ಸಂಯೋಗ ಸಂಜ್ಞೆ ಯನ್ನು ವಿಧಿಸುವ ಸೂತ್ರ)

**ಸೂತ್ರ 13: ಹಲೋಽನನ್ತರಾಃ ಸಂಯೋಗಃ (1.1.7)**

ವೃತ್ತಿ – ಅಜ್ಭಿಃ ಅವ್ಯವಹಿತಾ ಹಲಃ ಸಂಯೋಗಸಂಜ್ಞಾಃ ಸ್ಯುಃ ।

ಪ.ಚ್ಛೇ – ಹಲಃ, ಅನನ್ತರಾಃ, ಸಂಯೋಗಃ ।

ಅರ್ಥ– ವ್ಯಞ್ಜನಗಳ ಮಧ್ಯದಲ್ಲಿ ಸ್ವರಗಳಿಲ್ಲದೇ ಆ ವ್ಯಞ್ಜನಗಳು ಒಂದಕ್ಕೊಂದು ಕೂಡಿಕೊಂಡಿದ್ದರೆ, ಆ ವ್ಯಞ್ಜನಗಳಿಗೆ, ಸಂಯೋಗ ಎಂದು ಹೆಸರು. (ನಕ್ರ ಎಂಬ ಪದದಲ್ಲಿ, 'ಕ್ರ' ಎಂಬ ಶಬ್ದವು ಮೂರು ವರ್ಣಗಳಿಂದ ಕೂಡಿದೆ. (ಕ್,ರ್,ಅ). ಅವುಗಳಲ್ಲಿ ಕ್,ರ್, ಈ ವರ್ಣಗಳ ಮಧ್ಯದಲ್ಲಿ ಸ್ವರ ಇಲ್ಲ. ಈ ಸಂಯುಕ್ತವಾಗಿರುವ ಅಕ್ಷರಗಳಿಗೆ, ಸಂಯೋಗ ಎಂಬ ಸಂಜ್ಞೆ ಬರುತ್ತದೆ. ಇದೇ ರೀತಿಯಲ್ಲಿ ಮೂರು ಅಥವಾ ನಾಲ್ಕು ವ್ಯಞ್ಜನಗಳೂ ಸಹ ಮಧ್ಯದಲ್ಲಿ ಸ್ವರರಹಿತವಾಗಿಯೂ ಇರುವದುಂಟು. ಉದಾ– ಸುದ್ಧ್ಯ್ + ಉಪಾಸ್ಯ ಎಂಬಲ್ಲಿ, ಪೂರ್ವಪದದಲ್ಲಿ, ಮೂರು ವ್ಯಞ್ಜನಗಳು ಕೂಡಿರೋಣದ್ದರಿಂದ, ಅದು ಸಂಯೋಗಾನ್ತ ಪದವೆಂದು ಎನಿಸಿಕೊಳ್ಳುತ್ತದೆ. ಕಾರಣ 'ದ್'ಕಾರ, 'ಧ್'ಕಾರ ಮತ್ತು 'ಯ್'ಕಾರ ಎಂಬ ವರ್ಣಗಳು ಸಂಯುಕ್ತವಾಗಿ ಇರುವುದರಿಂದ ಸಂಯೋಗ ಸಂಜ್ಞೆಯನ್ನು ಪಡೆದಿವೆ).

### (ಪದ ಸಂಜ್ಞಾ ವಿಧಾಯಕ ಸೂತ್ರ)

**ಸೂತ್ರ 14: ಸುಪ್ತಿಙಂತಂ ಪದಮ್ (1.4.14)**

ವೃತ್ತಿ – ಸುಬಂತಂ ತಿಙಂತಂ ಚ ಪದಸಂಜ್ಞಂ ಸ್ಯಾತ್ ।

ಪ. ಚ್ಛೇ– ಸುಪ್ತಿಙಂತಂ ಪದಮ್ ।

ಅರ್ಥ – ಸುಬನ್ತ ಮತ್ತು ತಿಙನ್ತ ಇವುಗಳಿಗೆ, ಪದಗಳೆಂದು ಹೆಸರು. [ ಸುಬನ್ತಮ್ ಎಂದರೆ ಸುಪ್ ಅನ್ತೇ ಯಸ್ಯ ತತ್ ಎಂದೂ, ತಿಙನ್ತಮ್ ಎಂದರೆ, ತಿಙ್ ಅನ್ತೇ ಯಸ್ಯ ತತ್ ಎಂದೂ ವಿಗ್ರಹ ವಾಕ್ಯಗಳು. ಪ್ರಾತಿಪದಿಕಕ್ಕೆ (ಪ್ರಕೃತಿಗೆ) ಸುಪ್ ಪ್ರತ್ಯಯವನ್ನು ಸೇರಿಸಿದರೆ, ಸುಬನ್ತವಾಗುತ್ತದೆ.

ಉದಾ– ವೃಕ್ಷ+ಸು= ವೃಕ್ಷಃ, ಈಗ ಇದನ್ನು ಪದವೆಂದು ಕರೆಯುತ್ತೇವೆ. ಕೇವಲ 'ವೃಕ್ಷ' ವೆಂದೋ, ಅಥವಾ 'ಸು' ಎಂದೋ ಪ್ರಯೋಗಿಸಬಾರದು. (ಕೇವಲಾ ಪ್ರಕೃತಿರ್ವಾ ಪ್ರತ್ಯಯೋ ವಾ ನ ಪ್ರಯೋಕ್ತವ್ಯಃ ಎಂದು ಪತಂಜಲಿಯವರ ವಾಕ್ಯವು ಇದಕ್ಕೆ ಪ್ರಮಾಣ). ವೃಕ್ಷಃ ಎಂದೇ ಪ್ರಯೋಗಿಸಬೇಕು. ಇದರ ಬಗ್ಗೆ ಹೆಚ್ಚು ಮಾಹಿತಿಯನ್ನು ಷಡ್ಲಿಙ್ಗಿ ಪ್ರಕರಣದಲ್ಲಿ ತಿಳಿದುಕೊಳ್ಳಬೇಕು. ಇದೇ ರೀತಿಯಲ್ಲಿ ತಿಙನ್ತದ ಬಗ್ಗೆಯೂ ತಿಙನ್ತ ಪ್ರಕರಣಗಳಲ್ಲಿ ತಿಳಿಯಬೇಕು. ತಿಙನ್ತ ಪದವೆಂದರೆ, ತಿಙ್ ಪ್ರತ್ಯಯವನ್ನು ಕೊನೆಯಲ್ಲಿ ಉಳ್ಳದ್ದು ಎಂದರ್ಥ. ಕ್ರಿಯಾಪದದಲ್ಲಿ (ತಿಙನ್ತದಲ್ಲಿ) ಪ್ರಾಯಶಃ ಮೂರು ಅಂಶಗಳಿರುತ್ತವೆ. ಧಾತು+ವಿಕರಣಪ್ರತ್ಯಯ+ ಆಖ್ಯಾತಪ್ರತ್ಯಯ (ತಿಙ್ ಪ್ರತ್ಯಯ). ಸಾರ್ವಧಾತುಕ 'ಲ್'ಕಾರಗಳಾದ, ಲಟ್, ಲಙ್, ಲಿಙ್, ಲೋಟ್‌ಗಳಲ್ಲಿ ಮಾತ್ರ (ಶಪ್, ಶ್ಯನ್ ಮೊದಲಾದ) ವಿಕರಣಪ್ರತ್ಯಯಗಳು ಇರುತ್ತವೆ. ಉಳಿದ 'ಲ್'ಕಾರಗಳಲ್ಲಿ (ಲಿಟ್, ಲುಙ್, ಲುಟ್, ಲೃಟ್, ಆಶೀರ್ಲಿಙ್, ಸಂಕೇತೇ ಲೃಙ್) ಮೇಲೆ ಹೇಳಿದ ವಿಕರಣ ಪ್ರತ್ಯಯಗಳಿಲ್ಲದಿದ್ದರೂ, ಬೇರೆ (ಸ್ಯ ಮೊದಲಾದ) ಪ್ರತ್ಯಯಗಳು ಕೆಲವೊಂದು ಲಕಾರಗಳಲ್ಲಿ ಇರುತ್ತವೆ. ತದನನ್ತರ ಕೊನೆಯಲ್ಲಿ 'ತಿಙ್' ಪ್ರತ್ಯಯ ವನ್ನು ಸೇರಿಸಬೇಕು. ಕೊನೆಯಲ್ಲಿ 'ತಿಙ್' ಪ್ರತ್ಯಯಗಳು ಎಲ್ಲ 'ಲ್'ಕಾರಗಳಲ್ಲಿ ಇರೋಣದ್ದರಿಂದ, ಇವುಗಳಿಗೆ ತಿಙನ್ತ ಪದಗಳೆಂದುಹೆಸರು. 'ಸುಪ್' ಮತ್ತು 'ತಿಙ್' ಪ್ರತ್ಯಯಗಳನ್ನು ಕೆಳಗೆ ಕೊಡಲಾಗಿದೆ.

**ಸುಪ್ ಪ್ರತ್ಯಯಗಳು**

| ವಿಭಕ್ತಿ | ಏ.ವ. | ದ್ವಿವ. | ಬ.ವ. |
|---|---|---|---|
| ಪ್ರ.ವಿ. | ಸು | ಔ | ಜಸ್ |
| ದ್ವಿ.ವಿ. | ಅಮ್ | ಔಟ್ | ಶಸ್ |
| ತೃ.ವಿ. | ಟಾ | ಭ್ಯಾಮ್ | ಭಿಸ್ |
| ಚ.ವಿ. | ಙೇ | ಭ್ಯಾಮ್ | ಭ್ಯಸ್ |
| ಪಂ.ವಿ. | ಙಸಿ | ಭ್ಯಾಮ್ | ಭ್ಯಸ್ |
| ಷ.ವಿ. | ಙಸ್ | ಓಸ್ | ಆಮ್ |
| ಸ.ವಿ. | ಙಿ | ಓಸ್ | ಸುಪ್ |

'ಸು' ನಿಂದ ಆರಂಭವಾಗಿ 'ಪ್' ನಲ್ಲಿ ಮುಗಿಯುವುದರಿಂದ, ಅವುಗಳೆಲ್ಲವುಗಳಿಗೆ 'ಸುಪ್' ಪ್ರತ್ಯಯಗಳೆಂದು ಹೆಸರು.

## ತಿಙ್ ಪ್ರತ್ಯಯಗಳು

**ಪರಸ್ಮೈ ಪದದ ಆಖ್ಯಾತ ಅಥವಾ ತಿಙ್ ಪ್ರತ್ಯಯಗಳು.**

| ವಿಭಕ್ತಿ | ಏ.ವ. | ದ್ವಿವ. | ಬ.ವ. |
|---|---|---|---|
| ಪ್ರ.ಪು. | ತಿಪ್ | ತಸ್ | ಝಿ |
| ಮ.ಪು. | ಸಿಪ್ | ಥಸ್ | ಥ |
| ಉ.ಪು. | ಮಿಪ್ | ವಸ್ | ಮಸ್ |

**ಆತ್ಮನೇ ಪದದ ಆಖ್ಯಾತ ಅಥವಾ ತಿಙ್ ಪ್ರತ್ಯಯಗಳು.**

| ವಿಭಕ್ತಿ | ಏ.ವ. | ದ್ವಿವ. | ಬ.ವ. |
|---|---|---|---|
| ಪ್ರ.ಪು. | ತ | ಆತಾಮ್ | ಝ |
| ಮ.ಪು. | ಥಾಸ್ | ಆಥಾಮ್ | ಧ್ವಮ್ |
| ಉ.ಪು. | ಇಟ್ | ವಹಿ | ಮಹಿಙ್ |

'ತಿ' ಯಲ್ಲಿ ಆರಂಭವಾಗಿ 'ಙ್' ನಲ್ಲಿ ಮುಗಿಯೋಣದ್ದರಿಂದ ಈ ಎಲ್ಲಾ ಪ್ರತ್ಯಯಗಳಿಗೆ, 'ತಿಙ್' ಪ್ರತ್ಯಯಗಳೆಂದು ಹೆಸರು. ಈ 18 'ತಿಙ್' ಪ್ರತ್ಯಯಗಳು 'ಲಟ್' 'ಲಿಟ್' ಮೊದಲಾದವುಗಳಲ್ಲಿ ಇರುವ 'ಲ್' ಕಾರಗಳನ್ನು ಕೊಂದು ಆದೇಶವಾಗಿಬರುತ್ತವೆ. (ಆ 'ಲ್'ಕಾರಗಳ ಸ್ಥಾನದಲ್ಲಿ ಬರುತ್ತವೆ ಎಂದು ಅರ್ಥ– 'ಶತ್ರುವದಾದೇಶಃ' ಶತ್ರು ಶಬ್ದದಲಿಯ್ಲೂ ಮತ್ತು ಆದೇಶ ಶಬ್ದದಲ್ಲಿಯೂ 'ಶ' ಕಾರವಿರುವದನ್ನು ಗಮನಿಸಬೇಕು.

ಇದೇ ರೀತಿಯಲ್ಲಿ ಆಗಮದ ಬಗ್ಗೆ ನೆನಪಿಟ್ಟುಕೊಳ್ಳಬೇಕಾದಾಗ– ಮಿತ್ರವದಾಗಮಃ – ಇಲ್ಲಿಯೂ ಕೂಡ ಮಿತ್ರ ಮತ್ತು ಆಗಮ ಎಂಬ ಶಬ್ದಗಳಲ್ಲಿಯೂ 'ಮ'ಕಾರವಿರುವದನ್ನು ಗಮನಿಸಬೇಕು).

ಉದಾ– ಪಠ್+ಅ+ಲ್(ಲಿಟ್) ಎಂದಿದ್ದಾಗ– ಈ 'ಲ್'ಕಾರವನ್ನು ಕೊಂದುಹಾಕಿ ಅದರ ಸ್ಥಾನದಲ್ಲಿ ಮೂಲ ಆಖ್ಯಾತ ಪ್ರತ್ಯಯವಾದ 'ತಿ' ಎಂಬುದು ಆದೇಶವಾಗಿ ಬರುತ್ತದೆ. ಹೀಗೆಯೇ ಆತ್ಮನೇಪದಿ ಪರಸ್ಮೈಪದಿ ಧಾತುಗಳಿಗೆ ಕೊನೆಯಲ್ಲಿ ಸೇರಿಸುವ 'ಲಟ್' 'ಲಿಟ್' ಮೊದಲಾದವುಗಳಲ್ಲಿರುವ 'ಲ್' ಕಾರವನ್ನು ಕೊಂದು ಹಾಕಿ ಅವುಗಳ ಸ್ಥಾನದಲ್ಲಿ ಮೂಲ ಆಖ್ಯಾತ ಪ್ರತ್ಯಯಗಳು ಆದೇಶವಾಗಿ ಬರುತ್ತವೆ 'ಲಟ್', 'ಲಿಟ್' ಮೊದಲಾದವುಗಳಲ್ಲಿ, 'ಲ್' ಮಾತ್ರ ಉಳಿಯುವದು. 'ಅಟ್' 'ಇಟ್' ಮೊದಲಾದವು 'ಇತ್' ಗಳಾಗಿರುವದರಿಂದ ಅವು ಲೋಪ ಹೊಂದುತ್ತವೆ. ಇದನ್ನೇ – ಅಟಾವಿತೌ। ಇಟಾವಿತೌ ।........ ಎಂದು ಹೇಳಲಾಗಿದೆ.

**॥ ಸಂಜ್ಞಾ–ಪ್ರಕರಣ (1) ಮುಗಿಯಿತು॥**

# 2. ಸನ್ಧಿ-ಪ್ರಕರಣಮ್

## ಅಚ್ (ಸ್ವರ)-ಸನ್ಧಿ

**(ಸೂತ್ರ 15-61 ರವರೆಗೆ)**

**ಅವತಾರಿಕೆ**-ಎರಡು ವರ್ಣಗಳನ್ನು ಅವ್ಯವಹಿತವಾಗಿ ಉಚ್ಚರಿಸುವಾಗ ಉಂಟಾಗುವ ವಿಕಾರಕ್ಕೆ ಸನ್ಧಿ ಎಂದು ಹೆಸರು. 'ಅಚ್'(ಸ್ವರ)ಗಳು ಅವ್ಯವಹಿತವಾಗಿ ಉಚ್ಚರಿಸಲ್ಪಟ್ಟಾಗ, ಉಂಟಾಗುವ ವಿಕಾರಕ್ಕೆ, '**ಅಚ್**' ಸನ್ಧಿ ಎಂದು ಹೆಸರು. (ಇದೇರೀತಿಯಲ್ಲಿ, ವ್ಯಞ್ಜನ (ಹಲ್)ಗಳು ಅವಿಳಂಬಿತವಾಗಿ ಉಚ್ಚರಿಸಲ್ಪಟ್ಟಾಗ ಉಂಟಾಗುವ ವಿಕಾರಕ್ಕೆ, ವ್ಯಞ್ಜನ(ಹಲ್)ಸನ್ಧಿ ಎಂದು ಹೆಸರು). ಸನ್ಧಿಗಳು ಐದು ವಿಧವಾಗಿ ಇರುತ್ತವೆ. ಅವು 1. ಅಚ್-ಸನ್ಧಿ, 2. ಹಲ್-ಸನ್ಧಿ, 3.ಪ್ರಕೃತಿಭಾವ-ಸನ್ಧಿ, 4. ಸ್ವಾದಿ-ಸನ್ಧಿ, 5. ವಿಸರ್ಗ-ಸನ್ಧಿ ಎಂದು.

ಈ ಐದು ಸನ್ಧಿಗಳನ್ನು ಲಘುಸಿದ್ಧಾನ್ತಕೌಮುದಿಯಲ್ಲಿ, ಮೂರು ಸನ್ಧಿಗಳಾಗಿ ವಿಂಗಡಿಸಲಾಗಿದೆ. ಅವುಗಳು ಅಚ್-ಸನ್ಧಿ, ಹಲ್-ಸನ್ಧಿ ಮತ್ತು ವಿಸರ್ಗ-ಸನ್ಧಿಗಳು.ಈ ಅಚ್ ಸನ್ಧಿಪ್ರಕರಣದಲ್ಲಿ ವರದರಾಜರು ಕೆಳಗಿನ ಎಂಟು ಸನ್ಧಿಗಳನ್ನು ವಿವರಿಸಿದ್ದಾರೆ. 1. ಯಣ್ ಸನ್ಧಿ, 2. ಯಾನ್ತಾದೇಶ-ವಾನ್ತಾದೇಶ ಸನ್ಧಿ, 3.ಗುಣ ಸನ್ಧಿ, 4. ವೃದ್ಧಿ ಸನ್ಧಿ, 5. ಪರರೂಪ ಸನ್ಧಿ, 6. ಸವರ್ಣದೀರ್ಘಸನ್ಧಿ, 7. ಪೂರ್ವರೂಪಸನ್ಧಿ, 8.ಪ್ರಕೃತಿಭಾವ ಸನ್ಧಿ ಎಂದು. ಪ್ರಕೃತ ಅಚ್-ಸನ್ಧಿಯಲ್ಲಿ, ಭಟ್ಟೋಜಿದೀಕ್ಷಿತರ ಶಿಷ್ಯರಾದ ವರದರಾಜರು, ಈ ಪ್ರಕರಣವನ್ನು '**ಯಣ್**' ಸನ್ಧಿಯಿಂದ ಆರಂಭಿಸುತ್ತಾರೆ.

ಸನ್ಧಿಯನ್ನು ಸಮಾಸದಲ್ಲೂ ಅಥವಾ ಪರಸ್ಪರ ಪದಗಳನ್ನು ಸೇರಿಸುವಾಗಲೂ ಕಾಣುತ್ತೇವೆ. ತ್ರ್ತ + ಅತ್ರ =ತತ್ರಾತ್ರ, ಎಂದೂ, ಪದಗಳನ್ನು ಕೂಡಿ ಉಚ್ಚರಿಸುವಾಗ, ಸವರ್ಣದೀರ್ಘ-ಸನ್ಧಿ ಆಗಿರುತ್ತದೆ. ಸುಧೀಭಿಃ + ಉಪಾಸ್ಯಃ ಎಂಬ ವಿಗ್ರಹವಾಕ್ಯವನ್ನು ಸಮಾಸ ಮಾಡುವಾಗ, ಎಲ್ಲ ವಿಗ್ರಹವಾಕ್ಯಗಳಲ್ಲಿರುವ ಎಲ್ಲ ಪದಗಳ '**ಸುಪ್**' ಪ್ರತ್ಯಯವನ್ನು ತೆಗೆದು ಹಾಕಬೇಕು. (ಅಂದರೆ ಅವು ಲೋಪವಾಗುತ್ತವೆ ಎಂದು ಅರ್ಥ). ಆಗ ಅವುಗಳೆಲ್ಲವೂ ಪ್ರಾತಿಪದಿಕಗಳಾಗುತ್ತವೆ. ಈ ಸನ್ದರ್ಭದಲ್ಲೂ ಸನ್ಧಿಯಾಗಲು ಅವಕಾಶವಿರುತ್ತದೆ. ಆ ಎಲ್ಲ ಪ್ರಾತಿಪದಿಕಗಳನ್ನೂ ಸೇರಿಸಿ ಒಂದು ದೊಡ್ಡ ಪ್ರಾತಿಪದಿಕವನ್ನಾಗಿ ಮಾಡಬೇಕು. ಇದಕ್ಕೆ ಸಮಾಸವೆನ್ನುತ್ತಾರೆ. ಇದಕ್ಕೆ '**ಸುಪ್**' ಪ್ರತ್ಯಯವನ್ನು ಸೇರಿಸಿದರೆ, ಸುಬನ್ತ (ಪದ) ವಾಗುತ್ತದೆ. ಪ್ರಕೃತ '**ಸುಧೀಭಿಃ ಉಪಾಸ್ಯಃ**' ಎಂಬ ಪದಗಳಲ್ಲಿ, '**ಸುಪ್**' ಪ್ರತ್ಯಯವನ್ನು ಲೋಪ ಮಾಡಿದರೆ, ಸುಧೀ + ಉಪಾಸ್ಯ ಎಂದಿರುತ್ತದೆ. '**ಈ**' ಕಾರದ ನಂತರ '**ಉ**' ಕಾರವನ್ನು ವಿಳಂಬವಿಲ್ಲದೇ ಉಚ್ಚರಿಸುವಾಗ, ಸಂಹಿತಾ(ಸಂಜ್ಞಾ ಪ್ರಕರಣದಲ್ಲಿ ನೋಡಿರಿ) ಇರೋಣದ್ದರಿಂದ, '**ಯಣ್**' ಸನ್ಧಿಗೆ ಅವಕಾಶವಿರುತ್ತದೆ. ಇದನ್ನೇ ಪಾಣಿನಿಯವರು ತಮ್ಮ ಅಷ್ಟಾಧ್ಯಾಯಿಯಲ್ಲಿ, '**ಇಕೋ ಯಣಚಿ**' (6.1.77) ಎಂದು ಹೇಳಿದ್ದಾರೆ.

## (1). ಯಣ್ ಸನ್ಧಿಃ

**ಸೂತ್ರ ೧೫. ಇಕೋ ಯಣಚಿ ( 6.1.77)**

ವೃತ್ತಿ – ಇಕಃ ಸ್ಥಾನೇ 0ಯಣ್ ಸ್ಯಾತ್ ಅಚಿ, ಸಂಹಿತಾ0ಯಾಂ ವಿಷ0ಯೇ। 'ಸುಧೀ+ಉಪಾಸ್ಯ' ಇತಿ ಸ್ಥಿತೇ–

ಪ.ಚ್ಛೇ. – ಇಕಃ, ಯಣ್, ಅಚಿ।

ಅ.ವೃ. – "ಷಷ್ಠೀ ಸ್ಥಾನೇ ಯೋಗಾ" (1.1.49) ಎಂಬ ಸೂತ್ರದಿಂದ, 'ಸ್ಥಾನೇ' ಎಂಬ ಪದವು ಅನುವೃತ್ತವಾಗುತ್ತದೆ. "ಸಂಹಿತಾಯಾಮ್" (6.1.72) ಎಂಬುದು ಅಧಿಕಾರಸೂತ್ರ. ಅಧಿಕಾರವೆಂದರೆ, ತನ್ನ ಸ್ಥಾನದಲ್ಲಿ ಕಾರ್ಯ ಹೇಳದೇ ಉತ್ತರಸೂತ್ರಗಳಲ್ಲಿ ತಾನೂ ಸೇರಿಕೊಂಡು ವಾಕ್ಯಾರ್ಥವನ್ನು ಪೂರ್ಣ ಮಾಡುವದು. ಯಾವ ಅಧಿಕಾರ ಸೂತ್ರವು, ಯಾವಸೂತ್ರದವರೆಗೆ ಅನ್ವಯಿಸುತ್ತದೆ ಎಂಬುದನ್ನು, ಪಾಣಿನೀಯ ಸೂತ್ರದಿಂದಲೋ, ಅಥವಾ ವ್ಯಾಖ್ಯಾನದ ಮೂಲಕವೋ, ತಿಳಿದುಕೊಳ್ಳಬೇಕು.

ಅರ್ಥ – ಎರಡು ವರ್ಣಗಳ ಮಧ್ಯದಲ್ಲಿ, ಉಚ್ಚಾರಣ ಕಾಲದಲ್ಲಿ ಅತಿಶಯವಾದ ಸಾಮೀಪ್ಯ (ಸಂಹಿತಾ), (ಅಂದರೆ, ಅರ್ಧಮಾತ್ರಾಕಾಲ)ವಿದ್ದಾಗ, 'ಇಕ್' (ಇ,ಉ,ಋ,ಲೃ) ವರ್ಣಗಳ ಸ್ಥಾನದಲ್ಲಿ 'ಯಣ್' (ಯ್,ವ್,ರ್,ಲ್) ವರ್ಣಗಳು ಸ್ಥಾನ ಸಾಮ್ಯದಿಂದ ಆದೇಶವಾಗಿ ಬರುತ್ತವೆ. 'ಅಚ್' ಅವ್ಯವಹಿತವಾಗಿ ಪರದಲ್ಲಿದ್ದಾಗ, ಎಂದು ಸಪ್ತಮಿಯಲ್ಲಿ ಹೇಳಿರುವದರಿಂದ ಈ ನಿಮಿತ್ತ ವರ್ಣಗಳಿಗೆ ಇಲ್ಲಿ ಯಾವದೇ ವಿಕಾರವಿರುವದಿಲ್ಲ. ಎಲ್ಲ ಸಂದರ್ಭಗಳಲ್ಲೂ ವಿಕಾರವಿರುವದಿಲ್ಲವೆಂದು ಯಾವದೇ ನಿಯಮವಿರುವದಿಲ್ಲ. ಕೆಲವು ಸಂದರ್ಭಗಳಲ್ಲಿ ನಿಮಿತ್ತ ವರ್ಣಗಳಿಗೆ ವಿಕಾರವೂ ಆಗುವದುಂಟು. (ಉದಾ– ಗುಣ ಮತ್ತು ವೃದ್ಧಿ ಸನ್ಧಿಗಳು). ಯಾವ ಸ್ಥಾನಿಗೆ ಯಾವ ಆದೇಶವು ಬರುತ್ತದೆ ಎಂಬುದನ್ನು ಕೆಳಗಿನ ಕೋಷ್ಟಕದಲ್ಲಿ ಮತ್ತೆ ಸ್ಪಷ್ಟಪಡಿಸಲಾಗಿದೆ.

**ಇ–ಯ್**

**ಉ–ವ್**

**ಋ–ರ್**

**ಲೃ–ಲ್**

ಇಲ್ಲಿ, ಇ, ಉ, ಎಂದರೆ, ಅವುಗಳ 18 ರೂಪಗಳನ್ನು ಗ್ರಹಣಮಾಡಬೇಕು. ಋ, ಲೃ ಎಂದರೆ ಅವುಗಳ 30 ರೂಪಗಳನ್ನು ತೆಗೆದುಕೊಳ್ಳಬೇಕು. ಯ್. ವ್. ರ್, ಲ್ ಗಳಲ್ಲಿ ಯ್, ವ್, ಲ್, ಗಳಿಗೆ ಅನುನಾಸಿಕ ಮತ್ತು ಅನನುನಾಸಿಕ ಎಂದು ಎರಡು ರೂಪಗಳು. ರ್ ಕಾರಕ್ಕೆ ಮಾತ್ರ, ಅನನುನಾಸಿಕ ರೂಪವಿದ್ದು ಅನುನಾಸಿಕ ರೂಪವಿರುವದಿಲ್ಲ. ಞ್, ಮ್, ಙ್, ಣ್, ನ್ ಎಂಬ ವರ್ಗೀಯ ಅನ್ತ್ಯವರ್ಣಗಳಿಗೆ ಅನುನಾಸಿಕತ್ವಮಾತ್ರ ಇದೆಯೇ ಹೊರತು ಅನನುನಾಸಿಕರೂಪವಿಲ್ಲ ಎಂಬುದನ್ನು ಗಮನಿಸಬೇಕು). ಯ್. ವ್, ಲ್, ಮತ್ತು ರ್ (ರೇಫ)ಗಳಿಗೆ ಸವರ್ಣವಿದ್ದರೂ ಇಲ್ಲಿ

ಯಣ್ ಸಂಧಿಯಲ್ಲಿ ವಿಧೀಯಮಾನವಾಗಿದ್ದರಿಂದ, ಅವುಗಳ ಸವರ್ಣಗಳು ಆದೇಶವಾಗಿ ಬರುವದಿಲ್ಲ. (ಇದನ್ನು 'ಅಣುದಿತ್ ಸವರ್ಣಸ್ಯ ಚಾಪ್ರತ್ಯಯಃ' (1.1.69) ಎಂಬ ಸೂತ್ರದಲ್ಲಿ, ಹೆಚ್ಚಿನ ವಿವರಣೆಯಲ್ಲಿ ಹೇಳಲಾಗುವದು). 'ಇ' ಕಾರಕ್ಕೆ 'ಯ್' ಕಾರ, 'ಉ' ಕಾರಕ್ಕೆ 'ವ್' ಕಾರ, 'ಋ' ಕಾರಕ್ಕೆ 'ರ್'(ರೇಫ) ಮತ್ತು 'ಲೃ' ಕಾರಕ್ಕೆ 'ಲ್' ಕಾರಗಳು ಸ್ಥಾನ ಸಾಮ್ಯದಿಂದ, ಆದೇಶಗಳಾಗಿ ಬಂದಿವೆಯೇ ಹೊರತು, ಕ್ರಮದ ಆಧಾರದಮೇಲೆ ಅಲ್ಲ. ಈ ಸೂತ್ರದ ಪ್ರಕಾರ, 'ಇಕ್' ಗೆ 'ಯಣ್' ಬರುತ್ತದೆ 'ಅಚ್' ಪರದಲ್ಲಿದ್ದಾಗ ಎಂದರೆ, ಪೂರ್ವಪದದ ಕೊನೆಗೆ ಇ, ಉ, ಋ, ಲೃ ಗಳಲ್ಲಿ ಯಾವದಾದರೊಂದು ವರ್ಣವಿದ್ದು, ಉತ್ತರ ಪದದ ಆದಿಯಲ್ಲಿ, ಯಾವದಾದರೊಂದು ಸ್ವರವರ್ಣವಿದ್ದರೆ, ಆಗ 'ಇ' ಕಾರದ ಸ್ಥಾನದಲ್ಲಿ 'ಯ್' ಕಾರ, 'ಉ' ಕಾರದ ಸ್ಥಾನದಲ್ಲಿ 'ವ್' ಕಾರ, 'ಋ' ಕಾರದ ಸ್ಥಾನದಲ್ಲಿ 'ರ್'(ರೇಫ) ಮತ್ತು 'ಲೃ' ಕಾರದ ಸ್ಥಾನದಲ್ಲಿ 'ಲ್' ಕಾರಗಳು ಆದೇಶವಾಗಿ ಬರುತ್ತವೆ.

(ಶತ್ರುವದಾದೇಶಃ ಎಂದರೆ, ಆದೇಶವಾಗಿ ಬರುವ ವರ್ಣವು, ಸ್ಥಾನಿಯಾದ ವರ್ಣವನ್ನು ತೆಗೆದುಹಾಕಿ, ಆಜಾಗವನ್ನು ಆಕ್ರಮಿಸುತ್ತದೆ ಎಂದು ಅರ್ಥ).

ಸುಧ್ಯುಪಾಸ್ಯ ಎಂಬ ಪ್ರಾತಿಪದಿಕದ ರೂಪವು ಈ ಕೆಳಗಿನಂತೆ ಸಿದ್ಧಿಸುತ್ತದೆ.

ಸುಧ್ (ಈ + ಉ) ಪಾಸ್ಯ ---> ಸುಧ್(ಯ್ + ಉ) ಪಾಸ್ಯ ---> ಸುಧ್ಯ್ + ಉಪಾಸ್ಯ = 'ಸುಧ್ಯುಪಾಸ್ಯ' ಎಂದು ರೂಪವಾಗುತ್ತದೆ.

(ಅವ್ಯವಹಿತ ಪೂರ್ವವರ್ಣಕ್ಕೇನೇ ಕಾರ್ಯ ಬರುತ್ತದೆ ಎಂಬ ನಿಯಮವನ್ನು ಹೇಳುವ ಸೂತ್ರ)

**ಸೂತ್ರ 16. ತಸ್ಮಿನ್ನಿತಿ ನಿರ್ದಿಷ್ಟೇ ಪೂರ್ವಸ್ಯ (1.1.66)**

ವೃತ್ತಿ – ಸಪ್ತಮೀ-ನಿರ್ದೇಶೇನ ವಿಧೀಯಮಾನಂ ಕಾರ್ಯಂ ವರ್ಣಾನ್ತರೇಣ ಅವ್ಯವಹಿತಸ್ಯ ಪೂರ್ವಸ್ಯ ಬೋಧ್ಯಮ್।

ಪ.ಚ್ಛೇ – ತಸ್ಮಿನ್, ಇತಿ, ನಿರ್ದಿಷ್ಟೇ, ಪೂರ್ವಸ್ಯ।

ಅರ್ಥ – ಇದು ಪರಿಭಾಷಾ ಸೂತ್ರ, ಪರಿತಃ ವ್ಯಾಪೃತಾ ಭಾಷಾ ಪರಿಭಾಷಾ ಎಂದು ಪರಿಭಾಷಾ ಶಬ್ದದ ಅರ್ಥ. (ವ್ಯಾಪೃತಾ ಎಂದರೆ, ವ್ಯಾಕರಣಶಾಸ್ತ್ರದಲ್ಲಿ ಎಲ್ಲೆಡೆಯಲ್ಲೂ ವ್ಯಾಪಿಸಿಕೊಂಡಿರುವದು ಎಂದರ್ಥ). ಸೂತ್ರಗಳು 6 ವಿಧವಾಗಿ ಪರಿಗಣಿಸಲ್ಪಟ್ಟಿವೆ.

ಸಂಜ್ಞಾ ಚ ಪರಿಭಾಷಾ ಚ ವಿಧಿರ್ನಿಯಮ ಏವ ಚ।
ಅತಿದೇಶೋऽಧಿಕಾರಶ್ಚ ಷಡ್ವಿಧಂ ಸೂತ್ರಲಕ್ಷಣಮ್॥

ಸುಧೀ + ಉಪಾಸ್ಯ ಎಂದಿದ್ದಾಗ, 'ಇಕ್' ಗೆ 'ಯಣ್' ಬರುತ್ತದೆ, 'ಅಚ್' ಪರದಲ್ಲಿದ್ದಾಗ ಎಂದರೆ, ಮೇಲಿನ ಉದಾಹರಣೆಯಲ್ಲಿ, ಸುಧೀ ಎಂಬಲ್ಲಿ 'ಉ' ಕಾರ ಮತ್ತು 'ಈ' ಕಾರಗಳು, ನಿಮಿತ್ತವಾದ 'ಉ' ಕಾರ (ಅಚ್)ಕ್ಕೆ ಪೂರ್ವದಲ್ಲಿ ಇರುತ್ತವೆ. ಇದೇ ರೀತಿಯಲ್ಲಿ, 'ಅಚ್' ಪರದಲ್ಲಿ ಇದ್ದಾಗ ಎಂದರೆ, 'ಇಕ್' ವರ್ಣಗಳಿಗೆ

ಪರದಲ್ಲಿದ್ದಾಗ ಎಂದರ್ಥ. ಅವು 'ಉಪಾಸ್ಯ' ದಲ್ಲಿರುವ 'ಉ' ಕಾರ, 'ಆ'ಕಾರ ಮತ್ತು 'ಅ' ಕಾರ. ಈಗ ಯಾವ 'ಇಕ್'ಗೆ ಯಾವ 'ಅಚ್' ಪರದಲ್ಲಿರಬೇಕು ಎಂಬ ನಿಯಮವು ಇಲ್ಲದಿರುವದರಿಂದ, ಈ ನಿಯಮವನ್ನು ತಿಳಿಸುವದಕ್ಕಾಗಿ ಈ ಪರಿಭಾಷೆಯು ಹೊರಟಿದೆ. **'ಅನಿಯಮೇ ನಿಯಮಕಾರಿಣೇತ್ವಮ್'** ಎಂಬುದು ಪರಿಭಾಷೆಯ ಲಕ್ಷಣ.

ಅಚಿ ಎಂದು ನಿಮಿತ್ತವು ಸಪ್ತಮಿಯಲ್ಲಿ ನಿರ್ದಿಷ್ಟವಾಗಿರುವದರಿಂದ, ನಿರ್ದಿಷ್ಟವಾದ 'ಅಚ್'ಗೆ ಅವ್ಯವಹಿತ ಪೂರ್ವದಲ್ಲಿರುವ (ಬೇರೆ ವರ್ಣಗಳಿಂದ ತಡೆಯಲ್ಪಡದಿರುವ) ವರ್ಣಕ್ಕೇನೇ 'ಯಣ್' ಕಾರ್ಯ ಬರುತ್ತದೆ ಎಂದು ಈ ಪರಿಭಾಷೆಯು ನಿಯಮ ಮಾಡುತ್ತದೆ. ಆದ್ದರಿಂದ 'ಉಪಾಸ್ಯ' ಎಂಬಲ್ಲಿರುವ ಆದಿ ವರ್ಣವಾದ 'ಉ'ಕಾರವೇ ನಿಮಿತ್ತವಾಗುತ್ತದೆಯೇ ಹೊರತು, 'ಆ' ಕಾರ ಮತ್ತು 'ಅ' ಕಾರಗಳಾಗುವದಿಲ್ಲ. ಇದೇ ರೀತಿಯಲ್ಲಿ, 'ಸುಧೀ' ಎಂಬಲ್ಲಿರುವ 'ಈ' ಕಾರಕ್ಕೇನೇ 'ಯಣ್' ಬರುತ್ತದೆಯೇ ಹೊರತು, 'ಉ' ಕಾರಕ್ಕೆ ಬರುವುದಿಲ್ಲ. ಕಾರಣ ಸ್ಥಾನಿಯಾದ 'ಈ' ಕಾರವು ನಿಮಿತ್ತವಾದ 'ಉ' ಕಾರಕ್ಕೆ ಅವ್ಯವಹಿತ-ಪೂರ್ವ ವರ್ಣವಾಗಿದೆ. ಹೀಗಾಗಿ ಇತರ ವರ್ಣಗಳು ಸ್ಥಾನಿಯೂ ಮತ್ತು ನಿಮಿತ್ತಗಳಾಗುವದಿಲ್ಲ. ಈ ಪರಿಭಾಷೆಯಿಂದ ವ್ಯಾಕರಣಶಾಸ್ತ್ರದ ಎಲ್ಲೆಡೆಯಲ್ಲೂ ಕಾರ್ಯ ಯಾವ ವರ್ಣಕ್ಕೆ ಬರುತ್ತದೆ ಎಂಬ ನಿಯಮವನ್ನು ಸ್ಪಷ್ಟಪಡಿಸಿದಂತಾಯಿತು.

'ತಸ್ಮಿನ್' ಎಂದು ಸಪ್ತಮಿಯಲ್ಲಿ ಸರ್ವನಾಮದಿಂದ ನಿರ್ದಿಷ್ಟವಾಗಿರುವದರಿಂದ, ಎಲ್ಲೆಲ್ಲಿ ಸಪ್ತಮಿಯಲ್ಲಿ ನಿಮಿತ್ತಗಳು ನಿರ್ದಿಷ್ಟವಾಗಿವೆಯೋ, ಅಲ್ಲಲ್ಲಿ ಅವುಗಳ ಅವ್ಯವಹಿತ-ಪೂರ್ವ-ವರ್ಣಕ್ಕೇನೇ ಕಾರ್ಯ ಬರುತ್ತದೆಯೆಂದು ತಿಳಿಯಬೇಕು.

**(ಸದೃಶವಾದ ವರ್ಣವನ್ನೇ ಆದೇಶವಾಗಿ ಹೇಳುವ ಪರಿಭಾಷಾ ಸೂತ್ರ).**

**ಸೂತ್ರ 17: ಸ್ಥಾನೇಽನ್ತರತಮಃ (1.1.50)**

ವೃತ್ತಿ -ಪ್ರಸಙ್ಗೇ ಸತಿ ಸದೃಶತಮಃ ಆದೇಶಃ ಸ್ಯಾತ್। 'ಸುಧ್ಀಯ್ + ಉಪಾಸ್ಯ' ಇತಿ ಜಾತೇ-

ಪ.ಚ್ಛೇ.- ಸ್ಥಾನೇ, ಅನ್ತರತಮಃ।

ಅರ್ಥ - ಈ ಪರಿಭಾಷಾ ಸೂತ್ರದಲ್ಲಿ ಸ್ಥಾನವೆಂದರೆ, ಪ್ರಸಙ್ಗ. ಪ್ರಸಙ್ಗವೆಂದರೆ, ಉಚ್ಚಾರಣಾಪ್ರಸಕ್ತಿ (ಅವಕಾಶ). 'ಅತಿಶಯಿತಃ ಅನ್ತರಃ ಅನ್ತರತಮಃ' ಅನ್ತರವೆಂದರೆ ಸದೃಶವೆಂದರ್ಥ. ಯಾವದೇ ಒಂದು ಸ್ಥಾನಿಯನ್ನು ಉಚ್ಚಾರ ಮಾಡುವ ಪ್ರಸಙ್ಗದಲ್ಲಿ, ಬೇರೆ ರೀತಿಯ ಅನೇಕ ಸದೃಶವಾದ ಆದೇಶಗಳು ಪ್ರಾಪ್ತವಾದರೆ, ಆಗ ಅತ್ಯಂತ ಸದೃಶವಾದ ಆದೇಶವೇ ಬರುತ್ತದೆ. ಮೇಲೆ ಹೇಳಿದ ಉದಾಹರಣೆಯಲ್ಲಿ, ಅಂದರೆ ಸುಧ್ಯ್ + ಉಪಾಸ್ಯ ಎಂಬಲ್ಲಿ, ತಾಲು ಸ್ಥಾನ ಸಾಮ್ಯದಿಂದ 'ಯ್' ಕಾರಾದೇಶವು 'ಈ' ಕಾರದ ಜಾಗದಲ್ಲೇ ಬರುತ್ತದೆ.(ಇಚುಯಶಾನಾಂ ತಾಲು). ಇದೇ ಪ್ರಸಙ್ಗದಲ್ಲಿ ಉಳಿದ 'ಅರ್ಥ', 'ಗುಣ' ಮತ್ತು 'ಪ್ರಮಾಣ'ಗಳಿಂದ ಬೇರೆ ಸದೃಶ ವರ್ಣಗಳು

ಆದೇಶವಾಗಿ ಬರುವ ಅವಕಾಶವಿದ್ದರೂ ಸಹ ಸ್ಥಾನಸಾಮ್ಯವನ್ನೇ ಗ್ರಹಿಸಬೇಕು.

(ಈ ಸೂತ್ರದ ತತ್ವಬೋಧಿನೀ ವ್ಯಾಖ್ಯಾನದಲ್ಲಿ, ನಾಲ್ಕು ವಿಧ ಸಾದೃಶ್ಯಗಳು ಹೇಳಲ್ಪಟ್ಟಿವೆ. 'ಸ್ಥಾನತಃ' ಎಂದರೆ, ಸ್ಥಾನಿಯ ಸಾಮ್ಯವನ್ನೂ, 'ಅರ್ಥತಃ' ಎಂದರೆ, ಅಪತ್ಯಾರ್ಥ ಮೊದಲಾದ ಅರ್ಥ ಸಾಮ್ಯವಿದ್ದಾಗಲೂ ಅರ್ಥ ಸಾಮ್ಯವನ್ನೂ, 'ಗುಣತಃ' ಎಂದರೆ, ಪ್ರಯತ್ನಸಾಮ್ಯವನ್ನೂ ಮತ್ತು 'ಪ್ರಮಾಣತಃ' ಎಂದರೆ, ಮಾತ್ರಾಸಾದೃಶ್ಯವನ್ನೂ ಗ್ರಹಿಸಬೇಕೆಂದು ಉದಾಹರಣೆಗಳಮುಖಾಂತರ ವಿವರಿಸಿದ್ದಾರೆ). ಈ ಪ್ರಸಙ್ಗದಲ್ಲಿ ಸ್ಥಾನಸಾಮ್ಯ ಒಂದೇ ಇರುವದರಿಂದ, ಬೇರೆ ರೀತಿಯ ಸಾಮ್ಯಗಳಿಗೆ ಅವಕಾಶವಿರುವದಿಲ್ಲಾ.

ಈ ರೀತಿಯಾಗಿ, ಸುಧ್‌ಯ್ + ಉಪಾಸ್ಯ ಎಂದು ಸಂಧಿಯಿಂದ ಪರಿಣಾಮ ಉಂಟಾಗಿರುವಾಗ, 'ಧ್' ಕಾರಕ್ಕೆ ದ್ವಿತ್ವ ಬರುವದನ್ನು ಮುಂದಿನ ಸೂತ್ರದಿಂದ ತಿಳಿಸುತ್ತಾರೆ.

**('ಯರ್' ವರ್ಣವಾದ 'ಧ್' ಕಾರಕ್ಕೆ ದ್ವಿತ್ವ ಹೇಳುವ ಸೂತ್ರ)**

**ಸೂತ್ರ 18.ಅನಚಿ ಚ (8.4.47)**

ವೃತ್ತಿ –ಅಚಃ ಪರಸ್ಯ ಯರಃ, ದ್ವೇ ವಾ ಸ್ತಃ ನ ತು ಅಚಿ। ಇತಿ 'ಧ್' ಕಾರಸ್ಯ ದ್ವಿತ್ವಂ। 'ಸುಧ್‌ಧ್‌ಯ್ + ಉಪಾಸ್ಯ' ಇತಿ ಜಾತೇ–

ಅ.ವೃ. – 'ಯರೋಽನುನಾಸಿಕೇಽನುನಾಸಿಕೋ ವಾ (8.4.45)' ಎಂಬ ಸೂತ್ರದಿಂದ, 'ಯರಃ' ಮತ್ತು 'ವಾ' ಎಂಬ ಪದಗಳೂ ಮತ್ತೂ 'ಅಚೋ ರಹಾಭ್ಯಾಂ ದ್ವೇ (8.4.46)' ಎಂಬ ಸೂತ್ರದಿಂದ 'ಅಚಃ' ಹಾಗೂ 'ದ್ವೇ' ಎಂಬ ಪದಗಳು ಅನುವೃತ್ತವಾಗಿವೆ.

ಅರ್ಥ – 'ಅಚ್' (ಅಚಃ) ವರ್ಣದ ಪರದಲ್ಲಿ 'ಯರ್' ವರ್ಣವಿದ್ದು, ಅದರ ಪರದಲ್ಲಿ 'ಅಚ್' ವರ್ಣ ಇಲ್ಲದೇ ಇದ್ದಾಗ (ಅನಚಿ), 'ಯರ್' ವರ್ಣ (ಯರಃ)ಕ್ಕೆ, ವಿಕಲ್ಪದಿಂದ ದ್ವಿತ್ವ(ದ್ವೇ) ಬರುತ್ತದೆ.

'ಅಚ್' ಮತ್ತು 'ಯರ್' ಎರಡೂ ಪ್ರತ್ಯಾಹಾರಗಳು. 'ಅಚ್'ಎಂದರೆ ಎಲ್ಲ ಸ್ವರಗಳು. 'ಯರ್' ಎಂದರೆ 'ಹ' ಕಾರವನ್ನು ಬಿಟ್ಟು ಎಲ್ಲ ವ್ಯಞ್ಜನಗಳು ಎಂದು ಅರ್ಥ. ತಾತ್ಪರ್ಯವೇನೆಂದರೆ, ಸ್ವರವರ್ಣಕ್ಕೆ 'ಯರ್' ವರ್ಣವು ಪರದಲ್ಲಿದ್ದಾಗ, ಆ 'ಯರ್' ವರ್ಣಕ್ಕೆ, ಸ್ವರ ವರ್ಣವು ಪರದಲ್ಲಿ ಇರಬಾರದು. ಆಗ ಆ 'ಯರ್' ವರ್ಣಕ್ಕೆ ವಿಕಲ್ಪವಾಗಿ ದ್ವಿತ್ತ್ವ ಬರುತ್ತದೆ. ಸ್ವರ ವರ್ಣದ ನಂತರ 'ಯರ್' ವರ್ಣವು ಇರಬೇಕು. ಹಾಗೆಯೇ 'ಯರ್' ವರ್ಣದನಂತರ ಸ್ವರ ವರ್ಣವಿರಬಾರದು. ಈ ಎರಡು ನಿಬಂಧನೆಗಳು, ಸುಧ್‌ಯ್ + ಉಪಾಸ್ಯ ಎಂಬ ಉದಾಹರಣೆಯಲ್ಲಿ, ಇವೆ. ಆದ್ದರಿಂದ 'ಉ' ಕಾರದನಂತರ (ಅಚ್-ವರ್ಣದನಂತರ) 'ಯರ್' ವರ್ಣವಾದ 'ಧ್' ಕಾರವಿದ್ದು, ತದನಂತರ ಸ್ವರ ವರ್ಣವು ಇಲ್ಲದೇ ಇರುವದರಿಂದ, (ಅನಚಿ) 'ಯರ್' ವರ್ಣವಾದ 'ಧ್' ಕಾರಕ್ಕೆ ದ್ವಿತ್ವವು ವಿಕಲ್ಪವಾಗಿ ಬರುತ್ತದೆ. ಆಗ ಸುಧ್‌ಧ್‌ಯ್ + ಉಪಾಸ್ಯ ಎಂದು ರೂಪವಾಗುತ್ತದೆ. ದ್ವಿತ್ವ ಬಾರದೇ ಇರುವ ಪಕ್ಷದಲ್ಲಿ, ಸುಧ್‌ಯ್ + ಉಪಾಸ್ಯ

ಎಂಬ ರೂಪವೂ ಮೊದಲಿನಂತೆ ಇರುತ್ತದೆ. ಇಲ್ಲಿ ಪ್ರಸಜ್ಯ-ಪ್ರತಿಷೇಧವಿರುವದು.* (ಪರಿವಿಡಿ ನೋಡಿರಿ).

**(ಝಲ್ ವರ್ಣಗಳಿಗೆ ಜಶ್ತ್ವ ವಿಧಾಯಕ ಸೂತ್ರ)**

**ಸೂತ್ರ 19.ಝಲಾಂ ಜಶ್ ಝಶಿ ( 8.4.53)**

ವೃತ್ತಿ –ಸ್ಪಷ್ಟಂ। ಇತಿ ಪೂರ್ವ'ಧ್' ಕಾರಸ್ಯ 'ದ್' ಕಾರಃ । 'ಸುದ್‌ಧ್‌ಯ್ + ಉಪಾಸ್ಯ' (ಇತಿ ಸ್ಥಿತೇ)

ಅರ್ಥ – 'ಅನಚಿ ಚ' (8.4.47) ಎಂಬ ಸೂತ್ರದಿಂದ ವಿಕಲ್ಪದಿಂದ 'ಧ್'ಕಾರಕ್ಕೆ ದ್ವಿತ್ವ ಬಂದಾಗ,ಸುಧ್‌ಧ್‌ಯ್ + ಉಪಾಸ್ಯ ಎಂದಿರುತ್ತದೆ. ಆಗ ಪ್ರಕೃತ ಸೂತ್ರದ ಪ್ರಕಾರ 'ಝಲ್' ವರ್ಣಗಳ ಸ್ಥಾನದಲ್ಲಿ 'ಜಶ್' ವರ್ಣಗಳು ಆದೇಶವಾಗಿ ಬರುತ್ತವೆ, 'ಝಶ್' ವರ್ಣಗಳು ಪರದಲ್ಲಿದ್ದಾಗ. ಸುಧ್‌ಧ್‌ಯ್ + ಉಪಾಸ್ಯ ಎಂಬಲ್ಲಿ ಎರಡನೇ 'ಧ್' ಕಾರವು 'ಝಶ್' ವರ್ಣ(ನಿಮಿತ್ತ)ವಾಗಿರೋಣದರಿಂದ, ಅದಕ್ಕೆ ಅವ್ಯವಹಿತ ಪೂರ್ವದಲ್ಲಿರುವ 'ಝಲ್' ವರ್ಣ(ಸ್ಥಾನಿ)ವಾದ 'ಧ್' ಕಾರಕ್ಕೆ, 'ಜಶ್' ವರ್ಣವು ಆದೇಶವಾಗಿ ಬರುತ್ತದೆ. ಅಂದರೆ ವರ್ಗೀಯ ತೃತೀಯ 'ದ್' ಕಾರವು 'ಧ್' ಕಾರದ ಸ್ಥಾನದಲ್ಲಿ ಬರುತ್ತದೆ. ಹೀಗಾಗಿ, ಸುದ್‌ಧ್‌ಯ್+ಉಪಾಸ್ಯಃ ಎಂಬುದು ಸುಬಂತವಾದಾಗ ಸುದ್‌ಧ್ಯುಪಾಸ್ಯ ಎಂದು ರೂಪವಾಗುತ್ತದೆ. ಝಲ್ ವರ್ಣಗಳು–24. ಅವು ರಝ್,ಭ್,ಘ್,ಢ್,ಧ್, ಜ್,ಬ್,ಗ್,ಡ್,ದ್, ಖ್,ಫ್,ಛ್,ಠ್,ಥ್,ಚ್,ಟ್, ತ್,ಕ್,ಪ್,ಶ್,ಷ್,ಸ್,ಹ್.

**ಝಶ್ ವರ್ಣಗಳು** – ಝ್,ಭ್,ಘ್,ಢ್,ಧ್, ಜ್,ಬ್,ಗ್,ಡ್,ದ್,

**ಜಶ್ ವರ್ಣಗಳು** – ಜ್,ಬ್,ಗ್,ಡ್,ದ್,

ವಿಶೇಷ ವಿವರಣೆ– ವರ್ಗೀಯ ವ್ಯಞ್ಜನಗಳು ಪರಸ್ಪರ ಒಂದಕ್ಕೊಂದು ಸವರ್ಣವಾಗಿರುತ್ತವೆ. ಈ 'ಝಲ್'ಪ್ರತ್ಯಾಹಾರದಲ್ಲಿ, ವರ್ಗೀಯ ಅನ್ತ್ಯ ವ್ಯಞ್ಜನಗಳಾದ 'ಙ್,ಮ್,ಞ್,ಣ್,ನ್'ಗಳನ್ನು ಬಿಟ್ಟು 20 ವರ್ಣಗಳು ಇರುತ್ತವೆ. ಜ್,ಬ್,ಗ್,ಡ್,ದ್ ಎಂಬ 5 ಆದೇಶಗಳು ತಮ್ಮತಮ್ಮ ವರ್ಗೀಯವ್ಯಞ್ಜನಗಳ ಸ್ಥಾನದಲ್ಲಿ ಆದೇಶವಾಗಿ (ಪರಿವಿಡಿ ನೋಡಿರಿ) ಬರುತ್ತವೆ. ಆದರೆ ಶ್,ಷ್,ಸ್,ಹ್ ಎಂಬ ಅವರ್ಗೀಯ 'ಝಲ್' ವರ್ಣಗಳ ಸ್ಥಾನದಲ್ಲಿ ಜ್,ಬ್,ಗ್,ಡ್,ದ್ ಈ ಐದು ವರ್ಣಗಳಲ್ಲಿ ಸ್ಥಾನಸಾಮ್ಯವುಳ್ಳ ವರ್ಣಗಳೇ ಆದೇಶವಾಗಿ ಬರುತ್ತವೆ. ಅಂದರೆ 'ಶ್' ಕಾರಕ್ಕೆ 'ಜ್' ಕಾರ, 'ಷ್' ಕಾರಾಕ್ಕೆ 'ಡ್' ಕಾರ, 'ಸ್' ಕಾರಕ್ಕೆ 'ದ್' ಕಾರ, 'ಹ್' ಕಾರಕ್ಕೆ 'ಗ್' ಕಾರಗಳು ಕ್ರಮವಾಗಿ ಆದೇಶಗಳಾಗಿ ಬರುತ್ತವೆ.

**(ಸಂಯೋಗಾನ್ತವಾದ ಪದದ ಅನ್ತ್ಯ ವರ್ಣಕ್ಕೆ ಲೋಪ ಹೇಳುವ ಸೂತ್ರ)**

**ಸೂತ್ರ 20. ಸಂಯೋಗಾನ್ತಸ್ಯ ಲೋಪಃ (8.2.23)**

ವೃತ್ತಿ –ಸಂಯೋಗಾನ್ತಂ ಯತ್ಪದಂ ತದನ್ತಸ್ಯ ಲೋಪಃ ಸ್ಯಾತ್।

ಅ.ವೃ.- 'ಪದಸ್ಯ' ಎಂಬ ಅಧಿಕಾರದಡಿಯಲ್ಲಿ ಈ ಸೂತ್ರ ಬರುವದರಿಂದ, 'ಪದಸ್ಯ'(8.1.16) ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ – ಸಂಯೋಗಃ ಅನ್ತಃ ಯಸ್ಯ ತತ್ ಸಂಯೋಗಾನ್ತಮ್ (ಪದಮ್) ತಸ್ಯ ಸಂಯೋಗಾನ್ತಸ್ಯ (ಪದಾನ್ತಸ್ಯ) ಎಂದು ವಿಗ್ರಹ ವಾಕ್ಯ. ಯಾವ ಪದದ ಕೊನೆಯಲ್ಲಿ ಸಂಯೋಗವಿರುತ್ತದೆಯೋ, ಅಂದರೆ ಸ್ವರಗಳಿಂದ ತಡೆಯಲ್ಪಡದೆಯೇ ವ್ಯಞ್ಜನಗಳು ಮಾತ್ರ ಕೂಡಿಕೊಂಡಿರುತ್ತವೆಯೋ ಅಂತಹ ಪದದ ಕೊನೆಯ ವರ್ಣಕ್ಕೆ ಲೋಪವು ಆದೇಶವಾಗಿ ಬರುತ್ತದೆ. ಇಲ್ಲಿ ಸುದ್‌ಧ್‌ಯ್ ಎಂಬುದು ಸಂಯೋಗಾನ್ತವಾದ ಪದ.

'ಸುಧೀ' ಎಂಬ ಪದವೇ ಈ ರೂಪವನ್ನು ಹೊಂದಿದೆ. **'ಏಕದೇಶವಿಕೃತಮ್ ಅನನ್ಯವತ್'** ಎಂಬ ನ್ಯಾಯದಿಂದ ಇದರ ಪದತ್ವಕ್ಕೆ ಯಾವ ಚ್ಯುತಿಯೂ ಬಂದಿಲ್ಲ* (ನಾಯಿಯ ಬಾಲವು ಕತ್ತರಿಸಲ್ಪಟ್ಟರೂ, ಅದು ನಾಯಿಯಾಗಿಯೇ ಇರುತ್ತದೆ; ಕತ್ತೆಯಾಗುವುದಿಲ್ಲ.) ಪದಾನ್ತಸ್ಯ ಎಂದರೆ, ಪದದ ಕೊನೆಯ ವರ್ಣಕ್ಕೆ ಎಂದು ಅರ್ಥವಾಗುತ್ತದೆ. ಅಂದರೆ 'ಯ್' ಕಾರಕ್ಕೆ ಲೋಪವು ಆದೇಶವಾಗಿ ಬರುತ್ತದೆ ಎಂದು ಅರ್ಥ. ಇದಕ್ಕೆ ಪ್ರಮಾಣವನ್ನು ಮುಂದಿನ ಸೂತ್ರದಲ್ಲಿ ಹೇಳುತ್ತಾರೆ.

**(ಪದಾನ್ತ್ಯವಾದ ವರ್ಣಕ್ಕೆ ಲೋಪ ಹೇಳುವ ಪರಿಭಾಷಾ ಸೂತ್ರ)**

**ಸೂತ್ರ 21. ಅಲೋऽನ್ತ್ಯಸ್ಯ (1.1.52)**

ವೃತ್ತಿ-ಷಷ್ಠೀನಿರ್ದಿಷ್ಟಸ್ಯ ಅನ್ತ್ಯಸ್ಯ ಅಲಃ (ಲೋಪಃ) ಆದೇಶಃ ಸ್ಯಾತ್। ಇತಿ 'ಯ'-(ಯ್) ಲೋಪೇ ಪ್ರಾಪ್ತೇ-

ವಾ॥ 0ಯಣಃಪ್ರತಿಷೇಧೋ ವಾಚ್ಯಃ।

1.ಸುದ್‌ಧ್‌ಯ್‌ಉಪಾಸ್ಯಃ, 2.ಸುಧ್ಯುಪಾಸ್ಯಃ। 1.ಮದ್‌ಧ್‌ವ್‌ಅರಿಃ, 2.ಮಧ್ವರಿಃ। 1. ಧಾತ್‌ತ್‌ರಂಶಃ, 2.ಧಾತ್ರಂಶಃ । ಲಾಕೃತಿಃ ।

ಪ.ಛೇ. – ಅಲಃ, ಅನ್ತ್ಯಸ್ಯ।

ಅ.ವೃ.-'ಷಷ್ಠೀ ಸ್ಥಾನೇ ಯೋಗಾ' (1.1.49) ಎಂಬ ಸೂತ್ರದಿಂದ 'ಷಷ್ಠೀ' ಮತ್ತು 'ಸ್ಥಾನೇ' ಎಂಬ ಪದಗಳು ಅನುವೃತ್ತವಾಗುತ್ತವೆ. 'ಷಷ್ಠೀ' ಎಂಬ ಪ್ರಥಮಾನ್ತವಾದ ಪದವು ತೃತೀಯಾನ್ತವಾಗಿ 'ಷಷ್ಠ್ಯಾ' ಎಂದು ವಿಪರಿಣಾಮ ಹೊಂದಿದೆ.

ಅರ್ಥ-ಇದು ಪರಿಭಾಷಾ ಸೂತ್ರ. 'ಷಷ್ಠೀ' ವಿಭಕ್ತಿಯಲ್ಲಿ ನಿರ್ದಿಷ್ಟವಾದ ಪದದ ಲೋಪವನ್ನು ಹೇಳಿದ ಸ್ಥಳದಲ್ಲಿ (ಲೋಪವು ಆದೇಶವಾಗಿ ಬರುತ್ತದೆ ಎಂಬ ಸ್ಥಳದಲ್ಲಿ) ಪದದ ಕೊನೆಯವರ್ಣಕ್ಕೇನೇ ಲೋಪಾದೇಶವು ಬರುತ್ತದೆಂದು ತಿಳಿಯಬೇಕು. ಆ ಕೊನೆಯ ವರ್ಣವು ವ್ಯಞ್ಜನವಾಗಿಯೋ ಅಥವಾ ಸ್ವರವಾಗಿಯೋ ಇರಬಹುದು ಎಂಬುದನ್ನು 'ಅಲ್' ಎಂಬ ಪದದಿಂದ, ತಿಳಿಸಿದ್ದಾರೆ. ಪ್ರಕೃತ ಉದಾಹರಣೆಯಲ್ಲಿ, ಪದದ ಎಂದು ಅರ್ಥ ಮಾಡದೇ ನಾವು ಪದದ ಅನ್ತ್ಯ ವರ್ಣಕ್ಕೇ ಎಂದು ಅರ್ಥ ಮಾಡಿಬಿಟ್ಟಿದ್ದೇವೆ. ಆದ್ದರಿಂದ ಪದಾನ್ತ್ಯ ವರ್ಣವಾದ 'ಯ್' ಕಾರಕ್ಕೆ ಲೋಪ ಬರಬೇಕಾಗಿದ್ದಾಗ, ವಾರ್ತಿಕಕಾರರು ಈ ಲೋಪದ ನಿಷೇಧವನ್ನು ಹೇಳುತ್ತಾರೆ

**'ಯಣಃಪ್ರತಿಷೇಧೋ ವಾಚ್ಯಃ'** ಎಂದು.

ಸಂಯೋಗಾನ್ತ ಪದದ ಕೊನೆಯ ವರ್ಣವಾದ 'ಯ್' ಕಾರಕ್ಕೆ ಇಲ್ಲಿ ಲೋಪವನ್ನು ನಿಷೇಧಿಸುವಾಗ– 'ವ್' 'ರ್' 'ಲ್' ವರ್ಣಗಳಿಗೂ ಇಂತಹ ಲೋಪ ಬರುವ ಸಂದರ್ಭದಲ್ಲಿ ಲೋಪ ನಿಷೇಧವನ್ನು ಹೇಳುವದಕ್ಕಾಗಿ, 'ಯಣಃ' ಎಂಬ ಪದವನ್ನು ಬಳಸಿದ್ದಾರೆ. ಈ ರೀತಿಯಾಗಿ'ಸುದ್‌ಧ್‌ಯ್+ಉಪಾಸ್ಯಃ' ಎಂದಾಗ 'ಸುದ್‌ಧ್ಯುಪಾಸ್ಯಃ' (ಸುದ್ಧ್ಯುಪಾಸ್ಯಃ) ಎಂದು ರೂಪವು ಆಗುತ್ತದೆ. ಇದು ಮೊದಲನೇ ಉದಾಹರಣೆಯ ಎರಡನೆಯ ವೈಕಲ್ಪಿಕ ರೂಪ. ಯಣ್ ಸನ್ಧಿಯಿಂದ ಸಿಗುವ ಉದಾಹರಣೆಗಳು.

(ಅ) ಸುಧೀ + ಉಪಾಸ್ಯಃ = ಸುಧ್ಯುಪಾಸ್ಯಃ. (ದ್ವಿತ್ವವಿಲ್ಲದ ರೂಪ)

1. (ಬ) ಸುಧೀ + ಉಪಾಸ್ಯಃ > ಸುಧ್‌ಯ್ + ಉಪಾಸ್ಯಃ > (ಅನಚಿ ಚ) ಸುಧ್‌ಧ್‌ಯ್ + ಉಪಾಸ್ಯಃ > (ಝಲಾಂ ಜಶ್ ಝಶಿ) ಸುದ್‌ಧ್‌ಯ್ + ಉಪಾಸ್ಯಃ = ಸುದ್ಧ್ಯುಪಾಸ್ಯಃ (ದ್ವಿತ್ವಬಂದ ರೂಪ)ಇದರಂತೆಯೇ

2. (ಅ) ಮಧು + ಅರಿಃ = ಮಧ್ವರಿಃ (ದ್ವಿತ್ವವಿಲ್ಲದ ರೂಪ),

2. (ಬ) ಮಧ್‌ಧ್‌ವ್ + ಅರಿಃ > ಮದ್‌ಧ್‌ವ್ + ಅರಿಃ = ಮದ್ಧ್ವರಿಃ. (ದ್ವಿತ್ವಬಂದ ರೂಪ).

3. (ಅ) ಧಾತೃ + ಅಂಶಃ > ಧಾತ್ + (ಋ + ಅಂ) ಶಃ > ಧಾತ್ + (ರ್+ ಅಂ) ಶಃ = ಧಾತ್ರಂಶಃ (ದ್ವಿತ್ವವಿಲ್ಲದ ರೂಪ)

3. (ಬ) ಧಾತೃ + ಅಂಶಃ > ಧಾತ್ + (ಋ + ಅಂ) ಶಃ > (ಅನಚಿ ಚ) ಧಾತ್‌ತ್ + ಋ + ಅಂಶಃ >ಧಾತ್‌ತ್ + ರ್ + ಅಂಶಃ = ಧಾತ್ತ್ರಂಶಃ. (ದ್ವಿತ್ವ ಬಂದ ರೂಪ). ( ಇಲ್ಲಿ ಝಲಾಂ ಜಶ್ ಝಶಿ ಸೂತ್ರಕ್ಕೆ ಅವಕಾಶವಿಲ್ಲ).

4. ಲೃ + ಆಕೃತಿಃ > ಲ್ + ಆಕೃತಿಃ = ಲಾಕೃತಿಃ (ಇಲ್ಲಿ ಇಕೋ ಯಣಚಿ ಸೂತ್ರಕ್ಕೆ ಮಾತ್ರ ಅವಕಾಶವಿರುತ್ತದೆ).

**ಇಲ್ಲಿಗೆ ಯಣ್ ಸನ್ಧಿ ಮುಗಿಯಿತು.**

## (2). ಯಾನ್ತಾದೇಶ–ವಾನ್ತಾದೇಶ ಸನ್ಧಿಃ.

**(ಅಥವಾ ಅಯ್.ಅವ್,ಆಯ್,ಆವ್ ಆದೇಶ ವಿಧಾಯಕ ಸನ್ಧಿಃ)**

**ಸೂತ್ರ 22. ಏಚೋಽಯವಾಯಾವಃ ( 6.1.78)**

ವೃತ್ತಿ –ಏಚಃ ಕ್ರಮಾತ್ ಅಯ್–ಅವ್, ಆಯ್–ಆವ್ ಏತೇ ಯಥಾ ಸಂಖ್ಯಂ ಸ್ಯುಃ ಅಚಿ।

ಪ.ಚ್ಛೇ – ಏಚಃ, ಅಯವಾಯಾವಃ। (ಅಯ್,ಅವ್,ಆಯ್,ಆವ್)

ಅ.ವೃ.– 'ಇಕೋ ಯಣಚಿ' (6.1.77) ಎಂಬ ಸೂತ್ರದಿಂದ, 'ಅಚಿ' ಎಂಬುದು ಅನುವೃತ್ತವಾಗುತ್ತದೆ. "ಸಂಹಿತಾಯಾಂ" ಅಧಿಕಾರಸೂತ್ರವಾಗಿದೆ.

ಅರ್ಥ- ಅಯ್ ಚ, ಅವ್ ಚ, ಆಯ್ ಚ, ಆವ್ ಚ = ಅಯವಾಯಾವಃ। ಏಚ್ (ಏ,ಓ,ಐ,ಔ) ವರ್ಣಗಳಿಗೆ, 'ಅಚ್' ವರ್ಣಗಳು ಅವ್ಯವಹಿತವಾಗಿ ಪರದಲ್ಲಿದ್ದಾಗ, ಕ್ರಮವಾಗಿ ಅಯ್,ಅವ್,ಆಯ್,ಆವ್ ಆದೇಶಗಳು ಕ್ರಮವಾಗಿ ಬರುತ್ತವೆ. ಅಂದರೆ 'ಏ' ಎಂಬ ಸ್ಥಾನಿಯ ಜಾಗದಲ್ಲಿ 'ಅಯ್' ಎಂಬ ಆದೇಶವೂ 'ಓ' ಎಂಬ ಸ್ಥಾನಿಯ ಜಾಗದಲ್ಲಿ 'ಅವ್' ಎಂಬ ಆದೇಶವೂ, 'ಐ' ಎಂಬ ಸ್ಥಾನಿಯ ಜಾಗದಲ್ಲಿ 'ಆಯ್' ಎಂಬ ಆದೇಶವೂ, ಮತ್ತು 'ಔ' ಎಂಬ ಸ್ಥಾನಿಯ ಜಾಗದಲ್ಲಿ, 'ಆವ್' ಎಂಬ ಆದೇಶವೂ ಬರುತ್ತದೆ.

**'ಏಕದೇಶವಿಕೃತಮ್ ಅನನ್ಯವತ್'** ಎಂಬ ನ್ಯಾಯ ಹೀಗಿದೆ: ನಾಯಿಯ ಬಾಲ ಕತ್ತರಿಸಲ್ಪಟ್ಟರೂ ನಾಯಿ ನಾಯಿಯೇ ಹೊರತು ಕತ್ತೆಯಾಗುವದಿಲ್ಲ.

ಸುಬಂತಗಳು ಸಮಾಸವಾಗುವಾಗ ಸುಪ್ ಪ್ರತ್ಯಯಗಳನ್ನು ಕಳೆದುಕೊಂಡು ಪ್ರಾತಿಪದಿಕ ರೂಪವನ್ನು ತಾಳಿದರೂ ಪದತ್ವವನ್ನು ಕಳೆದುಕೊಳ್ಳುವದಿಲ್ಲ.

ಇಲ್ಲಿ 'ಯಾನ್ತಾದೇಶ-ವಾನ್ತಾದೇಶ' ಸನ್ಧಿಯೆಂದು ಹೇಳುವದಕ್ಕೆ ಕಾರಣವೇನೆಂದರೆ, ಏ, ಐ ಗಳಿಗೆ 'ಅಯ್' 'ಆಯ್' ಎಂಬ ಯಾನ್ತಾದೇಶಗಳು, ಮತ್ತು ಓ, ಔ ಗಳಿಗೆ 'ಅವ್' 'ಆವ್' ಎಂಬ ವಾನ್ತಾದೇಶಗಳೂ ಕ್ರಮವಾಗಿ ಬರುತ್ತವೆ. ಇಲ್ಲಿ ಕ್ರಮವಾಗಿ ಎಂದು ವೃತ್ತಿಯಲ್ಲಿ,ಹೇಳಿರುವದಕ್ಕೆ ಕಾರಣ, ಮುಂದಿನ ಪರಿಭಾಷಾ ಸೂತ್ರವೇ ಹೊರತು, ಅನುವೃತ್ತಿಯಿಂದ ಆದದ್ದಲ್ಲ ಎಂಬುದನ್ನು ಗಮನಿಸಬೇಕು.

**ಸೂತ್ರ 23. ಯಥಾಸಂಖ್ಯಮನುದೇಶಃ ಸಮಾನಾಮ್ (1.3.10)-**

ವೃತ್ತಿ -ಸಮಸಮ್ಬನ್ಧೀ ವಿಧಿಃ ಯಥಾಸಂಖ್ಯಂ ಸ್ಯಾತ್। ಹರಯೇ, ವಿಷ್ಣವೇ। ನಾಯಕಃ, ಪಾವಕಃ।

ಅರ್ಥ -'ಸಂಖ್ಯಾಮ್ ಅನತಿಕ್ರಮ್ಯ-ಯಥಾಸಂಖ್ಯಮ್'ಎಂದರೆ, ಕ್ರಮವಾಗಿ ಎಂದು ಅರ್ಥ. 'ಅನುದೇಶ'ವೆಂದರೆ ವಿಧಿಸುವುದು ಅಥವಾ ವಿಧಾನ ಮಾಡುವುದು ಎಂದರ್ಥ. ವಿಧಿಸಬೇಕಾದರೆ ಸ್ಥಾನಿ ಇರಬೇಕು. ಸ್ಥಾನಿಗಳನ್ನು ಉದ್ದೇಶವೆಂದು ಕರೆಯುತ್ತಾರೆ. ಆ ಸ್ಥಾನಿಯ ಸ್ಥಾನದಲ್ಲಿ ವಿಧಿಸುವ ಶಬ್ದ ಸ್ವರೂಪವನ್ನು ಆದೇಶವೆಂದು ಕರೆಯುತ್ತಾರೆ. ಯಾವ ಒಂದು ಸ್ಥಳದಲ್ಲಿ ಉದ್ದೇಶಗಳು ಮತ್ತು ವಿಧೇಯಗಳು ಸಮಾನ ಸಂಖ್ಯೆಯಲ್ಲಿ ಇರುವವೋ ಅಲ್ಲಿ ಮೊದಲನೇಯ ಉದ್ದೇಶಕ್ಕೆ(ಸ್ಥಾನಿಗೆ) ಮೊದಲನೇಯ ವಿಧೇಯವು(ಆದೇಶವು) ಎರಡನೇಯ ಉದ್ದೇಶಕ್ಕೆ ಎರಡನೇಯ ಆದೇಶವೆಂದು ಈ ರೀತಿಯಾಗಿ ವಿಧಾನ ಮಾಡಬೇಕು ಎಂಬ ಈ ಅರ್ಥವನ್ನು **'ಯಥಾಸಂಖ್ಯಮನುದೇಶಃ'** ಎಂಬ ಸೂತ್ರಸ್ಥ ಪದಗಳಿಂದ ಹೇಳಲಾಗಿದೆ. ಇಲ್ಲಿ ಏ, ಓ, ಐ, ಔ-ಗಳು ನಾಲ್ಕು ಸ್ಥಾನಿಗಳಾಗಿದ್ದು ವಿಧೇಯಗಳೂ ಸಹ ಸಮಾನವಾದ ಸಂಖ್ಯೆ (ನಾಲ್ಕು) ಉಳ್ಳದ್ದಾಗಿರುವದರಿಂದ ಮೊದಲನೇಯ ಉದ್ದೇಶವಾದ 'ಏ'ಕಾರಕ್ಕೆ ಮೊದಲನೆಯ ಆದೇಶವಾದ 'ಅಯ್', ಎರಡನೇಯ ಉದ್ದೇಶವಾದ 'ಓ' ಕಾರಕ್ಕೆ ಎರಡನೆಯ ಆದೇಶವಾದ ಅವ್ 'ಔ', ಮೂರನೇಯ ಉದ್ದೇಶವಾದ 'ಐ'ಕಾರಕ್ಕೆ, ಮೂರನೆಯ ಆದೇಶವಾದ 'ಆಯ್', ಮತ್ತು ನಾಲ್ಕನೇಯ ಉದ್ದೇಶವಾದ 'ಔ'

ಕಾರಕ್ಕೆ ನಾಲ್ಕನೆಯ ಆದೇಶವಾದ 'ಆವ್' ಗಳನ್ನು ವಿಧಿಸಲಾಗಿದೆ. (ವಿಧಿಸಲಾಗಿದೆ ಎಂದು ಹೇಳಿದಾಗ ಯಾವ ಆಧಾರದ ಮೇಲೆ ವಿಧಿಸಲಾಗಿದೆ ಎಂದು ಪ್ರಶ್ನೆ ಇರುವದಿಲ್ಲ. ಸೂತ್ರಕಾರರೇ ಇದಕ್ಕೆ ಪ್ರಮಾಣ.) ಏ,ಓ,ಐ,ಔ ವರ್ಣಗಳಿಗೆ, ಬರುವ ಆದೇಶಗಳ ನಾಲ್ಕು ಉದಾಹರಣೆಗಳು ಈ ಕೆಳಗಿನಂತಿವೆ.

'ಏ'ಕಾರಕ್ಕೆ ಉದಾಹರಣೆಯಾದ 'ಹರಯೇ' ಎಂಬಲ್ಲಿ, ಹರಿ + ಙೇ ಎಂದಿದ್ದಾಗ ಪ್ರಾತಿಪದಿಕದಲ್ಲಿರುವ 'ಇ'ಕಾರಕ್ಕೆ "ಘೇರ್ಙಿತಿ" (7.3.111) ಎಂಬ ಸೂತ್ರದಿಂದ ಗುಣ ಬಂದು ಹರೇ + ಏ ಎಂದಾಗುತ್ತದೆ. ಇಲ್ಲಿ 'ಏ'ಕಾರಕ್ಕೆ 'ಅಚ್'(ಏ) ಪರವಾಗಿರುವುದರಿಂದ, ಆದೇಶದಲ್ಲಿ ಮೊದಲನೆಯದಾದ, 'ಅಯ್' ಆದೇಶ ಬರುತ್ತದೆ. ಅಗ 'ಹರ್ + ಅಯ್ + ಏ ಎಂದಿದ್ದಾಗ 'ಹರಯೇ' ಎಂದು ರೂಪವಾಗುತ್ತದೆ.

'ಓ' ಕಾರಕ್ಕೆ ಉದಾಹರಣೆಯಾದ 'ವಿಷ್ಣವೇ' ಎಂಬಲ್ಲಿ, ವಿಷ್ಣೋ + ಏ ಎಂದಿದ್ದಾಗ, ಮೇಲಿನ ಪ್ರಕ್ರಿಯೆಯಂತೆ ಎರಡನೆಯ ಆದೇಶವಾದ 'ಅವ್' ಬಂದಾಗ, ವಿಷ್ಣ್ + ಅವ್ + ಏ ಎಂದಾಗಿ 'ವಿಷ್ಣವೇ' ಎಂದು ರೂಪವಾಗುತ್ತದೆ.

'ಐ' ಕಾರಕ್ಕೆ 'ನಾಯಕಃ' ಎಂಬುದು ಉದಾಹರಣೆ. ನೀ (ಞ್) ಧಾತುವಿಗೆ 'ಣ್ವುಲ್' ಪ್ರತ್ಯಯ ಬಂದಾಗ, ಆ ಪ್ರತ್ಯಯಕ್ಕೆ, 'ಅಕ' ಆದೇಶ, 'ಣಿತ್' ಆದುದರಿಂದ, ಅದನ್ನು ನಿಮಿತ್ತ ಮಾಡಿಕೊಂಡು, 'ಈ' ಕಾರಕ್ಕೆ ವೃದ್ಧಿ (ಐ) ಬಂದರೆ, ನೈ + ಅಕಃ ಎಂದಾಗಿ, ಮೂರನೆಯ ಸ್ಥಾನಿಯಾದ 'ಐ' ಕಾರಕ್ಕೆ, ಮೂರನೆಯ ಆದೇಶವಾದ 'ಆಯ್' ಬಂದರೆ, ನ್ + ಆಯ್ + ಅಕಃ = ನಾಯಕಃ ಎಂದು ರೂಪವಾಗುತ್ತದೆ.

'ಔ' ಕಾರಕ್ಕೆ 'ಪಾವಕಃ' ಎಂಬುದು ಉದಾಹರಣೆ. ಪೂ (ಞ್) ಧಾತುವಿಗೆ ಹಿಂದಿನಂತೆ (ನಾಯಕಃ ಎಂಬ ಉದಾಹರಣೆಯಲ್ಲಿದ್ದಂತೆ) ಪ್ರತ್ಯಯ ಬಂದರೆ, ವೃದ್ಧಿ ಅದೇಶವಾಗಿ ಬಂದು ಪೌ ಎಂದಾಗಿ, ಪೌ + ಅಕಃ ಎಂದಿರುತ್ತದೆ. ಈಗ 'ಪ್' ಕಾರೋತ್ತರವರ್ತಿ ನಾಲ್ಕನೆಯ ಸ್ಥಾನಿಯಾದ 'ಔ' ಕಾರಕ್ಕೆ, ನಾಲ್ಕನೆಯ ಆದೇಶವಾದ 'ಆವ್' ಬಂದು, ಪ್ + ಆವ್ + ಅಕಃ = ಪಾವಕಃ ಎಂದು ರೂಪವಾಗುತ್ತದೆ.

[ವಿಶೇಷ – ಯಥಾಸಂಖ್ಯ ಎಂಬ ನಿಯಮವು, ಸ್ಥಾನಿ + ಆದೇಶಗಳ ಸ್ಥಾನದಲ್ಲಿ ಮಾತ್ರವಲ್ಲ, ಧಾತು + ಪ್ರತ್ಯಯ ಇದ್ದಾಗಲೂ ಈ ರೀತಿಯ ಯಥಾ ಸಂಖ್ಯೆ ಕ್ರಮವು ಅನುಸರಿಸಲ್ಪಡುತ್ತದೆ. ಈ ವಿಷಯದಲ್ಲಿ, "ಸ್ಯತಾಸೀ ಲೃಲುಟೋಃ". (3.1.33) ಎಂಬ ಸೂತ್ರದ ವಿವರಣೆ ನೋಡಿರಿ].

### ('ಯ್'ಕಾರಾದಿ-ಪ್ರತ್ಯಯ ಪರದಲ್ಲಿರುವಾಗ, ವಾನ್ತಾದೇಶ (ಅವ್, ಆವ್)ಗಳನ್ನು ವಿಧಿಸುವ ಸೂತ್ರ).

**ಸೂತ್ರ 24: ವಾನ್ತೋ ಯಿ ಪ್ರತ್ಯಯೇ (6.1.79)**

ವೃತ್ತಿ –ಯಕಾರಾದೌ ಪ್ರತ್ಯಯೇ ಪರೇ ಓದೌತೋಃ 'ಅವ್' 'ಆವ್' ಏತೌ ಸ್ತಃ। ಗವ್ಯಮ್। ನಾವ್ಯಮ್।

ವಾ॥ ಅಧ್ವಪರಿಮಾಣೇ ಚ । ಗವ್ಯೂತಿಃ ।

ಪ.ಚ್ಛೇ. – ವಾನ್ತಃ, ಯಿ, ಪ್ರತ್ಯಯೇ।

ಅ. ವ್ಯ.– "ಯಥಾಸಂಖ್ಯಮನುದೇಶಃ ಸಮಾನಾಮ್" (1.3.10) ಎಂಬ ಸೂತ್ರವು ಇಲ್ಲಿ ಪ್ರವರ್ತಿಸುತ್ತದೆ. "ಸಂಹಿತಾಯಾಂ" (6.1.72) ಎಂಬುದು ಅಧಿಕಾರ ಸೂತ್ರ, (ಇದೇ ಹೆಸರಿನ ಇನ್ನೊಂದು "ಸಂಹಿತಾಯಾಂ" (6.3.114) ಎಂಬ ಸೂತ್ರವಿದೆ. ಅದು ಇಲ್ಲಿ ಪ್ರವೃತ್ತವಾಗುವದಿಲ್ಲ).

ಅರ್ಥ – 'ಯ್' ಕಾರಾದಿಯಾದ ಪ್ರತ್ಯಯವು ಪರದಲ್ಲಿರುವಾಗ, 'ವ್' ಕಾರಾನ್ತವಾದ, 'ಅವ್' 'ಆವ್' ಆದೇಶಗಳು, 'ಓ' ಮತ್ತು 'ಔ' ಗಳ ಸ್ಥಾನದಲ್ಲಿ ಕ್ರಮವಾಗಿ ಬರುತ್ತವೆ. ಇದರ ಸ್ಪಷ್ಟೀಕರಣಕ್ಕೆ "ಏಚೋಽಯವಾಯಾವಃ" (6.1.78) ಎಂಬ ಸೂತ್ರವನ್ನು ಅವಲಂಬಿಸಬೇಕು. ಈ ಸೂತ್ರದ ಪ್ರಕಾರ 'ಏ' 'ಐ'ಗಳ ಸ್ಥಾನದಲ್ಲಿ 'ಅಯ್' 'ಆಯ್' ಮತ್ತು 'ಓ' 'ಔ'ಗಳ ಸ್ಥಾನದಲ್ಲಿ, 'ಅವ್' 'ಆವ್' ಗಳು ಆದೇಶವಾಗಿ ಬರುತ್ತವೆ ಎಂದು ಹೇಳಿದೆ. ಈ ಸೂತ್ರ (ವಾನ್ತೋ ಯಿ ಪ್ರತ್ಯಯೇ 6.1.79)ದ ವೃತ್ತಿಯಲ್ಲಿ ಹೇಳಿರುವ, 'ಅವ್' 'ಆವ್' ಎಂಬ 'ವ್' ಕಾರಾನ್ತ ಆದೇಶಗಳು, ಬರಬೇಕಾದರೆ, 'ಓ' 'ಔ'ಗಳ ಸ್ಥಾನದಲ್ಲಿಯೇ ಕ್ರಮವಾಗಿ ಬರುತ್ತವೆ. 'ವಾನ್ತಃ' ಎಂಬ ಸೂತ್ರಸ್ಥ ಪದವು, ಈ ಎರಡು ಆದೇಶಗಳನ್ನು ಸೂಚಿಸುತ್ತದೆ. ಸಂಹಿತಾ ಅಧಿಕಾರದಲ್ಲಿ, 'ಯ್' ಕಾರಾದಿಯಾದ ಪ್ರತ್ಯಯವು ಪರದಲ್ಲಿರುವಾಗಲೂ 'ಓ' ಕಾರ 'ಔ' ಕಾರಗಳ ಸ್ಥಾನದಲ್ಲಿ 'ಅವ್' ಮತ್ತು 'ಆವ್' ಆದೇಶಗಳು ಕ್ರಮವಾಗಿ ಬರುತ್ತವೆ. (ಇದರ ಅರ್ಥ ಕೇವಲ ಸ್ವರಪರದಲ್ಲಿದ್ದಾಗ ಮಾತ್ರವಲ್ಲ). 'ಯಸ್ಮಿನ್ ವಿಧಿಃ ತದಾದಾವಲ್ ಗ್ರಹಣೇ' (ಇದು ಅಷ್ಟಾಧ್ಯಾಯಿಯಲ್ಲಿ ಇಲ್ಲ). ಎಂಬ ಪರಿಭಾಷೆಯಿಂದ ಆದಿ-ವಿಧಿಯು ಪ್ರವೃತ್ತವಾಗುತ್ತದೆ. ಆದ್ದರಿಂದ 'ಯಿ' ಎಂದರೆ 'ಯ್' ಕಾರಾದಿಯೆಂದೂ ಸೂತ್ರದಲ್ಲಿ ಹೇಳಲಾಗಿದೆ.

[ವಿಶೇಷ – "ಯೇನ ವಿಧಿಃ ತದನ್ತಸ್ಯ"(1.1.72) ಎಂಬ ಪರಿಭಾಷೆಯ ಪ್ರಕಾರ, 'ಯ್' ಕಾರಾನ್ತವಾದ ಪ್ರತ್ಯಯ ಪರದಲ್ಲಿದ್ದಾಗ ಎಂದು ಅರ್ಥ ಮಾಡಬೇಕು. ಆದರೆ, ಇಲ್ಲಿ ಆ ಪರಿಭಾಷೆಯು ಕೂಡುವದಿಲ್ಲ. ಆದ್ದರಿಂದ ಈ ಪರಿಭಾಷೆಗೆ ಅಪವಾದವಾಗಿ, 'ಯಸ್ಮಿನ್ ವಿಧಿಃ ತದಾದಾವಲ್ ಗ್ರಹಣೇ' (ಇದು ಅಷ್ಟಾಧ್ಯಾಯಿಯಲ್ಲಿ ಇಲ್ಲ) ಎಂಬ ಸೂತ್ರವು ಪ್ರವೃತ್ತವಾಗಿದೆ. ಕಾರಣ ಇಲ್ಲಿ 'ಯ್' ಕಾರಾದಿಯಾದ ಪ್ರತ್ಯಯವೇ ಪರದಲ್ಲಿ ಅಪೇಕ್ಷಿತವಾಗಿದೆ].

ಗವ್ಯಂ-ಎಂಬ ಉದಾಹರಣೆಯಲ್ಲಿ, ಗೋ+ಯತ್ ಎಂದಿದ್ದಾಗ, 'ತ್' ಕಾರವು "ಹಲನ್ತ್ಯಮ್" (1.3.3) ಎಂಬ ಸೂತ್ರದಿಂದ ಲೋಪವಾಗಿ ಗೋ+ಯ ಎಂದಿರುತ್ತದೆ. 'ಓ' ಕಾರಕ್ಕೆ 'ಅವ್' ಆದೇಶ ಬಂದು, ಗವ್+ಯ= ಗವ್ಯ ಎಂದಾಗುತ್ತದೆ. ಗವ್ಯ ಇದು 'ಅ'ಕಾರಾನ್ತ ಪ್ರಾತಿಪದಿಕವಾಗಿದೆ. ನಪುಂಸಕ ರೂಪವಾಗಬೇಕಾದರೆ, "ಅತೋಽಮ್" (7.1.24) ಎಂಬ ಸೂತ್ರದಿಂದ 'ಅಮ್' ಆದೇಶ ಬಂದು ಗವ್+ಯಮ್=ಗವ್ಯಮ್ ಎಂದು ರೂಪವಾಗುತ್ತದೆ. (ಈ ರೂಪವು, "ಗೋ ಪಯಸೋರ್ಯತ್" (4.3.160) ಎಂಬ ಸೂತ್ರದಿಂದ ಆಗಿದೆ.)

ಇದೇ ರೀತಿಯಲ್ಲಿ, ನೌ + ಯಮ್ ಎಂಬ ಉದಾಹರಣೆಯಲ್ಲಿಯೂ 'ಆವ್'

ಆದೇಶ ಬಂದು, ನ್ + ಆವ್ + ಯಮ್ = ನಾವ್ಯಮ್ ಎಂಬ ರೂಪವಾಗುತ್ತದೆ. 'ನಾವ್ಯಮ್' ಎಂದರೆ ನಾವಾ ತಾರ್ಯಮ್ (ಹಡಗಿನಿಂದ ದಾಟಿಸಲ್ಪಡುವದು). ಈ ರೂಪವು "ನೌ–ವಯೋ–ಧರ್ಮ–ವಿಷ–ಮೂಲ–ಸೀತಾ–ತುಲಾಭ್ಯಃ ತುಲ್ಯ–ತಾರ್ಯ–ಪ್ರಾಪ್ಯ–ವಧ್ಯಾನಾಮ್ಯ–ಸಮ–ಸಮಿತ–ಸಮ್ಮಿತೇಷು (4.4.91)" ಎಂಬ ಸೂತ್ರದಿಂದ ಸಿದ್ಧವಾಗಿದೆ.

('ಯ್' ಕಾರಾದಿಯಾದ (ಸುಬನ್ತ) ಪದ ಪರವಾದಾಗ, ಅವಾದೇಶ ವಿಧಿಸುವ ವಾರ್ತಿಕ)

ವಾ॥ "ಅಧ್ವ ಪರಿಮಾಣೇ ಚ"।

ಅ.ವ್ಯ. – "ವಾನ್ತೋ ಯಿ ಪ್ರತ್ಯಯೇ" (6.1.79) ಎಂಬ ಸೂತ್ರದಿಂದ, 'ವಾನ್ತಃ' ಎಂಬ ಪದವೂ, **"ಗೋರ್ಯೂತೌ ಛಂದಸ್ಯುಪಸಂಖ್ಯಾನಮ್"** ಎಂಬ ವಾರ್ತಿಕದಿಂದ, **'ಗೋಃ'** ಮತ್ತು **'ಯೂತೌ'** ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ – ಮಾರ್ಗದ ಅಳತೆ (ಪರಿಮಾಣ) ಎಂಬ ಅರ್ಥದಲ್ಲಿ 'ಯೂತಿ' ಎಂಬ ಪದವು ಪರದಲ್ಲಿದ್ದಾಗ, ಅವ್ಯವಹಿತ ಪೂರ್ವದಲ್ಲಿರುವ 'ಗೋ' ಶಬ್ದದ 'ಓ' ಕಾರಕ್ಕೆ 'ಅವ್' ಎಂಬ ವಾನ್ತಾದೇಶ ಬರುತ್ತದೆ. ಗವ್ಯೂತಿಃ ಎಂಬ ಉದಾಹರಣೆಯಲ್ಲಿ, 'ಗೋ' ಎಂಬ ಶಬ್ದದ 'ಓ' ಕಾರದ ಸ್ಥಾನದಲ್ಲಿ, 'ಅವ್' ಎಂಬ ಆದೇಶವು ಬರುತ್ತದೆ.

ಗೋ + ಯೂತಿಃ > ಗ್ + ಅವ್ + ಯೂತಿಃ = ಗವ್ಯೂತಿಃ ಎಂಬ ರೂಪವು ಆಗುತ್ತದೆ. ಇದರ ಅರ್ಥ – ಹಸುವಿನ ಕೂಗು ಕೇಳಿಸುವಷ್ಟು ದೂರ. (ಯೂತಿಃ, ಸ್ತ್ರೀ, ಕ್ರೋಶಯುಗಮ್–ಎಂದು ಅಮರ. ಯೂತಿಃ ಎಂದರೆ ಎರಡು ಕ್ರೋಶ ದೂರ).

## (3) ಗುಣಸನ್ಧಿ

**(ಗುಣ ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ–25: ಅದೇಙ್ಗುಣಃ** ( 1.1.2)

ವೃತ್ತಿ –ಅತ್ (ತ್) ಏಙ್ ಚ ಗುಣಸಂಜ್ಞಃ ಸ್ಯಾತ್।

ಪ.ಛೇ. – ಅತ್, (ತ್)ಏಙ್, ಗುಣಃ।

ಅರ್ಥ – ಇದು ಸಂಜ್ಞಾ ಸೂತ್ರವಾಗಿದೆ. ಅ, ಏ, ಓ ಈ ಮೂರೂ ವರ್ಣಗಳು, ಗುಣ ಎಂಬ ಸಂಜ್ಞೆಯನ್ನು ಹೊಂದುತ್ತವೆ. ('ಅತ್' ಎಂದರೆ ಹ್ರಸ್ವ 'ಅ' ಕಾರ, 'ಏಙ್' ಎಂದರೆ, ಏಙ್ ಪ್ರತ್ಯಾಹರದಲ್ಲಿರುವ ದೀರ್ಘ 'ಏ' ಕಾರ 'ಓ' ಕಾರಗಳು).

ವಿವರಣೆ– 'ಅತ್' ಎಂದರೆ, "ಅಣುದಿತ್ ಸವರ್ಣಸ್ಯಚಾಪ್ರತ್ಯಯಃ" (1.1.69) ಎಂಬ ಸೂತ್ರದಿಂದ ಹ್ರಸ್ವ 'ಅ' ಕಾರದ ಆರು ರೂಪಗಳನ್ನೂ, ಮತ್ತು 'ಏಙ್' ಎಂದರೆ, 'ಏ' ಕಾರ 'ಓ' ಕಾರಗಳಿಗೆ ಹ್ರಸ್ವ ರೂಪಗಳಿಲ್ಲದ್ದರಿಂದಲೂ, ಮತ್ತು ತಪರಕರಣ ಮಾಡಿರೋಣದ್ದರಿಂದ ಇವುಗಳ ಪ್ಲುತಗಳನ್ನೂ ಹೊರತುಪಡಿಸಿ ಕೇವಲ ಆರಾರು ದೀರ್ಘ ರೂಪಗಳನ್ನು ಮಾತ್ರ ತೆಗೆದುಕೊಳ್ಳಬೇಕು.

**(ತಪರ ವರ್ಣಗಳಿಗೆ, ಆಯಾ ಕಾಲದಲ್ಲಿ ಉಚ್ಚರಿಸಲ್ಪಟ್ಟ ವರ್ಣಗಳನ್ನೇ ಗ್ರಹಿಸಬೇಕೆಂಬ ನಿಯಮ ವಿಧಾಯಕ ಸೂತ್ರ)**

**ಸೂತ್ರ-26. ತಪರಸ್ತತ್ಕಾಲಸ್ಯ (1.1.70)**

ವೃತ್ತಿ – ತಃ ಪರಃ 0ಯಸ್ಮಾತ್ ಸ ಚ ತಾತ್‌ಪರಶ್ಚ ಉಚ್ಚಾರ್ಯಮಾಣ-ಸಮಕಾಲಸ್ಯೈವ ಸಂಜ್ಞಾ ಸ್ಯಾತ್।

ಪ. ಛೇ. – ತಪರಃ, ತತ್ಕಾಲಸ್ಯ।

ಅ. ವೃ. – "ಅಣುದಿತ್ ಸವರ್ಣಸ್ಯಚಾಪ್ರತ್ಯಯಃ" (1.1.69) ಎಂಬ ಸೂತ್ರದಿಂದ, 'ಅಣ್', 'ಅಪ್ರತ್ಯಯಃ' ಮತ್ತು 'ಸವರ್ಣಸ್ಯ' ಎಂಬ ಪದಗಳು ಅನುವೃತ್ತವಾಗುತ್ತವೆ. "ಸ್ವಂ ರೂಪಂ ಶಬ್ದಸ್ಯ ಅಶಬ್ದ ಸಂಜ್ಞಾ" (1.1.68) ಎಂಬ ಸೂತ್ರದಿಂದ, 'ಸ್ವಂ' ಎಂಬ ಶಬ್ದವು ಅನುವೃತ್ತವಾಗಿ 'ಸ್ವಸ್ಯ' ಎಂದು ಷಷ್ಠ್ಯನ್ತವಾಗಿ ವಿಪರಿಣಾಮ ಹೊಂದಿದೆ.

ಅರ್ಥ – 'ತಪರಃ' ಎಂಬುದಕ್ಕೆ ಎರಡುರೀತಿಯ ವಿಗ್ರಹ. 'ತಃ ಪರಃ ಯಸ್ಮಾತ್ ಸಃ, ತಪರಃ'. ಇದು ಬಹುವ್ರೀಹಿ ಸಮಾಸ. ಯಾವದರ ಪರದಲ್ಲಿ 'ತ್' ಕಾರವಿರುವದೋ ಅದು ಎಂದರ್ಥ. 'ಅತ್' ಎಂಬಲ್ಲಿ 'ತ್' ಕಾರವು 'ಅ' ಕಾರದ ಪರದಲ್ಲಿದೆ. ಆದ್ದರಿಂದ ಇಲ್ಲಿ, ಹ್ರಸ್ವ 'ಅ' ಕಾರ ಗ್ರಹೀತವಾಗುತ್ತದೆ. ಈ 'ಅ' ಕಾರವು ಏಕ ಮಾತ್ರಕವಾದ್ದರಿಂದ, ಹ್ರಸ್ವ 'ಅ' ಕಾರವನ್ನೇ ಗ್ರಹಿಸಬೇಕು ಎಂಬುದು ಈ ವೃತ್ತಿಯ ಅರ್ಥ. ಹ್ರಸ್ವ 'ಅ' ಕಾರಕ್ಕೆ ಆರು ಭೇದಗಳಿವೆ. (ಅವು ಉದಾತ್ತ, ಅನುದಾತ್ತ, ಸ್ವರಿತ ಇವುಗಳ ಅನುನಾಸಿಕ ಮತ್ತು ಅನನುನಾಸಿಕಗಳು).

ಎರಡನೆಯ ವಿಗ್ರಹ ವಾಕ್ಯ– 'ತಾತ್ ಪರಃ = ತಪರಃ. ಇದು ಪಞ್ಚಮೀ ತತ್ಪುರುಷ ಸಮಾಸ, ಇಲ್ಲಿ 'ಏಚ್' ಎಂಬ ಪ್ರತ್ಯಾಹರಕ್ಕೆ ತಾತ್ಪರತ್ವ ಬರಬೇಕಾದರೆ, ಅದೇ 'ತ್' ಕಾರವನ್ನೇ ಪೂರ್ವವರ್ತಿಯಾಗಿ, ತೆಗೆದುಕೊಳ್ಳಬೇಕು. (ಸೂತ್ರದಲ್ಲಿರುವ ಒಂದೇ 'ತ್' ಕಾರವು ದೇಹಲೀ (ಹೊಸ್ತಿಲ ಮೇಲಿನ) ದೀಪ ನ್ಯಾಯದಂತೆ ಎರಡೂಕಡೆಗೆ ಅನ್ವಯಿಸುತ್ತದೆ. ಅ+ತ್+ಏಚ್=ಅ+ತ್, ತ್+ಏಚ್=ಅದೇಚ್).

ಇಲ್ಲಿ 'ಅ' ಕಾರವನ್ನು ಹ್ರಸ್ವವಾಗಿ ಉಚ್ಚರಿಸಿರುವದರಿಂದ, 'ಅತ್' ಎಂದರೆ, ಹ್ರಸ್ವ 'ಅ'ಕಾರವನ್ನು ಮಾತ್ರ ಗ್ರಹಿಸಬೇಕು. ಹಾಗೆಯೇ 'ತ್+ಏಚ್' ಎಂಬಲ್ಲಿ, ('ತ್' ಕಾರವು ಏಚ್– ಪ್ರತ್ಯಾಹರದಲ್ಲಿ ಹೆಳಿರುವ ದೀರ್ಘ 'ಏ' ಕಾರ 'ಓ' ಕಾರಗಳೆರಡಕ್ಕೂ ಸಂಬಂಧಿಸಿರುವದರಿಂದ), ದೀರ್ಘ ಗಳಾದ 'ಏ' 'ಓ' ಕಾರಗಳನ್ನು ಮಾತ್ರ ತೆಗೆದುಕೊಳ್ಳಬೇಕು (ಪ್ಲುತ ವರ್ಣಗಳನ್ನಲ್ಲ. ಕಾರಣ ಅಲ್ಲಿ 3 ಎಂಬ ಸಂಖ್ಯೆ ಇರುವದಿಲ್ಲ).

"ಆದ್ಗುಣಃ" ಎಂಬ ಮುಂದಿನ ಸೂತ್ರದಲ್ಲಿ 'ತ್' ಕಾರವು ಪರದಲ್ಲಿದ್ದರೂ, ಅದು 'ತ'ಪರಕರಣದಿಂದಾದದ್ದಲ್ಲ. ಅದು 'ಅ' ಕಾರದ ಪಞ್ಚಮ್ಯನ್ತ ರೂಪ. ಇಂತಹ ವ್ಯತ್ಯಾಸಗಳನ್ನು ತಿಳಿದುಕೊಳ್ಳಲು ಆಯಾ ಸೂತ್ರದ ವ್ಯಾಖ್ಯಾನಗಳಿಂದ ತಿಳಿದುಕೊಳ್ಳಬೇಕು.

(ಉದಾ: ರಾಮ ಎಂಬ ಅಕಾರಾನ್ತ ಶಬ್ದವು ರಾಮಾತ್ ಎಂದು ಆಗಿರುವಂತೆ.)

**(ಗುಣಕಾರ್ಯವನ್ನು ವಿಧಿಸುವ ಸೂತ್ರ)**

**ಸೂತ್ರ– 27: ಆದ್ಗುಣಃ (6.1.87)**

ವೃತ್ತಿ– ಅ–ವರ್ಣಾತ್ ಅಚಿ ಪರೇ ಪೂರ್ವ–ಪರಯೋಃ ಏಕೋ ಗುಣಃ ಆದೇಶಃ ಸ್ಯಾತ್। ಉಪೇನ್ದ್ರಃ। ಗಙ್ಗೋದಕಮ್।

ಪ.ಛೇ.– ಆತ್, ಗುಣಃ।

ಅ. ವೃ.– ಇಕೋ ಯಣಚಿ (6.1.77)ಎಂಬ ಸೂತ್ರದಿಂದ 'ಅಚಿ' ಎಂಬ ಪದವು ಅನುವೃತ್ತವಾಗಿದೆ. "ಏಕಃ ಪೂರ್ವ ಪರಯೋಃ (6.1.84)" ಎಂಬುದು ಅಧಿಕಾರ ಸೂತ್ರ.

ಅರ್ಥ – 'ಅ' ವರ್ಣದ ನಂತರ (18 ವಿಧವಾದ 'ಅ' ಕಾರಗಳ ನಂತರ) 'ಅಚ್' ಪರದಲ್ಲಿದ್ದಾಗ, ಪೂರ್ವ–ಪರಗಳ ಸ್ಥಾನದಲ್ಲಿ ಒಂದು ಗುಣವರ್ಣವು ಆದೇಶವಾಗಿ ಬರುತ್ತದೆ. ಅಂದರೆ, ಹ್ರಸ್ವ ಅಥವಾ ದೀರ್ಘ– ಅ ಕಾರದ ನಂತರ, 'ಅಚ್' ವರ್ಣವು ಅವ್ಯವಹಿತವಾಗಿ ಪರದಲ್ಲಿದ್ದಾಗ, ಪೂರ್ವ 'ಅ' ಕಾರದ ಮತ್ತು ಪರದಲ್ಲಿರುವ 'ಅಚ್' ವರ್ಣದ ಸ್ಥಾನಗಳಲ್ಲಿ, (ಅ ,ಏ, ಓ ಗಳಲ್ಲಿ ಒಂದಾದ), ಒಂದು ಗುಣವರ್ಣವು ಆದೇಶವಾಗಿ ಬರುತ್ತದೆ. ಈ ಆದೇಶವು ಸ್ಥಾನ ಸಾಮ್ಯದಿಂದ **"ಸ್ಥಾನೇ ಅನ್ತರತಮಃ (1.1.50)"** ಎಂಬ ಪರಿಭಾಷೆಯಿಂದ ಬರುವದು.

ಉದಾ–1: ಉಪೇನ್ದ್ರಃ = ಉಪ + ಇನ್ದ್ರಃ ಎಂಬಲ್ಲಿ, ಉಪಸರ್ಗದಲ್ಲಿರುವ 'ಪ'ಕಾರೋತ್ತರ 'ಅ' ಕಾರವು ಪೂರ್ವ ವರ್ಣವಾಗಿಯೂ, ಇನ್ದ್ರ ಎಂಬಲ್ಲಿ ಇರುವ 'ಇ' ವರ್ಣವು ಅವ್ಯವಹಿತಪರವಾಗಿಯೂ ಇವೆ. ಇಲ್ಲಿ (ಅ ಮತ್ತು ಇ) ಇವುಗಳ ಸ್ಥಾನದಲ್ಲಿ, ಸ್ಥಾನಸಾಮ್ಯದಿಂದ (ಇವುಗಳನ್ನು ಕೊಂದು) 'ಏ' ಕಾರವೆಂಬ ಒಂದೇ ಗುಣಾಕ್ಷರವು ಆದೇಶವಾಗಿ ಬಂದು, 'ಉಪ್ + ಏ + ನ್ದ್ರಃ = ಉಪೇನ್ದ್ರಃ' ಎಂದು ರೂಪವಾಗುತ್ತದೆ. ( ಅ ಕಾರಕ್ಕೆ ಕಣ್ಠ ಸ್ಥಾನ, 'ಇ' ಕಾರಕ್ಕೆ ತಾಲು ಸ್ಥಾನ. ಇವೆರಡಕ್ಕೂ ಸ್ಥಾನಸಾಮ್ಯವುಳ್ಳ ವರ್ಣವೆಂದರೆ, 'ಏ' ಕಾರ (ಏದೈತೋಃ ಕಣ್ಠತಾಲು). ಇಲ್ಲಿ 'ಐ' ಕಾರಕ್ಕೂ ಕಣ್ಠತಾಲು ಸಾಮ್ಯವಿದ್ದರೂ, ಅದು ವೃದ್ಧಿ ಸಂಜ್ಞೆಯುಳ್ಳದ್ದು).

ಉದಾ– 2: ಗಙ್ಗೋದಕಮ್=ಗಙ್ಗಾ+ಉದಕಮ್ ಎಂಬಲ್ಲಿ ಪೂರ್ವ ವರ್ಣವು ದೀರ್ಘ– 'ಅ' (ಆ) ಕಾರವಾಗಿದ್ದು, ಅವ್ಯವಹಿತ ಪರವರ್ಣವು 'ಉ' ಕಾರವಾಗಿದ್ದು, ಇವುಗಳ ಸ್ಥಾನ ಸಾಮ್ಯದಿಂದ, 'ಓ' ಕಾರವು ಆದೇಶವಾಗಿ ಬರುತ್ತದೆ. ಆಗ ಗಙ್+ ಓ+ದಕಮ್=ಗಙ್ಗೋದಕಮ್ ಎಂದಾಗುತ್ತದೆ. (ಓದೌತೋಃ ಕಣ್ಠೋಷ್ಠಮ್) ಇಲ್ಲಿ 'ಔ' ಕಾರವು ವೃದ್ಧ್ಯಕ್ಷರವಾದ್ದರಿಂದ ಗುಣಾಕ್ಷರವಾದ 'ಓ' ಕಾರವೇ ಆದೇಶವಾಗಿ ಬರುತ್ತದೆ.

ವಿಶೇಷ–ಇಲ್ಲಿ ಅ, ಏ ಮತ್ತು ಓ ಎಂಬ ಗುಣಾಕ್ಷರಗಳಲ್ಲಿ, ಮೊದಲು 'ಏ'ಕಾರ 'ಓ' ಕಾರಗಳು ಆದೇಶವಾಗಿ ಬರುವದನ್ನು ಹೇಳಿದನಂತರ 'ಅ' ಕಾರಾದೇಶದ ಬಗ್ಗೆ ವಿಶೇಷವನ್ನು ಸೂಚಿಸುತ್ತಾನೆ.

'ಅ' ಅಥವಾ 'ಆ' ಮತ್ತು 'ಋ' ಇವೆರಡೂ ಸೇರಿದಾಗ ಇವುಗಳ ಸ್ಥಾನದಲ್ಲಿ 'ಅರ್' ಎಂಬುದು ಆದೇಶವಾಗಿ ಬರುತ್ತದೆ. ಇದರಂತೆ, ಅದರ (ಋ ಕಾರದ) ಸವರ್ಣವಾದ 'ಲೃ' ಕಾರದ ಸ್ಥಾನದಲ್ಲಿ, 'ಅಲ್' ಎಂದು ಆದೇಶವು ಬರುತ್ತದೆ. (**ಉರಣ್ ರಪರಃ** (1.1.51) ಎಂಬ ಸೂತ್ರವನ್ನು ನೋಡಿರಿ). [ಈ ಸಂಧಿ ಪ್ರಕರಣದಲ್ಲಿ, ಕೇವಲ 'ಅ' ಕಾರವೆಂಬ ಗುಣಾಕ್ಷರವು ಪ್ರತ್ಯೇಕವಾಗಿ ಆದೇಶವಾಗಿ ಬರುವ ಸಂದರ್ಭಗಳು ಕಂಡುಬಂದಿಲ್ಲ. ಮತ್ತು "**ಅಕಃ ಸವರ್ಣೇ ದೀರ್ಘಃ** (6.1.101)" ಹಾಗೂ "**ವೃದ್ಧಿರೇಚಿ** (6.1.88)" ಎಂಬ ಎರಡು ಸೂತ್ರಗಳು ಗುಣ ಸಂಧಿಗೆ ಅಪವಾದವಾಗಿವೆ ಎಂಬುದನ್ನು ಆಯಾ ಸೂತ್ರಗಳಲ್ಲಿ ಕಾಣಬಹುದು].

**(ಅಚ್ (ಸ್ವರ) ವರ್ಣಕ್ಕೆ ಅನುನಾಸಿಕ ಸಂಜ್ಞೆ ವಿಧಿಸುವ ಸೂತ್ರ)**

**ಸೂತ್ರ - 28: ಉಪದೇಶೇಽಜನುನಾಸಿಕ ಇತ್ (1.3.2)**

ವೃತ್ತಿ -ಉಪದೇಶೇ ಅನುನಾಸಿಕಃ ಅಚ್ ಇತ್-ಸಂಜ್ಞಃ ಸ್ಯಾತ್। ಪ್ರತಿಜ್ಞಾನುನಾಸಿಕ್ಯಾಃ ಪಾಣಿನೀಯಾಃ। 'ಲಣ್' ಸೂತ್ರಸ್ಥ- 'ಅ'ವರ್ಣೇನ ಸಹ ಉಚ್ಚಾರ್ಯಮಾಣೋ ರೇಫೋ ರಲಯೋಃ ಸಂಜ್ಞಾ।

ಪ.ಛೇ.- ಉಪದೇಶೇ, ಅಚ್, ಅನುನಾಸಿಕಃ, ಇತ್।

ಅರ್ಥ - ಉಪದೇಶವೆಂದರೆ, ಆದ್ಯೋಚ್ಚಾರಣೆ ಎಂದು "ಹಲನ್ತ್ಯಮ್ (1.3.3)" ಎಂಬ ಸೂತ್ರದಲ್ಲಿ ಈ ಹಿಂದೆಯೇ ಹೇಳಲಾಗಿದೆ. "ಮೊದಲ ಉಚ್ಚಾರಣೆ" ಎಂದು ಹೇಳಿರೋಣದರಿಂದ, ಇದು ಶಿವಸೂತ್ರಗಳಿಗೂ ಮುನಿತ್ರಯರ ಉಚ್ಚಾರಣೆಗೂ ಅನ್ವಯಿಸುತ್ತದೆ ಎಂದು ಹೇಳಿದ್ದೇವೆ. ಇದು ಮಾತ್ರವಲ್ಲದೇ ಕೆಳಗಿನ ಶ್ಲೋಕದಲ್ಲಿ ಬರುವ ಇತರ ಶಬ್ದ ಸ್ವರೂಪಗಳಿಗೂ ಉಪದೇಶ ಸಂಜ್ಞೆಯು ಬರುತ್ತವೆ ಎಂದು ಅದೇ ಸಂದರ್ಭದಲ್ಲಿ ಹೇಳಿದ್ದೇವೆ.

ಧಾತು-ಸೂತ್ರ-ಗಣೋ-ಣಾದಿ-ವಾಕ್ಯ-ಲಿಙ್ಗಾನುಶಾಸನಂ।
ಆಗಮ-ಪ್ರತ್ಯಯಾಽಽದೇಶಾಃ ಉಪದೇಶಾಃ ಪ್ರಕೀರ್ತಿತಾಃ॥

ಈ ರೀತಿ ಮೇಲೆ ಹೇಳಿರುವ ಉಪದೇಶ ವಾಚಕಗಳಾದ ಶಬ್ದಗಳಲ್ಲಿ, ಯಾವ ಸ್ವರಗಳು ಅನುನಾಸಿಕವಾಗಿ ಉಚ್ಚರಿಸಲ್ಪಟ್ಟಿವೆಯೋ, ಆ ಸ್ವರ ವರ್ಣಗಳೇ ಅನುನಾಸಿಕವೆಂದು ತಿಳಿಯಬೇಕು. ಬೇರೆ ಶಬ್ದಗಳನ್ನು ಅನುನಾಸಿಕವಾಗಿ ಉಚ್ಚರಿಸಬಾರದು. ಇದನ್ನು ಪಾಣಿನಿ ಮತ್ತು ಅವರ ಶಿಷ್ಯ ಪರಂಪರೆಯಿಂದಲೇ ತಿಳಿಯಬೇಕು. ಅವು 'ಇತ್' ಸಂಜ್ಞೆಯನ್ನು ಹೊಂದುತ್ತವೆ. [ಪಾಣಿನಿ ಮೊದಲಾದವರ ಕಾಲದಲ್ಲಿ ಯಾವರೀತಿಯಲ್ಲಿ, ಸ್ವರಗಳನ್ನು 'ಇತ್' ಆಗಿ ಪರಿಗಣಿಸುತ್ತಿದ್ದರೋ (ಅಂದರೆ ಅನುನಾಸಿಕ ವರ್ಣದಮೇಲೆ (ಅರ್ಧಚನ್ದ್ರದ ಮೇಲೆ ಚುಕ್ಕಿ ಚಿನ್ಹೆಯನ್ನು) ಚಂದ್ರಬಿಂದುವನ್ನು ಬರೆಯುತ್ತಿದ್ದರು. ಆ ಪರಂಪರೆ ಈಗ ನಿಂತುಹೋಗಿರೋಣದ್ದರಿಂದ, ಅದನ್ನು ಹೇಗೆ ಗುರುತಿಸುವದು ಎಂಬುದನ್ನು ಸ್ಪಷ್ಟಪಡಿಸುತ್ತಾರೆ.

ಪ್ರತಿಜ್ಞಾಯತೇ ಅಭ್ಯುಪಗಮ್ಯತೇ (ಅಙ್ಗೀಕರಿಸಲ್ಪಡುತ್ತದೆ) ಇತಿ ಪ್ರತಿಜ್ಞಾ, ಅನುನಾಸಿಕಸ್ಯ

ಭಾವಃ ಆನುನಾಸಿಕ್ಯಮ್. ಪ್ರತಿಜ್ಞಾ ಆನುನಾಸಿಕ್ಯಮ್ ಏಷಾಂ ತೇ ಪ್ರತಿಜ್ಞಾನುನಾಸಿಕ್ಯಾಃ. ಅನುನಾಸಿಕ ಸ್ವರೂಪವನ್ನು, ಅಙ್ಗೀಕರಿಸಿದವರು (ಎಂದರ್ಥ). ಪಾಣಿನಿನಾ ಪ್ರೋಕ್ತಂ ಪಾಣಿನೀಯಮ್. ತತ್ ಅಧೀಯತೇ ವಿದನ್ತಿ ವಾ ಪಾಣಿನೀಯಾಃ. ಪಾಣಿನೀಯವರಿಂದ (ಅನುನಾಸಿಕವಾಗಿ) ಉಚ್ಚರಿಸಲ್ಪಟ್ಟದ್ದನ್ನು ತಿಳಿದವರು, ಅಥವಾ ಅಧ್ಯಯನ ಮಾಡುವವರೇ ಪಾಣಿನೀಯರು. ಅಂದರೆ, ಅವರ ಶಿಷ್ಯಪರಂಪರೆಯಲ್ಲಿ ಬಂದವರು ಎಂದರ್ಥ. ಉಪದೇಶದಲ್ಲಿರುವ ಅನುನಾಸಿಕವನ್ನು, 'ಇತ್' ಆಗಿ ಪರಿಗಣಿಸಲ್ಪಡುವದಕ್ಕೆ ಪ್ರಯೋಜನವನ್ನು ಹೇಳುತ್ತಾರೆ.

'ಲಣ್' ಸೂತ್ರದಲ್ಲಿ, 'ಲ್' ಕಾರೋತ್ತರವರ್ತಿ 'ಅ' ಕಾರವು ಅನುನಾಸಿಕವಾಗಿ ಇರುವದರಿಂದ, ಅದಕ್ಕೆ ಪಾಣಿನಿಯವರು 'ಇತ್'ಸಂಜ್ಞೆಯನ್ನು ವಿಧಿಸುತ್ತಾರೆ. 'ಇತ್' ಸಂಜ್ಞೆಯನ್ನು ವಿಧಿಸಿದ್ದರಿಂದ ಈ 'ಅ' ಕಾರವನ್ನು 'ಇತ್' ಆಗಿ ಮಾಡಿಕೊಂಡು ಪ್ರತ್ಯಾಹಾರವನ್ನು ತಯಾರಿಸಬೇಕು. ಇದೇ 'ಇತ್' ನ ಪ್ರಯೋಜನ. ಆದ್ದರಿಂದ ಈ 'ಇತ್'(ಅ)ನ ಸಹಾಯದಿಂದ ಪಾಣಿನಿಯವರು 'ರ' ಎಂಬ ಪ್ರತ್ಯಾಹಾರವನ್ನು ಮಾಡಿದ್ದಾರೆ. 'ರ' ಪ್ರತ್ಯಾಹಾರವನ್ನು ಹೇಳುವ ಸೂತ್ರವೆಂದರೆ, ಮುಂದಿನ ಸೂತ್ರವಾದ **"ಉರಣ್ ರಪರಃ** (1.1.51)**"** ಎಂಬ ಸೂತ್ರ, **ರಪರಃ** ಎಂದರೆ **'ರ' ಪ್ರತ್ಯಾಹಾರಪರಃ** ಎಂದು ಅರ್ಥ. ಅಂದರೆ ('ರ' ಎಂಬ ಪ್ರತ್ಯಾಹಾರದಲ್ಲಿ 'ರ್' ಎಂಬುದು ಆದ್ಯಕ್ಷರ. ಇದು (ಹ್,ಯ್,ವ್,ರ್,ಟ್)ನಲ್ಲಿರುವ ರೇಫವೆಂದು ತಿಳಿಯಬೇಕು). 'ರ್' ಕಾರೋತ್ತರವರ್ತಿ ಅನುನಾಸಿಕ 'ಅ' ಕಾರವೇ ಅನ್ತ್ಯವಾದ 'ಇತ್'. ಈ 'ಅನುನಾಸಿಕ ಅ'–ಕಾರವು **"ಲಣ್"** ಸೂತ್ರದಲ್ಲಿರುವ 'ಲ್'ಕಾರೋತ್ತರವರ್ತಿ ಅ–ಕಾರವು. ಆದ್ಯಕ್ಷರವಾದ ರೇಫವನ್ನು ಮತ್ತು 'ಅ' ಕಾರವನ್ನು ಸೇರಿಸಿದರೆ 'ರ' ಎಂಬ ಪ್ರತ್ಯಾಹಾರ ಸಿಗುತ್ತದೆ. ಈ ಪ್ರತ್ಯಾಹಾರದಲ್ಲಿ 'ರೇಫ' ಮತ್ತು 'ಲ' ಕಾರಗಳು ಮಾತ್ರ ಗೃಹೀತವಾಗುತ್ತದೆ. (ರೇಫೋತ್ತರ 'ಟ್' ಇತ್ತಾಗಿರೋಣದ್ದರಿಂದ ಅದು **"ತಸ್ಯ ಲೋಪಃ"** (1.3.9) ಎಂಬ ಸೂತ್ರದಿಂದ ಲೋಪ ಹೊಂದುತ್ತದೆ. ಮತ್ತು ಅನುನಾಸಿಕವಾದ 'ಅ' ಕಾರವು 'ಇತ್' ಆಗಿರುವದರಿಂದ ಅದೂ ಲೋಪಹೊಂದುತ್ತದೆ. ಆದ್ದರಿಂದ 'ರ್' ಮತ್ತು 'ಲ್' ಮಾತ್ರ ಉಳಿಯುತ್ತವೆ. ಈ ರೀತಿ 'ರ' ಪ್ರತ್ಯಾಹಾರವನ್ನು ಮುಂದಿನ ಸೂತ್ರದಲ್ಲಿ ಉಪಯೋಗಿಸಿದ್ದಾರೆ.

**ರ– ಪ್ರತ್ಯಾಹಾರದ ವಿವರಣೆ :–**

ಮಾಹೇಶ್ವರ ಸೂತ್ರಗಳಲ್ಲಿ ಒಂದಾದ 'ಹಯವರಟ್' ಸೂತ್ರದ ನಂತರ ಬರುವ 'ಲಣ್' ಸೂತ್ರದಲ್ಲಿ ಲ್+ಅ+ಣ್ ಇದ್ದು, ಇದರಲ್ಲಿ ಅನುನಾಸಿಕವಾದ 'ಅ' ಮತ್ತು 'ಣ್' ಎರಡೂ 'ಇತ್' ಗಳಾಗಿವೆ. ಉಳಿದದ್ದು 'ಲ್' ಮಾತ್ರ, 'ಹಯವರಟ್' ದಲ್ಲಿ ರ್+ಅ ಎಂಬಲ್ಲಿ 'ಅ' ಕಾರವು ಉಚ್ಚಾರಣಾರ್ಥ. ಈ 'ರ್' ಮತ್ತು 'ಲಣ್' ದಲ್ಲಿ 'ಇತ್' ಆಗಿರುವ ಅನುನಾಸಿಕ 'ಅ' ಕಾರ ಎರಡನ್ನೂ ಸೇರಿಸಿದಾಗ (ರ್+ಅ) 'ರ' ಎಂಬ ಪ್ರತ್ಯಾಹಾರವು ದೊರಕುತ್ತದೆ. ಈ 'ರ' ಪ್ರತ್ಯಾಹಾರವು 'ರ್' ಮತ್ತು 'ಲ್' ಗಳಿಗೆ ಸಂಜ್ಞೆಯಾಗುತ್ತದೆ. ಹಯವರಟ್ ಎಂಬ ಸೂತ್ರದಲ್ಲಿಯ 'ಟ್' ಎಂಬುದು

'ಇತ್'. **"ಪ್ರತ್ಯಾಹಾರೇಷು ಇತಾಂ ನ ಗ್ರಹಣಂ"** ಎಂಬ ಭಟ್ಟೋಜಿಯವರ ವಾಕ್ಯದ ಪ್ರಕಾರ ಪ್ರತ್ಯಾಹಾರಗಳಲ್ಲಿ ಬರುವ 'ಇತ್' ವರ್ಣಗಳನ್ನು ಗ್ರಹಿಸಬಾರದು.

**(ಋ. ಲೃ, ವರ್ಣಗಳ ಸ್ಥಾನದಲ್ಲಿ, ಆದೇಶವಾಗಿ ಬರುವ ಸ್ವರ ನಿಯಮವನ್ನು ಹೇಳುವ ಸೂತ್ರ).**

**ಸೂತ್ರ - 29: ಉರಣ್ ರಪರಃ (1.1.51)**

ವೃತ್ತಿ -'ಋ' ಇತಿ ತ್ರಿಂಶತಃ ಸಂಜ್ಞಾ ಇತ್ಯುಕ್ತಮ್। ತತ್-ಸ್ಥಾನೇ 0ಯಃ ಅಣ್ ಸಃ ರಪರಃ ಸನ್ನೇವ ಪ್ರವರ್ತತೇ। ಕೃಷ್ಣರ್ಧಿಃ। ತವಲ್ಕಾರಃ।

ಪ.ಛೇ.- ಉಃ (ಷಷ್ಠೀ), ಅಣ್, ರಪರಃ ।

ಅ.ವೃ. - "ಷಷ್ಠೀ ಸ್ಥಾನೇ ಯೋಗಾ" (1.1.49) ಎಂಬ ಸೂತ್ರದಿಂದ 'ಸ್ಥಾನೇ' ಎಂಬುದು ಅನುವೃತ್ತವಾಗುತ್ತದೆ. ಮತ್ತು **"ಸ್ಥಾನೇಽನ್ತರತಮಃ"** (1.1.50) ಎಂಬ ಸೂತ್ರದಿಂದ, 'ಸ್ಥಾನೇ' ಎಂಬುದು ಅನುವೃತ್ತವಾಗುತ್ತದೆ. ಈ ಎರಡನೆಯ ಸ್ಥಾನೇ ಎಂಬ ಶಬ್ದವು, ಪ್ರಥಮಾ ವಿಭಕ್ತಿಯಲ್ಲಿ ಸ್ಥಾನಂ ಎಂದು ವಿಪರಿಣಾಮ ಹೊಂದಿ, 'ಅಣ್' (ಅ,ಇ,ಉ) ಎಂಬುದಕ್ಕೆ ವಿಶೇಷಣವಾಗುತ್ತದೆ.

ಅರ್ಥ - ಇದು ಪರಿಭಾಷಾ ಸೂತ್ರ. 'ಋ' ಕಾರದ ಸ್ಥಾನದಲ್ಲಿ ಯಾವ 'ಅಣ್' (ಅ,ಇ,ಉ) ಬರುತ್ತದೆಯೋ ಅದು 'ರ್' ಪರವಾಗಿಯೋ, 'ಲ್' ಪರವಾಗಿಯೋ ಬರುತ್ತದೆ. 'ರ' ಎಂಬುದು ಪ್ರತ್ಯಾಹಾರವಾದದ್ದರಿಂದ, 'ರ್' ಮತ್ತು 'ಲ್' ಕಾರಗಳು ಗೃಹೀತವಾಗುತ್ತವೆ. [**'ರ್' 'ಲೃ' ವರ್ಣಯೋಃ ಮಿಥಃ ಸಾವರ್ಣ್ಯಂ ವಾಚ್ಯಮ್"** ಎಂಬ ವಾರ್ತಿಕದಿಂದ 'ರ್' 'ಲೃ' ವರ್ಣಗಳಿಗೆ, 30 ಭೇದಗಳು ಪರಸ್ಪರ ಸವರ್ಣಗಳೆಂದು ತಿಳಿಯಬೇಕು. ಋ ಕಾರಕ್ಕೆ 18 ಸ್ಥಾನ ಮತ್ತು ಲೃ ಕಾರಕ್ಕೆ 12 ಸ್ಥಾನಗಳು ಸೇರಿ 30 ಸ್ಥಾನಗಳು ಪರಸ್ಪರ ಸವರ್ಣಗಳಾಗುತ್ತವೆ]. **ರಃ ಪರಃ ಯಸ್ಮಾತ್ ಸಃ ರಪರಃ** (ರ **ಪ್ರತ್ಯಾಹಾರ-ಪರಃ**) ಅಂದರೆ, 'ರ್' ವನ್ನೋ ಅಥವಾ 'ಲ್' ಕಾರವನ್ನೋ ಪರದಲ್ಲಿ ಉಳ್ಳದ್ದಾಗಿ ಬರುತ್ತದೆ ಎಂದರ್ಥ. ಇಲ್ಲಿ 'ಅಣ್' ಎಂದರೆ ಪೂರ್ವ 'ಣ್' ಕಾರದಿಂದ ಮಾಡಿದ ಪ್ರತ್ಯಾಹಾರ. ಇದರಲ್ಲಿ ಅ,ಇ,ಉ ಮಾತ್ರ ಇರುತ್ತವೆ. [ಏ, ಐ, ಮೊದಲಾದವು ಪರ 'ಣ್' ಕಾರದ ಪ್ರತ್ಯಾಹಾರದಲ್ಲಿರುವುದರಿಂದ ಅವು ಗೃಹೀತವಾಗುವದಿಲ್ಲವೆಂದು ತಿಳಿಯಬೇಕು. (ಪೂರ್ವೇಣೈವ 'ಅಣ್' ಗ್ರಹಾಃ ಸರ್ವೇ).]

ಇಲ್ಲಿ, 'ಅಣ್' ನಲ್ಲಿ 'ಅ' ಕಾರ ಮಾತ್ರ ಗುಣಾಕ್ಷರವಾಗಿದ್ದು, 'ಇ' ಮತ್ತು'ಉ' ಕಾರಗಳು ಗುಣಾಕ್ಷರಗಳಲ್ಲ. ಇಲ್ಲಿ ಗುಣಾಕ್ಷರವಾದ 'ಅ' ಕಾರಕ್ಕೆ ಮಾತ್ರ ಪ್ರಸಕ್ತಿ ಇರುತ್ತದೆ. ಮತ್ತು 'ಅಣ್' ನಲ್ಲಿರುವ 'ಇ'ಕಾರ 'ಉ' ಕಾರಗಳಿಗೂ, ರ-ಪರತ್ವ ಮತ್ತು ಲ-ಪರತ್ವಗಳು ಬೇರೆ ಸಂದರ್ಭಗಳಲ್ಲಿ ಬರುತ್ತವೆಯಾದರೂ ಪಾಣಿನಿಯವರು ಇಲ್ಲಿ ಸೇರಿಸಿ ಹೇಳಿದ್ದಾರೆ. ಇದು ಅಪ್ರಾಸಜ್ಗಿಕವೆಂದು ಹೇಳುವ ಅಧಿಕಾರ ನಮಗಿಲ್ಲ.

ಉದಾ_ 1: ಕೃಷ್ಣ + ಋದ್ಧಿಃ, ಎಂಬ ಉದಾಹರಣೆಯಲ್ಲಿ 'ಣ್' ಕಾರೋತ್ತರವರ್ತಿ 'ಅ' ಕಾರ ಮತ್ತು 'ಋ' ಕಾರಗಳ ಸ್ಥಾನಗಳಲ್ಲಿ, ಆದೇಶವಾಗಿ ಬರುವ, ಗುಣಾಕ್ಷರವಾದ

'ಅ' ಕಾರವು 'ಋ' ಪರವಾಗಿ ಬಂದು ಕೃಷ್ಣ + ಅರ್ + ಧ್ಧಿಃ = ಕೃಷ್ಣರ್ಧ್ಧಿಃ ಎಂದು ರೂಪವಾಗುತ್ತದೆ. ಇದೇ ರೀತಿಯಲ್ಲಿ–

ಉದಾ–2: ತವ + ಲೃಕಾರ ಎಂಬಲ್ಲಿ, 'ವ್' ಕಾರೋತ್ತರವರ್ತಿ 'ಅ' ಕಾರ ಮತ್ತು 'ಲೃ'ಕಾರಗಳ ಸ್ಥಾನಗಳಲ್ಲಿ, ಆದೇಶವಾಗಿ ಬರುವ ಗುಣಾಕ್ಷರವಾದ 'ಅ' ಕಾರವು 'ಲ್' ಪರವಾಗಿ ಬಂದು, ತವ್ + ಅಲ್ + ಕಾರಃ = ತವಲ್ಕಾರಃ ಎಂದು ರೂಪವಾಗುತ್ತದೆ.

ಇದರಂತೆ 'ಇ' ಕಾರ 'ಉ' ಕಾರಗಳಿಗೂ 'ರ'ಪರತ್ವ ಮತ್ತು 'ಲ್'ಪರತ್ವ (ಇರ್, ಇಲ್, ಉರ್, ಉಲ್) ಬರುವ ಉದಾಹರಣೆಗಳನ್ನು ಮುಂದೆ ಬರುವ ಸಂದರ್ಭಗಳಲ್ಲಿ, ಹೇಳಲಾಗುವದು. (ಸೂತ್ರ 209 ನೋಡಿ).

**(ಪದಾನ್ತ 'ಯ್' ಕಾರ 'ವ್' ಕಾರಗಳಗೆ ಲೋಪ ಹೇಳುವ ಸೂತ್ರ)**

**ಸೂತ್ರ – 30: ಲೋಪಃ ಶಾಕಲ್ಯಸ್ಯ (8.3.19)**

ವೃತ್ತಿ –ಅ–ವರ್ಣಪೂರ್ವ0ಯೋಃ ಪದಾನ್ತ0ಯೋಃ 0ಯವಯೋಃ ಲೋಪಃ ವಾ ಅಶಿ ಪರೇ।

ಅ.ವ್ಯ. – "ಭೋ–ಭಗೋ–ಅಘೋऽಪೂರ್ವಸ್ಯ ಯೋऽಶಿ" (8.3.17) ಎಂಬ ಸೂತ್ರದಿಂದ, 'ಅ–ಪೂರ್ವಸ್ಯ' ಮತ್ತು 'ಅಶಿ' ಎಂಬ ಪದಗಳು ಅನುವೃತ್ತವಾಗುತ್ತವೆ. ಹಾಗೆಯೇ **"ವ್ಯೋಃ ಲಘುಪ್ರಯತ್ನತರಃ ಶಾಕಟಾಯನಸ್ಯ"** (8.3.18) ಎಂಬ ಸೂತ್ರದಿಂದ, **'ವ್ಯೋಃ'** ಎಂಬುದು ಅನುವೃತ್ತವಾಗುತ್ತದೆ. **"ಪದಸ್ಯ"** (8.1.16) ಎಂಬ ಅಧಿಕಾರ ಸೂತ್ರವು ಪ್ರವೃತ್ತವಾಗುತ್ತದೆ.

ಅರ್ಥ – **'ಅಶ್'** (ಎಲ್ಲ ಸ್ವರಗಳು, ವರ್ಗೀಯ ತೃತೀಯ, ಚತುರ್ಥ, ಪಞ್ಚಮ ವರ್ಣಗಳು ಹಾಗೂ ಹ್,ಯ್,ವ್,ರ್,ಲ್ ಗಳು) ವರ್ಣವು ಪರದಲ್ಲಿದ್ದಾಗ, 'ಅ'ಕಾರ ಅಥವಾ 'ಆ' ಕಾರವನ್ನು ಪೂರ್ವದಲ್ಲಿ ಉಳ್ಳ ಮತ್ತು ಪದಾನ್ತ್ಯದಲ್ಲಿರುವ 'ಯ್' ಕಾರ 'ವ್'ಅಕಾರಗಳಿಗೆ, ವಿಕಲ್ಪವಾಗಿ ಲೋಪ ಬರುತ್ತದೆ.

ಶಾಕಲ್ಯರ ಮತದಲ್ಲಿ, ಈ ಲೋಪವನ್ನು ಹೇಳಿರುವದರಿಂದ, ವಿಕಲ್ಪವಾಗಿ ಬರುತ್ತದೆ ಎಂದು ತಿಳಿಯಬೇಕು. (ಶಾಕಲ್ಯ ಗ್ರಹಣಂ ವಿಭಾಷಾರ್ಥಮ್ – ಕಾಶಿಕಾ) ಪಾಣಿನಿ ಮುನಿಗಳು ಎಲ್ಲೆಲ್ಲಿ, ಬೇರೆ ಆಚಾರ್ಯರ ಹೆಸರನ್ನು, ಗ್ರಹಣ ಮಾಡಿದ್ದಾರೋ, ಅಲ್ಲೆಲ್ಲ ವಿಕಲ್ಪ ರೂಪವನ್ನು ಗ್ರಹಣ ಮಾಡಿದ್ದಾರೆಂದು ತಿಳಿಯಬೇಕು.

ಹರ್+ಅಯ್+ಇಹ>ಹರಯ್+ಇಹ=ಹರಯಿಹ, ಮತ್ತು 1) ಹರೇ+ಇಹ ಮತ್ತು 2) ವಿಷ್ಣೋ+ಇಹ–ಈ ಉದಾಹರಣೆಗಳಲ್ಲಿ, **"ಏಚೋऽಯವಾಯಾವಃ"** (6.1.78) ಎಂಬ ಸೂತ್ರದಿಂದ, **'ಅಯ್'** ಮತ್ತು **'ಅವ್'** ಆದೇಶಗಳು ಕ್ರಮವಾಗಿ ಬರುತ್ತವೆ.

ವಿಷ್ಣ್+ಅವ್+ಇಹ>ವಿಷ್ಣವ್+ಇಹ=ವಿಷ್ಣವಿಹ ಎಂದು ರೂಪಗಳಾಗುತ್ತವೆ. ಈ ಉದಾಹರಣೆಗಳಲ್ಲಿ, ಪದಾನ್ತವಾದ 'ಯ್' ಕಾರ 'ವ್' ಕಾರಗಳ ಪೂರ್ವದಲ್ಲಿ, 'ಅ' ಕಾರವು ಪೂರ್ವದಲ್ಲಿದೆ. ಅವುಗಳ ಪರದಲ್ಲಿ, 'ಅಶ್' ವರ್ಣವಾದ 'ಇ' ಕಾರವು

ಪರದಲ್ಲಿದೆ. ಆದ್ದರಿಂದ ಈ ಸೂತ್ರದ ಪ್ರಕಾರ 'ಯ್' ಕಾರ 'ವ್' ಕಾರಗಳಿಗೆ ಲೋಪವಾಗಿ **'ಹರ ಇಹ' 'ವಿಷ್ಣ ಇಹ'** ಎಂಬ ರೂಪಗಳಾಗುತ್ತವೆ. ಲೋಪಾಭಾವ ಪಕ್ಷದ ರೂಪಗಳು– **ಹರಯಿಹ, ವಿಷ್ಣವಿಹ।**

ಸೂಚನೆ:– ಲೋಪ ಬಂದ ಪಕ್ಷದ ಉದಾಹರಣೆಗಳಲ್ಲಿ, ಗುಣ ಬರುವದಕ್ಕೆ ಅವಕಾಶವಿದ್ದಂತೆ ಕಂಡರೂ, **"ಆದ್ಗುಣಃ** (6.1.87)**"** ಎಂಬ ಸೂತ್ರವು ಸಪಾದ ಸಪ್ತಾಧ್ಯಾಯಿಯಲ್ಲಿಯೂ, ಮತ್ತು ಪ್ರಕೃತ ಸೂತ್ರವು ತ್ರಿಪಾದಿಯಲ್ಲಿಯೂ ಇರುವದರಿಂದ, "ಆದ್ಗುಣಃ (6.1.87)" ಎಂಬ ಸೂತ್ರಕ್ಕೆ, 'ಯ್' ಕಾರ 'ವ್' ಕಾರಗಳು ಲೋಪವಾದದ್ದೇ ಗೊತ್ತಾಗದಿರುವುದರಿಂದ ಗುಣವು ಆದೇಶವಾಗಿ ಬರುವದಿಲ್ಲ. ಇದನ್ನು ಮುಂದಿನ ಸೂತ್ರದಲ್ಲಿ ಸ್ಪಷ್ಟಪಡಿಸಲಾಗಿದೆ.

### (ಪೂರ್ವ ಶಾಸ್ತ್ರ (ಸೂತ್ರ)ವನ್ನು ಕುರಿತು ಪರ (ಸೂತ್ರ) ಶಾಸ್ತ್ರದ ಅಸಿದ್ಧತ್ವವನ್ನು ವಿಧಿಸುವ ಅಧಿಕಾರಸೂತ್ರ)

**ಸೂತ್ರ – 31: ಪೂರ್ವತ್ರಾಸಿದ್ಧಮ್ (8.2.1)**

ವೃತ್ತಿ:–ಸಪಾದ–ಸಪ್ತಾಧ್ಯಾಯೀಂ ಪ್ರತಿ ತ್ರಿಪಾದೀ ಅಸಿದ್ಧಾ; ತ್ರಿಪಾದ್ಯಾಂ ಅಪಿ ಪೂರ್ವಂ ಪ್ರತಿ ಪರಂ ಶಾಸ್ತ್ರಂ ಅಸಿದ್ಧಮ್। ಹರ ಇಹ । ಹರಯಿಹ । ವಿಷ್ಣ ಇಹ । ವಿಷ್ಣವಿಹ ।

ಪ.ಛೇ.– ಪೂರ್ವತ್ರ, ಅಸಿದ್ಧಮ್।

ಉಪದೇಶದಲ್ಲಿರುವ ಅನುನಾಸಿಕವನ್ನು, 'ಇತ್' ಆಗಿ ಪರಿಗಣಿಸಲ್ಪಡುವದಕ್ಕೆ ಪ್ರಯೋಜನವನ್ನು ಹೇಳುತ್ತಾರೆ.

ವಿವರಣೆ – [ಇದು ಅಧಿಕಾರ ಸೂತ್ರ, ಪಾಣಿನಿಯವರು ತಮ್ಮ ಅಷ್ಟಾಧ್ಯಾಯೀ ಸೂತ್ರ ಪಾಠವೆಂಬ ಗ್ರಂಥವನ್ನು, ಸಪಾದಸಪ್ತಾಧ್ಯಾಯೀ ಮತ್ತು ತ್ರಿಪಾದೀ ಎಂದು ಎರಡು ಭಾಗಗಳನ್ನಾಗಿ ವಿಂಗಡಿಸಿದ್ದಾರೆ. ಪಾಣಿನಿ ಋಷಿಗಳು ಬರೆದಿರುವ ಅಷ್ಟಾಧ್ಯಾಯೀ ಸೂತ್ರ ಪಾಠದಲ್ಲಿ ಒಂದೊಂದು ಅಧ್ಯಾಯಕ್ಕೂ 4 ಪಾದಗಳು. ಏಳು ಅಧ್ಯಾಯಗಳಿಗೆ 28 ಪಾದಗಳು. 29 ನೆಯ ಪಾದವೆಂದರೆ, 8 ನೇ ಅಧ್ಯಾಯದ ಮೊದಲನೇ ಪಾದ. ಹೀಗಾಗಿ ಸಪಾದ ಸಪ್ತಾಧ್ಯಾಯೀ ಎಂದರೆ, 28 ಪಾದಗಳು ಮತ್ತು 8ನೇ ಅಧ್ಯಾಯದ ಮೊದಲನೆಯ ಪಾದವೆಂದರ್ಥ. (ಅಂದರೆ ಒಟ್ಟು 29 ಪಾದಗಳೆಂದು ಅರ್ಥ). ಇದು ಮೊದಲನೇ ಭಾಗ. ಇದನ್ನೇ **ಸಪಾದ ಸಪ್ತಾಧ್ಯಾಯೀ** ಎಂದು ಕರೆಯುತ್ತಾರೆ. ಇನ್ನು ಅಷ್ಟಾಧ್ಯಾಯಿಯ ಎರಡನೆ ಭಾಗ ವೆಂದರೆ, 8 ನೇ ಅಧ್ಯಾಯದ 2, 3, ಮತ್ತು 4ನೇಯ ಪಾದಗಳು. (30, 31 ಮತ್ತು 32ನೆಯ ಪಾದಗಳು). ಇದಕ್ಕೆ **ತ್ರಿಪಾದೀ** ಎಂದು ಹೆಸರು.]

ಅರ್ಥ–ಪೂರ್ವತ್ರ ಅಂದರೆ ಪೂರ್ವಶಾಸ್ತ್ರದ ಪ್ರವೃತ್ತಿಗೆ ಅವಕಾಶವಿದ್ದಾಗ ಎಂದರ್ಥ. ಅಸಿದ್ಧಂ ಎಂದರೆ ಪರಶಾಸ್ತ್ರವು (ಪರಸೂತ್ರವು) ಅಸಿದ್ಧವಾಗುವದು ಎಂದರ್ಥ. ಅಂದರೆ, ಈ ಪರಸೂತ್ರವಿರುವದೇ ಪೂರ್ವಸೂತ್ರಕ್ಕೆ ತಿಳಿಯದೇ ಇರೋಣವೆಂದರ್ಥ.

ಅಂದರೆ ಪೂರ್ವಸೂತ್ರದ ದೃಷ್ಟಿಯಲ್ಲಿ ಪರಸೂತ್ರವು ಇದ್ದರೂ ಇಲ್ಲವೆಂದೇ ಅರ್ಥ. ಇಲ್ಲಿ ಪೂರ್ವಸೂತ್ರವೆಂದರೆ, ಸಪಾದ ಸಪ್ತಾಧ್ಯಾಯಿಯಲ್ಲಿರುವ ಸೂತ್ರಗಳೆಂದರ್ಥ. ಪರಸೂತ್ರವೆಂದರೆ, ತ್ರಿಪಾದಿಯಲ್ಲಿರುವ ಸೂತ್ರಗಳು ಎಂದರ್ಥ.

ಪೂರ್ವತ್ರಾಸಿದ್ಧಮ್ (8.2.1) ಎಂಬುದು ಅಧಿಕಾರಸೂತ್ರವಾದದ್ದರಿಂದ, ತ್ರಿಪಾದಿಯಲ್ಲಿದ್ದರೂ, ಇದನ್ನು ಹೊರತುಪಡಿಸಿದ ಸೂತ್ರಗಳೇ ತ್ರಿಪಾದಿಯಲ್ಲಿ ಲೆಕ್ಕಕ್ಕೆ ಬರುವ ಪೂರ್ವ-ಪರ ಸೂತ್ರಗಳೆಂದು ತಿಳಿಯಬೇಕು.

ಮೊದಲನೆಯ ವಿಭಾಗದಲ್ಲಿರುವ (29 ಪಾದಗಳಲ್ಲಿರುವ) ಸೂತ್ರಗಳಿಗೆ ಅಂದರೆ ಸಪಾದಸಪ್ತಾಧ್ಯಾಯಿಗೆ, ಎರಡನೆಯ ವಿಭಾಗದಲ್ಲಿರುವ ಕೊನೆಯ 3 ಪಾದ (30, 31 ಮತ್ತು 32) ಗಳಲ್ಲಿ ಹೇಳಿರುವ ಸೂತ್ರಗಳ ಅಸ್ತಿತ್ವವೇ ಗೊತ್ತಿರುವದಿಲ್ಲ. ಆದ್ದರಿಂದ ಕೊನೆಯ 3 ಪಾದಗಳ ಸೂತ್ರಗಳ ಮೇಲೆಯಾಗಲೀ, ಅವುಗಳ ಕಾರ್ಯಗಳ ಮೇಲೆಯಾಗಲೀ, ಸಪಾದ ಸಪ್ತಾಧ್ಯಾಯಿಯ ಸೂತ್ರಗಳು ತಮ್ಮ ಅಧಿಕಾರವನ್ನು ಚಲಾಯಿಸುವದಿಲ್ಲ. **ಅಧಿಕಾರಸೂತ್ರವೆಂದರೆ, ತನ್ನ ಸ್ಥಾನವನ್ನು ಬಿಟ್ಟು (ತನ್ನಮೇಲೆ ಅಧಿಕಾರವನ್ನು ಚಲಾಯಿಸಿಕೊಳ್ಳದೇ) ಉತ್ತರವರ್ತೀ ಸೂತ್ರಗಳಜೊತೆಗೆ ಸೇರಿಕೊಂಡು ಅರ್ಥವನ್ನು ಬೋಧಿಸುವ ಸೂತ್ರವೆಂದರ್ಥ**. (ಅಧಿಕಾರತ್ವಮ್ ನಾಮ ಸ್ವಸ್ಥಲೇ ಲಕ್ಷ್ಯೋಪಯೋಗೀಬೋಧ-ಅಜನಕತ್ವೇ ಸತಿ ಸ್ವೋತ್ತರವರ್ತಿ ವಾಕ್ಯೈಕ-ವಾಕ್ಯತಾಪನ್ನತ್ವಮ್). ಅಧಿಕಾರೋ ನಾಮ ಪ್ರಸ್ತಾವಃ । (ಮಹಾಭಾಷ್ಯ)

"ಪೂರ್ವತ್ರಾಸಿದ್ಧಮ್ (8.2.1)" ಎಂಬ ಈ ಸೂತ್ರವು ತ್ರಿಪಾದಿಯಲ್ಲಿದ್ದರೂ, ಅಧಿಕಾರಸೂತ್ರವಾಗಿರೋಣದ್ದರಿಂದ, ಇದರ ಅನಂತರದ ಸೂತ್ರಗಳು, ಸಪಾದ-ಸಪ್ತಾದ್ಯಾಯಿಗೆ ಅಸಿದ್ಧವೆಂದು ತಿಳಿಯಬೇಕು. ಆದರೆ ಈಸೂತ್ರವು (ತ್ರಿಪಾದಿಯ ಮೊದಲನೆಯ ಸೂತ್ರವಾಗಿರೋಣದ್ದರಿಂದ) ಅಸಿದ್ಧಸೂತ್ರಗಳಲ್ಲಿ ಮೊದಲನೆಯದೆಂದು ಭಾವಿಸಬಾರದು. ಇದರ ಅನಂತರ ಸೂತ್ರವಾದ **"ನ ಲೋಪಃ ಸುಪ್-ಸ್ವರ-ಸಂಜ್ಞಾ-ತುಗ್-ವಿಧಿಷು ಕೃತಿ (8.2.2)"** ಎಂಬ ಸೂತ್ರದಿಂದ ಆರಂಭಿಸಿ ಅಷ್ಟಾಧ್ಯಾಯಿಯ ಕೊನೆಯ "ಅ ಅ" (8.4.68) ಎಂಬ ಸೂತ್ರದವರೆಗೆ ಇರುವ ಸೂತ್ರಗಳು ಸಪಾದ ಸಪ್ತಾಧ್ಯಾಯಿಗೆ ಅಸಿದ್ಧವಾದವುಗಳು ಎಂದು ತಿಳಿಯಬೇಕು.

ಇದೇ ರೀತಿಯಲ್ಲಿ ತ್ರಿಪಾದಿಯಲ್ಲಿರುವ ಒಂದೊಂದು ಪೂರ್ವಸೂತ್ರಕ್ಕೂ ಪರಸೂತ್ರವು ಅಸಿದ್ಧವೆಂದು ತಿಳಿಯಬೇಕು. ಅಸಿದ್ಧವೆಂದರೆ ಅಸ್ತಿತ್ವವಿಲ್ಲದಂತೆ ಭಾವಿಸಲ್ಪಡುವದು ಎಂದರ್ಥ. ಇಲ್ಲಿ ಪೂರ್ವತ್ರಾಸಿದ್ಧಮ್ (8.2.1) ಎಂಬ ಅಧಿಕಾರ ಸೂತ್ರವನ್ನು ಬಿಟ್ಟು, "ನ ಲೋಪಃ ಸುಪ್-ಸ್ವರ-ಸಂಜ್ಞಾ-ತುಗ್-ವಿಧಿಷು ಕೃತಿ(8.2.2)" ಎಂಬ ಸೂತ್ರದಿಂದ ಆರಂಭಿಸಿ ಅಷ್ಟಾಧ್ಯಾಯಿಯ ಕೊನೆಯ ಸೂತ್ರದವರೆಗೆ "ಅ ಅ" (8.4.68) ಇರುವ ಸೂತ್ರಗಳಲ್ಲಿ ಪೂರ್ವ ಸೂತ್ರಕ್ಕೆ ಪರಸೂತ್ರವು ಅಸಿದ್ಧವೆಂದು ಎಂದು ತಿಳಿಯಬೇಕು.

ಪ್ರಕೃತ **ಹರಯ್+ಇಹ,** ಮತ್ತು **ವಿಷ್ಣವ್+ಇಹ** ಎಂದಿರುವಾಗ, **ಲೋಪಃ ಶಾಕಲ್ಯಸ್ಯ** (8.3.19) ಎಂಬ ಸೂತ್ರದ ಪ್ರಕಾರ 'ಯ್' ಕಾರ 'ವ್' ಕಾರಗಳು ಲೋಪವಾಗುತ್ತವೆ. ಇದರಿಂದ **'ಹರ ಇಹ'** ಮತ್ತು 'ವಿಷ್ಣ ಇಹ' ಎಂದು ರೂಪಗಳಾಗುತ್ತವೆ. ಈಗ

"ಆದ್ಗುಣಃ (6.1.87)" ಎಂಬ ಸೂತ್ರಕ್ಕೆ ಗುಣವನ್ನು ವಿಧಿಸುವ ಅವಕಾಶ ಪ್ರಾಪ್ತವಾಗುತ್ತದೆ. ಆದರೆ 'ಯ್' ಕಾರ 'ವ್' ಕಾರಗಳಿಗೆ ಲೋಪವೇ ಆಗದಿದ್ದರೆ, 'ಅ' ಕಾರಕ್ಕೆ ಪರವಾಗಿ ಸ್ವರವರ್ಣವು ಪರವಾಗಿ ಇಲ್ಲದೇ ಇರುವುದರಿಂದ, ಗುಣವನ್ನು ವಿಧಿಸುವ ಪ್ರಸಂಗವೇ ಬರುವದಿಲ್ಲ. ಯಾಕೆಂದರೆ ಆ ಸೂತ್ರವು ("ಆದ್ಗುಣಃ" (6.1.87)) ಹರಯಿಹ, ವಿಷ್ಣವಿಹ ಎಂದೇ ಲೋಪವಿಲ್ಲದ 'ಯ್' ಕಾರ 'ವ್' ಕಾರಗಳನ್ನು ನೋಡುತ್ತಲೇ ಇರುತ್ತದೆ. (ಕಾರಣವೇನೆಂದರೆ, 'ಯ್' ಕಾರ 'ವ್' ಕಾರಗಳು ಲೋಪಃ ಶಾಕಲ್ಯಸ್ಯ ಎಂಬ ತ್ರಿಪಾದಿಸ್ಥ ಸೂತ್ರದಿಂದ ಲೋಪವಾಗಿವೆ). ಆದ್ದರಿಂದ "ಏಚೋಽಯವಾಯಾವಃ" (6.1.78)" ಎಂಬ ಸಪಾದ-ಸಪ್ತಾಧ್ಯಾಯಿಯ ಸೂತ್ರದ ಕಾರ್ಯವೇ "ಆದ್ಗುಣಃ (6.1.87) ಎಂಬ ಸೂತ್ರಕ್ಕೆ ಗೊತ್ತಾಗಿರುತ್ತದೆ. 'ಹರ ಇಹ' ಮತ್ತು 'ವಿಷ್ಣ ಇಹ' ಎಂಬ ರೂಪಗಳು ಮಾತ್ರ ಲೋಪ ಪಕ್ಷದಲ್ಲಿ (ಲೋಪಃ ಶಾಕಲ್ಯಸ್ಯ ಎಂಬ ಪಕ್ಷದಲ್ಲಿ) ಇರುವವು ಎಂದು ತಿಳಿಯಬೇಕು. ಲೋಪಾಭಾವ ಪಕ್ಷದಲ್ಲಿ, ಹರಯಿಹ, ವಿಷ್ಣವಿಹ ಎಂಬ ರೂಪಗಳು ಇರುತ್ತವೆ ಎಂಬುದನ್ನು ಈ ಮೊದಲೇ ಹೇಳಲಾಗಿದೆ.

ರಾಜನ್- ಶಬ್ದದ ತೃತೀಯಾ ಬಹುವಚನದ ರಾಜಭಿಃ ಎಂಬ ರೂಪವು ಕೆಳಗೆ ಹೇಳಿದ ರೀತಿಯಲ್ಲಿ ಸಿದ್ಧವಾಗುತ್ತದೆ.

ರಾಜನ್ + ಭಿಸ್ ಎಂದಿದ್ದಾಗ- **"ನ-ಲೋಪಃ ಪ್ರಾತಿಪದಿಕಾನ್ತಸ್ಯ"** (8.2.7) ಎಂಬ ಸೂತ್ರದಿಂದ ರಾಜನ್ ರೂಪದಲ್ಲಿರುವ ಕೊನೆಯ ನ್-ಕಾರವು ಲೋಪವಾಗಿ ರಾಜ ಎಂದು ಅ-ಕಾರಾನ್ತ-ಅಙ್ಗವಾದದ್ದಾಗಿರುತ್ತದೆ. ಆದುದರಿಂದ "ಅತೋ ಭಿಸ ಐಸ್" (7.1.9) ಎಂಬ ಸೂತ್ರದ ಪ್ರಾಪ್ತಿಗೆ ಅವಕಾಶವಿರುತ್ತದೆ. ಈ ಸೂತ್ರದ ಅರ್ಥವೇನೆಂದರೆ, ಅ-ಕಾರಾನ್ತ ಅಙ್ಗದ ಪರದಲ್ಲಿ ಇರುವ 'ಭಿಸ್' ಪ್ರತ್ಯಯಕ್ಕೆ 'ಐಸ್' ಆದೇಶವು ಬರುತ್ತದೆ ಎಂದು ಅರ್ಥ. "ಅತೋ ಭಿಸ ಐಸ್" (7.1.9) ಎಂಬ ಈ ಸೂತ್ರವು ಸಪಾದಿಯಲ್ಲಿದ್ದು, "ನ-ಲೋಪಃ ಪ್ರಾತಿಪದಿಕಾನ್ತಸ್ಯ" (8.2.7) ಎಂಬ ಸೂತ್ರವು ತ್ರಿಪಾದಿಯಲ್ಲಿದೆ. ಆದುದರಿಂದ, ತ್ರಿಪಾದಿಯಲ್ಲಿರುವ ಸೂತ್ರದಿಂದ ಉಂಟಾಗಿರುವ 'ನ್' ಲೋಪವು ಸಪಾದಿಯಲ್ಲಿರುವ ಸೂತ್ರದೃಷ್ಟಿಯಿಂದ ಅಸಿದ್ಧವಾಗಿರೋಣದ್ದರಿಂದ, ಅಂದರೆ- ಸಪಾದಿಯ ಸೂತ್ರದ ದೃಷ್ಟಿಯಿಂದ, ಅಲ್ಲಿ ನ್-ಕಾರವು ಇರೋಣದ್ದರಿಂದ, ಅಂದರೆ ಅಙ್ಗ ಅ-ಕಾರಾನ್ತವಾಗಿ ಇಲ್ಲದೇ ನ್-ಕಾರಾನ್ತವಾಗಿ ಇರೋಣದ್ದರಿಂದ, ಸಪಾದಿಯಲ್ಲಿರುವ ಸೂತ್ರದ ಪ್ರವೃತ್ತಿಯು ಆಗುವದಿಲ್ಲ ಮತ್ತು ರಾಜಭಿಃ ಎಂದೇ ಸರಿಯಾದ ರೂಪವು ಸಿದ್ಧವಾಗುತ್ತದೆ. ಇಲ್ಲದಿದ್ದರೆ, ರಾಜ + ಐಸ್ = ರಾಜೈಃ ಎಂದು ಅನಿಷ್ಟರೂಪವು ಸಿದ್ಧಿಸುತ್ತಿತ್ತು.

## (4) ವೃದ್ಧಿ ಸನ್ಧಿಃ

### (ವೃದ್ಧಿ ಸಂಜ್ಞೆಯನ್ನು ವಿಧಿಸುವ ಸೂತ್ರ)

**ಸೂತ್ರ - 32: ವೃದ್ಧಿರಾದೈಚ್** (1.1.1)

ವೃತ್ತಿ -ಆತ್, (ತ್)ಐಚ್ ಚ ವೃದ್ಧಿಸಂಜ್ಞಃ ಸ್ಯಾತ್।

ಪ.ಛೇ.– ವೃದ್ಧಿಃ, ಆತ್ (ತ್)ಐಚ್।

ಅರ್ಥ – ಈ ಸೂತ್ರವು ಅಷ್ಟಾಧ್ಯಾಯಿಯ ಮೊದಲನೆಯ ಸೂತ್ರವಾಗಿದೆ. ಗ್ರಂಥದ ಆರಂಭದಲ್ಲಿ, ಮಂಗಳಾಚರಣೆಯನ್ನು ಮಾಡಬೇಕೆಂಬ ಪದ್ಧತಿ ಇದೆ. ಪಾಣಿನಿಯವರು 'ವೃದ್ಧಿ' ಶಬ್ದವನ್ನೇ ಮಂಗಳಾರ್ಥವುಳ್ಳದ್ದೆಂದು ಭಾವಿಸಿ ಈ ಸೂತ್ರದಿಂದ ಗ್ರಂಥವನ್ನು ಆರಂಭಿಸಿದ್ದಾರೆ ಎಂದು ವಿದ್ವಾಂಸರ ಅಭಿಪ್ರಾಯ.

'ಆ' 'ಐ' ಮತ್ತು 'ಔ' ಈ ವರ್ಣಗಳಿಗೆ, ವೃದ್ಧಿ ಎಂಬ ಸಂಜ್ಞೆಯು ವಿಧಿಸಲಾಗಿದೆ. ಆದರೆ, ಈ ವರ್ಣಗಳು ದೀರ್ಘಸ್ವರೂಪದವೇ ಅಥವಾ ಪ್ಲುತ ಸ್ವರೂಪದವೇ ಎಂಬ ಸಂಶಯವನ್ನು ನಿವಾರಿಸುವದಕ್ಕಾಗಿ ಪಾಣಿನಿಯುವರು ತಪರಕರಣವನ್ನು (ಆ+ತ್+ಐಚ್)ಮಾಡಿದ್ದಾರೆ. ಇಲ್ಲಿ 'ತ್' ಕಾರವನ್ನು 'ಅ' ಕಾರದ ಜೊತೆಗೂ ಮತ್ತು ಐಚ್ ( ಐ, ಔ) ಗಳ ಜೊತೆಗೂ ಸೇರಿಸಿಕೊಳ್ಳಬೇಕು. ಇಲ್ಲಿ 'ಆತ್' ಎಂದರೆ, "ತಃ ಪರಃ ಯಸ್ಮಾತ್ ಸಃ" ಎಂಬ ಬಹುವ್ರೀಹಿ ಸಮಾಸದಿಂದ ದೀರ್ಘ 'ಅ' ಕಾರ ಎಂದರೆ 'ಆ' ಕಾರವನ್ನು ಗ್ರಹಿಸಬೇಕು. ಹಾಗೆಯೇ 'ತ್' ಕಾರವನ್ನು 'ಐ' 'ಔ' ಗಳಿಗೆ ಸೇರಿಸಬೇಕು. ತ್+ಐ, ತ್+ಔ ಎಂಬುದನ್ನು (ತಾತ್ ಪರಃ = ತಾತ್ಪರ ಎಂಬ ತತ್ಪುರುಷ ಸಮಾಸದಿಂದ) ದೀರ್ಘ 'ಐ' ಕಾರ ಮತ್ತು ದೀರ್ಘ 'ಔ' ಕಾರಗಳೆಂದು ಗ್ರಹಿಸಬೇಕೇ ವಿನಃ ಪ್ಲುತಗಳನ್ನಲ್ಲ. ಇಲ್ಲಿ ಮೇಲೆ ಹೇಳಿದ ಆ, ಐ, ಔ ವರ್ಣಗಳೇ ಗೃಹೀತವಾಗುತ್ತವೆಯೇ ಹೊರತು ಅವುಗಳ ಸವರ್ಣಗಳಲ್ಲ. ಯಾಕೆಂದರೆ ಇವು ವಿಧೀಯಮಾನವಾಗಿವೆ. ಸವರ್ಣಗಳು ಗೃಹೀತವಾಗಬೇಕಾದರೆ, ಅವು ಅವಿಧೀಯಮಾನ 'ಅಣ್' ಆಗಿರಬೇಕು. ಇದು **"ಅಣುದಿತ್ ಸವರ್ಣಸ್ಯ ಚಾऽಪ್ರತ್ಯಯಃ** (1.1.69)" ಎಂಬ ಸೂತ್ರದಲ್ಲಿ ಸ್ಪಷ್ಟವಾಗುವದು.

**(ವೃದ್ಧಿ ಸಂಧಿಯನ್ನು ವಿಧಾನ ಮಾಡುವ ಸೂತ್ರ)**

**ಸೂತ್ರ – 33: ವೃದ್ಧಿರೇಚಿ (6.1.88)**

ವೃತ್ತಿ –ಆತ್ ಏಚಿ ಪರೇ ವೃದ್ಧಿಃ ಏಕಾದೇಶಃ ಸ್ಯಾತ್। ಗುಣಾಪವಾದಃ। ಕೃಷ್ಣೈಕತ್ವಮ್। ಗಂಗೌಘಃ। ದೇವೈಶ್ವರ್ಯಮ್। ಕೃಷ್ಣೌತ್ಕಣ್ಠ್ಯಮ್।

ಪ.ಛೇ.– ವೃದ್ಧಿಃ, ಏಚಿ।

ಅ.ವೃ. – "ಆದ್ಗುಣಃ" (6.1.87)ಎಂಬ ಸೂತ್ರದಿಂದ 'ಆತ್'(ಅ–ವರ್ಣಾತ್) ಎಂಬ ಪದವು ಅನುವೃತವಾಗುತ್ತದೆ. ಇದು ತಪರಕರಣವಲ್ಲ ಅ– ಕಾರದ ಪಞ್ಚಮ್ಯನ್ತ ರೂಪವು. ಇದರ 18 ಭೇದಗಳೂ ಗೃಹೀತವಾಗುತ್ತವೆ.

ಅರ್ಥ–'ಏಚ್' ಪ್ರತ್ಯಾಹಾರದಲ್ಲಿ, ಏ,ಓ,ಐ,ಔ ವರ್ಣಗಳು ಇವೆ. "ಅ– ವರ್ಣದನಂತರ 'ಏಚ್' (ಏ,ಓ,ಐ,ಔ) ವರ್ಣಗಳು ಅವ್ಯವಹಿತವಾಗಿ ಪರದಲ್ಲಿದ್ದಾಗ (ಏಚಿ ಪರೇ), **"ತಸ್ಮಿನ್ನಿತಿ ನಿರ್ದಿಷ್ಟೇ ಪೂರ್ವಸ್ಯ"** (1.1.66) ಎಂಬ ಪರಿಭಾಷೆಯಿಂದ, ಅವುಗಳಿಗೆ ಅವ್ಯವಹಿತವಾಗಿ ಪೂರ್ವ–ಪರ ವರ್ಣಗಳ ಸ್ಥಾನದಲ್ಲಿ, **"ಏಕಃಪೂರ್ವಪರಯೋಃ"** (6.1.84) ಎಂಬ ಅಧಿಕಾರಸೂತ್ರದಿಂದ ವೃದ್ಧ್ಯಕ್ಷರವು (ಆ,

ಐ, ಔ ಗಳಲ್ಲಿ ಸ್ಥಾನಸಾಮ್ಯವುಳ್ಳ ಯಾವದಾದರೂ ಒಂದು) ಏಕಾದೇಶವಾಗಿ ಬರುತ್ತದೆ. ಇದು ಗುಣ ಸನ್ಧಿಗೆ ಅಪವಾದವಾಗಿದೆ.

[ವಿವರಣೆ: ವಿಧಿಸುವ ಶಾಸ್ತ್ರವು, ಸಾಮಾನ್ಯ ಶಾಸ್ತ್ರ, ಅಪವಾದ ಶಾಸ್ತ್ರವೆಂದು ಎರಡು ವಿಧವಾಗಿರುತ್ತದೆ. ಸಾಮಾನ್ಯ ಶಾಸ್ತ್ರಕ್ಕೆ, ಹೆಚ್ಚು ಲಕ್ಷ್ಯಗಳಲ್ಲಿ ಅವಕಾಶವಿರುತ್ತದೆ. ಅಪವಾದಶಾಸ್ತ್ರಕ್ಕಾದರೋ ಕೆಲವೇ ಲಕ್ಷ್ಯಗಳಲ್ಲಿ ಅವಕಾಶವಿರುತ್ತದೆ. ಇದನ್ನೇ ವಿಶೇಷ ಶಾಸ್ತ್ರವೆಂದು ಕರೆಯುತ್ತಾರೆ. ಅಪವಾದ ಶಾಸ್ತ್ರಕ್ಕೆ ಅವಕಾಶವಿರುವ ಸಂದರ್ಭಗಳಲ್ಲಿ, ಸಾಮಾನ್ಯ ಶಾಸ್ತ್ರವು ಪ್ರವರ್ತಿಸಲು ಅವಕಾಶವಿರುತ್ತದೆ. ಸಾಮಾನ್ಯ ಶಾಸ್ತ್ರಗಳಿಗೆ ಅವಕಾಶವಿರುವ ಜಾಗದಲ್ಲೆಲ್ಲ ಅಪವಾದ ಶಾಸ್ತ್ರಕ್ಕೆ ಅವಕಾಶವೇ ಇರುವದಿಲ್ಲ. ಈ ಕಾರಣದಿಂದ **ನಿರವಕಾಶೋ ವಿಧಿರಪವಾದಃ ಬಲೀಯಾನ್** ಎಂಬ ನಿಯಮದಿಂದ ಅಪವಾದಶಾಸ್ತ್ರವು ಸಾಮಾನ್ಯಶಾಸ್ತ್ರಕ್ಕಿಂತ ಬಲಿಷ್ಠವಾದದ್ದು ಎಂದು ನಿರ್ಣಯಿಸಲಾಗಿದೆ. ಪ್ರಕೃತದಲ್ಲಿ, ಗುಣಶಾಸ್ತ್ರಕ್ಕಿಂತ ವೃದ್ಧಿಶಾಸ್ತ್ರವು ನಿರವಕಾಶವಾದದ್ದರಿಂದ, ಅದು ಬಲಿಷ್ಠವಾಗಿದೆ].

[ಇದೇ ಅಭಿಪ್ರಾಯವನ್ನೇ, ಪಂ॥ ಜಿ. ವಿಷ್ಣುಮೂರ್ತಿಭಟ್‌ರವರು ಈ ರೀತಿ ವಿವರಿಸಿದ್ದಾರೆ – ಈ ಸೂತ್ರವು ಗುಣಕ್ಕೆ ಅಪವಾದ. "ಯೇನ ನ ಅಪ್ರಾಪ್ತೇ, ಯೋ ವಿಧಿರಾರಭ್ಯತೇ ಸ ತಸ್ಯ ಅಪವಾದಃ" ಎಂದು ಅಪವಾದದ ಲಕ್ಷಣ. ಒಂದು ಸೂತ್ರವು ಅವಶ್ಯ ಬರುತ್ತಿರುವಾಗ ಅಲ್ಲಿಯೇ ಇನ್ನೊಂದನ್ನು ಹೇಳುವದಾದರೆ, ಹಾಗೆ ಹೇಳುವ ಸೂತ್ರವು ಹಿಂದಿನ ಸೂತ್ರಕ್ಕೆ ಅಪವಾದ. ಪ್ರಕೃತ 'ಅ' ಕಾರಕ್ಕೆ 'ಏಚ್' ಪರವಾದಾಗ, 'ಏಚ್' ಕೂಡ, 'ಅಚ್' ಆದದ್ದರಿಂದ, ಗುಣಬರಬೇಕು. 'ಅಚ್' ಸಾಮಾನ್ಯ. ಆದರೆ, 'ಏಚ್' ವಿಶೇಷ. ಹೀಗೆ ಗುಣವು ಪ್ರಾಪ್ತವಾದರೆ, ಅದಕ್ಕೆ ಅಪವಾದವಾಗಿ ವೃದ್ಧಿಯು ಹೇಳಿದೆ. ವೃದ್ಧಿಯು ನಿರವಕಾಶವಾದದ್ದರಿಂದ, ಅಪವಾದ. ಗುಣವಾದರೋ 'ಏಚ್' ನಿಮಿತ್ತವನ್ನು ಬಿಟ್ಟರೆ, ಇ,ಉ,ಋ,ಲೃ ಪರವಾದಾಗ, ಬರುತ್ತದೆ. ಆದದ್ದರಿಂದ ಅದು ಸಾಮಾನ್ಯ ಸೂತ್ರ. ಆಗ ಸಾಮಾನ್ಯವನ್ನು ಬಾಧಿಸಿ, ವಿಶೇಷವೇ ಬರುತ್ತದೆ].

ಉದಾಹರಣೆಗಳು –1. ಕೃಷ್ಣೈಕತ್ವಮ್, 2. ಗಂಗೌಘಃ, 3. ದೇವೈಶ್ವರ್ಯಮ್, 4. ಕೃಷ್ಣೌತ್ಕಣ್ಠ್ಯಮ್। ಮೊದಲನೆಯ ಉದಾಹರಣೆಯಲ್ಲಿ, ಕೃಷ್ಣ + ಏಕತ್ವಮ್ ಎಂದಿದ್ದಾಗ, 'ಅ' ಕಾರದನಂತರ, 'ಏಚ್' ಆದ 'ಏ'ಕಾರವು, ಪರದಲ್ಲಿರೋಣದ್ದರಿಂದ, 'ಅ' ಕಾರ 'ಏ'ಕಾರಗಳ ಸ್ಥಾನದಲ್ಲಿ, ಐ-ಕಾರವು ಏಕಾದೇಶವಾಗಿ ಬರುತ್ತದೆ. (ಅಕುಹವಿಸರ್ಜನೀಯಾನಾಂ ಕಣ್ಠಃ, ಮತ್ತು ಏದೈತೋಃ ಕಣ್ಠತಾಲು ಎಂದಿರುವುದರಿಂದ ಅ-ಕಾರ, ಏ-ಕಾರಗಳಿಗೆ ವೃಧ್ಯಕ್ಷರವಾದ ಐ-ಕಾರವೇ ಸ್ಥಾನಸಾಮ್ಯವನ್ನು ಹೊಂದಿದ್ದರಿಂದ ಅದೇ ಆದೇಶವಾಗಿ ಬಂದಿದೆ).

ಎರಡನೆಯ ಉದಾಹರಣೆಯಲ್ಲಿ, ಗಙ್ಗಾ + ಓಘಃ ಎಂದಿರುವಾಗ, ಆ-ಕಾರ, ಓ-ಕಾರಗಳ ಸ್ಥಾನದಲ್ಲಿ– ಔ– ಕಾರವು ಸ್ಥಾನಸಾಮ್ಯದಿಂದ ಏಕಾದೇಶವಾಗಿ ಬಂದು, ಗಙ್ಗ್ + ಆ + ಓ + ಘಃ > ಗಙ್ಗ್ + ಔ + ಘಃ = 'ಗಙ್ಗೌಘಃ' ಎಂದು ರೂಪವು ಸಿದ್ಧವಾಗಿದೆ.

ಮೂರನೆಯ ಉದಾಹರಣೆಯಲ್ಲಿ, ದೇವ + ಐಶ್ವರ್ಯಮ್ ಎಂದಿದ್ದಾಗ– ಇದೇ ರೀತಿಯಲ್ಲಿ, ದೇವ್ + ಅ + ಐ + ಶ್ವರ್ಯಮ್ > ದೇವ್ + ಐ + ಶ್ವರ್ಯಮ್ = ದೇವೈಶ್ವರ್ಯಮ್ ಎಂದು ರೂಪವು ಸಿದ್ಧವಾಗುವದು. (ಇಲ್ಲಿ ಸ್ಥಾನಿಗಳಾದ, ಅ–ಕಾರ, ಐ–ಕಾರಗಳ ಸ್ಥಾನದಲ್ಲಿ ಹೊಸದಾದ ಐ–ಕಾರವು ಆದೇಶವಾಗಿ ಬರುತ್ತದೆ).

ನಾಲ್ಕನೆಯ ಉದಾಹರಣೆಯಲ್ಲಿ ಕೃಷ್ಣೌತ್ಕಣ್ಠ್ಯಮ್ ಎಂಬಲ್ಲಿ– ಕೃಷ್ಣ + ಔತ್ಕಣ್ಠ್ಯಮ್ > ಕೃಷ್ಣ್ + ಅ + ಔ + ತ್ಕಣ್ಠ್ಯಮ್ > ಕೃಷ್ಣ್ + ಔ + ತ್ಕಣ್ಠ್ಯಮ್ = ಕೃಷ್ಣೌತ್ಕಣ್ಠ್ಯಮ್ (ಇಲ್ಲಿ ಸ್ಥಾನಿಗಳಾದ, ಅ–ಕಾರ, ಔ–ಕಾರಗಳ ಸ್ಥಾನದಲ್ಲಿ ಹೊಸದಾದ ಔ–ಕಾರವು ಆದೇಶವಾಗಿ ಬರುತ್ತದೆ).

**(ಪರರೂಪಕ್ಕೂ ಮತ್ತು ಗುಣಕ್ಕೂ ಅಪವಾದವಾಗಿ ವೃದ್ಧಿಸನ್ಧಿಯನ್ನು ಹೇಳುವ ವಿಶೇಷ ಸೂತ್ರ)**

**ಸೂತ್ರ 34: ಏತ್ಯೇಧತ್ಯೂಠ್ಸು ( 6.1.89)**

ವೃತ್ತಿ –'ಅ' ವರ್ಣಾತ್ ಏಜಾದ್ಯೋಃ ಏತಿ–ಏಧತ್ಯೋಃ ಊಠಿ ಚ ಪರೇ ವೃದ್ಧಿಃ ಏಕಾದೇಶಃ ಸ್ಯಾತ್। **ಪರರೂಪ–ಗುಣ–ಅಪವಾದಃ**॥ ಉಪೈತಿ। ಉಪೈಧತೇ। ಪ್ರಷ್ಠೌಹಃ॥ ಏಜಾದ್ಯೋಃ ಕಿಂ? ಉಪೇತಃ॥ ಮಾ ಭವಾನ್ಪ್ರೇದಿಧತ್ (ಪ್ರ+ಇದಿಧತ್)॥

ವಾ॥1॥ ಅಕ್ಷಾದೂಹಿನ್ಯಾಮ್ ಉಪಸಂಖ್ಯಾನಮ್। ಅಕ್ಷೌಹಿಣೀ ಸೇನಾ।

ವಾ॥2॥ ಪ್ರಾತ್ ಊಹ–ಊಢ–ಊಢಿ–ಏಷ–ಏಷ್ಯೇಷು। ಪ್ರೌಹಃ॥ ಪ್ರೌಢಃ॥ ಪ್ರೌಢಿಃ॥ ಪ್ರೈಷಃ॥ ಪ್ರೈಷ್ಯಃ॥

ವಾ॥3॥ ಋತೇ ಚ ತೃತೀಯಾಸಮಾಸೇ। ಸುಖೇನ ಋತಃ ಸುಖಾರ್ತಃ॥ ತೃತೀಯೇತಿ ಕಿಂ? – ಪರಮರ್ತಃ॥

ವಾ॥4॥ ಪ್ರ–ವತ್ಸತರ–ಕಂಬಲ–ವಸನ– ಋಣ–ದಶಾನಾಂ ಋಣೇ। ಪ್ರಾರ್ಣಮ್। ವತ್ಸತರಾರ್ಣಮ್। ಇತ್ಯಾದಿ।

ಅ.ವ್ಯ. – "ವೃದ್ಧಿರೇಚಿ"(6.1.88) ಎಂಬ ಸೂತ್ರದಿಂದ, 'ಏಚಿ' ಎಂಬ ಪದವೂ ಮತ್ತು "ಆದ್ಗುಣಃ" (6.1.87) ಎಂಬ ಸೂತ್ರದಿಂದ, 'ಆತ್' ಎಂಬ ಪಞ್ಚಮ್ಯನ್ತ ಪದವೂ ಅನುವೃತ್ತವಾಗುತ್ತವೆ. "ಏಕಃ ಪೂರ್ವಪರಯೋಃ"(6.1.84) ಎಂಬುದು ಅಧಿಕಾರಸೂತ್ರ.

ಅರ್ಥ – ಇದು ಒಂದೇ ಪದವುಳ್ಳ ಸೂತ್ರ. ಇದರ ವಿಗ್ರಹ ವಾಕ್ಯವು ಹೀಗಿದೆ – **ಏತಿಶ್ಚ ಏಧತಿಶ್ಚ ಊಠ್ ಚ = ಏತ್ಯೇಧತ್ಯೂಠಃ, ತೇಷು ಏತ್ಯೇಧತ್ಯೂಠ್ಸು**. ಇಲ್ಲಿ ಏತಿ (ಇಣ್ ಗತೌ) ಮತ್ತು ಏಧತಿ (ಏಧ ವೃದ್ಧೌ) ಎಂಬ ಧಾತುಗಳು "ಇಕ್–ಶ್ತಿಪೌ ಧಾತು ನಿರ್ದೇಶೇ" ಎಂಬ ವಾರ್ತಿಕದಿಂದ, ಹೊಂದಿದ ರೂಪಗಳು "ವಾಹ ಊಠ್" (6.4.132) ಎಂಬ ಸೂತ್ರದಿಂದ, 'ಊಠ್' ಎಂಬ ಆದೇಶ ಬಂದ ರೂಪವಾಗಿದೆ.

ಉಪ + ಏತಿ ಎಂದಿದ್ದಾಗ, "ಏಜಿ ಪರರೂಪಮ್" (6.1.94) ಎಂಬ ಸೂತ್ರದಿಂದ,

ಉಪೇತಿ ಎಂಬ ಪರರೂಪ ಬಂದು ಅನಿಷ್ಟ ರೂಪ ಬರಬೇಕಾಗಿತ್ತು. ಆದರೆ ಇದಕ್ಕೆ ಅಪವಾದವಾಗಿ ವೃದ್ಧಿ ಬಂದು, ಉಪೈತಿ ಎಂದು ರೂಪವಾಗಿದೆ. ಇದೇ ರೀತಿಯಲ್ಲಿ, ಉಪ + ಏಧತೇ ಎಂದಿದ್ದಾಗ, ಪರರೂಪಕ್ಕೆ ಬದಲಾಗಿ ವೃದ್ಧಿ ಬಂದು, "ಉಪೈಧತೇ" ಎಂದು ರೂಪವಾಗಿದೆ. ಈ ಎರಡೂ ರೂಪಗಳೂ ಪರರೂಪಕ್ಕೆ ಅಪವಾದವಾಗಿ ವೃದ್ಧಿ ಬಂದ ರೂಪಗಳು.

ಪ್ರಷ್ಠ + ಊಹಃ ಎಂದಿದ್ದಾಗ, " ಆದ್ಗುಣ" (6.1.87) ಎಂಬ ಸೂತ್ರದಿಂದ, ಪ್ರಷ್ಠೋಹಃ ಎಂದು ಗುಣ ಬಂದ ರೂಪ ಬರಬೇಕಾಗಿದ್ದಾಗ, ಗುಣವನ್ನು ಬಾಧಿಸಿ, ಪ್ರಕೃತ ಸೂತ್ರದಿಂದ ವೃದ್ಧಿ ಬಂದು **ಪ್ರಷ್ಠೌಃ** ಎಂದು ರೂಪವಾಗಿದೆ. ಪ್ರಷ್ಠಂ ವಹತಿ = ಪ್ರಷ್ಠವಾಟ್ (ಹೆಗಲಮೇಲೆ ನೊಗವನ್ನೋ ಅಥವಾ ಗಾಡಿಯ ನೊಗವನ್ನೋ ಹೊತ್ತಿರುವ) ಎಂಬ ಅರ್ಥದಲ್ಲಿ ಬರುವ, ಪ್ರಷ್ಠವಾಹ್ ಎಂಬ 'ಹ್' ಕಾರಾನ್ತ ಪ್ರಾತಿಪದಿಕವಾಗುತ್ತದೆ. ಇದರಮೇಲೆ 'ಶಸ್' ಪ್ರತ್ಯಯ ಸೇರಿಸಿದಾಗ, "ವಾಹ ಊಠ್" (6.4.132) ಎಂಬ ಸೂತ್ರದಿಂದ ಸಂಪ್ರಸಾರಣದ 'ಊಠ್' ಬಂದು, ಪ್ರಷ್ಠ + ಊಹ್ ಎಂದಾಗಿ, ಅದಕ್ಕೆ ಶಸ್ ಸೇರಿಸಿದಾಗ, "ಆದ್ಗುಣಃ" ಎಂಬ ಸೂತ್ರದಿಂದ ಗುಣವಾಗಬೇಕಾಗಿದ್ದಾಗ, ಈ ಪ್ರಕೃತ ಅಪವಾದ ಸೂತ್ರದಿಂದ, ಸ್ಥಾನಸಾಮ್ಯದಿಂದ, ವೃದ್ಧ್ಯಕ್ಷರವಾದ 'ಔ' ಆದೇಶವಾಗಿ ಬಂದು **ಪ್ರಷ್ಠೌಹಃ** ಎಂಬ ರೂಪವು ಸಿದ್ಧವಾಗಿದೆ. ಪ್ರಷ್ಠೌಹಃ ಎಂಬ ರೂಪವು ದ್ವಿತೀಯಾ ಬಹುವಚನ, ಪಞ್ಚಮೀ ಏಕವಚನ ಮತ್ತೂ ಷಷ್ಠೀ ಏಕವಚನದಲ್ಲಿಯೂ ಒಂದೇ ರೀತಿಯಲ್ಲಿರುತ್ತದೆ.

ಏಜಾದ್ಯೋಃ ಎಂಬ ಈ ವಿಶೇಷಣವು 'ಏತಿ' ಮತ್ತು 'ಏಧತಿ' ಧಾತುಗಳಿಗೆ ಮಾತ್ರ ಸಂಬಂಧಿಸಿದೆ. 'ಊಠ್' ಶಬ್ದಕ್ಕೆ ಅಲ್ಲ. ಪರರೂಪ – ಗುಣಾಪವಾದವೆಂದರೆ, ಮೊದಲನೆಯ ಎರಡು ಉದಾಹರಣೆಗಳಾದ ಉಪೈತಿ ಮತ್ತು ಉಪೈಧತೇ ಎಂಬವುಗಳು ಪರರೂಪಕ್ಕೆ ಅಪವಾದವಾಗಿಯೂ, ಕೊನೆಯ ಉದಾಹಾರಣೆಯಾದ ಪ್ರಷ್ಠೌಹಃ ಎಂಬುದು ಗುಣಕ್ಕೆ ಅಪವಾದವಾಗಿದೆ ಎಂದು ಅರ್ಥ. ಈ ಎರಡೂ ಅಪವಾದಗಳಲ್ಲಿಯೂ ಅಪವಾದವಾಗಿ ವೃದ್ಧಿಯೇ ವಿಧಿಸಲ್ಪಟ್ಟಿದೆ.

ಏಜಾದಿ (ಏಚ್+ಆದಿ) ಯಾದ ವಿಶೇಷಣವೇಕೆ ಎಂಬ ಪ್ರಶ್ನೆಗೆ, ಉಪೇತಃ ಎಂಬ ಉದಾಹರಣೆಯನ್ನು ಕೊಡಲಾಗಿದೆ. ಉಪ+ಇತಃ ಎಂದಿದ್ದಾಗ, ಏಜಾದಿಯಲ್ಲದ 'ಇಣ್' ಧಾತುವಿನ ಲಟ್ 'ಲ್'ಕಾರದ ಪ್ರಥಮಪುರುಷದ ದ್ವಿವಚನದ ರೂಪ (ಇತಃ) ವನ್ನು ಕೊಡಲಾಗಿದೆ. 'ಇಣ್' ಧಾತುವೆಂದರೆ 'ಏತಿ' ಧಾತುವೇ. ಆದರೆ, 'ಇಣ್' ಧಾತುವು ದಶ ಲ-ಕಾರಗಳಲ್ಲಿ, ಹಲವು ರೂಪವನ್ನು ಹೊಂದಿದ್ದರೂ ಎಲ್ಲರೂಪಗಳು ಏಜಾದಿಯಾಗಿರುವದಿಲ್ಲ. ಇಲ್ಲಿ ಅಪೇಕ್ಷಿತವಾದ ರೂಪಗಳೆಂದರೆ, ಏಜಾದಿಗಳು. ಕಾರಣ ಈ ಪ್ರಕೃತ ಸೂತ್ರವು **"ಏಜಿ ಪರರೂಪವವ್"** (6.1.94) ಎಂಬುದಕ್ಕೆ ಅಪವಾದವಾಗಿರುವುದರಿಂದ, ಉದಾಹರಣೆಗಳಲ್ಲಿರುವ ರೂಪಗಳು ಏಜಾದಿಯಾಗಿಯೇ ಇರಬೇಕಾಗುತ್ತದೆ. ಪ್ರಕೃತ ಉದಾಹರಣೆಯುಲ್ಲಿ, 'ಇತಃ' ಎಂಬುದು ಏಜಾದಿಯಾಗಿಲ್ಲದ್ದರಿಂದ, ವೃದ್ಧಿ ಬಾರದೇ ಗುಣ ಬಂದು ಉಪೇತಃ ಎಂದಾಗಿದೆ.

ಮಾ ಭವಾನ್ ಪ್ರೇದಿಧತ್ ಎಂಬ ಉದಾಹರಣೆಯಲ್ಲಿ, ಪ್ರ+ಇದಿಧತ್ ಎಂಬಲ್ಲಿ ಇದಿಧತ್ ಎಂಬುದು 'ಏಧ್' ಧಾತುವಿನ ಣಿಜನ್ತ ಲುಙ್ ರೂಪದ ಪ್ರಥಮಪುರುಷ ಏಕವಚನದ ರೂಪವಾಗಿದೆ. "ನ ಮಾಙ್ ಯೋಗೇ" (6.4.74) ಎಂಬ ಸೂತ್ರದಿಂದ, ಆಡಾಗಮವು (ಆಟ್) ಬರಲಿಲ್ಲ. ಇಲ್ಲದಿದ್ದರೆ, ಆ+ಇದಿಧತ್=ಏದಿಧತ್>ಪ್ರ +ಏದಿಧತ್ ಎಂದಿದ್ದಾಗ, ವೃದ್ಧಿ ಬಂದು ಪ್ರೈದಿಧತ್ ಎಂಬ ಅನಿಷ್ಟ ರೂಪವು ಬರುವ ಅವಕಾಶವಿತ್ತು. ಆಡಾಗಮವು ನಿಷೇಧಿಸಲ್ಪಟ್ಟಿದ್ದರಿಂದ ವೃದ್ಧಿ ಬಾರದೇ ಗುಣವೇ ಬಂದು ಮಾ ಭವಾನ್ ಪ್ರೇದಿಧತ್ ಎಂದಾಗಿದೆ.

**"ಪುರಸ್ತಾತ್ ಅಪವಾದಾಃ ಅನನ್ತರಾನ್ ವಿಧೀನ್ ಬಾಧನ್ತೇ ನೋತ್ತರಾನ್"** (ಅಂದರೆ, ಮೊದಲು ಹೇಳಿದ ಅಪವಾದವು ತದನನ್ತರ ಹೇಳಿದ ಉತ್ಸರ್ಗಕ್ಕೆ ಬಾಧಕವಾಗುತ್ತದೆ, ಅದಕ್ಕೂ ಪರದಲ್ಲಿರುವ ಉತ್ಸರ್ಗಕ್ಕೆ ಬಾಧಕವಾಗುವದಿಲ್ಲ) ಎಂಬ ನ್ಯಾಯದಿಂದ, ಈ ಪ್ರಕೃತ ಸೂತ್ರವು "ಏಙಿ ಪರರೂಪಮ್" (6.1.94) ಎಂಬ ಸೂತ್ರಕ್ಕೆ ಅಪವಾದವಾಗಿದೆಯೇ ಹೊರತು, "ಓಮಾಙೋಶ್ಚ" (6.1.95) ಎಂಬ ಸೂತ್ರಕ್ಕೆ ಅಲ್ಲ.

ವಾ॥1॥ ಅಕ್ಷಾದೂಹಿನ್ಯಾಮ್ ಉಪಸಂಖ್ಯಾನಮ್। ಅಕ್ಷೌಹಿಣೀ ಸೇನಾ। ಅಕ್ಷ ಶಬ್ದದ ನನ್ತರ ಊಹಿನೀ ಶಬ್ದವು ಪರದಲ್ಲಿದ್ದಾಗ, ವೃದ್ಧಿಯು ಏಕಾದೇಶವಾಗಿ ಬರುತ್ತದೆ. ಅಕ್ಷಾಣಾಂ ಊಹಿನೀ ಅಕ್ಷೌಹಿಣೀ (ಪರಿಮಾಣ–ವಿಶೇಷ–ವಿಶಿಷ್ಟಾ ಸೇನಾ). ಗುಣವನ್ನು ಬಾಧಿಸಿ ವೃದ್ಧಿಯನ್ನು ಹೇಳುವದಕ್ಕಾಗಿ ಈ ವಾರ್ತಿಕ ಹೊರಟಿದೆ.

(ಗುಣಕ್ಕೆ ಅಪವಾದವಾಗಿ ವೃದ್ಧಿಯನ್ನು ಹೇಳುವ ವಾರ್ತಿಕ).

**ವಾ॥2॥ ಪ್ರಾತ್ ಊಹ–ಊಢ–ಊಢಿ–ಏಷ–ಏಷ್ಯೇಷು। ಪ್ರೌಹಃ। ಪ್ರೌಢಃ। ಪ್ರೌಢಿಃ। ಪ್ರೈಷಃ। ಪ್ರೈಷ್ಯಃ।** ಪ್ರ ಎಂಬ ಉಪಸರ್ಗದ ನನ್ತರ, 1. ಊಹ, 2. ಊಢ, 3. ಊಢಿ, 4. ಏಷ, 5. ಏಷ್ಯ ಎಂಬ ಶಬ್ದಗಳು ಪರದಲ್ಲಿದಾಗ, ವೃದ್ಧಿಯು ಏಕಾದೇಶವಾಗಿ ಬರುತ್ತದೆ. ಪ್ರ + ಊಹಃ = ಪ್ರೌಹಃ (ಅತಿಶಯ ತರ್ಕಮಾಡುವವನು). ಪ್ರ + ಊಢಃ = ಪ್ರೌಢಃ ( ಚೆನ್ನಾಗಿ ಬೆಳೆದವನು). ಪ್ರ + ಊಢಿಃ = ಪ್ರೌಢಿಃ (ಪ್ರಕೃಷ್ಟವಾದ ವೃದ್ಧಿ). ಈ 3 ಉದಾಹರಣೆಗಳು ಗುಣಕ್ಕೆ ಅಪವಾದವಾಗಿವೆ.

(ಪರರೂಪಕ್ಕೆ ಅಪವಾದವಾಗಿ ವೃದ್ಧಿಯನ್ನು ಹೇಳುವ ವಾರ್ತಿಕದ ಉದಾಹರಣೆಗಳು).

ಪ್ರ+ಏಷಃ=ಪ್ರೈಷಃ. (ಕಳುಹಿಸುವದು). ಪ್ರ+ಏಷ್ಯಃ=ಪ್ರೈಷ್ಯಃ (ಕಳುಹಿಸಲ್ಪಡುವವನು, ದೂತನು). ಈ ಎರಡು ಉದಾಹರಣೆಗಳಲ್ಲಿ, ಪರರೂಪಕ್ಕೆ ಅಪವಾದವಾಗಿ ವೃದ್ಧಿಯನ್ನು ವಿಧಿಸಿದಸಲಾಗಿದೆ.

(ತೃತೀಯಾ ಸಮಾಸದಲ್ಲಿ ವೃದ್ಧಿಯನ್ನು ಹೇಳುವ ವಾರ್ತಿಕ)

**ವಾ॥3॥ ಋತೇ ಚ ತೃತೀಯಾಸಮಾಸೇ।** ಸುಖೇನ ಋತಃ ಸುಖಾರ್ತಃ। ತೃತೀಯೇತಿ ಕಿಂ? – ಪರಮರ್ತಃ। ತೃತೀಯಾ ಸಮಾಸದಲ್ಲಿ ಅ–ಕಾರದ ನನ್ತರ (ಅ–ಕಾರಾನ್ತ

ಶಬ್ದದನಂತರ) 'ಋತ' ಶಬ್ದವು ಪರದಲ್ಲಿದ್ದಾಗ, ಅ-ಕಾರ, ಋ-ಕಾರಗಳ ಸ್ಥಾನದಲ್ಲಿ ವೃದ್ಧಿಯು (ಆರ್) ಏಕಾದೇಶವಾಗಿ ಬರುತ್ತದೆ. ಉದಾ- ಸುಖ + ಋತಃ = ಸುಖ್ + ಆರ್ + ತಃ = ಸುಖಾರ್ತಃ. ತೃತೀಯಾ ಸಮಾಸದಲ್ಲಿ ಎಂದು ಹೇಳಿದ್ದು ಏಕೆ ಎಂಬ ಪ್ರಶ್ನೆಗೆ, ಪರಮಃ + ಋತಃ = ಪರಮರ್ತಃ (ಪರಮಶ್ಚ ಅಸೌ ಋತಶ್ಚ = ಪರಮರ್ತಃ). ಇದು ತೃತೀಯಾ ಸಮಾಸವಲ್ಲವಾದ್ದರಿಂದ (ಕರ್ಮಧಾರಯ ವಾದದ್ದರಿಂದ), ವೃದ್ಧಿ ಬಾರದೇ ಗುಣ ಬಂದಿದೆ.

**ವಾ॥4॥ ಪ್ರ-ವತ್ಸತರ-ಕಂಬಲ-ವಸನ-ಋಣ-ದಶಾನಾಂ ಋಣೇ। ಪ್ರಾರ್ಣಮ್। ವತ್ಸತರಾರ್ಣಮ್। ಇತ್ಯಾದಿ।** ಇಲ್ಲಿ ದಶಾನಾಂ ಎಂಬುದು ಷಷ್ಠಿಯಲ್ಲಿದ್ದರೂ ಪಞ್ಚಮ್ಯರ್ಥದಲ್ಲಿ ಬಂದಿದೆ. ಅಂದರೆ ಈ ಮೇಲಿನ ಪ್ರ-ವತ್ಸತರ-ಕಂಬಲ-ವಸನ-ಋಣ-ದಶ ಎಂಬ ಐದು ಶಬ್ದಗಳ ನಂತರ, (ಇದೇ ಪಂಚ್ಯಮ್ಯರ್ಥ) ಋಣ ಶಬ್ದವಿದ್ದರೆ, ಗುಣ (ಅರ್) ಬಾರದೇ ಅಪವಾದವಾಗಿ ವೃದ್ಧಿ(ಆರ್)ಯು ಏಕಾದೇಶವಾಗಿ ಬಂದಿದೆ. 1. ಪ್ರ + ಋಣಂ = ಪ್ರಾರ್ಣಮ್ (ಹೆಚ್ಚಿನ ಸಾಲ) ವತ್ಸತರ + ಋಣಂ = ವತ್ಸತರಾರ್ಣಮ್ (ಸಣ್ಣಕರುವಿಗಾಗಿ ಮಾಡುವ ಸಾಲ).

ಕಂಬಲ + ಋಣಮ್ = ಕಂಬಲಾರ್ಣಮ್ (ಕಂಬಳಿಗಾಗಿ ಮಾಡುವ ಸಾಲ). ಋಣ + ಋಣಮ್ = ಋಣಾರ್ಣಮ್ (ಒಂದು ಸಾಲವನ್ನು ತೀರಿಸುವದಕ್ಕಾಗಿ ಮಾಡುವ ಮತ್ತೊಂದು ಸಾಲ.) ದಶ + ಋಣ ಎಂದಿದ್ದಾಗ ದಶಾರ್ಣ ಎಂದು ರೂಪವಾಗಿ ದಶಾರ್ಣಾಃ ಎಂದು ಒಂದು ದೇಶದ ಹೆಸರಾಗುತ್ತದೆ. ಹೀಗೆಯೇ ದಶಾರ್ಣಾ ಎಂದು ಒಂದು ನದಿಯ ಹೆಸರು ಆಗುತ್ತದೆ.

### (ಉಪಸರ್ಗ ಸಂಜ್ಞಾವಿಧಾಯಕ ಸೂತ್ರ)

**ಸೂತ್ರ 35: ಉಪಸರ್ಗಾಃ ಕ್ರಿಯಾಯೋಗೇ। (1.4.59)**

ವೃತ್ತಿ -ಪ್ರಾದಯಃ ಕ್ರಿಯಾಯೋಗೇ ಉಪಸರ್ಗ-ಸಂಜ್ಞಾಃ ಸ್ಯುಃ। ಪ್ರ, ಪರಾ, ಅಪ, ಸಮ್, ಅನು, ಅವ, ನಿಸ್, ನಿರ್, ದುಸ್, ದುರ್, ವಿ, ಆಜ್, ನಿ, ಅಧಿ, ಅಪಿ, ಅತಿ, ಸು, ಉತ್, ಅಭಿ, ಪ್ರತಿ, ಪರಿ, ಉಪ, ಏತೇ ಪ್ರಾದಯಃ।

ಅ.ವೃ. - ಪ್ರಾದಯಃ ಎಂಬ ಸೂತ್ರವು ಇಲ್ಲಿ ಅನುವೃತ್ತವಾಗುತ್ತದೆ.

ಅರ್ಥ - ಪ್ರ ಮೊದಲಾದಂತಹ ಈ ನಿಪಾತಗಳು ಕ್ರಿಯೆಯಸಂಬಂಧವನ್ನು ಹೊಂದಿರುವಾಗ ಅವುಗಳಿಗೆ ಉಪಸರ್ಗ ಎಂಬ ಸಂಜ್ಞೆಯು ಬರುತ್ತದೆ. ಮತ್ತು ಈ ನಿಪಾತಗಳು ಪ್ರಾದಿ ಗಣಗಳಿಗೆ ಸೇರಿದವುಗಳಾಗಿವೆ.

### (ಧಾತು ಸಂಜ್ಞೆಯನ್ನು ಹೇಳುವ ಸೂತ್ರ)

**ಸೂತ್ರ 36: ಭೂವಾದಯೋ ಧಾತವಃ (1.3.1)**

ವೃತ್ತಿ -ಕ್ರಿಯಾವಾಚಿನೋ ಭ್ವಾದಯಃ ಧಾತುಸಂಜ್ಞಾಃ ಸ್ಯುಃ।

ಪ.ಛೇ.- ಭೂವಾದಯಃ, ಧಾತವಃ

ಅರ್ಥ – 'ಭೂ' ಮೊದಲಾದ ಮತ್ತು 'ವಾ' ಸದೃಶವಾದ ಕ್ರಿಯಾವಾಚಕ ಶಬ್ದಗಳು 'ಧಾತು' ಸಂಜ್ಞೆಯನ್ನು ಹೊಂದುತ್ತವೆ. 'ಭೂ' ಮೊದಲಾದ ಧಾತುಗಳು ಧಾತು ಪಾಠದಲ್ಲಿ ಸಂಗೃಹೀತವಾಗಿವೆ. ವಾ ಧಾತುವಿಗೆ ಗತಿ ಮತ್ತು ವಾಸನೆ ಎಂದು ಅರ್ಥ (ವಾ ಗತಿ–ಗಂಧನಯೋಃ). 'ವಾ' ಶಬ್ದಕ್ಕೆ ಕ್ರಿಯಾರ್ಥವು ಪ್ರಸಿದ್ಧವಾಗಿರುವದರಿಂದ, ಇದರಂತೆ 'ವಾ' ಸದೃಶವಾದ ಕ್ರಿಯೆಯ ಅರ್ಥವುಳ್ಳ 'ಭೂ' ಮೊದಲಾದವುಗಳಿಗೆ 'ಧಾತು' ಎಂಬ ಸಂಜ್ಞೆಯು ಬರುತ್ತದೆ. 'ಭೂ' ಸತ್ತಾಯಾಂ ಎಂದು ಧಾತುಪಾಠದಲ್ಲಿ ಪಠಿತವಾಗಿದೆ. 'ಪೃಥ್ವೀ' ಎಂಬ ಅರ್ಥದಲ್ಲಿ ಪಠಿತವಾದ 'ಭೂ' ಶಬ್ದಕ್ಕೆ ಧಾತು ಸಂಜ್ಞೆ ಬರುವದಿಲ್ಲ. ಅದು ಕ್ರಿಯಾವಾಚಕವಾಗಿ ಇಲ್ಲದೇ ಇರುವದರಿಂದ, ಕೇವಲ 'ಭೂಮಿ' ಎಂಬ ನಾಮಪದವಾಗಿ ಉಳಿಯುತ್ತದೆ.

### (ಧಾತು–ಉಪಸರ್ಗಗಳಲ್ಲಿ ವೃದ್ಧಿವಿಧಾಯಕ ಸೂತ್ರ)

**ಸೂತ್ರ 37: ಉಪಸರ್ಗಾದೃತಿ ಧಾತೌ ( 6.1.91)**

ವೃತ್ತಿ –'ಅ' ವರ್ಣಾಂತಾತ್ ಉಪಸರ್ಗಾತ್ ಋಕಾರಾದೌ ಧಾತೌ ಪರೇ, ವೃದ್ಧಿರೇಕಾದೇಶಃ ಸ್ಯಾತ್। ಪ್ರಾರ್ಚ್ಛತಿ।

ಪ.ಛೇ.– ಉಪಸರ್ಗಾತ್, ಋತಿ, ಧಾತೌ।

ಅ.ವೃ. – "ಆದ್ಗುಣಃ" (6.1.87) ಎಂಬ ಸೂತ್ರದಿಂದ 'ಆತ್' ಎಂಬ ಪದವು ಅನುವೃತ್ತವಾಗುತ್ತದೆ. "ವೃದ್ಧಿರೇಚಿ" (6.1.88) ಎಂಬ ಸೂತ್ರದಿಂದ 'ವೃದ್ಧಿ' ಎಂಬುದು ಅನುವೃತ್ತವಾಗುತ್ತದೆ. 'ಏಕಃ ಪೂರ್ವಪರಯೋಃ" (6.13.84) ಎಂಬುದು ಅಧಿಕಾರಸೂತ್ರ

ಅರ್ಥ – 'ಅ'ಕಾರಾನ್ತವಾದ ಉಪಸರ್ಗದನಂತರ 'ಋ'ಕಾರಾದಿಯಾದ ಧಾತುವು ಪರದಲ್ಲಿದ್ದಾಗ, ಪೂರ್ವ–ಪರ ವರ್ಣಗಳ ಸ್ಥಾನದಲ್ಲಿ, ವೃದ್ಧಿಯು ಏಕಾದೇಶವಾಗಿ ಬರುವದು. ಪ್ರ+ಋಚ್ಛತಿ ಎಂದಿದ್ದಾಗ, 'ಅ'ಕಾರಾನ್ತವಾದ ಉಪಸರ್ಗದ ನನ್ತರ 'ಋ'ಕಾರಾದಿ ಯಾದ ಋಚ್ಛತಿ ಧಾತುವು ಪರದಲ್ಲಿರುವುದರಿಂದ, 'ಅ'ಕಾರ 'ಋ'ಕಾರಗಳ ಸ್ಥಾನದಲ್ಲಿ 'ಆ' ಎಂಬ ವೃದ್ಧ್ಯಕ್ಷರವು ರೇಫಸಹಿತವಾಗಿ 'ಆರ್' ಎಂದು "ಉರಣ್ ರಪರಃ" (1.1.51) ಸೂತ್ರದಿಂದ ಬರುತ್ತದೆ. ಆಗ ಪ್ರ್+ಆರ್+ಚ್ಛತಿ=ಪ್ರಾರ್ಚ್ಛತಿ ರೂಪವು ಸಿದ್ಧವಾಗುತ್ತದೆ. (ಇದರ ಅರ್ಥ ಒಳ್ಳೆಯ ರೀತಿಯಲ್ಲಿ ಗಮನ ಮಾಡುತ್ತಾನೆ ಎಂದು.)

ವಿಶೇಷ–'ಆತ್' ಎಂಬುದು ಉಪಸರ್ಗಾತ್ ಎಂಬುದಕ್ಕೆ ವಿಶೇಷಣವಾಗಿ ಇರುವುದರಿಂದ

1. "ಯೇನ ವಿಧಿಃ ತದನ್ತಸ್ಯ" (1.1.72) ಎಂಬ ಪರಿಭಾಷೆಯಿಂದ 'ಅವರ್ಣಾನ್ತಾತ್' ಎಂದು ಅರ್ಥ ಮಾಡಲಾಗಿದೆ.
2. 'ಋತಿ' ಎಂಬುದು 'ಧಾತೌ' ಎಂಬುದಕ್ಕೆ ಸಪ್ತಮ್ಯನ್ತ ವಿಶೇಷಣವಾಗಿ ಇರುವದರಿಂದ 'ಋತಿ' ಎಂಬುದು 'ಋ'ಕಾರವನ್ನು ಆದಿಯಾಗಿಯುಳ್ಳ ಎಂದು "ಯಸ್ಮಿನ್ ವಿಧಿಃ ತದಾದಾವಲ್ ಗ್ರಹಣೇ" (ಪರಿಭಾಷೇಂದುಶೇಖರ) ಎಂಬ ಪರಿಭಾಷೆಯಿಂದ ಮಾಡಲಾಗಿದೆ.

## (5). ಪರರೂಪ ಸನ್ಧಿಃ

### (ಪರರೂಪ ವಿಧಾಯಕ ಸೂತ್ರ)

**ಸೂತ್ರ 38: ಏಙಿ ಪರರೂಪಮ್ (6.1.94)**

ವೃತ್ತಿ –ಆತ್ ಉಪಸರ್ಗಾತ್ ಏಙಾದೌ ಧಾತೌ ಪರೇ ಪರರೂಪಮ್ ಏಕಾದೇಶಃ ಸ್ಯಾತ್। ಪ್ರೇಜತೇ। ಉಪೋಷತಿ।

ಅ.ವೃ.–ಆದ್ಗುಣಃ (6.1.87) ಎಂಬ ಸೂತ್ರದಿಂದ 'ಆತ್' ಎಂಬ ಪದವು ಅನುವೃತ್ತವಾಗುತ್ತದೆ. ಹಾಗೆಯೇ "ಏಕಃ ಪೂರ್ವಪರಯೋಃ" (6.1.84) ಎಂಬ ಅಧಿಕಾರಸೂತ್ರವೂ ಅನುವೃತ್ತವಾಗುತ್ತದೆ. "ಉಪಸರ್ಗಾದೃತಿಧಾತೌ" (6.1.91) ಎಂಬ ಸೂತ್ರದಿಂದ, 'ಉಪಸರ್ಗಾತ್' ಮತ್ತು 'ಧಾತೌ' ಎಂಬ ಪದಗಳೂ ಅನುವೃತ್ತವಾಗುತ್ತವೆ.

ಅರ್ಥ – 'ಅ'ವರ್ಣಾನ್ತವಾದ ಉಪಸರ್ಗದ ನಂತರ 'ಏಙ್' ಆದಿಯಾದ ಧಾತುವು ಪರದಲ್ಲಿದ್ದಾಗ, ಪೂರ್ವ ಪರ ವರ್ಣಗಳ ಸ್ಥಾನದಲ್ಲಿ ಪರರೂಪವು ಏಕಾದೇಶವಾಗಿ ಬರುತ್ತದೆ. ಎರಡು ವರ್ಣಗಳ ಸ್ಥಾನದಲ್ಲಿ ಪರವರ್ಣಕ್ಕೆ ಸಮಾನವಾದ ಬೇರೆ ವರ್ಣವು ಆದೇಶವಾಗಿ ಬರುವದಕ್ಕೆ ಪರರೂಪವೆಂದೂ, ಪೂರ್ವವರ್ಣಕ್ಕೆ ಸಮಾನವಾದ ಬೇರೆ ವರ್ಣವು ಆದೇಶವಾಗಿ ಬರುವದಕ್ಕೆ ಪೂರ್ವರೂಪವೆಂದೂ ಹೇಳುತ್ತಾರೆ.

ಉದಾ–1. ಪ್ರ್+ಅ+ಏಜತೇ=ಪ್ರೇಜತೇ ಎಂಬಲ್ಲಿ, 'ಅ' ಕಾರಾನ್ತವಾದ ಉಪಸರ್ಗದ ನನ್ತರ ಏಙಾದಿ (ಏ)ಯಾದ 'ಏಜ್' ಧಾತುವು (ಏಜತೇ) ಪರವಾದಾಗ 'ಅ'ಕಾರ 'ಏ'ಕಾರಗಳಸ್ಥಾನಗಳಲ್ಲಿ ಪರವರ್ಣವಾದ 'ಏ'ಕಾರದನ್ತಿರುವ ಬೇರೆ 'ಏ'ಕಾರವು ಆದೇಶವಾಗಿ ಬಂದು ಪ್ರೇಜತೇ ಎಂದು ರೂಪವಾಗುತ್ತದೆ. (ಇದರ ಅರ್ಥ ಹೆಚ್ಚಾಗಿ ಕಂಪಿಸುತ್ತದೆ ಎಂದು).

ಉದಾ–2. ಉಪ್+ಅ+ಓಷತಿ ಎಂಬಲ್ಲಿ, 'ಅ'ಕಾರಾನ್ತವಾದ ಉಪಸರ್ಗದ ನನ್ತರ 'ಏಙ್' (ಓ)–ಆದಿಯಾದ 'ಓಷತಿ' ಧಾತುವು (ಓಷತಿ) ಪರವಾದಾಗ 'ಅ'ಕಾರ 'ಓ'ಕಾರಗಳ ಸ್ಥಾನಗಳಲ್ಲಿ ಪರವರ್ಣವಾದ 'ಓ'ಕಾರದನ್ತಿರುವ ಬೇರೆ 'ಓ'ಕಾರವು ಏಕಾದೇಶವಾಗಿ ಬಂದು **ಉಪೋಷತಿ** ಎಂದು ರೂಪವಾಗುತ್ತದೆ. (ಇದರ ಅರ್ಥ ಪ್ರಜ್ವಲಿಸುತ್ತದೆ ಎಂದು). "ವೃದ್ಧಿರೇಚಿ" (6.1.88) ಎಂಬ ಸೂತ್ರಕ್ಕೆ ಪ್ರಕೃತ ಸೂತ್ರವು ಅಪವಾದವಾಗಿದೆ.

### (ಟಿ–ಸಂಜ್ಞೆಯನ್ನು ವಿಧಿಸುವ ಸೂತ್ರ)

**ಸೂತ್ರ 39: ಅಚೋಽನ್ತ್ಯಾದಿ ಟಿ। (1.1.64)**

ವೃತ್ತಿ –ಅಚಾಂ ಮಧ್ಯೇ ಯಃ ಅಂತ್ಯಃ ಸ ಆದಿಃ ಯಸ್ಯ ತತ್ 'ಟಿ'–ಸಂಜ್ಞಂ ಸ್ಯಾತ್। ವಾ॥ ಶಕನ್ಧ್ವಾದಿಷು ಪರರೂಪಂ ವಾಚ್ಯಮ್॥ ತತ್ ಚ ಟೇಃ। ಶಕನ್ಧುಃ। ಕರ್ಕನ್ಧುಃ। ಮನೀಷಾ। ಆಕೃತಿಗಣಃ ಅಯಂ–ಮಾರ್ತಣ್ಡಃ।

ಪ.ಛೇ.– ಅಚಃ, ಅನ್ತ್ಯಾದಿ, ಟಿ।

ಅರ್ಥ – ಷಷ್ಠ್ಯನ್ತವಾದ 'ಅಚಃ' ಎಂಬುದು ನಿರ್ಧಾರಣಾರ್ಥದಲ್ಲಿದೆ. 'ಅನ್ತ್ಯಃ ಆದಿಃ ಯಸ್ಯ ತತ್ ಅನ್ತ್ಯಾದಿ' ಎಂದು ವಿಗ್ರಹ. ಯಾವುದೇ ಪದದಲ್ಲಿ ಇರುವ 'ಅಚ್' ಗಳಲ್ಲಿ ಯಾವ ಒಂದು 'ಅಚ್' ವರ್ಣವು ಕೊನೆಯದಾಗಿರುವದೋ ಅದನ್ನು ಆದಿಯನ್ನಾಗಿಸಿಕೊಂಡು, ಇರುವ ವರ್ಣಸಮುದಾಯಕ್ಕೇನೇ 'ಟಿ' ಎಂಬ ಸಂಜ್ಞೆ ಬರುತ್ತದೆ.

ಉದಾ– 1. ಕರ್ಮ ಎಂಬ ಸುಬನ್ತ ಶಬ್ದದಲ್ಲಿ 'ಕ್' ಕಾರೋತ್ತರವಾದ 'ಅ' ಕಾರ ಮತ್ತು 'ಮ್' ಕಾರೋತ್ತರವಾದ 'ಅ' ಕಾರ ಹೀಗೆ ಎರಡು 'ಅ' ಕಾರಗಳಿವೆ. ಇವುಗಳಲ್ಲಿ 'ಮ್' ಕಾರೋತ್ತರ 'ಅ' ಕಾರವೇ ಕೊನೆಯ 'ಅಚ್' ವರ್ಣವಾಗಿದೆ. ವ್ಯಪದೇಶಿವದ್ಭಾವ ದಿಂದ ಇದೇ ಕೊನೆಯ ವರ್ಣ, ಮತ್ತು 'ಟಿ' ಸಂಜ್ಞೆಯುಳ್ಳ ಆದಿ ವರ್ಣವಾಗಿದೆ. ಕಾರಣ ಇದನ್ನು ಯಾವ ವ್ಯಞ್ಜನವೂ ಹಿಂಬಾಲಿಸಲಿಲ್ಲ. ಹೀಗಾಗಿ ಈ ಕೊನೆಯ 'ಅ' ಕಾರವೇ 'ಟಿ' ಸಂಜ್ಞಕವಾಗಿದೆ.

ಉದಾ–2. ಮನಸ್ ಎಂಬಲ್ಲಿ 'ಮ್' ಕಾರೋತ್ತರವಾದ 'ಅ' ಕಾರ ಮತ್ತು 'ನ್' ಕಾರೋತ್ತರವಾದ 'ಅ'ಕಾರ, ಹೀಗೆ ಎರಡು 'ಅ'ಕಾರಗಳಿವೆ. ಇಲ್ಲಿ 'ನ್'ಕಾರೋತ್ತರವಾದ 'ಅ'ಕಾರವೇ ಕೊನೆಯ 'ಅಚ್' ವರ್ಣವಾಗಿದೆ. ಇದನ್ನೇ ಆದಿಯಾಗುಳ್ಳ ವರ್ಣ ಸಮುದಾಯವೆಂದರೆ 'ಅಸ್' ಎಂಬುದು. ಇದಕ್ಕೇ 'ಟಿ' ಸಂಜ್ಞೆ ಬರುತ್ತದೆ. (ಸ್ವರಾನ್ತವಾದ ಶಬ್ದಗಳಲ್ಲಿ ಕೊನೆಯ ಸ್ವರವೇ 'ಟಿ' ಆಗಿರುತ್ತದೆ. ವ್ಯಞ್ಜನಾನ್ತವಾದ ಶಬ್ದಗಳಲ್ಲಿ ಕೊನೆಯ ಸ್ವರ ಮತ್ತು ಅದನ್ನು ಹಿಂಬಾಲಿಸುವ ವ್ಯಞ್ಜನ ಇವುಗಳ ವರ್ಣಸಮುದಾಯಕ್ಕೇನೇ 'ಟಿ' ಸಂಜ್ಞೆ ಬರುತ್ತದೆ. ಮನ್+ಅಸ್= ಮನಸ್ ಎಂಬಲ್ಲಿ 'ಅಸ್' ಎಂಬುದು ಟಿ).

ವಾ॥ **ಶಕನ್ಧ್ವಾದಿಷು ಪರರೂಪಂ ವಾಚ್ಯಮ್**–ಎಂಬ ಈ ವಾರ್ತಿಕವು ಸವರ್ಣದೀರ್ಘ ಸನ್ಧಿಗೆ ಅಪವಾದವಾಗಿದೆ.

**ಉದಾ– 1:** ಶಕ + ಅನ್ಧುಃ ಎಂದಿದ್ದಾಗ ಸವರ್ಣದೀರ್ಘ ಬಂದು ಶಕಾನ್ಧುಃ ಎಂದಾಗಬೇಕಾಗಿತ್ತು. ಆದರೆ ಈ ವಾರ್ತಿಕದಿಂದ ಪರರೂಪವು ಬಂದು ಶಕನ್ಧುಃ ಎಂದಾಗಿದೆ. (ಇದರ ಅರ್ಥ ಶಕ ದೇಶದ ಬಾವಿ ಎಂದು). ಇಲ್ಲಿ 'ಶಕ' ಎಂಬಲ್ಲಿರುವ 'ಕ್'ಕಾರೋತ್ತರವರ್ತಿ 'ಅ'ಕಾರ ಪೂರ್ವವರ್ಣವಾಗಿದೆ, ಮತ್ತು 'ಟಿ' ಆಗಿಯೂ ಇದೆ. ಅನ್ಧುಃ ಎಂಬ ಉತ್ತರಪದದ ಆದಿಯಲ್ಲಿರುವ 'ಅ'ಕಾರವೇ ಪರವರ್ಣ. ಈ ಎರಡು ವರ್ಣಗಳ ಸ್ಥಾನದಲ್ಲಿ ಪರವರ್ಣ(ಅ)ದನ್ತಿರುವ ಬೇರೆ 'ಅ'ಕಾರವು ಆದೇಶವಾಗಿ ಬಂದಿದೆ. ಎರಡು ಸ್ಥಾನಗಳಲ್ಲಿ ಆದೇಶವಾಗಿ ಬರುವಾಗ, ಪೂರ್ವವರ್ಣವು 'ಟಿ' ಆಗಿ ಇರುತ್ತದೆ. ವ್ಯಞ್ಜನ ಸಹಿತವಾದ ವರ್ಣಸಮುದಾಯವು 'ಟಿ' ಯಾಗಿದ್ದರೆ, ಆ ಪೂರ್ವಪದದ ಕೊನೆಯಲ್ಲಿರುವ 'ಟಿ' ಸಂಜ್ಞೆಯುಳ್ಳ ವರ್ಣಸಮೂಹವನ್ನೇ ಪೂರ್ವವರ್ಣವೆಂದು ಭಾವಿಸಬೇಕು.

**ಉದಾ–2:** ಕರ್ಕನ್ಧುಃ. ಇದೂ ಮೇಲಿನ ಉದಾಹರಣೆಯಂತೇ ಇರುತ್ತದೆ. (ಕರ್ಕದೇಶದ ಬಾವಿ ಎಂದು ಇದರ ಅರ್ಥ).

**ಉದಾ-3:** ಮನೀಷಾ ಎಂಬಲ್ಲಿ ಮನಸ್+ಈಷಾ ಎಂದಿದ್ದಾಗ ಪೂರ್ವ ವರ್ಣದ ಸ್ಥಾನದಲ್ಲಿ'ಟಿ' ಯಾಗಿರುವ 'ಅಸ್' ಎಂಬ ವರ್ಣಸಮುದಾಯವನ್ನೇ ಪೂರ್ವ ವರ್ಣವಾಗಿ ಭಾವಿಸಿ, ಅಸ್+ಈ ಎಂಬ ಈ ಎರಡರ ಸ್ಥಾನದಲ್ಲಿ ಪರವರ್ಣದಂತಿರುವ ಬೇರೆ 'ಈ' ಕಾರವು ಆದೇಶವಾಗಿ ಬಂದು (ಮನ್+(ಅಸ್+ಈ)+ಷಾ=ಮನ್+ಈ +ಷಾ=ಮನೀಷಾ ಎಂದು ರೂಪವಾಗುತ್ತದೆ.

ಈ ಶಕನ್ಧ್ವಾದಿ ಗಣವನ್ನು **ಆಕೃತಿಗಣ** ಎಂದು ಹೇಳುತ್ತಾರೆ. ಈ ಆಕೃತಿಗಣದ ಬಗ್ಗೆ ಎರಡು ಅಭಿಪ್ರಾಯಗಳಿವೆ.

1. ಯಾವ ಒಂದು ಶಬ್ದವು ಯಾವ ಗಣದಲ್ಲೂ ಇಲ್ಲದೇ ಮತ್ತು ಯಾವ ಸೂತ್ರದಿಂದಲೂ ನಿರ್ಮಿತವಾಗದೇ ಮತ್ತೊಂದು ಗಣದ ಶಬ್ದಗಳನ್ನು ಅನುಕರಣೆ ಮಾಡುವದೋ ಅಂತಹ ಶಬ್ದದ ಅನುಕರಣಕ್ಕೆ ಕಾರಣವಾದ ಗಣವನ್ನು ಆಕೃತಿಗಣವೆಂದು ಹೇಳುತ್ತಾರೆ.
2. ವಿದ್ವಾನ್ ಜಿ. ವಿಷ್ಣುಮೂರ್ತಿಭಟ್ ಇವರ ಅಭಿಪ್ರಾಯದಂತೆ "ಆಕೃತ್ಯಾ ಗಣ್ಯತೇ ಇತಿ ಆಕೃತಿಗಣಃ" ಎಂಬ ವಚನದಂತೆ ಯಾವ ಶಬ್ದದಲ್ಲಿ ಪರರೂಪವು ತೋರುತ್ತದೆಯೋ ಅದನ್ನು ವಿಧಿಸುವ ಸೂತ್ರವು ಇರುವದಿಲ್ಲವೋ ಅಂಥವುಗಳು ಈ ಗಣ(ಅಕೃತಿಗಣ)ದಲ್ಲಿ ಸೇರಿವೆ ಎಂದು ತಿಳಿಯಬೇಕು.

**ಉದಾ-3:** ಮಾರ್ತಣ್ಡಃ (ಮಾರ್ತಾಣ್ಡಃ ಎಂಬುದು ಅನಿಷ್ಟರೂಪ) ಎಂಬ ಈ ಶಬ್ದವು ಶಕನ್ಧ್ವಾದಿ ಗಣದಲ್ಲಿ ಪಠಿತವಾಗಿಲ್ಲ. ಮಾರ್ತ+ಅಣ್ಡಃ ಎಂದಿರುವಾಗ, ಇದು ಶಕನ್ಧ್ವಾದಿ ಗಣದಲ್ಲಿ ಪಠಿತವಾಗಿಲ್ಲದಿದ್ದರೂ ಶಕನ್ಧ್ವಾದಿ ಶಬ್ದಗಳಂತೆಯೇ ಪರರೂಪದಿಂದ ಮಾರ್ತಣ್ಡಃ ಎಂದು ಸಿದ್ಧವಾಗಿದೆ. ಬೇರೆ ಯಾವ ಸೂತ್ರದಿಂದಲೂ ಇದು ಸಿದ್ಧವಾಗಿಲ್ಲ. ಆದುದರಿಂದ ಮಾರ್ತಣ್ಡಃ ಎಂಬ ಶಬ್ದವು ಶಕನ್ಧ್ವಾದಿ ಗಣದಲ್ಲಿ ಇರುವಂತೆ ಊಹಿಸಬೇಕು.

**(ಪರರೂಪವನ್ನು ವಿಧಾನ ಮಾಡುವ ಅಪವಾದಸೂತ್ರ)**

**ಸೂತ್ರ 40: ಓಮಾಙೋಶ್ಚ। (6.1.95)**

ವೃತ್ತಿ –ಓಮಿ ಆಙಿ ಚ ಆತ್ ಪರೇ ಪರರೂಪಮೇಕಾದೇಶಃ ಸ್ಯಾತ್। ಶಿವಾಯೋಂ ನಮಃ। ಶಿವ + ಏಹಿ। (ಇತಿ ಸ್ಥಿತೇ)

ಪ.ಛೇ.– ಓಮಾಙೋಃ, ಚ।

ಅ.ವೃ. – "ಏಙಿ ಪರರೂಪಂ" (6.1.94) ಎಂಬ ಸೂತ್ರದಿಂದ 'ಪರರೂಪಂ' ಎಂಬ ಪದವೂ "ಆದ್ಗುಣಃ" (6.1.87) ಎಂಬ ಸೂತ್ರದಿಂದ 'ಆತ್' ಎಂಬ ಪದವೂ ಹಾಗೆಯೇ "ಏಕಃ ಪೂರ್ವಪರಯೋಃ" (6.1.84) ಎಂಬ ಅಧಿಕಾರ ಸೂತ್ರದಿಂದ 'ಪೂರ್ವಪರಯೋಃ' ಎಂಬ ಪದಗಳೂ ಅನುವೃತ್ತವಾಗುತ್ತವೆ.

ಅರ್ಥ – ಓಮ್ ಚ ಆಙ್ ಚ ಓಮಾಙೌ, ತಯೋಃ ಓಮಾಙೋಃ. ಹ್ರಸ್ವ ಅಥವಾ ದೀರ್ಘ 'ಅ'ಕಾರಕ್ಕೆ ಓಮ್ ಮತ್ತು ಆಙ್ ಗಳು ಪರದಲ್ಲಿದ್ದಾಗ, ಪೂರ್ವ–

ಪರ ಸ್ಥಾನಗಳಲ್ಲಿ ಪರವರ್ಣದಂತಿರುವ ಪರರೂಪವು ಏಕಾದೇಶವಾಗಿ ಬರುತ್ತದೆ.

**ಉದಾ–1:** ಶಿವಾಯ+ಓಮ್(ನಮಃ)=ಶಿವಾಯ್+(ಅ+ಓ)+ಮ್ (ನಮಃ) ಎಂಬಲ್ಲಿ, ಪೂರ್ವಪದದ 'ಯ' ಕಾರೋತ್ತರವರ್ತಿಯಾದ 'ಅ'ಕಾರಕ್ಕೆ ಉತ್ತರಪದದ ಆದಿಯಲ್ಲಿರುವ ಓಮ್ ಪರವಾದದ್ದರಿಂದ 'ಅ'ಕಾರ ಮತ್ತು 'ಓ' ಕಾರಗಳಸ್ಥಾನಗಳಲ್ಲಿ ಪ್ರಕೃತ ಸೂತ್ರದಿಂದ ಪರವರ್ಣದಂತಿರುವ ಬೇರೆ 'ಓ' ಕಾರ (ಪರರೂಪ) ವು ಆದೇಶವಾಗಿ ಬಂದಿದೆ. ಆಗ ಶಿವಾಯೋಂ ನಮಃ ಎಂದು ರೂಪವಾಗಿದೆ. ಇಲ್ಲಿ ವೃದ್ಧಿಸನ್ಧಿಗೆ ಅಪವಾದವಾಗಿ ಪರರೂಪವು ಆದೇಶವಾಗಿ ಹೇಳಲಾಗಿದೆ.

**ಉದಾ–2:** ಶಿವ + ಏಹಿ ಎಂಬಲ್ಲಿ, ಏಹಿ ಎಂಬ ರೂಪವು ಹೇಗಾಯಿತೆಂದು ಮೊದಲು ತಿಳಿಯಬೇಕು. 'ಇಹಿ' ಎಂಬುದು 'ಇಣ್' ಧಾತುವಿನ ಲೋಟ್ ಲಕಾರದ ಮಧ್ಯಮಪುರುಷ ಏಕವಚನರೂಪ. 'ಆಙ್' ನ ನಂತರ 'ಇಹಿ' ಎಂಬ ಶಬ್ದವು ಪರದಲ್ಲಿದೆ. 'ಆಙ್'ನಲ್ಲಿ 'ಙ್' ಕಾರ "ಹಲನ್ತ್ಯಮ್" (1.3.3) ಎಂಬ ಸೂತ್ರದಿಂದ ಇತ್ ಸಂಜ್ಞೆಯನ್ನು ಹೊಂದುತ್ತದೆ. "ತಸ್ಯ ಲೋಪಃ" (1.3.9) ಎಂಬ ಸೂತ್ರದಿಂದ ಅದು ಲೋಪವಾಗಿ 'ಆ' ಮಾತ್ರ ಉಳಿಯುತ್ತದೆ. ಆಗ ಆ + ಇಹಿ ಎಂದಿರುವಾಗ "ಆದ್ಗುಣಃ" (6.1.87) ಎಂಬ ಸೂತ್ರದಿಂದ ಗುಣ ಬಂದು 'ಏಹಿ' ಎಂದಾಗುತ್ತದೆ.

**ವಿವರಣೆ**:

ಇಲ್ಲಿ ವಿಶೇಷವೇನೆಂದರೆ, ಶಿವ+ಆ+ಇಹಿ ಎಂದಿರುವಾಗ 'ವ್'ಕಾರೋತ್ತರವರ್ತಿ 'ಅ' ಕಾರ ಮತ್ತು 'ಆ' ಕಾರಗಳ ಸ್ಥಾನದಲ್ಲಿ ಸವರ್ಣದೀರ್ಘಸನ್ಧಿಯಿಂದ ಶಿವಾ+ಇಹಿ ಎಂದು ಆಗುತ್ತಿತ್ತು. ಆದರೆ 'ಇಹಿ' ಎಂಬುದೇ.

ಮೇಲೆ ಹೇಳಿದಂತೆ 'ಏಹಿ' ಎಂದಾಗಿರುವದರಿಂದ, ಶಿವ+ಏಹಿ ಎಂದಾಗುತ್ತದೆ. ಆಗ 'ವ್'ಕಾರೋತ್ತರವರ್ತಿ 'ಅ'ಕಾರ ಮತ್ತು ಉತ್ತರಪದದ ಆದಿವರ್ಣವಾದ 'ಏ' ಕಾರಗಳ ಸ್ಥಾನದಲ್ಲಿ ಪರವರ್ಣದಂತಿರುವ ಬೇರೆ 'ಏ' ಕಾರವು ಆದೇಶವಾಗಿ ಬಂದು ಶಿವ+ಏ+ಹಿ=ಶಿವೇಹಿ ಎಂದಾಗುತ್ತಿತ್ತು. ಇದು 'ಆಙ್' ಎಂಬ ಉಪಸರ್ಗ ಪರದಲ್ಲಿರುವದಕ್ಕೆ ಉದಾಹರಣೆಯಾಗುತ್ತಿತ್ತು. ಮತ್ತು ಸವರ್ಣದೀರ್ಘ ಸನ್ಧಿಗೆ ಅಪವಾದವಾಗುತ್ತಿತ್ತು.

2.'ಆ' ಎಂಬ ಉಪಸರ್ಗಕ್ಕೇನೇ ಪೂರ್ವಪದದ ಜೊತೆಗೆ ಸನ್ಧಿಯಾಗಬೇಕಾಗಿದ್ದರೆ, ಶಿವ+ಆ+ಇಹಿ ಎಂದು ಪ್ರಕ್ರಿಯೆಯನ್ನು ಸಿದ್ಧಗೊಳಿಸಬೇಕಾಗಿತ್ತು.

ಈ ರೀತಿ ಎರಡು ಪ್ರಕ್ರಿಯೆಗಳಿಗೆ ಅವಕಾಶ ಬಂದಾಗ, ಆ ಪ್ರಕ್ರಿಯೆಗಳು ಸರಿಯಲ್ಲವೆಂಬುದನ್ನು ಮುಂದೆ ತಿಳಿಸಿ ಸರಿಯಾದ ಪ್ರಕ್ರಿಯೆಯನ್ನು ತೋರಿಸಲಾಗಿದೆ.

ಇಲ್ಲಿ ಆಗಿರುವ ಪ್ರಕ್ರಿಯೆಯೇ ಬೇರೆ. ಧಾತು–ಉಪಸರ್ಗಗಳ ಸನ್ಧಿಯನ್ನು ಮೊದಲು (ಅನ್ತರಙ್ಗ ಕಾರ್ಯ) ಮಾಡಿ ನಂತರ ಹೊರಗಿನ ಪದದಜೊತೆಗೆ ಸನ್ಧಿ ಮಾಡಬೇಕು ಎಂಬುದು ನಿಯಮ. **"ಅಸಿದ್ಧಂ ಬಹಿರಙ್ಗಮನ್ತರಙ್ಗೇ"** ಎಂಬ ವಚನವು ಇದಕ್ಕೆ ಪ್ರಮಾಣ. ಆದುದ್ದರಿಂದ ಎರಡು ಪದ (ಪೂರ್ವೋತ್ತರ)ಗಳಿಗೆ ಶಿವ+ಆ

(+ಇಹಿ) ಎಂದು ಮೊದಲೇ ಸನ್ಧಿ ಮಾಡಲು ಬರುವದಿಲ್ಲ. ಆದುದರಿಂದ ಆ+ಇಹಿ ಇವುಗಳ ಸನ್ಧಿಯನ್ನೇ ಮೊದಲು ಮಾಡಬೇಕು. (ಮೇಲಿನ ವಚನದ ಪ್ರಕಾರ ಧಾತು-ಉಪಸರ್ಗಗಳ ಸನ್ಧಿಕಾರ್ಯವೇ ಅನ್ತರಙ್ಗ ಕಾರ್ಯವಾಗಿದೆ). ಹಾಗಾದರೆ, ಶಿವ+ಏಹಿ ಎಂದಿದ್ದಾಗ, 'ಅ'ಕಾರದ ನಂತರ 'ಆ' (ಆಙ್) ಉಪಸರ್ಗಕ್ಕೆ ಬದಲಾಗಿ 'ಏಹಿ' ಎಂದಿರುತ್ತದೆ. ಇಂತಹ ಅವಸ್ಥೆಯಲ್ಲಿ ಪರರೂಪದ ಸಿದ್ಧಿಗಾಗಿ ಪಾಣಿನೀಯವರು ಮುಂದಿನ ಸೂತ್ರವನ್ನು ಹೇಳುತ್ತಾರೆ.

**(ಅನ್ತ-ಆದಿವದ್ಭಾವಗಳನ್ನು ವಿಧಾನಮಾಡುವ ಸೂತ್ರ)**

**ಸೂತ್ರ 41: ಅನ್ತಾದಿವಚ್ಚ (6.1.85)**

ವೃತ್ತಿ -ೞಃ ಅೞಂ ಏಕಾದೇಶಃ ಸ ಪೂರ್ವಸ್ಯ ಅಂತವತ್, ಪರಸ್ಯ ಆದಿವತ್ ಸ್ಯಾತ್। ಶಿವೇಹಿ।

ಪ.ಛೇ.- ಅನ್ತಾದಿವತ್, ಚ।

ಅ.ವ್ಯ. - "ಏಕಃ ಪೂರ್ವಪರಯೋಃ" (6.1.84) ಎಂಬ ಅಧಿಕಾರಸೂತ್ರವು ಅನುವೃತ್ತವಾಗುತ್ತದೆ.

ಅರ್ಥ - "ಯಥಾಸಂಖ್ಯಮನುದೇಶಃ ಸಮಾನಾಮ್" (1.3.10) ಎಂಬ ಪರಿಭಾಷೆಯಿಂದ ಕ್ರಮವಾಗಿ ಈ ಸೂತ್ರವನ್ನು ಅನ್ವಯಿಸಬೇಕು. ದ್ವಂದ್ವಸಮಾಸದಮೇಲೆ 'ವತ್' ಪ್ರತ್ಯಯವನ್ನು ಸೇರಿಸಿರುವದರಿಂದ, ಒಂದೊಂದು ಪದದಜೊತೆಗೆ ಪ್ರತ್ಯೇಕ ಅನ್ವಯಿಸಿದಾಗ, ಅನ್ತವತ್, ಮತ್ತು ಆದಿವತ್ ಎಂದು ಅರ್ಥವಾಗುತ್ತದೆ. (ದ್ವನ್ದ್ವಾನ್ತೇ ಶ್ರೂಯಮಾಣಂ ಪದಂ ಪ್ರತ್ಯೇಕಂ ಅಭಿಸಂಬಧ್ಯತೇ) ಎಂಬುದು ನಿಯಮ.

ಪೂರ್ವ-ಪರ ಸ್ಥಾನಗಳಲ್ಲಿ ಬಂದಿರುವ ಏಕಾದೇಶವು ಪೂರ್ವಪದದ ಅನ್ತ್ಯದಂತೆಯೂ ಮತ್ತು ಉತ್ತರಪದದ ಆದಿಯಂತೆಯೂ ಭಾವಿಸಬೇಕಾಗುತ್ತದೆ.

ಎರಡುವರ್ಣಗಳ ಸ್ಥಾನದಲ್ಲಿ ಈ ಆದೇಶವು ಬಂದಿದ್ದರೂ, ಪೂರ್ವವರ್ಣ ಅನ್ತ್ಯದಲ್ಲಿರುವಾಗ ಯಾವ ಕಾರ್ಯವು ಆಗುತ್ತಿತ್ತೋ, ಅದೇ ಕಾರ್ಯವು, ಈ ಆದೇಶದಿಂದ ಆಗಿದೆ ಎಂದು ತಿಳಿಯಬೇಕು. (ಆಗಿರುವ ಕಾರ್ಯವು, ಆಗಿರುವ ಏಕಾದೇಶದಿಂದ ಬಂದ (ಬೇರೆ) ವರ್ಣದಿಂದಲೇ ಆಗಿದ್ದರೂ, ಸ್ಥಾನಿಯಾಗಿದ್ದ ಪೂರ್ವವರ್ಣದ ಕಾರ್ಯವೆಂದೇ ಭಾವಿಸಬೇಕು). [ಇದೇ ರೀತಿಯಲ್ಲಿ ಪರವರ್ಣದಿಂದ ಆಗಬೇಕಾದ ಸನ್ಧಿಕಾರ್ಯವೇ ಏಕಾದೇಶದಿಂದ ಬಂದ (ಬೇರೆ) ವರ್ಣದಿಂದಲೇ ಆಗಿದೆಯೆಂದು ಭಾವಿಸಬೇಕು]. ಆದರೆ ಏಕಾದೇಶದಿಂದ ಆಗಿರುವ ಕಾರ್ಯವು ಬೇರೆಯಾಗಿರುತ್ತದೆ. ಕಾರಣ ಏಕಾದೇಶವಾಗಿ ಬರುವ ವರ್ಣವು ಬೇರೆಯಾಗಿಯೇ ಇರುತ್ತದೆ. ಏಕಾದೇಶವನ್ನು ಸ್ಥಾನಿ ಎಂದು ಗೌರವಿಸುತ್ತೇವೆ. ಆದರೆ ಆಗುವ ಕಾರ್ಯ ಮಾತ್ರ ಏಕಾದೇಶದಿಂದ ಬಂದ (ಬೇರೆ) ವರ್ಣದಿಂದಲೇ ಆಗಿರುತ್ತದೆ (ಉದಾ-ಶಿವ+ಏಹಿ ಎಂಬಲ್ಲಿ ಆದೇಶವು 'ಏ' ಕಾರವಾಗಿದ್ದರೂ, ಅದನ್ನು 'ಆ' ಕಾರವೆಂದು ಭಾವಿಸುತ್ತೇವೆ.

ಪ್ರಕೃತದಲ್ಲಿ, ಪರರೂಪ ಸನ್ಧಿಯನ್ನು ಹೇಳುವಾಗ ಏಕಾದೇಶವಾದ 'ಏ'ಕಾರವನ್ನು 'ಆ'ಕಾರದಂತೆಯೇ ಭಾವಿಸಬೇಕು. ಆದರೆ ಇಲ್ಲಿ ಆಗಿರುವದು 'ಅ'ಕಾರ ಮತ್ತು 'ಏ' ಕಾರಗಳ ಪರರೂಪ ಸನ್ಧಿ. ಇದಕ್ಕೆ 'ಆದಿವದ್ಭಾವವೆಂದು' ಹೆಸರು.

ಇದೇ ರೀತಿಯಲ್ಲಿ ಬೇರೆ ಸಂದರ್ಭಗಳಲ್ಲಿ ಏಕಾದೇಶವಾದ 'ಏ' ಕಾರವು 'ಇ' ಕಾರದ ಕೆಲಸವನ್ನು ಮಾಡುತ್ತದೆಂದು ಭಾವಿಸಬೇಕು. ಆದರೆ ಸನ್ಧಿಮಾತ್ರ 'ಅ'ಕಾರ 'ಏ'ಕಾರಗಳಿಗೆ ಆಗುವ ಪರರೂಪ ಸನ್ಧಿಯೇ ಆಗಿರುತ್ತದೆ. ಇದಕ್ಕೆ 'ಅನ್ತವದ್ಭಾವ'ವೆಂದು ಹೆಸರು. (ಉದಾಹರಣೆಯನ್ನು ಇಲ್ಲಿ ಕೊಡಲಿಲ್ಲ). 'ಆ' ಪ್ರತ್ಯಯವು ಎರಡು ವಿಧವಾಗಿದೆ.

1. 'ಙ್'ಕಾರವನ್ನು ಇತ್ತಾಗಿವುಳ್ಳದ್ದು (ಆಙ್),

2. 'ಇತ್' ರಹಿತವಾದ 'ಆ' ಎಂಬ ಪ್ರತ್ಯಯವು.

'ಆಙ್' ಎಂಬ ಉಪಸರ್ಗಕ್ಕೆ ನಾಲ್ಕು ಅರ್ಥಗಳಿವೆ.

1. ಸ್ವಲ್ಪ ಉದಾ–1. ಈಷದುಷ್ಣಮ್ ( ಆ + ಉಷ್ಣಮ್) ಓಷ್ಣಮ್.

2. ಕ್ರಿಯಾಯೋಗ: ಉದಾ–2. ಏಹಿ (ಆ + ಇಹಿ) ಏಹಿ.

3. ಮರ್ಯಾದಾ (ವರೆಗು ಎಂದರೆ ಅವಧಿರಹಿತವಾಗಿ): ಉದಾ– 3. ಆಕೈಲಾಸಾತ್ (ಆ+ಕೈಲಾಸಾತ್) = ಆಕೈಲಾಸಾತ್ (ಕೈಲಾಸದ ವರೆಗೆ) ಇಲ್ಲಿ ಕೈಲಾಸವು ಸೇರಿರುವದಿಲ್ಲ.

4. ಅಭಿವಿಧಿ (ವರೆಗು ಅಂದರೆ, ಅವಧಿ ಸಹಿತವಾಗಿ): ಉದಾ–4. ಆಬಾಲವೃದ್ಧಮ್ ಎಂಬಲ್ಲಿ ಅವಧಿಯು ಸೇರಿದೆ.

ಎರಡನೆಯದಾದ ('ಙ್'ಕಾರ ಇತ್ತಾಗಿ ಇಲ್ಲದ) 'ಆ' ಎಂಬ ಉಪಸರ್ಗವು ಎರಡು ಅರ್ಥಗಳಲ್ಲಿ ಪ್ರಯೋಗಿಸಲಾಗಿದೆ.

ಉದಾ–1. (ವಾಕ್ಯದಲ್ಲಿ) ಆ ಏವಂ ನು ಮನ್ಯಸೇ, (ನೀನು ಈ ರೀತಿ ಭಾವಿಸುವೆಯಾ?)

ಉದಾ–2. (ಸ್ಮರಣಾರ್ಥದಲ್ಲಿರುವ ಉಪಸರ್ಗ).ಆ ಏವಂ ಕಿಲ ತತ್ (ಓಹೋ! ಹೀಗಿತ್ತೇ ಅದು).

"ಈಷದರ್ಥೇ ಕ್ರಿಯಾಯೋಗೇ ಮರ್ಯಾದಾಭಿವಿಧೌ ಚ ಯಃ।
ಏತಮಾತಂ ಙಿತಂ ವಿದ್ಯಾತ್ ವಾಕ್ಯ–ಸ್ಮರಣಯೋರಙಿತ್॥"

## (6) ಸವರ್ಣದೀರ್ಘ ಸನ್ಧಿಃ

**(ಸವರ್ಣದೀರ್ಘ ಸನ್ಧಿಯನ್ನು ವಿಧಾನ ಮಾಡುವ ಸೂತ್ರ).**

**ಸೂತ್ರ 42: ಅಕಃ ಸವರ್ಣೇ ದೀರ್ಘಃ (6.1.101)**

ವೃತ್ತಿ –ಅಕಃ ಸವರ್ಣೇ ಅಚಿ ಪರೆ, ಪೂರ್ವಪರಯೋಃ ದೀರ್ಘಃ ಏಕಾದೇಶಃ ಸ್ಯಾತ್। ದೈತ್ಯಾರಿಃ। ಶ್ರೀಶಃ। ವಿಷ್ಣೂದಯಃ। ಹೋತೄಕಾರಃ।

ಅ.ವ್ಯ. – "ಇಕೋಯಣಚಿ" (6.1.77) ಎಂಬ ಸೂತ್ರದಿಂದ 'ಅಚಿ' ಎಂಬ

ಪದವೂ, ಮತ್ತು "ಏಕಃ ಪೂರ್ವಪರಯೋಃ"(6.1.84) ಎಂಬ ಅಧಿಕಾರಸೂತ್ರವೂ ಅನುವೃತ್ತವಾಗುತ್ತವೆ.

ಅರ್ಥ – 'ಅಕ್' (ಅ,ಇ,ಉ,ಋ,ಲೃ) ಗೆ ಸವರ್ಣವಾದ 'ಅಚ್' (ಸ್ವರಗಳು) ಪರವಾದಾಗ, ಪೂರ್ವ ಮತ್ತು ಪರಗಳ ಸ್ಥಾನದಲ್ಲಿ, ಅದೇ ಜಾತಿಗೆ ಸೇರಿದ ದೀರ್ಘ ವರ್ಣವು ಏಕಾದೇಶವಾಗಿ ಬರುತ್ತದೆ. "ತುಲ್ಯಾಸ್ಯ ಪ್ರಯತ್ನಂ ಸವರ್ಣಂ" (1.1.9) ಎಂಬ ಸೂತ್ರದಿಂದ 18 ವಿಧವಾದ 'ಅ' ಕಾರಗಳಿಗೆ 18 ವಿಧವಾದ 'ಅ' ಕಾರಗಳು ಸವರ್ಣವಾಗುತ್ತವೆ. ಇದೇ ರೀತಿಯಲ್ಲಿ ಇ,ಉ ಗಳಿಗೆ ಕ್ರಮವಾಗಿ ಇ,ಉ ಗಳು ಸವರ್ಣಗಳು. 'ಋ' ಮತ್ತು 'ಲೃ' ಗಳು ಪರಸ್ಪರ ಸವರ್ಣಗಳಾಗಿರೋಣದ್ದರಿಂದ ಒಂದೊಂದೂ ಪರಸ್ಪರ 30 ಸ್ಥಾನಗಳಿಗೆ ಸವರ್ಣಗಳಾಗುತ್ತವೆ. ( ದೀರ್ಘವೆಂದರೆ ಎರಡು ಮಾತ್ರಾ ಕಾಲಗಳಲ್ಲಿ ಉಚ್ಚರಿಸಲ್ಪಡುವ ವರ್ಣವೆಂಬುದು ಸ್ಪಷ್ಟ)

ಬೇರೆ ರೀತಿಯಿಂದ ಹೇಳುವದಾದರೆ– 'ಅ' ಕಾರದಪರದಲ್ಲಿ 'ಅ' ಕಾರ, 'ಇ' ಕಾರದ ಪರದಲ್ಲಿ 'ಇ' ಕಾರ, 'ಉ' ಕಾರದ ಪರದಲ್ಲಿ 'ಉ' ಕಾರ, ಮತ್ತು 'ಋ' 'ಲೃ' ಗಳ ಪರದಲ್ಲಿ 'ಋ' 'ಲೃ' ಗಳು ಇದ್ದಾಗ, ಆಯಾವರ್ಣಗಳ ದೀರ್ಘ ವರ್ಣವು ಆದೇಶವಾಗಿ ಬರುತ್ತದೆ. ಅದರೆ, 'ಲೃ' ಕಾರಕ್ಕೆ ದೀರ್ಘರೂಪವಿಲ್ಲದ್ದರಿಂದ ಸವರ್ಣವಾದ ದೀರ್ಘ 'ಋ' ಕಾರವೇ ಆದೇಶವಾಗಿ ಬರುತ್ತದೆ.

ಉದಾ– 1. ದೈತ್ಯಾರಿಃ–ದೈತ್ಯ+ಅರಿಃ=ದೈತ್ ್ಯ+(ಅ+ಅರಿಃ)=ದೈತ್ಯಾರಿಃ (ದೈತ್ಯರ ಶತ್ರುವಾದ ವಿಷ್ಣು) ಇದೇ ರೀತಿಯಲ್ಲಿ ಉಳಿದ ಉದಾಹರಣೆಗಳ ರೂಪಗಳು ಸಿದ್ಧವಾಗುತ್ತವೆ.

ಉದಾ– 2: ಶ್ರೀಶಃ : – ಶ್ರೀ + ಈಶಃ = ಶ್ರೀಶಃ,

ಉದಾ– 3: ವಿಷ್ಣೂದಯಃ : ವಿಷ್ಣು + ಉದಯಃ = ವಿಷ್ಣೂದಯಃ,

ಉದಾ– 4: ಹೋತ್ೃಕಾರಃ : ಹೋತೃ+ ಋಕಾರಃ = ಹೋತೄಕಾರಃ।

ಉದಾ–5– ಹೋತೄಕಾರಃ : ಹೋತೃ + ಲೃಕಾರಃ = ಹೋತೄಕಾರಃ।

ವಿಶೇಷ–1: ('ಋ' ಕಾರ 'ಲೃ' ಕಾರಗಳು ಸವರ್ಣವಾಗಿರೋಣದ್ದರಿಂದಲೂ ದೀರ್ಘ 'ಲೃ' (ಲೄ) ಕಾರವಿಲ್ಲದಿರೋಣದ್ದರಿಂದಲೂ ದೀರ್ಘ 'ಲೃ' (ಲೄ) ಕಾರಕ್ಕೆ ಬದಲಾಗಿ 'ೠ' ಕಾರವು ಬಂದಿದೆ).

ವಿಶೇಷ–2: 'ಅ' ವರ್ಣದ ವಿಷಯದಲ್ಲಿ ಈ ಸೂತ್ರವು "ಆದ್ಗುಣಃ" ಎಂಬ ಸೂತ್ರಕ್ಕೂ ಮತ್ತು "ಇಕೋಯಣಚಿ" ಎಂಬ ಸೂತ್ರಕ್ಕೂ ಅಪವಾದವಾಗಿದೆ.

## (7) ಪೂರ್ವರೂಪ ಸನ್ಧಿಃ

**(ಪೂರ್ವರೂಪವನ್ನು ವಿಧಿಸುವ ಅಪವಾದ ಸೂತ್ರ)**

**ಸೂತ್ರ 43: ಏಙಃ ಪದಾನ್ತಾದತಿ (6.1.109)**

ವೃತ್ತಿ –ಪದಾನ್ತಾತ್ ಏಙಃ ಅತಿ ಪರೆ ಪೂರ್ವರೂಪಮ್ ಏಕಾದೇಶಃ ಸ್ಯಾತ್।ಹರೇऽವ।

ವಿಷ್ಣೋಽವ।

ಪ.ಛೇ.- ಏಙಃ, ಪದಾನ್ತಾತ್, ಅತಿ।

ಅ.ವ್ಯ. – "ಅಮಿ ಪೂರ್ವಃ"(6.1.107) ಎಂಬ ಸೂತ್ರದಿಂದ ಪೂರ್ವಃ ಎಂಬ ಪದವು ಅನುವೃತ್ತವಾಗುತ್ತದೆ. "ಏಕಃ ಪೂರ್ವಪರಯೋಃ"(6.1.84) ಎಂಬುದು ಅಧಿಕಾರಸೂತ್ರವಾಗಿದೆ.

ಅರ್ಥ –'ಪದಾನ್ತಾತ್' ಎಂಬುದು 'ಏಙಃ' ಎಂಬುದಕ್ಕೆ ವಿಶೇಷಣವಾಗಿದೆ. ಪದಾನ್ತದಲ್ಲಿರುವ 'ಏ'ಕಾರ ಅಥವಾ 'ಓ' (ಏಙ್) ಕಾರಗಳಿಗೆ, 'ಅತ್' (ಹ್ರಸ್ವ 'ಅ'ಕಾರ) ಪರವಾಗಿದ್ದಾಗ, 'ಏ'ಕಾರ ಅಥವಾ 'ಓ'ಕಾರ (ಏಙ್) ಮತ್ತು ಹ್ರಸ್ವ 'ಅ'ಕಾರಗಳ ಸ್ಥಾನದಲ್ಲಿ, ಪೂರ್ವವರ್ಣದಂತಿರುವ ಪೂರ್ವರೂಪವು ಏಕಾದೇಶವಾಗಿ ಬರುತ್ತದೆ. ಇಲ್ಲಿ ತಪರಕರಣ ಮಾಡಿರೋಣದರಿಂದ, ಹ್ರಸ್ವ 'ಅ'ಕಾರವನ್ನೇ ಸ್ವೀಕರಿಸಬೇಕು.

ಉದಾ–1: ಹರೇಽವ ಹರೇ+ಅವ=ಹರ್+(ಏ+ಅ) ವ ಎಂದಿದ್ದಾಗ, 'ಏ' ಕಾರ 'ಅ' ಕಾರಗಳ ಸ್ಥಾನದಲ್ಲಿ ಪೂರ್ವ ವರ್ಣದಂತಿರುವ 'ಏ' ಕಾರವು ಏಕಾದೇಶವಾಗಿ ಬಂದು ಹರೇಽವ ಎಂದಾಗುತ್ತದೆ.

ಉದಾ– 2: ವಿಷ್ಣೋಽವ: ವಿಷ್ಣೋ+ಅವ=ವಿಷ್ಣ್+(ಓ+ಅ) ವ ಎಂದಿದ್ದಾಗ, 'ಓ' ಕಾರ ಮತ್ತು 'ಅ' ಕಾರಗಳ ಸ್ಥಾನದಲ್ಲಿ ಪೂರ್ವ ವರ್ಣದಂತಿರುವ 'ಓ' ಕಾರವು ಏಕಾದೇಶವಾಗಿ ಬಂದು ವಿಷ್ಣೋಽವ ಎಂದಾಗುತ್ತದೆ.

ಇಲ್ಲಿ "ಏಚೋಽಯವಾಯಾವಃ" (6.1.78) ಎಂಬ ಸೂತ್ರದಿಂದ 'ಅಯ್'ಮತ್ತು 'ಅವ್' ಎಂಬ ಆದೇಶಗಳು ಬರಬೇಕಾಗಿತ್ತು. ಅದರೆ ಅಪವಾದವಾಗಿ ಪ್ರಕೃತ ಸೂತ್ರದಿಂದ ಪೂರ್ವರೂಪವು ಬಂದಿದೆ. ಇನ್ನುಮುಂದೆ ಅಚ್–ಸನ್ಧಿಯ ಭಾಗವೇ ಆಗಿರುವ ಪ್ರಕೃತಿಭಾವ ಸನ್ಧಿಯನ್ನು ಆರಂಭಿಸುತ್ತಾನೆ.

## (8) ಪ್ರಕೃತಿಭಾವಸನ್ಧಿಃ

**('ಓ' ಕಾರಾನ್ತ 'ಗೋ" ಶಬ್ದಕ್ಕೆ ಬರುವ ಪ್ರಕೃತಿಭಾವ ಹೇಳುವ ಸೂತ್ರ).**

**ಸೂತ್ರ 44: ಸರ್ವತ್ರ ವಿಭಾಷಾ ಗೋಃ (6.1.122)**

ವೃತ್ತಿ –ಲೋಕೇ ವೇದೇ ಚ ಏಙಂತಸ್ಯ ಗೋಃ ಅತಿ ವಾ ಪ್ರಕೃತಿಭಾವಃ ಪದಾನ್ತೇ। ಗೋಅಗ್ರಮ್। ಗೋಽಗ್ರಮ್। ಏಙನ್ತಸ್ಯ ಕಿಂ? ಚಿತ್ರಗ್ವಗ್ರಮ್। ಪದಾನ್ತೇ ಕಿಂ? ಗೋಃ।

ಅ.ವ್ಯ. – "ಏಙಃ ಪದಾನ್ತಾದತಿ" (6.1.109) ಎಂಬ ಸೂತ್ರದಿಂದ 'ಪದಾನ್ತಾತ್' ಮತ್ತು 'ಅತಿ' ಎಂಬ ಪದಗಳು ಹಾಗೆಯೇ "ಪ್ರಕೃತ್ಯಾನ್ತಃ ಪಾದಮವ್ಯಪರೇ" ಎಂಬ ಸೂತ್ರದಿಂದ 'ಪ್ರಕೃತ್ಯಾ' ಎಂಬ ಪದವೂ ಅನುವೃತ್ತವಾಗುತ್ತದೆ.

ಅರ್ಥ–ಇಲ್ಲಿ 'ಪ್ರಕೃತ್ಯಾ' ಎಂಬುದರಿಂದ ವಿಕಾರವಿಲ್ಲದೇ ಸ್ವಾಭಾವಿಕ ಸ್ವರೂಪದಿಂದಲೇ ಉಳಿಯುವದು ಎಂದರ್ಥ. ಇದನ್ನೇ '**ಪ್ರಕೃತಿಭಾವ**' ಎಂದು ಹೇಳುತ್ತೇವೆ. "ಏಙಃ ಪದಾನ್ತಾದತಿ (6.1.109)" ಎಂಬ ಸೂತ್ರದಲ್ಲಿ 'ಅತಿ' ಶಬ್ದಕ್ಕೆ

ಏನು ಅರ್ಥವೋ ಅದನ್ನೇ ಇಲ್ಲಿಯೂ ತೆಗೆದುಕೊಳ್ಳಬೇಕು. ಅಂದರೆ ಹ್ರಸ್ವ 'ಅ'ಕಾರವು ಪರದಲ್ಲಿದ್ದಾಗ ಎಂದರ್ಥ. 'ಸರ್ವತ್ರ' ಎಂದು ಹೇಳಿರೋಣದ್ದರಿಂದ ವೈದಿಕ ಮತ್ತು ಲೌಕಿಕ ಸಾಹಿತ್ಯದಲ್ಲಿಯೂ ಎಂದು ಅರ್ಥ ಮಾಡಬೆಕು. ಯಾಕೆಂದರೆ ಹಿಂದಿನ ಸೂತ್ರದಲ್ಲಿ "ಅವಪಥಾಸಿ ಚ" – (6.1.121) ವೇದದಲ್ಲಿ ಮಾತ್ರವೆಂದು ಹೇಳಲಾಗಿತ್ತು. ಪಂಚಮ್ಯನ್ತವಾದ 'ಏಙಃ' ಎಂಬುದು 'ಗೋಃ' ಶಬ್ದಕ್ಕೆ ವಿಶೇಷಣವಾಗಿದೆ. ಅದುದ್ದರಿಂದ "ಯೇನ ವಿಧಿಃ ತದನ್ತಸ್ಯ"(1.1.72) ಎಂಬ ಪರಿಭಾಷೆಯಿಂದ, 'ಏಙನ್ತ'ವಾದ 'ಗೋ' ಶಬ್ದದ ನಂತರವೆಂದು ಅರ್ಥ ಮಾಡಬೇಕು. ಲೌಕಿಕ ಸಾಹಿತ್ಯದಲ್ಲಿಯೂ ಮತ್ತು ವೈದಿಕ ಸಾಹಿತ್ಯದಲ್ಲಿಯೂ ಏಙನ್ತವಾದ ಪದಾನ್ತ 'ಗೋ' ಶಬ್ದದನಂತರ (ಅತಿ) ಹ್ರಸ್ವ 'ಅ' ಕಾರ ಪರವಾದಾಗ, ವಿಭಾಷೆಯಿಂದ (ವಿಕಲ್ಪದಿಂದ) ಪ್ರಕೃತಿಭಾವವು ಬರುತ್ತದೆ. ಈ 'ಗೋ' ಶಬ್ದವು ಪಂಚ್ಯಮ್ಯನ್ತ ಪದವಾಗಿದ್ದಾಗ ಮಾತ್ರ ಪ್ರಕೃತಿಭಾವವು ಬರುತ್ತದೆ ಹೊರತು ಪದಾನ್ತವಾಗಿಲ್ಲದಿದ್ದರೆ ಬರುವದಿಲ್ಲ. ವಿಭಾಷಾ ಶಬ್ದದ ಅರ್ಥವನ್ನು "ನವೇತಿ ವಿಭಾಷಾ" ( 1.1.44) ಎಂಬ ಸೂತ್ರದಿಂದ ತಿಳಿದುಕೊಳ್ಳಬೇಕು.

ಉದಾ– 1. ಗೋ+ಅಗ್ರಮ್ (ಆಕಳಿನ ಅಗ್ರಭಾಗ) ಎಂದಿದ್ದಾಗ "ಏಚೋಽಯ ವಾಯಾವಃ" (6.1.78) ಎಂಬ ಸೂತ್ರದಿಂದ 'ಅವ್' ಆದೇಶವು ಬರಬೇಕಾಗಿತ್ತು. ಇದನ್ನು ಬಾಧಿಸಿ "ಏಙಃ ಪದಾನ್ತಾದತಿ" (6.1.109) ಎಂಬ ಸೂತ್ರದಿಂದ ಪೂರ್ವರೂಪವು ಪ್ರಾಪ್ತವಾಗಿತ್ತು. ಇದನ್ನೂ ಬಾಧಿಸಿ "ಸರ್ವತ್ರ ವಿಭಾಷಾ ಗೋಃ" (6.1.122) ಎಂಬ ಸೂತ್ರವು ಪ್ರಾಪ್ತವಾಗಿದೆ. ಇಲ್ಲಿ 'ಗೋ' ಎಂಬುದು ಪದವಾಗಿದೆ. 'ಓ' ಕಾರವು ಏಙನ್ತವಾಗಿರೋಣದ್ದರಿಂದ, ಏಙನ್ತವಾದ 'ಗೋ' ಶಬ್ದದ ಪರದಲ್ಲಿ ಹ್ರಸ್ವ 'ಅ'ಕಾರ ಇರುವುದರಿಂದ, ಪ್ರಕೃತ ಸೂತ್ರದಿಂದ ಪ್ರಕೃತಿಭಾವವು ವಿಕಲ್ಪದಿಂದ ಬಂದು 'ಗೋಅಗ್ರಮ್' ಎಂದಾಗಿದೆ.

ಉದಾ– 2: ಗೋ+ಅಗ್ರಮ್ ಎಂದಿದ್ದಾಗ ಪ್ರಕೃತಿಭಾವ ಬಾರದಿರುವ ಈ ಪಕ್ಷದಲ್ಲಿ, "ಏಙಃ ಪದಾನ್ತಾದತಿ" (6.1.109) ಎಂಬ ಸೂತ್ರದಿಂದ ಪೂರ್ವರೂಪ ಬಂದು 'ಗೋಽಗ್ರಮ್' ಎಂಬ ರೂಪವು ಸಿದ್ಧವಾಗಿದೆ.

(ಪ್ರಕೃತಿಭಾವವು ಬಾರದೇ ಇದ್ದ ಪಕ್ಷದಲ್ಲಿ "ಅವಙ್ ಸ್ಫೋಟಾಯನಸ್ಯ" (6.1.123) ಎಂಬ ಮುಂಬರುವ ಸೂತ್ರದಿಂದ 'ಗವಾಗ್ರಮ್' ಎಂಬ ರೂಪವು ಸಿದ್ಧವಾಗುವದು). ಇಲ್ಲಿ ಗವಾಂ ಅಗ್ರಂ ಎಂಬುದು ಲೌಕಿಕ ವಿಗ್ರಹ ವಾಕ್ಯ. ಇಲ್ಲಿ ಷಷ್ಠ್ಯನ್ತ ಪ್ರತ್ಯಯವು ಲೋಪವಾದಾಗ ಗೋ+ಅಗ್ರಮ್ ಎಂದಾಗುತ್ತದೆ. ವೈದಿಕ ಪ್ರಯೋಗದಲ್ಲಿ ಗೋ+ಆಮ್+ ಅಗ್ರ+ಸು ಎಂದು ಸಮಾಸ ಮಾಡಿದಾಗ ವಿಭಕ್ತಿರೂಪವು ಆಗುತ್ತದೆ. ಆಗಲೂ 'ಗೋ' ಶಬ್ದಕ್ಕೆ 'ಓ'ಕಾರಾನ್ತ ಪದತ್ವವಿರುತ್ತದೆ.

ಏಙನ್ತಸ್ಯ ಕಿಂ? ಅಂದರೆ 'ಗೋ' ಶಬ್ದ ಏಙನ್ತ (ಓ ಕಾರಾನ್ತ) ವಾಗಿಯೇ ಇದೆ. ಹಾಗಿರುವಾಗ ಏಙನ್ತವಾದ 'ಗೋ' ಶಬ್ದಕ್ಕೆ ಎಂದು ಪ್ರತ್ಯೇಕವಾಗಿ ಯಾಕೆ ಹೇಳಬೇಕು? ಎಂದರೆ ಸಮಾಧಾನ ಹೀಗಿದೆ. 'ಚಿತ್ರಾಃ ಗಾವಃ ಯಸ್ಯ ಸಃ' ಎಂಬ ವಿಗ್ರಹವಾಕ್ಯದಿಂದ ಸಮಾಸ ಮಾಡುವಾಗ ಚಿತ್ರಗುಃ ಎಂದಾಗುತ್ತದೆ. (ಹಲವು ಬಣ್ಣದ ಆಕಳುಗಳನ್ನುಳ್ಳವನು

ಎಂದರ್ಥ). ಚಿತ್ರಗೋಃ ಅಗ್ರಮ್ ಎಂಬಲ್ಲಿ ಸಮಾಸ ಮಾಡುವಾಗ ಚಿತ್ರಗು+ಅಗ್ರಮ್ ಎಂದಾಗಿ ಚಿತ್ರಗ್ವಗ್ರಮ್ ಎಂದಾಗುತ್ತದೆ. ಇಲ್ಲಿ 'ಯಣ್' ಸನ್ಧಿಯಾಗಿದೆ. ಅರ್ಥಾತ್ ಇಲ್ಲಿ ಅನಿಷ್ಟರೂಪಗಳಾದ ಪ್ರಕೃತಿಭಾವವಾಗಲೀ, (ಚಿತ್ರಗು+ಅಗ್ರಮ್) ಪೂರ್ವರೂಪ ವಾಗಲೀ (ಚಿತ್ರಗುಗ್ರಮ್) ಬಂದಿಲ್ಲ. ಕಾರಣ ಚಿತ್ರಗು ಶಬ್ದದಲ್ಲಿರುವ 'ಗು' ಶಬ್ದವು 'ಗೋ' ಶಬ್ದವೇ ಹೌದು ಆದರೆ ಏಜನ್ತವಾದ 'ಗೋ' ಶಬ್ದವಲ್ಲ. ಅದರ ಬದಲಾಗಿ ಹ್ರಸ್ವರೂಪವನ್ನು ಹೊಂದಿದ 'ಉ' ಕಾರಾನ್ತ 'ಗೋ' ಶಬ್ದವಾಗಿದೆ. ಇದಕ್ಕೆ ಪದಾನ್ತತ್ವವಿದ್ದರೂ 'ಓ' ಕಾರಾನ್ತ (ಏಜನ್ತ) ಆಗಿಲ್ಲ.

ಪದಾನ್ತೇ ಕಿಮ್? ಗೋಃ। ಪದಾನ್ತದಲ್ಲಿ ಎಂದು ಯಾಕೆ ಹೇಳಬೇಕು?

ಗೋ+ಅಸ್ ಎಂದಿದ್ದಾಗ, 'ಗೋ' ಎಂಬುದು 'ಓ'ಕಾರಾನ್ತವಾಗಿದ್ದರೂ ಪದಾನ್ತ ವಾಗಿಲ್ಲ. ಇದು ಕೇವಲ ಪ್ರಾತಿಪದಿಕ. ಆದ್ದರಿಂದ 'ಗೋಅಸ್' ಎಂದು ಪ್ರಕೃತಿಭಾವ ಹೊಂದುವದಿಲ್ಲ. ಗೋ+ಅಸ್ ಎಂದಿದ್ದಾಗ, ಪೂರ್ವರೂಪದಿಂದ 'ಗೋಸ್' ಎಂದಾಗಿ 'ಸ್' ಕಾರಕ್ಕೆ ರುತ್ವ–ವಿಸರ್ಗಗಳು ಬಂದು 'ಗೋಃ' ಎಂದು ಸುಬನ್ತ ಪದವಾಗುತ್ತದೆ.

**(ಸರ್ವಾದೇಶವನ್ನು ಹೇಳುವ ಪರಿಭಾಷಾ ಸೂತ್ರ)**

**ಸೂತ್ರ 45: ಅನೇಕಾಲ್ ಶಿತ್ ಸರ್ವಸ್ಯ (1.1.55)**

ವೃತ್ತಿ –ಇತಿ ಪ್ರಾಪ್ತೇ।

ಅರ್ಥ – ಯಾವ ಒಂದು ಆದೇಶವು ಅನೇಕ ವ್ಯಞ್ಜನಗಳಿಂದ ಕೂಡಿದ್ದಾಗಲೀ ಅಥವಾ ಶಕಾರವನ್ನು ಇತ್ತಾಗಿಯುಳ್ಳದ್ದಾಗಲೀ ಅಂತಹ ಆದೇಶವು ಸ್ಥಾನಿಯನ್ನು ಸಂಪೂರ್ಣವಾಗಿ ತೆಗೆದುಹಾಕಿ ಅದರ ಜಾಗದಲ್ಲಿ ಬರುತ್ತದೆ.

ಅನೇಕಾಲ್‌ಗೆ ಉದಾ– "ಅಸ್ತೇರ್ಭೂಃ" (2.4.52) ಎಂಬ ಸೂತ್ರದಿಂದ 'ಅಸ್' ಧಾತುವಿಗೆ 'ಭೂಃ' ಎಂಬ ಆದೇಶವು ಬರುತ್ತದೆ. ಇಲ್ಲಿ 'ಭೂಃ' ಎಂಬ ಆದೇಶವು ಅನೇಕಾಲ್ ಆಗಿರುವದರಿಂದ, ಸ್ಥಾನಿಯಾದ 'ಅಸ್' ಧಾತುವನ್ನು ಸಂಪೂರ್ಣವಾಗಿ ತೆಗೆದುಹಾಕಿ ಅದರ ಜಾಗದಲ್ಲಿ ಬರುತ್ತದೆ. ಆಗ 'ಭೂಃ' ಎಂದು ರೂಪವಾಗುತ್ತದೆ.

ಶ್–ಕಾರವನ್ನು ಇತ್ತಾ(ಶಿತ್)ಗಿಯುಳ್ಳದ್ದಕ್ಕೆ ಉದಾ– "ಅಷ್ಟಾಭ್ಯ ಔಶ್" (7.1.21) ಎಂಬ ಸೂತ್ರದಿಂದ 'ಅಷ್ಟಾ + ಅಸ್(ಜಸ್)' ಎಂಬಲ್ಲಿ, ಶ್–ಕಾರವನ್ನು ಇತ್ತಾ (ಶಿತ್)ಗಿ ಇರುವ 'ಔಶ್' ಎಂಬ ಆದೇಶವು 'ಅಸ್' ಎಂಬ ಸ್ಥಾನಿಯನ್ನು ಸಂಪೂರ್ಣವಾಗಿ ತೆಗೆದುಹಾಕಿ ಅದರ ಜಾಗದಲ್ಲಿ ಬರುತ್ತದೆ. ಆಗ 'ಅಷ್ಟೌ' ಎಂದು ರೂಪವಾಗುತ್ತದೆ.

ವಿಶೇಷಃ – "ಅವಙ್ ಸ್ಫೋಟಾಯನಸ್ಯ" (6.1.123) ಎಂಬ ಸೂತ್ರದಿಂದ "ಅವಙ್" ಎಂಬ ಆದೇಶವು ವಿಧಿಸಲಾಗುತ್ತದೆ. ಈ ಆದೇಶವು ಯಾವರೀತಿಯಲ್ಲಿ ಸ್ಥಾನಿಯನ್ನು ತೆಗೆದುಹಾಕಿ ಅದರ ಜಾಗದಲ್ಲಿ ಬರುತ್ತದೆ ಎಂಬುದನ್ನು ತಿಳಿಸುವದಕ್ಕಾಗಿ ಪ್ರಕೃತಸೂತ್ರವೂ ಮತ್ತು ಮುಂದಿನ ಸೂತ್ರವೂ ಹೊರಟಿವೆ.

**(ಸರ್ವಾದೇಶಕ್ಕೆ ಅಪವಾದವಾಗಿ ಅನ್ತಾದೇಶವನ್ನು ನಿಯಮಿಸುವ ಪರಿಭಾಷಾ ಸೂತ್ರ)**

**ಸೂತ್ರ 46: ಙಿಚ್ಚ (1.1.53)**

ವೃತ್ತಿ –ಙಿತ್ ಅನೇಕಾಲ್ ಅಪಿ ಅನ್ತ್ಯಸ್ಯೈವ ಸ್ಯಾತ್।

ಅ.ವ್ಯ. – "ಅಲೋಽನ್ತ್ಯಸ್ಯ" (1.1.52) ಎಂಬ ಸೂತ್ರವು ಅನುವೃತ್ತವಾಗಿದೆ.

ಪ. ಚ್ಛೇ – ಙಿತ್, ಚ।

ಅರ್ಥ – ಹಿಂದಿನ ಸೂತ್ರದಲ್ಲಿ ಅನೇಕಾಲ್ ಆದೇಶವು ಸ್ಥಾನಿಯನ್ನು ಸಂಪೂರ್ಣವಾಗಿ ತೆಗೆದು ಹಾಕಿ ಬರುತ್ತದೆ ಎಂದು ಹೇಳಿರೋಣದ್ದರಿಂದ, 'ಅವಙ್' ಇದು ಅನೇಕಾಲ್ ಆಗಿರೋಣದ್ದರಿಂದ, "ಅವಙ್ ಸ್ಫೋಟಾಯನಸ್ಯ" (6.1.123) ಎಂಬ ಸೂತ್ರದಲ್ಲಿ 'ಅವಙ್' ಆದೇಶವು ಸ್ಥಾನಿಯನ್ನು ಸಂಪೂರ್ಣವಾಗಿ ತೆಗೆದುಹಾಕಿ ಬರಬೇಕು, ಆದರೆ ಅದಕ್ಕೆ ಅಪವಾದವಾಗಿ ಪ್ರಕೃತ ಸೂತ್ರವು ಹೊರಟಿದೆ. ಆದ್ದರಿಂದ ಸ್ಥಾನಿ, ಅನೇಕಾಲ್ ಆಗಿ ಇದ್ದರೂ 'ಙಿತ್' ಆಗಿದ್ದರೆ ಅನ್ತ್ಯವರ್ಣಕ್ಕೇ ಆದೇಶವಾಗಿ ಬರುತ್ತದೆ ಎಂದರ್ಥ. "ಅನೇಕಾಲ್ ಆಗಿ ಇದ್ದರೂ" ಎಂದು ಹೇಳಿರೋಣದ್ದರಿಂದ, ಈ ಸೂತ್ರವು "ಅನೇಕಾಲ್ ಶಿತ್ ಸರ್ವಸ್ಯ" (1.1.55) ಎಂಬ ಸೂತ್ರಕ್ಕೆ ಅಪವಾದವಾಗಿದೆ. ಎಂಬುದನ್ನು ವೃತ್ತಿಯು ಸ್ಪಷ್ಟಪಡಿಸಿದೆ.

**('ಗೋ' ಶಬ್ದಕ್ಕೆ 'ಅವಙ್' ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ 47: ಅವಙ್ ಸ್ಫೋಟಾಯನಸ್ಯ (6.1.123)**

ವೃತ್ತಿ –ಪದಾನ್ತೇ ಏಙನ್ತಸ್ಯ ಗೋಃ ಅವಙ್ ವಾ ಅಚಿ। ಗವಾಗ್ರಮ್। 'ಗೋಽಗ್ರಮ್'। ಪದಾನ್ತೇ ಕಿಮ್? ಗವಿ।

ಅ.ವ್ಯ. – "ಏಙಃ ಪದಾನ್ತಾದತಿ"( 6.1.109) ಎಂಬ ಸೂತ್ರದಿಂದ 'ಏಙಃ' ಮತ್ತು 'ಪದಾನ್ತಾತ್' ಎಂಬ ಎರಡು ಪದಗಳು ಅನುವೃತ್ತವಾಗಿವೆ. ಮತ್ತು "ಇಕೋಯಣಚಿ" (6.1.77) ಎಂಬ ಸೂತ್ರದಿಂದ 'ಅಚಿ' ಎಂಬ ಪದವೂ ಹಾಗೆಯೇ "ಸರ್ವತ್ರ ವಿಭಾಷಾ ಗೋಃ" (6.1.122) ಎಂಬ ಸೂತ್ರದಿಂದ ಗೋಃ ಎಂಬ ಪದವು ಅನುವೃತ್ತವಾಗಿವೆ.

ಅರ್ಥ – ಪದಾನ್ತದಲ್ಲಿರುವ 'ಏಙನ್ತ' ವಾದ 'ಗೋ' ಶಬ್ದಕ್ಕೆ 'ಅಚ್' ಪರವಾದಾಗ 'ಅವಙ್' ಆದೇಶವು ವಿಕಲ್ಪವಾಗಿ ಬರುತ್ತದೆ.

**ಉದಾ– 1:** ಗೋ + ಅಗ್ರಮ್ ಎಂದಿದ್ದಾಗ 'ಏಙನ್ತ' ವಾದ 'ಗೋ' ಶಬ್ದಕ್ಕೆ 'ಅಚ್' ವರ್ಣ (ಅಗ್ರಮ್)ವು ಪರದಲ್ಲಿ ಇರುವದರಿಂದ 'ಗೋ' ಶಬ್ದದ ಅನ್ತ್ಯವರ್ಣವಾದ 'ಓ' ಕಾರಕ್ಕೆ 'ಅವಙ್' ಆದೇಶವಾಗಿ ಬರುತ್ತದೆ. ಇದರಲ್ಲಿ 'ಙ್' ಕಾರ 'ಇತ್' ಆಗಿರುವದರಿಂದ 'ಅವ' ಮಾತ್ರ ಉಳಿಯುತ್ತದೆ. ಆಗ ಗ್ + ಅವ + ಅಗ್ರಮ್ = ಗವಾಗ್ರಮ್ ಎಂಬ ರೂಪವಾಗುತ್ತದೆ. ಇದು ವೈಕಲ್ಪಿಕ ರೂಪ. 'ಅವಙ್'

ಆದೇಶ ಬಾರದ ಪಕ್ಷದಲ್ಲಿ, 'ಏಙಃ ಪದಾನ್ತಾದತಿ" (6.1.109) ಸೂತ್ರದಿಂದ ಪೂರ್ವರೂಪ ಬಂದು 'ಗೋऽಗ್ರಮ್' ಎಂದು ರೂಪವಾಗುತ್ತದೆ. ವೈಕಲ್ಪಿಕವಾದ ಪ್ರಕೃತಿ ಭಾವ ಬಂದು 'ಗೋಅಗ್ರಮ್' ಎಂದು ರೂಪವಾಗುತ್ತದೆ ಎಂಬುದನ್ನು "ಸರ್ವತ್ರ ವಿಭಾಷಾ ಗೋಃ" (6.1.122) ಎಂಬ ಸೂತ್ರದ ವ್ಯಾಖ್ಯಾನದಲ್ಲಿ ಹೇಳಲಾಗಿದೆ.

ಪದಾನ್ತೇ ಕಿಮ್? ಎಂದು ಏಕೆ ಹೇಳಬೇಕು ಎಂದರೆ, ಪದಾನ್ತೇ ಎಂದು ಹೇಳಿದ್ದರಿಂದ 'ಗೋ + ಜಿ' ಎಂದಿದ್ದಾಗ, 'ಜಿ' ಯಲ್ಲಿಯ 'ಙ್' ಕಾರವು ಇತ್ತಾಗಿ 'ಇ' ಮಾತ್ರ ಉಳಿದು 'ಗೋ + ಇ' ಎಂದಿದ್ದಾಗ "ಏಚೋऽಯವಾಯಾವಃ" (6.1.78) ದಿಂದ 'ಓ' ಕಾರಕ್ಕೆ 'ಅವ್' ಆದೇಶ ಬಂದು 'ಗ್ + ಅವ್+ ಇ' ಎಂದಾಗಿ 'ಗವಿ' ಎಂಬ ಇಷ್ಟ ರೂಪವು ಸಿದ್ಧವಾಗುತ್ತದೆ.

ಇಲ್ಲದಿದ್ದರೆ– ಗೋ+ಇ ಎಂದಿದ್ದಾಗ ಪದಾನ್ತವಲ್ಲದ (ಪ್ರಾತಿಪದಿಕವಾದ) 'ಗೋ' ಶಬ್ದದ 'ಓ'ಕಾರದ ನನ್ತರ 'ಅಚ್' ವರ್ಣವಾದ 'ಇ'ಕಾರವು ಪರದಲ್ಲಿರುವದರಿಂದ, 'ಅವಙ್' ಆದೇಶ ಬಂದು 'ಗ್+ಅವಙ್+ಇ' ಎಂದಾಗಿ (ಗ್+ಅವ+ಇ) ಗವೇ ಎಂಬ ಅನಿಷ್ಟ ರೂಪವು ವಿಕಲ್ಪದಿಂದ ಸಿದ್ಧವಾಗುತ್ತಿತ್ತು. ಈ ದೋಷವನ್ನು ಪರಿಹರಿಸುವದಕ್ಕಾಗಿ, 'ಪದಾನ್ತೇ' ಎಂದು ಹೇಳಲಾಗಿದೆ. ಸ್ಫೋಟಾಯನ ಎಂಬವರು ಪ್ರಾಚೀನ ಆಚಾರ್ಯರು. ಇವರಿಗೂ ಪಾಣಿನಿಯವರು ಮನ್ನಣೆಯನ್ನು ಕೊಟ್ಟಿದ್ದಾರೆ.

**('ಗೋ' ಶಬ್ದಕ್ಕೆ ಇನ್ದ್ರ ಶಬ್ದಪರದಲ್ಲಿದಾಗ 'ಅವಙ್' ಆದೇಶ ವಿಧಿಸುವ ಸೂತ್ರ)**

**ಸೂತ್ರ 48: ಇನ್ದ್ರೇಚ 6.1.124)**

ವೃತ್ತಿ –ಗೋಃ ಅವಙ್ ಸ್ಯಾತ್ ಇಂದ್ರೇ ।ಗವೇನ್ದ್ರಃ।

ಅ.ವ್ಯ. – "ಸರ್ವತ್ರ ವಿಭಾಷಾ ಗೋಃ " (6.1.122) ಎಂಬ ಸೂತ್ರದಿಂದ ಗೋಃ ಎಂಬ ಪದವೂ ಹಾಗೆಯೇ "ಅವಙ್ ಸ್ಫೋಟಾಯನಸ್ಯ" (6.1.123) ಎಂಬ ಸೂತ್ರದಿಂದ 'ಅವಙ್' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ–'ಗೋ' ಶಬ್ದಕ್ಕೆ 'ಇನ್ದ್ರ' ಶಬ್ದಪರದಲ್ಲಿದ್ದಾಗ, ಅವಙ್ ಆದೇಶವು ಬರುತ್ತದೆ.

ಗೋ=+ಇನ್ದ್ರಃ ಎಂದಿದ್ದಾಗ 'ಗೋ' ಶಬ್ದದ ಅನ್ತ್ಯ ವರ್ಣವಾದ 'ಓ'ಕಾರಕ್ಕೆ 'ಅವ' (ಅವಙ್) ಆದೇಶ ಬಂದು ಗ್+ಅವ+ಇನ್ದ್ರಃ=ಗವ+ಇನ್ದ್ರಃ ಎಂದಿದ್ದಾಗ ಗುಣ ಆದೇಶವಾಗಿ ಬಂದು ಗವೇನ್ದ್ರಃ ಎಂದು ರೂಪವಾಗುತ್ತದೆ.

**(ಪ್ಲುತವನ್ನು ಆದೇಶವಾಗಿ ವಿಧಿಸುವ ಸೂತ್ರ)**

**ಸೂತ್ರ 49: ದೂರಾದ್ಧೂತೇ ಚ (8.2.84)**

ವೃತ್ತಿ –ದೂರಾತ್ ಸಂಬೋಧನೇ ವಾಕ್ಯಸ್ಯ ಟೇಃ ಪ್ಲುತೋ ವಾ ಸ್ಯಾತ್।

ಪ.ಚ್ಛೇ– ದೂರಾತ್, ಹೂತೇ, ಚ ।

ಅ.ವ್ಯ. – "ವಾಕ್ಯಸ್ಯ ಟೇಃ ಪ್ಲುತಃ ಉದಾತ್ತಃ" ಎಂಬುದು ಅಧಿಕಾರ ಸೂತ್ರವಾಗಿದೆ.

ಅರ್ಥ - ಈ ಸೂತ್ರದಿಂದ ದೂರದಿಂದ ಸಂಬೋಧಿಸುವ ವಾಕ್ಯದಲ್ಲಿರುವ ಸಂಬೋಧನಾ ಪದದ ಹ್ರಸ್ವ ಮತ್ತು ದೀರ್ಘ 'ಟಿ' ಗಳಿಗೆ ಉದಾತ್ತವಾದ ಪ್ಲುತವು ವಿಕಲ್ಪದಿಂದ ಆದೇಶವಾಗಿ ಬರುತ್ತದೆ. ಸಂಬೋಧನೆ ಎಂದರೆ ದೂರದಲ್ಲಿರುವ ವ್ಯಕ್ತಿಯನ್ನು ಅಧಿಕ ಪ್ರಯತ್ನದಿಂದ ಉಚ್ಚರಿಸಿ ಅಹ್ವಾನಿಸುವದು ಎಂದರ್ಥ.

ಉದಾ- ಆಗಚ್ಛ ಕೃಷ್ಣ(3)! ಎಂಬುದು ವಾಕ್ಯ. ಇದರಲ್ಲಿ ಕೃಷ್ಣನು ಸಂಬೋಧಿಸಲ್ಪಡುವದರಿಂದ (ಹೇ ಕೃಷ್ಣನೇ(3)), ಆ ಕೃಷ್ಣ ಶಬ್ದದ ಕೊನೆಯಲ್ಲಿರುವ 'ಟಿ'(ಅ)ಗೆ ಉದಾತ್ತವಾದ ಪ್ಲುತವು ಬಂದಿದೆ. ಪ್ಲುತವು ಬಾರದ ವಿಕಲ್ಪ ಪಕ್ಷದ ಉದಾಹರಣೆಯಾದ, ಆಗಚ್ಛ ಹೇ ಕೃಷ್ಣಾತ್ರ (ಕೃಷ್ಣ+ಅತ್ರ=ಕೃಷ್ಣಾತ್ರ) ಗೌಶ್ಚರತಿ ಎಂಬ ವಾಕ್ಯದಲ್ಲಿ 'ಸವರ್ಣದೀರ್ಘ' ಬಂದು ಕೃಷ್ಣಾತ್ರ ಎಂದಾಗುತ್ತದೆ.

**(ಪ್ಲುತ ಮತ್ತು ಪ್ರಗೃಹ್ಯಗಳಗೆ ಪ್ರಕೃತಿಭಾವವನ್ನು ವಿಧಿಸುವ ಸೂತ್ರ)**

**ಸೂತ್ರ 50: ಪ್ಲುತ-ಪ್ರಗೃಹ್ಯಾ ಅಚಿ ನಿತ್ಯಮ್ (6.1.125)**

ವೃತ್ತಿ –ಏತೇ ಅಚಿ ಪ್ರಕೃತ್ಯಾ ಸ್ಯುಃ। ಆಗಚ್ಛ ಕೃಷ್ಣಾ! (3) ಅತ್ರ ಗೌಃ ಚರತಿ ।

ಅ.ವ್ಯ. - "ಪ್ರಕೃತ್ಯಾನ್ತಃ ಪಾದಂ ಅ-ವ್ಯಪರೇ" (6.1.115) ಎಂಬ ಸೂತ್ರದಿಂದ 'ಪ್ರಕೃತ್ಯಾ' ಎಂಬ ಪದವು ಅನುವೃತ್ತವಾಗುತ್ತದೆ. (ಅ-ವ್ಯಪರೇ ಎಂದರೆ ಅತಿ ಪರೇ ನ ತು 'ವ್'ಕಾರ-'ಯ್'ಕಾರ ಪರೇಽಪಿ ಎಂದರ್ಥ).

ಅರ್ಥ - 'ಅಚ್' ವರ್ಣಗಳು ಅವ್ಯವಹಿತವಾಗಿ ಪರದಲ್ಲಿದ್ದಾಗ (ಅಚಿ), ಪೂರ್ವದಲ್ಲಿರುವ ಪ್ಲುತಗಳೂ ಮತ್ತು ಪ್ರಗೃಹ್ಯಗಳೂ ನಿತ್ಯವಾಗಿ 'ಪ್ರಕೃತಿಭಾವದಿಂದ' ಇರುತ್ತವೆ (ಸನ್ಧಿವಿಕಾರವಾಗುವದಿಲ್ಲ). ಹಿಂದಿನ ಸೂತ್ರದಲ್ಲಿ 'ಟಿ' ಗೆ ಪ್ಲುತವಿದ್ದಾಗ, ಪ್ರಕೃತಿಭಾವಕ್ಕೆ, ಮತ್ತು ಪ್ಲುತವಿಲ್ಲದಿದ್ದಾಗ ಸವರ್ಣದೀರ್ಘಸನ್ಧಿಗೆ ಅವಕಾಶವಿದೆ. ಆದರೆ ಈ ಸೂತ್ರದಲ್ಲಿ, ಪ್ಲುತವೇ ಇರುವುದರಿಂದ ನಿತ್ಯವಾಗಿ ಪ್ರಕೃತಿಭಾವವೇ ಬರುತ್ತದೆ. ಇಲ್ಲಿ ಪ್ಲುತ-ಪ್ರಗೃಹ್ಯಾಃ ಎಂದರೆ ಪ್ಲುತಾಶ್ಚ ಪ್ರಗೃಹ್ಯಾಶ್ಚ ಎಂದು ವಿಗ್ರಹವಾಕ್ಯ.

**( ಪ್ರಗೃಹ್ಯ ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ 51. ಈದೂದೇದ್ ದ್ವಿವಚನಂ ಪ್ರಗೃಹ್ಯಮ್ (1.1.11)**

ವೃತ್ತಿ –ಈತ್-ಊತ್-ಏತ್-ಅನ್ತಂ ದ್ವಿವಚನಂ ಪ್ರಗೃಹ್ಯ-ಸಂಜ್ಞಂ ಸ್ಯಾತ್ । ಹರೀ ಏತೌ । ವಿಷ್ಣೂ ಇಮೌ । ಗಂಗೇ ಅಮೂ।

ಪ.ಚ್ಛೇ - ಈತ್-ಊತ್-ಏತ್ ದ್ವಿವಚನಂ, ಪ್ರಗೃಹ್ಯಮ್ ।

ಅರ್ಥ - 'ಈ' ಕಾರಾನ್ತ ದ್ವಿವಚನ, 'ಊ' ಕಾರಾನ್ತ ದ್ವಿವಚನ ಮತ್ತು 'ಏ' ಕಾರಾನ್ತ ದ್ವಿವಚನ ಶಬ್ದಗಳಿಗೆ 'ಪ್ರಗೃಹ್ಯ' ವೆಂದು ಹೆಸರು. ಇವುಗಳಿಗೆ 'ಅಚ್' ವರ್ಣವು ಪರದಲ್ಲಿದ್ದಾಗ, ಪ್ರಕೃತ ಸೂತ್ರದಿಂದ 'ಪ್ರಗೃಹ್ಯ' ಸಂಜ್ಞೆ ಬಂದು 'ಪ್ರಕೃತಿ'ಭಾವವು ಬರುತ್ತದೆ. ಈತ್-ಊತ್-ಏತ್ ಎಂಬ ಮೂರು ಶಬ್ದಗಳು ತಪರಕರಣದಿಂದ ನಿರ್ದೇಶಿಸಲ್ಪಟ್ಟಿರುವದರಿಂದ, ದ್ವಿಮಾತ್ರಕ ವರ್ಣಗಳಾದ ಈ-ಊ-ಏಗಳನ್ನು

ಸೂಚಿಸುತ್ತವೆ. ಈತ್‌ಚ-ಊತ್‌ಚ-ಏತ್‌ಚ ಈದೂದೇತ್ ಎಂಬುದು ಸಮಾಹಾರ-ದ್ವಂದ್ವ, ಮತ್ತು ಇದು ದ್ವಿವಚನಂ ಎಂಬುದಕ್ಕೆ ವಿಶೇಷಣವಾಗುತ್ತದೆ.

"ಯೇನ ವಿಧಿಸ್ತದನ್ತಸ್ಯ" (1.1.72) ಎಂಬ ಪರಿಭಾಷೆಯಿಂದ ಈದೂದೇತ್ ಎಂಬ ಶಬ್ದವು ಈದನ್ತ, ಊದನ್ತ, ಮತ್ತು ಏದನ್ತ ವೆಂದು ಅರ್ಥ ಮಾಡಲಾಗಿದೆ.

ಉದಾ-1. ಹರೀ + ಏತೌ ಎಂದಿದ್ದಾಗ, ಪ್ರಕೃತಸೂತ್ರದಿಂದ ನಿತ್ಯವಾಗಿ 'ಪ್ರಗೃಹ್ಯ'ಸಂಜ್ಞೆ ಬಂದು ಪ್ರಕೃತಿಭಾವ ಬರುತ್ತದೆ. ಆಗ 'ಹರೀ ಏತೌ' ಎಂದು ರೂಪವಾಗುತ್ತದೆ. ಹಿಂದಿನ ಸೂತ್ರದಲ್ಲಿ 'ನಿತ್ಯಂ' ಎಂದು ಹೇಳಿರೋಣದ್ದರಿಂದ ಇಲ್ಲಿ ನಿತ್ಯವಾಗಿ 'ಪ್ರಕೃತಿಭಾವ' ಬರುತ್ತದೆ. ಇಲ್ಲದಿದ್ದರೆ "ಇಕೋಯಣಚಿ" (6.1.77) ಎಂಬ ಸೂತ್ರದಿಂದ 'ಯಣಾದೇಶದಿಂದ' 'ಹರ್ಯೇತೌ' ಎಂಬ ಅನಿಷ್ಟರೂಪವು ಬರುತ್ತಿತ್ತು. ಇದೇರೀತಿಯಲ್ಲಿ ಎರಡನೆಯ ಮತ್ತು ಮೂರನೆಯ ಉದಹರಣೆಗಳಾದ ವಿಷ್ಣೂ ಇಮೌ। ಗಂಗೇ ಅಮೂ। ಎಂಬಲ್ಲಿ ಕೂಡ ಪ್ರಕೃತಿಭಾವವು ನಿತ್ಯವಾಗಿ ಬರುತ್ತದೆ. ಇಲ್ಲದಿದ್ದರೆ, 'ವಿಷ್ಣ್ವಿಮೌ' (ಯಣ್-ಸನ್ಧಿ) ಮತ್ತು 'ಗಂಗೇಽಮೂ' (ಪೂರ್ವರೂಪ-ಸನ್ಧಿಃ) ಎಂಬ ಅನಿಷ್ಟರೂಪಗಳಾಗುತ್ತಿತ್ತು.

**('ಅದಸ್' ಶಬ್ದಸ್ವರೂಪದಲ್ಲಿ ಪ್ರಗೃಹ್ಯಸಂಜ್ಞೆಯನ್ನು ಹೇಳುವ ಸೂತ್ರ)**

**ಸೂತ್ರ 52. ಅದಸೋ ಮಾತ್ (1.1.12)**

ವೃತ್ತಿ -ಅಸ್ಮಾತ್ ಪರೌ ಈತ್-ಊತೌ ಪ್ರಗೃಹ್ಯೌ ಸ್ತಃ । ಅಮೀ ಈಶಾಃ । (ರಾಮಕೃಷ್ಣೌ) ಅಮೂ ಆಸಾತೇ । ಮಾತ್ ಕಿಮ್? ಅಮುಕೇಽತ್ರ ।

ಪ.ಛೇ.- ಅದಸಃ, ಮಾತ್ ।

ಅ.ವೃ. -"ಈದೂದೇದ್ ದ್ವಿವಚನಂ ಪ್ರಗೃಹ್ಯಮ್" (1.1.11) ಎಂಬ ಸೂತ್ರದಿಂದ 'ಈದೂತ್' ಮತ್ತು 'ಪ್ರಗೃಹ್ಯಂ' ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ - ಅದಸ್ ಶಬ್ದದ ಅವಯವವಾದ 'ಮ್' ಕಾರಕ್ಕೆ ಪರದಲ್ಲಿರುವ 'ಏ' ಕಾರದ ಸಂಭವವು ಅವ್ಯವಹಿತ ಪರದಲ್ಲಿ ಇಲ್ಲದಿರುವದರಿಂದ, 'ಈದೂತ್'ಗಳ ಜೊತೆಗೆ 'ಏತ್' ವರ್ಣವನ್ನು ಅನುವೃತ್ತಿ ಮಾಡಿಕೊಳ್ಳಲಾಗಿಲ್ಲ.

'ಅದಸ್' ಶಬ್ದದ ಅವಯವವಾದ 'ಮ್' ಕಾರಕ್ಕಿಂತ ಪರದಲ್ಲಿರುವ 'ಈ'ಕಾರ 'ಊ' ಕಾರಗಳು ಮಾತ್ರ 'ಪ್ರಗೃಹ್ಯ' ಸಂಜ್ಞೆಯನ್ನು ಹೊಂದಿರುವವು.

ಉದಾ-1. ಅಮೀ+ಈಶಾಃ ಎಂದಿದ್ದಾಗ, 'ಅದಸ್' ಶಬ್ದದ 'ಮ್'ಕಾರದ ನಂತರ ಅವ್ಯವಹಿತ ಪರದಲ್ಲಿ 'ಈ'ಕಾರವು ಇರುವದರಿಂದ ಪ್ರಕೃತಸೂತ್ರದಿಂದ 'ಪ್ರಕೃತಿಭಾವ'ವು ನಿತ್ಯವಾಗಿ ಬಂದು 'ಅಮೀ ಈಶಾಃ' ಎಂದು ರೂಪವಾಗಿದೆ. ಈ ಸೂತ್ರದಲ್ಲಿ 'ಅದಸ್' ಶಬ್ದದ 'ಮ್'ಕಾರೋತ್ತರ 'ಈ'ಕಾರವು ದ್ವಿವಚನವಾಗಿಲ್ಲದಿದ್ದರೂ 'ಪ್ರಕೃತಿಭಾವವು' ಬಂದಿದೆ.

ಉದಾ-2. (ರಾಮಕೃಷ್ಣೌ) ಅಮೂ+ಆಸಾತೇ ಎಂಬಲ್ಲಿ 'ಅದಸ್' ಶಬ್ದದ 'ಮ್'

ಕಾರದ ನಂತರ ಅವ್ಯವಹಿತ ಪರದಲ್ಲಿ 'ಊ' ಕಾರವು ಇರುವದರಿಂದ ಪ್ರಕೃತಸೂತ್ರದಿಂದ 'ಪ್ರಕೃತಿಭಾವ'ವು ನಿತ್ಯವಾಗಿ ಬಂದು (ರಾಮಕೃಷ್ಣೌ) ಅಮೂ ಆಸಾತೇ ಎಂದು ರೂಪವಾಗಿದೆ.

ವಿಶೇಷ – ಇಲ್ಲಿ ಉದಾಹರಣೆಗಳಲ್ಲಿ ಅಪೇಕ್ಷಿತವಾಗಿರುವದು ಲಿಙ್ಗ-ವಚನಗಳ ನಿಯಮವಲ್ಲ. 'ಅದಸ್' ಶಬ್ದವಾಗಿದ್ದು 'ಮ್'ಕಾರೋತ್ತರ 'ಈ'ಕಾರ 'ಊ'ಕಾರ ಗಳಿರಬೇಕು, ಮತ್ತು ಅದರಪರದಲ್ಲಿ 'ಅಚ್' ವರ್ಣವಿರಬೇಕು. ಈ ಎರಡು ಉದಾಹರಣೆಗಳಲ್ಲೂ 'ಪ್ರಕೃತಿಭಾವವು' ನಿತ್ಯವಾಗಿರೋಣದ್ದರಿಂದ, ಬೇರೆ ಸನ್ಧಿಗಳಿಗೆ ಅವಕಾಶವಿಲ್ಲ.

ಮಾತ್ ಎಂದು ಏಕೆ ಹೇಳಿದೆ ಎಂದರೆ, ಅಮುಕೇಽತ್ರ ಎಂಬಲ್ಲಿಯೂ 'ಅಮುಕೇ ಅತ್ರ' ಎಂಬ ಅನಿಷ್ಟ 'ಪ್ರಕೃತಿಭಾವ'ವು ಬರುತ್ತಿತ್ತು. ಇದು ಅನಿಷ್ಟ ರೂಪ. ಯಾಕೆಂದರೆ, 'ಅಮುಕೇ' ಎಂಬಲ್ಲಿ 'ಏ'ಕಾರವು ಅವ್ಯವಹಿತವಾದ 'ಮ್'ಕಾರೋತ್ತರವರ್ತಿಯಾಗಿಲ್ಲ. ಅಂದರೆ 'ಮ್' ಕಾರ 'ಏ' ಕಾರಗಳ ಮಧ್ಯದಲ್ಲಿ 'ಉ' ಕಾರ 'ಕ್' ಕಾರಗಳು ಇವೆ.

ಅಮುಕೇ ಎಂಬ ರೂಪದ ಸಿದ್ಧಿಯ ವಿವರಣೆ: ಅದಸ್+ಜಸ್ ಎಂದಿದ್ದಾಗ, "ಅವ್ಯಯ ಸರ್ವನಾಮ್ನಾಮ್ ಅಕಚ್ ಪ್ರಾಕ್ಟೇಃ" (5.371) ಎಂಬ ಸೂತ್ರದಿಂದ 'ಅದಸ್' ಶಬ್ದದಲ್ಲಿರುವ 'ಅಸ್' ಎಂಬ 'ಟಿ' ಗೆ ಪೂರ್ವದಲ್ಲಿ 'ಅಕಚ್' ಎಂಬ ಪ್ರತ್ಯಯವು ಆಗಮವಾಗಿ ಬರುತ್ತದೆ. (ಅಕಚ್ ನಲ್ಲಿ 'ಚ್' ಕಾರವು 'ಇತ್', 'ಅ' ಕಾರವು ಉಚ್ಚಾರಣಾರ್ಥ. ಅದುದ್ದರಿಂದ 'ಅಕ್' ಮಾತ್ರ ಉಳಿಯುವದು).

ಅದ್+ಅಕ್+ಅಸ್+ಜಸ್ ಎಂದಿದ್ದಾಗ, ಅದಕಸ್+ಜಸ್ ಎಂದಾಗುತ್ತದೆ. ಈಗ – "ತ್ಯದಾದೀನಾಮ್ ಅಃ"(7.2.102) ಎಂಬ ಸೂತ್ರದಿಂದ 'ಸ್' ಕಾರಕ್ಕೆ 'ಅ'ಕಾರವು ಆದೇಶವಾಗಿ ಬರುತ್ತದೆ. ಆಗ – ಅದಕ+ಅ+ಅಸ್(ಜಸ್) ಎಂದಿದ್ದಾಗ, "ಅತೋ ಗುಣೇ"(6.1.97) ಎಂಬ ಸೂತ್ರದಿಂದ, ಪೂರ್ವ-ಪರಸ್ಥಾನಗಳಲ್ಲಿ ಪರರೂಪವು ಏಕಾದೇಶವಾಗಿ ಬಂದು ಅದಕ + ಅಸ್ (ಜಸ್) ಎಂದಾಗುತ್ತದೆ.

[ಅದಕ ಎಂಬಲ್ಲಿರುವ ಅನ್ತ್ಯ 'ಅ'ಕಾರ ಅಪದಾನ್ತವಾಗಿದೆ. ಅದಕ್ಕೆ ಪರವಾಗಿ, ಗುಣಾಕ್ಷರವಾದ 'ಅ'ಕಾರವು ಇದೆ. ಇವೆರಡಕ್ಕೂ ಪರವರ್ಣವಾದ (ಗುಣರೂಪವಾದ) 'ಅ'ಕಾರದಂತಿರುವ ಬೇರೊಂದು 'ಅ'ಕಾರವು ಆದೇಶವಾಗಿ ಬರುತ್ತದೆ. ಆಗ, ಅದಕ + ಅಸ್ (ಜಸ್) ಎಂದು ಇರುತ್ತದೆ.]

ಈಗ "ಅದಸೋಽಸೇಃ ದಾದುದೋಮಃ"(8.2.80) ಎಂಬ ಸೂತ್ರದಿಂದ, 'ದ'ಕಾರದಲ್ಲಿರುವ ವ್ಯಞ್ಜನರೂಪವಾದ 'ದ್' ಕಾರಕ್ಕೆ 'ಮ್' ಕಾರವು ಮತ್ತು 'ದ್' ಕಾರೋತ್ತರ 'ಅ'ಕಾರಕ್ಕೆ 'ಉ' ಕಾರವು ಆದೇಶವಾಗಿ ಬರುವದು. ಹೀಗಾಗಿ 'ಅಮುಕ+ಜಸ್ ಎಂದಾಗುತ್ತದೆ. "ಜಶ್ಶಸೋಃ ಶಿಃ" (7.1.20) ಎಂಬ ಸೂತ್ರದಿಂದ ಅಮುಕ+ಇ ಎಂದಾಗಿ ನಂತರ ಗುಣ ಬಂದು 'ಅಮುಕೇ' ಎಂದಾಗುತ್ತದೆ. ಇಲ್ಲಿ 'ಮ್' ಕಾರೋತ್ತರದಲ್ಲಿ 'ಉ'ಕಾರ 'ಕ್'ಕಾರಗಳಿರೋಣದ್ದರಿಂದ (ಅವ್ಯವಹಿತ ಪರತ್ವ

ಬಾರದೇ ಇರೋಣದರಿಂದ) ಪ್ರಕೃತಿಭಾವವು ಬಾರದೇ ಪೂರ್ವರೂಪ ಬಂದು 'ಅಮುಕೇऽತ್ರ' ಎಂದಾಗಿದೆ.

**(ಚಾದಿ ಗಣಶಬ್ದಗಳಿಗೆ ನಿಪಾತ ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ 53: ಚಾದಯೋऽಸತ್ತ್ವೇ ( 1.4.57)**

ವೃತ್ತಿ –ಅದ್ರವ್ಯಾರ್ಥಾಃ ಚಾದಯಃ ನಿಪಾತಾಃ ಸ್ಯುಃ ।

ಪ.ಛೇ.– ಚಾದಯಃ, ಅಸತ್ವೇ ।

ಅ.ವ್ಯ – "ಪ್ರಾಗ್ರೀಶ್ವರಾತ್ ನಿಪಾತಾಃ"(1.4.56) ಎಂಬ ಸೂತ್ರದಿಂದ, 'ನಿಪಾತಾಃ' ಎಂಬ ಪದವು ಅನುವೃತ್ತವಾಗಿದೆ.

ಅರ್ಥ– ಸತ್ವ ಎಂಬ ಪದಕ್ಕೆ, ಅಮರಕೋಶದಲ್ಲಿ 'ದ್ರವ್ಯ–ಅಸು–ವ್ಯವಸಾಯೇಷು ಸತ್ವಮ್' ಎಂದು ಹೇಳಲಾಗಿದೆ. 'ಲಿಙ್ಗಸಂಖ್ಯಾನ್ವಯಿತ್ವಂ ದ್ರವ್ಯತ್ವಮ್' ಲಿಙ್ಗ ಮತ್ತು ಸಂಖ್ಯಾ ಸಂಬಂಧವುಳ್ಳದ್ದು ದ್ರವ್ಯ. ದ್ರವ್ಯ ಭಿನ್ನವಾದದ್ದು ಅದ್ರವ್ಯ.

ಉದಾ– ಚ, ವೈ, ನು, ಮುಂತಾದವುಗಳು ಅದ್ರವ್ಯಗಳು. ದ್ರವ್ಯಗಳೆಂದರೆ 'ವೃಕ್ಷಃ' 'ಗೃಹಮ್' 'ಮೃಗಃ' ಇತ್ಯಾದಿಗಳು.

ದ್ರವ್ಯವಾಚಕವಲ್ಲದ ಚಾದಿ ಗಣದಲ್ಲಿ ಪಠಿತವಾದ ಶಬ್ದಗಳಿಗೆ ನಿಪಾತ ಸಂಜ್ಞೆಯನ್ನು, ಈ ಸೂತ್ರದಿಂದ ವಿಧಿಸಲಾಗಿದೆ. 'ನಿಪಾತ' ಸಂಜ್ಞೆಯಿಂದ ಸಿಕ್ಕುವ ಹಲವು ಲಾಭಗಳಲ್ಲಿ 'ಪ್ರಗೃಹ್ಯ' ಸಂಜ್ಞೆಯೂ ಒಂದಾಗಿದೆ. "ಪ್ರಾಗ್ರೀಶ್ವರಾತ್ ನಿಪಾತಾಃ"(1.4.56) ಎಂಬುದು ಅಧಿಕಾರಸೂತ್ರವಾಗಿದೆ. ಆದ್ದರಿಂದ ಇಲ್ಲಿ 'ನಿಪಾತಾಃ' ಎಂಬುದು ಅಧಿಕಾರಕ್ಕೆ ಸಂಬಂಧಿಸಿದೆ. ಚಾದಿ ಗಣದಲ್ಲಿ ಪಶು ಎಂಬ ಶಬ್ದವು ಪಠಿತವಾಗಿದೆ. 'ಪಶು' ಎಂಬ ಶಬ್ದವನ್ನು 'ಆಡು' ಎಂಬ ಅರ್ಥದಲ್ಲಿ ತೆಗೆದುಕೊಂಡರೆ– 'ದ್ರವ್ಯ'ವಾಗುತ್ತದೆ. ಇದೇ 'ಪಶು' ಶಬ್ದವನ್ನು "ಪುಷ್ಪಂ ಪಶು ಮನ್ಯತೇ" ಎಂದು ಪ್ರಯೋಗಿಸಿದಾಗ, ಚೆನ್ನಾಗಿ ಎಂಬ ಅರ್ಥವನ್ನು ಕೊಡುತ್ತದೆ. ಆಗ ಅದು ಅದ್ರವ್ಯವಾಗುತ್ತದೆ.

**(ಪ್ರಾದಿಗಳಿಗೆ ನಿಪಾತಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ 54: ಪ್ರಾದಯಃ (1.4.58)**

ವೃತ್ತಿ –ಏತೇ ಅಪಿ ತಥಾ।

ಅ.ವ್ಯ. –ಚಾದಯೋऽಸತ್ವೇ (1.4.57) ಎಂಬ ಸೂತ್ರದಿಂದ 'ಅಸತ್ವೇ' ಎಂಬ ಪದವು ಅನುವೃತ್ತವಾಗಿದೆ. ಮತ್ತು "ಪ್ರಾಗ್ರೀಶ್ವರಾತ್ ನಿಪಾತಾಃ" (1.4.56) ಎಂಬ ಸೂತ್ರದಿಂದ, 'ನಿಪಾತಾಃ' ಎಂಬ ಪದವು ಅಧಿಕೃತವಾಗಿ ಅನುವೃತ್ತವಾಗಿದೆ.

ಅರ್ಥ – "ಪ್ರಃ ಆದಿಃ ಏಷಾಂ ತೇ ಪ್ರಾದಯಃ" ಹಿಂದಿನ ಸೂತ್ರ "ಚಾದಯೋऽಸತ್ವೇ (1.4.57)"ದಲ್ಲಿ ಹೇಳಿದಂತೆ, ದ್ರವ್ಯಾರ್ಥವನ್ನು ಹೇಳದಿರುವ 'ಪ್ರ' ಮೊದಲಾದವುಗಳಿಗೆ ನಿಪಾತ ಸಂಜ್ಞೆಯು ಬರುತ್ತದೆ. "ಉಪಸರ್ಗಾಃ ಕ್ರಿಯಾಯೋಗೇ" (1.4.59) ಎಂಬ ಸೂತ್ರದಲ್ಲಿ, ಪ್ರಾದಿ (ಪ್ರ,ಪರಾ, ಅಪ... ಉಪ)

ಗಳು ಹೇಳಲಾಗಿವೆ. ಪ್ರಾದಿಗಳಿಗೆ ನಿಪಾತ ಸಂಜ್ಞೆಯು ಹೇಳಿರೋಣದರಿಂದ 'ಅವ್ಯಯ' ಸಂಜ್ಞೆಯೂ ಬರುತ್ತದೆ. ಅವ್ಯಯದ ನಂತರ ಇರುವ 'ಸುಪ್'ಗೆ ಲೋಪವು ಬರುತ್ತದೆ. ಇದರಿಂದಾಗುವ ಪ್ರಯೋಜನವನ್ನು ಮುಂದಿನ ಸೂತ್ರದಲ್ಲಿ, ಹೇಳಲಾಗುವದು.

**(ಪ್ರಗೃಹ್ಯ ಸಂಜ್ಞಾವಿಧಾಯಕ ಸೂತ್ರ)**

**ಸೂತ್ರ ೫೫: ನಿಪಾತ ಏಕಾಜನಾಜ್ (1.1.14)**

ವೃತ್ತಿ –ಏಕಃ ಅಚ್ ಆಜ್-ವರ್ಜಃ ಪ್ರಗೃಹ್ಯಃ ಸ್ಯಾತ್ । ಇ ಇಂದ್ರಃ । ಉ ಉಮೇಶಃ । (ವಾಕ್ಯಸ್ಮರಣಯೋರಜಿತ್ ಮಹಾಭಾಷ್ಯ-1.1.11) । ಆ ಏವಂ ನು ಮನ್ಯಸೇ। ಆ ಏವಂ ಕಿಲ ತತ್ । ಅನ್ಯತ್ರ ಜಿತ್। ಈಷದುಷ್ಣಮ್ ಓಷ್ಣಮ್ ।

ಪ.ಛೇ.– ನಿಪಾತಃ, ಏಕಾಚ್, ಅನಾಜ್ ।

ಅ.ವೃ. – "ಈದೂದೇದ್ ದ್ವಿವಚನಂ ಪ್ರಗೃಹ್ಯಮ್ (1.1.11)" ಎಂಬ ಸೂತ್ರದಿಂದ, ಪ್ರಗೃಹ್ಯಮ್ ಎಂಬುದು ಅನುವೃತ್ತವಾಗಿದೆ.

ಅರ್ಥ – "ಏಕಶ್ಚ ಅಸೌ ಅಚ್ ಚ – ಏಕಾಚ್ ( ಒಂದೇಸ್ವರವುಳ್ಳದ್ದು ಏಕಾಚ್). ನ ಆಜ್ ಅನಾಜ್ (ಆಜ್ ಭಿನ್ನವಾದದ್ದು). ಆಜ್ ಶಬ್ದವನ್ನು ಬಿಟ್ಟು ಒಂದೇ ಸ್ವರವುಳ್ಳ ನಿಪಾತವು ಪ್ರಗೃಹ್ಯ ಸಂಜ್ಞೆಯನ್ನು ಪಡೆಯುವದು.

**ಉದಾ-1:** ಇ ಇನ್ದ್ರಃ, 2. ಉ ಉಮೇಶಃ, ಎಂಬ ಈ ಎರಡು ಉದಾಹರಣೆಗಳಲ್ಲಿ, 'ಇ' ಮತ್ತು 'ಉ' ಎಂಬವು 'ಆಜ್' ಬಿನ್ನವಾಗಿರುವ ಒಂದೇ ಸ್ವರವುಳ್ಳವುಗಳು ನಿಪಾತಗಳು. ಆದ್ದರಿಂದ ಈ ಸೂತ್ರದಿಂದ ಪ್ರಗೃಹ್ಯಸಂಜ್ಞೆಯು ಬಂದಿರೋಣದರಿಂದ ಸನ್ಧಿವಿಕಾರವು ಆಗಲಿಲ್ಲ. ಅದೂ ಅಲ್ಲದೇ ಇವು ದ್ರವ್ಯಾರ್ಥದಿಂದ ಭಿನ್ನವಾಗಿವೆ. ಮೊದಲನೆಯ ಉದಾಹರಣೆಯಲ್ಲಿ 'ಇ' ಎಂಬುದು ವಿಸ್ಮಯಾರ್ಥಕವಾಗಿದೆ. ಇ! ಇನ್ದ್ರಃ ಎಂದರೆ 'ಓಹೋ ಇನ್ದ್ರನೇ' ಎಂದು ಅರ್ಥ. ಎರಡನೆಯ ಉದಾಹರಣೆಯಾದ 'ಉ ಉಮೇಶಃ', ಎಂಬಲ್ಲಿ, 'ಏನು ಇವನು ಉಮೇಶನೇ'? ಎಂದು ವಿತರ್ಕಾರ್ಥ.

1. ವಾಕ್ಯ-2.ಸ್ಮರಣಯೋರಜಿತ್ ಮಹಾಭಾಷ್ಯ-(1.1.11)

**ಉದಾ-3:** 'ಆ ಏವಂ ನು ಮನ್ಯಸೇ' ಎಂಬುದು ವಾಕ್ಯಕ್ಕೆ ಉದಾಹರಣೆ. ಇದರಲ್ಲಿ 'ಆ' ಎಂಬುದು ಜಿತ್‌ರಹಿತ(ಅನಾಜ್)ವಾಗಿದೆ. (ಓಹೋ ಏನು ನೀನು ಹೀಗೆ ಅಂದುಕೊಳ್ಳುತ್ತೀಯೇ?) ಎಂದು ಇದರ ಅರ್ಥ. ಹೀಗೆ ಇದಕ್ಕೆ ಪ್ರಗೃಹ್ಯ ಸಂಜ್ಞೆ ಬಂದಿರೋಣದರಿಂದ, ಸನ್ಧಿವಿಕಾರವಾಗಿಲ್ಲ.

**ಉದಾ-4:** 'ಆ ಏವಂ ಕಿಲ ತತ್' ಎಂಬುದು ಸ್ಮರಣೆಗೆ ಉದಾಹರಣೆಯಾಗಿದೆ. ಈ ವಾಕ್ಯದಲ್ಲಿ 'ಆ' ಎಂಬುದು 'ಅನಾಜ್' ಆಗಿದೆ. 'ಅದು ಹೀಗೋ' ಎಂದು ಸ್ಮರಣೆಗೆ ತಂದುಕೊಳ್ಳುವ ಅರ್ಥದಲ್ಲಿದೆ. ಹೀಗೆ ಇದಕ್ಕೆ ಇಲ್ಲಿಯೂ ಪ್ರಗೃಹ್ಯ ಸಂಜ್ಞೆ ಬಂದಿರೋಣದರಿಂದ, ಸನ್ಧಿವಿಕಾರವಾಗಿಲ್ಲ. ಅನ್ಯತ್ರ ಜಿತ್ । ಈಷದುಷ್ಣಮ್ ಓಷ್ಣಮ್ । ಬೇರೆ ಸಂದರ್ಭಗಳಲ್ಲಿ ಪ್ರಯೋಗಿಸುವ 'ಆ' ವನ್ನು 'ಜಿತ್' (ಆಜ್) ಎಂದು ತಿಳಿಯಬೇಕು.

**ಉದಾ–5:** ಆ (ಈಷತ್) + ಉಷ್ಣಮ್=ಓಷ್ಣಮ್ ಈ ಸಂದರ್ಭದಲ್ಲಿ ಪ್ರಗೃಹ್ಯಸಂಜ್ಞೆ ಇಲ್ಲದ್ದರಿಂದ ಗುಣ ಸನ್ಧಿಯಾಗಿ 'ಓಷ್ಣಮ್' ಎಂದಾಗಿದೆ. ಇದರಬಗ್ಗೆ ಹಿಂದೆಯೇ "ಓಮಾಙೋಶ್ಚ" (6.1.95) ಸೂತ್ರದ ಅಡಿಯಲ್ಲಿ ಕೆಳಗಿನ ಶ್ಲೋಕದ ವಿವರಣೆ ಕೊಡಲಾಗಿದೆ.

"ಈಷದರ್ಥೇ ಕ್ರಿಯಾಯೋಗೇ ಮರ್ಯಾದಾಽಭಿವಿಧೌ ಚ ಯಃ।
ಏತಂ ಆತಂ ಙಿತಂ ವಿದ್ಯಾತ್ ವಾಕ್ಯ–ಸ್ಮರಣಯೋರಙಿತ್॥"

ಮರ್ಯಾದಾ ಎಂದರೆ ಅದನ್ನು ಬಿಟ್ಟು, ಅಭಿವಿಧಿಃ ಎಂದರೆ ಅದನ್ನು ಸೇರಿಸಿ ಎಂದರ್ಥ.

**(ಪ್ರಗೃಹ್ಯ–ಸಂಜ್ಞಾ ವಿಧಾಯಕ ಸೂತ್ರ)**

**ಸೂತ್ರ 56: ಓತ್ (1.1.15)**

ವೃತ್ತಿ –ಓತ್–ಅನ್ತಃ ನಿಪಾತಃ ಪ್ರಗೃಹ್ಯಃ ಸ್ಯಾತ್ । ಅಹೋ ಈಶಾಃ ।

ಅ.ವ್ಯ. –"ನಿಪಾತ ಏಕಾಜನಾಙ್" (1.1.14) ಎಂಬ ಸೂತ್ರದಿಂದ 'ನಿಪಾತಃ' ಎಂಬ ಪದವೂ ಮತ್ತು "ಈದೂದೇದ್ದ್ವಿವಚನಂ ಪ್ರಗೃಹ್ಯಮ್" (1.1.11) ಎಂಬ ಸೂತ್ರದಿಂದ 'ಪ್ರಗೃಹ್ಯಮ್' ಎಂಬ ಪದಗಳು ಅನುವೃತ್ತವಾಗಿವೆ.

ಅರ್ಥ –'ಓತ್' ಎಂಬ ಪದವು 'ನಿಪಾತಃ' ಎಂಬುದಕ್ಕೆ ವಿಶೇಷಣವಾಗಿದೆ. ಆದ್ದರಿಂದ "ಯೇನ ವಿಧಿಃ ತದನ್ತಸ್ಯ" (1.1.72) ಎಂಬ ಸೂತ್ರದಿಂದ, ತದನ್ತವಿಧಿಯಿಂದ 'ಓದನ್ತಃ' ಎಂದು ಅರ್ಥಮಾಡಲಾಗಿದೆ. ಪ್ರಕೃತ ಸೂತ್ರದಿಂದ ಓ–ಕಾರಾನ್ತ ನಿಪಾತಕ್ಕೆ 'ಪ್ರಗೃಹ್ಯ' ಸಂಜ್ಞೆಯು ಬರುತ್ತದೆ.

ಉದಾ– ಅಹೋ! ಈಶಾಃ (ಆಶ್ಚರ್ಯವೇ! ಇವರು ಒಡೆಯರಾಗಿದ್ದಾರೆ). ಅಹೋ +ಈಶಾಃ ಎಂಬಲ್ಲಿ 'ಅಹೋ' ಶಬ್ದಕ್ಕೆ "ಚಾದಯೋಽಸತ್ವೇ (1.4.57)" ಎಂಬ ಸೂತ್ರದಿಂದ 'ನಿಪಾತ' ಸಂಜ್ಞೆ ಬಂದಿದೆ. ನಂತರ "ಓತ್" (1.1.15) ಎಂಬ ಸೂತ್ರದಿಂದ, 'ಅಹೋ' ಎಂಬ ನಿಪಾತಕ್ಕೆ ಈ ಸೂತ್ರದಿಂದ 'ಪ್ರಗೃಹ್ಯ' ಸಂಜ್ಞೆ ಬಂದಿದೆ. ಮತ್ತು "ಪ್ಲುತಪ್ರಗೃಹ್ಯಾ ಅಚಿ ನಿತ್ಯಮ್"(6.1.125) ಎಂಬ ಸೂತ್ರದಿಂದ 'ಪ್ರಕೃತಿಭಾವ' ಬಂದು ಸನ್ಧಿಕಾರ್ಯ(ಅವಾದೇಶ)ವಾಗಲಿಲ್ಲ. "ನಿಪಾತ ಏಕಾಜನಾಙ್ (1.1.14)" ಎಂಬ ಸೂತ್ರದಿಂದ, 'ಅನೇಕಾಚ್' ಆಗಿ ಇರುವ ಇದಕ್ಕೆ ಪ್ರಗೃಹ್ಯಸಂಜ್ಞೆ ಬಾರದೇ ಇರೋಣದ್ದರಿಂದ ಈ ಸೂತ್ರವು ಪ್ರತ್ಯೇಕವಾಗಿ ಪ್ರವೃತ್ತವಾಗಿದೆ

**(ವೈಕಲ್ಪಿಕವಾಗಿ ಸಂಬುದ್ಧಿನಿಮಿತ್ತಕ 'ಓ' ಕಾರಕ್ಕೆ ಪ್ರಗೃಹ್ಯಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ 57: ಸಂಬುದ್ಧೌ ಶಾಕಲ್ಯಸ್ಯೇತಾವನಾರ್ಷೇ ( 1.1.16)**

ವೃತ್ತಿ –ಸಂಬುದ್ಧಿ–ನಿಮಿತ್ತಕಃ ಓಕಾರಃ ವಾ ಪ್ರಗೃಹ್ಯಃ ಅವೈದಿಕೇ ಇತೌ ಪರೇ। ವಿಷ್ಣೋ ಇತಿ । ವಿಷ್ಣ ಇತಿ । ವಿಷ್ಣವಿತಿ ।

ಪ.ಛೇ.- ಸಂಬುದ್ಧೌ, ಶಾಕಲ್ಯಸ್ಯ, ಇತೌ, ಅನಾರ್ಷೇ ।

ಅ.ವೃ. "ಓತ್ (1.1.15)" ಎಂಬ ಸೂತ್ರವು ಅನುವೃತ್ತವಾಗುತ್ತದೆ. "ಈದೂದೇದ್ ದ್ವಿವಚನಂ ಪ್ರಗೃಹ್ಯಮ್" (1.1.11) ಎಂಬ ಸೂತ್ರದಿಂದ 'ಪ್ರಗೃಹ್ಯಂ' ಎಂಬ ಪದವು ಅನುವೃತ್ತವಾಗಿದೆ.

ಅರ್ಥ –'ಆರ್ಷಃ' ಎಂದರೆ ವೈದಿಕಪ್ರಯೋಗವೆಂದರ್ಥ. 'ಅನಾರ್ಷಃ' ಎಂದರೆ ವೈದಿಕವಲ್ಲದ ಲೌಕಿಕ ಪ್ರಯೋಗವೆಂದರ್ಥ. ಲೌಕಿಕ (ಅನಾರ್ಷಃ) ಪ್ರಯೋಗದಲ್ಲಿ, 'ಇತಿ' ಎಂಬ ಪದವು ಪರದಲ್ಲಿದ್ದಾಗ, ಪೂರ್ವದಲ್ಲಿರುವ ಸಂಬುದ್ಧಿನಿಮಿತ್ತಕವಾದ (ಪ್ರಥಮೈಕವಚನ) 'ಓ' ಕಾರವು ವಿಕಲ್ಪವಾಗಿ 'ಪ್ರಗೃಹ್ಯ' ಸಂಜ್ಞೆಯನ್ನು ಹೊಂದುವದು. ಇದು ಶಾಕಲ್ಯರ ಮತದ ಪ್ರಕಾರ ಹೇಳಲಾಗಿದೆ.

ಉದಾ– ವಿಷ್ಣೋ + ಇತಿ ಎಂಬಲ್ಲಿ 'ಓ' ಕಾರಾನ್ತ ಪ್ರಥಮೈಕವಚನ ಸಂಬೋಧನ ಶಬ್ದವು ಸಂಬುದ್ಧಿ ಸಂಜ್ಞೆಯನ್ನು ಹೊಂದಿದೆ. ಆಗ ಈ ಸೂತ್ರದ ಪ್ರಕಾರ ಆ 'ಓ' ಕಾರವು ಪ್ರಗೃಹ್ಯ ಸಂಜ್ಞೆಯನ್ನು ಹೊಂದುತ್ತದೆ. ನಂತರ ಅದಕ್ಕೆ ಪ್ರಕೃತಿಭಾವ ಬಂದು

ವಿಷ್ಣೋ ಇತಿ ಎಂದಾಗುತ್ತದೆ. (ಅವಾದೇಶ ಬರುವದಿಲ್ಲ) ಇದಕ್ಕೆ ವೈಕಲ್ಪಿಕರೂಪವಿರೋಣದ್ದರಿಂದ, ಪ್ರಕೃತಿಭಾವ ಬಾರದಿದ್ದ ಪಕ್ಷದಲ್ಲಿ ವಿಷ್ಣವಿತಿ ಎಂದಾಗುತ್ತದೆ. (ಅವಾದೇಶ ಬರುವದು). "ಲೋಪಃ ಶಾಕಲ್ಯಸ್ಯ"(8.3.19)ಎಂಬ ಸೂತ್ರದಿಂದ 'ವ್' ಕಾರಕ್ಕೆ ಲೋಪವು ವೈಕಲ್ಪಿಕವಾಗಿರೋಣದ್ದರಿಂದ ವಿಷ್ಣ ಇತಿ। ಎಂದಾಗುತ್ತದೆ. 'ವ್' ಕಾರ ಲೋಪವು ತ್ರಿಪಾದಿಗೆ ಸಂಬಂಧಿಸಿರೋಣದ್ದರಿಂದ ಗುಣ ಬರಲಿಕ್ಕೆ ಅವಕಾಶವಿರುವದಿಲ್ಲ.

**(ಉಞ್ ಗೆ 'ವ್' ಕಾರಾದೇಶವನ್ನು ವಿಧಿಸುವ ಸೂತ್ರ)**

**ಸೂತ್ರ 58: ಮಯ ಉಞೋವೋವಾ ( 8.3.33)**

ವೃತ್ತಿಃ–ಮಯಃ ಪರಸ್ಯ ಉಞೋ ವೋ ವಾ ಸ್ಯಾತ್ ಅಚಿ । ಕಿಮ್ವುಕ್ತಮ್ । ಕಿಮು ಉಕ್ತಮ್ ।

ಪ.ಛೇ.– ಮಯಃ, ಉಞಃ, ವಃ, ವಾ ।

ಅ.ವೃ. – "ಙಮೋ ಹ್ರಸ್ವಾತ್ ಅಚಿ ಙಮುಣ್ ನಿತ್ಯಮ್" (8.3.32) ಎಂಬ ಸೂತ್ರದಿಂದ 'ಅಚಿ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ – ಇಲ್ಲಿ 'ವಃ' ಎಂಬುದು ಪ್ರಥಮಾನ್ತ ಶಬ್ದ. 'ಮಯಃ' ಎಂಬುದು ಪಞ್ಚಮ್ಯನ್ತ ಶಬ್ದ. ಮತ್ತು 'ಉಞಃ' ಎಂಬುದು ಷಷ್ಠ್ಯನ್ತ ಶಬ್ದ. 'ವಾ' ಎಂಬುದು ವಿಕಲ್ಪಾರ್ಥಕ ಶಬ್ದ.

'ಮಞ್' ಪ್ರತ್ಯಾಹಾರದ ವರ್ಣಕ್ಕಿಂತ ಪರದಲ್ಲಿರುವ 'ಉಞ್' ಗೆ 'ಅಚ್' ವರ್ಣವು ಪರದಲ್ಲಿದ್ದಾಗ, ವಿಕಲ್ಪವಾಗಿ 'ವ್' ಕಾರವು ಆದೇಶವಾಗಿ ಬರುವದು. 'ಉಞ್' ನಲ್ಲಿ 'ಞ್' ಕಾರವು ಇತ್ತಾಗಿರುವದು.

ಈ ಸೂತ್ರವು ಪ್ರಕೃತಿಭಾವವನ್ನು ಬಾಧಿಸಿ 'ವ್' ಕಾರಾದೇಶವನ್ನು ವೈಕಲ್ಪಿಕವಾಗಿ ವಿಧಿಸುತ್ತದೆ. 'ವ್' ಕಾರಾದೇಶ ಬಾರದಿದ್ದ ಪಕ್ಷದಲ್ಲಿ, 'ಪ್ರಕೃತಿಭಾವ'ವು ಬರುತ್ತದೆ.

ಉದಾ–1 ಕಿಮ್ವುಕ್ತಮ್ (ಕಿಮ್+ವ್+ಉಕ್ತಮ್) ಎಂಬಲ್ಲಿ, ಕಿಮ್ + ಉ = ಕಿಮು, ಕಿಮು + ಉಕ್ತಮ್ ಎಂಬಲ್ಲಿ "ನಿಪಾತ ಏಕಾಜನಾಙ್" (1.1.14) ಎಂಬ ಸೂತ್ರದಿಂದ 'ಪ್ರಗೃಹ್ಯ' ಸಂಜ್ಞೆ ಬಂದು ನಂತರ 'ಪ್ರಕೃತಿಭಾವ'ವು ಬರುತ್ತದೆ, ಆಗ 'ಕಿಮು ಉಕ್ತಮ್' ಎಂದಾಗುತ್ತದೆ. ಇದು 'ಪ್ರಕೃತಿಭಾವ' ಬಂದ ಪಕ್ಷ.

ಪ್ರಕೃತಿಭಾವ ಬಾರದ ಪಕ್ಷದಲ್ಲಿ, ಇದನ್ನು ಬಾಧಿಸಿ "ಮಯ ಉಞೋವೋವಾ (8.3.33)" ಎಂಬ ಪ್ರಕೃತ ಸೂತ್ರದಿಂದ, 'ಉ' ಕಾರದ ಸ್ಥಾನದಲ್ಲಿ 'ವ್' ಕಾರಾದೇಶವು (ವಿಕಲ್ಪವಾಗಿ) ಬಂದು ಕಿಮ್+ವ್+ಉಕ್ತಮ್ ಎಂದಾಗಿ 'ಕಿಮ್ವುಕ್ತಮ್' ಎಂದಾಗುತ್ತದೆ.

**(ಇಕ್ ವರ್ಣಗಳಿಗೆ ಹ್ರಸ್ವವನ್ನು ಮತ್ತು ಪ್ರಕೃತಿಭಾವವನ್ನು ವಿಧಿಸುವ ಸೂತ್ರ)**

**ಸೂತ್ರ 59: ಇಕೋಽಸವರ್ಣೇ ಅಚಿ ಶಾಕಲ್ಯಸ್ಯ ಹ್ರಸ್ವಶ್ಚ (6.1.127)**

ವೃತ್ತಿ–ಪದಾನ್ತಾಃ ಇಕಃ ಹ್ರಸ್ವಾಃ ವಾ ಸ್ಯುಃ ಅಸವರ್ಣೇ ಅಚಿ । ಹ್ರಸ್ವವಿಧಿಸಾಮರ್ಥ್ಯಾತ್ ನ ಸ್ವರಸನ್ಧಿಃ । ಚಕ್ರಿ ಅತ್ರ । ಚಕ್ರ್ಯತ್ರ । ಪದಾನ್ತಾಃ ಇತಿ ಕಿಮ್? ಗೌರ್ಯೌ (ಗೌರ್ಯ್ಯೌ) ।

ಪ.ಛೇ.– ಇಕಃ, ಅಸವರ್ಣೇ, ಅಚಿ, ಶಾಕಲ್ಯಸ್ಯ, ಹ್ರಸ್ವಃ, ಚ ।

ಅ.ವ್ಯ. – "ಏಙಃ ಪದಾನ್ತಾದತಿ" (6.1.109) ಎಂಬ ಸೂತ್ರದಿಂದ 'ಪದಾನ್ತಾತ್' ಎಂಬ ಪದವೂ ಮತ್ತು "ಇಕೋಯಣಚಿ" (6.1.77) ಎಂಬ ಸೂತ್ರದಿಂದ 'ಅಚಿ' ಎಂಬ ಪದವೂ ಅನುವೃತ್ತವಾಗಿದೆ.

ಅರ್ಥ – ಇಲ್ಲಿ 'ಇಕಃ' ಎಂಬುದು ಪಥಮಾ ಬಹುವಚನವಾಗಿರೋಣದ್ದರಿಂದ 'ಪದಾನ್ತಾತ್' ಎಂಬುದನ್ನು ವಿಭಕ್ತಿವಚನ ಪರಿಣಾಮದಿಂದ 'ಪದಾನ್ತಾಃ' ಎಂದು 'ಇಕಃ' ಎಂಬುದಕ್ಕೆ 'ವಿಶೇಷಣ'ವನ್ನಾಗಿ ಸ್ವೀಕರಿಸಲಾಗಿದೆ. ಅಸವರ್ಣವಾದ 'ಅಚ್' ವರ್ಣವು ಪರದಲ್ಲಿದ್ದಾಗ ಪೂರ್ವದಲ್ಲಿರುವ ಪದಾನ್ತವಾದ 'ಇಕ್' ವರ್ಣಕ್ಕೆ ಹ್ರಸ್ವವು ಆದೇಶವಾಗಿ ಬರುತ್ತದೆ.

ಉದಾ–1 ಚಕ್ರೀ + ಅತ್ರ ಎಂದಿದ್ದಾಗ, ಪೂರ್ವಪದದ ಕೊನೆಯಲ್ಲಿ ದೀರ್ಘವಾದ 'ಇಕ್'(ಈ) ವರ್ಣವು ಇದೆ. ಅದರ ಪರದಲ್ಲಿ ಅಸವರ್ಣವಾದ 'ಅ' (ಅತ್ರ) ಕಾರವು ಇದೆ. ಹೀಗಿದ್ದಾಗ, ಶಾಕಲ್ಯರ ಮತದ ಪ್ರಕಾರ 'ಈ' ಕಾರಕ್ಕೆ ಹ್ರಸ್ವ ಬಂದು ಪ್ರಕೃತಿ–ಭಾವದಿಂದ 'ಚಕ್ರಿ ಅತ್ರ' ಎಂದಾಗುತ್ತದೆ. "ಹ್ರಸ್ವವಿಧಿಸಾಮರ್ಥ್ಯಾತ್ ನ ಸ್ವರಸನ್ಧಿಃ" ಎಂದು ಹೇಳಿರುವದರ ತಾತ್ಪರ್ಯವಿದು. ದೀರ್ಘ 'ಈ' ಕಾರಕ್ಕೆ ಹ್ರಸ್ವವನ್ನು ವಿಧಿಸಿದಮೇಲೆ ಇದಕ್ಕೆ 'ಯಣ್' ಸನ್ಧಿಯನ್ನು ಮಾಡಿದರೆ, ಹ್ರಸ್ವ ವಿಧಾನ ಮಾಡಿದ್ದು ವ್ಯರ್ಥವಾಗುತ್ತದೆ. ಆದ್ದರಿಂದ ಈ ಪ್ರಕೃತಿಭಾವ ರೂಪವನ್ನೂ ಸ್ವೀಕರಿಸಬೇಕು ಇದು ವೈಕಲ್ಪಿಕವೆಂದು ಹೇಳಿರೋಣದ್ದರಿಂದ 'ಚಕ್ರೀ ಅತ್ರ' ಎಂಬ ಅವಸ್ಥೆಯಲ್ಲಿಯೇ (ಹ್ರಸ್ವವನ್ನು ವಿಧಿಸುವದಕ್ಕೆ ಪೂರ್ವದಲ್ಲಿಯೇ) 'ಯಣ್' ಸಂಧಿಗೆ ಅವಕಾಶವಿರುತ್ತದೆ. ಆಗ ಚಕ್ರೀ+ಅತ್ರ

ಎಂಬುದು 'ಚಕ್ರ್ಯತ್ರ' ಎಂದಾಗುತ್ತದೆ.

ಹೀಗಾಗಿ ಶಾಕಲ್ಯರ ಮತದ ಪ್ರಕಾರ 'ಚಕ್ರಿ ಅತ್ರ' ಮತ್ತು'ಚಕ್ರ್ಯತ್ರ' ಎಂದು ಎರಡು ರೂಪಗಳು ಸಿದ್ಧವಾಗುತ್ತವೆ.

ಪದಾನ್ತವಾದ 'ಇಕ್' ವರ್ಣಗಳೆಂದು ಏಕೆ ಹೇಳಲಾಗಿದೆಯೆಂದರೆ, 'ಗೌರ್ಯೌ' (ಗೌರ್ಯ್ಯೌ) ಎಂಬಲ್ಲಿ ಗೌರೀ+ಔ ಎಂದಿದ್ದಾಗ ಪದಾನ್ತವಲ್ಲದ ಎಂದರೆ ಪ್ರಾತಿಪದಿಕವಾದ ಗೌರೀ ಶಬ್ದದ ಕೊನೆಯಲ್ಲಿ ದೀರ್ಘ 'ಈ' ಕಾರವಿರುತ್ತದೆ. ಅನಂತರ ಪರದಲ್ಲಿ ಅಸವರ್ಣವಾದ 'ಅಚ್' (ಔ) ಇರುತ್ತದೆ. ಆಗ ಪ್ರಕೃತ ಸೂತ್ರದಿಂದ 'ಗೌರಿ ಔ' ಎಂಬ ಅನಿಷ್ಟರೂಪವು ಸಿದ್ಧವಾಗುತ್ತಿತ್ತು. ಈ ಅನಿಷ್ಟವನ್ನು ಪರಿಹರಿಸುವದಕ್ಕಾಗಿ 'ಪದಾನ್ತಾಃ' ಎಂಬ ಪದವು ಅನುವೃತ್ತವಾಗಿದೆ. ಆದ್ದರಿಂದ ಪ್ರಕೃತಿಭಾವವಾಗದೇ 'ಯಣ್' ಸನ್ಧಿಯಿಂದ 'ಗೌರ್ಯೌ' ಎಂದು ರೂಪ ಸಿದ್ಧವಾಗಿದೆ.

ವೈಕಲ್ಪಿಕವಾಗಿ ದ್ವಿತ್ವದಿಂದ ಕೂಡಿದ ಗೌರ್ಯ್ಯೌ ಎಂಬ ಈ ರೂಪಸಿದ್ಧಿಯನ್ನು "ಅಚೋ ರಹಾಭ್ಯಾಂ ದ್ವೇ (8.4.46)" ಎಂಬ ಮುಂದಿನ ಸೂತ್ರದಲ್ಲಿ ವಿವರಿಸಲಾಗುವದು.

**(ಯರ್ ವರ್ಣಗಳಿಗೆ ವೈಕಲ್ಪಿಕವಾಗಿ ದ್ವಿತ್ವವನ್ನು ವಿಧಿಸುವ ಸೂತ್ರ)**

**ಸೂತ್ರ 60: ಅಚೋ ರಹಾಭ್ಯಾಂ ದ್ವೇ (8.4.46)**

ವೃತ್ತಿ – ಅಚಃ ಪರಾಭ್ಯಾಂ ರೇಫ-ಹಕಾರಾಭ್ಯಾಂ ಪರಸ್ಯ ಯರಃ ದ್ವೇ ವಾ ಸ್ತಃ। ಗೌರ್ಯ್ಯೌ (ಗೌ+ರ್+ಯ್+ಯ್+ಔ), ।

ವಾ॥ ನ ಸಮಾಸೇ ।ವಾಪ್ಯಶ್ವಃ ।

ಪ.ಛೇ.– ಅಚಃ, ರಹಾಭ್ಯಾಂ, ದ್ವೇ ।

ಅ.ವೃ. – "ಯರೋಽನುನಾಸಿಕೇಽನುನಾಸಿಕೋ ವಾ" (8.4.45) ಎಂಬ ಸೂತ್ರದಿಂದ 'ವಾ' ಎಂಬ ಪದವು ಅನುವೃತ್ತವಾಗಿದೆ.

ಅರ್ಥ-ರಶ್ಚ ಹಶ್ಚ ರಹೌ, ತಾಭ್ಯಾಂ, ರಹಾಭ್ಯಾಮ್ (ಪಞ್ಚಮ್ಯನ್ತ) 'ಅಚಃ' (ಪಞ್ಚಮ್ಯನ್ತ), ದ್ವೇ (ಪ್ರಥಮಾನ್ತ) ಎಂದು ತಿಳಿಯಬೇಕು. 'ಅಚ್' ವರ್ಣಕ್ಕಿಂತ ಪರದಲ್ಲಿ, ಇರುವ ರೇಫ (ರ್) ಮತ್ತು (ಹ್) ಕಾರ ಇವುಗಳ ಪರದಲ್ಲಿರುವ 'ಯರ್' ವರ್ಣಕ್ಕೆ ವಿಕಲ್ಪವಾಗಿ ದ್ವಿತ್ವವು ಬರುತ್ತದೆ.

ಉದಾ– ಗೌರ್ಯ್ಯೌ– (ಪೂರ್ವ ಸೂತ್ರದಲ್ಲಿ ಗೌರ್ಯೌ ಎಂಬ ದ್ವಿತ್ವವಿಲ್ಲದ ರೂಪವನ್ನೂ ಪ್ರಕೃತಿಭಾವಬರುವದಿಲ್ಲವೆಂಬುದನ್ನುಸೂಚಿಸಲಿಕ್ಕಾಗಿ ಕೊಡಲಾಗಿದೆ). ಪ್ರಕೃತ ಸೂತ್ರವು ದ್ವಿತ್ವವಿದ್ದ ಮತ್ತು ದ್ವಿತ್ವವಿಲ್ಲದ ರೂಪವನ್ನು ಹೇಳುವದಕ್ಕಾಗಿ ಹೊರಟಿದೆ. ಗೌರೀ+ಔ ಎಂದಿದ್ದಾಗ 'ಯಣ್' ಸನ್ಧಿಯಿಂದ ಗೌರ್+ಯ್+ಔ ಎಂದಾಗಿತ್ತು. ತದನಂತರ ಪ್ರಕೃತ ಸೂತ್ರವು ಪ್ರವೃತ್ತವಾಗಿದೆ. 'ಗೌ' ಎಂಬಲ್ಲಿ 'ಔ' ಕಾರವು 'ಅಚ್' ವರ್ಣವಾಗಿದೆ. ಅದರ ಪರದಲ್ಲಿ ರೇಫ(ರ್) ಇದೆ. ಆ 'ರೇಫ'ದ ಪರದಲ್ಲಿ ಯರ್

(ಯ್) ವರ್ಣವು ಇದೆ. ಇದಕ್ಕೆ ಪ್ರಕೃತ ಸೂತ್ರದಿಂದ ವೈಕಲ್ಪಿಕವಾಗಿ ದ್ವಿತ್ವ ಬಂದು ಗೌರ್+ಯ್ ಯ್+ಔ=ಗೌರ್ಯ್ಯೌ ಎಂದಾಗಿದೆ. ಈ ರೀತಿಯ ದ್ವಿತ್ವದಿಂದ ಕೂಡಿದ ರೂಪವು ಇಷ್ಟವಾದರೂ ದ್ವಿತ್ವವಿಲ್ಲದ ರೂಪವಾದ ಗೌರ್ಯೌ ಎಂಬ ರೂಪವೇ ಹೆಚ್ಚಾಗಿ ಬಳಕೆಯಲ್ಲಿದೆ.

ವಾ॥ ನ ಸಮಾಸೇ– ಈ ವಾರ್ತಿಕವು "ಇಕೋಽಸವರ್ಣೇ ಶಾಕಲ್ಯಸ್ಯ ಹ್ರಸ್ವಶ್ಚ"(6.1.127) ಎಂಬ ಸೂತ್ರಕ್ಕೆ ಸಂಬಂಧಿಸಿದ್ದಾಗಿದೆ. ಇದೇ ಸೂತ್ರದ ಪ್ರಕಾರ ಹ್ರಸ್ವ ಭಾವ ಬಂದಮೇಲೆ ಪ್ರಕೃತಿಭಾವವು ಬರುತ್ತದೆ. ಸಮಾಸದಲ್ಲಿ ಪ್ರಕೃತಿಭಾವ ಬರುವದಿಲ್ಲ. ಬದಲಾಗಿ ಸನ್ಧಿಯೇ ಆಗುತ್ತದೆ.

ಉದಾ– ವಾಪ್ಯಶ್ವಃ (ಬಾವಿಯಲ್ಲಿ ಬಿದ್ದಿರುವ ಕುದುರೆ) ಎಂಬಲ್ಲಿ 'ವಾಪ್ಯಾಂ ಅಶ್ವಃ' ಎಂದು ವಿಗ್ರಹ ವಾಕ್ಯ ಇದನ್ನು ಸಮಾಸ ಮಾಡುವಾಗ ವಾಪೀ + ಅಶ್ವಃ ಎಂದಿರುತ್ತದೆ. ಇಲ್ಲಿ "ಇಕೋಽಸವರ್ಣೇ ಶಾಕಲ್ಯಸ್ಯ ಹ್ರಸ್ವಶ್ಚ" (6.1.127) ಎಂಬ ಸೂತ್ರದಿಂದ 'ಹ್ರಸ್ವ' ಪ್ರಾಪ್ತವಾದರೆ ಪ್ರಕೃತ ವಾರ್ತಿಕದಿಂದ ಸಮಾಸದ ದೆಸೆಯಲ್ಲಿ ಪ್ರಕೃತಿಭಾವವು ನಿಷೇಧಿಸಲ್ಪಟ್ಟಿದೆ. ಆದ್ದರಿಂದ ವಾಪೀ + ಅಶ್ವಃ ಎಂದಿದ್ದಾಗ 'ಯಣ್' ಸನ್ಧಿಯಿಂದ 'ವಾಪ್ಯಶ್ವಃ' ಎಂದು ರೂಪವಾಗುತ್ತದೆ. ಈ ಪ್ರಕೃತ ವಾರ್ತಿಕದಿಂದ 'ವಾಪಿ ಅಶ್ವಃ' ಎಂಬ ಅನಿಷ್ಟ ಪ್ರಕೃತಿಭಾವದ ರೂಪವು ನಿಷೇಧಿಸಲ್ಪಟ್ಟಿದೆ.

**(ಹ್ರಸ್ವಭಾವದಿಂದ ಕೂಡಿದ ಪ್ರಕೃತಿಭಾವವನ್ನು ವಿಕಲ್ಪವಾಗಿ ವಿಧಿಸುವ ಸೂತ್ರ)**

**ಸೂತ್ರ 61: ಋತ್ಯಕಃ ( 6.1.128)**

ವೃತ್ತಿ –ಋತಿ ಪರೇ ಪದಾನ್ತಾಃ ಅಕಃ ಪ್ರಾಗ್ವದ್ವಾ ಬ್ರಹ್ಮ ಋಷಿಃ। ಬ್ರಹ್ಮರ್ಷಿಃ। ಪದಾನ್ತಾಃ ಇತಿ ಕಿಮ್? ಆರ್ಚ್ಛತ್। ॥ ಇತಿ ಅಚ್–ಸನ್ಧಿಃ॥

ಅ.ವ್ಯ.–"ಏಜಃ ಪದಾನ್ತಾದತಿ"(6.1.109) ಎಂಬ ಸುತ್ರದಿಂದ 'ಪದಾನ್ತಾತ್' ಎಂಬ ಶಬ್ದವು ಅನುವೃತ್ತವಾಗಿ ವಿಭಕ್ತಿ–ವಚನ ವಿಪರಿಣಾಮದಿಂದ 'ಪದಾನ್ತಾಃ' ಎಂದಾಗಿದೆ. "ಇಕೋಽಸವರ್ಣೇ ಶಾಕಲ್ಯಸ್ಯ ಹ್ರಸ್ವಶ್ಚ" (6.1.127) ಎಂಬ ಸೂತ್ರದಿಂದ 'ಹ್ರಸ್ವಃ' ಮತ್ತು 'ಶಾಕಲ್ಯಸ್ಯ' ಎಂಬ ಪದಗಳು ಅನುವೃತ್ತವಾಗಿವೆ.

ಅರ್ಥ – 'ಪ್ರಾಗ್ವದ್ವಾ' ಎಂದರೆ, "ಇಕೋಽಸವರ್ಣೇ ಶಾಕಲ್ಯಸ್ಯ ಹ್ರಸ್ವಶ್ಚ" (6.1.127) ಎಂಬ ಸೂತ್ರದಲ್ಲಿ ಹೇಳಿದಂತೆ ಕಾರ್ಯವಾಗುತ್ತದೆ ಎಂದರ್ಥ. ಹ್ರಸ್ವ 'ಋ' ಕಾರವು ಪರದಲ್ಲಿದ್ದಾಗ ಪೂರ್ವ ಪದದ ಕೊನೆಯಲ್ಲಿರುವ 'ಅಕ್' ವರ್ಣಕ್ಕೆ ಹ್ರಸ್ವವು ಬರುತ್ತದೆ. ಇಲ್ಲಿ ಹ್ರಸ್ವರೂಪವನ್ನು ಹೊಂದಿದಾಗ ಸನ್ಧಿಯಾಗದೇ ಪ್ರಕೃತಿಭಾವವು ಇರುತ್ತದೆ.

ಉದಾ–1– 'ಬ್ರಹ್ಮ ಋಷಿಃ' ಎಂಬಲ್ಲಿ ಬ್ರಹ್ಮಾ + ಋಷಿಃ ಎಂದಿದ್ದಾಗ, 'ಋ'ಕಾರವು ಪರದಲ್ಲಿರೋಣದ್ದರಿಂದ ಪೂರ್ವಪದಾನ್ತವಾದ 'ಆ' ಕಾರಕ್ಕೆ ಹ್ರಸ್ವ ಬಂದು 'ಬ್ರಹ್ಮ ಋಷಿಃ' ಎಂದಾಗುತ್ತದೆ. ಇದಕ್ಕೆ ಪ್ರತ್ಯೇಕವಾಗಿ ಹ್ರಸ್ವವನ್ನು ವಿಧಿಸಿರೋಣದ್ದರಿಂದ ಮತ್ತೆ ಗುಣಸನ್ಧಿಯು ಬರುವದಿಲ್ಲ. ಇದನ್ನೇ 'ಹ್ರಸ್ವವಿಧಿಸಾಮರ್ಥ್ಯಾತ್ ನ ಸ್ವರಸನ್ಧಿಃ' ಎಂದು ಹಿಂದೆ ಹೇಳಲಾಗಿದೆ.

ಉದಾ–2– ಬ್ರಹ್ಮಾ+ಋಷಿಃ ಎಂದಿದ್ದಾಗ, 'ಹ್ರಸ್ವ' ವಿಧಾನ ಮಾಡದಿದ್ದ ಸಂದರ್ಭದಲ್ಲಿ ಗುಣಸನ್ಧಿಯಿಂದ 'ಬ್ರಹ್ಮರ್ಷಿಃ' ಎಂದು ರೂಪವಾಗಿದೆ.

ಪದಾನ್ತಾಃ ಇತಿ ಕಿಮ್?–ಪದಾನ್ತವಾದ 'ಅಕ್' ವರ್ಣಗಳೆಂದು ಯಾಕೆ ಹೇಳಲಾಗಿದೆಯೆಂದರೆ– 'ಆರ್ಚ್ಛತ್' ಎಂಬ ಪ್ರಯೋಗವನ್ನು ತೋರಿಸಿ ಉತ್ತರಿಸಿದ್ದಾರೆ.

ಆ+ಋಚ್ಛತ್ ಎಂಬಲ್ಲಿ 'ಆ' ಎಂಬುದು 'ಆಟ್' ಆಗಮ, ಅದರಲ್ಲಿ 'ಟ್' ಕಾರ 'ಇತ್'. ಆಗ ಆ+ಋಚ್ಛತ್ ಎಂದಿರುತ್ತದೆ. ಇಲ್ಲಿ 'ಆ' ಕಾರವು ಪದಾನ್ತವಾಗಿ ಇಲ್ಲದಿರೋಣದರಿಂದ 'ಋ' ಕಾರವು ಪರದಲ್ಲಿದ್ದರೂ ಹ್ರಸ್ವವೂ ಬರುವದಿಲ್ಲ, ಹಾಗೆಯೇ ಪ್ರಕೃತಿಭಾವವೂ ಬರುವದಿಲ್ಲ. (ಅಂದರೆ 'ಅ ಋಚ್ಛತ್' ಎಂಬ ಅನಿಷ್ಟ ರೂಪವು ಬರುವದಿಲ್ಲ). ಆದ್ದರಿಂದ 'ಆ+ಋಚ್ಛತ್' ಎಂಬಲ್ಲಿ ವೃದ್ಧಿಸನ್ಧಿಯಿಂದ ಆರ್ಚ್ಛತ್ ಎಂದೇ ರೂಪವಾಗುತ್ತದೆ.

**॥ 'ಅಚ್' ಸನ್ಧಿ (2) ಪ್ರಕರಣ ಮುಗಿಯಿತು.॥**

# 3. ಹಲ್-ಸನ್ಧಿ-ಪ್ರಕರಣಮ್ ॥

**(ಸೂತ್ರ 62-102 ರವರೆಗೆ)**

ಅಚ್-ಸನ್ಧಿ-ಪ್ರಕರಣದ ನಂತರ, ಈಗ ಹಲ್-ಸನ್ಧಿಯನ್ನು ಆರಂಭಿಸುತ್ತಾರೆ. ಪರಸ್ಪರ ಹಲ್ (ವ್ಯಞ್ಜನ) ವರ್ಣಗಳು ವಿಳಂಬವಿಲ್ಲದೇ (ಅವ್ಯವಹಿತವಾಗಿ) ಉಚ್ಚರಿಸಲ್ಪಟ್ಟಾಗ ಉಂಟಾಗುವ ಬದಲಾವಣೆಗೆ 'ಹಲ್-ಸನ್ಧಿ' ಎಂದು ಹೆಸರು. ಹಾಗೆಯೇ 'ಹಲ್' ವರ್ಣಗಳನ್ನು 'ಅಚ್' ವರ್ಣಗಳ ಜೊತೆಗೆ ಸೇರಿ ಉಚ್ಚರಿಸಿದಾಗಲೂ ಆಗುವ ಬದಲಾವಣೆಯನ್ನೂ 'ಹಲ್-ಸನ್ಧಿ' ಎಂದು ಕರೆಯುತ್ತಾರೆ. ಈ 'ಹಲ್ ಸನ್ಧಿ' ಪ್ರಕರಣವು 1. ಶ್ಚುತ್ವ 2. ಷ್ಟುತ್ವ 3. ಜಸ್ತ್ವ 4. ಅನುನಾಸಿಕ 5. ಪರಸವರ್ಣ 6. ಪೂರ್ವಸವರ್ಣ 7. ಚರ್ತ್ವ 8. ಛತ್ವ 9. ಅನುಸ್ವಾರ 10. ಧುಟ್ 11. ಕುಕ್-ಟುಕ್ 12. ತುಕ್ 13. ಙಮುಟ್-ಆಗಮ 14. ಅನುಸ್ವಾರಾಗಮ 15. ವಿಸರ್ಗ-ಆದೇಶ, 16. ರು-ಆದೇಶ 17. ಅನುನಾಸಿಕ ಆಗಮ ಮತ್ತು ಕೊನೆಯದಾಗಿ 18. ತುಕ್-ಆಗಮಗಳನ್ನೊಳಗೊಂಡಿದೆ.

### ಸನ್ಧಿ 1 (1. ಶ್ಚುತ್ವ ಸನ್ಧಿ)

**1. (ಸ್-ಕಾರ ಮತ್ತು ತ-ವರ್ಗಗಳಿಗೆ ಶ್ಚುತ್ವ-ಸನ್ಧಿಯನ್ನು ಹೇಳುವ ಸೂತ್ರ)**

**ಸೂತ್ರ 62: ಸ್ತೋಃ ಶ್ಚುನಾ ಶ್ಚುಃ (8.4.40)**

ವೃತ್ತಿ- ಸಕಾರ-ತವರ್ಗಯೋಃ ಶ-ಕಾರ-ಚ-ವರ್ಗಾಭ್ಯಾಂ ಯೋಗೇ ಶ-ಕಾರ-ಚ-ವರ್ಗೌ ಸ್ತಃ । ರಾಮಶ್ಶೇತೇ । ರಾಮಶ್ಚಿನೋತಿ। ಸಚ್ಚಿತ್। ಶಾರ್ಙ್ಗಿಞ್ಜಯ !

ಅರ್ಥ- ಹಲ್-ಸನ್ಧಿ ಪ್ರಕರಣದಲ್ಲಿ ಶ್ಚುತ್ವ-ಸನ್ಧಿಯು ಮೊದಲನೆಯದಾಗಿದೆ. 'ಸ್' ಚ 'ತು'ಶ್ಚ ಸ್ತು, ತಸ್ಯ ಸ್ತೋಃ ಈ ಸಮಾಹಾರ-ದ್ವನ್ದ್ವದಲ್ಲಿ 'ನಪುಂಸಕಲಿಙ್ಗ' ಬರಬೇಕಾಗಿತ್ತು. ಆದರೆ ಇದು ಸೌತ್ರವಾಗಿರುವದರಿಂದ ಪುಲ್ಲಿಙ್ಗ ಬಂದಿದೆ. ಇದೇ ರೀತಿಯಲ್ಲಿ ಉಳಿದ ಎರಡು ಪದಗಳೂ ಸೌತ್ರವಾಗಿವೆ. ಇದನ್ನು 'ಆರ್ಷ ಪ್ರಯೋಗ'ವೆಂದು ಹೇಳುತ್ತಾರೆ.

ಸ್ಥಾನಿಗಳಾದ 'ಸ್'ಕಾರ ಮತ್ತು 'ತ'ವರ್ಗಗಳ ಸ್ಥಾನದಲ್ಲಿ, 'ಶ್'ಕಾರ ಮತ್ತು 'ಚ'ವರ್ಗಗಗಳಾದ ನಿಮಿತ್ತ ವರ್ಣಗಳು ಅವುಗಳ (ಆ ಸ್ಥಾನಿಗಳ) ಪೂರ್ವದಲ್ಲೋ ಅಥವಾ ಪರದಲ್ಲಿಯೋ (ಅವ್ಯವಹಿತವಾಗಿ) ಸಂಬಂಧ ಹೊಂದಿರುವಾಗ ಕ್ರಮವಾಗಿ 'ಶ್' ಕಾರ ಮತ್ತು 'ಚ' ವರ್ಗಗಗಳು ಆದೇಶವಾಗಿ ಬರುತ್ತವೆ.

**1. ನಿಮಿತ್ತಗಳು ಪೂರ್ವದಲ್ಲಿದ್ದಾಗ**

| ನಿಮಿತ್ತ ವರ್ಣಗಳು | ಸ್ಥಾನಿಗಳು | ಆದೇಶಗಳು |
|---|---|---|
| ಶ್ | 1. ಸ್ | 1. ಶ್ |
| ಚ್ | 2. ತ್ | 2. ಚ್ |
| ಛ್ | 3. ಥ್ | 3. ಛ್ |

| ನಿಮಿತ್ತ ವರ್ಣಗಳು | ಸ್ಥಾನಿಗಳು | ಆದೇಶಗಳು |
|---|---|---|
| ಜ್ | 4. ದ್ | 4. ಜ್ |
| ಝ್ | 5. ಧ್ | 5. ಝ್ |
| ಞ್ | 6. ನ್ | 6. ಞ್ |

**2. ನಿಮಿತ್ತಗಳು ಪರದಲ್ಲಿದ್ದಾಗ**

| ಸ್ಥಾನಿಗಳು | ನಿಮಿತ್ತ ವರ್ಣಗಳು | ಆದೇಶಗಳು |
|---|---|---|
| 1. ಸ್ | ಶ್ | 1. ಶ್ |
| 2. ತ್ | ಚ್ | 2. ಚ್ |
| 3. ಥ್ | ಛ್ | 3. ಛ್ |
| 4. ದ್ | ಜ್ | 4. ಜ್ |
| 5. ಧ್ | ಝ್ | 5. ಝ್ |
| 6. ನ್ | ಞ್ | 6. ಞ್ |

ಈ ಮೇಲಿನ ಎರಡು ಕೋಷ್ಟಕಗಳಲ್ಲೂ ನಿಮಿತ್ತವರ್ಣಗಳಿಗೆ ಕ್ರಮಸಂಖ್ಯೆ ಕೊಡಲಿಲ್ಲ. ಇದರಿಂದ ಈ ಆರು ನಿಮಿತ್ತವರ್ಣಗಳಲ್ಲಿ ಯಾವದಾದರೊಂದು ನಿಮಿತ್ತ ವರ್ಣವು ಯಾವದಾದರೊಂದು ಸ್ಥಾನಿ-ವರ್ಣದ ಪೂರ್ವದಲ್ಲೋ ಅಥವಾ ಪರದಲ್ಲಿಯೋ (ಅವ್ಯವಹಿತವಾಗಿ) ಇರಬಹುದೆಂದು ಹೇಳಿದಂತಾಯಿತು. ಅರ್ಥಾತ್ ಇಲ್ಲಿ ಸ್ಥಾನಿಗಳಿಗೂ ಮತ್ತು ನಿಮಿತ್ತ ವರ್ಣಗಳಿಗೂ ಯಥಾಸಂಖ್ಯ ನಿಯಮವಿರುವದಿಲ್ಲ. (ಇದರಲ್ಲಿ 'ಶ್' ಕಾರದ ನಂತರ ತ-ವರ್ಗ ವರ್ಣಗಳಿದ್ದರೆ ಮಾತ್ರ 'ಚುತ್ವ (ಚ-ವರ್ಗ) ಬರುವದಿಲ್ಲ' ಎಂಬುದು ಅಪವಾದವಾಗಿದೆ. ಇದು "ಶಾತ್" (8.4.44) ಎಂಬ ಮುಂದಿನ ಸೂತ್ರದಲ್ಲಿ ಸ್ಪಷ್ಟವಾಗುತ್ತದೆ. ಈ ಸೂತ್ರದಿಂದಲೇ ಸ್ಥಾನಿಗಳಿಗೂ ಮತ್ತು ನಿಮಿತ್ತಗಳಿಗೂ ಕ್ರಮಸಂಖ್ಯವಿಲ್ಲವೆಂಬುದು ಪ್ರಮಾಣಸಿದ್ಧವಾಗುತ್ತದೆ.)

ಇಲ್ಲಿ 'ಶ್ಚುನಾ' ಎಂಬ 'ತೃತೀಯಾ' ವಿಭಕ್ತಿಯಿಂದ ಸ-ಕಾರ ತ-ವರ್ಗಗಳಿಗೆ (ಸ್ತೋಃ) ಪೂರ್ವದಲ್ಲೋ ಅಥವಾ ಪರದಲ್ಲೋ ನಿಮಿತ್ತವರ್ಣಗಳು (ಶ-ಕಾರ ಚ-ವರ್ಗಗಳು) ಇರಬಹುದೆಂದು ಅರ್ಥ ಮಾಡಿರುವುದರಿಂದ, "ತಸ್ಮಾದಿತ್ಯುತ್ತರಸ್ಯ(1.1.67)" ಮತ್ತು "ತಸ್ಮಿನ್ನಿತಿ ನಿರ್ದಿಷ್ಟೇ ಪೂರ್ವಸ್ಯ(1.1.66)" ಎಂಬ ಎರಡು ಸೂತ್ರಗಳಿಗೂ ಅವಕಾಶವಿರುತ್ತದೆ. ಇಲ್ಲಿ 'ಶ್ಚುನಾ' ಎಂಬ ಶಬ್ದದ ಜೊತೆಗೆ 'ಸಹ' ಎಂಬ ಶಬ್ದವನ್ನು 'ಅಧ್ಯಾಹಾರ' ಮಾಡಿಕೊಳ್ಳಬೇಕು. 'ಸಹ' ಶಬ್ದವಿಲ್ಲದಿದ್ದರೂ 'ಸಹ' ಎಂಬ ಶಬ್ದದ ಅರ್ಥವನ್ನು ಕೊಡುತ್ತದೆಂದು 'ಕಾಶಿಕಾ'ದಲ್ಲಿ ಹೇಳಲಾಗಿದೆ.

**ಉದಾಹರಣೆಗಳು-**

1. ರಾಮಶ್ಶೇತೇ-'ರಾಮಸ್ + ಶೇತೇ' ಎಂದಿದ್ದಾಗ, ಸ್ಥಾನಿಯಾದ 'ಸ್' ಕಾರದ ನಂತರ ನಿಮಿತ್ತವಾದ 'ಶ್' ಕಾರವು ಪರದಲ್ಲಿದೆ. (ಆದರೆ ಆ 'ಶ್' ಕಾರವು

ಸಂಖ್ಯಾನಿಯಮದಿಂದ ಬಂದದ್ದಲ್ಲ. ಆಕಸ್ಮಿಕವಾಗಿ ಅದು ನಿಮಿತ್ತವರ್ಣಗಳಲ್ಲಿ ಮೊದಲನೆಯದಾಗಿದೆ). ಆದ್ದರಿಂದ ಸ್ಥಾನಿಗಳಲ್ಲಿ ಮೊದಲನೆಯದಾದ 'ಸ್' ಕಾರದ ಸ್ಥಾನದಲ್ಲಿ, ಆದೇಶ ವರ್ಣಗಳಲ್ಲಿ ಮೊದಲನೆಯದಾದ 'ಶ್' ಕಾರವು ಆದೇಶವಾಗಿ ಬಂದು 'ರಾಮಶ್ಶೇತೇ' ಎಂದಾಗಿದೆ. (ರಾಮನು ಮಲಗಿದ್ದಾನೆ ಎಂದು ಇದರ ಅರ್ಥ).ಆದ್ದರಿಂದ ಇಲ್ಲಿ 'ಸ್ಥಾನಿ-ಆದೇಶ'ಗಳಿಗೆ 'ಯಥಾಸಂಖ್ಯ' ಕ್ರಮವು "ಯಥಾಸಂಖ್ಯಮನುದೇಶಃ ಸಮಾನಾಮ್(1.3.10)" ಎಂಬ ಸೂತ್ರದಿಂದ ಬಂದಿದೆ ಎಂಬುದು ಸ್ಪಷ್ಟವಾಗುತ್ತದೆ. ಈ ನಿಯಮ ಸ್ಥಾನಿ ಮತ್ತು ನಿಮಿತ್ತಗಳಿಗಿಲ್ಲ.

2. ರಾಮಶ್ಚಿನೋತಿ – 'ರಾಮಸ್+ಚಿನೋತಿ' ಎಂದಿದ್ದಾಗ – ಸ್ಥಾನಿಯಾದ 'ಸ್' ಕಾರದನಂತರ ನಿಮಿತ್ತವಾದ 'ಚ್'ಕಾರವು ಪರದಲ್ಲಿದೆ. ಈ 'ಚ್' – ಕಾರವು ನಿಮಿತ್ತವರ್ಣಗಳಲ್ಲಿ ಮೊದಲನೇಯದ್ದಲ್ಲ. ಹಾಗಿದ್ದರೂ 'ಸ್' ಕಾರಕ್ಕೆ 'ಶ್' ಕಾರವು ಆದೇಶವಾಗಿ ಬಂದು 'ರಾಮಶ್ಚಿನೋತಿ' ಎಂದಾಗಿದೆ. (ರಾಮನು ಆಯ್ದುಕೊಳ್ಳುತ್ತಿದ್ದಾನೆ ಎಂದು ಇದರ ಅರ್ಥ). ಇಲ್ಲಿ ಸ್ಥಾನಿ ಮತ್ತು ಆದೇಶಗಳಿಗೆ ಸಂಖ್ಯಾನಿಯಮವಿದೆಯೇ ಹೊರತು ಸ್ಥಾನಿ ಮತ್ತು ನಿಮಿತ್ತಗಳಿಗಿಲ್ಲವೆಂಬುದು ಸ್ಪಷ್ಟವಾಗುತ್ತದೆ.

3. ಸಚ್ಚಿತ್– ಸತ್+ಚಿತ್ ಎಂದಿದ್ದಾಗ– 'ತ್' ಕಾರವು ಸ್ಥಾನಿಯಾಗಿದೆ. ನಿಮಿತ್ತವಾದ 'ಚ್'ಕಾರವು ಸಂಖ್ಯಾಕ್ರಮ ನಿಯಮವನ್ನು ಅಪೇಕ್ಷಿಸದೇ ಪರದಲ್ಲಿದೆ. ಆಗ ಸ್ಥಾನಿಯಾದ 'ತ್' ಕಾರದ ಸ್ಥಾನದಲ್ಲಿ ಕ್ರಮಸಂಖ್ಯೆಗನುಗುಣವಾಗಿ 'ಚ್' ಕಾರವು ಆದೇಶವಾಗಿ ಬಂದು ಸಚ್ಚಿತ್ ಎಂದಾಗುತ್ತದೆ. (ಇದರ ಅರ್ಥ – ಸತ್ ಮತ್ತು ಚಿತ್ ಎಂದು).

4. ಶಾರ್ಙ್ಗಿಞ್ಜಯ–'ಶಾರ್ಙ್ಗಿನ್!+ಜಯ' ಎಂದಿದ್ದಾಗ ಸ್ಥಾನಿಗಳಲ್ಲಿ ಕೊನೆಯದಾದ 'ನ್' ಕಾರದ ನಂತರ ನಿಮಿತ್ತವಾದ ಚ–ವರ್ಗದ 'ಜ್' ಕಾರವು ಕ್ರಮನಿಯಮವಿಲ್ಲದೇ ಪರದಲ್ಲಿದ್ದಾಗ, ಸ್ಥಾನಿಯಾದ 'ನ್' ಕಾರದ ಸ್ಥಾನದಲ್ಲಿ ಸಂಖ್ಯಾಕ್ರಮಕ್ಕನುಗುಣವಾಗಿ ಆದೇಶಗಳಲ್ಲಿ ಕೊನೆಯದಾದ 'ಞ್' ಕಾರವು ಆದೇಶವಾಗಿ ಬಂದು, ಶಾರ್ಙ್ಗಿಞ್ಜಯ! ಎಂದಾಗಿದೆ. (ಹೇ ವಿಷ್ಣುವೇ! ನೀನು ಜಯಶೀಲನಾಗು ಎಂದರ್ಥ).

5. ಯಾಚ್ಞಾ–ಯಾಚ್+ನಾ ಎಂದಿದ್ದಾಗ– ಸ್ಥಾನಿಯಾದ 'ನ್' ಕಾರದ ಪೂರ್ವದಲ್ಲಿ ನಿಮಿತ್ತವಾದ 'ಚ್' ಕಾರವು ಇದೆ. ಇಲ್ಲಿ ಸ್ಥಾನಿಯಾದ 'ನ್' ಕಾರದ ಸ್ಥಾನದಲ್ಲಿ ಸಂಖ್ಯಾಕ್ರಮಕ್ಕನುಗುಣವಾಗಿ 'ಚ' ವರ್ಗದ ಕೊನೆಯ ವರ್ಣವಾದ 'ಞ್' ಕಾರವು ಆದೇಶವಾಗಿ ಬಂದು 'ಯಾಚ್ಞಾ' ಎಂದಾಗುತ್ತದೆ. ನಿಮಿತ್ತ ವರ್ಣವು ಪೂರ್ವದಲ್ಲಿರುವದಕ್ಕೆ ಇದು ಉದಾಹರಣೆಯಾಗಿದೆ. 'ಯಾಚಿಸುವದು' ಎಂದು ಇದರರ್ಥ.

### (ಚುತ್ವವನ್ನು ನಿಷೇಧಿಸುವ ಅಪವಾದ ಸೂತ್ರ)

**ಸೂತ್ರ-63: ಶಾತ್ ( 8.4.44)**

ವೃತ್ತಿ–ಶಾತ್ ಪರಸ್ಯ ತವರ್ಗಸ್ಯ ಚುತ್ವಂ ನ ಸ್ಯಾತ್। ವಿಶ್ನಃ। ಪ್ರಶ್ನಃ।

ಅ.ವ್ಯ.–"ತೋಃ ಷಿ(8.4.43)" ಸೂತ್ರದಿಂದ 'ತೋಃ' ಎಂಬ ಪದವೂ ಹಾಗೆಯೇ "ನ ಪದಾನ್ತಾಟ್ಟೋರನಾಮ್(8.4.42)" ಸೂತ್ರದಿಂದ 'ನ' ಪದವೂ ಅನುವೃತ್ತವಾಗಿದೆ.

ಅರ್ಥ– 'ಶ್' ಕಾರದ ನಂತರ 'ತ'ವರ್ಗೀಯ ವರ್ಣಗಳಿದ್ದರೆ ಅವುಗಳಿಗೆ ಚುತ್ವ (ಚ–ವರ್ಗ)ವು ಬರುವದಿಲ್ಲ. ಆದರೆ 'ಚ'–ವರ್ಗದ ನಂತರ 'ತ'ವರ್ಗವಿದ್ದರೆ 'ಚುತ್ವ' ಬರುತ್ತದೆ. ಈ ಸೂತ್ರವು "ಸ್ತೋಃ ಶ್ಚುನಾ ಶ್ಚುಃ (8.4.40)" ಸೂತ್ರಕ್ಕೆ ಅಪವಾದವಾಗಿದೆ. ಇದರಿಂದ ನಿಮಿತ್ತ ಮತ್ತು ಸ್ಥಾನಿಗಳಿಗೆ ಸಂಖ್ಯಾಕ್ರಮ ನಿಯಮವಿಲ್ಲವೆಂಬುದು ಸ್ಪಷ್ಟವಾಗುತ್ತದೆ.

ಉದಾ–1. 'ವಿಶ್ನಃ' (ಗತಿ ಅಥವಾ ಭಾಷಣ) – ವಿಶ್+ನಃ ಎಂದಿದ್ದಾಗ ನಿಮಿತ್ತವಾದ 'ಶ್' ಕಾರದ ಯೋಗವು ಪೂರ್ವದಲ್ಲಿದ್ದು, ಪರದಲ್ಲಿ 'ತ' ವರ್ಗದ 'ನ್'ಕಾರ(ಸ್ಥಾನಿ)ವಿದೆ. ಈ ಸಂದರ್ಭದಲ್ಲಿ, ಪ್ರಕೃತ ಸೂತ್ರದಿಂದ ಚುತ್ವವು ಬಾರದೆ 'ವಿಶ್ನಃ' ಎಂದೇ ಉಳಿಯುತ್ತದೆ.

ಉದಾ–2. 'ಪ್ರಶ್ನಃ'(ಪ್ರಶ್ನೆ) ಪ್ರಶ್ + ನಃ ಎಂದಿದ್ದಾಗ 'ಶ್' ಕಾರದ ನಂತರ 'ತ' ವರ್ಗದ 'ನ್' ಕಾರವಿರೋಣದರಿಂದ 'ಚುತ್ವ'ವು ಬಾರದೆ 'ಪ್ರಶ್ನಃ' ಎಂದೇ ಉಳಿಯುತ್ತದೆ.

ಸೂಚನೆ–1.–ವಿಚ್ಛ ಧಾತುವಿನಿಂದ "ಯಜ–ಯಾಚ–ಯತ್–ವಿಚ್ಛ–ಪ್ರಚ್ಛ–ರಕ್ಷೋ ನಙ್(3–3–90)" ಸೂತ್ರದಿಂದ 'ನಙ್' ಪ್ರತ್ಯಯ ಬಂದಮೇಲೆ "ಚ್ಛ್ವೋಃ ಶೂಡನುನಾಸಿಕೇ(6–4–19)" ಎಂಬ ಸೂತ್ರದಿಂದ 'ಛ್' ಗೆ 'ಶ್' ಕಾರವು ಬಂದು 'ಶ್ಚುತ್ವ' ನಿಷೇಧದಿಂದ ಅದೇ ರೂಪ (ವಿಶ್ನಃ)ವು ಉಳಿಯುತ್ತದೆ.

ಸೂಚನೆ–2. ಪ್ರಚ್ಛ ಧಾತುವಿನಿಂದ "ಯಜ–ಯಾಚ–ಯತ್–ವಿಚ್ಛ–ಪ್ರಚ್ಛ–ರಕ್ಷೋ ನಙ್(3–3–90)" ಸೂತ್ರದಿಂದ ನಙ್ ಪ್ರತ್ಯಯ ಬಂದ ಮೇಲೆ 'ಶ್ಚುತ್ವ' ನಿಷೇಧದಿಂದ ಅದೇ ರೂಪ (ಪ್ರಶ್ನಃ)ವು ಉಳಿಯುತ್ತದೆ.

### (ಸನ್ಧಿ 2: ಷ್ಟುತ್ವವನ್ನು ವಿಧಿಸುವ ಸೂತ್ರ)

**ಸೂತ್ರ–64: ಷ್ಟುನಾ ಷ್ಟುಃ ( 8.4.41)**

ವೃತ್ತಿ–ಸ್ತೋಃ ಷ್ಟುನಾ 0ಯೋಗೇ ಷ್ಟುಃ ಸ್ಯಾತ್ । ರಾಮಷ್ಷಷ್ಠಃ । ರಾಮಷ್ಟೀಕತೇ । ಪೇಷ್ಟಾ । ತಟ್ಟೀಕಾ । ಚಕ್ರಿಣ್ಢೌಕಸೇ ।

ಅ.ವೃ.– "ಸ್ತೋಃ ಶ್ಚುನಾ ಶ್ಚುಃ(8.4.40)" ಸೂತ್ರದಿಂದ 'ಸ್ತೋಃ' ಎಂಬ ಪದವು ಅನುವೃತ್ತವಾಗಿದೆ.

ಅರ್ಥ–"ಸ್ತೋಃ ಶ್ಚುನಾ ಶ್ಚುಃ(8.4.40)" ಸೂತ್ರದಲ್ಲಿ, 'ಸ್'ಕಾರ ಮತ್ತು 'ತ'–ವರ್ಗಗಳಿಗೆ 'ಶ್ಚುತ್ವ'ವು ಹೇಳಲಾಗಿದೆ. ಈ ಸೂತ್ರದಲ್ಲಿ ಅದೇ 'ಸ್'–ಕಾರ ಮತ್ತು 'ತ'–ವರ್ಗಗಳಿಗೆ 'ಷ್ಟುತ್ವ'ವು ಹೇಳಲಾಗಿದೆ. ಅಲ್ಲಿ 'ಶ್ಚುನಾ' ಎಂಬುದು ನಿಮಿತ್ತವಾದರೆ ಇಲ್ಲಿ 'ಷ್ಟುನಾ' ಎಂಬುದು ನಿಮಿತ್ತವಾಗಿದೆ.

'ಸ್'ಕಾರ ಮತ್ತು 'ತ'ವರ್ಗಗಳ ಸ್ಥಾನದಲ್ಲಿ 'ಷ್'ಕಾರ ಮತ್ತು 'ಟ'ವರ್ಗಗಳ ಯೋಗವಿದ್ದಾಗ, 'ಷ್'ಕಾರ ಮತ್ತು 'ಟ'ವರ್ಗಗಳು (ಷ್ಟುತ್ವವು), ಆದೇಶವಾಗಿ ಬರುತ್ತವೆ. ಇಲ್ಲಿಯೂ ನಿಮಿತ್ತ ವರ್ಣಗಳು ಸ್ಥಾನಿಗಳ ಪೂರ್ವದಲ್ಲೋ ಅಥವಾ ಪರದಲ್ಲೋ ಸಂಖ್ಯಾನಿಯಮವಿಲ್ಲದೇ ಇರಬಹುದು. (ಇದಕ್ಕೆ ಅಪವಾದವಾಗಿ 'ಷ್'ಕಾರ ಪರದಲ್ಲಿದ್ದಾಗ ಪೂರ್ವದಲ್ಲಿದ್ದ 'ತ'ವರ್ಗಕ್ಕೆ 'ಟುತ್ವ' ಬರುವದಿಲ್ಲ). ಇದನ್ನೇ

"ತೋಃಷಿ(8.4.43)" ಸೂತ್ರದಲ್ಲಿ ಅಪವಾದವಾಗಿ ಹೇಳಲಾಗಿದೆ.

ಉದಾ– 1. ರಾಮಷ್ಷಷ್ಠಃ (ರಾಮನು ಆರನೆಯವನು) – 'ರಾಮಸ್ + ಷಷ್ಠಃ' ಎಂದಿದ್ದಾಗ 'ಸ್' ಕಾರದ ಪರದಲ್ಲಿ 'ಷ್'ಕಾರದ ಯೋಗವಿರುವುದರಿಂದ ಪೂರ್ವದಲ್ಲಿರುವ 'ಸ್' ಕಾರದ ಸ್ಥಾನದಲ್ಲಿ ಪ್ರಕೃತ ಸೂತ್ರದಿಂದ 'ಷ್' ಕಾರ (ಷ್ಟುತ್ವ) ಆದೇಶವಾಗಿ ಬಂದು 'ರಾಮಷ್ + ಷಷ್ಠಃ' = 'ರಾಮಷ್ಷಷ್ಠಃ' ಎಂದಾಗುತ್ತದೆ.

ಉದಾ– 2. 'ರಾಮಷ್ಟೀಕತೇ'(ರಾಮನು ಹೋಗುತ್ತಾನೆ) – 'ರಾಮಸ್ + ಟೀಕತೇ' ಎಂದಿದ್ದಾಗ, 'ಸ್' ಕಾರದ ಪರದಲ್ಲಿ 'ಟ್'ಕಾರದ ಯೋಗವಿರುವುದರಿಂದ ಪೂರ್ವದಲ್ಲಿರುವ 'ಸ್' ಕಾರದ ಸ್ಥಾನದಲ್ಲಿ ಪ್ರಕೃತ ಸೂತ್ರದಿಂದ 'ಷ್'ಕಾರವು (ಷ್ಟುತ್ವ) ಆದೇಶವಾಗಿ ಬಂದು 'ರಾಮಷ್ + ಟೀಕತೇ' = 'ರಾಮಷ್ಟೀಕತೇ' ಎಂದಾಗುತ್ತದೆ.

ಉದಾ–3.ಪೇಷ್ಟಾ (ಹಿಟ್ಟು ಬೀಸುವವನು)– 'ಪೇಷ್ + ತಾ' ಎಂದಿದ್ದಾಗ, ನಿಮಿತ್ತವಾದ 'ಷ್' ಕಾರದ ಯೋಗವು ಪರದಲ್ಲಿರುವ 'ತ್'ಕಾರಕ್ಕೆ ಇರೋಣದರಿಂದ 'ತ್'ಕಾರ(ಸ್ಥಾನಿ)ದ ಸ್ಥಾನದಲ್ಲಿ ಪ್ರಕೃತ ಸೂತ್ರದಿಂದ 'ಟ್' ಕಾರವು (ಟುತ್ವ) ಆದೇಶವಾಗಿ ಬಂದು 'ಪೇಷ್ + ಟಾ' = 'ಪೇಷ್ಟಾ' ಎಂದಾಗುತ್ತದೆ.

ಉದಾ–4. 'ತಟ್ಟೀಕಾ' (ಅದರ ವ್ಯಾಖ್ಯಾನ)– 'ತತ್ + ಟೀಕಾ' ಎಂದಿದ್ದಾಗ, ಸ್ಥಾನಿಯಾದ 'ತ್' ಕಾರದ ಪರದಲ್ಲಿ ನಿಮಿತ್ತವಾದ 'ಟ್' ಕಾರದ (ಟ–ವರ್ಗದ)

ಯೋಗವಿರುವದರಿಂದ ಆ 'ತ್' ಕಾರದ ಸ್ಥಾನದಲ್ಲಿ 'ಟ'ವರ್ಗದ 'ಟ್'ಕಾರವು ಆದೇಶವಾಗಿ ಬಂದು 'ತಟ್ + ಟೀಕಾ' = 'ತಟ್ಟೀಕಾ' ಎಂದಾಗುತ್ತದೆ.

ಉದಾ–5. 'ಚಕ್ರಿಣ್ಢೌಕಸೇ'(ಚಕ್ರಧಾರಿ(ವಿಷ್ಣು)ವೇ! ನೀನು ಹೋಗುತ್ತಿದ್ದೀಯೆ) – 'ಚಕ್ರಿನ್! + ಢೌಕಸೇ' ಎಂದಿದ್ದಾಗ, ಸ್ಥಾನಿಯಾದ ತವರ್ಗದ 'ನ್' ಕಾರಕ್ಕೆ 'ಟ್' ವರ್ಗದ 'ಢ್' ಕಾರದ ಯೋಗವಿರುವದರಿಂದ, 'ತ್' ವರ್ಗದ 'ನ್' ಕಾರದ ಸ್ಥಾನದಲ್ಲಿ 'ಟ್' ವರ್ಗದ 'ಣ್' ಕಾರವು ಆದೇಶವಾಗಿ ಬಂದು 'ಚಕ್ರಿಣ್! + ಢೌಕಸೇ' = 'ಚಕ್ರಿಣ್ಢೌಕಸೇ' ಎಂದಾಗುತ್ತದೆ.

### (ಷ್ಟುತ್ವವನ್ನು ನಿಷೇಧಿಸುವ ಸೂತ್ರ)

**ಸೂತ್ರ–65: ನ ಪದಾನ್ತಾಟ್ಟೋರನಾಮ್ (8.4.42)**

ವೃತ್ತಿ–ಪದಾಂತಾತ್ ಟ–ವರ್ಗಾತ್ ಪರಸ್ಯ ಅನಾಮಃ ಸ್ತೋಃ ಷ್ಟುಃ ನ ಸ್ಯಾತ್। ಷಟ್‌ಸನ್ತಃ। ಷಟ್‌ತೇ। ಪದಾನ್ತಾತ್ ಕಿಮ್? ಈಟ್ಟೇ । ಟೋಃ ಕಿಮ್? ಸರ್ಪಿಷ್ಟಮಮ್।

ವಾ॥ ಅನಾಮ್–ನವತಿ–ನಗರೀಣಾಂ ಇತಿ ವಾಚ್ಯಮ್ । ಷಣ್ಣಾಮ್ ।ಷಣ್ಣವತಿಃ । ಷಣ್ಣಗರ್ಯಃ

ಪ.ಛೇ. – ನ, ಪದಾನ್ತಾತ್, ಟೋಃ, ಅನಾಮ್ ।

ಅ.ವೃ.– "ಸ್ತೋಃ ಶ್ಚುನಾ ಶ್ಚುಃ(8.4.40)" ಸೂತ್ರದಿಂದ ಸ್ತೋಃ ಎಂಬ ಪದವು ಮತ್ತು "ಷ್ಟುನಾ ಷ್ಟುಃ(8.4.41)" ಸೂತ್ರದಿಂದ 'ಷ್ಟುಃ' ಎಂಬ ಪದವೂ ಅನುವೃತ್ತವಾಗಿದೆ.

ಅರ್ಥ– ಪೂರ್ವ–ಪದದ ಕೊನೆಯಲ್ಲಿ 'ಟ'ವರ್ಗೀಯ ವರ್ಣವಿದ್ದು ತದನಂತರ ಉತ್ತರ–ಪದದ ಆದಿಯಲ್ಲಿ 'ಸ್'ಕಾರ ಹಾಗೂ 'ತ' ವರ್ಗೀಯ ವರ್ಣವಾದ 'ನ'ಕಾರದಿಂದ ಆರಂಭವಾಗುವ 'ನಾಮ್' ಎಂಬ ಶಬ್ದವನ್ನು ಬಿಟ್ಟು ಉಳಿದ 'ತ'ವರ್ಗದ ವರ್ಣಗಳಿದ್ದಾಗ 'ಷ್ಟುತ್ವ'ವು ಬರುವದಿಲ್ಲ.(ಅಂದರೆ ಷ್ಟುತ್ವ ನಿಷೇಧ ಬರುತ್ತದೆಂದರ್ಥ).

ಉತ್ತರ ಪದದಲ್ಲಿ 'ನಾಮ್' ಇದ್ದರೆ, 'ಷ್ಟುತ್ವ' ಬಂದೇ ಬರುತ್ತದೆ. (ಇದು ನಿಷೇಧದ ನಿಷೇಧವಾಗಿದೆ).

ಉದಾ–1. 'ಷಟ್‌ಸನ್ತಃ'–(ಆರು ಸಜ್ಜನರು)–'ಷಟ್+ಸನ್ತಃ' ಎಂದಿದ್ದಾಗ ಮೊದಲನೇ ಪದದ ಕೊನೆಯಲ್ಲಿ 'ಟ'–ವರ್ಗೀಯ ವರ್ಣವಾದ 'ಟ್'ಕಾರವಿದೆ. ಉತ್ತರ ಪದವಾದ 'ಸನ್ತಃ' ಎಂಬಲ್ಲಿ ಆದಿ ವರ್ಣವಾದ 'ಸ್'ಕಾರವು 'ನಾಮ್' ಭಿನ್ನವಾಗಿದೆ. ಇದು 'ಸ್'ಕಾರ 'ತ'ವರ್ಗಗಳಲ್ಲಿ ಒಂದಾಗಿದೆ. ಆದ್ದರಿಂದ ಇಲ್ಲಿ 'ಸ್'ಕಾರಕ್ಕೆ 'ಷ್ಟುತ್ವ' ನಿಷೇಧಿಸಲ್ಪಟ್ಟು 'ಷಟ್‌ಸನ್ತಃ' ಎಂದೇ ಇದೆ.

ಉದಾ–2. 'ಷಟ್‌ತೇ'। (ಅವರು ಆರು ಜನರು)– 'ಷಟ್+ತೇ' ಎಂದಿದ್ದಾಗ, "ಷ್ಟುನಾ ಷ್ಟುಃ(8.4.41)" ಸೂತ್ರದಿಂದ ಪೂರ್ವ ಪದದ ಕೊನೆಯಲ್ಲಿರುವ 'ಟ್'ಕಾರದ ನಂತರ, ಉತ್ತರ ಪದದ ಆದಿಯಲ್ಲಿರುವ 'ತ್' ಕಾರಕ್ಕೆ 'ಟುತ್ವ' (ಟ್–ಕಾರಾದೇಶ)ವು ಬರಬೇಕಾಗಿತ್ತು. ಆದರೆ ಉತ್ತರ ಪದದ ಆದಿಯಲ್ಲಿರುವ 'ತ್'ಕಾರವು 'ನಾಮ್' ಭಿನ್ನವಾಗಿರುವುದರಿಂದ ಪ್ರಕೃತ ಸೂತ್ರದಿಂದ 'ಟುತ್ವ'(ಟ್–ಕಾರಾದೇಶ) ನಿಷೇಧಿಸಲ್ಪಟ್ಟು 'ಷಟ್‌ತೇ' ಎಂದೇ ಉಳಿದಿದೆ.

ಪದಾನ್ತಾತ್ ಕಿಮ್?– 'ಪದಾನ್ತ'ದ ನಂತರ ಎಂದು ಯಾಕೆ ಹೇಳಲಾಗಿದೆ ಎಂಬ ಪ್ರಶ್ನೆಗೆ – 'ಈಟ್ಟೇ' ಎಂಬಲ್ಲಿ ಬರುವ ದೋಷವನ್ನು ತೋರಿಸಿ ಉತ್ತರಿಸಿದ್ದಾರೆ.

ಉದಾ–3. 'ಈಟ್ಟೇ' (ಸ್ತುತಿಸುತ್ತಾನೆ) 'ಈಟ್+ತೇ' ಎಂಬಲ್ಲಿ 'ಟ'ವರ್ಗದ 'ಟ್'ಕಾರವಿದೆ. ಆದರೆ ಅದು ಪದಾನ್ತವಾಗಿಲ್ಲ. ಇಲ್ಲಿ 'ಈಡ್' ಎಂಬುದು ಧಾತುವಾಗಿದೆ. "ಖರಿ ಚ(8.4.55)" ಸೂತ್ರದಿಂದ 'ಈಡ್'ನ 'ಝಲ್' ವರ್ಣವಾದ 'ಡ್' ಕಾರಕ್ಕೆ 'ಚರ್' ವರ್ಣವಾದ 'ಟ್'ಕಾರ ಆದೇಶವಾಗಿ ಬಂದು 'ಈಟ್' ಎಂದಾಗಿದೆ. ಮತ್ತು 'ತೇ' ಎಂಬುದು 'ತಿಙ್' ಪ್ರತ್ಯಯವಾಗಿದೆ. "ಸುಪ್–ತಿಙನ್ತಮ್ ಪದಮ್ (1.1.14)" ಸೂತ್ರದಿಂದ 'ಪದ' ಸಂಜ್ಞೆಯನ್ನು ಹೊಂದಿದೆ.

ಇಲ್ಲಿ (ಸ್ತೋಃ) "ಷ್ಟುನಾ ಷ್ಟುಃ(8.4.41)" ಸೂತ್ರದಿಂದ 'ಷ್ಟುತ್ವ' ನಿಷೇಧವಾಗದೇ 'ತ್'ಕಾರಕ್ಕೆ 'ಟುತ್ವ' ಬಂದು 'ಈಟ್ಟೇ' ಎಂಬ 'ಏಕಾರಾನ್ತ' 'ತಿಙನ್ತ' ಪದವಾಗಿದೆ.

'ಟೋಃ'(ಟ–ವರ್ಗಾತ್) ಕಿಮ್? 'ಸರ್ಪಿಷ್ಟಮಮ್'। 'ಟೋಃ' ಎಂದು ಯಾಕೆ ಹೇಳಬೇಕು ಎಂದರೆ, 'ಸರ್ಪಿಷ್ಟಮಮ್' ಎಂಬಲ್ಲಿ ದೋಷ ಬರುತ್ತದೆ. ಹೇಗೆಂದರೆ: 'ಟೋಃ' ಎಂದರೆ 'ಟ'ವರ್ಗದ ನಂತರ ಎಂದು ಅರ್ಥ. 'ಟೋಃ' ಎಂದು ಹೇಳದಿದ್ದರೆ ಯಾವ ವರ್ಣದ ನಂತರವೂ 'ಸ್'ಕಾರ 'ತ'ವರ್ಗಗಳಿದ್ದರೆ 'ಷ್ಟುತ್ವ' ಬರುತ್ತಿರಲಿಲ್ಲ.

ಉದಾ–4.'ಸರ್ಪಿಷ್ಟಮಮ್'(ಉತ್ತಮವಾದ ತುಪ್ಪ) 'ಸರ್ಪಿಷ್+ತಮಮ್'

ಎಂದಿದ್ದಾಗ, 'ಷ್'ಕಾರದ ನಂತರ ಉತ್ತರ ಪದದ ಆದಿಯಲ್ಲಿ ಇರುವ 'ತ್'ಕಾರಕ್ಕೆ 'ಟುತ್ವ'ವು ನಿಷೇಧವಾಗದೇ, 'ಸರ್ಪಿಷ್ಟಮಮ್' ಎಂದೇ ಆಗಿದೆ. ಇಲ್ಲದಿದ್ದರೆ 'ಟುತ್ವ'ದ ನಿಷೇಧವಾಗಿ 'ಸರ್ಪಿಸ್ತಮಮ್' ಎಂಬ ಅನಿಷ್ಟರೂಪವು ಬರುತ್ತಿತ್ತು.

**ವಾ॥ ಅನಾಮ್-ನವತಿ-ನಗರೀಣಾಂ ಇತಿ ವಾಚ್ಯಮ್ ।ಷಣ್ಣಾಮ್ ।ಷಣ್ಣವತಿಃ ।ಷಣ್ಣಗರ್ಯಃ ।**

ಪದಾನ್ತವಾದ 'ಟ'ವರ್ಗಕ್ಕಿಂತ ಪರದಲ್ಲಿ 'ನಾಮ್' ಮಾತ್ರವಲ್ಲದೇ 'ನವತಿ' ಮತ್ತು 'ನಗರೀ' ಎಂಬ ಎರಡು ಶಬ್ದಗಳನ್ನು ಸೇರಿಸಿ ಈ ಮೂರು ಶಬ್ದಗಳ 'ನ್'ಕಾರವನ್ನು ಬಿಟ್ಟು, ಉಳಿದ 'ಸ್'ಕಾರ ಮತ್ತು 'ತ'ವರ್ಗಗಳು ಪರದಲ್ಲಿದ್ದಾಗ ಅವುಗಳಿಗೆ 'ಷ್ಟುತ್ವ'ವು ಬರುವದಿಲ್ಲ ಎಂದು ಹೇಳಬೇಕು. ಪಾಣಿನೀಯವರು ಸೂತ್ರದಲ್ಲಿ 'ನಾಮ್' ಎಂಬ ಪದಕ್ಕೆ ಮಾತ್ರ 'ಷ್ಟುತ್ವ'ವನ್ನು ನಿಷೇಧಿಸಿದ್ದರು. ಆದರೆ ವಾರ್ತಿಕಕಾರರು ಇದರ ಜೊತೆಗೆ 'ನವತಿ' ಮತ್ತು 'ನಗರೀ' ಎಂಬ ಎರಡು ಪದಗಳನ್ನೂ ಸೇರಿಸಬೇಕೆಂದು ಹೇಳಿದ್ದಾರೆ.

ಉದಾ-1. 'ಷಣ್ಣಾವ್' (ಆರರ)-'ಷಡ್+ನಾವ್' ಎಂದಿದ್ದಾಗ, "ನ ಪದಾನ್ತಾಟ್ಟೋರನಾಮ್(8.4.42)" ಸೂತ್ರದಿಂದ ಪ್ರಾಪ್ತವಾದ 'ಟುತ್ವ' ನಿಷೇಧಕ್ಕೆ ಅವಕಾಶವಿಲ್ಲ. ಯಾಕೆಂದರೆ 'ನಾಮ್' ಎಂಬ ಪದವು 'ನಾಮ್' ಭಿನ್ನವಾಗಿ ಇಲ್ಲ. ಪ್ರಕೃತ ವಾರ್ತಿಕವೂ ಇದನ್ನೇ ಹೇಳಿದೆ. ಅಂದರೆ 'ಟುತ್ವ'ವು ಬರುತ್ತದೆಂದರ್ಥ. 'ಷಡ್+ನಾಮ್' ಎಂದಿದ್ದಾಗ, ಪರದಲ್ಲಿರುವ 'ನ್' ಕಾರಕ್ಕೆ 'ಟುತ್ವ' ಬಂದು 'ಷಡ್+ಣಾಮ್' ಎಂದಾಗುತ್ತದೆ. ನಂತರ "ಯರೋಽನುನಾಸಿಕೇಽನುನಾಸಿಕೋ ವಾ(8.4.45)" ಸೂತ್ರದಿಂದ ವಿಕಲ್ಪವಾಗಿ ಬರುವ ಅನುನಾಸಿಕ ಆದೇಶವನ್ನು ಬಾಧಿಸಿ 'ಷಡ್'ನಲ್ಲಿರುವ 'ಡ್'ಕಾರಕ್ಕೆ, "ಪ್ರತ್ಯಯೇ ಭಾಷಾಯಾಂ ನಿತ್ಯಂ (8.4.45)" ವಾರ್ತಿಕದಿಂದ ನಿತ್ಯವಾಗಿ ಅನುನಾಸಿಕವು ಬಂದು 'ಷಣ್+ಣಾಮ್'='ಷಣ್ಣಾಮ್' ಎಂದಾಗುತ್ತದೆ.

ಉದಾ-2.'ಷಣ್ಣವತಿಃ' (ತೊಂಬತ್ತಾರು)-'ಷಡ್+ನವತಿ' ಎಂದಿದ್ದಾಗ, 'ಅನಾಮ್ -ನವತಿ-ನಗರೀಣಾಂ ಇತಿ ವಾಚ್ಯವ್' ಎಂಬ ವಾರ್ತಿಕದಿಂದ "ನ ಪದಾನ್ತಾಟ್ಟೋರನಾಮ್ (8.4.42)" ಸೂತ್ರದಿಂದ ಪ್ರಾಪ್ತವಾದ ಟುತ್ವ ನಿಷೇಧವನ್ನು ಬಾಧಿಸಿದನಂತರ ಉತ್ತರ ಪದದಲ್ಲಿರುವ 'ನ್' ಕಾರಕ್ಕೆ ಟುತ್ವ ಬಂದು 'ಷಡ್+ಣವತಿ' ಎಂದಾಗುತ್ತದೆ. "ಯರೋಽನುನಾಸಿಕೇಽನುನಾಸಿಕೋ ವಾ(8.4.45)" ಸೂತ್ರದಿಂದ 'ಷಡ್' ನಲ್ಲಿರುವ 'ಡ್' ಕಾರಕ್ಕೆ ವೈಕಲ್ಪಿಕ ಅನುನಾಸಿಕ ಆದೇಶವು ಬಂದು ಷಣ್ + ಣವತಿ = ಷಣ್ಣವತಿಃ ಎಂದಾಗುತ್ತದೆ. ಅನುನಾಸಿಕ ಬಾರದ ಪಕ್ಷದಲ್ಲಿ 'ಷಡ್ಣವತಿಃ' ಎಂದು ರೂಪವಾಗುತ್ತದೆ.

ಉದಾ-3.'ಷಣ್ಣಗರ್ಯಃ'(ಆರು ನಗರಗಳು)-'ಷಡ್+ನಗರ್ಯಃ' ಎಂದಿದ್ದಾಗ, 'ಅನಾವ್-ನವತಿ-ನಗರೀಣಾಂ ಇತಿ ವಾಚ್ಯವ್' ವಾರ್ತಿಕದಿಂದ "ನ ಪದಾನ್ತಾಟ್ಟೋರನಾಮ್(8.4.42)" ಸೂತ್ರದಿಂದ ಪ್ರಾಪ್ತವಾದ ಟುತ್ವ ನಿಷೇಧವನ್ನು ಬಾಧಿಸಿದ ನಂತರ ಉತ್ತರ ಪದದಲ್ಲಿರುವ 'ನ್'ಕಾರಕ್ಕೆ 'ಟುತ್ವ' ಬಂದು 'ಷಡ್+ಣಗರ್ಯಃ'

ಎಂದಾಗುತ್ತದೆ. "ಌರೋಽನುನಾಸಿಕೇಽನುನಾಸಿಕೋ ವಾ(8.4.45)" ಸೂತ್ರದಿಂದ 'ಷಡ್'ನಲ್ಲಿರುವ 'ಡ್'ಕಾರಕ್ಕೆ ವೈಕಲ್ಪಿಕ ಅನುನಾಸಿಕ ಆದೇಶವು ಬಂದು ಷಣ್+ಣಗರ್ಯಃ =ಷಣ್ಣಗರ್ಯಃ ಎಂದಾಗುತ್ತದೆ. ಅನುನಾಸಿಕ ಬಾರದ ಪಕ್ಷದಲ್ಲಿ ಷಡ್‌ಣಗರ್ಯಃ ಎಂದು ರೂಪವಾಗುತ್ತದೆ.

**(ಷ್ಟುತ್ವ ನಿಷೇಧವನ್ನು ವಿಧಿಸುವ ಸೂತ್ರ)**

**ಸೂತ್ರ-66: ತೋಃ ಷಿ (8.4.43)**

ವೃತ್ತಿ- ತವರ್ಗಸ್ಯ ಷಕಾರೇ ಪರೇ ನ ಷ್ಟುತ್ವಮ್ । ಸನ್ಷಷ್ಠಃ ।

ಅ.ವೃ. - "ನ ಪದಾನ್ತಾಟ್ಟೋರನಾಮ್(8.4.42)" ಸೂತ್ರದಿಂದ 'ನ' ಎಂಬ ಪದವು ಮತ್ತು "ಷ್ಟುನಾ ಷ್ಟುಃ (8.4.41)" ಸೂತ್ರದಿಂದ 'ಷ್ಟುಃ' ಎಂಬ ಪದವೂ ಅನುವೃತ್ತವಾಗಿವೆ.

ಅರ್ಥ-'ಷ್' ಕಾರವು ಪರದಲ್ಲಿದ್ದಾಗ ಪೂರ್ವದಲ್ಲಿರುವ 'ತ'ವರ್ಗಕ್ಕೆ ಷ್ಟುತ್ವವು ಬರುವದಿಲ್ಲ. 'ಷ್' ಕಾರವು ಬೇರೆ ಕಡೆಗಿದ್ದಾಗ ಷ್ಟುತ್ವವು ಬರುತ್ತದೆ. ಈ ಸೂತ್ರವು "ಷ್ಟುನಾ ಷ್ಟುಃ (8.4.41)" ಸೂತ್ರಕ್ಕೆ ಅಪವಾದವಾಗಿದೆ. "ಸ್ತೋಃ ಶ್ಚುನಾ ಶ್ಚುಃ (8.4.40)" ಸೂತ್ರಕ್ಕೆ "ಶಾತ್ (8.4.44)" ಸೂತ್ರವು ಹೇಗೆ ಅಪವಾದವೋ ಹಾಗೆಯೇ, "ಷ್ಟುನಾ ಷ್ಟುಃ (8.4.41)" ಸೂತ್ರಕ್ಕೆ "ನ ಪದಾನ್ತಾಟ್ಟೋರನಾಮ್ (8.4.42)" ಮತ್ತು "ತೋಃಷಿ (8.4.43)" ಸೂತ್ರಗಳು ಅಪವಾದಗಳಾಗಿವೆ.

**ಸನ್ಧಿ (3) (ಜಶ್ತ್ವವನ್ನು ವಿಧಿಸುವ ಸೂತ್ರ)**

**ಸೂತ್ರ-67: ಝಲಾಂ ಜಶೋಽನ್ತೇ (8.2.36)**

ವೃತ್ತಿ-ಪದಾನ್ತೇ ಝಲಾಂ ಜಶಃ ಸ್ಯುಃ । ವಾಗೀಶಃ ।

ಪ.ಛೇ. - ಝಲಾಂ, ಜಶಃ, ಅನ್ತೇ ।

ಅ.ವೃ.-"ಪದಸ್ಯ (8.1.16)" ಎಂಬುದು ಈ ಸೂತ್ರಕ್ಕೆ ಸಂಬಂಧಿಸಿದ ಅಧಿಕಾರಸೂತ್ರ

ಅರ್ಥ-ಪದದ ಕೊನೆಯಲ್ಲಿರುವ 'ಝಲ್' ವರ್ಣಕ್ಕೆ 'ಜಶ್' ವರ್ಣವು ಆದೇಶವಾಗಿ ಬರುತ್ತದೆ.

ಉದಾ- ವಾಕ್+ಈಶಃ ಎಂಬಲ್ಲಿ 'ವಾಕ್' ಎಂಬುದು ಸುಬನ್ತ ಪದವಾಗಿದೆ. ಆದ್ದರಿಂದ 'ವಾಕ್' ಎಂಬ ಪದದ ಕೊನೆಯಲ್ಲಿರುವ 'ಝಲ್' ವರ್ಣವಾದ 'ಕ್' ವರ್ಣಕ್ಕೆ 'ಜಶ್' ವರ್ಣವಾದ 'ಗ್' ಕಾರವು ಆದೇಶವಾಗಿ ಬಂದು ವಾಗ್+ಈಶಃ= ವಾಗೀಶಃ ಎಂದಾಗುತ್ತದೆ.

ವಿಶೇಷ - 'ಝಲ್' ಪ್ರತ್ಯಾಹಾರದಲ್ಲಿ 24 'ಹಲ್' ವರ್ಣಗಳಿವೆ. ಅವು ವರ್ಗೀಯ ಕೊನೆಯ ಅಕ್ಷರಗಳಾದ ಙ್,ಮ್,ಞ್,ಣ್,ನ್ ಎಂಬ ಐದು ಅಕ್ಷರಗಳನ್ನು ಬಿಟ್ಟು 20 ವರ್ಗೀಯ ವರ್ಣಗಳು ಹಾಗೂ ಶ್.ಷ್,ಸ್,ಹ್ ಎಂಬ ನಾಲ್ಕು ಊಷ್ಮ ವರ್ಣಗಳೂ ಸೇರಿ 24 ವರ್ಣಗಳಾಗುತ್ತವೆ.

1. ಝುಲಂತವಾದ ಪದದ ನಂತರ 'ಅಚ್' ಮತ್ತು 'ಹಲ್' ವರ್ಣವಿರಲಿ ಅಥವಾ ಇಲ್ಲದೇ ಇರಲಿ 'ಜಸ್ತ್ವ' ಸಂಧಿಯನ್ನು ಮಾಡಬೇಕು.

ಈ ನಿಯಮವನ್ನು ಬಾಧಿಸುವ ಬೇರೆ ಸೂತ್ರಗಳಿಗೆ ಅವಕಾಶವಿದ್ದರೆ ಆ ಬೇರೆ ಸೂತ್ರವೇ ಪ್ರವೃತ್ತವಾಗುವದು.

ಸೂಚನೆ:–'ಝುಲನ್ತ'ವಾದ ಪದವು 'ಜಶನ್ತ'ವಾದ ಮೇಲೆ ಬೇರೆ ವರ್ಣಗಳು ಪರದಲ್ಲಿದ್ದು ಬೇರೆ ಸನ್ಧಿಯಾದರೆ ಆಗಲಿ ಆದರೆ ಮೊದಲು ಆಗಿರುವ ಜಶ್ತ್ವ ಸನ್ಧಿಗೆ ಅದು ಬಾಧಕವಲ್ಲ.

ಸಾರಾಂಶ–ಯಾವ ವಿರೋಧವೂ ಇಲ್ಲದಿದ್ದಾಗ ಝುಲನ್ತ ಪದಗಳು ಜಶನ್ತವಾಗುತ್ತವೆ.

'ಝುಲ್' ವರ್ಣಗಳಿಗೆ 'ಜಶ್'ವರ್ಣಗಳು ಆದೇಶವಾಗಿ ಬರುವದು ("ಸ್ಥಾನೇಽನ್ತರತಮಃ(1.1.50)" ಸೂತ್ರದ ಸಹಾಯದಿಂದ) ಪ್ರಯತ್ನ ಸಾಮ್ಯದಿಂದಲೇನೇ ಆಯಾಯ ವರ್ಗೀಯ ವರ್ಣಗಳು ಪರಸ್ಪರ ಒಂದಕ್ಕೊಂದು ಸವರ್ಣವಾಗಿಯೇ ಇರುತ್ತವೇ ಹೊರತು ಬೇರೆ ವರ್ಗೀಯ ವರ್ಣಗಳ ಜೊತೆಗಲ್ಲ ಎಂದು ತಿಳಿಯಬೇಕು.

### ಸನ್ಧಿ (4) (ಅನುನಾಸಿಕವರ್ಣವನ್ನು ಆದೇಶವಾಗಿ ವಿಧಿಸುವ ಸೂತ್ರ)

**ಸೂತ್ರ–68: ಯರೋಽನುನಾಸಿಕೇಽನುನಾಸಿಕೋ ವಾ (8.4.45)**

ವೃತ್ತಿ– ಯರಃ ಪದಾನ್ತಸ್ಯ ಅನುನಾಸಿಕೇ ಪರೇ ಅನುನಾಸಿಕಃ ವಾ ಸ್ಯಾತ್ । ಏತನ್ಮುರಾರಿಃ, ಏತದ್ಮುರಾರಿಃ ।

ವಾ। ಪ್ರತ್ಯಯೇ ಭಾಷಾಯಾಂ ನಿತ್ಯಮ್ ।

ತನ್ಮಾತ್ರಮ್ । ಚಿನ್ಮಯಮ್

ಪ.ಛೇ. – ಯರಃ, ಆನುನಾಸಿಕೇ, ಅನುನಾಸಿಕಃ, ವಾ ।

ಅ.ವೃ.– "ನ ಪದಾನ್ತಾಟ್ಟೋರನಾಮ್(8.4.42)" ಸೂತ್ರದಿಂದ 'ಪದಾನ್ತಾತ್' ಎಂಬುದನ್ನು ಅನುವೃತ್ತಿ ಮಾಡಿ 'ಷಷ್ಠ್ಯನ್ತ'ವಾಗಿ ವಿಪರಿಣಾಮಗೊಳಿಸಲಾಗಿದೆ. ಅದು 'ಯರಃ' ಎಂಬುದಕ್ಕೆ ಅನ್ವಯಿಸುತ್ತದೆ. ಇಲ್ಲಿ "ಪದಸ್ಯ (ಸಿ.ಕೌ.8.1.16)" ಎಂಬುದು ಅಧಿಕಾರ ಸೂತ್ರವಾಗಿದೆ.

ಅರ್ಥ– ಅನುನಾಸಿಕವು ಪರದಲ್ಲಿರುವಾಗ ಪದಾನ್ತವಾದ 'ಯರ್' ವರ್ಣಕ್ಕೆ ವೈಕಲ್ಪಿಕವಾಗಿ ಅನುನಾಸಿಕವರ್ಣವು ಆದೇಶವಾಗಿ ಬರುತ್ತದೆ.

ಅನುನಾಸಿಕವು ಎರಡುತರಹದ್ದಾಗಿದೆ. 'ಅಚ್' ರೂಪವಾದ ಅನುನಾಸಿಕಗಳು ಮತ್ತು 'ಹಲ್' ರೂಪವಾದ ಅನುನಾಸಿಕಗಳು ಎಂದು. ಙ್,ಮ್,ಞ್,ಣ್,ನ್ ಎಂಬ 'ಹಲ್' ವರ್ಣಗಳು ಮೂಗಿನಿಂದಲೂ ಉಚ್ಚರಿಸಲ್ಪಡುತ್ತವೆ ಮತ್ತು ಯ್,ವ್,ಲ್ ಗಳೂ (ಯ್ಱ, ವ್ಱ, ಲ್ಱ.) ಎಂದು ಮೂಗಿನಿಂದಲೂ ಉಚ್ಚರಿಸಲ್ಪಡುತ್ತವೆ. ಕೇವಲ ಮೂಗಿನಿಂದ ಮಾತ್ರ ಉಚ್ಚರಿಸಲ್ಪಡುವ ಅನುನಾಸಿಕ ವರ್ಣವೆಂದರೆ ಅನುಸ್ವಾರ (.). 'ಅಚ್' ಸ್ವರಗಳೆಲ್ಲವೂ ಮೂಗಿನಿಂದಲೂ ಉಚ್ಚರಿಸಲ್ಪಡುತ್ತವೆ. ['ನಾಸಿಕಾ' ಸ್ಥಾನವನ್ನು

ಹೊರತು ಬೇರೆ ಸ್ಥಾನಗಳಾವುವು ಎಂಬುದನ್ನು ಸಂಜ್ಞಾ ಪ್ರಕರಣದಲ್ಲಿ ಹೇಳಲಾಗಿದೆ.]

ಇಲ್ಲಿ ಆದೇಶವಾಗಿ ಬರುವ ವರ್ಣವು "ಸ್ಥಾನೇಽನ್ತರತಮಃ (1.1.50)" ಸೂತ್ರದ ಸಹಾಯದಿಂದ ಮಾಡಲ್ಪಡುತ್ತದೆ. ಯಾಕೆಂದರೆ ಒಂದೇ 'ಸ್ಥಾನಿ'ಗೆ ಹಲವು ವರ್ಣಗಳು ಆದೇಶಗಳಾಗಿ ಬರುವ ಅವಕಾಶವಿರುತ್ತದೆ.

ಉದಾಹರಣೆ– 'ಏತದ್ + ಮುರಾರಿಃ' ಎಂಬಲ್ಲಿ ಪದಾನ್ತದಲ್ಲಿರುವ 'ದ್' ಕಾರವು 'ಯರ್' ವರ್ಣವಾಗಿದೆ. ಅದರ ಪರದಲ್ಲಿ 'ಮ್' ಕಾರವು ಅನುನಾಸಿಕ ವರ್ಣವಾಗಿದೆ. ಆದುದರಿಂದ ಪದಾನ್ತವಾದ 'ದ್' ಕಾರದ ಸ್ಥಾನದಲ್ಲಿ ಅದಕ್ಕೆ ಸವರ್ಣವಾದ ಮತ್ತು ಅನುನಾಸಿಕವಾದ ಸವರ್ಣವು 'ನ್' ಕಾರವು ಆದೇಶವಾಗಿ ಬರುತ್ತದೆ. ಹೀಗಾಗಿ 'ಏತನ್ಮುರಾರಿಃ' ಎಂದಾಗುತ್ತದೆ.(ವರ್ಗೀಯ ವರ್ಣಗಳ ಸವರ್ಣಗಳೆಂದರೆ ಸಮಾನ ಸ್ಥಾನ, ಪ್ರಯತ್ನಗಳುಳ್ಳವು ಎಂದರ್ಥ).ಈ ರೂಪವು ವೈಕಲ್ಪಿಕವಾದುದರಿಂದ 'ಏತನ್ಮುರಾರಿಃ' ಮತ್ತು ಏತದ್ಮುರಾರಿಃ ಎಂದು ಎರಡು ರೂಪಗಳಾಗುತ್ತವೆ.

**(ನಿತ್ಯವಾಗಿ ಅನುನಾಸಿಕವನ್ನು ವಿಧಿಸುವ ವಾರ್ತಿಕ)**

ವಾ॥ ಪ್ರತ್ಯಯೇ ಭಾಷಾಯಾಂ ನಿತ್ಯಮ್।

ತನ್ಮಾತ್ರಮ್. ಚಿನ್ಮಯಮ್।

ಅರ್ಥ–ಪ್ರತ್ಯಯವು ಪರದಲ್ಲಿದ್ದಾಗ ಪದಾನ್ತವಾದ 'ಯರ್' ವರ್ಣಕ್ಕೆ ಲೌಕಿಕ ಭಾಷೆಯಲ್ಲಿ ಅನುನಾಸಿಕವು ನಿತ್ಯವಾಗಿ ಬರುತ್ತದೆ.

ಉದಾ – 'ತನ್ಮಾತ್ರಮ್'– ಪ್ರಮಾಣ ಎಂಬ ಅರ್ಥದಲ್ಲಿ 'ತತ್'(ದ್) ಶಬ್ದದ ಮೇಲೆ 'ಮಾತ್ರಚ್' ಪ್ರತ್ಯಯವು ಇದ್ದಾಗ ಪೂರ್ವ ಪದದ ಕೊನೆಯಲ್ಲಿ 'ಯರ್' ವರ್ಣವಾದ 'ದ್' ಕಾರವು ಇರುವುದರಿಂದ ತದನಂತರ 'ಮಾತ್ರಚ್' ಪ್ರತ್ಯಯವು ಲೌಕಿಕ ಭಾಷೆಯಲ್ಲಿ ಪ್ರಯೋಗಿಸಿರುವುದರಿಂದ ಮತ್ತು 'ಮಾತ್ರಚ್' ಪ್ರತ್ಯಯವು ಅನುನಾಸಿಕ ವರ್ಣವಾದ 'ಮ್' ಕಾರದಿಂದ ಆರಂಭವಾಗಿರುವುದರಿಂದ ಪೂರ್ವದಲ್ಲಿರುವ ಪದಾನ್ತವಾದ 'ಯರ್' ವರ್ಣಕ್ಕೆ ಅನುನಾಸಿಕವು ನಿತ್ಯವಾಗಿ ಆದೇಶವಾಗಿ ಬಂದು 'ತನ್ಮಾತ್ರಮ್' ಎಂದು ಒಂದೇ ರೂಪವು ಇರುತ್ತದೆ. ಈ ಪ್ರಯೋಗವು ಲೌಕಿಕ ಭಾಷೆಯಲ್ಲಿರುವುದರಿಂದ ವೈಕಲ್ಪಿಕ ರೂಪವಿಲ್ಲ.

ಉದಾಹರಣೆ – 'ಚಿನ್ಮಯಮ್' = 'ಚಿದ್+ಮಯಮ್' ಎಂದಿರುವಾಗ, 'ಮಯಟ್' ಪ್ರತ್ಯಯವು ಲೌಕಿಕ ಭಾಷೆಯಲ್ಲಿರುವುದರಿಂದ ಪೂರ್ವಪದದ ಕೊನೆಯಲ್ಲಿರುವ 'ಯರ್'(ದ್) ವರ್ಣಕ್ಕೆ ಪರದಲ್ಲಿ ಅನುನಾಸಿಕ(ಮ್) ವರ್ಣವು ಇರುವುದರಿಂದ ನಿತ್ಯವಾಗಿ ಅನುನಾಸಿಕವಾದ 'ನ್' ಕಾರವು ಆದೇಶವಾಗಿ ಬಂದು 'ಚಿನ್ಮಯಮ್' ಎಂಬ ಒಂದೇ ರೂಪವು ಇರುತ್ತದೆ.  ವೈಕಲ್ಪಿಕ ರೂಪವು ಇರುವುದಿಲ್ಲ.

**ಸನ್ಧಿ (5) ('ತ' ವರ್ಗಕ್ಕೆ ಪರಸವರ್ಣ ವಿಧಾಯಕ ಸೂತ್ರ) ವಿದ್ವಾಲ್ँಲಿಖತಿ**

**ಸೂತ್ರ 69: ತೋರ್ಲಿ (8.4.60)**

ವೃತ್ತಿ–ತವರ್ಗಸ್ಯ ಲಕಾರೇ ಪರೇ ಪರಸವರ್ಣಃ । ತಲ್ಲಯಃ ।ವಿದ್ವಾಲ್ँಲಿಖತಿ ।

ನಸ್ಯ ಅನುನಾಸಿಕಃ ಲಃ ।

ಪ.ಛೇ. – ತೋಃ, ಲಿ ।

ಅ.ವ್ಯ.– "ಅನುಸ್ವಾರಸ್ಯ ಯಯಿಪರಸವರ್ಣಃ(8–4–58)" ಎಂಬ ಸೂತ್ರದಿಂದ 'ಪರಸವರ್ಣಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– 'ಲ್'ಕಾರವು ಪರದಲ್ಲಿದ್ದಾಗ 'ತ'ವರ್ಗದ ಸ್ಥಾನದಲ್ಲಿ ಪರಸವರ್ಣವು ಆದೇಶವಾಗಿ ಬರುತ್ತದೆ.

ಉದಾ–1. 'ತತ್+ಲಯಃ',ಇಲ್ಲಿ 'ಲ್'ಕಾರವು ಪರದಲ್ಲಿದೆ, ಪದಾನ್ತವಾದ 'ತ್'ಕಾರಕ್ಕೆ ಪರಸವರ್ಣವಾದ 'ಲ್'ಕಾರವು ಆದೇಶವಾಗಿ ಬಂದು 'ತಲ್+ಲಯಃ' = 'ತಲ್ಲಯಃ' ಎಂದಾಗುತ್ತದೆ.

2.'ವಿದ್ವಾನ್+ಲಿಖತಿ' ಎಂಬ ಉದಾಹರಣೆಯಲ್ಲಿ 'ಲ್'ಕಾರವು ಪರದಲ್ಲಿದ್ದಾಗ ಪೂರ್ವದಲ್ಲಿರುವ 'ತ'ವರ್ಗದ 'ನ್'ಕಾರವು ಅನುನಾಸಿಕವಾಗಿರುವುದರಿಂದ ಅನುನಾಸಿಕವಾದ ಪರಸವರ್ಣವು ಬಂದು 'ವಿದ್ವಾಲ್ँ+ಲಿಖತಿ' ಎಂದಾಗುತ್ತದೆ. ಇದನ್ನೇ ಸೇರಿಸಿ ಬರೆಯುವಾಗ 'ವಿದ್ವಾಲ್ँಲಿಖತಿ' ಎಂದಾಗುತ್ತದೆ. "ನಸ್ಯಾನುನಾಸಿಕೋಃ ಲಃ" ಎಂದರೆ 'ನ್'ಕಾರದ ಜಾಗದಲ್ಲಿ ಅನುನಾಸಿಕವಾದ (ಲ್ँ) ಕಾರವು ಆದೇಶವಾಗಿ ಬಂದಿದೆಂದರ್ಥ.

ವಿಶೇಷ–"ಝಲಾಂ ಜಶೋಽನ್ತೇ(8–2–39)" ಎಂಬ ಸೂತ್ರದ ದೃಷ್ಟಿಯಿಂದ ಈ ಪ್ರಕೃತ ಸೂತ್ರವು ಅಸಿದ್ಧವಾಗಿದೆ. ಆದ್ದರಿಂದ ಎಲ್ಲಿ "ಝಲಾಂ ಜಶೋಽನ್ತೇ(8–2–39)"ಗೆ ಅವಕಾಶವಿರುತ್ತದೋ, ಅಲ್ಲಿ ಮೊದಲು 'ಜಶ್ತ್ವ'ವನ್ನು ಮಾಡಿದ ನಂತರ ಪ್ರಕೃತ ಸೂತ್ರದಿಂದ 'ಲ್' ಕಾರವು ಆದೇಶವಾಗಿ ಬರುವುದು.

ಉದಾಹರಣೆ–ಜಗತ್ + ಲೀಯತಿ = ಜಗದ್ + ಲೀಯತೆ = ಜಗಲ್ಲೀಯತೇ.

### ಸನ್ಧಿ (6) (ಪೂರ್ವಸವರ್ಣವನ್ನು ವಿಧಿಸುವ ಸೂತ್ರ)

**ಸೂತ್ರ 70: ಉದಃ ಸ್ಥಾ–ಸ್ತಂಭೋಃ ಪೂರ್ವಸ್ಯ ( 8.4.61)**

ವೃತ್ತಿ–ಉದಃ ಪರಯೋಃ ಸ್ಥಾ–ಸ್ತಂಭೋಃ ಪೂರ್ವಸವರ್ಣಃ ।

ಪ.ಛೇ.– ಉದಃ, ಸ್ಥಾ–ಸ್ತಂಭೋಃ, ಪೂರ್ವಸ್ಯ ।

ಅ.ವ್ಯ.– "ಅನುಸ್ವಾರಸ್ಯ ಯಯಿ ಪರಸವರ್ಣಃ"(8–4–58) ಸೂತ್ರದಿಂದ 'ಸವರ್ಣಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– 'ಉತ್' ಉಪಸರ್ಗಕ್ಕಿಂತ ಪರದಲ್ಲಿರುವ 'ಸ್ಥಾ' ಮತ್ತು 'ಸ್ತಮ್ಭ್' ಗಳಿಗೆ ಪೂರ್ವಸವರ್ಣವು ಬರುತ್ತದೆ.

ಪೂರ್ವ ಸವರ್ಣವು 'ಸ್ಥಾ' ಮತ್ತು 'ಸ್ತಂಭ್' ಧಾತುಗಳಲ್ಲಿ ಯಾವ ವರ್ಣಗಳಿಗೆ ಬರುವದು ಎಂಬುದನ್ನು ನಿಶ್ಚಯಿಸುವದಕ್ಕಾಗಿ ಪರಿಭಾಷಾ ಸೂತ್ರಗಳು ಹೊರಟಿವೆ.

(ನಿಯಮ ಹೇಳುವ ಪರಿಭಾಷಾ ಸೂತ್ರ)

**ಸೂತ್ರ 71: ತಸ್ಮಾದಿತ್ಯುತ್ತರಸ್ಯ (1.1.67)**

ವೃತ್ತಿ-ಪಞ್ಚಮೀ-ನಿರ್ದೇಶೇನ ಕ್ರಿಯಮಾಣಂ ಕಾರ್ಯಂ ವರ್ಣಾನ್ತರೇಣ ಅವ್ಯವಹಿತಸ್ಯ ಪರಸ್ಯ ಜ್ಞೇಯಮ್।

ಪ.ಛೇ. - ತಸ್ಮಾತ್, ಇತಿ, ಉತ್ತರಸ್ಯ।

ಅರ್ಥ- 'ಪಂಚಮೀ ವಿಭಕ್ತ್ಯನ್ತ' ಪದದಿಂದ ನಿರ್ದೇಶಿಸಲ್ಪಡುವ ಕಾರ್ಯವು ಬೇರೆ ವರ್ಣಗಳಿಂದ ವ್ಯವಹಿತವಾಗದೇ ಇರುವ ಪರವರ್ಣದ ಸ್ಥಾನದಲ್ಲಿ ಆಗುತ್ತದೆಂದು ತಿಳಿಯಬೇಕು. "ಉದಃ ಸ್ಥಾ-ಸ್ತಂಭೋಃ ಪೂರ್ವಸ್ಯ(8.4.61)" ಸೂತ್ರದಲ್ಲಿ 'ಉದಃ' ಎಂಬುದು ಪಂಚಮ್ಯನ್ತವಾಗಿದೆ. ಈ ಪಂಚಮ್ಯನ್ತವಾದ ಪದದ 'ಉತ್' ಎಂಬ ಶಬ್ದದ ಪರದಲ್ಲಿರುವ ವರ್ಣಕ್ಕೆ ಕಾರ್ಯವು ಆಗುತ್ತದೆಂದರ್ಥ.

ಇದು 'ಪರಿಭಾಷಾ' ಸೂತ್ರವಾಗಿದೆ. ಪರಿಭಾಷೆಯು ಸ್ವತಂತ್ರವಾಗಿ ಯಾವ ಕಾರ್ಯವನ್ನು ಮಾಡಲು ಸಮರ್ಥವಾಗುವುದಿಲ್ಲ. ಮತ್ತೊಂದು ವಿಧಿ ಸೂತ್ರವನ್ನು ಜೊತೆಗೆ ಸೇರಿಸಿಕೊಂಡು ಒಂದು ನಿರ್ದಿಷ್ಟವಾದ ಅರ್ಥವನ್ನು ಕೊಡುತ್ತದೆ. "ಉದಃ ಸ್ಥಾ-ಸ್ತಂಭೋಃ ಪೂರ್ವಸ್ಯ"(8.4.61) ಎಂಬ ಸೂತ್ರದೊಡನೆ "ತಸ್ಮಾದಿತ್ಯುತ್ತರಸ್ಯ(1-1-67)" ಎಂಬ ಪರಿಭಾಷೆಯು ಸೇರಿಕೊಂಡು ಅವ್ಯವಹಿತವಾದ ಪರಸವರ್ಣಕ್ಕೆ ಕಾರ್ಯವು ಬರುತ್ತದೆಂಬರ್ಥವನ್ನುಂಟು ಮಾಡುತ್ತದೆ.

ಉದಾ- 'ಉದ್ + ಸ್ಥಾನಮ್' ಮತ್ತು 'ಉದ್ + ಸ್ತಂಭನಮ್' ಎಂಬಲ್ಲಿ ಹಿಂದಿನ ಸೂತ್ರದ ಪ್ರಕಾರ ಪೂರ್ವಸವರ್ಣವು "ಅಲೋಽನ್ತ್ಯಸ್ಯ" ಎಂಬ ಪರಿಭಾಷಾ ಸೂತ್ರದಿಂದ 'ಸ್ಥಾ' ಮತ್ತು 'ಸ್ತಂಭ್' ಧಾತುಗಳ ಅಂತ್ಯ ವರ್ಣಕ್ಕೆ ಬರಬೇಕಾಗುತ್ತದೆ. ಇಂತಹ ಸ್ಥಿತಿಯಲ್ಲಿ ನಿರ್ಣಯವನ್ನು ಕೊಡುವುದಕ್ಕಾಗಿ ಮುಂದಿನ ಸೂತ್ರವು ಅಪವಾದವನ್ನು ಹೇಳುತ್ತದೆ.

(ನಿಯಮ ಹೇಳುವ ಪರಿಭಾಷಾ ಸೂತ್ರ)

**ಸೂತ್ರ 72: ಆದೇಃ ಪರಸ್ಯ ( 1.1.54)**

ವೃತ್ತಿ-ಪರಸ್ಯ ಯದ್ವಿಹಿತಂ ತತ್ ತಸ್ಯ ಆದೇಃ ಬೋಧ್ಯಮ್(ಇತಿ ಸಸ್ಯ ಥಃ) ।

ಅ.ವ್ಯ.-"ಅಲೋಽನ್ತ್ಯಸ್ಯ(1-1-52)" ಎಂಬ ಪರಿಭಾಷಾ ಸೂತ್ರದಿಂದ 'ಅಲಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- ಪರದಲ್ಲಿರುವ(ವರ್ಣಕ್ಕೋ ಅಥವಾ ಪದಕ್ಕೋ) ವಿಹಿತವಾಗಿರುವ ಯಾವ ಕಾರ್ಯವು ವಿಧಿಸಲ್ಪಡುತ್ತದೋ ಅದು ಆ ಶಬ್ದ-ಸ್ವರೂಪದ ಆದಿ ವರ್ಣಕ್ಕೆ ಆಗುತ್ತದೆ. ಈ ಕಾರಣದಿಂದ 'ಉದ್' ಎಂಬ ಶಬ್ದದ ಪರದಲ್ಲಿರುವ 'ಸ್ಥಾ' ಧಾತುವಿನ ಆದಿ ವರ್ಣವಾದ 'ಸ್' ಕಾರದ ಸ್ಥಾನಕ್ಕೂ ಹಾಗೆಯೇ 'ಉದ್' ಶಬ್ದ ಪರದಲ್ಲಿರುವ 'ಸ್ತಮ್ಭ್' ಶಬ್ದದ ಆದಿ ವರ್ಣವಾದ 'ಸ್' ಕಾರಕ್ಕೂ ಪೂರ್ವಸವರ್ಣವು ಬರುತ್ತದೆ. 'ಸ್' ಕಾರದ ಜಾಗದಲ್ಲಿ ಪೂರ್ವ ವರ್ಣವಾದ 'ದ್' ಕಾರದ ಸವರ್ಣ ಅಕ್ಷರವಾದ

(ಥ್) ಕಾರವು ಆದೇಶವಾಗಿ ಬರುತ್ತದೆ. ಆ ಆದೇಶವಾಗಿ ಬರುವ ವರ್ಣವು 'ಸ್' ಕಾರವನ್ನು ಕೊಲ್ಲಲು ಸಮರ್ಥವಾಗಿರಬೇಕು ಅಂದರೆ– ಆ ಆದೇಶವು ಪೂರ್ವ ವರ್ಣವಾದ 'ದ್' ವರ್ಣಕ್ಕೂ ಸವರ್ಣವಾಗಿರಬೇಕು.

ಅಂದರೆ 'ಸ್ಥಾ' ಮತ್ತು 'ಸ್ತಂಭ್' ಎಂಬ ಪದಗಳಲ್ಲಿರುವ ಆದಿವರ್ಣವಾದ 'ಸ್' ಕಾರಕ್ಕೆ ಸ್ಥಾನಪ್ರಯತ್ನ(ಬಾಹ್ಯ ಪ್ರಯತ್ನ) ಸಾಮ್ಯದಿಂದ ಮಹಾಪ್ರಾಣವಾದ 'ಥ್' ಕಾರವು ಆದೇಶವಾಗಿ ಬಂದು ಉದ್+ಥ್+ಥಾನಮ್, ಉದ್+ಥ್+ತಂಭನಮ್ ಎಂದಾಗುತ್ತವೆ.

**(ವೈಕಲ್ಪಿಕವಾಗಿ ಲೋಪವನ್ನು ಹೇಳುವ ಸೂತ್ರ)**

**ಸೂತ್ರ 73: ಝರೋ ಝರಿ ಸವರ್ಣೇ (8.4.65)**

ವೃತ್ತಿ–ಹಲಃ ಪರಸ್ಯ ಝರೋ ವಾ ಲೋಪಃ ಸವರ್ಣೇ ಝರಿ ।

ಪ. ಛೇ. – ಝರಃ, ಝರಿ, ಸವರ್ಣೇ ।

ಅ.ವ್ಯ.– "ಹಲೋ ಯಮಾಂ ಯಮಿ ಲೋಪಃ(8–4–64)" ಸೂತ್ರದಿಂದ 'ಹಲಃ' ಮತ್ತು 'ಲೋಪಃ' ಎಂಬ ಪದಗಳು, ಹಾಗೆಯೇ "ಝಯೋ ಹೋऽನ್ಯತರಸ್ಯಾಮ್(8–4–62)" ಎಂಬ ಸೂತ್ರದಿಂದ 'ಅನ್ಯತರಸ್ಯಾಮ್' ಎಂಬ ಪದವು ಅನುವೃತ್ತವಾಗಿದೆ.

ಅರ್ಥ – 'ಹಲ್' ವರ್ಣಕ್ಕಿಂತ ಪರದಲ್ಲಿರುವ 'ಝರ್' ವರ್ಣದ ಲೋಪವು ವಿಕಲ್ಪವಾಗಿ ಆಗುತ್ತದೆ, ಸವರ್ಣವಾದ 'ಝರ್' ವರ್ಣವು ಪರದಲ್ಲಿದ್ದಾಗ.

ಉದಾ– ಉದ್+ಥ್+ಥಾನಮ್ ಎಂದಿದ್ದಾಗ 'ಉದ್' ಎಂಬಲ್ಲಿರುವ 'ದ್' ಕಾರವೇ 'ಹಲ್' ವರ್ಣವಾಗಿದೆ. ಅದಕ್ಕೆ ಪರದಲ್ಲಿ 'ಝರ್' ವರ್ಣವು 'ಥ್' ಕಾರವಾಗಿದೆ. ಆ ಮೊದಲಿನ 'ಥ್' ಕಾರಕ್ಕೆ ಪರದಲ್ಲಿ ಸವರ್ಣವಾದ 'ಝರ್' ವರ್ಣ ಪರದಲ್ಲಿ ಇರುವುದರಿಂದ ಮೊದಲಿನ 'ಥ್' ಕಾರಕ್ಕೆ ಲೋಪವು ಬರುತ್ತದೆ. ಆಗ, ಉದ್+ಥಾನಮ್ ಎಂದಿರುತ್ತದೆ. ಮುಂದಿನ ಸೂತ್ರದಲ್ಲಿ 'ದ್' ಕಾರಕ್ಕೆ ಚರ್ತ್ವವನ್ನು ವಿಧಿಸುತ್ತಾನೆ.

**ಸನ್ಧಿ (7)(ಚರ್ತ್ವವನ್ನು ವಿಧಿಸುವ ಸೂತ್ರ)**

**ಸೂತ್ರ 74: ಖರಿ ಚ (8.4.55)**

ವೃತ್ತಿ–ಖರಿ ಝಲಾಂ ಚರಃ ಸ್ಯುಃ । ಇತಿ ಉದಃ ದಸ್ಯ ತಃ । ಉತ್ಥಾನಮ್ । ಉತ್ತಂಭನಮ್ ।

ಅ.ವ್ಯ.– "ಝಲಾಂ ಜಶ್ ಝಶಿ(8–4–53)" ಸೂತ್ರದಿಂದ 'ಝಲಾಂ' ಎಂಬ ಪದವು ಮತ್ತು "ಅಭ್ಯಾಸೇ ಚರ್ಚ(8–4–54)" ಸೂತ್ರದಿಂದ 'ಚರ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– 'ಖರ್' ವರ್ಣವು ಪರದಲ್ಲಿರುವಾಗ 'ಝಲ್' ವರ್ಣದ ಸ್ಥಾನದಲ್ಲಿ 'ಚರ್' ವರ್ಣವು ಆದೇಶವಾಗಿ ಬರುತ್ತದೆ.

ಉದಾ-'ಉದ್+ಥಾನಮ್; ಉದ್+ತಮ್ಭನಮ್' – ಎಂಬ ಉದಾಹರಣೆಗಳಲ್ಲಿ 'ದ್' ಕಾರಕ್ಕೆ 'ತ್' ಕಾರವು ಬರುತ್ತದೆ. ಇಲ್ಲಿ 'ದ್'ಕಾರವು 'ಝಲ್'ವರ್ಣವಾಗಿಯೂ ಮತ್ತು 'ತ್'ಕಾರವು 'ಚರ್' ವರ್ಣವಾಗಿಯೂ ಇದೆ. ಆಗ ಉತ್+ಥಾನಮ್ ಎಂದಿರುತ್ತದೆ. ಲೋಪವು ವಿಕಲ್ಪವಾಗಿರೋಣದ್ದರಿಂದ ಲೋಪ ಬಾರದ ಪಕ್ಷದಲ್ಲಿ ಪ್ರಕೃತ ಸೂತ್ರದಿಂದ 'ದ್' ಕಾರಕ್ಕೆ ಚರ್ತ್ವ ಬಂದರೂ ಉತ್+ಥ್+ಥಾನಮ್ ಎಂದೇ ಇರುತ್ತದೆ.

ಎರಡನೇ ಉದಾಹರಣೆಯಲ್ಲಿ ಉದ್ + ತಮ್ಭನಮ್ ಎಂದಿದ್ದಾಗ, ಪೂರ್ವ ಉದಾಹರಣೆಯಲ್ಲಿ ಹೇಗೋ ಹಾಗೆಯೇ 'ಸ್' ಕಾರಕ್ಕೆ ಸ್ಥಾನ-ಪ್ರಯತ್ನ ಸಾಮ್ಯದಿಂದ 'ಥ್' ಕಾರವು ಆದೇಶವಾಗಿ ಬಂದು ಉದ್ + ತ್ + ತಮ್ಭನಮ್ ಎಂದಾಗಿರುತ್ತದೆ. "ಝರ್‌ೋ ಝರಿ ಸವರ್ಣೆ" ಎಂಬುದರಿಂದ ಸವರ್ಣವಾದ 'ತ್' ಕಾರವು ಪರದಲ್ಲಿರುವುದರಿಂದ ವೈಕಲ್ಪಿಕವಾಗಿ 'ಥ್' ಕಾರಕ್ಕೆ ಲೋಪವು ಬರುತ್ತದೆ. ಪ್ರಕೃತ ಸೂತ್ರದಿಂದ 'ದ್'ಕಾರಕ್ಕೆ ಚರ್ತ್ವ ಬಂದು ಉತ್ + ತಮ್ಭನಮ್ = ಉತ್ತಮ್ಭನಮ್ ಎಂದಾಗುತ್ತದೆ. 'ಥ್' ಕಾರದ ಲೋಪಾಭಾವ ಪಕ್ಷದಲ್ಲಿ ಉತ್ + ಥ್ + ತಮ್ಭನಮ್ = ಉತ್‌ಥ್‌ತ್‌ಮ್ಭನಮ್ ಎಂದು ರೂಪವಾಗುತ್ತದೆ.

**(ವೈಕಲ್ಪಿಕವಾಗಿ ಪೂರ್ವಸವರ್ಣವನ್ನು ವಿಧಿಸುವ ಸೂತ್ರ).**

**ಸೂತ್ರ 75: ಝಯೋ ಹೋಽನ್ಯತರಸ್ಯಾಮ್ (8.4.62)**

ವೃತ್ತಿ-ಝಯಃ ಪರಸ್ಯ ಹಸ್ಯ ವಾ ಪೂರ್ವಸವರ್ಣಃ । ನಾದಸ್ಯ, ಘೋಷಸ್ಯ ಸಂವಾರಸ್ಯ, ಮಹಾಪ್ರಾಣಸ್ಯ ಹಸ್ಯ ತಾದೃಶಃ ವರ್ಗಚತುರ್ಥಃ । ವಾಗ್ಘರಿಃ, ವಾಗ್‌ಹರಿಃ।

ಪ.ಛೇ. – ಝಯಃ, ಹಃ, ಅನ್ಯತರಸ್ಯಾಮ್ । (ಸಪ್ತಮ್ಯನ್ತ).

ಅ.ವೃ.– "ಉದಃ ಸ್ಥಾ-ಸ್ತಂಭೋಃ ಪೂರ್ವಸ್ಯ(8.4.61)" ಸೂತ್ರದಿಂದ 'ಪೂರ್ವಸ್ಯ' ಎಂಬ ಪದವು ಮತ್ತು "ಅನುಸ್ವಾರಸ್ಯ ಯಯಿ ಪರಸವರ್ಣಃ(8–4–58)" ಸೂತ್ರದಿಂದ 'ಸವರ್ಣಃ' ಎಂಬ ಪದವು ಅನುವೃತ್ತವಾಗುತ್ತವೆ.

ಅರ್ಥ– 'ಝಯ್' ಗಿಂತ ಪರದಲ್ಲಿರುವ ಸ್ಥಾನದಲ್ಲಿ ವಿಕಲ್ಪವಾಗಿ ಪೂರ್ವಸವರ್ಣವು ಬರುತ್ತದೆ. 'ಘ್' ಕಾರಕ್ಕೂ 'ಹ್' ಕಾರಕ್ಕೂ 'ಕಂಠ' ಸಾಮ್ಯವಿದ್ದರೂ, ಇತರ ವರ್ಗೀಯ ವರ್ಣಗಳು 'ಹ್' ಕಾರಕ್ಕೆ ಆದೇಶವಾಗಿ ಬರಲು ಸ್ಪರ್ಧಿಸುತ್ತವೆ. ಆದ್ದರಿಂದ ಈ ಸಮಸ್ಯೆಯನ್ನು ಪರಿಹರಿಸಲು ಬಾಹ್ಯ ಪ್ರಯತ್ನದಿಂದ ಸಾಮ್ಯವನ್ನು ನೋಡಬೇಕಾಗುತ್ತದೆ (ಆನ್ತರತಮ್ಯ ಪರೀಕ್ಷೆ ಮಾಡಬೇಕಾಗುತ್ತದೆ). ಹೀಗಾಗಿ 'ಹ್'ಕಾರಕ್ಕೆ ಪೂರ್ವಸವರ್ಣ ವೆಂದರೆ 'ಕ' ವರ್ಗೀಯ ವರ್ಣಗಳಲ್ಲಿ 'ಘ್'ಕಾರವೇ ಆಗುತ್ತದೆ. ಯಾಕೆಂದರೆ 'ಘ್' ಕಾರಕ್ಕೂ 'ಹ್'ಕಾರಕ್ಕೂ 'ಸ್ಥಾನ', 'ಕಂಠ' ಹಾಗೂ 'ಬಾಹ್ಯ' ಪ್ರಯತ್ನಗಳು 'ನಾದ', 'ಘೋಷ', 'ಸಂವಾರ' ಮತ್ತು 'ಮಹಾಪ್ರಾಣ' ಸಮಾನವಾಗಿವೆ.

ಉದಾಹರಣೆ-1: 'ವಾಕ್+ಹರಿಃ' ಎಂದಿದ್ದಾಗ 'ಕ್' ಎಂಬುದು ಪದಾನ್ತವಾಗಿ ಇರುವುದರಿಂದ "ಝಲಾಂ ಜಶೋಽನ್ತೇ(8–2–39)" ಸೂತ್ರದಿಂದ 'ವಾಗ್'

ಎಂದಾಗುತ್ತದೆ. ಹೀಗಿದ್ದಾಗ, 'ವಾಗ್ + ಹರಿಃ' ಎಂದಾಗಿ 'ವಾಗ್‌ಹರಿಃ' ಎಂದಾಗುತ್ತದೆ. ಇದು 'ಪೂರ್ವಸವರ್ಣ' ಬಾರದಿರುವ ಪಕ್ಷ.

ಉದಾ–2: ವಾಗ್ಘರಿಃ = 'ವಾಕ್ + ಹರಿಃ' ಎಂದಿದ್ದಾಗ "ಝಲಾಂ ಜಶೋऽನ್ತೇ (8–2–39)" ಸೂತ್ರದಿಂದ 'ಕ್'ಕಾರಕ್ಕೆ 'ಗ'ಕಾರ ಆದೇಶವಾಗಿ ಬಂದು, 'ವಾಗ್+ಹರಿಃ' ಎಂದಿದ್ದಾಗ 'ಹ್'ಕಾರಕ್ಕೆ ಪೂರ್ವಸವರ್ಣವೆಂದರೆ 'ಘ್' ಕಾರವೆಂದು ಮೇಲೆ ವಿವರಿಸಲಾಗಿದೆ. ಅದರ ಪ್ರಕಾರ 'ವಾಗ್+ಹ್+ಅ+ರಿಃ'= 'ವಾಗ್ + ಘ್+ಅ+ರಿಃ'= ವಾಗ್ಘರಿಃ ಎಂದು ರೂಪವಾಗುತ್ತದೆ. ಇದು 'ಪೂರ್ವಸವರ್ಣ' ಬಂದ ಪಕ್ಷ.

**ಸನ್ಧಿ (8) ಛತ್ವ –ಸನ್ಧಿ(ವೈಕಲ್ಪಿಕವಾಗಿ 'ಶ್'ಕಾರಕ್ಕೆ ಛತ್ವವನ್ನು ವಿಧಿಸುವ ಸೂತ್ರ)**

**ಸೂತ್ರ 76. ಶಶ್ಛೋऽಟಿ (8.4.63)**

ವೃತ್ತಿ–ಝಯಃ ಪರಸ್ಯ ಶಸ್ಯ ಛೋ ವಾ ಅಟಿ । ತದ್+ಶಿವಃ ಇತ್ಯತ್ರ ದಸ್ಯ ಶ್ಚುತ್ವೇನ ಜಕಾರೇ ಕೃತೇ "ಖರಿ ಚ" ಇತಿ 'ಜ' ಕಾರಸ್ಯ 'ಚ' ಕಾರಃ । ತಚ್ಛಿವಃ

ವಾ॥ ಛತ್ವಮಮೀತಿ ವಾಚ್ಯಮ್। ತಚ್ಛ್ಲೋಕೇನ ।

ಪ.ಛೇ. – ಶಃ, ಛಃ, ಅಟಿ ।

ಅ.ವೃ.– "ಝಯೋ ಹೋऽನ್ಯತರಸ್ಯಾಮ್ (8.4.62)" ಸೂತ್ರದಿಂದ 'ಝಯಃ' ಮತ್ತು 'ಅನ್ಯತರಸ್ಯಾಮ್' ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ– ಪೂರ್ವದಲ್ಲಿ 'ಝಯ್' ವರ್ಣ ಮತ್ತು ಪರದಲ್ಲಿ 'ಅಟ್' ವರ್ಣ, ಹಾಗೆಯೇ ಮಧ್ಯದಲ್ಲಿ 'ಶ್'ಕಾರ ಇರಬೇಕು. ಆಗ 'ಶ್' ಕಾರದ ಸ್ಥಾನದಲ್ಲಿ ಒಂದು ಪಕ್ಷದಲ್ಲಿ 'ಛ್' ಕಾರವು ವಿಕಲ್ಪದಿಂದ ಆದೇಶವಾಗಿ ಬಂದು 'ತಚ್ಛಿವಃ' ಎಂದು ರೂಪವಾಗುತ್ತದೆ. ಆದೇಶ ಬಾರದಿರುವ ಪಕ್ಷದಲ್ಲಿ 'ಶ್'ಕಾರವೇ ಉಳಿದು 'ತಚ್‌ಶಿವಃ = ತಚ್ಛಿವಃ' ಎಂದಾಗುತ್ತದೆ. ಪ್ರಕೃತ ಸೂತ್ರವು ತ್ರಿಪಾದಿಯ ಚತುರ್ಥ ಪಾದದ ಕೊನೆಯಲ್ಲಿರುವುದರಿಂದ, ಪೂರ್ವದಲ್ಲಿರುವ ಎಲ್ಲ ಸೂತ್ರಗಳ ದೃಷ್ಟಿಯಲ್ಲಿ 'ಅಸಿದ್ಧ'ವೇ ಆಗಿರುತ್ತದೆ. ಆದ್ದರಿಂದ 'ಶ್ಚುತ್ವ', 'ಜಶ್ತ್ವ', 'ಚರ್ತ್ವ' ಮೊದಲಾದ ಕಾರ್ಯಗಳು ಈ ಕಾರ್ಯದ ಪೂರ್ವದಲ್ಲೇ ಆಗಬೇಕು.

ಉದಾ– 'ತಚ್ಛಿವಃ' 'ತಚ್‌ಶಿವಃ'= 'ತಚ್ಛಿವಃ' (ಅವನು ಮಂಗಳಕರನು). 'ತತ್+ಶಿವಃ' ಎಂದಿದ್ದಾಗ, ಪೂರ್ವಪದದ ಕೊನೆಯಲ್ಲಿರುವ 'ತ್'ಕಾರದ ಸ್ಥಾನದಲ್ಲಿ "ಝಲಾಂ ಜಶೋऽನ್ತೇ(8–2–39)" ಎಂಬ ಸೂತ್ರದಿಂದ 'ಜಶ್ತ್ವ' (ದ್) ಬಂದು 'ತದ್+ಶಿವಃ' ಎಂದಾಗುತ್ತದೆ. 'ಶಿವ' ಎಂಬಲ್ಲಿರುವ 'ಶ್' ಕಾರದೊಡನೆ 'ದ್' ಕಾರದ ಸಂಬಂಧವು ತನಗೆ ಪೂರ್ವದಲ್ಲಿ ಅವ್ಯವಹಿತವಾಗಿರುವುದರಿಂದ 'ದ್' ಕಾರಕ್ಕೆ 'ಚುತ್ವ' (ಜ್) ಬಂದು 'ತಜ್+ಶಿವಃ' ಎಂದಾಗುತ್ತದೆ. ನಂತರ "ಖರಿ ಚ (8–4–55)" ಸೂತ್ರದಿಂದ 'ಜ್'ಕಾರಕ್ಕೆ ಚರ್ತ್ವ (ಚ್)ವು ಆದೇಶವಾಗಿ ಬಂದು 'ತಚ್+ಶಿವಃ' ಎಂದಾಗುತ್ತದೆ.

ಈಗ ಪ್ರಕೃತ ಸೂತ್ರದಿಂದ 'ಚ್'ಕಾರವು 'ಝಯ್' ವರ್ಣವಾಗಿರುವುದರಿಂದ ಅದರ ಪರದಲ್ಲಿ 'ಶ್'ಕಾರವು ಇದ್ದು, ಅದರ ಪರದಲ್ಲಿ 'ಅಟ್' ಪ್ರತ್ಯಾಹಾರದ ವರ್ಣವಾದ

'ಇ'ಕಾರವು ಪರದಲ್ಲಿರುವುದರಿಂದ 'ಶ್'ಕಾರಕ್ಕೆ 'ಛ್' ಕಾರವು ಆದೇಶವಾಗಿ ಬಂದು 'ತಚ್ಛಿವಃ' ಎಂದಾಗುತ್ತದೆ. ವೈಕಲ್ಪಿಕವಾಗಿ (ಛತ್ವವು ಬಾರದ ಪಕ್ಷದಲ್ಲಿ) 'ತಚ್‌ಶಿವಃ' ಎಂದೇ ಇರುತ್ತದೆ.

ವಾರ್ತಿಕ- **"ಛತ್ವಮಮೀತಿ ವಾಚ್ಯಮ್"**. 'ತಚ್ಛ್ಲೋಕೇನ'. ।

ಪ.ಛೇ- ಛತ್ವಂ,ಅಮಿ,ಇತಿ ವಾಚ್ಯಮ್ ।

ಇಲ್ಲಿ 'ಅಟಿ' ಎಂಬುದಕ್ಕೆ ಬದಲಾಗಿ 'ಅಮಿ' ಎಂದು ಹೇಳಬೇಕೆಂದು ವಾರ್ತಿಕಕಾರರು ಹೇಳುತ್ತಾರೆ. 'ಶ್'ಕಾರದ ಪರದಲ್ಲಿ 'ಅಟ್' ಪ್ರತ್ಯಾಹಾರಕ್ಕೆ ಬದಲಾಗಿ, 'ಅಮ್' ಪ್ರತ್ಯಾಹಾರದ ವರ್ಣವಿದ್ದರೂ 'ಛತ್ವ'ವು ಬರುತ್ತದೆ ಎಂದರ್ಥ.

ಉದಾಹರಣೆ- 'ತಚ್ಛ್ಲೋಕೇನ'- 'ತಚ್ + ಶ್ಲೋಕೇನ' ಎಂದಿದ್ದಾಗ 'ಶ್'ಕಾರದ ಪರದಲ್ಲಿ 'ಲ್' ಕಾರವು ಇದೆ. ಅದು 'ಅಮ್' ಪ್ರತ್ಯಾಹಾರದ ವರ್ಣವಾಗಿರುವುದರಿಂದ 'ಶ್'ಕಾರಕ್ಕೆ 'ಛತ್ವ'ವು ಆದೇಶವಾಗಿ ಬಂದು 'ತಚ್ಛ್ಲೋಕೇನ' ಎಂಬ ರೂಪವನ್ನು ಪಡೆಯುತ್ತದೆ.

**ಸನ್ಧಿ (೯) ಅನುಸ್ವಾರ ಸನ್ಧಿ (ಅನುಸ್ವಾರವನ್ನು ವಿಧಿಸುವ ಸೂತ್ರ)**

**ಸೂತ್ರ 77: ಮೋಽನುಸ್ವಾರಃ (೮.೩.೨೩)**

ವೃತ್ತಿ-ಮಾನ್ತಸ್ಯ ಪದಸ್ಯ ಅನುಸ್ವಾರಃ ಹಲಿ । ಹರಿಂ ವನ್ದೇ ।

ಪ. ಛೇ. – ಮಃ(ಷಷ್ಠ್ಯನ್ತ), ಅನುಸ್ವಾರಃ ।

ಅ. ವ್ಯ. –"ಹಲಿ ಸರ್ವೇಷಾಮ್(8–3–22)" ಸೂತ್ರದಿಂದ 'ಹಲಿ' ಎಂಬ ಪದವು ಅನುವೃತ್ತವಾಗುತ್ತದೆ. "ಪದಸ್ಯ(8–1–16)" ಎಂಬುದು ಇಲ್ಲಿ ಅಧಿಕಾರ ಸೂತ್ರವಾಗಿದೆ.

ಅರ್ಥ- 'ಮ್'ಕಾರಾನ್ತ ಪದದ ಅನ್ತ್ಯವರ್ಣಕ್ಕೆ ಅನುಸ್ವಾರವು ಆದೇಶವಾಗಿ ಬರುತ್ತದೆ. 'ಹಲ್' ವರ್ಣವು ಪರದಲ್ಲಿದ್ದಾಗ, "ಯೇನ ವಿಧಿಸ್ತದನ್ತಸ್ಯ (1–1–72)" ಎಂಬ ಪರಿಭಾಷಾ ಸೂತ್ರದಿಂದ 'ತದನ್ತವಿಧಿ'ಯಿಂದ 'ಮ್'ಕಾರಾನ್ತ ಪದದ ಎಂದರ್ಥ ಮಾಡಲಾಗಿದೆ. "ಅಲೋಽನ್ತ್ಯಸ್ಯ (1–1–52)" ಎಂಬ ಪರಿಭಾಷಾ ಸೂತ್ರದಿಂದ 'ಮ್'ಕಾರಾನ್ತ ಪದದ ಅನ್ತ್ಯ 'ಮ್' ಕಾರಕ್ಕೆ ಅನುಸ್ವಾರವು ಆದೇಶವಾಗಿ ಬರುತ್ತದೆ. 'ಅಚ್' ವರ್ಣವು ಪರದಲ್ಲಿದ್ದಾಗ ಆಗುವುದಿಲ್ಲ. ಅಂದರೆ 'ಮ್'ಹಾಗೆಯೇ ಉಳಿಯುತ್ತದೆ.

ಉದಾಹರಣೆ – 'ಹರಿಮ್ + ವನ್ದೇ' ಎಂಬಲ್ಲಿ ಪ್ರಕೃತ ಸೂತ್ರದಿಂದ 'ಮ್'ಕಾರದ ಸ್ಥಾನದಲ್ಲಿ 'ಅನುಸ್ವಾರ'ವು ಬಂದು 'ಹರಿಂ ವನ್ದೇ' ಎಂಬ ರೂಪವು ಸಿದ್ಧವಾಗುತ್ತದೆ.

**(ಅಪದಾನ್ತದಲ್ಲಿ ಅನುಸ್ವಾರವನ್ನು ವಿಧಿಸುವ ಸೂತ್ರ)**.

**ಸೂತ್ರ 78. ನಶ್ಚಾಪದಾನ್ತಸ್ಯ ಝಲಿ (೮.೩.೨೪)**

ವೃತ್ತಿ-ನಸ್ಯ ಮಸ್ಯ ಚ ಅಪದಾನ್ತಸ್ಯ ಝಲಿ ಅನುಸ್ವಾರಃ । ಯಶಾಂಸಿ । ಆಕ್ರಂಸ್ಯತೇ। ಝಲಿ ಕಿಮ್? ಮನ್ಯತೇ

ಪ. ಛೇ. – ನಃ, ಚ, ಅಪದಾನ್ತಸ್ಯ ಝಲಿ ।

ಅ. ವೃ. – "ಮೋಽನುಸ್ವಾರಃ (8.3.23)" ಸೂತ್ರದಿಂದ 'ಮಃ' ಎಂಬ ಪದವು ಅನುವೃತ್ತವಾಗಿದೆ.

ಅರ್ಥ–'ಅಪದಾನ್ತ'ವಾದ 'ನ್' ಕಾರ ಮತ್ತು 'ಅಪದಾನ್ತ' ವಾದ 'ಮ್'ಕಾರದ ಸ್ಥಾನದಲ್ಲಿ 'ಅನುಸ್ವಾರ'ವು ಆದೇಶವಾಗಿ ಬರುತ್ತದೆ 'ಝಲ್' ವರ್ಣವು ಪರದಲ್ಲಿದ್ದಾಗ.

ಉದಾ–1: 'ಯಶಾಂಸಿ' (ಹೆಚ್ಚಾದ ಯಶಸ್ಸು) ಎಂಬಲ್ಲಿ 'ಯಶಾನ್ + ಸಿ' ಎಂದಿದ್ದಾಗ, 'ಯಶಾನ್' ಎಂಬುದು ಸುಬನ್ತ ಪದವಲ್ಲ. (ಯಶಾಂಸಿ ಎಂಬುದೇ ಸುಬಂತ ಪದ). 'ಯಶಾನ್' ಎಂಬಲ್ಲಿರುವ 'ನ್'ಕಾರ ಅಪದಾನ್ತವಾದ 'ನ್'ಕಾರ. ಪರದಲ್ಲಿ 'ಝಲ್' ವರ್ಣವಾದ 'ಸ್' ಕಾರವು ಇದೆ. ಇದು 'ಸಿ', ಯಲ್ಲಿರುವ 'ಸ್' ಕಾರ. ಆದುದರಿಂದ ಪ್ರಕೃತ ಸೂತ್ರದಿಂದ, 'ಯಶಾನ್' ಎಂಬಲ್ಲಿರುವ 'ನ್' ಕಾರಕ್ಕೆ 'ಅನುಸ್ವಾರ' ಬಂದು 'ಯಶಾಂಸಿ' ಎಂದಾಗುತ್ತದೆ.

ಉದಾ– 2: ಆಕ್ರಂಸ್ಯತೇ (ಆಕ್ರಮಣ ಮಾಡುತ್ತದೆ). ಆಕ್ರಮ್ + ಸ್ಯತೇ ಎಂದಿದ್ದಾಗ, 'ಆಕ್ರಮ್' ಎಂಬಲ್ಲಿರುವ 'ಮ್' ಕಾರವು ಅಪದಾನ್ತದಲ್ಲಿದೆ. 'ಸ್ಯತೇ' ಎಂಬಲ್ಲಿರುವ 'ಸ್' ಕಾರ 'ಝಲ್' ವರ್ಣವಾಗಿ ಪರದಲ್ಲಿದೆ. ಆದುದರಿಂದ ಪ್ರಕೃತ ಸೂತ್ರದಿಂದ 'ಮ್' ಕಾರದ ಸ್ಥಾನದಲ್ಲಿ ಅನುಸ್ವಾರ ಬಂದು 'ಆಕ್ರಂಸ್ಯತೇ' ಎಂದಾಗಿದೆ.

'ಝಲಿ ಕಿಂ'? ಎಂಬ ಪ್ರಶ್ನೆಗೆ 'ಮನ್ಯತೇ' ಎಂದು ಉತ್ತರ ಕೊಟ್ಟಿದ್ದಾರೆ. 'ಮನ್ಯತೇ' ಎಂಬಲ್ಲಿ ದೋಷ ಬಾರದೇ (ಇಷ್ಟ ರೂಪಸಿದ್ಧಿಗಾಗಿ) ಇರುವದಕ್ಕಾಗಿ ಎಂಬುದೇ ಈ ಪ್ರಶ್ನೆಗೆ ಉತ್ತರ. 'ಝಲಿ' ಎಂದು ಹೇಳದಿದ್ದರೆ, ಈ ಸೂತ್ರವು ಬೇರೆ ಎಲ್ಲೆಡೆಯಲ್ಲಿಯೂ ಪ್ರವೃತ್ತವಾಗುವದು. ಮನ್ + ಯತೇ ಎಂದಿದ್ದಾಗ, 'ಝಲ್' ವರ್ಣವು ಪರದಲ್ಲಿ ಇರುವದಿಲ್ಲ. ಇಂತಹ ಸ್ಥಳದಲ್ಲಿಯೂ 'ನ್' ಕಾರಕ್ಕೆ 'ಅನುಸ್ವಾರ' ಬಂದು 'ಮಂಯತೇ' ಎಂಬ ಅನಿಷ್ಟ ರೂಪವು ಬರುತ್ತಿತ್ತು. ಇದಕ್ಕಾಗಿ 'ಝಲಿ' ಎಂದು ಹೇಳಲಾಗಿದೆ.

**(ಪರಸವರ್ಣವನ್ನು ವಿಧಿಸುವ ಸೂತ್ರ).**

**ಸೂತ್ರ 79: ಅನುಸ್ವಾರಸ್ಯ ಯಯಿ ಪರಸವರ್ಣಃ ( 8.4.58)**

ವೃತ್ತಿ– ಸ್ಪಷ್ಟಂ – ಶಾನ್ತಃ।

ಅರ್ಥ– ಯಯ್ ಪ್ರತ್ಯಾಹರವು ಪರದಲ್ಲಿದ್ದಾಗ ಅನುಸ್ವಾರದ ಸ್ಥಾನದಲ್ಲಿ ಪರಸವರ್ಣವು ಬರುತ್ತದೆ. [ಪರ–ಸವರ್ಣವೆಂದರೆ, ಪರದಲ್ಲಿ ಯಾವ ಒಂದು ವರ್ಣವಿದೆಯೋ ಅದಕ್ಕೆ ಸವರ್ಣೀಯ ವರ್ಣಗಳಲ್ಲಿ ಒಂದು ವರ್ಣವು ಆದೇಶವಾಗಿ ಬರುತ್ತದೆ. 'ಯಯ್' ಪ್ರತ್ಯಾಹಾರದಲ್ಲಿ ಶ್, ಷ್, ಸ್, ಹ್ ವ್ಯಞ್ಜನಗಳನ್ನು ಬಿಟ್ಟು ಉಳಿದ ಎಲ್ಲ ವರ್ಣಗಳೂ ಇರುತ್ತವೆ. ಪರದಲ್ಲಿ ಇರುವ ವರ್ಣಕ್ಕೆ, ಸವರ್ಣೀಯ ವರ್ಣಗಳು ಹಲವು ಇರುತ್ತವೆ. ಆದ್ದರಿಂದ, "ಸ್ಥಾನೇಽನ್ತರತಮಃ"(1–1–50) ಎಂಬ ಪರಿಭಾಷಾ ಸೂತ್ರವನ್ನು ಆಶ್ರಯಿಸಬೇಕಾಗಿದೆ. ಈ ಸೂತ್ರವು ಅನುಸ್ವಾರವಾದ ಮೇಲೆ ಪ್ರವೃತ್ತವಾಗುತ್ತದೆ. ಆದ್ದರಿಂದ ಪ್ರಕೃತ ಸೂತ್ರಕ್ಕೆ ಪೂರ್ವದಲ್ಲಿ "ಮೋಽನುಸ್ವಾರಃ(8.3.23)"

ಮತ್ತು "ನಶ್ಚಾಪದಾನ್ತಸ್ಯ ಝಲಿ(8.3.24)" ಸೂತ್ರಗಳು ಇರುತ್ತವೆ].

ಉದಾ-'ಶಾನ್ತಃ' = 'ಶಾಮ್ + ತಃ' ಎಂದಿದ್ದಾಗ, "ನಶ್ಚಾಪದಾನ್ತಸ್ಯ ಝಲಿ(8.3.24)" ಸೂತ್ರದಿಂದ, 'ಶಾಮ್'ನಲ್ಲಿರುವ 'ಮ್' ಕಾರದ ಸ್ಥಾನದಲ್ಲಿ ಅನುಸ್ವಾರವು ಬಂದು 'ಶಾಂ + ತಃ' ಎಂದಿದ್ದು, ತದನಂತರ "ಅನುಸ್ವಾರಸ್ಯ ಯಯೀ ಪರಸವರ್ಣಃ(8.4.58)" ಸೂತ್ರದಿಂದ 'ಯಯ್' ಪ್ರತ್ಯಾಹಾರಕ್ಕೆ ಸೇರಿದ 'ತಃ' ಎಂಬಲ್ಲಿರುವ 'ತ್'ಕಾರವು ಪರದಲ್ಲಿದೆ. ಅದಕ್ಕೆ ಪೂರ್ವದಲ್ಲಿ 'ಶಾಂ'ನಲ್ಲಿರುವ ಅನುಸ್ವಾರವಿದೆ. ಈ ಅನುಸ್ವಾರದ ಸ್ಥಾನದಲ್ಲಿ ಪರವರ್ಣದ ಸವರ್ಣವು ಬರಬೇಕಾಗಿದೆ. ಅನುಸ್ವಾರಕ್ಕಿಂತ ಪರದಲ್ಲಿ 'ತ್' ಕಾರವಿದ್ದು ಅದರ ಸವರ್ಣಗಳಾದ ತ್,ಥ್,ದ್,ಧ್,ನ್ ಗಳಲ್ಲಿ ಒಂದು ವರ್ಣವು ಆದೇಶವಾಗಿ ಬರಬೇಕಾಗಿದೆ. ಆದರೆ ಆ ಆದೇಶವು ಅನುಸ್ವಾರಕ್ಕೆ ಸವರ್ಣವಾಗಿಯೂ ಇರಬೇಕಾಗಿದೆ. ಅನುಸ್ವಾರ ಮತ್ತು 'ನ್' ಕಾರಗಳು ಅನುನಾಸಿಕಗಳಾಗಿರುವುದರಿಂದ ಅವು ಪರಸ್ಪರ ಸವರ್ಣಗಳಾಗುತ್ತವೆ. ಆದ್ದರಿಂದ 'ನ್' ಕಾರವೇ ಆದೇಶವಾಗಿ ಬಂದು 'ಶಾನ್ + ತಃ = ಶಾನ್ತಃ' ಎಂಬ ರೂಪವು ಸಿದ್ಧವಾಗುತ್ತದೆ.

**(ವೈಕಲ್ಪಿಕವಾಗಿ ಪರಸವರ್ಣವನ್ನು ವಿಧಿಸುವ ಸೂತ್ರ)**

**ಸೂತ್ರ 80: ವಾ ಪದಾನ್ತಸ್ಯ(8.4.59)**

ವೃತ್ತಿ- ಪದಾನ್ತಸ್ಯ ಅನುಸ್ವಾರಸ್ಯ ಯಯಿ ಪರೇ ಪರಸವರ್ಣಃ ವಾ ಸ್ಯಾತ್। ತ್ವಙ್ಕರೋಷಿ। ತ್ವಂ ಕರೋಷಿ।

ಅ.ವೃ.- "ಅನುಸ್ವಾರಸ್ಯ ಯಯಿ ಪರಸವರ್ಣಃ(8.4.58)" ಎಂಬ ಸಂಪೂರ್ಣ ಸೂತ್ರವೇ ಅನುವೃತ್ತವಾಗುತ್ತದೆ.

ಅರ್ಥ- ಪದಾನ್ತವಾದ ಅನುಸ್ವಾರಕ್ಕೆ 'ಯಯ್' ಪರದಲ್ಲಿದ್ದಾಗ ಪರಸವರ್ಣವು ವೈಕಲ್ಪಿಕವಾಗಿ ಆದೇಶವಾಗಿ ಬರುತ್ತದೆ.

ವಿಶೇಷ- ಈ ಸೂತ್ರವು "ಅನುಸ್ವಾರಸ್ಯ ಯಯಿ ಪರಸವರ್ಣಃ(8.4.58)" ಸೂತ್ರಕ್ಕೆ ಬಾಧಕವಾಗಿದೆ. ಯಾಕೆಂದರೆ ಅಲ್ಲಿ 'ಪದಾನ್ತ' ಮತ್ತು 'ಅಪದಾನ್ತ' ಎರಡೂ ಸ್ಥಳಗಳಲ್ಲೂ ಪರಸವರ್ಣವು ನಿತ್ಯವಾಗಿ ಬರುತ್ತದೆ. ಆದರೆ ಈ ಪ್ರಕೃತ ಸೂತ್ರದ ಪ್ರಕಾರ, ಕೇವಲ ಪದಾನ್ತದಲ್ಲಿ ಮಾತ್ರ ಪರಸವರ್ಣವು ವಿಕಲ್ಪವಾಗಿ ಬರುತ್ತದೆ. "ಅನುಸ್ವಾರಸ್ಯ ಯಯಿ ಪರಸವರ್ಣಃ(8.4.58)" ಸೂತ್ರದಿಂದಲೇ ಅವಶ್ಯವಾಗಿ ಪ್ರಾಪ್ತವಾಗುತ್ತಿರುವಾಗ ಈ ಪ್ರಕೃತ ಸೂತ್ರವು ಪ್ರವೃತ್ತವಾಗಿದೆ. **'ಯಸ್ಯ ನಾಪ್ರಾಪ್ತೇ' (ನ + ಅಪ್ರಾಪ್ತೇ ಅಂದರೆ ಅವಶ್ಯ ಪ್ರಾಪ್ತೇ) ಯೋಽವಿಧಿರಾರಭ್ಯತೇ ಸಃ ತಸ್ಯ ಬಾಧಕೋ ಭವತಿ'.**

ಉದಾ-'ತ್ವಙ್ಕರೋಷಿ'। ತ್ವಂ ಕರೋಷಿ।(ನೀನು ಮಾಡುತ್ತಿ) 'ತ್ವಮ್ + ಕರೋಷಿ' ಎಂದಿದ್ದಾಗ, "ಮೋಽನುಸ್ವಾರಃ(8.3.23)" ಸೂತ್ರದಿಂದ 'ಮ್' ಕಾರಕ್ಕೆ 'ಅನುಸ್ವಾರ' ಆದೇಶವಾಗಿ ಬರುತ್ತದೆ. ತದನಂತರ "ಮೋಽನುಸ್ವಾರಃ(8.3.23)" ಸೂತ್ರದಿಂದ ನಿತ್ಯವಾಗಿ ಪರಸವರ್ಣವು ಪ್ರಾಪ್ತವಾದಾಗ, ಅದನ್ನು ಬಾಧಿಸಿ ಪ್ರಕೃತ ಸೂತ್ರವು ಪ್ರವೃತ್ತವಾಗುತ್ತದೆ. 'ತ್ವಂ' ಎಂಬಲ್ಲಿ ಅನುಸ್ವಾರವು ಪದಾನ್ತವಾಗಿದೆ. ಮತ್ತು ಅದರ ಪರದಲ್ಲಿ 'ಯಯ್'

ಪ್ರತ್ಯಾಹಾರದ ವರ್ಣವಾದ 'ಕ್' ಕಾರವು ಇದೆ. ಆದ್ದರಿಂದ ಅನುಸ್ವಾರದ ಸ್ಥಾನದಲ್ಲಿ ಪರವರ್ಣವಾದ 'ಕ್'ಕಾರಕ್ಕೆ ಸವರ್ಣಗಳಾದ 'ಕ್','ಖ್','ಗ್','ಘ್','ಙ್' ಗಳಲ್ಲಿ ಒಂದು ವರ್ಣವು ಆದೇಶವಾಗಿ ಬರಬೇಕು. ಪ್ರಕೃತ ಸ್ಥಳದಲ್ಲಿ ಅನುಸ್ವಾರ ಮತ್ತು 'ಙ್' ಕಾರವು ಸವರ್ಣಗಳಾಗಿವೆ. ಆದ್ದರಿಂದ 'ಕ್' ಕಾರಕ್ಕೂ ಮತ್ತು ಅನುಸ್ವಾರಕ್ಕೂ ಸವರ್ಣವಾದ 'ಙ್' ಕಾರವೇ ಆದೇಶವಾಗಿ ಬಂದು 'ತ್ವಙ್ + ಕರೋಷಿ' = 'ತ್ವಙ್ಕರೋಷಿ' ಎಂದು ರೂಪವಾಗುತ್ತದೆ. 'ತ್ವಂ ಕರೋಷಿ' ಎಂಬ ಎರಡನೇ ರೂಪವು ವೈಕಲ್ಪಿಕ ರೂಪವಾಗಿದೆ. ಆದ್ದರಿಂದ ಪರಸವರ್ಣವು ಬರಲಿಲ್ಲ.

### ('ಮ್' ಕಾರವನ್ನು ಆದೇಶವಾಗಿ ವಿಧಿಸುವ ಸೂತ್ರ)

**ಸೂತ್ರ 81: ಮೋ ರಾಜಿ ಸಮಃ ಕ್ವೌ (8.3.25)**

ವೃತ್ತಿ–ಕ್ವಿಬನ್ತೇ ರಾಜತೌ ಪರೇ ಸಮಃ ಮಸ್ಯ 'ಮ' ಏವ ಸ್ಯಾತ್। ಸಮ್ರಾಟ್।

ಪ.ಛೇ– ಮಃ (ಪ್ರಥಮಾನ್ತ), ರಾಜಿ (ಸಪ್ತಮ್ಯನ್ತ), ಸಮಃ (ಷಷ್ಠ್ಯನ್ತ), ಕ್ವೌ (ಸಪ್ತಮ್ಯನ್ತ).

ಅ.ವ್ಯ.–"ಮೋಽನುಸ್ವಾರಃ(8.3.23)" ಸೂತ್ರದಿಂದ ಷಷ್ಠ್ಯನ್ತವಾದ 'ಮಃ' ಎಂಬ ಶಬ್ದವು ಅನುವೃತ್ತವಾಗುತ್ತದೆ.

ಅರ್ಥ–'ಕ್ವಿಪ್' ಪ್ರತ್ಯಯವನ್ನು ಕೊನೆಯಲುಳ್ಳ 'ರಾಜ್' ಧಾತುವು ಪರದಲ್ಲಿದ್ದಾಗ, ಪೂರ್ವದಲ್ಲಿರುವ 'ಸಮ್' ಶಬ್ದದಲ್ಲಿರುವ 'ಮ್'ಕಾರದ ಸ್ಥಾನದಲ್ಲಿ 'ಮ್'ಕಾರವೇ ಆದೇಶವಾಗಿ ಬರುತ್ತದೆ. ಉದಾ–'ಸಮ್ರಾಟ್' = 'ಸಮ್+ರಾಜ್+ ಕ್ವಿಪ್' ಎಂದಿದ್ದಾಗ, 'ಕ್ವಿಪ್' ಪ್ರತ್ಯಯವು ಸರ್ವಾಪಹಾರಿಯಾಗಿರುವುದರಿಂದ, ಅದು ಲೋಪವಾಗಿ 'ರಾಟ್' ಎಂದಾಗುತ್ತದೆ. ಇಲ್ಲಿ 'ರಾಟ್' ಎಂಬುದು 'ರಾಜ್' ಧಾತುವಿನ 'ಕ್ವಿಪ್' ಪ್ರತ್ಯಯಾನ್ತ ರೂಪವಾಗಿದೆ. 'ಸಮ್+ರಾಟ್ + (ಕ್ವಿಪ್‌ಲೋಪ)' ='ಸಮ್+ ರಾಟ್'. ಇಲ್ಲಿ 'ಕ್ವಿಬನ್ತ'ವಾದ 'ರಾಜ್' ಧಾತುವು ಪರದಲ್ಲಿರುವಾಗ, ಪೂರ್ವದಲ್ಲಿರುವ 'ಸಮ್' ಶಬ್ದದ 'ಮ್'ಕಾರದ ಸ್ಥಾನದಲ್ಲಿ 'ಮ್'ಕಾರವೇ ಆದೇಶವಾಗಿ ಬಂದು 'ಸಮ್ರಾಟ್' ಎಂದಾಗುತ್ತದೆ. 'ಸಮ್ರಾಟ್' (ಚಕ್ರವರ್ತಿ). 'ಸಮ್ರಾಟ್'ದೊಳಗಿರುವ 'ರಾಟ್' ಶಬ್ದದ ವ್ಯುತ್ಪತ್ತಿ ಹೀಗಿದೆ. "ಸತ್–ಸೂ–ದ್ವಿಷ–ದ್ರುಹ–ದುಹ–ಯುಜ–ವಿದ–ಭಿದ–ಚ್ಛಿದ–ಜಿ–ನೀ–ರಾಜಾಮುಪಸರ್ಗೇಽಪಿ ಕ್ವಿಪ್(3–2–61)" ಸೂತ್ರದಿಂದ 'ರಾಜ್' ಧಾತುವಿನ ಪರದಲ್ಲಿ 'ಕ್ವಿಪ್' ಪ್ರತ್ಯಯವು ಬಂದಿದೆ, ಮತ್ತು"ವ್ರಶ್ಚ–ಭ್ರಸ್ಜ–ಸೃಜ–ಮೃಜ–ಯಜ–ರಾಜ್–ಭ್ರಾಜ–ಚ್ಛ–ಶಾಂ ಷಃ(8–2–36)" ಸೂತ್ರದಿಂದ 'ಜ್'ಕಾರದ ಸ್ಥಾನದಲ್ಲಿ 'ಷ್' ಕಾರವು ಬಂದಿದೆ. ನಂತರ "ಝಲಾಂ ಜಶೋಽನ್ತೇ(8.2.36)" ಸೂತ್ರದಿಂದ 'ಷ್' ಕಾರಕ್ಕೆ 'ಡ್'ಕಾರ ಬಂದು "ವಾವಸಾನೇ(8.4.56)" ಸೂತ್ರದಿಂದ 'ಡ್'ಕಾರಕ್ಕೆ 'ಟ್'ಕಾರ ಬಂದು 'ರಾಟ್' ಎಂದಾಗಿದೆ. ಸಮ್+ರಾಟ್ ಎಂಬಲ್ಲಿ 'ರಾಟ್' ಎಂಬುದು 'ಕ್ವಿಪ್' ಪ್ರತ್ಯಯಾನ್ತವಾದ 'ರಾಜ್' ಧಾತುವಾಗಿದೆ. ಇದು ಪರದಲ್ಲಿರುವಾಗ ಅದರ ಪೂರ್ವದಲ್ಲಿರುವ 'ಸಮ್' ಶಬ್ದದ 'ಮ್'ಕಾರಕ್ಕೆ 'ಮ್' ಕಾರವೇ ಆದೇಶವಾಗಿ ಬರುತ್ತದೆ.

ಇಲ್ಲಿ "ಮೋऽನುಸ್ವಾರಃ (8.3.23)" ಸೂತ್ರದಿಂದ 'ಮ್'ಕಾರಕ್ಕೆ 'ಅನುಸ್ವಾರ'ವು ಬರುವ ಅವಕಾಶವಿದ್ದರೂ, ಅದು ಬಾರದೇ ಪ್ರಕೃತ ಸೂತ್ರದಿಂದ 'ಮ್'ಕಾರಕ್ಕೆ 'ಮ್' ಕಾರವೇ ಆದೇಶವಾಗಿ ಬಂದು, ನಂತರ ವರ್ಣಗಳ ಜೋಡಣೆಯಿಂದ 'ಸಮ್ರಾಟ್' ಎಂಬ ರೂಪವು ಸಿದ್ಧವಾಗಿದೆ.

**(ವೈಕಲ್ಪಿಕವಾಗಿ 'ಮ್'ಕಾರವನ್ನು ವಿಧಿಸುವ ಸೂತ್ರ).**

**ಸೂತ್ರ 82: ಹೇ ಮಪರೇ ವಾ (8.3.26)**

ವೃತ್ತಿ-ಮ-ಪರೇ ಹ-ಕಾರೇಪರೇ ಮಸ್ಯ'ಮಃ' ವಾ (ಸ್ಯಾತ್)। ಕಿಮ್ಹ್ಮಲಯತಿ,ಕಿಂ ಹ್ಮಲಯತಿ

ವಾ॥ **ಯವಲಪರೇ ಯವಲಾ ವಾ।** ಕಿಯ್ಹ್ಯಃ, ಕಿಂ ಹ್ಯಃ। ಕಿವ್ಹ್ವಲಯತಿ, ಕಿಂ ಹ್ವ ಲಯತಿ। ಕಿಲ್ಹ್ಲಾದಯತಿ, ಕಿಂ ಹ್ಲಾದಯತಿ।

ಅ.ವೃ.- "ಮೋऽನುಸ್ವಾರಃ (8.3.23)" ಸೂತ್ರದಿಂದ 'ಷಷ್ಠ್ಯನ್ತ'ವಾದ 'ಮಃ' ಎಂಬ ಪದವು ಮತ್ತು "ಮೋ ರಾಜಿ ಸಮಃ ಕ್ವೌ(8.3.25)" ಸೂತ್ರದಿಂದ 'ಪ್ರಥಮಾನ್ತ'ವಾದ 'ಮಃ' ಎಂಬ ಪದವು ಅನುವೃತ್ತವಾಗುತ್ತವೆ.

ಅರ್ಥ-'ಮ್'ಕಾರವನ್ನು ಪರದಲ್ಲುಳ್ಳ 'ಹ್'ಕಾರವು ಪರದಲ್ಲಿರುವಾಗ ಪೂರ್ವದಲ್ಲಿರುವ 'ಮ್'ಕಾರದ ಸ್ಥಾನದಲ್ಲಿ 'ಮ್'ಕಾರವೇ ವಿಕಲ್ಪದಿಂದ ಆದೇಶವಾಗಿ ಬರುತ್ತದೆ.

ತಾತ್ಪರ್ಯ- 'ಸ್ಥಾನಿ'ಯಾದ 'ಮ್'ಕಾರವು ಪೂರ್ವದಲ್ಲಿದ್ದು, ಪರದಲ್ಲಿ 'ಹ್' ಕಾರವಿದ್ದು, ಅದರ ಪರದಲ್ಲಿ 'ಮ್' ಕಾರವಿದ್ದಾಗ, ಒಂದು ಪಕ್ಷದಲ್ಲಿ 'ಸ್ಥಾನಿ'ಯಾದ 'ಮ್' ಕಾರಕ್ಕೆ 'ಮ್' ಕಾರವೇ ಆದೇಶವಾಗಿ ಬರುತ್ತದೆ. ಮತ್ತು 'ಮ್' ಕಾರವು ಆದೇಶವಾಗಿ ಬಾರದಿದ್ದ ಪಕ್ಷದಲ್ಲಿ 'ಸ್ಥಾನಿ'ಯಾದ 'ಮ್'ಕಾರಕ್ಕೆ "ಮೋऽನುಸ್ವಾರಃ (8.3.23)" ಸೂತ್ರದಿಂದ 'ಅನುಸ್ವಾರ'ವು ಆದೇಶವಾಗಿ ಬರುತ್ತದೆ.

ಉದಾ-1. 'ಕಿಮ್ಹ್ಮಲಯತಿ' = ಕಿಮ್ + ಹ್ + ಮ್ + ಲಯತಿ ಎಂದಿದ್ದಾಗ, 'ಕಿಮ್' ನಲ್ಲಿರುವ 'ಮ್' ಕಾರದ ನಂತರ, 'ಮ್' ಕಾರ ಪರಕವಾದ 'ಹ್' ಕಾರವು ಪರದಲ್ಲಿರುವುದರಿಂದ, ಪ್ರಕೃತ ಸೂತ್ರದಿಂದ ಆ ಪೂರ್ವ 'ಮ್' ಕಾರಕ್ಕೆ 'ಮ್' ಕಾರವೇ ಆದೇಶವಗಿ ಬಂದು 'ಕಿಮ್ಹ್ಮಲಯತಿ' ಎಂದು ರೂಪವಾಗಿದೆ.

ಉದಾ-2. 'ಕಿಂ ಹ್ಮಲಯತಿ'=ಕಿಮ್+ಹ್+ಮ್+ಲಯತಿ ಎಂದಿದ್ದಾಗ, ಇದು ವೈಕಲ್ಪಿಕರೂಪವಾಗಿರುವುದರಿಂದ, 'ಮ್' ಕಾರವು ಆದೇಶವಾಗಿ ಬಾರದೇ 'ಸ್ಥಾನಿ'ಯಾದ 'ಮ್'ಕಾರಕ್ಕೆ"ಮೋऽನುಸ್ವಾರಃ(8.3.23)" ಸೂತ್ರದಿಂದ 'ಅನುಸ್ವಾರ'ವು ಆದೇಶವಾಗಿ ಬಂದು 'ಕಿಂ ಹ್ಮಲಯತಿ' ಎಂದು ರೂಪವಾಗುತ್ತದೆ.

ವಾ॥ ಯವಲಪರೇ ಯವಲಾ ವಾ ಕಿಯ್ಹ್ಯಃ, ಕಿಂ ಹ್ಯಃ।
ಕಿವ್ಹ್ವಲಯತಿ, ಕಿಂ ಹ್ವ ಲಯತಿ। ಕಿಲ್ಹ್ಲಾದಯತಿ, ಕಿಂ ಹ್ಲಾದಯತಿ।

ಅರ್ಥ– 'ಮ್' ಕಾರವು ಪೂರ್ವದಲ್ಲಿದ್ದು ತದನಂತರ ಯ್,ವ್,ಲ್ ಪರಕಗಳಾದ 'ಹ್' ಕಾರವು ಪರದಲ್ಲಿದ್ದಾಗ, ಅನುನಾಸಿಕವರ್ಣಗಳಾದ ಯ್,ವ್ ಲ್ ಗಳು 'ಮ್' ಕಾರದ ಸ್ಥಾನದಲ್ಲಿ ವೈಕಲ್ಪಿಕವಾಗಿ ಆದೇಶವಾಗಿ ಬರುತ್ತವೆ. ಅನುನಾಸಿಕವು ಬಾರದಿದ್ದ ಪಕ್ಷದಲ್ಲಿ, 'ಮ್' ಕಾರದ ಸ್ಥಾನದಲ್ಲಿ "ಮೋಽನುಸ್ವಾರಃ (8.3.23)" ಸೂತ್ರದಿಂದ ಅನುಸ್ವಾರವು ಬರುತ್ತದೆ.

ಉದಾ– 1/1. 'ಕಿಯ್ಁಹ್ಯಃ'=ಕಿಮ್ + ಹ್ಯಃ ಎಂದಿದ್ದಾಗ, 'ಯ್' ಕಾರ ಪರಕವಾದ 'ಹ್' ಕಾರವು 'ಮ್' ಕಾರದ ಪರದಲ್ಲಿರುವದರಿಂದ, ಪ್ರಕೃತ ವಾರ್ತಿಕದಿಂದ 'ಮ್' ಕಾರದ ಸ್ಥಾನದಲ್ಲಿ ಅನುನಾಸಿಕವಾದ 'ಯ್ಁ' ಕಾರವು ಆದೇಶವಾಗಿ ಬಂದು 'ಕಿಯ್ಁಹ್ಯಃ' ಎಂದು ರೂಪವಾಗಿದೆ.

ಉದಾ– 1/2. ಅನುನಾಸಿಕವು ಬಾರದಿದ್ದ ಪಕ್ಷದಲ್ಲಿ, 'ಕಿಂ ಹ್ಯಃ'=ಕಿಮ್+ಹ್ಯಃ ಎಂದಿದ್ದಾಗ, 'ಯ್' ಕಾರ ಪರಕವಾದ 'ಹ್' ಕಾರವು 'ಮ್' ಕಾರದ ಪರದಲ್ಲಿರುವದರಿಂದ, "ಮೋಽನುಸ್ವಾರಃ (8.3.23)" ಸೂತ್ರದಿಂದ 'ಮ್' ಕಾರಕ್ಕೆ ಅನುಸ್ವಾರವು ಆದೇಶವಾಗಿ ಬಂದು 'ಕಿಂ ಹ್ಯಃ' ಎಂದು ರೂಪವಾಗುತ್ತದೆ.

ಇದೇ ರೀತಿಯಲ್ಲಿ 'ವ್' ಕಾರ ಮತ್ತು 'ಲ್' ಕಾರಗಳ ವಿಷಯದಲ್ಲಿಯೂ ಮೇಲಿನಂತೆಯೇ 'ಮ್' ಕಾರಕ್ಕೆ ಅನುನಾಸಿಕ 'ವ್ಁ' ಮತ್ತು 'ಲ್ಁ' ಗಳೂ, ಮತ್ತು ಅನುಸ್ವಾರ(ಂ) ಬಂದು ಮುಂದಿನಂತೆ ರೂಪಗಳಾಗುತ್ತವೆ ಎಂದು ತಿಳಿಯಬೇಕು. 2/1. ಕಿವ್ಁಹ್ವಲಯತಿ, 2/2. ಕಿಂ ಹ್ವಲಯತಿ। 3/1.ಕಿಲ್ಁಹ್ಲಾದಯತಿ, 3/2.ಕಿಂ ಹ್ಲಾದಯತಿ।

**(ವೈಕಲ್ಪಿಕವಾಗಿ 'ನ್'ಕಾರಾದೇಶವನ್ನು ವಿಧಿಸುವ ಸೂತ್ರ).**

**ಸೂತ್ರ –83: ನ ಪರೇ ನಃ ( 8.3.27)**

ವೃತ್ತಿ–ನಪರೇ ಹಕಾರೇ ಮಸ್ಯ ನಃ ವಾ। ಕಿನ್ಹ್ನುತೇ। ಕಿಂ ಹ್ನುತೇ।

ಅ.ವ್ಯ.– "ಹೇ ಮಪರೇ ವಾ(8.3.26)" ಸೂತ್ರದಿಂದ 'ಹೇ' ಎಂಬ ಪದವು ಹಾಗೆಯೇ "ಮೋಽನುಸ್ವಾರಃ(8.3.23)" ಸೂತ್ರದಿಂದ 'ಮಃ' ಎಂಬ ಪದವು ಅನುವೃತ್ತವಾಗುತ್ತವೆ.

ಅರ್ಥ– 'ನ್'ಕಾರವನ್ನು ಪರದಲ್ಲುಳ್ಳ 'ಹ್'ಕಾರವು ಪರದಲ್ಲಿದ್ದಾಗ ಪೂರ್ವದಲ್ಲಿರುವ 'ಮ್'ಕಾರದ ಸ್ಥಾನದಲ್ಲಿ 'ನ್'ಕಾರವು ವಿಕಲ್ಪವಾಗಿ ಆದೇಶವಾಗಿ ಬರುತ್ತದೆ.

ಉದಾಹರಣೆ–1. 'ಕಿನ್ಹ್ನುತೇ' = ಕಿಮ್ + ಹ್ನುತೇ ಎಂದಿದ್ದಾಗ 'ಕಿಮ್' ನಲ್ಲಿರುವ 'ಮ್' ಕಾರದ ಸ್ಥಾನದಲ್ಲಿ "ಮೋಽನುಸ್ವಾರಃ(8.3.23)" ಸೂತ್ರದಿಂದ ಅನುಸ್ವಾರವು ಪ್ರಾಪ್ತವಾಗಬೇಕಾಗಿತ್ತು, ಆದರೆ 'ನ್'ಕಾರವನ್ನು ಪರದಲ್ಲುಳ್ಳ 'ಹ್' ಕಾರವು ಪರದಲ್ಲಿದ್ದಾಗ ಪೂರ್ವದಲ್ಲಿರುವ 'ಮ್' ಕಾರದ ಸ್ಥಾನದಲ್ಲಿ ಪ್ರಕೃತ ಸೂತ್ರದಿಂದ 'ನ್'ಕಾರಾದೇಶವು ವಿಕಲ್ಪವಾಗಿ ಬಂದು 'ಕಿನ್ + ಹ್ನುತೇ = ಕಿನ್ಹ್ನುತೇ' ಎಂಬ ರೂಪವು ಸಿದ್ಧವಾಗುತ್ತದೆ.

ಉದಾಹರಣೆ –2. 'ಕಿಂ ಹ್ನುತೇ' = 'ಕಿಮ್ + ಹ್ನುತೇ' ಎಂದಿದ್ದಾಗ, 'ಕಿಮ್' ನಲ್ಲಿರುವ 'ಮ್' ಕಾರದ ಸ್ಥಾನದಲ್ಲಿ "ಮೋಽನುಸ್ವಾರಃ(8.3.23)" ಸೂತ್ರದಿಂದ ಅನುಸ್ವಾರವು ಬಂದು 'ಕಿಂ ಹ್ನುತೇ' ಎಂದಾಗುತ್ತದೆ.

**ಸಂಧಿ – 10 (ಧುಡಾಗಮವನ್ನು ವೈಕಲ್ಪಿಕವಾಗಿ ವಿಧಿಸುವ ಸೂತ್ರ)**

**ಸೂತ್ರ 84: ಡಃ ಸಿ ಧುಟ್ (8.3.29)**

ವೃತ್ತಿ– ಡಾತ್ ಪರಸ್ಯ ಸಸ್ಯ ಧುಟ್–ವಾ ಸ್ಯಾತ್।

ಅ.ವ್ಯ.– "ಹೇ ಮಪರೇ ವಾ (8.3.26)" ಸೂತ್ರದಿಂದ 'ವಾ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– 'ಡ್' ಕಾರದ ಪರದಲ್ಲಿರುವ 'ಸ್' ಕಾರಕ್ಕೆ 'ಧುಟ್' ಆಗಮವು ವಿಕಲ್ಪವಾಗಿ ಬರುತ್ತದೆ. ಸೂತ್ರದಲ್ಲಿ 'ಡಃ' ಎನ್ನುವದು ಪಞ್ಚಮ್ಯನ್ತವಾಗಿರುವದರಿಂದ 'ಡ್' ಕಾರದ ಅವ್ಯವಹಿತ ಪರದಲ್ಲಿರುವ 'ಸ್' ಕಾರಕ್ಕೆ ಕಾರ್ಯವು ಬರುತ್ತದೆಂದು ತಿಳಿಯಬೇಕು. 'ಸಿ' ಎಂಬುದು ಸಪ್ತಮಿಯಲ್ಲಿರುವದರಿಂದ, ಅವ್ಯವಹಿತವಾದ ಪೂರ್ವ ವರ್ಣಕ್ಕೆ ಕಾರ್ಯವು ಬರುತ್ತದೆಂದರ್ಥ. ಎರಡೂ ಕಾರ್ಯಗಳು ಏಕಕಾಲಕ್ಕೆ ಬರುವದಿಲ್ಲ. **"ಉಭಯ ನಿರ್ದೇಶೇ ಪಞ್ಚಮೀ ನಿರ್ದೇಶೋ ಬಲೀಯಾನ್"** ಎಂಬ ನಿಯಮದಿಂದ ಪಞ್ಚಮೀಗೇನೇ ಪ್ರಾಬಲ್ಯ ಬಂದು 'ಸಿ' ಎಂಬ ಸಪ್ತಮ್ಯನ್ತವನ್ನು 'ಸಸ್ಯ' ಎಂದು ವಿಪರಿಣಾಮಗೊಳಿಸಲಾಗಿದೆ.

'ಧುಟ್' ಎಂಬ ಆಗಮದಲ್ಲಿ 'ಟ್' ಕಾರವು 'ಇತ್', 'ಉ' ಕಾರವು ಅನುನಾಸಿಕ (ಅಚ್) ಆಗಿರುವದರಿಂದ 'ಇತ್' ಆಗಿದೆ. ಕೇವಲ 'ಧ್'ಕಾರವು ಮಾತ್ರ ಉಳಿಯುತ್ತದೆ. 'ಧುಟ್' ಆಗಮವು 'ಟಿತ್' ಆಗಿರುವದರಿಂದ, "ಆದ್ಯನ್ತೌ ಟಕಿತೌ(1.1.46)" ಎಂಬ ಮುಂದಿನ ಸೂತ್ರದಿಂದ ಪರಶಬ್ದದ ಆದ್ಯವಯವವಾಗಿ ಬರುತ್ತದೆ. ಆದ್ದರಿಂದ,

ಉದಾ–1. 'ಷಟ್ + ಸನ್ತಃ' (ಆರು ಸಜ್ಜನರು) ಎಂಬಲ್ಲಿ 'ಟ್' ಕಾರದ ಸ್ಥಾನದಲ್ಲಿ "ಝಲಾಂ ಜಶೋಽನ್ತೇ(8.2.36)" ಸೂತ್ರದಿಂದ 'ಷಡ್ + ಸನ್ತಃ' ಎಂದಾಗುತ್ತದೆ. ಇಲ್ಲಿ ಪ್ರಕೃತ ಸೂತ್ರದಿಂದ ಪದಾನ್ತವಾದ 'ಡ್' ಕಾರದ ನಂತರ 'ಸ್' ಕಾರವು ಪರದಲ್ಲಿರುವದರಿಂದ, ಆ 'ಸ್' ಕಾರಕ್ಕೆ ಆದ್ಯವಯವವಾಗಿ ಬಂದು 'ಷಡ್ + ಧ್ + ಸನ್ತಃ' ಎಂದಾಗುತ್ತದೆ. ಇಲ್ಲಿ 'ಧ್'ಕಾರದ ನಂತರ 'ಸ್'ಕಾರವು ಪರದಲ್ಲಿರುವದರಿಂದ, "ಖರಿ ಚ(8.4.55)" ಸೂತ್ರದಿಂದ 'ಚರ್ತ್ವ' ಬಂದು 'ಷಡ್ + ತ್ + ಸನ್ತಃ' ಎಂದಾಗಿ ಮತ್ತೆ 'ಡ್'ಕಾರಕ್ಕೆ 'ಟ್' ಕಾರವು ಪರದಲ್ಲಿರುವದರಿಂದ ಮತ್ತೆ ಚರ್ತ್ವ ಬಂದು 'ಷಟ್ + ತ್ + ಸನ್ತಃ' ಎಂದಾಗಿ 'ಷಟ್ತ್ಸನ್ತಃ' ಎಂದು ರೂಪವಾಗುತ್ತದೆ.

ಉದಾ–2– 'ಧುಟ್' ಆಗಮ ಬಾರದಿರುವ ಪಕ್ಷದಲ್ಲಿ 'ಷಟ್ಸನ್ತಃ' ಎಂಬ ರೂಪವು ಹಾಗೆಯೇ ಇರುತ್ತದೆ.

('ಆದ್ಯನ್ತಾವಯವ'ವಾಗಿ ವಿಧಿಸುವ ಸೂತ್ರ).

**ಸೂತ್ರ – 85: ಆದ್ಯನ್ತೌ ಟಕಿತೌ ( 1.1.46)**

ವೃತ್ತಿ –ಟಿತ್–ಕಿತೌ ೦ಯಸ್ಯ ಉಕ್ತೌ ತಸ್ಯ ಕ್ರಮಾತ್ ಆದ್ಯನ್ತ–ಅವ೦ಯವೌ ಸ್ತಃ। ಷಟ್ಸ್ವಂತಃ। ಷಟ್ಸಂತಃ।

ಅರ್ಥ–'ಟಿತ್' ಮತ್ತು 'ಕಿತ್'ಗಳು ಯಾವ ಶಬ್ದ ಸಮುದಾಯಕ್ಕೆ 'ಆಗಮ'ಗಳಾಗಿ ಹೇಳಲಾಗಿವಿಯೋ ಅವು ಕ್ರಮವಾಗಿ ಅದರ 'ಆದಿ' ಮತ್ತು 'ಅನ್ತಾವಯವ'ಗಳಾಗಿರುವ ರೀತಿಯಲ್ಲಿ 'ಆಗಮ'ಗಳಾಗಿ ಬರುತ್ತವೆ. ಅಂದರೆ 'ಟಿತ್' ಆಗಮವು ಉತ್ತರ ಶಬ್ದ ಸಮುದಾಯಕ್ಕೆ 'ಆದ್ಯವಯವ'ವಾಗಿಯೂ 'ಕಿತ್' ಆಗಮವು ಪೂರ್ವ ಶಬ್ದ ಸಮುದಾಯದ 'ಅನ್ತಾವಯವ'ವಾಗಿಯೂ ಬರುವುದು. 'ಆಗಮ'ಗಳೆಂದರೆ ಅವು ಯಾವ ಶಬ್ದಕ್ಕೆ ಹೇಳಲಾಗಿವೆಯೋ ಆ ಶಬ್ದದ ಜೊತೆಗೆ ಸೇರಿಕೊಳ್ಳುತ್ತದೆ. 'ಟಿತ್' ಆಗಿದ್ದರೆ ಆ ಅಗಮವು 'ಆದ್ಯವಯುವ'ವಾಗಿರುತ್ತದೆ. 'ಕಿತ್' ಆಗಿದ್ದರೆ 'ಅನ್ತಾವಯವ'ವಾಗಿರುತ್ತದೆ. 'ಟಿತ್' ಎಂದರೆ 'ಟ್'ಕಾರವನ್ನು 'ಇತ್'ಆಗಿ ಉಳ್ಳದ್ದು ಎಂದರ್ಥ. 'ಕಿತ್' ಎಂದರೆ 'ಕ್'ಕಾರವನ್ನು 'ಇತ್'ಆಗಿ ಉಳ್ಳದ್ದು ಎಂದರ್ಥ.'ಟ್' ಇತ್ ಯಸ್ಯ ಸಃ–'ಟಿತ್'. 'ಕ್' ಇತ್ ಯಸ್ಯ ಸಃ–'ಕಿತ್'.

ಸೂಚನೆ:– 'ಮಿತ್ರವದಾಗಮಃ, 'ಶತೃವದಾದೇಶಃ', ಎಂದು ಹೇಳಿರುವುದರ ಅರ್ಥವೇನೆಂದರೆ, ಒಬ್ಬ ಮಿತ್ರನು ತನ್ನ ಮಿತ್ರನನ್ನು ಹೇಗೆ ಜೊತೆಗೆ ಸೇರಿಸಿಕೊಳ್ಳುವನೋ, ಹಾಗೆಯೇ ಆಗಮಗಳು ನಿರ್ದಿಷ್ಟವಾದ ಶಬ್ದ ಸಮುದಾಯದ ಆದ್ಯವಯವವಾಗಿಯೋ ಅಥವಾ 'ಅನ್ತಾವಯವ'ವಾಗಿಯೋ ಸೇರಿಸಿಕೊಳ್ಳುತ್ತವೆ.

'ಆದೇಶ'ಗಳೆಂದರೆ ಒಂದು ವರ್ಣವನ್ನು ತೆಗೆದು ಹಾಕಿ ಆ ಸ್ಥಾನವನ್ನು ಆಕ್ರಮಿಸುವ ವರ್ಣ ಎಂದರ್ಥ. ಹೇಗೆ ಒಬ್ಬ 'ಶತೃ'ವು ತನ್ನ 'ಶತ್ರು'ವನ್ನು ಕೊಂದು ಅವನ ಸ್ಥಾನವನ್ನು ಆಕ್ರಮಿಸುವನೋ ಆ ರೀತಿ ಆದೇಶವು ಮಾಡುತ್ತದೆ ಎಂದರ್ಥ.

ಈ ಉದಾಹರಣೆಯು ಸಾಧಾರಣ ವಿದ್ಯಾರ್ಥಿಗಳಿಗೆ ಅರ್ಥವಾಗುವದಕ್ಕೆ ಹೇಳಲಾಗಿದೆ. ನಿಜವಾಗಿ ಹೇಳುವುದಾದರೆ ಯಾವ ವರ್ಣವೂ ನಾಶ ಮಾಡಲ್ಪಡುವುದಿಲ್ಲ, ಯಾಕೆಂದರೆ ಎಲ್ಲ ವರ್ಣಗಳು ನಿತ್ಯ.

ವೈಯಾಕರಣಿಗಳು 'ಶಬ್ದಬ್ರಹ್ಮವಾದಿ'ಗಳು ('ಸ್ಫೋಟ'ವಾದಿಗಳು). ಹಾಗಾದರೆ 'ಶತೃವತ್' ಎಂದು ಹೇಳಲಾಗಿದೆಯಲ್ಲ? ಅಂದರೆ ಅದರರ್ಥ ಹೀಗಿದೆ– 'ಸುಧೀ+ಉಪಾಸ್ಯಃ' ಎಂಬ ಜಾಗದಲ್ಲಿ 'ಇಕ್' ವರ್ಣಗಳಿಗೆ 'ಯಣ್' ವರ್ಣಗಳು ಬರುತ್ತವೆ ಎಂದು ಹೇಳಲಾಗಿದೆ. 'ಈ' ಕಾರವನ್ನು ಕೊಂದು 'ಯ್'ಕಾರವು ಬರುತ್ತದೆಂದು ಹೇಳುತ್ತೇವೆ. ಅಂದರೆ 'ಈ'ಕಾರವನ್ನು ಉಚ್ಚಾರಣೆ ಮಾಡುವುದಕ್ಕೆ ಬದಲಾಗಿ 'ಯ್'ಕಾರವನ್ನು ಉಚ್ಚರಿಸಲಾಗುತ್ತದೆಂದರ್ಥ. ಮಂದಮತಿಗಳಾದ ವಿದ್ಯಾರ್ಥಿಗಳಿಗಾಗಿ ಈ ದೃಷ್ಟಾಂತವನ್ನು ಹೇಳಲಾಗಿದೆ.

**ಸಂಧಿ - 11 (ಕುಕ್-ಟುಕ್ ಆಗಮ ವಿಧಾಯಕ ಸೂತ್ರ)**

**ಸೂತ್ರ - 86: ಙ್ಣೋಃ ಕುಕ್-ಟುಕ್ ಶರಿ। (8.3.28)**

ವೃತ್ತಿ- 'ಙ'ಕಾರ-'ಣ'ಕಾರಯೋಃ ಕುಕ್-ಟುಕೌ ಆಗಮೌ ವಾ ಸ್ತಃ ಶರಿ।

**ವಾ॥ ಚಯೋ ದ್ವಿತೀಯಾಃ** ಶರಿ ಪೌಷ್ಕರಸಾದೇರಿತಿ ವಾಚ್ಯಮ್। ಪ್ರಾಙ್ಖ್ಷಷ್ಠಃ, ಪ್ರಾಙ್ಖ್‌ಷಷ್ಠಃ, ಪ್ರಾಙ್ಷಷ್ಠಃ। ಸುಗುಣ್ಠ್ಷಷ್ಠಃ, ಸುಗುಣ್ ಠ್ ಷಷ್ಠಃ, ಸುಗುಣ್‌ಷಷ್ಠಃ।

ಅ.ವ್ಯ. - "ಹೇ ಮಪರೇ ವಾ (8.3.26)" ಸೂತ್ರದಿಂದ 'ವಾ' ಎಂಬ ಪದವು ಅನುವೃತ್ತವಾಗಿದೆ.

ಅರ್ಥ- 'ಶರ್' ವರ್ಣವು ಪರದಲ್ಲಿದ್ದಾಗ, 'ಙ್'ಕಾರ 'ಣ್'ಕಾರಗಳಿಗೆ ಕ್ರಮವಾಗಿ 'ಕುಕ್' ಮತ್ತು 'ಟುಕ್' ಆಗಮಗಳು ವಿಕಲ್ಪವಾಗಿ ಬರುತ್ತವೆ.

'ಕುಕ್' ಮತ್ತು 'ಟುಕ್' ಗಳಲ್ಲಿ "ಹಲನ್ತ್ಯಮ್(1-3-3)" ಸೂತ್ರದಿಂದ ಅನ್ತ್ಯ 'ಕ್'ಕಾರಗಳು 'ಇತ್' ಸಂಜ್ಞೆಯನ್ನು ಹೊಂದುತ್ತವೆ. 'ಉ'ಕಾರಗಳು "ಉಪದೇಶೇಽಜನುನಾಸಿಕ ಇತ್(1-3-2)" ಸೂತ್ರದಿಂದ ಇತ್ ಸಂಜ್ಞೆಯನ್ನು ಹೊಂದುವದರಿಂದ ಲೋಪವಾಗುತ್ತವೆ. ಇವುಗಳಲ್ಲಿ ಕ್ರಮವಾಗಿ ಆದಿವರ್ಣಗಳಾದ 'ಕ್' ಮತ್ತು 'ಟ್'ಕಾರಗಳು ಮಾತ್ರ ಉಳಿಯುತ್ತವೆ. ಈ ಎರಡೂ ಆಗಮಗಳಲ್ಲೂ 'ಕ್'ಕಾರವು 'ಇತ್' ಆಗಿರುವದರಿಂದ, ಎರಡೂ 'ಕಿತ್' ಆಗಿರುವದರಿಂದ (ಟ್,ಕ್) ಕ್ರಮವಾಗಿ ಆದ್ಯವಯವವಾಗಿಯೂ ಮತ್ತು ಅಂತಾವಯವವಾಗಿಯೂ ಬರುತ್ತವೆ. ಆದ್ದರಿಂದ 'ಙ್'ಕಾರಕ್ಕೆ 'ಕುಕ್'(ಕ್) ಆಗಮವೂ, 'ಣ್'ಕಾರಕ್ಕೆ 'ಟುಕ್'(ಟ್) ಆಗಮಗಳು **"ಯಥಾಸಂಖ್ಯಮನುದೇಶಃ ಸಮಾನಾಮ್** (1-3-10)" ಎಂಬ ನಿಯಮದಿಂದ ಬರುತ್ತವೆ.

ಉದಾ-1. 'ಪ್ರಾಙ್ + ಷಷ್ಠಃ' ಎಂದಿದ್ದಾಗ, ಪೂರ್ವ ಪದದ ಕೊನೆಯಲ್ಲಿರುವ 'ಙ್'ಕಾರಕ್ಕೆ 'ಕುಕ್'(ಕ್) ಆಗಮವಾಗಿ ಬರುತ್ತದೆ. ಆಗ ಪರದಲ್ಲಿ **ಶರ್** ವರ್ಣವಾದ 'ಷ್' ಕಾರವಿರುವದರಿಂದ 'ಪ್ರಾಙ್ + ಕ್ + ಷಷ್ಠಃ' ಎಂದಾಗುತ್ತದೆ. 'ಕ್'ಕಾರ ಮತ್ತು 'ಷ್'ಕಾರಗಳು ಸೇರಿದಾಗ 'ಕ್ಷ್' ಎಂದು ಸಂಯುಕ್ತಾಕ್ಷರವಾಗುತ್ತದೆ. ಆಗ 'ಪ್ರಾಙ್ + ಕ್ಷಷ್ಠಃ' = 'ಪ್ರಾಙ್ಕ್ಷಷ್ಠಃ' ಎಂದು ರೂಪವಾಗುತ್ತದೆ. ಇಲ್ಲಿ 'ಙ್' ಕಾರದ ಪರದಲ್ಲಿ 'ಶರ್' ವರ್ಣವಾದ 'ಷ್' ಕಾರವಿದೆ.

ಉದಾ-2. 'ಪ್ರಾಙ್+ಷಷ್ಠಃ' ಎಂದಿದ್ದಾಗ ಪೂರ್ವಪದದ ಕೊನೆಯಲ್ಲಿ 'ಙ್'ಕಾರವಿದ್ದು ಪರದಲ್ಲಿ 'ಷ್' (ಶರ್) ವರ್ಣವಿರುವಾಗ ಪೂರ್ವಪದದ 'ಅನ್ತಾವಯವ'ವಾಗಿ ಅಂದರೆ 'ಙ್'ಕಾರದ ಪರದಲ್ಲಿ 'ಕುಕ್' (ಕ್) ಆಗಮ ಬಂದು 'ಪ್ರಾಙ್‌ಕ್‌ಷಷ್ಠಃ' ಎಂದಾಗುತ್ತದೆ. 'ಕ್'ಕಾರ 'ಷ್'ಕಾರಗಳು ಸೇರಿ 'ಕ್ಷ್' ಎಂದು ಸಂಯುಕ್ತಾಕ್ಷರವಾಗುತ್ತದೆ. ಹೀಗಾಗಿ 'ಪ್ರಾಙ್‌ಕ್ಷಷ್ಠಃ' ಎಂದಾಗುತ್ತದೆ. 'ಕುಕ್'ಆಗಮ ಬಾರದ ಪಕ್ಷದಲ್ಲಿ 'ಪ್ರಾಙ್‌ಷಷ್ಠಃ' ಎಂದಾಗುತ್ತದೆ.

ಉದಾ- 3. ಇದೇ ರೀತಿಯಲ್ಲಿ 'ಸುಗಣ್+ಷಷ್ಠಃ' ಎಂದಿದ್ದಾಗ, ಪೂರ್ವಪದದ 'ಅನ್ತಾವಯವ'ವಾಗಿ 'ಟುಕ್'(ಟ್) ಆಗಮವು ಪೂರ್ವಪದದ ಅನ್ತಾವಯವವಾಗಿ

ಅಂದರೆ 'ಣ'ಕಾರದ ಪರದಲ್ಲಿ ಆಗಮವಾಗಿ ಬರುತ್ತದೆ. 'ಸುಗಣ್‌ಟ್‌ಷಷ್ಠಃ' ಎಂದಾಗುತ್ತದೆ. 'ಟುಕ್'ಆಗಮ ಬಾರದ ಪಕ್ಷದಲ್ಲಿ 'ಸುಗಣ್ ಷಷ್ಠಃ' ಎಂದಾಗುತ್ತದೆ.

**ವಾ॥ ಚಯೋ ದ್ವಿತೀಯಾಃ ಶರಿ ಪೌಷ್ಕರಸಾದೇರಿತಿ ವಾಚ್ಯಮ್।**

ಪ.ಚ್ಛೇ– ಚಯಃ, ದ್ವಿತೀಯಾಃ, ಶರಿ, ಪೌಷ್ಕರಸಾದೇಃ, ಇತಿ, ವಾಚ್ಯಮ್. ಆರು ಪದಗಳುಳ್ಳ ವಾರ್ತಿಕ.

ಅರ್ಥ– 'ಪೌಷ್ಕರಸಾದಿ' ಆಚಾರ್ಯರ ಮತದ ಪ್ರಕಾರ 'ಶರ್' ಪ್ರತ್ಯಾಹಾರ ವರ್ಣದ ಸ್ಥಾನದಲ್ಲಿ ಆಯಾ ವರ್ಗೀಯ ಎರಡನೇಯ ವರ್ಣವು ಆದೇಶವಾಗಿ ಬರುತ್ತದೆ.

ಉದಾಹರಣೆ– 1. 'ಪ್ರಾಙ್‌ಖ್‌ಷಷ್ಠಃ', 2. 'ಸುಗಣ್‌ಠ್‌ಷಷ್ಠಃ' ಎಂದಿದ್ದಾಗ –1. 'ಪ್ರಾಙ್ ಕ್ ಷಷ್ಠಃ' ಎಂಬಲ್ಲಿ 'ಶರ್' ಪರದಲ್ಲಿರುವಾಗ 'ಕುಕ್' ಆಗಮವು ಅನ್ತಾವಯವವಾಗಿ ಬಂದು 'ಪ್ರಾಙ್ ಕ್ ಷಷ್ಠಃ' ಎಂದಾಗಿದೆ. ಈ ವಾರ್ತಿಕದ ಪ್ರಕಾರ 'ಕ್' ಎಂಬ 'ಚಯ್' ವರ್ಣದ ಸ್ಥಳದಲ್ಲಿ ಅದರ ವರ್ಗೀಯ ಅಕ್ಷರವಾದ 'ಖ್' ವರ್ಣವು 'ಶರ್' ಪರದಲ್ಲಿರುವಾಗ ಆದೇಶವಾಗಿ ಬರುತ್ತದೆ. ಹೀಗಾಗಿ 'ಪ್ರಾಙ್‌ಖ್‌ಷಷ್ಠಃ' ಎಂದಾಗುತ್ತದೆ. (ಪ್ರಾಚೀನನಾದ ಆರನೇಯವನು ಎಂದರ್ಥ). ಇಲ್ಲಿ 'ಕ'ಕಾರದ ಸ್ಥಾನದಲ್ಲಿ 'ಖ್'ಕಾರವು ಆದೇಶವಾಗಿ ಬಂದಿದೆ.

ಉದಾ– 2.'ಸುಗಣ್ ಠ್ ಷಷ್ಠಃ' – 'ಸುಗಣ್ ಟ್ ಷಷ್ಠಃ' ಎಂದಿರುವಾಗ 'ಷಷ್ಠಃ' ಎಂಬಲ್ಲಿಯ 'ಷ'ಕಾರವು 'ಶರ್' ವರ್ಣವಾಗಿದೆ, ಆದ್ದರಿಂದ ಪ್ರಕೃತ ಸೂತ್ರದ ವಾರ್ತಿಕದಿಂದ 'ಚಯ್' ಪ್ರತ್ಯಾಹಾರಾನ್ತರ್ಗತ 'ಟ್' ಕಾರದ ದ್ವಿತೀಯ ವರ್ಣವಾದ 'ಠ್'ಕಾರವು ಅನ್ತಾವಯವವಾಗಿ ಬಂದು 'ಸುಗಣ್ ಠ್ ಷಷ್ಠಃ' ಎಂಬ ರೂಪವು ಸಿದ್ಧವಾಗುತ್ತದೆ. (ಆರನೇಯ ಗಣಿತ ವಿದ್ವಾಂಸನು ಎಂದರ್ಥ).

**(ವೈಕಲ್ಪಿಕವಾಗಿ ಧುಟ್–ಆಗಮವನ್ನು ವಿಧಿಸುವ ಸೂತ್ರ).**

**ಸೂತ್ರ – 87. ನಶ್ಚ (8.3.30)**

ವೃತ್ತಿ–ನಾನ್ತಾತ್ ಪರಸ್ಯ ಸಸ್ಯ ಧುಟ್–ವಾ । ಸನ್ತ್ಸಃ। ಸನ್ಸಃ।

ಪ. ಛೇ. – ನಃ, ಚ।

ಅ.ವೃ.–"ಡಃ ಸಿ ಧುಟ್(8.3.29)" ಸೂತ್ರದಿಂದ 'ಸಿ' ಮತ್ತು 'ಧುಟ್' ಎಂಬ ಪದಗಳು ಹಾಗೆಯೇ "ಹೇ ಮಪರೇ ವಾ (8.3.26)" ಸೂತ್ರದಿಂದ 'ವಾ' ಎಂಬ ಪದವು ಅನುವೃತ್ತವಾಗುತ್ತವೆ. "ಪದಸ್ಯ(8–1–16)" ಎಂಬುದು ಇಲ್ಲಿ ಅಧಿಕಾರ ಸೂತ್ರ

ಅರ್ಥ– 'ಪದಾನ್ತ'ವಾದ 'ನ್' ಕಾರದ ನಂತರವಿರುವ 'ಸ್' ಕಾರಕ್ಕೆ ವಿಕಲ್ಪವಾಗಿ 'ಧುಟ್' ಆಗಮವು ಬರುತ್ತದೆ.

'ಧುಟ್' ಆಗಮವು 'ಟಿತ್' ಆಗಿರುವುದರಿಂದ ಪರ ಶಬ್ದದ 'ಆದ್ಯವಯವ'ವಾಗಿ ಬರುತ್ತದೆ.

ಉದಾಹರಣೆ- 'ಸನ್+ಸಃ' ಎಂದಿದ್ದಾಗ 'ನ್' ಕಾರಾನ್ತವಾದ 'ಸನ್' ಶಬ್ದದ ಪರದಲ್ಲಿ 'ಸ್'ಕಾರವಿರುವುದರಿಂದ, ಪ್ರಕೃತ ಸೂತ್ರದಿಂದ 'ಧುಟ್'ಆಗಮವು 'ಸ್'ಕಾರದ ಆದ್ಯವಯವವಾಗಿ ಬಂದು 'ಸನ್ ಧ್ ಸಃ' ಎಂದಾಗುತ್ತದೆ. 'ಧ್'ಕಾರಕ್ಕೆ "ಖರಿ ಚ(8-4-55)" ಸೂತ್ರದಿಂದ 'ಚರ್ತ್ವ' ಬಂದು 'ತ್'ಕಾರವಾಗಿ 'ಸನ್ ತ್ ಸಃ' ಎಂದಾಗುತ್ತದೆ. 'ಧುಟ್' ಆಗಮ ಬಾರದ ಪಕ್ಷದಲ್ಲಿ 'ಸನ್ ಸಃ' ಎಂದೇ ಇರುತ್ತದೆ.

**(ವೈಕಲ್ಪಿಕವಾಗಿ 'ತುಕ್'ಆಗಮವನ್ನು ವಿಧಿಸುವ ಸೂತ್ರ).**

**ಸೂತ್ರ - 88: ಶಿ ತುಕ್ ( 8.3.31)**

ವೃತ್ತಿ- ಪದಾನ್ತಸ್ಯ ನಸ್ಯ ಶೇ ಪರೇ ತುಕ್-ವಾ। ಸಞ್ಛಮ್ಭುಃ, ಸಞ್ಚ್ಛಮ್ಭುಃ। ಸಞ್ಚ್ ಶಂಭುಃ। ಸಞ್ಶಂಭುಃ।

ಅ.ವ್ಯ.- "ನಶ್ಚ(8.3.30)" ಸೂತ್ರದಿಂದ 'ನಃ' ಎಂಬ ಪದವು ಮತ್ತು "ಹೇ ಮಪರೇ ವಾ (8.3.26)" ಸೂತ್ರದಿಂದ 'ವಾ' ಎಂಬ ಪದವು ಅನುವೃತ್ತವಾಗುತ್ತವೆ. "ಪದಸ್ಯ(8-1-16)" ಎಂಬುದು ಇಲ್ಲಿ ಅಧಿಕಾರ ಸೂತ್ರವಾಗಿದೆ.

ಅರ್ಥ- 'ಶ್'ಕಾರವು ಪರದಲ್ಲಿದ್ದಾಗ 'ಪದಾನ್ತ'ವಾದ 'ನ್'ಕಾರಕ್ಕೆ ವಿಕಲ್ಪವಾಗಿ 'ತುಕ್' ಆಗಮವು ಬರುತ್ತದೆ.

'ತುಕ್'ನಲ್ಲಿ 'ಕ್'ಕಾರವು 'ಇತ್'ಆದ 'ಉ'ಕಾರವು ಉಚ್ಚಾರಣಾರ್ಥ. ಹೀಗಾಗಿ ಕೇವಲ 'ತ್' ಮಾತ್ರ ಉಳಿಯುತ್ತದೆ. 'ತುಕ್'ಅಗಮವು 'ಇತ್' ಆಗಿರುವುದರಿಂದ 'ಕಿತ್'ನಲ್ಲಿರುವ 'ಕ್' ಎಂಬ ವರ್ಣವು ಪೂರ್ವಪದದ 'ಅನ್ತಾವಯವ'ವಾಗಿ ಬರುತ್ತದೆ.

ಉದಾಹರಣೆ- 'ಸನ್+ಶಮ್ಭುಃ' ಎಂಬಲ್ಲಿ 'ಶ್'ಕಾರವು ಪರದಲ್ಲಿರುವುದರಿಂದ 'ಪದಾನ್ತ'ವಾದ 'ನ್'ಕಾರಕ್ಕೆ 'ತುಕ್' ಆಗಮವು ಬರುತ್ತದೆ. ಅಂದರೆ 'ನ್'ಕಾರದ ನಂತರ 'ತ್'ಕಾರವು 'ಅನ್ತಾವಯವ'ವಾಗಿ ಆಗಮವಾಗಿ ಬರುತ್ತದೆಂದರ್ಥ. ಆಗ 'ಸನ್ ತ್ ಶಮ್ಭುಃ' ಎಂದಾಗುತ್ತದೆ.

ಈ ಸಂದರ್ಭದಲ್ಲಿ "ಸ್ತೋಃ ಶ್ಚುನಾ ಶ್ಚುಃ (8-4-40)" ಸೂತ್ರದಿಂದ 'ಶ್ಚುತ್ವ' ಸಂಧಿಗೆ ಅವಕಾಶವಿರುತ್ತದೆ. ಇಲ್ಲಿ 'ತ್'ಕಾರದ ನಂತರ ನಿಮಿತ್ತವಾದ 'ಶ್'ಕಾರವು ಪರದಲ್ಲಿರುವುದರಿಂದ 'ತ್'ಕಾರಕ್ಕೆ 'ಚ್'ಕಾರವು ಬಂದು 'ಸನ್ ಚ್ ಶಮ್ಭುಃ' ಎಂದಾಗುತ್ತದೆ.

ಉದಾಹರಣೆ-ಇಲ್ಲಿ 'ಛತ್ವ' ಬಾರದೇ ಇರುವ ರೂಪ - 'ತ'ವರ್ಗದ 'ನ್'ಕಾರಕ್ಕೆ 'ಚ್'ಕಾರದ ('ಚ'ವರ್ಗ) ಸಂಬಂಧವಿರುವುದರಿಂದ 'ನ್'ಕಾರದ ಜಾಗದಲ್ಲಿ 'ಚ್' ವರ್ಗದ 'ಞ್'ಕಾರವು ಬಂದು (ಚುತ್ವ)ವಾಗಿ 'ಸಞ್ ಚ್ ಶಮ್ಭುಃ' ಎಂದಾಗುತ್ತದೆ. ಈ ರೂಪವು ವೃತ್ತಿಯಲ್ಲಿ ಮೂರನೇಯದ್ದಾಗಿದೆ.

2.'ಛತ್ವ' ಬಂದ ರೂಪ- "ಶಶ್ಛೋಽಟಿ (58.4.63)" ಸೂತ್ರದಿಂದ 'ಶಮ್ಭುಃ'ವಿನಲ್ಲಿರುವ 'ಶ್' ಸ್ಥಾನದಲ್ಲಿ ವೈಕಲ್ಪಿಕವಾಗಿ 'ಛ್'ಕಾರವು ಆದೇಶವಾಗಿ ಬಂದು 'ಸಞ್ಚ್ಛಮ್ಭುಃ' ಎಂದಾಗುತ್ತದೆ. ಇದು ವೃತ್ತಿಯಲ್ಲಿರುವ ಎರಡನೇ ಉದಾಹರಣೆ.

1. 'ಸಞ್‌ಚ್‌ಛಮ್ಭುಃ' ಎಂದು ಎರಡನೇಯ ರೂಪವು ಸಿದ್ಧವಾಗಿರುವಾಗ "ಝರೋ ಝರಿ ಸವರ್ಣೇ(8–4–65)" ಸೂತ್ರವು ಪ್ರವೃತ್ತವಾಗುತ್ತದೆ. ಮೇಲಿನ ಉದಾಹರಣೆಯಲ್ಲಿ 'ಞ್'ಕಾರವು 'ಹಲ್' ವರ್ಣವಾಗಿದೆ. 'ಚ್'ಕಾರವು 'ಝರ್' ವರ್ಣವಾಗಿದೆ, ಅದರ ಪರದಲ್ಲಿರುವ 'ಛಮ್ಭುಃ' ಎಂಬಲ್ಲಿ 'ಛ್'ಕಾರವು ಪೂರ್ವವರ್ಣವಾದ 'ಚ್'ಕಾರಕ್ಕೆ ಸವರ್ಣವಾಗಿದೆ. ಆದ್ದರಿಂದ 'ಚ್'ಕಾರಕ್ಕೆ ಮೊದಲು ಲೋಪವಾಗುತ್ತದೆ. ಅದೊಂದು ರೂಪ. ಇದು ವಿಕಲ್ಪವಾಗಿರುವುದರಿಂದ 'ಚ್'ಕಾರವು ಲೋಪವಾಗದೇ ಇರುವುದು ಎರಡನೇಯ ವೈಕಲ್ಪಿಕ ರೂಪ.

'ಛತ್ವ'ವೂ ಸಹ ವಿಕಲ್ಪವಾಗಿರುವುದರಿಂದ 'ಛತ್ವ'ವಾಗದೇ ಕೇವಲ 'ಶ್'ಕಾರದಿಂದ ಕೂಡಿರುವ ರೂಪವು 'ಸಞ್ ಚ್ ಶಮ್ಭುಃ'(ಸಞ್ಚ್‌ಶಮ್ಭುಃ). ಇದು ಮೂರನೇಯ ರೂಪವಾಗಿದೆ.

'ತುಕ್' ಆಗಮವು ವಿಕಲ್ಪವಾಗಿರುವುದರಿಂದ 'ತುಕ್'ಆಗಮ ಬಾರದೇ ಇರುವ ಪಕ್ಷದಲ್ಲಿ 'ಸಞ್‌ಶಮ್ಭುಃ' ಎಂದು ರೂಪವಾಗುತ್ತದೆ. ಇದು ನಾಲ್ಕನೆಯ ರೂಪ.

ಈ ಸಂಧಿಯ ರೂಪಗಳನ್ನು 'ವೈಯಾಕರಣಸಿದ್ಧಾನ್ತಕೌಮುದೀ'ಯಲ್ಲಿ ಶ್ಲೋಕ ರೂಪವಾಗಿ ಹೇಳಲಾಗಿದೆ.

"ಞಛೌ ಞಚಛಾ ಞಚಶಾ ಞಶಾವಿತಿ ಚತುಷ್ಟಯಮ್।
ರೂಪಾಣಾಮಿಹ ವಿಜ್ಞೇಯಂ ತುಕ್–ಛತ್ವ–ಚಲೋಪಾನಾಂ ವಿಕಲ್ಪನಾತ್"।

ಅಂದರೆ 'ತುಕ್'ಆಗಮ,'ಛತ್ವ' ಮತ್ತು 'ಚ್'ಕಾರಗಳ ಲೋಪವು ವೈಕಲ್ಪಿಕವಾಗಿ ಆಗುವುದರಿಂದ, 'ಸನ್+ಶಮ್ಭುಃ' ಎಂಬಲ್ಲಿ 'ಞ್'ಕಾರ ಮತ್ತು 'ಛ್'ಕಾರ ಇವೆರಡುನ್ನುಳ್ಳ ಒಂದು ರೂಪ. ಹಾಗೆಯೇ 'ಞ್'ಕಾರ 'ಚ್'ಕಾರ ಮತ್ತು 'ಛ್'ಕಾರ ಈ ಮೂರಕ್ಷರಗಳನ್ನೊಳಗೊಂಡ ಮತ್ತೊಂದು ರೂಪ. ಮತ್ತು 'ಚ' ವರ್ಗದ 'ಞ್'ಕಾರ 'ಛ್'ಕಾರ 'ಶ್'ಕಾರ ಇವುಗಳುಳ್ಳ ಮಗದೊಂದು ರೂಪ. ಮತ್ತು 'ಞ್'ಕಾರ 'ಶ್'ಕಾರ ಇವೆರಡಕ್ಷರಗಳಿಂದ ಕೂಡಿದ ಇನ್ನೊಂದು ರೂಪ. ಹೀಗಾಗಿ ನಾಲ್ಕು ರೂಪಗಳು ಸಿದ್ಧವಾಗುತ್ತವೆ.

### ಸಂಧಿ –13 ('ಙಮುಟ್' ಆಗಮವನ್ನು ವಿಧಿಸುವ ಸೂತ್ರ).

**ಸೂತ್ರ – 89: ಙಮೋ ಹ್ರಸ್ವಾದಚಿ ಙಮುಣ್ ನಿತ್ಯಮ್ ( 8.3.32)**

ವೃತ್ತಿ–ಹ್ರಸ್ವಾತ್ ಪರಃ ೦ಯಃ ಙಮ್ ತದನ್ತಂ ೦ಯತ್ಪದಂ ತಸ್ಮಾತ್ ಪರಸ್ಯ ಅಚಃ ನಿತ್ಯಂ ಙಮುಟ್। ಪ್ರತ್ಯಙ್ಙಾತ್ಮಾ। ಸುಗಣ್ಣೀಶಃ। ಸನ್ನಚ್ಯುತಃ।

ಪ.ಛೇ. – ಙಮಃ, ಹ್ರಸ್ವಾತ್, ಅಚಿ, ಙಮುಟ್, ನಿತ್ಯಮ್।

ಅರ್ಥ.– "ಹೇ ಮಪರೇ ವಾ (8.3.26)" ಸೂತ್ರದಿಂದ ವಿಕಲ್ಪಾರ್ಥವಾದ 'ವಾ' ಎಂಬ ಶಬ್ದದ ಅನುವೃತ್ತಿಗೆ ಅವಕಾಶವಿಲ್ಲವೆಂಬುದಕ್ಕೆ "ನಿತ್ಯಂ" ಎಂಬ ಪದವನ್ನು ಉಪಯೋಗಿಸಲಾಗಿದೆ. 'ಹ್ರಸ್ವ' ಸ್ವರದ ನಂತರ 'ಙಮ್' ವರ್ಣಗಳು ಕೊನೆಯಲ್ಲಿದ್ದರೆ, ಅದರ ಪರದಲ್ಲಿರುವ 'ಅಚ್' ವರ್ಣಗಳಿಗೆ 'ಙಮುಟ್' ಆದ್ಯವಯವವಾಗಿಯೂ,

ನಿತ್ಯವಾಗಿಯೂ ಬರುವುವು. 'ಙಮುಟ್' ಎಂದರೆ 'ಙಮ್+ಉಟ್'. 'ಉ'ಕಾರ, 'ಟ್'ಕಾರಗಳು 'ಇತ್'. 'ಙ್ಮ್' (ಙ್,ಣ್,ನ್) ವರ್ಣಗಳು ಮಾತ್ರ ಉಳಿಯುತ್ತವೆ. ಇದನ್ನು ಅಂದರೆ 'ಙಮುಟ್'ನ್ನು ಪ್ರತ್ಯೇಕವಾಗಿ ಹೇಳುವಾಗ 'ಙುಟ್', 'ಣುಟ್', ನುಟ್' ಎಂದು ಹೇಳಬೇಕು. ಈ ಮೂರು ಆಗಮಗಳು 'ಟಿತ್' ಆಗಿವೆ, ಆದ್ದರಿಂದ ಇವು ಪರಶಬ್ದದ ಆದ್ಯವಯವವಾಗಿ ಬರುತ್ತವೆ.

ಇಲ್ಲಿ 'ಙಮಃ' ಎಂದು 'ಪಂಚಮೀ' ವಿಭಕ್ತಿಯಲ್ಲಿದೆ, 'ಅಚಿ' ಎಂದು 'ಸಪ್ತಮಿ'ಯೂ ಇದೆ. "ಉಭಯನಿರ್ದೇಶೇ ಪಂಚಮೀನಿರ್ದೇಶೋ ಬಲೀಯಾನ್" ಎಂಬ ನಿಯಮದಿಂದ 'ಙಮಃ' ಎಂಬ 'ಪಂಚಮ್ಯನ್ತ'ಕ್ಕೆ ಪ್ರಾಬಲ್ಯವಿರುತ್ತದೆ. ಆದ್ದರಿಂದ 'ಅಚಿ' ಎಂಬುದನ್ನು 'ಅಚಃ' ಎಂದು 'ಷಷ್ಠ್ಯನ್ತ' ಮಾಡಿಕೊಳ್ಳಬೇಕು. 'ಅಚ್'ಗೆ 'ಟಿತ್'ಆಗಮ ಬರಬೇಕಾದರೆ ಆ 'ಅಜಾದಿ'ಯಾದ ಶಬ್ದಕ್ಕೆ ಆದ್ಯವಯವವಾಗಿ 'ಟಿತ್' ಆಗಮವು ಬರುತ್ತದೆ. ಆ 'ಅಜಾದಿ'ಯಾದ ಶಬ್ದವು ಆದ್ಯವಯವವಾಗಿರಬೇಕು. ಆಗಲೇ ಆದ್ಯವಯವವಾಗಿ ಬರಲು ಸಾಧ್ಯ. "ಯಥಾಸಂಖ್ಯಮನುದೇಶಃಸಮಾನಾಮ್(1-3-10)" ಸೂತ್ರದ ನಿಯಮಾನುಸಾರವಾಗಿ 'ಙ್', 'ಣ್', 'ನ್' ಎಂಬ ಆಗಮಗಳು, 'ಆತ್ಮಾ', 'ಈಶಃ' ಮತ್ತು 'ಅಚ್ಯುತಃ' ಪದಗಳಿಗೆ ಆದ್ಯವಯವವಾಗಿಯೂ ಬರುತ್ತವೆ, ಪೂರ್ವಪದದ ಕೊನೆಯಲ್ಲಿ 'ಙ್', 'ಣ್', 'ನ್' ವರ್ಣಗಳು ಕ್ರಮವಾಗಿದ್ದಾಗ ಅಂದರೆ ಪದದ ಕೊನೆಯಲ್ಲಿ 'ಙ್'ಕಾರವಿದ್ದರೆ 'ಙ್'ಕಾರವು, 'ಣ್'ಕಾರವಿದ್ದರೆ 'ಣ್'ಕಾರವು 'ನ್'ಕಾರವಿದ್ದರೆ 'ನ್'ಕಾರವು ಉತ್ತರಪದದ ಆದ್ಯವಯವದ ಆಗಮಗಳಾಗಿ ಬರುತ್ತವೆ.

ಉದಾ- 1. 'ಪ್ರತ್ಯಙ್ಙಾತ್ಮಾ'(ಜೀವಾತ್ಮಾ)- 'ಪ್ರತ್ಯಙ್+ಆತ್ಮಾ' ಎಂದಿದ್ದಾಗ 'ಹ್ರಸ್ವ ಅ'ಕಾರದ ನಂತರ 'ಙ್' ವರ್ಣವು (ಙಮ್)ಇದೆ. ಪರದಲ್ಲಿ (ಆತ್ಮಾ) 'ಅಚ್' ವರ್ಣವಿದೆ. ಆದ್ದರಿಂದ ಉತ್ತರಪದದ ಆದಿಯಲ್ಲಿ 'ಙ್'(ಙಮುಟ್)ಕಾರವು ಆದ್ಯವಯವವಾಗಿ ಬಂದು 'ಪ್ರತ್ಯಙ್ಙಾತ್ಮಾ' ಎಂಬ ರೂಪವು ಸಿದ್ಧವಾಗಿದೆ.

ಇದೇ ರೀತಿಯಲ್ಲಿ 'ಸುಗಣ್+ಈಶಃ' ಎಂದಿದ್ದಾಗ 'ಹ್ರಸ್ವ' ಸ್ವರದ ನಂತರ 'ಣ್'(ಣಮ್)ಕಾರವಿದೆ. ಉತ್ತರಪದದ 'ಈ' ಎಂಬ ಸ್ವರವಿದೆ. ಆದ್ದರಿಂದ 'ಣ್' ಎಂಬ ಆಗಮವು (ಙಮುಟ್) ಉತ್ತರಪದದ ಆದ್ಯವಯವವಾಗಿ ಬಂದು 'ಸುಗಣ್+ಣ್+ಈಶಃ' ಎಂದಾಗಿ 'ಸುಗಣ್ಣೀಶಃ' ಎಂದಾಗಿದೆ.

ಉದಾ -2. 'ಸನ್ನಚ್ಯುತಃ'- 'ಸನ್+ಅಚ್ಯುತಃ' ಎಂದಿದ್ದಾಗ 'ಙಮ್' ವರ್ಣವಾದ 'ನ್'ಕಾರವು 'ಹ್ರಸ್ವ'ದ ನಂತರ 'ಪದಾನ್ತ'ವಾಗಿದೆ. ಉತ್ತರಪದದ ಆದಿಯಲ್ಲಿ 'ಅ' ಕಾರವಿರುವುದರಿಂದ ಈ ಪದಕ್ಕೆ ಆದ್ಯವಯವವಾಗಿ 'ನ್'(ಙಮುಟ್) ಆಗಮವು ಬಂದು 'ಸನ್+ನ್+ಅಚ್ಯುತಃ' ಎಂದಾಗಿ 'ಸನ್ನಚ್ಯುತಃ' ಎಂಬ ರೂಪವನ್ನು ಪಡೆದಿದೆ.

**(ರುತ್ವವನ್ನು ವಿಧಿಸುವ ಸೂತ್ರ).**

**ಸೂತ್ರ - ೨೦: ಸಮಃ ಸುಟಿ ( ೮.೩.೫)**

ವೃತ್ತಿ- ಸಮಃ ರುಃ ಸುಟಿ।

ಅ.ವೃ.-"ಮತುವಸೋ ರು ಸಮ್ಬುದ್ಧೌ ಛನ್ದಸಿ(8-3-1)" ಸೂತ್ರದಿಂದ 'ರುಃ' ಎಂಬ ಪದವು ಅನುವೃತ್ತವಾಗಿದೆ.

ಅರ್ಥ- 'ಸುಟ್' ಪರದಲ್ಲಿದ್ದಾಗ 'ಸಮ್' ಶಬ್ದದ 'ಮ್' ಕಾರದ ಸ್ಥಾನದಲ್ಲಿ 'ರು' ಆದೇಶವು ಬರುತ್ತದೆ. "ಅಲೋऽನ್ತ್ಯಸ್ಯ(1-1-52)" ಎಂಬ ಪರಿಭಾಷಾ ಸೂತ್ರದಿಂದ 'ಸಮ್' ಎಂಬ ಉಪಸರ್ಗದ ಕೊನೆಯಲ್ಲಿರುವ 'ಮ್'ಕಾರಕ್ಕೆ 'ರು' ಎಂಬ ಆದೇಶವು 'ಸುಟ್' ಪರದಲ್ಲಿರುವಾಗ ಬರುವುದು. "ಸಂಪರಿಭ್ಯಾಮ್ ಕರೋತೌ ಭೂಷಣೇ(6-1-137)" ಸೂತ್ರದಿಂದ 'ಸಮ್+ಕೃಞ್'(ಕರ್ತಾ) ಎಂದಿದ್ದಾಗ, 'ಸುಟ್' ಆಗಮವು ಬರುವುದು. ಈ ಆಗಮವು 'ಟಿತ್' ಆಗಿರುವುದರಿಂದ ಆದ್ಯವಯವವಾಗಿ ಬಂದು 'ಸಮ್+ಸ್+ಕರ್ತಾ'(ಸಮ್+ಸ್ಕರ್ತಾ) ಎಂದಿದ್ದಾಗ, ಪೂರ್ವದಲ್ಲಿರುವ 'ಸಮ್' ಶಬ್ದದ 'ಮ್' ಕಾರಕ್ಕೆ 'ರು' ಆದೇಶವು ಬಂದು 'ಸರು + ಸ್ಕರ್ತಾ' ಎಂದಿದ್ದಾಗ

**(ಅನುನಾಸಿಕವನ್ನು ಆದೇಶವಾಗಿ ವಿಧಿಸುವ ಸೂತ್ರ).**

**ಸೂತ್ರ - 91. ಅತ್ರಾನುನಾಸಿಕಃ ಪೂರ್ವಸ್ಯ ತು ವಾ ( 8.3.2)**

ವೃತ್ತಿ- ಅತ್ರ ರು-ಪ್ರಕರಣೇ ರೋಃ ಪೂರ್ವಸ್ಯ ಅನುನಾಸಿಕಃ ವಾ।

ಪ.ಛೇ. - ಅತ್ರ, ಅನುನಾಸಿಕಃ, ಪೂರ್ವಸ್ಯ, ತು, ವಾ।

ಅರ್ಥ- ಈ 'ರು' ಪ್ರಕರಣದಲ್ಲಿ 'ರು'ವಿಗೆ ಪೂರ್ವದಲ್ಲಿರುವ ವರ್ಣಕ್ಕೆ ('ಸ್' ಕಾರೋತ್ತರ 'ಅ'ಕಾರಕ್ಕೆ) ವಿಕಲ್ಪವಾಗಿ ಅನುನಾಸಿಕವು ಆದೇಶವಾಗಿ ಬರುತ್ತದೆ. ಆಗ ಸ್+ಅँರು+ಸ್ಕರ್ತಾ ಎಂದು ರೂಪವಿರುತ್ತದೆ.

ಈ ಸೂತ್ರದಲ್ಲಿ 'ಅತ್ರ' ಎಂಬ ಶಬ್ದವು "ಮತುವಸೋ ರು ಸಮ್ಬುದ್ಧೌ ಛನ್ದಸಿ (8-3-1)" ಮೊದಲಾದ ಸೂತ್ರಗಳಿಂದ ಮಾಡಲಾಗಿರುವ 'ರು'ವನ್ನು ಹೇಳುತ್ತದೆ. ಆದ್ದರಿಂದ "ಸ-ಸಜುಷೋರುಃ(8-2-66)" ಸೂತ್ರದಿಂದ ಬರುವ 'ರು'ವನ್ನು ತೆಗೆದುಕೊಳ್ಳಬಾರದು. ಪೂರ್ವದಲ್ಲಿ ಹೇಳಿದ ಸೂತ್ರಗಳಿಂದ 'ರು' ವನ್ನು ವಿಧಿಸಿದ ನಂತರ ಈ 'ರು'ವಿಗೆ ಪೂರ್ವದಲ್ಲಿರುವ ಯಾವ 'ಅಚ್' ವರ್ಣವಿದೆಯೋ ಅದಕ್ಕೆ ಇಲ್ಲಿ ಅನುನಾಸಿಕ 'ಅಚ್'ವರ್ಣವು ಆದೇಶವಾಗಿ ಬರುತ್ತದೆ.

**ಸಂಧಿ -14. (ಅನುಸ್ವಾರ ಆಗಮವನ್ನು ವಿಧಿಸುವ ಸೂತ್ರ).**

**ಸೂತ್ರ - 92. ಅನುನಾಸಿಕಾತ್ ಪರೋऽನುಸ್ವಾರಃ (8.3.4)**

ವೃತ್ತಿ- ಅನುನಾಸಿಕಂ ವಿಹಾಯ ರೋಃ ಪೂರ್ವಸ್ಮಾತ್ ಪರಃ ಅನುಸ್ವಾರಾಗಮಃ।

ಪ.ಛೇ. - ಅನುನಾಸಿಕಾತ್, ಪರಃ, ಅನುಸ್ವಾರಃ।

ಅ.ವೃ.- "ಮತುವಸೋ ರು ಸಮ್ಬುದ್ಧೌ ಛನ್ದಸಿ(8-3-1)" ಸೂತ್ರದಿಂದ 'ರು'ವನ್ನು ಪಂಚಮೀ ವಿಭಕ್ತಿಯಲ್ಲಿ ವಿಪರಿಣಾಮಗೊಳಿಸಿ 'ರೋಃ' ಎಂಬ ಪದವು ಮತ್ತು "ಅತ್ರಾನುನಾಸಿಕಃ ಪೂರ್ವಸ್ಯ ತು ವಾ(8.3.2)" ಸೂತ್ರದಿಂದ 'ಪೂರ್ವಸ್ಯ' ಎಂಬ ಶಬ್ದವನ್ನು ವಿಭಕ್ತಿ ಪರಿಣಾಮಗೊಳಿಸಿ 'ಪೂರ್ವಾತ್' ಎಂಬುದನ್ನು ಅನುವೃತ್ತಿ

ಮಾಡಲಾಗಿದೆ.

ಅರ್ಥ-(ಹಿಂದಿನ ಸೂತ್ರದಲ್ಲಿ ಹೇಳಲ್ಪಟ್ಟ) ಅನುನಾಸಿಕವು ಆದೇಶವಾಗಿ ಬರುವ ಪಕ್ಷವನ್ನು ಬಿಟ್ಟು ಎರಡನೇ (ವೈಕಲ್ಪಿಕ)ಪಕ್ಷದಲ್ಲಿ 'ರು'ವಿಗೆ ಪೂರ್ವದಲ್ಲಿ ಯಾವ (ಸ್ವರ) ವರ್ಣವಿದೆಯೋ ಅದರ ಪರದಲ್ಲಿ ಅನುಸ್ವಾರವು ಆಗಮವಾಗಿ ಬರುತ್ತದೆ. 'ರು'ವಿಗೆ ಪೂರ್ವದಲ್ಲಿ ಎಂದರೆ, ಪೂರ್ವದಲ್ಲಿರುವ 'ಅಚ್' ವರ್ಣದ ನಂತರ ಎಂದು ಅರ್ಥ. [ಆದರೆ ಅನುಸ್ವಾರವನ್ನು ಯಾವಾಗಲೂ ಪೂರ್ವದಲ್ಲಿರುವ 'ಅಚ್' ವರ್ಣದ ಮೇಲೆ ದೇವನಾಗರಿ ಲಿಪಿಯಲ್ಲಾದರೆ ಚುಕ್ಕಿ(.)ಯ ರೂಪದಲ್ಲಿ ಬರೆಯಲಾಗುತ್ತದೆ. ಕನ್ನಡ ಲಿಪಿಯಲ್ಲಾದರೆ ಸ್ವರದ ಪರದಲ್ಲಿ ಸೊನ್ನೆಯ(೦) ರೂಪದಲ್ಲಿ ಬರೆಯಲಾಗುತ್ತದೆ ಎಂಬುದನ್ನು ಗಮನಿಸಬೇಕು].

### ಸಂಧಿ - ೧೫. ('ರೇಫ'ಕ್ಕೆ ವಿಸರ್ಗವನ್ನು ವಿಧಿಸುವ ಸೂತ್ರ)

**ಸೂತ್ರ - ೯೩: ಖರವಸಾನಯೋರ್ವಿಸರ್ಜನೀಯಃ (೮.೩.೧೫)**

ವೃತ್ತಿ- ಖರಿ ಅವಸಾನೇ ಚ ಪದಾನ್ತಸ್ಯ ರೇಫಸ್ಯ ವಿಸರ್ಗಃ।

ವಾ॥ **ಸಂ-ಪುಂ-ಕಾನಾಂ ಸೊ ವಕ್ತವ್ಯಃ।** ಸೂಸ್ಸ್ಕರ್ತಾ। ಸಂಸ್ಸ್ಕರ್ತಾ।

ಪ. ಛೇ. - ಖರ್-ಅವಸಾನಯೋಃ, ವಿಸರ್ಜನೀಯಃ।

ಅ. ವ್ಯ. - "ರೋರಿ(8-3-14)" ಸೂತ್ರದಿಂದ 'ರೋಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- 'ಖರ್' ಪರದಲ್ಲಿದ್ದಾಗಲೋ ಅಥವಾ ಅವಸಾನದಲ್ಲಿ (ಕೊನೆಯ ವರ್ಣವಾಗಿ) ರೇಫವಿದ್ದಾಗಲೋ, ಆ ರೇಫದ ಸ್ಥಾನದಲ್ಲಿ ವಿಸರ್ಗವು ಆದೇಶವಾಗಿ ಬರುತ್ತದೆ.ಸಂಜ್ಞಾ ಪ್ರಕರಣದಲ್ಲಿ 'ವಿಸರ್ಜನೀಯ', 'ಜಿಹ್ವಾಮೂಲೀಯ' ಮತ್ತು 'ಉಪಧ್ಮಾನೀಯ' ಎಂದು ಮೂರು ವಿಧವಾದ ವಿಸರ್ಗಗಳನ್ನು ಹೇಳಲಾಗಿದೆ. ಅವುಗಳಲ್ಲಿ ವಿಸರ್ಜನೀಯವು ಅಂದರೆ ಸಾಮಾನ್ಯ ವಿಸರ್ಗವು ಇಲ್ಲಿ ವಿಧಾನ ಮಾಡಲಾಗಿದೆ. ಪದಾನ್ತವಾಗಿರುವ ಅವಸಾನದ ಸ್ಥಾನದಲ್ಲಿರುವ ರೇಫಕ್ಕೆ ವಿಸರ್ಗವು ಆದೇಶವಾಗಿ ವಿಧಿಸಲಾಗಿದೆ. ಆ ರೇಫದ ಪರದಲ್ಲಿ 'ಖರ್' ಪ್ರತ್ಯಾಹರ ವರ್ಣವಾಗಲೀ, ಅಥವಾ ಸ್ವತಃ ಅವಸಾನದಲ್ಲಿರುವ ರೇಫವಾಗಲೀ ಇದ್ದರೆ ಅಂತಹ ರೇಫವೇ ಇಲ್ಲಿ ಗುರುತಿಸಲಾಗಿದೆ. ಇದಕ್ಕೇನೇ ವಿಸರ್ಗವು ಆದೇಶವಾಗಿ ಬರುತ್ತದೆ. ಇಲ್ಲಿ 'ರು'ವಿನಲ್ಲಿ 'ಉ' ಕಾರವು ಅನುನಾಸಿಕವಾಗಿದ್ದರಿಂದ 'ಇತ್' ಆಗಿ ಲೋಪವಾಗುತ್ತದೆ. ಆಗ 'ರ್' ಮಾತ್ರ ಉಳಿಯುತ್ತದೆ.

ವಾ॥ **ಸಂ-ಪುಂ-ಕಾನಾಂ ಸೋವಕ್ತವ್ಯಃ -**

ಅರ್ಥ -ಸಮ್, ಪುಮ್ ಮತ್ತು ಕಾನ್, ಗಳಿಗೆ ಸಂಬಂಧಿಸಿದ ವಿಸರ್ಗದ ಸ್ಥಾನದಲ್ಲಿ 'ಸ್' ಕಾರವು ಆದೇಶವಾಗಿ ಬರುತ್ತದೆ.

ಉದಾ- 'ಸೂಸ್ಸ್ಕರ್ತಾ'। 'ಸಂಸ್ಸ್ಕರ್ತಾ'। - (ಸಂಸ್ಕಾರವನ್ನು ಮಾಡುವವನು)

ಇಲ್ಲಿ 'ಸಮ್' ಎಂಬುದು ಉಪಸರ್ಗವಾಗಿದೆ. 'ಕೃ' ಧಾತುವಿನ ಮೇಲೆ 'ತೃಚ್' ಪ್ರತ್ಯಯ ಬಂದು 'ಕರ್ತಾ' ಎಂದಾಗಿದೆ. "ಸಮ್ಪರಿಭ್ಯಾಂ ಕರೋತೌ ಭೂಷಣೇ(6–1–137)" ಸೂತ್ರದಿಂದ 'ಸುಟ್'(ಸ್) ಆಗಮ ಬಂದು 'ಸಮ್ + ಸ್ಕರ್ತಾ' ಎಂದಾಗುತ್ತದೆ. ಈಗ "ಸಮಃ ಸುಟಿ(8.3.5)" ಸೂತ್ರದಿಂದ ಬಂದ 'ಸ್ಕರ್ತಾ' ಎಂಬಲ್ಲಿರುವ 'ಸ್'ಕಾರ (ಸುಟ್) ಪರದಲ್ಲಿರುವದರಿಂದ 'ಸಮ್' ನಲ್ಲಿರುವ 'ಮ್' ಕಾರದ ಸ್ಥಾನದಲ್ಲಿಯೇ 'ರು' (ರ್) ಆದೇಶ ಬಂದು 'ಸರ್ + ಸ್ಕರ್ತಾ' ಎಂದಾಗಿದೆ. "ಅತ್ರಾನುನಾಸಿಕಃ ಪೂರ್ವಸ್ಯ ತು ವಾ (8.3.2)" ಸೂತ್ರದಿಂದ, 'ರು'(ರ್) ವಿನ ರೇಫಕ್ಕಿಂತ ಪೂರ್ವದಲ್ಲಿರುವ 'ಸ' ಕಾರೋತ್ತರವರ್ತಿ 'ಅ'ಕಾರಕ್ಕೆ ಅನುನಾಸಿಕ 'ಅँ' ಕಾರವು ಬರುತ್ತದೆ. ಆಗ 'ಸँರ್+ಸ್ಕರ್ತಾ' ಎಂದಾಗುತ್ತದೆ. ಈ ಅನುನಾಸಿಕ ಆದೇಶವು ವೈಕಲ್ಪಿಕವಾಗಿದೆ.

ಈ ಅನುನಾಸಿಕ ಬಾರದ ಪಕ್ಷದಲ್ಲಿ "ಅನುನಾಸಿಕಾತ್ ಪರೋऽನುಸ್ವಾರಃ(8.3.4)" ಸೂತ್ರದಿಂದ ರೇಫಕ್ಕೆ ಪೂರ್ವದಲ್ಲಿ ಅನುಸ್ವಾರಾಗಮವು ಬಂದು 'ಸಂ+ರ್+ಸ್ಕರ್ತಾ' ಎಂದಾಗುತ್ತದೆ. ಇದೇ ರೀತಿಯಲ್ಲಿ 'ಸँರ್+ಸ್ಕರ್ತಾ', 'ಸಂರ್+ಸ್ಕರ್ತಾ' ಎಂದು ಎರಡು ರೂಪಗಳಾಗುತ್ತವೆ. 'ಸ್ಕರ್ತಾ' ಶಬ್ದದಲ್ಲಿರುವ 'ಸ್' ಕಾರವು 'ಖರ್' ಪ್ರತ್ಯಾಹಾರಕ್ಕೆ ಸೇರಿದ ವರ್ಣವಾಗಿದೆ. ಮತ್ತು 'ಸಂ' ಎಂಬುದು ಏಕಪದವಾಗಿದೆ. ಆದ್ದರಿಂದ 'ಮ್' ಸ್ಥಾನದಲ್ಲಿ ಬರುವ 'ರೇಫ'ವು ಪದದಲ್ಲಿಯೇ ಅಂತರ್ಗತವಾಗುತ್ತದೆ ಮತ್ತು ಅದು ಅಂತ್ಯದಲ್ಲೂ ಇದೆ.

ಆದ್ದರಿಂದ ಪದಾನ್ತ ರೇಫವಾಗಿದೆ. ಆದುದರಿಂದ ಇದರ ಸ್ಥಾನದಲ್ಲಿ "ಖರವಸಾನಯೋರ್ವಿಸರ್ಜನೀಯಃ(8.3.15)" ಸೂತ್ರದಿಂದ ವಿಸರ್ಗವು ಆದೇಶವಾಗಿ ಬರುತ್ತದೆ. ಆಗ 'ಸँಃ+ಸ್ಕರ್ತಾ' ಮತ್ತು 'ಸಂಃ+ಸ್ಕರ್ತಾ' ಎಂದಾಗುತ್ತದೆ. ನಂತರ ವಿಸರ್ಗದ ಸ್ಥಾನದಲ್ಲಿ "ವಿಸರ್ಜನೀಯಸ್ಯ ಸಃ(8.3.34)" ಸೂತ್ರದಿಂದ ನಿತ್ಯವಾಗಿ 'ಸ್' ಕಾರವು ಬರುತ್ತದೆ. ಅದೇ ಸಂದರ್ಭದಲ್ಲಿ "ವಾ ಶರಿ(8–3–36)" ಸೂತ್ರದಿಂದ ವೈಕಲ್ಪಿಕವಾಗಿ ವಿಸರ್ಗವು ಆದೇಶವಾಗಿ ಬರುತ್ತದೆ. ಇಂತಹ ಸಂದರ್ಭದಲ್ಲಿ ಈ ಎರಡೂ ಸೂತ್ರಗಳನ್ನು ನಿಷೇಧಿಸಿ.

ವಾ॥ **"ಸಂ–ಪುಂ–ಕಾನಾಂ ಸೊ ವಕ್ತವ್ಯಃ"** ವಾರ್ತಿಕದಿಂದ ಎರಡೂ ರೂಪಗಳಲ್ಲಿ, 'ಸ್' ಕಾರವು ಆದೇಶವಾಗಿ ಬಂದು, ಸँಸ್ಸ್ಕರ್ತಾ। ಸಂಸ್ಸ್ಕರ್ತಾ ಎಂದು ಎರಡು ರೂಪಗಳಾಗುತ್ತವೆ. ವೈಯಾಕರಣ ಸಿದ್ಧಾನ್ತ ಕೌಮುದಿಯಲ್ಲಿ ಭಟ್ಟೋಜೀ ದೀಕ್ಷಿತರು ಸँ+ಸ್+ಸ್ಕರ್ತಾ=ಸँಸ್ಸ್ಕರ್ತಾ, ಎಂಬಲ್ಲಿ ಒಂದು 'ಸ್' ಕಾರ, ಎರಡು 'ಸ್' ಕಾರಗಳು ಮತ್ತು ಮೂರು 'ಸ್' ಕಾರಗಳು ಹಾಗೂ ಒಂದು 'ಕ್' ಕಾರ, ಎರಡು 'ಕ್' ಕಾರಗಳು, ಅನುನಾಸಿಕ ಮತ್ತು ಅನನುನಾಸಿಕಗಳಿಂದ ಕೂಡಿ (9X2=18. 18X3=54. 54X2=108) 108 ರೂಪಗಳನ್ನು ತೋರಿಸಿ ಕೊಟ್ಟಿದ್ದಾರೆ.

**ಸಂಧಿ –(16) (ರುತ್ವವನ್ನು ವಿಧಿಸುವ ಸೂತ್ರ).**

**ಸೂತ್ರ – 94: ಪುಮಃ ಖಯ್ಯಂಪರೇ ( 8.3.6)**

ವೃತ್ತಿ– ಅಂ-ಪರೇ ಖಯಿ ಪುಮಃ ರುಃ ಸ್ಯಾತ್। ಪುಂಸ್ಕೋಕಿಲಃ । ಪುँಸ್ಕೋಕಿಲಃ।

ಪ.ಛೇ. – ಪುಮಃ, ಖಯಿ, ಅಂ-ಪರೇ ।

ಅ.ವೃ.– "ಮತುವಸೋ ರು ಸಮ್ಬುದ್ಧೌ ಛನ್ದಸಿ(8–3–1)" ಸೂತ್ರದಿಂದ 'ರುಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– 'ಅಮ್' ಪ್ರತ್ಯಾಹಾರದ ವರ್ಣವನ್ನು ಪರದಲ್ಲಿ ಉಳ್ಳ 'ಖಯ್' ಪ್ರತ್ಯಾಹಾರ ವರ್ಣವು ಪರದಲ್ಲಿದ್ದಾಗ 'ಮ್' ಕಾರಕ್ಕೆ 'ರು' ಆದೇಶವು ಬರುತ್ತದೆ.

ಪ್ರಕೃತ ಸೂತ್ರದ ಅರ್ಥವೇನೆಂದರೆ, 'ಪುಂ' ಶಬ್ದದ ನಂತರ 'ಖಯ್' ವರ್ಣವು ಇದ್ದು, ಅದರ ಅವ್ಯವಹಿತ ಪರದಲ್ಲಿ 'ಅಮ್' ವರ್ಣವು ಇರಬೇಕು. ಆಗ 'ಮ್' ಕಾರಕ್ಕೆ 'ರು' ಆದೇಶವು ಬರುತ್ತದೆಂದರ್ಥ.

ಉದಾ–'ಪುಂಸ್ಕೋಕಿಲಃ'।'ಪುँಸ್ಕೋಕಿಲಃ'।(ಪುರುಷ ಕೋಕಿಲ) 'ಪುಮ್ + ಕೋಕಿಲಃ' ಎಂದಿದ್ದಾಗ, ಪ್ರಕೃತ ಸೂತ್ರದಿಂದ ಕೋಕಿಲಃ ಎಂಬ ಶಬ್ದದ 'ಕ್' ಕಾರೋತ್ತರವರ್ತಿ 'ಓ' ಕಾರವನ್ನು 'ಅಮ್' ಪ್ರತ್ಯಾಹರದ ವರ್ಣವೆಂದು ತಿಳಿದು ಮತ್ತು 'ಕ್' ಕಾರವನ್ನು 'ಖಯ್' ವರ್ಣವೆಂದು ತಿಳಿದು (ಕೋ ಎಂಬ ಶಬ್ದವು 'ಅಮ್' ಪರಕವಾದ 'ಖಯ್' ಎಂದು ತಿಳಿದು) 'ಪುಮ್' ಎಂಬಲ್ಲಿರುವ 'ಮ್' ಕಾರದ ಸ್ಥಾನದಲ್ಲಿ 'ರು'(ರ್) ಆದೇಶವು ಬಂದ್ದು, ಆ 'ರು'(ರ್)ವಿನ ಪೂರ್ವದಲ್ಲಿರುವ ನಿರನುನಾಸಿಕ– 'ಉ'ಕಾರಕ್ಕೆ ಅನುನಾಸಿಕ ' ँ 'ಆದೇಶವು ಬಂದು 'ಪುರ್+ಕೋಕಿಲಃ' ಎಂದಾಗುತ್ತದೆ.

ಇಲ್ಲಿ ಅನುನಾಸಿಕ ಆದೇಶವು ವೈಕಲ್ಪಿಕವಾಗಿರುವದರಿಂದ, ಅನುನಾಸಿಕ ಬಾರದ ಪಕ್ಷದಲ್ಲಿ **"ಅನುನಾಸಿಕಾತ್ ಪರೋಽನುಸ್ವಾರಃ(8.3.4)"** ಸೂತ್ರದಿಂದ 'ರೇಫ'(ರ್)ಕ್ಕೆ ಪೂರ್ವದಲ್ಲಿರುವ 'ಉ' ಕಾರದ ನಂತರ ಅನುಸ್ವಾರವು ಆಗಮವಾಗಿ ಬಂದು 'ಪುಂರ್+ ಕೋಕಿಲಃ' ಎಂದಾಗಿದೆ. ಹೀಗೆ 'ಪುರ್+ಕೋಕಿಲಃ', 'ಪುಂರ್+ಕೋಕಿಲಃ' ಎಂದು ಎರಡು ರೂಪಗಳಾಗಿವೆ. 'ಕೋಕಿಲಃ' ಎಂಬಲ್ಲಿರುವ 'ಕ್' ಕಾರವು 'ಖರ್' ವರ್ಣವಾಗಿರುವದರಿಂದ, ಮತ್ತು 'ಪುಮ್' ಎಂಬ ಶಬ್ದವು ಒಂದೇ ಪದವಾಗಿ ಇರುವುದರಿಂದ ಅದರ ಸ್ಥಾನದಲ್ಲಿ ಬಂದಂತಹ 'ರೇಫ'(ರ್)ವು ಪದಾನ್ತವಾಗುವುದರಿಂದ, "ಖರವಸಾನಯೋರ್ವಿಸರ್ಜನೀಯಃ(8.3.15)" ಸೂತ್ರದಿಂದ ವಿಸರ್ಗವು ಆದೇಶವಾಗಿ ಬಂದು 'ಪುँಃ + ಕೋಕಿಲಃ', 'ಪುಂಃ + ಕೋಕಿಲಃ' ಎಂದು ರೂಪಗಳಾಗಿರುತ್ತವೆ. ಈಗ "ಸಂ-ಪುಂ-ಕಾನಾಂ ಸೊ ವಕ್ತವ್ಯಃ" ವಾರ್ತಿಕದಿಂದ ಎರಡು ರೂಪಗಳಲ್ಲಿಯೂ ವಿಸರ್ಗದ ಸ್ಥಾನದಲ್ಲಿ 'ಸ್' ಕಾರವು ಆದೇಶವಾಗಿ ಬಂದು 'ಪುँಸ್+ಕೋಕಿಲಃ= ಪುँಸ್ಕೋಕಿಲಃ', 'ಪುಂಸ್+ಕೋಕಿಲಃ=ಪುಂಸ್ಕೋಕಿಲಃ' ಎಂದು ಎರಡು ಎರಡು ರೂಪಗಳಾಗಿವೆ.

ಇಲ್ಲಿ 'ಸಮ್' ಎಂಬುದು ಉಪಸರ್ಗವಾಗಿದೆ. 'ಕೃ' ಧಾತುವಿನ ಮೇಲೆ 'ತೃಚ್' ಪ್ರತ್ಯಯ ಬಂದು 'ಕರ್ತಾ' ಎಂದಾಗಿದೆ. "ಸಮ್ಪರಿಭ್ಯಾಂ ಕರೋತೌ ಭೂಷಣೇ(6–1–137)" ಸೂತ್ರದಿಂದ 'ಸುಟ್'(ಸ್) ಆಗಮ ಬಂದು 'ಸಮ್ + ಸ್ಕರ್ತಾ' ಎಂದಾಗುತ್ತದೆ. ಈಗ "ಸಮಃ ಸುಟಿ(8.3.5)" ಸೂತ್ರದಿಂದ ಬಂದ 'ಸ್ಕರ್ತಾ' ಎಂಬಲ್ಲಿರುವ 'ಸ್'ಕಾರ (ಸುಟ್) ಪರದಲ್ಲಿರುವದರಿಂದ 'ಸಮ್' ನಲ್ಲಿರುವ 'ಮ್' ಕಾರದ ಸ್ಥಾನದಲ್ಲಿಯೇ 'ರು' (ರ್) ಆದೇಶ ಬಂದು 'ಸರ್ + ಸ್ಕರ್ತಾ' ಎಂದಾಗಿದೆ. "ಅತ್ರಾನುನಾಸಿಕಃ ಪೂರ್ವಸ್ಯ ತು ವಾ (8.3.2)" ಸೂತ್ರದಿಂದ, 'ರು'(ರ್) ವಿನ ರೇಫಕ್ಕಿಂತ ಪೂರ್ವದಲ್ಲಿರುವ 'ಸ' ಕಾರೋತ್ತರವರ್ತಿ 'ಅ'ಕಾರಕ್ಕೆ ಅನುನಾಸಿಕ 'ಅ' ಕಾರವು ಬರುತ್ತದೆ. ಆಗ 'ಸರ್+ಸ್ಕರ್ತಾ' ಎಂದಾಗುತ್ತದೆ. ಈ ಅನುನಾಸಿಕ ಆದೇಶವು ವೈಕಲ್ಪಿಕವಾಗಿದೆ.

ಈ ಅನುನಾಸಿಕ ಬಾರದ ಪಕ್ಷದಲ್ಲಿ "ಅನುನಾಸಿಕಾತ್ ಪರೋಽನುಸ್ವಾರಃ(8.3.4)" ಸೂತ್ರದಿಂದ ರೇಫಕ್ಕೆ ಪೂರ್ವದಲ್ಲಿ ಅನುಸ್ವಾರಾಗಮವು ಬಂದು 'ಸಂ+ರ್+ಸ್ಕರ್ತಾ' ಎಂದಾಗುತ್ತದೆ. ಇದೇ ರೀತಿಯಲ್ಲಿ 'ಸರ್+ಸ್ಕರ್ತಾ', 'ಸಂರ್+ಸ್ಕರ್ತಾ' ಎಂದು ಎರಡು ರೂಪಗಳಾಗುತ್ತವೆ. 'ಸ್ಕರ್ತಾ' ಶಬ್ದದಲ್ಲಿರುವ 'ಸ್' ಕಾರವು 'ಖರ್' ಪ್ರತ್ಯಾಹಾರಕ್ಕೆ ಸೇರಿದ ವರ್ಣವಾಗಿದೆ. ಮತ್ತು 'ಸಂ' ಎಂಬುದು ಏಕಪದವಾಗಿದೆ. ಆದ್ದರಿಂದ 'ಮ್' ಸ್ಥಾನದಲ್ಲಿ ಬರುವ 'ರೇಫ'ವು ಪದದಲ್ಲಿಯೇ ಅಂತರ್ಗತವಾಗುತ್ತದೆ ಮತ್ತು ಅದು ಅಂತ್ಯದಲ್ಲೂ ಇದೆ.

ಆದ್ದರಿಂದ ಪದಾನ್ತ ರೇಫವಾಗಿದೆ. ಆದುದರಿಂದ ಇದರ ಸ್ಥಾನದಲ್ಲಿ "ಖರವಸಾನಯೋರ್ವಿಸರ್ಜನೀಯಃ(8.3.15)" ಸೂತ್ರದಿಂದ ವಿಸರ್ಗವು ಆದೇಶವಾಗಿ ಬರುತ್ತದೆ. ಆಗ 'ಸಃ+ಸ್ಕರ್ತಾ' ಮತ್ತು 'ಸಂಃ+ಸ್ಕರ್ತಾ' ಎಂದಾಗುತ್ತದೆ. ನಂತರ ವಿಸರ್ಗದ ಸ್ಥಾನದಲ್ಲಿ "ವಿಸರ್ಜನೀಯಸ್ಯ ಸಃ(8.3.34)" ಸೂತ್ರದಿಂದ ನಿತ್ಯವಾಗಿ 'ಸ್' ಕಾರವು ಬರುತ್ತದೆ. ಅದೇ ಸಂದರ್ಭದಲ್ಲಿ "ವಾ ಶರಿ(8–3–36)" ಸೂತ್ರದಿಂದ ವೈಕಲ್ಪಿಕವಾಗಿ ವಿಸರ್ಗವು ಆದೇಶವಾಗಿ ಬರುತ್ತದೆ. ಇಂತಹ ಸಂದರ್ಭದಲ್ಲಿ ಈ ಎರಡೂ ಸೂತ್ರಗಳನ್ನು ನಿಷೇಧಿಸಿ.

ವಾ॥ **"ಸಂ–ಪುಂ–ಕಾನಾಂ ಸೊ ವಕ್ತವ್ಯಃ"** ವಾರ್ತಿಕದಿಂದ ಎರಡೂ ರೂಪಗಳಲ್ಲಿ, 'ಸ್' ಕಾರವು ಆದೇಶವಾಗಿ ಬಂದು, ಸಸ್ಸ್ಕರ್ತಾ। ಸಂಸ್ಸ್ಕರ್ತಾ ಎಂದು ಎರಡು ರೂಪಗಳಾಗುತ್ತವೆ. ವೈಯಾಕರಣ ಸಿದ್ಧಾನ್ತ ಕೌಮುದಿಯಲ್ಲಿ ಭಟ್ಟೋಜೀ ದೀಕ್ಷಿತರು ಸ+ಸ್+ಸ್ಕರ್ತಾ=ಸಸ್ಸ್ಕರ್ತಾ, ಎಂಬಲ್ಲಿ ಒಂದು 'ಸ್' ಕಾರ, ಎರಡು 'ಸ್' ಕಾರಗಳು ಮತ್ತು ಮೂರು 'ಸ್' ಕಾರಗಳು ಹಾಗೂ ಒಂದು 'ಕ್' ಕಾರ, ಎರಡು 'ಕ್' ಕಾರಗಳು, ಅನುನಾಸಿಕ ಮತ್ತು ಅನನುನಾಸಿಕಗಳಿಂದ ಕೂಡಿ (9X2=18. 18X3=54. 54X2=108) 108 ರೂಪಗಳನ್ನು ತೋರಿಸಿ ಕೊಟ್ಟಿದ್ದಾರೆ.

**ಸಂಧಿ –(16) (ರುತ್ವವನ್ನು ವಿಧಿಸುವ ಸೂತ್ರ).**

**ಸೂತ್ರ – 94: ಪುಮಃ ಖಯ್ಯಂಪರೇ ( 8.3.6)**

ವೃತ್ತಿ– ಅಂ–ಪರೇ ಖಯಿ ಪುಮಃ ರುಃ ಸ್ಯಾತ್। ಪುಂಸ್ಕೋಕಿಲಃ । ಪುँಸ್ಕೋಕಿಲಃ।

ಪ.ಛೇ. – ಪುಮಃ, ಖಯಿ, ಅಂ–ಪರೇ ।

ಅ.ವೃ.– "ಮತುವಸೋ ರು ಸಮ್ಬುದ್ಧೌ ಛನ್ದಸಿ(8–3–1)" ಸೂತ್ರದಿಂದ 'ರುಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– 'ಅಮ್' ಪ್ರತ್ಯಾಹಾರದ ವರ್ಣವನ್ನು ಪರದಲ್ಲಿ ಉಳ್ಳ 'ಖಯ್' ಪ್ರತ್ಯಾಹಾರ ವರ್ಣವು ಪರದಲ್ಲಿದ್ದಾಗ 'ಮ್' ಕಾರಕ್ಕೆ 'ರು' ಆದೇಶವು ಬರುತ್ತದೆ.

ಪ್ರಕೃತ ಸೂತ್ರದ ಅರ್ಥವೇನೆಂದರೆ, 'ಪುಂ' ಶಬ್ದದ ನಂತರ 'ಖಯ್' ವರ್ಣವು ಇದ್ದು, ಅದರ ಅವ್ಯವಹಿತ ಪರದಲ್ಲಿ 'ಅಮ್' ವರ್ಣವು ಇರಬೇಕು. ಆಗ 'ಮ್' ಕಾರಕ್ಕೆ 'ರು' ಆದೇಶವು ಬರುತ್ತದೆಂದರ್ಥ.

ಉದಾ–'ಪುಂಸ್ಕೋಕಿಲಃ'।'ಪುँಸ್ಕೋಕಿಲಃ'।(ಪುರುಷ ಕೋಕಿಲ) 'ಪುಮ್ + ಕೋಕಿಲಃ' ಎಂದಿದ್ದಾಗ, ಪ್ರಕೃತ ಸೂತ್ರದಿಂದ ಕೋಕಿಲಃ ಎಂಬ ಶಬ್ದದ 'ಕ್' ಕಾರೋತ್ತರವರ್ತಿ 'ಓ' ಕಾರವನ್ನು 'ಅಮ್' ಪ್ರತ್ಯಾಹರದ ವರ್ಣವೆಂದು ತಿಳಿದು ಮತ್ತು 'ಕ್' ಕಾರವನ್ನು 'ಖಯ್' ವರ್ಣವೆಂದು ತಿಳಿದು (ಕೋ ಎಂಬ ಶಬ್ದವು 'ಅಮ್' ಪರಕವಾದ 'ಖಯ್' ಎಂದು ತಿಳಿದು) 'ಪುಮ್' ಎಂಬಲ್ಲಿರುವ 'ಮ್' ಕಾರದ ಸ್ಥಾನದಲ್ಲಿ 'ರು'(ರ್) ಆದೇಶವು ಬಂದು, ಆ 'ರು'(ರ್)ವಿನ ಪೂರ್ವದಲ್ಲಿರುವ ನಿರನುನಾಸಿಕ–'ಉ'ಕಾರಕ್ಕೆ ಅನುನಾಸಿಕ ' ँ 'ಆದೇಶವು ಬಂದು 'ಪುँರ್+ಕೋಕಿಲಃ' ಎಂದಾಗುತ್ತದೆ.

ಇಲ್ಲಿ ಅನುನಾಸಿಕ ಆದೇಶವು ವೈಕಲ್ಪಿಕವಾಗಿರುವದರಿಂದ, ಅನುನಾಸಿಕ ಬಾರದ ಪಕ್ಷದಲ್ಲಿ **"ಅನುನಾಸಿಕಾತ್ ಪರೋಽನುಸ್ವಾರಃ(8.3.4)"** ಸೂತ್ರದಿಂದ 'ರೇಫ'(ರ್)ಕ್ಕೆ ಪೂರ್ವದಲ್ಲಿರುವ 'ಉ' ಕಾರದ ನಂತರ ಅನುಸ್ವಾರವು ಆಗಮವಾಗಿ ಬಂದು 'ಪುಂರ್+ಕೋಕಿಲಃ' ಎಂದಾಗಿದೆ. ಹೀಗೆ 'ಪುँರ್+ಕೋಕಿಲಃ', 'ಪುಂರ್+ಕೋಕಿಲಃ' ಎಂದು ಎರಡು ರೂಪಗಳಾಗಿವೆ. 'ಕೋಕಿಲಃ' ಎಂಬಲ್ಲಿರುವ 'ಕ್' ಕಾರವು 'ಖರ್' ವರ್ಣವಾಗಿರುವದರಿಂದ, ಮತ್ತು 'ಪುಮ್' ಎಂಬ ಶಬ್ದವು ಒಂದೇ ಪದವಾಗಿ ಇರುವುದರಿಂದ ಅದರ ಸ್ಥಾನದಲ್ಲಿ ಬಂದಂತಹ 'ರೇಫ'(ರ್)ವು ಪದಾನ್ತವಾಗುವುದರಿಂದ, "ಖರವಸಾನಯೋರ್ವಿಸರ್ಜನೀಯಃ(8.3.15)" ಸೂತ್ರದಿಂದ ವಿಸರ್ಗವು ಆದೇಶವಾಗಿ ಬಂದು 'ಪುँಃ + ಕೋಕಿಲಃ', 'ಪುಂಃ + ಕೋಕಿಲಃ' ಎಂದು ರೂಪಗಳಾಗಿರುತ್ತವೆ. ಈಗ "ಸಂ–ಪುಂ–ಕಾನಾಂ ಸೊ ವಕ್ತವ್ಯಃ" ವಾರ್ತಿಕದಿಂದ ಎರಡು ರೂಪಗಳಲ್ಲಿಯೂ ವಿಸರ್ಗದ ಸ್ಥಾನದಲ್ಲಿ 'ಸ್' ಕಾರವು ಆದೇಶವಾಗಿ ಬಂದು 'ಪುँಸ್+ಕೋಕಿಲಃ= ಪುँಸ್ಕೋಕಿಲಃ', 'ಪುಂಸ್+ಕೋಕಿಲಃ=ಪುಂಸ್ಕೋಕಿಲಃ' ಎಂದು ಎರಡು ಎರಡು ರೂಪಗಳಾಗಿವೆ.

**(ಪದಾನ್ತ 'ನ್' ಕಾರಕ್ಕೆ ರುತ್ವವನ್ನು ವಿಧಿಸುವ ಸೂತ್ರ).**

**ಸೂತ್ರ – 95. ನಶ್ಛವ್ಯಪ್ರಶಾನ್ (8.3.7)**

ವೃತ್ತಿ– ಅಂ–ಪರೇ ಛವಿ ನಾನ್ತಸ್ಯ ಪದಸ್ಯ ರುಃ ಸ್ಯಾತ್; ನ ತು ಪ್ರಶಾನ್–ಶಬ್ದಸ್ಯ।

ಪ.ಛೇ.– ನಃ, ಛವಿ, ಅಪ್ರಶಾನ್ ।

ಅ.ವ್ಯ.– "ಮತುವಸೋ ರು ಸಮ್ಬುದ್ಧೌ ಛನ್ದಸಿ(8–3–1)" ಸೂತ್ರದಿಂದ 'ರುಃ' ಎಂಬ ಪದವೂ "ಪುಮಃ ಖಯ್ಯಂಪರೇ(8.3.6)" ಸೂತ್ರದಿಂದ 'ಅಮ್ಪರೇ' ಎಂಬ ಪದವೂ ಅನುವೃತ್ತವಾಗುತ್ತವೆ. 'ಪದಸ್ಯ' ಎಂಬುದು ಅಧಿಕಾರ ಸೂತ್ರ.

ಅರ್ಥ– 'ಅಮ್' ಪ್ರತ್ಯಾಹಾರದ ವರ್ಣವನ್ನು ಪರದಲ್ಲುಳ್ಳ 'ಛವ್' ಪ್ರತ್ಯಾಹಾರ ವರ್ಣವು ಪರದಲ್ಲಿದ್ದಾಗ ಪದಾನ್ತವಾದ 'ನ್' ಕಾರಕ್ಕೆ 'ರು'(ರ್) ಆದೇಶವು ಬರುತ್ತದೆ. ಆದರೆ 'ಪ್ರಶಾನ್' ಶಬ್ದದ ಅನ್ತ್ಯ 'ನ್'ಕಾರಕ್ಕೆ ಬರುವದಿಲ್ಲ.

ಇಲ್ಲಿ ಪೂರ್ಣ 'ನ್' ಕಾರಾನ್ತ ಶಬ್ದಕ್ಕೆ 'ರು'(ರ್) ಬರಬೇಕಾಗಿದ್ದಾಗ "ಅಲೋऽನ್ತ್ಯಸ್ಯ(1.1.52)" ಸೂತ್ರದಿಂದ ಅನ್ತ್ಯ 'ನ್' ಕಾರಕ್ಕೆ 'ರು'(ರ್) ಆದೇಶವಾಗಿ ಬರುತ್ತದೆ.

ಉದಾ–'ಚಕ್ರಿನ್+ತ್ರಾಯಸ್ವ' ಎಂಬಲ್ಲಿ ಪದಾನ್ತವಾದ 'ನ್'ಕಾರಕ್ಕೆ 'ಛವ್' ಪ್ರತ್ಯಾಹಾರದ ವರ್ಣವಾದ 'ತ್' ಕಾರವು ಪರದಲ್ಲಿದೆ. ಅದರ ಪರದಲ್ಲಿ 'ಅಮ್' ಪ್ರತ್ಯಾಹಾರದ ವರ್ಣವಾದ 'ರೇಫ'(ರ್)ವು ಪರದಲ್ಲಿದೆ. ಆಗ 'ಸ್'ಕಾರಕ್ಕೆ 'ರುತ್ವ'(ರ್) ಬಂದು 'ಚಕ್ರಿರ್+ತ್ರಾಯಸ್ವ' ಎಂದಿದ್ದಾಗ, ಹಿಂದಿನ ಸೂತ್ರದಲ್ಲಿ ಬಂದ ಉದಾಹರಣೆ ಗಳಂತೆ ಅನುನಾಸಿಕ ಮತ್ತು ಅನುಸ್ವಾರಗಳು ಬಂದು 'ಚಕ್ರಿँರ್ + ತ್ರಾಯಸ್ವ' ಮತ್ತು 'ಚಕ್ರಿಂರ್+ತ್ರಾಯಸ್ವ' ಎಂದಾಗುತ್ತವೆ. ನಂತರ "ಖರವಸಾನಯೋರ್ವಿಸರ್ಜನೀಯಃ (8.3.15)" ಸೂತ್ರದಿಂದ 'ರೇಫ'(ರ್)ಕ್ಕೆ ವಿಸರ್ಗ ಬಂದು 'ಚಕ್ರಿँಃ+ತ್ರಾಯಸ್ವ' ಮತ್ತು 'ಚಕ್ರಿಂಃ+ತ್ರಾಯಸ್ವ' ಎಂದಾಗುತ್ತದೆ.

**(ವಿಸರ್ಗಕ್ಕೆ 'ಸ್' ಕಾರಾದೇಶವನ್ನು ವಿಧಿಸುವ ಸೂತ್ರ)**

**ಸೂತ್ರ – 96: ವಿಸರ್ಜನೀಯಸ್ಯ ಸಃ ( 8.3.34)**

ವೃತ್ತಿ–ಖರಿ ವಿಸರ್ಜನೀಯಸ್ಯ ಸಃ ಸ್ಯಾತ್ । ಚಕ್ರಿँಸ್ತ್ರಾಯಸ್ವ, ಚಕ್ರಿಂಸ್ತ್ರಾಯಸ್ವ । ಅಪ್ರಶಾನ್ ಕಿಮ್? ಪ್ರಶಾನ್ ತನೋತಿ। ಪದಾನ್ತಸ್ಯ ಇತಿ ಕಿಮ್? ಹನ್ತಿ ।

ಅ.ವ್ಯ.– "ಖರವಸಾನಯೋರ್ವಿಸರ್ಜನೀಯಃ(8.3.15)" ಸೂತ್ರದಿಂದ 'ಖರ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ–'ಖರ್' ವರ್ಣವು ಪರದಲ್ಲಿರುವಾಗ ವಿಸರ್ಜನೀಯ–ವಿಸರ್ಗದ ಸ್ಥಾನದಲ್ಲಿ 'ಸ್' ಕಾರವು ಆದೇಶವಾಗಿ ಬರುತ್ತದೆ.

ಉದಾ– ಚಕ್ರಿँಃ+ತ್ರಾಯಸ್ವ ಮತ್ತು ಚಕ್ರಿಂಃ+ತ್ರಾಯಸ್ವ ಎಂದಿದ್ದಾಗ, ಪ್ರಕೃತ ಸೂತ್ರದಿಂದ ವಿಸರ್ಗಕ್ಕೆ 'ಸ್' ಕಾರ ಆದೇಶವಾಗಿ ಬಂದು, 'ಚಕ್ರಿಸ್+ತ್ರಾಯಸ್ವ=ಚಕ್ರಿँಸ್ತ್ರಾಯಸ್ವ'

ಮತ್ತು 'ಚಕ್ರೀಂಸ್+ತ್ರಾಯಸ್ವ = ಚಕ್ರೀಂಸ್ತ್ರಾಯಸ್ವ' ಎಂದು ರೂಪಗಳಾಗುತ್ತವೆ.

'ಅಪ್ರಶಾನ್' ಎಂದು ಯಾಕೆ ಹೇಳಬೇಕು? ಎಂದರೆ, ಪ್ರಶಾನ್+ತನೋತಿ ಎಂಬಲ್ಲಿ "ನಶ್ಛವ್ಯಪ್ರಶಾನ್ (8.3.7)" ಸೂತ್ರದಿಂದ 'ನ್'ಕಾರಕ್ಕೆ 'ರುತ್ವ'(ರ್) ಬಂದು, ಪ್ರಶಾರ್+ತನೋತಿ ಎಂದಿದ್ದಾಗ, ಈ 'ರುತ್ವ' (ರ್)ಕ್ಕೆ ಪ್ರಕೃತ ಸೂತ್ರದಿಂದ ವಿಸರ್ಗ ಬಂದರೆ 'ಪ್ರಶಾಃ+ತನೋತಿ' ಎಂದಾಗಿ 'ಪ್ರಶಾಸ್ತನೋತಿ' ಎಂಬ ಅನಿಷ್ಟರೂಪ ವಾಗುತ್ತಿತ್ತು. ಆದ್ದರಿಂದ 'ಅಪ್ರಶಾನ್' ಎಂದು ಹೇಳಲಾಗಿದೆ. ಯಾಕೆಂದರೆ 'ತ' (ತ್+ಅ) ಕಾರವು 'ಅಮ್' ಪರಕವಾದ 'ಛವ್' ವರ್ಣವಾಗಿದೆ. ಇಂತಹ 'ಛವ್' ವರ್ಣವು ಪದಾನ್ತವಾದ 'ನ್' ಕಾರದ ನಂತರ ಇರುವದರಿಂದ, ಈ ಅನಿಷ್ಟರೂಪವಾಗಿದೆ. 'ಅಪ್ರಶಾನ್' ಎಂದು ಹೇಳಿರುವದರಿಂದ 'ಪ್ರಶಾನ್+ತನೋತಿ = ಪ್ರಶಾನ್ತನೋತಿ' ಎಂದೇ ರೂಪವಾಗುತ್ತದೆ.

ಹಿಂದಿನ ಸೂತ್ರದಲ್ಲಿ 'ಪದಸ್ಯ' ಎಂದು ಯಾಕೆ ಹೇಳಲಾಗಿದೆ? ಎಂಬ ಪ್ರಶ್ನೆಗೆ 'ಹನ್ತಿ' ಎಂದು ಉತ್ತರ ಕೊಡಲಾಗಿದೆ. ಯಾಕೆಂದರೆ 'ಪದಸ್ಯ' ಎಂದು ಹೇಳಿರುವದರಿಂದ ಪದಾನ್ತವಾದ 'ನ್' ಕಾರಕ್ಕೆ 'ರುತ್ವ'(ರ್)ವು ಬರುತ್ತದೆ. ಅಪದಾನ್ತಕ್ಕೆ ಬರುವದಿಲ್ಲ. ಪದಾನ್ತವೆಂದು ಹೇಳದಿದ್ದರೆ ಪದಾನ್ತ ಮತ್ತು ಅಪದಾನ್ತಗಳಾದ ಈ ಎರಡು ವಿಧವಾದ 'ನ್' ಕಾರಗಳಿಗೂ ರುತ್ವವು ಬರುತ್ತಿತ್ತು. ಹನ್+ತಿ ಎಂಬಲ್ಲಿ 'ಹನ್' ಎಂಬುದು ಅಪದಾನ್ತವಾಗಿದೆ. ಅಪದಾನ್ತ 'ನ್' ಕಾರಕ್ಕೆ 'ರುತ್ವ'ವು ಬಂದು ಹರ್+ತಿ ಎಂದಿದ್ದಾಗ,

ಆ ರು(ರ್ँ)ಗೆ ಪೂರ್ವಕ್ಕಿರುವ 'ಅ' ಕಾರಕ್ಕೆ ಅನುನಾಸಿಕ 'ಅँ' ಆದೇಶವಾಗಿ ಬಂದು ಹ್ಅ+ ರು(ರ್ँ) ಎಂದಾಗಿ, ನಂತರ 'ರು'ಗೆ ವಿಸರ್ಗ ಬಂದು, ವಿಸರ್ಗಕ್ಕೆ 'ಸ್' ಕಾರ ಬಂದು, 'ಹँಸ್ತಿ' ಎಂಬ ಅನಿಷ್ಟ ರೂಪವು ಬರುತ್ತಿತ್ತು. ಇದಕ್ಕಾಗಿ 'ಪದಸ್ಯ' ಎಂದು ಅನುವೃತ್ತಿ ಮಾಡಿಕೊಂಡಿರುವದರಿಂದ 'ಹನ್ತಿ' ಎಂಬ ರೂಪವೇ ಉಳಿಯುತ್ತದೆ.

### (ವೈಕಲ್ಪಿಕವಾಗಿ 'ರುತ್ವ'ವನ್ನು ವಿಧಿಸುವ ಸೂತ್ರ)

**ಸೂತ್ರ - ೨೭. ನೄನ್ ಪೇ ( ೮.೩.೧೦)**

ವೃತ್ತಿ- 'ನೄನ್' ಇತ್ಯಸ್ಯ ರುಃ ವಾ ಪೇ ।

ಅ.ವೃ.- "ಮತುವಸೋ ರು ಸಮ್ಬುದ್ಧೌ ಛನ್ದಸಿ(8-3-1)" ಸೂತ್ರದಿಂದ 'ರುಃ' ಪದವು ಮತ್ತು "ಉಭಯಥರ್ಕ್ಷು(8-3-8)" ಸೂತ್ರದಿಂದ 'ಉಭಯಥಾ'(ವಿಕಲ್ಪವಾಗಿ) ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ-'ಪ್'ಕಾರವು ಪರದಲ್ಲಿದ್ದಾಗ 'ನೄನ್' ಶಬ್ದದಲ್ಲಿರುವ 'ನ್' ವರ್ಣದ ಸ್ಥಾನದಲ್ಲಿ 'ರು'(ರ್) ಆದೇಶವು ವಿಕಲ್ಪವಾಗಿ ಬರುತ್ತದೆ.

ಉದಾ-'ನೄನ್+ಪಾಹಿ' ಎಂದಿರುವಾಗ ಒಂದನೇಯ ಪದದ ಕೊನೆಯಲ್ಲಿ 'ನ್'ಕಾರವಿದ್ದು ಪರದಲ್ಲಿ 'ಪ್'ಕಾರವಿರುವುದರಿಂದ ವಿಕಲ್ಪವಾಗಿ 'ಪದಾನ್ತ'ದ 'ನ್' ಕಾರಕ್ಕೆ 'ರು' ಬರುತ್ತದೆ.

"ಅಲೋಽನ್ತ್ಯಸ್ಯ(1-1-52)" ಎಂಬ ಪರಿಭಾಷಾ ಸೂತ್ರದಿಂದ 'ರು'(ರ್) ಎಂಬ ಆದೇಶವು ಪದಾನ್ತವಾದ 'ನ್' ಕಾರಕ್ಕೆ ಬಂದು 'ನೄ+ರು+ಪಾಹಿ' ಎಂದಿದ್ದಾಗ,

'ರ್'ಗೆ ಪೂರ್ವದಲ್ಲಿರುವ ನಿರನುನಾಸಿಕ 'ಋ'ಕಾರಕ್ಕೆ ಅನುನಾಸಿಕ 'ಋೂ'ಕಾರವು ಆದೇಶವಾಗಿ ಬಂದು 'ನೃ̃ರ್+ಪಾಹಿ' ಎಂದಾಗುತ್ತದೆ. 'ರು'ವಿನಲ್ಲಿ 'ರೇಫ' ಮಾತ್ರ ಉಳಿಯುವುದರಿಂದ ವಿಕಲ್ಪವಾಗಿ 'ನೃಂರ್+ಪಾಹಿ' ಎಂದಾಗುತ್ತದೆ. ಈ 'ರೇಫ'ಕ್ಕೆ ಬರುವ ಆದೇಶಗಳ ಬಗ್ಗೆ ಮುಂದಿನ ಸೂತ್ರದಲ್ಲಿ ವಿವರಿಸುತ್ತಾರೆ.

**(ಜಿಹ್ವಾಮೂಲೀಯ, ಉಪಧ್ಮಾನೀಯಗಳನ್ನು ವಿಧಿಸುವ ಸೂತ್ರ).**

**ಸೂತ್ರ – 98. ಕುಪ್ವೋ><ಕ><ಪೌ ಚ (8.3.37)**

ವೃತ್ತಿ– ಕವರ್ಗೇ ಪವರ್ಗೇ ಚ ಪರೇ ವಿಸರ್ಗಸ್ಯ >< ಕ><ಪೌ ಸ್ತಃ, ಚಾತ್ ವಿಸರ್ಗಃ । ನೃ<>ಪಾಹಿ । ನೃಂ<>ಪಾಹಿ। ನೃಃ ಪಾಹಿ। ನೃಂಃ ಪಾಹಿ । ನೄನ್ ಪಾಹಿ ।

ಪ.ಛೇ.– ಕುಪ್ವೋಃ ><ಕ><ಪೌ, ಚ ।

ಅ.ವ್ಯ.– "ವಿಸರ್ಜನೀಯಸ್ಯ ಸಃ (8.3.34)" ಸೂತ್ರದಿಂದ 'ವಿಸರ್ಜನೀಯಸ್ಯ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– 'ಕ'ವರ್ಗ ಮತ್ತು 'ಪ'ವರ್ಗ ಪರದಲ್ಲಿದ್ದಾಗ 'ವಿಸರ್ಜನೀಯ' ರೂಪವಾದ 'ವಿಸರ್ಗ'ದ ಸ್ಥಾನದಲ್ಲಿ ಕ್ರಮವಾಗಿ 'ಜಿಹ್ವಾಮೂಲೀಯ' ಮತ್ತು 'ಉಪಧ್ಮಾನೀಯ'– ವಿಸರ್ಗಗಳು ಆದೇಶವಾಗಿ ಬರುತ್ತವೆ. ಸೂತ್ರದಲ್ಲಿರುವ 'ಚ'ಕಾರದಿಂದ ವಿಸರ್ಗವು ಅವುಗಳಿಗೆ ಬದಲಾಗಿ ಆದೇಶವಾಗಿ ಬರುತ್ತದೆ.

'ಜಿಹ್ವಾಮೂಲೀಯ'ವನ್ನು '><' ಎಂಬ ಗುರುತಿನಿಂದ ಮತ್ತು 'ಉಪಧ್ಮಾನೀಯ'ವನ್ನು '<>' ಎಂಬ ಗುರುತಿನಿಂದ ಬರೆಯುತ್ತಾರೆ. 'ಕ'ವರ್ಗದ ಪೂರ್ವದಲ್ಲಿರುವ ವಿಸರ್ಗಕ್ಕೆ 'ಜಿಹ್ವಾಮೂಲೀಯ'–ವಿಸರ್ಗವೆಂದು 'ಪ'ವರ್ಗದ ಪೂರ್ವದಲ್ಲಿರುವ ವಿಸರ್ಗಕ್ಕೆ 'ಉಪಧ್ಮಾನೀಯ'–ವಿಸರ್ಗವೆಂದು ಕರೆಯುತ್ತಾರೆ. ಇಲ್ಲಿ 'ಕ'ವರ್ಗ, 'ಪ' ವರ್ಗಗಳೆಂದರೆ ವರ್ಗೀಯ ಎಲ್ಲ ವರ್ಣಗಳನ್ನು ಸ್ವೀಕರಿಸಬಾರದು. 'ಕ್', 'ಖ್' ಮತ್ತು 'ಪ್', 'ಫ್' ವರ್ಣಗಳನ್ನು ಮಾತ್ರ ಗ್ರಹಿಸಬೇಕು.

ಉದಾ– 'ನೃ̃+ಪಾಹಿ'; 'ನೃಂ+ಪಾಹಿ' ಎಂದಿದ್ದಾಗ 'ಅನುಸ್ವಾರ' ಮತ್ತು 'ವಿಸರ್ಗ'ಗಳು ವಿಕಲ್ಪವಾಗಿ ಬರುವುದರಿಂದ 'ನೃ ಪಾಹಿ', 'ನೃಃ ಪಾಹಿ'; 'ನೃಂ ಪಾಹಿ'; 'ನೃಂಃ ಪಾಹಿ', ನೄನ್+ಪಾಹಿ (ಮನುಷ್ಯರನ್ನು ರಕ್ಷಿಸಿರಿ). ಎಂಬ ರೂಪಗಳಾಗುತ್ತವೆ. ಮೊಟ್ಟಮೊದಲಿಗೆ 'ರು' (ರ್)ಗೆ ವಿಸರ್ಗ ಬಂದಿರುವುದು "ಖರವಸಾನಯೋರ್ವಿಸರ್ಜನೀಯಃ(8.3.15)" ಸೂತ್ರದಿಂದ. ಸೂತ್ರದಲ್ಲಿ 'ಚ್'ಕಾರ ಹೇಳಿರುವುದರಿಂದ 'ಜಿಹ್ವಾಮೂಲೀಯ' ಮತ್ತು 'ಉಪಧ್ಮಾನೀಯ'ಗಳು ವಿಕಲ್ಪವಾಗಿ ಬಂದಿವೆ. 'ರುತ್ವ' ಬಂದ ಮೇಲೆ 'ರುತ್ವ'ಕ್ಕೆ ಪೂರ್ವದಲ್ಲಿರುವ 'ಸ್ವರ'(ಋ)ಕ್ಕೆ ("ಅತ್ರಾನುನಾಸಿಕಃ ಪೂರ್ವಸ್ಯ ತು ವಾ(8–3–2)") ಸೂತ್ರದಿಂದ 'ಅನುನಾಸಿಕ' (ಋೂ)ಕಾರವು ಆದೇಶವಾಗಿ ಬಂದಿದೆ.

'ಅನುನಾಸಿಕ'(ಋೂ)ಕಾರವು ಬಾರದ ಪಕ್ಷದಲ್ಲಿ 'ರು'(ರ್)ಗೆ ಪೂರ್ವದಲ್ಲಿರುವ 'ನಿರನುನಾಸಿಕ'(ಋ)ಕಾರದ ಪರದಲ್ಲಿ 'ಅನುಸ್ವಾರ'ವು ಆಗಮವಾಗಿ ಬಂದಿದೆ. 'ಅನುಸ್ವಾರ'ವು ಪ್ರತ್ಯೇಕವಾಗಿ ಇಲ್ಲದಿರುವುದರಿಂದ ಅದನ್ನು ಪೂರ್ವದಲ್ಲಿರುವ ಸ್ವರದ ಮೇಲೆ ˘ ಬರೆಯುತ್ತೇವೆ.

ಪೂರ್ವ ಸೂತ್ರದಲ್ಲಿ 'ರುತ್ವ'(ರ್)ವು ವಿಕಲ್ಪವಾಗಿ ವಿಧಿಸಿರುವುದರಿಂದ 'ನೄನ್ ಪಾಹಿ' ಎಂದು ಸನ್ಧಿ ಆಗದ ಒಂದು ರೂಪವು ಇರುತ್ತದೆ. ಹೀಗಾಗಿ ಐದು ರೂಪಗಳು ಇಲ್ಲಿರುತ್ತವೆ. (ನೄ ಪಾಹಿ, ನೄಃ ಪಾಹಿ, ನೄಂ ಪಾಹಿ, ನೄಂಃ ಪಾಹಿ, ನೄನ್ ಪಾಹಿ).

**(ಆಮ್ರೇಡಿತ ಸಂಜ್ಞೆಯನ್ನು ವಿಧಿಸುವ ಸೂತ್ರ.)**

**ಸೂತ್ರ - 99. ತಸ್ಯ ಪರಮಾಮ್ರೇಡಿತಮ್ ( 8.1.2)**

ವೃತ್ತಿ- ದ್ವಿರುಕ್ತಸ್ಯ ಪರಂ ಆಮ್ರೇಡಿತಂ ಸ್ಯಾತ್ ।

ಪ. ಛೇ. - ತಸ್ಯ, ಪರಂ, ಆಮ್ರೇಡಿತಮ್ ।

ಅ.ವೃ.-"ಸರ್ವಸ್ಯ ದ್ವೇ(8-1-1)" ಸೂತ್ರದಲ್ಲಿ 'ದ್ವೇ' ಎಂಬ ಶಬ್ದವಿದೆ. 'ತಸ್ಯ' ಎಂಬುದು ಆ 'ದ್ವೇ' ಎಂಬ ಪದದ ಅರ್ಥವನ್ನು ಸೂಚಿಸುತ್ತದೆ.

ಅರ್ಥ- ಒಂದು ಶಬ್ದವನ್ನು ಎರಡು ಸಲ ಉಚ್ಚಾರಣೆ ಮಾಡಿದಾಗ ಎರಡನೇಯ ಪದಕ್ಕೆ 'ಆಮ್ರೇಡಿತ' ಎಂಬ ಸಂಜ್ಞೆಯು ಬರುತ್ತದೆ.

**(ರುತ್ವವನ್ನು ವಿಧಿಸುವ ಸೂತ್ರ).**

**ಸೂತ್ರ - 100. ಕಾನಾಮ್ರೇಡಿತೇ (8.3.12)**

ವೃತ್ತಿ-ಕಾನ್-'ನ' ಕಾರಸ್ಯ ರುಃ ಸ್ಯಾತ್ ಆಮ್ರೇಡಿತೇ । ಕಾँಸ್ಕಾನ್ । ಕಾಂಸ್ಕಾನ್।

ಪ.ಛೇ. - ಕಾನ್, ಆಮ್ರೇಡಿತೇ ।

ಅ.ವೃ.-"ಮತುವಸೋ ರುಃ ಸಮ್ಬುದ್ಧೌ ಛನ್ದಸಿ(8-3-1)" ಸೂತ್ರದಿಂದ 'ರುಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- 'ಆಮ್ರೇಡಿತ'ವು ಪರದಲ್ಲಿದ್ದಾಗ ಪೂರ್ವದಲ್ಲಿರುವ 'ಕಾನ್' ಶಬ್ದದ 'ನ್' ಕಾರಕ್ಕೆ 'ರು' ಎಂಬುದು ಆದೇಶವಾಗಿ ಬರುತ್ತದೆ.

"ಅಲೋಽನ್ತ್ಯಸ್ಯ(1-1-52)" ಸೂತ್ರದಿಂದ ಮೊದಲನೇಯ 'ಕಾನ್' ಶಬ್ದದ ಅಂತ್ಯವಾದ 'ನ್' ಕಾರಕ್ಕೆ 'ರು' ಆದೇಶವಾಗಿ ಬರುತ್ತದೆ. ಹಿಂದಿನ ಉದಾಹರಣೆಗಳಲ್ಲಿ ಬಂದ ಪ್ರಕ್ರಿಯೆಯಂತೆ ಇಲ್ಲಿಯೂ 'ರು'(ರ್) ಬಂದ ಮೇಲೆ ಅದರ ಪೂರ್ವದಲ್ಲಿರುವ ನಿರನುನಾಸಿಕ ಸ್ವರಕ್ಕೆ ಅದೇ ವರ್ಣದ ಅನುನಾಸಿಕ ಸ್ವರವು ಆದೇಶವಾಗಿ ಬರುತ್ತದೆ.

ವಿಕಲ್ಪವಾಗಿ-ಅನುನಾಸಿಕ ಬಾರದ ಪಕ್ಷದಲ್ಲಿ 'ರು'(ರ್)ವಿಗೆ ಪೂರ್ವದಲ್ಲಿರುವ ನಿರನುನಾಸಿಕ ಸ್ವರಕ್ಕೆ ಅನುಸ್ವಾರವು ಆಗಮವಾಗಿ ಬರುತ್ತದೆ.

ಉದಾಹರಣೆ–ಕಾँಸ್ಕಾನ್, 'ಕಾಂಸ್ಕಾನ್'। 'ಕಾನ್+ಕಾನ್' ಎಂಬ ಎರಡು ಶಬ್ದಗಳಲ್ಲಿ ಎರಡನೇಯ ಶಬ್ದಕ್ಕೆ 'ಆಮ್ರೇಡಿತ' ಎಂದು ಹೆಸರು. 'ಆಮ್ರೇಡಿತ'ವು ಪರದಲ್ಲಿದ್ದಾಗ ಪೂರ್ವದಲ್ಲಿರುವ 'ಕಾನ್' ಶಬ್ದದ 'ನ್' ಕಾರಕ್ಕೆ 'ರುತ್ವ'(ರ್) ವು ಬಂದು 'ಕಾರ್ + ಕಾನ್' ಎಂದಿದ್ದಾಗ 'ರು'(ರ್)ವಿಗೆ ಪೂರ್ವದಲ್ಲಿರುವ ನಿರನುನಾಸಿಕ 'ಆ'ಕಾರಕ್ಕೆ ಅನುನಾಸಿಕ 'ಆ ँ' ಕಾರವು ಆದೇಶವಾಗಿ ಬಂದು 'ಕಾँರ್+ಕಾನ್' ಎಂದಾಗುತ್ತದೆ. ವೈಕಲ್ಪಿಕವಾಗಿ ನಿರನುನಾಸಿಕ 'ಆ' ಕಾರದ ಪರದಲ್ಲಿ ಅನುಸ್ವಾರವು ಆದೇಶವಾಗಿ 'ಕಾಂರ್+ಕಾನ್' ಎಂದಾಗುತ್ತದೆ. ಎರಡು ಉದಾಹರಣೆಗಳಲ್ಲೂ 'ರೇಫ'ಕ್ಕೆ "ಖರವಸಾನಯೋರ್ವಿಸರ್ಜನೀಯಃ(8–3–15)" ಸೂತ್ರದಿಂದ ವಿಸರ್ಗವು ಬಂದು 'ಕಾँಃ ಕಾನ್, ಕಾಂಃ ಕಾನ್' ಎಂದಾಗುತ್ತವೆ. "ಸಂಪುಂಕಾನಾಂ ಸೋ ವಕ್ತವ್ಯಃ" ವಾರ್ತಿಕದಿಂದ ವಿಸರ್ಗಕ್ಕೆ 'ಸ್'ಕಾರವು ಬಂದು 'ಕಾँಸ್ಕಾನ್', 'ಕಾಂಸ್ಕಾನ್' ಎಂಬ ರೂಪಗಳು ಸಿದ್ಧವಾಗುತ್ತವೆ.

**(ತುಗಾಗಮವನ್ನು ವಿಧಿಸುವ ಸೂತ್ರ)**

**ಸೂತ್ರ – 101. ಛೇ ಚ (6.1.73)**

ವೃತ್ತಿ– ಹ್ರಸ್ವಸ್ಯ ಛೇ 'ತುಕ್' । ಶಿವಚ್ಛಾಯಾ ।

**॥ ಇತಿ ಹಲ್–ಸನ್ಧಿ(3) ಪ್ರಕರಣಮ್ ॥**

ಅ.ವ್ಯ.–"ಹ್ರಸ್ವಸ್ಯ ಪಿತಿ ಕೃತಿ ತುಕ್(6–1–71)" ಸೂತ್ರದಿಂದ 'ಹ್ರಸ್ವಸ್ಯ' ಮತ್ತು 'ತುಕ್' ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ–'ಛ್'ಕಾರವು ಪರದಲ್ಲಿದ್ದಾಗ ಪೂರ್ವದಲ್ಲಿರುವ 'ಹ್ರಸ್ವ' ಸ್ವರಕ್ಕೆ 'ತುಕ್' ಆಗಮವು ಬರುತ್ತದೆ. ಈ 'ತುಕ್' ಆಗಮವು 'ಕಿತ್' ಆಗಿರುವುದರಿಂದ ಪೂರ್ವ ಶಬ್ದದ ಅನ್ತಾವಯವವಾಗಿ ಬರುತ್ತದೆ.

ಉದಾಹರಣೆ– 'ಶಿವ+ಛಾಯಾ' ಎಂದಿರುವಾಗ ಇಲ್ಲಿ ಪೂರ್ವಪದದಲ್ಲಿ ಹ್ರಸ್ವ 'ಅ' ಕಾರವು ಇದ್ದು, ಇಲ್ಲಿ ಪರದಲ್ಲಿ 'ಛ್'ಕಾರವಿದೆ. ಪ್ರಕೃತ ಸೂತ್ರದಿಂದ 'ತುಕ್' ಆಗಮವು ಪೂರ್ವದಲ್ಲಿರುವ 'ಅ'ಕಾರದ ನಂತರ(ಅನ್ತಾವಯವವಾಗಿ) ಬರುತ್ತದೆ. ಹೀಗಾಗಿ 'ಶಿವತ್+ಛಾಯಾ' ಎಂದಾಗುತ್ತದೆ. ಇಲ್ಲಿ ಪರದಲ್ಲಿರುವ 'ಚ' ವರ್ಗದ 'ಛ್' ಕಾರದ ಸಂಬಂಧವು 'ತ್'(ತವರ್ಗ)ಕಾರದ ಜೊತೆಗೆ ಇರುವುದರಿಂದ (ಶ್ಚುತ್ವ ಸಂಧಿಗೆ ಅವಕಾಶವಿರುವುದರಿಂದ) 'ತ್' ಕಾರಕ್ಕೆ 'ಚ್'ಕಾರವು ಆದೇಶವಾಗಿ ಬಂದು 'ಶಿವಚ್+ಛಾಯಾ' ಎಂದಾಗಿ 'ಶಿವಚ್ಛಾಯಾ' ಎಂಬ ರೂಪವು ಸಿದ್ಧವಾಗಿದೆ. ಇಲ್ಲಿ 'ಶಿವ' ಎಂಬಲ್ಲಿರುವ 'ವ' ಕಾರೋತ್ತರವರ್ತಿ 'ಅ'ಕಾರದ ನಂತರ 'ಛ್'ಕಾರವಿರುವುದರಿಂದ ಪ್ರಕೃತ ಸೂತ್ರದಿಂದ ಈ ರೂಪವು ಬಂದಿದೆ.

**(ವೈಕಲ್ಪಿಕವಾಗಿ ತುಕ್ ಆಗಮವನ್ನು ವಿಧಿಸುವ ಸೂತ್ರ).**

**ಸೂತ್ರ – 102. ಪದಾನ್ತಾದ್ವಾ (6.1.76)**

ವೃತ್ತಿ–ದೀರ್ಘಾತ್ ಪದಾನ್ತಾತ್ ಛೇ ತುಕ್ ವಾ । ಲಕ್ಷ್ಮೀಚ್ಛಾಯಾ । ಲಕ್ಷ್ಮೀಛಾಯಾ।

ಪ. ಛೇ. – ಪದಾನ್ತಾತ್, ವಾ ।

ಅ.ವೃ. – "ದೀರ್ಘಾತ್(6–1–75)" ಸೂತ್ರದಿಂದ 'ದೀರ್ಘಾತ್' ಎಂಬ ಪದವು ಮತ್ತು "ಹ್ರಸ್ವಸ್ಯ ಪಿತಿ ಕೃತಿ ತುಕ್(6–1–71)" ಸೂತ್ರದಿಂದ 'ಹ್ರಸ್ವಸ್ಯ' ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ – 'ಪದಾನ್ತ'ದಲ್ಲಿ 'ದೀರ್ಘ' ಸ್ವರವಿದ್ದು ತದನಂತರ 'ಛ್'ಕಾರವಿದ್ದರೆ 'ತುಕ್' ಆಗಮವು ವಿಕಲ್ಪವಾಗಿ ಬರುತ್ತದೆ.

ಉದಾಹರಣೆ – 'ಲಕ್ಷ್ಮೀಚ್ಛಾಯಾ','ಲಕ್ಷ್ಮೀಛಾಯಾ' – 'ಲಕ್ಷ್ಮೀ+ಛಾಯಾ' ಎಂದಿದ್ದಾಗ, ಪೂರ್ವಪದದ ಕೊನೆಯಲ್ಲಿ ದೀರ್ಘ ಸ್ವರವಾದ 'ಈ'ಕಾರವಿದ್ದು, ತದನಂತರ ಪರದಲ್ಲಿ 'ಛ್'ಕಾರವು ಇರುವುದರಿಂದ, ಪ್ರಕೃತ ಸೂತ್ರದಿಂದ 'ತುಕ್' ಆಗಮವು ಬಂದು ಲಕ್ಷ್ಮೀತ್ (ತುಕ್) + ಛಾಯಾ ಎಂದಾಗಿ 'ಶ್ಚುತ್ವ' ಸಂಧಿಯಿಂದ 'ಲಕ್ಷ್ಮೀಚ್ + ಛಾಯಾ'(ಲಕ್ಷ್ಮೀಚ್ಛಾಯಾ) ಎಂದಾಗುತ್ತದೆ. ಇಲ್ಲಿ 'ತುಕ್' ಆಗಮವು 'ಕಿತ್' ಆಗಿರುವುದರಿಂದ ಪೂರ್ವಪದದ ಕೊನೆಯಲ್ಲಿರುವ 'ಈ'ಕಾರದ ನಂತರ ಅನ್ತಾವಯವವಾಗಿ ಬಂದಿದೆ. ಇದರ ವೈಕಲ್ಪಿಕ ರೂಪವು 'ಲಕ್ಷ್ಮೀ ಛಾಯಾ' ಎಂದಿರುತ್ತದೆ. ಕಾರಣ ಇದು 'ತುಕ್' ಆಗಮ ಬಾರದ ಪಕ್ಷವಾಗಿದೆ.

**ಇಲ್ಲಿ ಹಲ್-ಸನ್ಧಿ(3) ಪ್ರಕರಣವು ಮುಗಿಯಿತು.**

# 4. ವಿಸರ್ಗ-ಸನ್ಧಿ-ಪ್ರಕರಣಮ್

(ಸೂತ್ರ 62-102 ರವರೆಗೆ)

(ವಿಸರ್ಗಕ್ಕೆ 'ಸ್'ಕಾರವನ್ನು ಆದೇಶವಾಗಿ ವಿಧಿಸುವ ಸೂತ್ರ)

**ಸೂತ್ರ - 103. ವಿಸರ್ಜನೀಯಸ್ಯ ಸಃ। (8.3.34)**

ವೃತ್ತಿ-ಖರಿ ವಿಸರ್ಜನೀಯಸ್ಯ ಸಃ ಸ್ಯಾತ್। ವಿಷ್ಣುಸ್ತ್ರಾತಾ।

ಇದೇ ಸೂತ್ರವು ಹಲ್ ಸನ್ಧಿ ಪ್ರಕರಣದಲ್ಲಿ (96ನೇಯ ಸೂತ್ರವಾಗಿ) ಹೇಳಲಾಗಿದೆ.ಇಲ್ಲಿ ಪ್ರಸಂಗಾನುಸರವಾಗಿ ಈ ಪ್ರಕರಣದಲ್ಲಿ ಮತ್ತೆ ಹೇಳಲಾಗಿದೆ.

ಅ.ವ್ಯ.- "ಖರವಸಾನಯೋರ್ವಿಸರ್ಜನೀಯಃ (8-3-15)" ಸೂತ್ರದಿಂದ ಆ ಸೂತ್ರದ ಏಕದೇಶವಾದ 'ಖರಿ' ಎಂಬ ಪದವು ಅನುವೃತ್ತವಾಗಿದೆ.

ಅರ್ಥ- 'ಖರ್' ವರ್ಣವು ಪರದಲ್ಲಿದ್ದಾಗ ಪೂರ್ವದಲ್ಲಿರುವ ವಿಸರ್ಜನೀಯವಾದ ವಿಸರ್ಗದ ಸ್ಥಾನದಲ್ಲಿ 'ಸ್' ಕಾರವು ಆದೇಶವಾಗಿ ಬರುತ್ತದೆ. 'ಖರ್' ಪ್ರತ್ಯಾಹಾರದಲ್ಲಿ 13 ವರ್ಣಗಳಿವೆ. ಕ್-ಖ್;ಚ್-ಛ್;ಟ್-ಠ್;ತ್-ಥ್;ಪ್-ಫ್ ಎಂಬ ವರ್ಗೀಯ ಪ್ರಥಮ, ದ್ವಿತೀಯ (10) ಅಕ್ಷರಗಳು ಹಾಗೂ ಅವರ್ಗೀಯ ಶ್,ಷ್,ಸ್ (3) ವರ್ಣಗಳು ಪರದಲ್ಲಿದ್ದಾಗ ಪೂರ್ವದಲ್ಲಿರುವ ವಿಸರ್ಗಕ್ಕೆ 'ಸ್' ಕಾರವು ಆದೇಶವಾಗಿ ಬರುತ್ತದೆ. ಈ ವಿಸರ್ಗವು 'ಕ್','ಖ್'ವರ್ಣಗಳ ಪೂರ್ವದಲ್ಲಿದ್ದಾಗ, ವೈಕಲ್ಪಿಕವಾಗಿ ಜಿಹ್ವಾಮೂಲೀಯವು ಆದೇಶವಾಗಿ ಬರುತ್ತದೆ. ಹಾಗೆಯೇ 'ಪ್-ಫ್' ವರ್ಣಗಳ ಪೂರ್ವದಲ್ಲಿ ಬಂದರೆ, ಆ ವಿಸರ್ಗದ ಸ್ಥಾನದಲ್ಲಿ ವಿಕಲ್ಪವಾಗಿ ಉಪಧ್ಮಾನೀಯವು ಆದೇಶವಾಗಿ ಬರುತ್ತದೆ. ವಿಸರ್ಗದ ಪರದಲ್ಲಿ 'ಚ್' ಮತ್ತು 'ಛ್' ವರ್ಣವಿದ್ದಾಗ ವಿಸರ್ಗದ ಸ್ಥಾನದಲ್ಲಿ 'ಸ್' ಕಾರವು ಆದೇಶವಾಗಿ ಬರುತ್ತದೆ. ಹಾಗೆಯೇ 'ಸ್'ಕಾರದ ನಂತರ 'ಟ್- ಠ್' ವರ್ಣಗಳಿದ್ದರೆ "ಷ್ಟುನಾ ಷ್ಟುಃ (8.4.41)" ಸೂತ್ರದಿಂದ 'ಷ್' ಕಾರವು ಆದೇಶವಾಗಿ ಬರುತ್ತದೆ. 'ತ್'-ಥ್' ವರ್ಣಗಳು ಪರದಲ್ಲಿದ್ದಾಗ 'ಸ್' ಕಾರವು ಹಾಗೆಯೇ ಉಳಿಯುತ್ತದೆ.

ಉದಾ-"ವಿಷ್ಣುಸ್ತ್ರಾತಾ"। (ವಿಷ್ಣುವು ರಕ್ಷಕನಾಗಿದ್ದಾನೆ). 'ವಿಷ್ಣುಃ+ತ್ರಾತಾ' ಎಂಬಲ್ಲಿ ವಿಸರ್ಗದ ಪರದಲ್ಲಿರುವ 'ತ್' ಕಾರವು 'ಖರ್' ವರ್ಣವಾಗಿದೆ. ಪ್ರಕೃತ ಸೂತ್ರದಿಂದ ಆ ವಿಸರ್ಗದ ಸ್ಥಾನದಲ್ಲಿ 'ಸ್' ಕಾರವು ಆದೇಶವಾಗಿ ಬಂದು ಈ ರೂಪವು ಸಿದ್ಧವಾಗಿದೆ.

(ವೈಕಲ್ಪಿಕವಾಗಿ ವಿಸರ್ಗವನ್ನು ಆದೇಶವಾಗಿ ವಿಧಿಸುವ ಸೂತ್ರ)

**ಸೂತ್ರ 104. ವಾ ಶರಿ। (8.3.36)**

ವೃತ್ತಿ-ಶರಿ ವಿಸರ್ಗಸ್ಯ ವಿಸರ್ಗೋ ವಾ ಸ್ಯಾತ್। ಹರಿಃಶೇತೇ, ಹರಿಶ್ಶೇತೇ।

ಅ.ವ್ಯ.- "ಶರ್ ಪರೇ ವಿಸರ್ಜನೀಯಃ (8-3-35)" ಸೂತ್ರದಿಂದ 'ವಿಸರ್ಜನೀಯಃ' ಎಂಬ ಪದವು ಮತ್ತು "ವಿಸರ್ಜನೀಯಸ್ಯ ಸಃ (8-3-34)" ಸೂತ್ರದಿಂದ 'ವಿಸರ್ಜನೀಯಸ್ಯ' ಎಂಬ ಪದವು ಅನುವೃತ್ತವಾಗುತ್ತವೆ.

ಅರ್ಥ - 'ಶರ್' ವರ್ಣವು ಪರದಲ್ಲಿದ್ದಾಗ ವಿಸರ್ಗದ ಸ್ಥಾನದಲ್ಲಿ ವಿಕಲ್ಪದಿಂದ ವಿಸರ್ಗವು ಆದೇಶವಾಗಿ ಬರುತ್ತದೆ.

'ಶರ್' ಪ್ರತ್ಯಾಹಾರವು 'ಖರ್' ಪ್ರತ್ಯಾಹಾರದಲ್ಲಿ ಸೇರಿಕೊಂಡಿದೆ. 'ಶರ್' ಪ್ರತ್ಯಾಹಾರವು ಪರದಲಿದ್ದಾಗ "ವಿಸರ್ಜನೀಯಸ್ಯ ಸಃ(8-3-34)" ಸೂತ್ರದಿಂದ ನಿತ್ಯವಾಗಿ ವಿಸರ್ಗದ ಸ್ಥಾನದಲ್ಲಿ 'ಸ್' ಕಾರವು ಆದೇಶವಾಗಿ ಬರುತ್ತಿತ್ತು.

ಇದಕ್ಕೆ ಅಪವಾದವಾಗಿ ಪ್ರಕೃತ ಸೂತ್ರವು ವಿಸರ್ಗದ ಸ್ಥಾನದಲ್ಲಿ 'ಸ್' ಕಾರವನ್ನು ವಿಕಲ್ಪವಾಗಿ ಆದೇಶವಾಗಿ ವಿಧಿಸುತ್ತದೆ. ಒಂದು ಪಕ್ಷದಲ್ಲಿ ವಿಸರ್ಗ, ಮತ್ತೊಂದು ಪಕ್ಷದಲ್ಲಿ 'ಸ್'ಕಾರವನ್ನು ವಿಧಿಸಿರುವುದರಿಂದ ಪ್ರಕೃತ ಸೂತ್ರವು ಅಪವಾದವಾಗಿಯೂ ಹಾಗೂ ವೈಕಲ್ಪಿವಾಗಿಯೂ ಇದೆ.

ಉದಾ- "ಹರಿಃ ಶೇತೇ"; "ಹರಿಶ್ ಶೇತೇ"(ಹರಿಯು ಮಲಗಿದ್ದಾನೆ.)ಹರಿಃ + ಶೇತೇ -ವಿಸರ್ಗದ ಸ್ಥಾನದಲ್ಲಿ "ವಿಸರ್ಜನೀಯಸ್ಯ ಸಃ(8-3-34)" ಸೂತ್ರದಿಂದ ನಿತ್ಯವಾಗಿ 'ಸ್' ಕಾರವು ಆದೇಶವಾಗಿ ಬಂದಿರುತ್ತದೆ. ಶೇತೇ ಎಂಬಲ್ಲಿರುವ 'ಶ್' ಕಾರವು 'ಶರ್' ವರ್ಣವಾಗಿದ್ದು ಅದು ಪರದಲ್ಲಿವುದರಿಂದ ಪ್ರಕೃತ ಸೂತ್ರದಿಂದ ಬಾಧಿತವಾಗಿ "ವಾ ಶರಿ(8-3-36)" ಸೂತ್ರದಿಂದ ವಿಕಲ್ಪವಾಗಿ ವಿಸರ್ಗವು ಆದೇಶವಾಗಿ ಬಂದು "ಹರಿಃ ಶೇತೇ" ಎಂದಾಗಿದೆ.'ಸ್'ಕಾರಾದೇಶ ಬಂದ ಪಕ್ಷದಲ್ಲಿ ಹರಿಸ್+ಶೇತೇ ಎಂದಿದ್ದಾಗ, 'ಸ್' ಕಾರ,' 'ಶ್' ಕಾರಗಳು ಸೇರಿರುವುದರಿಂದ "ಶ್ಚುತ್ವ" ಸಂಧಿಯಿಂದ 'ಸ್' ಕಾರದ ಸ್ಥಾನದಲ್ಲಿ 'ಶ್' ಕಾರವು ಆದೇಶವಾಗಿ ಬಂದು "ಹರಿಶ್ ಶೇತೇ" ಎಂಬ ರೂಪವು; ಈ ರೀತಿಯಾಗಿ ಮೇಲಿನ ಎರಡು ರೂಪಗಳು ಸಿದ್ಧವಾಗಿವೆ.

**('ಸ್' ಕಾರಕ್ಕೆ ರುತ್ವವನ್ನು ವಿಧಿಸುವ ಸೂತ್ರ)**

**ಸೂತ್ರ 105. ಸ-ಸಜುಷೋಃ ರುಃ। (8.2.66)**

ವೃತ್ತಿ-ಪದಾನ್ತಸ್ಯ ಸಸ್ಯ ಸಜುಷಶ್ಚ ರುಃ ಸ್ಯಾತ್।

ಪ.ಛೇ.- ಸ-ಸಜುಷೋಃ ರುಃ।

ಅ.ವೃ.- ಈ ಸೂತ್ರಕ್ಕೆ "ಪದಸ್ಯ(8-1-16)" ಎಂಬುದು ಅಧಿಕಾರ ಸೂತ್ರವಾಗಿದೆ.

ಅರ್ಥ- ಪದಾನ್ತವಾದ 'ಸ್' ಕಾರ ಮತ್ತು 'ಸಜುಷ್' ಶಬ್ದದ 'ಷ್'ಕಾರಗಳ ಸ್ಥಾನದಲ್ಲಿ 'ರು' ಎಂಬುದು ಆದೇಶವಾಗಿ ಬರುತ್ತದೆ.

"ಅಲೋಽನ್ತ್ಯಸ್ಯ(1-1-52)" ಸೂತ್ರದಿಂದ ಪದದ ಅನ್ತ್ಯ ವರ್ಣವಾದ 'ಸ್'ಕಾರದ ಸ್ಥಾನದಲ್ಲಿ ಮತ್ತು 'ಸಜುಷ್' ಶಬ್ದದ 'ಷ್' ಕಾರದ ಸ್ಥಾನದಲ್ಲಿ 'ರು' ಆದೇಶವು ವಿಧಿಸಲಾಗಿದೆ. 'ಸಜುಷ್'ಶಬ್ದದ ಕೊನೆಯಲ್ಲಿ 'ಸ್' ಕಾರವು ಇಲ್ಲದೇ ಇರುವುದರಿಂದ 'ರುತ್ವ' ವು ಬರುವುದಕ್ಕೆ ಅವಕಾಶವಿರುವುದಿಲ್ಲ. ಆದುದರಿಂದ 'ಸಜುಷ್' ಶಬ್ದವನ್ನು ಪ್ರತ್ಯೇಕವಾಗಿ ಈ ಸೂತ್ರದಲ್ಲಿ ಹೇಳಲಾಗಿದೆ.

ಉದಾ-'ಶಿವಸ್ + ಅರ್ಚ್ಯಃ' ಎಂದಿದ್ದಾಗ 'ಸ್'ಕಾರಕ್ಕೆ ಪ್ರಕೃತ ಸೂತ್ರದಿಂದ 'ರು' ಬಂದು, ಅನುಬಂಧವಾದ 'ಉ' ಕಾರದ ಲೋಪವಾಗಿ 'ಶಿವರ್+ಅರ್ಚ್ಯಃ' ಎಂದಿದ್ದಾಗ-

### ('ರು' ವಿಗೆ 'ಉ' ಕಾರವನ್ನು ವಿಧಿಸುವ ಸೂತ್ರ)

**ಸೂತ್ರ 106. ಅತೋರೋರಪ್ಲುತಾದಪ್ಲುತೇ। (6.1.113)**

ವೃತ್ತಿ– ಅಪ್ಲುತಾತ್ ಅತಃ ಪರಸ್ಯ ರೋಃ ಉಃ ಸ್ಯಾತ್ ಅಪ್ಲುತೇ ಅತಿ। ಶಿವೋಽರ್ಚ್ಯಃ।

ಪ.ಛೇ.– ಅತಃ, ರೋಃ, ಅಪ್ಲುತಾತ್, ಅಪ್ಲುತೇ।

ಅ.ವ್ಯ.– "ಏಙಃ ಪದಾನ್ತಾದತಿ(6–1–109)" ಸೂತ್ರದಿಂದ 'ಅತಿ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ – 'ಪ್ಲುತ' ವಲ್ಲದ ಹ್ರಸ್ವ 'ಅ' ಕಾರದ ಪರದಲ್ಲಿರುವ 'ರು' ವಿನಲ್ಲಿರುವ 'ರೇಫ' (ರ್) ಮಾತ್ರಕ್ಕೆ 'ಉ'ಕಾರವು ಆದೇಶವಾಗಿ ಬರುವುದು, ಪ್ಲುತವಲ್ಲದ ಹ್ರಸ್ವ 'ಅ' ಕಾರವು ಪರದಲ್ಲಿದ್ದಾಗ, 'ರು' ವಿನಲ್ಲಿ ಅನುನಾಸಿಕ 'ಉ' ಕಾರವು ಇತ್ತಾಗಿರುವುದರಿಂದ 'ರೇಫ' (ರ್) ಮಾತ್ರ ಉಳಿಯುತ್ತದೆ. ಆ 'ರೇಫ' (ರ್)ದ ಪೂರ್ವದಲ್ಲೂ, ಪರದಲ್ಲೂ 'ಪ್ಲುತ'ವಲ್ಲದ ಹ್ರಸ್ವ 'ಅ' ಕಾರವಿರಬೇಕು, ಆಗ ಮಧ್ಯದಲ್ಲಿರುವ 'ರೇಫ' (ರ್)ಕ್ಕೆ 'ಉ' ಕಾರವು ಆದೇಶವಾಗಿ ಬರುತ್ತದೆ.

ಉದಾ– "ಶಿವೋಽರ್ಚ್ಯಃ" (ಶಿವನು ಪೂಜ್ಯನು). 'ಶಿವಃ + ಅರ್ಚ್ಯಃ' ಎಂದಿದ್ದಾಗ "ವಿಸರ್ಜನೀಯಸ್ಯ ಸಃ (8–3–34)" ಸೂತ್ರದಿಂದ 'ಶಿವಸ್ + ಅರ್ಚ್ಯಃ' ಎಂದಿದ್ದಾಗ ಮತ್ತೆ 'ಸ–ಸಜುಷೋ ರುಃ(8–2–66)" ಸೂತ್ರದಿಂದ 'ಶಿವರ್+ಅರ್ಚ್ಯಃ' ಎಂದಾಗಿ ಅನುಬಂಧವಾದ 'ಉ' ಕಾರದ ಲೋಪವಾದ ಮೇಲೆ 'ಶಿವ್+ಅ+ರ್+ಅರ್ಚ್ಯಃ' ಎಂದಿದ್ದಾಗ – ಇಲ್ಲಿ 'ರು' ವಿನಲ್ಲಿರುವ 'ರೇಫ'(ರ್)ವು ಪ್ಲುತವಲ್ಲದ ಹ್ರಸ್ವ 'ಅ'ಕಾರಗಳ ಮಧ್ಯದಲ್ಲಿದೆ. ಅಂತಹ 'ರೇಫ'(ರ್) ಕ್ಕೆ 'ಉ' ಕಾರವು ಆದೇಶವಾಗಿ ಬಂದು 'ಶಿವ+ಉ+ಅರ್ಚ್ಯಃ' ಎಂದಾಗುತ್ತದೆ. ಪ್ರಥಮ 'ಅ' ಕಾರ ಮತ್ತು 'ಉ' ಕಾರಗಳು ಸೇರಿ ಗುಣವಾಗಿ 'ಓ' ಎಂದಾಗುತ್ತದೆ. 'ಶಿವ್+ಓ+ಅರ್ಚ್ಯಃ' ಎಂದಿದ್ದಾಗ ವರ್ಣಜೋಡಣೆಯಿಂದ "ಶಿವೋ+ಅರ್ಚ್ಯಃ" ಎಂದಾಗಿ "ಏಙಃ ಪದಾನ್ತಾದತಿ" (6–1–109)" ಸೂತ್ರದಿಂದ ಪೂರ್ವರೂಪ ಬಂದು "ಶಿವೋಽರ್ಚ್ಯಃ" ಎಂದಾಗುತ್ತದೆ.

ವಿಶೇಷ–"ಅತೋರೋರಪ್ಲುತಾದಪ್ಲುತೇ(6.1.113)" ಎಂಬ ಸೂತ್ರವು 'ಸಪಾದ ಸಪ್ತಾಧ್ಯಾಯೀ'ಯಲ್ಲಿರುವುದು. "ಸ–ಸಜುಷೋ ರುಃ (8.2.66)" ಎಂಬ 'ರುತ್ವ' ವಿಧಾಯಕ ಸೂತ್ರವು 'ತ್ರಿಪಾದಿ'ಯಲ್ಲಿರುವುದು. "ಪೂರ್ವತ್ರಾಸಿದ್ಧಮ್ (8.2.1)" ಸೂತ್ರದ ಪ್ರಕಾರ "ಅತೋ ರೋರಪ್ಲುತಾದಪ್ಲುತೇ (6.1.113)" ಸೂತ್ರದ ದೃಷ್ಟಿಯಲ್ಲಿ"ಸ–ಸಜುಷೋ ರುಃ (8.2.66)" ಎಂಬುದು ಅಸಿದ್ಧವಾಗುವುದಿಲ್ಲ. "ಪೂರ್ವತ್ರಾಸಿದ್ಧಮ್ (8.2.1)" ಸೂತ್ರದ ದೃಷ್ಟಿಯಲ್ಲಿ ಅಸಿದ್ಧವಾಗಿರಬೇಕಾಗಿದ್ದ "ಸ–ಸಜುಷೋ ರುಃ (8.2.66)" ಸೂತ್ರವು 'ಸಪಾದಸಪ್ತಾಧ್ಯಾಯಿ' ಯಲ್ಲಿರುವ "ಅತೋರೋರಪ್ಲುತಾದಪ್ಲುತೇ (6.1.113)"ಸೂತ್ರದಲ್ಲಿ ತ್ರಿಪಾದಿ' ಯಲ್ಲಿರುವ 'ರುತ್ವ'ವನ್ನು ಉಲ್ಲೇಖಿಸಿರುವುದರಿಂದ, ಈ ಸೂತ್ರಕ್ಕೆ ಆ ಸೂತ್ರದ ಜ್ಞಾನವಿದೆಯಂದಾಯಿತು. ಆದ್ದರಿಂದ ಇಲ್ಲಿ 'ರುತ್ವ'ವು ಅಸಿದ್ಧವಾಗುವುದಿಲ್ಲ. 'ರುತ್ವ'ವು ಅಸಿದ್ಧವಾಗಿರುವುದಾದರೆ 'ಉತ್ವ'ದ ವಿಧಾನವು ವ್ಯರ್ಥವಾಗಿರಬೇಕಾಗಿತ್ತು.

**('ಉತ್ವ'ವನ್ನು ವಿಧಿಸುವ ಸೂತ್ರ)**

**ಸೂತ್ರ 107. ಹಶಿ ಚ। (6.1.114)**

ವೃತ್ತಿ- (ತಥಾ) ಶಿವೋ ವನ್ದ್ಯಃ।

ಅ.ವ್ಯ.- "ಅತೋರೋರಪ್ಲುತಾದಪ್ಲುತೇ (6.1.113)" ಸೂತ್ರದಿಂದ -'ಅತೋರೋರಪ್ಲುತಾತ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- ಅಪ್ಲುತವಾದ ಹ್ರಸ್ವ 'ಅ' ಕಾರದ ನಂತರವಿರುವ 'ರು'(ರ್) ವಿನ ಸ್ಥಾನದಲ್ಲಿ 'ಉ' ಕಾರಾದೇಶವು ಆಗುತ್ತದೆ, 'ಹಶ್' ಪ್ರತ್ಯಾಹಾರವು ಪರದಲ್ಲಿದ್ದಾಗ.

ಈ ಸೂತ್ರವೂ ಉತ್ವವನ್ನು ವಿಧಿಸುವುದಕ್ಕಾಗಿ ಬಂದಿರುವುದು. ಆದರೆ "ಅತೋರೋರಪ್ಲುತಾದಪ್ಲುತೇ (6.1.113)" ಸೂತ್ರವು ಹ್ರಸ್ವ 'ಅ' ಕಾರವು ಪರದಲ್ಲಿದ್ದಾಗ ಪ್ರವರ್ತಿಸುತ್ತದೆ, ಮತ್ತು "ಹಶಿ ಚ(6-1-114)" ಸೂತ್ರವು 'ಹಶ್' ಪ್ರತ್ಯಾಹಾರ ಪರದಲ್ಲಿದ್ದಾಗ ಪ್ರವರ್ತಿಸುತ್ತದೆ. ಈ ಎರಡು ಸೂತ್ರಗಳಲ್ಲಿ ಇಷ್ಟೇ ಅಂತರವಿರುವುದು. ಉಳಿದೆಲ್ಲ ಅಂಶಗಳು ಸಮಾನವಾಗಿರುತ್ತದೆ. ಆದ್ದರಿಂದ ಈ ಎರಡು ಸೂತ್ರಗಳು ಸಮಾನವಾದ ಭೇದವುಳ್ಳಂತಹವುಗಳಾಗಿವೆ.

ಉದಾ- 'ಶಿವೋ ವನ್ದ್ಯಃ'(ಶಿವನು ಪೂಜ್ಯನು). 'ಶಿವಸ್+ವನ್ದ್ಯಃ' ಎಂಬಲ್ಲಿ 'ಸ್' ಕಾರದ ಸ್ಥಾನದಲ್ಲಿ 'ರುತ್ವ' ವು ಬಂದು 'ಶಿವರ್+ವನ್ದ್ಯಃ' ಎಂದಾಗುತ್ತದೆ. 'ವನ್ದ್ಯಃ' ಎಂಬಲ್ಲಿರುವ 'ವ್'ಕಾರವು 'ಹಲ್' ವರ್ಣವಾಗಿದೆ. ಆದುದ್ದರಿಂದ ಹ್ರಸ್ವ 'ಅ' ಕಾರವು ಪರದಲ್ಲಿಲ್ಲದೇ ಇರುವುದರಿಂದ "ಅತೋ ರೋರಪ್ಲುತಾದಪ್ಲುತೇ (6.1.113)" ಸೂತ್ರದಿಂದ 'ಉತ್ವ'ವು ಬರುವುದಿಲ್ಲ. ಆಗ "ಹಶಿ ಚ (6-1-114)" ಸೂತ್ರದ ಆವಶ್ಯಕತೆ ಇರುತ್ತದೆ. ಪ್ರಕೃತ ಸೂತ್ರದಿಂದ 'ವ್' ಕಾರವೆಂಬ 'ಹಶ್' ವರ್ಣವು ಪರದಲ್ಲಿದ್ದಾಗ 'ರೇಫ'(ರು)ದ ಸ್ಥಾನದಲ್ಲಿ 'ಉ' ಕಾರವು ಆದೇಶವಾಗಿ ಬರುವುದರಿಂದ 'ಶಿವ+ಉ+ವನ್ದ್ಯಃ' ಎಂದಿದ್ದಾಗ 'ಶಿವ+ಉ' ಎಂಬಲ್ಲಿ "ಆದ್ಗುಣಃ (6-1-87)" ಸೂತ್ರದಿಂದ 'ಗುಣ' ವು ಬಂದು 'ಶಿವೋ ವನ್ದ್ಯಃ ಎಂಬ ರೂಪವು ಸಿದ್ಧವಾಗುತ್ತದೆ.

**('ರುತ್ವ'ಕ್ಕೆ 'ಯ್' ಕಾರವನ್ನು ಹೇಳುವ ಸೂತ್ರ)**

**ಸೂತ್ರ 108. ಭೋ-ಭಗೋ-ಅಘೋ-ಅಪೂರ್ವಸ್ಯ ಯೋಽಶಿ। (8.3.17)**

ವೃತ್ತಿ-ಏತತ್ಪೂರ್ವಸ್ಯ ರೋಃ '0ಯ'ಆದೇಶಃ (ಸ್ಯಾತ್) ಅಶಿ। ದೇವಾ ಇಹ, ದೇವಾಯಿಹ। ಭೋಸ್, ಅಘೋಸ್, ಇತಿ ಸಾನ್ತಾಃ ನಿಪಾತಾಃ ತೇಷಾಂ ರೋಃ 0ಯತ್ವೇ ಕೃತೇ-

ಪ.ಛೇ.- ಭೋ-ಭಗೋ-ಅಘೋ-ಅ-ಪೂರ್ವಸ್ಯ ಯಃ ಅಶಿ।

ಅ.ವ್ಯ.- "ರೋಽಸುಪಿ (8-2-69)" ಸೂತ್ರದಿಂದ 'ರೋಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ -'ಅಶ್' ವರ್ಣವು ಪರದಲ್ಲಿದ್ದಾಗ 'ಭೋ', 'ಭಗೋ', 'ಅಘೋ' ಮತ್ತು

'ಅ' ಕಾರವನ್ನು ಪೂರ್ವದಲ್ಲಿವುಳ್ಳ 'ರು' ವಿನ ಸ್ಥಾನದಲ್ಲಿ 'ಯ್' ಆದೇಶವಾಗಿ ಬರುತ್ತದೆ.

'ಭೋಸ್', ಭಗೋಸ್' ಮತ್ತು 'ಅಘೋಸ್' ಗಳು 'ಸ್' ಕಾರಾಂತ ನಿಪಾತಗಳು. ಈ ಶಬ್ದಗಳು 'ಚಾದಿ' ಗಣದಲ್ಲಿ ಪರಿಗಣಿತವಾಗಿರುವುದರಿಂದ "ಚಾದಯೋऽಸತ್ವೇ(1-4-57)" ಎಂಬ ನಿಪಾತ ಸಂಜ್ಞೆಯು ಬಂದು ಮತ್ತು "ಸ್ವರಾದಿನಿಪಾತಮವ್ಯಯಮ್(1-1-37)" ಸೂತ್ರದಿಂದ ಅವ್ಯಯಸಂಜ್ಞೆಯೂ ಬರುತ್ತದೆ. 'ಭೋಸ್' ಎಂಬುದು 'ಸಾಮಾನ್ಯ ಸಂಬೋಧನೆ'ಯಾಗಿಯೂ, 'ಭಗೋಸ್' ಎಂಬುದು 'ಆದರಪೂರ್ವಕ ಸಂಬೋಧನೆ' ಯಾಗಿಯೂ, 'ಅಘೋಸ್' ಎಂಬುದು 'ಅಧಮರ ಸಂಬೋಧನೆ'ಯಾಗಿಯೂ ಇರುತ್ತದೆ. ಈ ಶಬ್ದಗಳ ಕೊನೆಯಲ್ಲಿರುವ 'ಸ್' ಕಾರಕ್ಕೆ "ಸ-ಸಜುಷೋ ರುಃ(8-2-66)" ಸೂತ್ರದಿಂದ 'ರು' ಆದೇಶವಾಗಿ ಬಂದು, ಅನುಬಂಧವಾದ 'ಉ' ಕಾರದ ಲೋಪವಾದ ಮೇಲೆ (ರ್) ಎಂದಿದ್ದಾಗ ಈ ಪ್ರಕೃತ ಸೂತ್ರವು ಪ್ರವೃತ್ತವಾಗುತ್ತದೆ. ಇವುಗಳಿಗೆ 'ಅಶ್'(ಅಶಿ) ವರ್ಣವು ಪರವಾದಾಗ 'ರು'(ರ್) ಗೆ 'ಯ್' ಕಾರವು ಆದೇಶವಾಗಿ ಬರುತ್ತದೆ.

ಉದಾಹರಣೆ- "ದೇವಾ ಇಹ", "ದೇವಾಯಿಹ". (ಹೇ ದೇವರುಗಳಿರಾ! ಇಲ್ಲಿ (ಬನ್ನಿ)) ಎಂಬಲ್ಲಿ 'ದೇವಾ ಇಹ' ಎಂದಿದ್ದಾಗ, "ಸ-ಸಜುಷೋರುಃ(8-2-66) ಸೂತ್ರದಿಂದ 'ದೇವಾ+ರು+ಇಹ' ಎಂದಾಗಿ, 'ರು' ವಿನಲ್ಲಿರುವ ಅನುಬಂಧವಾದ 'ಉ'ಕಾರವು ಲೋಪವಾದ ಮೇಲೆ 'ದೇವಾರ್+ಇಹ' ಎಂದಾಗುತ್ತದೆ. ಈಗ ಪ್ರಕೃತ ಸೂತ್ರದಿಂದ 'ರೇಫ'(ರ್) ಕ್ಕೆ 'ಯ್' ಕಾರವು ಆದೇಶವಾಗಿ 'ದೇವಾಯ್+ಇಹ' ಎಂದಾಗುತ್ತದೆ. ಇಲ್ಲಿ 'ದೇವಾ' ಎಂಬಲ್ಲಿರುವ 'ವ್' ಕಾರೋತ್ತರವರ್ತಿ 'ಆ' ಕಾರವು 'ರೇಫ'(ರ್)ಕ್ಕೆ ಪೂರ್ವದಲ್ಲಿದೆ. (ಅಂದರೆ 'ರು'(ರ್) ವರ್ಣವು 'ಅ' ವರ್ಣ ಪೂರ್ವಕವಾಗಿದೆ.) ಮತ್ತು 'ರೇಫ'(ರ್) ದ ನಂತರ 'ಇ' ಎಂಬ ವರ್ಣವಿದೆ. ಆದ್ದರಿಂದ 'ರ್' ವಿನ ಸ್ಥಾನದಲ್ಲಿ 'ಯ್' ಕಾರವು ಆದೇಶವಾಗಿ ಬಂದಿದೆ. 'ದೇವಾಯಿಹ' ಎಂದಿರುವಾಗ ಇಲ್ಲಿ 'ಇ' ಕಾರ ವೆಂಬ 'ಅಶ್' ವರ್ಣವು ಪರದಲ್ಲಿರುವುದರಿಂದ "ಲೋಪಃ ಶಾಕಲ್ಯಸ್ಯ(8-3-19)" ಸೂತ್ರದಿಂದ 'ಯ್' ಕಾರಕ್ಕೆ ವೈಕಲ್ಪಿಕವಾಗಿ ಲೋಪವು ಬಂದು 'ದೇವಾ ಇಹ' ಎಂದಾಗುತ್ತದೆ. "ಲೋಪಃ ಶಾಕಲ್ಯಸ್ಯ(8-3-19)" ಸೂತ್ರವು 'ತ್ರಿಪಾದಿ' ಗೆ ಸೇರಿದ್ದಾಗಿದೆ. ಆದ್ದರಿಂದ "ಪೂರ್ವತ್ರಾಸಿದ್ಧಮ್(8-2-1)" ಸೂತ್ರದಿಂದಾಗಿರುವ 'ಯ್' ಕಾರದ ಲೋಪವು "ಆದ್ಗುಣಃ(6-1-87)" ಸೂತ್ರಕ್ಕೆ ಗೊತ್ತಾಗುವುದಿಲ್ಲ(ಅಂದರೆ ಅದು ಅಸಿದ್ಧವಾಗಿರುತ್ತದೆ.) ಆದ್ದರಿಂದ 'ಗುಣ ಸನ್ಧಿ' ಆಗದೇ 'ದೇವಾಯಿಹ' ಎಂದೇ ಇರುತ್ತದೆ.

ವೈಕಲ್ಪಿಕವಾಗಿ ('ಯ್' ಕಾರವು ಬಾರದ) ಪಕ್ಷದಲ್ಲಿ ವರ್ಣ ಸಮ್ಮೇಳನದಿಂದ (ಯ್ + ಇಹ= ಯಿಹ) 'ದೇವಾಯಿಹ' ಎಂದಾಗುತ್ತದೆ. ಇಲ್ಲಿ ನಾಲ್ಕು ಉದಾಹರಣೆಗಳ ಪೈಕಿ ಕೊನೆಯ ಉದಾಹರಣೆಯನ್ನು ವಿವರಿಸಲಾಗಿದೆ. ಇಲ್ಲಿ 'ರು'(ರ್) ಅ-ವರ್ಣ ಪೂರ್ವಕವಾಗಿದೆ. 'ಅ' ವರ್ಣ ಎಂದರೆ 'ತಪರಕರಣ'ವಿಲ್ಲದಿರುವುದರಿಂದ 'ಅ'

ಕಾರದ ಎಲ್ಲ ತರಹದ '18' ರೂಪಗಳನ್ನು ತೆಗೆದುಕೊಳ್ಳಬಹುದು.

ಪ್ರಕೃತ ಸೂತ್ರದಿಂದ 'ಭೋಸ್+ಭಗೋಸ್', 'ಭಗೋಸ್+ಅಘೋಸ್', 'ಅಘೋಸ್+ಅಪೂರ್ವಸ್ಯ', ಇವುಗಳಲ್ಲಿರುವ 'ಸ್' ಕಾರಕ್ಕೆ 'ರುತ್ವ'ವು ಬಂದು 'ಭೋರ್+ಭಗೋರ್', 'ಭಗೋರ್+ಅಘೋರ್', 'ಅಘೋರ್+ಅಪೂರ್ವಸ್ಯ', ಎಂದಾಗಿ, ಪ್ರಕೃತ ಸೂತ್ರದಿಂದ 'ಯ್' ಕಾರಾದೇಶವಾದ ಮೇಲೆ, 'ಭೋಯ್ + ಭಗೋಯ್', 'ಭಗೋಯ್+ಅಘೋಯ್', 'ಅಘೋಯ್+ಅಪೂರ್ವಸ್ಯ', ಎಂದು ರೂಪಗಳಾಗಿ ಅವುಗಳಿಗೆ "ಹಲಿ ಸರ್ವೇಷಾಮ್(8–3–22)" ಸೂತ್ರದಿಂದ 'ಯ್' ಕಾರಕ್ಕೆ ಲೋಪ ಬಂದು 'ಭೋ+ಭಗೋ, ಭಗೋ+ಅಘೋ, ಅಘೋ+ಅಪೂರ್ವಸ್ಯ' ಎಂದಿದ್ದಾಗ, ಇವುಗಳಲ್ಲಿ ಪ್ರಥಮ ರೂಪವನ್ನು ಬಿಟ್ಟು (ಪರದಲ್ಲಿ ವ್ಯಞ್ಜನವಿರೋಣದರಿಂದ) ಉಳಿದ ಎರಡು ರೂಪಗಳಲ್ಲಿ "ಏಚೋಽಯವಾಯಾವಃ(6–1–78)" ಸೂತ್ರದಿಂದ 'ಅವ್' ಆದೇಶವು ಪ್ರಾಪ್ತವಾಗ ಬೇಕಾಗಿದ್ದಾಗ, ಪೂರ್ವತ್ರಾಽಸಿದ್ಧಮ್(8–2–1)" ಸೂತ್ರದಿಂದ 'ತ್ರಿಪಾದಿ'ಯಲ್ಲಿರುವ "ಹಲಿ ಸರ್ವೇಷಾಮ್(8–3–22)" ಸೂತ್ರವು ಅಸಿದ್ಧವಾಗುವುದರಿಂದ 'ಯ್' ಕಾರದ ಲೋಪವು "ಏಚೋಽಯವಾಯಾವಃ(6–1–78)" ಸೂತ್ರದ ದೃಷ್ಟಿಯಿಂದ 'ಅಸಿದ್ಧ' ಆಗುವುದರಿಂದ, 'ಯ್' ಕಾರವು ಲೋಪವಾದದ್ದು ಗೋತ್ತಾಗದೇ ಇರುವುದರಿಂದ 'ಅವ್' ಆದೇಶ ಬರಲಿಲ್ಲವಾಗಿ 'ಭೋಭಗೋಅಘೋಅಪೂರ್ವಸ್ಯ' ಎಂದೇ ಉಳಿದಿದೆ.

**('ಯ್' ಕಾರಕ್ಕೆ ಲೋಪವನ್ನು ಹೇಳುವ ಸೂತ್ರ)**

**ಸೂತ್ರ 109. ಹಲಿ ಸರ್ವೇಷಾಮ್। ( 8.3.22)**

ವೃತ್ತಿ– ಭೋ–ಭಗೋ–ಅಘೋ–ಅ ಪೂರ್ವಸ್ಯ 0ಯಸ್ಯ('0ಯ' ಕಾರಸ್ಯ) ಲೋಪಃ ಸ್ಯಾತ್ ಹಲಿ। ಭೋ ದೇವಾಃ, ಭಘೋ ನಮಸ್ತೇ। ಅಘೋ 0ಯಾಹಿ।

ಅ.ವ್ಯ.– "ಭೋ–ಭಗೋ–ಅಘೋ–ಅಪೂರ್ವಸ್ಯ 0ಯೋಶಿ (8.3.17)" ಸೂತ್ರದಿಂದ 'ಭೋ–ಭಗೋ–ಅಘೋ–ಅಪೂರ್ವಸ್ಯ' ಎಂಬ ಪದವು, ಹಾಗೆಯೇ "ವ್ಯೋರ್ಲಘುಪ್ರಯತ್ನತರಃ ಶಾಕಟಾಯನಸ್ಯ(8–3–18)" ಸೂತ್ರದಿಂದ 'ವ್ಯೋಃ' ಎಂಬ ಪದದಲ್ಲಿರುವ ಕೇವಲ 'ಯ್' ಕಾರದ ವಚನವಿಪರಿಣಾಮ ಮಾಡಿದ ನಂತರ 'ಯಸ್ಯ' ಎಂಬ ಪದವು ಮತ್ತು "ಲೋಪಃ ಶಾಕಲ್ಯಸ್ಯ(8–3–19)" ಸೂತ್ರದಿಂದ 'ಲೋಪಃ' ಎಂಬ ಪದಗಳು ಅನುವೃತ್ತಾವಾಗುತ್ತವೆ.

ಅರ್ಥ – 'ಹಲ್' ವರ್ಣವು ಪರದಲ್ಲಿದ್ದಾಗ 'ಭೋ', 'ಭಗೋ', 'ಅಘೋ' ಮತ್ತು 'ಅ' ವರ್ಣ ಪೂರ್ವಗಳ 'ಯ್' ಕಾರದ ಲೋಪವು ಎಲ್ಲರ ಮತದಲ್ಲಿಯೂ ಆಗುತ್ತದೆ.

ಈ ಸೂತ್ರವು 'ತ್ರಿಪಾದಿ'ಯಲ್ಲಿದೆ, ಆದ್ದರಿಂದ ಇಲ್ಲಿ 'ಯ್' ಕಾರವು ಲೋಪವಾದರೂ 'ಸಪಾದಸಪ್ತಾಧ್ಯಾಯಿ'ಯಲ್ಲಿರುವ "ಆದ್ಗುಣಃ(6–1–87)" ಮೊದಲಾದ ಸೂತ್ರಗಳಿಗೆ 'ಯ್' ಕಾರ ಲೋಪವಾದದ್ದು ಗೊತ್ತಾಗುವದಿಲ್ಲ. (ಅಂದರೆ 'ಯ್' ಕಾರ ಲೋಪವಾಗದಂತೆ ಭಾವಿಸುತ್ತವೆ).

ಉದಾಹರಣೆ– 1.'ಭೋ ದೇವಾಃ'(ಹೇ ದೇವತೆಗಳಿರಾ) 'ಭೋಸ್ + ದೇವಾಃ' ಎಂದಿದ್ದಾಗ, 'ಭೋಸ್' ಎಂಬ ಪದದಲ್ಲಿರುವ 'ಸ್' ಕಾರಕ್ಕೆ "ಸ–ಸಜುಷೋ ರುಃ (8–2–66)" ಸೂತ್ರದಿಂದ 'ರುತ್ವ' ಬಂದು, 'ಉ' ಕಾರವು 'ಇತ್' ಆಗಿರುವುದರಿಂದ 'ರೇಫ'(ರ್) ಉಳಿದು " ಭೋ–ಭಗೋ–ಅಘೋ–ಅಪೂರ್ವಸ್ಯ ಯೋಽಶಿ (8.3.17)" ಸೂತ್ರದಿಂದ 'ರೇಫ'(ರ್) ಕ್ಕೆ 'ಯ್' ಕಾರವು ಆದೇಶವಾಗಿ ಬಂದು 'ಭೋಯ್ + ದೇವಾಃ' ಎಂದಾಗುತ್ತದೆ. 'ಯ್' ಗೆ 'ಹಲ್' ವರ್ಣವಾದ 'ದ್' ಕಾರವು ಪರದಲ್ಲಿರುವುದರಿಂದ ಪ್ರಕೃತ ಸೂತ್ರದಿಂದ 'ಯ್' ಕಾರವು ಲೋಪವಾಗಿ 'ಭೋ ದೇವಾಃ' ಎಂಬ ರೂಪವು ಸಿದ್ಧವಾಗುತ್ತದೆ.

ಉದಾ–2. 'ಭಗೋ ನಮಸ್ತೇ'.(ಹೇ ಪೂಜ್ಯರೇ! ನಿಮಗೆ ನಮಸ್ಕಾರ.) 'ಭಗೋಸ್+ನಮಸ್ತೇ ಎಂದಿದ್ದಾಗ, ಹಿಂದಿನಂತೆ 'ಸ್' ಕಾರಕ್ಕೆ 'ರುತ್ವ'(ರ್) ವು ಬಂದು, ಆ 'ರೇಫ'(ರ್) ಕ್ಕೆ 'ಯ್' ಕಾರವು ಆದೇಶವಾಗಿ ಬಂದು 'ಭಗೋಯ್ + ನಮಸ್ತೇ' ಎಂದಾಗುತ್ತದೆ. ಪ್ರಕೃತ ಸೂತ್ರದಿಂದ 'ಯ್' ಕಾರಕ್ಕೆ ಲೋಪ ಬಂದು 'ಭಗೋ ನಮಸ್ತೇ' ಎಂದಾಗುತ್ತದೆ.

ಉದಾ–3. 'ಅಘೋ ಯಾಹಿ'. (ಹೇ ಪಾಪಿಯೇ! ಹೋಗು) 'ಅಘೋ + ಯಾಹಿ' ಎಂದಿದ್ದಾಗ, ಹಿಂದಿನಂತೆಯೇ 'ಸ್' ಕಾರಕ್ಕೆ 'ರುತ್ವ'(ರ್) ಬಂದು, ಆ 'ರೇಫ'(ರ್) ಕ್ಕೆ 'ಯ್' ಕಾರವು ಆದೇಶವಾಗಿ ಬಂದು 'ಅಘೋಯ್ + ಯಾಹಿ ಎಂದಾಗುತ್ತದೆ. ಪ್ರಕೃತ ಸೂತ್ರದಿಂದ 'ಯ್' ಕಾರಕ್ಕೆ ಲೋಪವು ಬಂದು 'ಅಘೋ ಯಾಹಿ' ಎಂದಾಗುತ್ತದೆ.

**(ರೇಫಾದೇಶವನ್ನು ವಿಧಿಸುವ ಸೂತ್ರ)**

**ಸೂತ್ರ 110. ರೋಽಸುಪಿ। ( 8.2.69)**

ವೃತ್ತಿ– ಅಹ್ನೋ (ಅಹನ್–ಶಬ್ದಸ್ಯ) ರೇಫಾದೇಶಃ, ನ ತು ಸುಪಿ। ಅಹರಹಃ। ಅಹರ್ಗಣಃ।

ಪ.ಛೇ.– ರಃ, ಅಸುಪಿ।

ಅ.ವೃ.– "ಅಹನ್(8–2–68)" ಸೂತ್ರದಿಂದ 'ಅಹನ್' ಎಂಬ ಪದವು ಷಷ್ಠೀ ವಿಭಕ್ತಿಯಲ್ಲಿ ವಿಪರಿಣಾಮಗೊಳಿಸಿದ ನಂತರ ಅನುವೃತ್ತವಾಗುತ್ತದೆ.

ಅರ್ಥ– 'ಅಹನ್' ಶಬ್ದದ ಕೊನೆಯಲ್ಲಿರುವ 'ನ್' ಕಾರದ ಸ್ಥಾನದಲ್ಲಿ 'ರೇಫ'(ರ್) ವು ಆದೇಶವಾಗಿ ಬರುತ್ತದೆ, ಆದರೆ 'ಸುಪ್' ಪ್ರತ್ಯಯವು ಪರದಲ್ಲಿದ್ದಾಗ.

"ಅಲೋಽನ್ತ್ಯಸ್ಯ(1–1–52) ಎಂಬ 'ಪರಿಭಾಷಾ' ಸೂತ್ರದಿಂದ 'ಅಹನ್' ಕೊನೆಯ ವರ್ಣವಾದ 'ನ್' ಕಾರಕ್ಕೆ 'ರೇಫ'(ರ್) ವು ಆದೇಶವಾಗಿ ಬರುತ್ತದೆ. ಈ 'ರೇಫ'(ರ್)ದ ಪರದಲ್ಲಿ 'ಸುಪ್' ಪ್ರತ್ಯಯವು ಇರಬಾರದು. ಈ ಪ್ರಕೃತ ಸೂತ್ರವು 'ಅಹನ್' ಶಬ್ದದಲ್ಲಿರುವ 'ನ್' ಕಾರಕ್ಕೆ 'ರೇಫಾದೇಶ' ವನ್ನು ವಿಧಿಸುವ "ಅಹನ್(8–2–68)" ಸೂತ್ರಕ್ಕೆ ಬಾಧಿತವಾಗಿದೆ.

ಉದಾಹರಣೆ- 1. 'ಅಹರಹಃ' (ಪ್ರತಿದಿನ). 'ಅಹನ್ + ಅಹನ್' ಎಂದಿದ್ದಾಗ "ನಿತ್ಯವೀಪ್ಸಯೋಃ (8-1-4)" ಸೂತ್ರದಿಂದ 'ಅಹನ್' ಶಬ್ದಕ್ಕೆ 'ದ್ವಿತ್ವ'ವು ಬಂದು 'ಅಹನ್ ಅಹನ್' ಎಂದಾಗಿ "ಸ್ವಮೋರ್ನಪುಂಸಕಾತ್(7-1-33)" ಸೂತ್ರದಿಂದ 'ಸು' ಪ್ರತ್ಯಯದ ಲೋಪವಾಗುತ್ತದೆ.

ಪ್ರಕೃತ ಸೂತ್ರದಿಂದ ಎರಡು 'ನ್' ಕಾರದ ಸ್ಥಾನದಲ್ಲಿ 'ರೇಫ' (ರ್) ಆದೇಶವು ಬಂದು 'ಅಹರ್ + ಅಹರ್' ಎಂದಾಗಿ, ವರ್ಣ ಸಂಯೋಜನೆಯಿಂದ 'ಅಹರಹರ್' ಎಂದಾಗುತ್ತದೆ. ಎರಡನೇಯ 'ರೇಫ'(ರ್)ಕ್ಕೆ ಅವಸಾನವು ಪರದಲ್ಲಿರುವುದರಿಂದ "ಖರವಸಾನಯೋರ್ವಿಸರ್ಜನೀಯಃ (8-3-15)" ಸೂತ್ರದಿಂದ ವಿಸರ್ಗವು ಆದೇಶವಾಗಿ ಬಂದು 'ಅಹರಹಃ' ಎಂಬ ರೂಪವು ಸಿದ್ಧವಾಗುತ್ತದೆ.

2.'ಅಹರ್ಗಣಃ' (ದಿನಗಳ ಸಮೂಹ). 'ಅಹನ್+ಗಣಃ ಎಂದಿದ್ದಾಗ ಪ್ರಕೃತ ಸೂತ್ರದಿಂದ 'ಅಹನ್' ಶಬ್ದದಲ್ಲಿರುವ ಅಂತ್ಯವಾದ 'ನ್' ಕಾರದ ಸ್ಥಾನದಲ್ಲಿ 'ರೇಫಾದೇಶ' ವು ಬಂದು 'ಅಹರ್+ಗಣಃ' ಎಂದಾಗುತ್ತದೆ. 'ರೇಫ'(ರ್)ವು 'ಗ್' ಕಾರದ ಮೇಲೆ 'ಅರ್ಕಾವಳಿ'ಯಾಗಿ ಬರೆಯಲ್ಪಟ್ಟು 'ಅಹರ್ಗಣಃ' ಎಂಬ ರೂಪವು ಸಿದ್ಧವಾಗುತ್ತದೆ. ಇಲ್ಲಿ 'ರೇಫ'(ರ್) ದ ನಂತರ 'ಗಣಃ' ಎಂಬ ಶಬ್ದವಿರುವುದರಿಂದ 'ಅವಸಾನ' ವಿರುವುದಿಲ್ಲ ಮತ್ತು 'ಖರ್' ವರ್ಣವೂ ಇರುವುದಿಲ್ಲ. ಹೀಗಾಗಿ 'ರೇಫ'(ರ್) ಕ್ಕೆ ವಿಸರ್ಗವು ಆದೇಶವಾಗಿ ಬರುವುದಿಲ್ಲ.

**('ರೇಫ' ಕ್ಕೆ ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ 111. ರೋ ರಿ। (8.3.14)**

ವೃತ್ತಿ- ರೇಫಸ್ಯ ರೇಫೇ ಪರೇ ಲೋಪಃ।

ಪ.ಛೇ.- ರಃ, ರಿ।

ಅ.ವೃ.- "ಢೋ ಢೇ ಲೋಪಃ(8-3-13)" ಸೂತ್ರದಿಂದ 'ಲೋಪಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- 'ರೇಫ'(ರ್)ವು ಪರದಲ್ಲಿದ್ದಾಗ ಪೂರ್ವದಲ್ಲಿರುವ 'ರೇಫ'(ರ್)ಕ್ಕೆ ಲೋಪವು ಬರುತ್ತದೆ.(ಲೋಪವು ಆದೇಶವಾಗಿ ಬರುತ್ತದೆ.)

ವಾಕ್ಯ ರಚನೆಯಲ್ಲಿ ಎಲ್ಲಿಯೂ ವ್ಯಂಜನಗಳಾದ ಎರಡು 'ರೇಫ'(ರ್) ಗಳು ಕೂಡುವುದಿಲ್ಲ. ಯಾಕೆಂದರೆ ಪ್ರಕೃತ ಸೂತ್ರದಿಂದ ಒಂದು 'ರೇಫ'ವು ಪರದಲ್ಲಿರುವಾಗ ಅವ್ಯವಹಿತವಾಗಿ ತತ್ಪೂರ್ವದಲ್ಲಿರುವ 'ರೇಫ'(ರ್) ವು ಲೋಪವಾಗುತ್ತದೆ.

**('ದೀರ್ಘ'ವನ್ನು ವಿಧಿಸುವ ಸೂತ್ರ)**

**ಸೂತ್ರ 112. ಢ್ರಲೋಪೇ ಪೂರ್ವಸ್ಯ ದೀರ್ಘೋಽಣಃ। (6.3.111)**

ವೃತ್ತಿ- ಢ-ರೇಫಯೋಃ ಲೋಪನಿಮಿತ್ತಯೋಃ ಪೂರ್ವಸ್ಯ ಅಣಃ ದೀರ್ಘಃ ಸ್ಯಾತ್। ಪುನಾರಮತೇ। ಹರೀ ರಮ್ಯಃ, ಶಂಭೂ ರಾಜತೇ। ಅಣಃ ಕಿಮ್- ತೃಢಃ। ವೃಢಃ।

ಮನಸ್ ರಥ ಇತ್ಯತ್ರ ರುತ್ವೇ ಕೃತೇ 'ಹಶಿ ಚ' ಇತಿ ಉತ್ವೇ, 'ರೋರಿ' ಇತಿ ಲೋಪೇ ಚ ಪ್ರಾಪ್ತೇ–

ಪ.ಛೇ.– ಢ್ರಲೋಪೇ, ಪೂರ್ವಸ್ಯ, ದೀರ್ಘಃ, ಅಣಃ।

ಅರ್ಥ– 'ಢ್' ಕಾರ ಮತ್ತು 'ರೇಫ' ಇವುಗಳ ಲೋಪಕ್ಕೆ ನಿಮಿತ್ತವಾದ 'ರೇಫ' ಮತ್ತು 'ಢ್' ಕಾರಗಳು ಪರದಲ್ಲಿರುವಾಗ ಪೂರ್ವದಲ್ಲಿರುವ 'ಅಣ್' ವರ್ಣಕ್ಕೆ ದೀರ್ಘವು ಬರುತ್ತದೆ. "ಢೋ ಢೇ ಲೋಪಃ(8–3–13)" ಸೂತ್ರದಿಂದ 'ಢ್' ಕಾರವು ಪರದಲ್ಲಿದ್ದಾಗ ಪೂರ್ವದಲ್ಲಿರುವ 'ಢ್' ಕಾರವು ಲೋಪವಾಗುತ್ತದೆ. ಇದರಂತೆಯೇ "ರೋ ರಿ(8–3–14)" ಸೂತ್ರದಿಂದ 'ರೇಫ'ವು ಪರದಲ್ಲಿದ್ದಾಗ, ಪೂರ್ವದಲ್ಲಿರುವ 'ರೇಫ'ವು ಲೋಪವಾಗುತ್ತದೆ. (ಈ ಕಾರಣದಿಂದ ಎರಡನೆಯ 'ಢ್' ಕಾರ ಮತ್ತು ಎರಡನೆಯ ರೇಫಗಳಿಗೆ ಲೋಪನಿಮಿತ್ತವಾದ 'ಢ್' ಮತ್ತು ಲೋಪನಿಮಿತ್ತವಾದ 'ರೇಫ' ವೆಂದು ಕರೆಯಲಾಗಿದೆ). ಲೋಪನಿಮಿತ್ತವಾದ 'ಢ್' ಮತ್ತು ಲೋಪನಿಮಿತ್ತವಾದ 'ರೇಫ'ಗಳು ಪರದಲ್ಲಿದ್ದಾಗ ಎಂದರೆ ಈ ವರ್ಣಗಳು ಪೂರ್ವದಲ್ಲಿರುವ 'ಢ್' ಮತ್ತು 'ರೇಫ' ಗಳನ್ನು ಲೋಪಗೊಳಿಸಿದಮೇಲೆ ಎಂದರ್ಥ. ಆಗ ಅವುಗಳ ಪೂರ್ವದಲ್ಲಿ ಇರುವ 'ಅಣ್' ವರ್ಣಗಳಿಗೆ ದೀರ್ಘ ಬರುತ್ತದೆ ಎಂದರ್ಥ. 'ಅಣ್' ವರ್ಣಗಳೆಂದರೆ ಅ,ಇ,ಉ ವರ್ಣಗಳೆಂದು ತಿಳಿಯಬೇಕು.

ಉದಾ – 1. 'ಪುನಾ ರಮತೇ'। (ಮತ್ತೆ ರಮಣ ಮಾಡುತ್ತಾನೆ) ಎಂಬಲ್ಲಿ 'ಪುನರ್ + ರಮತೇ' ಎಂದಿದ್ದಾಗ "ರೋ ರಿ(8–3–14)" ಸೂತ್ರದಿಂದ ಮೊದಲನೇಯ ರೇಫವು ಲೋಪವಾಗಿ 'ಪುನ + ರಮತೇ' ಎಂದಿದ್ದಾಗ ಲೋಪನಿಮಿತ್ತವಾದ ಎರಡನೇಯ ರೇಫವು ಪರದಲ್ಲಿರೋಣದರಿಂದ ಪೂರ್ವದಲ್ಲಿರುವ 'ನ್' ಕಾರೋತ್ತರ ಅಣ್ ವರ್ಣವಾದ 'ಅ' ಕಾರಕ್ಕೆ ದೀರ್ಘ ಬಂದು 'ಪುನಾ ರಮತೇ' ಎಂದು ರೂಪವು ಸಿದ್ಧವಾಗುತ್ತದೆ.

ಉದಾ –2. 'ಹರೀ ರಮ್ಯಃ'। (ಹರಿಯು ಸುಂದರನಾಗಿದ್ದಾನೆ) ಎಂಬಲ್ಲಿ 'ಹರಿಸ್ + ರಮ್ಯಃ' ಎಂದಿದ್ದಾಗ "ಸ–ಸಜುಷೋರುಃ(8–2–66)" ಸೂತ್ರದಿಂದ 'ಸ್' ಕಾರಕ್ಕೆ 'ರುತ್ವ'(ರ್) ಬಂದು 'ಹರಿರ್ + ರಮ್ಯಃ' ಎಂದಾಗುತ್ತದೆ. ನಂತರ "ರೋ ರಿ(8–3–14)" ಸೂತ್ರದಿಂದ ಮೊದಲನೇಯ 'ರೇಫ'ವು ಲೋಪವಾಗಿ 'ಹರಿ + ರಮ್ಯಃ' ಎಂದಿದ್ದಾಗ ಹಿಂದಿನಂತೆ ಲೋಪನಿಮಿತ್ತವಾದ ಎರಡನೆಯ ರೇಫವು ಪರದಲ್ಲಿರುವುದರಿಂದ ಪೂರ್ವದಲ್ಲಿರುವ 'ರ್' ಕಾರೋತ್ತರ 'ಅಣ್' ವರ್ಣವಾದ 'ಇ' ಕಾರಕ್ಕೆ 'ದೀರ್ಘ' ಬಂದು 'ಹರೀ ರಮ್ಯಃ' ಎಂದು ರೂಪವು ಸಿದ್ಧವಾಗುತ್ತದೆ.

ಉದಾ– 3. 'ಶಂಭೂ ರಾಜತೇ'। (ಶಂಭುವು ಶೋಭಿಸುತ್ತಾನೆ) ಎಂಬಲ್ಲಿ 'ಶಂಭುಸ್ + ರಾಜತೇ' ಎಂದಿದ್ದಾಗ "ಸ ಸಜುಷೋರುಃ (8–2–66)" ಸೂತ್ರದಿಂದ 'ಸ್' ಕಾರಕ್ಕೆ 'ರುತ್ವ'(ರ್) ಬಂದು 'ಶಂಭುರ್ + ರಾಜತೇ' ಎಂದಾಗುತ್ತದೆ. ನಂತರ "ರೋ ರಿ(8–3–14)" ಸೂತ್ರದಿಂದ ಮೊದಲನೇಯ 'ರೇಫ'ವು ಲೋಪವಾಗಿ 'ಶಂಭು + ರಾಜತೇ' ಎಂದಿದ್ದಾಗ ಹಿಂದಿನಂತೆ ಲೋಪನಿಮಿತ್ತವಾದ ಎರಡನೇಯ 'ರೇಫ'ವು

ಪರದಲ್ಲಿರೋಣದರಿಂದ ಪೂರ್ವದಲ್ಲಿರುವ 'ಭ್' ಕಾರೋತ್ತರ 'ಅಣ್' ವರ್ಣವಾದ 'ಉ' ಕಾರಕ್ಕೆ ದೀರ್ಘ ಬಂದು 'ಶಂಭೂ ರಾಜತೇ' ಎಂದು ರೂಪವು ಸಿದ್ಧವಾಗುತ್ತದೆ.

'ಅಣಃ' ಎಂದು ಯಾಕೆ ಹೇಳಿರುವರು? ಎಂಬ ಪ್ರಶ್ನೆಗೆ 'ತೃಢಃ','ವೃಢಃ' ಎಂಬ ಉದಾಹರಣೆಯನ್ನು ಕೊಟ್ಟಿದ್ದಾರೆ. 'ಪೂರ್ವದಲ್ಲಿರುವ ವರ್ಣಕ್ಕೆ ದೀರ್ಘ ಬರುತ್ತದೆ ಎಂದರೆ ಸಾಕಲ್ಲ. ಪುನಃ 'ಅಣಃ' ಎಂದು ಯಾಕೆ ಹೇಳಬೇಕು? ಎಂದರೆ 'ಅಣಃ' ಎಂದು ಹೇಳದಿದ್ದರೆ 'ಅಣ್' ಪ್ರತ್ಯಾಹಾರಕ್ಕಿಂತ ಭಿನ್ನವಾದ ವರ್ಣಗಳಿಗೂ 'ದೀರ್ಘ' ಬರುವ ಅವಕಾಶವಿರುತ್ತದೆ. ಹಾಗೆ ಆದರೆ ಅವುಗಳಿಗೂ 'ದೀರ್ಘ' ಬಂದು ಅನಿಷ್ಟ ರೂಪವಾಗಬೇಕಾಗುತ್ತದೆ. ಹೇಗೆಂದರೆ 'ತೃಢ್ + ಢಃ' ಎಂದಿದ್ದಾಗ "ಢೋ ಢೇ ಲೋಪಃ(8–3–13)" ಸೂತ್ರದಿಂದ ಮೊದಲನೇ 'ಢ್' ಕಾರಕ್ಕೆ ಲೋಪ ಬಂದ ಮೇಲೆ ಲೋಪನಿಮಿತ್ತವಾದ 'ಢ್' ಕಾರವು ಪರದಲ್ಲಿರುವಾಗ ಪೂರ್ವದಲ್ಲಿರುವ 'ಋ' ಕಾರಕ್ಕೆ ದೀರ್ಘ ಬಂದು 'ತೄಢಃ' ಎಂದಾಗುತ್ತಿತ್ತು ಇದು ಅಪೇಕ್ಷಿತವಲ್ಲ. ಇದರಂತೆಯೇ 'ವೃಢ್ + ಢಃ' ಎಂಬಲ್ಲಿಯೂ ಹಿಂದಿನಂತೆಯೇ 'ಅಣಃ' ಎಂದು ಹೇಳದಿದ್ದರೆ 'ವೄಢಃ' ಎಂಬ ಅನಿಷ್ಟರೂಪವು ಬರುತ್ತಿತ್ತು. ಕಾರಣ 'ಋ' ಕಾರವು 'ಅಣ್' ವರ್ಣವಲ್ಲ. ಈ ಅನಿಷ್ಟರೂಪವನ್ನು ಪರಿಹರಿಸುವದಕ್ಕಾಗಿಯೇ 'ಅಣ್' ಎಂದು ಹೇಳಿದ್ದಾರೆ.

'ಮನಸ್+ರಥಃ' ಎಂಬಲ್ಲಿ 'ಸ್' ಕಾರಕ್ಕೆ 'ರುತ್ವ' (ರ್) ಮಾಡಿದರೆ 'ಮನರ್+ರಥಃ' ಎಂದಾಗುತ್ತದೆ. "ಹಶಿ ಚ(6–1–114)" ಸೂತ್ರದಿಂದ ಪೂರ್ವ 'ರೇಫ' ಕ್ಕೆ 'ಉತ್ವ'ವು ಬಂದು 'ಮನ+ಉ+ರಥಃ " ಎಂದಾಗುತ್ತದೆ. ಮತ್ತೊಂದು ಪಕ್ಷದಲ್ಲಿ "ರೋರಿ(8–3–14)" ಎಂಬ ಸೂತ್ರದಿಂದ 'ಪೂರ್ವ ರೇಫ'ಕ್ಕೆ ಲೋಪವು ಬಂದು, ಪ್ರಕೃತ ಸೂತ್ರದಿಂದ 'ಮನಾ ರಥಃ' ಎಂದಾಗುತ್ತದೆ. ಈ ರೀತಿಯಾಗಿ ಭಿನ್ನ ಭಿನ್ನ ಸ್ಥಳಗಳಲ್ಲಿ ಪ್ರವೃತ್ತವಾಗುವ ಈ ಎರಡೂ ಸೂತ್ರಗಳೂ ಒಂದೇ ಲಕ್ಷ್ಯದಲ್ಲಿ ಪ್ರವೃತ್ತವಾಗುವಾಗ, ಈ ಮುಂದಿನ ಪರಿಭಾಷೆಯು ಪ್ರವೃತ್ತವಾಗುತ್ತದೆ.

**(ತುಲ್ಯಬಲವಿರೋಧವಿದ್ದಾಗ ಪರಕಾರ್ಯವನ್ನು ವಿಧಿಸುವ ಸೂತ್ರ)**

**ಸೂತ್ರ 113. ವಿಪ್ರತಿಷೇಧೇ ಪರಂ ಕಾರ್ಯಮ್। (1.4.2)**

ವೃತ್ತಿ– ತುಲ್ಯಬಲ–ವಿರೋಧೇ (ಸತಿ) ಪರಂ ಕಾರ್ಯಂ ಸ್ಯಾತ್। ಇತಿ ಲೋಪೇ ಪ್ರಾಪ್ತೇ 'ಪೂರ್ವತ್ರಾಸಿದ್ಧಂ' ಇತಿ 'ರೋ ರಿ' ಇತ್ಯಸ್ಯ ಅಸಿದ್ಧತ್ವಾತ್ ಉತ್ವಮೇವ ಸ್ಯಾತ್। ಮನೋರಥಃ।

ಅರ್ಥ – ತುಲ್ಯಬಲ ವಿರೋಧವಿದ್ದಾಗ ಪರಕಾರ್ಯವು ಬರುತ್ತದೆ.

'ಅಷ್ಟಾಧ್ಯಾಯೀ' ಕ್ರಮದಲ್ಲಿ ನಂತರ ಬರುವ ಸೂತ್ರಕ್ಕೆ ಪರಸೂತ್ರವೆಂದು ಹೇಳುತ್ತಾರೆ. ಬೇರೆ ಬೇರೆ ಸ್ಥಳಗಳಲ್ಲಿ ಪ್ರವೃತ್ತವಾಗುವ ಎರಡು ಸೂತ್ರಗಳು ಒಂದೇ ಲಕ್ಷ್ಯದಲ್ಲಿ ಪ್ರವೃತ್ತವಾದಾಗ ಅದಕ್ಕೆ ತುಲ್ಯಬಲವಿರೋಧವೆಂದು ಹೇಳುತ್ತಾರೆ.

ಉದಾಹರಣೆ– 'ಮನೋರಥಃ' ಎಂಬಲ್ಲಿ 'ಮನಸ್ + ರಥಃ' ಎಂದಿದ್ದಾಗ "ಸ ಸಜುಷೋರುಃ(8–2–66)" ಸೂತ್ರದಿಂದ 'ಸ್' ಕಾರಕ್ಕೆ 'ರುತ್ವ'(ರ್) ಬಂದು 'ಮನರ್

+ ರಥಃ' ಎಂದಿದ್ದಾಗ "ಹಶಿ ಚ(6–1–114)" ಸೂತ್ರದಿಂದ ಪೂರ್ವ 'ರೇಫ'ಕ್ಕೆ 'ಉತ್ವ' (ಉ) ಬರುವ ಅವಕಾಶವಿದೆ, ಹಾಗೆಯೇ "ರೋ ರಿ(8–3–14)" ಸೂತ್ರದಿಂದ ಪೂರ್ವ ರೇಫಕ್ಕೆ ಲೋಪ ಬರುವ ಅವಕಾಶವೂ ಇದೆ. ಇದಕ್ಕೆ ತುಲ್ಯಬಲವಿರೋಧವೆಂದು ಹೇಳುತ್ತಾರೆ. ಪ್ರಕೃತ ಪರಿಭಾಷಾ ಸೂತ್ರವು ಇಂಥ ಸಂದರ್ಭದಲ್ಲಿ ಪರಕಾರ್ಯವನ್ನು ವಿಧಿಸುತ್ತದೆ.

"ರೋ ರಿ(8–3–14)" ಎಂಬ ಸೂತ್ರವು ಅಷ್ಟಾಧ್ಯಾಯೀ ಕ್ರಮದಲ್ಲಿ ಪರಸೂತ್ರವಾಗಿದೆ. "ಹಶಿ ಚ(6–1–114)" ಸೂತ್ರವು ಪೂರ್ವಸೂತ್ರವಾಗಿದೆ. ಆದ್ದರಿಂದ "ರೋ ರಿ(8–3–14)" ಸೂತ್ರಕ್ಕೆ ಪ್ರಕೃತ ಪರಿಭಾಷೆಯಿಂದ ಇಲ್ಲಿ ಅವಕಾಶವಿರುವದು. ಅದರೆ ಈ "ರೋ ರಿ(8–3–14)" ಸೂತ್ರವು ಅಸಿದ್ಧ ಕಾಣ್ಡದಲ್ಲಿದೆ (8.3.14)."ಪೂರ್ವತ್ರಾಸಿದ್ಧಮ್(8–2–1)" ಸೂತ್ರದ ಪ್ರಕಾರ ಸಪಾದ ಸಪ್ತಾಧ್ಯಾಯಿಯ ದೃಷ್ಟಿಯಲ್ಲಿ ತ್ರಿಪಾದಿಯು ಅಸಿದ್ಧವಾಗುತ್ತದೆ. ಆದ್ದರಿಂದ "ರೋ ರಿ(8–3–14)" ಎಂಬ ಸೂತ್ರಕ್ಕೆ ಇಲ್ಲಿ ಅವಕಾಶವಿರುವದಿಲ್ಲ. ಗತ್ಯಂತರವಿಲ್ಲದೆ "ಹಶಿ ಚ(6–1–114)" ಎಂಬ ಸೂತ್ರಕ್ಕೇನೇ ಇಲ್ಲಿ ಪ್ರಾಧಾನ್ಯವಿದ್ದು, ಪೂರ್ವ 'ರೇಫ'ಕ್ಕೆ 'ಉತ್ವ' ( ಉ) ಬಂದು ಮನ+ಉ+ರಥಃ ಎಂದಾಗಿ ಮನೋರಥಃ ಎಂದು ರೂಪವು ಸಿದ್ಧವಾಗುತ್ತದೆ.

ಹಾಗಾದರೆ "ವಿಪ್ರತಿಷೇಧೇ ಪರಂ ಕಾರ್ಯಮ್(1–4–2)" ಎಂಬ ಸೂತ್ರಕ್ಕೆ ಸಾರ್ಥಕ್ಯ ಯಾವಾಗ ಬರುವದು ಎಂದರೆ, ಸಪಾದ–ಸಪ್ತಾಧ್ಯಾಯಿಯಲ್ಲಿಯೇ ಎರಡು ಸೂತ್ರಗಳು ತುಲ್ಯಬಲ ವಿರೋಧವನ್ನು ಹೊಂದಿದಾಗ ಪ್ರಕೃತ ಪರಿಭಾಷಾ ಸೂತ್ರವು ಸಾರ್ಥಕ್ಯವನ್ನು ಹೊಂದುತ್ತದೆ.

### (ಸು–ಲೋಪವನ್ನು ವಿಧಿಸುವ ಸೂತ್ರ)

**ಸೂತ್ರ 114.ಏತತ್ತದೋಃ ಸುಲೋಪೋऽಕೋರನಞ್–ಸಮಾಸೇ ಹಲಿ। (6.1.132)**

ವೃತ್ತಿ– ಅ–ಕಕಾರಯೋಃ ಏತತ್–ತದೋಃ ಯಃ ಸುಃ ತಸ್ಯ ಲೋಪಃ ಹಲಿ, ನ ತು ನಞ್–ಸಮಾಸೇ। ಏಷ ವಿಷ್ಣುಃ। ಸ ಶಂಭುಃ। ಅಕೋಃ ಕಿಮ್? ಏಷಕೋ ರುದ್ರಃ। ಅನಞ್–ಸಮಾಸೇ ಕಿಮ್? ಅಸಃ ಶಿವಃ। ಹಲಿ ಕಿಮ್? ಏಷೋऽತ್ರ।

ಪ.ಛೇ. – ಏತತ್ತದೋಃ ಸುಲೋಪಃ ಅಕೋಃ ಅನಞ್–ಸಮಾಸೇ ಹಲಿ।

ಅರ್ಥ – 'ಹಲ್' ವರ್ಣಕ್ಕೆ ಪರದಲ್ಲಿರುವ 'ಏತದ್' ಮತ್ತು 'ತದ್' ಶಬ್ದಗಳ ನಂತರ ಇರುವ ಸು– ಪ್ರತ್ಯಯಕ್ಕೆ ಲೋಪವು ಬರುತ್ತದೆ. ಆದರೆ ಆ ಎರಡು ಶಬ್ದಗಳಲ್ಲಿ 'ಅಕಚ್' ಪ್ರತ್ಯಯವು ಇರಬಾರದು. ಮತ್ತು 'ನಞ್' ಸಮಾಸವೂ ಇರಬಾರದು.

ಸೂತ್ರದಲ್ಲಿ 'ಅಕೋಃ' ಎಂಬ ಶಬ್ದಕ್ಕೆ 'ನ ವಿದ್ಯತೇ' 'ಕ್'– ಕಾರಃ ಯಯೋಃ ತೌ, ತಯೋಃ' ಅಂದರೆ 'ಕ್'– ಕಾರ ರಹಿತವಾದ (ಅಕಚ್ ಪ್ರತ್ಯಯವಿಲ್ಲದ) 'ಏತದ್' ಮತ್ತು 'ತದ್' ಶಬ್ದಗಳು ಎಂದರ್ಥ.

ಅಕಚ್ ಪ್ರತ್ಯಯವಿಲ್ಲದ ಉದಾಹರಣೆಗಳು – ಏಷ ಬಾಲಃ। ಸ ಬಾಲಃ।

ಅಕಚ್ ಪ್ರತ್ಯಯವಿರುವ ಉದಾಹರಣೆಗಳು – ಏಷಕೋ ರುದ್ರಃ। ಸಕೋ ಬಾಲಕಃ

ಮೇಲೆ ಹೇಳಿದ ಉದಾಹರಣೆಗಳಲ್ಲಿ 'ಹಲ್' ವರ್ಣ ಪರದಲ್ಲಿದ್ದು 'ಅಕಚ್' ಪ್ರತ್ಯಯ ಮತ್ತು 'ನಞ್' ಸಮಾಸವೂ ಇಲ್ಲದೇ ಇರುವಾಗ ಸುಲೋಪವಾಗುತ್ತದೆ ಎಂಬುದನ್ನು ಗಮನಿಸಬೇಕು.

ಉದಾಹರಣೆ-1. ಏಷ ವಿಷ್ಣುಃ। ಇಲ್ಲಿ 'ಹಲ್' ವರ್ಣ (ವ್) ಪರದಲ್ಲಿದ್ದು, 'ಅಕಚ್' ಪ್ರತ್ಯಯ ಮತ್ತು 'ನಞ್' ಸಮಾಸಗಳು ಪರದಲ್ಲಿಲ್ಲ. ಆದ್ದರಿಂದ ಸುಲೋಪವಾಗಿದೆ.

ಉದಾ- 2. ಸ ಶಂಭುಃ। ಈ ಉದಾಹರಣೆಯಲ್ಲಿಯೂ 'ಹಲ್' ವರ್ಣ (ವ್) ಪರದಲ್ಲಿದ್ದು, 'ಅಕಚ್' ಪ್ರತ್ಯಯ ಮತ್ತು 'ನಞ್' ಸಮಾಸಗಳು ಪರದಲ್ಲಿಲ್ಲ. ಆದ್ದರಿಂದ ಸುಲೋಪವಾಗಿದೆ.

ಅಕೋಃ ಕಿಂ? ಎಂಬ ಪ್ರಶ್ನೆಗೆ ಏಷಕೋ ರುದ್ರಃ। ಎಂಬ ಪ್ರತ್ಯುದಾಹರಣೆಯನ್ನೂ ಕೊಡಲಾಗಿದೆ. 'ಏತದ್' ಶಬ್ದಕ್ಕೆ 'ಅಕಚ್' ಪ್ರತ್ಯಯ ಬಂದಿರೋಣದರಿಂದ ಪರದಲ್ಲಿ 'ನಞ್' ಸಮಾಸವಿಲ್ಲದಿದ್ದರೂ 'ಹಲ್' ವರ್ಣ ಪರದಲ್ಲಿದ್ದರೂ ಸುಲೋಪವಾಗಲಿಲ್ಲ.

'ಅನಞ್' ಸಮಾಸೇ ಕಿಂ? ಎಂಬ ಪ್ರಶ್ನೆಗೆ 'ಸಃ ಶಿವಃ' ಎಂಬ ಉದಾಹರಣೆಯನ್ನು ಕೊಡಲಾಗಿದೆ. ಈ ಉದಾಹರಣೆಯಲ್ಲಿ 'ನಞ್' ಸಮಾಸವಿರುವದರಿಂದ 'ಅಕಚ್' ಪ್ರತ್ಯಯವಿಲ್ಲದೆಯೂ 'ಹಲ್' ವರ್ಣವು ಪರದಲ್ಲಿದ್ದರೂ ಸುಲೋಪವಾಗಲಿಲ್ಲ.

ಹಲಿ ಕಿಮ್? ಎಂಬ ಪ್ರಶ್ನೆಗೆ 'ಹಲ್' ಪರದಲ್ಲಿಲ್ಲದಿದ್ದರೆ ಸುಲೋಪವಾಗುವದಿಲ್ಲ ಎಂಬುದಕ್ಕೆ ಏಷೋಽತ್ರ ಎಂಬ ಉದಾಹರಣೆಯನ್ನು ಕೊಡಲಾಗಿದೆ. ಇಲ್ಲಿ 'ಸ್' ಕಾರಕ್ಕೆ 'ರೇಫ' ಮತ್ತು ಅದಕ್ಕೆ 'ಉ' ಕಾರ ನಂತರ ಗುಣ ಬಂದು ಏಷೋ + ಅತ್ರ ಎಂದಿದ್ದಾಗ ಪೂರ್ವರೂಪ ಬಂದು ಏಷೋಽತ್ರ ಎಂದಾಗಿದೆ.

**(ಪಾದಪೂರಣಕ್ಕಾಗಿ ಸು-ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ 115. ಸೋಽಚಿ ಲೋಪೇ ಚೇತ್ ಪಾದಪೂರಣಮ್। (6.1.134)**

ವೃತ್ತಿ- ಸ ಇತ್ಯಸ್ಯ ಸೋಃ ಲೋಪಃ ಸ್ಯಾತ್ ಅಚಿ, ಪಾದಶ್ಚೇತ್ ಲೋಪೇ ಸತ್ಯೇವ ಪೂರ್ಯೇತ। 1.ಸೇಮಾಮವಿಡ್ಢಿ ಪ್ರಭೃತಿಮ್। 2. ಸೈಷ ದಾಶರಥೀ ರಾಮಃ।

ಪ.ಛೇ.- ಸಃ, ಅಚಿ, ಲೋಪೇ, ಚೇತ್, ಪಾದಪೂರಣಮ್।

ಅ.ವೃ.-"ಏತತ್ತದೋಃ ಸುಲೋಪೋಽಕೋರನಞ್-ಸಮಾಸೇ ಹಲಿ (6.1.132)" ಸೂತ್ರದಿಂದ 'ಸುಲೋಪಃ' ಎಂಬ ಪದವೂ ಮತ್ತು "ಸ್ಯಶ್ಛಂದಸಿ ಬಹುಲಮ್" (6.1.133) ಸೂತ್ರದಿಂದ 'ಬಹುಲಮ್' ಎಂಬ ಪದವೂ 'ಏವ' ಎಂಬ ಅರ್ಥದಲ್ಲಿ ಅನುವೃತ್ತವಾಗಿದೆ.

ಅರ್ಥ – ಲೋಪವಾದರೆ ಮಾತ್ರವೇ ಛಂದಸ್ಸಿನ ಪಾದಪೂರಣವಾಗುವದಾದರೆ, 'ಅಚ್' ಪರದಲ್ಲಿದ್ದಾಗ 'ತತ್' ಶಬ್ದದ 'ಸು' ವಿಗೆ ಲೋಪವು ಬರುತ್ತದೆ. ವೈದಿಕ ಛಂದಸ್ಸುಗಳಲ್ಲಾಗಲೀ ಲೌಕಿಕ ಶ್ಲೋಕಗಳಲ್ಲಾಗಲೀ ಅಕ್ಷರ ಸಂಖ್ಯೆಗಳ ನಿಯಮವು ಪ್ರತಿ ಪಾದದಲ್ಲಿಯೂ ಛಂದಸ್ ಶಾಸ್ತ್ರದ ಪ್ರಕಾರ ಇರುತ್ತದೆ. ಈ ಸಂಖ್ಯೆಯ ನಿಯಮವನ್ನು ಉಲ್ಲಂಘಿಸಿದರೆ ಛಂದೋಭಂಗವಾಗುತ್ತದೆ. 'ಅನುಷ್ಟುಪ್' 'ತ್ರಿಷ್ಟುಪ್'

'ಗಾಯತ್ರೀ' ಮೊದಲಾದವು ವೈದಿಕ ಛಂದಸ್ಸುಗಳು. 'ಶಾರ್ದೂಲವಿಕ್ರೀಡಿತ' 'ವಸಂತತಿಲಕ' 'ವಂಶಸ್ಥ' ಮೊದಲಾದವು ಲೌಕಿಕ ಛಂದಸ್ಸಿಗೆ ಉದಾಹರಣೆಗಳು.

ಉದಾ–1. "ಸೇಮಾಮವಿಡ್ಢಿ ಪ್ರಭೃತಿಮ್ ಯ ಈಷಿಷೇ" ಎಂಬ ಈ ಪಾದವು ಋಗ್ವೇದದಲ್ಲಿ 'ಜಗತೀ ಛಂದಸ್ಸಿ' ನಲ್ಲಿ ಕಂಡುಬರುತ್ತದೆ. ಈ ಛಂದಸ್ಸಿನಲ್ಲಿ ಒಂದೊಂದು ಪಾದದಲ್ಲಿಯೂ 12 ಅಕ್ಷರಗಳು ಇರುತ್ತವೆ. ಸ + ಸ್ + ಇಮಾಮವಿಡ್ಢಿ ಪ್ರಭೃತಿಮ್ ಎಂಬಲ್ಲಿ 'ಸ್' ಎಂಬುದು ಸು–ವಿನ ಅನುಬಂಧರಹಿತವಾದ ರೂಪ. ಇಲ್ಲಿ 14 ವರ್ಣಗಳಿವೆ. ನಮಗೆ ಈ ಛಂದಸ್ಸಿನ ಪ್ರಕಾರ 12 ವರ್ಣಗಳು ಮಾತ್ರವಿರಬೇಕು. ಈ ಮೇಲಿನ ಉದಾಹರಣೆಯಲ್ಲಿ 'ಅಚ್' (ಇ) ಪರದಲ್ಲಿದ್ದು 'ಸ್' ಕಾರ ಲೋಪವಾದರೆ 13 ವರ್ಣಗಳು ಉಳಿಯುತ್ತವೆ 'ಅ'ಕಾರಾನ್ತವಾದ 'ಸ್' ಮತ್ತು ಅದರ ಪರದಲ್ಲಿರುವ 'ಇ' ಇವೆರಡಕ್ಕು ಗುಣ ಬಂದರೆ 'ಸೇ' ಎಂದಾದಾಗ 12 ವರ್ಣಗಳಾಗಿ ಛಂದೋಭಂಗವಾಗುವದಿಲ್ಲ. ಛಂದೋಭಂಗವಾಗದೇ ಪಾದಪೂರಣವಾಗಬೇಕಾಗಿದ್ದರೆ ಮಾತ್ರ 'ಅಚ್' ಪರದಲ್ಲಿದ್ದಾಗ 'ತತ್' ಶಬ್ದದ ಪ್ರಥಮೈಕವಚನ ಪ್ರತ್ಯಯವಾದ 'ಸ್' (ಸು)ಗೆ ಲೋಪ ಬರುತ್ತದೆ. ಮೇಲಿನ ಉದಾಹರಣೆಯಲ್ಲಿ ಈ ನಿಯಮವು ಪಾಲಿತವಾಗಿರುವುದರಿಂದ ಛಂದೋಭಂಗವಾಗಲಿಲ್ಲ.

ಉದಾ–2. ಸೈಷ ದಾಶರಥೀ ರಾಮಃ। ಈ ಪಾದವು ವಾಲ್ಮೀಕಿ ರಾಮಾಯಣದಿಂದ ಆಯ್ದುಕೊಳ್ಳಲ್ಪಟ್ಟಿದೆ. ಪ್ರಕೃತ ಸೂತ್ರದ ನಿಯಮದಿಂದ 'ಅನುಷ್ಟುಪ್' ವೃತ್ತದಲ್ಲಿ 8 ಅಕ್ಷರಗಳಿರಬೇಕು. 'ಸ+ಸ್+ಏಷ ದಾಶರಥೀ ರಾಮಃ' ಎಂದಿದ್ದಾಗ 10 ವರ್ಣಗಳಿರುತ್ತವೆ. ಪಾದಪೂರಣವಾಗಬೇಕಾದರೆ 'ಅಚ್' (ಏ) ವರ್ಣವು ಪರದಲ್ಲಿದ್ದು ಪೂರ್ವದಲ್ಲಿರುವ 'ತತ್' ಶಬ್ದದ ಸ್(ಸು) ಪ್ರತ್ಯಯವು ಲೋಪವಾದರೆ ಮಾತ್ರ 8 ವರ್ಣಗಳಾಗುತ್ತವೆ. ಪ್ರಕೃತದಲ್ಲಿ 'ಸ + ಏಷ ದಾಶರಥೀ ರಾಮಃ' ಎಂಬಲ್ಲಿ ಸು–ಲೋಪವಾಗಿದೆ. ಈಗ 9 ವರ್ಣಗಳಿವೆ. ಪರದಲ್ಲಿ 'ಅಚ್' (ಏ) ಇರುವುದರಿಂದ ವೃದ್ಧಿಸನ್ಧಿಯಾಗಿ 'ಸೈಷ' ಎಂದು 8 ವರ್ಣಗಳಾಗುತ್ತವೆ. ಹಾಗಾಗಿ ಛಂದೋಭಂಗವಾಗದೇ ಪಾದಪೂರಣವಾಗಿದೆ.

**॥ಇತಿ ವಿಸರ್ಗ ಸನ್ಧಿ (4)ಪ್ರಕರಣ ಮುಗಿಯಿತು॥**

**ಇಲ್ಲಿಗೆ ಸನ್ಧಿಪ್ರಕರಣಗಳು ಮುಗಿದವು.**

# ॥ ಷಡ್ಲಿಙ್ಗೆ ಪ್ರಕರಣಮ್ ॥

(ಸೂತ್ರ 116-215 ರವರೆಗೆ)

# 5. ಅಜನ್ತ ಪುಲ್ಲಿಂಗ ಪ್ರಕರಣಮ್

**ಸೂತ್ರ 116. ಅರ್ಥವದಧಾತುರಪ್ರತ್ಯಯಃ ಪ್ರಾತಿಪದಿಕಮ್ (1.2.45)**

ವೃತ್ತಿಃ – ಧಾತುಂ, ಪ್ರತ್ಯಯಂ, ಪ್ರತ್ಯಯಾನ್ತಂ ಚ ವರ್ಜಯಿತ್ವಾ ಅರ್ಥವತ್ ಶಬ್ದಸ್ವರೂಪಂ ಪ್ರಾತಿಪದಿಕಸಂಜ್ಞಂ ಸ್ಯಾತ್।

ಪ. ಛೇ. – ಅರ್ಥವತ್, ಅಧಾತುಃ, ಅಪ್ರತ್ಯಯಃ, ಪ್ರಾತಿಪದಿಕಮ್।

ಅ.ವ್ಯ.– ಶಬ್ದಾನುಶಾಸನಕ್ಕೆ ಇದು ವಿಷಯವಾಗಿರುವದರಿಂದ 'ಶಬ್ದಸ್ವರೂಪಮ್' ಎಂಬ ವಿಶೇಷ್ಯವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು.

ಅರ್ಥ– ಧಾತು, ಪ್ರತ್ಯಯ, ಮತ್ತು ಪ್ರತ್ಯಯಾನ್ತ ಶಬ್ದಗಳನ್ನು ಬಿಟ್ಟು ಉಳಿದ ಅರ್ಥವತ್ತಾದ ಶಬ್ದಸ್ವರೂಪಕ್ಕೆ ಪ್ರಾತಿಪದಿಕವೆಂಬ ಸಂಜ್ಞೆಯು ವಿಧಿಸಲ್ಪಡುತ್ತದೆ. ಧಾತುವಿಗೂ ಅರ್ಥವಿರುವದರಿಂದ ಅದನ್ನು ವ್ಯಾವೃತ್ತಿ ಮಾಡುವದಕ್ಕಾಗಿ 'ಅಧಾತುಃ' ಎನ್ನುವ ಪದವನ್ನು ಸೂತ್ರದಲ್ಲಿ ಸೇರಿಸಿದ್ದಾರೆ. 'ಸುಪ್' 'ಅಣ್' ಮೊದಲಾದ ಪ್ರತ್ಯಯಗಳಿಗೂ ಅರ್ಥವಿರುತ್ತದೆ. ಅದರ ನಿವೃತ್ತಿಗಾಗಿ 'ಅಪ್ರತ್ಯಯಃ' ಎಂಬುದನ್ನು ಸೇರಿಸಲಾಗಿದೆ. 'ಪ್ರತ್ಯಯಗ್ರಹಣೇ ತದನ್ತಗ್ರಹಣಮ್' ಎಂಬ ಪರಿಭಾಷೆಯಿಂದ ಸೂತ್ರದಲ್ಲಿ 'ಅಪ್ರತ್ಯಯಃ'ಎಂಬಲ್ಲಿರುವ 'ಪ್ರತ್ಯಯ' ಶಬ್ದದಿಂದ 'ಪ್ರತ್ಯಯಾನ್ತದ' ಗ್ರಹಣವೂ ಆಗುತ್ತದೆ. ಆದ್ದರಿಂದ ವೃತ್ತಿಯಲ್ಲಿ, 'ಪ್ರತ್ಯಯಂ ಪ್ರತ್ಯಯಾನ್ತಂ ಚ' ಎಂದು ಹೇಳಿದ್ದಾರೆ. ಇದರಿಂದ ಪ್ರತ್ಯಯಾನ್ತಕ್ಕೂ ಈ ಸಂಜ್ಞೆಯು ನಿಷೇಧಿಸಲ್ಪಡುತ್ತದೆ. ಮತ್ತು ಅರ್ಥವತ್ತಾದ ಧಾತು, ಪ್ರತ್ಯಯ, ಮತ್ತು ಪ್ರತ್ಯಯಾನ್ತಗಳಿಗೆ 'ಪ್ರಾತಿಪದಿಕ' ಸಂಜ್ಞೆಯು ನಿಷೇಧಿಸಲ್ಪಟ್ಟಿದೆ.

ಉದಾ– ರಾಮ ಶಬ್ದವು ಅರ್ಥವತ್ತಾಗಿದೆ. ಆದ್ದರಿಂದ ಇದಕ್ಕೆ 'ಪ್ರಾತಿಪದಿಕ' ಸಂಜ್ಞೆಯು ಬರುತ್ತದೆ. ಇದು ಧಾತುವಲ್ಲ, ಹಾಗೆಯೇ ಪ್ರತ್ಯಯವೂ ಅಲ್ಲ. ಮತ್ತು ಪ್ರತ್ಯಯಾನ್ತವೂ ಅಲ್ಲ. ಈ ರಾಮ ಶಬ್ದವು 'ಘಞ್' ಎಂಬ 'ಕೃತ್' ಪ್ರತ್ಯಯದಿಂದ ಕೂಡಿ ಪ್ರತ್ಯಯಾನ್ತ ಶಬ್ದವಾಗಿ 'ಪ್ರಾತಿಪದಿಕ' ಸಂಜ್ಞೆಯನ್ನು ಪಡೆದಿದೆ. ಆದರೆ, 'ಪ್ರತ್ಯಯಾನ್ತಂ ಚ ವರ್ಜಯಿತ್ವಾ' ಎಂದು ಹೇಳಿದ್ದು ವ್ಯರ್ಥವಲ್ಲವೇ? ಎಂದು ಹೀಗೆ ಪ್ರಶ್ನೆ ಸಂಭವಿಸಬಹುದು.

ಅದಕ್ಕೆ ಸಮಾಧಾನವನ್ನು ಹೀಗೆ ಹೇಳಬಹುದು. ಶಬ್ದಗಳ ವಿಷಯದಲ್ಲಿ, ವ್ಯುತ್ಪನ್ನ ಶಬ್ದ, ಮತ್ತು ಅವ್ಯುತ್ಪನ್ನ ಶಬ್ದಗಳೆಂದು ಎರಡು ಪಕ್ಷಗಳಿವೆ. ಹೀಗೆ 'ವ್ಯುತ್ಪತ್ತಿ ಪಕ್ಷದ' ಅನುಸಾರವಾಗಿ ಎಲ್ಲ ಶಬ್ದಗಳು ಪ್ರತ್ಯಯದ ಜೋಡಣೆಯಿಂದ ತಮ್ಮ ತಮ್ಮ ರೂಪಗಳನ್ನು ತಾಳಿವೆ.

ಉದಾಹರಣೆ– 'ರಾಮ' ಶಬ್ದವು ರಮು–ಕ್ರೀಡಾಯಾಂ ಎಂಬ ಧಾತುವಿಗೆ 'ಹಲಶ್ಚ'

ಸೂತ್ರದಿಂದ 'ಘಞ್' ಪ್ರತ್ಯಯವನ್ನು ಸೇರಿಸಿದ ನಂತರ ಸಿದ್ಧವಾಗಿದೆ. ಹೀಗೆ ನಿಷ್ಪನ್ನವಾದ ಈ ಶಬ್ದವು ಪ್ರತ್ಯಯಾನ್ತವಾಗಿರುವದರಿಂದ, ಈ ಪ್ರಕೃತ ಸೂತ್ರಕ್ಕೆ ಉದಾಹರಣೆಯಾಗುವದಿಲ್ಲ. ಇದು ನಿಜ, ಆದರೆ ಅವ್ಯುತ್ಪನ್ನವಾದ 'ರಾಮ' ಶಬ್ದವೇ ಇದಕ್ಕೆ ಉದಾಹರಣೆಯಾಗುತ್ತದೆ. ಅವ್ಯುತ್ಪನ್ನವಾದ ಶಬ್ದವೆಂದರೆ, ಯಾವದೇ ಪ್ರತ್ಯಯವನ್ನು ಸೇರಿಸದೇ ಇದ್ದ ಅರ್ಥವತ್ತಾದ ಶಬ್ದಸ್ವರೂಪ. ಈ ತರಹದ ಅರ್ಥವತ್ತಾದ ಪ್ರತ್ಯಯಾನ್ತವಲ್ಲದ 'ರಾಮ' ಶಬ್ದವು ಇಲ್ಲಿ ವಿವಕ್ಷಿತವಾಗಿರುವದರಿಂದ, ಮೇಲಿನ ಪ್ರಶ್ನೆಗೆ ಉತ್ತರವನ್ನು ಹೇಳಿದಂತೆ ಆಯಿತು.

'ಪ್ರಾತಿಪದಿಕ' ಸಂಜ್ಞೆಯು 'ಸುಪ್' ಮೊದಲಾದ ಇಪ್ಪತ್ತೊಂದು ಪ್ರತ್ಯಯಗಳನ್ನು ಸೇರಿಸುವದರಿಂದ ಪದಗಳಾಗುವದಕ್ಕೆ ಸಹಾಯಕವಾಗಿದೆ.

'ಅರ್ಥವತ್' ಎಂದು ಹೇಳುವದರಿಂದ ನಿರರ್ಥಕ ಶಬ್ದಗಳಿಗೆ 'ಪ್ರಾತಿಪದಿಕ' ಸಂಜ್ಞೆಯು ಬರುವದಿಲ್ಲ. ಹೀಗೆ ಹೇಳದೇ ಇದ್ದರೆ ಅದಕ್ಕೂ 'ಪ್ರಾತಿಪದಿಕ' ಸಂಜ್ಞೆಯು ಬರುತ್ತಿತ್ತು.

'ಅಧಾತುಃ' ಎಂದು ಹೇಳುವದರಿಂದ, 'ಅಹನ್' ಶಬ್ದಕ್ಕೆ 'ಪ್ರಾತಿಪದಿಕ' ಸಂಜ್ಞೆಯು ಬರುವದಿಲ್ಲ. ಯಾಕೆಂದರೆ ಇಲ್ಲಿ 'ಹನ್' ಎಂಬುದು ಧಾತುವಾಗಿದೆ. ಹೀಗೆ 'ಅಧಾತುಃ' ಹೇಳದೇ ಇದ್ದರೆ, ಪ್ರಾತಿಪದಿಕ ಸಂಜ್ಞೆಯು ಬಂದು 'ನ ಲೋಪಃ ಪ್ರಾತಿಪದಿಕಾನ್ತಸ್ಯ' ಎಂಬ ಸೂತ್ರದಿಂದ, 'ನ್' ಕಾರ ಲೋಪವಾಗಿ ಅನಿಷ್ಟರೂಪವು ಸಂಭವಿಸುತ್ತಿತ್ತು. 'ಅಹನ್' ಎಂಬ ರೂಪವು 'ಹನ್' ಧಾತುವಿನ 'ಲಙ್' ಲಕಾರದ ರೂಪವಾಗುವದರಿಂದ ಧಾತುವಾಗಿದೆ. ಆದ್ದರಿಂದ ಧಾತುವಿಗೆ ಪ್ರಾತಿಪದಿಕ ಸಂಜ್ಞೆಯನ್ನು ನಿಷೇಧಿಸಲಾಗಿದೆ.

ಪ್ರತ್ಯಯವನ್ನು ಬಿಟ್ಟು ಎಂದು ಹೇಳಿರುವದರಿಂದ 'ಹರಿಷು' 'ಕರೋಷಿ' ಎಂಬಲ್ಲಿ 'ಸುಪ್' ಪ್ರತ್ಯಯ ಹಾಗೂ 'ಸಿಪ್' ಪ್ರತ್ಯಯಗಳು ಪ್ರತ್ಯೇಕವಾಗಿ ಅರ್ಥವತ್ ಗಳಾಗಿವೆ. ಹಾಗೂ ಪ್ರತ್ಯಯಾನ್ತವಾಗಿಯೂ ಇಲ್ಲ. ಆದ್ದರಿಂದ ಪ್ರಾತಿಪದಿಕ ಸಂಜ್ಞೆಯು ಬರುತ್ತಿತ್ತು. ಇದರ ನಿವೃತ್ತಿಗಾಗಿ 'ಅಪ್ರತ್ಯಯಃ' ಎಂದು ಹೇಳಿದ್ದಾರೆ.

ಪ್ರತ್ಯಯವನ್ನು ಬಿಟ್ಟು ಎಂದು ಹೇಳಿರುವದರಿಂದ 'ರಾಮೇಷು' ಎಂಬ ಈ ಸಮುದಾಯಾಕ್ಕೆ ಪ್ರಾತಿಪದಿಕ ಸಂಜ್ಞೆಯು ಬರುವದಿಲ್ಲ. ಹಾಗೊಂದುವೇಳೆ ಬಂದಿದ್ದರೆ, 'ಸುಪೋ ಧಾತುಪ್ರಾತಿಪದಿಕಯೋಃ (2.4.71) ಎಂಬ ಸೂತ್ರದಿಂದ 'ಸು' ವಿಗೆ ಲೋಪವು ಬರುತ್ತಿತ್ತು. ಆದರೆ 'ರಾಮೇಷು' ಎಂಬುದು ಪ್ರತ್ಯಯಾನ್ತವಾಗುವದರಿಂದ ಇದಕ್ಕೆ ಪ್ರಾತಿಪದಿಕ ಸಂಜ್ಞೆಯು ಬರುವದಿಲ್ಲ. (ಪದ ಸಂಜ್ಞೆಯೇ ಬರುತ್ತದೆ).

ಈ ವಿಷಯದಲ್ಲಿ ಒಂದು ಸುಂದರವಾದ ಸುಭಾಷಿತವು ಪ್ರಸಿದ್ಧವಿದೆ.

**ಸುಭಾಷಿತ**

**ವಿದ್ವಾನ್ ಕೀದೃಗ್ ವಚೋ ಬ್ರೂತೇ? ಕೋ ರೋಗೀ? ಕಷ್ಟ ನಾಸ್ತಿಕಃ?।**
**ಕೀದೃಕ್-ಚಂದ್ರಂ ನ ಪಶ್ಯನ್ತಿ? ಸೂತ್ರಂ ತತ್ ಪಾಣಿನೇರ್ವದ॥**

(ಪ್ರಾತಿಪದಿಕ ಸಂಜ್ಞಾ ವಿಧಾಯಕ ಸೂತ್ರ)

**ಸೂತ್ರ 117. ಕೃತ್ತದ್ಧಿತ-ಸಮಾಸಾಶ್ಚ (1.2.46)**

ವೃತ್ತಿಃ - ಕೃತ್-ತದ್ಧಿತಾನ್ತೌ ಸಮಾಸಾಶ್ಚ ತಥಾ ಸ್ಯುಃ।

ಪ.ಛೇ. - ಕೃತ್-ತದ್ಧಿತ-ಸಮಾಸಾಃ, ಚ।

ಅ.ವ್ಯ. - "ಅರ್ಥವದಧಾತುರಪ್ರತ್ಯಯಃ ಪ್ರಾತಿಪದಿಕಮ್ (1.2.45)" ಸೂತ್ರದಿಂದ 'ಪ್ರಾತಿಪದಿಕಮ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- ಕೃದನ್ತ, ತದ್ಧಿತಾನ್ತ ಮತ್ತು ಸಮಾಸ ಇವುಗಳು 'ಪ್ರಾತಿಪದಿಕ' ಸಂಜ್ಞೆಯನ್ನು ಹೊಂದುತ್ತವೆ. ಕೃತ್ ಪ್ರತ್ಯಯಗಳನ್ನು ಧಾತುವಿನ ನಂತರ ಸೇರಿಸಲಾಗುತ್ತದೆ. ಆ ಶಬ್ದಗಳು ಕೃದನ್ತಗಳೆನಿಸಿಕೊಳ್ಳುತ್ತವೆ. ತದ್ಧಿತ ಪ್ರತ್ಯಯಗಳು ಸುಬನ್ತಗಳಮೇಲೆ ಸೇರುತ್ತವೆ. ಅನೇಕ ಪದಗಳನ್ನು ಸೇರಿಸಿ ಒಂದು ಸಂಕ್ಷಿಪ್ತ ಪದವಾಗಿ ರೂಪವನ್ನು ತಾಳುವ ಶಬ್ದಕ್ಕೆ ಸಮಾಸವೆಂದು ಹೇಳುತ್ತಾರೆ. ಈ ಸೂತ್ರದಿಂದ ಕೃದನ್ತ, ತದ್ಧಿತಾನ್ತ ಮತ್ತು ಸಮಾಸಗಳಿಗೆ ಪ್ರಾತಿಪದಿಕ ಸಂಜ್ಞೆಯು ಬರುತ್ತದೆ. ಇವು ಯೌಗಿಕ ಶಬ್ದಗಳಾಗಿರುವದರಿಂದ ವ್ಯುತ್ಪನ್ನ ಶಬ್ದಗಳಾಗಿವೆ. ಈ ಪ್ರಕೃತ ಸೂತ್ರದಿಂದ ಇವುಗಳಿಗೆ ಪ್ರಾತಿಪದಿಕ ಸಂಜ್ಞೆಯು ಬರುತ್ತದೆ. ಈ ಸೂತ್ರವು ಹಿಂದಿನ ಸೂತ್ರಕ್ಕೆ ಅಪವಾದವಾಗಿದೆ.

ಅವ್ಯುತ್ಪನ್ನ ಶಬ್ದಗಳಿಗೆ "ಅರ್ಥವದಧಾತುರಪ್ರತ್ಯಯಃ ಪ್ರಾತಿಪದಿಕಮ್ (1.2.45)" ಸೂತ್ರದಿಂದ ಪ್ರಾತಿಪದಿಕ ಸಂಜ್ಞೆಯು ಬರುತ್ತದೆ.

(ಸು ಮೊದಲಾದ 21 ಪ್ರತ್ಯಯಗಳನ್ನು ವಿಧಿಸುವ ಸೂತ್ರ)

**ಸೂತ್ರ 118. ಸ್ವೌಜಸಮೌಟ್-ಛಸ್ಟಾ-ಭ್ಯಾಂ-ಭಿಸ್-ಙೇ-ಭ್ಯಾಂ-ಭ್ಯಸ್ ಙಸಿ-ಭ್ಯಾಂ-ಭ್ಯಸ್-**

ಙಸೋಸಾಮ್ -ಙ್ಯೋಸ್ಸುಪ್-(4.1.2)

ವೃತ್ತಿಃ - ಸು ಔ ಜಸ್ ಇತಿ ಪ್ರಥಮಾ। ಅಮ್ ಔಟ್ ಶಸ್ ಇತಿ ದ್ವಿತೀಯಾ। ಟಾ ಭ್ಯಾಮ್ ಭಿಸ್ ಇತಿ ತೃತೀಯಾ। ಙೇ ಭ್ಯಾಮ್ ಭ್ಯಸ್ ಇತಿ ಚತುರ್ಥೀ। ಙಸಿ ಭ್ಯಾಮ್ ಭ್ಯಸ್ ಇತಿ ಪಞ್ಚಮೀ। ಙಸ್ ಓಸ್ ಆಮ್ ಇತಿ ಷಷ್ಠೀ। ಙಿಓಸ್ ಸುಪ್ ಇತಿ ಸಪ್ತಮೀ।

ಪ. ಛೇ. - ವೃತ್ತಿಯಲ್ಲಿ ಕೊಡಲಾಗಿದೆ.

ಅರ್ಥ - ಈ 21 ಪ್ರತ್ಯಯಗಳನ್ನು 'ಸುಪ್' ಪ್ರತ್ಯಯಗಳೆಂದು ಕರೆಯುತ್ತಾರೆ. 'ಸು' ವಿನಿಂದ ಆರಂಭವಾಗಿ 'ಪ್' ನಲ್ಲಿ ಮುಗಿಯುವದರಿಂದ 'ಸುಪ್' ಎಂಬ ಪ್ರತ್ಯಾಹಾರದಲ್ಲಿ ಇವುಗಳನ್ನು ಸಂಗ್ರಹಿಸಲಾಗಿದೆ. ಒಂದೊಂದು ವಿಭಕ್ತಿಯಲ್ಲಿಯೂ ಕ್ರಮವಾಗಿ ಮೂರು-ಮೂರು ಪ್ರತ್ಯಯಗಳನ್ನು ವಿಂಗಡಿಸಲಾಗಿದೆ. ಆಮೇಲೆ ಪ್ರಾತಿಪದಿಕದಜೊತೆಗೆ, ಈ 7 ವಿಭಕ್ತಿಗಳ ಮೂರು-ಮೂರು ಪ್ರತ್ಯಯಗಳನ್ನು ಸೇರಿಸಿದರೆ, 21 ರೂಪಗಳು ಸಿಗುತ್ತವೆ. ಒಂದೇ ಪ್ರಾತಿಪದಿಕಕ್ಕೆ 21 ರೂಪಗಳು ಏಕಕಾಲಕ್ಕೆ

ಸೂತ್ರದಿಂದ 'ಘಞ್' ಪ್ರತ್ಯಯವನ್ನು ಸೇರಿಸಿದ ನಂತರ ಸಿದ್ಧವಾಗಿದೆ. ಹೀಗೆ ನಿಷ್ಪನ್ನವಾದ ಈ ಶಬ್ದವು ಪ್ರತ್ಯಯಾನ್ತವಾಗಿರುವದರಿಂದ, ಈ ಪ್ರಕೃತ ಸೂತ್ರಕ್ಕೆ ಉದಾಹರಣೆಯಾಗುವದಿಲ್ಲ. ಇದು ನಿಜ, ಆದರೆ ಅವ್ಯುತ್ಪನ್ನವಾದ 'ರಾಮ' ಶಬ್ದವೇ ಇದಕ್ಕೆ ಉದಾಹರಣೆಯಾಗುತ್ತದೆ. ಅವ್ಯುತ್ಪನ್ನವಾದ ಶಬ್ದವೆಂದರೆ, ಯಾವದೇ ಪ್ರತ್ಯಯವನ್ನು ಸೇರಿಸದೇ ಇದ್ದ ಅರ್ಥವತ್ತಾದ ಶಬ್ದಸ್ವರೂಪ. ಈ ತರಹದ ಅರ್ಥವತ್ತಾದ ಪ್ರತ್ಯಯಾನ್ತವಲ್ಲದ 'ರಾಮ' ಶಬ್ದವು ಇಲ್ಲಿ ವಿವಕ್ಷಿತವಾಗಿರುವದರಿಂದ, ಮೇಲಿನ ಪ್ರಶ್ನೆಗೆ ಉತ್ತರವನ್ನು ಹೇಳಿದಂತೆ ಆಯಿತು.

'ಪ್ರಾತಿಪದಿಕ' ಸಂಜ್ಞೆಯು 'ಸುಪ್' ಮೊದಲಾದ ಇಪ್ಪತ್ತೊಂದು ಪ್ರತ್ಯಯಗಳನ್ನು ಸೇರಿಸುವದರಿಂದ ಪದಗಳಾಗುವದಕ್ಕೆ ಸಹಾಯಕವಾಗಿದೆ.

'ಅರ್ಥವತ್' ಎಂದು ಹೇಳುವದರಿಂದ ನಿರರ್ಥಕ ಶಬ್ದಗಳಿಗೆ 'ಪ್ರಾತಿಪದಿಕ' ಸಂಜ್ಞೆಯು ಬರುವದಿಲ್ಲ. ಹೀಗೆ ಹೇಳದೇ ಇದ್ದರೆ ಅದಕ್ಕೂ 'ಪ್ರಾತಿಪದಿಕ' ಸಂಜ್ಞೆಯು ಬರುತ್ತಿತ್ತು.

'ಅಧಾತುಃ' ಎಂದು ಹೇಳುವದರಿಂದ, 'ಅಹನ್' ಶಬ್ದಕ್ಕೆ 'ಪ್ರಾತಿಪದಿಕ' ಸಂಜ್ಞೆಯು ಬರುವದಿಲ್ಲ. ಯಾಕೆಂದರೆ ಇಲ್ಲಿ 'ಹನ್' ಎಂಬುದು ಧಾತುವಾಗಿದೆ. ಹೀಗೆ 'ಅಧಾತುಃ' ಹೇಳದೇ ಇದ್ದರೆ, ಪ್ರಾತಿಪದಿಕ ಸಂಜ್ಞೆಯು ಬಂದು 'ನ ಲೋಪಃ ಪ್ರಾತಿಪದಿಕಾನ್ತಸ್ಯ' ಎಂಬ ಸೂತ್ರದಿಂದ, 'ನ್' ಕಾರ ಲೋಪವಾಗಿ ಅನಿಷ್ಟರೂಪವು ಸಂಭವಿಸುತ್ತಿತ್ತು. 'ಅಹನ್' ಎಂಬ ರೂಪವು 'ಹನ್' ಧಾತುವಿನ 'ಲಙ್' ಲಕಾರದ ರೂಪವಾಗುವದರಿಂದ ಧಾತುವಾಗಿದೆ. ಆದ್ದರಿಂದ ಧಾತುವಿಗೆ ಪ್ರಾತಿಪದಿಕ ಸಂಜ್ಞೆಯನ್ನು ನಿಷೇಧಿಸಲಾಗಿದೆ.

ಪ್ರತ್ಯಯವನ್ನು ಬಿಟ್ಟು ಎಂದು ಹೇಳಿರುವದರಿಂದ 'ಹರಿಷು' 'ಕರೋಷಿ' ಎಂಬಲ್ಲಿ 'ಸುಪ್' ಪ್ರತ್ಯಯ ಹಾಗೂ 'ಸಿಪ್' ಪ್ರತ್ಯಯಗಳು ಪ್ರತ್ಯೇಕವಾಗಿ ಅರ್ಥವತ್ ಗಳಾಗಿವೆ. ಹಾಗೂ ಪ್ರತ್ಯಯಾನ್ತವಾಗಿಯೂ ಇಲ್ಲ. ಆದ್ದರಿಂದ ಪ್ರಾತಿಪದಿಕ ಸಂಜ್ಞೆಯು ಬರುತ್ತಿತ್ತು. ಇದರ ನಿವೃತ್ತಿಗಾಗಿ 'ಅಪ್ರತ್ಯಯಃ' ಎಂದು ಹೇಳಿದ್ದಾರೆ.

ಪ್ರತ್ಯಯವನ್ನು ಬಿಟ್ಟು ಎಂದು ಹೇಳಿರುವದರಿಂದ 'ರಾಮೇಷು' ಎಂಬ ಈ ಸಮುದಾಯಾಕ್ಕೆ ಪ್ರಾತಿಪದಿಕ ಸಂಜ್ಞೆಯು ಬರುವದಿಲ್ಲ. ಹಾಗೊಂದುವೇಳೆ ಬಂದಿದ್ದರೆ, 'ಸುಪೋ ಧಾತುಪ್ರಾತಿಪದಿಕಯೋಃ (2.4.71) ಎಂಬ ಸೂತ್ರದಿಂದ 'ಸು' ವಿಗೆ ಲೋಪವು ಬರುತ್ತಿತ್ತು. ಆದರೆ 'ರಾಮೇಷು' ಎಂಬುದು ಪ್ರತ್ಯಯಾನ್ತವಾಗುವದರಿಂದ ಇದಕ್ಕೆ ಪ್ರಾತಿಪದಿಕ ಸಂಜ್ಞೆಯು ಬರುವದಿಲ್ಲ. (ಪದ ಸಂಜ್ಞೆಯೇ ಬರುತ್ತದೆ).

ಈ ವಿಷಯದಲ್ಲಿ ಒಂದು ಸುಂದರವಾದ ಸುಭಾಷಿತವು ಪ್ರಸಿದ್ಧವಿದೆ.

**ಸುಭಾಷಿತ**

ವಿದ್ವಾನ್ ಕೀದೃಗ್ ವಚೋ ಬ್ರೂತೇ? ಕೋ ರೋಗೀ? ಕಶ್ಚ ನಾಸ್ತಿಕಃ?।
ಕೀದೃಕ್-ಚಂದ್ರಂ ನ ಪಶ್ಯನ್ತಿ? ಸೂತ್ರಂ ತತ್ ಪಾಣಿನೇರ್ವದ॥

**(ಪ್ರಾತಿಪದಿಕ ಸಂಜ್ಞಾ ವಿಧಾಯಕ ಸೂತ್ರ)**

**ಸೂತ್ರ 117. ಕೃತ್ತದ್ಧಿತ-ಸಮಾಸಾಶ್ಚ (1.2.46)**

ವೃತ್ತಿಃ – ಕೃತ್-ತದ್ಧಿತಾನ್ತೌ ಸಮಾಸಾಶ್ಚ ತಥಾ ಸ್ಯುಃ।

ಪ.ಛೇ. – ಕೃತ್-ತದ್ಧಿತ-ಸಮಾಸಾಃ, ಚ।

ಅ.ವೃ. – "ಅರ್ಥವದಧಾತುರಪ್ರತ್ಯಯಃ ಪ್ರಾತಿಪದಿಕಮ್ (1.2.45)" ಸೂತ್ರದಿಂದ 'ಪ್ರಾತಿಪದಿಕಮ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– ಕೃದನ್ತ, ತದ್ಧಿತಾನ್ತ ಮತ್ತು ಸಮಾಸ ಇವುಗಳು 'ಪ್ರಾತಿಪದಿಕ' ಸಂಜ್ಞೆಯನ್ನು ಹೊಂದುತ್ತವೆ. ಕೃತ್ ಪ್ರತ್ಯಯಗಳನ್ನು ಧಾತುವಿನ ನಂತರ ಸೇರಿಸಲಾಗುತ್ತದೆ. ಆ ಶಬ್ದಗಳು ಕೃದನ್ತಗಳೆನಿಸಿಕೊಳ್ಳುತ್ತವೆ. ತದ್ಧಿತ ಪ್ರತ್ಯಯಗಳು ಸುಬನ್ತಗಳಮೇಲೆ ಸೇರುತ್ತವೆ. ಅನೇಕ ಪದಗಳನ್ನು ಸೇರಿಸಿ ಒಂದು ಸಂಕ್ಷಿಪ್ತ ಪದವಾಗಿ ರೂಪವನ್ನು ತಾಳುವ ಶಬ್ದಕ್ಕೆ ಸಮಾಸವೆಂದು ಹೇಳುತ್ತಾರೆ. ಈ ಸೂತ್ರದಿಂದ ಕೃದನ್ತ, ತದ್ಧಿತಾನ್ತ ಮತ್ತು ಸಮಾಸಗಳಿಗೆ ಪ್ರಾತಿಪದಿಕ ಸಂಜ್ಞೆಯು ಬರುತ್ತದೆ. ಇವು ಯೌಗಿಕ ಶಬ್ದಗಳಾಗಿರುವದರಿಂದ ವ್ಯುತ್ಪನ್ನ ಶಬ್ದಗಳಾಗಿವೆ. ಈ ಪ್ರಕೃತ ಸೂತ್ರದಿಂದ ಇವುಗಳಿಗೆ ಪ್ರಾತಿಪದಿಕ ಸಂಜ್ಞೆಯು ಬರುತ್ತದೆ. ಈ ಸೂತ್ರವು ಹಿಂದಿನ ಸೂತ್ರಕ್ಕೆ ಅಪವಾದವಾಗಿದೆ.

ಅವ್ಯುತ್ಪನ್ನ ಶಬ್ದಗಳಿಗೆ "ಅರ್ಥವದಧಾತುರಪ್ರತ್ಯಯಃ ಪ್ರಾತಿಪದಿಕಮ್ (1.2.45)" ಸೂತ್ರದಿಂದ ಪ್ರಾತಿಪದಿಕ ಸಂಜ್ಞೆಯು ಬರುತ್ತದೆ.

**(ಸು ಮೊದಲಾದ 21 ಪ್ರತ್ಯಯಗಳನ್ನು ವಿಧಿಸುವ ಸೂತ್ರ)**

**ಸೂತ್ರ 118. ಸ್ವೌಜಸಮೌಟ್-ಛಸ್ಟಾ-ಭ್ಯಾಂ-ಭಿಸ್-ಙೇ-ಭ್ಯಾಂ-ಭ್ಯಸ್ ಙಸಿ-ಭ್ಯಾಂ-ಭ್ಯಸ್-**

ಙಸೋಸಾಮ್ –ಙ್ಯೋಸ್ಸುಪ್–(4.1.2)

ವೃತ್ತಿಃ – ಸು ಔ ಜಸ್ ಇತಿ ಪ್ರಥಮಾ। ಅಮ್ ಔಟ್ ಶಸ್ ಇತಿ ದ್ವಿತೀಯಾ। ಟಾ ಭ್ಯಾಮ್ ಭಿಸ್ ಇತಿ ತೃತೀಯಾ। ಙೇ ಭ್ಯಾಮ್ ಭ್ಯಸ್ ಇತಿ ಚತುರ್ಥೀ। ಙಸಿ ಭ್ಯಾಮ್ ಭ್ಯಸ್ ಇತಿ ಪಞ್ಚಮೀ। ಙಸ್ ಓಸ್ ಆಮ್ ಇತಿ ಷಷ್ಠೀ। ಙಿಓಸ್ ಸುಪ್ ಇತಿ ಸಪ್ತಮೀ।

ಪ. ಛೇ. – ವೃತ್ತಿಯಲ್ಲಿ ಕೊಡಲಾಗಿದೆ.

ಅರ್ಥ – ಈ 21 ಪ್ರತ್ಯಯಗಳನ್ನು 'ಸುಪ್' ಪ್ರತ್ಯಯಗಳೆಂದು ಕರೆಯುತ್ತಾರೆ. 'ಸು' ವಿನಿಂದ ಆರಂಭವಾಗಿ 'ಪ್' ನಲ್ಲಿ ಮುಗಿಯುವದರಿಂದ 'ಸುಪ್' ಎಂಬ ಪ್ರತ್ಯಾಹಾರದಲ್ಲಿ ಇವುಗಳನ್ನು ಸಂಗ್ರಹಿಸಲಾಗಿದೆ. ಒಂದೊಂದು ವಿಭಕ್ತಿಯಲ್ಲಿಯೂ ಕ್ರಮವಾಗಿ ಮೂರು-ಮೂರು ಪ್ರತ್ಯಯಗಳನ್ನು ವಿಂಗಡಿಸಲಾಗಿದೆ. ಆಮೇಲೆ ಪ್ರಾತಿಪದಿಕದಜೊತೆಗೆ, ಈ 7 ವಿಭಕ್ತಿಗಳ ಮೂರು-ಮೂರು ಪ್ರತ್ಯಯಗಳನ್ನು ಸೇರಿಸಿದರೆ, 21 ರೂಪಗಳು ಸಿಗುತ್ತವೆ. ಒಂದೇ ಪ್ರಾತಿಪದಿಕಕ್ಕೆ 21 ರೂಪಗಳು ಏಕಕಾಲಕ್ಕೆ

ಸೇರಿಸಲಾಗುವದಿಲ್ಲ. ಈ ವಿಭಕ್ತಿಗಳನ್ನು ಪ್ರಥಮಾ ವಿಭಕ್ತಿಃ, ದ್ವಿತೀಯಾ ವಿಭಕ್ತಿಃ, ತೃತೀಯಾ ವಿಭಕ್ತಿಃ, ಚತುರ್ಥೀ ವಿಭಕ್ತಿಃ, ಪಞ್ಚಮೀ ವಿಭಕ್ತಿಃ, ಷಷ್ಠೀ ವಿಭಕ್ತಿಃ, ಮತ್ತು ಸಪ್ತಮೀ ವಿಭಕ್ತಿಃ ಎಂದು ಕರೆಯಲಾಗಿದೆ. ಸಂಬೋಧನಾರ್ಥವನ್ನು ಸೂಚಿಸುವಾಗ, ಈ ಪ್ರಥಮಾ ವಿಭಕ್ತಿಯು ಸಂಬೋಧನ-ಪ್ರಥಮಾ ವಿಭಕ್ತಿ ಎಂದು ಹೇಳಲ್ಪಡುತ್ತದೆ. ಒಂದೊಂದು ವಿಭಕ್ತಿಯಲ್ಲಿರುವ ಮೂರು ವಚನಗಳನ್ನು ಏಕವಚನ, ದ್ವಿವಚನ ಮತ್ತು ಬಹುವಚನ ಗಳೆಂದು ವೈಯ್ಯಾಕರಣಿಗಳು ವ್ಯವಹರಿಸುತ್ತಾರೆ. ಈ ಏಳು ವಿಭಕ್ತಿಗಳಿಗೆ ಪ್ರತ್ಯೇಕವಾದ ಅರ್ಥಗಳಿವೆ.

**ವಿಭಕ್ತಿ ಪ್ರತ್ಯಯಗಳ ಅರ್ಥಗಳು (ಏಕ ವಚನ ಮಾತ್ರ)**

| ವಿಭಕ್ತಿ | | ಏಕವಚನ (ಒಬ್ಬ) | ಅರ್ಥ |
|---|---|---|---|
| ಪ್ರಥಮಾ- | ರಾಮಃ | ರಾಮನು | ಉ |
| ದ್ವಿತೀಯಾ- | ರಾಮಂ | ರಾಮನನ್ನು | ಅನ್ನು |
| ತೃತೀಯಾ- | ರಾಮೇಣ | 1. ರಾಮನಿಂದ | 1.ಇಂದ |
| | | 2. ರಾಮನ ಜೊತೆಗೆ | 2. ಜೊತೆಗೆ |
| ಚತುರ್ಥೀ- | ರಾಮಾಯ | 1. ರಾಮನಿಗೆ | 1. ಗೆ |
| | | 2. ರಾಮನಿಗೋಸ್ಕರ | 2. ಓಸ್ಕರ |
| ಪಞ್ಚಮೀ- | ರಾಮಾತ್ | 1. ರಾಮನದೆಸೆಯಿಂದ (ಇಂದ-ಕಡೆಯಿಂದ) | |
| | | 1. ದೆಸೆಯಿಂದ (ಇಂದ) | 2. ರಾಮನಿಗಿಂತ |
| | | 2. ಗಿಂತ | 3.ರಾಮನ ಕಾರಣದಿಂದ |
| | | | 3. ಆದುದರಿಂದ |
| ಷಷ್ಠೀ- | ರಾಮಸ್ಯ | 1. ರಾಮನ, | 1. ಅ |
| | | 2. ರಾಮನಿಗೆ | 2. ಗೆ |
| | | | ಷಷ್ಠೀ ಚತುರ್ಥೀ (ಇದನ್ನು ಅರ್ಥದಲ್ಲಿ ಪ್ರಯೋಗವೆಂದು ಹೇಳುತ್ತಾರೆ) |
| ಸಪ್ತಮೀ- | ರಾಮೇ | ರಾಮನಲ್ಲಿ | ಅಲ್ಲಿ, ಒಳಗೆ, ಮೇಲೆ |

(ಈ ಅರ್ಥಗಳ ಹೊರತು ಆ ಸ್ಥಳದಲ್ಲಿ, ಮತ್ತು ಆ ಸಮಯದಲ್ಲಿ ಎಂಬ ಅರ್ಥವೂ ಬರುತ್ತದೆ).

ಸಂ.ಪ್ರಥಮಾ- ಹೇ ರಾಮ ಹೇ(ಎಲೈ) ರಾಮನೇ! ಎಲೈ !

ವಿಶೇಷ-1. ಸಂಬೋಧನ ಪ್ರಥಮಾ ವಿಭಕ್ತಿಯಲ್ಲಿ ಮೂರೂ ವಚನಗಳಿಗೂ ಸಂಬೋಧನಾರ್ಥವಿದ್ದರೂ 'ಏಕವಚನಕ್ಕೆ ಮಾತ್ರ' "ಸಂಬುದ್ಧಿರೇಕವಚನಂ" ಎಂಬ

ಸೂತ್ರದಿಂದ 'ಸಂಬುದ್ಧಿಃ' ಎಂಬ ಸಂಜ್ಞೆಯು ಕೊಡಲಾಗಿದೆ.

2. ರಜಕಸ್ಯ ವಸ್ತ್ರಂ ದದಾತಿ ಎಂಬ ಉದಾಹರಣೆಯಲ್ಲಿ ವಸ್ತ್ರವನ್ನು ಮರಳಿ ಪಡೆಯುವದರಿಂದ ಚತುರ್ಥಿಯ ಅರ್ಥದಲ್ಲಿ ಷಷ್ಠಿಯು ಬಂದಿದೆ.

ಸೂಚನೆ: 'ಇಂದ ಎಂಬ ಪ್ರತ್ಯಯದ ಪ್ರಯೋಗವು ತೃತೀಯಾ ಮತ್ತು ಪಂಚಮೀ ಎರಡರಲ್ಲೂ ಕಂಡು ಬರುತ್ತದೆ. ಈ ವ್ಯತ್ಯಾಸವನ್ನು ಕನ್ನಡದಲ್ಲಿರುವುದನ್ನು ಗಮನಿಸಬೇಕು.

**(ಈ ಕೆಳಗಿನ ಮೂರು ಸೂತ್ರಗಳು ಅಧಿಕಾರ ಸೂತ್ರಗಳು)**

**ಸೂತ್ರ 119. ಙ್ಯಾಪ್-ಪ್ರಾತಿಪದಿಕಾತ್ (4.1.1)**

ಅ.ವ್ಯ.- ಇದು ಅಧಿಕಾರಸೂತ್ರ

**ಸೂತ್ರ 120. ಪ್ರತ್ಯಯಃ (3.1.1)**

ಅ.ವ್ಯ.- ಇದು ಅಧಿಕಾರ ಸೂತ್ರ.

**ಸೂತ್ರ 121. ಪರಶ್ಚ (3.1.2)**

ಅ.ವ್ಯ.- ಇದು ಅಧಿಕಾರ ಸೂತ್ರ.

ವೃತ್ತಿಃ –ಇತ್ಯಧಿಕೃತ್ಯ– ಙ್ಯನ್ತಾತ್, ಆಬನ್ತಾತ್, ಪ್ರಾತಿಪದಿಕಾತ್ ಚ ಪರೇ ಸ್ವಾದಯಃ ಪ್ರತ್ಯಯಾಃ ಸ್ಯುಃ।

ಪ. ಛೇ. – ಪರಃ, ಚ।

ಅರ್ಥ– ಈ ಮೇಲಿನ ಮೂರು ಅಧಿಕಾರ ಸೂತ್ರಗಳನ್ನು ಐದನೆಯ ಅಧ್ಯಾಯ ಮುಗಿಯುವವರೆಗೂ ಅನುವೃತ್ತಿ ಮಾಡಿಕೊಂಡು ಸೂತ್ರಗಳನ್ನು ವ್ಯಾಖ್ಯಾನ ಮಾಡಬೇಕು.

ಈ ಮೂರು ಸೂತ್ರಗಳಲ್ಲಿ "ಪ್ರತ್ಯಯಃ" (120) ಎಂಬ ಸೂತ್ರವು ಮೂರನೇ ಅಧ್ಯಾಯದಿಂದ (ಮೊದಲನೇ ಸೂತ್ರ (119) ಬಿಟ್ಟು) ಆರಂಭಿಸಿ, ಐದನೇ ಅಧ್ಯಾಯದವರೆಗೆ ಹೇಳಿರುವ ಪ್ರತ್ಯಯಗಳನ್ನು ಗ್ರಹಣಮಾಡುತ್ತದೆ. ಪ್ರತ್ಯಯವೆಂದರೆ ಅರ್ಥವನ್ನು ಹೇಳುವಂತಹದ್ದು ಎಂದರ್ಥ. **(ಅರ್ಥ–ಪ್ರತ್ಯಾಯಕತ್ವಂ ಪ್ರತ್ಯಯತ್ವಮ್)**

"ಪರಶ್ಚ" ಎಂಬ ಅಧಿಕಾರ ಸೂತ್ರವು ಐದನೇ ಅಧ್ಯಾಯದವರೆಗೆ ವ್ಯಾಪಿಸಿದೆ. ಈ ಅವಧಿಯಲ್ಲಿ ಹೇಳಿರುವ ಪ್ರತ್ಯಯಗಳು ಪರದಲ್ಲಿ ಬರುತ್ತವೆ. ಯಾವುದರ ಪರದಲ್ಲಿ ಎಂಬುದನ್ನು ಮುಂದಿನ ಸೂತ್ರದಲ್ಲಿ ತಿಳಿಸಲಾಗುತ್ತದೆ.

"ಙ್ಯಾಪ್–ಪ್ರಾತಿಪದಿಕಾತ್" (4.1.1) ಎಂಬ ಸೂತ್ರದ ವಿಗ್ರಹವಾಕ್ಯ ಹೀಗಿದೆ. ಙೀಪ್ ಚ, ಆಪ್ ಚ, ಪ್ರಾತಿಪದಿಕಂ ಚ ತೇಷಾಂ ಸಮಾಹಾರಃ ಙ್ಯಾಪ್–ಪ್ರಾತಿಪದಿಕಮ್. ತಸ್ಮಾತ್ ಙ್ಯಾಪ್–ಪ್ರಾತಿಪದಿಕಾತ್ ಎಂದು ವಿಗ್ರಹವಾಕ್ಯ. 'ಙೀ' ಎಂಬ ಶಬ್ದದಿಂದ 'ಙೀಪ್' 'ಙೀಷ್' 'ಙೀನ್' ಎಂಬ ಸ್ತ್ರೀ ಪ್ರತ್ಯಯಗಳನ್ನು ತೆಗೆದುಕೊಳ್ಳಬೇಕು. ಇವುಗಳಲ್ಲಿ 'ಈ' ಮಾತ್ರ ಉಳಿಯುತ್ತವೆ. ಉಳಿದ ಅಕ್ಷರ (ಪ್ರತ್ಯಯಾದಿಯಾದ ಙ್, ಮತ್ತು ಅನ್ತ್ಯ ವರ್ಣಗಳಾದ ಪ್,ಷ್,ನ್) ಗಳು 'ಇತ್' ಆಗಿ ಲೋಪವಾಗುತ್ತವೆ.

'ಆಪ್' ಎಂಬ ಶಬ್ದವು 'ಟಾಪ್, 'ಡಾಪ್' ಮತ್ತು 'ಚಾಪ್' ಎಂಬ ಸ್ತ್ರೀ ಪ್ರತ್ಯಯಗಳನ್ನು ಪ್ರತಿನಿಧಿಸುತ್ತವೆ. ಇವುಗ ('ಆಪ್' ಎಂಬ ಶಬ್ದವು 'ಟಾಪ್, 'ಡಾಪ್' ಮತ್ತು 'ಚಾಪ್') ಳಲ್ಲಿ 'ಆ' ಮಾತ್ರ ಉಳಿಯುತ್ತದೆ ಉಳಿದ ಅಕ್ಷರಗಳು ಹಿಂದಿನಂತೆ ಲೋಪವಾಗುತ್ತವೆ. ಈ-ಕಾರಾನ್ತ ಮತ್ತು ಆ-ಕಾರಾಂತವಾದ ಸ್ತ್ರೀ-ಪ್ರತ್ಯಯಾಂತವಾದ ಶಬ್ದಗಳಮೇಲೂ 'ಸು' ಮೊದಲಾದ 'ಸುಪ್' ಪ್ರತ್ಯಯಗಳು ಸೇರಿಸಲಾಗುತ್ತವೆ. ಹಾಗೆಯೇ ಪ್ರಾತಿಪದಿಕಸಂಜ್ಞೆಯುಳ್ಳ ಶಬ್ದಗಳಮೇಲೂ 'ಸು' ಮೊದಲಾದ 'ಸುಪ್' ಪ್ರತ್ಯಯಗಳು ಸೇರಿಸಲಾಗುತ್ತವೆ.

ಈ ರೀತಿಯಾಗಿ ಈ ಮೂರು ಅಧಿಕಾರ ಸೂತ್ರಗಳನ್ನು ಅನುವೃತ್ತಿ ಮಾಡಿಕೊಂಡು ಮುಂದಿನ ಸೂತ್ರಗಳನ್ನು ಐದನೇ ಅಧ್ಯಾಯ ಮುಗಿಯುವವರೆಗೆ ವ್ಯಾಖ್ಯಾನ ಮಾಡಬೇಕು.

**(ಏಕವಚನಾದಿ ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ 122. ಸುಪಃ (1.4.103)**

ವೃತ್ತಿಃ –ಸುಪಃ ತ್ರೀಣಿ ತ್ರೀಣಿ ವಚನಾನಿ ಏಕಶಃ ಏಕವಚನ, ದ್ವಿವಚನ, ಬಹುವಚನ ಸಂಜ್ಞಾನಿ ಸ್ಯುಃ।

ಅ.ವ್ಯ.– "ತಾನ್ಯೇಕವಚನ-ದ್ವಿವಚನ-ಬಹುವಚನಾನ್ಯೇಕಶಃ" ಎಂಬ ಸೂತ್ರದಿಂದ ಏಕವಚನ, ದ್ವಿವಚನ, ಬಹುವಚನಾನಿ ಮತ್ತು ಏಕಶಃ ಎಂಬ ಪದಗಳು ಅನುವೃತ್ತವಾಗುತ್ತವೆ. ಹಾಗೆಯೇ "ತಿಙಃ ತ್ರೀಣಿ ತ್ರೀಣಿ" ಎಂಬ ಸೂತ್ರದಿಂದ ತ್ರೀಣಿ ತ್ರೀಣಿ ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ– ಸೂತ್ರದಲ್ಲಿರುವ 'ಸುಪಃ' ಎಂಬುದು ಷಷ್ಠೀ-ಏಕವಚನ. 'ಸುಪ್'ನ ಕ್ರಮವಾಗಿ ಮೂರು-ಮೂರು ಆಗಿರುವ ರೂಪಗಳು ಏಕವಚನ, ದ್ವಿವಚನ ಮತ್ತು ಬಹುವಚನ ಎಂಬ ಸಂಜ್ಞೆಗಳುನ್ನು ಕ್ರಮವಾಗಿ ಪಡೆಯುತ್ತವೆ. ಈ 'ಸುಪ್'ನ ಸ್ವರೂಪವನ್ನು ಸ್ವೌಜಸಮೌಟ್-ಛಸ್ಟಾ-ಭ್ಯಾಂ-ಭಿಸ್-ಙೇ-ಭ್ಯಾಂ-ಭ್ಯಸ್-ಙಸಿ-ಭ್ಯಾಂ-ಭ್ಯಸ್-ಙಸೋಸಾಮ್-ಙ್ಯೋಸ್ಸುಪ್(4.1.2) ಎಂಬ ಸೂತ್ರದಲ್ಲಿ ವಿವರಿಸಲಾಗಿದೆ.

ಮುಂದಿನ ಸೂತ್ರ ದಿಂದ ಏಕವಚನ, ದ್ವಿವಚನಗಳ ಬಗ್ಗೆ ವಿವರಿಸಲಾಗುತ್ತದೆ.

**(ಏಕವಚನ, ದ್ವಿವಚನವನ್ನು ವಿಧಿಸುವ ನಿಯಮಸೂತ್ರ)**

**ಸೂತ್ರ 123. ದ್ವೇಕಯೋರ್ದ್ವಿವಚನೈಕವಚನೇ (1.4.22)**

ವೃತ್ತಿಃ –ದ್ವಿತ್ವ-ಏಕತ್ವಯೋಃ ತೇ ಸ್ತಃ।

ಪ.ಛೇ. – ದ್ವಿ-ಏಕಯೋಃ, ದ್ವಿವಚನ-ಏಕವಚನೇ।

ಅರ್ಥ– 'ದ್ವಿ' ಎಂಬುದರಿಂದ 'ದ್ವಿತ್ವ' ವನ್ನೂ 'ಏಕ' ಎಂಬುದರಿಂದ 'ಏಕತ್ವ' ಸಂಖ್ಯೆಯನ್ನು ಗ್ರಹಿಸಿ 'ದ್ವಿತ್ವೈಕತ್ವಯೋಃ' ಎಂದು ದ್ವಿವಚನವನ್ನು ಪ್ರಯೋಗಿಸಿದ್ದಾರೆ.

ವಸ್ತುಗಳು ಎರಡಾಗಿದ್ದಾಗ ಅವುಗಳಲ್ಲಿ 'ದ್ವಿತ್ವ' ಸಂಖ್ಯೆಯು ಕಂಡುಬರುತ್ತದೆ. ಆಗ ದ್ವಿವಚನ ಪ್ರತ್ಯಯವು ವಿಧಿಸಲಾಗುತ್ತದೆ. ವಸ್ತುವು ಒಂದೇ ಇದ್ದರೆ ಅದರಲ್ಲಿ 'ಏಕತ್ವ'ವು

ಇರುವದರಿಂದ ಏಕವಚನಪ್ರತ್ಯಯವು ವಿಧಿಸಲಾಗುತ್ತದೆ.

ಏಕತ್ವಕ್ಕೆ 'ಸು' ಪ್ರತ್ಯಯವನ್ನು ವಿಧಿಸಿದಾಗ, "ಉಪದೇಶೇಽಜನುನಾಸಿಕ ಇತ್" (1.3.2) ಎಂಬ ಸೂತ್ರದಿಂದ 'ಉ' ಕಾರವು ಲೋಪವಾಗಿ, 'ಸ್'ಕಾರ ಮಾತ್ರ ಉಳಿಯುತ್ತದೆ. ರಾಮ+ಸ್ ಎಂದಿದ್ದಾಗ–

**(ಅವಸಾನ ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ 124. ವಿರಾಮೋಽವಸಾನಮ್ (1.4.110)**

ವೃತ್ತಿಃ –ವರ್ಣಾನಾಂ ಅಭಾವಃ ಅವಸಾನ–ಸಂಜ್ಞಃ ಸ್ಯಾತ್। ರುತ್ವ–ವಿಸರ್ಗೌ। ರಾಮಃ॥

ಪ. ಛೇ. – ವಿರಾಮಃ, ಅವಸಾನಮ್।

ಅರ್ಥ– ವಿರಾಮಃ ಎಂದರೆ ಕೊನೆಯ ವರ್ಣ ಎಂದು ಅರ್ಥ ಮಾಡಲಾಗಿದೆ. ಕೊನೆಯ ವರ್ಣವೆಂದರೆ ಯಾವ ವರ್ಣದ ನಂತರ ಆ ಪದವು ಕೊನೆಗಾಣುತ್ತದೆಯೋ ಮತ್ತು ಅದರ ನಂತರ ಯಾವ ಅಕ್ಷರವೂ ಇಲ್ಲದೇ ವಿರಮಿಸುತ್ತದೋ ಆ ಅನ್ತ್ಯ ವರ್ಣಕ್ಕೆ ಅವಸಾನ ಎಂದು ಹೆಸರು. ವರ್ಣಗಳ ಅಭಾವಕ್ಕೂ ಅವಸಾನ ಎಂದು ಅರ್ಥ ಮಾಡಬಹುದು. ಈ ತರಹದ ಎರಡು ಅರ್ಥಗಳಿದ್ದಾಗ ಸಂದರ್ಭೋಚಿತವಾಗಿ ಎರಡೂ ಅರ್ಥಗಳನ್ನು ಸ್ವೀಕಾರ ಮಾಡಬೇಕು. ಅಂದರೆ –

1. ಕೊನೆಯ ವರ್ಣಕ್ಕೂ ಅವಸಾನ ಎಂಬ ಹೆಸರು. 2. ಕೊನೆಯ ವರ್ಣದ ನಂತರ ಇರುವ ವರ್ಣಗಳ ಅಭಾವಕ್ಕೂ ಅವಸಾನ ಎಂದು ಹೆಸರು ಬರುತ್ತದೆ.

ಉದಾ– ರಾಮ+ಸು ಎಂದಿದ್ದಾಗ "ಉಪದೇಶೇಽಜನುನಾಸಿಕ ಇತ್" (1.3.2) ಎಂಬ ಸೂತ್ರದಿಂದ 'ಉ' ಕಾರವು ಲೋಪವಾಗಿ, ರಾಮ+ಸ್ ಎಂದಿರುತ್ತದೆ. ಆಗ "ಸ–ಸಜುಷೋರುಃ" (8.2.66) ಎಂಬ ಸೂತ್ರದಿಂದ 'ಸ್' ಕಾರಕ್ಕೆ ರುತ್ವ(ರ್) ಬಂದು ಅನುಬಂಧವಾದ 'ಉ' ಕಾರವು ಲೋಪವಾಗಿ ರಾಮ+ರ್ ಎಂದಿದ್ದಾಗ– "ಖರವಸಾನಯೋರ್ವಿಸರ್ಜನೀಯಃ" ಎಂಬ ಸೂತ್ರದಿಂದ 'ರ್' ಗೆ ವಿಸರ್ಗ (ಃ) ಬಂದು ರಾಮಃ ಎಂಬ ರೂಪವು ಸಿದ್ಧವಾಗುತ್ತದೆ. (ಒಬ್ಬ ರಾಮನು)

**(ಸಮಾನರೂಪಗಳಲ್ಲಿ ಒಂದುರೂಪ ಮಾತ್ರ**
**ಉಳಿಯುವದನ್ನು (ಏಕಶೇಷವನ್ನು) ಹೇಳುವ ಸೂತ್ರ)**

**ಸೂತ್ರ 125. ಸರೂಪಾಣಾಮೇಕಶೇಷಃ ಏಕವಿಭಕ್ತೌ (1.2.64)**

ವೃತ್ತಿಃ – ಏಕವಿಭಕ್ತೌ ಯಾನಿ ಸರೂಪಾಣಿ ಏವ ದೃಷ್ಟಾನಿ ತೇಷಾಂ ಏಕ ಏವ ಶಿಷ್ಯತೇ।

ಪ. ಛೇ. – ಸರೂಪಾಣಾಂ ಏಕಶೇಷಃ ಏಕವಿಭಕ್ತೌ।

ಅ. ವೃ. – "ವೃದ್ಧೋಯೂನಾತಲ್ಲಕ್ಷಣಶ್ಚೇದೇವ ವಿಶೇಷಃ" ಎಂಬ ಸೂತ್ರದಿಂದ 'ಏವ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– ಒಂದೇ ವಿಭಕ್ತಿಗೆ ಸಂಬಂಧಿಸಿದ ಸಮಾನ ರೂಪವುಳ್ಳ ಶಬ್ದಗಳು ಸೇರಿಕೊಂಡಿದ್ದು, ಪರದಲ್ಲಿ ದ್ವಿವಚನ ಅಥವಾ ಬಹುವಚನ ಪ್ರತ್ಯಯವು ಇದ್ದಾಗ, ಪೂರ್ವದಲ್ಲಿವುರುವ ರೂಪಗಳಲ್ಲಿ, ಒಂದು ರೂಪವು ಮಾತ್ರ ಉಳಿಯುತ್ತದೆ. ಉಳಿದ ರೂಪಗಳು ಲೋಪವಾಗುತ್ತವೆ. ಉಳಿದಿರುವ ಒಂದು ರೂಪವು ಲೋಪವಾದ ರೂಪಗಳ ಅರ್ಥವನ್ನು ಹೇಳುತ್ತದೆ. ಇದನ್ನೇ **'ಯಃ ಶಿಷ್ಯತೆ ಸಃ ಲುಪ್ಯಮಾನಾಭಿಧಾಯೀ'** ಎಂದು ಹೇಳಿದ್ದಾರೆ.

ಉದಾ– ರಾಮ+ರಾಮ+ಔ ಎಂದಿದ್ದಾಗ, ಪ್ರಕೃತ ಸೂತ್ರದಿಂದ ಎರಡು ರಾಮ ಶಬ್ದಗಳಲ್ಲಿ ಒಂದು ರಾಮ ಶಬ್ದ ಲೋಪವಾಗಿ ಒಂದು ರಾಮ ಶಬ್ದ ಮಾತ್ರ ಉಳಿಯುತ್ತದೆ. ಹೀಗೆ ರಾಮ+ಔ ಎಂದಿದ್ದಾಗ– ಮುಂದಿನ ಸೂತ್ರವನ್ನು ಹೇಳುತ್ತಾನೆ.

**(ಪೂರ್ವಸವರ್ಣದೀರ್ಘವನ್ನು ವಿಧಿಸುವ ಸೂತ್ರ)**

**ಸೂತ್ರ 126. ಪ್ರಥಮಯೋಃ ಪೂರ್ವಸವರ್ಣಃ (6.1.102)**

ವೃತ್ತಿಃ –ಅಕಃ ಪ್ರಥಮಾ–ದ್ವಿತೀಯಯೋಃ ಅಚಿ ಪೂರ್ವಸವರ್ಣದೀರ್ಘಃ ಏಕಾದೇಶಃ ಸ್ಯಾತ್। ಇತಿ ಪ್ರಾಪ್ತೇ–

ಅ. ವೃ. – "ಏಕಃ ಪೂರ್ವಪರಯೋಃ" ಎಂಬುದು ಅಧಿಕಾರಸೂತ್ರ, "ಅಕಃ ಸವರ್ಣೇ ದೀರ್ಘಃ" (6.1.101) ಎಂಬ ಸೂತ್ರದಿಂದ 'ಅಕಃ' ಎಂಬ ಪದವು ಮತ್ತು "ಇಕೋಯಣಚಿ" (6.1.77) ಎಂಬ ಸೂತ್ರದಿಂದ 'ಅಚಿ' ಎಂಬ ಪದವು ಅನುವೃತ್ತವಾಗುತ್ತವೆ.

ಅರ್ಥ–ಇಲ್ಲಿ ಪ್ರಥಮಾ ಶಬ್ದದಿಂದ ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿಗಳು ಗೃಹೀತವಾಗುತ್ತವೆ. 'ಅಕ್' (ಅ,ಇ,ಉ,ಋ,ಲೃ) ವರ್ಣದನಂತರ ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿಗಳಲ್ಲಿರುವ 'ಅಚ್' ವರ್ಣವು ಪರದಲ್ಲಿದ್ದಾಗ, ಪೂರ್ವ–ಪರಗಳ ಸ್ಥಾನದಲ್ಲಿ "ಏಕಃ ಪೂರ್ವಪರಯೋಃ" ಎಂಬ ಅಧಿಕಾರ ಸೂತ್ರದಿಂದ ಪೂರ್ವಸವರ್ಣದೀರ್ಘವು ಏಕಾದೇಶವಾಗಿ ಬರುತ್ತದೆ.

ರಾಮ+ಔ ಎಂದಿದ್ದಾಗ ಪೂರ್ವಪದದ ಕೊನೆಯಲ್ಲಿಇರುವ 'ಮ್' ಕಾರೋತ್ತರವರ್ತಿ 'ಅ'ಕಾರವು 'ಅಕ್' ವರ್ಣವಾಗಿದ್ದು ಅದರ ಪರದಲ್ಲಿ 'ಔ' ಎಂಬ ದ್ವಿತೀಯಾ ವಿಭಕ್ತಿ 'ಸುಪ್' ಪ್ರತ್ಯಯವು ಅಜಾ(ಅಚ್)ದಿಯಾಗಿದ್ದು ಅವುಗಳಿಗೆ ಪೂರ್ವಸವರ್ಣದೀರ್ಘ ಮಾಡಿದಾಗ, ಪೂರ್ವ–ಪರಗಳ ಸ್ಥಾನದಲ್ಲಿ 'ಆ' ಕಾರವು ಏಕಾದೇಶವಾಗಿ ಬಂದು ರಾಮ್+(ಅ+ಔ)=ರಾಮ್+ಆ=ರಾಮಾ ಎಂಬ ಅನಿಷ್ಟ ರೂಪವು ಬರಬೇಕಾಗುತ್ತದೆ. ಅದನ್ನು ನಿಷೇಧಿಸಲು ಮುಂದಿನಸೂತ್ರವು ರಚಿಸಲ್ಪಟ್ಟಿದೆ.

**(ಪೂರ್ವಸವರ್ಣದೀರ್ಘವನ್ನು ನಿಷೇಧಿಸುವ ಸೂತ್ರ)**

**ಸೂತ್ರ 127. ನಾದಿಚಿ (6.1.104)**

ವೃತ್ತಿಃ –ಆತ್ ಇಚಿ ನ ಪೂರ್ವಸವರ್ಣದೀರ್ಘಃ।ವೃದ್ಧಿರೇಚಿ। ರಾಮೌ।

ಪ. ಛೇ. – ನ, ಆತ್, ಇಚಿ।

ಅ. ವ್ಯ. – "ಪ್ರಥಮಯೋಃ ಪೂರ್ವಸವರ್ಣಃ" (6.1.102) ಎಂಬ ಸೂತ್ರದಿಂದ 'ಪೂರ್ವಸವರ್ಣಃ' ಎಂಬ ಪದವು ಮತ್ತು "ಅಕಃ ಸವರ್ಣೇ ದೀರ್ಘಃ" (6.1.101) ಎಂಬ ಸೂತ್ರದಿಂದ 'ದೀರ್ಘಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– 'ಅ'ಕಾರದನಂತರ (ಆತ್) 'ಇಚ್ ('ಅ'ಕಾರವನ್ನು ಬಿಟ್ಟು ಉಳಿದ ಸ್ವರಗಳು ಎಂದರೆ– ಇ,ಉ,ಋ,ಲೃಏ,ಓ,ಐ,ಔ) ವರ್ಣಗಳು ಪರವಾದಾಗ, ಪೂರ್ವ ಸವರ್ಣದೀರ್ಘವು ಬರುವದಿಲ್ಲ.

ರಾಮ+ಔ ಎಂದಿದ್ದಾಗ 'ಅ'ಕಾರದ ನಂತರ 'ಇಚ್' ಪ್ರತ್ಯಾಹಾರದಲ್ಲಿ ಇರುವ 'ಔ' ವರ್ಣವು ಪರದಲ್ಲಿರುವದರಿಂದ, ಪ್ರಕೃತ ಸೂತ್ರದಿಂದ ಪೂರ್ವಸವರ್ಣದೀರ್ಘ ಬರುವದಿಲ್ಲ. ಈ ಮೇಲಿನ ಎರಡು ಸೂತ್ರಗಳಿಂದ ಇಷ್ಟರೂಪವು ಸಿದ್ಧವಾಗದಿರೋಣದ್ದರಿಂದ, "ವೃದ್ಧಿರೇಚಿ" ಎಂಬ ಸೂತ್ರಕ್ಕೆ ಮಾತ್ರ ಅವಕಾಶವಿರುವುದರಿಂದ, 'ಅ'ಕಾರ ಮತ್ತು 'ಔ' ಕಾರಗಳ ಸ್ಥಾನದಲ್ಲಿ ವೃದ್ಧ್ಯಕ್ಷರವಾದ 'ಔ' ಕಾರವು ಆದೇಶವಾಗಿ ಬಂದು 'ರಾಮೌ' ಎಂಬ ಇಷ್ಟ ರೂಪವು ಸಿದ್ಧವಾಗುತ್ತದೆ. (ಇಲ್ಲಿ ಇಬ್ಬರು ರಾಮರು ಎಂದರ್ಥ).

**(ಬಹುವಚನ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ 128. ಬಹುಷು ಬಹುವಚನಮ್ (1.4.21)**

ವೃತ್ತಿಃ –ಬಹುತ್ವ ವಿವಕ್ಷಾಯಾಂ ಬಹುವಚನಂ ಸ್ಯಾತ್।

ಅರ್ಥ– ಎರಡಕ್ಕಿಂತ ಹೆಚ್ಚಾಗಿ ಅಂದರೆ ಹಲವು ಪದಾರ್ಥಗಳಿರುವಾಗ ಅಲ್ಲಿ ಬಹುತ್ವ ಸಂಖ್ಯೆ ಇರೋಣದ್ದರಿಂದ, ಬಹುವಚನಪ್ರತ್ಯಯವಾದ 'ಜಸ್' (ಅಸ್) ವಿಧಿಸಲಾಗುತ್ತದೆ. ಇಲ್ಲಿ ಬಹಳಮಂದಿ ರಾಮರು ಎಂಬ ಅರ್ಥದಲ್ಲಿ ರಾಮ+ರಾಮ+ರಾಮ.....ರಾಮ ಎಂದು ಹಲವು ರಾಮ ಶಬ್ದಗಳನ್ನು ಸೇರಿಸಿದಾಗಲೂ ಒಂದು ರಾಮ ಶಬ್ದವನ್ನು ಬಿಟ್ಟು ಉಳಿದೆಲ್ಲ ರಾಮ ಶಬ್ದಗಳು ಲೋಪವಾಗುತ್ತವೆ. ಈ ರಾಮ ಶಬ್ದದ ಪರದಲ್ಲಿ ಬಹುವಚನ ಪ್ರತ್ಯಯವಾದ 'ಜಸ್'(ಅಸ್) ಪ್ರತ್ಯಯವು ಬಂದು ರಾಮ+ಜಸ್(ಅಸ್) ಎಂದಿದ್ದಾಗ–

**(ಪ್ರತ್ಯಯಾದಿ ವರ್ಣಗಳಾದ 'ಚ'ವರ್ಗ ಮತ್ತು ಟ–ವರ್ಗಗಳಿಗೆ 'ಇತ್' ಸಂಜ್ಞೆಯನ್ನು ಹೇಳುವ ಸೂತ್ರ)**

**ಸೂತ್ರ 129. ಚುಟೂ (1.3.7)**

ವೃತ್ತಿಃ –ಪ್ರತ್ಯಯಾದ್ಯೌ ಚುಟೂ ಇತೌ ಸ್ತಃ। (ಚುಟೂ= ಚವರ್ಗ–ಟವರ್ಗೌ)

ಅ. ವ್ಯ. – "ಉಪದೇಶೇಽಜನುನಾಸಿಕ ಇತ್" (1.3.2) ಎಂಬ ಸೂತ್ರದಿಂದ 'ಇತ್' ಎಂಬ ಪದ, "ಷಃ ಪ್ರತ್ಯಯಸ್ಯ" ಎಂಬ ಸುತ್ರದಿಂದ 'ಪ್ರತ್ಯಯಸ್ಯ' ಎಂಬ ಪದ, ಮತ್ತು "ಆದಿರ್ಞಿಟುಡವಃ" ಎಂಬ ಸೂತ್ರದಿಂದ 'ಆದಿಃ' ಎಂಬ ಪದಗಳನ್ನು ಅನುವೃತ್ತಿ ಮಾಡಿಕೊಂಡು ಅದನ್ನು ದ್ವಿವಚನಾನ್ತವಾಗಿ ವಿಪರಿಣಾಮಗೊಳಿಸಲಾಗಿದೆ.

ಅರ್ಥ- ಚುಶ್ಚ ಟುಶ್ಚ ಚುಟೂ। 'ಚು' ಎಂದರೆ ಚ-ವರ್ಗ, (ಚ್,ಛ್,ಜ್,ಝ್,ಞ್) 'ಟು' ಎಂದರೆ, ಟ-ವರ್ಗಗ(ಟ್,ಠ್,ಡ್,ಢ್,ಣ್)ವೆಂದು ಅರ್ಥ. ಈ ವರ್ಣಗಳು ಪ್ರತ್ಯಯದ ಆದಿಯಲ್ಲಿದ್ದರೆ 'ಇತ್' ಸಂಜ್ಞೆಯನ್ನು ಹೊಂದುತ್ತವೆ.

ಉದಾ- ರಾಮ+ಜಸ್ ಎಂದಿದ್ದಾಗ, 'ಜಸ್' ಪ್ರತ್ಯಯದ ಆದಿವರ್ಣವಾದ 'ಜ್' ಕಾರವು 'ಚ-ವರ್ಗದಲ್ಲಿ ಸೇರಿರುವದರಿಂದ ಅದಕ್ಕೆ 'ಇತ್' ಸಂಜ್ಞೆ ಬಂದು ಅದು ಲೋಪವಾಗುತ್ತದೆ. ಆಗ 'ಅಸ್' ಮಾತ್ರ ಉಳಿದಿರುತ್ತದೆ, ಅದರಲ್ಲಿನ 'ಸ್' ಕಾರಕ್ಕೆ ಲೋಪವನ್ನು ನಿಷೇಧಿಸುವ ಮೊದಲು ವಿಭಕ್ತಿ ಸಂಜ್ಞೆಯನ್ನು ವಿಧಿಸುತ್ತಾರೆ.

**(ವಿಭಕ್ತಿಸಂಜ್ಞಾ ವಿಧಾಯಕ ಸೂತ್ರ)**

**ಸೂತ್ರ 130. ವಿಭಕ್ತಿಶ್ಚ (1.4.104)**

ವೃತ್ತಿಃ -ಸುಪ್-ತಿಙೌ ವಿಭಕ್ತಿಸಂಜ್ಞೌ ಸ್ತಃ।

ಪ. ಛೇ. - ವಿಭಕ್ತಿಃ, ಚ।

ಅ. ವ್ಯ. - "ಸುಪಃ" ಎಂಬ ಸೂತ್ರದಿಂದ ವಿಭಕ್ತಿ ಪರಿಣಾಮ ಮಾಡಿ, 'ಸುಪ್' ಎಂದೂ, "ತಿಙಃ ತ್ರೀಣಿ ತ್ರೀಣಿ ಪ್ರಥಮ-ಮಧ್ಯಮೋತ್ತಮಾಃ" ಎಂಬ ಸೂತ್ರದಿಂದ ವಿಭಕ್ತಿ ಪರಿಣಾಮ ಮಾಡಿ, 'ತಿಙ್' ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ- 'ಸುಪ್' ಮತ್ತು 'ತಿಙ್' ಈ ಪ್ರತ್ಯಯಗಳು ವಿಭಕ್ತಿ ಸಂಜ್ಞೆಯನ್ನು ಹೊಂದುತ್ತವೆ. 'ಸುಪ್' ಮತ್ತು 'ತಿಙ್' ಗಳಿಗೆ ವಿಭಕ್ತಿ ಸಂಜ್ಞೆಯನ್ನು ಹೇಳಿದ್ದರಿಂದ, ಮುಂದಿನ ಸೂತ್ರದಿಂದ ಕೆಲವು ವರ್ಣಗಳಿಗೆ 'ಇತ್-ಸಂಜ್ಞಾ' ನಿಷೇಧವು ಆಗುತ್ತದೆ.

**(ವಿಭಕ್ತಿಸ್ಥವಾದ ಕೆಲವು ವರ್ಣಗಳಿಗೆ 'ಇತ್-ಸಂಜ್ಞೆಗೆ' ನಿಷೇಧ ಹೇಳುವ ಸೂತ್ರ)**

**ಸೂತ್ರ 131. ನ ವಿಭಕ್ತೌ ತುಸ್ಮಾಃ (1.3.4)**

ವೃತ್ತಿಃ -ವಿಭಕ್ತಿಸ್ಥಾಃ ತವರ್ಗ-ಸಕಾರ-ಮಕಾರಾಃ ನ ಇತಃ। ಇತಿ ಸಸ್ಯ ನ ಇತ್ವಮ್। ರಾಮಾಃ।

ಅರ್ಥ- ವಿಭಕ್ತಿ ಸಂಜ್ಞೆಯನ್ನು ಹೊಂದಿರುವ ಶಬ್ದ ಸ್ವರೂಪಗಳ ಕೊನೆಯಲ್ಲಿರುವ ತ-ವರ್ಗ, 'ಸ್' ಕಾರ ಮತ್ತು 'ಮ್' ಕಾರಗಳಿಗೆ 'ಇತ್' ಸಂಜ್ಞೆ ಬರುವದಿಲ್ಲ. ಪ್ರಕೃತ 'ಜಸ್' ನಲ್ಲಿಯ 'ಜ್' ಕಾರ ಲೋಪವಾದಮೇಲೆ ಅಂತ್ಯದಲ್ಲಿರುವ ಹಲ್ ವರ್ಣವಾದ 'ಸ್' ಕಾರಕ್ಕೆ "ಹಲನ್ತ್ಯಮ್"(1.3.3) ಸೂತ್ರದಿಂದ ಲೋಪ ಬರಬೇಕಾಗಿತ್ತು. ಆದರೆ ಈ ಸಂದರ್ಭದಲ್ಲಿ ಪ್ರಕೃತ ಸೂತ್ರದಿಂದ ಆ 'ಇತ್' ಸಂಜ್ಞೆಯು ನಿಷೇಧಿಸಲ್ಪಟ್ಟಿದ್ದರಿಂದ ಲೋಪ ಬರುವದಿಲ್ಲ. ಹೀಗೆ ರಾಮ್+ಅ+ಅಸ್ ಎಂದಿದ್ದಾಗ- "ಪ್ರಥಮಯೋಃ ಪೂರ್ವಸವರ್ಣಃ (6.1.102)" ಎಂಬ ಸೂತ್ರದಿಂದ ಪೂರ್ವ ಸವರ್ಣದೀರ್ಘವು ಏಕಾದೇಶವಾಗಿ ಬಂದು ರಾಮಾಸ್ ಎಂದಾಗಿ ರುತ್ವ-ವಿಸರ್ಗಗಳಿಂದ ರಾಮಾಃ ಎಂಬ ಪ್ರಥಮಾ ಬಹುವಚನ ರೂಪವು ಸಿದ್ಧಿಸುತ್ತದೆ.

**(ಸಂಬುದ್ಧಿ ಸಂಜ್ಞಾವಿಧಾಯಕ ಸೂತ್ರ)**

**ಸೂತ್ರ 132. ಏಕವಚನಂ ಸಂಬುದ್ಧಿಃ (2.3.49)**

ವೃತ್ತಿಃ –ಸಂಬೋಧನೇ ಪ್ರಥಮಾಯಾಃ ಏಕವಚನಂ ಸಂಬುದ್ಧಿ–ಸಂಜ್ಞಂ ಸ್ಯಾತ್।

ಅ.ವೃ.–"ಸಂಬೋಧನೇ ಚ" ಎಂಬ ಸೂತ್ರದಿಂದ 'ಸಂಬೋಧನೇ' ಎಂಬ ಪದವೂ, "ಪ್ರಾತಿಪದಿಕಾರ್ಥ–ಲಿಙ್ಗ–ಪರಿಮಾಣ–ವಚನಮಾತ್ರೇ ಪ್ರಥಮಾ" ಎಂಬ ಸೂತ್ರದಿಂದ 'ಪ್ರಥಮಾ' ಎಂಬ ಪದವನ್ನು ಷಷ್ಠೀ ವಿಭಕ್ತಿಯಲ್ಲಿ ವಿಪರಿಣಾಮಗೊಳಿಸಿದನಂತರ, 'ಪ್ರಥಮಾಯಾಃ' ಎಂಬ ಪದವು ಅನುವೃತ್ತಿ ಮಾಡಿಕೊಳ್ಳಲಾಗಿದೆ.

ಅರ್ಥ– ಸಂಬೋಧನಾರ್ಥದಲ್ಲಿ ಪ್ರಥಮಾವಿಭಕ್ತಿ ಏಕವಚನಕ್ಕೆ ಸಂಬುದ್ಧಿ ಎಂಬ ಸಂಜ್ಞೆಯನ್ನು ವಿಧಿಸಲಾಗಿದೆ. ಹಾಗಿದ್ದರೂ ಸಂಬೋಧನಾ ಪ್ರಥಮಾ ವಿಭಕ್ತಿಯ ದ್ವಿವಚನ–ಬಹುವಚನಗಳಿಗೆ ಸಂಬೋಧನಾರ್ಥ ಇದ್ದೇ ಇರುತ್ತದೆ.

**(ಅಙ್ಗ–ಸಂಜ್ಞಾ ವಿಧಾಯಕ ಸೂತ್ರ)**

**ಸೂತ್ರ 133. ಯಸ್ಮಾತ್ ಪ್ರತ್ಯಯವಿಧಿಸ್ತದಾದಿ ಪ್ರತ್ಯಯೇಽಙ್ಗಮ್ (1.4.13)**

ವೃತ್ತಿಃ –ಯಃ ಪ್ರತ್ಯಯಃ ಯಸ್ಮಾತ್ ಕ್ರಿಯತೇ ತದಾದಿ ಶಬ್ದಸ್ವರೂಪಂ ತಸ್ಮಿನ್ನಙ್ಗಂ ಸ್ಯಾತ್।

ಪ.ಛೇ. – ಯಸ್ಮಾತ್, ಪ್ರತ್ಯಯ–ವಿಧಿಃ, ತದಾದಿ, ಪ್ರತ್ಯಯೇ, ಅಙ್ಗಮ್।

ಅರ್ಥ– ಯಾವ ಪ್ರತ್ಯಯವು ಯಾವ ಶಬ್ದದನಂತರ ವಿಧಿಸಲ್ಪಡುತ್ತದೋ ಆ ಪ್ರತ್ಯಯದ ಪೂರ್ವದಲ್ಲಿರುವ ಶಬ್ದಕ್ಕೆ 'ಅಙ್ಗ' ವೆಂಬ ಸಂಜ್ಞೆಯು ಬರುತ್ತದೆ.

**(ಸಂಬುದ್ಧಿಯಲ್ಲಿರುವ 'ಹಲ್' ವರ್ಣಕ್ಕೆ ಲೋಪ ವಿಧಾಯಕ ಸೂತ್ರ)**

**ಸೂತ್ರ 134. ಏಙ್ ಹ್ರಸ್ವಾತ್ ಸಂಬುದ್ಧೇಃ (6.6.69)**

ವೃತ್ತಿಃ –ಏಙನ್ತಾತ್ ಹ್ರಸ್ವಾನ್ತಾತ್ ಚ ಅಙ್ಗಾತ್ ಹಲ್ ಲುಪ್ಯತೇ ಸಂಬುದ್ಧೇಶ್ಚೇತ್। ಹೇ ರಾಮ! ಹೇ ರಾಮೌ!

ಅ. ವೃ. – "ಹಲ್–ಙ್ಯಾಬ್ಭ್ಯೋ ದೀರ್ಘಾತ್ ಸು–ತಿ–ಸಿ ಅಪೃಕ್ತಂ ಹಲ್" ಎಂಬ ಸೂತ್ರದಿಂದ 'ಹಲ್' ಎಂಬ ಪದವು ಅನುವೃತ್ತವಾಗಿದೆ.

ಅರ್ಥ– ಏಙನ್ತವಾದ ಅಂಗ, ಮತ್ತು ಹ್ರಸ್ವಾನ್ತವಾದ ಅಂಗ ಇವುಗಳ ಪರದಲ್ಲಿರುವ ಸಂಬುದ್ಧಿಯ (ಪ್ರಥಮಾ ಸಂಬೋಧನೈಕವಚನದ) ಕೊನೆಯಲ್ಲಿರುವ 'ಹಲ್' ವರ್ಣಕ್ಕೆ ಲೋಪವು ಬರುತ್ತದೆ.

ಉದಾ– ಹೇ ರಾಮ! +ಸು ಎಂದಿದ್ದಾಗ, ಅನುಬಂಧ ಲೋಪವಾದಮೇಲೆ ಉಳಿದಿರುವ ಅನ್ತ್ಯ 'ಸ್' ಕಾರಕ್ಕೆ ಲೋಪ ಬಂದು ಹೇ ರಾಮ! ಎಂದಾಗುತ್ತದೆ. ದ್ವಿವಚನ, ಮತ್ತು ಬಹುವಚನಗಳಲ್ಲಿ ಪ್ರಥಮಾ ವಿಭಕ್ತಿಯಲ್ಲಿರುವಂತೆಯೇ ಹೇ ರಾಮೌ!, ಹೇರಾಮಾಃ! ಎಂದು ರೂಪಗಳಾಗುತ್ತವೆ.

(ಪೂರ್ವರೂಪ ವಿಧಾಯಕ ವಿಧಿಸೂತ್ರ)

**ಸೂತ್ರ - 135. ಅಮಿ ಪೂರ್ವಃ (6.1.107)**

ವೃತ್ತಿಃ –ಅಕಃ ಅಮಿ ಅಚಿ ಪೂರ್ವರೂಪಮ್ ಏಕಾದೇಶಃ ಸ್ಯಾತ್। ರಾಮಂ । ರಾಮೌ।

ಅ.ವ್ಯ. – "ಅಕಃ ಸವರ್ಣೇ ದೀರ್ಘಃ" (6.1.101) ಎಂಬ ಸೂತ್ರದಿಂದ 'ಅಕಃ' ಎಂಬ ಪದವೂ "ಇಕೋಯಣಚಿ" (6.1.77) ಎಂಬ ಸೂತ್ರದಿಂದ 'ಅಚಿ' ಎಂಬ ಪದವೂ ಅನುವೃತ್ತವಾಗುತ್ತವೆ. ಮತ್ತು "ಏಕಃ ಪೂರ್ವಪರಯೋಃ" ಎಂಬ ಅಧಿಕಾರ ಸೂತ್ರವು ಪ್ರವೃತ್ತವಾಗಿದೆ.

ಅರ್ಥ–'ಅಕ್' ವರ್ಣದ ನಂತರ 'ಅಮ್' ಪ್ರತ್ಯಯಕ್ಕೆ ಸಂಬಂಧಿಸಿದ 'ಅಚ್' ವರ್ಣವು ಅಂದರೆ, 'ಅ'ಕಾರವು ಪರದಲ್ಲಿದ್ದಾಗ, ಪೂರ್ವ–ಪರಗಳ ಸ್ಥಾನದಲ್ಲಿ ಪೂರ್ವರೂಪವು ಏಕಾದೇಶವಾಗಿ ಬರುತ್ತದೆ.

ದ್ವಿತೀಯಾ–ಏಕವಚನದಲ್ಲಿ–ರಾಮ+ಅಮ್=ರಾಮ್+ಅ+ಅಮ್ ಎಂದಿದ್ದಾಗ – "ಅಕಃ ಸವರ್ಣೇ ದೀರ್ಘಃ" (6.1.101) ಎಂಬ ಸೂತ್ರದಿಂದ ಬರಬೇಕಾದ ಸವರ್ಣದೀರ್ಘವನ್ನು ಬಾಧಿಸಿ ಪೂರ್ವ–ಪರಗಳ ಸ್ಥಾನದಲ್ಲಿ ಪ್ರಕೃತ ಸೂತ್ರದಿಂದ ಪೂರ್ವರೂಪವು ('ಅ' ಕಾರ) ಏಕಾದೇಶವಾಗಿ ಬಂದು ರಾಮ+ಅ+ಮ್ ಎಂದಾಗಿ ರಾಮಮ್ ಎಂಬ ದ್ವಿತೀಯಾ ಏಕವಚನ ರೂಪವು ಸಿದ್ಧಿಸುತ್ತದೆ.ಇನ್ನು ದ್ವಿತೀಯಾ ದ್ವಿವಚನದಲ್ಲಿ – ಪ್ರಥಮಾ ವಿಭಕ್ತಿ ದ್ವಿವಚನದರೂಪದಂತೆಯೆ ರಾಮೌ ಎಂಬ ರೂಪವು ಸಿದ್ಧಿಸುತ್ತದೆ.

(ಪ್ರತ್ಯಯಾದಿಯಾದ ಕೆಲವು ವರ್ಣಗಳಿಗೆ 'ಇತ್' ಸಂಜ್ಞಾ ವಿಧಿಸುವ ಸೂತ್ರ)

**ಸೂತ್ರ 136. ಲಶಕ್ವತದ್ಧಿತೇ (1.3.8)**

ವೃತ್ತಿಃ –ತದ್ಧಿತವರ್ಜ–ಪ್ರತ್ಯಯಾದ್ಯಾಃ ಲ–ಶ–ಕವರ್ಗಾಃ ಇತಃ ಸ್ಯುಃ।

ಪ. ಛೇ. – ಲ–ಶ–ಕು–ಅತದ್ಧಿತೇ।(ಏಕಪದ)

ಅ. ವ್ಯ. – "ಷಃ ಪ್ರತ್ಯಯಸ್ಯ" ಎಂಬ ಸೂತ್ರದಿಂದ ಪ್ರತ್ಯಯಸ್ಯ ಎಂಬ ಪದವು "ಆದಿರ್ಞಿಟುಡವಃ" ಸೂತ್ರದಿಂದ 'ಆದಿಃ' ಎಂಬ ಪದವೂ "ಉಪದೇಶೇऽಜನುನಾಸಿಕ ಇತ್" (1.3.2) ಸೂತ್ರದಿಂದ 'ಇತ್' ಎಂಬ ಪದವು ಅನುವೃತ್ತವಾಗುತ್ತವೆ.

ಅರ್ಥ– ತದ್ಧಿತ ಪ್ರತ್ಯಯಗಳನ್ನು ಬಿಟ್ಟು ಉಳಿದ ಪ್ರತ್ಯಯಗಳ ಆದಿಯಲ್ಲಿರುವ 'ಲ್' 'ಶ್' ಮತ್ತು ಕು (ಕವರ್ಗ –ಕ,ಖ,ಗ,ಘ,ಙ) ವರ್ಣಗಳಿಗೆ 'ಇತ್' ಸಂಜ್ಞೆಬರುತ್ತದೆ.

(ನತ್ವ ವಿಧಾಯಕ ಸೂತ್ರ)

**ಸೂತ್ರ –137. ತಸ್ಮಾಚ್ಛಸೋ ನಃ ಪುಂಸಿ (6.1.103)**

ವೃತ್ತಿಃ–ಪೂರ್ವ–ಸವರ್ಣದೀರ್ಘಾತ್ ಪರೋ ಯಃ ಶಸಃ ಸಃ, ತಸ್ಯ ನಃ ಸ್ಯಾತ್ ಪುಂಸಿ।

ಪ. ಛೇ. – ತಸ್ಮಾತ್, ಶಸಃ, ನಃ, ಪುಂಸಿ।

ಅರ್ಥ– ಪುಲ್ಲಿಂಗದಲ್ಲಿ, ಪೂರ್ವಸವರ್ಣದೀರ್ಘದ ಪರದಲ್ಲಿರುವ 'ಶಸ್'ಗೆ ಸಂಬಂಧಿಸಿದ 'ಸ್' ಕಾರದ ಸ್ಥಾನದಲ್ಲಿ 'ನ್' ಕಾರವು ಆದೇಶವಾಗಿ ಬರುತ್ತದೆ. 'ತಸ್ಮಾತ್' ಎಂಬ ಶಬ್ದದಿಂದ "ಪ್ರಥಮಯೋಃ ಪೂರ್ವಸವರ್ಣಃ" (6.1.102) ಎಂಬಲ್ಲಿರುವ 'ಪೂರ್ವಸವರ್ಣಃ' ಎಂಬ ಪದವು ಗೃಹೀತವಾಗುತ್ತದೆ.

ರಾಮ+ಶಸ್ ಎಂದಿದ್ದಾಗ– "ಲಶಕ್ವತದ್ಧಿತೇ (1.3.8)" ಎಂಬ ಸೂತ್ರದಿಂದ 'ಶ್' ಕಾರ ಲೋಪವಾದಮೇಲೆ ರಾಮ+ಅಸ್ ಎಂದಿದ್ದಾಗ–"ಪ್ರಥಮಯೋಃ ಪೂರ್ವಸವರ್ಣಃ" (6.1.102) ಎಂಬ ಸೂತ್ರದಿಂದ ಪೂರ್ವಸವರ್ಣದೀರ್ಘ ಬಂದು ರಾಮ್+ಆ+ಸ್ ಎಂದಿರುತ್ತದೆ. ಆಗ ಈ ಪೂರ್ವಸವರ್ಣದೀರ್ಘದ ನಂತರ ಇರುವ (ಶಸ್)ನ 'ಸ್' ಕಾರಕ್ಕೆ 'ನ್' ಕಾರವು ಆದೇಶವಾಗಿ ಬಂದು, ರಾಮ್+ಆ+ನ್=ರಾಮಾನ್ ಎಂಬ ರೂಪವು ಸಿದ್ಧಿಸುತ್ತದೆ.

[ಇಲ್ಲಿ ರಾಮಾಣ್ ಎಂದು 'ಣತ್ವ' ಏಕೆ ಬರಲಿಲ್ಲ ಎಂದರೆ– (ಪದಾನ್ತಸ್ಯ (8.4.37)) ಎಂದು ಹೇಳುವದಕ್ಕೆ ಮೊದಲು 'ಣತ್ವ' ಬರುವ ನಿಯಮಗಳನ್ನು ಹೇಳುತ್ತಾರೆ– "ರಷಾಭ್ಯಾಂ ನೋ ಣಃ ಸಮಾನಪದೇ" ಎಂಬ ಸೂತ್ರದಿಂದ ರೇಫ ಅಥವಾ ಷ– ಕಾರಗಳಿಗೆ ಅವ್ಯವಹಿತವಾಗಿಯೂ ಮತ್ತು ಸಮಾನ ಪದದಲ್ಲಿಯೂ ಪರದಲ್ಲಿರುವ 'ನ್' ಕಾರಕ್ಕೆ 'ಣ' ತ್ವ ಬರುತ್ತದೆ ಎಂದು ಹೇಳಲಾಗಿದೆ. ಈ ಮೇಲಿನ ನಿಯಮವನ್ನು ಸಡಿಲಗೊಳಿಸುವದಕ್ಕಾಗಿ, ಸಮಾನ ಪದದಲ್ಲಿರುವ 'ನ್' ಕಾರವು 'ರೇಫ' 'ಷ' ಕಾರಗಳಿಂದ ವ್ಯವಹಿತವಾಗಿದ್ದರೂ, 'ಣ'ತ್ವ ಬರುತ್ತದೆ ಎಂದು ಮುಂದಿನ ಸೂತ್ರವು ಹೇಳುತ್ತದೆ].

**(ಣತ್ವ ವಿಧಾಯಕ ಸೂತ್ರ)**

**ಸೂತ್ರ 138. ಅಟ್‌ಕುಪ್ವಾಙ್‌ನುಮ್‌ವ್ಯವಾಯೇಽಪಿ (8.4.2)**

ವೃತ್ತಿಃ – ಅಟ್–ಕವರ್ಗ–ಪವರ್ಗ–ಆಙ್–ನುಮ್, ಏತೈಃ ವ್ಯಸ್ತೈಃ ಸಮಸ್ತೈಃ ಯಥಾಸಂಭವಂ ಮಿಲಿತೈಶ್ಚ, ವ್ಯವಧಾನೇಽಪಿ, ರಷಾಭ್ಯಾಂ ಪರಸ್ಯ ನಸ್ಯ ಣಃ ಸ್ಯಾತ್ ಸಮಾನಪದೇ। ಇತಿ ಪ್ರಾಪ್ತೇ–

ಪ. ಛೇ. – ಅಟ್–ಕು–ಪು– ಆಙ್–ನುಮ್–ವ್ಯವಾಯೇ, ಅಪಿ।

ಅ.ವೃ– "ರಷಾಭ್ಯಾಂ ನೋ ಣಃ ಸಮಾನಪದೇ" ಎಂಬ ಸೂತ್ರವು ಇಲ್ಲಿ ಅನುವೃತ್ತವಾಗುತ್ತದೆ,

ಅರ್ಥ– ಅಟ್, ಕ–ವರ್ಗ, ಪ–ವರ್ಗ, ಆಙ್, ನುಮ್ ಇವೆಲ್ಲವುಗಳಿಂದಲೂ ಅಥವಾ ಕೆಲವುಗಳಿಂದಲೋ ವ್ಯವಹಿತವಾಗಿದ್ದರೂ, 'ರೇಫ' ಅಥವಾ 'ಷ್' ಕಾರಗಳನಂತರ ಇರುವ 'ನ್' ಕಾರಕ್ಕೆ 'ಣ್'ಕಾರವು ಸಮಾನ ಪದದಲ್ಲಿ ಆದೇಶವಾಗಿ ಬರುತ್ತದೆ. ಹೀಗಿರುವಾಗ–

**(ಣತ್ವ ನಿಷೇಧ ಸೂತ್ರ)**

**ಸೂತ್ರ – 139. ಪದಾನ್ತಸ್ಯ (8.4.37)**

ವೃತ್ತಿಃ –ನಸ್ಯ ಣೋ ನ।. ರಾಮಾನ್।

ಅ. ವ್ಯ. – "ರಷಾಭ್ಯಾಂ ನೋ ಣಃ ಸಮಾನಪದೇ" ಎಂಬ ಸೂತ್ರದಿಂದ 'ನಃ' ಮತ್ತು 'ಣಃ' ಎಂಬ ಪದಗಳು ಅನುವೃತ್ತವಾಗುತ್ತವೆ. ಹಾಗೆಯೇ "ನ–ಭಾ–ಭೂ–ಪೂ–ಕಮಿ–ಗಮಿ–ಪ್ಯಾಯೀ–ವೇಪಾಂ" ಎಂಬ ಸೂತ್ರದಿಂದ 'ನ' ಎಂಬ ಪದದ ಅನುವೃತ್ತಿಯಾಗುತ್ತದೆ.

ಅರ್ಥ– ಪದಾನ್ತವಾದ 'ನ್'ಕಾರಕ್ಕೆ 'ಣ್'ತ್ವವು ಬರುವದಿಲ್ಲ.

ಉದಾ– ರಾಮಾನ್ ಎಂಬುದು ಪದವಾಗಿದೆ. ಆದ್ದರಿಂದ 'ನ್' ಕಾರಕ್ಕೆ ಣತ್ವ ಬರಬೇಕಾಗಿದ್ದರೂ ಪ್ರಕೃತ ಸೂತ್ರದಿಂದ ಅದು ನಿಷೇಧಿಸಲ್ಪಟ್ಟಿದೆ.

**(ಟಾ–ಙಸಿ–ಙಸ್ ಗಳಿಗೆ ಕ್ರಮವಾಗಿ ಇನ–ಆತ್–ಸ್ಯ ಎಂಬ ಆದೇಶಗಳನ್ನು ವಿಧಿಸುವ ಸೂತ್ರ)**

**ಸೂತ್ರ – 140. ಟಾ–ಙಸಿ–ಙಸಾಮಿನಾತ್ಸ್ಯಾಃ (7.1.12)**

ವೃತ್ತಿಃ –ಅದನ್ತಾತ್ ಟಾದೀನಾಂ ಇನಾದಯಃ (ಇನ, ಆತ್, ಸ್ಯ) ಸ್ಯುಃ। ಣತ್ವಮ್। ರಾಮೇಣ।

ಪ. ಛೇ. – ಟಾ–ಙಸಿ–ಙಸಾಂ, ಇನ –ಆತ್–ಸ್ಯಾಃ।

ಅ. ವ್ಯ. –"ಅತೋಭಿಸ ಐಸ್"(7.1.13) ಎಂಬ ಸೂತ್ರದಿಂದ 'ಅತಃ' ಎಂಬ ಪದವು, ಮತ್ತು "ಅಙ್ಗಸ್ಯ" ಎಂಬ ಸೂತ್ರವನ್ನೇ ವಿಭಕ್ತಿ ಪರಿಣಾಮ(ಪಂಚಮ್ಯನ್ತ) ಮಾಡಿ 'ಅಙ್ಗಾತ್' ಎಂದು ಅನುವೃತ್ತಿ ಮಾಡಲಾಗಿದೆ.

ಅರ್ಥ– ಅದನ್ತವಾದ ಅಙ್ಗಕ್ಕಿಂತ ಪರದಲ್ಲಿರುವ ಟಾ–ಙಸಿ–ಙಸ್ ಇವುಗಳ ಸ್ಥಾನದಲ್ಲಿ ಕ್ರಮವಾಗಿ 'ಇನ–ಆತ್–ಸ್ಯ' ಗಳು ಆದೇಶವಾಗಿ ಬರುತ್ತವೆ. ಇಲ್ಲಿ ಸ್ಥಾನಿಗಳ ಸಂಖ್ಯೆಯು ಮೂರು, ಮತ್ತು ಆದೇಶಗಳ ಸಂಖ್ಯೆಯೂ ಮೂರು. ಆದುದರಿಂದ "ಯಥಾಸಂಖ್ಯಮನುದೇಶಸ್ಸಮಾನಾಮ್" ಎಂಬ ಸೂತ್ರದಿಂದ ಸ್ಥಾನಿಗಳ ಕ್ರಮಕ್ಕನುಗುಣವಾಗಿ ಆದೇಶಗಳು ಕ್ರಮವಾಗಿ ಬರುತ್ತವೆ.

ಉದಾ– ರಾಮ+ಟಾ ಎಂದಿದ್ದಾಗ– 'ಟಾ' ಗೆ 'ಇನ' ಆದೇಶವಾಗಿ ಬಂದು, ರಾಮ+ಇನ ಎಂದಿದ್ದಾಗ– "ಅಟ್–ಕು–ಪ್ವಾಙ್–ನುಮ್–ವ್ಯವಾಯೇಽಪಿ" (8.4.2) ಎಂಬ ಸೂತ್ರದಿಂದ 'ನ್' ಕಾರಕ್ಕೆ 'ಣ್' ಬಂದು ರಾಮ+ಇಣ ಎಂದಾಗಿ "ಆದ್ಗುಣಃ" (6.1.87) ಎಂಬ ಸೂತ್ರದಿಂದ ಗುಣ ಬಂದು ರಾಮೇಣ ಎಂಬ ರೂಪವು ಸಿದ್ಧಿಸುತ್ತದೆ.

**(ಅಙ್ಗಕ್ಕೆ ದೀರ್ಘ ವಿಧಾಯಕ ಸೂತ್ರ)**

**ಸೂತ್ರ –141. ಸುಪಿ ಚ (7.3.102)**

ವೃತ್ತಿಃ –ಯಞಾದೌ ಸುಪಿ ಅತೋಽಙ್ಗಸ್ಯ ದೀರ್ಘಃ।ರಾಮಾಭ್ಯಾಮ್।

ಅ. ವ್ಯ. – "ಅತೋ ದೀರ್ಘೋ ಯಞಿ" ಎಂಬ ಸೂತ್ರವು ಅನುವೃತ್ತವಾಗಿದೆ. "ಅಙ್ಗಸ್ಯ" ಎಂಬುದು ಅಧಿಕಾರಸೂತ್ರ.

ಅರ್ಥ– 'ಯಞ್' ಪ್ರತ್ಯಾಹಾರದ ವರ್ಣವನ್ನು ಆದಿಯಲ್ಲಿ ಉಳ್ಳ 'ಸುಪ್' ಪ್ರತ್ಯಯವು ಪರದಲ್ಲಿದ್ದಾಗ, ಹ್ರಸ್ವ ಅ–ಕಾರಾನ್ತ ಅಙ್ಗದ ಅನ್ತ್ಯ ವರ್ಣಕ್ಕೆ ದೀರ್ಘವು ಬರುತ್ತದೆ.

ಉದಾ– ರಾಮ+ಭ್ಯಾಮ್ ಎಂದಿದ್ದಾಗ– ಭ್ಯಾಮ್ ಇದು 'ಸುಪ್' ಪ್ರತ್ಯಯ. ಅದರಲ್ಲಿ ಆದಿವರ್ಣವಾದ 'ಭ್' ಇದು 'ಯಞ್' ಪ್ರತ್ಯಾಹಾರದ ವರ್ಣ. ಹೀಗಿದ್ದಾಗ, 'ರಾಮ' ಶಬ್ದದ ಹ್ರಸ್ವ 'ಅ' ಕಾರಕ್ಕೆ ದಿರ್ಘ ಬಂದು ರಾಮಾ+ಭ್ಯಾಮ್ ಎಂದಾಗಿ ರಾಮಾಭ್ಯಾಮ್ ಎಂಬ ರೂಪವು ಸಿದ್ಧಿಸುತ್ತದೆ.

**(ಐಸ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ –142. ಅತೋ ಭಿಸ ಐಸ್ (7.1.9)**

ವೃತ್ತಿಃ –ಅಕಾರಾಂತಾತ್ ಅಙ್ಗಾತ್ ಭಿಸಃ ಐಸ್ ಸ್ಯಾತ್।("ಅನೇಕಾಲ್‌ಶಿತ್ ಸರ್ವಸ್ಯ") ರಾಮೈಃ।

ಅ. ವ್ಯ. – ಇಲ್ಲಿ "ಅಂಗಸ್ಯ" ಎಂಬುದು ಅಧಿಕಾರಸೂತ್ರ.

ಪ.ಛೇ –ಅತಃ, ಭಿಸಃ, ಐಸ್।

ಅರ್ಥ– ಹ್ರಸ್ವ ಅ–ಕಾರಾನ್ತ ಅಙ್ಗದನಂತರ ಇರುವ 'ಭಿಸ್' ಪ್ರತ್ಯಯದ ಸ್ಥಾನದಲ್ಲಿ 'ಐಸ್' ಆದೇಶವು ಬರುತ್ತದೆ. "ಅನೇಕಾಲ್ ಶಿತ್ ಸರ್ವಸ್ಯ"(1.1.55) ಎಂಬ ಸೂತ್ರದಿಂದ 'ಐಸ್' ಎಂಬ ಅನೇಕಾಲ್ ಆದೇಶವು 'ಭಿಸ್' ಎಂಬ ಸ್ಥಾನಿಯನ್ನು ಸಂಪೂರ್ಣ ತೆಗೆದುಹಾಕಿ ಅದರ ಜಾಗದಲ್ಲಿ ಸರ್ವಾದೇಶವಾಗಿ ಬರುತ್ತದೆ.

ಉದಾ– ರಾಮ+ಭಿಸ್ ಎಂದಿದ್ದಾಗ– 'ಭಿಸ್' ಎಂಬ ಸ್ಥಾನಿಯನ್ನು ಸಂಪೂರ್ಣವಾಗಿ ತೆಗೆದುಹಾಕಿ ಅದರ ಜಾಗದಲ್ಲಿ ಪ್ರಕೃತ ಸೂತ್ರದಿಂದ 'ಐಸ್' ಆದೇಶವಾಗಿ ಬಂದು ರಾಮ+ಐಸ್ ಎಂದಿದ್ದಾಗ, "ವೃದ್ಧಿರೇಚಿ" (6.1.88) ಎಂಬ ಸೂತ್ರದಿಂದ ವೃದ್ಧಿ ಬಂದು ರಾಮೈಸ್ ಎಂದಾಗಿ ರುತ್ವ–ವಿಸರ್ಗಗಳಿಂದ ರಾಮೈಃ ರೂಪವು ಸಿದ್ಧಿಸುತ್ತದೆ.

**(ಯ–ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ – 143. ಙೇರ್ಯಃ (7.1.13)**

ವೃತ್ತಿಃ –ಅತೋಽಙ್ಗಾತ್ ಪರಸ್ಯ ಙೇಃ 'ಯ'–ಆದೇಶಃ।

ಪ. ಛೇ. – ಙೇಃ, ಯಃ।

ಅ. ವ್ಯ. – "ಅತೋ ಬಿಸ ಐಸ್ (7.1.9)" ಎಂಬ ಸೂತ್ರದಿಂದ 'ಅತಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– ಹ್ರಸ್ವ ಅ–ವರ್ಣಾನ್ತ ಅಙ್ಗದ ನಂತರ ಇರುವ 'ಙೇ' ಪ್ರತ್ಯಯದ ಸ್ಥಾನದಲ್ಲಿ 'ಯ' ಆದೇಶವು ಬರುತ್ತದೆ. ಆಗ ರಾಮ+ಯ ಎಂದಿರುತ್ತದೆ. ಇಲ್ಲಿ ಆದೇಶವಾಗಿ ಬಂದ 'ಯ' ಎಂಬುದು 'ಸುಪ್' ಪ್ರತ್ಯಯವಲ್ಲ. ಇದಕ್ಕೆ 'ಸುಪ್'ತ್ವವನ್ನು ವಿಧಿಸುವದಕ್ಕಾಗಿ

ಮುಂದಿನ ಸೂತ್ರವನ್ನು ರಚಿಸಲಾಗಿದೆ.

**(ಸ್ಥಾನಿವದ್ಭಾವ ವಿಧಾಯಕ ಅತಿದೇಶ ಸೂತ್ರ)**

**ಸೂತ್ರ - 144. ಸ್ಥಾನಿವದಾದೇಶೋಽನಲ್ವಿಧೌ** (1.1.56)

ವೃತ್ತಿಃ -ಆದೇಶಃ ಸ್ಥಾನಿವತ್ ಸ್ಯಾತ್ ನ ತು ಸ್ಥಾನಿ-ಅಲಾಶ್ರಯವಿಧೌ। ಇತಿ ಸ್ಥಾನಿವತ್ತ್ವಾತ್ "ಸುಪಿಚ (7.3.102)" ಇತಿ ದೀರ್ಘಃ। ರಾಮಾಯ। ರಾಮಾಭ್ಯಾಮ್।

ಪ. ಛೇ. – ಸ್ಥಾನಿವತ್, ಆದೇಶಃ, ಅನಲ್ವಿಧೌ।

ಅರ್ಥ– ಆದೇಶವು ಸ್ಥಾನಿಗೆ ಸಮಾನವಾಗಿರುವದು. ಅಂದರೆ ಸ್ಥಾನಿಯ ಧರ್ಮವನ್ನು ಪಡೆದಿರುವದು. ಆದರೆ ಸ್ಥಾನಿಯು 'ಅಲ್' ಆಗಿದ್ದರೆ, ಆಗ ತದಾಶ್ರಯ ವಿಧಿಯಲ್ಲಿ **(ಅಂದರೆ ಒಂದೇ 'ಅಲ್' ಅಥವಾ ವರ್ಣವನ್ನು ಆಶ್ರಯಿಸಿದ–ವಿಧಿ ಇದ್ದಾಗ)** ಆದೇಶವು ಸ್ಥಾನಿಯ ಧರ್ಮವನ್ನು ಪಡೆಯುವದಿಲ್ಲ.

ಯಾವ ಅಕ್ಷರಕ್ಕೆ ಆದೇಶವು ಬರುತ್ತದೋ ಆ ಅಕ್ಷರಕ್ಕೆ 'ಸ್ಥಾನಿ' ಎಂದು ಹೆಸರು. ಅಂದರೆ ಯಾವ ಆದೇಶವು ಬಂದದ್ದರಿಂದ, ಪೂರ್ವದಲ್ಲಿ ಉಚ್ಚರಿಸಲ್ಪಟ್ಟದ್ದು ಕಾಣದೇ ಹೋಗುತ್ತದೆಯೋ ಆ ಪೂರ್ವ ವರ್ಣಕ್ಕೆ ಸ್ಥಾನಿ ಎಂದು ಹೆಸರು.

[ಸ್ಥಾನಿವದ್ಭಾವದ ವಿವರಣೆ– ಆದೇಶವು 'ಸ್ಥಾನಿ'ಯಂತೆ ಆಗುತ್ತದೆ ಎಂದರೆ ಸ್ಥಾನಿಯ ಧರ್ಮವನ್ನು ಪಡೆಯುತ್ತದೆ ಎಂದರ್ಥ. ಇದಕ್ಕೆ ಒಂದು ನಿಯಮವನ್ನು ಹೇಳಿದ್ದಾರೆ. ಆ ನಿಯಮವೇನೆಂದರೆ, ಸ್ಥಾನಿಯು 'ಏಕಾಲ್' (ಒಂದೇ 'ಅಲ್') ಆಗಿರಬಾರದು. 'ಏಕಾಲ್' ಎಂದರೆ ಒಂದೇ ವರ್ಣ ಎಂದರ್ಥ. ಒಂದೇ ವರ್ಣವುಳ್ಳ ಸ್ಥಾನಿಯನ್ನು ಆಶ್ರಯಿಸಿದ ವಿಧಿ ಎಲ್ಲಿರುವದೋ ಅಂಥ ಸಂದರ್ಭಗಳಲ್ಲಿ ಆದೇಶವು ಸ್ಥಾನಿಯ ಧರ್ಮವನ್ನು ಪಡೆಯುವದಿಲ್ಲ. ಅಂದರೆ ಒಂದಕ್ಕಿಂತ ಹೆಚ್ಚಾದ ವರ್ಣಗಳುಳ್ಳ ಸ್ಥಾನಿಯನ್ನು ಆಶ್ರಯಿಸಿ ವಿಧಿಸಲ್ಪಟ್ಟಾಗ ಆ ಆದೇಶಕ್ಕೆ ಸ್ಥಾನಿಯ ಧರ್ಮವು ಬರುತ್ತದೆ. ಇದನ್ನೇ 'ಅನಲ್ವಿಧೌ' ಎಂದು ಹೇಳಿದ್ದಾರೆ. (ಅನಲ್ವಿಧಿಃ ಅಂದರೆ ನ ಏಕಾಲ್ ವಿಧಿಃ, ಅಲ್ ಎಂದರೆ ಒಂದು ಅಲ್ ಅಥವಾ ವರ್ಣ ಎಂದು ಅರ್ಥ) ವೃತ್ತಿಯಲ್ಲಿ ಹೇಳಿರುವ 'ಸ್ಥಾನ್ಯಲಾಶ್ರಯವಿಧೌ' ಎಂಬಲ್ಲಿರುವ 'ಅಲ್' ಶಬ್ದಕ್ಕೆ ಒಂದು ವರ್ಣವುಳ್ಳ ಸ್ಥಾನಿಗೆ ಆದೇಶವು ವಿಧಿಸಲ್ಪಟ್ಟಾಗ 'ನ' ಎಂದರೆ ಸ್ಥಾನಿವದ್ಭಾವವು ಬರುವದಿಲ್ಲ ಎಂದು ಸೂತ್ರಾರ್ಥ].

ಉದಾ– ರಾಮ+ಙೇ ಎಂದಿದ್ದಾಗ 'ಙೇ' ಎಂಬ ಸ್ಥಾನಿಗೆ 'ಯ' ಎಂಬ ಆದೇಶವು ವಿಧಿಸಲಾಗಿದೆ. ಇಲ್ಲಿ 'ಙೇ' ಎಂಬ ಸ್ಥಾನಿಯು ಒಂದೇ ಅಲ್ ಉಳ್ಳದ್ದಾಗಿಲ್ಲ. ಪರಂತು 'ಅನೇಕಾಲ್' (ಒಂದಕ್ಕಿಂತ ಹೆಚ್ಚು ಅಲ್) ಉಳ್ಳದ್ದು ಆಗಿದೆ. ಆದ್ದರಿಂದ ಇದಕ್ಕೆ ವಿಧಿಸಿರುವ 'ಯ' ಎಂಬ ಆದೇಶವು ಸ್ಥಾನಿವದ್ಭಾವವನ್ನು ಹೊಂದುತ್ತದೆ. 'ಯ' ಎಂಬ ಆದೇಶವು 'ಸುಪ್' ನಲ್ಲಿ ಅಂತರ್ಭಾವ ಹೊಂದಿಲ್ಲದಿದ್ದರೂ 'ಏಕಾಲ್' ತ್ವಾಶ್ರಯವಿಲ್ಲದ್ದರಿಂದ 'ಯ' ಕ್ಕೆ ಸ್ಥಾನಿಯ 'ಸುಪ್' ತ್ವ ಧರ್ಮವು ಬರುತ್ತದೆ.

'ಯ' ಎಂಬ ಆದೇಶವು ಸಂಪೂರ್ಣವಾಗಿ 'ಙೇ' ಯನ್ನು ಕೊಂದುಹಾಕಿ, ಅದರ

ಸ್ಥಾನದಲ್ಲಿ ಬಂದಿದೆ. ಈಗ ರಾಮ+ಙೇ ಎಂದಿದ್ದಾಗ, 'ಙೇ' ನ ಸ್ಥಾನದಲ್ಲಿ 'ಯ' ಆದೇಶವು ಸರ್ವಾದೇಶವಾಗಿ ಬಂದು ರಾಮ+ಯ ಎಂದಿದ್ದಾಗ "ಸುಪಿ ಚ" (7.3.102) ಎಂಬ ಸೂತ್ರದಿಂದ 'ಮ್' ಕಾರೋತ್ತರವರ್ತಿ 'ಅ' ಕಾರಕ್ಕೆ ದೀರ್ಘವು ಬಂದು ರಾಮಾ+ಯ ಎಂದಾಗಿ ರಾಮಾಯ ಎಂದಾಗುತ್ತದೆ.

ರಾಮಾಭ್ಯಾಮ್– ಇದು ಚತುರ್ಥೀ ವಿಭಕ್ತಿಯ ದ್ವಿವಚನದ ರೂಪವಾಗಿದೆ. ಇದರ ಸಿದ್ಧಿಯನ್ನು ತೃತೀಯಾ ವಿಭಕ್ತಿಯ ದ್ವಿವಚನದ ಪ್ರಕ್ರಿಯೆಯಂತೆ ತಿಳಿಯಬೇಕು.

**(ಏತ್ವ ವಿಧಿಸುವ ಸೂತ್ರ)**

**ಸೂತ್ರ – 145. ಬಹುವಚನೇ ಝಲ್ಯೇತ್ (7.1.103)**

ವೃತ್ತಿಃ – ಝಲಾದಿ–ಬಹುವಚನೇ ಸುಪಿ, ಅತೋಽಙ್ಗಸ್ಯ ಏಕಾರಃ (ಆದೇಶಃ) ಸ್ಯಾತ್। ರಾಮೇಭ್ಯಃ। ಸುಪಿ ಕಿಮ್। ಪಚಧ್ವಮ್।

ಪ. ಛೇ. – ಬಹುವಚನೇ ಝಲಿ ಏತ್।

ಅ.ವ್ಯ. – "ಅತೋ ದೀರ್ಘೋ ಯಞಿ" ಎಂಬ ಸೂತ್ರದಿಂದ 'ಅತಃ' ಎಂಬ ಪದವು, ಮತು "ಸುಪಿ ಚ"(7.3.102) ಎಂಬ ಸೂತ್ರದಿಂದ 'ಸುಪಿ' ಎಂಬ ಪದವು ಅನುವೃತ್ತವಾಗುತ್ತವೆ. 'ಅಙ್ಗಸ್ಯ" ಎಂಬುದು ಅಧಿಕಾರ ಸೂತ್ರ.

ಅರ್ಥ– 'ಝಲ್' ವರ್ಣವನ್ನು ಆದಿಯಲ್ಲುಳ್ಳ ಬಹುವಚನದ 'ಸುಪ್' ಪ್ರತ್ಯಯವು ಪರದಲ್ಲಿದ್ದಾಗ ಪೂರ್ವದಲ್ಲಿರುವ ಹ್ರಸ್ವ ಅ–ಕಾರಾನ್ತವಾದ ಅಙ್ಗದ ಅ–ಕಾರಕ್ಕೆ ದೀರ್ಘವು ಬರುತ್ತದೆ.

ಉದಾ– ರಾಮ+ಭ್ಯಸ್ (ಚತುರ್ಥಿ ವಿಭಕ್ತಿ ಬಹುವಚನ) ಎಂದಿದ್ದಾಗ ಪ್ರಕೃತ ಸೂತ್ರದಿಂದ 'ಭ್' ಕಾರ (ಝಲ್ ವರ್ಣ) ದ ಪೂರ್ವದಲ್ಲಿರುವ 'ಮ್'ಕಾರೋತ್ತರವರ್ತಿ 'ಅ' ಕಾರಕ್ಕೆ 'ಏ'ಕಾರವು ಆದೇಶವಾಗಿ ಬಂದು ರಾಮೇ+ಭ್ಯಸ್ ಎಂದಾಗಿ ರುತ್ವವಿಸರ್ಗಗಳಿಂದ ರಾಮೇಭ್ಯಃ ಎಂದಾಗುತ್ತದೆ.

'ಸುಪಿ' ಎಂದು ಯಾಕೆ ಹೇಳಿದ್ದಾರೆಂಬ ಪ್ರಶ್ನೆಗೆ, 'ಪಚಧ್ವಮ್' ಎಂಬ ಪ್ರತ್ಯುದಾಹರಣೆಯಿಂದ ಉತ್ತರಿಸಿದ್ದಾರೆ.

'ಪಚ' ಎಂಬುದು ಹ್ರಸ್ವ ಅ–ಕಾರಾನ್ತವಾಗಿದೆ. 'ಧ್ವಮ್' ಎಂಬುದು ಯದ್ಯಪಿ 'ಝಲಾದಿ'ಯಾದ ಬಹುವಚನ ಪ್ರತ್ಯಯವಾಗಿದ್ದರೂ ಅದು 'ಸುಪ್' ಪ್ರತ್ಯಯವಾಗಿಲ್ಲ. ಪರಂತು 'ತಿಙ್' ಪ್ರತ್ಯಯವಾಗಿದೆ.

**(ಚರ್ತ್ವ ವಿಧಾಯಕ ಸೂತ್ರ)**

**ಸೂತ್ರ – 146. ವಾಽವಸಾನೇ (8.4.56)**

ವೃತ್ತಿಃ –ಅವಸಾನೇ ಝಲಾಂ ಚರೋ ವಾ। ರಾಮಾತ್, ರಾಮಾದ್। ರಾಮಾಭ್ಯಾಮ್। ರಾಮೇಭ್ಯಃ। ರಾಮಸ್ಯ।

ಪ. ಛೇ. – ವಾ, ಅವಸಾನೇ।

ಅ. ವ್ಯ. – "ಝಲಾಂ ಜಶ್ ಝಶಿ" (8.4.53) ಎಂಬ ಸೂತ್ರದಿಂದ 'ಝಲಾಂ' ಎಂಬ ಪದವೂ ಮತ್ತು "ಅಭ್ಯಾಸೇ ಚರ್ಚ" (8.4.54) ಎಂಬ ಸೂತ್ರದಿಂದ 'ಚರ್' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ– ಅವಸಾನವು ಪರದಲ್ಲಿದ್ದಾಗ ಅವ್ಯವಹಿತ ಪೂರ್ವದಲ್ಲಿರುವ "ಝಲ್' ವರ್ಣಗಳ ಸ್ಥಾನದಲ್ಲಿ, ವಿಕಲ್ಪವಾಗಿ 'ಚರ್' ವರ್ಣವು ಆದೇಶವಾಗಿ ಬರುತ್ತದೆ.

ಉದಾ– ರಾಮ+ಙಸಿ (ಅಸ್) ಎಂದಿದ್ದಾಗ "ಟಾ–ಙಸಿ–ಙಸಾಮಿನಾತ್‌ಸ್ಯಾಃ (7.1.12) ಎಂಬ ಸೂತ್ರದಿಂದ 'ಙಸಿ'(ಅಸ್) ಗೆ 'ಆತ್' ಆದೇಶ ಬಂದು ರಾಮ+ಆತ್ ಎಂದಾಗಿ "ಅಕಃ ಸವರ್ಣೇ ದೀರ್ಘಃ (6.1.101) ಎಂಬ ಸೂತ್ರದಿಂದ ಸವರ್ಣದೀರ್ಘ ಬಂದು ರಾಮಾತ್ ಎಂದಾಗುತ್ತದೆ. ಮುಂದೆ "ಝಲಾಂ ಜಶೋಽನ್ತೇ" (8.2.39) ಎಂಬ ಸೂತ್ರದಿಂದ 'ತ್' ಕಾರಕ್ಕೆ 'ದ್' ಕಾರವು ಆದೇಶವಾಗಿ ಬಂದು 'ರಾಮಾದ್' ಎಂದಾಗುತ್ತದೆ. ಪ್ರಕೃತ ಸೂತ್ರದಿಂದ 'ದ್' ಕಾರಕ್ಕೆ ವೈಕಲ್ಪಿಕವಾಗಿ 'ಚರ್ತ್ವ' ಬಂದು 'ರಾಮಾತ್' ಎಂದಾಗುತ್ತದೆ. ಹೀಗೆ 'ರಾಮಾತ್' ಮತ್ತು 'ರಾಮಾದ್' ಎಂಬ ಎರಡು ರೂಪಗಳಾಗುತ್ತವೆ.

ಪಞ್ಚಮೀ ವಿಭಕ್ತಿಯ ದ್ವಿವಚನ ಮತ್ತು ಬಹುವಚನ ರೂಪಗಳು ಚತುರ್ಥೀ ವಿಭಕ್ತಿಯ ರೂಪಗಳಂತೆಯೇ ಪ್ರಕ್ರಿಯೆ ನಡೆದು ರಾಮಾಭ್ಯಾಂ ಮತ್ತು ರಾಮೇಭ್ಯಃ ಎಂಬ ರೂಪಗಳು ಸಿದ್ಧವಾಗುತ್ತವೆ.

ಇನ್ನು ಷಷ್ಠೀ ವಿಭಕ್ತಿಯಲ್ಲಿ ರಾಮ+ಙಸ್ ಎಂದಿದ್ದಾಗ "ಟಾ–ಙಸಿ–ಙಸಾಮಿನಾತ್‌ಸ್ಯಾಃ (7.1.12)" ಎಂಬ ಸೂತ್ರದಿಂದ 'ಙಸ್' ಗೆ 'ಸ್ಯ' ಆದೇಶವಾಗಿ ಬಂದು ರಾಮ+ಸ್ಯ ಎಂದಾಗಿ ರಾಮಸ್ಯ ಎಂದು ರೂಪವಾಗುತ್ತದೆ.

### (ಅದನ್ತ ಅಙ್ಗಕ್ಕೆ ಏತ್ವ ವಿಧಾಯಕ ಸೂತ್ರ)

**ಸೂತ್ರ – 147. ಓಸಿ ಚ (7.3.104)**

ವೃತ್ತಿಃ –ಅತೋಽಙ್ಗಸ್ಯ ಏಕಾರಃ (ಆದೇಶಃ) ಸ್ಯಾತ್ । ರಾಮಯೋಃ॥

ಅ.ವ್ಯ.– "ಅತೋ ಭಿಸ ಐಸ್ (7.1.9)" ಎಂಬ ಸೂತ್ರದಿಂದ 'ಅತಃ' ಎಂಬ ಪದವು, "ಬಹುವಚನೇ ಝಲ್ಯೇತ್ (7.1.103)" ಎಂಬ ಸೂತ್ರದಿಂದ 'ಏತ್' ಎಂಬ ಪದವೂ ಅನುವೃತ್ತವಾಗುತ್ತವೆ. 'ಅಂಗಸ್ಯ' ಎಂಬುದು ಅಧಿಕಾರ ಸೂತ್ರ.

ಅರ್ಥ– ಹ್ರಸ್ವ ಅ–ಕಾರಾನ್ತ ಅಂಗದ ನಂತರ 'ಓಸ್' ಪ್ರತ್ಯಯವು ಪರದಲ್ಲಿದ್ದಾಗ, ಹ್ರಸ್ವ ಅ–ಕಾರದ ಸ್ಥಾನದಲ್ಲಿ 'ಏ'ಕಾರವು ಆದೇಶವಾಗಿ ಬರುತ್ತದೆ.

ಉದಾ– ರಾಮ್+ಅ+ಓಸ್ ಎಂದಿದ್ದಾಗ, ಪ್ರಕೃತ ಸೂತ್ರದಿಂದ ರಾಮ ಶಬ್ದದಲ್ಲಿಯ ಅದನ್ತ ಅಙ್ಗಕ್ಕೆ 'ಏ' ಕಾರ ಪ್ರಾಪ್ತವಾಗಿ ರಾಮ್+ಏ+ಓಸ್ ಎಂದಿದ್ದಾಗ "ಏಚೋಽಯವಾಯಾವಃ (6.1.78)" ಎಂಬ ಸೂತ್ರದಿಂದ ಏ–ಕಾರಕ್ಕೆ 'ಅಯ್' ಆದೇಶವಾಗಿ ಬಂದು ರಾಮ್+ಅಯ್+ಓಸ್=ರಾಮಯೋಸ್ ಎಂದಾಗಿ ರುತ್ವ–ವಿಸರ್ಗಗಳಿಂದ ರಾಮಯೋಃ ಎಂದಾಗುತ್ತದೆ.

### (ಹ್ರಸ್ವಾನ್ತ, ನದ್ಯನ್ತ ಮತ್ತು ಆಬನ್ತ ಅಙ್ಗಗಳ ಪರದಲ್ಲಿರುವ 'ಆಮ್' ಗೆ ನುಡಾಗಮ ಹೇಳುವ ಸೂತ್ರ)

**ಸೂತ್ರ – 148. ಹ್ರಸ್ವನದ್ಯಾಪೋ ನುಟ್ (7.1.54)**

ವೃತ್ತಿಃ –ಹ್ರಸ್ವಾಂತಾತ್–ನದ್ಯನ್ತಾತ್–ಆಬನ್ತಾತ್ ಚ ಅಙ್ಗಾತ್ ಪರಸ್ಯ ಆಮಃ ನುಡಾಗಮಃ।

ಪ. ಛೇ. – ಹ್ರಸ್ವ–ನದೀ–ಆಪಃ, ನುಟ್।

ಅ. ವೃ. – 'ಅಂಗಸ್ಯ' ಎಂಬುದು ಅಧಿಕಾರ ಸೂತ್ರ. "ಆಮಿ ಸರ್ವನಾಮ್ನಃ ಸುಟ್" (7.1.52) ಎಂಬ ಸೂತ್ರದಿಂದ 'ಆಮಿ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ–ಇಲ್ಲಿ 'ಅಙ್ಗಸ್ಯ' ಎಂಬುದು ಹ್ರಸ್ವಾನ್ತ, ನದ್ಯನ್ತ ಮತ್ತು ಆಬನ್ತಗಳಿಗೆ ಅನ್ವಯಿಸುತ್ತದೆ. ಹ್ರಸ್ವಾನ್ತ, ನದ್ಯನ್ತ ಮತ್ತು ಆಬನ್ತ ಅಙ್ಗಗಳ ಪರದಲ್ಲಿರುವ 'ಆಮ್' ಗೆ 'ನ್'(ನುಟ್) ಆಗಮವು ಬರುತ್ತದೆ. ಇಲ್ಲಿ ಹ್ರಸ್ವ ವರ್ಣವೆಂದರೆ ಎಲ್ಲ ಹ್ರಸ್ವ ಸ್ವರಗಳೆಂದು ಅರ್ಥ.

'ನದೀ'–ಸಂಜ್ಞೆ ಎಂದರೆ 'ಈ'ಕಾರಾನ್ತ ಮತ್ತು 'ಊ'ಕಾರಾನ್ತ ಸ್ತ್ರೀಲಿಙ್ಗ ಶಬ್ದಗಳೆಂದು ತಿಳಿಯಬೇಕು. 'ಆಮ್' ಶಬ್ದಕ್ಕೆ ನುಡಾ(ನುಟ್)ಗಮ ಬರುತ್ತದೆ. ಇದು 'ಟಿತ್' ಆಗಿರುವದರಿಂದ "ಆದ್ಯನ್ತೌ ಟಕಿತೌ" ಎಂಬ ಸೂತ್ರದಿಂದ ಆದ್ಯವಯವವಾಗಿ ಬರುತ್ತದೆ. 'ನುಟ್' ನಲ್ಲಿ 'ಉ'ಕಾರ–ಟ್–ಕಾರಗಳು 'ಇತ್' ಸಂಜ್ಞಕಗಳಾದ್ದರಿಂದ ಅವೆರಡೂ ಲೋಪವಾಗಿ ಕೇವಲ 'ನ್' ಮಾತ್ರ ಉಳಿದಿರುತ್ತದೆ. ರಾಮ+ಆಮ್ ಎಂದಿದ್ದಾಗ, ರಾಮ ಶಬ್ದದಲ್ಲಿನ ಹ್ರಸ್ವಾನ್ತ ಅಙ್ಗದ ಪರದಲ್ಲಿರುವ 'ಆಮ್' ಗೆ ಪ್ರಕೃತ ಸೂತ್ರದಿಂದ 'ನ್' (ನುಟ್) ಆಗಮವಾಗಿ ಬಂದು ರಾಮ+ನ್+ಆಮ್=ರಾಮ+ನಾಮ್ ಎಂದಿದ್ದಾಗ–

### (ದೀರ್ಘ ವಿಧಿಸುವ ಸೂತ್ರ)

**ಸೂತ್ರ – 149. ನಾಮಿ (6.4.3)**

ವೃತ್ತಿಃ – ಅಜಂತ–(ಅಚ್+ಅಂತ)ಅಙ್ಗಸ್ಯ ದೀರ್ಘಃ। ರಾಮಾಣಾಂ। ರಾಮೇ। ರಾಮಯೋಃ। ಸುಪಿ ಏತ್ವೇ ಕೃತೇ–

ಅ. ವೃ. – ಅಙ್ಗಸ್ಯ ಎಂಬುದು ಇಲ್ಲಿ ಅಧಿಕಾರ ಸೂತ್ರ. "ಅಚಶ್ಚ" ಎಂಬ ಪರಿಭಾಷಾ ಸೂತ್ರದಿಂದ 'ಅಚಃ' ಎಂಬುದು ಉಪಸ್ಥಿತವಾಗಿ ಅಙ್ಗ ಶಬ್ದಕ್ಕೆ ವಿಶೇಷಣವಾಗಿದೆ. "ಢ್ರಲೋಪೇ ಪೂರ್ವಸ್ಯ ದೀರ್ಘೋಽಣಃ" ಎಂಬ ಸೂತ್ರದಿಂದ 'ದೀರ್ಘಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– 'ನಾಮ್' ಶಬ್ದವು ಪರದಲ್ಲಿದ್ದಾಗ ಅಜನ್ತ ಅಙ್ಗಕ್ಕೆ ದೀರ್ಘವು ಬರುತ್ತದೆ. ಆ ದೀರ್ಘ ವರ್ಣವು 'ಅಲೋಽನ್ತ್ಯಸ್ಯ' ಪರಿಭಾಷೆಯಿಂದ ಅಙ್ಗದ ಕೊನೆ ವರ್ಣಕ್ಕೆ ಬರುತ್ತದೆ.

ಉದಾ– ರಾಮ+ನಾಮ್ ಎಂದಿದ್ದಾಗ, 'ನಾಮ್' ಎಂಬುದು ಪರದಲ್ಲಿರೋಣದ್ದರಿಂದ ಅದಕ್ಕೆ ಅವ್ಯವಹಿತ ಪೂರ್ವದಲ್ಲಿರುವ ಅಜನ್ತ ಅಙ್ಗ(ರಾಮ ಶಬ್ದದ ಅಂತ್ಯ ಅ–ಕಾರ)ಕ್ಕೆ ದೀರ್ಘ ಬಂದು ರಾಮಾ+ನಾಮ್ ಎಂದಿದ್ದಾಗ, "ಅಟ್‌ಕುಪ್ವಾಙ್‌ನುಮ್‌ವ್ಯವಾಯೇಽಪಿ (8.4.2)" ಎಂಬ ಸೂತ್ರದಿಂದ ರೇಫದ ಪರದಲ್ಲಿರುವ 'ನ್' ಕಾರಕ್ಕೆ 'ಣ'ತ್ವ ಬಂದು ರಾಮಾ+ಣಾ+ಮ್=ರಾಮಾಣಾಮ್ ಎಂದಾಗುತ್ತದೆ.

ಸಪ್ತಮೀ ಏಕವಚನದಲ್ಲಿ ರಾಮ+ಜಿ ಎಂದಿದ್ದಾಗ, "ಲಶಕ್ವತದ್ಧಿತೇ (1.3.8)" ಎಂಬ ಸೂತ್ರದಿಂದ ಪ್ರತ್ಯಯದ ಆದಿವರ್ಣವಾದ 'ಙ್' ಕಾರ (ಇತ್) ಲೋಪವಾಗಿ 'ಇ' ಅಷ್ಟೇ ಉಳಿಯುತ್ತದೆ. ಹೀಗೆ ರಾಮ+ಇ ಎಂದಿದ್ದಾಗ "ಆದ್ಗುಣಃ" (6.1.87) ಎಂಬ ಸೂತ್ರದಿಂದ ಗುಣ ಬಂದು ರಾಮೇ ಎಂದಾಗುತ್ತದೆ.

ಇನ್ನು ಸಪ್ತಮೀ ದ್ವಿವಚನದಲ್ಲಿ ಷಷ್ಠೀ ದ್ವಿವಚನದಂತೆಯೇ ಪ್ರಕ್ರಿಯೆ ನಡೆದು ರಾಮಯೋಃ ಎಂದು ರೂಪ ಸಿದ್ಧವಾಗುತ್ತದೆ.ಸಪ್ತಮೀ ಬಹುವಚನದಲ್ಲಿ ರಾಮ+ಸುಪ್ ಎಂದಿದ್ದಾಗ 'ಸುಪ್' ನಲ್ಲಿಯ 'ಪ್' ಕಾರ "ಹಲನ್ತ್ಯಮ್" (1.3.3) ಸೂತ್ರದಿಂದ (ಇತ್)ಲೋಪವಾಗಿ ರಾಮ+ಸು ಎಂದಿದ್ದಾಗ, "ಬಹುವಚನೇ ಝಲ್ಯೇತ್ (7.1.103)" ಎಂಬ ಸೂತ್ರದಿಂದ ರಾಮ ಶಬ್ದದ ಹ್ರಸ್ವ ಅ–ಕಾರಕ್ಕೆ 'ಏ' ಕಾರ ಬಂದು ರಾಮ್+ಏ+ಸು=ರಾಮೇಸು ಎಂದಿದ್ದಾಗ –

**(ಷತ್ವ ವಿಧಾಯಕ ಸೂತ್ರ)**

**ಸೂತ್ರ – 150. ಆದೇಶ – ಪ್ರತ್ಯಯಯೋಃ (8.3.59)**

ವೃತ್ತಿಃ – ಇಣ್–ಕುಭ್ಯಾಂ ಪರಸ್ಯ ಅಪದಾನ್ತಸ್ಯ ಆದೇಶಃ, ಪ್ರತ್ಯಯಾವಯವಶ್ಚ ಯಃ ಸಃ, ತಸ್ಯ ಮೂರ್ಧನ್ಯಾದೇಶಃ। ಈಷದ್ವಿವೃತಸ್ಯ ಸಸ್ಯ ತಾದೃಶ ಏವ ಷಃ। ರಾಮೇಷು। ಏವಂ ಕೃಷ್ಣಾದಯಃ ಅಪಿ ಅದಂತಾಃ।

ಅ. ವ್ಯ. – 'ಇಣ್ಕೋಃ' ಎಂಬುದು ಅಧಿಕಾರ ಸೂತ್ರ ಮತ್ತು 'ಅಪದಾನ್ತಸ್ಯ ಮೂರ್ಧನ್ಯಃ' ಎಂಬುದು ಅಧಿಕಾರ ಸೂತ್ರ, ಮತ್ತು "ಸಹೇಃ ಸಾಡಃ ಸಃ" (8.3.56) ಎಂಬ ಸೂತ್ರದಿಂದ 'ಸಃ' ಎಂಬ ಪದವು ಅನುವೃತ್ತವಾಗಿದೆ.

ಅರ್ಥ–'ಇಣ್' ಪ್ರತ್ಯಾಹಾರದ ವರ್ಣ ಮತ್ತು 'ಕ' ವರ್ಗದ ವರ್ಣದನಂತರ (1) ಅಪದಾನ್ತಕ್ಕೆ ಆದೇಶವಾಗಿ ಬರುವ 'ಸ್' ಕಾರಕ್ಕೆ ಮತ್ತು (2) ಪ್ರತ್ಯಯದ ಅವಯವವಾದ 'ಸ್' ಕಾರಕ್ಕೆ ಮೂರ್ಧನ್ಯವರ್ಣವಾದ 'ಷ್' ಕಾರವು ಆದೇಶವಾಗಿ ಬರುತ್ತದೆ.

ಉದಾ– ಸಪ್ತಮೀ ಬಹುವಚನದಲ್ಲಿ ರಾಮೇ+ಸು ಎಂದಿದ್ದಾಗ 'ಈಷದ್ವಿವೃತ' ಪ್ರಯತ್ನವುಳ್ಳ 'ಸ್' ಕಾರಕ್ಕೆ 'ಈಷದ್ವಿವೃತ' ಪ್ರಯತ್ನವುಳ್ಳ ಮೂರ್ಧನ್ಯ–ವರ್ಣವಾದ 'ಷ್' ಕಾರವು ಆದೇಶವಾಗಿ ಬಂದು ರಾಮೇ+ಷು=ರಾಮೇಷು ಎಂಬ ರೂಪವು ಸಿದ್ಧವಾಗುತ್ತದೆ.

**'ಅ' ಕಾರಾನ್ತ ಪುಲ್ಲಿಂಗ 'ರಾಮ' ಶಬ್ದದ ರೂಪಗಳು**

| ವಿಭಕ್ತಿ | ಏ.ವ. | ದ್ವಿವ. | ಬ. ವ. |
|---|---|---|---|
| ಪ್ರಥಮಾ | ರಾಮಃ | ರಾಮೌ | ರಾಮಾಃ । |
| ದ್ವಿತೀಯಾ | ರಾಮಮ್ | ರಾಮೌ | ರಾಮಾನ್ । |
| ತೃತೀಯಾ | ರಾಮೇಣ | ರಾಮಾಭ್ಯಾಮ್ | ರಾಮೈಃ । |
| ಚತುರ್ಥೀ | ರಾಮಾಯ | ರಾಮಾಭ್ಯಾಮ್ | ರಾಮೇಭ್ಯಃ । |
| ಪಂಚಮೀ | ರಾಮಾತ್ | ರಾಮಾಭ್ಯಾಮ್ | ರಾಮೇಭ್ಯಃ । |
| ಷಷ್ಠೀ | ರಾಮಸ್ಯ | ರಾಮಯೋಃ। | ರಾಮಾಣಾಮ್। |
| ಸಪ್ತಮೀ | ರಾಮೇ | ರಾಮಯೋಃ | ರಾಮೇಷು । |
| ಸಂಬೋಧನ | ಹೇ ರಾಮ! | ಹೇ ರಾಮೌ! | ಹೇ ರಾಮಾಃ ! |

ಇದೇ ರೀತಿಯಲ್ಲಿ ಅಕಾರಾಂತ 'ಕೃಷ್ಣ' ಮೊದಲಾದ ಶಬ್ದಗಳ ರೂಪವು ಸಿದ್ಧವಾಗುತ್ತವೆ.

## ॥ ಸರ್ವನಾಮ ಶಬ್ದಗಳು ॥

**(ಸರ್ವನಾಮ ಸಂಜ್ಞಾ ವಿಧಾಯಕ ಸೂತ್ರ)**

**ಸೂತ್ರ – 151. ಸರ್ವಾದೀನಿ ಸರ್ವನಾಮಾನಿ (1.1.27)**

ವೃತ್ತಿಃ–1.ಸರ್ವ, 2.ವಿಶ್ವ, 3.ಉಭ, 4.ಉಭಯ, 5.ಡತರ, 6.ಡತಮ, 7.ಅನ್ಯ, 8.ಅನ್ಯತರ, 9.ಇತರ, 10. ತ್ವತ್, 11. ತ್ವ, 12. ನೇಮ, 13. ಸಮ, 14. ಸಿಮ। 15. ಪೂರ್ವ, 16.ಪರ, 17.ಅವರ, 18.ದಕ್ಷಿಣ, 19.ಉತ್ತರ, 20.ಅಪರ, 21.ಅಧರಾಣಿ ವ್ಯವಸ್ಥಾಯಾಂ ಅಸಂಜ್ಞಾಯಾಮ್। (ಗಣಸೂತ್ರಮ್)।

22.ಸ್ವಮ್–ಅಜ್ಞಾತಿ–ಧನಾಖ್ಯಾಯಾಮ್(ಗಣಸೂತ್ರಮ್)।

23.ಅಂತರಮ್–ಬಹಿರ್ಯೋಗೋಪಸಂವ್ಯಾನಯೋಃ (ಗಣಸೂತ್ರಮ್) ।

24.ತ್ಯದ್, 25.ತದ್, 26.ಯದ್, 27.ಏತದ್, 28.ಇದಮ್, 29.ಅದಸ್, 30.ಏಕ, 31.ದ್ವಿ, 32.ಯುಷ್ಮದ್, 33.ಅಸ್ಮದ್, 34.ಭವತು, 35.ಕಿಮ್। ಇತಿ ಸರ್ವಾದಯಃ।

ಅರ್ಥ– ಸರ್ವಾದಿ ಗಣ ಪಠಿತವಾದ 'ಸರ್ವ' ಮೊದಲಾದ 35 ಶಬ್ದಗಳು 'ಸರ್ವನಾಮ' ಸಂಜ್ಞೆಯನ್ನು ಪಡೆಯುತ್ತವೆ. ಸರ್ವಾದಿಗಣ ಪಠಿತವಾದ ಶಬ್ದಗಳ ಅರ್ಥವನ್ನು ಕೆಳಗೆ ಕೊಡಲಾಗಿದೆ.

1. ಸರ್ವ= ಎಲ್ಲ, 2. ವಿಶ್ವ=ಎಲ್ಲ. 3. ಉಭ=ಎರಡು, 4. ಉಭಯ=ಎರಡರ ಸಮೂಹ, 5. ಡತರ, 6. ಡತಮ ಇವು ಪ್ರತ್ಯಯಗಳು ಆದುದರಿಂದ ಈ ಪ್ರತ್ಯಯಾನ್ತ

ಶಬ್ದಗಳಿಗೆ ಸರ್ವನಾಮತ್ವವು ಬರುತ್ತದೆ. ಇವು ನಿರ್ಧಾರಣಾರ್ಥವನ್ನು ಸೂಚಿಸುವಾಗ ಪ್ರಶ್ನಿಸುವ ಸಂದರ್ಭದಲ್ಲಿ ಬರುತ್ತವೆ.

7. ಅನ್ಯ=ಬೇರೆ 8. ಅನ್ಯತರ=ಎರಡರಲ್ಲಿ ಒಂದು. 9. ಇತರ, 10. ತ್ವತ್, 11. ತ್ವ ಈ ಮೂರು ಶಬ್ದಗಳು ಅನ್ಯವೆಂಬ ಅರ್ಥವನ್ನು ಹೇಳುತ್ತವೆ.

12. ನೇಮ= ಅರ್ಧ, 13. ಸಮ= ಎಲ್ಲ, 14. ಸಿಮ=ಎಲ್ಲ

ಗಣಸೂತ್ರ (1.1.34) – 15. ಪೂರ್ವ=ಮೊದಲು, 16. ಪರ= ಎರಡನೆಯ, ಇತರ. 17. ಅವರ=ಅಧಮ ಅಥವಾ ಕಡಿಮೆ 18. ದಕ್ಷಿಣ=ದಕ್ಷಿಣದಿಕ್ಕು, 19. ಉತ್ತರ= ಉತ್ತರದಿಕ್ಕು 20. ಅಪರ=ಪಶ್ಚಿಮ ದಿಕ್ಕು, 21. ಅಧರ=ಕೆಳಗಿರುವ.

ಈ 7 ಸರ್ವನಾಮ ಶಬ್ದಗಳು ಸಂಜ್ಞಾಭಿನ್ನವಾದ ವ್ಯವಸ್ಥಾರ್ಥದಲ್ಲಿ ಸರ್ವಾದಿಗಣದಲ್ಲಿ ಗೃಹೀತವಾಗಿವೆ. ಆದ್ದರಿಂದ ಇವುಗಳಿಗೆ ಮೇಲೆ ತಿಳಿಸಿದ ಅರ್ಥದಲ್ಲಿ ಸರ್ವನಾಮಸಂಜ್ಞೆಯು ಬರುತ್ತದೆ.

ವ್ಯವಸ್ಥೆಯ ಲಕ್ಷಣವನ್ನು ಹೀಗೆ ಹೇಳಲಾಗಿದೆ. 'ಸ್ವಾಭಿಧೇಯ–ಅಪೇಕ್ಷಾವಧಿ–ನಿಯಮೋ ವ್ಯವಸ್ಥಾ' 'ಸ್ವಸ್ಯ ಪೂರ್ವಾದಿಶಬ್ದಸ್ಯ ಅಭಿಧೇಯಃ, ದಿಗ್–ದೇಶ–ಕಾಲಾದಿ–ರೂಪೋಽರ್ಥಃ, 'ತೇನ ಅಪೇಕ್ಷಮಾಣಃ ಅವಧೇಃ ನಿಯಮಃ ಯತ್ರ' ಎಂದು ವಿವರಿಸಿದ್ದಾರೆ.

ಉದಾ– 'ಪೂರ್ವ'ವೆಂದರೆ ಯಾವದಕ್ಕಿಂತ ಪೂರ್ವ? ಎಂಬ ಅಕಾಂಕ್ಷೆಯು ತಪ್ಪದೇ ಉಂಟಾಗುವುದು. ಈ ರೀತಿಯಾಗಿ ತಪ್ಪದೇ ಅವಧಿಸಾಪೇಕ್ಷವಾದ ಅರ್ಥವನ್ನು ಹೇಳುವಾಗ ಮಾತ್ರ ಪೂರ್ವಾದಿ ಶಬ್ದಗಳಿಗೆ 'ಸರ್ವನಾಮ' ಸಂಜ್ಞೆಯು ಬರುತ್ತದೆ. ಅದು ಮಾತ್ರವಲ್ಲ ಇಂತಹ ಗಣಗಳಲ್ಲಿ ಹೇಳಿದ ಶಬ್ದಗಳಿಗೆ ಸಂಜ್ಞಾವಾಚಕತ್ವವೂ ಇರಬಾರದು. ಸಂಜ್ಞಾವಾಚಕತ್ವವಿದ್ದರೆ ಈ ಸರ್ವನಾಮ ಶಬ್ದಗಳಿಗೆ ಸರ್ವನಾಮತ್ವವು ಬರುವುದಿಲ್ಲ.

ಉದಾ– 1. ದಕ್ಷಿಣಾ ಗಾಯಕಾಃ=ಚತುರರಾದ ಗಾಯಕರು ಎಂಬಲ್ಲಿ ಅವಧಿಯ ಸಾಪೇಕ್ಷ್ಯಾರ್ಥವು ದೊರಕುವುದಿಲ್ಲ. ಆದ್ದರಿಂದ 'ಸರ್ವನಾಮ ಸಂಜ್ಞಾ' ಬರುವದಿಲ್ಲ. ಹಾಗೆಯೇ 'ಅಧರೇ ರಾಗಃ' (ಕೆಳಗಿನ ತುಟಿಯಲ್ಲಿ ಕೆಂಪು), 'ಉತ್ತರೇ ಶಕ್ತಃ' (ಪ್ರತ್ಯುತ್ತರವನ್ನು ಕೊಡುವುದರಲ್ಲಿ ಸಮರ್ಥ) ಇವೇ ಮೊದಲಾದವುಗಳು ಅವಧಿ ಸಾಪೇಕ್ಷ್ಯ ಅರ್ಥ ಇಲ್ಲದಿರುವುದಕ್ಕೆ ಉದಾಹರಣೆಗಳು.

ಉದಾ–2. ಸಂಜ್ಞಾವಾಚಕತ್ವವಿದ್ದರೆ ಸರ್ವನಾಮತ್ವ ಬರುವದಿಲ್ಲ ಎನ್ನುವದಕ್ಕೆ ಪೂರ್ವಾಃ, ಪೂರ್ವಾಯ ಮೊದಲಾದವುಗಳು ಉದಾಹರಣೆಗಳಾಗಿವೆ.

ಗಣಸೂತ್ರ (1.1.35) – 'ಸ್ವ' ಎಂಬ ಶಬ್ದವು ಧನ ಮತ್ತು ಜ್ಞಾತಿ(ಬಂಧು) ಎಂಬ ಅರ್ಥವನ್ನು ಹೇಳುವಾಗ ಸರ್ವಾದಿಗಣಪಠಿತವಾಗಿದ್ದರೂ, ಈ ಎರಡು ಅರ್ಥಗಳನ್ನು ಬಿಟ್ಟು ಬೇರೆ ಅರ್ಥಗಳಲ್ಲಿ ಈ ಶಬ್ದಕ್ಕೆ ಸರ್ವನಾಮಸಂಜ್ಞೆಯು ಬರುತ್ತದೆ.

ಗಣಸೂತ್ರ (1.1.36) – 'ಅಂತರ' ಎಂಬ ಶಬ್ದಕ್ಕೆ ಹೊರಗಿನ(ಬಹಿರ್ಯೋಗ)

ಮತ್ತು ಅಧೋವಸ್ತ್ರ (ಉಪಸಂವ್ಯಾನ) ಎಂಬ ಅರ್ಥಗಳಲ್ಲಿ ಇರುವ 'ಅಂತರ' ಶಬ್ದವು ಸರ್ವಾದಿಗಣಪಠಿತವಾಗಿಯೂ ಮತ್ತು ಸರ್ವನಾಮ ಸಂಜ್ಞೆಯನ್ನು ಹೊಂದಿದೆ. ಉಳಿದ ಕೊನೆಯ 12 ಶಬ್ದಗಳು ಸರ್ವಾದಿಗಣ ಪಠಿತವಾಗಿವೆ. ಇವುಗಳನ್ನೇ ತ್ಯದಾದಿಗಣವೆಂದು ವಿವರಿಸಲಾಗುತ್ತದೆ. ಮತ್ತು ಇವುಗಳಿಗೆ 'ಸರ್ವನಾಮಸಂಜ್ಞೆ'ಯು ಇದೆ. ಇವುಗಳ ಅರ್ಥವು ಈ ಕೆಳಗಿನಂತಿವೆ.

1. ತ್ಯದ್=ಅದು, 2. ತದ್=ಅದು, 3. ಯದ್=ಯಾವುದು, 4. ಏತದ್=ಇದು, 5. ಇದಮ್=ಇದು, 6. ಅದಸ್=ಅದು, 7. ಏಕ= ಒಂದು, 8. ದ್ವಿ=ಎರಡು, 9. ಯುಷ್ಮದ್=ನೀನು, 10. ಅಸ್ಮದ್=ನಾನು, 11. ಭವತು= ತಾವು, 12. ಕಿಮ್=ಯಾರು/ಯಾವುದು.

'ಸರ್ವ' ಶಬ್ದಕ್ಕೆ ಜಸ್, ಜೌ, ಙಸಿ, ಆಮ್ ಮತ್ತು ಙೌ ಎಂಬ 5 ವಿಭಕ್ತಿಪ್ರತ್ಯಯಗಳು ಪರವಾದಾಗ ಎರಡೆರಡು ರೂಪಗಳು ಇರುವುವು. ಅದರಲ್ಲಿ ಒಂದು 'ಸರ್ವನಾಮ' ಶಬ್ದದಂತೆಯೂ, ಮತ್ತು ಇನ್ನೊಂದು 'ರಾಮ' ಶಬ್ದದಂತೆಯೂ ಇರುವುದು.

ಸರ್ವಾದಿ ಗಣಗಳಲ್ಲಿ ಮೊದಲನೆಯದಾದ 'ಸರ್ವ' ಶಬ್ದದ ಪ್ರಥಮಾ ವಿಭಕ್ತಿ ಏಕವಚನದಲ್ಲಿ, ಸರ್ವ+ಸು ಎಂದಿದ್ದಾಗ 'ಅ' ಕಾರಾನ್ತ ರಾಮ ಶಬ್ದದಂತೆ ಪ್ರಕ್ರಿಯೆ ನಡೆದು 'ಸರ್ವಃ' ಎಂದಾಗುತ್ತದೆ.

ಪ್ರಥಮಾ ದ್ವಿವಚನದಲ್ಲಿ – ಸರ್ವ+ಔ ಎಂದಿದ್ದಾಗ, ರಾಮ ಶಬ್ದದ ದ್ವಿವಚನರೂಪದಂತೆಯೇ 'ಸರ್ವೌ' ಎಂದಾಗುತ್ತದೆ.

ಪ್ರಥಮಾ ಬಹುವಚನದಲ್ಲಿ– ಸರ್ವ+ಜಸ್ ಎಂದಿದ್ದಾಗ, "ಪ್ರಥಮಯೋಃ ಪೂರ್ವಸವರ್ಣಃ" (6.1.102) ಎಂಬ ಸೂತ್ರದಿಂದ ಪೂರ್ವಸವರ್ಣದೀರ್ಘವು ಬರಬೇಕಿದ್ದಾಗ–

**(ಜಸ್ ಗೆ ಶೀ ಹೇಳುವ ಸೂತ್ರ)**

**ಸೂತ್ರ– 152. ಜಸಃ ಶೀ (7.1.17)**

ವೃತ್ತಿಃ – ಅದನ್ತಾತ್ ಸರ್ವನಾಮ್ನೋ ಜಸಃ ಶೀ ಸ್ಯಾತ್। ಅನೇಕಾಲ್ತ್ವಾತ್ ಸರ್ವಾದೇಶಃ। ಸರ್ವೇ।

ಅ. ವ್ಯ. – "ಅತೋ ಭಿಸ ಐಸ್ (7.1.9)" ಎಂಬ ಸೂತ್ರದಿಂದ 'ಅತಃ' ಎಂಬ ಪದವೂ "ಸರ್ವನಾಮ್ನಃ ಸ್ಮೈ (7.1.14)" ಎಂಬ ಸೂತ್ರದಿಂದ 'ಸರ್ವನಾಮ್ನಃ' ಎಂಬ ಪದವು ಅನುವೃತ್ತವಾಗುತ್ತವೆ.

ಅರ್ಥ– ಹ್ರಸ್ವ ಅಕಾರಾನ್ತವಾದ ಸರ್ವನಾಮಪದಕ್ಕಿಂತ ಪರದಲ್ಲಿರುವ 'ಜಸ್' ಗೆ 'ಶೀ' ಆದೇಶ ಬರುತ್ತದೆ. 'ಶೀ' ಎಂಬುದು 'ಸುಪ್' ಪ್ರತ್ಯಯಗಳಲ್ಲಿ ಸೇರದೇ ಇದ್ದರೂ ಸ್ಥಾನಿವದ್ಭಾವದಿಂದ 'ಸುಪ್'ತ್ವ ಧರ್ಮವನ್ನು ಪಡೆದಿದೆ. 'ಶೀ' ಎಂಬುದು ಅನೇಕಾಲ್ ಆಗಿರೋಣದ್ದರಿಂದ 'ಜಸ್' ಪ್ರತ್ಯಯವನ್ನು ಸಂಪೂರ್ಣವಾಗಿ ತೆಗೆದು ಹಾಕಿ ಅದರ ಜಾಗದಲ್ಲಿ ಆದೇಶವಾಗಿ ಬರುತ್ತದೆ. ಹೀಗೆ–

ಪ್ರಥಮಾ ವಿಭಕ್ತಿ ಬಹುವಚನದಲ್ಲಿ, ಸರ್ವ+ಶೀ ಎಂದಿದ್ದಾಗ– "ಲಶಕ್ವತದ್ಧಿತೇ (1.3.8)" ಎಂಬ ಸೂತ್ರದಿಂದ ಪ್ರತ್ಯಯದ ಆದಿವರ್ಣವಾದ 'ಶ್' ಕಾರವು ಲೋಪವಾಗಿ "ಸರ್ವ+ಈ ಎಂದಿರುವಾಗ, "ಆದ್ಗುಣಃ" (6.1.87) ಎಂಬ ಸೂತ್ರದಿಂದ ಗುಣ ಬಂದು 'ಸರ್ವೇ' ಎಂದಾಗುತ್ತದೆ.

ದ್ವಿತೀಯಾ ಮತ್ತು ತೃತೀಯಾ ವಿಭಕ್ತಿಗಳಲ್ಲಿ ರಾಮ ಶಬ್ದದಂತೆಯೇ ಕ್ರಮವಾಗಿ ಸರ್ವಂ, ಸರ್ವೌ, ಸರ್ವಾನ್, ಮತ್ತು ಸರ್ವೇಣ, ಸರ್ವಾಭ್ಯಾಮ್, ಸರ್ವೈಃ ಎಂದು ರೂಪಗಳಾಗುತ್ತವೆ.

ಚತುರ್ಥೀ ಏಕವಚನದಲ್ಲಿ – ರಾಮ+ಙೇ ಎಂದಿದ್ದಾಗ–

**(ಸ್ಮೈ ಆದೇಶವಿಧಾಯಕ ಸೂತ್ರ)**

**ಸೂತ್ರ –153. ಸರ್ವನಾಮ್ನಃ ಸ್ಮೈ (7.1.14)**

ವೃತ್ತಿಃ – ಅತಃ ಸರ್ವನಾಮ್ನಃ ಙೇಃ ಸ್ಮೈ। ಸರ್ವಸ್ಮೈ।

ಅ. ವ್ಯ. – "ಅತೋ ಭಿಸ ಐಸ್ (7.1.9)" ಎಂಬ ಸೂತ್ರದಿಂದ 'ಅತಃ' ಎಂಬ ಪದವೂ ಮತ್ತು "ಙೇರ್ಯಃ" (7.1.9) ಎಂಬ ಸೂತ್ರದಿಂದ 'ಙೇ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ– ಹ್ರಸ್ವ ಅಕಾರಾನ್ತವಾದ ಸರ್ವನಾಮಪದಕ್ಕಿಂತ ಪರವಾದ 'ಙೇ' ಗೆ 'ಸ್ಮೈ' ಸರ್ವಾದೇಶವಾಗಿ ಬರುತ್ತದೆ. ಹೀಗೆ ಸರ್ವ+ಸ್ಮೈ ಎಂದಿದ್ದಾಗ 'ಸರ್ವಸ್ಮೈ' ಎಂದು ರೂಪವಾಗುತ್ತದೆ.

**(ಙಸಿ, ಙಿ ಗಳಿಗೆ ಸ್ಮಾತ್, ಸ್ಮಿನ್, ಆದೇಶವಿಧಾಯಕ ಸೂತ್ರ)**

**ಸೂತ್ರ –154. ಙಸಿ-ಙ್ಯೋಃ ಸ್ಮಾತ್-ಸ್ಮಿನೌ (7.1.15)**

ವೃತ್ತಿಃ – ಅತಃ ಸರ್ವನಾಮ್ನಃ ಏತಯೋಃ ಏತೌ ಸ್ತಃ । ಸರ್ವಸ್ಮಾತ್ ।

ಅ. ವ್ಯ. – "ಅತೋ ಭಿಸ ಐಸ್ (7.1.9)" ಎಂಬ ಸೂತ್ರದಿಂದ 'ಅತಃ' ಎಂಬ ಪದವೂ ಮತ್ತು "ಸರ್ವನಾಮ್ನಃ ಸ್ಮೈ (7.1.14)" ಎಂಬ ಸೂತ್ರದಿಂದ 'ಸರ್ವನಾಮ್ನಃ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ– ಹ್ರಸ್ವ ಅಕಾರಾನ್ತವಾದ ಸರ್ವನಾಮಕ್ಕಿಂತ ಪರವಾದ 'ಙಸಿ' ಮತ್ತು 'ಙಿ' ಎಂಬ 'ಸುಪ್' ಪ್ರತ್ಯಯಗಳಿಗೆ ಕ್ರಮವಾಗಿ 'ಸ್ಮಾತ್' ಮತ್ತು 'ಸ್ಮಿನ್' ಗಳು ಆದೇಶವಾಗಿ ಬರುತ್ತವೆ. ಪಞ್ಚಮೀ ಏಕವಚನದಲ್ಲಿ ಸರ್ವ+ಙಸಿ ಎಂದಿದ್ದಾಗ ಪ್ರಕೃತ ಸೂತ್ರದಿಂದ ಙಸಿ ಗೆ 'ಸ್ಮಾತ್' ಎಂಬ ಆದೇಶವು ಸರ್ವಾದೇಶವಾಗಿ ಬಂದು ಸರ್ವ+ಸ್ಮಾತ್ ಎಂದಾಗಿ ಸರ್ವಸ್ಮಾತ್ ಎಂಬ ರೂಪವು ಸಿದ್ಧಿಸುತ್ತದೆ.

**(ಸುಡಾಗಮವನ್ನು ಹೇಳುವ ಸೂತ್ರ)**

**ಸೂತ್ರ –155. ಆಮಿ ಸರ್ವನಾಮ್ನಃ ಸುಟ್ (7.1.52)**

ವೃತ್ತಿಃ – ಅವರ್ಣಾನ್ತಾತ್ ಪರಸ್ಯ ಸರ್ವನಾಮ್ನಃ ವಿಹಿತಸ್ಯ ಆಮಃ ಸುಡಾಗಮಃ

(ಸುಟ್–ಆಗಮಃ) । ಏತ್ವ–ಷತ್ವೇ । ಸರ್ವೇಷಾಮ್ ।ಸರ್ವಸ್ಮಿನ್, ಶೇಷಂ ರಾಮವತ್। ಏವಂ ವಿಶ್ವಾದಯಃ ಅಪಿ ಅದನ್ತಾಃ । ಉಭ–ಶಬ್ದಃ ದ್ವಿ–ವಚನಾಂತಃ । ಉಭೌ–2 । ಉಭಾಭ್ಯಾಮ್–3 । ಉಭಯೋಃ–2 । ತಸ್ಯ ಇಹ ಪಾಠಃ ಅಕಚ್–ಅರ್ಥಃ । ಉಭಯ– ಶಬ್ದಸ್ಯ ದ್ವಿ–ವಚನಂ ನಾಸ್ತಿ । ಉಭಯಃ । ಉಭಯೇ । ಉಭಯಮ್ । ಉಭಯಾನ್ । ಉಭಯೇನ। ಉಭಯೈಃ । ಉಭಯಸ್ಮೈ। ಉಭಯೇಭ್ಯಃ । ಉಭಯಸ್ಮಾತ್। ಉಭಯೇಭ್ಯಃ । ಉಭಯಸ್ಯ । ಉಭಯೇಷಾಮ್ । ಉಭಯಸ್ಮಿನ್ । ಉಭಯೇಷು। ಡತರ–ಡತಮೌ ಪ್ರತ್ಯಯೌ ।

"ಪ್ರತ್ಯಯಗ್ರಹಣೇ ತದನ್ತಗ್ರಹಣಮ್" ಇತಿ ತದಂತಾಃ ಗ್ರಾಹ್ಯಾಃ । ನೇಮ ಇತಿ ಅರ್ಧೇ । ಸಮಃ ಸರ್ವಪರ್ಯಾಯಃ । ತುಲ್ಯಪರ್ಯಾಯಸ್ತು ನ "ಯಥಾಸಂಖ್ಯಮನುದೇಶಃ ಸಮಾನಾಮ್ (1.3.10)" ಇತಿ ಜ್ಞಾಪಕಾತ್ ।

ಅ.ವ್ಯ. – "ಅಙ್ಗಸ್ಯ" ಎಂಬುದು ಅಧಿಕಾರ ಸೂತ್ರ. "ಆಜ್ಜಸೇರಸುಕ್" ಎಂಬ ಸೂತ್ರದಿಂದ 'ಆತ್' ಎಂಬುದು ಅನುವೃತ್ತವಾಗುತ್ತದೆ.

ಅರ್ಥ–ಅವರ್ಣಾನ್ತವಾದ ಅಙ್ಗಕ್ಕಿಂತ ಪರದಲ್ಲಿರುವ ಸರ್ವನಾಮಶಬ್ದಕ್ಕಿಂತ ಪರದಲ್ಲಿ ವಿಧಿಸಲ್ಪಡುವ 'ಆಮ್' ಗೆ 'ಸುಟ್' ಆಗಮವು ಬರುತ್ತದೆ. 'ಸುಟ್' ನಲ್ಲಿ 'ಉ' ಕಾರ 'ಟ್'ಕಾರಗಳು 'ಇತ್' ಸಂಜ್ಞಕಗಳಾದ್ದರಿಂದ ಲೋಪಹೊಂದುತ್ತವೆ. 'ಸುಟ್' ಇದು 'ಟಿತ್' (ಟ್ ಕಾರ ಇತ್) ಆದ್ದರಿಂದ 'ಆಮ್' ಗೆ ಆದ್ಯವಯವವಾಗಿ ಆಗಮವಾಗಿ ಬರುತ್ತದೆ.

ಉದಾ– ಷಷ್ಠೀ ಬಹುವಚನದಲ್ಲಿ ಸರ್ವ+ಆಮ್ ಎಂದಿದ್ದಾಗ– ಪ್ರಕೃತ ಸೂತ್ರದಿಂದ 'ಆಮ್' ಗೆ 'ಸ್' (ಸುಟ್) ಆಗಮವಾಗಿ ಬಂದು ಸರ್ವ+ಸ್+ಆಮ್=ಸರ್ವ+ಸಾಮ್ ಎಂದಿದ್ದಾಗ, "ಬಹುವಚನೇ ಝಲ್ಯೇತ್ (7.1.103)" ಎಂಬ ಸೂತ್ರದಿಂದ ಝಲಾದಿಯಾದ ಬಹುವಚನ ಪ್ರತ್ಯಯವು ಪರವಾಗಿರೋಣದ್ದರಿಂದ ಅದರ ಅವ್ಯವಹಿತ ಪೂರ್ವದಲ್ಲಿರುವ 'ಅ' ಕಾರಕ್ಕೆ 'ಏ' ಆದೇಶವು ಬಂದು ಸರ್ವ+ಏ+ಸಾಮ್=ಸರ್ವೇಸಾಮ್ ಎಂದಿದ್ದಾಗ–"ಆದೇಶ–ಪ್ರತ್ಯಯಯೋಃ (8.3.59)" ಎಂಬ ಸೂತ್ರದಿಂದ ಪ್ರತ್ಯಯದ ಅವಯವವಾದ 'ಸ್' ಕಾರಕ್ಕೆ 'ಷತ್ವ ಬಂದು ಸರ್ವೇಷಾಮ್ ಎಂಬ ರೂಪವು ಸಿದ್ಧಿಸುತ್ತದೆ.

ಸಪ್ತಮೀ–ಏಕವಚನದಲ್ಲಿ– ಸರ್ವ+ಙಿ ಎಂದಿದ್ದಾಗ "ಙಸಿ–ಙ್ಯೋಃ ಸ್ಮಾತ್–ಸ್ಮಿನೌ (7.1.15)" ಎಂಬ ಸೂತ್ರದಿಂದ 'ಙಿ' ಪ್ರತ್ಯಯಕ್ಕೆ 'ಸ್ಮಿನ್' ಸರ್ವಾದೇಶವಾಗಿ ಬಂದು ಸರ್ವ+ಸ್ಮಿನ್ ಎಂದಾಗಿ ಸರ್ವಸ್ಮಿನ್ ಎಂದಾಗುತ್ತದೆ. ಉಳಿದ ರೂಪಗಳೆಲ್ಲ ರಾಮ ಶಬ್ದದಂತೆಯೇ ರೂಪಗಳನ್ನು ಪಡೆಯುತ್ತವೆ.

ಸರ್ವನಾಮ ಶಬ್ದಗಳಾದ 'ವಿಶ್ವ' ಮೊದಲಾದ ಹ್ರಸ್ವ ಅಕಾರಾನ್ತ ಶಬ್ದಗಳನ್ನು 'ಸರ್ವ' ಶಬ್ದದಂತೆಯೇ ನಡಿಸಬೇಕು.

'ಉಭ' ಶಬ್ದವು ಯಾವಾಗಲೂ(ನಿತ್ಯವಾಗಿ) ದ್ವಿವಚನದಲ್ಲಿಯೇ ಇರುತ್ತದೆ. ಉಭೌ,

ಉಭೌ, ಉಭಾಭ್ಯಾಮ್, ಉಭಾಭ್ಯಾಮ್, ಉಭಾಭ್ಯಾಮ್, ಉಭಯೋಃ, ಉಭಯೋಃ। ಸರ್ವನಾಮ ಶಬ್ದಗಳಿಗೆ ದ್ವಿವಚನದಲ್ಲಿ ಯಾವ ಕಾರ್ಯವೂ ಬರುವದಿಲ್ಲ ಆದರೆ, 'ರಾಮ' ಶಬ್ದದಂತೆ ರೂಪಗಳನ್ನು ಪಡೆಯುತ್ತವೆ.

'ತಸ್ಯೇಹ ನ' – ಉಭ ಶಬ್ದವನ್ನು ಸರ್ವಾದಿಗಣದಲ್ಲಿ ಪಠಿಸಿರುವ ಕಾರಣವೇನೆಂದರೆ, "ಅವ್ಯಯ-ಸರ್ವನಾಮ್ನಾಂ ಅಕಚ್ ಪ್ರಾಕ್ ಟೇಃ" ಎಂಬ ಸೂತ್ರದಿಂದ 'ಅಕಚ್' ಪ್ರತ್ಯಯ ಬಂದು ಉಭಕ ಎಂದಾಗುತ್ತದೆ. ಆದ್ದರಿಂದ ಸರ್ವಾದಿಗಣದಲ್ಲಿ 'ಉಭ' ಶಬ್ದವು ಪಠಿತವಾಗಿದೆ. 'ಉಭಯ' ಶಬ್ದಕ್ಕೆ ದ್ವಿವಚನವಿಲ್ಲ. ಉಭಯಃ, ಉಭಯೇ, ಉಭಯಂ, ಉಭಯಾನ್, ಉಭಯೇನ, ಉಭಯೈಃ, ಉಭಯಸ್ಮೈ, ಉಭಯೇಭ್ಯಃ, ಉಭಯಸ್ಮಾತ್, ಉಭಯೇಭ್ಯಃ, ಉಭಯಸ್ಯ, ಉಭಯೇಷಾಮ್, ಉಭಯಸ್ಮಿನ್,

ಉಭಯೇಷು. ಎಂದು ರೂಪಗಳಾಗುತ್ತವೆ.ಡತರ ಮತ್ತು ಡತಮ ಪ್ರತ್ಯಯಗಳು 'ಪ್ರತ್ಯಯಗ್ರಹಣೇ ತದನ್ತ ಗ್ರಹಣಮ್' ಎಂಬ ಪರಿಭಾಷೆಯಿಂದ ಆ ಪ್ರತ್ಯಯಾನ್ತಗಳನ್ನು ಗ್ರಹಿಸಬೇಕು.

"ನ ಕೇವಲಾ ಪ್ರಕೃತಿಃ ಪ್ರಯೋಕ್ತವ್ಯಾ ನಾಪಿ ಕೇವಲಃ ಪ್ರತ್ಯಯಃ' ಎಂಬ ಮಹಾಭಾಷ್ಯದ ವಚನದ ಪ್ರಕಾರ, ಡತರ ಮತ್ತು ಡತಮ ಪ್ರತ್ಯಯಗಳನ್ನು ಪ್ರತ್ಯಯಾನ್ತವಾಗಿ ಪ್ರಯೋಗಿಸಬೇಕು.

ಉದಾ– ಯತರ,ಯತಮ; ಕತರ,ಕತಮ; ಏಕತರ,ಏಕತಮ; ತತರ,ತತಮ; ಇವು ಸರ್ವನಾಮ ಸಂಜ್ಞೆಯನ್ನು ಹೊಂದುತ್ತವೆ.

ನೇಮ ಎಂಬ ಶಬ್ದಕ್ಕೆ ಅರ್ಧವೆಂದು ಅರ್ಥ. ಇದಕ್ಕೆ ಸರ್ವನಾಮ ಸಂಜ್ಞೆ ಬರುತ್ತದೆ. ಸಮ ಎಂಬುದು ಎಲ್ಲ ಅಥವಾ ಸರ್ವ ಎಂಬ ಅರ್ಥದಲ್ಲಿ ಇರುತ್ತದೆ. ಆದರೆ ಸಮಾನವೆಂಬ ಅರ್ಥದಲ್ಲಿ ಇಲ್ಲ. ಈ ಅರ್ಥದಲ್ಲಿ ಪ್ರಯೋಗಿಸಿದರೆ, ಸರ್ವನಾಮ ಸಂಜ್ಞೆಯು ಬರುವದಿಲ್ಲ. "ಯಥಾಸಂಖ್ಯಮನುದೇಶಃ ಸಮಾನಾಮ್" ಎಂಬಲ್ಲಿಯ ಸಮ ಶಬ್ದವು ಸರ್ವಾರ್ಥದಲ್ಲಿ ಇಲ್ಲದಿರುವದರಿಂದ, ಸರ್ವನಾಮ ಸಂಜ್ಞೆ ಹೊಂದುವದಿಲ್ಲ).

**(ವಿಕಲ್ಪವಾಗಿ ಸರ್ವನಾಮ ಸಂಜ್ಞೆಯನ್ನು ಹೇಳುವ ಸೂತ್ರ)**

**ಸೂತ್ರ –156. ಪೂರ್ವ-ಪರಾವರ-ದಕ್ಷಿಣೋತ್ತರಾಪರಾಧರಾಣಿ ವ್ಯವಸ್ಥಾಯಾಮಸಂಜ್ಞಾಯಾಮ್** (1.1.34)

ವೃತ್ತಿಃ– ಏತೇಷಾಂ ವ್ಯವಸ್ಥಾಯಾಮ್ ಅಸಂಜ್ಞಾಯಾಂ ಸರ್ವನಾಮಸಂಜ್ಞಾ ಗಣಸೂತ್ರಾತ್ ಸರ್ವತ್ರ ಯಾ ಪ್ರಾಪ್ತಾ ಸಾ ಜಸಿ ವಾ ಸ್ಯಾತ್ । ಪೂರ್ವೇ, ಪೂರ್ವಾಃ । ಅಸಂಜ್ಞಾಯಾಮ್ ಕಿಮ್? ಉತ್ತರಾಃ ಕುರವಃ । ಸ್ವಾಭಿಧೇಯ –ಅಪೇಕ್ಷಾವಧಿ– ನಿಯಮೋ ವ್ಯವಸ್ಥಾ । ವ್ಯವಸ್ಥಾಯಾಂ ಕಿಮ್? ದಕ್ಷಿಣಾ–ಗಾಥಕಾಃ । ಕುಶಲಾ ಇತ್ಯರ್ಥಃ ।

ಪ. ಛೇ. – ಪೂರ್ವ–ಪರ–ಅವರ–ದಕ್ಷಿಣ–ಉತ್ತರ–ಅಪರ–ಅಧರಾಣಿ ವ್ಯವಸ್ಥಾಯಾಮ್ ಅಸಂಜ್ಞಾಯಾಂ ।

ಅ. ವ್ಯ. – "ಸರ್ವಾದೀನಿ ಸರ್ವನಾಮಾನಿ"(1.1.27) ಎಂಬ ಸೂತ್ರದಿಂದ 'ಸರ್ವನಾಮಾನಿ' ಎಂಬ ಪದವು, ಹಾಗೆಯೇ "ವಿಭಾಷಾ ಝಸಿ" ಎಂಬ ಸೂತ್ರವೂ ಅನುವೃತ್ತವಾಗುತ್ತದೆ.

ಅರ್ಥ– ಪೂರ್ವ ಮೊದಲಾದ ಶಬ್ದಗಳಿಗೆ ವ್ಯವಸ್ಥಾ ಹಾಗೂ ಸಂಜ್ಞಾವಾಚಕವಾಗಿ ಇಲ್ಲದಿದ್ದಾಗ, 'ಸರ್ವನಾಮ' ಸಂಜ್ಞೆಯು ಗಣಸೂತ್ರದಿಂದ ನಿತ್ಯವಾಗಿ ಪ್ರಾಪ್ತವಾಗಿ ಅದಕ್ಕೆ ಪರದಲ್ಲಿ 'ಜಸ್' ಪ್ರತ್ಯಯವು ಇದ್ದಾಗ, 'ಸರ್ವನಾಮ' ಸಂಜ್ಞೆಯು ವಿಕಲ್ಪವಾಗಿ ಬರುತ್ತದೆ. "ಜಸಃ ಶೀ"(7.1.17) ಎಂಬ ಸೂತ್ರದಿಂದ 'ಜಸ್' ಗೆ 'ಈ'(ಶೀ) ಬಂದು ಪೂರ್ವ+ಈ ಎಂದಿದ್ದಾಗ ಗುಣ ಬಂದು ಪೂರ್ವೇ ಎಂದಾಗುತ್ತದೆ. ಸರ್ವನಾಮ ಸಂಜ್ಞೆ ಬಾರದಿದ್ದ ಪಕ್ಷದಲ್ಲಿ, (ವಿಕಲ್ಪವಾಗಿ) ರಾಮ ಶಬ್ದದಂತೆ ಪೂರ್ವಾಃ ಎಂದಾಗುತ್ತದೆ.

'ಅಸಂಜ್ಞಾಯಾಮ್' ಎಂದು ಏಕೆ ಹೇಳಬೇಕು ಎಂದರೆ, ಸಂಜ್ಞಾವಾಚಕ ವಾಗಿರುವಾಗ 'ಸರ್ವನಾಮ' ಸಂಜ್ಞೆಯು ಬರುವದಿಲ್ಲವೆಂಬುದನ್ನು ಸ್ಪಷ್ಟಪಡಿಸುವದಕ್ಕಾಗಿಯೇ.

ಉದಾ– ಉತ್ತರಾಃ ಕುರವಃ ಎಂಬಲ್ಲಿ 'ಉತ್ತರ' ಶಬ್ದವು ಉತ್ತರ–ಕುರುದೇಶಕ್ಕೆ ಸಂಜ್ಞೆಯಾಗಿದೆ. ಆದ್ದರಿಂದ 'ಜಸ್' ನ ಸ್ಥಾನದಲ್ಲಿ 'ಶೀ'(ಈ) ಆದೇಶವು ಬರುವದಿಲ್ಲ. ಆದ್ದರಿಂದ 'ಉತ್ತರೇ ಕುರವಃ' ಎಂದು ಆಗಿಲ್ಲ.

ವ್ಯವಸ್ಥಾ ಶಬ್ದದ ಅರ್ಥವು "ಸರ್ವಾದೀನಿ ಸರ್ವನಾಮಾನಿ (151.1.27)" ಎಂಬ ಸೂತ್ರದ ಅಡಿಯಲ್ಲಿ ಸ್ಪಷ್ಟಪಡಿಸಲಾಗಿದೆ. ವ್ಯವಸ್ಥಾ ಎಂದು ಯಾಕೆ ಹೇಳಲಾಗಿದೆ ಎಂದರೆ, 'ದಕ್ಷಿಣಾ ಗಾಥಕಾಃ' ಎಂಬಲ್ಲಿ 'ದಕ್ಷಿಣಾ' ಶಬ್ದಕ್ಕೆ 'ಕುಶಲರು' ಎಂದರ್ಥ. ಇಲ್ಲಿ ವ್ಯವಸ್ಥಾ ಇಲ್ಲದಿದ್ದುದರಿಂದ, ದಕ್ಷಿಣೇ, ದಕ್ಷಿಣಾಃ ಎಂದು ಎರಡು ರೂಪಗಳಾಗಲಿಲ್ಲ.

**(ವಿಕಲ್ಪವಾಗಿ ಸರ್ವನಾಮ ಸಂಜ್ಞೆಯನ್ನು ಹೇಳುವ ಮತ್ತೊಂದು ಸೂತ್ರ)**

**ಸೂತ್ರ –157. ಸ್ವ–ಮಜ್ಞಾತಿ–ಧನಾಖ್ಯಾಯಾಮ್ (1.1.35)**

ವೃತ್ತಿಃ– ಜ್ಞಾತಿ–ಧನಾನ್ಯವಾಚಿನಃ ಸ್ವಶಬ್ದಸ್ಯ ಪ್ರಾಪ್ತಾ ಸಂಜ್ಞಾ ಜಸಿ ವಾ । ಸ್ವೇ, ಸ್ವಾಃ=ಆತ್ಮೀಯಾಃ, ಆತ್ಮಾನಃ ಇತಿ ವಾ। ಜ್ಞಾತಿ–ಧನ ವಾಚಿನಃ ತು ಸ್ವಾಃ=ಜ್ಞಾತಯಃ ಅರ್ಥಾ ವಾ ।

ಪ. ಛೇ. – ಸ್ವಂ,ಅಜ್ಞಾತಿ–ಧನಾಖ್ಯಾಯಾಮ್ ।

ಅ. ವ್ಯ. – "ಸರ್ವಾದೀನಿ ಸರ್ವನಾಮಾನಿ" (151.1.27) ಎಂಬ ಸೂತ್ರದಿಂದ 'ಸರ್ವನಾಮಾನಿ' ಪದವು, ಹಾಗೆಯೇ "ವಿಭಾಷಾ ಜಸಿ" ಸೂತ್ರವು ಅನುವೃತ್ತವಾಗುತ್ತವೆ.

ಅರ್ಥ–ಬಂಧು ಮತ್ತು ಧನ ಎಂಬ ಅರ್ಥಕ್ಕಿಂತ ಭಿನ್ನವಾದ ಅರ್ಥದಲ್ಲಿ ಇರುವ 'ಸ್ವ' ಶಬ್ದಕ್ಕೆ ಗಣಸೂತ್ರದಿಂದ ಪ್ರಾಪ್ತವಾದ ಸರ್ವನಾಮ ಸಂಜ್ಞೆಯು 'ಜಸ್' ಪ್ರತ್ಯಯವು ಪರದಲ್ಲಿದ್ದಾಗ ವಿಕಲ್ಪವಾಗಿ ಬರುತ್ತದೆ.

ಉದಾ– ಸ್ವ+ಜಸ್ ಎಂದಿದ್ದಾಗ, 'ಜಸ್' ಗೆ 'ಶೀ'(ಈ) ಆದೇಶವಾಗಿ ಬಂದು, ಸ್ವ+ಈ= ಸ್ವೇ ಎಂದು ರೂಪವಾಗುತ್ತದೆ. 'ಶೀ' ಆದೇಶವು ಇಲ್ಲದಿದ್ದಾಗ ಸ್ವಾಃ ಎಂದು ರೂಪವಾಗುತ್ತದೆ. ಸ್ವ ಶಬ್ದಕ್ಕೆ ಆತ್ಮಾ,ಆತ್ಮೀಯ, ಬಂಧು ಮತ್ತು ಧನ ಎಂಬ ನಾಲ್ಕು ಅರ್ಥಗಳಿವೆ. ಆತ್ಮಾ ಮತ್ತು ಅತ್ಮೀಯ ಎಂಬ ಅರ್ಥಗಳಲ್ಲಿ ಸ್ವ ಶಬ್ದಕ್ಕೆ ಸರ್ವನಾಮ ಸಂಜ್ಞೆಯು ಬರುತ್ತದೆ. ಬಂಧು ಮತ್ತು ಧನ ಎಂಬ ಅರ್ಥದಲ್ಲಿ ಸರ್ವನಾಮ ಸಂಜ್ಞೆಯು ಬರುವದಿಲ್ಲ.

### (ವಿಕಲ್ಪವಾಗಿ ಸರ್ವನಾಮ ಸಂಜ್ಞೆಯನ್ನು ಹೇಳುವ ಮತ್ತೊಂದು ಸೂತ್ರ)

**ಸೂತ್ರ –158. ಅನ್ತರಂ ಬಹಿರ್ಯೋಗೋಪಸಂವ್ಯಾನಯೋಃ । 1.1.36)**

ವೃತ್ತಿಃ– ಬಾಹ್ಯೇ ಪರಿಧಾನೀಯೇ ಚ ಅರ್ಥೇ ಅಂತರ-ಶಬ್ದಸ್ಯ ಪ್ರಾಪ್ತಾ ಸಂಜ್ಞಾ ಜಸಿ ವಾ । ಅನ್ತರೇ, ಅನ್ತರಾ ವಾ ಗೃಹಾಃ; ಬಾಹ್ಯಾ, ಇತ್ಯರ್ಥಃ । ಅನ್ತರೇ, ಅನ್ತರಾ ವಾ ಶಾಟಕಾಃ, ಪರಿಧಾನೀಯಾ ಇತ್ಯರ್ಥಃ ।

ಪ. ಛೇ. – ಅನ್ತರಮ್, ಬಹಿಃಯೋಗಃ, ಉಪಸಂವ್ಯಾನಯೋಃ।

ಅ. ವ್ಯ. – "ಸರ್ವಾದೀನಿ ಸರ್ವನಾಮಾನಿ" (11.1.27) ಎಂಬ ಸೂತ್ರದಿಂದ 'ಸರ್ವನಾಮಾನಿ' ಎಂಬ ಪದವು, ಹಾಗೆಯೇ "ವಿಭಾಷಾ ಜಸಿ" ಎಂಬ ಸೂತ್ರವು ಅನುವೃತ್ತವಾಗುತ್ತವೆ. 'ಅನ್ತರ' ಎಂಬ ಅರ್ಥವು "ಸರ್ವಾದೀನಿ ಸರ್ವನಾಮಾನಿ" (1.1.27) ಎಂಬ ಸೂತ್ರದಡಿಯಲ್ಲಿ ವಿವರಿಸಲ್ಪಟ್ಟಿದೆ.

ಅರ್ಥ– ಗಣಸೂತ್ರದಿಂದ ಪ್ರಾಪ್ತವಾದ ಸರ್ವನಾಮ ಸಂಜ್ಞೆಯು 'ಜಸ್' ಪರದಲ್ಲಿದ್ದಾಗ ವಿಕಲ್ಪವಾಗಿ ಬರುತ್ತದೆ.

ಉದಾ– ಅನ್ತರೇ, ಅನ್ತರಾ ವಾ ಗೃಹಾಃ=ಹೊರಗಿರುವ ಮನೆಗಳು ಎಂದರ್ಥ. ಅನ್ತರೇ, ಅನ್ತರಾ ವಾ ಶಾಟಕಾಃ=ಅಧೋ ವಸ್ತ್ರಗಳು ಎಂದು ಅರ್ಥ.

### (ಸ್ಮಾತ್ ಮತ್ತು ಸ್ಮಿನ್ ಆದೇಶಗಳನ್ನು ವಿಕಲ್ಪವಾಗಿ ವಿಧಿಸುವ ಸೂತ್ರ)

**ಸೂತ್ರ –159. ಪೂರ್ವಾದಿಭ್ಯೋ ನವಭ್ಯೋ ವಾ (7.1.16)**

ವೃತ್ತಿಃ– ಏಭ್ಯೋ ಙಸಿ–ಙ್ಯೋಃ ಸ್ಮಾತ್–ಸ್ಮಿನೌ ವಾ ಸ್ತಃ । ಪೂರ್ವಸ್ಮಾತ್, ಪೂರ್ವಾತ್, ಪೂರ್ವಸ್ಮಿನ್, ಪೂರ್ವೇ । ಏವಂ ಪರಾದೀನಾಮಪಿ । ಶೇಷಂ ಸರ್ವವತ್ । ನಿರ್ಜರಃ।

ಪ. ಛೇ. – ಪೂರ್ವಾದಿಭ್ಯಃ, ನವಭ್ಯಃ, ವಾ।

ಅ.ವ್ಯ. – ಙಸಿ–ಙ್ಯೋಃ ಸ್ಮಾತ್–ಸ್ಮಿನೌ (7.1.15) ಎಂಬ ಸೂತ್ರವು ಅನುವೃತ್ತವಾಗಿದೆ.

ಅರ್ಥ– ಪೂರ್ವ, ಪರ ಎಂದು ಆರಂಭಿಸಿ ಸ್ವಂ ಮತ್ತು ಅನ್ತರ ವರೆಗಿನ ಮೇಲಿನ ಮೂರು ಸೂತ್ರಗಳಲ್ಲಿರುವ ಒಂಬತ್ತು ಶಬ್ದಗಳ ಪರದಲ್ಲಿ ಇರುವ ಙಸಿ ಮತ್ತು ಙಿ ಪ್ರತ್ಯಯಗಳಮೇಲೆ ಬರುವ 'ಸ್ಮಾತ್' ಮತ್ತು 'ಸ್ಮಿನ್' ಆದೇಶಗಳು ವಿಕಲ್ಪವಾಗಿ ಬರುತ್ತವೆ. ಙಸಿ–ಙ್ಯೋಃ ಸ್ಮಾತ್–ಸ್ಮಿನೌ (7.1.15) ಎಂಬ ಸೂತ್ರದಿಂದ 'ಸ್ಮಾತ್' ಮತ್ತು 'ಸ್ಮಿನ್' ಪ್ರತ್ಯಯಗಳನ್ನು ನಿತ್ಯವಾಗಿ ವಿಧಿಸಲಾಗಿತ್ತು. ಈ ಪ್ರಕೃತ ಸೂತ್ರವು ಇದನ್ನು ಬಾಧಿಸಿ

ವಿಕಲ್ಪವಾಗಿ ಈ ಪ್ರತ್ಯಯಗಳನ್ನು ವಿಧಿಸಿದೆ.

ಇದರಿಂದ 1. ಪೂರ್ವಸ್ಮಾತ್, ಪೂರ್ವಾತ್, 2. ಪೂರ್ವಸ್ಮಿನ್, ಪೂರ್ವೇ, 3. ಪರಸ್ಮಾತ್, ಪರಾತ್, 4. ಪರಸ್ಮಿನ್, ಪರೇ, ಎಂಬ ಎರಡೆರಡು ರೂಪಗಳು ಎಲ್ಲ ಒಂಬತ್ತು ಶಬ್ದಗಳಿಗೂ ಸಿದ್ಧವಾಗಿವೆ. ಉಳಿದ ರೂಪಗಳೆಲ್ಲ 'ಸರ್ವ' ಶಬ್ದದ ರೂಪಗಳಂತೆ ಇರುವವು.

ಈ ರೀತಿಯಾಗಿ 'ಸರ್ವ' ಶಬ್ದದಿಂದ ಆರಂಭವಾಗುವ 23 ಶಬ್ದಗಳ ರೂಪಗಳಬಗ್ಗೆ ತಿಳಿದುಕೊಂಡಂತಾಯಿತು. ಉಳಿದ ತ್ಯದ್ 'ತದ್' 'ಯದ್' 'ಏತದ್' 'ಇದಂ' 'ಅದಸ್' 'ಯುಷ್ಮದ್' 'ಅಸ್ಮದ್' ಭವತು (ಭವತ್) ಮತ್ತು ಕಿಮ್ ಎಂಬ ಸರ್ವಾದಿಗಣಪಠಿತವಾದ ಈ 10 ಶಬ್ದಗಳು ಹಲನ್ತಗಳಾಗಿವೆ. ಆದ್ದರಿಂದ ಇವುಗಳನ್ನು ಹಲನ್ತ ಪ್ರಕರಣಗಳಲ್ಲಿ ತಿಳಿದುಕೊಳ್ಳಬಹುದು. ಉಳಿದ 'ಏಕ' ಮತ್ತು 'ದ್ವಿ' ಎಂಬ ಎರಡು ಶಬ್ದಗಳ ಬಗ್ಗೆ ಈ ಅಜನ್ತ ಪ್ರಕರಣದಲ್ಲಿ ತಿಳಿಸಲಾಗುವದು.

ದ್ವಿ ಶಬ್ದದಲ್ಲಿ "ತ್ಯದಾದೀನಾಮ್ ಅಃ" ಎಂಬ ಸೂತ್ರದಿಂದ 'ಇ' ಕಾರದ ಸ್ಥಾನದಲ್ಲಿ 'ಅ' ಕಾರವು ಆದೇಶವಾಗಿ ಬಂದು ಅ-ಕಾರಾನ್ತ ಶಬ್ದವಾಗುತ್ತದೆ. ಮತ್ತು ದ್ವಿ ವಚನದಲ್ಲಿ ಮಾತ್ರ ಈ ರೂಪಗಳು ಸಿಗುತ್ತವೆ. ಆದರೆ ದ್ವಿ ವಚನದಲ್ಲಿ ಸರ್ವನಾಮ ಸಂಜ್ಞೆಯನ್ನು ಪಡೆದು ಯಾವ ಕಾರ್ಯವೂ ಆಗಿರುವದಿಲ್ಲ. ಆದ್ದರಿಂದ ಇವುಗಳ ರೂಪಗಳನ್ನು ಅಕಾರಾನ್ತ ರಾಮ ಶಬ್ದದಂತೆ ನಡೆಸಬೇಕು. ದ್ವೌ, ದ್ವೌ, ದ್ವಾಭ್ಯಾಮ್, ದ್ವಾಭ್ಯಾಮ್, ದ್ವಾಭ್ಯಾಮ್, ದ್ವಯೋಃ, ದ್ವಯೋಃ ಎಂದು ಪುಲ್ಲಿಂಗದಲ್ಲಿ ರೂಪಗಳಾಗುತ್ತವೆ. 'ಏಕ' ಶಬ್ದವು ಏಕವಚನದಲ್ಲಿ ಮಾತ್ರ ರೂಪಗಳನ್ನು ಪಡೆಯುತ್ತದೆ. ಏಕಃ, ಏಕಂ, ಏಕೇನ, ಏಕಸ್ಮೈ, ಏಕಸ್ಮಾತ್, ಏಕಸ್ಯ, ಏಕಸ್ಮಿನ್ ಎಂದು ರೂಪಗಳು ಇರುವವು.

**(ಜಸ್ ಪರವಾದಾಗ ಪ್ರಥಮ ಮೊದಲಾದವುಗಳಿಗೆ ಸರ್ವನಾಮ ಸಂಜ್ಞೆಯನ್ನು ವಿಕಲ್ಪವಾಗಿ ವಿಧಿಸುವ ಸೂತ್ರ)**

**ಸೂತ್ರ -160. ಪ್ರಥಮ-ಚರಮ-ತಯಾಲ್ಪಾರ್ಧ-ಕತಿಪಯ-ನೇಮಾಶ್ಚ (1.1.33)**

ವೃತ್ತಿಃ- ಏತೇ ಜಸಿ ಉಕ್ತಸಂಜ್ಞಾಃ ವಾ ಸ್ಯುಃ । ಪ್ರಥಮೇ, ಪ್ರಥಮಾಃ । ತಯಃ ಪತ್ಯಯಃ-ದ್ವಿತಯೇ, ದ್ವಿತಯಾಃ । ಶೇಷಂ ರಾಮವತ್ । ನೇಮೇ, ನೇಮಾಃ, ಶೇಷಂ ಸರ್ವವತ್ । (ವಾ॥ **ತೀಯಸ್ಯ ಜಿತ್ಸು ವಾ**) ದ್ವಿತೀಯಸ್ಮೈ, ದ್ವಿತೀಯಾಯ ಇತ್ಯಾದಿ । ಏವಂ ತೃತೀಯಃ ।

ಪ. ಛೇ. - ಪ್ರಥಮ-ಚರಮ-ತಯ-ಅಲ್ಪಾರ್ಧ-ಕತಿಪಯ-ನೇಮಾಃ ಚ।

ಅ. ವೃ. -"ಸರ್ವಾದೀನಿ ಸರ್ವನಾಮಾನಿ" (1.1.27) ಎಂಬ ಸೂತ್ರದಿಂದ 'ಸರ್ವನಾಮಾನಿ' ಪದವು, ಹಾಗೆಯೇ "ವಿಭಾಷಾ ಜಸಿ" ಸೂತ್ರವು ಅನುವೃತ್ತವಾಗುತ್ತವೆ.

ಅರ್ಥ- ಪ್ರಥಮ-ಚರಮ-ತಯಪ್ ಪ್ರತ್ಯಯಾನ್ತ ಶಬ್ದ, ಅಲ್ಪ-ಅರ್ಧ, ಕತಿಪಯ, ಮತ್ತು ನೇಮ ಈ ಶಬ್ದಗಳಿಗೆ 'ಜಸ್' ಪ್ರತ್ಯಯ ಪರದಲ್ಲಿದ್ದಾಗ ಸರ್ವನಾಮ ಸಂಜ್ಞೆಯು ವಿಕಲ್ಪವಾಗಿ ಬರುತ್ತದೆ. "ಜಸಃ ಶೀ" ಎಂಬ ಸೂತ್ರದಿಂದ 'ಶೀ' (ಈ) ಆದೇಶವು

ಸರ್ವನಾಮ ಸಂಜ್ಞೆಯನ್ನು ಪಡೆದಾಗ, ಪ್ರಥಮೇ, ಚರಮೇ ಮೊದಲಾದ ರೂಪಗಳನ್ನು ಪಡೆಯುತ್ತವೆ.

ತದಭಾವ ಪಕ್ಷದಲ್ಲಿ ರಾಮಾಃ ಎಂಬಂತೆ ಪ್ರಥಮಾಃ, ಚರಮಾಃ ಇತ್ಯಾದಿ ರೂಪಗಳು ಆಗುತ್ತವೆ. 'ಜಸ್' ಪರದಲ್ಲಿದ್ದಾಗ ಮಾತ್ರ 'ನೇಮ' ಶಬ್ದಕ್ಕೆ ವಿಕಲ್ಪವಾಗಿ ರೂಪಗಳ ಸಿದ್ಧಿಗಾಗಿ ಈ ಸೂತ್ರದಲ್ಲಿ ಪಠಿತವಾಗಿವೆ. ಇಲ್ಲದಿದ್ದರೆ ಇದಕ್ಕೆ ಸರ್ವನಾಮಸಂಜ್ಞೆಯು ಗಣಸೂತ್ರದಲ್ಲಿ ಪಠಿತವಾದದ್ದರಿಂದಲೇ ಲಭ್ಯವಾಗುತ್ತಿತ್ತು. ಉದಾ– ನೇಮೇ, ನೇಮಾಃ।

ತಯಪ್–ಪ್ರತ್ಯಯವಾದ್ದರಿಂದ "ಪ್ರತ್ಯಯಗ್ರಹಣೇ ತದನ್ತ–ಗ್ರಹಣಮ್" ಎಂಬ ಪರಿಭಾಷೆಯಿಂದ ದ್ವಿತಯ ಎಂಬ ತಯಪ್ ಪ್ರತ್ಯಯಾನ್ತ ರೂಪವನ್ನು ಸ್ವೀಕರಿಸಬೇಕು. 'ಜಸ್' ಪ್ರತ್ಯಯವು ಪರದಲ್ಲಿದ್ದಾಗ ದ್ವಿತಯೇ, ದ್ವಿತಯಾಃ ಎಂಬ ಎರಡು ರೂಪಗಳು ಆಗುತ್ತವೆ. ಉಳಿದ ರೂಪಗಳು ರಾಮ ಶಬ್ದದಂತೆ ಇರುತ್ತವೆ.

(ವಿಕಲ್ಪವಾಗಿ ಸರ್ವನಾಮ–ಸಂಜ್ಞಾ–ವಿಧಾಯಕ ವಾರ್ತಿಕ)

ವಾರ್ತಿಕ– **ತೀಯಸ್ಯ ಙಿತ್ಸು ವಾ ।**

ದ್ವಿತೀಯಸ್ಮೈ, ದ್ವಿತೀಯಾಯ ಇತ್ಯಾದಿ । ಏವಂ ತೃತೀಯಾಃ ।

ಅರ್ಥ– 'ತೀಯ' ಪ್ರತ್ಯಯಾನ್ತ ಶಬ್ದಗಳ ನಂತರ ಙಿತ್ ಆದ ಸುಪ್ ಪ್ರತ್ಯಯವು ಪರದಲ್ಲಿದ್ದಾಗ ವಿಕಲ್ಪವಾಗಿ ಸರ್ವನಾಮ ಸಂಜ್ಞೆಯು ಬರುತ್ತದೆ.'ಙ್' ಕಾರವನ್ನು 'ಇತ್' ಆಗಿ ಉಳ್ಳ (ಙಿತ್) ಪ್ರತ್ಯಯವೆಂದರೆ ಙೇ, ಙಸಿ, ಙಸ್ ಮತ್ತು ಙಿ.

ಉದಾ– ದ್ವಿತೀಯಸ್ಮೈ – ದ್ವಿತೀಯ+ಙೇ ಎಂದಿದ್ದಾಗ, 'ಙಿತ್' ಪ್ರತ್ಯಯವಾದ 'ಙೇ' ಎಂಬ ಚತುರ್ಥೀ ವಿಭಕ್ತಿಯ ಪತ್ಯಯವು ಪರದಲ್ಲಿದ್ದಾಗ, 'ತೀಯ' ಪ್ರತ್ಯಯಾನ್ತವಾದ 'ದ್ವಿತೀಯ' ಶಬ್ದಕ್ಕೆ ವಿಕಲ್ಪದಿಂದ ಸರ್ವನಾಮ ಸಂಜ್ಞೆಯು ಬಂದಿರುವುದು. ಸರ್ವನಾಮ ಸಂಜ್ಞೆಯ ಪಕ್ಷದಲ್ಲಿ 'ಙೇ' ಸ್ಥಾನದಲ್ಲಿ 'ಸ್ಮೈ' ಆದೇಶವು ಬಂದಿದೆ. ತದಭಾವ ಪಕ್ಷದಲ್ಲಿ 'ಙೇ' ಗೆ 'ಯ' ಆದೇಶವು ಬಂದು 'ದ್ವಿತೀಯಾಯ' ಎಂದಾಗಿರುವುದು. ಉಳಿದ 'ಙಿತ್' ಪ್ರತ್ಯಯಗಳ ವಿಷಯದಲ್ಲೂ ಇದೇ ರೀತಿಯಲ್ಲಿ ವೈಕಲ್ಪಿಕವಾದ ರೂಪಗಳು ಸಿಗುತ್ತವೆ.

ತೃತೀಯಃ ಎಂಬುದಕ್ಕೆ ಉದಾಹರಣೆ–ತೃತೀಯಸ್ಮಾತ್, ತೃತೀಯಾತ್। ತೃತೀಯಸ್ಮಿನ್, ತೃತೀಯೇ। ಅನ್ಯ ಸ್ಥಳಗಳಲ್ಲಿ ರಾಮ ಶಬ್ದದಂತೆ ರೂಪಗಳು ಇರುತ್ತವೆ.

**(ಇಲ್ಲಿಗೆ ಸರ್ವಾದಿ ಗಣವು ಪರಿಸಮಾಪ್ತವಾಯಿತು)**

**(ಜರಸ್–ಆದೇಶ ವಿಧಾಯಕ ಸೂತ್ರ)**

**ಸೂತ್ರ – 161. ಜರಾಯಾ ಜರಸನ್ಯತರಸ್ಯಾಮ್ (7.2.101)**

ವೃತ್ತಿಃ– ಅಜಾದೌ ವಿಭಕ್ತೌ।

ಪರಿಭಾಷಾಃ –

1. 'ಪದಾಙ್ಗಾಧಿಕಾರೇ ತಸ್ಯ ಚ ತದನ್ತಸ್ಯ ಚ'।

2. 'ನಿರ್ದಿಶ್ಯಮಾನಸ್ಯಾದೇಶಾಃ ಭವನ್ತಿ ।

3. 'ಏಕದೇಶವಿಕೃತಂ ಅನನ್ಯವತ್' ।

ಇತಿ ಜರ-ಶಬ್ದಸ್ಯ ಜರಸ್- ನಿರ್ಜರಸೌ, ನಿರ್ಜರಸಃ । ಇತ್ಯಾದಿ-ಪಕ್ಷೇ ಹಲಾದೌ ಚ ರಾಮವತ್। ವಿಶ್ವಪಾಃ।

ಪ. ಛೇ. – ಜರಾಯಾಃ, ಜರಸ್, ಅನ್ಯತರಸ್ಯಾಮ್ ।

ಅ. ವೃ – "ಅಚಿ ರ ಋತಃ"(7.2.100) ಎಂಬ ಸೂತ್ರದಿಂದ 'ಅಚಿ' ಎಂಬ ಪದವೂ ಮತ್ತು "ಅಷ್ಟನ ಆ ವಿಭಕ್ತೌ"(7.2.84) ಎಂಬ ಸೂತ್ರದಿಂದ 'ವಿಭಕ್ತೌ' ಎಂಬ ಪದವು ಅನುವೃತ್ತವಾಗುತ್ತದೆ. "ಯಸ್ಮಿನ್ ವಿಧಿಃ ತದಾದಾವಲ್ ಗ್ರಹಣೇ" ಎಂಬ ಪರಿಭಾಷೆಯಿಂದ 'ಅಚಿ' ಎಂಬ ಪದವು 'ವಿಭಕ್ತೌ' ಎಂಬುದಕ್ಕೆ ವಿಶೇಷಣವಾಗಿದೆ. ಆದ್ದರಿಂದ ಇಲ್ಲಿ ತದಾದಿವಿಧಿಯು ಇರುತ್ತದೆ.

ಅರ್ಥ– ಅಜಾದಿ ವಿಭಕ್ತಿಯು ಪರದಲ್ಲಿದ್ದಾಗ 'ಜರಾ' ಶಬ್ದದ ಸ್ಥಾನದಲ್ಲಿ 'ಜರಸ್' ಎಂಬ ಆದೇಶವು ವಿಕಲ್ಪವಾಗಿ ಬರುತ್ತದೆ. ಅಜಾದಿ ವಿಭಕ್ತಿಗಳೆಂದರೆ ಔ, ಜಸ್(ಅಸ್), ಅಮ್, ಔಟ್, ಶಸ್(ಅಸ್), ಟಾ(ಆ) ಜೇ(ಏ) ಙಸಿ(ಅಸ್), ಙಸ್(ಅಸ್), ಓಸ್, ಆಮ್, ಙಿ(ಇ) ಮತ್ತು ಓಸ್ ಇವು ಅಜಾದಿಯಾದ ಪ್ರತ್ಯಯಗಳು. ಈ ಪ್ರತ್ಯಯಗಳಲ್ಲಿ ಯಾವದೇ ಪ್ರತ್ಯಯವು ಪರದಲ್ಲಿದ್ದಾಗ 'ಜರಾ' ಶಬ್ದಕ್ಕೆ 'ಜರಸ್' ಎಂಬ ಆದೇಶವು ಬರುತ್ತದೆ.

ಉದಾ– ನಿರ್ಜರ+ಔ ಎಂದಿದ್ದಾಗ, ಇಲ್ಲಿ ಜರಾ ಶಬ್ದದ ಪರದಲ್ಲಿ ಅಜಾದಿ ಪ್ರತ್ಯಯವಾದ 'ಔ' ಇದೆ. ಹೀಗಾಗಿ ಪ್ರಕೃತ ಸೂತ್ರ ಪ್ರವೃತ್ತವಾಗಬೇಕಾಗಿತ್ತು. ಆದರೆ ಇಲ್ಲಿ ಒಂದು ಪ್ರತಿಬಂಧಕವಿದೆ. ಇಲ್ಲಿ ಇರುವದು ಜರಾ ಶಬ್ದವಾಗಿರದೆ, ಜರಾನ್ತವಾಗಿದೆ. ಆದ್ದರಿಂದ ಈ ಸೂತ್ರವು ಇಲ್ಲಿ ಹೇಗೆ ಪ್ರವೃತ್ತವಾಗಿ ತನ್ನ ಕಾರ್ಯ ಮಾಡುತ್ತದೆ? ಎಂಬುದು ಪ್ರಶ್ನೆ. ಈ ಸಮಸ್ಯೆಯನ್ನು ಪರಿಹರಿಸುವದಕ್ಕಾಗಿ ಈ ಕೆಳಗಿನ ಪರಿಭಾಷೆಯು ಪ್ರವೃತ್ತವಾಗುತ್ತದೆ.

ಪ.ಭಾ.1. **'ಪದಾಙ್ಗಾಧಿಕಾರೇ ತಸ್ಯ ಚ ತದನ್ತಸ್ಯ ಚ'** ।

ಪದ ಮತ್ತು ಅಙ್ಗ-ಅಧಿಕಾರಗಳಲ್ಲಿ ಯಾವುದರ ಸ್ಥಾನದಲ್ಲಿ ಆದೇಶವು ವಿಧಿಸಲ್ಪಡುತ್ತದೆಯೋ ಅದರ ಸ್ಥಾನದಲ್ಲೂ ಮತ್ತುಅದು ಯಾವುದರ ಅನ್ತದಲ್ಲಿದೆಯೋ ಆ ಪದಗಳ ಸಮುದಾಯಕ್ಕೂ ಆ ಆದೇಶವು ಬರುವದು.

ಪದಾಧಿಕಾರವು ಎಂಟನೇ ಅಧ್ಯಾಯದ ಮೊದಲನೆಯ ಪಾದದ 16ನೆಯ (ಪದಸ್ಯ ಎಂಬ) ಸೂತ್ರದಿಂದ ಆರಂಭಿಸಿ ಎಂಟನೇ ಅಧ್ಯಾಯದ ಮೂರನೇ ಪಾದದ 55ನೆಯ ಸೂತ್ರ (ಅಪದಾನ್ತಸ್ಯ ಮೂರ್ಧನ್ಯಃ) ದ ವರೆಗೆ ಇರುತ್ತದೆ. ಇದೇ ರೀತಿಯಲ್ಲಿ ಅಙ್ಗಾಧಿಕಾರವು ಆರನೇ ಅಧ್ಯಾಯದ ನಾಲ್ಕನೇ ಪಾದದ ಮೊದಲನೆಯ (ಅಙ್ಗಸ್ಯ) ಸೂತ್ರದಿಂದ ಆರಂಭಿಸಿ ಏಳನೆ ಅಧ್ಯಾಯದ ಸಮಾಪ್ತಿಯವರೆಗೆ ಇದೆ. ಈ ಪ್ರಕೃತ ಸೂತ್ರವು ಅಙ್ಗಾಧಿಕಾರದಲ್ಲಿ ಇದೆ. ಇದರ ವಿವರಣೆ ಹೀಗಿದೆ. 'ಜರಸ್' ಶಬ್ದವು

'ಜರಾ' ಶಬ್ದದ ಸ್ಥಾನದಲ್ಲಿ ವಿಧಿಸಲ್ಪಟ್ಟಿದೆ. ಮತ್ತು 'ಜರಾ' ಶಬ್ದವು ಯಾವ ಶಬ್ದದ ಅನ್ತವಾಗಿದೆಯೋ ಅಂತಹ 'ನಿರ್ಜರ' ಎಂಬ ಶಬ್ದದಮೇಲೆಯೂ ಆದೇಶವಾಗಿ ಬರುತ್ತದೆ. ಈ ಸಂದರ್ಭದಲ್ಲಿ "ಅನೇಕಾಲ್ ಶಿತ್ ಸರ್ವಸ್ಯ"(1.1.55) ಎಂಬ ಪರಿಭಾಷೆಯಿಂದ ಇಡೀ 'ನಿರ್ಜರ' ಶಬ್ದದ ಸ್ಥಾನದಲ್ಲಿ 'ಜರಸ್' ಎಂಬ ಆದೇಶವು ಬರುವ ಪ್ರಸಂಗ ಪ್ರಾಪ್ತವಾದರೆ– ಈ ಪರಿಭಾಷೆಯ ನಿಯಮವನ್ನು ಮುಂದಿನ ಪರಿಭಾಷೆಯು ನಿಷೇಧಿಸುತ್ತದೆ.

ಪ.ಭಾ.2. 'ನಿರ್ದಿಶ್ಯಮಾನಸ್ಯಾದೇಶಾಃ ಭವನ್ತಿ'।

ಈ ಪರಿಭಾಷೆಯ ಪ್ರಕಾರ ಸೂಚಿಸಲ್ಪಟ್ಟ ಸ್ಥಾನದಲ್ಲಿ ಆದೇಶಗಳು ಬರುತ್ತವೆ. 'ನಿರ್ದಿಶ್ಯಮಾನ' ಶಬ್ದದ ಅರ್ಥವು 'ಷಷ್ಠೀ–ಪ್ರಕೃತಿಜನ್ಯ–ಪ್ರಾಥಮಿಕ–ಉಪಸ್ಥಿತಿ–ವಿಷಯಃ' ಎಂದು ಹೇಳಲಾಗಿದೆ. ಇದನ್ನು ಉದಾಹರಣೆಯಿಂದ ವಿವರಿಸಲಾಗುವದು. 'ಜರಾಯಾಃ' ಎಂಬುದು ಷಷ್ಠೀ ವಿಭಕ್ತಿಯಲ್ಲಿದೆ. ಅದು ಮೊಟ್ಟಮೊದಲಿಗೆ ಹೇಳಲ್ಪಡೋಣದ್ದರಿಂದ ಆ ಷಷ್ಠೀ–ವಿಭಕ್ತಿಯ ಪ್ರಕೃತಿಯಾದ 'ಜರಾ' ಎಂಬುದಕ್ಕೆ 'ನಿರ್ದಿಶ್ಯಮಾನ' ಸಂಜ್ಞೆಯು ಬರುತ್ತದೆ. ಆದ್ದರಿಂದ 'ನಿರ್ಜರ' ಶಬ್ದದಲ್ಲೂ 'ಜರಾ' ಎಂಬ ಪದಕ್ಕೆ ಮಾತ್ರ 'ಜರಸ್' ಎಂಬ ಆದೇಶ ಬಂದಿದೆ. ಇಡೀ 'ನಿರ್ಜರ' ಶಬ್ದದಮೇಲೆ ಬಂದಿಲ್ಲ.

ಆದರೆ 'ಜರಾ' ಶಬ್ದದ ಸ್ಥಾನದಲ್ಲಿ 'ಜರಸ್' ಬಂದಮೇಲೆ ಒಂದು ಆಕಾಂಕ್ಷೆಯು ಬರುತ್ತದೆ. 'ನಿರ್ಜರ' ಶಬ್ದದಲ್ಲಿ 'ಜರಾ' ಎಂಬ ಶಬ್ದವಿಲ್ಲ. 'ಜರ' ಎಂದೇ ಇದೆ. ಆದರೆ ಆದೇಶವನ್ನು 'ಜರಾ' ಶಬ್ದಕ್ಕೆ ಹೇಳಲಾಗಿದೆ. ಆದರೆ ಇಲ್ಲಿ 'ಜರ' ಸ್ಥಾನದಲ್ಲಿ ಆದೇಶವು ಹೇಳಲ್ಪಟ್ಟಿದೆ. ಅದು ಹೇಗೆ ಸಮಂಜಸವಾಗುವದು ಎಂಬುದನ್ನು ಮುಂದಿನ ಪರಿಭಾಷೆ ತಿಳಿಸುತ್ತದೆ.

ಪ.ಭಾ. 3. 'ಏಕದೇಶವಿಕೃತಂ ಅನನ್ಯವತ್' ।

ಯಾವುದಾದರೂ ಒಂದು ಪದಾರ್ಥದ ಅವಯವದಲ್ಲಿ ವಿಕಾರ ಉಂಟಾದರೆ, ಅದು ಬೇರೆ ಪದಾರ್ಥವಾಗುವದಿಲ್ಲ. ಲೌಕಿಕ ಉದಾಹರಣೆಯನ್ನು ಕೊಡುವದಾದರೆ– ನಾಯಿಯ ಬಾಲ ಕತ್ತರಿಸಿದಮೇಲೂ ಅದು ನಾಯಿಯಾಗಿ ಇರುತ್ತದೆಯೇ ಹೊರತು, ನಾಯಿಗಿಂತ ಬೇರೆಯಾದ ಕುದುರೆಯಾಗದು. ಅಥವಾ, ಕತ್ತೆಯೂ ಆಗದು. ಹಾಗೆಯೇ 'ಜರಾ' ಶಬ್ದದಲ್ಲಿರುವ ಆಕಾರ (ದೀರ್ಘ)ವು ಹೋಗಿ 'ಜರ' ಎಂದು 'ಹ್ರಸ್ವ' ಅಕಾರಾನ್ತವಾದರೂ ಅದು 'ಜರಾ' ಶಬ್ದದಂತೆಯೇ ಗೃಹೀತವಾಗುತ್ತದೆ. ಆದ್ದರಿಂದ ಪ್ರಕೃತ ಸೂತ್ರದಿಂದ 'ನಿರ್ಜರ' ಶಬ್ದದಲ್ಲಿರುವ 'ಜರ' ಶಬ್ದಕ್ಕೆ 'ಜರಸ್' ಆದೇಶ ಬಂದಿರುವದು ಯುಕ್ತವೇ ಆಗಿದೆ. ಆದ್ದರಿಂದ 'ಜರಸ್' ಆದೇಶದಿಂದ 'ನಿರ್ಜರಸ್+ಔ= ನಿರ್ಜರಸೌ, ಮತ್ತು ನಿರ್ಜರಸಃ ಎಂಬ ರೂಪಗಳಾಗುತ್ತವೆ.

'ಜರಸ್' ಆದೇಶವು ಬಾರದಿರುವ ಪಕ್ಷದಲ್ಲಿ ಅಜಾದಿ ವಿಭಕ್ತಿ ಮತ್ತು ಹಲಾದಿ ಪ್ರತ್ಯಯಗಳು ಪರವಾದಾಗ ರಾಮ ಶಬ್ದದಂತೆ ರೂಪಗಳಾಗುತ್ತವೆ.

**(ಇಲ್ಲಿಗೆ ಅ–ಕಾರಾನ್ತ ಶಬ್ದದ ಪ್ರಕ್ರಿಯೆ ಮುಗಿಯಿತು)**

(ಆಕಾರಾನ್ತ ಶಬ್ದಗಳ ನಿರೂಪಣೆ)

(ಪೂರ್ವಸವರ್ಣದೀರ್ಘವನ್ನು ನಿಷೇಧಿಸುವ ಸೂತ್ರ)

**ಸೂತ್ರ್ – 162. ದೀರ್ಘಾಜ್ಜಸಿ ಚ (6.1.105)**

ವೃತ್ತಿಃ– ದೀರ್ಘಾತ್ ಜಸಿ ಇಚಿ ಚ ಪರೇ ನ ಪೂರ್ವಸವರ್ಣದೀರ್ಘಃ । ವೃದ್ಧಿಃ–ವಿಶ್ವಪೌ । ಹೇ ವಿಶ್ವಪಾಃ । ವಿಶ್ವಪಾಮ್ । ವಿಶ್ವಪೌ ।

ಪ. ಛೇ. – ದೀರ್ಘಾತ್, ಜಸಿ, ಚ ।

ಅ.ವ್ಯ. –"ನಾದಿಚಿ"(6.1.104) ಎಂಬ ಸೂತ್ರದಿಂದ 'ಇಚಿ' ಮತ್ತು 'ನ' ಎಂಬ ಪದಗಳೂ ಹಾಗೆಯೇ "ಪ್ರಥಮಯೋಃ ಪೂರ್ವಸವರ್ಣಃ (6.1.102)" ಎಂಬ ಸೂತ್ರದಿಂದ 'ಪೂರ್ವಸವರ್ಣಃ' ಎಂಬ ಪದವೂ ಮತ್ತು "ಅಕಃ ಸವರ್ಣೇ ದೀರ್ಘಃ"(6.1.101) ಎಂಬ ಸೂತ್ರದಿಂದ 'ದೀರ್ಘಃ' ಎಂಬ ಪದವೂ ಅನುವೃತ್ತವಾಗುತ್ತವೆ. "ಏಕಃ ಪೂರ್ವ–ಪರಯೋಃ" () ಎಂಬುದು ಅಧಿಕಾರಸೂತ್ರ.

ಅರ್ಥ– ದೀರ್ಘ ವರ್ಣದ ನಂತರ 'ಜಸ್' ಅಥವಾ 'ಇಚ್' (ಇ, ವು, ಋ, ಲೃ, ಏ, ಓ, ಐ, ಔ) ವರ್ಣಗಳು ಪರದಲ್ಲಿದ್ದಾಗ, ಪೂರ್ವಸವರ್ಣದೀರ್ಘವು ಬರುವದಿಲ್ಲ.

1. ಉದಾ– ವಿಶ್ವಪಾಃ– ಪ್ರಥಮೈಕವಚನದಲ್ಲಿ ವಿಶ್ವಪಾ+ಸು ಎಂದಿದ್ದಾಗ– ಪ್ರತ್ಯಯವಾದ 'ಉ' ಕಾರಕ್ಕೆ "ಉಪದೇಶೇಽಜನುನಾಸಿಕಇತ್" ಎಂಬ ಸೂತ್ರದಿಂದ 'ಇತ್' ಸಂಜ್ಞೆಯಿಂದ ಲೋಪ ಬಂದು ವಿಶ್ವಪಾ+ಸ್ ಎಂದಿದ್ದಾಗ– 'ಸ್' ಕಾರಕ್ಕೆ ರುತ್ವ–ವಿಸರ್ಗಗಳು ಬಂದು ವಿಶ್ವಪಾಃ ಎಂಬ ರೂಪವಾಗುತ್ತದೆ.

2. ಉದಾ– ಹೇ ವಿಶ್ವಪಾ –ಸಂಬೋಧನ ಪ್ರಥಮೈಕವಚನದಲ್ಲಿ– ಹೇ ವಿಶ್ವಪಾ+ಸು ಎಂದಿದ್ದಾಗ– ಮೇಲಿನಂತೆಯೇ ಹೇ ವಿಶ್ವಪಾಃ! ಎಂದಾಗುತ್ತದೆ.

3. ಉದಾ–ವಿಶ್ವಪೌ– ದ್ವಿವಚನದಲ್ಲಿ ವಿಶ್ವಪಾ+ಔ ಎಂದಿದ್ದಾಗ (ದೀರ್ಘ) 'ಆ' ಕಾರದಮುಂದೆ 'ಇಚ್' ವರ್ಣವಾದ 'ಔ' ಕಾರವು ಪರದಲ್ಲಿರುವದರಿಂದ, ಪ್ರಕೃತಸೂತ್ರದಿಂದ 'ಪೂರ್ವಸವರ್ಣದೀರ್ಘವು' ನಿಷೇಧಿಸಲ್ಪಟ್ಟಿದ್ದರಿಂದ ಅದು ಬಾರದೇ "ವೃದ್ಧಿರೇಚಿ"(6.1.88) ಎಂಬ ಸೂತ್ರದಿಂದ ವೃದ್ಧಿ ಬಂದು ವಿಶ್ವಪೌ ಎಂದು ರೂಪವಾಗುತ್ತದೆ.

4. ಉದಾ–ವಿಶ್ವಪಾಃ ಪ್ರಥಮಾ ವಿಭಕ್ತಿ ಬಹುವಚನದಲ್ಲಿ ವಿಶ್ವಪಾ+ಜಸ್ ಎಂದಿದ್ದಾಗ– "ಚುಟೂ" ಸೂತ್ರದಿಂದ ಪ್ರತ್ಯಯದ ಆದಿ 'ಜ್' ಕಾರಕ್ಕೆ 'ಇತ್/ಲೋಪ' ಬಂದು ವಿಶ್ವಪಾ+ಅಸ್ ಎಂದಿದ್ದಾಗ, "ಅಕಃ ಸವರ್ಣೇ ದೀರ್ಘಃ"(6.1.101) ಎಂಬ ಸೂತ್ರದಿಂದ 'ಸವರ್ಣದೀರ್ಘವಾಗಿ' ವಿಶ್ವಪಾಸ್ ಎಂದಿದ್ದಾಗ, ರುತ್ವ–ವಿಸರ್ಗಗಳಿಂದ ವಿಶ್ವಪಾಃ ಎಂಬ ರೂಪ ಸಿದ್ಧವಾಗುತ್ತದೆ.

5. ಉದಾ–ವಿಶ್ವಪಾಮ್ ದ್ವಿತೀಯಾ–ವಿಭಕ್ತಿ–ಏಕವಚನದಲ್ಲಿ– ವಿಶ್ವಪಾ+ಅಮ್ ಎಂದಿದ್ದಾಗ "ಅಮಿ ಪೂರ್ವಃ" (6.1.107) ಎಂಬ ಸೂತ್ರದಿಂದ ಪೂರ್ವರೂಪ ಬಂದು ವಿಶ್ವಪಾಮ್ ಎಂದಾಗುತ್ತದೆ.

6. ದ್ವಿತೀಯಾ ದ್ವಿವಚನದರೂಪವು ಪ್ರಥಮಾದ್ವಿವಚನ ರೂಪದಂತೆಯೇ ವಿಶ್ವಪೌ ಎಂದಿರುತ್ತದೆ.

**(ಸರ್ವನಾಮ-ಸ್ಥಾನ-ಸಂಜ್ಞಾ ವಿಧಾಯಕ ಸೂತ್ರ)**

**ಸೂತ್ರ - 163. ಸುಡನಪುಂಸಕಸ್ಯ (1.1.43)**

ವೃತ್ತಿಃ- ಸ್ವಾದಿ ಪಞ್ಚವಚನಾನಿ ಸರ್ವನಾಮಸ್ಥಾನ ಸಂಜ್ಞಾನಿ ಸ್ಯುಃ ಅಕ್ಲೀಬಸ್ಯ ।

ಪ. ಛೇ. - ಸುಟ್, ಅನಪುಂಸಕಸ್ಯ ।

ಅ.ವೃ. -"ಶಿ ಸರ್ವನಾಮಸ್ಥಾನಮ್" ಎಂಬ ಸೂತ್ರದಿಂದ 'ಸರ್ವನಾಮಸ್ಥಾನಮ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- 'ಸು' ಮೊದಲಾದ ಐದು (ಸು,ಔ,ಜಸ್,ಅಮ್,ಔಟ್) ಪ್ರತ್ಯಯಗಳಿಗೆ ಸರ್ವನಾಮಸ್ಥಾನ ಸಂಜ್ಞೆಯು ಬರುತ್ತದೆ. **ಆದರೆ ನಪುಂಸಕಲಿಙ್ಗದಲ್ಲಿ ಬರುವದಿಲ್ಲ. ಅಂದರೆ ಪುಲ್ಲಿಙ್ಗ ಮತ್ತು ಸ್ತ್ರೀಲಿಙ್ಗಗಳಲ್ಲಿ ಮಾತ್ರ ಈ ಐದು ಪ್ರತ್ಯಯಗಳಿಗೆ ಸರ್ವನಾಮಸ್ಥಾನ ಸಂಜ್ಞೆಯು ಬರುತ್ತದೆ.**

ಸರ್ವನಾಮ ಸ್ಥಾನ ಸಂಜ್ಞೆಯಿಂದ 'ಸರ್ವನಾಮಸ್ಥಾನೇ ಚಾಸಂಬುದ್ಧೌ' "ಮತ್ತು ಅಪ್,ತೃನ್, ತೃಚ್......" ಸೂತ್ರಗಳಿಂದ ದೀರ್ಘ ಮೊದಲಾದವುಗಳನ್ನು ಮಾಡಲಾಗುತ್ತದೆ. ಮುಂದಿನ ಸೂತ್ರದಲ್ಲಿ ಅಸರ್ವನಾಮಸ್ಥಾನದ ಬಗ್ಗೆ ತಿಳಿಯಬೇಕಾಗಿದೆ. ಆದ್ದರಿಂದ ಇಲ್ಲಿ ಸರ್ವನಾಮಸ್ಥಾನದ ಬಗ್ಗೆ ಹೇಳಲಾಗಿದೆ.

**(ಪದಸಂಜ್ಞಾ ವಿಧಾಯಕ ಸೂತ್ರ)**

**ಸೂತ್ರ - 164. ಸ್ವಾದಿಷ್ವಸರ್ವನಾಮಸ್ಥಾನೇ (1.4.17)**

ವೃತ್ತಿಃ -ಕಪ್ ಪ್ರತ್ಯಯಾವಧಿಷು ಸ್ವಾದಿಷು ಅಸರ್ವನಾಮಸ್ಥಾನೇಷು ಪೂರ್ವಂ ಪದಂ ಸ್ಯಾತ್

ಪ. ಛೇ. - ಸ್ವಾದಿಷು, ಅಸರ್ವನಾಮ-ಸ್ಥಾನೇ ।

ಅ. ವೃ. - "ಸುಪ್ ತಿಙನ್ತಂ ಪದಮ್"(1.1.14) ಎಂಬ ಸೂತ್ರದಿಂದ 'ಪದಮ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- 'ಸು' ನಿಂದ ಆರಂಭವಾಗಿ 'ಕಪ್' ಪ್ರತ್ಯಯದವರೆಗೆ ಇರುವ ಪ್ರತ್ಯಯಗಳಲ್ಲಿ ಸರ್ವನಾಮ ಸಂಜ್ಞೆಯುಳ್ಳ ಪ್ರತ್ಯಯಗಳನ್ನು ಬಿಟ್ಟು ಉಳಿದ ಪ್ರತ್ಯಯಗಳು ಪರದಲ್ಲಿದ್ದಾಗ ಪೂರ್ವಶಬ್ದ ಸ್ವರೂಪಕ್ಕೆ 'ಪದ' ಸಂಜ್ಞೆಯು ಬರುತ್ತದೆ. ಅಂದರೆ "ಸ್ವೌಜಸಮೌಟ್ಛಸ್.....ಙ್ಯೋಸ್ಸುಪ್ (4.1.2)" ಆರಂಭಿಸಿ "ಉದ-ಪ್ರತಿಭ್ಯಃ ಕಪ್" ಎಂಬ ಸೂತ್ರದವರೆಗಿನ ಎಲ್ಲ ಪ್ರತ್ಯಯಗಳು ಸ್ವಾದಿ ಪ್ರತ್ಯಯಗಳೆನಿಸಿಕೊಳ್ಳುತ್ತವೆ. ಇವುಗಳಲ್ಲಿ ಸರ್ವನಾಮಸಂಜ್ಞೆಯುಳ್ಳ ಪ್ರತ್ಯಯಗಳನ್ನು ಬಿಟ್ಟು ಉಳಿದ ಪ್ರತ್ಯಯಗಳು ಪರದಲ್ಲಿದ್ದಾಗ ಪ್ರಕೃತಿಗೆ 'ಪದ' ಸಂಜ್ಞೆಯು ಬರುತ್ತದೆ.

ಉದಾ- ದ್ವಿತೀಯಾ ವಿಭಕ್ತಿ ಬಹುವಚನದಲ್ಲಿ ವಿಶ್ವಪಾ+ಅಸ್(ಶಸ್) ಎಂದಿದ್ದಾಗ

'ಶಸ್' ಎಂಬುದು ಸರ್ವನಾಮಸ್ಥಾನವಾಗಿಲ್ಲ. ಆದ್ದರಿಂದ ಇದು ಪರದಲ್ಲಿದ್ದಾಗ ಪೂರ್ವ ಶಬ್ದ ಸಮುದಾಯವಾದ 'ವಿಶ್ವಪಾ' ಎಂಬ ಶಬ್ದಕ್ಕೆ 'ಪದ' ಸಂಜ್ಞಾ ಬರುತ್ತದೆ. ಹೀಗಿರುವಾಗ ಮುಂದಿನ ಸೂತ್ರವನ್ನು ಹೇಳುತ್ತಾನೆ.

**(ಭ-ಸಂಜ್ಞಾ ವಿಧಾಯಕ ಸೂತ್ರ)**

**ಸೂತ್ರ – 165. ಯಚಿ ಭಮ್ (1.4.18)**

ವೃತ್ತಿಃ – ಯಾದಿಷು ಅಜಾದಿಷು ಚ ಕಪ್ ಪ್ರತ್ಯಯಾವಧಿಷು ಸ್ವಾದಿಷು ಅಸರ್ವನಾಮಸ್ಥಾನೇಷು ಪೂರ್ವಂ ಭ-ಸಂಜ್ಞಂ ಸ್ಯಾತ್।

ಅ. ವೃ. – "ಸ್ವಾದಿಷು ಅಸರ್ವನಾಮಸ್ಥಾನೇ"(1.4.17) ಎಂಬ ಸೂತ್ರವು ಅನುವೃತ್ತವಾಗುತ್ತದೆ.

ಅರ್ಥ– 'ಸು' ವಿನಿಂದ ಆರಂಭಿಸಿ 'ಕಪ್' ಪ್ರತ್ಯಯದವರೆಗಿನ ಪ್ರತ್ಯಯಗಳಲ್ಲಿ ಸರ್ವನಾಮಸ್ಥಾನ ಸಂಜ್ಞೆಯುಳ್ಳ ಪ್ರತ್ಯಯಗಳನ್ನು ಬಿಟ್ಟು ಉಳಿದ ಯ-ಕಾರಾದಿ ಮತ್ತು ಅಜಾದಿ ಪ್ರತ್ಯಯಗಳು ಪರದಲ್ಲಿದ್ದಾಗ ಪೂರ್ವ ಶಬ್ದ ಸ್ವರೂಪಕ್ಕೆ 'ಭ' ಸಂಜ್ಞೆಯು ಬರುತ್ತದೆ.

ಉದಾ– ದ್ವಿತೀಯಾ ವಿಭಕ್ತಿ ಬಹುವಚನದಲ್ಲಿ ವಿಶ್ವಪಾ+ಅಸ್(ಶಸ್) ಎಂದಿದ್ದಾಗ, 'ಅಸ್' ಎಂಬುದು ಅಜಾದಿಯಾದ ಪ್ರತ್ಯಯವಾಗಿದೆ. ಅದು ಪರದಲ್ಲಿರೋಣದ್ದರಿಂದ 'ವಿಶ್ವಪಾ' ಶಬ್ದ ಸ್ವರೂಪಕ್ಕೆ 'ಭ' ಸಂಜ್ಞೆಯು ಬರುತ್ತದೆ.

ಹೀಗಿರುವಾಗ ಇಲ್ಲಿ ಒಂದು ಗೊಂದಲ ಉಂಟಾಗುತ್ತದೆ. "ಸ್ವಾದಿಷು ಅಸರ್ವನಾಮಸ್ಥಾನೇ" (1.4.17) ಎಂಬ ಸೂತ್ರದಿಂದ ವಿಶ್ವಪಾ+ಅಸ್(ಶಸ್) ಎಂದಿದ್ದಾಗ, 'ವಿಶ್ವಪಾ' ಶಬ್ದಸ್ವರೂಪಕ್ಕೆ ಈಗಾಗಲೇ ಪದ ಸಂಜ್ಞೆಯನ್ನು ಹೇಳಲಾಗಿದೆ. ಆದರೆ ಪ್ರಕೃತ ಸೂತ್ರದಿಂದ 'ಭ' ಸಂಜ್ಞೆಯನ್ನೂ ಹೇಳಲಾಗಿದೆ. ಎರಡಲ್ಲಿ ಪ್ರಕೃತದಲ್ಲಿ ಯಾವದನ್ನು ಗ್ರಹಿಸಬೇಕು ಎಂಬ ಪ್ರಶ್ನೆ ಬಂದಾಗ ಈ ಸಮಸ್ಯೆಯನ್ನು ಪರಿಹರಿಸಲು, ಮುಂದಿನ ಸೂತ್ರ ಪ್ರವೃತ್ತವಾಗುತ್ತದೆ.

**(ಪದ-ಸಂಜ್ಞಾ ಮತ್ತು – 'ಭ' ಸಂಜ್ಞಾಗಳು ಏಕ ಕಾಲದಲ್ಲ ಬಂದಾಗ ಯಾವದಾದರೂ ಒಂದು ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ – 166. ಆ ಕಡಾರಾದೇಕಾ ಸಂಜ್ಞಾ (1.4.1)**

ವೃತ್ತಿಃ –ಇತ ಊರ್ಧ್ವಂ "ಕಡಾರಾಃ ಕರ್ಮಧಾರಯೇ" ಇತ್ಯತಃ ಪ್ರಾಕ್ ಏಕಸ್ಯ ಏಕೈವ ಸಂಜ್ಞಾ ಜ್ಞೇಯಾ, ಯಾ ಪರಾ ಅನವಕಾಶಾ ಚ ।

ಪ.ಛೇ – ಆಕಡಾರಾತ್, ಏಕಾ, ಸಂಜ್ಞಾ ।

ಅರ್ಥ– ಪ್ರಕೃತ ಸೂತ್ರದಿಂದಾರಂಭಿಸಿ "ಕಡಾರಾಃ ಕರ್ಮಧಾರಯೇ" ಎಂಬ ಸೂತ್ರದ ಪೂರ್ವಸೂತ್ರದವರೆಗೆ ಒಂದು ರೂಪಕ್ಕೆ ಒಂದು ಸಂಜ್ಞೆ ಮಾತ್ರ ಇರುವದು. ಅಂದರೆ ಏಕಕಾಲದಲ್ಲಿ ಎರಡು ಸಂಜ್ಞೆಗಳು ಬರುವದಿಲ್ಲ. ಅಂದರೆ ಪ್ರಥಮಾಧ್ಯಾಯದ

ನಾಲ್ಕನೇ ಪಾದದ ಮೊದಲನೇ ಸೂತ್ರದಿಂದ ಆರಂಭಿಸಿ ಎರಡನೇ ಅಧ್ಯಾ೦ಯದ ಎರಡನೇ ಪಾದದ ಮೂವತ್ತೆಂಟನೇ ಸೂತ್ರದ ಪೂರ್ವಸೂತ್ರದ ವರೆಗೆ ಒಂದು ಪದಕ್ಕೆ ಒಂದೇ ಸಂಜ್ಞೆ೦ಯು ಇರುವದು. (ಎರಡೂ ಸಂಜ್ಞೆಗಳು ಏಕಕಾಲದಲ್ಲಿ ಬರುವದಿಲ್ಲ).

ಉದಾ–ವಿಶ್ವಪಾ+ಅಸ್(ಶಸ್) ಎಂದಿದ್ದಾಗ– 'ವಿಶ್ವಪಾ' ಶಬ್ದಕ್ಕೆ ಪದ–ಸಂಜ್ಞಾ ಮತ್ತು 'ಭ' ಸಂಜ್ಞಾಗಳು ಏಕ ಕಾಲದಲ್ಲಿ ಬಂದಾಗ, ಅವುಗಳಲ್ಲಿ ೦ಯಾವದಾದರೂ ಒಂದು ಸಂಜ್ಞೆ ಮಾತ್ರ ಬರುತ್ತದೆ. ಆದರೆ ಇಲ್ಲಿ ೦ಯಾವ ಸಂಜ್ಞೆ ಬರುತ್ತದೆಂಬುದು ಸ್ಪಷ್ಟವಾಗಿಲ್ಲ. ಇದನ್ನು ಸ್ಪಷ್ಟಪಡಿಸುವದಕ್ಕಾಗಿ "೦ಯಾ ಪರಾ ಅನವಕಾಶಾ ಚ" ಎಂಬುದರಿಂದ ಕಾಶಿಕೆ೦ಯ ಅಭಿಪ್ರಾ೦ಯವು ತಿಳಿಸಲ್ಪಟ್ಟಿದೆ. ೦ಯಾವ 'ಸಂಜ್ಞೆ೦ಯು' ಪರಸೂತ್ರದಿಂದ ವಿಹಿತವಾಗಿ೦ಯೂ, ನಿರವಕಾಶವಾಗಿ೦ಯೂ ಇರುತ್ತದೋ ಅದೇ ಸಂಜ್ಞೆ ೦ಯು ಗ್ರಾಹ್ಯವಾಗಿದೆ. ಇದರಿಂದ ತಿಳಿ೦ಯುವದೇನೆಂದರೆ, '೦ಯ' ಕಾರಾದಿ ಮತ್ತು ಅ–ಜಾದಿಯಾದ ವಿಭಕ್ತಿಪ್ರತ್ಯ೦ಯವು ಪರದಲ್ಲಿದ್ದಾಗ 'ಭ'–ಸಂಜ್ಞೆ೦ಯು ಬರುತ್ತದೆ. ಹಾಗೆ೦ಯೇ ಹಲಾದಿಯಾದ ವಿಭಕ್ತಿ ಪ್ರತ್ಯ೦ಯಗಳು ಪರದಲ್ಲಿದ್ದಾಗ 'ಪದ' ಸಂಜ್ಞೆ೦ಯು ಬರುತ್ತದೆ.

**(ಆ–ಕಾರ ಲೋಪವಿಧಾಯಕ ಸೂತ್ರ)**

**ಸೂತ್ರ – 167. ಆತೋ ಧಾತೋಃ (3.4.140)**

ವೃತ್ತಿಃ – ಆಕಾರಾಂತಃ ೦ಯಃ ಧಾತುಃ ತದನ್ತಸ್ಯ ಭಸ್ಯ ಅಙ್ಗಸ್ಯ ಲೋಪಃ। ಅಲೋಽಂತ್ಯಸ್ಯ। ವಿಶ್ವಪಃ। ವಿಶ್ವಪಾ। ವಿಶ್ವಪಾಭ್ಯಾಂ ಇತ್ಯಾದಿ। ಏವಂ ಶಙ್ಖಧ್ಮಾದ೦ಯಃ। ಧಾತೋಃ ಕಿಮ್– ಹಾಹಾನ್। ಹರಿಃ। ಹರೀ।

ಅ.ವ್ಯ. –"ಅಲ್ಲೋಪೋಽನಃ" ಎಂಬ ಸೂತ್ರದಿಂದ 'ಲೋಪಃ' ಎಂಬ ಪದವು ಅನುವೃತ್ತವಾಗುತ್ತದೆ. "ಅಙ್ಗಸ್ಯ" ಮತ್ತು "ಭಸ್ಯ" ಎಂಬ ಎರಡು ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ– ಆ–ಕಾರಾನ್ತ ಧಾತುವನ್ನು ಅಂತವಾಗಿ೦ಯುಳ್ಳ 'ಭ' ಸಂಜ್ಞೆಯಿಂದೊಡಗೂಡಿದ ಅಙ್ಗಕ್ಕೆ ಲೋಪವು ಬರುತ್ತದೆ. ಅಂದರೆ ಅಙ್ಗದ ಕೊನೆ೦ಯ ವರ್ಣಕ್ಕೆ ಲೋಪವು ಬರುತ್ತದೆ ಎಂದರ್ಥ.

ಉದಾ– ವಿಶ್ವಪಾ+ಅಸ್(ಶಸ್) ಎಂದಿದ್ದಾಗ– "೦ಯಾ ಪರಾ ಅನವಕಾಶಾ ಚ" ಎಂಬ ನಿ೦ಯಮದಿಂದ 'ಪದ' ಸಂಜ್ಞೆ೦ಯನ್ನು ಬಾಧಿಸಿ 'ಭ' ಸಂಜ್ಞೆ೦ಯು ಬಂದಿದೆ. ಆ–ಕಾರಾನ್ತ ಧಾತುವೆಂದರೆ ಇಲ್ಲಿ 'ಪಾ' ಧಾತುವು. ಇದು ವಿಶ್ವ ಶಬ್ದದ ಕೊನೆ೦ಯಲ್ಲಿದೆ. ಇದರ ಅಙ್ಗವಾದ ಅಂತ್ಯ 'ಆ' ಕಾರಕ್ಕೆ 'ಅಸ್'(ಶಸ್) ಪರವಾದ್ದರಿಂದ, "ಅಲೋನ್ತ್ಯಸ್ಯ" ಪರಿಭಾಷೆಯಿಂದ, 'ಭ' ಸಂಜ್ಞೆ೦ಯನ್ನು ಹೊಂದಿದ 'ಆ' ಕಾರಕ್ಕೆ ಲೋಪ ಬಂದು ವಿಶ್ವಪ್+ಅಸ್ (ಶಸ್) ಎಂದಿದ್ದಾಗ 'ವಿಶ್ವಪಸ್' ಎಂದಾಗಿ ರುತ್ವ– ವಿಸರ್ಗಗಳಿಂದ 'ವಿಶ್ವಪಃ' ಎಂದು ರೂಪವಾಗಿದೆ.

ಇನ್ನು ತೃತೀ೦ಯಾ–ವಿಭಕ್ತಿ–ಏಕವಚನದಲ್ಲಿ ವಿಶ್ವಪಾ+ಟಾ ಎಂದಿದ್ದಾಗ "ಚುಟೂ"

ಸೂತ್ರದಿಂದ 'ಟ್' ಕಾರ ಇತ್/ಲೋಪವಾಗಿ 'ಆ' ಅಷ್ಟೇ ಉಳಿದಿರುತ್ತದೆ. ಆಗ ವಿಶ್ವಪಾ+ ಆ ಎಂದಿರುತ್ತದೆ. ಈಗ ಪ್ರಕೃತ ಸೂತ್ರದಿಂದ ಧಾತುವಿನ 'ಆ' ಕಾರಕ್ಕೆ ಲೋಪ ಬಂದು ವಿಶ್ವಪ್+ಆ ಎಂದಾಗಿ ವಿಶ್ವಪಾ ಎಂದಾಗುತ್ತದೆ.

ಉಳಿದ ಸ್ಥಳಗಳಲ್ಲಿ ಅಂದರೆ '0ಯ' ಕಾರವನ್ನು ಬಿಟ್ಟು 'ಹಲ್' ವರ್ಣಗಳನ್ನು ಆದಿ0ಯಲ್ಲಿ ಉಳ್ಳ ಪ್ರತ್ಯ0ಯಗಳು ಪರವಾದಾಗ, 'ಆ' ಕಾರಕ್ಕೆ ಲೋಪ ಬರುವದಿಲ್ಲ. ಕಾರಣವೇನೆಂದರೆ ಅಲ್ಲಿ 'ಭ' ಸಂಜ್ಞೆ0ಯು ಇರುವದಿಲ್ಲ.

ಉದಾ–ವಿಶ್ವಪಾಭ್ಯಾಮ್: ತೃತೀ0ಯಾ–ವಿಭಕ್ತಿ–ದ್ವಿವಚನದಲ್ಲಿ ವಿಶ್ವಪಾ+ಭ್ಯಾಮ್ ಎಂಬಲ್ಲಿ ಹಲಾದಿ0ಯಾದ ಪ್ರತ್ಯ0ಯ ಪರದಲ್ಲಿರೋಣದ್ದರಿಂದ, 'ಭ' ಸಂಜ್ಞಾ ಬಾರದೇ ಇರುವದರಿಂದ 'ಆ' ಕಾರಕ್ಕೆ ಲೋಪ ಬರಲಿಲ್ಲ. ಹೀಗೆ ವಿಶ್ವಪಾಭ್ಯಾಮ್ ಎಂಬ ರೂಪ ಸಿದ್ಧವಾಗುತ್ತದೆ.

ಇದರಂತೆ0ಯೇ ಉಳಿದ ರೂಪಗಳನ್ನು ತಿಳಿ0ಯಬೇಕು. 'ಶಂಖಧ್ಮಾ' ಮುಂತಾದ ಶಬ್ದಗಳು ಹೀಗೆ0ಯೇ ರೂಪಗಳನ್ನು ಹೊಂದುತ್ತವೆ.

'ಧಾತೋಃ' ಎಂದು ಏಕೆ ಹೇಳಲಾಗಿದೆ ಎಂದರೆ– 'ಹಾಹಾ' ಶಬ್ದವು ಧಾತುವಲ್ಲ. ('ಹಾಹಾ' ಎಂದರೆ ಒಬ್ಬ ಗಂಧರ್ವನ ಹೆಸರು). ಅವ್ಯುತ್ಪನ್ನ ಪ್ರಾತಿಪದಿಕವಾಗಿದೆ. ಮತ್ತು 0ಯಾವದೇ ಧಾತು–ಪ್ರತ್ಯ0ಯಗಳ ಜೋಡಣೆಯಿಂದ ಉಂಟಾದದ್ದಲ್ಲ. ಹೀಗಾಗಿ ಹಾಹಾ+ಅಸ್ ಎಂದಿದ್ದಾಗಲೂ ಲೋಪ ಬರಲಿಲ್ಲ. ಯಾಕೆಂದರೆ **ಹಾಹಾ** ಎಂಬುದು ಧಾತುವಲ್ಲ. ಹೀಗಾಗಿ 'ಆ' ಕಾರಕ್ಕೆ ಲೋಪ ಬಾರದೇ 'ಹಾಹಾ' ಎಂದೇ ಇರುತ್ತದೆ.

ಉದಾ–'ಹಾಹಾನ್' : ದ್ವಿತೀ0ಯಾ–ವಿಭಕ್ತಿ ಬಹುವಚನದಲ್ಲಿ ಹಾಹಾ+ಅಸ್(ಶಸ್) ಎಂದಿದ್ದಾಗ "ಪ್ರಥಮ0ಯೋಃ ಪೂರ್ವಸವರ್ಣಃ"(6.1.102) ಎಂಬ ಸೂತ್ರದಿಂದ ಪೂರ್ವಸವರ್ಣದೀರ್ಘವು ಏಕಾದೇಶವಾಗಿ ಬಂದು 'ಹಾಹಾಸ್' ಎಂದಾಗಿ, "ತಸ್ಮಾಚ್ಛಸೋ ನಃ ಪುಂಸಿ" (6.1.103) ಎಂಬ ಸೂತ್ರದಿಂದ 'ಸ್' ಕಾರಕ್ಕೆ 'ನ್' ಕಾರ ಬಂದು 'ಹಾಹಾನ್' ಎಂದು ರೂಪವಾಗುತ್ತದೆ. ಉಳಿದ ರೂಪಗಳು ಈ ಕೆಳಗಿನಂತಿವೆ.
ತೃತೀಯಾ–ಹಾಹಾ–ಹಾಹಾ+ಟಾ>ಹಾಹಾ+ಆ>ಸವರ್ಣದೀರ್ಘ>ಹಾಹಾ

ಚತುರ್ಥೀ–ಹಾಹೈ–ಹಾಹಾ+ಙೇ>ಹಾಹಾ+ಏ>ವೃದ್ಧಿ>ಹಾಹೈ

ಪಞ್ಚಮೀ ಮತ್ತು ಷಷ್ಠೀ – ಹಾಹಾಃ–ಹಾಹಾ+ಙಸಿ(ಙಸ್)>ಹಾಹಾ+ಅಸ್> ಸವರ್ಣದೀರ್ಘಸಂಧಿ>ಹಾಹಾಸ್>ರುತ್ವ–ವಿಸರ್ಗ>ಹಾಹಾಃ

ಷಷ್ಠೀ ದ್ವಿವ– ಹಾಹೌಃ–ಹಾಹಾ+ಓಸ್>ವೃದ್ಧಿ>ಹಾಹೌಸ್>ರುತ್ವ–ವಿಸರ್ಗ> ಹಾಹೌಃ

ಷಷ್ಠೀ ಬ. ವ – ಹಾಹಾಮ್ –ಹಾಹಾ+ಆಮ್ > ಸವರ್ಣದೀರ್ಘ > ಹಾಹಾಮ್

ಸಪ್ತಮೀ – ಹಾಹೇ–ಹಾಹಾ+ಙಿ > ಹಾಹಾ+ಇ > ಗುಣ > ಹಾಹೇ

**(ಇಲ್ಲಿಗೆ ಆ–ಕಾರಾನ್ತ ಪುಲ್ಲಿಂಗ ಶಬ್ದಗಳು ಮುಗಿದವು)**

**(ಇ-ಕಾರಾನ್ತ ಪುಲ್ಲಿಂಗ ಶಬ್ದಗಳು)**

ಪ್ರಥಮಾ ಏಕವಚನದಲ್ಲಿ ಇ-ಕಾರಾನ್ತ ಶಬ್ದವಾದ ಹರಿ ಶಬ್ದವು ಹರಿ+ಸ್ (ಸು) ಎಂದಿದ್ದಾಗ 'ಹರಿಸ್' ಎಂದಾಗಿ ರುತ್ವ- ವಿಸರ್ಗಗಳಿಂದ ಹರಿಃ ಎಂದಾಗುತ್ತದೆ.

ಪ್ರಥಮಾ-ವಿಭಕ್ತಿ ದ್ವಿವಚನದಲ್ಲಿ ಹರಿ+ಔ ಎಂದಿದ್ದಾಗ "ಪ್ರಥಮಯೋಃ ಪೂರ್ವಸವರ್ಣಃ" (6.1.102) ಎಂಬ ಸೂತ್ರದಿಂದ ಪೂರ್ವಸವರ್ಣದೀರ್ಘವು ಏಕಾದೇಶವಾಗಿ ಬಂದು ಹರೀ ಎಂದಾಗುತ್ತದೆ.

**(ಅಙ್ಗಕ್ಕೆ ಗುಣವನ್ನು ವಿಧಿಸುವ ಸೂತ್ರ)**

**ಸೂತ್ರ - 168. ಜಸಿ ಚ (7.3.109)**

ವೃತ್ತಿಃ- ಹ್ರಸ್ವಾನ್ತಸ್ಯ ಅಙ್ಗಸ್ಯ ಗುಣಃ । ಹರಯಃ ।

ಅ. ವೃ. - "ಹ್ರಸ್ವಸ್ಯ ಗುಣಃ"(7.3.108) ಎಂಬ ಸೂತ್ರ ಅನುವೃತ್ತವಾಗಿದೆ.

ಅರ್ಥ- 'ಜಸ್' ಪ್ರತ್ಯಯವು ಪರದಲ್ಲಿದ್ದಾಗ ಪೂರ್ವದಲ್ಲಿರುವ ಹ್ರಸ್ವಾನ್ತವಾದ ಅಙ್ಗದ ಅನ್ತ್ಯ ವರ್ಣಕ್ಕೆ ಗುಣವು ಬರುತ್ತದೆ.

ಉದಾ- ಪ್ರಥಮಾವಿಭಕ್ತಿ ಬಹುವಚನದಲ್ಲಿ ಹರಿ+ಜಸ್ ಎಂದಿದ್ದಾಗ- "ಚುಟೂ"(1.3.7) ಎಂಬ ಸೂತ್ರದಿಂದ 'ಜ್'ಕಾರ ಇತ್/ಲೋಪವಾಗಿ ಹರಿ+ಅಸ್ ಎಂದಿದ್ದಾಗ ಪ್ರಕೃತ ಸೂತ್ರದಿಂದ ಅಙ್ಗದ 'ಇ' ಕಾರಕ್ಕೆ ಗುಣ ಬಂದು ಹರ್+ಏ+ಅಸ್ ಎಂದಿದ್ದಾಗ, "ಏಚೋऽಯವಾಯಾವಃ"(6.1.78) ಎಂಬ ಸೂತ್ರದಿಂದ 'ಏ' ಕಾರಕ್ಕೆ 'ಅಯ್' ಆದೇಶವಾಗಿ ಬಂದು ಹರ್+ಅಯ್+ಅಸ್ ಎಂದಿದ್ದಾಗ 'ಹರಯಸ್' ಎಂದಾಗಿ ರುತ್ವ-ವಿಸರ್ಗಗಳಿಂದ ಹರಯಃ ಎಂಬ ರೂಪವು ಸಿದ್ಧವಾಗುತ್ತದೆ.

**(ಗುಣವನ್ನು ವಿಧಿಸುವ ಸೂತ್ರ)**

**ಸೂತ್ರ- 169. ಹ್ರಸ್ವಸ್ಯ ಗುಣಃ (7.3.108)**

ವೃತ್ತಿಃ -ಸಂಬುದ್ಧೌ। ಹೇ ಹರೇ। ಹರಿಮ್। ಹರೀ। ಹರೀನ್।

ಅ.ವೃ. - "ಸಂಬುದ್ಧೌ ಚ" ಎಂಬ ಸೂತ್ರದಿಂದ 'ಸಂಬುದ್ಧೌ' ಎಂಬ ಪದವು ಅನುವೃತ್ತವಾಗುತ್ತದೆ. "ಅಙ್ಗಸ್ಯ" ಎಂಬುದು ಇಲ್ಲಿಯೂ ಅಧಿಕಾರ ಸೂತ್ರವಾಗಿದೆ.

ಅರ್ಥ-ಸಂಬುದ್ಧಿ ಸಂಜ್ಞಕವಾದ ಶಬ್ದವು (ಸಂಬೋಧನ ಪ್ರಥಮಾ ವಿಭಕ್ತಿಯ ಏಕವಚನ) ಪರದಲ್ಲಿದ್ದಾಗ ಹ್ರಸ್ವಾನ್ತವಾದ ಅಙ್ಗಕ್ಕೆ (ಅಙ್ಗದ ಕೊನೆಯ ವರ್ಣಕ್ಕೆ) ಗುಣವು ಬರುತ್ತದೆ.

**(ಘಿ ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ- 170. ಶೇಷೋಘ್ಯಸಖಿ (1.4.7)**

ವೃತ್ತಿಃ -ಶೇಷ ಇತಿ ಸ್ಪಷ್ಟಾರ್ಥಮ್ । ಅ-ನದೀ ಸಂಜ್ಞೌ ಹ್ರಸ್ವೌ ಯೌ ಇತ್-ಉತೌ ತದನ್ತಂ ಸಖಿವರ್ಜಂ ಘಿಸಂಜ್ಞಮ್ ।

ಪ. ಛೇ. – ಶೇಷಃ, ಘಿ, ಅಸಖಿ ।

ಅ. ವ್ಯ. –'ಯೂ' ಸ್ತ್ರ್ಯಾಖ್ಯೌ ನದೀ ಎಂಬ ಸೂತ್ರದಿಂದ 'ಯೂ' ಎಂಬ ಪದವು ಅನುವೃತ್ತವಾಗುತ್ತದೆ. "ಜಿತಿ ಹ್ರಸ್ವಶ್ಚ" ಎಂಬ ಸೂತ್ರದಿಂದ ಹ್ರಸ್ವಃ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ–ನದೀ ಸಂಜ್ಞೆಯನ್ನು ಪಡೆಯದ ಹ್ರಸ್ವ ಇಕಾರ, ಉಕಾರಗಳನ್ನು ಅಂತವಾಗಿವುಳ್ಳ ಮತ್ತು 'ಸಖಿ' ಶಬ್ದ ಭಿನ್ನವಾದ ಶಬ್ದವು 'ಘಿ' ಸಂಜ್ಞೆಯನ್ನು ಹೊಂದುತ್ತದೆ.

'ಜಿತಿ ಹ್ರಸ್ವಶ್ಚ' ಎಂಬ ಸೂತ್ರದಿಂದ ಸ್ತ್ರೀಲಿಂಗದಲ್ಲಿರುವ ಇಕಾರ–ಉಕಾರಾಂತಶಬ್ದಗಳಿಗೆ 'ಜಿತ್' ಗಳಾದ ಪ್ರತ್ಯಯಗಳು ಪರವಾದಾಗ ವಿಕಲ್ಪದಿಂದ 'ನದೀ' ಸಂಜ್ಞೆಯು ವಿಧಿಸಲಾಗಿದೆ. ಅಂತಹ ನದೀ – ಸಂಜ್ಞೆಗಳಲ್ಲದ ಪದಗಳು ಎಂಬುದನ್ನು ಸೂಚಿಸಿ ಸ್ಪಷ್ಟ ಪಡಿಸುವದಕ್ಕಾಗಿ ಶೇಷಃ ಎಂಬ ಪದವು ಹೇಳಲಾಗಿದೆ.

ನದೀ ಸಂಜ್ಞಾ ವಿಧಾಯಕ ಸೂತ್ರವನ್ನು ವಿಶೇಷ ಶಾಸ್ತ್ರವೆಂದು ಪರಿಗಣಿಸಲಾಗಿದೆ. 'ಘಿ' ಸಂಜ್ಞಾ ವಿಧಾಯಕ ಸೂತ್ರವನ್ನು ಸಾಮಾನ್ಯ ಶಾಸ್ತ್ರವೆಂದು ಭಾವಿಸಲಾಗಿದೆ. 'ಉತ್ಸೃಜ್ಯ ಅಪವಾದ ವಿಷಯಂ ಸಾಮಾನ್ಯಂ–ಪ್ರವರ್ತತೇ' ಎಂಬ ನ್ಯಾಯವನ್ನು ಅನುಸರಿಸಿ ನದೀ ಸಂಜ್ಞೆಗೆ ಅವಕಾಶವಿಲ್ಲದ ಲಕ್ಷ್ಯಗಳಲ್ಲಿ ಮಾತ್ರ 'ಘಿ' ಸಂಜ್ಞಾ–ವಿಧಾಯಕ ಶಾಸ್ತ್ರವು ಪ್ರವರ್ತಿಸುವುದು ಮತ್ತು ' ಆಕಡಾರಾದೇಕಾ ಸಂಜ್ಞಾ ' ಎಂಬ ನಿಯಮದಿಂದ ಒಂದೇ ಲಕ್ಷ್ಯಕ್ಕೆ ಎರಡು ಸಂಜ್ಞೆಗಳು ಏಕಕಾಲದಲ್ಲಿ ಬರುವದಿಲ್ಲಾ. ಆದ್ದರಿಂದ ನದೀ ಸಂಜ್ಞೆ ಇಲ್ಲದ ಇಕಾರ ಉಕಾರಾಂತ ಶಬ್ದಗಳಿಗೆ 'ಘಿ' ಸಂಜ್ಞೆಯು ಬರುವುದು ಎಂಬುದು ಈ ವಾಕ್ಯಾರ್ಥಗಳಿಂದ ಸಿದ್ಧಿಸಿದರೂ, **ಶೇಷಃ** ಎಂಬ ಪದವನ್ನು ಸ್ಪಷ್ಟವಾಗಿ ಅರ್ಥವನ್ನು ತಿಳಿಸುವುದಕ್ಕಾಗಿ ಪ್ರಯೋಗಿಸಲಾಗಿದೆ. ಹರಿ ಶಬ್ದಕ್ಕೆ 'ನದೀ' ಸಂಜ್ಞೆಯ ಅವಕಾಶವಿಲ್ಲದ್ದರಿಂದ 'ಘಿ' ಸಂಜ್ಞೆಗೆ ಅವಕಾಶವಿದೆ.

**('ನಾ' ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ – 171. ಆಙೋನಾಽಸ್ತ್ರಿಯಾಮ್ (7.3.120)**

ವೃತ್ತಿಃ –ಘೇಃ ಪರಸ್ಯ ಆಙೋ ನಾ ಸ್ಯಾತ್ ಅಸ್ತ್ರಿಯಾಮ್ । ಆಙಿತಿ ಟಾ ಸಂಜ್ಞಾ ಹರಿಣಾ, ಹರಿಭ್ಯಾಮ್, ಹರಿಭಿಃ।

ಪ. ಛೇ. – ಆಙಃ, ನಾ, ಅಸ್ತ್ರಿಯಾಮ್।

ಅ. ವ್ಯ. –'ಅಚ್ಚ ಘೇಃ' ಎಂಬ ಸೂತ್ರದಿಂದ 'ಘೇಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– ಸ್ತ್ರೀ–ಲಿಂಗಕ್ಕಿಂತ ಭಿನ್ನವಾದ ಅನ್ಯಲಿಂಗದಲ್ಲಿ 'ಘಿ' ಸಂಜ್ಞಕ ಶಬ್ದದ ಪರದಲ್ಲಿರುವ ಆಙ್–ಪ್ರತ್ಯಯದ ಸ್ಥಾನದಲ್ಲಿ 'ನಾ' ಎಂಬ ಆದೇಶವು ಬರುತ್ತದೆ. 'ಆಙ್' ಎಂಬ ಸಂಜ್ಞೆಯನ್ನು ಪ್ರಾಚೀನರು 'ಟಾ' ಗೆ ಬದಲಾಗಿ ಪ್ರಯೋಗಿಸುತ್ತಿದ್ದರು.

ಉದಾ:– ಹರಿಣಾ –ಹರಿ+ಟಾ ಎಂದಿದ್ದಾಗ 'ಘಿ' ಸಂಜ್ಞಕ ಹರಿ ಶಬ್ದದ ಪರದಲ್ಲಿರುವ 'ಟಾ' ದ ಸ್ಥಾನದ ಮೇಲೆ 'ನಾ' ಆದೇಶವು ಬಂದು ಹರಿ+ನಾ

ಎಂದಿರುವಾಗ, 'ಅಟ್‌ಕುಪ್ವಾಙ್‌ನುಮ್‌ವ್ಯವಾಯೇಽಪಿ' ಎಂಬುದರಿಂದ 'ನ್'ಕಾರಕ್ಕೆ 'ಣ್' ಕಾರವು ಆದೇಶವಾಗಿ ಬಂದು, 'ಹರಿಣಾ' ಎಂದು ರೂಪವು ಸಿದ್ಧವಾಗುತ್ತದೆ.

ಹರಿ+ಭ್ಯಾಮ್=ಹರಿಭ್ಯಾಮ್ ಎಂದು ದ್ವಿವಚನದ ರೂಪವು ಸಿದ್ಧಿಸುತ್ತದೆ.

ಹರಿಭಿಃ –ಹರಿ+ಭಿಸ್ ಎಂದಿದ್ದಾಗ 'ಸ್' ಕಾರಕ್ಕೆ ರುತ್ವ ವಿಸರ್ಗಗಳಾಗಿ ಹರಿಭಿಃ ಎಂದಾಗುತ್ತದೆ.

### ('ಘಿ' ಗೆ ಗುಣವನ್ನು ವಿಧಿಸುವ ಸೂತ್ರ)

**ಸೂತ್ರ – 172. ಘೇರ್ಙಿತಿ (7.3.111)**

ವೃತ್ತಿಃ – ಘಿ–ಸಂಜ್ಞಸ್ಯ ಙಿತಿ ಸುಪಿ ಗುಣಃ । ಹರಯೇ, ಹರಿಭ್ಯಾಮ್, ಹರಿಭ್ಯಃ ।

ಪ. ಛೇ. – ಘೇಃ, ಙಿತಿ ।

ಅ. ವ್ಯ. –'ಸುಪಿ ಚ' ಎಂಬ ಸೂತ್ರದಿಂದ 'ಸುಪಿ' ಎಂಬ ಪದವು 'ಹ್ರಸ್ವಸ್ಯ ಗುಣಃ' ಎಂಬ ಸೂತ್ರದಿಂದ ಗುಣಃ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ–'ಘಿ' ಸಂಜ್ಞಕ ಪದದ ನಂತರ 'ಙಿತ್' ಆದ 'ಸುಪ್' ಪ್ರತ್ಯಯವು ಪರದಲ್ಲಿದ್ದಾಗ ಗುಣಾದೇಶವು ಬರುವುದು.

ಉದಾ:– ಹರಿ+ಙೇ ಎಂದಿದ್ದಾಗ ಪ್ರಕೃತ ಸೂತ್ರದಿಂದ 'ಇ' ಕಾರಕ್ಕೆ ಗುಣ ಬಂದು ಹರೇ+ಏ ಎಂದಿದ್ದಾಗ 'ಏಚೋಽಯವಾಯಾವಃ' ಎಂಬ ಸೂತ್ರದಿಂದ ಗುಣವಾಗಿ ಬಂದ 'ಏ' ಕಾರಕ್ಕೆ 'ಅಯ್' ಆದೇಶವು ಬಂದು ಹರಯ್+ಏ ಎಂದಾಗಿ ಹರಯೇ ಎಂಬ ಚತುರ್ಥಿ ಏಕವಚನದ ರೂಪವು ಸಿದ್ಧವಾಗುತ್ತದೆ. ಹರಿ+ಭ್ಯಾಮ್=ಹರಿಭ್ಯಾಮ್ ಇದು ದ್ವಿವಚನದ ರೂಪ. ಹರಿ+ಭ್ಯಃ=ಹರಿಭ್ಯಃ ಇದು ಬಹುವಚನದ ರೂಪ. ಙಸಿ ಮತ್ತು ಙಸ್ ಪ್ರತ್ಯಯಗಳು ಪರವಾದಾಗ 'ಘಿ' ಸಂಜ್ಞಕ ಶಬ್ದಕ್ಕೆ ಗುಣ ಬಂದು ಹರೇ+ಅಸ್ ಎಂದಿದ್ದಾಗ–

### (ಪೂರ್ವರೂಪವನ್ನು ವಿಧಿಸುವ ಸೂತ್ರ)

**ಸೂತ್ರ – 173. ಙಸಿ–ಙಸೋಶ್ಚ (6.1. 110)**

ವೃತ್ತಿಃ –ಏಙಃ ಙಸಿ–ಙಸೋಃ ಅತಿ ಪೂರ್ವರೂಪಮೇಕಾದೇಶಃ ಸ್ಯಾತ್ । ಹರೇಃ। ಹರೇಃ । ಹರ್ಯೋಃ । ಹರೀಣಾಮ್ ।

ಪ. ಛೇ. – ಙಸಿ, ಙಸೋಃ, ಚ ।

ಅ. ವ್ಯ. –ಅಮಿ ಪೂರ್ವಃ ಎಂಬ ಸೂತ್ರದಿಂದ 'ಪೂರ್ವಃ' ಎಂಬ ಪದವು ಹಾಗೆಯೇ 'ಏಙಃ ಪದಾನ್ತಾದತಿ' ಎಂಬ ಸೂತ್ರದಿಂದ 'ಏಙಃ ಮತ್ತು ಅತಿ' ಎಂಬ ಪದಗಳು ಅನುವೃತ್ತವಾಗುತ್ತವೆ. 'ಏಕಃ ಪೂರ್ವಪರಯೋಃ' ಎಂಬುದು ಅಧಿಕಾರ ಸೂತ್ರ.

ಅರ್ಥ– ಏಙ್(ಏ ಮತ್ತು ಓ) ವರ್ಣಗಳಿಗೆ ಪರದಲ್ಲಿರುವ (ಙಸಿ ಮತ್ತು ಙಸ್ ಗಳಲ್ಲಿರುವ) 'ಅ' ಕಾರವು ಪರದಲ್ಲಿದ್ದಾಗ, ಪೂರ್ವ ಪರಗಳ ಸ್ಥಾನದಲ್ಲಿ ಪೂರ್ವರೂಪವು

ಏಕಾದೇಶವಾಗಿ ಬರುತ್ತದೆ.

ಉದಾ – ಹರೇಃ– ಹರೇ+ಅಸ್ ಎಂದಿದ್ದಾಗ ಙಸಿ ಎಂಬಲ್ಲಿರುವ 'ಅ' ಕಾರವು ಪರದಲ್ಲಿರುವಾಗ ಪೂರ್ವಪರಗಳ ಸ್ಥಾನದಲ್ಲಿ 'ಏ' ಕಾರವು ಬಂದು ಹರ್+ಏ+ಸ್=ಹರೇಸ್ ಎಂದಾಗಿ, ರುತ್ವ ವಿಸರ್ಗಗಳಿಂದ 'ಹರೇಃ' ಎಂದು ರೂಪವು ಸಿದ್ಧವಾಗುತ್ತದೆ.

ಷಷ್ಠೀ–ವಿಭಕ್ತಿಯ ರೂಪವೂ ಇದೇ ರೀತಿಯಲ್ಲಿ ಆಗುತ್ತದೆ. 'ಏಙ್' ನಲ್ಲಿರುವ 'ಓ' ಕಾರದ ಉದಾಹರಣೆಯು 'ಭಾನೋಃ' ಎಂಬಲ್ಲಿ ಮುಂದೆ ವಿವರಿಸಲಾಗುವುದು. ಪಂಚಮೀ ವಿಭಕ್ತಿಯ ದ್ವಿವಚನ ಮತ್ತು ಬಹುವಚನದ ರೂಪಗಳು ಚತುರ್ಥೀ ವಿಭಕ್ತಿಯಲ್ಲಿರುವಂತೆ ಆಗುತ್ತದೆ.

ಹರ್ಯೋ:=ಹರಿ+ಓಸ್ಎಂದಿದ್ದಾಗ 'ಇಕೋ ಯಣಚಿ ' ಎಂಬ ಸೂತ್ರದಿಂದ ಇ ಕಾರಕ್ಕೆ ಯಕಾರಾದೇಶವಾಗಿ 'ಸ್' ಕಾರಕ್ಕೆ ರುತ್ವ ವಿಸರ್ಗಗಳಾಗಿ ಹರ್ಯೋಃ ಎಂದು ರೂಪವಾಗಿದೆ.

ಹರೀಣಾಮ್=ಹರಿ+ಆಮ್ ಎಂದಿದ್ದಾಗ 'ನುಟ್' ಆಗಮವು ಬಂದು ಹರಿ+ನ್+ಆಮ್=ಹರಿನಾಮ್ ಎಂದಾಗಿ 'ನಾಮಿ ಚ' ಸೂತ್ರದಿಂದ 'ಇ'ಕಾರಕ್ಕೆ ದೀರ್ಘ ಬಂದು 'ಹರೀನಾಮ್' ಎಂದಾಗಿ 'ಅಟ್‌ಕುಪ್ವಾಙ್‌ನುಮ್ ವ್ಯವಾಯೇಽಪಿ' ಎಂಬುದರಿಂದ ಣತ್ವ ಬಂದು 'ಹರೀಣಾಮ್' ಎಂದು ರೂಪವು ಸಿದ್ಧಿಸುತ್ತದೆ.

**('ಘಿ'ಗೆ ಅಕಾರ ಮತ್ತು 'ಙಿ'ಗೆ ಔತ್ವವನ್ನು ಹೇಳುವ ಸೂತ್ರ)**

**ಸೂತ್ರ– 174. ಅಚ್ಚ ಘೇಃ (7.3.119)**

ವೃತ್ತಿಃ –ಇದುದ್ಭ್ಯಾಂ ಉತ್ತರಸ್ಯ ಙೇಃ ಔತ್, ಘೇಃ ಅತ್ । ಹರೌ । ಹರ್ಯೋಃ। ಹರಿಷು । ಏವಂ ಕವ್ಯಾದಯಃ ।

ಪ. ಛೇ. – ಅತ್, ಚ, ಘೇಃ ।

ಅ. ವೃ. –'ಙೇರಾಮ್‌ನದ್ಯಾಮ್‌ನೀಭ್ಯಃ' ಎಂಬ ಸೂತ್ರದಿಂದ 'ಙೇಃ' ಎಂಬ ಪದವು ಮತ್ತು "ಇದುದ್‌ಭ್ಯಾಮ್" ಹಾಗೂ "ಔತ್" ಎಂಬ ಸೂತ್ರಗಳೂ ಅನುವೃತ್ತವಾಗುತ್ತವೆ.

ಅರ್ಥ– ಹ್ರಸ್ವ ಇಕಾರ–ಉಕಾರಗಳಿಗಿಂತ ಪರವಾದ 'ಙ್'ಗೆ 'ಔ'ಕಾರವು ಆದೇಶವಾಗಿ ಬರುವುದು. 'ಘಿ' ಸಂಜ್ಞಕವಾದ ಶಬ್ದದ ಅಂತ್ಯಾಕ್ಷರ (ಇ) ಕ್ಕೆ ಹ್ರಸ್ವ ಅ–ಕಾರವು ಆದೇಶವಾಗಿ ಬರುತ್ತದೆ.

ಉದಾ:– ಹರೌ – ಹರಿ+ಙಿ ಎಂದಿದ್ದಾಗ ಪ್ರಕೃತ ಸೂತ್ರದಿಂದ 'ಇ'ಕಾರಕ್ಕೆ 'ಅ' ಕಾರವು 'ಙಿ' ಕಾರಕ್ಕೆ 'ಔ'ಕಾರವು ಆದೇಶಗಳಾಗಿ ಬಂದು ಹರ+ಔ=ಎಂದಾಗಿ ವೃದ್ಧಿ ಸಂಧಿಯಿಂದ 'ಹರೌ' ಎಂದು ರೂಪವು ಸಿದ್ಧವಾಗುತ್ತದೆ.

ಹರ್ಯೋಃ– ಇದು ಷಷ್ಠೀ ದ್ವಿವಚನದಂತೆ ರೂಪವು ಸಿದ್ಧವಾಗುತ್ತದೆ.

ಹರಿಷು – **ಹರಿ+ಸು** ಎಂದಿದ್ದಾಗ 'ಆದೇಶಪ್ರತ್ಯಯಯೋಃ' ಎಂಬ ಸೂತ್ರದಿಂದ 'ಸ' ಕಾರಕ್ಕೆ 'ಷ'ತ್ವವು ಆದೇಶವಾಗಿ ಬಂದು 'ಹರಿಷು' ಎಂದು ರೂಪವು ಸಿದ್ಧವಾಗುತ್ತದೆ. ಇದೇ ರೀತಿಯಾಗಿ 'ಕವಿ' ಮೊದಲಾದ ಶಬ್ದಗಳು ರೂಪಗಳನ್ನು ಪಡೆಯುತ್ತವೆ.

**(ಅನಙ್-ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ_ 175. ಅನಙ್ ಸೌ** (7.3.93)

ವೃತ್ತಿಃ –ಸಖ್ಯುಃ ಅಙ್ಗಸ್ಯ ಅನಙಾದೇಶಃ ಅಸಂಬುದ್ಧೌ ಸೌ ।

ಅ.ವೃ– 'ಸಖ್ಯುರಸಂಬುದ್ಧೌ' ಎಂಬ ಸೂತ್ರವು ಅನುವೃತ್ತವಾಗಿದೆ. 'ಅಂಗಸ್ಯ' ಎಂಬುದು ಅಧಿಕಾರ ಸೂತ್ರ.

ಅರ್ಥ–ಸಂಬುದ್ಧಿ ಭಿನ್ನವಾದ 'ಸು' ಪ್ರತ್ಯಯವು ಪರದಲ್ಲಿರುವಾಗ 'ಸಖಿ' ಶಬ್ದದ ಅಂಗದ ಸ್ಥಾನದಲ್ಲಿ 'ಅನಙ್' ಆದೇಶವು ಬರುತ್ತದೆ.

ಉದಾ:– ಸಖಿ+ಸು ಎಂದಿದ್ದಾಗ ಸಂಬುದ್ಧಿ ಭಿನ್ನವಾದ 'ಸು' ಪರದಲ್ಲಿ ಇರುವುದರಿಂದ ಇ–ಕಾರದ ಸ್ಥಾನದಲ್ಲಿ 'ಅನಙ್' ಆದೇಶವಾಗಿ 'ಸಖ್+ಅನ್+ಸು= ಎಂದಾಗುತ್ತದೆ. ಇಲ್ಲಿ 'ಅನಙ್' ಆದೇಶವು 'ಙಿತ್' ಆಗಿರುವುದರಿಂದ 'ಅನಙ್'ನಲ್ಲಿ 'ನ್' ಕಾರೋತ್ತರವರ್ತಿ 'ಅ' ಕಾರವು ಉಚ್ಚಾರಣಾರ್ಥವಾಗಿಯೂ 'ಙ್' ಕಾರವು 'ಇತ್' ಆಗಿರುವುದರಿಂದ 'ಅನ್' ಮಾತ್ರ ಉಳಿಯುತ್ತದೆ. 'ಙಿಚ್ಚ' ಎಂಬುದರಿಂದ ಅಂಗವಾದ 'ಸಖಿ' ಶಬ್ದದ ಅಂತ್ಯವರ್ಣಕ್ಕೆ ಆದೇಶವಾಗಿ ಬರುತ್ತದೆ. ಹೀಗಿರುವಾಗ–

**(ಉಪಧಾ ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ– 176. ಅಲೋಽನ್ತ್ಯಾತ್ ಪೂರ್ವ ಉಪಧಾ** (1.1.65)

ವೃತ್ತಿಃ –ಅಂತ್ಯಾತ್ ಅಲಃ ಪೂರ್ವಃ ವರ್ಣಃ ಉಪಧಾ–ಸಂಜ್ಞಃ ಸ್ಯಾತ್ ।

ಪ. ಛೇ. – ಅಲಃ, ಅಂತ್ಯಾತ್, ಪೂರ್ವಃ, ಉಪಧಾ ।

ಅರ್ಥ– ಅಂತ್ಯವಾದ ಅಲ್ ವರ್ಣಕ್ಕಿಂತ ಪೂರ್ವದಲ್ಲಿರುವ ವರ್ಣವು 'ಉಪಧಾ' ಸಂಜ್ಞೆಯನ್ನು ಹೊಂದುತ್ತದೆ. ಅಲ್ ಪ್ರತ್ಯಾಹಾರದಲ್ಲಿ ಎಲ್ಲಾ ವರ್ಣಗಳು ಅಡಕವಾಗಿದೆ.

ಉದಾ:– ಸಖ್+ಅನ್ ಎಂಬಲ್ಲಿ ಅಂತ್ಯವಾದ 'ಅಲ್' ವರ್ಣವು 'ನ್' ಕಾರವಾಗಿದೆ. ಅದಕ್ಕೂ ಪೂರ್ವ ವರ್ಣವೆಂದರೆ ಹ್ರಸ್ವ ಅ–ಕಾರ. ಅದಕ್ಕೆ 'ಉಪಧಾ' ಎಂದು ಹೆಸರು.

**(ಉಪಧೆಗೆ ದೀರ್ಘವನ್ನು ವಿಧಿಸುವ ಸೂತ್ರ)**

**ಸೂತ್ರ– 177. ಸರ್ವನಾಮ–ಸ್ಥಾನೇ ಚಾಸಂಬುದ್ಧೌ**(6.4.8)

ವೃತ್ತಿ –ನಾನ್ತಸ್ಯ ಉಪಧಾಯಾಃ ದೀರ್ಘಃ ಅಸಂಬುದ್ಧೌ ಸರ್ವನಾಮಸ್ಥಾನೇ ।

ಪ. ಛೇ. – ಸರ್ವನಾಮ–ಸ್ಥಾನೇ, ಚ, ಅಸಂಬುದ್ಧೌ ।

ಅ.ವೃ–'ಢ್ರಲೋಪೇ ಪೂರ್ವಸ್ಯ ದೀರ್ಘೋಽಣಃ' ಎಂಬ ಸೂತ್ರದಿಂದ ದೀರ್ಘಃ

ಎಂಬ ಪದವು ಹಾಗೆಯೇ 'ನೋಪಧಾಯಾಃ' ಎಂಬುದರಿಂದ 'ಉಪಧಾಯಾಃ' ಎಂಬ ಪದವು ಅನುವೃತ್ತವಾಗಿವೆ. 'ಅಂಗಸ್ಯ' ಎಂಬುದು ಅಧಿಕಾರ ಸೂತ್ರ.

ಅರ್ಥ–ಸಂಬುದ್ಧಿ ಭಿನ್ನವಾದ ಸರ್ವನಾಮ ಸ್ಥಾನವು ಪರದಲ್ಲಿದ್ದಾಗ 'ನ್' ಕಾರಾಂತ ಅಂಗದ ಉಪಧೆಗೆ ದೀರ್ಘವು ಆದೇಶವಾಗಿ ಬರುತ್ತದೆ. 'ಸರ್ವನಾಮ–ಸ್ಥಾನದ' ಬಗ್ಗೆ 'ಸುಡನಪುಂಸಕಸ್ಯ' ಎಂಬ ಸೂತ್ರದಲ್ಲಿ ಹೇಳಲಾಗಿದೆ.

ಉದಾ:–ಸಖ್ +ಅನ್+ಸ್ ಎಂದಿದ್ದಾಗ, ಸಖಿನ್ ಶಬ್ದವು 'ನ' ಕಾರಾನ್ತವಾದ ಅಂಗವಾಗಿದೆ. ಇದರ ಪರದಲ್ಲಿ ಸಂಬುದ್ಧಿ–ಭಿನ್ನವಾದ ಪ್ರಥಮೈಕ–ವಚನದ 'ಸ್' ಎಂಬುದು ಸರ್ವನಾಮಸ್ಥಾನವಾಗಿದೆ. ಆದ್ದರಿಂದ ಉಪಧಾಭೂತವಾದ 'ಅ–ಕಾರಕ್ಕೆ' ದೀರ್ಘ 'ಆ'ಕಾರವು ಆದೇಶವಾಗಿ ಬಂದು ಸಖಾನ್+ಸ್ ಎಂದಿದ್ದಾಗ–

**(ಅಪೃಕ್ತ ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ –178. ಅಪೃಕ್ತ ಏಕಾಲ್ ಪ್ರತ್ಯಯಃ (1.2.41)**

ವೃತ್ತಿಃ –ಏಕಾಲ್ ಪ್ರತ್ಯಯಃ ಯಃ ಸ ಅಪೃಕ್ತ–ಸಂಜ್ಞಃ ಸ್ಯಾತ್ ।

ಪ. ಛೇ. – ಅಪೃಕ್ತಃ, ಏಕಾಲ್, ಪ್ರತ್ಯಯಃ ।

ಅರ್ಥ– ಒಂದೇ ವರ್ಣವನ್ನು (ಏಕಾಲ್) ಉಳ್ಳ ಪ್ರತ್ಯಯಕ್ಕೆ ಅಪೃಕ್ತವೆಂದು ಹೆಸರು.

ಉದಾ:– ಸಖಾನ್+ಸ್ ಎಂಬಲ್ಲಿ 'ಸ್' ಎಂಬುದು ಪ್ರತ್ಯಯವು. ಅದು 'ಏಕಾಲ್' ಆಗಿಯೂ ಇದೆ. ಆದ್ದರಿಂದ ಅದಕ್ಕೆ 'ಅಪೃಕ್ತ' ಸಂಜ್ಞೆಯು ಬರುತ್ತದೆ.

(ಅಪೃಕ್ತವಾದ ಹಲ್ ವರ್ಣಕ್ಕೆ ಲೋಪವನ್ನು ವಿಧಿಸುವ ಸೂತ್ರ)

ಸೂತ್ರ– 179. ಹಲ್ ಙ್ಯಾಬ್ಭ್ಯೋ ದೀರ್ಘಾತ್ ಸು–ತಿ–ಸ್ಯಪೃಕ್ತಂ ಹಲ್ (6.1.68)

ವೃತ್ತಿಃ –ಹಲಂತಾತ್ ಪರಂ ದೀರ್ಘೌ ಯೌ ಙ್ಯಾಪೌ ತದಂತಾತ್ ಚ ಪರಂ ಸು–ತಿ–ಸಿ ಇತ್ಯೇತತ್ ಅಪೃಕ್ತಂ ಹಲ್ ಲುಪ್ಯತೇ ।

ಪ. ಛೇ. – ಹಲ್ಙ್ಯಾಬ್ಭ್ಯಃ, ಸು–ತಿ–ಸಿ–ಅಪೃಕ್ತಂ, ಹಲ್ ।

ಅ. ವೃ. – 'ಲೋಪೋರ್ವ್ಯೋರ್ವಲಿ' ಎಂಬ ಸೂತ್ರದಿಂದ 'ಲೋಪಃ' ಎಂಬ ಶಬ್ದವು ಅನುವೃತ್ತವಾಗಿದೆ.

ಅರ್ಥ– ಹಲನ್ತ, ಙ್ಯನ್ತ (ಙೀ ಪ್ರತ್ಯಯಾನ್ತ) ಮತ್ತು ಆಬನ್ತ(ಆಪ್ ಪ್ರತ್ಯಯಾನ್ತ) ವಾದ ಅಙ್ಗದ ನಂತರ ಸು–ತಿ–ಮತ್ತು ಸಿ ಎಂಬ ಅಪೃಕ್ತ 'ಹಲ್' ಗಳಿಗೆ ಲೋಪವು ಬರುತ್ತದೆ. ಸೂತ್ರದಲ್ಲಿರುವ 'ಸು'(ಸ್) ಎಂದರೆ ಪ್ರಥಮಾ ವಿಭಕ್ತಿಯ ಏಕವಚನದ 'ಸುಪ್' ಪ್ರತ್ಯಯ. ತಿ ಮತ್ತು ಸಿ ಎಂಬ ಪ್ರತ್ಯಯಗಳು ಕ್ರಮವಾಗಿ ಪ್ರಥಮ ಪುರುಷ ಮತ್ತು ಮಧ್ಯಮ ಪುರುಷದ ಏಕವಚನದ 'ತಿಙ್' ಪ್ರತ್ಯಯಗಳು. ಅಂತ್ಯವಾದ 'ಅಚ್' ವರ್ಣ ಲೋಪವಾದ ಮೇಲೆ ಇವುಗಳಿಗೆ 'ಅಪೃಕ್ತ' ಸಂಜ್ಞೆಯು ಬರುತ್ತದೆ. ಆಗ ಅವುಗಳಿಗೆ ಸ್, ತ್ ಮತ್ತು ಸ್ ಎಂಬ ರೂಪಗಳು ಬರುತ್ತವೆ. 'ಸು' ನಲ್ಲಿರುವ

ಉಕಾರಕ್ಕೆ 'ಉಪದೇಶೇಽಜನುನಾಸಿಕ ಇತ್' ಎಂಬ ಸೂತ್ರದಿಂದ ಲೋಪವು ಬರುತ್ತದೆ. 'ತಿ' ಮತ್ತು 'ಸಿ' ಗಳಲ್ಲಿರುವ ಇ-ಕಾರ ಲೋಪವು 'ಇತಶ್ಚ' ಎಂಬುದರಿಂದ ಆಗುತ್ತದೆ.

ಜೇಪ್, ಜೇಷ್, ಜೇನ್, ಎಂಬ ಪ್ರತ್ಯಯಗಳನ್ನು 'ಜೀ' ಎಂಬ ಶಬ್ದದಿಂದ ಸೂಚಿಸಲಾಗಿದೆ. 'ಆಪ್' ಎಂಬ ಶಬ್ದದಿಂದ ಟಾಪ್, ಡಾಪ್, ಚಾಪ್‌ಗಳನ್ನೂ ಗ್ರಹಿಸಬೇಕು. 'ದೀರ್ಘಾತ್' ಎಂಬ ಶಬ್ದವು 'ಜೀಬಂತ' ಮತ್ತು 'ಆಬಂತ'ಗಳಿಗೆ ವಿಶೇಷಣವಾಗಿದೆ. ವ್ಯಂಜನಗಳಿಗೆ ದೀರ್ಘವು ಇಲ್ಲ.

ಉದಾ:-ಸಖಾನ್+ಸ್ ಎಂದಿದ್ದಾಗ 'ಏಕಾಲ್' ಪ್ರತ್ಯಯವಾದ 'ಸ್' ಎಂಬ ಅಪೃಕ್ತಕ್ಕೆ ಲೋಪವಾಗಿ 'ಸಖಾನ್' ಎಂದು ರೂಪವಾಗುತ್ತದೆ.

**(ಪ್ರಾತಿಪದಿಕದ 'ನ್' ಕಾರಕ್ಕೆ ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ- 180. ನಲೋಪಃ ಪ್ರಾತಿಪದಿಕಾನ್ತಸ್ಯ (8.2.7)**

ವೃತ್ತಿಃ -ಪ್ರಾತಿಪದಿಕ-ಸಂಜ್ಞಕಂ ಯತ್ ಪದಂ, ತದನ್ತಸ್ಯ ನಸ್ಯ ಲೋಪಃ ಸ್ಯಾತ್। ಸಖಾ।

ಅ. ವೃ. - 'ಪದಸ್ಯ' ಎಂಬುದು ಅಧಿಕೃತವಾಗಿರುತ್ತದೆ.

ಅರ್ಥ-ಪ್ರಾತಿಪದಿಕ ಸಂಜ್ಞೆಯನ್ನು ಹೊಂದಿರುವ ಪದದ ಅಂತ್ಯ 'ನ್'ಕಾರಕ್ಕೆ ಲೋಪವು ಬರುತ್ತದೆ.

ಉದಾ:-'ಸಖಾನ್' ಎಂಬುದು ಪದವಾಗಿಯೂ ಇದೆ ಮತ್ತು ಪ್ರಾತಿಪದಿಕ ಸಂಜ್ಞೆಯನ್ನು ಹೊಂದಿದೆ.

ಪ್ರಥಮಾ ವಿಭಕ್ತಿ ಏಕವಚನದಲ್ಲಿ ಸಖಾನ್+ಸ್ ಎಂದಿದ್ದಾಗ, 'ಹಲ್-ಜ್ಯಾಬ್ಭ್ಯೋ ದೀರ್ಘಾತ್ ಸು-ತಿ-ಸ್ಯಪೃಕ್ತಂ ಹಲ್' (6.1.68) ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪ, ಮತ್ತು "ನಲೋಪಃ ಪ್ರಾತಿಪದಿಕಾನ್ತಸ್ಯ (8.2.7)" ಎಂಬ ಸೂತ್ರದಿಂದ'ಸಖಾನ್' ಎಂಬುದರ ಅಂತ್ಯ 'ನ್' ಕಾರಕ್ಕೆ ಲೋಪ ಬಂದು 'ಸಖಾ' ಎಂಬ ಪ್ರಥಮಾ ವಿಭಕ್ತಿಯ ಏಕವಚನದ ರೂಪವು ಸಿದ್ಧವಾಗುತ್ತದೆ.

**(ಣಿದ್ವದ್ಭಾವವನ್ನು ವಿಧಿಸುವ ಸೂತ್ರ)**

**ಸೂತ್ರ- 181. ಸಖ್ಯುರಸಂಬುದ್ಧೌ (7.1.92)**

ವೃತ್ತಿಃ -ಸಖ್ಯುಃ ಅಂಗಾತ್ ಪರಂ ಸಂಬುದ್ಧಿವರ್ಜಂ ಸರ್ವನಾಮಸ್ಥಾನಂ ಣಿದ್ವತ್ ಸ್ಯಾತ್ ।

ಪ. ಛೇ. - ಸಖ್ಯುಃ, ಅಸಂಬುದ್ಧೌ ।

ಅ.ವೃ.-'ಇತೋಽಸರ್ವನಾಮಸ್ಥಾನೇ' ಎಂಬುದರಿಂದ 'ಸರ್ವನಾಮಸ್ಥಾನೇ' ಎಂಬ ಪದವು ಮತ್ತು 'ಗೋತೋಣಿತ್' ಎಂಬುದರಿಂದ 'ಣಿತ್' ಎಂಬ ಪದವು ಅನುವೃತ್ತವಾಗುತ್ತವೆ. 'ಅಂಗಸ್ಯ' ಎಂಬ ಅಧಿಕಾರ ಶಬ್ದವನ್ನು 'ಪಞ್ಚಮ್ಯನ್ತ' ವಿಭಕ್ತಿ ಪರಿಣಾಮದಿಂದ 'ಅಂಗಾತ್' ಎಂದು ಮಾಡಿ ಕೊಳ್ಳಬೇಕು.

ಅರ್ಥ–'ಸಖಿ' ಎಂಬ ಅಂಗದ ಪರದಲ್ಲಿ ಸಂಬುದ್ಧಿಭಿನ್ನವಾದ ಸರ್ವನಾಮಸ್ಥಾನದ ಪ್ರತ್ಯಯವು 'ಣಿತ್' ಗೆ ಸಮಾನವಾಗಿರುತ್ತದೆ. ಅಂದರೆ 'ಣಿತ್' ಪರದಲ್ಲಿದ್ದಾಗ ಯಾವ ಕಾರ್ಯವು ಆಗುತ್ತದೋ ಆ ಕಾರ್ಯವು ಇದಕ್ಕೂ ಆಗುತ್ತದೆ ಎಂದರ್ಥ.

ಉದಾ– (ಪ್ರಥಮಾ ವಿಭಕ್ತಿ ದ್ವಿವಚನದಲ್ಲಿ)ಸಖಿ+ಔ ಎಂದಿದ್ದಾಗ 'ಸಖಿ' ಶಬ್ದದ ಅಂಗದ ಪರದಲ್ಲಿ ಸಂಬುದ್ಧಿ ಭಿನ್ನವಾದ ಸರ್ವನಾಮ ಸ್ಥಾನವಾದ 'ಔ'–ಕಾರವು ಇದೆ. ಇದು 'ಣಿತ್ತಿನ' ಕಾರ್ಯವನ್ನು ಪಡೆಯುತ್ತದೆ. ಈ ಕಾರ್ಯದ ಫಲವು ಮುಂದಿನ ಸೂತ್ರದಿಂದ ತಿಳಿಯಲ್ಪಡುತ್ತದೆ.

### (ವೃದ್ಧಿಯನ್ನು ವಿಧಿಸುವ ಸೂತ್ರ)

**ಸೂತ್ರ– 182. ಅಚೋಞ್ಣಿತಿ (7.2.115)**

ವೃತ್ತಿಃ –ಅಜಂತ–ಅಙ್ಗಸ್ಯ ವೃದ್ಧಿಃ ಞಿತಿ ಣಿತಿ ಚ ಪರೇ । ಸಖಾಯೌ । ಸಖಾಯಃ । ಹೇ ಸಖೇ! ಸಖಾಯಮ್ । ಸಖಾಯೌ । ಸಖೀನ್ । ಸಖ್ಯಾ । ಸಖ್ಯೇ ।

ಪ. ಛೇ. – ಅಚಃ, ಞ್ಣಿತಿ ।

ಅ. ವೃ. –'ಮೃಜೇರ್ವೃದ್ಧಿಃ' ಎಂಬ ಸೂತ್ರದಿಂದ 'ವೃದ್ಧಿಃ' ಎಂಬ ಪದವು ಅನುವೃತ್ತವಾಗುತ್ತದೆ. ಹಾಗೆಯೇ 'ಅಂಗಸ್ಯ' ಎಂಬ ಅಧಿಕಾರ ಸೂತ್ರವೂ ಅನುವೃತ್ತವಾಗುತ್ತದೆ.

ಅರ್ಥ– ಞಿತ್ ಅಥವಾ ಣಿತ್ ಪರದಲ್ಲಿದ್ದಾಗ ಅಜನ್ತಾಂಗಕ್ಕೆ 'ವೃದ್ಧಿಯು' ಬರುತ್ತದೆ. ಅಲೋಽನ್ತ್ಯಸ್ಯ ಎಂಬ ಪರಿಭಾಷೆಯಿಂದ ಅಂಗದ ಕೊನೆಯ ವರ್ಣಕ್ಕೆ ವೃದ್ಧಿಯು ಆದೇಶವಾಗಿ ಬರುತ್ತದೆ.

ಉದಾ:– ಪ್ರಥಮಾ–ದ್ವಿವಚನದಲ್ಲಿ ಸಖಾಯೌ ಎಂಬಲ್ಲಿ, ಸಖಿ+ಔ ಎಂದಿದ್ದಾಗ ಣಿದ್ವದ್ಭಾವವನ್ನು ಹೊಂದಿರುವ 'ಔ' ಪ್ರತ್ಯಯವು ಪರದಲ್ಲಿರುವುದರಿಂದ 'ಇ'ಕಾರಕ್ಕೆ 'ಐ' ಕಾರರೂಪವಾದ ವೃದ್ಧಿ ಬಂದು ಸಖೈ+ಔ ಎಂದಿದ್ದಾಗ, 'ಏಚೋಽಯವಾಯಾವಃ' ಎಂಬುದರಿಂದ 'ಆಯ್' ಆದೇಶವಾಗಿ ಸಖಾಯ್+ಔ='ಸಖಾಯೌ' ಎಂದು ರೂಪವಾಗುತ್ತದೆ.

ಪ್ರಥಮಾ–ಬಹುವಚನದಲ್ಲಿ ಸಖಾಯಃ ಎಂಬಲ್ಲಿ, ಸಖಿ+ಅಸ್ (ಜಸ್)>ಸಖೈ+ಅಸ್, ಸಖಾಯ್+ಅಸ್>ಸಖಾಯಸ್ ಎಂದಾಗಿ, ರುತ್ವ ವಿಸರ್ಗಗಳಿಂದ ಸಖಾಯಃ ಎಂದಾಗುತ್ತದೆ.

ಸಂಬೋಧನ–ಪ್ರಥಮಾ ಏಕವಚನದಲ್ಲಿ, ಹೇ ಸಖೇ! ಎಂಬಲ್ಲಿ (ಹರಿ–ಶಬ್ದದಂತೆ) ಸಖಿ+ಸ್ ಎಂದಿದ್ದಾಗ 'ಹ್ರಸ್ವಸ್ಯ ಗುಣಃ' ಎಂಬ ಸೂತ್ರದಿಂದ 'ಇ' ಕಾರಕ್ಕೆ 'ಏ'ಕಾರ ರೂಪ ಗುಣ ಬಂದು ಸಖೇ+ಸ್ ಎಂದಿದ್ದಾಗ 'ಏಙ್ಹ್ರಸ್ವಾತ್ ಸಂಬುದ್ಧೇಃ' ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪವಾಗಿ ಹೇ ಸಖೇ! ಎಂದು ರೂಪವಾಗುತ್ತದೆ.

ದ್ವಿತೀಯಾ–ವಿಭಕ್ತಿ–ಏಕವಚನದಲ್ಲಿ– ಸಖಿ+ಅಮ್ ಎಂದಿದ್ದಾಗ ಸರ್ವನಾಮ–

ಸ್ಥಾನ-ಸಂಜ್ಞೆಯುಳ್ಳ ಅಮ್ ಗೆ ಣಿದ್ವದ್ಭಾವ ಬಂದು, ಸಖ್+ಇ+ಅಮ್ ಎಂದಿದ್ದಾಗ, 'ಇ'ಕಾರಕ್ಕೆ 'ಐ'ರೂಪವಾದ ವೃದ್ಧಿ ಆದೇಶವಾಗಿ ಬಂದು ಸಖ್+ಐ+ಅಮ್ ಎಂದಿದ್ದಾಗ, 'ಐ' ಗೆ 'ಆಯ್' ಆದೇಶ ಬಂದು ಸಖ್+ಆಯ್+ಅಮ್=ಸಖಾಯಮ್ ಎಂದಾಗುತ್ತದೆ.

ದ್ವಿತೀಯಾ ವಿಭಕ್ತಿಯ ದ್ವಿವಚನವು ಪ್ರಥಮಾ ವಿಭಕ್ತಿ ದ್ವಿವಚನದಂತೆ ಸಖಾಯೌ ಎಂದಿರುವುದು.

ದ್ವಿತಿಯಾ ವಿಭಕ್ತಿ ಬಹುವಚನದಲ್ಲಿ ಸಖಿ+ಅಸ್ (ಶಸ್) ಎಂದಿದ್ದಾಗ, ಪೂರ್ವಸವರ್ಣ-ದೀರ್ಘ ಬಂದು ಸಖೀಸ್ ಎಂದಾಗಿ 'ತಸ್ಮಾಚ್ಛಸೋ ನಃ ಪುಂಸಿ ಎಂಬ ಸೂತ್ರದಿಂದ 'ಸ್' ಕಾರಕ್ಕೆ 'ನ್' ಕಾರ ಬಂದು ಸಖೀನ್ ಎಂದಾಗುತ್ತದೆ. 'ಶಸ್' ಎಂಬುದು ಸರ್ವನಾಮ ಸ್ಥಾನವಾಗದಿರುವುದರಿಂದ ಣಿದ್ವದ್ಭಾವವು ಬಂದಿಲ್ಲ.

ತೃತಿಯಾ ವಿಭಕ್ತಿ ಏಕವಚನದಲ್ಲಿ ಸಖಿ+ಆ (ಟಾ) ಎಂದಿದ್ದಾಗ ಯಣಾದೇಶವು ಬಂದು ಸಖ್ಯಾ ಎಂದಾಗುತ್ತದೆ. ಸಖಿ ಶಬ್ದಕ್ಕೆ 'ಘಿ' ಸಂಜ್ಞೆ ಬಾರದಿರುವುದರಿಂದ 'ಆಙೋನಾಽಸ್ತ್ರಿಯಾಮ್' ಎಂಬ ಸೂತ್ರದಿಂದ 'ಟಾ' ಗೆ 'ನಾ' ಆದೇಶವು ಬರಲಿಲ್ಲ.

ತೃತೀಯಾ ದ್ವಿವಚನದಲ್ಲಿ ಸಖಿಭ್ಯಾಂ ಎಂದೂ, ಮತ್ತು ಬಹುವಚನದಲ್ಲಿ ಸಖಿಭಿಃ ಎಂದೂ ಆಗುತ್ತದೆ.

ಚತುರ್ಥೀ ಏಕವಚನದಲ್ಲಿ ಸಖ್ಯೇ ಎಂಬಲ್ಲಿ ಸಖಿ+ಏ (ಙೇ) ಎಂದಿದ್ದಾಗ ಯಣಾದೇಶ ಬಂದು ಸಖ್ಯೇ ಎಂದಾಗುತ್ತದೆ. ಇಲ್ಲಿಯೂ 'ಘಿ' ಸಂಜ್ಞಾ ಬಾರದಿರುವುದರಿಂದ ಗುಣಬಂದಿಲ್ಲ.

ಚತುರ್ಥೀ ದ್ವಿವಚನದಲ್ಲಿ ಸಖಿ+ಭ್ಯಾಮ್=ಸಖಿಭ್ಯಾಮ್, ಬಹುವಚನದಲ್ಲಿ ಸಖಿ+ಭ್ಯಸ್ ಎಂದಿದ್ದಾಗ 'ಸ್' ಕಾರಕ್ಕೆ ರುತ್ವ-ವಿಸರ್ಗಗಳಾಗಿ ಸಖಿಭ್ಯಃ ಎಂದಾಗುತ್ತದೆ.

**(ಙಸಿ, ಙಸ್‌ಗಳ ಖ್ಯ-ಕಾರೋತ್ತರ ಅಕಾರಕ್ಕೆ ಉತ್ವವನ್ನು ವಿಧಿಸುವ ಸೂತ್ರ)**

**ಸೂತ್ರ- 183. ಖ್ಯತ್ಯಾತ್ ಪರಸ್ಯ (6.1.112)**

ವೃತ್ತಿಃ- ಖಿ-ತಿ-ಶಬ್ದಾಭ್ಯಾಂ ಖೀ-ತೀ-ಶಬ್ದಾಭ್ಯಾಂ ಕೃತ-ಯಣಾದೇಶಾಭ್ಯಾಂ ಪರಸ್ಯ ಙಸಿ-ಙಸೋಃ ಅತಃ ಉಃ । ಸಖ್ಯುಃ ।

ಪ. ಛೇ. - ಖ್ಯತ್ಯಾತ್, ಪರಸ್ಯ ।

ಅ.ವ್ಯ.- 'ಏಙಃ ಪದಾನ್ತಾದತಿ' ಎಂಬ ಸೂತ್ರದಿಂದ 'ಅತಃ' ಎಂಬ ಪದವು ವಿಭಕ್ತಿ- ವಿಪರಿಣಾಮವಾಗಿ ಅನುವೃತ್ತವಾಗಿರುತ್ತದೆ. 'ಙಸಿಙಸೋಶ್ಚ' ಎಂಬುದರಿಂದ ಙಸಿ ಮತ್ತು ಙಸೋಃ ಎಂಬುದೂ ಅನುವೃತ್ತವಾಗಿದೆ. ಇಲ್ಲಿ ಙಸಿ-ಙಸೋಃ ಎಂಬಲ್ಲಿ ಅವಯವಾರ್ಥದಲ್ಲಿ ಷಷ್ಠೀ-ವಿಭಕ್ತಿಯು ಇರುವುದು. ಅವಯವವೆಂದರೆ, ಙಸಿ-ಙಸ್‌ಗಳಲ್ಲಿ ಇರುವ ಹ್ರಸ್ವ ಅಕಾರವೆಂದರ್ಥ. ಇದಕ್ಕೆ 'ಋತ ಉತ್' ಎಂಬ ಸೂತ್ರದಿಂದ ಅನುವೃತ್ತವಾದ 'ಉ'ಕಾರವು ಆದೇಶವಾಗಿ ಬರುತ್ತದೆ.

ಅರ್ಥ- ಯಣಾದೇಶವನ್ನು ಮಾಡಿದ ಖಿ, ತಿ ಮತ್ತು ಖೀ, ತೀ ಶಬ್ದಗಳಿಗಿಂತ

ಅಂದರೆ ಯಣಾದೇಶವನ್ನು ಮಾಡಿದ ನಂತರ ಸಿಗುವ ಖ್ಯ ಮತ್ತು ತ್ಯ ಇವುಗಳ ಪರದಲ್ಲಿರುವ ಙಸಿ, ಮತ್ತು ಙಸ್ ಗಳ ಅಕಾರಕ್ಕೆ ಉಕಾರವು ಆದೇಶವಾಗಿ ಬರುವುದು.

[ಮೇಲೆ ಹೇಳಿದ್ದನ್ನೇ ವಿಸ್ತಾರವಾಗಿ ಹೇಳುವುದಾದರೆ– ಖಿ ಮತ್ತು ಖೀ ಶಬ್ದಗಳ ನಂತರ ಇರುವ ಹ್ರಸ್ವ ಇ ಕಾರ ಮತ್ತು ದೀರ್ಘ ಈ ಕಾರಗಳ ಪರದಲ್ಲಿ ಙಸಿ ಅಥವಾ ಙಸ್‌ಗಳು ಪರವಾದಾಗ ಅವುಗಳಲ್ಲಿರುವ ಅಕಾರಗಳು ಯಣಾದೇಶಕ್ಕೆ ನಿಮಿತ್ತಗಳಾಗಿವೆ. ಯಣಾದೇಶಗಳು ಬಂದನಂತರ ಖ್ಯ ಮತ್ತು ಖ್ಯಾ ಎಂದಾಗುತ್ತವೆ. ಈ ಯಣಾದೇಶಕ್ಕೆ ನಿಮಿತ್ತಗಳಾದ ಙಸಿ ಹಾಗೂ ಙಸ್ ಗಳಲ್ಲಿರುವ ಅ ಕಾರಗಳಿಗೆ ಉ ಕಾರಗಳು ಆದೇಶಗಳಾಗಿ ಬರುತ್ತವೆ. ಇಲ್ಲಿ ಖಿ ಮತ್ತು ಖೀ ಎಂದರೆ ಸಖಿ ಮತ್ತು ಸಖೀ ಶಬ್ದಗಳಲ್ಲಿರುವ ಖಿ ಮತ್ತು ಖೀ ಗಳನ್ನು ತೆಗೆದುಕೊಳ್ಳಬೇಕು].

ಪಂಚಮೀ ವಿಭಕ್ತಿಯ ಏಕವಚನದಲ್ಲಿ ಸಖ್ಯುಃ ಎಂಬಲ್ಲಿ ಸಖಿ+ಅಸ್ (ಙಸ್) ಎಂದಿದ್ದಾಗ ಇ ಕಾರಕ್ಕೆ ಯಣಾದೇಶವಾಗಿ ಸಖ್ಯ+ಸ್ ಎಂದಿದ್ದಾಗ, ಪ್ರಕೃತ ಸೂತ್ರದಿಂದ ಖ್ಯ ರೂಪವಾದ ಖಿ ಶಬ್ದದ ಪರದಲ್ಲಿರುವ ಙಸಿ ಯಲ್ಲಿರುವ 'ಅ' ಕಾರಕ್ಕೆ ಉ ಕಾರವು ಬಂದು ಸಖ್ಯುಸ್ ಎಂದಿರುವಾಗ 'ಸ್' ಕಾರಕ್ಕೆ ರುತ್ವ ವಿಸರ್ಗಗಳು ಬಂದು ಸಖ್ಯುಃ ಎಂದು ರೂಪವಾಗುತ್ತದೆ.

ಇದೇ ರೀತಿಯಲ್ಲಿ ಷಷ್ಠೀವಿಭಕ್ತಿಯ ಏಕವಚನದಲ್ಲಿ – ಸಖಿ+ಅಸ್ (ಙಸಿ) ಎಂದಿದ್ದಾಗ ಮೇಲಿನ ಪ್ರಕ್ರಿಯೆಯಂತೆ ಸಖ್ಯುಃ ಎಂದು ರೂಪವು ಸಿದ್ಧಿಸುತ್ತದೆ.

ತಿ ಮತ್ತು ತೀ ಶಬ್ದಗಳಿಗೂ ಮೇಲೆ ಹೇಳಿದ ಪ್ರಕ್ರಿಯೆಯಂತೆ ತ್ಯ ಎಂದಿದ್ದಾಗ ಪರದಲ್ಲಿರುವ ಙಸಿ–ಙಸ್‌ಗಳಲ್ಲಿರುವ ಯಣ್ ನಿಮಿತ್ತಕವಾದ 'ಅ' ಕಾರಕ್ಕೆ ಉ ಕಾರವು ಬಂದು ರುತ್ವ–ವಿಸರ್ಗಗಳಿಂದ ತ್ಯುಃ ಎಂದಾಗುವುದು.

ದೀರ್ಘಾನ್ತ ಖೀ ಮತ್ತು ತೀ ಗಳಿಗೆ ಉದಾಹರಣೆಯು ಸುಖೀ(ಸುಖವನ್ನು ಇಚ್ಛಿಸುವವನು) – ಸುಖ್ಯುಃ, ಸುತೀ (ಮಗನನ್ನು ಇಚ್ಛಿಸುವವನು)– ಸುತ್ಯುಃ ಎಂದು ತಿಳಿಯಬೇಕು.

**(ಔ ಕಾರವನ್ನು ಆದೇಶವಾಗಿ ವಿಧಿಸುವ ಸೂತ್ರ)**

**ಸೂತ್ರ – 184. ಔತ್ (7.3.118)**

ವೃತ್ತಿಃ– ಇತಃ ಪರಸ್ಯ ಙೇಃ ಔತ್ । ಸಖ್ಯೌ । ಶೇಷಂ ಹರಿವತ್ ।

ಅ.ವೃ– 'ಇದುದ್ಭ್ಯಾಂ' ಎಂಬ ಸೂತ್ರದಿಂದ 'ಇದುದ್ಭ್ಯಾಂ' ಎಂಬ ಪದವು ಅನುವೃತ್ತವಾಗುತ್ತದೆ. ಹಾಗೆಯೇ 'ಙೇರಾಮ್ ನದ್ಯಾಮ್‌ನೀಭ್ಯಃ' ಎಂಬ ಸೂತ್ರದಿಂದ ಙೇಃ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– ಹ್ರಸ್ವ ಇ ಕಾರ ಮತ್ತು ಉ ಕಾರಗಳ ಪರದಲ್ಲಿರುವ 'ಙೇ' ದ ಸ್ಥಾನದಲ್ಲಿ 'ಔ' ಕಾರವು ಆದೇಶವಾಗಿ ಬರುತ್ತದೆ.

ಉದಾ:–ಸಪ್ತಮೀ ವಿಭಕ್ತಿಯ ಏಕವಚನದಲ್ಲಿ ಸಖಿ+ಇ (ಙಿ) ಎಂದಿದ್ದಾಗ ಇ

ಕಾರದ ಸ್ಥಾನದಲ್ಲಿ ಪ್ರಕೃತ ಸೂತ್ರದಿಂದ 'ಔ' (ಔತ್) ಕಾರವು ಆದೇಶವಾಗಿ ಬಂದು ಸಖಿ+ಔ ಎಂದಿದ್ದಾಗ ಇ ಕಾರಕ್ಕೆ ಯಣಾದೇಶ ಬಂದು ಸಖ್ಯ+ಔ=ಸಖ್ಯೌ ಎಂದು ರೂಪವಾಗುತ್ತದೆ. ಇದರ ಉಳಿದ ರೂಪಗಳು 'ಹರಿ' ಶಬ್ದದಂತೆ ಇರುತ್ತವೆ.

**(ಘಿ-ಸಂಜ್ಞಾ ವಿಧಾಯಕ ಸೂತ್ರ)**

**ಸೂತ್ರ- 185. ಪತಿಃ ಸಮಾಸ ಏವ (1.4.8)**

ವೃತ್ತಿಃ- ಪತಿ-ಶಬ್ದಃ ಸಮಾಸ ಏವ ಘಿ-ಸಂಜ್ಞಃ । ಪತ್ಯಾ । ಪತ್ಯೇ । ಪತ್ಯುಃ, ಪತ್ಯುಃ । ಪತ್ಯೌ । ಶೇಷಂ ಹರಿವತ್ । ಸಮಾಸೇ ತು ಭೂಪತಯೇ । ಕತಿ-ಶಬ್ದಃ ನಿತ್ಯಂ ಬಹುವಚನಾನ್ತಃ ।

ಪ. ಛೇ. -ಪತಿಃ, ಸಮಾಸೇ, ಏವ ।

ಅ. ವೃ. -'ಶೇಷೋಘ್ಯಸಖಿ' ಎಂಬ ಸೂತ್ರದಿಂದ 'ಘಿ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- 'ಪತಿ' ಶಬ್ದವು ಸಮಾಸದಲ್ಲಿ ಮಾತ್ರ 'ಘಿ' ಸಂಜ್ಞೆಯನ್ನು ಪಡೆಯುತ್ತದೆ. ಅಂದರೆ ಕೇವಲ ಪತಿ ಶಬ್ದಕ್ಕೆ ಸಂಜ್ಞೆಯು ಇರುವುದಿಲ್ಲ. 'ಘಿ' ಸಂಜ್ಞಾ ಕಾರ್ಯಗಳು ಮೂರು ಸಂದರ್ಭಗಳಲ್ಲಿ ಅಗುತ್ತವೆ.

1. ಟಾಗೆ 'ನಾ' ಆದೇಶವು ಬರುವುದು (ಆಙೋನಾಽಸ್ತ್ರೀಯಾಮ್) ಎಂಬ ಸೂತ್ರದಿಂದ 'ಘಿ' ಸಂಜ್ಞಾ ಇದ್ದಾಗ ಮಾತ್ರ ಬರುತ್ತದೆ.
2. ಙೇ, ಙಸಿ ಮತ್ತು ಙಸ್ ಗಳಿದ್ದಾಗ ಗುಣ ಬರುವುದು 'ಘೇರ್ಙಿತಿ' ಎಂಬ ಸೂತ್ರದಿಂದ 'ಘಿ' ಸಂಜ್ಞಾ ಇದ್ದಾಗ ಮಾತ್ರ.
3. 'ಘಿ' ಸಂಜ್ಞಾ ಇದ್ದಾಗ ಮಾತ್ರ, 'ಔತ್' ಮತ್ತು 'ಅಚ್ಚಘೇಃ' ಎಂಬ ಸೂತ್ರಗಳಿಂದ ಕ್ರಮವಾಗಿ 'ಙಿ'ಗೆ 'ಔ' ಕಾರವೂ ಮತ್ತು 'ಇ'ಕಾರಕ್ಕೆ 'ಅ'ಕಾರವೂ ಆದೇಶವಾಗಿ ಬರುತ್ತವೆ.

ಸಮಾಸವಿಲ್ಲದ ಪಕ್ಷದಲ್ಲಿ ಪತಿ ಶಬ್ದಕ್ಕೆ 'ಘಿ' ಸಂಜ್ಞಾ ನಿಮಿತ್ತಕವಾದ ಕಾರ್ಯವು ಬರುವುದಿಲ್ಲಾ. ಆದ್ದರಿಂದ ತೃತೀಯಾ ಏಕವಚನದಲ್ಲಿ ಪತಿ+ಟಾ ಎಂದಿರುವಾಗ ಯಣಾದೇಶದಿಂದ ಪತ್ಯಾ ಎಂದಾಗಿದೆ.

ಚತುರ್ಥೀ ಏಕವಚನದಲ್ಲಿ ಪತಿ+ಙೇ ಎಂದಿರುವಾಗ, ಯಣಾದೇಶದಿಂದ ಪತ್ಯೇ ಎಂದಾಗುತ್ತದೆ.

ಪಞ್ಚಮೀ ಮತ್ತು ಷಷ್ಠೀ ಏಕವಚನಗಳಲ್ಲಿ ಕ್ರಮವಾಗಿ ಪತಿ+ಙಸಿ=ಪತ್ಯಸ್, ಮತ್ತು ಪತಿ+ಙಸ್ (ಪತ್ಯಸ್) ಎಂದಿದ್ದಾಗ, 'ಖ್ಯತ್ಯಾತ್ ಪರಸ್ಯ' ಎಂಬ ಸೂತ್ರದಿಂದ 'ತ್ಯ' ಗಳಲ್ಲಿರುವ 'ಅ' ಕಾರಗಳಿಗೆ 'ಉ'ಕಾರಗಳು ಬಂದು ಯಣಾದೇಶ ಮತ್ತು ರುತ್ವ-ವಿಸರ್ಗಗಳಿಂದ ಪತ್ಯುಃ ಎಂಬ ರೂಪಗಳನ್ನು ಪಡೆಯುತ್ತವೆ.

ಸಪ್ತಮೀ ಏಕವಚನದಲ್ಲಿ ಪತಿ+ಙಿ ಎಂದಿದ್ದಾಗ 'ಔತ್' ಎಂಬುದರಿಂದ 'ಔ'ಕಾರವು

ಆದೇಶವಾಗಿ ಬಂದು ಯಣಾದೇಶದಿಂದ ಪತ್ಯೌ ಎಂದಾಗಿದೆ.

ಉಳಿದ ರೂಪಗಳು ಹರಿ ಶಬ್ದದಂತೆ ಆಗುತ್ತವೆ.

ಸಮಾಸದಲ್ಲಿಯಾದರೋ ರಮಾಯಾಃ ಪತಿಃ=ರಮಾಪತಿಃ ಎಂದಾಗಿ ಪತಿ ಶಬ್ದಕ್ಕೆ 'ಘಿ' ಸಂಜ್ಞೆ ಬಂದು ತನ್ನಿಮಿತ್ತವಾದ ಕಾರ್ಯಗಳು ಆಗುತ್ತವೆ.

ರಮಾಪತಿ+ಆ (ಟಾ)=ರಮಾಪತಿ+ನಾ (ಆಙೋನಾऽಸ್ತ್ರಿಯಾಮಾ)=ರಮಾಪತಿನಾ ಇಲ್ಲಿ ಪತಿ ಶಬ್ದಕ್ಕೆ 'ಘಿ' ಸಂಜ್ಞೆಯು ಬಂದಿದೆ.

ಚತುರ್ಥೀ ಏಕವಚನದಲ್ಲಿ ರಮಾಪತಿ+ಙೇ ಎಂದಿದ್ದಾಗ ರಮಾಪತಿ+ಏ ಎಂದಾಗಿ ಘಿ ನಿಮಿತ್ತಕವಾದ 'ಇ' ಕಾರಕ್ಕೆ ಗುಣ (ಅದಕ್ಕೆ 'ಏ' ಕಾರ) ಬಂದು ಅದಕ್ಕೆ 'ಅಯ್' ಆದೇಶವಾಗಿ ಬಂದು ರಮಾಪತಯ್+ಏ=ರಮಾಪತಯೇ ಎಂದಾಗಿದೆ.

ವೃತ್ತಿಯಲ್ಲಿ ಹೇಳಿರುವ ಭೂಪತಿ–ಶಬ್ದವೂ 'ರಮಾಪತಿ' ಶಬ್ದದಂತೆಯೇ ರೂಪಗಳನ್ನು ತಾಳುತ್ತದೆ.

(ಕತಿ ಶಬ್ದದ ವಿವರಣೆ) 'ಕತಿ' ಶಬ್ದವು ನಿತ್ಯಬಹುವಚನಾಂತವಾಗಿದೆ.

**(ಸಂಖ್ಯಾ ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ – 186. ಬಹು–ಗಣ–ವತು–ಡತಿ ಸಂಖ್ಯಾ (1.1.23)**

ವೃತ್ತಿಃ– ಏತೇ ಶಬ್ದಾಃ ಸಂಖ್ಯಾ–ಸಂಜ್ಞಾಃ ಸ್ಯುಃ।

ಅರ್ಥ– ಬಹು ಮತ್ತು ಗಣ ಶಬ್ದಗಳು ಹಾಗೆಯೇ ವತು ಮತ್ತು ಡತಿ ಪ್ರತ್ಯಯಾಂತ ಶಬ್ದಗಳು ಸಂಖ್ಯಾ ಎಂಬ ಸಂಜ್ಞೆಯನ್ನು ಪಡೆಯುತ್ತವೆ.

ಪ್ರಕೃತ 'ಕತಿ' ಶಬ್ದವು ಡತಿ ಪ್ರತ್ಯಯವಾಗುವುದರಿಂದ ಇದಕ್ಕೆ 'ಸಂಖ್ಯಾ' ಎಂಬ ಸಂಜ್ಞೆಯು ಬಂದಿದೆ.

**('ಷಟ್' ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ – 187. ಡತಿ ಚ (1.1.25)**

ವೃತ್ತಿಃ – ಡತ್ಯನ್ತಾ ಸಂಖ್ಯಾ ಷಟ್ ಸಂಜ್ಞಾ ಸ್ಯಾತ್।

ಅ.ವೃ–'ಷ್ಣಾಂತಾ ಷಟ್' ಎಂಬ ಸೂತ್ರದಿಂದ 'ಷಟ್' ಎಂಬ ಪದವು. ಬಹು–ಗಣ–ವತು–ಡತಿ ಸಂಖ್ಯಾ (1.1.23) ಎಂಬುದರಿಂದ ಸಂಖ್ಯಾ ಎಂಬ ಪದವು ಅನುವೃತ್ತವಾಗುತ್ತವೆ.

ಅರ್ಥ–'ಡ'ತ್ಯಂತವಾದ, ಸಂಖ್ಯಾ ಸಂಜ್ಞೆಯನ್ನು ಪಡೆದಿರುವ ಶಬ್ದವೂ 'ಷಟ್' ಎಂಬ ಸಂಜ್ಞೆಯನ್ನು ಪಡೆಯುತ್ತದೆ. 'ಕತಿ' ಶಬ್ದವು 'ಡತಿ' ಪ್ರತ್ಯಯಾನ್ತವಾಗಿ ಸಂಖ್ಯಾವಾಚಕವಾಗಿರುವುದರಿಂದ, ಆ ಪದವು 'ಷಟ್' ಸಂಜ್ಞೆಯನ್ನು ಹೊಂದಿರುತ್ತದೆ. ಇದರ ಉಪಯೋಗವು ಮುಂದಿನ ಸೂತ್ರದಲ್ಲಿ ತಿಳಿಸಲಾಗಿದೆ.

**(ಜಸ್ ಮತ್ತು ಶಸ್-ಗಳಿಗೆ ಲುಕ್(ಲೋಪ) – ಹೇಳುವ ಸೂತ್ರ)**

**ಸೂತ್ರ- 188. ಷಡ್ಭ್ಯೋ ಲುಕ್ (7.1.22)**

ವೃತ್ತಿಃ- ಷಡ್ಭ್ಯಃ ಪರಯೋಃ ಜಶ್-ಶಸೋಃ ಲುಕ್ ಸ್ಯಾತ್।

ಪ. ಛೇ. – ಷಡ್ಭ್ಯಃ, ಲುಕ್।

ಅ. ವ್ಯ. –'ಜಶ್ಶಸೋಃ ಶಿಃ' ಎಂಬ ಸೂತ್ರದಿಂದ 'ಜಸ್' ಮತ್ತು 'ಶಸ್' ಎಂಬ ಪದಗಳು ಅನುವೃತ್ತವಾಗಿ ಬರುತ್ತವೆ.

ಅರ್ಥ-'ಷಟ್' ಸಂಜ್ಞಕ ಶಬ್ದದ ಅಂಗದ ಪರದಲ್ಲಿರುವ ಜಸ್, ಶಸ್ ಗಳಿಗೆ 'ಲುಕ್'(ಲೋಪ) ಬರುತ್ತದೆ.

ಕತಿ ಶಬ್ದವು ಷಟ್ ಸಂಜ್ಞಕವಾಗಿದೆ. ಅದರ ಜಸ್-ಶಸ್ ಗಳಿಗೆ ಲೋಪ ಬಂದು ಎರಡೂ ರೂಪಗಳು 'ಕತಿ' ಎಂದೇ ಆಗುತ್ತವೆ.

**(ಲುಕ್-ಶ್ಲು-ಲುಪ್ (ಲೋಪ)ಗಳನ್ನು ಹೇಳುವ ಸೂತ್ರ)**

**ಸೂತ್ರ- 189. ಪ್ರತ್ಯಯಸ್ಯ ಲುಕ್-ಶ್ಲು-ಲುಪಃ (1.1.61)**

ವೃತ್ತಿಃ- ಲುಕ್-ಶ್ಲು-ಲುಪ್-ಶಬ್ದೈಃ ಕೃತಂ ಪ್ರತ್ಯಯ-ಅದರ್ಶನಂ ಕ್ರಮಾತ್ ತತ್-ತತ್ ಸಂಜ್ಞಂ ಸ್ಯಾತ್।

ಅ. ವ್ಯ. –'ಅದರ್ಶನಂ ಲೋಪಃ' ಎಂಬ ಸೂತ್ರದಿಂದ 'ಅದರ್ಶನಂ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- ಲುಕ್, ಶ್ಲು ಮತ್ತು ಲುಪ್ ಶಬ್ದಗಳಲ್ಲಿ, ಯಾವ ಒಂದು ಶಬ್ದವನ್ನು ಉಚ್ಚರಿಸುವುದರಿಂದ ಯಾವ ಪ್ರತ್ಯಯದ ಅದರ್ಶನವು ಆಗುತ್ತದೆಯೋ, ಆ ಆದರ್ಶನಕ್ಕೆ ಕ್ರಮವಾಗಿ ಲುಕ್, ಶ್ಲು ಮತ್ತು ಲುಪ್ ಸಂಜ್ಞೆಗಳಾಗುತ್ತವೆ.

ಉದಾ:- 'ಕತಿ' ಎಂಬಲ್ಲಿ 'ಜಸ್' ಪ್ರತ್ಯಯದ ಲೋಪವು 'ಷಡ್ಭ್ಯೋ ಲುಕ್' ಎಂಬುದರಿಂದ ಲುಕ್ ಶಬ್ದದ ಮುಖಾಂತರವಾಗಿದೆ. ಆದ್ದರಿಂದ ಈ ಲೋಪಕ್ಕೆ ಲುಕ್ ಸಂಜ್ಞೆ ಬಂದಿದೆ. ಕತಿ ಶಬ್ದದ ಬಹುವಚನದ ರೂಪವು ಕತಿ ಎಂದೇ ಆಗುತ್ತದೆ.

**(ಪ್ರತ್ಯಯದ ಲಕ್ಷಣವನ್ನು ವಿಧಿಸುವ ಸೂತ್ರ)**

**ಸೂತ್ರ- 190. ಪ್ರತ್ಯಯಲೋಪೇ ಪ್ರತ್ಯಯಲಕ್ಷಣಮ್ (1.1.62)**

ವೃತ್ತಿಃ- ಪ್ರತ್ಯಯೇ ಲುಪ್ತೇಽಪಿ ತದಾಶ್ರಿತಂ ಕಾರ್ಯಂ ಸ್ಯಾತ್। ಇತಿ "ಜಸಿ ಚ" (7.3.109) ಇತಿ ಗುಣೇ ಪ್ರಾಪ್ತೇ-

ಅರ್ಥ-ಪ್ರತ್ಯಯದ ಲೋಪವಾದ ಮೇಲೆ, ಆ ಪ್ರತ್ಯಯವನ್ನು ಆಶ್ರಯಿಸಿ ಬರುವ ಕಾರ್ಯವು ಬರುತ್ತದೆ. ಈ ನಿಯಮಕ್ಕನುಸಾರವಾಗಿ ಕತಿ ಶಬ್ದದ ಪರದಲ್ಲಿರುವ ಜಸ್ ಗೆ ಲೋಪವು ಬಂದ ಮೇಲೆ, ಲುಪ್ತವಾದ ಆ ಜಸ್ ಪ್ರತ್ಯಯದ ನಿಮಿತ್ತಕವಾದ 'ಜಸಿಚ' ಎಂಬ ಸೂತ್ರದಿಂದ ಬರುವ ಗುಣರೂಪ ಕಾರ್ಯವು ಬರುತ್ತಿರಲು ಅದರ ನಿಷೇಧವನ್ನು ಮುಂದಿನ ಸೂತ್ರವು ಮಾಡುತ್ತಿದೆ.

## (ಪ್ರತ್ಯಯ ಲಕ್ಷಣ ನಿಷೇಧ ಸೂತ್ರ)

**ಸೂತ್ರ– 191. ನ ಲುಮತಾಙ್ಗಸ್ಯ (1.1.63)**

ವೃತ್ತಿಃ– ಲುಮತಾ–ಶಬ್ದೇನ ಲುಪ್ತೇ, ತನ್ನಿಮಿತ್ತಂ ಅಙ್ಗಕಾರ್ಯಂ ನ ಸ್ಯಾತ್। ಕತಿ, ಕತಿ। ಕತಿಭಿಃ। ಕತಿಭ್ಯಃ। ಕತಿಭ್ಯಃ। ಕತೀನಾಮ್। ಕತಿಷು। 0ಯುಷ್ಮದ್–ಅಸ್ಮದ್–ಷಟ್ ಸಂಜ್ಞಕಾಃ ತ್ರಿಷು ಸರೂಪಾಃ। ತ್ರಿ ಶಬ್ದಃ ನಿತ್ಯಂ ಬಹುವಚನಾನ್ತಃ। ತ್ರಯಃ। ತ್ರೀನ್। ತ್ರಿಭಿಃ। ತ್ರಿಭ್ಯಃ। ತ್ರಿಭ್ಯಃ।

ಪ. ಛೇ. – ನ, ಲುಮತಾ, ಅಂಗಸ್ಯ ।

ಅ. ವೃ. –'ಪ್ರತ್ಯಯ–ಲೋಪೇ ಪ್ರತ್ಯಯಲಕ್ಷಣಂ' ಎಂಬ ಸೂತ್ರವು ಅನುವೃತ್ತವಾಗುತ್ತದೆ.

ಅರ್ಥ–'ಲು' (ಲುಕ್, ಶ್ಲು, ಲುಪ್) ವನ್ನು ಉಳ್ಳ ಶಬ್ದದಿಂದ ಪ್ರತ್ಯಯದ ಅದರ್ಶನವಾದ ಮೇಲೆ, ಅದನ್ನು (ಲೋಪವಾದದ್ದನ್ನು) ನಿಮಿತ್ತ ಮಾಡಿಕೊಂಡು ಬರುವ ಅಂಗಕ್ಕೆ ಸಂಬಂಧಿಸಿದ ಕಾರ್ಯವು ಆಗುವುದಿಲ್ಲ.

ಉದಾ:–ಕತಿ=ಕಿಂ ಶಬ್ದಕ್ಕೆ 'ಡತಿ' ಪ್ರತ್ಯಯವು ಬಂದು ಕತಿ ಎಂದಾಗಿದೆ. ಇದಕ್ಕೆ ಪ್ರಥಮಾ ಬಹುವಚನದಲ್ಲಿ 'ಜಸ್' ಪ್ರತ್ಯಯವು ಬಂದಿದೆ. ಜಕಾರಕ್ಕೆ ಲೋಪ ಬಂದು ಕತಿ+ಅಸ್ ಎಂದಾಗುತ್ತದೆ. ಕತಿ–ಶಬ್ದಕ್ಕೆ 'ಬಹುಗಣವತುಡತಿ ಸಂಖ್ಯಾ' ಎಂಬುದರಿಂದ ಸಂಖ್ಯಾ ಸಂಜ್ಞೆಯು ಬಂದು ನಂತರ 'ಡತಿ ಚ' ಎಂಬ ಸೂತ್ರದಿಂದ ಷಟ್ ಸಂಜ್ಞಾ ಬಂದು ಷಟ್ ಸಂಜ್ಞಕ 'ಕತಿ' ಶಬ್ದದ ಮೇಲೆ ಜಸ್ ಪ್ರತ್ಯಯಕ್ಕೆ 'ಷಡ್ಭ್ಯೋ ಲುಕ್' ಎಂಬ ಸೂತ್ರದಿಂದ ಲುಕ್ ಆಗಿದೆ. ಆಗ 'ಕತಿ' ಮಾತ್ರ ಉಳಿಯುತ್ತದೆ.

'ಪ್ರತ್ಯಯ–ಲೋಪೆ ಪ್ರತ್ಯಯಲಕ್ಷಣಮ್' ಎಂಬ ನಿಯಮದಿಂದ ಲುಪ್ತವಾದ 'ಜಸ್'– ಅನ್ನು ನಿಮಿತ್ತ ಮಾಡಿಕೊಂಡು ಆಗಬೇಕಾದ ಗುಣಕಾರ್ಯವು ('ಜಸಿ ಚ' ಎಂಬ ಸೂತ್ರದಿಂದ 'ಕತಿ'ಯ ಇಕಾರಕ್ಕೆ ಗುಣವು ಬರಬೇಕಾಗಿತ್ತು) 'ನ ಲುಮತಾಂಗಸ್ಯ' ಎಂಬ ಸೂತ್ರದಿಂದ ನಿಷೇಧವಾಗಿದೆ. ಅಂದರೆ ಗುಣ–ಕಾರ್ಯವು ಬಂದಿಲ್ಲ. ಕತಿ ಎಂದೇ ಉಳಿಯುತ್ತದೆ. ದ್ವಿತೀಯಾ–ಬಹುವಚನ ಪ್ರತ್ಯಯವಾದ 'ಶಸ್' ನಲ್ಲೂ ಇದೇ ಪ್ರಕ್ರಿಯೆ ಇರುತ್ತದೆ.

ತೃತೀಯಾದಿಗಳಲ್ಲಿ ಕತಿಭಿಃ, ಕತಿಭ್ಯಃ ಕತಿಭ್ಯಃ ಕತೀನಾಂ, ಕತಿಷು, ಈ ಪ್ರಯೋಗಗಳು ಹರಿ ಶಬ್ದದಂತೆ ಇರುತ್ತವೆ.

'ಯುಷ್ಮದಸ್ಮದ್ ಷಟ್‌ಸಂಜ್ಞಕಾಃ ತ್ರಿಷು ಸರೂಪಾಃ–

ಯುಷ್ಮತ್–ಅಸ್ಮತ್ ಮತ್ತು ಷಟ್ ಸಂಜ್ಞಕ ಶಬ್ದಗಳು ಮೂರು ಲಿಂಗಗಳಲ್ಲೂ ಸಮಾನ ರೂಪಗಳನ್ನು ತಾಳುತ್ತವೆ. ಮೂರು ಲಿಂಗಗಳಲ್ಲೂ ಒಂದೇ ತರಹದ ರೂಪಗಳನ್ನು ಪಡೆಯುತ್ತವೆ.

'ತ್ರಿ' ಶಬ್ದವು ಯಾವಾಗಲೂ ಬಹುವಚನದಲ್ಲೇ ಪ್ರಯೋಗಿಸಲ್ಪಡುತ್ತದೆ.

**(ಜಸ್ ಮತ್ತು ಶಸ್-ಗಳಿಗೆ ಲುಕ್(ಲೋಪ) - ಹೇಳುವ ಸೂತ್ರ)**

**ಸೂತ್ರ- 188. ಷಡ್ಭ್ಯೋ ಲುಕ್ (7.1.22)**

ವೃತ್ತಿಃ- ಷಡ್ಭ್ಯಃ ಪರಯೋಃ ಜಶ್-ಶಸೋಃ ಲುಕ್ ಸ್ಯಾತ್।

ಪ. ಛೇ. - ಷಡ್ಭ್ಯಃ, ಲುಕ್।

ಅ. ವ್ಯ. -'ಜಶ್ಶಸೋಃ ಶಿಃ' ಎಂಬ ಸೂತ್ರದಿಂದ 'ಜಸ್' ಮತ್ತು 'ಶಸ್' ಎಂಬ ಪದಗಳು ಅನುವೃತ್ತವಾಗಿ ಬರುತ್ತವೆ.

ಅರ್ಥ-'ಷಟ್' ಸಂಜ್ಞಕ ಶಬ್ದದ ಅಂಗದ ಪರದಲ್ಲಿರುವ ಜಸ್, ಶಸ್ ಗಳಿಗೆ 'ಲುಕ್'(ಲೋಪ) ಬರುತ್ತದೆ.

ಕತಿ ಶಬ್ದವು ಷಟ್ ಸಂಜ್ಞಕವಾಗಿದೆ. ಅದರ ಜಸ್-ಶಸ್ ಗಳಿಗೆ ಲೋಪ ಬಂದು ಎರಡೂ ರೂಪಗಳು 'ಕತಿ' ಎಂದೇ ಆಗುತ್ತವೆ.

**(ಲುಕ್-ಶ್ಲು-ಲುಪ್ (ಲೋಪ)ಗಳನ್ನು ಹೇಳುವ ಸೂತ್ರ)**

**ಸೂತ್ರ- 189. ಪ್ರತ್ಯಯಸ್ಯ ಲುಕ್-ಶ್ಲು-ಲುಪಃ (1.1.61)**

ವೃತ್ತಿಃ- ಲುಕ್-ಶ್ಲು-ಲುಪ್-ಶಬ್ದೈಃ ಕೃತಂ ಪ್ರತ್ಯಯ-ಅದರ್ಶನಂ ಕ್ರಮಾತ್ ತತ್-ತತ್ ಸಂಜ್ಞಂ ಸ್ಯಾತ್।

ಅ. ವ್ಯ. -'ಅದರ್ಶನಂ ಲೋಪಃ' ಎಂಬ ಸೂತ್ರದಿಂದ 'ಅದರ್ಶನಂ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- ಲುಕ್, ಶ್ಲು ಮತ್ತು ಲುಪ್ ಶಬ್ದಗಳಲ್ಲಿ, ಯಾವ ಒಂದು ಶಬ್ದವನ್ನು ಉಚ್ಚರಿಸುವುದರಿಂದ ಯಾವ ಪ್ರತ್ಯಯದ ಅದರ್ಶನವು ಆಗುತ್ತದೆಯೋ, ಆ ಆದರ್ಶನಕ್ಕೆ ಕ್ರಮವಾಗಿ ಲುಕ್, ಶ್ಲು ಮತ್ತು ಲುಪ್ ಸಂಜ್ಞೆಗಳಾಗುತ್ತವೆ.

ಉದಾ:- 'ಕತಿ' ಎಂಬಲ್ಲಿ 'ಜಸ್' ಪ್ರತ್ಯಯದ ಲೋಪವು 'ಷಡ್ಭ್ಯೋ ಲುಕ್' ಎಂಬುದರಿಂದ ಲುಕ್ ಶಬ್ದದ ಮುಖಾಂತರವಾಗಿದೆ. ಆದ್ದರಿಂದ ಈ ಲೋಪಕ್ಕೆ ಲುಕ್ ಸಂಜ್ಞೆ ಬಂದಿದೆ. ಕತಿ ಶಬ್ದದ ಬಹುವಚನದ ರೂಪವು ಕತಿ ಎಂದೇ ಆಗುತ್ತದೆ.

**(ಪ್ರತ್ಯಯದ ಲಕ್ಷಣವನ್ನು ವಿಧಿಸುವ ಸೂತ್ರ)**

**ಸೂತ್ರ- 190. ಪ್ರತ್ಯಯಲೋಪೇ ಪ್ರತ್ಯಯಲಕ್ಷಣಮ್ (1.1.62)**

ವೃತ್ತಿಃ- ಪ್ರತ್ಯಯೇ ಲುಪ್ತೇಽಪಿ ತದಾಶ್ರಿತಂ ಕಾರ್ಯಂ ಸ್ಯಾತ್। ಇತಿ "ಜಸಿ ಚ" (7.3.109) ಇತಿ ಗುಣೇ ಪ್ರಾಪ್ತೇ-

ಅರ್ಥ-ಪ್ರತ್ಯಯದ ಲೋಪವಾದ ಮೇಲೆ, ಆ ಪ್ರತ್ಯಯವನ್ನು ಆಶ್ರಯಿಸಿ ಬರುವ ಕಾರ್ಯವು ಬರುತ್ತದೆ. ಈ ನಿಯಮಕ್ಕನುಸಾರವಾಗಿ ಕತಿ ಶಬ್ದದ ಪರದಲ್ಲಿರುವ ಜಸ್ ಗೆ ಲೋಪವು ಬಂದ ಮೇಲೆ, ಲುಪ್ತವಾದ ಆ ಜಸ್ ಪ್ರತ್ಯಯದ ನಿಮಿತ್ತಕವಾದ 'ಜಸಿಚ' ಎಂಬ ಸೂತ್ರದಿಂದ ಬರುವ ಗುಣರೂಪ ಕಾರ್ಯವು ಬರುತ್ತಿರಲು ಅದರ ನಿಷೇಧವನ್ನು ಮುಂದಿನ ಸೂತ್ರವು ಮಾಡುತ್ತಿದೆ.

## (ಪ್ರತ್ಯಯ ಲಕ್ಷಣ ನಿಷೇಧ ಸೂತ್ರ)

**ಸೂತ್ರ– 191. ನ ಲುಮತಾಙ್ಗಸ್ಯ (1.1.63)**

ವೃತ್ತಿಃ– ಲುಮತಾ–ಶಬ್ದೇನ ಲುಪ್ತೇ, ತನ್ನಿಮಿತ್ತಂ ಅಙ್ಗಕಾರ್ಯಂ ನ ಸ್ಯಾತ್। ಕತಿ, ಕತಿ। ಕತಿಭಿಃ। ಕತಿಭ್ಯಃ। ಕತಿಭ್ಯಃ। ಕತೀನಾಮ್। ಕತಿಷು। 0ಯುಷ್ಮದ್–ಅಸ್ಮದ್–ಷಟ್ ಸಂಜ್ಞಕಾಃ ತ್ರಿಷು ಸರೂಪಾಃ। ತ್ರಿ ಶಬ್ದಃ ನಿತ್ಯಂ ಬಹುವಚನಾನ್ತಃ। ತ್ರಯಃ। ತ್ರೀನ್। ತ್ರಿಭಿಃ। ತ್ರಿಭ್ಯಃ। ತ್ರಿಭ್ಯಃ।

ಪ. ಛೇ. – ನ, ಲುಮತಾ, ಅಂಗಸ್ಯ ।

ಅ. ವೃ. –'ಪ್ರತ್ಯಯ–ಲೋಪೇ ಪ್ರತ್ಯಯಲಕ್ಷಣಂ' ಎಂಬ ಸೂತ್ರವು ಅನುವೃತ್ತವಾಗುತ್ತದೆ.

ಅರ್ಥ–'ಲು' (ಲುಕ್, ಶ್ಲು, ಲುಪ್) ವನ್ನು ಉಳ್ಳ ಶಬ್ದದಿಂದ ಪ್ರತ್ಯಯದ ಅದರ್ಶನವಾದ ಮೇಲೆ, ಅದನ್ನು (ಲೋಪವಾದದ್ದನ್ನು) ನಿಮಿತ್ತ ಮಾಡಿಕೊಂಡು ಬರುವ ಅಂಗಕ್ಕೆ ಸಂಬಂಧಿಸಿದ ಕಾರ್ಯವು ಆಗುವುದಿಲ್ಲ.

ಉದಾ:–ಕತಿ=ಕಿಂ ಶಬ್ದಕ್ಕೆ 'ಡತಿ' ಪ್ರತ್ಯಯವು ಬಂದು ಕತಿ ಎಂದಾಗಿದೆ. ಇದಕ್ಕೆ ಪ್ರಥಮಾ ಬಹುವಚನದಲ್ಲಿ 'ಜಸ್' ಪ್ರತ್ಯಯವು ಬಂದಿದೆ. ಜಕಾರಕ್ಕೆ ಲೋಪ ಬಂದು ಕತಿ+ಅಸ್ ಎಂದಾಗುತ್ತದೆ. ಕತಿ–ಶಬ್ದಕ್ಕೆ 'ಬಹುಗಣವತುಡತಿ ಸಂಖ್ಯಾ' ಎಂಬುದರಿಂದ ಸಂಖ್ಯಾ ಸಂಜ್ಞೆಯು ಬಂದು ನಂತರ 'ಡತಿ ಚ' ಎಂಬ ಸೂತ್ರದಿಂದ ಷಟ್ ಸಂಜ್ಞಾ ಬಂದು ಷಟ್ ಸಂಜ್ಞಕ 'ಕತಿ' ಶಬ್ದದ ಮೇಲೆ ಜಸ್ ಪ್ರತ್ಯಯಕ್ಕೆ 'ಷಡ್ಭ್ಯೋ ಲುಕ್' ಎಂಬ ಸೂತ್ರದಿಂದ ಲುಕ್ ಆಗಿದೆ. ಆಗ 'ಕತಿ' ಮಾತ್ರ ಉಳಿಯುತ್ತದೆ.

'ಪ್ರತ್ಯಯ–ಲೋಪೆ ಪ್ರತ್ಯಯಲಕ್ಷಣಮ್' ಎಂಬ ನಿಯಮದಿಂದ ಲುಪ್ತವಾದ 'ಜಸ್'–ಅನ್ನು ನಿಮಿತ್ತ ಮಾಡಿಕೊಂಡು ಆಗಬೇಕಾದ ಗುಣಕಾರ್ಯವು ('ಜಸಿ ಚ' ಎಂಬ ಸೂತ್ರದಿಂದ 'ಕತಿ'ಯ ಇಕಾರಕ್ಕೆ ಗುಣವು ಬರಬೇಕಾಗಿತ್ತು) 'ನ ಲುಮತಾಂಗಸ್ಯ' ಎಂಬ ಸೂತ್ರದಿಂದ ನಿಷೇಧವಾಗಿದೆ. ಅಂದರೆ ಗುಣ–ಕಾರ್ಯವು ಬಂದಿಲ್ಲ. ಕತಿ ಎಂದೇ ಉಳಿಯುತ್ತದೆ. ದ್ವಿತೀಯಾ–ಬಹುವಚನ ಪ್ರತ್ಯಯವಾದ 'ಶಸ್' ನಲ್ಲೂ ಇದೇ ಪ್ರಕ್ರಿಯೆ ಇರುತ್ತದೆ.

ತೃತೀಯಾದಿಗಳಲ್ಲಿ ಕತಿಭಿಃ, ಕತಿಭ್ಯಃ ಕತಿಭ್ಯಃ ಕತೀನಾಂ, ಕತಿಷು, ಈ ಪ್ರಯೋಗಗಳು ಹರಿ ಶಬ್ದದಂತೆ ಇರುತ್ತವೆ.

'ಯುಷ್ಮದಸ್ಮದ್ ಷಟ್‌ಸಂಜ್ಞಕಾಃ ತ್ರಿಷು ಸರೂಪಾಃ–

ಯುಷ್ಮತ್–ಅಸ್ಮತ್ ಮತ್ತು ಷಟ್ ಸಂಜ್ಞಕ ಶಬ್ದಗಳು ಮೂರು ಲಿಂಗಗಳಲ್ಲೂ ಸಮಾನ ರೂಪಗಳನ್ನು ತಾಳುತ್ತವೆ. ಮೂರು ಲಿಂಗಗಳಲ್ಲೂ ಒಂದೇ ತರಹದ ರೂಪಗಳನ್ನು ಪಡೆಯುತ್ತವೆ.

'ತ್ರಿ' ಶಬ್ದವು ಯಾವಾಗಲೂ ಬಹುವಚನದಲ್ಲೇ ಪ್ರಯೋಗಿಸಲ್ಪಡುತ್ತದೆ.

ಉದಾ–ಪ್ರಥಮಾ ವಿಭಕ್ತಿ–ಬಹುವಚನದಲ್ಲಿ ತ್ರಿ+ಅಸ್(ಜಸ್) ಎಂದಿದ್ದಾಗ 'ಜಸಿ ಚ' ಎಂಬ ಸೂತ್ರದಿಂದ ಇಕಾರಕ್ಕೆ ಗುಣ (ಏ) ಬಂದು ತ್ರೇ+ಅಸ್ ಎಂದಿರುವಾಗ ಅಯ್ ಆದೇಶ ಬಂದು ತ್ರ್+ಅಯ್+ಅಸ್=ತ್ರಯಃ ಎಂದಾಗುತ್ತದೆ.

ತ್ರೀನ್– ದ್ವಿತೀಯಾ–ವಿಭಕ್ತಿ–ಬಹುವಚನದಲ್ಲಿ ತ್ರಿ+ಅಸ್ (ಶಸ್) ಎಂದಿದ್ದಾಗ ಪೂರ್ವ–ಸವರ್ಣ ದೀರ್ಘವಾಗಿ, ಸ್ ಕಾರಕ್ಕೆ ನ್ ಕಾರ ಆದೇಶವಾಗಿ ಬಂದಿದೆ.

ತ್ರಿಭಿಃ– ತೃತೀಯಾ ವಿಭಕ್ತಿ ಬಹುವಚನದಲ್ಲಿ ತ್ರಿ+ಭಿಸ್ ಎಂದಿದ್ದಾಗ ಭಿಸ್‌ನ ಸ್ ಕಾರಕ್ಕೆ ರುತ್ವ ವಿಸರ್ಗಗಳು ಬಂದು ತ್ರಿಭಿಃ ಎಂದಾಗಿದೆ.

ತ್ರಿಭ್ಯಃ – ಚತುರ್ಥೀ ಮತ್ತು ಪಞ್ಚಮೀ ಬಹುವಚನಗಳಲ್ಲಿ ತ್ರಿ+ಭ್ಯಸ್ ಎಂದಿದ್ದಾಗ, 'ಭ್ಯಸ್'ನ 'ಸ್' ಕಾರಕ್ಕೆ ರುತ್ವ–ವಿಸರ್ಗ ಬಂದು ತ್ರಿಭ್ಯಃ ಎಂಬ ಸಮಾನ ರೂಪಗಳಾಗಿವೆ.

**(ತ್ರಯ–ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ– 192. ತ್ರೇಸ್ತ್ರಯಃ (7.1.53)**

ವೃತ್ತಿಃ– ತ್ರಿ–ಶಬ್ದಸ್ಯ ತ್ರಯ–ಆದೇಶಃ ಸ್ಯಾತ್ ಆಮಿ। ತ್ರಯಾಣಾಮ್। ತ್ರಿಷು। ಗೌಣತ್ವೇಽಪಿ–ಪ್ರಿಯತ್ರಯಾಣಾಮ್।

ಪ. ಛೇ. – ತ್ರೇಃ, ತ್ರಯಃ ।

ಅ. ವೃ. –'ಆಮಿ ಸರ್ವನಾಮ್ನಃ ಸುಟ್' ಎಂಬ ಸೂತ್ರದಿಂದ 'ಆಮಿ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– ಆಮ್ ಪರದಲ್ಲಿರುವಾಗ, ಪೂರ್ವದಲ್ಲಿರುವ 'ತ್ರಿ' ಶಬ್ದಕ್ಕೆ ತ್ರಯ ಎಂಬ ಅ–ಕಾರಾನ್ತ ಆದೇಶವು ಬರುತ್ತದೆ.

ಉದಾ:–ತ್ರಿ+ಆಮ್ ಎಂದಿದ್ದಾಗ, ತ್ರಯ ಆದೇಶವಾಗಿ ಬಂದು, ತ್ರಯ+ಆಮ್ ಎಂದಿದ್ದಾಗ 'ಹ್ರಸ್ವನದ್ಯಾಪೋನುಟ್' ಎಂಬ ಸೂತ್ರದಿಂದ ನುಟ್(ನ್)ಆಗಮ ಬಂದು ತ್ರಯ+ನ್+ಆಮ್ ಎಂದಿರುವಾಗ 'ನಾಮಿ' ಎಂಬ ಸೂತ್ರದಿಂದ ಯಕಾರೋತ್ತರವರ್ತಿ 'ಅ' ಕಾರಕ್ಕೆ ದೀರ್ಘ ಬಂದು ತ್ರಯಾನಾಮ್ ಎಂದಿರುವಾಗ, 'ಅಟ್–ಕು–ಪ್ವಾಙ್–ನುಮ್–ವ್ಯವಾಯೇಽಪಿ' ಎಂಬುದರಿಂದ 'ನ್' ಕಾರಕ್ಕೆ ಣತ್ವ ಬಂದು 'ತ್ರಯಾಣಾಮ್' ಎಂದು ರೂಪ ಸಿದ್ಧವಾಗುತ್ತದೆ.

ತ್ರಿಷು – ಸಪ್ತಮೀ ಬಹುವಚನದಲ್ಲಿ, ತ್ರಿ+ಸು (ಸುಪ್) ಎಂದಿರುವಾಗ 'ಆದೇಶ–ಪ್ರತ್ಯಯೋಃ' ಎಂಬುದರಿಂದ 'ಸ್' ಕಾರಕ್ಕೆ ಷತ್ವ ಬಂದು ತ್ರಿಷು ಎಂದು ರೂಪವಾಗುತ್ತದೆ. 'ತ್ರಿ' ಶಬ್ದವು ಗೌಣವಾದರೂ (ಸಮಾಸದಲ್ಲಿ ಬಂದರೂ) 'ತ್ರಯ' ಆದೇಶವು ಬರುತ್ತದೆ.

ಉದಾ:'ಪ್ರಿಯತ್ರಯಾಣಾಮ್'=ಪ್ರಿಯಾಃ ತ್ರಯಃ ಏಷಾಂ ತೇ, ತೇಷಾಮ್ (ಯಾರಿಗೆ ಮೂರು ಪ್ರಿಯವಾಗಿದೆಯೋ ಅಂಥವರಿಗೆ) ಎಂಬ ಸಮಾಸದಲ್ಲಿ ಅನ್ಯಪದಾರ್ಥವು ಪ್ರಧಾನವಾಗುವುದರಿಂದ 'ತ್ರಿ' ಶಬ್ದದ ಅರ್ಥ ಇಲ್ಲಿ ಗೌಣವಾಗಿದೆ. ಆದರೂ 'ತ್ರಯ' ಆದೇಶ ಬರುತ್ತದೆ.

**(ಅಕಾರವನ್ನು ವಿಧಿಸುವ ಸೂತ್ರ)**

**ಸೂತ್ರ– 193. ತ್ಯದಾದೀನಾಮಃ (7.2.102)**

ವೃತ್ತಿಃ–ಏಷಾಂ ಅಕಾರಃ ಅನ್ತಾದೇಶಃ ಸ್ಯಾತ್ ವಿಭಕ್ತೌ ಪರತಃ।

**(ವಾ॥ ದ್ವಿಪರ್ಯಂತಾನಾಮೇವ ಇಷ್ಟಿಃ)।**

ದ್ವೌ। ದ್ವೌ ದ್ವಾಭ್ಯಾಮ್ 3। ದ್ವಯೋಃ2। [ಪಾತಿ ಲೋಕಂ ಇತಿ ಪಪೀಃ (ಸೂರ್ಯಃ)]।

ಪ. ಛೇ. – ತ್ಯದಾದೀನಾಮ್, ಅಃ।

ಅ. ವೃ. –'ಅಷ್ಟನ ಆ ವಿಭಕ್ತೌ' ಎಂಬ ಸೂತ್ರದಿಂದ 'ವಿಭಕ್ತೌ' ಎಂಬ ಪದವು ಅನುವೃತ್ತವಾಗಿದೆ.

ಅರ್ಥ–'ಸುಪ್' ಪ್ರತ್ಯಯಗಳು ಪರದಲ್ಲಿದ್ದಾಗ ತ್ಯದಾದಿಗಣ ಪಠಿತವಾದ ಶಬ್ದಗಳ ಅಂಗಕ್ಕೆ (ಅಂತ್ಯವರ್ಣಕ್ಕೆ) 'ಅ' ಕಾರವು ಆದೇಶವಾಗಿ ಬರುತ್ತದೆ.

ವಾರ್ತಿಕ:– ದ್ವಿಪರ್ಯಂತಾನಾಮೇವೇಷ್ಟಿ:– ಭಾಷ್ಯಾಕಾರರ ಪ್ರಕಾರ ತ್ಯದಾದಿ–ಗಣದಲ್ಲಿ ತ್ಯದ್, ತದ್, ಯದ್, ಏತದ್, ಇದಂ, ಅದಸ್, ಏಕ ಮತ್ತು ದ್ವಿ ಈ ಎಂಟು ಶಬ್ದಗಳಿಗೆ ಮಾತ್ರ ಅಕಾರವು ಆದೇಶವಾಗಿ ಬರುತ್ತದೆ. ತ್ಯದಾದಿಗಣವು ಸರ್ವಾದಿಗಣದಲ್ಲಿ ಅಂತರ್ಗತವಾಗಿದೆ.

ಸೂಚನೆ:–ದ್ವಿ ಶಬ್ದಕ್ಕೆ ದ್ವಿವಚನದ ರೂಪಗಳು ಮಾತ್ರ ಇರುತ್ತವೆ.

ಉದಾ:– ದ್ವೌ ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿಗಳ ದ್ವಿವಚನಗಳಲ್ಲಿ ದ್ವಿ+ಔ ಎಂದಿದ್ದಾಗ ಅಕಾರಾಂತವಾದ ಮೇಲೆ, ದ್ವ+ಔ ಎಂದಿದ್ದಾಗ ರಾಮ ಶಬ್ದದಂತೆ ವೃದ್ಧಿಯಾಗಿ ದ್ವೌ ಎಂದಾಗಿದೆ.

ದ್ವಾಭ್ಯಾಮ್ –ತೃತೀಯಾ, ಚತುರ್ಥೀ, ಮತ್ತು ಪಞ್ಚಮೀ ದ್ವಿವಚನಗಳಲ್ಲಿ ದ್ವಿ+ಭ್ಯಾಮ್ ಎಂದಿದ್ದಾಗ ಪ್ರಕೃತ ಸೂತ್ರದಿಂದ ದ್ವಿ ಶಬ್ದದ 'ಇ' ಕಾರಕ್ಕೆ 'ಅ' ಕಾರ ಆದೇಶವಾಗಿ ಬಂದು ದ್ವ+ಭ್ಯಾಮ್ ಎಂದಿದ್ದಾಗ 'ಸುಪಿ ಚ' ಎಂಬುದರಿಂದ 'ದ್ವಾಭ್ಯಾಮ್' ಎಂದಾಗಿದೆ.

ದ್ವಯೋ:– ಷಷ್ಠೀ ಮತ್ತು ಸಪ್ತಮೀ ದ್ವಿವಚನಗಳಲ್ಲಿ ದ್ವಿ+ಓಸ್ ಎಂದಿದ್ದಾಗ. ಪ್ರಕೃತ ಸೂತ್ರದಿಂದ ದ್ವಿ ಶಬ್ದದ 'ಇ' ಕಾರಕ್ಕೆ 'ಅ' ಕಾರ ಆದೇಶವಾಗಿ ಬಂದು, ದ್ವ+ಓಸ್ ಎಂದಿದ್ದಾಗ 'ಓಸಿ ಚ' ಎಂಬುದರಿಂದ 'ಅ' ಕಾರಕ್ಕೆ 'ಏ' ಕಾರ ಬಂದು 'ಏ'ಕಾರಕ್ಕೆ 'ಅಯ್' ಆದೇಶವಾಗಿ ಬಂದು ದ್ವಯ್+ಓಸ್ ಎಂದಾದ ಮೇಲೆ 'ಸ್'ಕಾರಕ್ಕೆ ರುತ್ವ–ವಿಸರ್ಗಗಳು ಬಂದು, 'ದ್ವಯೋಃ' ಎಂದು ರೂಪಗಳಾಗುತ್ತವೆ.

**(ಹ್ರಸ್ವ – ಇಕಾರಾನ್ತ ಶಬ್ದಗಳು ಮುಗಿದವು)**

**(ದೀರ್ಘ) ಈಕಾರಾಂತ ಪುಲ್ಲಿಙ್ಗ ಶಬ್ದಗಳು.**

**ಸೂತ್ರ: 194. ದೀರ್ಘಾಜ್ಜಸಿ ಚ (6.1.105)**

ಈ ಸೂತ್ರವನ್ನು ಇಲ್ಲಿ ಪಪೀ ಶಬ್ದದ ನಿರ್ವಚನದಲ್ಲಿ ಮತ್ತೊಮ್ಮೆ ತೆಗೆದುಕೊಳ್ಳಲಾಗಿದೆ. ಪಪ್ಯೌ । ಪಪ್ಯಃ। ಹೇ ಪಪೀಃ। ಪಪೀಮ್। ಪಪ್ಯಾ। ಪಪೀಭ್ಯಾಮ್। ಪಪೀಭಿಃ। ಪಪ್ಯೇ।

ಪಪೀಭ್ಯಃ। ಪಪ್ಯಃ। ಪಪ್ಯೋಃ। ದೀರ್ಘತ್ವಾತ್ ನ ನುಟ್, ಪಪ್ಯಾಮ್। ಙೌ ತು ಸವರ್ಣದೀರ್ಘಃ। ಪಪೀ, ಪಪ್ಯೋಃ, ಪಪೀಷು। ಏವಂ ವಾತಪ್ರಮ್ಯಾದಯಃ। ಬಹ್ವ್ಯಃ ಶ್ರೇಯಸ್ಯಃ ಯಸ್ಯ ಸಃ ಬಹುಶ್ರೇಯಸೀ।

(ಲೋಕವನ್ನು ರಕ್ಷಿಸುತ್ತಾನೆ ಎನ್ನುವದಕ್ಕಾಗಿ ಸೂರ್ಯನಿಗೆ ಪಪೀಃ ಎಂದು ಹೆಸರು).

ಉದಾ– ಪಪೀಃ–ಪ್ರಥಮಾ–ಏಕವಚನದಲ್ಲಿ ಪಪೀ+ಸ್(ಸು) ಎಂದಿರುವಾಗ 'ಸ್' ಕಾರಕ್ಕೆ ರುತ್ವ–ವಿಸರ್ಗಗಳಾಗಿ ಪಪೀಃ ಎಂದಾಗುತ್ತದೆ.

ಉದಾ– ಪಪ್ಯೌ–ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿಯ ದ್ವಿವಚನದಲ್ಲಿ ಪಪೀ+ಔ ಎಂದಿದ್ದಾಗ 'ಪ್ರಥಮಯೋಃಪೂರ್ವಸವರ್ಣಃ' ಎಂಬುದರಿಂದ ಪೂರ್ವಸವರ್ಣ ದೀರ್ಘವು ಪ್ರಾಪ್ತ–ವಾಗುತ್ತಿರಲು, ಅದಕ್ಕೆ 'ದೀರ್ಘಾಜ್ಜಸಿ ಚ' ಎಂಬುದರಿಂದ ನಿಷೇಧ ಬಂದು 'ಈ' ಕಾರಕ್ಕೆ ಯಣಾದೇಶವಾಗಿ ಪಪ್ಯೌ ಎಂದಾಗಿದೆ.

ಉದಾ– ಪಪ್ಯಃ –ಪ್ರಥಮಾ ಬಹುವಚನದಲ್ಲಿ ಪೀ+ಅಸ್ (ಜಸ್) ಎಂದಿದ್ದಾಗ, 'ಈ' ಕಾರಕ್ಕೆ ಯಣಾದೇಶವಾದ ನಂತರ ರುತ್ವ–ವಿಸರ್ಗಗಳಾಗಿ ಪಪ್ಯಃ ಎಂದಾಗಿದೆ.

ಹೇ ಪಪೀಃ – ಸಂಬೋಧನ – ವಿಭಕ್ತಿಯ – ಏಕವಚನದಲ್ಲಿ, ಪಪೀ–ಶಬ್ದವು ಹ್ರಸ್ವಾಂತ ವಾಗದಿರುವುದರಿಂದ 'ಸು' ಗೆ ಲೋಪವು ಬಾರದೇ ಹೇ ಪಪೀಃ! ಎಂದಾಗಿದೆ. (ಸಂಬೋಧನದ ದ್ವಿವಚನ–ಬಹುವಚನ ರೂಪಗಳು ಪ್ರಥಮಾವಿಭಕ್ತಿಯಲ್ಲಿರುವಂತೆ ಇರುತ್ತವೆ).

ಉದಾ– ಪಪೀಮ್–ದ್ವಿತೀಯಾ ವಿಭಕ್ತಿಯ ಏಕವಚನದಲ್ಲಿ ಪಪೀ+ಅಮ್ ಎಂದಿದ್ದಾಗ 'ಪ್ರಥಮಯೋಃ ಪೂರ್ವಸವರ್ಣಃ' ಎಂಬುದನ್ನು ಬಾಧಿಸಿ 'ಅಮಿಪೂರ್ವಃ' ಎಂಬ ಸೂತ್ರದಿಂದ ಪೂರ್ವರೂಪವಾಗಿ 'ಪಪೀಮ್' ಎಂದಾಗಿದೆ.

ಉದಾ– ಪಪೀನ್–ದ್ವಿತೀಯಾ ಬಹುವಚನದಲ್ಲಿ ಪಪೀ+ಅಸ್(ಶಸ್) ಎಂದಿರುವಾಗ, 'ಪ್ರಥಮಯೋಃ ಪೂರ್ವಸವರ್ಣಃ' ಎಂಬುದರಿಂದ ಪೂರ್ವಸವರ್ಣದೀರ್ಘವಾಗಿ ಪಪೀಸ್ ಎಂದಿರುವಾಗ 'ತಸ್ಮಾಚ್ಛಸೋನಃ ಪುಂಸಿ' ಎಂಬುದರಿಂದ 'ಸ್' ಕಾರಕ್ಕೆ 'ನ್' ಕಾರವು ಆದೇಶವಾಗಿ ಬಂದು ಪಪೀನ್ ಎಂದಾಗುತ್ತದೆ. ಉದಾ–ಪಪ್ಯಾ– ತೃತೀಯಾ ವಿಭಕ್ತಿ ಏಕವಚನದಲ್ಲಿ ಪಪೀ+ಆ(ಟಾ) ಎಂದಿರುವಾಗ ಯಣಾದೇಶವಾಗಿ ಪಪ್ಯಾ ಎಂದಾಗಿದೆ.

ಉದಾ– ಪಪೀಭ್ಯಾಮ್ – ತೃತೀಯಾ, ಚತುರ್ಥೀ ಮತ್ತು ಪಂಚಮೀ ವಿಭಕ್ತಿಯ ದ್ವಿವಚನಗಳಲ್ಲಿ, ಪಪೀ+ಭ್ಯಾಮ್ ಎಂದಿರುವಾಗ ಪ್ರತ್ಯಯವನ್ನು ಸೇರಿಸುವ ಮಾತ್ರದಿಂದ ಪಪೀಭ್ಯಾಮ್ ಎಂದಾಗಿದೆ.

ಪಪೀಭಿಃ –ತೃತೀಯಾ ವಿಭಕ್ತಿಯ ಬಹುವಚನದಲ್ಲಿ ಪಪೀ+ಭಿಸ್ ಎಂದಿರುವಾಗ 'ಸ್' ಕಾರಕ್ಕೆ ರುತ್ವ– ವಿಸರ್ಗಗಳಾಗಿ ಪಪೀಭಿಃ ಎಂದಾಗಿದೆ.

ಉದಾ–ಪಪ್ಯೇ – ಚತುರ್ಥಿಯ ಏಕವಚನದಲ್ಲಿ ಪಪೀ+ಏ ಎಂದಿದ್ದಾಗ, ಯಣಾದೇಶವಾಗಿ ಪಪ್ಯೇ ಎಂದಾಗಿದೆ.

ಉದಾ–ಪಪೀಭ್ಯಃ – ಚತುರ್ಥೀ ಹಾಗೂ ಪಂಚಮೀಯ ಬಹುವಚನಗಳಲ್ಲಿ ಪಪೀ+ಭ್ಯಸ್ ಎಂದಿರುವಾಗ 'ಸ್' ಕಾರಕ್ಕೆ ರುತ್ವ–ವಿಸರ್ಗಗಳಾಗಿ 'ಪಪೀಭ್ಯಃ' ಎಂದಾಗುತ್ತದೆ.

ಉದಾ–ಪಪ್ಯಃ –ಪಂಚಮೀ ಹಾಗೂ ಷಷ್ಠೀ ಏಕವಚನದಲ್ಲಿ ಪಪೀ+ಅಸ್ ಎಂದಿರುವಾಗ ಯಣಾದೇಶವಾಗಿ ಪಪ್ಯಃ ಎಂದಾಗಿದೆ.

ಉದಾ–ಪಪ್ಯೋಃ –ಷಷ್ಠೀ ಮತ್ತು ಸಪ್ತಮೀ ವಿಭಕ್ತಿಯ ದ್ವಿವಚನದಲ್ಲಿ ಪಪೀ+ಓಸ್ ಎಂದಿದ್ದಾಗ ಯಣಾದೇಶವಾಗಿ, ರುತ್ವ–ವಿಸರ್ಗಗಳಾಗಿ ಪಪ್ಯೋಃ ಎಂದಾಗಿದೆ.

ಉದಾ–ಪಪ್ಯಾಮ್ – ಷಷ್ಠೀ ಬಹುವಚನದಲ್ಲಿ ಪಪೀ+ಆಮ್ ಎಂದಿರುವಾಗ, ಅಂಗಕ್ಕೆ ದೀರ್ಘವಿರೋಣದ್ದರಿಂದ 'ನುಟ್' ಆಗಮವು ಬಾರದೇ ಯಣಾದೇಶವಾಗಿ 'ಪಪ್ಯಾಮ್' ಎಂದಾಗಿದೆ.

ಉದಾ–ಪಪೀ – ಸಪ್ತಮೀಯ ಏಕವಚನದಲ್ಲಿ ಪಪೀ+ಇ (ಙಿ) ಎಂದಿದ್ದಾಗ, ಸವರ್ಣದೀರ್ಘದಿಂದ ಪಪೀ ಎಂದಾಗುತ್ತದೆ.

ಉದಾ–ಪಪ್ಯೋಃ –ದ್ವಿವಚನದ ರೂಪವು ಷಷ್ಠೀ ದ್ವಿವಚನದಂತೆ ಆಗುತ್ತದೆ.

ಉದಾ–ಪಪೀಷು –ಬಹುವಚನದಲ್ಲಿ ಪಪೀ+ಸು ಎಂದಿದ್ದಾಗ ಷತ್ವಾದೇಶ (ಆದೇಶ–ಪ್ರತ್ಯಯಯೋಃ)ದಿಂದ ಪಪೀಷು ಎಂದಾಗಿದೆ. ಇದೇ ರೀತಿಯಾಗಿ ವಾತಪ್ರಮೀ, ಯಯೀ, ಮೊದಲಾದ ಶಬ್ದಗಳ ರೂಪಗಳೂ ಇದರಂತೆ ಆಗುತ್ತವೆ.

ಉದಾ– ಬಹುಶ್ರೇಯಸೀ– ಶ್ರೇಯಸ್ಸನ್ನು ಉಂಟುಮಾಡುವ ಹಲವು ಸ್ತ್ರೀಯರನ್ನು ಉಳ್ಳವನು ಯಾವನೋ ಅವನು ಎಂದರ್ಥ. ಇದು ಬಹುವ್ರೀಹಿ ಸಮಾಸವಾಗಿದೆ.

ಉದಾ–ಬಹುಶ್ರೇಯಸೀ+ಸ್(ಸು) ಎಂದಿದ್ದಾಗ, 'ಹಲ್–ಙ್ಯಾಬ್ಭ್ಯೋ–ದೀರ್ಘಾತ್–ಸುತಿಸ್ಯಪೃಕ್ತಂ ಹಲ್' ಎಂಬ ಸೂತ್ರದಿಂದ ಅಪೃಕ್ತವಾದ 'ಸ್' ಕಾರಕ್ಕೆ ಲೋಪ ಬಂದು 'ಬಹುಶ್ರೇಯಸೀ' ಎಂದು ರೂಪವಾಗಿದೆ. ಇದು ಈಕಾರಾಂತ ಪುಲ್ಲಿಂಗ ಶಬ್ದ (ಙ್ಯಂತ) ವಾಗಿದೆ.

**(ನದೀ–ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ – 195. ಯೂ ಸ್ತ್ರ್ಯಾಖ್ಯೌ ನದೀ (1.4.3)**

ವೃತ್ತಿಃ–ಈತ್–ಊತ್–ಅನ್ತೌ ನಿತ್ಯಸ್ತ್ರೀಲಿಂಗೌ ನದೀ ಸಂಜ್ಞೌ ಸ್ತಃ।

ವಾ॥ **ಪ್ರಥಮಲಿಂಗಗ್ರಹಣಮ್ ಚ ಪೂರ್ವಂ** ಸ್ತ್ರ್ಯಾಖ್ಯಸ್ಯ ಉಪಸರ್ಜನತ್ವೇ ಅಪಿ ನದೀತ್ವಂ ವಕ್ತವ್ಯಂ ಇತ್ಯರ್ಥಃ॥

ಪ. ಛೇ. – ಯೂ, ಸ್ತ್ರ್ಯಾಖ್ಯೌ, ನದೀ।

ಅರ್ಥ– ನಿತ್ಯ ಸ್ತ್ರೀಲಿಂಗಗಳಾದ ದೀರ್ಘ 'ಈ'ಕಾರಾಂತ ಮತ್ತು 'ಊ'ಕಾರಾಂತ ಶಬ್ದಗಳಿಗೆ ನದೀ ಸಂಜ್ಞೆಯು ಇರುತ್ತದೆ.

ವಾರ್ತಿಕ – **(ವಾ॥ ಪ್ರಥಮಲಿಂಗಗ್ರಹಣಮ್ ಚ)**। –

ಮೊದಲು (ಅಂದರೆ ಸಮಾಸವಾಗುವದಕ್ಕೆ ಮೊದಲು ಎಂದರ್ಥ) ಯಾವ ಶಬ್ದವು ನಿತ್ಯ ಸ್ತ್ರೀಲಿಂಗವಾಗಿತ್ತೋ ಅದು ಸಮಾಸದಲ್ಲಿ ಅಪ್ರಾಧಾನ್ಯವನ್ನು ಹೊಂದಿ ಲಿಂಗಾನ್ತರವನ್ನು ತಾಳಿದರೂ, ಅದು ಸಮಾಸ ಹೊಂದುವದಕ್ಕೆ ಪೂರ್ವದಲ್ಲಿ ಹೊಂದಿದ ನಿತ್ಯ ಸ್ತ್ರೀಲಿಂಗ ದ್ವಾರಾ ನದೀ ಸಂಜ್ಞೆಯನ್ನು ಪಡೆಯುತ್ತದೆ.

ಉದಾ –ಬಹು–ಶ್ರೇಯಸೀ ಎಂಬ ಶಬ್ದದಲ್ಲಿ ಶ್ರೇಯಸೀ ಎಂಬ ಶಬ್ದವು ನಿತ್ಯ ಸ್ತ್ರೀಲಿಂಗವಾಗಿದೆ. ಅನಂತರ ಬಹು ಶಬ್ದದೊಂದಿಗೆ ಸಮಾಸವಾದ ಮೇಲೆ ಲಿಂಗಾಂತರವನ್ನು ಪಡೆದರೂ (ಬಹ್ವ್ಯಃ ಶ್ರೇಯಸ್ಯಃ ಯಸ್ಯಸಃ ಬಹುಶ್ರೇಯಸೀ ಎಂದು ಪುಲ್ಲಿಂಗವನ್ನು ಪಡೆದರೂ) ಪೂರ್ವಾವಸ್ಥೆಯ ನಿತ್ಯ ಸ್ತ್ರೀಲಿಂಗದ ನಿಮಿತ್ತಕವಾಗಿ ಪಡೆದಿದ್ದ ನದೀ ಸಂಜ್ಞೆಯನ್ನು ಲಿಂಗಾಂತರವನ್ನು ಪಡೆದ ಮೇಲೂ ಕಳೆದು ಕೊಳ್ಳುವುದಿಲ್ಲ.

**(ಹ್ರಸ್ವವನ್ನು ವಿಧಿಸುವ ಸೂತ್ರ)**

**ಸೂತ್ರ– 196. ಅಂಬಾರ್ಥನದ್ಯೋರ್ಹ್ರಸ್ವಃ (7.3.107)**

ವೃತ್ತಿಃ– ಅಂಬಾರ್ಥಾನಾಂ ನದ್ಯನ್ತಾನಾಂ ಚ ಹ್ರಸ್ವಃ ಸ್ಯಾತ್ ಸಂಬುದ್ಧೌ। ಹೇ ಬಹುಶ್ರೇಯಸಿ!

ಪ. ಛೇ. – ಅಂಬಾರ್ಥನದ್ಯೋಃ, ಹ್ರಸ್ವಃ ।

ಅ. ವ್ಯ. 'ಸಂಬುದ್ಧೌ ಚ' ಎಂಬ ಸೂತ್ರದಿಂದ 'ಸಂಬುದ್ಧೌ' ಎಂಬ ಪದವು ಅನುವೃತ್ತವಾಗುತ್ತದೆ. 'ಅಂಗಸ್ಯ' ಎಂಬುದು ಅಧಿಕಾರ ಸೂತ್ರ.

ಅರ್ಥ– ಅಂಬಾ (ತಾಯಿ) ಎಂಬ ಅರ್ಥವುಳ್ಳ ಶಬ್ದಗಳ ಮತ್ತು ನದೀ ಸಂಜ್ಞಕ ಶಬ್ದಗಳ ಅಂಗಕ್ಕೆ (ಕೊನೆಯ ವರ್ಣಕ್ಕೆ) ಸಂಬುದ್ಧಿ ಪರದಲ್ಲಿದ್ದಾಗ ಹ್ರಸ್ವವು ಆದೇಶವಾಗಿ ಬರುತ್ತದೆ.

ಉದಾ– ಹೇ ಅಂಬ!

ಉದಾ – ಹೇ ಬಹುಶ್ರೇಯಸಿ! – ಈ ಶಬ್ದವು ನದೀ ಸಂಜ್ಞೆಯನ್ನು ಹೊಂದಿರುವುದರಿಂದ ಅಂತ್ಯದಲ್ಲಿರುವ ಈ ಕಾರಕ್ಕೆ ಹ್ರಸ್ವ ವರ್ಣವಾದ 'ಇ'ಕಾರವು ಆದೇಶವಾಗುವುದರಿಂದ ಹ್ರಸ್ವಾಂತವಾದ ಈ ಶಬ್ದದ ಅಂಗದ ಪರದಲ್ಲಿರುವ 'ಸ್' ಕಾರಕ್ಕೆ 'ಏಙ್–ಹ್ರಸ್ವಾತ್–ಸಂಬುದ್ಧೇಃ' ಎಂಬುದರಿಂದ ಲೋಪವಾಗಿ ಹೇ ಬಹುಶ್ರೇಯಸಿ! ಎಂದಾಗಿದೆ.

**(ಆಟ್–ಆಗಮವನ್ನು ವಿಧಿಸುವ ಸೂತ್ರ)**

**ಸೂತ್ರ– 197. ಆಣ್ನದ್ಯಾಃ (7.3.112)**

ವೃತ್ತಿಃ–ನದ್ಯಂತಾತ್ ಪರೇಷಾಂ ಙಿತಾಂ ಆಟ್–ಆಗಮಃ।

ಪ. ಛೇ. – ಆಟ್, ನದ್ಯಾಃ ।

ಅ. ವ್ಯ. –'ಘೇರ್ಙಿತಿ' ಎಂಬ ಸೂತ್ರದಿಂದ ವಿಭಕ್ತಿ ಮತ್ತು ವಚನ–ವಿಪರಿಣಾಮವಾಗಿ

'ಜಿತಾಂ' ಎಂದು ಅನುವೃತ್ತಿಮಾಡಲಾಗಿದೆ. 'ಅಂಗಸ್ಯ' ಎಂಬುದು ಅಧಿಕಾರ ಸೂತ್ರ.

ಅರ್ಥ– ನದ್ಯಂತ ಅಂಗದ ಪರದಲ್ಲಿರುವ ಜಿತ್ (ಙೇ, ಙಸಿ. ಙಸ್ ಮತ್ತು ಙಿ) ಪ್ರತ್ಯಯಗಳಿಗೆ 'ಆಟ್' ಆಗಮವು ಬರುತ್ತದೆ. 'ಆಟ್ ನದ್ಯಾಃ' ಎಂಬಲ್ಲಿ 'ಆಟ್' ಆಗಮವು ಬರುತ್ತದೆ.

'ಆಟ್‌ನದ್ಯಾಃ' ಎಂಬಲ್ಲಿ 'ಆಟ್'–ನ 'ಟ್' ಕಾರಕ್ಕೆ 'ಯರೋಽನುನಾಸಿಕೇಽನುನಾಸಿಕೋ ವಾ' ಸೂತ್ರದಿಂದ 'ಣ್' ಕಾರವು ಆದೇಶವಾಗಿ ಬಂದಿದೆ. ಇದರ ಉದಾಹರಣೆಯು ಮುಂದಿನ ಸೂತ್ರದಲ್ಲಿ ಸ್ಪಷ್ಟವಾಗುತ್ತದೆ.

**(ವೃದ್ಧಿಯನ್ನು ವಿಧಿಸುವ ಸೂತ್ರ)**

**ಸೂತ್ರ– 198. ಆಟಶ್ಚ (6.1.90)**

ವೃತ್ತಿಃ–ಆಟಃ ಅಚಿ ಪರೇ ವೃದ್ಧಿರೇಕಾದೇಶಃ ಸ್ಯಾತ್। ಬಹುಶ್ರೇಯಸ್ಯೈ। ಬಹುಶ್ರೇಯಸ್ಯಾಃ। ಬಹುಶ್ರೇಯಸೀನಾಮ್।

ಪ. ಛೇ. – ಆಟಃ, ಚ ।

ಅ. ವೃ. –'ಇಕೋಯಣಚಿ' ಎಂಬ ಸೂತ್ರದಿಂದ 'ಅಚಿ' ಎಂಬ ಪದವು 'ವೃದ್ಧಿರೇಚಿ' ಎಂಬ ಸೂತ್ರದಿಂದ ವೃದ್ಧಿಃ ಎಂಬ ಪದವೂ ಅನುವೃತ್ತವಾಗುತ್ತದೆ. "ಏಕಃ ಪೂರ್ವಪರಯೋಃ" ಎಂಬುದು ಅಧಿಕಾರ ಸೂತ್ರ.

ಅರ್ಥ–'ಆಟ್' ಗೆ ಅಚ್ ಪರದಲ್ಲಿರುವಾಗ ಪೂರ್ವ ಪರಗಳ ಸ್ಥಾನದಲ್ಲಿ ವೃದ್ಧಿಯು ಏಕಾದೇಶವಾಗಿ ಬರುತ್ತದೆ.

ಉದಾ :–ಬಹುಶ್ರೇಯಸ್ಯೈ=ಬಹುಶ್ರೇಯಸೀ+ಆ+ಏ ಎಂದಿದ್ದಾಗ ಪ್ರಕೃತ ಸೂತ್ರದಿಂದ 'ಆಟ್' ನ ಪರದಲ್ಲಿ 'ಏ'ಕಾರರೂಪವಾದ ಅಚ್ ಇರೋಣದ್ದರಿಂದ ವೃದ್ಧಿಯು ಏಕಾದೇಶವಾಗಿ ಬಂದು ಬಹುಶ್ರೇಯಸಿ+ಐ ಎಂದಿದ್ದಾಗ ಯಣಾದೇಶ ಬಂದು ಬಹುಶ್ರೇಯಸ್ಯೈ ಎಂದಾಗುತ್ತದೆ.

ಉದಾ–ಬಹುಶ್ರೇಯಸ್ಯಾಃ – ಪಂಚಮೀ ಮತ್ತು ಷಷ್ಠೀ ಏಕವಚನಗಳಲ್ಲಿ ಙಸಿ (ಅಸ್). ಙಸ್(ಅಸ್)ಗಳು ಪರದಲ್ಲಿರುವಾಗ ಅಂದರೆ ಬಹುಶ್ರೇಯಸೀ+ ಅಸ್ ಎಂದಿರುವಾಗ 'ಆಣ್‌ನದ್ಯಾಃ' ಎಂಬುದರಿಂದ ಆಟ್ ಬಂದು ಬಹುಶ್ರೇಯಸೀ+ ಆ+ಅಸ್ ಎಂದಿದ್ದಾಗ ಪ್ರಕೃತ ಸೂತ್ರದಿಂದ ವೃದ್ಧಿ ಆಗಿ 'ಸ್' ಕಾರಕ್ಕೆ ರುತ್ವ–ವಿಸರ್ಗಗಳಾಗಿ, ಬಹುಶ್ರೇಯಸ್ಯಾಃ ಎಂದು ರೂಪವು ಸಿದ್ಧವಾಗುತ್ತದೆ.

ನದ್ಯಂತ ಆಗುವುದರಿಂದ ಆಮ್‌ಗೆ 'ನುಟ್' ಆಗಮವು ಬಂದು ಷಷ್ಠೀ ಬಹುವಚನದಲ್ಲಿ ಬಹುಶ್ರೇಯಸೀ+ನ್+ಆಮ್=ಬಹುಶ್ರೇಯಸೀನಾಮ್ ಎಂದಾಗುತ್ತದೆ.

**(ಆಮ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ–199. ಙೇರಾಮ್ನದ್ಯಾಮ್ನೀಭ್ಯಃ (7.3.116)**

ವೃತ್ತಿಃ–ನದ್ಯನ್ತಾತ್ ಆಬನ್ತಾತ್ 'ನೀ'–ಶಬ್ದಾತ್ ಚ ಪರಸ್ಯ ಙೇಃ ಆಮ್।

ಬಹುಶ್ರೇಯಸ್ಯಾಮ್। ಶೇಷಂ ಪಪೀವತ್। ಅಙ್ಯನ್ತತ್ವಾತ್ ಸುಲೋಪಃ–ಅತಿಲಕ್ಷ್ಮೀಃ, ಶೇಷಂ ಬಹುಶ್ರೇಯಸೀವತ್। ಪ್ರಧೀಃ।

ಪ. ಛೇ. – ಙೇಃ, ಆಮ್, ನದೀ, ಆಪ್, ನೀಭ್ಯಃ ।

ಅ. ವ್ಯ. –'ಅಂಗಸ್ಯ' ಎಂಬುದು ಅಧಿಕಾರ ಸೂತ್ರ.

ಅರ್ಥ– ನದ್ಯನ್ತ, ಆಬನ್ತ ಮತ್ತು 'ನೀ' ಶಬ್ದಗಳ ಪರದಲ್ಲಿರುವ 'ಙಿ' – ಪ್ರತ್ಯಯಕ್ಕೆ ಆಮ್ ಆದೇಶವು ಬರುವುದು.

ಸಪ್ತಮೀ ಏಕವಚನದಲ್ಲಿ, ಬಹುಶ್ರೇಯಸ್ಯಾಮ್=ಬಹುಶ್ರೇಯಸೀ+ಇ (ಙಿ) ಎಂದಿದ್ದಾಗ ಪ್ರಕೃತ ಸೂತ್ರದಿಂದ 'ಆಮ್' ಆದೇಶ ಬಂದು ಬಹುಶ್ರೇಯಸೀ+ಆಮ್ ಎಂದಿದ್ದಾಗ ಸ್ಥಾನಿವದ್ಭಾವದಿಂದ ಆಮ್‌ಗೆ ಙಿದ್ವದ್ಭಾವ ಬಂದು 'ಆಣ್‌ನದ್ಯಾಃ' ಎಂಬ ಸೂತ್ರದಿಂದ 'ಆಟ್' ಆಗಮವು ಬಂದು ಬಹುಶ್ರೇಯಸೀ+ಆ+ಆಮ್ ಎಂದಾಗುತ್ತದೆ. 'ಆಟಶ್ಚ' ಸೂತ್ರದಿಂದ ಆ+ಆಮ್ ಗಳಿಗೆ ವೃದ್ಧಿ ಬಂದು ಆಮ್ ಎಂದಾಗುತ್ತದೆ. ಬಹುಶ್ರೇಯಸೀ+ಆಮ್ ಎಂದಿದ್ದಾಗ ಯಣ್ ಸಂಧಿಯಾಗಿ 'ಬಹುಶ್ರೇಯಸ್ಯಾಮ್' ಎಂದಾಗುತ್ತದೆ. ಇದರ ಉಳಿದ ರೂಪಗಳು ಪಪೀ ಶಬ್ದದಂತೆ ಆಗುತ್ತವೆ.

ಉದಾ –ಅತಿಲಕ್ಷ್ಮೀಃ – (ಲಕ್ಷ್ಮೀಯನ್ನು ಮೀರಿದ ಪುರುಷನು ಎಂದರ್ಥ. ಈ ಶಬ್ದವು 'ಙ್ಯನ್ತ'ವಾಗದಿರುವುದರಿಂದ (ಙೀಪ್, ಙೀಷ್, ಙೀನ್ ಇವುಗಳಲ್ಲಿ ಯಾವುದೊಂದನ್ನೂ ಅಂತವಾಗಿ ಪಡೆಯದೆ ಇರುವುದರಿಂದ) 'ಹಲ್-ಙ್ಯಾಭ್ಯೋದೀರ್ಘಾತ್ ಸುತಿಸಿ ಅಪೃಕ್ತಂ ಹಲ್' ಎಂಬುದರಿಂದ 'ಸು' ದ 'ಸ್'ಕಾರಕ್ಕೆ ಲೋಪವು ಬಾರದೆ ರುತ್ವ ವಿಸರ್ಗಗಳಾಗಿ 'ಅತಿಲಕ್ಷ್ಮೀಃ' ಎಂದಾಗಿದೆ. ಅತಿ ಲಕ್ಷ್ಮೀ ಶಬ್ದದ ಉಳಿದ ರೂಪಗಳು ಬಹುಶ್ರೇಯಸೀ ಶಬ್ದದಂತೆ ಆಗುತ್ತವೆ.

ಅತಿಕ್ರಾಂತಃ ಲಕ್ಷ್ಮೀಮ್ ಎಂಬ ವಿಗ್ರಹದಲ್ಲಿ 'ಅತ್ಯಾದಯಃ ಕ್ರಾಂತಾದ್ಯರ್ಥೇ ದ್ವಿತೀಯಯಾ' ಎಂಬ ವಾರ್ತಿಕದಿಂದ ಸಮಾಸವಾದ ಮೇಲೆ, ಸಿದ್ಧವಾಗುವ ಅತಿಲಕ್ಷ್ಮೀಃ ಎಂಬ ಶಬ್ದದಲ್ಲಿ ಅಂತರ್ಗತವಾದ ಲಕ್ಷ್ಮೀ ಶಬ್ದಕ್ಕೆ ನದೀ ಸಂಜ್ಞೆಯು ಇರುತ್ತದೆ. ಯಾಕೆಂದರೆ ಲಕ್ಷ್ಮೀ ಶಬ್ದವು ಸಮಾಸದ ಪೂರ್ವದಲ್ಲಿ ನಿತ್ಯ ಸ್ತ್ರೀಲಿಂಗವಾಗಿದೆ. ಸಮಾಸವಾದ ಮೇಲೆ ಪುಲ್ಲಿಂಗದ ರೂಪವನ್ನು ಪಡೆದು ಗೌಣವಾದರೂ ಪ್ರಥಮ ಲಿಂಗ ಗ್ರಹಣದ್ವಾರಾ ನದೀ ಸಂಜ್ಞೆಯು ಬಂದೇ ಬರುತ್ತದೆ. ಆದ್ದರಿಂದ ನದೀ ಸಂಜ್ಞೆ ಇದ್ದಾಗ ಆಗುವ ಎಲ್ಲ ಕಾರ್ಯಗಳು ಆಗುತ್ತವೆ.

ಉದಾ– ಪ್ರಧೀಃ –(ವಿಶೇಷವಾಗಿ ಮನನ ಮಾಡುವವನು ಎಂದರ್ಥ) – ಪ್ರಥಮಾ ಏಕವಚನದಲ್ಲಿ, ಪ್ರಧೀ+ಸ್(ಸು) ಎಂದಿದ್ದಾಗ, 'ಸ್'ಕಾರಕ್ಕೆ ರುತ್ವ–ವಿಸರ್ಗಗಳಾಗಿ ಪ್ರಧೀಃ ಎಂದಾಗಿದೆ. ಇದು ಅಙ್ಯನ್ತವಾಗಿರುವುದರಿಂದ 'ಸ್' ಕಾರಕ್ಕೆ ಲೋಪವು ಬಂದಿಲ್ಲ.

ಪ್ರಧ್ಯಾಯತಿ ಇತಿ ಪ್ರಧೀಃ। ಪ್ರಪೂರ್ವಕ 'ಧ್ಯೈ' ಚಿಂತಾಯಾಂ ಎಂಬ ಧಾತುವಿಗೆ ಧ್ಯಾಯತೇಃ ಸಂಪ್ರಸಾರಣಂಚ ಎಂಬುದರಿಂದ 'ಕ್ವಿಪ್' ಪ್ರತ್ಯಯವು ಬಂದು

ಸರ್ವಾಪಹಾರಿಯಾದ್ದರಿಂದ ಲೋಪವಾಗಿ, 'ಯ' ಕಾರಕ್ಕೆ ಸಂಪ್ರಾಸಾರಣವು ಆಗಿ, ಪ್ರ+ಧ್+ಇ+ಐ+ಃಎಂದಿರುವಾಗ 'ಸಂಪ್ರಸಾರಣಾಚ್ಚ' ಎಂಬುದರಿಂದ 'ಐ'ಕಾರಕ್ಕೆ ಪೂರ್ವರೂಪ ಆದೇಶವಾಗಿ 'ಹಲಃ' ಎಂಬ ಸೂತ್ರದಿಂದ ಹ್ರಸ್ವ 'ಇ'ಕಾರಕ್ಕೆ ದೀರ್ಘವಾಗಿ – 'ಪ್ರಧೀಃ' ಎಂದು ರೂಪವು ಸಿದ್ಧವಾಗುತ್ತದೆ.

**(ಇಯಙ್ – ಉವಙ್ – ಆದೇಶಗಳನ್ನು ವಿಧಿಸುವ ಸೂತ್ರ)**

**ಸೂತ್ರ– 200. ಅಚಿ ಶ್ನು–ಧಾತು–ಭ್ರುವಾಂ ಯ್ವೋರಿಯಙುವಙೌ (6.4.77)**

ವೃತ್ತಿಃ– ಶ್ನು–ಪ್ರತ್ಯಯಾಂತಸ್ಯ ಇ–ವರ್ಣ–ಉ–ವರ್ಣಾಂತಸ್ಯ ಧಾತೋಃ ಭ್ರೂ– ಇತ್ಯಸ್ಯ ಚ ಅಙ್ಗಸ್ಯ ಇಯಙುವಙೌ ಸ್ತಃ ಅಜಾದೌ ಪ್ರತ್ಯಯೇ ಪರೇ। ಇತಿ ಪ್ರಾಪ್ತೇ–

ಪ. ಛೇ. – ಅಚಿ, ಶ್ನು–ಧಾತು–ಭ್ರುವಾಂ, ಯ್ವೋಃ, ಇಯಙ್–ಉವಙೌ।

ಅ. ವೃ. –'ಅಂಗಸ್ಯ' ಎಂಬುದು ಅಧಿಕಾರ ಸೂತ್ರ ।

ಅರ್ಥ– ಅಜಾದಿ ಪ್ರತ್ಯಯವು ಪರದಲ್ಲಿದ್ದಾಗ 'ಶ್ನು' ಪ್ರತ್ಯಯಾಂತ ಅಂಗದ, 'ಇ' ವರ್ಣಾಂತ ಮತ್ತು 'ಉ' ವರ್ಣಾಂತ ಧಾತುರೂಪ ಅಂಗದ, ಹಾಗೆಯೇ 'ಪ್ರಧೀ' ಮತ್ತು 'ಭ್ರೂ' ರೂಪ ಅಂಗದ ಅಂತ್ಯ ವರ್ಣಗಳಾದ 'ಇ'ಕಾರ, 'ಉ'ಕಾರಗಳ ಸ್ಥಾನಗಳಲ್ಲಿ ಕ್ರಮವಾಗಿ 'ಇಯಙ್' ಮತ್ತು 'ಉವಙ್' – ಆದೇಶಗಳು ಬರುತ್ತವೆ.

ಉದಾ – ಪ್ರಧ್ಯೌ:– ಪ್ರಥಮಾ– ಮತ್ತು ದ್ವಿತೀಯಾ ವಿಭಕ್ತಿ ದ್ವಿವಚನಗಳಲ್ಲಿ – ಪ್ರಧೀ+ಔ ಎಂದಿದ್ದಾಗ 'ಅಜಾದಿ' ಪ್ರತ್ಯಯವು ಪರದಲ್ಲಿದೆ. 'ಈ' ಕಾರವು 'ಇ'ವರ್ಣಾಂತ ಧಾತುವಿನ ಅಂಗದ ಅಂತ್ಯದಲ್ಲಿದೆ. ಇಂತಹ 'ಈ' ಕಾರದ ಸ್ಥಾನದಲ್ಲಿ 'ಇಯಙ್' ಆದೇಶವು ಪ್ರಾಪ್ತವಾಗಲು ಮುಂದಿನ ಸೂತ್ರವು ಪ್ರವೃತ್ತವಾಗುತ್ತದೆ.

**(ಯಣಾದೇಶವನ್ನು ವಿಧಿಸುವ ಸೂತ್ರ)**

**ಸೂತ್ರ– 201. ಏರನೇಕಾಚೋಽಸಂಯೋಗಪೂರ್ವಸ್ಯ(6.4.82)**

ವೃತ್ತಿಃ–ಧಾತು–ಅವಯವ–ಸಂಯೋಗಪೂರ್ವೋ ನ ಭವತಿ ಯಃ ಇ–ವರ್ಣಃ, ತದನ್ತಃ ಯಃ ಧಾತುಃ ತದನ್ತಸ್ಯ ಅನೇಕಾಚಃ ಅಙ್ಗಸ್ಯ ಯಣ್ ಸ್ಯಾತ್ ಅಜಾದೌ ಪ್ರತ್ಯಯೇ। ಪ್ರಧ್ಯೌ। ಪ್ರಧ್ಯಃ। ಪ್ರಧ್ಯಮ್। ಪ್ರಧ್ಯೌ। ಪ್ರಧ್ಯಃ। ಪ್ರಧ್ಯಿ । ಶೇಷಂ ಪಪೀವತ್। ಏವಂ ಗ್ರಾಮಣೀಃ। ಙೌ ತು ಗ್ರಾಮಣ್ಯಾಮ್। ಅನೇಕಾಚಃ ಕಿಮ್– ನೀಃ। ನಿಯೌ। ನಿಯಃ। ಅಮಿ,ಶಸಿ ಚ ಪರತ್ವಾತ್ ಇಯಙ್। ನಿಯಮ್। ನಿಯೌ। ನಿಯಃ। ಙೇಃ ಆಮ್, ನಿಯಾಮ್। ಅಸಂಯೋಗಪೂರ್ವಸ್ಯ ಕಿಮ್? ಸುಶ್ರಿಯೌ। ಯವಕ್ರಿಯೌ।

ಪ. ಛೇ. – ಏಃ, ಅನೇಕಾಚಃ, ಅಸಂಯೋಗ–ಪೂರ್ವಸ್ಯ ।

ಅ.ವೃ. –'ಇಣೋಯಣ್' ಎಂಬ ಸೂತ್ರದಿಂದ 'ಯಣ್' ಎಂಬ ಪದವು ಮತ್ತು 'ಅಚಿ–ಶ್ನುಧಾತು–ಭ್ರುವಾಂ ಯ್ವೋರಿಯಙುವಙೌ'(6.4.77) ಎಂಬ ಸೂತ್ರದಿಂದ 'ಅಚಿ' ಎಂಬ ಪದವು ಹಾಗೂ 'ಏಕದೇಶವಾದ ಧಾತು' ಎಂಬ ಪದವನ್ನು ಷಷ್ಠ್ಯಂತವಾಗಿ ವಿಪರಿಣಾಮಗೊಳಿಸಿದ ನಂತರ ಅನುವೃತ್ತಿ ಮಾಡಲಾಗಿದೆ.

ಅರ್ಥ- ಧಾತ್ವವಯವವಾದ, ಸಂಯೋಗವನ್ನು ಪೂರ್ವವಾಗಿ ಇಲ್ಲದೇಯೂ ಇರುವ, ಯಾವ 'ಇ'ವರ್ಣಾನ್ತವಾದ ಧಾತುವಿದೆಯೋ, ಅದರ ಅನ್ತ್ಯದಲ್ಲಿ 'ಅನೇಕಾಚ್' ಆಗಿಯೂ ಇರುವ ಅಂಗದ ಅಂತ್ಯವರ್ಣವಾದ ಇ ಕಾರಕ್ಕೆ ಅಜಾದಿ ಪ್ರತ್ಯಯವು ಪರವಾದಾಗ 'ಯಣ್' (ಯ್) ಆದೇಶವಾಗಿ ಬರುತ್ತದೆ.

1. ಉದಾ- ಪ್ರಧ್ಯೌ ಪ್ರಥಮಾ-ದ್ವಿವಚನದಲ್ಲಿ - ಪ್ರಧೀ+ಔ ಎಂದಿದ್ದಾಗ ಪ್ರಕೃತ ಸೂತ್ರದಿಂದ 'ಇಯಙ್' ಬಾಧಿತವಾಗಿ 'ಯಣ್' (ಯ್)-ಆದೇಶವು ಬಂದು 'ಪ್ರಧ್ಯೌ' ಎಂದಾಗಿದೆ.
2. ಉದಾ- ಪ್ರಧ್ಯಃ- ಪ್ರಥಮಾ, ದ್ವಿತೀಯಾ, ಬಹುವಚನದಲ್ಲಿ ಮತ್ತು ಪಂಚಮೀ, ಷಷ್ಠೀ, ಏಕವಚನಗಳಲ್ಲಿ (ಅಂದರೆ ಜಸ್, ಶಸ್, ಙಸಿ ಮತ್ತು ಙಸ್ ಈ ನಾಲ್ಕು ಸ್ಥಳಗಳಲ್ಲಿ) ಪ್ರಕೃತ ಸೂತ್ರದಿಂದ ಪ್ರಧೀ+ಅಸ್ ಎಂದಾಗಿ 'ಯಣ್' ಸಂಧಿಯಿಂದ 'ಪ್ರಧ್ಯಸ್' ಎಂದಾಗಿ 'ಸ್' ಕಾರಕ್ಕೆ ರುತ್ವ-ವಿಸರ್ಗಗಳಿಂದ ಪ್ರಧ್ಯಃ ಎಂದಾಗುತ್ತದೆ.
3. ಉದಾ-ಪ್ರಧ್ಯಮ್ ದ್ವಿತೀಯಾ ವಿಭಕ್ತಿ ಏಕವಚನದಲ್ಲಿ - ಪ್ರಧೀ+ಅಮ್ ಎಂದಿರುವಾಗ ಪ್ರಕೃತ ಸೂತ್ರವು 'ಇಯಙ್' ಅನ್ನು ಬಾಧಿಸಿ 'ಯಣ್'(ಯ್) ಅನ್ನು ವಿಧಿಸಿರುವುದರಿಂದ, 'ಯಣ್'(ಯ್) ಆದೇಶವಾಗಿ 'ಪ್ರಧ್ಯಮ್' ಎಂದಾಗಿದೆ.
4. ಉದಾ- ಪ್ರಥಮಾ, ದ್ವಿತೀಯಾ ಬಹುವಚನ ಮತ್ತು ಪಂಚಮೀ ಷಷ್ಠೀ, ಏಕವಚನಗಳ ರೂಪವನ್ನು ಕ್ರ. ಸಂ. 2ರಲ್ಲಿ ತೋರಿಸಲಾಗಿದೆ.
5. ಉದಾ- ಪ್ರಧೀ:- ಸಪ್ತಮೀ ಏಕವಚನದಲ್ಲಿ -ಪ್ರಧೀ +ಇ (ಙಿ) ಎಂದಿದ್ದಾಗ ಪ್ರಕೃತ ಸೂತ್ರದಿಂದ ಯಣಾದೇಶವಾಗಿ ಪ್ರಧ್ಯಿ ಎಂದಾಗುತ್ತದೆ.

ಸೂಚನೆ:-ಈ ಶಬ್ದದ ಉಳಿದ ರೂಪಗಳು ಪಪೀ ಶಬ್ದದಂತೆ ಆಗುತ್ತವೆ. ಇದೇ ರೀತಿಯಾಗಿ 'ಗ್ರಾಮಣೀಃ' ಎಂಬ ಶಬ್ದವೂ ನಿಷ್ಪನ್ನವಾಗಿರುತ್ತದೆ.

ಉದಾ-ಗ್ರಾಮಣೀಃ- ಪ್ರಥಮಾ ಏಕವಚನದಲ್ಲಿ - ಗ್ರಾಮಣೀ+ಸ್ (ಸು) ಎಂದಿದ್ದಾಗ ಇದು ಅಜ್ಯಂತವಾಗಿರುವದರಿಂದ 'ಸ್' ಕಾರಕ್ಕೆ ಲೋಪವು ಬಾರದೇ ರುತ್ವ-ವಿಸರ್ಗಗಳಾಗಿ 'ಗ್ರಾಮಣೀಃ' ಎಂದಾಗುತ್ತದೆ.

ಉದಾ- ಗ್ರಾಮಣ್ಯಾಮ್ - ಸಪ್ತಮೀ ಏಕವಚನದಲ್ಲಿ - ಗ್ರಾಮಣೀ+(ಙಿ) ಎಂದಿದ್ದಾಗ 'ಙೇರಾಮ್ನದ್ಯಾಮ್ನೀಭ್ಯಃ' ಎಂಬುದರಿಂದ 'ಙಿ' ಗೆ 'ಆಮ್' ಆದೇಶವಾಗಿ ಗ್ರಾಮಣೀ+ಆಮ್ ಎಂದಿದ್ದಾಗ 'ಯಣ್'(ಯ್) ಆದೇಶವಾಗಿ 'ಗ್ರಾಮಣ್ಯಾಮ್' ಎಂದಾಗುತ್ತದೆ.

ಅನೇಕಾಚ್ ಎಂದು ಏಕೆ ಹೇಳಿದ್ದಾರೆ? ಅಂದರೆ ಇದಕ್ಕೆ ಸಮಾಧಾನವನ್ನು ಈ ಉದಾಹರಣೆಗಳ ಮೂಲಕ ತಿಳಿಸಿರುವರು.

1. ಉದಾ-ನೀಃ- ಪ್ರಥಮಾ ಏಕವಚನದಲ್ಲಿ-ನೀ+ಸ್ (ಸು) ಎಂದಿದ್ದಾಗ, ಇದು ಙ್ಯಂತವಾಗದಿರುವುದರಿಂದ 'ಹಲ್-ಙ್ಯಾಬ್ಭ್ಯೋ-ದೀರ್ಘಾತ್ ಸುತಿಸಿ ಅಪೃಕ್ತಂ ಹಲ್'

ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪವು ಬಾರದೇ, ರುತ್ವ-ವಿಸರ್ಗಗಳಾಗಿ ನೀಃ ಎಂದಾಗಿದೆ (ಇದು ಈ ಪ್ರಶ್ನೆಗೆ ಉತ್ತರವಲ್ಲ. ಕ್ರಮವನ್ನು ಅನುಸರಿಸಿ ಈ ಉದಾಹರಣೆಯನ್ನು ಮೊದಲು ಹೇಳಲಾಗಿದೆ. ನೀಯೌ-ಎಂಬುದೇ ಈ ಪ್ರಶ್ನೆಗೆ ಉತ್ತರವಾಗಿದೆ. ಅದನ್ನು ಕ್ರ. ಸಂ. 2 ರಲ್ಲಿ ತಿಳಿಸಲಾಗಿದೆ).

2. ಉದಾ- ನಿಯೌ- ಪ್ರಥಮಾ ದ್ವಿವಚನದಲ್ಲಿ ನಿಯೌ-ಎಂಬುದೇ ಈ ಪ್ರಶ್ನೆಗೆ ಉತ್ತರವಾಗಿದೆ. ನಿ+ ಔ ಎಂದಿದ್ದಾಗ ಇದು ಅನೇಕಾಚ್ ಆಗದಿರುವುದರಿಂದ ಪ್ರಕೃತ ಸೂತ್ರದಿಂದ ಯಣಾದೇಶವು ಬಾರದೇ ಪೂರ್ವಸೂತ್ರದಿಂದ 'ಇಯಙ್' ಆದೇಶವು ಬಂದು ನ್+ಇಯ್+ಔ='ನಿಯೌ' ಎಂದಾಗುತ್ತದೆ. (ಅನೇಕಾಚ್ ಎಂದು ಏಕೆ ಹೇಳಿದ್ದಾರೆ? ಎಂಬ ಪ್ರಶ್ನೆಗೆ ಇದು ಉತ್ತರವಾಗಿದೆ).

[ವಿವರಣೆ-ನೀ+ಔ ಎಂದಿದ್ದಾಗ 'ಇಕೋ ಯಣಚಿ' ಎಂಬುದರಿಂದ ಯಣಾದೇಶವು ಪಾಪ್ತವಾಗಲು, ಅದನ್ನು ಬಾಧಿಸಿ ಪೂರ್ವಸವರ್ಣದೀರ್ಘವು ಪ್ರಾಪ್ತವಾಗಲು, 'ದೀರ್ಘಾಜ್ಜಸಿಚ' ಎಂಬುದರಿಂದ ಇದರ ನಿಷೇಧವು ಪ್ರಾಪ್ತವಾಗಿ ಪುನಃ ಯಣಾದೇಶವು ಪ್ರಾಪ್ತವಾಗಲು, ಇದನ್ನು ಬಾಧಿಸಿ "ಅಚಿ ಶ್ನು-ಧಾತು-ಭ್ರುವಾಂ ಯ್ವೋರಿಯಙುವಙೌ (6.4.77) ಎಂಬ ಸೂತ್ರದಿಂದ 'ಇಯಙ್' ಆದೇಶವು ಬರುತ್ತದೆ.]

ಪ್ರಥಮಾ ಮತ್ತು ದ್ವಿತೀಯಾ ಬಹುವಚನಗಳಲ್ಲಿಯೂ ಅಂದರೆ, ಜಸ್ ಮತ್ತು ಶಸ್ ಗಳಲ್ಲಿಯೂ ಹಿಂದಿನಂತೆ 'ಇಯಙ್' ಆದೇಶವಾಗಿ ಬಂದು ನಿಯಃ ರೂಪವು ನಿಷ್ಪನ್ನವಾಗಿದೆ. (ಇದರ ಪ್ರಕ್ರಿಯೆಯನ್ನು ಕೆಳಗೆ ಕೊಡಲಾಗಿದೆ).

ಉದಾ- ನಿಯಮ್- ದ್ವಿತೀಯಾ ಏಕವಚನದಲ್ಲಿ (ನಿಯಮ್)=ನೀ+ಅಮ್ ಎಂದಿದ್ದಾಗ, 'ಅಮಿಪೂರ್ವಃ'(6.1.107) ಎಂಬುದರಿಂದ ಪೂರ್ವರೂಪವು ಪ್ರಾಪ್ತವಾಗಲು, ಪ್ರಕೃತ ಸೂತ್ರವು ಪರಸೂತ್ರವಾದ್ದರಿಂದ, ಅದನ್ನು ಬಾಧಿಸಿ "ಅಚಿ ಶ್ನು-ಧಾತು-ಭ್ರುವಾಂ ಯ್ವೋರಿಯಙುವಙೌ" (6.4.77) ಎಂಬ ಸೂತ್ರದಿಂದ, 'ಇಯಙ್' ಆದೇಶವು ಬಂದು ನ್+ಇಯ್+ಅಮ್=ನಿಯಮ್ ಎಂದಾಗಿದೆ.

ಉದಾ- ನಿಯಃ- ದ್ವಿತೀಯಾ ಬಹುವಚನದಲ್ಲಿ, ನಿಯಃ= ನೀ+ಅಸ್ (ಶಸ್) ಎಂದಿದ್ದಾಗ,'ಪ್ರಥಮಯೋಃಪೂರ್ವಸವರ್ಣಃ'ಎಂಬುದರಿಂದ ಪೂರ್ವ ಸವರ್ಣ ದೀರ್ಘವು ಪ್ರಾಪ್ತವಾಗಲು, ಪರವಾದ್ದರಿಂದ ಅದನ್ನು ಬಾಧಿಸಿ 'ಇಯಙ್' ಆದೇಶವು ಬಂದು ನ್+ಇಯ್+ಅಸ್ಎಂದಿದ್ದಾಗ 'ಸ್' ಕಾರಕ್ಕೆ ರುತ್ವ-ವಿಸರ್ಗಗಳಾಗಿ ನಿಯಃ ಎಂದಾಗಿದೆ.

ಉದಾ-ನಿಯಾಮ್ - ಸಪ್ತಮೀ ಏಕವಚನದಲ್ಲಿ (ನಿಯಾಮ್)=ನೀ+ಇ (ಙಿ) ಎಂದಿದ್ದಾಗ 'ಙೇರಾಮ್ನದ್ಯಾಮ್ನೀಭ್ಯಃ' ಎಂಬುದರಿಂದ 'ಆಮ್' ಆದೇಶವಾಗಿ ನೀ+ಆಮ್ ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ಇಯಙ್' ಆದೇಶವಾಗಿ ನ್+ಇಯ್+ಆಮ್= ನಿಯಾಮ್ ಎಂದಾಗಿದೆ.

'ಅಸಂಯೋಗಪೂರ್ವಸ್ಯ' ಎಂದು ಏಕೆ ಹೇಳಿರುವರು? ಅಂದರೆ ಇದಕ್ಕೆ

ಸಮಾಧಾನವನ್ನು ಈ ಉದಾಹರಣೆಗಳ ಮೂಲಕ ತಿಳಿಸುವರು.

ಸುಶ್ರಿಯೌ ಮತ್ತು ಯವಕ್ರಿಯೌ ಎಂಬ ಎರಡರಲ್ಲೂ ಶ್ರೀ ಮತ್ತು ಕ್ರೀ ಇವೆರಡರ ಅಂತ್ಯವರ್ಣವಾದ ಈ ಕಾರದ ಪೂರ್ವದಲ್ಲಿ ಸಂಯುಕ್ತಾಕ್ಷರಗಳು ಇರುವುದರಿಂದ ಅಸಂಯೋಗ ಪೂರ್ವವಾಗಿಲ್ಲಾ. ಆದ್ದರಿಂದ ಯಣಾದೇಶವು ಬಾರದೇ 'ಇಯಙ್' ಆದೇಶ ಬಂದು ಈ ರೂಪಗಳು ಸಿದ್ಧವಾಗಿವೆ.

**(ಗತಿ ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ- 202. ಗತಿಶ್ಚ (1.4.60)**

ವೃತ್ತಿಃ-ಪ್ರಾದಯಃ ಕ್ರಿಯಾಯೋಗೇ ಗತಿಸಂಜ್ಞಾಃ ಸ್ಯುಃ।

ವಾ॥ ಗತಿ-ಕಾರಕೇತರ-ಪೂರ್ವಪದಸ್ಯ ಯಣ್ ನೇಷ್ಯತೇ। ಶುದ್ಧಧಿಯೌ।

ಪ. ಛೇ. - ಗತಿಃ, ಚ ।

ಅ. ವ್ಯ -ಪ್ರಾದಯಃ ಎಂಬ ಸೂತ್ರದಿಂದ ಪ್ರಾದಯಃ ಎಂಬ ಪದವು, 'ಉಪಸರ್ಗಾಃ ಕ್ರಿಯಾಯೋಗೇ' ಎಂಬುದರಿಂದ ಕ್ರಿಯಾಯೋಗೆ ಎಂಬ ಪದವು ಅನುವೃತ್ತವಾಗುತ್ತವೆ.

ಅರ್ಥ- ಪ್ರ, ಪರಾ ಮೊದಲಾದ ಶಬ್ದಗಳಿಗೆ ಕ್ರಿಯಾಯೋಗವಿದ್ದಾಗ ಗತಿ ಸಂಜ್ಞೆಯನ್ನು ಪಡೆಯುತ್ತವೆ.

ವಾರ್ತಿಕ **-ವಾ॥ ಗತಿ-ಕಾರಕೇತರ-ಪೂರ್ವಪದಸ್ಯ ಯಣ್ ನೇಷ್ಯತೇ। -**

ಗತಿ ಮತ್ತು ಕಾರಕ ಇವುಗಳಿಗಿಂತ ಭಿನ್ನವಾದ ಪೂರ್ವ ಪದಕ್ಕೆ ಯಣಾದೇಶವಿರುವದಿಲ್ಲ.

ಉದಾ - ಶುದ್ಧಧೀಃ ಎಂಬ ಶಬ್ದದಲ್ಲಿ ಶುದ್ಧ ಎಂಬ ಪದವು ಗತಿಯೂ ಅಲ್ಲ, ಕಾರಕವೂ ಅಲ್ಲ. ಆದ್ದರಿಂದ ಶುದ್ಧಧೀ+ಔ ಎಂದಿದ್ದಾಗ ಯಣಾದೇಶವು ಬಾರದೇ 'ಇಯಙ್' ಆದೇಶವು ಬಂದು ಶುದ್ಧಧಿಯೌ ಎಂದಾಗಿದೆ. (ಇದು ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿಗಳ ದ್ವಿವಚನ ರೂಪವಾಗಿದೆ.

**(ಯಣ್-ನಿಷೇಧವನ್ನು ವಿಧಿಸುವ ಸೂತ್ರ)**

**ಸೂತ್ರ- 203. ನ ಭೂ ಸುಧಿಯೋಃ (6.4.85)**

ವೃತ್ತಿಃ-ಏತಯೋಃ ಅಚಿ ಸುಪಿ ಯಣ್ ನ। ಸುಧಿಯೌ। ಸುಧಿಯಃ, ಇತ್ಯಾದಿ। ಸುಖಮಿಚ್ಛತಿ ಇತಿ ಸುಖೀಃ। ಸುತಂ ಇಚ್ಛತಿ ಇತಿ ಸುತೀಃ। ಸುಖ್ಯೌ, ಸುತ್ಯೌ। ಸುಖ್ಯುಃ, ಸುತ್ಯುಃ। ಶೇಷಂ ಸುಧೀವತ್। ಶಂಭುಃ ಹರಿವತ್। ಏವಂ ಭಾನ್ವಾದಯಃ।

ಅ. ವ್ಯ.-'ಅಚಿ ಶ್ನು ಧಾತುಭ್ರುವಾಂ ಯ್ವೋರಿಯಙುವಙೌ' ಎಂಬುದರಿಂದ 'ಅಚಿ' ಎಂಬ ಪದವು 'ಓಃ ಸುಪಿ' ಎಂಬ ಸೂತ್ರದಿಂದ 'ಸುಪಿ' ಎಂಬ ಪದವು 'ಇಣೋಯಣ್' ಎಂಬುದರಿಂದ ಯಣ್ ಎಂಬ ಪದವು ಅನುವೃತ್ತವಾಗುತ್ತವೆ.

ಅರ್ಥ-ಭೂ ಮತ್ತು ಸುಧೀ ಶಬ್ದಗಳಿಗೆ ಅಜಾದಿಯಾದ 'ಸುಪ್' ಪ್ರತ್ಯಯವು ಪರದಲ್ಲಿದ್ದಾಗ ಯಣಾದೇಶವು ಬರುವುದಿಲ್ಲ.

ಉದಾ–ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿಗಳ ದ್ವಿಚನದಲ್ಲಿ–ಸುಧೀ+ಔ ಎಂದಿದ್ದಾಗ, ಪ್ರಕೃತ ಸೂತ್ರದಿಂದ ಯಣಾದೇಶವು ಬಾರದೇ 'ಇಯಙ್' ಆದೇಶವಾಗಿ, ಸುಧ್+ಇಯ್+ಔ=ಸುಧಿಯೌ ಎಂದಾಯಿತು. (ಈ ಶಬ್ದಕ್ಕೆ ಉತ್ತಮ ಚಿಂತನೆ ಮಾಡುವವನು ಎಂದರ್ಥ). ಇದರಂತೆ ಸುಧಿಯಃ ಮೊದಲಾದವುಗಳು ನಿಷ್ಪನ್ನ–ವಾಗುತ್ತವೆ.

ಸುಖೀಃ – ಎಂದರೆ ಸುಖವನ್ನು ಇಚ್ಛಿಸುವವನು ಎಂದರ್ಥ. ಸುತೀಃ ಎಂದರೆ ಮಗನನ್ನು ಇಚ್ಛಿಸುವವನು ಎಂದರ್ಥ. ಈ ಎರಡೂ ಶಬ್ದಗಳು ಈಕಾರಾಂತಗಳಾಗಿವೆ. ಈಕಾರವು ಙ್ಯಂತವಲ್ಲ.

ಸುಖ ಶಬ್ದದ ಮೇಲೆ 'ಕ್ಯಚ್' ಪ್ರತ್ಯಯ ಬಂದು, ಸುಖ+ಕ್ಯಚ್(ಯ)=ಸುಖಯ ಎಂದಾಗಿ, ಅದಕ್ಕೆ ಧಾತುಸಂಜ್ಞೆ ಬಂದು, 'ಕ್ಯಚಿ ಚ' ಸೂತ್ರದಿಂದ ಪೂರ್ವದಲ್ಲಿರುವ ಅ–ಕಾರಕ್ಕೆ 'ಈ' ಕಾರ ಬಂದು, ಸುಖೀಯ ಎಂದಾಗುತ್ತದೆ. ಇದರಮೇಲೆ ಕ್ವಿಪ್ ಪ್ರತ್ಯಯ ಬಂದು, ಸರ್ವಾಪಹಾರಲೋಪವಾಗಿ, 'ಅತೋಲೋಪಃ' ಎಂಬುದರಿಂದ ಸುಖೀಯ ಎಂಬಲ್ಲಿರುವ ಯ ಕಾರೋತ್ತರವರ್ತಿ ಅ ಕಾರಕ್ಕೆ ಲೋಪ ಬಂದು, 'ಲೋಪೋವ್ಯೋರ್ವಲಿ' ಎಂಬುದರಿಂದ 'ಯ' ಕಾರಕ್ಕೂ ಲೋಪ ಬಂದು ಸುಖೀ ಎಂಬ ಪ್ರಾತಿಪದಿಕವಾಗುತ್ತದೆ. ಈಗ ಪ್ರಥಮೈಕವಚನದಲ್ಲಿ ಸುಖೀ+ಸ್ (ಸು) ಎಂದಿದ್ದಾಗ, ರುತ್ವ–ವಿಸರ್ಗಗಳಿಂದ ಸುಖೀಃ ಎಂದು ರೂಪವಾಗುತ್ತದೆ. ಇದೇ ರೀತಿಯಲ್ಲಿ ಸುತೀಃ ಎಂಬ ಶಬ್ದವೂ ನಿಷ್ಪನ್ನವಾಗುತ್ತದೆ.

ಪ್ರಥಮಾ ಮತ್ತು ದ್ವಿತೀಯಾ ದ್ವಿವಚನಗಳಲ್ಲಿ– ಸುಖಿ+ಔ ಎಂದಿದ್ದಾಗ 'ಏರನೇಕಾಚೋಽಸಂಯೋಗಪೂರ್ವಸ್ಯ' ಎಂಬುದರಿಂದ ಯಣಾದೇಶ ಬಂದು ಸುಖ್ಯೌ ಎಂದಾಗಿದೆ. ಇದರಂತೆ ಸುತ್ಯೌ ಎಂಬುದೂ ರೂಪವನ್ನು ಪಡೆಯುತ್ತದೆ.

ಪ್ರಥಮಾ ಬಹುವಚನದಲ್ಲಿ ಸುಖೀ+ಅಸ್ (ಜಸ್) ಎಂದಿದ್ದಾಗ 'ಏರನೇಕಾಚೋಽಸಂಯೋಗಪೂರ್ವಸ್ಯ' ಎಂಬುದರಿಂದ ಯಣಾದೇಶವಾಗಿ, ಸುಖ್+ಯ್+ಅಸ್ ಎಂದಿರುವಾಗ 'ಖ್ಯತ್ಯಾತ್ಪರಸ್ಯ' ಎಂಬುದರಿಂದ ಅ–ಕಾರಕ್ಕೆ ಉ–ಕಾರಾದೇಶವಾಗಿ ಸ್ ಕಾರಕ್ಕೆ ರುತ್ವ ವಿಸರ್ಗಗಳು ಬಂದು ಸುಖ್ಯುಃ ಎಂದಾಯಿತು. ಇದರಂತೆ ಸುತ್ಯುಃ ಎಂಬುದನ್ನು ತಿಳಿಯಬೇಕು. ಇವುಗಳ ಉಳಿದ ರೂಪಗಳು ಪ್ರಧೀ ಶಬ್ದದಂತೆ ಆಗುತ್ತದೆ

**ಈ–ಕಾರಾನ್ತ 'ಸುಖೀ' ಶಬ್ದದ ರೂಪಗಳು**

| ವಿಭಕ್ತಿ | ಏ.ವ. | ದ್ವಿ.ವ. | ಬ. ವ. |
|---|---|---|---|
| ಪ್ರಥಮಾ | ಸುಖೀಃ | ಸುಖ್ಯೌ | ಸುಖ್ಯುಃ॥ |
| ದ್ವಿತೀಯಾ | ಸುಖ್ಯಮ್ | ಸುಖ್ಯೌ | ಸುಖ್ಯುಃ॥ |
| ತೃತೀಯಾ | ಸುಖ್ಯಾ | ಸುಖೀಭ್ಯಾಮ್ | ಸುಖೀಭಿಃ॥ |
| ಚತುರ್ಥೀ | ಸುಖ್ಯೇ | ಸುಖೀಭ್ಯಾಮ್ | ಸುಖೀಭ್ಯಃ॥ |

| | | | |
|---|---|---|---|
| ಪಂಚಮೀ | ಸುಖ್ಯುಃ | ಸುಖೀಭ್ಯಾಮ್ | ಸುಖೀಭ್ಯಃ। |
| ಷಷ್ಠೀ | ಸುಖ್ಯುಃ | ಸುಖ್ಯೋಃ | ಸುಖ್ಯಾಮ್। |
| ಸಪ್ತಮೀ | ಸುಖ್ಯಿ | ಸುಖ್ಯೋಃ | ಸುಖೀಷು। |
| ಸಂಬೋಧನ | ಹೇ ಸುಖೀಃ | ಹೇ ಸುಖ್ಯೌ | ಹೇ ಸುಖ್ಯಃ। |

ಸೂಚನೆ: 'ಸುತೀ' ಶಬ್ದದ ರೂಪಗಳೂ ಮೇಲಿನಂತೆಯೇ ಇರುತ್ತವೆ.

**ಇಲ್ಲಿಗೆ ಈಕಾರಾಂತ ಶಬ್ದಗಳು ಮುಗಿದವು.**

**'ಉ'ಕಾರಾಂತ ಶಬ್ದಗಳು ಪ್ರಾರಂಭವಾಗುತ್ತವೆ.**

ಶಂಭು ಶಬ್ದವು ಹರಿ ಶಬ್ದದ ಪ್ರಕ್ರಿಯೆಯನ್ನೇ ಅನುಸರಿಸುತ್ತದೆ. ಇದೇ ರೀತಿ ಭಾನು ಮೊದಲಾದ ಶಬ್ದಗಳನ್ನು ತಿಳಿಯಬೇಕು.

**[ಇಲ್ಲಿಗೆ ಉಕಾರಾಂತ ಶಬ್ದಗಳು ಮುಗಿದವು].**

[ಸೂಚನೆ: ಊ (ದೀರ್ಘ)ಕಾರಾನ್ತ ಶಬ್ದಗಳು ಕೆಲವು ಸೂತ್ರಗಳ ನಂತರ ಹೇಳಲ್ಪಡುತ್ತವೆ]. (ಸೂತ್ರ 210 ನೋಡಿರಿ).

**(ಋ-ಕಾರಾಂತ ಶಬ್ದವು ಆರಂಭವಾಗುತ್ತದೆ)**

**(ತೃಜ್ವದ್ಭಾವವನ್ನು ವಿಧಿಸುವ ಅತಿದೇಶ ಸೂತ್ರ )**

**ಸೂತ್ರ- 204. ತೃಜ್ವತ್ ಕ್ರೋಷ್ಟುಃ (7.1.95)**

ವೃತ್ತಿಃ-ಅಸಂಬುದ್ಧೌ ಸರ್ವನಮಾಸ್ಥಾನೇ ಪರೇ ಕ್ರೋಷ್ಟು-ಶಬ್ದಸ್ಯ ಸ್ಥಾನೇ ಕ್ರೋಷ್ಟೃಶಬ್ದಃ ಪ್ರಯೋಕ್ತವ್ಯಃ ಇತ್ಯರ್ಥಃ।

ಅ.ವೃ. - 'ಸಖ್ಯುರಸಂಬುದ್ಧೌ' ಎಂಬ ಸೂತ್ರದಿಂದ 'ಅಸಂಬುದ್ಧೌ' ಎಂಬ ಪದವು ಮತ್ತು 'ಇತೋಽಅತ್-ಸರ್ವನಾಮಸ್ಥಾನೇ' ಎಂಬ ಸೂತ್ರದಿಂದ ಸರ್ವನಾಮಸ್ಥಾನೇ ಎಂಬ ಪದವು ಅನುವೃತ್ತವಾಗುತ್ತವೆ.

ಅರ್ಥ- ಸಂಬುದ್ಧಿಗಿಂತ ಭಿನ್ನವಾದ ಸರ್ವನಾಮಸ್ಥಾನ (ಸ್ವಾದಿ ಪಞ್ಚ ವಿಭಕ್ತಿಗಳು)ವು ಪರದಲ್ಲಿ ಇದ್ದಾಗ 'ಉ' ಕಾರಾನ್ತ ಕ್ರೋಷ್ಟು ಶಬ್ದದ ಸ್ಥಾನದಲ್ಲಿ 'ಋ'ಕಾರಾನ್ತವಾದ ಕ್ರೋಷ್ಟೃ ಶಬ್ದವನ್ನು ಪ್ರಯೋಗಿಸಬೇಕು. ಈ ಸೂತ್ರವನ್ನು ಅತಿದೇಶ ಸೂತ್ರವೆಂದು ವ್ಯವಹರಿಸುತ್ತಾರೆ.

**(ಗುಣವನ್ನು ವಿಧಿಸುವ ಸೂತ್ರ)**

**ಸೂತ್ರ- 205. ಋತೋ ಙಿ-ಸರ್ವನಾಮಸ್ಥಾನಯೋಃ (7.3.110)**

ವೃತ್ತಿಃ-ಋತೋಽಙ್ಗಸ್ಯ ಗುಣೋ ಙೌ ಸರ್ವನಾಮಸ್ಥಾನೇ ಚ। ಇತಿ ಪ್ರಾಪ್ತೇ-

ಅ.ವೃ. -'ಅಂಗಸ್ಯ' ಎಂಬುದು ಅಧಿಕಾರ ಸೂತ್ರ, 'ಹ್ರಸ್ವಸ್ಯ ಗುಣಃ' ಎಂಬ ಸೂತ್ರದಿಂದ 'ಗುಣಃ' ಎಂಬ ಶಬ್ದವು ಅನುವೃತ್ತವಾಗುತ್ತದೆ.

ಅರ್ಥ- ಹ್ರಸ್ವ 'ಋ'ಕಾರಾನ್ತ ಅಂಗಕ್ಕೆ ಗುಣವು ಬರುತ್ತದೆ. 'ಙಿ' ಮತ್ತು

ಸರ್ವಸರ್ವನಾಮಸ್ಥಾನ ಪ್ರತ್ಯಯಗಳು ಪರದಲ್ಲಿದ್ದಾಗ.

ಉದಾ–ಕ್ರೋಷ್ಟೃ+ಸ್ (ಸು) ಎಂದಿದ್ದಾಗ 'ಋ'ಕಾರಾಂತ ಅಂಗವಾದ ಕ್ರೋಷ್ಟೃ ಶಬ್ದದ ಪರದಲ್ಲಿ 'ಸು' ಎಂಬ ಸರ್ವನಾಮಸ್ಥಾನವು ಪರದಲ್ಲಿರುವುದರಿಂದ ಗುಣವು ಪ್ರಾಪ್ತವಾಗಲು, ನಿಷೇಧವನ್ನು ಮುಂದಿನ ಸೂತ್ರದಿಂದ ಮಾಡುತ್ತಾರೆ.

**(ಗುಣವನ್ನು ನಿಷೇಧಿಸಿ 'ಅನಙ್' ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ– 206. ಋದುಶನಸ್ಪುರುದಂಸೋऽನೇಹಸಾಂ ಚ (7.1.94)**

ವೃತ್ತಿಃ–ಋದಂತಾನಾಂ ಉಶನಸಾದೀನಾಂ ಚ ಅನಙ್ ಸ್ಯಾತ್ ಅಸಂಬುದ್ಧೌ ಸೌ।

ಪ. ಛೇ. – ಋತ್–ಉಶನಸ್–ಪುರುದಂಸಃ, ಅನೇಹಸಾಂ, ಚ।

ಅ. ವೃ. –'ಸಖ್ಯುರಸಂಬುದ್ಧೌ' ಎಂಬ ಸೂತ್ರದಿಂದ 'ಅಸಂಬುದ್ಧೌ' ಎಂಬ ಪದವು ಮತ್ತು 'ಅನಙ್ ಸೌ' ಎಂಬ ಸೂತ್ರದಿಂದ 'ಸೌ' ಎಂಬ ಶಬ್ದದ ಅನುವೃತ್ತಿಯು ಆಗುತ್ತದೆ. 'ಅಂಗಸ್ಯ' ಎಂಬುದು ಅಧಿಕಾರ ಸೂತ್ರ.

ಅರ್ಥ– ಹ್ರಸ್ವ–ಋಕಾರಾಂತ, ಉಶನಸ್, ಪುರುದಂಸಸ್ ಮತ್ತು ಅನೇಹಸ್ ಎಂಬ ಈ ಶಬ್ದಗಳ ಅಂಗಕ್ಕೆ ಸಂಬುದ್ಧಿ ಭಿನ್ನವಾದ 'ಸು' ಪ್ರತ್ಯಯವು ಪರದಲ್ಲಿದ್ದಾಗ 'ಅನಙ್' (ಅನ್) ಆದೇಶವು ಬರುತ್ತದೆ.

ಉದಾ–ಕ್ರೋಷ್ಟೃ+ಅನಙ್+ಸು ಎಂದಿದ್ದಾಗ, ಈ **'ಅನಙ್'** ಆದೇಶವು ಅನೇಕಾಲ್ ಆಗಿದ್ದರೂ 'ಙಿಚ್ಚ' ಎಂಬ ಸೂತ್ರದಿಂದ ಅನ್ತ್ಯ ವರ್ಣ(ಋ)ಕ್ಕೇನೇ ಆದೇಶವು ಬರುತ್ತದೆ. ಆಗ ಕ್ರೋಷ್ಟೃ+ಅನ್(ಅನಙ್)+ಸು ಎಂದಿದ್ದಾಗ, ಮುಂದಿನ ಸೂತ್ರವು ಉಪಧೆಗೆ ದೀರ್ಘವನ್ನು ವಿಧಿಸುತ್ತದೆ.

**(ಉಪಧೆಗೆ ದೀರ್ಘವನ್ನು ವಿಧಿಸುವ ಸೂತ್ರ)**

**ಸೂತ್ರ– 207. ಅಪ್ತೃನ್ – ತೃಚ್ – ಸ್ವಸೃ – ನಪ್ತೃ – ನೇಷ್ಟೃ – ತ್ವಷ್ಟೃ – ಕ್ಷತ್ತೃ – ಹೋತೃ–ಪೋತೃ– ಶಾಸ್ತ್ರೂಣಾಮ್ (6.4.11)**

ವೃತ್ತಿಃ–ಅಬಾದೀನಾಂ ಉಪಧಾಯಾಃ ದೀರ್ಘಃ ಅಸಂಬುದ್ಧೌ ಸರ್ವನಾಮಸ್ಥಾನೇ। ಕ್ರೋಷ್ಟಾ। ಕ್ರೋಷ್ಟಾರೌ। ಕ್ರೋಷ್ಟಾರಃ। ಕ್ರೋಷ್ಟಾರಮ್। ಕ್ರೋಷ್ಟಾರೌ। ಕ್ರೋಷ್ಟೂನ್।

ಪ.ಛೇ. – ಅಪ್ತೃನ್ – ತೃಚ್ – ಸ್ವಸೃ – ನಪ್ತೃ – ನೇಷ್ಟೃ – ತ್ವಷ್ಟೃ– ಕ್ಷತ್ತೃ – ಹೋತೃ– ಪೋತೃ–ಪ್ರಶಾಸ್ತ್ರೂಣಾಮ್

ಅ. ವೃ. –"ನೋಪಧಾಯಾಃ" ಎಂಬ ಸೂತ್ರದಿಂದ 'ಉಪಧಾಯಾಃ'ಎಂಬ ಪದವೂ "ಢ್ರಲೋಪೇ ಪೂರ್ವಸ್ಯ ದಿರ್ಘೋऽಣಃ " ಎಂಬ ಸೂತ್ರದಿಂದ ದೀರ್ಘಃ ಎಂಬ ಪದವು ಮತ್ತು 'ಸರ್ವನಾಮಸ್ಥಾನೇ ಚ ಅಸಂಬುದ್ಧೌ' ಎಂಬುದರಿಂದ ಅಸಂಬುದ್ಧೌ ಮತ್ತು ಸರ್ವನಾಮಸ್ಥಾನೇ ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ– ಅಪ್, ತೃನ್ ಪ್ರತ್ಯಯಾಂತ, ತೃಚ್ ಪ್ರತ್ಯಯಾಂತ, ಶಬ್ದಗಳ ಹಾಗೂ

ಸ್ವಸೃ, ನಪ್ತೃ, ನೇಷ್ಟೃ, ತ್ವಷ್ಟೃ, ಕ್ಷತ್ತೃ, ಹೋತೃ, ಪೋತೃ ಮತ್ತು ಪ್ರಶಾಸ್ತೃ ಈ ಶಬ್ದಗಳ ಉಪಧೆಗೆ ಸಂಬುದ್ಧಿ ಭಿನ್ನವಾದ ಸರ್ವನಾಮ ಸ್ಥಾನವು ಪರದಲ್ಲಿದ್ದಾಗ ದೀರ್ಘವು ಬರುತ್ತದೆ.

[ಅಪ್ – ಜಲ, ಸ್ವಸೃ– ಸಹೋದರಿ, ನಪ್ತೃ – ಮಗಳಮಗ, ನೇಷ್ಟೃ – ದಾನ ಮಾಡುವವನು, ತ್ವಷ್ಟೃ– ಅಸುರ, ಕ್ಷತ್ತೃ – ಕತ್ತರಿಸುವವನು(ಶಿಲ್ಪಿ),ಸಾರಥಿ ಅಥವಾ ದ್ವಾರಪಾಲಕ, ಅಥವಾ ವಿದುರನಂತೆ ಜನ್ಮತಾಳಿದವನು, ಹೋತೃ – ಹೋಮ ಮಾಡುವವನು, ಪೋತೃ – ಪಾವನಗೊಳಿಸುವವನು, ಪ್ರಶಾಸ್ತೃ – ಶಾಸನ ಮಾಡುವವನು ಎಂದರ್ಥ).

ಉದಾ– ಪ್ರಥಮಾ ವಿಭಕ್ತಿ ಏಕವಚನದಲ್ಲಿ ಕ್ರೋಷ್ಟೃ+ಅನಙ್+ಸು ಎಂದಿದ್ದಾಗ, ಈ 'ಅನಙ್'ಆದೇಶವು ಅನೇಕಾಲ್ ಆಗಿದ್ದರೂ 'ಙಿಚ್ಚ' ಎಂಬ ಸೂತ್ರದಿಂದ ಅನ್ತ್ಯ ವರ್ಣ(ಋ)ಕ್ಕೇನೇ ಆದೇಶವು ಬಂದು ಕ್ರೋಷ್ಟ್+ಅನ್(ಅನಙ್)+ಸು ಎಂದಿದ್ದಾಗ, ಕ್ರೋಷ್ಟ್+ಅನ್+ಸ್ ಎಂದಾಗಿ, ಕ್ರೋಷ್ಟನ್+ಸ್ ಎಂದಿದ್ದಾಗ, ಪ್ರಕೃತ ಸೂತ್ರದಿಂದ ಉಪಧಾ – 'ಅ'ಕಾರಕ್ಕೆ ದೀರ್ಘ ಬಂದು ಕ್ರೋಷ್ಟಾನ್+ಸ್ ಎಂದಿದ್ದಾಗ, 'ಹಲ್‌ಙ್ಯಾಭ್ಯೋ ದೀರ್ಘಾತ್ ಸುತಿಸಿ ಅಪೃಕ್ತಂ' ಎಂಬುದರಿಂದ 'ಸ್' ಕಾರಕ್ಕೆ, ಮತ್ತು 'ನ ಲೋಪಃ ಪ್ರಾತಿಪದಿಕಾನ್ತಸ್ಯ' ಎಂಬ ಸೂತ್ರದಿಂದ 'ನ್' ಕಾರಕ್ಕೆ ಲೋಪ ಬಂದು ಕ್ರೋಷ್ಟಾ ಎಂದು ರೂಪವು ಸಿದ್ಧವಾಗುತ್ತದೆ.

ಉದಾ–ಕ್ರೋಷ್ಟಾರೌ– ಪ್ರಥಮಾ ವಿಭಕ್ತಿ ದ್ವಿವಚನದಲ್ಲಿ ಕ್ರೋಷ್ಟೃ+ಔ ಎಂದಿದ್ದಾಗ, 'ಋತೋಙಿಸರ್ವನಾಮಸ್ಥಾನಯೋಃ' ಎಂಬುದರಿಂದ ಗುಣ ಬಂದು,

ಕ್ರೋಷ್ಟರ್+ಔ ಎಂದಿದ್ದಾಗ, ಪ್ರಕೃತ ಸೂತ್ರದಿಂದ ಉಪಧಾ ದೀರ್ಘವಾಗಿ ಕ್ರೋಷ್ಟಾರೌ ಎಂದು ರೂಪವು ಸಿದ್ಧವಾಗುತ್ತದೆ.

ಉದಾ–ಕ್ರೋಷ್ಟಾರಃ –ಪ್ರಥಮಾ ವಿಭಕ್ತಿ ಬಹುವಚನದಲ್ಲಿ ಕ್ರೋಷ್ಟೃ+ಅಸ್(ಜಸ್) ಎಂದಿದ್ದಾಗ, ಪೂರ್ವ ಸೂತ್ರದಿಂದ ಗುಣವಾಗಿ ಪ್ರಕೃತ ಸೂತ್ರದಿಂದ ಉಪಧೆಗೆ ದೀರ್ಘವಾಗಿ 'ಸ್' ಕಾರಕ್ಕೆ ರುತ್ವ–ವಿಸರ್ಗಗಳಾಗಿ ಕ್ರೋಷ್ಟಾರಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ–ಕ್ರೋಷ್ಟಾರಮ್– ದ್ವಿತೀಯಾ ವಿಭಕ್ತಿ ಏಕವಚನದಲ್ಲಿ ಕ್ರೋಷ್ಟೃ+ಅಮ್ ಎಂದಿದ್ದಾಗ, ಹಿಂದಿನ ಪ್ರಕ್ರಿಯೆಯಂತೆ ರೂಪವನ್ನು ತಿಳಿಯಬೇಕು.

ದ್ವಿತೀಯಾ ವಿಭಕ್ತಿ ದ್ವಿ ವಚನದಲ್ಲಿ, ಪಥಮಾ ವಿಭಕ್ತಿ ದ್ವಿವಚನದಂತೆಯೇ ಕ್ರೋಷ್ಟಾರೌ ಎಂಬ ರೂಪವು ಸಿದ್ಧಿಸುತ್ತದೆ.

ಉದಾ–ಕ್ರೋಷ್ಟೂನ್ –ದ್ವಿತೀಯಾ ವಿಭಕ್ತಿ ಬಹು ವಚನದಲ್ಲಿ, ಕ್ರೋಷ್ಟು+ಅಸ್ (ಶಸ್) ಎಂದಿದ್ದಾಗ, 'ಶಸ್' ಸರ್ವನಾಮ ಸ್ಥಾನವಾಗದೇ ಇರೋಣದ್ದರಿಂದ ತೃಜ್ವದ್ಭಾವವು ಬಾರದೇ, 'ಪೂರ್ವಸವರ್ಣದೀರ್ಘವಾಗಿ' ಕ್ರೋಷ್ಟೂ+ಸ್ ಎಂದಿದ್ದಾಗ, 'ತಸ್ಮಾಚ್ಛಸೋಃ ನಃ ಪುಂಸಿ' ಎಂಬುದರಿಂದ 'ಸ್'

ಕಾರಕ್ಕೆ 'ನ್'ಕಾರಾದೇಶವಾಗಿ ಕ್ರೋಷ್ಟೂನ್ ಎಂದು ರೂಪವು ಸಿದ್ಧವಾಗುತ್ತದೆ.

**(ವೈಕಲ್ಪಿಕವಾಗಿ ತೃಜ್ವದ್ಭಾವವನ್ನು ವಿಧಿಸುವ ಸೂತ್ರ)**

**ಸೂತ್ರ – 208. ವಿಭಾಷಾ ತೃತೀಯಾದಿಷ್ವಚಿ (7.1.97)**

ವೃತ್ತಿಃ–ಅಜಾದಿಷು ತೃತೀಯಾದಿಷು ಕ್ರೋಷ್ಟುಃ ವಾ ತೃಜ್ವತ್। ಕ್ರೋಷ್ಟ್ರಾ।ಕ್ರೋಷ್ಟುನಾ।ಕ್ರೋಷ್ಟ್ರೇ।

ಪ. ಛೇ. – ವಿಭಾಷಾ, ತೃತೀಯಾದಿಷು, ಅಚಿ ।

ಅ. ವೃ. –'ತೃಜ್ವದ್‌ಕ್ರೋಷ್ಟುಃ' ಎಂಬ ಸೂತ್ರದಿಂದ 'ತೃಜ್ವತ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– ಅಜಾದಿಯಾದ ತೃತೀಯಾದಿ ವಿಭಕ್ತಿಗಳು ಪರದಲ್ಲಿದ್ದಾಗ, ವಿಕಲ್ಪವಾಗಿ 'ತೃಜ್ವದ್ಭಾವವು' ಬರುತ್ತದೆ.

ಉದಾ – ಕ್ರೋಷ್ಟ್ರಾ– ತೃತೀಯಾ ವಿಭಕ್ತಿಯ ಏಕವಚನದಲ್ಲಿ ಕ್ರೋಷ್ಟು+ಆ (ಟಾ) ಎಂದಿದ್ದಾಗ, ಪ್ರಕೃತ ಸೂತ್ರದಿಂದ ವಿಕಲ್ಪವಾಗಿ ತೃಜ್ವದ್ಭಾವವು ಬಂದು, ತೃಜ್ವದ್ಭಾವ ಪಕ್ಷದಲ್ಲಿ ಕ್ರೋಷ್ಟ್+ಋ+ಆ ಎಂದಿದ್ದಾಗ, ಯಣ್ ಸಂಧಿಯಿಂದ, ಕ್ರೋಷ್ಟ್+ರ್+ಆ=ಕ್ರೋಷ್ಟ್ರಾ ಎಂದಾಗುತ್ತದೆ.

ತೃಜ್ವದ್ಭಾವದ ಅಭಾವ ಪಕ್ಷದಲ್ಲಿ, 'ಉ' ಕಾರಾನ್ತ ಶಬ್ದದ ಪ್ರಕ್ರಿಯೆಯಂತೆ ಕ್ರೋಷ್ಟುನಾ ಎಂದು ರೂಪವಾಗುತ್ತದೆ.

ತೃತೀಯಾ ವಿಭಕ್ತಿಯ ದ್ವಿವಚನ ಮತ್ತು ಬಹುವಚನರೂಪಗಳು ಸ್ಪಷ್ಟ. (ಕ್ರೋಷ್ಟುಭ್ಯಾಮ್, ಕ್ರೋಷ್ಟುಭಿಃ)

ಉದಾ–ಕ್ರೋಷ್ಟ್ರೇ – ಚತುರ್ಥೀ ವಿಭಕ್ತೀ ಏಕವಚನದಲ್ಲಿ, ಕ್ರೋಷ್ಟೃ+ಏ (ಙೇ) ಎಂದಿದ್ದಾಗ, ಹಿಂದಿನಂತೆ ಯಣಾದೇಶವಾಗಿ ಕ್ರೋಷ್ಟ್ರೇ ಎಂದು ರೂಪವಾಗಿದೆ. ತೃಜ್ವದ್ಭಾವ ಬಾರದ ಪಕ್ಷದಲ್ಲಿ 'ಉ' ಕಾರಾನ್ತ 'ಗುರು' ಶಬ್ದದಂತೆ ಕ್ರೋಷ್ಟವೇ ಎಂದಿರುತ್ತದೆ. ಹೀಗಾಗಿ ಕ್ರೋಷ್ಟ್ರೇ, ಕ್ರೋಷ್ಟವೇ ಎಂದು ಎರಡು ರೂಪಗಳು.

ಉದಾ–ಚತುರ್ಥೀವಿಭಕ್ತಿಯ ದ್ವಿವಚನ ಮತ್ತು ಬಹುವಚನರೂಪಗಳು ಸ್ಪಷ್ಟ (ಕ್ರೋಷ್ಟುಭ್ಯಾಮ್, ಕ್ರೋಷ್ಟುಭ್ಯಃ)

ಉದಾ–ಹೀಗೆಯೇ ಪಂಚಮೀ ವಿಭಕ್ತಿಯ ದ್ವಿವಚನ ಬಹುವಚನರೂಪಗಳು ಇರುತ್ತವೆ. (ಕ್ರೋಷ್ಟುಭ್ಯಾಮ್, ಕ್ರೋಷ್ಟುಭ್ಯಃ)

**(ಉತ್ (ಉ) ಎಂಬ ಏಕಾದೇಶವನ್ನು ವಿಧಿಸುವ ಸೂತ್ರ)**

**ಸೂತ್ರ– 209. ಋತ ಉತ್ (6.1.111)**

ವೃತ್ತಿಃ–ಋತೋ ಙಸಿ ಙಸೋಃ ಅತಿ ಉತ್–ಏಕಾದೇಶಃ। ರಪರಃ।

ಅ. ವೃ. –'ಙಸಿಙಸೋಶ್ಚ' ಎಂಬ ಸೂತ್ರದಿಂದ 'ಙಸಿಙಸೋಃ' ಎಂಬ ಪದವು

'ಏಙಃ ಪದಾನ್ತಾದತಿ' ಎಂಬುದರಿಂದ 'ಅತಿ' ಎಂಬ ಪದವು ಅನುವೃತ್ತವಾಗುತ್ತವೆ. "ಏಕಃಪೂರ್ವಪರಯೋಃ" ಎಂಬುದು ಅಧಿಕಾರ ಸೂತ್ರವಾಗಿದೆ.

ಅರ್ಥ- ಹ್ರಸ್ವ ಋಕಾರಾಂತ ಅಂಗದ ಪರದಲ್ಲಿ ಙಸಿ ಮತ್ತು ಙಸ್‌ಗಳಲ್ಲಿರುವ 'ಅ' ಕಾರವು ಪರದಲ್ಲಿದ್ದಾಗ ಪೂರ್ವ ಪರಗಳ ಸ್ಥಾನದಲ್ಲಿ ಹ್ರಸ್ವ 'ಉ'ಕಾರವು ಏಕಾದೇಶವಾಗಿ ಬರುತ್ತದೆ. 'ಉ' ಕಾರವು ಆದೇಶವಾಗಿ ಬರುವಾಗ ರೇಫ ಸಹಿತವಾಗಿ ಉರ್ ಎಂದೇ ಆದೇಶವಾಗಿ) ಬರುತ್ತದೆ. ಕ್ರೋಷ್ಟುರ್+ಸ್ ಎಂದಿದ್ದಾಗ-

**(ಸ್-ಕಾರಕ್ಕೇನೇ ಲೋಪವನ್ನು ಹೇಳುವ ನಿಯಮ ಸೂತ್ರ)**

**ಸೂತ್ರ - 210. ರಾತ್ ಸಸ್ಯ (8.2.24)**

ವೃತ್ತಿಃ-ರೇಫಾತ್ ಸಂಯೋಗಾನ್ತಸ್ಯ ಸಸ್ಯ ಏವ ಲೋಪಃ ನಾನ್ಯಸ್ಯ। ರೇಫಸ್ಯ ವಿಸರ್ಗಃ। ಕ್ರೋಷ್ಟುಃ-2। ಕ್ರೋಷ್ಟ್ರೋಃ-2।

ವಾ॥ ನುಮ್-ಅಚಿರ-ತೃಜ್ವದ್ಭಾವೇಭ್ಯೋ ನುಟ್ ಪೂರ್ವ-ವಿಪ್ರತಿಷೇಧೇನ।

ಕ್ರೋಷ್ಟೂನಾಮ್। ಕ್ರೋಷ್ಟರಿ। ಪಕ್ಷೇ ಹಲಾದೌ ಚ ಶಂಭುವತ್। ಹೂಹೂಃ। ಹೂಹ್ವೌ ಹೂಹ್ವಃ। ಹೂಹೂಮ್। ಇತ್ಯಾದಿ। ಅತಿಚಮೂ ಶಬ್ದೇ ತು ನದೀ ಕಾರ್ಯಂ ವಿಶೇಷಃ। ಹೇ ಅತಿಚಮು!। ಅತಿ ಚಮ್ವೈ। ಅತಿ ಚಮ್ವಾಃ। ಅತಿಚಮೂನಾಮ್।.....ಖಲಪೂಃ।

ಅ. ವ್ಯ -'ಸಂಯೋಗಾನ್ತಸ್ಯ ಲೋಪಃ' ಎಂಬ ಸೂತ್ರವೇ ಅನುವೃತ್ತವಾಗುತ್ತದೆ.

ಅರ್ಥ- ರೇಫದ ಪರದಲ್ಲಿರುವ ಸಂಯುಕ್ತಾಕ್ಷರದಲ್ಲಿ ಅನ್ತ್ಯ ವರ್ಣವು 'ಸ್'ಕಾರವಾಗಿದ್ದರೆ ಆ 'ಸ್'ಕಾರಕ್ಕೆ ಲೋಪವು ಬರುತ್ತದೆ. ಬೇರೆ ವರ್ಣವು ಇದ್ದರೆ ಅದಕ್ಕೆ ಲೋಪವು ಬರುವದಿಲ್ಲ. -

ಉದಾ- ಕ್ರೋಷ್ಟುಃ - ಪಂಚಮೀ ಮತ್ತು ಷಷ್ಠೀ ಏಕವಚನದಲ್ಲಿ ಕ್ರೋಷ್ಟುರ್+ಸ್ ಎಂದಿದ್ದಾಗ -'ಸಂಯೋಗಾನ್ತಸ್ಯ ಲೋಪಃ' ಎಂಬ ಸೂತ್ರದಿಂದಲೇ 'ಸ್' ಕಾರಕ್ಕೆ ಲೋಪವಾಗಿ, ಆನಂತರ ರೇಫಕ್ಕೆ ಖರವಸಾನಯೋರ್ವಿಸರ್ಜನೀಯಃ ಎಂಬ ಸೂತ್ರದಿಂದ ವಿಸರ್ಗ ಬಂದು ಕ್ರೋಷ್ಟುಃ ಎಂದು ರೂಪವಾಗುತ್ತದೆ.

ಉದಾ- ಕ್ರೋಷ್ಟೋಃ-ತೃಜ್ವದ್ಭಾವ ಬಾರದ ಪಕ್ಷದಲ್ಲಿ-ಕ್ರೋಷ್ಟ್+ಉ+ ಅಸ್(ಙಸಿ) ಮತ್ತು ಕ್ರೋಷ್ಟ್+ಉ+ಅಸ್(ಙಸ್) ಎಂದಿದ್ದಾಗ, ಪಂಚಮೀ ಮತ್ತು ಷಷ್ಠೀ ಏಕವಚನಗಳಲ್ಲಿ "ಘೇರ್ಙಿತಿ" ಎಂಬ ಸೂತ್ರದಿಂದ 'ಉ' ಕಾರಕ್ಕೆ ಗುಣ ಬಂದು ಕ್ರೋಷ್ಟ್+ ಓ+ಅಸ್(ಙಸಿ) ಮತ್ತು ಕ್ರೋಷ್ಟ್+ಓ+ಅಸ್(ಙಸ್) ಎಂದಿದ್ದಾಗ, "ಙಸಿ ಙಸೋಶ್ಚ" ಎಂಬ ಸೂತ್ರದಿಂದ 'ಓ'ಕಾರ ಮತ್ತು 'ಅ' ಕಾರಗಳ ಸ್ಥಾನದಲ್ಲಿ 'ಓ' ಕಾರವು ಪೂರ್ವರೂಪ ಏಕಾದೇಶವಾಗಿ ಬಂದು ಕ್ರೋಷ್ಟೋ+ಸ್ ಎಂದಿದ್ದಾಗ, ರುತ್ವ-ವಿಸರ್ಗಗಳಿಂದ ಕ್ರೋಷ್ಟೋಃ ಎಂದಾಗುತ್ತದೆ.

ಉದಾ-ಪಂಚಮೀ ಮತ್ತು ಷಷ್ಠೀ ದ್ವಿ ವಚನಗಳಲ್ಲಿ - ಕ್ರೋಷ್ಟ್+ಋ+ಓಸ್ ಎಂದಿರುವಾಗ 'ಋ' ಕಾರಕ್ಕೆ ಯಣಾದೇಶವಾಗಿ ರೇಫ (ರ್) ಬಂದು ಕ್ರೋಷ್ಟ್+ರ್+ಓಸ್ ಎಂದಿದ್ದಾಗ, 'ಸ್' ಕಾರಕ್ಕೆ ರುತ್ವ-ವಿಸರ್ಗಗಳಾಗಿ ಕ್ರೋಷ್ಟ್ರೋಃ ಎಂದಾಗಿದೆ. ಪಂಚಮೀ

ಬಹುವಚನದಲ್ಲಿ ಕ್ರೋಷ್ಟು+ಭ್ಯಸ್ ಎಂದಿದ್ದಾಗ ಕ್ರೋಷ್ಟುಭ್ಯಸ್ ಎಂದಾಗಿ ರುತ್ವ–ವಿಸರ್ಗಗಳಿಂದ ಕ್ರೋಷ್ಟುಭ್ಯಃ ಎಂದಾಗಿದೆ.

ವಾರ್ತಿಕ॥ – **ನುಮ್–ಅಚಿ–ರ–ತೃಜ್ವದ್ಭಾವೇಭ್ಯೋ ನುಟ್ ಪೂರ್ವ ವಿಪ್ರತಿಷೇಧೇನ**

ಅರ್ಥ– ನುಮ್, ಮತ್ತು ಅಚ್ ಪರದಲ್ಲಿದ್ದಾಗ, ಆಗುವ ರೇಫಾದೇಶ ಮತ್ತು ತೃಜ್ವದ್ಭಾವ ಇವುಗಳಿಗಿಂತ ಮೊದಲು ಪೂರ್ವ ವಿಪ್ರತಿಷೇಧದಿಂದ 'ಆಮ್' ಗೆ 'ನುಟ್' ಆಗಮವು ಬರುತ್ತದೆ.

ವಿಶೇಷ – ಸಾಧಾರಣವಾಗಿ ತುಲ್ಯಬಲವಿರುವ ಶಾಸ್ತ್ರಗಳಿಗೆ ವಿರೋಧ ಬಂದಾಗ **'ವಿಪ್ರತಿಷೇಧೆ ಪರಂ ಕಾರ್ಯಂ'** ಎಂಬುದರಿಂದ ಪರ ಶಾಸ್ತ್ರಕ್ಕೆ ಪ್ರಾಬಲ್ಯವು ಬರುತ್ತಿತ್ತು. ಆದರೆ ಅದು ಇಲ್ಲಿ ಇಷ್ಟವಾಗದಿರೋಣದ್ದರಿಂದ ವಾರ್ತಿಕಕಾರರು **ಪೂರ್ವ ವಿಪ್ರತಿಷೇಧದಿಂದ ಕಾರ್ಯವನ್ನು** ವಿಧಾನ ಮಾಡಿದ್ದಾರೆ. ಅಂದರೆ 'ಇಕೋಽಚಿವಿಭಕ್ತೌ, "ತೃಜ್ವದ್ ಕೋಷ್ಟುಃ" "ಅಚಿ ರ ಋತಃ" ಇವು ಎಲ್ಲವುಗಳಿಗಿಂತಲೂ ಪೂರ್ವ ಸೂತ್ರವಾದ 'ಹ್ರಸ್ವನದ್ಯಾಪೋ ನುಟ್' ಎಂಬುದರಿಂದ, ಪೂರ್ವ–ವಿಪ್ರತಿಷೇಧದಿಂದ (ಅಂದರೆ ಅನಿಷ್ಟ ರೂಪದ ನಿವಾರಣೆಗಾಗಿ ಪರಸೂತ್ರಕ್ಕೆ ಪ್ರಾಧಾನ್ಯವನ್ನು ಕೊಡದೆ, ಪೂರ್ವಸೂತ್ರಕ್ಕೆ ಪ್ರಾಧಾನ್ಯವನ್ನು ಕೊಡುವುದು ಎಂದರ್ಥ) ನುಟ್ ಆಗಮವನ್ನು ಆಮ್ ಗೆ ವಾರ್ತಿಕಕಾರರು ಹೇಳಿದ್ದಾರೆ.

ಉದಾ –ಷಷ್ಠೀ ಬಹುವಚನದಲ್ಲಿ ಕ್ರೋಷ್ಟು+ಆಮ್ ಎಂದಿದ್ದಾಗ, ಮೇಲಿನ ವಾರ್ತಿಕದಿಂದ 'ನುಟ್' ಆಗಮವು ಬಂದು ಕ್ರೋಷ್ಟು+ನ್+ಆಮ್ ಎಂದಿರುವಾಗ 'ನಾಮಿ' ಎಂಬುದರಿಂದ ಹ್ರಸ್ವ 'ಉ' ಕಾರಕ್ಕೆ ದೀರ್ಘ ಬಂದು ಕ್ರೋಷ್ಟೂನಾಮ್ ಎಂದಾಗಿದೆ. ನುಡಾಗಮವು ಬಂದಿರೋಣದ್ದರಿಂದ ಹಲಾದಿಯಾಗುವುದರಿಂದ ತೃಜ್ವದ್ಭಾವವು ಬರಲಿಲ್ಲ. ಅನಿಷ್ಟ ರೂಪವೂ ಆಗಲಿಲ್ಲ.

ಉದಾ–ಕ್ರೋಷ್ಟರಿ–ಸಪ್ತಮೀ ಏಕವಚನದಲ್ಲಿ ಕ್ರೋಷ್ಟರಿ–ಕ್ರೋಷ್ಟು+ಇ(ಜಿ) ಎಂದಿದ್ದಾಗ, ತೃಜ್ವದ್ಭಾವವು ಬಂದ ಮೇಲೆ 'ಋತೋಜಿ ಸರ್ವನಾಮಸ್ಥಾನಯೋಃ' ಎಂಬುದರಿಂದ 'ಋ'ಕಾರಕ್ಕೆ ಗುಣವಾಗಿ 'ಅರ್' ಬಂದು ಕ್ರೋಷ್ಟರ್+ಇ=ಕ್ರೋಷ್ಟರಿ ಎಂದು ರೂಪ ಸಿದ್ಧವಾಗುತ್ತದೆ. ತೃಜ್ವದ್ಭಾವವು ಬಾರದೇ ಇದ್ದಾಗ, ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಕೋಷ್ಟು ಶಬ್ದದ ರೂಪಗಳು ಗುರು ಶಬ್ದದ ರೂಪಗಳಂತೆ ಆಗುತ್ತವೆ.

**'ಉ' ಕಾರಾಂತ 'ಕ್ರೋಷ್ಟು' ಶಬ್ದದ ರೂಪಗಳು**

| ವಿಭಕ್ತಿ | ಏ.ವ. | ದ್ವಿವ. | ಬ. ವ. |
|---|---|---|---|
| ಪ್ರಥಮಾ | ಕ್ರೋಷ್ಟಾ | ಕ್ರೋಷ್ಟಾರೌ | ಕ್ರೋಷ್ಟಾರಃ। |
| ದ್ವಿತೀಯಾ | ಕ್ರೋಷ್ಟಾರಂ | ಕ್ರೋಷ್ಟಾರೌ | ಕ್ರೋಷ್ಟೂನ್। |
| ತೃತೀಯಾ | ಕ್ರೋಷ್ಟ್ರಾ, ಕ್ರೋಷ್ಟುನಾ | ಕ್ರೋಷ್ಟುಭ್ಯಾಮ್ | ಕ್ರೋಷ್ಟುಭಿಃ। |
| ಚತುರ್ಥೀ | ಕ್ರೋಷ್ಟ್ರೇ, ಕ್ರೋಷ್ಟವೇ | ಕ್ರೋಷ್ಟುಭ್ಯಾಮ್ | ಕ್ರೋಷ್ಟುಭ್ಯಃ। |

| | | | |
|---|---|---|---|
| ಪಂಚಮೀ | ಕ್ರೋಷ್ಟುಃ, ಕ್ರೋಷ್ಟ್ರೋಃ | ಕ್ರೋಷ್ಟುಭ್ಯಾಮ್ | ಕ್ರೋಷ್ಟುಭ್ಯಃ। |
| ಷಷ್ಠೀ | ಕ್ರೋಷ್ಟುಃ, ಕ್ರೋಷ್ಟೋಃ | ಕ್ರೋಷ್ಟ್ರೋಃ, ಕ್ರೋಷ್ಟ್ವೋಃ | ಕ್ರೋಷ್ಟೂನಾಮ್। |
| ಸಪ್ತಮೀ | ಕ್ರೋಷ್ಟರಿ, ಕ್ರೋಷ್ಟೌ | ಕ್ರೋಷ್ಟ್ರೋಃ, ಕ್ರೋಷ್ಟ್ವೋಃ | ಕ್ರೋಷ್ಟುಷು। |
| ಸಂಬೋಧನ | ಹೇ ಕ್ರೋಷ್ಟೋ! | ಹೇ ಕ್ರೋಷ್ಟಾರೌ! | ಹೇಕ್ರೋಷ್ಟಾರಃ! |

**ಇಲ್ಲಿಗೆ (ಹ್ರಸ್ವ) ಉ ಕಾರಾಂತ ಶಬ್ದಗಳು ಮುಗಿದವು**

**(ದೀರ್ಘ) ಊ ಕಾರಾಂತ ಶಬ್ದಗಳು ಆರಂಭವಾಗುತ್ತವೆ.**

ಉದಾ–ಪ್ರಥಮಾ ವಿಭಕ್ತಿ ಏಕವಚನದಲ್ಲಿ –ಹೂಹೂ+ಸ್ (ಸು) ಎಂದಿದ್ದಾಗ, 'ಸ್' ಕಾರಕ್ಕೆ ರುತ್ವ–ವಿಸರ್ಗಗಳು ಬಂದು ಹೂಹೂಃ ಎಂದಾಗಿದೆ (ಗಂಧರ್ವನ ಹೆಸರು). ಇದು 'ಊ' ಕಾರಾನ್ತವಾಗಿರುವದರಿಂದ 'ಘಿ' ಮತ್ತು 'ನದಿ' ಸಂಜ್ಞೆ ಮೊದಲಾದವುಗಳು ಯಾವದೂ ಬರುವದಿಲ್ಲ. ಇದರ ರೂಪಗಳು ಬೇರೆಯೇ ಇರುತ್ತವೆ.

ಉದಾ–ಪ್ರಥಮಾ ವಿಭಕ್ತಿ ದ್ವಿವಚನದಲ್ಲಿ ಹೂಹ್ವೌ – ಹೂಹೂ+ಔ ಎಂದಿದ್ದಾಗ, "ದೀರ್ಘಾಜ್ಜಸಿ ಚ" ಎಂಬ ಸೂತ್ರದಿಂದ ಪೂರ್ವಸವರ್ಣಕ್ಕೆ ನಿಷೇಧ ಬಂದು ಯಣಾದೇಶದಿಂದ 'ಊ' ಕಾರಕ್ಕೆ 'ವ್' ಕಾರವು ಬಂದು ಹೂಹ್ವೌ ಎಂದಾಗಿದೆ.

ಉದಾ–ಪ್ರಥಮಾ ವಿಭಕ್ತಿ ಬಹುವಚನದಲ್ಲಿ ಹೂಹ್ವಃ – ಹೂಹೂ+ಅಸ್ (ಜಸ್) ಎಂದಿದ್ದಾಗ, "ದೀರ್ಘಾಜ್ಜಸಿ ಚ" ಎಂಬ ಸೂತ್ರದಿಂದ ಪೂರ್ವಸವರ್ಣಕ್ಕೆ ನಿಷೇಧ ಬಂದು, "ಇಕೋಯಣಚಿ" ಎಂಬುದರಿಂದ 'ಊ' ಕಾರಕ್ಕೆ 'ವ್' ಕಾರವು ಬಂದು ಹೂಹೂ+ವ್+ಅಸ್ ಎಂದಿದ್ದಾಗ ರುತ್ವ–ವಿಸರ್ಗಗಳಿಂದ ಹೂಹ್ವಃ ಎಂದಾಗಿದೆ.

ಉದಾ–ದ್ವಿತೀಯಾ ವಿಭಕ್ತಿ ಏಕವಚನದಲ್ಲಿ ಹೂಹೂಮ್–ಹೂಹೂ+ಅಮ್ ಎಂದಿದ್ದಾಗ, 'ಅಮಿಪೂರ್ವಃ' ಎಂಬುದರಿಂದ ಪೂರ್ವ ರೂಪವು ಏಕಾದೇಶವಾಗಿ ಬಂದು ಹೂಹೂಮ್ ಎಂದು ರೂಪವಾಗಿದೆ. ಉಳಿದ ರೂಪಗಳಲ್ಲಿ ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಯಣ್ ಸಂಧಿಯಿಂದ ರೂಪಗಳಾಗುತ್ತವೆ. ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, ವರ್ಣಗಳ ಜೋಡಣೆಯಾಗಿರುತ್ತದೆ.

**'ಊ' ಕಾರಾನ್ತ ಪುಲ್ಲಿಂಗ ಹೂಹೂ ಶಬ್ದದ ರೂಪಗಳು**

| ವಿಭಕ್ತಿ | ಏ.ವ. | ದ್ವಿವ. | ಬ. ವ. |
|---|---|---|---|
| ಪ್ರಥಮಾ | ಹೂಹೂಃ | ಹೂಹ್ವೌ | ಹೂಹ್ವಃ। |
| ದ್ವಿತೀಯಾ | ಹೂಹೂಮ್ | ಹೂಹ್ವೌ | ಹೂಹೂನ್। |
| ತೃತೀಯಾ | ಹೂಹ್ವಾ | ಹೂಹೂಭ್ಯಾಮ್ | ಹೂಹೂಭಿಃ। |
| ಚತುರ್ಥೀ | ಹೂಹ್ವೇ | ಹೂಹೂಭ್ಯಾಮ್ | ಹೂಹೂಭ್ಯಃ। |
| ಪಂಚಮೀ | ಹೂಹ್ವಃ | ಹೂಹೂಭ್ಯಾಮ್ | ಹೂಹೂಭ್ಯಃ। |

| | | | |
|---|---|---|---|
| ಷಷ್ಠೀ | ಹೂಹ್ವಃ | ಹೂಹ್ವೋಃ | ಹೂಹ್ವಾಮ್। |
| ಸಪ್ತಮೀ | ಹೂಹ್ವಿ | ಹೂಹ್ವೋಃ | ಹೂಹೂಷು। |
| ಸಂಬೋಧನ | ಹೇ ಹೂಹೂಃ | ಹೇ ಹೂಹ್ವೌ | ಹೇ ಹೂಹ್ವಃ।} |

ಉದಾ– ಅತಿಚಮೂ: (ಸೇನೆಯನ್ನು ಅತಿಕ್ರಮಣ ಮಾಡಿದವನು) ಶಬ್ದವು ಹೂಹೂ ಶಬ್ದಕ್ಕಿಂತ ವಿಭಿನ್ನವಾಗಿದೆ. ಯಾಕೆಂದರೆ ಇದರಲ್ಲಿ ನದೀ ಸಂಜ್ಞಾ ನಿಮಿತ್ತಕವಾದ ಕಾರ್ಯಗಳು ಆಗುತ್ತವೆ.

ಚಮೂಮ್ ಅತಿಕ್ರಾನ್ತಃ=ಅತಿಚಮೂಃ ಎಂದಾಗುತ್ತದೆ. ಚಮೂ ಶಬ್ದವು ಸ್ತ್ರೀಲಿಂಗವಾಗಿದ್ದರೂ ಸಮಾಸವು ಪುಲ್ಲಿಂಗದಲ್ಲಿದೆ. ["ಪ್ರಥಮಲಿಙ್ಗ ಗ್ರಹಣಂ ಚ" ಎಂಬಸೂತ್ರದಿಂದ] 'ಯೂ ಸ್ತ್ರ್ಯಾಖ್ಯೌ ನದೀ" ಎಂಬಸೂತ್ರದಿಂದ ನದೀ ಸಂಜ್ಞೆ ಬಂದಿದ್ದರಿಂದ ನದೀ ಸಂಜ್ಞೆಯ ಕಾರ್ಯವು "ಅಂಬಾರ್ಥನದ್ಯೋರ್ಹ್ರಸ್ವಃ" ಎಂಬ ಸೂತ್ರದಿಂದ ಹ್ರಸ್ವವಾಗಿ, "ಆಣ್‌ನದ್ಯಾಃ" ಎಂಬ ಸೂತ್ರದಿಂದ 'ಆಟ್' ಆಗಮಬಂದು, "ಜೇರಾಮ್ನದ್ಯಾಮ್ ನೀಭ್ಯಃ" ಎಂಬ ಸೂತ್ರದಿಂದ 'ಆಮ್' ಆದೇಶ ಮೊದಲಾದವು ಬರುತ್ತವೆ. ಇದರ ರೂಪವು 'ಬಹುಶ್ರೇಯಸೀ' ರೂಪದಂತೆ ಇರುತ್ತವೆ. ಬಹುಶ್ರೇಯಸೀ ಎಂಬಲ್ಲಿ 'ಈ' ಕಾರದ ಸ್ಥಾನದಲ್ಲಿ ಯಣ್ ಬಂದಿದೆ. ಆದರೆ ಅತಿಚಮೂಃ ಎಂಬಲ್ಲಿ 'ಊ' ಕಾರಕ್ಕೆ 'ವ್' ಕಾರವು ಬಂದಿದೆ. ಈ ಎರಡು ಶಬ್ದಗಳಲ್ಲಿ ಒಂದು ಅಂತರವಿದೆ. ಬಹುಶ್ರೇಯಸೀ ಎಂಬಲ್ಲಿ ಅದು ಙ್ಯನ್ತ ವಾಗಿರೋಣದ್ದರಿಂದ ಸು(ಸ್) ಗೆ ಲೋಪ ಬಂದಿದೆ. ಆದರೆ ಈ ಶಬ್ದದಲ್ಲಿ ಇದು 'ಙ್ಯನ್ತವಾಗದೇ ಇರೋಣದರಿಂದ 'ಸು(ಸ್) ಗೆ ಲೋಪ ಬರಲಿಲ್ಲ.

**(ಊ ಕಾರಾನ್ತ ಪುಲ್ಲಿಂಗದ 'ಅತಿಚಮೂ' ಶಬ್ದದ ರೂಪಗಳು)**

| ವಿಭಕ್ತಿ | ಏ.ವ. | ದ್ವಿ.ವ. | ಬ. ವ. |
|---|---|---|---|
| ಪ್ರಥಮಾ | ಅತಿಚಮೂಃ | ಅತಿಚಮ್ವೌ | ಅತಿಚಮ್ವಃ। |
| ದ್ವಿತೀಯಾ | ಅತಿಚಮೂಮ್ | ಅತಿಚಮ್ವೌ | ಅತಿಚಮೂನ್। |
| ತೃತೀಯಾ | ಅತಿಚಮ್ವಾ | ಅತಿಚಮೂಭ್ಯಾಮ್ | ಅತಿಚಮೂಭಿಃ। |
| ಚತುರ್ಥೀ | ಅತಿಚಮ್ವೈ | ಅತಿಚಮೂಭ್ಯಾಮ್ | ಅತಿಚಮೂಭ್ಯಃ। |
| ಪಂಚಮೀ | ಅತಿಚಮ್ವಾಃ | ಅತಿಚಮೂಭ್ಯಾಮ್ | ಅತಿಚಮೂಭ್ಯಃ। |
| ಷಷ್ಠೀ | ಅತಿಚಮ್ವಾಃ | ಅತಿಚಮ್ವೋಃ | ಅತಿಚಮೂನಾಮ್। |
| ಸಪ್ತಮೀ | ಅತಿಚಮ್ವಾಮ್ | ಅತಿಚಮ್ವೋಃ | ಅತಿಚಮೂಷು। |
| ಸಂಬೋಧನ | ಹೇ ಅತಿಚಮು! | ಹೇ ಅತಿಚಮ್ವೌ! | ಹೇ ಅತಿಚಮ್ವಃ! |

ಉದಾ–ಪ್ರಥಮಾವಿಭಕ್ತಿ ಏಕವಚನದಲ್ಲಿ, ಅತಿಚಮೂ+ಸ್ (ಸು) ಎಂದಿದ್ದಾಗ, 'ಸ್'ಕಾರಕ್ಕೆ ರುತ್ವ–ವಿಸರ್ಗಗಳು ಬಂದು ಅತಿಚಮೂಃ ಎಂದಾಗಿದೆ.

ಉದಾ–ಸಂಬೋಧನ ಪ್ರಥಮಾ ವಿಭಕ್ತಿಯಲ್ಲಿ ಹೇ ಅತಿಚಮು – ಅತಿಚಮೂ+ಸ್

(ಸು) ಎಂದಿದ್ದಾಗ 'ಅಂಬಾರ್ಥನದ್ಯೋರ್ಹ್ರಸ್ವಃ' ಎಂಬುದರಿಂದ ಹ್ರಸ್ವವಾಗಿ ಅತಿಚಮು+ಸ್ ಎಂದಿದ್ದಾಗ, 'ಏಙ್‌ಹ್ರಸ್ವಾತ್ ಸಂಬುದ್ಧೇಃ' ಎಂಬುದರಿಂದ 'ಸ್'ಗೆ ಲೋಪವಾಗಿ ಹೇ ಅತಿಚಮು! ಎಂದಾಗಿದೆ.

ಉದಾ-ದ್ವಿತೀಯಾ ವಿಭಕ್ತಿ ಏಕವಚನದಲ್ಲಿ ಅತಿಚಮೂ+ಅಮ್ ಎಂದಿದ್ದಾಗ, ಹಿಂದಿನಂತೆ ಪೂರ್ವಸವರ್ಣದೀರ್ಘಬಂದು ಅತಿಚಮೂಮ್ ಎಂದಾಗಿದೆ.

ಉದಾ-ತೃತೀಯಾ ವಿಭಕ್ತಿ ಏಕವಚನದಲ್ಲಿ ಅತಿಚಮ್ವಾ - ಅತಿಚಮೂ+ಆ(ಟಾ) ಎಂದಿದ್ದಾಗ, "ಯಣ್ ಸಂಧಿಯಿಂದ" ಅತಿಚಮ್ವಾ ಎಂದಾಗಿದೆ.

ಉದಾ-ಚತುರ್ಥೀ ವಿಭಕ್ತಿ ಏಕವಚನದಲ್ಲಿ ಅತಿಚಮ್ವೈ - ಅತಿಚಮೂ+ಏ (ಙೇ) ಎಂದಿದ್ದಾಗ, 'ಆಣ್‌ನದ್ಯಾಃ' ಎಂಬುದರಿಂದ ಆಟ್ ಆಗಮವು ಬಂದು

ಅತಿಚಮೂ+ಆ+ಏ ಎಂದಿದ್ದಾಗ, ವೃದ್ಧಿಯಾಗಿ ಅತಿಚಮೂ+ಐ ಎಂದಿದ್ದಾಗ ಯಣಾದೇಶವಾಗಿ ಅತಿಚಮ್ವೈ ಎಂದಾಗಿದೆ.

ಉದಾ-ಪಞ್ಚಮೀ ಮತ್ತು ಷಷ್ಠೀ ಏಕವಚನಗಳಲ್ಲಿ ಅತಿಚಮೂ+'ಙಸಿ'(ಅಸ್) ಮತ್ತು ಅತಿಚಮೂ+'ಙಸ್'(ಅಸ್) ಎಂದಿದ್ದಾಗ ಇಲ್ಲಿಯೂ ಆಟ್ ಆಗಮ, ನದೀ ಕಾರ್ಯ, ವೃದ್ಧಿ ಮತ್ತು ಯಣಾದೇಶಗಳಿಂದ ಅತಿಚಮ್ವಾಃ ಎಂದು ರೂಪಗಳಾಗಿವೆ.

ಉದಾ-ಷಷ್ಠೀ-ಬಹುವಚನದಲ್ಲಿ ಅತಿಚಮೂನಾಮ್ - ಅತಿಚಮೂ+ಆಮ್ ಎಂದಿದ್ದಾಗ, ನದೀ ಕಾರ್ಯ ರೂಪವಾದ ನುಡಾಗಮ ಬಂದು ಅತಿಚಮೂನಾಮ್ ಎಂದು ರೂಪವಾಗಿದೆ.

ಉದಾ-ಸಪ್ತಮೀ ಏಕವಚನದಲ್ಲಿ, ಅತಿಚಮ್ವಾಮ್ - ಅತಿಚಮೂ+ಙಿ (ಇ) ಎಂದಿದ್ದಾಗ, ಙಿಗೆ ಆಮ್ ಆದೇಶ, ಆಟ್ ಆಗಮ, ವೃದ್ಧಿ ಮತ್ತು ಯಣಾದೇಶಗಳಿಂದ ಅತಿಚಮ್ವಾಮ್ ಎಂದು ರೂಪವಾಗಿದೆ.

[ಸೂಚನೆ: ಮೇಲೆ ಹೇಳಿದ ರೂಪಗಳನ್ನು ಹೊರತುಪಡಿಸಿ ಉಳಿದ ರೂಪಗಳಲ್ಲಿ ವಿಶೇಷವೇನೂ ಇಲ್ಲವೆಂದು ತಿಳಿಯಬೇಕು].

ಉದಾ-ಖಲಪೂಃ-ಖಲಂ ಪುನಾತಿ ಇತಿ ಎಂದು ವಿಗ್ರಹ (ಗದ್ದೆಯನ್ನು ಶುದ್ಧಗೊಳಿಸುವ ಸೇವಕನು ಎಂದರ್ಥ).

ಉದಾ- ಪ್ರಥಮಾ ವಿಭಕ್ತಿ ಏಕವಚನದಲ್ಲಿ, ಖಲಪೂಃ-ಖಲಪೂ+ಸ್(ಸು) ಎಂದಿದ್ದಾಗ, 'ಸ್' ಕಾರಕ್ಕೆ ರುತ್ವ-ವಿಸರ್ಗಗಳಾಗಿ ಖಲಪೂಃ ಎಂದಾಗಿದೆ.

**(ಯಣ್ ವಿಧಾಯಕ ಸೂತ್ರ)**

**ಸೂತ್ರ- 211. ಓಃ ಸುಪಿ (6.4.86)**

ವೃತ್ತಿಃ-ಧಾತ್ವವಯವ-ಸಂಯೋಗಪೂರ್ವಃ ನ ಭವತಿ ಯಃ 'ಉ' ವರ್ಣಃ, ತದಂತಃ ಯಃ ಧಾತುಃ ತದನ್ತಸ್ಯ ಅನೇಕಾಚಃ ಅಙ್ಗಸ್ಯ ಯಣ್ ಸ್ಯಾತ್; ಅಚಿ ಸುಪಿ। ಖಲಪ್ವೌ ಖಲಪ್ವಃ। ಏವಂ ಸುಲ್ವಾದಯಃ। ಸ್ವಭೂಃ। ಸ್ವಭುವೌ। ಸ್ವಭುವಃ। ... ವರ್ಷಾಭೂಃ।

ಅ.ವ್ಯ.–'ಏರನೇಕಾಚೋಽಸಂಯೋಗ–ಪೂರ್ವಸ್ಯ' ಎಂಬುದರಿಂದ ಅನೇಕಾಚಃ ಮತ್ತು ಅಸಂಯೋಗಪೂರ್ವಸ್ಯ" ಎಂಬ ಪದಗಳು ಹಾಗೆಯೇ 'ಅಚಿ ಶ್ನು–ಧಾತು–ಭ್ರುವಾಂ–ಯ್ವೋರಿಯಙುವಙೌ ಎಂಬ ಸೂತ್ರದಿಂದ ಧಾತೋಃ ಮತ್ತು ಅಚಿ ಎಂಬ ಪದಗಳು ಹಾಗೆಯೇ 'ಇಯೋಯಣ್' ಎಂಬುದರಿಂದ 'ಯಣ್' ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ–ಧಾತುವಿನ ಅವಯವವಾಗಿಯೂ ಪೂರ್ವದಲ್ಲಿ ಸಂಯೋಗರಹಿತವಾದ ಯಾವ ಒಂದು 'ಉ'ಕಾರವಿರುವುದೋ ಅಂತಹ 'ಉ'ಕಾರವನ್ನೇ ಅಂತವಾಗಿವುಳ್ಳ ಅನೇಕಾಚ್ ಆದ ಧಾತುವಿನ ಅಂಗಕ್ಕೆ ಅಜಾದಿಯಾದ ಸುಪ್ ಪ್ರತ್ಯಯವು ಪರದಲ್ಲಿದ್ದಾಗ, ಯಣಾದೇಶವಾಗುತ್ತದೆ.

ಉದಾ–ಪ್ರಥಮಾ ವಿಭಕ್ತಿ ದ್ವಿವಚನದಲ್ಲಿ ಖಲಪ್ವೌ – ಖಲಪೂ+ಔ ಎಂದಿದ್ದಾಗ, ಇಲ್ಲಿ 'ಊ' ವರ್ಣದ ಪೂರ್ವದಲ್ಲಿ ಸಂಯೋಗವಿಲ್ಲ. ತದಂತವಾದ ಧಾತುವು ಪೂ, ಇದನ್ನು ಅಂತವಾಗಿವುಳ್ಳ ಅಂಗವೆಂದರೆ ಖಲಪೂ ಎಂಬುದು. ಇದು ಅನೇಕಾಚ್ ಆಗಿದೆ. ಔ ಎಂಬ ಅಜಾದಿಯಾದ ಸುಪ್ ಪರದಲ್ಲಿರೋಣದ್ದರಿಂದ ಯಣ್ ಆದೇಶ ಬಂದು ಖಲಪ್+ವ್+ಔ=ಖಲಪ್ವೌ ಎಂದಾಗಿದೆ.

ಉದಾ–ಪ್ರಥಮಾ ವಿಭಕ್ತಿ ಬಹುವಚನದಲ್ಲಿ (ಜಸ್), ದ್ವಿತೀಯಾ ಬಹುವಚನದಲ್ಲಿ (ಶಸ್), ಮತ್ತು ಷಷ್ಠೀ ಮತ್ತು ಸಪ್ತಮೀ ದ್ವಿವಚನಗಳಲ್ಲಿ (ಓಸ್) ವಿಭಕ್ತಿ ಪ್ರತ್ಯಯಗಳಿಗೆ ಯಣಾದೇಶವಾಗಿ ಖಲಪ್ವಃ ಎಂದು ರೂಪಗಳಾಗುತ್ತವೆ.

**(ಊ–ಕಾರಾನ್ತ ಪುಲ್ಲಿಂಗದ 'ಖಲಪೂ' ಶಬ್ದದ ರೂಪಗಳು)**

| ವಿಭಕ್ತಿ | ಏ.ವ. | ದ್ವಿವ. | ಬ. ವ. |
|---|---|---|---|
| ಪ್ರಥಮಾ | ಖಲಪೂಃ | ಖಲಪ್ವೌ | ಖಲಪ್ವಃ। |
| ದ್ವಿತೀಯಾ | ಖಲಪ್ವಮ್ | ಖಲಪ್ವೌ | ಖಲಪ್ವಃ। |
| ತೃತೀಯಾ | ಖಲಪ್ವಾ | ಖಲಪೂಭ್ಯಾಮ್ | ಖಲಪೂಭಿಃ। |
| ಚತುರ್ಥೀ | ಖಲಪ್ವೇ | ಖಲಪೂಭ್ಯಾಮ್ | ಖಲಪೂಭ್ಯಃ। |
| ಪಂಚಮೀ | ಖಲಪ್ವಃ | ಖಲಪೂಭ್ಯಾಮ | ಖಲಪೂಭ್ಯಃ। |
| ಷಷ್ಠೀ | ಖಲಪ್ವಃ | ಖಲಪ್ವೋಃ | ಖಲಪ್ವಾಮ್। |
| ಸಪ್ತಮೀ | ಖಲಪ್ವಿ | ಖಲಪ್ವೋಃ | ಖಲಪೂಷು। |
| ಸಂಬೋಧನ | ಹೇ ಖಲಪೂಃ! | ಹೇ ಖಲಪ್ವೌ! | ಹೇ ಖಲಪ್ವಃ! |

ಸೂಚನೆ: ಇದರಂತೆ ಸುಲೂಃ (ಚೆನ್ನಾಗಿ ಕತ್ತರಿಸುವವನು) ಮೊದಲಾದ ಶಬ್ದಗಳು ನಿಷ್ಪನ್ನವಾಗುತ್ತವೆ.

ಊ–ಕಾರಾನ್ತ ಸ್ವಭೂ– ಶಬ್ದ

ಉದಾ–ಪ್ರಥಮಾ ವಿಭಕ್ತಿ ಏಕವಚನದಲ್ಲಿ ಸ್ವಭೂಃ – ಸ್ವಭೂ+ಸ್ (ಸು) ಎಂದಿದ್ದಾಗ,

'ಸ್' ಕಾರಕ್ಕೆ ರುತ್ವ-ವಿಸರ್ಗಗಳಾಗಿ ಸ್ವಭೂಃ ಎಂದಾಗುತ್ತದೆ.

ಉದಾ-ದ್ವಿತೀಯಾ ವಿಭಕ್ತಿ ಏಕವಚನದಲ್ಲಿ ಸ್ವಭುವೌ - ಸ್ವಭೂ+ಔ ಎಂದಿದ್ದಾಗ, 'ಇಕೋಯಣಚಿ' ಎಂಬುದರಿಂದ ಯಣಾದೇಶವು ಪ್ರಾಪ್ತವಾಗಲು, ಅದನ್ನು ಬಾಧಿಸಿ ಪೂರ್ವಸವರ್ಣ ದೀರ್ಘವು ಪ್ರಾಪ್ತವಾಗಲು, 'ದೀರ್ಘಾಜ್ಜಸಿ ಚ' ಎಂಬುದರಿಂದ ಅದಕ್ಕೆ ನಿಷೇಧವು ಬಂದು ಪುನಃ ಯಣಾದೇಶವು ಪ್ರಾಪ್ತವಾಗಲು, ಅದನ್ನು ಬಾಧಿಸಿ 'ಅಚಿ ಶ್ನು-ಧಾತು-ಭ್ರುವಾಂ-ಯ್ವೋರಿಯಙುವಙೌ' ಎಂಬುದರಿಂದ 'ಉವಙ್' ಪ್ರಾಪ್ತವಾಗಲು, ಅದನ್ನು ಬಾಧಿಸಿ 'ಏರನೇಕಾಚೋಽಸಂಯೋಗಪೂರ್ವಸ್ಯ' ಎಂಬ ಸೂತ್ರದಿಂದ 'ಯಣ್' ಪ್ರಾಪ್ತವಾಗಲು, ಅದಕ್ಕೆ "ನ ಭೂಸುಧಿಯೋಃ" ಎಂಬುದರಿಂದ 'ಉವಙ್' ಆದೇಶವು ಬಂದು 'ಅಚಿ ಶ್ನು-ಧಾತು-ಭ್ರುವಾಂ-ಯ್ವೋರಿಯಙುವಙೌ' ಎಂಬುದರಿಂದ ಸ್ವಭ್+ಉವ್+ಔ=ಸ್ವಭುವೌ ಎಂದು ರೂಪವು ನಿಷ್ಪನ್ನವಾಗುತ್ತದೆ.

**(ಊ-ಕಾರಾನ್ತ ಸ್ವಭೂ-ಶಬ್ದದ ರೂಪಗಳು)**

| ವಿಭಕ್ತಿ | ಏ.ವ. | ದ್ವಿವ. | ಬ. ವ. |
|---|---|---|---|
| ಪ್ರಥಮಾ | ಸ್ವಭೂಃ | ಸ್ವಭುವೌ | ಸ್ವಭುವಃ। |
| ದ್ವಿತೀಯಾ | ಸ್ವಭುವಮ್ | ಸ್ವಭುವೌ | ಸ್ವಭುವಃ। |
| ತೃತೀಯಾ | ಸ್ವಭುವಾ | ಸ್ವಭೂಭ್ಯಾಮ್ | ಸ್ವಭೂಭಿಃ। |
| ಚತುರ್ಥೀ | ಸ್ವಭುವೇ | ಸ್ವಭೂಭ್ಯಾಮ್ | ಸ್ವಭೂಭ್ಯಃ। |
| ಪಂಚಮೀ | ಸ್ವಭುವಃ | ಸ್ವಭೂಭ್ಯಾಮ್ | ಸ್ವಭೂಭ್ಯಃ। |
| ಷಷ್ಠೀ | ಸ್ವಭುವಃ | ಸ್ವಭುವೋಃ | ಸ್ವಭುವಾಮ್। |
| ಸಪ್ತಮೀ | ಸ್ವಭುವಿ | ಸ್ವಭುವೋಃ | ಸ್ವಭೂಷು। |
| ಸಂಬೋಧನ | ಹೇ ಸ್ವಭೂಃ! | ಹೇ ಸ್ವಭುವೌ! | ಹೇ ಸ್ವಭುವಃ! |

**(ಯಣಾದೇಶವನ್ನು ವಿಧಿಸುವ ಸೂತ್ರ)**

ವರ್ಷಾಭೂ - ಶಬ್ದದ ರೂಪಗಳು (ಮಳೆಗಾಲದಲ್ಲಿ ಹುಟ್ಟುವ ಕಪ್ಪೆ ಎಂದು ಅರ್ಥ). (ವರ್ಷಾಪೂರ್ವಕ ಭೂ ಧಾತುವಿನ ನಂತರ ಕ್ವಿಪ್ ಪ್ರತ್ಯಯವನ್ನು ಸೇರಿಸಿ ಅದು ಸರ್ವಾಪಹಾರವಾದಮೇಲೆ ವರ್ಷಾಭೂ ಎಂದು ಪ್ರಾತಿಪದಿಕವಾಗುತ್ತದೆ).

ಉದಾ-ಪ್ರಥಮಾ ವಿಭಕ್ತಿ ಏಕವಚನದಲ್ಲಿ ವರ್ಷಾಭೂ- ವರ್ಷಾಭೂ+ಸ್ (ಸು) ಎಂದಿದ್ದಾಗ, 'ಸ್' ಗೆ ರುತ್ವ-ವಿಸರ್ಗಗಳಾಗಿ ವರ್ಷಾಭೂಃ ಎಂದಾಗುತ್ತದೆ.

**(ಯಣ್ ವಿಧಾಯಕ ಸೂತ್ರ)**

**ಸೂತ್ರ- 212. ವರ್ಷಾಭ್ವಶ್ಚ (6.4.84)**

ವೃತ್ತಿಃ-ಅಸ್ಯ ಯಣ್ ಸ್ಯಾತ್ ಅಚಿ ಸುಪಿ। ವರ್ಷಾಭ್ವೌ ಇತ್ಯಾದಿ। ದೃನ್ಭೂಃ।

ವಾ॥ ದೃನ್-ಕರ-ಪುನಃ-ಪೂರ್ವಸ್ಯ ಭುವಃ ಯಣ್ ವಕ್ತವ್ಯಃ।

ದೃನ್‌ಭ್ವೌ ಏವಂ ಕರಭೂಃ। ಧಾತಾ। ಹೇ ಧಾತಃ! ಧಾತಾರೌ। ಧಾತಾರಃ।

ವಾ॥ ಋ ವರ್ಣಾನ್ನಸ್ಯ ಣತ್ವಂ ವಾಚ್ಯಮ್।

ಧಾತೄಣಾಮ್। ಏವಂ ನಪ್ತ್ರಾದಯಃ। ನಪ್ತ್ರಾದಿ ಗ್ರಹಣಂ ವ್ಯುತ್ಪತ್ತಿಪಕ್ಷೇ ನಿಯಮಾರ್ಥಮ್। ತೇನ ಇಹ ನ। ಪಿತಾ, ಪಿತರೌ, ಪಿತರಃ। ಶೇಷಂ ಧಾತೃವತ್। ಏವಂ ಜಾಮಾತ್ರಾದಯಃ। ನಾ। ನರೌ।

ಪ. ಛೇ. – ವರ್ಷಾಭ್ವಃ, ಚ ।

ಅ.ವೃ – 'ಅಚಿ ಶ್ನು–ಧಾತು–ಭ್ರುವಾಂ–ಯ್ವೋರಿಯಙುವಙೌ ' ಎಂಬುದರಿಂದ 'ಅಚಿ' ಎಂಬ ಪದವು, 'ಓಃ ಸುಪಿ' ಎಂಬ ಸೂತ್ರದಿಂದ 'ಸುಪಿ' ಎಂಬ ಪದವು ಮತ್ತು 'ಇಣೋಯಣ್' ಎಂಬ ಸೂತ್ರದಿಂದ 'ಯಣ್' ಎಂಬ ಪದವು ಅನುವೃತ್ತವಾಗಿದೆ.

ಅರ್ಥ–ಅಜಾದಿಯಾದ 'ಸುಪ್' ಪ್ರತ್ಯಯವು ಪರದಲ್ಲಿದ್ದಾಗ ವರ್ಷಾಭೂ ಶಬ್ದಕ್ಕೆ ಯಣ್ ಆದೇಶವಾಗಿ ಬರುತ್ತದೆ.

ಉದಾ–ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿಗಳ ದ್ವಿವಚನದಲ್ಲಿ ವರ್ಷಾಭೂ+ಔ ಎಂದಿದ್ದಾಗ, ಪ್ರಕೃತ ಸೂತ್ರದಿಂದ ಯಣಾದೇಶವಾಗಿ ವರ್ಷಾಭ್ವೌ – ಎಂದು ರೂಪಗಳಾಗುತ್ತವೆ.

ಸೂಚನೆ: ಸ್ವಭುವೌ – ಶಬ್ದದಂತೆ ಪ್ರಕ್ರಿಯೆಯನ್ನು ತಿಳಿಯಬೇಕು. ಆದರೆ ಅಲ್ಲಿ 'ಉವಙ್' ಆದೇಶವಾಗುತ್ತದೆ. ಇಲ್ಲಿ ಯಣಾದೇಶವಾಗುತ್ತದೆ.

**ವಾರ್ತಿಕ –ವಾ॥ ದೃನ್–ಕರ–ಪುನಃ–ಪೂರ್ವಸ್ಯ ಭುವಃ ಯಣ್ ವಕ್ತವ್ಯಃ।**

ದೃನ್, ಕರ, ಮತ್ತು ಪುನರ್ ಶಬ್ದಪೂರ್ವಕವಾದ 'ಭೂ' ಶಬ್ದಕ್ಕೆ ಯಣಾದೇಶವು ಬರುತ್ತದೆ. ಅಜಾದಿಯಾದ 'ಸುಪ್' ಪ್ರತ್ಯಯವು ಪರದಲ್ಲಿದ್ದಾಗ.

ಉದಾ– ಪ್ರಥಮಾ ವಿಭಕ್ತಿ ದ್ವಿವಚನದಲ್ಲಿ ದೃನ್‌ಭೂ+ಔ ಎಂದಿದ್ದಾಗ, ಯಣಾದೇಶವಾಗಿ ದೃನ್‌ಭ್+ವ್+ಔ=ದೃನ್‌ಭ್ವೌ ಎಂದಾಗಿದೆ. ಸ್ವಭುವೌ–ಶಬ್ದದ ಪ್ರಕ್ರಿಯೆಯನ್ನು ಇಲ್ಲಿ ಅನುಸರಿಸಬೇಕು.

ಸೂಚನೆ: ಇದರಂತೆ ಕರಭೂಃ, ಪುನರ್ಭೂಃ ಮೊದಲಾದ ಶಬ್ದಗಳು ರೂಪಗಳನ್ನು ಪಡೆಯುತ್ತವೆ.

**ಇಲ್ಲಿಗೆ 'ಊ' ಕಾರಾಂತ ಶಬ್ದಗಳು ಮುಗಿದವು.**

**'ಋ' ಕಾರಾಂತ ಶಬ್ದಗಳು ಆರಂಭವಾಗುತ್ತವೆ.**

ಧಾತೃ ಶಬ್ದವು ಧಾ ಧಾತುವಿಗೆ ಕರ್ತ್ರರ್ಥದಲ್ಲಿ 'ಣ್ವುಲ್ ತೃಚೌ' ಎಂಬುದರಿಂದ ತೃಚ್ ಪ್ರತ್ಯಯವು ಬಂದು ರೂಪ ಸಿದ್ಧವಾಗಿದೆ. (ಧಾರಣೆಯನ್ನು ಮತ್ತು ಪೋಷಣೆಯನ್ನು ಮಾಡುವ ಬ್ರಹ್ಮನು ಎಂದರ್ಥ).

ಉದಾ– ಧಾತಾ – ಪ್ರಥಮಾವಿಭಕ್ತಿ ಏಕವಚನದಲ್ಲಿ ಧಾತಾ – ಧಾತೃ+ಸ್ (ಸು) ಎಂದಿದ್ದಾಗ, ಇದು 'ಋ' ಕಾರಾಂತವಾಗುವುದರಿಂದ 'ಋದುಶನಸ್ಪುರದಂಸೋಽನೇ–

ಹಸಾಂಚ' ಎಂಬುದರಿಂದ 'ಅನಜ್' ಆದೇಶವು ಬಂದು ಧಾತನ್+ಸ್ ಎಂದಿರುವಾಗ, ಅಪ್ತೃನ್–ತೃಚ್–ಸ್ವಸೃ–ನಪ್ತೃ–ನೇಷ್ಟೃ–ತ್ವಷ್ಟೃ–ಕ್ಷತ್ತೃ–ಹೋತೃ–ಪೋತೃ–ಪ್ರಶಾಸ್ತೃಣಾಮ್ (6.4.11) ಎಂಬ ಸೂತ್ರದಿಂದ ಉಪಧಾ 'ಅ'ಕಾರಕ್ಕೆ ದೀರ್ಘ ಬಂದು ಧಾತಾನ್+ಸ್ ಎಂದಿರುವಾಗ 'ಹಲ್‌ಙ್ಯಾಭ್ಯೋ...' ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬಂದು 'ನ ಲೋಪಃ ಪ್ರಾತಿಪದಿಕಾನ್ತಸ್ಯ' ಎಂಬುದರಿಂದ 'ನ್' ಕಾರಕ್ಕೆ ಲೋಪವಾಗಿ ಧಾತಾ ಎಂದು ರೂಪ ನಿಷ್ಪತ್ತಿ ಆಗುತ್ತದೆ.

ಉದಾ– ಹೇಧಾತಃ – ಸಂಬೋಧನ ಪ್ರಥಮಾ ವಿಭಕ್ತಿ ಏಕವಚನದಲ್ಲಿ ಹೇಧಾತಃ! –ಹೇ ಧಾತೃ+ಸ್ (ಸು) ಎಂದಿರುವಾಗ, ಗುಣ ಬಂದು ಧಾತರ್+ಸ್ ಎಂದಿದ್ದಾಗ "ಹಲ್ ಙ್ಯಾಭ್ಯೋ ದೀರ್ಘಾತ್ ಸುತಿಸ್ಯಪೃಕ್ತಮ್ ಹಲ್" ಎಂಬುದರಿಂದ 'ಸ್' ಲೋಪವಾಗಿ ಧಾತರ್ ಎಂದಿರುವಾಗ ರೇಫಕ್ಕೆ ರುತ್ವ–ವಿಸರ್ಗಗಳಾಗಿ ಹೇಧಾತಃ! ಎಂದಾಗಿದೆ.

ಉದಾ– ಧಾತಾರೌ – ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿಯ ದ್ವಿವಚನಗಳಲ್ಲಿ ಧಾತಾರೌ– ಧಾತೃ+ಔ ಎಂದಿದ್ದಾಗ, 'ಋತೋಙಿ'... ಎಂಬುದರಿಂದ 'ಋ'ಕಾರಕ್ಕೆ ಗುಣವಾಗಿ, ಧಾತರ್+ಔ ಎಂದಿರುವಾಗ 'ಅಪ್‌ತೃನ್'... ಎಂಬುದರಿಂದ ಉಪಧಾಕ್ಕೆ ದೀರ್ಘವಾಗಿ ಧಾತಾರೌ ಎಂದಾಗಿದೆ.

ಉದಾ– ಧಾತಾರಃ –ಪ್ರಥಮಾವಿಭಕ್ತಿ ಬಹುವಚನದಲ್ಲಿ ಧಾತಾರಃ – ಧಾತೃ+ಅಸ್ (ಜಸ್) ಎಂದಿದ್ದಾಗ, ಗುಣಬಂದು ಧಾತರ್+ಅಸ್ ಎಂದಿದ್ದಾಗ, 'ಅಪ್‌ತೃನ್'.. ಎಂಬುದರಿಂದ ಉಪಧಾಕ್ಕೆ ದೀರ್ಘವಾಗಿ ಧಾತಾರ್+ಅಸ್ ಎಂದಿದ್ದಾಗ ರುತ್ವ–ವಿಸರ್ಗಗಳಾಗಿ ಧಾತಾರಃ ಎಂದಾಗಿದೆ.

ವಾರ್ತಿಕ – **ಋ ವರ್ಣಾನ್ನಸ್ಯನ್ ಣತ್ವಂ ವಾಚ್ಯಮ್।**

ಋವರ್ಣದ ಪರದಲ್ಲಿರುವ 'ನ' ಕಾರಕ್ಕೆ 'ಣ' ಕಾರವು ಬರುತ್ತದೆ.

ಉದಾ– ಧಾತೃಣಾಮ್–ಷಷ್ಠೀ ವಿಭಕ್ತಿ ಬಹುವಚನದಲ್ಲಿ ಧಾತೃಣಾಮ್–ಧಾತೃ+ನ್+ಆಮ್=ಧಾತೃನಾಮ್ ಎಂದಾಗಿ ಪ್ರಕೃತ ವಾರ್ತಿಕದಿಂದ 'ನ್' ಕಾರಕ್ಕೆ 'ಣ್' ಬಂದು ಧಾತೃಣಾಮ್ ಎಂದಾಗಿದೆ.

ವ್ಯುತ್ಪತ್ತಿ ಪಕ್ಷದಲ್ಲಿ ನಪ್ತೃ ಮೊದಲಾದ ಶಬ್ದಗಳನ್ನು ಸ್ವೀಕರಿಸಿರುವುದು ನಿಯಮಕ್ಕಾಗಿ ಇರುತ್ತದೆ. ಆದ್ದರಿಂದ ಪಿತಾ, ಪಿತರೌ, ಪಿತರಃ ಎಂಬಲ್ಲಿ ದೀರ್ಘವು ಬಂದಿಲ್ಲ. ಅಂದರೆ 'ಅಪ್–ತೃನ್–ತೃಚ್'... ಎಂಬ ಸೂತ್ರದಲ್ಲಿ ಸ್ವಸೃ ಮೊದಲಾದ ಶಬ್ದಗಳೂ ಪಠಿತವಾಗಿವೆ. ಇವುಗಳು ಉಣಾದಿ ಸೂತ್ರಗಳಿಂದ ಉತ್ಪನ್ನವಾಗಿವೆ. ಕೆಲವರು ಈ ಶಬ್ದಗಳನ್ನು ವ್ಯುತ್ಪನ್ನ ಮತ್ತು ಅವ್ಯುತ್ಪನ್ನಗಳೆಂದು ಪರಿಗಣಿಸುತ್ತಾರೆ. ವ್ಯುತ್ಪನ್ನವೆಂದು ಸ್ವೀಕರಿಸುವ ಪಕ್ಷದಲ್ಲಿ, ಶಬ್ದಗಳನ್ನು ಪ್ರಕೃತಿ, ಪ್ರತ್ಯಯಗಳನ್ನಾಗಿ ವಿಂಗಡಿಸುತ್ತಾರೆ. ಇದರಿಂದ ತೃನ್ನಂತ, ತೃಜಂತಗಳಾಗಿರುವ ಶಬ್ದಗಳಿಗೆ ದೀರ್ಘವು ಬರುತ್ತದೆ. ಇವುಗಳಲ್ಲಿ (ಸಿದ್ಧವಾದ ರೂಪಗಳಲ್ಲಿ) ಕೆಲವೇ ಶಬ್ದಗಳನ್ನು ಸ್ವೀಕರಿಸುವ ಕಾರಣದಿಂದ,

ಉಳಿದವುಗಳು ವ್ಯರ್ಥವಾಗುತ್ತವೆ. **'ಸಿದ್ಧೇ ಸತ್ಯಾರಂಭೋ ನಿಯಮಾಯ'** ಕಾರ್ಯವು ಉಪಾಯಾಂತರಗಳಿಂದ ಸಿದ್ಧವಾದರೂ, ಇವುಗಳನ್ನು ಪ್ರತ್ಯೇಕವಾಗಿ ಮತ್ತೆ ವಿಧಾನ ಮಾಡಿರುವುದು ನಿಯಮಕ್ಕಾಗಿ (ಬರಲೇಬೇಕು ಎಂದು). ಈ ನ್ಯಾಯದಿಂದ ಸ್ವಸ್ರಾದಿ ಗ್ರಹಣವು ನಿಯಮವನ್ನು ಮಾಡುತ್ತಿದೆ. ಉಣಾದಿಗೆ ಸೇರಿದ ತೃನ್ ಮತ್ತು ತೃಚ್ ಪ್ರತ್ಯಯಾಂತಗಳಿಗೆ ದೀರ್ಘವಾಗುವುದಾದರೆ ನಪ್ತೃ ಮೊದಲಾದವುಗಳಿಗೇ ಆಗುತ್ತದೆ. ಬೇರೆ ಶಬ್ದಗಳಿಗಲ್ಲ.ಅವ್ಯುತ್ಪನ್ನ ಪಕ್ಷದಲ್ಲಿ ಆಯಾ ಶಬ್ದಗಳನ್ನು ಸ್ವೀಕರಿಸಿ 'ಸುಪ್' ಪ್ರತ್ಯಯಗಳನ್ನು ಸೇರಿಸಿದರೆ ಸಾಕು.

**('ಋ' ಕಾರಾಂತ ಪಿತೃ ಶಬ್ದ)**

ಸೂಚನೆ: ಪಿತೃ ಶಬ್ದವು ನಪ್ತ್ರಾದಿಗಣದಲ್ಲಿ ಬರುವದಿಲ್ಲ. ಇದು 'ಧಾತೃ' ಶಬ್ದದಂತೆ ಪ್ರಕ್ರಿಯೆಯನ್ನು ಹೊಂದಿದರೂ, ಸರ್ವನಾಮಸ್ಥಾನದಲ್ಲಿ ಅಪ್ತೃನ್–ತೃಚ್–ಸ್ವಸೃ–ನಪ್ತೃ–ನೇಷ್ಟೃ–ತ್ವಷ್ಟೃ–ಕ್ಷತ್ತೃ–ಹೋತೃ–ಪೋತೃ–ಪ್ರಶಾಸ್ತೄಣಾಮ್ (6.4.11) ಎಂಬ ಸೂತ್ರದಿಂದ ಉಪಧಾ ದೀರ್ಘವು ಬರುವದಿಲ್ಲ, ಪರಂತು ಕೆಳಗಿನ ನಿಯಮದಿಂದ ಬರುತ್ತದೆ.

ಉದಾ–ಪ್ರಥಮಾ ವಿಭಕ್ತಿ ಏಕವಚನದಲ್ಲಿ ಪಿತಾ –ಪಿತೃ+ಸ್ (ಸು) ಎಂದಿದ್ದಾಗ **'ಋದುಶನಸ್'**... ಎಂಬುದರಿಂದ **'ಅನಙ್'** ಆದೇಶವಾಗಿ ಪಿತನ್+ಸ್ ಎಂದಿದ್ದಾಗ, 'ಸರ್ವನಾಮಸ್ಥಾನೇ ಚಾಸಂಬುದ್ಧೌ' ಎಂಬ ಸೂತ್ರದಿಂದ ಉಪಧಾ ದೀರ್ಘವಾಗಿ, ಪಿತಾನ್+ಸ್ ಎಂದಿರುವಾಗ 'ಹಲ್‌ಙ್ಯಾಬ್ಭ್ಯೋ....' ಎಂಬುದರಿಂದ **'ಸ್'** ಕಾರಕ್ಕೆ ಲೋಪವಾಗಿ 'ನ ಲೋಪಃ ಪ್ರಾತಿಪದಿಕಾನ್ತಸ್ಯ' ಎಂಬುದರಿಂದ **'ನ್'** ಕಾರಕ್ಕೆ ಲೋಪವಾಗಿ ಪಿತಾ ಎಂದು ರೂಪವಾಗುತ್ತದೆ.

ಉದಾ–ಪಿತರೌ– ಪ್ರಥಮಾ ವಿಭಕ್ತಿ ದ್ವಿವಚನದಲ್ಲಿ ಪಿತೃ+ಔ ಎಂದಿದ್ದಾಗ, **'ಋತೋ ಙಿ'** ಎಂಬ ಸೂತ್ರದಿಂದ **'ಋ'**ಕಾರಕ್ಕೆ ಅರ್ ಎಂಬ ಗುಣಾದೇಶವು ಬಂದು ಪಿತರ್+ಔ=ಪಿತರೌ ಎಂದಾಗಿದೆ.

ಉದಾ–ಪಿತರಃ –ಪ್ರಥಮಾ ವಿಭಕ್ತಿ ಬಹು ವಚನದಲ್ಲಿ ಪಿತರಃ–ಪಿತೃ+ಅಸ್ (ಜಸ್) ಎಂದಿದ್ದಾಗ, ಗುಣಾದೇಶವಾಗಿ, ಪಿತರ್+ಅಸ್ ಎಂದಿದ್ದಾಗ, **'ಸ್'** ಕಾರಕ್ಕೆ ರುತ್ವ–ವಿಸರ್ಗಗಳಾಗಿ ಪಿತರಃ ಎಂದಾಗಿದೆ.

ಸೂಚನೆ: 'ಧಾತೃ' ಶಬ್ದದಂತೆ ಉಳಿದ ರೂಪಗಳು ಇರುತ್ತವೆ. 'ಜಾಮಾತೃ(ಅಳಿಯ), ಮತ್ತು ಭ್ರಾತೃ(ಸಹೋದರ) ಎಂಬ ಶಬ್ದಗಳೂ ಕೂಡ ಇದೇರೀತಿಯಲ್ಲಿ ರೂಪಗಳನ್ನು ತಾಳುತ್ತವೆ.

**'ನೃ' ಶಬ್ದದ ರೂಪಗಳು**

ಉದಾ–ನಾ–ಪ್ರಥಮಾ ವಿಭಕ್ತಿ ಏಕವಚನದಲ್ಲಿ ನೃ+ಸ್(ಸು) ಎಂದಿದ್ದಾಗ **'ಋದುಶನಸ್'**... ಎಂಬುದರಿಂದ **'ಅನಙ್'** ಆದೇಶವಾಗಿ ನನ್+ಸ್ ಎಂದಿರುವಾಗ, 'ಸರ್ವನಾಮಸ್ಥಾನೇ... ಸೂತ್ರದಿಂದ ಉಪಧಾ 'ಅ'ಕಾರಕ್ಕೆ ದೀರ್ಘವಾಗಿ ನಾನ್+ಸ್ ಎಂದಿದ್ದಾಗ, 'ಹಲ್‌ಙ್ಯಾಬ್ಭ್ಯೋ... ಎಂಬುದರಿಂದ **'ಸ್'** ಕಾರ ಲೋಪವಾಗಿ, 'ನಲೋಪಃ

ಪ್ರಾತಿಪದಿಕಾನ್ತಸ್ಯ' ಎಂಬುದರಿಂದ ನ್‌ಗೆ ಲೋಪವಾಗಿ ನಾ ಎಂದು ರೂಪವಾಗುತ್ತದೆ.

ಉದಾ–ನರೌ– ಪ್ರಥಮಾ ವಿಭಕ್ತಿ ದ್ವಿವಚನದಲ್ಲಿ ನೃ+ಔ ಎಂದಿದ್ದಾಗ 'ಋತೋಙಿ' ಎಂಬ ಸೂತ್ರದಿಂದ 'ಋ'ಕಾರಕ್ಕೆ ಅರ್ ಎಂಬ ಗುಣಾದೇಶವು ಬಂದು ನ್+ಅರ್+ ಔ=ನರೌ ಎಂದಾಗಿದೆ.

**(ವಿಕಲ್ಪವಾಗಿ ದೀರ್ಘವನ್ನು ವಿಧಿಸುವ ಸೂತ್ರ)**

**ಸೂತ್ರ– 213. ನೃ ಚ (6.4.6)**

ವೃತ್ತಿಃ–ಅಸ್ಯ ನಾಮಿ ವಾ ದೀರ್ಘಃ। ನೃಣಾಮ್, ನೄಣಾಮ್।

ಅ. ವ್ಯ. –'ಛಂದಸ್ಯುಭಯಥಾ' ಎಂಬ ಸೂತ್ರದಿಂದ 'ಉಭಯಥಾ' ಎಂಬ ಪದವು ಮತ್ತು 'ಢ್ರಲೋಪೇ ಪೂರ್ವಸ್ಯ ದೀರ್ಘೋಽಣಃ' ಎಂಬ ಸೂತ್ರದಿಂದ ದೀರ್ಘಃ ಎಂಬ ಪದವು ಹಾಗೂ 'ನಾಮಿ' ಎಂಬ ಸೂತ್ರವೂ ಅನುವೃತ್ತವಾಗುವವು.

ಅರ್ಥ–ನೃ ಶಬ್ದಕ್ಕೆ 'ನಾಮ್' ಪರವಾದಾಗ ದೀರ್ಘವು ವಿಕಲ್ಪವಾಗಿ ಬರುವುದು.

ಉದಾ–ನೃಣಾಂ, ನೄಣಾಂ–ಷಷ್ಠೀ ವಿಭಕ್ತಿ ಬಹುವಚನದಲ್ಲಿ ನೃ+ಆಮ್ ಎಂದಿದ್ದಾಗ, 'ಹ್ರಸ್ವನದ್ಯಾಪೋ ನುಟ್' ಎಂಬ ಸೂತ್ರದಿಂದ ನುಟ್ ಆಗಮವು ಬಂದು ನೃ+ನ್+ಆಮ್ ಎಂದಿರುವಾಗ, ಪ್ರಕೃತ ಸೂತ್ರದಿಂದ ವೈಕಲ್ಪಿಕವಾಗಿ ದೀರ್ಘವು ವಿಕಲ್ಪವಾಗಿ ಬಂದು ನೃ+ನಾಮ್ ಎಂದಿರುವಾಗ, 'ನಾಮೀ' ಎಂಬಸೂತ್ರದಿಂದ ನೄ+ನಾಮ್ 'ಋವರ್ಣಾನ್ತಸ್ಯ ಣತ್ವಂವಾಚ್ಯಂ' ಎಂಬ ವಾರ್ತಿಕದಿಂದ ನ್ ಕಾರಕ್ಕೆ ಣತ್ವ ಬಂದು ನೄಣಾಮ್ ಎಂದಾಗಿದೆ. ದೀರ್ಘವು ಬಾರದೇ ಇದ್ದಾಗ ನೃಣಾಮ್ ಎಂದಾಗುತ್ತದೆ. ಸೂಚನೆ: 'ಲೃ'ಕಾರಾಂತ, 'ಏ' ಕಾರಾಂತ ಶಬ್ದಗಳು ಅಪ್ರಸಿದ್ಧವಾಗಿವೆ.

**ಇಲ್ಲಿಗೆ ಋಕಾರಾಂತ ಶಬ್ದಗಳು ಮುಗಿದವು.**

**(ಓ–ಕಾರಾಂತ ಶಬ್ದವು ಪ್ರಾರಂಭವಾಗುತ್ತದೆ).**

**(ಣಿದ್ವದ್ಭಾವವನ್ನು ವಿಧಿಸುವ ಸೂತ್ರ)**

**ಸೂತ್ರ– 214. ಗೋತೋ ಣಿತ್ (7.1.60)**

ವೃತ್ತಿಃ–ಓಕಾರಾತ್ ವಿಹಿತಂ ಸರ್ವನಾಮಸ್ಥಾನಂ ಣಿದ್ವತ್। ಗೌಃ, ಗಾವೌ, ಗಾವಃ।

ಅ.ವ್ಯ. – 'ಇತೋಽತ್ ಸರ್ವನಾಮಸ್ಥಾನೇ' ಎಂಬ ಸೂತ್ರದಿಂದ 'ಸರ್ವನಾಮಸ್ಥಾನೇ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– 'ಓ'ಕಾರಾಂತ ಶಬ್ದದ ಪರದಲ್ಲಿ ವಿಧಿಸಲ್ಪಡುವ ಸರ್ವನಾಮಸ್ಥಾನಕ್ಕೆ ಣಿದ್ವದ್ಭಾವವು ಬರುತ್ತದೆ.

ಉದಾ –ಗೌಃ – ಪ್ರಥಮಾ ಏಕವಚನದಲ್ಲಿ ಗ್+ಓ+ಸ್ (ಸು) ಎಂದಿರುವಾಗ, ಪ್ರಕೃತ ಸೂತ್ರದಿಂದ 'ಸ್' ಗೆ ಣಿದ್ವದ್ಭಾವ ಮಾಡಿ, 'ಅಚೋ ಞ್ಣಿತಿ' ಎಂಬುದರಿಂದ ಪೂರ್ವದಲ್ಲಿರುವ 'ಓ' ಕಾರಕ್ಕೆ ವೃದ್ಧಿ ಬಂದು ಗ್+ಔ+ಸ್ ಎಂದಿರುವಾಗ, 'ಸ್' ಕಾರಕ್ಕೆ ರುತ್ವ ವಿಸರ್ಗಗಳಾಗಿ ಗೌಃ ಎಂದಾಗಿದೆ.

ಉದಾ– ಗಾವೌ –ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ದ್ವಿವಚನಗಳಲ್ಲಿ ಗಾವೌ– ಗೊ+ಔ ಎಂದಿರುವಾಗ, ಣಿದ್ವದ್ಭಾವ ಪ್ರಯುಕ್ತ ವೃದ್ಧಿ ಬಂದು ಗೌ+ಔ ಎಂದಿರುವಾಗ, 'ಏಚೋಽಯವಾಯಾವಃ' ಎಂಬುದರಿಂದ ಆವ್ ಆದೇಶವಾಗಿ ಗ್+ಆವ್+ಔ=ಗಾವೌ ಎಂದಾಗಿದೆ.

ಉದಾ– ಗಾವಃ – ಪ್ರಥಮಾ ವಿಭಕ್ತಿ ಬಹುವಚನದಲ್ಲಿ, ಗ್+ ಓ+ಅಸ್ (ಜಸ್) ಎಂದಿದ್ದಾಗ, ಣಿದ್ವದ್ಭಾವ ಓಕಾರಕ್ಕೆ ವೃದ್ಧಿ, ನಂತರ ಆವಾದೇಶ, ರುತ್ವ ವಿಸರ್ಗಗಳಾಗಿ ಗಾವಃ ಎಂಬ ರೂಪವಾಗಿದೆ.

**('ಅಮ್' ಮತ್ತು 'ಶಸ್' ಗಳಿಗೆ ಆ–ಕಾರವನ್ನು ಏಕಾದೇಶವಾಗಿ ವಿಧಿಸುವ ಸೂತ್ರ)**

**ಸೂತ್ರ– 215. ಔತೋಽಮ್‌ಶಸೋಃ (6.1.63)**

ವೃತ್ತಿಃ–ಓತಃ ಅಮ್–ಶಸೋಃ ಅಚಿ ಆಕಾರಃ ಏಕಾದೇಶಃ ಸ್ಯಾತ್। ಗಾಮ್। ಗಾವೌ। ಗಾಃ। ಗವಾ। ಗವೇ। ಗೋಃ2। ಇತ್ಯಾದಿ।

ಪ. ಛೇ. – ಆ, ಓತಃ, ಅಮ್, ಶಸೋಃ।

ಅ.ವೃ.–'ಇಕೋಯಣಚಿ' ಎಂಬ ಸೂತ್ರದಿಂದ 'ಅಚಿ' ಎಂಬ ಪದವು ಅನುವೃತ್ತವಾಗುತ್ತದೆ. 'ಏಕಃ ಪೂರ್ವಪರಯೋಃ' ಎಂಬುದು ಅಧಿಕಾರ ಸೂತ್ರ ।

ಅರ್ಥ– 'ಓ'ಕಾರದ ಪರದಲ್ಲಿ ಅಮ್ ಮತ್ತು ಶಸ್‌ಗಳಲ್ಲಿರುವ ಅಚ್ ಇದ್ದಾಗ ಪೂರ್ವಪರಗಳ ಸ್ಥಾನದಲ್ಲಿ 'ಆ'ಕಾರವು ಏಕಾದೇಶವಾಗಿ ಬರುತ್ತದೆ.

ಉದಾ– ದ್ವಿತೀಯಾ ವಿಭಕ್ತಿಯ ಏಕವಚನದಲ್ಲಿ ಗೋ+ಅಮ್ ಎಂದಿದ್ದಾಗ, ಣಿದ್ವದ್ಭಾವದಿಂದ ವೃದ್ಧಿ ಬರಬೇಕಾಗಿತ್ತು. ಅದನ್ನು ಬಾಧಿಸಿ, ಪ್ರಕೃತ ಸೂತ್ರದಿಂದ ಪೂರ್ವ ಪರಗಳ ಸ್ಥಾನದಲ್ಲಿ 'ಆ'ಕಾರವು ಏಕಾದೇಶವಾಗಿ ಬಂದು ಗ್+ಆ+ಮ್=ಗಾಮ್ ಎಂದಾಗಿದೆ.

ಉದಾ– ಗಾವೌ – ಪ್ರಥಮಾವಿಭಕ್ತಿ ದ್ವಿವಚನದಂತೆಯೇ ರೂಪವು ಇರುತ್ತದೆ.

ಉದಾ–ದ್ವಿತೀಯಾ ವಿಭಕ್ತಿಯ ಬಹುವಚನದಲ್ಲಿ–ಗೋ+ಅಸ್ (ಜಸ್) ಎಂದಿದ್ದಾಗ, ಪೂರ್ವಸವರ್ಣ ದೀರ್ಘವನ್ನು ಬಾಧಿಸಿ ಪ್ರಕೃತ ಸೂತ್ರದಿಂದ ಪೂರ್ವಪರಗಳ ಸ್ಥಾನದಲ್ಲಿ 'ಆ'ಕಾರವು ಆದೇಶವಾಗಿ ಬಂದು ಗ್+ಆ+ಸ್ ಎಂದಿರುವಾಗ ರುತ್ವ–ವಿಸರ್ಗಗಳಾಗಿ, ಗಾಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ–ತೃತಿಯಾ ವಿಭಕ್ತಿಯ ಏಕವಚನದಲ್ಲಿ ಗೋ+ಆ(ಟಾ) ಎಂದಿದ್ದಾಗ, ಅವಾದೇಶವಾಗಿ ಗ್+ಅವ್+ಆ=ಗವಾ ಎಂದಾಗಿದೆ.

ಉದಾ–ಗವೇ– ಚತುರ್ಥೀ ವಿಭಕ್ತಿಯ ಏಕವಚನದಲ್ಲಿ ಗೋ+ಏ(ಙೇ) ಎಂದಿದ್ದಾಗ, ಅವಾದೇಶವಾಗಿ ಗ್+ಅವ್+ಏ=ಗವೇ ಎಂದಾಗಿದೆ.

ಉದಾ–ಗೋಃ – ಪಂಚಮೀ ಮತ್ತು ಷಷ್ಠೀ ವಿಭಕ್ತಿಯ ಏಕವಚನದಲ್ಲಿ ಗೋ+ಅಸ್ (ಙಸಿ ಮತ್ತು ಙಸ್) ಎಂದಿದ್ದಾಗ 'ಙಸಿ ಙಸೋಶ್ಚ' ಎಂಬುದರಿಂದ ಪೂರ್ವ ರೂಪ

ಬಂದು ಗೋ+ಸ್ ಎಂದಿದ್ದಾಗ, ರುತ್ವ ವಿಸರ್ಗಗಳಾಗಿ ಗೋಃ ಎಂದಾಗಿದೆ.

ಸೂಚನೆ: ಹಲಾದಿ ಪ್ರತ್ಯಯಗಳು ಪರದಲ್ಲಿದ್ದಾಗ ಯಾವದೇ ವಿಶೇಷವಿಲ್ಲ.

ಉದಾ–ತೃತಿಯಾ ವಿಭಕ್ತಿ ದ್ವಿವಚನ–ಬಹುವಚನಗಳಲ್ಲಿ–ಗೋಭ್ಯಾಮ್ ಗೋಭಿಃ

ಉದಾ–ಚತುರ್ಥೀ ವಿಭಕ್ತೀ ದ್ವಿವಚನ–ಬಹುವಚನಗಳಲ್ಲಿ –ಗೋಭ್ಯಾಮ್ ಗೋಭ್ಯಃ

ಉದಾ–ಪಂಚಮೀ ವಿಭಕ್ತೀ ದ್ವಿವಚನ–ಬಹುವಚನಗಳಲ್ಲಿ –ಗೋಭ್ಯಾಮ್ ಗೋಭ್ಯಃ

ಉದಾ–ಷಷ್ಠೀ ವಿಭಕ್ತೀ ದ್ವಿವಚನ–ಬಹುವಚನಗಳಲ್ಲಿ – ಗೋ+ಓಸ್ > ಅವಾದೇಶ> ಗ್+ ಅವ್+ ಓಸ್ ಗವೋಸ್ > ರುತ್ವ–ವಿಸರ್ಗ ಗವೋಃ

ಉದಾ–ಷಷ್ಠೀ ವಿಭಕ್ತೀ ಬಹುವಚನದಲ್ಲಿ– ಗೋ+ಆಮ್ > ಅವಾದೇಶ> ಗ್+ಅವ್+ಆಮ್=ಗವಾಮ್ (ಏ,ಓ,ಐ,ಔ ಅಂದರೆ 'ಏಚ್' ಗಳಿಗೆ ಹ್ರಸ್ವವಿಲ್ಲದ್ದರಿಂದ, ಹ್ರಸ್ವನದ್ಯಾಪೋನುಟ್ ಎಂಬ ಸೂತ್ರದಿಂದ ನುಡಾಗಮ ಬರುವದಿಲ್ಲ).

ಉದಾ–ಸಪ್ತಮೀ ವಿಭಕ್ತೀ ಏಕವಚನದಲ್ಲಿ ಗೋ+ಇ(ಙಿ) >ಅವಾದೇಶ ಗವ್+ಇ=ಗವಿ

ಉದಾ–ಸಪ್ತಮೀ ದ್ವಿವಚನದಲ್ಲಿ – ಗೋ+ಓಸ್ >ಅವಾದೇಶ ಗವೋಸ್>ರುತ್ವ–ವಿಸರ್ಗ ಗವೋಃ

ಉದಾ–ಸಪ್ತಮೀ ಬಹುವಚನದಲ್ಲಿ– ಗೋ+ಸು (ಸುಪ್)>ಆದೇಶಪ್ರತ್ಯಯಯೋಃ ಎಂಬಸೂತ್ರದಿಂದ 'ಸ್' ಕಾರಕ್ಕೆ ಷತ್ವ ಬಂದು ಗೋಷು ಎಂದಾಗಿದೆ.

**ಇಲ್ಲಿಗೆ ಓ–ಕಾರಾಂತ ಶಬ್ದಗಳು ಮುಗಿದವು.**

### ಐ–ಕಾರಾಂತ 'ರೈ' ಶಬ್ದ

**(ಆ–ಕಾರಾದೇಶವನ್ನು ವಿಧಿಸುವ ಸೂತ್ರ)**

**ಸೂತ್ರ– 216. ರಾಯೋ ಹಲಿ (7.2.85)**

ವೃತ್ತಿಃ–ಅಸ್ಯ ಅಕಾರಾದೇಶಃ ಹಲಿ ವಿಭಕ್ತೌ। ರಾಃ। ರಾಯೌ। ರಾಯಃ। ರಾಭ್ಯಾಂ ಇತ್ಯಾದಿ। [......ಗ್ಲೌಃ। ಗ್ಲಾವೌ। ಗ್ಲಾವಃ। ಗ್ಲೌಭ್ಯಾಂ ಇತ್ಯಾದಿ]।

ಪ. ಛೇ. – ರಾಯಃ, ಹಲಿ।

ಅ.ವ್ಯ.–'ಅಷ್ಟನ ಆ ವಿಭಕ್ತೌ' ಎಂಬ ಸೂತ್ರದಿಂದ 'ಆ' ಮತ್ತು 'ವಿಭಕ್ತೌ' ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ– ಹಲಾದಿ ವಿಭಕ್ತಿಯು ಪರದಲ್ಲಿದ್ದಾಗ, ಪೂರ್ವದಲ್ಲಿರುವ 'ರೈ' ಶಬ್ದದ 'ಐ' ಕಾರಕ್ಕೆ 'ಆ'ಕಾರವು ಆದೇಶವಾಗಿ ಬರುತ್ತದೆ.

ಉದಾ – ರಾಃ (ಐಶ್ವರ್ಯ) ರೈ ಶಬ್ದದ ಪ್ರಥಮಾ ಏಕವಚನದಲ್ಲಿ ರೈ+ಸ್ (ಸು) ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ಐ' ಕಾರಕ್ಕೆ 'ಆ' ಕಾರವು ಆದೇಶವಾಗಿ ರಾ+ಸ್ ಎಂದಿದ್ದಾಗ ರುತ್ವ–ವಿಸರ್ಗಗಳಾಗಿ ರಾಃ ಎಂದಾಗಿದೆ.

ಉದಾ –ರಾಯೌ – ಪ್ರಥಮಾ ವಿಭಕ್ತಿ ದ್ವಿವಚನದಲ್ಲಿ ರೈ+ಔ ಎಂದಿದ್ದಾಗ, ಆಯ್ ಆದೇಶವು ಬಂದು ರಾಯ್+ಔ=ರಾಯೌ ಎಂದಾಗಿದೆ.

ಉದಾ –ರಾಯಃ – ಪ್ರಥಮಾ ವಿಭಕ್ತಿ ಬಹುವಚನದಲ್ಲಿಯೂ ರೈ+ಅಸ್ (ಜಸ್) ಎಂದಿದ್ದಾಗ, ಆಯ್ ಆದೇಶವಾಗಿ ರುತ್ವ ವಿಸರ್ಗಗಳಾಗಿ ರಾಯಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ – ರಾಭ್ಯಾಮ್ – ತೃತಿಯಾ ಚತುರ್ಥೀ ಮತ್ತು ಪಂಚಮೀ ದ್ವಿವಚನಗಳಲ್ಲಿ ರೈ+ಭ್ಯಾವ್ ಎಂದಿದ್ದಾಗ, ಪ್ರಕೃತ ಸೂತ್ರದಿಂದ ಆ ಕಾರಾದೇಶವಾಗಿ ರಾ+ಭ್ಯಾಮ್=ರಾಭ್ಯಾಮ್ ಎಂದಾಗಿದೆ.

**ಸೂಚನೆ**:

1) ಉಳಿದರೂಪಗಳು ಅತಿ ಸ್ಪಷ್ಟವಾಗಿರೋಣದರಿಂದ ಅವುಗಳ ಪ್ರಕ್ರಿಯೆಯನ್ನು ಹೇಳಲಾಗಿಲ್ಲ.

2) ಸ್ತ್ರೀಲಿಂಗದಲ್ಲಿಯೂ 'ರೈ' ಶಬ್ದವು ಪುಲ್ಲಿಂಗದಂತೆಯೇ ರೂಪಗಳನ್ನು ತಾಳುತ್ತದೆ.

**ಅಜನ್ತ ಪುಲ್ಲಿಂಗದ 'ಐ' ಕಾರಾಂತ 'ರೈ' ಶಬ್ದದ ರೂಪಗಳು**

| ವಿಭಕ್ತಿ | ಏ.ವ. | ದ್ವಿವ. | ಬ. ವ. |
|---|---|---|---|
| ಪ್ರಥಮಾ | ರಾಃ | ರಾಯೌ | ರಾಯಃ। |
| ದ್ವಿತೀಯಾ | ರಾಯಮ್ | ರಾಯೌ | ರಾಯಃ। |
| ತೃತೀಯಾ | ರಾಯಾ | ರಾಭ್ಯಾಮ್ | ರಾಭಿಃ। |
| ಚತುರ್ಥೀ | ರಾಯೇ | ರಾಭ್ಯಾಮ್ | ರಾಭ್ಯಃ। |
| ಪಂಚಮೀ | ರಾಯಃ | ರಾಭ್ಯಾಮ್ | ರಾಭ್ಯಃ। |
| ಷಷ್ಠೀ | ರಾಯಃ | ರಾಯೋಃ | ರಾಯಾಮ್। |
| ಸಪ್ತಮೀ | ರಾಯಿ | ರಾಯೋಃ | ರಾಸು। |
| ಸಂಬೋಧನ | ಹೇ ರಾಃ! | ಹೇ ರಾಯೌ! | ಹೇ ರಾಯಃ! |

**ಇಲ್ಲಿಗೆ ಐ ಕಾರಾಂತ ಶಬ್ದವು ಮುಗಿಯಿತು.**

****

ಔ–ಕಾರಾಂತ ಪುಲ್ಲಿಂಗದ 'ಗ್ಲೌ' ಶಬ್ದವು ಆರಂಭವಾಗುತ್ತದೆ.

ಉದಾ –ಗ್ಲೌಃ (ಚಂದ್ರ ) ಪ್ರಥಮಾ ವಿಭಕ್ತಿ ಏಕವಚನದಲ್ಲಿ ಗ್ಲೌ+ಸ್ (ಸು) ಎಂದಿದ್ದಾಗ, ರುತ್ವ–ವಿಸರ್ಗಗಳಾಗಿ ಗ್ಲೌಃ ಎಂದಾಗಿದೆ.

ಉದಾ –ಗ್ಲಾವೌ –ಪ್ರಥಮಾ ವಿಭಕ್ತಿ ದ್ವಿ ವಚನದಲ್ಲಿ ಗ್ಲೌ+ಔ ಎಂದಿದ್ದಾಗ, ಆವ್ ಆದೇಶವಾಗಿ ಗ್ಲಾವೌ ರೂಪವು ಸಿದ್ದವಾಗಿದೆ.

ಉದಾ -ಗ್ಲಾವಃ -ಪ್ರಥಮಾ ವಿಭಕ್ತಿ ಬಹುವಚನದಲ್ಲಿ ಗ್ಲೌ+ಅಸ್ (ಜಸ್) ಎಂದಿದ್ದಾಗ, ಆವ್ ಆದೇಶವಾಗಿ ಗ್ಲಾವ್+ಅಸ್ ಎಂದಿದ್ದಾಗ, ರುತ್ವ-ವಿಸರ್ಗಗಳಾಗಿ ಗ್ಲಾವಃ ರೂಪವಾಗಿದೆ.

ಉದಾ -ಗ್ಲೌಭ್ಯಾಮ್-ತೃತೀಯಾ, ಚತುರ್ಥೀ ಮತ್ತು ಪಞ್ಚಮೀ ದ್ವಿವಚನಗಳಲ್ಲಿ ಗ್ಲೌ+ಭ್ಯಾಮ್ ಎಂದಿದ್ದಾಗ, ಕೇವಲ ಪ್ರತ್ಯಯ ಸೇರಿಸುವುದರಿಂದಲೇ ಗ್ಲೌಭ್ಯಾಮ್ ರೂಪವು ಸಿದ್ಧವಾಗಿದೆ.

ಸೂಚನೆ: ಉಳಿದರೂಪಗಳು ಅತಿ ಸ್ಪಷ್ಟವಾಗಿರೋಣದರಿಂದ ಅವುಗಳ ಪ್ರಕ್ರಿಯೆಯನ್ನು ಹೇಳಲಾಗಿಲ್ಲ. ಇದರಂತೆಯೇ ಉಳಿದ 'ಔ' ಕಾರಾಂತ ಪುಲ್ಲಿಂಗದ ಶಬ್ದಗಳನ್ನು ನುಡಿಸಬೇಕು.

**(ಇಲ್ಲಿಗೆ ಔ-ಕಾರಾಂತ ಶಬ್ದವು ಮುಗಿಯಿತು)**

***

**॥ ಇತಿ ಅಜಂತಾಃ ಪುಲ್ಲಿಙ್ಗಾಃ॥**

**॥ ಅಜಂತ ಪುಲ್ಲಿಂಗ (5) ಪ್ರಕರಣವು ಮುಗಿಯಿತು ॥**

# 6. ಷಡ್ಲಿಙ್ಗೇಷು – ಅಜನ್ತಾಃ ಸ್ತ್ರೀಲಿಙ್ಗಾಃ

(ಸೂತ್ರ 216–234 ರವರೆಗೆ)

**ಪೀಠಿಕೆ:**

'ಅಜನ್ತ ಪುಲ್ಲಿಂಗ' ಶಬ್ದಗಳ ನಿರೂಪಣೆ ಮಾಡಿದ ನಂತರ, ಪಂಡಿತ ವರದರಾಜರು ಕ್ರಮಪ್ರಾಪ್ತವಾದ 'ಅಜನ್ತ ಸ್ತ್ರೀಲಿಂಗ' ಶಬ್ದಗಳ ರೂಪಸಿದ್ಧಿಯನ್ನು ಈ ಪ್ರಕರಣದಲ್ಲಿ ನಿರೂಪಣೆ ಮಾಡುತ್ತಾರೆ. 'ಅಜಂತ ಪುಲ್ಲಿಂಗ'ದಲ್ಲಿರುವಂತೆ 'ಅಜನ್ತ ಸ್ತ್ರೀಲಿಂಗ'ದಲ್ಲಿ 'ಹ್ರಸ್ವ–ಅಕಾರಾನ್ತ' ಶಬ್ದಗಳು ಇರುವುದೇ ಇಲ್ಲ.'ಅ'ಕಾರಾನ್ತ ಸ್ತ್ರೀಲಿಂಗ' ಶಬ್ದಗಳಿಗೆ ಸಾಮಾನ್ಯವಾಗಿ "ಅಜಾದ್ಯತಷ್ಟಾಪ್(4–1–4)" ಸೂತ್ರದಿಂದ 'ಟಾಪ್' ಪ್ರತ್ಯಯಗಳು ಬಂದು 'ಆ'ಕಾರಾನ್ತವಾಗುತ್ತವೆ.

### 'ಆ'ಕಾರಾನ್ತ ಸ್ತ್ರೀಲಿಂಗ ಶಬ್ದಗಳು "ರಮಾ"(ಲಕ್ಷ್ಮೀ)

**1. ರಮಾ(ಲಕ್ಷ್ಮೀ) ಶಬ್ದದ ರೂಪಗಳು**

'ರಮು ಕ್ರೀಡಾಯಾಂ' ಎಂಬುದು ಧಾತು."ನಂದಿ–ಗ್ರಹಿ–ಪಚಾದಿಭ್ಯೋ ಲ್ಯುಣಿನ್ಯಚಃ(3–1–134)" ಸೂತ್ರದಿಂದ 'ಅಚ್'(ಅ) ಪ್ರತ್ಯಯವು ಬಂದು ರಮ್+ಅ(ಅಚ್)='ರಮ' ಎಂದಾಗಿ "ಅಜಾದ್ಯತಷ್ಟಾಪ್(4–1–4)" ಸೂತ್ರದಿಂದ 'ಟಾಪ್'(ಆ) ಬಂದು ಸವರ್ಣದೀರ್ಘ ಸಂಧಿಯಿಂದ ರಮ+ಆ='ರಮಾ' ಎಂದು ಆಬನ್ತ ಸ್ತ್ರೀಲಿಂಗ ಶಬ್ದವಾಗಿದೆ. (ವಿಷ್ಣುವಿನ ಜೊತೆಗೆ ರಮಿಸುವ ಮಹಾಲಕ್ಷ್ಮೀ.)

ಉದಾ –ಪ್ರಥಮಾವಿಭಕ್ತಿ ಏಕವಚನದಲ್ಲಿ 'ರಮಾ+ಸು'(ಸ್) ಎಂದಿದ್ದಾಗ, "ಹಲ್ಙ್ಯಾಭ್ಯೋ ದೀರ್ಘಾತ್ ಸು–ತಿ–ಸಿ ಅಪೃಕ್ತಂ ಹಲ್(6–1–68)" ಎಂಬ ಸೂತ್ರದಿಂದ, ಅಪೃಕ್ತವಾದ 'ಸ್' ಕಾರವು ಲೋಪವನ್ನು ಹೊಂದುತ್ತದೆ. 'ರಮಾ' ಎಂಬ ('ಸುಬನ್ತ' ಶಬ್ದವು) ಸಿಗುತ್ತದೆ.

### (ಔ ಗೆ ಶೀ(ಈ)– ವಿಧಾಯಕ ವಿಧಿಸೂತ್ರ)

**ಸೂತ್ರ – 216. ಔಙ ಆಪಃ (7.1.18)**

ವೃತ್ತಿ–ಆಬಂತಾತ್ ಅಙ್ಗಾತ್ ಪರಸ್ಯ ಔಙಃ ಶೀ ಸ್ಯಾತ್। ಔಙ್ ಇತಿ ಔಕಾರವಿಭಕ್ತೇಃ ಸಂಜ್ಞಾ। ರಮೇ। ರಮಾಃ।

ಪ. ಛೇ.– ಔಙಃ, ಆಪಃ।

ಅ.ವೃ–"ಜಸಃಶೀ(7–1–17)" ಸೂತ್ರದಿಂದ 'ಶೀ' ಎಂಬ ಪದವು ಅನುವೃತ್ತವಾಗುತ್ತದೆ. "ಅಂಗಸ್ಯ(6–4–1)" ಎಂಬುದು ಅಧಿಕಾರ ಸೂತ್ರವಾಗಿದೆ.

ಅರ್ಥ – ಆಬನ್ತವಾದ ಅಂಗದ ನಂತರ 'ಔ'(ಔಟ್ ಅಥವಾ ಔಙ್) ಎಂಬ ಸುಪ್ ಪ್ರತ್ಯಯವಿದ್ದರೆ, ಅದರ ಸ್ಥಾನದಲ್ಲಿ 'ಶೀ(ಈ)' ಆದೇಶವು ಬರುತ್ತದೆ.

[ವಿವರಣೆ: 'ಆಬನ್ತ' ಶಬ್ದಕ್ಕೆ 'ಟಾಪ್', 'ಡಾಪ್', ಚಾಪ್' ಎಂಬ ಮೂರು ವಿಧ

ಪ್ರತ್ಯಯಗಳು ಗೃಹೀತವಾಗುತ್ತವೆ. ಪ್ರಾಚೀನ ವೈಯಾಕರಣಿಗಳು 'ಔ' ಮತ್ತು 'ಔಟ್' ವಿಭಕ್ತಿ ಪ್ರತ್ಯಯಗಳನ್ನು 'ಔಜ್' ಎಂದು ಕರೆಯುತ್ತಿದ್ದರು. 'ಔಟ್' ನಲ್ಲಿರುವ 'ಟ್' ಕಾರವು 'ಇತ್' ಆಗಿದೆ ಮತ್ತು 'ಔಜ್' ನಲ್ಲಿರುವ 'ಜ್' ಕಾರವು 'ಇತ್' ಆಗಿದೆ. ಆದ್ದರಿಂದ ಪ್ರಥಮಾ ವಿಭಕ್ತಿಯ ದ್ವಿವಚನ (ಔ) ಮತ್ತು ದ್ವಿತೀಯಾ ವಿಭಕ್ತಿಯ ದ್ವಿವಚನ(ಔ) ಪ್ರತ್ಯಯಗಳಿಗೆ 'ಶೀ' ಎಂಬ ಆದೇಶವು ಬರುವುದರಿಂದ ಒಂದೇ ತರಹದ ರೂಪವುಳ್ಳದ್ದಾಗಿರುತ್ತದೆ. 'ಶೀ' ಪ್ರತ್ಯಯದಲ್ಲಿ "ಲಶಕ್ವತದ್ಧಿತೇ(1–3–8)" ಸೂತ್ರದಿಂದ 'ಶೀ' ಎಂಬಲ್ಲಿರುವ 'ಶ್' ಕಾರವು 'ಇತ್' ಸಂಜ್ಞೆಯನ್ನು ಪಡೆದಿದೆ, ಆದ್ದರಿಂದ 'ಈ' ಮಾತ್ರ ಉಳಿಯುತ್ತದೆ. 'ಶೀ' ಎಂಬುದು 'ಸುಪ್' ಪ್ರತ್ಯಯವಲ್ಲ "ಸ್ಥಾನಿವದಾದೇಶೋಽನಲ್ವಿಧೌ(1–1–56)" ಸೂತ್ರದಿಂದ ಅದಕ್ಕೆ 'ಸ್ಥಾನಿವದ್ಭಾವ' ಮಾಡಿದಮೇಲೆ ಅದಕ್ಕೆ 'ಸುಪ್' ಪ್ರತ್ಯಯತ್ವವು ಬಂದು "ಲಶಕ್ವತದ್ಧಿತೇ(1–3–8)" ಸೂತ್ರದಿಂದ 'ಶ್' ಕಾರವು 'ಇತ್' ಆಗಿ ಲೋಪವನ್ನು ಹೊಂದಿದೆ].

ಉದಾ– ರಮೇ– ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ದ್ವಿವಚನಗಳಲ್ಲಿ– ರಮಾ+ಔ ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ಔ' ಗೆ ಶೀ (ಈ) ಆದೇಶ ಬಂದು 'ರಮಾ+ಈ (ಶೀ)– ಎಂದಿದ್ದಾಗ, "ಪ್ರಥಮಯೋಃ ಪೂರ್ವಸವರ್ಣಃ" ಎಂಬ ಸೂತ್ರದಿಂದ ಪೂರ್ವಸವರ್ಣದೀರ್ಘ ಬರಬೇಕಾಗಿತ್ತು. ಇದನ್ನು ಬಾಧಿಸಿ, 'ಗುಣ' ಸಂಧಿಯಿಂದ 'ರಮೇ' ಎಂದಾಗಿದೆ.

ಉದಾ– ರಮಾಃ –ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ಬಹುವಚನಗಳಲ್ಲಿ, – 'ರಮಾ+ಅಸ್(ಜಸ್)' ಮತ್ತು 'ರಮಾ+ಅಸ್ (ಶಸ್)' ಈ ಪ್ರತ್ಯಯಗಳು ಬಂದಾಗ, 'ಸವರ್ಣದೀರ್ಘ' ಸಂಧಿಯಿಂದ 'ರಮಾಸ್' ಎಂದಾಗಿ 'ಸ್' ಕಾರಕ್ಕೆ 'ರುತ್ವ' ವಿಸರ್ಗಗಳು ಬಂದು 'ರಮಾಃ' ಎಂಬ ರೂಪವು ಸಿದ್ಧವಾಗಿದೆ. "ದೀರ್ಘಾಜ್ಜಸಿ ಚ (6–1–105)" ಎಂಬ ಸೂತ್ರದಿಂದ ಇಲ್ಲಿ ಪೂರ್ವಸವರ್ಣದೀರ್ಘದ ನಿಷೇಧವು ಮಾಡಲಾಗಿದೆ).

### (ಆಬನ್ತಕ್ಕೆ 'ಏ' ಕಾರಾದೇಶವನ್ನು ವಿಧಿಸುವ ಸೂತ್ರ)

**ಸೂತ್ರ – 218. ಸಂಬುದ್ಧೌ ಚ (7.3.106)**

ವೃತ್ತಿ–ಆಪ ಏಕಾರಃ ಸ್ಯಾತ್ ಸಂಬುದ್ಧೌ। "ಏಙ್ ಹ್ರಸ್ವಾದಿತಿ" ಸಂಬುದ್ಧಿಲೋಪಃ। ಹೇ ರಮೆ!, ಹೇ ರಮೇ!, ಹೇ ರಮಾಃ। ರಮಾಮ್। ರಮೇ। ರಮಾಃ।

ಅ.ವೃ– "ಆಙಿ ಚಾಪಃ(7–3–105)" ಸೂತ್ರದಿಂದ 'ಆಪಃ' ಎಂಬ ಪದವು ಮತ್ತು "ಬಹುವಚನೇ ಝಲ್ಯೇತ್(7–3–103)" ಸೂತ್ರದಿಂದ 'ಏತ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ – 'ಆಬನ್ತ' ವಾದ 'ಅಙ್ಗ'ಕ್ಕೆ 'ಏ' ಕಾರವು ಆದೇಶವಾಗಿ ಬರುತ್ತದೆ 'ಸಂಬುದ್ಧಿ'(ಸು)ಯು ಪರದಲ್ಲಿದ್ದಾಗ.

ಉದಾ– ಹೇ ರಮೇ! –ಸಂಬೋಧನ ಪ್ರಥಮೈಕವಚನದಲ್ಲಿ (ಹೇ) ರಮಾ+ಸ್ (ಸು) ಎಂದಿದ್ದಾಗ 'ಸಂಬುದ್ಧಿ' ಪ್ರತ್ಯಯವು ಪರದಲ್ಲಿರುದರಿಂದ 'ಆಬನ್ತ'ವಾದ 'ರಮಾ'

ಶಬ್ದದ 'ಅಙ್ಗ'(ಆ)ಕಾರಕ್ಕೆ 'ಏ'ಕಾರವು ಆದೇಶವಾಗಿ ಬಂದು 'ರಮ್+ಏ+ಸ್' ಎಂದಿದ್ದಾಗ, "ಏಙ್ ಹ್ರಸ್ವಾತ್ಸಂಬುದ್ಧೇಃ(6-1-69)" ಸೂತ್ರದಿಂದ 'ಸ್' ಕಾರಕ್ಕೆ ಲೋಪವು ಬಂದು 'ಹೇ ರಮೇ' ಎಂದಾಗುತ್ತದೆ.

ಸೂಚನೆ-'ಹೇ ರಮೇ' ಎಂಬ ದ್ವಿವಚನವು ಪ್ರಥಮಾ ವಿಭಕ್ತಿ ದ್ವಿವಚನದಂತೆನೇ ಇರುತ್ತದೆ. 'ಹೇ ರಮಾಃ' ಎಂಬುದು ಪ್ರಥಮಾ ವಿಭಕ್ತಿ ಬಹುವಚನದ ರೂಪದಂತೆ ಸಿದ್ಧವಾಗುತ್ತದೆ. ಹೀಗಾಗಿ ಪ್ರಥಮಾ ವಿಭಕ್ತಿಯಲ್ಲಿ 'ರಮಾ', 'ರಮೇ', 'ರಮಾಃ' ಎಂದೂ ಸಂಬೋಧನ ಪ್ರಥಮಾ ವಿಭಕ್ತಿಯಲ್ಲಿ 'ಹೇ ರಮೇ', 'ಹೇ ರಮೇ', 'ಹೇ ರಮಾಃ' ಎಂಬ ರೂಪಗಳು ಸಿದ್ಧವಾಗಿರುತ್ತವೆ.

ಉದಾ – ರಮಾಮ್ – ದ್ವಿತೀಯಾ ಏಕವಚನದಲ್ಲಿ 'ರಮಾ' ಶಬ್ದದ ನಂತರ 'ಅಮ್' ವಿಭಕ್ತಿಯನ್ನು ಸೇರಿಸಲಾಗಿದೆ. ರಮ್+ಆ+ಅ +ಮ್' ಎಂದಿದ್ದಾಗ, ಅಕಃ ಸವರ್ಣೇ ದೀರ್ಘಃ" ಎಂಬ ಸೂತ್ರದಿಂದ ಸವರ್ಣದೀರ್ಘ ಬರಬೇಕಿದ್ದಾಗ, ಅದನ್ನು ಬಾಧಿಸಿ "ಅಮಿ ಪೂರ್ವಃ (6-1-107)" ಸೂತ್ರದಿಂದ ಪೂರ್ವ ರೂಪವು ಬಂದು, ರಮ್+ಆ+ಮ್ ಎಂದಾಗಿ, ರಮಾಮ್ ಎಂಬ ರೂಪವು ಸಿದ್ಧವಾಗುತ್ತದೆ.

(ಸೂಚನೆ– "ತಸ್ಮಾಚ್ಛಸೋ ನಃ ಪುಂಸಿ(6-1-103)" ಸೂತ್ರದಿಂದ 'ಶಸ್'ನಲ್ಲಿರುವ 'ಸ್' ಕಾರಕ್ಕೆ 'ನ್' ಕಾರವು ಪುಲ್ಲಿಂಗದಲ್ಲಿ ಮಾತ್ರ ಬರುತ್ತದೆ. ಸ್ತ್ರೀಲಿಂಗದಲ್ಲಿ 'ನ್' ಕಾರವು ಬಾರದೇ 'ಸ್' ಕಾರಕ್ಕೆ 'ರುತ್ವ' ವಿಸರ್ಗಗಳು ಬಂದು 'ರಮಾಃ ಎಂಬ ರೂಪವು ಸಿದ್ಧವಾಗುತ್ತದೆ).

**('ಏ'ಕಾರಾದೇಶವನ್ನು ವಿಧಿಸುವ ಸೂತ್ರ).**

**ಸೂತ್ರ– 219. ಆಙಿ ಚಾಪಃ (7.3.105)**

ವೃತ್ತಿ–ಆಙಿ ಓಸಿ ಚ ಆಪ ಏಕಾರಃ। ರಮಯಾ। ರಮಾಭ್ಯಾಮ್। ರಮಾಭಿಃ।

ಪ. ಛೇ.– ಆಙಿ, ಚ, ಆಪಃ।

ಅ.ವೃ–"ಓಸಿ ಚ(7-3-104)" ಸೂತ್ರದಿಂದ 'ಓಸಿ' ಎಂಬ ಪದವು ಮತ್ತು "ಬಹುವಚನೇ ಝಲ್ಯೇತ್ (7-3-103)" ಸೂತ್ರದಿಂದ 'ಏತ್' ಎಂಬ ಪದವು ಅನುವೃತ್ತವಾಗುತ್ತವೆ. "ಅಙ್ಗಸ್ಯ(6-4-1)" ಎಂಬುದು ಇಲ್ಲಿ ಅಧಿಕಾರ ಸೂತ್ರವಾಗಿದೆ.

ಅರ್ಥ –'ಆಙ್' ಮತ್ತು 'ಓಸ್' ಪರದಲ್ಲಿದ್ದಾಗ 'ಆಬನ್ತ' ವಾದ ಅಙ್ಗಕ್ಕೆ 'ಏ' ಕಾರವು ಆದೇಶವಾಗಿ ಬರುತ್ತದೆ.

ಉದಾ– ರಮಯಾ– ತೃತೀಯಾ ವಿಭಕ್ತಿ ಏಕವಚನದಲ್ಲಿ – ರಮಾ+ಆ (ಟಾ) ಎಂದಿದ್ದಾಗ, 'ಸವರ್ಣದೀರ್ಘ' ಸಂಧಿಯನ್ನು ಬಾಧಿಸಿ, ಪ್ರಕೃತ ಸೂತ್ರದಿಂದ 'ರಮಾ' ಎಂಬ ಶಬ್ದದ ಅನ್ತ್ಯವರ್ಣವಾದ 'ಆ'ಕಾರದ ಸ್ಥಾನದಲ್ಲಿ "ಅಲೋಽನ್ತ್ಯಸ್ಯ(1-1-52)" ಎಂಬ ಸೂತ್ರದಿಂದ, 'ಏ'ಕಾರವು ಆದೇಶವಾಗಿ ಬಂದು, 'ರಮ್+ಏ'=ರಮೇ+ಆ(ಟಾ) ಎಂದಿದ್ದಾಗ, "ಏಚೋಽಯವಾಯಾವಃ(6-1-78)" ಸೂತ್ರದಿಂದ 'ಅಯ್' ಆದೇಶವು ಬಂದು 'ರಮ್+ಅಯ್+ಆ'= 'ರಮಯಾ' ಎಂಬ

ರೂಪವು ಸಿದ್ಧವಾಗುತ್ತದೆ.

ಉದಾ- ರಮಾಭ್ಯಾಮ್ - ತೃತೀಯಾ, ಚತುರ್ಥೀ ಮತ್ತು ಪಂಚಮೀ ದ್ವಿವಚನಗಳಲ್ಲಿ ರಮಾ+ಭ್ಯಾಮ್ ಎಂದಿದ್ದಾಗ, ವರ್ಣ ಜೋಡಣೆಯಿಂದ 'ರಮಾಭ್ಯಾಮ್' ಎಂಬ ರೂಪಗಳು ಸಿದ್ಧವಾಗುತ್ತವೆ.

ಉದಾ- ರಮಾಭಿಃ - ತೃತೀಯಾ ವಿಭಕ್ತಿ ಬಹುವಚನದಲ್ಲಿ,'ರಮಾ+ಭಿಸ್' ಎಂದಿದ್ದಾಗ 'ಭಿಸ್'ನಲ್ಲಿರುವ 'ಸ್' ಕಾರಕ್ಕೆ 'ರುತ್ವ', ವಿಸರ್ಗಗಳು ಬಂದು, 'ರಮಾ+ಭಿಸ್'='ರಮಾಭಿಃ' ಎಂಬ ರೂಪವು ಸಿದ್ಧವಾಗಿದೆ.

**(ಯಾಡಾಗಮವನ್ನು ವಿಧಿಸುವ ಸೂತ್ರ).**

**ಸೂತ್ರ- 220. ಯಾಡಾಪಃ (7.3.113)**

ವೃತ್ತಿ-ಆಪಃ ಙಿತಃ ೦ಯಾಟ್। ವೃದ್ಧಿಃ। ರಮಾ೦ಯೈ। ರಮಾಭ್ಯಾಮ್। ರಮಾಭ್ಯಃ-2। ರಮಾ೦ಯಾಃ-2। ರಮ೦ಯೊಃ-2। ರಮಾಣಾಮ್। ರಮಾಸು। ಏವಂ ದುರ್ಗಾಂಬಿಕಾದ೦ಯಃ।

ಪ. ಛೇ.-ಯಾಟ್, ಆಪಃ।

ಅ.ವೃ-"ಘೇರ್ಙಿತಿ(7-3-111)" ಸೂತ್ರದಿಂದ 'ಙಿತಿ' ಎಂಬ 'ಸಪ್ತಮ್ಯಂತ' ಶಬ್ದವು 'ಙಿತಃ' ಎಂದು 'ಷಷ್ಠ್ಯಂತ'ವಾಗಿ ವಿಪರಿಣಾಮಗೊಳಿಸಿದ ನಂತರ ಅನುವೃತ್ತಿ ಮಾಡಲಾಗಿದೆ.

ಅರ್ಥ- 'ಆಬಂತ' ಅಂಗಕ್ಕಿಂತ ಪರದಲ್ಲಿರುವ 'ಙಿತ್' ವಿಭಕ್ತಿಗೆ 'ಯಾಟ್' ಆಗಮವು ಬರುವುದು.

ಇಲ್ಲಿ ಬಂದಿರುವುದು 'ಆದೇಶ'ವಲ್ಲ, 'ಆಗಮ' ವಾಗಿದೆ. ಇಲ್ಲಿ ಬಂದಿರುವುದು 'ಯಾಟ್' ಆಗಮವು, ಇದು 'ಟಿತ್' ಆಗಿದೆ, ಆದ್ದರಿಂದ "ಆದ್ಯಂತೌ ಟಕಿತೌ(1-1-46)" ಸೂತ್ರದಿಂದ ಉತ್ತರಪದದ 'ಆದ್ಯವಯವ' ವಾಗಿಯೂ ಬರುತ್ತದೆ. 'ಯಾಟ್' ನಲ್ಲಿ 'ಇತ್' ಆದ 'ಟ್' ಕಾರವು ಲೋಪವಾಗಿ 'ಯಾ' ಮಾತ್ರ ಉಳಿಯುತ್ತದೆ. 'ಙಿತ್' ವಿಭಕ್ತಿಗಳು ಪರದಲ್ಲಿದ್ದಾಗ ಎಂದರೆ 'ಙೇ','ಙಸಿ','ಙಸ್' ಮತ್ತು 'ಙಿ' ಈ ನಾಲ್ಕು ಪ್ರತ್ಯಯಗಳೆಂದು ತಿಳಿಯಬೇಕು. ಇಂತಹ ಸ್ಥಿತಿಯಲ್ಲಿ ಈ ಸೂತ್ರವು ಪ್ರವೃತ್ತವಾಗುತ್ತದೆ.

ಉದಾ- ರಮಾಯೈ- ಚತುರ್ಥೀ ವಿಭಕ್ತಿ ಏಕವಚನದಲ್ಲಿ-ರಮಾ+ಙೇ ಎಂದಿದ್ದಾಗ, "ಲಶಕ್ವ ತದ್ಧಿತೇ(1-3-8)" ಸೂತ್ರದಿಂದ 'ಇತ್' ಆದ 'ಙ್' ಕಾರಕ್ಕೆ 'ಲೋಪ' ವು ಬಂದು 'ರಮಾ+ಏ' ಎಂದಿದ್ದಾಗ 'ವೃದ್ಧಿ' ಸಂಧಿಯು ಬರಬೇಕಾಗಿತ್ತು. ಅದನ್ನು ಬಾಧಿಸಿ ಪ್ರಕೃತ ಸೂತ್ರದಿಂದ 'ಆಬಂತ ಅಂಗ' ವಾದ 'ರಮಾ' ಶಬ್ದದ ಮೇಲೆ 'ಙೇ'(ಏ) ಎಂದಿದ್ದಾಗ 'ಯಾಟ್'(ಯಾ) ಆಗಮವು ಬಂದು 'ಉತ್ತರ' ಶಬ್ದವಾದ ಏ(ಙೇ) ಗೆ 'ಆದ್ಯವಯವ'ವಾಗಿ ಬಂದು, 'ರಮಾ+ಯಾ+ಏ='ರಮಾ+ಯ್+ಐ( (ಆ+ಏ) ವೃದ್ಧಿಯಾಗಿ =ಐ)='ರಮಾ+ಯೈ=ರಮಾಯೈ' ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ರಮಾಭ್ಯಾಮ್ –ಚತುರ್ಥೀ ಮತ್ತು ಪಂಚಮೀ ವಿಭಕ್ತಿ ದ್ವಿವಚನಗಳಲ್ಲಿ ರಮಾ+ಭ್ಯಾಮ್ ಎಂದಿದ್ದಾಗ, ವರ್ಣಜೋಡಣೆಯಿಂದ 'ರಮಾಭ್ಯಾಮ್'– ಎಂದಾಗಿದೆ.

ಉದಾ– ರಮಾಭ್ಯಃ – ಚತುರ್ಥೀ ವಿಭಕ್ತಿ ಮತ್ತು ಪಂಚಮೀ ಬಹುವಚನಗಳಲ್ಲಿ– 'ರಮಾ+ಭ್ಯಸ್' ಎಂದಿದ್ದಾಗ, 'ರಮಾಭ್ಯಸ್' ಎಂದಾಗಿ ರುತ್ವ–ವಿಸರ್ಗಗಳಿಂದ ರಮಾಭ್ಯಃ ಎಂದಾಗಿದೆ.

ಉದಾ–ರಮಾಯಾಃ– 'ಪಂಚಮೀ' ಮತ್ತು 'ಷಷ್ಠೀ' ವಿಭಕ್ತಿಗಳ ಏಕವಚನದಲ್ಲಿ 'ರಮಾ+ ಅಸ್(ಙಸಿ) ಮತ್ತು 'ರಮಾ+ಅಸ್(ಙಸ್) ಎಂದಿದ್ದಾಗ ಪ್ರಕೃತ ಸೂತ್ರದಿಂದ 'ರಮಾ+ಯಾ+ಅಸ್' ಎಂದಿದ್ದಾಗ, 'ಸವರ್ಣದೀರ್ಘ' ಸಂಧಿಯಿಂದ 'ರಮಾಯಾಸ್' ಎಂದಾಗಿ 'ರುತ್ವ' ವಿಸರ್ಗದಿಂದ 'ರಮಾಯಾಃ' ಎಂದಾಗುತ್ತದೆ.

ಉದಾ– ರಮಯೋಃ – ಷಷ್ಠೀ ಮತ್ತು ಸಪ್ತಮೀ ದ್ವಿವಚನಗಳಲ್ಲಿ 'ರಮ್+ಆ+ಓಸ್' ಎಂದಿದ್ದಾಗ "ಆಙಿ ಚಾಪಃ(7–3–105)" ಎಂಬ ಸೂತ್ರದಿಂದ 'ಆಪ್'ಗೆ 'ಏ'ಕಾರಾದೇಶವು 'ರಮಾ+ಓ (ಓಸ್) ಎಂದಿದ್ದಾಗ, "ಏಚೋಽಯವಾಯಾವಃ" ಎಂಬ ಸೂತ್ರದಿಂದ, 'ಏ' ಗೆ 'ಅಯ್'ಆದೇಶವು ಬಂದು 'ರಮಯೋಸ್' ಎಂದಾಗಿ 'ರುತ್ವ ವಿಸರ್ಗಗಳಿಂದ 'ರಮಯೋಃ' ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ರಮಾಣಾಮ್ – ಷಷ್ಠೀ ಬಹುವಚನದಲ್ಲಿ ರಮ್+ಆ+ಆಮ್ ಎಂದಿದ್ದಾಗ, "ಹ್ರಸ್ವನದ್ಯಾಪೋ ನುಟ್(7–1–54)" ಸೂತ್ರದಿಂದ 'ನುಟ್' ಆಗಮ ಬಂದು 'ರಮಾ+ನ್+ಆಮ್= ರಮಾನಾಮ್' ಎಂದಾಗಿ "ಅಟ್ಕುಪ್ವಾಙ್ನುಮ್ವ್ಯವಾಯೇಽಪಿ(8–4–2)" ಸೂತ್ರದಿಂದ 'ನ್'ಕಾರಕ್ಕೆ 'ಣತ್ವ' ಬಂದು 'ರಮಾಣಾಮ್' ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ರಮಾಯಾಮ್ – ಸಪ್ತಮೀ ಏಕವಚನದಲ್ಲಿ ರಮಾ+ಇ (ಙಿ) ಎಂದಿದ್ದಾಗ, "ಙೇರಾಮ್ನದ್ಯಾಮ್ನೀಭ್ಯಃ(7–3–116)" ಸೂತ್ರದಿಂದ 'ಙಿ'ಗೆ 'ಅಮ್' ಆದೇಶವು ಬಂದು 'ರಮಾ+ಆಮ್' ಎಂದಾಗುತ್ತದೆ. 'ಆಪ್'ನ ಪರದಲ್ಲಿ 'ಙಿ' ಪ್ರತ್ಯಯವು 'ಙಿತ್' ಆಗಿರೋಣದರಿಂದ, ಪ್ರಕೃತ ಸೂತ್ರದಿಂದ 'ಯಾಡಾಗಮ' ಬಂದು 'ರಮಾ+ಯಾ+ಆಮ್= ರಮಾಯಾಮ್' ಎಂದಾಗುತ್ತದೆ.

ಉದಾ– ರಮಾಸು – ಸಪ್ತಮೀ ವಿಭಕ್ತಿ ಬಹುವಚನದಲ್ಲಿ 'ರಮಾ+ ಸು(ಸುಪ್) ಎಂದಿದ್ದಾಗ, ರಮಾ+ಸು ಎಂದಾಗಿ 'ರಮಾಸು' ಎಂದಾಗುತ್ತದೆ. 'ಸ್'ಕಾರಕ್ಕೆ 'ಷತ್ವ' ಬರುವ ಅವಕಾಶ ಇರುವದಿಲ್ಲ.

ಸೂಚನೆ: ದುರ್ಗಾ, ಅಂಬಿಕಾ ಮೊದಲಾದ 'ಆಕಾರಾನ್ತ' ಶಬ್ದಗಳ ರೂಪಗಳು ಕೂಡ ಇದೇ ರೀತಿಯಲ್ಲಿ ಸಿದ್ಧವಾಗುತ್ತವೆ.

**ಇಲ್ಲಿಗೆ ಸಾಧಾರಣ 'ಆ'ಕಾರಾನ್ತ ಶಬ್ದಗಳು ಮುಗಿದವು.**

***

## (ಸ್ತ್ರೀಲಿಂಗ ಸರ್ವನಾಮ ಶಬ್ದದಲ್ಲಿ ಸ್ಯಾಡಾಗಮ ಮತ್ತು ಹ್ರಸ್ವವನ್ನು ವಿಧಿಸುವ ಸೂತ್ರ)

**ಸೂತ್ರ- 221. ಸರ್ವನಾಮ್ನಃ ಸ್ಯಾಡ್ಢ್ರಸ್ವಶ್ಚ (7.3.114)**

ವೃತ್ತಿ-ಆಬಂತಾತ್ ಸರ್ವನಾಮ್ನಃ ಙಿತಃ ಸ್ಯಾಟ್ ಸ್ಯಾತ್, ಆಪಶ್ಚ ಹ್ರಸ್ವಃ। ಸರ್ವಸ್ಯೈ।ಸರ್ವಸ್ಯಾಃ2। ಸರ್ವಾಸಾಮ್।ಸರ್ವಸ್ಯಾಮ್। ಶೇಷಂ ರಮಾವತ್।ಏವಂ ವಿಶ್ವಾದಯಃ ಆಬಂತಾಃ।

ಪ. ಛೇ.-ಸರ್ವನಾಮ್ನಃ, ಸ್ಯಾಟ್, ಹ್ರಸ್ವಃ, ಚ.

ಅ. ವೃ- "ಯಾಡಾಪಃ(7-3-113)" ಸೂತ್ರದಿಂದ 'ಆಪಃ' ಎಂಬ ಪದವು, "ಘೇರ್ಙಿತಿ(7-3-111)" ಸೂತ್ರದಿಂದ 'ಙಿತಿ' ಎಂಬ ಪದವು ಅನುವೃತ್ತವಾಗುತ್ತವೆ.

ಅರ್ಥ -'ಸರ್ವನಾಮ' ಸಂಜ್ಞಕ 'ಆಬಂತ' ಶಬ್ದಗಳ ನಂತರವಿರುವ 'ಙಿತ್' ವಿಭಕ್ತಿಗೆ 'ಸ್ಯಾಟ್' ಆಗಮವು ಬರುತ್ತದೆ. ಮತ್ತು 'ಆಬಂತ'ವಾದ ಶಬ್ದಗಳಿಗೆ 'ಹ್ರಸ್ವ' ಬರುತ್ತದೆ.

[ಸೂಚನೆ; ಸರ್ವಾ ಶಬ್ದವು ಪ್ರಥಮಾ, ದ್ವಿತೀಯಾ ಮತ್ತು ತೃತೀಯಾ ವಿಭಕ್ತಿಗಳಲ್ಲಿ ಸಾಧಾರಣ 'ಆ' ಕಾರಾಂತ ಶಬ್ದವಾದ 'ರಮಾ' ಶಬ್ದದಂತೆ ರೂಪಗಳನ್ನು ಪಡೆಯುತ್ತವೆ]

ಉದಾ- ಸರ್ವಸ್ಯೈ-ಚತುರ್ಥೀ ವಿಭಕ್ತಿ ಏಕವಚನದಲ್ಲಿ, - ಸರ್ವಾ+ಏ (ಙೇ) ಎಂದಿದ್ದಾಗ, ಪ್ರಕೃತ ಸೂತ್ರದಿಂದ ಸರ್ವಾ ಶಬ್ದದಲ್ಲಿಯ 'ಆ' ಕಾರಕ್ಕೆ 'ಹ್ರಸ್ವ' ಮತ್ತು 'ಸ್ಯಾಟ್' ಆಗಮ ಬಂದು ಸರ್ವಸ್ಯಾ+ಏ, ಎಂದಿದ್ದಾಗ, ವೃದ್ಧಿ ಸಂಧಿಯಿಂದ 'ವೃದ್ಧಿ' ಬಂದು ಸರ್ವಸ್ಯೈ ಎಂದಾಗಿದೆ.

ಉದಾ- ಸರ್ವಾಭ್ಯಾಮ್- ಚತುರ್ಥೀ ಮತ್ತು ಪಂಚಮೀ ದ್ವಿವಚನ ರೂಪಗಳು ಮೇಲೆ ಹೇಳಿದ ತೃತೀಯಾ ವಿಭಕ್ತಿ ದ್ವಿವಚನದಂತೆಯೇ 'ಸರ್ವಾಭ್ಯಾಮ್' ಎಂದಿರುತ್ತದೆ.

ಉದಾ- ಸರ್ವಾಭ್ಯಃ -ಚತುರ್ಥೀ ಮತ್ತು ಪಂಚಮೀ ವಿಭಕ್ತಿ ಬಹುವಚನಗಳಲ್ಲಿ ಸರ್ವಾ+ಭ್ಯಸ್ ಎಂದಿದ್ದಾಗ, ಕೇವಲ ವರ್ಣಜೋಡಣೆಯಿಂದ ಸರ್ವಾಭ್ಯಃ ಎಂದು ರೂಪಗಳಾಗುತ್ತವೆ.

ಉದಾ- ಸರ್ವಸ್ಯಾಃ- ಪಂಚಮೀ ಮತ್ತು ಷಷ್ಠಿ ಏಕವಚನಗಳಲ್ಲಿ, 'ಸರ್ವಾ+ಅಸ್(ಙಸಿ), 'ಸರ್ವಾ+ಅಸ್(ಙಸ್) ಎಂದಿದ್ದಾಗ, ಪ್ರಕೃತ ಸೂತ್ರದಿಂದ ಸರ್ವಾ ಶಬ್ದದಲ್ಲಿಯ 'ಆ' ಕಾರಕ್ಕೆ 'ಹ್ರಸ್ವ' ಮತ್ತು 'ಸ್ಯಾಟ್' ಆಗಮ ಬಂದು 'ಸರ್ವಸ್ಯಾ+ಅಸ್(ಸರ್ವಣ ದೀರ್ಘ)=ಸರ್ವಸ್ಯಾಸ್' ಎಂದಾಗಿ, 'ಸ್'ಕಾರಕ್ಕೆ 'ರುತ್ವ' ವಿಸರ್ಗಗಳು ಬಂದು 'ಸರ್ವಸ್ಯಾಃ' ಎಂಬ ರೂಪವು ಸಿದ್ಧವಾಗುತ್ತದೆ.

ಉದಾ- ಸರ್ವಯೋಃ -ಷಷ್ಠೀ ಮತ್ತು ಸಪ್ತಮೀ ದ್ವಿವಚನಗಳಲ್ಲಿ, ಸರ್ವ್+ಆ+ಓ (ಓಸ್), ಎಂದಿದ್ದಾಗ, "ಆಙಿ ಚಾಪಃ" ಎಂಬ ಸೂತ್ರದಿಂದ 'ಆ' ಕಾರಕ್ಕೆ 'ಏ'ಕಾರ ಬಂದು ಸರ್ವ್+ಏ+ಓ (ಓಸ್) ಎಂದಿದ್ದಾಗ, "ಏಚೋಽಯವಾಯಾವಃ" ಸೂತ್ರದಿಂದ 'ಏ' ಕಾರಕ್ಕೆ 'ಅಯ್' ಆದೇಶ ಬಂದು, ಸರ್ವ್+ಅಯ್+ಓ (ಓಸ್) ಎಂದಿದ್ದಾಗ,

'ಸ್' ಕಾರಕ್ಕೆ ರುತ್ವ–ವಿಸರ್ಗಗಳು ಬಂದು ಸರ್ವಯೋಃ ಎಂದು ರೂಪಗಳಾಗುತ್ತವೆ.

ಉದಾ–ಸರ್ವಾಸಾಮ್ – ಷಷ್ಠೀ ವಿಭಕ್ತಿ ಬಹುವಚನದಲ್ಲಿ 'ಸರ್ವಾ+ಆಮ್', ಎಂದಿದ್ದಾಗ, "ಆಮಿಸರ್ವನಾಮ್ನಃಸುಟ್(7–1–52)"), ಎಂಬ ಸೂತ್ರದಿಂದ 'ಸುಟ್' ಆಗಮ ಬಂದು, 'ಸರ್ವಾ+ಸ್+ಆಮ್=ಸರ್ವಾಸಾಮ್' ಎಂದು ರೂಪವಾಗುತ್ತದೆ.

ಉದಾ– ಸರ್ವಸ್ಯಾಮ್– ಸಪ್ತಮೀ ವಿಭಕ್ತಿ ಏಕವಚನದಲ್ಲಿ, 'ಸರ್ವಾ+ಇ (ಙಿ) ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ಹ್ರಸ್ವ' ಮತ್ತು 'ಸ್ಯಾಟ್(ಸ್ಯಾ)' ಆಗಮಗಳು ಬಂದು ಸರ್ವ+ಸ್ಯಾ+ಇ, ಎಂದಿದ್ದಾಗ, "ಙೇರಾಮ್ನದ್ಯಾಮ್ನೀಭ್ಯಃ(7–3–116)" ಎಂಬ ಸೂತ್ರದಿಂದ 'ಇ' ಕಾರಕ್ಕೆ 'ಆಮ್' ಬಂದು ಸರ್ವ+ಸ್ಯಾ+ಆಮ್ ಎಂದಿದ್ದಾಗ, ಸರ್ವಣದೀರ್ಘ ಸಂದಿಯಿಂದ=ಸರ್ವಸ್ಯಾಮ್' ಎಂದಾಗುತ್ತದೆ.

ಉದಾ–ಸರ್ವಾಸು ಸಪ್ತಮೀ ಬಹುವಚನದಲ್ಲಿ ಸರ್ವಾ+ಸು (ಸುಪ್) ಎಂದಿದ್ದಾಗ, 'ಸರ್ವಾಸು' ಎಂದು ರೂಪವಾಗುತ್ತದೆ.

ಉದಾ– ಸಂಬೋಧನಾ ಪ್ರಥಮಾ ವಿಭಕ್ತಿಯಲ್ಲಿ, 'ರಮಾ' ಶಬ್ದದಂತೆ, ಹೇ ಸರ್ವೇ!, ಹೇ ಸರ್ವೇ! ಹೇ ಸರ್ವಾಃ! ಎಂದು ರೂಪಗಳಾಗುತ್ತವೆ.

[ಸೂಚನೆ: ಆಕಾರಾನ್ತ ಸ್ತ್ರೀಲಿಂಗದ ಸರ್ವನಾಮದ 'ಸರ್ವಾ' ಶಬ್ದದ ರೂಪಗಳು– ಪುಲ್ಲಿಂಗದಲ್ಲಿ 'ಸರ್ವ' ಶಬ್ದವು 'ಅ' ಕಾರಂತವಾಗಿರುವದರಿಂದ "ಅಜಾದ್ಯತಷ್ಟಾಪ್ (4–1–4)" ಸೂತ್ರದಿಂದ 'ಟಾಪ್' ಪ್ರತ್ಯಯವು ಬಂದು 'ಸರ್ವಾ' ಎಂದು 'ಆ' ಕಾರಂತವಾಗುತ್ತದೆ. 'ಙಿತ್' ಆದ ವಿಭಕ್ತಿಗಳು ಮತ್ತು 'ಆಮ್' ಪರದಲ್ಲಿ ಬಂದಾಗ ಮಾತ್ರ ವಿಶೇಷ ಕಾರ್ಯವಿರುತ್ತದೆ].

**('ಆಬನ್ತ' ಸ್ತ್ರೀಲಿಂಗ 'ಸರ್ವಾ' ಶಬ್ದದ ರೂಪಗಳು).**

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಸರ್ವಾ | ಸರ್ವೇ | ಸರ್ವಾಃ |
| ದ್ವಿತೀಯ | ಸರ್ವಾಮ್ | ಸರ್ವೇ | ಸರ್ವಾಃ |
| ತೃತೀಯ | ಸರ್ವಯಾ | ಸರ್ವಾಭ್ಯಾಮ್ | ಸರ್ವಾಭಿಃ |
| ಚತುರ್ಥೀ | ಸರ್ವಸ್ಯೈ | ಸರ್ವಾಭ್ಯಾಮ್ | ಸರ್ವಾಭ್ಯಃ |
| ಪಞ್ಚಮೀ | ಸರ್ವಸ್ಯಾಃ | ಸರ್ವಾಭ್ಯಾಮ್ | ಸರ್ವಾಭ್ಯಃ |
| ಷಷ್ಠೀ | ಸರ್ವಸ್ಯಾಃ | ಸರ್ವಯೋಃ | ಸರ್ವಾಸಾಮ್ |
| ಸಪ್ತಮೀ | ಸರ್ವಸ್ಯಾಮ್ | ಸರ್ವಯೋಃ | ಸರ್ವಾಸು |
| ಸಂಬೋಧನ | ಹೇ ಸರ್ವೇ! | ಹೇ ಸರ್ವೇ! | ಹೇ ಸರ್ವಾಃ! |

ಸೂಚನೆ: ಇಷ್ಟರವರೆಗೆ 'ಆ'ಕಾರಾನ್ತದ ಸ್ತ್ರೀಲಿಂಗ ಶಬ್ದಗಳ ರೂಪಗಳಂತೆ ರೂಪಗಳಿರುತ್ತವೆ. ಇದರಂತೆಯೇ 'ವಿಶ್ವಾ' ಮೊದಲಾದ ಸ್ತ್ರೀಲಿಂಗ ಶಬ್ದಗಳನ್ನು ನುಡಿಸಬೇಕು.

## (ಸ್ತ್ರೀಲಿಙ್ಗ ಸರ್ವನಾಮ ಶಬ್ದದಲ್ಲಿ ಸ್ಯಾಡಾಗಮ ಮತ್ತು ಹ್ರಸ್ವವನ್ನು ವಿಧಿಸುವ ಸೂತ್ರ)

**ಸೂತ್ರ- 221. ಸರ್ವನಾಮ್ನಃ ಸ್ಯಾಡ್ಢ್ರಸ್ವಶ್ಚ (7.3.114)**

ವೃತ್ತಿ–ಆಬಂತಾತ್ ಸರ್ವನಾಮ್ನಃ ಙಿತಃ ಸ್ಯಾಟ್ ಸ್ಯಾತ್, ಆಪಶ್ಚ ಹ್ರಸ್ವಃ। ಸರ್ವಸ್ಯೈ।ಸರ್ವಸ್ಯಾಃ2। ಸರ್ವಾಸಾಮ್।ಸರ್ವಸ್ಯಾಮ್। ಶೇಷಂ ರಮಾವತ್।ಏವಂ ವಿಶ್ವಾದಯಃ ಆಬಂತಾಃ।

ಪ. ಛೇ.–ಸರ್ವನಾಮ್ನಃ, ಸ್ಯಾಟ್, ಹ್ರಸ್ವಃ, ಚ.

ಅ. ವೃ– "ಯಾಡಾಪಃ(7–3–113)" ಸೂತ್ರದಿಂದ 'ಆಪಃ' ಎಂಬ ಪದವು, "ಘೇರ್ಙಿತಿ(7–3–111)" ಸೂತ್ರದಿಂದ 'ಙಿತಿ' ಎಂಬ ಪದವು ಅನುವೃತ್ತವಾಗುತ್ತವೆ.

ಅರ್ಥ –'ಸರ್ವನಾಮ' ಸಂಜ್ಞಕ 'ಆಬಂತ' ಶಬ್ದಗಳ ನಂತರವಿರುವ 'ಙಿತ್' ವಿಭಕ್ತಿಗೆ 'ಸ್ಯಾಟ್' ಆಗಮವು ಬರುತ್ತದೆ. ಮತ್ತು 'ಆಬಂತ'ವಾದ ಶಬ್ದಗಳಿಗೆ 'ಹ್ರಸ್ವ' ಬರುತ್ತದೆ.

[ಸೂಚನೆ; ಸರ್ವಾ ಶಬ್ದವು ಪ್ರಥಮಾ, ದ್ವಿತೀಯಾ ಮತ್ತು ತೃತೀಯಾ ವಿಭಕ್ತಿಗಳಲ್ಲಿ ಸಾಧಾರಣ 'ಆ' ಕಾರಾಂತ ಶಬ್ದವಾದ 'ರಮಾ' ಶಬ್ದದಂತೆ ರೂಪಗಳನ್ನು ಪಡೆಯುತ್ತವೆ]

ಉದಾ– ಸರ್ವಸ್ಯೈ–ಚತುರ್ಥೀ ವಿಭಕ್ತಿ ಏಕವಚನದಲ್ಲಿ, – ಸರ್ವಾ+ಏ (ಙೇ) ಎಂದಿದ್ದಾಗ, ಪ್ರಕೃತ ಸೂತ್ರದಿಂದ ಸರ್ವಾ ಶಬ್ದದಲ್ಲಿಯ 'ಆ' ಕಾರಕ್ಕೆ 'ಹ್ರಸ್ವ' ಮತ್ತು 'ಸ್ಯಾಟ್' ಆಗಮ ಬಂದು ಸರ್ವಸ್ಯಾ+ಏ, ಎಂದಿದ್ದಾಗ, ವೃದ್ಧಿ ಸಂಧಿಯಿಂದ 'ವೃದ್ಧಿ' ಬಂದು ಸರ್ವಸ್ಯೈ ಎಂದಾಗಿದೆ.

ಉದಾ– ಸರ್ವಾಭ್ಯಾಮ್– ಚತುರ್ಥೀ ಮತ್ತು ಪಂಚಮೀ ದ್ವಿವಚನ ರೂಪಗಳು ಮೇಲೆ ಹೇಳಿದ ತೃತೀಯಾ ವಿಭಕ್ತಿ ದ್ವಿವಚನದಂತೆಯೇ 'ಸರ್ವಾಭ್ಯಾಮ್' ಎಂದಿರುತ್ತದೆ.

ಉದಾ– ಸರ್ವಾಭ್ಯಃ –ಚತುರ್ಥೀ ಮತ್ತು ಪಂಚಮೀ ವಿಭಕ್ತಿ ಬಹುವಚನಗಳಲ್ಲಿ ಸರ್ವಾ+ಭ್ಯಸ್ ಎಂದಿದ್ದಾಗ, ಕೇವಲ ವರ್ಣಜೋಡಣೆಯಿಂದ ಸರ್ವಾಭ್ಯಃ ಎಂದು ರೂಪಗಳಾಗುತ್ತವೆ.

ಉದಾ– ಸರ್ವಸ್ಯಾಃ– ಪಂಚಮೀ ಮತ್ತು ಷಷ್ಠಿ ಏಕವಚನಗಳಲ್ಲಿ, 'ಸರ್ವಾ+ಅಸ್(ಙಸಿ), 'ಸರ್ವಾ+ಅಸ್(ಙಸ್) ಎಂದಿದ್ದಾಗ, ಪ್ರಕೃತ ಸೂತ್ರದಿಂದ ಸರ್ವಾ ಶಬ್ದದಲ್ಲಿಯ 'ಆ' ಕಾರಕ್ಕೆ 'ಹ್ರಸ್ವ' ಮತ್ತು 'ಸ್ಯಾಟ್' ಆಗಮ ಬಂದು 'ಸರ್ವಸ್ಯಾ+ಅಸ್(ಸವರ್ಣ ದೀರ್ಘ)=ಸರ್ವಸ್ಯಾಸ್' ಎಂದಾಗಿ, 'ಸ್'ಕಾರಕ್ಕೆ 'ರುತ್ವ' ವಿಸರ್ಗಗಳು ಬಂದು 'ಸರ್ವಸ್ಯಾಃ' ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಸರ್ವಯೋಃ –ಷಷ್ಠೀ ಮತ್ತು ಸಪ್ತಮೀ ದ್ವಿವಚನಗಳಲ್ಲಿ, ಸರ್ವ್+ಆ+ಓ (ಓಸ್), ಎಂದಿದ್ದಾಗ, "ಆಙಿ ಚಾಪಃ" ಎಂಬ ಸೂತ್ರದಿಂದ 'ಆ' ಕಾರಕ್ಕೆ 'ಏ'ಕಾರ ಬಂದು ಸರ್ವ್+ಏ+ಓ (ಒಸ್) ಎಂದಿದ್ದಾಗ, "ಏಚೋಽಯವಾಯಾವಃ" ಸೂತ್ರದಿಂದ 'ಏ' ಕಾರಕ್ಕೆ 'ಅಯ್' ಆದೇಶ ಬಂದು, ಸರ್ವ್+ಅಯ್+ಓ (ಓಸ್) ಎಂದಿದ್ದಾಗ,

'ಸ್' ಕಾರಕ್ಕೆ ರುತ್ವ–ವಿಸರ್ಗಗಳು ಬಂದು ಸರ್ವಯೋಃ ಎಂದು ರೂಪಗಳಾಗುತ್ತವೆ.

ಉದಾ–ಸರ್ವಾಸಾಮ್ – ಷಷ್ಠೀ ವಿಭಕ್ತಿ ಬಹುವಚನದಲ್ಲಿ 'ಸರ್ವಾ+ಆಮ್', ಎಂದಿದ್ದಾಗ, "ಆಮಿಸರ್ವನಾಮ್ನಃಸುಟ್(7–1–52)"), ಎಂಬ ಸೂತ್ರದಿಂದ 'ಸುಟ್' ಆಗಮ ಬಂದು, 'ಸರ್ವಾ+ಸ್+ಆಮ್=ಸರ್ವಾಸಾಮ್' ಎಂದು ರೂಪವಾಗುತ್ತದೆ.

ಉದಾ– ಸರ್ವಸ್ಯಾಮ್– ಸಪ್ತಮೀ ವಿಭಕ್ತಿ ಏಕವಚನದಲ್ಲಿ, 'ಸರ್ವಾ+ಇ (ಜಿ) ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ಹ್ರಸ್ವ' ಮತ್ತು 'ಸ್ಯಾಟ್(ಸ್ಯಾ)' ಆಗಮಗಳು ಬಂದು ಸರ್ವ+ಸ್ಯಾ+ಇ, ಎಂದಿದ್ದಾಗ, "ಙೇರಾಮ್ನದ್ಯಾಮ್ನೀಭ್ಯಃ(7–3–116)" ಎಂಬ ಸೂತ್ರದಿಂದ 'ಇ' ಕಾರಕ್ಕೆ 'ಆಮ್' ಬಂದು ಸರ್ವ+ಸ್ಯಾ+ಆಮ್ ಎಂದಿದ್ದಾಗ, ಸರ್ವಣದೀರ್ಘ ಸಂದಿಯಿಂದ=ಸರ್ವಸ್ಯಾಮ್' ಎಂದಾಗುತ್ತದೆ.

ಉದಾ–ಸರ್ವಾಸು ಸಪ್ತಮೀ ಬಹುವಚನದಲ್ಲಿ ಸರ್ವಾ+ಸು (ಸುಪ್) ಎಂದಿದ್ದಾಗ, 'ಸರ್ವಾಸು' ಎಂದು ರೂಪವಾಗುತ್ತದೆ.

ಉದಾ– ಸಂಬೋಧನಾ ಪ್ರಥಮಾ ವಿಭಕ್ತಿಯಲ್ಲಿ, 'ರಮಾ' ಶಬ್ದದಂತೆ, ಹೇ ಸರ್ವೇ!, ಹೇ ಸರ್ವೇ! ಹೇ ಸರ್ವಾಃ! ಎಂದು ರೂಪಗಳಾಗುತ್ತವೆ.

[ಸೂಚನೆ: ಆಕಾರಾನ್ತ ಸ್ತ್ರೀಲಿಂಗದ ಸರ್ವನಾಮದ 'ಸರ್ವಾ' ಶಬ್ದದ ರೂಪಗಳು– ಪುಲ್ಲಿಂಗದಲ್ಲಿ 'ಸರ್ವ' ಶಬ್ದವು 'ಅ' ಕಾರಂತವಾಗಿರುವದರಿಂದ "ಅಜಾದ್ಯತಷ್ಟಾಪ್ (4–1–4)" ಸೂತ್ರದಿಂದ 'ಟಾಪ್' ಪ್ರತ್ಯಯವು ಬಂದು 'ಸರ್ವಾ' ಎಂದು 'ಆ' ಕಾರಂತವಾಗುತ್ತದೆ. 'ಜಿತ್' ಆದ ವಿಭಕ್ತಿಗಳು ಮತ್ತು 'ಆಮ್' ಪರದಲ್ಲಿ ಬಂದಾಗ ಮಾತ್ರ ವಿಶೇಷ ಕಾರ್ಯವಿರುತ್ತದೆ].

**('ಆಬನ್ತ' ಸ್ತ್ರೀಲಿಂಗ 'ಸರ್ವಾ' ಶಬ್ದದ ರೂಪಗಳು).**

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಸರ್ವಾ | ಸರ್ವೇ | ಸರ್ವಾಃ |
| ದ್ವಿತೀಯ | ಸರ್ವಾಮ್ | ಸರ್ವೇ | ಸರ್ವಾಃ |
| ತೃತೀಯ | ಸರ್ವಯಾ | ಸರ್ವಾಭ್ಯಾಮ್ | ಸರ್ವಾಭಿಃ |
| ಚತುರ್ಥೀ | ಸರ್ವಸ್ಯೈ | ಸರ್ವಾಭ್ಯಾಮ್ | ಸರ್ವಾಭ್ಯಃ |
| ಪಞ್ಚಮೀ | ಸರ್ವಸ್ಯಾಃ | ಸರ್ವಾಭ್ಯಾಮ್ | ಸರ್ವಾಭ್ಯಃ |
| ಷಷ್ಠೀ | ಸರ್ವಸ್ಯಾಃ | ಸರ್ವಯೋಃ | ಸರ್ವಾಸಾಮ್ |
| ಸಪ್ತಮೀ | ಸರ್ವಸ್ಯಾಮ್ | ಸರ್ವಯೋಃ | ಸರ್ವಾಸು |
| ಸಂಬೋಧನ | ಹೇ ಸರ್ವೇ! | ಹೇ ಸರ್ವೇ! | ಹೇ ಸರ್ವಾಃ! |

ಸೂಚನೆ: ಇಷ್ಟರವರೆಗೆ 'ಆ'ಕಾರಾನ್ತದ ಸ್ತ್ರೀಲಿಂಗ ಶಬ್ದಗಳ ರೂಪಗಳಂತೆ ರೂಪಗಳಿರುತ್ತವೆ. ಇದರಂತೆಯೇ 'ವಿಶ್ವಾ' ಮೊದಲಾದ ಸ್ತ್ರೀಲಿಂಗ ಶಬ್ದಗಳನ್ನು ನುಡಿಸಬೇಕು.

(ವೈಕಲ್ಪಿಕವಾಗಿ ಸರ್ವನಾಮಸಂಜ್ಞೆಯನ್ನು ವಿಧಿಸುವ ಸೂತ್ರ)

**ಸೂತ್ರ- 222. ವಿಭಾಷಾ ದಿಕ್ಸಮಾಸೇ ಬಹುವ್ರೀಹೌ (1.1.28)**

ವೃತ್ತಿ–ಸರ್ವನಾಮತಾ ವಾ । ಉತ್ತರಪೂರ್ವಸ್ಯೈ ಉತ್ತರಪೂರ್ವಾಯೈ।

ವಾ॥ ತೀಯಸ್ಯ ಇತಿ ವಾ ಸರ್ವನಾಮ ಸಂಜ್ಞಾ ।

ದ್ವಿತೀಯಸ್ಯೈ, ದ್ವಿತೀಯಾಯೈ। ಏವಂ ತೃತೀಯಾ। (195) ಅಂಬಾರ್ಥಾ ಇತಿ ಹ್ರಸ್ವಃ। ಹೇ ಅಂಬ!, ಹೇ ಅಕ್ಕ!, ಹೇ ಅಲ್ಲ!, ಜರಾ। ಜರಸೌ. ಇತ್ಯಾದಿ। ಪಕ್ಷೇ ಹಲಾದೌ ಚ ರಮಾವತ್। ಗೋಪಾಃ ವಿಶ್ವಪಾವತ್। [..... ಮತೀಃ। ಮತ್ಯಾ]।

ಪ. ಛೇ.–ವಿಭಾಷಾ, ದಿಕ್, ಸಮಾಸೇ, ಬಹುವ್ರೀಹೌ।

ಅ.ವೃ– "ಸರ್ವಾದೀನಿ ಸರ್ವನಾಮಾನಿ (1–1–27)" ಎಂಬ ಇಡೀ ಸೂತ್ರವು ಅನುವೃತ್ತವಾಗುತ್ತದೆ.

ಅರ್ಥ – "(ದಿಕ್ಸಮಾಸೇ ಬಹುವ್ರೀಹೌ ಸರ್ವಾದೀನಿ ಸರ್ವನಾಮಾನಿ ವಿಭಾಷಾ ಸ್ಯುಃ)" 'ದಿಕ್'– ವಾಚಕ ಶಬ್ದಗಳ ಬಹುವ್ರೀಹಿ ಸಮಾಸದಲ್ಲಿ 'ಸರ್ವಾದಿ'ಗಳಿಗೆ ವಿಕಲ್ಪದಿಂದ 'ಸರ್ವನಾಮ' ಸಂಜ್ಞೆಯು ಬರುತ್ತದೆ."ದಿಙ್ನಾಮಾನ್ಯನ್ತರಾಲೇ(2–2–26)" ಸೂತ್ರದಿಂದ 'ದಿಕ್'– ವಾಚಕ ಶಬ್ದಗಳಿಗೆ ಬಹುವ್ರೀಹಿ ಸಮಾಸವು ಬರುತ್ತದೆ. "ಸರ್ವಾದೀನಿ ಸರ್ವನಾಮಾನಿ(1–1–27)" ಸೂತ್ರದಿಂದ ನಿತ್ಯವಾಗಿ ಸರ್ವನಾಮ ಸಂಜ್ಞೆಯು ಬರುತ್ತಿತ್ತು. ಅದು ಪ್ರಕೃತ ಸೂತ್ರದಿಂದ ವೈಕಲ್ಪಿಕವಾಯಿತು. 'ದಿಕ್' ಶಬ್ದವು ಸ್ತ್ರೀಲಿಂಗವಾಗಿದೆ. ಅದ್ದರಿಂದ ಇದರ ವಿಶೇಷಣವಾದ 'ಪೂರ್ವಾ' ಮೊದಲಾದ ಶಬ್ದಗಳು ಸ್ತ್ರೀಲಿಂಗದಲ್ಲಿರುತ್ತವೆ. 'ಪೂರ್ವ, 'ದಕ್ಷಿಣ,' 'ಪಶ್ಚಿಮ' ಮತ್ತು 'ಉತ್ತರ' – ಈ 'ದಿಕ್'ಗಳ ಮಧ್ಯದಲ್ಲಿರುವ 'ದಿಕ್'ಗಳಿಗೆ 'ಅನ್ತರಾಳ'(ಉಪ ದಿಕ್)ವೆಂದು ಹೇಳುತ್ತಾರೆ.

ಉದಾಹರಣೆ– 'ಪೂರ್ವ' ಮತ್ತು 'ದಕ್ಷಿಣ' ಇವುಗಳ ಮಧ್ಯದಲ್ಲಿರುವ 'ಉಪ ದಿಕ್'ಗೆ 'ದಕ್ಷಿಣ–ಪೂರ್ವಾ' ಎಂದೂ, 'ದಕ್ಷಿಣ' ಮತ್ತು 'ಪಶ್ಚಿಮ' ದಿಕ್‌ಗಳ ಮಧ್ಯದಲ್ಲಿರುವ ಉಪ–ದಿಕ್‌ಗೆ 'ದಕ್ಷಿಣ–ಪಶ್ಚಿಮಾ' ಎಂದೂ, 'ಪಶ್ಚಿಮ' ಮತ್ತು 'ಉತ್ತರ' ದಿಕ್‌ಗಳ ಮಧ್ಯದಲ್ಲಿರುವ ಉಪ–ದಿಕ್‌ಗೆ 'ಪಶ್ಚಿಮೋತ್ತರಾ' ಎಂದೂ ಮತ್ತು 'ಉತ್ತರ' ಮತ್ತು 'ಪೂರ್ವ' ದಿಕ್‌ಗಳ ಮಧ್ಯದಲ್ಲಿರುವ ದಿಕ್‌ಗೆ 'ಉತ್ತರ–ಪೂರ್ವಾ' ಎಂದು ಹೇಳುತ್ತಾರೆ.

ಉದಾಹರಣೆ–1: 'ಉತ್ತಾರಪೂರ್ವಾ'– 'ಉತ್ತರಸ್ಯಾಶ್ಚ ಪೂರ್ವಸ್ಯಾಃ ಚ ದಿಶೋಃ ಯದನ್ತರಾಳಂ ಸಾ ದಿಕ್' – 'ಉತ್ತರಪೂರ್ವಾ'. ಇದು 'ಅನ್ಯ ಪದಾರ್ಥ ಪ್ರಧಾನ'ವಾದ 'ಬಹುವ್ರೀಹಿ' ಸಮಾಸದಲ್ಲಿದೆ. "ಸರ್ವಾದೀನಿ ಸರ್ವನಾಮಾನಿ (1–1–27)" ಸೂತ್ರದಿಂದ ನಿತ್ಯವಾಗಿ ಪ್ರಾಪ್ತವಾದ ಸರ್ವನಾಮ ಸಂಜ್ಞೆಯು ಪ್ರಕೃತ ಸೂತ್ರದಿಂದ ವಿಕಲ್ಪವಾಗಿದೆ. ಆದರೆ "ಸರ್ವನಾಮ್ನಃ ಸ್ಯಾಡ್ಢ್ರಸ್ವಶ್ಚ (7–3–114)" ಸೂತ್ರವು 'ಸರ್ವನಾಮ' ಸಂಜ್ಞೆಯನ್ನು ಆಧರಿಸಿ ಹೊರಟಿದೆ. ಆದ್ದರಿಂದ ಇದಕ್ಕೆ 'ಸ್ಯಾಟ್' ಆಗಮವು ಮತ್ತು 'ಹ್ರಸ್ವ'ವು 'ಜಿತ್' ವಿಭಕ್ತಿಗಳಲ್ಲೂ ಬರುತ್ತವೆ. ಆದ್ದರಿಂದ ವೈಕಲ್ಪಿಕ 'ಸರ್ವನಾಮ' ಸಂಜ್ಞೆಯು 'ಜಿತ್' ವಿಭಕ್ತಿಗಳಲ್ಲಿ ಕಾಣುತ್ತೇವೆ.

ಉದಾಹರಣೆ–2: 'ಉತ್ತರಪೂರ್ವಸ್ಯೈ', 'ಉರಪೂರ್ವಸ್ಯಾಃ', 'ಉತ್ತರಪೂರ್ವಸ್ಯಾಮ್' ಎಂಬ ರೂಪಗಳು 'ಸರ್ವನಾಮ' ಸಂಜ್ಞೆಯನ್ನು ಹೊಂದಿದಾಗ 'ಸ್ಯಾಡಾಗಮ'ವನ್ನು ಮತ್ತು 'ಹ್ರಸ್ವ' ರೂಪವನ್ನು ತಾಳುತ್ತವೆ. 'ಸರ್ವನಾಮ' ಸಂಜ್ಞೆಯನ್ನು ಹೊಂದದಿರುವ ಪಕ್ಷದಲ್ಲಿ 'ಆ' ಕಾರಾನ್ತ ಸ್ತ್ರೀಲಿಂಗದಂತೆ 'ಉತ್ತರಪೂರ್ವಾಯೈ ', 'ಉತ್ತರಪೂರ್ವಾಯಾಃ', 'ಉತ್ತರಪೂರ್ವಾಯಾಮ್' ಎಂದು ರೂಪಗಳಾಗುತ್ತವೆ.

ವಾ॥–**"ತೀಯಸ್ಯೇತಿ ವಾ ಸರ್ವನಾಮಸಂಜ್ಞಾ"**.

'ಅಜನ್ತ ಪುಲಿಂಗ'ದಲ್ಲಿ "ತೀಯಸ್ಯ ಜಿತ್ಸು ವಾ" ಎಂಬ ವಾರ್ತಿಕವನ್ನು ಹೇಳಲಾಗಿದೆ. ಅಲ್ಲಿ 'ಜಿತ್' ಪ್ರತ್ಯಯವು ಪರದಲ್ಲಿದ್ದಾಗ 'ತೀಯ' ಪ್ರತ್ಯಯಾನ್ತ ಶಬ್ದಗಳಿಗೆ 'ಸರ್ವನಾಮ' ಸಂಜ್ಞೆಯು ವಿಕಲ್ಪವಾಗಿ ಹೇಳಲಾಗಿದೆ. 'ತೀಯ' ಪ್ರತ್ಯಯಾನ್ತ ಶಬ್ದಗಳು ಸ್ತ್ರೀಲಿಂಗದಲ್ಲಿ ಇರುವುವು ಎರಡು– ಅವು 'ದ್ವಿತೀಯಾ' ಮತ್ತು 'ತೃತೀಯಾ'. ಅದರ ಪರದಲ್ಲಿ 'ಜಿದ್ವಿಭಕ್ತಿ' ಇದ್ದಾಗ 'ಸರ್ವನಾಮ' ಸಂಜ್ಞೆಯು ಬಂದ ಪಕ್ಷದಲ್ಲಿ,

'ದ್ವಿತೀಯಸ್ಯೈ', 'ದ್ವಿತೀಯಸ್ಯಾಃ', 'ದ್ವಿತೀಯಸ್ಯಾಮ್,' ಎಂದೂ, ಅದೇ ರೀತಿಯಲ್ಲಿ 'ತೃತೀಯಸ್ಯೈ', 'ತೃತೀಯಸ್ಯಾಃ', 'ತೃತೀಯಸ್ಯಾಮ್' ಎಂದು ರೂಪಗಳಾಗುತ್ತವೆ. 'ಸರ್ವನಾಮ' ಸಂಜ್ಞೆಯು ಬಾರದ ಪಕ್ಷದಲ್ಲಿ 'ಆ' ಕಾರಾನ್ತ ಸ್ತ್ರೀಲಿಂಗ ಶಬ್ದಗಳಂತೆ 'ದ್ವಿತೀಯಾಯೈ', 'ದ್ವಿತೀಯಾಯಾಃ','ದ್ವಿತೀಯಾಯಾಮ್' ಮತ್ತು 'ತೃತೀಯಾಯೈ', 'ತೃತೀಯಾಯಾಃ', 'ತೃತೀಯಾಯಾಮ್' ಎಂಬ ರೂಪಗಳಾಗುತ್ತವೆ. 'ಜಿದ್ವಿಭಕ್ತಿ'ಗಳು ಪರದಲ್ಲಿದ್ದಾಗ 'ಸರ್ವನಾಮ' ಸಂಜ್ಞೆಯು ಬಾರದೇ ಸಾಧಾರಣ 'ಆ' ಕಾರನ್ತ ಸ್ತ್ರೀಲಿಂಗ ಶಬ್ದಗಳಂತೆ ರೂಪಗಳನ್ನು ಹೊಂದುತ್ತವೆ.

'ದ್ವಿತೀಯಾ' ಶಬ್ದದ ಎಲ್ಲ ರೂಪಗಳನ್ನು ಇಲ್ಲಿ ಕೊಡಲಾಗಿದೆ.

**'ಆಬನ್ತ' ಸ್ತ್ರೀಲಿಂಗ ತೀಯಪ್ರತ್ಯಯಾನ್ತ 'ದ್ವಿತೀಯಾ' ಶಬ್ದದ ರೂಪಗಳು.**

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ದ್ವಿತೀಯಾ | ದ್ವಿತೀಯೇ | ದ್ವಿತೀಯಾಃ |
| ದ್ವಿತೀಯಾ | ದ್ವಿತೀಯಾಮ್ | ದ್ವಿತೀಯೇ | ದ್ವಿತೀಯಾಃ |
| ತೃತೀಯಾ | ದ್ವಿತೀಯಯಾ | ದ್ವಿತೀಯಾಭ್ಯಾಮ್ | ದ್ವಿತೀಯಾಭಿಃ |
| ಚತುರ್ಥೀ | ದ್ವಿತೀಯಸ್ಯೈ, ದ್ವಿತೀಯಾಯೈ | ದ್ವಿತೀಯಾಭ್ಯಾಮ್ | ದ್ವಿತೀಯಾಭ್ಯಃ |
| ಪಞ್ಚಮೀ | ದ್ವಿತೀಯಸ್ಯಾಃ, ದ್ವಿತೀಯಾಯಾಃ | ದ್ವಿತೀಯಾಭ್ಯಾಮ್ | ದ್ವಿತೀಯಾಭ್ಯಃ |
| ಷಷ್ಠೀ | ದ್ವಿತೀಯಸ್ಯಾಃ, ದ್ವಿತೀಯಾಯಾಃ | ದ್ವಿತೀಯಯೋಃ | ದ್ವಿತೀಯಾನಾಮ್ |

| | | | |
|---|---|---|---|
| ಸಪ್ತಮೀ | ದ್ವಿತೀಯಸ್ಯಾಮ್, ದ್ವಿತೀಯಾಯಾಮ್ | ದ್ವಿತೀಯಯೋಃ | ದ್ವಿತೀಯಾಸು |
| ಸಂಬೋಧನಾ | ಹೇ ದ್ವಿತೀಯೇ! | ಹೇ ದ್ವಿತೀಯೇ! | ಹೇ ದ್ವಿತೀಯಾಃ! |

ಸೂಚನೆ– 1 : ಇದೇ ರೀತಿಯಲ್ಲಿ ತೃತೀಯಾ ಶಬ್ದದ ರೂಪಗಳನ್ನು ನುಡಿಸಬೇಕು.

ಸೂಚನೆ–2: 'ಅಂಬಾ','ಅಕ್ಕಾ','ಅಲ್ಲಾ' ಎಂಬ ಈ ಮೂರು ಶಬ್ದಗಳು 'ತಾಯಿ' ಎಂಬರ್ಥವನ್ನು ಕೊಡುತ್ತವೆ.ಈ ಮೂರು ಶಬ್ದಗಳು 'ಆಬನ್ತ'ವಾಗಿರುವುದರಿಂದ 'ರಮಾ' ಶಬ್ದಗಳಂತೆ ಇವುಗಳನ್ನು ನುಡಿಸಬೇಕು. ಆದರೆ ಈ ಶಬ್ದಗಳಿಗೆ 'ಅಂಬಾ'(ತಾಯಿ) ಎಂಬ ಅರ್ಥವುಳ್ಳಂತಹದ್ದಾಗಿರುವುದರಿಂದ, "ಅಮ್ಬಾರ್ಥನದ್ಯೋರ್ಹ್ರಸ್ವಃ(7–3–107)" ಸೂತ್ರದಿಂದ ಹ್ರಸ್ವಾನ್ತವಾಗಿ 'ಹೇ ಅಂಬ,"ಹೇ ಅಕ್ಕ,"ಹೇ ಅಲ್ಲ' ಎಂಬ ರೂಪಗಳನ್ನು ಸಂಬೋಧನದಲ್ಲಿ(ಏಕ ವಚನದಲ್ಲಿ) ಪಡೆಯುತ್ತವೆ.

'ಜರಾ' ಶಬ್ದದ ರೂಪಗಳು.

ಪ್ರಥಮಾ ವಿಭಕ್ತಿ–ಜರಾ ಜರಸೌ ಜರಸಃ.

ಸೂಚನೆಃ – ಈ ಜರಾ ಶಬ್ದಕ್ಕೆ ವೈಕಲ್ಪಿಕವಾಗಿ ರಮಾ ಶಬ್ದದಂತೆಯೂ ರೂಪಗಳಿರುತ್ತವೆ. ಕಾರಣ 'ಜರಾ' ಎಂದು 'ಆ' ಕಾರನ್ತ ಸ್ತ್ರೀಲಿಂಗ ರೂಪವಿದೆ. ಜರಾ ಶಬ್ದಕ್ಕೆ 'ಜರಸ್' ಎಂಬ ಆದೇಶವು "ಜರಾಯಾ ಜರಸನ್ಯತರಸ್ಯಾಮ್(7–2–101)" ಸೂತ್ರದಿಂದ ಬರುತ್ತದೆ.ಆದ್ದರಿಂದ 'ಅಜಾ'ದಿ ಪ್ರತ್ಯಯಗಳು ಪರದಲ್ಲಿದ್ದಾಗ 'ಜರಸ್' ಆದೇಶವು ಬರುತ್ತದೆ. 'ಜರಸ್' ಆದೇಶವು ಬಾರದ ಪಕ್ಷದಲ್ಲಿ ಮತ್ತು 'ಹಲಾ'ದಿ ಸುಪ್ ಪ್ರತ್ಯಯವು ಪರದಲ್ಲಿದ್ದಾಗ 'ರಮಾ' ಶಬ್ದದಂತೆ ರೂಪಗಳಿರುತ್ತವೆ.

ಆಬನ್ತವಾದ ಸ್ತ್ರೀಲಿಂಗ 'ಜರಾ' ಶಬ್ದದ ರೂಪಗಳು ಈ ಕೆಳಗಿನಂತಿವೆ.

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಜರಾ | ಜರಸೌ, ಜರೇ | ಜರಸಃ, ಜರಾಃ |
| ದ್ವಿತೀಯಾ | ಜರಸಮ್,ಜರಾಮ್ | ಜರಸೌ, ಜರೇ | ಜರಸಃ,ಜರಾಃ |
| ತೃತೀಯಾ | ಜರಸಾ, ಜರಯಾ | ಜರಾಭ್ಯಾಮ್ | ಜರಾಭಿಃ |
| ಚತುರ್ಥೀ | ಜರಸೇ, ಜರಾಯೈ | ಜರಾಭ್ಯಾಮ್ | ಜರಾಭ್ಯಃ |
| ಪಞ್ಚಮೀ | ಜರಸಃ,ಜರಾಯಾಃ | ಜರಾಭ್ಯಾಮ್ | ಜರಾಭ್ಯಃ |
| ಷಷ್ಠೀ | ಜರಸಃ, ಜರಾಯಾಃ | ಜರಸೋಃ, ಜರಯೋಃ | ಜರಸಾಮ್, ಜರಾಣಾಮ್ |
| ಸಪ್ತಮೀ | ಜರಸಿ, ಜರಾಯಾಮ್ | ಜರಸೋಃ, ಜರಯೋಃ | ಜರಾಸು |
| ಸಮ್ಬೋಧನಾ | ಹೇ ಜರೇ! | ಹೇ ಜರಸೌ! ಹೇ ಜರೇ! | ಹೇ ಜರಸಃ! ಹೇ ಜರಾಃ! |

### ಸ್ತ್ರೀ ಲಿಂಗದಲ್ಲಿ 'ಗೋಪಾ' ಶಬ್ದ

ಸೂಚನೆ: 'ಗೋಪಾ' ಶಬ್ದವನ್ನು 'ವಿಶ್ವಪಾ' ಶಬ್ದದಂತೆ ನುಡಿಸಬೇಕು. 'ಗಾಂ ಪಾತೀತಿ' – 'ಗೋಪಾಃ'. 'ಪಾತಿ' ಎಂಬರ್ಥದಲ್ಲಿ 'ಪಾ' ಧಾತುವಿಗೆ 'ವಿಚ್' ಪ್ರತ್ಯಯವನ್ನು ಸೇರಿಸಿದಾಗ 'ಗೋಪಾಃ' ಎಂಬ ಶಬ್ದವುಂಟಾಗುತ್ತದೆ.(ಗೋವನ್ನು ರಕ್ಷಣೆ ಮಾಡುವವಳು).'ವಿಶ್ವಪಾ' ಶಬ್ದವು 'ವಿಶ್ವ' ಪೂರ್ವಕ 'ಪಾ'

ಧಾತುವಿನಿಂದ ಕೂಡಿದೆ. ಹಾಗೆಯೇ 'ಗೋಪಾಃ' ಎಂಬ ಶಬ್ದವು 'ಗೋ' ಪೂರ್ವಕ 'ಪಾ' ಧಾತುವಿನಿಂದ ಕೂಡಿದೆ. ಇದು 'ಆಬನ್ತ' ಶಬ್ದವಲ್ಲ. ಸ್ತ್ರಿಲಿಂಗ ಪ್ರಯುಕ್ತವಾಗಿ ಯಾವ ಕಾರ್ಯವಿರುವುದಿಲ್ಲ.

ಸ್ತ್ರೀಲಿಂಗದಲ್ಲಿ ಗೋಪಾ ಶಬ್ದದ ರೂಪಗಳು.

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಗೋಪಾಃ | ಗೋಪೌ | ಗೋಪಾಃ |
| ದ್ವಿತೀಯಾ | ಗೋಪಾಮ್ | ಗೋಪೌ | ಗೋಪಃ |
| ತೃತೀಯಾ | ಗೋಪಾ | ಗೋಪಾಭ್ಯಾಮ್ | ಗೋಪಾಭಿಃ |
| ಚತುರ್ಥೀ | ಗೋಪೇ | ಗೋಪಾಭ್ಯಾಮ್ | ಗೋಪಾಭ್ಯಃ |
| ಪಞ್ಚಮೀ | ಗೋಪಃ | ಗೋಪಾಭ್ಯಾಮ್ | ಗೋಪಾಭ್ಯಃ |
| ಷಷ್ಠೀ | ಗೋಪಃ | ಗೋಪೋಃ | ಗೋಪಾಮ್ |
| ಸಪ್ತಮೀ | ಗೋಪಿ | ಗೋಪೋಃ | ಗೋಪಾಸು |
| ಸಮ್ಬೋಧನಾ | ಹೇ ಗೋಪಾಃ! | ಹೇ ಗೋಪೌ! | ಹೇ ಗೋಪಾಃ! |

ವಿಶೇಷ– ಗೋಪನ ಪತ್ನಿ(ಗೋಪಸ್ಯ ಸ್ತ್ರೀ–ಗೊಲ್ಲನ ಹಂಡತಿ).ಈ ರೀತಿ ಅರ್ಥ ಮಾಡಿದಾಗ ಇಲ್ಲಿ 'ಪಾ' ಧಾತುವು ಇರುವುದಿಲ್ಲ. ಇಲ್ಲಿ 'ಅ'ಕಾರನ್ತ 'ಗೋಪ' ಶಬ್ದದ ಮೇಲೆ ಸ್ತ್ರೀ ಪ್ರತ್ಯಯವು ಬಂದು 'ಗೋಪೀ' ಎಂದಾಗಿದೆ. ಇದನ್ನು 'ನದೀ' ಶಬ್ದದಂತೆ ನುಡಿಸಬೇಕು. "ಜಾತೇರಸ್ತ್ರೀವಿಷಯಾದಯೋಪಧಾತ್(4–1–63)" ಸೂತ್ರದಿಂದ ಇಲ್ಲಿ 'ಙೀಷ್' ಪ್ರತ್ಯಯವು ಬಂದಿದೆ.(ಇಲ್ಲಿ ಎರಡು ತರಹದ 'ಆ'ಕಾರನ್ತ ಸ್ತ್ರೀಲಿಂಗ ಶಬ್ದಗಳು ವರ್ಣಿತವಾಗಿವೆ–1. ಆಬನ್ತ ಸ್ತ್ರೀಲಿಂಗ ಶಬ್ದಗಳು,2. 'ಆ'ಕಾರಾನ್ತ' ಧಾತುವನ್ನು ಕೊನೆಯಲ್ಲುಳ್ಳ ಸ್ತ್ರೀಲಿಂಗ ಶಬ್ದಗಳು ಎಂಬುದನ್ನು ಗಮನಿಸಬೇಕು).

ಇಲ್ಲಿಗೆ 'ಆ'ಕಾರಾನ್ತ ಸ್ತ್ರೀಲಿಂಗ ಶಬ್ದಗಳ ವಿವರಣೆ ಮುಗಿಯಿತು.

## 'ಇ' ಕಾರಾಂತ ಸ್ತ್ರೀಲಿಂಗ ಶಬ್ದಗಳು

### 'ಇ' ಕಾರಾಂತ ಸ್ತ್ರೀಲಿಂಗ 'ಮತಿ' ಶಬ್ದದ ರೂಪಗಳು

ಉದಾ – ಮತಿ: (ಬುದ್ಧಿ) –ಪ್ರಥಮಾ ವಿಭಕ್ತಿ ಏಕವಚನದಲ್ಲಿ 'ಮನ ಜ್ಞಾನೇ'

ಎಂಬ ಧಾತುವಿನ ಪರದಲ್ಲಿ 'ಕ್ತಿನ್' ಪ್ರತ್ಯಯವನ್ನು ಸೇರಿಸಿದಾಗ 'ಮತಿ' ಎಂದಾಗಿ, ಮತಿ+ಸು ಎಂದಿದ್ದಾಗ, ರುತ್ವ–ವಿಸರ್ಗಗಳಿಂದ 'ಮತಿಃ' ಎಂಬ ರೂಪವು ಸಿದ್ಧವಾಗುತ್ತದೆ.

ಸೂಚನೆಃ 'ಮತಿ' ಶಬ್ದಕ್ಕು 'ಹರಿ' ಶಬ್ದಕ್ಕೂ ಹಲವು ರೂಪಗಳಲ್ಲಿ ಸಾಮ್ಯವಿದ್ದರೂ, ದ್ವಿತೀಯಾ ಬಹುವಚನ, ತೃತೀಯಾ ಏಕವಚನ, ಮತ್ತು 'ಙಿತ್'ವಿಭಕ್ತಿಗಳುಳ್ಳ ವಚನಗಳು – ಇವುಗಳು ಮಾತ್ರ ಭಿನ್ನವಾಗಿರುತ್ತವೆ.

ಉದಾ–ಮತೀ– ಪ್ರಥಮಾ ವಿಭಕ್ತಿ ದ್ವಿವಚನದಲ್ಲಿ–'ಮತಿ+ಔ' ಎಂದಿದ್ದಾಗ (ಪೂರ್ವಸವರ್ಣದೀರ್ಘದಿಂದ) 'ಮತೀ' ಎಂದಾಗುತ್ತದೆ.

ಉದಾ– ಮತಯಃ – ಪ್ರಥಮಾ ವಿಭಕ್ತಿ ಬಹುವಚನದಲ್ಲಿ– 'ಮತಿ+ಅಸ್(ಜಸ್)' ಎಂದಿದ್ದಾಗ, "ಜಸಿ ಚ (7–3–109)" ಸೂತ್ರದಿಂದ 'ಗುಣ' ಬಂದು 'ಮತೇ+ಅಸ್' ಎಂದಾಗಿ, "ಏಚೋಽಯವಾಯಾವಃ(6.1.78)" ಸೂತ್ರದಿಂದ 'ಅಯ್' ಆದೇಶವು ಬಂದು, 'ಮತ್+ಅಯ್+ಅಸ್'= 'ಮತಯಸ್' ಎಂದಾಗಿ, ರುತ್ವ–ವಿಸರ್ಗದಿಂದ 'ಮತಯಃ' ಎಂದಾಗಿದೆ.

ಉದಾ– ಮತಿಮ್ –ದ್ವಿತೀಯಾ ವಿಭಕ್ತಿ ಏಕವಚನದಲ್ಲಿ– 'ಮತಿ+ಅಮ್' ಎಂದಿದ್ದಾಗ, "ಅಮಿಪೂರ್ವಾ" ಎಂಬಸೂತ್ರದಿಂದ ಪೂರ್ವ ರೂಪ ಬಂದು, 'ಮತಿಮ್' ಎಂದಾಗುತ್ತದೆ.

ಉದಾ– ಮತೀ–ದ್ವಿತೀಯಾ ವಿಭಕ್ತಿ ದ್ವಿವಚನದ ರೂಪವು ಪ್ರಥಮಾ ವಿಭಕ್ತಿ ದ್ವಿವಚನರೂಪದಂತೆಯೇ 'ಮತೀ' ಎಂದೇ ಇರುತ್ತದೆ.

ಉದಾ–ಮತೀಃ – ದ್ವಿತೀಯಾ ವಿಭಕ್ತಿ ಬಹುವಚನದಲ್ಲಿ, – ಮತಿ+ಅಸ್(ಶಸ್) ಎಂದಿದ್ದಾಗ, ಪೂರ್ವಸವರ್ಣದೀರ್ಘದಿಂದ 'ಮತೀಸ್' ಎಂದಾಗಿ 'ಸ್'ಕಾರಕ್ಕೆ 'ರುತ್ವ' ವಿಸರ್ಗಗಳು ಬಂದು 'ಮತೀಃ' ಎಂದಾಗಿದೆ. ಇದು ಸ್ತ್ರೀಲಿಂಗ ಶಬ್ದವಾಗಿರುವುದರಿಂದ 'ಸ್'ಕಾರಕ್ಕೆ 'ನತ್ವ'ವು ಬರುವುದಿಲ್ಲ.

ಉದಾ– ಮತ್ಯಾ– ತೃತೀಯಾ ವಿಭಕ್ತಿ ಏಕವಚನದಲ್ಲಿ – ಮತಿ+ಆ(ಟಾ) ಎಂದಿದ್ದಾಗ, 'ಯಣ್' ಸಂಧಿಯಿಂದ 'ಮತ್ಯಾ' ಎಂದಾಗಿದೆ.

ಸೂಚನೆ: "ಆಙೋ ನಾಽಸ್ತ್ರಿಯಾಮ್(7–3–120)" ಸೂತದಲ್ಲಿ, 'ಅಸ್ತ್ರಿಯಾಮ್' ಎಂದು ಹೇಳಿರುವುದರಿಂದ 'ನಾ' ಆದೇಶವು ಬರವುದಿಲ್ಲ.

ಉದಾ– ಮತಿಭ್ಯಾಮ್ – ತೃತೀಯಾ, ಚತುರ್ಥೀ ಮತ್ತು ಪಂಚಮೀ ವಿಭಕ್ತಿ ದ್ವಿವಚನಗಳಲ್ಲಿ,– ಮತಿ+ಭ್ಯಾಮ್ ಎಂದಿದ್ದಾಗ, ವರ್ಣ ಜೋಡಣೆಯಿಂದ 'ಮತಿಭ್ಯಾಮ್' ಎಂದಾಗುತ್ತದೆ.

ಉದಾ– ಮತಿಭಿಃ –ತೃತೀಯಾ ವಿಭಕ್ತಿ ಬಹುವಚನದಲ್ಲಿ, – ಮತಿ+ಭಿಸ್' ವರ್ಣಜೋಡಣೆಯಿಂದ, ಮತಿಭಿಸ್ ಎಂದಾಗಿ, ರುತ್ವ–ವಿಸರ್ಗಗಳಿಂದ, 'ಮತಿಭಿಃ' ಎಂದಾಗುತ್ತದೆ.

(ವೈಕಲ್ಪಿಕವಾಗಿ ನದೀ ಸಂಜ್ಞೆಯನ್ನು ವಿಧಿಸುವ ಸೂತ್ರ).

**ಸೂತ್ರ- 223. ಙಿತಿ ಹ್ರಸ್ವಶ್ಚ (1.4.6)**

ವೃತ್ತಿ-ಇಯುಙುವಙ್ ಸ್ಥಾನೌ ಸ್ತ್ರೀ-ಶಬ್ದಭಿನ್ನೌ ನಿತ್ಯಸ್ತ್ರೀಲಿಙ್ಗೌ ಈತ್-ಊತೌ ಹ್ರಸ್ವೌ ಚ ಈವರ್ಣ-ಊವರ್ಣೌ ಸ್ತ್ರಿಯಾಂ ವಾ ನದೀ ಸಂಜ್ಞೌ ಸ್ತಃ ಙಿತಿ। ಮತ್ಯೈ, ಮತಯೇ। ಮತ್ಯಾಃ-2, ಮತೇಃ-2।

ಪ. ಛೇ.-ಙಿತಿ, ಹ್ರಸ್ವಃ, ಚ।

ಅ. ವೃ- "ನೇಯಙುವಙ್ ಸ್ಥಾನಾವಸ್ತ್ರೀ(1-4-4)" ಎಂಬ ಸೂತ್ರದಲ್ಲಿ 'ನ' ಪದವನ್ನು ಬಿಟ್ಟು ಉಳಿದ ಸೂತ್ರದ ಭಾಗವು ಹಾಗೆಯೇ "ಯೂಸ್ತ್ರ್ಯಾಖ್ಯೌ ನದೀ(1-4-3)" ಎಂಬ ಸಂಪೂರ್ಣ ಸೂತ್ರವು ಅನುವೃತ್ತವಾಗುತ್ತವೆ.

ಅರ್ಥ -'ಇಯಙ್' ಮತ್ತು 'ಉವಙ್' ಆದೇಶಗಳು ಬರುವುದಕ್ಕೆ ಯೋಗ್ಯವಾದ ಮತ್ತು 'ಸ್ತ್ರೀ' ಶಬ್ದಗಳಿಗಿಂತ ಭಿನ್ನವಾದ ಹಾಗೂ 'ನಿತ್ಯ ಸ್ತ್ರೀಲಿಂಗ'ಗಳಾದ 'ಈ'ಕಾರ, 'ಊ'ಕಾರ('ಈ'ಕಾರಾನ್ತ, 'ಊ'ಕಾರಾನ್ತಗಳಾದ) ಮತ್ತು ಹ್ರಸ್ವ 'ಇ' ವರ್ಣ, 'ಉ' ವರ್ಣ ('ಇ'ಕಾರಾನ್ತ, 'ಉ'ಕಾರಾನ್ತಗಳಾದ) ಸ್ತ್ರೀಲಿಂಗ ಶಬ್ದಗಳಿಗೆ ಪರದಲ್ಲಿ 'ಙಿತ್'ಆದ 'ಸುಪ್' ಪ್ರತ್ಯಯಗಳು ಪರದಲ್ಲಿದ್ದಾಗ ವೈಕಲ್ಪಿಕವಾಗಿ 'ನದೀ' ಸಂಜ್ಞೆಯು ಬರುತ್ತದೆ.

'ಮತಿ' ಶಬ್ದವು 'ಇ'ಕಾರಾನ್ತ ಸ್ತ್ರೀಲಿಂಗವಾಗಿದೆ.

ಉದಾ- ಮತ್ಯೈ/ಮತಯೇ -ಚತುರ್ಥೀ ವಿಭಕ್ತಿ ಏಕವಚನದಲ್ಲಿ- ಮತಿ+ಙೇ ಎಂದಿದ್ದಾಗ, 'ಙಿತ್' ಆದ 'ಸುಪ್' ಪ್ರತ್ಯಯವು ಪರವಾಗಿರೋಣದರಿಂದ, ಪ್ರಕೃತ ಸೂತ್ರದಿಂದ 'ನದೀ' ಸಂಜ್ಞೆಯು ವೈಕಲ್ಪಿಕವಾಗಿ ಬರುತ್ತದೆ. ಹೀಗೆ 'ನದೀ' ಸಂಜ್ಞೆಯು ಇದ್ದಾಗ, "ಆಣ್ನದ್ಯಾಃ(7-3-112)" ಎಂಬ ಸೂತ್ರದಿಂದ 'ಆಟ್' ಆಗಮವು ಬಂದು 'ಮತಿ+ಆ+ಎ' ಎಂದಾಗುತ್ತದೆ. "ಆಟಶ್ಚ(6-1-90)" ಸೂತ್ರದಿಂದ 'ಆ+ಏ' ಎಂಬುದಕ್ಕೆ 'ವೃದ್ಧಿ' ಬಂದು ಮತಿ+ಐ ಎಂದಾಗಿ 'ಯಣ್' ಸಂಧಿಯಿಂದ 'ಮತ್ಯೈ' ಎಂದು ರೂಪವಾಗುತ್ತದೆ.ಇದಕ್ಕೆ ವೈಕಲ್ಪಿಕವಾಗಿ, 'ನದೀ' ಸಂಜ್ಞೆಯು ಬಾರದ ಪಕ್ಷದಲ್ಲಿ ಚತುರ್ಥೀ ವಿಭಕ್ತಿ ಏಕವಚನದಲ್ಲಿ- 'ಘಿ' ಸಂಜ್ಞೆಯು ಬಂದು 'ಮತಿ+ಏ' ಎಂದಿದ್ದಾಗ "ಘೇರ್ಙಿತಿ(7-3-111)" ಸೂತ್ರದಿಂದ 'ಇ'ಕಾರಕ್ಕೆ 'ಗುಣ' ಬಂದು 'ಮತೇ+ಏ' ಎಂದಾಗಿ 'ಅಯ್'- ಆದೇಶ ಬಂದು 'ಮತಯೇ' ಎಂದಾಗುತ್ತದೆ.

ಉದಾ- ಮತ್ಯಾಃ - ಪಂಚಮೀ ಮತ್ತು ಷಷ್ಠೀ ವಿಭಕ್ತಿ ಏಕವಚನಗಳಲ್ಲಿ - ಮತಿ+ಅಸ್ (ಙಸಿ) ಮತ್ತು ಮತಿ+ಅಸ್ (ಙಸ್) ಎಂದಿದ್ದಾಗ, 'ಙಿತ್' ಆದ 'ಙಸಿ' ಮತ್ತು 'ಙಸ್' ಪ್ರತ್ಯಯಗಳು ಪರವಾಗಿರೋಣದ್ದರಿಂದ, 'ಆಟ್'- ಆಗಮವು ಬಂದು ವೃದ್ಧಿ, ಯಣಾದೇಶ ಮತ್ತು 'ರುತ್ವ' ವಿಸರ್ಗಗಳು ಬಂದು 'ಮತ್ಯಾಃ' ಎಂದು ರೂಪಗಳಾಗುತ್ತವೆ.

ಇದಕ್ಕೆ ವೈಕಲ್ಪಿಕವಾಗಿ, 'ನದೀ' ಸಂಜ್ಞೆಯು ಬಾರದ ಪಕ್ಷದಲ್ಲಿ ಮತಿ+ಅಸ್ (ಙಸಿ) ಮತ್ತು ಮತಿ+ಅಸ್(ಙಸ್) ಎಂದಿದ್ದಾಗ, "ಘೇರ್ಙಿತಿ(7-3-111)" ಸೂತ್ರದಿಂದ

'ಇ' ಕಾರಕ್ಕೆ 'ಗುಣ' ಬಂದು 'ಮತೇ+ಅಸ್' ಎಂದಾಗಿ 'ಜಸಿಜಸೋಸ್ಚ(6-1-110)" ಸೂತ್ರದಿಂದ ಪೂರ್ವರೂಪವು ಬಂದು 'ಮತೇಸ್' ಎಂದಾಗಿ ರುತ್ವ ವಿಸರ್ಗಗಳಿಂದ 'ಮತೇಃ' ಎಂದು ರೂಪವಾಗುತ್ತದೆ.

ಉದಾ–ಮತ್ಯೋಃ–ಷಷ್ಠೀ ಮತ್ತು ಸಪ್ತಮೀ ವಿಭಕ್ತಿ ದ್ವಿವಚನಗಳಲ್ಲಿ, ಮತಿ+ಓಸ್= 'ಮತ್ಯೋಸ್' ಎಂದಾಗಿ 'ರುತ್ವ' ವಿಸರ್ಗಗಳಿಂದ ಮತ್ಯೋಃ ಎಂದು ರೂಪಗಳಾಗುವೆ.

ಉದಾ– ಮತೀನಾಮ್–ಷಷ್ಠೀ ವಿಭಕ್ತಿ ಬಹುವಚನದಲ್ಲಿ, ಮತಿ+ಆಮ್' ಎಂದಿದ್ದಾಗ, "ಹ್ರಸ್ವನದ್ಯಾಪೋ ನುಟ್ (7-1-54)" ಸೂತ್ರದಿಂದ 'ನುಟ್' ಆಗಮವು ಬಂದು, 'ಮತಿ+ನಾಮ್' ಎಂದಿದ್ದಾಗ, "ನಾಮಿ(6-4-3)" ಸೂತ್ರದಿಂದ 'ಇ'ಕಾರಕ್ಕೆ ದೀರ್ಘವು ಬಂದು 'ಮತೀನಾಮ್' ಎಂಬ ರೂಪವು ಸಿದ್ಧವಾಗುತ್ತದೆ.

**('ಙಿ'ಗೆ 'ಆಮ್' ಆದೇಶವನ್ನು ವಿಧಿಸುವ ವಿಧಿಸೂತ್ರ).**

**ಸೂತ್ರ – 224. ಇದುದ್ಭ್ಯಾಂ (7.3.117)**

ವೃತ್ತಿ–ಇದುದ್ಭ್ಯಾಂ ನದೀಸಂಜ್ಞಕಾಭ್ಯಾಂ ಪರಸ್ಯ ಙೇಃ ಆಮ್। ಮತ್ಯಾಮ್, ಮತೌ।ಶೇಷಂ ಹರಿವತ್।ಏವಂ ಬುದ್ಧ್ಯಾದಯಃ।

ಅ.ವೃ–"ಙೇರಾಮ್ನದ್ಯಾಮ್ನೀಭ್ಯಃ(7-3-116)" ಸೂತ್ರದ ಏಕದೇಶವಾದ 'ನದೀ' ಶಬ್ದದ ವಿಭಕ್ತಿ ವಚನಗಳನ್ನು ವಿಪರಿಣಾಮಗೊಳಿಸಿದ ನಂತರ 'ನದೀಭ್ಯಾಮ್' ಎಂಬ ಪದವು ಮತ್ತು 'ಙೇಃ' ಮತ್ತು' ಆಮ್' ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ– 'ನದೀ' ಸಂಜ್ಞೆಯುಳ್ಳ 'ಹ್ರಸ್ವ 'ಇ'ಕಾರ ಮತ್ತು 'ಉ'ಕಾರಗಳ ಪರದಲ್ಲಿರುವ 'ಙಿತ್' ಪ್ರತ್ಯಯಕ್ಕೆ 'ಆಮ್' ಆದೇಶವು ಬರುತ್ತದೆ.

ವಿಶೇಷ– ಅನುವೃತ್ತಿಗೆ ಕಾರಣವಾದ "ಙೇರಾಮ್ನದ್ಯಾಮ್ನೀಭ್ಯಃ(7-3-116)" ಸೂತ್ರದಿಂದ 'ಆಪ್' ಮತ್ತು 'ಙೀ' ಎಂಬ ಶಬ್ದಗಳು ಅನುವೃತ್ತವಾಗಿಲ್ಲ. ಕಾರಣ ಪ್ರಕೃತ ಸೂತ್ರದಲ್ಲಿ ಹ್ರಸ್ವ 'ಇ'ಕಾರ ಮತ್ತು 'ಉ'ಕಾರಗಳೇ ಪಠಿತವಾಗಿವೆ. ಆದ್ದರಿಂದ 'ಆಪ್' ಮತ್ತು 'ಙಿತ್' ಇವುಗಳು ಹ್ರಸ್ವ'ವಾಗಿಲ್ಲ. 'ಮತಿ' ಶಬ್ದದ ಏಕವಚನದಲ್ಲಿ "ಙೇರಾಮ್ನದ್ಯಾಮ್ನೀಭ್ಯಃ(7-3-116)" ಸೂತ್ರದಿಂದ 'ಙಿತ್'ಗೆ 'ಆಮ್' ಆದೇಶವು ಹಾಗೂ "ಔತ್(7-3-118)" ಸೂತ್ರದಿಂದ 'ಔ'ಕಾರಾದೇಶವು ಪ್ರಾಪ್ತವಾಗಿತ್ತು. ಆದರೆ "ವಿಪ್ರತಿಷೇಧೇ ಪರಂ ಕಾರ್ಯಮ್" ಎಂಬ ನ್ಯಾಯದಿಂದ ಪರ ಕಾರ್ಯವಾದ "ಔತ್(7-3-118)" ಸೂತ್ರದಿಂದ 'ಔ'ಕಾರಾದೇಶವು ಬರುತ್ತದೆ.

'ಔ'ಕಾರಾದೇಶವು ಬಂದರೆ 'ಮತಿ+ಔ'='ಮತ್ಯೌ' ಎಂದು ಅನಿಷ್ಟ ರೂಪವು ಆಗುತ್ತಿತ್ತು. ಆದ್ದರಿಂದ ಪ್ರಕೃತ ಸೂತ್ರದಲ್ಲಿ 'ನದೀ' ಸಂಜ್ಞೆಯುಳ್ಳ ಹ್ರಸ್ವ 'ಇ'ಕಾರ ಮತ್ತು 'ಉ'ಕಾರ ಪರದಲ್ಲಿರುವ 'ಙಿತ್'ಪ್ರತ್ಯಯಕ್ಕೆ 'ಆಮ್'ಆದೇಶವೇ ಬರುತ್ತದೆ. ('ಔತ್' ಬರುವುದಿಲ್ಲವೆಂದು ತಾತ್ಪರ್ಯ).

ಉದಾ–ಮತ್ಯಾಮ್– ಸಪ್ತಮೀ ವಿಭಕ್ತಿ ಏಕವಚನದಲ್ಲಿ, ಮತಿ+ಇ (ಙಿತ್) ಎಂದಿದ್ದಾಗ, ಇಲ್ಲಿ 'ಘಿ'ಸಂಜ್ಞೆಯನ್ನು ಬಾಧಿಸಿ "ಙಿತಿ ಹ್ರಸ್ವಶ್ಚ(1-4-6)" ಸೂತ್ರದಿಂದ

ವೈಕಲ್ಪಿಕವಾಗಿ 'ನದೀ' ಸಂಜ್ಞೆಯು ಬರುತ್ತದೆ. ಈ ಕಾರಣದಿಂದ ಪ್ರಕೃತ ಸೂತ್ರದಿಂದ ಹ್ರಸ್ವ 'ಇ'ಕಾರದ ಸ್ಥಾನದಲ್ಲಿ 'ಆಮ್'ಆದೇಶವು ಬಂದು 'ಮತಿ+ಆಮ್' ಎಂದಿರುತ್ತದೆ, ಈಗ "ಆಣ್ನದ್ಯಾಃ(7–3–112)" ಸೂತ್ರದಿಂದ 'ಆಟ್' ಆಗಮವು ಬಂದು 'ಮತಿ+ಆ+ಆಮ್' ಎಂದಿದ್ದಾಗ 'ಆ+ಆಮ್'ಗಳು ಸೇರಿ "ಆಟಶ್ಚ(6–1–90)" ಸೂತ್ರದಿಂದ ವೃದ್ಧಿಯನ್ನು ಹೊಂದಿ 'ಆಮ್' ಎಂದಾಗುತ್ತದೆ. ಈಗ 'ಮತಿ+ಆಮ್' ಎಂದಿದ್ದಾಗ 'ಯಣ್' ಸಂಧಿಯಿಂದ 'ಮತ್+ಯ್+ಆಮ್' ಎಂದಾಗಿ 'ಮತ್ಯಾಮ್' ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಮತೌ –ವೈಕಲ್ಪಿಕವಾಗಿ ನದಿ ಸಂಜ್ಞೆಯು ಬಾರದ ಪಕ್ಷದಲ್ಲಿ, ಸಪ್ತಮೀ ವಿಭಕ್ತಿ ಏಕವಚನದಲ್ಲಿ, ಮತಿ+ಇ(ಙಿ) ಎಂದಿದ್ದಾಗ, 'ಮತಿ' ಎಂಬಲ್ಲಿರುವ 'ಇ'ಕಾರಕ್ಕೆ ' "ಅಚ್ಚ ಘೇಃ(7–3–119)" ಸೂತ್ರದಿಂದ 'ಅ'ಕಾರವು ಬಂದು, ಪ್ರತ್ಯಯವಾದ 'ಇ'(ಙಿ)ಕಾರಕ್ಕೆ "ಔತ್(7–3–118)" ಸೂತ್ರದಿಂದ 'ಔ'ಕಾರದೇಶವು ಬಂದು 'ಮತ+ಔ' ಎಂದಿದ್ದಾಗ ವೃದ್ಧಿಯಿಂದ 'ಮತೌ' ಎಂಬ ರೂಪವು ಸಿದ್ಧವಾಗುತ್ತದೆ.

ಸೂಚನೆ: ಉಳಿದ ರೂಪಗಳು 'ಹರಿ' ಶಬ್ದದಂತೆ ಇರುತ್ತವೆ.

**ಹ್ರಸ್ವ 'ಇ'ಕಾರಾನ್ತ ಸ್ತ್ರೀಲಿಂಗ 'ಮತಿ' ಶಬ್ದದ ರೂಪಗಳು.**

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಮತಿಃ | ಮತೀ | ಮತಯಃ |
| ದ್ವಿತೀಯಾ | ಮತಿಮ್ | ಮತೀ | ಮತೀಃ |
| ತೃತೀಯಾ | ಮತ್ಯಾ | ಮತಿಭ್ಯಾಮ | ಮತಿಭಿಃ |
| ಚತುರ್ಥೀ | ಮತ್ಯೈ,ಮತಯೇ | ಮತಿಭ್ಯಾಮ್ | ಮತಿಭ್ಯಃ |
| ಪಞ್ಚಮೀ | ಮತ್ಯಾಃ,ಮತೇಃ | ಮತಿಭ್ಯಾಮ್ | ಮತಿಭ್ಯಃ |
| ಷಷ್ಠೀ | ಮತ್ಯಾಃ,ಮತೇಃ | ಮತ್ಯೋಃ | ಮತೀನಾಮ್ |
| ಸಪ್ತಮೀ | ಮತ್ಯಾಮ್,ಮತೌ | ಮತ್ಯೋಃ | ಮತಿಷು |
| ಸಮ್ಬೋಧನಾ | ಹೇ ಮತೇ! | ಹೇ ಮತೀ! | ಹೇ ಮತಯಃ! |

**(ತ್ರಿಸೃ–ಚತಸೃ ಎಂಬ ಆದೇಶಗಳನ್ನು ವಿಧಿಸುವ ಸೂತ್ರ.)**

**ಸೂತ್ರ –225. ತ್ರಿಚತುರೋಃ ಸ್ತ್ರಿಯಾಂ ತಿಸೃಚತಸೃ (7.2.66)**

ವೃತ್ತಿ–ಸ್ತ್ರೀಲಿಙ್ಗಯೋಃ ಏತಯೋಃ ಏತೌ ಸ್ತಃ ವಿಭಕ್ತೌ|

ಪ. ಛೇ.–ತ್ರಿಚತುರೋಃ, ಸ್ತ್ರಿಯಾಂ, ತ್ರಿಸೃಚತಸೃ.

ಅ.ವೃ– "ಅಷ್ಟನ ಆ ವಿಭಕ್ತೌ(7–2–84)" ಸೂತ್ರದಿಂದ 'ವಿಭಕ್ತೌ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ –'ಸುಪ್' ಪ್ರತ್ಯಯವು ಪರದಲ್ಲಿದ್ದಾಗ ಸ್ತ್ರೀಲಿಂಗದಲ್ಲಿರುವ 'ತ್ರಿ' ಮತ್ತು

'ಚತುರ್' ಶಬ್ದಗಳಿಗೆ ಕ್ರಮವಾಗಿ 'ತಿಸೃ' ಮತ್ತು 'ಚತಸೃ' ಆದೇಶವಾಗಿ ಬರುತ್ತದೆ.

'ಚತುರ್' ಶಬ್ದವು 'ಹಲನ್ತ'ವಾಗಿರುವುದರಿಂದ ಅದನ್ನು 'ಹಲನ್ತಸ್ತ್ರೀಲಿಂಗ' ಪ್ರಕರಣದಲ್ಲಿ ನಿರೂಪಿಸಲಾಗುವುದು.

**('ರೇಫ'ವನ್ನು ಆದೇಶವಾಗಿ ವಿಧಿಸುವ ಸೂತ್ರ).**

**ಸೂತ್ರ-226. ಅಚಿ ರ ಋತಃ (7.2.100)**

ವೃತ್ತಿ–ತಿಸೃಚತಸೃ ಏತಯೋಃ ಋಕಾರಸ್ಯ ರೇಫಾದೇಶಃ ಸ್ಯಾದಚಿ। ಗುಣ–ದೀರ್ಘತ್ವಾನಾಮ್ ಅಪವಾದಃ। ತಿಸ್ರಃ, ತಿಸ್ರಃ। ತಿಸೃಭಿಃ। ತಿಸೃಭ್ಯಃ। ತಿಸೃಭ್ಯಃ। ಆಮಿ ನುಟ್।

ಪ. ಛೇ.–ಅಚಿ, ರಃ, ಋತಃ।

ಅ.ವೃ–"ತ್ರಿಚತುರೋಃ ಸ್ತ್ರಿಯಾಂ ತಿಸೃಚತಸೃ(7.2.99)" ಸೂತ್ರದಿಂದ ವಿಭಕ್ತಿ ವಿಪರಿಣಾಮಗೊಳಿಸಿ 'ತಿಸೃಚತಸ್ರೋಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ –'ಅಚ್' ಪರದಲ್ಲಿದ್ದಾಗ 'ತಿಸೃ' ಮತ್ತು 'ಚತಸೃ'ಗಳ 'ಋ'ಕಾರಕ್ಕೆ 'ರೇಫ'ವು ಆದೇಶವಾಗಿ ಬರುತ್ತದೆ.

ಸೂಚನೆ: ಈ ಸೂತ್ರವು "ಋತೋ ಙಿ ಸರ್ವನಾಮಸ್ಥಾನಯೋಃ (7–3–110)" ಸೂತ್ರಕ್ಕೆ ಬಾಧಕವಾಗಿದೆ.

ಉದಾ– ತಿಸ್ರಃ – ಪ್ರಥಮಾ ವಿಭಕ್ತಿ ಬಹುವಚನದಲ್ಲಿ– ತ್ರಿ+ಅಸ್(ಜಸ್) ಎಂದಿದ್ದಾಗ, "ತ್ರಿಚತುರೋಃ ಸ್ತ್ರಿಯಾಂ ತಿಸೃಚತಸೃ (7.2.99)" ಸೂತ್ರದಿಂದ 'ತ್ರಿ' ಶಬ್ದದ ಸ್ಥಾನದಲ್ಲಿ 'ತಿಸೃ' ಶಬ್ದವು ಆದೇಶವಾಗಿ ಬರುತ್ತದೆ. ಆಗ 'ತಿಸೃ+ಅಸ್' ಎಂದಿದ್ದಾಗ ಪೂರ್ವಸವರ್ಣವು ಬರಬೇಕಾಗಿತ್ತು. ಅದನ್ನು ಬಾಧಿಸಿ "ಋತೋ ಙಿ ಸರ್ವನಾಮಸ್ಥಾನಯೋಃ(7–3–110)" ಸೂತ್ರದಿಂದ 'ಗುಣ'ವು ಬರಬೇಕಾಗಿತ್ತು. ಅದನ್ನು ಬಾಧಿಸಿ ಪ್ರಕೃತ ಸೂತ್ರದಿಂದ 'ತಿಸೃ' ಶಬ್ದಕ್ಕೆ 'ರೇಫ'ವು ಅದೇಶವಾಗಿ ಬಂದು 'ತಿಸ್+ರ್+ಅಸ್'= 'ತಿಸ್ರಸ್' ಎಂದಾಗಿ 'ರುತ್ವ' ವಿಸರ್ಗದಿಂದ 'ತಿಸ್ರಃ' ಎಂದಾಗುತ್ತದೆ.

ಉದಾ– ತಿಸ್ರಃ–ದ್ವಿತೀಯಾ ವಿಭಕ್ತಿಯ ಬಹುವಚನದಲ್ಲಿ ತ್ರಿ+ಅಸ್ (ಶಸ್)' ಎಂದಿದ್ದಾಗ, ಮೇಲಿನಂತೆಯೇ ವಿಸರ್ಗಗಳಿಂದ 'ತಿಸ್ರಃ' ಎಂದಾಗುತ್ತದೆ.

ಉದಾ– 'ತಿಸೃಭಿಃ', 'ತಿಸೃಭ್ಯಃ'–ತೃತಿಯಾ ವಿಭಕ್ತಿ ಮತ್ತು ಚತುರ್ಥಿ ವಿಭಕ್ತಿ ಬಹುವಚನಗಳಲ್ಲಿ, ತ್ರಿ ಶಬ್ದಕ್ಕೆ ತಿಸೃ ಆದೇಶ ಬಂದಮೇಲೆ, ತಿಸೃ+ಭಿಸ್ ಮತ್ತು ತಿಸೃ+ಭ್ಯಸ್ ಎಂದಿದ್ದಾಗ, ತಿಸೃಭಿಸ್ ಮತ್ತು ತಿಸೃಭ್ಯಸ್ ಎಂದಾಗಿ, ರುತ್ವ–ವಿಸರ್ಗಗಳಿಂದ 'ತಿಸೃಭಿಃ', 'ತಿಸೃಭ್ಯಃ' ಎಂಬ ರೂಪಗಳು ಸಿದ್ಧವಾಗುತ್ತವೆ.

('ನಾಮ್' ಪರದಲ್ಲಿದ್ದಾಗ 'ದೀರ್ಘ'ವನ್ನು ನಿಷೇಧಿಸುವ ಸೂತ್ರ)

**ಸೂತ್ರ– 227. ನ ತಿಸೃಚತಸೃ (6.4.4)**

ವೃತ್ತಿ–ಏತಯೋಃ ನಾಮಿ ದೀರ್ಘಃ ನ। ತಿಸೃಣಾಮ್।ತಿಸೃಷು।..... [ದ್ವೇ।ದ್ವೇ।ದ್ವಾಭ್ಯಾಮ್]॥

ಅ.ವೃ– "ನಾಮಿ(6–4–3)" ಸೂತ್ರದಿಂದ 'ನಾಮಿ' ಎಂಬ ಪದವು ಮತ್ತು "ಢ್ರಲೋಪೇ ಪೂರ್ವಸ್ಯ ದೀರ್ಘೋಽಣಃ(6–3–111)" ಸೂತ್ರದಿಂದ 'ದೀರ್ಘಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ –'ನಾಮ್' ಶಬ್ದವು ಪರದಲ್ಲಿದಾಗ 'ತಿಸೃ' ಮತ್ತು 'ಚತಸೃ' ಶಬ್ದಗಳಿಗೆ 'ದಿರ್ಘ'ವು ಬರುವುದಿಲ್ಲ.

ಉದಾ– ತಿಸೃಣಾಮ್ – ಷಷ್ಠೀ ವಿಭಕ್ತಿ ಬಹುವಚನದಲ್ಲಿ – ತ್ರಿ+ಆಮ್ ಎಂದಿದ್ದಾಗ, "ತ್ರೇಸ್ತ್ರಯಃ(7–1–53)" ಎಂಬ ಸೂತ್ರದಿಂದ 'ತ್ರಯ' ಆದೇಶವು ಬರುತಿತ್ತು. ಅದನ್ನು ಬಾಧಿಸಿ "ತ್ರಿಚತುರೋಃ ಸ್ತ್ರಿಯಾಂ ತಿಸೃಚತಸೃ(7.2.99)" ಸೂತ್ರದಿಂದ 'ತಿಸೃ' ಆದೇಶವು ಬಂದು 'ತಿಸೃ+ಆಮ್' ಎಂದಾಗಿ, "ಹ್ರಸ್ವನದ್ಯಾಪೋ ನುಟ್(7–1–54)" ಸೂತ್ರದಿಂದ 'ನುಟ್' ಆಗಮವು ಬಂದು ಹಾಗೆಯೇ "ಅಚಿ ರ ಋತಃ(7–2–100)" ಸೂತ್ರದಿಂದ 'ರೇಫ' ಆದೇಶವು ಏಕಕಾಲಕ್ಕೆ ಪ್ರಾಪ್ತವಾಗಿದೆ. ಆಗ **"ವಿಪ್ರತಿಷೇಧೇ ಪರಂ ಕಾರ್ಯಮ್"** ಎಂಬ ನಿಯಮದಿಂದ ಪರ ಕಾರ್ಯವಾದ 'ರೇಫ'ಆದೇಶವು ಪ್ರಾಪ್ತವಾದಾಗ "ನುಮಚಿರತೃಜ್ವದ್ಭಾವೇಭ್ಯೋ ನುಟ್ ಪೂರ್ವವಿಪ್ರತಿಷೇಧೇನ" ಎಂಬ ವಾರ್ತಿಕದಿಂದ, ಇಲ್ಲಿ 'ಪೂರ್ವವಿಪ್ರತಿಷೇಧ'ದಿಂದ ಪೂರ್ವ ಕಾರ್ಯವಾದ 'ನುಟ್'(ನ್) ಆಗಮವು ಬರುತ್ತದೆ. ಇದು 'ಟಿತ್' ಆಗಿರುವುದರಿಂದ 'ಆಮ್'ಗೆ 'ಆದ್ಯವಯವ'ವಾಗಿ ಬಂದು 'ತಿಸೃ+ನ್+ಆಮ್' ಎಂದಾಗಿ "ನಾಮಿ(6–4–3)" ಸೂತ್ರದಿಂದ 'ಋ' ಕಾರಕ್ಕೆ 'ದೀರ್ಘ'ವು ಪಾಪ್ತವಾಗಬೇಕಾಗಿತ್ತು. ಆದರೆ ಪ್ರಕೃತ ಸೂತ್ರದಿಂದ 'ದೀರ್ಘ'ವನ್ನು ನಿಷೇಧಿಸಿ, "ಋವರ್ಣಾನ್ನಸ್ಯ ಣತ್ವಂ ವಾಚ್ಯಮ್" ವಾರ್ತಿಕದಿಂದ 'ನ್' ಕಾರಕ್ಕೆ ಣತ್ವ ಬಂದು 'ತಿಸೃಣಾಮ್' ಎಂಬ ರೂಪವಾಗಿದೆ.

ಉದಾ– ತಿಸೃಷು–ಸಪ್ತಮೀ ವಿಭಕ್ತಿ ಬಹುವಚನದಲ್ಲಿ–'ತಿಸೃ+ಸು(ಸುಪ್)' ಎಂದಿದ್ದಾಗ, "ಆದೇಶಪ್ರತ್ಯಯಯೋಃ (8–3–59)" ಸೂತ್ರದಿಂದ 'ಷತ್ವ'ವು ಬಂದು 'ತಿಸೃಷು' ಎಂದಾಗುತ್ತದೆ.

'ತ್ರಿ' ಶಬ್ದದ ಸ್ತ್ರೀಲಿಂಗದ ರೂಪಗಳು.–'ತಿಸ್ರಃ', 'ತಿಸ್ರಃ', 'ತಿಸೃಭಿಃ', ತಿಸೃಭ್ಯಃ',ತಿಸೃಭ್ಯಃ 'ತಿಸೃಣಾಮ್', 'ತಿಸೃಷು'.

'ಚತಸೃ' ಶಬ್ದದ ಸ್ತ್ರೀಲಿಂಗದ ರೂಪಗಳು.–ಮೇಲಿನಂತೆಯೇ'ಚತುರ್' ಶಬ್ದಕ್ಕೆ 'ಚತಸೃ' ಆದೇಶವು ಬಂದು ಕೆಳಗಿನ ರೂಪಗಳಾಗಿವೆ.'ಚತಸ್ರಃ','ಚತಸ್ರಃ', 'ಚತಸೃಭಿಃ', 'ಚತಸೃಭ್ಯಃ', 'ಚತಸೃಭ್ಯಃ', 'ಚತಸೃಣಾಮ್', 'ಚತಸೃಷು'.

ದ್ವಿ ಶಬ್ದದ ರೂಪಗಳು :–'ದ್ವಿ' ಶಬ್ದವು ನಿತ್ಯ ದ್ವಿವಚನಾನ್ತವಾಗಿದೆ.

ಉದಾ:–ದ್ವೇ–ಪ್ರಥಮಾ ವಿಭಕ್ತಿ ದ್ವಿ ವಚನದಲ್ಲಿ ದ್ವಿ+ಸ್ (ಸು) ಎಂದಿದ್ದಾಗ, "ತ್ಯದಾದೀನಾಮಃ(7–2–102)" ಸೂತ್ರದಿಂದ 'ಇ'ಕಾರಕ್ಕೆ 'ಅ'ಕಾರವು ಬಂದು 'ದ್ವ+ಔ' ಎಂದಿರುತ್ತದೆ. 'ಸ್ತ್ರೀಲಿಂಗ'ದಲ್ಲಿ "ಅಜಾದ್ಯತಷ್ಟಾಪ್(4–1–4)" ಸೂತ್ರದಿಂದ 'ಟಾಪ್'(ಆ) ಪ್ರತ್ಯಯವು ಬಂದು 'ದ್ವ+ಆ+ಔ' ಎಂದಿದ್ದಾಗ ಮೊದಲೆರೆಡು ಶಬ್ದಗಳಿಗೆ 'ಸವರ್ಣದೀರ್ಘ' ದಿಂದ 'ದ್ವಾ' ಎಂದಾಗಿ 'ದ್ವಾ+ಔ' ಎಂದಿದ್ದಾಗ "ಔಙ ಆಪಃ(7–1–18)" ಸೂತ್ರದಿಂದ 'ಔ'ಗೆ 'ಶಿ'(ಇ) ಆದೇಶವು ಬಂದು 'ದ್ವಾ+ಇ' ಎಂದಾಗಿ 'ಗುಣ'ವು ಬಂದು 'ದ್ವೇ' ಎಂದಾಗುತ್ತದೆ.

ಸೂಚನೆ: 'ದ್ವಿತೀಯಾ ದ್ವಿವಚನ'ದಲ್ಲೂ ಇದೇ ರೀತಿಯಲ್ಲಿ 'ದ್ವೇ' ಎಂದಾಗುತ್ತದೆ.

ಉದಾ– ದ್ವಾಭ್ಯಾಮ್(3)– 'ತೃತೀಯಾ', 'ಚತುರ್ಥೀ' ಮತ್ತು 'ಪಂಚಮೀ' ದ್ವಿವಚನಗಳಲ್ಲಿ ದ್ವಿ+ಭ್ಯಾಮ್ ಎಂದಿದ್ದಾಗ, 'ದ್ವಿ' ಶಬ್ದಕ್ಕೆ ಮೇಲಿನಂತೆಯೇ 'ಅತ್ವ'ದಿಂದ ದ್ವ+ಭ್ಯಾಮ್ ಎಂದಾಗಿ, ನಂತರ 'ಟಾಪ್'(ಆ) ಬಂದು ದ್ವಾ+ ಆಭ್ಯಾಮ್ ಎಂದಾಗಿ, ತದನಂತರ ಸವರ್ಣದೀರ್ಘ'ವನ್ನು ಮಾಡಿದಾಗ 'ದ್ವಾಭ್ಯಾಮ್', 'ದ್ವಾಭ್ಯಾಮ್', 'ದ್ವಾಭ್ಯಾಮ್' ಎಂಬ ರೂಪಗಳು ಆಗುತ್ತವೆ.

ಉದಾ– ದ್ವಯೋಃ (2) –ಷಷ್ಠೀ ಮತ್ತು ಸಪ್ತಮೀ ದ್ವಿವಚನಗಳಲ್ಲಿ 'ದ್ವಿ+ಓಸ್' ಎಂದಿದ್ದಾಗ ಹಿಂದಿನಂತೆಯೇ 'ದ್ವ+ಓಸ್' ಎಂದಾಗಿ 'ದ್ವ+ಆ+ಓಸ್'

ಎಂದಾಗಿ 'ಸವರ್ಣದೀರ್ಘ'ವು ಬಂದು 'ದ್ವಾ+ಓಸ್' ಎಂದಿದ್ದಾಗ, "ಆಙಿ ಚಾಪಃ (7–3–105)" ಸೂತ್ರದಿಂದ 'ಏ'ಕಾರಾದೇಶವು ಬಂದು ಅದಕ್ಕೆ 'ಅಯ್'ಆದೇಶವು ಬಂದು 'ದ್ವ್+ಅಯ್+ಓಸ್' ಎಂದಾಗಿ 'ದ್ವಯೋಸ್' ಎಂದಾಗಿ 'ರುತ್ವ' ವಿಸರ್ಗಗಳಿಂದ 'ದ್ವಯೋಃ' ಎಂದಾಗುತ್ತದೆ.

'ದ್ವಿ' ಶಬ್ದದ ರೂಪಗಳು– ದ್ವೇ ದ್ವೇ, 'ದ್ವಾಭ್ಯಾಮ್', 'ದ್ವಾಭ್ಯಾಮ್', 'ದ್ವಾಭ್ಯಾಮ್', ದ್ವಯೋಃ, ದ್ವಯೋಃ।

**ಇಲ್ಲಿಗೆ 'ಹ್ರಸ್ವ 'ಇ'ಕಾರಾನ್ತ ಶಬ್ದಗಳು ಮುಗಿದವು.**

**'ಈ' ಕಾರಾನ್ತ ಸ್ತ್ರೀಲಿಂಗ ಶಬ್ದಗಳು**

ಸೂಚನೆ: 'ಗೌರ'– ಶಬ್ದಕ್ಕೆ, "ಷಿದ್ಗೌರಾದಿಭ್ಯಶ್ಚ (7–1–41)" ಎಂಬ ಸೂತ್ರದಿಂದ 'ಙೀಷ್'(ಈ) ಬಂದು 'ಗೌರೀ' ಎಂಬ ಸ್ತ್ರೀ' ಪ್ರತ್ಯಯಾನ್ತ ಶಬ್ದವಾಗಿದೆ.

ಉದಾ– 'ಗೌರೀ' – ಗೌರೀ – ಪ್ರಥಮಾ ವಿಭಕ್ತಿ ಏಕವಚನದಲ್ಲಿ– ಗೌರೀ+ಸ್ (ಸು) ಎಂದಿದ್ದಾಗ, ಇದು 'ಙ್ಯನ್ತ'ವಾಗಿರುವುದರಿಂದ "ಹಲ್ಙ್ಯಾಭ್ಯೋ ದೀರ್ಘಾತ್ಸುತಿಸ್ಯಪೃಕ್ತಂ ಹಲ್(6–1–68)" ಎಂಬ ಸೂತ್ರದಿಂದ 'ಸ್'ಕಾರಕ್ಕೆ ಲೋಪ ಬಂದು 'ಗೌರೀ' ಎಂಬ ರೂಪವಾಗುತ್ತದೆ.

ಉದಾ– ಗೌರ್ಯೌ,ಗೌರ್ಯೌ – ಪ್ರಥಮಾ ವಿಭಕ್ತಿ ದ್ವಿವಚನದಲ್ಲಿ– ಗೌರೀ+ಔ ಎಂದಿದ್ದಾಗ, 'ಪೂರ್ವಸವರ್ಣದೀರ್ಘ'ವು ಪ್ರಾಪ್ತವಾಗಬೇಕಾಗಿದ್ದಾಗ, "ದೀರ್ಘಾಜ್ಜಸಿ ಚ(6–1–105)" ಸೂತ್ರದಿಂದ ಅದು ನಿಷೇಧವಾಗಿ,'ಯಣ್' ಸಂಧಿಯಿಂದ

'ಗೌರ್+ಯ್+ಔ' ಎಂದಿದ್ದಾಗ "ಅಚೋ ರಹಾಭ್ಯಾಮ್ ದ್ವೇ(8–4–46)" ಸೂತ್ರದಿಂದ 'ಯ್'ಕಾರಕ್ಕೆ 'ದ್ವಿತ್ವ'ವು ಬಂದು 'ಗೌರ್ಯ್ಯೌ' ಎಂದಾಗುತ್ತದೆ. 'ದ್ವಿತ್ವ' ಅಭಾವ ಪಕ್ಷದಲ್ಲಿ 'ಗೌರ್ಯೌ' ಎಂದಾಗುತ್ತದೆ. ಇದೇ ರೀತಿಯಲ್ಲಿ 'ಗೌರೀ' ಶಬ್ದಕ್ಕೆ 'ಯ್'ಕಾರದ 'ದ್ವಿತ್ವ'ವುಳ್ಳ ರೂಪ ಮತ್ತು 'ದ್ವಿತ್ವ'ವಿಲ್ಲದ ರೂಪಗಳಿರುತ್ತದೆ.

[ವಿಶೇಷ– 'ಯಣ್' ಸಂಧಿ ಬಾರದಿರುವ ಸ್ಥಳಗಳಲ್ಲಿ ಮಾತ್ರ ಅಂದರೆ 'ಅಮ್' ಮತ್ತು 'ಶಸ್' ಪ್ರತ್ಯಯಗಳು ಪರವಾದಾಗ 'ಯ್'ಕಾರಕ್ಕೆ ಅವಕಾಶವೇ ಇರುವುದಿಲ್ಲ].

ಉದಾ– ಗೌರೀಮ್ – 'ದ್ವಿತೀಯಾ' ಏಕವಚನದಲ್ಲಿ 'ಗೌರೀ+ಅಮ್' ಎಂದಿದ್ದಾಗ, ಬರಬೇಕಿದ್ದ, 'ಯಣ್' ಸಂಧಿಯನ್ನು ಬಾಧಿಸಿ "ಅಮಿ ಪೂರ್ವಃ(6–1–107)" ಸೂತ್ರದಿಂದ ಪೂರ್ವರೂಪವು ಬಂದು 'ಗೌರೀಮ್' ಎಂದಾಗುತ್ತದೆ.

ಉದಾ– ಗೌರೀಃ– 'ದ್ವಿತೀಯಾ' ಬಹುವಚನದಲ್ಲಿ ಗೌರೀ+ಅಸ್(ಶಸ್)' ಎಂದಿದ್ದಾಗ, "ಪ್ರಥಮಯೋಃ ಪೂರ್ವಸವರ್ಣಃ(6–1–102)" ಸೂತ್ರದಿಂದ 'ಪೂರ್ವಸರ್ಣದೀರ್ಘ'ವಾಗಿ 'ರುತ್ವ' ವಿಸರ್ಗಗಳಿಂದ 'ಗೌರೀಃ' ಎಂದು ರೂಪವಾಗುತ್ತದೆ.

ಉದಾ–'ಗೌರ್ಯಾ' – 'ತೃತೀಯಾ' ಏಕವಚನದಲ್ಲಿ 'ಗೌರೀ+ಆ(ಟಾ)' ಎಂದಿದ್ದಾಗ 'ಯಣ್' ಸಂಧಿಯಿಂದ 'ಗೌರ್ಯಾ' ಎಂದಾಗುತ್ತದೆ.

ಉದಾ– ಗೌರೀಭ್ಯಾಮ್(3) – ತೃತಿಯಾ, ಚತುರ್ಥೀ ಮತ್ತು ಪಂಚಮೀ ದ್ವಿವಚನಗಳಲ್ಲಿ ಗೌರೀ+ಭ್ಯಾಮ್ ಎಂದಿದ್ದಾಗ, ಕೇವಲ ವರ್ಣ ಜೋಡಣೆಯಿಂದ ಗೌರೀಭ್ಯಾಮ್ ಎಂದಾಗುತ್ತದೆ.

ಉದಾ– ಗೌರೀಭಿಃ – ತೃತಿಯಾ ವಿಭಕ್ತಿ ಬಹುವಚನದಲ್ಲಿ ಗೌರೀ+ಭಿಸ್ ಎಂದಿದ್ದಾಗ ಗೌರೀಭಿಸ್ ಎಂದಾಗಿ, ರುತ್ವ–ವಿಸರ್ಗಗಳಿಂದ ಗೌರೀಭಿಃ ಎಂದು ರೂಪವಾಗುತ್ತದೆ.

ಉದಾ– ಗೌರೀಭ್ಯಃ (2)– ಚತುರ್ಥೀ ಮತ್ತು ಪಂಚಮೀ ಬಹುವಚನಗಳಲ್ಲಿ ಗೌರೀ+ಭ್ಯಸ್ ಎಂದಿದ್ದಾಗ, ಗೌರೀಭ್ಯಸ್ ಎಂದಾಗಿ ರುತ್ವ–ವಿಸರ್ಗಗಳಿಂದ ಗೌರೀಭ್ಯಃ ಎಂದಾಗುತ್ತದೆ.

ಉದಾ– 'ಗೌರ್ಯೈ' – ಚತುರ್ಥೀ ವಿಭಕ್ತಿ ಏಕವಚನದಲ್ಲಿ– 'ಗೌರೀ +ಏ'(ಙೇ) ಎಂದಿದ್ದಾಗ "ಆಣ್ನದ್ಯಾಃ(7–3–112)" ಸೂತ್ರದಿಂದ 'ಆಟ್'(ಆ) ಆಗಮವು ಬಂದು 'ಏ'ಕಾರಕ್ಕೆ 'ಆದ್ಯವಯವ'ವಾಗಿ ಬಂದು, 'ಗೌರೀ+ಆ+ಏ' ಎಂದಿದ್ದಾಗ, 'ಯಣ್' ಸಂಧಿಯಿಂದ 'ಗೌರ್+ಯ್+ಆ+ಏ' ಎಂದಿದ್ದಾಗ 'ಗೌರ್ಯ್+ಆ+ಏ' ಎಂದಾಗಿ "ಆಟಶ್ಚ(6–1–90)" ಸೂತ್ರದಿಂದ 'ವೃದ್ಧಿ'ಯಾಗಿ 'ಗೌರ್ಯೈ' ಎಂದಾಗುತ್ತದೆ.

ಉದಾ– 'ಗೌರ್ಯಾಃ (2) – ಪಂಚಮೀ ಮತ್ತು ಷಷ್ಠೀ ವಿಭಕ್ತಿ ಏಕವಚನದಲ್ಲಿ, 'ಗೌರೀ+ಙಸಿ'(ಅಸ್) ಮತ್ತು 'ಗೌರೀ+ಙಸ್'(ಅಸ್) ಎಂದಿದ್ದಾಗ, "ಆಣ್ನದ್ಯಾಃ(7–3–112)" ಸೂತ್ರದಿಂದ 'ಆಟ್' ಆಗಮವು 'ಅಸ್' ಪ್ರತ್ಯಯಕ್ಕೆ 'ಆದ್ಯವಯವ'ವಾಗಿ ಬರುತ್ತದೆ. 'ಗೌರೀ+ಆ+ಅಸ್' ಎಂದಿದ್ದಾಗ, "ಆಟಶ್ಚ(6–1–90)" ಸೂತ್ರದಿಂದ 'ವೃದ್ಧಿ'ಯು ಏಕಾದೇಶವಾಗಿ ಬಂದು 'ರುತ್ವ' ವಿಸರ್ಗದಿಂದ 'ಗೌರ್ಯಾಃ' ಎಂದಾಗುತ್ತದೆ.

ಉದಾ–ಗೌರ್ಯೋಃ (2)–'ಷಷ್ಠೀ' ಮತ್ತು 'ಸಪ್ತಮೀ' 'ದ್ವಿವಚನ'ಗಳಲ್ಲಿ 'ಗೌರೀ+ಓಸ್' ಎಂದಿದ್ದಾಗ 'ಯಣ್' ಸಂಧಿಯಾಗಿ 'ರುತ್ವ' ವಿಸರ್ಗಗಳಿಂದ 'ಗೌರ್ಯೋಃ' ಎಂದಾಗುತ್ತದೆ.

ಉದಾ–'ಗೌರೀಣಾಮ್' – ಷಷ್ಠೀ' ವಿಭಕ್ತಿ ಬಹುವಚನದಲ್ಲಿ ಗೌರೀ+'ಆಮ್' ಎಂದಿದ್ದಾಗ, 'ನದೀ' ಸಂಜ್ಞೆಯು ಬಂದು ನಂತರ "ಹ್ರಸ್ವನದ್ಯಾಪೋ ನುಟ್(7–1–54)" ಎಂಬ ಸೂತ್ರದಿಂದ 'ನುಟ್' ಆಗಮವು ಬಂದು "ನಾಮಿ(6–4–3)" ಸೂತ್ರದಿಂದ 'ದೀರ್ಘ'ವಾಗಿ "ಅಟ್ಕುಪ್ವಾಙ್ನುಮ್‌ವ್ಯವಾಯೇಽಪಿ(8–4–2)" ಸೂತ್ರದಿಂದ 'ಣತ್ವ'ವು ಬಂದು 'ಗೌರೀಣಾಮ್' ಎಂಬ ರೂಪವು ಸಿದ್ಧವಾಗುತ್ತದೆ.

ಉದಾ–'ಗೌರ್ಯಾಮ್'–ಸಪ್ತಮೀ ವಿಭಕ್ತಿ ಏಕವಚನದಲ್ಲಿ ಗೌರೀ+ಙಿ (ಇ) ಎಂದಿದ್ದಾಗ, 'ನದೀ' ಸಂಜ್ಞೆಯು ಬಂದು "ಙೇರಾಮ್ನದ್ಯಾಮ್ನೀಭ್ಯಃ (7–3–116)" ಸೂತ್ರದಿಂದ 'ಙಿ'ಗೆ 'ಆಮ್' ಆದೇಶವು ಬಂದು ಮತ್ತು "ಆಣ್ನದ್ಯಾಃ (7–3–112)" ಸೂತ್ರದಿಂದ 'ಆಟ್' ಆಗಮವು ಆದ್ಯವಯವ್‌ವಾಗಿ ಬಂದು "ಆಟಶ್ಚ (6–1–90)" ಸೂತ್ರದಿಂದ ಏಕಾದೇಶ ವೃದ್ಧಿಯಾಗಿ 'ಗೌರ್ಯಾಮ್' ಎಂಬ ರೂಪವು ಸಿದ್ಧವಾಗುತ್ತದೆ.

ಉದಾ–ಗೌರೀಷು–'ಸಪ್ತಮೀ ವಿಭಕ್ತಿ ಬಹುವಚನದಲ್ಲಿ ಗೌರೀ+ಸು (ಸುಪ್) ಎಂದಿದ್ದಾಗ, 'ಗೌರೀ'ಶಬ್ದದ 'ಈ'ಕಾರವು 'ಇಣ್' ಆಗಿರುವುದರಿಂದ, ಅದರ ಪರದಲ್ಲಿರುವ 'ಸುಪ್' ಪ್ರತ್ಯಯದ ಅವಯವವಾದ) 'ಸ್'ಕಾರಕ್ಕೆ "ಆದೇಶ ಪ್ರತ್ಯಯೋಃ (8–3–59)" ಸೂತ್ರದಿಂದ 'ಷ್' ಕಾರವು ಬಂದು 'ಗೌರೀಷು' ರೂಪವು ಸಿದ್ಧವಾಗಿದೆ.

ಉದಾ– (ಹೇ) ಗೌರಿ–'ಸಂಬೋಧನ ಪ್ರಥಮಾ ವಿಭಕ್ತಿ ಏಕವಚನದಲ್ಲಿ, ಗೌರೀ+ಸ್ (ಸು) ಎಂದಿದ್ದಾಗ, "ಅಂಬಾರ್ಥನದ್ಯೋರ್ಹ್ರಸ್ವಃ(7–3–107)" ಸೂತ್ರದಿಂದ 'ಈ'ಕಾರಕ್ಕೆ ಹ್ರಸ್ವವು ಬಂದು 'ಗೌರೀ+ಸ್' ಎಂದಾಗಿ "ಏಙ್‌ಹ್ರಸ್ವಾತ್ಸಂಬುದ್ಧೇಃ (6–1–69)" ಎಂಬ ಸೂತ್ರದಿಂದ 'ಸ್'ಕಾರಕ್ಕೆ ಲೋಪವು ಬಂದು '(ಹೇ) ಗೌರಿ' ರೂಪವು ಸಿದ್ಧವಾಗುತ್ತದೆ.

**'ಙ್ಯನ್ತ ಸ್ತ್ರೀಲಿಂಗ 'ಗೌರೀ' ಶಬ್ದದ ರೂಪಗಳು'.**

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಗೌರೀ, ಗೌರ್ಯೌ | ಗೌರ್ಯೌ, ಗೌರ್ಯ್ಯಃ | ಗೌರ್ಯಃ |
| ದ್ವಿತೀಯಾ | ಗೌರೀಮ್ | ಗೌರ್ಯೌ, ಗೌರ್ಯೌ | ಗೌರೀಃ |
| ತೃತೀಯಾ | ಗೌರ್ಯಾ, ಗೌರ್ಯಾ | ಗೌರೀಭ್ಯಾಮ್ | ಗೌರೀಭಿಃ |
| ಚತುರ್ಥೀ | ಗೌರ್ಯೈ, ಗೌರ್ಯೈ | ಗೌರೀಭ್ಯಾಮ್ | ಗೌರೀಭ್ಯಃ |

| | | | |
|---|---|---|---|
| ಪಞ್ಚಮೀ | ಗೌರ್ಯ್ಯಾಃ, ಗೌರ್ಯಾಃ | ಗೌರೀಭ್ಯಾಮ್ | ಗೌರೀಭ್ಯಃ |
| ಷಷ್ಠೀ | ಗೌರ್ಯ್ಯಾಃ, ಗೌರ್ಯಾಃ | ಗೌರ್ಯ್ಯೋಃ, ಗೌರ್ಯೋಃ | ಗೌರೀಣಾಮ್ |
| ಸಪ್ತಮೀ | ಗೌರ್ಯ್ಯಾಮ್, ಗೌರ್ಯಾಮ್ | ಗೌರ್ಯ್ಯೋಃ, ಗೌರ್ಯೋಃ | ಗೌರೀಷು |
| ಸಮ್ಬೋಧನಾ | ಹೇ ಗೌರಿ! | ಹೇ ಗೌರ್ಯ್ಯೌ ಹೇ ಗೌರ್ಯೌ | ಹೇ ಗೌರ್ಯ್ಯಃ! |

**'ಙ್ಯನ್ತ ಸ್ತ್ರೀಲಿಂಗ 'ನದೀ' ಶಬ್ದದ ರೂಪಗಳು'.**

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ನದೀ | ನದ್ಯೌ | ನದ್ಯಃ |
| ದ್ವಿತೀಯಾ | ನದೀಮ್ | ನದ್ಯೌ | ನದೀಃ |
| ತೃತೀಯಾ | ನದ್ಯಾ | ನದೀಭ್ಯಾಮ್ | ನದೀಭಿಃ |
| ಚತುರ್ಥೀ | ನದ್ಯೈ | ನದೀಭ್ಯಾಮ್ | ನದೀಭ್ಯಃ |
| ಪಞ್ಚಮೀ | ನದ್ಯಾಃ | ನದೀಭ್ಯಾಮ್ | ನದೀಭ್ಯಃ |
| ಷಷ್ಠೀ | ನದ್ಯಾಃ | ನದ್ಯೋಃ | ನದೀನಾಮ್ |
| ಸಪ್ತಮೀ | ನದ್ಯಾಮ್ | ನದ್ಯೋಃ | ನದೀಷು |
| ಸಮ್ಬೋಧನಾ | ಹೇ ನದಿ! | ಹೇ ನದ್ಯೌ! | ಹೇ ನದ್ಯಃ! |

ಸೂಚನೆ: ಲಕ್ಷ್ಮೀಃ– ಇಲ್ಲಿ 'ನದೀ' ಶಬ್ದದಂತೆ 'ಙೀಪ್' ಅನ್ತವಾಗಿಲ್ಲದೇ ಇರುವುದರಿಂದ 'ಙ್ಯನ್ತ'ವಾಗಿಲ್ಲ. ಆದ್ದರಿಂದ "ಹಲ್ಙ್ಯಾಬ್ಭ್ಯೋ ದೀರ್ಘಾತ್ಸುತಿಸ್ಯಪೃಕ್ತಂ ಹಲ್(6–1–68)" ಸೂತ್ರದಿಂದ 'ಸ್'ಗೆ ಲೋಪವಾಗದೆ 'ಲಕ್ಷ್ಮೀಃ' ಎಂದು ರೂಪವಾಗಿದೆ. ಇತರ ವಿಭಕ್ತಿಗಳಿದ್ದಾಗ 'ನದೀ' ಶಬ್ದಂತೆ ರೂಪಗಳಾಗುತ್ತವೆ.

'ಸು' ಲೋಪವಾಗದಿರುವ ಸ್ತ್ರೀಲಿಂಗ ಶಬ್ದಗಳನ್ನು ಸಂಗ್ರಹಿಸಿದ ಶ್ಲೋಕವು ಈ ಕೆಳಗಿನಂತಿದೆ.

"ಅವೀ–ತನ್ತ್ರೀ–ತರೀ–ಲಕ್ಷ್ಮೀ–ಧೀ–ಹ್ರೀ–ಶ್ರೀಣಾಮುಣಾದಿಷು ।
ಅಪಿ ಸ್ತ್ರೀಲಿಂಗವೃತ್ತೀನಾಂ ಸೋರ್ಲೋಪೋ ನ ಕದಾಚನ. ॥

ಸೂಚನೆ: ಈ ಏಳು ಸ್ತ್ರೀಲಿಂಗ ಶಬ್ದಗಳು 'ಉಣಾದಿ'ಗಣ ಪಠಿತವಾಗಿವೆ. ಆದರೆ ಇವು 'ಙ್ಯನ್ತ'ಪ್ರತ್ಯಯಾನ್ತ ಶಬ್ದಗಳಲ್ಲ. ಆದ್ದರಿಂದ "ಹಲ್ಙ್ಯಾಬ್ಭ್ಯೋ ದೀರ್ಘಾತ್ಸುತಿಸ್ಯಪೃಕ್ತಂ ಹಲ್(6–1–68)" ಸೂತ್ರದಿಂದ 'ಸು' ಲೋಪವಾಗಿಲ್ಲ. ಆದ್ದರಿಂದ 'ರುತ್ವ' ವಿಸರ್ಗಗಳಾಗಿವೆ.

**'ಅಙ್ಯನ್ತ'ವಾದ ಸ್ತ್ರೀಲಿಂಗ 'ಲಕ್ಷ್ಮೀ' ಶಬ್ದದ ರೂಪಗಳು.**

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಲಕ್ಷ್ಮೀಃ | ಲಕ್ಷ್ಮ್ಯೌ | ಲಕ್ಷ್ಮ್ಯಃ |
| ದ್ವಿತೀಯಾ | ಲಕ್ಷ್ಮೀಮ್ | ಲಕ್ಷ್ಮ್ಯೌ | ಲಕ್ಷ್ಮೀಃ |
| ತೃತೀಯಾ | ಲಕ್ಷ್ಮ್ಯಾ | ಲಕ್ಷ್ಮೀಭ್ಯಾಮ್ | ಲಕ್ಷ್ಮೀಭಿಃ |
| ಚತುರ್ಥೀ | ಲಕ್ಷ್ಮ್ಯೈ | ಲಕ್ಷ್ಮೀಭ್ಯಾಮ್ | ಲಕ್ಷ್ಮೀಭ್ಯಃ |
| ಪಞ್ಚಮೀ | ಲಕ್ಷ್ಮ್ಯಾಃ | ಲಕ್ಷ್ಮೀಭ್ಯಾಮ್ | ಲಕ್ಷ್ಮೀಭ್ಯಃ |
| ಷಷ್ಠೀ | ಲಕ್ಷ್ಮ್ಯಾಃ | ಲಕ್ಷ್ಮ್ಯೋಃ | ಲಕ್ಷ್ಮೀಣಾಮ್ |
| ಸಪ್ತಮೀ | ಲಕ್ಷ್ಮ್ಯಾಮ್ | ಲಕ್ಷ್ಮ್ಯೋಃ | ಲಕ್ಷ್ಮೀಷು |
| ಸಮ್ಬೋಧನಾ | ಹೇ ಲಕ್ಷ್ಮಿ! | ಹೇ ಲಕ್ಷ್ಮ್ಯೌ! | ಹೇ ಲಕ್ಷ್ಮ್ಯಃ! |

ಸೂಚನೆ-1: ಇದೇ ತರಹ ಅವೀ, ತರೀ, ತನ್ತ್ರೀ ಮೊದಲಾದ ಶಬ್ದದ ರೂಪಳಿರುತ್ತವೆ ಎಂದು ತಿಳಿಯಬೇಕು.

ಸೂಚನೆ-2: 'ಸ್ತ್ರೀ' ಶಬ್ದವು 'ಸ್ತ್ಯೈ' ಎಂಬ ಧಾತುವಿನ ನಂತರ 'ಙೀಪ್' ಪ್ರತ್ಯಯವು ಬಂದು 'ಙ್ಯನ್ತ'ವಾಗಿರುತ್ತವೆ ಮತ್ತು 'ನಿತ್ಯ ಸ್ತ್ರೀಲಿಂಗ'ವಾಗಿಯೂ ಇದೆ. ಆದ್ದರಿಂದ 'ನದೀ'ಸಂಜ್ಞೆಯು ಬಂದಿದೆ.

ಉದಾ- ಸ್ತ್ರೀ – ಪ್ರಥಮಾ ವಿಭಕ್ತಿ ಏಕವಚನದಲ್ಲಿ – ಸ್ತ್ರೀ+ ಸ್ (ಸು) ಎಂದಿದ್ದಾಗ, "ಹಲ್ಙ್ಯಾಬ್ಭ್ಯೋ ದೀರ್ಘಾತ್ಸುತಿಸ್ಯಪೃಕ್ತಂ ಹಲ್(6–1–68)" ಸೂತ್ರದಿಂದ 'ಸ್'ಗೆ ಲೋಪ ಬಂದದ್ದರಿಂದ, ರುತ್ವ-ವಿಸರ್ಗಗಳು ಬಾರದೇ ಸ್ತ್ರೀ ಎಂದು ರೂಪವಾಗಿದೆ.

ಉದಾ- ಹೇ ಸ್ತ್ರಿ!-ಸಂಬೋಧನ ಪ್ರಥಮಾ ವಿಭಕ್ತಿಯಲ್ಲಿ ಹೇ ಸ್ತ್ರೀ+ಸ್ (ಸು) ಎಂದಿದ್ದಾಗ, 'ನದೀ' ಸಂಜ್ಞೆಯು ಇರುವುದರಿಂದ "ಅಮ್ಬಾರ್ಥನದ್ಯೋರ್ಹ್ರಸ್ವಃ(7–3–107)" ಸೂತ್ರದಿಂದ 'ಈ' ಕಾರಕ್ಕೆ ಹ್ರಸ್ವವು ಬಂದು ಹೇ ಸ್ತ್ರಿ+ಸ್ (ಸು) ಎಂದಿದ್ದಾಗ, "ಏಙ್ಹ್ರಸ್ವಾತ್ಸಮ್ಬುದ್ಧೇಃ(6–1–69)" ಸೂತ್ರದಿಂದ 'ಸು' ಲೋಪವಾಗಿ ಹೇ ಸ್ತ್ರಿ! ಎಂಬ ರೂಪವಾಗಿದೆ.

**('ಇಯಙ್' ಆದೇಶವನ್ನು ವಿಧಿಸುವ ಸೂತ್ರ).**

**ಸೂತ್ರ- 228. ಸ್ತ್ರಿಯಾಃ (6.4.76)**

ವೃತ್ತಿ-ಅಸ್ಯ ಇಯಙ್ ಸ್ಯಾತ್ ಅಜಾದೌ ಪ್ರತ್ಯಯೇ ಪರೇ। ಸ್ತ್ರಿಯೌ। ಸ್ತ್ರಿಯಃ।

ಅ.ವೃ-"ಅಚಿ ಶ್ನುಧಾತುಭ್ರುವಾಂ ಯ್ವೋರಿಯಙುವಙೌ(6–4–77)" ಸೂತ್ರದಿಂದ 'ಅಚಿ' ಮತ್ತು 'ಇಯಙ್' ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ – ಅಚ್-ಆದಿ ಪ್ರತ್ಯಯವು ಪರದಲ್ಲಿದ್ದಾಗ 'ಸ್ತ್ರೀ' ಶಬ್ದದ 'ಈ' ಕಾರಕ್ಕೆ 'ಇಯಙ್' ಆದೇಶವು ಬರುತ್ತದೆ.

ಆದರೆ, 'ಸ್ತ್ರೀ' ಶಬ್ದದಲ್ಲಿ ಧಾತುವಿಗೆ 'ಈ' ಕಾರವಿಲ್ಲದೇ ಇರುವುದರಿಂದ "ಅಚಿ ಶ್ನುಧಾತುಭ್ರುವಾಂ ಯ್ವೋರಿಯಙುವಙೌ (6–4–77)" ಸೂತ್ರದಿಂದ 'ಇಯಙ್' ಪ್ರಾಪ್ತವಾಗುವದಿಲ್ಲ. ಆದ್ದರಿಂದ ಈ ಪ್ರಕೃತ ಸೂತ್ರವು ಪ್ರವೃತ್ತವಾಗಿದೆ.

ಉದಾ–ಸ್ತ್ರಿಯೌ (2) – ಪ್ರಥಮಾ ಮತ್ತು ದ್ವಿತಿಯಾ ವಿಭಕ್ತಿ ದ್ವಿ ವಚನಗಳಲ್ಲಿ, ಸ್ತ್ರೀ+ಔ ಎಂದಿದ್ದಾಗ, 'ಯಣ್' ಸಂಧಿ ಪ್ರಾಪ್ತವಾದಾಗ ಅದನ್ನು ಬಾಧಿಸಿ "ಪ್ರಥಮಯೋಃ ಪೂರ್ವಸವರ್ಣಃ(6–1–102)" ಸೂತ್ರದಿಂದ ಪೂರ್ವಸವರ್ಣದೀರ್ಘವು ಬರಬೇಕಾಗಿದ್ದಾಗ, "ದೀರ್ಘಾಜ್ಜಸಿ ಚ(6–1–105)" ಸೂತ್ರದಿಂದ ನಿಷೇಧವಾದ ಮೇಲೆ 'ಯಣ್' ಪ್ರಾಪ್ತವಾಗಿತ್ತು. ಆಗ ಪ್ರಕೃತ ಸೂತ್ರದಿಂದ 'ಇಯಙ್'(ಇಯ್) ಆದೇಶವು ವಿಧಿಸಲಾಗಿದೆ. ಆಗ 'ಈ'ಕಾರದ ಸ್ಥಾನದಲ್ಲಿ 'ಇಯ್' ಆದೇಶವು ಬರುತ್ತದೆ. 'ಸ್ತ್+ ಇಯ್ +ಔ' ಎಂದಾಗಿ 'ಸ್ತ್ರಿಯೌ' ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– 'ಸ್ತ್ರಿಯಃ'–ಪ್ರಥಮಾ ವಿಭಕ್ತಿ ಬಹುವಚನದಲ್ಲಿ, ಸ್ತ್+ಅಸ್ (ಜಸ್) ಎಂದಿದ್ದಾಗ, 'ಇಯಙ್' ಆದೇಶವು ಬಂದು ಸ್ತ್+ಇಯ್ (ಇಯಙ್)+ಅಸ್ (ಜಸ್) ಎಂದು ಇದ್ದಾಗ, ಸ್ತ್ರಿಯಸ್ ಎಂದಾಗಿ ರುತ್ವ–ವಿಸರ್ಗಗಳಿಂದ 'ಸ್ತ್ರಿಯಃ' ಎಂಬ ರೂಪವಾಗಿದೆ.

### (ವೈಕಲ್ಪಿಕವಾಗಿ 'ಇಯಙ್'ನ್ನು ವಿಧಿಸುವ ಸೂತ್ರ)

**ಸೂತ್ರ–229. ವಾಮ್ಶಸೋಃ (6.4.80)**

ವೃತ್ತಿ–ಅಮಿ ಶಸಿ ಚ ಸ್ತ್ರಿಯಾ ಇಯಙ್ ವಾ ಸ್ಯಾತ್। ಸ್ತ್ರಿಯಮ್, ಸ್ತ್ರೀಮ್। ಸ್ತ್ರಿಯಃ, ಸ್ತ್ರೀಃ। ಸ್ತ್ರಿಯಾ, ಸ್ತ್ರಿಯೈ, ಸ್ತ್ರಿಯಾಃ। ಪರತ್ವಾತ್ ನುಟ್, ಸ್ತ್ರೀಣಾಮ್। ಸ್ತ್ರೀಷು।... [ಶ್ರೀಃ, ಶ್ರಿಯೌ, ಶ್ರಿಯಃ]।

ಪ. ಛೇ.–ವಾ, ಅಮ್, ಶಸೋಃ।

ಅ. ವೃ– "ಅಚಿಶ್ನುಧಾತುಭ್ರುವಾಂ ಯ್ವೋರಿಯಙುವಙೌ(6–4–77)" ಸೂತ್ರದಿಂದ 'ಇಯಙ್' ಎಂಬ ಪದವು ಮತ್ತು "ಸ್ತ್ರಿಯಾಃ(6–4–79)" ಎಂಬ ಸಂಪೂರ್ಣ ಸೂತ್ರವೇ ಅನುವೃತ್ತವಾಗುತ್ತದೆ.

ಅರ್ಥ – 'ಅಮ್' ಮತ್ತು 'ಶಸ್'ಗಳು ಪರದಲ್ಲಿದ್ದಾಗ 'ಸ್ತ್ರೀ' ಶಬ್ದಕ್ಕೆ 'ಇಯಙ್' ಆದೇಶವು ವಿಕಲ್ಪವಾಗಿ ಬರುತ್ತದೆ.

[ವಿಶೇಷ–"ಸ್ತ್ರಿಯಾಃ(6–4–79)" ಸೂತ್ರದಿಂದ ನಿತ್ಯವಾಗಿ ಬರುವಂತಹ 'ಇಯಙ್' ಪ್ರತ್ಯಯವು 'ಅಮ್' ಮತ್ತು 'ಶಸ್'ಗಳು ಪರದಲ್ಲಿದ್ದಾಗ ವಿಕಲ್ಪವಾಗಿ ಬರುತ್ತದೆ].

(ಸೂಚನೆ: ಅಜಾದಿ ಸುಪ್ ಪ್ರತ್ಯಯಗಳು ಪರದಲ್ಲಿದ್ದಾಗ ಸ್ತ್ರಿಯಾಃ (3.4.79) ಸೂತ್ರದಿಂದ ಇಯಙ್ ಆದೇಶವು ಬಂದು ಈ ಕೆಳಗಿನಂತೆ ರೂಪಗಳು ಸಿದ್ಧವಾಗುತ್ತವೆ).

ಉದಾ– ಸ್ತ್ರಿಯಮ್, ಸ್ತ್ರೀಮ್ – ದ್ವಿತಿಯಾ ವಿಭಕ್ತಿ ಏಕವಚನದಲ್ಲಿ– ಸ್ತ್ರಿ+ಅಮ್ ಎಂದಿದ್ದಾಗ, 'ಯಣ್' ಸಂಧಿಗೆ ಅವಕಾಶವಿದ್ದು, "ಪ್ರಥಮಯೋಃ ಪೂರ್ವಸವರ್ಣಃ(6–

1–107)" ಸೂತ್ರದಿಂದ ಅದು ನಿಷಿದ್ಧವಾಗಿ, ಪೂರ್ವಸವರ್ಣದೀರ್ಘವು ಪ್ರಾಪ್ತವಾಗಲು, ಅದನ್ನು ಬಾಧಿಸಿ, "ಅಮಿ ಪೂರ್ವಃ (6–1–107)" ಸೂತ್ರದಿಂದ ಪೂರ್ವರೂಪವು ಪ್ರಾಪ್ತವಾಗಿತ್ತು. ಆಗ 'ಸ್ತ್ರಿಯಾಃ (6–4–79)" ಸೂತ್ರದಿಂದ 'ಇಯಙ್' ಆದೇಶವು ನಿತ್ಯವಾಗಿ ವಿಧಿಸಲಾಗಿತ್ತು. ಅದನ್ನು ಬಾಧಿಸಿ, ಪ್ರಕೃತ ಸೂತ್ರದಿಂದ ವಿಕಲ್ಪವಾಗಿ 'ಇಯಙ್'(ಇಯ್) ಆದೇಶವು ಬಂದು ಸ್ತ್+ಇಯ್ (ಇಯಙ್)+ಅಮ್ ಎಂದಾಗಿ 'ಸ್ತ್ರಿಯಮ್' ಎಂಬ ರೂಪವು ಸಿದ್ಧವಾಗುತ್ತದೆ. ಇದು ವೈಕಲ್ಪಿಕವಾಗಿರುವುದರಿಂದ 'ಇಯಙ್' ಬಾರದ ಪಕ್ಷದಲ್ಲಿ ಸ್ತ್ರೀ+ಅಮ್ ಎಂದಿದ್ದಾಗ, "ಅಮಿ ಪೂರ್ವಃ (6–1–107)" ಸೂತ್ರದಿಂದ ಪೂರ್ವರೂಪವು ಬಂದು 'ಸ್ತ್ರೀಮ್' ಎಂದು ರೂಪವಾಗುತ್ತದೆ.

ಉದಾ– ಸ್ತ್ರಿಯಃ, ಸ್ತ್ರೀಃ – ದ್ವಿತಿಯಾ ವಿಭಕ್ತಿ ದ್ವಿ ವಚನದಲ್ಲಿ– ಸ್ತ್ರೀ+ಅಸ್ (ಶಸ್) ಎಂದಿದ್ದಾಗ, ಇಯಙ್ ಬರುವ ಪಕ್ಷದಲಿ, ಸ್ತ್+ಇಯ(ಇಯಙ್)+ಅಸ್ (ಶಸ್) ಎಂದಿದ್ದಾಗ, ಸ್ತ್ರಿಯಸ್ ಎಂದಾಗಿ, ರುತ್ವ–ವಿಸರ್ಗಗಳಿಂದ 'ಸ್ತ್ರಿಯಃ' ಎಂದು ರೂಪವಾಗುತ್ತದೆ. ತದಭಾವ ಪಕ್ಷದಲ್ಲಿ ಸ್ತ್ರೀ+ಅಸ್ (ಶಸ್) ಎಂದಿದ್ದಾಗ, "ಪ್ರಥಮಯೋಃ ಪೂರ್ವಸವರ್ಣಃ(6–1–102)" ಸೂತ್ರದಿಂದ ಪೂರ್ವಸವರ್ಣದೀರ್ಘವು ಬಂದು ಸ್ತ್ರೀಸ್ ಎಂದಾಗಿ, 'ಸ್ತ್ರೀಃ' ಎಂದು ರೂಪವಾಗುತ್ತದೆ.

ಉದಾ– ಸ್ತ್ರಿಯಾ – ತೃತಿಯಾ ವಿಭಕ್ತಿ ಏಕವಚನದಲ್ಲಿ–ಸ್ತ್ರೀ+ಆ (ಟಾ) ಎಂದಿದ್ದಾಗ, ಇಯಙ್ ಆದೇಶವು ಬಂದು ಸ್ತ್+ಇಯ್ (ಇಯಙ್)+ಆ (ಟಾ) ಎಂದಿದ್ದಾಗ, ಸ್ತ್ರಿಯಾ ಎಂದು ರೂಪವಾಗುತ್ತದೆ.

ಉದಾ–'ಸ್ತ್ರಿಯೈ' – ಚತುರ್ಥೀ ವಿಭಕ್ತಿ ಏಕವಚನದಲ್ಲಿ– ಸ್ತ್ರೀ+ಏ(ಙೇ) ಎಂದಿದ್ದಾಗ, ಇಯಙ್ ಆದೇಶವು ಬಂದು ಸ್ತ್+ಇಯ್ (ಇಯಙ್)+ಏ (ಙೇ) ಎಂದಿದ್ದಾಗ, "ಆಣ್ನದ್ಯಾಃ(7–3–112)" ಸೂತ್ರದಿಂದ 'ಆಟ್'(ಆ) ಆಗಮವು ಬಂದು 'ಏ'ಕಾರಕ್ಕೆ 'ಆದ್ಯವಯವ'ವಾಗಿ ಬಂದು, 'ಸ್ತ್ರಿಯ್+ಆ+ಏ' ಎಂದಿದ್ದಾಗ, "ಆಟಶ್ಚ(6–1–90)" ಸೂತ್ರದಿಂದ 'ವೃದ್ಧಿ'ಯಾಗಿ 'ಸ್ತ್ರಿಯೈ' ಎಂದಾಗುತ್ತದೆ.

ಉದಾ– ಸ್ತ್ರಿಯಾಃ, ಸ್ತ್ರಿಯಃ – ಪಂಚಮೀ ಮತ್ತು ಷಷ್ಠೀ ಏಕವಚನಗಳಲ್ಲಿ – ಸ್ತ್ರೀ+ಅಸ್(ಙಸಿ), ಮತ್ತು ಸ್ತ್ರೀ+ಅಸ್(ಙಸ್) ಎಂದಿದ್ದಾಗ, ಇಯಙ್ ಆದೇಶವು ಬಂದು ಸ್ತ್+ಇಯ್ (ಇಯಙ್)+ಅಸ್(ಙಸಿ), ಮತ್ತು ಸ್ತ್+ಇಯ್ (ಇಯಙ್)+ಅಸ್(ಙಸ್) ಎಂದಿದ್ದಾಗ, "ಆಣ್ನದ್ಯಾಃ(7–3–112)" ಸೂತ್ರದಿಂದ 'ಆಟ್'(ಆ) ಆಗಮವು ಬಂದು 'ಅಸ್' ಗೆ 'ಆದ್ಯವಯವ'ವಾಗಿ ಬಂದು, ಸ್ತ್ರಿಯ್+ಆ+ಅಸ್ ಎಂದಿದ್ದಾಗ, "ಆಟಶ್ಚ(6–1–90)" ಸೂತ್ರದಿಂದ 'ವೃದ್ಧಿ' ಬಂದು ಸ್ತ್ರಿಯಾಸ್ ಎಂದಾಗಿ, ರುತ್ವ–ವಿಸರ್ಗಗಳಿಂದ ಸ್ತ್ರಿಯಾಃ, ಎಂದು ರೂಪವಾಗುತ್ತದೆ. 'ಆಟ್' ಅಗಮವು ಬಾರದಪಕ್ಷದಲ್ಲಿ ಸ್ತ್ರಿಯಃ ಎಂದು ರೂಪವಾಗುತ್ತದೆ.

"ನೇಯಙುವಙ್‌ಸ್ಥಾನಾವಸ್ತ್ರೀ(1–4–4)" ಸೂತ್ರದಿಂದ ನಿಷೇಧವಾಗಿರುವುದರಿಂದ 'ನದೀ' ಸಂಜ್ಞೆಯು ಬರುವುದಿಲ್ಲ. ಆದರೆ 'ಙಿತ್' ಪ್ರತ್ಯಯಗಳು ಪರವಾದಾಗ 'ಙಿತಿ ಹ್ರಸ್ವಶ್ಚ(1–4–6)" ಸೂತ್ರದಿಂದ ವೈಕಲ್ಪಿಕವಾಗಿ 'ನದೀ' ಸಂಜ್ಞೆಯು ಬರುತ್ತದೆ].

ಉದಾ– 'ಶ್ರೀಃ'– ಪ್ರಥಮಾ ವಿಭಕ್ತಿ ಏಕವಚನದಲ್ಲಿ ಶ್ರೀ+ಸ್(ಸು) ಎಂದಿದ್ದಾಗ 'ರುತ್ವ' ವಿಸರ್ಗಗಳಿಂದ 'ಶ್ರೀಃ' ಎಂದು ರೂಪವಾಗುತ್ತದೆ.

ಉದಾ– 'ಶ್ರಿಯೌ' –ಪ್ರಥಮಾ ವಿಭಕ್ತಿ ದ್ವಿವಚನದಲ್ಲಿ– 'ಶ್ರೀ+ಔ' ಎಂದಿದ್ದಾಗ ಧಾತುವಿನ 'ಈ' ಕಾರದ ಪೂರ್ವದಲ್ಲಿರುವ ಧಾತುವಿನ ಅವಯವದಲ್ಲಿ ಸಂಯೋಗವು 'ಶ್ರ್' ಎಂಬ ಅಕ್ಷರದಲ್ಲಿದೆ ಮತ್ತು ಅನೇಕ 'ಅಚ್'ಗಳುಳ್ಳ ಅಂಗವಾಗಿಯೂ ಇಲ್ಲ. ಆದ್ದರಿಂದ "ಏರನೇಕಾಚೋಽಸಂಯೋಗಪೂರ್ವಸ್ಯ (6–4–82)" ಸೂತ್ರದಿಂದ 'ಯಣ್' ಸಂಧಿಯು ಬಂದಿಲ್ಲ. "ಅಚಿ ಶ್ನುಧಾತುಭ್ರುವಾಂ ಯ್ವೋರಿಯಙುವಙೌ (6–4–77)" ಸೂತ್ರದಿಂದ 'ಇಯಙ್' ಆದೇಶವು ಬಂದು 'ಶ್ರ್+ಇಯ್+ಔ'='ಶ್ರಿಯೌ' ಎಂದಾಗುತ್ತದೆ.

ಉದಾ–'ಶ್ರಿಯಃ'–ಪ್ರಥಮಾ ವಿಭಕ್ತಿ ಬಹುವಚನದಲ್ಲಿ– ಶ್ರೀ+ಅಸ್(ಜಸ್) ಎಂದಿದ್ದಾಗ, 'ಇಯಙ್' ಆದೇಶವು ಬಂದು 'ಶ್ರ್+ಇಯ್+ಅಸ್'= 'ಶ್ರಿಯಸ್' ಎಂದಾಗಿ ರುತ್ವ–ವಿಸರ್ಗಗಳಿಂದ 'ಶ್ರಿಯಃ' ಎಂದಾಗುತ್ತದೆ.

**('ನದೀ' ಸಂಜ್ಞೆಯನ್ನು ನಿಷೇಧಿಸುವ ಸೂತ್ರ).**

**ಸೂತ್ರ– 230. ನೇಯಙುವಙ್ಸ್ಥಾನಾವಸ್ತ್ರೀ (1.4.4.)**

ವೃತ್ತಿ–ಇಯಙುವಙೋಃ ಸ್ಥಿತಿಃ ಯಯೋಃ ತೌ ಈತ್–ಊತೌ ನದೀ ಸಂಜ್ಞೌ ನ ಸ್ತೋ ನ ತು ಸ್ತ್ರೀ। ಹೇ ಶ್ರೀಃ!। ಶ್ರಿಯೌ, ಶ್ರಿಯಾಃ2। ಶ್ರಿಯಃ 2।

ಪ. ಛೇ.– ನ,ಇಯಙುವಙ್‌ಸ್ಥಾನೌ,ಅಸ್ತ್ರೀ।

ಅ.ವೃ– "ಯೂ ಸ್ತ್ರ್ಯಾಖ್ಯೌ ನದೀ(1–4–3)" ಸೂತ್ರದಿಂದ 'ಯೂ' ಮತ್ತು 'ನದೀ' ಎಂಬ ಪದಗಳು ಅನುವೃತ್ತವಾಗುತ್ತವೆ.

ಉದಾ– ಸ್ತ್ರಿಯಾಮ್–ಸಪ್ತಮೀ ವಿಭಕ್ತಿ ಏಕವಚನದಲ್ಲಿ – ಸ್ತ್ರೀ+ಇ (ಙಿ) ಎಂದಿದ್ದಾಗ, ಇಲ್ಲಿ ನದಿ ಸಂಜ್ಞೆ ಬರೋಣದ್ದರಿಂದ ಇಯಙ್ ಆದೇಶ ಬಂದು ಸ್ತ್ರ್+ಇಯಙ್+ಇ ಎಂದಿದ್ದಾಗ, ಸ್ತ್ರ್+ಇಯ್+ಇ ಎಂದಾಗಿ, ನಂತರ, ಸ್ತ್ರಿಯ್+ಇ ಎಂದಿದ್ದಾಗ, "ಙೇರಾಮ್ನದ್ಯಾಮ್ನೀಭ್ಯಃ" ಎಂಬ ಸೂತ್ರದಿಂದ 'ಇ' ಗೆ 'ಆಮ್' ಆದೇಶ ಬಂದು ಸ್ತ್ರಿಯ್+ಆಮ್=ಸ್ತ್ರಿಯಾಮ್ ಎಂದು ರೂಪವಾಗುತ್ತದೆ.

ಉದಾ–ಸ್ತ್ರೀಷು – ಸಪ್ತಮೀ ವಿಭಕ್ತಿ ಬಹುವಚನದಲ್ಲಿ – ಸ್ತ್ರೀ+ಸು (ಸುಪ್) ಎಂದಿದ್ದಾಗ, ಯಾವ ವಿಶೇಷ ಕಾರ್ಯಗಳಿಲ್ಲದ್ದರಿಂದ, ಕೇವಲ ವರ್ಣಜೋಡಣೆಯಿಂದ, ಸ್ತ್ರೀಸು ಎಂದಾಗಿ "ಆದೇಶ ಪ್ರತ್ಯಯಯೋಃ" ಎಂಬ ಸೂತ್ರದಿಂದ ಪ್ರತ್ಯಯದ ಅವಯವವಾದ 'ಸ್' ಕಾರಕ್ಕೆ ಷತ್ವ(ಷ್) ಬಂದು ಸ್ತ್ರೀಷು ಎಂದು ರೂಪವಾಗುತ್ತದೆ.

**'ಙ್ಯನ್ತ– ನಿತ್ಯ ಸ್ತ್ರೀಲಿಂಗ 'ಸ್ತ್ರೀ' ಶಬ್ದ ರೂಪಗಳು.**

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಸ್ತ್ರೀ | ಸ್ತ್ರಿಯೌ | ಸ್ತ್ರಿಯಃ |
| ದ್ವಿತೀಯಾ | ಸ್ತ್ರಿಯಮ್, ಸ್ತ್ರೀಮ್ | ಸ್ತ್ರಿಯೌ | ಸ್ತ್ರಿಯಃ,ಸ್ತ್ರೀಃ |

| | | | |
|---|---|---|---|
| ತೃತೀಯಾ | ಸ್ತ್ರಿಯಾ | ಸ್ತ್ರೀಭ್ಯಾಮ್ | ಸ್ತ್ರೀಭಿಃ |
| ಚತುರ್ಥೀ | ಸ್ತ್ರಿಯೈ | ಸ್ತ್ರೀಭ್ಯಾಮ್ | ಸ್ತ್ರೀಭ್ಯಃ |
| ಪಞ್ಚಮೀ | ಸ್ತ್ರಿಯಾಃ | ಸ್ತ್ರೀಭ್ಯಾಮ್ | ಸ್ತ್ರೀಭ್ಯಃ |
| ಷಷ್ಠೀ | ಸ್ತ್ರಿಯಾಃ | ಸ್ತ್ರಿಯೋಃ | ಸ್ತ್ರೀಣಾಮ್ |
| ಸಪ್ತಮೀ | ಸ್ತ್ರಿಯಾಮ್ | ಸ್ತ್ರಿಯೋಃ | ಸ್ತ್ರೀಷು |
| ಸಮ್ಬೋಧನಾ | ಹೇ ಸ್ತ್ರಿ! | ಹೇ ಸ್ತ್ರಿಯೌ! | ಹೇ ಸ್ತ್ರಿಯಃ! |

ಸೂಚನೆ: 'ಶ್ರೀ' ಶಬ್ದ:–ಶ್ರಯತಿ ಹರಿಮ್ ಇತಿ ಶ್ರೀಃ' (ಹರಿಯನ್ನು ಆಶ್ರಯಿಸಿದವಳು– ಲಕ್ಷ್ಮೀ ಅಥವಾ ಸೌಂದರ್ಯ ಮೊದಲಾದವು).

'ಶ್ರಿಞ್ ಸೇವಾಯಾಮ್' ಎಂಬ ಧಾತುವಿನ ನಂತರ 'ಕ್ವಿಪ್' ಪ್ರತ್ಯಯವು ಬಂದು ಅನಂತರ ದೀರ್ಘವಾದಾಗ 'ಶ್ರೀ' ಎಂದು ರೂಪವಾಗುತ್ತದೆ. ಇಲ್ಲಿ 'ಙೀಪ್' ಮೊದಲಾದ 'ಈ'ಕಾರದ 'ಸ್ತ್ರೀ' ಪ್ರತ್ಯಯವು ಬರುವುದಿಲ್ಲ. ಧಾತುವು 'ಈ' ಕಾರಾಂತವಾಗಿರುವುದರಿಂದ 'ಇಯಙ್' ಬರುತ್ತದೆ. 'ಙೀಪ್' ಮೊದಲಾದ 'ಈ'ಕಾರಾಂತ 'ಸ್ತ್ರೀ' ಪ್ರತ್ಯಯಾಂತವಾಗಿಲ್ಲದಿರುವುದರಿಂದ 'ಸು'ಗೆ ಲೋಪವು ಬರುವುದಿಲ್ಲ.

ಉದಾ– ಸ್ತ್ರಿಯೋಃ(2) – ಷಷ್ಠೀ ಮತ್ತು ಸಪ್ತಮೀ ದ್ವಿವಚನಗಳಲ್ಲಿ– ಸ್ತ್ರೀ+ಓಸ್ ಎಂದಿದ್ದಾಗ, ಇಯಙ್ ಆದೇಶವು ಬಂದು ಸ್ತ್+ಇಯ್ (ಇಯಙ್)+ಓಸ್ ಎಂದಿದ್ದಾಗ, ಸ್ತ್ರಿಯೋಸ್ ಎಂದಾಗಿ ರುತ್ವ–ವಿಸರ್ಗಗಳಿಂದ ಸ್ತ್ರಿಯೋಃ ಎಂದಾಗುತ್ತದೆ.

ಉದಾ– ಸ್ತ್ರೀಣಾಮ್ – ಷಷ್ಠೀ ವಿಭಕ್ತಿ ಬಹುವಚನದಲ್ಲಿ – ಸ್ತ್ರೀ+ಆಮ್ ಎಂದಿದ್ದಾಗ, "ಹ್ರಸ್ವ ನದ್ಯಾಪೋನುಟ್" ಎಂಬ ಸೂತ್ರದಿಂದ ನ್(ನುಟ್) ಆಗಮ ಬಂದು ಸ್ತ್ರೀ+ನ್+ಆಮ್=ಸ್ತ್ರೀ+ನಾಮ್ ಎಂದಿದ್ದಾಗ, ಇದು ಹಲಾದಿ ಪ್ರತ್ಯಯವಾದ್ದರಿಂದ ಇಯಙ್ ಆದೇಶವು ಬಾರದೇ ಣತ್ವ ಬಂದು ಸ್ತ್ರೀ+ಣ್+ಆಮ್ =ಸ್ತ್ರೀಣಾಮ್ ಎಂದು ರೂಪವಾಗಿದೆ.

ಸೂಚನೆ:– ಹಲಾದಿ ಸುಪ್ ಪ್ರತ್ಯಯಗಳು ಪರವಾದಾಗ ಯಾವ ಕಾರ್ಯವೂ ಇರುವುದಿಲ್ಲ. ಆದರೆ 'ಆಮ್' ಪರದಲ್ಲಿದ್ದಾಗ 'ಸ್ತ್ರಿಯಾಃ(6–4–79)" ಸೂತ್ರಕ್ಕಿಂತ "ಹ್ರಸ್ವನದ್ಯಾಪೋ ನುಟ್(7–1–54)" ಸೂತ್ರವು ಪರದಲ್ಲಿರುವುದರಿಂದ ಮೊದಲು 'ನುಟ್' ಆಗಮವು ಬಂದ ಮೇಲೆ 'ನಾಮ್' ಎಂದಾದಾಗ, ಇದು ಹಲಾದಿ ಪ್ರತ್ಯಯವಾಗುತ್ತದೆ ('ಅಜಾದಿ' ಪ್ರತ್ಯಯವಾಗಿರುವದಿಲ್ಲ) ಆದ್ದರಿಂದ 'ಇಯಙ್' ಆದೇಶವು ಬರುವುದಿಲ್ಲ, ಆದ್ದರಿಂದ 'ಸ್ತ್ರೀಣಾಮ್' ಎಂಬ ರೂಪವು ಸಿದ್ಧವಾಗುತ್ತದೆ.

ಉದಾ–ಸ್ತ್ರೀಭ್ಯಾಮ್(3) – ತೃತಿಯಾ, ಚತುರ್ಥೀ ಮತ್ತು ಪಂಚಮೀ ವಿಭಕ್ತಿ ದ್ವಿವಚನಗಳಲ್ಲಿ ಸ್ತ್ರೀ +ಭ್ಯಾಮ್ ಎಂದಿದ್ದಾಗ, ಇವು ಹಲಾದಿಯಾದ ಪ್ರತ್ಯಯಗಳಾದ್ದರಿಂದ ಕೇವಲ ವರ್ಣಜೋಡಣೆಯಿಂದ ಸ್ತ್ರೀಭ್ಯಾಮ್, ಸ್ತ್ರೀಭ್ಯಾಮ್, ಸ್ತ್ರೀಭ್ಯಾಮ್ ಎಂದು ರೂಪಗಳು ಸಿದ್ಧವಾಗುತ್ತವೆ.

ಉದಾ– ಸ್ತ್ರೀಭಿಃ – ತೃತಿಯಾ ವಿಭಕ್ತಿ ಬಹುವಚನದಲ್ಲಿ ಸ್ತ್ರೀ+ಭಿಸ್ ಎಂದಿದ್ದಾಗ, ಯಾವ ವಿಶೇಷ ಕಾರ್ಯಗಳಿಲ್ಲದ್ದರಿಂದ, ಸ್ತ್ರೀಭಿಸ್ ಎಂದಾಗ ರುತ್ವ–ವಿಸರ್ಗಗಳಿಂದ ಸ್ತ್ರೀಭಿಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಸ್ತ್ರೀಭ್ಯಃ (2) –ಚತುರ್ಥೀ ಮತ್ತು ಪಂಚಮೀ ವಿಭಕ್ತಿ ಬಹುವಚನಗಳಲ್ಲಿ ಸ್ತ್ರೀ+ಭ್ಯಸ್ ಎಂದಿದ್ದಾಗ, ಯಾವ ವಿಶೇಷ ಕಾರ್ಯಗಳಿಲ್ಲದ್ದರಿಂದ, ಕೇವಲ ವರ್ಣಜೋಡಣೆಯಿಂದ ಸ್ತ್ರೀಭ್ಯಸ್ ಎಂದಾಗಿ ರುತ್ವ–ವಿಸರ್ಗಗಳಿಂದ ಸ್ತ್ರೀಭ್ಯಃ, ಸ್ತ್ರೀಭ್ಯಃ ಎಂದು ರೂಪಗಳಾಗುತ್ತವೆ.

ಅರ್ಥ–'ಇಯಙ್' ಮತ್ತು 'ಉವಙ್' ಆದೇಶಗಳಿಗೆ ಸ್ಥಾನಿಯಾಗಿರುವ ದೀರ್ಘ 'ಈ'ಕಾರ ಮತ್ತು 'ಊ'ಕಾರಗಳಿಗೆ 'ನದೀ' ಸಂಜ್ಞೆಯು ಬರುವುದಿಲ್ಲ.

ಸೂಚನೆ:'ಶ್ರೀ' ಮೊದಲಾದ ಶಬ್ದಗಳಲ್ಲಿ "ಅಚಿಶ್ನುಧಾತುಭ್ರುವಾಂ ಯ್ವೋರಿಯಙುವಙೌ(6–4–77)" ಸೂತ್ರದಿಂದ 'ಇಯಙ್' ಆದೇಶವು ಬರುತ್ತದೆ. ಆದ್ದರಿಂದ 'ಶ್ರೀ' ಶಬ್ದದ 'ಈ'ಕಾರವು 'ಇಯಙ್' ಆದೇಶಕ್ಕೆ 'ಸ್ಥಾನಿ'ಯಾಗಿದೆ.

ಉದಾ–'(ಹೇ)ಶ್ರೀಃ' – ಸಂಬೋಧನ ಪ್ರಥಮಾ ವಿಭಕ್ತಿ ಏಕವಚನದಲ್ಲಿ ಶ್ರೀ+ಸ್ (ಸು) ಪ್ರತ್ಯಯವನ್ನು ಸೇರಿಸಿದಾಗ "ಯೂ ಸ್ತ್ರ್ಯಾಖ್ಯೌ ನದೀ (1–4–3)" ಸೂತ್ರದಿಂದ 'ನದೀ' ಸಂಜ್ಞೆಯು ಪ್ರಾಪ್ತವಾಗಲು, "ನೇಯಙುವಙ್‌ಸ್ಥಾನಾವಸ್ತ್ರೀ (1.4.4.)" ಸೂತ್ರದಿಂದ ಅದು ನಿಷೇಧವಾಗಲು, 'ನದೀತ್ವ'ವಿಲ್ಲದೇ ಇರುವುದರಿಂದ "ಅಮ್ಬಾರ್ಥನದ್ಯೋ–ರ್ಹ್ರಸ್ವಃ (7–3–107)" ಸೂತ್ರದಿಂದ 'ಹ್ರಸ್ವ'ವು ಬರಲಿಲ್ಲ. ಆದ್ದರಿಂದ "ಏಙ್ ಹ್ರಸ್ವಾತ್ಸಮ್ಬುದ್ಧೇಃ (6–1–69)" ಎಂಬ ಸೂತ್ರದಿಂದ 'ಸ್'ಗೆ ಲೋಪವು ಬರಲಿಲ್ಲ. ಆ 'ಸ್'ಗೆ 'ರುತ್ವ' ವಿಸರ್ಗಗಳು ಬಂದು '(ಹೇ)ಶ್ರೀಃ' ಎಂದು ರೂಪವು ಸಿದ್ಧವಾಗಿದೆ.

ಉದಾ– ಹೇ ಶ್ರಿಯೌ!, ಹೇ ಶ್ರಿಯಃ–ಸಂಬೋಧನ ಪ್ರಥಮಾ ವಿಭಕ್ತಿ ದ್ವಿವಚನ ಮತ್ತು ಬಹುವಚನಗಳಲ್ಲಿ–ಮೇಲಿನಂತೆಯೇ ಹೇ ಶ್ರಿಯೌ! ಹೇ ಶ್ರಿಯಃ ಎಂದು ರೂಪಗಳಾಗುತ್ತವೆ.

ಉದಾ–ಶ್ರಿಯಮ್ – ದ್ವಿತಿಯಾ ವಿಭಕ್ತಿ ಏಕವಚನದಲ್ಲಿ– ಶ್ರೀ+ಅಮ್ ಎಂದಿದ್ದಾಗ, 'ಇಯಙ್' ಆದೇಶವು ಬಂದು ಶ್ರ್+ಇಯ್(ಇಯಙ್)+ಅಮ್ ಎಂದಿದ್ದಾಗ, ಶ್ರಿಯಮ್ ಎಂದು ರೂಪವಾಗುತ್ತದೆ.,

ಉದಾ –ಶ್ರಿಯೌ–ದ್ವಿತಿಯಾ ವಿಭಕ್ತಿ ದ್ವಿವಚನದಲ್ಲಿ ಶ್ರೀ+ಔ ಎಂದಿದ್ದಾಗ, ಪ್ರಥಮಾ ವಿಭಕ್ತಿ ದ್ವಿವಚನದಂತೆಯೇ ಶ್ರಿಯೌ ಎಂದು ರೂಪವಾಗುತ್ತದೆ.

ಉದಾ – ಶ್ರಿಯಃ (2) – ಪ್ರಥಮಾ ಮತ್ತು ದ್ವಿತಿಯಾ ವಿಭಕ್ತಿ ಬಹುವಚನಗಳಲ್ಲಿ, ಶ್ರೀ+ಅಸ್ (ಜಸ್), ಮತ್ತು ಶ್ರೀ+ಅಸ್(ಶಸ್) ಎಂದಿದ್ದಾಗ, ಇಯಙ್ ಆದೇಶ ಬಂದು ಶ್ರ್+ಇಯ್+ಅಸ್ ಎಂದಾಗಿ ರುತ್ವ–ವಿಸರ್ಗಗಳಿಂದ ಶ್ರಿಯಃ ಎಂದು 2 ರೂಪಗಳಾಗುತ್ತವೆ.

ಉದಾ– ಶ್ರಿಯಃ (2) ಪಂಚಮಿ ಮತ್ತು ಷಷ್ಠೀ ಏಕವಚನಗಳಲ್ಲಿ ಶ್ರಿಯಃ ಎಂದೇ

2 ವೈಕಲ್ಪಿಕ ರೂಪಗಳಾಗುತ್ತವೆ. ಹೀಗೆ 4ನಾಲ್ಕು ರೂಪಗಳಿರುತ್ತವೆ.

ಉದಾ- ಶ್ರಿಯಾ - ತೃತಿಯಾ ವಿಭಕ್ತಿ ಏಕವಚನದಲ್ಲಿ ಶ್ರೀ+ಆ (ಟಾ) ಎಂದಿದ್ದಾಗ, ಮೇಲಿನಂತೆಯೇ 'ಇಯಙ್' ಆದೇಶವು ಬಂದು ಶ್+ಇಯ್+ಆ(ಟಾ) ಎಂದಿದ್ದಾಗ, ಶ್ರಿಯಾ ಎಂದು ರೂಪವಾಗುತ್ತದೆ.

ಉದಾ- 'ಶ್ರಿಯೈ, ಶ್ರಿಯೇ- ಚತುರ್ಥೀ ವಿಭಕ್ತಿ ಏಕವಚನದಲ್ಲಿ -ಶ್ರೀ+ಏ'(ಙೇ) ಎಂದಿದ್ದಾಗ "ಯೂ ಸ್ತ್ರ್ಯಾಖ್ಯೌ ನದೀ(1-4-3)"ಸೂತ್ರದಿಂದ ಪ್ರಾಪ್ತವಾದ 'ನದೀ' ಸಂಜ್ಞೆಯು "ನೇಯುಙುವಙ್‌ಸ್ಥಾನಾವಸ್ತ್ರೀ (1.4.4.)" ಸೂತ್ರದಿಂದ ಅದು ನಿಷೇಧಿಸಲ್ಪಟ್ಟು, 'ಙೇ' ಪ್ರತ್ಯಯವು 'ಙಿತ್' ಆಗಿರುವುದರಿಂದ, 'ಙಿತಿ ಹ್ರಸ್ವಶ್ಚ(1-4-6)" ಎಂಬ ಸೂತ್ರದಿಂದ ವೈಕಲ್ಪಿಕವಾಗಿ 'ನದೀ' ಸಂಜ್ಞೆಯು ಬರುತ್ತದೆ. 'ನದೀ' ಸಂಜ್ಞೆಯು ಬಂದ ಪಕ್ಷದಲ್ಲಿ "ಆಣ್ನದ್ಯಾಃ(7-3-112)" ಸೂತ್ರದಿಂದ 'ಆಟ್' ಆಗಮವು ಬಂದು 'ಶ್ರೀ+ಆ+ಏ' ಎಂದಾಗುತ್ತದೆ. 'ಆ+ಏ'ಗಳನ್ನು ಸೇರಿಸಿದಾಗ "ಆಟಶ್ಚ(6-1-90)" ಸೂತ್ರದಿಂದ 'ವೃದ್ಧಿ'ಯಾಗಿ 'ಐ' ಎಂದಾಗಿ ಶ್ರೀ+ಐ ಎಂದಿದ್ದಾಗ, "ಅಚಿ ಶ್ನುಧಾತುಭ್ರುವಾಂ ಯ್ವೋರಿಯಙುವಙೌ(6-4-77)" ಸೂತ್ರದಿಂದ 'ಇಯಙ್' ಆದೇಶವು ಬಂದು 'ಶ್+ಇಯ್+ಐ'= 'ಶ್ರಿಯೈ ಎಂದು ರೂಪವಾಗುತ್ತದೆ. ನದಿ ಸಂಜ್ಞೆ ಬಾರದ ಪಕ್ಷದಲ್ಲಿ, ಶ್ರಿಯ್+ಏ (ಙೇ) ಎಂದಿದ್ದಾಗ, ವರ್ಣಜೋಡಣೆಯಿಂದ ಶ್ರಿಯೇ ಎಂದು ವೈಕಲ್ಪಿಕ ರೂಪವಾಗುತ್ತದೆ.

ಸೂಚನೆ: ಇದೇ ತರಹದ ಪ್ರಕ್ರಿಯೆಯಿಂದ 'ಪಂಚಮೀ', 'ಷಷ್ಠೀ' ಮತ್ತು ಏಕವಚನಗಳಲ್ಲಿ ಕ್ರಮವಾಗಿ 'ಶ್ರಿಯಾಃ-ಶ್ರಿಯಃ', 'ಶ್ರಿಯಾಃ-ಶ್ರಿಯಃ' ಎಂದು ರೂಪಗಳಾಗುತ್ತವೆ

ಉದಾ-'ಶ್ರಿಯಿ'- ಸಪ್ತಮಿ ವಿಭಕ್ತಿ ಏಕವಚನದಲ್ಲಿ ಶ್ರೀ+ಇ (ಙಿ) ಎಂದಿದ್ದಾಗ ಮೇಲಿನಂತೆಯೇ 'ಇಯಙ್' ಆದೇಶ ಬಂದು ಶ್+ಇಯ್+ಇ(ಙಿ) ಎಂದಿದ್ದಾಗ, "ಙೇರಾಮ್ನದ್ಯಾಮ್ನೀಭ್ಯಃ" ಎಂಬ ಸೂತ್ರದಿಂದ, ಪ್ರತ್ಯಯದ 'ಇ' ಕಾರಕ್ಕೆ 'ಆಮ್' ಬಂದು ಶ್ರಿಯಾಮ್ ಎಂದು ರೂಪವಾಗುತ್ತದೆ. 'ಆಮ್' ಬಾರದ ಪಕ್ಷದಲ್ಲಿ, ನದೀ ಸಂಜ್ಞೆ ಇಲ್ಲದ್ದರಿಂದ, ಶ್+ಇಯ್+ಇ (ಙಿ) ಎಂದಿದ್ದಾಗ, ವರ್ಣಜೋಡಣೆಯಿಂದ 'ಶ್ರಿಯಿ' ಎಂದು ರೂಪವಾಗುತ್ತದೀ.

ಉದಾ-'ಶ್ರಿಯೋಃ (2)-ಷಷ್ಠೀ ಮತ್ತು ಸಪ್ತಮಿ ವಿಭಕ್ತಿ ದ್ವಿವಚನಗಳಲ್ಲಿ, ಶ್ರೀ+ಓಸ್ ಎಂದಿದ್ದಾಗ, 'ಇಯಙ್' ಆದೇಶವು ಬಂದು ಶ್+ಇಯ್+ಓಸ್ ಎಂದಿದ್ದಾಗ ಶ್ರಿಯೋಸ್ ಎಂದಾಗಿ ರುತ್ವ-ವಿಸರ್ಗಗಳಿಂದ 'ಶ್ರಿಯೋಃ' ಎಂಬ ರೂಪವು ಸಿದ್ಧವಾಗುತ್ತದೆ.

**(ವೈಕಲ್ಪಿಕವಾಗಿ 'ನದೀ' ಸಂಜ್ಞೆಯನ್ನು ವಿಧಿಸುವ ಸೂತ್ರ).**

**ಸೂತ್ರ -230. ವಾಮಿ (1.4.5)**

ವೃತ್ತಿ-ಇಯುಙುವಙ್ ಸ್ಥಾನೌ ಸ್ತ್ರ್ಯಾಖ್ಯೌ ಯೂ ಆಮಿ ವಾ ನದಿಸಂಜ್ಞೌ ಸ್ತೋ ನತು ಸ್ತ್ರೀ। ಶ್ರೀಣಾಮ್, ಶ್ರಿಯಾಮ್। ಶ್ರಿಯಾಮ್, ಶ್ರಿಯಿ। ಧೇನುಃ ಮತಿವತ್।

ಪ. ಛೇ.– ವಾ, ಅಮಿ।

ಅ.ವೃ–"ನೇಯಙುವಙ್‌ಸ್ಥಾನಾವಸ್ತ್ರೀ (1.4.4.)" ಸೂತ್ರದಿಂದ 'ನೇಯಙುವಙ್ ಸ್ಥಾನೌ' ಮತ್ತು "ಯೂ ಸ್ತ್ರ್ಯಾಖ್ಯೌ ನದೀ(1–4–3)" ಎಂಬ ಸಂಪೂರ್ಣ ಸೂತ್ರವೇ ಅನುವೃತ್ತವಾಗುತ್ತವೆ.

ಅರ್ಥ–'ಇಯಙ್' ಮತ್ತು 'ಉವಙ್'ಗಳ ಸ್ಥಾನಿಗಳಾದ 'ನಿತ್ಯ ಸ್ತ್ರೀಲಿಂಗ'ಗಳಲ್ಲಿರುವ 'ಈ'ಕಾರ ಮತ್ತು 'ಊ' ಕಾರಗಳು 'ಆಮ್' ಪರದಲ್ಲಿದ್ದಾಗ ವಿಕಲ್ಪದಿಂದ 'ನದೀ' ಸಂಜ್ಞೆಯನ್ನು ಪಡೆಯುತ್ತವೆ. ಆದರೆ 'ಸ್ತ್ರೀ' ಶಬ್ದದಲ್ಲಿ ಈ ನಿಯಮವು ಬರುವುದಿಲ್ಲ.

ಸೂಚನೆ: "ಯೂ ಸ್ತ್ರ್ಯಾಖ್ಯೌ ನದೀ (1–4–3)" ಸೂತ್ರದಿಂದ 'ನಿತ್ಯ'ವಾಗಿ ಪ್ರಾಪ್ತವಾದ 'ನದೀ' ಸಂಜ್ಞೆಯು, ಪ್ರಕೃತ ಸೂತ್ರದಿಂದ ವಿಕಲ್ಪದಿಂದ ಬರುತ್ತದೆ. ಇದರಿಂದ 'ನದೀ' ಸಂಜ್ಞಾ ಇದ್ದ ಪಕ್ಷದಲ್ಲಿ "ಹ್ರಸ್ವನದ್ಯಾಪೋ ನುಟ್(7–1–54)" ಸೂತ್ರದಿಂದ 'ನುಟ್' ಆಗಮ ಬರುತ್ತದೆ. 'ನದೀ' ಸಂಜ್ಞಾ ಬಾರದಪಕ್ಷದಲ್ಲಿ 'ಇಯಙ್' ಆದೇಶವು ಬರುತ್ತದೆ.

ಉದಾ–'ಶ್ರೀಣಾಮ್, ಶ್ರಿಯಾಮ್'– ಷಷ್ಠೀ ವಿಭಕ್ತಿ ಬಹುವಚನದಲ್ಲಿ, ಶ್ರೀ+ಆಮ್ ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ನದೀ' ಸಂಜ್ಞಾ ಇದ್ದ ಪಕ್ಷದಲ್ಲಿ, ಹ್ರಸ್ವನದ್ಯಾಪೋನುಟ್" ಸೂತ್ರದಿಂದ 'ನುಟ್' ಆಗಮವು ಬಂದು ಶ್ರೀ+ನ್+ಆಮ್ ಎಂದಿದ್ದಾಗ, "ನಾಮಿ" ಎಂಬ ಸೂತ್ರದಿಂದ ದೀರ್ಘ 'ಈ' ಕಾರಕ್ಕೂ ದೀರ್ಘ 'ಈ' ಕಾರವು ಬಂದನಂತರ, 'ನ್'ಕಾರಕ್ಕೆ ಣತ್ವ ಬಂದು ಶ್ರೀ+ಣ್+ಆಮ್ ಎಂದಾಗಿ 'ಶ್ರೀಣಾಮ್' ಎಂಬ ರೂಪವಾಗುತ್ತದೆ. 'ನದೀ' ಸಂಜ್ಞಾ ಬಾರದ ಪಕ್ಷದಲ್ಲಿ 'ಇಯಙ್' ಆದೇಶವು ಬಂದು 'ಶ್+ಇಯ್+ಆಮ್'='ಶ್ರಿಯಾಮ್' ಎಂದು ರೂಪವಾಗುತ್ತದೆ.

ಉದಾ–ಶ್ರೀಷು–ಸಪ್ತಮೀ ವಿಭಕ್ತಿ ಬಹುವಚನದಲ್ಲಿ, ಶ್ರೀ+ಸು(ಸುಪ್) ಎಂದಿದ್ದಾಗ, ಶ್ರೀಸು ಎಂದಾಗಿ "ಆದೇಶ ಪ್ರತ್ಯಯೋಃ" ಸೂತ್ರದಿಂದ 'ಸ'ಕಾರಕ್ಕೆ ಷತ್ವ ಬಂದು ಶ್ರೀಷು ಎಂದಾಗುತ್ತದೆ.

**'ಅಜ್ಯನ್ತ–ನಿತ್ಯಸ್ತ್ರೀಲಿಂಗ' 'ಶ್ರೀ' ಶಬ್ದದ ರೂಪಗಳು**

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಶ್ರೀಃ | ಶ್ರಿಯೌ | ಶ್ರಿಯಃ |
| ದ್ವಿತೀಯಾ | ಶ್ರಿಯಮ್ | ಶ್ರಿಯೌ | ಶ್ರಿಯಃ |
| ತೃತೀಯಾ | ಶ್ರಿಯಾ | ಶ್ರೀಭ್ಯಾಮ್ | ಶ್ರೀಭಿಃ |
| ಚತುರ್ಥೀ | ಶ್ರಿಯೈ, ಶ್ರಿಯೇ | ಶ್ರೀಭ್ಯಾಮ್ | ಶ್ರೀಭ್ಯಃ |
| ಪಞ್ಚಮೀ | ಶ್ರಿಯಾಃ, ಶ್ರಿಯಃ | ಶ್ರೀಭ್ಯಾಮ್ | ಶ್ರೀಭ್ಯಃ |
| ಷಷ್ಠೀ | ಶ್ರಿಯಾಃ, ಶ್ರಿಯಃ | ಶ್ರಿಯೋಃ | ಶ್ರೀಣಾಮ್, ಶ್ರಿಯಾಮ್ |
| ಸಪ್ತಮೀ | ಶ್ರಿಯಾಮ್,ಶ್ರಿಯಿ | ಶ್ರಿಯೋಃ | ಶ್ರೀಷು |
| ಸಮ್ಬೋಧನಾ | ಹೇ ಶ್ರೀಃ | ಹೇ ಶ್ರಿಯೌ | ಹೇ ಶ್ರಿಯಃ |

ಸೂಚನೆ: – 'ನದೀ' ಸಂಜ್ಞೆ ಯಿಂದ ಆಗುವ ಪರಿಣಾಮಗಳು 'ಙೇ', 'ಙಸಿ', 'ಙಸ್', 'ಙಿ', 'ಆಮ್' ಮತ್ತು ಸಮ್ಬೋಧನಗಳಲ್ಲೇ ಇರುತ್ತದೆ. ಯಾವ ಶಬ್ದಗಳಿಗೆ 'ಇಯಙ್', 'ಉವಙ್' ಆದೇಶಗಳು ಬರುತ್ತವೆಯೋ ಅವುಗಳಿಗೆ "ನೇಯಙುವಙ್‌ಸ್ಥಾನವಸ್ತ್ರೀ (1.4.4.)" ಸೂತ್ರದಿಂದ 'ನದೀ' ಸಂಜ್ಞೆಗೆ ನಿಷೇಧವು ಬರುತ್ತದೆ. ಆದರೆ 'ಙಿತ್' ಪ್ರತ್ಯಯಗಳು ಪರದಲ್ಲಿದ್ದಾಗ "ಙಿತಿ ಹ್ರಸ್ವಶ್ಚ(1–4–6)" ಮತ್ತು "ವಾಮಿ(1–4–5)" ಎಂಬ ಪ್ರಕೃತ ಸೂತ್ರಗಳಿಂದ ವೈಕಲ್ಪಿಕವಾಗಿ 'ನದೀ' ಸಂಜ್ಞೆಯು ಬರುತ್ತದೆ. 'ಅಸ್ತ್ರೀ' ಎಂದು ಹೇಳಿ ನಿಷೇಧ ಮಾಡಿರುವುದರಿಂದ ಈ ನಿಯಮವು 'ಸ್ತ್ರೀ' ಶಬ್ದಕ್ಕೆ ಅನ್ವಯಿಸುವುದಿಲ್ಲ. ಅಂದರೆ 'ಸ್ತ್ರೀ' ಶಬ್ದವು ನಿತ್ಯವಾಗಿ 'ನದೀ' ಸಂಜ್ಞೆಯು ಬರುತ್ತದೆಂದರ್ಥ.

**ಇಲ್ಲಿಗೆ "ಈ' ಕಾರಾನ್ತ ಶಬ್ದಗಳು ಮುಗಿದವು.**

**ಈಗ 'ಉ'ಕಾರಾನ್ತ ಶಬ್ದಗಳ ನಿರೂಪಣೆಯು ಆರಂಭವಾಗುತ್ತದೆ.**

ಸೂಚನೆ: 'ಧೇನುರ್ಮತಿವತ್'– 'ಧೇನು' ಶಬ್ದವು 'ಉ'ಕಾರಾನ್ತವಾಗಿದೆ, 'ಮತಿ' ಶಬ್ದವು 'ಇ'ಕಾರಾನ್ತವಾಗಿದೆ. ಆದರೆ 'ಇ'ಕಾರಾನ್ತ 'ಸ್ತ್ರೀ'ಶಬ್ದಗಳಿಗೆ ಕೆಲವೆಡೆ 'ಇ'ಕಾರಕ್ಕೆ ಗುಣವು ಬಂದು 'ಏ'ಕಾರವಾಗುತ್ತದೆ. ಅದೇ ರೀತಿಯಲ್ಲಿ 'ಉ'ಕಾರಾನ್ತವಾದ ಶಬ್ದಗಳಿಗೆ 'ಗುಣ'ವು ಬಂದಾಗ 'ಓ'ಕಾರಾನ್ತವಾಗುತ್ತವೆ. ಈ ರೀತಿ 'ಇ'ಕಾರಾನ್ತ, 'ಉ'ಕಾರಾನ್ತ ಸ್ತ್ರೀಲಿಂಗ ಶಬ್ದಗಳಲ್ಲಿ ಪ್ರಕ್ರಿಯೆಗಳಿರುತ್ತವೆಂದು ತಿಳಿಯಬೇಕು.

**'ಉ'ಕಾರಾನ್ತ ಸ್ತ್ರೀಲಿಂಗ 'ಧೇನು' ಶಬ್ದದ ರೂಪಗಳು.**

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಧೇನುಃ | ಧೇನೂ | ಧೇನವಃ |
| ದ್ವಿತೀಯಾ | ಧೇನುಮ್ | ಧೇನೂ | ಧೇನೂಃ |
| ತೃತೀಯಾ | ಧೇನ್ವಾ | ಧೇನುಭ್ಯಾಮ್ | ಧೇನುಭಿಃ |
| ಚತುರ್ಥೀ | ಧೇನ್ವೈ,ಧೇನವೇ | ಧೇನುಭ್ಯಾಮ್ | ಧೇನುಭ್ಯಃ |
| ಪಞ್ಚಮೀ | ಧೇನ್ವಾಃ, ಧೇನೋಃ | ಧೇನುಭ್ಯಾಮ್ | ಧೇನುಭ್ಯಃ |
| ಷಷ್ಠೀ | ಧೇನ್ವಾಃ, ಧೇನೋಃ | ಧೇನ್ವೋಃ | ಧೇನೂನಾಮ್ |
| ಸಪ್ತಮೀ | ಧೇನ್ವಾಮ್ | ಧೇನೌ,ಧೇನ್ವೋಃ | ಧೇನುಷು |
| ಸಮ್ಬೋಧನಾ | ಹೇ ಧೇನೋ! | ಹೇ ಧೇನೂ! | ಹೇ ಧೇನವಃ! |

**(ತೃಜ್ವದ್ಭಾವವನ್ನು ವಿಧಿಸುವ ಅತಿದೇಶ ಸೂತ್ರ).**

**ಸೂತ್ರ – 232. ಸ್ತ್ರಿಯಾಂ ಚ (7.1.96)**

ವೃತ್ತಿ–ಸ್ತ್ರೀವಾಚೀ ಕ್ರೋಷ್ಟು–ಶಬ್ದಃ ತೃಜಂತವತ್ ರೂಪಂ ಲಭತೇ।

ಅ.ವೃ–"ತೃಜ್ವತ್ ಕ್ರೋಷ್ಟುಃ(7–1–95)" ಸಂಪೂರ್ಣ ಸೂತ್ರವು ಅನುವೃತ್ತವಾಗುತ್ತದೆ.

ಅರ್ಥ –'ಸ್ತ್ರೀ' ವಾಚಕವಾದ 'ಕ್ರೋಷ್ಟು' ಶಬ್ದವೂ ಕೂಡ 'ತೃಚ್' ಪ್ರತ್ಯಯಾನ್ತದಂತೆ ಆಗುತ್ತದೆ. ಅಂದರೆ 'ತೃಜ್ವದ್ಭಾವ'ವನ್ನು ಹೊಂದುತ್ತದೆ.

ಸೂಚನೆ:–ಈ ಸಂದರ್ಭದಲ್ಲಿ ಪುಲ್ಲಿಂಗದಲ್ಲಿ 'ಕ್ರೋಷ್ಟು' ಶಬ್ದದ ರೂಪಗಳನ್ನು ಪರಿಶೀಲಿಸಬೇಕು. ಕೆಲವು ವಿಭಕ್ತಿಗಳು ಪರದಲ್ಲಿದ್ದಾಗ 'ಉ'ಕಾರಾನ್ತ ಶಬ್ದಗಳು 'ತೃಜ್ವದ್ಭಾವ'ವನ್ನು ಹೊಂದಿ 'ಋ'ಕಾರಾನ್ತವಾಗುತ್ತವೆ. ಇಲ್ಲಿ ಸ್ತ್ರೀಲಿಂಗದಲ್ಲಿ ಪ್ರತ್ಯೇಕವಾದ ವಿಭಕ್ತಿಗಳ ಅಪೇಕ್ಷೆ ಇರುವುದಿಲ್ಲ. ಕೇವಲ 'ಸ್ತ್ರೀತ್ವ' ವಿವಕ್ಷೆ ಇದ್ದಾಗ 'ತೃಜ್ವದ್ಭಾವ'ವು ಬರುತ್ತದೆ. 'ಕ್ರೋಷ್ಟು' ಶಬ್ದವು 'ಕ್ರೋಷ್ಟೃ' ಎಂದು 'ತೃಜ್ವದ್ಭಾವ'ವನ್ನು ಹೊಂದುತ್ತದೆ. ಮತ್ತು ಮುಂದಿನ ಸೂತ್ರ (ಋನ್ನೇಭ್ಯೋ ಙೀಪ್(4–1–5)") ದಿಂದ 'ಙೀಪ್' ಪ್ರತ್ಯಯವು ಬಂದು 'ಕ್ರೋಷ್ಟ್ರೀ' ಎಂಬ ರೂಪವಾಗುತ್ತದೆ.

**('ಙೀಪ್' ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ– 233. ಋನ್ನೇಭ್ಯೋ ಙೀಪ್ (4.1.5)**

ವೃತ್ತಿ–ಋದಂತೇಭ್ಯೋ ನಾಂತೇಭ್ಯಶ್ಚ ಸ್ತ್ರಿಯಾಂ ಙೀಪ್। ಕ್ರೋಷ್ಟ್ರೀ ಗೌರೀವತ್।... [ಭ್ರೂಃ ಶ್ರೀವತ್। ಸ್ವಯಂಭೂಃ ಪುಂವತ್]।

ಪ. ಛೇ.– ಋನ್ನೇಭ್ಯಃ, ಙೀಪ್।

ಅ.ವೃ–"ಙ್ಯಾಪ್ಪ್ರಾತಿಪದಿಕಾತ್(4–1–1)" ಎಂಬ ಸೂತ್ರದಿಂದ ವಚನವಿಪರಿಣಾಮ ಮಾಡಿದ ಮೇಲೆ, 'ಪ್ರಾತಿಪದಿಕೇಭ್ಯಃ' ಎಂಬ ಪದವು ಅನುವೃತ್ತಿ ಮಾಡಲಾಗಿದೆ.

ಅರ್ಥ –'ಋ'ಕಾರಾನ್ತ ಮತ್ತು 'ನ'ಕಾರಾನ್ತ ಪ್ರಾತಿಪದಿಕದ ನಂತರ 'ಸ್ತ್ರೀತ್ವ' ವಿವಕ್ಷೆ ಇದ್ದಾಗ, 'ಙೀಪ್'(ಈ) ಪ್ರತ್ಯಯವು ಬರುತ್ತದೆ.

ಸೂಚನೆ: – 'ಸ್ತ್ರೀ' ಪ್ರತ್ಯಯಗಳಲ್ಲಿ 'ಙೀಪ್', ಙೀಷ್', ಙೀನ್' ಮೊದಲಾದ ಪ್ರತ್ಯಯಗಳಿವೆ. 'ಙೀಪ್' ಶಬ್ದದಿಂದ ಸಾಮಾನ್ಯವಾಗಿ 'ಈ'ಕಾರಾನ್ತವೆಂದು ಸೂಚಿಸಲಾಗಿದೆ. ಅವುಗಳಲ್ಲಿ ಎಂತಹ 'ಈ'ಕಾರಾನ್ತ ಪ್ರತ್ಯಯವು ಬರುತ್ತದೆಂಬುದನ್ನು ಅನುಬಂಧಗಳನ್ನು ಪ್ರತ್ಯೇಕವಾದ ಸೂತ್ರದಿಂದ ಅಲ್ಲಲ್ಲಿ ಪಾಣಿನಿಯವರು ತಿಳಿಸುತ್ತಾರೆ.

ಕ್ರೋಷ್ಟು ಶಬ್ದವು 'ತೃಜ್ವದ್ಭಾವ'ವನ್ನು ಹೊಂದಿ 'ಕ್ರೋಷ್ಟೃ' ಎಂದಾದಮೇಲೆ, 'ಋ'ಕಾರಾನ್ತ ಶಬ್ದವಾಗಿದೆ. ಮತ್ತೊಂದು ಉದಾಹರಣೆಯನ್ನು ಹೇಳುವುದಾದರೆ 'ಸ್ವಾಮಿನ್' ಶಬ್ದವು 'ನ್'ಕಾರಾನ್ತವಾಗಿದ್ದು, ಸ್ತ್ರೀಲಿಙ್ಗದಲ್ಲಿ 'ಙೀಪ್'(ಈ) ಪ್ರತ್ಯಯವನ್ನು ಹೊಂದಿ, ಸ್ವಾಮಿನೀ ಎಂದಾಗುತ್ತದೆ. 'ಮೊದಲನೆಯ ಉದಾಹರಣೆಯಲ್ಲಿ 'ಕ್ರೋಷ್ಟೃ+ ಙೀಪ್' (ಈ) ಎಂದಿದ್ದಾಗ, 'ಯಣ್'ಸಂಧಿಯಾಗಿ, 'ಕ್ರೋಷ್ಟ್+ರ್+ಈ'= 'ಕ್ರೋಷ್ಟ್ರೀ' ಎಂದು ರೂಪವಾಗುತ್ತದೆ. ಎರಡನೇಯ ಉದಾಹರಣೆಯಲ್ಲಿ 'ನ್'ಕಾರಾನ್ತವಾದ 'ಸ್ವಾಮಿನ್' ಶಬ್ದದ ನಂತರ 'ಙೀಪ್' ಬಂದಾಗ 'ಸ್ವಾಮಿನೀ' ಎಂದಾಗುತ್ತದೆ. ಇದು 'ಙ್ಯನ್ತ ಸ್ತ್ರೀಲಿಂಗ'ವಾಗಿರುವುದರಿಂದ 'ಕಾಶೀ' ಶಬ್ದದಂತೆ ರೂಪಗಳನ್ನು ತಾಳುತ್ತದೆ.

ಸೂಚನೆ:–'ಉ'ಕಾರಾನ್ತ 'ಕ್ರೋಷ್ಟು' ಶಬ್ದವು 'ತೃಜ್ವದ್ಭಾವನ್ನು ಹೊಂದಿದ ಮೇಲೆ 'ಙೀಪ್' ಪ್ರತ್ಯಯವನ್ನು ಸೇರಿಸಿದಾಗ ಮೇಲೆ ಬರುವ ರೂಪಗಳು ಈ ಕೆಳಗಿನಂತಿವೆ.

**(ಈ-ಕಾರಾನ್ತ ಸ್ತ್ರೀಲಿಙ್ಗದ ಕ್ರೋಷ್ಟ್ರೀ ಶಬ್ದದ ರೂಪಗಳು)**

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಕ್ರೋಷ್ಟ್ರೀ | ಕ್ರೋಷ್ಟ್ರ್ಯೌ | ಕ್ರೋಷ್ಟ್ರ್ಯಃ |
| ದ್ವಿತೀಯಾ | ಕ್ರೋಷ್ಟ್ರೀಮ್ | ಕ್ರೋಷ್ಟ್ರ್ಯೌ | ಕ್ರೋಷ್ಟ್ರೀಃ |
| ತೃತೀಯಾ | ಕ್ರೌಷ್ಟ್ರ್ಯಾ | ಕ್ರೋಷ್ಟ್ರೀಭ್ಯಾಮ್ | ಕ್ರೋಷ್ಟ್ರೀಭಿಃ |
| ಚತುರ್ಥೀ | ಕ್ರೋಷ್ಟ್ರ್ಯೈ | ಕ್ರೋಷ್ಟ್ರೀಭ್ಯಾಮ್ | ಕ್ರೋಷ್ಟ್ರೀಭ್ಯಃ |
| ಪಞ್ಚಮೀ | ಕ್ರೋಷ್ಟ್ರ್ಯಾಃ | ಕ್ರೋಷ್ಟ್ರೀಭ್ಯಾಮ್ | ಕ್ರೋಷ್ಟ್ರೀಭ್ಯಃ |
| ಷಷ್ಠೀ | ಕ್ರೋಷ್ಟ್ರ್ಯಾಃ | ಕ್ರೋಷ್ಟ್ರ್ಯೋಃ | ಕ್ರೋಷ್ಟ್ರೀಣಾಮ್ |
| ಸಪ್ತಮೀ | ಕ್ರೋಷ್ಟ್ರ್ಯಾಮ್ | ಕ್ರೋಷ್ಟ್ರ್ಯೋಃ | ಕ್ರೋಷ್ಟ್ರೀಷು |
| ಸಮ್ಬೋಧನಾ | ಹೇ ಕ್ರೋಷ್ಟ್ರಿ! | ಹೇ ಕ್ರೋಷ್ಟ್ರ್ಯೌ! | ಹೇ ಕ್ರೋಷ್ಟ್ರ್ಯಃ! |

ಸೂಚನೆ-1:- ಇದೇರೀತಿ 'ಋ'ಕಾರಾನ್ತ ಮತ್ತು 'ನ್'ಕಾರಾನ್ತ ಶಬ್ದಗಳನ್ನು 'ಙೀಪ್' ಪ್ರತ್ಯಯವನ್ನು ಸೇರಿಸಿ ರೂಪಗಳನ್ನು ತಯಾರಿಸಬೇಕು.

ಸೂಚನೆ-2:- ಸ್ವಾಮಿನ್' ಶಬ್ದವು 'ಹಲನ್ತ' ಶಬ್ದವಾಗಿದೆ. ಆದ್ದರಿಂದ ಇದು 'ಹಲನ್ತ ಸ್ತ್ರೀಲಿಂಗ' ಪ್ರಕರಣಕ್ಕೆ ಸೇರಿದ್ದು. ಆದರೂ ಇದು 'ಈ' ಕಾರಾನ್ತವಾಗಿರುವುದರಿಂದ 'ಅಜನ್ತ ಸ್ತ್ರೀಲಿಂಗ' ಪ್ರಕರಣದಲ್ಲೂ ನಿರೂಪಿಸಲಾಗಿದೆ.

**'ಈ'ಕಾರಾನ್ತ ಸ್ತ್ರೀಲಿಂಗ 'ಸ್ವಾಮಿನೀ' ಶಬ್ದದ ರೂಪಗಳು.**

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಸ್ವಾಮಿನೀ | ಸ್ವಾಮಿನ್ಯೌ | ಸ್ವಾಮಿನ್ಯಃ |
| ದ್ವಿತೀಯಾ | ಸ್ವಾಮಿನೀಮ್ | ಸ್ವಾಮಿನ್ಯೌ | ಸ್ವಾಮಿನೀಃ |
| ತೃತೀಯಾ | ಸ್ವಾಮಿನ್ಯಾ | ಸ್ವಾಮಿನೀಭ್ಯಾಮ್ | ಸ್ವಾಮಿನೀಭಿಃ |
| ಚತುರ್ಥೀ | ಸ್ವಾಮಿನ್ಯೈ | ಸ್ವಾಮಿನೀಭ್ಯಾಮ್ | ಸ್ವಾಮಿನೀಭ್ಯಃ |
| ಪಞ್ಚಮೀ | ಸ್ವಾಮಿನ್ಯಾಃ | ಸ್ವಾಮಿನೀಭ್ಯಾಮ್ | ಸ್ವಾಮಿನೀಭ್ಯಃ |
| ಷಷ್ಠೀ | ಸ್ವಾಮಿನ್ಯಾಃ | ಸ್ವಾಮಿನ್ಯೋಃ | ಸ್ವಾಮಿನೀನಾಮ್ |
| ಸಪ್ತಮೀ | ಸ್ವಾಮಿನ್ಯಾಮ್ | ಸ್ವಾಮಿನ್ಯೋಃ | ಸ್ವಾಮಿನೀಷು |
| ಸಮ್ಬೋಧನಾ | ಹೇ ಸ್ವಾಮಿನಿ! | ಹೇ ಸ್ವಾಮಿನ್ಯೌ! | ಹೇ ಸ್ವಾಮಿನ್ಯಃ! |

ಸೂಚನೆ:- ಭ್ರೂಃ-ಶ್ರೀವತ್'- 'ಭ್ರೂ' ಶಬ್ದದ ರೂಪಗಳು 'ಶ್ರೀ' ಶಬ್ದದ ರೂಪದಂತೆ ಇರುತ್ತವೆ. "ಅಚಿ ಶ್ನುಧಾತುಭ್ರುವಾಂ ಯ್ವೋರಿಯಙುವಙೌ (6-4-77)" ಸೂತ್ರದಲ್ಲಿ 'ಭ್ರೂ' ಶಬ್ದವು ಪಠಿತವಾಗಿದೆ. ಆದ್ದರಿಂದ 'ಭ್ರೂ' ಶಬ್ದದ 'ಊ'ಕಾರದ ಸ್ಥಾನದಲ್ಲಿ 'ಉವಙ್' ಆದೇಶವು ಬರುತ್ತದೆ. 'ಉವಙ್' ಆದೇಶವು ಬರುವುದರಿಂದ "ನೇಯಙುವಙ್ಸ್ಥಾನಾವಸ್ತ್ರೀ (1.4.4.)" ಸೂತ್ರದಿಂದ 'ನದೀ' ಸಂಜ್ಞೆಗೆ ನಿಷೇಧ

ಬಂದ ಮೇಲೂ 'ಜಿತ್' ವಿಭಕ್ತಿಯು ಪರದಲ್ಲಿದ್ದಾಗ, "ಜಿತಿ ಹ್ರಸ್ವಶ್ಚ (1-4-6)" ಸೂತ್ರದಿಂದ ಮತ್ತು 'ಆಮ್' ಪರದಲ್ಲಿದ್ದಾಗ, 'ವಾಮಿ (1-4-5)" ಸೂತ್ರದಿಂದ ವೈಕಲ್ಪಿಕ 'ನದೀ' ಸಂಜ್ಞೆಯು ಬರುವುದರಿಂದಲೂ ಇದರ ರೂಪಗಳು 'ಶ್ರೀ' ಶಬ್ದದಂತೆ ಸಿದ್ಧವಾಗುತ್ತವೆ. 'ಭ್ರೂ+ಔ'>ಭ್ರ್+ಉವಙ್+ಔ, ಭ್ರ್+ಉವ್+ಔ=ಭ್ರುವೌಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

**'ಊ'ಕಾರಾನ್ತ ಸ್ತ್ರೀಲಿಂಗ 'ಭ್ರೂ' ಶಬ್ದದ ರೂಪಗಳು.**

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಭ್ರೂಃ | ಭ್ರುವೌ | ಭ್ರುವಃ |
| ದ್ವಿತೀಯಾ | ಭ್ರುವಮ್ | ಭ್ರುವೌ | ಭ್ರುವಃ |
| ತೃತೀಯಾ | ಭ್ರುವಾ | ಭ್ರೂಭ್ಯಾಮ್ | ಭ್ರೂಭಿಃ |
| ಚತುರ್ಥೀ | ಭ್ರುವೈ, ಭ್ರುವೇ | ಭ್ರೂಭ್ಯಾಮ್ | ಭ್ರೂಭ್ಯಃ |
| ಪಞ್ಚಮೀ | ಭ್ರುವಾಃ,ಭ್ರುವಃ | ಭ್ರೂಭ್ಯಾಮ್ | ಭ್ರೂಭ್ಯಃ |
| ಷಷ್ಠೀ | ಭ್ರುವಾಃ,ಭ್ರುವಃ | ಭ್ರುವೋಃ | ಭ್ರುವಾಮ್, ಭ್ರೂಣಾಮ್ |
| ಸಪ್ತಮೀ | ಭ್ರುವಾಮ್, ಭ್ರುವಿ | ಭ್ರುವೋಃ | ಭ್ರೂಷು |
| ಸಮ್ಬೋಧನಾ | ಹೇ ಭ್ರೂಃ! | ಹೇ ಭ್ರುವೌ! | ಹೇಭ್ರುವಃ! |

ಸೂಚನೆ:- ಸ್ವಯಮ್ಭೂಃ ಪುಂವತ್'. 'ಸ್ವಯಮ್ಭೂ' ಶಬ್ದದ ರೂಪಗಳು ಪುಲ್ಲಿಂಗದ 'ಸ್ವಯಮ್ಭೂ' ಶಬ್ದದ ರೂಪಗಳಂತೆ ಇರುತ್ತವೆ. ಅಂದರೆ ಎರಡೂ ಲಿಂಗಗಳಲ್ಲೂ ರೂಪಗಳು ಸಮಾನವಾಗಿರುತ್ತವೆ. ವಿಶೇಷ್ಯದ ಲಿಂಗವನ್ನು ತಿಳಿದು ಅದಕ್ಕನುಗುಣವಾಗಿ ಆಯಾ ಲಿಂಗಗಳಲ್ಲಿ ವಿಶೇಷಣಗಳಾದ 'ಸ್ವಯಮ್ಭೂ' ಶಬ್ದದ ರೂಪಗಳನ್ನು ಉಪಯೋಗಿಸಬೇಕು. ಇದು 'ನಿತ್ಯ ಸ್ತ್ರೀಲಿಂಗ'ವಾಗಿಲ್ಲದಿರುವುದರಿಂದ "ಯೂ ಸ್ತ್ರ್ಯಾಖ್ಯೌ ನದೀ(1-4-3)" ಸೂತ್ರದಿಂದ 'ನದೀ' ಸಂಜ್ಞೆಯು ಬರುವುದಿಲ್ಲ. ಆದ್ದರಿಂದ "ಓಃ ಸುಪಿ(6-4-83)" ಸೂತ್ರದಿಂದ ಬರಬೇಕಾದ 'ಯಣ್' ಸಂಧಿಗೆ "ನಭೂ ಸುಧಿಯೋಃ (6-4-85)" ಸೂತ್ರದಿಂದ ನಿಷೇಧವು ಬಂದಿದೆ. ಆಮೇಲೆ "ಅಚಿ ಶ್ನುಧಾತುಭ್ರುವಾಂ ಯ್ವೋರಿಯಙುವಙೌ(6-4-77)" ಸೂತ್ರದಿಂದ 'ಉವಙ್' ಆದೇಶವು ಬಂದು 'ಸ್ವಯಮ್ಭೂಃ','ಸ್ವಯಮ್ಭುವೌ', 'ಸ್ವಯಮ್ಭುವಃ' ಎಂಬ ರೂಪಗಳು ಸಿದ್ಧವಾಗುತ್ತವೆ.

**'ಊ'ಕಾರಾನ್ತ ಸ್ತ್ರೀಲಿಂಗ 'ಸ್ವಯಮ್ಭೂ' ಶಬ್ದದ ರೂಪಗಳು.**

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಸ್ವಯಮ್ಭೂಃ | ಸ್ವಯಮ್ಭುವೌ | ಸ್ವಯಮ್ಭುವಃ |
| ದ್ವಿತೀಯಾ | ಸ್ವಯಮ್ಭುವಮ್ | ಸ್ವಯಮ್ಭುವೌ | ಸ್ವಯಮ್ಭುವಃ |
| ತೃತೀಯಾ | ಸ್ವಯಮ್ಭುವಾ | ಸ್ವಯಮ್ಭೂಭ್ಯಾಮ್ | ಸ್ವಯಮ್ಭೂಭಿಃ |

| | | | |
|---|---|---|---|
| ಚತುರ್ಥೀ | ಸ್ವಯಮ್ಭುವೇ | ಸ್ವಯಮ್ಭೂಭ್ಯಾಮ್ | ಸ್ವಯಮ್ಭೂಭ್ಯಃ |
| ಪಞ್ಚಮೀ | ಸ್ವಯಮ್ಭುವಃ | ಸ್ವಯಮ್ಭೂಭ್ಯಾಮ್ | ಸ್ವಯಮ್ಭೂಭ್ಯಃ |
| ಷಷ್ಠೀ | ಸ್ವಯಮ್ಭುವಃ | ಸ್ವಯಮ್ಭುವೋಃ | ಸ್ವಯಮ್ಭುವಾಮ್ |
| ಸಪ್ತಮೀ | ಸ್ವಯಮ್ಭುವಿ | ಸ್ವಯಮ್ಭುವೋಃ | ಸ್ವಯಮ್ಭೂಷು |
| ಸಮ್ಬೋಧನಾ | ಹೇ ಸ್ವಯಮ್ಭೂಃ! | ಹೇ ಸ್ವಯಮ್ಭುವೌ! | ಹೇ ಸ್ವಯಮ್ಭುವಃ! |

**('ಙೀಪ್' ಮತ್ತು 'ಟಾಪ್'ಗಳಿಗೆ ನಿಷೇಧವನ್ನು ಹೇಳುವ ಸೂತ್ರ).**

**ಸೂತ್ರ- 234. ನ ಷಟ್-ಸ್ವಸ್ರಾದಿಭ್ಯಃ (4.1.10)**

ವೃತ್ತಿ-ಙೀಪ್ ಟಾಪೌ ನ ಸ್ತಃ

ಸ್ವಸಾ ತಿಸ್ರಶ್ಚತಸ್ರಶ್ಚ ನನಾಂದಾ ದುಹಿತಾ ತಥಾ।

0ಯಾತಾ ಮಾತೇತಿ ಸಪ್ತೈತೇ ಸ್ವಸ್ರಾದ0ಯ ಉದಾಹೃತಾಃ।

ಸ್ವಸಾ। ಸ್ವಸಾರೌ। ಮಾತಾ ಪಿತೃವತ್, ಮಾತೃಃ। ದ್ಯೌರ್ಗೋವತ್। ರಾಃ ಪುಂವತ್। ನೌಃಗ್ಲೌವತ್।

ಪ. ಛೇ.-ನ, ಷಟ್ಸ್ವಸ್ರಾದಿಭ್ಯಃ।

ಅ. ವೃ- "ಋನ್ನೇಭ್ಯೋ ಙೀಪ್ (4-1-5)" ಸೂತ್ರದಿಂದ 'ಙೀಪ್' ಎಂಬ ಪದವು ಮತ್ತು "ಅಜಾದ್ಯದಷ್ಟಾಪ್(4-1-4)" ಸೂತ್ರದಿಂದ 'ಟಾಪ್' ಎಂಬ ಪದವು ಅನುವೃತ್ತವಾಗುತ್ತವೆ.

ಅರ್ಥ -'ಷಟ್' ಸಂಜ್ಞೆಯುಳ್ಳ ಮತ್ತು 'ಸ್ವಸ್ರಾದಿ' ಗಣ ಪಠಿತವಾದ ಶಬ್ದಗಳ ನಂತರ 'ಸ್ತ್ರೀತ್ವ' ವಿವಕ್ಷೆಯಲ್ಲಿ 'ಙೀಪ್' ಮತ್ತು 'ಟಾಪ್' ಪ್ರತ್ಯಯಗಳು ಬರುವುದಿಲ್ಲ.

ಈ ಸೂತ್ರವು ಹಿಂದಿನ ಸೂತ್ರವಾದ "ಋನ್ನೇಭ್ಯೋ ಙೀಪ್(4-1-5)" ಸೂತ್ರದಿಂದ 'ಪಂಚನ್', 'ಷಷ್', 'ಸ್ವಸೃ', 'ದುಹಿತೃ' ಮೊದಲಾದ ಶಬ್ದಗಳಿಗೆ ಬರುವ 'ಙೀಪ್' ಮತ್ತು 'ಟಾಪ್' ಮೊದಲಾದ 'ಸ್ತ್ರೀ' ಪ್ರತ್ಯಯಗಳಿಗೆ ನಿಷೇಧವನ್ನು ಹೇಳುತ್ತದೆ. 'ಷಟ್' ಸಂಜ್ಞೆಯುಳ್ಳ ಶಬ್ದಗಳು ಮತ್ತು 'ಸ್ವಸ್ರಾದಿ' ಗಣಗಳಲ್ಲಿ ಹೇಳಿರುವ ಶಬ್ದಗಳ ನಂತರ 'ಙೀಪ್' ಮತ್ತು ಟಾಪ್' ಪ್ರತ್ಯಯಗಳು ಬರುವುದಿಲ್ಲ. ಅಂದರೆ ಈ ಪ್ರತ್ಯಯಗಳಿಲ್ಲದೇ ಇದ್ದರೂ 'ಸ್ತ್ರೀತ್ವ' ಅರ್ಥವನ್ನು ಕೊಡುತ್ತವೆ. 'ಚತಸೃ'(ನಾಲ್ಕರ ಸಂಖ್ಯೆ), 'ನನಾನ್ದೃ'(ಗಂಡನ ಸಹೋದರಿ), 'ದುಹಿತೃ'(ಮಗಳು), 'ಯಾತೃ'(ಮೈದುನನ ಹೆಂಡತಿ) ಮತ್ತು 'ಮಾತೃ'(ತಾಯಿ) ಈ ಶಬ್ದಗಳು 'ಸ್ವಸ್ರಾದಿ' ಗಣ ಪಠಿತವಾಗಿವೆ.

ಸೂಚನೆ:-'ಸ್ವಸಾ' (ಸಹೋದರಿ) ಈ ಶಬ್ದದ ಮೇಲೆ 'ಸ್ತ್ರೀಲಿಂಗ' ಪ್ರತ್ಯಯವು ಇಲ್ಲ.'ಉಣಾದಿ' ನಿಷ್ಪನ್ನವಾಗಿದ್ದರೂ ಅಪ್ತೃನ್ತೃಚ್ಸ್ವಸೃನಪ್ತೃನೇಷ್ಟೃತ್ವಷ್ಟೃಕ್ಷತೃಹೋತೃ-ಪೋತೃಪ್ರಶಾಸ್ತೄಣಾಮ್ (6-4-11)" ಸೂತ್ರದಲ್ಲಿ ಪಠಿತವಾಗಿರುವುದರಿಂದ 'ಸರ್ವನಾಮ' ಸ್ಥಾನದಲ್ಲಿ 'ಉಪಧಾದೀರ್ಘ'ವು ಬರುತ್ತದೆ. ಆದ್ದರಿಂದ ಇವುಗಳ ರೂಪವು ಪುಲ್ಲಿಂಗದ 'ಧಾತೃ' ಶಬ್ದದಂತೆ ಇರುತ್ತವೆ. 'ಶಸ್' ಪ್ರತ್ಯಯವು ಪರದಲ್ಲಿದ್ದಾಗ

'ನತ್ವ'ವು ಬಾರದೇ 'ಸ್ವಸೄಃ' ಎಂದು ರೂಪಗಳಾಗುತ್ತದೆ.

**'ಸ್ವಸೃ' ಶಬ್ದದ ರೂಪಗಳು.**

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಸ್ವಸಾ | ಸ್ವಸಾರೌ | ಸ್ವಸಾರಃ |
| ದ್ವಿತೀಯಾ | ಸ್ವಸಾರಮ್ | ಸ್ವಸಾರೌ | ಸ್ವಸೄಃ |
| ತೃತೀಯಾ | ಸ್ವಸ್ರಾ | ಸ್ವಸೃಭ್ಯಾಮ್ | ಸ್ವಸೃಭಿಃ |
| ಚತುರ್ಥೀ | ಸ್ವಸ್ರೇ | ಸ್ವಸೃಭ್ಯಾಮ್ | ಸ್ವಸೃಭ್ಯಃ |
| ಪಞ್ಚಮೀ | ಸ್ವಸುಃ | ಸ್ವಸೃಭ್ಯಾಮ್ | ಸ್ವಸೃಭ್ಯಃ |
| ಷಷ್ಠೀ | ಸ್ವಸುಃ | ಸ್ವಸ್ರೋಃ | ಸ್ವಸೄಣಾಮ್ |
| ಸಪ್ತಮೀ | ಸ್ವಸರಿ | ಸ್ವಸ್ರೋಃ | ಸ್ವಸೃಷು |
| ಸಮ್ಬೋಧನಾ | ಹೇ ಸ್ವಸಃ! | ಹೇ ಸ್ವಸಾರೌ! | ಹೇ ಸ್ವಸಾರಃ! |

ಸೂಚನೆ:– 'ತಿಸೃ' ಶಬ್ದವು ಕೂಡ ಇದೇ ತರಹ ರೂಪಗಳನ್ನು ಪಡೆಯುತ್ತದೆ.

**ನಿತ್ಯ ಬಹುವಚನದಲ್ಲಿರುವ 'ತಿಸೃ' ಶಬ್ದದ ರೂಪಗಳು'.**

| ವಿಭಕ್ತಿಗಳು | ಬಹುವಚನ |
|---|---|
| ಪ್ರಥಮಾ | ತಿಸ್ರಃ |
| ದ್ವಿತೀಯಾ | ತಿಸ್ರಃ |
| ತೃತೀಯಾ | ತಿಸೃಭಿಃ |
| ಚತುರ್ಥೀ | ತಿಸೃಭ್ಯಃ |
| ಪಞ್ಚಮೀ | ತಿಸೃಭ್ಯಃ |
| ಷಷ್ಠೀ | ತಿಸೃಣಾಮ್ |
| ಸಪ್ತಮೀ | ತಿಸೃಷು |

ಸೂಚನೆ:– "ಅಪ್ತೃನ್ತೃಚ್ಸ್ವಸೃನಪ್ತೃನೇಷ್ಟೃತ್ವಷ್ಟೃಕ್ಷತ್ತೃಹೋತೃಪೋತೃಪ್ರಶಾಸ್ತೄಣಾಮ್ (6–4–11)" ಸೂತ್ರದಲ್ಲಿ 'ನನಾನ್ದೃ', 'ದುಹಿತೃ' ಮತ್ತು 'ಯಾತೃ' ಮೊದಲಾದ ಶಬ್ದಗಳು ಪಠಿತವಾಗಿಲ್ಲದೇ ಇರುವುದರಿಂದ 'ಸರ್ವನಾಮಸ್ಥಾನ'ದಲ್ಲಿ 'ಉಪಧಾ ದೀರ್ಘ'ವು ಆಗುವುದಿಲ್ಲ. ಆದರೆ "ಸರ್ವನಾಮಸ್ಥಾನೇ ಚಾಸಮ್ಬುದ್ಧೌ (6–4–8)" ಸೂತ್ರದಿಂದ 'ಸು' ಪ್ರತ್ಯಯವಿದ್ದಾಗ, 'ದೀರ್ಘ'ವಾಗಿ 'ನನಾನ್ದಾ', 'ನನಾನ್ದರೌ', 'ನನಾನ್ದರಃ'; 'ದುಹಿತಾ', 'ದುಹಿತರೌ', 'ದುಹಿತರಃ'; 'ಯಾತಾ', 'ಯಾತರೌ', 'ಯಾತರಃ' ಎಂಬ ರೂಪಗಳು ಸಿದ್ಧವಾಗುತ್ತವೆ.

**'ಋ' ಕಾರಾನ್ತ ಸ್ತ್ರೀಲಿಂಗ 'ಮಾತೃ' ಶಬ್ದದ ರೂಪಗಳು'.**

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಮಾತಾ | ಮಾತರೌ | ಮಾತರಃ |
| ದ್ವಿತೀಯಾ | ಮಾತರಮ್ | ಮಾತರೌ | ಮಾತೄಃ |
| ತೃತೀಯಾ | ಮಾತ್ರಾ | ಮಾತೃಭ್ಯಾಮ್ | ಮಾತೃಭಿಃ |
| ಚತುರ್ಥೀ | ಮಾತ್ರೇ | ಮಾತೃಭ್ಯಾಮ್ | ಮಾತೃಭ್ಯಃ |
| ಪಞ್ಚಮೀ | ಮಾತುಃ | ಮಾತೃಭ್ಯಾಮ್ | ಮಾತೃಭ್ಯಃ |
| ಷಷ್ಠೀ | ಮಾತುಃ | ಮಾತ್ರೋಃ | ಮಾತೄಣಾಮ್ |
| ಸಪ್ತಮೀ | ಮಾತರಿ | ಮಾತ್ರೋ | ಮಾತೃಷು |
| ಸಮ್ಬೋಧನಾ | ಹೇ ಮಾತಃ! | ಹೇ ಮಾತರೌ! | ಹೇ ಮಾತರಃ! |

ಸೂಚನೆ:– ಇಲ್ಲಿ 'ಮಾತೃ' ಶಬ್ದದ ನಂತರ 'ಶಸ್' ಪ್ರತ್ಯಯವನ್ನು ಸೇರಿಸಿದಾಗ 'ಮಾತೄಃ' ಎಂದು ರೂಪವು ಸಿದ್ಧವಾಗುತ್ತದೆ. ಉಳಿದ ರೂಪಗಳೆಲ್ಲಾ 'ಪಿತೃ' ಶಬ್ದದ ರೂಪಗಳಂತೆ ಇರುತ್ತವೆ.

**ಇಲ್ಲಿಗೆ 'ಋ' ಕಾರಾಂತ ಶಬ್ದಗಳು ಮುಗಿದವು**

**'ಓ'ಕಾರಾನ್ತ ಸ್ತ್ರೀಲಿಂಗ ಶಬ್ದದ ರೂಪಗಳು**

ಸೂಚನೆ: – ಅಜನ್ತ ಪುಲ್ಲಿಂಗ'ದ 'ಓ' ಕಾರಾನ್ತ ಶಬ್ದಗಳಂತೆ ಇರುತ್ತವೆ."ಗೋತೋ ಣಿತ್(7–1–90)" ಸೂತ್ರದಿಂದ 'ಣಿದ್ವದ್ಭಾವ' ಮಾಡಿದಾಗ "ಅಚೋ ಞ್ಣಿತಿ(7–2–115)" ಸೂತ್ರದಿಂದ 'ವೃದ್ಧಿ'ಯಾಗಿ 'ಸುಪ್' ಪ್ರತ್ಯಯವನ್ನು ಸೇರಿಸಿದಾಗ ಕೆಳಗಿನಂತೆ ರೂಪಗಳಾಗುತ್ತವೆ.

**'ಓ'ಕಾರಾನ್ತ ಸ್ತ್ರೀಲಿಙ್ಗಃ 'ದ್ಯೋ' ಶಬ್ದದ ರೂಪಗಳು.**

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ದ್ಯೌಃ | ದ್ಯಾವೌ | ದ್ಯಾವಃ |
| ದ್ವಿತೀಯಾ | ದ್ಯಾಮ್ | ದ್ಯಾವೌ | ದ್ಯಾಃ |
| ತೃತೀಯಾ | ದ್ಯವಾ | ದ್ಯೋಭ್ಯಾಮ್ | ದ್ಯೋಭಿಃ |
| ಚತುರ್ಥೀ | ದ್ಯವೇ | ದ್ಯೋಭ್ಯಾಮ್ | ದ್ಯೋಭ್ಯಃ |
| ಪಞ್ಚಮೀ | ದ್ಯೋಃ | ದ್ಯೋಭ್ಯಾಮ್ | ದ್ಯೋಭ್ಯಃ |
| ಷಷ್ಠೀ | ದ್ಯೋಃ | ದ್ಯವೋಃ | ದ್ಯವಾಮ್ |
| ಸಪ್ತಮೀ | ದ್ಯವಿ | ದ್ಯವೋಃ | ದ್ಯೋಷು |
| ಸಮ್ಬೋಧನಾ | ಹೇ ದ್ಯೌಃ! | ಹೇ ದ್ಯಾವೌ! | ಹೇ ದ್ಯಾವಃ! |

ಸೂಚನೆ–1:– 'ಓ'ಕಾರಾನ್ತ 'ಗೋ' ಶಬ್ದವು 'ಸ್ತ್ರೀಲಿಂಗ' ಮತ್ತು 'ಪುಲ್ಲಿಂಗ'ಗಳಲ್ಲಿ ಸಮಾನ ರೂಪಗಳನ್ನು ತಾಳಿರುತ್ತವೆ.

ಸೂಚನೆ–2:– ಇದೇರೀತಿಯಲ್ಲಿ 'ರೈ'(ಐಶ್ವರ್ಯ)ಶಬ್ದವು 'ಸ್ತ್ರೀಲಿಂಗ', 'ಪುಲ್ಲಿಂಗ'ಗಳಲ್ಲಿ ಒಂದೇ ರೀತಿಯಲ್ಲಿರುತ್ತವೆ. "ರಾಯೋ ಹಲಿ(215/7–2–85)" ಸೂತ್ರದಿಂದ 'ಹಲ್' ಪರವಾದಾಗ 'ಆ'ಕಾರವು 'ಅನ್ತಾದೇಶ'ವಾಗಿರುತ್ತದೆ. 'ಅಜಾದಿಪ್ರತ್ಯಯ'ಗಳು ಪರವಾದಾಗ 'ಯಾನ್ತಾದೇಶ–ವಾನ್ತಾದೇಶ' ಸಂಧಿಯಿಂದ 'ಆಯ್'ಆದೇಶವು ಬರುತ್ತದೆ.

ಸೂಚನೆ–3:– ಔ'ಕಾರಾನ್ತ 'ನೌ'(ಹಡಗು)ಶಬ್ದವು 'ಪುಲ್ಲಿಂಗದ 'ಗ್ಲೌ' ಶಬ್ದದಂತಿರುತ್ತದೆ. 'ಹಲಾದಿ' ವಿಭಕ್ತಿಗಳು ಪರವಾದಾಗ ಯಾವ ವ್ಯತ್ಯಾಸವೂ ಆಗುವುದಿಲ್ಲ. 'ಅಜಾದಿ' ವಿಭಕ್ತಿಗಳು ಪರವಾದಾಗ 'ಆವ್'ಆದೇಶವು ಬಂದು ಕೆಳಗಿನಂತೆ ರೂಪಗಳಾಗುತ್ತವೆ.

**'ಔ'ಕಾರಾನ್ತ 'ಸ್ತ್ರೀಲಿಙ್ಗ' 'ನೌ' ಶಬ್ದದ ರೂಪಗಳು .**

| **ವಿಭಕ್ತಿಗಳು** | **ಏಕವಚನ** | **ದ್ವಿವಚನ** | **ಬಹುವಚನ** |
|---|---|---|---|
| ಪ್ರಥಮಾ | ನೌಃ | ನಾವೌ | ನಾವಃ |
| ದ್ವಿತೀಯಾ | ನಾವಮ್ | ನಾವೌ | ನಾವಃ |
| ತೃತೀಯಾ | ನಾವಾ | ನೌಭ್ಯಾಮ್ | ನೌಭಿಃ |
| ಚತುರ್ಥೀ | ನಾವೇ | ನೌಭ್ಯಾಮ್ | ನೌಭ್ಯಃ |
| ಪಞ್ಚಮೀ | ನಾವಃ | ನೌಭ್ಯಾಮ್ | ನೌಭ್ಯಃ |
| ಷಷ್ಠೀ | ನಾವಃ | ನಾವೋಃ | ನಾವಾಮ್ |
| ಸಪ್ತಮೀ | ನಾವಿ | ನಾವೋಃ | ನೌಷು |
| ಸಮ್ಬೋಧನಾ | ಹೇ ನೌಃ! | ಹೇ ನಾವೌ! | ಹೇ ನಾವಃ! |

**॥ಇತಿ ಅಜಂತಾಃ ಸ್ತ್ರೀಲಿಂಗಾಃ॥**

**॥ ಅಜನ್ತಸ್ತ್ರೀಲಿಂಗ (6) ಪ್ರಕರಣವು ಮುಗಿಯಿತು.॥**

# 7. ಷಡ್ಲಿಙ್ಗೇಷು- ಅಜಂತಾಃ ನಪುಂಸಕ ಲಿಙ್ಗಾಃ

**(ಸೂತ್ರ 235-251 ರವರೆಗೆ)**

**(ಅಮ್-ಆದೇಶ ವಿಧಾಯಕ ಸೂತ್ರ)**

**ಸೂತ್ರ-235. ಅತೋಽಮ್ ( 7.1.24)**

ವೃತ್ತಿಃ-ಅತೋಽಙ್ಗಾತ್ ಕ್ಲೀಬಾತ್ ಸ್ವಮೋಃ ಅಮ್। "ಅಮಿಪೂರ್ವಃ" । ಜ್ಞಾನಮ್। "ಏಙ್‌ಹ್ರಸ್ವಾತ್" ಇತಿ ಹಲ್-ಲೋಪಃ। ಹೇ ಜ್ಞಾನ।

ಪ. ಛೇ. - ಅತಃ, ಅಮ್।

ಅ.ವ್ಯ.- "ಅಙ್ಗಸ್ಯ" ಎಂಬುದು ಅಧಿಕಾರಸೂತ್ರ, ಮತ್ತು "ಸ್ವಮೋರ್ನಪುಂಸಕಾತ್" ಎಂಬ ಸೂತ್ರವು ಸಂಪೂರ್ಣವಾಗಿ ಅನುವೃತ್ತವಾಗಿದೆ.

ಅರ್ಥ- ನಪುಂಸಕಲಿಙ್ಗದ ಅದನ್ತ ಅಙ್ಗದನಂತರ 'ಸು' ಮತ್ತು 'ಅಮ್' ಪ್ರತ್ಯಯಗಳಿದ್ದಾಗ,ಅವುಗಳಿಗೆ 'ಅಮ್' ಆದೇಶವು ಬರುತ್ತದೆ.

ಸೂಚನೆ: 1- ಈ ಸೂತ್ರವು "ಸ್ವಮೋರ್ನಪುಂಸಕಾತ್" ಎಂಬ ಸೂತ್ರಕ್ಕೆ ಬಾಧಕವಾಗಿದೆ. ಈ ಸೂತ್ರದಿಂದ 'ಸು' ಮತ್ತು 'ಅಮ್'ಗಳಿಗೆ ಲೋಪ ಬರುತ್ತಿತ್ತು. ಆದರೆ ಪ್ರಕೃತ ಸೂತ್ರದಿಂದ 'ಸು' ಮತ್ತು 'ಔ'ಗಳಿಗೆ 'ಅಮ್' ಆದೇಶವು ಬರುತ್ತದೆ. "ಅನೇಕಾಲ್ ಶಿತ್ ಸರ್ವಸ್ಯ" ಎಂಬ ಸೂತ್ರದ ನಿಯಮದಿಂದ, 'ಅಮ್' ಎಂಬುದು ಸರ್ವಾದೇಶವಾಗಿ ಬರುತ್ತದೆ.

ಸೂಚನೆ: 2- ಸ್ಥಾನಿವದ್ಭಾವದಿಂದ 'ಸು' ನಲ್ಲಿರುವ ವಿಭಕ್ತಿತ್ವವು 'ಅಮ್' ಗೂ ಬರುತ್ತದೆ. ಅದ್ದರಿಂದ 'ಅಮ್'ನಲ್ಲಿರುವ 'ಮ್'ಕಾರಕ್ಕೆ "ನ ವಿಭಕ್ತೌ ತುಸ್ಮಾಃ" ಎಂಬ ಸೂತ್ರದಿಂದ, ನಿಷೇಧಿಸಲಾಗಿದೆ.

ಉದಾ- ಜ್ಞಾನಮ್(ಜ್ಞಾನ) - ಇದು ಅ-ಕಾರಾನ್ತ ಶಬ್ದವಾಗಿದೆ. ಪ್ರಥಮಾ ವಿಭಕ್ತಿ ಏಕವಚನದಲ್ಲಿ- ಜ್ಞಾನ+ಸ್(ಸು) ಎಂದಿದ್ದಾಗ, "ಸ್ವಮೋರ್ನಪುಂಸಕಾತ್" ಎಂಬ ಸೂತ್ರದಿಂದ, 'ಸು' ಗೆ ಲೋಪವು ಪ್ರಾಪ್ತವಾಗಿತ್ತು. ಅದನ್ನು ಬಾಧಿಸಿ ಪ್ರಕೃತ ಸೂತ್ರದಿಂದ 'ಅಮ್' ಎಂಬುದು ಸರ್ವಾದೇಶವಾಗಿ ಬಂದಿದೆ. ಜ್ಞಾನ+ಅಮ್ ಎಂದಿದ್ದಾಗ, "ಅಮಿ ಪೂರ್ವಃ" ಎಂಬ ಸೂತ್ರದಿಂದ, ಪೂರ್ವರೂಪವಾಗಿ ಜ್ಞಾನಮ್ ಎಂಬ ರೂಪವು ಸಿದ್ಧವಾಗಿದೆ.

**(ಶೀ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ- 236. ನಪುಂಸಕಾಚ್ಚ (7.1.11)**

ವೃತ್ತಿಃ-ಕ್ಲೀಬಾತ್ ಔಙಃ ಶೀ ಸ್ಯಾತ್। ಭಸಂಜ್ಞಾ0ಯಾಮ್।

ಪ. ಛೇ. - ನಪುಂಸಕಾತ್, ಚ।

ಅ. ವ್ಯ. - "ಔಙ ಆಪಃ" ಎಂಬ ಸೂತ್ರದಿಂದ 'ಔಙಃ' ಎಂಬ ಪದವೂ "ಜಶಃ

ಶೀ" ಎಂಬ ಸೂತ್ರದಿಂದ 'ಶೀ' ಎಂಬುದು ಅನುವೃತ್ತವಾಗುತ್ತದೆ.

ಅರ್ಥ– ನಪುಂಸಕ ಲಿಙ್ಗ ಶಬ್ದದ ಅಙ್ಗದನಂತರ 'ಔ' ಪ್ರತ್ಯಯಕ್ಕೆ 'ಶೀ ಆದೇಶವು ಬರುತ್ತದೆ. ಇದು ಕೇವಲ ನಪುಂಸಕ ಲಿಙ್ಗ ಶಬ್ದಗಳಿಗೆ ಮಾತ್ರ ಅನ್ವಯಿಸುತ್ತದೆ.

**(ಇ–ವರ್ಣ, ಅ–ವರ್ಣಗಳಿಗೆ ಲೋಪವನ್ನು ಹೇಳುವ ಸೂತ್ರ)**

**ಸೂತ್ರ– 237. ಯಸ್ಯೇತಿ ಚ (6.4.248)**

ವೃತ್ತಿಃ–ಈಕಾರೇ ತದ್ಧಿತೇ ಚ ಪರೇ ಭಸ್ಯ ಇ–ವರ್ಣ–ಅವರ್ಣಯೋಃ ಲೋಪಃ ಇತಿ ಅಲ್ಲೋಪೇ ಪ್ರಾಪ್ತೇ

**ವಾ॥ ಔಙಃ ಶ್ಯಾಂ ಪ್ರತಿಷೇಧಃ ಜ್ಞಾನೇ।**

ಪ. ಛೇ. – ಯಸ್ಯ, ಈತಿ, ಚ।

ಅ. ವೃ. – "ನಸ್ತದ್ಧಿತೇ" ಎಂಬ ಸೂತ್ರದಿಂದ, 'ತದ್ಧಿತೇ' ಎಂಬ ಪದವೂ, "ಅಲ್ಲೋಪೋಽನಃ" ಎಂಬ ಸೂತ್ರದಿಂದ, 'ಲೋಪಃ' ಎಂಬ ಪದವೂ ಅನುವೃತ್ತವಾಗುತ್ತವೆ. 'ಭಸ್ಯ' ಎಂಬುದು ಅಧಿಕೃತವಾಗಿದೆ.

ಅರ್ಥ– 'ಈ'ಕಾರ ಮತ್ತು ತದ್ಧಿತ ಪ್ರತ್ಯಯವು ಪರದಲ್ಲಿದ್ದಾಗ, ಪೂರ್ವದಲ್ಲಿರುವ 'ಭ'ಸಂಜ್ಞಕ 'ಇ' ವರ್ಣ ಮತ್ತು 'ಅ' ವರ್ಣಗಳಿಗೆ ಲೋಪವು ಬರುತ್ತದೆ.

ಸೂಚನೆ:– "ನಪುಂಸಕಾಚ್ಚ" ಎಂಬ ಸೂತ್ರದಿಂದ, 'ಔ' ಪ್ರತ್ಯಯಕ್ಕೆ ಬಂದಿರುವ 'ಈ'(ಶೀ) ಕಾರವು ಪರದಲ್ಲಿರುವಾಗ, ಪೂರ್ವದಲ್ಲಿರುವ 'ಅ' ಕಾರಕ್ಕೆ ಲೋಪವು ಬರುತ್ತಿತ್ತು. ಇದನ್ನು ತಡೆಯುವದಕ್ಕಾಗಿ ಮೇಲಿನ ವಾರ್ತಿಕ (ಔಙಃ ಶ್ಯಾಂ ಪ್ರತಿಷೇಧಃ)ವು ಪ್ರವೃತ್ತವಾಗಿದೆ. ಈ ಸಂದರ್ಭದಲ್ಲಿ, ಸರ್ವನಾಮಸ್ಥಾನವಲ್ಲದ ಅಜಾದಿಗಳಾದ ಸ್ವಾದಿ ಪ್ರತ್ಯಯಗಳು ಪರದಲ್ಲಿದ್ದಾಗ, "ಯಚಿ ಭಮ್ " ಎಂಬ ಸೂತ್ರದಿಂದ 'ಭ' ಸಂಜ್ಞೆಯು ಬರುತ್ತದೆ ಎಂಬುದನ್ನು ಗಮನಿಸಬೇಕು.

ವಾ॥ ಔಙಃ ಶ್ಯಾಂ ಪ್ರತಿಷೇಧಃ।

'ಔಙ್' ಪ್ರತ್ಯಯದ ಸ್ಥಾನದಲ್ಲಿ, ಬರುವ 'ಈ' (ಶೀ) ಪರದಲ್ಲಿರುವಾಗ, ಪ್ರಕೃತ ಸೂತ್ರವಾದ "ಯಸ್ಯೇತಿ ಚ "(6.4.248) ಎಂಬುದರ ನಿಷೇಧವನ್ನು ಮಾಡಬೇಕಾಗಿತ್ತು. ಅಂದರೆ ಬೇರೆ ಕಡೆಯಲ್ಲಿ "ಯಸ್ಯೇತಿ ಚ "(6.4.248) ಎಂಬ ಸೂತ್ರವು ಲೋಪವನ್ನು ವಿಧಾನ ಮಾಡುತ್ತದೆ. ಆದರೆ 'ಔಙ್' ನ ಸ್ಥಾನದಲ್ಲಿ ಆದೇಶವಾಗಿ ಬರುವ 'ಈ' (ಶೀ) ಪರದಲ್ಲಿದ್ದಾಗ, ಲೋಪವು ಬರುವದಿಲ್ಲ.

ಉದಾ– ಜ್ಞಾನೇ(2)– ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ದ್ವಿವಚನದಲ್ಲಿ ಜ್ಞಾನ+ಔ, ಮತ್ತು ಜ್ಞಾನ+ಔ (ಔಟ್) ಎಂದಿದ್ದಾಗ, ವೃದ್ಧಿಯು ಬರುತ್ತಿತ್ತು. ಅದನ್ನು ಬಾಧಿಸಿ "ನಪುಂಸಕಾಚ್ಚ" (7.1.11) ಎಂಬ ಸೂತ್ರವು ಪ್ರವೃತ್ತವಾಗುತ್ತದೆ. ಇಲ್ಲಿ 'ಔ' ನ ಸ್ಥಾನದಲ್ಲಿ 'ಈ'(ಶೀ) ಆದೇಶವಾಗಿ ಬಂದು, ಜ್ಞಾನ+ಈ ಎಂದಿದ್ದಾಗ, "ಯಚಿ ಭಮ್" ಎಂಬ ಸೂತ್ರದಿಂದ ಜ್ಞಾನ ಶಬ್ದಕ್ಕೆ 'ಭ' ಸಂಜ್ಞೆಯು ಬಂದು ಪ್ರಕೃತ ಸೂತ್ರವಾದ "ಯಸ್ಯೇತಿ

ಚ "(6.4.248) ಎಂಬುದರಿಂದ ಜ್ಞಾನ ಶಬ್ದದಲ್ಲಿರುವ 'ಅ' ಕಾರವು ಲೋಪವಾಗಬೇಕಿದ್ದಾಗ, ಮೇಲಿನ ವಾರ್ತಿಕ (ಔಙಃ ಶ್ಯಾಂ ಪ್ರತಿಷೇಧಃ)ದಿಂದ 'ಅ' ಕಾರ ಲೋಪವಾಗಲಿಲ್ಲ. ಜ್ಞಾನ+ಈ ಎಂಬಲ್ಲಿ ಗುಣಸಂಧಿಯಿಂದ ಜ್ಞಾನೇ ಎಂದು ರೂಪವಾಗಿದೆ.

**(ಶಿ-ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ- 238 ಜಶ್ಶಸೋಃ ಶಿಃ (7.1.20)**

ವೃತ್ತಿಃ-ಕ್ಲೀಬಾತ್ ಅನಯೋಃ ಶಿಃ ಸ್ಯಾತ್।

ಪ. ಛೇ. – ಜಶ್ಶಸೋಃ ಶಿಃ।

ಅ. ವೃ. – "ಸ್ವಮೋರ್ನಪುಂಸಕಾತ್" ಎಂಬ ಸೂತ್ರದಿಂದ, 'ನಪುಂಸಕಾತ್' ಎಂಬ ಶಬ್ದವು ಅನುವೃತ್ತವಾಗುತ್ತದೆ.

ಅರ್ಥ– ನಪುಂಸಕಲಿಙ್ಗದಲ್ಲಿ, 'ಜಸ್' ಮತ್ತು 'ಶಸ್' ವಿಭಕ್ತಿಗಳು ಪರದಲ್ಲಿದ್ದಾಗ, ಅವುಗಳಿಗೆ 'ಇ' (ಶಿ) ಆದೇಶವಾಗಿ ಬರುತ್ತದೆ.

**(ಸರ್ವನಾಮ ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ- 239. ಶಿ ಸರ್ವನಾಮಸ್ಥಾನಮ್ (1.1.42)**

ವೃತ್ತಿಃ-ಶಿ ಇತಿ ಏತದ್ ಉಕ್ತಸಂಜ್ಞಂ ಸ್ಯಾತ್।

ಅರ್ಥ– 'ಶಿ' ಎಂಬ ಈ ಆದೇಶವು ಸರ್ವನಾಮಸ್ಥಾನ ಸಂಜ್ಞೆಯನ್ನು ಪಡೆಯುತ್ತದೆ.

'ಜಸ್' ಮತ್ತು 'ಶಸ್' ಗಳ ಸ್ಥಾನದಲ್ಲಿ, 'ಇ'(ಶಿ) ಆದೇಶವು ಬಂದು ಸರ್ವನಾಮಸ್ಥಾನ ಸಂಜ್ಞೆಯನ್ನು ಪಡೆಯುವದೇ ಈ ಸೂತ್ರದ ಉದ್ದೇಶ. "ಸುಡನಪುಂಸಕಸ್ಯ" ಎಂಬ ಸೂತ್ರದಿಂದ ನಪುಂಸಕಲಿಙ್ಗದಲ್ಲಿ, ಸರ್ವನಾಮಸ್ಥಾನ ಸಜ್ಞೆಯು ಪ್ರಾಪ್ತವಾಗುತ್ತಿರಲಿಲ್ಲ. ಹಾಗೆಯೇ 'ಶಸ್' ಗೆ ಬೇರೆಕಡೆಯಲ್ಲಿಯೂ ಸರ್ವನಾಮಸ್ಥಾನ ಸಂಜ್ಞೆಯು ಬರುತ್ತಿರಲಿಲ್ಲ. ಆದರೆ ನಪುಂಸಕಲಿಙ್ಗದಲ್ಲಿ 'ಜಸ್' ಮತ್ತು 'ಶಸ್' ಗಳಿಗೆ ಇಲ್ಲಿ ಅಪ್ರಾಪ್ತವಾದ ಈ ಸಂಜ್ಞೆಯು ಈ ಸೂತ್ರದಿಂದ ಮಾಡಲಾಗಿದೆ. ಇದರ ಪರಿಣಾಮವನ್ನು ಮುಂದೆ ನೋಡಬಹುದು.

**(ನುಮ್- ಆಗಮವನ್ನು ವಿಧಿಸುವ ಸೂತ್ರ)**

**ಸೂತ್ರ- 240. ನಪುಂಸಕಸ್ಯ ಝಲಚಃ (7.1.72)**

ವೃತ್ತಿಃ-ಝಲನ್ತಸ್ಯ ಅಜನ್ತಸ್ಯ ಚ ಕ್ಲೀಬಸ್ಯ ನುಮ್ ಸ್ಯಾತ್ ಸರ್ವನಾಮಸ್ಥಾನೇ।

ಅ. ವೃ. – "ಇದಿತೋ ನುಮ್ ಧಾತೋ" ಎಂಬ ಸೂತ್ರದಿಂದ 'ನುಮ್' ಎಂಬ ಪದವು ಅನುವೃತ್ತವಾಗುತ್ತದೆ. ಮತ್ತು 'ಉಗಿದಚಾಂ ಸರ್ವನಾಮಸ್ಥಾನೇ ಚಾಽಧಾತೋಃ" ಎಂಬ ಸೂತ್ರದಿಂದ 'ಸರ್ವನಾಮಸ್ಥಾನೇ' ಎಂಬಪದವು ಅನುವೃತ್ತವಾಗುತ್ತದೆ.

ಅರ್ಥ– ಸರ್ವನಾಮಸ್ಥಾನವು ಪರದಲ್ಲಿರುವಾಗ, ನಪುಂಸಕಲಿಙ್ಗದಲ್ಲಿ ಇರುವ

'ಝಲನ್ತ' ಮತ್ತು 'ಅಜನ್ತ' ಶಬ್ದಗಳಿಗೆ 'ನುಮ್' ಆಗಮವು ಬರುತ್ತದೆ.

**(ಮಿತ್-ಆಗಮವನ್ನು ವಿಧಿಸುವ ಪರಿಭಾಷಾ ಸೂತ್ರ)**

**ಸೂತ್ರ– 241. ಮಿದಚೋಽನ್ತ್ಯಾತ್ ಪರಃ** (1.1.47)

ವೃತ್ತಿಃ–ಅಚಾಂ ಮಧ್ಯೇ ಯಃ ಅಂತ್ಯಃ ತಸ್ಮಾತ್ಪರಃ ತಸ್ಯೈವ ಅಂತಾವಯವಃ ಮಿತ್ ಸ್ಯಾತ್। ಉಪಧಾ ದೀರ್ಘಃ॥ ಜ್ಞಾನಾನಿ। ಪುನಃ ತದ್ವತ್। ಶೇಷಂ ಪುಂವತ್। ಏವಂ ಧನ–ವನ–ಫಲಾದಯಃ॥

ಪ. ಛೇ. – ಮಿತ್, ಅಚಃ, ಅನ್ತ್ಯಾತ್, ಪರಃ॥

ಅರ್ಥ– 'ಅಚ್' ಗಳಲ್ಲಿ ಯಾವ ಒಂದು 'ಅಚ್' ಅನ್ತ್ಯವಾಗಿರುವುದೋ ಅದರ ಪರದಲ್ಲಿಯೇ ಅನ್ತಾವಯವಾಗಿ 'ಮಿತ್' ಆಗಮವು ಬರುವದು.

ಸೂಚನೆ: – ಒಂದು ಶಬ್ದಸಮೂಹದಲ್ಲಿ, ಹಲವು ಸ್ವರಗಳಿರಬಹುದು. ಅವುಗಳಲ್ಲಿ ಕೊನೆಯ ಸ್ವರವು ಯಾವದಿದೆಯೋ ಅದರಪರದಲ್ಲಿ 'ಮಿತ್' ಆದ ಆಗಮವು ಅನ್ತ್ಯಾವಯವವಾಗಿ ಬರುವದು. 'ಮಿತ್' ಆಗಮವು ಯಾವಶಬ್ದಕ್ಕೆ ಬರುತ್ತದೆಯೋ ಆ ಶಬ್ದವು 'ಅ'ಕಾರಾನ್ತವಾಗಿ ಇರಬೇಕೆಂದಿಲ್ಲ. ಕೊನೆಯ 'ಅಚ್' ನ ನಂತರ 'ಹಲ್' ವರ್ಣವಿದ್ದರೂ, ಆ ಹಲ್ ವರ್ಣದ ಪೂರ್ವದಲ್ಲಿರುವ ಕೊನೆಯ 'ಅಚ್' ನ ನಂತರ ಆ ಅಚ್ ಗೆ ಅನ್ತ್ಯಾವಯವವಾಗಿ ಬರುತ್ತದೆ. ('ಮಿತ್', ನಲ್ಲಿ 'ಮ್' ಕಾರ ಮಾತ್ರ ಉಳಿಯುತ್ತದೆ).

ಉದಾ– ಜ್ಞಾನಾನಿ (2) – ಪ್ರಥಮಾ ಮತ್ತು ದ್ವಿತಿಯಾ ವಿಭಕ್ತಿ ಬಹುಚನಗಳಲ್ಲಿ, ಜ್ಞಾನ+ಅಸ್(ಜಸ್) ಮತ್ತು ಜ್ಞಾನ+ಅಸ್(ಶಸ್) ಎಂದಿದ್ದಾಗ, 'ಅಸ್' ನ ಸ್ಥಾನದಲ್ಲಿ "ಜಶ್ಶಸೋಃ ಶಿಃ" (7.1.20) ಎಂಬ ಸೂತ್ರದಿಂದ, ಇ (ಶಿ) ಆದೇಶವು ಬರುತ್ತದೆ. ಜ್ಞಾನ+ಇ(ಶಿ) ಎಂದಿದ್ದಾಗ "ಶಿ ಸರ್ವನಾಮಸ್ಥಾನಮ್" (1.1.42) ಎಂಬ ಸೂತ್ರದಿಂದ, 'ಇ'ಕಾರಕ್ಕೆ ಸರ್ವನಾಮಸ್ಥಾನ ಸಂಜ್ಞೆಯು ಬರುತ್ತದೆ. ಆಗ "ನಪುಂಸಕಸ್ಯ ಝಲಚಃ" (7.1.72) ಎಂಬ ಸೂತ್ರವು ಪ್ರವೃತ್ತವಾಗಿ, ಜ್ಞಾನ ಎಂಬಲ್ಲಿರುವ 'ನ್'ಕಾರೋತ್ತರ ಅಂತ್ಯ 'ಅ' ಕಾರದ ಪರದಲ್ಲಿ ಅದಕ್ಕೆ ಅನ್ತ್ಯಾವಯವವಾಗಿ 'ನುಮ್' ಆಗಮವು ಬರುತ್ತದೆ. 'ನುಮ್'ನಲ್ಲಿ 'ನ್' ಮಾತ್ರ ಉಳಿಯುತ್ತದೆ. ಜ್ಞಾನ+ನ್+ಇ ಎಂದಿದ್ದಾಗ, "ಅಲೋಽನ್ತ್ಯಾತ್ ಪೂರ್ವ ಉಪಧಾ" ಎಂಬ ಸೂತ್ರದಿಂದ, 'ನ್' ಕಾರೋತ್ತರವರ್ತಿ 'ಅ' ಕಾರಕ್ಕೆ ಉಪಧಾ ಸಂಜ್ಞೆಯು ಬಂದು "ಸರ್ವನಾಮಸ್ಥಾನೇ ಚಾಸಮ್ಬುದ್ಧೌ" ಎಂಬ ಸೂತ್ರದಿಂದ, ಉಪಧಾ ದೀರ್ಘವಾಗಿ ಜ್ಞಾನಾನ್+ಇ=ಜ್ಞಾನಾನಿ ಎಂದಾಗುತ್ತದೆ.

ಸೂಚನೆ: – ಇದೇ ರೀತಿಯಲ್ಲಿ, ಪ್ರಥಮೈಕವಚನ, ದ್ವಿತೀಯೈಕವಚನದಲ್ಲಿಯೂ, 'ಸು' ಮತ್ತು 'ಅಮ್' ಪ್ರತ್ಯಯಗಳನ್ನು ಸೇರಿಸಿದಾಗ, ಅತೋಽಮ್ (7.1.24) ಎಂಬ ಸೂತ್ರದಿಂದ, ಒಂದೇ ತರಹದ ರೂಪಗಳು (ಜ್ಞಾನಮ್, ಜ್ಞಾನಮ್) ಸಿದ್ಧವಾಗುತ್ತವೆ. ಇದೇ ರೀತಿಯಲ್ಲಿ 'ಅ'ಕಾರಾಂತವಾದ ನಪುಂಸಕಲಿಙ್ಗ– ಶಬ್ದಗಳಿಗೆ, ಮೂರೂ ವಚನಗಳಲ್ಲೂ ಒಂದೇ ತರಹವಾಗಿ ಇರುತ್ತವೆ. 'ಅ'ಕಾರಾಂತವಲ್ಲದ, ಬೇರೆ ನಪುಂಸಕಲಿಙ್ಗ

ಶಬ್ದಗಳಿಗೆ ಬೇರೆ ಪ್ರಕ್ರಿಯೆಗಳಿಂದ, ಪ್ರಥಮಾ ಮತ್ತು ದ್ವಿತಿಯಾ ವಿಭಕ್ತಿಗಳ ಎಲ್ಲ ವಚನಗಳಿಗೂ ಸಮಾನವಾದ, ರೂಪಗಳೇ ಬರುತ್ತವೆ. ಇದೇ ರೀತಿಯಲ್ಲಿ, ಉಳಿದ ವಿಭಕ್ತಿಗಳಲ್ಲೂ 'ಅ'ಕಾರಾಂತ ಪುಲ್ಲಿಙ್ಗ ಶಬ್ದಗಳಿಗೆ ಬರುವ ರೂಪಗಳೇ ಬರುತ್ತವೆ.

**('ಅ-ಕಾರಾಂತ ನಪುಂಸಕಲಿಂಗ 'ಜ್ಞಾನ' ಶಬ್ದದ ರೂಪಗಳು).**

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಜ್ಞಾನಮ್ | ಜ್ಞಾನೇ | ಜ್ಞಾನಾನಿ |
| ದ್ವಿತೀಯ | ಜ್ಞಾನಮ್ | ಜ್ಞಾನೇ | ಜ್ಞಾನಾನಿ |
| ತೃತೀಯ | ಜ್ಞಾನೇನ | ಜ್ಞಾನಾಭ್ಯಾಮ್ | ಜ್ಞಾನೈಃ |
| ಚತುರ್ಥೀ | ಜ್ಞಾನಾಯ | ಜ್ಞಾನಾಭ್ಯಾಮ್ | ಜ್ಞಾನೇಭ್ಯಃ |
| ಪಞ್ಚಮೀ | ಜ್ಞಾನಾತ್ | ಜ್ಞಾನಾಭ್ಯಾಮ್ | ಜ್ಞಾನೇಭ್ಯಃ |
| ಷಷ್ಠೀ | ಜ್ಞಾನಸ್ಯ | ಜ್ಞಾನಯೋಃ | ಜ್ಞಾನಾನಾಮ್ |
| ಸಪ್ತಮೀ | ಜ್ಞಾನೇ | ಜ್ಞನಯೋಃ | ಜ್ಞಾನೇಷು |
| ಸಂಬೋಧನ | ಹೇ ಜ್ಞಾನ! | ಹೇ ಜ್ಞಾನೇ! | ಹೇ ಜ್ಞಾನಾನಿ! |

**(ಅದ್‌ಡ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ- 242. ಅದ್‌ಡ್‌ಡತರಾದಿಭ್ಯಃ ಪಞ್ಚಭ್ಯಃ (7.1.25)**

ವೃತ್ತಿಃ-ಏಭ್ಯಃ ಕ್ಲೀಬೇಭ್ಯಃ ಸ್ವಮೋಃ ಅದ್‌ಡ್ ಆದೇಶಃ ಸ್ಯಾತ್।

ಪ. ಛೇ. - ಅದ್‌ಡ್, ಡತರಾದಿಭ್ಯಃ, ಪಞ್ಚಭ್ಯಃ।

ಅ. ವೃ. - "ಸ್ವಮೋರ್ನಪುಂಸಕಾತ್" ಎಂಬ ಸೂತ್ರದಿಂದ, ವಚನ ವಿಪರಿಣಾಮಗೊಳಿಸಿ, 'ನಪುಂಸಕೇಭ್ಯಃ' ಎಂಬ ಪದವು, ಮತ್ತು 'ಸ್ವಮೋಃ' ಎಂಬ ಪದವೂ ಅನುವೃತ್ತವಾಗಿವೆ.

ಅರ್ಥ-ಡತರ, ಡತಮ, ಅನ್ಯ, ಅನ್ಯತರ, ಇತರ ಈ ಐದು ಪ್ರತ್ಯಯಾನ್ತ ನಪುಂಸಕ ಶಬ್ದಗಳ ಪರದಲ್ಲಿ 'ಸು' ಮತ್ತು 'ಅಮ್' ಪ್ರತ್ಯಯಗಳ ಸ್ಥಾನದಲ್ಲಿ, ಅದ್‌ಡ್ ಆದೇಶವು ಬರುತ್ತದೆ.

ಸೂಚನೆ: ಡತರ, ಡತಮ ಮೊದಲಾದವು ಪ್ರತ್ಯಯಗಳಾದ್ದರಿಂದ ಪ್ರತ್ಯಯಾಂತ ಶಬ್ದಗಳನ್ನು ಇಲ್ಲಿ ಗ್ರಹಿಸಬೇಕು. ಅದ್‌ಡ್‌ನಲ್ಲಿ 'ಡ' ಕಾರವು ಇತ್ತಾಗಿದೆ. ಆದ್ದರಿಂದ 'ಟೇಃ' ಎಂಬ ಸೂತ್ರದಿಂದ 'ಟಿ'ಗೆ ಲೋಪವು ಬರುತ್ತದೆ.

**(ಟಿಗೆ ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ- 243. ಟೇಃ (6.4.143)**

ವೃತ್ತಿಃ-ಡಿತಿ ಭಸ್ಯ ಟೇಃ ಲೋಪಃ। ಕತರತ್, ಕತರದ್।ಕತರೇ।ಕತರಾಣಿ।ಹೇ ಕತರತ್!। ಶೇಷಂ ಪುಂವತ್। ಏವಂ ಕತರತ್।ಇತರತ್।ಅನ್ಯತ್।ಅನ್ಯತರತ್। ಅನ್ಯತಮಸ್ಯ ತು ಅನ್ಯತಮ ಇತ್ಯೇವ।

ವಾ॥ ಏಕತರಾತ್ ಪ್ರತಿಷೇಧೋ ವಕ್ತವ್ಯಃ। ಏಕತರಮ್।

ಅ. ವ್ಯ. – 'ಟಿ ವಿಂಶತೇರ್ಡಿತಿ' ಎಂಬ ಸೂತ್ರದಿಂದ 'ಡಿತಿ' ಎಂಬ ಪದವು 'ಅಲ್ಲೋಪೋಽನಃ' ಎಂಬ ಸೂತ್ರದಿಂದ 'ಲೋಪಃ' ಎಂಬ ಪದವು ಅನುವೃತ್ತವಾಗುತ್ತವೆ. 'ಭಸ್ಯ' ಎಂಬುದು ಇಲ್ಲಿ ಅಧಿಕಾರ ಸೂತ್ರವಾಗಿದೆ.

ಅರ್ಥ– 'ಡಿತ್' ಪರದಲ್ಲಿ ಇದ್ದಾಗ 'ಭ'ಸಂಜ್ಞೆಯುಳ್ಳ ಅಂಗದ ಟಿಗೆ ಲೋಪವು ಬರುತ್ತದೆ.

ಕಿಮ್ ಶಬದ್ದ ಮೇಲೆ 'ಡತರ' ಪ್ರತ್ಯಯ ಬಂದು 'ಕತರ' ಎಂದಾಗಿದೆ.

ಉದಾ:– ಕತರತ್, ಕತರದ್ – ಪ್ರಥಮಾವಿಭಕ್ತಿ ಏಕವಚನದಲ್ಲಿ, ಇದಕ್ಕೆ 'ಸು' ಪ್ರತ್ಯಯವನ್ನು ಸೇರಿಸಿ ಕತರ+ಸ್ (ಸು) ಎಂದಿದ್ದಾಗ, ಅದಕ್ಕೆ "ಅತೋಽಮ್" (7.1.24) ಎಂಬ ಸೂತ್ರದಿಂದ ಅಮಾದೇಶವು ಬರಬೇಕಿದ್ದಾಗ, ಅದನ್ನು ಬಾಧಿಸಿ "ಅದ್‌ಡ್‌ಡತರಾದಿಭ್ಯಃ ಪಞ್ಚಭ್ಯಃ" (7.1.25) ಎಂಬ ಸೂತ್ರದಿಂದ ಅದ್‌ಡ್ (ಅದ್) ಆದೇಶವು ಬಂದು ಕತರ+ಅದ್ ಎಂದಾಗುತ್ತದೆ. ಕತರ ಎಂಬಲ್ಲಿರುವ ರೇಫೋತ್ತರ 'ಅ'ಕಾರಕ್ಕೆ 'ಟಿ' ಸಂಜ್ಞೆ ಬಂದು ಅದಕ್ಕೆ "ಟೇಃ" ಎಂಬ ಸೂತ್ರದಿಂದ ಲೋಪವು ಬಂದು ಕತರ್+ಅದ್= ಕತರದ್ ಎಂದಾಗುತ್ತದೆ. ಅವಸಾನವು ಪರದಲ್ಲಿದ್ದಾಗ "ವಾವಸಾನೇ" ಎಂಬ ಸೂತ್ರದಿಂದ 'ದ'ಕಾರದ ಸ್ಥಾನದಲ್ಲಿ ವೈಕಲ್ಪಿಕವಾಗಿ ಚರ್ತ್ವವು ಬಂದು ಕತರತ್ ಎಂದಾಗುತ್ತದೆ. ಚರ್ತ್ವ ಬಾರದ ಪಕ್ಷದಲ್ಲಿ ಕತರದ್ ಎಂದಿರುತ್ತದೆ.

ಉದಾ– ಕತರಮ್ – ದ್ವಿತಿಯಾ ವಿಭಕ್ತಿ ಏಕವಚನದಲ್ಲಿಯೂ ಕತರ+ಅಮ್ ಎಂದಿದ್ದಾಗ, ಮೇಲಿನಂತೆಯೇ ಕತರಮ್ ಎಂದು ರೂಪವು ಆಗುತ್ತದೆ.

ಉದಾ– ಕತರೇ – ಪ್ರಥಮಾ ಮತ್ತು ದ್ವಿತೀಯಾ ದ್ವಿವಚನಗಳಲಿ ಕತರ+ಔ' ಮತ್ತು ಕತರ ಔ(ಔಟ್) ಎಂದಿದ್ದಾಗ, 'ವೃದ್ಧಿ' ಬರಬೇಕಾಗಿತ್ತು. ಅದನ್ನು ಬಾಧಿಸಿ "ನಪುಂಸಕಾಚ್ಚ" (7.1.11) ಎಂಬ ಸೂತ್ರದಿಂದ 'ಔ' ಪ್ರತ್ಯಯದ ಸ್ಥಾನದಲ್ಲಿ 'ಈ (ಶೀ) ಆದೇಶವು ಬಂದು ಕತರ+ಈ ಎಂದಿದ್ದಾಗ 'ಯಚಿ ಭಮ್' ಎಂಬ ಸೂತ್ರದಿಂದ ಪೂರ್ವ ಅಂಗಕ್ಕೆ 'ಭ'ಸಂಜ್ಞೆಯು ಬಂದು "ಯಸ್ಯೇತಿ ಚ" ಎಂಬ ಸೂತ್ರದಿಂದ ರೇಫೋತ್ತರದಲ್ಲಿರುವ 'ಅ'ಕಾರಕ್ಕೆ ಲೋಪವು ಪ್ರಾಪ್ತವಾದಾಗ **'ಔಙಃ ಶ್ಯಾಂ ಪ್ರತಿಷೇಧೋ ವಾಚ್ಯಃ'** ಎಂಬ ವಾರ್ತಿಕದಿಂದ ನಿಷೇಧವು ಬಂದು ಕತರ+ಈ ಎಂದಿದ್ದಾಗ, ಗುಣ ಬಂದು 'ಕತರೇ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಕತರಾಣಿ – ಕತರ ಶಬ್ದದ ಪ್ರಥಮಾ ಮತ್ತು ದ್ವಿತೀಯಾ ಬಹುವಚನಗಳಲ್ಲಿ ಕ್ರಮವಾಗಿ ಕತರ+ಅಸ್(ಜಸ್) ಮತ್ತು ಕತರ+ಅಸ್(ಶಸ್) ಎಂದಿದ್ದಾಗ, 'ಅಸ್' ಗಳ ಸ್ಥಾನದಲ್ಲಿ"ಜಶ್ಶಸೋಃ ಶಿ" (7.1.20) ಎಂಬ ಸೂತ್ರದಿಂದ ಇ(ಶಿ) ಆದೇಶವು ಬಂದು ಕತರ+ಇ ಎಂದಾಗುತ್ತದೆ. "ಶಿ ಸರ್ವನಾಮಸ್ಥಾನಮ್" (1.1.42) ಎಂಬ ಸೂತ್ರದಿಂದ ಸರ್ವನಾಮಸ್ಥಾನ ಸಂಜ್ಞೆಯು ಬಂದು. "ನಪುಂಸಕಸ್ಯ ಝಲಚಃ" (7.1.72) ಎಂಬ ಸೂತ್ರದಿಂದ ನುಮಾಗಮ(ನ್) ಬಂದು ಅದು ಮಿತ್ ಆಗಿರುವುದರಿಂದ ರೇಫದ

ಪರದಲ್ಲಿರುವ ಅಂತ್ಯ ಅಕಾರದ ನಂತರ ಬಂದು, ಕತರ+ನ್+ಇ ಎಂದಾಗುತ್ತದೆ. ಕತರ+ನ್ ಎಂಬಲ್ಲಿ ಅಂತ್ಯ ವರ್ಣವಾದ 'ನ್' ಕಾರಕ್ಕೆ ಪೂರ್ವದಲ್ಲಿ ರೇಫೋತ್ತರವರ್ತಿಯಾದ 'ಅ'ಕಾರವು ಉಪಧಾ ಸಂಜ್ಞೆಯನ್ನು ಹೊಂದುತ್ತದೆ. ಮತ್ತು 'ಸರ್ವನಾಮಸ್ಥಾನೇ ಚಾಸಮ್ಬುದ್ಧೌ' ಎಂಬ ಸೂತ್ರದಿಂದ ಉಪಧಾ 'ಅ'ಕಾರಕ್ಕೆ ದೀರ್ಘ ಬಂದು ಕತರಾನ್+ಇ= ಕತರಾನಿ ಎಂದಾಗುತ್ತದೆ. ರೇಫದ ಪರದಲ್ಲಿರುವ 'ನ್'ಕಾರಕ್ಕೆ ಣತ್ವ ಬಂದು ಕತರಾಣಿ ಎಂದು ರೂಪವು ಸಿದ್ಧವಾಗುತ್ತದೆ.

ಉದಾ – ಹೇ ಕತರತ್, ಮತ್ತು ಹೇ ಕತರದ್– ಸಂಬೋಧನ ಪ್ರಥಮಾ ವಿಭಕ್ತಿಯಲ್ಲಿ ಹೇ ಕತರ+ಸ್(ಸು) ಎಂದಿದ್ದಾಗ, 'ಅದ್‌ಡ್(ಅದ್)' ಆದೇಶ ಬಂದು, ಹಿಂದಿನಂತೆಯೇ ಹೇ ಕತರತ್, ಮತ್ತು ಹೇ ಕತರದ್ ಎಂದು ಎರಡು ರೂಪಗಳಾಗುತ್ತವೆ.

ಸೂಚನೆ:– ಉಳಿದ ರೂಪಗಳು ಪುಲ್ಲಿಙ್ಗ ಶಬ್ದ 'ಸರ್ವ'ದಂತೆ ಇರುತ್ತವೆ.

**'ಕತರ' ಶಬ್ದದ ರೂಪಗಳು**

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಕತರತ್, ಕತರದ್ | ಕತರೇ | ಕತರಾಣಿ |
| ದ್ವಿತೀಯ | ಕತರತ್, ಕತರದ್ | ಕತರೇ | ಕತರಾಣಿ |
| ತೃತೀಯ | ಕತರೇಣ | ಕತರಾಭ್ಯಾಮ್ | ಕತರೈಃ |
| ಚತುರ್ಥೀ | ಕತರಸ್ಮೈ | ಕತರಾಭ್ಯಾಮ್ | ಕತರೇಭ್ಯಃ |
| ಪಞ್ಚಮೀ | ಕತರಸ್ಮಾತ್ | ಕತರಾಭ್ಯಾಮ್ | ಕತರೇಭ್ಯಃ |
| ಷಷ್ಠೀ | ಕತರಸ್ಯ | ಕತರಯೋಃ | ಕತರೇಷಾಮ್ |
| ಸಪ್ತಮೀ | ಕತರಸ್ಮಿನ್ | ಕತರಯೋಃ | ಕತರೇಷು |
| ಸಂಬೋಧನ | ಹೇ ಕತರತ್, ಹೇ ಕತರದ್ | ಹೇ ಕತರೇ | ಹೇ ಕತರಾಣಿ |

ಸೂಚನೆ 1.– ಇದೇ ತರಹ ಕತಮ, ಅನ್ಯ, ಅನ್ಯತರ, ಇತರ, ಮೊದಲಾದ ಶಬ್ದಗಳು ರೂಪಗಳನ್ನು ತಾಳುತ್ತವೆ.

ಸೂಚನೆ 2.– 'ಅನ್ಯತಮ' ಶಬ್ದವು ಡತರಾದಿ ಐದು ಶಬ್ದಗಳಲ್ಲಿ ಬರುವದಿಲ್ಲ. ಅದುದರಿಂದ 'ಅದ್‌ಡ್' ಆದೇಶವು ಬರುವದಿಲ್ಲ. ಹೀಗಾಗಿ 'ಅನ್ಯತಮಮ್' ಎಂದೇ ರೂಪವಾಗುತ್ತದೆ.

ವಾರ್ತಿಕ– "ಏಕತರಾತ್ ಪ್ರತಿಷೇಧೋ ವಕ್ತವ್ಯಃ"

ಈ ವಾರ್ತಿಕದ ಪ್ರಕಾರ ಏಕತರ ಶಬ್ದದನಂತರ 'ಸು' ಮತ್ತು 'ಅಮ್' ಪ್ರತ್ಯಯಗಳಿದ್ದರೆ, ಅವುಗಳಿಗೆ 'ಅದ್‌ಡ್' ಆದೇಶವು ಬರುವದಿಲ್ಲ ಎಂದರ್ಥ. 'ಡತರ' ಪ್ರತ್ಯಯಾಂತವಾಗಿರೋಣದ್ದರಿಂದ 'ಏಕತರ' ಶಬ್ದಕ್ಕೂ 'ಅದ್‌ಡ್' ಆದೇಶವು ಬರುತ್ತಿತ್ತು. ಈ ವಾರ್ತಿಕವು ಅದನ್ನು ನಿಷೇಧ ಮಾಡಿದೆ. ಆಗ 'ಸು' ಮತ್ತು 'ಔ' ಪ್ರತ್ಯಯಗಳು

ಪರದಲ್ಲಿದ್ದಾಗ 'ಏಕತರಮ್' ಎಂದೇ ರೂಪಗಳನ್ನು ತಾಳುತ್ತವೆ. ಉಳಿದ ರೂಪಗಳು 'ಕತರ' ಶಬ್ದದ ರೂಪಗಳಂತೆಯೇ ಇರುತ್ತವೆ.

**(ಹ್ರಸ್ವವನ್ನು ವಿಧಿಸುವ ಸೂತ್ರ)**

**ಸೂತ್ರ- 244. ಹ್ರಸ್ವೋ ನಪುಂಸಕೇ ಪ್ರಾತಿಪದಿಕಸ್ಯ (1.2.47)**

ವೃತ್ತಿಃ-ಅಜಂತಸ್ಯ ಇತ್ಯೇವ। ಶ್ರೀಪಮ್। ಜ್ಞಾನವತ್। ........[ದ್ವೇ-2।ತ್ರೀಣಿ-2।]

ಅರ್ಥ-ನಪುಂಸಕ ಲಿಙ್ಗದಲ್ಲಿ ಅಜನ್ತ ಪ್ರಾತಿಪದಿಕಕ್ಕೇನೇ ಹ್ರಸ್ವವು ಬರುತ್ತದೆ.

ಸೂಚನೆ: ಎಲ್ಲೆಲ್ಲಿ ಹ್ರಸ್ವ-ದೀರ್ಘ-ಪ್ಲುತ ಶಬ್ದಗಳಿಂದ ಅವು ವಿಧಿಸಲ್ಪಡುತ್ತವೆಯೋ ಅಲ್ಲಿ "ಅಚಶ್ಚ" ಎಂಬ ಪರಿಭಾಷೆಯಿಂದ 'ಅಚಃ' ಎಂಬ ಪದವನ್ನು ಸೇರಿಸಿಕೊಳ್ಳಬೇಕು. ಇಲ್ಲೂ 'ಹ್ರಸ್ವಃ' ಎಂಬ ಪದವು ಬಂದಿರೋಣದ್ದರಿಂದ, ಅಜನ್ತಕ್ಕೇನೇ ಹ್ರಸ್ವವು ಬರುತ್ತದೆ ಎಂದು ನಿಯಮ ಮಾಡಲಾಗಿದೆ.

ಸೂಚನೆ -ಶ್ರೀಪಮ್ ಜ್ಞಾನವತ್। ಶ್ರೀಪ (ಲಕ್ಷ್ಮಿಯನ್ನು ರಕ್ಷಣೇ ಮಾಡುವಂಥ ವಂಶ) 'ವಿಶ್ವಪಾ' ಶಬ್ದದಂತೆ ಶ್ರಿಯಂ ಪಾತಿ ಇತಿ ಶ್ರೀಪಾ. ಇದು ಶ್ರೀ ಪೂರ್ವಕ 'ಪಾ' ಧಾತುವಾಗಿದೆ. ನಪುಂಸಕಲಿಙ್ಗದಲ್ಲಿ, "ಹ್ರಸ್ವೋ ನಪುಂಸಕೇ ಪ್ರಾತಿಪದಿಕಸ್ಯ" ಎಂಬ ಸೂತ್ರದಿಂದ, 'ಪಾ' ಶಬ್ದದ 'ಆ'ಕಾರಕ್ಕೆ ಹ್ರಸ್ವವು ಬಂದು ಶ್ರೀಪ ಎಂದಾಗಿದೆ. ಇದು ಅದನ್ತವಾಗಿದೆ. ಆದ್ದರಿಂದ 'ಜ್ಞಾನ' ಶಬ್ದದಂತೆ ರೂಪಗಳನ್ನು ತಾಳುತ್ತದೆ.

ಉದಾ- ಶ್ರೀಪಂ, ಶ್ರೀಪೇ, ಶ್ರೀಪಾಣಿ ಇತ್ಯಾದಿ.

**(ಲೋಪ(ಲುಕ್)ವನ್ನು ಹೇಳುವ ಸೂತ್ರ)**

**ಸೂತ್ರ- 245. ಸ್ವಮೋರ್ನಪುಂಸಕಾತ್(7.1.23)**

ವೃತ್ತಿಃ-ಲುಕ್ ಸ್ಯಾತ್। ವಾರಿ।

ಪ. ಛೇ. - ಸ್ವಮೋಃ ನಪುಂಸಕಾತ್।

ಅ. ವೃ. - "ಷಡ್ಭ್ಯೋಲುಕ್" ಎಂಬ ಸೂತ್ರದಿಂದ, 'ಲುಕ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- ನಪುಂಸಕಲಿಙ್ಗದ ಶಬ್ದದ ಪರದಲ್ಲಿರುವ, 'ಸು' ಮತ್ತು 'ಅಮ್' ಪ್ರತ್ಯಯಗಳಿಗೆ 'ಲುಕ್' ಬರುತ್ತದೆ. 'ಲುಕ್' ಶಬ್ದವು ಲೋಪ ಎಂಬ ಅರ್ಥವನ್ನೇ ಕೊಡುತ್ತದೆ. ಆದರೆ, 'ಲುಕ್' ಆದನಂತರವೂ, 'ಲುಕ್' ಶಬ್ದದಿಂದ ಎಲ್ಲಿ ಲೋಪಮಾಡಲಾಗಿದೆಯೋ, ಅದನ್ನು ಆಶ್ರಯಿಸಿ ಆಗುವ ಕಾರ್ಯಗಳು ಆಗುವದಿಲ್ಲ. ಅಂದರೆ 'ಲುಕ್' ಎಂದರೂ ಅದರ್ಶನವೆಂದೇ ಅರ್ಥ. ಆದರೆ ಲೋಪ ಮತ್ತು ಲುಕ್ ಮೊದಲಾದವುಗಳಲ್ಲಿ ಈ ಕೆಳಗಿನ ಅಂತರವಿದೆ. ಲೋಪವಾಗುವದಕ್ಕೆ ಮೊದಲು ಯಾವ ಕಾರ್ಯವಾಗುತ್ತಿತ್ತೋ ಆ ಕಾರ್ಯವು ಲೋಪವಾದಮೇಲೆಯೂ "ಪ್ರತ್ಯಯಲೋಪೇ ಪ್ರತ್ಯಯಲಕ್ಷಣಮ್" ಎಂಬ ನ್ಯಾಯದಿಂದ ಆಗುತ್ತದೆ. ಆದರೆ ಪ್ರಕೃತ 'ಲುಕ್' ಮೊದಲಾದವುಗಳು ಆಗುವುದಕ್ಕೆ ಮೊದಲು, ಅಂಗ-ಸಂಬಂಧಿಯಾದ ಯಾವ ಕಾರ್ಯವಾಗುತ್ತಿತ್ತೋ, ಆ ಕಾರ್ಯವು

ಲುಕ್ ಮೊದಲಾದವುಗಳು ಆದಮೇಲೆ ಆಗುವದಿಲ್ಲ. "ಪ್ರತ್ಯಯಲೋಪೇ ಪ್ರತ್ಯಯಲಕ್ಷಣಮ್" ಎಂಬುದು ಪ್ರತ್ಯಯ ಲಕ್ಷಣಕ್ಕಾಗಿ ಇರುವ ಸೂತ್ರ, ಪ್ರತ್ಯಯದ ಲೋಪವಾದಮೇಲೂ, ಅದನ್ನು ಲೆಕ್ಕಿಸಿ ಆಗುವ ಕಾರ್ಯವು ಆಗುವದು. ತದನಂತರ ಇದರ ನಿಷೇಧವನ್ನು "ನ ಲುಮತಾಙ್ಗಸ್ಯ" ಎಂಬ ಸೂತ್ರದಿಂದ ಮಾಡಲಾಗಿದೆ. ಇಲ್ಲಿ 'ಲುಕ್' ಮೊದಲಾದವು ಆದಮೇಲೆ ಪೂರ್ವಸೂತ್ರದ ನಿಷೇಧವನ್ನು ಮಾಡಲಾಗಿದೆ. ಅಲ್ಲಿ ಸ್ಥಾನಿವದ್ಭಾವ ಬರುವದಿಲ್ಲ. ನಪುಂಸಕ ಸಾಮಾನ್ಯದಲ್ಲಿ, ಇದು ಬರುತ್ತದೆ.

**ವಾರಿ (ನೀರು) ಶಬ್ದದ ರೂಪಗಳು**

ಉದಾ– ವಾರಿ – ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ಏಕವಚನಗಳಲ್ಲಿ ವಾರಿ+ಸು, ಮತ್ತು ವಾರಿ+ಅಮ್ ಎಂದಿದ್ದಾಗ, 'ಸು' ಮತ್ತು 'ಅಮ್' ಗಳಿಗೆ 'ಲುಕ್' (ಲೋಪ) ಬಂದು 'ವಾರಿ' ಎಂದೇ ಉಳಿಯುತ್ತದೆ. ಇಲ್ಲಿ 'ಸು' ಮತ್ತು 'ಅಮ್' ಪ್ರತ್ಯಯಗಳು 'ಲುಕ್' ಶಬ್ದದಿಂದ ಲೋಪವಾಗಿರುವದರಿಂದ ಸ್ಥಾನಿವದ್ಭಾವ ಬರುವದಿಲ್ಲ.

**(ನುಮಾಗಮವನ್ನು ವಿಧಿಸುವ ಸೂತ್ರ)**

**ಸೂತ್ರ– 246. ಇಕೋಽಚಿ ವಿಭಕ್ತೌ** (7.1.73)

ವೃತ್ತಿಃ–ಇಗಂತಸ್ಯ ನುಮ್ ಅಚಿ ವಿಭಕ್ತೌ । ವಾರಿಣೀ। ವಾರೀಣಿ।(191) ನ ಲುಮತಾ ಇತ್ಯಸ್ಯ ಅನಿತ್ಯತ್ವಾತ್ ಪಕ್ಷೇ ಸಂಬುದ್ಧಿನಿಮಿತ್ತೋ ಗುಣಃ। ಹೇ ವಾರೇ!. ಹೇ ವಾರಿ!। ಆಙೋನಾ, ವಾರಿಣಾ। ಘೇರ್ಙಿತಿ ಇತಿ ಗುಣೇ ಪ್ರಾಪ್ತೇ।

ವಾ॥ **ವೃದ್ಧ್ಯೌತ್ವತೃಜ್ವದ್ಭಾವಗುಣೇಭ್ಯೋ ನುಮ್ ಪೂರ್ವ ವಿಪ್ರತಿಷೇಧೇನ।**

ವಾರಿಣೇ। ವಾರಿಣಃ–2। ವಾರಿಣೋಃ–2। ನುಮಚಿರೇತಿ ನುಟ್। ವಾರೀಣಾಮ್। ವಾರಿಣಿ। ಹಲಾದೌ ಹರಿವತ್।

ಪ. ಛೇ.– ಇಕಃ, ಅಚಿ, ವಿಭಕ್ತೌ।

ಅ. ವೃ. –"ನಪುಂಸಕಸ್ಯ ಝಲಚಃ" ಎಂಬ ಸೂತ್ರದಿಂದ, 'ನಪುಂಸಕಸ್ಯ' ಎಂಬ ಪದವೂ, ಮತ್ತು "ಇದಿತೋನುಮ್ಧಾತೋಃ" ಎಂಬ ಸೂತ್ರದಿಂದ, 'ನುಮ್' ಎಂಬ ಪದವು ಅನುವೃತ್ತವಾಗಿದೆ.

ಅರ್ಥ–ಇಗಂತ ನಪುಂಸಕ ಅಙ್ಗಕ್ಕೆ ಅಜಾದಿ ವಿಭಕ್ತಿ ಪ್ರತ್ಯಯವು ಪರದಲ್ಲಿದ್ದಾಗ, 'ನುಮ್'(ನ್) ಆಗಮವು ಬರುತ್ತದೆ. "ಮಿದಚೋಽನ್ತ್ಯಾತ್ಪರಃ" ಎಂಬ ಸೂತ್ರದಿಂದ, ಅನ್ತ್ಯವಾದ ಅಚ್ಚಿ (ಅಚ್)ನ ನಂತರ ಈ ಆಗಮವು ಬರುತ್ತದೆ.

ಉದಾ–ವಾರಿಣೀ–ಪ್ರಥಮಾ ವಿಭಕ್ತಿ ದ್ವಿವಚದಲ್ಲಿ ವಾರಿ+ಔ ಎಂದಿದ್ದಾಗ, "ನಪುಂಸಕಾಚ್ಚ" ಸೂತ್ರದಿಂದ 'ಈ' (ಶೀ) ಆದೇಶ ಬಂದು, ವಾರಿ+ಈ(ಶೀ) ಎಂದಿದ್ದಾಗ, ಪ್ರಕೃತ ಸೂತ್ರವು ಪ್ರವೃತ್ತವಾಗುತ್ತದೆ. ಇಲ್ಲಿ, ವಾರಿ ಎಂಬುದು ಇಗ(ಇಕ್)ನ್ತ ವಾಗಿದೆ. ಇದರ ಪರದಲ್ಲಿ ಅಜಾದಿಯಾದ 'ಔ' ಪ್ರತ್ಯಯವಿದೆ. ಆದ್ದರಿಂದ ನುಮಾಗಮ ಬಂದು ವಾರಿ+ನ್+ಈ ಎಂದಾಗಿ, "ಅಟ್–ಕುಪ್ವಾಙ್–ನುಮ್ ವ್ಯವಾಯೇಽಪಿ" ಎಂಬ ಸೂತ್ರದಿಂದ 'ನ್' ಕಾರಕ್ಕೆ ಣತ್ವ ಬಂದು ವಾರಿಣೀ ಎಂದು ರೂಪವು ಸಿದ್ಧವಾಗಿದೆ.

ಸೂಚನೆ ; ದ್ವಿತಿಯಾ ವಿಭಕ್ತಿಯ ದ್ವಿವಚನದಲ್ಲಿಯೂ ಮೇಲಿನಂತೆಯೇ ಪ್ರಕ್ರಿಯೆ ನಡೆದು, ವಾರಿಣೀ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ವಾರೀಣಿ – ಪ್ರಥಮಾ ಮತ್ತು ದ್ವಿತಿಯಾ ವಿಭಕ್ತಿ ಬಹುವಚನಗಳಲ್ಲಿ ಕ್ರಮವಾಗಿ ವಾರಿ +ಅಸ್(ಜಸ್), ಮತ್ತು ವಾರಿ+ಅಸ್(ಶಸ್) ಎಂದಿದ್ದಾಗ, 'ಅಸ್'ಗೆ "ಜಶ್ಶಸೋಃ ಶಿ" ಸೂತ್ರದಿಂದ ಇ(ಶಿ) ಆದೇಶ ಬಂದು "ಶಿ ಸರ್ವನಾಮಸ್ಥಾನಮ್" ಎಂಬ ಸೂತ್ರದಿಂದ, ಸರ್ವನಾಮಸ್ಥಾನ ಸಂಜ್ಞೆ ಬಂದು, ವಾರಿ+ಇ(ಶಿ) ಎಂದಿದ್ದಾಗ, ಪ್ರಕೃತ ಸೂತ್ರದಿಂದ ನುಮಾ(ನ್)ಗಮ ಬಂದು ವಾರಿ+ನ್+ಇ(ಶಿ)ಎಂದಿದ್ದಾಗ, 'ರಿ' ನಲ್ಲಿಯ 'ಇ' ಕಾರಕ್ಕೆ ಉಪಧಾ ಸಂಜ್ಞೆಯು ಬಂದು, "ಸರ್ವನಾಮಸ್ಥಾನೇ ಚಾಸಂಬುದ್ಧೌ" ಎಂಬ ಸೂತ್ರದಿಂದ ಉಪಧಾ ದೀರ್ಘವಾಗಿ, ವಾರೀ+ನ್+ಇ(ಶಿ) ಎಂದಿದ್ದಾಗ, ವಾರೀನಿ ಎಂದಾಗಿ, "ಅಟ್–ಕುಪ್ವಾಙ್–ನುಮ್ ವ್ಯವಾಯೇऽಪಿ" ಎಂಬ ಸೂತ್ರದಿಂದ 'ನ್' ಕಾರಕ್ಕೆ ಣತ್ವ ಬಂದು ವಾರೀಣಿ ಎಂದು ರೂಪವು ಸಿದ್ಧವಾಗಿದೆ.

ಉದಾ– ಹೇ ವಾರೇ/ಹೇ ವಾರಿ ಸಂಬೋಧನ ಪ್ರಥಮಾ ವಿಭಕ್ತಿ ಏಕವಚನದಲ್ಲಿ, ಹೇ ವಾರಿ+ಸ್ (ಸು) ಎಂದಿದ್ದಾಗ, ಪ್ರಥಮಾ ವಿಭಕ್ತಿ ಏಕವಚನದಲ್ಲಿಯಂತೆಯೇ 'ಸ್' ಗೆ 'ಲುಕ್'(ಲೋಪ) ಬಂದು ಹೇ ವಾರಿ ಎಂದಿದ್ದಾಗ, "ನ ಲುಮತಾಙ್ಗಸ್ಯ" ಎಂಬುದು ಅನಿತ್ಯವಾಗಿರುವದರಿಂದ, ಪಾಕ್ಷಿಕವಾಗಿ ಸಂಬುದ್ಧಿ ನಿಮಿತ್ತಕವಾಗಿ, ರೇಫೋತ್ತರ 'ಇ' ಕಾರಕ್ಕೆ ಗುಣ ಬಂದು ಹೇ ವಾರೇ ಎಂದು ರೂಪವಾಗಿದೆ. ಹೇ ವಾರಿ ಎಂಬ ರೂಪವೂ ಪ್ರಥಮಾ ವಿಭಕ್ತಿ ಏಕವಚನದಂತೆ ಬಂದಿದೆ.

ವಿವರಣೆ: "ಪ್ರತ್ಯಯಸ್ಯ ಲುಕ್ ಶ್ಲು ಲುಪಃ", "ಪ್ರತ್ಯಯಲೋಪೇ ಪ್ರತ್ಯಯಲಕ್ಷಣಮ್" ಮತ್ತು"ನ ಲುಮತಾಙ್ಗಸ್ಯ" ಎಂಬ ಈ ಮೂರು ಸೂತ್ರಗಳು ಈ ಪ್ರಸಂಗಕ್ಕೆ ಸಂಬಂಧಿಸಿದವು. ಪ್ರತ್ಯಯ ಲೋಪವಾದಮೇಲೂ, ಆ ಪ್ರತ್ಯಯವನ್ನು ನಿಮಿತ್ತ ಮಾಡಿ ಕೊಂಡು, ಕಾರ್ಯವಾಗುತ್ತದೆ ಎಂಬುದೇ 'ಪ್ರತ್ಯಯಲೋಪೇ ಪ್ರತ್ಯಯಲಕ್ಷಣಂ' ಎಂಬುದರ ಅರ್ಥ. ಆದರೆ, 'ಲುಕ್', 'ಶ್ಲು', ಮತ್ತು 'ಲುಪ್'ಗಳದ್ವಾರಾ ಲೋಪವಾದ ಮೇಲೆ ಪ್ರತ್ಯಯದ ನಿಮಿತ್ತ ಮಾಡಿಕೊಂಡು, ಅಂಗ–ಸಂಬಂಧಿಯಾದ ಕಾರ್ಯವು ಆಗುವದಿಲ್ಲ ಎಂಬುದೇ ನಿಷೇಧ. ಸಂಬೋಧನದ 'ಸುಪ್' ಪ್ರತ್ಯಯದ, ಸ್ಥಾನದಲ್ಲೂ, 'ಅಮ್' ಆದೇಶ ಪ್ರಾಪ್ತವಾಗಿತ್ತು, ಅದನ್ನು ಬಾಧಿಸಿ "ಸ್ವಮೋರ್ನಪುಂಸಕಾತ್" ಎಂಬ ಸೂತ್ರದಿಂದ, 'ಲುಕ್' ಬಂದು 'ವಾರಿ' ಎಂಬ ರೂಪವು ಸಿದ್ಧವಾಗಿದೆ. ಪ್ರತ್ಯಯದ ಲಕ್ಷಣದಿಂದ, ಸಂಬುದ್ಧಿಯನ್ನು ಮನ್ನಿಸಿ, "ಹ್ರಸ್ವಸ್ಯ ಗುಣಃ" ಎಂಬ ಸೂತ್ರದಿಂದ, ಗುಣವು ಪ್ರಾಪ್ತವಾಗಿತ್ತು, ಆದರೆ "ನ ಲುಮತಾಙ್ಗಸ್ಯ" ಎಂಬ ಸೂತ್ರದಿಂದ, ನಿಷೇಧವಾಗಿರುವದರಿಂದ, ಪ್ರತ್ಯಯಲಕ್ಷಣವನ್ನು ಆಶ್ರಯಿಸಿರುವ ಅಂಗ–ಕಾರ್ಯವು ಆಗುವದಿಲ್ಲ. ಅಂದರೆ, ವಾರಿ ಶಬ್ದದ 'ಇ' ಕಾರಕ್ಕೆ ಗುಣವು ಬರುವದಿಲ್ಲ.

ಆದರೆ ಪತಂಜಲಿಯವರು ಹಲವಾರು ಕಾರಣಗಳಿಂದ, "ನ ಲುಮತಾಙ್ಗಸ್ಯ" ಎಂಬ ಸೂತ್ರಕ್ಕೆ ನಿತ್ಯತ್ವವನ್ನು ಹೇಳುತ್ತಾರೆ. ಅಂದರೆ, ಕೆಲವು ಕಡೆಗೆ ಪ್ರವೃತ್ತವಾಗುತ್ತದೆ, ಕೆಲವುಕಡೆ ಪ್ರವೃತ್ತವಾಗುವದಿಲ್ಲ. ಆದ್ದರಿಂದ ಅನಿತ್ಯ. ಇಲ್ಲಿಯೂ ಅನಿತ್ಯ ಪಕ್ಷದಲ್ಲಿ,

ನಿಷೇಧವಾಗದೇ "ಹ್ರಸ್ವಸ್ಯ ಗುಣಃ" ಎಂಬ ಸೂತ್ರದಿಂದ 'ವಾರಿ' ಶಬ್ದದ 'ಇ'ಕಾರಕ್ಕೆ ಗುಣವು ಬಂದು, ವಾರೇ+ಸ್ ಎಂದಾಗುತ್ತದೆ. ಈ ರೀತಿಯಾಗಿ ವಾರೇ+ಸ್ ಮತ್ತು ವಾರಿ+ಸ್ ಎಂಬ ಎರಡು ಪಕ್ಷದಲ್ಲೂ, "ಏಙ್ ಹ್ರಸ್ವಾತ್ ಸಂಬುದ್ಧೇಃ" ಎಂಬ ಸೂತ್ರದಿಂದ, ಹಲ್ ವರ್ಣಕ್ಕೆ ಲೋಪ ಬಂದು ಹೇ ವಾರೇ ಮತ್ತು ಹೇ ವಾರಿ ಎಂದು ಎರಡು ರೂಪಗಳಾಗುತ್ತವೆ.

ಉದಾ– ಹೇ ವಾರಿಣೀ, ಹೇ ವಾರೀಣಿ – ಸಂಬೋಧನ ಪ್ರಥಮಾ ವಿಭಕ್ತಿಯ ದ್ವಿವಚನ ಮತ್ತು ಬಹುವಚನರೂಪಗಳು ಪ್ರಥಮಾ ವಿಭಕ್ತಿ ದ್ವಿವಚನ– ಬಹುವಚನಗಳ ರೂಪಗಳಂತೆಯೇ ಹೇ ವಾರಿಣೀ, ಹೇ ವಾರೀಣಿ ಎಂದೇ ಇರುತ್ತವೆ.

ಉದಾ– ವಾರಿ, ವಾರಿಣೀ, ವಾರೀಣಿ –ದ್ವಿತಿಯಾವಿಭಕ್ತಿಯ ಎಲ್ಲ ರೂಪಗಳೂ ಪ್ರಥಮಾ ವಿಭಕ್ತಿಯ ರೂಪಗಳಂತೆಯೇ ಇರುತ್ತವೆ ( ವಾರಿ, ವಾರಿಣೀ, ವಾರೀಣಿ).

ಉದಾ–ವಾರಿಣಾ–ತೃತಿಯಾ ವಿಭಕ್ತಿ ಏಕವಚನದಲ್ಲಿ– ವಾರಿ+ಆ(ಟಾ) ಎಂದಿದ್ದಾಗ, "ಇಕೋಽಚಿ ವಿಭಕ್ತೌ" (7.1.73) ಎಂಬ ಸೂತ್ರದಿಂದ 'ನುಮ್'(ನ್) ಪ್ರಾಪ್ತವಾಗುತ್ತದೆ. ಆದರೆ, "ಆಙೋನಾಽಸ್ತ್ರಿಯಾಮ್" ಎಂಬುದು ಪರಸೂತ್ರವಾಗುವದರಿಂದ, 'ನಾ' ಆದೇಶವು ಬಂದು, ವಾರಿ+ನಾ ಎಂದಿದ್ದಾಗ, 'ನ್' ಕಾರಕ್ಕೆ ಣತ್ವ ಬಂದು ವಾರಿಣಾ ಎಂದು ರೂಪವಾಗುತ್ತದೆ.

ಉದಾ– ವಾರಿಭ್ಯಾಮ್(3)– ತೃತಿಯಾ, ಚತುರ್ಥೀ ಮತ್ತು ಪಞ್ಚಮೀ ವಿಭಕ್ತಿ ದ್ವಿವಚನದಲ್ಲಿ– ವಾರಿ+ಭ್ಯಾಮ್ ಎಂದಿದ್ದಾಗ, ಇವು ಹಲಾದಿ ವಿಭಕ್ತಿಗಳಾದ ಪ್ರಯುಕ್ತ, 'ನುಮ್' ಆಗಮ ಬಾರದೇ ಕೇವಲ ವರ್ಣಜೋಡಣೆಯಿಂದ ವಾರಿಭ್ಯಾಮ್, ವಾರಿಭ್ಯಾಮ್, ವಾರಿಭ್ಯಾಮ್ ಎಂಬ ರೂಪಗಳು ಸಿದ್ಧವಾಗುತ್ತವೆ.

ಉದಾ– ವಾರಿಭಿಃ – ತೃತಿಯಾ ವಿಭಕ್ತಿ ಬಹುವಚನದಲ್ಲಿ– ವಾರಿ+ಭಿಸ್ ಎಂದಿದ್ದಾಗ, ಇದು ಹಲಾದಿ ವಿಭಕ್ತಿಯಾದ ಪ್ರಯುಕ್ತ, 'ನುಮ್' ಆಗಮ ಬಾರದೇ ಕೇವಲ ವರ್ಣಜೋಡಣೆಯಿಂದ ವಾರಿಭಿಸ್ ಎಂದಾಗಿ ರುತ್ವ–ವಿಸರ್ಗಗಳಿಂದ ವಾರಿಭಿಃ ಎಂಬ ರೂಪವು ಸಿದ್ಧವಾಗುತ್ತದೆ.

ವಾರ್ತಿಕ– ವೃದ್ಧಿ–ಔತ್ವ–ತೃಜ್ವದ್ಭಾವ–ಗುಣೇಭ್ಯೋ ನುಮ್ ಪೂರ್ವ ವಿಪ್ರತಿಷೇಧೇನ

ಅರ್ಥ: ಪೂರ್ವ ವಿಪ್ರತಿಷೇಧದಿಂದ, ವೃದ್ಧಿ, ಔತ್ವ, ತೃಜ್ವದ್ಭಾವ, ಮತ್ತು ಗುಣ ಇವುಗಳಿಗಿಂತ ಮೊದಲು ನುಮ್' ಆಗಮವು ಬರುತ್ತದೆ. ತಾತ್ಪರ್ಯವೇನೆಂದರೆ, ಒಮ್ಮೆಲೇ "ಅಚೋಞ್ಣಿತಿ" ಎಂಬ ಸೂತ್ರದಿಂದ ವೃದ್ಧಿ, ಮತ್ತು ಪ್ರಕೃತ ಸೂತ್ರದಿಂದ, 'ನುಮ್, "ಅಚ್ಚಘೇಃ" ಸೂತ್ರದಿಂದ ಔತ್ವ, ಮತ್ತು ಇದರಿಂದ 'ನುಮ್' ಹಾಗೆಯೇ "ತೃಜ್ವತ್ ಕ್ರೋಷ್ಟುಃ" ಎಂಬ ಸೂತ್ರದಿಂದ ತೃಜ್ವದ್ಭಾವ ಮತ್ತು ಇದರಿಂದ 'ನುಮ್', ಹಾಗೆಯೇ "ಘೇರ್ಙಿತಿ" ಸೂತ್ರದಿಂದ 'ಗುಣ' ಮತ್ತು "ಇಕೋಽಚಿ ವಿಭಕ್ತೌ" ಎಂಬ ಸೂತ್ರದಿಂದ, 'ನುಮ್' ಪ್ರಾಪ್ತವಾದಮೇಲೆ, "ವಿಪ್ರತಿಷೇಧೇ ಪರಂ ಕಾರ್ಯಮ್" ಎಂಬ ನಿಯಮದಿಂದ, ಪೂರ್ವದ 'ನುಮ್' ಕಾರ್ಯವನ್ನು ಬಾಧಿಸಿ ಪರಕಾರ್ಯವಾದ,

'ವೃದ್ಧಿ' ಮೊದಲಾದವುಗಳು ಪ್ರಾಪ್ತವಾಗುತ್ತಿತ್ತು. ಅದನ್ನು ವಾರ್ತಿಕಕಾರರು, ಈ ಮೇಲಿನ ವಾರ್ತಿತಿಕವನ್ನು ಮಾಡಿ ಈನಿರ್ಣಯವನ್ನು ಕೊಟ್ಟಿದಾರೆ. ಅಂದರೆ, ವೃದ್ಧಿ ಮೊದಲಾದ, ಮತ್ತು 'ನುಮ್' ಕಾರ್ಯಗಳು ಒಮ್ಮೆಲೇ ಪ್ರಾಪ್ತವಾದಾಗ, ವಿಪ್ರತಿಷೇಧವಾಗುವದರಿಂದ, ಮೊದಲು 'ನುಮ್'ಆಗಮವನ್ನು ಮಾಡಬೇಕು. ಇಲ್ಲಿ 'ವಾರಿ' ಶಬ್ದದಮೇಲೆ, 'ಙೇ" ಪ್ರತ್ಯಯವು ಬಂದಾಗ, "ಘೇರ್ಙಿತಿ" ಎಂಬ ಸೂತ್ರದಿಂದ ಗುಣವು ಮತ್ತು "ಇಕೋಽಚಿವಿಭಕ್ತೌ" ಎಂಬ ಸೂತ್ರದಿಂದ, 'ನುಮ್' ಆಗಮವು ಒಮ್ಮೆಲೇ ಪ್ರಾಪ್ತವಾದಾಗ, ಪರಕಾರ್ಯವಾದ ಗುಣವೇ ಪ್ರಾಪ್ತವಾಗಬೇಕಿದೆ. ಈ ವಾರ್ತಿಕದ ನಿಯಮದಿಂದ, 'ನುಮ್' ಆಗಮವೇ ಮೊದಲು ಬರುತ್ತದೆ.

ಉದಾ– ವಾರಿಣೇ–ಚತುರ್ಥೀ ವಿಭಕ್ತಿ ಏಕವಚನದಲ್ಲಿ–ವಾರಿ+ಏ (ಙೇ)ಎಂದಿದ್ದಾಗ, ಇದು ಅಜಾದಿ ಪ್ರತ್ಯಯವಾಗಿರುವದರಿಂದ, ನುಮಾ (ನುಮ್) ಗಮ ಬಂದು ವಾರಿ+ನ್+ಏ ಎಂದಿದ್ದಾಗ, ಣ(ನ್)ತ್ವ ಬಂದು ವಾರಿ+ನ್+ಏ ಎಂದಾಗಿ, 'ನ್' ಕಾರಕ್ಕೆ ಣತ್ವ ಬಂದು ವಾರಿಣೇ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ವಾರಿಭ್ಯಃ (2) – ಚತುರ್ಥೀ ಮತ್ತು ಪಞ್ಚಮೀ ವಿಭಕ್ತಿ ಬಹುವಚನಗಳಲ್ಲಿ– ವಾರಿ+ ಭ್ಯಸ್, ಮತ್ತು ವಾರಿ+ಭ್ಯಸ್ ಎಂದಿದ್ದಾಗ, ಇದು ಹಲಾದಿ ವಿಭಕ್ತಿಯಾದ ಪ್ರಯುಕ್ತ, 'ನುಮ್'ಆಗಮ ಬಾರದೇ ಕೇವಲ ವರ್ಣಜೋಡಣೆಯಿಂದ ವಾರಿಭ್ಯಸ್ ಎಂದಾಗಿ ರುತ್ವ–ವಿಸರ್ಗಗಳಿಂದ ವಾರಿಭ್ಯಃ, ವಾರಿಭ್ಯಃ ಎಂದು ರೂಪಗಳಾಗುತ್ತವೆ.

ಉದಾ– ವಾರಿಣಃ (2)– ಪಞ್ಚಮೀ ಮತ್ತು ಷಷ್ಠೀ ವಿಭಕ್ತಿ ಏಕವಚನಗಳಲ್ಲಿ– ವಾರಿ+ಅಸ್ (ಙಸಿ) ಮತ್ತು ವಾರಿ+ಅಸ್ (ಙಸ್) ಎಂದಿದ್ದಾಗ, ನುಮಾ(ನ್)ಗಮ ಬಂದು ವಾರಿ+ನ್+ಅಸ್ ಎಂದಿದ್ದಾಗ, 'ನ್' ಕಾರಕ್ಕೆ ಣತ್ವ ಮತ್ತು'ಸ್' ಕಾರಕ್ಕೆ ರುತ್ವ –ವಿಸರ್ಗಗಳು ಬಂದು ವಾರಿಣಃ, ವಾರಿಣಃ ಎಂದು ರೂಪಗಳಾಗುತ್ತವೆ.

ಉದಾ– ವಾರಿಣೋಃ(2) – ಷಷ್ಠೀ ಮತ್ತು ಸಪ್ತಮೀ ದ್ವಿವಚನಗಳಲ್ಲಿ– ವಾರಿ+ಓಸ್ ಎಂದಿದ್ದಾಗ, ಹಿಂದಿನಂತೆಯೇ ನುಮಾಗಮ ಮತ್ತು ಣತ್ವಗಳು ಬಂದು ವಾರಿ+ನ್+ಓಸ್= ವಾರಿಣೋಸ್ ಎಂದಾಗಿ ರುತ್ವ–ವಿಸರ್ಗಗಳಿಂದ ವಾರಿಣೋಃ, ವಾರಿಣೋಃ ಎಂದು ರೂಪಗಳಾಗುತ್ತವೆ.

ನುಮಚಿರೇತಿ ನುಟ್–

ಉದಾ– ವಾರೀಣಾಮ್ – ಷಷ್ಠೀ ವಿಭಕ್ತಿಯ ಬಹುವಚನದಲ್ಲಿ ವಾರಿ+ಆಮ್ ಎಂದಿದ್ದಾಗ, "ಹ್ರಸ್ವನದ್ಯಾಪೋ ನುಟ್" ಎಂಬ ಸೂತ್ರದಿಂದ 'ನುಟ್'(ನ್) ಪ್ರಾಪ್ತವಾಗಿ, ಮತ್ತು ಇಕೋಽಚಿ ವಿಭಕ್ತೌ" ಎಂಬ ಸೂತ್ರದಿಂದ 'ನುಮ್' ಪ್ರಾಪ್ತವಾಗಿ, ಇದು ಪರದಲ್ಲಿ ಇರುವದರಿಂದ, 'ನುಟ್' ಗೆ ಬಾಧ ಬಂದು 'ನುಮ್' ಎಂದು ಆಗಬೇಕಾಗಿತ್ತು. ಆದರೆ, "ನುಮಚಿರ ತೃಜ್ವದ್ಭಾವೇಭ್ಯೋ "ನುಟ್‌ಪೂರ್ವಪ್ರತಿಷೇಧೇನ" ಎಂಬ ನಿಯಮದಿಂದ, 'ನುಟ್' ಆಗಮವೇ ಬಂದಿದೆ. ವಾರಿ+ನ್+ಆಮ್ ಎಂದಿದ್ದಾಗ, "ನಾಮಿ" ಎಂಬ ಸೂತ್ರದಿಂದ 'ಇ'ಕಾರಕ್ಕೆ ದೀರ್ಘ ಬಂದು 'ನ್' ಕಾರಕ್ಕೆ 'ಣತ್ವ'

ಬಂದು ವಾರೀಣಾಮ್ ಎಂಬ ರೂಪವು ಸಿದ್ಧವಾಗಿದೆ.

ವಿಶೇಷ– 'ನುಮ್' ಮತ್ತು 'ನುಟ್'ಗಳಲ್ಲಿ 'ನ್' ಕಾರ ಮಾತ್ರ ಉಳಿಯುತ್ತದೆ. ಹಾಗಿದ್ದರೂ 'ನುಟ್' ಆಗಮವು 'ಆಮ್' ಪರದಲ್ಲಿ ಇದ್ದಾಗ, ಆಗುತ್ತದೆ. ಮತ್ತು 'ಟಿತ್' ಆಗಿ ಇರೋಣದ್ದರಿಂದ ಆದ್ಯವಯವಾಗಿ ಬರುತ್ತದೆ. ಮತ್ತು 'ನುಮ್' ಆಗಮವು 'ಇಗಂತಕ್ಕೆ' ಬರುತ್ತದೆ. ಅದು ಮಾತ್ರವಲ್ಲದೇ 'ನುಮ್' ಆಗಮವು 'ಮಿತ್' ಆಗಿರೋಣದ್ದರಿಂದ "ಮಿದಚೋಽನ್ತ್ಯಾತ್ ಪರಃ" ಎಂಬ ಸೂತ್ರದಿಂದ ಅಂತ್ಯವಾದ 'ಅಚ್' ನ ನಂತರ ಬರುತ್ತದೆ. 'ನುಮ್' ಆಗಮವು ಬಂದಮೇಲೆ ಪೂರ್ವದಲ್ಲಿರುವ ಅಜನ್ತ ಅಙ್ಗಕ್ಕೆ ಪರದಲ್ಲಿ 'ನಾಮ್' ಕೂಡ ಇರುವದಿಲ್ಲ. ಆದ್ದರಿಂದ "ನಾಮಿ" ಎಂಬ ಸೂತ್ರದಿಂದ, ದೀರ್ಘವು ಬರುವದಕ್ಕೆ ಅವಕಾಶವಿರುವದಿಲ್ಲ. ಆದ್ದರಿಂದ 'ವಾರಿಣಾಮ್' ಎಂಬ ಅನಿಷ್ಟರೂಪವು ಸಿದ್ಧವಾಗುತ್ತಿತ್ತು. 'ನುಟ್', 'ಆಮ್' ಪರದಲ್ಲಿದ್ದಾಗಲೂ ಆಗುತ್ತದೆ. ಪೂರ್ವದಲ್ಲಿ ವಾರಿ ಅಜನ್ತ–ಅಙ್ಗ ಮತ್ತು 'ನಾಮ್' ಪರದಲ್ಲಿರುತ್ತದೆ. ಆದ್ದರಿಂದ 'ನಾಮ್' ಪರದಲ್ಲಿದ್ದಾಗ ಪೂರ್ವ 'ಇ' ಕಾರಕ್ಕೆ ದೀರ್ಘ ಬಂದು ವಾರೀಣಾಮ್ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ:– ವಾರಿಣಿ –ಸಪ್ತಮೀ ವಿಭಕ್ತಿ ಏಕವಚನದಲ್ಲಿ, ವಾರಿ+ನ್+ಇ (ಙಿ) ಎಂದಿದ್ದಾಗ, 'ನ್' ಕಾರಕ್ಕೆ 'ಣತ್ವ' ಬಂದು ವರ್ಣಜೋಡಣೆಯಿಂದ ವಾರಿಣಿ ಎಂದು ರೂಪವು ಸಿದ್ಧವಾಗುತ್ತದೆ.

ಉದಾ – ವಾರಿಷು – ಸಪ್ತಮೀ ಬಹುವಚನದಲ್ಲಿ ವಾರಿ+ಸು (ಸುಪ್) ಎಂದಿದ್ದಾಗ, "ಆದೇಶ ಪ್ರತ್ಯಯಯೋಃ" ಎಂಬ ಸೂತ್ರದಿಂದ 'ಸ್' ಕಾರಕ್ಕೆ 'ಷತ್ವ' ಬಂದು ವಾರಿಷು ಎಂದು ರೂಪವಾಗುತ್ತದೆ.

**(ಇ–ಕಾರಾನ್ತ ನಪುಂಸಕಲಿಙ್ಗದ 'ವಾರಿ' ಶಬ್ದದ ರೂಪಗಳು)**

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ವಾರಿ | ವಾರಿಣೀ | ವಾರೀಣಿ |
| ದ್ವಿತೀಯ | ವಾರಿ | ವಾರಿಣೀ | ವಾರೀಣಿ |
| ತೃತೀಯ | ವಾರಿಣಾ | ವಾರಿಭ್ಯಾಮ್ | ವಾರಿಭಿಃ |
| ಚತುರ್ಥೀ | ವಾರಿಣೇ | ವಾರಿಭ್ಯಾಮ್ | ವಾರಿಭ್ಯಃ |
| ಪಞ್ಚಮೀ | ವಾರಿಣಃ | ವಾರಿಭ್ಯಾಮ್ | ವಾರಿಭ್ಯಃ |
| ಷಷ್ಠೀ | ವಾರಿಣಃ | ವಾರಿಣೋಃ | ವಾರೀಣಾಮ್ |
| ಸಪ್ತಮೀ | ವಾರಿಣಿ | ವಾರಿಣೋಃ | ವಾರಿಷು |
| ಸಂಬೋಧನ | ಹೇ ವಾರೇ!<br>ಹೇ ವಾರಿ! | ಹೇ ವಾರಿಣೀ! | ಹೇ ವಾರೀಣಿ! |

**(ಅನಙ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ – 247. ಅಸ್ಥಿ–ದಧಿ–ಸಕ್ಥ್ಯಕ್ಷ್ಣಾಮನಙುದಾತ್ತಃ (7.1.75)**

ವೃತ್ತಿಃ–ಏಷಾಮ್ ಅನಙ್ ಸ್ಯಾತ್ ಟಾದೌ ಅಚಿ।

ಪ. ಛೇ. – ಅಸ್ಥಿ, ದಧಿ, ಸಕ್ಥಿ, ಅಕ್ಷ್ಣಾಮ್, ಅನಙ್, ಉದಾತ್ತಃ।

ಅ. ವೃ. – "ಇಕೋऽಚಿ ವಿಭಕ್ತೌ" ಎಂಬ ಸೂತ್ರದಿಂದ 'ವಿಭಕ್ತೌ' ಮತ್ತು 'ಅಚಿ' ಎಂಬ ಎರಡು ಪದಗಳು ವಚನ ವಿಪರಿಣಾಮ ಮಾಡಿದಮೇಲೆ 'ಅಕ್ಷು' ಮತ್ತು 'ವಿಭಕ್ತಿಷು' ಹಾಗೆಯೇ "ತೃತಿಯಾದಿಷು ಭಾಷಿತ ಪುಂಸ್ಕಂ ಪುಂವದ್ಗಾಲವಸ್ಯ" ಎಂಬ ಸೂತ್ರದಿಂದ, 'ತೃತಿಯಾದಿಷು' ಎಂಬ ಪದವೂ ಅನುವೃತ್ತವಾಗುತ್ತದೆ.

ಅರ್ಥ– ತೃತೀಯಾದಿ ವಿಭಕ್ತಿಗಳಲ್ಲಿ ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಅಸ್ಥಿ, ದಧಿ, ಸಕ್ಥಿ, ಮತ್ತು ಅಕ್ಷಿ ಈ ಶಬ್ದಗಳಿಗೆ, 'ಅನಙ್' ಆದೇಶವು ಬರುತ್ತದೆ. 'ಅನಙ್' ನಲ್ಲಿ 'ಅನ್' ಮಾತ್ರ ಉಳಿಯುತ್ತದೆ. ಇದು 'ಙಿ' ಆಗಿರೋಣದ್ದರಿಂದ, 'ಙಿಚ್ಚ' ಎಂಬ ಸೂತ್ರದಿಂದ, ಅನ್ತ್ಯವಾದ 'ಇ' ಕಾರದ ಸ್ಥಾನದಲ್ಲೇ ಈ 'ಅನ್' ಆದೇಶವು ಬರುತ್ತದೆ. 'ಟಾ' ಇಂದ ಆರಂಭಿಸಿ 'ಸುಪ್' ವರೆಗೆ ತೃತಿಯಾದಿ ವಿಭಕ್ತಿಗಳು ಇವೆ. ಇವುಗಳಲ್ಲಿ ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ ಮಾತ್ರ ಈ ಆದೇಶವು ಬರುತ್ತದೆ.

**(ಅ–ಕಾರದ ಲೋಪವನ್ನು (ಅಲ್ಲೋಪವನ್ನು) ವಿಧಿಸುವ ಸೂತ್ರ)**

**ಸೂತ್ರ– 248. ಅಲ್ಲೋಪೋऽನಃ (6.4.234)**

ವೃತ್ತಿಃ–ಅಙ್ಗಾವಯವೋऽಸರ್ವನಾಮಸ್ಥಾನ–ಯಜಾದಿ–ಸ್ವಾದಿಪರಃ ಯಃ ಅನ್ ತಸ್ಯ ಅ ಕಾರಸ್ಯ ಲೋಪಃ। ದಧ್ನಾ । ದಧ್ನೇ। ದಧ್ನಃ। ದದ್ನಃ। ದಧ್ನೋಃ। ದಧ್ನೋಃ।

ಪ. ಛೇ. – ಅತ್,(ಅತಃ), ಲೋಪಃ, ಅನಃ।

ಅ.ವೃ. – 'ಭಸ್ಯ' ಮತ್ತು 'ಅಙ್ಗಸ್ಯ' ಎಂಬವು ಅಧಿಕಾರ ಸೂತ್ರಗಳು.

ಅರ್ಥ– ಅಸರ್ವನಾಮಸ್ಥಾನವಾದ, ಯಾದಿ (ಯ್–ಕಾರಾದಿ) ಮತ್ತು ಅಜಾದಿ ಸುಪ್ ಪ್ರತ್ಯಯಗಳು ಪರದಲ್ಲಿದ್ದಾಗ, ಪೂರ್ವಶಬ್ದರೂಪಕ್ಕೆ 'ಭ' ಸಂಜ್ಞೆಯು ಬರುತ್ತದೆ. ಸರ್ವನಾಮಸ್ಥಾನ ಭಿನ್ನವಾದ 'ಯ್'ಕಾರಾದಿ ಮತ್ತು ಅಜಾದಿ ಸ್ವಾದಿ (ಸುಪ್)ಪ್ರತ್ಯಯಗಳು ಪರದಲ್ಲಿದ್ದಾಗ, ಅಙ್ಗದ ಅವಯವಕ್ಕೆ ಯಾವ 'ಅನ್' ಆದೇಶವಾಗಿ ಬರುತ್ತದೋ, ಅದರ 'ಅ' ಕಾರಕ್ಕೆ ಲೋಪವು ಬರುತ್ತದೆ. 'ಭಸ್ಯ' ಎಂಬುದರಿಂದ ಸರ್ವನಾಮಸ್ಥಾನಭಿನ್ನವಾದ ಸ್ಥಳಗಳಲ್ಲಿ 'ಯ್' ಕಾರಾದಿ ಮತ್ತು 'ಅಜಾದಿ' ಸ್ವಾದಿಪ್ರತ್ಯಯಗಳು ಎಂಬುದು ಗೃಹೀತವಾಗುತ್ತದೆ. ಇವುಗಳು ಪರದಲ್ಲಿದ್ದಾಗ, ಈ ಪ್ರಕೃತ ಸೂತ್ರವು ಪ್ರವೃತ್ತವಾಗುತ್ತದೆ. 'ಅನಙ್' ಆದೇಶದಲ್ಲಿ 'ನ್' ಕಾರೋತ್ತರವರ್ತಿ 'ಅ'ಕಾರವು ಅನುನಾಸಿಕವಾದುದರಿಂದ ಅದಕ್ಕೆ 'ಇತ್' ಸಂಜ್ಞೆ ಮತ್ತು 'ಙ್' ಕಾರಕ್ಕೆ "ಹಲನ್ತ್ಯಮ್" ಎಂಬ ಸೂತ್ರದಿಂದ 'ಇತ್' ಸಂಜ್ಞೆ ಬಂದು ಅವು ಲೋಪವಾಗಿ 'ಅನ್' ಎಂಬುದು ಮಾತ್ರ ಉಳಿಯುತ್ತದೆ. ಅನಂತರ 'ಅನ್' ಎಂಬುದರಲ್ಲಿರುವ

'ಅ' ಕಾರಕ್ಕೆ ಪ್ರಕೃತ ಸೂತ್ರದಿಂದ ಲೋಪವು ಬಂದು 'ನ್' ಮಾತ್ರ ಉಳಿಯುತ್ತದೆ.

ಉದಾ– ದಧ್ನಾ – ತೃತಿಯಾ ವಿಭಕ್ತಿ ಏಕವಚನದಲ್ಲಿ ದಧಿ+ಆ(ಟಾ) ಎಂದಿದ್ದಾಗ, ಹಿಂದಿನ ಸೂತ್ರದಿಂದ 'ಅನ್' (ಅನಙ್) ಆದೇಶವು ಬಂದು ದಧ್+ಅನ್+ಆ ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ಅನ್' ನಲ್ಲಿರುವ 'ಅ' ಕಾರಕ್ಕೆ ಲೋಪ ಬಂದು ದಧ್+ ನ್+ಆ=ದಧ್ನಾ ಎಂದು ರೂಪವು ಆಗುತ್ತದೆ.

ಉದಾ – ಧಧ್ನೇ – ಚತುರ್ಥೀ ವಿಭಕ್ತಿ ಏಕವಚನದಲ್ಲಿ ದಧ್+ಅನ್+ಏ (ಙೇ) ಎಂದಿದ್ದಾಗ, ಮೇಲಿನಂತೆಯೇ 'ಅ' ಕಾರ ಲೋಪವಾಗಿ 'ನ್' ಮಾತ್ರ ಉಳಿದು ದಧ್+ನ್+ಏ=ಧಧ್ನೇ ಎಂದು ರೂಪವಾಗುತ್ತದೆ.

ಉದಾ – ದಧ್ನಃ(2)– ಪಞ್ಚಮೀ ಮತ್ತು ಷಷ್ಠೀ ಏಕವಚನಗಳಲ್ಲಿ ದಧ್+ನ್+ಅಸ್ (ಙಸಿ) ಎಂದಿದ್ದಾಗ, ದಧ್ನಸ್ ಎಂದಾಗಿ'ಸ್' ಕಾರಕ್ಕೆ ಖುತ್ವ–ವಿಸರ್ಗಗಳು ಬಂದು ದಧ್ನಃ, ದಧ್ನಃ ಎಂದು ರೂಪಗಳಾಗುತ್ತವೆ.

ಉದಾ– ದಧ್ನೋಃ(2)–ಷಷ್ಠೀ ಮತ್ತು ಸಪ್ತಮೀ ವಿಭಕ್ತಿ ದ್ವಿವಚನಗಳಲ್ಲಿ ದಧ್+ಅನ್+ಓಸ್ ಎಂದಿದ್ದಾಗ, ಮೇಲಿನಂತೆಯೇ ಪ್ರಕ್ರಿಯೆಗಳಾಗಿ, ದಧ್+ನ್+ಓಸ್= ದಧ್ನೋಸ್ ಎಂದಾಗಿ ಖುತ್ವ–ವಿಸರ್ಗಗಳು ಬಂದು ದಧ್ನೋಃ, ದಧ್ನೋಃ ಎಂದು ರೂಪಗಳಾಗಿವೆ.

ಉದಾ–ದಧ್ನಾಮ್ – ಷಷ್ಠೀ ವಿಭಕ್ತಿ ಬಹುವಚನದಲ್ಲಿ–ದಧ್+ಅನ್+ಆಮ್ ಎಂದಿದ್ದಾಗ, ಮೇಲಿನಂತೆಯೇ ಪ್ರಕ್ರಿಯೆಗಳಾಗಿ, ದಧ್+ನ್+ಆಮ್ ಎಂದಾಗಿ ದಧ್ನಾಮ್ ಎಂದು ರೂಪವಾಗುತ್ತದೆ.

ಸೂಚನೆ: ಇನ್ನು ಹಲಾದಿ ಪ್ರತ್ಯಯಗಳು ಪರದಲ್ಲಿದ್ದಾಗ, ಯಾವ ವಿಕಾರಗಳು ಆಗದು. ಹಾಗಾಗಿ ದಧಿಬ್ಯಾಮ್–3 ದಧಿಭ್ಯಃ–2, ದಧಿಷು ಇತ್ಯಾದಿ ರೂಪಗಳಾಗುತ್ತವೆ.

**(ವೈಕಲ್ಪಿಕವಾಗಿ ಅಲ್ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ –249. ವಿಭಾಷಾ ಙಿಶ್ಯೋಃ (6.4.236)**

ವೃತ್ತಿಃ–ಅಙ್ಗಾವಯವೋಽಸರ್ವನಾಮಸ್ಥಾನಪರಃ ಯಃ ಅನ್ ತಸ್ಯ ಅ ಕಾರಸ್ಯ ಲೋಪಃ ವಾ ಸ್ಯಾತ್। ಙಿಶ್ಯೋಃ ಪರಯೋಃ। ದಧ್ನಿ ।ದಧನಿ। ಶೇಷಂ ವಾರಿವತ್। ಏವಂ ಅಸ್ಥಿ–ಸಕ್ಥ್ಯಕ್ಷಿ। ಸುಧಿ। ಸುಧಿನೀ। ಸುಧೀನಿ। ಹೇ ಸುಧೇ!।ಹೇಸುಧಿ!।

ಅ. ವೃ. – "ಅಲ್ಲೋಪೋಽನಃ" ಎಂಬ ಸೂತ್ರವು ಅನುವೃತ್ತವಾಗುತ್ತದೆ. 'ಭಸ್ಯ' ಮತ್ತು 'ಅಙ್ಗಸ್ಯ' ಎಂಬುವು ಅಧಿಕಾರಸೂತ್ರಗಳು.

ಅರ್ಥ– ಸರ್ವನಾಮಸ್ಥಾನಭಿನ್ನವಾದ 'ಯ್' ಕಾರಾದಿಯಾದ ಮತ್ತು ಅಜಾದಿ, ಸ್ವಾದಿ–ಪ್ರತ್ಯಯರೂಪವಾದ 'ಙಿ' ಮತ್ತು 'ಶೀ' ಪರದಲ್ಲಿದ್ದಾಗ, ಅಙ್ಗದ ಅವಯವವಾದ 'ಅನ್' ನಲ್ಲಿರುವ 'ಅ' ಕಾರಕ್ಕೆ ವಿಕಲ್ಪದಿಂದ, ಲೋಪವು ಬರುತ್ತದೆ.

ಉದಾ– ದಧ್ನಿ– ಸಪ್ತಮೀ ವಿಭಕ್ತಿ ಏಕವಚನದಲ್ಲಿ, ದಧ್+ಅನ್+ಇ (ಙಿ)

ಎಂದಿದ್ದಾಗ, 'ಅ' ಕಾರ ಲೋಪಾಭಾವ ಪಕ್ಷದಲ್ಲಿ, ಕೇವಲ ವರ್ಣಜೋಡಣೆಯಿಂದ ದಧನಿ ಎಂದು ರೂಪವಾಗುತ್ತದೆ. ವೈಕಲ್ಪಿಕ ಪಕ್ಷದಲ್ಲಿ ದಧ್+ಅನ್+ಇ (ಜಿ) ಎಂದಾಗಿ ಪ್ರಕೃತ ಸೂತ್ರದಿಂದ 'ಅ'ಕಾರಕ್ಕೆ ಲೋಪ ಬಂದು ದಧ್+ನ್+ಇ ಎಂದಾಗಿ ದಧ್ನಿ ಎಂದು ರೂಪವಾಗುತ್ತದೆ.

ಸೂಚನೆ: ಉಳಿದ ರೂಪಗಳು ವಾರಿ ಶಬ್ದದಂತೆ ಇರುತ್ತವೆ.

**(ಇ-ಕಾರಾನ್ತ ನಪುಂಸಕ ದಧಿ ಶಬ್ದದ ರೂಪಗಳು)**

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ದಧಿ | ದಧಿನೀ | ದಧೀನಿ |
| ದ್ವಿತೀಯ | ದಧಿ | ದಧಿನೀ | ದಧೀನಿ |
| ತೃತೀಯ | ದಧ್ನಾ | ದಧಿಭ್ಯಾಮ್ | ದದಿಭಿಃ |
| ಚತುರ್ಥೀ | ದಧ್ನೇ | ದಧಿಭ್ಯಾಮ್ | ದಧಿಭ್ಯಃ |
| ಪಞ್ಚಮೀ | ದಧ್ನಃ | ದಧಿಭ್ಯಾಮ್ | ದಧಿಭ್ಯಃ |
| ಷಷ್ಠೀ | ದಧ್ನಃ | ದದ್ನೋಃ | ದಧ್ನಾಮ್ |
| ಸಪ್ತಮೀ | ದಧ್ನಿ, ದಧನಿ | ದಧ್ನೋಃ | ದಧಿಷು |
| ಸಂಬೋಧನ | ಹೇ ದಧೇ! | ಹೇ ದಧಿ!ಹೇ ದಧಿನೀ! | ಹೇ ದಧೀನಿ! |

ಸೂಚನೆ: ಅಸ್ಥಿ, ಸಕ್ಥಿ, ಮತ್ತು ಅಕ್ಷಿ ಶಬ್ದಗಳು ಇದೇ ರೀತಿಯಲ್ಲಿ ನಡೆಸಲ್ಪಡುತ್ತವೆ.

**ಇಲ್ಲಿಗೆ 'ಇ' ಕಾರಾನ್ತ ನಪುಂಸಕಲಿಙ್ಗ ಶಬ್ದಗಳು ಮುಗಿದವು.**

ಸೂಚನೆ-1: ವಿದ್ವಾನ್ ಎಂಬ ಅರ್ಥವುಳ್ಳಂತಹ ಸುಧೀ ಶಬ್ದವು ಪುಲ್ಲಿಂಗದಲ್ಲಿದ್ದರೂ ವಿದ್ವಾಂಸರಿಂದ ಕೂಡಿದ ಕುಲ ಎಂಬ ಅರ್ಥದಲ್ಲಿ ಕುಲ ಶಬ್ದಕ್ಕೆ ವಿಶೇಷಣವಾದಾಗ ನಪುಂಸಕ ಲಿಂಗದಲ್ಲಿ ಪ್ರ೦ಯೋಗಿಸಲ್ಪಡುತ್ತದೆ.

ಸೂಚನೇ-2: 'ಹ್ರಸ್ವೋ ನಪುಂಸಕೇ ಪ್ರಾತಿಪದಿಕಸ್ಯ' ಎಂಬ ಸೂತ್ರದಿಂದ ಸುಧೀ ಶಬ್ದದಲ್ಲಿರುವ 'ಈ' ಕಾರಕ್ಕೆ ಹ್ರಸ್ವ ಬಂದು ಸುಧಿ ಎಂದಾಗುತ್ತದೆ.

ಉದಾ – ಹೇ ಸುಧೇ!, ಹೇ ಸುಧಿ!– ಪ್ರಥಮಾ ಮತ್ತು ದ್ವಿತೀ೦ಯಾ ವಿಭಕ್ತಿಗಳಲ್ಲಿ ದಧಿ ಶಬ್ದದಂತೆ ಸುಧಿ, ಸುಧಿನೀ, ಸುಧೀನೀ ಎಂದು ಹಾಗೆ೦ಯೇ ಸಂಬೋಧನಾರ್ಥದಲ್ಲಿ ಹೇ ಸುಧೇ, ಹೇ ಸುಧಿ ಎಂದು ರೂಪಗಳು ಸಿದ್ಧವಾಗುತ್ತವೆ.

**(ಪುಂವದ್ಭಾವವನ್ನು ವಿಧಿಸುವ ಸೂತ್ರ)**

**ಸೂತ್ರ- ೨೫೦. ತೃತೀಯಾದಿಷು ಭಾಷಿತಪುಂಸ್ಕಂ ಪುಂವದ್ ಗಾಲವಸ್ಯ (7.1.74)**

ವೃತ್ತಿಃ–ಪ್ರವೃತ್ತಿನಿಮಿತ್ತ ಐಕ್ಯೇ ಭಾಷಿತಪುಂಸ್ಕಂ ಇಗಂತಂ ಕ್ಲೀಬಂ ಪುಂವದ್ವಾ ಟಾದೌ ಅಚಿ। ಸುಧಿ೦ಯಾ। ಸುಧಿನಾ ಇತ್ಯಾದಿ। ಮಧು, ಮಧುನೀ, ಮಧೂನಿ। ಹೇ ಮಧೋ!। ಹೇ ಮಧು!। ಸುಲು। ಸುಲುನೀ। ಸುಲೂನಿ। ಸುಲ್ವಾ ಸುಲುನೇ ಇತ್ಯಾದಿ। ಧಾತ್ಯ।

ಧಾತೃಣೀ। ಧಾತೃಣಿ। ಹೇ ಧಾತಃ!।ಹೇ ಧಾತೃ।। ಧಾತ್ರಾ, ಧಾತೃಣಾ, ಧಾತೃಣಾಮ್।
ಏವಂ ಜ್ಞಾತ್ರಾದಯಃ।

ಅ.ವ್ಯ.–"ಇಕೋಽಚಿ ವಿಭಕ್ತೌ (245/7.1.73)" ಎಂಬ ಸೂತ್ರವು ಅನುವೃತ್ತವಾಗುತ್ತದೆ.

ಅರ್ಥ– ಪ್ರವೃತ್ತಿ ನಿಮಿತ್ತಗಳು ಒಂದೇ ಆಗಿರುವಾಗ ಭಾಷಿತ ಪುಂಸ್ಕವಾದ ಇಗಂತ ನಪುಂಸಕ ಶಬ್ದವು ವಿಕಲ್ಪದಿಂದ ಪುಲ್ಲಿಂಗದಂತೆ ಇರುತ್ತದೆ – ತೃತೀಯಾ ಮೊದಲಾದ ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ.

ಸೂಚನೆ–1: ಪ್ರವೃತ್ತಿ ನಿಮಿತ್ತ– ಪ್ರತ್ಯೇಕ ಶಬ್ದಕ್ಕೆ ತನ್ನ ಅರ್ಥವನ್ನು ಬೋಧಿಸುವುದಕ್ಕಾಗಿ ಒಂದು ನಿಮಿತ್ತವು ಅವಶ್ಯಕವಾಗಿರುತ್ತದೆ. ಅದಕ್ಕೆ ಪ್ರವೃತ್ತಿ ನಿಮಿತ್ತವೆಂದು ಹೇಳುತ್ತೇವೆ. ಬಿಳುಪು ಎಂಬ ಅರ್ಥವನ್ನು ಬೋಧಿಸುವುದಕ್ಕಾಗಿ ಶುಕ್ಲ ಎಂಬ ಶಬ್ದವು ಪ್ರವೃತ್ತವಾಗುತ್ತದೆ. ಶುಕ್ಲತ್ವ ಈ ಪ್ರವೃತ್ತಿಗೆ ನಿಮಿತ್ತವಾಗಿದೆ.

ಸೂಚನೆ–2: ವಿಪ್ರ ಎಂಬ ಅರ್ಥವನ್ನು ಬೋಧಿಸುವುದಕ್ಕಾಗಿ ಬ್ರಾಹ್ಮಣ ಶಬ್ದವು ಪ್ರವೃತ್ತವಾಗಿದೆ. ಇಲ್ಲಿ ಪ್ರವೃತ್ತಿಗೆ ನಿಮಿತ್ತವು ಬ್ರಾಹ್ಮಣತ್ವ ಒಂದೇ ವಿಶೇಷವನ್ನು ನಿಮಿತ್ತವಾಗಿ ಇಟ್ಟುಕೊಂಡು ಪ್ರವೃತ್ತವಾಗುವುದಕ್ಕೆ ಪ್ರವೃತ್ತಿ ನಿಮಿತ್ತವೆಂದು ಹೆಸರು. ಪ್ರವೃತ್ತಿ ನಿಮಿತ್ತವು ಪುಲ್ಲಿಂಗದಲ್ಲಿಯೂ ಇರಬಹುದು. ಆದರೆ ಅದು ಒಂದಾಗಿಯೂ ಇರಬಹುದು. ಹೇಗೆ ಸುಧೀ ಶಬ್ದಕ್ಕೆ ಪುಲ್ಲಿಂಗದಲ್ಲಿ ಶೋಭನಧ್ಯಾನಕರ್ತೃತ್ವವು ಪ್ರವೃತ್ತಿ ನಿಮಿತ್ತವಾಗಿದೆಯೋ ಹಾಗೆಯೇ ನಪುಂಸಕ ಲಿಂಗದಲ್ಲಿಯೂ ಶೋಭನಧ್ಯಾನಕರ್ತೃತ್ವ ಎಂಬ ಅರ್ಥವು ಪ್ರವೃತ್ತಿ ನಿಮಿತ್ತವಾಗಿದೆ. ಆದ್ದರಿಂದ ಪ್ರವೃತ್ತಿ ನಿಮಿತ್ತವು ಒಂದೇ ಆಗಿದೆ. ತಾತ್ಪರ್ಯವೇನೆಂದರೆ ಶಬ್ದಪ್ರಯೋಗಕ್ಕೆ ಕಾರಣವಾಗಿ ಅಂದರೆ ಯಾವ ನಿಮಿತ್ತದಿಂದ ಶಬ್ದಪ್ರಯೋಗವಾಗುತ್ತದೆಯೋ ಆ ಅರ್ಥವನ್ನೇ ಪ್ರವೃತ್ತಿ ನಿಮಿತ್ತವೆಂದು ತಿಳಿಯಬೇಕು.

ಸೂಚನೆ–3: ಭಾಷಿತ ಪುಂಸ್ಕ– ಒಂದೇ ಪ್ರವೃತ್ತಿ ನಿಮಿತ್ತವನ್ನು ಆಶ್ರಯಿಸಿದ ಪುಲ್ಲಿಂಗದಲ್ಲಿ ಪ್ರವೃತ್ತವಾದ ಶಬ್ದವು ನಪುಂಸಕದಲ್ಲಿಯೂ ಪ್ರಯುಕ್ತವಾದರೆ ಅದಕ್ಕೆ ಭಾಷಿತ ಪುಂಸ್ಕವೆಂದು ಕರೆಯುತ್ತಾರೆ. ಗಾಲವ ಋಷಿಗಳ ಪ್ರಕಾರ ಪುಲ್ಲಿಂಗದಂತೆ ಆದರೆ ಇತರರ ಪ್ರಕಾರ ನಪುಂಸಕ ಲಿಂಗದಲ್ಲೂ ಇರುವುದು. ಪುಂವದ್ಭಾವ ಬಂದ ಕಾರಣದಿಂದ ಪುಲ್ಲಿಂಗದಲ್ಲೇ ಇರಬೇಕೆಂದಿಲ್ಲ. ಆದರೆ ಪುಲ್ಲಿಂಗದಲ್ಲಿ ಯಾವ ಕಾರ್ಯವಾಗುತ್ತದೆಯೋ ಆ ಕಾರ್ಯ ನಪುಂಸಕ ಲಿಂಗದಲ್ಲೂ ಆಗಬೇಕು.

ಇಲ್ಲಿ ಸುಧೀ ಶಬ್ದದ ಮೇಲೆ ಪುಂವದ್ಭಾವವಾದ ಮೇಲೆ ನಪುಂಸಕ ಲಿಂಗದಲ್ಲಿ ಹ್ರಸ್ವಾಂತರೂಪವನ್ನು ತಾಳಿದೆ. ಮತ್ತು ಈ ಸುಧೀ ಶಬ್ದವು ದೀರ್ಘಾಂತ ರೂಪದಲ್ಲೂ ಪ್ರಯುಕ್ತವಾಗುತ್ತದೆ. ಸುಧೀ+ಆ ಎಂದಿದ್ದಾಗ 'ಅಚಿ-ಶ್ನು- ಧಾತುಭ್ರುವಾಂ-ಯ್ವೋಃ-ಇಯಙ್-ಉವಙೌ' ಎಂಬ ಸೂತ್ರದಿಂದ 'ಇಯಙ್' ಪ್ರಾಪ್ತವಾಗಿ ಅದನ್ನು ಬಾಧಿಸಿ 'ಏರನೇಕಾಚೋಽಸಂಯೋಗಪೂರ್ವಸ್ಯ' ಎಂಬ ಸೂತ್ರದಿಂದ ಯಣ್ ಪ್ರಾಪ್ತವಾಗಿ ಅದನ್ನು 'ನ ಭೂಸುಧಿಯೋಃ' ಎಂಬ ಸೂತ್ರವು ನಿಷೇಧಿಸಿದ ಮೇಲೆ 'ಅಚಿಶ್ನು... ಇಯಙ್ ಉವಙೌ' ಎಂಬ ಸೂತ್ರದಿಂದ ಇಯಙ್ ಬಂದು ಸುಧಿಯಾ ಮೊದಲಾದ ರೂಪಗಳು ಸಿದ್ಧವಾಗುತ್ತವೆ. ಪುಂವದ್ಭಾವವು ಬಾರದ ಪಕ್ಷದಲ್ಲಿ ಹ್ರಸ್ವವೇ ಉಳಿಯುತ್ತದೆ.

ಮತ್ತು 'ಇಕೋಽಚಿ ವಿಭಕ್ತೌ' ಅನ್ನುವದರಿಂದ ನುಮಾ(ನ್)ಗಮ ಬಂದು ಸುಧಿನಾ ಎಂದು ರೂಪವಾಗುತ್ತದೆ. ಸುಧಿಯಾ, ಸುಧಿನಾ ಎಂಬಂತೆ ಚತುರ್ಥೀ ಏಕವಚನದಲ್ಲಿ ಸುಧಿಯೇ, ಸುಧಿನೇ ಎಂದಾಗುತ್ತದೆ. ಪಂಚಮೀ ಮತ್ತು ಷಷ್ಠೀ ಏಕವಚನದಲ್ಲಿ ಸುಧಿಯಃ, ಸುಧಿನಃ, ಎಂದು ರೂಪವಾಗುತ್ತವೆ. ತೃತೀಯಾ ಮತ್ತು ಚತುರ್ಥೀ ಮೊದಲಾದ ವಿಭಕ್ತಿಗಳಲ್ಲಿ ಯಾವ ಕಾರ್ಯವಾಗುತ್ತದೋ ಅದು ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿಗಳಲ್ಲಿ ಇರುವುದಿಲ್ಲ.

**('ಈ' ಕಾರಾಂತ ಭಾಷಿತ ಪುಂಸ್ಕ ಸುಧೀ ಶಬ್ದದ ರೂಪಗಳು)**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಸುಧಿ | ಸುಧಿನೀ | ಸುಧೀನಿ |
| ದ್ವಿತೀಯ | ಸುಧಿ | ಸುಧಿನೀ | ಸುಧೀನಿ |
| ತೃತೀಯ | ಸುಧಿಯಾ | ಸುಧಿಭ್ಯಾಮ್ | ಸುಧಿಭಿಃ |
| ಚತುರ್ಥೀ | ಸುಧಿಯೇ, ಸುಧಿನೇ | ಸುಧಿಭ್ಯಾಮ್ | ಸುಧಿಭ್ಯಃ |
| ಪಞ್ಚಮೀ | ಸುಧಿಯಃ, ಸುಧಿನಃ | ಸುಧಿಭ್ಯಾಮ್ | ಸುಧಿಭ್ಯಃ |
| ಷಷ್ಠೀ | ಸುಧಿಯಃ, ಸುಧಿನಃ | ಸುಧಿಯೋಃ, ಸುಧಿನೋಃ | ಸುಧಿಯಾಮ್, ಸುಧೀನಾಮ್ |
| ಸಪ್ತಮೀ | ಸುಧಿಯಿ, ಸುಧಿನಿ | ಸುಧಿಯೋಃ, ಸುಧಿನೋಃ | ಸುಧಿಷು |
| ಸಂಬೋಧನ | ಹೇ ಸುಧೇ!, ಹೇ ಸುಧಿ! | ಹೇ ಸುಧಿನೀ! | ಹೇ ಸುಧೀನಿ! |

**ಗಮನಕ್ಕೆ:** ಈಗ 'ಉ' ಕಾರಾಂತ ನಪುಂಸಕ ಮಧು ಮೊದಲಾದ ರೂಪಗಳಿಗೆ ವಾರಿ ಶಬ್ದದಂತೆ ರೂಪಗಳು ಸಿದ್ಧವಾಗುತ್ತವೆ ಎಂಬುದನ್ನು ವಿವರಿಸುತ್ತೇವೆ. ವಾರಿ ಮತ್ತು ಮಧು ಶಬ್ದಗಳ ರೂಪಗಳಲ್ಲಿ ಸ್ವಲ್ಪವೇ ಭೇದವಿದೆ. ವಾರಿ ಶಬ್ದದ ನಂತರ ಬರುವಂತಹ 'ನುಮ್' ನ 'ನ್' ಕಾರವು ರೇಫದ ಪರದಲ್ಲಿ ಇರುವುದರಿಂದ ಣತ್ವವು ಬರುತ್ತದೆ. ಆದರೆ ಮಧು ಶಬ್ದದ ನಂತರ ಇರುವ 'ನುಮ್' ನ 'ನ್' ಕಾರವು ರೇಫ ಅಥವಾ ಷ್ ಕಾರದ ನಂತರ ಇಲ್ಲದೇ ಇರುವುದರಿಂದ ಣತ್ವವು ಇರುವುದಿಲ್ಲ.

**(ಉ ಕಾರಾಂತ ನಪುಂಸಕ ಲಿಂಗದ ಮಧು ಶಬ್ದದ ರೂಪಗಳು)**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಮಧು | ಮಧುನೀ | ಮಧೂನಿ |
| ದ್ವಿತೀಯ | ಮಧು | ಮಧುನೀ | ಮಧೂನಿ |
| ತೃತೀಯ | ಮಧುನಾ | ಮಧುಭ್ಯಾಮ್ | ಮಧುಭಿಃ |

| | | | |
|---|---|---|---|
| ಚತುರ್ಥೀ | ಮಧುನೇ | ಮಧುಭ್ಯಾಮ್ | ಮಧುಭ್ಯಃ |
| ಪಞ್ಚಮೀ | ಮಧುನಃ | ಮಧುಭ್ಯಾಮ್ | ಮಧುಭ್ಯಃ |
| ಷಷ್ಠೀ | ಮಧುನಃ | ಮಧುನೋಃ | ಮಧೂನಾಮ್ |
| ಸಪ್ತಮೀ | ಮಧುನಿ | ಮಧುನೋಃ | ಮಧುಷು |
| ಸಂಬೋಧನ | ಹೇ ಮಧೋ! | ಹೇ ಮಧುನೀ! | ಹೇ ಮಧೂನಿ! |

'ಸುಲು' ಶಬ್ದದ ರೂಪಗಳು-ಸುಷ್ಠು ಲುನಾತಿ ಇತಿ ಸುಲು. ಸು+ಲೂ ಇದು ಅಜಂತವಾಗಿರುವುದರಿಂದ ನಪುಂಸಕ ಲಿಂಗದಲ್ಲಿ 'ಹ್ರಸ್ವೋ ನಪುಂಸಕೇ ಪ್ರಾತಿಪದಿಕಸ್ಯ' ಎಂಬ ಸೂತ್ರದಿಂದ ಹ್ರಸ್ವವಾಗಿ ಸುಲು ಎಂದಾಗುತ್ತದೆ. ಸುಲು ಅಂದರೆ ಯಾವುದು ಚೆನ್ನಾಗಿ ಕತ್ತರಿಸುತ್ತದೋ ಅದು (ಶಸ್ತ್ರ). ವಿಶೇಷ ನಿಗ್ರಹವಾಗುವುದರಿಂದ ಇದರ ರೂಪಗಳು ಮೂರೂ ಲಿಂಗಗಳಲ್ಲೂ ಇರುತ್ತದೆ. ಒಂದು ಅರ್ಥವನ್ನು ವಿಶೇಷವಾಗಿ ಸ್ವೀಕಾರಮಾಡಿರುವುದರಿಂದ ಮೂರೂ ಲಿಂಗಗಳಲ್ಲೂ ಇರುವುದರಿಂದ ಪ್ರವೃತ್ತಿ ನಿಮಿತ್ತವು ಒಂದೇ ಇರುತ್ತದೆ. ಇದಕ್ಕೆ ಪುಂವದ್ಭಾವವು ಬಂದಿದೆ. ಪುಲ್ಲಿಂಗದಲ್ಲಿ 'ಓಃಸುಪಿ' ಎಂಬ ಸೂತ್ರದಿಂದ ಯಣ್ ಸಂಧಿ ಬಂದು ಸಲೂಃ, ಸುಲ್ವೌ, ಸುಲ್ವಃ, ಎಂದು ರೂಪಗಳು ಸಿದ್ಧವಾಗುತ್ತವೆ. ನಪುಂಸಕ ಲಿಂಗದಲ್ಲೂ ಸಹ ತೃತೀಯಾದಿಂದ ಆರಂಭಿಸಿ ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ ಪುಂವದ್ಭಾವ ಬಂದ ರೂಪ ಒಂದು, ಮತ್ತು ಪುಂವದ್ಭಾವವಿಲ್ಲದ ಪಕ್ಷದಲ್ಲಿ 'ನುಮಾಗಮ'ದಿಂದ ಕೂಡಿದ ರೂಪವು ಒಂದು ಬರುತ್ತದೆ.

**'ಉ' ಕಾರಾಂತ ಭಾಷಿತ ಪುಂಸ್ಕ ಸುಲೂ ಶಬ್ದದ ರೂಪಗಳು**

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಸುಲು | ಸುಲುನೀ | ಸುಲೂನಿ |
| ದ್ವಿತೀಯ | ಸುಲು | ಸುಲುನೀ | ಸುಲೂನಿ |
| ತೃತೀಯ | ಸುಲ್ವಾ, ಸುಲುನಾ | ಸುಲುಭ್ಯಾಮ್ | ಸುಲುಭಿಃ |
| ಚತುರ್ಥೀ | ಸುಲ್ವೇ, ಸುಲುನೇ | ಸುಲುಭ್ಯಾಮ್ | ಸುಲುಭ್ಯಃ |
| ಪಞ್ಚಮೀ | ಸುಲ್ವಃ, ಸುಲುನಃ | ಸುಲುಭ್ಯಾಮ್ | ಸುಲುಭ್ಯಃ |
| ಷಷ್ಠೀ | ಸುಲ್ವಃ, ಸುಲುನಃ | ಸುಲ್ವೋಃ, ಸುಲುನೋಃ | ಸುಲ್ವಾಮ್, ಸುಲೂನಾಮ್ |
| ಸಪ್ತಮೀ | ಸುಲ್ವಿ, ಸುಲುನಿ | ಸುಲ್ವೋಃ,ಸುಲುನೋಃ | ಸುಲುಷು |
| ಸಂಬೋಧನ | ಹೇ ಸುಲೋ! ಹೇ ಸುಲು! | ಹೇ ಸುಲುನೀ! | ಹೇ ಸುಲೂನಿ! |

ಸೂಚನೆ: ಈ ತರಹ ಮೇಲೆ ಬರೆದಿರುವ ಭಾಷಿತ-ಪುಂಸ್ಕ ಶಬ್ದಗಳ ರೂಪಗಳನ್ನು ವಿದ್ಯಾರ್ಥಿಗಳು ಪರಿಚಯಮಾಡಿಕೊಳ್ಳಬೇಕು. ಇಲ್ಲಿರುವ ವ್ಯತ್ಯಾಸಗಳನ್ನು ತಿಳಿದುಕೊಳ್ಳಬೇಕು. ಇಲ್ಲಿ ಉ ಕಾರಾಂತ ಶಬ್ದವು ಧಾತುವಲ್ಲವಾದರೆ ಅದು ಪುಲ್ಲಿಂಗ

ಶಬ್ದದಲ್ಲಿ 'ಓಃ ಸುಪಿ' ಎಂಬ ಸೂತ್ರದಿಂದ ಯಣ್ ಸಂಧಿಯಂತು ಆಗುವುದಿಲ್ಲ. ಆದರೆ ಭಾನು ಶಬ್ದದಂತೆ ರೂಪಗಳು ಇರುತ್ತವೆ.

'ಉ' ಕಾರಾಂತ ಇತರ ಭಾಷಿತ ಪುಂಸ್ಕ ಶಬ್ದಗಳ ಉದಾಹರಣೆಗಳು–

ಋಜು, ಸಾಧು, ಕಟು, ಮೃದು, ಸ್ವಾದು, ಗುರು, ವಿಭು.

**ಇಲ್ಲಿಗೆ 'ಉ'ಕಾರಾಂತ ನಪುಂಸಕ ಲಿಂಗ ಶಬ್ದಗಳು ಮುಗಿದವು.**

**'ಋ'ಕಾರಾಂತ ನಪುಂಸಕಲಿಂಗ ಶಬ್ದಗಳು**

ಸೂಚನೆ–1: ಧಾತೃ– ಧಾರಣ ಮಾಡುವ ಕುಲ, ಇಲ್ಲಿ ಧಾರಣಮಾಡುವ ಎಂಬ ಅರ್ಥದಲ್ಲಿ ಈ ಶಬ್ದವು ಪುಲ್ಲಿಂಗದಲ್ಲಿ ಪ್ರಯುಕ್ತವಾಗಿರುತ್ತದೆ. ಮತ್ತು ಇದೇ ಅರ್ಥವುಳ್ಳ ಶಬ್ದವು ನಪುಂಸಕಲಿಂಗದಲ್ಲೂ ಪ್ರವೃತ್ತವಾಗುತ್ತದೆ. ಆಗ ಪ್ರವೃತ್ತಿನಿಮಿತ್ತವು ಒಂದೇ ಆಗಿದೆ, ಭಾಷಿತ ಪುಂಸ್ಕವಾಗಿಯೂ ಇದೆ. ಆದ್ದರಿಂದ ತೃತೀಯಾದಿ ಅಜಾದಿ ವಿಭಕ್ತಿಗಳು ಪರವಾದಾಗ ವಿಕಲ್ಪದಿಂದ ಪುಂವದ್ಭಾವವು ಬಂದು ಎರೆಡೆರೆಡು ರೂಪಗಳು ಬರುತ್ತವೆ.

ಸೂಚನೆ–2: ಪುಲ್ಲಿಂಗದಲ್ಲಿ ತೃತೀಯಾದಿ ವಿಭಕ್ತಿಗಳಲ್ಲಿನ ಅಜಾದಿ ವಿಭಕ್ತಿಗಳು ಪರವಾದಾಗ ಯಣ್ ಸಂಧಿ ಹಾಗು ನುಮಾಗಮವು ಬರುತ್ತದೆ.

**ಋ ಕಾರಾಂತ ಭಾಷಿತಪುಂಸ್ಕ ಧಾತೃ ಶಬ್ದದ ರೂಪಗಳು**

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಧಾತೃ | ಧಾತೃಣೀ | ಧಾತೄಣಿ |
| ದ್ವಿತೀಯ | ಧಾತೃ | ಧಾತೃಣೀ | ಧಾತೄಣಿ |
| ತೃತೀಯ | ಧಾತ್ರಾ,ಧಾತೃಣಾ | ಧಾತೃಭ್ಯಾಮ್ | ಧಾತೃಭಿಃ |
| ಚತುರ್ಥೀ | ಧಾತ್ರೇ, ಧಾತೃಣೇ | ಧಾತೃಭ್ಯಾಮ್ | ಧಾತೃಭ್ಯಃ |
| ಪಞ್ಚಮೀ | ಧಾತುಃ, ಧಾತೃಣಃ | ಧಾತೃಭ್ಯಾಮ್ | ಧಾತೃಭ್ಯಃ |
| ಷಷ್ಠೀ | ಧಾತುಃ, ಧಾತೃಣಃ | ಧಾತ್ರೋಃ,ಧಾತೃಣೋಃ | ಧಾತೄಣಾಮ್ |
| ಸಪ್ತಮೀ | ಧಾತರಿ,ಧಾತೃಣಿ | ಧಾತ್ರೋಃ,ಧಾತೃಣೋಃ | ಧಾತೃಷು |
| ಸಂಬೋಧನ | ಹೇ ಧಾತಃ,ಹೇ ಧಾತೃ! | ಹೇ ಧಾತೃಣೀ! | ಹೇ ಧಾತೄಣೀ! |

ಸೂಚನೆ: ಇದೇ ತರಹ ಜ್ಞಾತೃ, ಕರ್ತೃ, ವಕ್ತೃ, ಶ್ರೋತೃ, ಮೊದಲಾದ ಶಬ್ದಗಳ ರೂಪಗಳನ್ನು ತಿಳಿದುಕೊಳ್ಳಬೇಕು.

**ಇಲ್ಲಿಗೆ ಋ–ಕಾರಾನ್ತ ಶಬ್ದಗಳು ಮುಗಿದವು.**

**ಓ ಕಾರಾಂತ ನಪುಂಸಕಲಿಂಗ ಶಬ್ದಗಳು**

**(ಏಚ್ ಗೆ 'ಇಕ್' ಆದೇಶವನ್ನು ವಿಧಿಸುವ ನಿಯಮ ಸೂತ್ರ)**

**ಸೂತ್ರ– 251. ಏಚ ಇಗ್ಘ್ರಸ್ವಾದೇಶೇ (1.1.48)**

ವೃತ್ತಿಃ–ಆದಿಶ್ಯಮಾನೇಷು ಹ್ರಸ್ವೇಷು ಮಧ್ಯೇ ಏಚಃ ಇಕ್ ಏವ ಸ್ಯಾತ್। ಪ್ರಧ್ಯು।

ಪ್ರಧ್ಯುನೀ। ಪ್ರಧ್ಯೂನಿ। ಪ್ರಧ್ಯುನೆ ಇತ್ಯಾದಿ। ಪ್ರರಿ। ಪ್ರರಿಣೀ ।ಪ್ರರೀಣಿ। ಪ್ರರಿಣಾ। ಏಕದೇಶವಿಕೃತಂ ಅನನ್ಯವತ್। ಪ್ರರಾಭ್ಯಾಮ್। ಸುನು। ಸುನುನೀ। ಸುನೂನಿ। ಸುನುನೇತ್ಯಾದಿ।

**ಇತ್ಯಜನ್ತಾಃ ನಪುಂಸಕ ಲಿಙ್ಗಾಃ**

ಪ. ಥೇ. – ಏಚಃ, ಇಕ್, ಹ್ರಸ್ವಾದೇಶೇ.

ಅರ್ಥ– ಏಚ್(ಏ,ಓ,ಐ,ಔ) ವರ್ಣಗಳ ಸ್ಥಾನದಲ್ಲಿ ಹ್ರಸ್ವಾದೇಶವು ವಿಧಿಸಲ್ಪಟ್ಟಾಗ, ಅದು ಇಕ್ ವರ್ಣಗಳದ್ದೇ ಹ್ರಸ್ವರೂಪವಾಗಿರುತ್ತದೆ. ಏಕೆ ಈ ರೀತಿಯಾಗಿ ಹೇಳಲಾಗಿದೆ ಎಂದರೆ ಏಚ್ ವರ್ಣಗಳಿಗೆ ಹ್ರಸ್ವಗಳಿಲ್ಲ, ಏಚ್ ವರ್ಣಗಳಿಗೆ ಹ್ರಸ್ವ ಬರಬೇಕಾದರೆ ಯಾವ ವರ್ಣಗಳು ಬರಬೇಕೆಂಬ ಪ್ರಶ್ನೆ ಬಂದಾಗ ಈ ಪ್ರಕೃತ ಸೂತ್ರವು ಒಂದು ನಿಯಮವನ್ನು ಮಾಡಿದೆ. 'ಸ್ಥಾನೇಽನ್ತರತಮಃ' ಎಂಬ ಪರಿಭಾಷೆಯಿಂದ ಏಚ್ ವರ್ಣಗಳ ಸ್ಥಾನದಲ್ಲಿ ಇಕ್ ವರ್ಣಗಳಿಗೆ ಹ್ರಸ್ವವರ್ಣಗಳಿವೆ. ಏಚ್‌ನಲ್ಲಿ ಏ, ಓ, ಐ, ಔ, ಎಂದು ನಾಲ್ಕು ವರ್ಣಗಳಿವೆ. ಹ್ರಸ್ವವರ್ಣಗಳು ಐದು ಇವೆ. (ಅ, ಇ, ಉ, ಋ, ಌ) ಇಲ್ಲಿ ಸಮ ಸಂಖ್ಯೆ ಇಲ್ಲದಿರುವುದರಿಂದ 'ಯಥಾಸಂಖ್ಯಮನುದೇಶಃಸಮಾನಾಮ್' ಎಂಬ ಸೂತ್ರವು ಪ್ರವೃತ್ತವಾಗುವುದಿಲ್ಲ. ಆದ್ದರಿಂದ ಸ್ಥಾನಸಾಮ್ಯದ ದೃಷ್ಟಿಯಿಂದ 'ಏ ಐ,' ಗಳ ಸ್ಥಾನದಲ್ಲಿ ಇ ಕಾರವು ಮತ್ತು ಅ ಕಾರವು, ಓ, ಔ ಗಳ ಸ್ಥಾನದಲ್ಲಿ ಉ ಕಾರ ಮತ್ತು ಅ ಕಾರವು ಆದೇಶವಾಗಿ ಬರುತ್ತವೆ. ಆದ್ದರಿಂದ ಪ್ರಕೃತ ಸೂತ್ರವು ಅ ಕಾರವನ್ನು ಬಿಟ್ಟು ಇಕ್ ವರ್ಣಗಳೇ ಆದೇಶವಾಗಿ ಬರಬೇಕು. ಅಂದರೆ ಬೇರೆ ವರ್ಣಣಗಳು ಬರುವದಿಲ್ಲವೆಂದು ಅರ್ಥ. ಹೀಗೆ ನಿಯಮವನ್ನು ಮಾಡುವುದಕ್ಕಾಗಿ ಪ್ರವೃತ್ತವಾಗಿದೆ.

ಪ್ರಕೃಷ್ಟಾ ದ್ಯೌಃ ಯಸ್ಮಿನ್ ದಿನೇ, ತತ್ ದಿನಂ=ಪ್ರದ್ಯು (ಮೋಡವಿಲ್ಲದೆ ಸ್ವಚ್ಛವಾದ ಆಕಾಶವುಳ್ಳದಿನ) ಕೇವಲ ದ್ಯೋ ಶಬ್ದವು ಪುಲ್ಲಿಂಗದಲ್ಲೇ ಇರುತ್ತದೆ. ಆದರೆ ಪ್ರ ಉಪಸರ್ಗಪೂರ್ವಕ ದ್ಯೋ ಶಬ್ದವು ನಪುಂಸಕಲಿಂಗದಲ್ಲಿದೆ. ಆದ್ದರಿಂದ ಪ್ರದ್ಯೋ ನಲ್ಲಿರುವ 'ಓ' ಕಾರಕ್ಕೆ ಹ್ರಸ್ವವು 'ಹ್ರಸ್ವೋ ನಪುಂಸಕೇ ಪ್ರಾತಿಪದಿಕಸ್ಯ' ಎಂಬ ಸೂತ್ರದಿಂದ ಬಂದಿದೆ. ಪ್ರಕೃತ ಸೂತ್ರದಿಂದ ನಿಯಮವಾಗಿ 'ಸ್ಥಾನೇಽನ್ತರತಮಃ' ಎಂಬ ಪರಿಭಾಷೆಯಿಂದ ಪ್ರದ್ಯೋವಿನಲ್ಲಿರುವ 'ಓ'ಕಾರಕ್ಕೆ 'ಉ'ಕಾರವು ಆದೇಶವಾಗಿ ಬಂದು ಪ್ರದ್ಯು ಎಂದಾಗುತ್ತದೆ. ಇದರ ರೂಪವು ಉ ಕಾರಾಂತ ಮಧು ಶಬ್ದದಂತೆ ಇರುತ್ತದೆ.

**ಓ ಕಾರಾಂತ ನಪುಂಸಕಲಿಂಗದ ಪ್ರದ್ಯೋ ಶಬ್ದದ ರೂಪಗಳು**

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಪ್ರದ್ಯು | ಪ್ರದ್ಯುನೀ | ಪ್ರದ್ಯೂನಿ |
| ದ್ವಿತೀಯ | ಪ್ರದ್ಯು | ಪ್ರದ್ಯುನೀ | ಪ್ರದ್ಯೂನಿ |
| ತೃತೀಯ | ಪ್ರದ್ಯುನಾ | ಪ್ರದ್ಯುಭ್ಯಾಮ್ | ಪ್ರದ್ಯುಭಿಃ |
| ಚತುರ್ಥೀ | ಪ್ರದ್ಯುನೇ | ಪ್ರದ್ಯುಭ್ಯಾಮ್ | ಪ್ರದ್ಯುಭ್ಯಃ |
| ಪಞ್ಚಮೀ | ಪ್ರದ್ಯುನಃ | ಪ್ರದ್ಯುಭ್ಯಾಮ್ | ಪ್ರದ್ಯುಭ್ಯಃ |

| | | | |
|---|---|---|---|
| ಷಷ್ಠೀ | ಪ್ರದ್ಯುನಃ | ಪ್ರದ್ಯುನೋಃ | ಪ್ರದ್ಯೂನಾಮ್ |
| ಸಪ್ತಮೀ | ಪ್ರದ್ಯುನಿ | ಪ್ರದ್ಯುನೋಃ | ಪ್ರದ್ಯುಷು |
| ಸಂಬೋಧನ | ಹೇ ಪ್ರದ್ಯೋ! ಹೇ ಪ್ರದ್ಯು! | ಹೇ ಪ್ರದ್ಯುನೀ! | ಹೇ ಪ್ರದ್ಯೂನಿ! |

**ಇಲ್ಲಿಗೆ 'ಓ' ಕಾರಾನ್ತ ಶಬ್ದಗಳು ಮುಗಿದವು.**

**ಐ ಕಾರಾನ್ತ ಶಬ್ದಗಳು**

ವಿವರಣೆ: ಪ್ರರಿ=ಪ್ರಕೃಷ್ಟಃ ರಾಃ ಯಸ್ಯ ಕುಲಸ್ಯ ತತ್ ಪ್ರರಿ ಕುಲಮ್ (ಪ್ರಕೃಷ್ಟವಾದ ಐಶ್ವರ್ಯವುಳ್ಳ ವಂಶ) ಪುಲ್ಲಿಙ್ಗ ಶಬ್ದದಲ್ಲಿ ರೈ ಶಬ್ದ ಇದೆ. ಅದು ನಪುಂಸಕ ಲಿಙ್ಗದಲ್ಲಿ ಪ್ರ ಪೂರ್ವಕ ರೈ ಶಬ್ದವಾಗಿದೆ. ನಪುಂಸಕ ಲಿಙ್ಗದಲ್ಲಿ "ಹ್ರಸ್ವೋ ನಪುಂಸಕೇ ಪ್ರಾತಿಪದಿಕಸ್ಯ " ಎಂಬ ಸೂತ್ರದಿಂದ, "ಏಚ ಇಘ್ರಸ್ವಾದೇಶೇ" ಎಂಬ ನಿಯಮದಂತೆ 'ಐ' ಕಾರದ ಸ್ಥಾನದಲ್ಲಿ, ಹ್ರಸ್ವ 'ಇ' ಕಾರ ಬಂದು 'ಪ್ರರಿ' ಎಂದಾಗಿದೆ. ಇದಕ್ಕೆ 'ಸುಪ್' ಪ್ರತ್ಯಯಗಳನ್ನು ಸೇರಿಸಲಾಗುತ್ತದೆ. ಈ 'ಪ್ರರಿ' ಶಬ್ದಕ್ಕೆ ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, 'ವಾರಿ' ಶಬ್ದದಂತೆಯೂ, 'ಪ್ರರೈ' ಶಬ್ದವು 'ಪ್ರರಿ' ಎಂದಾದಾಗಲೂ, 'ಏಕದೇಶವಿಕೃತ' ನ್ಯಾಯದಿಂದ, ಹಲಾದಿ ವಿಭಕ್ತಿಗಳು (ಭ್ಯಾಮ್, ಭಿಸ್, ಭ್ಯಸ್, ಮತ್ತು ಸುಪ್) ಪರದಲ್ಲಿದ್ದಾಗ "ರಾಯೋ ಹಲೀ" ಎಂಬ ಸೂತ್ರದಿಂದ, 'ಆ' ಕಾರಾದೇಶವು ಬಂದು, 'ಪ್ರರಾಭ್ಯಾಮ್', 'ಪ್ರರಾಭಿಃ' ಎಂದು ರೂಪಗಳಾಗುತ್ತವೆ.

**ಐ ಕಾರಾನ್ತ ನಪುಂಸಕ ಲಿಙ್ಗ 'ಪ್ರರೈ' ಶಬ್ದಗಳು**

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಪ್ರರಿ | ಪ್ರರಿಣೀ | ಪ್ರರೀಣಿ |
| ದ್ವಿತೀಯ | ಪ್ರರಿ | ಪ್ರರಿಣೀ | ಪ್ರರೀಣಿ |
| ತೃತೀಯ | ಪ್ರರಿಣಾ | ಪ್ರರಾಭ್ಯಾಮ್ | ಪ್ರರಾಭಿಃ |
| ಚತುರ್ಥೀ | ಪ್ರರಿಣೇ | ಪ್ರರಾಭ್ಯಾಮ್ | ಪ್ರರಾಭ್ಯಃ |
| ಪಞ್ಚಮೀ | ಪ್ರರಿಣಃ | ಪ್ರರಾಭ್ಯಾಮ್ | ಪ್ರರಾಭ್ಯಃ |
| ಷಷ್ಠೀ | ಪ್ರರಿಣಃ | ಪ್ರರಿಣೋಃ | ಪ್ರರೀಣಾಮ್ |
| ಸಪ್ತಮೀ | ಪ್ರರಿಣಿ | ಪ್ರರಿಣೋಃ | ಪ್ರರಾಸು |
| ಸಂಬೋಧನ | ಹೇ ಪ್ರರೇ!, ಹೇ ಪ್ರರಿ! | ಹೇ ಪ್ರರಿಣೀ! | ಹೇ ಪ್ರರೀಣಿ! |

**ಇಲ್ಲಿಗೆ 'ಐ' ಕಾರಂತ ಶಬ್ದಗಳು ಮುಗಿದವು.**

**ಔಕಾರಾನ್ತ ಶಬ್ದಗಳು**

ವಿವರಣೆ: ಸುನು=ಸುಷ್ಠುಃ ನೌಃ ಯಸ್ಯ ತತ್ ಕುಲಮ್ (ಸುಂದರವಾದ ಹಡಗು ಉಳ್ಳವನ ಕುಲ). ಸ್ತ್ರೀಲಿಙ್ಗದಲ್ಲಿ 'ನೌ' ಶಬ್ದವು 'ಔ' ಕಾರಾನ್ತವಾಗಿದೆ.

'ಸು' ಶಬ್ದವನ್ನು 'ನೌ' ಶಬ್ದದಜೊತೆಗೆ ಸೇರಿಸಿ ಸಮಾಸ ಮಾಡಿದಾಗ, ನಪುಂಸಕ ಲಿಙ್ಗದಲ್ಲಿ 'ಔ' ಕಾರಕ್ಕೆ "ಹ್ರಸ್ವೋ ನಪುಂಸಕೇ ಪ್ರಾತಿಪದಿಕಸ್ಯ " ಎಂಬ ಸೂತ್ರದಿಂದ, "ಏಚ ಇಗ್ಘ್ರಸ್ವಾದೇಶೇ" ಎಂಬ ನಿಯಮದಂತೆ 'ಔ' ಕಾರದ ಸ್ಥಾನದಲ್ಲಿ, ಹ್ರಸ್ವ 'ಉ' ಕಾರ (ಇಕ್) ಬಂದು,'ಸುನು' ಎಂದಾಗಿದೆ. ಇದಕ್ಕೆ 'ಸುಪ್' ಪ್ರತ್ಯಯಗಳನ್ನು ಸೇರಿಸಲಾಗುತ್ತದೆ. ಆಗ ಮಧು ಶಬ್ದದಂತೆ ರೂಪಗಳಾಗುತ್ತವೆ.

**ಔಕಾರಾನ್ತ ನಪುಂಸಕ ಲಿಙ್ಗದ 'ಸುನೌ' ಶಬ್ದದ ರೂಪಗಳು**

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಸುನು | ಸುನುನೀ | ಸುನೂನಿ |
| ದ್ವಿತೀಯ | ಸುನು | ಸುನುನೀ | ಸುನೂನಿ |
| ತೃತೀಯ | ಸುನುನಾ | ಸುನುಭ್ಯಾಮ್ | ಸುನುಭಿಃ |
| ಚತುರ್ಥೀ | ಸುನುನೇ | ಸುನುಭ್ಯಾಮ್ | ಸುನುಭ್ಯಃ |
| ಪಞ್ಚಮೀ | ಸುನುನಃ | ಸುನುಭ್ಯಾಮ್ | ಸುನುಭ್ಯಃ |
| ಷಷ್ಠೀ | ಸುನುನಃ | ಸುನುನೋಃ | ಸುನೂನಾಮ್ |
| ಸಪ್ತಮೀ | ಸುನುನಿ | ಸುನುನೋಃ | ಸುನುಷು |
| ಸಂಬೋಧನ | ಹೇ ಸುನೋ!<br>ಹೇ ಸುನು! | ಹೇ ಸುನುನೀ | ಹೇ ಸುನುನೀ! |

**ಇಲ್ಲಿಗೆ ಅಜನ್ತ ನಪುಂಸಕ ಲಿಙ್ಗ ಪ್ರಕರಣ ಮುಗಿಯಿತು.**

**ಇಲ್ಲಿಗೆ ಷಡ್ಲಿಙ್ಗೆ ಪ್ರಕರಣದಲ್ಲಿ ಅಜನ್ತಲಿಙ್ಗಗಳ ಪ್ರಕರಣ (7) ಮುಗಿಯಿತು.**

# 8. ಹಲನ್ತ ಪುಲ್ಲಿಂಗ ಪ್ರಕರಣ

**(ಸೂತ್ರ 252-359 ರವರೆಗೆ)**

**(ಢತ್ವ ವಿಧಾಯಕ ಸೂತ್ರ)**

**ಸೂತ್ರ- 252. ಸೂತ್ರ - ಹೋ ಢಃ॥ (8.2.31)**

ವೃತ್ತಿಃ-ಹಸ್ಯ ಢಃ ಸ್ಯಾತ್ ಝಲಿ ಪದಾನ್ತೇ ಚ । ಲಿಟ್, ಲಿಡ್। ಲಿಹೌ। ಲಿಹಃ।ಲಿಡ್ಭ್ಯಾಮ್।ಲಿಟ್ತ್ಸು, ಲಿಟ್ಸು।

ಪ.ಛೇ - ಹಃ, ಢಃ।

ಅ.ವೃ- "ಝಲೋರ್ಝರಿ" ಎಂಬ ಸೂತ್ರದಿಂದ 'ಝರಿ' ಎಂಬ ಪದವೂ ಮತ್ತು "ಸ್ಕೋಃಸಂಯೋಗಾದ್ಯೋರನ್ತೇಚ" ಎಂಬ ಸೂತ್ರದಿಂದ 'ಅನ್ತೇ' ಎಂಬ ಪದವೂ ಅನುವೃತ್ತವಾಗುತ್ತವೆ. "ಪದಸ್ಯ" ಎಂಬುದು ಅಧಿಕಾರ ಸೂತ್ರ.

ಅರ್ಥ- 'ಝಲ್' ಪರದಲ್ಲಿರುವ ಅಥವಾ ಪದಾನ್ತದಲ್ಲಿರುವ 'ಹ್' ಕಾರದ ಸ್ಥಾನದಲ್ಲಿ 'ಢ್' ಕಾರವು ಆದೇಶವಾಗಿ ಬರುತ್ತದೆ. (ಢಃ ಎಂಬಲ್ಲಿ 'ಅ' ಕಾರವು ಉಚ್ಚಾರಣಾರ್ಥ, ಆದ್ದರಿಂದ 'ಢ್' ಮಾತ್ರ ಉಳಿಯುತ್ತದೆ).

ಉದಾ- ಲಿಟ್, ಲಿಡ್ -(ನೆಕ್ಕುವವನು)ಪ್ರಥಮಾ ವಿಭಕ್ತಿ ಏಕವಚನದಲ್ಲಿ- 'ಲಿಹ್' ಧಾತುವಿನ ಪರದಲ್ಲಿ 'ಕ್ವಿಪ್' ಪ್ರತ್ಯಯ ಬಂದು, ಸರ್ವಾಪಹಾರಲೋಪವಾಗಿ, ಪ್ರಾತಿಪದಿಕ ಸಂಜ್ಞೆ ಬಂದು, 'ಸು(ಸ್)' ಪ್ರತ್ಯಯವನ್ನು ಸೇರಿಸಿದಾಗ, ಲಿಹ್+ಸ್ ಎಂದಿರುತ್ತದೆ. "ಹಲ್ಙ್ಯಾಭ್ಯೋದೀರ್ಘಾತ್ ಸುತಿಸ್ಯಪೃಕ್ತಂ ಹಲ್" ಎಂಬ ಸೂತ್ರದಿಂದ, 'ಸ್' ಕಾರಕ್ಕೆ ಲೋಪ ಬರುತ್ತದೆ. "ಪ್ರತ್ಯಯಲೋಪೇ ಪ್ರತ್ಯಯಲಕ್ಷಣಮ್" ಎಂಬ ಸೂತ್ರದಿಂದ, ಮೇಲಿನ ರೂಪವನ್ನು ಪ್ರತ್ಯಯಾನ್ತವಾಗಿ ಭಾವಿಸಿ ಪದವೆಂದು ಸ್ವೀಕರಿಸಬೇಕು. 'ಲಿಹ್' ಎಂಬುದು 'ಹ್'ಕಾರಾನ್ತ ಪದವಾಗಿರೋಣದ್ದರಿಂದ, ಪ್ರಕೃತ ಸೂತ್ರದಿಂದ, 'ಹ್' ಕಾರಕ್ಕೆ 'ಢ್' ಕಾರವು ಆದೇಶವಾಗಿ ಬಂದು, 'ಲಿಢ್' ಎಂದಾಗುತದೆ. ಪರದಲ್ಲಿ ಅವಸಾನ ಸಂಜ್ಞೆ ಇರುವದರಿಂದ, "ವಾಽವಸಾನೇ" ಎಂಬ ಸೂತ್ರದಿಂದ 'ಢ್' ಕಾರಕ್ಕೆ ವಿಕಲ್ಪವಾಗಿ 'ಚರ್ತ್ವ' ಬಂದು 'ಲಿಟ್' ಎಂದಾಗುತ್ತದೆ. ಹೀಗಾಗಿ 'ಲಿಟ್' ಲಿಡ್' ಎಂದು ಎರಡು ರೂಪಗಳು ಸಿದ್ಧವಾಗುತ್ತವೆ.

ಉದಾ- ಲಿಹೌ-ಪ್ರಥಮಾ ವಿಭಕ್ತಿಯ ದ್ವಿ ವಚನದಲ್ಲಿ, ಲಿಹ್+ಔ=ಲಿಹೌ ಎಂದು ರೂಪವಾಗುತ್ತದೆ.

ಉದಾ- ಲಿಹಃ-ಪ್ರಥಮಾ ವಿಭಕ್ತಿಯ ಬಹು ವಚನದಲ್ಲಿ, ಲಿಹ್+ಜಸ್ (ಅಸ್) ಎಂದಿದ್ದಾಗ, 'ಸ್' ಕಾರಕ್ಕೆ ರುತ್ವ-ವಿಸರ್ಗಗಳು ಬಂದು ಲಿಹಃ ಎಂದು ರೂಪವಾಗುತ್ತದೆ.

ಉದಾ-ಲಿಹಮ್ -ದ್ವಿತೀಯಾ ವಿಭಕ್ತಿಯ ಏಕ ವಚನದಲ್ಲಿ, ಲಿಹ್+ಅಮ್=ಲಿಹಮ್ ಎಂದು ರೂಪವಾಗುತ್ತದೆ.

ಉದಾ - ಲಿಹೌ-ದ್ವಿತೀಯಾ ವಿಭಕ್ತಿ ದ್ವಿವಚನದಲ್ಲಿ-ಪ್ರಥಮಾ ವಿಭಕ್ತಿ ದ್ವಿವಚನದಂತೆಯೆ ಲಿಹೌ ಎಂದು ರೂಪವಾಗುತ್ತದೆ.

ಉದಾ- ಲಿಹಃ-ದ್ವಿತೀಯಾ ವಿಭಕ್ತಿ ಬಹುವಚನದಲ್ಲಿ ಲಿಹ್+ಶಸ್ (ಅಸ್) ಎಂದಿದ್ದಾಗ ರುತ್ವ-ವಿಸರ್ಗಗಳಿಂದ ಲಿಹಃ ಎಂದು ರೂಪವಾಗುತ್ತದೆ

ಉದಾ- ಲಿಹಾ - ತೃತೀಯಾ ವಿಭಕ್ತಿ ಏಕವಚನದಲ್ಲಿ ಲಿಹ್+ಟಾ(ಆ)=ಲಿಹಾ ಎಂದು ರೂಪವಾಗುತ್ತದೆ.

ಉದಾ-ಲಿಡ್ಭ್ಯಾಮ್ (3) - ತೃತೀಯಾ, ಚತುರ್ಥೀ ಮತ್ತು ಪಞ್ಚಮೀ ವಿಭಕ್ತಿ ದ್ವಿವಚನಗಳಲ್ಲಿ ಲಿಹ್+ಭ್ಯಾಮ್ ಎಂದಿದ್ದಾಗ, ಅಸರ್ವನಾಮಸ್ಥಾನ - ಹಲಾದಿ ವಿಭಕ್ತಿಯಾದ 'ಭ್ಯಾಮ್' ಪರದಲ್ಲಿರೋಣದ್ದರಿಂದ 'ಲಿಹ್'ಗೆ "ಸ್ವಾದಿಷ್ವಸರ್ವನಾಮಸ್ಥಾನೇ" ಎಂಬ ಸೂತ್ರದಿಂದ ಪದಸಂಜ್ಞೆಯು ಬರುತ್ತದೆ. ಪ್ರಕೃತ ಸೂತ್ರದಿಂದ 'ಹ್' ಕಾರಕ್ಕೆ 'ಢತ್ವ' ಬಂದು, ಲಿಢ್+ಭ್ಯಾಮ್ ಎಂದಾಗುತ್ತದೆ. "ಝಲಾಂಜ ಶೋಽಂತೇ" ಎಂಬ ಸೂತ್ರದಿಂದ ಜಸ್ತ್ವವು ಬಂದು, ಲಿಡ್+ಭ್ಯಾಮ್=ಲಿಡ್ಭ್ಯಾಮ್(3) ಎಂದು ರೂಪವಾಗುತ್ತದೆ.

ಉದಾ-ಲಿಡ್ಭಿಃ - ತೃತೀಯಾ ವಿಭಕ್ತಿ ಬಹುವಚನದಲ್ಲಿ ಲಿಹ್+ಭಿಸ್ ಎಂದಿದ್ದಾಗ, ಹಿಂದಿನಂತೆಯೇ ಲಿಢ್+ಭಿಸ್ ಎಂದಿದ್ದಾಗ, "ಝಲಾಂಜ ಶೋಽನ್ತೇ" ಎಂಬ ಸೂತ್ರದಿಂದ 'ಜಶ್ತ್ವ' ಬಂದು ಲಿಡ್+ಭಿಸ್ ಎಂದಾಗಿ, ರುತ್ವ-ವಿಸರ್ಗಗಳಿಂದ ಲಿಡ್ಭಿಃ ಎಂದು ರೂಪವಾಗುತ್ತದೆ.

ಉದಾ- ಲಿಹೇ - ಚತುರ್ಥೀ ವಿಭಕ್ತಿ ಏಕ ವಚನದಲ್ಲಿ ಲಿಹ್+ಙೇ(ಏ)= ಲಿಹೇ ಎಂದು ರೂಪವಾಗುತ್ತದೆ.

ಉದಾ- ಲಿಡ್ಭ್ಯಃ (2) - ಚತುರ್ಥೀ ಮತ್ತು ಪಞ್ಚಮೀ ವಿಭಕ್ತಿ ಬಹುವಚನಗಳಲ್ಲಿ ಲಿಹ್+ಭ್ಯಸ್ ಎಂದಿದ್ದಾಗ, 'ಪದಸಂಜ್ಞೆ' ಬಂದು, ಲಿಢ್+ಭ್ಯಸ್ ಎಂದಾಗಿ, ನಂತರ ಹಿಂದಿನಂತೆಯೇ, 'ಜಶ್ತ್ವ', 'ಸ್' ಕಾರಕ್ಕೆ ರುತ್ವ-ವಿಸರ್ಗಗಳು ಬಂದು ಲಿಡ್ಭ್ಯಃ (2) ಎಂದು ರೂಪವಾಗುತ್ತದೆ.

ಉದಾ- ಲಿಹಃ (2)-ಪಞ್ಚಮೀ ಮತ್ತು ಷಷ್ಠೀ ವಿಭಕ್ತಿ ಏಕವಚನಗಳಲ್ಲಿ ಕ್ರಮವಾಗಿ ಙಸಿ (ಅಸ್), ಙಸ್(ಅಸ್) ಪ್ರತ್ಯಯಗಳು ಬಂದಾಗ ಲಿಹ್+ಅಸ್ ಎಂದು ಇರುತ್ತದೆ. ಈಗ 'ಸ್' ಕಾರಕ್ಕೆ ರುತ್ವ-ವಿಸರ್ಗಗಳು ಬಂದು ಲಿಹಃ (2) ಎಂದು ರೂಪಗಳಾಗುತ್ತವೆ.

ಉದಾ- ಲಿಹೋಃ (2)-ಷಷ್ಠೀ ಮತ್ತು ಸಪ್ತಮೀ ವಿಭಕ್ತಿ ದ್ವಿವಚನಗಳಲ್ಲಿ ಲಿಹ್+ಓಸ್ ಎಂದಿದ್ದಾಗ, 'ಸ್' ಕಾರಕ್ಕೆ ರುತ್ವ-ವಿಸರ್ಗಗಳು ಬಂದು ಲಿಹೋಃ (2) ಎಂದು ರೂಪಗಳಾಗುತ್ತವೆ.

ಉದಾ-ಲಿಹಿ ಸಪ್ತಮೀ ವಿಭಕ್ತಿ ಏಕವಚನದಲ್ಲಿ ಲಿಹ್+ ಙಿ (ಇ)=ಲಿಹಿ ಎಂದು ರೂಪವಾಗುತ್ತದೆ.

ಉದಾ-ಲಿಟ್ತ್ಸು, ಲಿಟ್ಸು - ಸಪ್ತಮೀ ವಿಭಕ್ತಿ ಬಹುವಚನದಲ್ಲಿ ಲಿಹ್+ ಸುಪ್(ಸು)

ಎಂದಿದ್ದಾಗ, ತೃತೀಯಾ ವಿಭಕ್ತಿಯಂತೆಯೇ ಪ್ರಕ್ರಿಯೆ ನಡೆದು ಢತ್ವ, 'ಜಶ್ತ್ವ', ಗಳು ಬಂದು ಲಿಡ್+ಸು ಎಂದಿದ್ದಾಗ, "ಡಃಸಿಧುಟ್" ಎಂಬ ಸೂತ್ರದಿಂದ ವೈಕಲ್ಪಿಕವಾಗಿ 'ಸು' ಗೆ 'ಧುಟ್' ಆಗಮವು ಆದ್ಯವಯವವಾಗಿ ಬಂದು, ಲಿಡ್+ಧ್+ಸು ಎಂದಾಗುತ್ತದೆ. ನಂತರ 'ಡ್' ಕಾರ ಮತ್ತು 'ಧ್' ಗಳು ಸೇರಿ, 'ಷ್ಟುತ್ವ' ಬಂದಾಗ, "ನಪದಾನ್ತಾಟ್ಪೋರನಾಮ್" ಎಂಬ ಸೂತ್ರದಿಂದ 'ನಿಷೇಧ' ಬಂದು, "ಖರಿಚ" ಎಂಬುದರಿಂದ 'ಚರ್ತ್ವ' ಬಂದು 'ಡ್' ಕಾರಕ್ಕೆ 'ಟ್' ಕಾರ ಬಂದು, ಲಿಟ್ತ್ಸು ಎಂದು ರೂಪವಾಗುತ್ತದೆ. 'ಧುಟ್' ಆಗಮ ಬಾರದ ಪಕ್ಷದಲ್ಲಿ ಲಿಟ್ಸು ಎಂದು ರೂಪವಿರುತ್ತದೆ.

ಉದಾ– ಸಂಬೋಧನ ಏಕವಚನ, ದ್ವಿವಚನ ಮತ್ತು ಬಹುವಚನಗಳಲ್ಲಿ ಕ್ರಮವಾಗಿ ಹೇ ಲಿಟ್, ಹೇಲಿಡ್!, ಹೇ ಲಿಹೌ!, ಹೇ ಲಿಹಃ ಎಂದೇ ಪ್ರಥಮಾ ವಿಭಕ್ತಿಯಂತೆ ರೂಪಗಳು ಇರುತ್ತವೆ.

**(ಹ್– ಕಾರಾನ್ತ ಪುಲ್ಲಿಂಗ 'ಲಿಹ್' ಶಬ್ದದ ರೂಪಗಳು)**

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರ.ವಿ. | ಲಿಟ್, ಲಿಡ್ | ಲಿಹೌ | ಲಿಹಃ |
| ದ್ವಿ.ವಿ. | ಲಿಹಮ್ | ಲಿಹೌ | ಲಿಹಃ |
| ತೃ.ವಿ. | ಲಿಹಾ | ಲಿಡ್ಭ್ಯಾಮ್ | ಲಿಡ್ಭಿಃ |
| ಚ.ವಿ. | ಲಿಹೇ | ಲಿಡ್ಭ್ಯಾಮ್ | ಲಿಡ್ಭ್ಯಃ |
| ಪ.ವಿ. | ಲಿಹಃ | ಲಿಡ್ಭ್ಯಾಮ್ | ಲಿಡ್ಭ್ಯಃ |
| ಷ.ವಿ. | ಲಿಹಃ | ಲಿಹೋಃ | ಲಿಹಾಮ್ |
| ಸ.ವಿ. | ಲಿಹಿ | ಲಿಹೋಃ | ಲಿಟ್ತ್ಸು, ಲಿಟ್ಸು |
| ಸಂ.ಪ್ರ.ವಿ | ಹೇ ಲಿಟ್!,ಹೇ ಲಿಡ್! | ಹೇ ಲಿಹೌ! | ಹೇ ಲಿಹಃ! |

**(ಹ್ ಕಾರಕ್ಕೆ ಘ್ ಕಾರವನ್ನು ವಿಧಿಸುವ ಸೂತ್ರ)**

**ಸೂತ್ರ– 253. ದಾದೇರ್ಧಾತೋರ್ಘಃ (8.2.32)**

ವೃತ್ತಿಃ–ಝಲಿ ಪದಾಂತೇ ಚ ಉಪದೇಶೇ ದಾದೇರ್ಧಾತೋಃ ಹಸ್ಯ ಘಃ।

ಪ. ಛೇ. – ದಾದೇಃ, ಧಾತೋಃ, ಘಃ।

ಅ. ವ್ಯ. – " ಹೋಢಃ" ಎಂಬ ಸೂತ್ರದಿಂದ 'ಹಃ' ಎಂಬ ಪದವೂ, ಮತ್ತು "ಝಲೋಝಲಿ" ಎಂಬ ಸೂತ್ರದಿಂದ 'ಝಲಿ' ಎಂಬ ಪದವೂ ಅನುವೃತ್ತವಾಗಿವೆ. 'ಪದಸ್ಯ' ಎಂಬುದು ಅಧಿಕಾರ ಸೂತ್ರ.

ಅರ್ಥ– ಉಪದೇಶದ ಅವಸ್ಥೆಯಲ್ಲಿ 'ದ್' ಕಾರಾದಿಯಾದ ಧಾತುವಿನ 'ಹ್' ಕಾರವು ಪದಾನ್ತವಾಗಿದ್ದಾಗಲೋ ಅಥವಾ 'ಹ್' ಕಾರದ ನಂತರ 'ಝಲ್' ಪರವಾದಾಗಲೋ, 'ಹ್' ಕಾರದ ಸ್ಥಾನದಲ್ಲಿ 'ಘ್' ಕಾರವು ಆದೇಶವಾಗಿ ಬರುತ್ತದೆ.

ಸೂಚನೆ: ಈ ಸೂತ್ರವು "ಹೋ ಢಃ" ಎಂಬ ಸೂತ್ರಕ್ಕೆ ಅಪವಾದವಾಗಿದೆ. 'ಘಃ' ಎಂಬಲ್ಲಿ 'ಅ' ಕಾರವು ಉಚ್ಚಾರಣಾರ್ಥ. ಹೀಗಾಗಿ 'ಘ್' ಮಾತ್ರ ಉಳಿಯುತ್ತದೆ.

**(ಭಷ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ- 254. ಏಕಾಚೋ ಬಶೋ ಭಷ್ ಝುಷಂತಸ್ಯ ಸ್ಧ್ವೋಃ (8.2.37)**

ವೃತ್ತಿಃ- ಧಾತ್ವವಯವಸ್ಯ ಏಕಾಚಃ ಝಷಂತಸ್ಯ ಬಶಃ ಭಷ್, ಸೇ ಧ್ವೇ ಪದಾನ್ತೇ ಚ। ಧುಕ್, ಧುಗ್,। ದುಹೌ। ದುಹಃ। ಧುಗ್ಭ್ಯಾಮ್। ಧುಕ್ಷು।

ಪ. ಛೇ. – ಏಕಾಚಃ, ಬಶಃ, ಭಷ್, ಝುಷನ್ತಸ್ಯ, ಸ್ಧ್ವೋಃ।

ಅ. ವೃ. – "ದಾದೇರ್ಧಾತೋರ್ಘಃ (8.2.32)" ಎಂಬ ಸೂತ್ರದಿಂದ, 'ಧಾತೋಃ' ಎಂಬ ಪದವೂ ಮತ್ತು "ಸ್ಕೋಃ ಸಂಯೋಗಾದ್ಯೋರನ್ತೇ ಚ" ಎಂಬ ಸೂತ್ರದಿಂದ 'ಅನ್ತೇ' ಎಂಬ ಪದವೂ ಅನುವೃತ್ತವಾಗುತ್ತದೆ. "ಪದಸ್ಯ" ಎಂಬುದು ಅಧಿಕಾರ ಸೂತ್ರ.

ಅರ್ಥ- ಧಾತುವಿನ ಅವಯವವಾದ 'ಝುಷ್' ಅನ್ತವಾದ 'ಏಕಾಚ್' ನ 'ಬಶ್' ವರ್ಣಕ್ಕೆ 'ಭಷ್' ಆದೇಶವು ಬರುತ್ತದೆ – 'ಸ್' ಕಾರ ಮತ್ತು 'ಧ್' ಕಾರವು ಪರದಲ್ಲಿದ್ದಾಗ, ಅಥವಾ 'ಬಶ್' ವರ್ಣವು ಪದಾನ್ತವಾದಾಗ,-

ಸೂಚನೆ: ಇಲ್ಲಿ ಮೂರು ಪ್ರತ್ಯಾಹರಗಳನ್ನು ಹೇಳಲಾಗಿದೆ. 1. 'ಬಶ್' 2. 'ಭಷ್' 3. 'ಝುಷ್'. 'ಬಶ್' ಪ್ರತ್ಯಾಹಾರದಲ್ಲಿ ಬ್,ಗ್,ಡ್,ದ್ ವರ್ಣಗಳು ಇವೆ. 'ಭಷ್' ಪ್ರತ್ಯಾಹಾರದಲ್ಲಿ ಭ್,ಘ್,ಢ್,ಧ್ ವರ್ಣಗಳು ಬರುತ್ತವೆ. 'ಝುಷ್' ಪ್ರತ್ಯಾಹಾರದಲ್ಲಿ ಝ್,ಭ್, ಘ್, ಢ್, ಧ್ ವರ್ಣಗಳು ಇರುತ್ತವೆ.

ಧಾತುವಿನ ಅವಯವವು 'ಏಕಾಚ್' ಆಗಿದ್ದು ಅಂತ್ಯದಲ್ಲಿ 'ಝುಷ್' ವರ್ಣವು ಇರಬೇಕು. ಧಾತುವು 'ಅನೇಕಾಚ್' ಆಗಿ ಇದ್ದರೂ, ಒಂದು ಅವಯವ ಗ್ರಹಣವನ್ನು ಇಲ್ಲಿ ಮಾಡಲಾಗುವದು. ಈ 'ಏಕಾಚ್' ನಲ್ಲಿ ಇರುವ 'ಬಶ್' ವರ್ಣದ ಸ್ಥಾನದಲ್ಲಿ 'ಭಷ್' ವರ್ಣವು ಆದೇಶವಾಗಿ ಬರುವದು. ಮತ್ತು 'ಸ್' ಕಾರ ಅಥವಾ 'ಧ್ವ' ಕಾರವು ಪರದಲ್ಲಿ ಇರಬೇಕು. ಅಥವಾ 'ಬಶ್' ವರ್ಣವೇ ಪದಾನ್ತವಾಗಿ ಇರಬೇಕು.

ಉದಾ- ದುಕ್-ಧುಗ್(ಹಾಲು ಕರೆಯುವವನು)- 'ದುಹ್' ಪ್ರಪೂರಣೇ ಎಂಬ ಧಾತುವಿನ ನಂತರ, ಪ್ರಥಮಾ ವಿಭಕ್ತಿ ಏಕವಚನದಲ್ಲಿ, 'ಕ್ವಿಪ್' ಪ್ರತ್ಯಯವು ಬಂದು, ಅದರ ಸರ್ವಾಪಾಹಾರವಾದಮೇಲೆ, 'ದುಹ್' ಎಂದಾಗುತ್ತದೆ. ಈ ಧಾತುವು ಉಪದೇಶಾವಸ್ಥೆಯಲ್ಲಿ 'ಧ್' ಕಾರಾದಿಯಾಗಿ ಇರುತ್ತದೆ. 'ಸು(ಸ್)' ಪ್ರತ್ಯಯವನ್ನು ಸೇರಿಸಿದಮೇಲೆ, "ಹಲ್ಙ್ಯಾಭ್ಯೋ ದೀರ್ಘಾತ್...... " ಎಂಬ ಸೂತ್ರದಿಂದ 'ಸ್' ಲೋಪವಾಗುತ್ತದೆ. "ಹೋಢಃ" ಎಂಬ ಸೂತ್ರದಿಂದ ಢತ್ವ ಬರಬೇಕಾಗಿತ್ತು, ಅದನ್ನು ಬಾಧಿಸಿ, "ದಾದೇರ್ಧಾತೋರ್ಘಃ (8.2.32)" ಎಂಬ ಸೂತ್ರದಿಂದ, 'ಹ್' ಕಾರಕ್ಕೆ 'ಘ್' ಕಾರವು ಆದೇಶವಾಗಿ ಬಂದು, 'ದುಘ್' ಎಂದಾಗಿದೆ.

ಸೂಚನೆ: ಪ್ರಕೃತ ಸೂತ್ರದಿಂದ ಮುಂದಿನ ಪ್ರಕ್ರಿಯೆಯು ಪ್ರಾರಂಭವಾಗುತ್ತದೆ.

'ಘ್' ಎಂಬುದು 'ಝಷ್' ವರ್ಣ. ಧಾತ್ವಯವಯವಾದ ಝಷನ್ತವಾದ ಏಕಾಚ್ ಎಂಬುದು 'ದುಘ್'. 'ದ್' ಎಂಬುದು 'ಬಶ್' ವರ್ಣ. ಇದಕ್ಕೆ 'ಭಷ್' ವರ್ಣ (ದ್ ಕಾರಕ್ಕೆ ಧ್ ಕಾರ)ವು "ಸ್ಥಾನೇಽನ್ತರತಮಃ" ಎಂಬ ಸೂತ್ರದಿಂದ ಆದೇಶವಾಗಿ ಬಂದು 'ದುಘ್' ಎಂದಾಗುತ್ತದೆ. "ಝಲಾಮ್ ಜಶೋಽನ್ತೇ" ಎಂಬ ಸೂತ್ರದಿಂದ ಅಂತ್ಯ 'ಘ್' ಕಾರಕ್ಕೆ 'ಗ್' ಕಾರ ಬಂದು, "ವಾಽವಸಾನೇ" ಎಂಬ ಸೂತ್ರದಿಂದ ವೈಕಲ್ಪಿಕ ಚರ್ತ್ವದಿಂದ 'ಕ್' ಆದೇಶವು ಬರುತ್ತದೆ. ಈ ರೀತಿಯಾಗಿ ಧುಕ್–ಧುಗ್ ಎಂಬುದಾಗಿ ಎರಡು ರೂಪಗಳು ಸಿದ್ಧವಾಗುತ್ತವೆ.

ಉದಾ– ದುಹೌ(2) – ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ದ್ವಿವಚನಗಳಲ್ಲಿ – ಅಜಾದಿ ವಿಭಕ್ತಿಯು ಪರದಲ್ಲಿದ್ದಾಗ, ಪ್ರಕೃತಿಯ ಜೊತೆಗೆ ಪ್ರತ್ಯಯವನ್ನು ಸೇರಿಸಬೇಕು. ಹೀಗೆ ದುಹ್+ಔ ಮತ್ತು ದುಹ್+ಔಟ್ ಎಂದಿದ್ದಾಗ, ಕ್ರಮವಾಗಿ ದುಹೌ(2) ಎಂದು ರೂಪಗಳಾಗುತ್ತವೆ.

ಉದಾ– ದುಹಃ (2) – ಪ್ರಥಮಾವಿಭಕ್ತಿ ಮತ್ತು ದ್ವಿತೀಯಾ ವಿಭಕ್ತಿ ಬಹುವಚನಗಳಲ್ಲಿ ದುಹ್+ಜಸ್(ಅಸ್) ಮತ್ತು ದುಹ್+ಶಸ್(ಅಸ್) ಎಂದಿದ್ದಾಗ, 'ಸ್' ಕಾರಕ್ಕೆ ರುತ್ವ–ವಿಸರ್ಗಗಳು ಬಂದು ಕ್ರಮವಾಗಿ ದುಹಃ (2) ಎಂದು ರೂಪಗಳಾಗುತ್ತವೆ.

ಉದಾ– ದುಹಮ್ – ದ್ವಿತೀಯಾ ವಿಭಕ್ತಿ ಏಕವಚನದಲ್ಲಿ ದುಹ್+ಅಮ್=ದುಹಮ್ ಎಂದು ರೂಪವಾಗುತ್ತದೆ.

ಉದಾ– ದುಹಾ – ತೃತೀಯಾ ವಿಭಕ್ತಿ ಏಕವಚನದಲ್ಲಿ ದುಹ್ +ಟಾ(ಆ)=ದುಹಾ ಎಂದು ರೂಪವಾಗುತ್ತದೆ.

ಉದಾ– ದುಗ್ಭ್ಯಾಮ್–ದುಗ್ಭ್ಯಃ–ಇನ್ನು 'ಭ್ಯಾಮ್' ಮೊದಲಾದ ಹಲಾದಿ ವಿಭಕ್ತಿಗಳು ಪರದಲ್ಲಿದ್ದು, ದುಹ್+ಭ್ಯಾಮ್ ಎಂದಿದ್ದಾಗ, "ಸ್ವಾದಿಷ್ವ ಸರ್ವನಾಮಸ್ಥಾನೇ" ಎಂಬ ಸೂತ್ರದಿಂದ, ಪೂರ್ವರೂಪ (ಹ್) ಕ್ಕೆ 'ಪದಸಂಜ್ಞೆ' ಬಂದು ಪದಾಂತವಾಗುತ್ತದೆ. ಆಗ ಪ್ರಕೃತ ಸೂತ್ರದಿಂದ 'ಹ್' ಕಾರಕ್ಕೆ 'ಭಷ್' ವರ್ಣವಾದ 'ಘ್' ಆದೇಶವಾಗಿ ಬಂದು ದುಘ್+ಭ್ಯಾಮ್ ಎಂದಿದ್ದಾಗ, "ಝಲಾಮ್ಜಶೋಽನ್ತೇ" ಎಂಬ ಸೂತ್ರದಿಂದ 'ಘ್' ಕಾರಕ್ಕೆ 'ಜಶ್' ವರ್ಣವಾದ 'ಗ್' ಕಾರವು ಬಂದು, ದುಗ್+ಭ್ಯಾಮ್=ದುಗ್ಭ್ಯಾಮ್ ಮತ್ತು ದುಗ್+ಭ್ಯಸ್= ದುಗ್ಭ್ಯಃ ಮೊದಲಾದ ರೂಪಗಳು ಆಗುತ್ತವೆ.

ಉದಾ– ಧುಕ್ಷು–ಸಪ್ತಮೀ ಬಹುವಚನದಲ್ಲಿ 'ಸುಪ್' ಪ್ರತ್ಯಯವು ಪರದಲ್ಲಿ ಇರುವುದರಿಂದ, 'ಘತ್ವ' 'ಭಶ್' ಆದೇಶ ಮತ್ತು 'ಜಶ್ತ್ವ' ಗಳು ಬಂದು, ಧುಗ್+ಸು ಎಂದಾಗಿ ನಂತರ 'ಖರ್' ವರ್ಣವಾದ 'ಸ್' ಕಾರವು ಪರದಲ್ಲಿರುವಾಗ 'ಗ್' ಕಾರಕ್ಕೆ "ಖರಿ ಚ" ಎಂಬ ಸೂತ್ರದಿಂದ ಚರ್ತ್ವ(ಕ್) ಬರುತ್ತದೆ. 'ಕ್' ಕಾರದ ಪರದಲ್ಲಿ 'ಸ್' ಕಾರವು ಇರೋಣದ್ದರಿಂದ, "ಆದೇಶಪ್ರತ್ಯಯಯೋಃ" ಎಂಬ ಸೂತ್ರದಿಂದ 'ಷತ್ವ(ಷ್) ಬಂದು, 'ಕ್' ಕಾರ ಮತ್ತು 'ಷ್' ಕಾರಗಳ ಸಂಯೋಗದಿಂದ ಧುಕ್ಷು ಎಂದು ರೂಪವು ಸಿದ್ಧವಾಗುತ್ತದೆ.

(ಹ್ ಕಾರಾನ್ತ ಪುಲ್ಲಿಂಗ ದುಹ್ ಶಬ್ದದ ರೂಪಗಳು)

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರ.ವಿ. | ಧುಕ್, ಧುಗ್ | ದುಹೌ | ದುಹಃ |
| ದ್ವಿ.ವಿ. | ದುಹಮ್ | ದುಹೌ | ದುಹಃ |
| ತೃ.ವಿ. | ದುಹಾ | ಧುಗ್ಭ್ಯಾಮ್ | ಧುಗ್ಭಿಃ |
| ಚ.ವಿ. | ದುಹೇ | ಧುಗ್ಭ್ಯಾಮ್ | ಧುಗ್ಭ್ಯಃ |
| ಪ.ವಿ. | ದುಹಃ | ಧುಗ್ಭ್ಯಾಮ್ | ಧುಗ್ಭ್ಯಃ |
| ಷ.ವಿ. | ದುಹಃ | ದುಹೋಃ | ದುಹಾಮ್ |
| ಸ.ವಿ. | ದುಹಿ | ದುಹೋಃ | ಧುಕ್ಷು |
| ಸಂ.ಪ್ರ.ವಿ | ಹೇಧುಕ್!,ಹೇಧುಗ್! | ಹೇ ದುಹೌ! | ಹೇ ದುಹಃ! |

(ವೈಕಲ್ಪಿಕ ಘ್ ಆದೇಶವನ್ನು ವಿಧಿಸುವ ಸೂತ್ರ)

**ಸೂತ್ರ- 255. ವಾ ದ್ರುಹ-ಮುಹ-ಷ್ಣುಹ-ಷ್ಣಿಹಾಮ್ (8.2.33)**

ವೃತ್ತಿಃ-ಏಷಾಂ ಹಸ್ಯ ವಾ ಘೋ ಝಲಿ ಪದಾನ್ತೇ ಚ। ಧ್ರುಕ್,ಧ್ರುಗ್,ಧ್ರುಟ್,ಧ್ರುಡ್,ದ್ರುಹೌ। ಧ್ರುಹಃ।ಧ್ರುಗ್ಭ್ಯಾಮ್, ಧ್ರುಡ್ಭ್ಯಾಮ್।ಧ್ರುಕ್ಷು, ಧ್ರುಟ್ತ್ಸು, ಧ್ರುಟ್ಸು। ಏವಂ ಮುಕ್,ಮುಗ್। ಇತ್ಯಾದಿ।

ಪ. ಛೇ. – ವಾ, ದ್ರುಹ–ಮುಹ–ಷ್ಣುಹ–ಷ್ಣಿಹಾಮ್।

ಅ. ವೃ. – "ಹೋ ಢಃ" ಎಂಬ ಸೂತ್ರದಿಂದ, 'ಹಃ' ಎಂಬ ಪದವು "ದಾದೇರ್ಧಾತೋರ್ಘಃ" ಎಂಬ ಸೂತ್ರದಿಂದ 'ಘಃ' ಎಂಬ ಪದವೂ, ಮತ್ತು "ಝಲೋ ಝಲಿ" ಎಂಬ ಸೂತ್ರದಿಂದ 'ಝಲಿ' ಎಂಬ ಪದವೂ ಮತ್ತು "ಸ್ಕೋಃ ಸಂಯೋಗಾದ್ಯೋರನ್ತೇ ಚ" ಎಂಬ ಸೂತ್ರದಿಂದ 'ಅನ್ತೇ' ಎಂಬ ಪದವೂ ಅನುವೃತ್ತವಾಗಿವೆ. "ಪದಸ್ಯ" ಎಂಬುದು ಅಧಿಕಾರ ಸೂತ್ರ.

ಅರ್ಥ– ದ್ರುಹ್,ಮುಹ್, ಷ್ಣುಹ್ ಮತ್ತು ಷ್ಣಿಹ್ ಧಾತುಗಳ 'ಹ್' ಕಾರದ ಸ್ಥಾನದಲ್ಲಿ ವಿಕಲ್ಪವಾಗಿ 'ಘ್' ಕಾರವು ಆದೇಶವಾಗಿ ಬರುತ್ತದೆ– 'ಝಲ್' ಪರದಲ್ಲಿದ್ದಾಗ, ಅಥವಾ 'ಹ್' ಕಾರವು ಪದಾನ್ತವಾಗಿದ್ದಾಗ. ಸೂತ್ರದಲ್ಲಿ ದ್ರುಹ್, ಮುಹ್, ಷ್ಣುಹ್ ಮತ್ತು ಷ್ಣಿಹ್ ಎಂಬಲ್ಲಿ ('ಅ' ಕಾರವು ಉಚ್ಚಾರಣಾರ್ಥವಾಗಿರೋಣದ್ದರಿಂದ ಅದನ್ನು ತ್ಯಜಿಸಲಾಗಿದೆ). ಈ ಸೂತ್ರವು ಈ ನಾಲ್ಕು ಧಾತುಗಳಿಗೆ ಮಾತ್ರ ಅನ್ವಯಿಸುತ್ತದೆ.

ಉದಾ–1. ದ್ರುಹ್ (ದ್ರೋಹ ಮಾಡುವದು)

ವಿವರಣೆ – 'ದ್ರುಹ್' ನಲ್ಲಿ "ದಾದೇರ್ಧಾತೋರ್ಘಃ (8.2.32)" ಎಂಬ ಸೂತ್ರದಿಂದ, ನಿತ್ಯವಾಗಿ ಬರುವ 'ಘ್' ಕಾರವನ್ನು ಬಾಧಿಸಿ ಪ್ರಕೃತ ಸೂತ್ರದಿಂದ ವೈಕಲ್ಪಿಕವಾಗಿ 'ಘ್' ಆದೇಶವಾಗಿ ಬರುತ್ತದೆ. ಉಳಿದ ಮೂರು ಶಬ್ದಗಳಲ್ಲಿ "ಹೋ

ಢಃ" ಎಂಬ ಸೂತ್ರದಿಂದ ನಿತ್ಯವಾಗಿ 'ಢ್'ಕಾರಾದೇಶವು ಬಂದಮೇಲೆ ವಿಕಲ್ಪವಾಗಿ 'ಘ್' ಕಾರಾದೇಶ ಬರುವದಕ್ಕಾಗಿ, ಈ ಸೂತ್ರವು ಪ್ರವೃತ್ತವಾಗಿದೆ. "ಘ್' ಕಾರವು ಬಾರದ ಪಕ್ಷದಲ್ಲಿ "ಹೋಢಃ" ಎಂಬ ಸೂತ್ರದಿಂದ 'ಢ್' ಕಾರಾದೇಶವು ಬರುತ್ತದೆ. ಇದೇ ರೀತಿಯಲ್ಲಿ ದ್ರುಹ್ ನಂತರ 'ಸು' ಬಂದಾಗ, 'ಹ್' ಕಾರದ ಸ್ಥಾನದಲ್ಲಿ, 'ಘ್' ಕಾರಾದೇಶ, ಮತ್ತು 'ದ್' ಕಾರದ ಸ್ಥಾನದಲ್ಲಿ 'ಭಷ್(ಧ್)' ಬಂದು, ನಂತರ ಜಶ್ತ್ವ, ವಿಕಲ್ಪದಿಂದ ಚರ್ತ್ವ ಬಂದು, 'ಘ್' ಕಾರಾದೇಶ ಪಕ್ಷದಲ್ಲಿ, ಧ್ರುಕ್ ಮತ್ತು ಧ್ರುಗ್ ಎಂಬ ಈ ಎರಡು ರೂಪಗಳು ಆಗುತ್ತವೆ. ಮತ್ತು 'ಢ್' ಕಾರಾದೇಶ ಬಂದ ಪಕ್ಷದಲ್ಲಿ ಧ್ರುಟ್, ಧ್ರುಡ್ ಎಂಬ ಎರಡು ರೂಪಗಳಾಗುತ್ತವೆ. ಹೀಗೆ ಒಟ್ಟು ನಾಲ್ಕು ರೂಪಗಳಾಗುತ್ತವೆ.

ಉದಾ– ಧ್ರುಘ್, ಧ್ರುಢ್, ಧ್ರುಗ್, ಧ್ರುಡ್ – ದ್ರುಹ್ ಶಬ್ದದ ಪ್ರಥಮಾ ಏಕವಚನದಲ್ಲಿ, ದ್ರುಹ್+ಸ್(ಸು) ಎಂದಿದ್ದಾಗ, "ಹಲ್ಙ್ಯಾಭ್ಯೋ ದೀರ್ಘಾತ್...... " ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬಂದು 'ದ್ರುಹ್' ಎಂದಾಗುತ್ತದೆ. 'ಹ್' ಕಾರವು ಪದಾನ್ತವಾಗಿರೋಣದ್ದರಿಂದ ಪ್ರಕೃತ ಸೂತ್ರದಿಂದ 'ಹ್' ಕಾರಕ್ಕೆ, ವೈಕಲ್ಪಿಕವಾಗಿ 'ಘ್' ಕಾರವು ಬಂದು, ದ್ರುಘ್ ಎಂದಾಗುತ್ತದೆ.

'ಘ್' ಕಾರ ಬಾರದ ಪಕ್ಷದಲ್ಲಿ, "ಹೋಢಃ" ಎಂಬ ಸೂತ್ರದಿಂದ ಪದಾನ್ತ 'ಹ್' ಕಾರಕ್ಕೆ 'ಢ್' ಕಾರ ಬಂದು ಧ್ರುಢ್ ಎಂದಾಗುತ್ತದೆ. ನಂತರ "ಏಕಾಚೋ ಬಶೋ ಭಷ್ ಝಷಂತಸ್ಯ ಸ್ಧ್ವೋಃ" (8.2.37) ಎಂಬ ಸೂತ್ರದಿಂದ ಎರಡೂ ಪಕ್ಷದಲ್ಲಿ 'ದ್' ಕಾರದ ಸ್ಥಾನದಲ್ಲಿ 'ಧ್' ಕಾರವು ಬಂದು ಧ್ರುಘ್ ಮತ್ತು ಧ್ರುಢ್ ಎಂದು ರೂಪಗಳಾಗುತ್ತವೆ.

ಹೀಗಿರುವಾಗ "ಝಲಾಮ್ಜಶೋಽನ್ತೇ" ಎಂಬ ಸೂತ್ರದಿಂದ ಪದಾನ್ತ 'ಝಲ್' ವರ್ಣಗಳಾದ 'ಘ್' ಕಾರ 'ಢ್' ಕಾರಗಳ ಸ್ಥಾನಗಳಲ್ಲಿ, ಕ್ರಮವಾಗಿ 'ಜಶ್' ವರ್ಣಗಳಾದ 'ಗ್' ಕಾರ ಮತ್ತು 'ಡ್' ಕಾರಗಳು ಆದೇಶವಾಗಿ ಬಂದು, ಧ್ರುಗ್, ಧ್ರುಡ್ ಎಂದು ರೂಪಗಳಾಗುತ್ತವೆ.

ಮತ್ತೆ "ವಾಽವಸಾನೇ" ಎಂಬ ಸೂತ್ರದಿಂದ 'ಗ್' ಕಾರ ಮತ್ತು 'ಡ್' ಕಾರಗಳ ಸ್ಥಾನಗಳಲ್ಲಿ ವೈಕಲ್ಪಿಕ ಚರ್ತ್ವ(ಕ್ ಮತ್ತು ಟ್) ಬಂದು ಧ್ರುಕ್, ಧ್ರುಟ್ ಎಂದು ರೂಪಗಳಾಗುತ್ತವೆ. ಹೀಗಾಗಿ ಒಟ್ಟು ಧ್ರುಕ್, ಧ್ರುಗ್, ಧ್ರುಟ್, ಧ್ರುಡ್ ಎಂದು ನಾಲ್ಕು ರೂಪಗಳಾಗುತ್ತವೆ.

ಇದೇ ತರಹ 'ಭ್ಯಾಮ್' ಮತ್ತು 'ಭಿಸ್' ಮೊದಲಾದ ಹಲಾದಿ 'ಸುಪ್' ಪ್ರತ್ಯಯಗಳು ಪರದಲ್ಲಿದ್ದಾಗಲೂ, 'ಘ್' ಕಾರ ಮತ್ತು 'ಢ್' ಕಾರಾದೇಶಗಳು ಬಂದಮೇಲೆ, ಹಿಂದಿನಂತೆ 'ಧ್ರುಗ್ಭ್ಯಾಮ್' ಧ್ರುಡ್ಭ್ಯಾಮ್' ಮೊದಲಾದ ಎರಡೆರಡು ರೂಪಗಳು ಸಿದ್ಧವಾಗುತ್ತವೆ. 'ಸುಪ್' ಪ್ರತ್ಯಯಗಳು ಪರದಲ್ಲಿದ್ದಾಗ, 'ಘ್' ಕಾರ ಬಂದ ಪಕ್ಷದಲ್ಲಿ, 'ಧುಕ್ಷು' ಎಂಬಂತೆ 'ಧ್ರುಕ್ಷು' ಎಂಬ ರೂಪವು ಮತ್ತು 'ಢ್' ಕಾರಾದೇಶ ಬಂದ ಪಕ್ಷದಲ್ಲಿ 'ಲಿಟ್ತ್ಸು' ಮತ್ತು 'ಲಿಟ್ಸು' ಎಂಬಂತೆ 'ಧ್ರುಟ್ತ್ಸು' 'ಧ್ರುಟ್ಸು' ಎಂದು ಒಟ್ಟು ಮೂರು ರೂಪಗಳು

ಸಿದ್ಧವಾಗುತ್ತವೆ. ಉಳಿದ ಅಜಾದಿ ಪ್ರತ್ಯಯಗಳು ಪರದಲ್ಲಿ ಬಂದಾಗ, ಕೇವಲ ಅಕ್ಷರಗಳು ಜೋಡಿಸಲ್ಪಡುತ್ತವೆ.

**(ಹ್ ಕಾರಾನ್ತ ಪುಲ್ಲಿಂಗ ದ್ರುಹ್ ಶಬ್ದದ ರೂಪಗಳು)**

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರ.ವಿ. | ಧ್ರುಕ್, ಧ್ರುಗ್, ಧ್ರುಟ್, ಧ್ರುಡ್ | ದ್ರುಹೌ | ದ್ರುಹಃ |
| ದ್ವಿ.ವಿ. | ದ್ರುಹಮ್ | ದ್ರುಹೌ | ದ್ರುಹಃ |
| ತೃ.ವಿ. | ದ್ರುಹಾ | ಧ್ರುಗ್ಭ್ಯಾಮ್, | ಧ್ರುಗ್ಭಿಃ,ಧ್ರುಡ್ಭಿಃ |
| ಚ.ವಿ. | ಧ್ರುಡ್ಭ್ಯಾಮ್ | ದ್ರುಹೇ | |
| | ಧ್ರುಗ್ಭ್ಯಾಮ್,ಧ್ರುಡ್ಭ್ಯಾಮ್ ಧ್ರುಗ್ಭ್ಯಃ, | | ಧ್ರುಡ್ಭ್ಯಃ |
| ಪ.ವಿ. | ದ್ರುಹಃ | ಧ್ರುಗ್ಭ್ಯಾಮ್, ಧ್ರುಡ್ಭ್ಯಾಮ್ | ಧ್ರುಗ್ಭ್ಯಃ, ಧ್ರುಡ್ಭ್ಯಃ |
| ಷ.ವಿ. | ದ್ರುಹಃ | ದ್ರುಹೋಃ, | ದ್ರುಹಾಮ್ |
| ಸ.ವಿ. | ದ್ರುಹಿ | ದ್ರುಹೋಃ | ಧ್ರುಕ್ಷು,ಧುಟ್ತ್ಸು, ಧ್ರುಟ್ಸು |
| ಸಂ.ಪ್ರ.ವಿ | ಹೇಧ್ರುಕ್!,ಹೇಧ್ರುಗ್! | ಹೇ ದ್ರುಹೌ! | ಹೇ ದ್ರುಹಃ!,! |

ಇದೇ ತರಹ 'ಮುಹ್' ಶಬ್ದದ ರೂಪಗಳನ್ನು ತಯಾರಿಸಬೇಕು. ಇಲ್ಲಿ ಮುಹ್, ಷ್ಣುಹ್ ಮತ್ತು ಷ್ಣಿಹ್ ಮೂರು ಧಾತುಗಳಿಗೆ, 'ಬಶ್' ಪ್ರತ್ಯಾಹಾರ ಬಾರದೇ ಇರುವದರಿಂದ 'ಭಶ್' ಆದೇಶವು ಬರುವದಿಲ್ಲ. ಇಷ್ಟೇ ಇದರಲ್ಲಿ ಇರುವ ವಿಶೇಷ.

**(ಷ್ ಕಾರಕ್ಕೆ ಸ್ ಕಾರಾದೇಶವನ್ನು ವಿಧಿಸುವ ಸೂತ್ರ)**

**ಸೂತ್ರ – 256. ಧಾತ್ವಾದೇಃ ಷಃ ಸಃ (6.1.64)**

ವೃತ್ತಿಃ–ಧಾತೋಃ ಆದೇಃ ಷಸ್ಯ ಸಃ ಸ್ಯಾತ್। ಸ್ನುಕ್–ಸ್ನುಗ್,ಸ್ನುಟ್–ಸ್ನುಡ್। ಏವಂ ಸ್ನಿಕ್–ಸ್ನಿಗ್, ಸ್ನಿಟ್–ಸ್ನಿಡ್। (ವಿಶ್ವವಾಟ್, ವಿಶ್ವವಾಡ್। ವಿಶ್ವವಾಹೌ। ವಿಶ್ವವಾಹಃ।ವಿಶ್ವವಾಹಮ್। ವಿಶ್ವವಾಹೌ)।

ಅರ್ಥ– (ಧಾತ್ವಾದೇಃ 'ಷ' ಕಾರಸ್ಯ ಸ್ಥಾನೇ 'ಸ್' ಕಾರಾದೇಶೋ ಭವತಿ.) – ಧಾತು ಪಾಠದಲ್ಲಿ ಇರುವ ಧಾತುವಿನ ಆದಿಯಲ್ಲಿ ಇರುವ 'ಷ್' ಕಾರಕ್ಕೆ 'ಸ್' ಕಾರವು ಆದೇಶವಾಗಿ ಬರುತ್ತದೆ. ಧಾತುವಿನ ಆದಿಯಲ್ಲಿರುವ 'ಷ್' ಕಾರಕ್ಕೆ 'ಸ್' ಕಾರಾದೇಶ ಬಂದಮೇಲೆ, ಷ್ಟುತ್ವ ನಿಮಿತ್ತವಾದ ಕಾರ್ಯಗಳು ಇಲ್ಲದಿರುವುದರಿಂದ ಷ್ಟುತ್ವ ನಿಮಿತ್ತಕವಾದ ರೂಪಗಳು ನಾಶವಾಗಿ 'ಸ್' ಕಾರ ನಿಮಿತ್ತವಾದ ರೂಪಗಳು ಬರುತ್ತವೆ. ಈ ನಿಯಮವನ್ನು ವ್ಯಾಕರಣಶಾಸ್ತ್ರದಲ್ಲಿ "ನಿಮಿತ್ತಾಪಾಯೇ ನೈಮಿತ್ತಿಕಸ್ಯಾಪ್ಯಪಾಯಃ" ಎಂದು ಹೇಳುತ್ತಾರೆ.

ಅಂದರೆ ನಿಮಿತ್ತ ನಾಶವಾಗೋಣದ್ದರಿದ ನೈಮಿತ್ತಿಕದ ನಾಶವೂ ಆಗುತ್ತದೆ. (ನೈಮಿತ್ತಿಕವೆಂದರೆ – ನಿಮಿತ್ತದ ಕಾರಣದಿಂದ ಉತ್ಪನ್ನವಾದ ಎಂದು ಅರ್ಥ).

ಷ್ಣಿಹ್(ಸ್ನಿಹ್) –(ಸ್ನೇಹ ಮಾಡುವದು)

ಉದಾ– ಸ್ನಿಹ್ – 'ಷ್ಣಿಹ್' ಎಂಬುದು ಧಾತುಪಾಠದಲ್ಲಿರುವ ಧಾತುವಿನ ರೂಪ. ಇಲ್ಲಿ 'ಷ್' ಕಾರವನ್ನು ನಿಮಿತ್ತ ಮಾಡಿಕೊಂಡು, 'ನ್' ಕಾರದ ಸ್ಥಾನದಲ್ಲಿ "ರಷಾಭ್ಯಾಂ ನೋ ಣಃ ಸಮಾನಪದ್ನೇ" ಎಂಬ ಸೂತ್ರದಿಂದ 'ಣತ್ವ'ವು ಬಂದಿದೆ. ಈಗ ಪ್ರಕೃತ ಸೂತ್ರದಿಂದ 'ಷ್' ಕಾರದ ಸ್ಥಾನದಲ್ಲಿ 'ಸ್' ಕಾರವು ಬಂದು 'ಷತ್ವ'ವು ನಾಶವಾಗಿದೆ. ಆದ್ದರಿಂದ ನೈಮಿತ್ತಿಕವಾದ 'ಷ್' ಕಾರವು ನಾಶವಾಗುತ್ತದೆ. ಅಂದರೆ, ಪೂರ್ವದಲ್ಲಿದ್ದ 'ನ್' ಕಾರವೇ ಉಳಿದು 'ಸ್ನಿಹ್' ಎಂದೇ ಉಳಿಯುತ್ತದೆ.

ಸ್ನುಕ್–ಸ್ನುಗ್, ಸ್ನುಟ್–ಸ್ನುಡ್, ಸ್ನಿಕ್–ಸ್ನಿಗ್, ಸ್ನಿಟ್–ಸ್ನಿಡ್–ಷ್ಣಿಹ್ ಮತ್ತು ಷ್ಣುಹ್ ಧಾತುಗಳಲ್ಲಿ ಪ್ರಕೃತ ಸೂತ್ರದಿಂದ, 'ಸ್' ಕಾರಾದೇಶ ಮತ್ತು "ನಿಮಿತ್ತಾಪಾಯೇ ನೈಮಿತ್ತಿಕಸ್ಯಾಪ್ಯಪಾಯಃ" ಎಂಬ ನಿಯಮದಿಂದ 'ಣ್' ಕಾರಕ್ಕೆ 'ನ್' ಕಾರ ಬಂದು ಸ್ನಿಹ್ ಮತ್ತು ಸ್ನುಹ್ ಎಂದಾಗಿವೆ. ಇವುಗಳ ಪರದಲ್ಲಿರುವ 'ಸು(ಸ್)' ಪ್ರತ್ಯಯವು ಲೋಪವಾದಾಗ, "ಹೋ ಢಃ" ಎಂಬ ಸೂತ್ರದಿಂದ ಢತ್ವ ಪ್ರಾಪ್ತವಾದಾಗ, ಇದನ್ನು ಬಾಧಿಸಿ "ವಾ ದ್ರುಹ–ಮುಹ–ಷ್ಣುಹ–ಷ್ಣಿಹಾಮ್" (8.2.33) ಎಂಬ ಸೂತ್ರದಿಂದ ವೈಕಲ್ಪಿಕ 'ಘ್' ಕಾರಾದೇಶ, ಜಶ್ತ್ವ ಮತ್ತು ವೈಕಲ್ಪಿಕ ಚರ್ತ್ವ ಗಳು ಬಂದು ಸ್ನಿಕ್–ಸ್ನಿಗ್ ಮತ್ತು ಸ್ನುಕ್–ಸ್ನುಗ್ ಎಂಬ ಎರಡು ರೂಪಗಳು ಸಿದ್ಧವಾಗುತ್ತವೆ.

'ಘ್' ಕಾರಾದೇಶ ಬಾರದ ಪಕ್ಷದಲ್ಲಿ, "ಹೋ ಢಃ" ಎಂಬ ಸೂತ್ರದಿಂದ 'ಢ್' ಕಾರಾದೇಶ ಬಂದು , ನಂತರ ಜಶ್ತ್ವ, ವೈಕಲ್ಪಿಕ ಚರ್ತ್ವ ಬಂದು ಸ್ನಿಟ್–ಸ್ನಿಡ್, ಮತ್ತು ಸ್ನುಟ್– ಸ್ನುಡ್ ಎಂಬ ಈ ಎರಡು ರೂಪಗಳು ಸಿದ್ಧವಾಗುತ್ತವೆ.

ಇದೇ ತರಹ ಹಿಂದಿನಂತೆ ಸುಪ್(ಸು) ಪ್ರತ್ಯಯ ಸೇರಿಸಿದಾಗ, ಮೇಲಿನ ನಾಲ್ಕು ರೂಪಗಳಾಗುತ್ತವೆ. ಉಳಿದ ಪ್ರತ್ಯಯಗಳೆಲ್ಲ ದ್ರುಹ್ ಶಬ್ದದ ಪ್ರತ್ಯಯದಂತೆಯೇ ಇರುವುವು.

**(ವಿಶ್ವವಾಟ್ ಶಬ್ದದ ರೂಪಗಳು)**

ಉದಾ– ವಿಶ್ವವಾಟ್, ವಿಶ್ವವಾಡ್: ಪ್ರಥಮಾ ವಿಭಕ್ತಿ ಏಕವಚನದಲ್ಲಿ– 'ವಿಶ್ವಂ ವಹತಿ ಇತಿ ವಿಶ್ವವಾಟ್' ಎಂಬುದು ವಿಗ್ರಹ. ವಿಶ್ವ ಪೂರ್ವಕ 'ವಹ್' ಧಾತುವಿನ ನಂತರ 'ಣ್ವಿ' ಪ್ರತ್ಯಯಾದಿ ಕಾರ್ಯಗಳಾದಮೇಲೆ ಇದು ಕೃದಂತವಾಗುತ್ತದೆ.

ಹೀಗೆ – ವಿಶ್ವವಾಹ್+ಸು(ಸ್) ಎಂದಿದ್ದಾಗ, 'ಸು' ಲೋಪವಾಗಿ, "ಹೋಢಃ" ಎಂಬ ಸೂತ್ರದಿಂದ ಢತ್ವ ಬಂದು ಅದಕ್ಕೆ 'ಜಶ್ತ್ವ (ಡ್)' ಬಂದಮೇಲೆ, ಆ 'ಡ್' ಕಾರಕ್ಕೆ ವೈಕಲ್ಪಿಕ 'ಚರ್ತ್ವ(ಟ್)' ಬಂದು ವಿಶ್ವವಾಟ್– ವಿಶ್ವವಾಡ್ ಎಂದು ಎರಡು ರೂಪಗಳು ಸಿದ್ಧವಾಗುತ್ತವೆ.

ಇನ್ನು ಔ, ಜಸ್, ಅಮ್, ಔಟ್ ಪ್ರತ್ಯಯಗಳನ್ನು ಸೇರಿಸಿದಾಗ, ವಿಶ್ವವಾಹೌ। ವಿಶ್ವವಾಹಃ। ವಿಶ್ವವಾಹಮ್। ವಿಶ್ವವಾಹೌ ಎಂದು ರೂಪಗಳಾಗುತ್ತವೆ.

**(ಸಂಪ್ರಸಾರಣ ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ - 257. ಇಗ್ಯಣಃ ಸಂಪ್ರಸಾರಣಮ್। (1.1.45)**

ವೃತ್ತಿಃ-ಯಣಃ ಸ್ಥಾನೇ ಪ್ರಯುಜ್ಯಮಾನೋ ಯಃ ಇಕ್, ಸಃ ಸಂಪ್ರಸಾರಣ ಸಂಜ್ಞಃ ಸ್ಯಾತ್।

ಪ. ಛೇ. – ಇಕ್, ಯಣಃ, ಸಂಪ್ರಸಾರಣಮ್।

ಅರ್ಥ– 'ಯಣ್' (ಯ್,ವ್,ರ್,ಲ್) ಸ್ಥಾನದಲ್ಲಿ ಕ್ರಮವಾಗಿ ಆದೇಶವಾಗಿ ಬರುವ, 'ಇಕ್' (ಇ,ಉ,ಋ,ಲೃ) ಗಳಿಗೆ ಸಂಪ್ರಸಾರಣ ಸಂಜ್ಞೆ ಬರುತ್ತದೆ. ಅಂದರೆ– ಎಲ್ಲೆಲ್ಲಿ ಸಂಪ್ರಸಾರಣ ಶಬ್ದವು ಪ್ರಯೋಗಿಸಲ್ಪಡುತ್ತದೆಯೋ, ಅಲ್ಲಲ್ಲಿ 'ಯಣ್' (ಯ,ವ್,ರ್,ಲ್) ಸ್ಥಾನದಲ್ಲಿ 'ಇಕ್' (ಇ,ಉ,ಋ,ಲೃ) ವರ್ಣಗಳು ಕ್ರಮವಾಗಿ ಆದೇಶವಾಗಿ ಬರುತ್ತವೆ. ಇದು 'ಯಣ್' ಸಂಧಿಗೆ ವಿಪರೀತ ಕ್ರಮದಲ್ಲಿದೆ.

**(ಊಠ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ - 258. ವಾಹ ಊಠ್ (6.4.132)**

ವೃತ್ತಿಃ-ಭಸ್ಯ ವಾಹಃ ಸಂಪ್ರಸಾರಣಂ ಊಠ್।

ಪ. ಛೇ. – ವಾಹಃ, ಊಠ್।

ಅ. ವ್ಯ. – "ವಸೋಃ ಸಂಪ್ರಸಾರಣಮ್" ಎಂಬ ಸೂತ್ರದಿಂದ 'ಸಂಪ್ರಸಾರಣಮ್' ಎಂಬ ಪದವು ಅನುವೃತ್ತವಾಗಿದೆ. "ಭಸ್ಯ" ಎಂಬುದು ಅಧಿಕಾರ ಸೂತ್ರ.

ಅರ್ಥ–'ಭ' ಸಂಜ್ಞೆಯುಳ್ಳ 'ವಾಹ್' ಧಾತುವಿಗೆ ಸಂಪ್ರಸಾರಣ ಸಂಜ್ಞೆಯುಳ್ಳ 'ಊಠ್(ಊ)' ಆದೇಶವಾಗಿ ಬರುತ್ತದೆ. 'ಊಠ್(ಊ)' ಆದೇಶವನ್ನು ಸಾಕ್ಷಾತ್ತಾಗಿ ಮಾಡದೇ ಸಂಪ್ರಸಾರಣ ಸಂಜ್ಞೆಯುನ್ನು ಕೊಡುವದರ ಫಲವೆಂದರೆ, ಸಂಪ್ರಸಾರಣವಾದಮೇಲೆ "ಸಂಪ್ರಸಾರಣಾಚ್ಚ" ಎಂಬ ಮುಂದಿನ ಸೂತ್ರದಿಂದ 'ಪೂರ್ವರೂಪವನ್ನು' ಮಾಡಲಾಗುತ್ತದೆ.

**(ಪೂರ್ವರೂಪವನ್ನು ವಿಧಿಸುವ ಸೂತ್ರ)**

**ಸೂತ್ರ- 259. - ಸಂಪ್ರಸಾರಣಾಚ್ಚ (6.1.108)**

ವೃತ್ತಿಃ-ಸಂಪ್ರಸರಣಾತ್ ಅಚಿ ಪೂರ್ವರೂಪಮೇಕಾದೇಶಃ ಸ್ಯಾತ್। "ಏತ್ಯೇಧತ್ಯೂಠ್ಸು" ಇತಿ ವೃದ್ಧಿಃ। ವಿಶ್ವೌಹಃ, ಇತ್ಯಾದಿ।

ಪ. ಛೇ. – ಸಂಪ್ರಸಾರಣಾತ್, ಚ।

ಅ. ವ್ಯ. –"ಇಕೋಯಣಚಿ" ಎಂಬ ಸೂತ್ರದಿಂದ 'ಅಚಿ' ಎಂಬ ಪದವೂ ಮತ್ತು "ಅಮಿಪೂರ್ವಃ" ಎಂಬ ಸೂತ್ರದಿಂದ 'ಪೂರ್ವಃ' ಎಂಬ ಪದವೂ ಅನುವೃತ್ತವಾಗುತ್ತವೆ. "ಏಕಃ ಪೂರ್ವಪರಯೋಃ" ಎಂಬುದು ಅಧಿಕಾರ ಸೂತ್ರ.

ಅರ್ಥ–ಸಂಪ್ರಸಾರಣಕ್ಕಿಂತ 'ಅಚ್' ಪರದಲ್ಲಿದ್ದಾಗ, ಪೂರ್ವ– ಪರಗಳ ಸ್ಥಾನದಲ್ಲಿ, ಪೂರ್ವರೂಪವು ಏಕಾದೇಶವಾಗಿ ಬರುತ್ತದೆ.

ಉದಾ- ವಿಶ್ವೌಹಃ: - ದ್ವಿತೀಯಾ ಬಹುವಚನದಲ್ಲಿ - ವಿಶ್ವವಾಹ್ ಶಬ್ದದ ಪರದಲ್ಲಿ 'ಶಸ್(ಅಸ್)' ಸೇರಿಸಿದಾಗ, ವಿಶ್ವವಾಹ್+ಅಸ್ ಎಂದಿರುತ್ತದೆ. ಅಸ್ ಪರದಲ್ಲಿರೋಣದ್ದರಿಂದ "ಯಚಿ ಭಮ್" ಎಂಬ ಸೂತ್ರದಿಂದ 'ವಿಶ್ವವಾಹ್' ಶಬ್ದಕ್ಕೆ 'ಭ' ಸಂಜ್ಞೆ ಬರುತ್ತದೆ. "ವಾಹ ಊಠ್" ಎಂಬ ಸೂತ್ರದಿಂದ 'ವಾಹ್' ನಲ್ಲಿರುವ 'ವ್' ಗೆ ಸಂಪ್ರಸಾರಣ ಸಂಜ್ಞೆಯುಳ್ಳ 'ಊಠ್(ಊ)' ಆದೇಶವು ಬರುತ್ತದೆ. ಆಗ ವಿಶ್ವ+ಊ+ಆಹ್+ಅಸ್ ಎಂದಿರುತ್ತದೆ. ಆಗ ಪ್ರಕೃತ ಸೂತ್ರದಿಂದ ಊ+ಆ ವರ್ಣಗಳು ಸೇರಿದಾಗ, ಪೂರ್ವರೂಪ ಏಕಾದೇಶದಿಂದ 'ಊ' ಎಂದಾಗುತ್ತದೆ. ಹೀಗೆ ವಿಶ್ವ+ಊಹ್+ಅಸ್ ಎಂದಿದ್ದಾಗ, "ಏತ್ಯೇಧತ್ಯೂಠ್ಸು" ಎಂಬ ಸೂತ್ರದಿಂದ ವಿಶ್ವ+ಊಹ್ ಗಳಲ್ಲಿರುವ 'ಅ' ಕಾರ ಮತ್ತು 'ಊ' ಕಾರಗಳ ಸ್ಥಾನದಲ್ಲಿ ವೃದ್ಧಿ ಬಂದು, ವಿಶ್ವೌಹ+ಅಸ್=ವಿಶ್ವೌಹಸ್ ಎಂದಾಗಿ, ನಂತರ 'ಸ್' ಕಾರಕ್ಕೆ ರುತ್ವ-ವಿಸರ್ಗಗಳು ಬಂದು ವಿಶ್ವೌಹಃ ಎಂದು ರೂಪವಾಗುತ್ತದೆ.

ಇದೇ ತರಹ ವಿಶ್ವೌಹ್ ಜೊತೆಗೆ ಪರದಲ್ಲಿರುವ ಅಜಾದಿ ವಿಭಕ್ತಿಗಳನ್ನು ಸೇರಿಸಿದಾಗ, ಆಯಾ ಇಷ್ಟ ರೂಪಗಳು ಸಿದ್ಧಿಸುತ್ತವೆ. ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, "ಹೋ ಢಃ" ಎಂಬ ಸೂತ್ರದಿಂದ ಢತ್ವವು ಬಂದು, "ಝಲಾಂ ಜಶೋಽನ್ತೇ" ಎಂಬ ಸೂತ್ರದಿಂದ ಅದಕ್ಕೆ 'ಜಶ್ತ್ವ' ಮಾಡಿದಾಗ, 'ಡ್' ವರ್ಣವು ಬರುತ್ತದೆ. 'ಸುಪ್'ನಲ್ಲಿ 'ಧುಟ್' ಬಂದಾಗ, 'ದ್ರುಹ್' ಶಬ್ದದಂತೆ ಮೂರು ರೂಪಗಳು ಉಂಟಾಗುತ್ತವೆ.

**(ಹ್ ಕಾರಾನ್ತ ಪುಲ್ಲಿಂಗ ವಿಶ್ವವಾಹ್ ಶಬ್ದದ ರೂಪಗಳು)**

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರ.ವಿ. | ವಿಶ್ವವಾಟ್,ವಿಶ್ವವಾಡ್ | ವಿಶ್ವವಾಹೌ | ವಿಶ್ವವಾಹಃ |
| ದ್ವಿ.ವಿ. | ವಿಶ್ವವಾಹಮ್ | ವಿಶ್ವವಾಹೌ | ವಿಶ್ವೌಹಃ |
| ತೃ.ವಿ. | ವಿಶ್ವೌಹಾ | ವಿಶ್ವವಾಡ್ಭ್ಯಾಮ್ | ವಿಶ್ವವಾಡ್ಭಿಃ |
| ಚ.ವಿ. | ವಿಶ್ವೌಹೇ | ವಿಶ್ವವಾಡ್ಭ್ಯಾಮ್ | ವಿಶ್ವವಾಡ್ಭ್ಯಃ |
| ಪ.ವಿ. | ವಿಶ್ವೌಹಃ | ವಿಶ್ವವಾಡ್ಭ್ಯಾಮ್ | ವಿಶ್ವವಾಡ್ಭ್ಯಃ |
| ಷ.ವಿ. | ವಿಶ್ವೌಹಃ | ವಿಶ್ವೌಹೋಃ | ವಿಶ್ವೌಹಾಮ್ |
| ಸ.ವಿ. | ವಿಶ್ವೌಹಿ | ವಿಶ್ವೌಹೋಃ | ವಿಶ್ವವಾಟ್ತ್ಸು, ವಿಶ್ವವಾಟ್ಸು |
| ಸಂ.ಪ್ರ.ವಿ | ಹೇವಿಶ್ವವಾಟ್! | ಹೇವಿಶ್ವವಾಹೌ! | ಹೇವಿಶ್ವವಾಹಃ!ಹೇವಿಶ್ವವಾಡ್! |

**(ಆಮ್ ಆಗಮವನ್ನು ವಿಧಿಸುವ ಸೂತ್ರ)**

**ಸೂತ್ರ - 260. ಚತುರನಡುಹೋರಾಮುದಾತ್ತಃ (7.1.98)**

ವೃತ್ತಿಃ-ಅನಯೋಃ ಆಮ್ ಸ್ಯಾತ್ ಸರ್ವನಾಮಸ್ಥಾನೇ ಪರೇ।

ಪ. ಛೇ. - ಚತುರನಡುಹೋಃ, ಆಮ್, ಉದಾತ್ತಃ।

ಅ. ವ್ಯ. - "ಇತೋಽತ್ ಸರ್ವನಾಮಸ್ಥಾನೇ" ಎಂಬ ಸೂತ್ರದಿಂದ

'ಸರ್ವನಾಮಸ್ಥಾನೇ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– 'ಸರ್ವನಾಮ' ಸ್ಥಾನವು ಪರದಲ್ಲಿದ್ದಾಗ, 'ಚತುರ್' ಮತ್ತು 'ಅನಡುಹ್' ಶಬ್ದಗಳಿಗೆ 'ಆಮ್(ಆ)' ಆಗಮವು ಬರುತ್ತದೆ. ಇಲ್ಲಿ 'ಮ್' ಕಾರವು 'ಇತ್' ಆಗಿದೆ. ಆದುದರಿಂದ ಇದು 'ಮಿತ್' ಆದ ಆಗಮವಾಗಿಯೂ ಇದೆ. "ಮಿದಚೋಽನ್ತ್ಯಾತ್ ಪರಃ" ಎಂಬ ಸೂತ್ರದಿಂದ ಅಂತ್ಯವಾದ 'ಅಚ್' ನ ನಂತರ ಈ ಆಗಮವು ಬರುತ್ತದೆ. ಸೂತ್ರದಲ್ಲಿ 'ಉದಾತ್ತಃ' ಎಂಬ ಪದವು 'ಉದಾತ್ತ' ಸ್ವರವನ್ನು ವಿಧಾನ ಮಾಡುತ್ತದೆ. ಲಘು ಸಿದ್ಧಾನ್ತ ಕೌಮುದಿಯಲ್ಲಿ ಸ್ವರ ಪ್ರಕರಣವು ಇಲ್ಲದಿರುವುದರಿಂದ, ಇದರ ಬಗ್ಗೆ ಹೆಚ್ಚೇನೂ ಹೇಳುವದಿಲ್ಲ.

**(ನುಮ್ ಆಗಮವನ್ನು ವಿಧಿಸುವ ಸೂತ್ರ)**

**ಸೂತ್ರ– 261. ಸೂತ್ರ – ಸಾವನಡುಹಃ (7.1.82)**

ವೃತ್ತಿಃ– ಅಸ್ಯ ನುಮ್ ಸ್ಯಾತ್ ಸೌ ಪರೇ। ಅನಡ್ವಾನ್।

ಪ. ಛೇ. – ಸೌ, ಅನಡುಹಃ॥

ಅ. ವೃ – "ಆಚ್ಛೀನದ್ಯೋರ್ನುಮ್" ಎಂಬ ಸೂತ್ರದಿಂದ 'ನುಮ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– ಸು(ಸುಪ್) ಪ್ರತ್ಯಯವು ಪರದಲ್ಲಿದ್ದಾಗ, 'ಅನಡುಹ್' ಶಬ್ದಕ್ಕೆ 'ನುಮ್' ಆಗಮವು ಬರುತ್ತದೆ. ಇದು 'ಮಿತ್' ಆಗಿರೋಣದ್ದರಿಂದ, ಅಂತ್ಯವಾದ 'ಅಚ್(ಸ್ವರ)' ನ ನಂತರ ಬರುತ್ತದೆ. ಈ ಸೂತ್ರವು ಈ ಶಬ್ದಕ್ಕೆ ಮಾತ್ರ ಮೀಸಲಾಗಿದೆ.

ಉದಾ – ಅನಡ್ವಾನ್: (ಎತ್ತು/ವೃಷಭ)–'ಅನಡುಹ್' ಶಬ್ದದ ಪರದಲ್ಲಿ ಪ್ರಥಮೈಕವಚನ ಪ್ರತ್ಯಯವಾದ 'ಸು' ನಲ್ಲಿ 'ಉ' ಕಾರ ಲೋಪವಾದಮೇಲೆ ಅನಡುಹ್+ಸ್ ಎಂದಿದ್ದಾಗ, "ಚತುರನಡುಹೋರಾಮುದಾತ್ತಃ (7.1.98)" ಎಂಬ ಸೂತ್ರದಿಂದ, 'ಆಮ್(ಆ)' ಆಗಮವು ಅಂತ್ಯ 'ಅಚ್' ಆದ 'ಡ್'ಕಾರೋತ್ತರ 'ಉ' ಕಾರದ ನಂತರ ಮತ್ತು 'ಹ್' ಕಾರದ ಪೂರ್ವದಲ್ಲಿ ಬಂದು, ಅನಡು+ಆ+ಹ್+ಸ್ ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ನುಮ್(ನ್)' ಆಗಮವು ಅಂತ್ಯ 'ಅಚ್' ಆದ 'ಆ' ಕಾರದ ನಂತರ ಬಂದು, ಅನಡು+ಆ+ನ್+ಹ್+ಸ್ ಎಂದಾಗುತ್ತದೆ. 'ಡು+ಆ ಎಂಬಲ್ಲಿ 'ಯಣ್' ಸಂಧಿಯಿಂದ ಅನಡ್ವಾ+ನ್ +ಹ್+ಸ್ ಎಂದಿದ್ದಾಗ, ಅಂತ್ಯ 'ಸ್' ಕಾರಕ್ಕೆ "ಹಲ್ಙ್ಯಾಬ್ಭ್ಯೋ ದೀರ್ಘಾತ್ ಸುತಿಸ್ಯಪೃಕ್ತಮ್ ಹಲ್" ಎಂಬ ಸೂತ್ರದಿಂದ ಲೋಪವಾಗುತ್ತದೆ. 'ಹ್' ಕಾರವು "ಸಂಯೋಗಾನ್ತಸ್ಯ ಲೋಪಃ" ಎಂಬ ಸೂತ್ರದಿಂದ ಲೋಪವಾಗಿ ಅನಡ್ವಾ+ನ್=ಅನಡ್ವಾನ್ ಎಂದು ರೂಪವಾಗುತ್ತದೆ.

ಉದಾ– ಅನಡ್ವಾಹೌ – ಪ್ರಥಮಾ ದ್ವಿವಚನದಲ್ಲಿ – 'ಔ' ಪ್ರತ್ಯಯವು ಬಂದು, ಅನಡುಹ್+ಔ ಎಂದಿದ್ದಾಗ, "ಚತುರನಡುಹೋರಾಮುದಾತ್ತಃ (7.1.98)" ಎಂಬ ಸೂತ್ರದಿಂದ, 'ಆಮ್(ಆ)' ಆಗಮವು ಬಂದು, ಅನಡು+ಆ+ಹ್+ಔ ಎಂದಾಗುತ್ತದೆ. 'ಅನಡು' ಎಂಬಲ್ಲಿ 'ಯಣ್' ಸಂಧಿಯಿಂದ ಅನಡ್ವಾಹ್+ಔ=ಅನಡ್ವಾಹೌ ಎಂದು

ರೂಪವಾಗುತ್ತದೆ. (ಇಲ್ಲಿ 'ಸ್(ಸು)' ಪರದಲ್ಲಿ ಇಲ್ಲದೇ ಇರೋಣದ್ದರಿಂದ, ಪ್ರಕೃತ ಸೂತ್ರದಿಂದ 'ನುಮ್' ಆಗಮವು ಬಂದಿಲ್ಲ). ಇದೇ ರೀತಿಯಲ್ಲಿ ಅನಡ್ವಾಹಃ, ಅನಡ್ವಾಹಮ್, ಅನಡ್ವಾಹೌ, ಎಂಬ ರೂಪಗಳು ಸಿದ್ಧವಾಗುತ್ತವೆ.

ಉದಾ – ಅನಡುಹಃ – ದ್ವಿತೀಯಾ ಬಹುವಚನದಲ್ಲಿ 'ಶಸ್(ಅಸ್) ಪ್ರತ್ಯಯವು ಬಂದು, ಅನಡುಹ್+ಅಸ್ ಎಂದಿರುವಾಗ, (ಸರ್ವನಾಮಸ್ಥಾನ ಸಂಜ್ಞೆ ಬಾರದೇ ಇರೋಣದ್ದರಿಂದ 'ಆಮ್' ಆಗಮವು ಬರುವದಿಲ್ಲ). 'ಸ್' ಕಾರಕ್ಕೆ ರುತ್ವ-ವಿಸರ್ಗಗಳು ಬಂದು ಅನಡುಹಃ ಎಂಬ ರೂಪವು ಸಿದ್ಧಿಸುತ್ತದೆ.

(ಅಮ್ ಆಗಮವನ್ನು ವಿಧಿಸುವ ಸೂತ್ರ)

**ಸೂತ್ರ– 262. ಅಮ್ ಸಂಬುದ್ಧೌ (7.1.99)**

ವೃತ್ತಿಃ–ಹೇ ಅನಡ್ವನ್। ಹೇ ಅನಡ್ವಾಹೌ। ಹೇ ಅನಡ್ವಾಹಃ। ಅನಡುಹಃ।ಅನಡುಹಾ।

ಅ. ವೃ. – "ಚತುರನಡುಹೋರಾಮುದಾತ್ತಃ (7.1.98)" ಎಂಬ ಸೂತ್ರದಿಂದ, 'ಚತುರನಡುಹೋಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ–ಸಂಬುದ್ಧಿಯಲ್ಲಿ ಅನಡುಹ್ ಶಬ್ದಕ್ಕೆ 'ಅಮ್' ಆಗಮವು ಬರುತ್ತದೆ.

ಉದಾ – ಹೇ ಅನಡ್ವನ್!–ಸಂಬುದ್ಧಿಯಲ್ಲಿ ಅನಡುಹ್+ಸ್ ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ಅಮ್(ಅ)' ಆಗಮವು ಬಂದು, ಅನಡು+ಅ+ಹ್+ಸ್ ಎಂದಾಗುತ್ತದೆ. ಡು+ಅ ಎಂಬಲ್ಲಿ 'ಯಣ್' ಸಂಧಿಯಿಂದ ಅನಡ್ವ+ಹ್+ಸ್ ಎಂದಾಗಿ, ನಂತರ "ಸಾವನಡುಹಃ (7.1.82)" ಎಂಬ ಸೂತ್ರದಿಂದ 'ನುಮ್(ನ್)' ಆಗಮವು ಬಂದು, ಅನಡ್ವ+ನ್+ಸ್+ಹ್ ಎಂದಿದ್ದಾಗ, 'ಸ್' ಕಾರಕ್ಕೆ "ಹಲ್ಙ್ಯಾಭ್ಯೋ ದೀರ್ಘಾತ್ ಸುತಿಸ್ಯಪೃಕ್ತಮ್ ಹಲ್" ಎಂಬ ಸೂತ್ರದಿಂದ 'ಲೋಪ' ಬರುತ್ತದೆ. "ಸಂಯೋಗಾನ್ತಸ್ಯ ಲೋಪಃ"ಎಂಬ ಸೂತ್ರದಿಂದ 'ಹ್' ಕಾರಕ್ಕೆ ಲೋಪವಾಗಿ ಹೇ ಅನಡ್ವನ್! ಎಂಬ ರೂಪವು ಸಿದ್ಧವಾಗುತ್ತದೆ.

ಇನ್ನು ಮುಂದೆ ಅಜಾದಿ ವಿಭಕ್ತಿ ಪ್ರತ್ಯಯಗಳು ಬಂದಾಗ, ಕೇವಲ ಅಕ್ಷರ ಜೋಡಣೆಯಿಂದ ಮತ್ತು 'ಸ್' ಕಾರಕ್ಕೆ ರುತ್ವ-ವಿಸರ್ಗಗಳಿಂದಲೂ ಅನಡುಹಾ, ಅನಡುಹೇ ಮೊದಲಾದ ರೂಪಗಳು ಸಿದ್ಧವಾಗುತ್ತವೆ.

(ಸ್ ಕಾರ ಮತ್ತು ಹ್ ಕಾರಗಳಿಗೆ 'ದ್' ಕಾರವನ್ನು ವಿಧಿಸುವ ಸೂತ್ರ)

**ಸೂತ್ರ–263. ವಸು-ಸ್ರಂಸು ಧ್ವಂಸ್ವನಡುಹಾಂ ದಃ ( 8.2.72)**

ವೃತ್ತಿಃ– ಸಾನ್ತವಸ್ವಂತಸ್ಯ ಸ್ರಂಸಾದೇಶ್ಚ ದಃ ಸ್ಯಾತ್ ಪದಾಂತೇ। ಅನಡುದ್ಭ್ಯಾಮ್ ಇತ್ಯಾದಿ। ಸಾಂತೇತಿ ಕಿಮ್? ವಿದ್ವಾನ್। ಪದಾಂತೇ ಕಿಮ್?–ಸ್ರಸ್ತಮ್, ಧ್ವಸ್ತಮ್।

ಪ. ಛೇ. – ವಸು-ಸ್ರಂಸು-ಧ್ವಂಸು-ಅನಡುಹಾಂ, ದಃ।

ಅ. ವೃ.– "ಸಸಜುಷೋರುಃ" ಎಂಬ ಸೂತ್ರದಿಂದ ಸಮಾಸೈಕದೇಶವಾದ 'ಸಃ' ಎಂಬ ಪದವು ಅನುವೃತ್ತವಾಗುತ್ತದೆ. "ಪದಸ್ಯ ಎಂಬುದು ಅಧಿಕಾರ ಸೂತ್ರ.

ಅರ್ಥ– 'ಸ್' ಕಾರಾಂತವಾದ 'ವಸು' ಪ್ರತ್ಯಯಾಂತ ಶಬ್ದ, ಸ್ರಂಸ್– ಧ್ವಂಸ್– ಮತ್ತು ಅನಡುಹ್ ಶಬ್ದಗಳ ಸ್ಥಾನದಲ್ಲಿ 'ದ್' ಕಾರವು ಪದಾಂತದಲ್ಲಿ ಆದೇಶವಾಗಿ ಬರುತ್ತದೆ.

ವಸು ಎಂಬುದು ಪ್ರತ್ಯಯ. ಆದುದ್ದರಿಂದ, 'ಪ್ರತ್ಯಯಗ್ರಹಣೇ ತದನ್ತ ಗ್ರಹಣಮ್' ಎಂಬ ನಿಯಮಕ್ಕನುಸಾರವಾಗಿ 'ವಸು' ಪ್ರತ್ಯಯಾಂತ ಶಬ್ದವನ್ನು ತೆಗೆದುಕೊಳ್ಳಬೇಕು. "ಅಲೋಽನ್ತ್ಯಸ್ಯ" ಎಂಬ ಪರಿಭಾಷಾ ಸೂತ್ರದ ಪ್ರಕಾರ, ಎಲ್ಲ ಷಷ್ಠ್ಯಂತವಾದ ಶಬ್ದಗಳ ಅಂತ್ಯ ಅಕ್ಷರಕ್ಕೆ ಆದೇಶ ಎಂದು ತಿಳಿಯಬೇಕು.

ಉದಾ– ಅನಡುದ್ಭ್ಯಾಮ್ – 'ಅನಡುಹ್' ಶಬ್ದದ ಮೇಲೆ ತೃತೀಯಾ, ಚತುರ್ಥೀ ಮತ್ತು ಪಞ್ಚಮೀ ವಿಭಕ್ತಿಗಳ ದ್ವಿವಚನದಲ್ಲಿ, ಭ್ಯಾಮ್ ಎಂಬ ಪ್ರತ್ಯಯವು ಬರುತ್ತದೆ. ಪದಸಂಜ್ಞೆ ಬಂದಮೇಲೆ, ಪ್ರಕೃತ ಸೂತ್ರದಿಂದ 'ಹ್' ಕಾರದ ಸ್ಥಾನದಲ್ಲಿ 'ದ್' ಕಾರವು ಆದೇಶವಾಗಿ ಬಂದು ಅನಡು+ದ್+ಭ್ಯಾಮ್=ಅನಡುದ್ಭ್ಯಾಮ್ ಎಂದು ರೂಪವಾಗುತ್ತದೆ. ಇದೇ ರೀತಿಯಲ್ಲಿ ತೃತೀಯಾ ಬಹುವಚನದಲ್ಲಿ ಅನಡುದ್ಭಿಃ, ಚತುರ್ಥೀ ಮತ್ತು ಪಞ್ಚಮೀ ಬಹು ವಚನಗಳಲ್ಲಿ 'ಅನಡುದ್ಭ್ಯಃ' ಎಂದೂ, ಸಪ್ತಮೀ ಬಹುವಚನದಲ್ಲಿ ಅನಡುತ್ಸು ಎಂದು ರೂಪಗಳಾಗುತ್ತವೆ.

**(ಹ್ ಕಾರಾನ್ತ ಪುಲ್ಲಿಂಗ ಅನಡುಹ್ ಶಬ್ದದ ರೂಪಗಳು)**

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರ.ವಿ. | ಅನಡ್ವಾನ್ | ಅನಡ್ವಾಹೌ | ಅನಡ್ವಾಹಃ |
| ದ್ವಿ.ವಿ. | ಅನಡ್ವಾಹಮ್ | ಅನಡ್ವಾಹೌ | ಅನಡುಹಃ |
| ತೃ.ವಿ. | ಅನಡುಹಾ | ಅನಡುದ್ಭ್ಯಾಮ್ | ಅನಡುದ್ಭಿಃ |
| ಚ.ವಿ. | ಅನಡುಹೇ | ಅನಡುದ್ಭ್ಯಾಮ್ | ಅನಡುದ್ಭ್ಯಃ |
| ಪ.ವಿ. | ಅನಡುಹಃ | ಅನಡುದ್ಭ್ಯಾಮ್ | ಅನಡುದ್ಭ್ಯಃ |
| ಷ.ವಿ. | ಅನಡುಹಃ | ಅನಡುಹೋಃ | ಅನಡುಹಾಮ್ |
| ಸ.ವಿ. | ಅನಡುಹಿ | ಅನಡುಹೋಃ | ಅನಡುತ್ಸು |
| ಸಂ.ಪ್ರ.ವಿ | ಹೇ ಅನಡ್ವನ್! | ಹೇ ಅನಡ್ವಾಹೌ! | ಹೇ ಅನಡ್ವಾಹಃ! |

ಸಾಂತೇತಿ ಕಿಮ್? ವಿದ್ವಾನ್।

ಉದಾ– ವಿದ್ವಾನ್– ಎಂಬ ಶಬ್ದದ ಪ್ರಥಮಾ ವಿಭಕ್ತಿ ಏಕವಚನದಲ್ಲಿ ಪ್ರಕೃತ ಸೂತ್ರದಲ್ಲಿ 'ಸಾಂತ' ಎಂಬ ಶಬ್ದವನ್ನು ಏಕೆ ಅನುವೃತ್ತಿ ಮಾಡಲಾಗಿದೆ? ಎಂದರೆ, ಈ ಶಬ್ದವನ್ನು ಪ್ರಯೋಗ ಮಾಡದಿದ್ದರೆ– ಸಾಂತ ಮತ್ತು ಅಸಾಂತ ಶಬ್ದಗಳ ಸ್ಥಾನದಲ್ಲೂ 'ದ್' ಕಾರದ ಆದೇಶವು ಬರುತ್ತಿತ್ತು. 'ವಿದ್ವಸ್' ಶಬ್ದವು 'ವಸು' ಪ್ರತ್ಯಯಾಂತವಾಗಿ ಇರೋಣದ್ದರಿಂದ ಅದು ಸಾಂತವಾಗಿಯೇ ಇದೆ. ಆದರೆ 'ಸು' ವಿಭಕ್ತಿಯನ್ನು ಸೇರಿಸಿದಾಗ, 'ವಿದ್ವಾನ್' ಎಂದು ರೂಪ ತಾಳಿದಮೇಲೆ, 'ನ್' ಕಾರದ ಸ್ಥಾನದಲ್ಲಿ 'ದ್' ಕಾರದ ಆದೇಶವು ಬಂದು, 'ವಿದ್ವಾತ್' ಎಂದು ಅನಿಷ್ಟ ರೂಪವು

ಸಿದ್ಧವಾಗುತ್ತಿತ್ತು. 'ಸಾಂತ' ಎಂದು ಹೇಳಿದಮೇಲೂ ಅದು 'ವಸು' ಪ್ರತ್ಯಯಾಂತವಾಗಿದ್ದರೂ, 'ದ್' ಕಾರಾದೇಶ ಮಾಡುವ ಸಂದರ್ಭದಲ್ಲಿ ಅದು ಸಾಂತವಾಗಿಯೇ ಇರಬೇಕಾಗುತ್ತದೆ.

ಪದಾನ್ತೇ ಕಿಮ್?

ಉದಾ– ಸ್ರಸ್ತಮ್, ಧ್ವಸ್ತಮ್ ಎಂಬಲ್ಲಿ, ಪದಾಂತೇ ಎಂದು ಸೂತ್ರದ ವೃತ್ತಿಯಲ್ಲಿ ಇಲ್ಲದಿದ್ದರೆ, ಪದಾಂತ ಮತ್ತು ಅಪದಾಂತಗಳಲ್ಲೂ 'ಸ್' ಕಾರದ ಸ್ಥಾನದಲ್ಲಿ

'ದ್' ಕಾರವು ಆದೇಶವಾಗಿ ಬರುತ್ತಿತ್ತು. ಸ್ರಸ್+ತಮ್ ಮತ್ತು ಧ್ವಸ್+ತಮ್ ಎಂಬಲ್ಲಿ, 'ಸ್' ಕಾರವು ಪದಾಂತವಾಗಿಲ್ಲ. ಇಲ್ಲಿ 'ದ್' ಕಾರಾದೇಶವು ಬಂದಿದ್ದರೆ– ಸ್ರತ್ತಮ್ ಮತ್ತು ಧ್ವತ್ತಮ್ ಎಂಬ ಅನಿಷ್ಟ ರೂಪಗಳು ಆಗಿರುತ್ತಿದ್ದವು

**(ಮೂರ್ಧನ್ಯ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ – 264. ಸಹೇಃ ಸಾಢಃ ಸಃ ( 8.3.56)**

ವೃತ್ತಿಃ–ಸಾಡ್–ರೂಪಸ್ಯ ಸಹೇಃ ಸಸ್ಯ ಮೂರ್ಧನ್ಯಾದೇಶಃ। ತುರಾಷಾಟ್। ತುರಾಸಾಹೌ। ತುರಾಸಾಹಃ।

ಅ. ವ್ಯ.– "ಅಪದಾನ್ತಸ್ಯ ಮೂರ್ಧನ್ಯಃ" ಎಂಬ ಸೂತ್ರದಿಂದ 'ಮೂರ್ಧನ್ಯಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ–'ಸಾಡ್' ರೂಪವನ್ನು ಹೊಂದಿರುವ 'ಸಹ್' ಧಾತುವಿನ 'ಸ್' ಕಾರಕ್ಕೆ ಮೂರ್ಧನ್ಯಾದೇಶವು ಬರುತ್ತದೆ.

'ಸಾಡ್' ರೂಪವೆಂದರೆ 'ಸಹ್' ಧಾತುವಿನ ಮೇಲೆ 'ಕ್ವಿಪ್' ಪ್ರತ್ಯಯವು ಬಂದು, ದೀರ್ಘ, ಡತ್ವ, ಜಶ್ತ್ವಗಳು ಬಂದಮೇಲೆ, 'ಸಾಡ್' ಎಂದಾಗುತ್ತದೆ. ಆಗ ಈ ಸೂತ್ರವು ಪ್ರವೃತ್ತವಾಗುತ್ತದೆ.

ಇಲ್ಲಿ ಒಂದು ವಿಷಯವನ್ನು ಗಮನಿಸಬೇಕು – "ಹೋ ಢಃ" ಎಂಬ ಸೂತ್ರದಿಂದ ಢತ್ವವು, ಪದಾಂತ 'ಹ್' ಕಾರದ ಸ್ಥಾನದಲ್ಲಿದ್ದಾಗಲೂ ಅಥವಾ 'ಝಲ್' ಪರದಲ್ಲಿದ್ದಾಗಲೂ ಆಗುತ್ತದೆ. ಈ ತರಹ 'ಸ್' ಕಾರದ ಸ್ಥಾನದಲ್ಲಿ, ಮೂರ್ಧನ್ಯ ವರ್ಣಗಳಾದ ಋಕಾರ, ಟವರ್ಗ, ರೇಫ ಮತ್ತು ಷ–ಕಾರಗಳು ಎಲ್ಲವೂ ಪ್ರಾಪ್ತವಾಗುತ್ತವೆ. "ಸ್ಥಾನೇಽನ್ತರತಮಃ" ಎಂಬ ಸೂತ್ರದಿಂದ 'ಈಷದ್ವಿವೃತ' ಪ್ರಯತ್ನವುಳ್ಳ 'ಸ್' ಕಾರದ ಜೊತೆಗೆ, ಅಂತಹದ್ದೇ ಪ್ರಯತ್ನವುಳ್ಳ 'ಷ್'ಕಾರವು ಆದೇಶವಾಗಿ ಬರುತ್ತದೆ. ಈ ತರಹ ಎಲ್ಲೆಲ್ಲಿ "ಹೋ ಢಃ" ಎಂಬ ಸೂತ್ರದಿಂದ 'ಢ್' ಕಾರವು ಬರುತ್ತದೋ ಅಲ್ಲಲ್ಲಿ 'ಷ್' ಕಾರವು ಆದೇಶವಾಗಿ ಬರುತ್ತದೆ. ಬೇರೆ ಕಡೆಗೆ ಬರುವದಿಲ್ಲ. ಆದುದರಿಂದ 'ಅಜಾದಿ' ವಿಭಕ್ತಿಗಳು ಪರದಲ್ಲಿದ್ದಾಗ, 'ಷ್' ಕಾರವು ಆದೇಶವಾಗಿ ಬರುವದಿಲ್ಲ.

ಉದಾ:– ತುರಾಷಾಟ್– ತುರಾಷಾಡ್ (ಇಂದ್ರ): 'ತುರಂ ಸಾಹಯತೇ ಇತಿ ತುರಾಷಾಟ್' ಎಂದು ವಿಗ್ರಹ. 'ತುರ್' ಪೂರ್ವಕ ಣ್ಯನ್ತ 'ಸಹ್' ಧಾತುವಿನ ನಂತರ 'ಕ್ವಿಪ್' ಬಂದು ಸರ್ವಾಪಹಾರವಾಗಿ, 'ಣಿ' ಲೋಪವಾಗಿ ದೀರ್ಘ ಬಂದಾಗ,

ಅರ್ಥ– 'ಸ್' ಕಾರಾಂತವಾದ 'ವಸು' ಪ್ರತ್ಯಯಾಂತ ಶಬ್ದ, ಸ್ರಂಸ್– ಧ್ವಂಸ್– ಮತ್ತು ಅನಡುಹ್ ಶಬ್ದಗಳ ಸ್ಥಾನದಲ್ಲಿ 'ದ್' ಕಾರವು ಪದಾಂತದಲ್ಲಿ ಆದೇಶವಾಗಿ ಬರುತ್ತದೆ.

ವಸು ಎಂಬುದು ಪ್ರತ್ಯಯ. ಆದುದ್ದರಿಂದ, 'ಪ್ರತ್ಯಯಗ್ರಹಣೇ ತದನ್ತ ಗ್ರಹಣಮ್' ಎಂಬ ನಿಯಮಕ್ಕನುಸಾರವಾಗಿ 'ವಸು' ಪ್ರತ್ಯಯಾಂತ ಶಬ್ದವನ್ನು ತೆಗೆದುಕೊಳ್ಳಬೇಕು. "ಅಲೋಽನ್ತ್ಯಸ್ಯ" ಎಂಬ ಪರಿಭಾಷಾ ಸೂತ್ರದ ಪ್ರಕಾರ, ಎಲ್ಲ ಷಷ್ಠ್ಯಂತವಾದ ಶಬ್ದಗಳ ಅಂತ್ಯ ಅಕ್ಷರಕ್ಕೆ ಆದೇಶ ಎಂದು ತಿಳಿಯಬೇಕು.

ಉದಾ– ಅನಡುದ್ಭ್ಯಾಮ್ – 'ಅನಡುಹ್' ಶಬ್ದದ ಮೇಲೆ ತೃತೀಯಾ, ಚತುರ್ಥೀ ಮತ್ತು ಪಞ್ಚಮೀ ವಿಭಕ್ತಿಗಳ ದ್ವಿವಚನದಲ್ಲಿ, ಭ್ಯಾಮ್ ಎಂಬ ಪ್ರತ್ಯಯವು ಬರುತ್ತದೆ. ಪದಸಂಜ್ಞೆ ಬಂದಮೇಲೆ, ಪ್ರಕೃತ ಸೂತ್ರದಿಂದ 'ಹ್' ಕಾರದ ಸ್ಥಾನದಲ್ಲಿ 'ದ್' ಕಾರವು ಆದೇಶವಾಗಿ ಬಂದು ಅನಡು+ದ್+ಭ್ಯಾವ್=ಅನಡುದ್ಭ್ಯಾವ್ ಎಂದು ರೂಪವಾಗುತ್ತದೆ. ಇದೇ ರೀತಿಯಲ್ಲಿ ತೃತೀಯಾ ಬಹುವಚನದಲ್ಲಿ ಅನಡುದ್ಭಿಃ, ಚತುರ್ಥೀ ಮತ್ತು ಪಞ್ಚಮೀ ಬಹು ವಚನಗಳಲ್ಲಿ 'ಅನಡುದ್ಭ್ಯಃ' ಎಂದೂ, ಸಪ್ತಮೀ ಬಹುವಚನದಲ್ಲಿ ಅನಡುತ್ಸು ಎಂದು ರೂಪಗಳಾಗುತ್ತವೆ.

**(ಹ್ ಕಾರಾನ್ತ ಪುಲ್ಲಿಂಗ ಅನಡುಹ್ ಶಬ್ದದ ರೂಪಗಳು)**

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರ.ವಿ. | ಅನಡ್ವಾನ್ | ಅನಡ್ವಾಹೌ | ಅನಡ್ವಾಹಃ |
| ದ್ವಿ.ವಿ. | ಅನಡ್ವಾಹಮ್ | ಅನಡ್ವಾಹೌ | ಅನಡುಹಃ |
| ತೃ.ವಿ. | ಅನಡುಹಾ | ಅನಡುದ್ಭ್ಯಾಮ್ | ಅನಡುದ್ಭಿಃ |
| ಚ.ವಿ. | ಅನಡುಹೇ | ಅನಡುದ್ಭ್ಯಾಮ್ | ಅನಡುದ್ಭ್ಯಃ |
| ಪ.ವಿ. | ಅನಡುಹಃ | ಅನಡುದ್ಭ್ಯಾಮ್ | ಅನಡುದ್ಭ್ಯಃ |
| ಷ.ವಿ. | ಅನಡುಹಃ | ಅನಡುಹೋಃ | ಅನಡುಹಾಮ್ |
| ಸ.ವಿ. | ಅನಡುಹಿ | ಅನಡುಹೋಃ | ಅನಡುತ್ಸು |
| ಸಂ.ಪ್ರ.ವಿ | ಹೇ ಅನಡ್ವನ್! | ಹೇ ಅನಡ್ವಾಹೌ! | ಹೇ ಅನಡ್ವಾಹಃ! |

ಸಾಂತೇತಿ ಕಿಮ್? ವಿದ್ವಾನ್।

ಉದಾ– ವಿದ್ವಾನ್– ಎಂಬ ಶಬ್ದದ ಪ್ರಥಮಾ ವಿಭಕ್ತಿ ಏಕವಚನದಲ್ಲಿ ಪ್ರಕೃತ ಸೂತ್ರದಲ್ಲಿ 'ಸಾಂತ' ಎಂಬ ಶಬ್ದವನ್ನು ಏಕೆ ಅನುವೃತ್ತಿ ಮಾಡಲಾಗಿದೆ? ಎಂದರೆ, ಈ ಶಬ್ದವನ್ನು ಪ್ರಯೋಗ ಮಾಡದಿದ್ದರೆ– ಸಾಂತ ಮತ್ತು ಅಸಾಂತ ಶಬ್ದಗಳ ಸ್ಥಾನದಲ್ಲೂ 'ದ್' ಕಾರದ ಆದೇಶವು ಬರುತ್ತಿತ್ತು. 'ವಿದ್ವಸ್' ಶಬ್ದವು 'ವಸು' ಪ್ರತ್ಯಯಾಂತವಾಗಿ ಇರೋಣದ್ದರಿಂದ ಅದು ಸಾಂತವಾಗಿಯೇ ಇದೆ. ಆದರೆ 'ಸು' ವಿಭಕ್ತಿಯನ್ನು ಸೇರಿಸಿದಾಗ, 'ವಿದ್ವಾನ್' ಎಂದು ರೂಪ ತಾಳಿದಮೇಲೆ, 'ನ್' ಕಾರದ ಸ್ಥಾನದಲ್ಲಿ 'ದ್' ಕಾರದ ಆದೇಶವು ಬಂದು, 'ವಿದ್ವಾತ್' ಎಂದು ಅನಿಷ್ಟ ರೂಪವು

ಸಿದ್ಧವಾಗುತ್ತಿತ್ತು. 'ಸಾಂತ' ಎಂದು ಹೇಳಿದಮೇಲೂ ಅದು 'ವಸು' ಪ್ರತ್ಯಯಾಂತವಾಗಿದ್ದರೂ, 'ದ್' ಕಾರಾದೇಶ ಮಾಡುವ ಸಂದರ್ಭದಲ್ಲಿ ಅದು ಸಾಂತವಾಗಿಯೇ ಇರಬೇಕಾಗುತ್ತದೆ.

ಪದಾನ್ತೇ ಕಿಮ್?

ಉದಾ– ಸ್ರಸ್ತಮ್, ಧ್ವಸ್ತಮ್ ಎಂಬಲ್ಲಿ, ಪದಾಂತೇ ಎಂದು ಸೂತ್ರದ ವೃತ್ತಿಯಲ್ಲಿ ಇಲ್ಲದಿದ್ದರೆ, ಪದಾಂತ ಮತ್ತು ಅಪದಾಂತಗಳಲ್ಲೂ 'ಸ್' ಕಾರದ ಸ್ಥಾನದಲ್ಲಿ

'ದ್' ಕಾರವು ಆದೇಶವಾಗಿ ಬರುತ್ತಿತ್ತು. ಸ್ರಸ್+ತಮ್ ಮತ್ತು ಧ್ವಸ್+ತಮ್ ಎಂಬಲ್ಲಿ, 'ಸ್' ಕಾರವು ಪದಾಂತವಾಗಿಲ್ಲ. ಇಲ್ಲಿ 'ದ್' ಕಾರಾದೇಶವು ಬಂದಿದ್ದರೆ– ಸ್ರತ್ತಮ್ ಮತ್ತು ಧ್ವತ್ತಮ್ ಎಂಬ ಅನಿಷ್ಟ ರೂಪಗಳು ಆಗಿರುತ್ತಿದ್ದವು

**(ಮೂರ್ಧನ್ಯ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ – 264. ಸಹೇಃ ಸಾಡಃ ಸಃ ( 8.3.56)**

ವೃತ್ತಿಃ–ಸಾಡ್–ರೂಪಸ್ಯ ಸಹೇಃ ಸಸ್ಯ ಮೂರ್ಧನ್ಯಾದೇಶಃ। ತುರಾಷಾಟ್। ತುರಾಸಾಹೌ। ತುರಾಸಾಹಃ।

ಅ. ವೃ.– "ಅಪದಾನ್ತಸ್ಯ ಮೂರ್ಧನ್ಯಃ" ಎಂಬ ಸೂತ್ರದಿಂದ 'ಮೂರ್ಧನ್ಯಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ–'ಸಾಡ್' ರೂಪವನ್ನು ಹೊಂದಿರುವ 'ಸಹ್' ಧಾತುವಿನ 'ಸ್' ಕಾರಕ್ಕೆ ಮೂರ್ಧನ್ಯಾದೇಶವು ಬರುತ್ತದೆ.

'ಸಾಡ್' ರೂಪವೆಂದರೆ 'ಸಹ್' ಧಾತುವಿನ ಮೇಲೆ 'ಕ್ವಿಪ್' ಪ್ರತ್ಯಯವು ಬಂದು, ದೀರ್ಘ, ಡತ್ವ, ಜಶ್ತ್ವಗಳು ಬಂದಮೇಲೆ, 'ಸಾಡ್' ಎಂದಾಗುತ್ತದೆ. ಆಗ ಈ ಸೂತ್ರವು ಪ್ರವೃತ್ತವಾಗುತ್ತದೆ.

ಇಲ್ಲಿ ಒಂದು ವಿಷಯವನ್ನು ಗಮನಿಸಬೇಕು – "ಹೋ ಢಃ" ಎಂಬ ಸೂತ್ರದಿಂದ ಢತ್ವವು, ಪದಾಂತ 'ಹ್' ಕಾರದ ಸ್ಥಾನದಲ್ಲಿದ್ದಾಗಲೂ ಅಥವಾ 'ಝಲ್' ಪರದಲ್ಲಿದ್ದಾಗಲೂ ಆಗುತ್ತದೆ. ಈ ತರಹ 'ಸ್' ಕಾರದ ಸ್ಥಾನದಲ್ಲಿ, ಮೂರ್ಧನ್ಯ ವರ್ಣಗಳಾದ ಋಕಾರ, ಟವರ್ಗ, ರೇಫ ಮತ್ತು ಷ–ಕಾರಗಳು ಎಲ್ಲವೂ ಪ್ರಾಪ್ತವಾಗುತ್ತವೆ. "ಸ್ಥಾನೇಽನ್ತರತಮಃ" ಎಂಬ ಸೂತ್ರದಿಂದ 'ಈಷದ್ವಿವೃತ' ಪ್ರಯತ್ನವುಳ್ಳ 'ಸ್' ಕಾರದ ಜೊತೆಗೆ, ಅಂತಹದ್ದೇ ಪ್ರಯತ್ನವುಳ್ಳ 'ಷ್'ಕಾರವು ಆದೇಶವಾಗಿ ಬರುತ್ತದೆ. ಈ ತರಹ ಎಲ್ಲೆಲ್ಲಿ "ಹೋ ಢಃ" ಎಂಬ ಸೂತ್ರದಿಂದ 'ಢ್' ಕಾರವು ಬರುತ್ತದೋ ಅಲ್ಲಲ್ಲಿ 'ಷ್' ಕಾರವು ಆದೇಶವಾಗಿ ಬರುತ್ತದೆ. ಬೇರೆ ಕಡೆಗೆ ಬರುವದಿಲ್ಲ. ಆದುದರಿಂದ 'ಅಜಾದಿ' ವಿಭಕ್ತಿಗಳು ಪರದಲ್ಲಿದ್ದಾಗ, 'ಷ್' ಕಾರವು ಆದೇಶವಾಗಿ ಬರುವದಿಲ್ಲ.

ಉದಾ:– ತುರಾಷಾಟ್– ತುರಾಷಾಡ್ (ಇಂದ್ರ): 'ತುರಂ ಸಾಹಯತೇ ಇತಿ ತುರಾಷಾಟ್' ಎಂದು ವಿಗ್ರಹ. 'ತುರ್' ಪೂರ್ವಕ ಣ್ಯನ್ತ 'ಸಹ್' ಧಾತುವಿನ ನಂತರ 'ಕ್ವಿಪ್' ಬಂದು ಸರ್ವಾಪಹಾರವಾಗಿ, 'ಣಿ' ಲೋಪವಾಗಿ ದೀರ್ಘ ಬಂದಾಗ,

'ತುರಾಸಾಹ್' ಎಂದು ರೂಪವಾಗುತ್ತದೆ. ಇದರಮೇಲೆ, 'ಸುಪ್(ಸ್) ಪ್ರತ್ಯಯ ಬಂದು, ಅದರ ಲೋಪವಾಗಿ, "ಹೋ ಢಃ" ಎಂಬ ಸೂತ್ರದಿಂದ ಢತ್ವ ಬಂದಮೇಲೆ, ಜಶ್ತ್ವ ಬಂದು ತುರಾಸಾಡ್ ಎಂದು ರೂಪವಾಗುತ್ತದೆ. ಪ್ರಕೃತ ಸೂತ್ರದಿಂದ 'ಸಾಡ್' ನ 'ಸ್' ಕಾರದ ಸ್ಥಾನದಲ್ಲಿ 'ಷ್' ಕಾರವು ಆದೇಶವಾಗಿ ಬಂದು, ತುರಾಷಾಡ್ ಎಂದು ರೂಪವಾಗುತ್ತದೆ, 'ಡ್' ಕಾರಕ್ಕೆ "ವಾಽವಸಾನೇ" ಎಂಬ ಸೂತ್ರದಿಂದ ವೈಕಲ್ಪಿಕವಾಗಿ ಚರ್ತ್ವ ಬಂದು, ತುರಾಷಾಟ್ ಎಂದು ರೂಪವಾಗುತ್ತದೆ. ಹೀಗೆ ತುರಾಷಾಟ್, ತುರಾಷಾಡ್ ಎಂಬ ಎರಡು ರೂಪಗಳು ಸಿದ್ಧವಾಗುತ್ತವೆ.

**(ಹ್ ಕಾರಾನ್ತ ಪುಲ್ಲಿಂಗ ತುರಾಸಾಹ್ ಶಬ್ದದ ರೂಪಗಳು)**

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರ.ವಿ. | ತುರಾಷಾಟ್,ತುರಾಷಾಡ್ | ತುರಾಸಾಹೌ | ತುರಾಸಾಹಃ |
| ದ್ವಿ.ವಿ. | ತುರಾಸಾಹಮ್ | ತುರಾಸಾಹೌ | ತುರಾಸಾಹಃ |
| ತೃ.ವಿ. | ತುರಾಸಾಹಾ | ತುರಾಷಾಡ್ಭ್ಯಾಮ್ | ತುರಾಷಾಡ್ಭಿಃ |
| ಚ.ವಿ. | ತುರಾಸಾಹೇ | ತುರಾಷಾಡ್ಭ್ಯಾಮ್ | ತುರಾಷಾಡ್ಭ್ಯಃ |
| ಪ.ವಿ. | ತುರಾಸಾಹಃ | ತುರಾಷಾಡ್ಭ್ಯಾಮ್ | ತುರಾಷಾಡ್ಭ್ಯಃ |
| ಷ.ವಿ. | ತುರಾಸಾಹಃ | ತುರಾಸಾಹೋಃ | ತುರಾಸಾಹಾಮ್ |
| ಸ.ವಿ. | ತುರಾಸಾಹಿ | ತುರಾಸಾಹೋಃ | ತುರಾಷಾಟ್ತ್ಸು, ತುರಾಷಾಟ್ಸು |
| ಸಂ.ಪ್ರ.ವಿ | ಹೇ ತುರಾಷಾಟ್! ಹೇ ತುರಾಷಾಡ್! | ಹೇ ತುರಾಸಾಹೌ! | ಹೇ ತುರಾಸಾಹಃ! |

**ಇಲ್ಲಿಗೆ 'ಹ್' ಕಾರಾಂತ ಶಬ್ದಗಳು ಮುಗಿದವು.**

**'ವ್' ಕಾರಾಂತ ಶಬ್ದಗಳು ಆರಂಭವಾಗುತ್ತವೆ.**

**(ಔ ಕಾರಾದೇಶವನ್ನು ವಿಧಿಸುವ ಸೂತ್ರ)**

**ಸೂತ್ರ – 265. – ದಿವ ಔತ್ (7.1.84)**

ವೃತ್ತಿಃ–ದಿವ್ ಇತಿ ಪ್ರಾತಿಪದಿಕಸ್ಯ ಔತ್ ಸ್ಯಾತ್ ಸೌ (ಪರೇ)।ಸುದ್ಯೌಃ। ಸುದಿವೌ।

ಪ. ಛೇ. – ದಿವಃ, ಔತ್।

ಅ. ವೃ. –"ಸಾವನಡುಹಃ" ಎಂಬ ಸೂತ್ರದಿಂದ, 'ಸೌ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– 'ಸು(ಸ್)' ಪ್ರತ್ಯಯವು ಪರದಲ್ಲಿದ್ದಾಗ, 'ದಿವ್' ಎಂಬ ಪ್ರಾತಿಪದಿಕಕ್ಕೆ (ಅಂತ್ಯವರ್ಣಕ್ಕೆ) 'ಔ' ಕಾರಾದೇಶವು ಬರುತ್ತದೆ.

ಉದಾ– ಸುದ್ಯೌಃ – 'ಸುದಿವ್' ಶಬ್ದದ ಮೇಲೆ 'ಸು' ಸೇರಿಸಿದಾಗ, ಪ್ರಕೃತ ಸೂತ್ರದಿಂದ 'ವ್' ಕಾರದ ಸ್ಥಾನದಲ್ಲಿ, 'ಔ' ಕಾರವು ಆದೇಶವಾಗಿ ಬಂದು, ಸುದಿ+ಔ+ಸ್

ಎಂದಾಗುತ್ತದೆ. ದಿ+ಔ ಎಂಬಲ್ಲಿ ಯಣಾದೇಶವು ಬಂದು, 'ದ್ಯೌ' ಎಂದಾಗುತ್ತದೆ. 'ಸ್' ಕಾರಕ್ಕೆ ರುತ್ವ-ವಿಸರ್ಗಗಳು ಬಂದು ಸುದ್ಯೌಃ ಎಂದು ರೂಪವಾಗುತ್ತದೆ.

ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಕೇವಲ ವರ್ಣಗಳು ಮಾತ್ರ ಜೋಡಿಸಲಾಗುತ್ತದೆ. ಹೀಗಾಗಿ ಸುದಿವೌ, ಸುದಿವಃ ಎಂಬ ರೂಪಗಳು ಆಗುತ್ತವೆ.

**(ಉ ಕಾರಾದೇಶವನ್ನು ವಿಧಿಸುವ ಸೂತ್ರ)**

**ಸೂತ್ರ - 266. ದಿವ ಉತ್ (6.1.131)**

ವೃತ್ತಿಃ-ದಿವಃ ಅನ್ತಾದೇಶಃ ಉಕಾರಃ ಸ್ಯಾತ್ ಪದಾನ್ತೇ। ಸುದ್ಯುಭ್ಯಾಮ್। ಇತ್ಯಾದಿ। ಚತ್ವಾರಃ। ಚತುರಃ। ಚತುರ್ಭಿಃ। ಚತುರ್ಭ್ಯಃ।

ಪ. ಛೇ. - ದಿವಃ, ಉತ್।

ಅ. ವೃ. -"ಏಙಃ ಪದಾನ್ತಾದತಿ" ಎಂಬ ಸೂತ್ರದಿಂದ ಸಪ್ತಮೀ ಏಕವಚನಕ್ಕೆ ವಿಪರಿಣಾಮಗೊಳಿಸಿ 'ಪದಾನ್ತೇ' ಎಂಬ ಶಬ್ದವು ಅನುವೃತ್ತವಾಗುತ್ತದೆ.

ಅರ್ಥ- ಪದದ ಅಂತ್ಯದಲ್ಲಿ 'ದಿವ್' ಶಬ್ದಕ್ಕೆ 'ಉ' ಕಾರವು ಅಂತಾದೇಶವಾಗಿ ಬರುತ್ತದೆ.

ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಪೂರ್ವದಲ್ಲಿರುವ 'ಸುದಿವ್' ಶಬ್ದಕ್ಕೆ "ಸ್ವಾದಿಷ್ವಸರ್ವನಾಮಸ್ಥಾನೇ" ಎಂಬ ಸೂತ್ರದಿಂದ 'ಪದ-ಸಂಜ್ಞೆಯು' ಬರುತ್ತದೆ. ಆಗ 'ವ್' ಕಾರದ ಸ್ಥಾನದಲ್ಲಿ 'ಉ' ಕಾರವು ಆದೇಶವಾಗಿ ಬರುತ್ತದೆ.

ಉದಾ- ಸುದ್ಯುಭ್ಯಾಮ್ - 'ಸುದಿವ್' ಶಬ್ದದಮೇಲೆ 'ಭ್ಯಾಮ್' ಪ್ರತ್ಯಯ ಸೇರಿಸಿದಾಗ, ಅದಕ್ಕೆ 'ಪದ-ಸಂಜ್ಞೆ'ಯು ಬಂದು ಪ್ರಕೃತ ಸೂತ್ರದಿಂದ, 'ವ್' ಕಾರಕ್ಕೆ 'ಉ' ಕಾರಾದೇಶವು ಬಂದು ಸುದೀ+ಉ+ಭ್ಯಾಮ್ ಎಂದಿದ್ದಾಗ, 'ಈ' ಕಾರ 'ಉ' ಕಾರಗಳಿಗೆ 'ಯಣ್' ಸಂಧಿಯಾಗಿ 'ಸುದ್ಯುಭ್ಯಾಮ್' ಎಂಬ ರೂಪವು ಸಿದ್ಧಿಸುತ್ತದೆ.

**(ವ್ - ಕಾರಾನ್ತ ಪುಲ್ಲಿಂಗ ಸುದಿವ್ ಶಬ್ದದ ರೂಪಗಳು)**

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರ.ವಿ. | ಸುದ್ಯೌಃ | ಸುದಿವೌ | ಸುದಿವಃ |
| ದ್ವಿ.ವಿ. | ಸುದಿವಮ್ | ಸುದಿವೌ | ಸುದಿವಃ |
| ತೃ.ವಿ. | ಸುದಿವಾ | ಸುದ್ಯುಭ್ಯಾಮ್ | ಸುದ್ಯುಭಿಃ |
| ಚ.ವಿ. | ಸುದಿವೇ | ಸುದ್ಯುಭ್ಯಾಮ್ | ಸುದ್ಯುಭ್ಯಃ |
| ಪ.ವಿ. | ಸುದಿವಃ | ಸುದ್ಯುಭ್ಯಾಮ್ | ಸುದ್ಯುಭ್ಯಃ |
| ಷ.ವಿ. | ಸುದಿವಃ | ಸುದಿವೋಃ | ಸುದಿವಾಮ್ |
| ಸ.ವಿ. | ಸುದಿವಿ | ಸುದಿವೋಃ | ಸುದ್ಯುಷು |
| ಸಂ.ಪ್ರ.ವಿ | ಹೇ ಸುದ್ಯೌಃ! | ಹೇ ಸುದಿವೌ! | ಹೇ ಸುದಿವಃ! |

**ಈಗ ರೇಫಾಂತ ಶಬ್ದಗಳು ಆರಂಭವಾಗುತ್ತವೆ.**

ಚತ್ವಾರಃ – 'ಚತುರ್' ಶಬ್ದವು ರೇಫಾಂತವಾಗಿದ್ದು ನಿತ್ಯ ಬಹುವಚನವಾಗಿಯೇ ಇರುತ್ತದೆ.

ಉದಾ– ಚತ್ವಾರಃ – 'ಚತುರ್' ಶಬ್ದಕ್ಕೆ ಪ್ರಥಮಾ ಬಹುವಚನದಲ್ಲಿ 'ಜಸ್(ಅಸ್)' ಪ್ರತ್ಯಯವನ್ನು ಸೇರಿಸಿದಾಗ, ಚತುರ್+ಅಸ್ ಎಂದಾಗಿ "ಚತುರನಡುಹೋರಾಮುದಾತ್ತಃ (7.1.98)" ಎಂಬ ಸೂತ್ರದಿಂದ, ಹಾಗೂ "ಮಿದಚೋಽನ್ತ್ಯಾತ್ ಪರಃ" ಎಂಬ ಪರಿಭಾಷೆಯಿಂದ ಅಂತ್ಯವಾದ 'ಅಚ್' ಎಂದರೆ 'ತ್' ಕಾರದ ಪರದಲ್ಲಿರುವ 'ಉ' ಕಾರದ ನಂತರ 'ಆಮ್(ಆ)' ಆಗಮವು ಬಂದು, ಚತು+ಆ+ರ್+ಅ(ಅಸ್) ಎಂದಿದ್ದಾಗ, 'ಉ' ಕಾರ 'ಆ' ಕಾರಗಳಿಗೆ 'ಯಣ್'

ಸಂಧಿಯಿಂದ ಚತ್ವಾರ್+ಅಸ್ ಎಂದಾಗಿ 'ಸ್' ಕಾರಕ್ಕೆ ರುತ್ವ–ವಿಸರ್ಗಗಳು ಬಂದು 'ಚತ್ವಾರಃ' ಎಂದು ರೂಪವಾಗುತ್ತದೆ.

ಉದಾ– ಚತುರಃ – ದ್ವಿತೀಯಾ ವಿಭಕ್ತಿ ಬಹುವಚನದಲ್ಲಿ – ಚತುರ್+ಶಸ್(ಅಸ್) ಎಂದಿದ್ದಾಗ, 'ಸ್' ಕಾರಕ್ಕೆ ರುತ್ವ–ವಿಸರ್ಗಗಳು ಬಂದು ಚತುರಃ ಎಂದು ರೂಪವಾಗುತ್ತದೆ.

ಉದಾ– ಚತುರ್ಭಿಃ – ತೃತೀಯಾ ವಿಭಕ್ತಿ ಬಹುವಚನದಲ್ಲಿ – ಚತುರ್+ಭಿಸ್ ಎಂದಿದ್ದಾಗ, 'ಸ್' ಕಾರಕ್ಕೆ ರುತ್ವ–ವಿಸರ್ಗಗಳಿಂದ ಚತುರ್ಭಿಃ ಎಂದು ರೂಪವಾಗುತ್ತದೆ.

ಉದಾ– ಚತುರ್ಭ್ಯಃ(2) –ಚತುರ್ಥೀ ಮತ್ತು ಪಂಚಮೀ ಬಹು ವಚನಗಳಲ್ಲಿ ಚತುರ್+ಭ್ಯಸ್, ಚತುರ್+ಭ್ಯಸ್ ಎಂದಿದ್ದಾಗ, ಹಿಂದಿನಂತೆ 'ಸ್' ಕಾರಕ್ಕೆ ರುತ್ವ–ವಿಸರ್ಗಗಳಿಂದ ಚತುರ್ಭ್ಯಃ(2) ಎಂದು ರೂಪಗಳಾಗುತ್ತವೆ.

**(ನುಟ್(ನ್) ಆಗಮವನ್ನು ವಿಧಿಸುವ ಸೂತ್ರ)**

**ಸೂತ್ರ – 268. ಷಟ್ ಚತುರ್ಭ್ಯಶ್ಚ (7.1.55)**

ವೃತ್ತಿಃ–ಏಭ್ಯಃ ಆಮಃ ನುಡಾಗಮಃ(ಸ್ಯಾತ್)।

ಪ. ಛೇ. – ಷಟ್, ಚತುರ್ಭ್ಯಃ, ಚ।

ಅ. ವೃ. –"ಆಮಿ ಸರ್ವನಾಮ್ನಃ ಸುಟ್" ಎಂಬ ಸೂತ್ರದಿಂದ 'ಆಮಿ' ಎಂಬ ಪದವು ಮತ್ತು "ಹ್ರಸ್ವ ನದ್ಯಾಪೋ ನುಟ್" ಎಂಬ ಸೂತ್ರದಿಂದ 'ನುಟ್' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ– 'ಷಟ್' ಸಂಜ್ಞೆಯುಳ್ಳ ಮತ್ತು 'ಚತುರ್' ಶಬ್ದಗಳ ಮೇಲೆ ಇರುವ 'ಆಮ್' ಗೆ 'ನುಟ್(ನ್)' ಆಗಮವು ಬರುತ್ತದೆ. ಇಲ್ಲಿ ನುಡಾಗಮವು 'ಟಿತ್' ಆಗಿ ಇರೋಣದ್ದರಿಂದ 'ಆಮ್' ಶಬ್ದದ ಆದ್ಯವಯವವಾಗಿ ಬರುತ್ತದೆ.

**(ಣತ್ವ ವನ್ನು ವಿಧಿಸುವ ಸೂತ್ರ)**

**ಸೂತ್ರ – 267. ರಷಾಭ್ಯಾಂ ನೋ ಣಃ ಸಮಾನಪದೇ (8.4.1)**

ವೃತ್ತಿಃ–"ಅಚೋರಹಾಭ್ಯಾಂ ದ್ವೇ"। ಚತುರ್ಣ್ಣಾಮ್। ಚತುರ್ಣಾಮ್।

ಪ. ಛೇ. – ರಷಾಭ್ಯಾಂ, ನಃ, ಣಃ, ಸಮಾನಪದೇ।

ಅರ್ಥ– 'ರೇಫ' ಮತ್ತು 'ಷ್' ಕಾರದ ನಂತರ ಇರುವ 'ನ್' ಕಾರಕ್ಕೆ 'ಣ್' ಕಾರವು ಆದೇಶವಾಗಿ ಬರುತ್ತದೆ– ಸಮಾನ ಪದದಲ್ಲಿ ಮಾತ್ರ, ಭಿನ್ನವಾದ ಪದಗಳಲ್ಲಿದ್ದರೆ 'ಣತ್ವ' ಬರುವದಿಲ್ಲ.

ಉದಾ–ಹರಿರ್ನಯತಿ– ಹರಿಃ+ನಯತಿ ಎಂಬಲ್ಲಿ 'ಹರಿರ್ನಯತಿ' ಎಂದೇ ಸಂಧಿಯಾಗುತ್ತದೆ ಹೊರತು, 'ಹರಿರ್ಣಯತಿ' ಎಂದು ರೂಪವಾಗುವದಿಲ್ಲ. ಏಕೆಂದರೆ ಅಸಮಾನ ಪದವಾಗಿರೋಣದ್ದರಿಂದ. "ಅಟ್ಕುಪ್ವಾಙ್ ನುಮ್ ವ್ಯವಾಯೇಽಪಿ" ಎಂಬ ಸೂತ್ರದಿಂದ 'ರೇಫ' ಅಥವಾ 'ಷ್' ಕಾರಗಳಿಗೆ ಅವ್ಯವಹಿತೋತ್ತರವಾಗಿಯೇ 'ಣ್' ಕಾರವು ಇರಬೇಕೆಂದಿಲ್ಲ. 'ರೇಫ' 'ಷ್' ಕಾರ ಮತ್ತು 'ನ್' ಕಾರಗಳ ಮಧ್ಯದಲ್ಲಿ 'ಅಟ್' ಪ್ರತ್ಯಾಹಾರಾಂತರ್ಗತ ವರ್ಣಗಳು, ಕ–ವರ್ಗ, ಪ–ವರ್ಗ, 'ಆಙ್' ಮತ್ತು 'ನುಮ್' ಇವುಗಳೆಲ್ಲವೂ ಇದ್ದರೂ ಅಥವಾ ಇವುಗಳಲ್ಲಿ ಕೆಲವು ಇದ್ದರೂ ಣತ್ವ ಬರುತ್ತದೆ.

ಉದಾ– ಚತುರ್ಣ್ಣಾಮ್,ಚತುರ್ಣಾಮ್ – ಚತುರ್ ಶಬ್ದದ ನಂತರ ಷಷ್ಠೀ ಬಹುವಚನದಲ್ಲಿ, 'ಆಮ್' ಪ್ರತ್ಯಯವನ್ನು ಸೇರಿಸಿದಾಗ, "ಷಟ್ಚತುರ್ಭ್ಯಶ್ಚ" ಎಂಬ ಸೂತ್ರದಿಂದ 'ಆಮ್' ಗೆ ನುಡಾ(ನ್)ಗಮವು ಆದ್ಯವಯವವಾಗಿ ಬರುತ್ತದೆ. ಆಗ ಚತುರ್+ನ್+ಆಮ್ ಎಂದಾಗಿ ಪ್ರಕೃತ ಸೂತ್ರದಿಂದ 'ಣತ್ವ' ಬಂದು 'ಚತುರ್ಣ್ಣಾಮ್' ಅಥವಾ 'ಚತುರ್ಣಾಮ್' ಎಂದು ರೂಪವಾಗುತ್ತದೆ. "ಅಚೋರಹಾಭ್ಯಾಮ್ ದ್ವೇ" ಎಂಬ ಸೂತ್ರದಿಂದ ಚತುರ್ಣ್ಣಾಮ್ ಎಂಬಲ್ಲಿ 'ಣ್' ಕಾರಕ್ಕೆ ವೈಕಲ್ಪಿಕವಾಗಿ ದ್ವಿತ್ವ ಬಂದಿದೆ.

**(ರೇಫಕ್ಕೆ ವಿಸರ್ಗವನ್ನು ನಿಯಮವಾಗಿ ವಿಧಿಸುವ ಸೂತ್ರ)**

**ಸೂತ್ರ – 269. ರೋಃ ಸುಪಿ (8.3.16)**

ವೃತ್ತಿಃ–ರೋಃ ಏವ ವಿಸರ್ಗಃ ಸುಪಿ। ಷತ್ವಮ್। ಷಸ್ಯ ದ್ವಿತ್ವೇ ಪ್ರಾಪ್ತೇ।

ಅ. ವೃ. – "ಖರವಸಾನಯೋರ್ವಿಸರ್ಜನೀಯಃ" ಎಂಬ ಸೂತ್ರದಿಂದ 'ವಿಸರ್ಜನೀಯಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– 'ಸಪ್ತಮೀ' ಬಹುವಚನ ಪ್ರತ್ಯಯವಾದ 'ಸುಪ್' ಪರದಲ್ಲಿದ್ದಾಗ, ರು(ರೇಫ)ವಿನ ಸ್ಥಾನಕ್ಕೇನೇ 'ವಿಸರ್ಗವು' ಬರುತ್ತದೆಯೇ ಹೊರತು ಬೇರೆ ವರ್ಣಗಳ ಸ್ಥಾನಕ್ಕೆ ಬರುವದಿಲ್ಲ. **'ಸಿದ್ಧೇ ಸತಿ ಆರಭ್ಯಮಾಣೋ ವಿಧಿಃ ನಿಯಮಾಯ ಭವತಿ'** ಎಂಬ ನಿಯಮದ ಪ್ರಕಾರ ಇದು ನಿಯಮ ಸೂತ್ರವಾಗಿದೆ. ಅಂದರೆ ಒಂದು ಕಾರ್ಯವು ಸಿದ್ಧವಾಗಿದ್ದರೂ, ಅದೇ ಕಾರ್ಯಕ್ಕಾಗಿ ಮತ್ತೊಂದು ಸೂತ್ರವಾದರೆ, ವಿಶೇಷ ನಿಯಮಕ್ಕಾಗಿ (ಅದು ಬಂದೇ ಬರಬೇಕು ಎಂಬ ಉದ್ದೇಶದಿಂದ) ರಚಿಸಲಾಗಿದೆ ಎಂದು ತೀಳಿಯಬೇಕು. 'ರು' (ರೇಫ) ವಿನ ಸ್ಥಾನದಲ್ಲಿ "ಖರವಸಾನಯೋ–ರ್ವಿಸರ್ಜನೀಯಃ" ಎಂಬ ಸೂತ್ರದಿಂದ, 'ವಿಸರ್ಗ(ಃ)' ರೂಪವಾದ ಆದೇಶವು

ಸಿದ್ಧವಾಗಿದೆ. ಹಾಗಿದ್ದರೂ ಪ್ರಕೃತ ಸೂತ್ರವು ಪ್ರವೃತ್ತವಾಗಿದೆ. 'ಸುಪ್' ಪ್ರತ್ಯಯವು ಪರದಲ್ಲಿದ್ದಾಗ, ವಿಸರ್ಗವಾಗಬೇಕಾದರೆ ಪೂರ್ವದಲ್ಲಿರುವ ರೇಫಕ್ಕೇನೇ ವಿಸರ್ಗ (ಃ)ವು ಬರುತ್ತದೆ ಬೇರೆ ವರ್ಣಗಳಿಗಲ್ಲವೆಂದು ಈ ಸೂತ್ರವು ತಿಳಿಸುತ್ತದೆ.

ಉದಾ– ಚತುರ್ಷು– ಚತುರ್+ಸು (ಸುಪ್) ಎಂದಿದ್ದಾಗ, 'ಸು' ಪ್ರತ್ಯಯದ ಪೂರ್ವದಲ್ಲಿರುವ 'ರೇಫ' ದ ಸ್ಥಾನದಲ್ಲಿ ವಿಸರ್ಗವು ಬರುವದಿಲ್ಲ. ಏಕೆಂದರೆ, 'ಚತುರ್' ನಲ್ಲಿರುವ ರೇಫವು 'ರು' ಆದೇಶಕ್ಕೆ ಸಂಬಂಧ್ಧ ಪಟ್ಟದ್ದಲ್ಲ. ಅಂದರೆ ಸ್ವತಃ ರೇಫಾಂತವಾದ ಶಬ್ದ. ಆದ್ದರಿಂದ ಚತುರ್ಷು ಎಂದೇ ರೂಪವಿರುತ್ತದೆ.

**(ದ್ವಿತ್ವವನ್ನು ನಿಷೇಧಿಸುವ ಸೂತ್ರ)**

**ಸೂತ್ರ – 270. ಶರೋಽಚಿ (8.4.49)**

ವೃತ್ತಿಃ–ಅಚಿ ಪರೆ ಶರಃ ನ ದ್ವೇ ಸ್ತಃ। ಚತುರ್ಷು।

ಪ. ಛೇ. – ಶರಃ, ಅಚಿ।

ಅ. ವೃ.–"ನಾದಿನ್ಯಾಕ್ರೋಶೇ ಪುತ್ರಸ್ಯ" ಎಂಬ ಸೂತ್ರದಿಂದ. 'ನ' ಎಂಬ ಪದವೂ ಮತ್ತು "ಅಚೋರಹಾಭ್ಯಾಂ ದ್ವೇ" ಎಂಬ ಸೂತ್ರದಿಂದ 'ದ್ವೇ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ– 'ಅಚ್' ಪರದಲ್ಲಿದ್ದಾಗ, 'ಶರ್' ವರ್ಣಕ್ಕೆ ದ್ವಿತ್ವವು ಬರುವದಿಲ್ಲ.

ಉದಾ– ಚತುರ್ಷು–ಚತುರ್+ಸು ಎಂದಿದ್ದಾಗ, "ಆದೇಶಪ್ರತ್ಯಯಯೋಃ" ಎಂಬ ಸೂತ್ರದಿಂದ, 'ಷತ್ವ' ಬಂದು 'ಚತುರ್+ಷು' ಎಂದಿದ್ದಾಗ, "ಅಚೋರಹಾಭ್ಯಾಂ ದ್ವೇ" ಎಂಬ ಸೂತ್ರದಿಂದ 'ಷ' ಕಾರಕ್ಕೆ ವೈಕಲ್ಪಿಕವಾಗಿ ದ್ವಿತ್ವವು ಪ್ರಾಪ್ತವಾಗುತ್ತದೆ. ಪ್ರಕೃತ ಸೂತ್ರವು ಅದನ್ನು ನಿಷೇಧಿಸುತ್ತದೆ. ಪ್ರಕೃತ 'ಅಚ್' ನ ಪರದಲ್ಲಿ ರೇಫವಿದ್ದು, ಅದರ ಪರದಲ್ಲಿ 'ಯರ್' ವರ್ಣವಾದ 'ಷ' ಕಾರವು ಇರುತ್ತದೆ. ಅದುದರಿಂದ 'ದ್ವಿತ್ವ' ಬರುವದಕ್ಕೆ ಅವಕಾಶವಿದೆ. ಆದರೆ ಪ್ರಕೃತ ಸೂತ್ರದಿಂದ ಅದು ನಿಷೇಧಿಸಲ್ಪಟ್ಟಿದ್ದರಿಂದ, 'ದ್ವಿತ್ವ'ವು ಬರುವದಿಲ್ಲ. (ಯಾಕೆಂದರೆ 'ಶರ್' ವರ್ಣದ ಪರದಲ್ಲಿ 'ಅಚ್' ವರ್ಣವು ಇದೆ). ಹೀಗೆ ಚತುರ್+ಸು ಎಂದಿದ್ದಾಗ, ರೇಫದ ಸ್ಥಾನದಲ್ಲಿ "ಖರವಸಾನಯೋರ್ವಿಸರ್ಜನೀಯಃ" ಎಂಬ ಸೂತ್ರದಿಂದ, ವಿಸರ್ಗವು ಪ್ರಾಪ್ತವಾಗಿತ್ತು, ಆದರೆ "ರೋಃ ಸುಪಿ (8.3.16)" ಎಂಬ ಸೂತ್ರದಿಂದ ಅದು ನಿಷೇಧಿಸಲ್ಪಟ್ಟಿದೆ. ರೇಫವನ್ನು 'ಇಣ್' ಪ್ರತ್ಯಾಹಾರಾಂತರ್ಗತ ವರ್ಣವೆಂದು ಭಾವಿಸಿ "ಆದೇಶಪ್ರತ್ಯಯಯೋಃ" ಸೂತ್ರದಿಂದ, 'ಷತ್ವ' ಬಂದು, ಚತುರ್ಷು ಎಂದಾಗುತ್ತದೆ.

**(ರೇಫಾಂತ ಚತುರ್ ಶಬ್ದದ ರೂಪಗಳು)**

| **ವಿಭಕ್ತಿಗಳು** | **ಬಹುವಚನ** |
|---|---|
| ಪ್ರ.ವಿ. | ಚತ್ವಾರಃ |
| ದ್ವಿ.ವಿ. | ಚತುರಃ |

| | |
|---|---|
| ತೃ.ವಿ. | ಚತುರ್ಭಿಃ |
| ಚ.ವಿ. | ಚತುರ್ಭ್ಯಃ |
| ಪ.ವಿ. | ಚತುರ್ಭ್ಯಃ |
| ಷ.ವಿ. | ಚತುರ್ಣ್ಣಾಮ್, ಚತುರ್ಣಾಮ್ |
| ಸ.ವಿ. | ಚತುರ್ಷು |

**(ಇಲ್ಲಿಗೆ ರೇಫಾಂತ ಶಬ್ದಗಳು ಮುಗಿದವು)**

**'ಮ್' ಕಾರಾಂತ ಶಬ್ದಗಳು ಆರಂಭವಾಗುತ್ತವೆ.**

**(ನ್ ಕಾರಾದೇಶವನ್ನು ವಿಧಿಸುವ ಸೂತ್ರ)**

**ಸೂತ್ರ – 271. ಮೋ ನೋ ಧಾತೋಃ (8.2.64)**

ವೃತ್ತಿಃ–ಧಾತೋಃ ಮಸ್ಯ ನಃ ಸ್ಯಾತ್ ಪದಾನ್ತೇ। ಪ್ರಶಾನ್।

ಪ. ಛೇ. – ಮಃ, ನಃ, ಧಾತೋಃ।

ಅ. ವೃ.–"ಸ್ಕೋಃ ಸಂಯೋಗಾದ್ಯೋರನ್ತೇ ಚ" ಎಂಬ ಸೂತ್ರದಿಂದ 'ಅನ್ತೇ' ಎಂಬುದು ಅನುವೃತ್ತವಾಗುತ್ತದೆ. "ಪದಸ್ಯ" ಎಂಬುದು ಅಧಿಕಾರ ಸೂತ್ರ

ಅರ್ಥ–ಪದಾಂತದಲ್ಲಿರುವ ಧಾತುವಿನ 'ಮ್' ಕಾರಕ್ಕೆ 'ನ್' ಕಾರವು ಆದೇಶವಾಗಿ ಬರುತ್ತದೆ.

ವಿಶೇಷ– 'ಸು'ವಿನ ಲೋಪವಾದಮೇಲೆ, ಹಾಗೆಯೇ 'ಭ್ಯಾಮ್' ಮೊದಲಾದ ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, 'ಮ್' ಕಾರವು ಪದಾಂತವಾಗಿರುತ್ತದೆ. ಆದ್ದರಿಂದ ಪ್ರಕೃತ ಸೂತ್ರದಿಂದ 'ಮ್' ಕಾರದ ಸ್ಥಾನದಲ್ಲಿ 'ನ್' ಕಾರವು ಆದೇಶವಾಗಿ ಬರುತ್ತದೆ. ಮತ್ತು ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, 'ಪದ–ಸಂಜ್ಞೆ'ಯು ಬರುವದಿಲ್ಲವಾದ್ದರಿಂದ 'ಮ್' ಕಾರವು ಹಾಗೆಯೇ ಉಳಿಯುತ್ತದೆ.

ಉದಾ– ಪ್ರಶಾನ್ – ಪ್ರ–ಪೂರ್ವಕ 'ಶಮ್' ಧಾತುವು 'ಪ್ರಶಾಮ್' ಎಂದಾಗುತ್ತದೆ. ಅದಕ್ಕೆ 'ಸು' ಪ್ರತ್ಯವು ಸೇರಿ, ಪ್ರಶಾಮ್+ಸು ಎಂದಿರುತ್ತದೆ. ಈ 'ಸು' ವಿಗೆ ಲೋಪ ಬರುತ್ತದೆ. ಪೂರ್ವದಲ್ಲಿರುವ 'ಮ್' ಕಾರದ ಸ್ಥಾನದಲ್ಲಿ ಪ್ರಕೃತ ಸೂತ್ರದಿಂದ 'ನ್' ಕಾರವು ಆದೇಶವಾಗಿ ಬಂದು, 'ಪ್ರಶಾನ್' ಎಂದು ರೂಪವಾಗುತ್ತದೆ.

ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಕೇವಲ ವರ್ಣಜೋಡಣೆ ಮಾತ್ರದಿಂದ ರೂಪಗಳ ಸಿದ್ಧಿಯಾಗುತ್ತದೆ.

**('ಮ್' ಕಾರಾಂತ ಪುಲ್ಲಿಂಗ ಪ್ರಶಾಮ್ ಶಬ್ದದ ರೂಪಗಳು)**

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಪ್ರಶಾನ್ | ಪ್ರಶಾಮೌ | ಪ್ರಶಾಮಃ |
| ದ್ವಿತೀಯಾ | ಪ್ರಶಾಮಮ್ | ಪ್ರಶಾಮೌ | ಪ್ರಶಾಮಃ |

ಸಿದ್ಧವಾಗಿದೆ. ಹಾಗಿದ್ದರೂ ಪ್ರಕೃತ ಸೂತ್ರವು ಪ್ರವೃತ್ತವಾಗಿದೆ. 'ಸುಪ್' ಪ್ರತ್ಯಯವು ಪರದಲ್ಲಿದ್ದಾಗ, ವಿಸರ್ಗವಾಗಬೇಕಾದರೆ ಪೂರ್ವದಲ್ಲಿರುವ ರೇಫಕ್ಕೇನೇ ವಿಸರ್ಗ (ಃ)ವು ಬರುತ್ತದೆ ಬೇರೆ ವರ್ಣಗಳಿಗಲ್ಲವೆಂದು ಈ ಸೂತ್ರವು ತಿಳಿಸುತ್ತದೆ.

ಉದಾ– ಚತುರ್ಷು– ಚತುರ್+ಸು (ಸುಪ್) ಎಂದಿದ್ದಾಗ, 'ಸು' ಪ್ರತ್ಯಯದ ಪೂರ್ವದಲ್ಲಿರುವ 'ರೇಫ' ದ ಸ್ಥಾನದಲ್ಲಿ ವಿಸರ್ಗವು ಬರುವದಿಲ್ಲ. ಏಕೆಂದರೆ, 'ಚತುರ್' ನಲ್ಲಿರುವ ರೇಫವು 'ರು' ಆದೇಶಕ್ಕೆ ಸಂಬಂಧ್ಧ ಪಟ್ಟದ್ದಲ್ಲ. ಅಂದರೆ ಸ್ವತಃ ರೇಫಾಂತವಾದ ಶಬ್ದ. ಆದ್ದರಿಂದ ಚತುರ್ಷು ಎಂದೇ ರೂಪವಿರುತ್ತದೆ.

**(ದ್ವಿತ್ವವನ್ನು ನಿಷೇಧಿಸುವ ಸೂತ್ರ)**

**ಸೂತ್ರ – 270. ಶರೋಽಚಿ (8.4.49)**

ವೃತ್ತಿಃ–ಅಚಿ ಪರೇ ಶರಃ ನ ದ್ವೇ ಸ್ತಃ। ಚತುರ್ಷು।

ಪ. ಛೇ. – ಶರಃ, ಅಚಿ।

ಅ. ವೃ.–"ನಾದಿನ್ಯಾಕ್ರೋಶೇ ಪುತ್ರಸ್ಯ" ಎಂಬ ಸೂತ್ರದಿಂದ. 'ನ' ಎಂಬ ಪದವೂ ಮತ್ತು "ಅಚೋರಹಾಭ್ಯಾಂ ದ್ವೇ" ಎಂಬ ಸೂತ್ರದಿಂದ 'ದ್ವೇ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ– 'ಅಚ್' ಪರದಲ್ಲಿದ್ದಾಗ, 'ಶರ್' ವರ್ಣಕ್ಕೆ ದ್ವಿತ್ವವು ಬರುವದಿಲ್ಲ.

ಉದಾ– ಚತುರ್ಷು–ಚತುರ್+ಸು ಎಂದಿದ್ದಾಗ, "ಆದೇಶಪ್ರತ್ಯಯಯೋಃ" ಎಂಬ ಸೂತ್ರದಿಂದ, 'ಷತ್ವ' ಬಂದು 'ಚತುರ್+ಷು' ಎಂದಿದ್ದಾಗ, "ಅಚೋರಹಾಭ್ಯಾಂ ದ್ವೇ" ಎಂಬ ಸೂತ್ರದಿಂದ 'ಷ್' ಕಾರಕ್ಕೆ ವೈಕಲ್ಪಿಕವಾಗಿ ದ್ವಿತ್ವವು ಪ್ರಾಪ್ತವಾಗುತ್ತದೆ. ಪ್ರಕೃತ ಸೂತ್ರವು ಅದನ್ನು ನಿಷೇಧಿಸುತ್ತದೆ. ಪ್ರಕೃತ 'ಅಚ್' ನ ಪರದಲ್ಲಿ ರೇಫವಿದ್ದು, ಅದರ ಪರದಲ್ಲಿ 'ಯರ್' ವರ್ಣವಾದ 'ಷ್' ಕಾರವು ಇರುತ್ತದೆ. ಅದುದರಿಂದ 'ದ್ವಿತ್ವ' ಬರುವದಕ್ಕೆ ಅವಕಾಶವಿದೆ. ಆದರೆ ಪ್ರಕೃತ ಸೂತ್ರದಿಂದ ಅದು ನಿಷೇಧಿಸಲ್ಪಟ್ಟಿದ್ದರಿಂದ, 'ದ್ವಿತ್ವ'ವು ಬರುವದಿಲ್ಲ. (ಯಾಕೆಂದರೆ 'ಶರ್' ವರ್ಣದ ಪರದಲ್ಲಿ 'ಅಚ್' ವರ್ಣವು ಇದೆ). ಹೀಗೆ ಚತುರ್+ಸು ಎಂದಿದ್ದಾಗ, ರೇಫದ ಸ್ಥಾನದಲ್ಲಿ "ಖರವಸಾನಯೋರ್ವಿಸರ್ಜನೀಯಃ" ಎಂಬ ಸೂತ್ರದಿಂದ, ವಿಸರ್ಗವು ಪ್ರಾಪ್ತವಾಗಿತ್ತು, ಆದರೆ "ರೋಃ ಸುಪಿ (8.3.16)" ಎಂಬ ಸೂತ್ರದಿಂದ ಅದು ನಿಷೇಧಿಸಲ್ಪಟ್ಟಿದೆ. ರೇಫವನ್ನು 'ಇಣ್' ಪ್ರತ್ಯಾಹಾರಾಂತರ್ಗತ ವರ್ಣವೆಂದು ಭಾವಿಸಿ "ಆದೇಶಪ್ರತ್ಯಯಯೋಃ" ಸೂತ್ರದಿಂದ, 'ಷತ್ವ' ಬಂದು, ಚತುರ್ಷು ಎಂದಾಗುತ್ತದೆ.

**(ರೇಫಾಂತ ಚತುರ್ ಶಬ್ದದ ರೂಪಗಳು)**

| ವಿಭಕ್ತಿಗಳು | ಬಹುವಚನ |
|---|---|
| ಪ್ರ.ವಿ. | ಚತ್ವಾರಃ |
| ದ್ವಿ.ವಿ. | ಚತುರಃ |

| | |
|---|---|
| ತೃ.ವಿ. | ಚತುರ್ಭಿಃ |
| ಚ.ವಿ. | ಚತುರ್ಭ್ಯಃ |
| ಪ.ವಿ. | ಚತುರ್ಭ್ಯಃ |
| ಷ.ವಿ. | ಚತುರ್ಣ್ಣಾಮ್, ಚತುರ್ಣಾಮ್ |
| ಸ.ವಿ. | ಚತುರ್ಷು |

**(ಇಲ್ಲಿಗೆ ರೇಫಾಂತ ಶಬ್ದಗಳು ಮುಗಿದವು)**

**'ಮ್' ಕಾರಾಂತ ಶಬ್ದಗಳು ಆರಂಭವಾಗುತ್ತವೆ.**

**(ನ್ ಕಾರಾದೇಶವನ್ನು ವಿಧಿಸುವ ಸೂತ್ರ)**

**ಸೂತ್ರ - 271. ಮೋ ನೋ ಧಾತೋಃ (8.2.64)**

ವೃತ್ತಿಃ-ಧಾತೋಃ ಮಸ್ಯ ನಃ ಸ್ಯಾತ್ ಪದಾನ್ತೇ। ಪ್ರಶಾನ್।

ಪ. ಛೇ. - ಮಃ, ನಃ, ಧಾತೋಃ।

ಅ. ವೃ.-"ಸ್ಕೋಃ ಸಂಯೋಗಾದ್ಯೋರನ್ತೇ ಚ" ಎಂಬ ಸೂತ್ರದಿಂದ 'ಅನ್ತೇ' ಎಂಬುದು ಅನುವೃತ್ತವಾಗುತ್ತದೆ. "ಪದಸ್ಯ" ಎಂಬುದು ಅಧಿಕಾರ ಸೂತ್ರ.

ಅರ್ಥ-ಪದಾಂತದಲ್ಲಿರುವ ಧಾತುವಿನ 'ಮ್' ಕಾರಕ್ಕೆ 'ನ್' ಕಾರವು ಆದೇಶವಾಗಿ ಬರುತ್ತದೆ.

ವಿಶೇಷ- 'ಸು'ವಿನ ಲೋಪವಾದಮೇಲೆ, ಹಾಗೆಯೇ 'ಭ್ಯಾಮ್' ಮೊದಲಾದ ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, 'ಮ್' ಕಾರವು ಪದಾಂತವಾಗಿರುತ್ತದೆ. ಆದ್ದರಿಂದ ಪ್ರಕೃತ ಸೂತ್ರದಿಂದ 'ಮ್' ಕಾರದ ಸ್ಥಾನದಲ್ಲಿ 'ನ್' ಕಾರವು ಆದೇಶವಾಗಿ ಬರುತ್ತದೆ. ಮತ್ತು ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, 'ಪದ-ಸಂಜ್ಞೆ'ಯು ಬರುವದಿಲ್ಲವಾದ್ದರಿಂದ 'ಮ್' ಕಾರವು ಹಾಗೆಯೇ ಉಳಿಯುತ್ತದೆ.

ಉದಾ- ಪ್ರಶಾನ್ - ಪ್ರ-ಪೂರ್ವಕ 'ಶಮ್' ಧಾತುವು 'ಪ್ರಶಾಮ್' ಎಂದಾಗುತ್ತದೆ. ಅದಕ್ಕೆ 'ಸು' ಪ್ರತ್ಯವು ಸೇರಿ, ಪ್ರಶಾಮ್+ಸು ಎಂದಿರುತ್ತದೆ. ಈ 'ಸು' ವಿಗೆ ಲೋಪ ಬರುತ್ತದೆ. ಪೂರ್ವದಲ್ಲಿರುವ 'ಮ್' ಕಾರದ ಸ್ಥಾನದಲ್ಲಿ ಪ್ರಕೃತ ಸೂತ್ರದಿಂದ 'ನ್' ಕಾರವು ಆದೇಶವಾಗಿ ಬಂದು, 'ಪ್ರಶಾನ್' ಎಂದು ರೂಪವಾಗುತ್ತದೆ.

ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಕೇವಲ ವರ್ಣಜೋಡಣೆ ಮಾತ್ರದಿಂದ ರೂಪಗಳ ಸಿದ್ಧಿಯಾಗುತ್ತದೆ.

**('ಮ್' ಕಾರಾಂತ ಪುಲ್ಲಿಂಗ ಪ್ರಶಾಮ್ ಶಬ್ದದ ರೂಪಗಳು)**

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಪ್ರಶಾನ್ | ಪ್ರಶಾಮೌ | ಪ್ರಶಾಮಃ |
| ದ್ವಿತೀಯಾ | ಪ್ರಶಾಮಮ್ | ಪ್ರಶಾಮೌ | ಪ್ರಶಾಮಃ |

| | | | |
|---|---|---|---|
| ತೃತೀಯಾ | ಪ್ರಶಾಮಾ | ಪ್ರಶಾನ್ಭ್ಯಾಮ್ | ಪ್ರಶಾನ್ಭಿಃ |
| ಚತುರ್ಥೀ | ಪ್ರಶಾಮೇ | ಪ್ರಶಾನ್ಭ್ಯಾಮ್ | ಪ್ರಶಾನ್ಭ್ಯಃ |
| ಪಞ್ಚಮೀ | ಪ್ರಶಾಮಃ | ಪ್ರಶಾನ್ಭ್ಯಾಮ್ | ಪ್ರಶಾನ್ಭ್ಯಃ |
| ಷಷ್ಠೀ | ಪ್ರಶಾಮಃ | ಪ್ರಶಾಮೋಃ | ಪ್ರಶಾಮಾಮ್ |
| ಸಪ್ತಮೀ | ಪ್ರಶಾನಿ | ಪ್ರಶಾಮೋಃ | ಪ್ರಶಾನ್ಸು |
| ಸಂಬೋಧನ | ಹೇ ಪ್ರಶಾನ್! | ಹೇ ಪ್ರಶಾಮೌ! | ಹೇ ಪ್ರಶಾಮಃ! |

**(ಕ- ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ- 272. ಕಿಮಃ ಕಃ (7.2.103)**

ವೃತ್ತಿಃ-ಕಿಮಃ ಕಃ ಸ್ಯಾತ್ ವಿಭಕ್ತೌ। ಕಃ, ಕೌ, ಕೇ। ಇತ್ಯಾದಿ। ಶೇಷಂ ಸರ್ವವತ್।

ಅ. ವೃ.- "ಅಷ್ಟನ ಆ ವಿಭಕ್ತೌ" ಎಂಬ ಸೂತ್ರದಿಂದ 'ವಿಭಕ್ತೌ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ-ವಿಭಕ್ತಿ ಪ್ರತ್ಯಯವು ಪರದಲ್ಲಿದ್ದಾಗ, 'ಕಿಮ್' ಶಬ್ದದ ಸ್ಥಾನದಲ್ಲಿ 'ಕ' ಆದೇಶವು ಬರುತ್ತದೆ.

ಯಾವದೇ ವಿಭಕ್ತಿ ಪ್ರತ್ಯಯವು ಪರದಲ್ಲಿದ್ದಾಗಲೂ 'ಮ್' ಕಾರಾಂತ 'ಕಿಮ್' ಶಬ್ದದ ಸ್ಥಾನದಲ್ಲಿ ಅ-ಕಾರಾಂತ 'ಕ' ಆದೇಶವಾಗಿ ಬರುತ್ತದೆ. 'ಕ' ಎಂಬುದು 'ಅನೇಕಾಲ್' ಆಗಿರುವದರಿಂದ, "ಅನೇಕಾಲ್ ಶಿತ್ ಸರ್ವಸ್ಯ" ಎಂಬ ಸೂತ್ರದಿಂದ, ಸಂಪೂರ್ಣ 'ಕಿಮ್' ಶಬ್ದದ ಸ್ಥಾನದಲ್ಲಿ ಆದೇಶವು ಬರುತ್ತದೆ. ಅಂದರೆ ಹಲಂತ 'ಕಿಮ್' ಶಬ್ದವು ಅಜಂತವಾಗುತ್ತದೆ. ಈ 'ಕಿಮ್' ಶಬ್ದವು 'ಸರ್ವಾದಿ' ಗಣದಲ್ಲೂ ಬರುವದರಿಂದ, ಅದಕ್ಕೆ "ಸರ್ವಾದೀನಿ ಸರ್ವನಾಮಾನಿ" ಎಂಬ ಸೂತ್ರದಿಂದ 'ಸರ್ವನಾಮ' ಸಂಜ್ಞೆಯು ಬರುತ್ತದೆ. ಆದುದರಿಂದ ಇದರ ರೂಪಗಳು 'ಸರ್ವ' ಶಬ್ದದಂತೆ ಆಗುತ್ತವೆ.

ಉದಾ- ಕಃ, ಕೌ, ಕೇ - 'ಕಿಮ್' ಶಬ್ದದಮೇಲೆ ವಿಭಕ್ತಿ ಪ್ರತ್ಯಯಗಳು ಬಂದಾಗ, ಪ್ರಕೃತ ಸೂತ್ರವಾದ "ಕಿಮಃ ಕಃ" ಎಂಬ ಸೂತ್ರದಿಂದ, 'ಕ' ಆದೇಶವು ಬರುತ್ತದೆ. ಅ-ಕಾರಾಂತ 'ಕ' ಶಬ್ದದಮೇಲೆ 'ಸ್(ಸು)'ಸೇರಿಸಿ ಕ+ಸ್(ಸು) ಎಂದಿದ್ದಾಗ, 'ಸ್' ಕಾರಕ್ಕೆ ರುತ್ವ-ವಿಸರ್ಗಗಳು ಬಂದು, ಕ+ಃ=ಕಃ ಎಂದು ರೂಪವಾಗುತ್ತದೆ. ಇದೇ ರೀತಿಯಲ್ಲಿ ಕ+ಔ ಎಂದಿದ್ದಾಗ, 'ವೃದ್ಧಿ' ಬಂದು 'ಕೌ' ಎಂದಾಗುತ್ತದೆ. ಕ+ಜಸ್(ಅಸ್) ಎಂದಿದ್ದಾಗ, 'ಸರ್ವೇ' ಎಂಬಂತೆ 'ಕೇ' ಎಂದಾಗುತ್ತದೆ. ಹೀಗೆ 'ಕಿಮ್' ಶಬ್ದದ ಇತರ ರೂಪಗಳು ಕೂಡ 'ಸರ್ವ' ಶಬ್ದದಂತೆಯೇ ರೂಪ ತಾಳುತ್ತವೆ.

ಸೂಚನೆ: ತ್ಯದ್, ತದ್, ಯದ್, ಏತದ್, ಇದಮ್, ಅದಸ್, ಏಕ, ದ್ವಿ, ಯುಷ್ಮದ್, ಅಸ್ಮದ್, ಭವತು ಮತ್ತು ಕಿಮ್ ಈ ಶಬ್ದಗಳ ಮೇಲೆ ಸಂಬೋಧನ ರೂಪಗಳು ಇರುವದಿಲ್ಲ.

('ಮ್' ಕಾರಾಂತ ಪುಲ್ಲಂಗ 'ಕಿಮ್' ಶಬ್ದದ ರೂಪಗಳು)

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಕಃ | ಕೌ | ಕೇ |
| ದ್ವಿತೀಯಾ | ಕಮ್ | ಕೌ | ಕಾನ್ |
| ತೃತೀಯಾ | ಕೇನ | ಕಾಭ್ಯಾಮ್ | ಕೈಃ |
| ಚತುರ್ಥೀ | ಕಸ್ಮೈ | ಕಾಭ್ಯಾಮ್ | ಕೇಭ್ಯಃ |
| ಪಞ್ಚಮೀ | ಕಸ್ಮಾತ್,ಕಸ್ಮಾದ್ | ಕಾಭ್ಯಾಮ್ | ಕೇಭ್ಯಃ |
| ಷಷ್ಠೀ | ಕಸ್ಯ | ಕಯೋಃ | ಕೇಷಾಮ್ |
| ಸಪ್ತಮೀ | ಕಸ್ಮಿನ್ | ಕಯೋಃ | ಕೇಷು |

('ಮ್' ಕಾರಾಂತ ಸ್ತ್ರೀಲ್ಲಿಂಗ 'ಕಿಮ್' ಶಬ್ದದ ರೂಪಗಳು)

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಕಾ | ಕೇ | ಕಾಃ |
| ದ್ವಿತೀಯಾ | ಕಾಂ | ಕೇ | ಕಾಃ |
| ತೃತೀಯಾ | ಕಯಾ | ಕಾಭ್ಯಾಮ್ | ಕಾಭಿಃ |
| ಚತುರ್ಥೀ | ಕಸ್ಯೈ | ಕಾಭ್ಯಾಮ್ | ಕಾಭ್ಯಃ |
| ಪಞ್ಚಮೀ | ಕಸ್ಯಾಃ | ಕಾಭ್ಯಾಮ್ | ಕಾಭ್ಯಃ |
| ಷಷ್ಠೀ | ಕಸ್ಯಾಃ | ಕಯೋಃ | ಕಾಸಾಂ |
| ಸಪ್ತಮೀ | ಕಸ್ಯಾಂ | ಕಯೋಃ | ಕಾಸು |

('ಮ್' ಕಾರಾಂತ ನಪುಂಸಕ 'ಕಿಮ್' ಶಬ್ದದ ರೂಪಗಳು)

| ವಿಭಕ್ತಿಗಳು | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಕಿಮ್ | ಕೇ | ಕಾನಿ |
| ದ್ವಿತೀಯಾ | ಕಿಮ್ | ಕೇ | ಕಾನಿ |
| ತೃತೀಯಾ | ಕೇನ | ಕಾಭ್ಯಾಮ್ | ಕೈಃ |
| ಚತುರ್ಥೀ | ಕಸ್ಮೈ | ಕಾಭ್ಯಾಮ್ | ಕೇಭ್ಯಃ |
| ಪಞ್ಚಮೀ | ಕಸ್ಮಾತ್ | ಕಾಭ್ಯಾಮ್ | ಕೇಭ್ಯಃ |
| ಷಷ್ಠೀ | ಕಸ್ಯ | ಕಯೋಃ | ಕೇಷಾಮ್ |
| ಸಪ್ತಮೀ | ಕಸ್ಮಿನ್ | ಕಯೋಃ | ಕೇಷು |

**(ಮ್ ಕಾರಾಂತ ಪುಲ್ಲಿಂಗ 'ಇದಮ್' ಶಬ್ದ)**

ಸೂಚನೆ: ಈ ಶಬ್ದವು ಸರ್ವಾದಿ ಗಣದಲ್ಲಿ ಪಠಿತವಾಗಿರುವುದರಿಂದ "ಸರ್ವಾದೀನಿ ಸರ್ವನಾಮಾನಿ" ಎಂಬ ಸೂತ್ರದಿಂದ ಇದಕ್ಕೆ 'ಸರ್ವನಾಮ' ಸಂಜ್ಞೆಯು ಬರುತ್ತದೆ.

**(ಮ್ ಕಾರಕ್ಕೆ 'ಮ್' ಕಾರವನ್ನು ವಿಧಿಸುವ ಸೂತ್ರ)**

ಸೂತ್ರ – 273. ಇದಮೋ ಮಃ (7.2.108)

ವೃತ್ತಿಃ–ಸೌ। ತ್ಯದಾದ್ಯತ್ವ–ಅಪವಾದಃ॥

ಪ. ಛೇ. – ಇದಮಃ, ಮಃ॥

ಅ. ವೃ.– "ತದೋಃ ಸಃ ಸಾವನಂತ್ಯಯೋಃ" ಎಂಬ ಸೂತ್ರದಿಂದ, 'ಸೌ' ಎಂಬ ಶಬ್ದದ ಅನುವೃತ್ತಿಯಾಗುತ್ತದೆ.

ಅರ್ಥ–'ಸು' ಪ್ರತ್ಯಯವು ಪರದಲ್ಲಿದ್ದಾಗ, 'ಇದಮ್' ಶಬ್ದದ 'ಮ್' ಕಾರಕ್ಕೆ 'ಮ್' ಕಾರವೇ ಆದೇಶವಾಗಿ ಬರುತ್ತದೆ.

ಇದರಿಂದ ಏನು ಲಾಭವೆಂದು ಕೇಳಿದರೆ – 'ಇದಮ್' ಶಬ್ದವು 'ತ್ಯದಾದಿ' ಗಣದಲ್ಲಿ ಪಠಿತವಾಗಿದೆ. ಆದ್ದರಿಂದ "ತ್ಯದಾದೀನಾಮಃ" ಎಂಬ ಸೂತ್ರದಿಂದ, 'ಇದಮ್' ಶಬ್ದದ 'ಮ್' ಕಾರದ ಸ್ಥಾನದಲ್ಲಿ ಅ–ಕಾರ ಆದೇಶವಾಗಿ ಬರುವ ಸಂದರ್ಭವಿತ್ತು. ಈ 'ಅತ್ವ'ವನ್ನು ಬಾಧಿಸಿ, ಪ್ರಕೃತ ಸೂತ್ರದಿಂದ, 'ಮ್' ಕಾರದ ಸ್ಥಾನದಲ್ಲಿ 'ಮ್' ಕಾರವೇ ಆದೇಶವಾಗಿ ಬಂದಿದೆ.

**(ಅಯ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ – 274. ಇದೋಽಯ್ ಪುಂಸಿ (7.2.111)**

ವೃತ್ತಿಃ–ಇದಮಃ ಇದಃ ಅಯ್ ಸೌ ಪುಂಸಿ। ಅಯಮ್। ತ್ಯದಾದ್ಯತ್ವೇ।

ಪ. ಛೇ.– ಇದಃ, ಅಯ್, ಪುಂಸಿ॥

ಅ. ವೃ.–"ಇದಮೋ ಮಃ" ಎಂಬ ಸೂತ್ರದಿಂದ 'ಇದಮಃ' ಎಂಬ ಪದವೂ ಮತ್ತು "ಯಃ ಸೌ" ಎಂಬ ಸೂತ್ರದಿಂದ 'ಸೌ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ–'ಸು' ಪರದಲ್ಲಿದ್ದಾಗ, ಪುಲ್ಲಿಂಗದಲ್ಲಿ 'ಇದಮ್' ಶಬ್ದದ 'ಇದ್' ಎಂಬ ಶಬ್ದ–ಸ್ವರೂಪಕ್ಕೆ 'ಅಯ್' ಆದೇಶವು ಬರುತ್ತದೆ.

ಉದಾ: ಅಯಮ್– 'ಮ್' ಕಾರಾಂತ 'ಇದಮ್' ಶಬ್ದಕ್ಕೆ 'ಸು(ಸ್)' ಸೇರಿಸಿ, ಇದಮ್+ಸು(ಸ್) ಎಂದಿದ್ದಾಗ, "ತ್ಯದಾದೀನಾಮಃ" ಎಂಬ ಸೂತ್ರದಿಂದ, ಪ್ರಾಪ್ತವಾಗುವ ಅ–ಕಾರವನ್ನು ಬಾಧಿಸಿ "ಇದಮೋ ಮಃ" ಎಂಬ ಸೂತ್ರದಿಂದ 'ಮ್' ಕಾರದ ಸ್ಥಾನದಲ್ಲಿ 'ಮ್'ಕಾರವೇ ಆದೇಶವಾಗಿ ಬರುತ್ತದೆ. ಹೀಗೆ ಇದಮ್+ಸ್ ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ಇದ್' ಪರ್ಯಂತ ಶಬ್ದ–ಸ್ವರೂಪಕ್ಕೆ 'ಅಯ್' ಆದೇಶವು ಬಂದು, ಅಯ್+ಅಮ್+ಸ್ ಎಂದಿದ್ದಾಗ, "ಹಲ್ಙ್ಯಾಬ್ಭ್ಯೋ ದೀರ್ಘಾತ್ ಸುತಿಸ್ಯಪೃಕ್ತಮ್ ಹಲ್" ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬಂದು, 'ಅಯಮ್' ಎಂದಾಗುತ್ತದೆ.

(ಪರರೂಪ ವಿಧಾಯಕ ಸೂತ್ರ)

**ಸೂತ್ರ - 275. ಅತೋ ಗುಣೇ (6.1.97)**

ವೃತ್ತಿಃ-ಅಪದಾನ್ತಾತ್ ಅತಃ ಗುಣೇ ಪರರೂಪಮ್ ಏಕಾದೇಶಃ ಸ್ಯಾತ್।

ಪ. ಛೇ. -ಅತಃ, ಗುಣೇ।

ಅ. ವೃ.- "ಉಸ್ಯಪದಾನ್ತಾತ್" ಎಂಬ ಸೂತ್ರದಿಂದ 'ಅಪದಾನ್ತಾತ್' ಎಂಬ ಪದವೂ ಮತ್ತು "ಏಙಃ ಪದಾನ್ತಾದತಿ" ಎಂಬ ಸೂತ್ರದಿಂದ 'ಅತಿ' ಎಂಬ ಪದವೂ ಅನುವೃತ್ತವಾಗುತ್ತದೆ. "ಏಕಃ ಪೂರ್ವ-ಪರಯೋಃ" ಎಂಬುದು ಅಧಿಕಾರ ಸೂತ್ರ.

ಅರ್ಥ-ಅಪದಾನ್ತವಾದ ಅ-ಕಾರಕ್ಕಿಂತ ಗುಣಾಕ್ಷರವು (ಅ,ಇ,ಉ) ಪರದಲ್ಲಿರುವ ಪೂರ್ವ-ಪರಗಳ ಸ್ಥಾನದಲ್ಲಿ ಪರರೂಪವು ಏಕಾದೇಶವಾಗಿ ಬರುತ್ತದೆ.

(ಮ್-ಕಾರಾದೇಶವನ್ನು ವಿಧಿಸುವ ಸೂತ್ರ)

**ಸೂತ್ರ- 276. ದಶ್ಚ (7.2.109)**

ವೃತ್ತಿಃ-ಇದಮಃ ದಸ್ಯ ಮಃ ಸ್ಯಾತ್ ವಿಭಕ್ತೌ। ಇಮೌ। ಇಮೇ। ಇತ್ಯಾದೇಃ ಸಂಬೋಧನಂ ನಾಸ್ತಿ ಇತಿ ಉತ್ಸರ್ಗಃ।

ಪ. ಛೇ. - ದಃ, ಚ।

ಅ. ವೃ.- "ಅಷ್ಟನ ಆ ವಿಭಕ್ತೌ" ಎಂಬ ಸೂತ್ರದಿಂದ 'ವಿಭಕ್ತೌ' ಎಂಬ ಪದವೂ, "ಇದಮೋ ಮಃ" ಎಂಬ ಸೂತ್ರದಿಂದ 'ಮಃ' ಎಂಬ ಪದವೂ, ಅನುವೃತ್ತವಾಗುತ್ತವೆ.

ಅರ್ಥ-'ಇದಮ್' ಶಬ್ದದ 'ದ್' ಕಾರದ ಸ್ಥಾನದಲ್ಲಿ 'ಮ್' ಕಾರವು ಆದೇಶವಾಗಿ ಬರುತ್ತದೆ - ವಿಭಕ್ತಿ ಪ್ರತ್ಯಯಗಳು ಪರದಲ್ಲಿದ್ದಾಗ.

ಉದಾ- ಇಮೌ - 'ಇದಮ್' ಶಬ್ದದಮೇಲೆ ಪ್ರಥಮಾ ದ್ವಿವಚನದ 'ಔ' ಪ್ರತ್ಯಯವು ಪರದಲ್ಲಿದ್ದು, ಇದಮ್+ಔ ಎಂದಿದ್ದಾಗ, "ತ್ಯದಾದೀನಾಮಃ" ಎಂಬ ಸೂತ್ರದಿಂದ, 'ಮ್' ಕಾರದ ಸ್ಥಾನದಲ್ಲಿ ಅತ್ವ(ಅ-ಕಾರಾದೇಶ)ವು ಬಂದು, ಇದ+ಅ+ಔ ಎಂದಾಗುತ್ತದೆ. ಇದ+ಅ ಎಂಬಲ್ಲಿ, "ಅತೋ ಗುಣೇ (6.1.97)" ಎಂಬ ಸೂತ್ರದಿಂದ, ಪೂರ್ವದಲ್ಲಿರುವ 'ಇದ' ಶಬ್ದದ ಅ-ಕಾರ ಮತ್ತು ಪರದಲ್ಲಿರುವ ಅತ್ವದ ಅ-ಕಾರಗಳ ಸ್ಥಾನದಲ್ಲಿ ಪರರೂಪ 'ಅ' ಕಾರವೇ ಆದೇಶವಾಗಿ ಬಂದು, 'ಇದ' ಎಂದಾಗಿ, ಇದ+ಔ ಎಂದಿದ್ದಾಗ, ಪ್ರಕೃತ ಸೂತ್ರದಿಂದ, 'ದ್' ಕಾರದ ಸ್ಥಾನದಲ್ಲಿ 'ಮ್' ಕಾರವು ಆದೇಶವಾಗಿ ಬಂದು, ಇಮ+ಔ ಎಂದಾಗುತ್ತದೆ. ಹೀಗೆ ಇಮ+ಔ ಎಂದಿದ್ದಾಗ, ವೃದ್ಧಿಸಂಧಿಯಿಂದ ಇಮೌ ಎಂದು ರೂಪವಾಗುತ್ತದೆ.

ಉದಾ- ಇಮೌ -ಇದೇ ರೀತಿಯಲ್ಲಿ ದ್ವಿತೀಯಾ ವಿಭಕ್ತಿ ದ್ವಿವಚನದಲ್ಲೂ 'ಔಟ್(ಔ)' ಪ್ರತ್ಯಯವು ಪರದಲ್ಲಿದ್ದಾಗ, ಇಮೌ ಎಂದು ರೂಪವಾಗುತ್ತದೆ.

ಉದಾ- ಇಮೇ- ಪ್ರಥಮಾ ವಿಭಕ್ತಿ ಬಹುವಚನದಲ್ಲಿ 'ಜಸ್(ಅಸ್)' ಪ್ರತ್ಯಯ ಪರದಲ್ಲಿದ್ದಾಗ, "ತ್ಯದಾದೀನಾಮಃ" ಎಂಬ ಸೂತ್ರದಿಂದ, ಅತ್ವ, "ಅತೋ ಗುಣೇ

(6.1.97)" ಎಂಬ ಸೂತ್ರದಿಂದ, ಪರರೂಪ ಮತ್ತು 'ಸರ್ವನಾಮ' ಸಂಜ್ಞೆ ಪಡೆಯುವುದರಿಂದ, "ಜಸಃ ಶೀ" ಎಂಬ ಸೂತ್ರದಿಂದ 'ಜಸ್' ನಲ್ಲಿರುವ 'ಅಸ್' ನ ಸ್ಥಾನದಲ್ಲಿ 'ಶೀ(ಈ)' ಆದೇಶ ಬಂದು, ಪ್ರಕೃತ ಸೂತ್ರದಿಂದ 'ಮತ್ವ' ಬಂದು, ಇಮ+ಈ ಎಂದಿದ್ದಾಗ, 'ಅ' ಕಾರ 'ಈ' ಕಾರಗಳ ಸ್ಥಾನದಲ್ಲಿ 'ಗುಣ' ಬಂದು, 'ಇಮೇ' ಎಂಬ ರೂಪವು ಸಿದ್ಧಿಸುತ್ತದೆ.

ವಿಶೇಷ: –"ತ್ಯದಾದೇಃ ಸಂಬೋಧನಂ ನಾಸ್ತಿ ಇತಿ ಉತ್ಸರ್ಗಃ" –(ತ್ಯದಾದಿ-ಗಣ-ಶಬ್ದಗಳಿಗೆ ಸಂಬೋಧನದ ರೂಪವಿಲ್ಲ).

ಉದಾ– ಇಮಮ್ – ದ್ವಿತೀಯಾ ವಿಭಕ್ತಿ ಏಕವಚನದಲ್ಲಿ 'ಅಮ್' ಪ್ರತ್ಯಯವು ಪರದಲ್ಲಿದ್ದಾಗ, "ತ್ಯದಾದೀನಾಮಃ" ಎಂಬ ಸೂತ್ರದಿಂದ, ಅತ್ವ, "ಅತೋ ಗುಣೇ (6.1.97)" ಎಂಬ ಸೂತ್ರದಿಂದ, ಪರರೂಪ, ಹಾಗೂ "ದಶ್ಚ" ಎಂಬ ಸೂತ್ರದಿಂದ 'ಮತ್ವ' ಬಂದು, ಇಮ+ಅಮ್ ಎಂದಿದ್ದಾಗ, "ಅಮಿ ಪೂರ್ವಃ" ಎಂಬ ಸೂತ್ರದಿಂದ ಪೂರ್ವರೂಪ ಬಂದು ಇಮಮ್ ಎಂದು ರೂಪವಾಗುತ್ತದೆ.

ಉದಾ– ಇಮಾನ್–ದ್ವಿತೀಯಾ ವಿಭಕ್ತಿ ಬಹುವಚನದಲ್ಲಿ– 'ಶಸ್(ಅಸ್)' ಪ್ರತ್ಯಯ ಪರದಲ್ಲಿದ್ದಾಗ, "ತ್ಯದಾದೀನಾಮಃ" ಎಂಬ ಸೂತ್ರದಿಂದ, ಅತ್ವ, "ಅತೋ ಗುಣೇ (6.1.97)" ಎಂಬ ಸೂತ್ರದಿಂದ, ಪರರೂಪ, ಹಾಗೂ "ದಶ್ಚ" ಎಂಬ ಸೂತ್ರದಿಂದ 'ಮತ್ವ' ಬಂದು, ಇಮ+ಅಸ್ ಎಂದಿದ್ದಾಗ, "ಪ್ರಥಮಯೋಃ ಪೂರ್ವ ಸವರ್ಣಃ" ಎಂಬ ಸೂತ್ರದಿಂದ, ಪೂರ್ವ ಸವರ್ಣದೀರ್ಘ ಬಂದು, ಇಮಾಸ್ ಎಂದಾಗಿ, "ತಸ್ಮಾಚ್ಛಸೋಃ ನಃ ಪುಂಸಿ" ಎಂಬ ಸೂತ್ರದಿಂದ 'ಸ್' ಕಾರಕ್ಕೆ 'ನ್' ಕಾರ ಬಂದು ಇಮಾನ್ ಎಂದು ರೂಪವಾಗುತ್ತದೆ.

### (ಅನ್ ಆದೇಶ ವಿಧಾಯಕ ಸೂತ್ರ)

**ಸೂತ್ರ– 277.** **ಅನಾಪ್ಯಕಃ (7.2.112)**

ವೃತ್ತಿಃ–ಅಕಕಾರಸ್ಯ (ಕ–ಕಾರವಲ್ಲದ) ಇದಮಃ ಇದಃ ಅನ್ ಆಪಿ ವಿಭಕ್ತೌ।"ಆಪ್ ಇತಿ ಪ್ರತ್ಯಾಹಾರಃ"। ಅನೇನ।

ಪ. ಛೇ. – ಅನ್, ಆಪಿ, ಅಕಃ।

ಅ. ವ್ಯ. –"ಇದಮೋ ಮಃ" ಎಂಬ ಸೂತ್ರದಿಂದ 'ಇದಮಃ' ಎಂಬ ಪದವೂ, "ಇದೋಽಯ್ ಪುಂಸಿ" ಎಂಬ ಸೂತ್ರದಿಂದ 'ಇದಃ' ಎಂಬ ಪದವೂ ಮತ್ತು "ಅಷ್ಟನ ಆ ವಿಭಕ್ತೌ" ಎಂಬ ಸೂತ್ರದಿಂದ 'ವಿಭಕ್ತೌ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ– 'ಆಪ್' ಪ್ರತ್ಯಾಹಾರದ ವಿಭಕ್ತಿ ಪ್ರತ್ಯಯವು ಪರದಲ್ಲಿದ್ದಾಗ, 'ಅಕಚ್' ಪ್ರತ್ಯಯದಲ್ಲಿರುವ 'ಕ' ಕಾರ ರಹಿತವಾದ 'ಇದಮ್' ಶಬ್ದದ 'ಇದ್' ಎಂಬ ಸ್ಥಾನದಲ್ಲಿ 'ಅನ್' ಆದೇಶವು ಬರುತ್ತದೆ.

[ಗಮನಿಸಿರಿ–'ಇದಮ್' ಶಬ್ದದಲ್ಲಿ "ಅವ್ಯಯ–ಸರ್ವನಾಮ್ನಾಂ ಅಕಚ್ ಪ್ರಾಕ್ ಟೇಃ" ಎಂಬ ಸೂತ್ರದಲ್ಲಿ 'ಅಕಚ್' ಇಲ್ಲದಿದ್ದರೆ, ಆಗ ಈ ಸೂತ್ರವು ಪ್ರವೃತ್ತವಾಗುತ್ತಿತ್ತು.

ಏಕೆಂದರೆ– 'ಅಕಚ್' ಪ್ರತ್ಯಯದ ನಂತರ 'ಇದಮ್' ಶಬ್ದವು 'ಇದಕಮ್' ಎಂದೇ ಆಗುತ್ತಿತ್ತು. ಅರ್ಥಾತ್ 'ಕ' ಕಾರಯುಕ್ತವಾಗುತ್ತಿತ್ತು].

ಸೂತ್ರದಲ್ಲಿ 'ಅಕಃ' ಎಂಬುದರ ಅರ್ಥ – ನ ಕಃ=ಅಕಃ ಎಂದು. ಅಂದರೆ ಎಲ್ಲಿ 'ಕ್' ಕಾರವು ಇಲ್ಲವೋ ಅಲ್ಲಿ ಎಂದು ಅರ್ಥ. 'ಆಪಿ' ಎಂದರೆ–'ಆಪ್'ನ 'ಸಪ್ತಮೀ' ವಿಭಕ್ತಿ ಎಂದು ಅರ್ಥ. 'ಆಪ್' ಎಂಬುದು ಪ್ರತ್ಯಾಹಾರವಾಗಿದೆ. ಇದು 'ಟಾ' ಎಂಬಲ್ಲಿನ 'ಆ' ದಿಂದ ಆರಂಭ ಮಾಡಿ, ಸಪ್ತಮೀ ಬಹುವಚನದ 'ಸುಪ್' ಪ್ರತ್ಯಯದ ವರೆಗಿನ ಪ್ರತ್ಯಯಗಳನ್ನು ಗ್ರಹಿಸುತ್ತದೆ.

ಉದಾ– ಅನೇನ – ತೃತೀಯಾ ಏಕವಚನ – 'ಇದಮ್' ಶಬ್ದದಮೇಲೆ ತೃತೀಯಾ ಏಕವಚನದ ಪ್ರತ್ಯಯವಾದ 'ಟಾ(ಆ)" ವನ್ನು ಸೇರಿಸಿದಾಗ, ಇದಮ್+ಟಾ(ಆ) ಎಂದಿರುತ್ತದೆ. "ತ್ಯದಾದೀನಾಮಃ" ಎಂಬ ಸೂತ್ರದಿಂದ, 'ಮ್' ಕಾರ ಸ್ಥಾನದಲ್ಲಿ 'ಅತ್ವ' ಬಂದು, ಇದ+ಅ+ಟಾ(ಆ) ಎಂದಿದ್ದಾಗ, ಪರರೂಪವಾಗಿ ಇದ+ಆ ಎಂದಿದ್ದಾಗ, "ದಶ್ಚ" ಎಂಬ ಸೂತ್ರದಿಂದ, ಪ್ರಾಪ್ತವಾದ 'ಮತ್ವ'ವನ್ನು ಬಾಧಿಸಿ ಪ್ರಕೃತ ಸೂತ್ರದಿಂದ 'ಇದ' ಎಂಬಲ್ಲಿಯ 'ಇದ್' ನ ಸ್ಥಾನದಲ್ಲಿ 'ಅನ್' ಆದೇಶವು ಬಂದು, ಅನ್+ಅ+ಆ=ಅನ+ಆ ಎಂದಾಗುತ್ತದೆ. ಈಗ "ಟಾಙಸಿಙಸಾಮಿನಾತ್ಸ್ಯಾಃ" ಎಂಬ ಸೂತ್ರದಿಂದ 'ಟಾ' ದಲ್ಲಿರುವ 'ಆ' ಗೆ 'ಇನ' ಎಂಬ ಆದೇಶ ಬಂದು, ಅನ+ಇನ ಎಂದಾಗಿ, 'ಅ' ಕಾರ 'ಇ' ಕಾರಗಳಿಗೆ 'ಗುಣ' ಬಂದು 'ಅನೇನ' ಎಂಬ ರೂಪವು ಸಿದ್ಧಿಸುತ್ತದೆ.

**(ಇದಮ್ ಶಬ್ದದಲ್ಲಿರುವ 'ಇದ್' ಭಾಗಕ್ಕೆ ಲೋಪ ವಿಧಾಯಕ ಸೂತ್ರ)**

**ಸೂತ್ರ – 278. ಹಲಿ ಲೋಪಃ (7.2.113)**

ವೃತ್ತಿಃ–ಅಕಕಾರಸ್ಯ ಇದಮಃ ಇದಃ ಲೋಪಃ ಆಪಿ ಹಲಾದೌ। ಪರಿಭಾಷಾ – "ನ ಅನರ್ಥಕೇ ಅಲೋಂತ್ಯವಿಧಿಃ ಅನಭ್ಯಾಸ ವಿಕಾರೇ"।

ಅ. ವೃ.–"ಅನಾಪ್ಯಕಃ" ಎಂಬ ಸೂತ್ರದಿಂದ, 'ಅಕಃ' ಮತ್ತು 'ಆಪಿ' ಎಂಬ ಪದಗಳು, ಮತ್ತು "ಇದಮೋ ಮಃ" ಎಂಬ ಸೂತ್ರದಿಂದ 'ಇದಮಃ' ಎಂಬ ಪದವು, "ಇದೋಽಯ್ ಪುಂಸಿ" ಎಂಬ ಸೂತ್ರದಿಂದ 'ಇದಃ' ಎಂಬ ಪದವು, "ಅಷ್ಟನ ಆ ವಿಭಕ್ತೌ" ಎಂಬ ಸೂತ್ರದಿಂದ 'ವಿಭಕ್ತೌ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ– 'ಅಕಚ್' ಪ್ರತ್ಯಯದ 'ಕ್' ಕಾರದಿಂದ ರಹಿತವಾದ 'ಇದಮ್' ಶಬ್ದದ 'ಇದ್' ಎಂಬುದಕ್ಕೆ 'ಲೋಪ' ಬರುತ್ತದೆ. 'ಆಪ್' ಪ್ರತ್ಯಾಹಾರಾಂತರ್ಗತವಾದ ಹಲಾದಿ ವಿಭಕ್ತಿಗಳು ಪರವಾದಾಗ. ಈ ಸೂತ್ರವು (ಪ್ರಕೃತ) ಹಲಾದಿ ವಿಭಕ್ತಿಯಲ್ಲಿ "ಅನಾಪ್ಯಕಃ" ಎಂಬ ಸೂತ್ರವನ್ನು ಬಾಧಿಸುತ್ತದೆ. ಅಜಾದಿಯಲ್ಲಿಯೇ ಪ್ರವೃತ್ತವಾಗುವದು ಎಂದೂ ಇಲ್ಲ. ಆದ್ದರಿಂದ, ಅಜಾದಿಯಲ್ಲಿ "ಅನಾಪ್ಯಕಃ" ಎಂಬ ಸೂತ್ರದಿಂದ 'ಅನ್' ಆದೇಶವು ಆಗುತ್ತದೆ. ತೃತೀಯಾದಿಂದ ಸಪ್ತಮೀ ವಿಭಕ್ತಿಗಳಲ್ಲಿರುವ ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗಲೂ ಪ್ರವೃತ್ತವಾಗುವದು.

"ತ್ಯದಾದೀನಾಮಃ" ಎಂಬ ಸೂತ್ರದಿಂದ 'ಅತ್ವ' ಬಂದಮೇಲೆ, 'ಇದ' ಶಬ್ದದಲ್ಲಿರುವ 'ಇದ್' ನ ಲೋಪವಾದಮೇಲೆ, ಕೇವಲ 'ಅ' ಕಾರ ಮಾತ್ರ ಉಳಿಯುವದು. "ನಾನರ್ಥಕೇ ಅಲೋಽನ್ತ್ಯಸ್ಯ ವಿಧಿಃ ಅನಭ್ಯಾಸ ವಿಕಾರೇ" ಎಂಬುದು ಒಂದು ಪರಿಭಾಷೆ. ಅನರ್ಥಕದಲ್ಲಿ ನಿರರ್ಥಕ ಮತ್ತು ಅರ್ಥವುಳ್ಳವುಗಳಲ್ಲಿ ನಿರ್ಣಯ ಮಾಡುವಾಗ "ಅಲೋಽನ್ತ್ಯಸ" ಎಂಬ ಪರಿಭಾಷೆಯು ಪ್ರವೃತ್ತವಾಗುವದಿಲ್ಲ. ಆದರೆ ಅಭ್ಯಾಸದ ವಿಕಾರವು ಅನರ್ಥಕವಾದಾಗಲೂ ಪ್ರವೃತ್ತವಾಗುತ್ತದೆ.

ನಿರರ್ಥಕ ಮತ್ತು ಸಾರ್ಥಕಗಳ ನಿರ್ಣಯ ಮಾಡುವದಕ್ಕಾಗಿ ಪರಿಭಾಷೆಗಳು ಇವೆ. 'ಸಮುದಾಯೋಹ್ಯರ್ಥವಾನ್ ತಸ್ಯೈಕದೇಶೋಽನರ್ಥಕಃ' ಅಂದರೆ ಸಮುದಾಯವು ಅರ್ಥವುಳ್ಳದ್ದು, ಆದರೆ ಸಮುದಾಯದ ಏಕ ಭಾಗವು ಅನರ್ಥಕವಾಗಿರುತ್ತದೆ.

ಉದಾ– 'ಇದಮ್' ಎಂಬುದು ವರ್ಣಗಳ ಸಮುದಾಯ. ಇದು ಅರ್ಥವತ್ತಾಗಿದೆ ಮತ್ತು 'ಇದ್' ಎಂಬುದು ಏಕದೇಶವಾಗಿರೋಣದ್ದರಿಂದ ಮತ್ತು 'ಅಮ್' ಎಂಬುದೂ ಏಕದೇಶವಾಗಿರೋಣದ್ದರಿಂದ ಎರಡೂ ನಿರರ್ಥಕಗಳಾಗಿವೆ.

ಇದ+ಭ್ಯಾಮ್ ಮೊದಲಾದ ತೃತೀಯಾದಿ ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, "ಅನಾಪ್ಯಕಃ" ಎಂಬ ಸೂತ್ರವನ್ನು ಬಾಧಿಸಿ "ಹಲಿ ಲೋಪಃ" ಎಂಬ (ಪ್ರಕೃತ) ಸೂತ್ರದಿಂದ 'ಇದ್' ಭಾಗದ ಲೋಪವಾಗುತ್ತದೆ. ನಂತರ "ಅಲೋಽನ್ತ್ಯಸ್ಯ" ಎಂಬ ಸೂತ್ರವು ಪ್ರವೃತ್ತವಾಗಿ, ಅಂತ್ಯ ಸ್ಥಾನಕ್ಕೆ ಲೋಪವಾಗಬೇಕಾಗಿತ್ತು. ಆದರೆ "ನಾನರ್ಥಕೇ ಅಲೋಽನ್ತ್ಯಸ್ಯ ವಿಧಿಃ ಅನಭ್ಯಾಸ ವಿಕಾರೇ" ಎಂಬ ನಿಯಮದ ಪ್ರಕಾರ ಇಲ್ಲಿ "ಅಲೋಽನ್ತ್ಯಸ್ಯ" ಪರಿಭಾಷೆಯು ಪ್ರವೃತ್ತವಾಗುವದಿಲ್ಲ. ಆದುದರಿಂದ ಸಂಪೂರ್ಣವಾದ 'ಇದ್' ಶಬ್ದವು ಲೋಪವಾಗುತ್ತದೆ.

**(ಅತಿದೇಶ ಸೂತ್ರ)**

**ಸೂತ್ರ– 279. ಆದ್ಯಂತವದೇಕಸ್ಮಿನ್ (1.1.21)**

ವೃತ್ತಿಃ–ಏಕಸ್ಮಿನ್ ಕ್ರಿಯಾಮಾಣಂ ಕಾರ್ಯಂ ಆದೌ ಇವ ಅಂತ ಇವ ಚ ಸ್ಯಾತ್। "ಸುಪಿ ಚ" ಇತಿ ದೀರ್ಘಃ। ಆಭ್ಯಾಮ್–3।

ಪ. ಛೇ. – ಆದಿಃ, ಅನ್ತವತ್, ಏಕಸ್ಮಿನ್।

ಅರ್ಥ–ಆದಿ ಮತ್ತು ಅಂತವನ್ನು ಸ್ವೀಕರಿಸಿ ಆಗುವ ಕಾರ್ಯವು ಕೇವಲ ಒಂದನ್ನೇ ಸ್ವೀಕರಿಸಿ ಅಂದರೆ, ಒಂದೇ ವರ್ಣದ ಆದಿಯನ್ನೋ ಅಥವಾ ಅಂತವನ್ನೋ ಸ್ವೀಕರಿಸಿದಾಗ ಆಗುತ್ತದೆ. ಈ ಸೂತ್ರದಿಂದ ಆಗುವ ಕಾರ್ಯವನ್ನು 'ವ್ಯಪದೇಶಿವದ್ಭಾವ'ವೆಂದು ಕರೆಯುತ್ತಾರೆ. ಅಂದರೆ, ಹೇಗೆ ಒಬ್ಬ ವ್ಯಕ್ತಿಗೆ ಒಬ್ಬನೇ ಮಗನಿದ್ದರೆ, ಅವನನ್ನೇ ಜೇಷ್ಠನೆಂದೂ, ಮಧ್ಯಮನೆಂದೂ, ಕನಿಷ್ಠನೆಂದೂ ಕರೆಯುತ್ತಾರೆ.

ಆದಿ ಮತ್ತು ಅಂತ ಶಬ್ದಗಳು ಸಾಪೇಕ್ಷವಾಗಿವೆ. ಅಂದರೆ, ಒಂದು ಮತ್ತೊಂದನ್ನು ಅಪೇಕ್ಷಿಸುತ್ತದೆ. ಯಾವಾಗ ಕೊನೆಯ ವರ್ಣವಿರುವದಿಲ್ಲವೋ ಆಗ ಆದ್ಯಂತಗಳ ನಿಶ್ಚಯವಾಗುವದಿಲ್ಲ. 'ಯಸ್ಮಾತ್ ಪೂರ್ವಂ ನಾಸ್ತಿ,ಸಃ ಆದಿಃ', 'ಯಸ್ಮಾತ್ ಪೂರ್ವಮಸ್ತಿ

ಪರಂ ಚ ನಾಸ್ತಿ, ಸಃ ಅಂತಃ'

'ಇದಮ್' ಶಬ್ದದಲ್ಲಿ 'ಇದ್' ಭಾಗದ ಲೋಪವಾದಮೇಲೆ 'ಅ' ಕಾರವು ಮಾತ್ರ ಉಳಿಯುತ್ತದೆ. ನಂತರ "ಸುಪಿ ಚ" ಎಂಬ ಸೂತ್ರದಿಂದ ದೀರ್ಘವಾಗಿ 'ಆ' ಎಂದಾಗುತ್ತದೆ. ಇಲ್ಲಿ ಕೇವಲ ಅ–ಕಾರವಿರೋಣದ್ದರಿಂದ, "ಸುಪಿ ಚ" ಎಂಬ ಸೂತ್ರದಿಂದ ಅದಂತ ಅಂಗಕ್ಕೆ ದೀರ್ಘ ಬರುವ ಅವಕಾಶವಿಲ್ಲ. ಆದ್ದರಿಂದ ಪ್ರಕೃತ ಸೂತ್ರದಿಂದ 'ಅ' ಕಾರವನ್ನೇ ಅದಂತವಾಗಿ ಪರಿಗಣಿಸಲಾಗಿದೆ. ಇದನ್ನೇ 'ವ್ಯಪದೇಶಿವದ್ಭಾವ' ಎನ್ನುತ್ತಾರೆ.

ಉದಾ– ಆಭ್ಯಾಮ್– 'ಇದಮ್' ಶಬ್ದದಮೇಲೆ ತೃತೀಯಾ, ಚತುರ್ಥೀ ಮತ್ತು ಪಞ್ಚಮೀ ವಿಭಕ್ತಿ ದ್ವಿವಚನಗಳಲ್ಲಿ 'ಭ್ಯಾಮ್' ಬಂದಮೇಲೆ, ಅತ್ವ, ಪರರೂಪಗಳಾದಮೇಲೆ, ಇದ+ಭ್ಯಾಮ್ ಎಂದಿರುತ್ತದೆ. ಆಗ ಪ್ರಕೃತ ಸೂತ್ರದಿಂದ, 'ಇದ್' ಭಾಗ ಲೋಪವಾದಾಗ, ಅ+ಭ್ಯಾಮ್ ಎಂದಿರುತ್ತದೆ. ಅಗ ವ್ಯಪದೇಶಿವದ್ಭಾವದಿಂದ ಅದಂತವಾಗಿ "ಸುಪಿ ಚ" ಎಂಬ ಸೂತ್ರದಿಂದ 'ಅ' ಕಾರಕ್ಕೆ ದೀರ್ಘ ಬಂದು ಆ+ಭ್ಯಾಮ್=ಆಭ್ಯಾಮ್ ಎಂದು ರೂಪವಾಗುತ್ತದೆ.

**(ಐಸ್ ಆದೇಶವನ್ನು ನಿಷೇಧಿಸುವಸೂತ್ರ)**

**ಸೂತ್ರ– 280. ನೇದಮದಸೋರಕೋಃ (7.1.11)**

ವೃತ್ತಿಃ–ಅಕಕಾರಯೋಃ ಇದಮ್ ಅದಸೋಃ ಭಿಸಃ ಐಸ್ ನ। ಏಭಿಃ। ಅಸ್ಮೈ। ಏಭ್ಯಃ। ಅಸ್ಮಾತ್। ಅಸ್ಯ। ಅನಯೋಃ–2। ಏಷಾಮ್। ಅಸ್ಮಿನ್। ಏಷು।

ಪ. ಛೇ. – ನ, ಇದಮ್, ಅದಸೋಃ, ಅಕೋಃ।

ಅ. ವೃ.–"ಅತೋ ಭಿಸ್ ಐಸ್" ಎಂಬ ಸೂತ್ರದಿಂದ 'ಭಿಸಃ' ಮತ್ತು 'ಐಸ್' ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ–'ಅಕಚ್' ನಲ್ಲಿ 'ಕ್' ಕಾರ ಇಲ್ಲದೇ ಇರುವ 'ಇದಮ್' ಮತ್ತು 'ಅದಸ್' ಶಬ್ದಗಳ ಪರದಲ್ಲಿರುವ 'ಭಿಸ್' ನ ಸ್ಥಾನದಲ್ಲಿ 'ಐಸ್' ಆದೇಶ ಬರುವದಿಲ್ಲ. "ಅತೋ ಭಿಸ ಐಸ್" ಎಂಬ ಸೂತ್ರದಲ್ಲಿ ಬರುವ 'ಐಸ್' ಆದೇಶದ ನಿಷೇಧವನ್ನು ಇಲ್ಲಿ ಹೇಳಲಾಗಿದೆ.

ಉದಾ– ಏಭಿಃ– 'ಇದಮ್' ಶಬ್ದದಮೇಲೆ ತೃತೀಯಾ ಬಹುವಚನದ 'ಭಿಸ್' ಪ್ರತ್ಯಯವು ಬಂದಾಗ, 'ಅತ್ವ' ಮತ್ತು 'ಪರರೂಪ' ಗಳಾದಮೇಲೆ ಇದ+ಭಿಸ್ ಎಂದಿದ್ದಾಗ, "ಹಲಿ ಲೋಪಃ" ಎಂಬ ಸೂತ್ರದಿಂದ 'ಇದ್' ಎಂಬ ಶಬ್ದಸ್ವರೂಪವು ಲೋಪವಾಗಿ 'ಅ' ಮಾತ್ರ ಉಳಿದು, ಅ+ಭಿಸ್ ಎಂದಿರುತ್ತದೆ. ಇದು ಹ್ರಸ್ವ 'ಅ' ಕಾರಾಂತವಾದಮೇಲೆ, "ಅತೋ ಭಿಸ ಐಸ್" ಎಂಬ ಸೂತ್ರದಿಂದ 'ಐಸ್' ಆದೇಶ ಬರುವ ಪ್ರಸಂಗವಿತ್ತು. ಆದರೆ ಪ್ರಕೃತ ಸೂತ್ರದಿಂದ ಅದು ನಿಷೇಧಿಸಲ್ಪಟ್ಟಿದ್ದರಿಂದ, 'ಅ' ಕಾರದಸ್ಥಾನದಲ್ಲಿ "ಬಹುವಚನೇ ಝಲ್ಯೇತ್' ಎಂಬ ಸೂತ್ರದಿಂದ 'ಏತ್ವ' ಬಂದು 'ಏಭಿಸ್' ಎಂದಾಗಿ ನಂತರ ರುತ್ವ–ವಿಸರ್ಗಗಳಿಂದ 'ಏಭಿಃ' ಎಂದು ರೂಪವಾಗುತ್ತದೆ.

ಉದಾ– ಅಸ್ಮೈ 'ಇದಮ್' ಶಬ್ದದ ಮೇಲೆ ಚತುರ್ಥೀ ಏಕವಚನ ಪ್ರತ್ಯಯವಾದ 'ಙೇ(ಏ)' ಪರದಲ್ಲಿದ್ದಾಗ, 'ಅತ್ವ' ಮತ್ತು 'ಪರರೂಪ'ಗಳಾದ ಮೇಲೆ ಇದ+ಙೇ(ಏ) ಎಂದಿದ್ದಾಗ, 'ಸರ್ವನಾಮ' ಸಂಜ್ಞೆಯು ಬಂದು, 'ಸರ್ವನಾಮ್ನಃ ಸ್ಮೈ' ಸೂತ್ರದಿಂದ 'ಙೇ(ಏ)'ಗೆ 'ಸ್ಮೈ' ಆದೇಶವಾಗಿ ಬಂದು ಇದ+ಸ್ಮೈ ಎಂದಿರುತ್ತದೆ. 'ಅಜಾದಿ' ಪ್ರತ್ಯಯದ ಸ್ಥಾನದಲ್ಲಿ 'ಹಲಾದಿ' ಪ್ರತ್ಯಯವು ಬಂದದ್ದರಿಂದ, "ಹಲಿ ಲೋಪಃ" ಎಂಬ ಸೂತ್ರದಿಂದ, 'ಇದ್' ಶಬ್ದಸ್ವರೂಪದ ಲೋಪವಾಗಿ ಅ+ಸ್ಮೈ=ಅಸ್ಮೈ ಎಂಬ ರೂಪ ಸಿದ್ಧವಾಗುತ್ತದೆ.

ಉದಾ– ಏಭ್ಯಃ– 'ಇದಮ್' ಶಬ್ದದ ಮೇಲೆ ಚತುರ್ಥೀ ಹಾಗೂ ಪಞ್ಚಮೀ ಬಹುವಚನ ಪ್ರತ್ಯಯವಾದ 'ಭ್ಯಸ್' ಪರದಲ್ಲಿದ್ದಾಗ, 'ಇದಮ್' ಶಬ್ದಕ್ಕೆ 'ಅತ್ವ' ಮತ್ತು 'ಪರರೂಪ'ಗಳಾದಮೇಲೆ ಇದ+ಭ್ಯಸ್ ಎಂದಿದ್ದಾಗ, "ಹಲಿ ಲೋಪಃ" ಎಂಬ ಸೂತ್ರದಿಂದ, 'ಇದ್' ಶಬ್ದಸ್ವರೂಪದ ಲೋಪವಾಗಿ ಅ+ಭ್ಯಸ್ ಎಂದಿರುತ್ತದೆ. ನಂತರ 'ಅ' ಕಾರಕ್ಕೆ "ಬಹುವಚನೇ ಝಲ್ಯೇತ್' ಎಂಬ ಸೂತ್ರದಿಂದ 'ಏತ್ವ' ಬಂದು 'ಏಭ್ಯಸ್' ಎಂದಾಗಿ ನಂತರ ರುತ್ವ–ವಿಸರ್ಗಗಳಿಂದ 'ಏಭ್ಯಃ' ಎಂದು ರೂಪವಾಗುತ್ತದೆ.

ಉದಾ– ಅಸ್ಮಾತ್ – 'ಇದಮ್' ಶಬ್ದದ ಮೇಲೆ ಪಞ್ಚಮೀ ಏಕವಚನ ಪ್ರತ್ಯಯವಾದ 'ಙಸಿ(ಅಸ್)' ಬಂದ ನಂತರ 'ಇದಮ್' ಶಬ್ದಕ್ಕೆ 'ಅತ್ವ' ಮತ್ತು 'ಪರರೂಪ'ಗಳಾದಮೇಲೆ, ಇದ+ಅಸ್ ಎಂದಿದ್ದಾಗ, 'ಇದಮ್' ಎಂಬುದು 'ಅದಂತ' ವಾಗಿರುತ್ತದೆ. ಆಗ "ಙಸಿಙ್ಯೋಃ ಸ್ಮಾತ್ ಸ್ಮಿನೌ" ಎಂಬ ಸೂತ್ರದಿಂದ, 'ಅಸ್' ಗೆ 'ಸ್ಮಾತ್' ಆದೇಶವಾಗಿ ಬಂದು, ಇದ+ಸ್ಮಾತ್ ಎಂದಿರುತ್ತದೆ. "ಹಲಿ ಲೋಪಃ" ಎಂಬ ಸೂತ್ರದಿಂದ, 'ಇದ್' ಶಬ್ದಸ್ವರೂಪದ ಲೋಪವಾಗಿ ಅ+ಸ್ಮಾತ್=ಅಸ್ಮಾತ್ ಎಂದು ರೂಪವಾಗುತ್ತದೆ.

ಉದಾ– ಅಸ್ಯ – 'ಇದಮ್' ಶಬ್ದದ ಮೇಲೆ ಷಷ್ಠೀ ಏಕವಚನ ಪ್ರತ್ಯಯವಾದ 'ಙಸ್(ಅಸ್)' ಪರದಲ್ಲಿದ್ದಾಗ, 'ಇದಮ್' ಶಬ್ದಕ್ಕೆ 'ಅತ್ವ' ಮತ್ತು 'ಪರರೂಪ'ಗಳಾದಮೇಲೆ, ಇದ+ಅಸ್ ಎಂದಿದ್ದಾಗ, "ಟಾ ಙಸಿಙಸಾಮ್ ಇನಾತ್ಸ್ಯಾಃ" ಎಂಬ ಸೂತ್ರದಿಂದ 'ಅಸ್' ಗೆ 'ಸ್ಯ' ಆದೇಶವಾಗಿ ಇದ+ಸ್ಯ ಎಂದಿದ್ದಾಗ, "ಹಲಿ ಲೋಪಃ" ಎಂಬ ಸೂತ್ರದಿಂದ, 'ಇದ್' ಶಬ್ದಸ್ವರೂಪದ ಲೋಪವಾಗಿ ಅ+ಸ್ಯ=ಅಸ್ಯ ಎಂದಾಗುತ್ತದೆ.

ಉದಾ– ಅನಯೋಃ– 'ಇದಮ್' ಶಬ್ದದ ಮೇಲೆ ಷಷ್ಠೀ ಮತ್ತು ಸಪ್ತಮೀ ದ್ವಿವಚನ ಪ್ರತ್ಯಯವಾದ 'ಓಸ್' ಪರದಲ್ಲಿದ್ದಾಗ, 'ಇದಮ್' ಶಬ್ದಕ್ಕೆ 'ಅತ್ವ' ಮತ್ತು 'ಪರರೂಪ'ಗಳಾದಮೇಲೆ ಇದ+ಓಸ್ ಎಂದಿದ್ದಾಗ, "ಅನಾಪ್ಯಕಃ" ಎಂಬುದರಿಂದ 'ಇದ್' ಶಬ್ದ ಸ್ವರೂಪಕ್ಕೆ 'ಅನ್' ಆದೇಶವಾಗಿ ಬಂದು, ಅನ್+ಅ+ಓಸ್ ಎಂದಿರುತ್ತದೆ. ನಂತರ "ಓಸಿ ಚ" ಎಂಬ ಸೂತ್ರದಿಂದ 'ಅ' ಕಾರಕ್ಕೆ 'ಏ' ಕಾರಾದೇಶವಾಗಿ ಬಂದು, ಅನ್+ಏ+ಓಸ್ ಎಂದಿದ್ದಾಗ, 'ಏ' ಕಾರಕ್ಕೆ "ಏಚೋಽಯವಾಯಾವಃ" ಎಂಬ ಸೂತ್ರದಿಂದ 'ಅಯ್' ಆದೇಶವಾಗಿ ಬಂದು, ಅನ್+ಅಯ್+ಓಸ್ ಎಂದಿದ್ದಾಗ, 'ಅನಯೋಸ್' ಎಂದಾಗಿ ನಂತರ ರುತ್ವ–ವಿಸರ್ಗಗಳಿಂದ 'ಅನಯೋಃ' ಎಂದು ರೂಪವಾಗುತ್ತದೆ.

ಉದಾ– ಏಷಾಮ್–'ಇದಮ್' ಶಬ್ದದಮೇಲೆ 'ಷಷ್ಠೀ' ಬಹುವಚನದ 'ಆಮ್'

ಪ್ರತ್ಯಯ ಸೇರಿಸಿದಾಗ, ಹಿಂದಿನಂತೆ 'ಅತ್ವ' ಮತ್ತು ಪರರೂಪಗಳು ಬಂದಮೇಲೆ, ಇದ+ಆಮ್ ಎಂದಿದ್ದಾಗ, 'ಸರ್ವನಾಮ ಸಂಜ್ಞೆ' ಬಂದು ಅದಂತವಾಗಿರುವುದರಿಂದ "ಆಮಿ ಸರ್ವನಾಮ್ನಃ ಸುಟ್" ಎಂಬ ಸೂತ್ರದಿಂದ 'ಸುಟ್(ಸ್)' ಆಗಮ ಬಂದು, ಇದ+ಸ್+ಆಮ್ ಎಂದಿದ್ದಾಗ, ಇದ+ಸಾಮ್ ಎಂದಾಗುತ್ತದೆ. "ಹಲಿ ಲೋಪಃ" ಎಂಬ ಸೂತ್ರದಿಂದ, 'ಇದ್' ಶಬ್ದಸ್ವರೂಪದ ಲೋಪವಾಗಿ ಅ+ಸಾಮ್ ಎಂದಿದ್ದಾಗ, "ಬಹುವಚನೇ ಝಲ್ಯೇತ್" ಎಂಬ ಸೂತ್ರದಿಂದ 'ಅ' ಕಾರಕ್ಕೆ 'ಏತ್ವ' ಬಂದು, ಏ+ಸಾಮ್ ಎಂದಿದ್ದಾಗ, "ಆದೇಶಪ್ರತ್ಯಯಯೋಃ" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಷತ್ವ ಬಂದು, ಏ+ಷಾಮ್=ಏಷಾಮ್ ಎಂದು ರೂಪವಾಗುತ್ತದೆ.

ಉದಾ– ಅಸ್ಮಿನ್–'ಇದಮ್' ಶಬ್ದದಮೇಲೆ 'ಸಪ್ತಮೀ' ಏಕವಚನದ 'ಙಿ(ಇ)' ಪ್ರತ್ಯಯ ಸೇರಿಸಿದಾಗ, ಹಿಂದಿನಂತೆ 'ಅತ್ವ' ಮತ್ತು ಪರರೂಪಗಳು ಬಂದಮೇಲೆ, ಇದ+ಙಿ(ಇ) ಎಂದಿದ್ದಾಗ, "ಙಸಿಙ್ಯೋಃ ಸ್ಮಾತ್ ಸ್ಮಿನೌ" ಎಂಬ ಸೂತ್ರದಿಂದ, ಙಿ(ಇ) ಗೆ 'ಸ್ಮಿನ್' ಆದೇಶ ಬಂದು, ಇದ+ಸ್ಮಿನ್ ಎಂದಿದ್ದಾಗ, ಹಿಂದಿನಂತೆ "ಹಲಿ ಲೋಪಃ" ಎಂಬ ಸೂತ್ರದಿಂದ, 'ಇದ್' ಶಬ್ದಸ್ವರೂಪದ ಲೋಪವಾಗಿ ಅ+ಸ್ಮಿನ್=ಅಸ್ಮಿನ್ ಎಂದು ರೂಪವಾಗುತ್ತದೆ.

ಉದಾ– ಏಷು– 'ಇದಮ್' ಶಬ್ದದಮೇಲೆ 'ಸಪ್ತಮೀ' ಬಹುವಚನದ 'ಸುಪ್(ಸು)' ಪ್ರತ್ಯಯ ಸೇರಿಸಿದಾಗ, ಹಿಂದಿನಂತೆ 'ಅತ್ವ' ಮತ್ತು ಪರರೂಪಗಳು ಬಂದಮೇಲೆ ಇದ+ಸು ಎಂದಿದ್ದಾಗ, ಹಿಂದಿನಂತೆ "ಹಲಿ ಲೋಪಃ" ಎಂಬ ಸೂತ್ರದಿಂದ, 'ಇದ್' ಶಬ್ದಸ್ವರೂಪದ ಲೋಪವಾಗಿ, ಅ+ಸು ಎಂದಿದ್ದಾಗ, "ಬಹುವಚನೇ ಝಲ್ಯೇತ್" ಎಂಬ ಸೂತ್ರದಿಂದ 'ಅ' ಕಾರಕ್ಕೆ 'ಏತ್ವ' ಬಂದು, ಏ+ಸು ಎಂದಿದ್ದಾಗ, "ಆದೇಶಪ್ರತ್ಯಯಯೋಃ" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಷತ್ವ ಬಂದು, ಏ+ಷು=ಏಷು ಎಂದು ರೂಪವಾಗುತ್ತದೆ.

**(ಮ್ ಕಾರಾಂತ ಪುಲ್ಲಿಂಗ 'ಇದಮ್' ಶಬ್ದದರೂಪಗಳು**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಅಯಮ್ | ಇಮೌ | ಇಮೇ |
| ದ್ವಿತೀಯಾ | ಇಮಮ್, ಏನಮ | ಇಮೌ, ಏನೌ | ಇಮಾನ್, ಏನಾನ್ |
| ತೃತೀಯಾ | ಅನೇನ,ಏನೇನ | ಆಭ್ಯಾಮ್ | ಏಭಿಃ |
| ಚತುರ್ಥೀ | ಅಸ್ಮೈ | ಆಭ್ಯಾಮ್ | ಏಭ್ಯಃ |
| ಪಞ್ಚಮೀ | ಅಸ್ಮಾತ್ | ಆಭ್ಯಾಮ್ | ಏಭ್ಯಃ |
| ಷಷ್ಠೀ | ಅಸ್ಯ | ಅನಯೋಃ, ಏನಯೋಃ | ಏಷಾಮ್ |
| ಸಪ್ತಮೀ | ಅಸ್ಮಿನ್ | ಅನಯೋಃ, ಏನಯೋಃ | ಏಷು |

(ಮ್ ಕಾರಾಂತ ಸ್ತ್ರೀಲ್ಲಿಂಗ 'ಇದಮ್' ಶಬ್ದದರೂಪಗಳು)

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಇಯಮ್ | ಇಮೇ | ಇಮಾಃ |
| ದ್ವಿತೀಯಾ | ಇಮಾಮ್, ಏನಾಮ್ | ಇಮೇ, ಏನೇ | ಇಮಾಃ, ಏನಾಃ |
| ತೃತೀಯಾ | ಅನಯಾ,ಏನಯಾ | ಆಭ್ಯಾಮ್ | ಆಭಿಃ |
| ಚತುರ್ಥೀ | ಅಸ್ಯೈ | ಆಭ್ಯಾಮ್ | ಆಭ್ಯಃ |
| ಪಞ್ಚಮೀ | ಅಸ್ಯಾಃ | ಆಭ್ಯಾಮ್ | ಆಭ್ಯಃ |
| ಷಷ್ಠೀ | ಅಸ್ಯಾಃ | ಅನಯೋಃ, ಏನಯೋಃ | ಆಸಾಮ್ |
| ಸಪ್ತಮೀ | ಅಸ್ಯಾಂ | ಅನಯೋಃ, ಏನಯೋಃ | ಆಸು |

(ಮ್ ಕಾರಾಂತ ನಪುಂಸಕ ಲಿಂಗ'ಇದಮ್' ಶಬ್ದದರೂಪಗಳು

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಇದಮ್ | ಇಮೇ | ಇಮಾನಿ |
| ದ್ವಿತೀಯಾ | ಇದಮ್ | ಇಮೇ | ಇಮಾನಿ |
| ತೃತೀಯಾ | ಅನೇನ,ಏನೇನ | ಆಭ್ಯಾಮ್ | ಏಭಿಃ |
| ಚತುರ್ಥೀ | ಅಸ್ಮೈ | ಆಭ್ಯಾಮ್ | ಏಭ್ಯಃ |
| ಪಞ್ಚಮೀ | ಅಸ್ಮಾತ್ | ಆಭ್ಯಾಮ್ | ಏಭ್ಯಃ |
| ಷಷ್ಠೀ | ಅಸ್ಯ | ಅನಯೋಃ, ಏನಯೋಃ | ಏಷಾಮ್ |
| ಸಪ್ತಮೀ | ಅಸ್ಮಿನ್ | ಅನಯೋಃ, ಏನಯೋಃ | ಏಷು |

(ಏನ ಆದೇಶವನ್ನು ವಿಧಿಸುವ ಸೂತ್ರ)

**ಸೂತ್ರ-281. ದ್ವಿತೀಯಾಟೌಸ್ಸ್ವೇನಃ (2.4.34)**

ವೃತ್ತಿಃ-ಇದಮ್-ಏತದೋಃ ಅನ್ವಾದೇಶೇ। ಕಿಞ್ಚಿತ್ ಕಾರ್ಯಂ ವಿಧಾತುಮ್ ಉಪಾತ್ತಸ್ಯ ಕಾರ್ಯಾಂತರಂ ವಿಧಾತುಂ ಪುನಃ ಉಪಾದಾನಂ ಅನ್ವಾದೇಶಃ। ಯಥಾ- ಅನೇನ ವ್ಯಾಕರಣಮಧೀತಂ ಏನಂ ಛಂದೋಽಧ್ಯಾಪಯೇತಿ। ಅನಯೋಃ ಪವಿತ್ರಂ- ಕುಲಂ ಏನಯೋಃ ಪ್ರಭೂತಂ ಸ್ವಂ ಇತಿ। ಏನಮ್। ಏನೌ। ಏನಾನ್। ಏನೇನ। ಏನಯೋಃ। ರಾಜಾ।

ಪ. ಛೇ. – ದ್ವಿತೀಯಾ, ಟಾ, ಓಸ್ಸು, ಏನಃ।

ಅ. ವೃ.–"ಇದಮೋಽನ್ವಾದೇಶೇಽ ಶನುದಾತ್ತಃ ತೃತೀಯಾದೌ" ಎಂಬ ಸೂತ್ರದಿಂದ 'ಇದಮಃ' ಮತ್ತು 'ಅನ್ವಾದೇಶೇ' ಎಂಬ ಪದಗಳು, ಹಾಗೆಯೇ "ಏತದಸ್ತ್ರತಸೂಸಪದೌ ಚಾನುದಾತ್ತೌ" ಎಂಬ ಸೂತ್ರದಿಂದ, 'ಏತದಃ' ಎಂಬ ಪದವೂ ಅನುವೃತ್ತವಾಗುತ್ತದೆ.

ಅರ್ಥ–ದ್ವಿತೀಯಾ ವಿಭಕ್ತಿ, 'ಟಾ' ಮತ್ತು 'ಓಸ್' ಈ ಪ್ರತ್ಯಯಗಳು ಪರದಲ್ಲಿದ್ದಾಗ, 'ಇದಮ್' ಮತ್ತು 'ಏತದ್' ಶಬ್ದಗಳ ಸ್ಥಾನದಲ್ಲಿ, 'ಏನ' ಎಂಬ ಆದೇಶವು ಅನ್ವಾದೇಶದಲ್ಲಿ ಬರುತ್ತದೆ. ಯಾವದಾದರೂ ಕೆಲಸದ ಬಗ್ಗೆ, ಒಬ್ಬನನ್ನು ಕುರಿತು ಹೇಳಿದಮೇಲೆ ಮತ್ತೊಮ್ಮೆ ಅವನನ್ನೇ ಕುರಿತು ಹೇಳುವಾಗ, ಆ ಕ್ರಿಯೆಗೆ 'ಅನ್ವಾದೇಶ'ವೆಂದು ಹೆಸರು.

ಉದಾ: 'ಅನೇನ ವ್ಯಾಕರಣಮ್ ಅಧೀತಮ್, ಏನಮ್ ಛಂದೋಽಧ್ಯಾಪಯ' ಅಂದರೆ ಇವನಿಂದ ವ್ಯಾಕರಣವು ಕಲಿಯಲ್ಪಟ್ಟಿದೆ, ಇವನಿಗೆ (ಇವನನ್ನು) ವೇದವನ್ನು ಕಲಿಸಿರಿ. ಎಂಬಲ್ಲಿ, ಅನೇನ(ಇವನಿಂದ) ಎಂಬ ಶಬ್ದದಿಂದ ಹೇಳಲ್ಪಟ್ಟ ವ್ಯಕ್ತಿಯೇ, 'ಏನಮ್' (ಇವನಿಗೆ) ಅನ್ವಾದೇಶವೆನ್ನುತ್ತಾರೆ. ಅನ್ವಾದೇಶದಲ್ಲಿ ಎರಡನೇ ಸಲ ಹೇಳಲ್ಪಟ್ಟ 'ಇದಮ್' ಮತ್ತು 'ಏತದ್' ಶಬ್ದಗಳ ಸ್ಥಾನದಲ್ಲಿ ಅಮ್, ಔಟ್, ಶಸ್ ಮತ್ತು ಟಾ, ಓಸ್ ಇವು ಪರದಲ್ಲಿದ್ದಾಗ, 'ಏನ' ಆದೇಶವು ಬಂದು, 'ಇಮಮ್, ಇಮಾನ್, ಅನೇನ, ಅನಯೋಃ ಹಾಗೂ ಏತಮ್, ಏತೌ, ಏತಾನ್, ಏತೇನ, ಏತಯೋಃ ಇವುಗಳ ಸ್ಥಾನದಲ್ಲಿ ಕ್ರಮವಾಗಿ ಏನಮ್, ಏನೌ, ಏನಾನ್, ಏನೇನ, ಏನಯೋಃ ಎಂಬ ಅನ್ವಾದೇಶ ರೂಪಗಳು ಸಿದ್ಧವಾಗುತ್ತವೆ.

**(ಇಲ್ಲಿಗೆ 'ಮ್' ಕಾರಾಂತ ಶಬ್ದಗಳು ಮುಗಿದವು)**

**(ನ್ ಕಾರಾಂತ ಶಬ್ದಗಳು ಆರಂಭವಾಗುತ್ತವೆ)**

ರಾಜೃ–ದೀಪ್ತೌ ಎಂಬ ಧಾತುವಿನ ಮೇಲೆ 'ಕನಿನ್' ಪ್ರತ್ಯಯ ಬಂದು, 'ರಾಜನ್' ಶಬ್ದವು ಸಿದ್ಧವಾಗಿದೆ. ಈ ಪ್ರತ್ಯಯವು 'ಕೃತ್' ಪ್ರಕರಣಕ್ಕೆ ಸೇರಿದೆ. ಆದುದರಿಂದ "ಕೃತ್ತದ್ಧಿತ ಸಮಾಸಾಶ್ಚ" ಎಂಬ ಸೂತ್ರದಿಂದ ಪ್ರಾತಿಪದಿಕ ಸಂಜ್ಞೆಯು ಬಂದಿದೆ.

ಉದಾ– ರಾಜಾ – 'ರಾಜನ್' ಶಬ್ದದಮೇಲೆ ಪ್ರಥಮಾ ಏಕವಚನದಲ್ಲಿ 'ಸ್(ಸು)' ಪ್ರತ್ಯಯ ಸೇರಿಸಿದಾಗ, ರಾಜನ್+ಸ್ ಎಂದಿರುತ್ತದೆ. ಆಗ "ಅಲೋಽನ್ತ್ಯಾತ್ ಪೂರ್ವ ಉಪಧಾ" ಎಂಬ ಸೂತ್ರದಿಂದ 'ಜ್' ಕಾರೋತ್ತರ 'ಅ' ಕಾರಕ್ಕೆ 'ಉಪಧಾ' ಸಂಜ್ಞೆ ಬಂದು "ಸರ್ವನಾಮಸ್ಥಾನೇಚಾಸಮ್ಬುದ್ಧೌ" ಎಂಬ ಸೂತ್ರದಿಂದ ಉಪಧಾ ಕ್ಕೆ 'ದೀರ್ಘ' ಬಂದು ರಾಜಾನ್+ಸ್ ಎಂದಿರುತ್ತದೆ. "ಹಲ್ ಙ್ಯಾಬ್ಭ್ಯೋ ಸುತಿಸ್ಯಪೃಕ್ತಂ ಹಲ್" ಎಂಬ ಸೂತ್ರದಿಂದ ಅಪೃಕ್ತವಾದ 'ಸ್' ಕಾರಕ್ಕೆ ಲೋಪ ಬರುತ್ತದೆ. "ನಲೋಪಃ ಪ್ರಾತಿಪದಿಕಾನ್ತಸ್ಯ" ಎಂಬ ಸೂತ್ರದಿಂದ 'ನ್' ಕಾರಕ್ಕೆ ಲೋಪ ಬಂದು 'ರಾಜಾ' ಎಂದು ರೂಪವಾಗುತ್ತದೆ.

ಉದಾ– ರಾಜಾನೌ, ರಾಜಾನಃ, ರಾಜಾನಮ್, ರಾಜಾನೌ– 'ರಾಜನ್' ಶಬ್ದದಮೇಲೆ ಪ್ರಥಮಾ ದ್ವಿ– ವಚನದಲ್ಲಿ 'ಔ' ಪ್ರತ್ಯಯವನ್ನು ಸೇರಿಸಿದಾಗ ರಾಜನ್+ಔ ಎಂದಿದ್ದಾಗ, 'ಉಪಧಾಸಂಜ್ಞೆ' ಹಾಗೂ 'ಉಪಧಾದೀರ್ಘ' ಬಂದು, ರಾಜಾನ್+ಔ ಎಂದಾಗಿ ವರ್ಣ ಜೋಡಣೆಯಿಂದ 'ರಾಜಾನೌ' ಎಂಬ ರೂಪವು ಸಿದ್ಧಿಸುತ್ತದೆ.

ಇದೇ ರೀತಿಯಲ್ಲಿ ರಾಜನ್ ಶಬ್ದದ ಪರದಲ್ಲಿ ಪ್ರಥಮಾ ಬಹುವಚನ ಪ್ರತ್ಯಯ 'ಜಸ್(ಅಸ್)', ದ್ವಿತೀಯಾ ಏಕವಚನ ಪ್ರತ್ಯಯ 'ಅಮ್' ಹಾಗೂ ದ್ವಿ ವಚನ ಪ್ರತ್ಯಯ 'ಔ (ಔಟ್)' ಗಳು ಬಂದು ರಾಜನ್+ಅಸ್, ರಾಜನ್+ಅಮ್, ರಾಜನ್+ಔ, ಎಂದಿದ್ದಾಗ, ಹಿಂದಿನಂತೆ 'ಉಪಧಾಸಂಜ್ಞೆ', 'ಉಪಧಾದೀರ್ಘ'ಗಳು ಬಂದು ರಾಜಾನಃ, ರಾಜಾನಮ್ ಮತ್ತು ರಾಜಾನೌ ಎಂಬ ರೂಪಗಳು ಸಿದ್ಧಿಸುತ್ತವೆ.

**(ನ್ ಲೋಪವನ್ನು ನಿಷೇಧಿಸುವ ಸೂತ್ರ)**

**ಸೂತ್ರ -282. ನ ಙಿ-ಸಂಬುದ್ಧ್ಯೋಃ ( 8.2.8)**

ವೃತ್ತಿಃ–ನಸ್ಯ ಲೋಪಃ ನ ಙೌ ಸಮ್ಬುದ್ಧೌ ಚ। ಹೇ ರಾಜನ್!

ವಾ॥ **ಙಾವುತ್ತರಪದೇ ಪ್ರತಿಷೇಧೋ ವಕ್ತವ್ಯಃ** ಬ್ರಹ್ಮನಿಷ್ಠಃ। ರಾಜಾನೌ। ರಾಜಾನಃ। ರಾಜ್ಞಃ।

ಪ. ಛೇ. – ನ, ಙಿ, ಸಂಬುಧ್ಯೋಃ।

ಅರ್ಥ– 'ಙಿ' ಮತ್ತು ಸಂಬುದ್ಧಿ ಪ್ರತ್ಯಯಗಳು ಪರದಲ್ಲಿದ್ದಾಗ, 'ನ್' ಕಾರಕ್ಕೆ ಲೋಪವು ಬರುವದಿಲ್ಲ. 'ರಾಜನ್' ಶಬ್ದದಮೇಲೆ ಸಂಬುದ್ಧಿಯ 'ಸ್(ಸು)' ಪರದಲ್ಲಿದ್ದಾಗ, "ಹಲ್ಙ್ಯಾಬ್ಭ್ಯೋ ಸುತಿಸ್ಯಪೃಕ್ತಂ ಹಲ್" ಎಂಬ ಸೂತ್ರದಿಂದ, ಅಪೃಕ್ತವಾದ 'ಸ್' ಕಾರಕ್ಕೆ ಲೋಪ ಬಂದು 'ರಾಜನ್' ಎಂದಿದ್ದಾಗ, "ನಲೋಪಃ ಪ್ರಾತಿಪದಿಕಾನ್ತಸ್ಯ" ಎಂಬ ಸೂತ್ರದಿಂದ 'ನ್' ಕಾರಕ್ಕೆ ಲೋಪ ಬರಬೇಕಾಗಿದ್ದಾಗ, ಪ್ರಕೃತ ನಿಷೇಧ ಸೂತ್ರವು ಪ್ರವೃತ್ತವಾಗಿದೆ. ಈ ನಿಷೇಧವನ್ನು ನಿಷೇಧಿಸುವ ವಾರ್ತಿಕವು ಹೀಗಿದೆ.

ವಾ॥ **ಙಾವುತ್ತರಪದೇ ಪ್ರತಿಷೇಧೋ ವಕ್ತವ್ಯಃ –**

ಈ ವಾರ್ತಿಕವು ಉತ್ತರಪದವನ್ನು ಪರದಲ್ಲಿ ಉಳ್ಳ 'ಙಿ(ಇ)' ಪ್ರತ್ಯಯವು ಪರದಲ್ಲಿದ್ದಾಗ "ನಲೋಪಃ ಪ್ರಾತಿಪದಿಕಾನ್ತಸ್ಯ" ಎಂಬ ಸೂತ್ರದಿಂದ ನಿಷೇಧಿಸಲ್ಪಟ್ಟ 'ನ್' ಕಾರ ಲೋಪವನ್ನು ನಿಷೇಧಿಸುತ್ತದೆ. ಅಂದರೆ "ನ ಙಿಸಂಬುದ್ಧ್ಯೋಃ ( 8.2.8)" ಎಂಬ ಸೂತ್ರದ ನಿಷೇಧವನ್ನು ಹೇಳಬೇಕು. ಆಗ–

ಉದಾ– 'ಬ್ರಹ್ಮನಿಷ್ಠಃ' ಎಂಬಲ್ಲಿ ಬ್ರಹ್ಮನ್+ಙಿ(ಇ)+ನಿಷ್ಠಃ ಎಂದಿದ್ದಾಗ, 'ನ್' ಕಾರದ ಲೋಪದ ನಿಷೇಧಕ್ಕೆ ನಿಷೇಧವು ಬರಲಿಲ್ಲ. ಅಂದರೆ 'ನ್' ಕಾರದ ಲೋಪವು ಆಗಿಯೇ ಆಗುತ್ತದೆ. ಆಗ ಬ್ರಹ್ಮ+ಇ+ನಿಷ್ಠಃ ಎಂದಿರುತ್ತದೆ. ಇದರಿಂದ ಬ್ರಹ್ಮನಿಷ್ಠಃ ಎಂಬ ರೂಪವು ಸಿದ್ಧವಾಗಿದೆ.

ಈ ವಾರ್ತಿಕದ ಪ್ರಕಾರ ಉತ್ತರಪದದಿಂದ ಕೂಡಿದ 'ಙಿ(ಇ)' ಪ್ರತ್ಯಯವು ಪರದಲ್ಲಿದ್ದಾಗ ಮಾತ್ರ 'ನ್' ಕಾರ ಲೋಪವನ್ನು ಹೇಳುತ್ತದೆ. "ನ ಙಿಸಂಬುದ್ಧ್ಯೋಃ (8.2.8)" ಎಂಬಲ್ಲಿನ 'ಙಿ(ಇ)' ಮತ್ತು ಸಂಬುದ್ಧಿ ಪ್ರತ್ಯಯಗಳು ಪರದಲ್ಲಿದ್ದಾಗ, 'ನ್' ಲೋಪವನ್ನು ನಿಷೇಧಿಸಲಾಗಿದೆ. ವಾರ್ತಿಕದಲ್ಲಿ ಹೇಳಿರುವ 'ಙಿ(ಇ)' ಉತ್ತರಪದದಿಂದ ಕೂಡಿದ 'ಙಿ(ಇ)' ಆಗಿದೆ, ಆದ್ದರಿಂದ ಅಲ್ಲಿ ಮಾತ್ರ 'ನ್' ಲೋಪ ನಿಷೇಧದ ನಿಷೇಧವನ್ನು ಹೇಳಿದಂತಾಗುತ್ತದೆ].

ಉದಾ – ಹೇ ರಾಜನ್! – 'ರಾಜನ್' ಶಬ್ದದಮೇಲೆ ಸಂಬೋಧನ ಪ್ರಥಮಾ ಪ್ರತ್ಯಯವಾದ 'ಸ್(ಸು)' ವನ್ನು ಸೇರಿಸಿದಾಗ, ಹೇ ರಾಜನ್+ಸ್ ಎಂದಿರುತ್ತದೆ. ಆಗ "ಹಲ್ ಙ್ಯಾಭ್ಯೋ ದೀರ್ಘಾತ್ ಸುತಿಸ್ಯಪೃಕ್ತಂ ಹಲ್" ಎಂಬ ಸೂತ್ರದಿಂದ ಅಪೃಕ್ತವಾದ 'ಸ್' ಕಾರಕ್ಕೆ ಲೋಪ ಬಂದು ಹೇ ರಾಜನ್! ಎಂಬ ಸಂಬೋಧನ ಪ್ರಥಮಾ ವಿಭಕ್ತಿಯ ರೂಪವು ಸಿದ್ಧಿಸುತ್ತದೆ.

"ಸರ್ವನಾಮಸ್ಥಾನೇಚಾಸಂಬುದ್ಧೌ" ಎಂಬ ಸೂತ್ರದಲ್ಲಿ 'ಅಸಂಬುದ್ಧೌ' ಎಂದು ಹೇಳಿರೋಣದರಿಂದ (ಉಪಧಾ) ದೀರ್ಘವು ಬರಲಿಲ್ಲ. "ನಲೋಪಃ ಪ್ರಾತಿಪದಿಕಾನ್ತಸ್ಯ" ಎಂಬ ಸೂತ್ರದಿಂದ ಬರಬೇಕಾದ 'ನ್' ಕಾರದ ಲೋಪವು "ನ ಙಿಸಂಬುದ್ಧ್ಯೋಃ (8.2.8)" ಎಂಬ ಸೂತ್ರದಿಂದ ನಿಷೇಧಿಸಲ್ಪಟ್ಟಿದೆ. ಹೀಗಾಗಿ ಹೇ ರಾಜನ್! ಎಂಬ ಸಂಬೋಧನ ಪ್ರಥಮಾ ವಿಭಕ್ತಿಯ ರೂಪವು ಸಿದ್ಧವಾಗಿದೆ.

ಉದಾ–ರಾಜ್ಞಃ– 'ರಾಜನ್' ಶಬ್ದದಮೇಲೆ ದ್ವಿತೀಯಾ ವಿಭಕ್ತಿ ಬಹುವಚನ ಪ್ರತ್ಯಯವಾದ 'ಶಸ್(ಅಸ್)' ಪರದಲ್ಲಿದ್ದಾಗ, ರಾಜನ್+ಶಸ್(ಅಸ್) ಎಂದಿರುತ್ತದೆ. "ಯಚಿ ಭಮ್" ಎಂಬ ಸೂತ್ರದಿಂದ 'ರಾಜನ್' ಶಬ್ದಕ್ಕೆ 'ಭ' ಸಂಜ್ಞೆ ಬರುತ್ತದೆ. ಇಲ್ಲಿ "ಅಲ್ಲೋಪೋಽನಃ" ಎಂಬ ಸೂತ್ರವು ಪ್ರವೃತ್ತವಾಗುತ್ತದೆ. ರಾಜ್+ಅನ್+ಅಸ್ ಎಂದಿದ್ದಾಗ, ಅಂಗಾವಯವವಾದ 'ಅಸರ್ವನಾಮ' ಸ್ಥಾನಕ್ಕೆ ಪರದಲ್ಲಿ 'ಅನ್' ಇರುತ್ತದೆ. ಆ 'ಅನ್' ನಲ್ಲಿರುವ 'ಅ' ಕಾರಕ್ಕೆ "ಅಲ್ಲೋಪೋಽನಃ" ಎಂಬ ಸೂತ್ರದಿಂದ 'ಲೋಪ' ಬಂದು, ರಾಜ್+ನ್+ಅಸ್ ಎಂದಿದ್ದಾಗ, 'ರಾಜ್+ನ್ ಎಂಬಲ್ಲಿ, "ಸ್ತೋಃ ಶ್ಚುನಾಶ್ಚುಃ" ಎಂಬ ಸೂತ್ರದಿಂದ, 'ಶ್ಚುತ್ವ' ಬಂದು 'ನ್' ಕಾರಕ್ಕೆ 'ಞ್' ಕಾರ ಬಂದು, ರಾಜ್+ಞ್+ಅಸ್(ಅ) ಎಂದಾಗುತ್ತದೆ. ಆಗ 'ಜ್' ಮತ್ತು 'ಞ್' ಈ ಎರಡು ವ್ಯಂಜನಗಳು ಕೂಡಿ ರಾಜ್ಞ್+ಅಸ್(ಅ) ಎಂದಾಗಿ ಮುಂದೆ ರುತ್ವ–ವಿಸರ್ಗಗಳಿಂದ ರಾಜ್ಞಃ ಎಂದು ರೂಪವಾಗುತ್ತದೆ.

ಉದಾ– ರಾಜ್ಞಾ– 'ರಾಜನ್' ಶಬ್ದದಮೇಲೆ ತೃತೀಯಾ ವಿಭಕ್ತಿ ಏಕವಚನ ಪ್ರತ್ಯಯವಾದ 'ಟಾ(ಆ)' ಬಂದು, ರಾಜನ್+ಟಾ(ಆ) ಎಂದಿದ್ದಾಗ, ಹಿಂದಿನಂತೆ, 'ಅ' ಕಾರ ಲೋಪ, ಶ್ಚುತ್ವ, ನಂತರ 'ಜ್' ಮತ್ತು 'ಞ್' ಈ ಎರಡು ವ್ಯಂಜನಗಳು ಕೂಡಿ ರಾಜ್ಞ್+ಆ=ರಾಜ್ಞಾ ಎಂದು ರೂಪವಾಗುತ್ತದೆ.

ಇದೇ ರೀತಿಯಲ್ಲಿ, ಅಜಾದಿ ವಿಭಕ್ತಿ ಪ್ರತ್ಯಯಗಳು ಪರದಲ್ಲಿದ್ದಾಗ, ಚತುರ್ಥೀ ವಿಭಕ್ತಿ ಏಕವಚನದಲ್ಲಿ ರಾಜನ್+ಙೆ(ಎ) ಎಂದಿದ್ದಾಗ, ರಾಜ್ಞೇ ಎಂದೂ, ಹಾಗೆಯೇ ರಾಜ್ಞಃ, ರಾಜ್ಞಃ, ರಾಜ್ಞೋಃ, ರಾಜ್ಞಾಮ್, ಇತ್ಯಾದಿ ರೂಪಗಳಾಗುತ್ತವೆ.

ವಿಶೇಷ: ರಾಜ್ಞಾಮ್ ಎಂಬಲ್ಲಿ ವ್ಯಂಜನಾಂತವಾದ ಅಂಗವಿರುವುದರಿಂದ, "ಹ್ರಸ್ವನದ್ಯಾಪೋ ನುಟ್" ಎಂಬ ಸೂತ್ರದಿಂದ ನುಡಾಗಮವೂ, ಮತ್ತೆ "ನಾಮಿ" ಎಂಬ ಸೂತ್ರದಿಂದ ದೀರ್ಘವೂ ಬರಲಿಕ್ಕೆ ಸುತರಾಂ ಅವಕಾಶವಿಲ್ಲ.

**(ನ-ಲೋಪಕ್ಕೆ ಅಸಿದ್ಧತ್ವವನ್ನು ನಿಯಮಿಸುವ ಸೂತ್ರ)**

**ಸೂತ್ರ-283.ಸೂತ್ರ -ನಲೋಪಃ ಸುಪ್-ಸ್ವರ-ಸಂಜ್ಞಾ-ತುಗ್ವಿಧಿಷು ಕೃತಿ (8.2.2)**

ವೃತ್ತಿಃ-ಸುಬ್ವಿಧೌ ಸ್ವರವಿಧೌ ಸಂಜ್ಞಾವಿಧೌ ಕೃತಿ ತುಗ್ವಿಧೌ ಚ ನ ಲೋಪಃ ಅಸಿದ್ಧಃ। ನ ಅನ್ಯತ್ರ ರಾಜಾಶ್ವಃ ಇತ್ಯಾದೌ। ಇತಿ ಅಸಿದ್ಧಾತ್ ಆತ್ವಂ, ಏತ್ವಂ, ಐಸ್ತ್ವಂ ಚ ನ। ರಾಜಾಭ್ಯಾಮ್। ರಾಜಭಿಃ। ರಾಜಭ್ಯಃ। ರಾಜಭ್ಯಃ। ರಾಜನಿ, ರಾಜ್ಞಿ ರಾಜಸು। ೦ಯಜ್ವಾ ೦ಯಜ್ವಾನೌ। ೦ಯಜ್ವಾನಃ।

ಪ. ಛೇ. – ನಲೋಪಃ, ಸುಪ್, ಸ್ವರ, ಸಂಜ್ಞಾ, ತುಗ್ವಿಧಿಷು, ಕೃತಿ।

ಅ. ವ್ಯ.-"ಪೂರ್ವತ್ರಾಸಿದ್ಧಮ್" ಎಂಬ ಸೂತ್ರದಿಂದ ಲಿಂಗ ವಿಪರಿಣಾಮ ಮಾಡಿ 'ಅಸಿದ್ಧ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ-ಸುಪ್‌ವಿಧಿ, ಸ್ವರವಿಧಿ, ಸಂಜ್ಞಾವಿಧಿ ಮತ್ತು ಕೃತ್ ಗೆ ಪರದಲ್ಲಿ 'ತುಕ್' ಆಗಮದ ವಿಧಿ ಇರುವಾಗ, 'ನ್' ಕಾರದ ಲೋಪವು ಅಸಿದ್ಧವಾಗುತ್ತದೆ. ಬೇರೆಕಡೆಯಲ್ಲಿ ಅಲ್ಲ.

ಇಲ್ಲಿ 'ಸುಪ್' ಆಶ್ರಯವನ್ನು ಮನ್ನಿಸಿ ಉಂಟಾಗುವ 'ಸುಪ್' ವಿಧಿಯು ಮಾಡಲಾಗುತ್ತದೆ. "ನಲೋಪಃ ಪ್ರಾತಿಪದಿಕಾನ್ತಸ್ಯ" ಎಂಬ ಸೂತ್ರದಿಂದ 'ನ್' ಕಾರದ ಲೋಪವಾದ ಮೇಲೂ ಈ ಸೂತ್ರದಿಂದ 'ನ್' ಕಾರದ ಲೋಪವು ಅಸಿದ್ಧವಾಗಿರುತ್ತದೆ.

ಅಂದರೆ ಲೋಪವಾಗದೇ ಇರುವ ಹಾಗೆ ನಿಯಮವನ್ನು ಮಾಡುತ್ತದೆ. 'ನ್' ಕಾರದ ಲೋಪವು ಅಸಿದ್ಧವಾದಮೇಲೆ, "ಸುಪಿ ಚ" ಎಂಬ ಸೂತ್ರದಿಂದ ಆತ್ವವೂ, "ಬಹುವಚನೇ ಝಲ್ಯೇತ್" ಎಂಬ ಸೂತ್ರದಿಂದ ಏತ್ವವೂ ಮತ್ತು "ಅತೋ ಭಿಸ ಐಸ್" ಎಂಬ ಸೂತ್ರದಿಂದ 'ಐಸ್' ಮೊದಲಾದವು ಆಗುವದಿಲ್ಲ. ಇದನ್ನು ಕೆಳಗಿನ ಉದಾಹರಣೆ ಸ್ಪಷ್ಟಪಡಿಸುವುದು.

ಉದಾ- ರಾಜಾಶ್ವಃ ಎಂಬಲ್ಲಿ 'ಸುಪ್'ನ ವಿಧಿ, 'ಸ್ವರ'ದ ವಿಧಿ, 'ಸಂಜ್ಞೆ'ಯ ವಿಧಿ ಮತ್ತು 'ಕೃತ್' ಪರದಲ್ಲಿದ್ದಾಗ, ಬರುವ ತುಗಾಗಮವಿಧಿಗಳಲ್ಲೂ 'ನ್' ಕಾರದ ಲೋಪವು ಅಸಿದ್ಧವಾಗೋಣದ್ದರಿಂದ 'ರಾಜ್ಞಃ ಅಶ್ವಃ' ಎಂಬುದರ ಸಮಾಸದಲ್ಲಿ ರಾಜನ್+ಅಶ್ವಃ ಎಂದಿರುವಾಗ, 'ನ್' ಕಾರದ ಲೋಪವಾಗಿ, ರಾಜ+ಅಶ್ವಃ ಎಂದಾಗುತ್ತದೆ. ಈಗ ದೀರ್ಘ ಮಾತ್ರ ಮಾಡಲಾಗುತ್ತದೆ. ಆದರೆ ಮೇಲೆ ಹೇಳಿದ ವಿಧಿಗಳಲ್ಲ. ಆದುದರಿಂದ 'ನ್' ಕಾರದ ಲೋಪವು ಅಸಿದ್ಧವಾಗಲಿಲ್ಲ. ಆದುದರಿಂದ ಸವರ್ಣದೀರ್ಘವು ಬಂದು ರಾಜಾಶ್ವಃ ಎಂದಾಗಿದೆ. 'ನ್' ಕಾರದ ಲೋಪವು ಅಸಿದ್ಧವಾಗಿದ್ದರೆ, ದೀರ್ಘವು ಬರುತ್ತಿರಲಿಲ್ಲ.

ಉದಾ- 1. ರಾಜಭ್ಯಾಮ್- ರಾಜನ್ ಶಬ್ದದ ಮೇಲೆ ತೃತೀಯಾ ದ್ವಿವಚನದ ಪ್ರತ್ಯಯವಾದ 'ಭ್ಯಾಮ್' ಬಂದು, ರಾಜನ್+ಭ್ಯಾಮ್ ಎಂದಿದ್ದಾಗ, "ಸ್ವಾದಿಷ್ವ ಸರ್ವನಾಮಸ್ಥಾನೇ" ಎಂಬ ಸೂತ್ರದಿಂದ ರಾಜನ್ ಶಬ್ದಕ್ಕೆ 'ಪದಸಂಜ್ಞೆ' ಬಂದು, ಮತ್ತು ಪದಾನ್ತ 'ನ್' ಕಾರಕ್ಕೆ "ನಲೋಪಃ ಪ್ರಾತಿಪದಿಕಾನ್ತಸ್ಯ" ಎಂಬ ಸೂತ್ರದಿಂದ

ಲೋಪ ಬಂದು, ರಾಜ+ಭ್ಯಾಮ್ ಎಂದಾಗಿದೆ. ಈಗ "ಸುಪಿ ಚ" ಎಂಬ ಸೂತ್ರದಿಂದ 'ರಾಜ' ಎಂಬಲ್ಲಿರುವ 'ಅ' ಕಾರಕ್ಕೆ ದೀರ್ಘವು ಬರಬೇಕಾಗಿತ್ತು. ಯಾಕೆಂದರೆ ಆ ಸೂತ್ರದಲ್ಲಿ ಹ್ರಸ್ವ 'ಅ' ಕಾರಕ್ಕೆ ದೀರ್ಘ ಹೇಳಲಾಗಿದೆ. 'ನ್' ಕಾರ ಲೋಪವಾದಮೇಲೆ ರಾಜ ಎಂಬ ಹ್ರಸ್ವ 'ಅ' ಕಾರಾಂತ ಶಬ್ದವಾಗಿತ್ತು. ಅದನ್ನು ದೀರ್ಘ ಮಾಡುವದಕ್ಕಾಗಿ, ಪ್ರಕೃತ ಸೂತ್ರವು ಪ್ರವೃತ್ತವಾಗಿದೆ. ನಮಗೆ ಮೊದಲು "ಸುಪಿ ಚ" ಎಂಬ ಸೂತ್ರದಿಂದ 'ಸುಪ್' ವಿಧಿಯಾದ ದೀರ್ಘವನ್ನು ಮಾಡಬೇಕಾಗಿದೆ. ಆದ್ದರಿಂದ ಈ ಸೂತ್ರದಿಂದ 'ನ್' ಕಾರದ ಲೋಪವನ್ನು ಅಸಿದ್ಧಗೊಳಿಸಲಾಗಿದೆ. ಯಾವಾಗ 'ನ್' ಕಾರ ಲೋಪವು ಅಸಿದ್ಧವಾಯಿತೋ ಆಗ, "ಸುಪಿ ಚ" ಎಂಬ ಸೂತ್ರದಿಂದ 'ಹ್ರಸ್ವ' ಅ–ಕಾರಾಂತ ಶಬ್ದವು ಕಾಣಿಸುವದಿಲ್ಲ. ಅದುದರಿಂದ ದೀರ್ಘವು ಮಾಡಲ್ಪಡಲಿಲ್ಲ. ಈ ಸೂತ್ರವು ಇರದಿದ್ದರೆ, "ಸುಪಿ ಚ" ಎಂಬ ಸೂತ್ರದಿಂದ, ದೀರ್ಘವಾಗಿ ರಾಜಾಭ್ಯಾಮ್ ಎಂಬ ಅನಿಷ್ಟ ರೂಪವು ಬರುತ್ತಿತ್ತು. "ನಲೋಪಃ ಪ್ರಾತಿಪದಿಕಾನ್ತಸ್ಯ" ಎಂಬ ಸೂತ್ರವು ತ್ರಿಪಾದಿಯಲ್ಲಿ ಇರೋಣದ್ದರಿಂದ "ಪೂರ್ವತ್ರಾಸಿದ್ಧಮ್" ಎಂಬ ಸೂತ್ರದಿಂದಲೇ ಅಸಿದ್ಧವಾಗುತ್ತಿತ್ತು. ಹಾಗಿದ್ದಾಗ, ಮತ್ತೆ ಈ ಸೂತ್ರವು ಯಾಕೆ ಪ್ರವೃತ್ತವಾಯಿತು? ಎಂದರೆ – 'ನ್' ಲೋಪ ಅಸಿದ್ಧವಾಗುವದಾದರೆ, 'ಈ ಎಲ್ಲ ವಿಧಿಗಳಲ್ಲಿಯೂ ಆಗಲಿ. ಬೇರೆಕಡೆಗೆ ಆಗುವದು ಬೇಡ ಎಂದು ನಿಯಮವನ್ನು ಮಾಡುವದಕ್ಕಾಗಿ. ಆದುದರಿಂದ, ರಾಜ+ಅಶ್ವಃ ಎಂಬಲ್ಲಿ, ಮೇಲೆ ಹೇಳಿದ ವಿಧಿಗಳು ಇರುವದಿಲ್ಲ. ಆದುದರಿಂದ, 'ನ್' ಲೋಪವು ಅಸಿದ್ಧವಾಗಿಲ್ಲ. ಆದುದರಿಂದ ದೀರ್ಘ ಬಂದು ರಾಜಾಶ್ವಃ ಎಂದು ರೂಪವು ಸಿದ್ಧವಾಗಿದೆ.

ಉದಾ– ರಾಜಭಿಃ – ತೃತೀಯಾ ವಿಭಕ್ತಿ ಬಹುವಚನದಲ್ಲಿ ರಾಜನ್+ಭಿಸ್ ಎಂದಿದ್ದಾಗ, ಪದಸಂಜ್ಞೆ, 'ನ್' ಕಾರ ಲೋಪ, 'ಭಿಸ್' ಗೆ 'ಐಸ್' ಆದೇಶ, ಮತ್ತು 'ನ್' ಕಾರದ ಲೋಪಕ್ಕೆ ಅಸಿದ್ಧತ್ವ ಬರೋಣದ್ದರಿಂದ, 'ಐಸ್' ಆದೇಶ ಬಾರದಿರೋಣ, ಮೊದಲಾದ ಪ್ರಕ್ರಿಯೆ ಆದಮೇಲೆ, 'ಸ್' ಕಾರಕ್ಕೆ ರುತ್ವ–ವಿಸರ್ಗಗಳು ಬಂದು ರಾಜಭಿಃ ಎಂದು ರೂಪವಾಗುತ್ತದೆ.

ಉದಾ– ರಾಜಭ್ಯಃ(2)–ಚತುರ್ಥೀ ಮತ್ತು ಪಞ್ಚಮೀ ಬಹುವಚನಗಳಲ್ಲಿ ರಾಜನ್+ಭ್ಯಸ್ ಎಂದಿದ್ದಾಗ, 'ಪದಸಂಜ್ಞೆ', 'ನ್' ಕಾರದ ಲೋಪ, "ಬಹುವಚನೇ ಝಲ್ಯೇತ್" ಎಂಬ ಸೂತ್ರದಿಂದ 'ಏತ್ವ'ದ ಪ್ರಾಪ್ತಿ ಮತ್ತು 'ನ್' ಕಾರಲೋಪಕ್ಕೆ ಅಸಿದ್ಧತ್ವವು ಬಂದು, 'ಏತ್ವ' ಬಾರದೇ ಇರುವ ಪ್ರಕ್ರಿಯೆಗಳಾದಮೇಲೆ, 'ಸ್' ಕಾರಕ್ಕೆ ರುತ್ವ–ವಿಸರ್ಗಗಳು ಬಂದು ರಾಜಭ್ಯಃ(2) ಎಂದು ರೂಪಗಳಾಗುತ್ತವೆ.

ಉದಾ– ರಾಜ್ಞಿ ರಾಜನಿ–ಸಪ್ತಮೀ ಏಕವಚನದಲ್ಲಿ ರಾಜನ್+ಙಿ(ಇ) ಎಂದಿದ್ದಾಗ, 'ಭ'ಸಂಜ್ಞೆ ಬಂದು, "ಅಲ್ಲೋಪೋಽನಃ" ಎಂಬ ಸೂತ್ರದಿಂದ 'ಅನ್' ಶಬ್ದದ 'ಅ' ಕಾರಕ್ಕೆ ನಿತ್ಯವಾಗಿ ಲೋಪವು ಪ್ರಾಪ್ತವಾಗಿತ್ತು. ಅದನ್ನು ಬಾಧಿಸಿ, "ವಿಭಾಷಾ ಙಿ ಶ್ಯೋಃ" ಎಂಬ ಸೂತ್ರದಿಂದ ವಿಕಲ್ಪದಿಂದ 'ಅ' ಕಾರದ ಲೋಪವು ಮಾಡಲಾಗಿದೆ.

ತದನಂತರ ರಾಜ್+ನ್+ಇ ಎಂದಿದ್ದಾಗ, ಶ್ಚುತ್ವ ಬಂದು, ನಂತರ 'ಞ್' ಕಾರ

ಬಂದು, ಹಾಗೆಯೇ 'ಜ್' ಕಾರದ ಜೊತೆಗೆ ಕೂಡಿಕೊಂಡು, 'ಜ್ಞ್' ಆಗುತ್ತದೆ. ಅನಂತರ, ರಾಜ್ಞ್+ಇ=ರಾಜ್ಞಿ ಎಂದಾಗುತ್ತದೆ. 'ಅ' ಕಾರ ಲೋಪವಾಗದೇ ಇರುವ ಪಕ್ಷದಲ್ಲಿ ಕೇವಲ ವರ್ಣಸಂಯೋಗದಿಂದ ರಾಜನಿ ಎಂದು ರೂಪವಾಗುತ್ತದೆ.

ಉದಾ– ರಾಜಸು–ಸಪ್ತಮೀ ಬಹುವಚನದಲ್ಲಿ ರಾಜನ್+ಸು (ಸುಪ್) ಎಂದಿದ್ದಾಗಲೂ, 'ಏತ್ವ'ದ ಅಭಾವ ಬರೋಣದ್ದರಿಂದ, 'ಷತ್ವ'ವೂ ಬಾರದೇ ರಾಜಸು ಎಂದೇ ಉಳಿಯುತ್ತದೆ.

**'ನ್' ಕಾರಾಂತ ರಾಜನ್ ಶಬ್ದದ ರೂಪಗಳು**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ರಾಜಾ | ರಾಜಾನೌ | ರಾಜಾನಃ |
| ದ್ವಿತೀಯಾ | ರಾಜಾನಮ್ | ರಾಜಾನೌ | ರಾಜ್ಞಃ |
| ತೃತೀಯಾ | ರಾಜ್ಞಾ | ರಾಜಭ್ಯಾಮ್ | ರಾಜಭಿಃ |
| ಚತುರ್ಥೀ | ರಾಜ್ಞೇ | ರಾಜಭ್ಯಾಮ್ | ರಾಜಭ್ಯಃ |
| ಪಞ್ಚಮೀ | ರಾಜ್ಞಃ | ರಾಜಭ್ಯಾಮ್ | ರಾಜಭ್ಯಃ |
| ಷಷ್ಠೀ | ರಾಜ್ಞಃ | ರಾಜ್ಞೋಃ | ರಾಜ್ಞಾಮ್ |
| ಸಪ್ತಮೀ | ರಾಜ್ಞಿ, ರಾಜನಿ | ರಾಜ್ಞೋಃ | ರಾಜಸು |
| ಸಂಬೋಧನ | ಹೇ ರಾಜನ್! | ಹೇ ರಾಜಾನೌ! | ಹೇ ರಾಜಾನಃ! |

ಉದಾ– ಯ ಜ್ವಾ ಯಜ್ವಾನೌ। ಯಜ್ವಾನಃ।ಯಜ್ವಾನಮ್। ಯಜ್ವಾನೌ – ಯಜ್ವನ್ ಶಬ್ದದಮೇಲೆ ಪ್ರಥಮಾ ವಿಭಕ್ತಿಯ 3 ವಚನಗಳು ಮತ್ತು ದ್ವಿತೀಯಾ ವಿಭಕ್ತಿಯ ಏಕವಚನ ಮತ್ತು ದ್ವಿವಚನ ವಿಭಕ್ತಿಗಳು ಸೇರಿದಾಗ (ಸು, ಔ, ಜಸ್, ಅಮ್, ಔಟ್) ಉಪಧಾ ದೀರ್ಘ, ಮತ್ತು 'ಸು' ದಲ್ಲಿರುವ 'ಸ್' ಕಾರದ ಲೋಪ ಹಾಗೂ 'ನ್' ಕಾರದ ಲೋಪವಾದಮೇಲೆ ಯಜ್ವಾ ಯಜ್ವಾನೌ। ಯಜ್ವಾನಃ।ಯಜ್ವಾನಮ್। ಯಜ್ವಾನೌ ಎಂಬ ರೂಪಗಳು ಸಿದ್ಧವಾಗುತ್ತವೆ.

**(ಅ–ಕಾರ ಲೋಪವನ್ನು ನಿಷೇಧಿಸುವ ಸೂತ್ರ)**

**ಸೂತ್ರ – 284. ನ ಸಂಯೋಗಾದ್ ವಮಂತಾತ್ (6.4.137)**

ವೃತ್ತಿಃ–ವಮಂತಸಂಯೋಗಾತ್ ಅನಃ 'ಅ'ಕಾರಸ್ಯ ಲೋಪಃ ನ। ಯಜ್ವನಃ। ಯಜ್ವನಾ। ಯಜ್ವಭ್ಯಾಮ್। ಬ್ರಹ್ಮಣಃ। ಬ್ರಹ್ಮಣಾ।

ಅ. ವೃ. – "ಅಲ್ಲೋಪೋಽನಃ" ಎಂಬ ಸೂತ್ರದಿಂದ 'ಅನಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– 'ವ್' ಕಾರಾಂತ ಸಂಯೋಗ ಮತ್ತು 'ಮ್' ಕಾರಾಂತ ಸಂಯೋಗ, ಇವುಗಳಿಗಿಂತ ಪರದಲ್ಲಿರುವ 'ಅನ್' ಶಬ್ದದ 'ಅ' ಕಾರಕ್ಕೆ ಲೋಪ ಬರುವದಿಲ್ಲ.

ಯಜ್+ವ್+ಅನ್ ಎಂಬಲ್ಲಿ 'ಜ್' ಮತ್ತು 'ವ್' ಕಾರಗಳು ಸಂಯುಕ್ತವಾಗಿವೆ. ಸಂಯುಕ್ತಾಕ್ಷರದಲ್ಲಿ 'ವ್' ಕಾರವು ಕೊನೆಯಲ್ಲಿದೆ. ಆದುದರಿಂದ – "ಅಲ್ಲೋಪೋಽನಃ" ಎಂಬ ಸೂತ್ರದಿಂದ ಪ್ರಾಪ್ತವಾದ 'ಅ' ಕಾರದ ಲೋಪಕ್ಕೆ ನಿಷೇಧವು ಬರುತ್ತದೆ.

ಉದಾ– ಯಜ್ವನಃ – ದ್ವಿತೀಯಾವಿಭಕ್ತಿ ಬಹುವಚನದಲ್ಲಿ ಯಜ್ವನ್+ಶಸ್(ಅಸ್) ಎಂದಿದ್ದಾಗ, "ಅಲ್ಲೋಪೋಽನಃ" ಎಂಬ ಸೂತ್ರದಿಂದ, 'ಅ' ಕಾರದ ಲೋಪವು ಪ್ರಾಪ್ತವಾಯಿತು. ಮತ್ತು ಪ್ರಕೃತಸೂತ್ರದಿಂದ ಲೋಪದ ನಿಷೇಧವೂ ಆಗಿದೆ. ಆದ್ದರಿಂದ ಯಜ್ವನ್+ಅಸ್=ಯಜ್ವನಸ್ ಎಂದಿದ್ದಾಗ, 'ಸ್' ಕಾರಕ್ಕೆ ರುತ್ವ–ವಿಸರ್ಗಗಳು ಬಂದು ಯಜ್ವನಃ ಎಂದು ರೂಪವಾಗುತ್ತದೆ.

ಇದೇ ರೀತಿಯಲ್ಲಿ ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಇದೇ ಪ್ರಕ್ರಿಯೆಯಿಂದ ಆಯಾ ರೂಪಗಳು ಸಿದ್ಧವಾಗುತ್ತವೆ.

ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, 'ಪದಸಂಜ್ಞೆ' ಬಂದು, 'ನ್' ಕಾರಕ್ಕೆ ಲೋಪವಾಗಬೇಕಾಗಿದ್ದಾಗ, ಅದರ ಲೋಪವು ಅಸಿದ್ಧವಾಗೋಣದ್ದರಿಂದ "ಸುಪಿಚ" ಎಂಬ ಸೂತ್ರದಿಂದ ದೀರ್ಘ ಬಂದು, "ಅತೋ ಭಿಸ ಐಸ್" ಎಂಬ ಸೂತ್ರದಿಂದ 'ಐಸ್' ಆದೇಶ ಬಂದು, ಅನಂತರ "ಬಹುವಚನೇ ಝಲ್ಯೇತ್" ಎಂಬ ಸೂತ್ರದಿಂದ ಏತ್ವ ಬಾರದೇ, 'ಸ್' ಕಾರಕ್ಕೆ ರುತ್ವ–ವಿಸರ್ಗಗಳು ಬಂದು, ಆಯಾ ರೂಪಗಳು ಸಿದ್ಧವಾಗುತ್ತವೆ.

**'ವ್' ಕಾರಾಂತ ಸಂಯೋಗವುಳ್ಳ 'ನ್' ಕಾರಾಂತ ಯಜ್ವನ್ ಶಬ್ದದ ರೂಪಗಳು**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಯಜ್ವಾ | ಯಜ್ವಾನೌ | ಯಜ್ವಾನಃ |
| ದ್ವಿತೀಯಾ | ಯಜ್ವಾನಮ್ | ಯಜ್ವಾನೌ | ಯಜ್ವನಃ |
| ತೃತೀಯಾ | ಯಜ್ವನಾ | ಯಜ್ವಭ್ಯಾಮ್ | ಯಜ್ವಭಿಃ |
| ಚತುರ್ಥೀ | ಯಜ್ವನೇ | ಯಜ್ವಭ್ಯಾಮ್ | ಯಜ್ವಭ್ಯಃ |
| ಪಞ್ಚಮೀ | ಯಜ್ವನಃ | ಯಜ್ವಭ್ಯಾಮ್ | ಯಜ್ವಭ್ಯಃ |
| ಷಷ್ಠೀ | ಯಜ್ವನಃ | ಯಜ್ವನೋಃ | ಯಜ್ವನಾಮ್ |
| ಸಪ್ತಮೀ | ಯಜ್ವನಿ | ಯಜ್ವನೋಃ | ಯಜ್ವಸು |
| ಸಂಬೋಧನ | ಹೇ ಯಜ್ವನ್! | ಹೇ ಯಜ್ವಾನೌ! | ಹೇ ಯಜ್ವಾನಃ! |

**'ಮ್' ಕಾರಾಂತ ಸಂಯೋಗವುಳ್ಳ 'ನ್' ಕಾರಾಂತ 'ಬ್ರಹ್ಮನ್' ಶಬ್ದದ ರೂಪಗಳು**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಬ್ರಹ್ಮಾ | ಬ್ರಹ್ಮಾಣೌ | ಬ್ರಹ್ಮಾಣಃ |
| ದ್ವಿತೀಯಾ | ಬ್ರಹ್ಮಾಣಮ್ | ಬ್ರಹ್ಮಾಣೌ | ಬ್ರಹ್ಮಣಃ |

| | | | |
|---|---|---|---|
| ತೃತೀಯಾ | ಬ್ರಹ್ಮಣಾ | ಬ್ರಹ್ಮಭ್ಯಾಮ್ | ಬ್ರಹ್ಮಭಿಃ |
| ಚತುರ್ಥೀ | ಬ್ರಹ್ಮಣೇ | ಬ್ರಹ್ಮಭ್ಯಾಮ್ | ಬ್ರಹ್ಮಭ್ಯಃ |
| ಪಞ್ಚಮೀ | ಬ್ರಹ್ಮಣಃ | ಬ್ರಹ್ಮಭ್ಯಾಮ್ | ಬ್ರಹ್ಮಭ್ಯಃ |
| ಷಷ್ಠೀ | ಬ್ರಹ್ಮಣಃ | ಬ್ರಹ್ಮಣೋಃ | ಬ್ರಹ್ಮಣಾಮ್ |
| ಸಪ್ತಮೀ | ಬ್ರಹ್ಮಣಿ | ಬ್ರಹ್ಮಣೋಃ | ಬ್ರಹ್ಮಸು |
| ಸಂಬೋಧನ | ಹೇ ಬ್ರಹ್ಮನ್! | ಹೇ ಬ್ರಹ್ಮಾಣೌ! | ಹೇ ಬ್ರಹ್ಮಾಣಃ! |

**(ನಿಯಮಸೂತ್ರ)**

**ಸೂತ್ರ – 285. ಇನ್-ಹನ್-ಪೂಷಾರ್ಯಮ್ಣಾಂ ಶೌ ( 6.4.12)**

ವೃತ್ತಿಃ–ಏಷಾಂ ಶೌ ಏವ ಉಪಧಾಯಾಃ ದೀರ್ಘಃ ನ ಅನ್ಯತ್ರ ಇತಿ ನಿಷೇಧೇ ಪ್ರಾಪ್ತೇ–

ಅ. ವ್ಯ.–"ನೋಪಧಾಯಾಃ" ಎಂಬ ಸೂತ್ರದಿಂದ 'ಉಪಧಾಯಾಃ' ಎಂಬ ಪದವೂ, ಮತ್ತು "ಢ್ರಲೋಪೇ ಪೂರ್ವಸ್ಯ ದೀರ್ಘೋಽಣಃ" ಎಂಬ ಸೂತ್ರದಿಂದ 'ದೀರ್ಘಃ' ಎಂಬ ಪದವು ಅನುವೃತ್ತವಾಗುತ್ತದೆ. "ಅಙ್ಗಸ್ಯ" ಎಂಬುದು ಅಧಿಕಾರಸೂತ್ರ

ಅರ್ಥ–'ಇನ್' ಎಂಬುದನ್ನು ಅಂತ್ಯದಲ್ಲಿ ಉಳ್ಳ ಶಬ್ದ, 'ಹನ್' ಎಂಬುದನ್ನು ಅಂತದಲ್ಲಿಯುಳ್ಳ ಶಬ್ದ ಹಾಗೆಯೇ 'ಪೂಷನ್' ಮತ್ತು 'ಅರ್ಯಮನ್' ಶಬ್ದಗಳ ಉಪಧೆಗೆ 'ಶಿ' ಪರದಲ್ಲಿದ್ದಾಗ ಮಾತ್ರವೇ ದೀರ್ಘ ಬರುತ್ತದೆ. ಬೇರೆಕಡೆಗೆ ಬರುವದಿಲ್ಲ. ಯಾವಾಗ ನಪುಂಸಕಲಿಂಗದಲ್ಲಿ, ಪ್ರಾತಿಪದಿಕದ ಪರದಲ್ಲಿ, 'ಜಸ್' ಮತ್ತು 'ಶಸ್' ಪ್ರತ್ಯಯಗಳು ಬರುತ್ತವೆಯೋ ಆಗ, ಅವುಗಳಿಗೆ 'ಶಿ' ಆದೇಶ ಬರುತ್ತದೆ. ಈ ಸಂದರ್ಭದಲ್ಲಿಯೇ ಉಪಧೆಗೆ ದೀರ್ಘವನ್ನು ವಿಧಿಸಲಾಗಿದೆ.

'ಶಿ' ಎಂಬುದು ಸರ್ವನಾಮಸ್ಥಾನವಾಗಿರೋಣದ್ದರಿಂದ, "ಸರ್ವನಾಮಸ್ಥಾನೇ ಚಾಽಸಂಬುದ್ಧೌ" ಎಂಬ ಸೂತ್ರದಿಂದಲೇ ಅಲ್ಲಿ ದೀರ್ಘವಾಗುವ ಅವಕಾಶವಿದೆ. ಹಾಗಾದರೆ ಮತ್ತೆ ದೀರ್ಘವನ್ನು ವಿಧಿಸಲಿಕ್ಕಾಗಿ ಈ ಸೂತ್ರವು ಪ್ರವೃತ್ತಿಸಲಿಕ್ಕೆ ಕಾರಣವೇನೆಂದರೆ, ನಿಯಮ ಮಾಡುವದಕ್ಕಾಗಿ. ಅದು ಯಾಕೆಂದರೆ, 'ಇನ್', 'ಹನ್', 'ಪೂಷನ್' ಮತ್ತು 'ಅರ್ಯಮನ್' ಈ ಶಬ್ದಗಳಲ್ಲಿ 'ದೀರ್ಘ' ವಾಗಬೇಕಾದರೆ 'ಶಿ' ಪರದಲ್ಲಿದ್ದಾಗ ಮಾತ್ರ ಆಗುತ್ತದೆ. ಬೇರೆಕಡೆಯಲ್ಲಿ ಆಗುವದಿಲ್ಲ ಎಂದು ಅರ್ಥ. 'ಸಿದ್ಧೇ ಸತಿ ಆರಭ್ಯಮಾಣೋ ವಿಧಿಃ ನಿಯಮಾಯ ಭವತಿ' ಎಂಬುದು ನ್ಯಾಯ.

**(ಸಂಬುದ್ಧಿ ಭಿನ್ನ 'ಸು' ಪರದಲ್ಲಿದ್ದಾಗ ಉಪಧೆಗೆ ದೀರ್ಘವನ್ನು ವಿಧಿಸುವ ಸೂತ್ರ)**

**ಸೂತ್ರ – 286. ಸೌ ಚ (6.4.13)**

ವೃತ್ತಿಃ–ಇನ್ನಾದೀನಾಂ ಉಪಧಾಯಾಃ ದೀರ್ಘಃ ಅಸಂಬುದ್ಧೌ ಸೌ। ವೃತ್ರಹಾ। ಹೇ ವೃತ್ರಹನ್!।

ಅ.ವ್ಯ. –ಇನ್-ಹನ್-ಪೂಷಾರ್ಯಮ್ಣಾಂ ಶೌ (6.4.12)" ಎಂಬ ಸೂತ್ರದಿಂದ

'ಇನ್-ಹನ್-ಪೂಷಾರ್ಯಮ್ಣಾಂ' ಎಂಬ ಪದವೂ, "ನೋಪಧಾಯಾಃ" ಎಂಬ ಸೂತ್ರದಿಂದ 'ಉಪಧಾಯಾಃ' ಎಂಬ ಪದವೂ, "ಢ್ರಲೋಪೇ ಪೂರ್ವಸ್ಯ ದೀರ್ಘೋಽಣಃ" ಎಂಬ ಸೂತ್ರದಿಂದ 'ದೀರ್ಘಃ' ಎಂಬ ಪದವೂ, "ಸರ್ವನಾಮಸ್ಥಾನೇ ಚಾಽಸಂಬುದ್ಧೌ" ಎಂಬ ಸೂತ್ರದಿಂದ 'ಅಸಂಬುದ್ಧೌ' ಎಂಬ ಪದವೂ, ಅನುವೃತ್ತವಾಗುತ್ತದೆ. "ಅಙ್ಗಸ್ಯ" ಎಂಬುದು ಅಧಿಕಾರಸೂತ್ರ.

ಅರ್ಥ- 'ಇನ್' ಎಂಬುದನ್ನು ಅಂತವಾಗಿಯುಳ್ಳ ಮತ್ತು 'ಹನ್' ಎಂಬುದನ್ನು ಅಂತವಾಗಿಯುಳ್ಳ ಹಾಗೂ 'ಪೂಷನ್' ಮತ್ತು 'ಅರ್ಯಮನ್' ಶಬ್ದಗಳ ಅಂಗಗಳ ಉಪಧೆಗೆ ಸಂಬುದ್ಧಿಭಿನ್ನವಾದ 'ಸು' ಪರದಲ್ಲಿದ್ದಾಗ, ಮಾತ್ರವೇ ದೀರ್ಘ ಬರುತ್ತದೆ. ಬೇರೆ ವಿಭಕ್ತಿಗಳು ಪರದಲ್ಲಿದ್ದಾಗ ಬರುವದಿಲ್ಲ.

ಇದಕ್ಕಿಂತ ಮೊದಲು ಪ್ರಕ್ರಿಯೆಯು ಹೀಗಿತ್ತು-"ಸರ್ವನಾಮಸ್ಥಾನೇ ಚಾಽಸಂಬುದ್ಧೌ" ಎಂಬ ಸೂತ್ರದಿಂದ, ಸರ್ವನಾಮಸ್ಥಾನ ಅಥವಾ ಸು,ಔ,ಜಸ್, ಅಮ್, ಔಟ್ ಈ ಪ್ರತ್ಯಯಗಳು ಪರದಲ್ಲಿದ್ದಾಗ, ಉಪಧೆಗೆ ದೀರ್ಘವು ಪ್ರಾಪ್ತವಾಗಿತ್ತು. ಅದನ್ನು ನಿಷೇಧಿಸುವದಕ್ಕಾಗಿಯೇ ಸೂತ್ರಕಾರರು "ಇನ್-ಹನ್-ಪೂಷಾರ್ಯಮ್ಣಾಂ ಶೌ (6.4.12)" ಎಂಬ ಸೂತ್ರವನ್ನು ಮಾಡಿದ್ದಾರೆ. ಮೇಲೆ ಹೇಳಿದ ನಾಲ್ಕು ಶಬ್ದಗಳಿಗೆ 'ಶಿ' ಪರದಲ್ಲಿದ್ದಾಗ ಮಾತ್ರ ದೀರ್ಘವು ಬರುತ್ತದೆ. ಇನ್ನಂತವಾದ ಶಬ್ದಗಳ ವಿಷಯದಲ್ಲಿ 'ಸು' ಮೊದಲಾದ ಪ್ರತ್ಯಯಗಳು ಪರದಲ್ಲಿದ್ದಾಗ, ದೀರ್ಘ ಬರುವದು ತಪ್ಪಿದಂತಾಗುತ್ತದೆ. ಹೀಗಾದಾಗ, ಔ,ಜಸ್, ಅಮ್, ಔಟ್ ಈ ಪ್ರತ್ಯಯಗಳು ಪರದಲ್ಲಿದ್ದಾಗ, ದೀರ್ಘ ನಿಷೇಧವಾಗುವದು ಪಾಣಿನೀಯವರ ಅಭಿಮತವಾಗಿತ್ತು. ಆದರೆ 'ಸು' ಪರದಲ್ಲಿದ್ದಾಗ, ದೀರ್ಘ ನಿಷೇಧವು ಅವರಿಗೆ ಅಭಿಮತವಾಗಿಲ್ಲ. ಅದುದರಿಂದ 'ಸು' ಪರದಲ್ಲಿದ್ದಾಗ, ದೀರ್ಘ ಬರುವದಕ್ಕಾಗಿ ಅವರು ಈ ಸೂತ್ರವನ್ನು ರಚಿಸಿರುವರು. ಇದರಿಂದ ತಿಳಿಯುವದೇನೆಂದರೆ, 'ಇನ್' ಶಬ್ದದ ವಿಷಯದಲ್ಲಿ ಉಪಧೆಗೆ ದೀರ್ಘ ನಿಷೇಧವಿದೆ. ಆದರೂ 'ಸು' ಪರದಲ್ಲಿದ್ದಾಗ, ದೀರ್ಘವು ಬಂದೇ ಬರುತ್ತದೆ.

ಉದಾ- ವೃತ್ರಹಾ- ವೃತ್ರಂ ಹತವಾನ್ ಇತಿ ವೃತ್ರಹಾ(ಇಂದ್ರನು) - ಪ್ರಥಮಾ ವಿಭಕ್ತಿ ಏಕವಚನದಲ್ಲಿ ವೃತ್ರಹನ್+ಸು(ಸ್) ಎಂದಿದ್ದಾಗ, 'ಉಪಧಾಸಂಜ್ಞೆ' ಬಂದು,

'ನ್' ಕಾರಾಂತ ವೃತ್ರಹನ್ ಶಬ್ದದ ಉಪಧೆಗೆ ದೀರ್ಘ ಪ್ರಾಪ್ತವಾಗಿತ್ತು, ಆದರೆ "ಇನ್-ಹನ್-ಪೂಷಾರ್ಯಮ್ಣಾಂ ಶೌ (6.4.12)" ಎಂಬ ಸೂತ್ರದ ನಿಯಮದಿಂದ ದೀರ್ಘಕ್ಕೆ ನಿಷೇಧ ಪ್ರಾಪ್ತವಾಯಿತು. ಇದನ್ನೂ ಬಾಧಿಸಿ "ಸೌ ಚ (6.4.13)" ಎಂಬ ಸೂತ್ರದಿಂದ ದೀರ್ಘವು ಬಂದು ವೃತ್ರಹಾನ್+ಸ್ ಎಂದಾಗುತ್ತದೆ. ಈಗ 'ಸ್' ನ ಲೋಪವು "ಹಲ್ಙ್ಯಾಬ್ಭ್ಯೋ ದೀರ್ಘಾತ್ ಸುತಿಸ್ಯಪೃಕ್ತಂ ಹಲ್" ಎಂಬ ಸೂತ್ರದಿಂದ ಆಗುತ್ತದೆ. 'ನ್' ಕಾರದ ಲೋಪವು "ನಲೋಪಃ ಪ್ರಾತಿಪದಿಕಾಂತಸ್ಯ" ಎಂಬ ಸೂತ್ರದಿಂದ ಆಗುತ್ತದೆ. ಆಗ ವೃತ್ರಹಾ ಎಂಬ ರೂಪವು ಸಿದ್ಧಿಸುತ್ತದೆ.

ಉದಾ- ಹೇ ವೃತ್ರಹನ್! - ಈ ರೂಪವು ಹೇ ರಾಜನ್ ಎಂಬಂತೆ ಸಿದ್ಧವಾಗುತ್ತದೆ.

### (ಣತ್ವವನ್ನು ವಿಧಿಸುವ ಸೂತ್ರ)

**ಸೂತ್ರ – 287. ಏಕಾಜುತ್ತರಪದೇ ಣಃ ( 8.4.12)**

ವೃತ್ತಿಃ–ಏಕಾಚ್ ಉತ್ತರಪದಂ ಯಸ್ಯ ತಸ್ಮಿನ್ ಸಮಾಸೇ ಪೂರ್ವಪದಸ್ಥ ನಿಮಿತ್ತಾತ್ ಪರಸ್ಯ ಪ್ರಾತಿಪದಿಕಾಂತ–ನುಮ್ ವಿಭಕ್ತಿಸ್ಥಸ್ಯ ನಸ್ಯ ಣಃ। ವೃತ್ರಹಣೌ।

ಅ.ವೃ.–"ಪೂರ್ವಪದಾತ್ ಸಂಜ್ಞಾಯಾಮಗಃ" ಎಂಬ ಸೂತ್ರದಲ್ಲಿ 'ಪೂರ್ವಪದಾತ್' ಎಂಬುದರ ವಿಭಕ್ತಿ ವಿಪರಿಣಾಮ ಮಾಡಿ ಪೂರ್ವಪದಾಭ್ಯಾಮ್ ಎಂಬ ಪದವನ್ನು ಹಾಗೂ "ರಷಾಭ್ಯಾಂ ನೋ ಣಃ ಸಮಾನಪದೇ" ಮತ್ತು ಪ್ರಾತಿಪದಿಕಾಂತ "ನುಮ್ ವಿಭಕ್ತಿಷುಚ" ಎಂಬ ಸೂತ್ರಗಳು ಅನುವೃತ್ತವಾಗುತ್ತವೆ.

ಅರ್ಥ– ಯಾವದಕ್ಕೆ ಒಂದೇ ಅಚ್ ಉಳ್ಳ ಉತ್ತರಪದ ಇದೆಯೋ ಅಂಥ ಸಮಾಸದಲ್ಲಿ ಪೂರ್ವಪದದಲ್ಲಿರುವ ನಿಮಿತ್ತವಾದ 'ಋ' ಕಾರ, ರೇಫ ಮತ್ತು 'ಷ್' ಕಾರಗಳ ಪರದಲ್ಲಿ ಪ್ರಾತಿಪದಿಕಾಂತ, ನುಮ್(ನ್) ಹಾಗೂ ವಿಭಕ್ತಿಯಲ್ಲಿರುವ 'ನ್' ಕಾರಕ್ಕೆ 'ಣ್' ಕಾರವು ಬರುತ್ತದೆ.

ಗಮನಿಸಬೇಕಾದ ಅಂಶ – 'ನ್' ಕ್ಕೆ 'ಣತ್ವ' ಬರಬೇಕಾದರೆ ಪೂರ್ವದಲ್ಲಿ 'ಋ' ಕಾರ, ರೇಫ, ಮತ್ತು 'ಷ್' ಕಾರಗಳು ಇದ್ದೇ ಇರುತ್ತವೆ. ಅವುಗಳ ಪರದಲ್ಲಿ 'ನ್' ಕಾರಕ್ಕೆ ಣತ್ವವು ಬರುತ್ತದೆ. ಆದರೆ ಆ 'ನ್' ಕಾರವು ಪ್ರಾತಿಪದಿಕಾಂತವಾಗಿಯೂ ಇರಬಹುದು, ಅಥವಾ 'ನುಮ್' ಗೆ ಸಂಬಂಧಿಸಿದ್ದಾಗಿಯೂ ಇರಬಹುದು, ಅಥವಾ ವಿಭಕ್ತಿಗೆ ಸಂಬಂಧಿಸಿದ್ದಾಗಿಯೂ ಇರಬಹುದು. ಇನ್ನೊಂದು ಅಂಶವೆಂದರೆ, ನಿಮಿತ್ತದಿಂದ ಕೂಡಿದ ಪದದ ಜೊತೆಗೆ ಸಮಾಸವಾಗಿಯೂ ಇರಬೇಕು ಹೀಗಿದ್ದಾಗ ಮಾತ್ರ 'ಣ್'ತ್ವವು ಬರುತ್ತದೆ, ಇಲ್ಲದಿದ್ದರೆ ಇಲ್ಲ.

ಉದಾ– ವೃತ್ರಹಣೌ –(ಇಬ್ಬರು ಇಂದ್ರರು) – ಪ್ರಥಮಾ ಮತ್ತು ದ್ವಿತೀಯಾ ದ್ವಿವಚನಗಳಲ್ಲಿ ವೃತ್ರ+ಹನ್ ಎಂದಿದ್ದಾಗ, ಸಮಾಸವಾಗುತ್ತದೆ. ಆಲ್ಲಿ ಪೂರ್ವಪದದಲ್ಲಿ 'ತ್ರ' ಎಂಬಲ್ಲಿ ರೇಫವಿದೆ. ಮತ್ತು ಉತ್ತರಪದದಲ್ಲಿ ಒಂದೇ ಅಚ್ ಉಳ್ಳ 'ಹನ್' ಎಂಬ ಶಬ್ದವು ಇದೆ. 'ಹನ್' ಶಬ್ದದಲ್ಲಿರುವ 'ನ್' ಕಾರವು ಪ್ರಾತಿಪದಿಕಾಂತವಾಗಿದೆ. ಆದ್ದರಿಂದ 'ನ್' ಕಾರಾಕ್ಕೆ ಣತ್ವವು ಬಂದು ವೃತ್ರಹಣ್+ಔ ಎಂದಿರುತ್ತದೆ. ವರ್ಣ ಜೋಡಣೆಯಿಂದ ವೃತ್ರಹಣೌ ಎಂಬ ರೂಪವು ಸಿದ್ಧಿಸುತ್ತದೆ.

### (ಕುತ್ವವನ್ನು ವಿಧಿಸುವ ಸೂತ್ರ)

**ಸೂತ್ರ– 288. ಹೋ ಹನ್ತೇರ್ಞ್ಣಿನ್ನೇಷು (7.3.54)**

ವೃತ್ತಿಃ–ಞಿತಿ ಣಿತಿ ಪ್ರತ್ಯಯೇ ನಕಾರೇ ಚ ಪರೇ ಹಂತೇಃ ಹಕಾರಸ್ಯ ಕುತ್ವಮ್। ವೃತ್ರಘ್ನಃ। ಇತ್ಯಾದಿ। ಏವಂ ಶಾರ್ಙ್ಗಿನ್, ಯಶಸ್ವಿನ್, ಅರ್ಯಮನ್, ಪೂಷನ್।

ಅ. ವೃ. –"ಚಜೋಃ ಕು ಘಿಣ್ಯತೋಃ" ಎಂಬ ಸೂತ್ರದಿಂದ 'ಕುಃ' ಎಂಬ ಶಬ್ದವು ಅನುವೃತ್ತವಾಗುತ್ತದೆ. "ಅಂಗಸ್ಯ" ಎಂಬುದು ಅಧಿಕಾರ ಸೂತ್ರ

ಅರ್ಥ– ಞಿತ್ ಣಿತ್ ಪ್ರತ್ಯಯಗಳು ಹಾಗೂ 'ನ್' ಕಾರಕ್ಕೆ ಪರದಲ್ಲಿರುವ 'ಹನ್'

ಧಾತುವಿನ 'ಹ್' ಕಾರದ ಸ್ಥಾನದಲ್ಲಿ 'ಕ್' ವರ್ಗವು ಆದೇಶವಾಗಿ ಬರುತ್ತದೆ.

ಉದಾ– ವೃತ್ರಘ್ನಃ(3) – ದ್ವಿತೀಯಾ ಬಹುವಚನ ಹಾಗೂ ಪಂಚಮೀ, ಷಷ್ಠೀ ಬಹುವಚನಗಳಲ್ಲಿ ಕ್ರಮವಾಗಿ ವೃತ್ರಹನ್+ಶಸ್(ಅಸ್), ವೃತ್ರಹನ್+ಙಸಿ(ಅಸ್) ಹಾಗೂ ವೃತ್ರಹನ್+ಙಸ್(ಅಸ್) ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ನ್' ಕಾರಕ್ಕೆ ಣತ್ವವು ಪ್ರಾಪ್ತವಾಗುತ್ತದೆ ಆದರೆ, ಣತ್ವ ವಿಧಾಯಕ ಸೂತ್ರವು ತ್ರಿಪಾದಿಯಲ್ಲಿ ಇದೆ. ಆದುದರಿಂದ "ಪೂರ್ವತ್ರಾಸಿದ್ಧಮ್" ಎಂಬ ನಿಯಮದಿಂದ, "ಅಲ್ಲೋಪೋಽನಃ" ಎಂಬ ಸೂತ್ರದ ದೃಷ್ಟಿಯಲ್ಲಿ ಣತ್ವ ವಿಧಾನವು ಅಸಿದ್ಧವಾಗುತ್ತದೆ. ಹೀಗಾಗಿ ಮೊದಲನೆಯ 'ಅ' ಕಾರ ಲೋಪವಾದಮೇಲೆ ವೃತ್ರಹ್ನ್+ಅಸ್ ಎಂದಿರುತ್ತದೆ. ಆಗಲೂ ಣತ್ವವು ಬರುವದಿಲ್ಲ. ಯಾಕೆಂದರೆ ಈ ಸಮಯದಲ್ಲಿ ಉತ್ತರಪದದಲ್ಲಿ ಇರುವ 'ಹನ್' ಮಾತ್ರ ಉಳಿದಿರುತ್ತದೆ. ಆದರೆ ಅದು ಏಕಾಚ್ ಆಗಿಲ್ಲ. ಈಗ 'ನ್' ಕಾರವು ಪರದಲ್ಲಿದೆ ಎಂದು ಭಾವಿಸಿ ಪ್ರಕೃತ ಸೂತ್ರದಿಂದ 'ಹ್' ಕಾರದ ಸ್ಥಾನದಲ್ಲಿ **ಸ್ಥಾನ–ಪ್ರಯತ್ನ–ಸಾಮ್ಯದಿಂದ** 'ಕ್' ವರ್ಗದ 'ಘ್' ಆದೇಶವಾಗಿ ಬಂದು, ವೃತ್ರಘ್ನ್+ಅಸ್ ಎಂದಿದ್ದಾಗ, 'ಸ್' ಕಾರಕ್ಕೆ ರುತ್ವ–ವಿಸರ್ಗಗಳು ಬಂದು ವೃತಘ್ನಃ(3) ಎಂಬ ರೂಪವು ಸಿದ್ಧವಾಗುತ್ತದೆ.

ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಪ್ರಕ್ರಿಯೆಯು ಇದೇ ರೀತಿಯಲ್ಲಿರುತ್ತದೆ. ಹಲಾದಿ ವಿಭಕ್ತಿಗಳು ಪರದಲ್ಲಿರುವ 'ನ್' ಕಾರಕ್ಕೆ "ನ ಲೋಪಃ ಪ್ರಾತಿಪದಿಕಾನ್ತಸ್ಯ" ಎಂಬ ಸೂತ್ರದಿಂದ ಲೋಪವು ಬರುತ್ತದೆ.

**ಹನ್ನನ್ತ 'ವೃತ್ರಹನ್' ಶಬ್ದದ ರೂಪಗಳು**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ವೃತ್ರಹಾ | ವೃತ್ರಹಣೌ | ವೃತ್ರಹಣಃ |
| ದ್ವಿತೀಯಾ | ವೃತ್ರಹಣಮ್ | ವೃತ್ರಹಣೌ | ವೃತ್ರಘ್ನಃ |
| ತೃತೀಯಾ | ವೃತ್ರಘ್ನಾ | ವೃತ್ರಹಭ್ಯಾಮ್ | ವೃತ್ರಹಭಿಃ |
| ಚತುರ್ಥೀ | ವೃತ್ರಘ್ನೇ | ವೃತ್ರಹಭ್ಯಾಮ್ | ವೃತ್ರಹಭ್ಯಃ |
| ಪಞ್ಚಮೀ | ವೃತ್ರಘ್ನಃ | ವೃತ್ರಹಭ್ಯಾಮ್ | ವೃತ್ರಹಭ್ಯಃ |
| ಷಷ್ಠೀ | ವೃತ್ರಘ್ನಃ | ವೃತ್ರಘ್ನೋಃ | ವೃತ್ರಘ್ನಾಮ್ |
| ಸಪ್ತಮೀ | ವೃತ್ರಹಣಿ/ವೃತ್ರಘ್ನಿ | ವೃತ್ರಘ್ನೋಃ | ವೃತ್ರಹಸು |
| ಸಂಬೋಧನ | ಹೇ ವೃತ್ರಹನ್! | ಹೇ ವೃತ್ರಹಣೌ! | ಹೇ ವೃತ್ರಹಣಃ! |

**(ತೃ ಎಂಬ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ – 289. ಮಘವಾ ಬಹುಲಮ್ ( 6.4.128)**

ವೃತ್ತಿಃ–ಮಘವನ್ ಶಬ್ದಸ್ಯ ವಾ ತೃ ಇತಿ ಅಂತಾದೇಶಃ। ಋತ ಇತ್।

ಅ. ವೃ. –"ಅರ್ವಣಸ್ತ್ರಸಾವನಞಃ" ಎಂಬ ಸೂತ್ರದಿಂದ 'ತೃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- ಮಘವನ್ ಶಬ್ದಕ್ಕೆ ವಿಕಲ್ಪದಿಂದ 'ತೃ' ಎಂಬುದು ಅಂತಾದೇಶವಾಗಿ ಬರುತ್ತದೆ. 'ತೃ' ಎಂಬಲ್ಲಿ ತ್+ಋ ಎಂಬ ಎರಡು ಅಕ್ಷರಗಳಿವೆ. ಆದುದರಿಂದ ಇದು ಅನೇಕಾಲ್ ಆಗುತ್ತದೆ. "ಅನೇಕಾಲ್ ಶಿತ್ ಸರ್ವಸ್ಯ" ಎಂಬ ಸೂತ್ರದಿಂದ 'ತೃ' ಎಂಬುದು ಸರ್ವಾದೇಶವಾಗಿ ಬರಬೇಕಾಗಿತ್ತು. ಆದರೆ, 'ತೃ' ಎಂಬುದನ್ನು ಇಲ್ಲಿ ಅನೇಕಾಲ್ ಆಗಿ ಭಾವಿಸಲಾಗಿಲ್ಲ. ಅದಕ್ಕೆ 'ನಾನುಬಂಧಕೃತಮ್ ಅನೇಕಾಲ್ತ್ವಮ್' ಎಂಬ ಪರಿಭಾಷೆಯು ಪ್ರಮಾಣವಾಗಿದೆ. ಅಂದರೆ ಅನುಬಂಧವನ್ನು ತೆಗೆದುಕೊಂಡು ಅನೇಕಾಲ್‌ತ್ವವನ್ನು ಮಾಡುವದಿಲ್ಲ. 'ತೃ' ನಲ್ಲಿ 'ಋ' ಕಾರವು "ಉಪದೇಶೇಽಜನುನಾಸಿಕ ಇತ್" ಎಂಬುದರಿಂದ 'ಇತ್' ಸಂಜ್ಞೆಯನ್ನು ಹೊಂದುತ್ತದೆ. ಆದ್ದರಿಂದ 'ತ್' ಎಂಬ ಒಂದೇ ಅಕ್ಷರ ಉಳಿಯುತ್ತದೆ. ಆದುದರಿಂದ ಇದು ಸರ್ವಾದೇಶವಾಗಿ ಬಾರದೇ "ಅಲೋಽನ್ತ್ಯಸ್ಯ" ಎಂಬ ಸೂತ್ರದಿಂದ 'ಮಘವನ್' ಶಬ್ದದ ಅಂತ್ಯ ವರ್ಣವಾದ 'ನ್' ಕಾರದ ಸ್ಥಾನದಲ್ಲಿ ತೃ(ತ್) ಆದೇಶವು ಬರುತ್ತದೆ.

**ಕ್ವಚಿತ್ಪ್ರವೃತ್ತಿಃ ಕ್ವಚಿದಪ್ರವೃತ್ತಿಃ ಕ್ವಚಿದ್ವಿಭಾಷಾ ಕ್ವಚಿದನ್ಯದೇವ।**
**ವಿಧೇರ್ವಿಧಾನಮ್ ಬಹುದಾ ಸಮೀಕ್ಷ್ಯ**
**ಚತುರ್ವಿಧಮ್ ಬಾಹುಲಕಂ ವದನ್ತಿ॥**

### (ನುಮಾಗಮವನ್ನು ವಿಧಿಸುವ ಸೂತ್ರ)

**ಸೂತ್ರ -290. ಉಗಿದಚಾಂ ಸರ್ವನಾಮಸ್ಥಾನೇಽಧಾತೋಃ (7.1.70)**

ವೃತ್ತಿಃ -ಅಧಾತೋಃ ಉಗಿತಃ ನಲೋಪಿನಃ ಅಞ್ಚತೇಶ್ಚ ನುಮ್ ಸ್ಯಾತ್ ಸರ್ವನಾಮಸ್ಥಾನೇ ಪರೇ। ಮಘವಾನ್। ಮಘವಂತೌ। ಮಘವಂತಃ। ಹೇ ಮಘವನ್!। ಮಘವದ್ಭ್ಯಾಮ್। ತೃತ್ವಾಭಾವೇ-ಮಘವಾ। ಸುಟೀ ರಾಜವತ್।

ಪ. ಛೇ.-ಉಗಿದಚಾಂ, ಸರ್ವನಾಮಸ್ಥಾನೇ, ಅಧಾತೋಃ।

ಅ. ವೃ.-"ಇದಿತೋನುಮ್ ಧಾತೋಃ" ಎಂಬ ಸೂತ್ರದಿಂದ 'ನು' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- ಸರ್ವನಾಮಸ್ಥಾನವು ಪರದಲ್ಲಿದ್ದಾಗ, ಧಾತುಭಿನ್ನವಾದ 'ಉಗಿತ್'ಗೆ ಹಾಗೂ 'ನ್' ಕಾರ ಲೋಪವಾಗುವಂಥ 'ಅಞ್ಚ' ಧಾತುವಿಗೆ 'ನುಮ್' ಆಗಮವು ಬರುತ್ತದೆ. ಸರ್ವನಾಮಸ್ಥಾನವು ಪರದಲ್ಲಿದ್ದಾಗ, 'ನುಮ್' ಆಗಮವು ಬರುತ್ತದೆ; ಆದರೆ ಯಾವದರ ನಂತರ ಆಗಮವು ಬರುತ್ತದೋ ಅದು ಧಾತು ಆಗಿರಬಾರದು. ಮತ್ತು 'ಉಕ್' (ಉ,ಋ,ಲೃ) ಪ್ರತ್ಯಾಹಾರವನ್ನು 'ಇತ್' ಸಂಜ್ಞೆಯುಳ್ಳದ್ದಾಗಿಯೂ ಅಥವಾ 'ನ್' ಕಾರ ಲೋಪವುಳ್ಳಂಥಾದ್ದಾಗಿರುವಂಥ 'ಅಞ್ಚ್' ಧಾತುವಾಗಿರಬೇಕು ಎಂಬುದು ಇದರ ಅಭಿಪ್ರಾಯ.

ಉದಾ- ಮಘವಾನ್-(ಇಂದ್ರನು) - ಪ್ರಥಮಾ ಏಕವಚನದಲ್ಲಿ ಮಘವನ್+ಸು (ಸ್) ಎಂದಿದ್ದಾಗ, "ಮಘವಾ ಬಹುಲಮ್" ಎಂಬ ಸೂತ್ರದಿಂದ 'ನ್' ಕಾರದ ಸ್ಥಾನದಲ್ಲಿ 'ತೃ(ತ್)' ಆದೇಶವು ಬಂದು ಮಘವತ್+ಸ್ ಎಂದಿರುತ್ತದೆ. ಪ್ರಕೃತ

ಸೂತ್ರದಿಂದ 'ನುಮ್(ನ್) ಆಗಮ ಬರುತ್ತದೆ. ಅದು 'ಮಿತ್' ಆಗಿ ಇರೋಣದ್ದರಿಂದ "ಮಿದಚೋಽನ್ತ್ಯಾತ್ ಪರಃ" ಎಂಬ ಸೂತ್ರದಿಂದ 'ವ್' ಕಾರದ ನಂತರ ಇರುವ 'ಅ' ಕಾರದ ನಂತರ ಬಂದು ಮಘವನ್ತ್+ಸ್ ಎಂದಾಗುತ್ತದೆ. "ಹಲ್ಙ್ಯಾಭ್ಯೋ ದೀರ್ಘಾತ್ ಸುತಿಸ್ಯಪೃಕ್ತಮ್ ಹಲ್" ಎಂಬ ಸೂತ್ರದಿಂದ 'ಸ್' ಗೆ ಲೋಪ ಬರುತ್ತದೆ. "ಸಂಯೋಗಾನ್ತಸ್ಯ ಲೋಪಃ" ಎಂಬ ಸೂತ್ರದಿಂದ ಕೊನೆಯ 'ತ್' ಗೆ ಲೋಪ ಬಂದು ಮಘವನ್ ಎಂದಾಗುತ್ತದೆ. ನಂತರ ಪ್ರಕೃತ ಸೂತ್ರದಿಂದ 'ವ್' ಕಾರದ ನಂತರ ಇರುವ 'ಅ' ಕಾರಕ್ಕೆ ದೀರ್ಘ ಬಂದು 'ಮಘವಾನ್' ಎಂದಾಗುತ್ತದೆ.

ಇಲ್ಲಿ ತ್ರಿಪಾದಿಯಲ್ಲಿ ಪರದಲ್ಲಿರುವ "ಸಂಯೋಗಾನ್ತಸ್ಯ ಲೋಪಃ" ಎಂಬ ಸೂತ್ರದಿಂದ ಆಗಿರುವ 'ತ್' ಕಾರ ಲೋಪವು ತ್ರಿಪಾದಿಯ ಪೂರ್ವದಲ್ಲಿರುವ "ನಲೋಪಃ ಪ್ರಾತಿಪದಿಕಾಂತಸ್ಯ" ಎಂಬ ಸೂತ್ರದ ದೃಷ್ಟಿಯಲ್ಲಿ ಅಸಿದ್ಧವಾಗೋಣದ್ದರಿಂದ, 'ನ್' ಕಾರಕ್ಕೆ ಲೋಪವು ಬರುವದಿಲ್ಲ. ಯಾಕೆಂದರೆ 'ನ್' ಕಾರದ ಲೋಪವಾಗಬೇಕಾದರೆ 'ನ್' ಕಾರವು ಅಂತ್ಯದಲ್ಲಿ ಇರಬೇಕಾಗಿತ್ತು. ಆದರೆ 'ತ್' ಕಾರದ ಲೋಪವು ಅಸಿದ್ಧವಾಗಿರೋಣದ್ದರಿಂದ 'ನ್' ಕಾರವು ಅಂತ್ಯವರ್ಣವಾಗುವದಿಲ್ಲ.

ಉದಾ– ಮಘವನ್ತೌ – ಪ್ರಥಮಾ ಮತ್ತು ದ್ವಿತೀಯಾ ದ್ವಿವಚನಗಳಲ್ಲಿ ಮಘವನ್+ಔ, ಮತ್ತು ಮಘವನ್+ಔಟ್(ಔ) ಎಂದಿದ್ದಾಗ, 'ತೃ(ತ್)' ಅಂತಾದೇಶವಾಗಿ ಬಂದು, ಮಘವನ್+ತ್+ಔ ಎಂದಿದ್ದಾಗ, ನುಮಾಗಮ ಬಂದಮೇಲೆ ಮಘವನ್ತೌ ಎಂದು ರೂಪವು ಸಿದ್ಧವಾಗುತ್ತದೆ.

ನಾಂತ ಉಪಧೆ ಇಲ್ಲದ್ದರಿಂದ ದೀರ್ಘವು ಬರಲಿಲ್ಲ. ಹೀಗೆಯೇ ದ್ವಿತೀಯಾ ವಿಭಕ್ತಿ ದ್ವಿವಚನದಲ್ಲಿ ಮಘವಂತೌ ಎಂದು ರೂಪವಾಗುತ್ತದೆ.

ಇದೇ ರೀತಿಯಲ್ಲಿ ಪ್ರಥಮಾ ವಿಭಕ್ತಿ ಬಹುವಚನದಲ್ಲಿ ಮಘವಂತಃ ಎಂಬ ರೂಪವು ಸಿದ್ಧವಾಗುತ್ತದೆ.

ಸೂಚನೆ: ಸರ್ವನಾಮವಲ್ಲದ 'ಶಸ್(ಅಸ್)' ಮೊದಲಾದ ಪ್ರತ್ಯಯಗಳು ಬಂದಾಗ, ನುಮಾಗಮವು ಬರುವದಿಲ್ಲ. ಅದುದರಿಂದ ಮಘವತಃ, ಮಘವತಾ ಎಂದು ರೂಪಗಳಾಗುತ್ತವೆ. ಹಲಾದಿ ಪ್ರತ್ಯಯಗಳು ಪರದಲ್ಲಿದ್ದಾಗ, "ಝಲಾಂ ಜಶೋಽನ್ತೇ" ಎಂಬ ಸೂತ್ರದಿಂದ 'ತ್' ಕಾರಕ್ಕೆ 'ಜಶ್ತ್ವ' ಬಂದು 'ದ್' ಕಾರವಾಗುತ್ತದೆ. ಹೀಗೆ ಮಘವದ್ಭ್ಯಾಮ್, ಮಘವದ್ಭಿಃ ಇತ್ಯಾದಿ ರೂಪಗಳಾಗುತ್ತವೆ.

ಇಲ್ಲಿ ಗಮನಿಸಬೇಕಾದ ವಿಷಯ– 'ತೃ(ತ್)' ಆದೇಶವು ಬಹುಲ ಅಥವಾ ವಿಕಲ್ಪ ಎಂಬ ಅರ್ಥದಲ್ಲಿ ಇರುತ್ತದೆ. ಆದೇಶವಿಲ್ಲದ ಪಕ್ಷದಲ್ಲಿ, 'ಸುಟ್'(ಸು,ಔ,ಜಸ್,ಅಮ್, ಔಟ್) ಗಳಿದ್ದಾಗ, ರಾಜನ್ ಶಬ್ದದಂತೆ ಮಘವಾ, ಮಘವಾನೌ, ಮಘವಾನಃ, ಮಘವಾನಮ್, ಮಘವಾನೌ, ಎಂಬ ರೂಪಗಳನ್ನು ಪಡೆಯುತ್ತದೆ. 'ಶಸ್(ಅಸ್)' ಬಂದಾಗ 'ಭ' ಸಂಜ್ಞೆ(ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ) ಸಂಪ್ರಸಾರಣ ಬರುತ್ತದೆ. ಮತ್ತು ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, 'ತ್' ಕಾರಕ್ಕೆ 'ಜಶ್ತ್ವ' ವು ಬರುತ್ತದೆ.

### (ಸಂಪ್ರಸಾರಣವನ್ನು ವಿಧಿಸುವ ಸೂತ್ರ)

**ಸೂತ್ರ - 291. ಶ್ವ-ಯುವ-ಮಘೋನಾಮತದ್ಧಿತೇ ( 6.4.133)**

ವೃತ್ತಿಃ-ಅನ್ನನ್ತಾನಾಂ ಭಾನಾಂ ಏಷಾಂ ಅತದ್ಧಿತೇ ಸಂಪ್ರಸಾರಣಮ್। ಮಘೋನಃ। ಮಘೋನಾ। ಮಘವಭ್ಯಾಮ್। ಏವಂ ಶ್ವನ್, ಯುವನ್।

ಪ. ಛೇ. – ಶ್ವ-ಯುವ-ಮಘೋನಾಮ್, ಅತದ್ಧಿತೇ।

ಅ. ವ್ಯ. – "ಅಲ್ಲೋಽಪೋಽನಃ" ಎಂಬ ಸೂತ್ರದಿಂದ ವಿಭಕ್ತಿ ವಿಪರಿಣಾಮ ಮಾಡಿ 'ಅನಾಮ್' ಎಂಬ ಶಬ್ದವನ್ನು ಅನುವೃತ್ತಿ ಮಾಡಲಾಗಿದೆ. "ವಸೋಃ ಸಂಪ್ರಸಾರಣಮ್" ಎಂಬುದರಿಂದ 'ಸಂಪ್ರಸಾರಣಮ್' ಶಬ್ದವು ಅನುವೃತ್ತವಾಗಿದೆ. "ಭಸ್ಯ'ವು ಅಧಿಕಾರ ಸೂತ್ರ, ಇದು ಬಹುವಚನದಲ್ಲಿ ವಿಪರಿಣಾಮಗೊಳಿಸಲಾಗಿದೆ.

ಅರ್ಥ–'ಅನ್'ಶಬ್ದವನ್ನು ಅಂತದಲ್ಲಿಯುಳ್ಳ 'ಭ' ಸಂಜ್ಞಕಗಳಾದ ಶ್ವನ್,ಯುವನ್, ಮತ್ತು ಮಘವನ್ ಶಬ್ದಗಳ ಪರದಲ್ಲಿ ತದ್ಧಿತಭಿನ್ನ ಪ್ರತ್ಯಯಗಳಿದ್ದಾಗ, ಸಂಪ್ರಸಾರಣವು ಬರುತ್ತದೆ. ಸಂಪ್ರಸಾರಣವೆಂದರೆ ಯ,ವ್,ರ್,ಲ್ ಇವುಗಳ ಸ್ಥಾನದಲ್ಲಿ ಕ್ರಮವಾಗಿ ಇ,ಉ,ಋ,ಲೃ ವರ್ಣಗಳು ಆದೇಶವಾಗಿ ಬರುತ್ತವೆ.

ಉದಾ– ಮಘೋನಃ-ಮಘವನ್ ಶಬ್ದದಮೇಲೆ ತೃತ್ವ-ಅಭಾವ ಪಕ್ಷದಲ್ಲಿ, ಅಸರ್ವನಾಮ ಸ್ಥಾನವಾದ 'ಶಸ್(ಅಸ್)' ಪರದಲ್ಲಿದ್ದಾಗ, 'ಭ' ಸಂಜ್ಞೆಯು ಬರುತ್ತದೆ. ಪ್ರಕೃತ ಸೂತ್ರದಿಂದ 'ವ್' ಕಾರದ ಸ್ಥಾನದಲ್ಲಿ ಸಂಪ್ರಸಾರಣ 'ಉ' ಕಾರ ಬಂದು, ಮಘವು+ಅನ್+ಅಸ್ ಎಂದಿರುತ್ತದೆ. ಉ+ಅ ವರ್ಣಗಳಿಗೆ "ಸಂಪ್ರಸಾರಣಾಚ್ಚ" ಎಂಬ ಸೂತ್ರದಿಂದ ಪೂರ್ವರೂಪವಾಗಿ 'ಉ' ಕಾರ ಬರುತ್ತದೆ. ಮಘ+ಉ ಎಂಬಲ್ಲಿ ಗುಣ ಬಂದು, ಮಘೋ+ನ್+ಅಸ್=ಮಘೋನಸ್ ಎಂದಾಗುತ್ತದೆ. ನಂತರ 'ಸ್'ಕಾರಕ್ಕೆ ರುತ್ವ-ವಿಸರ್ಗಗಳು ಬಂದು ಮಘೋನಃ ಎಂದು ರೂಪವಾಗುತ್ತದೆ.

ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಪ್ರಕ್ರಿಯೆಯು ಹೀಗೆಯೇ ಇರುತ್ತದೆ.

ಹಲಾದಿ ಪ್ರತ್ಯಯಗಳು ಪರದಲ್ಲಿದ್ದಾಗ, "ನ ಲೋಪಃ ಪ್ರಾತಿಪದಿಕಾನ್ತಸ್ಯ" ಎಂಬ ಸೂತ್ರದಿಂದ 'ನ್' ಕಾರಕ್ಕೆ ಲೋಪ ಬಂದು ಮಘವ+ಭ್ಯಾಮ್=ಮಘವಭ್ಯಾಮ್ ಎಂದು ತೃತೀಯಾ, ಚತುರ್ಥೀ ಮತ್ತು ಪಞ್ಚಮೀ ವಿಭಕ್ತಿಗಳ ದ್ವಿವಚನ ರೂಪಗಳು, ಮತ್ತು ಇದೇ ವಿಭಕ್ತಿಗಳ ಬಹುವಚನ ರೂಪಗಳಾದ ಮಘವಭಿಃ, ಮಘವಭ್ಯಃ ಮಘವಭ್ಯಃ ಎಂಬ ರೂಪಗಳು ಸಿದ್ಧವಾಗುತ್ತವೆ.

ಇನ್ನು ತೃತ್ವ ಪಕ್ಷದಲ್ಲಿ 'ತ್' ಇರೋಣದ್ದರಿಂದ ಮಘವದ್ಭ್ಯಾಮ್, ಮಘವದ್ಭಿಃ ಮೊದಲಾದ ರೂಪಗಳು ಸಿದ್ಧವಾಗುತ್ತವೆ.

'ನ್' ಕಾರಾನ್ತ ಮಘವನ್ ಶಬ್ದಕ್ಕೆ ತೃತ್ವ(ತ್) ಪಕ್ಷದಲ್ಲಿ ರೂಪಗಳು

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಮಘವಾ | ಮಘವನ್ತೌ | ಮಘವನ್ತಃ |
| ದ್ವಿತೀಯಾ | ಮಘವನ್ತಮ್ | ಮಘವನ್ತೌ | ಮಘವತಃ |

| | | | |
|---|---|---|---|
| ತೃತೀಯಾ | ಮಘವತಾ | ಮಘವದ್ಭ್ಯಾಮ್ | ಮಘವದ್ಭಿಃ |
| ಚತುರ್ಥೀ | ಮಘವತೇ | ಮಘವದ್ಭ್ಯಾಮ್ | ಮಘವದ್ಭ್ಯಃ |
| ಪಞ್ಚಮೀ | ಮಘವತಃ | ಮಘವದ್ಭ್ಯಾಮ್ | ಮಘವದ್ಭ್ಯಃ |
| ಷಷ್ಠೀ | ಮಘವತಃ | ಮಘವತೋಃ | ಮಘವತಾಮ್ |
| ಸಪ್ತಮೀ | ಮಘವತಿ | ಮಘವತೋಃ | ಮಘವತ್ಸು |
| ಸಂಬೋಧನ | ಹೇ ಮಘವನ್! | ಹೇ ಮಘವನ್ತೌ! | ಹೇ ಮಘವನ್ತಃ! |

**'ನ್' ಕಾರಾನ್ತ ಮಘವನ್ ಶಬ್ದಕ್ಕೆ ತೃತ್ವ(ತ್)-ಅಭಾವ ಪಕ್ಷದಲ್ಲಿ ರೂಪಗಳು**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಮಘವಾ | ಮಘವಾನೌ | ಮಘವಾನಃ |
| ದ್ವಿತೀಯಾ | ಮಘವಾನಮ್ | ಮಘವಾನೌ | ಮಘೋನಃ |
| ತೃತೀಯಾ | ಮಘೋನಾ | ಮಘವಭ್ಯಾಮ್ | ಮಘವಭಿಃ |
| ಚತುರ್ಥೀ | ಮಘೋನೇ | ಮಘವಭ್ಯಾಮ್ | ಮಘವಭ್ಯಃ |
| ಪಞ್ಚಮೀ | ಮಘೋನಃ | ಮಘವಭ್ಯಾಮ್ | ಮಘವಭ್ಯಃ |
| ಷಷ್ಠೀ | ಮಘೋನಃ | ಮಘೋನೋಃ | ಮಘೋನಾಮ್ |
| ಸಪ್ತಮೀ | ಮಘೋನಿ | ಮಘೋನೋಃ | ಮಘವಸು |
| ಸಂಬೋಧನ | ಹೇ ಮಘವನ್! | ಹೇ ಮಘವಾನೌ! | ಹೇ ಮಘವಾನಃ! |

ಶ್ವನ್ ಮತ್ತು ಯುವನ್ ಶಬ್ದಗಳಿಗೆ ರೂಪಗಳನ್ನು ಇದೇ ರೀತಿಯಲ್ಲಿ ಸಿದ್ಧಪಡಿಸಬೇಕು.

ಶ್ವನ್ ಶಬ್ದದ ಪರದಲ್ಲಿ ಶಸ್ ಮೊದಲಾದ ಅಜಾದಿ ಪ್ರತ್ಯಯಗಳು ಬಂದಾಗ, ಪ್ರಕೃತ ಸೂತ್ರದಿಂದ ಸಂಪ್ರಸಾರಣವು ಆಗುತ್ತದೆ. ಅಂದರೆ 'ಶ್ವ' ಎಂಬಲ್ಲಿರುವ 'ವ್' ಕಾರಕ್ಕೆ ಸಂಪ್ರಸಾರಣರೂಪವಾದ 'ಉ' ಕಾರ ಬಂದು, ಶ್+ಉ+ಅನ್+ಅಸ್ ಎಂದಿರುತ್ತದೆ. 'ಉ' ಕಾರ 'ಅ' ಕಾರಗಳು ಸೇರಿದಾಗ ಪೂರ್ವರೂಪ ಬಂದು, ಶ್+ಉನ್+ಅಸ್=ಶುನಸ್ ಎಂದಾಗುತ್ತದೆ. 'ಸ್' ಕಾರಕ್ಕೆ ರುತ್ವ-ವಿಸರ್ಗಗಳು ಬಂದು ಶುನಃ ಎಂದು ರೂಪವು ಸಿದ್ಧವಾಗುತ್ತದೆ.

ಯುವನ್ ಶಬ್ದಕ್ಕೂ ಸರ್ವನಾಮ ಸ್ಥಾನಗಳಾದ ಸು, ಔ, ಜಸ್, ಅಮ್, ಔ ಗಳ ವರೆಗೆ ಯುವಾ, ಯುವಾನೌ, ಯುವಾನಃ, ಯುವಾನಮ್ ಯುವಾನೌ ಎಂದು ರಾಜನ್ ಶಬ್ದದಂತೆ ರೂಪಗಳಾಗುತ್ತವೆ. ಅಜಾದಿ ಪ್ರತ್ಯಯಗಳು ಪರದಲ್ಲಿದ್ದಾಗ, 'ಯುವನ್' ನಲ್ಲಿರುವ 'ವ್' ಕಾರಕ್ಕೆ ಸಂಪ್ರಸಾರಣ ರೂಪವಾದ 'ಉ' ಕಾರವು ಬಂದು, ಯುಉ+ಅನ್ ಎಂದಿದ್ದಾಗ, ಪೂರ್ವರೂಪವಾಗಿ ಯು+ಉನ್ ಎಂದಾಗಿ, ಸವರ್ಣದೀರ್ಘದಿಂದ ಯೂನ್ ಎಂದಾಗುತ್ತದೆ. ಯೂನ್+ಅಸ್ ಎಂದಿದ್ದಾಗ, ಯೂನಸ್ ಎಂದಾಗಿ 'ಸ್' ಕಾರಕ್ಕೆ ರುತ್ವ-ವಿಸರ್ಗಗಳು ಬಂದು ಯೂನಃ ಎಂದಾಗುತ್ತದೆ.

ವಿಶೇಷ - ಯುವನ್ ಶಬ್ದದಲ್ಲಿ ಮೊದಲನೆಯ ವ್ಯಂಜನ ವರ್ಣವು 'ಯ್' ಕಾರ, ಎರಡನೆಯ ವ್ಯಂಜನ ವರ್ಣವು 'ವ್' ಕಾರ, ಇವುಗಳಲ್ಲಿ ಯಾವ ವರ್ಣಕ್ಕೆ ಸಂಪ್ರಸಾರಣ ಬರುತ್ತದೆ ಎಂಬುದನ್ನು ಮುಂದಿನ ಸೂತ್ರವು ಸ್ಪಷ್ಟಪಡಿಸುತ್ತದೆ.

**(ಸಂಪ್ರಸಾರಣವನ್ನು ನಿಷೇಧಿಸುವ ಸೂತ್ರ)**

**ಸೂತ್ರ- 292. ನ ಸಂಪ್ರಸಾರಣೇ ಸಂಪ್ರಸಾರಣಮ್। (6.1.37)**

ವೃತ್ತಿಃ-ಸಂಪ್ರಸಾರಣೇ ಪುರತಃ ಪೂರ್ವಸ್ಯ ಯಣಃ ಸಂಪ್ರಸಾರಣಂ ನ ಸ್ಯಾತ್। ಇತಿ 'ಯ್'ಕಾರಸ್ಯ ನ ಇತ್ವಮ್। ಅತ ಏವ ಜ್ಞಾಪಕಾತ್ ಅಂತ್ಯಸ್ಯ ಯಣಃ ಪೂರ್ವೇ ಸಂಪ್ರಸಾರಣಮ್। ಯೂನಃ। ಯೂನಾ। ಯುವಭ್ಯಾಮ್। ಇತ್ಯಾದಿ। ಅರ್ವಾ। ಹೇ ಅರ್ವನ್!।

ಅರ್ಥ- ಸಂಪ್ರಸಾರಣವು ಪರದಲ್ಲಿದ್ದಾಗ, ಸಂಪ್ರಸಾರಣವು ಆಗುವದಿಲ್ಲ. ಇದರ ಅರ್ಥ ಒಂದುಸಲ ಸಂಪ್ರಸಾರಣವಾದಮೇಲೆ, ಅದಕ್ಕೆ ಪೂರ್ವದಲ್ಲಿ ಸಂಪ್ರಸಾರಣವಾಗುವ ಅವಕಾಶವಿದ್ದರೂ ಸಂಪ್ರಸಾರಣವಾಗುವದಿಲ್ಲ.

ಯುವನ್ ಶಬ್ದದಲ್ಲಿ 'ವ್' ಕಾರಕ್ಕೆ 'ಉ' ಕಾರ ಬಂದು ಸಂಪ್ರಸಾರಣವಾಗಿರುತ್ತದೆ. ಈ ಸಂಪ್ರಸಾರಣವು ಪರದಲ್ಲಿದ್ದಾಗ, ಪೂರ್ವದಲ್ಲಿರುವ 'ಯಣ್'ಗೆ ಸಂಪ್ರಸಾರಣವಾಗುವ ಅವಕಾಶವಿರುತ್ತದೆ. ಅಂದರೆ, 'ಯ್' ಕಾರಕ್ಕೆ ಸಂಪ್ರಸಾರಣ ಬರುವ ಅವಕಾಶವಿರುತ್ತದೆ. ಇದನ್ನು ಪ್ರಕೃತ ಸೂತ್ರವು ನಿಷೇಧಿಸಿದೆ.

ಉದಾ- ಅರ್ವಾ-(ಕುದುರೆ) - ಪ್ರಥಮಾ ವಿಭಕ್ತಿ ಏಕವಚನದಲ್ಲ ಅರ್ವನ್+ಸು(ಸ್) ಎಂದಿದ್ದಾಗ, 'ಸ್' ಕಾರ ಲೋಪವಾಗಿ, ಉಪಧಾ ದೀರ್ಘವಾಗಿ, 'ನ್' ಲೋಪ ಬಂದು, ಅರ್ವಾ ಎಂದು ರೂಪವಾಗುತ್ತದೆ. ಇದರ ವಿವರಣೆಯನ್ನು ಮುಂದಿನ ಸೂತ್ರದ ಅಡಿಯಲ್ಲಿ ಕೊಡಲಾಗಿದೆ.

ಉದಾ - ಹೇ ಅರ್ವನ್! - ಸಂಬೋಧನದಲ್ಲಿ 'ರಾಜನ್' ಶಬ್ದದಂತೆ ಹೇ ಅರ್ವನ್! ಎಂಬ ರೂಪವು ಸಿದ್ಧವಾಗುತ್ತದೆ.

**(ದ್ವಿವಚನಾದಿಗಳಲ್ಲ ಅರ್ವನ್ ಶಬ್ದಕ್ಕೆ 'ತೃ' ವರ್ಣವನ್ನು ಅಂತಾದೇಶವಾಗಿ ವಿಧಿಸುವ ಸೂತ್ರ)**

**ಸೂತ್ರ - 293. ಅರ್ವಣಸ್ತ್ರಸಾವನಞಃ। (6.4.127)**

ವೃತ್ತಿಃ-ನಞಾ ರಹಿತಸ್ಯ ಅರ್ವನ್-ಇತ್ಯಸ್ಯ ಅಙ್ಗಸ್ಯ ತೃ ಇತಿ ಅನ್ತಾದೇಶಃ, ನ ತು ಸೌ। ಅರ್ವಂತೌ। ಅರ್ವಂತಃ। ಅರ್ವದ್ಭ್ಯಾಂ ಇತ್ಯಾದಿ।

ಪ. ಛೇ. - ಅರ್ವಣಃ, ತೃ-ಅಸೌ, ಅನಯಃ।

ಅ. ವ್ಯ.-"ಅಙ್ಗಸ್ಯ" ಎಂಬುದು ಅಧಿಕಾರ ಸೂತ್ರ.

ಅರ್ಥ- 'ನಞ್' ಪ್ರತ್ಯಯರಹಿತವಾದ 'ಅರ್ವನ್' ಎಂಬ ಅಙ್ಗಕ್ಕೆ 'ತೃ' ಎಂಬ ಅನ್ತಾದೇಶವು ಬರುತ್ತದೆ. ಆದರೆ 'ಸು' ಪರದಲ್ಲಿದ್ದರೆ ಬರುವದಿಲ್ಲ.

ಸೂತ್ರ – 'ತೃ' ಎಂಬಲ್ಲಿ, ತ್+ಋ ಎಂಬ ಎರಡು ವರ್ಣಗಳಿವೆ. ಇದು ಅನೇಕಾಲ್ ಆಗಿರೋಣದರಿಂದ "ಅನೇಕಾಲ್ ಶಿತ್ ಸರ್ವಸ್ಯ" ಎಂಬ ಸೂತ್ರದಿಂದ ಸರ್ವಾದೇಶವಾಗಿ ಬರಬೇಕಾಗಿತ್ತು. ಆದರೆ 'ನಾನುಬಂಧಕೃತಮ್ ಅನೇಕಾಲ್ತ್ವಮ್' ಎಂಬ ಪರಿಭಾಷೆಗನುಸಾರವಾಗಿ 'ತೃ' ವನ್ನು 'ಅನೇಕಾಲ್' ಆಗಿ ಭಾವಿಸದೇ 'ಏಕಾಲ್' ಆಗಿ ಭಾವಿಸಲಾಗಿದೆ. ಆದ್ದರಿಂದ "ಅಲೋಽನ್ತ್ಯಸ್ಯ" ಎಂಬ ಸೂತ್ರದ ಪ್ರಕಾರ 'ಅರ್ವನ್' ಶಬ್ದದ ಅನ್ತ್ಯ'ನ್' ಕಾರದ ಸ್ಥಾನದಲ್ಲಿ 'ತೃ(ತ್)' ಆದೇಶವಾಗಿ ಬಂದು ಅರ್ವತ್ ಎಂದು ರೂಪವಾಗಬೇಕಾಗಿತ್ತು. ಆದರೆ ಪ್ರಕೃತ ಸೂತ್ರದ ಪ್ರಕಾರ ಪ್ರಥಮಾ ವಿಭಕ್ತಿ ಪ್ರತ್ಯಯವಾದ 'ಸು(ಸ್)' ಪರದಲ್ಲಿದ್ದಾಗ 'ತೃ(ತ್)' ಕಾರವು ಬಾರದೇ 'ಅರ್ವನ್' ಎಂದೇ ಉಳಿದು, ನಂತರ ಉಪಧಾ–ದೀರ್ಘವಾಗಿ 'ಅರ್ವಾನ್' ಎಂದಿದ್ದಾಗ–

ಉದಾ – ಅರ್ವಾ– ಪ್ರಥಮಾ ವಿಭಕ್ತಿ ಏಕವಚನದಲ್ಲಿ ಅರ್ವಾನ್+ಸು ಎಂದಿದ್ದಾಗ , "ಹಲ್ಙ್ಯಾಭ್ಯೋ ದೀರ್ಘಾತ್ ಸುತಿಸ್ಯಪೃಕ್ತಂ ಹಲ್" ಎಂಬುದರಿಂದ 'ಸ್' ಗೆ ಲೋಪ ಬಂದು, "ನ ಲೋಪಃ ಪ್ರಾತಿಪದಿಕಾನ್ತಸ್ಯ" ಎಂಬ ಸೂತ್ರದಿಂದ 'ನ್' ಲೋಪವಾಗಿ ನಂತರ ಉಪಧಾ ದೀರ್ಘವಾಗಿ ಅರ್ವಾ ಎಂದು ರೂಪವಾಗುತ್ತದೆ.

ಪ್ರಥಮಾ ವಿಭಕ್ತಿ ಏಕವಚನದ 'ಸು' ಪ್ರತ್ಯಯವನ್ನು ಮಾತ್ರ ಬಿಟ್ಟು, ಇನ್ನುಳಿದ 'ಸುಪ್' ಪ್ರತ್ಯಯಗಳು ಪರದಲ್ಲಿದ್ದಾಗ 'ತ್' ಕಾರವು ಬಂದು ಅರ್ವತ್ ಎಂದಾಗಿ, "ಉಗಿದಚಾಮ್ ಸರ್ವನಾಮಸ್ಥಾನೇಽಧಾತೋಃ" ಎಂಬ ಸೂತ್ರದಿಂದ 'ನುಮ್(ನ್)' ಅಗಮವು ಬಂದು, ಅರ್ವನ್ತ್+ಔ ಎಂದಿದ್ದಾಗ, 'ನ್' ಕಾರಕ್ಕೆ ಅನುಸ್ವಾರ ಮತ್ತು ಪರಸವರ್ಣ ಬಂದು ಅರ್ವನ್ತೌ, ಅರ್ವನ್ತಃ ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

ಸೂಚನೆ: ಸರ್ವನಾಮಸ್ಥಾನಗಳಲ್ಲಿ ಮಾತ್ರ ನುಮಾಗಮವು ಬರುತ್ತದೆ, ಆದರೆ ಬೇರೆಕಡೆಗಳಲ್ಲಿ ಬರುವದಿಲ್ಲ.

**(ಆ–ಕಾರಾನ್ತ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ – 294. ಪಥಿಮಥ್ಯೃಭುಕ್ಷಾಮಾತ್ ( 7.1.85)**

ವೃತ್ತಿಃ–ಏಷಾಂ ಅಕಾರಃ ಅಂತಾದೇಶಃ ಸ್ಯಾತ್ ಸೌ ಪರೇ।

ಪ. ಛೇ. – ಪಥಿಮತ್ಥ್ಯೃಭುಕ್ಷಾಮ್, ಅತ್।

ಅ. ವೃ– "ಸಾವನಡುಹಃ" ಎಂಬ ಸೂತ್ರದಿಂದ 'ಸೌ' ಎಂಬುದು ಅನುವೃತ್ತವಾಗುತ್ತದೆ.

ಅರ್ಥ– ಪಥಿನ್, ಮಥಿನ್ ಮತ್ತು ಋಭುಕ್ಷಿನ್ ಶಬ್ದಗಳಿಗೆ 'ಸು' ಪ್ರತ್ಯಯವು ಪರದಲ್ಲಿದ್ದಾಗ, 'ಆ' ಕಾರವು ಅನ್ತಾದೇಶವಾಗಿ ಬರುತ್ತದೆ.

'ನ್' ಕಾರದ ಸ್ಥಾನದಲ್ಲಿ 'ಆ' ಆದೇಶವು "ಅಲೋಽನ್ತ್ಯಸ್ಯ" ಎಂಬ ಸೂತ್ರದ ಪ್ರಕಾರ 'ಸು' ಪ್ರತ್ಯಯವು ಪರದಲ್ಲಿದ್ದಾಗಲೂ ಬರುತ್ತದೆ.

**(ಅ-ಕಾರಾದೇಶವನ್ನು ವಿಧಿಸುವ ಸೂತ್ರ)**

**ಸೂತ್ರ - 295. ಇತೋಽತ್ ಸರ್ವನಾಮಸ್ಥಾನೇ (7.1.86)**

ವೃತ್ತಿಃ–ಪಥ್ಯಾದೇಃ 'ಇ'ಕಾರಸ್ಯ 'ಅ'ಕಾರಃ ಸರ್ವನಾಮಸ್ಥಾನೇ ಪರೇ।

ಪ. ಛೇ. – ಇತಃ, ಅತ್, ಸರ್ವನಾಮಸ್ಥಾನೇ।

ಅ. ವ್ಯ. – "ಪಥಿಮತ್ಥ್ಯೃಭುಕ್ಷಾಮಾತ್ (7.1.85)" ಎಂಬ ಸೂತ್ರದಿಂದ "ಪಥಿಮತ್ಥ್ಯೃಭುಕ್ಷಾಮ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ–ಪಥಿನ್, ಮಥಿನ್ ಮತ್ತು ಋಭುಕ್ಷಿನ್ ಶಬ್ದಗಳ 'ಇ' ಕಾರದ ಸ್ಥಾನದಲ್ಲಿ 'ಅ' ಕಾರಾದೇಶವು ಬರುತ್ತದೆ– ಸರ್ವನಾಮಸ್ಥಾನವು ಪರದಲ್ಲಿದ್ದಾಗ.

**(ನ್ಥ- ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ - 296. ಥೋ ನ್ಥಃ (7.1.87)**

ವೃತ್ತಿಃ–ಪಥಿಮಥೋಃ ಥಸ್ಯ ನ್ಥ–ಆದೇಶಃ ಸರ್ವನಾಮಸ್ಥಾನೇ। ಪನ್ಥಾಃ। ಪನ್ಥಾನೌ। ಪನ್ಥಾನಃ।

ಪ. ಛೇ. – ಥಃ, ನ್ಥಃ।

ಅ. ವ್ಯ–"ಪಥಿಮತ್ಥ್ಯೃಭುಕ್ಷಾವಮಾತ್ (7.1.85)" ಎಂಬ ಸೂತ್ರದಿಂದ "ಪಥಿಮತ್ಥ್ಯೃಭುಕ್ಷಾಮ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ–ಪಥಿನ್, ಮಥಿನ್ ಮತ್ತು ಋಭುಕ್ಷಿನ್ ಶಬ್ದಗಳ 'ಥ್' ಕಾರದ ಸ್ಥಾನದಲ್ಲಿ 'ನ್ಥ' ಆದೇಶವು ಬರುತ್ತದೆ– ಸರ್ವನಾಮಸ್ಥಾನವು ಪರದಲ್ಲಿದ್ದಾಗ.

ಉದಾ– ಪನ್ಥಾಃ – (ಮಾರ್ಗ) – ಪ್ರಥಮಾ ವಿಭಕ್ತಿ ಏಕ ವಚನದಲ್ಲಿ, ಪಥಿನ್+ಸು (ಸ್) ಎಂದಿದ್ದಾಗ –"ಪಥಿಮತ್ಥ್ಯೃಭುಕ್ಷಾಮಾತ್ (7.1.85)" ಎಂಬ ಸೂತ್ರದಿಂದ, ಪಥಿನ್ ಶಬ್ದದ 'ನ್' ಕಾರದ ಸ್ಥಾನದಲ್ಲಿ 'ಆ' ಕಾರವು ಆದೇಶವಾಗಿ ಬಂದು, ಪಥಿ+ಆ+ಸ್ ಎಂದಿದ್ದಾಗ, "ಇತೋಽತ್ ಸರ್ವನಾಮಸ್ಥಾನೇ" (7.1.86) ಎಂಬ ಸೂತ್ರದಿಂದ 'ಥಿ' ಯ 'ಇ' ಕಾರದ ಸ್ಥಾನದಲ್ಲಿ 'ಅ' ಕಾರವು ಆದೇಶವಾಗಿ ಬಂದು, ಪಥ+ಆ+ಸ್ ಎಂದಾಗುತ್ತದೆ. ಪ್ರಕೃತ ಸೂತ್ರದಿಂದ 'ಥ' ಗೆ 'ನ್ಥ' ಆದೇಶ ಬಂದು, ಪನ್ಥ+ಆ+ಸ್ ಎಂದಾಗಿ, 'ಸ್' ಕಾರಕ್ಕೆ ರುತ್ವ–ವಿಸರ್ಗಗಳು ಬಂದು, ಪನ್ಥಾಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ – ಪನ್ಥಾನೌ(2)– ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ದ್ವಿ ವಚನಗಳಲ್ಲಿ ಪಥಿನ್+ಔ ಮತ್ತು ಪಥಿನ್+ಔಟ್(ಔ) ಎಂದಿದ್ದಾಗ, "ಇತೋಽತ್ ಸರ್ವನಾಮಸ್ಥಾನೇ" (7.1.86) ಎಂಬ ಸೂತ್ರದಿಂದ 'ಥಿ' ಯ 'ಇ' ಕಾರದ ಸ್ಥಾನದಲ್ಲಿ 'ಅ' ಕಾರವು ಆದೇಶವಾಗಿ ಬಂದು, ಪಥನ್+ಔ ಎಂದಾಗುತ್ತದೆ. ಆಮೇಲೆ ಪ್ರಕೃತ ಸೂತ್ರದಿಂದ, 'ಥ್' ಕಾರಕ್ಕೆ 'ನ್ಥ್' ಆದೇಶ ಬಂದು, ಪನ್ಥನ್+ಔ ಎಂದಾಗುತ್ತದೆ. "ಸರ್ವನಾಮಸ್ಥಾನೇ ಚಾಸಮ್ಬುದ್ಧೌ" ಎಂಬ ಸೂತ್ರದಿಂದ ಉಪಧಾ–ದೀರ್ಘ ಬಂದು, ಪನ್ಥಾನ್+ಔ=ಪನ್ಥಾನೌ

(2) ಎಂದು ರೂಪವಾಗುತ್ತದೆ. ಇದೇ ರೀತಿಯಲ್ಲಿ ಪ್ರಥಮಾ ವಿಭಕ್ತಿ ಬಹುವಚನದಲ್ಲಿ ಪನ್ಥಾನಃ ಎಂದೂ, ಹಾಗೆಯೇ ದ್ವಿತೀಯಾ ಏಕವಚನದಲ್ಲಿ ಪನ್ಥಾನಮ್ ಎಂದೂ ರೂಪಗಳಾಗುತ್ತವೆ.

**(ಟಿ ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ – 297. ಭಸ್ಯ ಟೇರ್ಲೋಪಃ ( 7.1.88)**

ವೃತ್ತಿಃ–ಭಸ್ಯ ಪಥ್ಯಾದೇಃ ಟೇಃ ಲೋಪಃ । ಪಥಃ, ಪಥಾ। ಪಥಿಭ್ಯಾಮ್। ಏವಂ ಮಥಿನ್ ಋಭುಕ್ಷಿನ್।

ಪ. ಛೇ. – ಭಸ್ಯ, ಟೇಃ, ಲೋಪಃ।

ಅ. ವೃ.– "ಪಥಿಮಥ್ಯೃಭುಕ್ಷಾಮಾತ್ (7.1.85)" ಎಂಬ ಸೂತ್ರದಿಂದ "ಪಥಿಮಥ್ಯೃಭುಕ್ಷಾಮ್" ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ–'ಭ' ಸಂಜ್ಞೆಯುಳ್ಳ ಪಥಿನ್, ಮಥಿನ್ ಮತ್ತು ಋಭುಕ್ಷಿನ್ ಶಬ್ದಗಳ 'ಟಿ'ಗೆ ಲೋಪ ಬರುತ್ತದೆ.

ಸೂಚನೆ: ದ್ವಿತೀಯಾ ಬಹುವಚನವಾದ 'ಶಸ್'ನಿಂದಾರಂಭಿಸಿ 'ಸುಪ್' ಪ್ರತ್ಯಯದ ವರೆಗೆ ಇರುವ 16 ಪ್ರತ್ಯಯಗಳು ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ 'ಭ' ಸಂಜ್ಞೆಯನ್ನು ಹೊಂದುತ್ತವೆ. ಮತ್ತು 'ಪಥಿನ್' ಮೊದಲಾದವುಗಳಲ್ಲಿ "ಅಚೋಽನ್ತ್ಯಾದಿ ಟಿ" ಎಂಬ ಸೂತ್ರದಿಂದ ಕೊನೆಯ ವರ್ಣವಾದ 'ಅಚ್' ಮತ್ತು ಅದರ ಜೊತೆಗೆ ಕೂಡಿರುವ ವ್ಯಞ್ಜನ ವರ್ಣವು ಅಂದರೆ 'ಇನ್' ಗೆ 'ಟಿ' ಸಂಜ್ಞೆಯು ಬರುತ್ತದೆ.

ಉದಾ: ಪಥಃ–ದ್ವಿತೀಯಾ ಬಹುವಚನದಲ್ಲಿ ಪಥಿನ್+ಶಸ್ (ಅಸ್) ಎಂದಿದ್ದಾಗ, ಇದು ಸರ್ವನಾಮಸ್ಥಾನವಾಗದೇ ಇರೋಣದರಿಂದ 'ಆ' ಕಾರಾದೇಶ, 'ಅ' ಕಾರಾದೇಶ ಮತ್ತು 'ಇನ್ಥ್' ಆದೇಶ ಮೊದಲಾದವು ಯಾವದೂ ಬರುವದಿಲ್ಲ. ಪಥಿನ್‌ನಲ್ಲಿರುವ ಕೊನೆಯ 'ಅಚ್' ಆದ 'ಇ' ಕಾರವು ಮತ್ತು ಅದರಜೊತೆಗೆ ಕೂಡಿದ 'ನ್' ಕಾರ ಅಂದರೆ, 'ಇನ್'ಗೆ "ಅಚೋಽನ್ತ್ಯಾದಿ ಟಿ" ಎಂಬ ಸೂತ್ರದಿಂದ 'ಟಿ' ಸಂಜ್ಞೆ ಬರುತ್ತದೆ. ನಂತರ ಪ್ರಕೃತ ಸೂತ್ರದಿಂದ 'ಟಿ' ಗೆ ಲೋಪ ಬಂದು, ಪಥ+ಅಸ್ ಎಂದಾಗುತ್ತದೆ, 'ಸ್' ಕಾರಕ್ಕೆ ರುತ್ವ–ವಿಸರ್ಗಗಳಿಂದ ಪಥಃ ಎಂಬ ರೂಪವು ಸಿದ್ಧವಾಗುತ್ತದೆ. ಹೀಗೆಯೇ ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, 'ಟಿ'ಗೆ ಲೋಪ ಬಂದು ಪಥಾ, ಪಥೇ, ಪಥಃ(3), ಪಥೋಃ(2), ಪಥಾಮ್, ಪಥಿ ಎಂಬ ರೂಪಗಳು ಸಿದ್ಧವಾಗುತ್ತವೆ.

ಹಲಾದಿ ಸುಪ್ ವಿಭಕ್ತಿಗಳು ಪರದಲ್ಲಿದ್ದಾಗ, "ನ ಲೋಪಃ ಪ್ರಾತಿಪದಿಕಾನ್ತಸ್ಯ" ಎಂಬ ಸೂತ್ರದಿಂದ 'ನ್' ಕಾರಕ್ಕೆ ಲೋಪ ಬಂದು, ಪಥಿಭ್ಯಾಮ್(3),ಪಥಿಭಿಃ, ಪಥಿಭ್ಯಃ(2), ಪಥಿಷು ಎಂಬ ರೂಪಗಳಾಗುತ್ತವೆ.

**'ನ್' ಕಾರಾನ್ತ ಪಥಿನ್ ಶಬ್ದದ ರೂಪಗಳು**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಪನ್ಥಾಃ | ಪನ್ಥಾನೌ | ಪನ್ಥಾನಃ |

| | | | |
|---|---|---|---|
| ದ್ವಿತೀಯಾ | ಪನ್ಥಾನಮ್ | ಪನ್ಥಾನೌ | ಪಥಃ |
| ತೃತೀಯಾ | ಪಥಾ | ಪಥಿಭ್ಯಾಮ್ | ಪಥಿಭಿಃ |
| ಚತುರ್ಥೀ | ಪಥೇ | ಪಥಿಭ್ಯಾಮ್ | ಪಥಿಭ್ಯಃ |
| ಪಞ್ಚಮೀ | ಪಥಃ | ಪಥಿಭ್ಯಾಮ್ | ಪಥಿಭ್ಯಃ |
| ಷಷ್ಠೀ | ಪಥಃ | ಪಥೋಃ | ಪಥಾಮ್ |
| ಸಪ್ತಮೀ | ಪಥಿ | ಪಥೋಃ | ಪಥಿಷು |
| ಸಂಬೋಧನ | ಹೇ ಪನ್ಥಾಃ! | ಹೇ ಪನ್ಥಾನೌ! | ಹೇ ಪನ್ಥಾನಃ! |

**(ಷಟ್ ಸಂಜ್ಞಾ ವಿಧಾಯಕ ಸೂತ್ರ)**

**ಸೂತ್ರ- 298. ಷ್ಣಾನ್ತಾ ಷಟ್(1.1.24)**

ವೃತ್ತಿಃ-ಷಾನ್ತಾಃ ನಾನ್ತಾಃ ಚ ಸಂಖ್ಯಾ ಷಟ್ ಸಂಜ್ಞಾ ಸ್ಯಾತ್। ಪಞ್ಚನ್ ಶಬ್ದಃ ನಿತ್ಯಂ ಬಹುವಚನಾಂತಃ। ಪಞ್ಚ। ಪಞ್ಚ। ಪಞ್ಚಭಿಃ। ಪಞ್ಚಭ್ಯಃ। ಪಞ್ಚಭ್ಯಃ। ನುಟ್(ನುಡಾಗಮ)।

ಪ. ಛೇ. – ಷ್ಣಾನ್ತಾಃ, ಷಟ್।

ಅ.ವೃ.– "ಬಹುಗಣ ವತುಡತಿ ಸಂಖ್ಯಾ" ಎಂಬ ಸೂತ್ರದಿಂದ 'ಸಂಖ್ಯಾ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ–'ಷ್' ಕಾರಾನ್ತ ಮತ್ತು 'ನ್' ಕಾರಾನ್ತ ಸಂಖ್ಯಾವಾಚಕ ಶಬ್ದಗಳಿಗೆ, 'ಷಟ್' ಸಂಜ್ಞಾ ಬರುತ್ತದೆ. 'ಷಟ್' ಸಂಜ್ಞೆ ಬಂದದ್ದರಿಂದ "ಷಡ್ಭ್ಯೋ ಲುಕ್" ಮತ್ತು "ಷಟ್ ಚತುರ್ಭ್ಯಶ್ಚ" ಮೊದಲಾದ ಸೂತ್ರಗಳು ಪ್ರವೃತ್ತವಾಗುತ್ತವೆ. 'ಪಞ್ಚನ್' ಶಬ್ದವು ಯಾವಾಗಲೂ ಬಹುವಚನಾನ್ತವಾಗಿದೆ.

ಉದಾ– ಪಞ್ಚ–(ಐದು) – ಪ್ರಥಮಾ ಮತ್ತು ದ್ವಿತೀಯಾ ಬಹುವಚನಗಳಲ್ಲಿ ಪಞ್ಚನ್+ಜಸ್(ಅಸ್) ಮತ್ತು ಪಞ್ಚನ್+ಶಸ್(ಅಸ್) ಎಂದಿದ್ದಾಗ, ಇದು 'ನ್' ಕಾರಾನ್ತವಾಗಿರೋಣದ್ದರಿಂದ, ಪ್ರಕೃತ ಸೂತ್ರದಿಂದ 'ಷಟ್' ಸಂಜ್ಞೆ ಬಂದು "ಷಡ್ಭ್ಯೋ ಲುಕ್" ಎಂಬ ಸೂತ್ರದಿಂದ 'ಜಸ್(ಅಸ್)' ಗೆ ಲೋಪ ಬಂದು 'ಪಞ್ಚನ್' ಎಂದು ರೂಪವಾಗಿ, "ನ ಲೋಪಃ ಪ್ರಾತಿಪದಿಕಾನ್ತಸ್ಯ" ಎಂಬ ಸೂತ್ರದಿಂದ 'ನ್' ಕಾರಕ್ಕೆ ಲೋಪ ಬಂದು, ಪಞ್ಚ ಎಂದು ರೂಪವಾಗುತ್ತದೆ.

ಹಲಾದಿ ಪ್ರತ್ಯಯಗಳಾದ 'ಭಿಸ್' ಮತ್ತು 'ಭ್ಯಸ್' ಪರದಲ್ಲಿದ್ದಾಗ, 'ನ್' ಕಾರ ಲೋಪವಾಗಿ, ಪಞ್ಚಭಿಃ ಮತ್ತು ಪಞ್ಚಭ್ಯಃ ಎಂಬ ರೂಪಗಳು ಸಿದ್ಧವಾಗುತ್ತವೆ.

**(ದೀರ್ಘವನ್ನು ವಿಧಿಸುವ ಸೂತ್ರ)**

**ಸೂತ್ರ – 299. ನೋಪಧಾಯಾಃ (6.4.7)**

ವೃತ್ತಿಃ–ನಾನ್ತಸ್ಯ ಉಪಧಾಯಾಃ ದೀರ್ಘಃ ನಾಮಿ। ಪಞ್ಚಾನಾಮ್। ಪಞ್ಚಸು।

ಪ. ಛೇ. – ನ, ಉಪಧಾಯಾಃ।

ಅ. ವೃ.– "ಢ್ರಲೋಪೇ ಪೂರ್ವಸ್ಯ ದೀರ್ಘೋಽಣಃ" ಎಂಬ ಸೂತ್ರದಿಂದ 'ದೀರ್ಘಃ' ಎಂಬ ಪದವು ಮತ್ತು "ನಾಮಿ"ಎಂಬ ಸೂತ್ರವು ಅನುವೃತ್ತವಾಗುತ್ತವೆ. "ಅಙ್ಗಸ್ಯ" ಎಂಬುದು ಅಧಿಕಾರ ಸೂತ್ರ.

ಅರ್ಥ–'ನ್' ಕಾರಾನ್ತ ಉಪಧೆಗೆ ದೀರ್ಘವು ಬರುತ್ತದೆ. 'ನಾಮ್' ಎಂಬ ಪದವು ಪರದಲ್ಲಿದ್ದಾಗ.

ಉದಾ– ಪಞ್ಚಾನಾಮ್– ಷಷ್ಠೀ ವಿಭಕ್ತೀ ದ್ವಿವಚನದಲ್ಲಿ ಪಞ್ಚನ್+ಆಮ್ ಎಂದಿದ್ದಾಗ, "ಷ್ಣಾನ್ತಾ ಷಟ್(1.1.24)" ಎಂಬ ಸೂತ್ರದಿಂದ 'ಷಟ್' ಸಂಜ್ಞೆ ಬಂದು, "ಷಟ್ ಚತುರ್ಭ್ಯಶ್ಚ" ಎಂಬ ಸೂತ್ರದಿಂದ ನುಡಾಗಮವನ್ನು ಹೊಂದಿ, ಪಞ್ಚನ್+ನ್+ಆಮ್ ಎಂದಿದ್ದಾಗ, ಪ್ರಕೃತ ಸೂತ್ರದಿಂದ ಉಪಧಾ ದೀರ್ಘವಾಗಿ ಪಞ್ಚಾನ್+ನಾವ್ ಎಂದಿದ್ದಾಗ, 'ನಾವ್' ಎಂಬುದು ನುಡಾಗಮದಿಂದ ಕೂಡಿರೋಣದ್ದರಿಂದ ನಾವ್' ಎಂಬುದು ಹಲಾದಿಯಾಗುತ್ತದೆ. "ಸ್ವಾದಿಷ್ವ ಸರ್ವನಾಮಸ್ಥಾನೇ ಎಂಬ ಸೂತ್ರದಿಂದ ಇದಕ್ಕೆ ಪದಸಂಜ್ಞೆ ಬಂದು, "ನ ಲೋಪಃ ಪ್ರಾತಿಪದಿಕಾನ್ತಸ್ಯ" ಎಂಬ ಸೂತ್ರದಿಂದ 'ನ್' ಕಾರಕ್ಕೆ ಲೋಪ ಬಂದು, ಪಞ್ಚಾ+ನಾಮ್=ಪಞ್ಚಾನಾಮ್ ಎಂದು ರೂಪವಾಗುತ್ತದೆ.

ಉದಾ–ಪಞ್ಚಸು – ಸಪ್ತಮೀ ವಿಭಕ್ತಿ ಬಹುವಚನದಲ್ಲಿ ಪಞ್ಚನ್+ಸು ಎಂದಿದ್ದಾಗ, "ನ ಲೋಪಃ ಪ್ರಾತಿಪದಿಕಾನ್ತಸ್ಯ" ಎಂಬ ಸೂತ್ರದಿಂದ 'ನ್' ಕಾರಕ್ಕೆ ಲೋಪ ಬಂದು, ಪಞ್ಚಸು ಎಂದು ರೂಪವಾಗುತ್ತದೆ.

### (ಆತ್ವವನ್ನು (ಆ–ಕಾರವನ್ನು) ವಿಧಿಸುವ ಸೂತ್ರ)

**ಸೂತ್ರ– 300. ಅಷ್ಟನ ಆ ವಿಭಕ್ತೌ ( 7.2.84)**

ವೃತ್ತಿಃ–ಹಲಾದೌ ವಾ ಸ್ಯಾತ್।

ಪ. ಛೇ. – ಅಷ್ಟನಃ, ಆ, ವಿಭಕ್ತೌ।

ಅ. ವೃ.– "ರಾಯೋಹಲಿ" ಎಂಬ ಸೂತ್ರದಿಂದ 'ಹಲಿ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ–ಹಲಾದಿ ವಿಭಕ್ತಿಯು ಪರದಲ್ಲಿದ್ದಾಗ, 'ಅಷ್ಟನ್' ಶಬ್ದಕ್ಕೆ ವಿಕಲ್ಪದಿಂದ 'ಆ' ಕಾರವು ಅನ್ತಾದೇಶವಾಗಿ ಬರುತ್ತದೆ.

### (ಔಶ್ ಆದೇಶವನ್ನು ವಿಧಿಸುವ ಸೂತ್ರ)

**ಸೂತ್ರ– 301. ಅಷ್ಟಾಭ್ಯ ಔಶ್ (7.1.21)**

ವೃತ್ತಿಃ–ಕೃತಾಕಾರಾತ್ ಅಷ್ಟನಃ ಜಶ್ಶಸೋಃ ಔಶ್। ಅಷ್ಟಭ್ಯ ಇತಿ ವಕ್ತವ್ಯೇ ಕೃತಾತ್ವನಿರ್ದೇಶಃ ಜಸ್–ಶಸೋಃ ವಿಷಯೇ ಆತ್ವಂ ಜ್ಞಾಪಯತಿ। ಅಷ್ಟೌ ಅಷ್ಟೌ ಅಷ್ಟಾಭಿಃ। ಅಷ್ಟಾಭ್ಯಃ। ಅಷ್ಟಾಭ್ಯಃ। ಅಷ್ಟಾನಾಮ್। ಅಷ್ಟಾಸು। ಆತ್ವಾಭಾವೇ–ಅಷ್ಟ ಪಞ್ಚವತ್।

ಪ. ಛೇ. – ಅಷ್ಟಾಭ್ಯಃ, ಔಶ್।

ಅ.ವೃ–"ಜಶ್ಶಸೋಃ ಶಿ" ಸೂತ್ರದಿಂದ ಜಶ್ಶಸೋಃ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ–ಆ–ಕಾರಾದೇಶವನ್ನು ಹೊಂದಿದ 'ಅಷ್ಟನ್' ಶಬ್ದದ ಪರದಲ್ಲಿ ಇರುವ 'ಜಸ್(ಅಸ್)' ಮತ್ತು 'ಶಸ್(ಅಸ್)' ಗಳ ಸ್ಥಾನದಲ್ಲಿ 'ಔಶ್(ಔ) ಆದೇಶವು ಬರುತ್ತದೆ. ಇದು 'ಶಿತ್' ಆಗಿರೋಣದ್ದರಿಂದ, "ಅನೇಕಾಲ್ ಶಿತ್ ಸರ್ವಸ್ಯ" ಎಂಬ ಸೂತ್ರದ ಪ್ರಕಾರ ಸರ್ವಾದೇಶವಾಗಿ ಬರುತ್ತದೆ. ಅಂದರೆ ಪ್ರಥಮಾ ಮತ್ತು ದ್ವಿತೀಯಾ ಬಹುವಚನಗಳಲ್ಲಿ 'ಜಸ್(ಅಸ್)' ಮತ್ತು 'ಶಸ್(ಅಸ್)' ಗಳ ಸ್ಥಾನದಲ್ಲಿ 'ಔಶ್(ಔ) ಆದೇಶವಾಗಿ ಬಂದು ಅಷ್ಟೌ ಅಷ್ಟೌ ಎಂದು ರೂಪಗಳಾಗುತ್ತವೆ. "ಷಡ್ಭ್ಯೋ ಲುಕ್" ಎಂಬ ಸೂತ್ರಕ್ಕೆ ಇದು ಅಪವಾದವಾಗಿದೆ.

ಉದಾ– ತೃತೀಯಾ ಬಹುವಚನದಲ್ಲಿ ಆಷ್ಟನ್+ಭಿಸ್ ಎಂದಿದ್ದಾಗ, ಆತ್ವ ಪಕ್ಷದಲ್ಲಿ ಅಷ್ಟಾಭಿಃ ಎಂದೂ ಆತ್ವಾಭಾವ ಪಕ್ಷದಲ್ಲಿ ಅಷ್ಟಭಿಃ ಎಂದು ಎರಡು ರೂಪಗಳಾಗುತ್ತವೆ.

ಉದಾ– ಚತುರ್ಥೀ ಮತ್ತು ಪಞ್ಚಮೀ ವಿಭಕ್ತಿ ಬಹುವಚನಗಳಲ್ಲಿ ಅಷ್ಟನ್+ಭ್ಯಸ್ ಎಂದಿದ್ದಾಗ, ಮೇಲಿನಂತೆ ಅಷ್ಟಾಭ್ಯಃ ಮತ್ತು ಅಷ್ಟಭ್ಯಃ ಎಂದು ಎರಡು ರೂಪಗಳಾಗುತ್ತವೆ.

ಸೂಚನೆ: ಅಷ್ಟನ್ ಶಬ್ದವು ನಿತ್ಯ ಬಹುವಚನಾಂತವಾಗಿರುತ್ತದೆ.

**(ನಿತ್ಯ ಬಹುವಚನಾಂತವಾದ 'ನ್' ಕಾರಾಂತ ಅಷ್ಟನ್ ಶಬ್ದದ ರೂಪಗಳು)**

| **ವಿಭಕ್ತಿ** | **ಆತ್ವ ಪಕ್ಷ** | **ಆತ್ವಾಭಾವ ಪಕ್ಷ** |
|---|---|---|
| ಪ್ರಥಮಾ | ಅಷ್ಟೌ | ಅಷ್ಟ |
| ದ್ವಿತೀಯಾ | ಅಷ್ಟೌ | ಅಷ್ಟ |
| ತೃತೀಯಾ | ಅಷ್ಟಾಭಿಃ | ಅಷ್ಟಭಿಃ |
| ಚತುರ್ಥೀ | ಅಷ್ಟಾಭ್ಯಃ | ಅಷ್ಟಭ್ಯಃ |
| ಪಞ್ಚಮೀ | ಅಷ್ಟಾಭ್ಯಃ | ಅಷ್ಟಭ್ಯಃ |
| ಷಷ್ಠೀ | ಅಷ್ಟಾನಾಮ್ | ಅಷ್ಟಾನಾಮ್ |
| ಸಪ್ತಮೀ | ಅಷ್ಟಾಸು | ಅಷ್ಟಸು |

**(ಕ್ವಿನ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ– 302. ಋತ್ವಿಗ್–ದಧೃಕ್–ಸ್ರಗ್–ದಿಗುಷ್ಣಿಗಞ್ಚು–ಯುಜಿ–ಕ್ರುಞ್ಚಾಂ (3.2.59)**

ವೃತ್ತಿಃ–ಏಭ್ಯಃ (ಋತ್ವಿಕ್–ದಧೃಕ್–ಸ್ರಕ್–ದಿಕ್–ಉಷ್ಣಿಕ್–ಅಞ್ಚ್–ಯುಜಿ–ಕ್ರುಞ್ಚಾಮ್) ಕ್ವಿನ್। ಅಞ್ಚೋಃ ಸುಪಿ ಉಪಪದೇ। ಯುಜಿ–ಕ್ರುಞ್ಚೋಃ ಕೇವಲಯೋಃ। ಕ್ರುಞ್ಚೇಃ ನಲೋಪ ಅಭಾವಶ್ಚ ನಿಪಾತ್ಯತೇ।ಕನಾವಿತೌ।

ಪ. ಛೇ. – ಋತ್ವಿಕ್,ದಧೃಕ್,ಸಕ್,ದಿಕ್,ಉಷ್ಣಿಕ್,ಅಞ್ಚು,ಯುಜಿ,ಕ್ರುಞ್ಚಾಂ।

ಅ. ವೃ– "ಸ್ಪೃಶೋಽನುದಕೇ ಕ್ವಿನ್" ಎಂಬ ಸೂತ್ರದಿಂದ 'ಕ್ವಿನ್' ಶಬ್ದವು ಅನುವೃತ್ತವಾಗಿದೆ.

ಅರ್ಥ– 'ಸುಪ್' ಉಪಪದವಾಗಿರುವ ಋತುಪೂರ್ವಕ 'ಯಜ್' ಧಾತು, ದ್ವಿತ್ವವನ್ನು ಹೊಂದಿರುವ ದೃಶ್ ಧಾತುವಿನ ದದೃಶ್, ಸ್ರಜ್, ದಿಶ್, ಉತ್ ಪೂರ್ವಕ ಸ್ನಿಹ್ ಧಾತು, ಉಪಪದರಹಿತವಾದ ಯುಜ್, ಮತ್ತು ಕ್ರುಞ್ಚ್ ಧಾತುವಿನ ನಂತರ 'ಕ್ವಿನ್' ಪ್ರತ್ಯಯವು ಬರುತ್ತದೆ. ಮತ್ತು ಕ್ರುಞ್ಚ್ ನಲ್ಲಿರುವ 'ನ್' ಕಾರಕ್ಕೆ ಲೋಪಾಭಾವದ ನಿಪಾತನವು ಸಹ ಆಗಿರುತ್ತದೆ. ಇಲ್ಲಿ ನಿಪಾತನವೆಂದರೆ ಪಾಣಿನಿಯವರು ಹೇಗೆ ಶಬ್ದವನ್ನು ಉಚ್ಚರಿಸಿದ್ದಾರೋ ಹಾಗೆಯೇ ಸ್ವೀಕರಿಸಬೇಕು. ಅದರಲ್ಲಿ ಯಾವ ಬದಲಾವಣೆಯನ್ನೂ ಮಾಡಬಾರದು.

ಕ್ವಿನ್ ಪ್ರತ್ಯಯದಲ್ಲಿ 'ಕ್' ಕಾರವು "ಲಶಕ್ವತದ್ಧಿತೇ" ಎಂಬ ಸೂತ್ರದಿಂದ 'ಇತ್' ಸಂಜ್ಞೆಯನ್ನು ಹೊಂದಿದೆ. 'ನ್' ಕಾರವು "ಹಲನ್ತ್ಯಮ್" ಎಂಬುದರಿಂದ 'ಇತ್' ಸಂಜ್ಞಕವಾಗಿದೆ. 'ಇ' ಕಾರವು ಉಚ್ಚಾರಣಾರ್ಥ. 'ವ್' ಕಾರವು "ವೇರಪೃಕ್ತಸ್ಯ" ಎಂಬ ಸೂತ್ರದಿಂದ ಲೋಪವಾಗುತ್ತದೆ. ಆದ್ದರಿಂದ ಇದಕ್ಕೆ ಸರ್ವಾಪಹಾರೀ ಎಂದು ಹೇಳುತ್ತಾರೆ.

**(ಕೃತ್ ಸಂಜ್ಞಾ ವಿಧಾಯಕ ಸೂತ್ರ)**

**ಸೂತ್ರ –303. ಕೃದತಿಙ್ (3.1.63)**

ವೃತ್ತಿಃ–ಅತ್ರ ಧಾತ್ವಧಿಕಾರೇ ತಿಙ್–ಭಿನ್ನಃ ಪ್ರತ್ಯಯಃ ಕೃತ್–ಸಂಜ್ಞಃ ಸ್ಯಾತ್।

ಪ. ಛೇ. – ಕೃತ್, ಅತಿಙ್।

ಅ. ವೃ – "ತತ್ರೋಪಪದಮ್ ಸಪ್ತಮೀಸ್ಥಮ್" ಎಂಬ ಸೂತ್ರದಿಂದ 'ತತ್ರ' ಎಂಬ ಪದವು ಅನುವೃತ್ತವಾಗುತ್ತದೆ. "ಧಾತೋಃ" ಎಂಬುದು ಅಧಿಕಾರ ಸೂತ್ರ.

ಅರ್ಥ– ಧಾತುವಿನ ಅಧಿಕಾರದಲ್ಲಿ ಬರುವ 'ತಿಙ್' ಪ್ರತ್ಯಯಗಳಿಗಿಂತ ಭಿನ್ನವಾದವುಗಳಿಗೆ 'ಕೃತ್' ಸಂಜ್ಞೆಯು ಬರುತ್ತದೆ. ಇಲ್ಲಿ 'ತಿಙ್' ಎಂದರೆ 18 ಮೂಲ ಆಖ್ಯಾತ ಪ್ರತ್ಯಯಗಳು. ಇವುಗಳಿಗಿಂತ ಭಿನ್ನವಾದ ಪ್ರತ್ಯಯಗಳು ಧಾತ್ವಧಿಕಾರದಲ್ಲಿ ಹೇಳಲ್ಪಟ್ಟಿದ್ದರೆ(ಧಾತುವಿನ ಪರದಲ್ಲಿ ವಿಹಿತವಾಗಿದ್ದರೆ) ಅವುಗಳಿಗೆ 'ಕೃತ್' ಎಂಬ ಸಂಜ್ಞೆ ಬರುತ್ತದೆ. "ಕೃತ್ತದ್ಧಿತಸಮಾಸಾಶ್ಚ" ಎಂಬ ಸೂತ್ರದಿಂದ ಈ ಕೃದನ್ತಗಳಿಗೆ 'ಪ್ರಾತಿಪದಿಕ ಸಂಜ್ಞೆಯು' ಬರುತ್ತದೆ. 'ಕ್ವಿನ್' ಪ್ರತ್ಯಯವು ಕೃದನ್ತ ಪ್ರಕರಣದಲ್ಲಿ ಸೇರಿದೆ ಎಂಬುದು ಗಮನಾರ್ಹ.

**(ಅಪೃಕ್ತ 'ವ್' ಕಾರಕ್ಕೆ ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ– 304. ವೇರಪೃಕ್ತಸ್ಯ (6.1.67)**

ವೃತ್ತಿಃ–ಅಪೃಕ್ತಸ್ಯ ವಸ್ಯ ಲೋಪಃ ।

ಪ. ಛೇ. –ವೇಃ, ಅಪೃಕ್ತಸ್ಯ।

ಅ. ವೃ- "ಲೋಪೋವ್ಯೋರ್ವಲಿ" ಎಂಬ ಸೂತ್ರದಿಂದ 'ಲೋಪಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ-ಅಪೃಕ್ತ ಸಂಜ್ಞೆಯನ್ನು ಹೊಂದಿರುವ 'ವ್' ಕಾರವು ಲೋಪವಾಗುತ್ತದೆ. 'ಅಪೃಕ್ತ' ವೆಂದರೆ ಏಕಾಲ್ ಪ್ರತ್ಯಯವು ಎಂದರ್ಥ. ಆ 'ವ್' ಕಾರವು ಲೋಪ ಹೊಂದುತ್ತದೆ.

**(ಕುತ್ವ ವಿಧಾಯಕ ಸೂತ್ರ)**

**ಸೂತ್ರ - ೩೦೫. ಕ್ವಿನ್ಪ್ರತ್ಯಯಸ್ಯ ಕುಃ (8.2.62)**

ವೃತ್ತಿಃ-ಕ್ವಿನ್ ಪ್ರತ್ಯಯಃ ಯಸ್ಮಾತ್ ತಸ್ಯ ಕು(ಕ್)ವರ್ಗಃ ಅಂತಾದೇಶಃ ಪದಾಂತೇ। ಅಸ್ಯ ಅಸಿದ್ಧತ್ವಾತ್ "ಚೋಃ ಕುಃ" ಇತಿ ಕುತ್ವಮ್।ಋತ್ವಿಕ್,ಋತ್ವಿಗ್।ಋತ್ವಿಜೌ।ಋತ್ವಿಗ್ಭ್ಯಾಮ್।

ಅ. ವೃ.-"ಸ್ಕೋಃ ಸಂಯೋಗಾದ್ಯೋರನ್ತೇ ಚ" ಎಂಬ ಸೂತ್ರದಿಂದ 'ಅನ್ತೇ' ಎಂಬ ಪದವು ಅನುವೃತ್ತವಾಗುತ್ತದೆ. "ಪದಸ್ಯ" ಎಂಬುದು ಅಧಿಕಾರ ಸೂತ್ರ

ಅರ್ಥ- 'ಕ್ವಿನ್' ಪ್ರತ್ಯಯವು ಯಾವದಕ್ಕೆ ಸೇರಿಸಲಾಗಿದೆಯೋ, ಅಂತಹ ಶಬ್ದದ ಪದಾನ್ತದಲ್ಲಿ 'ಕ್' ವರ್ಗವು ಅನ್ತಾದೇಶವಾಗಿ ಬರುತ್ತದೆ.

ಸೂಚನೆ: ಈ ಪ್ರಕೃತ ಸೂತ್ರವು ತ್ರಿಪಾದಿಯಲ್ಲಿ ಪರದಲ್ಲಿ ಇರೋಣದರಿಂದ, "ಚೋಃ ಕುಃ" ಎಂಬ ಸೂತ್ರದ ದೃಷ್ಟಿಯಿಂದ ಅಸಿದ್ಧವಾಗುತ್ತದೆ. ಈ ಎರಡೂ ಸೂತ್ರಗಳು ಕುತ್ವವನ್ನೇ ವಿಧಿಸುತ್ತವೆ. ಆದರೆ "ಪೂರ್ವತ್ರಾಸಿದ್ಧಮ್" ಎಂಬ ಸೂತ್ರದ ಪ್ರಕಾರ, ಪರ ಶಾಸ್ತ್ರವು (ಈ ಪ್ರಕೃತ ಸೂತ್ರವು) ಅಸಿದ್ಧವಾಗುತ್ತದೆ.

ಉದಾ- ಋತ್ವಿಕ್,ಋತ್ವಿಗ್-(ಯಾಜ್ನಿಕ) - ಋತು ಪೂರ್ವಕ 'ಯಜ್' ಧಾತುವಿನ ನಂತರ ಕ್ವಿನ್ ಪ್ರತ್ಯಯವನ್ನು ಸೇರಿಸಿದಾಗ, "ಋತ್ವಿಗ್-ದಧೃಕ್-ಸ್ರಗ್-ದಿಗುಷ್ಣಿಗಞ್ಚು-ಯುಜಿ-ಕ್ರುಞ್ಚಾಂ" (3.2.59) ಸೂತ್ರದಿಂದ 'ಕ್ವಿನ್' ಪ್ರತ್ಯಯದ ಎಲ್ಲ ವರ್ಣಗಳೂ ಲುಪ್ತವಾಗುತ್ತವೆ. "ವಚಿಸ್ವಪಿಯಜಾದೀನಾಮ್ ಕಿತಿ" ಎಂಬ ಸೂತ್ರದಿಂದ 'ಯಜ್' ನಲ್ಲಿರುವ 'ಯ್' ಕಾರಕ್ಕೆ ಸಂಪ್ರಸಾರಣ ಬಂದು, 'ಇ' ಕಾರವಾಗಿ ಮತ್ತು "ಸಂಪ್ರಸಾರಣಾಚ್ಚ" ಎಂಬ ಸೂತ್ರದಿಂದ ಪೂರ್ವರೂಪ ಬಂದು, ಋತು+ಇ+ಅ+ಜ್=ಋತು+ಇಜ್ ಎಂದಾಗಿ, 'ಯಣ್' ಸಂಧಿಯಿಂದ ಋತ್ವಿಜ್ ಎಂದಾಗುತ್ತದೆ. 'ಕ್ವಿನ್' ಪ್ರತ್ಯಯವು 'ಕೃತ್' ಪ್ರತ್ಯಯವಾಗಿರೋಣದ್ದರಿಂದ "ಕೃತ್ತದ್ಧಿತ ಸಮಾಸಾಶ್ಚ" ಎಂಬ ಸೂತ್ರದಿಂದ ಪ್ರಾತಿಪದಿಕ ಸಂಜ್ಞೆ ಬರುತ್ತದೆ. ಆಮೇಲೆ 'ಸುಪ್' ಪ್ರತ್ಯಯವನ್ನು ಸೇರಿಸಿದಾಗ, ಋತ್ವಿಜ್+ಸ್ ಎಂದಾಗುತ್ತದೆ. ನಂತರ "ಹಲ್ಙ್ಯಾಭ್ಯೋ ದೀರ್ಘಾತ್ ಸುತಿಸ್ಯಪೃಕ್ತಮ್ ಹಲ್" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬರುತ್ತದೆ. ಪ್ರಕೃತ ಸೂತ್ರವೂ ಮತ್ತು "ಚೋಃ ಕುಃ" ಸೂತ್ರವೂ ಪ್ರಾಪ್ತವಾಗುತ್ತದೆ. ಮೇಲೆ ಹೇಳಿದ ಪ್ರಕಾರ ಪರಸೂತ್ರವು ಬಾಧಿತವಾಗಿ "ಚೋಃ ಕುಃ" ಎಂಬ ಸೂತ್ರದಿಂದಲೇ 'ಜ್' ಕಾರಕ್ಕೆ ಕುತ್ವ(ಗ್-ಕಾರ) ಬಂದು, ಋತ್ವಿಗ್ ಎಂದು ರೂಪವಾಗುತ್ತದೆ. "ವಾವಸಾನೇ" ಎಂಬ ಸೂತ್ರದಿಂದ ವೈಕಲ್ಪಿಕವಾಗಿ ಚರ್ತ್ವ ಬಂದು, ಋತ್ವಿಕ್ ಎಂದು ರೂಪವಾಗುತ್ತದೆ.

ಹೀಗೆ ಋತ್ವಿಕ್,ಋತ್ವಿಗ್ ಎಂದು ಎರಡು ರೂಪಗಳಾಗುತ್ತವೆ.

ಉದಾ- ಋತ್ವಿಜೌ – ಪ್ರಥಮಾ ಮತ್ತು ದ್ವಿತೀಯಾ ದ್ವಿವಚನಗಳಲ್ಲಿ ಋತ್ವಿಜ್+ಔ ಮತ್ತು ಋತ್ವಿಜ್+ಔಟ್(ಔ) ಎಂದಿದ್ದಾಗ, ಋತ್ವಿಜೌ ಎಂದು ರೂಪವಾಗುತ್ತದೆ.

ಇದೇ ರೀತಿಯಲ್ಲಿ ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಋತ್ವಿಜಃ, ಋತ್ವಿಜಮ್, ಋತ್ವಿಜಃ, ಋತ್ವಿಜಾ ಮೊದಲಾದ ರೂಪಗಳು ಆಗುತ್ತವೆ. ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ ಪದಸಂಜ್ಞೆ ಬಂದು, 'ಜ್' ಕಾರಕ್ಕೆ ಕುತ್ವ(ಗ್-ಕಾರ) ಆದೇಶ ಬಂದು ಋತ್ವಿಗ್ಭ್ಯಾಮ್, ಋತ್ವಿಗ್ಭಿಃ ಮೊದಲಾದ ರೂಪಗಳು ಸಿದ್ಧವಾಗುತ್ತವೆ.

ಉದಾ- ಋತ್ವಿಕ್ಷು – ಸಪ್ತಮೀ ವಿಭಕ್ತಿ ಬಹುವಚನದಲ್ಲಿ ಸುಪ್ ಪ್ರತ್ಯಯವನ್ನು ಸೇರಿಸಿದಾಗ, ಕುತ್ವ ಬಂದಮೇಲೆ, "ಖರಿ ಚ" ಎಂಬ ಸೂತ್ರದಿಂದ ಚರ್ತ್ವ(ಕ್) ಬಂದು, "ಆದೇಶ ಪ್ರತ್ಯಯಯೋಃ" ಎಂಬ ಸೂತ್ರದಿಂದ 'ಸು' ನ 'ಸ್' ಕಾರಕ್ಕೆ ಷತ್ವ ಬಂದು 'ಕ್'ಕಾರ ಮತ್ತು 'ಷ್' ಕಾರಗಳು ಸೇರಿ 'ಕ್ಷ' ಎಂದಾಗಿ, ಋತ್ವಿಕ್ಷು ಎಂದು ರೂಪವು ಸಿದ್ಧವಾಗುತ್ತದೆ.

**(ಜ್ ಕಾರಾನ್ತ ಋತ್ವಿಜ್ ಶಬ್ದದ ರೂಪಗಳು)**

| **ವಿಭಕ್ತಿ** | **ಏಕವಚನ** | **ದ್ವಿವಚನ** | **ಬಹುವಚನ** |
|---|---|---|---|
| ಪ್ರಥಮಾ | ಋತ್ವಿಕ್, ಋತ್ವಿಗ್ | ಋತ್ವಿಜೌ | ಋತ್ವಿಜಃ |
| ದ್ವಿತೀಯಾ | ಋತ್ವಿಜಮ್ | ಋತ್ವಿಜೌ | ಋತ್ವಿಜಃ |
| ತೃತೀಯಾ | ಋತ್ವಿಜಾ | ಋತ್ವಿಗ್ಭ್ಯಾಮ್ | ಋತ್ವಿಗ್ಭಿಃ |
| ಚತುರ್ಥೀ | ಋತ್ವಿಜೇ | ಋತ್ವಿಗ್ಭ್ಯಾಮ್ | ಋತ್ವಿಗ್ಭ್ಯಃ |
| ಪಞ್ಚಮೀ | ಋತ್ವಿಜಃ | ಋತ್ವಿಗ್ಭ್ಯಾಮ್ | ಋತ್ವಿಗ್ಭ್ಯಃ |
| ಷಷ್ಠೀ | ಋತ್ವಿಜಃ | ಋತ್ವಿಜೋಃ | ಋತ್ವಿಜಾಮ್ |
| ಸಪ್ತಮೀ | ಋತ್ವಿಜಿ | ಋತ್ವಿಜೋಃ | ಋತ್ವಿಕ್ಷು |
| ಸಂಬೋಧನ | ಹೇ ಋತ್ವಿಕ್!/ ಹೇ ಋತ್ವಿಗ್! | ಹೇ ಋತ್ವಿಜೌ! | ಹೇ ಋತ್ವಿಜಃ! |

**(ನುಮ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-306. ಯುಜೇರಸಮಾಸೇ (7.1.71)**

ವೃತ್ತಿಃ-ಯುಜೇಃ ಸರ್ವನಾಮಸ್ಥಾನೇ ನುಮ್ ಸ್ಯಾತ್ ಅಸಮಾಸೇ। ಸುಲೋಪಃ, ಸಂಯೋಗಾಂತ-ಲೋಪಃ, ಕುತ್ವೇನ ನಸ್ಯ ಙಃ। ಯುಙ್।ಅನುಸ್ವಾರ-ಪರಸವರ್ಣೌ।ಯುಞ್ಜೌ।ಯುಞ್ಜಃ।ಯುಗ್ಭ್ಯಾಮ್।

ಪ. ಛೇ. -ಯುಜೇಃ, ಅಸಮಾಸೇ।

ಅ. ವೃ.- "ಉಗಿದಚಾಮ್ ಸರ್ವನಾಮಸ್ಥಾನೇಽಧಾತೋಃ" ಎಂಬ ಸೂತ್ರದಿಂದ 'ಸರ್ವನಾಮಸ್ಥಾನೇ' ಎಂಬ ಪದವೂ "ಇದಿತೋ ನುಮ್ ಧಾತೋಃ" ಎಂಬ

ಸೂತ್ರದಿಂದ 'ನುಮ್(ನ್)' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ–ಸರ್ವನಾಮಸ್ಥಾನವು ಪರದಲ್ಲಿದ್ದಾಗ, 'ಯುಜ್' ಗೆ 'ನುಮ್(ನ್)'ಆಗಮವು ಬರುತ್ತದೆ– ಸಮಾಸವಾಗದೇ ಇದ್ದಾಗ. 'ನುಮ್(ನ್)' ಇದು 'ಮಿತ್' ಆಗಿರೋಣದರಿಂದ, 'ಯ್' ಕಾರೋತ್ತರ 'ಉ' ಕಾರದ ನಂತರ ಬಂದು, ಕುತ್ವವಿಲ್ಲದಿದ್ದಾಗ, ಯುನ್‌ಜ್ ಎಂದಾಗಿ ಚುತ್ವದಿಂದ ಯುಞ್ಜ್ ಎಂದಾಗುತ್ತದೆ.

ಉದಾ– ಯುಙ್ – ಯುಜ್ ಧಾತುವಿನ ನಂತರ "ಋತ್ವಿಗ್–ದಧೃಕ್–ಸ್ರಗ್–ದಿಗುಷ್ಣಿಗಞ್ಚು–ಯುಜಿ–ಕ್ರುಞ್ಚಾಂ" (3.2.59) ಎಂಬ ಸೂತ್ರದಿಂದ 'ಕ್ವಿನ್' ಪ್ರತ್ಯಯವನ್ನು ಸೇರಿಸಿದಮೇಲೆ, ಇದರ ಸರ್ವಾಪಹಾರವಾಗುತ್ತದೆ. ಇದು 'ಕೃತ್'

ಪ್ರತ್ಯಯವಾದ್ದರಿಂದ 'ಪ್ರಾತಿಪದಿಕಸಂಜ್ಞೆ' ಬರುತ್ತದೆ. ಇದಕ್ಕೆ ಸುಪ್ ಪ್ರತ್ಯಯವನ್ನು ಸೇರಿಸಿದಾಗ, ಪ್ರಕೃತ ಸೂತ್ರದಿಂದ 'ನುಮ್(ನ್)' ಆಗಮ ಬಂದು, ಯುನ್‌ಜ್+ಸ್ ಎಂದಿರುತ್ತದೆ. "ಹಲ್ಙ್ಯಾಭ್ಯೋ ದೀರ್ಘಾತ್ ಸುತಿಸ್ಯಪೃಕ್ತಮ್ ಹಲ್" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬರುತ್ತದೆ. 'ಜ್' ಕಾರಕ್ಕೆ ಸಂಯೋಗಾನ್ತ–ಲೋಪವಾಗಿ, "ಕ್ವಿನ್ಪ್ರತ್ಯಯಸ್ಯ ಕುಃ" ಎಂಬ ಸೂತ್ರದಿಂದ 'ನ್' ಕಾರದ ಸ್ಥಾನದಲ್ಲಿ, 'ಙ್' ಕಾರ ಬಂದು, ಯುಙ್ ಎಂದು ರೂಪವಾಗುತ್ತದೆ.

ಉದಾ– ಯುಞ್ಜೌ – 'ಯುಜ್' ಧಾತುವಿನನಂತರ, 'ಕ್ವಿನ್' ಪ್ರತ್ಯಯವನ್ನು ಸೇರಿಸಿದಮೇಲೆ, ಇದರ ಸರ್ವಾಪಹಾರವಾಗುತ್ತದೆ. ಇದು 'ಕೃತ್' ಪ್ರತ್ಯಯವಾದ್ದರಿಂದ 'ಪ್ರಾತಿಪದಿಕ ಸಂಜ್ಞೆ' ಬರುತ್ತದೆ. ಪ್ರಥಮಾ ವಿಭಕ್ತಿ ದ್ವಿ–ವಚನದಲ್ಲಿ 'ಔ' ಸೇರಿಸಿ ಯುಜ್+ಔ ಎಂದಿದ್ದಾಗ, ಪ್ರಕೃತ ಸೂತ್ರದಿಂದ ನುಮಾಗಮ ಬಂದು, ಯುನ್+ಜ್+ಔ ಎಂದಾಗುತ್ತದೆ. "ಚೋಃ ಕುಃ (8.2.30)" ಎಂಬ ಸೂತ್ರವು ಇಲ್ಲಿ ಪ್ರವೃತ್ತವಾಗದಿರೋಣದರಿಂದ 'ಕುತ್ವವು' ಬರುವದಿಲ್ಲ. "ಸ್ತೋಃ ಶ್ಚುನಾಶ್ಚುಃ" ಎಂಬ ಸೂತ್ರದಿಂದ 'ನ್' ಕಾರಕ್ಕೆ 'ಚ್' ವರ್ಗದ 'ಞ್' ಕಾರ ಬಂದು, ಯುಞ್+ಜ್+ಔ=ಯುಞ್ಜೌ ಎಂದು ರೂಪವಾಗುತ್ತದೆ. ಇದೇ ರೀತಿಯಲ್ಲಿ ಉಳಿದ ರೂಪಗಳೂ ಸಿದ್ಧವಾಗುತ್ತವೆ.

'ಶಸ್' ಮೊದಲಾದ ಪ್ರತ್ಯಯಗಳು ಅಸರ್ವನಾಮಸ್ಥಾನದ ಪರದಲ್ಲಿರುವಾಗ, 'ನುಮ್(ನ್) ಆಗಮವು ಬರುವದಿಲ್ಲ. ಆದುದರಿಂದ ಯುಜಃ, ಯುಜಾ, ಯುಜೇ, ಯುಜಃ, ಯುಜೋಃ, ಯುಜಾಮ್, ಯುಜಿ ಎಂಬ ಇತರ ರೂಪಗಳು ಸಿದ್ಧವಾಗುತ್ತವೆ.

ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಮುಂಬರುವ "ಚೋಃ ಕುಃ (8.2.30)" ಎಂಬ ಸೂತ್ರದಿಂದ ಕುತ್ವ ಬಂದು 'ಗ್' ಕಾರವು ಆದೇಶವಾಗಿ ಬರುತ್ತದೆ. ಆಗ ಯುಗ್ಭ್ಯಾಮ್, ಯುಗ್ಭಿಃ, ಯುಗ್ಭ್ಯಃ, ಯುಕ್ಷು ಎಂಬ ರೂಪಗಳು ಸಿದ್ಧವಾಗುತ್ತವೆ.

**(ಕುತ್ವವನ್ನು ಆದೇಶವಾಗಿ ವಿಧಿಸುವ ಸೂತ್ರ)**

**ಸೂತ್ರ– 307. ಚೋಃ ಕುಃ (8.2.30)**

ವೃತ್ತಿಃ–ಚವರ್ಗಸ್ಯ ಕವರ್ಗಃ ಸ್ಯಾತ್ ಝಲಿ ಪದಾನ್ತೇ ಚ। ಸುಯುಕ್, ಸುಯುಗ್।

ಸುಯುಜೌ। ಸುಯುಗ್ಭ್ಯಾಮ್। ಖನ್। ಖಞ್ಜೌ। ಖನ್ಭ್ಯಾಮ್।

ಅ.ವೃ–"ಝಲೋ ಝಲಿ" ಎಂಬ ಸೂತ್ರದಿಂದ 'ಝಲಿ' ಎಂಬ ಪದವೂ, ಹಾಗೆಯೇ"ಸ್ಕೋಃ ಸಂಯೋಗಾದ್ಯೋರನ್ತೇ ಚ" ಎಂಬ ಸೂತ್ರದಿಂದ 'ಅನ್ತೇ' ಎಂಬ ಪದವೂ, ಅನುವೃತ್ತವಾಗುತ್ತವೆ. "ಪದಸ್ಯ" ಎಂಬುದು ಅಧಿಕಾರ ಸೂತ್ರ.

ಅರ್ಥ– 'ಚ' ವರ್ಗದ ಸ್ಥಾನದಲ್ಲಿ 'ಕ' ವರ್ಗವು ಯಥಾಸಂಖ್ಯವಾಗಿ ಆದೇಶವಾಗಿ ಬರುತ್ತದೆ, 'ಝಲ್' ಪರದಲ್ಲಿದ್ದಾಗ. ಅಥವಾ ಪದಾನ್ತದಲ್ಲಿ.

ಉದಾ–ಸುಯುಕ್, ಸುಯುಗ್(ಉತ್ತಮವಾದ ಯೋಗಿ)– 'ಸು' ಪೂರ್ವಕ 'ಯುಜ್' ಧಾತುವಿನ ನಂತರ 'ಕ್ವಿಪ್' ಸೇರಿಸಿದಾಗ, ಪ್ರಥಮಾ ವಿಭಕ್ತಿ ಏಕವಚನ ಮತ್ತು ಸಂಬೋಧನ ವಿಭಕ್ತಿ ಏಕವಚನಲ್ಲಿ, ಸುಯುಜ್+ಕ್ವಿಪ್ ಎಂದಿದ್ದಾಗ, ಅದು ಸರ್ವಾಪಹಾರವಾಗಿ, 'ಸುಪ್' ಪ್ರತ್ಯಯವನ್ನು ಸೇರಿಸಿ ಸುಯುಜ್+ಸು(ಸ್) ಎಂದಿದ್ದಾಗ, ಅದರ 'ಸ್' ಕಾರಕ್ಕೆ "ಹಲ್ಙ್ಯಾಭ್ಯೋ ದೀರ್ಘಾತ್ ಸುತಿಸ್ಯಪೃಕ್ತಮ್ ಹಲ್" ಎಂಬ ಸೂತ್ರದಿಂದ ಲೋಪ ಬಂದು, ಪದಾನ್ತ 'ಜ್' ಕಾರಕ್ಕೆ 'ಕುತ್ವ' ಬಂದು, ಸುಯುಗ್ ಎಂದಾಗುತ್ತದೆ. "ವಾಽವಸಾನೇ" ಎಂಬ ಸೂತ್ರದಿಂದ ವಿಕಲ್ಪದಿಂದ ಚರ್ತ್ವ ಬಂದು, ಸುಯುಕ್ ಎಂಬ ರೂಪವು ಸಿದ್ಧವಾಗುತ್ತದೆ. ಹೀಗೆ ಎರಡುರೂಪಗಳು ಸಿದ್ಧವಾಗುತ್ತವೆ.

ಅಜಾದಿ ಪ್ರತ್ಯಯಗಳು ಪರದಲ್ಲಿದ್ದಾಗ, ವರ್ಣಜೋಡಣೆ ಮಾತ್ರದಿಂದ ಸುಯುಜೌ, ಸುಯುಜಃ, ಸುಯುಜಮ್, ಸುಯುಜಾ, ಸುಯುಜೇ, ಸುಯುಜಃ, ಸುಯುಜೋಃ, ಸುಯುಜಾಮ್, ಸುಯುಜಿ, ಹೇ ಸುಯುಜೌ! ಹೇ ಸುಯುಜಃ! . ಎಂಬ ರೂಪಗಳು ಸಿದ್ಧವಾಗುತ್ತವೆ.

ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, "ಚೋಃ ಕುಃ (8.2.30)" ಎಂಬ ಸೂತ್ರದಿಂದ 'ಕುತ್ವ' ಬಂದು, 'ಗ್' ಕಾರವು ಆದೇಶವಾಗಿ ಬರುತ್ತದೆ. ಆಗ, ಸುಯುಗ್ಭ್ಯಾಮ್, ಸುಯುಗ್ಭಿಃ, ಸುಯುಗ್ಭ್ಯಃ, ಸುಯುಕ್ಷು.

ಉದಾ– ಖನ್(ಕುಂಟ)– 'ಖಜಿ(ಖಜ್)' ಧಾತುವಿನ ಮೇಲೆ ಪ್ರಥಮಾ ವಿಭಕ್ತಿ ಏಕವಚನದಲ್ಲಿ 'ಕ್ವಿಪ್' ಪ್ರತ್ಯಯವನ್ನು ಸೇರಿಸಿದಾಗ, ಸರ್ವಾಪಹಾರ, ನುಮಾಗಮ, ಮತ್ತು ಪರಸವರ್ಣ ಮೊದಲಾದವುಗಳಿಂದ, ಖಞ್ಜ್ ಎಂಬ ರೂಪವು ಸಿದ್ಧವಾಗುತ್ತದೆ. ಇದಕ್ಕೆ 'ಪ್ರಾತಿಪದಿಕ ಸಂಜ್ಞೆ' ಬಂದು, 'ಸು(ಸ್)' ಸೇರಿಸಿದಮೇಲೆ, "ಹಲ್ಙ್ಯಾಭ್ಯೋ ದೀರ್ಘಾತ್ ಸುತಿಸ್ಯಪೃಕ್ತಮ್ ಹಲ್" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬಂದು, "ಸಂಯೋಗಾನ್ತಸ್ಯ ಲೋಪಃ" ಎಂಬ ಸೂತ್ರದಿಂದ 'ಜ್' ಕಾರಕ್ಕೆ ಲೋಪ ಬರೋಣದ್ದರಿಂದ, 'ನಿಮಿತ್ತಾಪಾಯೇ ನೈಮಿತ್ತಿಕಸ್ಯಾಪ್ಯಪಾಯಃ' ಎಂಬ ನಿಯಮದಿಂದ 'ಞ್' ಕಾರದ ಸ್ಥಾನದಲ್ಲಿ 'ನ್' ಕಾರವು ಬಂದು, 'ಖನ್' ಎಂದು ರೂಪವಾಗುತ್ತದೆ. "ನಲೋಪಃ ಪ್ರಾತಿಪದಿಕಾನ್ತಸ್ಯ" ಎಂಬ ಸೂತ್ರದ ದೃಷ್ಟಿಯಿಂದ 'ಸಂಯೋಗಾನ್ತ' ಲೋಪವು ಅಸಿದ್ಧವಾಗೋಣದ್ದರಿಂದ, 'ನ್' ಕಾರಕ್ಕೆ ಲೋಪವು ಬರುವದಿಲ್ಲ. ಆದರಿಂದ 'ಖನ್' ಎಂದೆ ರೂಪವು ಉಳಿಯುತ್ತದೆ.

ಅಜಾದಿ ವಿಭಕ್ತಿಗಳು ಪರವಾದಾಗ, 'ಖಞ್ಜ್' ಜೊತೆಗೆ ಪ್ರತ್ಯಯಗಳನ್ನು ಸೇರಿಸುವ ಮಾತ್ರದಿಂದಲೇ ಖಞ್ಜೌ, ಖಞ್ಜಃ, ಖಞ್ಜಮ್, ಖಞ್ಜೌ, ಖಞ್ಜಃ, ಖಞ್ಜಾ, ಖಞ್ಜೇ, ಖಞ್ಜಃ, ಖಞ್ಜೋಃ, ಖಞ್ಜಾಮ್, ಖಞ್ಜಿ ಎಂಬ ರೂಪಗಳು ಸಿದ್ಧವಾಗುತ್ತವೆ.

ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಖನ್ಭ್ಯಾಮ್, ಖನ್ಭಿಃ, ಖನ್ಭ್ಯಃ, ಖನ್ಸು ಮತ್ತು ಹೇ ಖನ್! ಎಂಬ ರೂಪಗಳು ಸಿದ್ಧವಾಗುತ್ತವೆ.

ಉದಾ- ಖನ್ತ್ಸು-ಸಪ್ತಮೀ ವಿಭಕ್ತಿ ಬಹುವಚನ ಪ್ರತ್ಯಯವಾದ 'ಸುಪ್' ಪರದಲ್ಲಿದ್ದಾಗ, "ನಶ್ಚ" ಎಂಬ ಸೂತ್ರದಿಂದ, ವೈಕಲ್ಪಿಕವಾಗಿ 'ಧುಟ್ (ಧ್)' ಆಗಮವು ಬಂದು, ಆ 'ಧ್' ಕಾರಕ್ಕೆ ಚರ್ತ್ವದಿಂದ 'ತ್'ಕಾರ ಬಂದು ಖನ್ತ್ಸು ಎಂಬ ವೈಕಲ್ಪಿಕ ರೂಪವಾಗುತ್ತದೆ.

### (ಷತ್ವ(ಷ್)ವನ್ನು ವಿಧಿಸುವ ಸೂತ್ರ)

**ಸೂತ್ರ - 308. ವ್ರಶ್ಚ-ಭ್ರಸ್ಜ-ಸೃಜ-ಮೃಜ-ಯಜ-ರಾಜ-ಭ್ರಾಜ-ಚ್ಛಶಾಂಷಃ । (8.2.36)**

ವೃತ್ತಿಃ-ಝಲಿ ಪದಾಂತೇ ಚ ।ಜಶ್ತ್ವ-ಚರ್ತ್ವೇ। ರಾಟ್, ರಾಡ್। ರಾಜೌ। ರಾಜಃ। ರಾಡ್ಭ್ಯಾಮ್। ಏವಂ ವಿಭ್ರಾಟ್।ದೇವೇಟ್।ವಿಶ್ವಸೃಟ್।

ಉಣಾದಿ ಸೂತ್ರಮ್-**ಪರೌ ವ್ರಜೇಃ ಷಃ ಪದಾಂತೇ।**

ಪರೌ ಉಪಪದೇ ವ್ರಜೇಃ ಕ್ವಿಪ್ ಸ್ಯಾತ್, ದೀರ್ಘಶ್ಚ. ಪದಾನ್ತೇ ಷತ್ವಮಪಿ । ಪರಿವ್ರಾಟ್। ಪರಿವ್ರಾಜೌ।

ಅ. ವ್ಯ. -"ಝಲೋ ಝಲಿ" ಎಂಬ ಸೂತ್ರದಿಂದ, 'ಝಲಿ' ಎಂಬ ಪದವೂ, ಮತ್ತು "ಸ್ಕೋಃ ಸಂಯೋಗಾದ್ಯೋರನ್ತೇಚ" ಎಂಬ ಸೂತ್ರದಿಂದ 'ಅನ್ತೇ' ಎಂಬ ಪದವೂ ಅನುವೃತ್ತವಾಗುತ್ತವೆ. "ಪದಸ್ಯ" ಎಂಬುದು ಅಧಿಕಾರ ಸೂತ್ರ, "ಅಲೋಽನ್ತ್ಯಸ್ಯ" ಎಂಬುದು ಇಲ್ಲಿ ಪರಿಭಾಷಾ ಸೂತ್ರವಾಗಿದೆ.

ಅರ್ಥ-'ಝಲ್' ವರ್ಣವು ಪರದಲ್ಲಿದ್ದಾಗ ಅಥವಾ ಪದಾನ್ತದಲ್ಲಿದ್ದಾಗ, ವ್ರಶ್ಚ್, ಭ್ರಸ್ಜ್, ಸೃಜ್, ಮೃಜ್, ಯಜ್, ರಾಜ್ ಮತ್ತು 'ಛ್' ಕಾರಾನ್ತ ಹಾಗೂ 'ಶ್' ಕಾರಾನ್ತ ಧಾತುಗಳ ಸ್ಥಾನದಲ್ಲಿ, 'ಷ್' ಕಾರವು ಅನ್ತಾದೇಶವಾಗಿ ಬರುತ್ತದೆ.

ಸೂಚನೆ: ಈ ಮೇಲೆ ಹೇಳಿದ ಧಾತುಗಳ ಅನ್ತ್ಯ ವರ್ಣಕ್ಕೆ 'ಷ್' ಕಾರವು ಆದೇಶವಾಗಿ ಬರುತ್ತದೆ. "ಝಲಾಮ್ ಜಶೋಽನ್ತೇ" ಎಂಬ ಸೂತ್ರದಿಂದ ಅದಕ್ಕೆ 'ಜಶ್ತ್ವ' ಬಂದು, ಸ್ಥಾನ ಸಾಮ್ಯದಿಂದ 'ಡ್' ಕಾರವು ಬರುತ್ತದೆ.

ಉದಾ-ರಾಟ್/ರಾಡ್(ಪ್ರಕಾಶವುಳ್ಳವನು ಅಥವಾ ರಾಜಾ)- 'ರಾಜೃ' ಧಾತುವಿನಮೇಲೆ 'ಕ್ವಿಪ್' ಪ್ರತ್ಯಯವನ್ನು ಸೇರಿಸಿದಾಗ, ಅದು ಸರ್ವಾಪಹಾರವಾಗಿ, 'ಪ್ರಾತಿಪದಿಕ ಸಂಜ್ಞೆ' ಬಂದು, ಪ್ರಥಮಾ ವಿಭಕ್ತಿ ಏಕವಚನದಲ್ಲಿ ರಾಜ್+ಸು(ಸ್) ಎಂದಿದ್ದಾಗ, "ಹಲ್ಙ್ಯಾಭ್ಯೋ ದೀರ್ಘಾತ್ ಸುತಿಸ್ಯಪೃಕ್ತಮ್ ಹಲ್" ಎಂಬ ಸೂತ್ರದಿಂದ

'ಸ್' ಕಾರಕ್ಕೆ ಲೋಪ ಬಂದು, ಪ್ರಕೃತ ಸೂತ್ರದಿಂದ 'ಜ್' ಕಾರಕ್ಕೆ 'ಷ್' ಕಾರ ಬಂದು ರಾಷ್ ಎಂದಾಗುತ್ತದೆ. "ಝಲಾಮ್ ಜಶೋಽನ್ತೇ" ಎಂಬ ಸೂತ್ರದಿಂದ ಅದಕ್ಕೆ 'ಜಶ್ತ್ವ' ಬಂದು, ಸ್ಥಾನ ಸಾಮ್ಯದಿಂದ 'ಡ್' ಕಾರವು ಬಂದು, ರಾಡ್ ಎಂದು ರೂಪವಾಗುತ್ತದೆ. "ವಾವಸಾನೇ" ಎಂಬ ಸೂತ್ರದಿಂದ ವಿಕಲ್ಪದಿಂದ 'ಡ್' ಕಾರಕ್ಕೆ ಚರ್ತ್ವ(ಟ್) ಬಂದು ರಾಟ್ ಎಂದು ರೂಪವಾಗುತ್ತದೆ. ಹೀಗೆ ರಾಟ್, ರಾಡ್ ಎಂದು ಎರಡು ರೂಪಗಳಾಗಿವೆ. ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಅಥವಾ ಪದಾನ್ತವಾಗಿಲ್ಲದೇ ಇದ್ದಾಗ, 'ಷ್' ಕಾರವು ಆದೇಶವಾಗಿ ಬರುವದಿಲ್ಲ. ಹೀಗಾಗಿ ಕೇವಲ ಪ್ರತ್ಯಯ ಜೋಡಣೆಯಿಂದ ರೂಪಗಳು ಸಿದ್ಧವಾಗುತ್ತವೆ.

ಉದಾ– ರಾಜೌ,ರಾಜಃ,ರಾಜಮ್,ರಾಜೌ, ರಾಜಃ, ರಾಜಾ, ರಾಜೇ, ರಾಜಃ, ರಾಜೋಃ, ರಾಜಾಮ್ ಮತ್ತು ರಾಜಿ ಎಂದು ರೂಪಗಳಾಗುತ್ತವೆ.

ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, 'ಝಲ್' ವರ್ಣವು ಪರದಲ್ಲಿರುತ್ತದೆ. "ಸ್ವಾದಿಷ್ವಸರ್ವನಾಮಸ್ಥಾನೇ" ಎಂಬ ಸೂತ್ರದಿಂದ 'ಪದ ಸಂಜ್ಞೆ' ಬಂದು ಪದಾನ್ತವೂ ಆಗುತ್ತದೆ. ಹೀಗಾಗಿ 'ಷ್' ಕಾರಾದೇಶವು ಬಂದು,ಜಶ್ತ್ವದಿಂದ ರಾಡ್ಭ್ಯಾಮ್, ರಾಡ್ಭಿಃ ಮತ್ತು ರಾಡ್ಭ್ಯಃ ಎಂಬ ರೂಪಗಳಾಗುತ್ತವೆ.

ಸಪ್ತಮೀ ವಿಭಕ್ತಿಯ ಬಹುವಚನದಲ್ಲಿ, 'ಸುಪ್(ಸು) ಸೇರಿಸಿದಾಗ, "ಡಃ ಸಿ ಧುಟ್"ಎಂಬ ಸೂತ್ರದಿಂದ 'ಧುಟ್(ಧ್)' ಆಗಮ ಬಂದು, 'ಧ್' ಕಾರ ಮತ್ತು 'ಡ್' ಕಾರಗಳಿಗೆ ಚರ್ತ್ವ ಬಂದು ಧುಟ್ತ್ಸು, ಮತ್ತು ಧುಟ್ಸು ಎಂಬ ಎರಡು ರೂಪಗಳು ಸಿದ್ಧವಾಗುತ್ತವೆ.

**(ಜ್ ಕಾರಾನ್ತ ರಾಜ್ ಶಬ್ದದ ರೂಪಗಳು)**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ರಾಟ್,ರಾಡ್ | ರಾಜೌ | ರಾಜಃ |
| ದ್ವಿತೀಯಾ | ರಾಜಮ್ | ರಾಜೌ | ರಾಜಃ |
| ತೃತೀಯಾ | ರಾಜಾ | ರಾಡ್ಭ್ಯಾಮ್ | ರಾಡ್ಭಿಃ |
| ಚತುರ್ಥೀ | ರಾಜೇ | ರಾಡ್ಭ್ಯಾಮ್ | ರಾಡ್ಭ್ಯಃ |
| ಪಞ್ಚಮೀ | ರಾಜಃ | ರಾಡ್ಭ್ಯಾಮ್ | ರಾಡ್ಭ್ಯಃ |
| ಷಷ್ಠೀ | ರಾಜಃ | ರಾಜೋಃ | ರಾಜಾಮ್ |
| ಸಪ್ತಮೀ | ರಾಜಿ | ರಾಜೋಃ | ರಾಟ್ತ್ಸು, ರಾಟ್ಸು |
| ಸಂಬೋಧನ | ಹೇ ರಾಟ್!, ಹೇರಾಡ್! | ಹೇ ರಾಜೌ! | ಹೇ ರಾಜಃ! |

ಇದೇ ರೀತಿಯಲ್ಲಿ ವಿಭ್ರಾಜ್(ವಿ ಪೂರ್ವಕ ಭ್ರಾಜ್ ಧಾತು), ದೇವೇಜ್(ದೇವ ಪೂರ್ವಕ 'ಯಜ್' ಧಾತುವು ಸಂಪ್ರಸಾರಣದಿಂದ ದೇವೇಜ್ ಎಂದಾಗಿದೆ) ಮತ್ತು

ವಿಶ್ವಸೃಜ್(ವಿಶ್ವ ಪೂರ್ವಕ ಸೃಜ್ ಧಾತು) ಶಬ್ದಗಳ ರೂಪಗಳು ಸಿದ್ಧವಾಗುತ್ತವೆ.

**ಉಣಾದಿ ಸೂತ್ರಮ್-ಪರೌ ವ್ರಜೇಃ ಷಃ ಪದಾಂತೇ–** ಈ ಸೂತ್ರದ ವೃತ್ತಿಯು ಹೀಗಿದೆ. ಪರೌ ಉಪಪದೇ ವ್ರಜೇಃ ಕ್ವಿಪ್ ಸ್ಯಾತ್ ದೀರ್ಘಶ್ಚ, ಪದಾನ್ತೇ ಷತ್ವಮಪಿ। ಪರಿವ್ರಾಟ್। ಪರಿವ್ರಾಜೌ।

ಅರ್ಥ– ಪರಿ ಪೂರ್ವಕ 'ವ್ರಜ್' ಧಾತುವಿನ ನಂತರ, ಕ್ವಿಪ್ ಪ್ರತ್ಯಯ ಮತ್ತು ಧಾತುವಿಗೆ ದೀರ್ಘ, ಹಾಗೆಯೇ ಪದಾನ್ತದಲ್ಲಿ 'ಷ್' ಕಾರವು ಅನ್ತಾದೇಶವಾಗಿಯೂ ಬರುತ್ತದೆ.

ಉದಾ– ಪರಿವ್ರಾಟ್/ಪರಿವ್ರಾಡ್(ಸನ್ಯಾಸಿ) –ಪರಿ ಪೂರ್ವಕ 'ವ್ರಜ್' ಧಾತುವಿನ ನಂತರ, ಪ್ರಕೃತ ಉಣಾದಿ ಸೂತ್ರದಿಂದ ಕ್ವಿಪ್ ಪ್ರತ್ಯಯ, ಸರ್ವಾಪಹಾರ, ಮತ್ತು 'ವ್ರಜ್' ನಲ್ಲಿರುವ ರೇಫೋತ್ತರ 'ಅ' ಕಾರಕ್ಕೆ ದೀರ್ಘ, ಬಂದು ಪರಿವ್ರಾಜ್ ಎಂದಾಗುತ್ತದೆ. ಇದಕ್ಕೆ 'ಪ್ರಾತಿಪದಿಕ ಸಂಜ್ಞೆ' ಬಂದಿರೋಣದ್ದರಿಂದ, 'ಸು(ಸ್)' ಪ್ರತ್ಯಯವನ್ನು ಸೇರಿಸಿದಾಗ, "ಹಲ್ಙ್ಯಾಭ್ಯೋ ದೀರ್ಘಾತ್ ಸುತಿಸ್ಯಪೃಕ್ತಮ್ ಹಲ್" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬಂದು, ಪ್ರಕೃತ ಉಣಾದಿ ಸೂತ್ರದಿಂದ 'ಷ್' ಕಾರವು ಆದೇಶವಾಗಿ ಬಂದಿದೆ. 'ಷ್' ಕಾರಕ್ಕೆ ಜಶ್ತ್ವ(ಡ್) ಬಂದು, ಪರಿವ್ರಾಡ್ ಎಂದು ರೂಪವಾಗುತ್ತದೆ. "ವಾವಸಾನೇ" ಎಂಬ ಸೂತ್ರದಿಂದ ವಿಕಲ್ಪದಿಂದ ಅದಕ್ಕೆ ಚರ್ತ್ವ(ಟ್) ಬಂದು ಪರಿವ್ರಾಟ್ ಎಂದು ರೂಪವಾಗುತ್ತದೆ. ಹೀಗೆ ಎರಡು ರೂಪಗಳು ಸಿದ್ಧವಾಗುತ್ತವೆ. ಉಳಿದ ರೂಪಗಳು ಹಿಂದಿನಂತೆಯೇ ಸಿದ್ಧವಾಗುತ್ತವೆ.

**(ದೀರ್ಘಾನ್ತಾದೇಶವನ್ನು ವಿಧಿಸುವ ಸೂತ್ರ)**

**ಸೂತ್ರ – 309. ವಿಶ್ವಸ್ಯ ವಸುರಾಟೋಃ ( 6.3.128)**

ವೃತ್ತಿಃ–ವಿಶ್ವ ಶಬ್ದಸ್ಯ ದೀರ್ಘಃ ಅಂತಾದೇಶಃ ಸ್ಯಾತ್। ವಸೌ ರಾಟ್ ಶಬ್ದೇ ಚ ಪರೇ। ವಿಶ್ವರಾಟ್, ವಿಶ್ವರಾಡ್। ವಿಶ್ವರಾಜೌ। ವಿಶ್ವರಾಡ್ಭ್ಯಾಮ್।

ಅ. ವೃ. –"ಢ್ರಲೋಪೇ ಪೂರ್ವಸ್ಯ ದೀರ್ಘೋಽಣಃ" ಎಂಬ ಸೂತ್ರದಿಂದ ದೀರ್ಘಃ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– ವಸು ಮತ್ತು ರಾಟ್ ಶಬ್ದಗಳು ಪರದಲ್ಲಿದ್ದಾಗ ವಿಶ್ವ ಶಬ್ದಕ್ಕೆ ದೀರ್ಘ ಅನ್ತಾದೇಶವು ಬರುತ್ತದೆ.

ವಿವರಣೆ– ರಾಜ್ ಶಬ್ದದ ಸ್ಥಾನದಲ್ಲಿ, ರಾಟ್ ಶಬ್ದವು ಪಠಿತವಾಗಿರೋಣದ್ದರಿಂದ ಪದಾನ್ತವಾಗುತ್ತದೆ. ಅದ್ದರಿಂದ ರಾಟ್, ರಾಡ್ ಗಳೆಂದು ರೂಪಗಳಾಗುತ್ತವೆ. ತದನಂತರವೇ ಈ ಸೂತ್ರವು ಪ್ರವೃತ್ತವಾಗುತ್ತದೆ. ಬೇರೆ ಕಡೆಗೆ ಆಗುವದಿಲ್ಲ. ಆದುದರಿಂದ ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, ದೀರ್ಘವು ಆಗುವದಿಲ್ಲ.

ಉದಾ– ವಿಶ್ವರಾಟ್, ವಿಶ್ವರಾಡ್ – (ಸಮಸ್ತ ಪ್ರಪಞ್ಚದ ಒಡೆಯ) ವಿಶ್ವಪೂರ್ವಕ ರಾಜ್ ಧಾತುವಿನ ಪರದಲ್ಲಿ 'ಕ್ವಿಪ್' ಪ್ರತ್ಯಯವನ್ನು ಸೇರಿಸಿ ಸರ್ವಾಪಹಾರವಾದಮೇಲೆ, ಪ್ರಾತಿಪದಿಕ ಸಂಜ್ಞೆ ಬಂದು, ನಂತರ 'ಸು(ಸ್)' ಸೇರಿಸಿ, ವಿಶ್ವರಾಜ್+ಸ್ ಎಂದಿದ್ದಾಗ,

'ಸ್' ಕಾರಕ್ಕೆ ಲೋಪವಾಗಿ ವಿಶ್ವರಾಜ್ ಎಂದೇ ಇರುತ್ತದೆ. "ವ್ರಶ್ಚ-ಭ್ರಸ್ಜ-ಸೃಜ-ಮೃಜ-ಯಜ-ರಾಜ-ಭ್ರಾಜ-ಚ್ಛಶಾಂ ಷಃ (8.2.36)" ಎಂಬ ಸೂತ್ರದಿಂದ 'ಜ್' ಕಾರಕ್ಕೆ 'ಷ್' ಕಾರ ಆದೇಶ, ಮತ್ತು " ಝಲಾಮ್ ಜಶೋಽನ್ತೇ" ಎಂಬಸೂತ್ರದಿಂದ 'ಷ್' ಕಾರಕ್ಕೆ 'ಡ್' ಕಾರ ಬಂದು ವಿಶ್ವರಾಡ್ ಎಂದು ಆಗುತ್ತದೆ. ನಂತರ ವೈಕಲ್ಪಿಕ ಚರ್ತ್ವದಿಂದ ವಿಶ್ವರಾಟ್ ಎಂದಾಗುತ್ತದೆ. ನಂತರ ಪ್ರಕೃತ ಸೂತ್ರದಿಂದ, 'ರಾಡ್/ರಾಟ್' ಪರದಲ್ಲಿರುವುದರಿಂದ, ವಿಶ್ವ ಶಬ್ದಕ್ಕೆ ದೀರ್ಘ ಅನ್ತಾದೇಶ ಬಂದು, ವಿಶ್ವರಾಡ್ ಎಂದೂ, ವೈಕಲ್ಪಿಕ ಚರ್ತ್ವದಿಂದ ವಿಶ್ವಾರಾಟ್ ಹೀಗೆ ಎರಡು ರೂಪಗಳು ಸಿದ್ಧವಾಗುತ್ತವೆ.

ಇದೇ ತರಹ ಹಲಾದಿ ವಿಭಕ್ತಿಗಳು ಪರವಾದಾಗ, ಪದಾನ್ತತ್ವವು ಬಂದಿರುವುದರಿಂದ "ವ್ರಶ್ಚ-ಭ್ರಸ್ಜ-ಸೃಜ-ಮೃಜ-ಯಜ-ರಾಜ-ಭ್ರಾಜ-ಚ್ಛಶಾಂ ಷಃ (8.2.36)" ಎಂಬ ಸೂತ್ರವು ಪ್ರವೃತ್ತವಾಗಿ 'ಷ್' ಕಾರಾದೇಶ, ಡತ್ವ ಮತ್ತು ಟತ್ವಗಳಾಗಿ, ದೀರ್ಘರೂಪ ಅನ್ತಾದೇಶಕ್ಕೆ ಅವಕಾಶವಾಗಿ, ವಿಶ್ವಾರಾಡ್ಭ್ಯಾಮ್, ವಿಶ್ವಾರಾಡ್ಭಿಃ, ವಿಶ್ವಾರಾಡ್ಭ್ಯಃ ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

ಅಜಾದಿ ವಿಭಕ್ತಿಗಳು ಪರದಲ್ಲಿದ್ದು, ವಿಶ್ವಾರಾಜ್+ಔ ಎಂದಿದ್ದಾಗ, ವಿಶ್ವರಾಜ್ ಎಂದು ರೂಪವಾಗುತ್ತದೆ. ಇಲ್ಲಿ 'ರಾಜ್' ಶಬ್ದಕ್ಕೆ ಪ್ರಾತಿಪದಿಕತ್ವ ಮಾತ್ರವಿರುತ್ತದೆ. ಪದಾಂತತ್ವ ಇರುವದಿಲ್ಲ. ಹೀಗಾಗಿ "ವ್ರಶ್ಚ-ಭ್ರಸ್ಜ-ಸೃಜ-ಮೃಜ-ಯಜ-ರಾಜ-ಭ್ರಾಜ-ಚ್ಛಶಾಂ ಷಃ (8.2.36)" ಎಂಬ ಸೂತ್ರವು ಪ್ರವೃತ್ತವಾಗುವದಿಲ್ಲ. ಆದ್ದರಿಂದ ಪರದಲ್ಲಿ ರಾಡ್/ರಾಟ್' ಶಬ್ದಗಳು ಬರುವದಿಲ್ಲ, ಹೀಗಾಗಿ ದೀರ್ಘರೂಪ, ಅನ್ತಾದೇಶಗಳು ಬಾರದೇ ವಿಶ್ವರಾಜೌ, ವಿಶ್ವರಾಜಃ, ವಿಶ್ವರಾಜಾ ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

**(ಸ್ ಕಾರ-ಕ ಕಾರಗಳಿಗೆ ಲೋಪವನ್ನು ಹೇಳುವ ಸೂತ್ರ)**

**ಸೂತ್ರ-310. ಸ್ಕೋಃ ಸಂಯೋಗಾದ್ಯೋರನ್ತೇ ಚ (8.2.29)**

ವೃತ್ತಿಃ-ಪದಾನ್ತೇ ಝಲಿ ಚ ಯಃ ಸಂಯೋಗಃ ತದಾದ್ಯೋಃ ಸ್ಕೋಃ(ಸಕಾರ-ಕಕಾರಯೋಃ) ಲೋಪಃ। ಭೃಟ್।ಸಸ್ಯ ಶ್ಚುತ್ವೇನ ಶಃ। 'ಝಲಾಂ ಜಶ್ ಝಶಿ' ಇತಿ ಶಸ್ಯ ಜಃ । ಭೃಜೌ। ಭೃಡ್ಭ್ಯಾಮ್। 'ತ್ಯದಾದ್ಯತ್ವಮ್ ಪರರೂಪತ್ವಮ್'

ಪ. ಛೇ. – ಸ್ಕೋಃ, ಸಂಯೋಗಾದ್ಯೋಃ, ಅನ್ತೇ, ಚ।

ಅ. ವೃ.-"ಸಂಯೋಗಾನ್ತಸ್ಯ ಲೋಪಃ " ಎಂಬ ಸೂತ್ರದಿಂದ 'ಲೋಪಃ' ಎಂಬ ಪದವೂ, "ಝಲೋಝಲಿ" ಎಂಬ ಸೂತ್ರದಿಂದ 'ಝಲಿ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ-ಪದಾನ್ತದಲ್ಲಿ ಅಥವಾ 'ಝಲ್' ಪರದಲ್ಲಿದ್ದಾಗಲೂ ಸಂಯೋಗದಲ್ಲಿ ಇರುವ ಪ್ರಥಮ 'ಸ್'ಕಾರ ಅಥವಾ 'ಕ್' ಕಾರಗಳಿಗೆ ಲೋಪವು ಬರುತ್ತದೆ.

"ಸಂಯೋಗಾನ್ತಸ್ಯ ಲೋಪಃ " ಎಂಬ ಸೂತ್ರದ ದೃಷ್ಟಿಯಲ್ಲಿ ಪ್ರಕೃತ ಸೂತ್ರವು ತ್ರಿಪಾದಿಯಲ್ಲಿ ಪರಸೂತ್ರವಾಗಿರೋಣದರಿಂದ ಅಸಿದ್ಧವಾಗಬೇಕು. ಹಾಗಿದ್ದರೂ ಇಲ್ಲಿ ಈ ಸೂತ್ರವು ಪ್ರವೃತ್ತವಾಗುವದಕ್ಕೆ ಕಾರಣವೇನೆಂದರೆ, ಅಸಿದ್ಧವಾದರೂ

"ಪೂರ್ವತ್ರಾಸಿದ್ಧಮ್" ಎಂಬುದಕ್ಕೆ ಅಪವಾದವಾಗಿದೆ ಎಂದು ತಿಳಿಯಬೇಕು. "ಸಂಯೋಗಾನ್ತಸ್ಯ ಲೋಪಃ " ಎಂಬ ಸೂತ್ರವು ಸಂಯೋಗದಲ್ಲಿರುವ ಅನ್ತ್ಯವರ್ಣಕ್ಕೆ ಲೋಪವನ್ನು ಹೇಳುತ್ತದೆ. ಆದರೆ ಇಲ್ಲಿ ಸಂಯೋಗದಲ್ಲಿರುವ ಪ್ರಥಮ ವರ್ಣಗಳಾದ 'ಸ್' ಕಾರ ಮತ್ತು 'ಕ್' ಕಾರಗಳಿಗೆ ಲೋಪವನ್ನು ಹೇಳುತ್ತದೆ.

ಉದಾ – ಭೃಟ್(ಭ್ರಸ್ಜ್) 'ಭ್ರಸ್ಜ್' ಧಾತುವಿನಮೇಲೆ 'ಕ್ವಿಪ್' ಪ್ರತ್ಯಯವನ್ನು ಸೇರಿಸಿದಮೇಲೆ, ಸಂಪ್ರಸಾರಣ ಬಂದು ಪೂರ್ವರೂಪ ಮಾಡಿದಮೇಲೆ, ಕೃದನ್ತದಲ್ಲೂ ಭೃಸ್ಜ್ ಎಂದು ರೂಪವಾಗುತ್ತದೆ. ಪ್ರಾತಿಪದಿಕ ಸಂಜ್ಞೆ ಬಂದಮೇಲೆ, 'ಸು(ಸ್)' ಸೇರಿಸಿದ ನಂತರ, "ಹಲ್ಙ್ಯಾಬ್ಭ್ಯೋ ದೀರ್ಘಾತ್ ಸುತಿಸ್ಯಪೃಕ್ತಮ್ ಹಲ್" ಎಂಬ ಸೂತ್ರದಿಂದ ಅನ್ತ್ಯ 'ಸ್' ಕಾರಕ್ಕೆ ಲೋಪ ಬಂದು, ಸಂಯೋಗದ(ಸ್ಜ್) ಪ್ರಥಮ 'ಸ್' ಕಾರಕ್ಕೆ ಪ್ರಕೃತ ಸೂತ್ರದಿಂದ ಲೋಪ ಬಂದು, 'ಭೃಜ್' ಎಂದು ರೂಪವಾಗುತ್ತದೆ. 'ಜ್' ಕಾರದ ಸ್ಥಾನದಲ್ಲಿ, "ವ್ರಶ್ಚ–ಭ್ರಸ್ಜ–ಸೃಜ–ಮೃಜ–ಯಜ–ರಾಜ–ಭ್ರಾಜ–ಚ್ಛಶಾಂ ಷಃ (8.2.36)" ಎಂಬ ಸೂತ್ರದಿಂದ 'ಷ್' ಕಾರಾದೇಶವು ಬಂದು, " ಝಲಾಮ್ ಜಶೋಽನ್ತೇ" ಎಂಬಸೂತ್ರದಿಂದ 'ಷ್' ಕಾರಕ್ಕೆ 'ಡ್' ಕಾರ ಬಂದು, ಭೃಡ್ ಎಂದಾಗುತ್ತದೆ. ನಂತರ 'ಡ್' ಕಾರಕ್ಕೆ "ವಾವಸಾನೇ" ಎಂಬ ಸೂತ್ರದಿಂದ ವೈಕಲ್ಪಿಕ ಚರ್ತ್ವ(ಟ್) ಬಂದು, 'ಭೃಟ್' ಎಂದು ರೂಪವಾಗುತ್ತದೆ. ಹೀಗಾಗಿ ಎರಡು ರೂಪಗಳು ಸಿದ್ಧವಾಗುತ್ತವೆ.

ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗಲೂ, ಸಂಯೋಗದ ಪ್ರಥಮ 'ಸ್' ಕಾರಕ್ಕೆ ಲೋಪ ಬಂದು, ನಂತರ ಹಿಂದಿನಂತೆಯೆ 'ಷತ್ವ' ಮತ್ತು 'ಜಶ್ತ್ವ(ಡ್)' ಬಂದು, ಭೃಡ್ಭ್ಯಾಮ್, ಭೃಡ್ಭಿಃ, ಭೃಡ್ಭ್ಯಃ ಎಂಬ ರೂಪಗಳು ಸಿದ್ಧವಾಗುತ್ತವೆ.

ಉದಾ– ಭೃಟ್ತ್ಸು,ಭೃಟ್ಸು – ಸಪ್ತಮೀ ಬಹುವಚನದಲ್ಲಿ ಭೃಡ್+ಸುಪ್(ಸು) ಎಂದಿದ್ದಾಗ, "ಢಃ ಸಿ ಧುಟ್"() ಎಂಬ ಸೂತ್ರದಿಂದ ವೈಕಲ್ಪಿಕ 'ಧುಟ್(ಧ್)' ಆಗಮ ಬಂದು, 'ಢ್' ಕಾರ 'ಧ್' ಕಾರಗಳಿಗೆ ವೈಕಲ್ಪಿಕ ಚರ್ತ್ವದಿಂದ 'ಟ್' ಕಾರ 'ತ್' ಕಾರಗಳು ಬಂದು, ಭೃಟ್ತ್ಸು ಮತ್ತು ಭೃಟ್ಸು ಎಂದು ರೂಪಗಳಾಗುತ್ತವೆ.

ಇನ್ನು ಮುಂದೆ ಅಜಾದಿ ಪ್ರತ್ಯಯಗಳ ಪ್ರಕ್ರಿಯೆಯ ಬಗ್ಗೆ ಹೇಳಲಾಗುತ್ತದೆ.

ಉದಾ– ಭೃಜ್ಜೌ: ಭೃಸ್ಜ್ ಧಾತುವಿನಮೇಲೆ (ಔ) ಸೇರಿಸಿ ಭೃಸ್ಜ್+ಔ ಎಂದಿದ್ದಾಗ, ಪದಾನ್ತವಾಗಿಲ್ಲದೇ ಇರೋಣದ್ದರಿಂದಲೂ, ಮತ್ತು 'ಝಲ್' ಸೇರದೇ ಇರೋಣದ್ದರಿಂದಲೂ 'ಸ್' ಕಾರಕ್ಕೆ ಲೋಪವು ಬರಲಿಲ್ಲ. "ಸ್ತೋಃ ಶ್ಚುನಾಶ್ಚುಃ"() ಎಂಬ ಸೂತ್ರದಿಂದ 'ಸ್' ಕಾರಕ್ಕೆ 'ಶ್' ಕಾರವು ಆದೇಶವಾಗಿ ಬಂದಿದೆ. "ಝಲಾಮ್ ಜಶ್ ಝಶಿ" ಎಂಬ ಸೂತ್ರದಿಂದ 'ಶ್' ಕಾರಕ್ಕೆ ಜಶ್ತ್ವ(ಜ್) ಬಂದು, ಭೃಜ್ಜ್+ಔ=ಭೃಜ್ಜೌ ಎಂದಾಗುತ್ತದೆ.

ಇದೇ ತರಹ ಭೃಜ್ಜಃ, ಭೃಜ್ಜಮ್, ಭೃಜ್ಜೌ, ಭೃಜ್ಜಃ, ಭೃಜ್ಜಾ, ಭೃಜ್ಜೇ, ಭೃಜ್ಜಃ, ಭೃಜ್ಜೋಃ,ಭೃಜ್ಜಾಮ್, ಭೃಜ್ಜಿ ಎಂಬ ರೂಪಗಳು ಸಿದ್ಧವಾಗುತ್ತವೆ,

ಸಂಬೋಧನ ಪ್ರಥಮಾ ವಿಭಕ್ತಿಯಲ್ಲಿ, ಹೇ ಭೃಟ್!, ಹೇ ಭೃಡ್!, ಹೇ ಭೃಜ್ಜೌ!, ಹೇ ಭೃಜ್ಜಃ! ಎಂದು ರೂಪಗಳಾಗುತ್ತವೆ.

**(ಸ್ ಕಾರವನ್ನು ವಿಧಿಸುವ ಸೂತ್ರ)**

**ಸೂತ್ರ – 311. ತದೋಃ ಸಃ ಸಾವನಂತ್ಯಯೋಃ (7.2.106)**

ವೃತ್ತಿಃ–ತ್ಯದಾದೀನಾಂ ತಕಾರ–ದಕಾರಯೋಃ ಸಃ ಸ್ಯಾತ್ ಸೌ। ಸ್ಯಃ। ತ್ಯೌತ್ಯೇ। ಸಃ। ತೌ। ತೇ। ಯಃ। ಯೌ। ಯೇ। ಏಷಃ। ಏತೌ। ಏತೇ। ಏತಮ್। ಅನ್ವಾದೇಶೇ– ಏನಮ್। ಏನೌ। ಏನಾನ್। ಏನೇನ। ಏನಯೋಃ।

ಪ. ಛೇ.–ತದೋಃ, ಸಃ, ಸೌ, ಅನನ್ತ್ಯಯೋಃ।

ಅ. ವ್ಯ.– "ತ್ಯದಾದೀನಾಮಃ"() ಎಂಬ ಸೂತ್ರದಿಂದ 'ತ್ಯದಾದೀನಾಮ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– 'ತ್ಯದ್' ಮೊದಲಾದ ಸರ್ವನಾಮ ಸಂಜ್ಞೆಯನ್ನು ಹೊಂದಿರುವ ಶಬ್ದಗಳಲ್ಲಿ 'ತ್' ಕಾರ 'ದ್' ಕಾರಗಳು ಅನ್ತ್ಯವಾಗಿಲ್ಲದಿದ್ದರೆ, ಅಂಥ ವರ್ಣಗಳಿಗೆ 'ಸ್' ಕಾರವು ಆದೇಶವಾಗಿ ಬರುತ್ತದೆ– ಪ್ರಥಮಾ ವಿಭಕ್ತಿಯ 'ಸು' ಪ್ರತ್ಯಯವು ಪರದಲ್ಲಿದ್ದಾಗ ಮಾತ್ರ

ತ್ಯದಾದಿ ಗಣಗಳಲ್ಲಿರುವ 'ಹಲನ್ತ' ಶಬ್ದಗಳಲ್ಲಿ "ತ್ಯದಾದೀನಾಮಃ" ಎಂಬ ಸೂತ್ರದಿಂದ ಅನ್ತ್ಯ ಹಲ್ ವರ್ಣದ ಸ್ಥಾನದಲ್ಲಿ 'ಅ' ಕಾರವು ಆದೇಶವಾಗಿ ಬಂದು, ತ್ಯ+ಅ ಎಂದಿರುತ್ತದೆ. ಅನಂತರ "ಅತೋಗುಣೇ" ಎಂಬ ಸೂತ್ರದಿಂದ ಪರರೂಪ ಬಂದು, 'ತ್ಯ' ಎಂದಾಗುತ್ತದೆ. ಇವುಗಳಲ್ಲಿ ಕೆಲವು ಶಬ್ದಗಳ ರೂಪಗಳು ಪುಲ್ಲಿಂಗ ಸರ್ವನಾಮ ಶಬ್ದಗಳಂತೆಯೇ ಇರುತ್ತವೆ. ಆದಗೆ ತ್ಯದ್, ತದ್, ಏತದ್ ಶಬ್ದಗಳ ಅನನ್ತ್ಯವಾದ 'ತ್' ಕಾರಗಳ ಸ್ಥಾನದಲ್ಲಿ, 'ಸ್' ಕಾರವು ಆದೇಶವಾಗಿ ಬರುತ್ತದೆ. ಅದಸ್ ಶಬ್ದದ ಅನಂತ್ಯವರ್ಣವಾದ 'ದ್' ಕಾರದ ಸ್ಥಾನದಲ್ಲಿ 'ಸ್' ಕಾರವು ಆದೇಶವಾಗಿ ಬರುತ್ತದೆ.

ಉದಾ–ಸ್ಯಃ – 'ತ್ಯದ್' ಶಬ್ದದಮೇಲೆ ಪ್ರಥಮಾ ಏಕವಚನದಲ್ಲಿ 'ಸು(ಸ್)' ಸೇರಿಸಿದಮೆಲೆ "ತ್ಯದಾದೀನಾಮಃ" ಎಂಬ ಸೂತ್ರದಿಂದ ಹ್ರಸ್ವ 'ಅ' ಕಾರವು 'ದ್' ಕಾರದಸ್ಥಾನದಲ್ಲಿ ಬಂದು, ತ್ಯ+ಅ+ಸ್ ಎಂದಿರುತ್ತದೆ. ತ್ಯ+ಅ ಗಳಿಗೆ ಪರರೂಪ ಬಂದು, ತ್ಯ+ಸ್ ಎಂದಾಗುತ್ತದೆ. 'ತ್ಯ' ದಲ್ಲಿರುವ ಅನನ್ತ್ಯವಾದ 'ತ್' ಕಾರದ ಸ್ಥಾನದಲ್ಲಿ, ಪ್ರಕೃತ ಸೂತ್ರದಿಂದ 'ಸ್' ಕಾರ ಬಂದು, ಸ್ಯ+ಸ್ ಎಂದಾಗಿ, ರುತ್ವ–ವಿಸರ್ಗಗಳಿಂದ 'ಸ್ಯಃ' ಎಂದಾಗುತ್ತದೆ.

ಉದಾ– ತ್ಯೌ, ತ್ಯೇ – ತ್ಯದ್ ಶಬ್ದದಮೇಲೆ ಪ್ರಥಮಾ ವಿಭಕ್ತಿಯ ದ್ವಿವಚನ ಬಹುವಚನಗಳ ಪ್ರತ್ಯಯಗಳನ್ನು ಸೇರಿಸಿದಮೇಲೆ "ತ್ಯದಾದೀನಾಮಃ" ಎಂಬ ಸೂತ್ರದಿಂದ ಹ್ರಸ್ವ 'ಅ' ಕಾರವು ಬಂದು, ನಂತರ ಪರರೂಪ ಬಂದು, ಸರ್ವನಾಮ ಪುಲ್ಲಿಂಗ ಶಬ್ದದಂತೆ ತ್ಯೌ, ತ್ಯೇ ಎಂದು ರೂಪಗಳಾಗುತ್ತವೆ.

ಉದಾ–ಸಃ, ತೌ, ತೇ – ತ್ಯದ್ ಶಬ್ದವು ಪ್ರಥಮಾ ವಿಭಕ್ತಿ ಏಕವಚನದಲ್ಲಿ 'ಸ್ಯಃ' ಎಂದು ಆದಂತೆ 'ತದ್' ಶಬ್ದವು 'ಸಃ' ಎಂದಾಗಿರುವದು.

**(ದ್ ಕಾರಾಂತ ಪುಲ್ಲಿಂಗ 'ತದ್' ಶಬ್ದದ ರೂಪಗಳು)**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಸಃ | ತೌ | ತೇ |
| ದ್ವಿತೀಯಾ | ತಮ್ | ತೌ | ತಾನ್ |
| ತೃತೀಯಾ | ತೇನ | ತಾಭ್ಯಾಮ್ | ತೈಃ |
| ಚತುರ್ಥೀ | ತಸ್ಮೈ | ತಾಭ್ಯಾಮ್ | ತೇಭ್ಯಃ |
| ಪಞ್ಚಮೀ | ತಸ್ಮಾತ್/ತಸ್ಮಾದ್ | ತಾಭ್ಯಾಮ್ | ತೇಭ್ಯಃ |
| ಷಷ್ಠೀ | ತಸ್ಯ | ತಯೋಃ | ತೇಷಾಮ್ |
| ಸಪ್ತಮೀ | ತಸ್ಮಿನ್ | ತಯೋಃ | ತೇಷು |

ಉದಾ–ಏಷಃ – ಏತದ್ ಶಬ್ದವೂ ಸಹ 'ತ್ಯದ್' ಶಬ್ದದ ಪ್ರಕ್ರಿಯೆಯಂತೆಯೇ ರೂಪವನ್ನು ಹೊಂದುತ್ತದೆ. ಆದರೆ –

ಪ್ರಥಮಾ ವಿಭಕ್ತಿ ಏಕವಚನದ 'ಸು' ಪ್ರತ್ಯಯವು ಪರದಲ್ಲಿದ್ದಾಗ, ತ್ಯದ್ ಮತ್ತು ತದ್ ಶಬ್ದಗಳಲ್ಲಿ ಅನನ್ತ್ಯವಾಗಿ ಆದಿಯಲ್ಲಿರುವ 'ತ್' ಕಾರದ ಸ್ಥಾನದಲ್ಲಿ 'ಸ್' ಕಾರವು ಆದೇಶವಾಗಿ ಬರುತ್ತದೆ. ಏತದ್ ಶಬ್ದದಲ್ಲಿ ಮಧ್ಯದಲ್ಲಿರುವ 'ತ್' ಕಾರದ ಸ್ಥಾನದಲ್ಲಿ 'ಸ್' ಕಾರವು ಆದೇಶವಾಗಿ ಬರುತ್ತದೆ. ಆ 'ಸ್' ಕಾರಕ್ಕೆ 'ಷ್' ಕಾರವು ಆದೇಶವಾಗಿ ಬರುತ್ತದೆ. ಅನಂತರ, ಹ್ರಸ್ವ ಅ–ಕಾರ, ಮತ್ತು ಪರರೂಪಗಳಾದಮೇಲೆ, ಏತೌ, ಏತೇ, ಏತಮ್, ಏತೌ, ಏತಾನ್, ಏತಾಭ್ಯಾಮ್, ಏತೈಃ ಮೊದಲಾದ ರೂಪಗಳು ಸಿದ್ಧವಾಗುತ್ತವೆ. "ದ್ವಿತೀಯಾಟೌಸ್ವೇನಃ" ಎಂಬ ಸೂತ್ರದಿಂದ ಅನ್ವಾದೇಶದಲ್ಲಿ 'ಏತದ್' ಶಬ್ದದ ಸ್ಥಾನದಲ್ಲಿ ದ್ವಿತೀಯಾ– ಅಮ್, ತೃತೀಯಾ–'ಟಾ(ಆ)', ಷಷ್ಠೀ ಮತ್ತು ಸಪ್ತಮೀ ದ್ವಿವಚನ–ಓಸ್ ಪ್ರತ್ಯಯಗಳು ಪರದಲ್ಲಿದ್ದಾಗ, 'ಏನ' ಆದೇಶವು ಬಂದು ಏನಮ್, ಏನೌ, ಏನಾನ್, ಏನೇನ, ಏನಯೋಃ,ಏನಯೋಃ ಎಂಬ ಎರಡನೇ ರೂಪಗಳಾಗುತ್ತವೆ.

**(ಅಮ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ – 312. ಙೇಪ್ರಥಮಯೋರಮ್ (7.1.28)**

ವೃತ್ತಿಃ–ಯುಷ್ಮದಸ್ಮಭ್ಯಾಂ ಪರಸ್ಯ ಙೇ ಇತ್ಯೇತಸ್ಯ ಪ್ರಥಮಾ–ದ್ವಿತೀಯಯೋಃ ಚ ಅಮ್ ಆದೇಶಃ।

ಪ. ಛೇ. – ಙೇ(ಲುಪ್ತ ಷಷ್ಠೀಕ), ಪ್ರಥಮಯೋಃ, ಅಮ್।

ಅ.ವೃ.– "ಯುಷ್ಮದಸ್ಮದ್ಭ್ಯಾಮ್ ಙಸೋಽಶ್" ಎಂಬ ಸೂತ್ರದಿಂದ 'ಯುಷ್ಮದಸ್ಮದ್ಭ್ಯಾಮ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– 'ಯುಷ್ಮದ್' ಮತ್ತು 'ಅಸ್ಮದ್' ಶಬ್ದಗಳ ನಂತರ 'ಙೇ' ಹಾಗೂ ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿಗಳ ಸ್ಥಾನದಲ್ಲಿ 'ಅಮ್' ಆದೇಶವು ಬರುತ್ತದೆ.

'ಙೇ' ಮೊದಲಾದ ವಿಭಕ್ತಿಗಳ ಸ್ಥಾನದಲ್ಲಿ ಆದೇಶ ಬರುವದಕ್ಕೆ ಕಾರಣವೇನೆಂದರೆ, "ಸ್ಥಾನಿವದ್ಭಾವೇನ ಅಮ್" ಎಂಬಲ್ಲೂ ಪ್ರತ್ಯಯತ್ವವು ಬರುತ್ತದೆ. "ಹಲನ್ತ್ಯಮ್" ಎಂಬ ಸೂತ್ರದಿಂದ 'ಮ್' ಕಾರಕ್ಕೆ 'ಇತ್' ಸಂಜ್ಞೆಯು ಬರುತ್ತದೆ. ಅದನ್ನು ಬಾಧಿಸುವದಕ್ಕಾಗಿ, "ನ ವಿಭಕ್ತೌ ತುಸ್ಮಾಃ" ಎಂಬ ನಿಷೇಧ ಸೂತ್ರವು ಹೊರಟಿದೆ. ಆದ್ದರಿಂದ 'ಅಮ್' ಶಬ್ದವೇ ಆದೇಶ ರೂಪವಾಗಿ ಇರುತ್ತದೆ. ಆದ್ದರಿಂದ 'ಮ್' ಕಾರಕ್ಕೆ 'ಇತ್' ಸಂಜ್ಞೆಯು ಬರುವದಿಲ್ಲ.

### (ತ್ವ ಮತ್ತು ಅಹ ಆದೇಶಗಳನ್ನು ವಿಧಿಸುವ ಸೂತ್ರ)

**ಸೂತ್ರ– 313. ತ್ವಾಹೌ ಸೌ ( 7.2.94)**

ವೃತ್ತಿಃ–ಅನಯೋಃ 'ಮ' ಪರ್ಯಂತಸ್ಯ ತ್ವಾಹೌ(ತ್ವ ಮತ್ತುಅಹ), ಆದೇಶೌ ಸ್ತಃ। (ಸು ಪ್ರತ್ಯಯೇ ಪರೇ)।

ಅ. ವೃ–"ಯುಷ್ಮದಸ್ಮದೋರನಾದೇಶೇ" ಎಂಬ ಸೂತ್ರದಿಂದ 'ಯುಷ್ಮದಸ್ಮದೋಃ' ಎಂಬ ಪದವು ಅನುವೃತ್ತವಾಗುತ್ತದೆ "ಮ್ ಪರ್ಯಂತಸ್ಯ" ಎಂಬುದು ಅಧಿಕಾರ ಸೂತ್ರವಾಗಿದೆ.

ಅರ್ಥ– 'ಸು(ಸ್)' ಪ್ರತ್ಯಯವು ಪರದಲ್ಲಿದ್ದಾಗ 'ಯುಷ್ಮದ್' ಮತ್ತು 'ಅಸ್ಮದ್' ಶಬ್ದಗಳಲ್ಲಿ 'ಮ್' ಪರ್ಯಂತ ಭಾಗಕ್ಕೆ ಕ್ರಮವಾಗಿ 'ತ್ವ' ಮತ್ತು 'ಅಹ' ಎಂಬ ಶಬ್ದಗಳು ಆದೇಶವಾಗಿ ಬರುತ್ತವೆ. 'ಯುಷ್ಮದ್' ಶಬ್ದದಲ್ಲಿ 'ಯುಷ್ಮ್' ಎಂಬ ಶಬ್ದವು, 'ಅಸ್ಮದ್' ಶಬ್ದದಲ್ಲಿ 'ಅಸ್ಮ್' ಎಂಬ ಶಬ್ದವು 'ಮ್' ಪರ್ಯಂತ ಶಬ್ದಗಳು. ಇವುಗಳಿಗೆ ಕ್ರಮವಾಗಿ 'ತ್ವ' ಮತ್ತು 'ಅಹ' ಶಬ್ದಗಳು ಆದೇಶವಾಗಿ ಬರುತ್ತವೆ ಎಂದು ಅರ್ಥ.

### (ಲೋಪವನ್ನು ವಿಧಿಸುವ ಸೂತ್ರ)

**ಸೂತ್ರ– 314. ಶೇಷೇ ಲೋಪಃ ( 7.2.90)**

ವೃತ್ತಿಃ–ಏತಯೋಃ 'ಟಿ' ಲೋಪಃ। ತ್ವಮ್ । ಅಹಮ್।

ಅ. ವೃ. – "ಯುಷ್ಮದಸ್ಮದೋರನಾದೇಶೇ" ಎಂಬ ಸೂತ್ರದಿಂದ 'ಯುಷ್ಮದಸ್ಮದೋಃ' ಎಂಬ ಪದವು ಅನುವೃತ್ತವಾಗುತ್ತದೆ. "ಮ್ ಪರ್ಯಂತಸ್ಯ" ಎಂಬುದು ಅಧಿಕಾರ ಸೂತ್ರವಾಗಿದೆ. ಅದೇ ಅಧ್ಯಾಯ ಮತ್ತು ಪಾದದ 94 ನೆಯ ಸೂತ್ರದಿಂದ ಅಪಕರ್ಷಣ ಮಾಡಲಾಗಿದೆ.

ಅರ್ಥ–'ಯುಷ್ಮದ್' ಮತ್ತು 'ಅಸ್ಮದ್' ಶಬ್ದಗಳ 'ಮ್' ಪರ್ಯಂತ ಭಾಗವನ್ನು ಬಿಟ್ಟು ಉಳಿದ ಭಾಗದ 'ಟಿ' ಗೆ ಲೋಪವು ಬರುತ್ತದೆ.

'ಯುಷ್ಮ್' ಗೆ 'ತ್ವ' ಆದೇಶ ಬಂದು ಯುಷ್ಮದ್+ಅಮ್ ಎಂದಿದ್ದಾಗ, ತ್ವ+ಅದ್+ಅಮ್ ಎಂದಿರುತ್ತದೆ. 'ಅದ್' ಎಂಬುದು 'ಟಿ' ಆಗಿರೋಣದ್ದರಿಂದ ಪ್ರಕೃತ

ಸೂತ್ರದಿಂದ ಲೋಪ ಹೊಂದುತ್ತದೆ. ಆಗ ತ್ವ+ಅಮ್ ಎಂದಿರುತ್ತದೆ. "ಅಮಿಪೂರ್ವಃ" ಎಂಬ ಸೂತ್ರದಿಂದ ಪೂರ್ವರೂಪ ಬಂದು ತ್ವಮ್ ಎಂದು ರೂಪವು ಸಿದ್ಧವಾಗುತ್ತದೆ. ಇದೇ ರೀತಿಯಲ್ಲಿ 'ಅಸ್ಮ್' ಗೆ 'ಅಹ' ಆದೇಶ ಬಂದು, ಅಹ+ಅದ್+ಅಮ್ ಎಂದಿದ್ದಾಗ, ಮೇಲಿನಂತೆಯೇ ಪ್ರಕ್ರಿಯೆ ನಡೆದು ಅಹಮ್ ಎಂದು ರೂಪವಾಗುತ್ತದೆ.

**(ಯುವ ಮತ್ತು ಆವ ಆದೇಶಗಳನ್ನು ವಿಧಿಸುವ ಸೂತ್ರ)**

**ಸೂತ್ರ – ೩೧೫. ಯುವಾವೌ ದ್ವಿವಚನೇ ( 7.2.92)**

ವೃತ್ತಿಃ–ದ್ವಯೋಃ ಉಕ್ತೌ ಅನಯೋಃ 'ಮ್' ಪರ್ಯಂತಸ್ಯ ೦ಯುವ–ಆವೌ ಸ್ತಃ ವಿಭಕ್ತೌ।

ಅ. ವೃ– "ಯುಷ್ಮದಸ್ಮದೋರನಾದೇಶೇ" ಎಂಬ ಸೂತ್ರದಿಂದ 'ಯುಷ್ಮದಸ್ಮದೋಃ' ಎಂಬ ಪದವೂ "ಅಷ್ಟನ ಆ ವಿಭಕ್ತೌ" ಎಂಬ ಸೂತ್ರದಿಂದ 'ವಿಭಕ್ತೌ' ಎಂಬ ಪದವೂ ಅನುವೃತ್ತವಾಗುತ್ತವೆ. "ಮಪರ್ಯನ್ತಸ್ಯ" ಎಂಬುದು ಅಧಿಕಾರ ಸೂತ್ರ.

ಅರ್ಥ–ದ್ವಿವಚನವನ್ನು ಹೇಳುವ ವಿಭಕ್ತಿ ಪ್ರತ್ಯಯಗಳು ಪರದಲ್ಲಿರುವಾಗ, 'ಯುಷ್ಮದ್' ಮತ್ತು 'ಅಸ್ಮದ್' ಶಬ್ದಗಳಲ್ಲಿರುವ 'ಮ್' ಪರ್ಯನ್ತ ಭಾಗಕ್ಕೆ ಕ್ರಮವಾಗಿ 'ಯುವ' ಮತ್ತು 'ಆವ' ಆದೇಶಗಳು ಬರುತ್ತವೆ.

**(ದೀರ್ಘ 'ಆ' ಕಾರವನ್ನು ವಿಧಿಸುವ ಸೂತ್ರ)**

**ಸೂತ್ರ– ೩೧೬. ಪ್ರಥಮಾಯಾಶ್ಚ ದ್ವಿವಚನೇ ಭಾಷಾಯಾಮ್ (7.2.88)**

ವೃತ್ತಿಃ–ಔಜಿ ಏತಯೋಃ ಆತ್ವಂ ಲೋಕೇ। ೦ಯುವಾಮ್। ಆವಾಮ್।

ಪ. ಛೇ. – ಪ್ರಥಮಾಯಾಃ, ಚ, ದ್ವಿವಚನೇ, ಭಾಷಾಯಾಮ್।

ಅ. ವೃ– "ಯುಷ್ಮದಸ್ಮದೋರನಾದೇಶೇ" ಎಂಬ ಸೂತ್ರದಿಂದ 'ಯುಷ್ಮದಸ್ಮದೋಃ' ಎಂಬ ಪದವೂ "ಅಷ್ಟನ ಆ ವಿಭಕ್ತೌ" ಎಂಬ ಸೂತ್ರದಿಂದ 'ವಿಭಕ್ತೌ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ–ಲೌಕಿಕ ಭಾಷೆಯಲ್ಲಿ ಪ್ರಥಮಾ ವಿಭಕ್ತಿಯ ದ್ವಿ ವಚನವು ಪರದಲ್ಲಿದ್ದಾಗ, 'ಯುಷ್ಮದ್' ಮತ್ತು 'ಅಸ್ಮದ್' ಶಬ್ದಗಳಿಗೆ ದೀರ್ಘ 'ಆ' ಕಾರವು ಆದೇಶವಾಗಿ ಬರುತ್ತದೆ.

"ಅಲೋಽನ್ತ್ಯಸ್ಯ" ಎಂಬ ಸೂತ್ರದಿಂದ ಕೊನೆಯ ವರ್ಣವಾದ 'ದ್' ಕಾರಕ್ಕೆ ದೀರ್ಘ 'ಆ' ಕಾರವು ಆದೇಶವಾಗಿ ಬರುತ್ತದೆ ಎಂದು ಅರ್ಥ.

ಸೂಚನೆ: ದ್ವಿತೀಯಾ ವಿಭಕ್ತಿ ದ್ವಿವಚನದಲ್ಲೂ ದೀರ್ಘ 'ಆ' ಕಾರವು ಆದೇಶವಾಗಿ ಬರುತ್ತದೆ ಎಂಬುದನ್ನೂ ಮನಸಿನಲ್ಲಿಟ್ಟುಕೊಂಡು "ದ್ವಿತೀಯಾಯಾಂಚ" ಎಂಬ ಸೂತ್ರವನ್ನು ಪ್ರತ್ಯೇಕವಾಗಿ ಮಾಡಿರುವರು.

ಈ ಸೂತ್ರವನ್ನು ಇಷ್ಟು ದೀರ್ಘವಾಗಿ ಬರೆಯುವದಕ್ಕೆ ಬದಲಾಗಿ 'ಔಜಿ ಭಾಷಾಯಾಮ್' ಎಂದೇ ಬರೆಯಬಹುದಾಗಿತ್ತು, ಆಗ ಪ್ರಥಮಾ ಹಾಗೂ ದ್ವಿತೀಯಾ

ದ್ವಿವಚನಗಳಿಗೆ ಒಂದೇ ತರಹದ ಆದೇಶವು ಬರುತ್ತಿತ್ತು. ಇದಕ್ಕಾಗಿ ಮತ್ತೊಂದು ಸೂತ್ರವನ್ನು ಮಾಡಬೇಕಾದ ಅವಶ್ಯಕತೆ ಇರುತ್ತಿರಲಿಲ್ಲ. ಸೂತ್ರಕ್ಕೆ ಅಲ್ಪಾಕ್ಷರತ್ವವೂ ಬರುತ್ತಿತ್ತು ಎಂಬುದು ಭಟ್ಟೋಜಿ ದೀಕ್ಷಿತ ಮೊದಲಾದವರ ಅಭಿಪ್ರಾಯ,

ಉದಾ– ಯುವಾಮ್– 'ಯುಷ್ಮದ್' ಶಬ್ದದಮೇಲೆ ದ್ವಿತೀಯಾ ವಿಭಕ್ತಿ ದ್ವಿವಚನದ ಪ್ರತ್ಯಯವಾದ 'ಔ' ಬಂದು, ಯುಷ್ಮದ್+ಔ ಎಂದಿದ್ದಾಗ, "ಙೇ ಪ್ರಥಮಯೋರಮ್" ಎಂಬ ಸೂತ್ರದಿಂದ 'ಅಮ್' ಆದೇಶವು ಬಂದು, ಯುಷ್ಮದ್+ಅಮ್ ಎಂದಾಗುತ್ತದೆ. "ಯುವಾವೌ ದ್ವಿವಚನೇ" ಎಂಬ ಸೂತ್ರದಿಂದ 'ಮ್' ಪರ್ಯನ್ತ ಶಬ್ದ ಸ್ವರೂಪಕ್ಕೆ 'ಯುವ' ಆದೇಶವು ಬಂದು, ಯುವ+ಅದ್+ಅಮ್ ಎಂದಾಗುತ್ತದೆ. "ಅತೋಗುಣೇ" ಎಂಬ ಸೂತ್ರದಿಂದ 'ಯುವ' ಮತ್ತು 'ಅದ್' ಶಬ್ದಗಳ ಎರಡು 'ಅ' ಕಾರಗಳಿಗೆ ಪರರೂಪ ಬಂದು, ಯುವದ್+ ಅಮ್ ಎಂದಾಗುತ್ತದೆ. ಪ್ರಕೃತ ಸೂತ್ರದಿಂದ 'ದ್' ಕಾರಕ್ಕೆ ದೀರ್ಘ 'ಆ' ಕಾರವು ಆದೇಶವಾಗಿ ಬಂದು, ಯುವ+ಆ+ಅಮ್ ಎಂದಾಗುತ್ತದೆ. ಯುವ+ಆ ಶಬ್ದಗಳಿಗೆ ಸವರ್ಣದೀರ್ಘ ಬಂದು, ಯುವಾ+ಅಮ್ ಎಂದಾಗುತ್ತದೆ. ಆನಂತರ "ಅಮಿಪೂರ್ವಃ" ಎಂಬ ಸೂತ್ರದಿಂದ ಪೂರ್ವರೂಪ ಬಂದು ಯುವಾಮ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಆವಾಮ್ : 'ಅಸ್ಮದ್' ಶಬ್ದದಮೇಲೆ ದ್ವಿತೀಯಾ ವಿಭಕ್ತಿ ದ್ವಿವಚನದ ಪ್ರತ್ಯಯವಾದ 'ಔ' ಸೇರಿ ಅಸ್ಮದ್+ಔ ಎಂದಿದ್ದಾಗ, "ಙೇ ಪ್ರಥಮಯೋರಮ್" ಎಂಬ ಸೂತ್ರದಿಂದ 'ಔ' ಗೆ 'ಅಮ್' ಆದೇಶವು ಬಂದು, ಅಸ್ಮದ್+ಅಮ್ ಎಂದಾಗುತ್ತದೆ. "ಯುವಾವೌ ದ್ವಿವಚನೇ" ಎಂಬ ಸೂತ್ರದಿಂದ 'ಮ್' ಪರ್ಯನ್ತ ಶಬ್ದ ಸ್ವರೂಪಕ್ಕೆ 'ಆವ' ಆದೇಶವು ಬಂದು, ಆವ+ಅದ್+ಅಮ್ ಎಂದಾಗುತ್ತದೆ. "ಅತೋಗುಣೇ" ಎಂಬ ಸೂತ್ರದಿಂದ 'ಆವ' ಮತ್ತು 'ಅದ್' ಶಬ್ದಗಳ ಎರಡು 'ಅ' ಕಾರಗಳಿಗೆ ಪರರೂಪ ಬಂದು ಆವದ್+ಅಮ್ ಎಂದಾಗುತ್ತದೆ. 'ದ್' ಕಾರದ ಸ್ಥಾನದಲ್ಲಿ ಪ್ರಕೃತ ಸೂತ್ರದಿಂದ ದೀರ್ಘ 'ಆ' ಕಾರವು ಆದೇಶವಾಗಿ ಬಂದು ಆವ+ಆ+ಅಮ್ ಎಂದಾಗುತ್ತದೆ. ಆವ+ಆ ಶಬ್ದಗಳಿಗೆ ಸವರ್ಣದೀರ್ಘ ಬಂದು, ಆವಾ+ಅಮ್ ಎಂದಾಗುತ್ತದೆ. ಆನಂತರ "ಅಮಿಪೂರ್ವಃ" ಎಂಬ ಸೂತ್ರದಿಂದ ಪೂರ್ವರೂಪ ಬಂದು ಆವಾಮ್ ಎಂದು ರೂಪವು ಸಿದ್ಧವಾಗುತ್ತದೆ.

ಸೂಚನೆ: ಪ್ರಕೃತ ಸೂತ್ರದಲ್ಲಿ 'ಭಾಷಾಯಾಮ್' ಎಂದು ಹೇಳಿರೋಣದ್ದರಿಂದ, ಲೌಕಿಕ ಭಾಷೆಯಲ್ಲಿ ಮಾತ್ರ ದೀರ್ಘ 'ಆ' ಕಾರವು ಆದೇಶವಾಗಿ ಬರುತ್ತದೆ, ವೈದಿಕದಲ್ಲಿ ಯುವಮ್ ಮತ್ತು ಆವಮ್ ಎಂದೇ ರೂಪವಿರುತ್ತದೆ.

**(ಜಸ್ ಪರದಲ್ಲಿದ್ದಾಗ ಯೂಯ ಮತ್ತು ವಯ ಆದೇಶಗಳನ್ನು ವಿಧಿಸುವ ಸೂತ್ರ)**

**ಸೂತ್ರ – 317. ಯೂಯ-ವಯೌ ಜಸಿ (7.2.93)**

ವೃತ್ತಿಃ–ಅನಯೋಃ 'ಮ' ಪರ್ಯಂತಸ್ಯ। ಯೂಯಮ್। ವಯಮ್।

ಅ. ವ್ಯ.– "ಯುಷ್ಮದಸ್ಮದೋರನಾದೇಶೇ" ಎಂಬ ಸೂತ್ರದಿಂದ 'ಯುಷ್ಮದಸ್ಮದೋಃ'

ಎಂಬ ಪದವು ಅನುವೃತ್ತವಾಗುತ್ತದೆ. "ಮ ಪರ್ಯಂತಸ್ಯ" ಎಂಬುದು ಅಧಿಕಾರ ಸೂತ್ರವಾಗಿದೆ.

ಅರ್ಥ–'ಜಸ್' ಪರದಲ್ಲಿದ್ದಾಗ, 'ಯುಷ್ಮದ್' ಮತ್ತು 'ಅಸ್ಮದ್' ಶಬ್ದಗಳ 'ಮ್' ಪರ್ಯಂತದ ಶಬ್ದ ಸ್ವರೂಪಕ್ಕೆ ಕ್ರಮವಾಗಿ 'ಯೂಯ' ಮತ್ತು 'ವಯ' ಆದೇಶಗಳು ಬರುತ್ತವೆ.

ಉದಾ– ಯೂಯಮ್: 'ಯುಷ್ಮದ್' ಶಬ್ದದಮೇಲೆ 'ಜಸ್(ಅಸ್)' ಪ್ರತ್ಯಯವನ್ನು ಸೇರಿಸಿ ಯುಷ್ಮದ್+ಅಸ್ ಎಂದಿದ್ದಾಗ, ಅದಕ್ಕೆ 'ಅಮ್' ಆದೇಶ ಬಂದು, ಯುಷ್ಮದ್+ಅಮ್ ಎಂದಿರುತ್ತದೆ. ಪ್ರಕೃತ ಸೂತ್ರದಿಂದ 'ಯುಷ್ಮದ್' ಶಬ್ದದ 'ಮ್' ಪರ್ಯಂತ(ಯುಷ್ಮ್)ಭಾಗಕ್ಕೆ 'ಯೂಯ' ಎಂಬ ಆದೇಶ ಬಂದು ಯೂಯ+ಅದ್+ಅಮ್ ಎಂದಾಗುತ್ತದೆ. 'ಅಮ್' ಗೆ ಸ್ಥಾನಿವದ್ಭಾವದಿಂದ 'ಜಸ್' ಎಂದು ಭಾವಿಸಲಾಗುತ್ತದೆ. ಆಗ ಪ್ರಕೃತ ಸೂತ್ರದಿಂದ ಯೂಯ+ಅದ್+ಅಮ್ ಎಂದೇ ಇರುತ್ತದೆ. "ಶೇಷೇ ಲೋಪಃ" ಎಂಬ ಸೂತ್ರದಿಂದ 'ಅದ್' ಭಾಗಕ್ಕೆ 'ಟಿ' ಲೋಪ ಬಂದು, ಯೂಯ+ಅಮ್ ಎಂದಾಗುತ್ತದೆ. "ಅಮಿ ಪೂರ್ವಃ" ಎಂಬ ಸೂತ್ರದಿಂದ ಪೂರ್ವರೂಪ ಬಂದು ಯೂಯಮ್ ಎಂದು ರೂಪವಾಗುತ್ತದೆ.

ಉದಾ– ವಯಮ್ : 'ಅಸ್ಮದ್' ಶಬ್ದದಮೇಲೆ 'ಜಸ್(ಅಸ್)' ಪ್ರತ್ಯಯ ಸೇರಿಸಿ ಅಸ್ಮದ್+ಅಸ್ ಎಂದಿದ್ದಾಗ, 'ಜಸ್' ಗೆ 'ಅಮ್' ಆದೇಶ ಬಂದು ಅಸ್ಮದ್+ಅಮ್ ಎಂದಾಗುತ್ತದೆ. ಪ್ರಕೃತ ಸೂತ್ರದಿಂದ 'ಮ್' ಪರ್ಯಂತ(ಅಸ್ಮ್) ಭಾಗಕ್ಕೆ 'ವಯ' ಆದೇಶವು ಬಂದು ವಯ+ಅದ್+ಅಮ್ ಎಂದಾಗುತ್ತದೆ. "ಶೇಷೇ ಲೋಪಃ" ಎಂಬ ಸೂತ್ರದಿಂದ 'ಅದ್' ಭಾಗಕ್ಕೆ 'ಟಿ' ಲೋಪ ಬಂದು, ವಯ+ಅಮ್ ಎಂದಾಗುತ್ತದೆ. "ಅಮಿ ಪೂರ್ವಃ" ಎಂಬ ಸೂತ್ರದಿಂದ ಪೂರ್ವರೂಪ ಬಂದು ವಯಮ್ ಎಂದು ರೂಪವಾಗುತ್ತದೆ.

### (ತ್ವಮ್ ಆದೇಶವನ್ನು ವಿಧಿಸುವ ಸೂತ್ರ)

ಸೂತ್ರ – 318. ತ್ವಮಾವೇಕವಚನೇ ( 7.2.97)

ವೃತ್ತಿಃ–ಏಕಸ್ಯ ಉಕ್ತೌ ಅನಯೋಃ 'ಮ' ಪರ್ಯಂತಸ್ಯ ತ್ವ–ಮೌ ಸ್ತಃ ವಿಭಕ್ತೌ।

ಪ. ಛೇ. – ತ್ವ–ಮೌ, ಏಕವಚನೇ।

ಅ.ವೃ.–"ಅಷ್ಟನ ಆ ವಿಭಕ್ತೌ" ಎಂಬ ಸೂತ್ರದಿಂದ 'ವಿಭಕ್ತೌ' ಎಂಬ ಪದವೂ, "ಯುಷ್ಮದಸ್ಮದೋರನಾದೇಶೇ" ಎಂಬ ಸೂತ್ರದಿಂದ 'ಯುಷ್ಮದಸ್ಮದೋಃ' ಎಂಬ ಪದವೂ ಅನುವೃತ್ತವಾಗುತ್ತವೆ. "ಮ ಪರ್ಯಂತಸ್ಯ" ಎಂಬುದು ಅಧಿಕಾರ ಸೂತ್ರವಾಗಿದೆ.

ಅರ್ಥ– ವಿಭಕ್ತಿಪ್ರತ್ಯಯಗಳು ಪರದಲ್ಲಿದ್ದಾಗ, 'ಯುಷ್ಮದ್' ಮತ್ತು 'ಅಸ್ಮದ್' ಶಬ್ದಗಳ 'ಮ್' ಪರ್ಯಂತ ಭಾಗಕ್ಕೆ ಕ್ರಮವಾಗಿ 'ತ್ವ' ಮತ್ತು 'ಮ' ಗಳು ಆದೇಶವಾಗಿ ಬರುತ್ತವೆ– ಏಕಸಂಖ್ಯಾವಿಶಿಷ್ಟವಾಗಿದ್ದಾಗ.

(ಆತ್(ಆ) ಆದೇಶವನ್ನು ವಿಧಿಸುವ ಸೂತ್ರ)

**ಸೂತ್ರ - 319. ದ್ವಿತೀಯಾಯಾಂ ಚ ( 7.2.87)**

ವೃತ್ತಿಃ-ಅನಯೋಃ ಆತ್ ಸ್ಯಾತ್ । ತ್ವಾಮ್। ಮಾಮ್।

ಪ. ಛೇ. – ದ್ವಿತೀಯಾಯಾಂ, ಚ।

ಅ. ವೃ:- "ಅಷ್ಟನ ಆ ವಿಭಕ್ತೌ" ಎಂಬ ಸೂತ್ರದಿಂದ 'ವಿಭಕ್ತೌ' ಎಂಬ ಪದವೂ, "ಯುಷ್ಮದಸ್ಮದೋರನಾದೇಶೇ" ಎಂಬ ಸೂತ್ರದಿಂದ 'ಯುಷ್ಮದಸ್ಮದೋಃ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ-ದ್ವಿತೀಯಾ ವಿಭಕ್ತಿ ಪ್ರತ್ಯಯವು ಪರದಲ್ಲಿದ್ದಾಗ, 'ಯುಷ್ಮದ್' ಮತ್ತು 'ಅಸ್ಮದ್' ಶಬ್ದಗಳ ಅನ್ತ್ಯ ವರ್ಣವಾದ 'ದ್' ಕಾರಕ್ಕೆ 'ಆ' ಕಾರವು ಆದೇಶವಾಗಿ ಬರುತ್ತದೆ.

ಉದಾ- ತ್ವಾಮ್- 'ಯುಷ್ಮದ್' ಶಬ್ದದಮೇಲೆ ದ್ವಿತೀಯಾವಿಭಕ್ತಿ ಏಕವಚನದ ಪ್ರತ್ಯಯವಾದ 'ಅಮ್' ಪರದಲ್ಲಿದ್ದಾಗ "ಙೇ ಪ್ರಥಮಯೋರಮ್" ಎಂಬ ಸೂತ್ರದಿಂದ 'ಅಮ್' ಆದೇಶವು ಬಂದು, ಯುಷ್ಮದ್+ಅಮ್ ಎಂದಿರುತ್ತದೆ. "ತ್ವಮಾವೇಕವಚನೇ (7.2.97)" ಎಂಬ ಸೂತ್ರದಿಂದ 'ಯುಷ್ಮ್' ಎಂಬ ಭಾಗಕ್ಕೆ 'ತ್ವ' ಆದೇಶ ಬಂದು, ತ್ವ+ಅದ್+ಅಮ್ ಎಂದಾಗುತ್ತದೆ. ಇಲ್ಲಿ 'ತ್ವ' ಮತ್ತು 'ಅದ್' ಗಳಿಗೆ "ಅತೋಗುಣೇ" ಎಂಬ ಸೂತ್ರದಿಂದ ಪರರೂಪವು ಆದೇಶವಾಗಿ ಬಂದು ತ್ವದ್+ಅಮ್ ಎಂದಾಗುತ್ತದೆ. ನಂತರ ಪ್ರಕೃತ ಸೂತ್ರದಿಂದ 'ದ್' ಕಾರಕ್ಕೆ 'ಆ' ಕಾರವು ಆದೇಶವಾಗಿಬಂದು ತ್ವ+ಆ+ಅಮ್ ಎಂದಾಗುತ್ತದೆ. ಮೊದಲ ಎರಡು ಶಬ್ದಗಳಿಗೆ ಸವರ್ಣದೀರ್ಘ ಬಂದು, ತ್ವಾ+ಅಮ್ ಎಂದಾಗುತ್ತದೆ. ನಂತರ "ಅಮಿ ಪೂರ್ವಃ" ಎಂಬ ಸೂತ್ರದಿಂದ ಪೂರ್ವರೂಪವು ಬಂದು ತ್ವಾಮ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ- ಮಾಮ್- ಅಸ್ಮದ್ ಶಬ್ದದಮೇಲೆ ದ್ವಿತೀಯಾ ಏಕವಚನ 'ಅಮ್' ಪ್ರತ್ಯಯವು ಸೇರಿ ಅಸ್ಮದ್+ಅಮ್ ಎಂದು ಇದ್ದಾಗ, ಮೇಲಿನಂತೆಯೇ ಪ್ರಕ್ರಿಯೆ ನಡೆದು, ಮಾಮ್ ಎಂದು ರೂಪವು ಸಿದ್ಧವಾಗುತ್ತದೆ.

ಸೂಚನೆ: ದ್ವಿತೀಯಾ ದ್ವಿವಚನ ಪ್ರತ್ಯಯ ಇದ್ದಾಗಲೂ (ಯುಷ್ಮದ್+ಔ, ಮತ್ತು ಅಸ್ಮದ್+ಔ) ಎಂದಿದ್ದಾಗ, ಪ್ರಥಮಾ ವಿಭಕ್ತಿಯಲ್ಲಿರುವಂತೆ ಯುವಾಮ್ ಮತ್ತು ಆವಾಮ್ ಎಂದು ರೂಪಗಳಾಗುತ್ತವೆ.

ಉದಾ- ಯುವಾಮ್, ಆವಾಮ್ – 'ಯುಷ್ಮದ್' ಶಬ್ದದಮೇಲೆ ದ್ವಿತೀಯಾ ವಿಭಕ್ತಿ ದ್ವಿವಚನದ ಪ್ರತ್ಯಯವಾದ 'ಔ' ಸೇರಿ ಯುಷ್ಮದ್+ಔ ಎಂದಿದ್ದಾಗ, "ಙೇ ಪ್ರಥಮಯೋರಮ್" ಎಂಬ ಸೂತ್ರದಿಂದ 'ಅಮ್' ಆದೇಶವು ಬಂದು ಯುಷ್ಮದ್+ಅಮ್ ಎಂದಾಗುತ್ತದೆ. "ಯುವಾವೌ ದ್ವಿವಚನೇ" ಎಂಬ ಸೂತ್ರದಿಂದ 'ಮ್' ಪರ್ಯನ್ತ ಶಬ್ದ ಸ್ವರೂಪಕ್ಕೆ 'ಯುವ' ಆದೇಶವು ಬಂದು, ಯುವ+ಅದ್+ಅಮ್ ಎಂದಾದಮೇಲೆ, ಪ್ರಕೃತ ಸೂತ್ರದಿಂದ 'ದ್' ಕಾರಕ್ಕೆ ದೀರ್ಘ 'ಆ' ಕಾರವು ಬಂದು "ಅತೋಗುಣೇ" ಎಂಬ ಸೂತ್ರದಿಂದ 'ಯುವ' ಮತ್ತು 'ಅದ್' ಶಬ್ದಗಳ ಎರಡು

'ಅ' ಕಾರಗಳಿಗೆ ಪರರೂಪ ಬಂದು ಯುವದ್+ ಅಮ್ ಎಂದಾಗುತ್ತದೆ. ನಂತರ ಪ್ರಕೃತ ಸೂತ್ರದಿಂದ 'ದ್' ಕಾರಕ್ಕೆ ದೀರ್ಘ 'ಆ' ಕಾರವು ಆದೇಶವಾಗಿ ಬಂದು, ಯುವ+ಆ+ಅಮ್ ಎಂದಿದ್ದಾಗ, ಮೊದಲಿನ ಎರಡು ಶಬ್ದಗಳ 'ಅ' ಕಾರಗಳಿಗೆ ಸವರ್ಣದೀರ್ಘ ಬಂದು, ಯುವಾ+ಅಮ್ ಎಂದಿದ್ದಾಗ, "ಅಮಿ ಪೂರ್ವಃ" ಎಂಬ ಸೂತ್ರದಿಂದ ಪೂರ್ವರೂಪ ಬಂದು, ಯುವಾಮ್ ಎಂದು ರೂಪವಾಗುತ್ತದೆ. ಹಾಗೆಯೇ 'ಅಸ್ಮದ್' ಶಬ್ದದಮೇಲೆ ದ್ವಿತೀಯಾ ವಿಭಕ್ತಿ ದ್ವಿವಚನದ ಪ್ರತ್ಯಯವಾದ 'ಔ' ಸೇರಿ ಅಸ್ಮದ್+ಔ ಎಂದಿದ್ದಾಗ, ಮೇಲಿನಂತೆಯೇ ಪ್ರಕ್ರಿಯೆ ನಡೆದು ಆವಾಮ್ ಎಂದು ರೂಪವಾಗುತ್ತದೆ.

[ಭಟ್ಟೋಜಿ ದೀಕ್ಷಿತರು ಟೀಕಿಸಿದಂತೆ ಎರಡು ಸೂತ್ರಗಳಿಂದ ಬರುವದೀರ್ಘ 'ಆ' ಕಾರಾದೇಶವು ಒಂದೇ ಸೂತ್ರದಿಂದ ಬರಬಹುದಾಗಿತ್ತು ಎಂದು ತಾತ್ಪರ್ಯ.]

### (ನ್ ಕಾರಾದೇಶವನ್ನು ವಿಧಿಸುವ ಸೂತ್ರ)

**ಸೂತ್ರ- 320. ಶಸೋ ನ (7.1.29)**

ವೃತ್ತಿಃ–ಆಭ್ಯಾಂ ಶಸಃ ನಃ ಸ್ಯಾತ್ ಅಮೋಽಪವಾದಃ (72) ಆದೇಃ ಪರಸ್ಯ। (20) ಸಂಯೋಗಾಂತ ಲೋಪಃ। ಯುಷ್ಮಾನ್। ಅಸ್ಮಾನ್।

ಪ. ಛೇ. – ಶಸಃ, ನ। (ಇಲ್ಲಿ ನ ಎಂಬುದು ಲುಪ್ತ ಪ್ರಥಮಾಕವಾದ ಪದವು।

ಅ.ವೃ.–"ಯುಷ್ಮದಸ್ಮದ್ಭ್ಯಾಮ್ ಙಸೋಽಶ್" ಎಂಬ ಸೂತ್ರದಿಂದ 'ಯುಷ್ಮದಸ್ಮದ್ಭ್ಯಾಮ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ–'ಯುಷ್ಮದ್' ಮತ್ತು 'ಅಸ್ಮದ್' ಶಬ್ದಗಳ ಪರದಲ್ಲಿರುವ 'ಶಸ್(ಅಸ್)' ನ ಸ್ಥಾನದಲ್ಲಿ, 'ನ್' ಕಾರವು ಆದೇಶವಾಗಿ ಬರುತ್ತದೆ. ಪ್ರಕೃತ ಸೂತ್ರವು "ಙೇ ಪ್ರಥಮಯೋರಮ್" ಎಂಬ ಸೂತ್ರಕ್ಕೆ ಅಪವಾದವಾಗಿದೆ.

ಉದಾ–ಯುಷ್ಮಾನ್ – 'ಯುಷ್ಮದ್' ಶಬ್ದದ ನಂತರ 'ಶಸ್(ಅಸ್)' ಪ್ರತ್ಯೆಯವನ್ನು ಸೇರಿಸಿ ಯುಷ್ಮದ್+ಅಸ್ ಎಂದು ಇರುವಾಗ, "ಆದೇಃ ಪರಸ್ಯ" ಎಂಬ ಸೂತ್ರಕ್ಕನುಗುಣವಾಗಿ 'ಶಸ್(ಅಸ್)' ನಲ್ಲಿರುವ ಆದಿವರ್ಣವಾದ 'ಅ' ಕಾರಕ್ಕೆ 'ನ್' ಕಾರವು ಆದೇಶವಾಗಿ ಬಂದು, ಯುಷ್ಮದ್+ನ್ಸ್ ಎಂದಿರುವಾಗ, "ಸಂಯೋಗಾಂತಸ್ಯ ಲೋಪಃ" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪವು ಬಂದು, ಯುಷ್ಮದ್+ನ್ ಎಂದಿದ್ದಾಗ, "ದ್ವಿತೀಯಾಯಾಞ್ಚ" ಎಂಬ ಸೂತ್ರದಿಂದ 'ದ್' ಕಾರದ ಸ್ಥಾನದಲ್ಲಿ ದೀರ್ಘ 'ಆ' ಕಾರವು ಆದೇಶವಾಗಿ ಬರುತ್ತದೆ. ಆಗ, ಯುಷ್ಮ+ಆ+ನ್ ಎಂದಿರುತ್ತದೆ. ಮೊದಲ ಎರಡು 'ಅ' ಕಾರಗಳಿಗೆ ಸರ್ವರ್ಣದೀರ್ಘ ಬಂದು, ಯುಷ್ಮಾ +ನ್=ಯುಷ್ಮಾನ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ–ಅಸ್ಮಾನ್ 'ಅಸ್ಮದ್' ಶಬ್ದದ ನಂತರ 'ಶಸ್(ಅಸ್)' ಪ್ರತ್ಯಯವನ್ನು ಸೇರಿಸಿ ಅಸ್ಮದ್+ಅಸ್ ಎಂದು ಇರುವಾಗ "ಆದೇಃ ಪರಸ್ಯ" ಎಂಬ ಸೂತ್ರಕ್ಕನುಗುಣವಾಗಿ 'ಶಸ್(ಅಸ್)' ನಲ್ಲಿರುವ ಆದಿವರ್ಣವಾದ 'ಅ' ಕಾರಕ್ಕೆ 'ನ್' ಕಾರವು ಆದೇಶವಾಗಿ

ಬಂದು, ಅಸ್ಮದ್+ನ್ಸ್ ಎಂದಿರುವಾಗ, "ಸಂಯೋಗಾಂತಸ್ಯ ಲೋಪಃ" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪವು ಬಂದು, ಅಸ್ಮದ್+ನ್ ಎಂದಿದ್ದಾಗ, "ದ್ವಿತೀಯಾಯಾಞ್ಚ" ಎಂಬ ಸೂತ್ರದಿಂದ, 'ದ್' ಕಾರದ ಸ್ಥಾನದಲ್ಲಿ ದೀರ್ಘ 'ಆ' ಕಾರವು ಆದೇಶವಾಗಿ ಬರುತ್ತದೆ. ಆಗ, ಅಸ್ಮ+ಆ+ನ್ ಎಂದಿರುತ್ತದೆ. ಮೊದಲ ಎರಡು 'ಅ' ಕಾರಗಳಿಗೆ ಸರ್ವರ್ಣದೀರ್ಘ ಬಂದು ಅಸ್ಮಾ+ನ್=ಅಸ್ಮಾನ್ ಎಂದು ರೂಪವು ಸಿದ್ಧವಾಗುತ್ತದೆ.

**(ಯ್ ಕಾರವನ್ನು ಆದೇಶವಾಗಿ ವಿಧಿಸುವ ಸೂತ್ರ)**

**ಸೂತ್ರ - 321. ಯೋಽಚಿ (7.2.89)**

ವೃತ್ತಿಃ-ಅನಯೋಃ 'ಯ' ಕಾರಾದೇಶಃ ಸ್ಯಾತ್ ಅನಾದೇಶೇ ಅಜಾದೌ ಪರತಃ। ತ್ವಯಾ। ಮಯಾ।

ಪ. ಛೇ. - ಯಃ, ಅಚಿ।

ಅ. ವೃ. -"ಯುಷ್ಮದಸ್ಮದೋರನಾದೇಶೇ" ಎಂಬ ಸೂತ್ರದಿಂದ 'ಯುಷ್ಮದಸ್ಮದೋಃ' ಎಂಬ ಸೂತ್ರವು ಪೂರ್ಣವಾಗಿ ಅನುವೃತ್ತವಾಗುತ್ತದೆ. ಮತ್ತು "ಅಷ್ಟನ ಆ ವಿಭಕ್ತೌ" ಎಂಬ ಸೂತ್ರದಿಂದ 'ವಿಭಕ್ತೌ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- ಆದೇಶವಾಗಿ ಇಲ್ಲದಿರುವ (ಯಾವ ವಿಭಕ್ತಿ ಪ್ರತ್ಯಯಕ್ಕೆ ಆದೇಶ ಬಂದಿರುವದಿಲ್ಲವೋ ಅಂತಹದ್ದಕ್ಕೆ ಅನಾದೇಶವೆನ್ನುತ್ತಾರೆ). ಅಂತಹ ಶಬ್ದದ ಅಂತ್ಯ 'ದ್' ಕಾರಕ್ಕೆ 'ಯ್' ಕಾರವು "ಅಲೋಽನ್ತ್ಯಸ್ಯ" ಎಂಬ ಸೂತ್ರದಿಂದ ಆದೇಶವಾಗಿ ಬರುತ್ತದೆ.

ಉದಾ- ತ್ವಯಾ- ಯುಷ್ಮದ್ ಶಬ್ದದಮೇಲೆ ತೃತೀಯಾ ವಿಭಕ್ತಿ ಏಕವಚನದ ಪ್ರತ್ಯಯವಾದ 'ಟಾ(ಆ)' ಸೇರಿಸಿ ಯುಷ್ಮದ್+ಆ ಎಂದಿದ್ದಾಗ, "ತ್ವಮಾವೇಕವಚನೇ (7.2.97)" ಎಂಬ ಸೂತ್ರದಿಂದ 'ಯುಷ್ಮ್' ಎಂಬ ಭಾಗಕ್ಕೆ 'ತ್ವ' ಆದೇಶವಾಗಿ ಬಂದು, ತ್ವ+ಅದ್+ಆ ಎಂದಾಗುತ್ತದೆ. ತ್ವ+ಅದ್ ಎಂಬಲ್ಲಿ "ಅತೋಗುಣೇ" ಎಂಬ ಸೂತ್ರದಿಂದ ಪರರೂಪ ಬಂದು, ತ್ವದ್+ಆ ಎಂದಿರುತ್ತದೆ. ಆಗ, 'ದ್' ಕಾರದ ಸ್ಥಾನದಲ್ಲಿ ಪ್ರಕೃತ ಸೂತ್ರದಿಂದ 'ಯ್' ಕಾರವು ಆದೇಶವಾಗಿ ಬಂದು, ತ್ವಯ್+ಆ=ತ್ವಯಾ ಎಂದು ರೂಪವಾಗುತ್ತದೆ.

ಉದಾ- ಮಯಾ-ಅಸ್ಮದ್ ಶಬ್ದದಮೇಲೆ ತೃತೀಯಾ ವಿಭಕ್ತಿ ಏಕವಚನದ ಪ್ರತ್ಯಯವಾದ 'ಟಾ(ಆ)' ಸೇರಿಸಿ ಅಸ್ಮದ್+ಆ ಎಂದಿದ್ದಾಗ, "ತ್ವಮಾವೇಕವಚನೇ (7.2.97)" ಎಂಬ ಸೂತ್ರದಿಂದ 'ಅಸ್ಮ್' ಎಂಬ ಭಾಗಕ್ಕೆ 'ಮ್' ಆದೇಶವಾಗಿ ಬಂದು, ಮ್+ಅದ್+ಆ ಎಂದಾಗುತ್ತದೆ. ಮ್+ಅದ್ ಎಂಬಲ್ಲಿ "ಅತೋಗುಣೇ" ಎಂಬ ಸೂತ್ರದಿಂದ ಪರರೂಪ ಬಂದು, ಮದ್+ಆ ಎಂದಿರುತ್ತದೆ. ಆಗ, 'ದ್' ಕಾರದ ಸ್ಥಾನದಲ್ಲಿ ಪ್ರಕೃತ ಸೂತ್ರದಿಂದ 'ಯ್' ಕಾರವು ಆದೇಶವಾಗಿ ಬಂದು ಮಯ್+ಆ=ಮಯಾ ಎಂದು ರೂಪವಾಗುತ್ತದೆ.

'ಅ' ಕಾರಗಳಿಗೆ ಪರರೂಪ ಬಂದು ಯುವದ್+ ಅಮ್ ಎಂದಾಗುತ್ತದೆ. ನಂತರ ಪ್ರಕೃತ ಸೂತ್ರದಿಂದ 'ದ್' ಕಾರಕ್ಕೆ ದೀರ್ಘ 'ಆ' ಕಾರವು ಆದೇಶವಾಗಿ ಬಂದು, ಯುವ+ಆ+ಅಮ್ ಎಂದಿದ್ದಾಗ, ಮೊದಲಿನ ಎರಡು ಶಬ್ದಗಳ 'ಅ' ಕಾರಗಳಿಗೆ ಸವರ್ಣದೀರ್ಘ ಬಂದು, ಯುವಾ+ಅಮ್ ಎಂದಿದ್ದಾಗ, "ಅಮಿ ಪೂರ್ವಃ" ಎಂಬ ಸೂತ್ರದಿಂದ ಪೂರ್ವರೂಪ ಬಂದು, ಯುವಾಮ್ ಎಂದು ರೂಪವಾಗುತ್ತದೆ. ಹಾಗೆಯೇ 'ಅಸ್ಮದ್' ಶಬ್ದದಮೇಲೆ ದ್ವಿತೀಯಾ ವಿಭಕ್ತಿ ದ್ವಿವಚನದ ಪ್ರತ್ಯಯವಾದ 'ಔ' ಸೇರಿ ಅಸ್ಮದ್+ಔ ಎಂದಿದ್ದಾಗ, ಮೇಲಿನಂತೆಯೇ ಪ್ರಕ್ರಿಯೆ ನಡೆದು ಆವಾಮ್ ಎಂದು ರೂಪವಾಗುತ್ತದೆ.

[ಭಟ್ಟೋಜಿ ದೀಕ್ಷಿತರು ಟೀಕಿಸಿದಂತೆ ಎರಡು ಸೂತ್ರಗಳಿಂದ ಬರುವದೀರ್ಘ 'ಆ' ಕಾರಾದೇಶವು ಒಂದೇ ಸೂತ್ರದಿಂದ ಬರಬಹುದಾಗಿತ್ತು ಎಂದು ತಾತ್ಪರ್ಯ.]

**(ನ್ ಕಾರಾದೇಶವನ್ನು ವಿಧಿಸುವ ಸೂತ್ರ)**

**ಸೂತ್ರ- 320. ಶಸೋ ನ (7.1.29)**

ವೃತ್ತಿಃ-ಆಭ್ಯಾಂ ಶಸಃ ನಃ ಸ್ಯಾತ್ ಅಮೋಽಪವಾದಃ (72) ಆದೇಃ ಪರಸ್ಯ। (20) ಸಂಯೋಗಾಂತ ಲೋಪಃ। ಯುಷ್ಮಾನ್। ಅಸ್ಮಾನ್।

ಪ. ಛೇ. – ಶಸಃ, ನ। (ಇಲ್ಲಿ ನ ಎಂಬುದು ಲುಪ್ತ ಪ್ರಥಮಾಕವಾದ ಪದವು।

ಅ.ವ್ಯ.-"ಯುಷ್ಮದಸ್ಮದ್ಭ್ಯಾಮ್ ಙಸೋಽಶ್" ಎಂಬ ಸೂತ್ರದಿಂದ 'ಯುಷ್ಮದಸ್ಮದ್ಭ್ಯಾಮ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ–'ಯುಷ್ಮದ್' ಮತ್ತು 'ಅಸ್ಮದ್' ಶಬ್ದಗಳ ಪರದಲ್ಲಿರುವ 'ಶಸ್(ಅಸ್)' ನ ಸ್ಥಾನದಲ್ಲಿ, 'ನ್' ಕಾರವು ಆದೇಶವಾಗಿ ಬರುತ್ತದೆ. ಪ್ರಕೃತ ಸೂತ್ರವು "ಙೇ ಪ್ರಥಮಯೋರಮ್" ಎಂಬ ಸೂತ್ರಕ್ಕೆ ಅಪವಾದವಾಗಿದೆ.

ಉದಾ–ಯುಷ್ಮಾನ್ – 'ಯುಷ್ಮದ್' ಶಬ್ದದ ನಂತರ 'ಶಸ್(ಅಸ್)' ಪ್ರತ್ಯಯವನ್ನು ಸೇರಿಸಿ ಯುಷ್ಮದ್+ಅಸ್ ಎಂದು ಇರುವಾಗ, "ಆದೇಃ ಪರಸ್ಯ" ಎಂಬ ಸೂತ್ರಕ್ಕನುಗುಣವಾಗಿ 'ಶಸ್(ಅಸ್)' ನಲ್ಲಿರುವ ಆದಿವರ್ಣವಾದ 'ಅ' ಕಾರಕ್ಕೆ 'ನ್' ಕಾರವು ಆದೇಶವಾಗಿ ಬಂದು, ಯುಷ್ಮದ್+ನ್‌ಸ್ ಎಂದಿರುವಾಗ, "ಸಂಯೋಗಾಂತಸ್ಯ ಲೋಪಃ" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪವು ಬಂದು, ಯುಷ್ಮದ್+ನ್ ಎಂದಿದ್ದಾಗ, "ದ್ವಿತೀಯಾಯಾಞ್ಚ" ಎಂಬ ಸೂತ್ರದಿಂದ 'ದ್' ಕಾರದ ಸ್ಥಾನದಲ್ಲಿ ದೀರ್ಘ 'ಆ' ಕಾರವು ಆದೇಶವಾಗಿ ಬರುತ್ತದೆ. ಆಗ, ಯುಷ್ಮ+ಆ+ನ್ ಎಂದಿರುತ್ತದೆ. ಮೊದಲ ಎರಡು 'ಅ' ಕಾರಗಳಿಗೆ ಸರ್ವರ್ಣದೀರ್ಘ ಬಂದು, ಯುಷ್ಮಾ +ನ್=ಯುಷ್ಮಾನ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ–ಅಸ್ಮಾನ್ 'ಅಸ್ಮದ್' ಶಬ್ದದ ನಂತರ 'ಶಸ್(ಅಸ್)' ಪ್ರತ್ಯಯವನ್ನು ಸೇರಿಸಿ ಅಸ್ಮದ್+ಅಸ್ ಎಂದು ಇರುವಾಗ "ಆದೇಃ ಪರಸ್ಯ" ಎಂಬ ಸೂತ್ರಕ್ಕನುಗುಣವಾಗಿ 'ಶಸ್(ಅಸ್)' ನಲ್ಲಿರುವ ಆದಿವರ್ಣವಾದ 'ಅ' ಕಾರಕ್ಕೆ 'ನ್' ಕಾರವು ಆದೇಶವಾಗಿ

ಬಂದು, ಅಸ್ಮದ್+ನ್ಸ್ ಎಂದಿರುವಾಗ, "ಸಂಯೋಗಾಂತಸ್ಯ ಲೋಪಃ" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪವು ಬಂದು, ಅಸ್ಮದ್+ನ್ ಎಂದಿದ್ದಾಗ, "ದ್ವಿತೀಯಾಯಾಞ್ಚ" ಎಂಬ ಸೂತ್ರದಿಂದ, 'ದ್' ಕಾರದ ಸ್ಥಾನದಲ್ಲಿ ದೀರ್ಘ 'ಆ' ಕಾರವು ಆದೇಶವಾಗಿ ಬರುತ್ತದೆ. ಆಗ, ಅಸ್ಮ+ಆ+ನ್ ಎಂದಿರುತ್ತದೆ. ಮೊದಲ ಎರಡು 'ಅ' ಕಾರಗಳಿಗೆ ಸವರ್ಣದೀರ್ಘ ಬಂದು ಅಸ್ಮಾ+ನ್=ಅಸ್ಮಾನ್ ಎಂದು ರೂಪವು ಸಿದ್ಧವಾಗುತ್ತದೆ.

### (ಯ್ ಕಾರವನ್ನು ಆದೇಶವಾಗಿ ವಿಧಿಸುವ ಸೂತ್ರ)

**ಸೂತ್ರ – 321. ಯೋಽಚಿ (7.2.89)**

ವೃತ್ತಿಃ–ಅನಯೋಃ 'ಯ' ಕಾರಾದೇಶಃ ಸ್ಯಾತ್ ಅನಾದೇಶೇ ಅಜಾದೌ ಪರತಃ। ತ್ವಯಾ। ಮಯಾ।

ಪ. ಛೇ. – ಯಃ, ಅಚಿ।

ಅ. ವ್ಯ. –"ಯುಷ್ಮದಸ್ಮದೋರನಾದೇಶೇ" ಎಂಬ ಸೂತ್ರದಿಂದ 'ಯುಷ್ಮದಸ್ಮದೋಃ' ಎಂಬ ಸೂತ್ರವು ಪೂರ್ಣವಾಗಿ ಅನುವೃತ್ತವಾಗುತ್ತದೆ. ಮತ್ತು "ಅಷ್ಟನ ಆ ವಿಭಕ್ತೌ" ಎಂಬ ಸೂತ್ರದಿಂದ 'ವಿಭಕ್ತೌ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– ಆದೇಶವಾಗಿ ಇಲ್ಲದಿರುವ (ಯಾವ ವಿಭಕ್ತಿ ಪ್ರತ್ಯಯಕ್ಕೆ ಆದೇಶ ಬಂದಿರುವದಿಲ್ಲವೋ ಅಂತಹದ್ದಕ್ಕೆ ಅನಾದೇಶವೆನ್ನುತ್ತಾರೆ). ಅಂತಹ ಶಬ್ದದ ಅಂತ್ಯ 'ದ್' ಕಾರಕ್ಕೆ 'ಯ್' ಕಾರವು "ಅಲೋಽನ್ತ್ಯಸ್ಯ" ಎಂಬ ಸೂತ್ರದಿಂದ ಆದೇಶವಾಗಿ ಬರುತ್ತದೆ.

ಉದಾ– ತ್ವಯಾ– ಯುಷ್ಮದ್ ಶಬ್ದದಮೇಲೆ ತೃತೀಯಾ ವಿಭಕ್ತಿ ಏಕವಚನದ ಪ್ರತ್ಯಯವಾದ 'ಟಾ(ಆ)' ಸೇರಿಸಿ ಯುಷ್ಮದ್+ಆ ಎಂದಿದ್ದಾಗ, "ತ್ವಮಾವೇಕವಚನೇ (7.2.97)" ಎಂಬ ಸೂತ್ರದಿಂದ 'ಯುಷ್ಮ್' ಎಂಬ ಭಾಗಕ್ಕೆ 'ತ್ವ' ಆದೇಶವಾಗಿ ಬಂದು, ತ್ವ+ಅದ್+ಆ ಎಂದಾಗುತ್ತದೆ. ತ್ವ+ಅದ್ ಎಂಬಲ್ಲಿ "ಅತೋಗುಣೇ" ಎಂಬ ಸೂತ್ರದಿಂದ ಪರರೂಪ ಬಂದು, ತ್ವದ್+ಆ ಎಂದಿರುತ್ತದೆ. ಆಗ, 'ದ್' ಕಾರದ ಸ್ಥಾನದಲ್ಲಿ ಪ್ರಕೃತ ಸೂತ್ರದಿಂದ 'ಯ್' ಕಾರವು ಆದೇಶವಾಗಿ ಬಂದು, ತ್ವಯ್+ಆ=ತ್ವಯಾ ಎಂದು ರೂಪವಾಗುತ್ತದೆ.

ಉದಾ– ಮಯಾ–ಅಸ್ಮದ್ ಶಬ್ದದಮೇಲೆ ತೃತೀಯಾ ವಿಭಕ್ತಿ ಏಕವಚನದ ಪ್ರತ್ಯಯವಾದ 'ಟಾ(ಆ)' ಸೇರಿಸಿ ಅಸ್ಮದ್+ಆ ಎಂದಿದ್ದಾಗ, "ತ್ವಮಾವೇಕವಚನೇ (7.2.97)" ಎಂಬ ಸೂತ್ರದಿಂದ 'ಅಸ್ಮ್' ಎಂಬ ಭಾಗಕ್ಕೆ 'ಮ್' ಆದೇಶವಾಗಿ ಬಂದು, ಮ್+ಅದ್+ಆ ಎಂದಾಗುತ್ತದೆ. ಮ್+ಅದ್ ಎಂಬಲ್ಲಿ "ಅತೋಗುಣೇ" ಎಂಬ ಸೂತ್ರದಿಂದ ಪರರೂಪ ಬಂದು, ಮದ್+ಆ ಎಂದಿರುತ್ತದೆ. ಆಗ, 'ದ್' ಕಾರದ ಸ್ಥಾನದಲ್ಲಿ ಪ್ರಕೃತ ಸೂತ್ರದಿಂದ 'ಯ್' ಕಾರವು ಆದೇಶವಾಗಿ ಬಂದು ಮಯ್+ಆ=ಮಯಾ ಎಂದು ರೂಪವಾಗುತ್ತದೆ.

**(ದೀರ್ಘ 'ಆ' ಕಾರವನ್ನು ವಿಧಿಸುವ ಸೂತ್ರ)**

**ಸೂತ್ರ - 322. ಯುಷ್ಮದಸ್ಮದೋರನಾದೇಶೇ (7.2.86)**

ವೃತ್ತಿಃ–ಅನಯೋಃ ಆತ್ ಸ್ಯಾತ್ ಅನಾದೇಶೇ ಹಲಾದೌ ವಿಭಕ್ತೌ। ಯುವಾಭ್ಯಾಮ್। ಆವಾಭ್ಯಾಮ್। ಯುಷ್ಮಾಭಿಃ। ಅಸ್ಮಾಭಿಃ।

ಪ. ಛೇ. – ಯುಷ್ಮದಸ್ಮದೋಃ, ಅನಾದೇಶೇ।

ಅ. ವ್ಯ. "ರಾಯೋ ಹಲಿ" ಎಂಬ ಸೂತ್ರದಿಂದ 'ಹಲಿ' ಎಂಬ ಪದವೂ, ಮತ್ತು "ಅಷ್ಟನ ಆ ವಿಭಕ್ತೌ" ಎಂಬ ಸೂತ್ರದಿಂದ 'ವಿಭಕ್ತೌ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ–ಅನಾದೇಶವಾದ(ಯಾವ ವಿಭಕ್ತಿ ಪ್ರತ್ಯಯಕ್ಕೆ ಆದೇಶ ಬಂದಿರುವದಿಲ್ಲವೋ ಅಂತಹದ್ದಕ್ಕೆ ಅನಾದೇಶವೆನ್ನುತ್ತಾರೆ) ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, 'ಯುಷ್ಮದ್' ಮತ್ತು 'ಅಸ್ಮದ್' ಶಬ್ದಗಳ ಅನ್ತ್ಯವರ್ಣವಾದ 'ದ್' ಕಾರದ ಸ್ಥಾನದಲ್ಲಿ ದೀರ್ಘ 'ಆ' ಕಾರವು "ಅಲೋಽನ್ತ್ಯಸ್ಯ" ಎಂಬ ಸೂತ್ರದಿಂದ ಆದೇಶವಾಗಿ ಬರುತ್ತದೆ.

ಉದಾ– ಆವಾಭ್ಯಾಮ್– ಅಸ್ಮದ್ ಶಬ್ದದ ಮೇಲೆ ತೃತೀಯಾ ವಿಭಕ್ತಿ ದ್ವಿವಚನದ ಪ್ರತ್ಯಯವಾದ 'ಭ್ಯಾಮ್' ಸೇರಿಸಿ ಅಸ್ಮದ್+ಭ್ಯಾಮ್ ಎಂದಿದ್ದಾಗ,

"ಯುವಾವೌ ದ್ವಿವಚನೇ" ಎಂಬ ಸೂತ್ರದಿಂದ 'ಮ್' ಪರ್ಯನ್ತ ಶಬ್ದ ಸ್ವರೂಪಕ್ಕೆ 'ಆವ' ಆದೇಶವು ಬಂದು, ಆವ+ಅದ್+ಭ್ಯಾಮ್ ಎಂದಿದ್ದಾಗ, ಮೊದಲೆರಡು ಶಬ್ದಗಳಿಗೆ "ಅತೋಗುಣೇ" ಎಂಬ ಸೂತ್ರದಿಂದ ಪರರೂಪ ಬಂದು, ಆವದ್+ಭ್ಯಾಮ್ ಎಂದಿರುತ್ತದೆ. ಪ್ರಕೃತ ಸೂತ್ರದಿಂದ 'ದ್' ಕಾರಕ್ಕೆ ದೀರ್ಘ 'ಆ' ಕಾರಾದೇಶವು ಬಂದು, ಆವ+ಆ+ಭ್ಯಾಮ್ ಎಂದಾಗುತ್ತದೆ. ನಂತರ ಸವರ್ಣದೀರ್ಘ ದಿಂದ ಆವಾಭ್ಯಾಮ್ ಎಂಬ ರೂಪವು ಸಿದ್ಧವಾಗುತ್ತದೆ.

ಸೂಚನೆ: ಇದೇ ರೀತಿಯಲ್ಲಿ, ಚತುರ್ಥೀ ಮತ್ತು ಪಞ್ಚಮೀ ದ್ವಿವಚನಗಳಲ್ಲೂ ಭ್ಯಾಮ್ ಪ್ರತ್ಯಯವೇ ಪರದಲ್ಲಿರೋಣದ್ದರಿಂದ ಮೇಲಿನಂತೆಯೆ ಪ್ರಕ್ರಿಯೆ ನಡೆದು ಆವಾಭ್ಯಾಮ್ ಎಂಬ ರೂಪವೇ ಇರುತ್ತದೆ.

ಉದಾ– ಯುವಾಭ್ಯಾಮ್– 'ಯುಷ್ಮದ್' ಶಬ್ದದ ಮೇಲೆ ತೃತೀಯಾ ವಿಭಕ್ತಿ ದ್ವಿವಚನದ ಪ್ರತ್ಯಯವಾದ ಭ್ಯಾಮ್ ಸೇರಿಸಿ ಯುಷ್ಮದ್+ಭ್ಯಾಮ್ ಎಂದಿದ್ದಾಗ, "ಯುವಾವೌ ದ್ವಿವಚನೇ" ಎಂಬ ಸೂತ್ರದಿಂದ 'ಮ್' ಪರ್ಯನ್ತ ಶಬ್ದ ಸ್ವರೂಪಕ್ಕೆ 'ಯುವ' ಆದೇಶವು ಬಂದು, ಯುವ+ಅದ್+ಭ್ಯಾಮ್ ಎಂದಿದ್ದಾಗ, ಮೊದಲೆರಡು ಶಬ್ದಗಳಿಗೆ "ಅತೋಗುಣೇ" ಎಂಬ ಸೂತ್ರದಿಂದ ಪರರೂಪ ಬಂದು, ಯುವದ್+ಭ್ಯಾಮ್ ಎಂದಿರುತ್ತದೆ. ಪ್ರಕೃತ ಸೂತ್ರದಿಂದ 'ದ್' ಕಾರಕ್ಕೆ ದೀರ್ಘ 'ಆ' ಕಾರಾದೇಶವು ಬಂದು, ಯುವ+ಆ+ಭ್ಯಾಮ್ ಎಂದಾಗುತ್ತದೆ. ನಂತರ 'ಸವರ್ಣದೀರ್ಘ' ದಿಂದ ಯುವಾಭ್ಯಾಮ್ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಯುಷ್ಮಾಭಿಃ – 'ಯುಷ್ಮದ್' ಶಬ್ದದಮೇಲೆ ತೃತೀಯಾ ವಿಭಕ್ತಿ ಬಹುವಚನದ 'ಭಿಸ್' ಪ್ರತ್ಯಯವನ್ನು ಸೇರಿಸಿ ಯುಷ್ಮದ್+ಭಿಸ್ ಎಂದಿದ್ದಾಗ, 'ದ್' ಕಾರದ ಸ್ಥಾನದಲ್ಲಿ,

ಪ್ರಕೃತ ಸೂತ್ರದಿಂದ ದೀರ್ಘ 'ಆ' ಕಾರವು ಆದೇಶವಾಗಿ ಬಂದು, ಯುಷ್ಮ+ಆ+ಭಿಸ್ ಎಂದಿದ್ದಾಗ, 'ಅ' ಕಾರ 'ಆ' ಕಾರಗಳಿಗೆ 'ಸವರ್ಣದೀರ್ಘ' ಬಂದು, ನಂತರ 'ಸ್' ಕಾರಕ್ಕೆ ರುತ್ವ-ವಿಸರ್ಗಗಳು ಬಂದು, ಯುಷ್ಮಾಭಿಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ- ಅಸ್ಮಾಭಿಃ - 'ಅಸ್ಮದ್' ಶಬ್ದದಮೇಲೆ ತೃತೀಯಾ ವಿಭಕ್ತಿ ಬಹುವಚನದ 'ಭಿಸ್' ಪ್ರತ್ಯಯವನ್ನು ಸೇರಿಸಿ ಅಸ್ಮದ್+ಭಿಸ್ ಎಂದಿದ್ದಾಗ, 'ದ್' ಕಾರದ ಸ್ಥಾನದಲ್ಲಿ, ಪ್ರಕೃತ ಸೂತ್ರದಿಂದ ದೀರ್ಘ 'ಆ' ಕಾರವು ಆದೇಶವಾಗಿ ಬಂದು, ಅಸ್ಮ+ಆ+ಭಿಸ್ ಎಂದಿದ್ದಾಗ, 'ಅ' ಕಾರ 'ಆ' ಕಾರಗಳಿಗೆ 'ಸವರ್ಣದೀರ್ಘ' ಬಂದು, ನಂತರ 'ಸ್' ಕಾರಕ್ಕೆ ರುತ್ವ-ವಿಸರ್ಗಗಳು ಬಂದು ಅಸ್ಮಾಭಿಃ ಎಂಬ ರೂಪವು ಸಿದ್ಧವಾಗುತ್ತದೆ.

**(ತುಭ್ಯ ಮತ್ತು ಮಹ್ಯ ಶಬ್ದಗಳನ್ನು ಆದೇಶವಾಗಿ ವಿಧಿಸುವ ಸೂತ್ರ)**

**ಸೂತ್ರ - 323. ತುಭ್ಯ-ಮಹ್ಯೌ ಙಯಿ (7.2.95)**

ವೃತ್ತಿಃ-ಅನಯೋಃ 'ಮ್' ಪರ್ಯಂತಸ್ಯ 'ಟಿ' ಲೋಪಃ। ತುಭ್ಯಮ್।ಮಹ್ಯಮ್।

ಅ.ವ್ಯ. -"ಯುಷ್ಮದಸ್ಮದೋರನಾದೇಶೇ" ಎಂಬ ಸೂತ್ರದಿಂದ 'ಯುಷ್ಮದಸ್ಮದೋಃ' ಎಂಬ ಪದವು ಅನುವೃತ್ತವಾಗುತ್ತದೆ. "ಮ ಪರ್ಯಂತಸ್ಯ" ಎಂಬುದು ಅಧಿಕಾರ ಸೂತ್ರವಾಗಿದೆ.

ಅರ್ಥ- ಚತುರ್ಥೀ ವಿಭಕ್ತಿಯ ಏಕವಚನದ ಪ್ರತ್ಯಯವಾದ 'ಙೇ' ಪರದಲ್ಲಿದ್ದಾಗ, ಯುಷ್ಮದ್ ಮತ್ತು ಅಸ್ಮದ್ ಶಬ್ದಗಳ 'ಮ್' ಪರ್ಯಂತ ಶಬ್ದಸ್ವರೂಪಕ್ಕೆ ಕ್ರಮವಾಗಿ ತುಭ್ಯ ಮತ್ತು ಮಹ್ಯ ಶಬ್ದಗಳು ಆದೇಶವಾಗಿ ಬರುತ್ತವೆ.

ಉದಾ- ತುಭ್ಯಮ್:- 'ಯುಷ್ಮದ್' ಶಬ್ದದಮೇಲೆ ಚತುರ್ಥೀ ವಿಭಕ್ತಿಯ ಏಕವಚನದಲ್ಲಿ 'ಙೇ' ಪ್ರತ್ಯಯವನ್ನು ಸೇರಿಸಿ ಯುಷ್ಮದ್+ಙೇ ಎಂದಿದ್ದಾಗ, "ಙೇ ಪ್ರಥಮಯೋರಮ್" ಎಂಬ ಸೂತ್ರದಿಂದ 'ಅಮ್' ಆದೇಶವಾಗಿ ಬಂದು, ಯುಷ್ಮದ್+ಅಮ್ ಎಂದಿರುತ್ತದೆ. ಪ್ರಕೃತ ಸೂತ್ರದಿಂದ 'ಮ್' ಪರ್ಯಂತವಾದ 'ಯುಷ್ಮ್' ಶಬ್ದಕ್ಕೆ 'ತುಭ್ಯ' ಎಂಬ ಆದೇಶ ಬಂದು, ತುಭ್ಯ+ಅದ್+ಅಮ್ ಎಂದಿದ್ದಾಗ, ಮೊದಲೆರಡು ಶಬ್ದಗಳ 'ಅ' ಕಾರಗಳಿಗೆ, "ಅತೋಗುಣೇ" ಎಂಬ ಸೂತ್ರದಿಂದ ಪರರೂಪ ಬಂದು, ತುಭ್ಯದ್+ಅಮ್ ಎಂದಿರುತ್ತದೆ. "ಶೇಷೇ ಲೋಪಃ" ಎಂಬ ಸೂತ್ರದಿಂದ 'ಅದ್' ಎಂಬ 'ಟಿ' ಗೆ ಲೋಪ ಬಂದು, ತುಭ್+ಅಮ್=ತುಭ್ಯಮ್ ಎಂದು ರೂಪವಾಗುತ್ತದೆ.

ಉದಾ- ಮಹ್ಯಮ್:- 'ಅಸ್ಮದ್' ಶಬ್ದದಮೇಲೆ ಚತುರ್ಥೀ ವಿಭಕ್ತಿಯ ಏಕವಚನದಲ್ಲಿ 'ಙೇ' ಪ್ರತ್ಯಯವನ್ನು ಸೇರಿಸಿ ಅಸ್ಮದ್+ಙೇ ಎಂದಿದ್ದಾಗ, "ಙೇ ಪ್ರಥಮಯೋರಮ್" ಎಂಬ ಸೂತ್ರದಿಂದ 'ಅಮ್' ಆದೇಶವಾಗಿ ಬಂದು, ಅಸ್ಮದ್+ಅಮ್ ಎಂದಿರುತ್ತದೆ. ಪ್ರಕೃತ ಸೂತ್ರದಿಂದ 'ಮ್' ಪರ್ಯಂತವಾದ 'ಅಸ್ಮ್' ಶಬ್ದಕ್ಕೆ 'ಮಹ್ಯ' ಎಂಬ ಆದೇಶ ಬಂದು ಮಹ್ಯ+ಅದ್+ಅಮ್ ಎಂದಿದ್ದಾಗ, ಮೊದಲೆರಡು ಶಬ್ದಗಳ 'ಅ' ಕಾರಗಳಿಗೆ "ಅತೋಗುಣೇ" ಎಂಬ ಸೂತ್ರದಿಂದ ಪರರೂಪ ಬಂದು, ಮಹ್ಯದ್+ಅಮ್

ಎಂದಿರುತ್ತದೆ. "ಶೇಷೇ ಲೋಪಃ" ಎಂಬ ಸೂತ್ರದಿಂದ 'ಅದ್' ಎಂಬ 'ಟಿ' ಗೆ ಲೋಪ ಬಂದು, ಮಹ್ಯ್+ಅಮ್=ಮಹ್ಯಮ್ ಎಂದು ರೂಪವಾಗುತ್ತದೆ.

**(ಅಭ್ಯಮ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ – 324. ಭ್ಯಸೋಽಭ್ಯಮ್ (7.1.30)**

ವೃತ್ತಿಃ–ಆಭ್ಯಾಂ ಪರಸ್ಯ। ಯುಷ್ಮಭ್ಯಮ್। ಅಸ್ಮಭ್ಯಮ್।

ಪ. ಛೇ. – ಭ್ಯಸಃ, ಅಭ್ಯಮ್।

ಅ. ವೃ–"ಯುಷ್ಮದಸ್ಮಭ್ಯಾಮ್ ಙಸೋಽಶ್" ಎಂಬ ಸೂತ್ರದಿಂದ ಯುಷ್ಮದಸ್ಮಭ್ಯಾಮ್ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ–'ಯುಷ್ಮದ್' ಮತ್ತು 'ಅಸ್ಮದ್' ಶಬ್ದಗಳ ನಂತರ ಇರುವ 'ಭ್ಯಸ್' ಪ್ರತ್ಯಯದ ಸ್ಥಾನದಲ್ಲಿ 'ಅಭ್ಯಮ್' ಎಂಬ ಆದೇಶವು ಅನೇಕಾಲ್ ಆಗಿರೋಣದ್ದರಿಂದ ಸರ್ವಾದೇಶವಾಗಿ ಬರುತ್ತದೆ.

ಉದಾ– ಯುಷ್ಮಭ್ಯಮ್– 'ಯುಷ್ಮದ್' ಶಬ್ದದಮೇಲೆ ಚತುರ್ಥೀ ಬಹುವಚನದಲ್ಲಿ, 'ಭ್ಯಸ್' ಪ್ರತ್ಯಯವನ್ನು ಸೇರಿಸಿ, ಯುಷ್ಮದ್+ಭ್ಯಸ್ ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ಭ್ಯಸ್' ನ ಸ್ಥಾನದಲ್ಲಿ 'ಅಭ್ಯಮ್' ಎಂಬುದು ಸರ್ವಾದೇಶವಾಗಿ ಬಂದು ಯುಷ್ಮದ್+ಅಭ್ಯಮ್ ಎಂದಿರುತ್ತದೆ. 'ಅದ್' ಎಂಬ 'ಟಿ' ಗೆ "ಶೇಷೇ ಲೋಪಃ" ಎಂಬ ಸೂತ್ರದಿಂದ ಲೋಪ ಬಂದು ಯುಷ್ಮ್+ಅಭ್ಯಮ್=ಯುಷ್ಮಭ್ಯಮ್ ಎಂದು ರೂಪವಾಗುತ್ತದೆ.

ಉದಾ– ಅಸ್ಮಭ್ಯಮ್– 'ಅಸ್ಮದ್' ಶಬ್ದದಮೇಲೆ ಚತುರ್ಥೀ ಬಹುವಚನದಲ್ಲಿ, 'ಭ್ಯಸ್' ಪ್ರತ್ಯಯವನ್ನು ಸೇರಿಸಿ, ಅಸ್ಮದ್+ಭ್ಯಸ್ ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ಭ್ಯಸ್' ನ ಸ್ಥಾನದಲ್ಲಿ 'ಅಭ್ಯಮ್' ಎಂಬುದು ಸರ್ವಾದೇಶವಾಗಿ ಬಂದು ಅಸ್ಮದ್ +ಅಭ್ಯಮ್ ಎಂದಿರುತ್ತದೆ. 'ಅದ್' ಎಂಬ 'ಟಿ' ಗೆ "ಶೇಷೇ ಲೋಪಃ" ಎಂಬ ಸೂತ್ರದಿಂದ ಲೋಪ ಬಂದು, ಅಸ್ಮ್+ಅಭ್ಯಮ್=ಅಸ್ಮಭ್ಯಮ್ ಎಂದು ರೂಪವಾಗುತ್ತದೆ.

**(ಅತ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ – 325. ಏಕವಚನಸ್ಯ ಚ (7.1.32)**

ವೃತ್ತಿಃ–ಆಭ್ಯಾಂ ಙಸೋಃ ಅತ್। ತ್ವತ್। ಮತ್।

ಅ. ವೃ– "ಯುಷ್ಮದಸ್ಮಭ್ಯಾಮ್ ಙಸೋಽಶ್" ಎಂಬ ಸೂತ್ರದಿಂದ ಯುಷ್ಮದಸ್ಮಭ್ಯಾಮ್ ಎಂಬ ಪದವೂ, "ಪಞ್ಚಮ್ಯಾ ಅತ್" ಎಂಬ ಪೂರ್ಣ ಸೂತ್ರವೂ ಅನುವೃತ್ತವಾಗುತ್ತದೆ.

ಅರ್ಥ– ಯುಷ್ಮದ್ ಮತ್ತು ಅಸ್ಮದ್ ಶಬ್ದಗಳ ನಂತರ ಇರುವ 'ಙಸಿ' ಪ್ರತ್ಯಯಕ್ಕೆ 'ಅತ್' ಎಂಬುದು ಅನೇಕಾಲ್ ಆಗಿರೋಣದರಿಂದ ಸರ್ವಾದೇಶವಾಗಿ ಬರುತ್ತದೆ.

ಉದಾ–ತ್ವತ್– ಯುಷ್ಮದ್ ಶಬ್ದದಮೇಲೆ ಪಞ್ಚಮೀ ಏಕವಚನದಲ್ಲಿ, 'ಙಸಿ(ಅಸ್)' ಪ್ರತ್ಯಯವನ್ನು ಸೇರಿಸಿ ಯುಷ್ಮದ್+ಅಸ್ ಎಂದಿದ್ದಾಗ, 'ಙಸಿ(ಅಸ್)' ನ ಸ್ಥಾನದಲ್ಲಿ

ಪ್ರಕೃತ ಸೂತ್ರದಿಂದ 'ಅತ್' ಆದೇಶವು ಬಂದು, ಯುಷ್ಮದ್+ಅತ್ ಎಂದಿರುತ್ತದೆ. "ತ್ವಮಾವೇಕವಚನೇ" ಎಂಬ ಸೂತ್ರದಿಂದ 'ಮ್' ಪರ್ಯನ್ತ 'ಯುಷ್ಮ್' ಭಾಗಕ್ಕೆ 'ತ್ವ' ಆದೇಶವು ಬಂದು, ತ್ವ+ಅದ್+ಅತ್ ಎಂದಿದ್ದಾಗ, ಮೊದಲೆರಡು ಶಬ್ದಗಳಿಗೆ "ಅತೋಗುಣೇ" ಎಂಬುದರಿಂದ ಪರರೂಪ ಬಂದು, ತ್ವದ್+ಅತ್ ಎಂದಿದ್ದಾಗ, "ಶೇಷೇ ಲೋಪಃ" ಎಂಬುದರಿಂದ 'ಅದ್' ಎಂಬ 'ಟಿ' ಗೆ ಲೋಪ ಬಂದು, ತ್ವ್+ಅತ್=ತ್ವತ್ ಎಂದು ರೂಪವಾಗುತ್ತದೆ.

ಉದಾ– ಮತ್– ಅಸ್ಮದ್ ಶಬ್ದದಮೇಲೆ ಪಞ್ಚಮೀ ಏಕವಚನದಲ್ಲಿ 'ಙಸಿ(ಅಸ್)' ಪ್ರತ್ಯಯವನ್ನು ಸೇರಿಸಿ ಆಸ್ಮದ್+ಅಸ್ ಎಂದಿದ್ದಾಗ, 'ಙಸಿ(ಅಸ್)' ನ ಸ್ಥಾನದಲ್ಲಿ ಪ್ರಕೃತ ಸೂತ್ರದಿಂದ 'ಅತ್' ಆದೇಶವು ಬಂದು, ಅಸ್ಮದ್+ಅತ್ ಎಂದಿರುತ್ತದೆ. "ತ್ವಮಾವೇಕವಚನೇ" ಎಂಬ ಸೂತ್ರದಿಂದ 'ಮ್' ಪರ್ಯನ್ತ 'ಅಸ್ಮ್' ಭಾಗಕ್ಕೆ 'ಮ' ಆದೇಶವು ಬಂದು, ಮ+ಅದ್+ಅತ್ ಎಂದಿದ್ದಾಗ, ಮೊದಲೆರಡು ಶಬ್ದಗಳಿಗೆ "ಅತೋಗುಣೇ" ಎಂಬುದರಿಂದ ಪರರೂಪ ಬಂದು, ಮದ್+ಅತ್ ಎಂದಿದ್ದಾಗ, "ಶೇಷೇ ಲೋಪಃ" ಎಂಬುದರಿಂದ 'ಅದ್' ಎಂಬ 'ಟಿ' ಗೆ ಲೋಪ ಬಂದು, ಮ್+ಅತ್=ಮತ್ ಎಂದು ರೂಪವಾಗುತ್ತದೆ.

**(ಭ್ಯಸ್–ಗೆ ಅತ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ – 326. ಪಞ್ಚಮ್ಯಾ ಅತ್ (7.1.31)**

ವೃತ್ತಿಃ–ಆಭ್ಯಾಂ ಪಞ್ಚಮ್ಯಾಃ ಭ್ಯಸಃ ಅತ್ ಸ್ಯಾತ್। 0ಯುಷ್ಮತ್। ಅಸ್ಮತ್।

ಅ. ವೃ. –"ಯುಷ್ಮದಸ್ಮಭ್ಯಾವ್ ಙಸೋಽಶ್" ಎಂಬ ಸೂತ್ರದಿಂದ 'ಯುಷ್ಮದಸ್ಮಭ್ಯಾಮ್' ಎಂಬ ಪದವೂ. "ಭ್ಯಸೋಭ್ಯಮ್" ಎಂಬ ಸೂತ್ರದಿಂದ ಭ್ಯಸಃ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– ಯುಷ್ಮದ್ ಮತ್ತು ಅಸ್ಮದ್ ಶಬ್ದಗಳ ನಂತರ ಇರುವ ಪಞ್ಚಮೀ ವಿಭಕ್ತೀ ಬಹುವಚನದ 'ಭ್ಯಸ್' ಪ್ರತ್ಯಯಕ್ಕೆ 'ಅತ್' ಆದೇಶವು ಬರುತ್ತದೆ.

ಉದಾ– ಯುಷ್ಮತ್– 'ಯುಷ್ಮದ್' ಶಬ್ದದ ನಂತರ ಪಞ್ಚಮೀ ಬಹುವಚನದ 'ಭ್ಯಸ್' ಪ್ರತ್ಯಯವನ್ನು ಸೇರಿಸಿ ಯುಷ್ಮದ್+ಭ್ಯಸ್ ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ಭ್ಯಸ್' ಗೆ 'ಅತ್' ಸರ್ವಾದೇಶವಾಗಿ ಬಂದು, ಯುಷ್ಮದ್ ಶಬ್ದದ 'ಅದ್(ಟಿ)'ಗೆ "ಶೇಷೇ ಲೋಪಃ" ಎಂಬ ಸೂತ್ರದಿಂದ ಲೋಪ ಬಂದು, ಯುಷ್ಮ್+ಅತ್=ಯುಷ್ಮತ್ ಎಂದು ರೂಪವಾಗುತ್ತದೆ.

ಉದಾ_ ಅಸ್ಮತ್– 'ಅಸ್ಮದ್' ಶಬ್ದದ ನಂತರ ಪಞ್ಚಮೀ ಬಹುವಚನದ 'ಭ್ಯಸ್' ಪ್ರತ್ಯಯವನ್ನು ಸೇರಿಸಿ, ಅಸ್ಮದ್+ಭ್ಯಸ್ ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ಭ್ಯಸ್' ಗೆ 'ಅತ್' ಸರ್ವಾದೇಶವಾಗಿ ಬಂದು, ಅಸ್ಮದ್+ಅತ್ ಎಂದಿದ್ದಾಗ, ಅಸ್ಮದ್ ಶಬ್ದದ 'ಅದ್(ಟಿ)'ಗೆ "ಶೇಷೇ ಲೋಪಃ" ಎಂಬ ಸೂತ್ರದಿಂದ ಲೋಪ ಬಂದು, ಅಸ್ಮ್+ಅತ್=ಅಸ್ಮತ್ ಎಂದು ರೂಪವಾಗುತ್ತದೆ.

(ಮ-ಪರ್ಯಂತ ಭಾಗಕ್ಕೆ ತವ ಮತ್ತು ಮಮ ಆದೇಶಗಳನ್ನು ವಿಧಿಸುವ ಸೂತ್ರ)

**ಸೂತ್ರ - 327. ತವ-ಮಮೌ ಙಸಿ ( 7.2.96)**

ವೃತ್ತಿಃ-ಅನಯೋಃ 'ಮ' ಪರ್ಯಂತಸ್ಯ ತವ-ಮಮೌ ಸ್ತಃ ಙಸಿ।

ಅ. ವೃ.- "ಯುಷ್ಮದಸ್ಮದೋರನಾದೇಶೇ" ಎಂಬ ಸೂತ್ರದಿಂದ 'ಯುಷ್ಮದಸ್ಮದೋಃ' ಎಂಬ ಪದವು ಅನುವೃತ್ತವಾಗುತ್ತದೆ. "ಮ ಪರ್ಯಂತಸ್ಯ" ಎಂಬುದು ಅಧಿಕಾರ ಸೂತ್ರವಾಗಿದೆ.

ಅರ್ಥ-'ಙಸ್' ಪ್ರತ್ಯಯವು ಪರದಲ್ಲಿದ್ದಾಗ, 'ಯುಷ್ಮದ್' ಮತ್ತು 'ಅಸ್ಮದ್' ಶಬ್ದಗಳ 'ಮ್' ಪರ್ಯಂತ ಶಬ್ದ ಸ್ವರೂಪಕ್ಕೆ ಕ್ರಮವಾಗಿ 'ತವ' ಮತ್ತು 'ಮಮ' ಎಂಬವು ಆದೇಶವಾಗಿ ಬರುತ್ತವೆ.

(ಙಸ್ ಪ್ರತ್ಯಯಕ್ಕೆ ಅಶ್ ಆದೇಶವನ್ನು ವಿಧಿಸುವ ಸೂತ್ರ)

**ಸೂತ್ರ - 328. ಯುಷ್ಮದಸ್ಮದ್ಭ್ಯಾಮ್ ಙಸೋಽಶ್। (7.2.97)**

ವೃತ್ತಿಃ-ತವ। ಮಮ। ಯುವಯೋಃ। ಆವಯೋಃ।

ಪ. ಛೇ. - ಯುಷ್ಮದಸ್ಮದ್ಭ್ಯಾಮ್, ಙಸಃ, ಅಶ್।

ಅರ್ಥ-ಯುಷ್ಮದ್ ಮತ್ತು ಅಸ್ಮದ್ ಶಬ್ದಗಳ ನಂತರ ಇರುವ 'ಙಸ್' ಪ್ರತ್ಯಯದ ಸ್ಥಾನದಲ್ಲಿ, 'ಅಶ್(ಅ)' ಪ್ರತ್ಯಯವು ಆದೇಶವಾಗಿ ಬರುತ್ತದೆ.

ಈ ಆದೇಶವು 'ಶಿತ್' ಆಗಿರೋಣದ್ದರಿಂದ "ಆದೇಃ ಪರಸ್ಯ' ಎಂಬ ಸೂತ್ರವನ್ನು ಬಾಧಿಸಿ "ಅನೇಕಾಲ್ ಶಿತ್ ಸರ್ವಸ್ಯ" ಎಂಬ ಸೂತ್ರದಿಂದ ಸರ್ವಾದೇಶವಾಗಿ ಬರುತ್ತದೆ.

ಉದಾ- ತವ- ಯುಷ್ಮದ್ ಶಬ್ದದಮೇಲೆ ಷಷ್ಠೀ ಏಕವಚನದ ಙಸ್(ಅಸ್) ಪ್ರತ್ಯಯವನ್ನು ಸೇರಿಸಿ ಯುಷ್ಮದ್+ಅಸ್ ಎಂದಿದ್ದಾಗ, "ತವ-ಮಮೌ ಙಸಿ" (7.2.96) ಎಂಬ ಸೂತ್ರದಿಂದ 'ಯುಷ್ಮದ್' ಶಬ್ದದ 'ಮ್' ಪರ್ಯಂತ ಯುಷ್ಮ್ ಎಂಬ ಶಬ್ದ ಸ್ವರೂಪಕ್ಕೆ 'ತವ' ಎಂಬುದು ಆದೇಶವಾಗಿ ಬಂದು, ತವ+ಅದ್+ಅಸ್ ಎಂದಾಗುತ್ತದೆ. ಪ್ರಕೃತ ಸೂತ್ರದಿಂದ 'ಅಸ್' ಪ್ರತ್ಯಯಕ್ಕೆ 'ಅಶ್(ಅ)' ಆದೇಶವಾಗಿ ಬಂದು, ತವ+ಅದ್+ಅ ಎಂದಾಗುತ್ತದೆ. ಮೊದಲೆರಡು ಶಬ್ದಗಳಿಗೆ "ಅತೋ ಗುಣೇ" ಎಂಬುದರಿಂದ ಪರರೂಪ ಬಂದು ತವದ್+ಅ ಎಂದಿರುವಾಗ, 'ಅದ್' ಎಂಬ 'ಟಿ' ಗೆ ಲೋಪ ಬಂದು, ತವ್+ಅ=ತವ ಎಂದು ರೂಪವಾಗುತ್ತದೆ.

ಉದಾ- ಮಮ - ಅಸ್ಮದ್ ಶಬ್ದದಮೇಲೆ ಷಷ್ಠೀ ಏಕವಚನದ ಙಸ್(ಅಸ್) ಪ್ರತ್ಯಯವನ್ನು ಸೇರಿಸಿ ಅಸ್ಮದ್+ಅಸ್ ಎಂದಿದ್ದಾಗ, "ತವ-ಮಮೌ ಙಸಿ" (7.2.96) ಎಂಬ ಸೂತ್ರದಿಂದ 'ಅಸ್ಮದ್' ಶಬ್ದದ 'ಮ್' ಪರ್ಯಂತ ಅಸ್ಮ್ ಎಂಬ ಶಬ್ದ ಸ್ವರೂಪಕ್ಕೆ 'ಮಮ' ಎಂಬುದು ಆದೇಶವಾಗಿ ಬಂದು, ಮಮ+ಅದ್+ಅಸ್ ಎಂದಾಗುತ್ತದೆ. ಪ್ರಕೃತ ಸೂತ್ರದಿಂದ 'ಅಸ್' ಪ್ರತ್ಯಯಕ್ಕೆ 'ಅಶ್(ಅ)' ಆದೇಶವಾಗಿ ಬಂದು,

ಮಮ+ಅದ್+ಅ ಎಂದಾಗುತ್ತದೆ. ಮೊದಲೆರಡು ಶಬ್ದಗಳಿಗೆ "ಅತೋ ಗುಣೇ" ಎಂಬುದರಿಂದ ಪರರೂಪ ಬಂದು, ಮಮದ್+ಅ ಎಂದಿರುವಾಗ, 'ಅದ್' ಎಂಬ 'ಟಿ' ಗೆ ಲೋಪ ಬಂದು, ಮಮ್+ಅ= ಮಮ ಎಂದು ರೂಪವಾಗುತ್ತದೆ.

ಉದಾ– ಯುವಯೋಃ(2)– 'ಯುಷ್ಮದ್' ಶಬ್ದದ ನಂತರ ಷಷ್ಠೀ ಮತ್ತು ಸಪ್ತಮೀ ದ್ವಿವಚನಗಳಲ್ಲಿ 'ಓಸ್' ಪ್ರತ್ಯಯವನ್ನು ಸೇರಿಸಿ, ಯುಷ್ಮದ್+ಓಸ್ ಎಂದಿದ್ದಾಗ, 'ಮ್' ಪರ್ಯನ್ತ ಯುಷ್ಮ್ ಶಬ್ದಕ್ಕೆ "ಯುವಾವೌ ದ್ವಿವಚನೇ" (7.2.92) ಎಂಬ ಸೂತ್ರದಿಂದ 'ಯುವ' ಎಂಬ ಆದೇಶವು ಬಂದು, ಯುವ+ಅದ್+ಓಸ್ ಎಂದಿದ್ದಾಗ, ಮೊದಲೆರಡು ಶಬ್ದಗಳಿಗೆ "ಅತೋ ಗುಣೇ" ಎಂಬುದರಿಂದ ಪರರೂಪ ಬಂದು ಯುವದ್+ಓಸ್ ಎಂದಿದ್ದಾಗ, "ಶೇಷೇ ಲೋಪಃ" ಎಂಬುದರಿಂದ 'ಅದ್' ಎಂಬ 'ಟಿ' ಗೆ ಲೋಪವು ಬರಬೇಕಾಗಿತ್ತು. ಅದನ್ನು ಬಾಧಿಸಿ "ಯೋಽಚಿ" ಎಂಬ ಸೂತ್ರದಿಂದ 'ದ್' ಕಾರದ ಸ್ಥಾನದಲ್ಲಿ 'ಯ್' ಆದೇಶವು ಬಂದು ಯುವಯ್+ಓಸ್ ಎಂದಾಗಿ, ಮುಂದೆ ರುತ್ವ–ವಿಸರ್ಗಗಳಿಂದ ಯುವಯೋಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಆವಯೋಃ– ಅಸ್ಮದ್ ಶಬ್ದದ ನಂತರ ಷಷ್ಠೀ ಮತ್ತು ಸಪ್ತಮೀ ದ್ವಿವಚನಗಳಲ್ಲಿ, 'ಓಸ್' ಪ್ರತ್ಯಯವನ್ನು ಸೇರಿಸಿ, ಅಸ್ಮದ್+ಓಸ್ ಎಂದಿದ್ದಾಗ, 'ಮ್' ಪರ್ಯನ್ತ ಅಸ್ಮ್ ಶಬ್ದಕ್ಕೆ "ಯುವಾವೌ ದ್ವಿವಚನೇ" (7.2.92) ಎಂಬ ಸೂತ್ರದಿಂದ 'ಆವ' ಎಂಬ ಆದೇಶವು ಬಂದು, ಆವ+ಅದ್+ಓಸ್ ಎಂದಿದ್ದಾಗ, ಮೊದಲೆರಡು ಶಬ್ದಗಳಿಗೆ "ಅತೋ ಗುಣೇ" ಎಂಬುದರಿಂದ ಪರರೂಪ ಬಂದು, ಆವದ್+ಓಸ್ ಎಂದಿದ್ದಾಗ, "ಶೇಷೇ ಲೋಪಃ" ಎಂಬುದರಿಂದ 'ಅದ್' ಎಂಬ 'ಟಿ' ಗೆ ಲೋಪವು ಬರಬೇಕಾಗಿತ್ತು. ಅದನ್ನು ಬಾಧಿಸಿ "ಯೋಽಚಿ" ಎಂಬ ಸೂತ್ರದಿಂದ 'ದ್' ಕಾರದ ಸ್ಥಾನದಲ್ಲಿ 'ಯ್' ಆದೇಶವು ಬಂದು ಆವಯ್+ಓಸ್ ಎಂದಾಗಿ, ಮುಂದೆ ರುತ್ವ–ವಿಸರ್ಗಗಳಿಂದ ಆವಯೋಃ ಎಂದು ರೂಪವು ಸಿದ್ಧವಾಗುತ್ತದೆ.

**(ಆಕಮ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ – 329. ಸಾಮ ಆಕಮ್ (7.1.33)**

ವೃತ್ತಿಃ–ಆಭ್ಯಾಂ ಪರಸ್ಯ ಸಾಮಃ ಆಕಮ್ ಸ್ಯಾತ್। ಯುಷ್ಮಾಕಮ್। ಅಸ್ಮಾಕಮ್। ತ್ವಯಿ। ಮಯಿ। ಯುವಯೋಃ। ಆವಯೋಃ। ಯುಷ್ಮಾಸು। ಅಸ್ಮಾಸು।

ಅ. ವೃ– "ಯುಷ್ಮದಸ್ಮದ್ಭ್ಯಾಮ್ ಙಸೋಽಶ್"। (7.2.97) ಎಂಬ ಸೂತ್ರದಿಂದ 'ಯುಷ್ಮದಸ್ಮದ್ಭ್ಯಾಮ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– ಯುಷ್ಮದ್ ಮತ್ತು ಅಸ್ಮದ್ ಶಬ್ದಗಳ ನಂತರ ಇರುವ 'ಸಾಮ್' ಶಬ್ದಕ್ಕೆ 'ಆಕಮ್' ಆದೇಶವು ಬರುತ್ತದೆ.

ವಿವರಣೆ–'ಯುಷ್ಮದ್' ಮತ್ತು 'ಅಸ್ಮದ್' ಶಬ್ದಗಳು ಹಲನ್ತವಾಗಿರೋಣದ್ದರಿಂದ "ಆಮಿ ಸರ್ವನಾಮ್ನಃ ಸುಟ್" ಎಂಬ ಸೂತ್ರಕ್ಕೆ ಪ್ರವೃತ್ತಿ ಇರುವದಿಲ್ಲ,. ಆದ್ದರಿಂದ 'ಯುಷ್ಮದ್' ಹಾಗೂ 'ಅಸ್ಮದ್' ಶಬ್ದಗಳನ್ನು ಅಜನ್ತ ಶಬ್ದಗಳನ್ನಾಗಿ ಪರಿವರ್ತಿಸಲು

'ದ್' ಕಾರದ ಲೋಪ ಮಾಡುವದು ಅವಶ್ಯವಾಗಿದೆ. ಆ ಕಾರಣದಿಂದಾಗಿ ಇಲ್ಲಿ "ಶೇಷೇಲೋಪಃ" ಎಂಬ ಸೂತ್ರದಿಂದ ವೈಕಲ್ಪಿಕವಾಗಿ 'ದ್' ಕಾರವನ್ನು ಲೋಪ ಮಾಡಬಹುದಾಗಿದೆ. ಕೇವಲ 'ದ್' ಕಾರ ಲೋಪವಾಗುವ ಈ ವೈಕಲ್ಪಿಕ ಪಕ್ಷಕ್ಕೆ 'ಅನ್ತ್ಯಲೋಪ ಪಕ್ಷ'ವೆಂದು ಹೇಳುತ್ತಾರೆ. (ಆತ್ವ ಯತ್ವ ನಿಮಿತ್ತೇತರ ವಿಭಕ್ತೌ ಏತಯೋಃ **ಅನ್ತ್ಯಸ್ಯ ಲೋಪಃ** ಎಂಬುದು ಪ್ರಮಾಣ). "ಶೇಷೇಲೋಪಃ" ಎಂಬ ಸೂತ್ರದಿಂದ ಬರುವ ಎರಡನೇ 'ವೈಕಲ್ಪಿಕ ಪಕ್ಷ'ವೆಂದರೆ 'ಟಿ' ಲೋಪ ಪಕ್ಷ. ಆಗ 'ಯುಷ್ಮ್' ಮತ್ತು 'ಅಸ್ಮ್', ಎಂದಾದರೆ, ಆಗ ಅವು ಹಲನ್ತವಾಗುತ್ತವೆ. ಆಕಾರಣದಿಂದ, 'ಸುಟ್' ಸಹಿತವಾದ ನಿರ್ದೇಶಕ್ಕೆ ಅವಕಾಶವಿರುವದಿಲ್ಲ. ಹಾಗಿದ್ದರೂ ಯುಷ್ಮ್+ಆಮ್> ಯುಷ್ಮ್+ಆಕಮ್=ಯುಷ್ಮಾಕಮ್ ಎಂದೂ ಅಸ್ಮ್+ಆಮ್> ಅಸ್ಮ್+ಆಕಮ್=ಅಸ್ಮಾಕಮ್ ಎಂದು ರೂಪಗಳಾಗುತ್ತವೆ). ಆಗ 'ದ್' ಕಾರಕ್ಕೆ ಲೋಪವಾದಮೇಲೆ, 'ಯುಷ್ಮ' ಮತ್ತು 'ಅಸ್ಮ' ಶಬ್ದಗಳು 'ಅ' ಕಾರಾನ್ತವಾಗುತ್ತವೆ. ಆಗ "ಆಮಿ ಸರ್ವನಾಮ್ನಃ ಸುಟ್" ಎಂಬ ಸೂತ್ರ ಪ್ರವೃತ್ತವಾಗಿ, 'ಸುಟ್(ಸ್)' ಆಗಮ, 'ಆಮ್' ಗೆ ಆದ್ಯವಯವಾಗಿ ಬರುತ್ತದೆ. ಈಗ 'ಸುಟ್(ಸ್)' ಸಹಿತವಾದ 'ಆಮ್' ಗೆ ಅಂದರೆ 'ಸಾಮ್' ಗೆ 'ಆಕಮ್' ಆದೇಶವು ಬರುತ್ತದೆ.

ಉದಾ– ಯುಷ್ಮಾಕಮ್– ಯುಷ್ಮದ್ ಶಬ್ದದಮೇಲೆ ಷಷ್ಠೀ ಬಹುವಚನ 'ಆಮ್' ಪ್ರತ್ಯಯವನ್ನು ಸೇರಿಸಿ ಯುಷ್ಮದ್+ಆಮ್ ಎಂದಿದ್ದಾಗ, "ಶೇಷೇಲೋಪಃ" ಎಂಬ ಸೂತ್ರದಿಂದ ವೈಕಲ್ಪಿಕವಾಗಿ 'ದ್' ಕಾರದ ಲೋಪವಾದಮೇಲೆ, ಇದು ಅಕಾರಾನ್ತ ಶಬ್ದವಾಗುತ್ತದೆ. ಆಗ "ಆಮಿ ಸರ್ವನಾಮ್ನಃ ಸುಟ್" ಎಂಬ ಸೂತ್ರ ಪ್ರವೃತ್ತವಾಗಿ, 'ಸುಟ್(ಸ್)' ಆಗಮ ಆದ್ಯವಯವವಾಗಿ ಬಂದು, ಯುಷ್ಮ+ಸಾಮ್ ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ಆಮ್' ಸ್ಥಾನದಲ್ಲಿ 'ಆಕಮ್' ಆದೇಶ ಬಂದು, ಯುಷ್ಮ+ಆಕಮ್ ಎಂದಾಗುತ್ತದೆ. ನಂತರ ಸವರ್ಣದೀರ್ಘದಿಂದ ಯುಷ್ಮಾಕಮ್ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಅಸ್ಮಾಕಮ್–ಮೇಲಿನಂತೆಯೇ ಅಸ್ಮಾಕಮ್ ಎಂಬ ರೂಪವೂ ಸಿದ್ಧವಾಗುತ್ತದೆ.

ಉದಾ–ತ್ವಯಿ– ಯುಷ್ಮದ್ ಶಬ್ದದ ನಂತರ ಸಪ್ತಮೀ ಏಕವಚನದಲ್ಲಿ 'ಙಿ(ಇ)' ಪ್ರತ್ಯಯವನ್ನು ಸೇರಿಸಿ ಯುಷ್ಮದ್+ಇ ಎಂದಿದ್ದಾಗ, "ತ್ವಮಾವೇಕವಚನೇ (7.2.97)" ಎಂಬ ಸೂತ್ರದಿಂದ 'ಮ್' ಪರ್ಯನ್ತ ಯುಷ್ಮ ಶಬ್ದಸ್ವರೂಪಕ್ಕೆ 'ತ್ವ' ಆದೇಶ ಬಂದು, ತ್ವ+ಅದ್+ಇ ಎಂದಿದ್ದಾಗ, ಮೊದಲೆರಡು ಶಬ್ದಗಳಿಗೆ "ಅತೋ ಗುಣೇ" ಎಂಬುದರಿಂದ ಪರರೂಪ ಬಂದು, ತ್ವದ್+ಇ ಎಂದಿದ್ದಾಗ, 'ದ್' ಕಾರದ ಸ್ಥಾನದಲ್ಲಿ, "ಯೋಽಚಿ" ಎಂಬ ಸೂತ್ರದಿಂದ, 'ಯ್' ಕಾರ ಆದೇಶವಾಗಿ ಬಂದು, ತ್ವಯ್+ಇ=ತ್ವಯಿ ಎಂದು ರೂಪವು ಸಿದ್ಧವಾಗುತ್ತದೆ.

ಉದಾ–ಮಯಿ – ಅಸ್ಮದ್ ಶಬ್ದದ ನಂತರ ಸಪ್ತಮೀ ಏಕವಚನದಲ್ಲಿ 'ಙಿ(ಇ)' ಪ್ರತ್ಯಯವನ್ನು ಸೇರಿಸಿ ಅಸ್ಮದ್+ಇ ಎಂದಿದ್ದಾಗ, "ತ್ವಮಾವೇಕವಚನೇ (7.2.97)"

ಎಂಬ ಸೂತ್ರದಿಂದ 'ಮ್' ಪರ್ಯನ್ತ ಅಸ್ಮ್ ಶಬ್ದಸ್ವರೂಪಕ್ಕೆ 'ಮ' ಆದೇಶ ಬಂದು ಮ+ಅದ್+ಇ ಎಂದಿದ್ದಾಗ, ಮೊದಲೆರಡು ಶಬ್ದಗಳಿಗೆ "ಅತೋ ಗುಣೇ" ಎಂಬುದರಿಂದ ಪರರೂಪ ಬಂದು, ಮದ್+ಇ ಎಂದಿದ್ದಾಗ, 'ದ್' ಕಾರದ ಸ್ಥಾನದಲ್ಲಿ, "ಯೋಽಚಿ" ಎಂಬ ಸೂತ್ರದಿಂದ 'ಯ್' ಕಾರ ಆದೇಶವಾಗಿ ಬಂದು ಮಯ್+ಇ=ಮಯಿ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಯುಷ್ಮಾಸು– ಯುಷ್ಮದ್ ಶಬ್ದದ ಮೇಲೆ ಸಪ್ತಮೀ ಬಹುವಚನದಲ್ಲಿ, 'ಸುಪ್(ಸು)' ಪ್ರತ್ಯಯವನ್ನು ಸೇರಿಸಿ, ಯುಷ್ಮದ್+ಸು ಎಂದಿದ್ದಾಗ, "ಯುಷ್ಮದಸ್ಮದೋರನಾದೇಶೇ" ಎಂಬ ಸೂತ್ರದಿಂದ 'ದ್' ಕಾರದ ಸ್ಥಾನದಲ್ಲಿ ದೀರ್ಘ 'ಆ' ಕಾರವು ಆದೇಶವಾಗಿ ಬಂದು, ಯುಷ್ಮ+ಆ+ಸು ಎಂದಿದ್ದಾಗ, ಸವರ್ಣದೀರ್ಘದಿಂದ ಯುಷ್ಮಾಸು ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಅಸ್ಮಾಸು– ಅಸ್ಮದ್ ಶಬ್ದದ ಮೇಲೆ ಸಪ್ತಮೀ ಬಹುವಚನದಲ್ಲಿ 'ಸುಪ್(ಸು)' ಪ್ರತ್ಯಯವನ್ನು ಸೇರಿಸಿ ಅಸ್ಮದ್+ಸು ಎಂದಿದ್ದಾಗ, "ಯುಷ್ಮದಸ್ಮದೋರನಾದೇಶೇ" ಎಂಬ ಸೂತ್ರದಿಂದ 'ದ್' ಕಾರದ ಸ್ಥಾನದಲ್ಲಿ ದೀರ್ಘ 'ಆ' ಕಾರವು ಆದೇಶವಾಗಿ ಬಂದು, ಅಸ್ಮ+ಆ+ಸು ಎಂದಿದ್ದಾಗ, ಸವರ್ಣದೀರ್ಘದಿಂದ ಅಸ್ಮಾಸು ಎಂದು ರೂಪವು ಸಿದ್ಧವಾಗುತ್ತದೆ.

**('ದ್' ಕಾರಾಂತ ಯುಷ್ಮದ್ ಶಬ್ದದ ರೂಪಗಳು)**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ತ್ವಮ್ | ಯುವಾಮ್ | ಯೂಯಮ್ |
| ದ್ವಿತೀಯಾ | ತ್ವಾಮ್ | ಯುವಾಮ್ | ಯುಷ್ಮಾನ್ |
| ತೃತೀಯಾ | ತ್ವಯಾ | ಯುವಾಭ್ಯಾಮ್ | ಯುಷ್ಮಾಭಿಃ |
| ಚತುರ್ಥೀ | ತುಭ್ಯಮ್ | ಯುವಾಭ್ಯಾಮ್ | ಯುಷ್ಮಭ್ಯಮ್ |
| ಪಞ್ಚಮೀ | ತ್ವತ್ | ಯುವಾಭ್ಯಾಮ್ | ಯುಷ್ಮತ್ |
| ಷಷ್ಠೀ | ತವ | ಯುವಯೋಃ | ಯುಷ್ಮಾಕಮ್ |
| ಸಪ್ತಮೀ | ತ್ವಯಿ | ಯುವಯೋಃ | ಯುಷ್ಮಾಸು |

ಸೂಚನೆ: ದ್ವಿತೀಯಾ, ಚತುರ್ಥೀ ಮತ್ತು ಷಷ್ಠೀ ವಿಭಕ್ತಿಗಳಿಗೆ ವೈಕಲ್ಪಿಕ ರೂಪಗಳು ಇನ್ನು ಮುಂದೆ ಹೇಳಲಾಗುತ್ತದೆ.

**('ದ್' ಕಾರಾಂತ ಅಸ್ಮದ್ ಶಬ್ದದ ರೂಪಗಳು)**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಅಹಮ್ | ಆವಾಮ್ | ವಯಮ್ |
| ದ್ವಿತೀಯಾ | ಮಾಮ್ | ಆವಾಮ್ | ಅಸ್ಮಾನ್ |
| ತೃತೀಯಾ | ಮಯಾ | ಆವಾಭ್ಯಾಮ್ | ಅಸ್ಮಾಭಿಃ |

| | | | |
|---|---|---|---|
| ಚತುರ್ಥೀ | ಮಹ್ಯಮ್ | ಆವಾಭ್ಯಾಮ್ | ಅಸ್ಮಭ್ಯಮ್ |
| ಪಞ್ಚಮೀ | ಮತ್ | ಆವಾಭ್ಯಾಮ್ | ಅಸ್ಮತ್ |
| ಷಷ್ಠೀ | ಮಮ | ಆವಯೋಃ | ಅಸ್ಮಾಕಮ್ |
| ಸಪ್ತಮೀ | ಮಯಿ | ಆವಯೋಃ | ಅಸ್ಮಾಸು |

ಸೂಚನೆ: ದ್ವಿತೀಯಾ, ಚತುರ್ಥೀ ಮತ್ತು ಷಷ್ಠೀ ವಿಭಕ್ತಿಗಳಿಗೆ ವೈಕಲ್ಪಿಕ ರೂಪಗಳು ಇನ್ನು ಮುಂದೆ ಹೇಳಲಾಗುತ್ತದೆ.

**(ಯುಷ್ಮದ್ ಅಸ್ಮದ್ ಶಬ್ದಗಳಿಗೆ ವಾಂ ಮತ್ತು ನೌ ಆದೇಶಗಳನ್ನು ವಿಧಿಸುವ ಸೂತ್ರ)**

**ಸೂತ್ರ – 330. ಯುಷ್ಮದಸ್ಮದೋಃ ಷಷ್ಠೀ-ಚತುರ್ಥೀ-ದ್ವಿತೀಯಾಸ್ಥಯೋರ್ವಾಂ-ನಾವೌ ( 8.1.20)**

ವೃತ್ತಿಃ–ಪದಾತ್ ಪರಯೋಃ ಅಪದಾದೌ ಸ್ಥಿತಯೋಃ ಷಷ್ಠ್ಯಾದಿ-ವಿಶಿಷ್ಟಯೋಃ ವಾಂ, ನೌ ಇತ್ಯಾದೇಶೌ ಸ್ತಃ।

ಪ. ಛೇ. – ಯುಷ್ಮದಸ್ಮದೋಃ, ಷಷ್ಠೀ–ಚತುರ್ಥೀ–ದ್ವಿತೀಯಾಸ್ಥಯೋಃ, ವಾಂ–ನಾವೌ।

ಅ. ವೃ.– "ಪದಾತ್" ಮತ್ತು "ಅನುದಾತ್ತಮ್ ಸರ್ವಮಪದಾದೌ" ಎಂಬವು ಅಧಿಕಾರ ಸೂತ್ರಗಳು.

ಅರ್ಥ–ಪದದ ನಂತರ ಮತ್ತು ಅಪದಾದಿಯಲ್ಲಿರುವ (ಪದದ ಆದಿಯಲ್ಲಿ ಇಲ್ಲದಿರುವ) ಷಷ್ಠೀ, ಚತುರ್ಥೀ ಮತ್ತು ದ್ವಿತೀಯಾ ವಿಭಕ್ತಿಗಳಿಂದ ಕೂಡಿದ 'ಯುಷ್ಮದ್' ಮತ್ತು 'ಅಸ್ಮದ್' ಶಬ್ದಗಳ ಸ್ಥಾನದಲ್ಲಿ ಕ್ರಮವಾಗಿ 'ವಾಂ' ಮತ್ತು 'ನೌ' ಎಂಬ ಆದೇಶಗಳು ಬರುತ್ತವೆ.

ವಿವರಣೆ– ಪದಾತ್ ಎಂದರೆ. (ಮೊದಲನೆಯ) ಪದದ ನಂತರವೆಂದು ಅರ್ಥ. ಮತ್ತು ಅಪದಾದೌ ಎಂದರೆ ಪದದ ಆದಿಯಲ್ಲಿ ಇಲ್ಲದಿರುವ ಎಂದು ಅರ್ಥ. ಈ ಸ್ಥಿತಿಯು ಮೊದಲನೆಯ ಪದಕ್ಕೆ ಅನ್ವಯಿಸುವದಿಲ್ಲ. ಈ ಸೂತ್ರದಿಂದ ಮೇಲಿನ ಮೂರು ವಿಭಕ್ತಿಗಳ ದ್ವಿವಚನಗಳಿಗೆ ಮಾತ್ರ ಸಂಬಂಧಿಸಿರುತ್ತದೆ. ಏಕವಚನ, ಬಹುವಚನಗಳಿಗಲ್ಲ.

**(ವಸ್ ಮತ್ತು ನಸ್ ಆದೇಶಗಳನ್ನು ವಿಧಿಸುವ ಸೂತ್ರ)**

**ಸೂತ್ರ – 331. ಬಹುವಚನಸ್ಯ ವಸ್–ನಸೌ ( 8.1.21)**

ವೃತ್ತಿಃ–ಉಕ್ತ ವಿಧಯೋಃ ಅನಯೋಃ ಷಷ್ಠ್ಯಾದಿ ಬಹುವಚನಾಂತಯೋಃ ವಸ್–ನಸೌ ಸ್ತಃ।

ಅ. ವೃ. – "ಯುಷ್ಮದಸ್ಮದೋಃ ಷಷ್ಠೀ–ಚತುರ್ಥೀ–ದ್ವಿತೀಯಾಸ್ಥಯೋರ್ವಾಂ–ನಾವೌ" (8.1.20) ಎಂಬ ಸೂತ್ರದಿಂದ 'ಯುಷ್ಮದಸ್ಮದೋಃ ಷಷ್ಠೀ–ಚತುರ್ಥೀ–

ದ್ವಿತೀಯಾಸ್ಥಯೋಃ' ಎಂಬುದು ಅನುವೃತ್ತವಾಗುತ್ತದೆ. "ಪದಾತ್" ಮತ್ತು "ಅನುದಾತ್ತಮ್ ಸರ್ವಮಪದಾದೌ" ಎಂಬವು ಅಧಿಕಾರ ಸೂತ್ರಗಳು.

ಅರ್ಥ– ಪದದ ನಂತರ ಮತ್ತು ಅಪದಾದಿಯಲ್ಲಿ ಇರುವ (ಪದದ ಆದಿಯಲ್ಲಿ ಇಲ್ಲದಿರುವ) ಷಷ್ಠೀ, ಚತುರ್ಥೀ ಮತ್ತು ದ್ವಿತೀಯಾ ವಿಭಕ್ತಿಗಳ ಬಹುವಚನದಿಂದ ಕೂಡಿದ 'ಯುಷ್ಮದ್' ಮತ್ತು 'ಅಸ್ಮದ್' ಶಬ್ದಗಳ ಸ್ಥಾನದಲ್ಲಿ ಕ್ರಮವಾಗಿ 'ವಸ್' ಮತ್ತು 'ನಸ್' ಆದೇಶಗಳು ಬರುತ್ತವೆ. ಈ ಸೂತ್ರವು ಹಿಂದಿನ ಸೂತ್ರಕ್ಕೆ ಅಪವಾದವಾಗಿದೆ.

**(ತೇ ಮತ್ತು ಮೇ ಇವುಗಳನ್ನು ಆದೇಶವಾಗಿ ವಿಧಿಸುವ ಸೂತ್ರ)**

**ಸೂತ್ರ – 332. ತೇಮಯಾವೇಕವಚನಸ್ಯ (8.1.22)**

ವೃತ್ತಿಃ–ಉಕ್ತ ವಿಧಯೋಃ ಅನಯೋಃ ಷಷ್ಠೀ, ಚತುರ್ಥ್ಯೇಕವಚನಾಂತಯೋಃ ತೇ, ಮೇ ಏತೌ ಸ್ತಃ।

ಪ. ಛೇ. – ತೇಮಯೌ, ಏಕವಚನಸ್ಯ।

ಅ. ವೃ –"ಯುಷ್ಮದಸ್ಮದೋಃ ಷಷ್ಠೀ–ಚತುರ್ಥೀ–ದ್ವಿತೀಯಾಸ್ಥಯೋರ್ವಾಂ–ನಾವೌ" (8.1.20) ಎಂಬ ಸೂತ್ರದಿಂದ 'ಯುಷ್ಮದಸ್ಮದೋಃ ಷಷ್ಠೀ–ಚತುರ್ಥೀ–ದ್ವಿತೀಯಾಸ್ಥಯೋಃ' ಎಂಬುದು ಅನುವೃತ್ತವಾಗುತ್ತದೆ. "ಪದಾತ್" ಮತ್ತು "ಅನುದಾತ್ತಮ್ ಸರ್ವಮಪದಾದೌ" ಎಂಬವು ಅಧಿಕಾರ ಸೂತ್ರಗಳು.

ಅರ್ಥ– ಪದದ ನಂತರ ಮತ್ತು ಅಪದಾದಿಯಲ್ಲಿ ಇರುವ (ಪದದ ಆದಿಯಲ್ಲಿ ಇಲ್ಲದಿರುವ) ಷಷ್ಠೀ ಮತ್ತು ಚತುರ್ಥೀ ವಿಭಕ್ತಿಗಳ ಏಕವಚನದಿಂದ ಕೂಡಿದ, 'ಯುಷ್ಮದ್' ಮತ್ತು 'ಅಸ್ಮದ್' ಶಬ್ದಗಳಿಗೆ ಕ್ರಮವಾಗಿ 'ತೇ' ಮತ್ತು 'ಮೇ' ಆದೇಶಗಳು ಬರುತ್ತವೆ.

ಈ ಸೂತ್ರವು ದ್ವಿತೀಯಾ ವಿಭಕ್ತಿಯಲ್ಲಿ "ತ್ವಾಮೌ ದ್ವಿತೀಯಾಯಾಃ" ಎಂಬ ಸೂತ್ರದಿಂದ ಬಾಧಿತವಾಗೋಣದರಿಂದ, ಷಷ್ಠೀ ಮತ್ತು ಚತುರ್ಥೀ ವಿಭಕ್ತಿಗಳಿಗೆ ಮಾತ್ರ ಅನ್ವಯಿಸುತ್ತದೆ.

**(ತ್ವಾ ಮತ್ತು ಮಾ ಆದೇಶಗಳನ್ನು ವಿಧಿಸುವ ಸೂತ್ರ)**

**ಸೂತ್ರ – 333. ತ್ವಾಮೌ ದ್ವಿತೀಯಾಯಾಃ (8.1.23)**

ವೃತ್ತಿಃ–ದ್ವಿತೀಯೈಕವಚನಾಂತಯೋಃ ತ್ವಾ, ಮಾ, ಇತ್ಯಾದೇಶೌ ಸ್ತಃ।

ಸೂತ್ರಚತುಷ್ಟಯಸ್ಯ ಉದಾಹರಣಾನಿ ಶ್ಲೋಕದ್ವಯೇನ॥

"ಶ್ರೀಶಸ್ತ್ವಾವತು ಮಾಪೀಹ, ದತ್ತಾತ್ತೇ ಮೇಪಿ ಶರ್ಮ ಸಃ।
ಸ್ವಾಮೀ ತೇ ಮೇಪಿ ಸ ಹರಿಃ, ಪಾತು ವಾಮಪಿ ನೌ ವಿಭುಃ॥
ಸುಖಂ ವಾಂ ನೌ ದದಾತ್ವೀಶಃ ಪತಿರ್ವಾಮಪಿ ನೌ ಹರಿಃ।
ಸೋವ್ಯಾದ್ವೋ ನಃ ಶಿವಂ ವೋ ನೋ ದದ್ಯಾತ್ ಸೇವ್ಯೋತ್ರ ವಃ ಸ ನಃ॥

ವಾ॥1. **ಏಕವಾಕ್ಯೇ ಯುಷ್ಮದಸ್ಮದಾದೇಶಾ ವಕ್ತವ್ಯಾಃ।**

ಉದಾ–1. (ಏಕ ತಿಙ್ ವಾಕ್ಯಮ್)। 2. ತೇನೇಹ ನ– ಓದನಂ ಪಚ ತವ

ಭವಿಷ್ಯತಿ। 3. ಇಹ ತು ಸ್ಯಾದೇವ – ಶಾಲೀನಾಂ ತೇ ಓದನಂ ದಾಸ್ಯಾಮಿ।

ವಾ॥ 2. **ಏತೇ ವಾನ್ನಾವಾದಯೋಽನನ್ವಾದೇಶೇ ವಾ ವಕ್ತವ್ಯಾಃ ।**

ಅನ್ವಾದೇಶೇ ತು ನಿತ್ಯಂ ಸ್ಯುಃ। ಧಾತಾ ತೇ ಭಕ್ತೋಽಸ್ತಿ ಧಾತಾ ತವ ಭಕ್ತೋಽಸ್ತಿ,

ವಾ। **ತಸ್ಮೈ ತೇ ನಮ ಇತ್ಯೇವ। ಸುಪಾತ್, ಸುಪಾದ್। ಸುಪಾದೌ।**

ಅ. ವ್ಯ. –"ಯುಷ್ಮದಸ್ಮದೋಃ ಷಷ್ಠೀ–ಚತುರ್ಥೀ–ದ್ವಿತೀಯಾಸ್ಥಯೋರ್ವಾಂ–ನಾವೌ" (8.1.20) ಎಂಬ ಸೂತ್ರದಿಂದ 'ಯುಷ್ಮದಸ್ಮದೋಃ' ಎಂಬುದು ಅನುವೃತ್ತವಾಗುತ್ತದೆ. ಮತ್ತು "ತೇಮಯಾವೇಕವಚನಸ್ಯ" ಎಂಬ ಸೂತ್ರದಿಂದ 'ಏಕವಚನಸ್ಯ' ಎಂಬ ಪದವು ಅನುವೃತ್ತವಾಗುತ್ತದೆ. "ಪದಾತ್" ಮತ್ತು "ಅನುದಾತ್ತಮ್ ಸರ್ವಮಪದಾದೌ" "ತೇ ಮಯಾವೇಕವಚನಸ್ಯ" ಎಂಬ ಸೂತ್ರಕ್ಕೆ ಈ ಮೇಲಿನ ಎರಡು ಚರಣಗಳು ಉದಾಹರಣೆಯಾಗಿವೆ. 'ಯುಷ್ಮದ್' ಮತ್ತು 'ಅಸ್ಮದ್' ಶಬ್ದಗಳ ಏಕವಚನವಾದ 'ತುಭ್ಯಮ್' ಮತ್ತು 'ಮಹ್ಯಮ್' ಹಾಗೆಯೇ ಷಷ್ಠೀ ಏಕವಚನವಾದ 'ತವ' ಮತ್ತು 'ಮಮ' ಸ್ಥಾನಗಳಲ್ಲಿ ಕ್ರಮವಾಗಿ 'ತೇ' ಮತ್ತು 'ಮೇ' ಎಂಬವು ಆದೇಶಗಳಾಗಿ ಬಂದಿವೆ.

"ಯುಷ್ಮದಸ್ಮದೋಃ ಷಷ್ಠೀ–ಚತುರ್ಥೀ–ದ್ವಿತೀಯಾಸ್ಥಯೋರ್ವಾಂ–ನಾವೌ" (8.1.20) ಎಂಬ ಸೂತ್ರಕ್ಕೆ ಈ ಕೆಳಗಿನ ಮೂರು ಚರಣಗಳು ಉದಾಹರಣೆಯಾಗಿವೆ.

ಅ) ಪಾತು ವಾಮಪಿ ನೌ ವಿಭುಃ॥ ಪ.ಛೇ– ಪಾತು ವಾಮ್ ಅಪಿ ನೌ ವಿಭುಃ, ಅನ್ವಯ– ವಿಭುಃ ವಾಮ್ ಅಪಿ ನೌ ಪಾತು।

ಅರ್ಥ– ಎಲ್ಲಕಡೆಗೂ ವ್ಯಾಪ್ತನಾದ (ಪರಮಾತ್ಮನು) ನಿಮ್ಮಿಬ್ಬರನ್ನೂ ಮತ್ತು ನಮ್ಮಿಬ್ಬರನ್ನೂ ರಕ್ಷಿಸಲಿ.

ಬ) ಸುಖಂ ವಾಂ ನೌ ದದಾತ್ವೀಶಃ। ಪ.ಛೇ – ಸುಖಂ ವಾಮ್ ನೌ ದದಾತು ಈಶಃ।

ಅನ್ವಯ– ಈಶಃ ವಾಂ (ಅಪಿ) ನೌ ಸುಖಂ ದದಾತು।

ಅರ್ಥ– ಈಶ್ವರನು ನಿಮ್ಮಿಬ್ಬರಿಗೂ ಮತ್ತು ನಮ್ಮಿಬ್ಬರಿಗೂ ಸುಖವನ್ನು ಕೊಡಲಿ.

ಕ) ಪತಿರ್ವಾಮಪಿ ನೌ ಹರಿಃ। ಪ. ಛೇ– ಪತಿಃ ವಾಂ ಅಪಿ ನೌ ಹರಿಃ। ಅನ್ವಯ– ಹರಿಃ ವಾಂ ಅಪಿ ನೌ ಪತಿಃ (ಅಸ್ತಿ)।

ಅರ್ಥ– ಹರಿಯು ನಿಮ್ಮಿಬ್ಬರಿಗೂ ಮತ್ತು ನಮ್ಮಿಬ್ಬರಿಗೂ ಒಡೆಯನಾಗಿದ್ದಾನೆ.

ವಿವರಣೆ: 'ಯುಷ್ಮದ್' ಮತ್ತು 'ಅಸ್ಮದ್' ಶಬ್ದಗಳ ದ್ವಿತೀಯೈಕವಚನವಾದ 'ಯುವಾವಮ್' ಮತ್ತು 'ಆವಾವಮ್' ಎಂಬವು, ಚತುರ್ಥೀ ದ್ವಿವಚನವಾದ 'ಯುವಾಭ್ಯಾಮ್' ಮತ್ತು 'ಆವಾಭ್ಯಾಮ್' ಎಂಬ ಪದಗಳೂ ಹಾಗೂ ಷಷ್ಠೀ ದ್ವಿವಚನವಾದ 'ಯುವಯೋಃ' ಮತ್ತು 'ಆವಯೋಃ' ಎಂಬ ಶಬ್ದಗಳಿಗೆ ಕ್ರಮವಾಗಿ 'ವಾಮ್' ಮತ್ತು 'ನೌ' ಎಂಬವು ಆದೇಶಗಳಾಗಿ ಬರುತ್ತವೆ. ಹೀಗಾಗಿ ಒಂದೇ

ಅರ್ಥವುಳ್ಳ ಈ ಶಬ್ದಗಳಿಗೆ ಪರ್ಯಾಯಾವಾಗಿ ಬಂದು, ಎರಡೆರಡು ರೂಪಗಳಾಗಿವೆ.

"ಬಹುವಚನಸ್ಯ ವಸ್ನಸೌ" ಸೂತ್ರಕ್ಕೆ ಈ ಕೆಳಗಿನ ಚರಣಗಳು ಉದಾಹರಣೆಯಾಗಿವೆ.

ಸೋವ್ಯಾದ್ವೋ ನಃ ಶಿವಂ ವೋ ನೊ ದದ್ಯಾತ್ ಸೇವ್ಯೋತ್ರ ವಃ ಸ ನಃ॥

ಪ.ಛೇ– ಸಃ, ಅವ್ಯಾತ್, ವಃ, ನಃ, ಶಿವಂ,ವಃ, ನಃ, ದದ್ಯಾತ್, ಸೇವ್ಯಃ, ಅತ್ರ, ವಃ ಸಃ ನಃ। ಅನ್ವಯ– ಸಃ ವಃ (ತಥಾ) ನಃ ಅಸ್ಮಾನ್ ಅವ್ಯಾತ್। ವಃ ನಃ ಶಿವಂ ದದ್ಯಾತ್, ಅತ್ರ ಸಃ ವಃ ನಃ ಸೇವ್ಯಃ।

ಅರ್ಥ– ಆ ಶ್ರೀಹರಿಯು ನಿಮ್ಮೆಲ್ಲರನ್ನೂ ಮತ್ತು ನಮ್ಮೆಲ್ಲರನ್ನೂ ರಕ್ಷಿಸಲಿ, ಆ ಪರಮಾತ್ಮನು ನಿಮ್ಮೆಲ್ಲರಿಗೂ ಮತ್ತು ನಮ್ಮೆಲ್ಲರಿಗೂ ಕಲ್ಯಾಣವನ್ನು ಉಂಟು ಮಾಡಲಿ.

ಇಲ್ಲಿ ಆ ಭಗವಂತನು ನಿಮ್ಮೆಲ್ಲರಿಗೆ ಮತ್ತು ನಮ್ಮೆಲ್ಲರಿಗೆ ಆರಾಧಿಸಲ್ಪಡಲು ಯೋಗ್ಯನಾಗಿದ್ದಾನೆ.

ವಿವರಣೆ– 'ಯುಷ್ಮದ್' ಮತ್ತು 'ಅಸ್ಮದ್' ಶಬ್ದಗಳ ದ್ವಿತೀಯಾ ವಿಭಕ್ತೀ ಬಹುವಚನಗಳಾದ 'ಯುಷ್ಮಾನ್' ಮತ್ತು 'ಅಸ್ಮಾನ್', ಚತುರ್ಥೀ ವಿಭಕ್ತೀ ಬಹುವಚನಗಳಾದ 'ಯುಷ್ಮಭ್ಯಮ್' ಮತ್ತು 'ಅಸ್ಮಭ್ಯಮ್' ಹಾಗೂ ಷಷ್ಠೀ ಬಹುವಚನಗಳಾದ 'ಯುಷ್ಮಾಕಮ್' ಮತ್ತು 'ಅಸ್ಮಾಕಮ್' ಸ್ಥಾನಗಳಲ್ಲಿ ಕ್ರಮವಾಗಿ 'ವಸ್(ವಃ)' ಮತ್ತು 'ನಸ್(ನಃ)' ಗಳು ಆದೇಶವಾಗಿ ಬಂದಿವೆ.

ವಾ॥ 1. ಏಕವಾಕ್ಯೇ ಯುಷ್ಮದಸ್ಮದಾದೇಶಾ ವಕ್ತವ್ಯಾಃ।

ಉದಾ–1. (ಏಕ ತಿಙ್ ವಾಕ್ಯಮ್)। 2. ತೇನೇಹ ನ– ಓದನಂ ಪಚ, ತವ ಭವಿಷ್ಯತಿ। 3. ಇಹ ತು ಸ್ಯಾದೇವ – ಶಾಲೀನಾಂ ತೇ ಓದನಂ ದಾಸ್ಯಾಮಿ।

ಅರ್ಥ– 'ಯುಷ್ಮದ್' ಮತ್ತು 'ಅಸ್ಮದ್' ಗಳ ಜಾಗದಲ್ಲಿ ಯಾವ ಅದೇಶಗಳು ವಿಧಿಸಲ್ಪಟ್ಟವೋ ಅವು ಒಂದೇ ವಾಕ್ಯದಲ್ಲಿ ಇವೆ ಆದುದರಿಂದ ಯುಷದಸ್ಮದಾದೇಶಗಳ ನಿಮಿತ್ತಗಳು ಒಂದೇ ವಾಕ್ಯದಲ್ಲಿರಬೇಕು.

ಉದಾಹರಣೆ– 'ಪದಾತ್ಪರಯೋಃ ಅಪದಾದೌ ಸ್ಥಿತಯೋಃ' ಎಂಬುದು ಒಂದೇ ವಾಕ್ಯವಾಗಿದೆ. ಈ ರೀತಿಯಲ್ಲಿ ಒಂದೇ ವಾಕ್ಯದಲ್ಲಿ ಪದದ ಪರದಲ್ಲಿ ಮತ್ತು ಪದದ ಆದಿಯಲ್ಲಿ ಇರದೇ ಇರುವ ರೀತಿಯಲ್ಲಿ, ಮತ್ತು ದ್ವಿತೀಯಾ, ಚತುರ್ಥೀ ಮತ್ತು ಷಷ್ಠ್ಯಂತ 'ಯುಷ್ಮದ್' 'ಅಸ್ಮದ್' ಶಬ್ದಗಳ ಸ್ಥಾನದಲ್ಲಿ ಕ್ರಮವಾಗಿ ವಾಮ್, ನೌ ಹಾಗೂ ವಸ್, ನಸ್, ಹಾಗೆಯೇ ತ್ವಾ ಮತ್ತು ಮಾ ಆದೇಶಗಳು ಬರುತ್ತವೆ.

ವಾಕ್ಯವೆಂದರೆ 'ಏಕತಿಙ್ ವಾಕ್ಯಮ್' ಎಂದು ಉದಾಹರಿಸಿದ್ದಾರೆ. ಹೀಗೆಂದರೆ ಒಂದೇ 'ತಿಙ್' ಪ್ರತ್ಯಯದಿಂದ ಹೇಳಲ್ಪಡುವ ಕರ್ತೃ, ಕರ್ಮ ಮೊದಲಾದವುಗಳಿಂದ ಕೂಡಿದ ಸಮೂಹ ಎಂದು ಅರ್ಥ. ಇಲ್ಲಿ 'ತಿಙ್' ಎಂದರೆ ಕ್ರಿಯಾ ವಾಚಕ ಶಬ್ದ.

ಉದಾ– ಬಾಲಕಃ ಮೋದಕಂ ಖಾದತಿ। ಎಂಬಲ್ಲಿ ಬಾಲಕಃ ಎಂಬುದು ಕರ್ತೃ, ಮೋದಕಂ ಎಂಬುದು ಕರ್ಮ, ಖಾದತಿ ಎಂಬುದು ಕ್ರಿಯಾಪದ. ಇದು ಒಂದೇ

ವಾಕ್ಯ 'ತ್ವಂ ಘಟಮ್ ಆನಯ', 'ತ್ವಂ ಜಲಮ್ ಪಿಬ' ಎಂಬಲ್ಲಿ ಎರಡು ತಿಙನ್ತ ಪದಗಳಿವೆ. (ವೃತ್ತಿಯಲ್ಲಿ 'ಓದನಂ ಪಚ' 'ತವ ಭವಿಷ್ಯತಿ' ಎಂಬ ಉದಾಹರಣೆಗಳನ್ನು ಕೊಟ್ಟಿದ್ದಾರೆ). ಆ ಎರಡು ತಿಙನ್ತಗಳಿಂದ ಹೇಳಲ್ಪಡುವ ಕರ್ತೃಗಳು ಬೇರೆ ಬೇರೆಯಾಗಿದ್ದಾರೆ.

ಇಲ್ಲಿ ತ್ವಮ್ ಎಂಬುದರಿಂದ ಹೇಳಲ್ಪಡುವ ವ್ಯಕ್ತಿ ಒಬ್ಬನೇ ಆಗಿರಬೇಕೆಂಬ ನಿಯಮವಿಲ್ಲ. ಅಂದರೆ ಒಂದು 'ತ್ವಮ್' ಶಬ್ದದಿಂದ ರಾಮನೂ ಮತ್ತೊಂದು 'ತ್ವಮ್' ಶಬ್ದದಿಂದ ಕೃಷ್ಣನೂ ನಿರ್ದೇಶಿಸಲ್ಪಡಬಹುದು. ಹೀಗಾಗಿ ಇವೆರಡೂ ಬೇರೆ ಬೇರೆ ವಾಕ್ಯಗಳು. ಒಂದೇ ವಾಕ್ಯವಾಗಿದ್ದರೆ ಮಾತ್ರ ಪರ್ಯಾಯ ಶಬ್ದಗಳನ್ನು ಉಪಯೋಗ ಮಾಡಬಹುದಾಗಿದೆ. 'ತವ' ದ ಬದಲಾಗಿ 'ತೇ' ಎಂದೂ ಮತ್ತು 'ಮಮ' ಎಂಬುದಕ್ಕೆ ಬದಲಾಗಿ 'ಮೇ' ಎಂಬ ಪರ್ಯಾಯ ಪದಗಳನ್ನು ಉಪಯೋಗಿಸಬಹುದಾಗಿದೆ.

ವಾ॥ 2. **ಏತೇ ವಾನ್ನಾವಾದಯೋಽನನ್ವಾದೇಶೇ ವಾ ವಕ್ತವ್ಯಾಃ ।**

ಅನ್ವಾದೇಶೇ ತು ನಿತ್ಯಂ ಸ್ಯುಃ। ಧಾತಾ ತೇ ಭಕ್ತೋಽಸ್ತಿ ಧಾತಾ ತವ ಭಕ್ತೋಽಸ್ತಿ, ವಾ। ತಸ್ಮೈ ತೇ ನಮ ಇತ್ಯೇವ। ಸುಪಾತ್, ಸುಪಾದ್। ಸುಪಾದೌ।

'ವಾಮ್' ಮತ್ತು 'ನೌ' ಮೊದಲಾದವುಗಳು ಅನನ್ವಾದೇಶದಲ್ಲಿ (ಅನ್ವಾದೇಶವಿಲ್ಲದ ಪಕ್ಷದಲ್ಲಿ) ವಿಕಲ್ಪವಾಗಿ ಬರುತ್ತವೆ. ಅನ್ವಾದೇಶದಲ್ಲಿ ನಿತ್ಯವಾಗಿ ಬರುತ್ತವೆ. 'ಧಾತಾ ತೇ ಭಕ್ತೋಽಸ್ತಿ' 'ಧಾತಾ ತವ ಭಕ್ತೋಽಸ್ತಿ' ಎಂಬಲ್ಲಿ, ಬ್ರಹ್ಮನು ನಿನ್ನ (ತೇ) ಭಕ್ತನಾಗಿದ್ದಾನೆ. ಮತ್ತು ವೈಕಲ್ಪಿಕವಾಗಿ ಬ್ರಹ್ಮನು ನಿನ್ನ(ತವ) ಭಕ್ತನಾಗಿದ್ದಾನೆ ಎಂದು. ಇಲ್ಲಿ ಅನ್ವಾದೇಶವಿಲ್ಲದ್ದರಿಂದ ವೈಕಲ್ಪಿಕ ರೂಪಗಳಾದ 'ತವ' ಮತ್ತು 'ತೇ' ಗಳು ಬಂದಿವೆ. ಅನ್ವಾದೇಶವಿದ್ದಿದ್ದರೆ– ನಿತ್ಯವಾಗಿ ಎರಡನೇ ರೂಪವಾದ 'ತೇ' ಎಂಬುದೇ ಬರುತ್ತಿತ್ತು. ಮತ್ತೊಂದು ಉದಾಹರಣೆ ಹೇಳುವುದಾದರೆ–'ಏಷಃ ವಿದ್ಯಾರ್ಥೀ, ಏನಂ ವ್ಯಾಕರಣಮ್ ಪಾಠಯ' ಎಂಬಲ್ಲಿ ಅನ್ವಾದೇಶವಿರೋಣದ್ದರಿಂದ, 'ಏತಮ್' ಎಂಬುದನ್ನು ಉಪಯೋಗಿಸದೇ 'ಏನಮ್' ಎಂಬುದನ್ನೇ ಪ್ರಯೋಗಿಸಬೇಕು.

ಉದಾ– ಸುಪಾತ್, ಸುಪಾದ್( ಒಳ್ಳೆಯ ಕಾಲುಗಳುಳ್ಳವನು)– ಪ್ರಥಮಾ ವಿಭಕ್ತಿ ಏಕವಚನದಲ್ಲಿ ಸುಪಾದ್+ಸು(ಸ್) ಎಂದಿದ್ದಾಗ, 'ಹಲ್ಙ್ಯಾಬ್ಭ್ಯೋ ದೀರ್ಘಾತ್ ಸುತಿಸ್ಯಪೃಕ್ತಮ್ ಹಲ್" ಎಂಬ ಸೂತ್ರದಿಂದ, 'ಸ್' ಕಾರಕ್ಕೆ ಲೋಪ ಬಂದು, ಸುಪಾದ್ ಎಂದಾಗಿ, "ವಾಽವಸಾನೇ" ಎಂಬುದರಿಂದ ವೈಕಲ್ಪಿಕ ಚರ್ತ್ವ ಬಂದು ಸುಪಾತ್ ಎಂಬ ರೂಪವು ಸಿದ್ಧವಾಗಿದೆ.

ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಸುಪಾದೌ, ಸುಪಾದಃ, ಸುಪಾದಮ್, ಸುಪಾದೌ ಎಂಬ ರೂಪಗಳು ವರ್ಣಜೋಡಣೆಯಿಂದ ಸಿದ್ಧವಾಗುತ್ತವೆ.

**(ಪತ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ – 334. ಪಾದಃ ಪತ್ ( 6.4.130)**

ವೃತ್ತಿಃ–ಪಾತ್–ಶಬ್ದಾಂತಂ ಯದಙ್ಗಂ ಭಂ ತದವಯವಸ್ಯ ಪಾತ್ ಶಬ್ದಸ್ಯ ಪದ್–

ಆದೇಶಃ। ಸುಪದಃ। ಸುಪದಾ। ಸುಪಾದ್ಭ್ಯಾಮ್। ಅಗ್ನಿಮತ್, ಅಗ್ನಿಮದ್। ಅಗ್ನಿಮಥೌ। ಅಗ್ನಿ ಮಥಃ।

ಅ. ವೃ.– "ಭಸ್ಯ" ಮತ್ತು "ಅಙ್ಗಸ್ಯ" ಎಂಬವು ಅಧಿಕಾರ ಸೂತ್ರಗಳು.

ಅರ್ಥ– ಪಾದ ಶಬ್ದದ ಅಂತದಲ್ಲಿ ಇರುವ 'ಭ' ಸಂಜ್ಞಕ 'ಪಾದ್' ಶಬ್ದದ ಸ್ಥಾನದಲ್ಲಿ, 'ಪದ್' ಅದೇಶವು ಬರುತ್ತದೆ.

ವಿವರಣೆ– ಅಸರ್ವನಾಮಸ್ಥಾನವಾದ ಅಜಾದಿವಿಭಕ್ತಿಗಳು ಪರದಲ್ಲಿದ್ದಾಗ, ತತ್ಪೂರ್ವದಲ್ಲಿರುವ ಶಬ್ದ–ಸ್ವರೂಪಕ್ಕೆ 'ಭ' ಸಂಜ್ಞೆಯು ಬರುತ್ತದೆ. ಆದ್ದರಿಂದ 'ಶಸ್(ಅಸ್)' ಮೊದಲಾದ ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಪೂರ್ವದಲ್ಲಿರುವ 'ಪಾದ್' ಶಬ್ದಕ್ಕೆ 'ಪದ್' ಆದೇಶವು ಬರುತ್ತದೆ. ಅಸರ್ವನಾಮಸ್ಥಾನ ಮತ್ತು ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, 'ಪದ್' ಆದೇಶವು ಬರುವುದಿಲ್ಲ. 'ಪದಾಙ್ಗಾಧಿಕಾರೇ ತಸ್ಯ ಚ ತದನ್ತಸ್ಯ ಚ' ಎಂಬ ಪರಿಭಾಷೆಯಿಂದ, 'ಸುಪಾದ್' ಶಬ್ದಕ್ಕೇನೇ 'ಪದ್' ಆದೇಶವು ಬರಬೇಕಾಗಿತ್ತು. ಆದರೆ 'ನಿರ್ದಿಶ್ಯಮಾನಸ್ಯ ಆದೇಶಾ ಭವನ್ತಿ' ಎಂಬ ನಿಯಮದ ಪ್ರಕಾರ 'ಪಾದ್' ಶಬ್ದಕ್ಕೆ ಮಾತ್ರ 'ಪದ್' ಆದೇಶವು ಬಂದಿರುವುದು.

ಉದಾ– ಸುಪದಃ – (ಒಳ್ಳೇ ಕಾಲುಗಳುಳ್ಳವನು)–ಸುಪಾದ್ ಶಬ್ದದಮೇಲೆ ದ್ವಿತೀಯಾ ಬಹುವಚನದಲ್ಲಿ 'ಶಸ್(ಅಸ್)' ಪ್ರತ್ಯಯವನ್ನು ಸೇರಿಸಿ ಸುಪಾದ್+ಅಸ್ ಎಂದಿದ್ದಾಗ, 'ಭ' ಸಂಜ್ಞೆ ಬಂದು ಪ್ರಕೃತ ಸೂತ್ರದಿಂದ 'ಪದ್' ಆದೇಶ ಬಂದು, ಸುಪದ್+ಅಸ್=ಸುಪದಸ್ ಎಂದಾಗಿ, ರುತ್ವ–ವಿಸರ್ಗಗಳಿಂದ ಸುಪದಃ ಎಂಬ ರೂಪವು ಸಿದ್ಧವಾಗುತ್ತದೆ. ಇದೇ ರೀತಿಯಲ್ಲೇ ಸುಪದಾ, ಸುಪದೇ, ಸುಪದಃ, ಸುಪದೋಃ, ಸುಪದಾಮ್ ಮತ್ತು ಸುಪದಿ ಎಂಬ ರೂಪಗಳು ಸಿದ್ಧವಾಗುತ್ತವೆ. ಇತರ ಸ್ಥಳಗಲ್ಲಿ 'ಭ' ಸಂಜ್ಞೆ ಇಲ್ಲದೇ ಇರೋಣದ್ದರಿಂದ 'ಪದ್' ಆದೇಶವು ಬಾರದೇ ಸುಪಾದ್ಭ್ಯಾಮ್, ಸುಪಾದ್ಭಿಃ, ಸುಪಾದ್ಭ್ಯಃ, ಸುಪಾತ್ಸು ಎಂಬ ರೂಪಗಳು ಸಿದ್ಧವಾಗುತ್ತವೆ.

**(ಇಲ್ಲಿಗೆ 'ತ್' ಕಾರಾನ್ತ ಶಬ್ದಗಳು ಮುಗಿದವು)**

**(ಈಗ 'ಥ್' ಕಾರಾನ್ತ ಶಬ್ದಗಳು ಆರಂಭವಾಗುತ್ತವೆ).**

ಉದಾ – ಅಗ್ನಿಮತ್, ಅಗ್ನಿಮದ್( ಅಗ್ನಿಯನ್ನು ಮಥನ ಮಾಡುವವನು ) – 'ಅಗ್ನಿಮ್ ಮಥ್ನಾತಿ ಇತಿ ಅಗ್ನಿಮತ್' ಅಗ್ನಿ ಶಬ್ದವನ್ನು ಪೂರ್ವದಲ್ಲಿರುವ 'ಮನ್ಥ್' ಧಾತುವಿನ ನಂತರ 'ಕ್ವಿಪ್' ಪ್ರತ್ಯಯವನ್ನು ಸೇರಿಸಿದಾಗ, ಅದು ಸರ್ವಾಪಹಾರವಾಗಿ "ಪ್ರತ್ಯಯಲೋಪೇ ಪ್ರತ್ಯಯಲಕ್ಷಣಮ್" ಎಂಬ ಸೂತ್ರದಿಂದ ಅದನ್ನು 'ಕಿತ್'ಆಗಿ ಭಾವಿಸಿ 'ಮನ್ಥ್' ನಲ್ಲಿರುವ 'ನ್' ಕಾರಕ್ಕೆ "ಅನಿದಿತಾಮ್ ಹಲ ಉಪಧಾಯಾಃ ಕ್ಙಿತಿ" ಎಂಬ ಸೂತ್ರದಿಂದ ಲೋಪ ಬಂದು, ಅಗ್ನಿಮಥ್ ಎಂದು ರೂಪವಾಗುತ್ತದೆ. ಅದಕ್ಕೆ 'ಸು(ಸ್)' ಪ್ರತ್ಯಯವನ್ನು ಸೇರಿಸಿದಾಗ ಅಗ್ನಿಮಥ್+ಸ್ ಎಂದಿರುತ್ತದೆ. "ಹಲ್ಙ್ಯಾಬ್ಭ್ಯೋ ದೀರ್ಘಾತ್ ಸುತಿಸ್ಯಪೃಕ್ತಮ್‌ಹಲ್" ಎಂಬ ಸೂತ್ರದಿಂದ, 'ಸ್' ಕಾರಕ್ಕೆ ಲೋಪ ಬಂದ ಮೇಲೆ, 'ಥ್' ಕಾರದ ಜಾಗದಲ್ಲಿ, "ಝಲಾಮ್ ಜಶೋಽನ್ತೇ" ಎಂಬ ಸೂತ್ರದಿಂದ

'ಜಶ್ತ್ವ' ಬಂದು ಅಗ್ನಿಮದ್ ಎಂದು ರೂಪವಾಗುತ್ತದೆ. "ವಾऽವಸಾನೇ" ಎಂಬ ಸೂತ್ರದಿಂದ ವೈಕಲ್ಪಿಕ ಚರ್ತ್ವ ಬಂದು ಅಗ್ನಿಮತ್ ಮತ್ತು ಅಗ್ನಿಮದ್ ಎಂಬ ರೂಪಗಳು ಸಿದ್ಧವಾಗುತ್ತವೆ.ಅನಂತರ ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಯಾವ ವಿಕಾರವೂ ಆಗದೇ ಅಗ್ನಿಮಥೌ, ಅಗ್ನಿಮಥಃ, ಅಗ್ನಿಮಥಮ್, ಅಗ್ನಿಮಥಾ, ಅಗ್ನಿಮಥೇ, ಅಗ್ನಿಮಥಃ, ಅಗ್ನಿಮಥೋಃ, ಅಗ್ನಿಮಥಾವ್, ಅಗ್ನಿಮಥಿ ಮತ್ತು ಅಗ್ನಿಮಥ್ಸು ಎಂಬ ರೂಪಗಳಾಗುತ್ತವೆ. ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ "ಸ್ವಾದಿಷ್ವಸರ್ವನಾಮಸ್ಥಾನೇ" ಎಂಬ ಸೂತ್ರದಿಂದ ಪದ ಸಂಜ್ಞೆ ಬಂದು "ಝಲಾಮ್ ಜಶೋऽನ್ತೇ" ಎಂಬ ಸೂತ್ರದಿಂದ ಜಶ್ತ್ವ ಬಂದು ಅಗ್ನಿಮದ್ಭ್ಯಾಮ್, ಅಗ್ನಿಮದ್ಭಿಃ, ಅಗ್ನಿಮದ್ಭ್ಯಃ ಎಂಬ ರೂಪಗಳು ಸಿದ್ಧವಾಗುತ್ತವೆ.

**(ಇಲ್ಲಿಗೆ 'ಥ್' ಕಾರಾನ್ತ ಶಬ್ದಗಳು ಮುಗಿದವು)**

**( ಈಗ 'ಚ್' ಕಾರಾನ್ತ ಶಬ್ದಗಳು ಆರಂಭವಾಗುತ್ತವೆ)**

**('ನ್' ಕಾರ ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ – 335. ಅನಿದಿತಾಂ ಹಲ ಉಪಧಾಯಾಃ ಕ್ಙಿತಿ (6.4.24)**

ವೃತ್ತಿಃ–ಹಲನ್ತಾನಾಂ ಅನಿದಿತಾಂ ಅಙ್ಗಾನಾಂ ಉಪಧಾಯಾಃ ನಸ್ಯ ಲೋಪಃ ಕಿತಿ, ಙಿತಿ। ನುಮ್। ಸಂಯೋಗಾನ್ತಸ್ಯ ಲೋಪಃ। ನಸ್ಯ ಕುತ್ವೇನ ಙಃ। ಪ್ರಾಙ್। ಪ್ರಾಞ್ಚೌ। ಪ್ರಾಞ್ಚಃ।

ಅ. ವ್ಯ. –"ಶ್ನಾನ್ನಲೋಪಃ" ಎಂಬ ಸೂತ್ರದಿಂದ 'ನ' ಎಂಬ ಲುಪ್ತಷಷ್ಠೀಕ ಪದವೂ, ಮತ್ತು ಲೋಪಃ ಎಂಬ ಪದವೂ ಅನುವೃತ್ತವಾಗುತ್ತವೆ. "ಅಙ್ಗಸ್ಯ" ಎಂಬವು ಅಧಿಕಾರ ಸೂತ್ರ.

ಅರ್ಥ–ಯಾವುದಕ್ಕೆ 'ಇ' ಕಾರವು 'ಇತ್' ಸಂಜ್ಞೆಯಾಗಿರುವುದಿಲ್ಲವೋ ಅಂತಹ ಹಲನ್ತ ಅಙ್ಗಗಳ ಉಪಧೆಯ 'ನ್' ಕಾರಕ್ಕೆ ಲೋಪವು ಬರುತ್ತದೆ– 'ಕಿತ್' ಮತ್ತು 'ಙಿತ್'ಗಳು ಪರದಲ್ಲಿರುವಾಗ.

ಉದಾ– ಪ್ರಾಙ್: ಪ್ರ–ಪೂರ್ವಕ 'ಅಞ್ಚ್' ಧಾತುವಿಗೆ 'ಶ್ರೇಷ್ಠ ಗತಿಯುಳ್ಳವನು' 'ಮೊದಲು ನಡೆಯುವವನು' 'ಪೂರ್ವದಲ್ಲಿರುವ ದೇಶ' ಮತ್ತು 'ಪೂರ್ವಕಾಲ'. ಎಂದು ನಾಲ್ಕು ಅರ್ಥಗಳಿವೆ. ಇಲ್ಲಿ ಕೇವಲ ಗತ್ಯರ್ಥಕವಾದ 'ಅಞ್ಚ್' ಧಾತುವನ್ನೇ ಗ್ರಹಣ ಮಾಡಲಾಗಿದೆ. ಹೀಗೆ ಪ್ರ+ಅಞ್ಚ್ ಎಂದಿದ್ದಾಗ, "ಋತ್ವಿಗ್–ದಧೃಕ್–ಸ್ರಗ್–ದಿಗ್–ಉಷ್ಣಿಗ್–ಅಞ್ಚು–ಯುಜಿ–ಕ್ರುಞ್ಚಾಮ್ ಚ" ಎಂಬ ಸೂತ್ರದಿಂದ 'ಕ್ವಿನ್' ಪ್ರತ್ಯಯ ಬಂದು, ಅದು ಸರ್ವಾಪಹಾರವಾಗಿ "ಪ್ರತ್ಯಯ ಲೋಪೇ ಪ್ರತ್ಯಯ ಲಕ್ಷಣಮ್"

ಎಂಬುದರಿಂದ 'ಕ್ವಿನ್' ಪ್ರತ್ಯಯಾಂತವಾಗಿ, 'ಕಿತ್' ಪರದಲ್ಲಿರೋಣದರಿಂದ, ಪ್ರಕೃತ ಸೂತ್ರದಿಂದ 'ಅಞ್ಚ್' ನಲ್ಲಿರುವ 'ಞ್' ಕಾರದ ಸ್ಥಾನಕ್ಕೆ ಸಂಬಂಧಿಸಿದ 'ನ್' ಕಾರಕ್ಕೆ ಲೋಪ ಬಂದು, ಪ್ರ+ಅಚ್ ಎಂದಾಗುತ್ತದೆ. ಸವರ್ಣದೀರ್ಘದಿಂದ 'ಪ್ರಾಚ್' ಎಂದಾಗಿ ಪ್ರಾತಿಪದಿಕ ಸಂಜ್ಞೆಯನ್ನು ಹೊಂದಿ, 'ಸು(ಸ್)' ಪ್ರತ್ಯಯವನ್ನು ಸೇರಿಸಿ

ಪ್ರಾಚ್+ಸ್ ಎಂದಿದ್ದಾಗ, "ಹಲ್ಙ್ಯಾಭ್ಯೋ ದೀರ್ಘಾತ್ ಸುತಿಸ್ಯಪೃಕ್ತಮ್ ಹಲ್" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬರುತ್ತದೆ. 'ಪ್ರಾಚ್' ನಲ್ಲಿ "ಉಗಿದಚಾಮ್ ಸರ್ವನಾಮಸ್ಥಾನೇಽಧಾತೋಃ" ಎಂಬ ಸೂತ್ರದಿಂದ 'ನುಮ್(ನ್)' ಆಗಮ ಬಂದು, ಅಂತ್ಯ 'ಅಚ್' ಆದ 'ಆ' ಕಾರದ ನಂತರ 'ನ್' ಬಂದು ಪ್ರಾನ್+ಚ್ ಎಂದಾಗುತ್ತದೆ. 'ಚ್' ಕಾರಕ್ಕೆ ಸಂಯೋಗಾಂತ ಲೋಪವಾಗಿ 'ನ್' ಕಾರದ ಸ್ಥಾನದಲ್ಲಿ "ಕ್ವಿನ್ ಪ್ರತ್ಯಯಸ್ಯ ಕುಃ" ಎಂಬ ಸೂತ್ರದಿಂದ ಕುತ್ವ(ಙ್) ಬಂದು 'ಪ್ರಾಙ್' ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಪ್ರಾಞ್ಚೌ (2)– ಪ್ರಥಮಾ ಮತ್ತು ದ್ವಿತೀಯಾ ದ್ವಿ ವಚನಗಳಲ್ಲಿ ಪ್ರಾಚ್+ಔ ಎಂದಿದ್ದಾಗ, ಸರ್ವನಾಮ ಸ್ಥಾನವು ಪರದಲ್ಲಿರೋಣದ್ದರಿಂದ 'ನುಮ್' ಆಗಮವು ಬಂದು, ಪ್ರಾನ್+ಚ್+ಔ ಎಂದಾಗುತ್ತದೆ. 'ನ್' ಕಾರದ ಸ್ಥಾನದಲ್ಲಿ "ನಶ್ಚಾಪದಾನ್ತಸ್ಯ ಝಲಿ" ಎಂಬ ಸೂತ್ರದಿಂದ, ಅನುಸ್ವಾರ, ಮತ್ತು ಅದರ ಸ್ಥಾನದಲ್ಲಿ "ಅನುಸ್ವಾರಸ್ಯ ಯಯಿ ಪರಸವರ್ಣಃ" ಎಂಬ ಸೂತ್ರದಿಂದ 'ಞ್' ಕಾರವು ಬಂದು ಪ್ರಾಞ್ಚ್+ಔ=ಪ್ರಾಞ್ಚೌ ಎಂಬ ರೂಪವು ಸಿದ್ಧವಾಗುತ್ತದೆ.

ಹೀಗೆಯೇ ಉಳಿದ ಪ್ರಾಞ್ಚಮ್ ಮೊದಲಾದ ರೂಪಗಳೆಲ್ಲವೂ ಸಿದ್ಧವಾಗುತ್ತವೆ.

**(ಅ ಕಾರ ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ – 336. ಅಚಃ (6.4.138)**

ವೃತ್ತಿಃ–ಲುಪ್ತ 'ನ್' ಕಾರಸ್ಯ ಅಞ್ಚತೇಃ ಭಸ್ಯ ಅಕಾರಸ್ಯ ಲೋಪಃ।

ಅ. ವೃ– "ಅಲ್ಲೋಪೋಽನಃ" ಎಂಬ ಸೂತ್ರದಿಂದ 'ಅಲ್ಲೋಪಃ' ಎಂಬ ಪದವು ಅನುವೃತ್ತವಾಗುತ್ತದೆ. "ಭಸ್ಯ" ಎಂಬುದು ಅಧಿಕಾರ ಸೂತ್ರ.

ಅರ್ಥ– ಲೋಪಹೊಂದಿದ 'ನ್' ಕಾರವುಳ್ಳ 'ಅಞ್ಚ್' ಧಾತುವಿನ 'ಭ' ಸಂಜ್ಞೆಯುಳ್ಳ 'ಅ' ಕಾರಕ್ಕೆ ಲೋಪವು ಬರುತ್ತದೆ.

**(ದೀರ್ಘವನ್ನು ವಿಧಿಸುವ ಸೂತ್ರ)**

**ಸೂತ್ರ – 337. ಚೌ (6.3.138)**

ವೃತ್ತಿಃ–ಲುಪ್ತ–ಅ ಕಾರ–ನ ಕಾರೇ ಅಞ್ಚತೌ ಪರೇ ಪೂರ್ವಸ್ಯ ಅಣಃ ದೀರ್ಘಃ। ಪ್ರಾಚಃ। ಪ್ರಾಚಾ। ಪ್ರಾಗ್ಭ್ಯಾಮ್। ಪ್ರತ್ಯಙ್। ಪ್ರತ್ಯಞ್ಚೌ। ಪ್ರತೀಚಃ। ಪ್ರತ್ಯಗ್ಭ್ಯಾಮ್। ಉದಙ್। ಉದಞ್ಚೌ।

ಅ. ವೃ. – "ಢ್ರಲೋಪೇ ಪೂರ್ವಸ್ಯ ದೀರ್ಘೋಽಣಃ" ಎಂಬ ಸೂತ್ರದಿಂದ ಪೂರ್ವಸ್ಯ, ದೀರ್ಘಃ ಮತ್ತು ಅಣಃ ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ– 'ಅ' ಕಾರ ಮತ್ತು 'ನ್' ಕಾರಗಳನ್ನು ಲೋಪ ಹೊಂದಿರುವ 'ಅಞ್ಚ್' ಧಾತುವು ಪರದಲ್ಲಿದ್ದಾಗ, ಪೂರ್ವದಲ್ಲಿರುವ 'ಅಣ್' ಗೆ ದೀರ್ಘವು ಬರುತ್ತದೆ. 'ಚು(ಚೌ)' ಶಬ್ದದಿಂದ 'ನ್' ಕಾರ ರಹಿತವಾದ 'ಅಚ್' ಧಾತುವಿನ ಗ್ರಹಣವಾಗುತ್ತದೆ.

ಉದಾ– ಪ್ರಾಚಃ– 'ಪ್ರಾಚ್' ಶಬ್ದದಮೇಲೆ ಶಸ್(ಅಸ್) ಪ್ರತ್ಯಯವು ಬಂದು, ಪ್ರಾಚ್+ಅಸ್ ಎಂದಿದ್ದಾಗ, ಸರ್ವನಾಮಸ್ಥಾನವು ಪರದಲ್ಲಿಇರದೇ ಇರೋಣದ್ದರಿಂದ, "ಉಗಿದಚಾಮ್ ಸರ್ವನಾಮಸ್ಥಾನೇಽಧಾತೋಃ" ಎಂಬ ಸೂತ್ರದಿಂದ ಬರಬೇಕಾದ 'ನುಮ್' ಆಗಮವು ಬರುವುದಿಲ್ಲ. "ಅಚಃ" ಎಂಬ ಸೂತ್ರದಿಂದ, ಪ್ರ+ಅಚ್=ಪ್ರಾಚ್ ಎಂಬಲ್ಲಿರುವ 'ಅ' ಕಾರಕ್ಕೆ ಲೋಪ ಬಂದು ಪ್ರ+ಚ್+ಅಸ್ ಎಂದಿರುತ್ತದೆ. ಪ್ರಕೃತ ಸೂತ್ರದಿಂದ 'ಪ್ರ' ನಲ್ಲಿರುವ 'ಅ' ಕಾರಕ್ಕೆ ದೀರ್ಘ ಬಂದು, ಪ್ರಾ+ಚ್+ಅಸ್=ಪ್ರಾಚಸ್ ಎಂದಾಗಿ ರುತ್ವ–ವಿಸರ್ಗಗಳಿಂದ ಪ್ರಾಚಃ ಎಂಬ ರೂಪವು ಸಿದ್ಧವಾಗುತ್ತದೆ.

ಇದೇ ರೀತಿಯಲ್ಲಿ ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ ಇತರ ರೂಪಗಳು ಸಿದ್ಧವಾಗುತ್ತವೆ. ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಭ ಸಂಜ್ಞೆ ಬಾರದೇ ಇರುವುದರಿಂದ ಪ್ರಾಚ್‌ನಲ್ಲಿರುವ 'ಚ್' ಕಾರಕ್ಕೆ ಜಶ್ತ್ವ ಬಂದು, ಅದಕ್ಕೆ 'ಕುತ್ವ' ಬಂದು "ಖರಿಚ" ಎಂಬ ಸೂತ್ರದಿಂದ ಚರ್ತ್ವ(ಕ್) ಬಂದು, ಅದರ ಪರದಲ್ಲಿರುವ 'ಸ್' ಕಾರಕ್ಕೆ 'ಷ್' ಕಾರ ಬಂದು, ಕ್+ಷ್=ಕ್ಷ್ ಆಗಿ ಪ್ರಾಕ್ಷು ಎಂಬ ರೂಪವು ಸಿದ್ಧವಾಗುತ್ತದೆ.

**(ಚ್ ಕಾರಾನ್ತ ಪ್ರ–ಪೂರ್ವಕ 'ಅಞ್ಚ್' ಶಬ್ದದ ರೂಪಗಳು)**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಪ್ರಾಙ್ | ಪ್ರಾಞ್ಚೌ | ಪ್ರಾಞ್ಚಃ |
| ದ್ವಿತೀಯಾ | ಪ್ರಾಞ್ಚಮ್ | ಪ್ರಾಞ್ಚೌ | ಪ್ರಾಚಃ |
| ತೃತೀಯಾ | ಪ್ರಾಚಾ | ಪ್ರಾಗ್ಭ್ಯಾಮ್ | ಪ್ರಾಗ್ಭಿಃ |
| ಚತುರ್ಥೀ | ಪ್ರಾಚೇ | ಪ್ರಾಗ್ಭ್ಯಾಮ್ | ಪ್ರಾಭ್ಯಃ |
| ಪಞ್ಚಮೀ | ಪ್ರಾಚಃ | ಪ್ರಾಗ್ಭ್ಯಾಮ್ | ಪ್ರಾಭ್ಯಃ |
| ಷಷ್ಠೀ | ಪ್ರಾಚಃ | ಪ್ರಾಚೋಃ | ಪ್ರಾಚಾಮ್ |
| ಸಪ್ತಮೀ | ಪ್ರಾಚಿ | ಪ್ರಾಚೋಃ | ಪ್ರಾಕ್ಷು |
| ಸಂಬೋಧನ | ಹೇ ಪ್ರಾಙ್! | ಹೇ ಪ್ರಾಞ್ಚೌ! | ಹೇ ಪ್ರಾಞ್ಚಃ! |

ಉದಾ– ಪ್ರತ್ಯಙ್– ಪ್ರತಿ ಪೂರ್ವಕ ಅಞ್ಚ್ ಧಾತುವಿಗೆ 'ವಿಪರೀತವಾಗಿ ತಿಳಿದುಕೊಳ್ಳುವವನು', 'ಪಶ್ಚಿಮದೇಶ' ಅಥವಾ 'ಪಶ್ಚಿಮ ಕಾಲ' ಎಂದು ಅರ್ಥಗಳು. ಇಲ್ಲಿ ಅಞ್ಚ್ ಎಂಬುದೇ 'ನ್' ಕಾರವನ್ನು ಕಳೆದುಕೊಂಡಮೇಲೆ 'ಅಚ್' ಆಗಿದೆ. ಪ್ರ+ಅಞ್ಚ್ ಧಾತುವಿನ ರೂಪಗಳಂತೆಯೇ ಸಾಮಾನ್ಯವಾಗಿ ನಡೆಯುತ್ತವೆ. ಪ್ರ+ಅಚ್ ಎಂದಿದ್ದಾಗ, ಪ್ರಾಚ್ ಎಂದಾಗುತ್ತದೆ. ಪ್ರತಿ+ಅಚ್ ಎಂಬಲ್ಲಿ ಯಣ್ ಸಂಧಿಯಿಂದ ಪ್ರತ್ಯಚ್ ಎಂದಾಗುತ್ತದೆ. ನಂತರ ನುಮ್(ನ್) ಆಗಮ, ಸಂಯೋಗಾನ್ತ ಲೋಪ ಗಳಾದಮೇಲೆ 'ಕುತ್ವ' ಬಂದು, ಪ್ರತ್ಯಙ್, ಪ್ರತ್ಯಞ್ಚೌ, ಪ್ರತ್ಯಞ್ಚಃ ಎಂಬ ರೂಪಗಳು ಆಗುತ್ತವೆ.

ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಪ್ರತಿ+ಅಚ್ ನಲ್ಲಿ 'ಅ' ಕಾರಕ್ಕೆ ಲೋಪ

ಬಂದು, ಪ್ರತಿ+ಚ್ ಎಂದಿರುತ್ತದೆ. 'ಪ್ರತಿ' ಯಲ್ಲಿರುವ 'ಇ' ಕಾರಕ್ಕೆ ದೀರ್ಘ ಬಂದು, ಪ್ರತೀ+ಚ್ ಎಂದಾಗುತ್ತದೆ. ನಂತರ ದ್ವಿತೀಯಾ ವಿಭಕ್ತಿ ಬಹುವಚನ ಪ್ರತ್ಯಯವಾದ್ ಶಸ್(ಅಸ್) ಸೇರಿಸಿದಾಗ, ಪ್ರತೀ+ಚ್+ಅಸ್=ಪ್ರತೀಚಃ ಎಂದು ರೂಪವಾಗುತ್ತದೆ. ಹೀಗೆಯೇ ಪ್ರತೀಚಾ ಮೊದಲಾದ ಇತರ ರೂಪಗಳು ಸಿದ್ಧವಾಗುತ್ತವೆ.

ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ. ಪ್ರತ್ಯಗ್ಭ್ಯಾಮ್, ಪ್ರತ್ಯಗ್ಭಿಃ ಇತ್ಯಾದಿ ರೂಪಗಳಾಗುತ್ತವೆ.

**(ಚ್ ಕಾರಾನ್ತ ಪ್ರತಿ-ಪೂರ್ವಕ 'ಅಞ್ಚ್' ಶಬ್ದದ ರೂಪಗಳು)**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಪ್ರತ್ಯಙ್ | ಪ್ರತ್ಯಞ್ಚೌ | ಪ್ರತ್ಯಞ್ಚಃ |
| ದ್ವಿತೀಯಾ | ಪ್ರತ್ಯಞ್ಚಮ್ | ಪ್ರತ್ಯಞ್ಚೌ | ಪ್ರತೀಚಃ |
| ತೃತೀಯಾ | ಪ್ರತೀಚಾ | ಪ್ರತ್ಯಗ್ಭ್ಯಾಮ್ | ಪ್ರತ್ಯಗ್ಭಿಃ |
| ಚತುರ್ಥೀ | ಪ್ರತೀಚೇ | ಪ್ರತ್ಯಗ್ಭ್ಯಾಮ್ | ಪ್ರತ್ಯಗ್ಭ್ಯಃ |
| ಪಞ್ಚಮೀ | ಪ್ರತೀಚಃ | ಪ್ರತ್ಯಗ್ಭ್ಯಾಮ್ | ಪ್ರತ್ಯಗ್ಭ್ಯಃ |
| ಷಷ್ಠೀ | ಪ್ರತೀಚಃ | ಪ್ರತೀಚೋಃ | ಪ್ರತೀಚಾಮ್ |
| ಸಪ್ತಮೀ | ಪ್ರತೀಚಿ | ಪ್ರತೀಚೋಃ | ಪ್ರತ್ಯಕ್ಷು |
| ಸಂಬೋಧನ | ಹೇ ಪ್ರತ್ಯಙ್! | ಹೇ ಪ್ರತ್ಯಞ್ಚೌ! | ಹೇ ಪ್ರತ್ಯಞ್ಚಃ! |

**(ಈ ಕಾರಾದೇಶವನ್ನು ವಿಧಿಸುವ ಸೂತ್ರ)**

**ಸೂತ್ರ - 338. ಉದ ಈತ್ (6.4.139)**

ವೃತ್ತಿಃ-ಉತ್-ಶಬ್ದಾತ್ ಪರಸ್ಯ ಲುಪ್ತನಕಾರಸ್ಯ ಅಞ್ಚತೇಃ ಭಸ್ಯ 'ಅ'ಕಾರಸ್ಯ ಈತ್। ಉದೀಚಃ। ಉದೀಚಾ। ಉದಗ್ಭ್ಯಾಮ್।

ಅ. ವ್ಯ. - "ಅಚಃ" ಎಂಬ ಸೂತ್ರದಿಂದ 'ಅಚ್' ಎಂಬ ಪದವೂ, "ಅಲ್ಲೋಪೋऽನಃ" ಎಂಬ ಸೂತ್ರದಿಂದ ವಿಭಕ್ತಿ ಪರಿಣಾಮ ಮಾಡಿ, 'ಅತಃ' ಎಂಬ ಪದವು ಅನುವೃತ್ತವಾಗುತ್ತದೆ. "ಭಸ್ಯ" ಎಂಬುದು ಅಧಿಕಾರ ಸೂತ್ರ.

ಅರ್ಥ-'ಉದ್' ಶಬ್ದದ ನಂತರ 'ನ್' ಕಾರವನ್ನು ಕಳೆದುಕೊಂಡಿರುವ, 'ಅಞ್ಚ್' ಧಾತುವಿನ 'ಭ' ಸಂಜ್ಞಕ 'ಅ' ಕಾರದ ಸ್ಥಾನದಲ್ಲಿ, 'ಈ' ಕಾರವು ಆದೇಶವಾಗಿ ಬರುತ್ತದೆ.

[ಉದಾ- ಉದಙ್, ಉದಞ್ಚೌ, ಉದಞ್ಚಃ - ದ್ವಿತೀಯಾ ದ್ವಿ-ವಚನದವರೆಗಿನ ರೂಪಗಳ ಬಗ್ಗೆ-('ಉತ್' ಪೂರ್ವಕ 'ಅಞ್ಚ್' ಧಾತುವಿಗೆ, ಮೇಲಕ್ಕೆ ಹೋಗುವವನು, ಉತ್ತರದೇಶ, ಉತ್ತರಕಾಲ ಇತ್ಯಾದಿ ಅರ್ಥಗಳಿವೆ). ಈ ಶಬ್ದಗಳ ಪ್ರಕ್ರಿಯೆಯು ದ್ವಿತೀಯಾ ದ್ವಿವಚನದ ವರೆಗೆ ಹಿಂದಿನಂತೆಯೇ ಇದೆ. 'ನ್' ಕಾರದ ಲೋಪವು ಎಲ್ಲೆಡೆಯಲ್ಲೂ

ಇದೆ. ಆದರೆ, 'ನುಮ್' ಆಗಮವು ಸರ್ವನಾಮಸ್ಥಾನವು, ಪರದಲ್ಲಿದ್ದಾಗ ಮಾತ್ರ ಆಗುತ್ತದೆ. ಉದ್+ಅಞ್ಚ್ ಎಂದಿದ್ದಾಗ 'ನ್' ಕಾರ ಲೋಪವಾಗಿ ಉದ್+ಅಚ್=ಉದಚ್ ಎಂದಿರುತ್ತದೆ. ಇದಕ್ಕೆ ಪ್ರಾತಿಪದಿಕ ಸಂಜ್ಞೆ ಬಂದಮೇಲೆ 'ನುಮ್(ನ್)' ಆಗಮ ಬಂದು, "ಹಲ್ಙ್ಯಾಭ್ಯೋ ದೀರ್ಘಾತ್ ಸುತಿಸ್ಯಪೃಕ್ತಂ ಹಲ್" ಎಂಬ ಸೂತ್ರದಿಂದ, 'ಸು' ಪ್ರತ್ಯಯದ 'ಸ್' ಕಾರಕ್ಕೆ ಲೋಪ ಬಂದು, ಸಂಯೋಗಾಂತ ಲೋಪವಾಗಿ, ನಂತರ ಕುತ್ವ ಬಂದು, ಉದಙ್, ಉದಞ್ಚೌ, ಉದಞ್ಚಃ ಇತ್ಯಾದಿ ರೂಪಗಳಾಗುತ್ತವೆ].

ಉದಾ– ಉದೀಚಃ(ಉತ್ತರದೇಶಗಳನ್ನು/ಉತ್ತರ ಕಾಲಗಳನ್ನು)– ದ್ವಿತೀಯಾ ವಿಭಕ್ತಿ ದ್ವಿ ವಚನದಲ್ಲಿ, ಉದಚ್+ಶಸ್(ಅಸ್) ಎಂದಿದ್ದಾಗ, 'ಭ' ಸಂಜ್ಞೆ ಬಂದು, 'ಅಚ್' ನ 'ಅ' ಕಾರಕ್ಕೆ ಪ್ರಕೃತ ಸೂತ್ರದಿಂದ 'ಈ' ಕಾರವು ಆದೇಶವಾಗಿ ಬಂದು, ಉದೀಚ್+ಅಸ್=ಉದೀಚಸ್ ಎಂದಾಗಿ 'ಸ್' ಕಾರಕ್ಕೆ ರುತ್ವ–ವಿಸರ್ಗಗಳಿಂದ ಉದೀಚಃ ಎಂದು ರೂಪವಾಗುತ್ತದೆ.

ಹಲಾದಿ ಪ್ರತ್ಯಯಗಳು ಪರದಲ್ಲಿದ್ದಾಗ, ಉದಗ್ಭ್ಯಾಮ್, ಉದಗ್ಭಿಃ ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

**(ಚ್ ಕಾರಾನ್ತ ಉದ್–ಪೂರ್ವಕ 'ಅಞ್ಚ್' ಶಬ್ದದ ರೂಪಗಳು)**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಉದಙ್ | ಉದಞ್ಚೌ | ಉದಞ್ಚಃ |
| ದ್ವಿತೀಯಾ | ಉದಞ್ಚಮ್ | ಉದಞ್ಚೌ | ಉದೀಚಃ |
| ತೃತೀಯಾ | ಉದೀಚಾ | ಉದಗ್ಭ್ಯಾಮ್ | ಉದಗ್ಭಿಃ |
| ಚತುರ್ಥೀ | ಉದೀಚೇ | ಉದಗ್ಭ್ಯಾಮ್ | ಉದಗ್ಭ್ಯಃ |
| ಪಞ್ಚಮೀ | ಉದೀಚಃ | ಉದಗ್ಭ್ಯಾಮ್ | ಉದಗ್ಭ್ಯಃ |
| ಷಷ್ಠೀ | ಉದೀಚಃ | ಉದೀಚೋಃ | ಉದೀಚಾಮ್ |
| ಸಪ್ತಮೀ | ಉದೀಚಿ | ಉದೀಚೋಃ | ಉದಕ್ಷು |
| ಸಂಬೋಧನ | ಹೇ ಉದಙ್! | ಹೇ ಉದಞ್ಚೌ! | ಹೇ ಉದಞ್ಚಃ! |

**(ಸಮಿ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ – 339. ಸಮಃ ಸಮಿಃ (6.3.93)**

ವೃತ್ತಿಃ–ಅಪ್ರತ್ಯಯಾಂತೇಽಞ್ಚತೌ। ಸಮ್ಯಙ್।ಸಮ್ಯಞ್ಚೌ। ಸಮೀಚಃ। ಸಮ್ಯಗ್ಭ್ಯಾಮ್।

ಅ. ವೃ.– "ವಿಷ್ವಗ್–ದೇವಯೋಶ್ಚ ಟೇರದ್ರ್ಯಞ್ಚತೌ ವ– ಪ್ರತ್ಯಯೇ" ಎಂಬ ಸೂತ್ರದಿಂದ 'ಅಞ್ಚತೌ' ಮತ್ತು 'ವ–ಪ್ರತ್ಯಯೇ' ಎಂಬ ಶಬ್ದಗಳು ಅನುವೃತ್ತವಾಗುತ್ತವೆ.

ಅರ್ಥ– 'ವ್' ಪ್ರತ್ಯಯಾಂತ 'ಅಞ್ಚ್' ಧಾತುವು ಪರದಲ್ಲಿದ್ದಾಗ, ಪೂರ್ವದಲ್ಲಿರುವ 'ಸಮ್' ಶಬ್ದದ ಸ್ಥಾನದಲ್ಲಿ 'ಸಮಿ' ಎಂಬ ಶಬ್ದವು ಆದೇಶವಾಗಿ ಬರುತ್ತದೆ.

ಸೂಚನೆ:–'ಸಮ್' ಪೂರ್ವಕ ಅಞ್ಚ್ ಧಾತುವಿನಮೇಲೆ 'ಕ್ವಿನ್' ಪ್ರತ್ಯಯವನ್ನು ಸೇರಿಸಿ ಅದು ಸರ್ವಾಪಹಾರವಾದಮೇಲೆ, "ಪ್ರತ್ಯಯಲೋಪೇ ಪ್ರತ್ಯಯಲಕ್ಷಣಮ್" ಎಂಬ ಸೂತ್ರಕ್ಕನುಗುಣವಾಗಿ, 'ಕ್ವಿನ್' ಪ್ರತ್ಯಯದ 'ವ್' ಕಾರವು ಇದ್ದೇಇದೆ ಎಂದು ಭಾವಿಸಿ, ಪ್ರಕೃತ ಸೂತ್ರದಿಂದ 'ಸಮಿ' ಆದೇಶ ಬಂದು, 'ನ್' ಕಾರದ ಲೋಪ ಮೊದಲಾದವುಗಳು ಆಗಿ, ಸಮಿ+ಅಚ್=ಸಮ್ಯಚ್ ಎಂದಾಗುತ್ತದೆ. ಇದಕ್ಕೆ ಪ್ರಾತಿಪದಿಕ ಸಂಜ್ಞೆ ಬಂದು, ಮುಂದಿನ ರೂಪಗಳು ಸಿದ್ಧವಾಗುತ್ತವೆ.

ಉದಾ– ಸಮ್ಯಜ್(ಒಳ್ಳೆಯ ನಡೆಯುಳ್ಳವನು) – ಪ್ರಥಮಾ ವಿಭಕ್ತಿ ಏಕವಚನದಲ್ಲಿ 'ಸಮ್ಯಚ್' ಶಬ್ದದ ಮೇಲೆ 'ಸು(ಸ್)' ಪ್ರತ್ಯಯವನ್ನು ಸೇರಿಸಿದಾಗ, "ಹಲ್ಙ್ಯಾಬ್ಭ್ಯೋ ದೀರ್ಘಾತ್ ಸುತಿಸ್ಯಪೃಕ್ತಂ ಹಲ್" ಎಂಬ ಸೂತ್ರದಿಂದ, 'ಸು' ಪ್ರತ್ಯಯದ 'ಸ್' ಕಾರಕ್ಕೆ ಲೋಪ ಬಂದು, ಸಂಯೋಗಾಂತ ಲೋಪವಾಗಿ ನಂತರ 'ಕುತ್ವ' ಬಂದು, ಸಮ್ಯಜ್ ಎಂದು ರೂಪವು ಸಿದ್ಧವಾಗುತ್ತದೆ.

ದ್ವಿತೀಯಾ ವಿಭಕ್ತಿ ದ್ವಿವಚನದ ವರೆಗಿನ ಉಳಿದ ರೂಪಗಳಾದ ಸಮ್ಯಞ್ಚೌ, ಸಮ್ಯಞ್ಚಃ, ಸಮ್ಯಞ್ಚಮ್, ಸಮ್ಯಞ್ಚೌ ಎಂಬವು ಹಿಂದಿನಂತೆಯೇ ಸಿದ್ಧವಾಗುತ್ತವೆ.

ದ್ವಿತೀಯಾ ವಿಭಕ್ತಿ ಬಹುವಚನದಲ್ಲಿ ಸಮಿ+ಅಚ್ ಎಂದಿದ್ದಾಗ, "ಅಚಃ" ಎಂಬ ಸೂತ್ರದಿಂದ 'ಅಚ್' ನಲ್ಲಿರುವ 'ಅ' ಕಾರಕ್ಕೆ ಲೋಪ ಬಂದು ಸಮಿಚ್ ಎಂದಿದ್ದಾಗ, "ಚೌ" ಎಂಬ ಸೂತ್ರದಿಂದ, ಸಮಿಯಲ್ಲಿನ 'ಇ' ಕಾರಕ್ಕೆ ದೀರ್ಘ ಬಂದು ಸಮೀಚ್ ಎಂದಾಗಿ 'ಶಸ್(ಅಸ್)' ಸೇರಿಸಿ ಸಮೀಚ್+ಅಸ್ ಎಂದಿದ್ದಾಗ, ಸಮೀಚಸ್ ಎಂದಾಗಿ ರುತ್ವ–ವಿಸರ್ಗಗಳಿಂದ ಸಮೀಚಃ ಎಂಬ ರೂಪವು ಸಿದ್ಧವಾಗುತ್ತದೆ.

ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಸಮೀಚಾ ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ. ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಸಮ್ಯಗ್ಭ್ಯಾಮ್, ಸಮ್ಯಗ್ಭಿಃ ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

**(ಚ್ ಕಾರಾನ್ತ ಸಮ್–ಪೂರ್ವಕ 'ಅಞ್ಚ್' ಶಬ್ದದ ರೂಪಗಳು)**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಸಮ್ಯಜ್ | ಸಮ್ಯಞ್ಚೌ | ಸಮ್ಯಞ್ಚಃ |
| ದ್ವಿತೀಯಾ | ಸಮ್ಯಞ್ಚಮ್ | ಸಮ್ಯಞ್ಚೌ | ಸಮೀಚಃ |
| ತೃತೀಯಾ | ಸಮೀಚಾ | ಸಮ್ಯಗ್ಭ್ಯಾಮ್ | ಸಮ್ಯಗ್ಭಿಃ |
| ಚತುರ್ಥೀ | ಸಮೀಚೇ | ಸಮ್ಯಗ್ಭ್ಯಾಮ್ | ಸಮ್ಯಗ್ಭ್ಯಃ |
| ಪಞ್ಚಮೀ | ಸಮೀಚಃ | ಸಮ್ಯಗ್ಭ್ಯಾಮ್ | ಸಮ್ಯಗ್ಭ್ಯಃ |
| ಷಷ್ಠೀ | ಸಮೀಚಃ | ಸಮೀಚೋಃ | ಸಮೀಚಾಮ್ |
| ಸಪ್ತಮೀ | ಸಮೀಚಿ | ಸಮೀಚೋಃ | ಸಮ್ಯಕ್ಷು |
| ಸಂಬೋಧನ | ಹೇ ಸಮ್ಯಜ್! | ಹೇ ಸಮ್ಯಞ್ಚೌ! | ಹೇ ಸಮ್ಯಞ್ಚಃ! |

**(ಸಹ ಶಬ್ದಕ್ಕೆ ಸಧ್ರಿ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ – 340. ಸಹಸ್ಯ ಸಧ್ರಿಃ (6.3.95)**

ವೃತ್ತಿಃ–ತಥಾ। ಸಧ್ರ್ಯಙ್। ಸಧ್ರೀಚಃ॥

ಅ. ವೃ – "ವಿಷ್ವಗ್ದೇವಯೋಶ್ಚ ಟೇರದ್ರ್ಯಞ್ಚತೌ ವ–ಪ್ರತ್ಯಯೇ" ಎಂಬ ಸೂತ್ರದಿಂದ, 'ಅಞ್ಚತೌ' ಮತ್ತು 'ವ–ಪ್ರತ್ಯಯೇ' ಎಂಬ ಶಬ್ದಗಳು ಅನುವೃತ್ತವಾಗುತ್ತವೆ.

ಅರ್ಥ– 'ವ'ಪ್ರತ್ಯಯಾಂತ 'ಅಞ್ಚ್' ಶಬ್ದವನ್ನು ಪರದಲ್ಲಿರುವ 'ಸಹ' ಶಬ್ದದ ಸ್ಥಾನದಲ್ಲಿ 'ಸಧ್ರಿ' ಆದೇಶವು ಬರುತ್ತದೆ.

ಉದಾ– ಸಧ್ರ್ಯಙ್(ಜೊತೆಯಲ್ಲಿ ಹೋಗುವವನು): ಸಹ+ಅಞ್ಚ್ ಎಂದಿದ್ದಾಗ, 'ಕ್ವಿನ್' ಪ್ರತ್ಯಯ ಬಂದು, ಅದು ಸರ್ವಾಪಹಾರವಾಗಿ, 'ನ್' ಕಾರಕ್ಕೆ ಲೋಪ ಬಂದು, ಪ್ರಕೃತ ಸೂತ್ರದಿಂದ 'ಸಹ' ಶಬ್ದಕ್ಕೆ 'ಸಧ್ರಿ' ಆದೇಶ ಬಂದು, ಸಧ್ರಿ+ಅಚ್ ಎಂದಿದ್ದಾಗ, ಯಣ್ ಸಂಧಿಯಾಗಿ ಸಧ್ರ್ಯಚ್ ಎಂದಿರುತ್ತದೆ. ಇದಕ್ಕೆ ಪ್ರಾತಿಪದಿಕ ಸಂಜ್ಞೆ ಬಂದು, 'ಸು(ಸ್)' ಪ್ರತ್ಯಯವನ್ನು ಸೇರಿಸಿದಾಗ, "ಹಲ್ಙ್ಯಾಭ್ಯೋ ದೀರ್ಘಾತ್ ಸುತಿಸ್ಯಪೃಕ್ತಂ ಹಲ್" ಎಂಬ ಸೂತ್ರದಿಂದ, 'ಸು' ಪ್ರತ್ಯಯದ 'ಸ್' ಕಾರಕ್ಕೆ ಲೋಪ ಬಂದು, 'ನುಮ್(ನ್)' ಆಗಮ ಬಂದು, ಸಂಯೋಗಾಂತ ಲೋಪವಾಗಿ, ಅದಕ್ಕೆ 'ಕುತ್ವ' ಬಂದಮೇಲೆ ಸಧ್ರ್ಯಙ್ ಎಂಬ ರೂಪವು ಸಿದ್ಧವಾಗುತ್ತದೆ.

ಇದೇ ರೀತಿಯಲ್ಲಿ ಪ್ರಾಙ್, ಪ್ರಾಞ್ಚೌ, ಪ್ರಾಞ್ಚಃ ಎಂಬಂತೆ, ಸಧ್ರ್ಯಞ್ಚೌ, ಸದ್ರ್ಯಞ್ಚಃ, ಸಧ್ರ್ಯಞ್ಚಮ್, ಸದ್ರ್ಯಞ್ಚೌ ಎಂಬ ರೂಪಗಳು ಸಿದ್ಧವಾಗುತ್ತವೆ.

ದ್ವಿತೀಯಾ ವಿಭಕ್ತಿ ಬಹುವಚನ ಪ್ರತ್ಯಯವಾದ 'ಶಸ್(ಅಸ್)' ಪ್ರತ್ಯಯವನ್ನು ಸೇರಿಸಿ ಸಹ+ಅಸ್ ಎಂದಿದ್ದಾಗ, ಹಿಂದಿನಂತೆ ಪ್ರಕ್ರಿಯೆ ನಡೆದು ಸಧ್ರಿ+ಅಚ್ ಎಂದಿದ್ದಾಗ, 'ಅಚ್' ನಲ್ಲಿರುವ 'ಅ' ಕಾರಕ್ಕೆ ಲೋಪ ಬಂದು, 'ಇ' ಕಾರಕ್ಕೆ ದೀರ್ಘ ಬಂದು, ಸಧ್ರೀ+ಚ್ +ಅಸ್=ಸಧ್ರೀಚಃ ಎಂದು ರೂಪವಾಗುತ್ತದೆ. ಹೀಗೆಯೇ ಸಧ್ರೀಚಾ ಮೊದಲಾದ ರೂಪಗಳೂ ಸಿದ್ಧವಾಗುತ್ತವೆ.

ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಸಧ್ರ್ಯಗ್ಭ್ಯಾಮ್, ಸಧ್ರ್ಯಗ್ಭಿಃ ಮೊದಲಾದ ರೂಪಗಳು ಸಿದ್ಧವಾಗುತ್ತವೆ.

**(ಚ್ ಕಾರಾನ್ತ ಸಹ–ಪೂರ್ವಕ 'ಅಞ್ಚ್' ಶಬ್ದದ ರೂಪಗಳು)**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಸಧ್ರ್ಯಙ್ | ಸಧ್ರ್ಯಞ್ಚೌ | ಸಧ್ರ್ಯಞ್ಚಃ |
| ದ್ವಿತೀಯಾ | ಸಧ್ರ್ಯಞ್ಚಮ್ | ಸಧ್ರ್ಯಞ್ಚೌ | ಸಧ್ರೀಚಃ |
| ತೃತೀಯಾ | ಸಧ್ರೀಚಾ | ಸಧ್ರ್ಯಗ್ಭ್ಯಾಮ್ | ಸಧ್ರ್ಯಗ್ಭಿಃ |
| ಚತುರ್ಥೀ | ಸಧ್ರೀಚೇ | ಸಧ್ರ್ಯಗ್ಭ್ಯಾಮ್ | ಸಧ್ರ್ಯಗ್ಭ್ಯಃ |
| ಪಞ್ಚಮೀ | ಸಧ್ರೀಚಃ | ಸಧ್ರ್ಯಗ್ಭ್ಯಾಮ್ | ಸಧ್ರ್ಯಗ್ಭ್ಯಃ |

| | | | |
|---|---|---|---|
| ಷಷ್ಠೀ | ಸಧ್ರೀಚಃ | ಸಧ್ರೀಚೋಃ | ಸಧ್ರೀಚಾಮ್ |
| ಸಪ್ತಮೀ | ಸಧ್ರೀಚಿ | ಸಧ್ರೀಚೋಃ | ಸಧ್ರ್ಯಕ್ಷು |
| ಸಂಬೋಧನ | ಹೇ ಸಧ್ರ್ಯಙ್! | ಹೇ ಸಧ್ರ್ಯಞ್ಚೌ! | ಹೇ ಸಧ್ರ್ಯಞ್ಚಃ! |

**(ತಿರಸ್ ಶಬ್ದಕ್ಕೆ ತಿರಿ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ – 341. ತಿರಸಸ್ತಿರ್ಯಲೋಪೇ (6.394)**

ವೃತ್ತಿಃ–ಅಲುಪ್ತ ಅಕಾರೇ ಅಞ್ಚತೌ ವ–ಪ್ರತ್ಯಯಾಂತೇ ತಿರಸಃ ತಿರ್ಯ್–ಆದೇಶಃ। ತಿರ್ಯಙ್। ತಿರ್ಯಞ್ಚೌ। ತಿರಶ್ಚಃ। ತಿರ್ಯಗ್ಭ್ಯಾಮ್।

ಪ. ಛೇ. –ತಿರಸಃ, ತಿರಿ(ಲುಪ್ತ ಪ್ರಥಮಾನ್ತಮ್), ಅ–ಲೋಪೇ।

ಅ. ವೃ. – "ವಿಷ್ವಗ್ದೇವಯೋಶ್ಚ ಟೇರದ್ರ್ಯಞ್ಚತೌ ವ–ಪ್ರತ್ಯಯೇ" ಎಂಬ ಸೂತ್ರದಿಂದ, 'ಅಞ್ಚತೌ' ಮತ್ತು 'ವಪ್ರತ್ಯಯೇ' ಎಂಬ ಶಬ್ದಗಳು ಅನುವೃತ್ತವಾಗುತ್ತವೆ.

ಅರ್ಥ– ಲೋಪ ಹೊಂದದಿರುವ 'ಅ' ಕಾರವುಳ್ಳ ವ–ಪ್ರತ್ಯಯಾನ್ತ ಧಾತುವು ಪರದಲ್ಲಿದ್ದಾಗ, ಪೂರ್ವದಲ್ಲಿರುವ 'ತಿರಸ್' ಶಬ್ದಕ್ಕೆ 'ತಿರಿ' ಎಂಬುದು ಆದೇಶವಾಗಿ ಬರುತ್ತದೆ.

ಗಮನಿಸಬೇಕು: 'ಶಸ್' ಮೊದಲಾದ ಪ್ರತ್ಯಯಗಳು ಪರದಲ್ಲಿದ್ದಾಗ, ಪ್ರಕೃತ ಸೂತ್ರವು ಅನ್ವಯಿಸುವದಿಲ್ಲ, ಕಾರಣವೇನೆಂದರೆ ಅಲ್ಲಿ "ಅಚಃ"ಎಂಬ ಸೂತ್ರದಿಂದ 'ಅ' ಕಾರಕ್ಕೆ ಲೋಪವು ಬಂದಿರುತ್ತದೆ.

ತಿರಸ್ ಪೂರ್ವಕ 'ಅಞ್ಚ್' ಧಾತುವಿಗೆ ಅಡ್ಡವಾಗಿ ನಡೆಯುವ(ಬೆಳೆಯುವ) ಎಂದು ಅರ್ಥ. (ಮೃಗಾದಿಗಳು ಹಾಗೂ ಖೇಚರಗಳು)–ಈ ಮೇಲಿನ ಧಾತುವಿಗೆ, 'ಕ್ವಿನ್' ಪ್ರತ್ಯಯ ಬಂದು, ಸರ್ವಾಪಹಾರವಾಗಿ, 'ನ್' ಕಾರಕ್ಕೆ ಲೋಪ ಬಂದು, ಪ್ರಕೃತ ಸೂತ್ರದಿಂದ 'ತಿರಿ' ಆದೇಶವು ಬಂದು, ತಿರಿ+ಅಚ್ ಎಂದಿದ್ದಾಗ, ಪ್ರಾತಿಪದಿಕ ಸಂಜ್ಞೆ ಬಂದು –

ಉದಾ– ತಿರ್ಯಙ್– ಪ್ರಥಮಾ ವಿಭಕ್ತಿ ಏಕವಚನದಲ್ಲಿ ತಿರ್ಯಚ್+ಸು(ಸ್) ಎಂದಿದ್ದಾಗ, "ಹಲ್ಙ್ಯಾಭ್ಯೋ ದೀರ್ಘಾತ್ ಸುತಿಸ್ಯಪೃಕ್ತಂ ಹಲ್" ಎಂಬ ಸೂತ್ರದಿಂದ, 'ಸು' ಪ್ರತ್ಯಯದ 'ಸ್' ಕಾರಕ್ಕೆ ಲೋಪ ಬಂದು, ನಂತರ 'ನುಮ್(ನ್)' ಆಗಮ ಬಂದು, ಸಂಯೋಗಾನ್ತ ಲೋಪವಾದಮೇಲೆ, ಕುತ್ವ ಮಾಡಿದಾಗ, 'ತಿರ್ಯಙ್' ಎಂಬ ರೂಪವು ಸಿದ್ಧವಾಗುತ್ತದೆ.

ಅಜಾದಿ ಪ್ರತ್ಯಯಗಳು ಪರದಲ್ಲಿದ್ದಾಗ, ತಿರ್ಯಞ್ಚೌ, ತಿರ್ಯಞ್ಚಃ, ತರ್ಯಞ್ಚಮ್, ತಿರ್ಯಞ್ಚೌ ಎಂಬ ಮೊದಲಾದ ರೂಪಗಳು ಸಿದ್ಧವಾಗುತ್ತವೆ.

ಸರ್ವನಾಮಸ್ಥಾನವಲ್ಲದ 'ಶಸ್(ಅಸ್)' ಮೊದಲಾದ ಪ್ರತ್ಯಯಗಳು ಪರದಲ್ಲಿದ್ದಾಗ, 'ಅ' ಕಾರ ಲೋಪವಾಗದೇ ಇರೋಣದರಿಂದ, ಪ್ರಕೃತ ಸೂತ್ರವು ಇಲ್ಲಿ ಅನ್ವಯಿಸುವದಿಲ್ಲ. ಹಾಗೂ ಪೂರ್ವದಲ್ಲಿ 'ಅಣ್(ಅ,ಇ,ಉ)' ವರ್ಣವು ಇಲ್ಲದಿರೋಣದರಿಂದ, ದೀರ್ಘವು

ಆಗುವದಿಲ್ಲ. ಹೀಗಾಗಿ ತಿರಸ್ಚಃ, ತಿರಶ್ಚಾ ಎಂಬ ರೂಪಗಳು ಸಿದ್ಧವಾಗುತ್ತವೆ.

ಹಲಾದಿ ಪ್ರತ್ಯಯಗಳು ಪರದಲ್ಲಿದ್ದಾಗ, 'ಭ್' ಸಂಜ್ಞೆ ಬಾರದೇ ಇರೋಣದ್ದರಿಂದ, 'ಅ' ಕಾರಕ್ಕೆ ಲೋಪವು ಬರುವದಿಲ್ಲ. 'ಅ' ಕಾರವು ಅಲುಪ್ತವಾಗಿರೋಣದ್ದರಿಂದ ಪ್ರಕೃತ ಸೂತ್ರವು ಇಲ್ಲಿ ಅನ್ವಯಿಸುತ್ತದೆ. ಆದುದರಿಂದ, ತಿರ್ಯಗ್ಭ್ಯಾಮ್, ತಿರ್ಯಗ್ಭಿಃ ಮೊದಲಾದ ರೂಪಗಳು ಸಿದ್ಧವಾಗುತ್ತವೆ.

**(ಚ್ ಕಾರಾಂತ ತಿರಸ್-ಪೂರ್ವಕ 'ಅಞ್ಚ್' ಶಬ್ದದ ರೂಪಗಳು)**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ತಿರ್ಯಙ್ | ತಿರ್ಯಞ್ಚೌ | ತಿರ್ಯಞ್ಚಃ |
| ದ್ವಿತೀಯಾ | ತಿರ್ಯಞ್ಚಮ್ | ತಿರ್ಯಞ್ಚೌ | ತಿರಶ್ಚಃ |
| ತೃತೀಯಾ | ತಿರಶ್ಚಾ | ತಿರ್ಯಗ್ಭ್ಯಾಮ್ | ತಿರ್ಯಗ್ಭಿಃ |
| ಚತುರ್ಥೀ | ತಿರಶ್ಚೇ | ತಿರ್ಯಗ್ಭ್ಯಾಮ್ | ತಿರ್ಯಗ್ಭ್ಯಃ |
| ಪಞ್ಚಮೀ | ತಿರಶ್ಚಃ | ತಿರ್ಯಗ್ಭ್ಯಾಮ್ | ತಿರ್ಯಗ್ಭ್ಯಃ |
| ಷಷ್ಠೀ | ತಿರಶ್ಚಃ | ತಿರಶ್ಚೋಃ | ತಿರಶ್ಚಾಮ್ |
| ಸಪ್ತಮೀ | ತಿರಶ್ಚಿ | ತಿರಶ್ಚೋಃ | ತಿರ್ಯಕ್ಷು |
| ಸಂಬೋಧನ | ಹೇ ತಿರ್ಯಙ್! | ಹೇ ತಿರ್ಯಞ್ಚೌ! | ಹೇ ತಿರ್ಯಞ್ಚಃ! |

**(ನ್- ಕಾರವನ್ನು ನಿಷೇಧಿಸುವ ಸೂತ್ರ)**

**ಸೂತ್ರ - 342. ನಾಞ್ಚೇಃ ಪೂಜಾಯಾಮ್ ( 6.4.30)**

ವೃತ್ತಿಃ-ಪೂಜಾರ್ಥಸ್ಯ ಅಞ್ಚತೇಃ ಉಪಧಾಯಾಃ ನಸ್ಯ ಲೋಪಃ ನ। ಪ್ರಾಙ್। ಪ್ರಾಞ್ಚೌ। ನಲೋಪಾಭಾವಾತ್ ಅಲೋಪಃ ನ। ಪ್ರಾಞ್ಚಃ। ಪ್ರಾಙ್ಭ್ಯಾಮ್। ಪ್ರಾಙ್ಕ್ಷು । ಏವಂ ಪೂಜಾರ್ಥೇ ಪ್ರತ್ಯಙ್ಙಾದಯಃ। ಕ್ರುಙ್। ಕ್ರುಞ್ಚೌ। ಕ್ರುಙ್ಭ್ಯಾಮ್। ಪಯೋಮುಕ್। ಪಯೋಮುಗ್। ಪಯೋಮುಚೌ। ಪಯೋಮುಗ್ಭ್ಯಾಮ್। ಉಗಿತ್ವಾತ್ ನುಮ್।

ಪ. ಛೇ. - ನ, ಅಞ್ಚೇಃ, ಪೂಜಾಯಾಮ್।

ಅ. ವೃ.-"ಅನಿದಿತಾಮ್ ಹಲ ಉಪಧಾಯಾಃ ಕ್ಙಿತಿ" ಎಂಬ ಸೂತ್ರದಿಂದ 'ಉಪಧಾಯಾಃ' ಎಂಬ ಪದವೂ, ಮತ್ತು "ಶ್ನಾನ್ನಲೋಪಃ" ಎಂಬ ಸೂತ್ರದಿಂದ 'ನ' ಮತ್ತು 'ಲೋಪಃ' ಎಂಬ ಎರಡು ಪದಗಳು ಅನುವೃತ್ತವಾಗುತ್ತವೆ.

ಅರ್ಥ- ಪೂಜಾರ್ಥವುಳ್ಳ 'ಅಞ್ಚ್' ಧಾತುವಿನ ಉಪಧೆಯಾಗಿರುವ 'ನ್' ಕಾರಕ್ಕೆ ಲೋಪವು ಬರುವದಿಲ್ಲ.'ಅಞ್ಚ್' ಧಾತುವಿಗೆ 'ಪೂಜಾ' ಮತ್ತು 'ಗತಿ' ಎಂಬ ಎರಡು ಅರ್ಥಗಳಲ್ಲಿ "ಅನಿದಿತಾಮ್ ಹಲ ಉಪಧಾಯಾಃ ಕ್ಙಿತಿ" ಎಂಬ ಸೂತ್ರದಿಂದ, 'ನ್' ಕಾರಕ್ಕೆ ಲೋಪವು ಬರಬೇಕಾಗಿತ್ತು. ಆದರೆ, ಪೂಜಾರ್ಥದಲ್ಲಿ ಪ್ರಕೃತ ಸೂತ್ರದಿಂದ ಅದು ನಿಷೇಧವಾಗೋಣದ್ದರಿಂದ, ಗತ್ಯರ್ಥದಲ್ಲಿ ಮಾತ್ರ 'ನ್' ಕಾರವು ಲೋಪವನ್ನು

ಹೊಂದುತ್ತದೆ. ಪ್ರಕೃತ ಸೂತ್ರದಿಂದ ನಕಾರ ಲೋಪದ ನಿಷೇಧವಾಗುವುದರಿಂದ, 'ನ್' ಕಾರಕ್ಕೆ ಲೋಪ ಬಾರದೇ ಇರುವುದರಿಂದ, "ಉಗಿದಚಾವ್ ಸರ್ವನಾಮಸ್ಥಾನೇಽಧಾತೋಃ" ಎಂಬ ಸೂತ್ರದಿಂದ 'ನುಮ್' ಆಗಮವೂ ಬರುವುದಿಲ್ಲ. ಉಳಿದ ಪ್ರಕ್ರಿಯೆಯೆಲ್ಲ ಗತ್ಯರ್ಥಕ ಆಗಿದ್ದಾಗ, ಪ್ರಾಙ್। ಪ್ರಾಞ್ಚೌ। ಪ್ರಾಞ್ಚಃ। ಪ್ರಾಞ್ಚಮ್।ಪ್ರಾಞ್ಚೌ। ರೂಪಗಳಂತೆಯೇ ಇರುತ್ತವೆ. ಯಾವಾಗ ಶಬ್ದದಲ್ಲಿಯೇ 'ನ್' ಕಾರ ಲೋಪವು ಆಗುವದಿಲ್ಲವೋ ಆಗ, 'ಶಸ್(ಅಸ್) ಮೊದಲಾದ ಪ್ರತ್ಯಯಗಳಿದ್ದಾಗಲೂ ಪ್ರಾಞ್ಚಃ, ಪ್ರಾಞ್ಚಾ ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

ಹಲಾದಿ ವಿಭಕ್ತಿಗಳು ಪರದಲ್ಲಿದಾಗ, "ಸ್ವಾದಿಷ್ವಸರ್ವನಾಮಸ್ಥಾನೇ" ಎಂಬ ಸೂತ್ರದಿಂದ ಪೂರ್ವದಲ್ಲಿರುವ ಶಬ್ದ ಸ್ವರೂಪಕ್ಕೆ ಪದ-ಸಂಜ್ಞೆ ಬಂದು, 'ಚ್' ಕಾರಕ್ಕೆ ಸಂಯೋಗಾನ್ತ-ಲೋಪ ಬಂದು, 'ಞ್' ಕಾರಕ್ಕೆ 'ಜ' ಕಾರದ ಸ್ಥಾನಿಯಾದ 'ನ್' ಕಾರಕ್ಕೆ 'ಕುತ್ವ' ಬಂದು, ಪ್ರಾಙ್ಭ್ಯಾಮ್, ಪ್ರಾಙ್ಭಿಃ ಎಂದು ರೂಪಗಳು ಸಿದ್ಧವಾಗುತ್ತವೆ.

**(ಚ್ ಕಾರಾನ್ತ ಪೂಜಾರ್ಥಕ ಪ್ರ-ಪೂರ್ವಕ 'ಅಞ್ಚ್' ಶಬ್ದದ ರೂಪಗಳು)**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಪ್ರಾಙ್ | ಪ್ರಾಞ್ಚೌ | ಪ್ರಾಞ್ಚಃ |
| ದ್ವಿತೀಯಾ | ಪ್ರಾಞ್ಚಮ್ | ಪ್ರಾಞ್ಚೌ | ಪ್ರಾಞ್ಚಃ |
| ತೃತೀಯಾ | ಪ್ರಾಞ್ಚಾ | ಪ್ರಾಙ್ಗ್ಭ್ಯಾಮ್ | ಪ್ರಾಙ್ಭಿಃ |
| ಚತುರ್ಥೀ | ಪ್ರಾಞ್ಚೇ | ಪ್ರಾಙ್ಗ್ಭ್ಯಾಮ್ | ಪ್ರಾಙ್ಭ್ಯಃ |
| ಪಞ್ಚಮೀ | ಪ್ರಾಞ್ಚಃ | ಪ್ರಾಙ್ಗ್ಭ್ಯಾಮ್ | ಪ್ರಾಙ್ಭ್ಯಃ |
| ಷಷ್ಠೀ | ಪ್ರಾಞ್ಚಃ | ಪ್ರಾಞ್ಚೋಃ | ಪ್ರಾಞ್ಚಾಮ್ |
| ಸಪ್ತಮೀ | ಪ್ರಾಞ್ಚಿ | ಪ್ರಾಞ್ಚೋಃ | ಪ್ರಾಙ್ಕ್ಷು |
| ಸಂಬೋಧನ | ಹೇ ಪ್ರಾಙ್! | ಹೇ ಪ್ರಾಞ್ಚೌ! | ಹೇ ಪ್ರಾಞ್ಚಃ! |

ಸೂಚನೆ:-'ಇದೇ ರೀತಿಯಲ್ಲಿ ಪೂಜಾರ್ಥದಲ್ಲಿ ಪ್ರ-ಪೂರ್ವಕ 'ಅಞ್ಚ್' ಧಾತುವಾದ ಪ್ರತ್ಯಞ್ಚ್ ಶಬ್ದಕ್ಕೆ ಪ್ರಾತಿಪದಿಕ ಸಂಜ್ಞೆ ಬಂದು, ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಹಿಂದೆ ಮಾಡಿದ 'ಪ್ರಾಙ್' ಶಬ್ದದ ರೂಪಗಳಂತೆಯೇ ಪ್ರತ್ಯಙ್, ಪ್ರತ್ಯಞ್ಚೌ, ಪ್ರತ್ಯಞ್ಚಃ ಎಂದೂ, ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಪ್ರತ್ಯಗ್ಭ್ಯಾಮ್ ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ. ಇದೇ ರೀತಿಯಲ್ಲಿ 'ಉದಞ್ಚ್' ಮತ್ತು 'ಸಮಞ್ಚ್' ಶಬ್ದಗಳ ರೂಪಗಳೂ ಸಿದ್ಧವಾಗುತ್ತವೆ. ಸಹ+ಅಞ್ಚ್ ಎಂದಿದ್ದಾಗ, ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಸಧ್ರ್ಯಙ್, ಸಧ್ರ್ಯಞ್ಚೌ, ಸಧ್ರ್ಯಞ್ಚಃ ಇತ್ಯಾದಿ ರೂಪಗಳೂ, ಮತ್ತು ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಸಧ್ರ್ಯಙ್ಭ್ಯಾಮ್ ಇತ್ಯಾದಿ ರೂಪಗಳೂ ಸಿದ್ಧವಾಗುತ್ತವೆ. ತಿರಸ್+ಅಞ್ಚ್ ಎಂದಿದ್ದಾಗ, ಇದೇ ರೀತಿಯಲ್ಲಿ ತಿರ್ಯಙ್, ತಿರ್ಯಞ್ಚೌ, ತಿರ್ಯಞ್ಚಃ ಇತ್ಯಾದಿ; ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, ತಿರ್ಯಙ್ಭ್ಯಾಮ್ ರೂಪಗಳು ಸಿದ್ಧವಾಗುತ್ತವೆ.

ಉದಾ- ಕ್ರುಙ್- (ಕ್ರೌಂಚ ಪಕ್ಷಿ): 'ಕ್ರುಂಚ್' ಧಾತುವಿನಮೇಲೆ "ಋತ್ವಿಗ್-ದಧೃಕ್-ಸ್ರಗ್-ದಿಗ್-ಉಷ್ಣಿಗ್-ಅಞ್ಚು-ಯುಜಿ-ಕ್ರುಞ್ಚಾಮ್ ಚ" ಎಂಬ ಸೂತ್ರದಿಂದ 'ಕ್ವಿನ್' ಪ್ರತ್ಯಯ ಬಂದಮೇಲೆ, ಅದು ಸರ್ವಾಪಹಾರವಾಗಿ "ಅನಿದಿತಾಮ್ ಹಲ ಉಪಧಾಯಾಃ ಕ್ಙಿತಿ" ಎಂಬ ಸೂತ್ರದಿಂದ, ಪ್ರಾಪ್ತವಾದ 'ನ್' ಕಾರದ ಲೋಪವು ಪ್ರಕೃತ ಸೂತ್ರದಿಂದಲೇ ಹೇಳಲ್ಪಟ್ಟಿರೋಣದ್ದರಿಂದ, ಕ್ರುಞ್ಚ್ ಎಂದೇ ಉಳಿಯುತ್ತದೆ. ನಂತರ ಇದಕ್ಕೆ 'ಪ್ರಾತಿಪದಿಕಸಂಜ್ಞೆ' ಬಂದು-ಪ್ರಥಮಾ ವಿಭಕ್ತಿ ಏಕವಚನದಲ್ಲಿ 'ಸು(ಸ್)' ಸೇರಿಸಿದಮೇಲೆ, "ಹಲ್ಙ್ಯಾಭ್ಯೋ ದೀರ್ಘಾತ್ ಸುತಿಸ್ಯಪೃಕ್ತಂ ಹಲ್" ಎಂಬ ಸೂತ್ರದಿಂದ, 'ಸು' ಪ್ರತ್ಯಯದ 'ಸ್' ಕಾರಕ್ಕೆ ಲೋಪ ಬಂದು, 'ಚ್' ಕಾರಕ್ಕೆ ಸಂಯೋಗಾನ್ತ ಲೋಪವಾಗುತ್ತದೆ. ಆದರೂ 'ಚ್' ಕಾರಕ್ಕೆ 'ಸನ್ನಿಯೋಗ ವಿಶೇಷದಿಂದ'(?) 'ಚುತ್ವ(ಚ್)' ಬಂದು, ಕ್ರುನ್+ಚ್=ಕ್ರುನ್ಚ ಎಂದಾಗುತ್ತದೆ. ನಿಮಿತ್ತವಾದ 'ಚ್' ಕಾರ ಲೋಪವಾದಮೇಲೆ, ನೈಮಿತ್ತಿಕವಾದ 'ಞ್' ಕಾರದ ಲೋಪವಾಗಿ, ಅದರ ಸ್ಥಾನದಲ್ಲಿ 'ನ್' ಕಾರವು ಪುನಃ ಬಂದಿರುತ್ತದೆ. ಆಗ 'ಕ್ರುನ್' ಎಂದು ರೂಪವಾಗುತ್ತದೆ. "ಕ್ವಿನ್ ಪ್ರತ್ಯಯಸ್ಯ ಕುಃ" ಎಂಬ ಸೂತ್ರದಿಂದ ಕುತ್ವ(ಙ್) ಬಂದು, 'ಕ್ರುಙ್' ಎಂದು ರೂಪವು ಸಿದ್ಧವಾಗಿದೆ. ಅಜಾದಿ ಪ್ರತ್ಯಯ ಪರಕ ರೂಪಗಳಾದ ಕ್ರುಞ್ಚೌ, ಕ್ರುಞ್ಚಃ ಇತ್ಯಾದಿ ರೂಪಗಳೂ, ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಕ್ರುಙ್ಭ್ಯಾಮ್ ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

ಉದಾ- ಪಯೋಮುಕ್, ಪಯೋಮುಗ್:-(ಮೋಡ)- 'ಪಯಸ್' ಶಬ್ದದಮೇಲೆ 'ಮುಚ್' ಧಾತುವನ್ನು ಸೇರಿಸಿ ಪಯಸ್+ಮುಚ್ ಎಂದಿದ್ದಾಗ, ಅದಕ್ಕೆ 'ಕ್ವಿಪ್' ಪ್ರತ್ಯಯವನ್ನು ಸೇರಿಸಿದಮೇಲೆ ಅದು ಸರ್ವಾಪಹಾರವಾಗಿ, ಪಯೋಮುಚ್ ಎಂದಾಗುತ್ತದೆ.ಇದಕ್ಕೆ 'ಪ್ರಾತಿಪದಿಕಸಂಜ್ಞೆ' ಬಂದ ನಂತರ, 'ಸು(ಸ್)' ಪ್ರತ್ಯಯವನ್ನು ಸೇರಿಸಿ ಪಯೋಮುಚ್+ಸ್ ಎಂದಿದ್ದಾಗ, "ಹಲ್ಙ್ಯಾಭ್ಯೋ ದೀರ್ಘಾತ್ ಸುತಿಸ್ಯಪೃಕ್ತಂ ಹಲ್" ಎಂಬ ಸೂತ್ರದಿಂದ, 'ಸ್' ಕಾರಕ್ಕೆ ಲೋಪ ಬಂದು, "ಚೋಃ ಕುಃ" ಎಂಬ ಸೂತ್ರದಿಂದ 'ಚ್' ಕಾರಕ್ಕೆ 'ಕ್' ಕಾರ ಬಂದು, ಪಯೋಮುಕ್ ಎಂದಾಗಿ "ಝಲಾಮ್ ಜಶೋಽನ್ತೇ" ಎಂಬ ಸೂತ್ರದಿಂದ 'ಜಶ್ತ್ವ(ಗ್)' ಬಂದು ಪಯೋಮುಗ್ ಎಂದು ರೂಪವಾಗುತ್ತದೆ, "ವಾವಸಾನೇ" ಎಂಬ ಸೂತ್ರದಿಂದ ವೈಕಲ್ಪಿಕ ಚರ್ತ್ವ 'ಕ್' ಕಾರ ಬಂದು ಪಯೋಮುಕ್, ಎಂದಾಗುತ್ತದೆ. ಹೀಗೆ ಎರಡು ರೂಪಗಳಾಗುತ್ತವೆ. ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಯಾವ ಬದಲಾವಣೆಯೂ ಆಗದೇ ಕೇವಲ ವರ್ಣಜೋಡಣೆಯಿಂದ ಪಯೋಮುಚೌ ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ. ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, "ಸ್ವಾದಿಷ್ವಸರ್ವನಾಮಸ್ಥಾನೇ" ಎಂಬ ಸೂತ್ರದಿಂದ 'ಪದ ಸಂಜ್ಞೆ' ಬಂದು, "ಝಲಾಮ್ ಜಶೋಽನ್ತೇ" ಎಂಬ ಸೂತ್ರದಿಂದ 'ಜಶ್ತ್ವ(ಗ್)' ಬಂದು, ಪಯೋಮುಗ್ಭ್ಯಾಮ್, ಪಯೋಮುಗ್ಭಿಃ ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

**(ಚ್ ಕಾರಾನ್ತ ಪಯೋಮುಚ್ ಶಬ್ದದ ರೂಪಗಳು)**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಪಯೋಮುಕ್, ಪಯೋಮುಗ್ | ಪಯೋಮುಚೌ | ಪಯೋಮುಚಃ |

| | | | |
|---|---|---|---|
| ದ್ವಿತೀಯಾ | ಪಯೋಮುಚಮ್ | ಪಯೋಮುಚೌ | ಪಯೋಮುಚಃ |
| ತೃತೀಯಾ | ಪಯೋಮುಚಾ | ಪಯೋಮುಗ್ಭ್ಯಾಮ್ | ಪಯೋಮುಗ್ಭಿಃ |
| ಚತುರ್ಥೀ | ಪಯೋಮುಚೇ | ಪಯೋಮುಗ್ಭ್ಯಾಮ್ | ಪಯೋಮುಗ್ಭ್ಯಃ |
| ಪಞ್ಚಮೀ | ಪಯೋಮುಚಃ | ಪಯೋಮುಗ್ಭ್ಯಾಮ್ | ಪಯೋಮುಗ್ಭ್ಯಃ |
| ಷಷ್ಠೀ | ಪಯೋಮುಚಃ | ಪಯೋಮುಚೋಃ | ಪಯೋಮುಚಾಮ್ |
| ಸಪ್ತಮೀ | ಪಯೋಮುಚಿ | ಪಯೋಮುಚೋಃ | ಪಯೋಮುಕ್ಷು |
| ಸಂಬೋಧನ | ಹೇ ಪಯೋಮುಕ್! ಹೇ ಪಯೋಮುಗ್! | ಹೇ ಪಯೋಮುಚೌ! | ಹೇ ಪಯೋಮುಚಃ! |

**ಇಲ್ಲಿಗೆ 'ಚ್' ಕಾರಾನ್ತ ಶಬ್ದಗಳು ಮುಗಿದವು**

**ಈಗ 'ತ್' ಕಾರಾನ್ತ ಶಬ್ದಗಳು ಆರಂಭವಾಗುತ್ತವೆ.**

**('ನ್' ಕಾರದ ಉಪಧೆಗೆ ದೀರ್ಘವನ್ನು ಹೇಳುವ ಸೂತ್ರ)**

**ಸೂತ್ರ – 343. ಸಾಂತ-ಮಹತಃ ಸಂಯೋಗಸ್ಯ (6.4.10)**

ವೃತ್ತಿಃ-ಸಾಂತ ಸಂಯೋಗಶ್ಚ ಮಹತಶ್ಚ ಯಃ 'ನ್' ಕಾರಃ ತಸ್ಯ ಉಪಧಾಯಾ ದೀರ್ಘಃ ಅಸಂಬುದ್ಧೌ ಸರ್ವನಾಮಸ್ಥಾನೇ। ಮಹಾನ್। ಮಹಾಂತೌ। ಮಹಾಂತಃ। ಹೇ ಮಹನ್!। ಮಹದ್ಭ್ಯಾಮ್।

ಪ. ಛೇ. – ಸಾಂತ (ಲುಪ್ತ ಷಷ್ಠೀಕ ಪದ), ಮಹತಃ, ಸಂಯೋಗಸ್ಯ।

ಅ. ವೃ. –"ನೋಪಧಾಯಾಃ" ಎಂಬ ಸೂತ್ರದಿಂದ 'ನ' ಮತ್ತು 'ಉಪಧಾಯಾಃ' ಎಂಬ ಪದಗಳು ಅನುವೃತ್ತವಾಗುತ್ತವೆ. "ಢ್ರಲೋಪೇ ಪೂರ್ವಸ್ಯ ದೀರ್ಘೋಽಣಃ" ಎಂಬ ಸೂತ್ರದಿಂದ, 'ದೀರ್ಘಃ' ಎಂಬ ಪದವೂ, "ಸರ್ವನಾಮಸ್ಥಾನೇ ಚಾಸಂಬುದ್ಧೌ" ಎಂಬ ಪೂರ್ಣ ಸೂತ್ರವು ಅನುವೃತ್ತವಾಗುತ್ತದೆ.

ಅರ್ಥ-ಸಂಬುದ್ಧಿಭಿನ್ನವಾದ ಸರ್ವನಾಮಸ್ಥಾನದ ಪರದಲ್ಲಿ, 'ಸ್' ಕಾರಾನ್ತ ಸಂಯೋಗ ಮತ್ತು 'ಮಹತ್' ಶಬ್ದದಲ್ಲಿರುವ 'ನ್' ಕಾರಗಳ ಉಪಧೆಗೆ ದೀರ್ಘವು ಬರುತ್ತದೆ.

ಉದಾ- ಮಹ ಪೂಜಾಯಾಮ್: ಈ ಧಾತುವಿನಮೇಲೆ ಉಣಾದಿ ಸೂತ್ರದಿಂದ, 'ಶತೃ(ಅತ್)' ಪ್ರತ್ಯಯಾನ್ತ ನಿಪಾತನ ಮಾಡಿದಮೇಲೆ, 'ಮಹತ್' ಶಬ್ದವು ಸಿದ್ಧವಾಗುತ್ತದೆ. ಇಲ್ಲಿ 'ಋ' ಕಾರವು 'ಇತ್' ಆಗಿರೋಣದರಿಂದ, ಇದನ್ನು 'ಉಗಿತ್' ಎಂದು ಹೇಳುತ್ತಾರೆ. ಆದುದರಿಂದ "ಉಗಿದಚಾಮ್ ಸರ್ವನಾಮಸ್ಥಾನೇಽಧಾತೋಃ" ಎಂಬ ಸೂತ್ರದಿಂದ 'ನುಮ್(ನ್)' ಆಗಮವು ಬರುತ್ತದೆ.

ಉದಾ- ಮಹಾನ್(ದೊಡ್ಡವನು) – 'ಮಹ್' ಧಾತುವಿನ ನಂತರ 'ಶತೃ(ಅತ್)' ಪ್ರತ್ಯಯವನ್ನು ಸೇರಿಸಿ, ಮಹ್+ಅತ್=ಮಹತ್ ಎಂದಿದ್ದಾಗ, ಅದಕ್ಕೆ 'ಸು(ಸ್)' ಪ್ರತ್ಯಯವನ್ನು ಸೇರಿಸಿ, ಮಹತ್+ಸ್ ಎಂದಿದ್ದಾಗ, "ಉಗಿದಚಾಮ್ ಸರ್ವನಾಮಸ್ಥಾನೇಽಧಾತೋಃ" ಎಂಬ ಸೂತ್ರದಿಂದ 'ನುಮ್(ನ್)' ಆಗಮವು ಬಂದು, ಇದು 'ಮಿತ್' ಆಗಿರೋಣದ್ದರಿಂದ 'ಹ್' ಕಾರದ ನಂತರ ಇರುವ ಅನ್ತ್ಯ 'ಅಚ್'

ಆದ 'ಅ' ಕಾರದ ನಂತರ ಬಂದು, ಮಹನ್ತ್+ಸ್ ಎಂದಿರುತ್ತದೆ. ಇಲ್ಲಿ 'ನ್' ಕಾರವು ಉಪಧೆಯಾಗಿರುತ್ತದೆ. ಆದರೆ ಸೂತ್ರದಲ್ಲಿ 'ನ್' ಕಾರಕ್ಕೆ ದೀರ್ಘವನ್ನು ಹೇಳಲಾಗಿದ್ದರೂ, ಅದು 'ವ್ಯಞ್ಜನ'ವಾದ್ದರಿಂದ ಅದಕ್ಕೆ 'ದೀರ್ಘ' ಮಾಡಲು ಅವಕಾಶವಿರುವದಿಲ್ಲ: ಆದರಿಂದ 'ನ್' ಕಾರವನ್ನೇ ಅನ್ತ್ಯವರ್ಣವಾಗಿ ಭಾವಿಸಿ ಅದರ ಪೂರ್ವದಲ್ಲಿರುವ 'ಅ' ಕಾರವನ್ನು 'ಉಪಧೆ' ಯಾಗಿ ಭಾವಿಸಿ, ಪ್ರಕೃತ ಸೂತ್ರದಿಂದ ಅದಕ್ಕೆ ದೀರ್ಘವನ್ನು ಮಾಡಿದಾಗ, ಮಹಾನ್ತ್+ಸ್ ಎಂದಾಗುತ್ತದೆ. ನಂತರ "ಹಲ್ಙ್ಯಾಭ್ಯೋ ದೀರ್ಘಾತ್ ಸುತಿಸ್ಯಪೃಕ್ತಂ ಹಲ್" ಎಂಬ ಸೂತ್ರದಿಂದ, 'ಸ್' ಕಾರಕ್ಕೆ ಲೋಪ ಬಂದು, "ಸಂಯೋಗಾನ್ತಸ್ಯ ಲೋಪಃ" ಎಂಬ ಸೂತ್ರದಿಂದ 'ತ್' ಕಾರಕ್ಕೆ ಲೋಪ ಬಂದು 'ಮಹಾನ್' ಎಂಬ ರೂಪವು ಸಿದ್ಧವಾಗುತ್ತದೆ.

ತ್ರಿಪಾದಿಯಲ್ಲಿ ಪರ ಸೂತ್ರವಾದ "ಸಂಯೋಗಾನ್ತಸ್ಯ ಲೋಪಃ" ಎಂಬ ಸೂತ್ರದಿಂದ ಮಾಡಲಾಗಿರುವ 'ತ್' ಕಾರ ಲೋಪವು, ತ್ರಿಪಾದಿಯಲ್ಲಿರುವ 'ಪೂರ್ವ'ಸೂತ್ರವಾದ "ನ ಲೋಪಃ ಪ್ರಾತಿಪದಿಕಾನ್ತಸ್ಯ" ಎಂಬ ಸೂತ್ರದ ದೃಷ್ಟಿಯಲ್ಲಿ ಅಸಿದ್ಧವಾಗಿರೋಣದ್ದರಿಂದ 'ನ್' ಕಾರಕ್ಕೆ ಲೋಪವು ಬಂದಿಲ್ಲ. ಯಾಕೆಂದರೆ 'ನ್' ಕಾರದ ಲೋಪವನ್ನು ಮಾಡುವದಕ್ಕಾಗಿಯೇ 'ನ್' ಕಾರವು ಅಂತ್ಯದಲ್ಲಿ ಇರಬೇಕಾಗಿದೆ. ಆದರೆ 'ತ್' ಕಾರದ ಲೋಪವೇ ಅಸಿದ್ಧವಾಗಿರುವಾಗ, 'ನ್' ಕಾರವು ಅಂತ್ಯದಲ್ಲಿ ಇರುವದು ಪೂರ್ವ ಸೂತ್ರಕ್ಕೆ ಗೊತ್ತಾಗುವದಿಲ್ಲ.

ಉದಾ– ಮಹಾನ್ತೌ – ಪ್ರಥಮಾ ಮತ್ತು ದ್ವಿತೀಯಾ ದ್ವಿಚನಗಳಲ್ಲಿ ಮಹತ್+ಔ ಎಂದಿದ್ದಾಗ, ನುಮಾಗಮ(ನ್) ಬಂದು, ಪ್ರಕೃತ ಸೂತ್ರದಿಂದ ದೀರ್ಘ ಬಂದು, ಮಹಾನ್ತೌ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಮಹಾನ್ತಃ– ಪ್ರಥಮಾ ವಿಭಕ್ತಿ ಬಹುವಚನದಲ್ಲಿ ಮಹತ್+ಜಸ್(ಅಸ್) ಎಂದಿದ್ದಾಗ, ನುಮಾಗಮ(ನ್) ಬಂದು, ಪ್ರಕೃತ ಸೂತ್ರದಿಂದ ದೀರ್ಘ ಬಂದು, ಮಹಾನ್ತ+ಅಸ್=ಮಹಾನ್ತಸ್ ಎಂದಾಗಿ ರುತ್ವ–ವಿಸರ್ಗಗಳಿಂದ ಮಹಾನ್ತಃ ಎಂದು ರೂಪವಾಗುತ್ತದೆ.

ಉದಾ– ಮಹಾನ್ತಮ್– ಮಹತ್ ಶಬ್ದದ ಮೇಲೆ ದ್ವಿತೀಯಾ ವಿಭಕ್ತಿ ಏಕವಚನದಲ್ಲಿ 'ಅಮ್' ಸೇರಿಸಿ ಮಹತ್+ಅಮ್ ಎಂದಿದ್ದಾಗ, ನುಮಾಗಮ(ನ್) ಬಂದು, ಪ್ರಕೃತ ಸೂತ್ರದಿಂದ ದೀರ್ಘ ಬಂದು, ಮಹಾನ್ತಮ್ ಎಂದು ರೂಪವು ಸಿದ್ಧವಾಗುತ್ತದೆ.

ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, 'ಸರ್ವನಾಮಸ್ಥಾನಸಂಜ್ಞೆ' ಇಲ್ಲದ ಸ್ಥಳಗಳಲ್ಲಿ, ನುಮಾಗಮ(ನ್)ವು ಬರುವದಿಲ್ಲ ಮತ್ತು ದಿರ್ಘವೂ ಬರುವದಿಲ್ಲ. ಕೇವಲ ವರ್ಣಜೋಡಣೆ ಮಾತ್ರದಿಂದ ಕೆಳಗಿನ ರೂಪಗಳು ಸಿದ್ಧವಾಗುತ್ತವೆ. ಪ್ರತ್ಯಯದ ಕೊನೆಯಲ್ಲಿ 'ಸ್' ಕಾರವಿದ್ದರೆ ಅದಕ್ಕೆ ರುತ್ವ–ವಿಸರ್ಗಗಳು ಬರುತ್ತವೆ.

ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಮಹತ್ ನಲ್ಲಿರುವ 'ತ್' ಕಾರಕ್ಕೆ ಜಶ್ತ್ವ(ದ್) ಕಾರ ಬಂದು ಮಹದ್ಭ್ಯಾಮ್ ಮೊದಲಾದ ರೂಪಗಳು ಸಿದ್ಧವಾಗುತ್ತವೆ.

ಸಂಬೋಧನ ಪ್ರಥಮಾ ವಿಭಕ್ತಿಯಲ್ಲಿ ದೀರ್ಘವಿಲ್ಲದಿದ್ದುದರಿಂದ ಹೇ ಮಹನ್! ಎಂದೇ ರೂಪವು ಇರುತ್ತದೆ.

**(ತ್ ಕಾರಾನ್ತ ಮಹತ್ ಶಬ್ದದ ರೂಪಗಳು)**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಮಹಾನ್ | ಮಹಾನ್ತೌ | ಮಹಾನ್ತಃ |
| ದ್ವಿತೀಯಾ | ಮಹಾನ್ತಮ್ | ಮಹಾನ್ತೌ | ಮಹತಃ |
| ತೃತೀಯಾ | ಮಹತಾ | ಮಹದ್ಭ್ಯಾಮ್ | ಮಹದ್ಭಿಃ |
| ಚತುರ್ಥೀ | ಮಹತೇ | ಮಹದ್ಭ್ಯಾಮ್ | ಮಹದ್ಭ್ಯಃ |
| ಪಞ್ಚಮೀ | ಮಹತಃ | ಮಹದ್ಭ್ಯಾಮ್ | ಮಹದ್ಭ್ಯಃ |
| ಷಷ್ಠೀ | ಮಹತಃ | ಮಹತೋಃ | ಮಹತಾಮ್ |
| ಸಪ್ತಮೀ | ಮಹತಿ | ಮಹತೋಃ | ಮಹತ್ಸು |
| ಸಂಬೋಧನ | ಹೇ ಮಹನ್! | ಹೇ ಮಹಾನ್ತೌ! | ಹೇ ಮಹಾನ್ತಃ! |

**(ದೀರ್ಘವನ್ನು ವಿಧಿಸುವ ಸೂತ್ರ)**

**ಸೂತ್ರ – 344. ಅತ್ವಸಂತಸ್ಯ ಚಾಧಾತೋಃ (6.4.14)**

ವೃತ್ತಿಃ–ಅತ್ವಂತಸ್ಯ ಉಪಧಾಯಾಃ ದೀರ್ಘಃ ಧಾತುಭಿನ್ನ–ಅಸಂತಸ್ಯ ಚ ಅಸಂಬುದ್ಧೌ ಸೌ ಪರೇ।ಉಗಿತ್ವಾತ್ ನುಮ್ ಧೀಮಾನ್। ಧೀಮಂತೌ। ಧೀಮಂತಃ। ಹೇ ಧೀಮನ್!। ಶಸಾದೌ ಮಹದ್ವತ್। ಭಾತೇರ್ಡವತುಃ। ಡಿತ್ವಸಾಮರ್ಥ್ಯಾತ್ ಅಭಸ್ಯಾಪಿ ಟೇರ್ಲೋಪಃ। ಭವಾನ್। ಭವಂತೌ। ಭವಂತಃ। ಶತ್ರಂತಸ್ಯ ಭವನ್।

ಪ. ಛೇ. – ಅತು–ಅಸಂತಸ್ಯ, ಚ, ಅಧಾತೋಃ।

ಅ. ವೃ.– "ನೋಪಧಾಯಾಃ" ಎಂಬ ಸೂತ್ರದಿಂದ 'ನ' ಮತ್ತು 'ಉಪಧಾಯಾಃ' ಎಂಬ ಪದಗಳು ಅನುವೃತ್ತವಾಗುತ್ತವೆ. "ಢ್ರಲೋಪೇ ಪೂರ್ವಸ್ಯ ದೀರ್ಘೋಽಣಃ" ಎಂಬ ಸೂತ್ರದಿಂದ, 'ದೀರ್ಘಃ' ಎಂಬ ಪದವೂ, "ಸರ್ವನಾಮಸ್ಥಾನೇ ಚಾಸಂಬುದ್ಧೌ" ಎಂಬ ಪೂರ್ಣ ಸೂತ್ರವು ಅನುವೃತ್ತವಾಗುತ್ತದೆ.

ಅರ್ಥ–ಸಂಬುದ್ಧಿಭಿನ್ನವಾದ 'ಸು(ಸ್)' ಪರದಲ್ಲಿದ್ದಾಗ, 'ಅತು' ಎಂಬುದನ್ನು ಅಂತ್ಯದಲ್ಲಿ ಉಳ್ಳ ಶಬ್ದದ ಉಪಧೆಗೆ ದೀರ್ಘವು ಬರುತ್ತದೆ. ಹಾಗೆಯೇ ಧಾತುವನ್ನು ಬಿಟ್ಟು 'ಅಸ್' ಎಂಬುದನ್ನು ಅಂತವಾಗಿಯುಳ್ಳ ಶಬ್ದದ ಉಪಧೆಗೆ ದೀರ್ಘವು ಬರುತ್ತದೆ.

ಉದಾ– ಧೀಮಾನ್, ಧೀಮನ್ತೌ, ಧೀಮನ್ತಃ– ಧೀ+ಮತುಪ್(ಮತ್)=ಧೀಮತ್ ಎಂದಿರುತ್ತದೆ. ಮತುಪ್ ನಲ್ಲಿರುವ 'ಮತು' ಎಂಬ ಶಬ್ದವು ಅತ್ವನ್ತ (ಅತು+ಅನ್ತ) ಶಬ್ದವಾಗಿದೆ. ಇದಕ್ಕೆ 'ಸು'(ಸ್) ಪರದಲ್ಲಿದ್ದಾಗ, 'ಅತ್' ನಲ್ಲಿರುವ 'ಅ' ಕಾರಕ್ಕೆ ಪ್ರಕೃತ ಸೂತ್ರದಿಂದ ದೀರ್ಘ ಬರುತ್ತದೆ. ಉಳಿದ ಪ್ರಕ್ರಿಯೆ ಎಲ್ಲ 'ಮಹತ್' ಶಬ್ದದಂತೆಯೇ

ನಡೆದು ಧೀಮಾನ್ ಎಂದು ರೂಪವಾಗುತ್ತದೆ.

ಪ್ರಥಮಾ ದ್ವಿವಚನದಿಂದಾರಂಭಿಸಿ ಸರ್ವನಾಮಸ್ಥಾನವು ಪರದಲ್ಲಿದ್ದಾಗ, ನುಮಾಗಮ(ನ್), ವರ್ಣಜೋಡಣೆಗಳಿಂದ ಧೀಮನ್ತೌ, ಧೀಮನ್ತಃ ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ. ಸರ್ವನಾಮಸ್ಥಾನ ವಲ್ಲದ, ಶಸ್'(ಅಸ್)' ಮೊದಲಾದ ಅಜಾದಿ ಪ್ರತ್ಯಯಗಳು ಪರದಲ್ಲಿದ್ದಾಗ, ಯಾವ ವಿಕಾರವೂ ಇರುವದಿಲ್ಲ.

ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಧೀಮತ್ ನಲ್ಲಿರುವ 'ತ್' ಕಾರಕ್ಕೆ ಜಶ್ತ್ವ(ದ್) ಕಾರ ಬಂದು, ಧೀಮದ್ಭ್ಯಾಮ್ ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

**(ತ್ ಕಾರಾನ್ತ ಧೀಮತ್ ಶಬ್ದದ ರೂಪಗಳು)**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಧೀಮಾನ್ | ಧೀಮನ್ತೌ | ಧೀಮನ್ತಃ |
| ದ್ವಿತೀಯಾ | ಧೀಮನ್ತಮ್ | ಧೀಮನ್ತೌ | ಧೀಮತಃ |
| ತೃತೀಯಾ | ಧೀಮತಾ | ಧೀಮದ್ಭ್ಯಾಮ್ | ಧೀಮದ್ಭಿಃ |
| ಚತುರ್ಥೀ | ಧೀಮತೇ | ಧೀಮದ್ಭ್ಯಾಮ್ | ಧೀಮದ್ಭ್ಯಃ |
| ಪಞ್ಚಮೀ | ಧೀಮತಃ | ಧೀಮದ್ಭ್ಯಾಮ್ | ಧೀಮದ್ಭ್ಯಃ |
| ಷಷ್ಠೀ | ಧೀಮತಃ | ಧೀಮತೋಃ | ಧೀಮತಾಮ್ |
| ಸಪ್ತಮೀ | ಧೀಮತಿ | ಧೀಮತೋಃ | ಧೀಮತ್ಸು |
| ಸಂಬೋಧನ | ಹೇ ಧೀಮನ್! | ಹೇ ಧೀಮನ್ತೌ! | ಹೇ ಧೀಮನ್ತಃ! |

ಉದಾ– ಭವಾನ್,ಭವನ್ತೌ(ತಾವು) – 'ಭಾ' ಧಾತುವಿನಮೇಲೆ ಪ್ರಥಮಾ ವಿಭಕ್ತಿ ಏಕವಚನದಲ್ಲಿ 'ಡವತು' ಪ್ರತ್ಯಯವನ್ನು ಸೇರಿಸಿ 'ಕೃದನ್ತ'ವಾದಮೇಲೆ, ಭವತ್ ಎಂದಾಗುತ್ತದೆ. ಇದಕ್ಕೆ 'ಪ್ರಾತಿಪದಿಕ ಸಂಜ್ಞೆ' ಬಂದಮೇಲೆ, 'ಸು(ಸ್)' ಪ್ರತ್ಯಯವನ್ನು ಸೇರಿಸಿದಾಗ, 'ಅತ್ವನ್ತ'ವಾಗೋಣದರಿಂದ, ಪ್ರಕೃತ ಸೂತ್ರದಿಂದ ಉಪಧೆಗೆ ದೀರ್ಘ ಬಂದು, "ಉಗಿದಚಾಮ್ ಸರ್ವನಾಮಸ್ಥಾನೇಽಧಾತೋಃ" ಎಂಬ ಸೂತ್ರದಿಂದ, 'ನುಮ್(ನ್)' ಆಗಮವು ಬಂದು, 'ಸ್' ಕಾರ ಲೋಪವಾಗಿ, ಸಂಯೋಗಾನ್ತವಾದ 'ತ್' ಕಾರಕ್ಕೆ ಲೋಪ ಬಂದು, ಭವಾನ್ ಎಂದು ರೂಪವು ಸಿದ್ಧವಾಗುತ್ತದೆ.

ಪ್ರಥಮಾ ವಿಭಕ್ತಿ ಏಕವಚನ ಬಿಟ್ಟು ಉಳಿದ ಸ್ಥಳಗಳಲ್ಲಿ, ದೀರ್ಘವು ಬರುವದಿಲ್ಲ. ಹೀಗಾಗಿ ಭವನ್ತೌ, ಭವನ್ತಃ, ಭವನ್ತಮ್, ಭವನ್ತೌ, ಭವತಃ, ಭವತಾ ಭವದ್ಭ್ಯಾಮ್ ಭವದ್ಭಿಃ ಮೊದಲಾದ ರೂಪಗಳು ಸಿದ್ಧವಾಗುತ್ತವೆ.

ಉದಾ– ಭವತ್ (ಆಗುವವನು) – 'ಭೂ' ಧಾತುವಿನಮೇಲೆ ಶತೃ(ಅತ್) ಪ್ರತ್ಯಯವನ್ನು ಸೇರಿಸಿದಾಗಲೂ, ಭವತ್ ಎಂದೇ ರೂಪವು ಸಿದ್ಧವಾಗುತ್ತದೆ. ಇದು ಅತ್ವನ್ತ(ಅತು)ವಾಗಿ ಇಲ್ಲದಿರೋಣದ್ದರಿಂದ, ದೀರ್ಘವು ಬರುವದಿಲ್ಲ. ಹೀಗಾಗಿ ಉಳಿದ ರೂಪಗಳೆಲ್ಲ ಹಿಂದಿನಂತೆಯೇ ಇರುತ್ತವೆ.

**(ಅಭ್ಯಸ್ತ ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ – 345. ಉಭೇ ಅಭ್ಯಸ್ತಮ್ ( 6.1.5)**

ವೃತ್ತಿಃ–ಷಾಷ್ಠ ದ್ವಿತ್ವಪ್ರಕರಣೇ ೦ಯೇ ದ್ವೇ ವಿಹಿತೇ ತೇ ಉಭೇ ಸಮುದಿತೇ ಅಭ್ಯಸ್ತ ಸಂಜ್ಞೇ ಸ್ತಃ।

ಅ. ವೃ.–"ಏಕಾಚೋ ದ್ವೇ ಪ್ರಥಮಸ್ಯ" ಎಂಬ ಸೂತ್ರದಿಂದ 'ದ್ವೇ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– 6ನೇ ಅಧ್ಯಾಯದ ದ್ವಿತ್ವ ಪ್ರಕರಣದಲ್ಲಿ ಯಾವ ದ್ವಿತ್ವವು ಮಾಡಲಾಗಿದೆಯೋ, ಆ ಎರಡರ ಸಮುದಾಯಕ್ಕೂ 'ಅಭ್ಯಸ್ತಸಂಜ್ಞೆಯು' ಬರುತ್ತದೆ. ದ್ವಿತ್ವ ಪ್ರಕರಣವು ಅಷ್ಟಾಧ್ಯಾಯಿಯಲ್ಲಿ 6ನೆಯ ಮತ್ತು 8ನೆಯ ಅಧ್ಯಾಯಗಳಲ್ಲಿ ಬರುತ್ತದೆ. ಈ ದ್ವಿತ್ವವು 6ನೆಯ ಅಧ್ಯಾಯದ ದ್ವಿತ್ವ ಪ್ರಕರಣಕ್ಕೆ ಸಂಬಂಧಿಸಿದೆ. ಆದುದರಿಂದ 8ನೆಯ ಅಧ್ಯಾಯದ ಸೂತ್ರಗಳಿಂದ ದ್ವಿತ್ವವಾದರೆ, ಅವುಗಳಿಗೆ 'ಅಭ್ಯಸ್ತ ಸಂಜ್ಞೆಯು' ಬರುವದಿಲ್ಲ.

**(ನುಮ್ ಆಗಮವನ್ನು ನಿಷೇಧಿಸುವ ಸೂತ್ರ)**

**ಸೂತ್ರ – 346. ನಾಭ್ಯಸ್ತಾಚ್ಛತುಃ (7.1.78)**

ವೃತ್ತಿಃ–ಅಭ್ಯಸ್ತಾತ್ಪರಸ್ಯ ಶತುರ್ನುಮ್ ನ। ದದತ್, ದದದ್,। ದದತೌ। ದದತಃ।

ಪ. ಛೇ.– ನ, ಅಭ್ಯಸ್ತಾತ್, ಶತುಃ।

ಅ. ವೃ.– "ಇದಿತೋ ನುಮ್ ಧಾತೋಃ" ಸೂತ್ರದಿಂದ 'ನುಮ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ–ಅಭ್ಯಸ್ತ ಸಂಜ್ಞೆಯುಳ್ಳ ಶಬ್ದಗಳ ನಂತರ ಇರುವ 'ಶತೃ(ಅತ್)' ಪ್ರತ್ಯಯಕ್ಕೆ ನುಮಾಗಮವು ಬರುವದಿಲ್ಲ. ಇಲ್ಲಿ "ಉಗಿದಚಾಮ್ ಸರ್ವನಾಮಸ್ಥಾನೇಽಧಾತೋಃ" ಎಂಬ ಸೂತ್ರದಿಂದ ಬರಬೇಕಾದ 'ನುಮ್(ನ್)' ಆಗಮವು ನಿಷೇಧಿತವಾಗಿದೆ.

ಉದಾ_ ದದತ್, ದದದ್( ಕೊಡುತ್ತಿರುವವನು)– 'ದಾ' ಧಾತುವಿನ ನಂತರ 'ಶತೃ' ಪ್ರತ್ಯಯವನ್ನು ಸೇರಿಸಿದಮೇಲೆ, 'ಶ್ಲು(ಲೋಪ)' ಪ್ರತ್ಯಯಬಂದು, ಅದಕ್ಕೆ ದ್ವಿತ್ವ ಬಂದಮೇಲೆ, 'ಅಭ್ಯಾಸ ಸಂಜ್ಞೆ'ಯನ್ನು ಪಡೆದು ಹ್ರಸ್ವವಾಗಿ 'ಆ' ಕಾರಕ್ಕೆ ಲೋಪ ಮೊದಲಾದವುಗಳಾದಮೇಲೆ, ಪರರೂಪದಿಂದ ದದತ್ ಎಂಬ ರೂಪವು ಸಿದ್ಧವಾಗುತ್ತದೆ. (ದಾ+ಶತೃ(ಅತ್)+ಶ್ಲು ಎಂದಿದ್ದಾಗ, 'ದಾ' ಕ್ಕೆ ದ್ವಿತ್ವ ಬಂದು, ದಾದಾ+ಅತ್+ಶ್ಲು (ಲೋಪ)=ದಾದಾ+ಅತ್ ಎಂದಿದ್ದಾಗ, 'ದಾದಾ' ಎಂಬುದಕ್ಕೆ 'ಅಭ್ಯಾಸ ಸಂಜ್ಞೆ' ಬಂದು, ಪೂರ್ವ 'ದಾ' ಕಾರಕ್ಕೆ ಹ್ರಸ್ವವಾಗಿ, ದದಾ+ಅತ್ ಎಂದಿದ್ದಾಗ, "ಅತೋಗುಣೇ" ಎಂಬ ಸೂತ್ರದಿಂದ ಪರಸವರ್ಣ ಬಂದು, ದದತ್ ಎಂದು ರೂಪವಾಗುತ್ತದೆ.

ಈ ದದತ್ ಗೆ 'ಪ್ರಾತಿಪದಿಕ ಸಂಜ್ಞೆ' ಬಂದು, "ಉಭೇಽಭ್ಯಸ್ತಮ್" ಎಂಬ ಸೂತ್ರದಿಂದ ದ್ವಿತ್ವ ರೂಪಕ್ಕೆ 'ಅಭ್ಯಸ್ತ ಸಂಜ್ಞೆ' ಬಂದು –

ಪ್ರಥಮಾ ವಿಭಕ್ತಿ ಏಕವಚನದಲ್ಲಿ, 'ಸು(ಸ್)' ಪ್ರತ್ಯಯ ಸೇರಿಸಿದ ಮೇಲೆ,

"ಉಗಿದಚಾಮ್ ಸರ್ವನಾಮಸ್ಥಾನೇऽಧಾತೋಃ" ಎಂಬ ಸೂತ್ರದಿಂದ ಬರಬೇಕಾದ 'ನುಮ್(ನ್)' ಆಗಮವು, ಪ್ರಕೃತ ಸೂತ್ರದಿಂದ ನಿಷೇಧಸಲ್ಪಟ್ಟು, ದದತ್ ಎಂದು ರೂಪವಾಗುತ್ತದೆ. 'ಸು(ಸ್)' ಪ್ರತ್ಯಯದ ಲೋಪವಾದಮೇಲೆ, 'ತ್' ಕಾರಕ್ಕೆ "ಝಲಾಮ್ ಜಶೋऽನ್ತೇ" ಎಂಬ ಸೂತ್ರದಿಂದ ಜಶ್ತ್ವ(ದ್)' ಬಂದು, ದದದ್ ಎಂದಾದಮೇಲೆ, "ವಾವಸಾನೇ" ಎಂಬ ಸೂತ್ರದಿಂದ ವೈಕಲ್ಪಿಕವಾಗಿ ಚರ್ತ್ವ(ತ್) ಬಂದು ದದತ್ ಮತ್ತು ದದದ್ ಎಂಬ ಎರಡು ರೂಪಗಳು ಸಿದ್ಧವಾಗುತ್ತವೆ.

ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಯಾವ ವಿಕಾರವೂ ಇರುವದಿಲ್ಲ.

ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, 'ಜಶ್ತ್ವ' ಮಾಡಿದಾಗ, ದದತೌ, ದದತಮ್ ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

**(ತ್ ಕಾರಾನ್ತ ದದತ್ ಶಬ್ದದ ರೂಪಗಳು)**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ದದತ್,ದದದ್ | ದದತೌ | ದದತಃ |
| ದ್ವಿತೀ0ಯಾ | ತದತಮ್ | ದದತೌ | ದದತಃ |
| ತೃತೀ0ಯಾ | ದದತಾ | ದದದ್ಭ್ಯಾಮ್ | ದದದ್ಭಿಃ |
| ಚತುರ್ಥೀ | ದದತೇ | ದದದ್ಭ್ಯಾಮ್ | ದದದ್ಭ್ಯಃ |
| ಪಞ್ಚಮೀ | ದದತಃ | ದದದ್ಭ್ಯಾಮ್ | ದದದ್ಭ್ಯಃ |
| ಷಷ್ಠೀ | ದದತಃ | ದದತೋಃ | ದದತಾಮ್ |
| ಸಪ್ತಮೀ | ದದತಿ | ದದತೋಃ | ದದತ್ಸು |
| ಸಂಬೋಧನ | ಹೇ ದದತ್, ಹೇ ದದದ್! | ಹೇ ದದತೌ! | ಹೇ ದದತಃ! |

**(ಜಕ್ಷ್ ಮೊದಲಾದ 7 ಧಾತುಗಳಿಗೆ ಅಭ್ಯಸ್ತ ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ – 347. ಜಕ್ಷಿತ್ಯಾದಯಃ ಷಟ್** (6.1.6)

ವೃತ್ತಿಃ–ಷಟ್ ಧಾತವಃ ಅನ್ಯೇ ಜಕ್ಷಿತಿಶ್ಚ ಸಪ್ತಮ ಏತೇ ಅಭ್ಯಸ್ತ ಸಂಜ್ಞಾಃ ಸ್ಯುಃ। ಜಕ್ಷತ್,ಜಕ್ಷದ್।ಜಕ್ಷತೌ। ಜಕ್ಷತಃ। ಏವಂ ಜಾಗ್ರತ್, ದರಿದ್ರತ್, ಶಾಸತ್, ಚಕಾಸತ್। ಗುಪ್, ಗುಬ್। ಗುಪೌ। ಗುಪಃ। ಗುಬ್ಭ್ಯಾಮ್।

ಪ. ಛೇ. – ಜಕ್ಷ್, ಇತ್ಯಾದಯಃ, ಷಟ್।

ಅ. ವೃ–"ಉಭೇऽಭ್ಯಸ್ತಮ್" (6.1.5) ಎಂಬ ಸೂತ್ರದಿಂದ 'ಅಭ್ಯಸ್ತಮ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ–ಜಾಗೃ ಮೊದಲಾದ 6 ಧಾತುಗಳಿಗೂ ಹಾಗೂ 7ನೇಯದಾದ ಜಕ್ಷ್ ಧಾತುವಿಗೂ, 'ಅಭ್ಯಸ್ತ ಸಂಜ್ಞೆ'ಯು ಬರುತ್ತದೆ. ದ್ವಿತ್ವವಿಲ್ಲದೇನೇ ಈ 7 ಧಾತುಗಳಿಗೆ

'ಅಭ್ಯಸ್ತ ಸಂಜ್ಞೆಯು' ಬರುತ್ತದೆ. ಇದಕ್ಕೆ ಸಂಬಂಧಿಸಿದ ವೈಯಾಕರಣಿಗಳ ಶ್ಲೋಕವು ಈ ಕೆಳಗಿನಂತಿದೆ.

ಜಕ್ಷಿ-ಜಾಗೃ-ದರಿದ್ರಾ-ಶಾಸ್-ದೀಧೀಙ್-ವೇವೀಙ್-ಚಕಾಸ್ ತಥಾ।
ಅಭ್ಯಸ್ತ ಸಂಜ್ಞಾ ವಿಜ್ಞೇಯಾ ಧಾತವೋ ಮುನಿಭಾಷಿತಾಃ॥

ಈ 7 ಧಾತುಗಳಿಗೆ ಅಭ್ಯಸ್ತ ಸಂಜ್ಞೆ ಬಂದಮೇಲೆ, 'ಶತೃ(ಅತ್)' ಪ್ರತ್ಯಯವನ್ನು ಸೇರಿಸಿದಮೇಲೆ "ನಾಭ್ಯಸ್ತಾಚ್ಛತುಃ" (7.1.78) ಎಂಬ ಸೂತ್ರದಿಂದ ನುಮಾಗಮವು ನಿಷೇಧಿಸಲ್ಪಟ್ಟಿದೆ.

ಉದಾ- ಜಕ್ಷತ್(ತಿನ್ನುತ್ತಿರುವ/ನಗುತ್ತಿರುವ)- ಜಕ್ಷ್-ಭಕ್ಷ್-ಹಸನಯೋಃ ಎಂಬ ಅರ್ಥದಲ್ಲಿರುವ 'ಜಕ್ಷ್' ಧಾತುವಿನಮೇಲೆ, 'ಶತೃ(ಅತ್)' ಪ್ರತ್ಯಯವನ್ನು ಸೇರಿಸಿದಮೇಲೆ, ಜಕ್ಷ್+ಅತ್=ಜಕ್ಷತ್ ಎಂದಾಗುತ್ತದೆ. ಇದಕ್ಕೆ 'ಪ್ರಾತಿಪದಿಕ ಸಂಜ್ಞೆ' ಬಂದು- ಪ್ರಥಮಾ ವಿಭಕ್ತಿ ಏಕವಚನದಲ್ಲಿ, 'ಸು(ಸ್)' ಪ್ರತ್ಯಯವನ್ನು ಸೇರಿಸಿದಾಗ, ಇದಕ್ಕೆ 'ಅಭ್ಯಸ್ತ ಸಂಜ್ಞೆ' ಬರೋಣದ್ದರಿಂದ, ಪ್ರಾಪ್ತವಾದ, 'ನುಮ್' ಆಗಮವನ್ನು, "ನಾಭ್ಯಸ್ಥಾಚ್ಛತುಃ" (7.1.78) ಎಂಬ ಸೂತ್ರದಿಂದ ನಿಷೇಧಿಸಲಾಗಿದೆ. 'ಸ್' ಕಾರದ 'ಲೋಪ' ವಾದಮೇಲೆ 'ತ್' ಕಾರಕ್ಕೆ ಜಶ್ತ್ವ(ದ್) ಬಂದು "ವಾವಸಾನೇ" ಎಂಬ

ಸೂತ್ರದಿಂದ ವೈಕಲ್ಪಿಕವಾಗಿ ಚರ್ತ್ವ ಬಂದು, ಜಕ್ಷತ್ ಮತ್ತು ಜಕ್ಷದ್ ಎಂದು ಎರಡು ರೂಪಗಳು ಸಿದ್ಧವಾಗುತ್ತವೆ.

ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಯಾವ ವಿಕಾರವೂ ಆಗದೇ ಜಕ್ಷತೌ, ಜಕ್ಷತಃ ಇತ್ಯಾದಿ ರೂಪಗಳು ಆಗುತ್ತವೆ.

ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಜಶ್ತ್ವ ಮಾಡಿದಾಗ, ಜಕ್ಷದ್ಭ್ಯಾಮ್ ಇತ್ಯಾದಿ ರೂಪಗಳಾಗುತ್ತವೆ.

ಇದೇ ರೀತಿಯಲ್ಲಿ 'ಜಾಗ್ರತ್(ಎಚ್ಚರವಾಗಿರುವವನು)' ದರಿದ್ರತ್, ಶಾಸತ್, ಚಕಾಸತ್ ಶಬ್ದದ ರೂಪಗಳೂ ಸಿದ್ಧವಾಗುತ್ತವೆ.

**ಇಲ್ಲಿಗೆ 'ತ್' ಕಾರಾನ್ತ ಶಬ್ದಗಳು ಮುಗಿದವು**

**ಈಗ 'ಪ್' ಕಾರಾನ್ತ ಶಬ್ದಗಳು ಆರಂಭವಾಗುತ್ತವೆ.**

ಉದಾ- ಗುಪ್,ಗುಬ್- (ಗೋಪಾಯತಿ ಇತಿ ಗುಪ್-ರಕ್ಷಣೆ ಮಾಡುವವನು)- ಗುಪೂ(ಗುಪ್) ಧಾತುವಿನಮೇಲೆ 'ಕ್ವಿಪ್' ಪ್ರತ್ಯಯವನ್ನು ಸೇರಿಸಿ ಗುಪ್+ಕ್ವಿಪ್ ಎಂದಿದ್ದಾಗ, 'ಕ್ವಿಪ್' ಪ್ರತ್ಯಯವು ಸರ್ವಾಪಹಾರವಾದಮೇಲೆ 'ಗುಪ್' ಅಷ್ಟೇ ಉಳಿದಿರುತ್ತದೆ. ಇದಕ್ಕೆ 'ಪ್ರಾತಿಪದಿಕ ಸಂಜ್ಞೆ' ಬಂದಮೇಲೆ, 'ಸು(ಸ್)' ಪ್ರತ್ಯಯವನ್ನು ಸೇರಿಸಿ, ಗುಪ್+ಸ್ ಎಂದಿದ್ದಾಗ, "ಹಲ್‌ಙ್ಯಾಭ್ಯೋ ದೀರ್ಘಾತ್‌ಸುತಿಸ್ಯಪೃಕ್ತಮ್ ಹಲ್" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬಂದು ನಂತರ, 'ಪ್' ಕಾರಕ್ಕೆ ಜಶ್ತ್ವ ಬಂದು, ವೈಕಲ್ಪಿಕ ಚರ್ತ್ವದಿಂದ ಗುಪ್, ಗುಬ್ ಎಂಬ ಎರಡು ರೂಪಗಳು ಸಿದ್ಧವಾಗುತ್ತವೆ.

ಅಜಾದಿ ವಿಭಕ್ತಿಗಳು ಪರವಾದಾಗ, ಯಾವ ವಿಕಾರವೂ ಇಲ್ಲದೇ ಕೇವಲ ವರ್ಣಸಂಯೋಜನೆಯಿಂದ ಗುಪೌ, ಗುಪಃ ಇತ್ಯಾದಿ ರೂಪಗಳಾಗುತ್ತವೆ.

ಹಲಾದಿ ವಿಭಕ್ತಿಗಳು ಪರವಾದಾಗ, ಜಶ್ತ್ವ ಸಂಧಿಯಿಂದ, ಗುಬ್ಭ್ಯಾಮ್ ಮತ್ತು ಗುಬ್ಭಿಃ ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

**(ಪ್ ಕಾರಾನ್ತ ಗುಪ್ ಶಬ್ದದ ರೂಪಗಳು)**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಗುಪ್,ಗುಬ್ | ಗುಪೌ | ಗುಪಃ |
| ದ್ವಿತೀಯಾ | ಗುಪಮ್ | ಗುಪೌ | ಗುಪಃ |
| ತೃತೀಯಾ | ಗುಪಾ | ಗುಬ್ಭ್ಯಾಮ್ | ಗುಬ್ಭಿಃ |
| ಚತುರ್ಥೀ | ಗುಪೇ | ಗುಬ್ಭ್ಯಾಮ್ | ಗುಬ್ಭ್ಯಃ |
| ಪಞ್ಚಮೀ | ಗುಪಃ | ಗುಬ್ಭ್ಯಾಮ್ | ಗುಬ್ಭ್ಯಃ |
| ಷಷ್ಠೀ | ಗುಪಃ | ಗುಪೋಃ | ಗುಪಾಮ್ |
| ಸಪ್ತಮೀ | ಗುಪಿ | ಗುಪೋಃ | ಗುಪ್ಸು |
| ಸಂಬೋಧನ | ಹೇ ಗುಪ್!, ಹೇ ಗುಬ್! | ಹೆ ಗುಪೌ! | ಹೇ ಗುಪಃ! |

**ಇಲ್ಲಿಗೆ ಪ್-ಕಾರಾನ್ತ ಶಬ್ದಗಳು ಮುಗಿದವು**

**(ಇನ್ನು ಮುಂದೆ ಶ್-ಕಾರಾನ್ತ ಶಬ್ದಗಳು ಆರಂಭವಾಗುತ್ತವೆ)**

**(ಕಞ್ ಮತ್ತು ಕ್ವಿನ್ ಪ್ರತ್ಯಯಗಳನ್ನು ವಿಧಿಸುವ ಸೂತ್ರ)**

**ಸೂತ್ರ - 348. ತ್ಯದಾದಿಷು ದೃಶೋಽನಾಲೋಕನೇ ಕಞ್ ಚ (3.2.60)**

ವೃತ್ತಿಃ-ತ್ಯದಾದಿಷು ಉಪಪದೇಷು ಅಜ್ಞಾನಾರ್ಥಾತ್ ದೃಶೇಃ ಕಞ್ ಸ್ಯಾತ್ ಚಾತ್ ಕ್ವಿನ್।

ಪ. ಛೇ. - ತ್ಯದಾದಿಷು, ದೃಶಃ, ಅನಾಲೋಕನೇ, ಕಞ್, ಚ।

ಅ. ವೃ.-"ಸ್ಪೃಶೋಽನುದಕೇ ಕ್ವಿನ್" ಎಂಬ ಸೂತ್ರದಿಂದ 'ಕ್ವಿನ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- 'ತ್ಯದ್' ಮೊದಲಾದ ಶಬ್ದಗಳು ಉಪಪದವಾದಾಗ, ಜ್ಞಾನ ಭಿನ್ನಾರ್ಥವಾದ 'ದೃಶ್' ಧಾತುವಿನ ನಂತರ, 'ಕಞ್' ಮತ್ತು 'ಕ್ವಿನ್' ಪ್ರತ್ಯಯಗಳು ಬರುತ್ತವೆ. ಸೂತ್ರದಲ್ಲಿ ಚ- ಕಾರದ ಪ್ರಯೋಗವಿರೋಣದ್ದರಿಂದ, ಮೇಲಿಂದ ಮೇಲೆ ಎರಡೂ ಪ್ರತ್ಯಯಗಳೂ ಬರುತ್ತವೆ. 'ಕಞ್(ಅ)' ಪ್ರತ್ಯಯ ಬಂದಾಗ, ಕೇವಲ ಅ-ಕಾರ ಮಾತ್ರ ಉಳಿಯುತ್ತದೆ. ಧಾತುವಿನ ಜೊತೆಗೆ ಸೇರಿಕೋಂಡು ಅ-ಕಾರಾನ್ತ ಪುಲ್ಲಿಂಗ ಶಬ್ದವಾಗುತ್ತದೆ.

ಉದಾ- 'ದೃಶ್' ಧಾತುವನ್ನು 'ತ್ಯದ್' ಉಪಪದದ ಜೊತೆಗೆ ಸೇರಿಸಿ, ಅದಕ್ಕೆ

'ಕಞ್(ಅ)' ಪ್ರತ್ಯಯವನ್ನು ಸೇರಿಸಿದಾಗ, 'ತಾದೃಶ' ಎಂದು ಅ-ಕಾರಾನ್ತ ಪುಲ್ಲಿಂಗ ಶಬ್ದವಾಗುತ್ತದೆ. ತಾದೃಶಃ, ತಾದೃಶೌ, ತಾದೃಶಾಃ ಎಂದು ಪ್ರಥಮಾ ವಿಭಕ್ತಿಯ ರೂಪಗಳು ಸಿದ್ಧವಾಗುತ್ತವೆ.

ಸ್ತ್ರೀ ಪ್ರತ್ಯಯವಾದ 'ಙೀಪ್(ಈ)' ಸೇರಿಸಿದಾಗ, "ಟಿಡ್ಢಾಣಞ್... ಕಞ್ ಕ್ವರಪಃ" ಎಂಬ ಸೂತ್ರವು ಪ್ರವೃತ್ತವಾಗಿ, ತಾದೃಶೀ ಎಂದು ರೂಪವು ಸಿದ್ಧವಾಗುತ್ತದೆ.

ನಪುಂಸಕ ಲಿಂಗದಲ್ಲಿ ಪುಲ್ಲಿಂಗದಲ್ಲಿ ಹೇಗೋ ಹಾಗೆ, ಅ-ಕಾರಾನ್ತ ಶಬ್ದವಾಗಿ, ತಾದೃಶಮ್, ತಾದೃಶೇ, ತಾದೃಶಾನಿ ಎಂದು ರೂಪಗಳಾಗುತ್ತವೆ.

'ಕ್ವಿನ್' ಪ್ರತ್ಯಯವು ಬಂದಾಗ, ಅದು ಸರ್ವಾಪಹಾರವಾಗಿ 'ದೃಶ್' ಎಂದು 'ಹಲನ್ತ' ಶಬ್ದವಾಗುತ್ತದೆ. 'ಕ್ವಿನ್' ಆಗಲಿ ಅಥವಾ 'ಕಞ್' ಪ್ರತ್ಯಯವಾಗಲಿ, ತ್ಯದಾದಿಯಲ್ಲಿ ಅವುಗಳಿಗೆ ಆ-ಕಾರಾನ್ತಾದೇಶವು ಬರುತ್ತದೆ ಎಂಬುದನ್ನು ಮುಂದಿನ ಸೂತ್ರದಲ್ಲಿ ಹೇಳಲಾಗಿದೆ.

### (ಆ-ಕಾರವನ್ನು ಅಂತಾದೇಶವಾಗಿ ವಿಧಿಸುವ ಸೂತ್ರ)

**ಸೂತ್ರ – 349. ಆ ಸರ್ವನಾಮ್ನಃ (6.3.91)**

ವೃತ್ತಿಃ-ಸರ್ವನಾಮ್ನಃ 'ಆ'ಕಾರಃ ಅಂತಾದೇಶಃ ಸ್ಯಾತ್ "ದೃಗ್-ದೃಶ್-ವತುಷು"। ತಾದೃಕ್, ತಾದೃಗ್। ತಾದೃಶೌ। ತಾದೃಶಃ। ತಾದೃಗ್ಭ್ಯಾಮ್। ವೃಶ್ಚ ಇತಿ ಷಃ। ಜಶ್ತ್ವ-ಚರ್ತ್ವೇ । ವಿಟ್, ವಿಡ್। ವಿಶೌ. ವಿಶಃ। ವಿಡ್ಭ್ಯಾಮ್।

ಅ. ವೃ. – "ದೃಗ್-ದೃಶ್-ವತುಷು" ಎಂಬ ಸೂತ್ರವು ಅನುವೃತ್ತವಾಗಿದೆ.

ಅರ್ಥ– "ದೃಗ್, ದೃಶ್, ಶಬ್ದಗಳು, ಮತ್ತು 'ವತು' ಪ್ರತ್ಯಯ ಪರದಲ್ಲಿದ್ದಾಗ, 'ಸರ್ವನಾಮ ಸಂಜ್ಞೆ' ಯುಳ್ಳ ಶಬ್ದಗಳಿಗೆ ಆ- ಕಾರವು ಅನ್ತಾದೇಶವಾಗಿ ಬರುತ್ತದೆ.

ಉದಾ_ ತಾದೃಕ್, ತಾದೃಗ್(ಅದರಂತಿರುವ) – 'ತದ್' (ತ್ಯದಾದಿ) ಉಪಪದದ ನಂತರ 'ದೃಶ್' ಧಾತುವನ್ನು ಸೇರಿಸಿದಮೇಲೆ, "ತ್ಯದಾದಿಷು ದೃಶೋಽನಾಲೋಕನೇ ಕಞ್ಚ" (3.2.60) ಎಂಬ ಸೂತ್ರಕ್ಕನುಸಾರವಾಗಿ, 'ಕ್ವಿನ್' ಪ್ರತ್ಯಯವನ್ನು ಸೇರಿಸಿದಮೇಲೆ, ಅದು ಸರ್ವಾಪಹಾರವಾಗಿ 'ದೃಶ್' ಎಂದೇ ಪರದಲ್ಲಿ ಉಳಿದು, 'ತದ್' ದಲ್ಲಿರುವ 'ದ್' ಕಾರದ ಸ್ಥಾನದಲ್ಲಿ 'ಆ' ಕಾರವು ಆದೇಶವಾಗಿ ಬಂದು, 'ತಾದೃಶ್' ಎಂದಾಗುತ್ತದೆ. ನಂತರ ಇದಕ್ಕೆ 'ಪ್ರಾತಿಪದಿಕ ಸಂಜ್ಞೆ' ಬಂದು, 'ಸು(ಸ್)' ಸೇರಿಸಿ ತಾದೃಶ್+ಸ್ ಎಂದಿದ್ದಾಗ, "ಹಲ್ಙ್ಯಾಭ್ಯೋ ದೀರ್ಘಾತ್ ಸುತಿಸ್ಯಪೃಕ್ತಮ್ ಹಲ್" ಎಂಬ ಸೂತ್ರದಿಂದ 'ಸ್' ಕಾರ ಲೋಪವಾಗಿ 'ತಾದೃಶ್' ಎಂದೇ ಇರುತ್ತದೆ. ನಂತರ "ಕ್ವಿನ್ ಪ್ರತ್ಯಯಸ್ಯ ಕುಃ" ಎಂಬ ಸೂತ್ರದಿಂದ 'ಶ್' ಕಾರಕ್ಕೆ ಕುತ್ವ(ಕ್)', ಮತ್ತು "ವ್ರಶ್ಚ-ಭ್ರಸ್ಜ..... ಷಃ" ಎಂಬ ಸೂತ್ರದಿಂದ 'ಷತ್ವ' ಎರಡೂ ಒಟ್ಟಿಗೇ ಪ್ರವೃತ್ತವಾದಾಗ, "ಕ್ವಿನ್ ಪ್ರತ್ಯಯಸ್ಯ ಕುಃ" ಎಂಬ ಸೂತ್ರವು ಪರ-ತ್ರಿಪಾದಿಯಾಗಿರೋಣದರಿಂದ ಅದು ಅಸಿದ್ಧವಾಗುತ್ತದೆ. ಆದ್ದರಿಂದ ಇನ್ನೊಂದು ಸೂತ್ರವಾದ "ವ್ರಶ್ಚ-ಭ್ರಸ್ಜ..... ಷಃ" ಎಂಬ ಸೂತ್ರವೇ ಪ್ರವೃತ್ತವಾಗಿ, 'ಷತ್ವ(ಷ್)' ವು ಆದೇಶವಾಗಿ ಬಂದು, 'ತಾದೃಷ್'

ಎಂದಾಗುತ್ತದೆ. 'ಷ್' ಕಾರಕ್ಕೆ ಜಶ್ತ್ವ(ಡ್) ಬಂದು, ಆ 'ಡ್' ಕಾರಕ್ಕೆ ಕುತ್ವ(ಗ್) ಬಂದು "ವಾವಸಾನೇ" ಎಂಬ ಸೂತ್ರದಿಂದ ವೈಕಲ್ಪಿಕ 'ಚರ್ತ್ವ' ಬಂದು, ತಾದೃಕ್, ಮತ್ತು ತಾದೃಗ್ ಎಂಬ ಎರಡು ರೂಪಗಳು ಸಿದ್ಧವಾಗುತ್ತವೆ,

ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಯಾವ ವಿಕಾರಗಳೂ ಆಗದೇ ತಾದೃಶೌ, ತಾದೃಶಃ ಇತ್ಯಾದಿ ರೂಪಗಳಾಗುತ್ತವೆ.

ಇನ್ನು ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, 'ಷತ್ವ(ಷ್)' ಜಶ್ತ್ವ(ಡ್), ಕುತ್ವ(ಗ್) ಗಳು ಬಂದು, ತಾದೃಗ್ಭ್ಯಾಮ್, ತಾದೃಗ್ಭಿಃ, ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

ವಿಶೇಷ ['ತ್ಯದ್, ತದ್, ಯದ್, ಏತದ್, ಇದಮ್ (ಅದಸ್ ಶಬ್ದದ ಏಕವಚನ ಮತ್ತು ದ್ವಿವಚನ), ಯುಷ್ಮದ್, ಅಸ್ಮದ್, ಭವತು, ಕಿಮ್, ಈ ಶಬ್ದಗಳು ತ್ಯದಾದಿಗಣ ಪಠಿತಗಳಾಗಿವೆ. ಇವುಗಳ ಮೇಲೂ 'ಕಞ್' ಮತ್ತು 'ಕ್ವಿನ್' ಪ್ರತ್ಯಯಗಳು ಬರುತ್ತವೆ. ದೃಗ್, ದೃಶ್ ಮತ್ತು ವತು ಈ ಪ್ರತ್ಯಯಗಳು ಪರದಲ್ಲಿದ್ದಾಗಲೂ 'ಆ' ಕಾರವು ಅಂತಾದೇಶವಾಗಿ ಬರುತ್ತದೆ].

ಉದಾ– ತ್ಯಾದೃಶಃ, ತ್ಯಾದೃಕ್ – 'ತ್ಯದ್' ಶಬ್ದದಿಂದ ತಾದೃಶಃ ಮತ್ತು ತಾದೃಕ್ ಎಂಬ ಶಬ್ದಗಳು ಆಗುತ್ತವೆ. (ಅವನಂತೆ ಕಾಣುವ ಎಂದು ಅರ್ಥ). 'ಯದ್' ಶಬ್ದದಿಂದ ಯಾದೃಶಃ ಮತ್ತು ಯಾದೃಕ್ (ಯಾವರೀತಿ ಕಾಣುವವನು) ಎಂಬ ರೂಪಗಳು ಆಗುತ್ತವೆ.

'ಏತದ್' ಶಬ್ದದಿಂದ ಏತಾದೃಶಃ, ಏತಾದೃಕ್( ಈ ರೀತಿ ಕಾಣುವವನು) ಎಂಬ ರೂಪಗಳು ಆಗುತ್ತವೆ.

'ಇದಮ್' ಶಬ್ದದಿಂದ ಈದೃಶಃ ಮತ್ತು ಈದೃಕ್ ( ಇಂತಹ ) ಎಂಬ ರೂಪಗಳು ಆಗುತ್ತವೆ.

'ಯುಷ್ಮದ್' ಶಬ್ದದಿಂದ ಯುಷ್ಮಾದೃಶಃ, ಮತ್ತು ಯುಷ್ಮಾದೃಕ್( ನಿಮ್ಮಂತಹ) ಎಂಬ ರೂಪಗಳು ಆಗುತ್ತವೆ.

'ಅಸ್ಮದ್' ಶಬ್ದದಿಂದ ಅಸ್ಮಾದೃಶಃ ಮತ್ತು ಅಸ್ಮಾದೃಕ್ (ನಮ್ಮಂತಹ) ಎಂಬ ರೂಪಗಳು ಆಗುತ್ತವೆ.

'ಭವತ್' ಶಬ್ದದಿಂದ, ಭವಾದೃಶಃ ಮತ್ತು ಭವಾದೃಕ್ (ತಮ್ಮಂತಹ) ಎಂಬ ರೂಪಗಳು ಆಗುತ್ತವೆ.

'ಕಿಮ್' ಶಬ್ದದಿಂದ ಕೀದೃಶಃ ಮತ್ತು ಕೀದೃಕ್( ಯಾರಂತೆ) ಎಂಬ ರೂಪಗಳು ಆಗುತ್ತವೆ.

'ಇದಮ್' ಮತ್ತು ಕಿಮ್ ಶಬ್ದಗಳಿಗೆ ಆ–ಕಾರವು ಆದೇಶವಾಗಿ ಬಾರದೇ 'ಈಶ್' ಮತ್ತು 'ಕೀ' ಶಬ್ದಗಳು ಆದೇಶವಾಗಿ ಬರುತ್ತವೆ].

ಉದಾ– ವಿಟ್,ವಿಡ್(ವೈಶ್ಯನು) – 'ವಿಶ್' ಧಾತುವಿನ ಮೇಲೆ 'ಕ್ವಿನ್' ಪ್ರತ್ಯಯವನ್ನು

ಸೇರಿಸಿ, ವಿಶ್+ಕ್ವಿನ್ ಎಂದಿದ್ದಾಗ, 'ಕ್ವಿನ್' ಪ್ರತ್ಯಯವು ಸರ್ವಾಪಹಾರವಾಗಿ, 'ವಿಶ್' ಮಾತ್ರ ಉಳಿಯುತ್ತದೆ. ಅದಕ್ಕೆ 'ಪ್ರಾತಿಪದಿಕ ಸಂಜ್ಞೆ' ಬಂದು, 'ಸು(ಸ್)' ಸೇರಿಸಿ ವಿಶ್+ಸ್ ಎಂದಿದ್ದಾಗ, "ಹಲ್ಙ್ಯಾಬ್ಭ್ಯೋ ದೀರ್ಘಾತ್ ಸುತಿಸ್ಯಪೃಕ್ತಮ್ ಹಲ್" ಎಂಬ ಸೂತ್ರದಿಂದ 'ಸ್' ಕಾರ ಲೋಪವಾಗಿ, 'ವಿಶ್' ನಲ್ಲಿರುವ 'ಶ್' ಕಾರಕ್ಕೆ "ವ್ರಶ್ಚ-ಭ್ರಸ್ಜ..... ಷಃ" ಎಂಬ ಸೂತ್ರದಿಂದ 'ಷತ್ವ' ಬಂದು, 'ವಿಷ್' ಎಂದಾಗಿ, 'ಷ್' ಕಾರಕ್ಕೆ ಜಶ್ತ್ವದಿಂದ 'ಡ್' ಕಾರ, ಹಾಗೆಯೇ "ವಾಽವಸಾನೇ" ಎಂಬ ಸೂತ್ರದಿಂದ ವೈಕಲ್ಪಿಕ 'ಚರ್ತ್ವ' ಬಂದು 'ವಿಟ್' 'ವಿಡ್' ಎಂಬ ಎರಡು ರೂಪಗಳು ಸಿದ್ಧವಾಗುತ್ತವೆ.

ಅಜಾದಿ ವಿಭಕ್ತಿಗಳು ಪರವಾದಾಗ, ಯಾವ ವಿಕಾರವೂ ಆಗದೇ ವಿಶೌ, ವಿಶಃ, ವಿಶಮ್, ವಿಶಾ ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಷತ್ವ, ಜಶ್ತ್ವಗಳಾಗಿ ವಿಡ್ಭ್ಯಾಮ್, ವಿಡ್ಭಿಃ......ವಿಟ್ತ್ಸು ವಿಟ್ಸು ಇತ್ಯಾದಿ ರೂಪಗಳಾಗುತ್ತವೆ.

**(ಕ್ - ವರ್ಗವನ್ನು ಆದೇಶವಾಗಿ ವಿಧಿಸುವ ಸೂತ್ರ)**

**ಸೂತ್ರ - 350. ನಶೇರ್ವಾ ( 8.2.63)**

ವೃತ್ತಿಃ-ನಶೇಃ ಕವರ್ಗಃ ಅಂತಾದೇಶಃ ವಾ ಪದಾಂತೇ। ನಕ್, ನಗ್, ನಟ್, ನಡ್। ನಶೌ। ನಶಃ। ನಗ್ಭ್ಯಾಮ್। ನಡ್ಭ್ಯಾಮ್।

ಪ. ಛೇ. - ನಶೇಃ, ವಾ।

ಅ. ವೃ.-"ಕ್ವಿನ್ ಪ್ರತ್ಯಯಸ್ಯ ಕುಃ" ಎಂಬ ಸೂತ್ರದಿಂದ 'ಕುಃ' ಎಂಬ ಪದವೂ, "ಸ್ಕೋಃ ಸಂಯೋಗಾದ್ಯೋರನ್ತೇ ಚ" ಎಂಬ ಸೂತ್ರದಿಂದ 'ಅನ್ತೇ' ಎಂಬ ಪದವೂ ಅನುವೃತ್ತವಾಗುತ್ತವೆ, "ಅಲೋಽನ್ತ್ಯಸ್ಯ" ಎಂಬ ಸೂತ್ರದಿಂದ 'ಅನ್ತ್ಯಸ್ಯ' ಎಂಬುದರ ಉಪಸ್ಥಿತಿ ಇರುತ್ತದೆ. "ಪದಸ್ಯ" ಎಂಬುದು ಅಧಿಕಾರ ಸೂತ್ರ.

ಅರ್ಥ- ಪದಾನ್ತದಲ್ಲಿ 'ನಶ್' ಶಬ್ದಕ್ಕೆ ವಿಕಲ್ಪವಾಗಿ 'ಕ್' ವರ್ಗವು ಅನ್ತಾದೇಶವಾಗಿ ಬರುತ್ತದೆ.

ಉದಾ- ನಕ್, ನಗ್, ನಟ್, ನಡ್ (ನಾಶವುಳ್ಳವನು/ ನಶ್ವರವಾದ) - 'ನಶ್' ಧಾತುವಿನಮೇಲೆ 'ಕ್ವಿಪ್' ಪ್ರತ್ಯಯವನ್ನು ಸೇರಿಸಿದಾಗ, ಅದು ಸರ್ವಾಪಹಾರವಾಗಿ, 'ನಶ್' ಎಂದೇ ಉಳಿದಿರುತ್ತದೆ. ಅದಕ್ಕೆ 'ಪ್ರಾತಿಪದಿಕ ಸಂಜ್ಞೆ' ಬಂದಮೇಲೆ, 'ಸು(ಸ್)' ಸೇರಿಸಿದಾಗ ನಶ್+ಸ್ ಎಂದಿರುತ್ತದೆ. ಆಗ, "ಹಲ್ಙ್ಯಾಬ್ಭ್ಯೋ ದೀರ್ಘಾತ್ ಸುತಿಸ್ಯಪೃಕ್ತಮ್ ಹಲ್" ಎಂಬ ಸೂತ್ರದಿಂದ 'ಸ್' ಕಾರ ಲೋಪವಾಗಿ, 'ನಶ್' ನಲ್ಲಿರುವ 'ಶ್' ಕಾರಕ್ಕೆ "ವ್ರಶ್ಚ-ಭ್ರಸ್ಜ..... ಷಃ" ಎಂಬ ಸೂತ್ರದಿಂದ 'ಷತ್ವ' ಬಂದು 'ನಷ್' ಎಂದಾಗಿ, ನಂತರ 'ಷ್' ಕಾರಕ್ಕೆ 'ಜಶ್ತ್ವ(ಡ್)' ಕಾರ ಬಂದು, ನಡ್ ಎಂದು ರೂಪವಾಗುತ್ತದೆ. ಈಗ ಪ್ರಕೃತ ಸೂತ್ರದಿಂದ, 'ನಶ್' ನಲ್ಲಿರುವ 'ಶ್' ಕಾರಕ್ಕೆ ವಿಕಲ್ಪದಿಂದ ಕುತ್ವ(ಗ್) ಬಂದು,'ನಗ್' ಎಂದಾಗುತ್ತದೆ. ನಂತರ 'ನಡ್' ಮತ್ತು 'ನಗ್' ಈ ಎರಡು ರೂಪಗಳಿಗೆ "ವಾಽವಸಾನೇ" ಎಂಬ ಸೂತ್ರದಿಂದ ವೈಕಲ್ಪಿಕ ಚರ್ತ್ವ ಬಂದು, ನಕ್

ಮತ್ತು ನಗ್ ಎಂಬ ಎರಡು ರೂಪಗಳು ಸಿದ್ಧವಾಗುತ್ತವೆ. ಪ್ರಕೃತ ಸೂತ್ರದಿಂದ ಕುತ್ವ(ಗ್) ಬಾರದ ಪಕ್ಷದಲ್ಲಿ, 'ಡ್' ಕಾರವು ಹಾಗೆಯೇ ಇರುತ್ತದೆ. ಅದಕ್ಕೆ "ವಾಽವಸಾನೇ" ಎಂಬ ಸೂತ್ರದಿಂದ ವೈಕಲ್ಪಿಕ 'ಚರ್ತ್ವ' ಬಂದು 'ನಟ್' 'ನಡ್' ಎಂದು ಎರಡು ರೂಪಗಳಾಗುತ್ತವೆ. ಹೀಗಾಗಿ ನಕ್, ನಗ್, ನಟ್, ನಡ್ ಎಂಬ ನಾಲ್ಕು ರೂಪಗಳು ಸಿದ್ಧವಾಗುತ್ತವೆ.

ಅಜಾದಿ ವಿಭಕ್ತಿಗಳು ಪರವಾದಾಗ, ಯಾವ ವಿಕಾರವೂ ಆಗದೇ ನಶೌ, ನಶಃ, ನಶಮ್, ನಶಾ ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, "ವಾಽವಸಾನೇ" ಎಂಬ ಸೂತ್ರಕ್ಕೆ ಅವಕಾಶವಿಲ್ಲದೇ ಇರೋಣದರಿಂದ 'ಡ್' ಕಾರಾನ್ತ ಮತ್ತು 'ಗ್' ಕಾರಾನ್ತ ಶಬ್ದಗಳೇ ಇರುತ್ತವೆ. ನಗ್ಭ್ಯಾಮ್, ನಡ್ಭ್ಯಾಮ್-ನಟ್ತ್ಸು, ನಟ್ಸು, ನಕ್ಷು ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

### (ಕ್ವಿನ್ ಪ್ರತ್ಯಯವನ್ನು ವಿಧಿಸುವ ಸೂತ್ರ)

**ಸೂತ್ರ – 351. ಸ್ಪೃಶೋಽನುದಕೇ ಕ್ವಿನ್ (3.2.58)**

ವೃತ್ತಿಃ–ಅನುದಕೇ ಸುಪಿ ಉಪಪದೇ ಸ್ಪೃಶೇಃ ಕ್ವಿನ್। ಘೃತಸ್ಪೃಕ್, ಘೃತಸ್ಪೃಗ್। ಘೃತಸ್ಪೃಶೌ। ಘೃತಸ್ಪೃಶಃ। ದಧೃಕ್, ದಧೃಗ್। ದಧೃಷೌ। ದಧೃಗ್ಭ್ಯಾಮ್। ರತ್ನಮುಟ್, ರತ್ನಮುಡ್। ರತ್ನಮುಷೌ। ರತ್ನಮುಡ್ಭ್ಯಾಮ್। ಷಟ್, ಷಡ್। ಷಡ್ಭಿಃ। ಷಡ್ಭ್ಯಃ। ಷಣ್ಣಾಮ್। ಷಟ್ಸು,ಷಟ್ತ್ಸು। ರುತ್ವಂ ಪ್ರತಿ ಷತ್ವಸ್ಯ ಅಸಿದ್ಧತ್ವಾತ್ "ಸಸಜುಷೋರುಃ" ಇತಿ ರುತ್ವಮ್।

ಪ. ಛೇ. – ಸ್ಪೃಶಃ, ಅನುದಕೇ, ಕ್ವಿನ್।

ಅ. ವೃ– "ಸುಪಿ ಸ್ಥಃ" ಎಂಬ ಸೂತ್ರದಿಂದ 'ಸುಪಿ' ಎಂಬ ಪದವು ಅನುವೃತ್ತವಾಗುತ್ತದೆ.

(ಸೂಚನೆ – ಕ್ವಿನ್ ಪ್ರತ್ಯಯವನ್ನು ಸೇರಿಸೋಣದರಿಂದ ಕುತ್ವ ಬರುವುದಕ್ಕೆ ಅವಕಾಶವಿರುತ್ತದೆ).

ಅರ್ಥ–'ಉದಕ' ಶಬ್ದಕ್ಕಿಂತ ಭಿನ್ನವಾದ ಸುಬನ್ತವು ಉಪಪದವಾಗಿದ್ದಾಗ, 'ಸ್ಪೃಶ್' ಧಾತುವಿನಮೇಲೆ 'ಕ್ವಿನ್' ಪ್ರತ್ಯಯವು ಬರುತ್ತದೆ.

ಉದಾ– ಘೃತಸ್ಪೃಕ್, ಘೃತಸ್ಪೃಗ್, (ತುಪ್ಪವನ್ನು ಸ್ಪರ್ಶಿಸುವವನು) – 'ಘೃತ' ಶಬ್ದಪೂರ್ವಕವಾದ, 'ಸ್ಪೃಶ್' ಧಾತುವಿನ ನಂತರ, ಪ್ರಕೃತ ಸೂತ್ರದಿಂದ 'ಕ್ವಿನ್' ಪ್ರತ್ಯಯವನ್ನು ಸೇರಿಸಿ, ಅದು ಸರ್ವಾಪಹಾರವಾದಾಗ, ಘೃತಸ್ಪೃಶ್ ಎಂದಿರುತ್ತದೆ. ಇದಕ್ಕೆ 'ಪ್ರಾತಿಪದಿಕ ಸಂಜ್ಞೆ' ಬಂದು, 'ಸು(ಸ್)' ಸೇರಿಸಿದಾಗ, ಘೃತಸ್ಪೃಶ್+ಸ್ ಎಂದಿರುತ್ತದೆ. "ಹಲ್ಙ್ಯಾಭ್ಯೋ ದೀರ್ಘಾತ್ ಸುತಿಸ್ಯಪೃಕ್ತಮ್ ಹಲ್" ಎಂಬ ಸೂತ್ರದಿಂದ 'ಸ್'ಕಾರ ಲೋಪವಾಗಿ, ಘೃತಸ್ಪೃಶ್ ಎಂದೇ ಉಳಿದಿರುತ್ತದೆ. ಅನ್ತ್ಯವರ್ಣವಾದ 'ಶ್' ಕಾರಕ್ಕೆ "ವ್ರಶ್ಚ–ಭ್ರಸ್ಜ..... ಷಃ" ಎಂಬ ಸೂತ್ರದಿಂದ 'ಷತ್ವ' ಬಂದು ಘೃತಸ್ಪೃಷ್ ಎಂದಾಗುತ್ತದೆ. ಈ 'ಷ್' ಕಾರಕ್ಕೆ ಜಶ್ತ್ವ(ಡ್)' ಕಾರ ಬಂದು,

ಘೃತಸ್ಪೃಡ್ ಎಂದಾಗುತ್ತದೆ. "ಕ್ವಿನ್ ಪ್ರತ್ಯಯಸ್ಯ ಕುಃ" ಎಂಬ ಸೂತ್ರದಿಂದ 'ಡ್' ಕಾರಕ್ಕೆ ಕುತ್ವ(ಕ್)' ಕಾರ ಬಂದು ಘೃತಸ್ಪೃಗ್ ಎಂದಾಗುತ್ತದೆ. "ವಾಽವಸಾನೇ" ಎಂಬ ಸೂತ್ರದಿಂದ ಕುತ್ವ(ಕ್) ಕಾರ ಬಂದು, ಘೃತಸ್ಪೃಕ್ ಎಂದಾಗುತ್ತದೆ. ಚರ್ತ್ವ ಬಾರದ ಪಕ್ಷದಲ್ಲಿ ಘೃತಸ್ಪೃಗ್ ಎಂದೇ ಇರುತ್ತದೆ. ಹೀಗಾಗಿ ಎರಡು ರೂಪಗಳಾಗಿವೆ.

ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಯಾವ ವಿಕಾರಗಳೂ ಆಗದೇ ಘೃತಸ್ಪೃಶೌ, ಘೃತಸ್ಪೃಶಃ ಇತ್ಯಾದಿ ರೂಪಗಳಾಗುತ್ತವೆ.

ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಷತ್ವ, ಜಶ್ತ್ವ ಮತ್ತು ಕುತ್ವಗಳಿಂದ ಘೃತಸ್ಪೃಗ್ಭ್ಯಾಮ್, ಘೃತಸ್ಪೃಗ್ಭಿಃ ಇತ್ಯಾದಿ ರೂಪಗಳಾಗುತ್ತವೆ.

**(ಇಲ್ಲಿಗೆ 'ಶ್' ಕಾರಾನ್ತ ಶಬ್ದಗಳ ನಿರೂಪಣೆ ಮುಗಿಯಿತು)**

**(ಇನ್ನು ಮುಂದೆ 'ಷ್' ಕಾರಾನ್ತ ಶಬ್ದಗಳ ನಿರೂಪಣೆ ಮಾಡಲಾಗುತ್ತದೆ).**

ಉದಾ–ದಧೃಕ್, ದಧೃಗ್ (ತಿರಸ್ಕರಿಸುವವನು) – 'ದೃಷ್' ಧಾತುವಿನಮೇಲೆ "ಋತ್ವಿಗ್–ದಧೃಕ್–ಸ್ರಗ್–ದಿಗ್–ಉಷ್ಣಿಗ್–ಅಞ್ಚು–ಯುಜಿ–ಕ್ರುಞ್ಚಾಮ್ ಚ" ಎಂಬ ಸೂತ್ರದಿಂದ 'ಕ್ವಿನ್' ಪ್ರತ್ಯಯ ಬಂದಮೇಲೆ, ಅದು ಸರ್ವಾಪಹಾರವಾಗಿ 'ದಧೃಷ್' ಎಂದಾಗುತ್ತದೆ. ಅದಕ್ಕೆ 'ಪ್ರಾತಿಪದಿಕ ಸಂಜ್ಞೆ' ಬಂದಮೇಲೆ 'ಸು(ಸ್)' ಪ್ರತ್ಯಯವನ್ನು ಸೇರಿಸಿದಾಗ, ದಧೃಷ್+ಸ್ ಎಂದಿರುತ್ತದೆ. "ಹಲ್ಙ್ಯಾಭ್ಯೋ ದೀರ್ಘಾತ್ ಸುತಿಸ್ಯಪೃಕ್ತಮ್ ಹಲ್" ಎಂಬ ಸೂತ್ರದಿಂದ 'ಸ್' ಕಾರ ಲೋಪವಾಗಿ 'ಷ್' ಕಾರಕ್ಕೆ ಜಶ್ತ್ವ(ಡ್) ಬಂದು, ಅದರ ಸ್ಥಾನದಲ್ಲಿ, "ಕ್ವಿನ್ ಪ್ರತ್ಯಯಸ್ಯ ಕುಃ" ಎಂಬ ಸೂತ್ರದಿಂದ ಕುತ್ವ(ಗ್) ಬಂದು, 'ದದೃಗ್' ಎಂದು ರೂಪವಾಗುತ್ತದೆ. "ವಾಽವಸಾನೇ" ಎಂಬ ಸೂತ್ರದಿಂದ ವೈಕಲ್ಪಿಕ 'ಚರ್ತ್ವ(ಕ್)' ಬಂದು, 'ದಧೃಕ್' ಮತ್ತು 'ದಧೃಗ್' ಎಂಬ ಎರಡು ರೂಪಗಳು ಸಿದ್ಧವಾಗುತ್ತವೆ.

ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಯಾವ ವಿಕಾರವೂ ಉಂಟಾಗದೇ ದಧೃಷೌ, ದಧೃಷಃ ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ. ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಜಶ್ತ್ವ(ಡ್), ಮತ್ತು ಕುತ್ವ(ಗ್), ಬಂದು ದಧೃಗ್ಭ್ಯಾಮ್, ದಧೃಗ್ಭಿಃ ಇತ್ಯಾದಿ ರೂಪಗಳಾಗುತ್ತವೆ.

ಉದಾ– ರತ್ನಮುಟ್, ರತ್ನಮುಡ್(ರತ್ನವನ್ನು ಅಪಹಾರ ಮಾಡುವವನು)ರತ್ನಾನಿ ಮುಷ್ಣಾತಿ ಇತಿ ರತ್ನಮುಟ್– 'ಮುಷ್' ಧಾತುವಿನಮೇಲೆ 'ಕ್ವಿಪ್' ಪ್ರತ್ಯಯವನ್ನು ಸೇರಿಸಿ ಸರ್ವಾಪಹಾರವಾದಮೇಲೆ, ಅದಕ್ಕೆ 'ಪ್ರಾತಿಪದಿಕ ಸಂಜ್ಞೆ' ಬಂದು, ಮುಷ್+ಸು(ಸ್) ಎಂದಿದ್ದಾಗ, "ಹಲ್ಙ್ಯಾಭ್ಯೋ ದೀರ್ಘಾತ್ ಸುತಿಸ್ಯಪೃಕ್ತಮ್ ಹಲ್" ಎಂಬ ಸೂತ್ರದಿಂದ 'ಸ್' ಕಾರ ಲೋಪವಾಗಿ, "ಝಲಾಮ್ ಜಶೋಽನ್ತೇ" ಎಂಬುದರಿಂದ ಜಶ್ತ್ವ(ಡ್) ಬಂದು, 'ರತ್ನಮುಡ್' ಎಂದಾಗುತ್ತದೆ. "ವಾಽವಸಾನೇ" ಎಂಬ ಸೂತ್ರದಿಂದ ವೈಕಲ್ಪಿಕ 'ಚರ್ತ್ವ' ಬಂದು, 'ರತ್ನಮುಟ್' ಎಂದಾಗಿ, 'ರತ್ನಮುಟ್' ಮತ್ತು 'ರತ್ನಮುಡ್' ಎಂದು ಎರಡು ರೂಪಗಳು ಸಿದ್ಧವಾಗುತ್ತವೆ. ಅಜಾದಿ ವಿಭಕ್ತಿಗಳು

ಪರದಲ್ಲಿದ್ದಾಗ, ಯಾವ ವಿಕಾರವೂ ಉಂಟಾಗದೇ ರತ್ನಮುಷೌ, ರತ್ನಮುಷಃ ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ. ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಜಶ್ತ್ವ(ಡ್), ಬಂದು, ರತ್ನಮುಡ್ಭ್ಯಾಮ್, ರತ್ನಮುಡ್ಭಿಃ ಇತ್ಯಾದಿ ರೂಪಗಳಾಗುತ್ತವೆ.

ಉದಾ– ಷಟ್(ಸಂಖ್ಯಾವಾಚಕವಾದ ಆರು)– ಇದು ಯಾವಾಗಲೂ ಬಹುವಚನದಲ್ಲಿಯೇ ಇರುತ್ತದೆ. "ಷ್ಣಾನ್ತಾಷಟ್" ಎಂಬ ಸೂತ್ರದಿಂದ 'ಷಟ್' ಸಂಜ್ಞೆ ಬರುತ್ತದೆ. 'ಜಸ್' ಮತ್ತು 'ಶಸ್' ಗಳಿಗೆ "ಷಡ್ಭ್ಯೋ ಲುಕ್" ಎಂಬ ಸೂತ್ರದಿಂದ ಲೋಪ ಬರುತ್ತದೆ. 'ಡ್' ಕಾರಕ್ಕೆ "ವಾಽವಸಾನೇ" ಎಂಬ ಸೂತ್ರದಿಂದ ವೈಕಲ್ಪಿಕ ಚರ್ತ್ವ(ಟ್) ಬಂದು, 'ಷಟ್' ಮತ್ತು ಷಡ್ ಎಂದು ಪ್ರಥಮಾ ಮತ್ತು ದ್ವಿತೀಯಾ ಬಹುವಚನದಲ್ಲೂ ರೂಪಗಳಾಗುತ್ತವೆ. ಹಲಾದಿ ವಿಭಕ್ತಿಗಳಾದ ಭಿಸ್, ಭ್ಯಸ್, ಭ್ಯಾಮ್ ಮತ್ತು ಸುಪ್ ಗಳು ಪರದಲ್ಲಿದ್ದಾಗ, ಷಡ್ಭಿಃ, ಷಡ್ಭ್ಯಃ, ಷಣ್ಣಾಮ್ ಮತ್ತು ಷಟ್ಸು ಎಂಬ ರೂಪಗಳಾಗುತ್ತವೆ.

### (ರೇಫಾನ್ತ ಮತ್ತು 'ವ್' ಕಾರಾನ್ತ ಧಾತುಗಳ ಉಪಧೆಗೆ ದೀರ್ಘವನ್ನು ವಿಧಿಸುವ ಸೂತ್ರ)

ಸೂತ್ರ – 352. ರ್ವೋರುಪಧಾಯಾ ದೀರ್ಘ ಇಕಃ (8.2.76)

ವೃತ್ತಿಃ–ರೇಫ–ವಾಂತಯೋಃ ಧಾತ್ವೋಃ ಇಕಃ ದೀರ್ಘಃ ಪದಾಂತೇ। ಪಿಪಠೀಃ। ಪಿಪಠಿಷೌ। ಪಿಪಠೀರ್ಭ್ಯಾಮ್।

ಪ. ಛೇ. – ರ್ವೋಃ, ಉಪಧಾಯಾಃ, ದೀರ್ಘಃ, ಇಕಃ।

ಅ. ವೃ– "ಸಿಪಿ ಧಾತೋಃ ರುರ್ವಾ" ಎಂಬ ಸೂತ್ರದಿಂದ 'ಧಾತೋಃ' ಎಂಬ ಪದವೂ, "ಸ್ಕೋಃ ಸಂಯೋಗಾದ್ಯೋರನ್ತೇ ಚ" ಎಂಬ ಸೂತ್ರದಿಂದ 'ಅನ್ತೇ' ಎಂಬ ಪದವೂ ಅನುವೃತ್ತವಾಗುತ್ತದೆ. "ಪದಸ್ಯ" ಎಂಬುದು ಅಧಿಕಾರ ಸೂತ್ರ.

ಅರ್ಥ– ಪದಾನ್ತದಲ್ಲಿ ಇರುವ ರೇಫಾನ್ತ ಅಥವಾ 'ವ್' ಕಾರಾನ್ತ ಧಾತುವಿನ ಉಪಧಾರೂಪವಾದ 'ಇಕ್(ಇ,ಉ,ಋ, ಲೃ) ಗೆ ದೀರ್ಘವು ಬರುತ್ತದೆ.

ಉದಾ– ಪಿಪಠೀಃ –(ಓದುವ ಇಚ್ಛೆಯುಳ್ಳವನು)– 'ಪಠ್' ಧಾತುವಿನಮೇಲೆ 'ಸನ್' ಪ್ರತ್ಯಯವನ್ನು ಸೇರಿಸಿದಮೇಲೆ ದ್ವಿತ್ವ ಕಾರ್ಯಮಾಡಿ, ಅದಕ್ಕೆ ಅಭ್ಯಾಸ ಮತ್ತು ಆ ಅಭ್ಯಾಸಕ್ಕೆ ಇತ್ವ ಮಾಡಿದಮೇಲೆ, ಇಡಾಗಮ ಮತ್ತು 'ಸನ್' ನಲ್ಲರುವ 'ಸ್' ಕಾರಕ್ಕೆ, 'ಷತ್ವ(ಷ್)' ಮಾಡಿದಮೇಲೆ, ಪಿಪಠಿಷ್ ಎಂದಾಗುತ್ತದೆ. ಇದಕ್ಕೂ ಮೊದಲು "ಸನಾದ್ಯಂತಾ ಧಾತವಃ" ಎಂಬ ಸೂತ್ರದಿಂದ 'ಧಾತು ಸಂಜ್ಞೆ' ಬಂದು ನಂತರ' 'ಕ್ವಿಪ್' ಪ್ರತ್ಯಯ ಸೇರಿಸಿದಮೇಲೆ ಅದಕ್ಕೆ ಸರ್ವಾಪಹಾರವಾಗಿ ಪಿಪಠಿಷ್ ಎಂಬುದಕ್ಕೆ 'ಪ್ರಾತಿಪದಿಕ ಸಂಜ್ಞೆ' ಬಂದು, ಪಿಪಠಿಷ್+ಸು(ಸ್) ಎಂದಾಗುತ್ತದೆ. "ಹಲ್ಙ್ಯಾಭ್ಯೋ ದೀರ್ಘಾತ್ ಸುತಿಸ್ಯಪೃಕ್ತಮ್ ಹಲ್" ಎಂಬ ಸೂತ್ರದಿಂದ 'ಸ್' ಕಾರ ಲೋಪವಾಗಿ, ಪಿಪಠಿಷ್ ಎಂದಾಗುತ್ತದೆ. ಪರತ್ರಿಪಾದಿಯಾದ "ಆದೇಶ ಪ್ರತ್ಯಯಯೋಃ" ಎಂಬ ಸೂತ್ರದಿಂದ ಆಗುವ 'ಷತ್ವ' ವು ಪೂರ್ವತ್ರಿಪಾದಿಯಾದ "ಸಸಜುಷೋ ರುಃ" ಎಂಬ

ಸೂತ್ರದ ದೃಷ್ಟಿಯಲ್ಲಿ ಅಸಿದ್ಧವಾಗೋಣದ್ದರಿಂದ, 'ಷ್' ಕಾರಕ್ಕೆ 'ಸ್' ಕಾರ ಬಂದು, ಪಿಪಠಿಸ್ ಎಂದಾಗಿ 'ಸ್' ಕಾರಕ್ಕೆ 'ರುತ್ವ' ಬಂದು, ಪಿಪಠಿರ್ ಎಂದಾಗುತ್ತದೆ. ಪ್ರಕೃತ ಸೂತ್ರದಿಂದ 'ಠ್' ಕಾರದ ನಂತರ ಇರುವ ಉಪಧೆಯಾದ 'ಇ' ಕಾರಕ್ಕೆ ದೀರ್ಘ ಬಂದು, ಪಿಪಠೀರ್ ಎಂದಾಗುತ್ತದೆ. ನಂತರ "ಖರವಸಾನಯೋ-ರ್ವಿಸರ್ಜನೀಯಃ" ಎಂಬ ಸೂತ್ರದಿಂದ ರೇಫಕ್ಕೆ ವಿಸರ್ಗ ಬಂದು, ಪಿಪಠೀಃ ಎಂದು ರೂಪವಾಗುತ್ತದೆ.

ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, ರುತ್ವ ಮತ್ತು ದೀರ್ಘಗಳು ಆಗದೇ ಯಾವ ವಿಕಾರವೂ ಇಲ್ಲದೇ ಪಿಪಠಿಷೌ ಇತ್ಯಾದಿ ರೂಪಗಳಾಗುತ್ತವೆ.

ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಪ್ರಕೃತ ಸೂತ್ರದಿಂದ ಉಪಧೆಯಾದ 'ಇ' ಕಾರಕ್ಕೆ 'ದೀರ್ಘ' ಬಂದು, ಪಿಪಠೀರ್ಭ್ಯಾಮ್ ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

**('ಸ್' ಕಾರಕ್ಕೆ ಮೂರ್ಧನ್ಯಾದೇಶ(ಷ್) ಕಾರವನ್ನು ವಿಧಿಸುವ ಸೂತ್ರ)**

**ಸೂತ್ರ – ೩೫೩. ನುಮ್ ವಿಸರ್ಜನೀಯಶರ್ವ್ಯವಾಯೇऽಪಿ (೮.೩.೫೮)**

ವೃತ್ತಿಃ–ಏತೌ ಪ್ರತ್ಯೇಕಂ ವ್ಯವಧಾನೇಪಿ ಇಣ್-ಕುಭ್ಯಾಂ ಪರಸ್ಯ ಸಸ್ಯ ಮೂರ್ಧನ್ಯಾದೇಶಃ। ಷ್ಟುತ್ವೇನ ಪೂರ್ವಸ್ಯ ಷಃ। ಪಿಪಠೀಷ್ಷು। ಪಿಪಠೀಃಷು। ಚಿಕೀಃ। ಚಿಕೀರ್ಷೌ। ಚಿಕೀರ್ಭ್ಯಾಮ್। ಚಿಕೀರ್ಷುಃ ವಿದ್ವಾನ್। ವಿದ್ವಾಂಸೌ। ಹೇ ವಿದ್ವನ್।

ಪ. ಛೇ. – ನುಮ್, ವಿಸರ್ಜನೀಯ-ಶರ್, ವ್ಯವಾಯೇ, ಅಪಿ।

ಅ. ವೃ. – "ಇಣ್ಕೋಃ" ಎಂಬುದು ಅಧಿಕಾರ ಸೂತ್ರ. "ಸಹೇಃ ಸಾಢಃ ಸಃ" ಎಂಬ ಸೂತ್ರದಿಂದ 'ಸಃ' ಎಂಬ ಪದವೂ "ಅಪದಾನ್ತಸ್ಯ ಮೂರ್ಧನ್ಯಃ" ಎಂಬ ಸೂತ್ರದಿಂದ 'ಮೂರ್ಧನ್ಯಃ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ– 'ನುಮ್' ವಿಸರ್ಜನೀಯ ಮತ್ತು ಶರ್ ಇವುಗಳಲ್ಲಿ ಯಾವದಾದರೂ ಒಂದರಿಂದಲೂ ವ್ಯವಹಿತವಾದಾಗಲೂ, 'ಇಣ್' ಮತ್ತು ಕ್-ವರ್ಗ ಇವುಗಳ ಪರದಲ್ಲಿರುವ 'ಸ್' ಕಾರಕ್ಕೆ ಮೂರ್ಧನ್ಯಾದೇಶ(ಷ್)ವು ಬರುತ್ತದೆ.

"ಆದೇಶ ಪ್ರತ್ಯಯಯೋಃ" ಸೂತ್ರದಿಂದ ಷತ್ವ ಮಾಡುವುದಕ್ಕಾಗಿ 'ಸ್' ಕಾರ ಮತ್ತು 'ಇಣ್' ಅಥವಾ ಕ್-ವರ್ಗದ ಮಧ್ಯದಲ್ಲಿ ಯಾವ ಬೇರೆ ವರ್ಣದಿಂದಲೂ ವ್ಯವಹಿತವಾಗಬಾರದು. ಅದಕ್ಕಾಗಿಯೇ 'ಇಣ್' ಮತ್ತು ಕ್-ವರ್ಗಗಳು 'ಷತ್ವ' ಬರುವದಕ್ಕಾಗಿ ನಿಮಿತ್ತಗಳಾಗಿವೆ. ಹಾಗೆ ವ್ಯವಧಾನವಾಗಬೇಕಾದರೆ, 'ನುಮ್'

'ವಿಸರ್ಜನೀಯ(ವಿಸರ್ಗ)' ಮತ್ತು 'ಶರ್' ಪ್ರತ್ಯಾಹಾರದಲ್ಲಿಯ ವರ್ಣಗಳಿಂದ ವ್ಯವಧಾನವಾಗಬಹುದು ಎಂದು ಅರ್ಥ.

ಉದಾ–ಪಿಪಠೀಷ್ಷು, ಪಿಪಠೀಃಷು ಎಂಬಲ್ಲಿ ಪಿಪಠಿಷ್ ಶಬ್ದದ ಸಪ್ತಮೀ ಬಹುವಚನದಲ್ಲಿ ಪಿಪಠಿಷ್+ಸು ಎಂದಿದ್ದಾಗ, "ಸಸಜುಷೋ ರುಃ" ಎಂಬ ಸೂತ್ರದಿಂದ ರುತ್ವ(ರ್) ಮಾಡಿ "ರ್ವೋರುಪಧಾಯಾ ದೀರ್ಘ ಇಕಃ" ಎಂಬ ಸೂತ್ರದಿಂದ ದೀರ್ಘವಾದಮೇಲೆ, ಪಿಪಠೀರ್+ಸು ಎಂದಾಗುತ್ತದೆ. ಮುಂದೆ ರೇಫಕ್ಕೆ

"ಖರವಸಾನಯೋರ್ವಿಸರ್ಜನೀಯಃ" ಎಂಬ ಸೂತ್ರದಿಂದ ವಿಸರ್ಗವು ಬರುತ್ತದೆ. ನಂತರ ವಿಸರ್ಗದ ಸ್ಥಾನದಲ್ಲಿ "ವಿಸರ್ಜನೀಯಸ್ಯ ಸಃ" ಎಂಬ ಸೂತ್ರದಿಂದ, 'ಸ್' ಕಾರಾದೇಶವು ಪ್ರಾಪ್ತವಾಗಬೇಕಿದ್ದಾಗ, ಅದನ್ನು ಬಾಧಿಸಿ "ವಾ ಶರಿ" ಎಂಬ ಸೂತ್ರದಿಂದ ವೈಕಲ್ಪಿಕ ವಿಸರ್ಗವು ಆದೇಶವಾಗಿ ಬರುತ್ತದೆ. ಆಗ ಪಿಪಠೀಃ+ಸು ಮತ್ತು ಪಿಪಠೀಸ್+ಸು ಎಂದಾಗುತ್ತವೆ. ಈಗ "ಆದೇಶ ಪ್ರತ್ಯಯಯೋಃ" ಎಂಬ ಸೂತ್ರದಿಂದ 'ಸುಪ್' ನ 'ಸ್' ಕಾರಕ್ಕೆ 'ಷ್' ಕಾರ ಬರಬೇಕಾಗಿದೆ. ಆದರೆ 'ಈ'ಕಾರ ಮತ್ತು 'ಸ್' ಕಾರಗಳ ಮಧ್ಯದಲ್ಲಿ ಒಂದೆಡೆ ವಿಸರ್ಗವೂ ಮತ್ತೊಂದು ಕಡೆಗೆ 'ಸ್' ಕಾರವೂ ವ್ಯವಹಿತವಾಗಿರುತ್ತದೆ. ಆದುದರಿಂದ ಈ ಸೂತ್ರವು ಪ್ರವೃತ್ತವಾಗುವುದಿಲ್ಲ. ಆದುದರಿಂದ ಪ್ರಕೃತ ಸೂತ್ರವು ಪ್ರವೃತ್ತವಾಗಿ ಈ ಎರಡು ವರ್ಣಗಳು ಎರಡೂ ರೂಪಗಳಲ್ಲಿ ವ್ಯವಹಿತವಾಗಿದ್ದರೂ 'ಸ್'ಕಾರಕ್ಕೆ ಷತ್ವವು ಬಂದೇ ಬರುತ್ತದೆ. ಆದುದರಿಂದ ಪಿಪಠೀಸ್+ಷು ಮತ್ತು ಪಿಪಠೀಃ+ಷು ಎಂದಿದ್ದಾಗ, ಷ್ಟುತ್ವ ಸಂಧಿಯಿಂದ 'ಸ್' ಕಾರಕ್ಕೆ 'ಷ್' ಕಾರವು ಬಂದು ಪಿಪಠೀಷ್ಷು ಎಂದು ಮೊದಲನೆಯ ರೂಪವು ಸಿದ್ಧವಾಗುತ್ತದೆ. ಎರಡನೆಯ ರೂಪದಲ್ಲಿ ವಿಸರ್ಗನಂತರ ಇರುವ 'ಸ್' ಕಾರಕ್ಕೆ ಷತ್ವ ಬಂದು ಪಿಪಠೀಃಷು ಎಂದು ಎರಡನೆಯ ರೂಪವು ಸಿದ್ಧವಾಗಿದೆ.

**(ಷ್ ಕಾರಾಂತ ಪಿಪಠಿಷ್ ಶಬ್ದದ ರೂಪಗಳು)**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಪಿಪಠೀಃ | ಪಿಪಠಿಷೌ | ಪಿಪಠಿಷಃ |
| ದ್ವಿತೀ೦ಯಾ | ಪಿಪಠಿಷಮ್ | ಪಿಪಠಿಷೌ | ಪಿಪಠಿಷಃ |
| ತೃತೀ೦ಯಾ | ಪಿಪಠಿಷಾ | ಪಿಪಠೀರ್ಭ್ಯಾಮ್ | ಪಿಪಠೀರ್ಭಿಃ |
| ಚತುರ್ಥೀ | ಪಿಪಠಿಷೇ | ಪಿಪಠೀರ್ಭ್ಯಾಮ್ | ಪಿಪಠೀರ್ಭ್ಯಃ |
| ಪಞ್ಚಮೀ | ಪಿಪಠಿಷಃ | ಪಿಪಠೀರ್ಭ್ಯಾಮ್ | ಪಿಪಠೀರ್ಭ್ಯಃ |
| ಷಷ್ಠೀ | ಪಿಪಠಿಷಃ | ಪಿಪಠಿಷೋಃ | ಪಿಪಠಿಷಾಮ್ |
| ಸಪ್ತಮ್ಪಿ | ಪಿಪಠಿಷಿ | ಪಿಪಠಿಷೋಃ | ಪಿಪಠೀಷ್ಷು। ಪಿಪಠೀಃಷು |
| ಸಂಬೋಧನ | ಹೇ ಪಿಪಠೀಃ! | ಹೇ ಪಿಪಠಿಷೌ! | ಹೇ ಪಿಪಠಿಷಃ! |

ಉದಾ– ಚಿಕೀಃ (ಮಾಡುವ ಇಚ್ಛೆಯುಳ್ಳವನು) – ಕರ್ತುಮ್ ಇಚ್ಛತಿ ಇತಿ ಚಿಕೀರ್ಷತಿ– 'ಕೃ' ಧಾತುವಿನಮೇಲೆ 'ಸನ್' ಪ್ರತ್ಯಯವನ್ನು ಸೇರಿಸಿದ ಮೇಲೆ ದ್ವಿತ್ವ ಮೊದಲಾದವುಗಳನ್ನು ಮಾಡಿದಮೇಲೆ, ಚಿಕೀರ್ಷ್ ಎಂದಿರುತ್ತದೆ ಇದಕ್ಕೆ 'ಧಾತು ಸಂಜ್ಞೆ' ಬಂದು, ಚಿಕೀರ್ಷ್+ಕ್ವಿಪ್ ಎಂದಿದ್ದಾಗ, ಅದು(ಕ್ವಿಪ್) ಸರ್ವಾಪಹಾರವಾಗಿ ಚಿಕೀರ್ಷ್ ಎಂದೇ ಉಳಿಯುತ್ತದೆ. ಇದಕ್ಕೆ 'ಪ್ರಾತಿಪದಿಕ ಸಂಜ್ಞೆ' ಬಂದಮೇಲೆ 'ಸು(ಸ್)' ಸೇರಿಸಿದಾಗ, "ಹಲ್ಙ್ಯಾಭ್ಯೋ ದೀರ್ಘಾತ್ ಸುತಿಸ್ಯಪೃಕ್ತಮ್ ಹಲ್" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬಂದಮೇಲೆ, 'ಷ್' ಕಾರವು ಅಸಿದ್ಧವಾಗಿರುವುದರಿಂದ 'ಸ್'

ಕಾರವು ಕಾಣಿಸಿಕೊಳ್ಳುತ್ತದೆ. ಆ 'ಸ್' ಕಾರಕ್ಕೆ "ರಾತ್ ಸಸ್ಯ" ಎಂಬ ಸೂತ್ರದ ಪ್ರಕಾರ "ಸಂಯೋಗಾಂತಸ್ಯ ಲೋಪಃ" ಎಂಬ ಸೂತ್ರದಿಂದ ಲೋಪವಾಗಿ ಚಿಕೀರ್ ಎಂದಿರುತ್ತದೆ. ಈ ರೇಫಕ್ಕೆ ವಿಸರ್ಗ ಬಂದು ಚಿಕೀಃ ಎಂಬ ರೂಪವು ಸಿದ್ಧವಾಗುತ್ತದೆ.

**(ಷ್ ಕಾರಾಂತ ಚಿಕೀರ್ಷ್ ಶಬ್ದದ ರೂಪಗಳು)**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಚಿಕೀಃ | ಚಿಕೀರ್ಷೌ | ಚಿಕೀರ್ಷಃ |
| ದ್ವಿತೀಯಾ | ಚಿಕೀರ್ಷಮ್ | ಚಿಕೀರ್ಷೌ | ಚಿಕೀರ್ಷಃ |
| ತೃತೀಯಾ | ಚಿಕೀರ್ಷಾ | ಚಿಕೀರ್ಭ್ಯಾಮ್ | ಚಿಕೀರ್ಭಿಃ |
| ಚತುರ್ಥೀ | ಚಿಕೀರ್ಷೇ | ಚಿಕೀರ್ಭ್ಯಾಮ್ | ಚಿಕೀರ್ಭ್ಯಃ |
| ಪಞ್ಚಮೀ | ಚಿಕೀರ್ಷಃ | ಚಿಕೀರ್ಭ್ಯಾಮ್ | ಚಿಕೀರ್ಭ್ಯಃ |
| ಷಷ್ಠೀ | ಚಿಕೀರ್ಷಃ | ಚಿಕೀರ್ಷೋಃ | ಚಿಕೀರ್ಷಾಮ್ |
| ಸಪ್ತಮಿ | ಚಿಕೀರ್ಷಿ | ಚಿಕೀರ್ಷೋಃ | ಚಿಕೀರ್ಷು |
| ಸಂಬೋಧನ | ಹೇ ಚಿಕೀಃ! | ಹೇ ಚಿಕೀರ್ಷೌ! | ಹೇ ಚಿಕೀರ್ಷಃ! |

ಸೂಚನೆ: ಸನಾದ್ಯನ್ತವಾದ ಈ ರೂಪವು ಧಾತುಸಂಜ್ಞೆಯನ್ನು ಹೊಂದುವುದಕ್ಕೆ ಮೊದಲು ದೀರ್ಘವಾಗಿದೆ. ಆದುದರಿಂದ 'ಸು' ಮೊದಲಾದ ಪ್ರತ್ಯಯಗಳು ಬಂದಮೇಲೂ ದೀರ್ಘ ಬರುತ್ತದೆ ಎಂಬ ಪ್ರಶ್ನೆ ಉದ್ಭವಿಸುವುದಿಲ್ಲ.

ಅಜಾದಿ ಪ್ರತ್ಯಯಗಳು ಪರದಲ್ಲಿದ್ದಾಗ ಯಾವ ವ್ಯತ್ಯಾಸವೂ ಇರುವದಿಲ್ಲ.

ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, 'ಷ್' ಕಾರಕ್ಕೆ 'ಸಂಯೋಗಾಂತ ಲೋಪ' ಮಾಡಿದಾಗ, ಮೇಲಿನ ರೂಪಗಳು ಸಿದ್ಧವಾಗಿರುತ್ತವೆ.

**ಇಲ್ಲಿಗೆ 'ಷ್' ಕಾರಾಂತ ಶಬ್ದಗಳು ಮುಗಿದವು.**

**ಇನ್ನು ಮುಂದೆ 'ಸ್' ಕಾರಾಂತ ಶಬ್ದಗಳು ಆರಂಭವಾಗುತ್ತವೆ.**

ಉದಾ– ವಿದ್ವಾನ್ (ತಿಳಿದವನು) – 'ವಿದ್' ಜ್ಞಾನೇ ಎಂಬ ಧಾತುವಿನ ಮೇಲೆ 'ವಸು' ಪ್ರತ್ಯಯವನ್ನು ಸೇರಿಸಿದಾಗ 'ವಿದ್ವಸ್' ಎಂಬ ಶಬ್ದವು ನಿಷ್ಪನ್ನವಾಗುತ್ತದೆ. ಇದಕ್ಕೆ 'ಪ್ರಾತಿಪದಿಕ ಸಂಜ್ಞೆ' ಬಂದಮೇಲೆ, 'ಸು(ಸ್)' ಪ್ರತ್ಯಯವನ್ನು ಸೇರಿಸಿ "ಉಗಿದಚಾಂ ಸರ್ವನಾಮಸ್ಥಾನೇಽಧಾತೋಃ" ಎಂಬ ಸೂತ್ರದಿಂದ 'ನುಮ್(ನ್)' ಪ್ರತ್ಯಯವು ಆಗಮವಾಗಿ ಬರುವಾಗ "ಮಿದಚೋಽನ್ತ್ಯಾತ್ ಪರಃ" ಎಂಬ ಸೂತ್ರದಿಂದ ಅಂತ್ಯ ಅಚ್ ಆದ 'ಅ' ಕಾರ ಬಂದು, ವಿದ್ವನ್‌ಸ್+ಸ್ ಎಂದಿರುತ್ತದೆ. "ಸಾಂತಮಹತಃ ಸಂಯೋಗಸ್ಯ" ಎಂಬ ಸೂತ್ರದಿಂದ 'ನ್' ಕಾರದ ಪೂರ್ವದಲ್ಲಿರುವ ಉಪಧಾರೂಪವಾದ 'ಅ' ಕಾರಕ್ಕೆ ದೀರ್ಘ ಬಂದು, ವಿದ್ವಾನ್‌ಸ್+ಸ್ ಎಂದಿರುತ್ತದೆ. ಕೊನೆಯ 'ಸ್' ಕಾರಕ್ಕೆ "ಹಲ್ಙ್ಯಾಬ್ಭ್ಯೋ ದೀರ್ಘಾತ್ ಸುತಿಸ್ಯಪೃಕ್ತಮ್ ಹಲ್" ಎಂಬ ಸೂತ್ರದಿಂದ ಲೋಪ ಬಂದಮೇಲೆ ಇನ್ನೊಂದು 'ಸ್' ಕಾರಕ್ಕೆ ಸಂಯೋಗಾಂತ

ಲೋಪ ಬಂದು ವಿದ್ವಾನ್ ಎಂದು ರೂಪವು ಸಿದ್ಧವಾಗುತ್ತದೆ. ಮುಂದೆ ಸರ್ವನಾಮ ಸ್ಥಾನವು ಪರದಲ್ಲಿದ್ದಾಗ, 'ನುಮ್(ನ್)' ಹಾಗೂ ದೀರ್ಘಗಳು ಬಂದು, "ನಶ್ಚಾಪದಾನ್ತಸ್ಯ ಝಲಿ" ಎಂಬ ಸೂತ್ರದಿಂದ 'ನ್' ಕಾರಕ್ಕೆ ಅನುಸ್ವಾರ ಬಂದು, ವಿದ್ವಾಂಸೌ, ವಿದ್ವಾಂಸಃ ಇತ್ಯಾದಿ ರೂಪಗಳಾಗುತ್ತವೆ.

**(ಸಂಪ್ರಸಾರಣವನ್ನು ವಿಧಿಸುವ ಸೂತ್ರ)**

ಸೂಚನೆ: ಅಸರ್ವನಾಮಸ್ಥಾನವು ಪರದಲ್ಲಿದ್ದಾಗ, ಪ್ರಕೃತ ಸೂತ್ರವು ಪ್ರವೃತ್ತವಾಗುತ್ತದೆ.

ಸೂತ್ರ – 354.ವಸೋಃ ಸಂಪ್ರಸಾರಣಮ್ (6.4.131)

ವೃತ್ತಿಃ–ವಸ್ವಂತಸ್ಯ ಭಸ್ಯ ಸಂಪ್ರಸಾರಣಂ ಸ್ಯಾತ್। ವಿದುಷಃ।"262. ವಸುಸ್ರಂಸ್ವಿತಿ" ದಃ। ವಿದ್ವದ್ಭ್ಯಾಮ್।

ಅ. ವ್ಯ. – "ಭಸ್ಯ" ಮತ್ತು "ಅಂಗಸ್ಯ" ಎಂಬವು ಅಧಿಕಾರ ಸೂತ್ರಗಳು.

ಅರ್ಥ–'ವಸು' ಪ್ರತ್ಯಯಾಂತವಾದ 'ಭ' ಸಂಜ್ಞೆಯುಳ್ಳ ಅಂಗಕ್ಕೆ ಸಂಪ್ರಸಾರಣವು ಬರುತ್ತದೆ.

'ಸೂಚನೆ: 'ಭ' ಸಂಜ್ಞೆಯ ಲಕ್ಷಣಗಳನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು. ಸಂಪ್ರಸಾರಣ ಎಂದರೆ 'ಇಗ್ಯಣಃ ಸಂಪ್ರಸಾರಣಂ' ಎಂದು ತಿಳಿಯಬೇಕು.

ಉದಾ–ವಿದುಷಃ– ವಿದ್ವಸ್(ವಿದ್+ವಸ್) ಶಬ್ದದಮೇಲೆ 'ಶಸ್(ಅಸ್)' ಪ್ರತ್ಯಯವನ್ನು ಸೇರಿಸಿದಮೇಲೆ 'ಭ' ಸಂಜ್ಞೆ ಬಂದು, ವಿದ್+ವಸ್+ಅಸ್ ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ವ್' ಕಾರಕ್ಕೆ 'ಉ' ಕಾರ (ಸಂಪ್ರಸಾರಣ) ಬಂದು, ವಿದ್+ಉ+ಅಸ್+ಅಸ್ ಎಂದಿದ್ದಾಗ, ಉ–ಕಾರ ಅ–ಕಾರಗಳು ಸೇರಿ, "ಸಂಪ್ರಸಾರಣಾಚ್ಚ" ಎಂಬ ಸೂತ್ರದಿಂದ ಪೂರ್ವರೂಪವನ್ನು ಪಡೆದು, 'ಉಸ್' ಎಂದಾಗುತ್ತದೆ. ಆಗ ವಿದ್+ಉಸ್+ಅಸ್=ವಿದುಸ್+ಅಸ್ ಎಂದಿರುತ್ತದೆ. "ಆದೇಶ ಪ್ರತ್ಯಯಯೋಃ' ಎಂಬ ಸೂತ್ರದಿಂದ 'ಇಣ್' ಪ್ರತ್ಯಯಾಂತರ್ಗತವಾದ 'ಉ' ಕಾರದ ಪರದಲ್ಲಿರುವ ಆದೇಶರೂಪವಾದ 'ಸ್' ಕಾರಕ್ಕೆ 'ಷತ್ವ' ಬಂದು, ವಿದುಷ್+ಅಸ್=ವಿದುಷಸ್ ಎಂದಿರುತ್ತದೆ. ನಂತರ 'ಸ್' ಕಾರಕ್ಕೆ ರುತ್ವ–ವಿಸರ್ಗಗಳಿಂದ ವಿದುಷಃ ಎಂದು ರೂಪವಾಗಿದೆ. ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗಲೂ, ಇದೇ ರೀತಿಯಲ್ಲಿ ವಿದುಷಾ, ವಿದುಷೇ ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, 'ಭ' ಸಂಜ್ಞೆ ಇಲ್ಲದೇ ಇರೋಣದರಿಂದ, ಸಂಪ್ರಸಾರಣವು ಬರುವುದಿಲ್ಲ. ಆದರೆ "ಸ್ವಾದಿಷ್ವಸರ್ವನಾಮಸ್ಥಾನೇ" ಎಂಬ ಸೂತ್ರದಿಂದ 'ಪದಸಂಜ್ಞೆ' ಬಂದು, "ವಸು–ಸ್ರಂಸು–ಧ್ವಂಸ್ವನಡುಹಾಮ್ ದಃ" ಎಂಬ ಸೂತ್ರದಿಂದ 'ಸ್' ಕಾರದ ಸ್ಥಾನದಲ್ಲಿ 'ದ್' ಕಾರವು ಆದೇಶವಾಗಿ ಬಂದು, ವಿದ್ವದ್ಭ್ಯಾಮ್, ವಿದ್ವದ್ಭಿಃ ಮೊದಲಾದ ರೂಪಗಳು ಸಿದ್ಧವಾಗುತ್ತವೆ.

ಸಪ್ತಮೀ ಬಹುವಚನ ಪ್ರತ್ಯಯವಾದ 'ಸುಪ್' ಪರದಲ್ಲಿದ್ದಾಗ, 'ದ್' ಕಾರದ ಸ್ಥಾನದಲ್ಲಿ "ಖರಿಚ' ಎಂಬ ಸೂತ್ರದಿಂದ ಚರ್ತ್ವ ದಿಂದ 'ತ್' ಕಾರವು ಆದೇಶವಾಗಿ

ಬಂದು ವಿದ್ವತ್ಸು ಎಂದು ರೂಪವಾಗುತ್ತದೆ. ಸಂಬೋಧನ ಏಕವಚನದಲ್ಲಿ "ಸಾಂತಮಹತಃ ಸಂಯೋಗಸ್ಯ" ಎಂಬ ಸೂತ್ರವು ಪ್ರವೃತ್ತವಾಗದೇ, ಉಪಧೆಯಾದ 'ಅ' ಕಾರಕ್ಕೆ ದೀರ್ಘವು ಬರುವುದಿಲ್ಲ.

**(ಸ್ ಕಾರಾನ್ತ ವಿದ್ವಸ್ ಶಬ್ದದ ರೂಪಗಳು)**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ವಿದ್ವಾನ್ | ವಿದ್ವಾಂಸೌ | ವಿದ್ವಾಂಸಃ |
| ದ್ವಿತೀಯಾ | ವಿದ್ವಾಂಸಮ್ | ವಿದ್ವಾಂಸೌ | ವಿದುಷಃ |
| ತೃತೀಯಾ | ವಿದುಷಾ | ವಿದ್ವದ್ಭ್ಯಾಮ್ | ವಿದ್ವದ್ಭಿಃ |
| ಚತುರ್ಥೀ | ವಿದುಷೇ | ವಿದ್ವದ್ಭ್ಯಾಮ್ | ವಿದ್ವದ್ಭ್ಯಃ |
| ಪಞ್ಚಮೀ | ವಿದುಷಃ | ವಿದ್ವದ್ಭ್ಯಾಮ್ | ವಿದ್ವದ್ಭ್ಯಃ |
| ಷಷ್ಠೀ | ವಿದುಷಃ | ವಿದುಷೋಃ | ವಿದುಷಾಮ್ |
| ಸಪ್ತಮಿ | ವಿದುಷಿ | ವಿದುಷೋಃ | ವಿದ್ವತ್ಸು |
| ಸಂಬೋಧನ | ಹೇ ವಿದ್ವನ್! | ಹೇ ವಿದ್ವಾಂಸೌ! | ಹೇ ವಿದ್ವಾಂಸಃ! |

**('ಸ್' ಕಾರಾನ್ತ ಇಯಸುನ್ ಪ್ರತ್ಯಯಾನ್ತ ಶ್ರೇಯಸ್ ಶಬ್ದದ ರೂಪಗಳು)**

[ಸೂಚನೆ: ವಿದ್ವಸ್ ಶಬ್ದದಂತೆಯೇ ಇಯಸುನ್ ಪ್ರತ್ಯಯಾನ್ತವಾದ ಶ್ರೇಯಸ್ ಶಬ್ದದ ರೂಪ ಇರುತ್ತವೆ. ಆದರೆ 'ಸಂಪ್ರಸಾರಣ' ಮತ್ತು ಪದಾನ್ತದಲ್ಲಿ 'ದ್' ಕಾರವು ಬರದು. ಉದಾ– ಶ್ರೇಯಾನ್(ಮಂಗಳವನ್ನುಂಟು ಮಾಡುವ ಅಥವಾ ಒಳ್ಳೆಯದಾದ)]

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಶೇಯಾನ್ | ಶ್ರೇಯಾಂಸೌ | ಶ್ರೇಯಾಂಸಃ |
| ದ್ವಿತೀಯಾ | ಶ್ರೆಯಾಂಸಮ್ | ಶ್ರೆಯಾಂಸೌ | ಶ್ರೇಯಸಃ |
| ತೃತೀಯಾ | ಶ್ರೇಯಸಾ | ಶ್ರೇಯೋಭ್ಯಾಮ್ | ಶ್ರೇಯೋಭಿಃ |
| ಚತುರ್ಥೀ | ಶ್ರೇಯಸೇ | ಶ್ರೇಯೋಭ್ಯಾಮ್ | ಶ್ರೇಯೋಭ್ಯಃ |
| ಪಞ್ಚಮೀ | ಶ್ರೇಯಸಃ | ಶ್ರೇಯೋಭ್ಯಾಮ್ | ಶ್ರೇಯೋಭ್ಯಃ |
| ಷಷ್ಠೀ | ಶ್ರೇಯಸಃ | ಶ್ರೇಯಸೋಃ | ಶ್ರೇಯಸಾಮ್ |
| ಸಪ್ತಮಿ | ಶ್ರೇಯಸಿ | ಶ್ರೇಯಸೋಃ | ಶ್ರೇಯಸ್ಸು, ಶ್ರೇಯಃಸು |
| ಸಂಬೋಧನ | ಹೇ ಶ್ರೇಯನ್! | ಹೇ ಶ್ರೇಯಾಂಸೌ! | ಹೇ ಶ್ರೇಯಾಂಸಃ! |

**(ಅಸುಙ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ – 355. ಪುಂಸೋಽಸುಙ್ (7.1.89)**

ವೃತ್ತಿಃ–ಸರ್ವನಾಮಸ್ಥಾನೇ ವಿವಕ್ಷಿತೇ ಪುಂಸಃ ಅಸುಙ್(ಅಸ್) ಸ್ಯಾತ್। ಪುಮಾನ್।

**ಹೇ ಪುಮನ್!। ಪುಮಾಂಸೌ। ಪುಂಸಃ। ಪುಂಭ್ಯಾಮ್। ಪುಂಸು। (304) "ಋದುಶಸನೇ" ಇತಿ ಅನಙ್। ಉಶನಾ। ಉಶನಸೌ।**

ವಾ॥ **ಅಸ್ಯ ಸಂಬುದ್ಧೌ ವಾ ಅನಙ್, ನಲೋಪಶ್ಚ ವಾ ವಾಚ್ಯಃ॥**

ಹೇ ಉಶನ, ಹೇ ಉಶನನ್। ಹೇ ಉಶನಸೌ। ಉಶನೋಭ್ಯಾಮ್। ಉಶನಸ್ಸು। ಅನೇಹಾ। ಅನೇಹಸೌ। ಹೇ ಅನೇಹಃ। ವೇದಾಃ। ವೇದಸೌ। ಹೇ ವೇದಃ। ವೇದೋಭ್ಯಾಮ್।

ಪ. ಛೇ. –ಪುಂಸಃ, ಅಸುಙ್(ಅಸ್)।

ಅ. ವೃ.–"ಇತೋಽತ್ ಸರ್ವನಾಮಸ್ಥಾನೇ" ಸೂತ್ರದಿಂದ 'ಸರ್ವನಾಮಸ್ಥಾನೇ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ–ಸರ್ವನಾಮಸ್ಥಾನ ಸಂಜ್ಞೆಯುಳ್ಳ ಪ್ರತ್ಯಯದ ವಿವಕ್ಷೆ ಇದ್ದಾಗ, 'ಪುಂಸ್' ಶಬ್ದಕ್ಕೆ 'ಅಸುಙ್(ಅಸ್)' ಆದೇಶವು ಬರುತ್ತದೆ.

ಸೂಚನೆ: 'ಅಸುಙ್' ಎಂಬುದು 'ಙಿತ್' ಆಗಿರುವುದರಿಂದ, "ಙಿಚ್ಚ" ಎಂಬ ಸೂತ್ರದ ಪ್ರಕಾರ 'ಪುಂಸ್' ಶಬ್ದದ 'ಸ್'ಕಾರಕ್ಕೆ ಈ ಆದೇಶವು ಬರುತ್ತದೆ.

ಉದಾ– ಪುಮಾನ್(ಪುರುಷನು) 'ಪೂಙ್' ಧಾತುವಿನಮೇಲೆ 'ಡುಮ್‌ಸುನ್' ಪ್ರತ್ಯಯವನ್ನು ಸೇರಿಸಿದಾಗ, 'ಡ್' ಕಾರ ಮತ್ತು 'ಟಿ' ಸಂಜ್ಞೆಯುಳ್ಳ 'ಉನ್' ಲೋಪವಾದಮೇಲೆ, 'ಉಮ್ಸ್' ಅಷ್ಟೇ ಉಳಿದು, ಪೂ (ಪೂಙ್)+ಉಮ್ಸ್ ಎಂದಿದ್ದಾಗ, ಪರರೂಪ ಬಂದು ಪುಮ್ಸ್ ಎಂದಾಗುತ್ತದೆ. ಇದಕ್ಕೆ 'ಪ್ರಾತಿಪದಿಕ ಸಂಜ್ಞೆ' ಬಂದು, 'ಸು(ಸ್)' ಪ್ರತ್ಯಯವನ್ನು ಸೇರಿಸಿದಾಗ, 'ಸರ್ವನಾಮಸ್ಥಾನ ಸಂಜ್ಞೆ' ಬಂದು ಅದರ 'ಸ್' ಕಾರಕ್ಕೆ ಪ್ರಕೃತ ಸೂತ್ರದಿಂದ 'ಅಸುಙ್' ಆದೇಶ ಬಂದು ಪುಮ್+ಅಸ್+ಸ್= ಪುಮಸ್+ಸ್ ಎಂದಾಗುತ್ತದೆ. "ಉಗಿದಚಾಂ ಸರ್ವನಾಮ ಸ್ಥಾನೇಽಧಾತೋಃ" ಎಂಬ ಸೂತ್ರದಿಂದ 'ನುಮ್(ನ್)' ಆಗಮ ಬಂದು, ಪುಮನ್‌ಸ್+ಸ್ ಎಂದಾಗುತ್ತದೆ. "ಸಾಂತಮಹತಃ ಸಂಯೋಗಸ್ಯ" ಎಂಬ ಸೂತ್ರದಿಂದ ಉಪಧೆಗೆ ದೀರ್ಘ ಬಂದು, ಪುಮಾನ್‌ಸ್+ಸ್ ಎಂದಾಗುತ್ತದೆ. ಕೊನೆಯ 'ಸ್' ಕಾರಕ್ಕೆ "ಹಲ್ಙ್ಯಾಭ್ಯೋ ದೀರ್ಘಾತ್ ಸುತಿಸ್ಯಪೃಕ್ತಮ್ ಹಲ್" ಎಂಬ ಸೂತ್ರದಿಂದ ಲೋಪ ಬಂದು, ಪುಮಾನ್ ಜೊತೆಗೆ ಇರುವ 'ಸ್' ಕಾರಕ್ಕೆ ಸಂಯೋಗಾನ್ತ–ಲೋಪ ಬಂದು, ಪುಮಾನ್ ಎಂದು ರೂಪವು ಸಿದ್ಧವಾಗುತ್ತದೆ. ಈಗ ಸರ್ವನಾಮಸ್ಥಾನ ಅಜಾದಿ ವಿಭಕ್ತಿ ಪರದಲ್ಲಿರೋಣದ್ದರಿಂದ 'ಅಸುಙ್' ಆದೇಶ, ದೀರ್ಘ ಮತ್ತು "ನಶ್ಚಾಪದಾನ್ತಸ್ಯ ಝಲಿ" ಎಂಬ ಸೂತ್ರದಿಂದ 'ನ್'ಕಾರಕ್ಕೆ ಅನುಸ್ವಾರ ಬಂದು, ಪುಮಾಂಸೌ, ಪುಮಾಂಸಃ... ರೂಪಗಳು ಸಿದ್ಧವಾಗುತ್ತವೆ.

ಅಸರ್ವನಾಮಸ್ಥಾನ ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, 'ಅಸುಙ್' ಆದೇಶ ಮತ್ತು ದೀರ್ಘಗಳು ಬರುವದಿಲ್ಲ. ಕೇವಲ 'ನ್' ಕಾರಕ್ಕೆ ಮಾತ್ರ ಅನುಸ್ವಾರ ಬಂದು ಪುಮ್ಸಃ, ಪುಮ್ಸಾ ಇತ್ಯಾದಿ ರೂಪಗಳಾಗುತ್ತವೆ.

ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, "ಸ್ವಾದಿಷ್ವಸರ್ವನಾಮಸ್ಥಾನೇ" ಎಂಬ ಸೂತ್ರದಿಂದ 'ಪದಸಂಜ್ಞೆ' ಬಂದು, 'ಸ್' ಕಾರಕ್ಕೆ ಸಂಯೋಗಾನ್ತ ಲೋಪವಾಗುತ್ತದೆ.

"ಮೋಽನುಸ್ವಾರಃ" ಎಂಬ ಸೂತ್ರದಿಂದ ಅನುಸ್ವಾರ ಹಾಗೂ "ವಾ ಪದಾನ್ತಸ್ಯ" ಎಂಬ ಸೂತ್ರದಿಂದ ವೈಕಲ್ಪಿಕ ಪರಸವರ್ಣ ರೂಪದಲ್ಲಿ 'ಮ್' ಕಾರವು ಬರುತ್ತದೆ. ಪುಂಭ್ಯಾಮ್, ಪುಂಭಿಃ ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

**(ಸ್ ಕಾರಾನ್ತ ಪುಮ್ಸ್ ಶಬ್ದದ ರೂಪಗಳು)**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಪುಮಾನ್ | ಪುಮಾಂಸೌ | ಪುಮಾಂಸಃ |
| ದ್ವಿತೀಯಾ | ಪುಮಾಂಸಮ್ | ಪುಮಾಂಸೌ | ಪುಂಸಃ |
| ತೃತೀಯಾ | ಪುಂಸಾ | ಪುಂಭ್ಯಾಮ್ | ಪುಂಭಿಃ |
| ಚತುರ್ಥೀ | ಪುಂಸೇ | ಪುಂಭ್ಯಾಮ್ | ಪುಮ್ಭ್ಯಃ |
| ಪಞ್ಚಮೀ | ಪುಂಸಃ | ಪುಂಭ್ಯಾಮ್ | ಪುಮ್ಭ್ಯಃ |
| ಷಷ್ಠೀ | ಪುಂಸಃ | ಪುಂಸೋಃ | ಪುಂಸಾಮ್ |
| ಸಪ್ತಮಿ | ಪುಂಸಿ | ಪುಂಸೋಃ | ಪುಮ್ಸು |
| ಸಂಬೋಧನ | ಹೇ ಪುಮನ್! | ಹೇ ಪುಮಾಂಸೌ! | ಹೇ ಪುಮಾಂಸಃ! |

ಸೂಚನೆ: ಪರಸವರ್ಣ ಬಾರದ ಪಕ್ಷದಲ್ಲಿ ಪುಂಭ್ಯಾಮ್, ಪುಂಭಿಃ ಇತ್ಯಾದಿ ರೂಪಗಳಾಗುತ್ತವೆ.

ಉದಾ– ಉಶನಾ (ಶುಕ್ರಾಚಾರ್ಯರು)–'ಸ್' ಕಾರಾನ್ತವಾದ 'ಉಶನಸ್' ಶಬ್ದದ ಮೇಲೆ 'ಸು(ಸ್)' ಪ್ರತ್ಯಯವನ್ನು ಸೇರಿಸಿ, "ಋದುಶನಸ್–ಪುರುದಂಸೋಽನೇಹಸಾಂ ಚ" ಎಂಬ ಸೂತ್ರದಿಂದ 'ಸ್' ಕಾರದ ಸ್ಥಾನದಲ್ಲಿ 'ಅನಙ್' ಆದೇಶವು ಬಂದು, ಉಶನನ್+ಸ್ ಎಂದಿದ್ದಾಗ, "ಸರ್ವನಾಮಸ್ಥಾನೇ ಚಾಸಂಬುದ್ಧೌ" ಎಂಬ ಸೂತ್ರದಿಂದ ಉಪಧೆಗೆ ದೀರ್ಘ ಬಂದು, ಉಶನಾನ್+ಸ್ ಎಂದಾಗುತ್ತದೆ. ನಂತರ "ಹಲ್ಙ್ಯಾಬ್ಭ್ಯೋ ದೀರ್ಘಾತ್ ಸುತಿಸ್ಯಪೃಕ್ತಮ್ ಹಲ್" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬಂದು, "ನಲೋಪಃ ಪ್ರಾತಿಪದಿಕಾನ್ತಸ್ಯ" ಎಂಬ ಸೂತ್ರದಿಂದ 'ನ್' ಕಾರಕ್ಕೆ ಲೋಪ ಬಂದು ಉಶನಾ ಎಂದು ರೂಪವು ಸಿದ್ಧವಾಗುತ್ತದೆ.

ಅಜಾದಿ ಪ್ರತ್ಯಯಗಳು ಪರದಲ್ಲಿದ್ದಾಗ, 'ಅನಙ್' ಆದೇಶವೂ ಬರುವದಿಲ್ಲ, ಮತ್ತು ಉಪಧಾದೀರ್ಘವೂ ಬರುವದಿಲ್ಲ. ಆದ್ದರಿಂದ ಉಶನಸೌ, ಉಶನಸಃ ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, 'ಪದಸಂಜ್ಞೆ' ಬಂದು 'ಸ್' ಕಾರಕ್ಕೆ ರುತ್ವ, ಮತ್ತು "ಹಶಿ ಚ" ಎಂಬುದರಿಂದ ಉತ್ವ(ಉ) ಬಂದು, ಗುಣಸಂಧಿಯಿಂದ ಉಶನೋಭ್ಯಾಮ್, ಉಶನೋಭಿಃ ಇತ್ಯಾದಿ ರೂಪಗಳು ಆಗುತ್ತವೆ.

ಸಪ್ತಮೀ ಬಹುವಚನದ ಪ್ರತ್ಯಯವಾದ 'ಸುಪ್(ಸು)' ಪರದಲ್ಲಿದ್ದಾಗ, "ವಾ ಶರೀ" ಎಂಬ ಸೂತ್ರದಿಂದ ವೈಕಲ್ಪಿಕ ವಿಸರ್ಗವು ಆದೇಶವಾಗಿ ಬಂದು, ಉಶನಃಸು,

ಉಶನಸ್ಸು ಎಂಬ ಎರಡು ರೂಪಗಳು ಸಿದ್ಧವಾಗುತ್ತವೆ.

ಸೂಚನೆ: ಸಂಬೋಧನ ಪ್ರಥಮಾವಿಭಕ್ತಿಯಲ್ಲಿ ಎರಡು ರೂಪಗಳು ಬರುತ್ತವೆ. ಇದನ್ನು ಕೆಳಗಿನ ವಾರ್ತಿಕವು ಸ್ಪಷ್ಟಪಡಿಸುತ್ತದೆ.

**ವಾ॥ ಅಸ್ಯ ಸಂಬುದ್ಧೌ ವಾ ಅನಙ್, ನಲೋಪಶ್ಚ ವಾ ವಾಚ್ಯಃ–**

ಅರ್ಥ– 'ಉಶನಸ್' ಶಬ್ದದ ನಂತರ ಸಂಬುದ್ಧಿ ಏಕವಚನದ ಪ್ರತ್ಯಯವು ಪರದಲ್ಲಿದ್ದಾಗ, ವಿಕಲ್ಪದಿಂದ 'ಅನಙ್' ಆದೇಶವು ಮತ್ತು ವಿಕಲ್ಪದಿಂದ 'ನ್' ಕಾರಕ್ಕೆ ಲೋಪವು ಬರುತ್ತದೆ. 'ಅನಙ್' ಆದೇಶ ಬಂದಾಗ 'ನ್' ಕಾರಕ್ಕೆ ಲೋಪ ಬರುವ ಪಕ್ಷದಲ್ಲಿ ಹೇ ಉಶನ! ಎಂದೂ, ಲೋಪ ಬಾರದ ಪಕ್ಷದಲ್ಲಿ, ಹೇ ಉಶನನ್! ಎಂದೂ ರೂಪಗಳಾಗುತ್ತವೆ. 'ಅನಙ್' ಆದೇಶವೇ ಬಾರದ ಪಕ್ಷದಲ್ಲಿ 'ಸ್' ಕಾರಕ್ಕೆ ರುತ್ವ–ವಿಸರ್ಗಗಳು ಬಂದು ಹೇ ಉಶನಃ! ಎಂದು ರೂಪವಾಗಿ ಒಟ್ಟು ಮೂರು ರೂಪಗಳಾಗುತ್ತವೆ.

**(ಸ್ ಕಾರಾನ್ತ ಉಶನಸ್ ಶಬ್ದದ ರೂಪಗಳು)**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಉಶನಾ | ಉಶನಸೌ | ಉಶನಸಃ |
| ದ್ವಿತೀಯಾ | ಉಶನಸಮ್ | ಉಶನಸೌ | ಉಶನಸಃ |
| ತೃತೀಯಾ | ಉಶನಸಾ | ಉಶನೋಭ್ಯಾಮ್ | ಉಶನೋಭಿಃ |
| ಚತುರ್ಥೀ | ಉಶನಸೇ | ಉಶನೋಭ್ಯಾಮ್ | ಉಶನೋಭ್ಯಃ |
| ಪಞ್ಚಮೀ | ಉಶನಸಃ | ಉಶನೋಭ್ಯಾಮ್ | ಉಶನೋಭ್ಯಃ |
| ಷಷ್ಠೀ | ಉಶನಸಃ | ಉಶನಸೋಃ | ಉಶನಸಾಮ್ |
| ಸಪ್ತಮಿ | ಉಶನಸಿ | ಉಶನಸೋಃ | ಉಶನಸ್ಸು |
| ಸಂಬೋಧನ | ಹೇ ಉಶನ! | ಉಶನಸೌ, | ಹೇ ಉಶನಸಃ!॥ |
| | | ಹೇ ಉಶನನ್! | ಹೇ ಉಶನಃ! |

ಉದಾ– ಅನೇಹಾ(ಸಮಯ)– ಈ 'ಸ್' ಕಾರಾನ್ತ ಶಬ್ದವು ಮೇಲಿನ ಉಶನಸ್ ಶಬ್ದದಂತೆಯೇ ನಡೆಯುತ್ತದೆ.

**(ಸ್ ಕಾರಾನ್ತ ಅನೇಹಸ್ ಶಬ್ದದ ರೂಪಗಳು)**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಅನೇಹಾ | ಅನೇಹಸೌ | ಅನೇಹಸಃ |
| ದ್ವಿತೀಯಾ | ಅನೇಹಸಮ್ | ಅನೇಹಸೌ | ಅನೇಹಸಃ |
| ತೃತೀಯಾ | ಅನೇಹಸಾ | ಅನೇಹೋಭ್ಯಾಮ್ | ಅನೇಹೋಭಿಃ |
| ಚತುರ್ಥೀ | ಅನೇಹಸೇ | ಅನೇಹೋಭ್ಯಾಮ್ | ಅನೇಹೋಭ್ಯಃ |

| | | | |
|---|---|---|---|
| ಪಞ್ಚಮೀ | ಅನೇಹಸಃ | ಅನೇಹೋಭ್ಯಾಮ್ | ಅನೇಹೋಭ್ಯಃ |
| ಷಷ್ಠೀ | ಅನೇಹಸಃ | ಅನೇಹಸೋಃ | ಅನೇಹಸಾಮ್ |
| ಸಪ್ತಮಿ | ಅನೇಹಸಿ | ಅನೇಹಸೋಃ | ಅನೇಹಃಸು,ಅನೇಹಸ್ಸು |
| ಸಂಬೋಧನ | ಹೇ ಅನೇಹಃ! | ಹೇ ಅನೇಹಸೌ! | ಹೇ ಅನೇಹಸಃ! |

ಉದಾ–ವೇಧಾಃ (ಬ್ರಹ್ಮನು)–'ವಿ–ಪೂರ್ವಕ ಧಾ–ಧಾತುವಿನ ಜೊತೆಗೆ 'ಅಸಿ(ಅಸ್)' ಪ್ರತ್ಯಯವನ್ನು ಸೇರಿಸಿದಾಗ, 'ವೇಧಸ್' ಎಂದು ರೂಪವಾಗುತ್ತದೆ. ಇದಕ್ಕೆ 'ಪ್ರಾತಿಪದಿಕ' ಸಂಜ್ಞೆ ಬಂದು, 'ಸು(ಸ್)' ಪ್ರತ್ಯಯವನ್ನು ಸೇರಿಸಿದಾಗ, "ಅತ್ವಸಂತಸ್ಯ ಚಾಧಾತೋಃ" ಎಂಬ ಸೂತ್ರದಿಂದ ಉಪಧೆಗೆ ದೀರ್ಘ ಬಂದು ವೇಧಾಸ್+ಸ್ ಎಂದಿರುತ್ತದೆ. ಪ್ರತ್ಯಯರೂಪವಾದ ಕೊನೆಯ 'ಸ್' ಕಾರಕ್ಕೆ, ಸಂಯೋಗಾನ್ತ ಲೋಪ ಬಂದು, ವೇಧಾಸ್ ಎಂದು, 'ಸ್'ಕಾರಕ್ಕೆ ರುತ್ವ–ವಿಸರ್ಗಗಳಿಂದ ವೇಧಾಃ ಎಂದು ರೂಪವಾಗುತ್ತದೆ.

ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಯಾವದೇ ವಿಕಾರವಿಲ್ಲದೆ ಕೆಳಗಿನ ರೂಪಗಳು ಸಿದ್ಧವಾಗುತ್ತವೆ.

ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, 'ಸ್' ಕಾರಕ್ಕೆ ರುತ್ವ ಮತ್ತು ಉತ್ವಗಳು ಬಂದು, ಗುಣಸಂಧಿಯಿಂದ ಕೆಳಗಿನ ರೂಪಗಳು ಸಿದ್ಧವಾಗುತ್ತವೆ.

**(ಸ್ ಕಾರಾನ್ತ ವೇಧಸ್ ಶಬ್ದದ ರೂಪಗಳು)**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ವೇಧಾಃ | ವೇಧಸೌ | ವೇಧಸಃ |
| ದ್ವಿತೀ೦ಯಾ | ವೇಧಸಮ್ | ವೇಧಸೌ | ವೇಧಸಃ |
| ತೃತೀ೦ಯಾ | ವೇಧಸಾ | ವೇಧೋಭ್ಯಾಮ್ | ವೇಧೋಭಿಃ |
| ಚತುರ್ಥೀ | ವೇಧಸೇ | ವೇಧೋಭ್ಯಾಮ್ | ವೇಧೋಭ್ಯಃ |
| ಪಞ್ಚಮೀ | ವೇಧಸಃ | ವೇಧೋಭ್ಯಾಮ್ | ವೇಧೋಭ್ಯಃ |
| ಷಷ್ಠೀ | ವೇಧಸಃ | ವೇಧಸೋಃ | ವೇಧಸಾಮ್ |
| ಸಪ್ತಮಿ | ವೇಧಸಿ | ವೇಧಸೋಃ | ವೇಧಃಸು, ವೇಧಸ್ಸು |
| ಸಂಬೋಧನ | ಹೇ ವೇಧಃ! | ಹೇ ವೇಧಸೌ! | ಹೇವೇಧಸಃ! |

**(ಔ–ಕಾರಾದೇಶ ಮತ್ತು ಸು–ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ – 356. ಅದಸ ಔ ಸುಲೋಪಶ್ಚ (7.2.107)**

ವೃತ್ತಿಃ–ಅದಸಃ ಔಕಾರಃ ಅನ್ತಾದೇಶಃ ಸ್ಯಾತ್ ಸೌ ಪರೇ ಸುಲೋಪಶ್ಚ। (310) ತದೋರಿತಿ ಸಃ। ಅಸೌ। ತ್ಯದಾದ್ಯತ್ವಮ್। ಪರರೂಪತ್ವಮ್। ವೃದ್ಧಿಃ।

ಪ. ಛೇ. – ಅದಸಃ ಔ, ಸುಲೋಪಃ, ಚ।

ಅ. ವ್ಯ.– "ತದೋಃ ಸಃ ಸಾವನನ್ತ್ಯಯೋಃ" ಎಂಬ ಸೂತ್ರದಿಂದ 'ಸೌ' ಎಂಬ

ಶಬ್ದವು ಅನುವೃತ್ತವಾಗುತ್ತದೆ.

ಅರ್ಥ– 'ಸು(ಸ್)' ಪ್ರತ್ಯಯವು ಪರದಲ್ಲಿದ್ದಾಗ, 'ಅದಸ್' ಶಬ್ದಕ್ಕೆ ಔ–ಕಾರವು ಅನ್ತಾದೇಶವಾಗಿ ಬರುತ್ತದೆ. ಮತ್ತು 'ಸು(ಸ್)' ಗೆ ಲೋಪವು ಬರುತ್ತದೆ.

ಉದಾ– ಅಸೌ(ದೂರದಲ್ಲಿ ಇರುವವನನ್ನು ಸೂಚಿಸುವ(ಅವನು))– 'ಅದಸ್' ಶಬ್ದದಮೇಲೆ 'ಸು(ಸ್)' ಪ್ರತ್ಯಯವನ್ನು ಸೇರಿಸಿದಾಗ, ಅದಸ್+ಸ್ ಎಂದಿರುತ್ತದೆ. ಇದು ಸರ್ವಾದಿಗಣದಲ್ಲಿ ಸೇರಿದ ತ್ಯದಾದಿಗಣದ ಶಬ್ದವಾಗಿರೋಣದರಿಂದ, ಸರ್ವನಾಮ ಸಂಜ್ಞೆಯನ್ನು ಪಡೆದಿರುತ್ತದೆ. ಆದ್ದರಿಂದ "ತ್ಯದಾದೀನಾಮಃ" ಎಂಬ ಸೂತ್ರದಿಂದ ಬರಬೇಕಾದ ಅತ್ವವನ್ನು ಬಾಧಿಸಿ, ಪ್ರಕೃತ ಸೂತ್ರದಿಂದ 'ಅದಸ್' ಶಬ್ದದ ಅನ್ತ್ಯ 'ಸ್' ಕಾರದ ಸ್ಥಾನದಲ್ಲಿ ಔ– ಕಾರವು ಬರುತ್ತದೆ ಮತ್ತು ಪ್ರತ್ಯಯದ 'ಸ್' ಕಾರವೂ ಲೋಪವಾಗಿ ಅದ+ಔ ಎಂದಿರುತ್ತದೆ. ವೃದ್ಧಿಸಂಧಿಯಿಂದ ಅದೌ ಎಂದಾಗುತ್ತದೆ. ಇಲ್ಲಿ 'ಲೋಪ' ಎಂಬ ಶಬ್ದವು ಪ್ರಯೋಗಿಸಲ್ಪಟಿದ್ದರಿಂದ, 'ಪ್ರತ್ಯಯಲೋಪೇ ಪ್ರತ್ಯಯಲಕ್ಷಣಮ್' ಎಂಬ ನಿಯಮದಿಂದ ಪ್ರತ್ಯಯವಾದ 'ಸು(ಸ್)' ಇರುವಂತೆ ಭಾವಿಸಿ "ತದೋಃ ಸಃ ಸಾವನನ್ತ್ಯಯೋಃ" ಎಂಬ ಸೂತ್ರದಿಂದ 'ದ್' ಕಾರದ ಸ್ಥಾನದಲ್ಲಿ 'ಸ್' ಕಾರವು ಆದೇಶವಾಗಿ ಬಂದು ಅಸೌ ಎಂಬ ರೂಪವು ಸಿದ್ಧವಾಗುತ್ತದೆ.

**(ಉ–ಕಾರ, ಊ–ಕಾರ ಮತ್ತು ಮ್– ಕಾರವನ್ನು ವಿಧಿಸುವ ಸೂತ್ರ)**

**ಸೂತ್ರ – 357. ಅದಸೋಽಸೇರ್ದಾದು ದೋ ಮಃ (8.2.80)**

ವೃತ್ತಿಃ–ಅದಸಃ ಅಸಾಂತಸ್ಯ ದಾತ್ ಪರಸ್ಯ ಉದೂತೌ ದಸ್ಯ ಮಶ್ಚ ಆಂತರತಮ್ಯಾದ್, ಹ್ರಸ್ವಸ್ಯ ಉಃ, ದೀರ್ಘಸ್ಯ ಊಃ। ಅಮೂ। (152) ಜಸಃ ಶೀ। ಗುಣಃ।

ಪ. ಛೇ. – ಅದಸಃ,ಅಸೇಃ,ದಾತ್,ಉ,ದಃ,ಮಃ, ಚ।

ಅರ್ಥ– ಅಂತ್ಯದಲ್ಲಿ 'ಸ್' ಕಾರವಿಲ್ಲದಿರುವ 'ಅದಸ್' ಶಬ್ದದ 'ದ್' ಕಾರದ ಪರದಲ್ಲಿರುವ ಹ್ರಸ್ವ ವರ್ಣಕ್ಕೆ 'ಉ' ಕಾರವೂ, ಮತ್ತು ದೀರ್ಘ ವರ್ಣಕ್ಕೆ 'ಊ' ಕಾರವೂ ಅದೇಶವಾಗಿ ಬರುತ್ತವೆ. ಮತ್ತು 'ದ್' ಕಾರಕ್ಕೆ 'ಮ್' ಕಾರವೂ ಅದೇಶವಾಗಿ ಬರುತ್ತದೆ,

ಉದಾ– ಅಮೂ(ಅವರಿಬ್ಬರು)– 'ಅದಸ್' ಶಬ್ದದಮೇಲೆ ಪ್ರಥಮಾ ದ್ವಿವಚನದಲ್ಲಿ ಅದಸ್+ಔ ಎಂದಿದ್ದಾಗ, "ತ್ಯದಾದೀನಾಮಃ" ಎಂಬ ಸೂತ್ರದಿಂದ 'ಸ್' ಕಾರಕ್ಕೆ 'ಅ' ಕಾರ ಆದೇಶವಾಗಿ ಬಂದು, ಅದ+ಅ +ಔ ಎಂದಿದ್ದಾಗ, ಅ–ಕಾರ ಉ–ಕಾರಗಳಿಗೆ ಪರರೂಪ ಬಂದು, ಅದ+ಔ ಎಂದಾಗುತ್ತದೆ. ನಂತರ ಇದಕ್ಕೆ ವೃದ್ಧಿ ಬಂದು, ಅದೌ ಎಂದಾಗುತ್ತದೆ. ಪ್ರಕೃತ ಸೂತ್ರದಿಂದ "ಸ್ಥಾನೇ ಅನ್ತರತಮಃ" ಎಂಬ ಸೂತ್ರದಿಂದ ಪ್ರಮಾಣ ಸಾದೃಶ್ಯದಿಂದ 'ಔ' ಕಾರದ ಸ್ಥಾನದಲ್ಲಿ (ದೀರ್ಘ) ಊ ಕಾರವು ಆದೇಶವಾಗಿ ಬಂದು ಅದ್+ಊ ಎಂದಿರುತ್ತದೆ. 'ದ್' ಕಾರದ ಸ್ಥಾನದಲ್ಲಿ 'ಮ್' ಕಾರವು ಆದೇಶವಾಗಿ ಬಂದು, ಅಮ್+ಊ=ಅಮೂ ಎಂದು ರೂಪವಾಗುತ್ತದೆ.

(ಈತ್ ಆದೇಶವನ್ನೂ ಮತ್ತು 'ಮ'ತ್ವವನ್ನು ವಿಧಿಸುವ ಸೂತ್ರ)

**ಸೂತ್ರ – 358. ಏತ ಈದ್ ಬಹುವಚನೇ (8.2.81)**

ವೃತ್ತಿಃ–ಅದಸಃ ದಾತ್ ಪರಸ್ಯ ಏತಃ ಈತ್, ದಸ್ಯ ಚ ಮಃ ಬಹ್ವರ್ಥೋಕ್ತೌ। ಅಮೀ। (31) "ಪೂರ್ವತ್ರಾಸಿದ್ಧಂ" ಇತಿ ವಿಭಕ್ತಿಕಾರ್ಯಂ ಪ್ರಾಕ್, ಪಶ್ಚಾತ್ ಉತ್ವಮತ್ವೇ। ಅಮುಮ್। ಅಮೂ। ಅಮೂನ್। ಮತ್ವೇ ಕೃತೇ ಘಿ ಸಂಜ್ಞಾಯಾಂ "ನಾ" ಭಾವಃ ।

ಪ. ಛೇ. – ಏತಃ, ಈತ್, ಬಹುವಚನೇ।

ಅ. ವೃ.–"ಅದಸೋಽಸೇರ್ದಾದು ದೋ ಮಃ" (8.2.80) ಎಂಬ ಸೂತ್ರದಿಂದ 'ಅದಸಃ', 'ದಾತ್' ಮತ್ತು 'ಮಃ' ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ– 'ಅದಸ್' ಶಬ್ದದ ಬಹುವಚನದಲ್ಲಿ, 'ದ್' ಕಾರದ ನಂತರ ಇರುವ ಏ–ಕಾರಕ್ಕೆ ಈ– ಕಾರವೂ ಮತ್ತು 'ದ್' ಕಾರಕ್ಕೆ ಮ್– ಕಾರವೂ ಆದೇಶವಾಗಿ ಬರುತ್ತವೆ.

ಉದಾ–ಅಮೀ(ದೂರದಲ್ಲಿರುವ (ಬಹಳ ಜನರಾದ) ಅವರು)– 'ಅದಸ್' ಶಬ್ದದ ಮೇಲೆ 'ಜಸ್(ಅಸ್)' ಸೇರಿಸಿದಾಗ, ಅದಸ್+ಅಸ್ ಎಂದಿರುತ್ತದೆ. ಈಗ "ತ್ಯದಾದೀನಾಮಃ" ಎಂಬ ಸೂತ್ರದಿಂದ, 'ಸ್' ಕಾರಕ್ಕೆ ಅತ್ವ ಬಂದು, ಅದ+ಅ+ಅಸ್ ಎಂದಿರುತ್ತದೆ. "ಅತೋಗುಣೇ" ಎಂಬ ಸೂತ್ರದಿಂದ ಅದ+ಅ ಎಂಬಲ್ಲಿಯ ಎರಡು ಅ–ಕಾರಗಳಿಗೆ 'ಪರರೂಪ' ಬಂದು ಅದ+ಅಸ್ ಎಂದಾಗುತ್ತದೆ. 'ಜಸಃ ಶೀ" ಎಂಬ ಸೂತ್ರದಿಂದ 'ಜಸ್(ಅಸ್)' ನ ಸ್ಥಾನದಲ್ಲಿ 'ಶೀ(ಈ)' ಬಂದು ಅದ+ಈ ಎಂದಿದ್ದಾಗ, 'ಗುಣ ಸಂಧಿಯಿಂದ' 'ಅದೇ' ಎಂದಾಗುತ್ತದೆ. ಪ್ರಕೃತ ಸೂತ್ರದಿಂದ 'ಅದೇ' ನಲ್ಲಿರುವ ಏ–ಕಾರಕ್ಕೆ ಈ–ಕಾರ ಬಂದು 'ಅದೀ' ಎಂದಾಗುತ್ತದೆ. ಇದೇ ಸೂತ್ರದಿಂದ 'ದ್' ಕಾರಕ್ಕೆ 'ಮ್' ಕಾರವು ಬಂದು, ಅಮೀ ರೂಪವು ಸಿದ್ಧವಾಗುತ್ತದೆ.

ಉದಾ– ಅಮುಮ್–"ಪೂರ್ವತ್ರಾಸಿದ್ಧಂ" ಇತಿ ವಿಭಕ್ತಿಕಾರ್ಯಂ ಪ್ರಾಕ್, ಪಶ್ಚಾತ್ ಉತ್ವಮತ್ವೇ।– ದ್ವಿತೀಯಾ ವಿಭಕ್ತಿ ಏಕವಚನದಲ್ಲಿ ಅದಸ್+ಅಮ್ ಎಂದಿದ್ದಾಗ, ಹಿಂದಿನಂತೆ "ತ್ಯದಾದೀನಾಮಃ" ಎಂಬ ಸೂತ್ರದಿಂದ, 'ಸ್' ಕಾರಕ್ಕೆ ಅತ್ವ, "ಅತೋಗುಣೇ" ಎಂಬ ಸೂತ್ರದಿಂದ 'ಪರರೂಪ' ಬಂದಮೇಲೆ, ಅದ+ಅಮ್ ಎಂದಿರುತ್ತದೆ. ನಂತರ "ಅಮಿಪೂರ್ವಃ" ಎಂಬ ಸೂತ್ರದಿಂದ 'ಪೂರ್ವರೂಪ' ಬಂದಮೇಲೆ, ಅದೇ ಸಮಯದಲ್ಲಿ "ಅದಸೋಽಸೇರ್ದಾದು ದೋ ಮಃ" (8.2.80) ಎಂಬ ಸೂತ್ರದಿಂದ ಉತ್ವ ಮತ್ತು ಮತ್ವ ಗಳು ಒಮ್ಮೆಲೇ ಪ್ರಾಪ್ತವಾದಾಗ, "ಪೂರ್ವತ್ರಾಸಿದ್ಧಮ್" ಎಂಬ ನಿಯಮದಿಂದ ಉತ್ವ–ಮತ್ವ ವಿಧಾಯಕ ಸೂತ್ರಕ್ಕೆ ಅಸಿದ್ಧಿ (ತ್ರಿಪಾದಿಯಲ್ಲಿರುವುದರಿಂದ) ಬಂದಾಗ, "ಅಮಿಪೂರ್ವಃ" ಎಂಬ ಸೂತ್ರದಿಂದ ವಿಭಕ್ತಿ ಕಾರ್ಯವನ್ನು ಮೊದಲು ಮಾಡಿದನಂತರ, ಮೊದಲು ಅಸಿದ್ಧವಾಗಿದ್ದ ಸೂತ್ರಕ್ಕೆ ಪ್ರವೃತ್ತಿ ಬಂದು, ಉತ್ವ–ಮತ್ವಗಳು ಬಂದು, ಅಮುಮ್ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಅಮೂ (ದೂರದಲ್ಲಿರುವ ಅವರಿಬ್ಬರನ್ನು)–ಅಮೂ ಎಂಬ ದ್ವಿತೀಯಾ ವಿಭಕ್ತಿ ದ್ವಿವಚನದ ಈ ರೂಪವು ಪ್ರಥಮಾವಿಭಕ್ತಿ ದ್ವಿವಚನದಂತೆಯೇ ಸಿದ್ಧವಾಗುತ್ತದೆ.

ಉದಾ– ಅಮೂನ್ (ದೂರದಲ್ಲಿರುವ ಅವರನ್ನು [ಬಹಳ ಜನರನ್ನು]) – ಅದಸ್ ಶಬ್ದದಮೇಲೆ ದ್ವಿತೀಯಾ ವಿಭಕ್ತಿ ಬಹುವಚನದ ಪ್ರತ್ಯಯವಾದ 'ಶಸ್ (ಅಸ್)'ನ್ನು ಸೇರಿಸಿ ಅದಸ್+ಅಸ್ ಎಂದಿದ್ದಾಗ, "ತ್ಯದಾದೀನಾಮಃ" ಎಂಬ ಸೂತ್ರದಿಂದ, 'ಸ್' ಕಾರಕ್ಕೆ ಅತ್ವ, "ಅತೋಗುಣೇ" ಎಂಬ ಸೂತ್ರದಿಂದ 'ಪರರೂಪ' ಬಂದಮೇಲೆ, ಅದ+ಅಸ್ ಎಂದಿರುತ್ತದೆ. ಇಲ್ಲಿಯೂ "ಪೂರ್ವತ್ರಾಸಿದ್ಧಮ್" ಎಂಬ ನಿಯಮದಿಂದ, ಉತ್ವ–ಮತ್ವ ಗಳು ಅಸಿದ್ಧವಾಗುವುದರಿಂದ ಮೊದಲು ವಿಭಕ್ತಿ ಕಾರ್ಯವಾದ ಮೇಲೆ, "ಪ್ರಥಮಯೋಃ ಪೂರ್ವಸವರ್ಣಃ" ಎಂಬ ಸೂತ್ರದಿಂದ 'ಪೂರ್ವಸವರ್ಣದೀರ್ಘವು' ಬಂದು, ಅದಾಸ್ ಎಂದಿರುತ್ತದೆ, "ತಸ್ಮಾಚ್ಛಸೋಃ ನಃ ಪುಂಸಿ ಎಂಬ ಸೂತ್ರದಿಂದ 'ಸ್' ಕಾರಕ್ಕೆ 'ನ್' ಕಾರವು ಆದೇಶವಾಗಿ ಬಂದು ಅದಾನ್ ಎಂದಾಗುತ್ತದೆ. ಈಗ "ಅದಸೋಽಸೇರ್ದಾದು ದೋ ಮಃ" (8.2.80) ಎಂಬ ಸೂತ್ರದಿಂದ, ಆ–ಕಾರದ ಸ್ಥಾನದಲ್ಲಿ ಊ– ಕಾರವು ಆದೇಶವಾಗಿ ಬಂದು 'ದ್' ಕಾರದ ಸ್ಥಾನದಲ್ಲಿ 'ಮ್' ಕಾರವು ಆದೇಶವಾಗಿ ಬಂದು, ಅಮೂನ್ ಎಂದು ರೂಪವು ಸಿದ್ಧವಾಗುತ್ತದೆ.

**(ಮು ಭಾವದ ಅಸಿದ್ಧಿಯನ್ನು ನಿಷೇಧಿಸುವ ಸೂತ್ರ)**

**ಸೂತ್ರ – 359. ನಮುನೇ (8.2.3)**

ವೃತ್ತಿಃ–"ನಾ" ಭಾವೇ ಕರ್ತವ್ಯೇ ಕೃತೇ ಚ ಮು–ಭಾವೋ ನಾಸಿದ್ಧಃ। ಅಮುನಾ। ಅಮೂಭ್ಯಾಮ್–3। ಅಮೀಭಿಃ। ಅಮುಷ್ಮೈ। ಅಮೀಭ್ಯಃ–2। ಅಮುಷ್ಮಾತ್। ಅಮುಷ್ಯ। ಅಮು0ಯೋಃ–2। ಅಮೀಷಾಮ್। ಅಮುಷ್ಮಿನ್। ಅಮೀಷು।

ಅ. ವೃ.–"ಪೂರ್ವತ್ರಾಸಿದ್ಧಮ್" ಎಂಬ ಸೂತ್ರದಿಂದ 'ಅಸಿದ್ಧಮ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– "ನಾ" ಆದೇಶವು ಮಾಡಬೇಕಾಗಿದ್ದಾಗ, ಅಥವಾ ಮಾಡಿದ್ದಾಗಲೂ ಮು– ಭಾವವು ಅಸಿದ್ಧವಾಗುವುದಿಲ್ಲ. (ಅಂದರೆ 'ಮ್' ಚ 'ಉ' ಶಚ ತಯೋಃ ಸಮಾಹಾರಃ 'ಮು' ಎಂದರ್ಥ 'ಮು' ಎಂಬುದು ಲುಪ್ತ ಪ್ರಥಮಾಂತ ಎಂದು ತಿಳಿಯಬೇಕು).

ಉದಾ– ಅಮುನಾ–ತೃತೀಯಾ ವಿಭಕ್ತಿ ಏಕವಚನದಲ್ಲಿ ಅದಸ್+ಟ(ಆ) ಎಂದಿದ್ದಾಗ, "ತ್ಯದಾದೀನಾಮಃ" ಎಂಬ ಸೂತ್ರದಿಂದ, 'ಸ್' ಕಾರಕ್ಕೆ ಅತ್ವ "ಅತೋಗುಣೇ" ಎಂಬ ಸೂತ್ರದಿಂದ 'ಪರರೂಪ' ಮಾಡಿದಮೇಲೆ, ಅದ+ಆ ಎಂದಿರುತ್ತದೆ. "ಅದಸೋಽಸೇರ್ದಾದು ದೋ ಮಃ" (8.2.80), ಮತ್ತು "ಟಾ ಙಸಿಙಸಾಮಿನಾತ್ ಸ್ಯಾಃ"(7.1.12) ಎಂಬ ಸೂತ್ರಗಳು ಒಮ್ಮೆಲೇ ಪ್ರವೃತ್ತವಾದಾಗ, "ಅದಸೋಸೇರ್ದಾದು ದೋ ಮಃ" (8.2.80), ಎಂಬುದು ಪರಸೂತ್ರವಾಗಿದ್ದರೂ, ಉತ್ವ–ಮತ್ವಗಳ ನಿಷೇಧಕ್ಕೆ ನಿಷೇಧವು ಪ್ರಕೃತ ಸೂತ್ರದಿಂದ ಬಂದಿರೋಣದರಿಂದ, "ಪೂರ್ವತ್ರಾಸಿದ್ಧಮ್" ಎಂಬ ನಿಯಮಕ್ಕೆ ಇಲ್ಲಿ ಅಪವಾದವು ಇರುತ್ತದೆ. ಅಂದರೆ ಉತ್ವ–ಮತ್ವಗಳು ಬಂದೇ ಬರುತ್ತವೆ. ಆಗ ಅಮು+ಆ ಎಂದಿರುತ್ತದೆ. ಇದೇ ರೀತಿ ಪ್ರಕೃತ ಸೂತ್ರವು ತ್ರಿಪಾದಿಯಲ್ಲಿದ್ದರೂ, ಮೊದಲು ಉತ್ವ–ಮತ್ವಗಳಾಗಿ ಅನಂತರ

"ಆಙೋನಾಽಸ್ತ್ರಿಯಾಂ" ಸೂತ್ರದಿಂದ 'ಆ' ಗೆ 'ನಾ' ಬಂದು, ಅಮು+ನಾ=ಅಮುನಾ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಅಮೂಭ್ಯಾಮ್–3– ತೃತೀಯಾ, ಚತುರ್ಥೀ ಮತ್ತು ಪಞ್ಚಮೀ ವಿಭಕ್ತಿ ದ್ವಿವಚನಗಳಲ್ಲಿ ಅದಸ್+ಭ್ಯಾಮ್ ಎಂದಿದ್ದಾಗ ಹಿಂದಿನಂತೆಯೇ ಪ್ರಕ್ರಿಯೆ ನಡೆದು ಅದ+ಭ್ಯಾಮ್ ಎಂದಿರುತ್ತದೆ. ಆಗ "ಸುಪಿ ಚ" ಎಂಬ ಸೂತ್ರದಿಂದ 'ದ್' ಕಾರೋತ್ತರ 'ಅ' ಕಾರಕ್ಕೆ ದೀರ್ಘ ಬಂದು, ಅದಾ+ಭ್ಯಾಮ್ ಎಂದಾಗುತ್ತದೆ. "ಅದಸೋಽಸೇರ್ದಾದು ದೋ ಮಃ" (8.2.80) ಸೂತ್ರದಿಂದ 'ಆ' ಕಾರಕ್ಕೆ 'ಊ' ಕಾರ ಮತ್ತು 'ದ್'ಕಾರಕ್ಕೆ 'ಮ್' ಕಾರ ಬಂದು, ಅಮೂ+ಭ್ಯಾಮ್=ಅಮೂಭ್ಯಾಮ್ ರೂಪವು ಸಿದ್ಧವಾಗುತ್ತದೆ.

ಉದಾ–ಅಮೀಭಿಃ–ತೃತೀಯಾ ವಿಭಕ್ತಿ ಬಹುವಚನದಲ್ಲಿ ಅದಸ್+ಭಿಸ್ ಎಂದಿದ್ದಾಗ, "ತ್ಯದಾದೀನಾಮಃ" ಎಂಬ ಸೂತ್ರದಿಂದ, 'ಸ್' ಕಾರಕ್ಕೆ ಅತ್ವ, "ಅತೋಗುಣೇ" ಎಂಬ ಸೂತ್ರದಿಂದ 'ಪರರೂಪ' ಬಂದಮೇಲೆ, ಅದ+ಭಿಸ್ ಎಂದಿರುತ್ತದೆ. "ಅತೋಭಿಸ ಐಸ್" ಎಂಬ ಸೂತ್ರದಿಂದ 'ಐಸ್' ಪ್ರಾಪ್ತವಾಗಬೇಕಾಗಿದ್ದಾಗ, "ನೇದಮದಸೋರಕೋಃ" ಎಂಬ ಸೂತ್ರದಿಂದ ನಿಷೇಧವಾಗಿ "ಏತ ಈದ್ ಬಹುವಚನೇ (8.2.81)" ಎಂಬ ಸೂತ್ರದಿಂದ ಈತ್ವ–ಮತ್ವಗಳು ಬಂದು, ಅಮೀಭಿಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ–ಅಮುಷ್ಮೈ– ಚತುರ್ಥೀ ಏಕವಚನದಲ್ಲಿ ಅದಸ್+ಙೇ(ಏ) ಎಂದಿದ್ದಾಗ, "ತ್ಯದಾದೀನಾಮಃ" ಎಂಬ ಸೂತ್ರದಿಂದ, 'ಸ್' ಕಾರಕ್ಕೆ ಅತ್ವ "ಅತೋಗುಣೇ" ಎಂಬ ಸೂತ್ರದಿಂದ 'ಪರರೂಪ' ಬಂದಮೇಲೆ ಅದ+ಏ ಎಂದಿರುತ್ತದೆ. ಆಗ "ಸರ್ವನಾಮ್ನಃ ಸ್ಮೈ" ಎಂಬ ಸೂತ್ರದಿಂದ 'ಸ್ಮೈ' ಆದೇಶವು ಬಂದು, ಉತ್ವ–ಮತ್ವಗಳು ಮತ್ತು 'ಸ್' ಕಾರಕ್ಕೆ ಷತ್ವ ಬಂದು ಅಮುಷ್ಮೈ ಎಂದು ರೂಪವಾಗುತ್ತದೆ.

ಉದಾ–ಅಮೀಭ್ಯಃ–2– ಈ ರೂಪವೂ ಕೂಡ ಅಮೀಭಿಃ ಎಂಬಂತೆಯೇ ಆಗುತ್ತದೆ.

ಉದಾ–ಅಮುಷ್ಮಾತ್– ಪಞ್ಚಮೀ ಏಕವಚನದಲ್ಲಿ ಅದಸ್+ಙಸಿ(ಅಸ್) ಎಂದಿದ್ದಾಗ, ಅತ್ವ ಮತ್ತು 'ಪರರೂಪಗಳು' ಬಂದು ಅದ+ಅಸ್ ಎಂದಿರುತ್ತದೆ. "ಙಸಿಙ್ಯೋಃ ಸ್ಮಾತ್ ಸ್ಮಿನೌ" ಎಂಬ ಸೂತ್ರದಿಂದ 'ಸ್ಮಾತ್' ಆದೇಶವಾಗಿ ಬಂದು, 'ಸ್' ಕಾರಕ್ಕೆ ಷತ್ವ ಬಂದಮೇಲೆ ಅಮುಷ್ಮಾತ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ–ಅಮುಷ್ಯ – ಷಷ್ಠೀ ಏಕವಚನದಲ್ಲಿ ಅದಸ್+ಙಸ್(ಅಸ್) ಎಂದಿದ್ದಾಗ, 'ಅತ್ವ' ಮತ್ತು ಪರರೂಪಗಳು ಬಂದು, ಅದ+ಅಸ್ ಎಂದಿರುತ್ತದೆ. "ಟಾಙಸಿಙಸಾಮಿನಾತ್ಸ್ಯಾಃ" ಎಂಬ ಸೂತ್ರದಿಂದ 'ಸ್ಯ' ಆದೇಶವಾಗಿ ಬಂದು, ನಂತರ ಉತ್ವ–ಮತ್ವಗಳು ಬಂದು ಮತ್ತು 'ಸ್' ಕಾರಕ್ಕೆ ಷತ್ವ ಬಂದು ಅಮುಷ್ಯ ಎಂದಾಗುತ್ತದೆ.

ಉದಾ–ಅಮು೦ಯೋಃ(2)– ಷಷ್ಠೀ ಮತ್ತು ಸಪ್ತಮೀ ದ್ವಿ ವಚನದಲ್ಲಿ ಅದಸ್+ಓಸ್ ಎಂದಿದ್ದಾಗ, 'ಅತ್ವ' ಮತ್ತು ಪರರೂಪಗಳು ಬಂದಮೇಲೆ, ಅದ+ಓಸ್ ಎಂದಿರುತ್ತದೆ. "ಓಸಿಚ" ಸೂತ್ರದಿಂದ 'ಏ' ಕಾರಾದೇಶವು ಬಂದು ಅದೇ+ಓಸ್ ಎಂದಿದ್ದಾಗ, ಯಾನ್ತಾದೇಶ ಬಂದು ಅದಯೋಸ್ ಎಂದಿದ್ದಾಗ, ಹಿಂದಿನಂತೆ ಉತ್ವ–ಮತ್ವಗಳು

ಬಂದು ಅಮುಯೋಸ್ ಎಂದಾಗಿ ರುತ್ವ-ವಿಸರ್ಗಗಳಿಂದ ಅಮುಯೋಃ ಎಂದು ರೂಪವಾಗುತ್ತದೆ.

ಉದಾ- ಅಮೀಷಾಮ್- ಷಷ್ಠೀ ಬಹುವಚನದಲ್ಲಿ ಅದಸ್+ಆಮ್ ಎಂದಿದ್ದಾಗ, ಹಿಂದಿನಂತೆಯೇ ಅತ್ವ ಮತ್ತು ಪರರೂಪಗಳು ಬಂದು, ಅದ+ಆಮ್ ಎಂದಿರುತ್ತದೆ. "ಆಮಿಸರ್ವನಾಮ್ನಃ ಸುಟ್" ಸೂತ್ರದಿಂದ ಸುಡಾಗಮ(ಸ್) ಬಂದು, ಅದ+ಸಾಮ್ ಎಂದಿರುತ್ತದೆ. "ಬಹುವಚನೇ ಝಲ್ಯೇತ್" ಎಂಬ ಸೂತ್ರದಿಂದ 'ಏ' ಕಾರ ಬಂದು, ಅದೇ+ಷಾಮ್ ಎಂದಿರುತ್ತದೆ. ನಂತರ "ಏತಈತ್ ಬಹುವಚನೇ" ಎಂಬ ಸೂತ್ರದಿಂದ, 'ಏ' ಕಾರಕ್ಕೆ ಈ ಕಾರ, ಮತ್ತು 'ದ್' ಕಾರಾಕ್ಕೆ 'ಮ್' ಕಾರ ಬಂದು, ಅಮೀ+ಸಾಮ್ ಎಂದಿದ್ದಾಗ, 'ಸ್' ಕಾರಕ್ಕೆ ಷತ್ವ ಬಂದು ಅಮೀಷಾಮ್ ಎಂದು ರೂಪವಾಗುತ್ತದೆ.

ಉದಾ- ಅಮುಷ್ಮಿನ್ - ಸಪ್ತಮೀ ಏಕವಚನದಲ್ಲಿ ಅದಸ್+ಜಿ(ಇ) ಎಂದಿದ್ದಾಗ ಹಿಂದಿನಂತೆಯೇ ಅತ್ವ ಮತ್ತು ಪರರೂಪಗಳು ಬಂದು ಅದ+ಇ ಎಂದಿರುತ್ತದೆ, "ಙಸಿಙ್ಯೋಃ ಸ್ಮಾತ್ ಸ್ಮಿನೌ" ಎಂಬ ಸೂತ್ರದಿಂದ 'ಸ್ಮಿನ್' ಆದೇಶ ಬಂದಮೇಲೆ, ಉತ್ವ-ಮತ್ವಗಳು ಹಾಗೂ 'ಸ್' ಕಾರಕ್ಕೆ ಷತ್ವವೂ ಬಂದಮೇಲೆ ಅಮುಷ್ಮಿನ್ ಎಂದು ರೂಪವು ಸಿದ್ಧವಾಗುತ್ತದೆ

ಉದಾ-ಅಮೀಷು-ಸಪ್ತಮೀ ಬಹುವಚನದಲ್ಲಿ ಅದಸ್+ಸುಪ್(ಸು) ಎಂದಿದ್ದಾಗ ಹಿಂದಿನಂತೆಯೇ ಅತ್ವ ಮತ್ತು ಪರರೂಪಗಳನ್ನು ಮಾಡಿದಮೇಲೆ ಅದ+ಸು ಎಂದಿದ್ದಾಗ, "ಏತಈದ್ ಬಹುವಚನೇ" ಎಂಬ ಸೂತ್ರದಿಂದ, 'ಏ'ಕಾರಕ್ಕೆ 'ಈ' ಕಾರ, ಮತ್ತು 'ದ್' ಕಾರಕ್ಕೆ 'ಮ್' ಕಾರ ಬಂದು, ಅಮೀಸು ಎಂದಾಗಿ "ಆದೇಶಪ್ರತ್ಯಯಯೋಃ" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಷತ್ವ ಬಂದು ಅಮೀಷು ಎಂದು ರೂಪವಾಗುತ್ತದೆ.

**(ಸ್ ಕಾರಾಂತ ಅದಸ್ ಶಬ್ದದ ರೂಪಗಳು)**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಅಸೌ | ಅಮೂ | ಅಮೀ |
| ದ್ವಿತೀಯಾ | ಅಮುಮ್ | ಅಮೂ | ಅಮೂನ್ |
| ತೃತೀಯಾ | ಅಮುನಾ | ಅಮೂಭ್ಯಾಮ್ | ಅಮೀಭಿಃ |
| ಚತುರ್ಥೀ | ಅಮುಷ್ಮೈ | ಅಮೂಭ್ಯಾಮ್ | ಅಮೀಭ್ಯಃ |
| ಪಞ್ಚಮೀ | ಅಮುಷ್ಮಾತ್, ಅಮುಷ್ಮಾದ್ | ಅಮೂಭ್ಯಾಮ್ | ಅಮೀಭ್ಯಃ |
| ಷಷ್ಠೀ | ಅಮುಷ್ಯ | ಅಮುಯೋಃ | ಅಮೀಷಾಮ್ |
| ಸಪ್ತಮಿ | ಅಮುಷ್ಮಿನ್ | ಅಮುಯೋಃ | ಅಮೀಷು |

ಸೂಚನೆ: ತ್ಯದಾದಿಗಣ ಪಠಿತ ಶಬ್ದಗಳಿಗೆ ಸಂಬೋಧನವಿರುವುದಿಲ್ಲ.

**ಇತಿ ಹಲನ್ತಾಃ ಪುಂಲಿಙ್ಗಾಃ ಶಬ್ದಾಃ । ಹಲಂತ ಪುಲ್ಲಿಂಗ ಪ್ರಕರಣವು ಮುಗಿದುದು**

# 9. ಹಲನ್ತಾಃ ಸ್ತ್ರೀಲಿಙ್ಗ ಶಬ್ದಾಃ

**(ಸೂತ್ರ 360-362 ರವರೆಗೆ)**

**( ಹ್- ಕಾರಕ್ಕೆ ಧ್-ಕಾರವನ್ನು ವಿಧಿಸುವ ಸೂತ್ರ)**

**ಸೂತ್ರ - 360. ನಹೋ ಧಃ। (8.2.34)**

ವೃತ್ತಿಃ- ನಹಃ ಹಸ್ಯ ಧಃ ಸ್ಯಾತ್ ಝಲಿ ಪದಾಂತೇ ಚ।

ಪ. ಛೇ.- ನಹಃ, ಧಃ।

ಅ.ವೃ.- "ಝಲೋ ಝಲಿ(8-2-26)" ಎಂಬ ಸೂತ್ರದಿಂದ 'ಝಲಿ' ಎಂಬ ಪದವು ಮತ್ತು "ಸ್ಕೋಃ ಸಂಯೋಗಾದ್ಯೋರನ್ತೇ ಚ(8-2-29)" ಎಂಬ ಸೂತ್ರದಿಂದ 'ಅನ್ತೇ' ಎಂಬ ಪದವೂ ಅನುವೃತ್ತವಾಗುತ್ತವೆ. "ಪದಸ್ಯ" ಎಂಬುದು ಅಧಿಕಾರ ಸೂತ್ರ.

ಅರ್ಥ- 'ನಹ್' ಶಬ್ದದ 'ಹ್'ಕಾರಕ್ಕೆ 'ಧ್'ಕಾರವು ಆದೇಶವಾಗಿ ಬರುತ್ತದೆ. 'ಝಲ್' ವರ್ಣವು ಪರದಲ್ಲಿದ್ದಾಗ, ಅಥವಾ 'ಹ್' ಕಾರವು ಪದಾನ್ತದಲ್ಲಿದ್ದಾಗ.

**(ದೀರ್ಘವನ್ನು ವಿಧಿಸುವ ಸೂತ್ರ)**

**ಸೂತ್ರ - 361. ನಹಿ-ವೃತಿ-ವೃಷಿ-ವ್ಯಧಿ-ರುಚಿ-ಸಹಿ-ತನಿಷು ಕ್ವೌ। (6.3.114)**

ವೃತ್ತಿಃ- ಕ್ವಿಬಂತೇಷು ಪೂರ್ವಪದಸ್ಯ ದೀರ್ಘಃ। ಉಪಾನದ್। ಉಪಾನಹೌ। ಉಪಾನತ್ಸು। ಕ್ವಿನ್ನಂತತ್ವಾತ್ ಕುತ್ವೇನ ಘಃ। ಉಷ್ಣಿಕ್,ಉಷ್ಣಿಗ್। ಉಷ್ಣಿಹೌ । ಉಷ್ಣಿಗ್ಭ್ಯಾಮ್। ದ್ಯೌಃ। ದಿವೌ। ದಿವಃ। ದ್ಯುಭ್ಯಾಮ್। ಗೀಃ। ಗಿರೌ। ಗಿರಃ। ಗೀರ್ಭ್ಯಾಮ್। ಏವಂ ಪೂಃ। ಚತಸ್ರಃ। ಚತಸೃಣಾಮ್। ಕಾ। ಕೇ। ಕಾಃ। ಸರ್ವಾವತ್।

ಅ.ವೃ. - "ಢ್ರಲೋಪೇ ಪೂರ್ವಸ್ಯ ದೀರ್ಘೋಽಣಃ(6-3-111)" ಸೂತ್ರದಿಂದ 'ಪೂರ್ವಸ್ಯ' ಮತ್ತು 'ದೀರ್ಘಃ' ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ-'ಕ್ವಿಪ್' ಪ್ರತ್ಯಯಾನ್ತವಾದ 'ನಹ್', 'ವೃತ್', 'ವೃಷ್', 'ವ್ಯಧ್', 'ರುಚ್', 'ಸಹ್', 'ತನ್', ಈ ಏಳು ಧಾತುಗಳು ಪರದಲ್ಲಿದ್ದಾಗ ಪೂರ್ವಪದದ ಅನ್ತ್ಯ ವರ್ಣಕ್ಕೆ 'ದೀರ್ಘ'ವು ಬರುತ್ತದೆ.

"ಅಲೋಽನ್ತ್ಯಸ್ಯ" ಸೂತ್ರದಿಂದ ಪೂರ್ವಪದದ ಅನ್ತ್ಯ ವರ್ಣವಾದ 'ಅ' ಕಾರಕ್ಕೆ ದೀರ್ಘವು ಆದೇಶವಾಗಿ ಬರುತ್ತದೆ. ಇಲ್ಲಿ ಪೂರ್ವಪದವು 'ಉಪ' ಎಂಬ 'ಅ' ಕಾರಾನ್ತ ಉಪಸರ್ಗವಾಗಿದೆ.

ಉದಾ- ಉಪಾನತ್, ಉಪಾನದ್ (ಪಾದುಕೆ)- ಉಪ ಪೂರ್ವಕ 'ನಹ್' ಧಾತುವಿನ ನಂತರ 'ಕ್ವಿಪ್' ಪ್ರತ್ಯಯವು ಬಂದು, ಪ್ರಕೃತ ಸೂತ್ರದಿಂದ 'ಉಪ' ಎಂಬ ಉಪಸರ್ಗದ ಅನ್ತ್ಯ 'ಅ' ಕಾರಕ್ಕೆ ದೀರ್ಘವು ಆದೇಶವಾಗಿ ಬಂದು 'ಉಪಾನಹ್' ಎಂದಾಗಿದೆ. ಇದಕ್ಕೆ 'ಪ್ರಾತಿಪದಿಕ' ಸಂಜ್ಞೆ ಬಂದ ಮೇಲೆ 'ಸ್'(ಸು) ಪ್ರತ್ಯಯವನ್ನು ಸೇರಿಸಿದಾಗ,

"ಹಲ್ಙ್ಯಾಭ್ಯೋ ...........ಸುತಿಸ್ಯಪೃಕ್ತಮ್ ಹಲ್" ಎಂಬ ಸೂತ್ರದಿಂದ ಅದಕ್ಕೆ ಲೋಪ ಬಂದು ಉಪಾನಹ್ ಎಂದಿರುತ್ತದೆ. ಅನ್ತ್ಯ 'ಹ್' ಕಾರದ ಸ್ಥಾನದಲ್ಲಿ "ನಹೋ ಧಃ" ಸೂತ್ರದಿಂದ 'ಧ್' ಕಾರವು ಆದೇಶವಾಗಿ ಬಂದು ಅದಕ್ಕೆ 'ಜಶ್ತ್ವ'ವು ಬಂದು 'ದ್' ಕಾರವಾಗಿ ಮತ್ತೆ ವೈಕಲ್ಪಿಕ 'ಚರ್ತ್ವ' ಬಂದು 'ತ್' ಕಾರವಾಗಿ 'ಉಪಾನತ್' ಮತ್ತು ಉಪಾನದ್' ಎಂದು ಎರಡು ರೂಪಗಳು ಸಿದ್ಧವಾಗುತ್ತವೆ.

'ಅಜಾದಿ' 'ಸುಪ್' ಪ್ರತ್ಯಯಗಳು ಪರವಾದಾಗ, 'ಧ್' ಕಾರವು ಆದೇಶವಾಗಿ ಬರುವುದಿಲ್ಲ. ಆದ್ದರಿಂದ 'ಹ್' ಕಾರದ ಮುಂದೆ ಆ ಪ್ರತ್ಯಯಗಳು ಸೇರಿಕೊಂಡು ಉಪಾನಹೌ, ಉಪಾನಹಃ ಇತ್ಯಾದಿ ರೂಪಗಳು ಆಗುತ್ತವೆ.

'ಹಲಾದಿ' ಪ್ರತ್ಯಯಗಳು ಪರದಲ್ಲಿದ್ದಾಗ, 'ಹ್' ಕಾರಕ್ಕೆ 'ಧ್' ಕಾರವು ಆದೇಶವಾಗಿ ಬರುತ್ತದೆ. "ಝಲಾಂ ಜಶೋಽನ್ತೇ" ಸೂತ್ರದಿಂದ 'ಧ್' ಕಾರಕ್ಕೆ 'ಜಶ್ತ್ವ'ವು ಬಂದು 'ಉಪಾನದ್ಭ್ಯಾಮ್' ಮೊದಲಾದ ರೂಪಗಳಾಗುತ್ತವೆ.

'ಸುಪ್'(ಸಪ್ತಮೀ ಬಹುವಚನ) ಪ್ರತ್ಯಯವು ಪರದಲ್ಲಿದ್ದಾಗ 'ಹ್' ಕಾರಕ್ಕೆ 'ಧ್' ಕಾರವು ಬಂದು, "ಖರಿ ಚ" ಸೂತ್ರದಿಂದ 'ಚರ್ತ್ವ' ಬಂದು, 'ಉಪಾನತ್ಸು' ಎಂದಾಗುತ್ತದೆ.

**(ಹ್-ಕಾರಾನ್ತ ಸ್ತ್ರೀಲಿಂಗ 'ಉಪಾನಹ್' ಶಬ್ದದ ರೂಪಗಳು).**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರ.ವಿ. | ಉಪಾನತ್, ಉಪಾನದ್ | ಉಪಾನಹೌ | ಉಪಾನಹಃ |
| ದ್ವಿ.ವಿ. | ಉಪಾನಹಮ್ | ಉಪಾನಹೌ | ಉಪಾನಹಃ |
| ತೃ.ವಿ. | ಉಪಾನಹಾ | ಉಪಾನದ್ಭ್ಯಾಮ್ | ಉಪಾನದ್ಭಿಃ |
| ಚ.ವಿ. | ಉಪಾನಹೇ | ಉಪಾನದ್ಭ್ಯಾಮ್ | ಉಪಾನದ್ಭ್ಯಃ |
| ಪ.ವಿ. | ಉಪಾನಹಃ | ಉಪಾನದ್ಭ್ಯಾಮ್ | ಉಪಾನದ್ಭ್ಯಃ |
| ಷ.ವಿ. | ಉಪಾನಹಃ | ಉಪನಹೋಃ | ಉಪಾನಹಾಮ್ |
| ಸ.ವಿ. | ಉಪಾನಹಿ | ಉಪನಹೋಃ | ಉಪಾನತ್ಸು |
| ಸಂ.ಪ್ರ.ವಿ | ಹೇ ಉಪಾನತ್! ಹೇ ಉಪಾನದ್! | ಹೇಉಪಾನಹೌ! | ಹೇ ಉಪಾನಹಃ! |

ಉದಾ- ಉಷ್ಣಿಕ್', 'ಉಷ್ಣಿಗ್' (ಇದು ಒಂದು ವೈದಿಕ ಛಂದಸ್ಸಿನ ಹೆಸರು)- 'ಉತ್' ಪೂರ್ವಕ 'ಷ್ಣಿಹ್' ಧಾತುವಿನ ನಂತರ "ಋತ್ವಿಗ್ದಧೃಕ್ಸ್ರಗ್ ದಿಗುಷ್ಣಿಗಞ್ಚುಯುಜಿಕ್ರುಞ್ಚಾಂ ಚ" ಸೂತ್ರದಿಂದ 'ಕ್ವಿನ್' ಪ್ರತ್ಯಯಾನ್ತ 'ಉಷ್ಣಿಕ್' ಶಬ್ದದ 'ನಿಪಾತನ' ವಾಗಿದೆ. ಇದಕ್ಕೆ 'ಪ್ರಾತಿಪದಿಕ' ಸಂಜ್ಞೆ ಬಂದ ಮೇಲೆ –

'ಪ್ರಥಮಾ' ವಿಭಕ್ತಿ ಏಕವಚನದಲ್ಲಿ 'ಸ್'(ಸು) ಪ್ರತ್ಯಯದ ಲೋಪವಾದ ಮೇಲೆ "ಕ್ವಿನ್‌ಪ್ರತ್ಯಯಸ್ಯ ಕುಃ" ಸೂತ್ರದಿಂದ 'ಕುತ್ವ' ಮಾಡಿದಾಗ 'ಘ್' ಕಾರಾದೇಶ ಬಂದು

'ಜಶ್ತ್ವ' ಮಾಡಿದಾಗ, 'ಗ್' ಕಾರ ಆದೇಶವಾಗಿ ಬಂದು, ಅದಕ್ಕೆ ವೈಕಲ್ಪಿಕ 'ಚರ್ತ್ವ' ಮಾಡಿದಾಗ, 'ಕ್' ಕಾರಾದೇಶ ಬಂದು, 'ಉಷ್ಣಿಕ್', 'ಉಷ್ಣಿಗ್' ಎಂಬ ರೂಪಗಳು ಸಿದ್ಧವಾಗುತ್ತವೆ.

'ಅಜಾದಿ' ಪ್ರತ್ಯಯಗಳು ಪರದಲ್ಲಿದ್ದಾಗ, 'ಹ್' ಕಾರವು 'ಅಚ್' ಗಳ ಜೊತೆಗೆ ಸೇರಿಕೊಂಡು ಉಷ್ಣಿಹೌ, ಉಷ್ಣಿಹಃ ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

'ಹಲಾದಿ' ಪ್ರತ್ಯಯಗಳು ಪರದಲ್ಲಿದ್ದಾಗ 'ಕುತ್ವ' ಬಂದು 'ಘ್' ಕಾರವಾಗುತ್ತದೆ. ಅದಕ್ಕೆ 'ಜಶ್ತ್ವ' ಬಂದು, 'ಗ್' ಕಾರವಾಗಿ ಉಷ್ಣಿಗ್ಭ್ಯಾಮ್ ಇತ್ಯಾದಿ ರೂಪಗಳಾಗುತ್ತವೆ.

**(ಹ್-ಕಾರಾನ್ತ ಉಷ್ಣಿಹ್ ಶಬ್ದದ ರೂಪಗಳು)**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರ.ವಿ. | ಉಷ್ಣಿಕ್, ಉಷ್ಣಿಗ್ | ಉಷ್ಣಿಹೌ | ಉಷ್ಣಿಹಃ |
| ದ್ವಿ.ವಿ. | ಉಷ್ಣಿಹಮ್ | ಉಷ್ಣಿಹೌ | ಉಷ್ಣಿಹಃ |
| ತೃ.ವಿ. | ಉಷ್ಣಿಹಾ | ಉಷ್ಣಿಗ್ಭ್ಯಾಮ್ | ಉಷ್ಣಿಗ್ಭಿಃ |
| ಚ.ವಿ. | ಉಷ್ಣಿಹೇ | ಉಷ್ಣಿಗ್ಭ್ಯಾಮ್ | ಉಷ್ಣಿಗ್ಭ್ಯಃ |
| ಪ.ವಿ. | ಉಷ್ಣಿಹಃ | ಉಷ್ಣಿಗ್ಭ್ಯಾಮ್ | ಉಷ್ಣಿಭ್ಯಃ |
| ಷ.ವಿ. | ಉಷ್ಣಿಹಃ | ಉಷ್ಣಿಹೋಃ | ಉಷ್ಣಿಹಾಮ್ |
| ಸ.ವಿ. | ಉಷ್ಣಿಹಿ | ಉಷ್ಣಿಹೋಃ | ಉಷ್ಣಿಕ್ಷು |
| ಸಂ.ಪ್ರ.ವಿ | ಹೇ ಉಷ್ಣಿಕ್, ಹೇ ಉಷ್ಣಿಗ್! | ಹೇ ಉಷ್ಣೀಹೌ! | ಹೇ ಉಷ್ಣಿಹಃ! |

ಉದಾ-'ದ್ಯೌಃ' (ಆಕಾಶ ಅಥವಾ ಸ್ವರ್ಗ)- ಈ 'ವ್' ಕಾರಾನ್ತ 'ದಿವ್' ಶಬ್ದ ಪ್ರಾತಿಪದಿಕವಾಗಿದೆ. 'ದಿವ್' ಶಬ್ದವು ಸ್ತ್ರೀಲ್ಲಿಂಗದಲ್ಲಿದೆ ಮತ್ತು 'ಸುದಿವ್' ಶಬ್ದವು ಪುಲಿಂಗದಲ್ಲಿದೆ. ಇದರ ರೂಪವು 'ಸುದಿವ್' ಶಬ್ದದಂತೆಯೇ ದ್ಯೌಃ, ದಿವೌ, ದಿವಃ ಇತ್ಯಾದಿ ರೂಪಗಳನ್ನು ತಾಳುತ್ತದೆ.

**ಇಲ್ಲಿಗೆ 'ಹ್' ಕರಾಂತ ಶಬ್ದಗಳು ಮುಗಿದವು.**

***

**(ವ್-ಕಾರಾನ್ತ ಶಬ್ದಗಳು ಪ್ರಾರಂಭವಾಗುತ್ತವೆ.**

**(ವ್-ಕಾರಾನ್ತ ಸ್ತ್ರೀಲಿಂಗ ದಿವ್ ಶಬ್ದದ ರೂಪಗಳು)**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರ.ವಿ. | ದ್ಯೌಃ | ದಿವೌ | ದಿವಃ |
| ದ್ವಿ.ವಿ. | ದಿವಮ್ | ದಿವೌ | ದಿವಃ |
| ತೃ.ವಿ. | ದಿವಾ | ದ್ಯುಭ್ಯಾಮ್ | ದ್ಯುಭಿಃ |

| | | | |
|---|---|---|---|
| ಚ.ವಿ. | ದಿವೇ | ದ್ಯುಭ್ಯಾಮ್ | ದ್ಯುಭ್ಯಃ |
| ಪ.ವಿ. | ದಿವಃ | ದ್ಯುಭ್ಯಾಮ್ | ದ್ಯುಭ್ಯಃ |
| ಷ.ವಿ. | ದಿವಃ | ದಿವೋಃ | ದಿವಾಮ್ |
| ಸ.ವಿ. | ದಿವಿ | ದಿವೋಃ | ದ್ಯುಷು |
| ಸಂ.ಪ್ರವಿ | ಹೇ ದ್ಯೌಃ! | ಹೇ ದಿವೌ! | ಹೇ ದಿವಃ! |

## ರೇಫಾನ್ತ ಸ್ತ್ರೀಲಿಂಗ ಶಬ್ದಗಳು

ಉದಾ–'ಗೀಃ'(ವಾಣಿ–ಮಾತು)– ಇದು ರೇಫಾನ್ತ ಸ್ತ್ರೀಲಿಂಗವಾಗಿದೆ. ಈ ಶಬ್ದವು 'ಗೃ' ಧಾತುವಿನ ಮೇಲೆ 'ಕ್ವಿಪ್' ಪ್ರತ್ಯಯವನ್ನು ಸೇರಿಸಿ 'ಸರ್ವಾಪಹಾರ ಲೋಪ'ವಾಗಿ 'ಇತ್ವ' ಮತ್ತು 'ರ'ಪರವಾಗಿ 'ಗಿರ್' ಎಂದಾಗಿದೆ. ಇದಕ್ಕೆ 'ಪ್ರಾತಿಪದಿಕ' ಸಂಜ್ಞೆ ಬಂದ ನಂತರ 'ಸು(ಸ್)' ಪ್ರತ್ಯಯವನ್ನು ಸೇರಿಸಿದಾಗ "ಹಲ್ಙ್ಯಾಭ್ಯೋ ...........ಸುತಿಸ್ಯಪೃಕ್ತಮ್ ಹಲ್" ಎಂಬ ಸೂತ್ರದಿಂದ ಅದು ಲೋಪವಾಗಿ "ರ್ವೋರುಪಧಾಯಾ ದೀರ್ಘ ಇಕಃ" ಸೂತ್ರದಿಂದ ಪದಾನ್ತದ 'ಉಪಧೆ' ಗೆ ದೀರ್ಘ ಬಂದು, 'ಗೀರ್' ಎಂದಾಗುತ್ತದೆ. 'ರೇಫ' ಕ್ಕೆ ವಿಸರ್ಗ ಬಂದು 'ಗೀಃ' ಎಂದಾಗುತ್ತದೆ.

'ಅಜಾದಿ' ವಿಭಕ್ತಿಗಳು ಪರದಲ್ಲಿರುವಾಗ 'ದೀರ್ಘ' ಬರುವುದಿಲ್ಲ.

'ಹಲಾದಿ' ವಿಭಕ್ತಿಗಳು ಪರದಲ್ಲಿರುವಾಗ ಪದಾನ್ತದಲ್ಲಿರುವುದರಿಂದ "ರ್ವೋರುಪಧಾಯಾ ದೀರ್ಘ ಇಕಃ" ಸೂತ್ರದಿಂದ 'ದೀರ್ಘ' ವಾಗುತ್ತದೆ.

### (ರೇಫಾನ್ತ ಸ್ತ್ರೀಲಿಂಗ 'ಗೀರ್' ಶಬ್ದದ ರೂಪಗಳು)

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರ.ವಿ. | ಗೀಃ | ಗಿರೌ | ಗಿರಃ |
| ದ್ವಿ.ವಿ. | ಗಿರಮ್ | ಗಿರೌ | ಗಿರಃ |
| ತೃ.ವಿ. | ಗಿರಾ | ಗೀರ್ಭ್ಯಾಮ್ | ಗೀರ್ಭಿಃ |
| ಚ.ವಿ. | ಗಿರೇ | ಗೀರ್ಭ್ಯಾಮ್ | ಗೀರ್ಭ್ಯಃ |
| ಪ.ವಿ. | ಗಿರಃ | ಗೀರ್ಭ್ಯಾಮ್ | ಗೀರ್ಭ್ಯಃ |
| ಷ.ವಿ. | ಗಿರಃ | ಗಿರೋಃ | ಗಿರಾಮ್ |
| ಸ. ವಿ. | ಗಿರಿ | ಗಿರೋಃ | ಗೀರ್ಷು |
| ಸಂ.ಪ್ರವಿ | ಹೇ ಗೀಃ! | ಹೇ ಗಿರೌ! | ಹೇ ಗಿರಃ! |

'ಪುರ್'(ನಗರ) ಶಬ್ದದ ರೂಪಗಳು ಇದೇ ರೀತಿಯಲ್ಲಿ ಪೂಃ, ಪುರೌ, ಪುರಃ ಇತ್ಯಾದಿ ರೂಪಗಳನ್ನು ಪಡೆಯುತ್ತವೆ.

ಉದಾ–'ಚತಸ್ರಃ'(ನಾಲ್ಕು)– 'ಚತುರ್' ಶಬ್ದಕ್ಕೆ ಪುಲ್ಲಿಂಗದಲ್ಲಿ 'ಚತ್ವಾರಃ', 'ಚತುರಃ' ಮೊದಲಾದ ಬಹುವಚನ ರೂಪಗಳಿರುತ್ತವೆ. ಸ್ತ್ರೀಲಿಂಗದಲ್ಲಿ "ತ್ರಿಚತುರೋಃ ಸ್ತ್ರಿಯಾಂ

ತಿಸೃಚತಸೃ" ಸೂತ್ರದಿಂದ 'ಚತಸೃ' ಆದೇಶ ಬಂದು 'ಚತಸ್ರಃ' ಎಂದು ಬಹುವಚನದ ರೂಪವು ಸಿಗುತ್ತದೆ.

ಚತಸ್ರ ಶಬ್ದದಮೇಲೆ ಪ್ರಥಮಾ ಮತ್ತು ದ್ವಿತೀಯಾ ಬಹುವಚನಗಳಲ್ಲಿ ಜಸ್(ಅಸ್) ಮತ್ತು ಶಸ್(ಅಸ್) ಪ್ರತ್ಯಯಗಳನ್ನು ಸೇರಿಸಿದಾಗ, ಚತಸೃ+ಅಸ್ ಎಂದಿರುತ್ತದೆ. 'ಋ' ಕಾರಕ್ಕೆ "ಅಚಿರಋತಃ" ಎಂಬ ಸೂತ್ರದಿಂದ ರೇಫಾ(ರ್)ದೇಶವು ಬಂದು, ಚತಸ್+ರ್+ ಅಸ್ ಎಂದಿದ್ದಾಗ, 'ಸ್' ಕಾರಕ್ಕೆ ರುತ್ವ–ವಿಸರ್ಗಗಳಿಂದ ಚತಸ್ರಃ ಎಂದು ರೂಪವು ಸಿದ್ಧವಾಗುತ್ತದೆ.

ಸೂಚನೇ: ಇಲ್ಲಿ "ಇಕೋಯಣಚಿ" ಎಂಬ ಸೂತ್ರದಿಂದ 'ಯಣ್' ಸಂಧಿ ಮಾಡಿದರೂ ಚತಸ್ರಃ ಎಂದಾಗುತ್ತದೆ. ಆದರೆ 'ಜಸ್' ಇದ್ದಾಗ ಅದಕ್ಕೆ ಬಾಧಕವಾಗಿ "ಋತೋಙಿ ಸರ್ವನಾಮಸ್ಥಾನಯೋಃ" ಎಂಬ ಸೂತ್ರದಿಂದ ಗುಣವೂ ಬರಬೇಕಾಗಿತ್ತು. ಆದುದರಿಂದ "ಅಚಿರಋತಃ" ಎಂಬ ಸೂತ್ರವು ಪ್ರಾಪ್ತವಾಗಿದೆ. ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಚತಸೃಭಿಃ, ಚತಸೃಭ್ಯಃ ಇತ್ಯಾದಿ ರೂಪಗಳಾಗುತ್ತವೆ.

ಷಷ್ಠೀ ಬಹುವಚನದಲ್ಲಿ 'ಆಮ್' ಪರದಲ್ಲಿದ್ದಾಗ ಪೂರ್ವವರ್ಣಕ್ಕೆ ಹ್ರಸ್ವ, ಮತ್ತು ನುಡಾಗಮ ಬಂದು ಚತಸೃಣಾಮ್ ಎಂದು ರೂಪವಾಗುತ್ತದೆ.

ಸಪ್ತಮೀ ಬಹುವಚನದಲ್ಲಿ ಸುಪ್ ಪರದಲ್ಲಿದ್ದಾಗ, "ಆದೇಶಪ್ರತ್ಯಯಯೋಃ" ಎಂಬ ಸೂತ್ರದಿಂದ ಷತ್ವ ಬಂದು, ಚತಸೃಷು ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಕಾ(ಯಾವಳು, ಯಾವ?)–'ಮ್' ಕಾರಾನ್ತ ಸ್ತ್ರೀಲಿಂಗ 'ಕಿಮ್' ಶಬ್ದದಮೇಲಿರುವ ವಿಭಕ್ತಿ ಪ್ರತ್ಯಯವು ಪರದಲ್ಲಿದ್ದಾಗ, 'ಕಿಮ್' ಶಬ್ದಕ್ಕೆ ಪುಲ್ಲಿಂಗದಲ್ಲಿರುವಂತೆ "ಕಿಮಃ ಕಃ" ಎಂಬ ಸೂತ್ರದಿಂದ 'ಕ' ಆದೇಶ ಬಂದು "ಅಜಾದ್ಯದಷ್ಟಾಪ್" ಎಂಬ ಸೂತ್ರದಿಂದ 'ಟಾಪ್(ಆ)' ಬಂದು ಕ+ಆ ಎಂದಾಗುತ್ತದೆ. ಸವರ್ಣದೀರ್ಘದಿಂದ 'ಕಾ' ಎಂದಾದಮೇಲೆ ಕಾ+ಸ್ ಎಂದಿರುತ್ತದೆ. "ಹಲ್ಙ್ಯಾಬ್ಭ್ಯೋ ... ಸುತಿಸ್ಯಪೃಕ್ತಮ್ ಹಲ್" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬಂದು, 'ಕಾ' ರೂಪವು ಸಿದ್ಧವಾಗುತ್ತದೆ. ಇದು ಸ್ತ್ರೀಲಿಂಗ 'ಸರ್ವಾ' ಶಬ್ದದಂತೆ ನಡೆಯುತ್ತದೆ.

**(ಮ್– ಕಾರಾನ್ತ ಸ್ತ್ರೀಲಿಂಗ ಕಿಮ್ ಶಬ್ದ)**

**(ಮ್– ಕಾರಾನ್ತ ಸ್ತ್ರೀಲಿಂಗ ಕಿಮ್ ಶಬ್ದದ ರೂಪಗಳು)**

ಸೂಚನೆ – ಈ ಶಬ್ದಕ್ಕೆ ಸಂಬೋಧನ ರೂಪವಿಲ್ಲ

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರ.ವಿ. | ಕಾ | ಕೇ | ಕಾಃ |
| ದ್ವಿ.ವಿ. | ಕಾಮ್ | ಕೇ | ಕಾಃ |
| ತೃ.ವಿ. | ಕಯಾ | ಕಾಭ್ಯಾಮ್ | ಕಾಭಿಃ |
| ಚ.ವಿ. | ಕಸ್ಯೈ | ಕಾಭ್ಯಾಮ್ | ಕಾಭ್ಯಃ |

| | | | |
|---|---|---|---|
| ಪ.ವಿ. | ಕಸ್ಯಾಃ | ಕಾಭ್ಯಾಮ್ | ಕಾಭ್ಯಃ |
| ಷ.ವಿ. | ಕಸ್ಯಾಃ | ಕಯೋಃ | ಕಾಸಾಮ್ |
| ಸ. ವಿ. | ಕಸ್ಯಾಮ್ | ಕಯೋಃ | ಕಾಸು |

**(ದ್-ಕಾರಕ್ಕೆ ಯ್- ಆದೇಶವನ್ನು ವಿಧಿಸುವ ಸೂತ್ರ).**

**ಸೂತ್ರ - 362. ಯಃ ಸೌ (7.2.110)**

ವೃತ್ತಿಃ-ಇದಮಃ ದಸ್ಯ ಯಃ। ಇಯಮ್। ತ್ಯದಾದ್ಯತ್ವಮ್। ಪರರೂಪತ್ವಮ್। ಟಾಪ್। ದಶ್ಚ ಇತಿ ಮಃ। ಇಮೇ। ಇಮಾಃ। ಇಮಾಮ್। ಅನಯಾ। (277) ಹಲಿ ಲೋಪಃ। ಆಭ್ಯಾಮ್। ಆಭಿಃ। ಅಸ್ಯೈ। ಆಭ್ಯಃ। ಅಸ್ಯಾಃ। ಅನಯೋಃ। ಆಸಾಮ್। ಅಸ್ಯಾಮ್। ಆಸು। ತ್ಯದಾದ್ಯತ್ವಮ್। ಟಾಪ್। ಸ್ಯಾ ತ್ಯೇ। ತ್ಯಾಃ। ಏವಂ ತದ್, ಏತದ್। ವಾಕ್। ವಾಗ್। ವಾಚೌ। ವಾಗ್ಭ್ಯಾಮ್। ವಾಕ್ಷು। ಅಪ್ ಶಬ್ದಃ ನಿತ್ಯ-ಬಹುವಚನಾಂತಃ। (206) ಅಪ್ತೃನ್ನಿತಿ ದೀರ್ಘಃ। ಆಪಃ। ಅಪಃ।

ಅ. ವ್ಯ. -"ಇದಮೋ ಮಃ(7-2-108)" ಸೂತ್ರದಿಂದ 'ಇದಮಃ' ಎಂಬ ಪದವು ಮತ್ತು "ದಶ್ಚ(7-2-109)" ಸೂತ್ರದಿಂದ 'ದಃ' ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ-'ಸು' ಪ್ರತ್ಯಯವು ಪರದಲ್ಲಿದ್ದಾಗ, 'ಇದಮ್' ಶಬ್ದದ 'ದ್' ಕಾರಕ್ಕೆ 'ಯ್' ಕಾರವು ಆದೇಶವಾಗಿ ಬರುತ್ತದೆ.

[ವಿಶೇಷ-'ಇದಮ್' ಶಬ್ದಕ್ಕೆ ಪುಲ್ಲಿಂಗದಲ್ಲಿ "ಇದೋಽಯ್ ಪುಂಸಿ" ಎಂಬ ಸೂತ್ರದಿಂದ 'ಇದ್' ಪರ್ಯನ್ತ ಶಬ್ದ-ಸ್ವರೂಪಕ್ಕೇನೇ 'ಅಯ್' ಆದೇಶ ಬರೋಣದ್ದರಿಂದ 'ಇದ್' ಎಂಬುದೇ ಉಳಿದಿರುವದಿಲ್ಲ. ಹೀಗಾಗಿ ಇಲ್ಲಿ ಪ್ರಕೃತ ಸೂತ್ರವು ಅನ್ವಯಿಸುವದಿಲ್ಲ].

ನಪುಂಸಕ ಲಿಂಗದಲ್ಲಿ 'ಸು' ಪ್ರತ್ಯಯವು ಲೋಪವಾಗೋಣದ್ದರಿಂದ, ಪ್ರಕೃತ ಸೂತ್ರವು ಅನ್ವಯಿಸುವದಿಲ್ಲ.

ಹೀಗಾಗಿ ಈ ಸೂತ್ರವು ಸ್ತ್ರೀಲಿಂಗದಲ್ಲಿ ಮಾತ್ರ ಪ್ರವೃತ್ತಿಸುತ್ತದೆ].

ಉದಾ- ಇಯಮ್(ಒಬ್ಬ ಸ್ತ್ರೀ ವ್ಯಕ್ತಿಯನ್ನು ಸೂಚಿಸುವ ಇವಳು ಎಂಬ ಏಕವಚನ ಶಬ್ದ)-ಇವಳು)- ಪ್ರಥಮಾ ವಿಭಕ್ತಿ ಏಕವಚನದಲ್ಲಿ ಇದಮ್+ಸು(ಸ್) ಎಂದಿದ್ದಾಗ, ತ್ಯದಾದ್ಯತ್ವವನ್ನು ಬಾಧಿಸಿ 'ಮ್' ಕಾರಕ್ಕೆ 'ಮ್' ಕಾರವೇ ಆದೇಶವಾಗಿ ಬರುತ್ತದೆ. ಪ್ರಕೃತ ಸೂತ್ರದಿಂದ 'ದ್' ಕಾರಕ್ಕೆ 'ಯ್' ಕಾರವು ಆದೇಶವಾಗಿ ಬಂದು, ಇಯ್+ಅ+ಮ್+ಸ್ ಎಂದಿದ್ದಾಗ, "ಹಲ್ಙ್ಯಾಭ್ಯೋ... ಸುತಿಸ್ಯಪೃಕ್ತಮ್ ಹಲ್" ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬಂದು ಇಯಮ್ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ- ಇಮೇ (ಇಬ್ಬರು ಸ್ತ್ರೀ ವ್ಯಕ್ತಿಗಳನ್ನು ಸೂಚಿಸುವ ದ್ವಿವಚನ ಶಬ್ದ)- ಪ್ರಥಮಾ ಮತ್ತು ದ್ವಿತೀಯಾ ದ್ವಿ ವಚನಗಳಲ್ಲಿ ಇದಮ್+ಔ ಎಂದಿದ್ದಾಗ, 'ತ್ಯದಾದ್ಯತ್ವ'

ದಿಂದ ಅಂತ್ಯ 'ಮ್' ಕಾರಕ್ಕೆ 'ಅ' ಕಾರ ಬಂದು ಇದ+ಅ+ಔ ಎಂದಿದ್ದಾಗ, ಪರರೂಪ ಬಂದು ಇದ+ಔ ಎಂದಾಗುತ್ತದೆ. "ಅಜಾದ್ಯದಷ್ಟಾಪ್" ಎಂಬ ಸೂತ್ರದಿಂದ 'ಟಾಪ್(ಆ)' ಪ್ರತ್ಯಯವು ಪರದಲ್ಲಿ ಬಂದು, ಇದ+ಆ+ಔ ಎಂದಿದ್ದಾಗ, ಸವರ್ಣ ದೀರ್ಘದಿಂದ ಇದಾ+ಔ ಎಂದಾಗುತ್ತದೆ. "ದಶ್ಚ" ಎಂಬ ಸೂತ್ರದಿಂದ 'ದ್' ಕಾರಕ್ಕೆ 'ಮ್' ಕಾರ ಬಂದು ಇಮಾ+ಔ ಎಂದಿದ್ದಾಗ, "ಔಙ ಆಪಃ" ಎಂಬ ಸೂತ್ರದಿಂದ 'ಔ' ಕಾರಕ್ಕೆ 'ಶೀ(ಈ)' ಕಾರ ಆದೇಶವಾಗಿ ಬಂದು, ಇಮಾ+ಈ ಎಂದಿದ್ದಾಗ, ಗುಣಸಂಧಿಯಿಂದ ಇಮೇ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಇಮಾಃ (ಹಲವು ಸ್ತ್ರೀ ವ್ಯಕ್ತಿಗಳನ್ನು ಸೂಚಿಸುವ ಬಹುವಚನ ಶಬ್ದ) – ಪ್ರಥಮಾ ವಿಭಕ್ತಿ ಬಹುವಚನದಲ್ಲಿ ಇದಮ್+'ಜಸ್(ಅಸ್)' ಎಂದಿದ್ದಾಗ, ತ್ಯದಾದ್ಯತ್ವ ದಿಂದ ಅಂತ್ಯ 'ಮ್' ಕಾರಕ್ಕೆ 'ಅ' ಕಾರ ಬಂದು, ಇದ+ಅ+ಅಸ್=ಇದಾ+ಅಸ್ ಎಂದಿದ್ದಾಗ, "ಅಜಾದ್ಯದಷ್ಟಾಪ್" ಎಂಬ ಸೂತ್ರದಿಂದ 'ಟಾಪ್(ಆ)' ಪ್ರತ್ಯಯವನ್ನು ವಿಭಕ್ತಿಪ್ರತ್ಯಯಕ್ಕೆ ಪೂರ್ವದಲ್ಲಿ ಸೇರಿಸಿದಮೇಲೆ, ಇದಾ+ಆ+ಅಸ್ ಎಂದಿದ್ದಾಗ, 'ದ್' ಕಾರಕ್ಕೆ ಹಿಂದಿನಂತೆ ಮತ್ವ ಬಂದು ಇಮಾ+ಆ+ಅಸ್ ಎಂದಿದ್ದಾಗ, ಸವರ್ಣ ದೀರ್ಘದಿಂದ ಇಮಾ+ಅಸ್ ಎಂದಿದ್ದಾಗ, ಪೂರ್ವಸವರ್ಣದೀರ್ಘದಿಂದ ಇಮಾಸ್ ಎಂದಾಗಿ ರುತ್ವ–ವಿಸರ್ಗಗಳಿಂದ ಇಮಾಃ ಎಂಬ ರೂಪವು ಸಿದ್ಧಿಸುತ್ತದೆ.

ಉದಾ– ಅನಯಾ – ತೃತೀಯಾ ಏಕವಚನದಲ್ಲಿ ಇದಮ್+ಟಾ(ಆ) ಎಂದಿದ್ದಾಗ, ತ್ಯದಾದ್ಯತ್ವದಿಂದ 'ಮ್' ಕಾರಕ್ಕೆ 'ಅ' ಕಾರ ಬಂದು, ಇದ+ಅ+ಆ ಎಂದಿದ್ದಾಗ, ಮೊದಲ ಎರಡು ಅ–ಕಾರಗಳಿಗೆ ದೀರ್ಘದಿಂದ ಇದಾ+ಆ ಎಂದಿರುತ್ತದೆ.

"ಅಜಾದ್ಯದಷ್ಟಾಪ್" ಎಂಬ ಸೂತ್ರದಿಂದ 'ಟಾಪ್(ಆ)' ಪ್ರತ್ಯಯವನ್ನು ವಿಭಕ್ತಿ ಪ್ರತ್ಯಯಕ್ಕೆ ಪೂರ್ವದಲ್ಲಿ ಸೇರಿಸಿದಮೇಲೆ, ಇದಾ+ಆ ಎಂದಿದ್ದಾಗ, "ಅನಾಪ್ಯಕಃ" ಎಂಬ ಸೂತ್ರದಿಂದ 'ಇದ್' ಎಂಬ ಶಬ್ದಸ್ವರೂಪಕ್ಕೆ 'ಅನ್' ಆದೇಶ ಬಂದು, ಅನಾ+ಆ ಎಂದಾಗುತ್ತದೆ. "ಆಙಿಚಾಪಃ" ಎಂಬ ಸೂತ್ರದಿಂದ 'ಆ' ಕಾರದ ಸ್ಥಾನದಲ್ಲಿ 'ಏ' ಕಾರ ಬಂದು ಅನೇ+ಆ ಎಂದಾಗುತ್ತದೆ. "ಏಚೋಽಯವಾಯಾವಃ" ಎಂಬ ಸೂತ್ರದಿಂದ ಏ– ಕಾರಕ್ಕೆ 'ಅಯ್' ಆದೇಶ ಬಂದು ಅನಯ್+ಆ=ಅನಯಾ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಆಭ್ಯಾಮ್ – ತೃತೀಯಾ ವಿಭಕ್ತಿ ದ್ವಿವಚನದಲ್ಲಿ ಇದಮ್+ಭ್ಯಾಮ್ ಎಂದಿದ್ದಾಗ, ತ್ಯದಾದ್ಯತ್ವದಿಂದ 'ಮ್' ಕಾರಕ್ಕೆ 'ಅ' ಕಾರ ಬಂದು ಇದ+ಅ+ಭ್ಯಾಮ್ ಎಂದಿರುತ್ತದೆ. ಮೊದಲ ಎರಡು ಅ–ಕಾರಗಳಿಗೆ ದೀರ್ಘ ಬಂದು ಇದಾ+ಭ್ಯಾಮ್ ಎಂದಿದ್ದಾಗ, "ಅಜಾದ್ಯದಷ್ಟಾಪ್" ಎಂಬ ಸೂತ್ರದಿಂದ 'ಟಾಪ್(ಆ)' ಪ್ರತ್ಯಯವನ್ನು ವಿಭಕ್ತಿಪ್ರತ್ಯಯಕ್ಕೆ ಪೂರ್ವದಲ್ಲಿ ಸೇರಿಸಿದ ಮೇಲೆ, ಇದಾ+ಆ+ಭ್ಯಾಮ್ ಎಂದಿದ್ದಾಗ, ಸವರ್ಣದೀರ್ಘ ಬಂದು ಇದಾ+ಭ್ಯಾಮ್ ಎಂದಿರುತ್ತದೆ. "ಹಲಿ ಲೋಪಃ" ಎಂಬ ಸೂತ್ರದಿಂದ ಇದ್ ಎಂಬ ಶಬ್ದಸ್ವರೂಪಕ್ಕೆ ಲೋಪ ಬಂದು ಆ+ಭ್ಯಾಮ್=ಆಭ್ಯಾಮ್ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಆಭಿಃ – ತೃತೀಯಾವಿಭಕ್ತಿ ಬಹುವಚನದಲ್ಲಿ ಇದಮ್+ಭಿಸ್ ಎಂದಿದ್ದಾಗ ಹಿಂದಿನಂತೆ ಪ್ರಕ್ರಿಯೆ ನಡೆದು ಆ+ಭಿಸ್ ಎಂದಿದ್ದಾಗ, ಆಭಿಸ್ ಎಂದಾಗಿ 'ಸ್' ಕಾರಕ್ಕೆ ರುತ್ವ–ವಿಸರ್ಗಗಳಿಂದ ಆಭಿಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಆಭ್ಯಃ – ಚತುರ್ಥೀ ಮತ್ತು ಪಞ್ಚಮೀ ವಿಭಕ್ತಿ ಬಹುವಚನಗಳಲ್ಲಿ ಇದಮ್+ಭ್ಯಸ್ ಎಂದಿದ್ದಾಗ ಹಿಂದಿನಂತೆ ಪ್ರಕ್ರಿಯೆ ನಡೆದು ಆ+ಭ್ಯಸ್ ಎಂದಿದ್ದಾಗ, ಆಭ್ಯಸ್ ಎಂದಾಗಿ 'ಸ್' ಕಾರಕ್ಕೆ ರುತ್ವ–ವಿಸರ್ಗಗಳಿಂದ ಆಭ್ಯಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಅಸ್ಯೈ ಚತುರ್ಥೀ ವಿಭಕ್ತಿ ಏಕವಚನದಲ್ಲಿ ಇದಮ್+ಙೇ(ಏ) ಎಂದಿದ್ದಾಗ, ವಿಭಕ್ತಿ ಪ್ರತ್ಯಯದ ಪೂರ್ವದಲ್ಲಿ ಸ್ತ್ರೀ ಪ್ರತ್ಯಯವಾದ ಟಾಪ್(ಆ) ಬಂದು, ಇದಮ್+ಆ+ಏ ಎಂದಿರುತ್ತದೆ. ಈಗ ತ್ಯದಾದ್ಯತ್ವದಿಂದ 'ಮ್' ಕಾರಕ್ಕೆ 'ಅ' ಕಾರ ಬಂದು ಇದ+ಅ+ಆ+ಏ ಎಂದಿದ್ದಾಗ, ಮೊದಲ ಎರಡು ಅ–ಕಾರಗಳಿಗೆ ಪರಸವರ್ಣ ಬಂದು ಇದ+ಆ+ಏ ಎಂದಿದ್ದಾಗ, "ಸರ್ವನಾಮ್ನಃ ಸ್ಯಾಡ್ ಢ್ರಸ್ವಶ್ಚ" ಎಂಬ ಸೂತ್ರದಿಂದ ವಿಭಕ್ತಿ ಪ್ರತ್ಯಯದ ಪೂರ್ವದಲ್ಲಿ 'ಸ್ಯಾಟ್(ಸ್ಯಾ)' ಆಗಮ ಬಂದು, ಇದಾ+ಆ+ಸ್ಯಾ+ಏ ಎಂದಿದ್ದಾಗ, ಮತ್ತೆ ಇದೇ ಸೂತ್ರದಿಂದ 'ಆ' ಕಾರಕ್ಕೆ ಹ್ರಸ್ವ ಬಂದು ನಂತರ 'ಇದ್' ಶಬ್ದರೂಪಕ್ಕೆ ಲೋಪ ಬಂದು, ಅ+ಸ್ಯಾ+ಏ ಎಂದಿದ್ದಾಗ, ಆ–ಕಾರ ಏ–ಕಾರಗಳಿಗೆ ವೃದ್ಧಿ ಬಂದು ಅಸ್ಯೈ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಅಸ್ಯಾಃ – ಪಞ್ಚಮೀ ಮತ್ತು ಷಷ್ಠೀ ಏಕವಚನಗಳಲ್ಲಿ ಇದಮ್+ಙಸಿ(ಅಸ್),ಮತ್ತು ಇದಮ್+ಙಸ್(ಅಸ್) ಎಂದಿದ್ದಾಗ, ಹಿಂದಿನಂತೆಯೇ ಪ್ರಕ್ರಿಯೆ ನಡೆದು ಅ+ಸ್ಯಾ+ಅಸ್ ಎಂದಿದ್ದಾಗ, ಅಸ್ಯಾಸ್ ಎಂದಾಗಿ ರುತ್ವ–ವಿಸರ್ಗಗಳಿಂದ ಅಸ್ಯಾಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಅನಯೋಃ –ಷಷ್ಠೀ ಮತ್ತು ಸಪ್ತಮೀ ದ್ವಿ–ವಚನಗಳಲ್ಲಿ ಇದಮ್+ಓಸ್ ಎಂದಿದ್ದಾಗ, ತ್ಯದಾದ್ಯತ್ವದಿಂದ 'ಮ್' ಕಾರಕ್ಕೆ 'ಅ' ಕಾರ ಬಂದು, ಇದ+ಅ+ಓಸ್ ಎಂದಿದ್ದಾಗ, ಮೊದಲ ಎರಡು ಅ– ಕಾರಗಳಿಗೆ ಪರಸವರ್ಣದಿಂದ ಇದ+ಓಸ್ ಎಂದಿದ್ದಾಗ, ವಿಭಕ್ತಿಪ್ರತ್ಯಯದ ಪೂರ್ವದಲ್ಲಿ ಟಾಪ್(ಆ) ಪ್ರತ್ಯಯ ಬಂದು, ಇದ+ಆ+ಓಸ್ ಎಂದಿದ್ದಾಗ, "ಅನಾಪ್ಯಕಃ" ಎಂಬಸೂತ್ರದಿಂದ 'ಇದ್' ಶಬ್ದ ಸ್ವರೂಪಕ್ಕೆ 'ಅನ್' ಆದೇಶ ಬಂದು ಅನ+ಆ+ಓಸ್ ಎಂದಿದ್ದಾಗ, ಸವರ್ಣದೀರ್ಘದಿಂದ ಅನಾ+ಓಸ್ ಎಂದಿದ್ದಾಗ, "ಆಙಿಚಾಪಃ" ಎಂಬ ಸೂತ್ರದಿಂದ 'ಆ'ಕಾರದ ಸ್ಥಾನದಲ್ಲಿ 'ಏ' ಕಾರ ಬಂದು, ಅನೇ+ಓಸ್ ಎಂದಿದ್ದಾಗ, "ಏಚೋಽಯವಾಯಾವಃ" ಎಂಬ ಸೂತ್ರದಿಂದ ಏ– ಕಾರಕ್ಕೆ 'ಅಯ್' ಆದೇಶ ಬಂದು ಅನಯೋಸ್ ಎಂದಾಗಿ 'ಸ್' ಕಾರಕ್ಕೆ ರುತ್ವ–ವಿಸರ್ಗಗಳು ಬಂದು ಅನಯೋಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಆಸಾಮ್– ಷಷ್ಠೀ ಬಹುವಚನದಲ್ಲಿ ಇದಮ್+ಆಮ್ ಎಂದಿದ್ದಾಗ, ತ್ಯದಾದ್ಯತ್ವದಿಂದ 'ಮ್' ಕಾರಕ್ಕೆ 'ಅ' ಕಾರ ಬಂದು, ಇದ+ಅ+ಆಮ್ ಎಂದಿದ್ದಾಗ,

ಮೊದಲ ಎರಡು ಅ-ಕಾರಗಳಿಗೆ ಪರಸವರ್ಣ ಬಂದು, ಇದ+ಆಮ್ ಎಂದಿರುತ್ತದೆ. ವಿಭಕ್ತಿಪ್ರತ್ಯಯದ ಪೂರ್ವದಲ್ಲಿ ಟಾಪ್(ಆ) ಪ್ರತ್ಯಯ ಬಂದು, ಇದ+ಆ+ಆಮ್ ಎಂದಿದ್ದಾಗ, ಅ-ಕಾರ, ಆ-ಕಾರಗಳಿಗೆ ಸವರ್ಣದೀರ್ಘ ಬಂದು ಇದಾ+ಆಮ್ ಎಂದಿದ್ದಾಗ, "ಆಮಿ ಸರ್ವನಾಮ್ನಃ ಸುಟ್" ಎಂಬ ಸೂತ್ರದಿಂದ ಟಿತ್ ಆಗಿರೋಣದ್ದರಿಂದ, ವಿಭಕ್ತಿಪ್ರತ್ಯಯಕ್ಕೆ ಆದ್ಯವಯವವಾಗಿ ಬಂದು, ಇದಾ+ಸಾಮ್ ಎಂದಿರುತ್ತದೆ. "ಹಲಿಲೋಪಃ" ಎಂಬ ಸೂತ್ರದಿಂದ 'ಇದ್' ಶಬ್ದ ಸ್ವರೂಪಕ್ಕೆ ಲೋಪ ಬಂದು ಆ+ಸಾಮ್=ಆಸಾಮ್ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ- ಅಸ್ಯಾಮ್: ಸಪ್ತಮೀ ಏಕವಚನದಲ್ಲಿ ಇದಮ್+ಙಿ(ಇ) ಎಂದಿದ್ದಾಗ, ತ್ಯದಾದ್ಯತ್ವದಿಂದ 'ಮ್' ಕಾರಕ್ಕೆ 'ಅ' ಕಾರ ಬಂದು ಇದ+ಅ+ಇ ಎಂದಿದ್ದಾಗ, ಮೊದಲ ಎರಡು ಅ-ಕಾರಗಳಿಗೆ ಪರಸವರ್ಣ ಬಂದು ಇದ+ಇ ಎಂದಿದ್ದಾಗ, ವಿಭಕ್ತಿಪ್ರತ್ಯಯದ ಪೂರ್ವದಲ್ಲಿ ಟಾಪ್(ಆ) ಪ್ರತ್ಯಯ ಬಂದು, ಇದ+ಆ+ಇ ಎಂದಿರುತ್ತದೆ. ಆಗ ಸವರ್ಣದೀರ್ಘದಿಂದ ಇದಾ+ಇ ಎಂದಾಗುತ್ತದೆ. "ಙೇರಾಮ್ನದ್ಯಾಮ್ ನೀಭ್ಯಃ" ಎಂಬ ಸೂತ್ರದಿಂದ, 'ಇ' ಗೆ 'ಆಮ್' ಬಂದು, ಇದಾ+ಆಮ್ ಎಂದಿದ್ದಾಗ, "ಸರ್ವನಾಮ್ನಃ ಸ್ಯಾಡ್ ಢ್ರಸ್ವಶ್ಚ" ಎಂಬ ಸೂತ್ರದಿಂದ ವಿಭಕ್ತಿ ಪ್ರತ್ಯಯದ ಪೂರ್ವದಲ್ಲಿ 'ಸ್ಯಾಟ್(ಸ್ಯಾ)' ಆಗಮ ಬಂದು, ಇದಾ+ಸ್ಯಾ+ಆಮ್ ಎಂದಿದ್ದಾಗ, 'ಇದಾ' ದಲ್ಲಿರುವ 'ಆ' ಕಾರಕ್ಕೆ ಹ್ರಸ್ವ ಬಂದು ಇದ+ಸ್ಯಾ+ಆಮ್ ಎಂದಿದ್ದಾಗ, "ಹಲಿಲೋಪಃ" ಏಂಬ ಸೂತ್ರದಿಂದ 'ಇದ್' ಶಬ್ದ ಸ್ವರೂಪಕ್ಕೆ ಲೋಪ ಬಂದು ಅಸ್ಯಾ+ಆಮ್ ಎಂದಿದ್ದಾಗ, ಸವರ್ಣದೀರ್ಘದಿಂದ ಅಸ್ಯಾಮ್ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ- ಆಸು- ಸಪ್ತಮೀ ಬಹುವಚನದಲ್ಲಿ ಇದಮ್+ಸುಪ್(ಸು) ಎಂದಿದ್ದಾಗ, ತ್ಯದಾದ್ಯತ್ವದಿಂದ 'ಮ್' ಕಾರಕ್ಕೆ 'ಅ' ಕಾರ ಬಂದು, ಇದ+ಅ+ಸು ಎಂದಿದ್ದಾಗ, ಮೊದಲ ಎರಡು ಅ-ಕಾರಗಳಿಗೆ ಪರಸವರ್ಣ ಬಂದು, ಇದ+ಸು ಎಂದಿದ್ದಾಗ, ವಿಭಕ್ತಿಪ್ರತ್ಯಯದ ಪೂರ್ವದಲ್ಲಿ ಟಾಪ್(ಆ) ಪ್ರತ್ಯಯ ಬಂದು, ಇದ+ಆ+ಸು ಎಂದಿದ್ದಾಗ, ಸವರ್ಣದೀರ್ಘದಿಂದ ಇದಾ+ಸು ಎಂದಿದ್ದಾಗ, "ಹಲಿಲೋಪಃ" ಎಂಬ ಸೂತ್ರದಿಂದ 'ಇದ್' ಶಬ್ದ ಸ್ವರೂಪಕ್ಕೆ ಲೋಪ ಬಂದು ಆ+ಸು = ಆಸು ಎಂಬ ರೂಪವು ಸಿದ್ಧವಾಗುತ್ತದೆ.

### (ಮ್- ಕಾರಾನ್ತ ಸ್ತ್ರೀಲಿಂಗ ಇದಮ್ ಶಬ್ದದ ರೂಪಗಳು)

**ಸೂಚನೆ:** ಈ ಶಬ್ದಕ್ಕೆ ಸಂಬೋಧನ ರೂಪವಿಲ್ಲ

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರ.ವಿ. | ಇಯಮ್ | ಇಮೇ | ಇಮಾಃ |
| ದ್ವಿ.ವಿ. | ಇಮಾಮ್,ಏನಾಮ್ | ಇಮೇ, ಏನೇ | ಇಮಾಃ, ಏನಾಃ |
| ತೃ.ವಿ. | ಅನಯಾ, ಏನಯಾ | ಆಭ್ಯಾಮ್ | ಆಭಿಃ |

ಉದಾ– ಆಭಿಃ – ತೃತೀಯಾವಿಭಕ್ತಿ ಬಹುವಚನದಲ್ಲಿ ಇದಮ್+ಭಿಸ್ ಎಂದಿದ್ದಾಗ ಹಿಂದಿನಂತೆ ಪ್ರಕ್ರಿಯೆ ನಡೆದು ಆ+ಭಿಸ್ ಎಂದಿದ್ದಾಗ, ಆಭಿಸ್ ಎಂದಾಗಿ 'ಸ್' ಕಾರಕ್ಕೆ ರುತ್ವ–ವಿಸರ್ಗಗಳಿಂದ ಆಭಿಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಆಭ್ಯಃ – ಚತುರ್ಥೀ ಮತ್ತು ಪಞ್ಚಮೀ ವಿಭಕ್ತಿ ಬಹುವಚನಗಳಲ್ಲಿ ಇದಮ್+ಭ್ಯಸ್ ಎಂದಿದ್ದಾಗ ಹಿಂದಿನಂತೆ ಪ್ರಕ್ರಿಯೆ ನಡೆದು ಆ+ಭ್ಯಸ್ ಎಂದಿದ್ದಾಗ, ಆಭ್ಯಸ್ ಎಂದಾಗಿ 'ಸ್' ಕಾರಕ್ಕೆ ರುತ್ವ–ವಿಸರ್ಗಗಳಿಂದ ಆಭ್ಯಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಅಸ್ಯೈ ಚತುರ್ಥೀ ವಿಭಕ್ತಿ ಏಕವಚನದಲ್ಲಿ ಇದಮ್+ಙೇ(ಏ) ಎಂದಿದ್ದಾಗ, ವಿಭಕ್ತಿ ಪ್ರತ್ಯಯದ ಪೂರ್ವದಲ್ಲಿ ಸ್ತ್ರೀ ಪ್ರತ್ಯಯವಾದ ಟಾಪ್(ಆ) ಬಂದು, ಇದಮ್+ಆ+ಏ ಎಂದಿರುತ್ತದೆ. ಈಗ ತ್ಯದಾದ್ಯತ್ವದಿಂದ 'ಮ್' ಕಾರಕ್ಕೆ 'ಅ' ಕಾರ ಬಂದು ಇದ+ಅ+ಆ+ಏ ಎಂದಿದ್ದಾಗ, ಮೊದಲ ಎರಡು ಅ–ಕಾರಗಳಿಗೆ ಪರಸವರ್ಣ ಬಂದು ಇದ+ಆ+ಏ ಎಂದಿದ್ದಾಗ, "ಸರ್ವನಾಮ್ನಃ ಸ್ಯಾಡ್ ಢ್ರಸ್ವಶ್ಚ" ಎಂಬ ಸೂತ್ರದಿಂದ ವಿಭಕ್ತಿ ಪ್ರತ್ಯಯದ ಪೂರ್ವದಲ್ಲಿ 'ಸ್ಯಾಟ್(ಸ್ಯಾ)' ಆಗಮ ಬಂದು, ಇದಾ+ಆ+ಸ್ಯಾ+ಏ ಎಂದಿದ್ದಾಗ, ಮತ್ತೆ ಇದೇ ಸೂತ್ರದಿಂದ 'ಆ' ಕಾರಕ್ಕೆ ಹ್ರಸ್ವ ಬಂದು ನಂತರ 'ಇದ್' ಶಬ್ದರೂಪಕ್ಕೆ ಲೋಪ ಬಂದು, ಅ+ಸ್ಯಾ+ಏ ಎಂದಿದ್ದಾಗ, ಆ–ಕಾರ ಏ–ಕಾರಗಳಿಗೆ ವೃದ್ಧಿ ಬಂದು ಅಸ್ಯೈ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಅಸ್ಯಾಃ – ಪಞ್ಚಮೀ ಮತ್ತು ಷಷ್ಠೀ ಏಕವಚನಗಳಲ್ಲಿ ಇದಮ್+ಙಸಿ(ಅಸ್),ಮತ್ತು ಇದಮ್+ಙಸ್(ಅಸ್) ಎಂದಿದ್ದಾಗ, ಹಿಂದಿನಂತೆಯೇ ಪ್ರಕ್ರಿಯೆ ನಡೆದು ಅ+ಸ್ಯಾ+ಅಸ್ ಎಂದಿದ್ದಾಗ, ಅಸ್ಯಾಸ್ ಎಂದಾಗಿ ರುತ್ವ–ವಿಸರ್ಗಗಳಿಂದ ಅಸ್ಯಾಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಅನಯೋಃ –ಷಷ್ಠೀ ಮತ್ತು ಸಪ್ತಮೀ ದ್ವಿ–ವಚನಗಳಲ್ಲಿ ಇದಮ್+ಓಸ್ ಎಂದಿದ್ದಾಗ, ತ್ಯದಾದ್ಯತ್ವದಿಂದ 'ಮ್' ಕಾರಕ್ಕೆ 'ಅ' ಕಾರ ಬಂದು, ಇದ+ಅ+ಓಸ್ ಎಂದಿದ್ದಾಗ, ಮೊದಲ ಎರಡು ಅ– ಕಾರಗಳಿಗೆ ಪರಸವರ್ಣದಿಂದ ಇದ+ಓಸ್ ಎಂದಿದ್ದಾಗ, ವಿಭಕ್ತಿಪ್ರತ್ಯಯದ ಪೂರ್ವದಲ್ಲಿ ಟಾಪ್(ಆ) ಪ್ರತ್ಯಯ ಬಂದು, ಇದ+ಆ+ಓಸ್ ಎಂದಿದ್ದಾಗ, "ಅನಾಪ್ಯಕಃ" ಎಂಬಸೂತ್ರದಿಂದ 'ಇದ್' ಶಬ್ದ ಸ್ವರೂಪಕ್ಕೆ 'ಅನ್' ಆದೇಶ ಬಂದು ಅನ+ಆ+ಓಸ್ ಎಂದಿದ್ದಾಗ, ಸವರ್ಣದೀರ್ಘದಿಂದ ಅನಾ+ಓಸ್ ಎಂದಿದ್ದಾಗ, "ಆಙಿಚಾಪಃ" ಎಂಬ ಸೂತ್ರದಿಂದ 'ಆ'ಕಾರದ ಸ್ಥಾನದಲ್ಲಿ 'ಏ' ಕಾರ ಬಂದು, ಅನೇ+ಓಸ್ ಎಂದಿದ್ದಾಗ, "ಏಚೋಽಯವಾಯಾವಃ" ಎಂಬ ಸೂತ್ರದಿಂದ ಏ– ಕಾರಕ್ಕೆ 'ಅಯ್' ಆದೇಶ ಬಂದು ಅನಯೋಸ್ ಎಂದಾಗಿ 'ಸ್' ಕಾರಕ್ಕೆ ರುತ್ವ–ವಿಸರ್ಗಗಳು ಬಂದು ಅನಯೋಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಆಸಾಮ್– ಷಷ್ಠೀ ಬಹುವಚನದಲ್ಲಿ ಇದಮ್+ಆಮ್ ಎಂದಿದ್ದಾಗ, ತ್ಯದಾದ್ಯತ್ವದಿಂದ 'ಮ್' ಕಾರಕ್ಕೆ 'ಅ' ಕಾರ ಬಂದು, ಇದ+ಅ+ಆಮ್ ಎಂದಿದ್ದಾಗ,

ಮೊದಲ ಎರಡು ಅ–ಕಾರಗಳಿಗೆ ಪರಸವರ್ಣ ಬಂದು, ಇದ+ಆಮ್ ಎಂದಿರುತ್ತದೆ. ವಿಭಕ್ತಿಪ್ರತ್ಯಯದ ಪೂರ್ವದಲ್ಲಿ ಟಾಪ್(ಆ) ಪ್ರತ್ಯಯ ಬಂದು, ಇದ+ಆ+ಆಮ್ ಎಂದಿದ್ದಾಗ, ಅ–ಕಾರ, ಆ–ಕಾರಗಳಿಗೆ ಸವರ್ಣದೀರ್ಘ ಬಂದು ಇದಾ+ಆಮ್ ಎಂದಿದ್ದಾಗ, "ಆಮಿ ಸರ್ವನಾಮ್ನಃ ಸುಟ್" ಎಂಬ ಸೂತ್ರದಿಂದ ಟಿತ್ ಆಗಿರೋಣದ್ದರಿಂದ, ವಿಭಕ್ತಿಪ್ರತ್ಯಯಕ್ಕೆ ಆದ್ಯವಯವವಾಗಿ ಬಂದು, ಇದಾ+ಸಾಮ್ ಎಂದಿರುತ್ತದೆ. "ಹಲಿಲೋಪಃ" ಎಂಬ ಸೂತ್ರದಿಂದ 'ಇದ್' ಶಬ್ದ ಸ್ವರೂಪಕ್ಕೆ ಲೋಪ ಬಂದು ಆ+ಸಾಮ್=ಆಸಾಮ್ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಅಸ್ಯಾಮ್: ಸಪ್ತಮೀ ಏಕವಚನದಲ್ಲಿ ಇದಮ್+ಙಿ(ಇ) ಎಂದಿದ್ದಾಗ, ತ್ಯದಾದ್ಯತ್ವದಿಂದ 'ಮ್' ಕಾರಕ್ಕೆ 'ಅ' ಕಾರ ಬಂದು ಇದ+ಅ+ಇ ಎಂದಿದ್ದಾಗ, ಮೊದಲ ಎರಡು ಅ–ಕಾರಗಳಿಗೆ ಪರಸವರ್ಣ ಬಂದು ಇದ+ಇ ಎಂದಿದ್ದಾಗ, ವಿಭಕ್ತಿಪ್ರತ್ಯಯದ ಪೂರ್ವದಲ್ಲಿ ಟಾಪ್(ಆ) ಪ್ರತ್ಯಯ ಬಂದು, ಇದ+ಆ+ಇ ಎಂದಿರುತ್ತದೆ. ಆಗ ಸವರ್ಣದೀರ್ಘದಿಂದ ಇದಾ+ಇ ಎಂದಾಗುತ್ತದೆ. "ಙೇರಾಮ್ನದ್ಯಾಮ್ ನೀಭ್ಯಃ" ಎಂಬ ಸೂತ್ರದಿಂದ, 'ಇ' ಗೆ 'ಆಮ್' ಬಂದು, ಇದಾ+ಆಮ್ ಎಂದಿದ್ದಾಗ, "ಸರ್ವನಾಮ್ನಃ ಸ್ಯಾಡ್ ಢ್ರಸ್ವಶ್ಚ" ಎಂಬ ಸೂತ್ರದಿಂದ ವಿಭಕ್ತಿ ಪ್ರತ್ಯಯದ ಪೂರ್ವದಲ್ಲಿ 'ಸ್ಯಾಟ್(ಸ್ಯಾ)' ಆಗಮ ಬಂದು, ಇದಾ+ಸ್ಯಾ+ಆಮ್ ಎಂದಿದ್ದಾಗ, 'ಇದಾ' ದಲ್ಲಿರುವ 'ಆ' ಕಾರಕ್ಕೆ ಹ್ರಸ್ವ ಬಂದು ಇದ+ಸ್ಯಾ+ಆಮ್ ಎಂದಿದ್ದಾಗ, "ಹಲಿಲೋಪಃ" ಎಂಬ ಸೂತ್ರದಿಂದ 'ಇದ್' ಶಬ್ದ ಸ್ವರೂಪಕ್ಕೆ ಲೋಪ ಬಂದು ಅಸ್ಯಾ+ಆಮ್ ಎಂದಿದ್ದಾಗ, ಸವರ್ಣದೀರ್ಘದಿಂದ ಅಸ್ಯಾಮ್ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಆಸು– ಸಪ್ತಮೀ ಬಹುವಚನದಲ್ಲಿ ಇದಮ್+ಸುಪ್(ಸು) ಎಂದಿದ್ದಾಗ, ತ್ಯದಾದ್ಯತ್ವದಿಂದ 'ಮ್' ಕಾರಕ್ಕೆ 'ಅ' ಕಾರ ಬಂದು, ಇದ+ಅ+ಸು ಎಂದಿದ್ದಾಗ, ಮೊದಲ ಎರಡು ಅ–ಕಾರಗಳಿಗೆ ಪರಸವರ್ಣ ಬಂದು, ಇದ+ಸು ಎಂದಿದ್ದಾಗ, ವಿಭಕ್ತಿಪ್ರತ್ಯಯದ ಪೂರ್ವದಲ್ಲಿ ಟಾಪ್(ಆ) ಪ್ರತ್ಯಯ ಬಂದು, ಇದ+ಆ+ಸು ಎಂದಿದ್ದಾಗ, ಸವರ್ಣದೀರ್ಘದಿಂದ ಇದಾ+ಸು ಎಂದಿದ್ದಾಗ, "ಹಲಿಲೋಪಃ" ಎಂಬ ಸೂತ್ರದಿಂದ 'ಇದ್' ಶಬ್ದ ಸ್ವರೂಪಕ್ಕೆ ಲೋಪ ಬಂದು ಆ+ಸು = ಆಸು ಎಂಬ ರೂಪವು ಸಿದ್ಧವಾಗುತ್ತದೆ.

**(ಮ್– ಕಾರಾನ್ತ ಸ್ತ್ರೀಲಿಂಗ ಇದಮ್ ಶಬ್ದದ ರೂಪಗಳು)**

**ಸೂಚನೆ:** ಈ ಶಬ್ದಕ್ಕೆ ಸಂಬೋಧನ ರೂಪವಿಲ್ಲ

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರ.ವಿ. | ಇಯಮ್ | ಇಮೇ | ಇಮಾಃ |
| ದ್ವಿ.ವಿ. | ಇಮಾಮ್,ಏನಾಮ್ | ಇಮೇ, ಏನೇ | ಇಮಾಃ, ಏನಾಃ |
| ತೃ.ವಿ. | ಅನಯಾ, ಏನಯಾ | ಆಭ್ಯಾಮ್ | ಆಭಿಃ |

| | | | |
|---|---|---|---|
| ಚ.ವಿ. | ಅಸ್ಯೈ | ಆಭ್ಯಾಮ್ | ಆಭ್ಯಃ |
| ಪ.ವಿ. | ಅಸ್ಯಾಃ | ಆಭ್ಯಾಮ್ | ಆಭ್ಯಃ |
| ಷ.ವಿ. | ಅಸ್ಯಾಃ | ಆನಯೋಃ, ಏನಯೋಃ | ಆಸಾಮ್ |
| ಸ. ವಿ. | ಅಸ್ಯಾಮ್ | ಆನಯೋಃ, ಏನಯೋಃ | ಆಸು |

ಸೂಚನೆ: 1. ಹಲನ್ತ ಪುಲ್ಲಿಂಗದಲ್ಲಿ ದ್ವಿತೀಯಾ ಎಲ್ಲ ವಚನಗಳಲ್ಲೂ, ತೃತೀಯಾ ವಿಭಕ್ತಿಯ ಏಕವಚನದಲ್ಲೂ ಷಷ್ಠೀ ವಿಭಕ್ತಿ ದ್ವಿವಚನಗಳಲ್ಲೂ ಹೇಗೆ 'ಏನ' ಎಂಬ ಅನ್ವಾದೇಶವನ್ನು ಸೇರಿಸಲಾಗಿದೆಯೋ ಹಾಗೆಯೇ ಇಲ್ಲಿಯೂ ಸೇರಿಸಲಾಗಿದೆ ಎಂದು ತಿಳಿಯಬೇಕು.

ತ್ಯದಾದಿ ಸರ್ವನಾಮಗಳಾದ ತ್ಯದ್, ಯದ್, ತದ್, ಏತದ್ ಸ್ತ್ರೀಲಿಂಗ ಶಬ್ದಗಳಿಗೆ ಟಾಪ್(ಆ) ಪ್ರತ್ಯಯವನ್ನು ಸೇರಿಸಿದಾಗ, ಅತ್ವ, ಪರರೂಪಗಳಾದಮೇಲೆ ಸವರ್ಣದೀರ್ಘವಾಗಿ ಸರ್ವನಾಮಸಂಜ್ಞೆಯನ್ನು ಹೊಂದಿ ತ್ಯಾ, ಯಾ, ತಾ, ಏತಾ, ಎಂಬ ರೂಪಗಳು ಸಿದ್ಧವಾಗುತ್ತವೆ

ಗಮನಕ್ಕೆ: ತಾ ಮತ್ತು ಏತಾ ಗಳಲ್ಲಿ 'ಸು' ಪ್ರತ್ಯಯವು ಪರದಲ್ಲಿರೋಣದ್ದರಿಂದ "ತದೋಃ ಸಃ ಸಾವನನ್ತ್ಯಯೋಃ" ಎಂಬ ಸೂತ್ರದಿಂದ 'ಸತ್ವ(ಸ್)' ಮತ್ತು 'ಏಸಾ' ಎಂಬಲ್ಲಿರುವ 'ಸ್' ಕಾರಕ್ಕೆ ಷತ್ವಗಳು ಬರುತ್ತವೆ. ಆದ್ದರಿಂದ ಸ್ಯಾ,ತ್ಯೇ, ತ್ಯಾಃ – ಯಾ, ಯೇ, ಯಾಃ– ಸಾ, ತೇ, ತಾಃ,ಏಷಾ, ಏತೇ, ಏತಾಃ, ಇತ್ಯಾದಿ ರೂಪಗಳು ಬರುತ್ತವೆ.

ಉದಾ– ವಾಚ್(ಮಾತು)– ಪ್ರಥಮಾ ವಿಭಕ್ತಿ ಏಕವಚನದಲ್ಲಿ ವಾಚ್+ಸು(ಸ್) ಎಂದಿದ್ದಾಗ, 'ವಾಚ್' ಗೆ 'ಪದಸಂಜ್ಞೆ' ಬಂದು, 'ಚ್' ಕಾರಕ್ಕೆ "ಚೋಃ ಕುಃ" ಎಂಬ ಸೂತ್ರದಿಂದ ಕುತ್ವ(ಕ್) ಬಂದು ವಾಕ್+ಸು ಎಂದಿದ್ದಾಗ, "ಝಲಾಂ ಜಶೋऽನ್ತೇ" ಎಂಬುದರಿಂದ ವಾಗ್+ಸ್ ಎಂದಿದ್ದಾಗ, "ಹಲ್ಙ್ಯಾಭ್ಯೋ ದೀರ್ಘಾತ್ ಸುತಿಸ್ಯಪೃಕ್ತಂ ಹಲ್" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬಂದು "ವಾऽವಸಾನೇ" ಎಂಬಸೂತ್ರದಿಂದ ವೈಕಲ್ಪಿಕ ಚರ್ತ್ವ ಬಂದು ವಾಕ್, ವಾಗ್ ಎಂದು ಎರಡು ರೂಪಗಳಾಗುತ್ತವೆ.

ಇದೇ ರೀತಿಯಲ್ಲಿ ಹಲಾದಿ ಪ್ರತ್ಯಯಗಳು ಪರದಲ್ಲಿದ್ದಾಗ ವಾಗ್ಭ್ಯಾಮ್ ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

ಸಪ್ತಮೀ ಬಹುವಚನದಲ್ಲಿ ವಾಚ್+ಸುಪ್(ಸು) ಎಂದಿದ್ದಾಗ, ಹಿಂದಿನಂತೆಯೇ ಪ್ರಕ್ರಿಯಾ ನಡೆದು ವಾಕ್+ಸು ಎಂದಿದ್ದಾಗ, "ಆದೇಶಪ್ರತ್ಯಯಯೋಃ" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಷತ್ವ(ಷ್) ಬಂದು 'ಕ್' ಕಾರ ಮತ್ತು 'ಷ್' ಕಾರಗಳು ಸೇರಿ ವಾಕ್ಷು ಎಂದು ರೂಪವಾಗುತ್ತದೆ.

ಅಜಾದಿ ಪ್ರತ್ಯಯಗಳು ಪರದಲ್ಲಿದ್ದಾಗ ವಾಚ್+ಔ=ವಾಚೌ ಇತ್ಯಾದಿ ರೂಪಗಳು ಕೇವಲ ವರ್ಣಜೋಡಣೆಯಿಂದ ಬರುತ್ತವೆ.

(ಚ್- ಕಾರಾನ್ತ ಸ್ತ್ರೀಲಿಂಗ ವಾಚ್ ಶಬ್ದದ ರೂಪಗಳು)

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರ.ವಿ. | ವಾಕ್, ವಾಗ್ | ವಾಚೌ | ವಾಚಃ |
| ದ್ವಿ.ವಿ. | ವಾಚಮ್ | ವಾಚೌ | ವಾಚಃ |
| ತೃ.ವಿ. | ವಾಚಾ | ವಾಗ್ಭ್ಯಾಮ್ | ವಾಗ್ಭಿಃ |
| ಚ.ವಿ. | ವಾಚೇ | ವಾಗ್ಭ್ಯಾಮ್ | ವಾಗ್ಭ್ಯಃ |
| ಪ.ವಿ. | ವಾಚಃ | ವಾಗ್ಭ್ಯಾಮ್ | ವಾಗ್ಭ್ಯಃ |
| ಷ.ವಿ. | ವಾಚಃ | ವಾಚೋಃ | ವಾಚಾಮ್ |
| ಸ. ವಿ. | ವಾಚಿ | ವಾಚೋಃ | ವಾಕ್ಷು |
| ಸಂ. ವಿ. | ಹೇ ವಾಕ್!, ಹೇ ವಾಗ್! | ಹೇ ವಾಚೌ! | ಹೇ ವಾಚಃ! |

ಇಲ್ಲಿಗೆ 'ಚ್' ಕಾರಾನ್ತ ಸ್ತ್ರೀಲಿಂಗ ಶಬ್ದಗಳು ಮುಗಿದವು.

***

ಈಗ 'ಪ್' ಕಾರಾನ್ತ ಸ್ತ್ರೀಲಿಂಗ ಶಬ್ದಗಳು ಆರಂಭವಾಗುತ್ತವೆ.

'ಪ್' ಕಾರಾನ್ತ 'ಅಪ್'(ನೀರು) 'ಶಬ್ದವು ನಿತ್ಯ ಬಹುವಚನಾನ್ತವಾಗಿದೆ.

ಉದಾ–ಆಪಃ(ನೀರು)– ಪ್ರಥಮಾ ವಿಭಕ್ತಿ ಬಹುವಚನದಲ್ಲಿ ಅಪ್+ಜಸ್(ಅಸ್) ಎಂದಿದ್ದಾಗ, "ಅಪ್–ತೃನ್–ತೃಚ್........ ಹೋತೃ–ಪೋತೃ–ಪ್ರಶಾಸ್ತೄಣಾಮ್" ಎಂಬ ಸೂತ್ರದಿಂದ ಉಪಧೆಗೆ ದೀರ್ಘ ಬಂದು ಆಪ್+ಅಸ್=ಆಪಸ್ ಎಂದಾಗಿ 'ಸ್' ಕಾರಕ್ಕೆ ರುತ್ವ–ವಿಸರ್ಗಗಳಿಂದ ಆಪಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಅಪಃ –ದ್ವಿತೀಯಾ ಬಹುವಚನದಲ್ಲಿ ಅಪ್+ಶಸ್ (ಅಸ್) ಎಂದಿದ್ದಾಗ, ಅಪಸ್ ಎಂದಾಗಿ 'ಸ್' ಕಾರಕ್ಕೆ ರುತ್ವ–ವಿಸರ್ಗಗಳು ಬಂದು ಅಪಃ ಎಂಬ ರೂಪವು ಸಿದ್ಧವಾಗುತ್ತದೆ. ಇಲ್ಲಿ 'ಶಸ್' ಪ್ರತ್ಯಯವು ಸರ್ವನಾಮಸ್ಥಾನದಲ್ಲಿ ಇಲ್ಲದೇ ಇರುವುದರಿಂದ ಪ್ರಾತಿಪದಿಕದ ಉಪಧೆಗೆ ದೀರ್ಘ ಬಂದಿಲ್ಲ.

('ತ್' ಕಾರ ಆದೇಶವನ್ನು ವಿಧಿಸುವ ಸೂತ್ರ)

**ಸೂತ್ರ – 363. ಅಪೋ ಭಿ। (7.4.48)**

ವೃತ್ತಿಃ–ಅಪಃ ತಕಾರಃ ಭಾದೌ ಪ್ರತ್ಯಯೇ। ಅದ್ಭಿಃ। ಅದ್ಭ್ಯಃ–2। ಅಪಾಮ್। ಅಪ್ಸು। ದಿಕ್, ದಿಗ್। ದಿಶೌ। ದಿಶಃ। ದಿಗ್ಭ್ಯಾಮ್ (347) ತ್ಯದಾದಿಷು ಇತಿ ದೃಶೇಃ ಕ್ವಿನ್ ವಿಧಾನಾತ್ ಅನ್ಯತ್ರಾಪಿ। ಕುತ್ವಮ್। ದೃಕ್, ದೃಗ್। ದೃಶೌ। ದೃಗ್ಭ್ಯಾಮ್। ತ್ವಿಟ್, ತ್ವಿಡ್। ತ್ವಿಷೌ ತ್ವಿಡ್ಭ್ಯಾಮ್। (205) ಸಸಜುಷೋ ರುಃ ಇತಿ ರುತ್ವಮ್। ಸಜೂಃ। ಸಜುಷೌ। ಸಜೂರ್ಭ್ಯಾಮ್। ಆಶೀಃ। ಆಶಿಷೌ। ಆಶೀರ್ಭ್ಯಾಮ್। ಅಸೌ। ಉತ್ವ–ಮತ್ವೇ।

ಅಮೂ, ಅಮೂಃ। ಅಮುಂಯಾ। ಅಮೂಭ್ಯಾಮ್–3 ಅಮೂಭಿಃ। ಅಮುಷ್ಯೈ।
ಅಮೂಭ್ಯಃ–2। ಅಮುಷ್ಯಾಃ। ಅಮುಯೋಃ। ಅಮೂಷಾಮ್। ಅಮುಷ್ಯಾಮ್। ಅಮೂಷು।

**ಇತಿ ಹಲನ್ತ ಸ್ತ್ರೀಲಿಂಗ ಪ್ರಕರಣಮ್(9)**

ಪ. ಛೇ. –ಅಪಃ,ಭಿ।

ಅ.ವೃ.– "ಅಚ ಉಪಸರ್ಗಾತ್ತಃ(7–4–47)" ಸೂತ್ರದಿಂದ 'ತಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– 'ಭ್' ಕಾರಾದಿ ಪ್ರತ್ಯಯವು ಪರದಲ್ಲಿದ್ದಾಗ, "ಅಲೋಽನ್ತ್ಯಸ್ಯ" ಎಂಬ ಸೂತ್ರದಿಂದ 'ಅಪ್' ಶಬ್ದದ 'ಪ್' ಕಾರಕ್ಕೆ 'ತ್' ಕಾರವು ಆದೇಶವಾಗಿ ಬರುತ್ತದೆ.

ಉದಾ–ಅದ್ಭಿಃ – ತೃತೀಯಾ ವಿಭಕ್ತಿ ಬಹುವಚನದಲ್ಲಿ ಅಪ್+ಭಿಸ್ ಎಂದಿದ್ದಾಗ, ಪ್ರಕೃತ ಸೂತ್ರದಿಂದ ಅತ್+ಭಿಸ್ ಎಂದಾಗುತ್ತದೆ. "ಝಲಾಂ ಜಶೋಽನ್ತೇ"ಎಂಬ ಸೂತ್ರದಿಂದ ಜಶ್ತ್ವ(ದ್) ಬಂದು ಅದ್+ಭಿಸ್=ಅದ್ಭಿಸ್ ಎಂದಾಗಿ ರುತ್ವ–ವಿಸರ್ಗಗಳಿಂದ ಅದ್ಭಿಃ ಎಂದು ರೂಪವಾಗುತ್ತದೆ.

ಉದಾ –ಅದ್ಭ್ಯಃ(2) –ಚತುರ್ಥೀ ಮತ್ತು ಪಂಚಮೀ ಬಹುವಚನಗಳಲ್ಲಿ ಅಪ್+ಭ್ಯಸ್ ಎಂದಿದ್ದಾಗ ಮೇಲಿನಂತೆಯೇ ಪ್ರಕ್ರಿಯೆ ನಡೆದು ಅದ್ಭ್ಯಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಅಪಾಮ್– ಷಷ್ಠೀ ಬಹುವಚನದಲ್ಲಿ ಅಪ್+ಆಮ್=ಅಪಾಮ್ ಎಂದು ರೂಪವಾಗುತ್ತದೆ.

ಉದಾ– ಅಪ್ಸು – ಸಪ್ತಮೀ ವಿಭಕ್ತಿ ಬಹುವಚನ್ದಲ್ಲಿ ಅಪ್+ಸುಪ್(ಸು)=ಅಪ್ಸು ಎಂದು ರೂಪವಾಗುತ್ತದೆ.

ಉದಾ– ಹೇ ಆಪಃ!– ಸಂಬೋಧನ ಪ್ರಥಮಾ ಬಹುವಚನದಲ್ಲಿ ಪ್ರಥಮಾವಿಭಕ್ತಿ ಬಹುವಚನದಂತೆ ರೂಪವಿದ್ದು ಹೇ ಆಪಃ! ಎಂದು ರೂಪವಾಗುತ್ತದೆ.

**(ಪ್– ಕಾರಾನ್ತ ಸ್ತ್ರೀಲಿಂಗ 'ಅಪ್' ಶಬ್ದದ ರೂಪಗಳು)**

| ವಿಭಕ್ತಿ | ಬಹುವಚನ |
|---|---|
| ಪ್ರ.ವಿ. | ಆಪಃ |
| ದ್ವಿ.ವಿ. | ಅಪಃ |
| ತೃ.ವಿ. | ಅದ್ಭಿಃ |
| ಚ.ವಿ. | ಅದ್ಭ್ಯಃ |
| ಪ.ವಿ. | ಅದ್ಭ್ಯಃ |
| ಷ.ವಿ. | ಅಪಾಮ್ |
| ಸ.ವಿ. | ಅಪ್ಸು |
| ಸಂ.ವಿ. | ಹೇ ಆಪಃ! |

**(ಇಲ್ಲಿಗೆ 'ಷ್' ಕರಾನ್ತ ಶಬ್ದಗಳು ಮುಗಿದವು).**
**ಈಗ 'ಶ್' ಕಾರಾನ್ತ ಶಬ್ದಗಳು ಆರಂಭವಾಗುತ್ತವೆ.**

ಉದಾ– ದಿಕ್, ದಿಗ್(ದಿಕ್ಕು) – "ಅಪ್–ತೃನ್–ತೃಚ್................ಹೋತೃ–ಪೋತೃ–ಪ್ರಶಾಸ್ತೄಣಾಮ್" ಎಂಬ ಸೂತ್ರದಿಂದ 'ಕ್ವಿನ್' ಪ್ರತ್ಯಯಾಂತ 'ದಿಶ್' ಶಬ್ದದ ನಿಪಾತನವು ಆಗಿರುತ್ತದೆ. ಇದು 'ಕ್ವಿನ್' ಪ್ರತ್ಯಯಾಂತವಾಗಿರೋಣದರಿಂದ 'ಸು(ಸ್)' ಮತ್ತು ಹಲಾದಿ ವಿಭಕ್ತಿಗಳು ಪರದಲ್ಲಿರುವಾಗ, "ಕ್ವಿನ್ ಪ್ರತ್ಯಯಸ್ಯ ಕುಃ" ಎಂಬ ಸೂತ್ರದಿಂದ 'ಶ್' ಕಾರಕ್ಕೆ ಕುತ್ವ(ಕ್) ಬರುತ್ತದೆ. ಕುತ್ವ ಬರುವದಕ್ಕೆ ಮೊದಲು ಈ ಶಬ್ದವು 'ಶ್' ಕಾರಾಂತವಾಗಿರೋಣದರಿಂದ, ವ್ರಶ್ಚ–ಭ್ರಶ್ಜ–ಸೃಜ–ಮೃಜ–ಯಜ–ರಾಜ–ಭ್ರಾಜಶ್ಛ–ಷಾಮ್ ಷಃ" ಎಂಬ ಸೂತ್ರದಿಂದ ಷತ್ವ ಮತ್ತು 'ಷ್' ಕಾರಕ್ಕೆ "ಝಲಾಮ್ ಜಶೋಽನ್ತೇ" ಎಂಬ ಸೂತ್ರದಿಂದ 'ಜಶ್ತ್ವ' ಬಂದು 'ಡ್' ಕಾರ ಬರುತ್ತದೆ. ಆ 'ಡ್' ಕಾರಕ್ಕೆ 'ಗ್' ಬಂದು 'ದಿಗ್' ಎಂದೂ ವೈಕಲ್ಪಿಕ ಚರ್ತ್ವದಿಂದ 'ದಿಕ್' ಎಂದೂ ಹೀಗೆ ಎರಡು ರೂಪಗಳಾಗುತ್ತವೆ.

ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಕೇವಲ ವರ್ಣಜೋಡಣೆಯಿಂದ ದಿಶಾ, ದಿಶೇ ಇತ್ಯಾದಿ ರೂಪಗಳಾಗುತ್ತವೆ.

ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಮೊದಲು ಹೇಳಿದಂತೆ ಷತ್ವ, ತದನಂತರ ಡತ್ವ ಮತ್ತು ಕುತ್ವ ಗಳು ಆಗುತ್ತವೆ. ಇದರಿಂದ ದಿಗ್ಭ್ಯಾಮ್, ದಿಗ್ಭಿಃ ಇತ್ಯಾದಿ ರೂಪಗಳಾಗುತ್ತವೆ.

**(ಶ್– ಕಾರಾನ್ತ ಸ್ತ್ರೀಲಿಂಗ ದಿಶ್ ಶಬ್ದದ ರೂಪಗಳು)**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರ.ವಿ. | ದಿಕ್,ದಿಗ್ | ದಿಶೌ | ದಿಶಃ |
| ದ್ವಿ.ವಿ. | ದಿಶಮ್ | ದಿಶೌ | ದಿಶಃ |
| ತೃ.ವಿ. | ದಿಶಾ | ದಿಗ್ಭ್ಯಾಮ್ | ದಿಗ್ಭಿಃ |
| ಚ.ವಿ. | ದಿಶೇ | ದಿಗ್ಭ್ಯಾಮ್ | ದಿಗ್ಭ್ಯಃ |
| ಪ.ವಿ. | ದಿಶಃ | ದಿಗ್ಭ್ಯಾಮ್ | ದಿಗ್ಭ್ಯಃ |
| ಷ.ವಿ. | ದಿಶಃ | ದಿಶೋಃ | ದಿಶಾಮ್ |
| ಸ. ವಿ. | ದಿಶಿ | ದಿಶೋಃ | ದಿಕ್ಷು |
| ಸಂ. ವಿ. | ಹೇ ದಿಕ್!, ಹೇ ದಿಗ್! | ಹೇ ದಿಶೌ! | ಹೇ ದಿಶಃ! |

ವಾರ್ತಿಕ–(347) "ತ್ಯದಾದಿಷು ಇತಿ ದೃಶೇಃ ಕ್ವಿನ್ ವಿಧಾನಾತ್ ಅನ್ಯತ್ರಾಪಿ ಕುತ್ವಮ್" ಎಂಬ ವಾರ್ತಿಕದಿಂದ 'ತ್ಯದ್' ಮೊದಲಾದ ಉಪಪದವು ಇರುವ ದೃಶ್ ಧಾತುವಿನಮೇಲೆ ಕ್ವಿನ್ ಪ್ರತ್ಯಯವು ವಿಧಿಸಲ್ಪಟ್ಟಾಗ, ಅನ್ಯತ್ರ ಎಂದರೆ ತ್ಯದಾದಿ

ಉಪಪದವಿಲ್ಲದಿರುವಾಗಲೂ ಇದಕ್ಕೆ ಕುತ್ವವು ಬರುತ್ತದೆ.

ಉದಾ- ದೃಕ್,ದೃಗ್(ಕಣ್ಣು/ದೃಷ್ಟಿ) ತ್ಯದ್ ಮೊದಲಾದವು ಉಪಪದವಾಗಿರುವಾಗ ದೃಶ್ ಧಾತುವಿನ ನಂತರ 'ಕ್ವಿನ್' ಪ್ರತ್ಯಯವು ವಿಧಿಸಲಾಗುತ್ತದೆ. ಕೇವಲ 'ದೃಶ್' ಗೆ 'ಕ್ವಿನ್' ಪ್ರತ್ಯಯವು ವಿಧಿಸಲಾಗುವದಿಲ್ಲ. ಹಾಗಿದ್ದರೂ , ಯಾವ ಧಾತುವಿನ ನಂತರ ಯಾವದೇ ಸ್ಥಿತಿಯಲ್ಲಿಯೂ ಯಾವಾಗಲಾದರೂ 'ಕ್ವಿನ್' ವಿಧಿಸಲ್ಪಟ್ಟರೂ, ಅದಕ್ಕೂ ಕುತ್ವವು ಬರುತ್ತದೆ. ಅದುದರಿಂದ 'ದೃಶ್' ಗೆ ಪ್ರಕೃತ ಸೂತ್ರದಿಂದ ಕುತ್ವವು ಮಾಡಲಾಗಿದೆ. ಇದರಿಂದ 'ತಾದೃಶ್' ಶಬ್ದದಂತೆಯೇ ದೃಕ್, ದೃಗ್, ದೃಶೌ, ದೃಶಃ- ದೃಶಮ್, ದೃಶೌ, ದೃಶಃ - ದೃಶಾ, ದೃಗ್ಭ್ಯಾಮ್ ,ದೃಗ್ಭಿಃ- ದೃಶೇ, ದೃಗ್ಭ್ಯಾಮ್, ದೃಗ್ಭ್ಯಃ- ದೃಶಃ, ದೃಗ್ಭ್ಯಾಮ್, ದೃಗ್ಭ್ಯಃ - ದೃಶಃ, ದೃಶೋಃ, ದೃಶಾಮ್- ದೃಶಿ, ದೃಶೋಃ, ದೃಕ್ಷು- ಹೇದೃಕ್, ಹೇ ದೃಗ್, ಹೇ ದೃಶೌ, ಹೇ ದೃಶಃ ಎಂದು ರೂಪಗಳಾಗುತ್ತವೆ.

ಉದಾ-ತ್ವಿಟ್,ತ್ವಿಡ್(ಕಾಂತಿ)-ಪ್ರಥಮಾ ವಿಭಕ್ತಿ ಏಕವಚನದಲ್ಲಿ 'ತ್ವಿಷ್' ಧಾತುವಿನಮೇಲೆ 'ಕ್ವಿಪ್' ಪ್ರತ್ಯಯವು ಬಂದು, 'ತ್ವಿಷ್' ಎಂದಿದ್ದಾಗ, 'ಪ್ರಾತಿಪದಿಕಸಂಜ್ಞೆ' ಬಂದು, 'ಕ್ವಿಪ್' ಪ್ರತ್ಯಯ ಲೋಪವಾಗಿ, ತ್ವಿಷ್+ಸು(ಸ್) ಎಂದಿದ್ದಾಗ, ಈ 'ಷ್' ಕಾರಾನ್ತ ಶಬ್ದಕ್ಕೂ ಪುಲ್ಲಿಂಗ ಶಬ್ದದಂತೆ ತ್ವಿಟ್, ತ್ವಿಡ್,ತ್ವಿಷೌ, ತ್ವಿಷಃ- ತ್ವಿಷಮ್, ತ್ವಿಷೌ, ತ್ವಿಷಃ-ತ್ವಿಷಾ, ತ್ವಿಡ್ಭ್ಯಾಮ್, ತ್ವಿಡ್ಭಿಃ- ತ್ವಿಷೇ, ತ್ವಿಡ್ಭ್ಯಾಮ್, ತ್ವಿಡ್ಭ್ಯಃ- ತ್ವಿಷಃ, ತ್ವಿಡ್ಭ್ಯಾಮ್, ತ್ವಿಡ್ಭ್ಯಃ - ತ್ವಿಷಃ, ತ್ವಿಷೋಃ, ತ್ವಿಷಾಮ್ - ತ್ವಿಷಿ, ತ್ವಿಷೋಃ, ತ್ವಿಟ್ತ್ಸು,ತ್ವಿಟ್ಸು - ಹೇ ತ್ವಿಟ್/ ತ್ವಿಡ್, ಹೇ ತ್ವಿಷೌ, ಹೇ ತ್ವಿಷಃ ಎಂದು ರೂಪಗಳಾಗುತ್ತವೆ.

ಉದಾ-ಸಜೂಃ(ಗೆಳತಿ)- ಸಹ ಜುಷತೇ ಇತಿ ಸಜೂಃ - ಪ್ರಥಮಾ ವಿಭಕ್ತಿ ಏಕವಚನದಲ್ಲಿ- 'ಸಜುಷ್' ಶಬ್ದದಮೇಲೆ 'ಸು(ಸ್)' ಸೇರಿಸಿದಾಗ 'ಸ್' ಕಾರಕ್ಕೆ 'ಲೋಪ' ಬಂದು 'ಸಜುಷ್' ಎಂದಿದ್ದಾಗ, "ಸಸ ಜುಷೋ ರುಃ" ಎಂಬ ಸೂತ್ರದಿಂದ ಷ-ಕಾರಕ್ಕೆ ರುತ್ವ ಬಂದು ಸಜುರ್ ಎಂದಾಗುತ್ತದೆ. "ರ್ವೋರುಪಧಾಯಾ

ದೀರ್ಘ ಇಕಃ" ಎಂಬ ಸೂತ್ರದಿಂದ ಉಪಧೆಗೆ ದೀರ್ಘ ಬಂದು ಸಜೂರ್ ಎಂದಾಗುತ್ತದೆ. "ಖರವಸಾನಯೋರ್ವಿಸರ್ಜನೀಯಃ" ಎಂಬ ಸೂತ್ರದಿಂದ ರೇಫಕ್ಕೆ ವಿಸರ್ಗ ಬಂದು ಸಜೂಃ ಎಂದಾಗುತ್ತದೆ.

ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಕೇವಲ ವರ್ಣಜೋಡಣೆಯಿಂದ ಸಜುಷೌ, ಸಜುಷಃ ಇತ್ಯಾದಿ ರೂಪಗಳಾಗುತ್ತವೆ.

ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ ರುತ್ವ ಮತ್ತು ದೀರ್ಘಗಳು ಬಂದು, ಸಜೂರ್ಭ್ಯಾಮ್, ಸಜೂರ್ಭಿಃ ಇತ್ಯಾದಿ ರೂಪಗಳಾಗುತ್ತವೆ.

**(ಷ್- ಕಾರಾನ್ತ ಸ್ತ್ರೀಲಿಂಗ ಸಜುಷ್ ಶಬ್ದದ ರೂಪಗಳು)**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರ.ವಿ. | ಸಜೂಃ | ಸಜುಷೌ | ಸಜುಷಃ |
| ದ್ವಿ.ವಿ. | ಸಜುಷಂ | ಸಜುಷೌ | ಸಜುಷಃ |

| | | | |
|---|---|---|---|
| ತೃ.ವಿ. | ಸಜುಷಾ | ಸಜೂರ್ಭ್ಯಾಮ್ | ಸಜೂರ್ಭಿಃ |
| ಚ.ವಿ. | ಸಜುಷೇ | ಸಜೂರ್ಭ್ಯಾಮ್ | ಸಜೂರ್ಭ್ಯಃ |
| ಪ.ವಿ. | ಸಜುಷಃ | ಸಜೂರ್ಭ್ಯಾಮ್ | ಸಜೂರ್ಭ್ಯಃ |
| ಷ.ವಿ. | ಸಜುಷಃ | ಸಜುಷೋಃ | ಸಜುಷಾಮ್ |
| ಸ. ವಿ. | ಸಜುಷಿ | ಸಜುಷೋಃ | ಸಜೂಃಷು/ಸಜೂರ್ಷು |
| ಸಂ. ವಿ. | ಹೇ ಸಜೂಃ! | ಹೇ ಸಜುಷೌ! | ಹೇ ಸಜುಷಃ! |

ಉದಾ– ಆಶೀಃ(ಆಶೀರ್ವಾದ)– ಆ–ಪೂರ್ವಕ 'ಶಾಸ್' ಧಾತುವಿನ ನಂತರ 'ಕ್ವಿಪ್' ಪ್ರತ್ಯಯವನ್ನು ಸೇರಿಸಿದಮೇಲೆ, ಅದರ ಸರ್ವಾಪಹಾರವಾಗಿ, "ಶಾಸಿ–ವಸಿ–ಘಸೀನಾಮ್ ಚ" ಎಂಬ ಸೂತ್ರದಿಂದ ಇತ್ವ–ಷತ್ವಗಳು ಬಂದು, ಆಶಿಷ್ ಎಂದಾಗುತ್ತದೆ.

ಪ್ರಥಮಾವಿಭಕ್ತಿ ಏಕವಚನದಲ್ಲಿ ಆಶಿಷ್+ಸು(ಸ್) ಎಂದಿದ್ದಾಗ, "ಹಲ್ಙ್ಯಾಭ್ಯೋ ಸುತಿಸ್ಯಪೃಕ್ತಮ್ ಹಲ್" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬಂದು ಆಶಿಷ್ ಎಂದಿರುತ್ತದೆ. ಆದರೆ, ಪ್ರಾತಿಪದಿಕ ಸಂಜ್ಞೆ ಬರುವದಕ್ಕೆ ಮೊದಲು ಇದ್ದ 'ಷ' ಕಾರವು "ಸಸಜುಷೋ ರುಃ" ಎಂಬ ಸೂತ್ರದ ದೃಷ್ಟಿಯಲ್ಲಿ ಅಸಿದ್ಧವಾಗಿರೋಣದ್ದರಿಂದ ಆಶಿಸ್ ಎಂದೇ ಉಳಿದು, "ಸಸಜುಷೋ ರುಃ" ಎಂಬ ಸೂತ್ರದಿಂದಲೇ 'ಸ್' ಕಾರಕ್ಕೆ 'ರು(ರ್)' ಬಂದು, ರೇಫಾನ್ತ ಉಪಧೆಗೆ "ರ್ವೋರುಪಧಾಯಾ‐ ದೀರ್ಘ ಇಕಃ" ಎಂಬ ಸೂತ್ರದಿಂದ ಉಪಧೆಗೆ ದೀರ್ಘ ಬಂದು ಆಶೀರ್ ಎಂದಾಗಿ ರೇಫಕ್ಕೆ "ಖರವಸಾನಯೋರ್ವಿಸರ್ಜನೀಯಃ" ಎಂಬ ಸೂತ್ರದಿಂದ ವಿಸರ್ಗ ಬಂದು ಆಶೀಃ ಎಂದು ರೂಪವಾಗುತ್ತದೆ.

ಅಜಾದಿ ಪ್ರತ್ಯಯಗಳು ಪರದಲ್ಲಿದ್ದಾಗ– ಪ್ರಥಮಾವಿಭಕ್ತಿ ದ್ವಿವಚನದಲ್ಲಿ ಹಿಂದಿನಂತೆಯೇ ಪ್ರಕ್ರಿಯೆ ನಡೆದು, ಆಶಿಷ್+ಔ ಎಂದಿದ್ದಾಗ, 'ಔ' ಇದು ಅಜಾದಿ ಪ್ರತ್ಯಯವಾಗಿರೋಣದ್ದರಿಂದ, ಕೇವಲ ವರ್ಣಜೋಡಣೆಯಿಂದ ಆಶಿಷೌ ಎಂದು ರೂಪವಾಗುತ್ತದೆ. ಇದೇ ರೀತಿಯಲ್ಲಿ ಆಶಿಷಃ ಇತ್ಯಾದಿ ರೂಪಗಳಾಗುತ್ತವೆ.

ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಹಿಂದಿನಂತೆಯೇ ರುತ್ವ ಮತ್ತು ದೀರ್ಘಗಳು ಬಂದು ಆಶೀರ್ಭ್ಯಾಮ್ ಇತ್ಯಾದಿ ರೂಪಗಳಾಗುತ್ತವೆ.

**(ಷ್– ಕಾರಾನ್ತ ಸ್ತ್ರೀಲಿಂಗ ಆಶಿಷ್ ಶಬ್ದದ ರೂಪಗಳು)**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರ.ವಿ. | ಆಶೀಃ | ಆಶಿಷೌ | ಆಶಿಷಃ |
| ದ್ವಿ.ವಿ. | ಆಶಿಷಂ | ಆಶಿಷೌ | ಆಶಿಷಃ |
| ತೃ.ವಿ. | ಆಶಿಷಾ | ಆಶೀರ್ಭ್ಯಾಮ್ | ಆಶೀರ್ಭಿಃ |
| ಚ.ವಿ. | ಆಶಿಷೇ | ಆಶೀರ್ಭ್ಯಾಮ್ | ಆಶೀರ್ಭ್ಯಃ |
| ಪ.ವಿ. | ಆಶಿಷಃ | ಆಶೀರ್ಭ್ಯಾಮ್ | ಆಶೀರ್ಭ್ಯಃ |

| | | | |
|---|---|---|---|
| ಷ.ವಿ. | ಆಶಿಷಃ | ಆಶಿಷೋಃ | ಆಶಿಷಾಮ್ |
| ಸ. ವಿ. | ಆಶಿಷಿ | ಆಶಿಷೋಃ | ಆಶೀಃಷು/ಆಶೀರ್ಷು |
| ಸಂ. ವಿ. | ಹೇ ಆಶೀಃ! | ಹೇ ಆಶಿಷೌ! | ಹೇ ಆಶಿಷಃ! |

ಉದಾ– ಅಸೌ– ಅದಸ್ ಶಬ್ದದ ಪುಲ್ಲಿಂಗದ ರೂಪವು "ಅದಸ ಔ ಸುಲೋಪಶ್ಚ" ಎಂಬ ಸುತ್ರದಿಂದ ಹೇಗೆ ಆಗಿರುವದೋ, ಹಾಗೆಯೇ ಸ್ತ್ರೀಲಿಂಗದ ಅಸೌ ಶಬ್ದವೂ ಆಗಿದೆ.

ಉದಾ– ಅಮೂ(2) – 'ಅದಸ್' ಶಬ್ದದಮೇಲೆ ಪ್ರಥಮಾ ಮತ್ತು ದ್ವಿತೀಯಾ ದ್ವಿ ವಚನಗಳ್ಲಿ 'ಔ' ಮತ್ತು ಔಟ್(ಔ)ಗಳನ್ನು ಸೇರಿಸಿದಾಗ, ಹಿಂದಿನಂತೆ ತ್ಯದಾದ್ಯತ್ವ, ಪರರೂಪ ಮತ್ತು ವಿಭಕ್ತಿ ಪ್ರತ್ಯಯದ ಪೂರ್ವದಲ್ಲಿ ಸ್ತ್ರೀ ಪ್ರತ್ಯಯವಾದ ಟಾಪ್(ಆ) ಸೇರಿಸಿದಮೇಲೆ, ಸವರ್ಣದೀರ್ಘ ಬಂದು, ಅದಾ+ಔ ಎಂದಿರುತ್ತದೆ. "ಔಙ ಆಪಃ" ಎಂಬ ಸೂತ್ರದಿಂದ 'ಔ' ಪ್ರತ್ಯಯದ ಸ್ಥಾನದಲ್ಲಿ 'ಶೀ(ಈ)' ಬಂದು, ನಂತರ ಗುಣ ಬಂದು 'ಅದೇ' ಎಂದಿರುತ್ತದೆ. "ಅದಸೋಽಸೇರ್ದಾದುದೋಮಃ" ಎಂಬ ಸೂತ್ರದಿಂದ 'ಊ' ಕಾರ ಮತ್ತು 'ಮ್' ಕಾರಗಳು ಆದೇಶವಾಗಿ ಬಂದು ಅಮೂ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಅಮೂಃ(2) – ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ಬಹುವಚನಗಳಲ್ಲಿ ಜಸ್(ಅಸ್)' ಮತ್ತು 'ಶಸ್(ಅಸ್)' ಸೇರಿಸಿ ಅದಸ್+ಅಸ್ ಎಂದಿದ್ದಾಗ, ಹಿಂದಿನಂತೆ ತ್ಯದಾದ್ಯತ್ವ, ಪರರೂಪ ಮತ್ತು ವಿಭಕ್ತಿ ಪ್ರತ್ಯಯದ ಪೂರ್ವದಲ್ಲಿ ಸ್ತ್ರೀ ಪ್ರತ್ಯಯವಾದ ಟಾಪ್(ಆ) ಸೇರಿಸಿದಮೇಲೆ, ಸವರ್ಣದೀರ್ಘ ಬಂದು, ಅದಾ+ಅಸ್ ಎಂದಿರುತ್ತದೆ. 'ಸವರ್ಣದೀರ್ಘ'ವಾದ ಮೇಲೆ ಅದಾಸ್ ಎಂದಿರುತ್ತದೆ. "ಅದಸೋಽಸೇರ್ದಾದುದೋಮಃ" ಎಂಬ ಸೂತ್ರದಿಂದ 'ಊ' ಕಾರ ಮತ್ತು 'ಮ್' ಕಾರಗಳು ಆದೇಶವಾಗಿ ಬಂದು, ಅಮೂಸ್ ಎಂದಾಗಿ ರುತ್ವ–ವಿಸರ್ಗಗಳಿಂದ ಅಮೂಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಅಮೂಮ್– ದ್ವಿತೀಯಾ ವಿಭಕ್ತಿ ಏಕವಚನದಲ್ಲಿ ಹಿಂದಿನಂತೆಯೇ ಪ್ರಕ್ರಿಯೆ ನಡೆದು ಅದಾ+ಅಮ್ ಎಂದಿದ್ದಾಗ, "ಅಮಿ ಪೂರ್ವಃ"ಎಂಬುದರಿಂದ ಪೂರ್ವರೂಪ ಬಂದು ಅದಾಮ್ ಎಂದಿರುತ್ತದೆ. "ಅದಸೋಽಸೇರ್ದಾದುದೋಮಃ" ಎಂಬ ಸೂತ್ರದಿಂದ 'ಊ' ಕಾರ ಮತ್ತು 'ಮ್' ಕಾರಗಳು ಆದೇಶವಾಗಿ ಬಂದು, ಅಮೂಮ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಅಮುಯಾ– ಹಿಂದಿನಂತೆಯೇ ಪ್ರಕ್ರಿಯೆ ನಡೆದು ಅದಾ ಎಂದಾದಮೇಲೆ, ತೃತೀಯಾ ವಿಭಕ್ತಿಯಲ್ಲಿ ಅದಾ+ ಟಾ(ಆ) ಎಂದಿದ್ದಾಗ, "ಆಙಿ ಚಾಪಃ" ಎಂಬ ಸೂತ್ರದಿಂದ 'ಆ' ಕಾರಕ್ಕೆ 'ಏ' ಕಾರ ಆದೇಶವಾಗಿ ಬಂದು, ಅದೇ+ಆ ಎಂದಿದ್ದಾಗ, "ಏಚೋಽಯವಾಯಾವಃ" ಎಂಬ ಸೂತ್ರದಿಂದ 'ಅಯ್' ಆದೇಶವಾಗಿ ಬಂದು, ಅದಯಾ ಎಂದಿರುತ್ತದೆ. 'ದ್' ಕಾರಕ್ಕೆ 'ಮ್' ಕಾರ ಮತ್ತು 'ಅ' ಕಾರಕ್ಕೆ 'ಉ'

ಕಾರಗಳು ಆದೇಶವಾಗಿ ಬಂದು ಅಮುಯಾ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಅಮೂಭ್ಯಾಮ್– ಹಿಂದಿನಂತೆಯೇ ಪ್ರಕ್ರಿಯೆ ನಡೆದು ಅದಾ ಎಂದಾದಮೇಲೆ, ತೃತೀಯಾ, ಚತುರ್ಥೀ ಮತ್ತು ಪಂಚಮೀ ದ್ವಿವಚನಗಳಲ್ಲಿ, ಅದಾ+ಭ್ಯಾಮ್ ಎಂದಿದ್ದಾಗ, 'ದ್' ಕಾರಕ್ಕೆ 'ಮ್' ಕಾರ ಮತ್ತು 'ಅ' ಕಾರಕ್ಕೆ 'ಊ' ಕಾರಗಳು ಆದೇಶವಾಗಿ ಬಂದು, ಅಮೂಭ್ಯಾಮ್ ಎಂದು ರೂಪಗಳಾಗುತ್ತವೆ.

ಉದಾ– ಅಮೂಭಿಃ– ತೃತಿಯಾ ವಿಭಕ್ತಿ ಬಹುವಚನದಲ್ಲಿ ಅದಾ+ಭಿಸ್ ಎಂದಿದ್ದಾಗ, ಹಿಂದಿನಂತೆ 'ದ್' ಕಾರಕ್ಕೆ 'ಮ್' ಕಾರ ಮತ್ತು 'ಅ' ಕಾರಕ್ಕೆ 'ಊ' ಕಾರಗಳು ಆದೇಶವಾಗಿ ಬಂದು, ಅಮೂಭಿಸ್ ಎಂದಾಗಿ, ರುತ್ವ–ವಿಸರ್ಗಗಳಿಂದ ಅಮೂಭಿಃ ಎಂದು ರೂಪವಾಗುತ್ತದೆ.

ಉದಾ– ಅಮುಷ್ಯೈ – ಚತುರ್ಥೀ ವಿಭಕ್ತಿ ಏಕವಚನದಲ್ಲಿ ಅದಾ+ಙೇ(ಏ) ಎಂದಿದ್ದಾಗ, 'ಸರ್ವನಾಮಸಂಜ್ಞೆ'ಯನ್ನು ಹೊಂದಿರೋಣದ್ದರಿಂದ, "ಸರ್ವನಾಮ್ನಃ ಸ್ಯಾಡ್ಢ್ರಸ್ವಶ್ಚ" ಎಂಬ ಸೂತ್ರದಿಂದ ಹ್ರಸ್ವ ಮತ್ತು ಸ್ಯಾಡ್ ಆಗಮಗಳು ಬಂದು, ಅದ+ಸ್ಯಾಟ್(ಸ್ಯಾ)+ಏ ಎಂದಿದ್ದಾಗ, 'ಆ' ಕಾರ 'ಏ' ಕಾರಗಳಿಗೆ ವೃದ್ಧಿ ಬಂದು, ಅದಸ್ಯೈ ಎಂದಾಗಿ, ಹಿಂದಿನಂತೆ 'ದ್' ಕಾರಕ್ಕೆ 'ಮ್' ಕಾರ ಮತ್ತು 'ಅ' ಕಾರಕ್ಕೆ 'ಉ' ಕಾರಗಳು ಆದೇಶವಾಗಿ ಬಂದು, ಅಮುಸ್ಯೈ ಎಂದಾಗುತ್ತದೆ. "ಆದೇಶ ಪ್ರತ್ಯಯಯೋಃ" ಎಂಬ ಸೂತ್ರದಿಂದ 'ಸ್' ಕಾರಕ್ಕೆ 'ಷ್' ಕಾರ ಬಂದು ಅಮುಷ್ಯೈ ಎಂದು ರೂಪವಾಗುತ್ತದೆ.

ಉದಾ– ಅಮೂಭ್ಯಃ (2) – ಚತುರ್ಥೀ ಮತ್ತು ಪಂಚಮೀ ಬಹುವಚನಗಳಲ್ಲಿ ಅದಾ+ಭ್ಯಸ್ ಎಂದಿದ್ದಾಗ, ಹಿಂದಿನಂತೆ 'ದ್' ಕಾರಕ್ಕೆ 'ಮ್' ಕಾರ ಮತ್ತು 'ಆ' ಕಾರಕ್ಕೆ 'ಊ' ಕಾರಗಳು ಆದೇಶವಾಗಿ ಬಂದು, ಅಮೂಭ್ಯಸ್ ಎಂದಾಗಿ ರುತ್ವ–ವಿಸರ್ಗಗಳಿಂದ ಅಮೂಭ್ಯಃ ಎಂದು ರೂಪಗಳಾಗುತ್ತವೆ.

ಉದಾ– ಅಮುಷ್ಯಾಃ(2)– ಪಂಚಮೀ ಮತ್ತು ಷಷ್ಠೀ ಏಕವಚನದಲ್ಲಿ ಕ್ರಮವಾಗಿ ಅದಾ+ಙಸಿ (ಅಸ್), ಅದಾ+ಙಸ್(ಅಸ್) ಎಂದಿದ್ದಾಗ, "ಸರ್ವನಾಮ್ನಃ ಸ್ಯಾಡ್ಢ್ರಸ್ವಶ್ಚ" ಎಂಬ ಸೂತ್ರದಿಂದ ಹ್ರಸ್ವ ಮತ್ತು ಸ್ಯಾಡ್ ಆಗಮಗಳು ಬಂದು, ಅದ+ಸ್ಯಾಟ್(ಸ್ಯಾ)+ಅಸ್ ಎಂದಿದ್ದಾಗ, ಸವರ್ಣದೀರ್ಘದಿಂದ ಅದ+ಸ್ಯಾಸ್ ಎಂದಾಗಿ, ಹಿಂದಿನಂತೆ 'ದ್' ಕಾರಕ್ಕೆ 'ಮ್' ಕಾರ ಮತ್ತು 'ಅ' ಕಾರಕ್ಕೆ 'ಉ' ಕಾರಗಳು

ಆದೇಶವಾಗಿ ಬಂದು, ಅಮುಸ್ಯಾಸ್ ಎಂದಾಗಿ, "ಆದೇಶ ಪ್ರತ್ಯಯಯೋಃ" ಎಂಬ ಸೂತ್ರದಿಂದ 'ಸ್' ಕಾರಕ್ಕೆ 'ಷ್' ಕಾರ ಬಂದು ಅಮುಷ್ಯಾಸ್ ಎಂದಿದ್ದಾಗ, ರುತ್ವ–ವಿಸರ್ಗಗಳಿಂದ ಅಮುಷ್ಯಾಃ ಎಂದು ರೂಪಗಳಾಗುತ್ತವೆ.

ಉದಾ– ಅಮುಯೋಃ(2)– ಷಷ್ಠೀ ಮತ್ತು ಸಪ್ತಮೀ ದ್ವಿವಚನಗಳಲ್ಲಿ ಅದಾ+ಓಸ್ ಎಂದಿದ್ದಾಗ, "ಆಙಿ ಚಾಪಃ" ಎಂಬ ಸೂತ್ರದಿಂದ 'ಆ' ಕಾರಕ್ಕೆ 'ಏ' ಕಾರ ಆದೇಶವಾಗಿ ಬಂದು, ಅದೇ+ಓಸ್ ಎಂದಿರುತ್ತದೆ. "ಏಚೋಽಯವಾಯಾವಃ" ಎಂಬ ಸೂತ್ರದಿಂದ

'ಅಯ್' ಆದೇಶ ಬಂದು, ಅದಯ್+ಓಸ್ ಎಂದಿದ್ದಾಗ, ಹಿಂದಿನಂತೆ 'ದ್' ಕಾರಕ್ಕೆ 'ಮ್' ಕಾರ ಮತ್ತು 'ಅ' ಕಾರಕ್ಕೆ 'ಉ' ಕಾರಗಳು ಆದೇಶವಾಗಿ ಬಂದು, ಅಮುಯೋಸ್ ಎಂದಾಗಿ, 'ಸ್' ಕಾರಕ್ಕೆ ರುತ್ವ-ವಿಸರ್ಗಗಳಿಂದ ಅಮುಯೋಃ ಎಂದು ರೂಪವಾಗುತ್ತದೆ.

ಉದಾ- ಅಮೂಷಾಮ್ ಷಷ್ಠೀ ಬಹುವಚನದಲ್ಲಿ, ಅದಾ+ಆಮ್ ಎಂದಿದ್ದಾಗ, "ಆಮಿ ಸರ್ವನಾಮ್ನಃ ಸುಟ್" ಎಂಬ ಸೂತ್ರದಿಂದ 'ಸುಟ್(ಸ್)' ಆಗಮವು 'ಆಮ್' ಗೆ ಆದ್ಯವಯವವಾಗಿ ಬಂದು, ಅದಾ+ಸಾಮ್ ಎಂದಿದ್ದಾಗ, ಹಿಂದಿನಂತೆ 'ಸ್' ಕಾರಕ್ಕೆ ಷತ್ವ ಬಂದು, ಅದಾ+ಷಾಮ್ ಎಂದಿದ್ದಾಗ, ಹಿಂದಿನಂತೆ 'ದ್' ಕಾರಕ್ಕೆ 'ಮ್' ಕಾರ ಮತ್ತು 'ಆ' ಕಾರಕ್ಕೆ 'ಊ'ಕಾರಗಳು ಆದೇಶವಾಗಿ ಅಮೂಷಾಮ್ ಎಂದಾಗುತ್ತದೆ.

ಉದಾ- ಅಮುಷ್ಯಾಮ್- ಸಪ್ತಮೀವಿಭಕ್ತಿ ಏಕವಚನದಲ್ಲಿ, ಅದಾ+ಇ(ಜಿ) ಎಂದಿದ್ದಾಗ, "ಜೇರಾಮ್ ನದ್ಯಾಮ್ನೀಭ್ಯಃ" ಎಂಬ ಸೂತ್ರದಿಂದ 'ಇ' ಕಾರಕ್ಕೆ 'ಆಮ್' ಆದೇಶ ಬಂದು "ಸರ್ವನಾಮ್ನಃ ಸ್ಯಾಡ್ಡ್ರಸ್ವಶ್ಚ" ಎಂಬ ಸೂತ್ರದಿಂದ ಹ್ರಸ್ವ ಮತ್ತು ಸ್ಯಾಡ್(ಸ್ಯಾ) ಆಗಮಗಳು ಬಂದಮೇಲೆ, ಅದ+ಸ್ಯಾಮ್ ಎಂದಿರುತ್ತದೆ. ಹಿಂದಿನಂತೆ 'ದ್' ಕಾರಕ್ಕೆ 'ಮ್' ಕಾರ ಮತ್ತು 'ಅ' ಕಾರಕ್ಕೆ 'ಉ' ಕಾರಗಳು ಆದೇಶವಾಗಿ ಬಂದು, ಅಮುಸ್ಯಾಮ್ ಎಂದಾಗಿ, "ಆದೇಶ ಪ್ರತ್ಯಯಯೋಃ" ಎಂಬ ಸೂತ್ರದಿಂದ 'ಸ್' ಕಾರಕ್ಕೆ 'ಷ್' ಕಾರ ಬಂದು ಅಮುಷ್ಯಾಮ್ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ- ಅಮೂಷು ಸಪ್ತಮೀ ವಿಭಕ್ತಿ ಬಹುವಚನದಲ್ಲಿ, ಅದಾ+ಸು(ಸುಪ್) ಎಂದಿದ್ದಾಗ, ಹಿಂದಿನಂತೆ 'ದ್' ಕಾರಕ್ಕೆ 'ಮ್' ಕಾರ ಮತ್ತು 'ಆ' ಕಾರಕ್ಕೆ 'ಊ' ಕಾರ ಬಂದು ಅಮೂ+ಸು ಎಂದಿದ್ದಾಗ, "ಆದೇಶ ಪ್ರತ್ಯಯಯೋಃ" ಎಂಬ ಸೂತ್ರದಿಂದ 'ಸ್' ಕಾರಕ್ಕೆ 'ಷ್' ಕಾರ ಬಂದು, ಅಮೂಷು ಎಂದು ರೂಪವು ಸಿದ್ಧವಾಗುತ್ತದೆ.

**(ಸ್- ಕಾರಾನ್ತ ಅದಸ್ ಶಬ್ದದ ಸ್ತ್ರೀಲಿಂಗ ರೂಪಗಳು)**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರ.ವಿ. | ಅಸೌ | ಅಮೂ | ಅಮೂಃ |
| ದ್ವಿ.ವಿ. | ಅಮೂಮ್ | ಅಮೂ | ಅಮೂಃ |
| ತೃ.ವಿ. | ಅಮುಯಾ | ಅಮೂಭ್ಯಾಮ್ | ಅಮೂಭಿಃ |
| ಚ.ವಿ. | ಅಮುಷ್ಯೈ | ಅಮೂಭ್ಯಾಮ್ | ಅಮೂಭ್ಯಃ |
| ಪ.ವಿ. | ಅಮುಷ್ಯಾಃ | ಅಮೂಭ್ಯಾಮ್ | ಅಮೂಭ್ಯಃ |
| ಷ.ವಿ. | ಅಮುಷ್ಯಾಃ | ಅಮುಯೋಃ | ಅಮೂಷಾಮ್ |
| ಸ. ವಿ. | ಅಮುಷ್ಯಾಮ್ | ಅಮುಯೋಃ | ಅಮೂಷೂ |

ಸಂಬೋಧನ ರೂಪಗಳು ಇರುವದಿಲ್ಲ.

# 10. ಹಲನ್ತಾಃ ನಪುಂಸಕ ಲಿಙ್ಗಾಃ ಶಬ್ದಾಃ॥

**(ಸೂತ್ರ 364-367 ರವರೆಗೆ)**

ಅವತಾರಿಕೆ – ಸ್ವಮೋರ್ಲುಕ್। ದತ್ತ್ವಮ್। ಸ್ವನಡುತ್, ಸ್ವನಡುದ್। ಸ್ವನಡುಹೀ। (259) ಚತುರನಡುಹೋರಿತ್ಯಾಮ್। ಸ್ವನಡ್ವಾಂಹಿ। ಪುನಸ್ತದ್ವತ್। ಶೇಷಂ ಪುಂವತ್। ವಾಃ। ವಾರೀ। ವಾರಿ। ವಾರ್ಭ್ಯಾಮ್। ಚತ್ವಾರಿ। ಕಿಮ್। ಕೇ। ಕಾನಿ। ಇದಮ್। ಇಮೇ। ಇಮಾನಿ।

ವಾ॥ **ಅನ್ವಾದೇಶೇ ನಪುಂಸಕೇ ಏನದ್ ವಕ್ತವ್ಯಃ** ಏನತ್, ಏನದ್। ಏನೇ। ಏನಾನಿ। ಏನೇನ। ಏನಯೋಃ-2। ಅಹಃ। (248) ವಿಭಾಷಾ ಙಿಶ್ಯೋಃ। ಅಹ್ನೀ, ಅಹನೀ। ಅಹಾನಿ।

ಈಗ ವರದರಾಜರು 'ಹಲನ್ತ ನಪುಂಸಕಲಿಂಗ'ವನ್ನು ಪ್ರಾರಂಭಿಸುತ್ತಾರೆ. ಇದು ಷಡ್ಲಿಂಗಿಯಲ್ಲಿ ಕೊನೆಯ ಪ್ರಕರಣವಾಗಿದೆ.

ವಿಶೇಷ –'ಸ್ವನಡುತ್', 'ಸ್ವನಡುದ್' (ಒಳ್ಳೆಯ ಎತ್ತುಗಳುಳ್ಳವನ ಕುಲ)– ಸು+ಅನಡುಹ್=ಸ್ವನಡುಹ್. ನಪುಂಸಕಲಿಂಗದಲ್ಲಿ "ಸುಡನಪುಂಸಕಸ್ಯ (1–1–43)" ಎಂಬ ಸೂತ್ರದಿಂದ 'ಸರ್ವನಾಮಸ್ಥಾನ' ಸಂಜ್ಞೆಯು ಬರುವುದಿಲ್ಲ, ಆದರೆ "ಶಿ ಸರ್ವನಾಮಸ್ಥಾನಮ್(1–1–42)" ಎಂಬ ಸೂತ್ರದಿಂದ-ಪ್ರಥಮಾ ವಿಭಕ್ತಿ ಮತ್ತು ದ್ವಿತೀಯಾ ವಿಭಕ್ತಿ ಬಹುವಚನಗಳಲ್ಲಿ, 'ಜಸ್' ಮತ್ತು 'ಶಸ್' ಪ್ರತ್ಯಯಗಳಿದ್ದಾಗ, "ಜಶ್ಶಸೋಃ ಶಿಃ" ಎಂಬ ಸೂತ್ರದಿಂದ, ಅವುಗಳ ಸ್ಥಾನದಲ್ಲಿ ಬರುವ 'ಶಿ'ಗೆ 'ಸರ್ವನಾಮ ಸಂಜ್ಞೆ'ಯು ಬರುತ್ತದೆ. ತದಭಾವ ಪಕ್ಷದಲ್ಲಿ 'ನುಮ್' ಮತ್ತು 'ಆಮ್' ಮೊದಲಾದವೂ ಬರುವುದಿಲ್ಲ.

ಉದಾ – ಸ್ವನಡುತ್, ಸ್ವನಡುದ್ – ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ಏಕವಚನಗಳಲ್ಲಿ, ಸ್ವನಡುಹ್+ಸು ಮತ್ತು ಸ್ವನಡುಹ್+ಅಮ್ ಎಂದಿದ್ದಾಗ, "ಸ್ವಮೋರ್ನಪುಂಸಕಾತ್(7–1–33)" ಎಂಬ ಸೂತ್ರದಿಂದ 'ಸು' ಮತ್ತು 'ಅಮ್' ಗಳಿಗೆ ಲೋಪ ಬಂದ ಮೇಲೆ, "ಪ್ರತ್ಯಯಲೋಪೇ ಪ್ರತ್ಯಯಲಕ್ಷಣಮ್(1–1–62)" ಸೂತ್ರದಿಂದ 'ಪದಸಂಜ್ಞೆಯು' ಬಂದಾಗ "ವಸುಸ್ರಂಸ್ವನಡುಹಾಂ ದಃ (8–2–72)" ಸೂತ್ರದಿಂದ, 'ಹ್'ಕಾರಕ್ಕೆ 'ದ್'ಕಾರವು ಆದೇಶವಾಗಿ ಬರುತ್ತದೆ. "ವಾಽವಸಾನೇ(8–4–56)" ಸೂತ್ರದಿಂದ 'ದ್'ಕಾರಕ್ಕೆ 'ಚರ್ತ್ವ'ವು ವೈಕಲ್ಪಿಕವಾಗಿ ಬಂದು 'ಸ್ವನಡುತ್', 'ಸ್ವನಡುದ್' ಎಂಬ ಎರಡು ರೂಪಗಳು ಸಿದ್ಧವಾಗುತ್ತವೆ. 'ಅಮ್' ಪ್ರತ್ಯಯಗಳು ಪರದಲ್ಲಿ ಬಂದಾಗಲೂ ಇದೇ ರೂಪವು ಸಿದ್ಧವಾಗುತ್ತವೆ.

ಉದಾ– ಸ್ವನಡುಹೀ– ಪ್ರಥಮಾ ವಿಭಕ್ತಿ ದ್ವಿವಚನದಲ್ಲಿ, 'ಸ್ವನಡುಹ್+ಔ' ಎಂದಿದ್ದಾಗ, "ನಪುಂಸಕಾಚ್ಚ(7–1–19)" ಸೂತ್ರದಿಂದ 'ಶೀ'(ಈ)ಆದೇಶವು ಬಂದು 'ಸ್ವನಡುಹ್+ಈ'= 'ಸ್ವನಡುಹೀ' ಎಂದಾಗುತ್ತದೆ.

ದ್ವಿತೀಯಾ ವಿಭಕ್ತಿ ದ್ವಿವಚನದಲ್ಲೂ 'ಔಟ್' ಪ್ರತ್ಯಯವಿದ್ದಾಗಲೂ ಇದೇ ರೂಪವು ಸಿದ್ಧವಾಗುತ್ತದೆ.

ಉದಾ–'ಸ್ವನಡ್ವಾಂಹಿ'– ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ಬಹುವಚನಗಳಲ್ಲಿ 'ಜಸ್' ಮತ್ತು 'ಶಸ್'ಗಳಿಗೆ 'ಶಿ(ಇ)' ಆದೇಶಗಳು ಬಂದು 'ಸರ್ವನಾಮಸ್ಥಾನ' ಸಂಜ್ಞೆಯನ್ನು ಪಡೆದಾಗ "ಚತುರನಡುಹೋರಾಮುದಾತ್ತಃ(7–1–98)" ಸೂತ್ರದಿಂದ 'ಆಮ್' ಬಂದು, ಮತ್ತು "ನಪುಂಸಕಸ್ಯ ಝಲಚಃ(7–1–72)" ಸೂತ್ರದಿಂದ 'ನುಮ್(ನ್)' ಆಗಮವು ಬಂದು, 'ಸ್ವನಡು+ಆನ್+ಹ್+ಇ(ಶಿ)' ಎಂದಾಗುತ್ತದೆ. ತದನಂತರ 'ಯಣ್' ಸಂಧಿಯಾಗಿ 'ನ್'ಕಾರಕ್ಕೆ 'ಅನುಸ್ವಾರ'ವು ಬಂದು ವರ್ಣಜೋಡಣೆಯಿಂದ 'ಸ್ವನಡ್ವಾಂಹಿ' ಎಂದು ರೂಪವು ಸಿದ್ಧವಾಗುತ್ತದೆ.

'ಅಜಾದಿ' ವಿಭಕ್ತಿಗಳು ಪರದಲ್ಲಿದ್ದಾಗ, ಕೇವಲ ಪ್ರಾತಿಪದಿಕದ ಜೊತೆಗೆ ವರ್ಣಜೋಡಣೆಯಾಗಿ ಸ್ವನಡುಹಾ ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

'ಹಲಾದಿ' ವಿಭಕ್ತಿಗಳು ಪರದಲ್ಲಿದ್ದಾಗ, "ವಸುಸ್ರಂಸ್ವನಡುಹಾಂ ದಃ(8–2–72)" ಸೂತ್ರದಿಂದ 'ದತ್ವ'ಮಾಡಿದ ನಂತರ, ಪುಲ್ಲಿಂಗ ರೂಪಗಳಂತೆ ಸ್ವನಡುದ್ಭ್ಯಾಮ್, ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ,

**(ಹ್– ಕಾರಾನ್ತ ನಪುಂಸಕಲಿಂಗ ಸ್ವನಡುಹ್ ಶಬ್ದದ ರೂಪಗಳು)**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರ.ವಿ. | ಸ್ವನಡುತ್,ಸ್ವನಡುದ್ | ಸ್ವನಡುಹೀ | ಸ್ವನಡ್ವಾಂಹಿ |
| ದ್ವಿ.ವಿ. | ಸ್ವನಡುತ್,ಸ್ವನಡುದ್ | ಸ್ವನಡುಹೀ | ಸ್ವನಡ್ವಾಂಹಿ |
| ತೃ.ವಿ. | ಸ್ವನಡುಹಾ | ಸ್ವನಡುದ್ಭ್ಯಾಮ್ | ಸ್ವನಡುದ್ಭಿಃ |
| ಚ.ವಿ. | ಸ್ವನಡುಹೇ | ಸ್ವನಡುದ್ಭ್ಯಾಮ್ | ಸ್ವನಡುದ್ಭ್ಯಃ |
| ಪ.ವಿ. | ಸ್ವನಡುಹಃ | ಸ್ವನಡುದ್ಭ್ಯಾಮ್ | ಸ್ವನಡುದ್ಭ್ಯಃ |
| ಷ.ವಿ. | ಸ್ವನಡುಹಃ | ಸ್ವನಡುಹೋಃ | ಸ್ವನಡುಹಾಮ್ |
| ಸ. ವಿ. | ಸ್ವನಡುಹಿ | ಸ್ವನಡುಹೋಃ | ಸ್ವನಡುತ್ಸು |
| ಸಂ. ವಿ. | ಹೇ ಸ್ವನಡುತ್!, ಹೇ ಸ್ವನಡುದ್! | ಹೇ ಸ್ವನಡುಹೀ! | ಹೇ ಸ್ವನಡ್ವಾಂಹಿ! |

**ಇಲ್ಲಿಗೆ 'ಹ್' ಕಾರಾಂತ ನಪುಂಸಕಲಿಂಗ ಶಬ್ದಗಳು ಮುಗಿದವು**

***

**ಇನ್ನು ರೇಫಾಂತ ಶಬ್ದಗಳು ಆರಂಭವಾಗುತ್ತವೆ.**

ವಿವರಣೆ– 'ವಾಃ'(ನೀರು)– ವಾರಿ ಎಂಬ 'ಇ' ಕಾರಾಂತ ಶಬ್ದಕ್ಕೂ, 'ವಾರ್' ಎಂಬ ರೇಫಾಂತ ಶಬ್ದಕ್ಕೂ ನೀರು ಎಂದೇ ಅರ್ಥ.

ಉದಾ – ವಾಃ(ನೀರು) ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ಏಕವಚನಗಳಲ್ಲಿ ವಾರ್+ಸ್(ಸು) ಮತ್ತು ವಾರ್+ಅಮ್ ಎಂದಿದ್ದಾಗ, "ಸ್ವಮೋರ್ನಪುಂಸಕಾತ್(7–1–33)" ಸೂತ್ರದಿಂದ 'ಸು' ಮತ್ತು 'ಅಮ್' ಗಳಿಗೆ ಲೋಪವು ಬಂದನಂತರ "ಖರವಸಾನಯೋರ್ವಿಸರ್ಜನೀಯಃ(8–3–15)" ಸೂತ್ರದಿಂದ 'ರೇಫ'ಕ್ಕೆ ವಿಸರ್ಗವು ಬಂದು 'ವಾಃ' ಎಂದು ರೂಪವು ಸಿದ್ಧವಾಗುತ್ತದೆ.

ಉದಾ–ವಾರೀ(ನೀರು) – ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ದ್ವಿವಚನಗಳಲ್ಲಿ ವಾರ್+ಔ ಮತ್ತು ವಾರ್+ಔ(ಔಟ್) ಎಂದಿದ್ದಾಗ, "ನಪುಂಸಕಾಚ್ಚ(7–1–19)" ಸೂತ್ರದಿಂದ 'ಶೀ'(ಈ) ಆದೇಶವು ಬಂದು ವಾರ್+ಈ=ವಾರೀ ಎಂದಾಗುತ್ತದೆ.

ಉದಾ–ವಾರಿ– ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ಬಹುವಚನಗಳಲ್ಲಿ ವಾರ್+ಅಸ್(ಜಸ್) ಮತ್ತು ವಾರ್+ಅಸ್(ಶಸ್) ಎಂದಿದ್ದಾಗ, "ಜಶ್ಶಸೋಃ ಶಿ(7–1–20)" ಸೂತ್ರದಿಂದ 'ಶಿಃ'(ಇ) ಆದೇಶವು ಬಂದು ವಾರ್+ಇ=ವಾರಿ ಎಂದು ರೂಪವು ಸಿದ್ಧವಾಗುತ್ತದೆ.

ತೃತೀಯಾ ವಿಭಕ್ತಿಯಿಂದ ಆರಂಭಿಸಿ 'ಸಪ್ತಮೀ' ವಿಭಕ್ತಿಯವರೆಗೆ 'ಅಜಾದಿ' ಮತ್ತು 'ಹಲಾದಿ' ವಿಭಕ್ತಿಗಳು ಪರದಲ್ಲಿದ್ದಾಗ ಕೇವಲ ವರ್ಣಜೋಡಣೆಯಿಂದ ರೂಪಗಳು ಸಿದ್ಧಿಸುತ್ತವೆ.

**(ರೇಫಾಂತ ನಪುಂಸಕಲಿಂಗ ವಾರ್– ಶಬ್ದದ ರೂಪಗಳು)**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರ.ವಿ. | ವಾಃ | ವಾರೀ | ವಾರಿ |
| ದ್ವಿ.ವಿ. | ವಾಃ | ವಾರೀ | ವಾರಿ |
| ತೃ.ವಿ. | ವಾರಾ | ವಾರ್ಭ್ಯಾಮ್ | ವಾರ್ಭಿಃ |
| ಚ.ವಿ. | ವಾರೇ | ವಾರ್ಭ್ಯಾಮ್ | ವಾರ್ಭ್ಯಃ |
| ಪ.ವಿ. | ವಾರಃ | ವಾರ್ಭ್ಯಾಮ್ | ವಾರ್ಭ್ಯಃ |
| ಷ.ವಿ. | ವಾರಃ | ವಾರೋಃ | ವಾರಾಮ್ |
| ಸ. ವಿ. | ವಾರಿ | ವಾರೋಃ | ವಾರ್ಷು |
| ಸಂ. ವಿ. | ಹೇ ವಾಃ! | ಹೇ ವಾರೀ! | ಹೇ ವಾರಿ! |

ಸೂಚನೆ: – 'ಚತುರ್' ಶಬ್ದವು ನಪುಂಸಕಲಿಂಗದಲ್ಲೂ ಬಹುವಚನದ ರೂಪವನ್ನೇ ತಾಳುತ್ತದೆ.

ಉದಾ–ಚತ್ವಾರಿ(2) – ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿಗಳ ಬಹುವಚನಗಳಲ್ಲಿ ಚತುರ್+ಜಸ್(ಅಸ್) ಮತ್ತು ಚತುರ್+ಶಸ್(ಅಸ್) ಎಂದಿದ್ದಾಗ, ಅವುಗಳಿಗೆ(ಅಸ್) 'ಶಿ'(ಇ) ಆದೇಶವಾಗಿ ಬಂದು ಚತುರ್+ಇ ಎಂದಿದ್ದಾಗ, "ಚತುರ ನಡುಹೋರಾಮುದಾತ್ತಃ (7–1–98)" ಎಂಬ ಸೂತ್ರದಿಂದ 'ಆಮ್'(ಆ) ಆಗಮ

ಬಂದು, ಅದು 'ಮಿತ್' ಆಗಿರೋಣದರಿಂದ "ಮಿದಚೋನ್ತ್ಯಾತ್ ಪರಃ" ಎಂಬ ಸೂತ್ರದಿಂದ 'ಉ' ಕಾರದ ನಂತರ ಬಂದು, ಚತು+ಆ+ರ್+ಇ ಎಂದಿದ್ದಾಗ, 'ಉ' ಕಾರ 'ಆ' ಕಾರಗಳಿಗೆ 'ಯಣ್' ಸಂಧಿಯಾಗಿ, ಚತ್ವಾರ್+ಇ= ಚತ್ವಾರಿ ಎಂದುರೂಪವಾಗುತ್ತದೆ.

ಸೂಚನೆ: – ತೃತೀಯಾ ವಿಭಕ್ತಿಯಿಂದ ಸಪ್ತಮೀ ವಿಭಕ್ತಿಯವರೆಗೆ ಪುಲ್ಲಿಂಗದ ರೂಪಗಳಂತೆ ರೂಪಗಳಿರುತ್ತವೆ.

**(ರೇಫಾಂತ ನಪುಂಸಕಲಿಂಗ ವಾರ್– ಶಬ್ದದ ರೂಪಗಳು)**

| ವಿಭಕ್ತಿ | ಬಹುವಚನ |
|---|---|
| ಪ್ರ.ವಿ. | ಚತ್ವಾರಿ |
| ದ್ವಿ.ವಿ. | ಚತ್ವಾರಿ |
| ತೃ.ವಿ. | ಚತುರ್ಭಿಃ |
| ಚ.ವಿ. | ಚತುರ್ಭ್ಯಃ |
| ಪ.ವಿ. | ಚತುರ್ಭ್ಯಃ |
| ಷ.ವಿ. | ಚತುರ್ಣ್ಣಾಮ್/ಚತುರ್ಣಾಮ್ |
| ಸ. ವಿ. | ಚತುರ್ಷು |

– ಇದಕ್ಕೆ ಸಂಬೋಧನರೂಪವಿಲ್ಲ.

**ಇಲ್ಲಿಗೆ ರೇಫಾಂತ ನಪುಂಸಕಲಿಂಗದ ಶಬ್ದಗಳು ಮುಗಿದವು.**

***

ಇನ್ನು 'ಮ್' ಕಾರಾಂತ ನಪುಂಸ ಲಿಂಗ ಶಬ್ದಗಳು ಪ್ರಾರಂಭವಾಗುತ್ತವೆ.

ಉದಾ–ಕಿಮ್(2)– ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ಏಕವಚನಗಳಲ್ಲಿ ಕಿಮ್+ಸು ಮತ್ತು ಕಿಮ್+ಅಮ್ ಎಂದಿದ್ದಾಗ "ಸ್ವಮೋರ್ನಪುಂಸಕಾತ್(7–1–33)" ಎಂಬ ಸೂತ್ರದಿಂದ 'ಸು' 'ಅಮ್' ಗಳಿಗೆ 'ಲುಕ್(ಲೋಪ)' ಬಂದು 'ಕಿಮ್' ಎಂದೇ ಇರುತ್ತದೆ. ನಪುಂಸಕ ಲಿಂಗದಲ್ಲಿ ವಿಭಕ್ತಿಪ್ರತ್ಯಯವು ಲೋಪವಾಗಿರೋಣದಿಂದ "ಕಿಮಃ ಕಃ(7–2–103)" ಸೂತ್ರವು ಪ್ರವೃತ್ತವಾಗದೇ 'ಕಿಮ್' ಎಂಬ ರೂಪವೇ ಉಳಿಯುತ್ತದೆ.

[ಸ್ತ್ರೀಲಿಂಗ, ಪುಲ್ಲಿಂಗಗಳಲ್ಲಿ ಕಿಮ್ ಶಬ್ದದನಂತರ ಇರುವ ವಿಭಕ್ತಿಪ್ರತ್ಯಯವು ಲೋಪವಾಗದೇ ಇರೋಣದರಿಂದ ಅಲ್ಲಿ "ಕಿಮಃ ಕಃ" ಸೂತ್ರವು ಪ್ರವೃತ್ತವಾಗಿದೆ]

ಉದಾ– ಕೇ(2)– ಪ್ರಥಮಾ ಮತ್ತು ದ್ವಿತೀಯಾ ದ್ವಿವಚನಗಳಲ್ಲಿ ಕ್ರಮವಾಗಿ 'ಕಿಮ್+ಔ' ಮತ್ತು 'ಕಿಮ್+ಔಟ್(ಔ)' ಎಂದಿದ್ದಾಗ, ಆ ಪ್ರತ್ಯಯಗಳಿಗೆ 'ಶೀ'(ಈ) ಆದೇಶವು ಬಂದು ಕಿಮ್+ಈ ಎಂದಿದ್ದಾಗ, "ಕಿಮಃ ಕಃ(7–2–103)" ಸೂತ್ರದಿಂದ 'ಕಿಮ್' ಗೆ 'ಕ' ಆದೇಶ ಬಂದು ಕ+ಈ ಎಂದಾಗಿ, 'ಗುಣ ಸಂಧಿ'ಯಿಂದ 'ಕೇ'

ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಕಾನಿ(2)– ಪ್ರಥಮಾ ಮತ್ತು ದ್ವಿತೀಯಾ ಬಹುವಚನಗಳಲ್ಲಿ ಕ್ರಮವಾಗಿ 'ಜಸ್(ಅಸ್)' ಮತ್ತು 'ಶಸ್(ಅಸ್)' ಗಳು ಬಂದು 'ಕಿಮ್+ಜಸ್'(ಅಸ್) ಮತ್ತು 'ಕಿಮ್+ಶಸ್'(ಅಸ್) ಎಂದಿದ್ದಾಗ, "ಜಶ್ಶಸೋಃ ಶಿಃ(7–1–20)" ಎಂಬ ಸೂತ್ರದಿಂದ 'ಶಿ(ಇ)' ಆದೇಶವು ಬಂದು ಕಿಮ್+ಇ, ಕಿಮ್+ಇ ಎಂದಿದ್ದಾಗ, ವಿಭಕ್ತಿ ಪ್ರತ್ಯಯ ಲೋಪಪಾಗದೇ ಇರೋಣದ್ದರಿಂದ ಹಿಂದಿನಂತೆ "ಕಿಮಃ ಕಃ(7–2–103)" ಸೂತ್ರದಿಂದ 'ಕಿವಮ್' ಗೆ 'ಕ' ಆದೇಶವು ಬಂದು ಕ+ಶಿ(ಇ) ಎಂದಿದ್ದಾಗ, "ಶಿ ಸರ್ವನಾಮಸ್ಥಾನಮ್(1–1–42)" ಸೂತ್ರದಿಂದ 'ಸರ್ವನಾಮಸ್ಥಾನ' ಸಂಜ್ಞೆಯು ಬಂದು, "ನಪುಂಸಕಸ್ಯ ಝಲಚಃ(7–1–72)" ಸೂತ್ರದಿಂದ 'ನುಮ್'(ನ್) ಆಗಮವು ಬಂದು, ಕ+ನ್+ಇ ಎಂದಿದ್ದಾಗ, "ಸರ್ವನಾಮಸ್ಥಾನೇಚಾಸಮ್ಬುದ್ಧೌ(6–4–8)" ಸೂತ್ರದಿಂದ 'ಕ'(ಕ್)ಕಾರೋತ್ತರವರ್ತಿ 'ಅ'ಕಾರಕ್ಕೆ ಉಪಧಾ ದೀರ್ಘವಾಗಿ ಕಾ+ನ್+ಇ=ಕಾನಿ ಎಂದಾಗಿ, ಕ್ರಮವಾಗಿ 'ಕಾನಿ', 'ಕಾನಿ' ಎಂದು ರೂಪಗಳು ಸಿದ್ಧವಾಗುತ್ತವೆ.

'ತೃತೀಯಾ' ವಿಭಕ್ತಿಯಿಂದ ಸಪ್ತಮೀ ವಿಭಕ್ತಿಯವರೆಗೆ ಎಲ್ಲ ಶಬ್ದಗಳಿಗೂ 'ಕಿಮ್' ಶಬ್ದದ ಪುಲ್ಲಿಂಗದ ರೂಪಗಳಂತೆ ಇರುವ ರೂಪಗಳು ಸಿದ್ಧವಾಗುತ್ತವೆ. ಆದುದರಿಂದ ಪ್ರತ್ಯೇಕವಾಗಿ ವಿವರಿಸಲಾಗಿಲ್ಲ.

**'ಮ್'ಕಾರಾನ್ತ ನಪುಂಸಕಲಿಂಗದ'ಕಿಮ್' ಶಬ್ದದ ರೂಪಗಳು.**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಕಿಮ್ | ಕೇ | ಕಾನಿ |
| ದ್ವಿತೀಯಾ | ಕಿಮ್ | ಕೇ | ಕಾನಿ |
| ತೃತೀಯ | ಕೇನ | ಕಾಭ್ಯಾಮ್ | ಕೈಃ |
| ಚತುರ್ಥೀ | ಕಸ್ಮೈ | ಕಾಭ್ಯಾಮ್ | ಕೇಭ್ಯಃ |
| ಪಞ್ಚಮೀ | ಕಸ್ಮಾತ್/ಕಸ್ಮಾದ್ | ಕಾಭ್ಯಾಮ್ | ಕೇಭ್ಯಃ |
| ಷಷ್ಠೀ | ಕಸ್ಯ | ಕಯೋಃ | ಕೇಷಾಮ್ |
| ಸಪ್ತಮೀ | ಕಸ್ಮಿನ್ | ಕಯೋಃ | ಕೇಷು |

ಸಂಬೋಧನ – ಇದಕ್ಕೆ ಸಂಬೋಧನ ರೂಪಗಳು ಇರುವುದಿಲ್ಲ.

ಉದಾ–ಇದಮ್(2) – ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ಏಕವಚನದಲ್ಲಿ, ಇದಮ್+ಸು ಮತ್ತು ಇದಮ್+ಅಮ್ ಎಂದಿದ್ದಾಗ, "ಸ್ವಮೋರ್ನಪುಂಸಕಾತ್(7–1–33)" ಸೂತ್ರದಿಂದ 'ಸು' ಮತ್ತು 'ಅಮ್' ಗಳಿಗೆ ಲೋಪವು ಬರುತ್ತದೆ. ವಿಭಕ್ತಿಯು 'ಲುಕ್(ಲೋಪ)' ಆಗಿರೋಣದರಿಂದ "ಇದಮೋ ಮಃ(7–2–108)" ಮತ್ತು "ತ್ಯದಾದೀನಾಮಃ(7–2–102)" ಸೂತ್ರಗಳು ಪ್ರವೃತ್ತವಾಗುವುದಿಲ್ಲ. ಹೀಗೆ 'ಇದಮ್' ಎಂಬ ರೂಪವು ಸಿದ್ಧವಾಗುತ್ತದೆ.

ಉದಾ–ಇಮೇ(2)– ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ದ್ವಿವಚನದಲ್ಲಿ ಇದಮ್+ಔ ಮತ್ತು ಇದಮ್+ಔಟ್(ಔ) ಎಂದಿದ್ದಾಗ, 'ಔ' ಗೆ 'ಶೀ'(ಈ)ಆದೇಶವು ಬಂದು, ತ್ಯದಾದಿ ಪ್ರಯುಕ್ತ ಅತ್ವ ಬಂದ ಮೇಲೆ "ದಶ್ಚ(7–2–109)" ಸೂತ್ರದಿಂದ 'ಮ್' ಕಾರಾದೇಶವು ಬಂದು, ಇಮ+ಈ ಎಂದಿದ್ದಾಗ, ಗುಣಸಂಧಿಯಿಂದ ಇಮೇ ಎಂಬ ರೂಪಗಳು ಸಿದ್ಧವಾಗುತ್ತವೆ.

ಉದಾ–ಇಮಾನಿ (2)– ಪ್ರಥಮಾ ಮತ್ತು ದ್ವಿತೀಯಾ ಬಹುವಚನಗಳಲ್ಲಿ ಇದಮ್+ಜಸ್(ಅಸ್) ಮತ್ತು ಇದಮ್+ಶಸ್ (ಅಸ್) ಎಂದಿದ್ದಾಗ, "ಜಶ್ಶಸೋಃ ಶಿಃ(7–1–20)" ಎಂಬ ಸೂತ್ರದಿಂದ 'ಶಿ(ಇ)' ಆದೇಶ ಬಂದು, ಇದಮ್+ಇ ಎಂದಿದ್ದಾಗ, ತ್ಯದಾದ್ಯತ್ವ, "ದಶ್ಚ" ಎಂಬಸೂತ್ರದಿಂದ ಮತ್ವ ಬಂದು, ಇಮ+ಇ ಎಂದಿದ್ದಾಗ, 'ನುಮ್(ನ್)' ಆಗಮ ಮತ್ತು 'ಉಪಧಾದೀರ್ಘ' ಬಂದ ಮೇಲೆ ಇಮಾ+ನ್+ಇ=ಇಮಾನಿ ಎಂಬ ರೂಪವು ಸಿದ್ಧವಾಗುತ್ತದೆ.

ಇಲ್ಲಿಂದ ಮುಂದೆ ತೃತೀಯಾ ವಿಭಕ್ತಿಯಿಂದ ಸಪ್ತಮೀ ವಿಭಕ್ತಿವರಗೆ ಪುಲ್ಲಿಙ್ಗದಲ್ಲಿರುವ ರೂಪಗಳಂತೆ ರೂಪಗಳು ಸಿದ್ಧವಾಗುತ್ತವೆ.

**(ಮ್–ಕಾರಾನ್ತ ನಪುಂಸಕ ಲಿಂಗ 'ಇದಮ್' ಶಬ್ದದ ರೂಪಗಳು).**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಇದಮ್ | ಇಮೇ | ಇಮಾನಿ |
| ದ್ವಿತೀಯಾ | ಇದಮ್/ಏನತ್ | ಇಮೇ/ಏನೇ | ಇಮಾನಿ/ಏನಾನಿ |
| ತೃತೀಯಾ | ಅನೇನ/ಏನೇನ | ಆಭ್ಯಾಮ್ | ಏಭಿಃ |
| ಚತುರ್ಥೀ | ಅಸ್ಮೈ | ಆಭ್ಯಾಮ್ | ಏಭ್ಯಃ |
| ಪಞ್ಚಮೀ | ಅಸ್ಮಾತ್/ಅಸ್ಮಾದ್ | ಆಭ್ಯಾಮ್ | ಏಭ್ಯಃ |
| ಷಷ್ಠೀ | ಅಸ್ಯ | ಅನಯೋಃ/ ಏನಯೋಃ | ಏಷಾಮ್ |
| ಸಪ್ತಮೀ | ಅಸ್ಮಿನ್ | ಅನಯೋಃ/ ಏನಯೋಃ | ಏಷು |

ವಾರ್ತಿಕ– ಅನ್ವಾದೇಶೇ ನಪುಂಸಕೇ ವಾ ಏನದ್ವಕ್ತವ್ಯಃ–

ಅನ್ವಾದೇಶದಲ್ಲಿ ನಪುಂಸಕಲಿಙ್ಗದಲ್ಲಿ ಅಮ್, ಟಾ ಮತ್ತು ಓಸ್ ಪರದಲ್ಲಿದ್ದಾಗ 'ಇದಮ್' ಮತ್ತು 'ಏತದ್' ಶಬ್ದಗಳಿಗೆ 'ಏನತ್' ಆದೇಶವು ವಿಕಲ್ಪವಾಗಿ ಬರುತ್ತದೆ.

**(ಅನ್ವಾದೇಶದಲ್ಲಿ ರೂಪಗಳು)**

ಉದಾ–ಏನತ್, ಏನೇ – ದ್ವಿತೀಯಾ ವಿಭಕ್ತಿ ಏಕವಚನ ಮತ್ತು ದ್ವಿವಚನಗಳಲ್ಲಿ –'ಇದಮ್' ಶಬ್ದಕ್ಕೆ ಅನ್ವಾದೇಶದಲ್ಲಿ 'ಏನತ್' ಆದೇಶವು ಬಂದು ಅಮ್ ಗೆ ಲುಕ್ ಬಂದು, ಪರದಲ್ಲಿ ವಿಭಕ್ತಿ (ಸುಪ್) ಪ್ರತ್ಯಯವಿಲ್ಲದಿರುವುದರಿಂದ ಅತ್ವವು ಬರುವುದಿಲ್ಲ.

ಆದ್ದರಿಂದ 'ಏನತ್' ಎಂದೇ ಉಳಿಯುತ್ತದೆ. ಔಟ್(ಔ) ನಲ್ಲಿ 'ಶೀ(ಈ)' ಆದೇಶವು ಬಂದು, 'ತ್' ಕಾರದ ಸ್ಥಾನದಲ್ಲಿ 'ಅತ್ವ' ಮತ್ತು 'ಪರರೂಪ' ಬಂದು ಏನ+ಈ ಎಂದಿದ್ದಾಗ, ಗುಣ ಬಂದು 'ಏನೇ' ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಏನಾನಿ– ದ್ವಿತೀಯಾ ವಿಭಕ್ತಿ ಬಹುವಚನದಲ್ಲಿ 'ಇದಮ್' ಶಬ್ದಕ್ಕೆ 'ಏನತ್' ಆದೇಶ ಬಂದು ಏನತ್+ ಶಸ್(ಅಸ್) ಎಂದಿದ್ದಾಗ, ಶಸ್(ಅಸ್) ಗೆ ಶಿ(ಇ) ಆದೇಶವು ಬಂದು, ಏನತ್+ಇ ಎಂದಿದ್ದಾಗ, ನಂತರ 'ತ್ಯದಾದ್ಯತ್ವ' ದಿಂದ 'ತ್' ಕಾರಕ್ಕೆ ಅತ್ವ(ಅ), ಬಂದು ಏನ+ಅ+ಇ ಎಂದಿದ್ದಾಗ, ಎರಡು 'ಅ' ಕಾರಗಳಿಗೆ 'ಪರರೂಪ' ಬಂದು, ಏನ+ಇ ಎಂದಿರುತ್ತದೆ. ನುಮ್(ನ್) ಆಗಮ ಮತ್ತು 'ಉಪಧಾ ದೀರ್ಘಗಳು' ಬಂದು ಏನಾ+ನ್+ಇ= ಏನಾನಿ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ–ಏನೇನ – ತೃತೀಯಾ ವಿಭಕ್ತಿ ಏಕವಚನದಲ್ಲಿ ಇದಮ್+ಟಾ(ಆ) ಎಂದಿದ್ದಾಗ, 'ಇದಮ್' ಗೆ 'ಏನತ್' ಆದೇಶ ಬಂದು, ಏನತ್+ಆ(ಟಾ) ಎಂದಿದ್ದಾಗ, 'ತ್ಯದಾದ್ಯತ್ವ' ದಿಂದ 'ತ್' ಕಾರಕ್ಕೆ ಅತ್ವ(ಅ) ಬಂದು, ಏನ+ಅ+ಆ(ಟಾ) ಎಂದಿದ್ದಾಗ, ಎರಡು 'ಅ' ಕಾರಗಳಿಗೆ 'ಪರರೂಪ' ಬಂದು, ಏನ+ಆ ಎಂದಿದ್ದಾಗ, "ಟಾಙಸಿಙಸಾಮಿನಾತ್ ಸ್ಯಾಃ" ಎಂಬ ಸೂತ್ರದಿಂದ 'ಇನ' ಆದೇಶ ಬಂದು, ಏನ+ಇನ ಎಂದಿದ್ದಾಗ, ಗುಣ ಬಂದು ಏನೇನ ಎಂದು ರೂಪವು ಆಗುತ್ತದೆ.

ಉದಾ– ಓಸ್– ಷಷ್ಠೀ ಮತ್ತು ಸಪ್ತಮೀ ದ್ವಿ–ವಚನಗಳಲ್ಲಿ, ಇದಮ್+ಓಸ್ ಎಂದಿದ್ದಾಗ, ಹಿಂದಿನಂತೆಯೇ ಪ್ರಕ್ರಿಯೆ ನಡೆದು ಏನ+ಓಸ್ ಎಂದಿದ್ದಾಗ, "ಓಸಿಚ" ಎಂಬ ಸೂತ್ರದಿಂದ 'ಅ' ಕಾರಕ್ಕೆ 'ಏ' ಕಾರ ಬಂದು, ಏನೇ+ಓಸ್ ಎಂದಿದ್ದಾಗ, 'ಅಯ್' ಆದೇಶ ಬಂದು ಏನಯೋಸ್ ಎಂದಾಗಿ, ರುತ್ವ–ವಿಸರ್ಗಗಳಿಂದ ಏನಯೋಃ ಎಂದು ರೂಪಗಳು ಸಿದ್ಧವಾಗುತ್ತವೆ.

**ಇಲ್ಲಿಗೆ 'ಮ್' ಕಾರಾಂತ ಶಬ್ದಗಳು ಮುಗಿದವು**

***

**ಈಗ 'ನ್' ಕಾರಾಂತ ಶಬ್ದಗಳು ಪ್ರಾರಂಭವಾಗುತ್ತವೆ.**

ಉದಾ– ಅಹಃ–2–(ದಿನ)– ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ಏಕವಚನಗಳಲ್ಲಿ, ಅಹನ್+ಸು ಮತ್ತು ಅಹಮ್+ಅಮ್ ಎಂದಿದ್ದಾಗ, "ಸ್ವಮೋರ್ನಪುಂಸಕಾತ್(7–1–33)" ಸೂತ್ರದಿಂದ, 'ಸು' ಮತ್ತು 'ಅಮ್' ಗಳಿಗೆ 'ಲುಕ್' ಬಂದು, "ರೋಽಸುಪಿ(8–2–76)" ಸೂತ್ರದಿಂದ 'ನ್' ಕಾರಕ್ಕೆ ರುತ್ವ(ರ್) ಬಂದು, ಅಹರ್ ಎಂದಿದ್ದಾಗ, "ಖರವಸಾನಯೋರ್ವಿಸರ್ಜನೀಯಃ" ಎಂಬ ಸೂತ್ರದಿಂದ ರೇಫಕ್ಕೆ ವಿಸರ್ಗ ಬಂದು ಅಹಃ ಎಂದು ರೂಪವಾಗುತ್ತದೆ.

ಉದಾ– ಅಹ್ನೀ/ಅಹನೀ(2)– ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿಗಳ ದ್ವಿ ವಚನಗಳಲ್ಲಿ, ಅಹನ್+ಔ, ಮತ್ತು ಅಹನ್+ಔಟ್(ಔ) ಎಂದಿದ್ದಾಗ, "ನಪುಂಸಕಾಚ್ಚ(7–1–19)" ಸೂತ್ರದಿಂದ 'ಶೀ'(ಈ) ಆದೇಶವು ಬಂದು, ಅದು

ಪರದಲ್ಲಿದ್ದಾಗ, "ವಿಭಾಷಾ ಙಿಶ್ಯೋಃ(6–4–136)" ಸೂತ್ರದಿಂದ ಹ-ಕಾರೊತ್ತರವರ್ತೀ 'ಅ' ಕಾರಕ್ಕೆ ವೈಕಲ್ಪಿಕವಾಗಿ 'ಲೋಪ' ಬಂದು ಅಹ್ನ್+ಈ=ಅಹ್ನೀ ಎಂದು ರೂಪವಾಗುತ್ತದೆ. ಲೋಪವಾಗದ ಪಕ್ಷದಲ್ಲಿ, ಅಹನ್+ಈ ಎಂದಿದ್ದಾಗ, ಅಹನೀ ಎಂದು ವೈಕಲ್ಪಿಕ ರೂಪವಾಗುತ್ತದೆ.

ಉದಾ– ಅಹಾನಿ(2)– ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ಬಹುವಚನಗಳಲ್ಲಿ, ಕ್ರಮವಾಗಿ ಅಹನ್+ಜಸ್ ಮತ್ತು ಅಹನ್+ಶಸ್ ಎಂದಿದ್ದಾಗ, ಆ ಪ್ರತ್ಯಯಗಳಿಗೆ 'ಶಿ(ಇ)' ಆದೇಶ ಬಂದು ಅಹನ್+ಇ, ಮತ್ತು ಅಹನ್+ಇ ಎಂದಿದ್ದಾಗ, 'ಸರ್ವನಾಮ ಸ್ಥಾನದ' ಸಂಜ್ಞೆಯನ್ನು ಪಡೆದು, 'ಉಪಧಾದೀರ್ಘ'ವಾಗಿ ಅಹಾನ್+ಇ=ಅಹಾನಿ ಎಂದು ರೂಪಗಳು ಸಿದ್ಧವಾಗುತ್ತವೆ.

ಉದಾ– ಅಹ್ನಾ– ತೃತೀಯಾ ವಿಭಕ್ತಿ ಏಕವಚನದಲ್ಲಿ ಅಹನ್+ಟಾ(ಆ) ಎಂದಿದ್ದಾಗ, "ಅಲ್ಲೋಪೋऽನಃ(6–4–134)" ಸೂತ್ರದಿಂದ 'ಅ' ಕಾರಕ್ಕೆ ಲೋಪ ಬಂದು, ಅಹ್ನ್+ಆ= ಅಹ್ನಾ ಎಂದು ರೂಪವು ಸಿದ್ಧವಾಗುತ್ತದೆ.

**(ರುತ್ವವನ್ನು ವಿಧಿಸುವ ಸೂತ್ರ)**

**ಸೂತ್ರ – 364. ಅಹನ್ (8.2.68)**

ವೃತ್ತಿಃ–ಅಹನ್ನಿತ್ಯಸ್ಯ ರುಃ ಪದಾಂತೇ। ಅಹೋಭ್ಯಾಮ್। ದಂಡಿ। ದಂಡಿನೀ। ದಂಡೀನಿ

ವಾ॥ **ಸಂಬುದ್ಧೌ ನಪುಂಸಕಾನಾಂ ನಲೋಪೋ ವಾ ವಾಚ್ಯಃ॥**

ಹೇ ದಂಡಿನ್!। ಹೇ ದಂಡಿ!। ಹೇ ದಂಡಿನೀ!। ಹೇ ದಂಡೀನಿ!। ದಂಡಿನಾ। ದಂಡಿಭ್ಯಾಮ್। ಸುಪಥಿ। ಟೇರ್ಲೋಪಃ। ಸುಪಥೀ। ಸುಪನ್ಥಾನಿ। ಊರ್ಕ್, ಊರ್ಗ್। ಊರ್ಜೀ। ಊರ್ನ್ಜಿ। ನರಜಾನಾಮ್। ಸಂ0ಯೋಗಃ। ತತ್। ತೇ। ತಾನಿ। 0ಯತ್। 0ಯೇ। 0ಯಾನಿ। ಏತತ್। ಏತೇ। ಏತಾನಿ।ಗವಾಕ್,ಗವಾಗ್। ಗೋಚೀ। ಗವಾಞ್ಚಿ। ಪುನಸ್ತದ್ವತ್। ಗೋಚಾ। ಗವಾಗ್ಭ್ಯಾಮ್। ಶಕೃತ್। ಶಕೃತೀ। ಶಕೃಂತಿ। ದದತ್।

ಅ.ವ್ಯ.–"ಸಸಜುಷೋ ರುಃ (8–2–66)" ಸೂತ್ರದಿಂದ 'ರುಃ' ಎಂಬ ಪದವೂ, "ಸ್ಕೋಃ ಸಂಯೋಗಾದ್ಯೋರನ್ತೇ ಚ (8–2–29)" ಸೂತ್ರದಿಂದ 'ಅನ್ತೇ' ಎಂಬ ಪದವೂ ಅನುವೃತ್ತವಾಗುತ್ತವೆ. ಮತ್ತು "ಪದಸ್ಯ(ಸಿ.ಕೌ.8.1.16)" ಎಂಬುದು ಅಧಿಕಾರ ಸೂತ್ರ. "ಅಲೋऽನ್ತ್ಯಸ್ಯ(1–1–52)" ಎಂಬುದು ಪರಿಭಾಷಾ ಸೂತ್ರ.

ಅರ್ಥ–ಪದಾನ್ತದಲ್ಲಿ 'ಅಹನ್' ಶಬ್ದದ 'ನ್'ಕಾರಕ್ಕೆ 'ರು' ಆದೇಶವಾಗಿ ಬರುತ್ತದೆ.

ಉದಾ–ಅಹೋಭ್ಯಾಮ್ –ತೃತೀಯಾ ವಿಭಕ್ತಿ ದ್ವಿ ವಚನದಲ್ಲಿ ಅಹನ್+ಭ್ಯಾಮ್ ಎಂದಿದ್ದಾಗ, "ಸ್ವಾದಿಷ್ವಸರ್ವನಾಮಸ್ಥಾನೇ(1–4–17)" ಸೂತ್ರದಿಂದ ಪೂರ್ವದಲ್ಲಿರುವ ಶಬ್ದ ಸ್ವರೂಪ(ಅಹನ್)ಕ್ಕೆ 'ಪದ ಸಂಜ್ಞೆಯು' ಬಂದು, 'ಅಹನ್' ಶಬ್ದದಲ್ಲಿರುವ 'ನ್' ಕಾರಕ್ಕೆ ಪ್ರಕೃತ ಸೂತ್ರದಿಂದ 'ರು' ಆದೇಶವು ಬಂದು ಅಹರ್+ಭ್ಯಾಮ್ ಎಂದಾಗುತ್ತದೆ. "ಹಶಿ ಚ" ಎಂಬ ಸೂತ್ರದಿಂದ 'ರು' ಗೆ 'ಉತ್ವ'ಬಂದು, ಅಹ+ಉ+ಭ್ಯಾಮ್ ಎಂದಿದ್ದಾಗ, ಗುಣ ಬಂದು, ಅಹೋಭ್ಯಾಮ್ ಎಂದು

ರೂಪವಾಗುತ್ತದೆ. ಇದೇ ರೀತಿಯಲ್ಲಿ ಅಹೋಭಿಃ ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, "ಅಲ್ಲೋಪೋऽನಃ" ಎಂಬ ಸೂತ್ರದಿಂದ 'ಅ' ಕಾರಕ್ಕೆ ಲೋಪ ಬಂದು, ವರ್ಣಜೋಡಣೆಯಿಂದ ಅಹ್ನೇ ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

ಉದಾ–ಅಹ್ನಿ– ಸಪ್ತಮೀ ಏಕವಚನದಲ್ಲಿ 'ಜಿ' ಪರದಲ್ಲಿದ್ದಾಗ, "ವಿಭಾಷಾ ಜಿಶ್ಯೋಃ" ಎಂಬ ಸೂತ್ರದಿಂದ 'ಅ' ಕಾರಕ್ಕೆ ವೈಕಲ್ಪಿಕ ಲೋಪ ಬಂದು ಅಹ್ನಿ ಮತ್ತು ಅಹನಿ ಎಂಬ ರೂಪಗಳು ಸಿದ್ಧವಾಗುತ್ತವೆ.

**('ನ್'ಕಾರಾನ್ತ 'ಅಹನ್' ಶಬ್ದದ ರೂಪಗಳು).**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಅಹಃ | ಅಹ್ನೀ/ಅಹನೀ | ಅಹಾನಿ |
| ದ್ವಿತೀಯಾ | ಅಹಃ | ಅಹ್ನೀ/ಅಹನೀ | ಅಹಾನಿ |
| ತೃತೀಯಾ | ಅಹ್ನಾ | ಅಹೋಭ್ಯಾಮ್ | ಅಹೋಭಿಃ |
| ಚತುರ್ಥೀ | ಅಹ್ನೇ | ಅಹೋಭ್ಯಾಮ್ | ಅಹೋಭ್ಯಃ |
| ಪಞ್ಚಮೀ | ಅಹ್ನಃ | ಅಹೋಭ್ಯಾಮ್ | ಅಹೋಭ್ಯಃ |
| ಷಷ್ಠೀ | ಅಹ್ನಃ | ಅಹ್ನೋಃ | ಅಹ್ನಾಮ್ |
| ಸಪ್ತಮೀ | ಅಹ್ನಿ/ಅಹನಿ | ಅಹ್ನೋಃ | ಅಹಃಸು/ಅಹಸ್ಸು |
| ಸಮ್ಬೋಧನ | ಹೇ ಅಹಃ! | ಹೇಅಹ್ನೀ/ ಹೇಅಹನೀ! | ಹೇ ಅಹಾನಿ! |

ಉದಾ–ದಣ್ಡಿ(ದಣ್ಡವುಳ್ಳವರ ಕುಲ)–ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ಏಕವಚನಗಳಲ್ಲಿ ದಣ್ಡಿನ್+ಸು(ಸ್) ಮತ್ತು ದಣ್ಡಿನ್+ಅಮ್ ಎಂದಿದ್ದಾಗ, "ಸ್ವಮೋರ್ನಪುಂಸಕಾತ್(7–1–33)" ಸೂತ್ರದಿಂದ 'ಸು' ಮತ್ತು 'ಅಮ್' ಗಳಿಗೆ ಲುಕ್ ಬಂದು ನಂತರ "ನಲೋಪಃ ಪ್ರಾತಿಪದಿಕಾನ್ತಸ್ಯ(8–2–7)" ಸೂತ್ರದಿಂದ 'ನ್' ಕಾರ ಲೋಪವಾಗಿ ದಣ್ಡಿ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ದಣ್ಡಿನೀ –ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ದ್ವಿವಚನದಲ್ಲಿ ದಣ್ಡಿನ್+ಔ ಎಂದಿದ್ದಾಗ, 'ಔ' ಟ್ ಗೆ ಶೀ(ಈ) ಆದೇಶ ಬಂದು ದಣ್ಡಿನ್+ಈ=ದಣ್ಡಿನೀ ಎಂದಾಗುತ್ತದೆ.

ಉದಾ– ದಣ್ಡೀನಿ– ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ಬಹುವಚನಗಳಲ್ಲಿ, ದಣ್ಡಿನ್+ಜಸ್(ಅಸ್) ಮತ್ತು ದಣ್ಡಿನ್+ಶಸ್(ಅಸ್) ಎಂದಿದ್ದಾಗ, "ಜಶ್ಶಸೋಃ ಶಿಃ" ಎಂಬ ಸೂತ್ರದಿಂದ ಶಿ(ಇ) ಆದೇಶ ಬಂದು, ದಣ್ಡಿನ್+ಇ ಎಂದಿದ್ದಾಗ, "ಸರ್ವನಾಮಸ್ಥಾನೇಚಾಸಮ್ಬುದ್ಧೌ(6–4–8)" ಸೂತ್ರದಿಂದ 'ಇ'ಕಾರಕ್ಕೆ ಉಪಧಾದೀರ್ಘ ಬಂದು ದಣ್ಡೀನಿ ಎಂಬ ರೂಪವು ಸಿದ್ಧವಾಗುತ್ತದೆ.

ತೃತೀಯಾ ವಿಭಕ್ತಿಯಿಂದ ಸಪ್ತಮೀ ವಿಭಕ್ತಿಯವರೆಗೆ ಹಲಾದಿ ಪ್ರತ್ಯಯಗಳು ಪರದಲ್ಲಿದ್ದಾಗ, "ಸ್ವಾದಿಷ್ವಸರ್ವನಾಮಸ್ಥಾನೇ(1–4–17)" ಸೂತ್ರದಿಂದ 'ಪದಸಂಜ್ಞಾ' ಬಂದು, "ನಲೋಪಃ ಪ್ರಾತಿಪದಿಕಾನ್ತಸ್ಯ(8–2–7)" ಸೂತ್ರದಿಂದ 'ನ್' ಕಾರಕ್ಕೆ ಲೋಪ ಬಂದು, ಮತ್ತು ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ ಕೇವಲ ವರ್ಣಜೋಡಣೆಯಿಂದ ರೂಪಗಳು ಸಿದ್ಧವಾಗುತ್ತದೆ.

ಸಮ್ಬೋಧನ ವಿಭಕ್ತಿಯಲ್ಲಿ "ನ ಲುಮತಾಙ್ಗಸ್ಯ(1–1–63)" ಸೂತ್ರವು ಅನಿತ್ಯವಾಗಿರುವದರಿಂದ ಎರಡು ರೂಪಗಳು ಸಿದ್ಧವಾಗುತ್ತದೆ.

**'ನ್'ಕಾರಾನ್ತ 'ದಣ್ಡಿನ್' ಶಬ್ದದರೂಪಗಳು.**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ದಣ್ಡೀ | ದಣ್ಡಿನೀ | ದಣ್ಡೀನಿ |
| ದ್ವಿತೀಯ | ದಣ್ಡೀ | ದಣ್ಡಿನೀ | ದಣ್ಡೀನಿ |
| ತೃತೀಯ | ದಣ್ಡಿನಾ | ದಣ್ಡಿಭ್ಯಾಮ್ | ದಣ್ಡಿಭಿಃ |
| ಚತುರ್ಥೀ | ದಣ್ಡಿನೇ | ದಣ್ಡಿಭ್ಯಾಮ್ | ದಣ್ಡಿಭ್ಯಃ |
| ಪಞ್ಚಮೀ | ದಣ್ಡಿನಃ | ದಣ್ಡಿಭ್ಯಾಮ್ | ದಣ್ಡಿಭ್ಯಃ |
| ಷಷ್ಠೀ | ದಣ್ಡಿನಃ | ದಣ್ಡಿನೋಃ | ದಣ್ಡಿನಾಮ್ |
| ಸಪ್ತಮೀ | ದಣ್ಡಿನಿ | ದಣ್ಡಿನೋಃ | ದಣ್ಡಿಷು |
| ಸಮ್ಬೋಧನ | ಹೇ ದಣ್ಡಿ!/ ಹೇ ದಣ್ಡಿನ್! | ಹೇ ದಣ್ಡಿನೀ! | ಹೇ ದಣ್ಡೀನಿ! |

ಉದಾ–ಸುಪಥಿ(2)(ಸುಂದರವಾದ ರಸ್ತೆಗಳುಳ್ಳ ನಗರ)– ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ಏಕವಚನಗಳಲ್ಲಿ ಸುಪಥಿನ್+ಸು(ಸ್) ಮತ್ತು ಸುಪಥಿನ್+ಅಮ್ ಎಂದಿದ್ದಾಗ, "ಸ್ವಮೋರ್ನಪುಂಸಕಾತ್(7–1–33)" ಸೂತ್ರದಿಂದ ಆ 'ಸು' ಮತ್ತು 'ಅಮ್' ಗಳಿಗೆ ಲುಕ್ ಬಂದು, "ನಲೋಪಃ ಪ್ರಾತಿಪದಿಕಾನ್ತಸ್ಯ(8–2–7)" ಸೂತ್ರದಿಂದ 'ನ್' ಕಾರಕ್ಕೆ ಲೋಪ ಬಂದು, ಸುಪಥಿ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಸುಪಥೀ(2)–ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ದ್ವಿವಚನಗಳಲ್ಲಿ ಸುಪಥಿನ್+ಔ, ಸುಪಥಿನ್+ಔಟ್(ಔ) ಎಂದಿದ್ದಾಗ, 'ಔ' ಗೆ ಶೀ (ಈ) ಆದೇಶವು ಬಂದು, ಅದಕ್ಕೆ ಸರ್ವನಾಮಸ್ಥಾನ ಸಂಜ್ಞೆ ಬಾರದೇ ಇರುವುದರಿಂದ 'ಭ' ಸಂಜ್ಞಾ ಬಂದು, "ಭಸ್ಯ ಟೇರ್ಲೋಪಃ(7–1–88)" ಸೂತ್ರದಿಂದ 'ಟಿ' ಸಂಜ್ಞೆಯುಳ್ಳ (ಇನ್)ಗೆ ಲೋಪ ಬಂದು ಸುಪಥ್+ಈ=ಸುಪಥೀ ಎಂದು ರೂಪಗಳಾಗುತ್ತವೆ.

ಉದಾ– ಸುಪನ್ಥಾನಿ(2)–ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ಬಹುವಚನಗಳಲ್ಲಿ ಸುಪಥಿನ್+ಜಸ್(ಅಸ್) ಮತ್ತು ಸುಪಥಿನ್+ಶಸ್(ಅಸ್) ಎಂದಿದ್ದಾಗ, 'ಅಸ್' ಗಳಿಗೆ ಶಿ(ಇ) ಆದೇಶ ಬಂದು, ಅದಕ್ಕೆ 'ಸರ್ವನಾಮಸ್ಥಾನ ಸಂಜ್ಞೆ' ಇರೋಣದ್ದರಿಂದ,

"ಇತೋಽತ್ಸರ್ವನಾಮಸ್ಥಾನೇ(7–1–86)" ಸೂತ್ರದಿಂದ 'ಇ' ಕಾರಕ್ಕೆ 'ಅ' ಕಾರ ಆದೇಶವಾಗಿ ಬಂದು ಸುಪಥನ್+ಇ ಎಂದಿದ್ದಾಗ, "ಥೋನ್ಥಃ(7–1–87)" ಸೂತ್ರದಿಂದ 'ಥ್' ಕಾರದ ಸ್ಥಾನದಲ್ಲಿ 'ನ್ಥ್' ಆದೇಶ ಬಂದು ಸುಪನ್ಥ್+ಅ+ನ್+ಇ ಎಂದಿದ್ದಾಗ, "ಸರ್ವನಾಮಸ್ಥಾನೇ ಚಾಸಮ್ಬುದ್ಧೌ(6–4–8)" ಸೂತ್ರದಿಂದ ಉಪಧಾದೀರ್ಘವು ಬಂದು, ಸುಪನ್ಥಾನ್+ಇ=ಸುಪನ್ಥಾನಿ ಎಂದು ರೂಪವು ಸಿದ್ಧವಾಗುತ್ತದೆ.

ಅಜಾದಿ ವಿಭಕ್ತಿಗಳು ಪರವಾದಾಗ, ಮುಂದಿನ ರೂಪಗಳಿಗೂ ಹಿಂದಿನಂತೆಯೇ 'ಭ'ಸಂಜ್ಞಾ ಬಂದು, "ಭಸ್ಯ ಟೇರ್ಲೋಪಃ(7–1–88)" ಸೂತ್ರದಿಂದ 'ಟಿ' ಸಂಜ್ಞೆಯುಳ್ಳದಕ್ಕೆ ಲೋಪ ಬಂದು, ಅಕ್ಷರಜೋಡಣೆಯಿಂದ ರೂಪಗಳು ಸಿದ್ಧವಾಗುತ್ತದೆ.

ಹಲಾದಿ ಪ್ರತ್ಯಯಗಳು ಪರದಲ್ಲಿದ್ದಾಗ, 'ಪದ ಸಂಜ್ಞಾ' ಬಂದು, "ನಲೋಪಃ ಪ್ರಾತಿಪದಿಕಾನ್ತಸ್ಯ(8–2–7)" ಸೂತ್ರದಿಂದ 'ನ್' ಕಾರಕ್ಕೆ ಲೋಪ ಬಂದು ಕೆಳಗಿನಂತೆ ರೂಪಗಳು ಸಿದ್ಧವಾಗುತ್ತವೆ.

**ನಪುಂಸಕಲಿಙ್ಗದ 'ಸುಪಥಿನ್' ಶಬ್ದದ ರೂಪಗಳು.**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಸುಪಥಿ | ಸುಪಥೀ | ಸುಪನ್ಥಾನಿ |
| ದ್ವಿತೀಯ | ಸುಪಥಿ | ಸುಪಥೀ | ಸುಪನ್ಥಾನಿ |
| ತೃತೀಯ | ಸುಪಥಾ | ಸುಪಥಿಭ್ಯಾಮ್ | ಸುಪಥಿಭಿಃ |
| ಚತುರ್ಥೀ | ಸುಪಥೇ | ಸುಪಥಿಭ್ಯಾಮ್ | ಸುಪಥಿಭ್ಯಃ |
| ಪಞ್ಚಮೀ | ಸುಪಥಃ | ಸುಪಥಿಭ್ಯಾಮ್ | ಸುಪಥಿಭ್ಯಃ |
| ಷಷ್ಠೀ | ಸುಪಥಃ | ಸುಪಥೋಃ | ಸುಪಥಾಮ್ |
| ಸಪ್ತಮೀ | ಸುಪಥಿ | ಸುಪಥೋಃ | ಸುಪಥಿಷು |
| ಸಮ್ಬೋಧನ | ಹೇ ಸುಪಥಿ! ಹೇ ಸುಪಥಿನ್! | ಹೇ ಸುಪಥೀ! | ಹೇ ಸುಪನ್ಥಾನಿ! |

**ಇಲ್ಲಿಗೆ 'ನ್' ಕಾರಾಂತ ಶಬ್ದಗಳು ಮುಗಿದವು**

***

**ಈಗ 'ಜ್' ಕಾರಾನ್ತಶಬ್ದಗಳು ಪ್ರಾರಂಭವಾಗುತ್ತವೆ.**

ಉದಾ–ಊರ್ಕ್/ಊರ್ಗ್(ಬಲ ಅಥವಾ ತೇಜಸ್ಸು)–ಊರ್ಜ್ ಧಾತುವಿನ ಮೇಲೆ 'ಕ್ವಿಪ್' ಪ್ರತ್ಯಯವನ್ನು ಸೇರಿಸಿದಾಗ ಅದು ಸರ್ವಾಪಹಾರವಾಗಿ ಊರ್ಜ್ ಶಬ್ದವು ಸಿದ್ಧವಾಗುತ್ತದೆ.

ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ಏಕವಚನಗಳಲ್ಲಿ ಊರ್ಜ್+ಸು(ಸ್) ಮತ್ತು

ಊರ್ಜ್+ಅಮ್ ಎಂದಿದ್ದಾಗ, "ಸ್ವಮೋರ್ನಪುಂಸಕಾತ್(7–1–33)" ಸೂತ್ರದಿಂದ ಆ 'ಸು' ಮತ್ತು 'ಅಮ್' ಗಳಿಗೆ ಲುಕ್ ಬಂದು ಊರ್ಜ್ ಎಂದಿರುತ್ತದೆ. "ಚೋಃ ಕುಃ(8–2–30)" ಸೂತ್ರದಿಂದ 'ಜ್' ಕಾರಕ್ಕೆ ಕುತ್ವ(ಗ್) ಬಂದು, 'ಗ್' ಕಾರಕ್ಕೆ ವೈಕಲ್ಪಿಕವಾಗಿ ಚರ್ತ್ವ ಬಂದು ಊರ್ಕ್, ಊರ್ಗ್ ಎಂಬ ಎರಡು ರೂಪಗಳು ಸಿದ್ಧವಾಗುತ್ತವೆ.

ವಿಶೇಷ– "ರಾತ್ಸಸ್ಯ (8–2–24)" ಸೂತ್ರದ ಪ್ರಕಾರ ರೇಫದ ಪರದಲ್ಲಿರುವ 'ಸ್' ಕಾರಕ್ಕೇನೇ ಲೋಪವು ಬರುತ್ತದೆ. ಉಳಿದ ವರ್ಣಗಳಿಗಲ್ಲ. ಆದ್ದರಿಂದ 'ಜ್' ಕಾರಕ್ಕೆ ಲೋಪವು ಬರುವುದಿಲ್ಲ.

ಉದಾ– ಊರ್ಜೆ (2)– ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ದ್ವಿವಚನಗಳಲ್ಲಿ, ಊರ್ಜ್+ಔ, ಮತ್ತು ಊರ್ಜ್+ಔಟ್(ಔ) ಎಂದಿದ್ದಾಗ, "ನಪುಂಸಕಾಚ್ಚ" ಎಂಬ ಸೂತ್ರದಿಂದ 'ಔ'ಗೆ ಶೀ(ಈ) ಆದೇಶ ಬಂದು ಊರ್ಜ್+ಈ ಎಂದಿದ್ದಾಗ, ವರ್ಣಜೋಡಣೆಯಿಂದ ಊರ್ಜೀ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಊನ್ರ್ಜಿ(2) – ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ಬಹುವಚನಗಳಲ್ಲಿ ಊರ್ಜ್+ಜಸ್(ಅಸ್) ಮತ್ತು ಊರ್ಜ್+ಶಸ್(ಅಸ್) ಎಂದಿದ್ದಾಗ, ಶಿ(ಇ) ಆದೇಶ ಬಂದು, ಊರ್ಜ್+ಇ ಮತ್ತು ಊರ್ಜ್+ಇ ಎಂದಿದ್ದಾಗ, "ನಪುಂಸಕಸ್ಯ ಝಲಚಃ (7–1–72)" ಸೂತ್ರದಿಂದ 'ನುಮ್'(ನ್) ಆಗಮವು ಮಿತ್ ಆಗಿರೋಣದ್ದರಿಂದ, 'ನ್' ಕಾರವು, 'ಊ' ಕಾರದ ನಂತರ ಬಂದು, ಊನ್ರ್‌ಜ್+ಇ=ಊನ್ರ್ಜಿ ಎಂಬ ರೂಪವು ಸಿದ್ಧವಾಗುತ್ತದೆ. ಇದರಲ್ಲಿ (ನ್ ಕಾರ ರ್ ಕಾರ ಜ್–ಗಳು ಸೇರಿ ಸಂಯುಕ್ತಾಕ್ಷರವಾಗಿದೆ).

ತೃತೀಯಾ ವಿಭಕ್ತಿಯಿಂದ ಮುಂದೆ ಬರುವ ರೂಪಗಳು, ಅಜಾದಿ ಪ್ರತ್ಯಯಗಳು ಪರದಲ್ಲಿದ್ದಾಗ, ಕೇವಲ ವರ್ಣಜೋಡಣೆಯಿಂದ ಊರ್ಜಾ, ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

ಹಲಾದಿ ಪ್ರತ್ಯಯಗಳು ಪರದಲ್ಲಿದ್ದಾಗ, 'ಪದಸಂಜ್ಞಾ' ಬಂದು, "ಚೋಃ ಕುಃ(8–2–30)" ಸೂತ್ರದಿಂದ 'ಕುತ್ವ(ಗ್)' ಕಾರ ಆದೇಶವಾಗಿ ಬಂದು, ಊರ್ಗ್ಭ್ಯಾಮ್, ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

**('ಜ್' ಕಾರಾಂತ ನಪುಂಸಕಲಿಙ್ಗ 'ಊರ್ಜ್' ಶಬ್ದದ ರೂಪಗಳು).**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಊರ್ಕ್/ಊರ್ಗ್ | ಊರ್ಜೀ | ಊನ್ರ್ಜಿ |
| ದ್ವಿತೀಯ | ಊರ್ಕ್/ಊರ್ಗ್ | ಊರ್ಜೀ | ಊನ್ರ್ಜಿ |
| ತೃತೀಯ | ಊರ್ಜಾ | ಊರ್ಗ್ಭ್ಯಾಮ್ | ಊರ್ಗ್ಭಿಃ |
| ಚತುರ್ಥೀ | ಊರ್ಜೇ | ಊರ್ಗ್ಭ್ಯಾಮ್ | ಊರ್ಗ್ಭ್ಯಃ |

| | | | |
|---|---|---|---|
| ಪಞ್ಚಮೀ | ಊರ್ಜಃ | ಊರ್ಗ್ಭ್ಯಾಮ್ | ಊರ್ಗ್ಭ್ಯಃ |
| ಷಷ್ಠೀ | ಊರ್ಜಃ | ಊರ್ಜೋಃ | ಊರ್ಜಾಮ್ |
| ಸಪ್ತಮೀ | ಊರ್ಜಿ | ಊರ್ಜೋಃ | ಊರ್ಕ್ಷು |
| ಸಮ್ಬೋಧನ | ಹೇಊರ್ಕ್!/ ಹೇ ಊರ್ಗ್! | ಹೇ ಊರ್ಜೀ!, | ಹೇ ಊರ್ನ್ಜಿ! |

**ಇಲ್ಲಿಗೆ 'ಜ್' ಕಾರಾಂತ ಶಬ್ದಗಳು ಮುಗಿದವು**

***

**ಈಗ 'ತ್' ಕಾರಾಂತ ಶಬ್ದಗಳು ಆರಂಭವಾಗುತ್ತವೆ.**

ಉದಾ– ತತ್(2)– ಇದು ಸರ್ವನಾಮ ಸಂಜ್ಞೆವುಳ್ಳ ಶಬ್ದವಾಗಿದೆ. ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ಏಕವಚನಗಳಲ್ಲಿ ತತ್+ಸು(ಸ್) ಮತ್ತು ತತ್+ಅಮ್ ಎಂದಿದ್ದಾಗ, "ಸ್ವಮೋರ್ನಪುಂಸಕಾತ್(7–1–33)" ಸೂತ್ರದಿಂದ ಆ 'ಸು' ಮತ್ತು 'ಅಮ್' ಗಳಿಗೆ ಲುಕ್ ಬಂದು ತತ್ ಎಂದು ರೂಪವಾಗುತ್ತದೆ.

ಉದಾ– ತೇ(2)– ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ದ್ವಿವಚನಗಳಲ್ಲಿ ತತ್+ಔ ಮತ್ತು ತತ್+ಔಟ್(ಔ) ಎಂದಿದ್ದಾಗ, ಅದಕ್ಕೆ "ನಪುಂಸಕಾಚ್ಚ" ಎಂಬ ಸೂತ್ರದಿಂದ 'ಔ' ಗೆ ಶೀ(ಈ) ಆದೇಶ ಬಂದು, ತತ್+ಈ ಎಂದಿದ್ದಾಗ, ವಿಭಕ್ತಿ ಪ್ರತ್ಯಯವು ಪರದಲ್ಲಿ ಇರೋಣದ್ದರಿಂದ "ತ್ಯದಾದೀನಾಮಃ(7–2–102)" ಸೂತ್ರದಿಂದ ಅಂತ್ಯ 'ತ್' ಕಾರಕ್ಕೆ 'ಅ' ಕಾರವು ಆದೇಶವಾಗಿ ಬಂದು, ತ+ಅ+ಈ ಎಂದಿದ್ದಾಗ, ಎರಡು 'ಅ' ಕಾರಗಳಿಗೆ 'ಪರರೂಪ' ಬಂದು ತ+ಈ ಎಂದಾಗಿ ಗುಣಸಂಧಿಯಿಂದ ತೇ ಎಂದು ರೂಪವಾಗುತ್ತದೆ.

ಉದಾ– ತಾನಿ(2)– ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ಬಹುವಚನಗಳಲ್ಲಿ, ತತ್+ಜಸ್(ಅಸ್) ಮತ್ತು ತತ್+ಶಸ್(ಅಸ್) ಎಂದಿದ್ದಾಗ, "ಜಶ್ಶಸೋಃ ಶಿಃ" ಎಂಬ ಸೂತ್ರದಿಂದ ಶಿ(ಇ) ಆದೇಶ ಬಂದು ತತ್+ಇ ಮತ್ತು ತತ್+ಇ, ಎಂದಿದ್ದಾಗ, "ತ್ಯದಾದೀನಾಮಃ(7–2–102)" ಸೂತ್ರದಿಂದ ಅಂತ್ಯ 'ತ್' ಕಾರಕ್ಕೆ 'ಅ' ಕಾರವು ಆದೇಶವಾಗಿ ಬಂದು, ತ+ಅ+ಇ ಎಂದಿದ್ದಾಗ, "ನಪುಂಸಕಸ್ಯ ಝಲಚಃ(7–1–72)" ಸೂತ್ರದಿಂದ 'ನುಮ್'(ನ್) ಆಗಮವು ಮಿತ್ ಆಗಿರೋಣದ್ದರಿಂದ, ಅಂತ್ಯ 'ಅ' ಕಾರದ ನಂತರ ಬಂದು, ತ+ಅ+ನ್+ಇ ಎಂದಿದ್ದಾಗ, ಪರರೂಪ ಬಂದು, ತ+ನ್+ಇ ಎಂದಿದ್ದಾಗ, "ಸರ್ವನಾಮಸ್ಥಾನೇಚಾಸಮ್ಬುದ್ಧೌ(6–4–8)" ಸೂತ್ರದಿಂದ ಉಪಧಾದೀರ್ಘ ಬಂದು ತಾ+ನ್+ಇ=ತಾನಿ ಎಂಬ ರೂಪವು ಸಿದ್ಧವಾಗುತ್ತದೆ.

ತೃತೀಯಾ ವಿಭಕ್ತಿಯಿಂದ ಮುಂದೆ ಬರುವ ಎಲ್ಲ ರೂಪಗಳು ಪುಲ್ಲಿಙ್ಗ ಶಬ್ದದಲ್ಲಿರುವಂತೆ ಪ್ರಕ್ರಿಯೆಯನ್ನು ಹೊಂದಿ ಸಿದ್ಧವಾಗುತ್ತವೆ.

**(ಸರ್ವನಾಮಸಂಜ್ಞೆಯುಳ್ಳ 'ತ್' ಕಾರಾಂತ ನಪುಂಸಕಲಿಙ್ಗ 'ತತ್' ಶಬ್ದದ ರೂಪಗಳು).**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ತತ್/ತದ್ | ತೇ | ತಾನಿ |
| ದ್ವಿತೀಯ | ತತ್/ತದ್ | ತೇ | ತಾನಿ |
| ತೃತೀಯ | ತೇನ | ತಾಭ್ಯಾಮ್ | ತೈಃ |
| ಚತುರ್ಥೀ | ತಸ್ಮೈ | ತಾಭ್ಯಾಮ್ | ತೇಭ್ಯಃ |
| ಪಞ್ಚಮೀ | ತಸ್ಮಾತ್ | ತಾಭ್ಯಾಮ್ | ತೇಭ್ಯಃ |
| ಷಷ್ಠೀ | ತಸ್ಯ | ತಯೋಃ | ತೇಷಾಮ್ |
| ಸಪ್ತಮೀ | ತಸ್ಮಿನ್ | ತಯೋಃ | ತೇಷು |

ಸಮ್ಬೋಧನ ಇದಕ್ಕೆ ಸಂಬೋಧನರೂಪವು ಇರುವದಿಲ್ಲ.

ಇದೇ ತರಹ ಯತ್ ಶಬ್ದವು ಯತ್, ಯೇ, ಯಾನಿ ಮೊದಲಾದ ರೂಪಗಳನ್ನು ಪಡೆಯುತ್ತದೆ.

**ಇಲ್ಲಿಗೆ 'ತ್' ಕಾರಾಂತ ಸರ್ವನಾಮ ಶಬ್ದಗಳು ಮುಗಿದವು**

***

**'ಚ್' ಕಾರಾಂತ 'ಗೋ' ಪೂರ್ವಕ 'ಅಞ್ಚ್'**
**ಧಾತುವಿನ ರೂಪಗಳು ಆರಂಭವಾಗುತ್ತವೆ.**

ಉದಾ-ಗವಾಕ್,ಗವಾಗ್-ಇದು ಗೋ-ಪೂರ್ವಕ 'ಅಞ್ಚ್' ಧಾತುವಾಗಿದೆ. "ಋತ್ವಿಗ್ದಧೃಕ್ಸ್ರಗ್ದಿಗುಷ್ಣಿಗಞ್ಚುಯುಜಿಕ್ರುಞ್ಚಾಂ ಚ (3-2-59)" ಸೂತ್ರದಿಂದ 'ಕ್ವಿನ್' ಪ್ರತ್ಯಯ ಬಂದು, 'ಸರ್ವಾಪಹಾರ ಲೋಪವಾಗಿ' ಗೋ+ಅಞ್ಚ್ ಎಂದಿರುತ್ತದೆ. ಅಞ್ಚ್ ಧಾತುವಿಗೆ ಎರಡು ಅರ್ಥಗಳಿವೆ. 1.ಗತಿ, 2.ಪೂಜಾ. ಗತಿ-ಅರ್ಥದಲ್ಲಿ "ಅನಿದಿತಾಂ ಹಲ ಉಪಧಾಯಾ ಕ್ಙಿತಿ(6-4-24)" ಸೂತ್ರದಿಂದ ಈ ಮೊದಲು 'ಞ್' ಕಾರದ ಸ್ಥಾನದಲ್ಲಿ (ಸ್ಥಾನೀಯಾಗಿದ್ದ) 'ನ್' ಕಾರವು ಲೋಪವಾಗಿ ಗೋ+ಅಚ್ ಎಂದಾಗುತ್ತದೆ. ಅನಂತರ 'ಪ್ರಾತಿಪದಿಕಸಂಜ್ಞೆ' ಬಂದು ಸು(ಸ್) ಪ್ರತ್ಯಯಗಳನ್ನು ಸೇರಿಸಲಾಗುತ್ತದೆ.

ಗತ್ಯರ್ಥಕ ಅಞ್ಚ್ ಧಾತುವಿನ ಕೊನೆಗೆ 'ಗಾಂ ಅಞ್ಚತಿ ಗಚ್ಛತೀತಿ' ಎಂಬ ಅರ್ಥದಲ್ಲಿ 'ಭೂಮಿಯ ಮೇಲೆ ಯಾವ ಗೋವಿದೆಯೋ ಅದರ ಹಿಂದೆ ಚಲಿಸುವ ಕುಲ' ಎಂದು ಅರ್ಥ.

2. ಪೂಜಾ-ಅರ್ಥದಲ್ಲಿ ಭೂಮಿ ಅಥವಾ ಆಕಳು, ಇವುಗಳನ್ನು ಪೂಜೆ ಮಾಡುವ ಕುಲ ಎಂಬ ಅರ್ಥವಾಗುತ್ತದೆ. ವರದರಾಜರು ತಮ್ಮ 'ಲಘುಸಿದ್ಧಾನ್ತ ಕೌಮುದೀ'ಯಲ್ಲಿ 'ಗತ್ಯರ್ಥ' ಪಕ್ಷದಲ್ಲಿ 'ನ್' ಕಾರ ಲೋಪವಾದ ರೂಪವನ್ನು ಮಾತ್ರ ವಿವರಿಸಿದ್ದಾರೆ.

ಉದಾ–ಗವಾಕ್,ಗವಾಗ್– ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ಏಕವಚನಗಳಲ್ಲಿ –ಗೋ+ಅಚ್+ಸು ಮತ್ತು ಗೋ+ಅಚ್+ಅಮ್ ಎಂದಿದ್ದಾಗ, "ಸ್ವಮೋರ್ನಪುಂಸಕಾತ್(7–1–33)" ಸೂತ್ರದಿಂದ 'ಸು' ಮತ್ತು 'ಅಮ್' ಗಳಿಗೆ ಲೋಪ ಬರುತ್ತದೆ. ಕ್ವಿನ್ಪ್ರತ್ಯಯಸ್ಯ ಕುಃ(8–2–62) ಸೂತ್ರದಿಂದ ಬರಬೇಕಾಗಿದ್ದ 'ಕುತ್ವ' ವು "ಪೂರ್ವತ್ರಾಸಿದ್ಧಮ್(8–2–1)" ಎಂಬ ಸೂತ್ರದ ಪ್ರಕಾರ ಅಸಿದ್ಧ ವಾಗಿರುವುದರಿಂದ ಚೋಃ ಕುಃ(8–2–30) ಸೂತ್ರದಿಂದ 'ಚ್' ಕಾರಕ್ಕೆ 'ಕುತ್ವ' ಬಂದು 'ಕ್' ಕಾರವಾಗಿ ಗೋ+ಅಕ್ ಎಂದಿದ್ದಾಗ, 'ಕ್' ಕಾರದ ಸ್ಥಾನದಲ್ಲಿ "ಝಲಾಂ ಜಶೋऽನ್ತೇ(8.2.36)" ಸೂತ್ರದಿಂದ ಜಶ್ತ್ವ(ಗ್) ಬಂದು, ಗೋ+ಅಗ್ ಎಂದಿರುತ್ತದೆ. ಅನಂತರ "ವಾವಸಾನೇ(8–4–56)" ಸೂತ್ರದಿಂದ ವೈಕಲ್ಪಿಕವಾಗಿ 'ಚರ್ತ್ವ' ಬಂದು ಗೋ+ಅಕ್, ಗೋ+ಅಗ್ ಎಂಬ ಎರಡು ರೂಪಗಳಾಗುತ್ತವೆ. ಈ ಎರಡು ರೂಪಗಳಿಗೂ ಪ್ರತ್ಯೇಕವಾಗಿ ಸಂಧಿಯ ನಿಯಮಗಳಿಂದ ಮೂರು, ಮೂರು ರೂಪಗಳು ಅಂದರೆ ಒಟ್ಟು ಆರು ರೂಪಗಳಾಗುತ್ತವೆ. "ಅವಙ್ ಸ್ಫೋಟಾಯನಸ್ಯ(6–1–123)" ಸೂತ್ರದಿಂದ ಗೋನಲ್ಲಿರುವ 'ಓ' ಕಾರಕ್ಕೆ ವೈಕಲ್ಪಿಕವಾಗಿ ಅವಙ್ ಆದೇಶವು ಬಂದು ಗವ+ಅಕ್ ಎಂದಿದ್ದಾಗ, 'ಸವರ್ಣದೀರ್ಘ' ಸಂಧಿಯಾಗಿ ಗವಾಕ್ ಎಂಬ ಒಂದನೇ ರೂಪವು ಸಿದ್ಧವಾಗುತ್ತದೆ.ಅವಙ್–ಆದೇಶವು ಬಾರದೇ ಇದ್ದ ಪಕ್ಷದಲ್ಲಿ "ಸರ್ವತ್ರ ವಿಭಾಷಾ ಗೋಃ(6–1–122)" ಸೂತ್ರದಿಂದ 'ಪ್ರಕೃತಿಭಾವ' ಬಂದು ಗೋಅಕ್ ಎಂಬ ಎರಡನೇ ರೂಪವು ಸಿದ್ಧವಾಗುತ್ತದೆ. ಹಾಗೆಯೇ 'ಪ್ರಕೃತಿಭಾವವು' ಬಾರದೇ ಇದ್ದ ಪಕ್ಷದಲ್ಲಿ "ಏಙಃ ಪದಾನ್ತಾದತಿ(6–1–109)" ಸೂತ್ರದಿಂದ 'ಪೂರ್ವ ರೂಪವು' ಬಂದು ಗೋऽಕ್ ಎಂಬ ಮೂರನೇ ರೂಪವು ಸಿದ್ಧವಾಗುತ್ತದೆ. ಈ ಮೂರೂ ರೂಪಗಳು "ವಾವಸಾನೇ(8–4–56) ಸೂತ್ರದಿಂದ ಚರ್ತ್ವ ಬಂದ ರೂಪಗಳಾಗಿವೆ. ಚರ್ತ್ವ ಬಾರದೇ ಇದ್ದ ಪಕ್ಷದಲ್ಲಿ ಗವಾಗ್, ಗೋಅಗ್, ಗೋऽಗ್ ಎಂಬ ಮೂರು ರೂಪಗಳಾಗುತ್ತವೆ ಹೀಗೆ ಗವಾಕ್–ಗವಾಗ್, ಗೋಅಕ್–ಗೋಅಗ್, ಗೋऽಕ್–ಗೋऽಗ್ ಎಂದು ಒಟ್ಟು ಆರು ರೂಪಗಳು ಸಿದ್ಧವಾಗುತ್ತವೆ.

ಉದಾ– ಗೋಚೀ(2)– ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ದ್ವಿವಚನದಲ್ಲಿ ಗೋ+ಅಚ್+ಔ ಎಂದಿದ್ದಾಗ, "ನಪುಂಸಕಾಚ್ಚ(7–1–19)" ಸೂತ್ರದಿಂದ 'ಔ' ಗೆ 'ಶೀ'(ಈ) ಆದೇಶವು ಬಂದು ಗೋ+ಅಚ್+ಈ ಎಂದಾಗುತ್ತದೆ. ನಪುಂಸಕಲಿಂಗವಾಗಿರುವದರಿಂದ ಶೀ(ಈ) ಗೆ 'ಸರ್ವನಾಮ ಸಂಜ್ಞೆ' ಬಾರದೇ ಇದು(ಈ) ಪರದಲ್ಲಿರೋಣದ್ದರಿಂದ, ಇದರ ಪೂರ್ವದಲ್ಲಿರುವ ಶಬ್ದ–ಸ್ವರೂಪಕ್ಕೆ 'ಭ'ಸಂಜ್ಞಾ ಬಂದು "ಅಚಃ(6–4–138)" ಸೂತ್ರದಿಂದ 'ಅಚ್' ನಲ್ಲಿರುವ 'ಅ' ಕಾರಕ್ಕೆ ಲೋಪವು ಬಂದು ಗೋಚ್+ಇ=ಗೋಚೀ ಎಂಬ ಒಂದೇ ರೂಪವು ಸಿದ್ಧವಾಗುತ್ತದೆ.

ವಿಶೇಷ– ಗೋ+ಅಚ್+ಈ ಎಂಬಲ್ಲಿ 'ಅ' ಕಾರದ ಲೋಪ ವಾಗಿರೋಣದ್ದರಿಂದ "ಅವಙ್ ಸ್ಫೋಟಾಯನಸ್ಯ(6–1–123)", "ಸರ್ವತ್ರ ವಿಭಾಷಾ ಗೋಃ(6–1–122)"

ಮತ್ತು "ಏಙಃ ಪದಾನ್ತಾದತಿ(6–1–109) ಎಂಬ ಈ ಸೂತ್ರಗಳು ಅನ್ವಯಿಸುವುದಿಲ್ಲ. ಈ ರೀತಿಯಾಗಿ 'ಭ'ಸಂಜ್ಞಾ ಬಂದ ಜಾಗದಲ್ಲಿ ಈ ರೀತಿ ಪ್ರಕ್ರಿಯಾ ಇರುತ್ತದೆ ಎಂದು ತಿಳಿಯಬೇಕು.

ಉದಾ– ಗವಾಞ್ಚಿ, ಗೋಅಞ್ಚಿ, ಗೋಽಞ್ಚಿ– ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ಬಹುವಚನಗಳಲ್ಲಿ ಗೋ+ಅಚ್+ಜಸ್(ಅಸ್) ಮತ್ತು ಗೋ+ಅಚ್+ಶಸ್(ಅಸ್) ಎಂದಿದ್ದಾಗ, ಜಸ್(ಅಸ್) ಮತ್ತು ಶಸ್(ಅಸ್) ಸ್ಥಾನಗಳಲ್ಲಿ, "ಜಶ್ಶಸೋಃ ಶಿಃ(7–1–70)" ಸೂತ್ರದಿಂದ ಶಿ(ಇ) ಆದೇಶವು ಬರುತ್ತದೆ. ಆಗ ಗೋ+ಅಚ್+ಇ ಎಂದಿರುತ್ತದೆ. ನಪುಂಸಕಲಿಂಗವಾದ ಮೇಲೂ 'ಶಿ' ಗೆ "ಶಿ ಸರ್ವನಾಮಸ್ಥಾನಮ್ (1–1–42)" ಸೂತ್ರದಿಂದ 'ಸರ್ವನಾಮ–ಸ್ಥಾನ' ಸಂಜ್ಞೆಯು ಬರುತ್ತದೆ. ಆದ್ದರಿಂದ 'ಭ'ಸಂಜ್ಞಾ ಬರುವುದಿಲ್ಲ. "ಉಗಿದಚಾಂ ಸರ್ವನಾಮಸ್ಥಾನೇಧಾತೋಃ(7–1–70)" ಸೂತ್ರದಿಂದ ನುವಮ್(ನ್)ಆಗವು 'ಮಿತ್' ಆಗಿರೋಣದ್ದರಿಂದ, "ಮಿದಚೋಽನ್ತ್ಯಾತ್ಪರಃ(1–1–47)" ಸೂತದಿಂರ್ರದ ಅನ್ತ್ಯ 'ಅಚ್' ನ ನಂತರ ಆಗಮವಾಗಿ ಬಂದು, ಗೋ+ಅನ್+ಚ್+ಇ ಎಂದಿರುತ್ತದೆ.

"ನಶ್ಚಾಪದಾನ್ತಸ್ಯ ಝಲಿ(8–3–24)" ಸೂತ್ರದಿಂದ 'ಅನ್' ನಲ್ಲಿರುವ 'ನ್' ಕಾರಕ್ಕೆ ಅನುಸ್ವಾರ ಮತ್ತು 'ಚ್' ಕಾರವು ಪರದಲ್ಲಿರುವುದರಿಂದ, "ಅನುಸ್ವಾರಸ್ಯ ಯಯಿ ಪರಸವರ್ಣಃ(8–4–58)" ಸೂತ್ರದಿಂದ 'ಪರಸವರ್ಣವು' 'ಞ್' ಗೋ+ಅಞ್ಚ್+ಇ=ಗೋ+ಅಞ್ಚೀ ಎಂದಾಗುತ್ತದೆ.

(ಇಲ್ಲಿ ಮೂರು ಸಂಧಿಗಳು ಇರುತ್ತವೆ)– 'ಅಞ್ಚಿ' ಅಂದರೆ ಅವಙ್(ಅವ) ಆದೇಶ ಬಂದಮೇಲೆ ಗವ+ಅಞ್ಚಿ ಎಂದಾಗಿ 'ಸವರ್ಣದೀರ್ಘದಿಂದ' ಗವಾಞ್ಚಿ ಎಂದು ಒಂದನೇ ರೂಪವಾಗುತ್ತದೆ. ಪ್ರಕೃತಿಭಾವದಲ್ಲಿ ಗೋ+ಅಞ್ಚಿ=ಗೋಅಞ್ಚಿ ಎಂದು ಎರಡನೇಯ ರೂಪವಾಗುತ್ತದೆ. ಗೋ+ಅಞ್ಚಿ ಎಂದಿದ್ದಾಗ, 'ಪೂರ್ವರೂಪದಿಂದ' ಗೋಽಞ್ಚಿ ಎಂಬ ಮೂರನೆಯ ರೂಪವು ಸಿದ್ಧವಾಗುತ್ತದೆ. ಹೀಗೆ ಪ್ರಥಮಾ ಬಹುವಚನದಲ್ಲಿ 3 ರೂಪಗಳು, ಹಾಗೆಯೇ ದ್ವಿತೀಯಾ ಬಹುವಚನದಲ್ಲಿಯೂ 3 ರೂಪಗಳು ಸಿದ್ಧವಾಗುತ್ತವೆ.

ಉದಾ–ಗೋಚಾ– ತೃತೀಯಾ ವಿಭಕ್ತಿಯ ಏಕವಚನದಲ್ಲಿ ಗೋ+ಅಚ್+ಟಾ(ಆ) ಎಂದಿದ್ದಾಗ, 'ಭ'ಸಂಜ್ಞಾ ಬಂದ ಮೇಲೆ "ಅಚಃ(6–4–138)" ಸೂತ್ರದಿಂದ 'ಅ'ಕಾರಕ್ಕೆ ಲೋಪ ಬಂದು ಗೋ+ಚ್+ಆ=ಗೋಚಾ ಎಂದಾಗುತ್ತದೆ.

ಇದೇ ರೀತಿಯಲ್ಲಿ ಅಜಾದಿ ಸುಪ್ ಪ್ರತ್ಯಯಗಳು ಪರದಲ್ಲಿದಾಗ ಗೋಚೇ ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

ಉದಾ–ಗವಾಗ್ಭ್ಯಾಮ್, ಗೋಅಗ್ಭ್ಯಾಮ್,ಗೋಽಗ್ಭ್ಯಾಮ್– ತೃತೀಯಾ ವಿಭಕ್ತಿ ದ್ವಿವಚನದಲ್ಲಿ 'ಭ'ಸಂಜ್ಞಾ ಇಲ್ಲದೇಯಿರುವುದರಿಂದ' ಅಚಃ(6–4–138) ಸೂತ್ರದಿಂದ 'ಅ' ಕಾರದ ಲೋಪವು ಆಗುವುದಿಲ್ಲ. "ಸ್ವಾದಿಷ್ವಸರ್ವನಾಮಸ್ಥಾನೇ (1–4–17)"

ಸೂತ್ರದಿಂದ 'ಪದಸಂಜ್ಞೆಯು' ಆಗಿಯೇ ಆಗುತ್ತದೆ. ಆದ್ದರಿಂದ ಗೋ+ಅಚ್+ಭ್ಯಾಮ್ ಎಂದಿದ್ದಾಗ, 'ಚ್' ಕಾರಕ್ಕೆ "ಚೋಃ ಕುಃ(8–2–30)" ಸೂತ್ರದಿಂದ ಕುತ್ವ(ಕ್) ಕಾರ ಆದೇಶವಾಗಿ ಬರುತ್ತದೆ. ಮತ್ತು "ಝಲಾಂ ಜಶೋऽನ್ತೇ(8–2–36)" ಸೂತ್ರದಿಂದ ಆ 'ಕ್'ಕಾರಕ್ಕೆ ಜಶ್ತ್ವ(ಗ್) ಕಾರವು ಆದೇಶವಾಗಿ ಬಂದು ಗೋ+ಅಗ್+ಭ್ಯಾಮ್ ಎಂದಾಗುತ್ತದೆ. ತದನಂತರ ಮೂರು ಸಂಧಿಗಳಿಂದ ಮೂರು ರೂಪಗಳಾಗುತ್ತವೆ. 1. ಅವಙ್ ಆದೇಶ ಬಂದಾಗ, ಗವ+ಅಗ್+ಭ್ಯಾಮ್ ಎಂದಿದ್ದಾಗ, 'ಸವರ್ಣ ದೀರ್ಘದಿಂದ' ಗವಾಗ್ಭ್ಯಾಮ್ ಎಂದು ರೂಪವಾಗುತ್ತದೆ. 2. ಪ್ರಕೃತಿಭಾವ ಬಂದಾಗ, ಗೋ+ಅಗ್ಭ್ಯಾಮ್=ಗೋಅಗ್ಭ್ಯಾಮ್ ಎಂದು ರೂಪವಾಗುತ್ತದೆ. 3. ಗೋ+ಅಗ್ಭ್ಯಾಮ್ ಎಂದಿದ್ದಾಗ, 'ಪೂರ್ವರೂಪ' ಬಂದು, ಗೋऽಗ್ಭ್ಯಾಮ್ ಎಂದು ರೂಪವಾಗುತ್ತದೆ. ಹೀಗೆ ತೃತೀಯಾ ವಿಭಕ್ತಿ ದ್ವಿವಚನದಲ್ಲಿ ಗವಾಗ್ಭ್ಯಾಮ್, ಗೋಅಗ್ಭ್ಯಾಮ್, ಗೋऽಗ್ಭ್ಯಾಮ್ ಎಂಬ ರೂಪಗಳು ಸಿದ್ಧವಾಗುತ್ತದೆ.

ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಇದೇ ರೀತಿಯ ಪ್ರಕ್ರಿಯೆಯಿಂದ ರೂಪಗಳು ಕೆಳಗಿನ ಕೋಷ್ಟಕದಲ್ಲಿ ತೋರಿಸಿದ ರೀತಿಯಲ್ಲಿ ಇರುತ್ತವೆ.

ಉದಾ– ಗೋಚೇ, ಗೋಚಃ–ಚತುರ್ಥೀ, ಪಞ್ಚಮೀ ಏಕವಚನಗಳಲ್ಲಿ ಕ್ರಮವಾಗಿ ಗೋ+ಅಚ್+ಙೇ(ಏ) ಎಂದಿದ್ದಾಗ, ಹಿಂದಿನ ಪ್ರಕ್ರಿಯೆಯನ್ನು ಅನುಸರಿಸಿ ಗೋಚೇ ಎಂದೂ, ಹಾಗೆಯೇ ಗೋ+ಅಚ್+ಙಸಿ(ಅಸ್) ಎಂದಿದ್ದಾಗ, ಗೋಚಃ ಎಂದೂ ರೂಪಗಳು ಸಿದ್ಧವಾಗುತ್ತವೆ.

ಉದಾ– ಗವಾಗ್ಭ್ಯಾಮ್, ಗೋಅಗ್ಭ್ಯಾಮ್, ಗೋऽಗ್ಭ್ಯಾಮ್ – ಚತುರ್ಥೀ, ಪಞ್ಚಮೀ ದ್ವಿವಚನಗಳಲ್ಲಿ ಹಿಂದಿನಂತೆಯೇ ಪ್ರಕ್ರಿಯೆ ನಡೆದು ಗವಾಗ್ಭ್ಯಾಮ್, ಗೋಅಗ್ಭ್ಯಾಮ್, ಗೋऽಗ್ಭ್ಯಾಮ್ ಎಂಬ ರೂಪಗಳು ಸಿದ್ಧವಾಗುತ್ತವೆ.

ಉದಾ– ಗವಾಗ್ಭ್ಯಃ, ಗೋಅಗ್ಭ್ಯಃ ಗೋऽಗ್ಭ್ಯಃ–ಚತುರ್ಥೀ, ಪಞ್ಚಮೀ ಬಹುವಚನಗಳಲ್ಲಿ ಹಿಂದಿನಂತೆಯೇ ಪ್ರಕ್ರಿಯೆ ನಡೆದು ಗವಾಗ್ಭ್ಯಃ, ಗೋಅಗ್ಭ್ಯಃ, ಗೋऽಗ್ಭ್ಯಃ ಎಂಬ ರೂಪಗಳು ಸಿದ್ಧಿಸುತ್ತವೆ.

ಉದಾ– ಗೋಚಃ, ಗೋಚೋಃ– ಷಷ್ಠೀ ಏಕವಚನದಲ್ಲಿ ಗೋ+ಙಸ್ ಎಂದಿದ್ದಾಗ, ಹಿಂದಿನಂತೆಯೇ "ಅಚಃ" ಎಂಬ ಸೂತ್ರದಿಂದ 'ಅ' ಕಾರ ಲೋಪವಾಗಿ ಗೋಚಃ ಎಂದೂ, ದ್ವಿವಚನದಲ್ಲಿ ಗೋಚೋಃ ಎಂದೂ ಬಹುವಚನದಲ್ಲಿ ಗೋಚಾಮ್ ಎಂದೂ ರೂಪಗಳು ಸಿದ್ಧವಾಗುತ್ತವೆ.

ಉದಾ– ಗೋಚಿ, ಗೋಚೋಃ–ಸಪ್ತಮೀ ಏಕ ವಚನದಲ್ಲಿ ಗೋಚಿ ಎಂದೂ ದ್ವಿವಚನದಲ್ಲಿ ಗೋಚೋಃ ಎಂದೂ ಹಿಂದಿನ ಪ್ರಕ್ರಿಯೆಯಂತೆಯೇ ರೂಪಗಳು ಸಿದ್ಧವಾಗಿವೆ.

ಉದಾ– ಗವಾಕ್ಷು,ಗೋಅಕ್ಷು,ಗೋऽಕ್ಷು –ಸಪ್ತಮೀ ಬಹುವಚನದಲ್ಲಿ ಗೋ+ಅಚ್+ ಸುಪ್(ಸು) ಎಂದಿದ್ದಾಗ, "ಝಲಾಂ ಜಶೋऽನ್ತೇ(8.2.36)" ಸೂತ್ರದಿಂದ 'ಚ್'

ಕಾರಕ್ಕೆ ಜಶ್ತ್ವ(ಜ್) ಕಾರ ಬಂದು, ಗೋ+ಅಜ್+ಸು ಎಂದಿದ್ದಾಗ, "ಖರಿ ಚ(8–4–55)" ಸೂತ್ರದಿಂದ 'ಜ್' ಕಾರಕ್ಕೆ ಚರ್ತ್ವದಿಂದ 'ಚ್' ಕಾರವು ಬಂದು, ಗೋ+ಅಚ್+ಸು ಎಂದಾಗುತ್ತದೆ. ತದನಂತರ ಆ 'ಚ್' ಕಾರಕ್ಕೆ "ಚೋಃ ಕುಃ" ಎಂಬ ಸೂತ್ರದಿಂದ 'ಕ್' ಕಾರವು ಬಂದು ಗೋ+ಅಕ್+ಸು ಎಂದಿದ್ದಾಗ, "ಆದೇಶ ಪ್ರತ್ಯಯಯೋಃ" ಎಂಬ ಸೂತ್ರದಿಂದ 'ಸು' ನಲ್ಲಿರುವ 'ಸ್' ಕಾರಕ್ಕೆ ಷತ್ವ ಬಂದು 'ಕ್' ಮತ್ತು 'ಷ್' ಕಾರಗಳು ಸೇರಿ 'ಕ್ಷ್' ಎಂದಾಗುತ್ತದೆ. ಹೀಗೆ ಗವಾಕ್ಷು, ಗೋಅಕ್ಷು, ಗೋಽಕ್ಷು ಎಂದು ಮೂರು ರೂಪಗಳಾಗುತ್ತವೆ.

ಸಮ್ಬೋಧನ ವಿಭಕ್ತಿಯಲ್ಲಿಯೂ ಎಲ್ಲ ವಚನಗಳಲ್ಲಿಯೂ ಪ್ರಥಮಾ ವಿಭಕ್ತಿಯ ರೂಪಗಳನ್ನೇ ಹೊಂದಿರುತ್ತವೆ.

**ಗತ್ಯರ್ಥದಲ್ಲಿ ಗೋಅಞ್ಚ್ ಶಬ್ದದ ರೂಪಗಳು**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಗವಾಕ್, ಗವಾಗ್ ಗೋಚೀ | ಗವಾಞ್ಚೌ ಗೋಅಕ್, ಗೋಅಗ್ | ಗೋಅಞ್ಚಃ, ಗೋಽಕ್,ಗೋಽಗ್, ಗೋಽಞ್ಚೌ |
| ದ್ವಿತೀಯಾ | ಗವಾಕ್, ಗವಾಗ್ ಗೋಚೀ | ಗವಾಞ್ಚೌ ಗೋಅಕ್, ಗೋಅಗ್ ಗೋಅಞ್ಚೌ | ಗೋಽಕ್, ಗೋಽಗ್, ಗೋಽಞ್ಚೌ |
| ತೃತೀಯಾ | ಗೋಚಾ ಗವಾಗ್ಭ್ಯಾಮ್ | ಗವಾಗ್ಭಿಃ ಗೋಅಗ್ಭ್ಯಾಮ್ | ಗೋಅಗ್ಭಿಃ, ಗೋಽಗ್ಭ್ಯಾಮ್ ಗೋಽಗ್ಭಿಃ |
| ಚತುರ್ಥೀ | ಗೋಚೇ ಗವಾಗ್ಭ್ಯಾಮ್ | ಗವಾಗ್ಭ್ಯಃ, ಗೋಅಗ್ಭ್ಯಾಮ್ | ಗೋಅಗ್ಭ್ಯಃ ಗೋಽಗ್ಭ್ಯಾಮ್, ಗೋಽಗ್ಭ್ಯಃ |
| ಪಞ್ಚಮೀ | ಗೋಚಃ, ಗವಾಗ್ಭ್ಯಾಮ್, ಗವಾಗ್ಭ್ಯಃ | ಗೋಅಗ್ಭ್ಯಾಮ್ ಗೋಅಗ್ಭ್ಯಃ | ಗೋಽಗ್ಭ್ಯಾಮ್ ಗೋಽಗ್ಭ್ಯಃ |
| ಷಷ್ಠೀ | ಗೋಚಃ | ಗೋಚೋಃ | ಗೋಚಾಮ್ |
| ಸಪ್ತಮೀ | ಗೋಚಿ,ಗೋಚೋಃ | ಗವಾಕ್ಷು | ಗೋಅಕ್ಷು, ಗೋಽಕ್ಷು |
| ಸಮ್ಬೋಧನ | ಹೇ ಗವಾಕ್, ಹೇ ಗವಾಗ್, | ಹೇ ಗೋಚೀ, ಹೇ ಗೋಅಗ್, | ಹೇಗವಾಞ್ಚಃ, ಹೇಗೋಅಞ್ಚಃ, |

ಹೇ ಗೋಅಕ್, ಹೇ ಗೋಽಗ್ ಹೇ ಗೋಽಞ್ಚಿ
ಹೇ ಗೋಽಕ್

ಸೂಚನೆ– ಮೇಲೆ ಹೇಳಿದ ರೂಪಗಳೆಲ್ಲ ಗತ್ಯರ್ಥಕ ಧಾತುವಿಗೆ ಸಂಬಂಧಿಸಿದ್ದು.

ಸೂಚನೆ– ಎರಡನೆಯ ಅರ್ಥವಾದ ಪೂಜಾರ್ಥಕ ಗೋಪೂರ್ವಕ ಅಞ್ಚ್ ಧಾತುವಿನ ರೂಪಗಳು ನಾಞ್ಚೇಃ ಪೂಜಾಯಾಮ್(6–4–30) ಸೂತ್ರದಿಂದ 'ನ್' ಕಾರದ 'ಲೋಪದ' ನಿಷೇಧವಾದ ನಂತರ ಗೋ+ಅಞ್ಚ್ ಎಂದಿರುತ್ತದೆ. ಇದಕ್ಕೆ 'ಪ್ರಾತಿಪದಿಕ–ಸಂಜ್ಞೆ' ಬಂದ ಮೇಲೆ ವಿಭಕ್ತಿ ಪ್ರತ್ಯಯಗಳನ್ನು ಸೇರಿಸಬೇಕು.

ಉದಾ–ಗವಾಙ್,ಗೋಅಙ್,ಗೋಽಙ್– ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿಗಳ ಏಕವಚನಗಳಲ್ಲಿ, ಗೋ+ಅಞ್ಚ್+ಸು (ಸ್) ಮತ್ತು ಗೋ+ಅಞ್ಚ್+ಅಮ್ ಎಂದಿದ್ದಾಗ, "ಸ್ವಮೋರ್ನಪುಂಸಕಾತ್(7–1–33)" ಸೂತ್ರದಿಂದ 'ಸು(ಸ್)' ಮತ್ತು 'ಅಮ್' ಗಳಿಗೆ ಲುಕ್ ಬಂದು "ಸಂಯೋಗಾನ್ತಸ್ಯ ಲೋಪಃ(8–2–23)" ಸೂತ್ರದಿಂದ 'ಚ್' ಕಾರಕ್ಕೆ 'ಲೋಪ' ಬರುತ್ತದೆ. 'ಸ್' ಕಾರದ ಸಂಯೋಗದಿಂದ 'ನ್' ಕಾರದ ಸ್ಥಾನದಲ್ಲಿ ಶ್ಚುತ್ವ ಬಂದು 'ಞ್' ಕಾರವಾಗಿತ್ತು. 'ಚ್' ಕಾರವು ಲೋಪವಾಗುವುದರಿಂದ, "ನಿಮಿತ್ತಾಪಾಯೇ ನೈಮಿತ್ತಿಕಸ್ಯಾಪ್ಯಪಾಯಃ' ಎಂಬ ನಿಯಮದಿಂದ 'ಞ್' ಕಾರವು 'ನ್' ಕಾರದ ರೂಪದಲ್ಲಿ ಇರುತ್ತದೆ. ಹೀಗಾಗಿ ಗೋ+ಅನ್ ಎಂದಾಗುತ್ತದೆ. "ಕ್ವಿನ್ಪ್ರತ್ಯಯಸ್ಯ ಕುಃ(8–2–62)" ಸೂತ್ರದಿಂದ 'ನ್' ಕಾರದ ಸ್ಥಾನದಲ್ಲಿ ಕುತ್ವ(ಙ್) ಬಂದು ಗೋ+ಅಙ್ ಎಂದಾಗುತ್ತದೆ. ಮೂರೂ ಸಂಧಿಗಳಿಂದ ಕ್ರಮವಾಗಿ ಅಂದರೆ 1. ಅವಙ್ ಆದೇಶ ಬಂದ ಮೇಲೆ ಸವರ್ಣದೀರ್ಘದಿಂದ, ಗವಾಙ್, ಪ್ರಕೃತಿಭಾವ ಬಂದು, ಗೋಅಙ್ ಮತ್ತು 'ಪೂರ್ವರೂಪ' ದಿಂದ ಗೋಽಙ್ ಹೀಗೆ ಗವಾಙ್, ಗೋಅಙ್, ಗೋಙ್ ಎಂಬ ಮೂರು ರೂಪಗಳು ಸಿದ್ಧವಾಗುತ್ತದೆ.

ಅಜಾದಿ ವಿಭಕ್ತಿ ಪ್ರತ್ಯಯಗಳು ಪರದಲ್ಲಿದ್ದಾಗ "ಅಚಃ(6–4–138)" ಸೂತ್ರದಿಂದ 'ಅ' ಕಾರಕ್ಕೆ ಲೋಪವಾಗುವುದಿಲ್ಲ. ಯಾಕೆಂದರೆ 'ನ್' ಕಾರಕ್ಕೆ ಲೋಪ ಬಂದ ನಂತರ ಅದು ಅನ್ವಯಿಸುತ್ತದೆ. ಇಲ್ಲಿ ಪೂಜಾರ್ಥದಲ್ಲಿ "ನಾಞ್ಚೇಃ ಪೂಜಾಯಾಮ್(6–4–30)" ಸೂತ್ರದಿಂದ 'ನ್' ಕಾರ ರೂಪವು ನಿಷೇಧಿಸಲಾಗಿದೆ.

ಉದಾ– ಗವಾಞ್ಚೀ, ಗೋಅಞ್ಚೀ, ಗೋಞ್ಚೀ– ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿಗಳ ದ್ವಿವಚನಗಳಲ್ಲಿ ಗೋ+ಅಞ್ಚ್+ಔ, ಮತ್ತು ಗೋ+ಅಞ್ಚ್+ಔಟ್ (ಔ) ಎಂದಿದ್ದಾಗ, "ನಪುಂಸಕಾಚ್ಚ(7–1–19)" ಸೂತ್ರದಿಂದ 'ಶೀ'(ಈ) ಆದೇಶವು ಬಂದು, ಗೋ+ಅಞ್ಚ್+ಈ=ಗೋ+ಅಞ್ಚೀ ಎಂದಾಗುತ್ತದೆ. ಈಗ ಹಿಂದಿನಂತೆ ಅವಙ್ ಆದೇಶ ಬಂದು, 'ಸವರ್ಣದೀರ್ಘ', 'ಪ್ರಕೃತಿಭಾವ' ಮತ್ತು 'ಪೂರ್ವರೂಪ' ಸಂಧಿಗಳಾಗಿ, ಗವಾಞ್ಚೀ, ಗೋಅಞ್ಚೀ, ಗೋಽಞ್ಚೀ ಎಂಬ ಮೂರು ರೂಪಗಳು ಸಿದ್ಧವಾಗುತ್ತವೆ.

ಉದಾ– ಗವಾಞ್ಚಿ, ಗೋಅಞ್ಚಿ, ಗೋಽಞ್ಚಿ–ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿಗಳ ಬಹುವಚನಗಳಲ್ಲಿ , ಗೋ+ಅಞ್ಚ್+ಜಸ್(ಅಸ್) ಮತ್ತು ಗೋ+ಅಞ್ಚ್+ಶಸ್(ಅಸ್) ಎಂದಿದ್ದಾಗ, 'ಅಸ್' ಗಳ ಸ್ಥಾನಗಳಲ್ಲಿ "ಜಶ್ಶಸೋಃ ಶಿಃ" ಎಂಬ ಸೂತ್ರದಿಂದ

ಶಿ(ಇ) ಆದೇಶವು ಬಂದು, ಗೋ+ಅಞ್ಚ್+ಇ ಎಂದಿದ್ದಾಗ, 'ನ್' ಕಾರಕ್ಕೆ ಲೋಪ ಬಾರದೇ ಇರುವುದರಿಂದ "ಉಗಿದಚಾಂ ಸರ್ವನಾಮಸ್ಥಾನೇಽಧಾತೋಃ(7–1–70)" ಸೂತ್ರದಿಂದ 'ನುಮ್' ಆಗಮವು ಬರುವುದಿಲ್ಲ. "ನಪುಂಸಕಸ್ಯ ಝಲಚಃ(7–1–72)" ಸೂತ್ರದಿಂದಲೂ 'ನುಮ್' ಆಗಮವು ಬರುವದಿಲ್ಲ. ಯಾಕೆಂದರೆ ಈ ಸೂತ್ರದ ಅರ್ಥದ ಪ್ರಕಾರ, ಯಾವ ಝಲ್– ವರ್ಣಕ್ಕೆ ನುಮ್ ವಿಧಾನವು ಮಾಡಲಾಗಿದೆಯೋ, ಆ ಝಲ್ ವರ್ಣವು ಅಚ್ ವರ್ಣಕ್ಕಿಂತ ಪರದಲ್ಲಿರಬೇಕಾಗುತ್ತದೆ. ಆದರೆ ಇಲ್ಲಿ "ಝಲ್' ವರ್ಣವು 'ಹಲ್'ವರ್ಣಕ್ಕೆ ಪರದಲ್ಲಿದೆ. ಅಂದರೆ 'ಅಚ್' ವರ್ಣಕ್ಕೆ ಪರದಲ್ಲಿ ಇಲ್ಲ. ಆದ್ದರಿಂದ ಗೋ+ಅಞ್ಚ್+ಇ=ಗೋ ಅಞ್ಚಿ ಎಂದಾಗಿದೆ. ಮೂರು ಸಂಧಿಗಳ ನಿಯಮಗಳಿಂದ ಅಂದರೆ ಅವಙ್ ಆದೇಶವು ಬಂದು ಸವರ್ಣದೀರ್ಘ, ಪ್ರಕೃತಿಭಾವ ಮತ್ತು ಪೂರ್ವರೂಪ ಸಂಧಿಗಳಾಗಿ ಗವಾಞ್ಚಿ, ಗೋಅಞ್ಚಿ, ಗೋಽಞ್ಚಿ ಎಂಬ ರೂಪಗಳು ಸಿದ್ಧವಾಗುತ್ತವೆ.

ಉದಾ– ಗವಾಞ್ಚಾ, ಗೋಅಞ್ಚಾ, ಗೋಽಞ್ಚಾ– ತೃತೀಯಾ ವಿಭಕ್ತಿ ಏಕವಚನದಲ್ಲಿ ಗ್+ ಅಞ್ಚ್+ಟಾ (ಆ) ಎಂದಿದ್ದಾಗ, ಹಿಂದಿನಂತೆ ಮೂರು ಸಂಧಿಗಳಿಂದ ಅಂದರೆ ಅವಙ್ ಆದೇಶವು ಬಂದು ಸವರ್ಣದೀರ್ಘ, ಪ್ರಕೃತಿಭಾವ ಮತ್ತು ಪೂರ್ವರೂಪಗಳು ಬಂದು ಸಂಧಿಗಳಾಗಿ ಗವಾಞ್ಚಾ, ಗೋಅಞ್ಚಾ, ಗೋಽಞ್ಚಾ ಎಂಬ ಮೂರು ರೂಪಗಳು ಸಿದ್ಧವಾಗುತ್ತವೆ.

ಉದಾ– ಗವಾಙ್ಭ್ಯಾಮ್, ಗೋಅಙ್ಭ್ಯಾಮ್,ಗೋಽಙ್ಭ್ಯಾಮ್– ತೃತೀಯಾ,ಚತುರ್ಥೀ ಮತ್ತು ಪಞ್ಚಮೀ ವಿಭಕ್ತಿ ದ್ವಿ ವಚನಗಳಲ್ಲಿ ಗೋ+ಅಞ್ಚ್+ಭ್ಯಾಮ್ ಎಂದಿದ್ದಾಗ, 'ಚ್' ಕಾರಕ್ಕೆ "ಸಂಯೋಗಾನ್ತಸ್ಯ ಲೋಪಃ(8–2–23)" ಸೂತ್ರದಿಂದ 'ಲೋಪವಾಗಿ' 'ನಿಮಿತ್ತಾಪಾಯೇ ನೈಮಿತ್ತಿಕಸ್ಯಾಪ್ಯಪಾಯಃ' ಎಂಬ ನಿಯಮದಿಂದ 'ಞ್' ಕಾರವು 'ನ್' ಕಾರದ ರೂಪವನ್ನು ತಾಳುತ್ತದೆ. ಆಗ ಗೋ+ಅನ್+ಭ್ಯಾಮ್ ಎಂದಾಗುತ್ತದೆ. ಆಗ 'ನ್' ಕಾರಕ್ಕೆ "ಕ್ವಿನ್ಪ್ರತ್ಯಯಸ್ಯ ಕುಃ(8–2–62)" ಸೂತ್ರದಿಂದ ಕುತ್ವ(ಙ್) ಬಂದು, 'ಙ್' ಕಾರ ಆಗಿ ಗೋ+ಅಙ್ಭ್ಯಾಮ್ ಎಂದಿರುತ್ತದೆ. ಆಗ ಮೂರು ಸಂಧಿಗಳಿಂದ ಅಂದರೆ 1. ಅವಙ್ ಆದೇಶವು ಬಂದು ಸವರ್ಣದೀರ್ಘ, 2. ಪ್ರಕೃತಿಭಾವ ಮತ್ತು 3. ಪೂರ್ವರೂಪ ಸಂಧಿಗಳಿಂದ ಗವಾಙ್ಭ್ಯಾಮ್, ಗೋಅಙ್ಭ್ಯಾಮ್, ಗೋಽಙ್ಭ್ಯಾಮ್ ಎಂಬ ರೂಪಗಳು ಸಿದ್ಧವಾಗುತ್ತವೆ.

ಇದೇ ತರಹ ತೃತೀಯಾ ವಿಭಕ್ತಿ ಬಹುವಚನದಲ್ಲಿಯೂ ಭಿಸ್ ಪ್ರತ್ಯಯವನ್ನು ಸೇರಿಸಿದಾಗ ಗವಾಙ್ಭಿಃ, ಗೋಅಙ್ಭಿಃ, ಗೋಽಙ್ಭಿಃ ಎಂಬ ಮೂರು ರೂಪಗಳು ಸಿದ್ಧವಾಗುತ್ತವೆ.

ಉದಾ– ಚತುರ್ಥೀ, ಪಞ್ಚಮೀ ವಿಭಕ್ತಿ ಏಕವಚನಗಳಲ್ಲಿ, ಅಜಾದಿ ಪ್ರತ್ಯಯಗಳು ಪರದಲ್ಲಿರೋಣದರಿಂದ, ತೃತೀಯಾ ವಿಭಕ್ತಿ ಏಕವಚನದ ಪ್ರಕ್ರಿಯೆಯನ್ನು ಅನುಸರಿಸುತ್ತವೆ. ಅಂದರೆ ಚತುರ್ಥೀ ಏಕವಚನದಲ್ಲಿ ಗವಾಞ್ಚೇ, ಗೋಅಞ್ಚೇ ಮತ್ತು ಗೋಽಞ್ಚೇ ಎಂಬರೂಪಗಳು ಮತ್ತು ಪಞ್ಚಮೀ ಏಕವಚನದಲ್ಲಿ ಗವಾಞ್ಚಃ,

ಗೋಅಞ್ಚಃ ಮತ್ತು ಗೋऽಞ್ಚಃ ಎಂಬ ರೂಪಗಳನ್ನು ಪಡೆಯುತ್ತವೆ.

ಉದಾ– ಚತುರ್ಥೀ ಮತ್ತು ಪಞ್ಚಮೀ ಬಹುವಚನಗಳಲ್ಲಿ ಹಲಾದಿ ಪ್ರತ್ಯಯವಾದ 'ಭ್ಯಸ್' ಪರದಲ್ಲಿರುವದರಿಂದ ಹಿಂದಿನಂತೆ ಪ್ರಕ್ರಿಯೆಯನ್ನು ಅನುಸರಿಸಿದಮೇಲೆ ಗೋ+ಅಞ್ಚ್+ಭ್ಯಸ್ ಎಂದಿದ್ದಾಗ, ಹಿಂದೆ ಹೇಳಿದ ಹಲಾದಿ ಪ್ರತ್ಯಯಗಳು ಪರದಲ್ಲಿದ್ದಾಗ ಹೇಳಿದ ನಿಯಮಗಳನ್ನನುಸರಿಸಿ ಗೋ+ಅಜ್+ಭ್ಯಸ್ ಎಂದಾಗಿ, 'ಸ್' ಕಾರಕ್ಕೆ ರುತ್ವ–ವಿಸರ್ಗಗಳು ಬಂದು ಹಿಂದಿನಂತೆ ಮೂರು ಸಂಧಿಗಳಿಂದ ಗವಾಙ್ಭ್ಯಃ, ಗೋಅಙ್ಭ್ಯಃ ಮತ್ತು ಗೋऽಙ್ಭ್ಯಃ ಎಂದು ಮೂರು ಮೂರು ರೂಪಗಳಾಗುತ್ತವೆ.

ಇದೇ ರೀತಿಯಲ್ಲಿ ಷಷ್ಠೀ ವಿಭಕ್ತಿಯ ಎಲ್ಲ ವಚನಗಳಲ್ಲೂ ಙಸ್(ಅಸ್) , ಓಸ್, ಆಮ್ ಪ್ರತ್ಯಯಗಳು ಪರದಲ್ಲಿದ್ದಾಗ, ಮೇಲಿನ ಪ್ರಕ್ರಿಯೆಗಳನ್ನೇ ಅನುಸರಿಸಿ ಕೆಳಗಿನ ಕೋಷ್ಟಕದಲ್ಲಿ ಕೊಟ್ಟಿರುವ ರೂಪಗಳನ್ನು ಪಡೆಯುತ್ತವೆ.

ಸೂಚನೆ– ಸಪ್ತಮೀ, ಏಕವಚನ, ದ್ವಿ ವಚನಗಳಲ್ಲಿ 'ಙಿ' 'ಓಸ್' ಪ್ರತ್ಯಯಗಳು(ಅಜಾದಿ) ಪರದಲ್ಲಿದ್ದಾಗ, ಹಿಂದಿನ ಪ್ರಕ್ರಿಯೆಯನ್ನೇ ಅನುಸರಿಸಿ ಕೆಳಗಿನ ಕೋಷ್ಟಕದಲ್ಲಿ ಕೊಟ್ಟಿರುವ ರೂಪಗಳನ್ನು ಪಡೆಯುತ್ತವೆ.

ಉದಾ–ಸಪ್ತಮೀ ವಿಭಕ್ತೀ ಬಹುವಚನದಲ್ಲಿ, ಗೋ+ಅಞ್ಚ್+ಸುಪ್(ಸ್) ಎಂದಿದ್ದಾಗ, 'ಙ್' ಕಾರ ಬರುವವರೆಗಿನ ಪ್ರಕ್ರಿಯೆಯ ನಂತರ 'ಙ್' ಕಾರಕ್ಕೆ 'ಸುಪ್(ಸು)' ಪರದಲ್ಲಿದ್ದಾಗ **"ಙ್ಣೋಃ ಕುಕ್ಟುಕ್ ಶರಿ"** ಎಂಬ ಸೂತ್ರದಿಂದ 'ಙ್' ಕಾರಕ್ಕೆ ವೈಕಲ್ಪಿಕ ವಾಗಿ ಕುಕ್(ಕ್) ಆಗಮ ಬಂದು **"ಚಯೋ ದ್ವಿತೀಯಾಃ ಶರಿ ಪೌಷ್ಕರಸಾದೇರಿತಿ ವಾಚ್ಯಮ್"** ಎಂಬ ವಾರ್ತಿಕದಿಂದ 'ಕ್' ಕಾರದ ಸ್ಥಾನದಲ್ಲಿ ವೈಕಲ್ಪಿಕ ದ್ವಿತೀಯ ವರ್ಣವಾದ 'ಖ್' ಕಾರ ಆದೇಶವಾಗಿ ಬಂದು ಅವಙ್ಗಾದೇಶ ಪಕ್ಷದಲ್ಲಿ ಗವಾಙ್ಖ್ಷು, ಎಂದು ರೂಪವು ಸಿದ್ಧವಾಗುತ್ತದೆ.

ದ್ವಿತೀಯ ವರ್ಣ ಬಾರದ ಪಕ್ಷದಲ್ಲಿ 'ಕ್' 'ಷ್' ಗಳು ಸೇರಿ 'ಕ್ಷ' ಎಂದಾಗಿ ಗವಾಙ್ಕ್ಷು ಎಂದು ರೂಪವಾಗುತ್ತದೆ (ಇಲ್ಲಿ 'ಸ್' ಕಾರಕ್ಕೆ 'ಷ್' ಕಾರವು **"ಆದೇಶಪ್ರತ್ಯಯಯೋಃ"** ಎಂಬ ಸೂತ್ರದಿಂದ ಬಂದಿದೆ). ಮೂರನೆಯ ರೂಪದಲ್ಲಿಯೂ 'ಸ್' ಕಾರಕ್ಕೆ 'ಷತ್ವ ಮಾತ್ರ ಬಂದು, ಗವಾಙ್ಷು ಎಂದು ರೂಪವಾಗಿದೆ. ಈ ಮೂರು ರೂಪಗಳು 'ಅವಙ್' ಆದೇಶದಿಂದ ಬಂದ ಸವರ್ಣದೀರ್ಘದ ರೂಪಗಳು. ಈ ಮೂರು ರೂಪಗಳು ಮೊದಲನೆಯ ಪ್ರಭೇದಕ್ಕೆ ಸೇರಿದ್ದು.

ಎರಡನೇ ಪ್ರಭೇದದಲ್ಲಿ ಪ್ರಕೃತಿಭಾವ ಇರುತ್ತದೆ ಉಳಿದ ಪ್ರಕ್ರಿಯೆಗಳೆಲ್ಲ ಮೊದಲನೇ ಪ್ರಭೇದಕ್ಕೆ ಸೇರಿದವುಗಳಾಗಿವೆ.

ಮೂರನೆಯ ಪ್ರಭೇದವಾದ 'ಪೂರ್ವರೂಪಸಂಧಿಗೆ' ಸೇರಿದ ಮೂರು ರೂಪಗಳು ಕೆಳಗಿನ ಕೋಷ್ಟಕದಲ್ಲಿ ಕೊಟ್ಟಂತೆ ಇರುತ್ತವೆ.

ಉಳಿದ ಪ್ರಕ್ರಿಯೆಗಳೆಲ್ಲ ಮೊದಲೆರಡು ಪ್ರಭೇದಗಳಲ್ಲಿದ್ದಂತೆಯೇ ಇರುತ್ತದೆ.

**ಪೂಜಾರ್ಥದಲ್ಲಿ ಗೋಅಞ್ಚ್ ಶಬ್ದದ ರೂಪಗಳು**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಗವಾಙ್ | ಗವಾಞ್ಚೌ | ಗವಾಞ್ಚಃ |
| | ಗೋಅಙ್ | ಗೋಅಞ್ಚೌ | ಗೋಅಞ್ಚಃ |
| | ಗೋಽಙ್ | ಗೋಽಞ್ಚೌ | ಗೋಽಞ್ಚಃ |
| ದ್ವಿತೀಯ | ಗವಾಙ್ | ಗವಾಞ್ಚೌ | ಗವಾಞ್ಚಃ |
| | ಗೋಅಙ್ | ಗೋಅಞ್ಚೌ | ಗೋಅಞ್ಚಃ |
| | ಗೋಽಙ್ | ಗೋಽಞ್ಚೌ | ಗೋಽಞ್ಚಃ |
| ತೃತೀಯಾ | ಗವಾಞ್ಚಾ | ಗವಾಙ್ಭ್ಯಾಮ್ | ಗವಾಙ್ಭಿಃ |
| | ಗೋಅಞ್ಚಾ | ಗೋಅಙ್ಭ್ಯಾಮ್ | ಗೋಅಙ್ಭಿಃ |
| | ಗೋಽಞ್ಚಾ | ಗೋಽಙ್ಭ್ಯಾಮ್ | ಗೋಽಙ್ಭಿಃ |
| ಚತುರ್ಥೀ | ಗವಾಞ್ಚೇ | ಗವಾಙ್ಭ್ಯಾಮ್ | ಗವಾಙ್ಭ್ಯಃ |
| | ಗೋಅಞ್ಚೇ | ಗೋಅಙ್ಭ್ಯಾಮ್ | ಗೋಅಙ್ಭ್ಯಃ |
| | ಗೋಽಞ್ಚೇ | ಗೋಽಙ್ಭ್ಯಾಮ್ | ಗೋಽಕ್ಭ್ಯಃ |
| ಪಞ್ಚಮೀ | ಗವಾಞ್ಚಃ | ಗವಾಙ್ಭ್ಯಾಮ್ | ಗವಾಙ್ಭ್ಯಃ |
| | ಗೋಅಞ್ಚಃ | ಗೋಅಙ್ಭ್ಯಾಮ್ | ಗೋಅಙ್ಭ್ಯಃ |
| | ಗೋಽಞ್ಚಃ | ಗೋಽಙ್ಭ್ಯಾಮ್ | ಗೋಽಙ್ಭ್ಯಃ |
| ಷಷ್ಠೀ | ಗವಾಞ್ಚಃ | ಗವಾಞ್ಚೋಃ | ಗವಾಞ್ಚಾಮ್ |
| | ಗೋಅಞ್ಚಃ | ಗೋಅಞ್ಚೋಃ | ಗೋಅಞ್ಚಾಮ್ |
| | ಗೋಽಞ್ಚಃ | ಗೋಽಞ್ಚೋಃ | ಗೋಽಞ್ಚಾಮ್ |
| ಸಪ್ತಮೀ | ಗವಾಞ್ಚಿ | ಗವಾಞ್ಚೋಃ, | ಗವಾಙ್ಕ್ಷು |
| | ಗೋಅಞ್ಚಿ | ಗೋಅಞ್ಚೋಃ, | ಗವಾಙ್ಕ್ಷು, |
| | ಗೋಽಞ್ಚಿ | ಗೋಽಞ್ಚೋಃ, | ಗವಾಙ್ಷು |
| | ಗೋಅಙ್ಖ್ಷು | ಗೋಅಙ್ಕ್ಷು, | ಗೋಅಙ್ಷು |
| | ಗೋಽಙ್ಖ್ಷು | ಗೋಽಙ್ಕ್ಷು, | ಗೋಽಙ್ಷು |
| ಸಮ್ಬೋಧನ | ಹೇ ಗವಾಙ್! | ಹೇ ಗವಾಞ್ಚೌ! | ಹೇ ಗವಾಞ್ಚಃ ! |
| | ಹೇ ಗೋಅಙ್! | ಹೇಗೋಅಞ್ಚೌ | ಹೇಗೋಅಞ್ಚಃ! |
| | ಹೇ ಗೋಽಙ್ ! | ಹೇ ಗೋಽಞ್ಚೌ! | ಹೇ ಗೋಽಞ್ಚಃ! |

**'ಚ್' ಕಾರಾಂತ ಶಬ್ದಗಳು ಇಲ್ಲಿಗೆ ಮುಗಿದವು**

**ಇನ್ನು ಸರ್ವನಾಮಸಂಜ್ಞೆ ಅಲ್ಲದ 'ತ್' ಕಾರಾಂತ ಶಬ್ದಗಳು ಆರಂಭವಾಗುತ್ತವೆ.**

ಉದಾ–ಶಕೃದ್,ಶಕೃತ್–(ಮಲ)– ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ಏಕವಚನಗಳಲ್ಲಿ, ಶಕೃತ್+ಸು(ಸ್) ಮತ್ತು ಶಕೃತ್+ಅಮ್ ಎಂದಿದ್ದಾಗ, "ಸ್ವಮೋರ್ನಪುಂಸಕಾತ್" ಎಂಬ ಸೂತ್ರದಿಂದ 'ಸು' ಮತ್ತು 'ಅಮ್' ಗಳಿಗೆ ಲೋಪ ಬಂದು, 'ಶಕೃತ್' ಎಂದಿದ್ದಾಗ, 'ತ್' ಕಾರಕ್ಕೆ "ಝಲಾಮ್ ಜಶೋಽನ್ತೇ" ಎಂಬ ಸೂತ್ರದಿಂದ 'ದ್' ಕಾರ ಬಂದು, ಶಕೃದ್ ಎಂದಿದ್ದಾಗ, "ಖರಿ ಚ" ಎಂಬ ಸೂತ್ರದಿಂದ 'ದ್' ಕಾರಕ್ಕೆ 'ತ್' ಕಾರ ಬಂದು, ಶಕೃತ್ ಮತ್ತು ಶಕೃದ್ ಎಂದು ಎರಡು ರೂಪಗಳಾಗುತ್ತವೆ.

ಉದಾ– ಶಕೃತೀ– ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ದ್ವಿವಚನಗಳಲ್ಲಿ, ಶಕೃತ್+ಔ ಮತ್ತು ಶಕೃತ್+ಔಟ್(ಔ) ಎಂದಿದ್ದಾಗ, "ನಪುಂಸಕಾಚ್ಚ(7–1–19)" ಸೂತ್ರದಿಂದ 'ಔ' ಗೆ 'ಶೀ'(ಈ) ಬಂದು, ಶಕೃತ್+ಈ=ಶಕೃತೀ ಎಂದು ರೂಪವಾಗುತ್ತದೆ.

ಉದಾ– ಶಕೃನ್ತಿ–ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ಬಹುವಚನಗಳಲ್ಲಿ ಶಕೃತ್ +ಜಸ್(ಅಸ್) ಮತ್ತು ಶಕೃತ್+ಶಸ್(ಅಸ್) ಎಂದಿದ್ದಾಗ, "ಜಶ್ಶಸೋಃ ಶಿಃ" ಎಂಬ ಸೂತ್ರದಿಂದ 'ಅಸ್' ಗಳಿಗೆ 'ಇ' ಆದೇಶ ಬಂದು, ಶಕೃತ್+ಇ ಎಂದಿದ್ದಾಗ, "ನಪುಂಸಕಸ್ಯ ಝಲಚಃ" ಎಂಬ ಸೂತ್ರದಿಂದ 'ನುಮ್' ಆಗಮವು ಅಂತ್ಯ 'ಅಚ್' ನ ನಂತರ ಬಂದು, ಶಕೃ+ನ್+ತಿ=ಶಕೃನ್ತಿ ಎಂದು ರೂಪವಾಗುತ್ತದೆ.

ತೃತೀಯಾದಿ ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಯಾವ ವಿಕಾರವೂ ಇಲ್ಲದೆ ಕೇವಲ ವರ್ಣ ಜೋಡಣೆಯಿಂದ ಶಕೃತಾ ಇತ್ಯಾದಿ ರೂಪಗಳಾಗುತ್ತವೆ.

ಇನ್ನು 'ತ್' ಕಾರಕ್ಕೆ "ಝಲಾಮ್ ಜಶೋಽನ್ತೇ" ಎಂಬ ಸೂತ್ರದಿಂದ 'ದ್' ಕಾರ ಬಂದು ಶಕೃದ್ ಎಂದಿದ್ದಾಗ, ಇದಕ್ಕೆ ಪರದಲ್ಲಿ ಹಲಾದಿ ಪ್ರತ್ಯಯಗಳು ಇದ್ದಾಗ, ಶಕೃದ್ಭ್ಯಾಮ್ ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

**'ತ್' ಕಾರಾನ್ತ 'ಶಕೃತ್' ಶಬ್ದದ ರೂಪಗಳು**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಶಕೃತ್,ಶಕೃದ್ | ಶಕೃತೀ | ಶಕೃನ್ತಿ |
| ದ್ವಿತೀಯ | ಶಕೃತ್,ಶಕೃದ್ | ಶಕೃತೀ | ಶಕೃನ್ತಿ |
| ತೃತೀಯ | ಶಕೃತಾ | ಶಕೃದ್ಭ್ಯಾಮ್ | ಶಕೃದ್ಭಿಃ |
| ಚತುರ್ಥೀ | ಶಕೃತೇ | ಶಕೃದ್ಭ್ಯಾಮ್ | ಶಕೃದ್ಭ್ಯಃ |
| ಪಞ್ಚಮೀ | ಶಕೃತಃ | ಶಕೃದ್ಭ್ಯಾಮ್ | ಶಕೃದ್ಭ್ಯಃ |
| ಷಷ್ಠೀ | ಶಕೃತಃ | ಶಕೃತೋಃ | ಶಕೃತಾಮ್ |
| ಸಪ್ತಮೀ | ಶಕೃತಿ | ಶಕೃತೋಃ | ಶಕೃತ್ಸು |
| ಸಮ್ಬೋಧನ | ಹೇ ಶಕೃತ್!, ಹೇ ಶಕೃದ್! | ಹೇ ಶಕೃತೀ! | ಹೇ ಶಕೃನ್ತಿ! |

ಸೂಚನೆ– 'ತ್' ಕಾಕಾರಾನ್ತ 'ಯಕೃತ್' ಶಬ್ದವು ಇದೇ ರೀತಿಯಲ್ಲಿ ರೂಪಗಳನ್ನು ಪಡೆಯುತ್ತದೆ.

ಉದಾ– ದದತ್,ದದದ್(ದಾನಿಯ ಕುಲ)– ಡು–ದಾಞ್ ಎಂಬಲ್ಲಿರುವ 'ದಾ' ಧಾತುವಿನಮೇಲೆ 'ಶತೃ(ಅತ್)'ಪ್ರತ್ಯಯವನ್ನು ಸೇರಿಸಿ ದಾ+ಅತ್ ಎಂದಿದ್ದಾಗ, "ಕರ್ತರಿ ಶಪ್" ಎಂಬ ಸೂತ್ರದಿಂದ ಬಂದ 'ಶಪ್(ಅ)' ಪ್ರತ್ಯಯವನ್ನು ಬಾಧಿಸಿ,'ಶ್ಲು ಗೆ (ಲೋಪ)' ಬಂದು, ಧಾತುವಿಗೆ ದ್ವಿತ್ವ ಬಂದು, ದಾದಾ+ಅತ್ ಎಂದಿದ್ದಾಗ, ಅಭ್ಯಾಸಕ್ಕೆ ಹ್ರಸ್ವ ಬಂದಮೇಲೆ, 'ದಾ' ನಲ್ಲಿರುವ 'ಆ' ಕಾರಕ್ಕೆ ಲೋಪ ಬಂದು, ದದತ್ ಎಂದು ರೂಪವಾಗುತ್ತದೆ. ಇದಕ್ಕೆ 'ಪ್ರಾತಿಪದಿಕಸಂಜ್ಞೆ' ಬಂದಮೇಲೆ, ಪ್ರಥಮಾ ಮತ್ತು ದ್ವಿತೀಯಾವಿಭಕ್ತಿ ಏಕವಚನಗಳಲ್ಲಿ 'ಸು' ಸೇರಿಸಿ ದದತ್+ಸು ಮತ್ತು ದದತ್+ಅಮ್ ಎಂದಿದ್ದಾಗ, 'ಸು' ಮತ್ತು 'ಅಮ್' ಗಳಿಗೆ ಲುಕ್(ಲೋಪ) ಬಂದು, ದದತ್ ಎಂದು ರೂಪವಾದಾಗ, 'ತ್' ಕಾರಕ್ಕೆ ಜಶ್ತ್ವ(ದ್) ದದದ್ ಎಂದಾಗಿ ಮತ್ತೆ 'ದ್' ಕಾರಕ್ಕೆ ವೈಕಲ್ಪಿಕ ಚರ್ತ್ವದಿಂದ 'ತ್' ಬಂದು, ದದತ್ ಎಂದು ರೂಪವಾಗುತ್ತದೆ. ಹೀಗೆ ದದತ್, ಮತ್ತು ದದದ್ ಎರಡು ರೂಪಗಳು ಸಿದ್ಧವಾಗುತ್ತವೆ.

ಉದಾ– ದದತೀ ಪ್ರಥಮಾ ಮತ್ತು ದ್ವಿತೀಯಾವಿಭಕ್ತಿ ದ್ವಿವಚನಗಳಲ್ಲಿ ದದತ್+ಔ ಎಂದಿದ್ದಾಗ, "ನಪುಂಸಕಾಚ್ಚ(7–1–19)" ಸೂತ್ರದಿಂದ 'ಔ' ಗೆ 'ಶೀ'(ಈ) ಬಂದು, ದದತ್+ಈ=ದದತೀ ಎಂದು ರೂಪವಾಗುತ್ತದೆ.

**(ವೈಕಲ್ಪಿಕವಾಗಿ'ನುಮ್'ಆಗಮವನ್ನು ವಿಧಿಸುವ ಸೂತ್ರ).**

**ಸೂತ್ರ – 365. ವಾ ನಪುಂಸಕಸ್ಯ (7.1.79)**

ವೃತ್ತಿಃ–ಅಭ್ಯಸ್ತಾತ್ ಪರಃ ೦ಯಃ ಶತಾ ತದಂತಸ್ಯ ಕ್ಲೀಬಸ್ಯ ವಾ ನುಮ್ ಸರ್ವನಾಮಸ್ಥಾನೇ। ದದ ನ್ತಿ। ದದತಿ। ತುದತ್।

ಅ.ವ್ಯ.– "ನಾಭ್ಯಸ್ತಾಚ್ಛತುಃ(7–1–78)" ಸೂತ್ರದಿಂದ 'ಶತುಃ', "ಇದಿತೋ ನುಮ್‌ಧಾತೋಃ(7–1–58)" ಸೂತ್ರದಿಂದ 'ನುಮ್' ಮತ್ತು "ಉಗಿದಚಾಂ ಸರ್ವನಾಮಸ್ಥಾನೇಽಧಾತೋಃ(7–1–70)" ಸೂತ್ರದಿಂದ 'ಸರ್ವನಾಮಸ್ಥಾನೇ' ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ–'ಅಭ್ಯಸ್ತ' ಸಂಜ್ಞೆಯುಳ್ಳ ಶಬ್ದದ ಪರದಲ್ಲಿರುವ ಶತೃ–ಪ್ರತ್ಯಯಾನ್ತ ನಪುಂಸಕಲಿಙ್ಗ–ಶಬ್ದಕ್ಕೆ ಸರ್ವನಾಮಸ್ಥಾನವು ಪರದಲ್ಲಿದ್ದಾಗ, ವಿಕಲ್ಪವಾಗಿ ನುಮ್(ನ್) ಆಗಮವು ಬರುತ್ತದೆ.

"ನಪುಂಸಕಸ್ಯಝಲಚಃ(7–1–72)" ಸೂತ್ರದಿಂದ ಪ್ರಾಪ್ತವಾದ ನುಮ್ ಆಗಮಕ್ಕೆ "ನಾಭ್ಯಸ್ತಾಚ್ಛತುಃ(7–1–78)" ಸೂತ್ರದಿಂದ ನಿಷೇಧವು ಬರುತ್ತದೆ. ಆದನ್ನು ವಿಕಲ್ಪ ಮಾಡುವುದಕ್ಕಾಗಿ ಈ ಸೂತ್ರವು ಪ್ರವೃತ್ತವಾಗಿದೆ.

ಉದಾ– ದದನ್ತಿ–ದದತಿ– ದದತ್ ಪ್ರಥಮಾ ಮತ್ತು ದ್ವಿತೀಯಾ ಬಹುವಚನಗಳಲ್ಲಿ, ದದತ್+ಜಸ್(ಅಸ್) ಮತ್ತು ದದತ್+ಶಸ್(ಅಸ್) ಎಂದಿದ್ದಾಗ, 'ಜಶ್ಶಸೋಃ ಶಿಃ'

ಎಂಬ ಸೂತ್ರದಿಂದ 'ಶಿ' ಆದೇಶಗಳು ಬಂದು, ದದತ್+ಇ ಎಂದಿದ್ದಾಗ, 'ಸರ್ವನಾಮ ಸ್ಥಾನ' ಸಂಜ್ಞೆ ಬಂದು, "ನಪುಂಸಕಸ್ಯ ಝಲಚಃ(7–1–72)" ಸೂತ್ರದಿಂದ ನುಮ್(ನ್) ಆಗಮವು ಪ್ರಾಪ್ತವಾಗಿ ಅದಕ್ಕೆ "ಉಭೇಅಭ್ಯಸ್ತಮ್(6–1–5)" ಸೂತ್ರದಿಂದ 'ಅಭ್ಯಸ್ತಸಂಜ್ಞೆಯು' ಬಂದು, "ನಾಭ್ಯಸ್ತಾಚ್ಛತುಃ(7–1–78)" ಸೂತ್ರದಿಂದ ಅದು ನಿಷೇಧವಾದಮೇಲೆ, "ವಾ ನಪುಂಸಕಸ್ಯ" ಸೂತ್ರದಿಂದ, ವೈಕಲ್ಪಿಕವಾಗಿ ನುಮ್(ನ್) ಆಗಮವು ಬಂದು, ದದನ್ತ್+ಇ ಎಂದಿದ್ದಾಗ, 'ನ್' ಕಾರಕ್ಕೆ ಅನುಸ್ವಾರ ಬಂದು, ದದನ್ತಿತ್+ಇ ಎಂದಿದ್ದಾಗ, 'ಪರಸವರ್ಣ' ಬಂದು, ದದನ್ತ್+ಇ=ದದನ್ತಿ ಎಂದೇ ಆಗುತ್ತದೆ. 'ನುಮ್' ಆಗಮವು ಬಾರದ ಪಕ್ಷದಲ್ಲಿ ದದತಿ ಎಂಬ ರೂಪವಿರುತ್ತದೆ.

ತೃತೀಯಾದಿ ವಿಭಕ್ತಿಗಳಲ್ಲಿ ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ ಯಾವ ವಿಕಾರವೂ ಆಗದೇ, ಕೇವಲ ಅಕ್ಷರ ಜೋಡಣೆ ಯಿಂದ ದದತಾ ಇತ್ಯಾದಿ ರೂಪಗಳು ಆಗುತ್ತವೆ.

ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, ತ್ ಕಾರಕ್ಕೆ ಜಶ್ತ್ವ ಬಂದು, 'ದ್' ಕಾರವಾಗುತ್ತದೆ. ಸುಪ್ ಪ್ರತ್ಯಯವು ಪರದಲ್ಲಿದ್ದಾಗ, ದದದ್ಭ್ಯಾಮ್ ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

**'ತ್' ಕಾರಾನ್ತ ದದತ್ ಶಬ್ದದ ರೂಪಗಳು**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ದದತ್, ದದದ್ | ದದತೀ | ದದನ್ತಿ,ದದತಿ |
| ದ್ವಿತೀಯ | ದದತ್, ದದದ್ | ದದತೀ | ದದನ್ತಿ,ದದತಿ |
| ತೃತೀಯ | ದದತಾ | ದದದ್ಭ್ಯಾಮ್ | ದದದ್ಭಿಃ |
| ಚತುರ್ಥೀ | ದದತೇ | ದದದ್ಭ್ಯಾಮ್ | ದದದ್ಭ್ಯಃ |
| ಪಞ್ಚಮೀ | ದದತಃ | ದದದ್ಭ್ಯಾಮ್ | ದದದ್ಭ್ಯಃ |
| ಷಷ್ಠೀ | ದದತಃ | ದದತೋಃ | ದದತಾಮ್ |
| ಸಪ್ತಮೀ | ದದತಿ | ದದತೋಃ | ದದತ್ಸು |
| ಸಮ್ಬೋಧನ | ಹೇ ದದತ್, ಹೇದದದ್! | ಹೇ ದದತೀ! | ಹೇದದನ್ತಿ!, ಹೇ ದದತಿ! |

ಉದಾ– ತುದತ್, ತುದದ್– (ದುಃಖವನ್ನುಕೊಡುವಂತಹ ಕುಲ.) 'ತುದ್' ಧಾತುವಿನ ನಂತರ ಶತೃ(ಅತ್) ಪ್ರತ್ಯಯವು ಬಂದು, ತುದತ್ ಎಂದಾಗುತ್ತದೆ.

ಉದಾ –ಪ್ರಥಮಾ ಮತ್ತು ದ್ವಿತೀಯಾ ಏಕವಚನಗಳಲ್ಲಿ ತುದತ್+ಸು(ಸ್) ಮತ್ತು ತುದತ್+ಅಮ್ ಎಂದಿದ್ದಾಗ, "ಸ್ವಮೋರ್ನಪುಂಸಕಾತ್(7–1–33)" ಸೂತ್ರದಿಂದ ಆ 'ಸು' ಮತ್ತು 'ಅಮ್' ಗಳಿಗೆ 'ಲುಕ್' ಬಂದು, ತುದತ್ ಎಂದಿರುತ್ತದೆ. ಅಂತ್ಯ 'ತ್' ಕಾರಕ್ಕೆ ಜಶ್ತ್ವ ಬಂದು ತುದದ್ ಎಂದಾದಮೇಲೆ, ವೈಕಲ್ಪಿಕ ಚರ್ತ್ವ ಬಂದು, ತುದತ್ ಮತ್ತು ತುದದ್ ಎಂದು ಎರಡು ರೂಪಗಳಾಗುತ್ತವೆ.

(ವೈಕಲ್ಪಿಕವಾಗಿ'ನುಮ್'ಆಗಮವನ್ನು ವಿಧಿಸುವ ಸೂತ್ರ).

**ಸೂತ್ರ - 366. ಆಚ್ಛೀನದ್ಯೋರ್ನುಮ್( 7.1.80)**

ವೃತ್ತಿಃ-ಅವರ್ಣಾಂತಾತ್ ಅಙ್ಗಾತ್ ಪರಃ 0ಯಃ ಶತುಃ ಅವ0ಯವಃ ತದಂತಸ್ಯ ನುಮ್ ವಾ ಶೀನದ್ಯೋಃ। ತುದಂತೀ। ತುದತೀ। ತುದಂತಿ।

ಪ.ಛೇ.- ಆತ್, ಶೀನದ್ಯೋಃ, ನುಮ್।

ಅ.ವ್ಯ.- "ನಾಭ್ಯಸ್ತಾಚ್ಛತುಃ(7–1–87)" ಸೂತ್ರದಿಂದ 'ಶತುಃ' ಎಂಬ ಪದವು ಮತ್ತು "ವಾ ನಪುಂಸಕಸ್ಯ(7–1–79)" ಸೂತ್ರದಿಂದ 'ವಾ'ಎಂಬ ಪದವು ಅನುವೃತ್ತವಾಗುತ್ತವೆ. "ಅಙ್ಗಸ್ಯ(6–4–1)" ಎಂಬುದು ಅಧಿಕಾರ ಸೂತ್ರವಾಗಿದೆ.

ಅರ್ಥ–'ಅ' ವರ್ಣಾನ್ತ ಅಂಗದ ಪರದಲ್ಲಿರುವ 'ಶತೃ' ಪ್ರತ್ಯಯದ ಅವಯವಾಂಗಕ್ಕೆ ವಿಕಲ್ಪವಾಗಿ 'ನುಮ್' ಆಗಮವು ಬರುತ್ತದೆ. 'ಶೀ' ಅಥವಾ 'ನದೀ' ಸಂಜ್ಞೆವುಳ್ಳ ಪ್ರತ್ಯಯಗಳು ಪರದಲ್ಲಿದ್ದಾಗ – ಉದಾ– ತುದನ್ತೀ, ತುದತೀ– ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ದ್ವಿ–ವಚನಗಳಲ್ಲಿ, ತುದತ್+ಔ ಮತ್ತು ತುದತ್+ಔಟ್(ಔ) ಎಂದಿದ್ದಾಗ, "ನಪುಂಸಕಾಚ್ಚ(7–1–19)" ಸೂತ್ರದಿಂದ, 'ಔ' ಗೆ 'ಶೀ'(ಈ) ಆದೇಶವು ಬಂದು, ತುದತ್+ಶೀ(ಈ) ಎಂದಾಗುತ್ತದೆ. ಪ್ರಕೃತ ಸೂತ್ರದಿಂದ 'ಶೀ' ನಲ್ಲಿರುವ 'ಈ' ಕಾರವು ಪರದಲ್ಲಿದ್ದಾಗ, ವೈಕಲ್ಪಿಕವಾಗಿ 'ನುಮ್' ಆಗಮವು ಬಂದು ತುದನ್‌ತ್+ಈ ಎಂದಾಗುತ್ತದೆ. 'ನ್' ಕಾರಕ್ಕೆ ಅನುಸ್ವಾರ ಬಂದು, ಅದಕ್ಕೆ ಪರಸವರ್ಣ ಬಂದು, ತುದನ್‌ತ್+ಈ=ತುದನ್ತೀ ಎಂದು ರೂಪವಾಗುತ್ತದೆ. ನುಮಾಗಮಬಾರದ ಪಕ್ಷದಲ್ಲಿ, ತುದತೀ ಎಂದೇ ರೂಪವಿರುತ್ತದೆ,

ಉದಾ–ತುದನ್ತಿ(2) – ಪ್ರಥಮಾ ಮತ್ತು ದ್ವಿತೀಯಾ ವಿಭಕ್ತೀ ಬಹುವಚನಗಳಲ್ಲಿ, ತುದತ್+ಜಶ್(ಅಸ್) ಮತ್ತು ತುದತ್+ಶಸ್(ಅಸ್) ಎಂದಿದ್ದಾಗ, "ಜಶ್ಶಸೋಃ ಶಿಃ" ಎಂಬ ಸೂತ್ರದಿಂದ 'ಅಸ್' ಗೆ 'ಶಿ(ಇ) ಆದೇಶ ಬಂದು ತುದತ್+ಇ ಎಂದಿದ್ದಾಗ, ಅದಕ್ಕೆ 'ಸರ್ವನಾಮಸ್ಥಾನ–ಸಂಜ್ಞೆ' ಬಂದಮೇಲೆ, "ನಪುಂಸಕಸ್ಯ ಝಲಚಃ" ಎಂಬ ಸೂತ್ರದಿಂದ, 'ನುವ್' ಆಗಮವು ಅಂತ್ಯ 'ಅಚ್' ನ ನಂತರ ಬಂದು, ತುದನ್‌ತ್+ಇ=ತುದನ್ತಿ ಎಂದಿದ್ದಾಗ, 'ನ್' ಕಾರಕ್ಕೆ ಅನುಸ್ವಾರ, ಅದಕ್ಕೆ ಪರಸವರ್ಣ ಬಂದು, ತುದನ್ತಿ ಎಂದೇ ರೂಪವು ಸಿದ್ಧವಾಗುತ್ತದೆ.

ತೃತೀಯಾ ಮೊದಲಾದವುಗಳಲ್ಲಿ, ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಕೇವಲ ವರ್ಣಜೋಡಣೆಯಿಂದ 'ತುದತಾ' ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, 'ತ್' ಕಾರಕ್ಕೆ 'ಜಶ್ತ್ವ' ಬಂದು, ತುದದ್‌ಭ್ಯಾಮ್, ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

'ತ್' ಕಾರಾನ್ತ ದದತ್ ಶಬ್ದದ ರೂಪಗಳು

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ತುದತ್, ತುದದ್ | ತುದನ್ತೀ,ತುದತೀ | ತುದನ್ತಿ |
| ದ್ವಿತೀಯಾ | ತುದತ್, ತುದದ್ | ತುದನ್ತೀ,ತುದತೀ | ತುದನ್ತಿ |
| ತೃತೀಯಾ | ತುದತಾ | ತುದದ್ಭ್ಯಾಮ್ | ತುದದ್ಭಿಃ |
| ಚತುರ್ಥೀ | ತುದತೇ | ತುದದ್ಭ್ಯಾಮ್ | ತುದದ್ಭ್ಯಃ |
| ಪಞ್ಚಮೀ | ತುದತಃ | ತುದದ್ಭ್ಯಾಮ್ | ತುದದ್ಭ್ಯಃ |
| ಷಷ್ಠೀ | ತುದತಃ | ತುದತೋಃ | ತುದತಾಮ್ |
| ಸಪ್ತಮೀ | ತುದತಿ | ತುದತೋಃ | ತುದತ್ಸು |
| ಸಮ್ಬೋಧನ | ಹೇ ತುದತ್!, ಹೇ ತುದದ್! | ಹೇ ತುದನ್ತೀ!, ಹೇ ತುದತೀ! | ಹೇ ತುದನ್ತಿ! |

ಉದಾ- ಪಚದ್, ಪಚತ್- (ಪಾಕ ಮಾಡುವವರ ಕುಲ). -'ಪಚ್' ಧಾತುವಿನ ನಂತರ 'ಶಪ್(ಅ)' ಬಂದು ನಂತರ ಅದಕ್ಕೆ 'ಶತೃ(ಅತ್)' ಪ್ರತ್ಯಯವು ಬಂದ ಮೇಲೆ, ಪಚ್+ಅ+ಅತ್ ಎಂದಿದ್ದಾಗ, "ಅತೋಗುಣೇ" ಎಂಬ ಸೂತ್ರದಿಂದ 'ಪರರೂಪ' ಬಂದು, ಪಚತ್ ಎಂದಾದಮೇಲೆ, ಇದಕ್ಕೆ 'ಪ್ರಾತಿಪದಿಕ-ಸಂಜ್ಞೆಯು' ಬಂದು-

ಪ್ರಥಮಾ ಮತ್ತು ದ್ವಿತೀಯಾ ವಿಭಕ್ತೀ ಏಕವಚನಗಳಲ್ಲಿ ಪಚತ್+ಸು(ಸ್) ಮತ್ತು ಪಚತ್+ಅಮ್ ಎಂದಿದ್ದಾಗ, "ಸ್ವಮೋರ್ನಪುಂಸಕಾತ್" ಎಂಬ ಸೂತ್ರದಿಂದ 'ಸ್' ಕಾರ ಮತ್ತು 'ಅಮ್' ಗಳು ಲೋಪವಾಗಿ ಪಚತ್ ಎಂದೇ ಇರುತ್ತದೆ. ಆಗ 'ತ್' ಕಾರಕ್ಕೆ "ಝಲಾಂ ಜಶೋಽನ್ತೇ(8.2.36)" ಸೂತ್ರದಿಂದ ಜಶ್ತ್ವ(ದ್) ದಿಂದ 'ದ್' ಕಾರ ಆದೇಶವಾಗಿ ಬಂದು ಪಚದ್ ಎಂದಾದಮೇಲೆ, "ವಾವಸಾನೇ" ಎಂಬ ಸೂತ್ರದಿಂದ ವೈಕಲ್ಪಿಕ ಚರ್ತ್ವದಿಂದ 'ದ್' ಕಾರಕ್ಕೆ 'ತ್' ಕಾರ ಬಂದು ಪಚತ್ ಎಂಬ ವೈಕಲ್ಪಿಕ ರೂಪವು ಸಿದ್ಧವಾಗುತ್ತದೆ, ಹೀಗೆ ಪಚದ್, ಪಚತ್ ಎಂಬ ಎರಡು ರೂಪಗಳಾಗುತ್ತವೆ.

('ನುಮ್'ಆಗಮವನ್ನು ವಿಧಿಸುವ ಸೂತ್ರ).

**ಸೂತ್ರ - 367. ಶಪ್-ಶ್ಯನೋರ್ನಿತ್ಯಮ್।** (7.1.81)

ವೃತ್ತಿಃ-ಶಪ್-ಶ್ಯನೋಃ ಆತ್ ಪರಃ ೦ಯಃ ಶತುಃ ಅವ೦ಯವಃ ತದಂತಸ್ಯ ನಿತ್ಯಂ ನುಮ್ ಶೀನದ್ಯೋಃ। ಪಚಂತೀ। ಪಚಂತಿ। ದೀವ್ಯತ್। ದೀವ್ಯಂತೀ। ದೀವ್ಯಂತಿ। ಧನುಃ। ಧನುಷೀ। (342) ಸಾಂತಾಇತಿ ದೀರ್ಘಃ। (352) **ನುಮ್ವಿಸರ್ಜನೀ೦ಯ** ಇತಿ ಷಃ। ಧನೂಂಷಿ। ಧನುಷಾ। ಧನುರ್ಭ್ಯಾಮ್। ಏವಂ ಚಕ್ಷು-ರ್ಹವಿರಾದ೦ಯಃ। ಪ೦ಯಃ। ಪ೦ಯಸೀ। ಪ೦ಯಾಂಸಿ। ಪ೦ಯಸಾ। ಪ೦ಯೋಭ್ಯಾಮ್। ಸುಪುಮ್। ಸುಪುಂಸೀ। ಸುಪುಮಾಂಸಿ।

ಅದಃ। ವಿಭಕ್ತಿಕಾರ್ಯಮ್। ಉತ್ವ-ಮತ್ವೇ। ಅಮೂ।ಅಮೂನಿ। ಶೇಷಂ ಪುಂವತ್।

॥ಇತಿ ಹಲನ್ತ-ನಪುಂಸಕಲಿಂಙ್ಗ ಪ್ರಕರಣಂ (10) ॥

॥ಷಡ್ಲಿಙ್ಗ ಪ್ರಕರಣಂ ಸಮಾಪ್ತಮ್॥

***

ಪ.ಛೇ. - ಶಪ್, ಶ್ಯನೋಃ, ನಿತ್ಯಮ್।

ಅ.ವೃ. - "ಆಚ್ಛೀನದ್ಯೋರ್ನುಮ್(7-1-80)" ಸೂತ್ರದಿಂದ 'ಆತ್' ಮತ್ತು 'ನುಮ್' ಎಂಬ ಪದಗಳೂ, ಹಾಗೆಯೇ "ನಾಭ್ಯಸ್ತಾಚ್ಛತುಃ(7-1-87)" ಎಂಬ ಸೂತ್ರದಿಂದ 'ಶತುಃ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ- ಶಪ್ ಮತ್ತು ಶ್ಯನ್ ಪ್ರತ್ಯಯಗಳ 'ಅ'ವರ್ಣಗಳಿಗಿಂತ ಪರದಲ್ಲಿರುವ ಶತೃ-ಪ್ರತ್ಯಯದ ಅವಯವಾಂತದ ಅಂಗಕ್ಕೆ ನಿತ್ಯವಾಗಿ 'ನುಮ್' ಆಗಮವು ಬರುತ್ತದೆ.

ಉದಾ- ಪಚನ್ತೀ- 'ಪಚ್' ಧಾತುವಿನ ಪರದಲ್ಲಿ 'ಶಪ್(ಅ)' ಬಂದನಂತರ, 'ಶತೃ(ಅತ್)' ಪ್ರತ್ಯಯವು ಬಂದ ಮೇಲೆ ಪಚ್+ಅ+ಅತ್ ಎಂದಿದ್ದಾಗ, "ಅತೋಗುಣೇ" ಎಂಬ ಸೂತ್ರದಿಂದ 'ಪರರೂಪ' ಬಂದು, ಪಚತ್ ಎಂದಾದಮೇಲೆ-

ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ದ್ವಿವಚನಗಳಲ್ಲಿ ಪಚತ್+ಔ ಮತ್ತು ಪಚತ್+ಔಟ್(ಔ) ಎಂದಿದ್ದಾಗ, "ನಪುಂಸಕಾಚ್ಚ(7-1-19)" ಎಂಬ ಸೂತ್ರದಿಂದ, 'ಔ' ಗಳಿಗೆ 'ಶೀ'(ಈ) ಬಂದು ಪಚತ್+ಈ ಎಂದಿದ್ದಾಗ, 'ಶೀ'ನಲ್ಲಿರುವ 'ಈ'ಕಾರ ಪರದಲ್ಲಿ ಇರುವುದರಿಂದ, ಪ್ರಕೃತ ಸೂತ್ರದಿಂದ 'ನುಮ್' ಆಗಮವು 'ಚ್' ಕಾರೋತ್ತರ 'ಅ' ಕಾರದ ನಂತರ ಬಂದು ಪಚನ್ತ್+ಈ ಎಂದಿರುತ್ತದೆ. ನಂತರ 'ನ್'ಕಾರಕ್ಕೆ ಅನುಸ್ವಾರ ಬಂದು ಅದಕ್ಕೆ 'ಪರಸವರ್ಣ' ಬಂದು ವರ್ಣಜೋಡಣೆಯಿಂದ 'ಪಚನ್ತೀ' ಎಂಬ ರೂಪವು ಸಿದ್ಧವಾಗುತ್ತದೆ.

ಉದಾ-ಪಚನ್ತಿ- ಪ್ರಥಮಾ ಮತ್ತು ದ್ವಿತೀಯಾ ವಿಭಕ್ತೀ ಬಹುವಚನಗಳಲ್ಲಿ ಪಚತ್+ಜಸ್(ಅಸ್) ಮತ್ತು ಪಚತ್+ಶಸ್(ಅಸ್) ಎಂದಿದ್ದಾಗ, "ಜಶ್ಶಸೋಃ ಶಿ" ಎಂಬ ಸೂತ್ರದಿಂದ 'ಅಸ್' ಗೆ 'ಶಿ(ಇ) ಆದೇಶ ಬಂದು, ಪಚತ್+ಇ ಎಂದಿದ್ದಾಗ, 'ನುಮ್' ಆಗಮ ಬಂದು, ಪಚನ್ತ್+ಇ=ಪಚನ್ತಿ ಎಂದಿದ್ದಾಗ, ಹಿಂದಿನಂತೆ ಅನುಸ್ವಾರ ಮತ್ತು 'ಪರಸವರ್ಣಗಳಿಂದ' ಪಚನ್ತಿ ರೂಪವು ಸಿದ್ಧವಾಗುತ್ತದೆ.

ಉದಾ-ಪಚತಾ - ತೃತೀಯಾ ಮೊದಲಾದ ವಿಭಕ್ತಿಗಳಲ್ಲಿ ಅಜಾದಿ ಪ್ರತ್ಯಯಗಳು ಪರದಲ್ಲಿದಾಗ, ಕೇವಲ ವರ್ಣಗಳ ಜೋಡಣೆಯಾಗಿ, ಪಚತಾ ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

ಉದಾ- ಪಚದ್ಭ್ಯಾಮ್- ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ 'ತ್' ಕಾರಕ್ಕೆ ಜಶ್ತ್ವ ಬಂದು, ಪಚದ್ ಎಂದಾಗಿ ಪಚದ್ಭ್ಯಾಮ್ ಮುಂತಾದ ರೂಪಗಳು ಸಿದ್ಧವಾಗುತ್ತವೆ.

'ತ್' ಕಾರಾನ್ತ ನಪುಂಸಕ ಲಿಂಗ ಪಚತ್ ಶಬ್ದದ ರೂಪಗಳು

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಪಚತ್,ಪಚದ್ | ಪಚನ್ತೀ | ಪಚನ್ತಿ |
| ದ್ವಿತೀಯ | ಪಚತ್,ಪಚದ್ | ಪಚನ್ತೀ | ಪಚನ್ತಿ |
| ತೃತೀಯ | ಪಚತಾ | ಪಚ್‌ದ್ಭ್ಯಾಮ್ | ಪಚದ್ಭಿಃ |
| ಚತುರ್ಥೀ | ಪಚತೇ | ಪಚದ್ಭ್ಯಾಮ್ | ಪಚದ್ಭ್ಯಃ |
| ಪಞ್ಚಮೀ | ಪಚತಃ | ಪಚದ್ಭ್ಯಾಮ್ | ಪಚದ್ಭ್ಯಃ |
| ಷಷ್ಠೀ | ಪಚತಃ | ಪಚತೋಃ | ಪಚತಾಮ್ |
| ಸಪ್ತಮೀ | ಪಚತಿ | ಪಚತೋಃ | ಪಚತ್ಸು |
| ಸಮ್ಬೋಧನ | ಹೇ ಪಚತ್!, ಹೇ ಪಚದ್! | ಹೇ ಪಚನ್ತೀ! | ಹೇ ಪಚನ್ತಿ! |

ಉದಾ– ದೀವ್ಯತ್ – 'ದಿವ್' ಧಾತುವು 'ದಿವಾದಿ ಗಣ'ಕ್ಕೆ ಸೇರಿದ್ದರಿಂದ, ಅದಕ್ಕೆ 'ಶಪ್' ಸ್ಥಾನದಲ್ಲಿ 'ಶ್ಯನ್(ಯ)' ಪ್ರತ್ಯಯ ಬಂದು, ದಿವ್ಯ ಎಂದಿದ್ದಾಗ, "ಅಲೋಽನ್ತ್ಯಾತ್ ಪೂರ್ವ ಉಪಧಾ" ಎಂಬ ಸೂತ್ರದಿಂದ 'ದ್' ಕಾರೋತ್ತರ 'ಇ' ಕಾರಕ್ಕೆ 'ಉಪಧಾ–ಸಂಜ್ಞೆ' ಬಂದು, "ಹಲಿಚ" ಎಂಬ ಸೂತ್ರದಿಂದ ಉಪಧಾ ದೀರ್ಘ ಬಂದು ದೀವ್ಯ ಎಂದಿದ್ದಾಗ, ಅದಕ್ಕೆ ಶತೃ(ಅತ್) ಪ್ರತ್ಯಯವನ್ನು ಸೇರಿಸಿದಾಗ, ದೀವ್ಯ+ಅತ್ ಎಂದಿರುತ್ತದೆ. ಆಗ "ಅತೋಗುಣೇ" ಎಂಬ ಸೂತ್ರದಿಂದ 'ಪರರೂಪ' ಬಂದು, 'ದೀವ್ಯತ್' ಎಂದಾಗುತ್ತದೆ. ಇದಕ್ಕೆ 'ಪ್ರಾತಿಪದಿಕ–ಸಂಜ್ಞೆ' ಬಂದಮೇಲೆ,

ಪ್ರಥಮಾ ಮತ್ತು ದ್ವಿತೀಯಾ ವಿಭಕ್ತೀ ಏಕವಚನಗಳಲ್ಲಿ ದೀವ್ಯತ್+ಸು ಮತ್ತು ದೀವ್ಯತ್+ಅಮ್ ಎಂದಿದ್ದಾಗ, "ಸ್ವಮೋರ್ನಪುಂಸಕಾತ್" ಎಂಬುದರಿಂದ 'ಸು' ಮತ್ತು 'ಅಮ್' ಗಳು ಲೋಪವಾಗಿ ದೀವ್ಯತ್ ಎಂದೇ ಉಳಿಯುತ್ತದೆ. ಆಗ– 'ತ್' ಕಾರಕ್ಕೆ "ಝಲಾಂ ಜಶೋಽನ್ತೇ" ಎಂಬ ಸೂತ್ರದಿಂದ ಜಶ್ತ್ವ (ದ್ ಕಾರ) ಬಂದು ದೀವ್ಯದ್ ಎಂದಾಗುತ್ತದೆ. ನಂತರ "ವಾವಸಾನೇ" ಎಂಬ ಸೂತ್ರದಿಂದ ವೈಕಲ್ಪಿಕ ಚರ್ತ್ವದಿಂದ 'ದ್' ಕಾರಕ್ಕೆ 'ತ್' ಕಾರ ಬಂದು 'ದೀವ್ಯತ್' ಎಂಬ ರೂಪವು ಸಿದ್ಧವಾಗುತ್ತದೆ. ಹೀಗೆ ದೀವ್ಯದ್ ಮತ್ತು ದೀವ್ಯತ್ ಎಂಬ ಎರಡು ರೂಪಗಳು ಸಿದ್ದವಾಗುತ್ತವೆ.

ಉದಾ– ದೀವ್ಯನ್ತೀ –ಹಿಂದಿನ ಪ್ರಕ್ರಿಯೆಯಂತೆ ದೀವ್ಯತ್ ಎಂದಾದಮೇಲೆ, ಪ್ರಥಮಾ ಮತ್ತು ದ್ವಿತೀಯಾ ವಿಭಕ್ತೀ ದ್ವಿವಚನಗಳಲ್ಲಿ ದೀವ್ಯತ್+ಔ, ಮತ್ತು ದೀವ್ಯತ್+ಔಟ್(ಔ) ಎಂದಿದ್ದಾಗ, "ನಪುಂಸಕಾಚ್ಚ(7–1–19)" ಎಂಬ ಸೂತ್ರದಿಂದ, 'ಔ' ಗಳಿಗೆ 'ಶೀ'(ಈ) ಬಂದು ದೀವ್ಯತ್+ಶೀ(ಈ) ಎಂದಿದ್ದಾಗ, 'ಶೀ(ಈ)' ಪ್ರತ್ಯಯವು ಪರದಲ್ಲಿರುವ ನಿಮಿತ್ತದಿಂದಾಗಿ, ಅದಕ್ಕೆ 'ಸರ್ವನಾಮಸ್ಥಾನ–ಸಂಜ್ಞೆ' ಬಂದು, 'ನುಮ್(ನ್)' ಆಗಮವು

ಅಂತ್ಯ 'ಅಚ್' ಗೆ ಬರುತ್ತದೆ. ಆಗ ದೀವ್ಯನ್‌ತ್+ಈ=ದೀವ್ಯನ್ತೀ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ- ದೀವ್ಯನ್ತೀ - ಹಿಂದಿನ ಪ್ರಕ್ರಿಯೆಯಂತೆ ದೀವ್ಯತ್ ಎಂದಾದಮೇಲೆ, ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ ಬಹುವಚನಗಳಲ್ಲಿ ದೀವ್ಯತ್+ಜಸ್(ಅಸ್) ಮತ್ತು ದೀವ್ಯತ್+ಶಸ್(ಅಸ್) ಎಂದಿದ್ದಾಗ, "ಜಶ್ಶಸೋಃ ಶಿಃ" ಎಂಬ ಸೂತ್ರದಿಂದ 'ಅಸ್' ಗೆ 'ಶಿ(ಇ) ಆದೇಶ ಬಂದು, ದೀವ್ಯತ್+ಇ ಎಂದಿದ್ದಾಗ, "ನಪುಂಸಕಸ್ಯ ಝಲಚಃ" ಎಂಬ ಸೂತ್ರದಿಂದ, 'ನುಮ್' ಆಗಮವು ಅಂತ್ಯ 'ಅಚ್'ನ ನಂತರ ಬಂದು, ದೀವ್ಯನ್‌ತ್+ಇ=ದೀವ್ಯನ್ತಿ ಎಂದಿದ್ದಾಗ, 'ನ್' ಕಾರಕ್ಕೆ 'ಅನುಸ್ವಾರ', ಅದಕ್ಕೆ 'ಪರಸವರ್ಣ' ಬಂದು, ದೀವ್ಯನ್ತಿ ಎಂದೇ ರೂಪವು ಇರುತ್ತದೆ.

ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಯಾವ ವಿಕಾರವೂ ಇಲ್ಲದೇ, ಕೇವಲ ವರ್ಣಜೋಡಣೆಯಿಂದ ದೀವ್ಯತಾ ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, 'ತ್' ಕಾರಕ್ಕೆ ಜಶ್ತ್ವ (ದ್‌ಕಾರ) ಬಂದು, ದೀವ್ಯದ್ಭ್ಯಾಮ್ ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

**'ತ್' ಕಾರಾನ್ತ ನಪುಂಸಕ ಲಿಂಗ ದೀವ್ಯತ್ ಶಬ್ದದ ರೂಪಗಳು**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ದೀವ್ಯತ್, ದೀವ್ಯದ್ | ದೀವ್ಯನ್ತೀ | ದೀವ್ಯನ್ತಿ |
| ದ್ವಿತೀಯ | ದೀವ್ಯತ್, ದೀವ್ಯದ್ | ದೀವ್ಯನ್ತೀ | ದೀವ್ಯನ್ತಿ |
| ತೃತೀಯ | ದೀವ್ಯತಾ | ದೀವ್ಯದ್ಭ್ಯಾಮ್ | ದೀವ್ಯದ್ಭಿಃ |
| ಚತುರ್ಥೀ | ದೀವ್ಯತೇ | ದೀವ್ಯದ್ಭ್ಯಾಮ್ | ದೀವ್ಯದ್ಭ್ಯಃ |
| ಪಞ್ಚಮೀ | ದೀವ್ಯತಃ | ದೀವ್ಯದ್ಭ್ಯಾಮ್ | ದೀವ್ಯದ್ಭ್ಯಃ. |
| ಷಷ್ಠೀ | ದೀವ್ಯತಃ | ದೀವ್ಯತೋಃ | ದೀವ್ಯತಾಮ್ |
| ಸಪ್ತಮೀ | ದೀವ್ಯತಿ | ದೀವ್ಯತೋಃ | ದೀವ್ಯತ್ಸು |
| ಸಮ್ಬೋಧನ | ಹೇ ದೀವ್ಯತ್!, ಹೇ ದೀವ್ಯದ್! | ಹೇ ದೀವ್ಯನ್ತೀ! | +ಹೇ ದೀವ್ಯನ್ತಿ! |

**ಇಲ್ಲಿಗೆ 'ತ್' ಕಾರಾನ್ತ ಶಬ್ದಗಳು ಮುಗಿದವು**

**ಇನ್ನು ಷ್- ಕಾರಾನ್ತ ನಪುಂಸಕ ಲಿಂಗ ಶಬ್ದಗಳು ಆರಂಭವಾಗುತ್ತವೆ.**

ಉದಾ- ಧನುಃ- (ಬಿಲ್ಲು) ಪ್ರಥಮಾ ಮತ್ತು ದ್ವಿತೀಯಾ ವಿಭಕ್ತೀ ಏಕವಚನಗಳಲ್ಲಿ ಧನುಷ್+ಸು ಮತ್ತು ಧನುಷ್+ಅಮ್ ಎಂದಿದ್ದಾಗ, "ಸ್ವಮೋರ್ನಪುಂಸಕಾತ್" ಎಂಬುದರಿಂದ 'ಸು' ಮತ್ತು 'ಅಮ್'ಗಳು ಲೋಪವಾಗಿ ಧನುಷ್ ಎಂದಿದ್ದಾಗ, "ಆದೇಶಪ್ರತ್ಯಯಯೋಃ(8-3-59)" ಸೂತ್ರದಿಂದ ಮಾಡಲಾಗಿರುವ 'ಷತ್ವ'ವು ಅಸಿದ್ಧವಾದ ಕಾರಣ 'ಧನುಸ್' ಎಂದೇ ಭಾವಿಸಿ

"ಸಸಜುಷೋ ರುಃ(8–2–66)" ಸೂತ್ರದಿಂದ ರುತ್ವ–ವಿಸರ್ಗಗಳು ಬಂದು 'ಧನುಃ' ಎಂಬ ರೂಪ ಸಿದ್ಧವಾಗುತ್ತವೆ.

ಉದಾ– ಧನುಷೀ– ಪ್ರಥಮಾ ಮತ್ತು ದ್ವಿತೀಯಾ ವಿಭಕ್ತೀ ದ್ವಿವಚನಗಳಲ್ಲಿ ಧನುಷ್+ಔ, ಮತ್ತು ಧನುಷ್+ಔಟ್(ಔ) ಎಂದಿದ್ದಾಗ, "ನಪುಂಸಕಾಚ್ಚ (7–1–19)" ಎಂಬ ಸೂತ್ರದಿಂದ 'ಔ' ಗಳಿಗೆ 'ಶೀ'(ಈ) ಬಂದು, 'ಶೀ' ಆದೇಶ ಬಂದು ಧನುಷ್+ಈ=ಧನುಷೀ ಎಂದಾಗುತ್ತದೆ.

ಉದಾ– ಧನೂಂಷಿ– ಪ್ರಥಮಾ ಮತ್ತು ದ್ವಿತೀಯಾ ವಿಭಕ್ತೀ ಬಹುವಚನಗಳಲ್ಲಿ ಧನುಷ್+ಜಸ್(ಅಸ್) ಮತ್ತು ಧನುಷ್+ಶಸ್(ಅಸ್) ಎಂದಿದ್ದಾಗ, "ಜಶ್ಶಸೋಃ ಶಿಃ" ಎಂಬ ಸೂತ್ರದಿಂದ 'ಅಸ್' ಗೆ 'ಶಿ(ಇ) ಆದೇಶ ಬಂದು ಧನುಷ್+ಈ ಎಂದಿದ್ದಾಗ, "ನಪುಂಸಕಸ್ಯ ಝಲಚಃ (7–1–72)" ಸೂತ್ರದಿಂದ 'ನುಮ್(ನ್)' ಆಗಮ ಬಂದು, ಧನುನ್ಷ್+ಇ ಎಂದಿದ್ದಾಗ, "ಸಾನ್ತಮಹತಃ ಸಂಯೋಗಸ್ಯ" ಎಂಬ ಸೂತ್ರದಿಂದ 'ಉಪಧಾ–ದೀರ್ಘ' ಬಂದು ಧನೂನ್ಷ್+ಇ ಎಂದಿದ್ದಾಗ, ಆ 'ನುಮ್' ಆಗಮದ 'ನ್' ಕಾರಕ್ಕೆ "ನಶ್ಚಾಪದಾನ್ತಸ್ಯ ಝಲಿ(8–3–24)" ಸೂತ್ರದಿಂದ 'ಅನುಸ್ವಾರ' ಬಂದು 'ಧನೂಂಷಿ' ಎಂಬ ರೂಪಗಳಾಗುತ್ತವೆ. ತೃತೀಯಾ ವಿಭಕ್ತಿಯಿಂದ ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ. ಕೇವಲ ಆ ಪ್ರತ್ಯಯಗಳನ್ನು ಸೇರಿಸುವುದರಿಂದ ಧನುಷಾ ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ. ಹಲಾದಿ ವಿಭಕ್ತಿಗಳು ಪರದಲ್ಲಿದಾಗ "ಸಸಜುಷೋ ರುಃ(8–2–66)" ಸೂತ್ರದಿಂದ 'ರುತ್ವ(ರ್)' ಬಂದು ಧನುರ್ಭ್ಯಾಮ್, ಧನುರ್ಭಿಃ, ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

ಚಕ್ಷುಷ್, ಹವಿಷ್ ಮೊದಲಾದ ಶಬ್ದಗಳು ಕೂಡ ಇದೇ ತರಹ ರೂಪಗಳನ್ನು ಹೊಂದುತ್ತವೆ ಎಂದು ವೃತ್ತಿಯಲ್ಲಿಯೇ ಹೇಳಲಾಗಿದೆ.

**ಷ್– ಕಾರಾನ್ತ ನಪುಂಸಕ ಲಿಂಗ ಧನುಷ್ ಶಬ್ದದ ರೂಪಗಳು**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಧನುಃ | ಧನುಷೀ | ಧನೂಂಷಿ |
| ದ್ವಿತೀಯ | ಧನುಃ | ಧನುಷೀ | ಧನೂಂಷಿ |
| ತೃತೀಯ | ಧನುಷಾ | ಧನುರ್ಭ್ಯಾಮ್ | ಧನುರ್ಭಿಃ |
| ಚತುರ್ಥೀ | ಧನುಷೇ | ಧನುರ್ಭ್ಯಾಮ್ | ಧನುರ್ಭ್ಯಃ |
| ಪಞ್ಚಮೀ | ಧನುಷಃ | ಧನುರ್ಭ್ಯಾಮ್ | ಧನುರ್ಭ್ಯಃ |
| ಷಷ್ಠೀ | ಧನುಷಃ | ಧನುಷೋಃ | ಧನುಷಾಮ್ |
| ಸಪ್ತಮೀ | ಧನುಷಿ | ಧನುಷೋಃ | ಧನುಷ್ಷು |
| ಸಮ್ಬೋಧನ | ಹೇ ಧನುಃ! | ಹೇ ಧನುಷೀ! | ಹೇ ಧನೂಂಷಿ! |

**ಇಲ್ಲಿಗೆ 'ಷ್' ಕಾರಾನ್ತ ನಪುಂಸಕಲಿಂಗ ಶಬ್ದಗಳು ಮುಗಿದವು**

**ಈಗ 'ಸ್' ಕಾರಾನ್ತ ನಪುಂಸಕ ಲಿಂಗ ಶಬ್ದಗಳು ಆರಂಭವಾಗುತ್ತವೆ.**

ಉದಾ–ಪಯಃ (ಹಾಲು/ನೀರು)– ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ–ಏಕವಚನಗಳಲ್ಲಿ ಪಯಸ್+ಸು ಮತ್ತು ಪಯಸ್+ಅಮ್ ಎಂದಿದ್ದಾಗ, "ಸ್ವಮೋರ್ನಪುಂಸಕಾತ್" ಎಂಬುದರಿಂದ 'ಸು' ಮತ್ತು 'ಅಮ್' ಗಳು ಲೋಪವಾಗಿ 'ಪಯಸ್' ಎಂದಿದ್ದಾಗ, 'ಸ್' ಕಾರಕ್ಕೆ ರುತ್ವ–ವಿಸರ್ಗಗಳಿಂದ 'ಪಯಃ' ಎಂಬ ರೂಪಗಳು ಸಿದ್ಧವಾಗುತ್ತವೆ.

ಉದಾ– ಪಯಸೀ– ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ–ದ್ವಿವಚನಗಳಲ್ಲಿ ಪಯಸ್+ಔ ಮತ್ತು ಪಯಸ್+ಔಟ್(ಔ) ಎಂದಿದ್ದಾಗ, "ನಪುಂಸಕಾಚ್ಚ(7–1–19)" ಎಂಬ ಸೂತ್ರದಿಂದ 'ಔ' ಗಳಿಗೆ 'ಶೀ (ಈ)' ಆದೇಶವು ಬಂದು, ಪಯಸ್+ಈ=ಪಯಸೀ ಎಂದಾಗುತ್ತದೆ.

ಉದಾ– ಪಯಾಂಸಿ – ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ–ಬಹುವಚನಗಳಲ್ಲಿ, ಪಯಸ್+ಜಸ್(ಅಸ್) ಮತ್ತು ಪಯಸ್+ಶಸ್(ಅಸ್) ಎಂದಿದ್ದಾಗ, 'ಅಸ್'ಗಳಿಗೆ "ಜಶ್ಶಸೋಃ ಶಿಃ" ಎಂಬ ಸೂತ್ರದಿಂದ 'ಶಿ(ಇ) ಆದೇಶ ಬಂದು, ಪಯಸ್+ಇ ಎಂದಿದ್ದಾಗ, ಅದಕ್ಕೆ "ನಪುಂಸಕಸ್ಯ ಝುಲಚಃ(7–1–72)" ಸೂತ್ರದಿಂದ 'ನುಮ್' ಆಗಮವು ಅಂತ್ಯ 'ಅಚ್'ನ ಪರದಲ್ಲಿ ಬಂದು, ಪಯನ್ಸ್+ಇ ಎಂದಿದ್ದಾಗ, "ಸಾನ್ತಮಹತಃ ಸಂಯೋಗಸ್ಯ(6–4–10)" ಸೂತ್ರದಿಂದ 'ಉಪಧಾ ದೀರ್ಘ' ಬಂದು, ಪಯಾನ್ಸ್+ಇ ಎಂದಿದ್ದಾಗ, 'ನುಮ್' ಆಗಮದ 'ನ್' ಕಾರಕ್ಕೆ "ನಶ್ಚಾಪದಾನ್ತಸ್ಯ ಝಲಿ(8–3–24)" ಸೂತ್ರದಿಂದ ಅನುಸ್ವಾರ ಬಂದು' ಪಯಾಂಸ್+ಇ=ಪಯಾಂಸಿ ಎಂಬ ರೂಪವು ಸಿದ್ಧವಾಗುತ್ತದೆ. ಉಳಿದ ವಿಭಕ್ತಿಗಳಲ್ಲಿ ಅಜಾದಿ ವಿಭಕ್ತಿಗಳು ಪರವಾದಾಗ, ಕೇವಲ ವರ್ಣಜೋಡಣೆಯಿಂದ 'ಪಯಸಾ' ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

ಹಲಾದಿ ಪ್ರತ್ಯಯಗಳು ಪರವಾದಾಗ "ಸ್ವಾದಿಷ್ವಸರ್ವನಾಮಸ್ಥಾನೇ(1–4–17)" ಸೂತ್ರದಿಂದ 'ಪದ ಸಂಜ್ಞಾ' ಬಂದು, 'ಸ್' ಕಾರಕ್ಕೆ "ಸಸಜುಷೋ ರುಃ(8–2–66)" ಸೂತ್ರದಿಂದ, 'ರುತ್ವ' ಬಂದು ಅದಕ್ಕೆ "ಹಶಿ ಚ(6–1–114)" ಸೂತ್ರದಿಂದ 'ಉತ್ವ' ಬಂದು, "ಆದ್ಗುಣಃ (6–1–87)" ಸೂತ್ರದಿಂದ 'ಗುಣ' ಬಂದು ಪಯೋಭ್ಯಾಮ್, ಮೊದಲಾದ ರೂಪಗಳಾಗುತ್ತವೆ.

ಸಪ್ತಮೀ ವಿಭಕ್ತಿ ಬಹುವಚನದಲ್ಲಿ ಪಯಸ್+ಸುಪ್(ಸು) ಎಂದಿದ್ದಾಗ, "ಸಸಜುಷೋ ರುಃ(8–2–66)" ಸೂತ್ರದಿಂದ 'ರುತ್ವ' ಬಂದು, ಪಯರ್+ಸು ಎಂದಿದ್ದಾಗ, "ಖರವಸಾನಯೋರ್ವಿಸರ್ಜನೀಯಃ" ಎಂಬಸೂತ್ರದಿಂದ ರೇಫಕ್ಕೆ ವಿಸರ್ಗ ಬಂದು, ಪಯಃ+ಸು ಎಂದಿದ್ದಾಗ, ಪಯಃಸು ಮತ್ತು ಪಯಸ್ಸು ಎಂದು ಎರಡು ರೂಪಗಳು ಸಿದ್ಧವಾಗುತ್ತವೆ.

**'ಸ್'ಕಾರಾನ್ತ ನಪುಂಸಕ ಲಿಂಗದ 'ಪಯಸ್' ಶಬ್ದದ ರೂಪಗಳು**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಪಯಃ | ಪಯಸೀ | ಪಯಾಂಸಿ |
| ದ್ವಿತೀಯಾ | ಪಯಃ | ಪಯಸೀ | ಪಯಾಂಸಿ |
| ತೃತೀಯಾ | ಪಯಸಾ | ಪಯೋಭ್ಯಾಮ್ | ಪಯೋಭಿಃ |
| ಚತುರ್ಥೀ | ಪಯಸೇ | ಪಯೋಭ್ಯಾಮ್ | ಪಯೋಭ್ಯಃ |
| ಪಞ್ಚಮೀ | ಪಯಸಃ | ಪಯೋಭ್ಯಾಮ್ | ಪಯೋಭ್ಯಃ |
| ಷಷ್ಠೀ | ಪಯಸಃ | ಪಯಸೋಃ | ಪಯಸಾಮ್ |
| ಸಪ್ತಮೀ | ಪಯಸಿ | ಪಯಸೋಃ | ಪಯಃಸು |
| ಸಮ್ಬೋಧನ | ಹೇ ಪಯಃ! | ಹೇ ಪಯಸೀ! | ಹೇ ಪಯಾಂಸಿ! |

ಸೂಚನೆ – ಇದರಂತೆಯೇ 'ಸ್' ಕಾರಾನ್ತ ನಪುಂಸಕ ಲಿಂಗದ ಶಬ್ದಗಳಾದ ಅಯಸ್, ಓಜಸ್, ತಪಸ್, ತಮಸ್, ರಕ್ಷಸ್, ವಯಸ್, ಶಿರಸ್, ಸರಸ್, ಮೊದಲಾದ ಶಬ್ದಗಳ ರೂಪಗಳು ಸಿದ್ಧವಾಗುತ್ತವೆ.

ಉದಾ– ಸುಪುಮ್–(ಯಾವ ನಗರದಲ್ಲಿ ಅಥವಾ ಕುಲದಲ್ಲಿ ಹುಟ್ಟಿದ ಸತ್ಪುರುಷರ ನಗರ ಅಥವಾ ಕುಲ). ಪ್ರಥಮಾ ಮತ್ತು ದ್ವಿತೀಯಾ ವಿಭಕ್ತೀ ಏಕವಚನಗಳಲ್ಲಿ ಸುಪುಮ್ಸ್+ಸು(ಸ್) ಮತ್ತು ಸುಪುಮ್ಸ್+ಅಮ್ ಎಂದಿದ್ದಾಗ, "ಸ್ವಮೋರ್ನಪುಂಸಕಾತ್" ಎಂಬುದರಿಂದ 'ಸು' ಮತ್ತು 'ಅಮ್'ಗಳು ಲೋಪವಾಗಿ ಸುಪುಮ್ಸ್ ಎಂದಿದ್ದಾಗ, 'ಸ್' ಕಾರಕ್ಕೆ "ಸಂಯೋಗಾನ್ತಸ್ಯ ಲೋಪಃ(8–2–23)" ಸೂತ್ರದಿಂದ ಲೋಪ ಬಂದು ಸುಪುಮ್ ಎಂದು ರೂಪಗಳು ಸಿದ್ಧವಾಗುತ್ತವೆ.

ಉದಾ– ಸುಪುಂಸೀ–ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ–ದ್ವಿವಚನಗಳಲ್ಲಿ ಸುಪುಮ್ಸ್+ಔ ಮತ್ತು ಸುಪುಮ್ಸ್+ಔಟ್(ಔ) ಎಂದಿದ್ದಾಗ, "ನಪುಂಸಕಾಚ್ಚ (7–1–19)" ಎಂಬ ಸೂತ್ರದಿಂದ 'ಔ' ಗಳಿಗೆ 'ಶೀ (ಈ)' ಆದೇಶವು ಬಂದು, ಸುಪುಮ್ಸ್+ಶೀ(ಈ) ಎಂದಿದ್ದಾಗ, 'ಮ್' ಕಾರಕ್ಕೆ ಅನುಸ್ವಾರ ಬಂದು ಸುಪುಂಸೀ ಎಂದು ರೂಪಗಳು ಸಿದ್ಧವಾಗುತ್ತವೆ.

ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ–ಬಹುವಚನಗಳಲ್ಲಿ ಸುಪುಮ್ಸ್+ಜಸ್(ಅಸ್) ಮತ್ತು ಸುಪುಮ್ಸ್+ಶಸ್(ಅಸ್) ಎಂದಿದ್ದಾಗ, "ಜಶ್ಶಸೋಃ ಶಿಃ" ಶಿ(ಇ) ಆದೇಶ ಬಂದು ಸುಪುಮ್ಸ್+ಇ ಎಂದಿದ್ದಾಗ, ಅದು 'ಸರ್ವನಾಮಸ್ಥಾನ–ಸಂಜ್ಞೆ' ಪಡೆದಮೇಲೆ "ಪುಂಸೋಽಸುಙ್(7–1–89)" ಎಂಬ ಸೂತ್ರದಿಂದ ಸುಪುಮ್ಸ್ ಗೆ ಅಸುಙ್ ಆದೇಶ ಬಂದು ಸುಪುಮ್+ಅಸ್+ಇ=ಸುಪುಮಸ್+ಇ ಎಂದಿರುತ್ತದೆ. "ನಪುಂಸಕಸ್ಯ ಝಲಚಃ" ಎಂಬ ಸೂತ್ರದಿಂದ 'ನುಮ್(ನ್)' ಆಗಮ ಬಂದು, ಸುಪುಮನ್ಸ್+ಇ ಎಂದಿದ್ದಾಗ, "ಸಾನ್ತಮಹತಃ ಸಂಯೋಗಸ್ಯ(6–4–10)" ಸೂತ್ರದಿಂದ

'ಮ್' ಕಾರೋತ್ತರ 'ಅ' ಕಾರಕ್ಕೆ ದೀರ್ಘವು ಬಂದು ಸುಪುಮಾನ್ಸ್+ಇ ಎಂದಿರುತ್ತದೆ. 'ನ್' ಕಾರಕ್ಕೆ ಅನುಸ್ವಾರ ಬಂದು ವರ್ಣಜೋಡಣೆಯಾಗಿ ಸುಪುಮಾಂಸಿ ಎಂದು ರೂಪವು ಸಿದ್ಧವಾಗುತ್ತದೆ.

ಅನಂತರದ ರೂಪಗಳಲ್ಲಿ ಅಜಾದಿ ವಿಭಕ್ತಿಗಳು ಪರದಲ್ಲಿದ್ದಾಗ, ಸುಪುಮ್ಸ್ ನಲ್ಲಿರುವ 'ಮ್' ಕಾರಕ್ಕೆ ಅನುಸ್ವಾರ ಬಂದು ವರ್ಣಜೋಡಣೆಯಿಂದ ಸುಪುಂಸಾ ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ. ಹಲಾದಿ ವಿಭಕ್ತಿಗಳು ಪರದಲ್ಲಿದ್ದಾಗ, "ಸಂಯೋಗಾನ್ತಸ್ಯ ಲೋಪಃ" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬಂದು, ಸುಪುಮ್ಭ್ಯಾಮ್ ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

**'ಸ್'ಕಾರಾನ್ತ ನಪುಂಸಕ ಲಿಂಗದ 'ಸುಪುಂಸ್' ಶಬ್ದದ ರೂಪಗಳು**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಸುಪುಮ್ | ಸುಪುಂಸೀ | ಸುಪುಮಾಂಸಿ |
| ದ್ವಿತೀಯಾ | ಸುಪುಮ್ | ಸುಪುಂಸೀ | ಸುಪುಮಾಂಸಿ |
| ತೃತೀಯಾ | ಸುಪುಂಸಾ | ಸುಪುಮ್ಭ್ಯಾಮ್ | ಸುಪುಮ್ಭಿಃ |
| ಚತುರ್ಥೀ | ಸುಪುಂಸೇ | ಸುಪುಮ್ಭ್ಯಾಮ್ | ಸುಪುಮ್ಭ್ಯಃ |
| ಪಞ್ಚಮೀ | ಸುಪುಂಸಃ | ಸುಪುಮ್ಭ್ಯಾಮ್ | ಸುಪುಮ್ಭ್ಯಃ |
| ಷಷ್ಠೀ | ಸುಪುಂಸ | ಸುಪುಂಸೋಃ | ಸುಪುಂಸಾಮ್ |
| ಸಪ್ತಮೀ | ಸುಪುಂಸಿ | ಸುಪುಂಸೋಃ | ಸುಪುಂಸು |
| ಸಮ್ಬೋಧನ | ಹೇ ಸುಪುಮ್! | ಹೇ ಸುಪುಂಸೀ! | ಹೇ ಸುಪುಮಾಂಸಿ! |

ಉದಾ– ಅದಃ(ಕೆಳಗೆ) – ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ–ಏಕಚನಗಳಲ್ಲಿ ಅದಸ್+ಸು(ಸ್) ಮತ್ತು ಅದಸ್+ಅಮ್ ಎಂದಿದ್ದಾಗ, "ಸ್ವಮೋರ್ನಪುಂಸಕಾತ್" ಎಂಬುದರಿಂದ 'ಸು' ಮತ್ತು 'ಅಮ್' ಗಳು ಲೋಪವಾಗಿ ಅದಸ್ ಎಂದಿದ್ದಾಗ, ರುತ್ವ–ವಿಸರ್ಗಗಳಿಂದ ಅದಃ ಎಂಬ ರೂಪಗಳು ಸಿದ್ಧವಾಗುತ್ತವೆ.

[ವಿಶೇಷ– ವಿಭಕ್ತಿಪ್ರತ್ಯಯ 'ಸು(ಸ್)' ಗೆ ಲೋಪ ಬಂದ ಮೇಲೆ ವಿಭಕ್ತಿ ಪ್ರತ್ಯಯವು ಇಲ್ಲದೇ ಇರುವುದರಿಂದ "ತ್ಯದಾದೀನಾಮಃ(7–2–102)"ಸೂತ್ರದಿಂದ ಅತ್ವ, ಹಾಗೂ ಸಾನ್ತವಾಗಿರುವುದರಿಂದ "ಅದಸೋಽಸೇರ್ದಾದು ದೋಮಃ(8–2–80)" ಸೂತ್ರದಿಂದ ಉತ್ವ ಮತ್ವಗಳೂ ಬರುವುದಿಲ್ಲ].

ಉದಾ– ಅಮೂ– ಪ್ರಥಮಾ ಮತ್ತು ದ್ವಿತೀಯಾ ವಿಭಕ್ತೀ ದ್ವಿಚನಗಳಲ್ಲಿ ಅದಸ್+ಔ ಮತ್ತು ಅದಸ್+ಔಟ್(ಔ) ಎಂದಿದ್ದಾಗ, "ನಪುಂಸಕಾಚ್ಚ(7–1–19)" ಸೂತ್ರದಿಂದ 'ಔ' ಗೆ ಶೀ(ಈ) ಆದೇಶ ಬಂದು ಅದಸ್+ಈ ಎಂದಿದ್ದಾಗ, "ತ್ಯದಾದಿನಾಮಃ(7–2–102)" ಸೂತ್ರದಿಂದ 'ಸ್' ಕಾರಕ್ಕೆ 'ಅ' ಕಾರ ಬಂದು ಅದ+ಅ+ಈ ಎಂದಿದ್ದಾಗ, "ಅತೋಗುಣೇ(6–1–97)" ಸೂತ್ರದಿಂದ ಪರರೂಪ ಬಂದು ಅದ+ಈ ಎಂದಾಗುತ್ತದೆ.

ನಂತರ ಗುಣ ಬಂದು, ಅದೇ ಎಂದಾಗುತ್ತದೆ. "ಅದಸೋऽಸೇರ್ದಾದು ದೋಮಃ(8–2–80)" ಸೂತ್ರದಿಂದ 'ದ್' ಕಾರಕ್ಕೆ ಮತ್ವ(ಮ್), 'ಏ' ಕಾರಕ್ಕೆ ಊತ್ವ(ಊ), ಬಂದು ಅಮೂ ಎಂಬ ರೂಪಗಳು ಸಿದ್ಧವಾಗುತ್ತವೆ.

ಉದಾ– ಅಮೂನಿ– ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿ–ಬಹುವಚನಗಳಲ್ಲಿ ಅದಸ್+ಜಸ್(ಅಸ್) ಮತ್ತು ಅದಸ್+ಶಸ್(ಅಸ್) ಎಂದಿದ್ದಾಗ, "ಜಶ್ಶಸೋಃ ಶಿಃ" ಶಿ(ಇ) ಆದೇಶ ಬಂದು, ಅದಸ್+ಇ ಎಂದಿದ್ದಾಗ, ಹಿಂದಿನಂತೆ ತ್ಯದಾದ್ಯತ್ವ ಮತ್ತು ಪರರೂಪಗಳು, ಹಾಗೆಯೇ "ನಪುಂಸಕಸ್ಯ ಝಲಚಃ(7–1–72)" ಸೂತ್ರದಿಂದ 'ನುಮ್(ನ್)' ಆಗಮ ಬಂದು, ಅದ+ನ್+ಇ ಎಂದಿದ್ದಾಗ, "ಸರ್ವನಾಮಸ್ಥಾನೇ ಚಾಸಮ್ಬುದ್ಧೌ" ಎಂಬ ಸೂತ್ರದಿಂದ 'ದ್' ಕಾರೋತ್ತರ 'ಅ' ಕಾರಕ್ಕೆ 'ಉಪಧಾ–ದೀರ್ಘ' ಬಂದು, ಅದಾ+ನ್+ಇ=ಅದಾನಿ ಎಂದಿರುತ್ತದೆ. "ಅದಸೋऽಸೇರ್ದಾದು ದೋಮಃ(8–2–80)" ಸೂತ್ರದಿಂದ 'ದ್' ಕಾರಕ್ಕೆ ಮತ್ವ(ಮ್), 'ಆ' ಕಾರಕ್ಕೆ ಊತ್ವ(ಊ), ಬಂದು ಅಮೂನಿ ಎಂದು ರೂಪಗಳು ಸಿದ್ಧವಾಗುತ್ತವೆ.

ಸೂಚನೆ –ತೃತೀಯಾ ವಿಭಕ್ತಿಯಿಂದ ಉಳಿದ ಎಲ್ಲ ವಿಭಕ್ತಿಗಳ ರೂಪಗಳು ಪುಲ್ಲಿಂಗದಂತೆಯೇ ಸಿದ್ಧವಾಗುತ್ತದೆ.

**'ಸ್'ಕಾರಾನ್ತ ನಪುಂಸಕ ಲಿಂಗದ 'ಅದಸ್' ಶಬ್ದದ ರೂಪಗಳು**

| ವಿಭಕ್ತಿ | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮಾ | ಅದಃ | ಅಮೂ | ಅಮೂನಿ |
| ದ್ವಿತೀಯಾ | ಅದಃ | ಅಮೂ | ಅಮೂನಿ |
| ತೃತೀಯಾ | ಅಮುನಾ | ಅಮೂಭ್ಯಾಮ್ | ಅಮೀಭಿಃ |
| ಚತುರ್ಥೀ | ಅಮುಷ್ಮೈ | ಅಮೂಭ್ಯಾಮ್ | ಅಮೀಭ್ಯಃ |
| ಪಞ್ಚಮೀ | ಅಮುಷ್ಮಾತ್ | ಅಮೂಭ್ಯಾಮ್ | ಅಮೀಭ್ಯಃ |
| ಷಷ್ಠೀ | ಅಮುಷ್ಯ | ಅಮುಯೋಃ | ಅಮೀಷಾಮ್ |
| ಸಪ್ತಮೀ | ಅಮುಷ್ಮಿನ್ | ಅಮುಯೋಃ | ಅಮೀಷು |
| ಸಮ್ಬೋಧನ | ಇದಕ್ಕೆ ಸಂಬೋಧನ ರೂಪ ಇರುವುದಿಲ್ಲ. | | |

**॥ ಇತಿ ಹಲನ್ತಾಃ ನಪುಂಸಕ ಲಿಙ್ಗಾಃ ಶಬ್ದಾಃ॥**

**ಇಲ್ಲಿಗೆ 'ಸ್' ಕಾರಾನ್ತ ನಪುಂಸಕಲಿಂಗ ಶಬ್ದಗಳು ಮುಗಿದವು.**

**ಇಲ್ಲಿಗೆ ಹಲಂತ ನಪುಂಸಕಲಿಂಗ ಪ್ರಕರಣ(10)ವು ಮುಗಿಯಿತು.**

**ಇಲ್ಲಿಗೆ ಷಡ್ಲಿಙ್ಗೆಯ 6 ಪ್ರಕರಣಗಳು ಮುಗಿದವು.**

# 11. ಅವ್ಯಯ ಪ್ರಕರಣಮ್

(ಸೂತ್ರ 368-372/2 ರವರೆಗೆ)

(ಅವ್ಯಯ ಸಂಜ್ಞೆಯನ್ನು ವಿಧಿಸುವ ಪ್ರಥಮ ಸೂತ್ರ)

**ಸೂತ್ರ - 368. ಸ್ವರಾದಿ-ನಿಪಾತಮವ್ಯಯಮ್(1.2.37)**

ವೃತ್ತಿಃ- ಸ್ವರಾದಯಃ ನಿಪಾತಾಶ್ಚ ಅವ್ಯಯ-ಸಂಜ್ಞಾಃ ಸ್ಯುಃ।

1. ಸ್ವರ್। 2. ಅಂತರ್। 3. ಪ್ರಾತರ್। 4. ಪುನರ್। 5. ಸನುತರ್। 6. ಉಚ್ಚೈಸ್। 7. ನೀಚೈಸ್। 8. ಶನೈಸ್। 9. ಋಧಕ್। 10. ಋತೇ। 11. ಯುಗಪತ್। 12. ಆರಾತ್। 13. ಪೃಥಕ್। 14. ಹ್ಯಸ್। 15. ಶ್ವಸ್। 16. ದಿವಾ 17. ರಾತ್ರೌ 18. ಸಾಯಮ್ 19. ಚಿರಮ್ 20. ಮನಾಕ್ 21. ಈಷತ್ 22. ಜೋಷಮ್ 23. ತೂಷ್ಣೀಮ್ 24. ಬಹಿಸ್ 25. ಅವಸ್ 26. ಅಧಸ್ 27. ಸಮಯಾ 28. ನಿಕಷಾ 29. ಸ್ವಯಮ್ 30. ವೃಥಾ 31. ನಕ್ತಮ್ 32. ನ 33. ನಞ್ 34. ಹೇತೌ 35. ಇದ್ಧಾ 36. ಅದ್ಧಾ 37. ಸಾಮಿ 38. ವತ್ 39. ಬ್ರಾಹ್ಮಣವತ್ 40. ಕ್ಷತ್ರಿಯವತ್ 41. ಸನಾ 42. ಸನತ್ 43. ಸನಾತ್ 44. ಉಪಧಾ 45. ತಿರಸ್ 46. ಅಂತರಾ 47. ಅಂತರೇಣ 48. ಜ್ಯೋಕ್ 49. ಕಮ್ 50. ಶಮ್ 51. ಸಹಸಾ 52. ವಿನಾ 53. ನಾನಾ 54. ಸ್ವಸ್ತಿ 55. ಸ್ವಧಾ 56. ಅಲಮ್ 57. ವಷಟ್ 58. ಶ್ರೌಷಟ್ 59. ವೌಷಟ್ 60. ಅನ್ಯತ್ 61. ಅಸ್ತಿ 62. ಉಪಾಂಶು 63. ಕ್ಷಮಾ 64. ವಿಹಾಯಸಾ 65. ದೋಷಾ 66. ಮೃಷಾ 67. ಮಿಥ್ಯಾ 68. ಮುಧಾ 69. ಪುರಾ 70. ಮಿಥೋ 71. ಮಿಥಸ್ 72. ಪ್ರಾಯಸ್ 73. ಮುಹುಸ್ 74. ಪ್ರವಾಹುಕಮ್ 75. ಪ್ರವಾಹಿಕಾ 76. ಆರ್ಯಹಲಮ್ 77. ಅಭೀಕ್ಷ್ಣಮ್ 78. ಸಾಕಮ್ 79. ಸಾರ್ಧಮ್ 80. ನಮಸ್ 81. ಹಿರುಕ್ 82. ಧಿಕ್ 83. ಅಥ 84. ಅಮ್ 85.ಆಮ್ 86. ಪ್ರತಾಮ್ 87. ಪ್ರಶಾನ್(ಪ್ರತಾನ್) 88. ಮಾ 89. ಮಾಙ್ ॥ ಆಕೃತಿಗಣೋಽಯಮ್)॥

ನಿಪಾತಾಃ-

90. ಚ। 91. ವಾ। 92. ಹ। 93. ಅಹ। 94. ಏವ। 95. ಏವಮ್। 96. ನೂನಮ್। 97. ಶಶ್ವತ್। 98. ಯುಗಪತ್। 99. ಭೂಯಸ್। 100. ಕೂಪತ್। 101. ಸೂಪತ್ 102. ಕುವಿತ್ 103. ನೇತ್ 104. ಚೇತ್ 105. ಚಣ್ 106. ಯತ್ರ 107. ಕಚ್ಚಿತ್। 108. ನಹ। 109. ಹನ್ತ। 110. ಮಾಕಿಃ। 111. ಮಾಕಿಮ್। 112. ನಕಿಃ। 113. ನಕಿಮ್। 114. ಮಾಙ್ 115. ನಞ್ 116. ಯಾವತ್ 117. ತಾವತ್ 118. ತ್ವೈ 119. ನ್ವೈ। 120. ದ್ವೈ। 121. ರೈ। 122. ಶ್ರೌಷಟ್। 123. ವೌಷಟ್। 124. ಸ್ವಾಹಾ। 125. ಸ್ವಧಾ। 126. ವಷಟ್। 127. ತುಮ್। 128. ತಥಾಹಿ। 129. ಖಲು। 130. ಕಿಲ। 131. ಅಥೋ। 132. ಅಥ। 133. ಸುಷ್ಠು 134. ಸ್ಮ 135. ಆದಹ।

## (ವಾ।। ಉಪಸರ್ಗ-ವಿಭಕ್ತಿ-ಸ್ವರ-ಪ್ರತಿರೂಪಕಾಶ್ಚ)

136. ಅವದತ್ತಮ್। 137. ಅಹಂಯುಃ। 138. ಅಸ್ತಿಕ್ಷೀರಾ। 139. ಅ। 140. ಆ। 141. ಇ। 142. ಈ। 143. ಉ। 144. ಊ। 145. ಏ। 146. ಐ। 147. ಓ। 148. ಔ। 149. ಪಶು। 150. ಶುಕಮ್। 151. ಯಥಾಕಥಾಚ। 152. ಪಾಟ್। 153. ಪ್ಯಾಟ್। 154. ಅಙ್ಗ। 155. ಹೈ। 156. ಹೇ। 157. ಭೋಃ। 158. ಅಯೇ। 159. ದ್ಯ। 160. ವಿಷು। 161. ಏಕಪದೇ। 162. ಯುತ್। 163. ಆತಃ। ಚಾದಿರಾಕೃತಿಗಣಃ.

ಪ. ಛೇ. –ಸ್ವರಾದಿನಿಪಾತಮ್, ಅವ್ಯಯಮ್।

ಅರ್ಥ – 'ಸ್ವರ್' ಮೊದಲಾದ (ಸ್ವರಾದಿ ಗಣ ಪಠಿತ) ಶಬ್ದಗಳು ಮತ್ತು 'ನಿಪಾತ' ಸಂಜ್ಞೆಯುಳ್ಳ ಶಬ್ದಗಳು– ಇವು 'ಅವ್ಯಯ' ಸಂಜ್ಞೆಯನ್ನು ಪಡೆಯುತ್ತವೆ.ಅವ್ಯಯ ಸಂಜ್ಞೆಯನ್ನು ಪಡೆಯುವುದರಿಂದ "ಅವ್ಯಯಾದಾಪ್ಸುಪಃ(2–4–82)" ಸೂತ್ರದಿಂದ 'ಆಪ್' ಮತ್ತು 'ಸುಪ್'ಗಳಿಗೆ 'ಲೋಪ' ಬರುತ್ತದೆ.

ಸ್ವರಾದಿ– 'ಸ್ವರ್' ಶಬ್ದವು ಮೊದಲನೇಯ ಶಬ್ದವಾಗಿ ಪರಿಗಣಿಸಲ್ಪಟ್ಟಿದೆ. ವೃತ್ತಿಯಲ್ಲಿ ಸ್ವರಾದಿ ಶಬ್ದಗಳನ್ನು ಪಠಿಸಲಾಗಿವೆ. ಅವುಗಳ ಅರ್ಥವು ಕ್ರಮವಾಗಿ ಹೀಗಿವೆ.

ಸೂಚನೆ – 'ಸ್ವರಾದಿ'ಗೇನೇ 'ಆಕೃತಿ–ಗಣ'ವೆಂದು ಹೆಸರು. ಇದರಲ್ಲಿ ಬೇರೆ ಶಬ್ದಗಳಿರುತ್ತವೆ. ಇವುಗಳ ಪ್ರಯೋಗದಲ್ಲಿ ವೈಶಿಷ್ಟ್ಯವನ್ನು ಕಾಣಬಹುದು.

1.ಸ್ವರ್–ಸ್ವರ್ಗ; 2. ಅನ್ತರ್–ಒಳಗೆ; 3.ಪ್ರಾತರ್–ಬೆಳಗ್ಗೆ, 4.ಪುನರ್–ಮತ್ತೆ; 5.ಸನುತರ್–ಅನ್ತರ್ಧಾನ; 6.ಉಚ್ಚೈಸ್–ದೊಡ್ಡ ಧ್ವನಿಯಿಂದ/ಮೇಲೆ 7.ನೀಚೈಸ್–ಕೆಳಗೆ, ಅಲ್ಪ; 8. ಶನೈಸ್–ಮೆಲ್ಲನೆ; 9.ಋಧಕ್–ಸತ್ಯ; 10.ಋತೇ–ಬಿಟ್ಟು(ಹೊರತು); 11.ಯುಗಪತ್–ಏಕಕಾಲದಲ್ಲಿ; 12.ಆರಾತ್–ದೂರ/ಸಮೀಪ; 13.ಪೃಥಕ್–ಬೇರೆ/ಅನ್ಯ; 14.ಹ್ಯಸ್–ನಿನ್ನೆ; 15.ಶ್ವಸ್–ನಾಳೆ; 16.ದಿವಾ–ಹಗಲು; 17.ರಾತ್ರೌ–ರಾತ್ರಿಯಲ್ಲಿ; 18.ಸಾಯಮ್–ಸಾಯಂಕಾಲ; 19.ಚಿರಮ್–ಬಹುಕಾಲ; 20.ಮನಾಕ್–ಸ್ವಲ್ಪ; 21.ಈಷತ್–ಸ್ವಲ್ಪ; 22. ಜೋಷಮ್–ಸುಖ/ಮೌನ; 23.ತೂಷ್ಣೀಮ್–ಮೌನ; 24.ಬಹಿಸ್–ಹೊರಗೆ; 25.ಅವಸ್–ಹೊರಗೆ; 26.ಅಧಸ್–ಕೆಳಗೆ; 27.ಸಮಯಾ–ಹತ್ತಿರ; 28.ನಿಕಷಾ–ಸಮೀಪ; 29.ಸ್ವಯಮ್–ತಾನಾಗಿ; 30.ವೃಥಾ–ವ್ಯರ್ಥ; 31.ನಕ್ತಮ್–ರಾತ್ರಿ; 32.ನಞ್–ಇಲ್ಲ,/ನಿಷೇಧ; 33. ಹೇತೌ–ನಿಮಿತ್ತ/ಕಾರಣ; 34.ಇದ್ಧಾ–ಪ್ರಕಟ,(ಸ್ಪಷ್ಟ); 35.ಅದ್ಧಾ–ವಾಸ್ತವವಾಗಿ, ನಿಜವಾಗಿ; 36.ಸಾಮಿ–ಅರ್ಧ; 37.ವತ್–ಸಾದೃಶ್ಯಾರ್ಥಕಪ್ರತ್ಯಯ(ಅನ್ತೆ); (38.ಬ್ರಾಹ್ಮಣವತ್–ಬ್ರಾಹ್ಮಣನಂತೆ) (39.ಕ್ಷತ್ರಿಯವತ್–ಕ್ಷತ್ರಿಯನಂತೆ) 40.ಸನಾ, ಸನತ್, ಸನಾತ್–ಸದಾ, ಯಾವಾಗಲೂ; 41.ಉಪಧಾ–ಭೇದ; 42.ತಿರಸ್–ಅನ್ತರ್ಧಾನ,ಅಡ್ಡ, ತಿರಸ್ಕಾರ; 43.ಅನ್ತರಾ–ಮಧ್ಯ, ಬಿಟ್ಟು; 44.ಅನ್ತರೇಣ–ಬಿಟ್ಟು; 45.ಜ್ಯೋಕ್–ಕಾಲಾಧಿಕ್ಯ, ಪ್ರಶ್ನೆ, ಶೀಘ್ರ, ಈಗ; 46.ಕಮ್–ನೀರು,ತಲೆ, ನಿಂದಾ, ಸುಖ; 47.ಶಮ್–ಸುಖ; 48.ಸಹಸಾ–ಆಕಸ್ಮಿಕ, ಅವಿಮರ್ಶ; 49.ವಿನಾ–ವರ್ಜ(ಬಿಟ್ಟು); 50.ನಾನಾ–ಅನೇಕ,ಬಿಟ್ಟು; 51.ಸ್ವಸ್ತಿ–ಮಂಗಳ,ಕಲ್ಯಾಣ;

52.ಸ್ವಧಾ–ಪಿತೃಗಳಿಗೆದಾನ 53.ಅಲಂ–ಅಲಂಕಾರ,ಸಾಕಷ್ಟು; 54. ವಷಟ್, ಶ್ರೌಷಟ್, ವೌಷಟ್– ವೈದಿಕ ಪ್ರಯೋಗ(ಆಹುತಿ ಸೂಚಕ) ಮಾಡುವಾಗ ಉಚ್ಚರಿಸುವ ಶಬ್ದ;ಶಕ್ತಿ,ನಿಷೇಧ,ತಡೆ; 55.ಅನ್ಯತ್–ಅನ್ಯ,ಅತಿರಿಕ್ತ,ಬೇರೆ; 56.ಅಸ್ತಿ–ವಿದ್ಯಮಾನ,ಇರುವಿಕೆ; 57.ಉಪಾಂಶು– ನಿದಾನೋಚ್ಚಾರಣೆ,ರಹಸ್ಯ; 58.ಕ್ಷಮಾ–ಸಹನೆ; 59.ವಿಹಾಯಸಾ–ಆಕಾಶ; 60.ದೋಷಾ–ರಾತ್ರಿ; 61.ಮೃಷಾ–ಅಸತ್ಯ,ಸುಳ್ಳು; 62.ಮಿಥ್ಯಾ–ಅಸತ್ಯ,ಸುಳ್ಳು; 63.ಮುಧಾ–ವ್ಯರ್ಥ; 64.ಪುರಾ–ಸತತ, ಬಹುಕಾಲದ ಹಿಂದೆ; 65.ಮಿಥೋ–ಏಕಾನ್ತ,ಬಿಟ್ಟು; 66.ಮಿಥಸ್–ಪರಸ್ಪರ, ಒಟ್ಟಿಗೆ; ಮುಂದೆ ಆಗುವುದು,ಆಸನ್ನವಾದುದು; 67.ಪ್ರಾಯಸ್ – ಸಾಮಾನ್ಯ; 68.ಮುಹುಸ್–ಪುನಃಪುನಃ; 69.ಪ್ರವಾಹುಕಮ್ – ಆ ಸಮಯದಲ್ಲಿ; 70.ಪ್ರವಾಹಿಕಾ–ಸಮಾನಕಾಲ, ಮೇಲೆ; 71.ಆರ್ಯಹಲಮ್–ಬಲಾತ್ಕಾರ; 72.ಅಭೀಕ್ಷ್ಣಮ್– ನಿರನ್ತರ, ಪೌನಃಪುನ್ಯ; 73.ಸಾಕಮ್ – ಒಟ್ಟಿಗೆ; 74.ಸಾರ್ಧಮ್–ಒಟ್ಟಿಗೆ; 75.ನಮಸ್–ನಮಸ್ಕಾರ,ಬಗ್ಗಿರುವಿಕೆ; 76.ಹಿರುಕ್–ವರ್ಜನ(ಬಿಟ್ಟಿರುವಿಕೆ); 77.ಧಿಕ್–ನಿಂದಾ, ಧಿಕ್ಕರಿಸುವಿಕೆ; 78.ಅಥ–ಆರಂಭ, ಆಮೇಲೆ; 79.ಅಮ್–ಶೀಘ್ರ, ಅಲ್ಪ; 80.ಆಮ್–ಅಙ್ಗೀಕಾರ; 81.ಪ್ರತಾಮ್–ಬಾಡುವಿಕೆ; 82.ಪ್ರಶಾನ್–ತುಲ್ಯ, ಸಮಾನ; 83. ಪ್ರತಾನ್ – ತುಲ್ಯ, (ವಿಸ್ತಾರ) 84.ಮಾ–ನಿಷೇಧ, ಆಶಙ್ಕೆ; 85. ಮಾಙ್–ನಿಷೇಧ, ಆಶಙ್ಕೆ.

ಸೂಚನೆ – ಆಕೃತಿಗಣೋಽಯಮ್– 'ಸ್ವರಾದಿ'ಗಣಕ್ಕೇನೇ 'ಆಕೃತಿ–ಗಣ'ವೆಂದು ಹೆಸರು. ಇದರಲ್ಲಿ ಬೇರೆ ಶಬ್ದಳಿರುತ್ತವೆ. ಇವುಗಳ ಪ್ರಯೋಗದಲ್ಲಿ ವೈಶಿಷ್ಟ್ಯವನ್ನು ಕಾಣಬಹುದು. 'ಆಕೃತಿ'ಯಿಂದ ಇದರಂತೆ ಇರುವ ಇತರ ಶಬ್ದಗಳೂ 'ಅವ್ಯಯ'ವೆಂದು ಊಹಿಸಿಕೊಳ್ಳಬೇಕು.

ಪರಂ–ಆದರೆ; ಸಾಕ್ಷಾತ್–ಪ್ರತ್ಯಕ್ಷ; ಸಾಚಿ–ಅಡ್ಡಲಾಗಿ; ಸತ್ಯಂ–ಅರ್ಧ ಅಙ್ಗೀಕಾರ; ಮಙ್ಕ್ಷು/ಆಶು–ಬೇಗ; ಸಂವತ್–ವರ್ಷ; ಅವಶ್ಯಮ್–ನಿಶ್ಚಯ; ಉಷಾ–ರಾತ್ರಿ; ಓಂ–ಅಙ್ಗೀಕಾರ,ಬ್ರಹ್ಮ; ಭೂಃ–ಭೂಮಿ; ಭುವಃ–ಅನ್ತರಿಕ್ಷ; ಝಟಿತಿ/ಝುಕ್/ತರಸಾ–ಬೇಗ; ಸುಷ್ಠು–ಪ್ರಶಂಸೆ; ದುಷ್ಠು–ನಿಷ್ಕೃಷ್ಟ; ಸು–ಪೂಜಾ; ಕು–ಕುತ್ಸಿತ, ಸ್ವಲ್ಪ; ಅಂಜಸಾ–ಬೇಗ, ತತ್ತ್ವ; ಮಿಥು–ಎರಡು; ಅಸ್ತಂ–ವಿನಾಶ; ಸ್ಥಾನೇ–ಯುಕ್ತ; ವರಂ–ಸ್ವಲ್ಪ,ಉತ್ಕರ್ಷ; ಸುದಿ–ಶುಕ್ಲಪಕ್ಷ; ವದಿ–ಕೃಷ್ಣ,ಪಕ್ಷ.

ವೃತ್ತಿಯಲ್ಲಿ ಹೇಳಿರುವ 'ಚ' ಮೊದಲಾದ 'ನಿಪಾತ' ಗಳಿಗೂ ಅರ್ಥವನ್ನು ಕ್ರಮವಾಗಿ ಕೊಡಲಾಗಿದೆ.

ಚ–ಸಮುಚ್ಚಯ,ಅನ್ವಾಚಯ,ಇತರೇತರಯೋಗ,ಸಮಾಹಾರ; ವಾ–ವಿಕಲ್ಪ, ಉಪಮಾ, ಸಾದೃಶ್ಯ, ಸಮುಚ್ಚಯ; ಹ–ಪ್ರಸಿದ್ಧಿ; ಅಹ–ಆಶ್ಚರ್ಯ; ಏವ–ನಿಶ್ಚಯ,

ಅನಿಶ್ಚಯ; ಏವಮ್– ಈ ರೀತಿಯಾಗಿ; ನೂನಮ್ – ತರ್ಕ, ನಿಶ್ಚಯ; ಶಶ್ವತ್ – ನಿತ್ಯ, ಪುನಃಪುನಃ,– ಒಟ್ಟಿಗೆ; ಯುಗಪತ್–ಏಕಕಾಲದಲ್ಲಿ; ಭೂಯಸ್–ಪುನಃ; ಕೂಪತ್–ಪ್ರಶ್ನೆ, ಪ್ರಶಂಸಾ; ಕುವಿತ್–ಅಧಿಕ, ಪ್ರಶಂಸಾ; ನೇತ್–ಶಙ್ಕೆ, ನಿಷೇಧ, ವಿಚಾರ, ಸಮುಚ್ಚಯ; ಚೇತ್–ರೆ(ಆದರೆ); ಚಣ್–ಒಂದು ವೇಳೆ(ರೆ); ಕಚ್ಚಿತ್–ಇಷ್ಟಪ್ರಶ್ನೆ; ಯತ್ರ–

ಅನಿಶ್ಚಿತ ಪ್ರದೇಶ, ಅಮರ್ಷ, ನಿಂದಾ, ಆಶ್ಚರ್ಯ; ನಹ-ಪ್ರತ್ಯಾರಮ್ಭ; ಹನ್ತ-ಹರ್ಷ, ವಿಷಾದ, ಅನುಕಮ್ಪ, ವಾಕ್ಯಾರಮ್ಭ; ಮಾಕಿಃ/ ಮಾಕಿಮ್/ ಮಕಿಃ/ ನಕಿಮ್-ಬಿಟ್ಟು; ಮಾಙ್, ನಞ್ - ನಿಷೇಧ, ಸ್ವರಾದ್ಯುಕ್ತಿ; ಯಾವತ್, ತಾವತ್-ಪೂರ್ತಿ, ಅವಧಿ, ಪರಿಮಾಣ, ನಿಶ್ಚಯ; ತ್ವೈ - ವಿಶೇಷ, ವಿತರ್ಕ; ದ್ವೈ-ವಿತರ್ಕ; ನ್ವೈ-ವಿತರ್ಕ, ಇದು ಪಾಠಾನ್ತರ. ರೈ-ದಾನ, ಅನಾದರ; ಶ್ರೌಷಟ್, ವೌಷಟ್, ಸ್ವಾಹಾ - ಸ್ವರಾದ್ಯುಕ್ತಿಯಲ್ಲಿ ಬರುತ್ತದೆ. ಸ್ವಾಹಾ-ದೇವತಾದಾನದಲ್ಲಿ ಹೇಳುವುದು. ಸ್ವಧಾ-ಪಿತೃಗಳ ದಾನದಲ್ಲಿ ಹೇಳುವುದು; ವಷಟ್-ಮನ್ತ್ರದಲ್ಲಿ ಹೇಳುವುದು; ತುಮ್ - ತುಚ್ಛೀಕರಿಸಿ ಹೇಳುವಾಗ ಉಪಯೋಗಿಸುವುದು; ತಥಾಹಿ-ನಿದರ್ಶನ ಹೇಳುವಾಗ ಬರುವುದು; ಖಲು-ನಿಷೇಧ, ವಾಕ್ಯಾಲಙ್ಕಾರ, ನಿಶ್ಚಯ; ಕಿಲ-ವಾರ್ತಾದಲ್ಲಿ, ಸುಳ್ಳು; ಅಥೋ-ಆರಮ್ಭ, ಅನನ್ತರ; ಅಥ-ಮಙ್ಗಲ, ಅನನ್ತರ, ಆರಮ್ಭ, ಪ್ರಶ್ನ, ಪೂರ್ತಿ, ಅಧಿಕಾರ, ಪ್ರತಿಜ್ಞಾ, ಸಮುಚ್ಚಯ; ಸುಷ್ಠು-ಸುನ್ದರ, ಪ್ರಶಮ್ಸಾ; ಸ್ಮ-ಕಳೆದುದು, ಭೂತಕಾಲದಲ್ಲಿ ಬರುವುದು; ಆದಹ-ಉಪ್ರಕಮ, ಹಿಮ್ಸಾ, ನಿಂದಿತ.

**ವಾ॥ಉಪಸರ್ಗ-ವಿಭಕ್ತಿ-ಸ್ವರ-ಪ್ರತಿರೂಪಕಾಶ್ಚ॥**

ಅವದತ್ತಮ್-,ಅಹಂಯುಃ- ಅಸ್ತಿಕ್ಷೀರಾ-, ಅ-, ಆ-, ಇ-, ಈ-, ಉ, ಊ, ಏ, ಐ, ಓ-, ಆಶು-, ಶುಕಮ್- ಯಥಾಕಥಾಚ-, ಪಾಟ್, ಪ್ಯಾಟ್-, ಅಙ್ಗ-ಹೈ, ಹೇ, ಭೋಃ ಅಯೇ-, ದ್ಯ-, ವಿಷು-, ಏಕಪದೇ-, ಯುತ್-, ಆತಃ-ಚಾದಿರಾಕೃತಿಗಣಃ.

**(ಅವ್ಯಯ ಸಂಜ್ಞೆಯನ್ನು ವಿಧಿಸುವ ದ್ವಿತೀಯ ಸೂತ್ರ)**

**ಸೂತ್ರ - 369. ತದ್ಧಿತಶ್ಚಾಸರ್ವವಿಭಕ್ತಿಃ ( 1.1.38)**

ವೃತ್ತಿಃ- ಯಸ್ಮಾತ್ ಸರ್ವಾ ವಿಭಕ್ತಿಃ ನ ಉತ್ಪದ್ಯತೇ ಸ ತದ್ಧಿತಾಂತೋಽವ್ಯಯಮ್ ಸ್ಯಾತ್।

ವಾ॥ **ಪರಿಗಣನಮ್ ಕರ್ತವ್ಯಮ್**

ತಸಿಲಾದಯಃ ಪ್ರಾಕ್ಪಾಶಪಃ। ಶಸ್-ಪ್ರಭೃತಯಃ ಪ್ರಾಕ್ ಸಮಾಸಾಂತೇಭ್ಯಃ। ಅಮ್। ಆಮ್। ಕೃತ್ವೋಽರ್ಥಾಃ। ತಸಿವತೀ। ನಾ-ನಾಞೌ। ಏತದಂತಮಪಿ ಅವ್ಯಯಮ್। ಅತಃ ಇತ್ಯಾದಿ।

ಪ.ಛೇ. - ತದ್ಧಿತಃ, ಚ, ಅಸರ್ವ-ವಿಭಕ್ತಿಃ।

ಅ.ವೃ.-"ಸ್ವರಾದಿನಿಪಾತಮವ್ಯಯಮ್(1-1-37)" ಸೂತ್ರದಿಂದ 'ಅವ್ಯಯಮ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ-ಯಾವ ಶಬ್ದದ ಮೇಲೆ ಎಲ್ಲ ವಿಭಕ್ತಿಗಳ ರೂಪಗಳು ಬರುವುದಿಲ್ಲವೋ, ಅಂತಹ 'ತದ್ಧಿತಾನ್ತ' ಶಬ್ದಗಳಿಗೂ ಕೂಡ 'ಅವ್ಯಯ-ಸಂಜ್ಞೆಯು' ಬರುತ್ತದೆ.

"ಅಸರ್ವ ವಿಭಕ್ತಿಃ" ಎಂಬುದಕ್ಕೆ "ಸರ್ವ ವಿಭಕ್ತಿಗಳು ಬಾರದೇ ಇರುವ" ಎಂದು ಅರ್ಥ. ಆದರೆ ಅವ್ಯಯಗಳಿಗಿಂತ ಕೂಡ ಎಲ್ಲ ವಿಭಕ್ತಿಗಳೂ ಸ್ವೀಕರಿಸಲ್ಪಟ್ಟಿವೆಯಾದ್ದರಿಂದ,

ಆ ಅರ್ಥವೂ ಸರಿಯಾದದ್ದಲ್ಲ. ಆದರೆ, ಅವ್ಯಗಳ ನಂತರ ಏಕವಚನವಿಭಕ್ತಿಪ್ರತ್ಯಯಗಳು ಮಾತ್ರ ಸೇರಿಸಲಾಗುವವು ಎಂದು ಮಹಾಭಾಷ್ಯದಲ್ಲಿ ಹೇಳಿರೋಣದ್ದರಿಂದ "ಎಲ್ಲವಿಭಕ್ತಿಗಳೂ ಬಾರದಿರುವ" ಎಂದು ಅರ್ಥಮಾಡಲಾಗಿದೆ.

ಇಂತಹ ತದ್ಧಿತಪ್ರತ್ಯಯಾನ್ತ ಶಬ್ದಗಳಲ್ಲಿ ಕೂಡ ಕೆಲವು "ಪಚತಿ ರೂಪಮ್" "ಪಚತಿಕಲ್ಪಮ್" ಮೊದಲಾದವುಗಳಿಗೆ 'ಅವ್ಯಯ-ಸಂಜ್ಞೆಯು' ಯೋಗ್ಯವಾದದ್ದಲ್ಲ. ಆದುದರಿಂದ, ಅವ್ಯಯತ್ವವಿರುವ ಪ್ರತ್ಯಯಗಳ ಪರಿಗಣನೆ ಮಾಡಬೇಕು. "ಪಞ್ಚಮ್ಯಾಸ್ತಸಿಲ್(5.3.7)" ಎಂಬ ಸೂತ್ರದಿಂದ ಆರಂಭಿಸಿ "ಯಾಪ್ಯೇಪಾಶಪ್" (5.3.47) ಎಂಬ ಸೂತ್ರಕ್ಕೆ ಪೂರ್ವದಲ್ಲಿ ವಿಧಿಸಲಾದ ಪ್ರತ್ಯಯಗಳು, "ಬಹ್ವಲ್ಪಾರ್ಥಾ-ಚ್ಛಸ್ಕಾರಕಾದನ್ಯತರಸ್ಯಾಮ್ (5-4-42)" ಸೂತ್ರದಿಂದ ಆರಂಭಿಸಿ, "ಸಮಾಸಾನ್ತಾಃ (5-4-68)" ಸೂತ್ರಕ್ಕಿಂತ ಪೂರ್ವದಲ್ಲಿ ಹೇಳಲಾಗಿರುವ ಪ್ರತ್ಯಯಗಳು, "ಅಮು ಚ ಛ್ಛಂದಸಿ(5-4-12)" ಸೂತ್ರದಿಂದ ಹೇಳಲಾಗಿರುವ, 'ಅಮ್' ಪ್ರತ್ಯಯವು, "ಕಿಮೇತ್ತಿಙವ್ಯಯಘಾದಾಮ್ವದ್ರವ್ಯಪ್ರಕರ್ಷೇ(5-4-11)" ಸೂತ್ರದಿಂದ ವಿಧಿಸಲಾದ 'ಅಮ್' ಪ್ರತ್ಯಯವು, "ಸಂಖ್ಯಾಯಾಃ ಕ್ರಿಯಾಭ್ಯಾವೃತ್ತಿಗಣನೇಕೃತ್ವಸುಚ್(5-4-17)", "ದ್ವಿ - ತ್ರಿ - ಚತುರ್ಭ್ಯಃ ಸುಚ್(5-4-18)", "ವಿಭಾಷಾ ಬಹೋರ್ಧಾಽವಿಪ್ರಕೃಷ್ಟಕಾಲೇ(5-4-20)" ಎಂಬ ಮೂರು ಸೂತ್ರಗಳಿಂದ ವಿಹಿತವಾದ 'ಕೃತ್ವಸುಚ್', 'ಸುಚ್', 'ಧಾ' ಪ್ರತ್ಯಯಗಳು, "ತಸಿಶ್ಚ(4-3-113)" ಸೂತ್ರದಿಂದ ವಿಧಿಸಲಾದ 'ತಸಿ' ಪ್ರತ್ಯಯವು, ಮತ್ತು "ತೇನ ತುಲ್ಯಂ ಕ್ರಿಯಾಚೇದ್ವತಿ(5-1-115)" ಮತ್ತು "ತತ್ರ ತಸ್ಯೇವ(5-1-116)" ಸೂತ್ರಗಳಿಂದ ವಿಹಿತವಾದ 'ವತಿ' ಪ್ರತ್ಯಯವು, "ವಿ-ನಞಭ್ಯಾಂ ನಾ ನಾಞೌ ನ ಸಹ(5-2-27)" ಸೂತ್ರದಿಂದ ವಿಹಿತವಾದ 'ನಾ' ಮತ್ತು 'ನಾಞ' ಪ್ರತ್ಯಯಗಳು - ಈ 'ತದ್ಧಿತ' ಪ್ರತ್ಯಯಗಳನ್ನು ಅಂತವಾಗಿ ಉಳ್ಳ, 'ಅತಃ' ಇತ್ಯಾದಿ ಪದಗಳು ಅವ್ಯಯಗಳಾಗುವವು.

ಉದಾಹರಣೆ- 'ಇದಮ್' ಶಬ್ದಕ್ಕೆ 'ತಸಿಲ್' ಪ್ರತ್ಯಯವನ್ನು ಸೇರಿಸಿದಾಗ 'ಅತಃ' ಎಂಬ ರೂಪವನ್ನು ತಾಳುತ್ತದೆ. ಈ ಶಬ್ದದ ಅರ್ಥ 'ಇದರಿಂದ (ತೃತಿಯಾ)' ಅಥವಾ 'ಇದರದ್ವಾರಾ(ಪಞ್ಚಮೀ)' ಎಂದು. 'ಅತಃ' ಎಂಬ 'ತಸಿಲ್' ಪ್ರತ್ಯಯಾನ್ತ ಶಬ್ದದಿಂದ 'ತೃತೀಯಾ'(ಇಂದ) ಮತ್ತು 'ಪಞ್ಚಮೀ'(ಇದರ ದೆಸೆಯಿಂದ) ವಿಭಕ್ತಿಗಳ ಅರ್ಥ ಮಾತ್ರ ಸಿಗುವುದರಿಂದ ಉಳಿದ ವಿಭಕ್ತಿಗಳ ಪ್ರಯೋಗದ ಆವಶ್ಯಕತೆಯು ಕಂಡು ಬರುವುದಿಲ್ಲ. ಆದ್ದರಿಂದ 'ಅತಃ' ಎಂಬುದು 'ಅಸರ್ವವಿಭಕ್ತಿಕ' ವಾಗಿರುವುದರಿಂದ ಅಂತಹ ಶಬ್ದಗಳಿಗೆ 'ಅವ್ಯಯ-ಸಂಜ್ಞೆ'ಯು ಬರುತ್ತದೆ.

**(ಅವ್ಯಯ ಸಂಜ್ಞೆಯನ್ನು ವಿಧಿಸುವ ತೃತೀಯ ಸೂತ್ರ).**

**ಸೂತ್ರ - 370. ಕೃನ್ಮೇಜಂತಃ (1.1.39)**

ವೃತ್ತಿಃ-ಕೃದ್ ೦ಯೋ ಮಾಂತ ಏಜಂತಶ್ಚ ತದಂತಂ ಅವ್ಯ೦ಯಂ ಸ್ಯಾತ್। ಸ್ಮಾರಮ್। ಜೀವಸೇ। ಪಿಬಧ್ಯೈ।

ಪ.ಛೇ. – ಕೃತ್, ಮೇಜಂತಃ.

ಅ.ವ್ಯ.–"ಸ್ವರಾದಿನಿಪಾತಮವ್ಯಯಮ್(1–1–37)" ಸೂತ್ರದಿಂದ 'ಅವ್ಯಯಮ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– ಯಾವ ಒಂದು 'ಕೃತ್' ಪ್ರತ್ಯಯವು 'ಮ್' ಕಾರನ್ತವಾಗಿಯೂ ಮತ್ತು 'ಏಜನ್ತ'ವಾಗಿಯೂ ಇರುವದೋ, 'ತದನ್ತ' ಶಬ್ದಗಳು 'ಅವ್ಯಯ–ಸಂಜ್ಞೆ'ಯನ್ನು ಪಡೆಯುತ್ತವೆ.

ಉದಾಹರಣೆ– 'ಸ್ಮಾರಂ ಸ್ಮಾರಮ್'. "ಆಭೀಕ್ಷ್ಣ್ಯೇ ಣಮುಲ್ ಚ(3–4–22)" ಸೂತ್ರದಿಂದ 'ಣಮುಲ್' ಪ್ರತ್ಯಯವು ಬಂದಿದೆ. 'ಣಮುಲ್' ನಲ್ಲಿ 'ಇತ್' ವರ್ಣಗಳನ್ನು ಬಿಟ್ಟರೆ, 'ಅಮ್' ಮಾತ್ರ ಉಳಿಯುತ್ತದೆ. ಇದು 'ಮ್' ಕಾರಾಂತ 'ಕೃತ್' ಪ್ರತ್ಯಯವಾಗಿದೆ. ಇದನ್ನು ಅಂತವಾಗಿ ಉಳ್ಳ ಈ ಶಬ್ದವು 'ಅವ್ಯಯ–ಸಂಜ್ಞೆ'ಯನ್ನು ಪಡೆದಿದೆ.

ಉದಾಹರಣೆ 2: 'ಜೀವಸೇ'– ಇಲ್ಲಿ 'ಜೀವ್' ಧಾತುವಿನ 'ಸೇ' ಪ್ರತ್ಯಯವು ಮತ್ತು 'ಪಿಬಧ್ಯೈ' ನಲ್ಲಿ 'ಪಾ–ಪಾನೇ' ಎಂಬ ಧಾತುವಿನ ನಂತರ 'ಶಧ್ಯೈ' ಪ್ರತ್ಯಯವು "ತುಮರ್ಥೆ 'ಸೇ–ಸೇನ್', 'ಅಸೇ–ಅಸೇನ್, ಕ್ಸೇ–ಕಸೇನ್–ಕಧ್ಯೈ–ಕಧ್ಯೈನ್–ಶಧ್ಯೈ–ಶಧ್ಯೈನ್–ತವೈ–ತವೇಜ್–ತವೇನಃ(3–4–9)" ಸೂತ್ರದಿಂದ ಬರುತ್ತದೆ. ಇವೆರಡೂ ಪ್ರತ್ಯಯಗಳು 'ಏ' ದಂತ, 'ಐ' ದಂತಗಳಾಗಿರುವುದರಿಂದ 'ಏಜಂತ' ಗಳಾಗಿವೆ. ಆದ್ದರಿಂದ ಈ ಎರಡು ವೈದಿಕ ಪ್ರತ್ಯಯಗಳು 'ಅವ್ಯಯತ್ವ' ವನ್ನು ಹೊಂದಿವೆ.

**(ಕೃದಂತಗಳಿಗೆ 'ಅವ್ಯಯ' ಸಂಜ್ಞೆಯನ್ನು ಹೇಳುವ ಸೂತ್ರ)**

**ಸೂತ್ರ – 371. ಕ್ತ್ವಾ–ತೋಸುನ್–ಕಸುನಃ (1.1.40)**

ವೃತ್ತಿಃ–ಏತದಂತಮವ್ಯಯಮ್। ಕೃತ್ವಾ ಉದೇತೋಃ। ವಿಸೃಪಃ।

ಪ.ಛೇ.– ಕ್ತ್ವಾ–ತೋಸುನ್–ಕಸುನಃ।

ಅ.ವ್ಯ.–"ಸ್ವರಾದಿನಿಪಾತಮವ್ಯಯಮ್(1–1–37)" ಸೂತ್ರದಿಂದ 'ಅವ್ಯಯಮ್' ಸಂಜ್ಞೆಯು ಅನುವೃತ್ತವಾಗುತ್ತದೆ.

ಅರ್ಥ– 'ಕ್ತ್ವಾ', 'ತೋಸುನ್' ಮತ್ತು 'ಕಸುನ್' ಈ ಪ್ರತ್ಯಯಗಳು ಯಾವುದರ ಕೊನೆಯಲ್ಲಿರುತ್ತವೋ ಆ ಶಬ್ದಗಳು 'ಅವ್ಯಯ–ಸಂಜ್ಞೆ'ಯನ್ನು ಪಡೆಯುತ್ತವೆ.ಈ ಪ್ರತ್ಯಯಗಳೂ ಸಹ 'ಕೃತ್' ಪ್ರತ್ಯಯಗಳಾಗಿವೆ. (882)"ಸಮಾನಕರ್ತೃಕಯೋಃ ಪೂರ್ವಕಾಲೇ(3–4–21)" ಮತ್ತು (881) "ಅಲಂಖಲ್ವೋಃ ಪ್ರತಿಷೇಧೇ ಪ್ರಾಚಾಂ ಕ್ತ್ವಾ(3–4–18)" ಸೂತ್ರದಿಂದ 'ಕ್ತ್ವಾ' ಪ್ರತ್ಯಯಗಳು ಬರುತ್ತವೆ. ಆದ್ದರಿಂದ 'ಕೃತ್ವಾ','ಭುಕ್ತ್ವಾ', 'ಗತ್ವಾ','ಶಯಿತ್ವಾ', ಮತ್ತು 'ಪಠಿತ್ವಾ' ಮುಂತಾದ 'ಕ್ತ್ವಾ' ಪ್ರತ್ಯಯಾಂತ ಶಬ್ದಗಳು 'ಅವ್ಯಯತ್ವ' ವನ್ನು ಹೊಂದುತ್ತವೆ. "ಈಶ್ವರೇ ತೋಸುನ್ಕಸುನೌ(3–4–13)" ಸೂತ್ರದಿಂದ ವಿಹಿತವಾದ 'ತೋಸುನ್' ಮತ್ತು 'ಕಸುನ್'ಗಳು 'ತುಮುನ್' ಅರ್ಥವನ್ನು ಹೇಳುವ ಪ್ರತ್ಯಯಗಳಾಗಿವೆ. 'ತೋಸುನ್' ಮತ್ತು 'ಕಸುನ್' ಪ್ರತ್ಯಯಗಳಲ್ಲಿ 'ತೋಸ್' ಮತ್ತು 'ಕಸ್' ರೂಪಗಳು ಮಾತ್ರ ಉಳಿಯುತ್ತವೆ.

ಉದಾಹರಣೆ - 1. ಉದೇತೋಃ- ಇಲ್ಲಿ 'ಉತ್' ಪೂರ್ವಕ 'ಇಣ್' ಧಾತುವಿನ ನಂತರ 'ತೋಸುನ್'(ತೋಸ್) ಪ್ರತ್ಯಯವು ಬರುತ್ತದೆ.

ಅರ್ಥ- 'ಉದೇತುಮ್' ಎಂದು ಹೇಳಲಾಗಿದೆ.

ಉದಾಹರಣೆ- 2. ಇಲ್ಲಿ 'ವಿ' ಪೂರ್ವಕ 'ಸುಪ್' ಧಾತುವಿನ ನಂತರ 'ಕಸುನ್'(ಅಸ್) ಪ್ರತ್ಯಯವು ಬರುತ್ತದೆ. ಅರ್ಥ-'ವಿಸರ್ಪಿತುಮ್' ಎಂದು ಹೇಳಲಾಗಿದೆ.

'ಕ್ತ್ವಾನ್ತ' ಅವ್ಯಯ ಮಾತ್ರ ವೈದಿಕ, ಲೌಕಿಕ ಭಾಷೆಗಳಲ್ಲಿರುತ್ತವೆ

**(ಅವ್ಯಯ ಸಂಜ್ಞೆಯನ್ನು ವಿಧಿಸುವ ಪಂಚಮ ಸೂತ್ರ)**

**ಸೂತ್ರ - 372/1. ಅವ್ಯಯೀಭಾವಶ್ಚ (1.1.41)**

ವೃತ್ತಿಃ- ಅಧಿಹರಿ।

ಪ.ಛೇ. - ಅವ್ಯಯೀಭಾವಃ,ಚ।

ಅ.ವೃ.- "ಸ್ವರಾದಿನಿಪಾತಮವ್ಯಯಮ್(1-1-37)" ಸೂತ್ರದಿಂದ 'ಅವ್ಯಯಮ್' ಎಂಬ ಸಂಜ್ಞೆಯು ಅನುವೃತ್ತವಾಗುತ್ತದೆ.

ಅರ್ಥ- 'ಅವ್ಯಯೀಭಾವ ಸಮಾಸ'ವೂ ಕೂಡ 'ಅವ್ಯಯ-ಸಂಜ್ಞೆ'ಯನ್ನು ಹೊಂದುತ್ತದೆ.

ಉದಾಹರಣೆ- 'ಅಧಿಹರಿ'(ಹರಿಯ ವಿಷಯದಲ್ಲಿ)."ಅವ್ಯಯಂ - ವಿಭಕ್ತಿ - ಸಮೀಪ - ಸಮೃದ್ಧಿ - ವ್ಯೃದ್ಧ್ಯರ್ಥಾಽಭಾವಾಽತ್ಯಯಾ - ಸಂಪ್ರತಿ - ಶಬ್ದಪ್ರಾದುರ್ಭಾವ - ಪಶ್ಚಾದ್ - ಯಥಾಽನುಪೂರ್ವ್ಯ - ಯೌಗಪದ್ಯ - ಸಾದೃಶ್ಯ - ಸಂಪತ್ತಿ - ಸಾಕಲ್ಯಾನ್ತ ವಚನೇಷು(2-1-6)" ಸೂತ್ರದಿಂದ 'ಅವ್ಯಯೀಭಾವ ಸಮಾಸ'ವನ್ನು ಹೊಂದಿ '(ಹರಿ + ಙಿ= ಹರಿ +ಅಧಿ)' 'ಪೂರ್ವ-ನಿಪಾತ' ಬಂದು' ಅವ್ಯಯೀಭಾವ ಸಮಾಸದಿಂದ 'ಅಧಿಹರಿ' ಎಂಬ ರೂಪವು ಸಿದ್ಧವಾಗುತ್ತದೆ. ಪ್ರಕೃತ ಸೂತ್ರದಿಂದ ಇದಕ್ಕೆ 'ಅವ್ಯಯ-ಸಂಜ್ಞೆ'ಯು ಬರುತ್ತದೆ. "ಅವ್ಯಯಾದಾಪ್ಸುಪಃ(2-4-82)" ಸೂತ್ರದಿಂದ 'ಸುಪ್' ಗೆ 'ಲೋಪ'ವು ಬರುತ್ತದೆ.

**(ಅವ್ಯಯದ ನಂತರವಿರುವ 'ಆಪ್' ಮತ್ತು 'ಸುಪ್'ಗಳಿಗೆ**
**'ಲೋಪವನ್ನು ಹೇಳುವ ಸೂತ್ರ).**

**ಸೂತ್ರ - 372/2. ಅವ್ಯಯಾದಾಪ್ಸುಪಃ (2.2.82)**

ವೃತ್ತಿಃ-ಅವ್ಯಯಾತ್ ವಿಹಿತಸ್ಯ ಆಪಃ ಸುಪಶ್ಚ ಲುಕ್ । ತತ್ರ ಶಾಲಾಯಾಮ್।

ಪ.ಛೇ. - ಅವ್ಯಯಾತ್,ಆಪ್,ಸುಪಃ।

ಅ.ವೃ.- "ಣ್ಯಕ್ಷತ್ರಿಯಾರ್ಷಞಿತೋ ಯೂನಿ ಲುಗಣಿಞೋಃ(2-4-58)" ಸೂತ್ರದಿಂದ 'ಲುಕ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- 'ಅವ್ಯಯ'ದ ನಂತರ ವಿಧಿಸಲಾಗುವ 'ಆಪ್'(ಟಾಪ್,ಚಾಪ್,ಡಾಪ್)

ಮತ್ತು 'ಸುಪ್' ಪ್ರತ್ಯಯಗಳಿಗೂ 'ಲುಕ್'(ಲೋಪ) ಬರುತ್ತದೆ.

ಉದಾಹರಣೆ-'ತತ್ರ ಶಾಲಾಯಾಮ್'- 'ತತ್ರ' ಶಬ್ದವು ತದ್ಧಿತ 'ತ್ರಲ್' ಪ್ರತ್ಯಯವಾಗಿದೆ. ಇದು "ಸಪ್ತಮ್ಯಾಸ್ತ್ರಲ್(5-3-10)" ಸೂತ್ರದಿಂದ ಉಂಟಾಗಿದೆ. 'ತಸಿಲ್' ಮತ್ತು 'ಪಾಶಪ್' ಪ್ರತ್ಯಯಗಳ ಮಧ್ಯದಲ್ಲಿ ಬರುವುದರಿಂದ (369-"ತದ್ಧಿತಶ್ಚಾಸರ್ವವಿಭಕ್ತಿಃ(1-1-38)") ಸೂತ್ರದಿಂದ 'ಅವ್ಯಯ' ಸಂಜ್ಞೆಯನ್ನು ಪಡೆದಿದೆ. 'ತತ್ರ ಶಾಲಾಯಾಮ್' ಎಂಬಲ್ಲಿ, 'ತತ್ರ' ಎಂಬುದು 'ಶಾಲಾಯಾಮ್' ಪದಕ್ಕೆ ವಿಶೇಷಣವಾಗಿರುವುದರಿಂದ 'ತತ್ರ' ಶಬ್ದದ ಮೇಲೂ 'ಟಾಪ್' (ಸ್ತ್ರೀ ಪ್ರತ್ಯಯ)+ಙಿ(ಸುಪ್) ಪ್ರತ್ಯಯವನ್ನು ಸೇರಿಸಬೇಕು. ಇದು 'ಅವ್ಯಯ'ದ ನಂತರ ಸೇರಿಲ್ಪಟ್ಟದ್ದರಿಂದ ಪ್ರಕೃತ ಸೂತ್ರದಿಂದ ಲೋಪವಾಗಿ 'ತತ್ರ' ಎಂಬ ರೂಪವುಂಟಾಗಿದೆ.

*ವಿಶೇಷ- 'ಅವ್ಯಯ'ದ ನಂತರ 'ಸುಪ್' ಪ್ರತ್ಯಯಗಳನ್ನು ಸೇರಿಸಿದ ಮೇಲೂ ಅವು ಲೋಪವಾದರೂ ಅವು 'ಸುಬಂತ'ಗಳಾಗಿಯೇ ಇರುತ್ತವೆ.

ಅವ್ಯಯಲಕ್ಷಣಮ್-

"ಸದೃಶಂ ತ್ರಿಷು ಲಿಙ್ಗೇಷು ಸರ್ವಾಸು ಚ ವಿಭಕ್ತಿಷು।
ವಚನೇಷು ಚ ಸರ್ವೇಷು ಯನ್ನವ್ಯೇತಿ ತದವ್ಯಯಮ್"॥ ಇತಿ॥

ಮೂರು ಲಿಂಗಗಳಲ್ಲಿಯೂ, ಎಲ್ಲಾ ವಿಭಕ್ತಿಯಲ್ಲೂ, ಎಲ್ಲಾ ವಚನಗಳಲ್ಲೂ ಯಾವೊಂದು ಶಬ್ದವು ವಿಕಾರ ಹೊಂದುವುದಿಲ್ಲವೋ ಆ ಶಬ್ದ ಸ್ವರೂಪಕ್ಕೆ 'ಅವ್ಯಯ'ವೆಂದು ಹೆಸರು.

'ಅವ್ಯಯ' ಎಂದು ಕೆಲವು ಶಬ್ದಗಳಿಗೆ ಸಂಜ್ಞೆಯನ್ನು ಇಟ್ಟಿರುವುದು ಸಾರ್ಥಕವಾಗಿದೆ. ಯಾಕೆಂದರೆ "ಅವ್ಯಯಾದಾಪ್ಸುಪಃ(2-2-82)" ಸೂತ್ರದಿಂದ 'ಆಪ್'(ಸ್ತ್ರೀ ಪ್ರತ್ಯಯ)ಗಳು, 'ಸುಪ್'(ಸುಬನ್ತ)ಗಳು ಲೋಪವಾದ ಮೇಲೂ 'ಲಿಙ್ಗ', 'ವಿಭಕ್ತಿ', ವಚನಗಳಿಂದ ಆಗಬೇಕಾದ ವಿಕಾರಗಳು ಉಂಟಾಗುವುದಿಲ್ಲ. (ಭಾಗುರಿ ಆಚಾರ್ಯರ ಮತ)

"ವಷ್ಟಿ ಭಾಗುರಿರಲ್ಲೋಪಮ್ ಅವ-ಅಪ್ಯೋಃ ಉಪಸರ್ಗಯೋಃ।
ಆಪಂಚೈವ ಹಲನ್ತಾಂ ಯಥಾ ವಾಚಾ ನಿಶಾ-ದಿಶಾ॥"

'ಅವ್ಯಯ ಪ್ರಕರಣ'ದಲ್ಲಿ 'ಅವ' ಮತ್ತು 'ಅಪಿ' ಈ ಎರಡು ಅವ್ಯಯಗಳ ಬಗ್ಗೆ 'ಭಾಗುರಿ ಆಚಾರ್ಯ'ರು ಒಂದು ವೈಶಿಷ್ಟ್ಯವನ್ನು ತೋರಿಸಿಕೊಟ್ಟಿರುವರು. 'ಅವ' ಮತ್ತು ಅಪಿ' ಉಪಸರ್ಗಗಳ(ಆದ್ಯಕ್ಷರವಾದ) ಹ್ರಸ್ವ 'ಅ' ಕಾರದ ಲೋಪವನ್ನು ಬಯಸುತ್ತಾರೆ. 'ಹಲನ್ತ'(ಸ್ತ್ರೀಲಿಂಗವಾಚಕ) ಶಬ್ದಗಳನ್ನು ಆಬನ್ತ(ಆಕಾರಾನ್ತ) ಶಬ್ದಗಳಿಗಳನ್ನಾಗಿ ನುಡಿಸಲು ಬಯಸುತ್ತಾರೆ.

ಉದಾಹರಣಮ್-

ವಗಾಹಃ। ಅವಗಾಹಃ। ಪಿಧಾನಮ್। ಅಪಿಧಾನಮ್। ಇತ್ಯವ್ಯಯಾನಿ।

ಉದಾಹರಣೆ-1.ವಾಚಾ- 'ವಾಚ್' ಶಬ್ದವು 'ಚ್'(ಹಲನ್ತ) ಕಾರನ್ತ

ಪ್ರಾತಿಪದಿಕವಾಗಿದೆ. ಇದನ್ನು 'ವಾಕ್,ವಾಚೌ,ವಾಚಃ' ಎಂಬಂತೆಯೂ ನುಡಿಸಬಹುದು ಅಥವಾ ಇವುಗಳನ್ನೇ 'ಆ'ಕಾರನ್ತವಾಗ 'ವಾಚಾ,ವಾಚೇ,ವಾಚಾಃ' ಎಂದೂ ನುಡಿಸಬಹುದು.

2. 'ನಿಶಾ'–ನಿಶಾ ಶಬ್ದಕ್ಕೆ 'ನಿಶ್' ಎಂಬುದು ಪ್ರಾತಿಪದಿಕ.ಇದನ್ನು 'ನಿಟ್,ನಿಶೌ,ನಿಶಃ' ಎಂದೂ ನುಡಿಯುತ್ತಾರೆ.ಇದು 'ಹಲನ್ತ'ವಾಗಿರುವುದರಿಂದ ಇದಕ್ಕೆ 'ಆ'ಕಾರವನ್ನು(ಆಪ್) ಸೇರಿಸಿ 'ನಿಶ್+ಆ=ನಿಶಾ' ಎಂದಾಗುತ್ತದೆ. ಇದನ್ನು 'ನಿಶಾ,ನಿಶೇ,ನಿಶಾಃ' ಎಂದೂ ನುಡಿಸಬಹುದು.

ಇದೇ ರೀತಿಯಲ್ಲಿ 'ದಿಕ್'(ದಿಶ್) ಶಬ್ದವು 'ಶ್' ಕಾರನ್ತವಾಗಿರುತ್ತದೆ. ಹಲನ್ತವಾದ ಈ ಶಬ್ದಕ್ಕೆ 'ಆ'ಕಾರವನ್ನು ಸೇರಿಸಿ 'ದಿಶಾ,ದಿಶೇ,ದಿಶಾಃ' ಎಂದು ನುಡಿಸಬಹುದು ಎಂಬುದೇ 'ಭಾಗುರಿ ಆಚಾರ್ಯ'ರ ಅಭಿಪ್ರಾಯವಾಗಿದೆ.

ಪಾಣಿನಿಯವರ ಮತದಲ್ಲಿ ಈ ಹೊಸ ರೂಪವಿಲ್ಲ. ಆದರೆ 'ಭಾಗುರಿ' ಅವರ ಮತವು ಪಾಣಿನಿಯವರಿಗೆ ಸಮ್ಮತವಾಗಿರುವುದರಿಂದ ಎರಡು ರೂಪಗಳು ಪ್ರಯೋಗದಲ್ಲಿವೆ.

'ಅ'ಕಾರ ಲೋಪವನ್ನು ಹೇಳುವುದಕ್ಕೆ ಉದಾಹರಣೆ.

ಇಲ್ಲಿ 'ಅವಗಾಹಃ' ಎಂಬುದಕ್ಕೆ ಬದಲಾಗಿ 'ಅ'ಕಾರ ಲೋಪ ಮಾಡಿ 'ವಗಾಹಃ' ಎಂದು ಹೇಳಬಹುದು ಎಂದು 'ಭಾಗುರಿ ಆಚಾರ್ಯ'ರ ಮತ.

ಇದೇ ರೀತಿಯಲ್ಲಿ 'ಅಪಿಧಾನಮ್' ಎಂಬುದಕ್ಕೆ ಬದಲಾಗಿ 'ಅ'ಕಾರವನ್ನು ಲೋಪ ಮಾಡಿ 'ಪಿಧಾನಮ್' ಎಂದು ಹೇಳಬಹುದೆಂದು 'ಭಾಗುರಿ ಆಚಾರ್ಯ'ರ ಮತ. ಪಾಣಿನಿಯವರ ಮತದ ಪ್ರಕಾರ 'ಅ'ಕಾರದ ಲೋಪವಾಗದೇ 'ಅವಗಾಹಃ' ಮತ್ತು 'ಅಪಿಧಾನಮ್'ಎಂಬ ರೂಪಗಳೇ ಇರುತ್ತವೆ.

**॥ ಇತಿ ಅವ್ಯಯಪ್ರಕರಣಮ್ ॥**

**॥ ಇತಿ ಪೂರ್ವಾರ್ಧಮ್ ॥**

***

**ಮುಂದಿನ ಭಾಗ**

# ಉತ್ತರಾರ್ಧ

## ಭ್ವಾದಯಃ ಪ್ರಕರಣ

# 12. ತಿಙನ್ತ ಪ್ರಕರಣ

## ಭ್ವಾದಯಃ (1ನೇಗಣ)

**(ಸೂತ್ರಸಂಖ್ಯೆ 373 ರಿಂದ 551 ವರೆಗೆ) (189 ಸೂತ್ರಗಳು)**

ಈ ಭ್ವಾದಿ ಗಣದಲ್ಲಿ 1035 ಧಾತುಗಳು ಪಠಿತವಾಗಿವೆ. ಅವುಗಳಲ್ಲಿ 49 ಧಾತುಗಳನ್ನು ವರದರಾಜರು ರೂಪಸಿದ್ಧಿಗಾಗಿ ಆರಿಸಿಕೊಂಡಿದ್ದಾರೆ. (ಪರಸ್ಮೈಪದಿ–20, ಆತ್ಮನೇಪದಿ–20, ಉಭಯಪದಿ–9)

**ಪರಸ್ಮೈ ಪದಿ ಧಾತುಗಳು (20)**

1. ಭೂ – (ಇರುವಿಕೆ), 2. ಅತ–(ನಿರಂತರವಾಗಿ ಗಮಿಸುವುದು), 3. ಷಿಧ–(ಹೋಗುವುದು), 4. ಚಿತೀ–(ಎಚ್ಚರಗೊಳ್ಳುವುದು), 5. ಶುಚ–(ಶೋಕಿಸುವುದು), 6. ಗದ–(ಸ್ಪಷ್ಟವಾಗಿ ಮಾತನಾಡುವುದು), 7. ಣದ–(ಅಸ್ಪಷ್ಟವಾಗಿ ಮಾತನಾಡುವುದು ಅಥವಾ ಶಬ್ದ ಮಾಡುವುದು), 8. ಟುನದಿ–(ಸಮೃದ್ಧವಾಗುವುದು), 9.ಅರ್ಚ–(ಪೂಜಿಸುವುದು), 10. ವ್ರಜ–(ಹೋಗುವುದು), 11. ಕಟೇ–(ಮಳೆ ಸುರಿಯುವುದು ಅಥವಾ ಮುಚ್ಚುವುದು), 12.ಗುಪೂ–(ರಕ್ಷಿಸುವುದು), 13. ಕ್ಷಿ–(ನಾಶವಾಗುವುದು), 14. ತಪ–(ಪರಿತಪಿಸುವುದು ಅಥವಾ ಆಲೋಚಿಸುವುದು), 15. ಕ್ರಮು–(ಕ್ರಮಿಸುವುದು ಅಥವಾ ಚಲಿಸುವುದು), 16. ಪಾ–(ಕುಡಿಯುವುದು), 17. ಗ್ಲೈ–(ಸಂತೋಷದ ನಾಶವಾಗುವುದು ಅಥವಾ ದಣಿಯುವುದು), 18. ಹ್ವೃ–(ಕುಟಿಲ ಆಚರಣೆ), 19. ಶೃ–(ಶ್ರವಣ ಮಾಡುವುದು), 20. ಗಮ್ಲೃ–(ಹೋಗುವುದು)

**ಆತ್ಮನೇಪದಿ ಧಾತುಗಳು (20)**

1.ಏಧ–(ಬೆಳೆಯುವುದು), 2. ಕಮು–(ಇಚ್ಛಿಸುವುದು), 3. ಅಯ–(ಹೋಗುವುದು), 4. ದ್ಯುತ–(ಹೊಳೆಯುವುದು), 5. ಶ್ವಿತಾ–(ಬಿಳಿಯಬಣ್ಣದಲ್ಲಿರುವುದು), 6. ಞಿಮಿದಾ–(ನುಣ್ಣಗೆ ಮಾಡುವುದು ಅಥವಾ ಮಂದಸ್ಮಿತ), 7. ಞಿಷ್ವಿದಾ–(ಬೆವರುವುದು ಮತ್ತು ಬಿಡುವುದು) 8. ಋಚ–(ಹೊಳೆಯುವುದು ಅಥವಾ ಇಷ್ಟವಾಗಿರುವುದು) 9. ಘುಟ–(ತಿರುಗುವುದು), 10.ಶುಭ– (ಶೋಭಿಸುವುದು ಅಥವಾ ಪ್ರಕಾಶಿಸುವುದು), 11. ಕ್ಷುಭ–(ವಿಚಲಿತವಾಗುವುದು), 12. ಣಭ(ಹಿಂಸಿಸುವುದು), 13. ತುಭ–(ಹಿಂಸಿಸುವುದು), 14. ಶ್ರಂಸು–(ಜಾರುವುದು), 15. ಭ್ರಂಸು (ಜಾರುವುದು), 16. ಧ್ವಂಸು–(ನಾಶವಾಗುವುದು), 17. ಶ್ರಂಭು– (ವಿಶ್ವಾಸ ಮಾಡುವುದು), 18. ವೃತು–(ಆಗುವುದು ಅಥವಾ ಇರುವುದು), 19. ದದ–(ಕೊಡುವುದು), 20. ತ್ರಪೂಷ್– (ನಾಚುವುದು)

**ಉಭಯಪದಿ ಧಾತುಗಳು–9**

1. ಶ್ರಿಞ್ –(ಸೇವಿಸುವುದು), 2. ಭ್ರಞ್–(ಪಾಲನೆ ಮಾಡುವುದು), 3. ಹ್ರಞ್–(ಅಪಹರಿಸುವುದು ಅಥವಾ ಕದಿಯುವುದು), 4. ಭೃಞ್–(ಧರಿಸುವುದು), 5. ಣೀಞ್–

(ತೆಗೆದುಕೊಂಡು ಹೋಗುವುದು), 6.ಡುಪಚಷ್-(ಬೇಯಿಸುವುದು), 7. ಭಜ-(ಸೇವಿಸುವುದು), 8. ಯಜ-(ದೇವಪೂಜೆ ಮಾಡುವುದು ಅಥವಾ ಯಜ್ಞ ಮಾಡುವುದು), 9. ವಹ - (ಹೊತ್ತುಕೊಂಡು ಹೋಗುವುದು)

***

ಲಟ್। ಲಿಟ್। ಲುಟ್। ಲೃಟ್। ಲೇಟ್। ಲೋಟ್। ಲಙ್। ಲಿಙ್। ಲುಙ್। ಲೃಙ್। ಏಷು ಪಞ್ಚಮಃ ಲಕಾರಃ ಛಂದೋಮಾತ್ರ ಗೋಚರಃ।

ಅರ್ಥ- ಮೇಲಿನವು 10 'ಲ್' ಕಾರಗಳು. ಇವುಗಳಲ್ಲಿ 'ಲೇಟ್' ವೇದಗಳಲ್ಲಿ ಮಾತ್ರ ಕಾಣಿಸಿಕೊಳ್ಳುತ್ತದೆ. ಇವು ಧಾತುಗಳ ಪರದಲ್ಲಿ ಇರುತ್ತವೆ.

ಸುಬನ್ತ ಪ್ರಕರಣವನ್ನು ಹೇಳಿ ಮುಗಿಸಿದನಂತರ, ಆಚಾರ್ಯ ವರದರಾಜರು ತಿಙನ್ತ ಪ್ರಕರಣವನ್ನು ಆರಂಭಿಸುತ್ತಾರೆ. ಈ ತಿಙನ್ತ ಪ್ರಕರಣವು ಭ್ವಾದಿ(12) ಪ್ರಕರಣದಿಂದ ಆರಂಭಿಸಿ 'ಲ್' ಕಾರಾರ್ಥ(32) ಪ್ರಕರಣದವರೆಗೆ (21 ಪ್ರಕರಣಗಳಲ್ಲಿ) ವ್ಯಾಪಿಸಿರುವುದು. ಸಂಸ್ಕೃತ ಭಾಷೆಯ ಜೀವಾಳವೆಂದರೆ ಧಾತುಗಳೇ. ಧಾತುಗಳಿಂದಲೇ ಎಲ್ಲ ಶಬ್ದಗಳ ರೂಪಗಳು ಉತ್ಪನ್ನವಾಗುತ್ತವೆ. ಆದ್ದರಿಂದ ಸಂಸ್ಕೃತ ಭಾಷೆಯಲ್ಲಿರುವ ಸುಮಾರು ಎರಡುಸಾವಿರ ಧಾತುಗಳನ್ನು ತಿಳಿದುಕೊಳ್ಳಬೇಕು. ಇವುಗಳನ್ನು ಭಟ್ಟೋಜಿದೀಕ್ಷಿತರಿಂದ ರಚಿತವಾದ 'ವೈಯ್ಯಾಕರಣ ಸಿದ್ಧಾನ್ತಕೌಮುದಿ'ಯಲ್ಲಿ ಕಾಣಬಹುದು. ಆದರೆ, ಅದು ದಟ್ಟವಾದ ಅರಣ್ಯ. ಆರಂಭದಲ್ಲಿ ವಿದ್ಯಾರ್ಥಿಗಳು ಅವುಗಳನ್ನು ಅಭ್ಯಾಸ ಮಾಡುವುದು ಕಠಿಣ. ಆದ್ದರಿಂದ ವರದರಾಜರು ಪ್ರಯೋಗದಲ್ಲಿರುವ ಮುಖ್ಯವಾದ ಕೆಲವೇ ಧಾತುಗಳನ್ನು ಆರಿಸಿಕೊಂಡು ಈ ಉತ್ತರಾರ್ಧದಲ್ಲಿ ಅವುಗಳನ್ನು ವಿವರಿಸಿರುವರು. ಆದ್ದರಿಂದ ಇದನ್ನು ಅಭ್ಯಾಸ ಮಾಡುವುದು ಸುಲಭ. ತಿಙನ್ತ ಎಂದರೆ 'ತಿಙ್' ಪ್ರತ್ಯಯಗಳನ್ನು ಕೊನೆಯಲ್ಲಿ ಉಳ್ಳಂಥವುಗಳು (ತಿಙ್ ಅನ್ತೇ ಯಸ್ಯ ತತ್ ತಿಙನ್ತಮ್(ಪದಮ್)). ಈ ಪ್ರತ್ಯಯಗಳು 18 ಎಂಬುದನ್ನು ಇನ್ನು ಮುಂದೆ ತೋರಿಸುತ್ತಾರೆ. ತಿಙನ್ತಮ್ ಎಂದರೆ ಕ್ರಿಯಾಪದ. ಇವು ಪರಸ್ಮೈಪದ ಮತ್ತು ಆತ್ಮನೇಪದ ಎಂದು ಎರಡು ತರಹದ್ದಿರುತ್ತವೆ. ಇದರ ವಿವರಣೆಯನ್ನು ಮುಂದೆ ಕೊಡಲಾಗಿದೆ. ಧಾತುಗಳೂ ಕೂಡ ಸಕರ್ಮಕ ಮತ್ತು ಅಕರ್ಮಕ ಎಂದು ಎರಡು ವಿಧವಾಗಿ ವಿಂಗಡಿಸಲ್ಪಟ್ಟಿವೆ. ಇದೇ ಧಾತುಗಳನ್ನು ಮತ್ತೆ ಮೂರು ವಿಧವಾಗಿ ಬೇರೆ ರೀತಿಯಲ್ಲಿ ಸೇಟ್, ವೇಟ್, ಅನಿಟ್ ಎಂದು ವಿಂಗಡಿಸಲಾಗಿದೆ. ಇವುಗಳ ಉಪಯೋಗವನ್ನು ಮುಂದೆ ಬರುವ ಸೂತ್ರಗಳಿಂದ ತಿಳಿದುಕೊಳ್ಳಬಹುದು.

ಮೇಲೆ ಹೇಳಿದ 18 ತಿಙ್ ಪ್ರತ್ಯಯಗಳಲ್ಲಿ ಮೊದಲಿನ 9 ಪ್ರತ್ಯಯಗಳು ಪರಸ್ಮೈಪದಗಳು. ಅನಂತರದ 9 ಪ್ರತ್ಯಯಗಳು ಆತ್ಮನೇ ಪದಗಳು. ಇವುಗಳನ್ನು ಮೂಲ ಆಖ್ಯಾತ ಪ್ರತ್ಯಯಗಳೆಂದು ನಮ್ಮ ಅನುಕೂಲಕ್ಕಾಗಿ ಗುರುತಿಸುತ್ತೇವೆ. ಇವುಗಳನ್ನು ಧಾತುವಿನ ಕೊನೆಯಲ್ಲಿ 'ಲ್' ಕಾರಾದೇಶಗಳಾಗಿ ಸೇರಿಸಲಾಗುವುದು. 10 ವಿಧವಾದ 'ಲ್' ಕಾರಗಳಲ್ಲಿ ಪ್ರತಿಯೊಂದಕ್ಕೂ 18 ತಿಙ್ ಪ್ರತ್ಯಯಗಳು ಆದೇಶವಾಗಿ ಬರುತ್ತವೆ. ಅವು 'ಲ್' ಎಂಬ ರೂಪದಲ್ಲಿ ಇರುತ್ತವೆ. 10 'ಲ್'ಕಾರಗಳಲ್ಲಿ 6 'ಲ್' ಕಾರಗಳು

ಕಾಲವಾಚಕಗಳು (ಲಟ್, ಲಙ್, ಲಿಟ್, ಲುಙ್, ಲುಟ್, ಲೃಟ್). ಮುಂದಿನ 4 'ಲ್' ಕಾರಗಳು ಭಾವವಾಚಕಗಳು(ಲೋಟ್, ವಿಧಿಲಿಙ್, ಆಶೀರ್ಲಿಙ್, ಲೃಙ್). ಎಲ್ಲ ಆದೇಶಗಳೂ 'ಲ್' ಎಂದೇ ಇರುವುದರಿಂದ ಅಟ್, ಇಟ್, ಉಟ್, ಋಟ್, ಏಟ್, ಓಟ್, ಅಙ್, ಇಙ್, ಉಙ್ ಮತ್ತು ಋಙ್ ಎಂಬ ಈ ಅನುಬಂಧ(ಇತ್) ಗಳನ್ನು ಸೇರಿಸಿ, 'ಲ್' ಕಾರಗಳಲ್ಲಿರುವ ಭೇದಗಳನ್ನು ತಿಳಿಸಿಕೊಟ್ಟಿರುತ್ತಾರೆ.

ಹೀಗಾಗಿ 'ಲ್' ಕಾರಗಳು 10. ಆದರೆ ಲೇಟ್ 'ಲ್' ಕಾರದ ಪ್ರಯೋಗವು ವೇದಗಳಲ್ಲಿ ಮಾತ್ರ ಕಂಡು ಬರುತ್ತದೆ. ಹೀಗಾಗಿ 9 'ಲ್' ಕಾರಗಳು ಮಾತ್ರ ಉಳಿದವು. ಲಿಙ್ 'ಲ್' ಕಾರದಲ್ಲಿ ವಿಧಿಲಿಙ್ ಮತ್ತು ಆಶೀರ್ಲಿಙ್ ಎಂದು ಎರಡು ವಿಧಗಳು ಇರುವವು. ಆದ್ದರಿಂದ ಈಗ ಅಭ್ಯಾಸ ಮಾಡುವ 'ಲ್' ಕಾರಗಳು 10. (ಇದರಲ್ಲಿ ಲೇಟ್ 'ಲ್' ಕಾರವು ಸೇರಿಲ್ಲ) ಧಾತುವು ಕ್ರಿಯಾರ್ಥವನ್ನು ಹೇಳುತ್ತದೆ. ಆ ಕ್ರಿಯೆಯು ಭೂತ, ವರ್ತಮಾನ, ಭವಿಷ್ಯತ್, ಕಾಲವನ್ನು ಸೂಚಿಸುವುದು. ಕೆಲವೊಮ್ಮೆ 'ಲ್' ಕಾರಗಳು ಕಾಲಾರ್ಥವನ್ನು ಹೇಳದಿದ್ದಾಗ, ಭಾವಾರ್ಥವನ್ನು ಹೇಳುವದೂ ಉಂಟು. ಮೇಲೆ ಹೇಳಿದ ಕಾಲವಾಚಕ ಆರು 'ಲ್' ಕಾರಗಳಲ್ಲಿ, ವರ್ತಮಾನ ಕಾಲಕ್ಕೆ ಸೇರಿದ 'ಲ್' ಕಾರ(ಲಟ್)ವು ಒಂದು. ಭೂತಕಾಲಕ್ಕೆ ಸೇರಿದ 'ಲ್' ಕಾರಗಳು ಮೂರು. (ಲಙ್, ಲಿಟ್, ಲುಙ್). ಭವಿಷ್ಯತ್ ಕಾಲಕ್ಕೆ ಸೇರಿದ 'ಲ್'ಕಾರಗಳು ಎರಡು. (ಲುಟ್,ಲೃಟ್) ಇದೇರೀತಿಯಲ್ಲಿ ಭಾವವಾಚಕ 'ಲ್' ಕಾರಗಳು ನಾಲ್ಕು. (ಆಜ್ಞಾಯಾಂ ಲೋಟ್, ವಿಧಿಲಿಙ್, ಆಶೀರ್ಲಿಙ್, ಸಂಕೇತೇ ಲೃಙ್) ಎಂದು ಮುಂದೆ ಹೇಳಲಾಗುವುದು. ಈ ಮೇಲಿನ 'ಲ್' ಕಾರಾಗಳನ್ನೇ 'ಸಾರ್ವಧಾತುಕ' ಮತ್ತು 'ಆರ್ಧಧಾತುಕ' ಎಂದು ಮತ್ತೆ ಎರಡು ವಿಧವಾಗಿ ವಿಂಗಡಿಸಲಾಗಿದೆ. ಲಟ್, ಲಙ್, ಲಿಙ್ ಮತ್ತು ಲೋಟ್ 'ಲ್' ಕಾರಗಳು ಸಾರ್ವಧಾತುಕ 'ಲ್' ಕಾರಗಳು. ಉಳಿದ ಲಿಟ್, ಲುಙ್, ಲುಟ್, ಲೃಟ್, ಆಶೀರ್ಲಿಙ್ ಮತ್ತು ಸಂಕೇತೇ ಲೃಙ್ 'ಲ್' ಕಾರಗಳು ಆರ್ಧಧಾತುಕಗಳಾಗಿವೆ.

ಈ 'ಲ್' ಕಾರಗಳನ್ನೇ 'ಟಿತ್' ಮತ್ತು 'ಙಿತ್' 'ಲ್' ಕಾರಗಳೆಂದು ಮತ್ತೆ ಎರಡು ವಿಧವಾಗಿ ವಿಂಗಡಿಸಬಹುದು. 'ಟಿತ್' 'ಲ್' ಕಾರಗಳೆಂದರೆ ಲಟ್, ಲಿಟ್, ಲುಟ್, ಲೃಟ್, ಲೇಟ್ ಮತ್ತು ಲೋಟ್ 'ಲ್' ಕಾರಗಳು. ಇದರಲ್ಲಿ 'ಲೇಟ್''ಲ್'ಕಾರವು ಛಂದೋಮಾತ್ರ ಗೋಚರಃ ಎಂದು ಹಿಂದೆಯೇ ಹೇಳಿದ್ದರಿಂದ ಅದನ್ನು ಈಗ ಗಣನೆಗೆ ತೆಗೆದುಕೊಳ್ಳುವುದಿಲ್ಲ. ಹೀಗಾಗಿ 'ಟಿತ್' 'ಲ್' ಕಾರಗಳು ಐದು ಎಂದು ಭಾವಿಸಬೇಕು. ಹೀಗೆಯೇ ಙಿತ್ 'ಲ್' ಕಾರಗಳೂ ಕೂಡ ಐದು. (ಲಙ್, ವಿಧಿಲಿಙ್,ಆಶೀರ್ಲಿಙ್, ಲುಙ್ ಮತ್ತು ಸಂಕೇತೇ ಲೃಙ್). ಈ ಮೊದಲು 'ಲಿಙ್' 'ಲ್' ಕಾರವೆಂದು ಸಾಮಾನ್ಯವಾಗಿ ಹೇಳಿದ್ದೆವು. ಅದರಲ್ಲಿಯೂ ಎರಡು ಪ್ರಕಾರಗಳಿರೋಣದ್ದರಿಂದ 'ವಿಧಿಲಿಙ್' ಮತ್ತು 'ಆಶೀರ್ಲಿಙ್' ಎಂದು ವಿಂಗಡಿಸಲಾಗಿದೆ. ಸಾಮಾನ್ಯವಾಗಿ 'ಲಿಙ್' ಎಂದರೆ 'ವಿಧಿಲಿಙ್' ಎಂದು ತಿಳಿಯಬೇಕು. ಇಲ್ಲದಿದ್ದರೆ ಆಶೀರ್ಲಿಙ್ ಎಂದೇ ವ್ಯವಹರಿಸಲಾಗುವುದು. ಈ ದಶ 'ಲ್' ಕಾರಗಳನ್ನು ಧಾತುವಿನ

ನಂತರ ಸೇರಿಸಲಾಗುವುದು.(ಧಾತು+ಲ್ ಎಂದು). ಈ 10 'ಲ್' ಕಾರಗಳಿಗೆ ಮೊಟ್ಟ ಮೊದಲಿಗೆ 18 ಆಖ್ಯಾತ ಪ್ರತ್ಯಯಗಳು ಆದೇಶವಾಗಿ ಬರುತ್ತವೆ. ಅವುವಳನ್ನು ಮೂಲ ಆಖ್ಯಾತ ಪ್ರತ್ಯಯಗಳೆಂದು ಕರೆಯಬಹುದು. ಮತ್ತೆ ಈ 18 ಮೂಲ ಆಖ್ಯಾತ ಪ್ರತ್ಯಯಗಳಲ್ಲಿ ಕೆಲವಕ್ಕೆ ಮತ್ತೆ ಬೇರೆ ಆಖ್ಯಾತ ಪ್ರತ್ಯಯಗಳು ಆದೇಶವಾಗಿ ಬರುತ್ತವೆ. ಅವುಗಳನ್ನು ನಮ್ಮ ತಿಳಿವಳಿಕೆಗಾಗಿ ಅಭಿನವ ಆಖ್ಯಾತ ಪ್ರತ್ಯಯಗಳೆಂದು ಗುರುತಿಸಿಕೊಳ್ಳಬಹುದು.

ಸೂಚನೆ– ಮೂಲ ಆಖ್ಯಾತ ಪ್ರತ್ಯಯಗಳು ಮತ್ತು ಅಭಿನವ ಆಖ್ಯಾತ ಪ್ರತ್ಯಯಗಳೆಂದು ವ್ಯಾಕರಣ ಗ್ರಂಥಗಳಲ್ಲಿ ಎಲ್ಲಿಯೂ ಹೇಳಿಲ್ಲ. ಆದರೆ ನಮ್ಮ ಗುರುತಿಗಾಗಿ ಹೀಗೆ ಕರೆಯಲಾಗಿದೆ. 'ಲ್' ಕಾರಗಳಿಗೆ ಆದೇಶಗಳಾಗಿ ಬರುವ 18 ಮೂಲ ಆಖ್ಯಾತ ಪ್ರತ್ಯಯಗಳೆಂದರೆ, ಪರಸ್ಮೈ ಪದಿಯಲ್ಲಿ – ಪ್ರಥಮ ಪುರುಷ– ತಿಪ್, ತಸ್, ಝಿ,

ಮಧ್ಯಮ ಪುರುಷ–ಸಿಪ್, ಥಸ್, ಥ,

ಉತ್ತಮ ಪುರುಷ– ಮಿಪ್, ವಸ್, ಮಸ್

ಆತ್ಮನೇ ಪದದಲ್ಲಿ ಪ್ರಥಮ ಪುರುಷ – ತ, ಆತಾಂ, ಝ

ಮಧ್ಯಮ ಪುರುಷ – ಥಾಸ್, ಆಥಾಂ, ಧ್ವಮ್

ಉತ್ತಮ ಪುರುಷ– ಇಟ್, ವಹಿ, ಮಹಿಙ್

ಇಷ್ಟನ್ನು ಮೊದಲು ತಿಳಿದುಕೊಂಡರೆ ಮುಂದಿನ ವಿಷಯಗಳು ಸುಲಭವಾಗಿ ಅರ್ಥವಾಗುವವು.

**(ಲ್ ಕಾರಾರ್ಥವನ್ನು ವಿಧಿಸುವ ಸೂತ್ರ)**

**ಸೂತ್ರ 373 –ಲಃ ಕರ್ಮಣಿ ಚ ಭಾವೇ ಚಾಕರ್ಮಕೇಭ್ಯಃ (3.4.69)**

ವೃತ್ತಿಃ– ಲಕಾರಾಃ ಸಕರ್ಮಕೇಭ್ಯಃ ಕರ್ಮಣಿ ಕರ್ತರಿ ಚ ಸ್ಯುಃ; ಅಕರ್ಮಕೇಭ್ಯೋ ಭಾವೇ ಕರ್ತರಿ ಚ।

ಪ. ಛೇ. – ಲಃ, ಕರ್ಮಣಿ, ಚ, ಭಾವೇ, ಚ, ಅಕರ್ಮಕೇಭ್ಯಃ।

ಅ.ವ್ಯ. – "ಕರ್ತರಿ ಕೃತ್" ಎಂಬ ಸೂತ್ರದಿಂದ 'ಕರ್ತರಿ' ಎಂಬ ಪದವು ಅನುವೃತ್ತವಾಗುತ್ತದೆ. ಸೂತ್ರದಲ್ಲಿಯ ಚ–ಕಾರ ಪ್ರಯೋಗದಿಂದ 'ಕರ್ತರಿ' ಎಂಬ ಪದದ ಅನುಕರ್ಷಣವೂ ಆಗುತ್ತದೆ. ಇದೇ ರೀತಿಯ ಅರ್ಥದಲ್ಲಿ 'ಕರ್ತರಿ' ಪದದ ಪ್ರಯೋಗವು ಎರಡುಸಲ ಆಗುತ್ತದೆ. "ಧಾತೋಃ' ಎಂಬುದು ಅಧಿಕಾರಸೂತ್ರ.

ಅರ್ಥ– ಸಕರ್ಮಕ ಧಾತುಗಳ ನಂತರ ಕರ್ತೃ ಮತ್ತು ಕರ್ಮ ಅರ್ಥದಲ್ಲಿ ಹಾಗೆಯೇ ಅಕರ್ಮಕಧಾತುವಿನ ನಂತರ ಭಾವ ಮತ್ತು ಕರ್ತೃ ಅರ್ಥದಲ್ಲಿ 'ಲ್' ಕಾರವು ಬರುತ್ತದೆ. (ಅಂದರೆ ಕರ್ತರಿ ಪ್ರಯೋಗದಲ್ಲೂ ಕರ್ಮಣಿ ಪ್ರಯೋಗದಲ್ಲೂ ಮತ್ತು ಭಾವೇ ಪ್ರಯೋಗದಲ್ಲೂ 'ಲ್' ಕಾರಗಳು ವಿಧಿಸಲಾಗುತ್ತವೆ ಎಂದರ್ಥ). 'ಫಲ–ವ್ಯಾಪಾರಯೋಃ ಧಾತುಃ' ಎಂಬ ನ್ಯಾಯದಿಂದ ಧಾತುವು ಫಲವನ್ನೂ ಮತ್ತು ವ್ಯಾಪಾರವನ್ನೂ

ಬೋಧಿಸುವುದು.

ಉದಾ– ಪಚ್ ಧಾತುವಿಗೆ ವಿಕ್ಲಿತ್ತಿ ಎಂದರೆ, ಅಕ್ಕಿ ಮೊದಲಾದವುಗಳು ಬೆಂದು ಮೆತ್ತಗಾಗಿ ಅರಳುವುದು. ಅದೇ ಫಲ. ಇದಕ್ಕೆ ಅನುಕೂಲವಾದ ಕೆಲಸಗಳಿಗೆ ವ್ಯಾಪಾರವೆಂದು ಹೆಸರು. ಫಲಕ್ಕೆ 'ಆಶ್ರಯ'ವಾಗಿರುವದಕ್ಕೆ 'ಕರ್ಮ'ವೆಂದೂ, ವ್ಯಾಪಾರಕ್ಕೆ ಆಶ್ರಯವಾದದ್ದನ್ನು ಕರ್ತೃವೆಂದೂ ಹೆಳುತ್ತಾರೆ. (ವ್ಯಾಪಾರಕ್ಕೆ ಭಾವವೆಂದು ಮತ್ತೊಂದು ಹೆಸರು.) ಮೇಲಿನ ಉದಾಹರಣೆಯಲ್ಲಿ ವಿಕ್ಲಿತ್ತಿ ರೂಪ ಫಲವು ಅನ್ನದಲ್ಲಿದೆ. ಆದ್ದರಿಂದ ಅನ್ನವು ಕರ್ಮ, ಅದಕ್ಕೆ ಅನುಕೂಲವಾದ ವ್ಯಾಪಾರವು ಕರ್ತೃವಾದ ಯಜ್ಞದತ್ತನಲ್ಲಿದೆ. ಅಡಿಗೆ ಮಾಡುವುದು ಎಂಬ ವ್ಯಾಪಾರವೇ ಭಾವವು.

ಉದಾ– 'ದೇವದತ್ತಃ ತಂಡುಲಾನ್ ಪಚತಿ' ಎಂಬಲ್ಲಿ ದೇವದತ್ತನು ಕರ್ತೃ, ತಂಡುಲಾನ್ ಎಂಬುದು ಕರ್ಮ, ಮತ್ತು ಪಚತಿ ಎಂಬುದು ಕ್ರಿಯಾಪದ. (ಕ್ರಿಯೆಯನ್ನು ಸೂಚಿಸುವ ಇದು ಕಾಲವನ್ನೂ ಸೂಚಿಸುತ್ತದೆ).

ಫಲ ಮತ್ತು ವ್ಯಾಪಾರ ಇವು ಬೇರೆಬೇರೆ ಸ್ಥಳಗಳಲ್ಲಿದ್ದರೆ, ಅಂಥ ಧಾತುವು ಸಕರ್ಮಕ ಧಾತುವು. 'ಪಚ್' ಧಾತ್ವರ್ಥವಾದ ಫಲವು ತಂಡುಲದಲ್ಲಿ ಇರುವುದು. ವ್ಯಾಪಾರವು ದೇವದತ್ತನಲ್ಲಿರುವುದು. ಆದ್ದರಿಂದ ಇದು ಸಕರ್ಮಕ ಧಾತುವು. ಫಲ ಮತ್ತು ವ್ಯಾಪಾರ ಇವೆರಡೂ ಒಂದೇ ವ್ಯಕ್ತಿಯಲ್ಲಿದ್ದರೆ, ಅದು ಅಕರ್ಮಕವು.

ಉದಾ– ರಾಮಃ ಸ್ವಪಿತಿ. ಎಂಬಲ್ಲಿ 'ಸ್ವಪ್' ಧಾತುವಿಗೆ ನಿದ್ರಿಸುವುದು ಎಂದು ಅರ್ಥ. ನಿದ್ರೆಯಿಂದ ಉಂಟಾಗುವ ಸುಖರೂಪವಾದ ಫಲವೂ, ತದನುಕೂಲವಾದ ವ್ಯಾಪಾರ ಇವೆರಡೂ ರಾಮನಲ್ಲಿಯೇ (ಒಂದೇ ಸ್ಥಳದಲ್ಲಿ) ಇರುವುದರಿಂದ ಇದು ಅಕರ್ಮಕ ಧಾತುವು. ಧಾತುವಿಗೆ ಕರ್ತ್ರರ್ಥದಲ್ಲಿ 'ಲ್' ಕಾರವನ್ನು ಸೇರಿಸಿದಾಗ– ಅಂದರೆ– 'ಲ್' ಕಾರವು ಕರ್ತೃವನ್ನು ಬೋಧಿಸಿದಾಗ ಕರ್ತೃವಾಚ್ಯವೆಂದೂ (ಕರ್ತರಿ ಪ್ರಯೋಗ), ಕರ್ಮಾರ್ಥದಲ್ಲಿ ಸೇರಿಸಿದಾಗ, ಅಂದರೆ 'ಲ್' ಕಾರವು ಕರ್ಮವನ್ನು ಬೋಧಿಸಿದರೆ ಕರ್ಮವಾಚ್ಯ (ಕರ್ಮಣಿ ಪ್ರಯೋಗ) ವೆಂದೂ, ಭಾವಾರ್ಥದಲ್ಲಿ ಸೇರಿಸಿದಾಗ ಅಂದರೆ 'ಲ್' ಕಾರವು ವ್ಯಾಪಾರವನ್ನು ಬೋಧಿಸಿದಾಗ, ಭಾವವಾಚ್ಯ(ಭಾವೇಪ್ರಯೋಗ)ವೆಂದೂ ಹೇಳಲಾಗುತ್ತದೆ. 'ಪಚತಿ' ಎಂದರೆ ಬೇಯಿಸುವುದು ಎಂದರ್ಥ. 'ಲ್' ಕಾರವು ಬೇಯಿಸುತ್ತಿರುವ ದೇವದತ್ತನನ್ನು ಹೇಳುತ್ತದೆ. ಅಂದರೆ 'ದೇವದತ್ತಃ ಪಚತಿ' ಎಂಬುದು ಕರ್ತರಿ ಪ್ರಯೋಗಕ್ಕೆ ಉದಾಹರಣೆ. ಇನ್ನು ಬೇಯಿಸಲ್ಪಡುತ್ತದೆ ಎಂದು ಹೇಳುವಾಗ ಬೇಯಿಸಲ್ಪಡುವ ಕರ್ಮವಾದ ಅನ್ನ ಮೊದಲಾದವನ್ನು ಹೇಳುತ್ತದೆ. ಅಂದರೆ 'ದೇವದತ್ತೇನ ಪಚ್ಯತೆ' ಎಂಬುದು ಕರ್ಮಣಿ ಪ್ರಯೋಗಕ್ಕೆ ಉದಾಹರಣೆ. ಇಲ್ಲಿ ಬೇಯಸಲ್ಪಡುವ ಕರ್ಮವಾದ ಅನ್ನ ಮೊದಲಾದವುಗಳನ್ನು ಹೇಳುತ್ತದೆ. ಆದ್ದರಿಂದ ಮೇಲಿನ ಎರಡು ಪ್ರಯೋಗಗಳಿಗೂ ಕ್ರಮವಾಗಿ ಕರ್ತೃವಾಚ್ಯ ಮತ್ತು ಕರ್ಮವಾಚ್ಯಗಳೆಂದು ಹೆಸರುಗಳು.

ರಾಮೇಣ ಸುಪ್ಯತೇ– (ರಾಮನಿಂದ ನಿದ್ರೆ ಮಾಡಲ್ಪಡುತ್ತದೆ.) ಎಂದು ಹೇಳಿದಾಗ, 'ಲ್' ಕಾರವು ನಿದ್ರಿಸುವುದು ಎಂಬ ವ್ಯಾಪಾರವನ್ನು ಮಾತ್ರ ಬೋಧಿಸುತ್ತಿರುವುದರಿಂದ

ಈ ಕ್ರಿಯೆಯು ಭಾವವಾಚಕವು. ಯಾಕೆಂದರೆ 'ಸ್ವಪ್' ಧಾತುವು ಅಕರ್ಮಕವಾಗಿದೆ. ಈರೀತಿಯಾಗಿ 'ಲ್' ಕಾರಗಳು ಕರ್ತೃ, ಕರ್ಮ, ಭಾವಗಳನ್ನು ಬೋಧಿಸುತ್ತವೆ.

ಸಕರ್ಮಕ ಧಾತುಗಳು ಕರ್ತೃ, ಕರ್ಮವಾಚ್ಯ(ಪ್ರಯೋಗ)ಗಳಲ್ಲೂ, ಮತ್ತು ಅಕರ್ಮಕ ಧಾತುಗಳು ಕರ್ತೃ ಮತ್ತು ಭಾವವಾಚ್ಯ(ಪ್ರಯೋಗ)ಗಳಲ್ಲೂ ಪ್ರಯೋಗಿಸಲ್ಪಡುತ್ತವೆ.

**(ವರ್ತಮಾನಾರ್ಥದಲ್ಲಿ ಲಟ್ ಲ-ಕಾರವನ್ನು ವಿಧಿಸುವ ಸೂತ್ರ)**

**ಸೂತ್ರ-374 . ವರ್ತಮಾನೇ ಲಟ್ (3.2.123)**

ವೃತ್ತಿಃ-ವರ್ತಮಾನ-ಕ್ರಿಯಾವೃತ್ತೇಃ ಧಾತೋಃ ಲಟ್ ಸ್ಯಾತ್। ಅಟೌ ಇತೌ । ಉಚ್ಚಾರಣಸಾಮರ್ಥ್ಯಾತ್ ಲಸ್ಯ ನ ಇತ್ವಮ್।

## ॥ ಅಥ ಪರಸ್ಮೈಪದಿನಃ ॥

ಧಾತು – 1. ಭೂಸತ್ತಾಯಾಂ। ಕರ್ತೃವಿವಕ್ಷಾಯಾಂ ಭೂ+ಲ್ ಇತಿ ಸ್ಥಿತೇ।

ಅ.ವ್ಯ.-ತಿಜನ್ತವನ್ನು ಹೇಳುವ ಎಲ್ಲ ಸೂತ್ರಗಳಲ್ಲೂ "ಧಾತೋಃ"ಎಂಬ ಸೂತ್ರವು ಅಧಿಕಾರಸೂತ್ರವಾಗಿರುತ್ತದೆ. ಪ್ರಕೃತ ಸೂತ್ರದಲ್ಲೂ "ಧಾತೋಃ" ಎಂಬುದು ಅಧಿಕಾರ ಸೂತ್ರವಾಗಿದೆ. "ಪ್ರತ್ಯಯಃ" ಮತ್ತು "ಪರಶ್ಚ" ಎಂಬ ಸೂತ್ರಗಳೂ ಅಧಿಕಾರ ಸೂತ್ರಗಳಾಗಿವೆ.

ಅರ್ಥ– ಧಾತುವು ಯಾವಾಗ ವರ್ತಮಾನ ಕಾಲದ ಕ್ರಿಯೆಯ ಅರ್ಥವನ್ನು ಹೇಳಬೇಕಾಗಿರುವದೋ, ಆಗ ಆ ಧಾತುವಿನ ನಂತರ ಲಟ್ ಲ್-ಕಾರವು ಬರುತ್ತದೆ. (ಲಟ್ ನಲ್ಲಿ 'ಅ'ಕಾರ 'ಟ್' ಕಾರಗಳು ಇತ್ ಸಂಜ್ಞಕಗಳು. ಆದ್ದರಿಂದ 'ಲ್' ಮಾತ್ರ ಉಳಿದಿರುತ್ತದೆ).

ವಿವರಣೆ: ಕಾಲಗಳು ವರ್ತಮಾನ, ಭೂತ, ಭವಿಷ್ಯತ್ ಎಂದು ಮೂರು ವಿಧ. ವರ್ತಮಾನ ಕ್ರಿಯೆಯನ್ನು ಸೂಚಿಸುವಾಗ, ಧಾತುವಿನ ಪರದಲ್ಲಿ 'ಲಟ್(ಲ್)' ಸೇರಿಸಲಾಗುತ್ತದೆ.

**1. ವರ್ತಮಾನ ಕಾಲ (ಲಟ್):**

ಇದು ಪ್ರಕೃತ ಕಾಲದಲ್ಲಿ ಜರುಗುವ ಕ್ರಿಯೆಯನ್ನು ಸೂಚಿಸುವ ಕಾಲ. ಹೀಗೆಂದರೆ ಪ್ರಕೃತ ಒಂದೇ ಕ್ಷಣವೂ ಆಗಬಹುದು, ಅಥವಾ ಹೆಚ್ಚಿನ ಸಮಯವೂ ಆಗಬಹುದು.(ವರ್ತಮಾನ ಕ್ರಿಯೆಯು ಜರುಗುವ ಕಾಲವೆಂದು ಅರ್ಥ).

ಉದಾ-1. ರಾಮಃ ತಂಡುಲಾನ್ ಪಚತಿ ಎಂದರೆ – ರಾಮನು ಅಕ್ಕಿಯನ್ನು ಬೇಯಿಸುವದಕ್ಕಾಗಿ ನೀರು ತರುವುದರಿಂದ ಆರಂಭಿಸಿ, ಒಲೆ ಹೊತ್ತಿಸಿ, ಅಕ್ಕಿಬೇಯುವವರೆಗಿನ ಕಾಲ.

ಉದಾ-2. – ವೃಕ್ಷಾತ್ ಪರ್ಣಂ ಪತತಿ– ಗಿಡದಿಂದ ಎಲೆಯು ಬೀಳುತ್ತದೆ. ಅಂದರೆ ಎಲೆಯು ಗಿಡದಿಂದ ಕೆಳಗೆ ಬೀಳುವವರೆಗಿನ ಕಾಲ.

**2. ಭೂತಕಾಲ:**

ಸಂಸ್ಕೃತ ವ್ಯಾಕರಣದಲ್ಲಿ, ಭೂತ ಕಾಲವು ಮೂರು ವಿಧ.

1. ಅನದ್ಯತನ ಭೂತಕಾಲ (ಲಙ್): (ಮೊದಲನೇ ಭೂತಕಾಲ) – (Imperfect tense).
2. ಪರೋಕ್ಷ ಭೂತಕಾಲ (ಲಿಟ್): (perfect tense),
3. ಅದ್ಯತನ ಭೂತಕಾಲ (ಲುಙ್): a)(ಇಂದಿಗೆ ಸಂಬಂಧಿಸಿದ ಭೂತಕಾಲ) (Aorist - it also gives the general sense of the past). - b)ಘಟನೆಯು ಜರುಗಿತು ಎಂಬ ಸಾಮಾನ್ಯ ಭೂತಕಾಲಾರ್ಥವನ್ನೂ ಈ 'ಲ್' ಕಾರವು ಸೂಚಿಸುತ್ತದೆ. 1. ಅನದ್ಯತನ ಭೂತಕಾಲ (ಲಙ್) (ಮೊದಲನೇ ಭೂತಕಾಲ) –(Imperfect tense).

ಉದಾ– ಅಭವತ್ :– (100 ವರ್ಷದೊಳಗೆ ಘಟಿಸಿದ ಘಟನೆ). ಈ ಘಟನೆಯನ್ನು ಸಾಕ್ಷಾತ್ತಾಗಿ ನೋಡಿರಬಹುದು ಅಥವಾ ಅವಕಾಶ ಸಿಕ್ಕಿದ್ದರೆ ನೋಡಬಹುದಾಗಿತ್ತು ಎಂಬ ಈ ಎರಡೂ ಪ್ರಸಂಗಗಳಲ್ಲೂ 'ಲಙ್'(ಲ್) ಲಕಾರ ಬರುತ್ತದೆ. ಇದನ್ನು ಮೊದಲನೆಯ ಭೂತಕಾಲವೆಂದು ಹೇಳುತ್ತಾರೆ. ಆಂಗ್ಲ ಭಾಷೆಯಲ್ಲಿ ಇದನ್ನು Imperfect tense ಎಂದು ಹೇಳುತ್ತಾರೆ.

2. ಪರೋಕ್ಷ ಭೂತಕಾಲ (ಲಿಟ್) (ಎರಡನೇ ಭೂತಕಾಲ (ಲಿಟ್)): (perfect tense): 101ನೇ ವರ್ಷದಿಂದಾರಂಭಿಸಿ ಅದಕ್ಕೂ ಪೂರ್ವದ ಅನಾದಿಕಾಲದವರೆಗಿನ ಅವಧಿಯಲ್ಲಿ ಜರುಗಿದ ಘಟನೆಯನ್ನು ಈ ಲಿಟ್ 'ಲ್' ಕಾರವು ಸೂಚಿತ್ತದೆ.

ಉದಾ– ಬಭೂವ:– (ಆಗಿದ್ದನ್ನು ಅಂದರೆ ಮೇಲೆ ಹೇಳಿದ ಕಾಲದಲ್ಲಿ (100 ವರ್ಷಗಳ ಹಿಂದಿನ ಘಟನೆಯನ್ನು) ಈ ಘಟನೆಯನ್ನು ಮನುಷ್ಯನು ಅಪರೋಕ್ಷ (ಪ್ರತ್ಯಕ್ಷ)ವಾಗಿ ನೋಡಲು ಸಾಧ್ಯವಿಲ್ಲ. ಆದ್ದರಿಂದಲೇ ಇದಕ್ಕೆ ಪರೋಕ್ಷಭೂತೇ 'ಲಿಟ್' ಎಂದು ವ್ಯವಹರಿಸುತ್ತಾರೆ. ಈ 'ಲ್' ಕಾರವು ಒಂದು ವಿಧದಲ್ಲಿ ಅನದ್ಯತನವೇ. ಯಾಕೆಂದರೆ, ಹಿಂದಿನ 101 ವರ್ಷದಿಂದ ಅರಂಭವಾದ ಎಂದು ಹೇಳೋಣದ್ದರಿಂದ ಇಂದಿನದ್ದಲ್ಲವೆಂದು ಗೊತ್ತಾಗುತ್ತದೆ.

[ವಿವರಣೆ– ಮೊದಲನೇ ಭೂತಕಾಲವಾದ 'ಲಙ್' 'ಲ್' ಕಾರವು ನಿನ್ನೆ ರಾತ್ರಿಯ ಕೊನೆಯ ಕ್ಷಣದಿಂದ ಅರಂಭವಾಗುತ್ತದೆ. ಅದ್ದರಿಂದ ಇದೂ ಕೂಡ ಅನದ್ಯತನವೇ ಆಗಿದೆ. ಇವೆರಡಕ್ಕೂ ಇರುವ ವ್ಯತ್ಯಾಸವೆಂದರೆ ಮೊದಲನೇ ಭೂತಕಾಲಕ್ಕೆ 100 ವರ್ಷದ (ಮನುಷ್ಯನ ಜೀವಿತದ)ಅವಧಿ. ಈ ಅವಧಿಯು ಅಪೂರ್ಣ. ಆದರೆ, ಅಪರೋಕ್ಷ ಅಂದರೆ ಈ ಅವಧಿಯಲ್ಲಿ ಜರುಗಿದ ಘಟನೆಯನ್ನು ಸಾಕ್ಷಾತ್ತಾಗಿ ನೋಡಿರುತ್ತಾನೆ. ಅಥವಾ ಅವಕಾಶ ಸಿಕ್ಕಿದ್ದರೆ ನೋಡಬಹುದಾಗಿತ್ತು. ಈ ಕಾರಣಗಳಿಂದ ಈ 'ಲಙ್' 'ಲ್'ಕಾರವನ್ನು ಅನದ್ಯತನ, ಅಪೂರ್ಣ ಮತ್ತು ಅಪರೋಕ್ಷ (ಪ್ರತ್ಯಕ್ಷ) ಭೂತಕಾಲವೆಂದು ಹೆಳಬಹುದು. ಆದರೆ ಪ್ರಯೋಗದಲ್ಲಿ, ಅಥವಾ ವ್ಯವಹಾರದಲ್ಲಿ ಅನದ್ಯತನ ಭೂತೇ

'ಲಙ್' ಎಂದು ಮಾತ್ರ ಹೇಳುತ್ತೇವೆ. ಉಳಿದ ಎರಡು ವಿಶೇಷಣಗಳನ್ನು ಆಗಾಗ್ಗೆ ಬಳಸುವುದಿಲ್ಲ. ಆದರೆ ಅದು ಅರ್ಥಗೋಚರವಾಗಿಯೇ ಇರುತ್ತದೆ.

**ಲಿಟ್**: ಇದೇ ರೀತಿಯಲ್ಲಿ 'ಲಿಟ್' 'ಲ್' ಕಾರವು ಅನದ್ಯತನ, ಪರೋಕ್ಷ ಮತ್ತು ಪೂರ್ಣಭೂತವೂ ಹೌದು.ಇದರ ಉತ್ತರಾವಧಿಯು ಅನಾದಿಕಾಲದವರೆಗೆ ಇರೋಣದ್ದರಿಂದ ಪೂರ್ಣಭೂತವೆಂದು ಕರೆಯುತ್ತೇವೆ. ಈ 'ಲ್' ಕಾರದ ವಿಷಯದಲ್ಲೂ ಪರೋಕ್ಷಭೂತೇ 'ಲಿಟ್' ಎಂದೇ ಹೇಳುತ್ತೇವೆ. ಉಳಿದ ಎರಡು ವಿಶೇಷಣಗಳನ್ನು (ಪೂರ್ಣಮತ್ತು ಪರೋಕ್ಷ) ಆಗಾಗ್ಗೆ ಬಳಸುವುದಿಲ್ಲ].

3. ಅದ್ಯತನ ಭೂತಕಾಲ (ಲುಙ್): a) (ಇಂದಿಗೆ ಸಂಬಂಧಿಸಿದ ಭೂತಕಾಲ) **(Aorist - it also gives the general sense of the past).**

b) ಮೂರನೇ ಭೂತಕಾಲ– ಅದ್ಯತನ ಅಥವಾ ಸಾಮಾನ್ಯ ಭೂತಕಾಲ: ಲುಙ್: ಅದ್ಯತನವೆಂದರೆ ಇಂದಿನದ್ದು ಎಂದು ಅರ್ಥ. ಹೀಗೆಂದರೆ ಈಕ್ಷಣದ ಪೂರ್ವ–ಕ್ಷಣದಿಂದಾರಂಭಿಸಿ ಇಂದಿನ ಮೊದಲನೇ ಗಂಟೆಯ ಮೊದಲನೇ ಕ್ಷಣದವರೆಗಿನ ಅವಧಿಯಲ್ಲಿ ಜರುಗಿದ ಘಟನೆಯನ್ನು ಈ 'ಲ್'ಕಾರವು ಸೂಚಿಸುತ್ತದೆ.

ಉದಾ– ಅಭೂತ್ (ಇಂದು ಇದ್ದಿತು) – ಇದು ಇಂದಿನ ಅವಧಿಯನ್ನು ಸೂಚಿಸಿದೆ. ಇದು ಮೊದಲನೇ ಅರ್ಥ. ಈ 'ಲ್' ಕಾರದಿಂದ ಮತ್ತೊಂದು ಅರ್ಥವೂ ಸಂದರ್ಭೋಚಿತವಾಗಿ ಸಿಗುತ್ತದೆ. ಅದು ಸಾಮಾನ್ಯ ಭೂತಾರ್ಥ. ಹೀಗೆಂದರೆ, ಭೂತಕಾಲದ ಸರಿಯಾದ ಅವಧಿಯನ್ನು ಸೂಚಿಸದೇ ಸಾಮಾನ್ಯವಾಗಿ ಇತ್ತು ಅಥವಾ ಜರುಗಿತು ಎಂಬರೀತಿಯಲ್ಲಿ ಅರ್ಥವನ್ನು ಕೊಡುತ್ತದೆ. ಆದ್ದರಿಂದ ಇದಕ್ಕೆ ಸಾಮಾನ್ಯ ಭೂತವೆಂಬ ಮತ್ತೊಂದು ಹೆಸರೂ ಬಂದಿದೆ.

**೩. ಭವಿಷ್ಯತ್ ಕಾಲ:**

ಭವಿಷ್ಯತ್ ಕಾಲದಲ್ಲಿ ಎರಡು ಪ್ರಕಾರಗಳಿವೆ. ಅ) ಲುಟ್: ಅನದ್ಯತನ ಭವಿಷ್ಯತ್ ಅಥವಾ ಮೊದಲನೆಯ ಭವಿಷ್ಯತ್ ಕಾಲ. ಬ) ಲೃಟ್: ಅದ್ಯತನ ಭವಿಷ್ಯತ್ ಕಾಲ ಅಥವಾ ಎರಡನೆಯ ಭವಿಷ್ಯತ್ ಕಾಲ. ಇದನ್ನೇ ಸಾಮಾನ್ಯ ಭವಿಷ್ಯತ್ ಎಂಬ ಅರ್ಥದಲ್ಲಿಯೂ ಪ್ರಯೋಗಿಸುತ್ತೇವೆ.

ವಿವರಣೆ– (ಅ) ಅನದ್ಯತನ ಭವಿಷ್ಯತ್ ಅಥವಾ ಮೊದಲನೆಯ ಭವಿಷ್ಯತ್ ಕಾಲ (ಲುಟ್): ಲುಟ್ 'ಲ್' ಕಾರವೆಂದರೆ, ಇಂದಿನದಲ್ಲದ ಭವಿಷ್ಯತ್ ಕಾಲದಲ್ಲಿ ಜರುಗಿದ ಘಟನೆಯನ್ನು ಸೂಚಿಸುವಂಥಾದ್ದು.

ಉದಾ– ಗನ್ತಾ – ಅಂದರೆ ನಾಳೆ ಹೋಗುವವನಿದ್ದಾನೆ. ಎಂದರ್ಥ. ಉದಾ– ಶ್ವಃ ರಾಜಾ ವನಂ ಗನ್ತಾ (ನಾಳಿನದಿವಸ ರಾಜನು ಕಾಡಿಗೆ ಹೋಗುವವನಿದ್ದಾನೆ).

ಬ) ಅದ್ಯತನ ಭವಿಷ್ಯತ್ ಕಾಲ ಅಥವಾ ಎರಡನೆಯ ಭವಿಷ್ಯತ್ ಕಾಲ: ಲೃಟ್: ಈ ಕ್ಷಣದ ಮುಂದಿನ ಕ್ಷಣದಿಂದ ಆರಂಭಿಸಿ ಇವತ್ತಿನ ರಾತ್ರಿಯ ಕೊನೆಯ ಕ್ಷಣದ ಅವಧಿಯೊಳಗೆ ಜರುಗಲಿರುವ ಘಟನೆಯನ್ನು ಸೂಚಿಸುತ್ತದೆ.

ಭವಿಷ್ಯತ್ಕಾಲದ ಅವಧಿಯನ್ನು ನಿಶ್ಚಯ ಮಾಡಲು ಅಶಕ್ಯವಾದಾಗ ಸಾಮಾನ್ಯ ಭವಿಷ್ಯರ್ಥದಲ್ಲಿ ಈ 'ಲ್' ಕಾರವನ್ನು ಉಪಯೋಗಿಸುತ್ತಾರೆ.

ಉದಾ– ಸಃ ರಾಜಾ ಭವಿಷ್ಯತಿ (ಅವನು ಮುಂದೆ ರಾಜನಾಗುತ್ತಾನೆ). ಇಲ್ಲಿ ಭವಿಷ್ಯತ್ಕಾಲದ ನಿರ್ಣಯವಾಗಿಲ್ಲವೆಂಬುದನ್ನು ಗಮನಿಸಬೇಕು.

ಹೀಗಾಗಿ ಸಂಸ್ಕೃತ ಸಾಹಿತ್ಯದಲ್ಲಿ ಕಾಲ ವಾಚಕಗಳಿಗೆ ಆರು 'ಲ್' ಕಾರಗಳಿದ್ದು ಅವುಗಳನ್ನು ಮೂರು ಕಾಲಗಳಲ್ಲಿ ವಿಭಜಿಸಲಾಗಿದೆ.

ಇದೇ ರೀತಿಯಲ್ಲಿ ಭಾವವಾಚಕದ ನಾಲ್ಕು 'ಲ್'ಕಾರಗಳೆಂದರೆ ಲೋಟ್, ವಿಧಿಲಿಙ್, ಆಶೀರ್ಲಿಙ್ ಮತ್ತು ಸಂಕೇತೇ ಲೃಙ್. ಇವುಗಳನ್ನು ಮುಂದೆ ವಿವರಿಸಲಾಗುವುದು.

ಲಟ್ 'ಲ್' ಕಾರದಲ್ಲಿ 'ಅ' ಕಾರ 'ಟ್' ಕಾರಗಳು ಇತ್ ಗಳಾಗಿವೆ. 'ಲ್' ಮಾತ್ರ ಉಳಿಯುತ್ತದೆ. "ಲಶಕ್ವತದ್ಧಿತೇ" ಎಂಬ ಸೂತ್ರದಿಂದ 'ಲ್' ಕಾರವೂ 'ಇತ್' ಆದರೆ, ಏನೂ ಉಳಿಯುವುದಿಲ್ಲ. ಅದಕ್ಕೆ ಸಮಾಧಾನ ಹೇಳುತ್ತಾರೆ–ಉಚ್ಚಾರಣಸಾಮರ್ಥ್ಯಾತ್ ಎಂದು. 'ಲ್' ಕಾರವು 'ಇತ್' ಆಗುವದಾದರೆ, ಧಾತುವಿನ ಪರದಲ್ಲಿ 'ಲ್' ಕಾರಗಳನ್ನು ಏಕೆ ಹೇಳಬೇಕು? ಹೇಳಿ ಲೋಪ ಮಾಡಿದರೆ ಅದು ವ್ಯರ್ಥವಲ್ಲವೇ? ಆದ್ದರಿಂದ 'ಲ್' ಕಾರಕ್ಕೆ ಇತ್ವ ಬರುವುದಿಲ್ಲ.

ಧಾತು 1. 'ಭೂ' ಧಾತುವಿಗೆ ಸತ್ತಾ (ಇರುವಿಕೆ) ಎಂದರ್ಥ. ಇದು ಭ್ವಾದಿಗಣ ಪಠಿತವಾಗಿದೆ. ಹಾಗೂ ಕ್ರಿಯಾವಾಚಕವಾಗಿದೆ. 'ಭೂ' ಧಾತುವನ್ನು ಆದಿಯಾಗಿಯುಳ್ಳ ಗಣವಾಗಿರೋಣದ್ದರಿಂದ ಈ ಮೊದಲನೇ ಗಣಕ್ಕೆ 'ಭ್ವಾದಿಗಣ' ಎಂದು ಹೆಸರು.

ವರ್ತಮಾನಕಾಲ ಎಂದರೆ, ಕ್ರಿಯೆ ಜರುಗುವ ಕಾಲ. ಇದು ಒಂದೇ ಕ್ಷಣವಾಗಿರಬೇಕೆಂದು ನಿಯಮವಿಲ್ಲ. ವರ್ತಮಾನ ಕಾಲದಲ್ಲಿ, ಕರ್ತೃ ವಿವಕ್ಷೆ ಮಾಡಿದಾಗ, ಭೂ ಧಾತುವಿನ ಮೇಲೆ 'ಲಟ್' ಬರುತ್ತದೆ. ಅದರಲ್ಲಿ 'ಲ್' ಮಾತ್ರ ಉಳಿಯುವುದರಿಂದ, ಭೂ+ಲ್ ಎಂದಿದ್ದಾಗ, ಅದರ ಸ್ಥಾನಕ್ಕೆ ಆದೇಶವಾಗಿ ಬರುವ ಪ್ರತ್ಯಯಗಳನ್ನು ಹೇಳುತ್ತಾನೆ.

**('ಲ್' ಕಾರಗಳ ಸ್ಥಾನಗಳಲ್ಲಿ ಬರುವ ಆದೇಶಗಳನ್ನು ಹೇಳುವ ಸೂತ್ರ)**

**ಸೂತ್ರ: 375– ತಿಪ್–ತಸ್–ಝಿ। ಸಿಪ್–ಥಸ್–ಥ। ಮಿಬ್–ವಸ್–ಮಸ್। ತ–ಆತಾಂ–ಝ। ಥಾಸ್–ಆಥಾಂ–ಧ್ವಂ। ಇಡ್–ವಹಿ–ಮಹಿಙ್। (3.4.78)**

ವೃತ್ತಿಃ–ಏತೇ ಅಷ್ಟಾದಶ ಲಾದೇಶಾಃ ಸ್ಯುಃ।

ಪ.ಛೇ. – ತಿಪ್–ತಸ್–ಝಿ। ಸಿಪ್–ಥಸ್–ಥ। ಮಿಬ್–ವಸ್–ಮಸ್। ತ–ಆತಾಂ–ಝ। ಥಾಸ್–ಆಥಾಂ–ಧ್ವಂ। ಇಡ್–ವಹಿ–ಮಹಿಙ್।

ಅ. ವೃ. –"ಲಸ್ಯ" ಮತ್ತು "ಪ್ರತ್ಯಯಃ" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ– 18 ಲ್–ಕಾರಗಳ ಸ್ಥಾನದಲ್ಲಿ, ತಿಪ್, ತಸ್, ಝಿ, ಸಿಪ್, ಥಸ್, ಥ, ಮಿಪ್, ವಸ್, ಮಸ್, ತ, ಆತಾಂ, ಝ, ಥಾಸ್, ಆಥಾಂ, ಧ್ವಮ್, ಇಟ್, ವಹಿ, ಮಹಿಙ್ ಎಂಬ 18 ಮೂಲ ಆಖ್ಯಾತ ಪ್ರತ್ಯಯಗಳು ಕ್ರಮವಾಗಿ ಆದೇಶಗಳಾಗಿ ಬರುತ್ತವೆ.

ಗಮನಿಸಬೇಕಾದ ಅಂಶ– 'ತಿಪ್' ನಲ್ಲಿ ಇರುವ 'ತಿ' ಯಿಂದ ಆರಂಭಿಸಿ 'ಮಹಿಙ್' ನಲ್ಲಿರುವ 'ಙ್' ದವರೆಗೆ ಇರುವ ಪ್ರತ್ಯಾಹಾರವನ್ನು 'ತಿಙ್' ಎಂದು ಹೆಸರಿಸಲಾಗಿದೆ. ಆದರೆ 'ತಿ' ನಿಂದ ಆರಂಭಿಸಿ 'ವಸ್' ವರೆಗಿನ ಪ್ರತ್ಯಯಗಳನ್ನು ಪರಸ್ಮೈಪದ ಪ್ರತ್ಯಯಗಳೆಂದೂ, 'ತ' ದಿಂದ ಆರಂಭಿಸಿ 'ಮಹಿಙ್' (ತಙ್ ಪ್ರತ್ಯಾಹಾರ) ವರೆಗಿನ ಪ್ರತ್ಯಯಗಳನ್ನು ಆತ್ಮನೇ ಪದ ಗಳೆಂದೂ ಹೆಸರಿಸಲಾಗಿದೆ.

'ತಿಪ್' 'ಸಿಪ್' ಮತ್ತು 'ಮಿಪ್' ಗಳಲ್ಲಿರುವ 'ಪ್' ಕಾರಕ್ಕೆ "ಹಲನ್ತ್ಯಮ್" ಎಂಬ ಸೂತ್ರದಿಂದ 'ಇತ್' ಸಂಜ್ಞೆ ಮತ್ತು 'ಇಟ್' ನಲ್ಲಿರುವ 'ಟ್' ಕಾರಕ್ಕೆ 'ಇತ್' ಸಂಜ್ಞೆ ಮತ್ತು 'ಮಹಿಙ್' ನಲ್ಲಿರುವ 'ಙ್' ಕಾರಕ್ಕೆ 'ಇತ್' ಸಂಜ್ಞೆ ಬಂದು "ತಸ್ಯ ಲೋಪಃ" ಎಂಬ ಸೂತ್ರದಿಂದ ಲೋಪವಾಗುತ್ತವೆ. 'ತಸ್' 'ಥಸ್' 'ವಸ್' 'ಮಸ್' ಮತ್ತು 'ಥಾಸ್' ಗಳಲ್ಲಿರುವ 'ಸ್' ಕಾರಕ್ಕೆ ಹಾಗೂ 'ಆತಾಮ್' ಆಥಾಮ್' ಮತ್ತು 'ಧ್ವಮ್' ಗಳಲ್ಲಿರುವ 'ಮ್' ಕಾರಕ್ಕೆ "ಹಲನ್ತ್ಯಮ್" ಎಂಬ ಸೂತ್ರದಿಂದ 'ಇತ್' ಸಂಜ್ಞೆ ಬರಬೇಕಾಗಿತ್ತು. ಆದರೆ "ನ ವಿಭಕ್ತೌ ತುಸ್ಮಾಃ" ಎಂಬ ಸೂತ್ರದಿಂದ ಅವುಗಳಿಗೆ 'ಇತ್' ಸಂಜ್ಞೆಯ ನಿಷೇಧವಾಗಿರುವುದರಿಂದ ಲೋಪವು ಬರಲಿಲ್ಲ.

**(ಪರಸ್ಮೈ ಪದ ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ 376. ಲಃ ಪರಸ್ಮೈಪದಮ್ (1.4.99)**

ವೃತ್ತಿಃ–ಲಾದೇಶಾಃ ಪರಸ್ಮೈಪದ ಸಂಜ್ಞಾಃ ಸ್ಯುಃ।

ಅರ್ಥ–ಲ್–ಕಾರಗಳ ಸ್ಥಾನದಲ್ಲಿ 0ಯಾವ ತಿಪ್, ತಸ್, ಝಿ ಮೊದಲಾದ 18 ಆದೇಶಗಳು ಬರುತ್ತವೋ ಅವು ಪರಸ್ಮೈ ಪದ ಸಂಜ್ಞೆ0ಯನ್ನು ಹೊಂದಿರುತ್ತವೆ.

[ಹೀಗೆ 18 ಪ್ರತ್ಯಯಗಳಿಗೆ ಪರಸ್ಮೈ ಪದ ಸಂಜ್ಞೆಯನ್ನು ಹೇಳಿದ್ದರೂ ಅನಂತರದ ಸೂತ್ರದಿಂದ ಕೊನೆಯ 9 ಪ್ರತ್ಯಯಗಳಿಗೆ ಮಾತ್ರ ಆತ್ಮನೇಪದ ಸಂಜ್ಞೆಯನ್ನು ಕೊಟ್ಟಿರುವುದರಿಂದ ಮೊದಲಿನ 9 ಪ್ರತ್ಯಯಗಳು ಪರಸ್ಮೈಪದ ಸಂಜ್ಞೆಯುಳ್ಳದ್ದೆಂದು ತಿಳಿಯಬೇಕು].

**(ಆತ್ಮನೇ ಪದ ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ– 377. ತಙಾನಾವಾತ್ಮನೇಪದಮ್ (1.4.100)**

ವೃತ್ತಿಃ–ತಙ್ ಪ್ರತ್ಯಾಹಾರಃ ಶಾನಚ್–ಕಾನಚೌ ಚ ಏತತ್–ಸಂಜ್ಞಾಃ ಸ್ಯುಃ। ಪೂರ್ವಸಂಜ್ಞಾಪವಾದಃ।

ಪ. ಛೇ. – ತಙಾನೌ, ಆತ್ಮನೇಪದಮ್।

ಅ. ವೃ. –"ಲಃ ಪರಸ್ಮೈಪದಂ" ಎಂಬ ಸೂತ್ರದಿಂದ 'ಲಃ' ಎಂಬ ಪದವು ಅನುವೃತ್ತವಾಗುತ್ತದೆ. 'ಲ್' ಕಾರದ ಸ್ಥಾನದಲ್ಲಿ ಈ 'ತಙ್' ಪ್ರತ್ಯಯಗಳ ಹೊರತು "ಲಿಟಃ ಕಾನಜ್ವಾ", "ಕ್ವಸುಶ್ಚ", "ಲಟಃ ಶತೃಶಾನಚಾವಪ್ರಥಮಾಸಮಾನಾಧಿಕರಣೇ" "ಲೃಟಃ ಸದ್ವಾ" ಮತ್ತು "ತಾಚ್ಛೀಲ್ಯವಯೋವಚನೇಷು ಚಾನಶ್" ಎಂಬ ಸೂತ್ರಗಳಿಂದ

ಕ್ರಮವಾಗಿ ಕಾನಚ್, ಕ್ವಸು, ಶತೃ, ಶಾನಚ್ ಮತ್ತು ಚಾನಶ್ ಎಂಬ ಪ್ರತ್ಯಯಗಳನ್ನೂ ಕೂಡ ವಿಧಿಸಲಾಗಿರುವುದರಿಂದ, ಇವುಗಳನ್ನು ಅನುವೃತ್ತಿ ಮಾಡಿಕೊಳ್ಳಬೇಕು,

ಅರ್ಥ–ತಙ್ ಪ್ರತ್ಯಾಹಾರ (ತ, ಆತಾಂ, ಝ, ಥಾಸ್, ಆಥಾಂ, ಧ್ವಮ್, ಇಟ್, ವಹಿ, ಮಹಿಙ್) ಮತ್ತು 'ಶಾನಚ್' ಮತ್ತು 'ಕಾನಚ್' ಪ್ರತ್ಯ೦ಯಗಳು ಆತ್ಮನೇಪದ ಸಂಜ್ಞೆ೦ಯನ್ನು ಹೊಂದುತ್ತವೆ. ಹಿಂದಿನ ಸೂತ್ರದಿಂದ ಇವುಗಳಿಗೆ (ತಙ್ ನಲ್ಲಿರುವ ಪ್ರತ್ಯಯಗಳಿಗೆ) ಪರಸ್ಮೈಪದ ಸಂಜ್ಞೆಯನ್ನು ಹೇಳಿರುವುದರಿಂದ, ಈ ಸೂತ್ರದಿಂದ ಈ 'ತಙ್' ಎಂಬ 9 ಪ್ರತ್ಯಯಗಳಿಗೆ ಆತ್ಮನೇಪದ ಸಂಜ್ಞೆ ಹೇಳಿರುವುದರಿಂದ ಹಿಂದಿನ ಸೂತ್ರಕ್ಕೆ ಇದು ಅಪವಾದ. ಆದ್ದರಿಂದ ಹಿಂದಿನ ಸೂತ್ರದಿಂದ ತಿಬಾದಿ 9 ಪ್ರತ್ಯಯಗಳಿಗೆ ಮಾತ್ರ ಪರಸ್ಮೈಪದ ಸಂಜ್ಞೆ ಎಂದು ತಿಳಿಯಬೇಕು. ಆಗ ಮೊದಲಿನ 9 ಪ್ರತ್ಯಯಗಳು ಪರಸ್ಮೈಪದವೆಂದೂ ಕೊನೆಯ 9 ಪ್ರತ್ಯಯಗಳು ಆತ್ಮನೇ ಪದವೆಂದೂ ತಿಳಿಯಬೇಕು.

ಶಾನಚ್, ಕಾನಚ್, ಮತ್ತು ಚಾನಶ್ ಗಳಲ್ಲಿ 'ಆನ' ಮಾತ್ರ ಉಳಿಯುವುದರಿಂದ ಮೊದಲಿನ ಎರಡಕ್ಕೆ ಪ್ರಕೃತ ಸೂತ್ರದಲ್ಲಿ, 'ಆನ' ಎಂಬ ಪದದಿಂದಲೇ ಗ್ರಹಣ. 'ಚಾನಶ್' ಎಂಬುದರಲ್ಲಿಯೂ 'ಆನ' ಮಾತ್ರ ಉಳಿಯುತ್ತದೆ. ಆದಕ್ಕೆ "ತಾಚ್ಛೀಲ್ಯವಯೋವಚನೇಷು ಚಾನಶ್" ಎಂಬ ಸೂತ್ರದಿಂದ 'ಆನ' ಎಂಬುದರ ಗ್ರಹಣವಾಗುತ್ತದೆ. ಈಗ ಆತ್ಮನೇಪದ ಪ್ರತ್ಯಯಗಳನ್ನು ಹೊಂದುವ ಧಾತುಗಳನ್ನು ಹೇಳುತ್ತಾರೆ.

**(ಧಾತುವಿಗೆ ಆತ್ಮನೇ ಪದ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ 378.–ಅನುದಾತ್ತಙಿತ ಆತ್ಮನೇಪದಮ್ (1.3.12)**

ವೃತ್ತಿಃ– ಅನುದಾತ್ತೇತಃ ಙಿತಶ್ಚ ಧಾತೋಃ ಆತ್ಮನೇ ಪದಂ ಸ್ಯಾತ್।

ಪ. ಛೇ. – ಅನುದಾತ್ತಙಿತಃ, ಆತ್ಮನೇ ಪದಮ್।

ಅ. ವೃ. –"ಭೂವಾದ೦ಯೋ ಧಾತವಃ" ಎಂಬ ಸೂತ್ರದಿಂದ 'ಧಾತವಃ' ಎಂಬ ಬಹುವಚನ ಪದವನ್ನು 'ಪಞ್ಚಮೀ' ವಿಭಕ್ತಿ೦ಯ ಏಕವಚನವಾಗಿ ವಿಭಕ್ತಿ ವಿಪರಿಣಾಮ ಮಾಡಿದ ನಂತರ 'ಧಾತೋಃ' ಎಂದು ಅನುವೃತ್ತವಾಗಿದೆ.

ಅರ್ಥ– ಅನುದಾತ್ತವಾದ 'ಇತ್' ಸಂಜ್ಞೆ೦ಯುಳ್ಳ ಧಾತುಗಳಿಗೂ ಮತ್ತು'ಙ್' ಕಾರವನ್ನು 'ಇತ್' ಸಂಜ್ಞೆ೦ಯುಳ್ಳ ಧಾತುಗಳಿಗೂ 'ಆತ್ಮನೇಪದ' ಸಂಜ್ಞೆ೦ಯು ಬರುತ್ತವೆ.

ಸೂಚನೆ– 'ಭೂ' ಧಾತುವು ಇವೆರಡರಲ್ಲಿಯೂ ಸೇರಿಲ್ಲ. 'ಙಿತ್' ಆದ ಧಾತುಗಳೆಂದರೆ, 'ಶೀಙ್' ಮತ್ತು 'ವೃಙ್' ಮುಂತಾದವುಗಳು. ಅನುದಾತ್ತವಾಗಿ 'ಇತ್' ಆದ ಧಾತುಗಳು 'ಏಧ' 'ಭಾಸ' ಮತ್ತು 'ದ್ಯುತ' ಮುಂತಾದವುಗಳು. ಈ ಎರಡು ವಿಧವಾದ ಧಾತುಗಳಿಗೆ ಆತ್ಮನೇಪದ ಪ್ರತ್ಯಯಗಳನ್ನು ಸೇರಿಸಲಾಗುತ್ತದೆ.

**(ಉಭಯಪದ [ಆತ್ಮನೇ ಮತ್ತು ಪರಸ್ಮೈ ಪದ]ಗಳನ್ನು ವಿಧಿಸುವ ಸೂತ್ರ)**

**ಸೂತ್ರ 379. –ಸ್ವರಿತಞಿತಃ ಕರ್ತ್ರಭಿಪ್ರಾಯೇ ಕ್ರಿಯಾಫಲೇ (1.3.72)**

ವೃತ್ತಿಃ– ಸ್ವರಿತೇತಃ ಞಿತಶ್ಚ ಧಾತೋಃ ಆತ್ಮನೇಪದಂ ಸ್ಯಾತ್ ಕರ್ತೃಗಾಮಿನಿ

ಕ್ರಿಯಾಫಲೇ।

ಅ. ವ್ಯ. – "ಭೂವಾದಯೋ ಧಾತವಃ" ಎಂಬ ಸೂತ್ರದಿಂದ 'ಧಾತವಃ' ಎಂಬ ಬಹುವಚನ ಪದವನ್ನು 'ಪಞ್ಚಮೀ' ವಿಭಕ್ತಿಯ ಏಕವಚನವಾಗಿ ವಿಭಕ್ತಿ ವಿಪರಿಣಾಮ ಮಾಡಿದ ನಂತರ 'ಧಾತೋಃ' ಎಂದು ಅನುವೃತ್ತವಾಗಿದೆ.

ಅರ್ಥ– ಸ್ವರಿತ– ಇತ್, ಅಥವಾ 'ಞ್' ಕಾರವನ್ನು 'ಇತ್' ಸಂಜ್ಞೆಯಾಗಿ ಉಳ್ಳ ಧಾತುವಿನ ನಂತರ 'ಆತ್ಮನೇ' ಪದ ಸಂಜ್ಞೆಯುಳ್ಳ ಪ್ರತ್ಯಯಗಳು ಬರುತ್ತವೆ– ಯಾವಾಗ ಅಂದರೆ ಕ್ರಿಯೆಯ ಫಲವು ಕರ್ತೃಗಾಮಿಯಾಗಿದ್ದಾಗ (ಕರ್ತೃವನ್ನು ಹೊಂದುವಾಗ) ಎಂದು ತಿಳಿಯಬೇಕು. ಕ್ರಿಯೆಯ ಫಲವು ಕರ್ತೃಗಾಮಿಯಾಗಿಲ್ಲದಿದ್ದಾಗ 'ಪರಸ್ಮೈಪದ' ಪ್ರತ್ಯಯವು ಬರುತ್ತದೆ.

ವಿವರಣೆ: ಇಂಥ ಸಂದರ್ಭಗಳಲ್ಲಿ ಧಾತುಗಳು ಉಭಯಪದಿಗಳಾಗುತ್ತವೆ. ಕ್ರಿಯೆಯ ಫಲವು ಕರ್ತೃವಿಗೆ ಸೇರುವದಾದರೆ ಆತ್ಮನೇ ಪದ, ಇಲ್ಲದಿದ್ದರೆ ಪರಸ್ಮೈಪದವು ಬರುತ್ತದೆ ಎಂದು ಹೇಳಿದಂತಾಗುತ್ತದೆ.

ಉದಾ–1 'ರಾಮಃ ತಂಡುಲಾನ್ ಪಚತೇ' ಎಂದು ಪ್ರಯೋಗವಿದ್ದಾಗ, 'ಪಚ್' ಧಾತುವು ಆತ್ಮನೇಪದದಲ್ಲಿರುತ್ತದೆ. ಅಂದರೆ ಪಚನಕ್ರಿಯೆಯ ಫಲವು ಕರ್ತೃವಾದ ರಾಮನಿಗೇ ಸೇರುತ್ತದೆ. ಅಂದರೆ ರಾಮನು ತನಗಾಗಿ ಆಕ್ಕಿಯನ್ನು ಬೇಯಿಸುತ್ತಾನೆ ಎಂದರ್ಥ.

ಉದಾ–2 'ರಾಮಃ ತಂಡುಲಾನ್ ಪಚತಿ' ಎಂಬಲ್ಲಿ, ಪರಸ್ಮೈಪದ ಬಂದಿದೆ, ಕಾರಣ ರಾಮನು ಬೇರೆಯವರಿಗಾಗಿ ಅಕ್ಕಿಯನ್ನು ಬೇಯಿಸುತ್ತಾನೆ ಎಂದು ಅರ್ಥ.(ಪಚನ ಕ್ರಿಯೆಯ ಫಲವು ರಾಮನಿಗೆ ಹೋಗದೇ ಬೇರೆಯವರಿಗೆ ಹೋಗುತ್ತದೆ).

ಒಂದೇ ಧಾತುವು ಪರಸ್ಮೈ ಮತ್ತು ಆತ್ಮನೇ ಪದಗಳ ಉಪಯೋಗದಲ್ಲಿ ಕಂಡು ಬಂದಾಗ, ಅದನ್ನು ಉಭಯಪದಿ ಧಾತು ಎಂದು ತಿಳಿಯಬೇಕು. (ನಾವು ನಮಗೆ ಬೇಕಾದ ಯಾವುದಾದರೂ ಒಂದು ಧಾತುವನ್ನು ಉಭಯಪದಿಯಾಗಿ ಉಪಯೋಗಿಸಲು ಬರುವುದಿಲ್ಲ. ಧಾತುಪಾಠದಲ್ಲಿ ಪಠಿತವಾಗಿದ್ದರೆ ಮಾತ್ರ ಅದನ್ನು ಉಭಯಪದಿಯಾಗಿ ಉಪಯೋಗಿಸಬಹುದಾಗಿದೆ. ಹಾಗೆಯೇ ಪರಸ್ಮೈಪದಿಯಾಗಿ ಧಾತುವನ್ನು ಪ್ರಯೋಗಿಸಬೇಕಾದರೆ, ಅದು ಧಾತುಪಾಠದಲ್ಲಿ ಪರಸ್ಮೈಪದಿಯಾಗಿ ಪಠಿತವಾಗಿರಬೇಕು. ಹೀಗೆಯೇ ಆತ್ಮನೇಪದ ಧಾತುವನ್ನೂ ಧಾತುಪಾಠದಿಂದಲೇ ತಿಳಿಯಬೇಕು. ಪ್ರಕೃತ ದೃಷ್ಟಾಂತದಿಂದ 'ಪಚ್' ಧಾತುವು ಉಭಯಪದಿ ಎಂದು ತಿಳಿಯಬೇಕು. ಅಲ್ಲದೇ 'ಬೇಯಿಸುವುದು' ಎಂಬ ಅರ್ಥವುಳ್ಳ ಕೇವಲ ಆತ್ಮನೇಪದ ಧಾತುಗಳಿಗೂ, ಮತ್ತು ಕೇವಲಪರಸ್ಮೈಪದ ಧಾತುಗಳಿಗೂ ಪ್ರಕೃತ ಹೇಳಿದ ಎರಡು ಉದಾಹರಣೆಗಳಲ್ಲಿ ಅವಕಾಶವಿರುತ್ತದೆ. ಆದರೆ, ಕ್ರಿಯೆಯ ಫಲವು ಕರ್ತೃವನ್ನು ಆಶ್ರಯಿಸುತ್ತದೆ ಎಂಬ ಕಾರಣದಿಂದ ಕೇವಲ ಪರಸ್ಮೈಪದಿ ಧಾತುವಿಗೆ ಆತ್ಮನೇಪದ ಪ್ರತ್ಯಯವನ್ನು ಸೇರಿಸಲಿಕ್ಕೆ ಬರುವುದಿಲ್ಲ. ಅಂತಹ ಸಂದರ್ಭದಲ್ಲಿ ಆತ್ಮನೇಪದ ಧಾತುವನ್ನೇ ಉಪಯೋಗಿಸಬೇಕು. ಹಾಗೆಯೇ ಕೇವಲ ಆತ್ಮನೇಪದ ಧಾತುವಿಗೆ ಪರಸ್ಮೈಪದ ಪ್ರತ್ಯಯಗಳನ್ನು ಸೇರಿಸಲಿಕ್ಕೆ

ಬರುವುದಿಲ್ಲ. ಅಂದರೆ ಉಭಯಪದಿ ಧಾತುವಾಗಿದ್ದರೆ ಮಾತ್ರ ಎರಡೂ ಪದಗಳ ಪ್ರತ್ಯಯಗಳನ್ನೂ ಉಪಯೋಗಿಸಬಹುದು. ಇಲ್ಲಿಯೂ ಸಹ ಫಲವು ಕರ್ತೃಗಾಮಿಯಾಗಿದ್ದರೆ ಮಾತ್ರ ಆತ್ಮನೇಪದ, ಇಲ್ಲದಿದ್ದರೆ ಪರಸ್ಮೈಪದವೆಂದು ತಿಳಿಯಬೇಕು.

**(ಪರಸ್ಮೈಪದವನ್ನು ವಿಧಿಸುವ ಸೂತ್ರ)**

**ಸೂತ್ರ 380. –ಶೇಷಾತ್ ಕರ್ತರಿ ಪರಸ್ಮೈಪದಮ್ (1.3.78)**

ವೃತ್ತಿಃ–ಆತ್ಮನೇಪದನಿಮಿತ್ತಹೀನಾತ್ ಧಾತೋಃ ಕರ್ತರಿ ಪರಸ್ಮೈ ಪದಂ ಸ್ಯಾತ್।

ಅ.ವ್ಯ. – "ಭೂವಾದಯೋ ಧಾತವಃ" ಎಂಬ ಸೂತ್ರದಿಂದ 'ಧಾತವಃ' ಎಂಬ ಬಹುವಚನ ಪದವನ್ನು 'ಪಞ್ಚಮೀ' ವಿಭಕ್ತಿಯ ಏಕವಚನವಾಗಿ ವಿಭಕ್ತಿ ವಿಪರಿಣಾಮ ಮಾಡಿದ ನಂತರ 'ಧಾತೋಃ' ಎಂದು ಅನುವೃತ್ತವಾಗಿದೆ.

ಅರ್ಥ– ಆತ್ಮನೇ ಪದಕ್ಕೆ ಸಂಬಂಧಿಸಿದ ನಿಮಿತ್ತಗಳು ಇಲ್ಲದಿರುವ ಧಾತುಗಳ ನಂತರ ಕರ್ತ್ರರ್ಥದಲ್ಲಿ ಪರಸ್ಮೈಪದ ಸಂಜ್ಞೆಯುಳ್ಳ ಪ್ರತ್ಯಯಗಳು ಬರುತ್ತವೆ. (ಶೇಷವೆಂದರೆ ಉಕ್ತಾದನ್ಯಃ ಶೇಷಃ ಎಂದು ಹೇಳಿರುವರು. ಅಂದರೆ ಮೇಲೆ ಹೇಳಿದ ನಿಮಿತ್ತಗಳನ್ನು ಬಿಟ್ಟು ಉಳಿದ ನಿಮಿತ್ತಗಳಿರುವಾಗ ಎಂದರ್ಥ).

**(ಪ್ರಥಮಪುರುಷ ಮೊದಲಾದ ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ 381. – ತಿಙಸ್ತ್ರೀಣಿ ತ್ರೀಣಿ ಪ್ರಥಮ–ಮಧ್ಯಮೋತ್ತಮಾಃ (1.4.101)**

ವೃತ್ತಿಃ–ತಿಙಃ ಉಭಯೋಃ ಪದಯೋಃ ತ್ರಯಃ ತ್ರಿಕಾಃ ಕ್ರಮಾತ್ ಏತತ್–ಸಂಜ್ಞಾಃ ಸ್ಯುಃ।

ಪ. ಛೇ. – ತಿಙಃ, ತ್ರೀಣಿ, ತ್ರೀಣಿ, ಪ್ರಥಮ–ಮಧ್ಯಮೋತ್ತಮಾಃ।

ಅ.ವ್ಯ. –"ಲಃ ಪರಸ್ಮೈಪದಂ" ಎಂಬ ಸೂತ್ರದಿಂದ 'ಪರಸ್ಮೈಪದಮ್' ಎಂಬ ಪದವೂ, ಮತ್ತು "ತಙಾನಾವಾತ್ಮನೇಪದಮ್"। ಎಂಬ ಸೂತ್ರದಿಂದ 'ಆತ್ಮನೇಪದಮ್' ಎಂಬ ಈ ಎರಡು ಪದಗಳು ಷಷ್ಠೀ ವಿಭಕ್ತಿಯಲ್ಲಿ ವಿಪರಿಣಾಮಗೊಳಿಸಿ 'ಪರಸ್ಮೈಪದಸ್ಯ' ಮತ್ತು 'ಆತ್ಮನೇಪದಸ್ಯ' ಎಂದು ಅನುವೃತ್ತವಾಗುತ್ತವೆ. ಈ ಎರಡು ಪದಗಳನ್ನೇ 'ಉಭಯೋಃ ಪದಯೋಃ' ಎಂದು ವೃತ್ತಿಯಲ್ಲಿ ನಿರ್ದೇಶಿಸಿದ್ದಾರೆ.

ಅರ್ಥ–'ತಿಙ್' ಪ್ರತ್ಯಯಗಳಿಗೆ ಸಂಬಂಧಿಸಿದ ಎರಡೂ (ಪರಸ್ಮೈಪದ ಮತ್ತು ಆತ್ಮನೇಪದ) ಪದಗಳ ಮೂರು ಮೂರು ಪ್ರತ್ಯಯಗಳು ಕ್ರಮವಾಗಿ ಪ್ರಥಮ, ಮಧ್ಯಮ ಮತ್ತು ಉತ್ತಮ ಪುರುಷಗಳೆಂಬ ಸಂಜ್ಞೆಯನ್ನು ಪಡೆಯುತ್ತವೆ. 'ತ್ರಿಕ' ಎಂದರೆ ಮೂರು ಪ್ರತ್ಯಯಗಳಿಂದ ಕೂಡಿದ ಗುಂಪು ಎಂದು ಅರ್ಥ.

**ಪರಸ್ಮೈ ಪದದ ಪ್ರತ್ಯಯಗಳು –**

ಪ್ರಥಮ ಪುರುಷ: ತಿಪ್, ತಸ್, ಝಿ, ಮಧ್ಯಮ ಪುರುಷ: ಸಿಪ್, ಥಸ್, ಥ – ಉತ್ತಮ ಪುರುಷ: ಮಿಪ್, ವಸ್, ಮಸ್ ಹೀಗೆ ಮೂರು ತ್ರಿಕಗಳಲ್ಲಿ ಒಟ್ಟು ಒಂಬತ್ತು

ಪ್ರತ್ಯಯಗಳು ಇವೆ.

ಇದೇ ರೀತಿಯಲ್ಲಿ ಉಳಿದ ಆತ್ಮನೇಪದ ಪ್ರತ್ಯಯಗಳನ್ನು ಮೂರು ತ್ರಿಕಗಳಾಗಿ ವಿಂಗಡಿಸಲಾಗಿದೆ.

ಪ್ರಥಮ ಪುರುಷ: ತ, ಆತಾಂ, ಝ, ಮಧ್ಯಮ ಪುರುಷ: ಥಾಸ್, ಆಥಾಂ, ಧ್ವಂ, ಉತ್ತಮ ಪುರುಷ: ಇಟ್, ವಹಿ, ಮಹಿಜ್ ಹೀಗೆ ಮೂರು ತ್ರಿಕಗಳಲ್ಲಿ ಒಟ್ಟು ಒಂಬತ್ತು ಪ್ರತ್ಯಯಗಳು ಇವೆ.

**(ಪ್ರಥಮಾದಿ ಪುರುಷಗಳಲ್ಲಿ ಏಕವಚನಾದಿ, ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ- 382. ತಾನ್ಯೇಕವಚನ-ದ್ವಿವಚನ-ಬಹುವಚನಾನ್ಯೇಕಶಃ (1.4.102)**

ವೃತ್ತಿಃ-ಲಬ್ಧ ಪ್ರಥಮಾದಿ ಸಂಜ್ಞಾನಿ ತಿಙಃ ತ್ರೀಣಿ-ತ್ರೀಣಿ (ವಚನಾನಿ) ಪ್ರತ್ಯೇಕಂ ಏಕವಚನಾದಿ ಸಂಜ್ಞಾನಿ ಸ್ಯುಃ।

ಪ. ಛೇ. – ತಾನಿ, ಏಕವಚನ-ದ್ವಿವಚನ-ಬಹುವಚನಾನಿ, ಏಕಶಃ।

ಅ. ವೃ. – "ತಿಙಸ್ತ್ರೀಣಿ ತ್ರೀಣಿ ಪ್ರಥಮ-ಮಧ್ಯಮೋತ್ತಮಾಃ (1.4.101)" ಎಂಬ ಸೂತ್ರದಿಂದ 'ತಿಙಃ' ಮತ್ತು 'ತ್ರೀಣಿ, ತ್ರೀಣಿ' ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ-'ಪ್ರಥಮಪುರುಷ' ಮೊದಲಾದ ಸಂಜ್ಞೆಗಳನ್ನು ಹೊಂದಿದಮೇಲೆ, ೦ಯಾವ ಮೂರು ಮೂರು ಪ್ರತ್ಯ೦ಯಗಳಿರುವವೋ ಅವು ಕ್ರಮವಾಗಿ ಏಕವಚನ, ದ್ವಿವಚನ ಮತ್ತು ಬಹುವಚನ ಎಂಬ ಸಂಜ್ಞೆಗಳನ್ನು ಪಡೆ೦ಯುತ್ತವೆ. ಇನ್ನುಮುಂದೆ ಯಾವ ಕರ್ತೃವನ್ನು ಈ ಪುರುಷಗಳು ಹೇಳುತ್ತವೆ ಎಂಬುದನ್ನು ವಿವರಿಲಾಗುತ್ತದೆ.

**(ಮಧ್ಯಮ ಪುರುಷವನ್ನು ವಿಧಿಸುವ ಸೂತ್ರ)**

**ಸೂತ್ರ-383.ಯುಷ್ಮದ್ಯುಪಪದೇ ಸಮಾನಾಧಿಕರಣೇ ಸ್ಥಾನಿನ್ಯಪಿ ಮಧ್ಯಮಃ (1.4.105)**

ವೃತ್ತಿಃ-ತಿಙ್ ವಾಚ್ಯ ಕಾರಕವಾಚಿನಿ ೦ಯುಷ್ಮದಿ ಉಪಪದೇ ಪ್ರ೦ಯುಜ್ಯಮಾನೇ, ಅಪ್ರ೦ಯುಜ್ಯಮಾನೇ ಚ ಮಧ್ಯಮಃ।

ಪ. ಛೇ. – ೦ಯುಷ್ಮದಿ, ಉಪಪದೇ, ಸಮಾನಾಧಿಕರಣೇ, ಸ್ಥಾನಿನಿ, ಅಪಿ, ಮಧ್ಯಮಃ।

ಅ.ವೃ – "ಲಃ ಪರಸ್ಮೈಪದಂ" ಎಂಬಸೂತ್ರದಿಂದ, 'ಲಃ' ಎಂಬುದು ಅನುವೃತ್ತವಾಗಿದೆ.

ಅರ್ಥ-'ತಿಙ್' ಪ್ರತ್ಯ೦ಯದಿಂದ ವಾಚ್ಯವಾದ ೦ಯಾವ ಒಂದು ಕಾರಕವಿರುವದೋ (ಕರ್ತಾ ಅಥವಾ ಕರ್ಮ) ಅವುಗಳನ್ನು ಹೇಳುವ '೦ಯುಷ್ಮದ್' ಶಬ್ದ ಉಪಪದವಿದ್ದಾಗ, ಆ '೦ಯುಷ್ಮದ್' ಶಬ್ದದ ಪ್ರ೦ಯೋಗ ಮಾಡಿದಾಗಲೂ ಅಥವಾ ಮಾಡದೇ ಇದ್ದಾಗಲೂ 'ಮಧ್ಯಮಪುರುಷವು' ಬರುತ್ತದೆ. 'ಲ್' ಕಾರದ ಸ್ಥಾನದಲ್ಲಿ ಆದೇಶವಾಗಿ ಬಂದ 'ತಿಙ್' ಪ್ರತ್ಯಯವು 'ಕರ್ತೃ' ಅಥವಾ 'ಕರ್ಮ' ಕಾರಕವನ್ನು ಬೋಧಿಸುವುದು. 'ಯುಷ್ಮದ್' ಶಬ್ದವೂ ಕೂಡ ಆ ಕಾರಕವನ್ನೇ ಬೋಧಿಸಿದರೆ, ಮಧ್ಯಮಪುರುಷ ಪ್ರತ್ಯಯಗಳು 'ಲ್' ಕಾರದ ಸ್ಥಾನದಲ್ಲಿ ಆದೇಶವಾಗಿ ಬರುತ್ತವೆ.

**ಮಧ್ಯಮಪುರುಷ ಪ್ರತ್ಯಯಗಳು:**

ಪರಸ್ಮೈ ಪದ: ಸಿಪ್, ಥಸ್, ಥ। ಆತ್ಮನೇ ಪದ: ಥಾಸ್, ಆಥಾಮ್, ಧ್ವಮ್। **ತ್ವಂಯುಷ್ಮದ್** ಶಬ್ದವನ್ನು ಪ್ರಯೋಗಿಸಲೇಬೇಕೆಂಬ ನಿರ್ಬಂಧವಿರುವುದಿಲ್ಲ. ಅದರ ಅರ್ಥವಾದರೆ ಸಾಕು. ಉದಾ– ಹೇ ಕೃಷ್ಣ ಪಾಹಿ.

**(ಉತ್ತಮಪುರುಷವನ್ನು ವಿಧಿಸುವ ಸೂತ್ರ)**

**ಸೂತ್ರ –384.ಅಸ್ಮದ್ಯುತ್ತಮಃ (1.4.107)**

ವೃತ್ತಿಃ–ತಥಾಭೂತೇ ಅಸ್ಮದಿ ಉತ್ತಮಃ।

ಪ. ಛೇ. – ಅಸ್ಮದಿ, ಉತ್ತಮಃ।

ಅ. ವ್ಯ. –"ಯುಷ್ಮದ್ಯುಪಪದೇ ಸಮಾನಾಧಿಕರಣೇ ಸ್ಥಾನಿನ್ಯಪಿ ಮಧ್ಯಮಃ ಎಂಬ ಸೂತ್ರದಿಂದ ಉಪಪದೇ, ಸಮಾನಾಧಿಕರಣೇ, ಸ್ಥಾನಿನಿ, ಮತ್ತು ಅಪಿ ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ–'ತಿಙ್' ಪ್ರತ್ಯಯಗಳಿಂದ ವಾಚ್ಯವಾದ ಯಾವ ಒಂದು ಕಾರಕ (ಕರ್ತಾ ಅಥವಾ ಕರ್ಮ) ಅವುಗಳನ್ನು ಹೇಳುವ 'ಅಸ್ಮದ್' ಶಬ್ದ ಉಪಪದವಿದ್ದಾಗ, ಆ 'ಅಸ್ಮದ್' ಶಬ್ದದ ಪ್ರಯೋಗ ಮಾಡಿದಾಗಲೂ ಅಥವಾ ಮಾಡದೇ ಇದ್ದಾಗಲೂ, 'ಲ್' ಕಾರದ ಸ್ಥಾನದಲ್ಲಿ 'ಉತ್ತಮಪುರುಷವು' ಬರುತ್ತದೆ.

ಉದಾ–'ಕರೋಮಿ' ಎಂದೊಡನೆ 'ಅಹಂ' (ಕರ್ತೃ) ಎಂದು ತಾನಾಗಿಯೇ ತಿಳಿಯುತ್ತದೆ. 'ಅಹಂ ಕರೋಮಿ' ಎಂದಾಗಲೂ ಇದೇ ಅರ್ಥ. 'ಮಿಪ್' ಪ್ರತ್ಯಯದಿಂದಲೂ, ಅಹಂ ಶಬ್ದದಿಂದಲೂ ಒಂದೇ ಅರ್ಥ ಬರುತ್ತದೆ. ಅಸ್ಮದ್ ಶಬ್ದದ ಏಕವಚನ, ದ್ವಿವಚನ ಮತ್ತು ಬಹುವಚನ ತೋರುವಾಗ, ಮಿಪ್. ವಸ್, ಮಸ್ ಗಳು ಬರುತ್ತವೆ. ಹೀಗೆಯೇ ಆತ್ಮನೇ ಪದಲ್ಲಿಯೂ ಕೂಡ ಇಟ್, ವಹಿ, ಮಹಿಙ್ ಪ್ರತ್ಯಯಗಳು 'ಲ್' ಕಾರಗಳ ಸ್ಥಾನದಲ್ಲಿ ಆದೇಶಗಳಾಗಿ ಬರುತ್ತವೆ.

**(ಪ್ರಥಮ ಪುರುಷವನ್ನು ವಿಧಿಸುವ ಸೂತ್ರ)**

**ಸೂತ್ರ– 385.ಶೇಷೇ ಪ್ರಥಮಃ (1.4.108)**

ವೃತ್ತಿಃ–ಮಧ್ಯಮೋತ್ತಮಯೋಃ ಅವಿಷಯೇ ಪ್ರಥಮಃ ಸ್ಯಾತ್। ಭೂ+ತಿ, ಇತಿ ಜಾತೇ।

ಅರ್ಥ–ಉತ್ತಮಪುರುಷ ಮತ್ತು ಮಧ್ಯಮಪುರುಷಗಳು ಹೇಳಲ್ಪಡದಿದ್ದಾಗ, ಪ್ರಥಮಪುರುಷವು ಬರುತ್ತದೆ. ಭೂ ಧಾತುವಿಗೆ, ಕರ್ತ್ರರ್ಥದ ವರ್ತಮಾನಾರ್ಥದಲ್ಲಿ (ಭೂ+ಲಟ್) ಭೂ+ಲ್ ಎಂದಿದ್ದಾಗ, ಪ್ರಥಮಪುರುಷದ ಏಕವಚನದಲ್ಲಿ 'ಲ್' ಕಾರಕ್ಕೆ ಆದೇಶವಾಗಿ 'ತಿಪ್(ತಿ)' (ತಿಙ್) ಪ್ರತ್ಯಯವು ಬರುವುದು. ಭೂ+ತಿ ಎಂದಿದ್ದಾಗ–

**(ಸಾರ್ವಧಾತುಕ ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ– 386.ತಿಙ್–ಶಿತ್ ಸಾರ್ವಧಾತುಕಮ್ (3.4.113)**

ವೃತ್ತಿಃ-ತಿಙಃ ಶಿತಶ್ಚ ಧಾತ್ವಧಿಕಾರೋಕ್ತಾಃ ಏತತ್-ಸಂಜ್ಞಾಃ ಸ್ಯುಃ।

ಪ. ಛೇ. – ತಿಙ್-ಶಿತ್, ಸಾರ್ವಧಾತುಕಮ್।

ಅ. ವೃ. -"ಧಾತೋಃ" ಎಂಬುದು ಅಧಿಕಾರಸೂತ್ರವಾಗಿದೆ.

ಅರ್ಥ- ಧಾತುವಿನ ನಂತರ ವಿಧಿಸಲ್ಪಟ್ಟ 'ತಿಙ್' ಪ್ರತ್ಯಯಗಳಾಗಲೀ 'ಶಿತ್' (ಶ್-ಕಾರವನ್ನು ಇತ್ ಆದ) ಪ್ರತ್ಯಯಗಳಾಗಲೀ ಇದ್ದಾಗ, ಅಂಥ ಪ್ರತ್ಯಯಗಳಿಗೆ 'ಸಾರ್ವಧಾತುಕ' ಸಂಜ್ಞೆಯು ಬರುತ್ತದೆ. (ಆದರೆ 'ಲಿಟ್' ಮತ್ತು 'ಆಶೀರ್ಲಿಙ್' ಗಳಲ್ಲಿ ಪ್ರಕೃತ ಸೂತ್ರವನ್ನು ಬಾಧಿಸಿ "ಲಿಟ್ ಚ" ಮತ್ತು "ಲಿಙ್ ಆಶಿಷೀ" ಎಂಬ ಸೂತ್ರಗಳಿಂದ 'ಆರ್ಧಧಾತುಕ' ಸಂಜ್ಞೆಯು ಬರುತ್ತದೆ. "ಕರ್ತರಿ ಶಪ್" ಎಂಬ ಸೂತ್ರದಿಂದ ಬರುವ 'ಶಪ್' ಪ್ರತ್ಯಯಕ್ಕೂ ಈ ಸೂತ್ರದಿಂದ 'ಸಾರ್ವಧಾತುಕ' ಸಂಜ್ಞೆಯು ಬರುತ್ತದೆ).

**(ಶಪ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ- 387.ಕರ್ತರಿ ಶಪ್ (3.1.68)**

ವೃತ್ತಿಃ-ಕರ್ತ್ರರ್ಥೇ ಸಾರ್ವಧಾತುಕೇ ಪರೇ ಧಾತೋಃ ಶಪ್।

ಅ.ವೃ.-"ಸಾರ್ವಧಾತುಕೇ ಯಕ್" ಎಂಬ ಸೂತ್ರದಿಂದ 'ಸಾರ್ವಧಾತುಕೇ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ-ಕರ್ತ್ರರ್ಥದಲ್ಲಿ ಬರುವ 'ಸಾರ್ವಧಾತುಕ' ಸಂಜ್ಞೆಯುಳ್ಳ ಪ್ರತ್ಯಯವು ಪರದಲ್ಲಿದ್ದಾಗ, ಧಾತುವಿನ ನಂತರ 'ಶಪ್' ಪ್ರತ್ಯಯವು ಬರುತ್ತದೆ.

**(ಇಗನ್ತ ಅಂಗಕ್ಕೆ ಗುಣವನ್ನು ವಿಧಿಸುವ ಸೂತ್ರ)**

**ಸೂತ್ರ- 388.ಸಾರ್ವಧಾತುಕಾರ್ಧಧಾತುಕಯೋಃ (7.3.84)**

ವೃತ್ತಿಃ-ಅನಯೋಃ ಪರಯೋಃ ಇಗಂತಾಙ್ಗಸ್ಯ ಗುಣಃ। ಅವಾದೇಶಃ। ಭವತಿ। ಭವತಃ।

ಪ. ಛೇ. – ಸಾರ್ವಧಾತುಕ-ಆರ್ಧಧಾತುಕಯೋಃ(ಒಂದೇ ಪದ)।

ಅ.ವೃ."ಮಿದೇರ್ಗುಣಃ ಎಂಬ ಸೂತ್ರದಿಂದ 'ಗುಣಃ' ಎಂಬ ಪದವು ಅನುವೃತ್ತವಾಗುತ್ತದೆ. "ಅಙ್ಗಸ್ಯ" ಎಂಬುದು ಅಧಿಕಾರ ಸೂತ್ರ, "ಇಕೋ ಗುಣವೃದ್ಧೀ" ಎಂಬ ಪರಿಭಾಷಾ ಸೂತ್ರದಿಂದ 'ಇಕಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- ಸಾರ್ವಧಾತುಕ ಮತ್ತು ಆರ್ಧಧಾತುಕ ಪ್ರತ್ಯಯಗಳು ಪರದಲ್ಲಿದ್ದಾಗ, ಇಗಂತವಾದ ಅಂಗಕ್ಕೆ ಗುಣ ಬರುತ್ತದೆ. "ಅಲೋಽನ್ತ್ಯಸ್ಯ" ಎಂಬ ಸೂತ್ರದಿಂದ ಇಗಂತವಾದ (ಇ,ಉ,ಋ,ಲೃ ಗಳು ಅಂತವಾದ) ಅಂಗದ ಅಂತ್ಯವರ್ಣಕ್ಕೆ ಗುಣವು ಬರುತ್ತದೆ. (ಅಂದರೆ ಇ-ಕಾರಕ್ಕೆ ಏ-ಕಾರ, ಉ-ಕಾರಕ್ಕೆ ಓ-ಕಾರ, ಋ-ಕಾರಕ್ಕೆ ಅರ್, ಮತ್ತು ಲೃ- ಕಾರಕ್ಕೆ ಅಲ್ ಎಂಬ ಗುಣ ವರ್ಣಗಳು ಆದೇಶವಾಗಿ ಬರುತ್ತವೆ).

"ತಸ್ಮಿನ್ನಿತಿನಿರ್ದಿಷ್ಟೇ ಪೂರ್ವಸ್ಯ" ಎಂಬ ಸೂತ್ರದ ಪ್ರಕಾರ ಸಾರ್ವಧಾತುಕ ಮತ್ತು ಆರ್ಧಧಾತುಕ ಪ್ರತ್ಯಯಗಳಿಗೆ ಅವ್ಯವಹಿತ ಪೂರ್ವದಲ್ಲಿರುವ ವರ್ಣಕ್ಕೆ ಗುಣಾದೇಶವು

ಬರುತ್ತದೆ. ಭವತಿ ಎಂಬಲ್ಲಿ ಭೂ (ಸತ್ತಾಯಾಂ) ಎಂಬುದು ಧಾತು. (ಸತ್ತಾ ಎಂದರೆ ಇರುವಿಕೆ) ಎಂದು ಅರ್ಥ. ಈ ಗಣದಲ್ಲಿ, ಭೂ ಧಾತುವು ಆರಂಭದಲ್ಲಿರುವುದರಿಂದ ಇದಕ್ಕೆ ಭ್ವಾದಿಗಣ ಎಂದು ಹೆಸರು. 'ಭೂ' ಧಾತುವಿನಲ್ಲಿರುವ 'ಊ' ಕಾರವು ಅನುನಾಸಿಕವಲ್ಲ. ಆದ್ದರಿಂದ ಅದು ಲೋಪವಾಗುವುದಿಲ್ಲ. ಇದು ಅಕರ್ಮಕ ಧಾತು. ಇಲ್ಲಿ ಈ ಅಕರ್ಮಕವಾದ 'ಭೂ' ಧಾತುವಿನಮೇಲೆ ಕರ್ತ್ರರ್ಥದಲ್ಲಿ ವರ್ತಮಾನ ಕಾಲದ 'ಲಟ್' ಪ್ರತ್ಯಯದ 'ಲ್' ಕಾರವು (ವರ್ತಮಾನೇ ಲಟ್) ವಿಧಿಸಲಾಗಿದೆ. ಹೀಗೆ ಭೂ+ಲಟ್(ಲ್) ಎಂದಿದ್ದಾಗ, (ಲಟ್ ನಲ್ಲಿ "ಅಟಾವಿತೌ" ಎಂಬುದರಿಂದ 'ಲ್' ಮಾತ್ರ ಉಳಿಯುತ್ತದೆ). ಭೂ+ಲ್ ಎಂದಿರುತ್ತದೆ. ಆಗ "ತಿಪ್-ತಸ್-ಝಿ-ಸಿಪ್-ಥಸ್-ಥ-ಮಿಬ್-ವಸ್-ಮಸ್-ತ-ಆತಾಂ-ಝ-ಥಾಸ್-ಆಥಾಂ-ಧ್ವಂ-ಇಡ್-ವಹಿ-ಮಹಿಙ್ (3.4.78) ಎಂಬ ಸೂತ್ರದಿಂದ 18 ಆಖ್ಯಾತ ಪ್ರತ್ಯಯಗಳು ಆದೇಶವಾಗಿ ಬರುವ ಅವಕಾಶವಿರುತ್ತದೆ-ಧಾತುವು ಉಭಯಪದಿಯಾಗಿದ್ದಲ್ಲಿ.

ಸೂಚನೆ- ಈ ಭ್ವಾದಿ ಗಣದಲ್ಲಿ 1035 ಧಾತುಗಳು ಪಠಿತವಾಗಿವೆ. ಅವುಗಳಲ್ಲಿ 49 ಧಾತುಗಳನ್ನು ವರದರಾಜರು ರೂಪಸಿದ್ಧಿಗಾಗಿ ಆರಿಸಿಕೊಂಡಿದ್ದಾರ. (ಪರಸ್ಮೈಪದಿ-20, ಆತ್ಮನೇಪದಿ-20, ಉಭಯಪದಿ-9)

**(ಪರಸ್ಮೈ ಪದದ) ಭೂ ಧಾತುವಿನ ರೂಪಗಳು:**

ಉದಾ- 1 ಭವತಿ - ಪ್ರಕೃತ ಪ್ರಥಮ ಪುರುಷ ಏಕವಚನದ ರೂಪ ಬೇಕಾಗಿರುವುದರಿಂದ, 'ತಿಪ್' ಎಂಬ ಆದೇಶವು ಬರುತ್ತದೆ 'ತಿಪ್' ನಲ್ಲಿ 'ತಿ' ಮಾತ್ರ ಉಳಿಯುತ್ತದೆ. ಹೀಗೆ ಭೂ+ತಿ ಎಂದಿದ್ದಾಗ, "ತಿಙ್‌ಶಿತ್ ಸಾರ್ವಧಾತುಕಮ್" (3.4.113) ಎಂಬ ಸೂತ್ರದಿಂದ ಸಾರ್ವಧಾತುಕ ಸಂಜ್ಞೆ ಬಂದಮೇಲೆ ಕರ್ತ್ರರ್ಥದಲ್ಲಿ ಭೂ ಧಾತುವಿನ ನಂತರ 'ಶಪ್(ಅ)' ಎಂಬ ವಿಕರಣಪ್ರತ್ಯಯವು ಬರುತ್ತದೆ. ಈಗ ಭೂ+ಅ+ತಿ ಎಂದಿದ್ದಾಗ, ಇಲ್ಲಿ ಇಗಂತ ಅಂಗ(ಊ)ಕ್ಕೆ ಗುಣ ಬಂದು ಭೋ+ಅ+ತಿ ಎಂದಾಗುತ್ತದೆ. ನಂತರ "ಏಚೋಽಯವಾಯಾವಃ" ಎಂಬ ಸೂತ್ರದಿಂದ 'ಅವ್' ಆದೇಶ ಬಂದು ಭವ್+ಅ+ತಿ=ಭವತಿ ಎಂದು ರೂಪವಾಗುತ್ತದೆ.

ಉದಾ- 2. ಭವತಃ-ಪ್ರಥಮ ಪುರುಷ ದ್ವಿವಚನದಲ್ಲಿ-ಭೂ+ತಸ್ ಎಂದಿದ್ದಾಗ, ಹಿಂದಿನಂತೆ ಭೂ+ಅ+ತಸ್ ಎಂದಾಗಿ, ಇಗಂತ ಅಂಗ(ಊ)ಕ್ಕೆ ಗುಣ ಬಂದು ಭೋ+ಅ+ತಸ್ ಎಂದಾಗುತ್ತದೆ. ನಂತರ "ಏಚೋಽಯವಾಯಾವಃ" ಎಂಬ ಸೂತ್ರದಿಂದ 'ಅವ್' ಆದೇಶ ಬಂದು ಭವ್+ಅ+ತಸ್ ಎಂದಿದ್ದಾಗ, 'ಸ್' ಕಾರಕ್ಕೆ "ನ ವಿಭಕ್ತೌ ತುಸ್ಮಾಃ" ಎಂಬ ಸೂತ್ರದಿಂದ ಇತ್ವ ಸಂಜ್ಞೆ ಬಾರದೇ ರುತ್ವ-ವಿಸರ್ಗಗಳು ಬಂದು ಭವತಃ ಎಂದು ರೂಪವಾಗುತ್ತದೆ.

ಉದಾ- 3 ಭವನ್ತಿ - ಪ್ರಥಮ ಪುರುಷ ಬಹುವಚನದಲ್ಲಿ-ಭೂ+ಝಿ ಎಂದಿದ್ದಾಗ, ಹಿಂದಿನಂತೆ ಭೂ+ಅ+ಝಿ ಎಂದಾಗಿ, ಇಗಂತ ಅಂಗ(ಊ)ಕ್ಕೆ ಗುಣ ಬಂದು ಭೋ+ಅ+ಝಿ ಎಂದಾಗುತ್ತದೆ. ನಂತರ "ಏಚೋಽಯವಾಯಾವಃ" ಎಂಬ ಸೂತ್ರದಿಂದ 'ಅವ್' ಆದೇಶ ಬಂದು ಭವ್+ಅ+ಝಿ ಎಂದಿದ್ದಾಗ.

**(ಝಿ ಗೆ ಅನ್ತ್- ಆದೇಶವನ್ನು ಹೇಳುವ ಸೂತ್ರ)**

**ಸೂತ್ರ- 389.ಝೋಽನ್ತಃ (7.1.3)**

ವೃತ್ತಿಃ-ಪ್ರತ್ಯಯ-ಅವಯವಸ್ಯ ಝಸ್ಯ 'ಅನ್ತ್' ಆದೇಶಃ। "274 ಅತೋಗುಣೇ"। ಭವನ್ತಿ। ಭವಸಿ। ಭವಥಃ। ಭವಥ।

ಪ. ಛೇ. - ಝಃ, ಅನ್ತಃ।

ಅ. ವೃ. - "ಆಯನೇಯೀನೀಯಿಯಃ ಫಢಖಛಘಾಮ್ ಪ್ರತ್ಯಯಾದೀನಾಮ್" (ಆಯನ್-ಏಯ್-ಈಯ್-ಈನ್-ಇಯ್)ಎಂಬ ಸೂತ್ರದಿಂದ 'ಪ್ರತ್ಯಯಾದೀನಾಂ' ಎಂಬ ಶಬ್ದವನ್ನು, ಷಷ್ಠೀ ಏಕವಚನದಲ್ಲಿ ವಿಭಕ್ತಿ ವಿಪರಿಣಾಮ ಮಾಡಿ 'ಪ್ರತ್ಯಯಸ್ಯ' ಎಂಬ ಪದವನ್ನು ಅನುವೃತ್ತಿ ಮಾಡಲಾಗಿದೆ.

ಅರ್ಥ- ಪ್ರತ್ಯಯದ ಅವಯವವಾದ 'ಝ್' ಕಾರದ ಸ್ಥಾನದಲ್ಲಿ 'ಅನ್ತ್' ಆದೇಶವು ಬರುತ್ತದೆ. "ಚುಟೂ" ಎಂಬ ಸೂತ್ರದಿಂದ 'ಝಿ' ನಲ್ಲಿರುವ 'ಝ್'ಗೆ ಇತ್ ಸಂಜ್ಞೆ ಬಂದು ಲೋಪವಾಗಬೇಕಾಗಿತ್ತು. ಅದನ್ನು ನಿಷೇಧ ಮಾಡುವದಕ್ಕಾಗಿ ಈ ಸೂತ್ರವು ಪ್ರವೃತ್ತವಾಗಿದೆ. ಭವ್+ಅ+ಝಿ ಎಂದಿದ್ದಾಗ, 'ಝಿ'ನಲ್ಲಿರುವ 'ಝ್'ಗೆ 'ಅನ್ತ್' ಆದೇಶ ಬಂದು ಭವ+ಅನ್ತ್+ಇ ಎಂದಿದ್ದಾಗ, ಭವ+ಅನ್ತಿ ಎಂದಾಗುತ್ತದೆ. ಈಗ "ಅತೋ ಗುಣೇ" ಎಂಬ ಸೂತ್ರದಿಂದ ಪರರೂಪ ಬಂದು ಭವನ್ತಿ ಎಂದು ರೂಪವಾಗುತ್ತದೆ. (ಸವರ್ಣ ದೀರ್ಘ ಬರುವುದಿಲ್ಲ)

ಉದಾ- 4. ಭವಸಿ - ಭೂ ಧಾತುವಿನ ಮೇಲೆ ಮಧ್ಯಮಪುರುಷ ಏಕವಚನದಲ್ಲಿ 'ಸಿಪ್(ಸಿ)' ವಿಧಿಸಲ್ಪಟ್ಟಾಗ, ಹಿಂದಿನಂತೆ ಸಾರ್ವಧಾತುಕ ಸಂಜ್ಞೆ ಬಂದು 'ಶಪ್' (ಅ) ವಿಧಿಸಲಾಗುತ್ತದೆ. ಅದಕ್ಕೂ "ತಿಙ್‌ಶಿತ್‌ಸಾರ್ವಧಾತುಕಮ್ (3.4.113)" ಎಂಬ ಸೂತ್ರದಿಂದ ಸಾರ್ವಧಾತುಕ ಸಂಜ್ಞೆ ಬರುವುದರಿಂದ, ಗುಣ, ಅವಾದೇಶಗಳು ಬಂದು ಭವ+ಸಿ=ಭವಸಿ ಎಂದು ರೂಪವಾಗುತ್ತದೆ.

ಉದಾ- 5,6. ಭವಥಃ, ಭವಥ-ಎಂಬ ಎರಡು ರೂಪಗಳ ಸಿದ್ಧಿಯು ಹಿಂದಿನ ಪ್ರಕ್ರಿಯೆಯಂತೆ ಸಿದ್ಧವಾಗುತ್ತವೆ.

ಉದಾ- 7. ಭವಾಮಿ-ಭೂ ಧಾತುವಿನಮೇಲೆ ಉತ್ತಮಪುರುಷ ಏಕವಚನದಲ್ಲಿ ಭೂ+ಮಿಪ್(ಮಿ) ಎಂದಿರುವಾಗ, ಗುಣ, ಶಪ್ ಮತ್ತು ಅವ್ ಆದೇಶಗಳು ಬಂದು ಭವ+ಮಿ ಎಂದಿದ್ದಾಗ ಅಂಗದ ಅಂತ್ಯ ಅ-ಕಾರಕ್ಕೆ ಮುಂದಿನ ಸೂತ್ರದಲ್ಲಿ ದೀರ್ಘವನ್ನು ಹೇಳುತ್ತಾನೆ.

**(ಅದಂತ ಅಂಗಕ್ಕೆ ದೀರ್ಘವನ್ನು ಹೇಳುವ ಸೂತ್ರ)**

**ಸೂತ್ರ- 390.ಅತೋ ದೀರ್ಘೋ ಯಞಿ (7.3.101)**

ವೃತ್ತಿಃ-ಅತಃ ಅಙ್ಗಸ್ಯ ದೀರ್ಘಃ ಯಞಾದೌ ಸಾರ್ವಧಾತುಕೇ। ಭವಾಮಿ। ಭವಾವಃ। ಭವಾಮಃ। ಸ ಭವತಿ। ತೌ ಭವತಃ। ತೇ ಭವನ್ತಿ। ತ್ವಂ ಭವಸಿ। ಯುವಾಂ ಭವಥಃ। ಯೂಯಂ ಭವಥ। ಅಹಂ ಭವಾಮಿ। ಆವಾಂ ಭವಾವಃ। ವಯಂ ಭವಾಮಃ।

ಪ. ಛೇ. – ಅತಃ, ಅಂಗಸ್ಯ, ದೀರ್ಘಃ, ಯಞಿ।

ಅ. ವ್ಯ. – "ತುರುಸ್ತು ಶಮ್ಯಮಃ ಸಾರ್ವಧಾತುಕೇ"(7–3–95) ಎಂಬ ಸೂತ್ರದಿಂದ 'ಸಾರ್ವಧಾತುಕೇ' ಎಂಬ ಪದವು ಅನುವೃತ್ತವಾಗುತ್ತದೆ. ಅಂಗಸ್ಯ ಎಂಬುದು ಅಧಿಕಾರಸೂತ್ರ.

ಅರ್ಥ– ಯಞ್–ಪ್ರತ್ಯಾಹಾರದಲ್ಲಿರುವ ವರ್ಣವನ್ನು ಆದಿಯಲ್ಲಿರುವ, ಸಾರ್ವಧಾತುಕ ಸಂಜ್ಞೆಯುಳ್ಳ ಪ್ರತ್ಯಯವು ಪರದಲ್ಲಿದ್ದಾಗ, ಪೂರ್ವದಲ್ಲಿರುವ ಅದಂತ(ಅ–ಕಾರಾಂತ) ಅಂಗದ ಕೊನೆಯ ವರ್ಣಕ್ಕೆ (ಅ–ಕಾರಕ್ಕೆ) ದೀರ್ಘವು ಬರುತ್ತದೆ.

ಹಿಂದೆ ಹೇಳಿದಂತೆ ಭವ+ಮಿ ಎಂದಿದ್ದಾಗ, ಪ್ರಕೃತ ಸೂತ್ರದಿಂದ ವ–ಕಾರೋತ್ತರ ಅ–ಕಾರಕ್ಕೆ ದೀರ್ಘ ಬಂದು ಭವ್+ಆ+ಮಿ=ಭವಾಮಿ ಎಂದು ರೂಪವಾಗುತ್ತದೆ.

ಉದಾ– 8– ಭವಾವಃ – ಉತ್ತಮ ಪುರುಷ ದ್ವಿವಚನದಲ್ಲಿ ಹಿಂದಿನಂತೆ ಗುಣ, ಶಪ್ ಮತ್ತು ಅವ್ ಆದೇಶಗಳು ಬಂದು ಭವ+ವಸ್ ಎಂದಿದ್ದಾಗ ಹಿಂದಿನಂತೆ 'ಅ' ಕಾರಕ್ಕೆ ದೀರ್ಘ ಬಂದು ಭವಾ+ವಸ್ ಎಂದಿದ್ದಾಗ, 'ಸ್'ಕಾರಕ್ಕೆ ರುತ್ವ–ವಿಸರ್ಗಗಳು ಬಂದು ಭವಾವಃ ಎಂದು ರೂಪವಾಗುತ್ತದೆ.

ಉದಾ– 9– ಭವಾಮಃ – ಉತ್ತಮಪುರುಷ ಬಹುವಚನದಲ್ಲಿ ಹಿಂದಿನಂತೆ ಗುಣ, ಶಪ್ ಮತ್ತು ಅವ್ ಆದೇಶಗಳು ಬಂದು, ಭವ+ಮಸ್ ಎಂದಿದ್ದಾಗ, ಮೇಲಿನ ಪ್ರಕ್ರಿಯೆಯಂತೆ ಭವಾಮಃ ಎಂದು ರೂಪವಾಗುತ್ತದೆ.

**ಇಲ್ಲಿಗೆ ಭೂ ಧಾತುವಿನ 'ಲಟ್' 'ಲ್' ಕಾರದ ಪ್ರಕ್ರಿಯೆಯು ಮುಗಿಯಿತು**

**(ಅಟ್ (ಲ್–ಕಾರವನ್ನು)ನ್ನು ವಿಧಿಸುವ ಸೂತ್ರ)**

**ಸೂತ್ರ– 391.ಪರೋಕ್ಷೇ ಅಟ್ (3.2.115)**

ವೃತ್ತಿಃ–ಭೂತ–ಅನದ್ಯತನ–ಪರೋಕ್ಷಾರ್ಥವೃತ್ತೇಃ ಧಾತೋಃ ಲಿಟ್ ಸ್ಯಾತ್। ಲಸ್ಯ ತಿಬಾದಯಃ।

ಅ. ವ್ಯ. –"ಅನದ್ಯತನೇ ಲಙ್" ಎಂಬ ಸೂತ್ರದಿಂದ 'ಅನದ್ಯತನೇ' ಎಂಬ ಪದವು ಅನುವೃತ್ತವಾಗಿದೆ. "ಭೂತೇ" ಮತ್ತು "ಧಾತೋಃ" ಎಂಬುವು ಅಧಿಕಾರ ಸೂತ್ರಗಳು.

ಅರ್ಥ– ಭೂತ, ಅನದ್ಯತನ, ಪೂರ್ಣ ಮತ್ತು ಪರೋಕ್ಷಾರ್ಥಗಳಲ್ಲಿ ಧಾತುವಿನ ನಂತರ 'ಲಿಟ್' (ಠಿಜಡಿಜಿಜಛಿಣ ಣಜಟಿಜ), ಲ್–ಕಾರವು ಬರುತ್ತದೆ.

ಹಿಂದೆ ವಿವರಿಸಿದಂತೆ 101ನೇ ವರ್ಷದಿಂದಾರಂಭಿಸಿ ಅನಾದಿಕಾಲ (ಪೂರ್ಣಾವಧಿ ವರೆಗೆ)ದ ವರೆಗಿನ ಅವಧಿಯಲ್ಲಿ ಜರುಗಿದ ಘಟನೆಯನ್ನು ಈ 'ಲಿಟ್' ನ 'ಲ್' ಕಾರವು ಸೂಚಿಸುತ್ತದೆ. ಇದರ ಅವಧಿ ಪೂರ್ಣವಾಗಿರೋಣದ್ದರಿಂದಲೇ ಪೂರ್ಣಭೂತಕಾಲವೆಂದು ಹೇಳುತ್ತೇವೆ. ಈ 'ಲ್' ಕಾರವು ಇವತ್ತಿನದಲ್ಲದಾದ್ದರಿಂದ 'ಲಙ್' 'ಲ್' ಕಾರದಂತೆ ಅನದ್ಯತನವೂ ಹೌದು. ಮನುಷ್ಯನ ಜೀವಿತಾವಧಿಯು 100 ವರ್ಷದವರಗೆ ಇರೋಣದ್ದರಿಂದ ಈ 'ಲಿಟ್' 'ಲ್' ಕಾರದ ಅವಧಿಯಲ್ಲಿ ಜರುಗಿದ

ಘಟನೆಯನ್ನೂ ಮನುಷ್ಯನು ನೋಡಲಿಕ್ಕೆ ಸಾಧ್ಯವೇ ಇಲ್ಲ. ಆದುದರಿಂದಲೇ ಇದಕ್ಕೆ **'ಪರೋಕ್ಷಭೂತೇ ಲಿಟ್'** ಎಂದು ಹೇಳುತ್ತಾರೆ. ಆದ್ದರಿಂದ ಈ ಪರೋಕ್ಷಭೂತ ಕಾಲದ **'ಲಿಟ್' 'ಲ್'** ಕಾರಕ್ಕೆ ಅನದ್ಯತನ, ಪೂರ್ಣ, ಮತ್ತು ಪರೋಕ್ಷ ಎಂಬ ವಿಶೇಷಣಗಳು ಇರುತ್ತವೆ. **'ಲಿಟ್'** ನಲ್ಲಿ **'ಇ'**ಕಾರ ಮತ್ತು **ಟ್'** ಕಾರಗಳು **'ಇತ್'** ಗಳಾಗಿವೆ. ಉಳಿದಿರುವ **'ಲ್'** ಕಾರದಮೇಲೆ ತಿಪ್,ತಸ್,ಝಿ ಮೊದಲಾದ 18 ಮೂಲ (9 ಪರಸ್ಮೈಪದಿ ಮತ್ತು 9 ಆತ್ಮನೇಪದಿ) ಆಖ್ಯಾತ ಪ್ರತ್ಯಯಗಳು ಆದೇಶಗಳಾಗಿ ಬರುತ್ತವೆ– ಧಾತುಗಳು ಉಭಯಪದಿಗಳಾಗಿದ್ದರೆ.

**(ಣಲ್ ಮೊದಲಾದ 9 ಆದೇಶಗಳನ್ನು ವಿಧಿಸುವ ಸೂತ್ರ)**

**ಸೂತ್ರ– 392.ಪರಸ್ಮೈಪದಾನಾಂ ಣಲತುಸುಸ್ಥಲಥುಸಣಲ್ವಮಾಃ (3.4.82)**

ವೃತ್ತಿಃ–ಲಿಟಃ ತಿಬಾದೀನಾಂ ನವಾನಾಂ ಣಲಾದಯಃ (ಣಲ್, ಅತುಸ್, ಉಸ್। ಥಲ್, ಅಥುಸ್, ಅ। ಣಲ್, ವ, ಮ) ನವ ಆದೇಶಾಃ ಸ್ಯುಃ। ಭೂ+ಅ, ಇತಿ ಸ್ಥಿತೇ।

ಪ. ಛೇ. – ಪರಸ್ಮೈಪದಾನಾಂ, ಣಲ್–ಅತುಸ್– ಉಸ್–ಥಲ್–ಅಥುಸ್–ಅ–ಣಲ್–ವ–ಮಾಃ।

ಅ. ವೃ. – **"ಲಿಟಸ್ತಝಯೋರೇಶಿರೇಚ್"** ಎಂಬ ಸೂತ್ರದಿಂದ **'ಲಿಟಃ'** ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ–**'ಲಿಟ್' 'ಲ್'** ಕಾರದ ಸ್ಥಾನದಲ್ಲಿ ಆದೇಶಗಳಾಗಿ ಬರುವ ತಿಪ್,ತಸ್,ಝಿ ಮೊದಲಾದ 9 ಮೂಲ ಆಖ್ಯಾತ ಪ್ರತ್ಯಯಗಳ ಸ್ಥಾನದಲ್ಲಿ ಕ್ರಮವಾಗಿ, ಕೆಳಗಿನಂತೆ ಅಭಿನವ ಆಖ್ಯಾತ ಪ್ರತ್ಯಯಗಳು ಬರುತ್ತವೆ.

**ಮೂಲ ಆಖ್ಯಾತ ಪ್ರತ್ಯಯಗಳು ಅಭಿನವ ಆಖ್ಯಾತ ಪ್ರತ್ಯಯಗಳು**

ಪ್ರ.ಪು:ತಿಪ್–ತಸ್–ಝಿಗಳಿಗೆ ಕ್ರಮವಾಗಿ ಣಲ್–ಅತುಸ್–ಉಸ್।

ಮ.ಪುಃಸಿಪ್–ಥಸ್–ಥಗಳಿಗೆ ಕ್ರಮವಾಗಿ ಥಲ್–ಅಥುಸ್–ಅ।

ಉ.ಪು.ಮಿಪ್–ವಸ್– ಮಸ್‌ಗಳಿಗೆ ಕ್ರಮವಾಗಿ ಣಲ್–ವ–ಮ।

ವಿವರಣೆ– ಭೂ+ಅ ಎಂಬಲ್ಲಿರುವ 'ಅ' ಕಾರವು **'ಣಲ್'** ನಲ್ಲಿರುವ **'ಅ'** ಕಾರವೇ ಹೊರತೂ **'ಶಪ್'** ವಿಕರಣ ಪ್ರತ್ಯಯದ 'ಅ' ಕಾರವಲ್ಲ. ಯಾಕೆಂದರೆ– ಇದು ಆರ್ಧಧಾತುಕ **'ಲ್'** ಕಾರವೇ ಹೊರತೂ ಸಾರ್ವಧಾತುಕ 'ಲ್' ಕಾರವಲ್ಲ.

**(ವುಕ್ (ವ್) ಆಗಮವನ್ನು ವಿಧಿಸುವ ಸೂತ್ರ)**

**ಸೂತ್ರ– 393.ಭುವೋ ವುಗ್ ಲುಙ್ ಲಿಟೋಃ (6.4.88)**

ವೃತ್ತಿಃ–ಭುವಃ ವುಕ್(ವ್)ಆಗಮಃ ಸ್ಯಾತ್, ಲುಙ್ ಲಿಟೋಃ ಅಚಿ।

ಪ. ಛೇ. – ಭುವಃ, ವುಗ್, ಲುಙ್–ಲಿಟೋಃ।

ಅ. ವೃ. –**"ಅಚಿ ಶ್ನು–ಧಾತುಭ್ರುವಾಮ್ ಯ್ವೋರಿಯಙುವಙೌ "** ಎಂಬ ಸೂತ್ರದಿಂದ

'ಅಚಿ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– 'ಲುಙ್' ಮತ್ತು 'ಲಿಟ್' 'ಲ್' ಕಾರಗಳಿಗೆ ಆದೇಶಗಳಾಗಿ ಬಂದಿರುವ ಅಚ್(ಸ್ವರ)ಗಳು ಪರದಲ್ಲಿದ್ದಾಗ, 'ಭೂ' ಧಾತುವಿಗೆ 'ವುಕ್(ವ್)' ಆಗಮವು ಬರುತ್ತದೆ. 'ವುಕ್' ಇದು 'ಕಿತ್' ಆಗಿರೋಣದರಿಂದ ಅಂತಾವಯವಾಗಿ ಬರುತ್ತದೆ.

ಉದಾ :–ಬಭೂವ–'ಭೂ' ಗೆ 'ವುಕ್' ಆಗಮವು ಬಂದಿದೆ. ಅಂದರೆ, ಭೂ+ಲ್ ಎಂದಿದ್ದಾಗ ಲ್ ಗೆ ತಿಪ್(ತಿ) ಆದೇಶ ಬಂದು ಅದಕ್ಕೆ ಮತ್ತೆ ಣಲ್(ಅ) ಆದೇಶ ಬಂದು ಭೂ+ಅ ಎಂದಿದ್ದಾಗ, 'ಭೂ' ಧಾತುವಿನ 'ಊ'ಕಾರದ ನಂತರ 'ವುಕ್(ವ್)' ಆಗಮವು ಬಂದು ಭೂವ್+ಅ ಎಂದಾಗುವುದು. ನಂತರ ಮುಂದಿನ ಸೂತ್ರದಿಂದ–

### (ಧಾತುವಿಗೆ ದ್ವಿತ್ವವನ್ನು ವಿಧಿಸುವ ಸೂತ್ರ)

**ಸೂತ್ರ– 394.ಲಿಟಿ ಧಾತೋರನಭ್ಯಾಸಸ್ಯ (6.1.8)**

ವೃತ್ತಿಃ–ಲಿಟಿ ಪರೇ, ಅನಭ್ಯಾಸ–ಧಾತ್ವವಯವಸ್ಯ ಏಕಾಚಃ ಪ್ರಥಮಸ್ಯ ದ್ವೇ ಸ್ತಃ, ಆದಿಭೂತಾತ್ ಅಚಃ ಪರಸ್ಯ ತು ದ್ವಿತೀಯಸ್ಯ। ಭೂವ್+ಭೂವ್+ ಅ ಇತಿ ಸ್ಥಿತೇ।

ಪ. ಛೇ. – ಲಿಟಿ, ಧಾತೋಃ, ಅನಭ್ಯಾಸಸ್ಯ।

ಅ.ವೃ.–"ಏಕಾಚೋ ದ್ವೇ ಪ್ರಥಮಸ್ಯ" ಮತ್ತು "ಅಜಾದೇರ್ದ್ವಿತೀಯಸ್ಯ" ಎಂಬ ಸೂತ್ರಗಳು ಅಧಿಕಾರಸೂತ್ರಗಳಾಗಿವೆ.

ಅರ್ಥ– 'ಲಿಟ್' ಪರದಲ್ಲಿದ್ದಾಗ –

1. ಅಭ್ಯಾಸಭಿನ್ನವಾಗಿಯೂ(ಅನಭ್ಯಸ್ತವಾದಾಗ ಇರುವ ರೂಪದ ಅಂದರೆ ಅಭ್ಯಾಸವಾಗದೇ ಇದ್ದ ಪೂರ್ವಾವಸ್ಥೆಯಲ್ಲಿ ಒಂದೇ ರೂಪವನ್ನು ಹೊಂದಿರುವಾಗ) ಧಾತ್ವವಯವವಾಗಿಯೂ, ಏಕಾಚ್ ಆಗಿಯೂ ಇರುವ ಮೊದಲನೆಯ ಭಾಗಕ್ಕೆ ದ್ವಿತ್ವವು ಬರುವುದು. (ಭೂವ್+ಭೂವ್)

2. ಧಾತುವು ಅಜಾದಿಯಾಗಿದ್ದು, ಮೊದಲನೇ 'ಅಚ್' ಗಿಂತ ಪರದಲ್ಲಿದ್ದಾಗ, ಅದರ ಪರದಲ್ಲಿರುವ ಎರಡನೆಯ ಏಕಾಚ್ಕ–ಭಾಗಕ್ಕೆ ದ್ವಿತ್ವವು ಬರುವುದು.

ಅಂದರೆ, ಹಲಾದಿ ಧಾತುಗಳಾಗಿದ್ದಾಗ, ಮೊದಲನೇ ಏಕಾಚ್ಕ (ಒಂದೇ ಅಚ್ ನಿಂದ ಕೂಡಿರುವ) ಭಾಗಕ್ಕೆ, ಮತ್ತು ಅಜಾದಿ ಧಾತುಗಳಾಗಿದ್ದರೆ, ಎರಡನೆಯ ಏಕಾಚ್ಕ ಭಾಗಕ್ಕೆ ದ್ವಿತ್ವವು ಬರುವದೆಂದರ್ಥ. ಧಾತುವು ಸ್ವಾಭಾವಿಕವಾಗಿಯೇ ಏಕಾಚ್ಕವಾಗಿದ್ದರೆ ವ್ಯಪದೇಶಿವದ್ಭಾವದಿಂದ, ಅದನ್ನೇ ಪ್ರಥಮ ಭಾಗವಾಗಿಯೂ ಮತ್ತು ದ್ವಿತೀಯ ಭಾಗವಾಗಿಯೂ ಭಾವಿಸಿ ದ್ವಿತ್ವವನ್ನು ಮಾಡಬೇಕು.

ಪ್ರಥಮ ಏಕಾಚ್ ಭಾಗಕ್ಕೆ ದ್ವಿತ್ವ ಬರುವ ಉದಾಹರಣೆಗಳು.

ಉದಾ 1. – ಹಲಾದಿಯಾದ 'ಚಕಾಸ್' ಧಾತುವಿನಲ್ಲಿ ಚ ಮತ್ತು ಕಾಸ್ ಎಂಬ ಎರಡು ಭಾಗಗಳಿರೋಣದ್ದರಿಂದ್ದ ಇಲ್ಲಿ ಚ ಎಂಬುದಕ್ಕೆ ದ್ವಿತ್ವವು ಬರುತ್ತದೆ.

ಉದಾ–2. 'ನೀ' ಎಂಬ ಹಲಾದಿ ಧಾತುವಿನಲ್ಲಿ ಏಕಾಚ್ಕ ಭಾಗವು ಒಂದೇ

ಇರೋಣದ್ದರಿಂದ ಅದನ್ನೇ ವ್ಯಪದೇಶಿವದ್ಭಾವದಿಂದ ಪ್ರಥಮ ಏಕಾಚ್ಕವಾಗಿ ಪರಿಗಣಿಸಿ ದ್ವಿತ್ವವನ್ನು ಮಾಡಬೇಕು.

ದ್ವಿತೀಯ ಏಕಾಚ್ ಭಾಗಕ್ಕೆ ದ್ವಿತ್ವ ಬರುವ ಉದಾಹರಣೆಗಳು.

ಉದಾ–3. ಅಜಾದಿಯಾದ ಊರ್ಣು ಧಾತುವಿನಲ್ಲಿ ಣು ಎಂಬುದು ಎರಡನೆಯ ಏಕಾಚ್ಕ ಭಾಗವಾಗಿರೋಣದರಿಂದ ಅದಕ್ಕೆ ದ್ವಿತ್ವವನ್ನು ಮಾಡಬೇಕು.

ಉದಾ–4 ಅಟ್ ಧಾತುವಿನಲ್ಲಿ ಅಟ್ ಎಂಬುದನ್ನೇ ದ್ವಿತೀಯ ಏಕಾಚ್ಕ ಭಾಗವೆಂದು ಗ್ರಹಿಸಿ ಅದಕ್ಕೆ ದ್ವಿತ್ವವನ್ನು ಹೇಳಬೇಕು.

ಪ್ರಸ್ತುತ ಉದಾಹರಣೆಯಲ್ಲಿ ಭೂವ್ ಎಂಬುದು ಪ್ರಥಮ ಏಕಾಚ್ಕ ಭಾಗವಾಗಿರುವುದರಿಂದ, ಅದಕ್ಕೆ ದ್ವಿತ್ವವು ಬಂದು ಭೂವ್ ಭೂವ್ ಎಂದು ಇರುವುದು. 'ವ್' ಕಾರವು ಭೂ ಎಂಬುದಕ್ಕೆ ಆಗಮವಾಗಿ ಬಂದಿರೋಣದರಿಂದ "ಯದಾಗಮಾಃ ತದ್ಗುಣೀಭೂತಾಃ ತದ್ಗ್ರಹಣೇನ ಗೃಹ್ಯನ್ತೇ" (ಯಾವದಕ್ಕೆಆಗಮವಾಗಿ ಬರುವದೋ ಅದು ಅದರ ಅಂಗವಾಗಿ ಅದರ ಜೊತೆಗೆ ಗ್ರಹಿಸಲಾಗುವುದು) ಎಂಬ ಪರಿಭಾಷೆಯನ್ನು ಅನುಸರಿಸಿ 'ವ್'ಕಾರ ಸಹಿತವಾಗಿರುವ 'ಭೂ' ಧಾತುವಿಗೇನೇ ಇಲ್ಲಿ ದ್ವಿತ್ವವು ಬರುವುದು.

**(ಅಭ್ಯಾಸ ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ– 395.ಪೂರ್ವೋಽಭ್ಯಾಸಃ (6.1.4)**

ವೃತ್ತಿಃ–ಅತ್ರ ಯೇ ದ್ವೇ ವಿಹಿತೇ ತಯೋಃ ಪೂರ್ವಃ ಅಭ್ಯಾಸ–ಸಂಜ್ಞಃ ಸ್ಯಾತ್।

ಪ. ಛೇ. – ಪೂರ್ವಃ, ಅಭ್ಯಾಸ।

ಅರ್ಥ– ಈ ಆರನೆಯ ಅಧ್ಯಾಯದ ಸೂತ್ರದಿಂದ ದ್ವಿತ್ವ ಹೊಂದಿದ ಮೇಲೆ ಯಾವ ಶಬ್ದಸ್ವರೂಪವು ಎರಡು ಸಲ ಉಚ್ಚರಿಸಲ್ಪಡುತ್ತದೆಯೋ, ಆ ಎರಡರಲ್ಲಿ ಮೊದಲನೆಯ ಶಬ್ದಸ್ವರೂಪಕ್ಕೆ ಅಭ್ಯಾಸವೆಂಬ ಸಂಜ್ಞೆಯು ಬರುತ್ತದೆ. 'ಭೂವ್' ಎಂಬ ಶಬ್ದ–ಸ್ವರೂಪಕ್ಕೆ ದ್ವಿತ್ವ ಬಂದಮೇಲೆ ಭೂವ್ ಭೂವ್ ಎಂದಾಗುತ್ತದೆ. ಮೊದಲನೆಯ 'ಭೂವ್' ಗೆ ಪ್ರಕೃತ ಸೂತ್ರದಿಂದ ಅಭ್ಯಾಸ ಸಂಜ್ಞೆಯು ಬರುತ್ತದೆ.

**(ಅಭ್ಯಾಸದ ಮೊದಲನೆಯ 'ಹಲ್' ವರ್ಣವನ್ನು ಉಳಿಸಿ ಉಳಿದ 'ಹಲ್' ವರ್ಣಗಳನ್ನು ಲೋಪಗೊಳಿಸುವ ಸೂತ್ರ)**

**ಸೂತ್ರ– 396.ಹಲಾದಿಃ ಶೇಷಃ (7.4.60)**

ವೃತ್ತಿಃ–ಅಭ್ಯಾಸಸ್ಯ ಆದಿಃ ಹಲ್ ಶಿಷ್ಯತೇ। ಅನ್ಯೇ ಹಲಃ ಲುಪ್ಯನ್ತೇ। ಇತಿ ವಲೋಪಃ।

ಅ. ವೃ. – "ಅತ್ರ ಲೋಪೋಽಭ್ಯಾಸಸ್ಯ" ಎಂಬ ಸೂತ್ರದಿಂದ 'ಅಭ್ಯಾಸಸ್ಯ'ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– ಅಭ್ಯಾಸ ಸಂಜ್ಞೆಯನ್ನು ಹೊಂದಿರುವ ಶಬ್ದ ಸ್ವರೂಪದಲ್ಲಿ ಮೊದಲನೇ 'ಹಲ್' ವರ್ಣ ಮಾತ್ರ ಉಳಿಯುತ್ತದೆ. ಉಳಿದ 'ಹಲ್' ವರ್ಣಗಳು ಲೋಪ ಹೊಂದುತ್ತವೆ.

ಪ್ರಕೃತ 'ಭೂವ್' ಎಂಬ ಅಭ್ಯಾಸದಲ್ಲಿ ಎರಡು 'ಹಲ್'ಗಳೂ ಮತ್ತು ಒಂದು

ಸ್ವರವೂ ಇದೆ. ಈಗ ಮೊದಲನೆಯ 'ಹಲ್' ಮಾತ್ರ ಉಳಿಯುತ್ತದೆ. ಎಂದರೆ 'ಭ್' ಉಳಿಯುತ್ತದೆ, ಮತ್ತು ಅದರ ಜೊತೆಗೆ 'ಊ' ಕಾರವೂ ಇರುತ್ತದೆ. ಕಾರಣ ಸ್ವರದ ಲೋಪವನ್ನು ಹೇಳಲಿಲ್ಲ. ಉಳಿದ 'ಹಲ್' ವರ್ಣಗಳು ಲೋಪವಾಗುತ್ತವೆ ಎಂದು ಹೇಳಿರೋಣದ್ದರಿಂದ 'ವ್' ಕಾರವು ಮಾತ್ರ ಲೋಪವಾಗುತ್ತದೆ. ಇಲ್ಲಿ 'ಹಲ್' ವರ್ಣವು ಒಂದೇ ಇದೆ, ಇನ್ನೂ ಹೆಚ್ಚು 'ಹಲ್' ವರ್ಣಗಳು ಇದ್ದಿದ್ದರೆ ಅವುಗಳೂ ಲೋಪವಾಗುತ್ತಿದ್ದವು. ಹೀಗಾಗಿ 'ಭೂವ್' ನಲ್ಲಿ ಆದಿ 'ಹಲ್' ಉಳಿದು ಉಳಿದ 'ಹಲ್' ವರ್ಣವು (ವ್) ಲೋಪವಾಗಿ, 'ಭೂ' ಮಾತ್ರ ಉಳಿದಿದೆ. (ಆದ್ದರಿಂದ ಅಭ್ಯಾಸ ಸಂಜ್ಞೆಯನ್ನು ಹೊಂದದೇ ಇರುವ 'ಭೂವ್' ಎಂಬ ಎರಡನೇ ರೂಪಕ್ಕೆ ಯಾವ ಧಕ್ಕೆಯೂ ಬರುವುದಿಲ್ಲ. ಹೀಗಾಗಿ ಭೂ ಭೂವ್+ಅ ಎಂದು ಇರುತ್ತದೆ).

**(ಅಭ್ಯಾಸದ ದೀರ್ಘವರ್ಣಕ್ಕೆ ಹ್ರಸ್ವವನ್ನು ವಿಧಿಸುವ ಸೂತ್ರ)**

**ಸೂತ್ರ– 397.ಹ್ರಸ್ವಃ (7.4.59)**

ವೃತ್ತಿಃ–ಅಭ್ಯಾಸಸ್ಯ ಅಚಃ ಹ್ರಸ್ವಃ ಸ್ಯಾತ್।

ಅ. ವ್ಯ. –"ಅತ್ರ ಲೋಪೋಽಭ್ಯಾಸಸ್ಯ" ಎಂಬ ಸೂತ್ರದಿಂದ 'ಅಭ್ಯಾಸಸ್ಯ'ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– ಅಭ್ಯಾಸದ ದೀರ್ಘವಾದ ಸ್ವರಕ್ಕೆ ಪ್ರಕೃತ ಸೂತ್ರದಿಂದ ಹ್ರಸ್ವವು ಆದೇಶವಾಗಿ ಬರುತ್ತದೆ. ಭೂ ಭೂವ್+ಅ ಎಂಬಲ್ಲಿ ಮೊದಲನೇ 'ಭೂ' ಎಂಬುದು ಅಭ್ಯಾಸ ಸಂಜ್ಞೆಯನ್ನು ಹೊಂದಿರುವಂಥಾದ್ದು. ಇದರಲ್ಲಿ 'ಊ' ಕಾರವು ದೀರ್ಘವಾಗಿದೆ. ಈ 'ಊ' ಕಾರಕ್ಕೆ ಪ್ರಕೃತ ಸೂತ್ರದಿಂದ ಹ್ರಸ್ವ 'ಉ' ಕಾರವು ಆದೇಶವಾಗಿ ಬಂದು 'ಭು' ಎಂದಾಗಿ ಭು ಭೂವ್+ಅ ಎಂದು ಇರುತ್ತದೆ.

**(ಅತ್ವ(ಅಕಾರವನ್ನು) ವಿಧಿಸುವ ಸೂತ್ರ)**

**ಸೂತ್ರ– 398.ಭವತೇರಃ (7.4.73)**

ವೃತ್ತಿಃ–ಭವತೇಃ ಅಭ್ಯಾಸ–ಉ–ಕಾರಸ್ಯ ಅಃ ಸ್ಯಾತ್ ಲಿಟಿ।

ಪ. ಛೇ. – ಭವತೇಃ, ಅಃ।

ಅ. ವ್ಯ. – "ವ್ಯಥೋಲಿಟಿ" ಎಂಬ ಸೂತ್ರದಿಂದ 'ಲಿಟಿ' ಎಂಬ ಪದವೂ ಮತ್ತು "ಅತ್ರ ಲೋಪೋಽಭ್ಯಾಸಸ್ಯ" ಎಂಬ ಸೂತ್ರದಿಂದ 'ಅಭ್ಯಾಸಸ್ಯ'ಎಂಬ ಪದವು ಅನುವೃತ್ತವಾಗುತ್ತವೆ.

ಅರ್ಥ– 'ಭೂ'ಎಂದಾಗಿರುವ ಅಭ್ಯಾಸಕ್ಕೆ ಹಿಂದಿನ ಸೂತ್ರದಿಂದ ಹ್ರಸ್ವ 'ಉ' ಕಾರವು ಆದೇಶವಾಗಿ ಬಂದಮೇಲೆ ಮತ್ತೆ ಅದಕ್ಕೆ (ಉ) ಕಾರಕ್ಕೆ 'ಅ' ಕಾರವು ಆದೇಶವಾಗಿ ಬರುತ್ತದೆ, 'ಲಿಟ್' ಪರದಲ್ಲಿದ್ದಾಗ. ಭು ಭೂವ್+ಅ ಎಂಬಲ್ಲಿ ಅಭ್ಯಾಸದಲ್ಲಿರುವ 'ಉ' ಕಾರಕ್ಕೆ 'ಅ' ಕಾರ ಆದೇಶವಾಗಿ ಬಂದು ಭ ಭೂವ್+ಅ ಎಂದಾಗುತ್ತದೆ.

(ಚರ್ತ್ವವನ್ನು ವಿಧಿಸುವ ಸೂತ್ರ)

**ಸೂತ್ರ- 399.ಅಭ್ಯಾಸೇ ಚರ್ಚ (8.4.54)**

ವೃತ್ತಿಃ-ಅಭ್ಯಾಸೇ ಝಲಾಂ ಚರಃ ಸ್ಯುಃ; ಜಶಶ್ಚ । ಝಶಾಂ ಜಶಃ, ಖಯಾಂ ಚರಃ ಇತಿ ವಿವೇಕಃ। ಬಭೂವ। ಬಭೂವತುಃ। ಬಭೂವುಃ।

ಪ. ಛೇ- ಅಭ್ಯಾಸೇ, ಚರ್, ಚ।

ಅ. ವೃ. - "ಝಲಾಂ ಜಶ್ ಝಶಿ" ಎಂಬ ಸೂತ್ರದಿಂದ 'ಝಲಾಂ' ಮತ್ತು 'ಜಶ್' ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ- ಅಭ್ಯಾಸದಲ್ಲಿ ಇರುವ 'ಝಲ್' ಪ್ರತ್ಯಾಹಾಗದಲ್ಲಿ ಇರುವ 'ಜಶ್' ವರ್ಣಗಳಿಗೆ 'ಜಶ್' ವರ್ಣಗಳೇ ಆದೇಶವಾಗಿ ಬರುತ್ತವೆ. ಅದೇ 'ಝಲ್' ಪ್ರತ್ಯಾಹಾರದಲ್ಲಿರುವ 'ಖಯ್' ಪ್ರತ್ಯಾಹಾರದ ವರ್ಣಗಳಿಗೆ 'ಚರ್(8)' ವರ್ಣಗಳು ಆದೇಶಗಳಾಗಿ ಬರುತ್ತವೆ.

(ಇಲ್ಲಿ ಒಂದೇ ವರ್ಣಕ್ಕೆ ಎರಡು ಆದೇಶಗಳು ಬರುವುದಿಲ್ಲ). ಈ ಸೂತ್ರದ ಅರ್ಥವೇನೆಂದರೆ, 'ಝಲ್(24)' ಪ್ರತ್ಯಾಹಾರವನ್ನು 1.'ಝಶ್(10)' 2.'ಖಯ್(10)' 3.'ಶರ್(3)' ಮತ್ತು 4.'ಹ್(1)' ಎಂದು ನಾಲ್ಕು ಅವಾಂತರ ಭಾಗಗಳಾಗಿ ವಿಂಗಡಿಸಲಾಗಿದೆ. ಈ ಎರಡು ಪ್ರತ್ಯಾಹಾರಗಳ(1 & 2) ಸ್ಥಾನಗಳಲ್ಲಿ 'ಜಶ್' ಮತ್ತು 'ಚರ್' ವರ್ಣಗಳು ಆದೇಶಗಳಾಗಿ ಬರುತ್ತವೆ. (ಅಂದರೆ 'ಝಶ್' ಗೆ 'ಜಶ್' ಮತ್ತು 'ಖಯ್' ಗೆ 'ಚರ್' ವರ್ಣಗಳು ಆದೇಶಗಳಾಗಿ ಬರುತ್ತವೆ ಎಂದು ಅರ್ಥ). 'ಝಶ್' ಪ್ರತ್ಯಾಹಾರದಲ್ಲಿ ಝಭಞ್। ಘಢಧಷ್।ಜಬಗಡದಶ್। ಎಂದು 10 ವರ್ಣಗಳು ಇವೆ. 'ಜಶ್' ಪ್ರತ್ಯಾಹಾರದಲ್ಲಿ ಜಬಗಡದ ಎಂಬ 5 ವರ್ಣಗಳಿವೆ. ಅಂದರೆ ಮೊದಲನೆಯ 10 ವರ್ಣಗಳಿಗೆ ಎರಡನೆಯ 5 ವರ್ಣಗಳು ಆದೇಶವಾಗಿ ಬರುತ್ತವೆ ಎಂದು ಅರ್ಥ.

'ಖಯ್' ಪ್ರತ್ಯಾಹಾರದಲ್ಲಿ, ಖಫಛಠಥಚಟತವ್। ಕಪಯ್। ಎಂಬ 10 ವರ್ಣಗಳಿರುತ್ತವೆ. 'ಚರ್' ಪ್ರತ್ಯಾಹಾರದಲ್ಲಿ ಚಟತವ್।ಕಪಯ್।ಶಷಸರ್। ಎಂಬ 8 ವರ್ಣಗಳಿವೆ. ಮೊದಲನೆಯ 10 ವರ್ಣಗಳಿಗೆ ಎರಡನೆಯ 8 ವರ್ಣಗಳು ಆದೇಶಗಳಾಗಿ ಬರುತ್ತವೆ ಎಂದು ಅರ್ಥ. 'ಝಲ್' ಪ್ರತ್ಯಾಹಾರದಲ್ಲಿ 24 ವರ್ಣಗಳಿವೆ. ಈಗ 23 ವರ್ಣಗಳ ಬಗ್ಗೆ ಹೇಳಲಾಗಿದೆ. ಅವುಗಳಲ್ಲಿ ಶಷಸ ಎಂದು 3 ವರ್ಣಗಳು. 'ಶರ್' ಪ್ರತ್ಯಾಹಾರದಲ್ಲಿ ಸೇರಿವೆ. ಈ 3 ವರ್ಣಗಳಿಗೆ 'ಚರ್' ಆದೇಶವು ಬಂದರೂ ಅವು ಸ್ಥಾನ-ಪ್ರಯತ್ನಗಳ ಸಾಮ್ಯದಿಂದ ಮಾತ್ರ ಬರುತ್ತವೆ. ಅಂದರೆ 'ಶ್' ಕಾರಕ್ಕೆ 'ಶ್' ಕಾರ 'ಷ್' ಕಾರಕ್ಕೆ 'ಷ್' ಕಾರ ಮತ್ತು 'ಸ್' ಕಾರಕ್ಕೆ 'ಸ್' ಕಾರಗಳು ಆದೇಶಗಳಾಗಿ ಬರುತ್ತವೆ. ನಾಲ್ಕನೇ ವಿಭಾಗಕ್ಕೆ ಸೇರಿದ 'ಹ್' ಕಾರಕ್ಕೆ "ಕುಹೋಶ್ಚುಃ" ಎಂಬ ಸೂತ್ರದಿಂದ ಸ್ಥಾನ-ಪ್ರಯತ್ನ ಸಾಮ್ಯವುಳ್ಳ 'ಚ್' ವರ್ಗದ 'ಝ್' ಕಾರವು ಆದೇಶವಾಗಿ ಬರುತ್ತದೆ.

ಉದಾ- 1: ಬಭೂವ। "ಭೂ' ಧಾತುವಿನಮೇಲೆ ಕರ್ತ್ರರ್ಥದಲ್ಲಿ 'ಲಿಟ್' 'ಲ್' ಕಾರವು ಬಂದಾಗ, ಪ್ರಥಮಪುರುಷ ಏಕವಚನದಲ್ಲಿ ಭೂ+ಲ್ ಎಂದಿರುತ್ತದೆ. 'ಲ್' ಕಾರಕ್ಕೆ 'ತಿಪ್(ತಿ)' ಆದೇಶ ಬಂದು, ಭೂ+ತಿ ಎಂದಿರುತ್ತದೆ. ಇಲ್ಲಿ 'ತಿ' ಗೆ ಸಾರ್ವಧಾತುಕ

ಸಂಜ್ಞೆಯು ಬರುವುದಿಲ್ಲ. ಕಾರಣ ಮುಂದೆ ಬರುವ "ಲಿಟ್ ಚ" ಎಂಬ ಸೂತ್ರದಿಂದ ಸಾರ್ವಧಾತುಕ ಸಂಜ್ಞೆಯನ್ನು ಬಾಧಿಸಿ ಆರ್ಧಧಾತುಕ ಸಂಜ್ಞೆಯು ಬರುತ್ತದೆ. ಆದುದರಿಂದ "ಕರ್ತರಿ ಶಪ್" ಸೂತ್ರದಿಂದ 'ಶಪ್(ಅ)' ವಿಕರಣಪ್ರತ್ಯಯವು ಬರುವುದಿಲ್ಲ. ಆದರೆ 'ತಿ' ಸ್ಥಾನದಲ್ಲಿ, "ಪರಸ್ಮೈಪದಾನಾಂ ಣಲತುಸುಸ್ಥಲಥುಸಣಲ್ವಮಾಃ (3.4.82)" ಎಂಬ ಸೂತ್ರದಿಂದ 'ಣಲ್(ಅ)' ಆದೇಶ ಬರುತ್ತದೆ. ಈಗ ಭೂ+ಅ ಎಂದಿರುತ್ತದೆ. "ಭುವೋ ವುಗ್ ಲುಙ್ ಲಿಟೋಃ (6.4.88)" ಎಂಬ ಸೂತ್ರದಿಂದ, 'ಭೂ' ನ 'ಉ' ಕಾರದನಂತರ 'ವುಕ್(ವ್)' ಆಗಮವು ಬಂದು, ಭೂವ್+ಅ ಎಂದಾಗುತ್ತದೆ. "ಲಿಟಿ ಧಾತೋರನಭ್ಯಾಸಸ್ಯ (6.1.8)" ಎಂಬ ಸೂತ್ರದಿಂದ 'ಭೂವ್' ಎಂಬ ಶಬ್ದಸ್ವರೂಪಕ್ಕೆ ದ್ವಿತ್ವ ಬಂದು ಭೂವ್ ಭೂವ್+ಅ ಎಂದಿರುತ್ತದೆ. "ಪೂರ್ವೋಽಭ್ಯಾಸಃ (6.1.4)" ಎಂಬ ಸೂತ್ರದಿಂದ ಮೊದಲನೇ 'ಭೂವ್' ಗೆ ಅಭ್ಯಾಸ ಸಂಜ್ಞೆ ಬಂದು, "ಹಲಾದಿಃ ಶೇಷಃ (7.4.60)" ಎಂಬುದರಿಂದ 'ವ್' ಕಾರಕ್ಕೆ ಲೋಪ ಬಂದು, ಭೂ ಭೂವ್+ಅ ಎಂದಿರುತ್ತದೆ. ಆಗ "ಹ್ರಸ್ವಃ (7.4.59)" ಎಂಬ ಸೂತ್ರದಿಂದ ಅಭ್ಯಾಸದ 'ಊ' ಕಾರಕ್ಕೆ ಹ್ರಸ್ವ ಬಂದು ಭು ಭೂವ್+ಅ ಎಂದಿರುತ್ತದೆ. "ಭವತೇರಃ (7.4.73)" ಎಂಬ ಸೂತ್ರದಿಂದ ಅಭ್ಯಾಸದ 'ಉ' ಕಾರಕ್ಕೆ 'ಅ' ಕಾರ ಬಂದು ಭ ಭೂವ್,+ಅ ಎಂದಿರುತ್ತದೆ. ಆಗ "ಅಭ್ಯಾಸೇ ಚರ್ಚ (8.4.54)" ಎಂಬ ಸೂತ್ರದಿಂದ 'ಝಶ್' ಪ್ರತ್ಯಾಹಾರದಲ್ಲಿರುವ 'ಭ್' ಕಾರಕ್ಕೆ 'ಜಶ್' ಪ್ರತ್ಯಾಹಾರದಲ್ಲಿರುವ 'ಬ್' ಕಾರವು ಆದೇಶವಾಗಿ ಬಂದು, ಬಭೂವ್+ಅ ಎಂದಿದ್ದಾಗ ಬಭೂವ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– 2 – ಬಭೂವತುಃ 'ಭೂ' ಧಾತುವಿನಮೇಲೆ "ಪರೋಕ್ಷೇ ಲಿಟ್" ಎಂಬ ಸೂತ್ರದಿಂದ 'ಲ್(ಲಿಟ್)' ಬಂದು, ಅದಕ್ಕೆ ಮೂಲ ಆಖ್ಯಾತ ಪ್ರತ್ಯಯವಾದ 'ತಸ್' ಪ್ರತ್ಯಯ ಬಂದು, ಅದರ ಸ್ಥಾನದಲ್ಲಿ 'ಅತುಸ್' ಎಂಬ ಅಭಿನವ ಆಖ್ಯಾತ ಪ್ರತ್ಯಯವು ಆದೇಶ ವಾಗಿ ಬಂದು ಭೂ+ಅತುಸ್ ಎಂದಿರುತ್ತದೆ. ಆಗ ಹಿಂದಿನ ಪ್ರಕ್ರಿಯೆಯಂತೆ ಬಭೂವ್ ಎಂದಾದಮೇಲೆ ಅತುಸ್ ಸೇರಿಸಿದಾಗ ಬಭೂವ್+ಅತುಸ್=ಬಭೂವತುಸ್ ಎಂದಾಗಿ ರುತ್ವ–ವಿಸರ್ಗಗಳಿಂದ ಬಭೂವತುಃ ಎಂದು ರೂಪವಾಗುತ್ತದೆ.

ಉದಾ–3 – ಬಭೂವುಃ : ಇದೇ ರೀತಿಯಲ್ಲಿ ಬಭೂವ್ ಎಂದಿದ್ದಾಗ, ಮೂಲ ಆಖ್ಯಾತ ಪ್ರತ್ಯಯವಾದ 'ಝಿ' ಪ್ರತ್ಯಯ ಬಂದು, ಅದರ ಸ್ಥಾನದಲ್ಲಿ 'ಉಸ್' ಎಂಬ ಅಭಿನವ ಆಖ್ಯಾತ ಪ್ರತ್ಯಯವು ಆದೇಶ ವಾಗಿ ಬಂದು, ಬಭೂವ್+ಉಸ್=ಬಭೂವುಸ್ ಎಂದಾಗಿ, ರುತ್ವ–ವಿಸರ್ಗಗಳಿಂದ ಬಭೂವುಃ ಎಂದು ರೂಪವಾಗುತ್ತದೆ.

**(ಆರ್ಧಧಾತುಕ ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ– 400.ಲಿಟ್ಚ (3.4.114)**

ವೃತ್ತಿಃ–ಲಿಡಾದೇಶಃ ತಿಙ್ ಆರ್ಧಧಾತುಕ–ಸಂಜ್ಞಃ ।

ಪ. ಛೇ– ಲಿಟ್, ಚ।

ಅ. ವೃ. –"ತಿಙ್‌ಶಿತ್‌ಸಾರ್ವಧಾತುಕಮ್" ಎಂಬ ಸೂತ್ರದಿಂದ 'ತಿಙ್' ಮತ್ತು "ಆರ್ಧಧಾತುಕಂ ಶೇಷಃ" ಎಂಬ ಸೂತ್ರದಿಂದ 'ಆರ್ಧಧಾತುಕ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ– 'ಲಿಟ್' 'ಲ್' ಕಾರದ ಸ್ಥಾನದಲ್ಲಿ ಬರುವ 'ತಿಙ್' ಆದೇಶವು ಆರ್ಧಧಾತುಕ ಸಂಜ್ಞೆಯನ್ನು ಪಡೆಯುತ್ತದೆ.

ವಿವರಣೆ– 'ಲಿಟ್' 'ಲ್'ಕಾರಕ್ಕೆ "ತಿಙ್‌ಶಿತ್‌ಸಾರ್ವಧಾತುಕಮ್" ಎಂಬ ಸೂತ್ರದಿಂದ, ಸಾರ್ವಧಾತುಕ ಸಂಜ್ಞೆಯು ಬರುತ್ತಿತ್ತು. ಅದನ್ನು ಬಾಧಿಸಿ ಪ್ರಕೃತ ಸೂತ್ರದಿಂದ ಆರ್ಧಧಾತುಕ ಸಂಜ್ಞೆಯು ಬಂದಿರುವುದು. 'ಲಿಟ್ಚ' (3.4.114)'ಎಂಬ ಸೂತ್ರದಲ್ಲಿರುವ 'ಲಿಟ್' ಪದವು 'ಲಿಟಃ' ಎಂದಿರಬೇಕಾಗಿತ್ತು. ಆದರೆ ಅದನ್ನು 'ಲುಪ್ತ ಷಷ್ಠೀಕ' ಎಂದು ತಿಳಿಯಬೇಕು. ಹೀಗೆಂದರೆ ಷಷ್ಠೀ ವಿಭಕ್ತಿ ಪ್ರತ್ಯಯವನ್ನು ಕಳೆದುಕೊಂಡಿದೆ ಎಂದು ತಿಳಿಯಬೇಕು. ಆದ್ದರಿಂದ ಇದನ್ನು ಆರ್ಷ ಪ್ರಯೋಗವೆಂದು ತಿಳಿಯಬೇಕು.

**(ಇಡಾಗಮವನ್ನು ವಿಧಿಸುವ ಸೂತ್ರ)**

**ಸೂತ್ರ– 401.ಆರ್ಧಧಾತುಕಸ್ಯೇಡ್ ವಲಾದೇಃ (7.2.35)**

ವೃತ್ತಿಃ–ವಲಾದೇಃ ಆರ್ಧಧಾತುಕಸ್ಯ ಇಡಾಗಮಃ ಸ್ಯಾತ್। ಬಭೂವಿಥ। ಬಭೂವಥುಃ। ಬಭೂವ। ಬಭೂವ। ಬಭೂವಿವ। ಬಭೂವಿಮ।

ಪ. ಛೇ. – ಆರ್ಧಧಾತುಕಸ್ಯ, ಇಟ್, ವಲಾದೇಃ।

ಅರ್ಥ– 'ವಲ್' ಪ್ರತ್ಯಾಹಾರಾಂತರ್ಗತವಾದ ವರ್ಣವನ್ನು ಆದಿಯಲ್ಲಿಯುಳ್ಳ ಆರ್ಧಧಾತುಕ ಪ್ರತ್ಯಯಕ್ಕೆ 'ಇಟ್(ಇ)' ಆಗಮವು ಬರುತ್ತದೆ. ಈ ಪ್ರತ್ಯಯವು 'ಟಿತ್' ಆಗಿರೋಣದ್ದರಿಂದ "ಆದ್ಯಂತೌ ಟಕಿತೌ" ಎಂಬ ಸೂತ್ರದ ಪ್ರಕಾರ ಆದ್ಯವಯವವಾಗಿ ಬರುತ್ತದೆ. ಅಂದರೆ ಪರದಲ್ಲಿರುವ ಶಬ್ದಸ್ವರೂಪಕ್ಕೆ ಆದ್ಯವಯವವಾಗಿ ಬರುತ್ತದೆ ಎಂದು ಅರ್ಥ.

ಉದಾ–4 ಬಭೂವಿಥ–ಭೂ ಧಾತುವಿನಮೇಲೆ ಕರ್ತ್ರರ್ಥದಲ್ಲಿ ಪರೋಕ್ಷ (ಅನದ್ಯತನಪೂರ್ಣ) ಭೂತಕಾಲಾರ್ಥದಲ್ಲಿ, "ಪರೋಕ್ಷೇ ಲಿಟ್" ಎಂಬ ಸೂತ್ರದಿಂದ 'ಲ್(ಲಿಟ್)' ಕಾರದ ಸ್ಥಾನದಲ್ಲಿ ಮಧ್ಯಮಪುರುಷ ಏಕವಚನದಲ್ಲಿ, (ಮೂಲ ಆಖ್ಯಾತ ಪ್ರತ್ಯಯವಾದ) 'ಸಿಪ್(ಸಿ)' ಪ್ರತ್ಯಯ ಬಂದು, ಅಪವಾದವಾಗಿ ಆರ್ಧಧಾತುಕ ಸಂಜ್ಞೆ ಬಂದು 'ಕರ್ತರಿ ಶಪ್' ಸೂತ್ರದಿಂದ ಶಪ್ ವಿಕರಣ ಪ್ರತ್ಯಯ ಬಾರದೇ 'ಥಲ್' ಎಂಬ ಅಭಿನವ ಆಖ್ಯಾನ ಪ್ರತ್ಯಯವು ಆದೇಶವಾಗಿ ಬಂದು ಭೂ+ಥ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ವಲಾದಿಯಾದ ಆರ್ಧಧಾತುಕ 'ಥ' ಪ್ರತ್ಯಯಕ್ಕೆ 'ಇಟ್' ಆಗಮವು ('ಟಿತ್' ಆಗಿರೋಣದ್ದರಿಂದ ಪರದಲ್ಲಿರುವ 'ಥ'ಕ್ಕೆ) ಆದ್ಯಯವಯವಾಗಿ ಬಂದು ಭೂ+ಇ+ಥ ಎಂದಿರುತ್ತದೆ. (ಇಲ್ಲಿ ಭೂ ಎಂಬುದು ಬಭೂವ್ ಎಂದು ಹೇಗೆ ಆಯಿತು ಎಂಬುದನ್ನು 'ಬಭೂವ' ಎಂಬ ರೂಪದ ಪ್ರಕ್ರಿಯೆಯಲ್ಲಿ ಹೇಳಿದ್ದನ್ನು ನೋಡಿಕೊಳ್ಳಬೇಕು). ಹೀಗೆ ಬಭೂವ್+ಇಥ=ಬಭೂವಿಥ ಎಂದು ರೂಪವಾಗುತ್ತದೆ.

ಉದಾ– 5: ಬಭೂವಥುಃ ಎಂಬ ಮಧ್ಯಮಪುರುಷ ದ್ವಿವಚನದಲ್ಲಿಯೂ ಕೂಡ 'ಥಸ್' ಪ್ರತ್ಯಯದ ಸ್ಥಾನದಲ್ಲಿ 'ಅಥುಸ್' ಆದೇಶ ಬಂದು ಬಭೂವ್+ಅಥುಸ್=ಬಭೂವಥುಸ್ ಎಂದಾಗಿ ರುತ್ವ–ವಿಸರ್ಗಗಳಿಂದ ಬಭೂವಥುಃ ಎಂದು ರೂಪವಾಗಿದೆ.

ಉದಾ– 6: ಬಭೂವ–ಎಂಬ ಮಧ್ಯಮಪುರುಷ ಬಹುವಚನದಲ್ಲಿ 'ಥ' ಪ್ರತ್ಯಯದ ಸ್ಥಾನದಲ್ಲಿ 'ಅ' ಆದೇಶ ಬಂದು ಬಭೂವ್+ಅ=ಬಭೂವ ಎಂದಾಗಿದೆ.

ಉದಾ– 7: ಬಭೂವ–ಎಂಬ ಉತ್ತಮಪುರುಷ ಏಕವಚನದಲ್ಲಿ 'ಮಿಪ್' ಪ್ರತ್ಯಯದ ಸ್ಥಾನದಲ್ಲಿ 'ಣಲ್ (ಅ)' ಆದೇಶ ಬಂದು ಬಭೂವ್+ಅ=ಬಭೂವ ಎಂದು ರೂಪವಾಗುತ್ತದೆ.

ಉದಾ– 8: ಬಭೂವಿವ–ಎಂಬ ಉತ್ತಮಪುರುಷ ದ್ವಿವಚನದಲ್ಲಿ 'ವಸ್'ಪ್ರತ್ಯಯದ ಸ್ಥಾನದಲ್ಲಿ 'ವ' ಆದೇಶ ಬಂದು ಬಭೂವ್+ವ ಎಂದಿದ್ದಾಗ, ವಲಾದಿಯಾದ 'ವ' ಪ್ರತ್ಯಯವು ಪರದಲ್ಲಿ ಇರೋಣದರಿಂದ, ಪ್ರಕೃತ ಸೂತ್ರದಿಂದ ಪರದಲ್ಲಿರುವ 'ವ' ಕಾರಕ್ಕೆ ಆದ್ಯವಯವವಾಗಿ 'ಇಟ್ (ಇ)' ಆಗವುವು ಬಂದು ಬಭೂವ್+ಇ+ವ=ಬಭೂವಿವ ಎಂದು ರೂಪವಾಗುತ್ತದೆ.

ಉದಾ– 9: ಬಭೂವಿಮ – ಎಂಬ ಉತ್ತಮಪುರುಷ ಬಹುವಚನದಲ್ಲಿ 'ಮಸ್' ಪ್ರತ್ಯಯದ ಸ್ಥಾನದಲ್ಲಿ 'ಮ' ಪ್ರತ್ಯಯವು ಆದೇಶವಾಗಿ ಬಂದು ಬಭೂವ್+ಮ ಎಂದಿದ್ದಾಗ ಮೇಲಿನಂತೆ ಇಡಾಗಮ ಬಂದು ಬಭೂವ್+ಇ+ಮ =ಬಭೂವಿಮ ಎಂದು ರೂಪವಾಗುತ್ತದೆ.

**(ಇಲ್ಲಿಗೆ 'ಭೂ' ಧಾತುವಿನ 'ಲಿಟ್' 'ಲ್' ಕಾರದ ಪ್ರಕ್ರಿಯೆಯು ಮುಗಿಯಿತು).**

**(ಪ್ರಥಮ ಭವಿಷ್ಯತ್ಕಾಲದ ಲುಟ್ 'ಲ್' ಕಾರವನ್ನು ವಿಧಿಸುವ ಸೂತ್ರ)**

**ಸೂತ್ರ– 402.ಅನದ್ಯತನೇ ಲುಟ್ (3.3.15)**

ವೃತ್ತಿಃ–ಭವಿಷ್ಯತಿ ಅನದ್ಯತನೇ ಅರ್ಥೇ ಧಾತೋಃ ಲುಟ್।

ಅ. ವ್ಯ. –"ಭವಿಷ್ಯತಿ ಗಮ್ಯಾದಯಃ" ಎಂಬ ಸೂತ್ರದಿಂದ 'ಭವಿಷ್ಯತಿ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– ಅನದ್ಯತನ ಭವಿಷ್ಯತ್ ಕಾಲಾರ್ಥದಲ್ಲಿ, ಧಾತುವಿನ ನಂತರ 'ಲುಟ್(ಲ್)' ಕಾರವು ಬರುತ್ತದೆ. ಅನದ್ಯತನವೆಂದರೆ ಇವತ್ತಿನ ಕಾಲದ ಸಂಬಂಧವಿಲ್ಲದ ಸಮಯದಲ್ಲಿ (ನಾಳೆಯಿಂದ ಆರಂಭವಾಗುವ ಸಮಯದಲ್ಲಿ) ಜರುಗಲಿರುವ ಘಟನೆಯನ್ನು ಸೂಚಿಸುವ 'ಲ್'ಕಾರ ಎಂದರ್ಥ. ಅಂದರೆ ನಾಳಿನ ಮೊದಲನೆಯ ಗಂಟೆಯ ಮೊದಲನೆ ನಿಮಿಷದ ಮೊದಲನೆಯ ಕ್ಷಣದಿಂದ ಆರಂಭಿಸಿ ಅನಂತಕಾಲದವರೆಗಿನ ಅವಧಿ ಎಂದು ಅರ್ಥ. ಮನುಷ್ಯನು ಭವಿಷ್ಯದಬಗ್ಗೆ ನಿಶ್ಚಯವಾಗಿ ಹೇಳಲು ಅಸಮರ್ಥನಾದ್ದರಿಂದ ಇಲ್ಲಿ ಭೂತಕಾಲದಲ್ಲಿರುವ ವಿಭಾಗಗಳಂತೆ ಮೂರು ವಿಭಾಗಗಳಿಲ್ಲ. ಮತ್ತೊಂದು ಪ್ರಶ್ನೆ ಬರುತ್ತದೆ. ಅದು ಏನೆಂದರೆ, ಇಂದಿನ ಈ ಕ್ಷಣದಿಂದ ಇಂದಿನ ರಾತ್ರಿಯ ಕೊನೆಯ

ಕ್ಷಣದವರೆಗಿನ ಅವಧಿಯಲ್ಲಿ ಜರುಗುವ ಘಟನೆಯನ್ನು ಸೂಚಿಸುವ 'ಲೃಟ್(ಲ್)' ಕಾರವೂ ಕೂಡ ಭವಿಷ್ಯದ ಅರ್ಥವನ್ನೇ ಹೇಳುತ್ತದೆ. ಅದರೂ ಸಾಧಾರಣವಾಗಿ ಮನುಷ್ಯನಿಗೆ ಇಂದೇ ಸಾಯುತ್ತೇನೆ ಎಂಬ ಭಾವನೆ ಬರುವುದಿಲ್ಲ. ಅದೂ ಮೊದಲನೇ ಭವಿಷ್ಯದಂತೆ ಪರೋಕ್ಷವೇ.

ಹೀಗಾಗಿ ಇಲ್ಲಿ ಪರೋಕ್ಷ-ಅಪರೋಕ್ಷ ವ್ಯವಹಾರಗಳಿರುವುದಿಲ್ಲ. ಅಂದರೆ ಅವನು ಮುಂದೆ ಬದುಕಿರುವ ಜೀವನಾವಧಿಯಲ್ಲಿ ಜರುಗಲಿರುವ ಘಟನೆಯನ್ನು ನೋಡಬಹುದು ಅಥವಾ ನೋಡದೆಯೂ ಹೋಗಬಹುದು.

**(ಸ್ಯ ಮತ್ತು ತಾಸಿ ಪ್ರತ್ಯಯಗಳನ್ನು ವಿಧಿಸುವ ಸೂತ್ರ)**

**ಸೂತ್ರ- 403. ಸ್ಯತಾಸೀ ಲೃ-ಲುಟೋಃ (3.1.33)**

ವೃತ್ತಿಃ-ಧಾತೋಃ ಸ್ಯ-ತಾಸೀ (ತಾಸಿಯಲ್ಲಿ 'ಇ' ಕಾರವು ಅನುನಾಸಿಕವಾದ್ದರಿಂದ 'ಇತ್' ಸಂಜ್ಞೆಯನ್ನು ಹೊಂದಿ ಲೋಪವಾದದ್ದರಿಂದ ತಾಸ್ ಎಂದು ಉಳಿದಿದೆ.) ಏತೌ ಪ್ರತ್ಯಯೌ ಸ್ತಃ, ಲೃಲುಟೋಃ ಪರತಃ। ಶಬಾದ್ಯಪವಾದಃ। ಲೃ ಇತಿ ಲೃಙ್-ಲೃಟೋಃ ಗ್ರಹಣಮ್।

ಅರ್ಥ- ಲೃಟ್(ಲ್) ಮತ್ತು ಲೃಙ್(ಲ್) ಕಾರಗಳು ಪರದಲ್ಲಿರುವಾಗ, 'ಸ್ಯ' ಪ್ರತ್ಯಯವೂ ಹಾಗೆಯೇ ಲುಟ್(ಲ್) ಪರದಲ್ಲಿದ್ದಾಗ, 'ತಾಸಿ' ಪ್ರತ್ಯಯವೂ ಕ್ರಮವಾಗಿ ಬರುತ್ತದೆ. 'ಲೃ' ಶಬ್ದದಿಂದ 'ಲೃಙ್' 'ಲ್'ಕಾರವನ್ನೂ ಗ್ರಹಿಸಬೇಕು.

**(ಆರ್ಧಧಾತುಕ ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ- 404.ಆರ್ಧಧಾತುಕಂ ಶೇಷಃ (3.1.144)**

ವೃತ್ತಿಃ- ತಿಙ್-ಶಿದ್ಭ್ಯಃ ಅನ್ಯಃ, ಧಾತೋಃ ಇತಿ ವಿಹಿತಃ ಪ್ರತ್ಯಯಃ ಏತತ್-ಸಂಜ್ಞಃ ಸ್ಯಾತ್। ಇಟ್(ಇಡಾಗಮಃ)।

ಅರ್ಥ- ಧಾತುವಿನ ನಂತರ ವಿಹಿತವಾದ 'ತಿಙ್' ಮತ್ತು 'ಶಿತ್' ಗಳಿಂದ ಕೂಡಿರುವದಕ್ಕಿಂತ ಭಿನ್ನವಾದ ಪ್ರತ್ಯಯಕ್ಕೆ ಆರ್ಧಧಾತುಕ ಸಂಜ್ಞೆಯು ಬರುತ್ತದೆ. 'ಶೇಷ' ಶಬ್ದಕ್ಕೆ ಉಕ್ತಾದನ್ಯಃ ಶೇಷಃ ಎಂದು ಹೇಳಲಾಗಿದೆ. ಅಂದರೆ ಈ ಸೂತ್ರಕ್ಕಿಂತ ಪೂರ್ವದಲ್ಲಿ 'ತಿಙ್-ಶಿತ್ ಸಾರ್ವಧಾತುಕಂ' ಎಂದು ಉಕ್ತವಾಗಿದೆ. ಆದ್ದರಿಂದ 'ಶೇಷ' ಎಂದರೆ 'ತಿಙ್'ಮತ್ತು 'ಶಿತ್' ಗಳಿಗಿಂತ ಭಿನ್ನವಾದದ್ದು ಎಂದು ಅರ್ಥ.

**(ಡಾ-ರೌ-ರಸ್ ಪ್ರತ್ಯಯಗಳನ್ನು ವಿಧಿಸುವ ಸೂತ್ರ)**

**ಸೂತ್ರ- 405.ಲುಟಃ ಪ್ರಥಮಸ್ಯ ಡಾ-ರೌ-ರಸಃ (2.4.85)**

ವೃತ್ತಿಃ- 'ಡಾ-ರೌ-ರಸ್' ಏತೇ ಕ್ರಮಾತ್ ಸ್ಯುಃ। ಡಿತ್ವಸಾಮರ್ಥ್ಯಾತ್ ಅಭಸ್ಯ ಅಪಿ ಟೇಃ ಲೋಪಃ। ಭವಿತಾ।

ಅರ್ಥ- 'ಲುಟ್' 'ಲ್' ಕಾರದ ಪ್ರಥಮಪುರುಷದ (ಮೂರು ವಚನಗಳ) ಆದೇಶಗಳಾದ ಮೂಲ ಆಖ್ಯಾತ ಪ್ರತ್ಯಯಗಳಾದ ತಿಪ್, ತಸ್, ಝಿ ಗಳ ಸ್ಥಾನದಲ್ಲಿ,

ಕ್ರಮವಾಗಿ ಅಭಿನವ ಆಖ್ಯಾತ ಪ್ರತ್ಯಯಗಳಾದ ಡಾ, ರೌ, ರಸ್ ಪ್ರತ್ಯಯಗಳು ಬರುತ್ತವೆ.

**ಲುಟ್:**

ಉದಾ–1 – ಭವಿತಾ– 'ಭೂ' ಧಾತುವಿನ ನಂತರ ಕರ್ತ್ರರ್ಥದಲ್ಲಿ ಅನದ್ಯತನ ಭವಿಷ್ಯತ್ ಕಾಲವನ್ನು ಸೂಚಿಸುವಾಗ, (ಪರಸ್ಮೈ ಪದದಲ್ಲಿ) 'ಲುಟ್(ಲ್)' ಕಾರವು ಬರುತ್ತದೆ. ಹೀಗೆ ಭೂ+ಲ್ ಎಂದಿದ್ದಾಗ, ತಿಙ್(ತಿ) ಎಂಬ ಮೂಲ ಆಖ್ಯಾತ ಪ್ರತ್ಯಯವು ಆದೇಶವಾಗಿ ಬಂದು ಭೂ+ತಿ ಎಂದಿದ್ದಾಗ, "ತಿಙ್–ಶಿತ್ ಸಾರ್ವಧಾತುಕಂ" ಎಂಬ ಸೂತ್ರದಿಂದ ಸಾರ್ವಧಾತುಕ ಸಂಜ್ಞೆಯು ಮತ್ತು "ಕರ್ತರಿ ಶಪ್" ಎಂಬ ಸೂತ್ರದಿಂದ 'ಶಪ್(ಅ) ಪ್ರತ್ಯಯವು ಪ್ರಾಪ್ತವಾದಾಗ, ಇವುಗಳನ್ನು ಬಾಧಿಸಿ "ಸ್ಯತಾಸೀ ಲೃ–ಲುಟೋಃ (3.1.33)" ಎಂಬ ಸೂತ್ರದಿಂದ 'ತಾಸಿ(ತಾಸ್)' ಎಂಬ ಪ್ರತ್ಯಯವು ಆದೇಶವಾಗಿ ಬಂದು ಭೂ+ಇ+ತಾಸ್+ತಿ ಎಂದಿರುತ್ತದೆ. ಈ 'ತಾಸ್' ಪ್ರತ್ಯಯವು 'ತಿಙ್' ಮತ್ತು 'ಶಿತ್' ಗಳಿಂದ ಕೂಡಿರುವದಕ್ಕಿಂತ ಭಿನ್ನವಾಗಿರೋಣದ್ದರಿಂದ ಆರ್ಧಧಾತುಕ ಸಂಜ್ಞೆಯು ಬರುತ್ತದೆ. "ಆರ್ಧಧಾತುಕಸ್ಯೇಡ್ ವಲಾದೇಃ" ಎಂಬ ಸೂತ್ರದಿಂದ 'ತಾಸ್' ಗೆ 'ಇಟ್' ಆಗಮವು ಬರುತ್ತದೆ. ಈ ಆಗಮವು 'ಟಿತ್' ಆಗಿರೋಣದ್ದರಿಂದ 'ತಾಸ್' ಗೆ ಆದ್ಯಯವಯವವಾಗಿ ಬಂದು, ಭೂ+ಇ+ತಾಸ್+ತಿ ಎಂದಿರುತ್ತದೆ. ಈಗ "ಸಾರ್ವಧಾತುಕಾರ್ಧಧಾತುಕಯೋಃ" ಎಂಬ ಸೂತ್ರದಿಂದ 'ಊ' ಕಾರಕ್ಕೆ ಗುಣ ಬಂದು ಭೋ+ಇ+ತಾಸ್+ತಿ ಎಂದಾಗುತ್ತದೆ. "ಏಚೋಽಯವಾಯಾವಃ" ಎಂಬುದರಿಂದ ಅವಾದೇಶ ಬಂದು ಭವಿ+ತಾಸ್+ತಿ ಎಂದಿರುತ್ತದೆ. 'ತಿ' ಎಂಬ ಮೂಲ ಆಖ್ಯಾತ ಪ್ರತ್ಯಯದ ಸ್ಥಾನದಲ್ಲಿ 'ಡಾ(ಆ)' ಎಂಬ ಆದೇಶವು ಬಂದು, "ಚುಟೂ" ಸೂತ್ರದಿಂದ ಟವರ್ಗದ 'ಡ್' ಕಾರಕ್ಕೆ ಲೋಪ ಬಂದು, ಭವಿತಾಸ್+ಆ ಎಂದಿರುತ್ತದೆ. ಭವಿತಾಸ್ ಎಂಬಲ್ಲಿ 'ಆಸ್' ಎಂಬುದು "ಅಚೋಽಂತ್ಯಾದಿ ಟಿ" ಎಂಬ ಸೂತ್ರದಿಂದ 'ಟಿ' ಸಂಜ್ಞೆಯನ್ನು ಹೊಂದಿ, ಡಿತ್ವ ವಿಧಾನ ಸಾಮರ್ಥ್ಯದಿಂದ 'ಭ' ಸಂಜ್ಞಕವಾಗದಿದ್ದರೂ "ಟೇಃ" ಎಂಬುದರಿಂದ 'ಟಿ' ಸಂಜ್ಞೆಯನ್ನು ಹೊಂದಿರುವ 'ಆಸ್' ಗೆ ಲೋಪ ಬಂದು, ಭವಿತ್+ಆ=ಭವಿತಾ ಎಂದು ರೂಪವಾಗಿದೆ

**(ಸ್–ಕಾರ ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ– 406.ತಾಸಸ್ತ್ಯೋರ್ಲೋಪಃ (7.4.50)**

ವೃತ್ತಿಃ–ತಾಸೇಃ ಅಸ್ತೇಶ್ಚ ಸಸ್ಯ ಲೋಪಃ ಸ್ಯಾತ್ ಸಾದೌ ಪ್ರತ್ಯಯೇ ಪರೇ।

ಪ. ಛೇ. – ತಾಸಸ್ತ್ಯೋಃ, ಲೋಪಃ।

ಅ. ವೃ. – "ಸಃ ಸ್ಯಾರ್ಧಧಾತುಕೇ" ಎಂಬ ಸೂತ್ರದಿಂದ 'ಸಿ' ಎಂಬುದು ಅನುವೃತ್ತವಾಗುತ್ತದೆ.

ಅರ್ಥ– 'ಸ್' ಕಾರಾದಿ ಪ್ರತ್ಯಯವು ಪರದಲ್ಲಿದ್ದಾಗ 'ತಾಸಿ' ಪ್ರತ್ಯಯದ ಮತ್ತು 'ಅಸ್' ಧಾತುವಿನ 'ಸ್' ಕಾರಕ್ಕೆ ಲೋಪವು ಬರುತ್ತದೆ.

(ಸ್ -ಕಾರ ಲೋಪವನ್ನು ವಿಧಿಸುವ ಮತ್ತೊಂದು ಸೂತ್ರ)

**ಸೂತ್ರ- 407.ರಿ ಚ (7.4.51)**

ವೃತ್ತಿಃ-ರಾದೌ ಪ್ರತ್ಯಯೇ ತಥಾ। ಭವಿತಾರೌ। ಭವಿತಾರಃ। ಭವಿತಾಸಿ। ಭವಿತಾಸ್ಥಃ। ಭವಿತಾಸ್ಥ। ಭವಿತಾಸ್ಮಿ।ಭವಿತಾಸ್ವಃ। ಭವಿತಾಸ್ಮಃ।

ಅ.ವ್ಯ –"ತಾಸಸ್ತ್ಯೋರ್ಲೋಪಃ (7.4.50)" ಎಂಬ ಸೂತ್ರವು ಅನುವೃತ್ತವಾಗುತ್ತದೆ.

ಅರ್ಥ– 'ರ್' ಕಾರಾದಿ ಪ್ರತ್ಯಯವು ಪರದಲ್ಲಿದ್ದಾಗ 'ತಾಸಿ' ಪ್ರತ್ಯಯದ ಮತ್ತು 'ಅಸ್' ಧಾತುವಿನ 'ಸ್' ಕಾರಕ್ಕೆ ಲೋಪವು ಬರುತ್ತದೆ.

ಉದಾ– 2. ಭವಿತಾರೌ – 'ಭೂ' ಧಾತುವಿನಮೇಲೆ ಕರ್ತ್ರರ್ಥದಲ್ಲಿ ಅನದ್ಯತನ ಭವಿಷ್ಯದರ್ಥದಲ್ಲಿ 'ಲುಟ್' 'ಲ್' ಕಾರವು ವಿಧಿಸಲಾಗಿದೆ. ಭೂ+ಲ್ ಎಂದಿದ್ದಾಗ ಪ್ರಥಮ ಪುರುಷ ದ್ವಿ ವಚನದಲ್ಲಿ 'ಲ್' ಕಾರದ ಸ್ಥಾನದಲ್ಲಿ'ತಸ್' ಆದೇಶವು ಬಂದು ಭೂ+ತಸ್ ಎಂದಿರುತ್ತದೆ. 'ತಸ್' ಗೆ "ತಿಙ್‌ಶಿತ್ ಸಾರ್ವಧಾತುಕಮ್ (3.4.113)" ಎಂಬ ಸೂತ್ರದಿಂದ ಸಾರ್ವಧಾತುಕಸಂಜ್ಞೆ ಬಂದು, " ಕರ್ತರಿ ಶಪ್" ಎಂಬಸೂತ್ರದಿಂದ 'ಶಪ್(ಅ)' ಬಂದಿದೆ. ಆದರೆ ಇದನ್ನು ಬಾಧಿಸಿ "ಸ್ಯತಾಸೀ ಲೃ-ಲುಟೋಃ (3.1.33)" ಎಂಬ ಸೂತ್ರದಿಂದ 'ತಾಸಿ' ಪ್ರತ್ಯಯವು ಬರುತ್ತದೆ. 'ತಾಸಿ'ಯಲ್ಲಿ 'ಇ' ಕಾರವು ಅನುನಾಸಿಕವಾಗಿರುವುದರಿಂದ 'ಇತ್' ಸಂಜ್ಞೆಯನ್ನು ಹೊಂದಿ ಲೋಪವಾಗುತ್ತದೆ. ಆಗ, ಭೂ+ತಾಸ್+ತಸ್ ಎಂದಿರುತ್ತದೆ. 'ತಾಸ್' ಎಂಬುದು ಧಾತುವಿನ ನಂತರ ವಿಹಿತವಾಗಿದೆ. ಇದು 'ತಿಙ್' ಅಲ್ಲ ಮತ್ತು 'ಶಿತ್' ಅಲ್ಲ. "ಆರ್ಧಧಾತುಕಂ ಶೇಷಃ" ಎಂಬ ಸೂತ್ರದಿಂದ ಆರ್ಧ-ಧಾತುಕ ಸಂಜ್ಞೆ ಬರುತ್ತದೆ. ಈಗ "ಆರ್ಧಧಾತುಕಸ್ಯೇಡ್ ವಲಾದೇಃ" ಎಂಬ ಸೂತ್ರದಿಂದ 'ತಾಸ್' ಗೆ ಆದ್ಯವಯವಾಗಿ ಇಡಾಗಮವು ಬಂದು ಭೂ+ಇ+ತಾಸ್+ತಸ್ ಎಂದಿದ್ದಾಗ, 'ಭೂ'ನಲ್ಲಿಯ 'ಊ' ಕಾರಕ್ಕೆ "ಸಾರ್ವಧಾತುಕಾರ್ಧ-ಧಾತುಕಯೋಃ" ಎಂಬುದರಿಂದ ಗುಣ ಬಂದು ಭೋ+ಇ ಎಂದಾಗುತ್ತದೆ. "ಏಚೋಽಯವಾ-ಯಾವಃ" ಎಂಬ ಸೂತ್ರದಿಂದ 'ಅವ್' ಆದೇಶಬಂದು ಭ್+ಅವ್+ಇ=ಭವಿ+ತಾಸ್+ತಸ್ ಎಂದಿದ್ದಾಗ, 'ತಸ್' ನ ಸ್ಥಾನದಲ್ಲಿ "ಲುಟಃ ಪ್ರಥಮಸ್ಯ ಡಾ-ರೌ-ರಸಃ (2.4.85)" ಎಂಬ ಸೂತ್ರದಿಂದ 'ರೌ' ಆದೇಶವು ಬರುತ್ತದೆ. ಆಗ ಭವಿತಾಸ್+ರೌ ಎಂದಿರುತ್ತದೆ. ಆಗ ಪ್ರಕೃತ ಸೂತ್ರದಿಂದ 'ತಾಸ್' ನ 'ಸ್' ಕಾರಕ್ಕೆ ಲೋಪ ಬಂದು ಭವಿತಾ+ರೌ=ಭವಿತಾರೌ ಎಂದು ರೂಪವಾಗುತ್ತದೆ.

ಉದಾ-3. ಭವಿತಾರಃ ಎಂಬಲ್ಲಿ ಭೂ+ಝಿ ಎಂದಿದ್ದಾಗ, ಮೇಲಿನ ಪ್ರಕ್ರಿಯೆಯಂತೆಯೇ ಕಾರ್ಯಗಳಾಗಿ 'ಝಿ'ಗೆ 'ರಸ್' ಆದೇಶವು ಬಂದು ಭವಿತಾರಸ್ ಎಂದಾಗಿ 'ಸ್' ಕಾರಕ್ಕೆ ರುತ್ವ-ವಿಸರ್ಗಗಳಿಂದ ಭವಿತಾರಃ ಎಂಬ ರೂಪವು ಸಿದ್ಧವಾಗುತ್ತದೆ. ಈ ಎರಡು ಉದಾಹರಣೆಗಳ ಪ್ರಕ್ರಿಯೆಯಲ್ಲಿ ಹೆಚ್ಚು ವ್ಯತ್ಯಾಸವಿಲ್ಲ.

ಉದಾ-4. ಭವಿತಾಸಿ – ಮಧ್ಯಮಪುರುಷ ಏಕವಚನದಲ್ಲಿ 'ಸಿಪ್ (ಸಿ)' ಪ್ರತ್ಯಯವು ಬಂದು ಭೂ+ಸಿಪ್ (ಸಿ) ಎಂದಿದ್ದಾಗ, ಈ 'ಸಿ' ಗೆ 'ತಾಸಿ' ಎಂಬ ಪ್ರತ್ಯಯವು ಆದೇಶವಾಗಿ ಬಂದು, ಭೂ+ತಾಸಿ(ತಾಸ್) ಎಂದು ಇರುತ್ತದೆ. ಇದಕ್ಕೆ ಆರ್ಧಧಾತುಕ

ಸಂಜ್ಞೆ ಬಂದು, ನಂತರ ಇಡಾ(ಇಟ್) ಗಮ ಬರುತ್ತದೆ. ನಂತರ ಗುಣ-ಅವಾದೇಶಗಳಿಂದ ಭವ್+ಇ+ತಾಸ್+ಸಿ ಎಂದಿದ್ದಾಗ, 'ತಾಸ್' ನ 'ಸ್' ಕಾರಕ್ಕೆ -"ತಾಸಸ್ತ್ಯೋರ್ಲೋಪಃ (7.4.50)" ಎಂಬುದರಿಂದ ಲೋಪ ಬಂದು ಭವಿತಾಸಿ ಎಂದು ರೂಪವಾಗುತ್ತದೆ.

ಉದಾ- 5. ಭವಿತಾಸ್ಥಃ। 6. ಭವಿತಾಸ್ಥ।7. ಭವಿತಾಸ್ಮಿ।8. ಭವಿತಾಸ್ವಃ। 9. ಭವಿತಾಸ್ಮಃ। ಎಂಬ ರೂಪಗಳಲ್ಲಿ ಕ್ರಮವಾಗಿ ಥಸ್, ಥ, ಮಿಪ್, ವಸ್, ಮಸ್ ಪ್ರತ್ಯಯಗಳು ಬರುತ್ತವೆ. ಇವುಗಳಿಗೆ 'ತಾಸಿ(ಸಿ)' ನಲ್ಲಿ ಅನುನಾಸಿಕ ಇ-ಕಾರವು ಇತ್ ಆದ್ದರಿಂದ ತಾಸ್ ಮಾತ್ರ ಉಳಿಯುತ್ತದೆ)' ಪ್ರತ್ಯಯಗಳು ಆದೇಶಗಳಾಗಿ ಬಂದು, ಇಡಾಗಮ, ಗುಣ, ಅವಾದೇಶಗಳು ಬಂದಮೇಲೆ ಭವಿತಾಸ್ಥಃ। ಭವಿತಾಸ್ಥ। ಭವಿತಾಸ್ಮಿ।ಭವಿತಾಸ್ವಃ। ಭವಿತಾಸ್ಮಃ। ಎಂದು ರೂಪಗಳು ಸಿದ್ಧಿಸುತ್ತವೆ.

ಸೂಚನೆ: ಈ ಮೇಲಿನ ಐದು ಉದಾಹರಣೆಗಳಲ್ಲಿ. 'ಸ್' ಕಾರಾದಿ ಮತ್ತು 'ರ್' ಕಾರಾದಿ ಪ್ರತ್ಯಯಗಳು ಪರದಲ್ಲಿ ಇಲ್ಲದೇ ಇರೋಣದರಿಂದ 'ಸ್' ಕಾರಕ್ಕೆ ಲೋಪವು ಬರುವುದಿಲ್ಲ.

### (ಲೃಟ್ 'ಲ್' ಕಾರವನ್ನು ವಿಧಿಸುವ ಸೂತ್ರ)

**ಸೂತ್ರ- 408. ಲೃಟ್ ಶೇಷೇ ಚ (3.3.13)**

ವೃತ್ತಿಃ-ಭವಿಷ್ಯತ್-ಅರ್ಥಾತ್ ಧಾತೋಃ ಲೃಟ್ ಕ್ರಿಯಾರ್ಥಾಯಾಂ ಕ್ರಿಯಾಯಾಂ ಸತ್ಯಾಂ ಅಸತ್ಯಾಂ ವಾ। ಸ್ಯಃ। ಇಟ್(ಆಗಮ)। ಭವಿಷ್ಯತಿ। ಭವಿಷ್ಯತಃ। ಭವಿಷ್ಯನ್ತಿ। ಭವಿಷ್ಯಸಿ। ಭವಿಷ್ಯಥಃ।ಭವಿಷ್ಯಥ। ಭವಿಷ್ಯಾಮಿ। ಭವಿಷ್ಯಾವಃ। ಭವಿಷ್ಯಾಮಃ।

ಅ. ವೃ. - "ಭವಿಷ್ಯತಿ ಗಮ್ಯಾದಯಃ" ಎಂಬ ಸೂತ್ರದಿಂದ 'ಭವಿಷ್ಯತಿ' ಎಂಬ ಪದವೂ ಮತ್ತು "ತುಮುನ್ ಣ್ವುಲೌ ಕ್ರಿಯಾಯಾಂ ಕ್ರಿಯಾರ್ಥಾಯಾಮ್" ಎಂಬ ಸೂತ್ರದಿಂದ 'ಕ್ರಿಯಾಯಾಂ ಮತ್ತು ಕ್ರಿಯಾರ್ಥಾಯಾಂ' ಎಂಬ ಪದಗಳು ಅನುವೃತ್ತವಾಗುತ್ತವೆ. "ಧಾತೋಃ" ಎಂಬುದು ಅಧಿಕಾರ ಸೂತ್ರ.

ಅರ್ಥ-ಒಂದು ಕ್ರಿಯೆಗಾಗಿ ಮತ್ತೊಂದು ಕ್ರಿಯೆಯು ಉಪಪದವಾಗಿ ಇರಲಿ ಅಥವಾ ಇಲ್ಲದಿರಲಿ, ಆಗ (ಸಾಮಾನ್ಯ) ಭವಿಷ್ಯತ್ಕಾಲದಲ್ಲಿ 'ಲೃಟ್(ಲ್)' ಕಾರವು ಬರುತ್ತದೆ. ಇಲ್ಲಿ ಧಾತುವಿಗೆ 'ತುಮುನ್' ಮತ್ತು 'ಣ್ವುಲ್' ಪ್ರತ್ಯಯಗಳು ವಿಧಿಸಲಾಗುತ್ತದೆ. ಒಂದು ಕ್ರಿಯೆಯ ಪ್ರಯೋಜನಕ್ಕಾಗಿ ಪ್ರಯೋಗಿಸುವ ಮತ್ತೊಂದು ಕ್ರಿಯೆಗೆ 'ಕ್ರಿಯಾರ್ಥ ಕ್ರಿಯಾ' ಎಂದು ಹೆಸರು.

ಉದಾ-'ಗಾತುಂ ಯಾತಿ' (ಹಾಡುವದಕ್ಕಾಗಿ ಹೋಗುತ್ತಾನೆ).ಇಲ್ಲಿ ಹೋಗುವುದು ಎಂಬ ಕ್ರಿಯೆಗೆ ಪ್ರಯೋಜನವಾಗಿರುವುದು ಹಾಡುವ ಕ್ರಿಯೆ. ಆದ್ದರಿಂದ ಹೋಗುವುದು ಎಂಬುದು 'ಕ್ರಿಯಾರ್ಥಕ್ರಿಯಾ'. ಈ ಸೂತ್ರದಲ್ಲಿ ಶೇಷೇ ಚ ಎಂದು ಹೇಳಲಾಗಿದೆ. (ಅಂದರೆ ಇಂಥ ಕ್ರಿಯಾರ್ಥಕ್ರಿಯಾ ಇಲ್ಲದೇ ಇರುವ ಜಾಗದಲ್ಲೂ ಕೂಡ ಎಂದರ್ಥ). ಅಂದರೆ ಕ್ರಿಯಾರ್ಥ ಕ್ರಿಯೆ ಇದ್ದಾಗಲೂ ಮತ್ತು ಇಲ್ಲದೇ ಇದ್ದಾಗಲೂ ಭವಿಷ್ಯದ ಅರ್ಥವಾಚಕವಾದ ಧಾತುವಿನ ನಂತರ 'ಲೃಟ್(ಲ್)' ಕಾರವು ಬರುವುದು ಎಂದರ್ಥ.

ಉದಾ–1 : ಭವಿಷ್ಯತಿ–ಭೂ+ಲ್ ಎಂದಿದ್ದಾಗ 'ತಿಙ್' ಪ್ರತ್ಯಯವಾದ 'ತಿ' ಆದೇಶವಾಗಿ ಬಂದು, ಭೂ+ತಿ ಎಂದಿದ್ದಾಗ, "ಸ್ಯತಾಸೀ ಲೃ–ಲುಟೋಃ (3.1.33)" ಎಂಬ ಸೂತ್ರದಿಂದ ಧಾತುವಿನ ನಂತರ ಶಬಾದಿಗಳಿಗೆ ಅಪವಾದವಾಗಿ 'ಸ್ಯ' ಪ್ರತ್ಯಯವು ಬರುತ್ತದೆ. ಆಗ ಭೂ+ಸ್ಯ+ತಿ ಎಂದಿರುತ್ತದೆ. ಅಮೇಲೆ "ಆರ್ಧಧಾತುಕಂ ಶೇಷಃ" ಎಂಬ ಸೂತ್ರದಿಂದ ಆರ್ಧ ಧಾತುಕ ಸಂಜ್ಞೆ ಬರುತ್ತದೆ. ಈಗ "ಆರ್ಧಧಾತುಕಸ್ಯೇಡ್ ವಲಾದೇಃ" ಎಂಬ ಸೂತ್ರದಿಂದ 'ಸ್ಯ' ಗೆ ಆದ್ಯವಯವವಾಗಿ ಇಡಾಗಮವು ಬಂದು ಭೂ+ಇ+ಸ್ಯ+ತಿ ಎಂದಿರುತ್ತದೆ. ನಂತರ "ಸಾರ್ವಧಾತುಕಾರ್ಧಧಾತುಕಯೋಃ" ಎಂಬುದರಿಂದ 'ಊ' ಕಾರಕ್ಕೆ 'ಗುಣ' ಬಂದು, ನಂತರ 'ಅವ್' ಆದೇಶ ಬಂದು, 'ಭವಿಸ್ಯತಿ' ಎಂದಿದ್ದಾಗ "ಆದೇಶ ಪ್ರತ್ಯಯಯೋಃ" ಎಂಬ ಸೂತ್ರದಿಂದ 'ಸ್ಯ' ನಲ್ಲಿರುವ 'ಸ್' ಕಾರಕ್ಕೆ ಮೂರ್ಧನ್ಯಾದೇಶ(ಷ) ಬಂದು, ಭವಿಷ್ಯತಿ ಎಂದು ರೂಪವು ಸಿದ್ಧವಾಗುತ್ತದೆ. ಇತರ ರೂಪಗಳಿಗೂ ಸಹ 'ಭವಿಷ್ಯ' ಎಂಬಲ್ಲಿಯವರೆಗೂ ಮೇಲಿನಂತೆಯೇ ಪ್ರಕ್ರಿಯೆ ಇದ್ದು, ಕೆಳಗಿನಂತೆ ರೂಪಗಳು ಸಿದ್ಧವಾಗುತ್ತವೆ.

ಉದಾ–2. ಪ್ರಥಮಪುರುಷ ದ್ವಿ ವಚನದಲ್ಲಿ – ಭವಿಷ್ಯ+ತಸ್ ಎಂದಿದ್ದಾಗ, ಭವಿಷ್ಯತಸ್ ಎಂದಾಗಿ ರುತ್ವ–ವಿಸರ್ಗಗಳಿಂದ ಭವಿಷ್ಯತಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ–3. ಪ್ರಥಮಪುರುಷ ಬಹು ವಚನದಲ್ಲಿ – ಭವಿಷ್ಯ+ಝಿ ಎಂದಿದ್ದಾಗ, "ಝೋಽನ್ತಃ" ಎಂಬ ಸೂತ್ರದಿಂದ 'ಝ್' ಗೆ 'ಅನ್ತ್' ಆದೇಶ ಬಂದು, ಭವಿಷ್ಯ+ಅನ್ತ್+ಇ ಎಂದಿದ್ದಾಗ, "ಅತೋಗುಣೇ' ಎಂಬುದರಿಂದ ಪರರೂಪ ಬಂದು ಭವಿಷ್ಯನ್ತ್+ಇ=ಭವಿಷ್ಯನ್ತಿ ಎಂದು ರೂಪವಾಗುತ್ತದೆ.

ಉದಾ–4. ಮಧ್ಯಮಪುರುಷ ಏಕವಚನದಲ್ಲಿ ಭವಿಷ್ಯ+ಸಿ=ಭವಿಷ್ಯಸಿ ಎಂದು ರೂಪವಾಗುತ್ತದೆ.

ಉದಾ–5. ಮಧ್ಯಮಪುರುಷ ದ್ವಿವಚನದಲ್ಲಿ–ಭವಿಷ್ಯ+ಥಃ=ಭವಿಷ್ಯಥಃ ಎಂದು ರೂಪವಾಗುತ್ತದೆ.

ಉದಾ–6. ಮಧ್ಯಮಪುರುಷ ಬಹುವಚನದಲ್ಲಿ – ಭವಿಷ್ಯ+ಥ=ಭವಿಷ್ಯಥ ಎಂದು ರೂಪವಾಗುತ್ತದೆ.

ಉದಾ–7.ಉತ್ತಮಪುರುಷ ಏಕವಚನದಲ್ಲಿ – ಭವಿಷ್ಯ+ಮಿ ಎಂದಿದ್ದಾಗ, "ಅತೋ ದೀರ್ಘೋ ಯಞಿ" ಎಂಬಸೂತ್ರದಿಂದ 'ಮ್(ಯಞ್)' ಕಾರದ ಪೂರ್ವದಲ್ಲಿ ಇರುವ 'ಅ'ಕಾರಕ್ಕೆ ದೀರ್ಘ ಬಂದು ಭವಿಷ್ಯಾಮಿ ಎಂದು ರೂಪವಾಗುತ್ತದೆ.

ಉದಾ–8. ಉತ್ತಮಪುರುಷ ದ್ವಿವಚನದಲ್ಲಿ – ಭವಿಷ್ಯ+ವಸ್ ಎಂದಿದ್ದಾಗ, "ಅತೋ ದೀರ್ಘೋ ಯಞಿ" ಎಂಬಸೂತ್ರದಿಂದ 'ವ್' ಕಾರದ ಪೂರ್ವದಲ್ಲಿ ಇರುವ 'ಅ'ಕಾರಕ್ಕೆ ದೀರ್ಘ ಬಂದು, ಭವಿಷ್ಯಾವಸ್ ಎಂದಾಗಿ, ರುತ್ವ–ವಿಸರ್ಗಗಳಿಂದ ಭವಿಷ್ಯಾವಃ ಎಂದು ರೂಪವಾಗುತ್ತದೆ.

ಉದಾ–9. ಉತ್ತಮಪುರುಷ ಬಹುವಚನದಲ್ಲಿ – ಭವಿಷ್ಯ+ಮಸ್ ಎಂದಿದ್ದಾಗ,

"ಅತೋ ದೀರ್ಘೋ ಯಞಿ" ಎಂಬ ಸೂತ್ರದಿಂದ 'ಮ್' ಕಾರದ ಪೂರ್ವದಲ್ಲಿ ಇರುವ 'ಅ'ಕಾರಕ್ಕೆ ದೀರ್ಘ ಬಂದು, ಭವಿಷ್ಯಾಮಸ್ ಎಂದಾಗಿ, ರುತ್ವ-ವಿಸರ್ಗಗಳಿಂದ ಭವಿಷ್ಯಾಮಃ ಎಂದು ರೂಪವಾಗುತ್ತದೆ.

[ಗಮನಿಸಬೇಕಾದ ಅಂಶ: 'ಲುಟ್'(ಅನದ್ಯತನ ಭವಿಷ್ಯತ್) 'ಲ್' ಕಾರಕ್ಕೂ ಮತ್ತು'ಲೃಟ್' (ಅದ್ಯತನ ಭವಿಷ್ಯತ್ ಅಥವಾ ಸಾಮಾನ್ಯ ಭವಿಷ್ಯತ್) 'ಲ್' ಕಾರಕ್ಕೂ ಇರುವ ವ್ಯತ್ಯಾಸಗಳನ್ನು ತಿಙನ್ತಪ್ರಕರಣದ ಆರಂಭದಲ್ಲಿಯೇ ಸ್ಪಷ್ಟಪಡಿಸಲಾಗಿದೆ. ಅನದ್ಯತನ ಅರ್ಥದ ಜೊತೆಗೆ ಸಾಮಾನ್ಯ ಭವಿಷ್ಯದರ್ಥವನ್ನೂ 'ಲೃಟ್' 'ಲ್' ಕಾರವು ಬೋಧಿಸುತ್ತದೆ ಎಂಬುದನ್ನೂ ಅಲ್ಲಿಯೇ ವಿವರಿಸಲಾಗಿದೆ].

**(ಲೋಟ್ 'ಲ್' ಕಾರವನ್ನು ವಿಧಿಸುವ ಸೂತ್ರ)**

**ಸೂತ್ರ- 409.ಲೋಟ್ ಚ (3.3.162)**

ವೃತ್ತಿಃ-ವಿಧ್ಯಾದಿ-ಅರ್ಥೇಷು ಧಾತೋಃ ಲೋಟ್।

ಅ.ವೃ.-"ವಿಧಿ-ನಿಮನ್ತ್ರಣ-ಆಮನ್ತ್ರಣ-ಅಧೀಷ್ಟ-ಸಂಪ್ರಶ್ನ-ಪ್ರಾರ್ಥನೇಷು ಲಿಙ್" ಎಂಬ ಸೂತ್ರವು ಅನುವೃತ್ತವಾಗುತ್ತದೆ.

ಅರ್ಥ- ವಿಧಿ, ನಿಮನ್ತ್ರಣ, ಆಮನ್ತ್ರಣ, ಅಧೀಷ್ಟ, ಸಂಪ್ರಶ್ನ, ಪ್ರಾರ್ಥನೆ  ಅರ್ಥಗಳಲ್ಲಿ ಧಾತುವಿನಮೇಲೆ 'ಲೋಟ್' 'ಲ್' ಕಾರವು ಬರುತ್ತದೆ.

ವಿಧಿ- ಭೃತ್ಯಾದಿಗಳನ್ನು ಯಾವದಾದರೂ ಕೆಲಸದಲ್ಲಿ ತೊಡಗಿಸುವದಕ್ಕೆ ಮಾಡುವ ಆಜ್ಞೆಯೇ ವಿಧಿ. ಇದನ್ನು ಭೃತ್ಯರು ಮೀರಬಾರದು.

ನಿಮಂತ್ರಣ - ಅವಶ್ಯ ಕರ್ತವ್ಯವಾದ ಕಾರ್ಯಗಳಲ್ಲಿ ಶಿಷ್ಯಾದಿಗಳನ್ನು ನಿಯೋಜಿಸುವುದು ನಿಮಂತ್ರಣ. ಈ ನಿಮಂತ್ರಣವು ಅಧಿಕಾರಪೂರ್ವವಾಗಿ ಮಾಡದಿದ್ದರೂ ಇದು ಅವಶ್ಯ ಕರ್ತವ್ಯವಾಗಿಯೇ ಇರುವುದು.

ಆಮಂತ್ರಣ-ನಿನಗೆ ಸಾಧ್ಯವಿದ್ದರೆ ಮಾಡಬಹುದು ಎಂಬ ರೀತಿಯಲ್ಲಿ ಪ್ರೇರೇಪಿಸುವುದು ಆಮಂತ್ರಣ (ವಿವಾಹಾದಿ ಕಾರ್ಯಗಳಿಗೆ ಯಾರನ್ನಾದರು ಆಹ್ವಾನಿಸುವಾಗ, ಅವನು ಬರಬಹುದು ಅಥವಾ ಬಾರದೆಯೂ ಇರಬಹುದು ಎಂಬ ಅರ್ಥದಲ್ಲಿ).

ಅಧೀಷ್ಟ- ಹಿರಿಯರನ್ನು ಗೌರವಪೂರ್ವಕ ಪ್ರೇರೇಪಿಸುವುದು ಅಧೀಷ್ಟವೆನಿಸುತ್ತದೆ.

ಉದಾ- ಭವಾನ್ ಮಮ ಭ್ರಾತರಂ ಶಾಸ್ತ್ರಂ ಅಧ್ಯಾಪಯತು.

ಸಂಪ್ರಶ್ನ - "ಈ ಕೆಲಸವನ್ನು ಮಾಡಲೇ ಅಥವಾ ಆ ಕೆಲಸವನ್ನು ಮಾಡಲೇ" ಎಂದು ಆಲೋಚಿಸಿ ನಿರ್ಧಾರಣೆ ಮಾಡುವದಕ್ಕೆ ಸಂಪ್ರಶ್ನ ಎನ್ನುತ್ತಾರೆ.

ಉದಾ- (ಕಿಂ ಭೋಃ) ರಾಮಕೃಷ್ಣ! ಭವಾನ್ ತರ್ಕಶಾಸ್ತ್ರಮೇವ ಅಧೀಯೀತ? (ರಾಮಕೃಷ್ಣ ತಾವು ತರ್ಕಶಾಸ್ತ್ರವನ್ನೇ ಅಧ್ಯಯನ ಮಾಡುವಿರಾ)?

ಪ್ರಾರ್ಥನೆ- ವಿನಯಪೂರ್ವಕ ಯಾಚಿಸುವದೇ ಪ್ರಾರ್ಥನೆ. ಈ ಆರು ಅರ್ಥಗಳಲ್ಲಿ 'ಲೋಟ್' 'ಲ್' ಕಾರವನ್ನಾಗಲೀ 'ವಿಧಿಲಿಙ್' 'ಲ್'ಕಾರವನ್ನಾಗಲೀ ಉಪಯೋಗಿಸ

ಬಹುದು. ಪಾಣಿನಿಯವರು ಈ ಸೂತ್ರದಿಂದ ಒಂದೇ ಅರ್ಥದಲ್ಲಿ ಎರಡು 'ಲ್' ಕಾರಗಳನ್ನು ಉಪಯೋಗ ಮಾಡುವ ಅವಕಾಶವನ್ನು ಮಾಡಿಕೊಟ್ಟಿರುವರು. ಸಂಸ್ಕೃತ ಅಭ್ಯಾಸ ಮಾಡುವವರಿಗೆ ಇದು ಒಂದು ಸುಲಭವಾದ ಅವಕಾಶವಾಗಿದೆ. ಈ 'ಲ್' ಕಾರವು ಭಾವವನ್ನೇ ಬೋಧಿಸುತ್ತದೆ ಹೊರತು ಕಾಲಾರ್ಥವನ್ನಲ್ಲ.

**(ಲಿಙ್ ಮತ್ತು ಲೋಟ್ 'ಲ್'ಕಾರಗಳನ್ನು ವಿಧಿಸುವ ಸೂತ್ರ)**

**ಸೂತ್ರ– 410. ಆಶಿಷಿ ಲಿಙ್ ಲೋಟೌ (3.3.173)**

ವೃತ್ತಿಃ – ಆಶಿಷ್ಯಪಿ ಲಿಙ್-ಲೋಟೌ ಸ್ತಃ। ಆಶೀಃ ಅಪ್ರಾಪ್ತ-ಪ್ರಾಪ್ತೇಚ್ಛಾ।

ಅರ್ಥ– ಆಶೀರ್ವಾದಾರ್ಥದಲ್ಲಿ ಧಾತುವಿನ ನಂತರ 'ಆಶೀರ್ಲಿಙ್' ಮತ್ತು 'ಲೋಟ್' 'ಲ್' ಕಾರಗಳು ಬರುತ್ತವೆ. ಪಡೆಯದೇ ಇದ್ದದ್ದನ್ನು ಬೇಕೆಂದು ಬಯಸುವುದು ಆಶೀಃ ಎಂದೆನಿಸಿಕೊಳ್ಳುತ್ತದೆ.

('ಲೋಟ್' 'ಲ್' ಕಾರದ ಪ್ರಥಮಪುರುಷ ಏಕವಚನ, ಮತ್ತು ಮಧ್ಯಮಪುರುಷ ಏಕವಚನಗಳಲ್ಲಿ ಮಾತ್ರ ವಿಶೇಷರೂಪಗಳು ಇರುವವು. 'ಆಶೀರ್ಲಿಙ್' ನಲ್ಲಿ ಎಲ್ಲ ರೂಪಗಳೂ ಮಾರ್ಪಾಡಾಗೋಣದರಿಂದ ಇದಕ್ಕೆ ಆಶೀರ್ಲಿಙ್ ಎಂದು ಪ್ರತ್ಯೇಕವಾದ ಹೆಸರು). 'ಭೂ' ಧಾತುವಿಗೆ ವಿಧಿ ಮೊದಲಾದ ಅರ್ಥಗಳಲ್ಲಿ 'ಲೋಟ್(ಲ್)' 'ಲ್' ಕಾರವನ್ನು ಸೇರಿಸಿ ಭೂ+ಲ್ಎಂದಿದ್ದಾಗ, ಇದಕ್ಕೆ 'ತಿಙ್' ಪ್ರತ್ಯಯಗಳು ಆದೇಶವಾಗಿ ಬರುತ್ತವೆ. ಪ್ರಥಮಪುರುಷ ಏಕವಚನದಲ್ಲಿ ಭೂ+ತಿ ಎಂದಿದ್ದಾಗ, 'ತಿಙ್(ತಿ)' ಪ್ರತ್ಯಯವು ಸಾರ್ವಧಾತುಕವಾಗಿರೋಣದ್ದರಿಂದ, ಧಾತುವಿನ ನಂತರ 'ಶಪ್(ಅ)' ವಿಕರಣ ಪ್ರತ್ಯಯ ಬಂದು, ಅದಕ್ಕೆ ಗುಣ-ಅವಾದೇಶಗಳು ಹಿಂದಿನಂತೆ ಬಂದು ಭವ+ತಿ ಎಂದಿರುವಾಗ–

**(ಇ ಕಾರಕ್ಕೆ ಉ ಕಾರವನ್ನು ವಿಧಿಸುವ ಸೂತ್ರ)**

**ಸೂತ್ರ– 411.ಏರುಃ (3.4.86)**

ವೃತ್ತಿಃ–ಲೋಟಃ ಇಕಾರಸ್ಯ ಉಃ ಸ್ಯಾತ್। ಭವತು।

ಪ. ಛೇ. – ಏಃ, ಉಃ।

ಅ. ವೃ.– "ಲೋಟೋ ಲಙ್ವತ್" ಎಂಬ ಸೂತ್ರದಿಂದ 'ಲೋಟಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– 'ಲೋಟ್' 'ಲ್' ಕಾರಕ್ಕೆ ಸಂಬಂಧಿಸಿದ 'ಇ' ಕಾರದ ಸ್ಥಾನದಲ್ಲಿ 'ಉ' ಕಾರವು ಆದೇಶವಾಗಿ ಬರುತ್ತದೆ. ಇಲ್ಲಿ 'ಏಃ' ಎಂಬುದು 'ಹರೇಃ' ಎಂಬಂತೆ 'ಇ'ಕಾರದ ಷಷ್ಠೀ-ಏಕವಚನದ ರೂಪವಾಗಿದೆ.

ಉದಾ–1 ಭವತು/ ಭವತಾತ್–ಭವ+ತಿ ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ತ್' ಕಾರೋತ್ತರ 'ಇ'ಕಾರಕ್ಕೆ 'ಉ'ಕಾರ ಬಂದು ಭವ+ತ್+ಉ=ಭವತುಎಂದು ರೂಪವಾಗಿದೆ.

**(ತಾತಙ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ– 412.ತುಹ್ಯೋಸ್ತಾತಙ್ಙಾಶಿಷ್ಯನ್ಯತರಸ್ಯಾಮ್ (7.1.35)**

ವೃತ್ತಿಃ–ಆಶಿಷಿ ತುಹ್ಯೋಃ ತಾತಙ್(ತಾತ್) ವಾ। ಪರತ್ವಾತ್ ಸರ್ವಾದೇಶಃ। ಭವತಾತ್।

ಪ. ಛೇ. – ತುಹ್ಯೋಃ, ತಾತಙ್(ತಾತ್), ಆಶಿಷಿ, ಅನ್ಯತರಸ್ಯಾಮ್।

ಅರ್ಥ– ಕೇವಲ ಆಶೀರ್ವಾದಾರ್ಥದಲ್ಲಿ ಬರುವ 'ತು' ಮತ್ತು 'ಹಿ' ಇವುಗಳ ಸ್ಥಾನದಲ್ಲಿ 'ತಾತಙ್(ತಾತ್)' ಆದೇಶವು ವಿಕಲ್ಪವಾಗಿ ಬರುತ್ತದೆ. 'ತಾತಙ್(ತಾತ್)' ಎಂಬುದು 'ಙಿತ್' ಆಗಿರೋಣದ್ದರಿಂದ ಸಂಪೂರ್ಣ ಸ್ಥಾನಿಯನ್ನು ಕೊಂದು ಹಾಕಿ ಆದೇಶವಾಗಿ ಬರುತ್ತದೆ. ಪರತ್ವಾತ್ – "ಙಿಚ್ಚ"(1.1.53) ಎಂಬ ಸೂತ್ರದಿಂದ 'ತಾತಙ್' ಎಂಬುದು ಅಂತಾದೇಶವಾಗಿ ಬರಬೇಕಾಗಿತ್ತು. ಆದರೆ ಈ ಆದೇಶದಲ್ಲಿ ಅನೇಕವರ್ಣಗಳು ಇರುವುದರಿಂದ "ಅನೇಕಾಲ್ ಶಿತ್ಸರ್ವಸ್ಯ"(1.1.55) ಎಂಬ ಸೂತ್ರದಿಂದ ಸರ್ವಾದೇಶವಾಗಿ ಬರುತ್ತದೆ. ಪ್ರಕೃತ ಸೂತ್ರವು "ಙಿಚ್ಚ" ಎಂಬ ಸೂತ್ರಕ್ಕೆ ಪರವಾಗಿರೋಣದ್ದರಿಂದ "ವಿಪ್ರತಿಷೇಧೇ ಪರಂ ಕಾರ್ಯಂ" ಎಂಬ ಪರಿಭಾಷೆಯಿಂದ ಅದನ್ನು ಬಾಧಿಸುತ್ತದೆ.

ಭವತಾತ್ – (ಉದಾ–1ರ ವೈಕಲ್ಪಿಕ ರೂಪ) ಈ ರೀತಿಯಾಗಿ ಭವ+ತು ಎಂದಿದ್ದಾಗ, 'ತು' ಎಂಬುದಕ್ಕೆ 'ತಾತ್' ಎಂಬುದು ಸರ್ವಾದೇಶವಾಗಿ ಬಂದು ಭವ+ತಾತ್=ಭವತಾತ್ ಎಂದು ಆಶೀರ್ವಾದಾರ್ಥದಲ್ಲಿ ವೈಕಲ್ಪಿಕ ರೂಪ ಸಿದ್ಧಿಸುತ್ತದೆ. ಈ ಆದೇಶ ಬಾರದಿದ್ದ ಪಕ್ಷದಲ್ಲಿ, ಆಶೀರ್ವಾದಾರ್ಥದಲ್ಲಿಯೂ ಕೂಡ ಭವತು ಎಂದೇ ರೂಪವು ಇರುತ್ತದೆ. ಆಶೀರ್ವಾದಾರ್ಥದಲ್ಲಿ ಭೂಯಾತ್, ಭೂಯಾಸ್ತಾಮ್, ಭೂಯಾಸುಃ ಎಂದು ರೂಪಗಳಾಗುತ್ತವೆ. ವಿಧಿಲಿಙ್ ನಲ್ಲಿ ಭವೇತ್, ಭವೇತಾಮ್, ಭವೇಯುಃ ಎಂದು ರೂಪಗಳಾಗುತ್ತವೆ.

**(ಲೋಟ್ 'ಲ್' ಕಾರಕ್ಕೆ ಲಙ್ ಧರ್ಮವನ್ನು ವಿಧಿಸುವ ಅತಿದೇಶ ಸೂತ್ರ)**

**ಸೂತ್ರ– 413.ಲೋಟೋಲಙ್ವತ್ (3.4.85)**

ವೃತ್ತಿಃ–ಲೋಟಃ ತಾಮಾದಯಃ(ಲೋಟಃ ಲಜೀವ ಕಾರ್ಯಂ ಸ್ಯಾತ್ ತೇನ ತಾಮಾದಯಃ) ಸಲೋಪಶ್ಚ।

ಪ. ಛೇ. – ಲೋಟಃ, ಲಙ್ವತ್।

ಅರ್ಥ– 'ಲೋಟ್' 'ಲ್' ಕಾರವು 'ಲಙ್' 'ಲ್' ಕಾರಕ್ಕೆ ಸಮಾನವಾಗಿರುವುದು. ಅಂದರೆ 'ಲಙ್' 'ಲ್' ಕಾರದಲ್ಲಿ ಆಗುವ ಕಾರ್ಯಗಳೇ (ರೂಪಗಳೇ) 'ಲೋಟ್' 'ಲ್' ಕಾರದಲ್ಲಿಯೂ ಆಗುತ್ತವೆ. (ಮುಂದಿನ ಸೂತ್ರಗಳಿಂದ ಹೇಳಲ್ಪಡುವ) 'ತಾಮ್' ಮೊದಲಾದ ಆದೇಶಗಳ ಜೊತೆಗೆ 'ಸ್' ಕಾರ ಲೋಪವೂ ಬರುವುದು. 'ಲೋಟ್' 'ಲ್' ಕಾರವು 'ಟಿತ್' ಆಗಿದೆ. 'ಙಿತ್' ಅಲ್ಲ. ಆದರೆ 'ಲಙ್' ಇದು 'ಙಿತ್' ಆಗಿದೆ. 'ಙಿತ್' ಆದ 'ಲಙ್' ನ ಕಾರ್ಯವು 'ಟಿತ್' ಆದ 'ಲೋಟ್' 'ಲ್' ಕಾರಕ್ಕೆ ಬರಬೇಕಾಗಿದೆ. ಅದುದರಿಂದಲೇ 'ತಾಮ್' ಮೊದಲಾದ ಪ್ರತ್ಯಯಗಳು ಈ 'ಲೋಟ್' 'ಲ್' ಕಾರಕ್ಕೆ 'ಙಿತ್' ಆಗಿಲ್ಲದಿದ್ದರೂ ಪ್ರಕೃತ ಸೂತ್ರದಿಂದ 'ಙಿತ್' ಆಗಿ ಭಾವಿಸಲ್ಪಟ್ಟು ಬರುತ್ತವೆ. ಮುಂದಿನ ಸೂತ್ರದಲ್ಲಿ 'ತಾಮ್' ಆದಿಗಳು ವಿಧಿಸಲ್ಪಟ್ಟಿವೆ. ಇದು 'ಲಙ್' ಗೆ ಮಾತ್ರವಲ್ಲ,

'ಲೋಟ್' ಗೂ ಬರುತ್ತದೆ. "ನಿತ್ಯಂ ಙಿತಃ" ಎಂಬ ಸೂತ್ರದಿಂದ ಬರುವ 'ಸ್' ಲೋಪವು 'ಙಿತ್' ಆಗಿ ಇಲ್ಲದಿರುವ 'ಲೋಟ್' ಗೂ ಬರುತ್ತದೆ. ಈ ರೀತಿಯಾಗಿ ಬೇರೆಡೆಯಲ್ಲಿರುವ ಧರ್ಮವನ್ನು ಇಲ್ಲಿ ಅನ್ವಯಿಸುವಂತೆ ಮಾಡುವದಕ್ಕೆ 'ಅತಿದೇಶ' ವೆಂದು ಹೆಸರು. ಆದ್ದರಿಂದ ಇದನ್ನು 'ಅತಿದೇಶಸೂತ್ರವೆಂದು' ಹೇಳುತ್ತಾರೆ.

**(ತಾಮ್ ಮೊದಲಾದ ಆದೇಶಗಳನ್ನು ವಿಧಿಸುವ ಸೂತ್ರ)**

**ಸೂತ್ರ- 414.ತಸ್ಥಸ್ಥಮಿಪಾಂ ತಾಂತಂತಾಮಃ (3.4.101)**

ವೃತ್ತಿಃ-ಙಿತಶ್ಚತುರ್ಣಾಂ ತಾಮಾದಯಃ ಕ್ರಮಾತ್ ಸ್ಯುಃ। ಭವತಾಮ್। ಭವನ್ತು।

ಪ. ಛೇ. - ತಸ್-ಥಸ್-ಥ-ಮಿಪಾಂ, ತಾಮ್-ತಮ್- ತ-ಅಮಃ।

ಅ. ವ್ಯ. -. "ನಿತ್ಯಂ ಙಿತಃ" ಎಂಬ ಸೂತ್ರದಿಂದ 'ಙಿತಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- 'ಙಿತ್' 'ಲ್'ಕಾರದ ಸ್ಥಾನದಲ್ಲಿ ಬರುವ ತಸ್-ಥಸ್-ಥ-ಮಿಪ್ ಗಳ ಸ್ಥಾನದಲ್ಲಿ ಕ್ರಮವಾಗಿ ತಾಮ್-ತಮ್- ತ-ಅಮ್ ಪ್ರತ್ಯಯಗಳು ಆದೇಶವಾಗಿ ಬರುತ್ತವೆ.

ಏ.ವ.ದ್ವಿ.ವ.ಬ.ವ.

ಪ್ರ.ಪು--ತಸ್ ಗೆ ತಾಮ್-

ಮ.ಪು --ಥಸ್ ಗೆ ತಮ್ ಥ ಗೆ ತ

ಉ.ಪು -ಮಿಪ್(ಮಿ) ಗೆ ಅಮ್ - ಆದೇಶಗಳಾಗಿ ಬರುತ್ತವೆ.

ಸೂಚನೆ:- ಒಂಭತ್ತು ಪ್ರತ್ಯಯಗಳಲ್ಲಿ ನಾಲ್ಕು ಪ್ರತ್ಯಯಗಳಿಗೆ ಮಾತ್ರ ಇಲ್ಲಿ ಆದೇಶಗಳನ್ನು ವಿಧಿಸಿದ್ದಾನೆ.

ಉದಾ-2. ಭವತಾಮ್ - ಪ್ರಥಮಪುರುಷ ದ್ವಿವಚನದಲ್ಲಿ 'ಭೂ' ಧಾತುವಿನಮೇಲೆ 'ಲೋಟ್' 'ಲ್' ಕಾರದಲ್ಲಿ ಭೂ+ಲ್ ಎಂದಿದ್ದಾಗ, 'ಲ್'ಗೆ 'ತಸ್' ಆದೇಶ ಬಂದು ಭೂ+ತಸ್ ಎಂದಾಗುತ್ತದೆ. ಇದಕ್ಕೆ ಸಾರ್ವಧಾತುಕ ಸಂಜ್ಞೆ ಬಂದು "ಕರ್ತರಿ ಶಪ್" ಎಂಬ ಸೂತ್ರದಿಂದ 'ಶಪ್(ಅ)' ವಿಕರಣ ಬಂದು ಭೂ+ಅ+ತಸ್ ಎಂದಿದ್ದಾಗ, ಗುಣ, ಅವ್, ಆದೇಶಗಳು ಬಂದು ಭವ+ತಸ್ ಎಂದಿದ್ದಾಗ "ಲೋಟೋ ಲಙ್‌ವತ್" ಎಂಬ ಸೂತ್ರದಿಂದ 'ಟಿತ್' ಆದ ಈ 'ಲ್' ಕಾರಕ್ಕೆ ಅತಿದೇಶದಿಂದ ಙಿದ್ವದ್ಭಾವ ಬಂದು 'ಙಿತ್' ಆದ 'ಲಙ್' 'ಲ್' ಕಾರಕ್ಕೆ ಬರುವ ಆದೇಶಗಳಲ್ಲಿ ಮೊದಲನೆಯದಾದ, 'ತಾಮ್' ಆದೇಶವು ಪ್ರಕೃತ ಸೂತ್ರದಿಂದ ಬಂದು, ಭವ+ತಾಮ್=ಭವತಾಮ್ ಎಂದು ರೂಪವಾಗುತ್ತದೆ.

ಉದಾ-3. ಭವನ್ತು - ಪ್ರಥಮಪುರುಷ ಬಹುಚನದಲ್ಲಿ 'ಭೂ' ಧಾತುವಿನಮೇಲೆ 'ಲೋಟ್' 'ಲ್' ಕಾರದಲ್ಲಿ ಭೂ+ಲ್ ಎಂದಿದ್ದಾಗ, 'ಲ್'ಗೆ ಮೂಲ ಆಖ್ಯಾತ ಪ್ರತ್ಯಯವಾದ 'ಝಿ' ಬಂದು ಭೂ+ಝಿ ಎಂದಿದ್ದಾಗ, "ಝೋऽನ್ತಃ" ಎಂಬ ಸೂತ್ರದಿಂದ 'ಝ್'ಗೆ 'ಅನ್ತ್' ಆದೇಶ ಬಂದು ಭೂ+ಅನ್ತ್+ಇ ಎಂದಿದ್ದಾಗ ಹಿಂದಿನಂತೆಯೇ ಗುಣ ಮತ್ತು

ಅವಾದೇಶಗಳು ಬಂದು ಭವ+ಅನ್ತಿ ಎಂದಿದ್ದಾಗ, "ಅತೋಗುಣೇ" ಎಂಬುದರಿಂದ ಪರರೂಪ ಬಂದು ಭವನ್ತಿ ಎಂದಿದ್ದಾಗ, "ಏರುಃ" ಎಂಬ ಸೂತ್ರದಿಂದ 'ಇ' ಕಾರಕ್ಕೆ 'ಉ' ಕಾರ ಬಂದು ಭವನ್ತು ಎಂದು ರೂಪವಾಗುತ್ತದೆ.

**(ಸಿ ಗೆ ಹಿ ಪ್ರತ್ಯಯವನ್ನು ಆದೇಶವಾಗಿ ವಿಧಿಸುವ ಸೂತ್ರ)**

**ಸೂತ್ರ– 415.ಸೇರ್ಹ್ಯಪಿಚ್ಚ (3.4.87)**

ವೃತ್ತಿಃ–ಲೋಟಃ ಸೇಃ ಹಿಃ; ಸ ಅಪಿತ್ ಚ।

ಪ. ಛೇ. – ಸೇಃ, ಹಿ, ಅಪಿತ್, ಚ ।

ಅ. ವ್ಯ. – "ಲೋಟೋ ಲಙ್ವತ್" ಎಂಬ ಸೂತ್ರದಿಂದ 'ಲೋಟಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– 'ಲೋಟ್' 'ಲ್' ಕಾರದ ಸ್ಥಾನದಲ್ಲಿ ಆದೇಶವಾಗಿ ಬಂದಿರುವ ಮೂಲ ಆಖ್ಯಾತ ಪ್ರತ್ಯಯವಾದ 'ಸಿ' ಪ್ರತ್ಯಯದ ಸ್ಥಾನದಲ್ಲಿ 'ಹಿ' ಎಂಬ ಆದೇಶವು ಬರುತ್ತದೆ. ಇಲ್ಲಿ 'ಹಿ' ಎಂಬುದು 'ಪಿತ್' ('ಪ್' ಕಾರವನ್ನು 'ಇತ್') ಆಗಿಯುಳ್ಳದ್ದು ಅಲ್ಲ.

ವಿವರಣೆ: ಇಲ್ಲಿ 'ಸಿಪ್(ಸಿ)' ಎಂಬುದು 'ಪಿತ್' ಆಗಿದೆ. ಅದರ ಸ್ಥಾನದಲ್ಲಿ ಆದೇಶವಾಗಿ ಬಂದಿರುವ 'ಹಿ' ಎಂಬ ಪ್ರತ್ಯಯವು ಸ್ಥಾನಿವದ್ಭಾವದಿಂದ 'ಪಿತ್' ಆಗಬೇಕಾಗಿತ್ತು, ಆದರೆ ಪ್ರಕೃತ ಸೂತ್ರದಿಂದ ಅದು ನಿಷೇಧಿಸಲ್ಪಟ್ಟಿದೆ. ಆದ್ದರಿಂದ ಅದು 'ಅಪಿತ್' ಆಗಿದೆ. ಈ ರೀತಿ ನಿಷೇಧಿಸಲ್ಪಡೋಣದರಿಂದ, "ಸಾರ್ವಧಾತುಕಮಪಿತ್" ('ಪ್' ಕಾರವನ್ನು ಇತ್ ಆಗಿ ಇಲ್ಲದಿರುವ ಸಾರ್ವಧಾತುಕವು 'ಙಿತ್' ನಂತೆ ಆಗುವುದು) ಎಂಬ ಸೂತ್ರದಿಂದ, 'ಹಿ' ಪ್ರತ್ಯಯಕ್ಕೆ 'ಙಿದ್ವದ್ಭಾವವು' ಬರುತ್ತದೆ. ಆದುದರಿಂದ 'ಙಿತ್ವ' ಕ್ಕೆ ಸಂಬಂಧಿಸಿದ ಗುಣ–ನಿಷೇಧ ಮೊದಲಾದ ಕಾರ್ಯಗಳು ಬರೋಣದ್ದರಿಂದ, 'ಸ್ತುಹಿ' ಇತ್ಯಾದಿ। ಸ್ಥಳಗಳಲ್ಲಿ "ಸಾರ್ವಧಾತುಕಾರ್ಧ–ಧಾತುಕಯೋಃ" ಎಂಬ ಸೂತ್ರದಿಂದ ಬರಬೇಕಾದ ಗುಣವು ಬರುವುದಿಲ್ಲ. ಇದೇ ಅಪಿತ್ವದ ಪ್ರಯೋಜನ. (ಗುಣನಿಷೇಧಕ್ಕೆ "ಕ್ಙಿತಿ ಚ" ಎಂಬ ಸೂತ್ರವನ್ನು ನೋಡಿರಿ).

ಇಲ್ಲಿ 'ಸಿ' ಎಂಬುದಕ್ಕೆ 'ಹಿ' ಆದೇಶವನ್ನು ವಿಧಿಸಿದ ನಂತರ ಭವ+ಹಿ ಎಂದಿದ್ದಾಗ–

**(ಹಿ ಗೆ ಲುಕ್ ವಿಧಿಸುವ ಸೂತ್ರ)**

**ಸೂತ್ರ– 416.ಅತೋ ಹೇಃ (6.4.105)**

ವೃತ್ತಿಃ–ಅತಃ ಪರಸ್ಯ ಹೇಃ ಲುಕ್ । ಭವ। ಭವತಾತ್। ಭವತಮ್। ಭವತ।

ಅ. ವ್ಯ.– "ಚಿಣೋ ಲುಕ್" ಎಂಬ ಸೂತ್ರದಿಂದ, 'ಲುಕ್' ಎಂಬ ಪದವು ಅನುವೃತ್ತವಾಗುತ್ತದೆ. 'ಅಙ್ಗಸ್ಯ' ಎಂಬ ಅಧಿಕಾರ ಸೂತ್ರದ ಪದವನ್ನು 'ಅಙ್ಗಾತ್' ಎಂದು ಪಞ್ಚಮೀ ವಿಭಕ್ತಿಯಾಗಿ ವಿಪರಿಣಾಮಗೊಳಿಸಲಾಗಿದೆ.

ಅರ್ಥ– ಹ್ರಸ್ವ 'ಅ' ಕಾರಕ್ಕಿಂತ ಪರದಲ್ಲಿರುವ 'ಹಿ' ಗೆ ಲೋಪವು ಬರುತ್ತದೆ. ಹ್ರಸ್ವ 'ಅ'ಕಾರ ಎಂದು ಯಾಕೆ ಹೇಳಿದೆ ಎಂದರೆ– ಏಹಿ ಮತ್ತು ಸ್ತುಹಿ ಮೊದಲಾದ

ಸ್ಥಳಗಳಲ್ಲಿ 'ಹಿ' ವರ್ಣಕ್ಕೆ ಲೋಪ ಪ್ರಸಕ್ತಿ ಇರುವುದಿಲ್ಲ.

ಉದಾ 4.–ಭವ/ಭವತಾತ್ – ಮಧ್ಯಮಪುರುಷ ಏಕವಚನದಲ್ಲಿ 'ಭೂ' ಧಾತುವಿನ ನಂತರ 'ಲೋಟ್' 'ಲ್' ಕಾರದ ಸ್ಥಾನದಲ್ಲಿ ಮೂ.ಆ.ಪ್ರ. (ಮೂಲ ಆಖ್ಯಾತ ಪ್ರತ್ಯಯ) ವಾದ 'ಸಿಪ್(ಸಿ)' ಆದೇಶವಾಗಿ ಬಂದು, ಸಾರ್ವಧಾತುಕ ಸಂಜ್ಞೆಯನ್ನು ಪಡೆದು 'ಶಪ್(ಅ)' ವಿಕರಣ ಬಂದಮೇಲೆ, ಗುಣ ಮತ್ತು 'ಅವ್' ಆದೇಶಗಳಿಂದ ಭವ+ಸಿ=ಭವಸಿ ಎಂದಾಗುತ್ತದೆ. "ಸೇರ್ಹ್ಯಪಿಚ್ಚ (3.4.87)" ಎಂಬ ಸೂತ್ರದಿಂದ 'ಸಿ' ಯ ಸ್ಥಾನದಲ್ಲಿ 'ಹಿ' ಬಂದು ಭವಹಿ ಎಂದಾಗಿದೆ. ಪ್ರಕೃತ ಸೂತ್ರದಿಂದ 'ಹಿ' ಗೆ ಲೋಪ ಬರಬೇಕಾಗಿತ್ತು. ಅದನ್ನು ಬಾಧಿಸಿ "ತುಹ್ಯೋಸ್ತಾತಙ್ಙಾಶಿಷ್ಯನ್ಯತರಸ್ಯಾಮ್ (7.1.35)" ಎಂಬ ಸೂತ್ರದಿಂದ ವೈಕಲ್ಪಿಕವಾಗಿ 'ತಾತಙ್(ತಾತ್)' ಆದೇಶವು ಬಂದು 'ಭವತಾತ್' ಎಂದು ರೂಪವಾಗಿದೆ. 'ತಾತಙ್(ತಾತ್)' ಆದೇಶವು ಬಾರದ ಪಕ್ಷದಲ್ಲಿ, ಪ್ರಕೃತಸೂತ್ರದಿಂದ 'ಹಿ' ಗೆ ಲೋಪ ಬಂದು 'ಭವ' ಎಂದು ರೂಪವಾಗುತ್ತದೆ. ಹೀಗಾಗಿ 'ಭವ' ಮತ್ತು 'ಭವತಾತ್' ಎಂದು ಎರಡು ರೂಪಗಳು ಸಿದ್ಧವಾಗುತ್ತವೆ.

ಉದಾ– 5. ಭವತಮ್ – ಮಧ್ಯಮ ಪುರುಷ ದ್ವಿವಚನದಲ್ಲಿ 'ಭೂ' ಧಾತುವಿನ ನಂತರ 'ಲೋಟ್' 'ಲ್' ಕಾರದ ಸ್ಥಾನದಲ್ಲಿ ಮೂ.ಆ.ಪ್ರ. ವಾದ 'ಥಸ್' ಪ್ರತ್ಯಯ ಬಂದು, ಭೂ+ಥಸ್ ಎಂದಿದ್ದಾಗ, ಇದಕ್ಕೆ ಸಾರ್ವಧಾತುಕ ಸಂಜ್ಞೆ ಬಂದಮೇಲೆ ಹಿಂದಿನಂತೆ 'ಶಪ್' ವಿಕರಣ, ಗುಣ ಮತ್ತು ಅವಾದೇಶಗಳು ಬಂದಮೇಲೆ ಭವ+ಥಸ್ ಎಂದಿರುತ್ತದೆ. "ಲೋಟೋಲಙ್ವತ್ (3.4.85)" ಎಂಬ ಸೂತ್ರದಿಂದ, 'ಲೋಟ್' 'ಲ್' ಕಾರಕ್ಕೆ ಆದೇಶವಾಗಿ ಬಂದಿರುವ 'ಥಸ್' ಗೆ ಅತಿದೇಶದಿಂದ ಙಿದ್ವದ್ಭಾವ ಬಂದದ್ದರಿಂದ, "ತಸ್ಥಸ್ಥಮಿಪಾಂ ತಾಂತಂತಾಮಃ (3.4.101)" ಎಂಬ ಸೂತ್ರದಿಂದ 'ಥಸ್'ನ ಸ್ಥಾನದಲ್ಲಿ 'ತಮ್' ಆದೇಶವಾಗಿ ಬಂದು ಭವ+ತಮ್=ಭವತಮ್ ಎಂದು ರೂಪವಾಗುತ್ತದೆ.

ಉದಾ– 6. ಭವತ – ಮಧ್ಯಮ ಪುರುಷ ಬಹುವಚನದಲ್ಲಿ 'ಭೂ' ಧಾತುವಿನ ನಂತರ 'ಲೋಟ್' 'ಲ್' ಕಾರದ ಸ್ಥಾನದಲ್ಲಿ ಮೂ.ಆ.ಪ್ರ.ವಾದ 'ಥ' ಪ್ರತ್ಯಯ ಬಂದು, ಭೂ+ಥ ಎಂದಿದ್ದಾಗ, ಇದಕ್ಕೆ ಸಾರ್ವಧಾತುಕ ಸಂಜ್ಞೆ ಬಂದಮೇಲೆ, ಹಿಂದಿನಂತೆ 'ಶಪ್' ವಿಕರಣ, ಗುಣ ಮತ್ತು ಅವಾದೇಶಗಳು ಬಂದಮೇಲೆ ಭವ+ಥ ಎಂದಿರುತ್ತದೆ. "ಲೋಟೋಲಙ್ವತ್ (3.4.85)" ಎಂಬ ಸೂತ್ರದಿಂದ, 'ಲೋಟ್' 'ಲ್' ಕಾರಕ್ಕೆ ಆದೇಶವಾಗಿ ಬಂದಿರುವ 'ಥ'ಗೆ ಅತಿದೇಶದಿಂದ ಙಿದ್ವದ್ಭಾವ ಬಂದದ್ದರಿಂದ, "ತಸ್ಥಸ್ಥಮಿಪಾಂ ತಾಂತಂತಾಮಃ (3.4.101)" ಎಂಬ ಸೂತ್ರದಿಂದ 'ಥ' ಕಾರದ ಸ್ಥಾನದಲ್ಲಿ 'ತ' ಆದೇಶವಾಗಿ ಬಂದು ಭವ+ತ=ಭವತ ಎಂದು ರೂಪವಾಗುತ್ತದೆ.

### ('ಮಿ' ಗೆ 'ನಿ' ಆದೇಶವನ್ನು ವಿಧಿಸುವ ಸೂತ್ರ)

**ಸೂತ್ರ– 417.ಮೇರ್ನಿಃ (3.4.89)**

ವೃತ್ತಿಃ–ಲೋಟಃ ಮೇಃ ನಿಃ ಸ್ಯಾತ್।

ಪ. ಛೇ. – ಮೇಃ, ನಿಃ।

ಅ. ವೃ. –"ಲೋಟೋಲಙ್ವತ್ (3.4.85)" ಎಂಬ ಸೂತ್ರದಿಂದ, 'ಲೋಟಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– 'ಲೋಟ್' 'ಲ್' ಕಾರದ ಆದೇಶವಾದ 'ಮಿ(ಮಿಪ್)' ನ ಸ್ಥಾನದಲ್ಲಿ 'ನಿ' ಎಂಬ ಅಭಿನವ ಆಖ್ಯಾತ ಪ್ರತ್ಯಯವು ಆದೇಶವಾಗಿ ಬರುತ್ತದೆ.

[ಸೂಚನೆ; – ಮೇಲಿನ ಎಲ್ಲ ಉದಾಹರಣೆಗಳಲ್ಲಿ ಮೊದಲು 'ಲ್' ಕಾರವಿರುತ್ತದೆ. ಅದಕ್ಕೆ ಆದೇಶವಾಗಿ ಮೂಲ ಆಖ್ಯಾತ ಪರತ್ಯಯಗಳಾದ 'ತಿಙ್' ಪ್ರತ್ಯಯಗಳು ಬರುತ್ತವೆ. ಅವುಗಳಲ್ಲಿ ಕೆಲವಕ್ಕೆ ಆದೇಶವಾಗಿ ಅಭಿನವ ಆಖ್ಯಾತ ಪ್ರತ್ಯಯಗಳು ಬರುತ್ತವೆ. ಇದನ್ನು ಕೆಲವೆಡೆಯಲ್ಲಿ ಹೇಳಿರುತ್ತೇವೆ; ಇನ್ನು ಕೆಲವೆಡೆಯಲ್ಲಿ ಹೇಳಿರುವುದಿಲ್ಲ. ಆದ್ದರಿಂದ ಹೇಳಲಾರದ ಕಡೆಯಲ್ಲಿ ಹೇಳಿದಂತೆ ಭಾವಿಸಬೇಕು. ಇದು ಅತಿ ಸ್ಪಷ್ಟವಾಗಿರೋಣದ್ದರಿಂದ ಕೆಲವೆಡೆಯಲ್ಲಿ ಹೇಳಿರುವುದಿಲ್ಲ].

**(ಲೋಟ್ ನ ಉತ್ತಮಪುರುಷಕ್ಕೆ ಆಟ್ ಆಗಮವನ್ನು ವಿಧಿಸುವ ಸೂತ್ರ)**

**ಸೂತ್ರ– 418.ಆಡುತ್ತಮಸ್ಯ ಪಿಚ್ಚ (3.4.92)**

ವೃತ್ತಿಃ–ಲೋಟ್ ಉತ್ತಮಸ್ಯ ಆಟ್ ಸ್ಯಾತ್; ಪಿತ್ ಚ। ಹಿನ್ಯೋಃ ಉತ್ವಂ ನ ಇತ್ವ(ಇಕಾರ)– ಉಚ್ಚಾರಣ–ಸಾಮರ್ಥ್ಯಾತ್।

ಪ. ಛೇ. – ಆಟ್, ಉತ್ತಮಸ್ಯ, ಪಿತ್, ಚ।

ಅ. ವೃ. – "ಲೋಟೋ ಲಙ್ವತ್ (3.4.85)" ಎಂಬ ಸೂತ್ರದಿಂದ, 'ಲೋಟಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– 'ಲೋಟ್' 'ಲ್' ಕಾರದ ಉತ್ತಮಪುರುಷಕ್ಕೆ 'ಆಟ್' ಆಗಮವು ಬರುತ್ತದೆ. ಈ 'ಆಟ್' ಸಹಿತವಾದ ಉತ್ತಮಪುರುಷವು 'ಪಿತ್' ಗೆ ಸಮಾನವಾಗಿರುತ್ತದೆ.

ಉತ್ತಮಪುರುಷ ಏಕವಚನದಲ್ಲಿ 'ಮಿಪ್(ಮಿ)' ನ ಸ್ಥಾನದಲ್ಲಿ 'ನಿ' ಆದೇಶವಾಗಿ ಬರುತ್ತದೆ ಎಂದು ಹೇಳಲಾಗಿದೆ. ಸ್ಥಾನಿವದ್ಭಾವದಿಂದ 'ನಿ' ಗೆ ಪಿತ್ವ ಬಂದೇ ಬರುತ್ತದೆ. ಆದರೆ 'ವಸ್' 'ಮಸ್' ಗಳಿಗೂ ಅತಿದೇಶದಿಂದ ಪಿತ್ವ ಬರಬೇಕಾಗಿದೆ. ಅದಕ್ಕಾಗೆಯೇ ಪ್ರಕೃತ ಸೂತ್ರವು ಪ್ರವೃತ್ತವಾಗಿದೆ. 'ಆಟ್' ಇದು 'ಟಿತ್' ಆಗಿರೋಣದರಿಂದ (ಪರದಲ್ಲಿರುವ) ಪ್ರತ್ಯಯದ ಆದ್ಯವಯವವಾಗಿ ಬರುತ್ತದೆ.

ವಿವರಣೆ: – ಭ್ವಾದಿ ಗಣದಲ್ಲಿ 'ಆಟ್'ಆಗಮವು ಬಾರದಿದ್ದರೂ "ಅತೋದೀರ್ಘೋ ಯಞಿ" ಎಂಬಸೂತ್ರದಿಂದ ದೀರ್ಘ ಬಂದು ಭವಾನಿ, ಭವಾವ, ಭವಾಮ ಎಂದು ರೂಪಗಳು ಆಗಿಯೇ ಆಗುತ್ತವೆ. ಆದರೆ ಅದಾದಿಗಣ ಮತ್ತು ಜುಹೋತ್ಯಾದಿಗಣ ಮೊದಲಾದವುಗಳಲ್ಲಿ ಈ ಸೂತ್ರದ ಪ್ರಯೋಜನವು ಇದ್ದೇ ಇರುತ್ತದೆ. ಆದುದರಿಂದಲೇ ಅದಾನಿ, ಅದಾವ, ಅದಾಮ ಮತ್ತು ಜುಹವಾನಿ ಮೊದಲಾದ ರೂಪಗಳು 'ಆಟ್' ಆಗಮದಿಂದ ಕೂಡಿ ಇಷ್ಟರೂಪಗಳ ಸಿದ್ಧಿಯಾಗಿರುತ್ತದೆ.

ಹಿನ್ಯೋಃ ಉತ್ವಂ ನ – ಇಕಾರೋಚ್ಚಾರಣ ಸಾಮರ್ಥ್ಯಾತ್ – 'ಮಿ' ಮತ್ತು 'ನಿ'

ಗಳಲ್ಲಿರುವ 'ಇ' ಕಾರಕ್ಕೆ "ಏರುಃ" ಎಂಬ ಸೂತ್ರದಿಂದ ಉತ್ವವು ಬರುವುದಿಲ್ಲ. ಯಾಕೆಂದರೆ, ಉ-ಕಾರವು ಆದೇಶವಾಗಿ ಬರಲೇಬೇಕಾಗಿದ್ದರೆ, ಆಗ 'ನಿ' ಯ ಸ್ಥಾನದಲ್ಲಿ 'ನು' ವಿನ ಉಚ್ಚಾರಣೆಯನ್ನೂ ಮತ್ತು 'ಹಿ' ಯ ಸ್ಥಾನದಲ್ಲಿ 'ಹು' ವಿನ ಉಚ್ಚಾರಣವನ್ನೂ ಮಾಡಬೇಕಾಗಿತ್ತು.

**(ಗತಿ ಮತ್ತು ಉಪಸರ್ಗಗಳನ್ನು ವಿಧಿಸುವ ಸೂತ್ರ)**

**ಸೂತ್ರ- 419.ತೇ ಪ್ರಾಗ್ಧಾತೋಃ (1.4.80)**

ವೃತ್ತಿಃ-ತೇ ಗತಿ-ಉಪಸರ್ಗ-ಸಂಜ್ಞಕಾಃ ಧಾತೋಃ ಪ್ರಾಗೇವ ಪ್ರಯೋಕ್ತವ್ಯಾಃ।

ಪ. ಛೇ. - ತೇ, ಪ್ರಾಕ್, ಧಾತೋಃ।

ಅರ್ಥ- ಗತಿ ಸಂಜ್ಞೆ ಮತ್ತು ಉಪಸರ್ಗ ಸಂಜ್ಞೆಗಳುಳ್ಳ ಶಬ್ದಗಳನ್ನು ಧಾತುವಿಗೆ ಅವ್ಯವಹಿತ ಪೂರ್ವದಲ್ಲಿಯೇ ಉಪಯೋಗಿಸಬೇಕು. "ಉಪಸರ್ಗಾಃ ಕ್ರಿಯಾಯೋಗೇ" ಮತ್ತು "ಗತಿಶ್ಚ" ಮೊದಲಾದ ಸೂತ್ರಗಳಿಂದ ಯಾವ ಶಬ್ದಗಳಿಗೆ 'ಗತಿ' ಸಂಜ್ಞೆ ಬರುವದೋ, ಅವುಗಳನ್ನು ಧಾತುವಿನ ಪೂರ್ವದಲ್ಲಿಯೇ ಪ್ರಯೋಗಿಸಬೇಕು.

ಉದಾ- 1. ಪ್ರ+ಹರತಿ=ಪ್ರಹರತಿ, 2. ಆ+ಹರತಿ=ಆಹರತಿ, 3. ಅನು+ಭವತಿ=ಅನುಭವತಿ.

ವೇದಗಳಲ್ಲಿ ಮಾತ್ರ ಈ ಶಬ್ದಗಳನ್ನು (ಉಪಸರ್ಗ ಮತ್ತು ಗತಿ) ಪರದಲ್ಲಿಯೂ, 'ವ್ಯವಹಿತವಾಗಿಯೂ ಪ್ರಯೋಗಿಸಲಾಗಿರುವುದು' ಸೂತ್ರಗಳಿಂದ ತಿಳಿದು ಬರುತ್ತದೆ. (ಇದಕ್ಕೆ ಉದಾಹರಣೆಯನ್ನು ಗ್ರಂಥಾಂತರಗಳಿಂದ ನೋಡುಕೊಳ್ಳಬೇಕು.)

**(ಣತ್ವವನ್ನು ವಿಧಿಸುವ ಸೂತ್ರ)**

**ಸೂತ್ರ- 420. ಆನಿ ಲೋಟ್ (8.4.16)**

ವೃತ್ತಿಃ-ಉಪಸರ್ಗಸ್ಥಾತ್ ನಿಮಿತ್ತಾತ್ ಪರಸ್ಯ ಲೋಟ್ ಆದೇಶಸ್ಯ ಆನಿ ಇತ್ಯಸ್ಯ ನಸ್ಯ ಣಃ ಸ್ಯಾತ್। ಪ್ರಭವಾಣಿ

ವಾ॥ 1. ದುರಃಷತ್ವ-ಣತ್ವಯೋಃ ಉಪಸರ್ಗತ್ವ ಪ್ರತಿಷೇಧೋ ವಾಚ್ಯಃ।

2.ವಾ॥ ಅನ್ತಃ ಶಬ್ದಸ್ಯ ಆಙ್-ಕಿ -ವಿಧಿ ಣತ್ವೇಷು ಉಪಸರ್ಗತ್ವಂ ವಾಚ್ಯಮ್॥

ಅ.ವೃ. "ಅಸಮಾಸೇಽಪಿ ನೋಪದೇಶಸ್ಯ" ಎಂಬ ಸೂತ್ರದಿಂದ, 'ಉಪಸರ್ಗಾತ್' ಎಂಬ ಪದವೂ, "ಅಟ್ಕುಪ್ವಾಙ್ ನುಮ್ ವ್ಯವಾಯೇಽಪಿ" ಎಂಬ ಪೂರ್ಣ ಸೂತ್ರವು ಹಾಗೆಯೇ "ರಷಾಭ್ಯಾಮ್ ನೋ ಣಃ ಸಾಮಾನಪದೇ" ಎಂಬ ಸೂತ್ರವೂ ಅನುವೃತ್ತವಾಗುತ್ತವೆ.

ಅರ್ಥ- ಉಪಸರ್ಗದಲ್ಲಿರುವ ನಿಮಿತ್ತಕ್ಕಿಂತ ಪರದಲ್ಲಿರುವ 'ಲೋಟ್' 'ಲ್' ಕಾರದ ಆದೇಶವಾಗಿರುವ 'ಆನಿ' ಎಂಬ ಶಬ್ದದಲ್ಲಿರುವ 'ನ್' ಕಾರಕ್ಕೆ 'ಣ್' ಕಾರವು ಆದೇಶವಾಗಿ ಬರುತ್ತದೆ. ಣತ್ವವನ್ನು ವಿಧಿಸುವ ಸೂತ್ರಗಳು ಅಷ್ಟಾಧ್ಯಾಯೀಯಲ್ಲಿ 8ನೇ ಅಧ್ಯಾಯದ 4ನೇ ಪಾದದಲ್ಲಿದೆ. ಅಂದರೆ ತ್ರಿಪಾದಿಯಲ್ಲಿದೆ ಎಂದು ಅರ್ಥ. "ರಷಾಭ್ಯಾಮ್ ನೋ

ಣಃ ಸಮಾನಪದೇ"(8.4.1) ಮತ್ತು "ಅಟ್ಕುಪ್ವಾಙ್ ನುಮ್ ವ್ಯವಾಯೇऽಪಿ" ಎಂಬ ಸೂತ್ರಗಳಿಂದ ಣತ್ವ ಪ್ರಕರಣವು ಆರಂಭವಾಗುತ್ತದೆ. 'ನ್' ಕಾರಕ್ಕೆ 'ಣ್' ಕಾರವು ಬರುವದಕ್ಕೆ ರೇಫ, ಷ್ ಕಾರಗಳು ನಿಮಿತ್ತವಾಗಿರುತ್ತವೆ. 'ಋ ವರ್ಣಾತ್ ನಸ್ಯ ಣತ್ವಂ ವಾಚ್ಯಮ್' ಎಂಬ ವಾರ್ತಿಕದಿಂದಲೂ 'ಋ' ವರ್ಣಕ್ಕೂ ಣತ್ವದ ನಿಮಿತ್ತ ಬರುತ್ತದೆ. ಹೀಗಾಗಿ ರೇಫ, ಷ ಕಾರ, ಋ ಕಾರಗಳು ಣತ್ವವಾಗುವದಕ್ಕೆ ನಿಮಿತ್ತಗಳಾಗಿರುತ್ತವೆ. ಈ ಣತ್ವ ವಿಧಾಯಕ ಸೂತ್ರದ ವೃತ್ತಿಯಲ್ಲಿ 'ಉಪಸರ್ಗಸ್ಥ ನಿಮಿತ್ತ' ಎಂಬ ಪದವು ಇದೆ. ಇದರ ಅರ್ಥವೇನೆಂದರೆ ನಿಮಿತ್ತವು (ರೇಫ,ಷ ಕಾರ ಮತ್ತು ಋ ಕಾರಗಳು) ಪೂರ್ವದಲ್ಲಿ ಇರಬೇಕು. "ಅಟ್ಕುಪ್ವಾಙ್ ನುಮ್ ವ್ಯವಾಯೇऽಪಿ" ಎಂಬ ಸೂತ್ರವು 'ನಿಮಿತ್ತ ವರ್ಣಗಳ ಅವ್ಯವಹಿತ ಪರವಾಗಿಯೇ 'ನ್' ಕಾರವು ಇರಬೇಕೆಂಬ ನಿರ್ಬಂಧವನ್ನು ದೂರ ಮಾಡಿದೆ'. ಅಂದರೆ 'ಅಟ್' ಪ್ರತ್ಯಾಹಾರಾಂತರ್ಗತ ವರ್ಣಗಳು, 'ಕ' ವರ್ಗ, 'ಪ' ವರ್ಗ, 'ಆಙ್' ಮತ್ತು ನುಮ್ ಪ್ರತ್ಯಯಗಳಲ್ಲಿರುವ ವರ್ಣಗಳಲ್ಲಿ ಎಲ್ಲ ವರ್ಣಗಳೂ ಅಥವಾ ಕೆಲವು ವರ್ಣಗಳು ವ್ಯವಹಿತವಾಗಿ ಇದ್ದರೂ ಣತ್ವ ಬರುತ್ತದೆ ಎಂದು ಹೇಳುತ್ತದೆ. ಈ ವರ್ಣಗಳನ್ನು ಬಿಟ್ಟು ಬೇರೆ ಯಾವದೇ ಒಂದು ವರ್ಣವು ಮಧ್ಯದಲ್ಲಿದ್ದರೂ, ಣತ್ವ ಬರುವುದಿಲ್ಲ. "ಆನಿ ಲೋಟ್" ಎಂಬ ಸೂತ್ರದ ಪ್ರಕಾರ 'ಲ್' ಕಾರದ ಆದೇಶವಾದ 'ಮಿಪ್' ನಲ್ಲಿರುವ 'ಮಿ' ಗೆ 'ನಿ' ಎಂಬ ಆದೇಶ ಬಂದಿದೆ. ಮತ್ತು 'ಆಟ್' ಆಗಮವೂ ಅದ್ಯವಯವವಾಗಿ ಬಂದಿದೆಯಾದ್ದರಿಂದ 'ಆನಿ' ಎಂದು ಆಗಿದೆ. ಇದರಲ್ಲಿ ಇರುವ 'ನ್' ಕಾರಕ್ಕೆ ಣತ್ವವು ಬಂದಿದೆ.

ಉದಾ– ಪ್ರ+ಭವಾನಿ=ಪ್ರಭವಾಣಿ.

ಉಪಸರ್ಗಪೂರ್ವಕ ಭೂ ಧಾತುವಿನ ನಂತರ 'ಲೋಟ್''ಲ್' ಕಾರದಲ್ಲಿ 'ಮಿಪ್' ಆದೇಶ ಬಂದು ಅದಕ್ಕೆ 'ಆನಿ' ಎಂಬ ಅಭಿನವ ಆಖ್ಯಾತಪ್ರತ್ಯಯವು ಆದೇಶವಾಗಿ ಬಂದು ಪ್ರಭವಾನಿ ಎಂದಿದ್ದಾಗ, ಪೂರ್ವದಲ್ಲಿರುವ ಉಪಸರ್ಗವಾದ 'ಪ್ರ' ದಲ್ಲಿ ರೇಫ ಇರುವುದರಿಂದ ಪರದಲ್ಲಿರುವ 'ನ್' ಕಾರಕ್ಕೆ ಣತ್ವ ಬಂದು ಪ್ರಭವಾಣಿ ಎಂದಾಗಿದೆ.

ವಾ॥ ದುರಃಷತ್ವ–ಣತ್ವಯೋಃ ಉಪಸರ್ಗತ್ವ ಪ್ರತಿಷೇಧೋ ವಾಚ್ಯಃ। –

ದುರ್ ಎಂಬ ಉಪಸರ್ಗವನ್ನು ಷತ್ವ ಮತ್ತು ಣತ್ವಗಳ ಕಾರ್ಯಗಳನ್ನು ಮಾಡುವಾಗ ಇಲ್ಲಿ ಮಾತ್ರ ಉಪಸರ್ಗತ್ವವನ್ನು ಕಳೆದುಕೊಳ್ಳುತ್ತದೆ (ನಿಷೇಧಿಸಲಾಗಿದೆ). "ಉಪಸರ್ಗಾಃ ಕ್ರಿಯಾಯೋಗೇ" ಎಂಬ ಸೂತ್ರದಿಂದ 'ದುರ್' ಎಂಬುದಕ್ಕೆ ಉಪಸರ್ಗ ಸಂಜ್ಞೆ ಬಂದರೂ, ಈ ವಾರ್ತಿಕದಿಂದ ಈ ಪ್ರಕೃತ ಸಂದರ್ಭದಲ್ಲಿ ಮಾತ್ರ 'ಸ್' ಕಾರಕ್ಕೆ ಷತ್ವವನ್ನು ಮಾಡುವದಾಗಲೀ, 'ನ್' ಕಾರಕ್ಕೆ ಣತ್ವವನ್ನು ಮಾಡುವದಾಗಲೀ ನಿಷೇಧಿಸಲಾಗಿದೆ.

ಉದಾ–1. ದುರ್+ಸ್ಥಿತಿಃ=ದುಃಸ್ಥಿತಿಃ ಎಂಬಲ್ಲಿ "ಉಪಸರ್ಗಾತ್ ಸುನೋತಿ–ಸುವತ್..." ಎಂಬ ಸೂತ್ರದಿಂದ ಷತ್ವ ಬರಬೇಕಾಗಿತ್ತು. ಅದು ಇಲ್ಲಿ ಬಾಧಿತವಾಗಿದೆ.

ಉದಾ–2 ದುರ್+ಭವಾನಿ=ದುರ್ಭವಾನಿ "ಆನಿ ಲೋಟ್" ಎಂಬ ಸೂತ್ರದಿಂದ ಉಪಸರ್ಗವಾಗಿ ಇದನ್ನು ಭಾವಿಸಬಾರದು ಎಂಬುದಕ್ಕಾಗಿ ಈ ವಾರ್ತಿಕವು ಹೊರಟಿದೆ,

ವಾ॥-2. ಅನ್ತಃ ಶಬ್ದಸ್ಯ ಆಙ್-ಕಿ –ವಿಧಿ ಣತ್ವೇಷು ಉಪಸರ್ಗತ್ವಂ ವಾಚ್ಯಮ್-

ಆಙ್ ಪತ್ಯಯವನ್ನು ವಿಧಿಸುವಾಗಲೂ 'ಕಿ' ಪ್ರತ್ಯಯವನ್ನು ವಿಧಿಸುವಾಗಲೂ ಣತ್ವವನ್ನು ವಿಧಿಸುವಾಗಲೂ 'ಅನ್ತರ್' ಶಬ್ದವನ್ನು ಉಪಸರ್ಗವಾಗಿ ಭಾವಿಸಬೇಕು. 'ಅನ್ತರ್' ಶಬ್ದವು ಪ್ರಾದಿಗಳಲ್ಲಿ ಇಲ್ಲ. ಇದಕ್ಕೆ ಉಪಸರ್ಗತ್ವವು ಬರಬೇಕಾಗಿದೆ. ಮೇಲೆ ಹೇಳಿದ ಮೂರು ವಿಧಿಗಳಲ್ಲೂ 'ಅನ್ತರ್' ಶಬ್ದಕ್ಕೆ ಉಪಸರ್ಗತ್ವವನ್ನು ಕಲ್ಪಿಸಿದರೆ ಮಾತ್ರ ಕೆಲವು ರೂಪಗಳು ಸಿದ್ಧಿಸುತ್ತವೆ.

ಉದಾ– ಅನ್ತರ್+ಭವಾನಿ=ಅನ್ತರ್ಭವಾಣಿ. ಉಪಸರ್ಗಗಳಿಗೆ ಮಾತ್ರ ಣತ್ವವು ಸಿದ್ಧಿಸುತ್ತದೆ ಎಂದು ಪ್ರಕೃತ "ಆನಿ ಲೋಟ್" ಎಂಬ ಸೂತ್ರವು ಹೇಳುತ್ತದೆ. ಆದ್ದರಿಂದ ಅನ್ತರ್ ಶಬ್ದಕ್ಕೆ ಉಪಸರ್ಗದ ಕಲ್ಪನೆಯನ್ನು ಈ ವಾರ್ತಿಕವು ಮಾಡಿದೆ.

**(ಸ್ ಕಾರ ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ– 421. ನಿತ್ಯಂ ಙಿತಃ (3.4.19)**

ವೃತ್ತಿಃ–ಸಕಾರಾನ್ತಸ್ಯ ಙಿತ್ ಉತ್ತಮಸ್ಯ ನಿತ್ಯಂ ಲೋಪಃ। (21) ಅಲೋಽನ್ತ್ಯಸ್ಯ ಇತಿ ಸಲೋಪಃ। ಭವಾವ। ಭವಾಮ।

ಅ. ವೃ.– "ಸ ಉತ್ತಮಸ್ಯ" ಎಂಬ ಸೂತ್ರವು ಅನುವೃತ್ತವಾಗುತ್ತದೆ. ಹಾಗೆಯೇ "ಇತಶ್ಚ ಲೋಪಃ ಪರಸ್ಮೈಪದೇಷು" ಎಂಬ ಸೂತ್ರದಿಂದ 'ಲೋಪಃ' ಎಂಬ ಪದವು ಅನುವೃತ್ತವಾಗುತ್ತದೆ. 'ಸಃ' ಎಂಬುದು ಷಷ್ಠ್ಯನ್ತ ಏಕವಚನ. ಇದು ಉತ್ತಮಸ್ಯ ಎಂಬುದಕ್ಕೆ ವಿಶೇಷಣವಾಗಿದೆ. ಅದುದರಿಂದ "ಯೇನವಿಧಿಸ್ತದನ್ತಸ್ಯ" ಎಂಬ ಸೂತ್ರದಿಂದ ತದನ್ತವಿಧಿಯನ್ನು ಮಾಡಿದಾಗ, 'ಸ್' ಕಾರಾನ್ತವಾಗುತ್ತದೆ.

ಅರ್ಥ– ಙಿತ್ ಆದ 'ಲ್'ಕಾರದ ಉತ್ತಮ ಪುರುಷದ ಅಂತ್ಯ 'ಸ್' ಕಾರಕ್ಕೆ ಲೋಪವು ಬರುತ್ತದೆ. 'ವಸ್, ಮತ್ತು 'ಮಸ್' ಇವುಗಳಿಗೆ ಪೂರ್ಣವಾಗಿ ಲೋಪ ಬರಬೇಕಾಗಿತ್ತು. ಆದರೆ "ಅಲೋಽನ್ತ್ಯಸ್ಯ" ಎಂಬ ಸೂತ್ರದ ಪ್ರಕಾರ ಅನ್ತ್ಯ ವರ್ಣವಾದ 'ಸ್' ಕಾರಕ್ಕೇನೇ ಲೋಪವು ಬರುತ್ತದೆ.

ಉದಾ– ಭವಾವ, ಭವಾಮ – ಭೂ ಧಾತುವಿನ ನಂತರ ಇರುವ 'ಲೋಟ್' 'ಲ್'ಕಾರದ ಉತ್ತಮ ಪುರುಷ ದ್ವಿವಚನಕ್ಕೆ ವಸ್ ಆದೇಶವು ಬರುತ್ತದೆ. "ಆಡುತ್ತಮಸ್ಯ ಪಿಚ್ಚ" ಎಂಬ ಸೂತ್ರದಿಂದ 'ಆಟ್(ಆ)' ಆಗಮವೂ ಬರುತ್ತದೆ. ಇದು 'ಟಿತ್' ಆಗಿ ಇರೋಣದರಿಂದ 'ವಸ್' ಪ್ರತ್ಯಯಕ್ಕೆ ಆದ್ಯವಯವಾಗಿ ಬರುತ್ತದೆ. ಆಗ ಭೂ+ಆವಸ್ ಎಂದಾಗುತ್ತದೆ. ಸಾರ್ವಧಾತುಕ ಸಂಜ್ಞೆ ಬಂದಮೇಲೆ 'ಶಪ್(ಅ)' ವಿಕರಣಪ್ರತ್ಯಯ ಬಂದು, ಗುಣ ಮತ್ತು ಅವಾದೇಶ ಗಳು ಬಂದಮೇಲೆ ಭವ+ಆವಸ್ ಎಂದಾಗುತ್ತದೆ. ಈ ಎರಡು ಶಬ್ದಗಳಿಗೆ 'ಸವರ್ಣದೀರ್ಘ ಸಂಧಿಯಾಗಿ ಭವಾವಸ್ ಎಂದಾಗುತ್ತದೆ. ನಂತರ 'ಸ್' ಕಾರಕ್ಕೆ ಪ್ರಕೃತ ಸೂತ್ರದಿಂದ ಲೋಪ ಬಂದು ಭವಾವ ಎಂದು ರೂಪವಾಗುತ್ತದೆ. ಇದೇರೀತಿಯಲ್ಲಿ ಉತ್ತಮ ಪುರುಷ ಬಹುವಚನದಲ್ಲಿ ಭವಾಮ ಎಂದು ರೂಪವಾಗುತ್ತದೆ.

**(ಲಙ್ 'ಲ್' ಕಾರವನ್ನು ವಿಧಿಸುವ ಸೂತ್ರ)**

**ಸೂತ್ರ– 422.ಅನದ್ಯತನೇ ಲಙ್ (3.2.111)**

ವೃತ್ತಿಃ–ಅನದ್ಯತನಭೂತಾರ್ಥವೃತ್ತೇಃ ಧಾತೋಃ ಲಙ್ ಸ್ಯಾತ್।

ಅ. ವೃ– "ಭೂತೇ", "ಧಾತೋಃ", "ಪ್ರತ್ಯಯಃ", "ಪರಶ್ಚ" ಇವು ಅಧಿಕಾರ ಸೂತ್ರಗಳಾಗಿವೆ.

ಅರ್ಥ– ಅನದ್ಯತನವಾದ ಭೂತ ಕಾಲದಲ್ಲಿ ಧಾತುವಿನ ಪರದಲ್ಲಿ 'ಲಙ್' 'ಲ್' ಕಾರವು ಬರುತ್ತದೆ. ಅನದ್ಯತನದ ಬಗ್ಗೆ ವಿಸ್ತಾರವಾಗಿ ಈ ಪ್ರಕರಣದ ಆರಂಭದಲ್ಲಿ ಕಾಲವಾಚಕಗಳ ಬಗ್ಗೆ ಹೇಳುವಾಗ ಹೇಳಲಾಗಿದೆ.

**(ಅಟ್ ಆಗಮವನ್ನು ವಿಧಿಸುವ ಸೂತ್ರ)**

**ಸೂತ್ರ– 423.ಲುಙ್-ಲಙ್-ಲೃಙ್ಕ್ಷ್ವಡುದಾತ್ತಃ (6.4.71)**

ವೃತ್ತಿಃ–ಏಷು ಅಂಗಸ್ಯ ಅಟ್ ಸ್ಯಾತ್।

ಪ. ಛೇ. – ಲುಙ್-ಲಙ್-ಲೃಙ್ಕ್ಷು, ಅಟ್, ಉದಾತ್ತಃ।

ಅ. ವೃ.– "ಅಙ್ಗಸ್ಯ" ಎಂಬುದು ಅಧಿಕಾರ ಸೂತ್ರ.

ಅರ್ಥಃ– ಲುಙ್,ಲಙ್,ಲೃಙ್ 'ಲ್' ಕಾರಗಳು ಪರದಲ್ಲಿದ್ದಾಗ, ಪೂರ್ವದಲ್ಲಿರುವ ಧಾತುವಿನ ಅಙ್ಗಕ್ಕೆ 'ಅಟ್' ಆಗಮವು ಬರುತ್ತದೆ. ಇದು 'ಟಿತ್' ಆಗಿರೋಣದರಿಂದ ಧಾತುವಿಗೆ ಆದ್ಯವಯವವಾಗಿ ಬರುತ್ತದೆ. ಯಾವುದು 'ಟಿತ್' ಆಗಿರುತ್ತದೋ ಅದು ಉದಾತ್ತ ಸ್ವರವುಳ್ಳದ್ದಾಗಿಯೂ ಇರುತ್ತದೆ.

**(ಙಿತ್ 'ಲ್' ಕಾರದ ಪರಸ್ಮೈಪದದ 'ಇ' ಕಾರಾನ್ತದ ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ– 424.ಇತಶ್ಚ (32.4.100)**

ವೃತ್ತಿಃ–ಙಿತೋ ಲಸ್ಯ ಪರಸ್ಮೈಪದಂ ಇಕಾರಾನ್ತಂ ೦ಯತ್ ತದನ್ತಸ್ಯ ಲೋಪಃ। ಅಭವತ್।ಅಭವತಾಮ್। ಅಭವನ್। ಅಭವಃ।ಅಭವತಮ್। ಅಭವತ। ಅಭವಮ್। ಅಭವಾವ। ಅಭವಾಮ।

ಪ. ಛೇ. – ಇತಃ, ಚ।

ಅ.ವೃ.– "ನಿತ್ಯಂ ಙಿತಃ" ಎಂಬ ಸೂತ್ರದಿಂದ 'ಙಿತಃ' ಎಂಬ ಪದವೂ, ಹಾಗೆಯೇ "ಇತಶ್ಚ ಲೋಪಃ ಪರಸ್ಮೈಪದೇಷು" ಎಂಬ ಸೂತ್ರದಿಂದ ಲೋಪಃ, ಪರಸ್ಮೈಪದೇಷು ಎಂಬ ಎರಡು ಪದಗಳು ಅನುವೃತ್ತವಾಗುತ್ತವೆ.

ಅರ್ಥ– ಙಿತ್' 'ಲ್' ಕಾರಕ್ಕೆ ಪರಸ್ಮೈಪದದಲ್ಲಿ ಹ್ರಸ್ವ 'ಇ' ಕಾರಾನ್ತ ಶಬ್ದ ಬಂದರೆ ಅದರ ಅನ್ತ್ಯ 'ಇ' ಕಾರಕ್ಕೆ ಲೋಪವು ಬರುತ್ತದೆ.

ಉದಾ– ಅಭವತ್– 'ಭೂ' ಧಾತುವಿನ ನಂತರ ಅನದ್ಯತನ ಭೂತಕಾಲಾರ್ಥದಲ್ಲಿ

"ಅನದ್ಯತನೇ ಲಙ್" ಎಂಬ ಸೂತ್ರದಿಂದ 'ಲಙ್' 'ಲ' ಕಾರ ಬಂದು ಲುಙ್–ಲಙ್–ಲೃಙ್ಕ್ವಡುದಾತ್ತಃ" ಎಂಬ ಸೂತ್ರದಿಂದ ಧಾತುವಿಗೆ ಆದ್ಯವಯವವಾಗಿ 'ಅಟ್(ಅ)' ಆಗಮವು ಬಂದು ಅದಕ್ಕೆ ಪ್ರಥಮಪುರುಷ ಏಕವಚನದಲ್ಲಿ 'ತಿಪ್(ತಿ)' ಆದೇಶ ಬಂದಾಗ, ಅಭೂ+ತಿ ಎಂದಿರುತ್ತದೆ. 'ತಿ' ಗೆ ಸಾರ್ವಧಾತುಕ ಸಂಜ್ಞೆ ಬಂದಮೇಲೆ 'ಶಪ್(ಅ)' ಬಂದು ಅಭೂ+ಅ+ತಿ ಎಂದಿದ್ದಾಗ, "ಸಾರ್ವಧಾತುಕಾರ್ಧ–ಧಾತುಕಯೋಃ" ಎಂಬ ಸೂತ್ರದಿಂದ 'ಇಗನ್ತ' ಅಙ್ಗ(ಊ)ಕ್ಕೆ ಗುಣ–ಅವಾದೇಶಗಳು ಬಂದು ಅಭವತಿ ಎಂದಿರುತ್ತದೆ. "ಇತಶ್ಚ" ಎಂಬ ಸೂತ್ರದಿಂದ 'ಇ' ಕಾರಕ್ಕೆ ಲೋಪ ಬಂದು 'ಅಭವತ್' ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಅಭವತಾಮ್– ಭೂ ಧಾತುವಿನ ನಂತರ "ಅನದ್ಯತನೇ ಲಙ್" ಎಂಬ ಸೂತ್ರದಿಂದ ಲಙ್ 'ಲ್'ಕಾರ ಬಂದು, ಧಾತುವಿನ ಆದ್ಯವಯವಕ್ಕೆ ಅಡಾಗಮ(ಅ), ಮತ್ತು ಪ್ರಥಮಪುರುಷ ದ್ವಿವಚನಕ್ಕೆ 'ತಸ್' (ಮೂಲ ಆಖ್ಯಾತ ಪ್ರತ್ಯಯ) ಬಂದಮೇಲೆ, ಸಾರ್ವಧಾತುಕ ಸಂಜ್ಞೆ ಬಂದು 'ಶಪ್(ಅ) ಪ್ರತ್ಯಯವನ್ನು ಸೇರಿಸಿದಾಗ, ಗುಣ, ಅವಾದೇಶಗಳು ಬಂದು, ಅಭವ್+ಅ+ತಸ್ ಎಂದಿರುತ್ತದೆ. "ತಸ್–ಥಸ್–ಥ–ಮಿಪಾಮ್ ತಾಮ್–ತಮ್ ತಾಮಃ" ಎಂಬ ಸೂತ್ರದಿಂದ 'ತಸ್' ಗೆ ಅಭಿನವ ಆಖ್ಯಾತ ಪ್ರತ್ಯಯವಾದ 'ತಾಮ್' ಆದೇಶ ಬಂದು, ಅಭವತಾಮ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಅಭವನ್–ಪ್ರಥಮ ಪುರುಷ ಬಹುವಚನದಲ್ಲಿ– ಭೂ ಧಾತುವಿನ ನಂತರ ಲಙ್ 'ಲ್' ಕಾರ ಬಂದಮೇಲೆ, ಧಾತುವಿನ ಆದ್ಯವಯವವಾಗಿ ಅಡಾಗಮ(ಅ) ಬಂದು, ಮೂಲ ಆಖ್ಯಾತ ಪ್ರತ್ಯಯವಾದ 'ಝಿ' ನಲ್ಲಿರುವ 'ಝ್' ಗೆ 'ಅನ್ತ್' ಆದೇಶ ಬಂದು, ಅಭೂ+ಅನ್ತ್+ಇ ಎಂದಿರುತ್ತದೆ. 'ಶಪ್(ಅ)' ಪ್ರತ್ಯಯವನ್ನು ಧಾತುವಿನ ನಂತರ ಸೇರಿಸಿದಾಗ ಅಭೂ+ಅ+ಅನ್ತ್+ಇ ಎಂದಿರುತ್ತದೆ. ಗುಣ, ಅವಾದೇಶಗಳು ಬಂದು, ಅಭವ+ಅನ್ತಿ ಎಂದಾಗುತ್ತದೆ. "ಅತೋಗುಣೇ" ಎಂಬ ಸೂತ್ರದಿಂದ ಪರರೂಪ ಬಂದು ಅಭವನ್ತಿ ಎಂದು ರೂಪವಾಗುತ್ತದೆ. 'ತ್' ಕಾರೋತ್ತರ 'ಇ' ಕಾರಕ್ಕೆ ಪ್ರಕೃತ ಸೂತ್ರದಿಂದ ಲೋಪ ಬಂದು ಅಭವನ್ತ್ ಎಂದಾಗುತ್ತದೆ. "ಸಂಯೋಗಾನ್ತಸ್ಯ ಲೋಪಃ" ಎಂಬ ಸೂತ್ರದಿಂದ 'ತ್' ಕಾರಕ್ಕೆ ಲೋಪ ಬಂದು ಅಭವನ್ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಅಭವಃ– ಮಧ್ಯಮಪುರುಷ ಏಕವಚನದಲ್ಲಿ – ಭೂ ಧಾತುವಿನ ಮೇಲೆ ಹಿಂದಿನಂತೆ ಲಙ್ 'ಲ್' ಕಾರ ಬಂದಮೇಲೆ, ಧಾತುವಿನ ಆದ್ಯವಯವಾಗಿ ಅಡಾ(ಅ)ಗಮ ಬಂದು, ಲಾದೇಶವಾದ 'ಸಿಪ್(ಇ)' ಬಂದು, ಸಾರ್ವಧಾತುಕ ಸಂಜ್ಞೆಯನ್ನು ಪಡೆದಮೇಲೆ, 'ಶಪ್(ಅ)' ಪ್ರತ್ಯಯವನ್ನು ಧಾತುವಿನ ನಂತರ ಸೇರಿಸಿದಾಗ, ಗುಣ, ಅವಾದೇಶಗಳು ಬಂದು, ಅಭವ್+ಅ+ಸಿ ಎಂದಿರುತ್ತದೆ. ಪ್ರಕೃತ ಸೂತ್ರದಿಂದ 'ಇ' ಕಾರಕ್ಕೆ ಲೋಪ ಬಂದು, ಅಭವಸ್ ಎಂದಾಗುತ್ತದೆ. 'ಸ್' ಕಾರಕ್ಕೆ ರುತ್ವ–ವಿಸರ್ಗಗಳು ಬಂದು ಅಭವಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಅಭವತಮ್– ಮಧ್ಯಮಪುರುಷ ದ್ವಿವಚನದಲ್ಲಿ –ಭೂ ಧಾತುವಿನ ಮೇಲೆ

ಹಿಂದಿನಂತೆ ಲಙ್ 'ಲ್' ಕಾರ ಬಂದಮೇಲೆ, ಧಾತುವಿನ ಆದ್ಯವಯವಾಗಿ ಅಡಾ(ಅ)ಗಮ ಬಂದು, ಲಾದೇಶವಾದ 'ಥಸ್' ಬಂದು, ಸಾರ್ವಧಾತುಕ ಸಂಜ್ಞೆಯನ್ನು ಪಡೆದಮೇಲೆ, 'ಶಪ್(ಅ)' ಪ್ರತ್ಯಯವನ್ನು ಧಾತುವಿನ ನಂತರ ಸೇರಿಸಿದಾಗ, ಗುಣ, ಅವಾದೇಶಗಳು ಬಂದು, ಅಭವ್+ಅ+ಥಸ್ ಎಂದಿದ್ದಾಗ, "ತಸ್-ಥಸ್-ಥ-ಮಿಪಾಮ್ ತಾಮ್-ತಮ್ ತಾಮಃ" ಎಂಬ ಸೂತ್ರದಿಂದ ಥಸ್ ಗೆ ಅಭಿನವ ಆಖ್ಯಾತ ಪ್ರತ್ಯಯವಾದ 'ತಮ್' ಆದೇಶ ಬಂದು, ಅಭವತಮ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ- ಅಭವತ - ಮಧ್ಯಮಪುರುಷ ಬಹುವಚನದಲ್ಲಿ - ಭೂ ಧಾತುವಿನ ಮೇಲೆ ಹಿಂದಿನಂತೆ ಲಙ್ 'ಲ್' ಕಾರ ಬಂದಮೇಲೆ, ಧಾತುವಿನ ಆದ್ಯವಯವವಾಗಿ ಅಡಾ(ಅ)ಗಮ ಬಂದು, ಲಾದೇಶವಾದ 'ಥ' ಬಂದು, ಸಾರ್ವಧಾತುಕ ಸಂಜ್ಞೆಯನ್ನು ಪಡೆದಮೇಲೆ, 'ಶಪ್(ಅ)' ಪ್ರತ್ಯಯವನ್ನು ಧಾತುವಿನ ನಂತರ ಸೇರಿಸಿದಾಗ, ಗುಣ, ಅವಾದೇಶಗಳು ಬಂದು, ಅಭವ್+ಅ+ಥ ಎಂದಿದ್ದಾಗ, "ತಸ್-ಥಸ್-ಥ-ಮಿಪಾಮ್ ತಾಮ್-ತಮ್ ತಾಮಃ" ಎಂಬ ಸೂತ್ರದಿಂದ 'ಥಸ್' ಗೆ ಅಭಿನವ ಆಖ್ಯಾತ ಪ್ರತ್ಯಯವಾದ ತ ಆದೇಶ ಬಂದು, ಅಭವತ ಎಂದು ರೂಪವು ಸಿದ್ಧವಾಗುತ್ತದೆ.

ಉದಾ- ಅಭವಮ್ - ಉತ್ತಮ ಪುರುಷ ಏಕವಚನದಲ್ಲಿ -ಭೂ ಧಾತುವಿನ ಮೇಲೆ ಹಿಂದಿನಂತೆ ಲಙ್ 'ಲ್' ಕಾರ ಬಂದಮೇಲೆ, ಧಾತುವಿನ ಆದ್ಯವಯವವಾಗಿ ಅಡಾ(ಅ)ಗಮ ಬಂದು, ಲಾದೇಶವಾದ 'ಮಿಪ್(ಮಿ)' ಬಂದು, ಸಾರ್ವಧಾತುಕ ಸಂಜ್ಞೆಯನ್ನು ಪಡೆದಮೇಲೆ, 'ಶಪ್(ಅ)' ಪ್ರತ್ಯಯವನ್ನು ಧಾತುವಿನ ನಂತರ ಸೇರಿಸಿದಾಗ, ಗುಣ, ಅವಾದೇಶಗಳು ಬಂದು, ಅಭವ್+ಅ+ಮಿ ಎಂದಿದ್ದಾಗ, "ತಸ್-ಥಸ್-ಥ-ಮಿಪಾಮ್ ತಾಮ್-ತಮ್ ತಾಮಃ" ಎಂಬ ಸೂತ್ರದಿಂದ ಮಿ-ಗೆ ಅಭಿನವ ಆಖ್ಯಾತ ಪ್ರತ್ಯಯವಾದ ಅಮ್ ಆದೇಶ ಬಂದು, ಅಭವ+ಅಮ್ ಎಂದಿದ್ದಾಗ, "ಅತೋ ಗುಣೇ" ಎಂಬುದರಿಂದ ಪರರೂಪ ಬಂದು ಅಭವಮ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ- ಅಭವಾವ- ಉತ್ತಮ ಪುರುಷ ದ್ವಿವಚನದಲ್ಲಿ -ಭೂ ಧಾತುವಿನ ಮೇಲೆ ಹಿಂದಿನಂತೆ ಲಙ್ 'ಲ್' ಕಾರ ಬಂದಮೇಲೆ, ಧಾತುವಿನ ಆದ್ಯವಯವವಾಗಿ ಅಡಾ(ಅ)ಗಮ ಬಂದು, ಲಾದೇಶವಾದ 'ವಸ್' ಬಂದು, ಸಾರ್ವಧಾತುಕ ಸಂಜ್ಞೆಯನ್ನು ಪಡೆದಮೇಲೆ, 'ಶಪ್(ಅ)' ಪ್ರತ್ಯಯವನ್ನು ಧಾತುವಿನ ನಂತರ ಸೇರಿಸಿದಾಗ, ಗುಣ, ಅವಾದೇಶಗಳು ಬಂದು, ಅಭವ್+ಅ+ವಸ್ ಎಂದಿದ್ದಾಗ, "ಅತೋದೀರ್ಘೋ ಯಞಿ" ಎಂಬ ಸೂತ್ರದಿಂದ ಮೊದಲನೇ 'ವ'ಕಾರೋತ್ತರ 'ಅ' ಕಾರಕ್ಕೆ ದೀರ್ಘ ಬಂದು ಅಭವಾವಸ್ ಎಂದಾಗುತ್ತದೆ. 'ಸ್' ಕಾರಕ್ಕೆ "ನಿತ್ಯಮ್ ಙಿತಃ" ಎಂಬ ಸೂತ್ರದಿಂದ ಲೋಪ ಬಂದು ಅಭವಾವ ಎಂದು ರೂಪವು ಸಿದ್ಧವಾಗುತ್ತದೆ.

ಉದಾ- ಅಭವಾಮ- ಉತ್ತಮ ಪುರುಷ ಬಹುವಚನದಲ್ಲಿ ಹಿಂದಿನತೆಯೇ ಪ್ರಕ್ರಿಯೆ ನಡೆದು 'ಅಭವಾಮ' ಎಂಬ ರೂಪವುಸಿದ್ಧವಾಗುತ್ತದೆ.

**(ವಿಧಿಲಿಙ್ 'ಲ್' ಕಾರವನ್ನು ವಿಧಿಸುವ ಸೂತ್ರ)**

**ಸೂತ್ರ- 425.ವಿಧಿ-ನಿಮನ್ತ್ರಣಾಮನ್ತ್ರಣಾಧೀಷ್ಟ-ಸಂಪ್ರಶ್ನ-ಪ್ರಾರ್ಥನೇಷು ಲಿಙ್ (3.3.161)**

ವೃತ್ತಿಃ-ಏಷು ಅರ್ಥೇಷು ಧಾತೋಃ ಲಿಙ್।

ಪ. ಛೇ. – ವಿಧಿ-ನಿಮನ್ತ್ರಣ- ಆಮನ್ತ್ರಣ-ಅಧೀಷ್ಟ-ಸಂಪ್ರಶ್ನ-ಪ್ರಾರ್ಥನೇಷು, ಲಿಙ್।

ಅ. ವೃ. – "ಧಾತೋಃ", "ಪ್ರತ್ಯಯಃ", "ಪರಶ್ಚ" ಎಂಬವು ಅಧಿಕಾರ ಸೂತ್ರಗಳು.

ಅರ್ಥ- ವಿಧಿ,ನಿಮನ್ತ್ರಣ, ಆಮನ್ತ್ರಣ, ಅಧೀಷ್ಟ, ಸಂಪ್ರಶ್ನ, ಮತ್ತು ಪ್ರಾರ್ಥನೆ ಈ ಅರ್ಥಗಳಲ್ಲಿ ಧಾತುವಿನ ನಂತರ 'ಲಿಙ್' 'ಲ್' ಕಾರವು ಬರುತ್ತದೆ. ಈ 'ಲ್' ಕಾರವು ಕಾಲವಾಚಕವಲ್ಲ.

ವಿಧಿಃ – ತನಗಿಂತ ಸಣ್ಣವರಾದ ಮತ್ತು ಭೃತ್ಯ ಮೊದಲಾದವರಿಗೆ ಆಜ್ಞಾಪಿಸುವುದು.

ನಿಮನ್ತ್ರಣಮ್- ಅವಶ್ಯ ಕರ್ತವ್ಯವಾದ ವಿಷಯದಲ್ಲಿ ಪ್ರೇರೇಪಿಸುವುದು.

ಆಮನ್ತ್ರಣಮ್- ವಿವಾಹ ಮೊದಲಾದ ಸಂದರ್ಭಗಳಲ್ಲಿ ಕರೆಯುವುದು. ಇದರಲ್ಲಿ ಬರಲೇಬೇಕೆಂಬ ನಿರ್ಬಂಧವಿರುವುದಿಲ್ಲ.

ಅಧೀಷ್ಟಮ್- ಹಿರಿಯರಾದವರಲ್ಲಿ ವಿನಯದಿಂದ ಬೇಡಿಕೊಳ್ಳುವುದು.

ಸಂಪ್ರಶ್ನಃ- ಹಿರಿಯರಾದವರ ಸನ್ನಿಧಾನದಲ್ಲಿ ನಿಶ್ಚಿತವಾದ ವಿಷಯದಲ್ಲಿ ಮಾಡುವ ಪ್ರಶ್ನೆ

ಪ್ರಾರ್ಥನಾ- ಬೇಡಿಕೊಳ್ಳುವುದು.

ಆಶೀರ್ವಾದ-ಈ ವಿಧಿಲಿಙ್ 'ಲ್' ಕಾರಕ್ಕೆ ಆಶೀರ್ವಾದದ ಅರ್ಥವೂ ಇರುತ್ತದೆ.

(ಯಾಸುಟ್ ಆಗಮ ಮತ್ತು ಜಿದ್ವದ್ಭಾವನ್ನು ವಿಧಿಸುವ ಅತಿದೇಶ ಸೂತ್ರ)

ಸೂತ್ರ- 426.0ಯಾಸುಟ್ ಪರಸ್ಮೈಪದೇಷೂದಾತ್ತೋ ಜಿಚ್ಚ (3.4.103)

ವೃತ್ತಿಃ-ಲಿಙಃ ಪರಸ್ಮೈಪದಾನಾಂ '0ಯಾಸುಟ್' ಆಗಮಃ ಜಿಚ್ಚ।

ಪ. ಛೇ. – 0ಯಾಸುಟ್ ಪರಸ್ಮೈಪದೇಷು ಉದಾತ್ತಃ ಜಿತ್ ಚ।

ಅ. ವೃ. – "ಲಿಙಃ ಸೀಯುಟ್" ಎಂಬ ಸೂತ್ರದಿಂದ 'ಲಿಙಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- 'ಲಿಙ್' 'ಲ್' ಕಾರದ ಪರಸ್ಮೈಪದಿ ಪ್ರತ್ಯಯಗಳಿಗೆ 'ಯಾಸುಟ್(ಯಾಸ್)' ಆಗಮವು ಬರುತ್ತದೆ. ಮತ್ತು ಅದು ಜಿದ್ವದ್ಭಾವವನ್ನು ಹೊಂದುತ್ತದೆ.

**(ಸ್ ಕಾರಕ್ಕೆ ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ- 427.ಲಿಙಃ ಸಲೋಪೋऽನನ್ತ್ಯಸ್ಯ (7.2.79)**

ವೃತ್ತಿಃ-ಸಾರ್ವಧಾತುಕ ಲಿಙಃ ಅನನ್ತ್ಯಸ್ಯ ಸಸ್ಯ ಲೋಪಃ ಇತಿ ಪ್ರಾಪ್ತೇ।

ಪ. ಛೇ. – ಲಿಙಃ, ಸಲೋಪಃ, ಅನನ್ತ್ಯಸ್ಯ।

ಅ.ವೃ.– "ರುಧಾದಿಭ್ಯಃ ಸಾರ್ವಧಾತುಕೇ" ಎಂಬ ಸೂತ್ರದಿಂದ ವಿಭಕ್ತಿ ಪರಿಣಾಮ ಮಾಡಿದಾಗ, 'ಸಾರ್ವಧಾತುಕಸ್ಯ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– ಸಾರ್ವಧಾತುಕ 'ಲಿಙ್' 'ಲ್' ಕಾರದ ಅನ್ತ್ಯವಲ್ಲದ 'ಸ್' ಕಾರಕ್ಕೆ ಲೋಪವು ಬರುತ್ತದೆ.

ಉದಾ– ಭವ+ಯಾಸ್+ತ್ ಎಂಬಲ್ಲಿ 'ಸ್' ಕಾರಕ್ಕೆ ಲೋಪವು ಪ್ರಾಪ್ತವಾಗಿತ್ತು. ಇದನ್ನು ಬಾಧಿಸಿ ಮುಂದಿನ ಸೂತ್ರವು ಪ್ರವೃತ್ತವಾಗುತ್ತದೆ. ಸಾರ್ವಧಾತುಕದ 'ಸ್' ಕಾರಕ್ಕೆ ಇದು ಲೋಪವನ್ನು ಹೇಳುತ್ತದೆ. ಆರ್ಧಧಾತುಕ 'ಸ್' ಕಾರಕ್ಕೆ ಲೋಪದ ಪ್ರಸಕ್ತಿ ಇರುವುದಿಲ್ಲ. 'ಯಾಸ್' ಎಂಬುದಕ್ಕೆ ಸಾರ್ವಧಾತುಕ ಸಂಜ್ಞೆಯಾಗಲೀ ಅಥವಾ ಆರ್ಧಧಾತುಕ ಸಂಜ್ಞೆಯಾಗಲಿ ಇರುವುದಿಲ್ಲ. ಆದರೆ ಇದು ಆಗಮವಾಗಿರೋಣದ್ದರಿಂದ, ಸಾರ್ವಧಾತುಕದ ಆಗಮವಾದರೆ ಅದು ಸಾರ್ವಧಾತುಕವೆಂಬಂತೆ ಭಾವಿಸುವುದರಿಂದ ಸಾರ್ವಧಾತುಕವಾಗುತ್ತದೆ. ಆರ್ಧಧಾತುಕದ ಆಗಮವಾದರೆ ಆರ್ಧಧಾತುಕವೆಂದು ಭಾವಿಸುವದರಮೂಲಕ ಆರ್ಧಧಾತುಕವಾಗುತ್ತದೆ. ಇಂಥ ಸಂದರ್ಭದಲ್ಲಿ ಈ ಕೆಳಗಿನ ಪರಿಭಾಷೆಯು ಪ್ರವೃತ್ತವಾಗುತ್ತದೆ. "ಯದಾಗಮಾಃ ಯದ್ಗುಣೀಭೂತಾಃ ತದ್ಗ್ರಹಣೇನ ಗೃಹ್ಯನ್ತೇ' ಅಂದರೆ ಆಗಮವು ಯಾವುದಕ್ಕೆ ಬರುತ್ತದೋ ಅದರ ಅಂಗವಾಗುತ್ತದೆ. (ಯಾವ ರೀತಿ ಕನ್ಯೆಯು ಮದುವೆಯಾದಮೇಲೆ ಗಂಡನ ಗೋತ್ರಕ್ಕೆ ಸೇರಿ ತನ್ನ ಮೊದಲಿನ ಗೋತ್ರವನ್ನು ಕಳೆದುಕೊಳ್ಳುತ್ತಾಳೋ ಹಾಗೆ).

**(ಯಾಸುಟ್(ಯಾಸ್) ಎಂಬುದಕ್ಕೆ ಇಯ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ– 428.ಅತೋ ಯೇಯಃ (7.2.80)**

ವೃತ್ತಿಃ–ಅತಃ ಪರಸ್ಯ ಸಾರ್ವಧಾತುಕ ಅವಯವಸ್ಯ ಯಾಸ್ ಇತ್ಯಸ್ಯ ಇಯ್। ಗುಣಃ।

ಪ. ಛೇ. – ಅತಃ, ಯಾ, (ಲುಪ್ತ ಷಷ್ಠೀಕಂ), ಇಯಃ (ಪ್ರಥಮಾನ್ತಃ)।

ಅ.ವೃ.–"ರುಧಾದಿಭ್ಯಃ ಸಾರ್ವಧಾತುಕೇ" ಎಂಬ ಸೂತ್ರದಲ್ಲಿ ವಿಭಕ್ತಿಪರಿಣಾಮ ಮಾಡಿದಮೇಲೆ 'ಸಾರ್ವಧಾತುಕಸ್ಯ' ಎಂಬ ಪದವು ಅನುವೃತ್ತವಾಗುತ್ತದೆ. "ಅಂಗಸ್ಯ" ಎಂಬ ಅಧಿಕಾರಸೂತ್ರದ ಪದವು ಪಂಚಮ್ಯನ್ತವಾಗಿ ಪರಿಣಾಮಗೊಳ್ಳುತ್ತದೆ.

ಅರ್ಥ– ಅದನ್ತವಾದ ಅಂಗದ ಪರದಲ್ಲಿರುವ ಸಾರ್ವಧಾತುಕ ಅವಯವವಾದ 'ಯಾಸ್' ಎಂಬುದಕ್ಕೆ 'ಇಯ್' ಆದೇಶವು ಬರುತ್ತದೆ.

**(ವ್ ಮತ್ತು ಯ್ ಕಾರಗಳಿಗೆ ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ– 429.ಲೋಪೋ ವ್ಯೋರ್ವಲಿ (6.1.66)**

ವೃತ್ತಿಃ–ವಕಾರ–ಯಕಾರಯೋಃ ಲೋಪಃ ಸ್ಯಾತ್ ವಲಿ ಪರೇ। ಭವೇತ್। ಭವೇತಾಮ್।

ಪ. ಛೇ. – ಲೋಪಃ, ವ್ಯೋಃ (ವ್, ಯ್), ವಲಿ (ಸಪ್ತಮೀ)।

ಅರ್ಥ– 'ವಲ್' ಪ್ರತ್ಯಾಹಾರಾನ್ತರ್ಗತ ವರ್ಣಗಳು ಪರದಲ್ಲಿದ್ದಾಗ, ಅವ್ಯವಹಿತ ಪೂರ್ವದಲ್ಲಿರುವ 'ವ್' ಮತ್ತು 'ಯ್' ಕಾರಗಳಿಗೆ ಲೋಪವು ಬರುತ್ತದೆ.

ಉದಾ– ಭವೇತ್– 'ಭೂ' ಧಾತುವಿನ ನಂತರ ವಿಧಿ ಮೊದಲಾದ ಅರ್ಥದಲ್ಲಿ 'ಲಿಙ್' 'ಲ್'ಕಾರವು ಇದ್ದಾಗ, ಅದರ ಪ್ರಥಮಪುರುಷ ಏಕವಚನದಲ್ಲಿ 'ತಿಪ್(ತಿ)' ಆದೇಶ ಬಂದು, ನಂತರ ಸಾರ್ವಧಾತುಕ ಸಂಜ್ಞೆ ಬಂದು, 'ಶಪ್(ಅ)' ವಿಕರಣ ಪ್ರತ್ಯಯ ಬಂದಾಗ, ಭೂ+ಅ+ತಿ ಎಂದಿರುತ್ತದೆ. ನಂತರ ಗುಣ – ಅವ್ ಆದೇಶಗಳು ಬಂದು ಭವ+ತಿ ಎಂದಿರುತ್ತದೆ. ನಂತರ ಯಾಸುಟ್ (ಯಾಸ್) ಬಂದು ಭವ+ಯಾಸ್+ತಿ ಎಂದಿರುತ್ತದೆ. 'ಯಾಸ್' ನಲ್ಲಿರುವ 'ಸ್' ಕಾರಕ್ಕೆ "ಲಿಙಃ ಸಲೋಪೋಽನಂತ್ಯಸ್ಯ" ಎಂಬ ಸೂತ್ರದಿಂದ ಲೋಪ ಪ್ರಾಪ್ತವಾದಾಗ, ಅದನ್ನು ಬಾಧಿಸಿ "ಅತೋ ಯೇಯಃ" ಎಂಬ ಸೂತ್ರದಿಂದ 'ಯಾಸ್' ಎಂಬುದಕ್ಕೆ 'ಇಯ್' ಆದೇಶವು ಬಂದು ಭವ+ಇಯ್+ತಿ ಎಂದಿರುತ್ತದೆ. 'ಅ' ಕಾರ 'ಇ' ಕಾರಗಳಿಗೆ 'ಗುಣ' ಬಂದು ಭವೇಯ್+ತಿ ಎಂದಿರುತ್ತದೆ. ಪ್ರಕೃತ ಸೂತ್ರದಿಂದ 'ಯ್' ಕಾರಕ್ಕೆ ಲೋಪ ಬಂದು, ಭವೇತಿ ಎಂದಿರುತ್ತದೆ. 'ಇತಶ್ಚ' ಎಂಬ ಸೂತ್ರದಿಂದ 'ಇ' ಕಾರಕ್ಕೆ ಲೋಪ ಬಂದು, ಭವೇತ್ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಭವೇತಾಮ್– ಭೂ ಧಾತುವಿನ ನಂತರ ವಿಧಿ ಮೊದಲಾದ ಅರ್ಥದಲ್ಲಿ 'ಲಿಙ್' 'ಲ್'ಕಾರವು ಇದ್ದಾಗ, ಅದರ ಪ್ರಥಮಪುರುಷ ದ್ವಿವಚನದಲ್ಲಿ 'ತಸ್' ಆದೇಶ ಬಂದು, ನಂತರ ಸಾರ್ವಧಾತುಕ ಸಂಜ್ಞೆ ಬಂದು, 'ಶಪ್(ಅ)' ವಿಕರಣ ಪ್ರತ್ಯಯ ಬಂದಾಗ, ಭೂ+ಅ+ತಸ್ ಎಂದಿರುತ್ತದೆ. ನಂತರ ಗುಣ–ಅವ್ ಆದೇಶಗಳು ಬಂದು ಭವ+ತಸ್ ಎಂದಿರುತ್ತದೆ. 'ತಸ್' ಗೆ "ತಸ್–ಥಸ್–ಥ–ಮಿಪಾಮ್ ತಾಮ್–ತಮ್ ತಾಮಃ" ಎಂಬ ಸೂತ್ರದಿಂದ ಅಭಿನವ ಆಖ್ಯಾತ ಪ್ರತ್ಯಯವಾದ 'ತಾಮ್' ಆದೇಶ ಬಂದು, ಭವ+ತಾಮ್ ಎಂದಿರುತ್ತದೆ ಅದಕ್ಕೆ ಜಿದ್ವದ್ಭಾವ ಬಂದು 'ಯಾಸುಟ್(ಯಾಸ್)' ಆಗಮ ಬಂದು ಭವ+ಯಾಸ್+ತಾಮ್ ಎಂದಿರುತ್ತದೆ. "ಲಿಙಃ ಸಲೋಪೋಽನನ್ತ್ಯಸ್ಯ" ಎಂಬ ಸೂತ್ರದಿಂದ 'ಯಾಸ್' ನಲ್ಲಿರುವ 'ಸ್' ಕಾರಕ್ಕೆ ಲೋಪ ಪ್ರಾಪ್ತವಾದಾಗ, ಅದನ್ನು ಬಾಧಿಸಿ "ಅತೋ ಯೇಯಃ" ಎಂಬ ಸೂತ್ರದಿಂದ 'ಯಾಸ್' ಎಂಬುದಕ್ಕೆ 'ಇಯ್' ಆದೇಶವು ಬಂದು ಭವ+ಇಯ್+ತಾಮ್ ಎಂದಿರುತ್ತದೆ. 'ಅ' ಕಾರ 'ಇ' ಕಾರಗಳಿಗೆ ಗುಣ ಬಂದು ಭವೇಯ್+ತಾಮ್ ಎಂದಿರುತ್ತದೆ. ಪ್ರಕೃತ ಸೂತ್ರದಿಂದ 'ಯ್' ಕಾರಕ್ಕೆ ಲೋಪ ಬಂದು ಭವೇತಾಮ್ ಎಂಬ ರೂಪವು ಸಿದ್ಧವಾಗುತ್ತದೆ.

**(ಝಿ ಗೆ ಜುಸ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ– 430. ಝೇರ್ಜುಸ್ (3.4.180)**

ವೃತ್ತಿಃ–ಲಿಙಃ ಝೇಃ ಜುಸ್ ಸ್ಯಾತ್। ಭವೇಯುಃ। ಭವೇಃ। ಭವೇತಮ್। ಭವೇತ। ಭವೇಯಮ್। ಭವೇವ । ಭವೇಮ।

ಪ. ಛೇ. – ಝೇಃ, ಜುಸ್।

ಅ. ವೃ.– "ಲಿಙಃ ಸೀಯುಟ್" ಎಂಬ ಸೂತ್ರದಿಂದ 'ಲಿಙಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– 'ಲಿಙ್' 'ಲ್' ಕಾರದ ಸ್ಥಾನದಲ್ಲಿ ಆದೇಶವಾಗಿ ಬಂದಿರುವ 'ಝಿ' ಎಂಬ ಮೂಲ ಆಖ್ಯಾತ ಪ್ರತ್ಯಯಕ್ಕೆ 'ಜುಸ್' ಎಂಬ ಅದೇಶವು ಬರುತ್ತದೆ. ಇದರಲ್ಲಿ 'ಉಸ್' ಮಾತ್ರ ಉಳಿಯುತ್ತದೆ.

ಉದಾ– ಭವೇಯುಃ– 'ಭೂ' ಧಾತುವಿನಮೇಲೆ ಪ್ರಥಮಪುರುಷ ಬಹುವಚನದಲ್ಲಿ 'ಲಿಙ್' ಆದೇಶವಾದ 'ಝಿ' ಬಂದು, ಅದಕ್ಕೆ "ಝೋಽನ್ತಃ" ಎಂಬ ಸೂತ್ರದಿಂದ ಬರಬೇಕಾದ 'ಅನ್ತ್' ಆದೇಶವನ್ನು ಬಾಧಿಸಿ ಪ್ರಕೃತ ಸೂತ್ರದಿಂದ 'ಜುಸ್(ಉಸ್)' ಆದೇಶವಾಗಿ ಬಂದು ಭೂ+ಉಸ್ ಎಂದಿದ್ದಾಗ 'ಸಾರ್ವಧಾತುಕ' ಸಂಜ್ಞೆ ಬಂದು, ಧಾತುವಿನ ಪರದಲ್ಲಿ 'ಶಪ್(ಅ)' ವಿಕರಣ ಪ್ರತ್ಯಯ ಬಂದಮೇಲೆ ಗುಣ ಮತ್ತು ಅವಾದೇಶಗಳಾಗಿ, ನಂತರ 'ಯಾಸುಟ್ (ಯಾಸ್)' ಆಗಮ ಬಂದು ಭವ+ಯಾಸ್+ಉಸ್ ಎಂದಿರುತ್ತದೆ. "ಲಿಙಃ ಸಲೋಪೋಽನನ್ತ್ಯಸ್ಯ" ಎಂಬ ಸೂತ್ರದಿಂದ ಬರಬೇಕಾದ 'ಸ್' ಕಾರ ಲೋಪವನ್ನು ಬಾಧಿಸಿ "ಅತೋಯೇಯಃ" ಎಂಬ ಸೂತ್ರದಿಂದ 'ಯಾಸ್' ಗೆ 'ಇಯ್' ಆದೇಶ ಬಂದು ಭವ+ಇಯ್+ಉಸ್ ಎಂದಿರುತ್ತದೆ. ಮಧ್ಯದಲ್ಲಿ 'ಇ' ಕಾರದಿಂದ ವ್ಯವಹಿತವಾಗಿರುವುದರಿಂದ "ಲೋಪೋ ವ್ಯೋರ್ವಲಿ" ಎಂಬ ಸೂತ್ರದಿಂದ ಆಗಬೇಕಾದ 'ಯ್' ಕಾರ ಲೋಪವು ಆಗುವುದಿಲ್ಲ. ಆಗ ಅ ಕಾರ ಇ ಕಾರಗಳಿಗೆ ಗುಣ ಬಂದು ಭವೇಯ್+ಉಸ್ ಎಂದಾಗಿ, ರುತ್ವ–ವಿಸರ್ಗಗಳಿಂದ ಭವೇಯುಃ ಎಂದು ರೂಪವಾಗುತ್ತದೆ.

ಉದಾ– ಭವೇಃ – ಮಧ್ಯಮಪುರುಷ ಏಕವಚನದಲ್ಲಿ ಭೂ+ಸಿಪ್(ಸಿ) ಎಂದಿದ್ದಾಗ, ಹಿಂದಿನಂತೆ 'ಸಾರ್ವಧಾತುಕ' ಸಂಜ್ಞೆ ಬಂದು, ಧಾತುವಿನ ಪರದಲ್ಲಿ 'ಶಪ್(ಅ)' ವಿಕರಣ ಪ್ರತ್ಯಯ ಬಂದಮೇಲೆ ಗುಣ ಮತ್ತು ಅವಾದೇಶಗಳಾಗಿ, ನಂತರ 'ಯಾಸುಟ್(ಯಾಸ್)' ಆಗಮ ಬಂದು ಭೂ+ಅ+ಯಾಸ್+ಸಿ ಎಂದಿದ್ದಾಗ, 'ಯಾಸ್' ಗೆ 'ಇಯ್' ಆದೇಶ ಬಂದು, "ಲೋಪೋ ವ್ಯೋರ್ವಲಿ" ಎಂಬ ಸೂತ್ರದಿಂದ 'ಯ್' ಕಾರ ಲೋಪವಾದ ಮೇಲೆ 'ಅ' ಕಾರ 'ಇ' ಕಾರಗಳಿಗೆ ಗುಣ ಬಂದು ಭವೇಸಿ ಎಂದಿರುತ್ತದೆ. "ಇತಶ್ಚ" ಎಂಬ ಸೂತ್ರದಿಂದ 'ಇ' ಕಾರಕ್ಕೆ ಲೋಪ ಬಂದು, ಭವೇಸ್ ಎಂದಿದ್ದಾಗ, 'ಸ್'ಕಾರಕ್ಕೆ ರುತ್ವ–ವಿಸರ್ಗಗಳು ಬಂದು ಭವೇಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಭವೇತಮ್– ಮಧ್ಯಮಪುರುಷ ದ್ವಿವಚನದಲ್ಲಿ ಭೂ+ಥಸ್ ಎಂದಿದ್ದಾಗ, ಹಿಂದಿನಂತೆ 'ಸಾರ್ವಧಾತುಕ' ಸಂಜ್ಞೆ ಬಂದು, ಧಾತುವಿನ ಪರದಲ್ಲಿ 'ಶಪ್(ಅ)' ವಿಕರಣ ಪ್ರತ್ಯಯ ಬಂದಮೇಲೆ ಗುಣ ಮತ್ತು ಅವಾದೇಶಗಳಿಂದ ಭವ+ಥಸ್ ಎಂದಿದ್ದಾಗ, ಥಸ್‌ಗೆ "ತಸ್–ಥಸ್–ಥ–ಮಿಪಾಮ್ ತಾಮ್–ತಮ್ ತಾಮಃ" ಎಂಬ ಸೂತ್ರದಿಂದ ಅಭಿನವ ಆಖ್ಯಾತ ಪ್ರತ್ಯಯವಾದ 'ತಮ್' ಆದೇಶ ಬಂದು, ಭವ+ತಮ್ ಎಂದಿದ್ದಾಗ, 'ಯಾಸುಟ್(ಯಾಸ್)' ಆಗಮ ಬಂದು, ಅದಕ್ಕೆ 'ಇಯ್' ಆದೇಶ ಬಂದಮೇಲೆ

ಭವ+ಇಯ್+ತಮ್ ಎಂದಿದ್ದಾಗ, ಅ ಕಾರ ಇ ಕಾರಗಳಿಗೆ ಗುಣ ಬಂದು ಭವೇಯ್+ತಮ್ ಎಂದಿರುತ್ತದೆ. "ಲೋಪೋ ವ್ಯೋರ್ವಲಿ" ಎಂಬ ಸೂತ್ರದಿಂದ 'ಯ್' ಕಾರ ಲೋಪವಾದ ಮೇಲೆ ಭವೇ+ತಮ್=ಭವೇತಮ್ ಎಂದು ರೂಪವಾಗುತ್ತದೆ.

ಉದಾ- ಭವೇತ - ಮಧ್ಯಮಪುರುಷ ಬಹುವಚನದಲ್ಲಿ ಭೂ+ಥ ಎಂದಿದ್ದಾಗ, ಹಿಂದಿನಂತೆಯೇ ಪ್ರಕ್ರಿಯೆ ನಡೆದು ಭೂ+ಅ+ಥ ಎಂದಿರುತ್ತದೆ. ನಂತರ ಗುಣ-ಅವಾದೇಶಗಳು ಬಂದು, ಭವ+ಥ ಎಂದಿದ್ದಾಗ 'ಥ' ಗೆ "ತಸ್-ಥಸ್-ಥ-ಮಿಪಾಮ್ ತಾಮ್-ತಮ್ ತಾಮಃ" ಎಂಬ ಸೂತ್ರದಿಂದ ಅಭಿನವ ಆಖ್ಯಾತ ಪ್ರತ್ಯಯವಾದ 'ತ' ಆದೇಶ ಬಂದು, ನಂತರ 'ಯಾಸುಟ್(ಯಾಸ್)' ಆಗಮ ಬಂದು ಭವ+ಯಾಸ್+ತ ಎಂದಿದ್ದಾಗ, ಅದಕ್ಕೆ 'ಇಯ್' ಆದೇಶ ಬಂದಮೇಲೆ ಭವ+ಇಯ್+ತ ಎಂದಿದ್ದಾಗ, ಅ ಕಾರ ಇ ಕಾರಗಳಿಗೆ ಗುಣ ಬಂದು ಭವೇಯ್+ತ ಎಂದಿರುತ್ತದೆ. "ಲೋಪೋ ವ್ಯೋರ್ವಲಿ" ಎಂಬ ಸೂತ್ರದಿಂದ 'ಯ್' ಕಾರ ಲೋಪವಾದ ಮೇಲೆ ಭವೇ+ತ=ಭವೇತ ಎಂದು ರೂಪವಾಗುತ್ತದೆ.

ಉದಾ- ಭವೇಯಮ್ - ಉತ್ತಮಪುರುಷ ಏಕವಚನದಲ್ಲಿ ಭೂ+ಮಿಪ್(ಮಿ) ಎಂದಿದ್ದಾಗ, ಧಾತುವಿನ ಪರದಲ್ಲಿ 'ಶಪ್(ಅ)' ವಿಕರಣ ಪ್ರತ್ಯಯ ಬಂದು, ಭೂ+ಅ+ಮಿ ಎಂದಿರುತ್ತದೆ. ಹಿಂದಿನಂತೆಯೆ ಗುಣ ಅವಾದೇಶಗಳು ಬಂದು ಭವ+ಮಿ ಎಂದಿದ್ದಾಗ, 'ಮಿ' ಗೆ "ತಸ್-ಥಸ್-ಥ-ಮಿಪಾಮ್ ತಾಮ್-ತಮ್ ತಾಮಃ" ಎಂಬ ಸೂತ್ರದಿಂದ ಅಭಿನವ ಆಖ್ಯಾತ ಪ್ರತ್ಯಯವಾದ 'ಅಮ್' ಆದೇಶ ಬಂದು, ಭವ+ಅಮ್ ಎಂದಿದ್ದಾಗ, ಯಾಸುಟ್(ಯಾಸ್)' ಆಗಮ ಬಂದು ಭವ+ಯಾಸ್+ಅಮ್ ಎಂದಿದ್ದಾಗ, ಅದಕ್ಕೆ 'ಇಯ್' ಆದೇಶ ಬಂದಮೇಲೆ, ಭವ+ಇಯ್+ಅಮ್ ಎಂದಿರುತ್ತದೆ. ಅ ಕಾರ ಇ ಕಾರಗಳಿಗೆ ಗುಣ ಬಂದು ಭವೇಯ್+ಅಮ್=ಭವೇಯಮ್ ಎಂಬ ರೂಪವು ಸಿದ್ಧಿಸುತ್ತದೆ.

ಉದಾ- ಭವೇವ,ಭವೇಮ - ಉತ್ತಮಪುರುಷ ದ್ವಿವಚನ ಮತ್ತು ಬಹುವಚನಗಳಲ್ಲಿ ಭೂ+ವಸ್ ಮತ್ತು ಭೂ+ಮಸ್ ಎಂದಿದ್ದಾಗ, ಧಾತುವಿನ ಪರದಲ್ಲಿ 'ಶಪ್(ಅ)' ವಿಕರಣ ಪ್ರತ್ಯಯ ಬಂದು, ಭೂ+ಅ+ವಸ್ ಮತ್ತು ಭೂ+ಅ+ಮಸ್ ಎಂದಿರುತ್ತದೆ. ಹಿಂದಿನಂತೆಯೆ ಗುಣ ಅವಾದೇಶಗಳು ಬಂದು ಭವ+ವಸ್ ಮತ್ತು ಭವ+ಮಸ್ ಎಂದಿರುತ್ತದೆ. ನಂತರ ಯಾಸುಟ್(ಯಾಸ್)' ಆಗಮ ಬಂದು, ಭವ+ಯಾಸ್+ವಸ್ ಮತ್ತು ಭವ+ಯಾಸ್+ಮಸ್ ಎಂದಿದ್ದಾಗ, ಅದಕ್ಕೆ 'ಇಯ್' ಆದೇಶ ಬಂದಮೇಲೆ, ಭವ+ಇಯ್+ವಸ್ ಮತ್ತು ಭವ+ಇಯ್+ಮಸ್ ಎಂದಿರುತ್ತದೆ. ಅ ಕಾರ ಇ ಕಾರಗಳಿಗೆ ಗುಣ ಬಂದು ಭವೇಯ್+ವಸ್ ಮತ್ತು ಭವೇಯ್+ಮಸ್ ಎಂದಿರುತ್ತದೆ. "ಲೋಪೋ ವ್ಯೋರ್ವಲಿ" ಎಂಬ ಸೂತ್ರದಿಂದ 'ಯ್' ಕಾರ ಲೋಪವಾದ ಮೇಲೆ ಭವೇ+ವಸ್ ಮತ್ತು ಭವೇ+ಮಸ್ ಎಂದಿರುತ್ತದೆ. "ನಿತ್ಯಂ ಙಿತಃ" ಎಂಬ ಸೂತ್ರದಿಂದ 'ಸ್' ಕಾರಾಕ್ಕೆ ಲೋಪವಾಗಿ ಭವೇವ ಮತ್ತು ಭವೇಮ ಎಂಬ ರೂಪಗಳು ಸಿದ್ಧಿಸುತ್ತವೆ.

**(ಆರ್ಧಧಾತುಕ ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ- 431.ಲಿಙಾಶಿಷಿ (3.4.116)**

ವೃತ್ತಿಃ–ಆಶಿಷಿ ಲಿಙಃ ತಿಙ್ ಆರ್ಧಧಾತುಕಸಂಜ್ಞಃ ಸ್ಯಾತ್।

ಪ. ಛೇ– ಲಿಙ್, ಆಶಿಷಿ।

ಅ. ವೃ.–"ತಿಙ್ ಶಿತ್ ಸಾರ್ವಧಾತುಕಮ್" ಎಂಬ ಸೂತ್ರದಿಂದ 'ತಿಙ್' ಎಂಬ ಪದವೂ ಮತ್ತು "ಆರ್ಧಧಾತುಕಂ ಶೇಷಃ" ಎಂಬ ಸೂತ್ರದಿಂದ 'ಆರ್ಧಧಾತುಕಮ್' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ–ಆಶೀರ್ವಾದಾರ್ಥದಲ್ಲಿರುವ 'ಲಿಙ್' ಗೆ ಆದೇಶವಾಗಿ ಬರುವ 'ತಿಙ್' ಪ್ರತ್ಯಯಕ್ಕೆ 'ಆರ್ಧಧಾತುಕ ಸಂಜ್ಞೆ'ಯು ಬರುತ್ತದೆ. ಇದರಿಂದ 'ಆಶೀರ್ಲಿಙ್' 'ಲ್' ಕಾರವು 'ಆರ್ಧಧಾತುಕ' ಸಂಜ್ಞೆಯನ್ನು ಪಡೆಯುತ್ತದೆ. (ಲಟ್,ಲಙ್,ಲಿಙ್ ಮತ್ತು ಲೋಟ್ 'ಲ್' ಕಾರಗಳು 'ಸಾರ್ವಧಾತುಕ' ಸಂಜ್ಞೆಯನ್ನು ಹೊಂದುತ್ತವೆ ಎಂಬುದನ್ನು ಇಲ್ಲಿ ಸ್ಮರಿಸಬಹುದು).

**(ಕಿತ್ವ ವಿಧಾಯಕ ಅತಿದೇಶ ಸೂತ್ರ)**

**ಸೂತ್ರ– 432.ಕಿದಾಶಿಷಿ (3.4.104)**

ವೃತ್ತಿಃ–ಆಶಿಷಿ ಲಿಙಃ ಯಾಸುಟ್ ಕಿತ್ ।(309) ಸ್ಕೋಃ ಸಂಯೋಗಾದ್ಯೋಃ ಇತಿ 'ಸ'ಲೋಪಃ।

ಪ. ಛೇ. – ಕಿತ್, ಆಶಿಷಿ।

ಅ. ವೃ. – "ಲಿಙಃ ಸೀಯುಟ್" ಎಂಬ ಸೂತ್ರದಿಂದ 'ಲಿಙಃ' ಎಂಬ ಪದವೂ, ಮತ್ತು "ಯಾಸುಟ್ ಪರಸ್ಮೈಪದೇಷೂದಾತ್ತೋ ಙಿಚ್ಚ" ಎಂಬ ಸೂತ್ರದಿಂದ 'ಯಾಸುಟ್' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ– ಆಶೀರ್ವಾದಾರ್ಥದಲ್ಲಿ ಇರುವ 'ಲಿಙ್' 'ಲ್'ಕಾರಕ್ಕೆ ಬರುವ 'ತಿಙ್' ಆದೇಶಕ್ಕೆ ಬರುವ ಯಾಸುಟ್ ಆಗಮವು ಕಿದ್ವದ್ಭಾವವನ್ನು ಹೊಂದುತ್ತದೆ.

'ಯಾಸುಟ್' ಆಗಮವು 'ಕಿತ್' ಆಗಿ ಇರುವುದಿಲ್ಲ. ಅದು 'ಟಿತ್' ಆಗಿಯೇ ಇದೆ. ಅಲ್ಲಿ 'ಕಿದ್ವದ್ಭಾವ' ಇಲ್ಲದಿದ್ದರೂ ಇದ್ದಂತೆ ಭಾವಿಸಬೇಕು. ಇದಕ್ಕೆ 'ಅತಿದೇಶ'ವೆಂದು ಹೆಸರು. ಕಿದ್ವದ್ಭಾವದಿಂದ ಹಲವು ರೂಪಗಳು ಸಿದ್ಧವಾಗಬೇಕಾಗಿದೆ. ಅದುದರಿಂದ ಈ ಅತಿದೇಶವನ್ನು ಮಾಡಲಾಗಿದೆ.

**(ಗುಣ ಮತ್ತು ವೃದ್ಧಿಗಳನ್ನು ನಿಷೇಧಿಸುವ ಸೂತ್ರ)**

**ಸೂತ್ರ– 433.ಕ್ಙಿತಿ ಚ (1.1.5)**

ವೃತ್ತಿಃ–ಗಿತ್, ಕಿತ್, ಙಿತ್ ನಿಮಿತ್ತೇ ಇಗ್–ಲಕ್ಷಣೇ ಗುಣವೃದ್ಧೀ ನ ಸ್ತಃ। ಭೂಯಾತ್। ಭೂಯಾಸ್ತಾಮ್। ಭೂಯಾಸುಃ। ಭೂಯಾಃ। ಭೂಯಾಸ್ತಮ್। ಭೂಯಾಸ್ತ।

ಭೂಯಾಸಮ್। ಭೂಯಾಸ್ವ। ಭೂಯಾಸ್ಮ।

ಪ. ಛೇ. – ಗ್ ಚ, ಕ್ ಚ, ಙ್ ಚ ಕ್ ಗ್ ಙಃ ತೇ ಇತಃ ಯಸ್ಯ ಸಃ ಕ್ಙಿತ್ ತಸ್ಮಿನ್ ಕ್ಙಿತಿ।

ಅ. ವ್ಯ. – "ಇಕೋ ಗುಣ ವೃದ್ಧೀ" ಎಂಬ ಸೂತ್ರವು ಅನುವೃತ್ತವಾಗುತ್ತದೆ. ಮತ್ತು "ನ ಧಾತುಲೋಪ ಆರ್ಧಧಾತುಕೇ" ಎಂಬ ಸೂತ್ರದಿಂದ 'ನ' ಎಂಬ ಶಬ್ದವು ಅನುವೃತ್ತವಾಗುತ್ತದೆ.

ಅರ್ಥ– ಗಿತ್, ಕಿತ್ ಮತ್ತು ಜಿತ್ ಇವುಗಳನ್ನು ನಿಮಿತ್ತವಾಗಿ ಇರುವ 'ಇಕ್'ಗೆ ಆಗುವ ಗುಣವೃದ್ಧಿಗಳು ಆಗುವುದಿಲ್ಲ.

ಉದಾ–ಭೂಯಾತ್ – ಭೂಧಾತುವಿನ "ಆಶಿಷಿ ಲಿಙ್–ಲೋಟೌ" ಎಂಬ ಸೂತ್ರದಲ್ಲಿ ಹೇಳಿರುವ ಆಶೀರ್ವಾದಾರ್ಥದಲ್ಲಿ 'ಲಿಙ್' 'ಲ್' ಕಾರ ಬಂದಾಗ, ಅದರಸ್ಥಾನದಲ್ಲಿ ಪ್ರಥಮ ಪುರುಷ ಏಕವಚನದಲ್ಲಿ ಮೂಲ ಆಖ್ಯಾತಪ್ರತ್ಯಯವಾದ ತಿಪ್ (ತಿ) ಬಂದು, ಭೂ+ತಿ ಎಂದು ಇರುತ್ತದೆ. "ತಿಙ್ ಶಿತ್ ಸಾರ್ವಧಾತುಕಮ್" ಎಂಬ ಸೂತ್ರದಿಂದ ಬರುವ ಸಾರ್ವಧಾತುಕ ಸಂಜ್ಞೆಯನ್ನು ಬಾಧಿಸಿ "ಲಿಙಾಶಿಷೀ" ಎಂಬ ಸೂತ್ರದಿಂದ ಆರ್ಧಧಾತುಕ ಸಂಜ್ಞೆ ಬರುತ್ತದೆ. ಆದ್ದರಿಂದ ಶಪ್ ವಿಕರಣ ಪ್ರತ್ಯಯವು ಬರುವುದಿಲ್ಲ. ಹೀಗೆ ಭೂ+ತಿ ಎಂದಿದ್ದಾಗ, "ಯಾಸುಟ್ ಪರಸ್ಮೈಪದೇಷೂದಾತ್ತೋ ಜಿಚ್ಚ" ಎಂಬ ಸೂತ್ರದಿಂದ 'ತಿ' ಪ್ರತ್ಯಯಕ್ಕೆ ಯಾಸುಟ್ (ಯಾಸ್) ಆಗಮವು ಆದ್ಯವಯವಾಗಿ ಬಂದು, ಭೂ+ಯಾಸ್+ತಿ ಎಂದಿರುತ್ತದೆ. ಯಾಸ್‌ಗೆ "ಕಿದಾಶಿಷೀ" ಎಂಬ ಸೂತ್ರದಿಂದ ಅತಿದೇಶದಿಂದ ಕಿತ್ವವು ಬರುತ್ತದೆ. ಭೂ+ಯಾಸ್+ತಿ ಎಂದಿದ್ದಾಗ 'ತಿ' ಯು ಆರ್ಧಧಾತುಕವಾಗಿರುವುದರಿಂದ, ಯಾಸ್ ಎಂಬ ಆಗಮವನ್ನು ಆರ್ಧಧಾತುಕವಾಗಿ ಭಾವಿಸಿ "ಸಾರ್ವಧಾತುಕಾರ್ಧಧಾತುಕಯೋಃ" ಎಂಬ ಸೂತ್ರದಿಂದ 'ಊ' ಕಾರಕ್ಕೆ ಬರುವ ಗುಣವನ್ನು ಪ್ರಕೃತ ಸೂತ್ರವು ನಿಷೇಧಿಸುತ್ತದೆ. ಆದುದ್ದರಿಂದ ಯಾಸುಟ್ (ಯಾಸ್)ಗೆ ಕಿತ್ವವು ಬಂದಿದೆ. ಆದ್ದರಿಂದ 'ಭೂ' ನಲ್ಲಿರುವ ಊ ಕಾರಕ್ಕೆ ಬರುವ ಗುಣವು ನಿಷೇಧಿಸಲಾಗಿದೆ. 'ತಿ' ನಲ್ಲಿರುವ 'ಇ' ಕಾರವು "ಇತಶ್ಚ" ಎಂಬ ಸೂತ್ರದಿಂದ ಲೋಪವಾಗಿ ಭೂ+ಯಾಸ್+ತ್ ಎಂದಿರುತ್ತದೆ. ಸ್ ಮತ್ತು ತ್ ಗಳ ನಂತರ ಯಾವ ಸ್ವರವು ಇಲ್ಲದೇ ಇರುವುದರಿಂದ "ಹಲೋಽನಂತರಾಃ ಸಂಯೋಗಃ" ಎಂಬುದರಿಂದ ಸ್ ಮತ್ತು ತ್‌ಗಳಿಗೆ ಸಂಯೋಗ ಸಂಜ್ಞೆ ಬಂದು "ಸ್ಕೋಃ ಸಂಯೋಗಾದ್ಯೋರಂತೇ ಚ" ಎಂಬ ಸೂತ್ರದಿಂದ ಸ್ ಕಾರಕ್ಕೆ ಲೋಪ ಬಂದು ಭೂಯಾತ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಭೂಯಾಸ್ತಾಮ್– ಭೂ ಧಾತುವಿನ ಮೇಲೆ ಆಶೀರ್ಲಿಙ್ ನಲ್ಲಿ ಪ್ರಥಮ ಪುರುಷ ದ್ವಿವಚನದಲ್ಲಿ ಭೂ+ತಸ್ ಎಂದಿದ್ದಾಗ "ಯಾಸುಟ್ ಪರಸ್ಮೈಪದೇಷೂದಾತ್ತೋ ಜಿಚ್ಚ" ಎಂಬ ಸೂತ್ರದಿಂದ ಯಾಸುಟ್ (ಯಾಸ್) ಆಗಮವು ಬಂದು, ಭೂ+ಯಾಸ್+ ತಸ್ ಎಂದಿರುತ್ತದೆ. ಯಾಸ್‌ಗೆ ಕಿದ್ವದ್ಭಾವವು ಬಂದಿರುವುದರಿಂದ ಗುಣ ನಿಷೇಧಿಸಲಾಗಿದೆ. "ತಸ್ಥಸ್ಥಮಿಪಾಮ್ ತಾಮ್ –ತಮ್–ತ–ಅಮಃ" ಎಂಬ ಸೂತ್ರದಿಂದ ತಸ್‌ಗೆ ತಾಮ್ ಆದೇಶವು ಬಂದು ಭೂಯಾಸ್ತಾಮ್ ಎಂಬ ರೂಪವು ಬರುತ್ತದೆ.

ವಿಶೇಷ–ಇಲ್ಲಿ 'ಸ್' ಮತ್ತು 'ತ್'ಗಳಿಗೆ ಸಂಯೋಗವಿದ್ದರೂ ಪದಾನ್ತವಾಗಿಲ್ಲ– ದಿರುವುದರಿಂದಲೂ ಮತ್ತು 'ಝಲ್' ಇದಕ್ಕೆ ಪರದಲ್ಲಿ ಇಲ್ಲದೇ ಇರುವುದರಿಂದಲೂ

"ಸ್ಕೋಃ ಸಂಯೋಗಾದ್ಯೋರಂತೇ ಚ" ಎಂಬ ಸೂತ್ರದಿಂದ ಸ್ ಕಾರಕ್ಕೆ ಲೋಪ ಬರುವುದಿಲ್ಲ.

ಉದಾ– ಭೂಯಾಸುಃ– ಭೂ ಧಾತುವಿನ ಮೇಲೆ ಲಿಙ್ ಲಕಾರದಲ್ಲಿ ಪ್ರಥಮ ಪುರುಷ ಬಹುವಚನದಲ್ಲಿ ಭೂ+ಝಿ ಎಂದಿದ್ದಾಗ, ಝಿ ಪ್ರತ್ಯಯಕ್ಕೆ "ಝೇರ್ಜುಸ್" ಎಂಬ ಸೂತ್ರದಿಂದ ಜುಸ್ (ಉಸ್) ಆದೇಶ ಬಂದು, ಭೂ+ಉಸ್ ಎಂದಿದ್ದಾಗ, "ಯಾಸುಟ್ ಪರಸ್ಮೈಪದೇಷೂದಾತ್ತೋ ಙಿಚ್ಚ" ಎಂಬ ಸೂತ್ರದಿಂದ ಯಾಸುಟ್ (ಯಾಸ್) ಆಗಮವು ಬಂದು, ಭೂ+ಯಾಸ್+ಉಸ್ ಎಂದಿರುತ್ತದೆ. 'ಯಾಸ್'ಗೆ ಕಿದ್ವದ್‌ಭಾವ ಬಂದಿರುವುದರಿಂದ ಗುಣವು ಬರುವುದಿಲ್ಲ. ಆದ್ದರಿಂದ ಭೂಯಾಸುಸ್ ಎಂದಿರುತ್ತದೆ. 'ಸ್' ಕಾರಕ್ಕೆ ರುತ್ವ ವಿಸರ್ಗಗಳು ಬಂದು, ಭೂಯಾಸುಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ:– ಭೂಯಾಃ– ಭೂ ಧಾತುವಿನ ಮೇಲೆ ಆಶೀರ್ಲಿಙ್‌ನಲ್ಲಿ ಮಧ್ಯಮ ಪುರುಷ ಏಕವಚನದಲ್ಲಿ ಸಿಪ್ (ಸಿ) ಪ್ರತ್ಯಯವನ್ನು ಸೇರಿಸಿ ಭೂ+ಸಿ ಎಂದಿದ್ದಾಗ, "ಯಾಸುಟ್ ಪರಸ್ಮೈಪದೇಷೂದಾತ್ತೋ ಙಿಚ್ಚ" ಎಂಬ ಸೂತ್ರದಿಂದ ಯಾಸುಟ್ (ಯಾಸ್) ಆಗಮ ಬಂದು, ಭೂ+ಯಾಸ್+ಸಿ ಎಂದಿರುತ್ತದೆ. ಯಾಸ್‌ಗೆ ಕಿದ್ವದ್ ಭಾವ ಬಂದಿರುವುದರಿಂದ ಗುಣ ನಿಷೇಧಿಸಲಾಗಿದೆ. ಸಿ ನಲ್ಲಿರುವ 'ಇ' ಕಾರಕ್ಕೆ "ಇತಶ್ಚ" ಎಂಬುದರಿಂದ ಲೋಪ ಬಂದು, ಭೂ+ಯಾಸ್+ಸ್ ಎಂದಿರುತ್ತದೆ. "ಸ್ಕೋಃ ಸಂಯೋಗಾದ್ಯೋರಂತೇ ಚ" ಎಂಬ ಸೂತ್ರದಿಂದ ಯಾಸ್ ಎಂಬಲ್ಲಿರುವ ಸ್ ಕಾರಕ್ಕೆ ಲೋಪ ಬಂದು ಕೊನೆಯಲ್ಲಿರುವ 'ಸ್' ಕಾರಕ್ಕೆ ರುತ್ವ ವಿಸರ್ಗಗಳು ಬಂದು ಭೂಯಾಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಭೂಯಾಸ್ತಮ್– ಮಧ್ಯಮಪುರುಷ ದ್ವಿವಚನದಲ್ಲಿ ಭೂ+ಥಸ್ ಎಂದಿದ್ದಾಗ, "ಯಾಸುಟ್ ಪರಸ್ಮೈಪದೇಷೂದಾತ್ತೋ ಙಿಚ್ಚ" ಎಂಬ ಸೂತ್ರದಿಂದ ಯಾಸುಟ್ (ಯಾಸ್) ಆಗಮ ಬಂದು, ಭೂ+ಯಾಸ್+ಥಸ್ ಎಂದಿರುತ್ತದೆ. ಯಾಸ್‌ಗೆ ಕಿದ್ವದ್ ಭಾವ ಬಂದಿರುವುದರಿಂದ ಗುಣ ನಿಷೇಧಿಸಲಾಗಿದೆ. "ತಸ್ತಸ್ಥಮಿಪಾಮ್ ತಾಮ್ – ತಮ್–ತ–ಅಮಃ" ಎಂಬ ಸೂತ್ರದಿಂದ ಥಸ್ ಗೆ ತಮ್ ಆದೇಶ ಬಂದು ಭೂಯಾಸ್ತಮ್ ಎಂಬ ರೂಪವು ಸಿದ್ಧವಾಗಿದೆ.

ಉದಾ– ಭೂಯಾಸ್ತ – ಹಿಂದಿನಂತೆಯೇ ಪ್ರಕ್ರಿಯೆ ನಡೆದು ಥ ಪ್ರತ್ಯಯಕ್ಕೆ 'ತ' ಆದೇಶವಾಗಿ ಬಂದು, ಭೂಯಾಸ್ತ ಎಂಬ ರೂಪವು ಸಿದ್ಧವಾಗಿದೆ.

ಉದಾ– ಭೂಯಾಸಮ್ – ಉತ್ತಮಪುರುಷ ಏಕವಚನದಲ್ಲಿ ಭೂ+ಮಿಪ್ ಎಂದಿದ್ದಾಗ, "ಯಾಸುಟ್ ಪರಸ್ಮೈಪದೇಷೂದಾತ್ತೋ ಙಿಚ್ಚ" ಎಂಬ ಸೂತ್ರದಿಂದ ಯಾಸುಟ್ (ಯಾಸ್) ಆಗಮ ಬಂದು, ಭೂ+ಯಾಸ್+ಮಿ ಎಂದಿರುತ್ತದೆ 'ಯಾಸ್' ಗೆ ಕಿದ್ವದ್ಭಾವ ಬಂದಿರೋಣದರಿಂದ ಗುಣ ನಿಷೇಧಿಸಲಾಗಿದೆ. ಹೀಗೆ ಭೂಯಾಸ್+ಮಿ ಎಂದಿದ್ದಾಗ 'ಮಿ' ಗೆ ಹಿಂದಿನಂತೆ 'ಅಮ್' ಆದೇಶ ಬಂದು ಭೂಯಾಸ್+ಅಮ್=ಭೂಯಾಸಮ್ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ- ಭೂಯಾಸ್ವ, ಭೂಯಾಸ್ಮ- ಉತ್ತಮಪುರುಷ ದ್ವಿವಚನ ಮತ್ತು ಬಹುವಚನಗಳಲ್ಲಿ ಕ್ರಮವಾಗಿ ಭೂ+ವಸ್ ಮತ್ತು ಭೂ+ಮಸ್ ಎಂದಿದ್ದಾಗ, ಪ್ರಕ್ರಿಯೆಯು ಹಿಂದಿನಂತೆಯೇ ಇರುತ್ತದೆ. ಆದರೆ ವಸ್, ಮಸ್‌ಗಳಲ್ಲಿರುವ 'ಸ್' ಕಾರವು "ನಿತ್ಯಂ ಙಿತಃ" ಎಂಬ ಸೂತ್ರದಿಂದ ಲೋಪವಾಗಿ, ಭೂಯಾಸ್ವ ಮತ್ತು ಭೂಯಾಸ್ಮ ಎಂಬ ರೂಪಗಳು ಸಿದ್ಧವಾಗುತ್ತವೆ.

**(ಭೂತಾರ್ಥದಲ್ಲಿ ಲುಙ್ 'ಲ್' ಕಾರವನ್ನು ವಿಧಿಸುವ ಸೂತ್ರ)**

**ಸೂತ್ರ- 434.ಲುಙ್ (3.2.110)**

ವೃತ್ತಿಃ-ಭೂತಾರ್ಥೇ ಧಾತೋಃ ಲುಙ್ ಸ್ಯಾತ್।

ಅ. ವ್ಯ. ಭೂತೇ, ಧಾತೋಃ, ಪ್ರತ್ಯಯಃ ಮತ್ತು ಪರಶ್ಚ ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ- ಸಾಮಾನ್ಯ ಭೂತಕಾಲದಲ್ಲಿ ಧಾತುವಿನ ಪರದಲ್ಲಿ ಲುಙ್ 'ಲ್'ಕಾರವು ಬರುತ್ತದೆ. (ಅನದ್ಯತನ ಭೂತಕಾಲದಲ್ಲೂ 'ಲುಙ್' 'ಲ್'ಕಾರವು ಬರುತ್ತದೆ).

**(ಮಾಙ್ ಉಪಪದವಿದ್ದಾಗ ಧಾತುವಿಗೆ ಲುಙ್ 'ಲ್'ಕಾರ ವಿಧಿಸುವ ಸೂತ್ರ)**

ಸೂತ್ರ- 435.ಮಾಙಿ ಲುಙ್ (3.3.175)

ವೃತ್ತಿಃ-ಸರ್ವಲಕಾರಾಪವಾದಃ।

ಅ. ವ್ಯ. – ಧಾತೋಃ, ಪ್ರತ್ಯಯಃ ಮತ್ತು ಪರಶ್ಚ ಎಂಬವು ಅಧಿಕಾರಸೂತ್ರಗಳಾಗಿವೆ.

ಅರ್ಥ- 'ಮಾಙ್' ಶಬ್ದವು ಉಪಪದವಾಗಿದ್ದಾಗ, ಧಾತುವಿನ ನಂತರ 'ಲುಙ್' 'ಲ್' ಕಾರವು ಬರುತ್ತದೆ. ಇದು ಉಳಿದ ಎಲ್ಲ'ಲ್'ಕಾರಗಳಿಗೂ ಅಪವಾದವಾಗಿದೆ.

**(ಲಙ್ ಮತ್ತು ಲುಙ್ 'ಲ್' ಕಾರಗಳನ್ನು ವಿಧಿಸುವ ಸೂತ್ರ)**

**ಸೂತ್ರ- 436.ಸ್ಮೋತ್ತರೇ ಲಙ್ ಚ (3.3.176)**

ವೃತ್ತಿಃ-ಸ್ಮೋತ್ತರೆ ಮಾಙಿ ಲಙ್ ಸ್ಯಾತ್ ಚಾತ್ ಲುಙ್।

ಅ. ವ್ಯ.- "ಮಾಙಿ ಲುಙ್" ಎಂಬ ಸೂತ್ರದಿಂದ 'ಮಾಙಿ' ಎಂಬ ಶಬ್ದವು ಅನುವೃತ್ತವಾಗುತ್ತದೆ. ಪ್ರತ್ಯಯಃ ಮತ್ತು ಪರಶ್ಚ ಎಂಬವು ಅಧಿಕಾರಸೂತ್ರಗಳಾಗಿವೆ.

ಅರ್ಥ- 'ಸ್ಮ' ಶಬ್ದವನ್ನು ಪರದಲ್ಲಿ ಉಳ್ಳ, 'ಮಾಙ್' ಎಂಬ ಉಪಪದದ ಪರದಲ್ಲಿ ಉಳ್ಳ ಧಾತುವಿನ ನಂತರ, 'ಲಙ್' ಮತ್ತು 'ಲುಙ್' 'ಲ್' ಕಾರಗಳು ಬರುತ್ತವೆ. 'ಚ' ಕಾರ ಶಬ್ದವು ಸೂತ್ರದಲ್ಲಿ ಇರೋಣದ್ದರಿಂದ 'ಲುಙ್' 'ಲ್' ಕಾರವೂ ಗೃಹೀತವಾಗಿದೆ.

**(ಚ್ಲಿ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ- 437.ಚ್ಲಿ ಲುಙಿ (3.1.43)**

ವೃತ್ತಿಃ – ಶಬಾದ್ಯಪವಾದಃ।

ಅ. ವ್ಯ.- "ಧಾತೋರೇಕಾಚೋ ಹಲಾದೇಃ ಕ್ರಿಯಾ ಸಮಭಿಹಾರೇ ಯಙ್"

ಎಂಬ ಸೂತ್ರದಿಂದ 'ಧಾತೋಃ' ಎಂಬ ಪದವು ಅನುವೃತ್ತವಾಗುತ್ತದೆ. ಪ್ರತ್ಯಯಃ ಮತ್ತು ಪರಶ್ಚ ಎಂಬವು ಅಧಿಕಾರಸೂತ್ರಗಳಾಗಿವೆ.

ಅರ್ಥ– "ಲುಙ್' 'ಲ್'ಕಾರವು ಪರದಲ್ಲಿದ್ದಾಗ, ಧಾತುವಿನ ಪರದಲ್ಲಿ 'ಚ್ಲಿ' ಪ್ರತ್ಯಯವು ಆಗಮವಾಗಿ ಬರುತ್ತದೆ. 'ಚ್ಲಿ' ನಲ್ಲಿ 'ಲ್' ಮಾತ್ರ ಉಳಿಯುತ್ತದೆ.

**(ಚ್ಲಿ ಗೆ ಸಿಚ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ– 438.ಚ್ಲೇಃ ಸಿಚ್ (3.1.44)**

ವೃತ್ತಿಃ–ಇಚಾವಿತೌ।

ಪ. ಛೇ– ಚ್ಲೇಃ, ಸಿಚ್।

ಅರ್ಥ– ಚ್ಲಿ ಎಂಬುವುದಕ್ಕೆ ಸಿಚ್ (ಸ್) ಆದೇಶವು ಬರುತ್ತದೆ.

ವಿಶೇಷ–ಚ್ಲಿಯ ಸ್ಥಾನದಲ್ಲಿ 'ಸಿಚ್(ಸ್)' ಪ್ರತ್ಯಯವೇ ಬರುವದಾದರೆ, ಸಾಕ್ಷಾತ್ತಾಗಿ 'ಸಿಚ್' ಪ್ರತ್ಯಯವನ್ನು ಯಾಕೆ ವಿಧಿಸಲಿಲ್ಲ. "ಚ್ಲಿ ಲುಙಿ" ಮತ್ತು "ಚ್ಲೇಃ ಸಿಚ್" ಈ ಸೂತ್ರಗಳನ್ನು ಬರೆಯುದಕ್ಕೆ ಬದಲಾಗಿ "ಸಿಚ್ ಲುಙಿ" ಎಂದೇ ಹೇಳಬಹುದಾಗಿತ್ತಲ್ಲ ಎಂದರೆ, ಇದಕ್ಕೆ ಸಮಾಧಾನವು ಹೀಗಿದೆ. ಪಾಣಿನೀ ಮುನಿಗಳು 'ಚ್ಲಿ' ಗೆ 'ಸಿಚ್' ವಿಧಿಸುವಂತೆ ಬೇರೆಕಡೆಗಳಲ್ಲಿ "ಚಙ್' ಮತ್ತು 'ಅಙ್' ಹಾಗೆಯೇ 'ಕ್ಸ' ಆದೇಶಗಳನ್ನು ವಿಧಿಸುತ್ತಾರೆ. ಇದರಿಂದ ಕೆಲವು ಪ್ರತ್ಯಯಗಳು ಬಾಧಿತವಾಗಿ ಅದರ ಸ್ಥಾನದಲ್ಲಿ ಬೇರೆ ಪ್ರತ್ಯಯಗಳು ಬರುತ್ತವೆ. ಆದುದರಿಂದ 'ಸಿಚ್' 'ಚಙ್' 'ಅಙ್' ಮತ್ತು 'ಕ್ಸ' ಮೊದಲಾದವುಗಳಿಗೆ ಯಾವದಾದರೂ ಒಂದು ಸ್ಥಾನಿಯು ಅವಶ್ಯಕವಾಗಿರುತ್ತದೆ. ಈ ಕಾರಣದಿಂದ 'ಚ್ಲಿ'ಯನ್ನು ಸಾಮಾನ್ಯ ಪ್ರತ್ಯಯವನ್ನಾಗಿ ಮಾಡಿ 'ಸಿಚ್' ಮೊದಲಾದವುಗಳನ್ನು ಆದೇಶವಾಗಿ ವಿಧಿಸಲಾಗಿದೆ.

**(ಸಿಚ್ ಗೆ ಲುಕ್– ವಿಧಿಸುವ ಸೂತ್ರ)**

**ಸೂತ್ರ– 439.ಗಾತಿ–ಸ್ಥಾ–ಘು–ಪಾ–ಭೂಭ್ಯಃ ಸಿಚಃ ಪರಸ್ಮೈಪದೇಷು (2.4.77)**

ವೃತ್ತಿಃ–ಏಭ್ಯಃ ಸಿಚಃ ಲುಕ್ ಸ್ಯಾತ್। ಗಾಪೌ(ಪಾ)ಇಹ ಇಣಾದೇಶ–ಪಿಬತೀ ಗೃಹ್ಯೇತೇ।

ಅ. ವೃ – "ಣ್ಯ ಕ್ಷತ್ರಿಯಾರ್ಷ ಜಿತೋಯೂನಿಲುಗಣಿಞೋಃ" ಎಂಬಸೂತ್ರದಿಂದ 'ಲುಕ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– 'ಇಣ್' ಧಾತುವಿನ ಸ್ಥಾನದಲ್ಲಿ ಬರುವ 'ಗಾ–ಸ್ಥಾ–ಘು– ಸಂಜ್ಞಕ ಧಾತು 'ಪಾ' ಮತ್ತು ಭೂ ಧಾತುಗಳ ನಂತರ 'ಸಿಚ್' ಗೆ 'ಲುಕ್(ಲೋಪ)' ಬರುತ್ತದೆ.

ವಿಶೇಷ– 'ಗಾ' ಧಾತುವು ಸ್ವತಂತ್ರವಾಗಿಯೂ ಇದೆ, ಈ ಸೂತ್ರಸ್ಥ 'ಗಾ' ಧಾತುವನ್ನು ಸ್ವತಂತ್ರ 'ಗಾ' ಧಾತುವಿನಿಂದ ಬೇರ್ಪಡಿಸಲು 'ಇಣಾದೇಶ ಗಾ ಧಾತು' ಎಂದು ಹೇಳಲಾಗಿದೆ. ಅಂದರೆ ಪ್ರಕೃತ ಸೂತ್ರದಲ್ಲಿ 'ಇಣ್' ಧಾತುವಿಗೆ 'ಗಾ' ಎಂಬ ಧಾತುವು ಆದೇಶವಾಗಿ ಬಂದಿದೆ. ಆದ್ದರಿಂದ ಇದು ಪ್ರತ್ಯೇಕವಾದ ಧಾತು.

ದಾ ಮತ್ತು ಧಾ ಧಾತುಗಳಿಗೆ "ದಾಧಾಘ್ವದಾಪ್" ಎಂಬ ಸೂತ್ರದಿಂದ 'ಘು'

ಸಂಜ್ಞೆಯು ವಿಧಿಸಲ್ಪಟ್ಟಿದೆ. ಈ ರೀತಿಯಲ್ಲಿ 'ಪಾ' ಧಾತುವು ಸ್ವತಂತ್ರವಾಗಿಯೂ ಇದೆ, ಆದರೆ ಪ್ರಕೃತ ಸೂತ್ರದಲ್ಲಿ 'ಪಿಬ್' ಆದೇಶವನ್ನು ಹೊಂದುವ 'ಪಾ' ಧಾತುವನ್ನೇ ಗ್ರಹಣ ಮಾಡಬೇಕು ಎಂದು ಭಾಷ್ಯಕಾರರು ಸಾರಿರುತ್ತಾರೆ.

**(ಗುಣವನ್ನು ನಿಷೇಧಿಸುವ ಸೂತ್ರ)**

**ಸೂತ್ರ– 440.ಭೂಸುವೋಸ್ತಿಙಿ (7.3.88)**

ವೃತ್ತಿಃ–ಭೂ ಸೂ ಏತಯೋಃ ಸಾರ್ವಧಾತುಕೇ ತಿಙಿ ಪರೇ ಗುಣೋ ನ। ಅಭೂತ್। ಅಭೂತಾಮ್। ಅಭೂವನ್। ಅಭೂಃ। ಅಭೂತಮ್। ಅಭೂತ। ಅಭೂವಮ್। ಅಭೂವ। ಅಭೂಮ।

ಪ. ಛೇ. – ಭೂ, ಸುವೋಃ, ತಿಙಿ।

ಅ.ವೃ – "ನಾಭ್ಯಸ್ತಸ್ಯಾಚಿ ಪಿತಿ ಸಾರ್ವಧಾತುಕೇ" ಎಂಬ ಸೂತ್ರದಿಂದ 'ನ' ಮತ್ತು 'ಸಾರ್ವಧಾತುಕೇ' ಎಂಬ ಎರಡು ಪದಗಳು ಮತ್ತು "ಮಿದೇರ್ಗುಣಃ" ಎಂಬ ಸೂತ್ರದಿಂದ 'ಗುಣಃ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ– ಸಾರ್ವಧಾತುಕ ತಿಙ್ ಪ್ರತ್ಯಯಗಳು ಪರದಲ್ಲಿದ್ದಾಗ, 'ಭೂ' ಮತ್ತು 'ಸೂ' ಧಾತುಗಳ 'ಇಗ್' ವರ್ಣಗಳಿಗೆ ಗುಣವು ಬರುವುದಿಲ್ಲ.

ಉದಾ – ಅಭೂತ್– 'ಭೂ' ಧಾತುವಿನಮೇಲೆ ಸಾಮಾನ್ಯ ಭೂತಾರ್ಥದಲ್ಲಿ 'ಲುಙ್' 'ಲ್' ಕಾರವು ವಿಧಿಸಲಾಗಿದೆ. "ಲುಙ್ಲಙ್ಲೃಙ್ಕ್ಷ್ವಡುತಾತ್ತಃ" ಎಂಬ ಸೂತ್ರದಿಂದ 'ಭೂ'ಧಾತುವಿಗೆ 'ಅಟ್' ಆಗಮವು ಬಂದಿರುತ್ತದೆ. ಪ್ರಥಮಪುರುಷ ಏಕವಚನದಲ್ಲಿ ತಿಪ್(ತಿ) ಆದೇಶವು ಬಂದು ಅ+ಭೂ+ತಿ ಎಂದಿರುತ್ತದೆ. 'ತಿ' ಪ್ರತ್ಯಯಕ್ಕೆ "ಸಾರ್ವಧಾತುಕ" ಸಂಜ್ಞೆ ಬಂದಿರೋಣದರಿಂದ ಕರ್ತರಿ ಶಪ್(ಅ) ಬರಬೇಕಾಗಿತ್ತು, ಅದನ್ನು ಬಾಧಿಸಿ "ಚ್ಲಿ ಲುಙಿ" ಎಂಬ ಸೂತ್ರದಿಂದ 'ಚ್ಲಿ(ಲ್)' ಆದೇಶವು ಬರುತ್ತದೆ. ಅದಕ್ಕೆ "ಚ್ಲೇಃ ಸಿಚ್" ಎಂಬ ಸೂತ್ರದಿಂದ 'ಸಿಚ್(ಸ್)' ಆದೇಶ ಬಂದು ಅಭೂ+ಸ್+ತಿ ಎಂದಿರುತ್ತದೆ. 'ಸಿಚ್'ನಲ್ಲಿರುವ 'ಸ್' ಕಾರಕ್ಕೆ ಆರ್ಧಧಾತುಕ ಸಂಜ್ಞೆ ಬರುತ್ತದೆ. (ಇದಕ್ಕೆ ಭೂ ಧಾತುವಿನಲ್ಲಿ ಯಾವ ಪ್ರಯೋಜನವೂ ಇಲ್ಲ. ಆದರೆ ಬೇರೆಕಡೆಗೆ ಇದಕ್ಕೆ ಪ್ರಯೋಜನವಿದೆ). "ಗಾತಿ–ಸ್ಥಾ–ಘು–ಪಾ–ಭೂಭ್ಯಃ ಸಿಚಃ ಪರಸ್ಮೈಪದೇಷು" ಎಂಬ ಸೂತ್ರದಿಂದ 'ಸ್' ಕಾರಕ್ಕೆ 'ಲುಕ್(ಲೋಪ)' ಬರುತ್ತದೆ. ಆಗ ಅಭೂ+ತಿ ಎಂದಿರುತ್ತದೆ. "ಸಾರ್ವಧಾತುಕ ಪ್ರತ್ಯಯವಾದ 'ತಿ' ಪರದಲ್ಲಿರೋಣದರಿಂದ ಭೂ ಧಾತುವಿನಲ್ಲಿರುವ 'ಊ' ಕಾರಕ್ಕೆ ಬರಬೇಕಾದ ಗುಣವನ್ನು ಪ್ರಕೃತ ಸೂತ್ರವು ನಿಷೇಧಿಸುತ್ತದೆ. 'ತಿ' ನಲ್ಲಿರುವ 'ಇ' ಕಾರಕ್ಕೆ "ಇತಶ್ಚ" ಎಂಬ ಸೂತ್ರದಿಂದ ಲೋಪ ಬಂದು ಅಭೂ+ತ್=ಅಭೂತ್ ಎಂದು ರೂಪವಾಗುತ್ತದೆ.

ಉದಾ– ಅಭೂತಾಮ್– ಪ್ರಥಮಪುರುಷ ದ್ವಿ ವಚನದಲ್ಲಿ ಭೂ+ತಸ್ ಎಂದಿದ್ದಾಗ, ಹಿಂದಿನಂತೆಯೇ ಅಡಾಗಮ ಮತ್ತು 'ತಸ್' ಗೆ 'ತಾಮ್' ಆದೇಶಬಂದು ಅ+ಭೂ+ತಾಮ್=ಅಭೂತಾಮ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ–ಅಭೂವನ್– ಪ್ರಥಮಪುರುಷ ಬಹು ವಚನದಲ್ಲಿ ಭೂ+ಝಿ ಎಂದಿದ್ದಾಗ, ಹಿಂದಿನಂತೆಯೇ ಅಡಾಗಮ ಮತ್ತು 'ಝ್'ಗೆ 'ಅನ್ತ್' ಆದೇಶ ಬಂದು ಅ+ಭೂ+ಅನ್ತ್+ಇ ಎಂದಿರುತ್ತದೆ. ಆಗ "ಭುವೋವುಗ್‌ಲುಙ್‌ಲಿಟೋಃ" ಎಂಬ ಸೂತ್ರದಿಂದ 'ವುಕ್(ವ್)' ಆಗಮವು ಬಂದು ಅಭೂ+ವ್+ಅನ್ತ್+ಇ ಎಂದು ಇರುತ್ತದೆ 'ಚ್ಲಿ' ಯ ಸ್ಥಾನದಲ್ಲಿ 'ಸಿಚ್(ಸ್)' ಬಂದು ಅಭೂವ್+ಸ್+ಅನ್ತಿ ಎಂದಿದ್ದಾಗ ಗಾತಿ–ಸ್ಥಾ–ಘು–ಪಾ–ಭೂಭ್ಯಃ ಸಿಚಃ ಪರಸ್ಮೈಪದೇಷು" ಎಂಬ ಸುತ್ರದಿಂದ 'ಸ್' ಕಾರಕ್ಕೂ ಮತ್ತು"ಇತಶ್ಚ" ಎಂಬ ಸೂತ್ರದಿಂದ 'ಇ' ಕಾರಕ್ಕೂ ಲೋಪ ಬಂದು ಅಭೂವ್+ಅನ್ತ್ ಎಂದಿದ್ದಾಗ, "ಸಂಯೋಗಾನ್ತಸ್ಯ ಲೋಪಃ" ಎಂಬ ಸೂತ್ರದಿಂದ 'ತ್'ಕಾರಕ್ಕೆ ಲೋಪ ಬಂದು, ಅಭೂವನ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ – ಅಭೂಃ – ಲುಙ್ 'ಲ್' ಕಾರದಲ್ಲಿ ಮಧ್ಯಮಪುರುಷ ಏಕವಚನದಲ್ಲಿ ಭೂ ಧಾತುವಿನಮೇಲೆ 'ಸಿಪ್'(ಸಿ) ಬಂದು ಭೂ+ಸಿ ಎಂದಿದ್ದಾಗ, ಅಡಾಗಮ ಬಂದು ಅಭೂ+ಸಿ ಎಂದಿದ್ದಾಗ, 'ಇತಶ್ಚ' ಎಂಬುದರಿಂದ 'ಇ' ಕಾರಕ್ಕೆ ಲೋಪ ಬಂದು ಅಭೂ+ಸ್=ಅಭೂಸ್ ಎಂದಿದ್ದಾಗ 'ಸ್' ಕಾರಕ್ಕೆ ರುತ್ವ–ವಿಸರ್ಗಗಳಿಂದ ಅಭೂಃ ಎಂದು ರೂಪವಾಗುತ್ತದೆ.

ಉದಾ– ಅಭೂತಮ್, ಅಭೂತ– ಮಧ್ಯಮಪುರುಷ ದ್ವಿವಚನ ಬಹುವಚನಗಳಲ್ಲಿ ಭೂ+ಥಸ್ ಎಂದಿದ್ದಾಗ ಹಿಂದಿನಂತೆ ಅಡಾಗಮ, ಸಾರ್ವಧಾತುಕ ಸಂಜ್ಞೆ, ಚ್ಲಿ ಆದೇಶ ಅದಕ್ಕೆ ಮತ್ತೆ 'ಸಿಚ್(ಸ್)' ಆದೇಶ ಬಂದು, ಅಭೂ+ಸ್+ಥಸ್ ಎಂದಿದ್ದಾಗ 'ಸ್' ಕಾರಕ್ಕೆ ಲುಕ್ (ಲೋಪ) ಬಂದು, ಥಸ್ ಗೆ ತಮ್ ಆದೇಶ ಬಂದು ಅಭೂತಮ್ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಅಭೂತ–ಮಧ್ಯಮಪುರುಷ ಬಹುವಚನದಲ್ಲಿ ಇದೇ ರೀತಿ ಭೂ+ಥ ಎಂದಿದ್ದಾಗ, ಹಿಂದಿನಂತೆಯೇ ಪ್ರಕ್ರಿಯೆ ನಡೆದು ಅಭೂ+ಸ್+ಥ ಎಂದಿದ್ದಾಗ, 'ಸ್' ಕಾರಕ್ಕೆ ಲುಕ್ (ಲೋಪ) ಬಂದು, 'ಥ' ಗೆ 'ತ' ಆದೇಶ ಬಂದು ಅಭೂತ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ–ಅಭೂವಮ್ – ಉತ್ತಮ ಪುರುಷ ಏಕವಚನದಲ್ಲಿ ಭೂ+ಮಿಪ್(ಮಿ) ಎಂದಿದ್ದಾಗ, ಹಿಂದಿನಂತೆಯೇ ಪ್ರಕ್ರಿಯೆ ನಡೆದು, ಧಾತುವಿನ ಪೂರ್ವದಲ್ಲಿ ಅಡಾಗಮ ಬಂದು ವುಕ್(ವ್) ಆಗಮ ಬಂದು ಅಭೂ+ವ್+ಮಿ ಎಂದಿದ್ದಾಗ, 'ಮಿ'ಗೆ 'ಅಮ್' ಆದೇಶ ಬಂದು ಅಭೂ+ವ್+ಅಮ್=ಅಭೂವಮ್ ಎಂದು ರೂಪವು ಸಿದ್ಧಿಸುತ್ತದೆ.

ಉದಾ– ಅಭೂವ, ಅಭೂಮ – ಉತ್ತಮ ಪುರುಷ ದ್ವಿವಚನ ಮತ್ತು ಬಹುವಚನಗಳಲ್ಲಿ ಕ್ರಮವಾಗಿ ವಸ್, ಮತ್ತು ಮಸ್ ಪ್ರತ್ಯಯಗಳು ಬಂದು, ಧಾತುವಿನ ಪೂರ್ವದಲ್ಲಿ ಅಡಾಗಮ ಬಂದು ಅಭೂ+ವಸ್ ಮತ್ತು ಅಭೂ+ಮಸ್ ಎಂದಿದ್ದಾಗ, ಹಿಂದಿನಂತೆಯೇ ಪ್ರಕ್ರಿಯೆಗಳು ನಡೆದು "ನಿತ್ಯಂ ಙಿತಃ" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬಂದು ಅಭೂವ ಮತ್ತು ಅಭೂಮ ಎಂಬ ರೂಪಗಳು ಸಿದ್ಧವಾಗುತ್ತವೆ.

### (ಅಟ್ ಮತ್ತು ಆಟ್ ಆಗಮಗಳನ್ನು ನಿಷೇಧಿಸುವ ಸೂತ್ರ)

**ಸೂತ್ರ- 441.ನ ಮಾಙ್ ಯೋಗೇ (6.4.74)**

ವೃತ್ತಿಃ-ಅಡಾಟೌ ನ ಸ್ತಃ। ಮಾ ಭವಾನ್ ಭೂತ್। ಮಾ ಸ್ಮ ಭವತ್। ಮಾ ಸ್ಮ ಭೂತ್।

ಅ. ವ್ಯ.- "ಲುಙ್-ಲಙ್-ಲೃಙ್‌ಕ್ಷ್ವಡುದಾತ್ತಃ" ಎಂಬ ಸೂತ್ರದಿಂದ 'ಅಟ್' ಎಂಬ ಪದವೂ, "ಆಡಜಾದೀನಾಮ್" ಎಂಬ ಸೂತ್ರದಿಂದ 'ಆಟ್' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ- ಮಾಙ್ ಎಂಬ ಅವ್ಯಯದ ಯೋಗವಿದ್ದಾಗ, 'ಲುಙ್' ಮತ್ತು 'ಲಙ್''ಲ್' ಕಾರಗಳಲ್ಲಿ ಧಾತುವಿಗೆ 'ಅಟ್' ಮತ್ತು 'ಆಟ್'ಆಗಮಗಳು ಬರುವುದಿಲ್ಲ.

ಉದಾ- ಮಾ ಭವಾನ್ ಭೂತ್। ಮಾ ಸ್ಮ ಭವತ್। ಮಾ ಸ್ಮ ಭೂತ್। ಈ ಮೂರೂ ಪ್ರಯೋಗಗಳಲ್ಲೂ "ಮಾಙಿ ಲುಙ್" ಮತ್ತು "ಸ್ಮೋತ್ತರೇ ಲಙ್ ಚ" ಎಂಬ ಸೂತ್ರಗಳು ಪ್ರವೃತ್ತವಾಗಿ ಅಡಾಗಮ ಬಾರದೇ ಹಲಾದಿ ಧಾತುವಾಗಿದ್ದಾಗ ಇಂತಹದೇ ಸಂದರ್ಭದಲ್ಲಿ 'ಆಟ್' ಆಗಮವು ಬಾರದೇ, ಈ ಮೇಲಿನ ಪ್ರಯೋಗಗಳು ಸಿದ್ಧವಾಗುತ್ತವೆ. (ಸವರ್ಣದೀರ್ಘ ಸಂಧಿಯಿಂದ 'ಅಟ್' ಆಗಮ ಇದೆ ಎಂದು ಶಂಕಿಸಬಾರದು ಎಂಬುದಕ್ಕಾಗಿ ಮಾ ಭವಾನ್ ಭೂತ್। ಮಾ ಸ್ಮ ಭವತ್। ಮಾ ಸ್ಮ ಭೂತ್। ಎಂಬ ಉದಾಹರಣೆಗಳನ್ನು ಕೊಟ್ಟಿದ್ದಾರೆ).

### (ಲೃಙ್ 'ಲ್' ಕಾರವನ್ನು ವಿಧಿಸುವ ಸೂತ್ರ)

**ಸೂತ್ರ- 442.ಲಿಙ್ ನಿಮಿತ್ತೇ ಲೃಙ್ ಕ್ರಿಯಾತಿಪತ್ತೌ (3.3.3)**

ವೃತ್ತಿಃ-ಹೇತುಹೇತುಮದ್ಭಾವಾದಿ ಲಿಙ್-ನಿಮಿತ್ತಂ ತತ್ರ ಭವಿಷ್ಯತ್ಯರ್ಥೇ ಲೃಙ್ ಸ್ಯಾತ್ ಕ್ರಿಯಾಯಾಃ ಅನಿಷ್ಪತ್ತೌ ಗಮ್ಯಮಾನಾಯಾಮ್। ಅಭವಿಷ್ಯತ್। ಅಭವಿಷ್ಯತಾಮ್। ಅಭವಿಷ್ಯನ್। ಅಭವಿಷ್ಯಃ। ಅಭವಿಷ್ಯತಮ್। ಅಭವಿಷ್ಯತ। ಅಭವಿಷ್ಯಮ್। ಅಭವಿಷ್ಯಾವ। ಅಭವಿಷ್ಯಾಮ। ಸುವೃಷ್ಟಿಶ್ಚೇತ್ ಅಭವಿಷ್ಯತ್ ತದಾ ಸುಭಿಕ್ಷಮಭವಿಷ್ಯತ್ ಇತ್ಯಾದಿ। ಜ್ಞೇಯಮ್। ॥ ಇಲ್ಲಿಗೆ 'ಭೂ' ಧಾತುವಿನ ರೂಪಗಳು ಮುಗಿದವು॥

**ಅತ ಸಾತತ್ಯಗಮನೇ। 2। ಅತತಿ।**

ಅ.ವ್ಯ.-"ಭವಿಷ್ಯತಿ ಮರ್ಯಾದಾ ವಚನೇಽವರಸ್ಮಿನ್" ಎಂಬ ಸೂತ್ರದಿಂದ 'ಭವಿಷ್ಯತಿ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- 'ಲಿಙ್' ನಿಮಿತ್ತಿಕವಾದ ಯಾವ ಹೇತುಹೇತುಮದ್ಭಾವ(ಕಾರಣ-ಕಾರ್ಯ ಭಾವ) ಮೊದಲಾದವು ಇರುವದೋ ಅಲ್ಲಿ ಕ್ರಿಯೆಯ ಭವಿಷ್ಯತ್ಕಾಲವನ್ನು ಸೂಚಿಸುವ ಧಾತುವಿನಮೇಲೆ 'ಲೃಙ್' 'ಲ್' ಕಾರವು ಬರುತ್ತದೆ. (ಕ್ರಿಯೆಯ ಅಸಿದ್ಧಿಯನ್ನು ತಿಳಿಸುವ ಸಂದರ್ಭದಲ್ಲಿ) ವೃತ್ತಿಯಲ್ಲಿ ಕೊಟ್ಟಿರುವ ಉದಾಹರಣೆ (ಸುವೃಷ್ಟಿಶ್ಚೇತ್ ಅಭವಿಷ್ಯತ್ ತದಾ ಸುಭಿಕ್ಷಮಭವಿಷ್ಯತ್)ಯ ತಾತ್ಪರ್ಯ ಹೀಗಿದೆ- "ಮಳೆ ಆಗಿದ್ದರೆ ಸುಭಿಕ್ಷವಾಗಿರುತ್ತಿತ್ತು, ಆದರೆ ಮಳೆಯಾಗಲಿಲ್ಲ ಆದಕಾರಣ ಸುಭಿಕ್ಷವೂ ಆಗಲಿಲ್ಲ" ಎಂದು. ಇದರ ಅರ್ಥ

ಕಾರಣವಾದ ಮಳೆ ಇಲ್ಲದ್ದರಿಂದ ಕಾರ್ಯವಾದ ಸುಭಿಕ್ಷವು ಆಗಲಿಲ್ಲವೆಂದು ತಿಳಿಯಬೇಕು.

ರೂಪಗಳು– ಅಭವಿಷ್ಯತ್। ಅಭವಿಷ್ಯತಾಮ್। ಅಭವಿಷ್ಯನ್। ಅಭವಿಷ್ಯಃ। ಅಭವಿಷ್ಯತಮ್। ಅಭವಿಷ್ಯತ। ಅಭವಿಷ್ಯಮ್। ಅಭವಿಷ್ಯಾವ। ಅಭವಿಷ್ಯಾಮ।

ಗಮನಿಸಬೇಕಾದ ಅಂಶ– ಈ ರೀತಿಯಾಗಿ 10 'ಲ್' ಕಾರಗಳ ರೂಪಗಳನ್ನು ಕೆಲವು ಧಾತುಗಳಿಗೆ ಮಾತ್ರ ವರದರಾಜರಿಂದ ನಿರೂಪಿಸಲಾಗಿದೆ. ಉಳಿದ ಧಾತುಗಳ ರೂಪಗಳನ್ನು 'ಸಿದ್ಧಾನ್ತಕೌಮುದೀ' ಯಿಂದ ತಿಳಿದುಕೊಳ್ಳಬೇಕು.

ಧಾತು–2. ಅತ ಸಾತತ್ಯಗಮನೇ। (ಸತತವಾಗಿ ಗಮನ ಮಾಡುವುದು ಎಂದು ಅರ್ಥ) ಇದರಲ್ಲಿ 'ಅತ್' ಮಾತ್ರ ಉಳಿಯುತ್ತದೆ.

**ಲಟ್**:

ಉದಾ–ಅತತಿ–ಪ್ರಥಮಪುರುಷ ಏಕವಚನದಲ್ಲಿ 'ಅತ್' ಧಾತುವಿನಮೇಲೆ 'ಲಟ್' 'ಲ್' ಕಾರ ಬಂದು ಅದಕ್ಕೆ 'ತಿಪ್ (ತಿ)' ಆದೇಶ ಬಂದು, ಅತ್+ತಿ ಎಂದಿದ್ದಾಗ "ಕರ್ತರಿ ಶಪ್" ಎಂಬುದರಿಂದ 'ಶಪ್(ಅ)' ಬಂದು ಅತ್+ಅ+ತಿ=ಅತತಿ ಎಂದು ರೂಪವು ಸಿದ್ಧವಾಗುತ್ತದೆ. ಇದೇ ರೀತಿಯಲ್ಲಿ ಉಳಿದ ಎಲ್ಲ 'ಲಟ್' 'ಲ್' ಕಾರದ ರೂಪಗಳಾದ ಅತತಃ, ಅತನ್ತಿ, ಅತಸಿ, ಅತಥಃ, ಅತಥ, ಅತಾಮಿ, ಅತಾವಃ, ಅತಾಮಃ ರೂಪಗಳು ಸಿದ್ಧವಾಗುತ್ತವೆ.

**(ಲಟ್ 'ಲ್' ಕಾರದಲ್ಲಿ ಅಭ್ಯಾಸದ ಆರಂಭದಲ್ಲಿ ಇರುವ ಅ ಕಾರಕ್ಕೆ ದೀರ್ಘ ವಿಧಾಯಕ ಸೂತ್ರ)**

**ಸೂತ್ರ– 443.ಅತ ಆದೇಃ (7.4.70)**

ವೃತ್ತಿಃ–ಅಭ್ಯಾಸಸ್ಯ ಆದೇಃ ಅತೋ ದೀರ್ಘಃ ಸ್ಯಾತ್ ಲಿಟಿ। ಆತ। ಆತತುಃ।ಆತುಃ। ಆತಿಥ। ಆತಥುಃ। ಆತ। ಆತ। ಆತಿವ। ಆತಿಮ। ಅತಿತಾ। ಅತಿಷ್ಯತಿ।ಅತತು।

ಪ. ಛೇ. – ಅತಃ, ಆದೇಃ।

ಅ. ವೃ.– "ಅತ್ರ ಲೋಪೋಽಭ್ಯಾಸಸ್ಯ" ಎಂಬ ಸೂತ್ರದಿಂದ 'ಅಭ್ಯಾಸಸ್ಯ' ಎಂಬ ಪದವೂ, ಮತ್ತು "ದೀರ್ಘ ಇಣಃ ಕಿತಿ" ಎಂಬ ಸೂತ್ರದಿಂದ 'ದೀರ್ಘಃ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ– ಅಭ್ಯಾಸದ ಆದಿಯಲ್ಲಿರುವ ಹ್ರಸ್ವ 'ಅ' ಕಾರಕ್ಕೆ ದೀರ್ಘವು(ಆ) ಬರುತ್ತದೆ.

ವಿಶೇಷ– 'ಅತ್' ಧಾತುವಿನ ಅಭ್ಯಾಸದ 'ಅ' ಕಾರಕ್ಕೆ ದೀರ್ಘ ಬಂದಾಗಲೂ ಬಾರದೇ ಇರುವಾಗಲೂ ಸಮಾನವಾದ ರೂಪವು ಸಿದ್ಧಿಸಿದರೂ, 'ಅರ್ಚ್' ಮೊದಲಾದ ಧಾತುಗಳಲ್ಲಿ 'ಆನರ್ಚ' ಮೊದಲಾದ ರೂಪಗಳ ಸಿದ್ಧಿಗಾಗಿ, ಪ್ರಕೃತ ಸೂತ್ರವು ಪ್ರವೃತ್ತವಾಗಿದೆ. ಆದರೆ 'ಅ' ಕಾರಕ್ಕೆ ದೀರ್ಘ ಬರುವುದು ಈ ಸೂತ್ರದಿಂದಲೇ. ಆದುದರಿಂದ ಈ ಸೂತ್ರದ ಆವಶ್ಯಕತೆ ಇದೆ. ಅಂದರೆ 'ಸವರ್ಣದೀರ್ಘ' ಸಂಧಿಯಿಂದ ದೀರ್ಘ ಬಂದಿದೆ ಎಂದು ತಿಳಿಯಬಾರದು.

**ಅಟ್**:

ಉದಾ– ಆತ – ಪ್ರಥಮಪುರುಷ ಏಕವಚನದಲ್ಲಿ 'ಅತ್' ಧಾತುವಿನಮೇಲೆ 'ತಿಪ್(ತಿ)' ಎಂಬ ಮೂಲ ಆಖ್ಯಾತ ಪ್ರತ್ಯಯ ಬಂದು ಅತ್+ತಿ ಎಂದಿದ್ದಾಗ, 'ತಿ' ಗೆ "ಣಲ್–ಅತುಸ್–ಉಸ್......ಣಲ್ವಮಾಃ" ಎಂಬ ಸೂತ್ರದಿಂದ ಅಭಿನವ ಆಖ್ಯಾತ

ಪ್ರತ್ಯಯವಾದ 'ಣಲ್(ಅ)' ಬಂದು, ಅತ್+ಅ ಎಂದಿರುತ್ತದೆ. "ಲಿಟಿಧಾತೋರನಭ್ಯಾಸಸ್ಯ" ಎಂಬ ಸೂತ್ರದಿಂದ, ಧಾತುವಿಗೆ ದ್ವಿತ್ವ ಬಂದು, ಅತ್+ಅತ್+ಅ ಎಂದಿರುತ್ತದೆ. ಮೊದಲನೇ 'ಅತ್' ಗೆ ಅಭ್ಯಾಸ ಸಂಜ್ಞೆ ಬಂದು "ಹಲಾದಿ: ಶೇಷಃ" ಎಂಬ ಸೂತ್ರದಿಂದ ಮೊದಲನೇ ಹಲ್ (ತ್) ಲೋಪವಾಗಿ ಅ+ಅತ್+ಅ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ಅಭ್ಯಾಸದ 'ಅ' ಕಾರಕ್ಕೆ ದೀರ್ಘ (ಆ) ಬಂದು ಆ+ಅತ್+ಅ ಎಂದಿದ್ದಾಗ, ಸವರ್ಣದೀರ್ಘ ಸಂಧಿಯಿಂದ ಆತ್+ಅ=ಆತ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ –ಆತತುಃ–ಪ್ರಥಮಪುರುಷ ದ್ವಿವಚನದಲ್ಲಿ ಅತ್+ತಸ್ ಎಂದಿದ್ದಾಗ ಹಿಂದಿನಂತೆಯೇ ಪ್ರಕ್ರಿಯೆ ನಡೆದು ತಸ್‌ಗೆ ಅತುಸ್ ಎಂಬ ಆದೇಶ ಬಂದು, ಆ+ಅತ್+ಅತುಸ್ ಎಂದಿದ್ದಾಗ, ಸವರ್ಣದೀರ್ಘವಾಗಿ, 'ಸ್' ಕಾರಕ್ಕೆ ರುತ್ವ–ವಿಸರ್ಗಗಳು ಬಂದು ಆತತುಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ –ಆತುಃ–ಪ್ರಥಮಪುರುಷ ಬಹುವಚನದಲ್ಲಿ ಅತ್+ಝಿ ಎಂದಿದ್ದಾಗ, 'ಝಿ' ಗೆ 'ಉಸ್' ಎಂಬ ಆದೇಶ ಬಂದು, ಅತ್+ಉಸ್ ಎಂದಿದ್ದಾಗ, ಹಿಂದಿನಂತೆಯೇ ಪ್ರಕ್ರಿಯೆ ನಡೆದು, ಆ+ಅತ್+ಉಸ್ ಎಂದಿದ್ದಾಗ, 'ಸ್' ಕಾರಕ್ಕೆ ರುತ್ವ–ವಿಸರ್ಗಗಳು ಬಂದು ಆತುಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಆತಿಥ– ಮಧ್ಯಮಪುರುಷ ಏಕವಚನದಲ್ಲಿ, ಅತ್+ಸಿಪ್ (ಸಿ) ಎಂದಿದ್ದಾಗ, ಮೇಲಿನಂತೆಯೇ 'ಸಿ'ಗೆ 'ಥ' ಆದೇಶ ಬಂದು ಅತ್+ಥ ಎಂದಿರುತ್ತದೆ. ಆಗ ಹಿಂದಿನಂತೆಯೇ ದ್ವಿತ್ವಾದಿಗಳು ಬಂದು ಆತ್+ಥ ಎಂದಿದ್ದಾಗ, "ಆರ್ಧಧಾತುಕಸ್ಯೇಡ್ ವಲಾದೇಃ" ಎಂಬ ಸೂತ್ರದಿಂದ 'ಥ' ಪೂರ್ವದಲ್ಲಿ ಇಟ್(ಇ) ಆಗಮ ಬಂದು ಆತ್+ಇ+ಥ=ಆತಿಥ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಆತಥುಃ –ಮಧ್ಯಮ ಪುರುಷ ದ್ವಿವಚನದಲ್ಲಿ, ಅತ್+ಥಸ್ ಎಂದಿದ್ದಾಗ, ಮೇಲಿನಂತೆಯೇ 'ಥಸ' ಗೆ 'ಅಥುಸ್' ಆದೇಶ ಬಂದು, ಅತ್+ಅಥುಸ್ ಎಂದಿದ್ದಾಗ, ಆಗ ಹಿಂದಿನಂತೆಯೇ ದ್ವಿತ್ವಾದಿಗಳು ಬಂದು ಆತ್+ಅಥುಸ್ ಎಂದಿದ್ದಾಗ 'ಸ್' ಕಾರಕ್ಕೆ ರುತ್ವ–ವಿಸರ್ಗಗಳು ಬಂದು, ಆತಥುಃ ಎಂದು ರೂಪವು ಸಿದ್ಧಿಸುತ್ತದೆ.

ಉದಾ– ಆತ– ಮಧ್ಯಮ ಪುರುಷ ಬಹುವಚನದಲ್ಲಿ, ಅತ್+ಥ ಎಂದಿದ್ದಾಗ, ಮೇಲಿನಂತೆಯೇ 'ಥ'ಗೆ 'ಅ' ಆದೇಶ ಬಂದು, ಅತ್+ಅ ಎಂದಿದ್ದಾಗ, ಆಗ ಹಿಂದಿನಂತೆಯೇ ದ್ವಿತ್ವಾದಿಗಳು ಬಂದು ಆತ್+ಅ=ಆತ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಆತ, ಆತಿವ, ಆತಿಮ–ಉತ್ತಮ ಪುರುಷ ಏಕವಚನ, ದ್ವಿವಚನ, ಮತ್ತು

ಬಹುವಚನಗಳಲ್ಲಿ ಕ್ರಮವಾಗಿ ಅತ್+ಮಿಪ್(ಮಿ), ಅತ್+ವಸ್ ಮತ್ತು ಆತ್+ಮಸ್ ಎಂದಿದ್ದಾಗ ಆತ್ ರೂಪದವರೆಗೂ ಪ್ರಕ್ರಿಯೆ ಸಮಾನವಾಗಿದ್ದು, ಏಕವಚನದಲ್ಲಿ 'ಮಿ' ಗೆ ಣಲ್(ಅ) , ದ್ವಿವಚನ ಬಹುವಚನಗಳಲ್ಲಿ 'ವಸ್' ಮತ್ತು 'ಮಸ್' ಗಳಿಗೆ ಇಟ್ (ಇ) ಆಗಮ ಬಂದು, ಆತ್+ಅ=ಆತ ಎಂದೂ, ಆತ್+ಇ+ವ=ಆತಿವ ಎಂದೂ, ಆತ್+ಇ+ಮ=ಆತಿಮ ಎಂದೂ ರೂಪಗಳು ಸಿದ್ಧವಾಗುತ್ತವೆ.

**ಲುಟ್:**

ಉದಾ– ಅತಿತಾ – 'ಅತ್' ಧಾತುವಿನಮೇಲೆ 'ಲುಟ್' 'ಲ್' ಕಾರದಲ್ಲಿ 'ತಿಪ್(ತಿ)' ಆದೇಶ ಬಂದು ಅತ್+ತಿ ಎಂದಿದ್ದಾಗ, ಅದಕ್ಕೆ ಸಾರ್ವಧಾತುಕಸಂಜ್ಞೆ ಬಂದಮೇಲೆ 'ಶಪ್' ವಿಕರಣ ಬರಬೇಕಾಗಿತ್ತು, ಅದನ್ನು ಬಾಧಿಸಿ "ಸ್ಯತಾಸೀ ಲೃ–ಲುಟೋಃ" ಎಂಬ ಸೂತ್ರದಿಂದ 'ತಾಸಿ (ತಾಸ್)' ಪ್ರತ್ಯಯ ಬಂದು ಅದಕ್ಕೆ ಆರ್ಧಧಾತುಕಸಂಜ್ಞೆ ಬಂದು, ಅದರ ದೆಸೆಯಿಂದ ವಲಾದಿಯಾದ 'ತಾಸ್' ನ ಪೂರ್ವದಲ್ಲಿ 'ಇಟ್' ಆಗಮ ಬಂದು, ಅತ್+ಇ+ತಾಸ್+ತಿ ಎಂದಿರುತ್ತದೆ, "ಲುಟಃ ಪ್ರಥಮಸ್ಯ ಡಾರೌರಸಃ" ಎಂಬ ಸೂತ್ರದಿಂದ 'ತಿ' ಗೆ 'ಡಾ(ಆ)' ಆದೇಶ ಬಂದು ಅತ್+ಇ+ ತಾಸ್+ಆ ಎಂದಿರುತ್ತದೆ, ಆಗ 'ತಾಸ್' ನಲ್ಲಿರುವ 'ಆಸ್' ಗೆ ಟಿಲೋಪ ಬಂದು ಅತ್+ಇ+ತ್+ಆ=ಅತಿತಾ ಎಂಬ ರೂಪವು ಸಿದ್ಧಿಸುತ್ತದೆ.

ವಿಶೇಷ: 'ಲುಟ್' 'ಲ್' ಕಾರದಲ್ಲಿ ಎಲ್ಲಕಡೆಯಲ್ಲೂ 'ಟಿತ್' ಆದ 'ಇಟ್' ಆಗಮವು ಬರೋಣದರಿಂದ ಗುಣನಿಷೇಧವಾಗಿದೆ.

**ಲುಟ್ 'ಲ್' ಕಾರದ ರೂಪಗಳು–**

ಅತಿತಾ, ಅತಿತಾರೌ, ಅತಿತಾರಃ। ಅತಿತಾಸಿ, ಅತಿತಾಸ್ಥಃ, ಅತಿತಾಸ್ಥ। ಅತಿತಾಸ್ಮಿ, ಅತಿತಾಸ್ವಃ, ಅತಿತಾಸ್ಮಃ।

**ಲೃಟ್:**

ಉದಾ– ಅತಿಷ್ಯತಿ– ಪ್ರಥಮಪುರುಷ ಏಕವಚನದಲ್ಲಿ, 'ಅತ್' ಧಾತುವಿನಮೇಲೆ ಮೂಲ ಆಖ್ಯಾತ ಪ್ರತ್ಯಯವಾದ 'ತಿಪ್(ತಿ)' ಬಂದು ಸಾರ್ವಧಾತುಕಸಂಜ್ಞೆ ಬಂದಮೇಲೆ 'ಶಪ್' ವಿಕರಣ ಬರಬೇಕಾಗಿದ್ದಾಗ, ಅದನ್ನು ಬಾಧಿಸಿ, "ಸ್ಯತಾಸೀ ಲೃ–ಲುಟೋಃ" ಎಂಬ ಸೂತ್ರದಿಂದ 'ಸ್ಯ' ಆದೇಶ ಬಂದು ಅದಕ್ಕೆ ಆರ್ಧಧಾತುಕ ಸಂಜ್ಞೆ ಬಂದಾಗ, ವಲಾದಿ ಪ್ರತ್ಯಯವಾದ 'ಸ್ಯ' ದ ಪೂರ್ವದಲ್ಲಿ 'ಇಟ್' ಆಗಮ ಬಂದು, ಅತ್+ಇ+ಸ್ಯ+ತಿ=ಅತಿಸ್ಯತಿ ಎಂದಿರುತ್ತದೆ. 'ಸ್ಯ' ದಲ್ಲಿರುವ 'ಸ್' ಕಾರಕ್ಕೆ "ಆದೇಶ ಪ್ರತ್ಯಯಯೋಃ" ಎಂಬ ಸೂತ್ರದಿಂದ ಷತ್ವ ಬಂದು ಅತಿಷ್ಯತಿ ಎಂದು ರೂಪವಾಗುತ್ತದೆ.

ಈ 'ಲ್' ಕಾರದಲ್ಲಿ 'ಸ್' ಪ್ರತ್ಯಯ ಮತ್ತು 'ಇಟ್' ಆಗಮ ಬಂದಾಗ, 'ಅತ್' ಧಾತುವಿಗೆ ಈ ಕೆಳಗಿನ ರೂಪಗಳು ಬರುತ್ತವೆ.

ರೂಪಗಳು– ಅತಿಷ್ಯತಿ, ಅತಿಷ್ಯತಃ, ಅತಿಷ್ಯನ್ತಿ। ಅತಿಷ್ಯಸಿ, ಅತಿಷ್ಯಥಃ, ಅತಿಷ್ಯಥ। ಅತಿಷ್ಯಾಮಿ, ಅತಿಷ್ಯಾವಃ, ಅತಿಷ್ಯಾಮಃ।

**ಲೋಟ್**:

ಉದಾ– ಅತತು – ಪ್ರಥಮಪುರುಷ ಏಕವಚನದಲ್ಲಿ 'ಅತ್' ಧಾತುವಿನ ಮೇಲೆ 'ತಿಪ್(ತಿ)' ಆದೇಶ ಬಂದು ಅತ್+ತಿ ಎಂದಿದ್ದಾಗ, ಸಾರ್ವಧಾತುಕಸಂಜ್ಞೆ ಬಂದು, 'ಶಪ್(ಅ)' ವಿಕರಣ ಬಂದಮೇಲೆ, ಅತ್+ಅ+ತಿ ಎಂದಿರುತ್ತದೆ, "ಏ ರುಃ" ಎಂಬ ಸೂತ್ರದಿಂದ 'ಇ' ಕಾರಕ್ಕೆ 'ಉ' ಕಾರ ಬಂದು, ಅತ್+ಅ+ತು=ಅತತು ಎಂದು ರೂಪವಾಗುತ್ತದೆ. "ತುಹ್ಯೋಸ್ತಾತಙ್ಙಾಶಿಷ್ಯನ್ಯತರಸ್ಯಾಮ್" ಎಂಬ ಸೂತ್ರದಿಂದ ವೈಕಲ್ಪಿಕವಾಗಿ 'ತಾತಙ್ (ತಾತ್) ಆದೇಶ ಬಂದು ಅತತಾತ್ ಎಂಬ ವೈಕಲ್ಪಿಕರೂಪವು ಸಿದ್ಧವಾಗುತ್ತದೆ. ರೂಪಗಳು: ಅತತು/ಅತತಾತ್, ಅತತಾಮ್, ಅತನ್ತು। ಅತತು/ಅತತಾತ್, ಅತತಮ್, ಅತತ।ಅತಾನಿ, ಅತಾವ, ಅತಾಮ।

### (ಆಟ್(ಆ)ಆಗಮವನ್ನು ವಿಧಿಸುವ ಸೂತ್ರ)

**ಸೂತ್ರ– 444.ಆಡಜಾದೀನಾಮ್ (6.4.27)**

ವೃತ್ತಿಃ–ಅಜಾದೇಃ ಅಙ್ಗಸ್ಯ ಆಟ್, ಲುಙ್–ಲಙ್–ಲೃಙ್‌ಕ್ಷು। ಆತತ್। ಆತೇತ್।ಆತ್ಯಾತ್। ಅತ್ಯಾಸ್ತಾಮ್। ಲುಜಿ ಸಿಚಿ ಇಡಾಗಮೇ ಕೃತೇ।

ಪ. ಛೇ. – ಆಟ್, ಅಜಾದೀನಾಮ್।

ಅ. ವೃ.– "ಲುಙ್–ಲಙ್–ಲೃಙ್‌ಕ್ಷ್ವಡುದಾತ್ತಃ" ಎಂಬ ಸೂತ್ರದಿಂದ 'ಲುಙ್–ಲಙ್–ಲೃಙ್ಕ್ಷು' ಎಂಬ ಪದವೂ, ಮತ್ತು 'ಉದಾತ್ತ' ಎಂಬ ಪದವೂ ಅನುವೃತ್ತ ವಾಗುತ್ತವೆ. "ಅಙ್ಗಸ್ಯ" ಎಂಬುದನ್ನು 'ಅಙ್ಗಾನಾಂ' ಎಂದು ಷಷ್ಠೀ ವಿಭಕ್ತಿಯಲ್ಲಿ ವಚನ ವಿಪರಿಣಾಮ ಮಾಡಿ, ಅಧಿಕಾರಸೂತ್ರವಾಗಿ ಸ್ವೀಕರಿಸಲಾಗಿದೆ.

ಅರ್ಥ– 'ಲುಙ್–ಲಙ್–ಲೃಙ್' 'ಲ್' ಕಾರಗಳು ಪರದಲ್ಲಿದ್ದಾಗ, ಅಜಾದಿ ಅಙ್ಗವುಳ್ಳ ಧಾತುವಿಗೆ 'ಆಟ್' ಆಗಮವು ಬರುತ್ತದೆ.

ವಿಶೇಷ– ಈ ಸೂತ್ರದ ಪೂರ್ವ ಸೂತ್ರವಾದ "ಲುಙ್–ಲಙ್–ಲೃಙ್‌ಕ್ಷ್ವಡುದಾತ್ತಃ" ಎಂಬುದು 'ಅಟ್' ಆಗಮವನ್ನು ವಿಧಿಸುತ್ತದೆ. ಆದರೆ ಪ್ರಕೃತ ಸೂತ್ರವು 'ಆಟ್' ಆಗಮವನ್ನು ವಿಧಿಸುತ್ತದೆ. ಕಾರಣ ಇದು ಅಜಾದಿಗಳಿಗೆ ಮಾತ್ರ 'ಆಟ್' ಆಗಮವನ್ನು ವಿಧಿಸುತ್ತದೆ. ಆದುದರಿಂದ ಇದು ಪೂರ್ವ ಸೂತ್ರಕ್ಕೆ ಅಪವಾದ ಸೂತ್ರವಾಗಿದೆ.

**ಲಙ್**:

ಉದಾ– ಆತತ್– 'ಅತ್' ಧಾತುವಿನಮೇಲೆ 'ಲಙ್' 'ಲ್'ಕಾರದ ಪ್ರಥಮ ಪುರುಷ ಏಕವಚನದಲ್ಲಿ ಅತ್+ತಿ ಎಂದಿದ್ದಾಗ, ಧಾತುವಿಗೆ ಅಡಾಗಮ ಬಂದಾಗ, ಇದು ಅಜಾದಿಯಾಗಿರೋಣದರಿಂದ ಅದನ್ನು ಬಾಧಿಸಿ ಪ್ರಕೃತ ಸೂತ್ರದಿಂದ 'ಟಿತ್' ಆದ 'ಆಟ್(ಆ)' ಆಗಮವು ಬಂದು ಆ+ಅತ್+ತಿ ಎಂದಿದ್ದಾಗ, ಸಾರ್ವಧಾತುಕ ಸಂಜ್ಞೆ ಬಂದು 'ಶಪ್(ಅ)' ವಿಕರಣ ಪ್ರತ್ಯಯ ಬಂದಾಗ, ಆ+ಅತ್+ಅ+ತಿ ಎಂದಿರುತ್ತದೆ. "ಆಟಶ್ಚ" ಎಂಬ ಸೂತ್ರದಿಂದ 'ಆ' ಕಾರ 'ಅ' ಕಾರಗಳಿಗೆ ವೃದ್ಧಿ ಬಂದು 'ಆ' ಎಂದಾದಮೇಲೆ ಆತ್+ಅ+ತಿ ಎಂದಿರುತ್ತದೆ. "ಇತಶ್ಚ" ಎಂಬ ಸೂತ್ರದಿಂದ 'ಇ' ಕಾರ

ಲೋಪವಾಗಿ ಆತತ್ ಎಂಬ ರೂಪವು ಸಿದ್ಧವಾಗುತ್ತದೆ.

ವಿವರಣೆ: ತಸ್, ಥಸ್, ಥ ಮತ್ತು ಮಿಪ್(ಮಿ) ಗಳಿಗೆ "ತಸ್ಥಸ್ಥಮಿಪಾಂ ತಾಂತಂತಾಮಃ" ಎಂಬ ಸೂತ್ರದಿಂದ ತಾಮ್ ಮೊದಲಾದ ಆದೇಶಗಳು ಬರುತ್ತವೆ. ಸಿಪ್(ಸಿ) ನಲ್ಲಿ "ಇತಶ್ಚ" ಎಂಬ ಸೂತ್ರದಿಂದ 'ಇ'ಕಾರಕ್ಕೆ ಲೋಪ ಬಂದು, 'ಸ್' ಕಾರಕ್ಕೆ ರುತ್ವ–ವಿಸರ್ಗಗಳು ಬರುತ್ತವೆ. 'ವಸ್' ಮಸ್'ಗಳು ಬಂದಾಗ, "ಅತೋ–ದೀರ್ಘೋಯಞಿ" ಎಂಬುದರಿಂದ ದೀರ್ಘ ಬಂದು "ನಿತ್ಯಂಜಿತಃ" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬಂದು ಕೆಳಗಿನಂತೆ ರೂಪಗಳು ಸಿದ್ಧವಾಗುತ್ತವೆ. ರೂಪಗಳು: ಆತತ್, ಆತತಾಮ್, ಆತನ್। ಆತಃ, ಆತತಮ್, ಆತತ। ಆತಮ್, ಆತಾವ, ಆತಾಮ।

**ಅಙ್ೕ:**

ಉದಾ– ಅತೇತ್– ಪ್ರಥಮ ಪುರುಷ ಏಕವಚನದಲ್ಲಿ 'ಅತ್' ಧಾತುವಿನಮೇಲೆ ಮೂಲ ಆಖ್ಯಾತ ಪ್ರತ್ಯಯವಾದ 'ತಿ' ಆದೇಶ ಬಂದು, ಅತ್+ತಿ ಎಂದಿರುತ್ತದೆ. ಅದಕ್ಕೆ ಸಾರ್ವಧಾತುಕ ಸಂಜ್ಞೆ ಮತ್ತು ಶಪ್(ಅ) ವಿಕರಣ ಬಂದು ಅತ್+ಅ+ತಿ ಎಂದಿರುತ್ತದೆ. "ಯಾಸುಟ್ ಪರಸ್ಮೈಪದೇಷೂದಾತ್ತೋ ಜಿಚ್ಚ" ಎಂಬ ಸೂತ್ರದಿಂದ 'ಯಾಸುಟ್(ಯಾಸ್)' ಆಗಮ ಬಂದು ಅತ್+ಅ+ಯಾಸ್+ತಿ ಎಂದಿದ್ದಾಗ, 'ಯಾಸ್' ಗೆ 'ಇಯ್' ಆದೇಶ ಬಂದು, ಅತ್+ಅ+ಇಯ್+ತಿ ಎಂದಿರುತ್ತದೆ. "ಲೋಪೋ–ವ್ಯೋರ್ವಲೀ" ಎಂಬ ಸೂತ್ರದಿಂದ 'ಯ್'ಗೆ ಲೋಪ ಬಂದು ಅತ್+ಅ+ಇ+ತಿ ಎಂದಿರುತ್ತದೆ. 'ಅ' ಕಾರ 'ಇ' ಕಾರಗಳಿಗೆ ಗುಣ ಬರುತ್ತದೆ. "ಇತಶ್ಚ" ಎಂಬುದರಿಂದ 'ತಿ' ಯಲ್ಲಿರುವ 'ಇ' ಕಾರಕ್ಕೆ ಲೋಪ ಬರುತ್ತದೆ. ಆಗ ಅತೇತ್ ಎಂಬ ರೂಪವು ಸಿದ್ಧವಾಗುತ್ತದೆ.

ವಿಶೇಷ: ತಸ್ ಮೊದಲಾದ ಪ್ರತ್ಯಯಗಳಲ್ಲಿ ಹಿಂದಿನಂತೆ "ತಸ್ಥಸ್ಥಮಿಪಾಂ ತಾಂತಂತಾಮಃ" ಎಂಬ ಸೂತ್ರದಿಂದ 'ತಾಮ್' ಮೊದಲಾದ ಆದೇಶಗಳು ಕ್ರಮವಾಗಿ ಬರುತ್ತವೆ. 'ಸಿಪ್' ನಲ್ಲಿಯ 'ಇ' ಕಾರಕ್ಕೆ "ಇತಶ್ಚ" ಎಂಬುದರಿಂದ ಲೋಪವಾಗಿ 'ಸ್'ಕಾರಕ್ಕೆ ರುತ್ವ–ವಿಸರ್ಗಗಳು ಬರುತ್ತವೆ. 'ವಸ್' ಮತ್ತು 'ಮಸ್' ಪ್ರತ್ಯಯಗಳು ಇದ್ದಾಗ, "ಅತೋದೀರ್ಘೋಯಞಿ" ಎಂಬುದರಿಂದ ದೀರ್ಘ ಬಂದು, "ನಿತ್ಯಂಜಿತಃ" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬಂದು ರೂಪಗಳು ಸಿದ್ಧವಾಗುತ್ತವೆ. ಪ್ರಥಮ ಪುರುಷ ಬಹುವಚನದಲ್ಲಿ 'ಝಿ' ಗೆ "ಝೇರ್ಜುಸ್" ಎಂಬುದರಿಂದ 'ಜುಸ್(ಉಸ್)' ಆದೇಶ ಬಂದು ವಲಾದಿ ಪ್ರತ್ಯಯವು ಪರದಲ್ಲಿದ್ದಾಗ ಮಾತ್ರ, "ಲೋಪೋವ್ಯೋರ್ವಲಿ" ಎಂಬ ಸೂತ್ರದಿಂದ 'ಯ್' ಗೆ ಲೋಪ ಬಂದು, "ನಿತ್ಯಂಜಿತಃ" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬಂದು ಕೆಳಗಿನಂತೆ ರೂಪಗಳು ಸಿದ್ಧವಾಗುತ್ತವೆ,

ರೂಪಗಳು: ಅತೇತ್, ಅತೇತಾಮ್, ಅತೇಯುಃ। ಅತೇಃ, ಅತೇತಮ್, ಅತೇತ। ಅತೇಯಮ್, ಅತೇವ, ಅತೇಮ।

**ಆಶೀರ್ಲಿಙ್**:

ಉದಾ– ಅತ್ಯಾತ್ ಮೊದಲಾದ 9 ರೂಪಗಳು – ಪ್ರಥಮ ಪುರುಷ ಏಕವಚನದಲ್ಲಿ 'ಅತ್' ಧಾತುವಿನಮೇಲೆ, "ಆಶಿಷೀ ಲಿಙ್‌ಲೋಟೌ" ಎಂಬ ಸೂತ್ರದಿಂದ 'ತಿಪ್(ತಿ)' ಆದೇಶ ಬಂದು ಅತ್+ತಿ ಎಂದಿದ್ದಾಗ, "ಲಿಙಾಶಿಷೀ" ಎಂಬ ಸೂತ್ರದಿಂದ ಆರ್ಧ ಧಾತುಕ ಸಂಜ್ಞೆ ಬರೋಣದರಿಂದ 'ಶಪ್' ಬಾರದೇ 'ಯಾಸುಟ್(ಯಾಸ್)' ಆಗಮಬಂದು ಅತ್+ಯಾಸ್+ತಿ ಎಂದಿದ್ದಾಗ, "ಇತಶ್ಚ" ಎಂಬುದರಿಂದ 'ಇ' ಕಾರಕ್ಕೆ ಲೋಪ ಬಂದು ಅತ್+ಯಾಸ್+ತ್ ಎಂದಿರುತ್ತದೆ. "ಸ್ಕೋಃ ಸಂಯೋಗಾದ್ಯೋರನ್ತೇಚ" ಎಂಬುದರಿಂದ 'ಸ್' ಕಾರಕ್ಕೆ ಲೋಪ ಬಂದು, ಅತ್ಯಾತ್ ಎಂಬ ರೂಪವು ಸಿದ್ಧವಾಗುತ್ತದೆ. ಉಳಿದ ರೂಪಗಳು– ಅತ್ಯಾಸ್ತಾಮ್, ಅತ್ಯಾಸುಃಅತ್ಯಾಃ, ಅತ್ಯಾಸ್ತಮ್, ಅತ್ಯಾಸ್ತ ಅತ್ಯಾಸಮ್, ಅತ್ಯಾಸ್ವ, ಅತ್ಯಾಸ್ಮ।

ವಿಶೇಷ – ಆಶೀರ್ಲಿಙ್ ನಲ್ಲಿ 'ಅತ್' ಧಾತುವಿನಮೇಲೆ ಗುಣವು ಬರುವುದಿಲ್ಲ. ಆದುದರಿಂದ ಗುಣ ನಿಷೇಧಕ್ಕೆ ಪ್ರಸಕ್ತಿಯೇ ಇರುವುದಿಲ್ಲ.

ಲುಙಿ ಸಿಚಿ ಇಡಾಗಮೇ ಕೃತೇ– 'ಲುಙ್' ನಲ್ಲಿ 'ಚ್ಲಿ' ಗೆ 'ಸಿಚ್(ಸ್) ಆದೇಶವು ಬರುತ್ತದೆ. 'ಸಿಚ್' ಇದು ಆರ್ಧಧಾತುಕವಾಗಿದೆ. ("ಆರ್ಧಧಾತುಕಂ ಶೇಷಃ") ಇದು ವಲಾದಿಯಾಗಿಯೂ ಇದೆ "ಆರ್ಧಧಾತುಕಸ್ಯೇಡ್ವಲಾದೇಃ" ಎಂಬ ಸೂತ್ರದಿಂದ 'ಇಟ್' ಆಗಮವು ಬರುತ್ತದೆ. ಆಗ ಆತ್+ಇ+ಸ್ ಎಂದಿದ್ದಾಗ

**(ಈಟ್ ಆಗಮವನ್ನು ವಿಧಿಸುವ ಸೂತ್ರ)**

**ಸೂತ್ರ– 445.ಅಸ್ತಿಸಿಚೋಽಪೃಕ್ತೇ (7.3.96)**

ವೃತ್ತಿಃ–ವಿದ್ಯಮಾನಾತ್ ಸಿಚೋಃ ಅಸ್ತೇಃ ಚ ಪರಸ್ಯ ಅಪೃಕ್ತಸ್ಯ ಹಲಃ ಈಟ್– ಅಗಮಃ।

ಪ. ಛೇ. – ಅಸ್ತಿ, ಸಿಚಃ, ಅಪೃಕ್ತೇ।

ಅ. ವೃ.– "ಉತೋವೃದ್ಧಿರ್ಲುಕಿ ಹಲಿ" ಎಂಬ ಸೂತ್ರದಿಂದ 'ಹಲಿ' ಎಂಬ ಪದವೂ ಮತ್ತು "ಬ್ರುವಈಟ್" ಎಂಬ ಸೂತ್ರದಿಂದ 'ಈಟ್' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ– ವಿದ್ಯಮಾನ 'ಸಿಚ್' ಪ್ರತ್ಯಯ ಮತ್ತು 'ಅಸ್' ಧಾತುವಿಗಿಂತ ಪರದಲ್ಲಿರುವ 'ಹಲ್' ವರ್ಣಕ್ಕೂ 'ಈಟ್' ಆಗಮವು ಬರುತ್ತದೆ.

ವಿಶೇಷ: 'ಚ್ಲಿ' ಮತ್ತು ಅದರ ಸ್ಥಾನದಲ್ಲಿ ಬರುವ 'ಸಿಚ್' 'ಲುಙ್' 'ಲ್'ಕಾರದಲ್ಲಿ ಮಾತ್ರ ಬರುತ್ತದೆ. 'ಸಿಚ್' ನ ನಂತರ ಅಥವಾ 'ಅಸ್' ಧಾತುವಿನ ನಂತರ ಇರುವ ಅಪೃಕ್ತಸಂಜ್ಞೆಯುಳ್ಳ 'ಹಲ್' ಗೆ 'ಈಟ್' ಆಗಮವು ಬರುತ್ತದೆ. ಈ ಆಗಮವು 'ಟಿತ್' ಆಗಿದೆ, ಮತ್ತು ದೀರ್ಘ 'ಇ(ಈ)' ಕಾರವು ಇದೆ. 'ಟಿತ್' ಆಗಿ ಇರೋಣದರಿಂದ ಅಪೃಕ್ತ 'ಹಲ್' ಗೆ ಆದಿಯಲ್ಲಿ ಬರುತ್ತದೆ. ಅಪೃಕ್ತ 'ಹಲ್' ವರ್ಣವು 'ತಿಪ್' ಮತ್ತು 'ಸಿಪ್' ಗಳಲ್ಲಿರುವ 'ಇ' ಕಾರಗಳ ಲೋಪವಾದಮೇಲೆಯೇ ಕೂಡಿಕೊಳ್ಳುತ್ತದೆ.

ಅದುದರಿಂದ ಈ ಸೂತ್ರವು 'ತಿಪ್' ಮತ್ತು 'ಸಿಪ್' ಗಳಿಗೇನೇ ಸಂಬಂಧಿಸಿರುತ್ತದೆ.

**(ಸ್ ಕಾರ ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ- 446.ಇಟ ಈಟಿ (5.2.28)**

ವೃತ್ತಿಃ–ಇಟಃ ಪರಸ್ಯ ಸಸ್ಯ ಲೋಪಃ ಸ್ಯಾತ್ ಈಟಿ ಪರೇ।

ವಾ॥ ಸಿಜ್‌ಲೋಪ ಏಕಾದೇಶೇ ಸಿದ್ಧೋ ವಾಚ್ಯಃ॥

ಆತೀತ್। ಆತಿಷ್ಟಾಮ್।

ಪ. ಛೇ. – ಇಟಃ, ಈಟಿ।

ಅ.ವೃ.– "ರಾತ್ ಸಸ್ಯ" ಎಂಬ ಸೂತ್ರದಿಂದ 'ಸಸ್ಯ' ಎಂಬ ಪದವೂ ಮತ್ತು "ಸಂಯೋಗಾನ್ತಸ್ಯ ಲೋಪಃ" ಎಂಬ ಸೂತ್ರದಿಂದ 'ಲೋಪಃ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ– 'ಇಟ್' ಗಿಂತ ಪರದಲ್ಲಿ 'ಈಟ್' ಇರುವಾಗ, ಅವುಗಳ ಮಧ್ಯದಲ್ಲಿರುವ 'ಸ್' ಕಾರಕ್ಕೆ ಲೋಪವು ಬರುತ್ತದೆ.

ವಿಶೇಷ: ಇಲ್ಲಿ ಎರಡೂ ಆಗಮಗಳು 'ಟಿತ್' ಆಗಿವೆ. "ಆರ್ಧಧಾತು ಕಸ್ಯೇಡ್ವಲಾದೇಃ" ಎಂಬ ಸೂತ್ರದಿಂದ 'ಇಟ್' ಆಗಮ ಬರುತ್ತದೆ. ಮತ್ತು "ಅಸ್ತಿ ಸಿಚೋಽಪೃಕ್ತೇ" ಎಂಬ ಸೂತ್ರದಿಂದ 'ಈಟ್' ಆಗಮವೂ ಬರುತ್ತದೆ. ಪ್ರಕೃತ ಸೂತ್ರದಿಂದ 'ಇಟ್' ಮತ್ತು 'ಈಟ್' ಗಳ ಮಧ್ಯದಲ್ಲಿರುವ 'ಸ್' ಕಾರಕ್ಕೆ ಲೋಪವು ಬರುತ್ತದೆ. ಆಗ ಸರ್ವರ್ಣದೀರ್ಘ ಸಂಧಿಯಿಂದ ಇ+ಈ=ಈ ಎಂದು ಆಗಬೇಕಾಗಿತ್ತು. ಆದರೆ ಪ್ರಕೃತ ಸೂತ್ರ 'ತ್ರಿಪಾದಿ'ಯಲ್ಲಿದೆ. ಮತ್ತು "ಅಕಃ ಸವರ್ಣೇ ದೀರ್ಘಃ" ಎಂಬ ಸೂತ್ರವು ಸಪಾದಸಪ್ತಾಧ್ಯಾಯಿಯಲ್ಲಿದೆ. ತ್ರಿಪಾದಿ ಸೂತ್ರವು ಅಸಿದ್ಧವಾಗಿರೋಣದರಿಂದ ಸರ್ವರ್ಣದೀರ್ಘಕ್ಕೆ ಅವಕಾಶವಿರುವುದಿಲ್ಲ. ಅದುದರಿಂದ ಪ್ರಕೃತ ವಾರ್ತಿಕ

ವಾ॥ ಸಿಜ್‌ಲೋಪ ಏಕಾದೇಶೆ ಸಿದ್ಧೋ ವಾಚ್ಯಃ ವು ಹೊರಟಿದೆ.

ವಾ॥ ಸಿಜ್‌ಲೋಪ ಏಕಾದೇಶೆ ಸಿದ್ಧೋ ವಾಚ್ಯಃ ।

ಅರ್ಥ:–ಏಕಾದೇಶವನ್ನು ಮಾಡಬೇಕಾಗಿದ್ದಾಗ, 'ಸಿಚ್' ನ ಲೋಪವು ಸಿದ್ಧವಾಗುತ್ತದೆ. ಸಪಾದ ಸಪ್ತಾಧ್ಯಾಯೀಯ ದೃಷ್ಟಿಯಲ್ಲಿ, ಬೇರೆ ಕಡೆಗೆ ತ್ರಿಪಾದಿಯೂ ಅಸಿದ್ಧವಾಗುತ್ತದೆ. ಆದರೆ ಏಕಾದೇಶವನ್ನು ವಿಧಿಸುವಾಗ ಮಾತ್ರ ಅದು ಸಿದ್ಧವಾಗಿಯೇ ಇರುತ್ತದೆ. ಆದುದರಿಂದ ಸವರ್ಣದೀರ್ಘ ಸಂಧಿಯು ಇಲ್ಲಿ ಬಂದೇ ಬರುತ್ತದೆ.

ಲುಙ್: ಉದಾ–ಆತೀತ್ ಪ್ರಥಮಪುರುಷ ಏಕವಚನದಲ್ಲಿ ಅತ್+ತಿ ಎಂದಿದ್ದಾಗ, 'ಆಟ್' ಆಗಮ ಬಂದು, ಆ+ಅತ್+ತಿಪ್(ತಿ) ಎಂದಿರುತ್ತದೆ. 'ಚ್ಲಿ(ಲ್)' ಗೆ 'ಸಿಚ್(ಸ್)' ಬಂದ ಮೇಲೆ, "ಇತಶ್ಚ" ಎಂಬ ಸೂತ್ರದಿಂದ 'ತಿ' ಯಲ್ಲಿರುವ 'ಇ'ಕಾರವು ಲೋಪವಾಗುತ್ತದೆ. ಆಗ ಆ+ಅತ್+ಸ್+ತ್ ಎಂದಿರುತ್ತದೆ. 'ಸ್'(ಸಿಚ್) ಗೆ "ಆರ್ಧಧಾತುಕಂ ಶೇಷಃ" ಎಂಬ ಸೂತ್ರದಿಂದ ಆರ್ಧಧಾತುಕಸಂಜ್ಞೆ ಬಂದು 'ಸ್' ಗೆ

**ಆಶೀರ್ಲಿಙ್**:

ಉದಾ– ಅತ್ಯಾತ್ ಮೊದಲಾದ 9 ರೂಪಗಳು – ಪ್ರಥಮ ಪುರುಷ ಏಕವಚನದಲ್ಲಿ 'ಅತ್' ಧಾತುವಿನಮೇಲೆ, "ಆಶಿಷೀ ಲಿಙ್‌ಲೋಟೌ" ಎಂಬ ಸೂತ್ರದಿಂದ 'ತಿಪ್(ತಿ)' ಆದೇಶ ಬಂದು ಅತ್+ತಿ ಎಂದಿದ್ದಾಗ, "ಲಿಙಾಶಿಷೀ" ಎಂಬ ಸೂತ್ರದಿಂದ ಆರ್ಧ ಧಾತುಕ ಸಂಜ್ಞೆ ಬರೋಣದರಿಂದ 'ಶಪ್' ಬಾರದೇ 'ಯಾಸುಟ್(ಯಾಸ್)' ಆಗಮಬಂದು ಅತ್+ಯಾಸ್+ತಿ ಎಂದಿದ್ದಾಗ, "ಇತಶ್ಚ" ಎಂಬುದರಿಂದ 'ಇ' ಕಾರಕ್ಕೆ ಲೋಪ ಬಂದು ಅತ್+ಯಾಸ್+ತ್ ಎಂದಿರುತ್ತದೆ. "ಸ್ಕೋಃ ಸಂಯೋಗಾದ್ಯೋರನ್ತೇಚ" ಎಂಬುದರಿಂದ 'ಸ್' ಕಾರಕ್ಕೆ ಲೋಪ ಬಂದು, ಅತ್ಯಾತ್ ಎಂಬ ರೂಪವು ಸಿದ್ಧವಾಗುತ್ತದೆ. ಉಳಿದ ರೂಪಗಳು– ಅತ್ಯಾಸ್ತಾಮ್, ಅತ್ಯಾಸುಃ।ಅತ್ಯಾಃ, ಅತ್ಯಾಸ್ತಮ್, ಅತ್ಯಾಸ್ತ ಅತ್ಯಾಸಮ್, ಅತ್ಯಾಸ್ವ, ಅತ್ಯಾಸ್ಮ।

ವಿಶೇಷ – ಆಶೀರ್ಲಿಙ್ ನಲ್ಲಿ 'ಅತ್' ಧಾತುವಿನಮೇಲೆ ಗುಣವು ಬರುವುದಿಲ್ಲ. ಆದುದರಿಂದ ಗುಣ ನಿಷೇಧಕ್ಕೆ ಪ್ರಸಕ್ತಿಯೇ ಇರುವುದಿಲ್ಲ.

ಲುಙಿ ಸಿಚಿ ಇಡಾಗಮೇ ಕೃತೇ– 'ಲುಙ್' ನಲ್ಲಿ 'ಚ್ಲಿ' ಗೆ 'ಸಿಚ್(ಸ್) ಆದೇಶವು ಬರುತ್ತದೆ. 'ಸಿಚ್' ಇದು ಆರ್ಧಧಾತುಕವಾಗಿದೆ. ("ಆರ್ಧಧಾತುಕಂ ಶೇಷಃ") ಇದು ವಲಾದಿಯಾಗಿಯೂ ಇದೆ "ಆರ್ಧಧಾತುಕಸ್ಯೇಡ್ವಲಾದೇಃ" ಎಂಬ ಸೂತ್ರದಿಂದ 'ಇಟ್' ಆಗಮವು ಬರುತ್ತದೆ. ಆಗ ಆತ್+ಇ+ಸ್ ಎಂದಿದ್ದಾಗ

**(ಈಟ್ ಆಗಮವನ್ನು ವಿಧಿಸುವ ಸೂತ್ರ)**

**ಸೂತ್ರ– 445.ಅಸ್ತಿಸಿಚೋಽಪೃಕ್ತೇ (7.3.96)**

ವೃತ್ತಿಃ–ವಿದ್ಯಮಾನಾತ್ ಸಿಚೋಃ ಅಸ್ತೇಃ ಚ ಪರಸ್ಯ ಅಪೃಕ್ತಸ್ಯ ಹಲಃ ಈಟ್–ಅಗಮಃ।

ಪ. ಛೇ. – ಅಸ್ತಿ, ಸಿಚಃ, ಅಪೃಕ್ತೇ।

ಅ. ವೃ.– "ಉತೋವೃದ್ಧಿರ್ಲುಕಿ ಹಲಿ" ಎಂಬ ಸೂತ್ರದಿಂದ 'ಹಲಿ' ಎಂಬ ಪದವೂ ಮತ್ತು "ಬ್ರುವಈಟ್" ಎಂಬ ಸೂತ್ರದಿಂದ 'ಈಟ್' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ– ವಿದ್ಯಮಾನ 'ಸಿಚ್' ಪ್ರತ್ಯಯ ಮತ್ತು 'ಅಸ್' ಧಾತುವಿಗಿಂತ ಪರದಲ್ಲಿರುವ 'ಹಲ್' ವರ್ಣಕ್ಕೂ 'ಈಟ್' ಆಗಮವು ಬರುತ್ತದೆ.

ವಿಶೇಷ: 'ಚ್ಲಿ' ಮತ್ತು ಅದರ ಸ್ಥಾನದಲ್ಲಿ ಬರುವ 'ಸಿಚ್' 'ಲುಙ್' 'ಲ್'ಕಾರದಲ್ಲಿ ಮಾತ್ರ ಬರುತ್ತದೆ. 'ಸಿಚ್' ನ ನಂತರ ಅಥವಾ 'ಅಸ್' ಧಾತುವಿನ ನಂತರ ಇರುವ ಅಪೃಕ್ತಸಂಜ್ಞೆಯುಳ್ಳ 'ಹಲ್' ಗೆ 'ಈಟ್' ಆಗಮವು ಬರುತ್ತದೆ. ಈ ಆಗಮವು 'ಟಿತ್' ಆಗಿದೆ, ಮತ್ತು ದೀರ್ಘ 'ಇ(ಈ)' ಕಾರವು ಇದೆ. 'ಟಿತ್' ಆಗಿ ಇರೋಣದರಿಂದ ಅಪೃಕ್ತ 'ಹಲ್' ಗೆ ಆದಿಯಲ್ಲಿ ಬರುತ್ತದೆ. ಅಪೃಕ್ತ 'ಹಲ್' ವರ್ಣವು 'ತಿಪ್' ಮತ್ತು 'ಸಿಪ್' ಗಳಲ್ಲಿರುವ 'ಇ' ಕಾರಗಳ ಲೋಪವಾದಮೇಲೆಯೇ ಕೂಡಿಕೊಳ್ಳುತ್ತದೆ.

ಅದುದರಿಂದ ಈ ಸೂತ್ರವು 'ತಿಪ್' ಮತ್ತು 'ಸಿಪ್' ಗಳಿಗೇನೇ ಸಂಬಂಧಿಸಿರುತ್ತದೆ.

**(ಸ್ ಕಾರ ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ– 446.ಇಟ ಈಟಿ (5.2.28)**

ವೃತ್ತಿಃ–ಇಟಃ ಪರಸ್ಯ ಸಸ್ಯ ಲೋಪಃ ಸ್ಯಾತ್ ಈಟಿ ಪರೇ।

ವಾ॥ ಸಿಜ್‌ಲೋಪ ಏಕಾದೇಶೇ ಸಿದ್ಧೋ ವಾಚ್ಯಃ॥

ಆತೀತ್। ಆತಿಷ್ಟಾಮ್।

ಪ. ಛೇ. – ಇಟಃ, ಈಟಿ।

ಅ.ವ್ಯ.– "ರಾತ್ ಸಸ್ಯ" ಎಂಬ ಸೂತ್ರದಿಂದ 'ಸಸ್ಯ' ಎಂಬ ಪದವೂ ಮತ್ತು "ಸಂಯೋಗಾನ್ತಸ್ಯ ಲೋಪಃ" ಎಂಬ ಸೂತ್ರದಿಂದ 'ಲೋಪಃ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ– 'ಇಟ್' ಗಿಂತ ಪರದಲ್ಲಿ 'ಈಟ್' ಇರುವಾಗ, ಅವುಗಳ ಮಧ್ಯದಲ್ಲಿರುವ 'ಸ್' ಕಾರಕ್ಕೆ ಲೋಪವು ಬರುತ್ತದೆ.

ವಿಶೇಷ: ಇಲ್ಲಿ ಎರಡೂ ಆಗಮಗಳು 'ಟಿತ್' ಆಗಿವೆ. "ಆರ್ಧಧಾತು ಕಸ್ಯೇಡ್ವಲಾದೇಃ" ಎಂಬ ಸೂತ್ರದಿಂದ 'ಇಟ್' ಆಗಮ ಬರುತ್ತದೆ. ಮತ್ತು "ಅಸ್ತಿ ಸಿಚೋಽಪೃಕ್ತೇ" ಎಂಬ ಸೂತ್ರದಿಂದ 'ಈಟ್' ಆಗಮವೂ ಬರುತ್ತದೆ. ಪ್ರಕೃತ ಸೂತ್ರದಿಂದ 'ಇಟ್' ಮತ್ತು 'ಈಟ್' ಗಳ ಮಧ್ಯದಲ್ಲಿರುವ 'ಸ್' ಕಾರಕ್ಕೆ ಲೋಪವು ಬರುತ್ತದೆ. ಆಗ ಸರ್ವರ್ಣದೀರ್ಘ ಸಂಧಿಯಿಂದ ಇ+ಈ=ಈ ಎಂದು ಆಗಬೇಕಾಗಿತ್ತು. ಆದರೆ ಪ್ರಕೃತ ಸೂತ್ರ 'ತ್ರಿಪಾದಿ'ಯಲ್ಲಿದೆ. ಮತ್ತು "ಅಕಃ ಸವರ್ಣೇ ದೀರ್ಘಃ" ಎಂಬ ಸೂತ್ರವು ಸಪಾದಸಪ್ತಾಧ್ಯಾಯಿಯಲ್ಲಿದೆ. ತ್ರಿಪಾದಿ ಸೂತ್ರವು ಅಸಿದ್ಧವಾಗಿರೋಣದರಿಂದ ಸರ್ವರ್ಣದೀರ್ಘಕ್ಕೆ ಅವಕಾಶವಿರುವುದಿಲ್ಲ. ಅದುದರಿಂದ ಪ್ರಕೃತ ವಾರ್ತಿಕ

ವಾ॥ ಸಿಜ್‌ಲೋಪ ಏಕಾದೇಶೆ ಸಿದ್ಧೋ ವಾಚ್ಯಃ ವು ಹೊರಟಿದೆ.

ವಾ॥ ಸಿಜ್‌ಲೋಪ ಏಕಾದೇಶೆ ಸಿದ್ಧೋ ವಾಚ್ಯಃ ।

ಅರ್ಥ:–ಏಕಾದೇಶವನ್ನು ಮಾಡಬೇಕಾಗಿದ್ದಾಗ, 'ಸಿಚ್' ನ ಲೋಪವು ಸಿದ್ಧವಾಗುತ್ತದೆ. ಸಪಾದ ಸಪ್ತಾಧ್ಯಾಯೀಯ ದೃಷ್ಟಿಯಲ್ಲಿ, ಬೇರೆ ಕಡೆಗೆ ತ್ರಿಪಾದಿಯೂ ಅಸಿದ್ಧವಾಗುತ್ತದೆ. ಆದರೆ ಏಕಾದೇಶವನ್ನು ವಿಧಿಸುವಾಗ ಮಾತ್ರ ಅದು ಸಿದ್ಧವಾಗಿಯೇ ಇರುತ್ತದೆ. ಆದುದರಿಂದ ಸರ್ವರ್ಣದೀರ್ಘ ಸಂಧಿಯು ಇಲ್ಲಿ ಬಂದೇ ಬರುತ್ತದೆ.

ಲುಙ್: ಉದಾ–ಆತೀತ್ ಪ್ರಥಮಪುರುಷ ಏಕವಚನದಲ್ಲಿ ಅತ್+ತಿ ಎಂದಿದ್ದಾಗ, 'ಆಟ್' ಆಗಮ ಬಂದು, ಆ+ಅತ್+ತಿಪ್(ತಿ) ಎಂದಿರುತ್ತದೆ. 'ಚ್ಲಿ(ಲ್)' ಗೆ 'ಸಿಚ್(ಸ್)' ಬಂದ ಮೇಲೆ, "ಇತಶ್ಚ" ಎಂಬ ಸೂತ್ರದಿಂದ 'ತಿ' ಯಲ್ಲಿರುವ 'ಇ'ಕಾರವು ಲೋಪವಾಗುತ್ತದೆ. ಆಗ ಆ+ಅತ್+ಸ್+ತ್ ಎಂದಿರುತ್ತದೆ. 'ಸ್'(ಸಿಚ್) ಗೆ "ಆರ್ಧಧಾತುಕಂ ಶೇಷಃ" ಎಂಬ ಸೂತ್ರದಿಂದ ಆರ್ಧಧಾತುಕಸಂಜ್ಞೆ ಬಂದು 'ಸ್' ಗೆ

ಆದ್ಯಯವವಾಗಿ'ಇಟ್(ಇ)' ಆಗಮ ಬರುತ್ತದೆ. ಆಗ ಆ+ಅತ್+ಇ+ಸ್+ ತ್ ಎಂದಿರುತ್ತದೆ. ನಂತರ "ಅಸ್ತಿಸಿಚೋಽಪೃಕ್ತೇ" ಎಂಬ ಸೂತ್ರದಿಂದ 'ಈಟ್' ಆಗಮವು ಅಪೃಕ್ತವಾದ 'ತ್' ಕಾರದ ಪೂರ್ವದಲ್ಲಿ ಬಂದು ಆ+ಅತ್+ಇ+ಸ್+ಈ+ತ್ ಎಂದಿದ್ದಾಗ, 'ಇ' ಕಾರ ಮತ್ತು 'ಈ' ಕಾರಗಳಮಧ್ಯದಲ್ಲಿರುವ 'ಸ್' ಕಾರಕ್ಕೆ ಲೋಪ ಬಂದು ಆ+ಅತ್+ಇ+ಈ+ತ್ ಎಂದಿದ್ದಾಗ, "ಆಟಶ್ಚ" ಎಂಬ ಸೂತ್ರದಿಂದ ಮೊದಲಿನ ಎರಡು ಸ್ವರಗಳಿಗೆ ವೃದ್ಧಿ (ಆ) ಬಂದು ಪ್ರಕೃತ ವಾರ್ತಿಕದಿಂದ 'ಇ' ಕಾರ 'ಈ' ಕಾರಗಳಿಗೆ ಸವರ್ಣ ದೀರ್ಘ ಬಂದು ಆತ್+ಈ+ತ್=ಆತೀತ್ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಆತಿಷ್ಟಾಮ್– ಪ್ರಥಮಪುರುಷ ದ್ವಿವಚನದಲ್ಲಿ ಅತ್+ತಸ್ ಎಂದಿದ್ದಾಗ, ಹಿಂದಿನಂತೆಯೇ 'ಆಟ್(ಆ)' ಆಗಮ ಮೊದಲಾದವುಗಳು ಬಂದು, ಆ+ಅತ್+ಇಸ್+ ತಾಮ್ ಎಂದಾದಮೇಲೆ "ಆಟಶ್ಚ" ಎಂಬುದರಿಂದ ವೃದ್ಧಿ ಬಂದು ಆತಿಸ್+ತಾಮ್ ಎಂದಿದ್ದಾಗ "ಆದೇಶ ಪ್ರತ್ಯಯಯೋಃ" ಎಂಬುದರಿಂದ 'ಸ್' ಕಾರಕ್ಕೆ ಷತ್ವ ಬಂದು 'ಷ್' ಕಾರ 'ತ್' ಕಾರಗಳಿಗೆ ಷ್ಟುತ್ವ ಬಂದು ಆತಿಷ್+ಟಾಮ್=ಆತಿಷ್ಟಾಮ್ ಎಂಬ ರೂಪವು ಸಿದ್ಧಿಸುತ್ತದೆ.

### (ಜುಸ್ ಆದೇಶವನ್ನು ವಿಧಿಸುವ ಸೂತ್ರ)

**ಸೂತ್ರ– 447. ಸಿಜಭ್ಯಸ್ತವಿದಿಭ್ಯಶ್ಚ (3.4.109)**

ವೃತ್ತಿಃ–ಸಿಚಃ ಅಭ್ಯಸ್ತಾತ್ ವಿದೇಃ ಚ ಪರಸ್ಯ ಜಿತ್–ಸಂಬಂಧಿನಃ ಝೇರ್ಜುಸ್। ಆತಿಷುಃ। ಆತೀಃ। ಆತಿಷ್ಟಮ್। ಆತಿಷ್ಟ ಆತಿಷಮ್। ಆತಿಷ್ವ ಆತಿಷ್ಮ।ಆತಿಷ್ಯತ್।

ಷಿಧ ಗತ್ಯಾಮ್।

ಪ. ಛೇ. – ಸಿಜಭ್ಯಸ್ತವಿಧಿಭ್ಯಃ, ಚ।

ಅ. ವೃ– "ನಿತ್ಯಂ ಜಿತಃ" ಎಂಬ ಸೂತ್ರದಿಂದ 'ಜಿತಃ' ಎಂಬ ಪದವೂ "ಝೇರ್ಜುಸ್" ಎಂಬ ಸೂತ್ರದಿಂದ 'ಜುಸ್' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ–'ಸಿಚ್' ಪ್ರತ್ಯಯ, ಅಭ್ಯಸ್ತ ಸಂಜ್ಞೆಯುಳ್ಳ ಧಾತು, ಮತ್ತು 'ವಿದ್' ಧಾತುವಿನ ಪರದಲ್ಲಿ ಇರುವ 'ಜಿತ್' 'ಲ್' ಕಾರದ ಆದೇಶವಾದ 'ಝಿ' ಗೆ 'ಜುಸ್(ಉಸ್)' ಆದೇಶವು ಬರುತ್ತದೆ. ಇದು ಅನೇಕಾಲ್ ಆಗಿರೋಣದರಿಂದ ಸರ್ವಾದೇಶವಾಗಿ ಬರುತ್ತದೆ.

ಉದಾ– ಆತಿಷುಃ– ಪ್ರಥಮ ಪುರುಷ ಬಹುವಚನದಲ್ಲಿ 'ಅತ್' ಧಾತುವಿಗೆ ಪರದಲ್ಲಿ'ಲುಙ್' 'ಲ್' ಕಾರಕ್ಕೆ ಝಿ' ಆದೇಶ ಬಂದು ಅತ್+ಝಿ ಎಂದಿದ್ದಾಗ, ಧಾತುವಿನ ಪೂರ್ವದಲ್ಲಿ 'ಆಟ್' ಆಗಮ ಬಂದು ಆ+ಅತ್+ಝಿ ಎಂದಿದ್ದಾಗ, 'ಚ್ಲಿ' ಬಂದು ಆ+ಅತ್+ಲ್(ಚ್ಲಿ)+ಝಿ ಎಂದಿದ್ದಾಗ, 'ಚ್ಲಿ(ಲ್)ಗೆ 'ಸಿಚ್(ಸ್)' ಆದೇಶ ಬಂದು, ಆ+ಅ+ಸ್+ಝಿ ಎಂದಿದ್ದಾಗ, ಅದಕ್ಕೆ ಆರ್ಧಧಾತುಕ ಸಂಜ್ಞೆ ಬಂದ ಕಾರಣದಿಂದ 'ಇಟ್' ಆಗಮ ಬಂದು, ಆ+ಅ+ಇ+ಸ್+ಝಿ ಎಂದಿದ್ದಾಗ, ಪ್ರಕೃತ

ಸೂತ್ರದಿಂದ 'ಝಿ' ಗೆ 'ಜುಸ್(ಉಸ್)' ಆದೇಶ ಬಂದು, ಆ+ಅತ್+ಇ+ಸ್+ಉಸ್ ಎಂದಿರುತ್ತದೆ. "ಆಟಶ್ಚ" ಎಂಬುದರಿಂದ ಹ್ರಸ್ವ ಅ ಕಾರಕ್ಕೆ ವೃದ್ಧಿ (ಆ), ಬಂದು, 'ಸಿಚ್' ನ 'ಸ್' ಕಾರಕ್ಕೆ ಷತ್ವ ಆ+ಆತ್+ಇ+ಷ್+ಉಸ್ ಎಂದಿದ್ದಾಗ, ಎರಡು 'ಆ' ಕಾರಗಳಿಗೆ ಸವರ್ಣದೀರ್ಘ ಬಂದು ಆತ್+ಇ+ಷ್+ಉಸ್ ಎಂದಿದ್ದಾಗ, 'ಸ್' ಕಾರಕ್ಕೆ ರುತ್ವ-ವಿಸರ್ಗಗಳಿಂದ ಆತಿಷುಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ- ಆತೀಃ- ಮಧ್ಯಮಪುರುಷ ಏಕವಚನದಲ್ಲಿ, ಅತ್+ಸಿಪ್(ಸಿ) ಎಂದಿದ್ದಾಗ, ಧಾತುವಿನ ಪೂರ್ವದಲ್ಲಿ 'ಆಟ್' ಆಗಮ ಬಂದು ಆ+ಅತ್+ಸಿ ಎಂದಿದ್ದಾಗ, ಮೇಲಿನಂತೆ 'ಚ್ಲಿ' ಬಂದು ಅದಕ್ಕೆ 'ಸಿಚ್(ಸ್)' ಆದೇಶ ಬಂದು ಆ+ಅತ್+ಸ್+ಸಿ ಎಂದಿರುತ್ತದೆ. ನಂತರ 'ಸಿಚ್' ನ 'ಸ್' ಕಾರಕ್ಕೆ 'ಇಟ್' ಆಗಮ ಬಂದು ಆ+ಅತ್+ಇ+ಸ್+ಸಿ ಎಂದಿದ್ದಾಗ, "ಆಟಶ್ಚ" ಎಂಬುದರಿಂದ ಹ್ರಸ್ವ ಅ ಕಾರಕ್ಕೆ ವೃದ್ಧಿ ಬಂದು ಆತ್+ಇ+ಸ್+ಸಿ ಎಂದಿದ್ದಾಗ, "ಇತಶ್ಚ" ಎಂಬುದರಿಂದ 'ಸಿ' ನಲ್ಲಿಯ 'ಇ' ಕಾರಕ್ಕೆ ಲೋಪ ಬಂದು ಆತ್+ಇ+ಸ್+ಸ್ ಎಂದಿದ್ದಾಗ, 'ಸಿಚ್' ನ 'ಸ್' ಕಾರಕ್ಕೆ ಲೋಪ ಬಂದು, ಆತ್+ಇ+ಸ್ ಎಂದಿದ್ದಾಗ, ಅಪೃಕ್ತವಾದ 'ಸ್' ಗೆ 'ಈಟ್(ಈ)' ಆಗಮ ಬಂದು ಆತ್+ಇ+ಈ+ಸ್ ಎಂದಿದ್ದಾಗ 'ಇ' ಕಾರ 'ಈ' ಕಾರಗಳಿಗೆ ಸವರ್ಣದೀರ್ಘ ಬಂದು ಆತ್+ ಈ+ಸ್ ಎಂದಿದ್ದಾಗ 'ಸ್' ಕಾರಕ್ಕೆ ರುತ್ವ-ವಿಸರ್ಗಗಳು ಬಂದು ಆತೀಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ- ಆತಿಷ್ಟಮ್, ಆತಿಷ್ಟ - ಮಧ್ಯಮಪುರುಷ ದ್ವಿವಚನ ಮತ್ತು ಬಹುವಚನಗಳಲ್ಲಿ ಪ್ರಕ್ರಿಯೆಯು ಪ್ರಥಮ ಪುರುಷ ದ್ವಿವಚನದಲ್ಲಿಯಂತೆ ಆತಿಷ್ಟಮ್ ಮತ್ತು ಆತಿಷ್ಟ ಎಂದು ಇರುತ್ತವೆ.

ಉದಾ -ಆತಿಷಮ್, ಆತಿಷ್ವ, ಆತಿಷ್ಮ- ಉತ್ತಮಪುರುಷ ಮೂರೂ ವಚನಗಳಲ್ಲಿ'ಆತಿಸ್' ವರೆಗಿನ ಪ್ರಕ್ರಿಯೆಯು ಹಿಂದಿನಂತೆ ನಡೆದು, ಏಕವಚನದಲ್ಲಿ 'ಮಿಪ್(ಮಿ)' ಗೆ 'ಅಮ್' ಆದೇಶ ಬಂದು ಆತಿಸ್+ಅಮ್ ಎಂದಿದ್ದಾಗ, 'ಸ್' ಕಾರಕ್ಕೆ ಷತ್ವ ಬಂದು 'ಆತಿಷಮ್' ಎಂದು ರೂಪವು ಸಿದ್ಧವಾಗುತ್ತದೆ. ದ್ವಿವಚನ ಬಹುವಚನಗಳಲ್ಲಿ ಆತಿಸ್+ವಸ್, ಆತಿಸ್+ಮಸ್ ಎಂದಿದ್ದಾಗ ಆತಿಸ್ ನಲ್ಲಿರುವ ಆದೇಶದ 'ಸ್' ಕಾರಕ್ಕೆ ಷತ್ವ, ಮತ್ತು "ನಿತ್ಯಂ ಙಿತಃ" ಎಂಬ ಸೂತ್ರದಿಂದ ಪ್ರತ್ಯಯದ 'ಸ್' ಕಾರಕ್ಕೆ ಲೋಪ ಬಂದು ಆತಿಸ್+ವಸ್=ಆತಿಷ್ವ, ಆತಿಸ್+ಮಸ್=ಆತಿಷ್ಮ ಎಂದು ರೂಪಗಳಾಗುತ್ತವೆ.

**ಲೃಙ್:**

ಉದಾ- ಆತಿಷ್ಯತ್। ಪ್ರಥಮಪುರುಷ ಏಕವಚನದಲ್ಲಿ, ಅತ್+ತಿಪ್(ತಿ) ಎಂದಿದ್ದಾಗ, ಧಾತುವಿನ ಪೂರ್ವದಲ್ಲಿ ಹಿಂದಿನಂತೆ 'ಆಟ್' ಆಗಮ ಬಂದು, ಆ+ಅತ್+ತಿ ಎಂದಿದ್ದಾಗ, ಸಾರ್ವಧಾತುಕ ಸಂಜ್ಞೆಯಿಂದ 'ಶಪ್(ಅ)' ಬರಬೇಕಿದ್ದಾಗ, ಅದನ್ನು ಬಾಧಿಸಿ "ಸ್ಯತಾಸೀ ಲೃ ಲುಟೋಃ" ಎಂಬ ಸೂತ್ರದಿಂದ 'ಸ್ಯ' ಬಂದು, ಆ+ಅತ್+ಸ್ಯ+ತಿ ಎಂದಿದ್ದಾಗ, ಆರ್ಧಧಾತುಕಸಂಜ್ಞೆಯಿಂದ 'ಇಟ್' ಆಗಮ ಬಂದು ಆ+ಅತ್+ಇ+ಸ್ಯ+ತಿ ಎಂದಿರುತ್ತದೆ, ಧಾತುವಿನಲ್ಲಿರುವ ಹ್ರಸ್ವ 'ಅ' ಕಾರಕ್ಕೆ "ಆಟಶ್ಚ" ಎಂಬುದರಿಂದ ವೃದ್ಧಿ ಬಂದು, ಎರಡು

ಆಕಾರಗಳಿಗೆ ಸವರ್ಣದೀರ್ಘ ಬಂದು, ಆತ್+ಇ+ಸ್ಯ+ತಿ ಎಂದಿದ್ದಾಗ, 'ಸ್ಯ' ನಲ್ಲಿರುವ 'ಸ್' ಕಾರಕ್ಕೆ ಷತ್ವ ಬಂದು, ಆತ್+ಇ+ ಷ್ಯ+ತಿ ಎಂದಿದ್ದಾಗ, 'ತಿ' ನಲ್ಲಿರುವ 'ಇ'ಕಾರಕ್ಕೆ "ಇತಶ್ಚ' ಎಂಬುದರಿಂದ ಲೋಪ ಬಂದು ಆತಿಷ್ಯತ್ ಎಂದು ರೂಪವು ಸಿದ್ಧವಾಗುತ್ತದೆ.

'ತಸ್' ಮೊದಲಾದ ಪ್ರತ್ಯಯಗಳು ಬಂದಾಗಲೂ ಆತಿಷ್ಯ-ದ ವರೆಗಿನ ಪ್ರಕ್ರಿಯೆಯು ಹೀಗೆಯೇ ನಡೆದು ತಾಮ್ ಮೊದಲಾದ ಆದೇಶಗಳು ಬರುತ್ತವೆ.

ಉದಾ- ಆತಿಷ್ಯತಾಮ್,ಆತಿಷ್ಯನ್ - ಪ್ರಥಮ ಪುರುಷ ದ್ವಿವಚನದಲ್ಲಿ ಆತಿಷ್ಯತಾಮ್ ಎಂದೂ, ಬಹುವಚನದಲ್ಲಿ 'ಝಿ' ಪ್ರತ್ಯಯ ಬಂದಾಗ 'ಅನ್ತ್' ಆದೇಶ ಬಂದು ಅನ್ತ್+ಇ ಎಂದಿದ್ದಾಗ ಹಿಂದಿನಂತೆಯೇ 'ಇ' ಕಾರಕ್ಕೆ ಲೋಪ ಮತ್ತು 'ತ್' ಕಾರಕ್ಕೆ ಸಂಯೋಗಾನ್ತ-ಲೋಪ ಬಂದು ಆತಿಷ್ಯನ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ- ಆತಿಷ್ಯಃ, ಆತಿಷ್ಯತಮ್, ಆತಿಷ್ಯತ -ಹೀಗೆಯೇ ಉಳಿದ ರೂಪಗಳಾದ ಆತಿಷ್ಯಃ, ಅತಿಷ್ಯತಮ್, ಆತಿಷ್ಯತ ಎಂಬ ರೂಪಗಳೂ, ಉತ್ತಮ ಪುರುಷ ಏಕವಚನದಲ್ಲಿ, ಮಿಪ್(ಮಿ)' ಗೆ 'ಅಮ್' ಆದೇಶ ಬಂದು ಆತಿಷ್ಯಮ್ ಎಂದೂ, ದ್ವಿವಚನ, ಬಹುವಚನಗಳಲ್ಲಿ ಹಿಂದಿನಂತೆಯೇ 'ವಸ್' 'ಮಸ್' ಗಳ 'ಸ್' ಕಾರ ಲೋಪವಾಗಿ, "ಅತೋದೀರ್ಘೋ ಯಞಿ" ಎಂಬ ಸೂತ್ರದಿಂದ 'ವ' 'ಮ' ಕಾರಗಳ ಪೂರ್ವದಲ್ಲಿರುವ 'ಅ' ಕಾರಕ್ಕೆ ದೀರ್ಘ ಬಂದು ಆತಿಷ್ಯಾವ, ಆತಿಷ್ಯಾಮ ಎಂಬ ರೂಪಗಳು ಸಿದ್ಧವಾಗುತ್ತವೆ.

ಉದಾ- 3. ಷಿಧ ಗತ್ಯಾಮ್ (ಇದು ಗತ್ಯರ್ಥಕವಾಗಿದೆ)- ಗತಿ ಶಬ್ದಕ್ಕೆ ನಾಲ್ಕು ಅರ್ಥಗಳಿವೆ 1. ಗಮನ, 2. ಪ್ರಾಪ್ತಿ, 3. ಜ್ಞಾನ ಮತ್ತು 4. ಮೋಕ್ಷ ಎಂದು. ಇದರಲ್ಲಿ 'ಷಿಧ್' ಮಾತ್ರ ಉಳಿಯುತ್ತದೆ 'ಷ್' ಕರಕ್ಕೆ 'ಸ್' ಕಾರವು "ಧಾತ್ವಾದೇಃ ಷಃ ಸಃ" ಎಂಬ ಸೂತ್ರದಿಂದ ಬಂದು 'ಸಿಧ್' ಎಂದಾಗುತ್ತದೆ.

ಲಟ್: 'ಸಿಧ್'ಧಾತುವಿನ ಮೇಲೆ 'ಲಟ್' 'ಲ್' ಕಾರದ ಆದೇಶವಾದ ತಿ (ತಿಪ್) ಬಂದು, ಸಿಧ್+ತಿ ಎಂದಿದ್ದಾಗ -

**(ಲಘು ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ- 448.ಹ್ರಸ್ವಂ ಲಘು (1.4.10)**

ಅರ್ಥ- ಹ್ರಸ್ವ ಸ್ವರಕ್ಕೆ 'ಲಘು' ಎಂಬ ಸಂಜ್ಞೆ ಬರುತ್ತದೆ. ಈ ಸಂಜ್ಞೆಯಿಂದ ಮುಂದೆ ಕೆಲವು ಕಾರ್ಯಗಳು ನಡೆಯುತ್ತವೆ.

**(ಗುರು ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ- 449. ಸಂಯೋಗೇ ಗುರು (1.4.11)**

ವೃತ್ತಿಃ-ಸಂಯೋಗೇ ಪರೇ ಹ್ರಸ್ವಂ ಗುರು ಸಂಜ್ಞಂ ಸ್ಯಾತ್।

ಅರ್ಥ- ಸಂಯೋಗವು ಪರದಲ್ಲಿದ್ದಾಗ, ಅವ್ಯವಹಿತ ಪೂರ್ವದಲ್ಲಿರುವ ಹ್ರಸ್ವ ಸ್ವರಕ್ಕೆ ಗುರು ಸಂಜ್ಞೆಯು ಬರುತ್ತದೆ.

(ಗುರು ಸಂಜ್ಞೆಯನ್ನು ವಿಧಿಸುವ ಮತ್ತೊಂದು ಸೂತ್ರ)

**ಸೂತ್ರ- 450. ದೀರ್ಘಂ ಚ (1.4.12)**

ವೃತ್ತಿಃ-ಗುರು ಸ್ಯಾತ್।

ಅರ್ಥ- ದೀರ್ಘ ಸ್ವರಕ್ಕೂ ಗುರು ಸಂಜ್ಞೆ ಬರುತ್ತದೆ.

(ಗುಣವಿಧಾಯಾಕ ಸೂತ್ರ)

**ಸೂತ್ರ- 451. ಪುಗನ್ತಲಘೂಪಧಸ್ಯ ಚ (7.3.86)**

ವೃತ್ತಿಃ-ಪುಗಂತಸ್ಯ ಲಘೂಪಧಸ್ಯ ಚ ಅಙ್ಗಸ್ಯ ಇಕಃ ಗುಣಃ ಸಾರ್ವಧಾತುಕಾರ್ಧ-ಧಾತುಕಯೋಃ। (255)। ಧಾತ್ವಾದೇರಿತಿ। ಸಃ। ಸೇಧತಿ। ಷತ್ವಮ್ ಸಿಷೇಧ।

ಅ. ವೃ- ಇಲ್ಲಿ ಅಂಗಸ್ಯ ಎಂಬುದು ಅಧಿಕಾರ ಸೂತ್ರವಾಗಿದೆ. "ಮಿದೇರ್ಗುಣಃ" ಎಂಬ ಸೂತ್ರದಿಂದ 'ಗುಣಃ' ಎಂಬ ಪದವೂ, "ಸಾರ್ವಧಾತುಕಾರ್ಧಧಾತುಕಯೋಃ" ಎಂಬ ಸೂತ್ರವು ಅನುವೃತ್ತವಾಗುತ್ತದೆ. ಮತ್ತು "ಇಕೋಗುಣವೃದ್ಧೀ" ಎಂಬ ಸೂತ್ರದಿಂದ 'ಇಕಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- ಸಾರ್ವಧಾತುಕ ಮತ್ತು ಆರ್ಧಧಾತುಕ 'ಲ್' ಕಾರಗಳು ಪರದಲ್ಲಿದ್ದಾಗ, 'ಪುಕ್' ಪ್ರತ್ಯಯವನ್ನು ಅಂತ್ಯದಲ್ಲಿಯುಳ್ಳ ಅಂಗದ 'ಇಕ್' ಗೆ ಮತ್ತು ಲಘು ಸಂಜ್ಞೆಯುಳ್ಳ ಉಪಧೆಯ ಅಂಗಕ್ಕೆ 'ಇಕ್' ಗೆ ಗುಣವು ಬರುತ್ತದೆ.

**ಲಟ್:**

ಉದಾ- ಪ್ರಥಮ ಪುರುಷ ಏಕವಚನದಲ್ಲಿ ಸಿಧ್+ತಿ(ತಿಪ್) ಎಂದಿದ್ದಾಗ, ಸಾರ್ವಧಾತುಕಸಂಜ್ಞೆ ಬಂದು 'ಶಪ್(ಅ)' ವಿಕರಣ ಪ್ರತ್ಯಯವನ್ನು ಧಾತುವಿನ ನಂತರ ಸೇರಿಸಿದಾಗ, ಸಿಧ್+ಅ+ತಿ ಎಂದಿರುತ್ತದೆ. 'ಧ್' ಕಾರದ ಪೂರ್ವದಲ್ಲಿರುವ 'ಇ' ಕಾರವು ಲಘೂಪದವಾಗಿದೆ. ಆದ್ದರಿಂದ ಪ್ರಕೃತ ಸೂತ್ರದಿಂದ ಈ 'ಇ' ಕಾರಕ್ಕೆ ಗುಣ ಬಂದು ಸೇಧ್+ಅ+ತಿ=ಸೇಧತಿ ಎಂದು ರೂಪವಾಗುತ್ತದೆ.

ರೂಪಗಳು: ಸೇಧತಿ, ಸೇಧತಃ, ಸೇಧನ್ತಿ। ಸೇಧಸಿ, ಸೇಧಥಃ, ಸೇಧಥ। ಸೇಧಾಮಿ, ಸೇಧಾವಃ, ಸೇಧಾಮಃ।

**ಲಿಟ್:**

ಉದಾ- ಸಿಷೇಧ- ಪ್ರಥಮಪುರುಷ ಏಕವಚನದಲ್ಲಿ ಸಿಧ್+ತಿಪ್ ಎಂದಿದ್ದಾಗ, 'ತಿಪ್' ಗೆ ಅಭಿನವ ಆಖ್ಯಾತ ಪ್ರತ್ಯಯವಾದ 'ಣಲ್(ಅ)' ಬಂದು ಸಿಧ್+ಅ ಎಂದಿದ್ದಾಗ, "ಲಿಟ್ ಚ" ಎಂಬ ಸೂತ್ರದಿಂದ ಆರ್ಧಧಾತುಕ ಸಂಜ್ಞೆ ಬಂದು, ನಂತರ "ಲಿಟಿ ಧಾತೋರನಭ್ಯಾಸಸ್ಯ" ಎಂಬ ಸೂತ್ರದಿಂದ ಧಾತುವಿಗೆ ದ್ವಿತ್ವ ಬಂದು ಸಿಧ್ ಸಿಧ್+ಅ ಎಂದಿದ್ದಾಗ, "ಪೂರ್ವೋಽಭ್ಯಾಸಃ" ಎಂಬ ಸೂತ್ರದಿಂದ ಅಭ್ಯಾಸಸಂಜ್ಞೆ ಬಂದು, "ಹಲಾದಿಃ ಶೇಷಃ" ಎಂಬ ಸೂತ್ರದಿಂದ ಅಭ್ಯಾಸದ 'ಸಿಧ್'ನಲ್ಲಿರುವ 'ಧ್' ಕಾರಕ್ಕೆ ಲೋಪ ಬಂದು, ಸಿ, ಸಿಧ್+ಅ ಎಂದಿದ್ದಾಗ, ಆರ್ಧಧಾತುಕವು ಪರದಲ್ಲಿರುವುದರಿಂದ

'ಧ್' ಕಾರಕ್ಕೆ ಪೂರ್ವದಲ್ಲಿರುವ 'ಇ' ಕಾರಕ್ಕೆ "ಪ್ರಕೃತ ಸೂತ್ರದಿಂದ ಗುಣ ಬಂದು ಸಿಸೇಧ್+ಅ ಎಂದಿರುತ್ತದೆ. ಆಗ ಮೊದಲನೇ 'ಸ್' ಕಾರೋತ್ತರ 'ಇ' ಕಾರವು 'ಇಣ್(ಇ)' ಆಗಿರೋಣದರಿಂದ "ಆದೇಶ ಪ್ರತ್ಯಯಯೋಃ" ಎಂಬ ಸೂತ್ರದಿಂದ ಎರಡನೆಯ 'ಸ್' ಕಾರಕ್ಕೆ ಷತ್ವ ಬಂದು ಸಿಷೇಧ್+ಅ=ಸಿಷೇಧ ಎಂದು ರೂಪವು ಸಿದ್ಧವಾಗುತ್ತದೆ.

**(ಕಿದ್ವದ್ಭಾವವನ್ನು ವಿಧಿಸುವ ಸೂತ್ರ)**

**ಸೂತ್ರ- 452. ಅಸಂಯೋಗಾಲ್ಲಿಟ್ ಕಿತ್ (1.2.5)**

ವೃತ್ತಿಃ-ಅಸಂಯೋಗಾತ್ ಪರಃ ಅಪಿತ್ ಲಿಟ್ ಕಿತ್ ಸ್ಯಾತ್। ಸಿಷಿಧತುಃ। ಸಿಷಿಧುಃ। ಸಿಷೇಧಿಥ। ಸಿಷಿಧಥುಃ। ಸಿಷಿಧ। ಸಿಷೇಧ।ಸಿಷಿಧಿವ। ಸಿಷಿಧಿಮ। ಸೇಧಿತಾ। ಸೇಧಿಷ್ಯತಿ। ಸೇಧತು। ಅಸೇಧತ್। ಸೇಧೇತ್। ಸಿಧ್ಯಾತ್। ಅಸೇಧೀತ್। ಅಸೇಧಿಷ್ಯತ್। ಏವಂ ಚಿತಿ ಸಂಜ್ಞಾನೇ।4।

ಪ. ಛೇ. – ಅಸಂಯೋಗಾತ್, ಲಿಟ್, ಕಿತ್।

ಅ. ವೃ.– "ಸಾರ್ವಧಾತುಕಮಪಿತ್" ಎಂಬ ಸೂತ್ರದಿಂದ 'ಅಪಿತ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ–ಸಂಯೋಗವಲ್ಲದರ ಪರದಲ್ಲಿರುವ 'ಪಿತ್' ಗಿಂತ ಭಿನ್ನವಾದ 'ಲಿಟ್' 'ಲ್' ಕಾರಕ್ಕೆ ಕಿದ್ವದ್ಭಾವವು ಅತಿದೇಶದಿಂದ ಬರುತ್ತದೆ. ಇದರಿಂದ ಕಿದ್ವದ್ಭಾವದಿಂದ ಬರುವ ಪ್ರಯೋಜನಗಳು (ಗುಣ, ವೃದ್ಧಿ, ನಿಷೇಧ)ಗಳು ಆಗುತ್ತವೆ.

ಉದಾ– ಸಿಷಿಧತುಃ – ಪ್ರಥಮಪುರುಷ ದ್ವಿವಚನದಲ್ಲಿ ಸಿಧ್+ತಸ್ ಎಂದಿದ್ದಾಗ, ಅದಕ್ಕೆ ಅಭಿನವ ಆಖ್ಯಾತ ಪ್ರತ್ಯಯವಾದ 'ಅತುಸ್' ಬಂದು, ಸಿಧ್+ಅತುಸ್ ಎಂದಿರುತ್ತದೆ, "ಲಿಟ್ ಚ' ಎಂಬ ಸೂತ್ರದಿಂದ ಆರ್ಧ ಧಾತುಕ ಸಂಜ್ಞೆ ಬಂದು "ಲಿಟಿ ಧಾತೋರನಭ್ಯಾಸಸ್ಯ" ಎಂಬ ಸೂತ್ರದಿಂದ ಧಾತುವಿಗೆ ದ್ವಿತ್ವ ಬಂದು ಸಿಧ್ ಸಿಧ್+ಅತುಸ್ ಎಂದಿದ್ದಾಗ, "ಪೂರ್ವೋಽಭ್ಯಾಸಃ" ಎಂಬುದರಿಂದ ಮೊದಲನೆಯ 'ಸಿಧ್' ಗೆ ಅಭ್ಯಾಸ ಸಂಜ್ಞೆ ಬಂದು, "ಹಲಾದಿಃ ಶೇಷಃ" ಎಂಬ ಸೂತ್ರದಿಂದ ಅಭ್ಯಾಸವಾದ ಸಿಧ್ ನ 'ಧ್' ಕಾರಕ್ಕೆ ಲೋಪ ಬಂದು ಸಿ, ಸಿಧ್+ಅತುಸ್ ಎಂದಿರುತ್ತದೆ. ಇಲ್ಲಿ ಸಂಯುಕ್ತಾಕ್ಷರವು ಇಲ್ಲದೇ ಇರೋಣದರಿಂದ ಪ್ರಕೃತ ಸೂತ್ರದಿಂದ 'ಅತುಸ್' ಗೆ ಕಿದ್ವದ್ಭಾವವು ಬಂದು, ಆರ್ಧಧಾತುಕವು ಪರದಲ್ಲಿರೋಣದರಿಂದ 'ಸಿಧ್' ನಲ್ಲಿರುವ 'ಇ' ಕಾರಕ್ಕೆ "ಪುಗನ್ತಲಘೂಪಧಸ್ಯ ಚ" ಎಂಬ ಸೂತ್ರದಿಂದ ಗುಣವು ಪ್ರಾಪ್ತವಾದಾಗ, "ಕ್ಙಿತಿಚ" ಎಂಬ ಸೂತ್ರದಿಂದ ಗುಣವು ಬಾರದೇ ಸಿಸಿಧ್+ಅತುಸ್ ಎಂದೇ ಇರುತ್ತದೆ. ಮೊದಲನೇಯ 'ಸಿ' ನಲ್ಲಿರುವ 'ಇ'ಕಾರವು 'ಇಣ್' ಪ್ರತ್ಯಾಹಾರದಲ್ಲಿರೋಣದರಿಂದ ಅದರ ಪರದಲ್ಲಿರುವ ಎರಡನೆಯ 'ಸಿಧ್' ನಲ್ಲಿ ಇರುವ 'ಸ್' ಕಾರಕ್ಕೆ "ಆದೇಶ ಪ್ರತ್ಯಯಯೋಃ" ಎಂಬ ಸೂತ್ರದಿಂದ ಷತ್ವ ಬಂದು, ಸಿಷಿಧ್+ಅತುಸ್=ಸಿಷಿಧತುಸ್ ಎಂದಿದ್ದಾಗ, ರುತ್ವ-ವಿಸರ್ಗಗಳಿಂದ ಸಿಷಿಧತುಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಸಿಷಿಧುಃ–ಪ್ರಥಮ ಪುರುಷ ಬಹು ವಚನದಲ್ಲಿ ಸಿಷಿಧ್ ವರೆಗಿನ ಪ್ರಕ್ರಿಯೆಯು ಮೇಲಿನಂತೆಯೇ ನಡೆದು, ಸಿಷಿಧ್+ಝಿ ಎಂದಿದ್ದಾಗ, 'ಝಿ' ಗೆ 'ಉಸ್' ಆದೇಶ ಬಂದು ಸಿಷಿಧುಸ್ ಎಂದಾಗಿ ರುತ್ವ–ವಿಸರ್ಗಗಳಿಂದ ಸಿಷಿಧುಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಸಿಷೇಧಿಥ – ಮಧ್ಯಮಪುರುಷ ಏಕವಚನದಲ್ಲಿ ಸಿಸಿಧ್ ವರೆಗಿನ ಪ್ರಕ್ರಿಯೆಯು ಮೇಲಿನಂತೆಯೇ ನಡೆದು ಸಿಸಿಧ್+ಸಿಪ್ ಎಂದಿದ್ದಾಗ, 'ಸಿಪ್' ಗೆ 'ಥಲ್(ಥ)' ಆದೇಶ ಬಂದು ಸಿಸಿಧ್+ಥ ಎಂದಿರುತ್ತದೆ. ಇಲ್ಲಿ 'ಧ್' ಕಾರ 'ಥ್' ಕಾರಗಳ ಸಂಯೋಗವಿರೋಣದರಿಂದ ಕಿದ್ವದ್ಭಾವವು ಬರುವುದಿಲ್ಲವಾದ್ದರಿಂದ ಪ್ರಕೃತ ಸೂತ್ರದಿಂದ ಬರುವ ಗುಣಕ್ಕೆ ನಿಷೇಧವಿರುವುದಿಲ್ಲ . ಆದ್ದರಿಂದ ಎರಡನೇ 'ಸ್' ಗೆ ಷತ್ವ ಬಂದು, ಸಿಷಿಧ್+ಥ ಎಂದಿದ್ದಾಗ, 'ಷಿ' ನಲ್ಲಿರುವ 'ಇ' ಕಾರಕ್ಕೆ ಗುಣ ಬಂದು ಸಿಷೇಧ್+ಥ ಎಂದಿದ್ದಾಗ, 'ಥ' ಗೆ 'ಇಟ್(ಇ)' ಆಗಮ ಬಂದು ಸಿಷೇಧ್+ಇಥ =ಸಿಷೇಧಿಥ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಸಿಷಿಧಥುಃ – ಮಧ್ಯಮ ಪುರುಷ ದ್ವಿವಚನದಲ್ಲಿ ಸಿಷಿಧ್ ವರೆಗಿನ ಪ್ರಕ್ರಿಯೆಯು ಮೇಲಿನಂತೆಯೇ ನಡೆದು ಸಿಷಿಧ್+ಅಥುಸ್ ಎಂದಿದ್ದಾಗ, 'ಸ್' ಕಾರಕ್ಕೆ ರುತ್ವ–ವಿಸರ್ಗಗಳಿಂದ ಸಿಷಿಧಥುಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಸಿಷಿಧ– ಮಧ್ಯಮ ಪುರುಷ ಬಹುವಚನದಲ್ಲಿ ಸಿಷಿಧ್ ವರೆಗಿನ ಪ್ರಕ್ರಿಯೆಯು ಮೇಲಿನಂತೆಯೇ ನಡೆದು ಸಿಷಿಧ್+ಥ ಎಂದಿದ್ದಾಗ, 'ಥ'ಗೆ ಅಭಿನವ ಆಖ್ಯಾತ ಪ್ರತ್ಯಯವಾದ 'ಅ' ಬಂದು ಸಿಷಿಧ್+ಅ=ಸಿಷಿಧ ಎಂದು ರೂಪವಾಗುತ್ತದೆ.

ಉದಾ– ಸಿಷೇಧ – ಉತ್ತಮ ಪುರುಷ ಏಕವಚನಲ್ಲಿ ಸಿಷಿಧ್ ವರೆಗಿನ ಪ್ರಕ್ರಿಯೆಯು ಮೇಲಿನಂತೆಯೇ ನಡೆದು ಸಿಷಿಧ್+ಅ (ಣಲ್) ಎಂದಿದ್ದಾಗ, ಪ್ರಥಮಪುರುಷ ಏಕವಚನದಲ್ಲಿಯಂತೆಯೇ ಸಿಷೇಧ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ–ಸಿಷಿಧಿವ। ಸಿಷಿಧಿಮ – ಉತ್ತಮ ಪುರುಷ ದ್ವಿವಚನ ಬಹುವಚನಗಳಲ್ಲಿ ಸಿಷಿಧ್ ವರೆಗಿನ ಪ್ರಕ್ರಿಯೆಯು ಹಿಂದಿನಂತೆಯೆ ನಡೆದು ಸಿಷಿಧ್+ವಸ್ ಮತ್ತು ಸಿಷಿಧ್+ಮಸ್ ಎಂದಿದ್ದಾಗ, ಇವು ವಲಾದಿಯಾದ ಪ್ರತ್ಯಯಗಳಾದ್ದರಿಂದ 'ಇಟ್' ಆಗಮ ಬಂದು ಸಿಷಿಧ್+ಇ+ವಸ್ ಮತ್ತು ಸಿಷಿಧ್+ಇ+ಮಸ್, ಎಂದಿದ್ದಾಗ, ಸಿಷಿಧಿವಸ್, ಮತ್ತು ಸಿಷಿಧಿಮಸ್ ಎಂದಾಗಿ ವಸ್, ಮಸ್ ಪ್ರತ್ಯಯಗಳು ಸಾರ್ವಧಾತುಕವಾಗಿಯೂ, ಅಪಿತ್ ಆಗಿಯೂ ಇರೋಣದರಿಂದ "ಸಾರ್ವಧಾತುಕಮಪಿತ್" ಎಂಬಸೂತ್ರದಿಂದ ಙಿದ್ವದ್ಭಾವ ಬಂದು "ನಿತ್ಯಂಙಿತಃ" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬಂದು ಸಿಷಿಧಿವ ಮತ್ತು ಸಿಷಿಧಿಮ ಎಂಬ ರೂಪಗಳು ಸಿದ್ಧವಾಗುತ್ತವೆ.

**ಲುಟ್**:

ಉದಾ– ಸೇಧಿತಾ – ಪ್ರಥಮಪುರುಷ ಏಕವಚನದಲ್ಲಿ ಸಿಧ್(ಷಿಧ್) ಧಾತುವಿನಮೇಲೆ

'ಲುಟ್' 'ಲ್'ಕಾರಕ್ಕೆ 'ತಿಪ್' ಆದೇಶ ಬಂದು, ಸಿಧ್+ತಿ (ತಿಪ್) ಎಂದಿದ್ದಾಗ, ಸಾರ್ವಧಾತುಕಸಂಜ್ಞೆಯಿಂದ 'ಶಪ್' ವಿಕರಣ ಬರಬೇಕಾಗಿದ್ದಾಗ, ಅದನ್ನು ಬಾಧಿಸಿ "ಸ್ಯತಾಸೀ ಲೃ ಲುಟೋಃ" ಎಂಬುದರಿಂದ 'ತಾಸಿ' ಪ್ರತ್ಯಯ ಬಂದು, ಸಿಧ್+ತಾಸಿ+ತಿ ಎಂದಿದ್ದಾಗ, ಆರ್ಧಧಾತುಕಸಂಜ್ಞೆಯ ನಿಮಿತ್ತದಿಂದ 'ತಾಸಿ' ಪ್ರತ್ಯಯಕ್ಕೆ ಪೂರ್ವದಲ್ಲಿ 'ಇಟ್' ಆಗಮ ಬಂದು, ಸಿಧ್+ಇ+ತಾಸಿ+ತಿ ಎಂದಿದ್ದಾಗ, 'ಸಿಧ್' ನಲ್ಲಿರುವ 'ಇ' ಕಾರಕ್ಕೆ "ಪುಗಂತಲಘೂಪಧಸ್ಯ ಚ" ಎಂಬುದರಿಂದ ಗುಣ ಬಂದು ಸೇಧಿ+ತಾಸಿ+ತಿ ಎಂದಿದ್ದಾಗ, "ಉಪದೇಶೇಽಜನುನಾಸಿಕ ಇತ್" ಎಂಬುದರಿಂದ 'ತಾಸಿ' ನಲ್ಲಿರುವ 'ಇ' ಕಾರಕ್ಕೆ ಲೋಪ ಬಂದು, ಸೇಧಿ+ತಾಸ್+ತಿ ಎಂದಿದ್ದಾಗ, 'ತಿ' ಗೆ "ಲುಟಃ ಪ್ರಥಮಸ್ಯ ಡಾರೌರಸಃ" ಎಂಬುದರಿಂದ 'ಡಾ(ಆ)' ಆದೇಶ ಬಂದು, ಸೇಧಿ+ತಾಸ್+ಆ ಎಂದಿರುತ್ತದೆ. ಆಗ 'ತಾಸ್' ನಲ್ಲಿರುವ 'ಆಸ್' ಗೆ 'ಟಿ' ಸಂಜ್ಞೆ ಬರುತ್ತದೆ. ಡಿತ್ವವಿಧಾನಸಾಮರ್ಥ್ಯದಿಂದ 'ಭ' ಸಂಜ್ಞೆ ಬಾರದಿದ್ದರೂ, "ಟೇಃ" ಎಂಬ ಸೂತ್ರದಿಂದ 'ಟಿ(ಆಸ್)' ಗೆ ಲೋಪ ಬಂದು, ಸೇಧಿ+ತಾ+ಆ ಎಂದಿದ್ದಾಗ, ಎರಡು 'ಆ' ಕಾರಗಳಿಗೆ ಸವರ್ಣದೀರ್ಘ ಬಂದು ಸೇಧಿತಾ ಎಂಬ ರೂಪವು ಸಿದ್ಧವಾಗುತ್ತದೆ. ಇದೇ ರೀತಿಯಲ್ಲಿ ಪ್ರಕ್ರಿಯೆ ನಡೆದು ಉಳಿದ ರೂಪಗಳು ಸಿದ್ಧವಾಗುತ್ತವೆ.

ರೂಪಗಳು: ಸೇಧಿತಾ,ಸೇಧಿತಾರೌ, ಸೇಧಿತಾರಃ।ಸೇದಿತಾಸಿ, ಸೇದಿತಾಸ್ಥಃ, ಸೇದಿತಾಸ್ಥ। ಸೇಧಿತಾಸ್ಮಿ, ಸೇಧಿತಾಸ್ವಃ, ಸೇಧಿತಾಸ್ಮಃ।

**ಲೃಟ್**:

ಉದಾ– ಸೇಧಿಷ್ಯತಿ– ಪ್ರಥಮಪುರುಷ ಏಕವಚನದಲ್ಲಿ ಸಿಧ್(ಷಿಧ್) ಧಾತುವಿನಮೇಲೆ 'ಲೃಟ್' 'ಲ್'ಕಾರಕ್ಕೆ, 'ತಿಪ್' ಬಂದಮೇಲೆ ಧಾತುವಿನ ನಂತರ 'ಸ್ಯ' ಪ್ರತ್ಯಯ ಬಂದು ಸಿಧ್+ಸ್ಯ+ತಿ(ತಿಪ್) ಎಂದಿದ್ದಾಗ, ಹಿಂದಿನಂತೆ ಮೊದಲನೇ 'ಸ್' ನಲ್ಲಿರುವ 'ಇ' ಕಾರಕ್ಕೆ ಗುಣ ಬಂದು ಸೇಧ್+ಸ್ಯ+ತಿ ಎಂದಿದ್ದಾಗ, ವಲಾದಿಯಾದ 'ಸ್ಯ' ಗೆ 'ಇಟ್' ಆಗಮ ಬಂದು ಸೇಧ್+ಇ+ಸ್ಯ+ತಿ ಎಂದಿದ್ದಾಗ, ಹಿಂದಿನಂತೆ ಆದೇಶವಾದ 'ಸ್ಯ' ದಲ್ಲಿರುವ 'ಸ್' ಕಾರಕ್ಕೆ ಷತ್ವ ಬಂದು, ಸೇಧಿಷ್ಯತಿ ಎಂದು ರೂಪವು ಸಿದ್ಧವಾಗುತ್ತದೆ.

ರೂಪಗಳು: ಸೇಧಿಷ್ಯತಿ, ಸೇಧಿಷ್ಯತಃ, ಸೇಧಿಷ್ಯನ್ತಿ। ಸೇಧಿಷ್ಯಸಿ, ಸೇಧಿಷ್ಯಥಃ, ಸೇಧಿಷ್ಯಥ, ಸೇಧಿಷ್ಯಾಮಿ, ಸೇಧಿಷ್ಯಾವಃ, ಸೇಧಿಷ್ಯಾಮಃ।

**ಲೋಟ್**:

ಉದಾ–ಸೇಧತು – ಈ ಪ್ರಕೃತ ಧಾತುವಿಗೂ ಈ 'ಲ್' ಕಾರದಲ್ಲಿ 'ಅತ್' ಧಾತುವಿನಲ್ಲಿ ಜರುಗಿದ ಪ್ರಕ್ರಿಯೆಯಂತೆ ಪ್ರಕ್ರಿಯೆ ನಡೆದು, "ಪುಗನ್ತಲಘೂಪದಸ್ಯ ಚ" ಎಂಬುದರಿಂದ ಇಗನ್ತ ಅಂಗಕ್ಕೆ ಗುಣ ಬಂದು ಕೆಳಗಿನಂತೆ ರೂಪಗಳು ಸಿದ್ಧವಾಗುತ್ತವೆ.

ರೂಪಗಳು– ಸೇಧತು/ಸೇಧತಾತ್,ಸೇಧತಾಮ್, ಸೇಧನ್ತು। ಸೇಧ/ಸೇಧತಾತ್, ಸೇಧತಮ್, ಸೇಧತ। ಸೇಧಾನಿ, ಸೇಧಾವ, ಸೇಧಾಮ।

**ಲಙ್:**

ಉದಾ–ಅಸೇಧತ್– ಇಲ್ಲಿಯೂ ಕೂಡ 'ಅತ್' ಧಾತುವಿನಲ್ಲಿ ಜರುಗಿದ ಪ್ರಕ್ರಿಯೆಯಂತೆ ಪ್ರಕ್ರಿಯೆ ನಡೆದು, "ಪುಗನ್ತಲಘೂಪಧಸ್ಯ ಚ" ಎಂಬುದರಿಂದ ಇಗನ್ತ ಅಂಗಕ್ಕೆ ಗುಣ ಬಂದು, ಹಲಾದಿ ಧಾತುವಾಗಿರುವುದರಿಂದ ಧಾತುವಿನ ಪೂರ್ವದಲ್ಲಿ 'ಅಟ್' ಆಗಮ ಬಂದು ಕೆಳಗಿನಂತೆ ರೂಪಗಳು ಸಿದ್ಧವಾಗುತ್ತವೆ.

ರೂಪಗಳು: ಅಸೇಧತ್, ಅಸೇಧತಾಮ್, ಅಸೇಧನ್। ಅಸೇಧಃ, ಅಸೇಧತಮ್, ಅಸೇಧತ। ಅಸೇಧಮ್, ಅಸೇಧಾವ, ಅಸೇಧಾಮ।

**ವಿಧಿಲಙ್:**

ಉದಾ–ಸೇಧೇತ್– ಇಲ್ಲಿಯೂ ಕೂಡ 'ಅತ್' ಧಾತುವಿನಲ್ಲಿ ಜರುಗಿದ ಪ್ರಕ್ರಿಯೆಯಂತೆ ಪ್ರಕ್ರಿಯೆ ನಡೆದು, "ಪುಗನ್ತಲಘೂಪಧಸ್ಯ ಚ" ಎಂಬುದರಿಂದ ಇಗನ್ತ ಅಂಗಕ್ಕೆ ಗುಣ ಬಂದು, ಕೆಳಗಿನಂತೆ ರೂಪಗಳು ಸಿದ್ಧಿಸುತ್ತವೆ.

ರೂಪಗಳು: ಸೇಧೇತ್, ಸೇಧೇತಾಮ್,ಸೇಧೇಯುಃ। ಸೇಧೇಃ, ಸೇಧೇತಮ್, ಸೇಧೇತ। ಸೇಧೇಯಮ್, ಸೇಧೇವ, ಸೇಧೇಮ।

**ಆಶೀರ್ಲಙ್:**

ಉದಾ–ಸಿಧ್ಯಾತ್ – ಇಲ್ಲಿಯೂ ಕೂಡ 'ಅತ್' ಧಾತುವಿನಲ್ಲಿ ಜರುಗಿದ ಪ್ರಕ್ರಿಯೆಯಂತೆ ಪ್ರಕ್ರಿಯೆ ನಡೆದು, "ಪುಗನ್ತಲಘೂಪಧಸ್ಯ ಚ" ಎಂಬುದರಿಂದ ಇಗನ್ತ ಅಂಗಕ್ಕೆ ಗುಣ ಬಂದು, "ಲಿಙಾಶಿಷೀ" ಎಂಬುದರಿಂದ ಯಾಸುಟ್" ಗೆ ಕಿದ್ವದ್ಭಾವ ಬಂದು "ಕ್ಙಿತಿ ಚ" ಎಂಬುದರಿಂದ ಗುಣಕ್ಕೆ ನಿಷೇಧ ಬಂದು ಕೆಳಗಿನಂತೆ ರೂಪಗಳು ಸಿದ್ಧಿಸುತ್ತವೆ.

ರೂಪಗಳು: ಸಿಧ್ಯಾತ್,ಸಿಧ್ಯಾಸ್ತಾಮ್,ಸಿಧ್ಯಾಸುಃ। ಸಿಧ್ಯಾಃ, ಸಿಧ್ಯಾಸ್ತಮ್,ಸಿಧ್ಯಾಸ್ತ। ಸಿಧ್ಯಾಸಮ್, ಸಿಧ್ಯಾಸ್ವ, ಸಿಧ್ಯಾಸ್ಮ।

**ಲುಙ್:**

ಉದಾ–ಅಸೇಧೀತ್–ಇಲ್ಲಿಯೂ ಕೂಡ 'ಅತ್' ಧಾತುವಿನಲ್ಲಿ ಜರುಗಿದ ಪ್ರಕ್ರಿಯೆಯಂತೆ ಪ್ರಕ್ರಿಯೆ ನಡೆದು, "ಪುಗನ್ತಲಘೂಪಧಸ್ಯ ಚ" ಎಂಬುದರಿಂದ ಇಗನ್ತ ಅಂಗಕ್ಕೆ ಗುಣ ಬಂದು, ಹಲಾದಿ ಧಾತುವಾಗಿರುವುದರಿಂದ ಧಾತುವಿನ ಪೂರ್ವದಲ್ಲಿ 'ಅಟ್' ಆಗಮ ಬಂದು ಕೆಳಗಿನಂತೆ ರೂಪಗಳು ಸಿದ್ಧವಾಗುತ್ತವೆ.

ರೂಪಗಳು: ಅಸೇಧೀತ್, ಅಸೇಧಿಷ್ಟಾಮ್, ಅಸೇಧಿಷುಃ। ಅಸೇಧೀಃ, ಅಸೇಧಿಷ್ಟಮ್, ಅಸೇಧಿಷ್ಟ। ಅಸೇಧಿಷಮ್, ಅಸೇಧಿಷ್ವ, ಅಸೇಧಿಷ್ಮ।

**ಲೃಙ್:**

ಉದಾ–ಅಸೇಧಿಷ್ಯತ್– ಇಲ್ಲಿಯೂ ಕೂಡ 'ಅತ್' ಧಾತುವಿನಲ್ಲಿ ಜರುಗಿದ ಪ್ರಕ್ರಿಯೆಯಂತೆ ಪ್ರಕ್ರಿಯೆ ನಡೆದು, "ಪುಗನ್ತಲಘೂಪಧಸ್ಯ ಚ" ಎಂಬುದರಿಂದ ಇಗನ್ತ ಅಂಗಕ್ಕೆ ಗುಣ ಬಂದು, ಹಲಾದಿ ಧಾತುವಾಗಿರುವುದರಿಂದ ಧಾತುವಿನ ಪೂರ್ವದಲ್ಲಿ

'ಅಟ್' ಆಗಮ ಬಂದು ಕೆಳಗಿನಂತೆ ರೂಪಗಳು ಸಿದ್ಧವಾಗುತ್ತವೆ.

ರೂಪಗಳು: ಅಸೇಧಿಷ್ಯತ್, ಅಸೇಧಿಷ್ಯತಾಮ್, ಅಸೇಧಿಷ್ಯನ್। ಅಸೇಧಿಷ್ಯಃ, ಅಸೇಧಿಷ್ಯತಮ್, ಅಸೇಧಿಷ್ಯತ। ಅಸೇಧಿಷ್ಯಮ್, ಅಸೇಧಿಷ್ಯಾವ, ಅಸೇಧಿಷ್ಯಾಮ।

ಧಾತು 4. ಏವಂ ಚಿತಿ ಸಂಜ್ಞಾನೇ– (ಎಚ್ಚರಗೊಳ್ಳುವುದು / ಸರಿಯಾದ ರೀತಿಯಲ್ಲಿ ಜ್ಞಾನವನ್ನು ಮಾಡಿಕೊಳ್ಳುವುದು) – ಇದರಲ್ಲಿ 'ಚಿತ್' ಮಾತ್ರ ಉಳಿಯುತ್ತದೆ.

ಲಟ್:

ಇದರಲ್ಲಿ 'ಲಘೂಪಧ ಗುಣವಾಗಿ' ಪ್ರಥಮಪುರುಷ ಏಕವಚನದಲ್ಲಿ 'ಚೇತತಿ' ಎಂದು ರೂಪವಾಗುತ್ತದೆ.

ರೂಪಗಳು: ಚೇತತಿ, ಚೇತತಃ, ಚೇತನ್ತಿ। ಚೇತಸಿ. ಚೇತಥಃ, ಚೇತಥ। ಚೇತಾಮಿ, ಚೇತಾವಃ, ಚೇತಾಮಃ।

ಲಿಟ್:–ರೂಪಗಳು: ಚಿಚೇತ, ಚಿಚಿತತುಃ, ಚಿಚಿತುಃ। ಚಿಚೇತಿಥ, ಚಿಚಿತಥುಃ, ಚಿಚಿತ। ಚಿಚೇತ, ಚಿಚಿತಿವ, ಚಿಚಿತಿಮ।

ಲುಟ್:–ರೂಪಗಳು: ಚೇತಿತಾ, ಚೇತಿತಾರೌ, ಚೇತಿತಾರಃ। ಚೇತಿತಾಸಿ, ಚೇತಿತಾಸ್ಥಃ, ಚೇತಿತಾಸ್ಥ। ಚೇತಿತಾಸ್ಮಿ, ಚೇತಿತಾಸ್ವಃ, ಚೇತಿತಾಸ್ಮಃ।

ಲೃಟ್:–ರೂಪಗಳು: ಚೇತಿಷ್ಯತಿ, ಚೇತಿಷ್ಯತಃ, ಚೇತಿಷ್ಯನ್ತಿ। ಚೇತಿಷ್ಯಸಿ, ಚೇತಿಷ್ಯಥಃ, ಚೇತಿಷ್ಯಥ। ಚೇತಿಷ್ಯಾಮಿ, ಚೇತಿಷ್ಯಾವಃ, ಚೇತಿಷ್ಯಾಮಃ।

ಲೋಟ್:–ರೂಪಗಳು: ಚೇತತು/ಚೇತತಾತ್, ಚೇತತಾಮ್, ಚೇತನ್ತು। ಚೇತ/ಚೇತತಾತ್, ಚೇತತಮ್, ಚೇತತ। ಚೇತಾನಿ, ಚೇತಾವ, ಚೇತಾಮ।

ಲಙ್:–ರೂಪಗಳು: ಅಚೇತತ್, ಅಚೇತತಾಮ್, ಅಚೇತನ್। ಅಚೇತಃ, ಅಚೇತತಮ್, ಅಚೇತತ। ಅಚೇತಮ್, ಅಚೇತಾವ, ಅಚೇತಾಮ।

ವಿಧಿಲಿಙ್:–ರೂಪಗಳು: ಚೇತೇತ್, ಚೇತೇತಾಮ್, ಚೇತೇಯುಃ। ಚೇತೇಃ, ಚೇತೇತಮ್, ಚೇತೇತ। ಚೇತೇಯಮ್, ಚೇತೇವ, ಚೇತೇಮ।

ಆಶೀರ್ಲಿಙ್:–ರೂಪಗಳು: ಚಿತ್ಯಾತ್, ಚಿತ್ಯಾಸ್ತಾಮ್, ಚಿತ್ಯಾಸುಃ। ಚಿತ್ಯಾಃ, ಚಿತ್ಯಾಸ್ತಮ್, ಚಿತ್ಯಾಸ್ತ। ಚಿತ್ಯಾಸಮ್, ಚಿತ್ಯಾಸ್ವ, ಚಿತ್ಯಾಸ್ಮ।

ಲುಙ್:–ರೂಪಗಳು: ಅಚೇತೀತ್, ಅಚೇತಿಷ್ಟಾಮ್, ಅಚೇತಿಷುಃ। ಅಚೇತೀಃ, ಅಚೇತಿಷ್ಟಮ್, ಅಚೇತಿಷ್ಟ। ಅಚೇತಿಷಮ್, ಅಚೇತಿಷ್ವ, ಅಚೇತಿಷ್ಮ।

ಲೃಙ್:–ರೂಪಗಳು: ಅಚೇತಿಷ್ಯತ್, ಅಚೇತಿಷ್ಯತಾಮ್, ಅಚೇತಿಷ್ಯನ್। ಅಚೇತಿಷ್ಯಃ, ಅಚೇತಿಷ್ಯತಮ್, ಅಚೇತಿಷ್ಯತ। ಅಚೇತಿಷ್ಯಮ್, ಅಚೇತಿಷ್ಯಾವ, ಅಚೇತಿಷ್ಯಾಮ।

ಧಾತು 5. ಶುಚ ಶೋಕೇ (ಶೋಕಮಾಡುವುದು, ಚಿಂತಿಸುವುದು ಇತ್ಯಾದಿ।) – ಇದರಲ್ಲಿ 'ಶುಚ್' ಮಾತ್ರ ಉಳಿಯುತ್ತದೆ.

ಲಟ್:–ಉದಾ– ಶೋಚತಿ– ಇಲ್ಲಿಯೂ 'ಲಘೂಪದ ಗುಣವಾಗಿ' ಪ್ರಥಮಪುರುಷ ಏಕವಚನದಲ್ಲಿ 'ಶೋಚತಿ' ಎಂದು ರೂಪವಾಗುತ್ತದೆ.

ರೂಪಗಳು: ಶೋಚತಿ, ಶೋಚತಃ, ಶೋಚನ್ತಿ। ಶೋಚಸಿ, ಶೋಚಥಃ, ಶೋಚಥ। ಶೋಚಾಮಿ, ಶೋಚಾವಃ, ಶೋಚಾಮಃ।

ಲಿಟ್:–ರೂಪಗಳು: ಶುಶೋಚ, ಶುಶುಚತುಃ, ಶುಶುಚುಃ। ಶುಶೋಚಿಥ, ಶುಶುಚಥುಃ, ಶುಶುಚ। ಶುಶೋಚ, ಶುಶುಚಿವ, ಶುಶುಚಿಮ।

ಲುಟ್:–ರೂಪಗಳು: ಶೋಚಿತಾ, ಶೋಚಿತಾರೌ, ಶೋಚಿತಾರಃ। ಶೋಚಿತಾಸಿ, ಶೋಚಿತಾಸ್ಥಃ, ಶೋಚಿತಾಸ್ಥ। ಶೋಚಿತಾಸ್ಮಿ, ಶೋಚಿತಾಸ್ವಃ, ಶೋಚಿತಾಸ್ಮಃ।

ಲೃಟ್:–ರೂಪಗಳು: ಶೋಚಿಷ್ಯತಿ, ಶೋಚಿಷ್ಯತಃ, ಶೋಚಿಷ್ಯನ್ತಿ। ಶೋಚಿಷ್ಯಸಿ, ಶೋಚಿಷ್ಯಥಃ, ಶೋಚಿಷ್ಯಥ। ಶೋಚಿಷ್ಯಾಮಿ, ಶೋಚಿಷ್ಯಾವಃ, ಶೋಚಿಷ್ಯಾಮಃ।

ಲೋಟ್–ರೂಪಗಳು: ಶೋಚತು/ಶೋಚತಾತ್, ಶೋಚತಾಮ್, ಶೋಚನ್ತು। ಶೋಚ/ಶೋಚತಾತ್, ಶೋಚತಮ್, ಶೋಚತ। ಶೋಚಾನಿ, ಶೋಚಾವ, ಶೋಚಾಮ।

ಲಙ್:–ರೂಪಗಳು: ಅಶೋಚತ್, ಅಶೋಚತಾಮ್, ಅಶೋಚನ್। ಅಶೋಚಃ, ಅಶೋಚತಮ್, ಅಶೋಚತ। ಅಶೋಚಮ್, ಅಶೋಚಾವ, ಅಶೋಚಾಮ।

ವಿಧಿಲಿಙ್:–ರೂಪಗಳು: ಶೋಚೇತ್, ಶೋಚೇತಾಮ್, ಶೋಚೇಯುಃ। ಶೋಚೇಃ, ಶೋಚೇತಮ್, ಶೋಚೇತ। ಶೋಚೇಯಮ್, ಶೋಚೇವ, ಶೋಚೇಮ।

ಆಶೀರ್ಲಿಙ್:–ರೂಪಗಳು; ಶುಚ್ಯಾತ್, ಶುಚ್ಯಾಸ್ತಾಮ್, ಶುಚ್ಯಾಸುಃ। ಶುಚ್ಯಾಃ, ಶುಚ್ಯಾಸ್ತಮ್, ಶುಚ್ಯಾಸ್ತ। ಶುಚ್ಯಾಸಮ್, ಶುಚ್ಯಾಸ್ವ, ಶುಚ್ಯಾಸ್ಮ।

ಲುಙ್:–ರೂಪಗಳು: ಅಶೋಚೀತ್,ಅಶೋಚಿಷ್ಟಾಮ್, ಅಶೋಚಿಷುಃ। ಅಶೋಚೀಃ, ಅಶೋಚಿಷ್ಟಮ್, ಅಶೋಚಿಷ್ಟ। ಅಶೋಚಿಷಮ್, ಅಶೋಚಿಷ್ವ, ಅಶೋಚಿಷ್ಮ।

ಲೃಙ್:–ರೂಪಗಳು: ಅಶೋಚಿಷ್ಯತ್, ಅಶೋಚಿಷ್ಯತಾಮ್, ಅಶೋಚಿಷ್ಯನ್। ಅಶೋಚಿಷ್ಯಃ, ಅಶೋಚಿಷ್ಯತಮ್, ಅಶೋಚಿಷ್ಯತ। ಅಶೋಚಿಷ್ಯಮ್, ಅಶೋಚಿಷ್ಯಾವ, ಅಶೋಚಿಷ್ಯಾಮ।

1. "ಕಿದಾಶಿಷಿ" ಇತಿ ೦ಯಾಸುಟಃ ಕಿತ್ವಾತ್ ಜಿತ್ವಾಚ್ಚ ನ ಗುಣಃ। 2– ಈಕಾರ ಇತ್, ಈದಿತ್ಫಲಂ ತು "ಶ್ವೀದಿತೋ ನಿಷ್ಠಾ೦ಯಾಮ್" ಇತಿ ನಿಷ್ಠಾ೦ಯಾಮ್ ಅನಿಟ್‌ಕತ್ವಮ್। ಅತ್ರ ಪ್ರಸಙ್ಗಾತ್ ಧಾತುಷು ವರ್ಣವಿಶೇಷಾಣಾಮ್ ಇತ್ಕರಣಫಲಮ್। ದರ್ಶಯತೇ ಚಿತ್ರೇ।

1. "ಕಿದಾಶಿಷಿ" ಇತಿ ಯಾಸುಟಃ ಕಿತ್ವಾತ್ ಚಕ್ಷಾಚ್ಚ ನ ಗುಣಃ। 2– ಈಕಾರ ಇತ್, ಈದಿತ್ಫಲಂ ತು "ಶ್ವೀದಿತೋ ನಿಷ್ಠಾಯಾಮ್" ಇತಿ ನಿಷ್ಠಾಯಾಮ್ ಅನಿಟ್‌ಕತ್ವಮ್। ಅತ್ರ ಪ್ರಸಙ್ಗಾತ್ ಧಾತುಷು ವರ್ಣವಿಶೇಷಾಣಾಮ್ ಇತ್ಕರಣಫಲಮ್। ದರ್ಶಯತೇ ಚಿತ್ರೇ।

| ವರ್ಣಾನಾಮ್ | ಇತ್ಕರಣೇ | ಪ್ರಯೋಜನಮ್ | ಉದಾಹರಣಮ್ |
|---|---|---|---|
| (ಉದಾತ್ತ) | ಇತ್ಕರಣೇ ಫಲಂ | ಪರಸ್ಮೈಪದಮ್ | ಅತ– 'ಅತತಿ'। |
| 'ಅ'– | ಇತ್ಕರಣೇ ಫಲಂ | ಆತ್ಮನೇಪದಮ್ | ಏಧ 'ಏಧತೆ'। |
| (ಅನುದಾತ್ತ) | ಇತ್ಕರಣೇ ಫಲಂ | ಉಭಯಪದಮ್ | 'ಭಜ –' ಭಜತಿ' |
| 'ಅ'– | ಇತ್ಕರಣೇ ಫಲಂ | "ಆದಿತಶ್ಚ" ಇತಿ ನಿಷ್ಠಾಯಾಂ ಇಟ ನಿಷೇಧಃ | 'ಭಜತೆ' |
| (ಸ್ವರಿತ) | ಇತ್ಕರಣೇ ಫಲಂ | "ಇದಿತೊ ನುಮ್ ಧಾ" ಇತಿ ನುಮ್ | (ಞಿ) ಫಲಾ ಪ್ರಫುಲ್ತಃ |
| 'ಅ'– | ಇತ್ಕರಣೇ ಫಲಂ | "ಹರಿತೊ ವಾ" ಇತಿ ಅಙ್ವಾ | (ಟು) ನದಿ 'ನಂದತಿ" |
| 'ಆ' – | ಇತ್ಕರಣೇ ಫಲಂ | "ಶ್ವೀದಿತೊ ನಿಷ್ಠಾಯಾಂ" ನಿಷ್ಠಾಯಾಂ ನೇಟ್ | ಣಿಜಿರ್–'ಅನಿಜತ್' |
| ಇ – | ಇತ್ಕರಣೇ ಫಲಂ | "ಉದಿತೊ ವಾ" ಇತಿ ಕಿತ್ವ ವೇಟ್ | 'ಅನ್ಕ್ಷೀತ್' |
| ಇರ್ – | ಇತ್ಕರಣೇ ಫಲಂ | "ಸ್ವರತಿಸೂತಿ" ಇತಿ ವೇಟ್ | ಉನ್ದೀಃ ಉನ್ನಃ, ಉತ್ತಃ |
| ಈ – | ಇತ್ಕರಣೇ ಫಲಂ | "ನಾಗ್ಲೋಪಿಶಾ......"ಉಪಧಾ ಹ್ರಸ್ವ ಭಾವಃ | ಶಮು–ಶಮಿತ್ವಾ, ಶಾನ್ತ್ವಾ |
| ಉ – | ಇತ್ಕರಣೇ ಫಲಂ | "ಪುಷಾದಿದ್ಯುತಾದಿ...." ಇತಿ ಚ್ಲೇರಙ್ | ಗುಪ್ – ಗೋಪಿತಾ, |
| ಊ – | ಇತ್ಕರಣೇ ಫಲಂ | "ಹ್ಮಯಂತ" ಇತಿ ವೃಧ್ಧಭಾವಃ | ಗೋಪ್ತಾ |
| | ಇತ್ಕರಣೇ ಫಲಂ | "ಓದಿತಶ್ಚ" ಇತಿ ನಿಷ್ಠಾನತ್ವಮ್ | ಲೋಕೃ – |
| ಋ | ಇತ್ಕರಣೇ ಫಲಂ | ಆತ್ಮನೇಪದಮ್ | ಅಲುಲೋಕತ್। |
| ಲೃ – | ಇತ್ಕರಣೇ ಫಲಂ | ಉಭಯಪದಮ್ | ಗಮ್ಲೃ– ಅಗಮತ್ |
| ಏ – | ಇತ್ಕರಣೇ ಫಲಂ | "ಞೀತಃಕ್ತಃ" ಇತಿ ವರ್ತಮಾನೆ ಕ್ತಃ | ಕಟೆ – ಅಕಟೀತ್ |
| ಓ – | ಇತ್ಕರಣೇ ಫಲಂ | ಟ್ವಿತೋಥುಚ್" | ಭುಜೋ–ಭುಗ್ನಃ |
| ಙ್ – | ಇತ್ಕರಣೇ ಫಲಂ | "ಡ್ವಿತಃ ಕ್ತ್ರಿಃ" | ಶೀಙ್ – ಶೇತೆ |
| ಞ್ – | ಇತ್ಕರಣೇ ಫಲಂ | ಷಿದ್ಭಿದಾದಿಭ್ಯೋಙ್" | ಶ್ರಿಞ್ – ಶ್ರಯತಿ, ಶ್ರಯತೇ |
| ಞಿ – | | | ಞಿಇನ್ಧೀ – ಇದ್ಧಃ |
| ಟು – | | | ಟುನಾದಿ –ನನ್ದಥುಃ, |
| ಡು– | | | ಟುವೇಪೃ–ವೇಪಥುಃ |
| ಷ್ – | | | ಡುಕೃಞ್–ಕೃತ್ರಿಮಮ್ |
| | | | ತ್ರಪೂಷ್–ತ್ರಪ, |
| | | | ಕ್ಷಮೂಸ್–ಕ್ಷಮಾ |

ಧಾತು 6. ಗದ (ಪ.ಪ) ವ್ಯಕ್ತಾಯಾಂ ವಾಚಿ (ಸ್ಪಷ್ಟವಾಗಿ ಉಚ್ಚರಿಸುವುದು)– ಇದರಲ್ಲಿ 'ಗದ್' ಮಾತ್ರ ಉಳಿಯುತ್ತದೆ.

**ಲಟ್**: ಉದಾ– ಗದತಿ – ಪ್ರಥಮ ಪುರುಷ ಏಕವಚನದಲ್ಲಿ 'ಗದ್' ಧಾತುವಿನಮೇಲೆ ಮೂಲ ಆಖ್ಯಾತ ಪ್ರತ್ಯಯವಾದ 'ತಿಪ್' ಬಂದು, ಗದ್+ತಿ ಎಂದಿದ್ದಾಗ, ಧಾತುವಿನ ನಂತರ 'ಶಪ್(ಅ)' ಪ್ರತ್ಯಯ ಬಂದು ಗದ್+ಅ+ತಿ=ಗದತಿ ಎಂದು ರೂಪವು ಸಿದ್ಧವಾಗುತ್ತದೆ.

ರೂಪಗಳು: ಗದತಿ, ಗದತಃ, ಗದನ್ತಿ। ಗದಸಿ, ಗದಥಃ, ಗದಥ। ಗದಾಮಿ, ಗದಾವಃ, ಗದಾಮಃ।

**(ಣತ್ವವನ್ನು ವಿಧಿಸುವ ಸೂತ್ರ)**

**ಸೂತ್ರ – 453. ನೇರ್ಗದ–ನದ–ಪತ–ಪದ–ಘು–ಮಾ–ಸ್ಯತಿ–ಹನ್ತಿ–ಯಾತಿ–ವಾತಿ–ದ್ರಾತಿ–ಪ್ಸಾತಿ–ವಪತಿ–ವಹತಿ–ಶಾಮ್ಯತಿ–ಚಿನೋತಿ–ದೇಗ್ಧಿಷು ಚ (8.4.17)**

ವೃತ್ತಿಃ–ಉಪಸರ್ಗಸ್ಥಾತ್ ನಿಮಿತ್ತಾತ್ ಪರಸ್ಯ ನೇರ್ಣೋಃ ಗದಾದಿಷು ಪರೇಷು। ಪ್ರಣಿಗದತಿ।

ಪ. ಛೇ. – ನೇಃ, ಗದ–ನದ–ಪತ–ಪದ–ಘು–ಮಾ–ಸ್ಯತಿ–ಹನ್ತಿ–ಯಾತಿ–ವಾತಿ–

ದ್ರಾತಿ–ಪ್ಸಾತಿ–ವಪತಿ–ವಹತಿ–ಶಾಮ್ಯತಿ–ಚಿನೋತಿ–ದೇಗ್ಧಿಷು, ಚ।

ಅ. ವೃ– "ಅಟ್–ಕುಪ್ವಾಙ್–ನುಮ್–ವ್ಯವಾಯೇಽಪಿ" ಎಂಬ ಸೂತ್ರ ಹಾಗೂ "ರಷಾಭ್ಯಾಮ್ ನೋ ಣಃ ಸಮಾನಪದೇ" ಎಂಬ ಸೂತ್ರದಿಂದ ರಷಾಭ್ಯಾಮ್, ನಃ ಮತ್ತು ಣಃ ಎಂಬ ಪದಗಳು ಅನುವೃತ್ತವಾಗುತ್ತವೆ. ಹಾಗೆಯೇ "ಉಪಸರ್ಗಾದಸಮಾಸೇಽಪಿ ಣೋಪದೇಶಸ್ಯ" ಎಂಬ ಸೂತ್ರದಿಂದ 'ಉಪಸರ್ಗಾತ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– ಉಪಸರ್ಗದಲ್ಲಿರುವ ನಿಮಿತ್ತ(ರೇಫ, ಷ್ ಕಾರ ಮತ್ತು ಋ ಕಾರ) ಗಳ ಪರದಲ್ಲಿ ಇರುವ 'ನಿ' ಎಂಬ ಉಪಸರ್ಗದಲ್ಲಿರುವ 'ನ್' ಕಾರಕ್ಕೆ ಣತ್ವವು. ಬರುತ್ತದೆ– ಗದ್–ನದ್–ಪತ್–ಪದ್–ಘು ಸಂಜ್ಞೆಯುಳ್ಳ ಧಾತು ಮತ್ತು ಮಾ, ಸೋ, ಹನ್, ಯಾ, ವಾ, ದ್ರಾ, ಪ್ಸಾ, ವಪ್, ವಹ್, ಶಮ್, ಚಿ, ದಿಹ್, ಈ ಧಾತುಗಳು ಪರದಲ್ಲಿದ್ದಾಗ,

**ಲಟ್**: ಉದಾ–1. ಪ್ರಣಿಗದತಿ (ಪ್ರ+ನಿ+ಗದತಿ) – ಇಲ್ಲಿ ಪ್ರ ಎಂಬ ಉಪಸರ್ಗದಲ್ಲಿ ರೇಫವು ನಿಮಿತ್ತವಾಗಿದೆ. ಅನಂತರ ಇರುವ 'ನಿ' ಯಲ್ಲಿ 'ನ್' ಇದೆ. ಆ 'ನ್' ಗೆ ಣತ್ವ ಬರುತ್ತದೆ. ಸೂತ್ರದಲ್ಲಿ ಹೇಳಿರುವ 'ಗದ್' ಧಾತುವು ಪರದಲ್ಲಿರೋಣದರಿಂದ. ಇದೇ ರೀತಿಯಲ್ಲಿ ಸೂತ್ರದಲ್ಲಿರುವ ಉಳಿದ ಧಾತುಗಳು ಪರದಲ್ಲಿ ಇದ್ದಾಗ, ಅವುಗಳ ಪೂರ್ವದಲ್ಲಿರುವ ಉಪಸರ್ಗದಲ್ಲಿ ಮೇಲೆ ಹೇಳಿದ ನಿಮಿತ್ತ ವರ್ಣಗಳಲ್ಲಿ ಯಾವದಾದರೂ ಒಂದು ವರ್ಣವಿದ್ದು ಅನಂತರ ಇರುವ 'ನ್' ಕಾರಕ್ಕೆ ಣತ್ವವು ಬರುತ್ತದೆ.

ಇದರಂತೆ ಇರುವ ಬೇರೆ ಉದಾಹರಣೆಗಳು – ಪ್ರಣಿಪತತಿ (ಪ್ರ+ನಿ+ಪತತಿ), ಪ್ರಣಿಜಗಾದ (ಪ್ರ+ನಿ+ಜಗಾದ) ಇತ್ಯಾದಿ।.

**(ಚ–ವರ್ಗವನ್ನು ಆದೇಶವಾಗಿ ವಿಧಿಸುವ ಸೂತ್ರ)**

**ಸೂತ್ರ – 454.ಕುಹೋಶ್ಚುಃ (7.4.62)**

ವೃತ್ತಿಃ–ಅಭ್ಯಾಸ ಕವರ್ಗ–ಹಕಾರಯೋಃ ಚವರ್ಗಾದೇಶಃ।

ಪ. ಛೇ. – ಕುಹೋಃ, ಚುಃ।

ಅ. ವೃ.–"ಅತ್ರ ಲೋಪೋಽಭ್ಯಾಸಸ್ಯ" ಎಂಬ ಸೂತ್ರದಿಂದ 'ಅಭ್ಯಾಸಸ್ಯ' ಎಂಬ ಪದವು ಅನುವೃತ್ತವಾಗಿದೆ.

ಅರ್ಥ– ಅಭ್ಯಾಸದಲ್ಲಿರುವ 'ಕ್' ವರ್ಗ ಹಾಗೂ 'ಹ್' ಕಾರಗಳ ಸ್ಥಾನದಲ್ಲಿ 'ಚ್' ವರ್ಗವು ಆದೇಶವಾಗಿ ಬರುತ್ತದೆ.

**ವಿಶೇಷ:** ಈ ಸೂತ್ರದಲ್ಲಿ ಅಭ್ಯಾಸದಲ್ಲೇ ಇರುವ ವರ್ಣಗಳಿಗೆ ಆದೇಶವನ್ನು ವಿಧಿಸಲಾಗಿರೋಣದರಿಂದ ಬೇರೆಕಡೆಯಲ್ಲಿ ಅಂದರೆ ಅಭ್ಯಾಸವಿಲ್ಲದ ಸ್ಥಳದಲ್ಲಿ ಕಾರ್ಯವು ಆಗುವುದಿಲ್ಲವೆಂದು ತಿಳಿದು ಬರುತ್ತದೆ.

**(ಉಪಧೆಯಾದ ಹ್ರಸ್ವ 'ಅ' ಕಾರಕ್ಕೆ ವೃದ್ಧಿಯನ್ನು ವಿಧಿಸುವ ಸೂತ್ರ)**

**ಸೂತ್ರ – 455. ಅತ ಉಪಧಾಯಾಃ (7.2.116)**

ವೃತ್ತಿಃ-ಉಪಧಾಯಾ ಅತೋ ವೃದ್ಧಿಃ ಸ್ಯಾತ್। ಞಿತಿ-ಣಿತಿ ಚ ಪ್ರತ್ಯಯೇ ಪರೇ। ಜಗಾದ, ಜಗದತುಃ। ಜಗದುಃ। ಜಗದಿಥ। ಜಗದಥುಃ। ಜಗದ।

ಪ. ಛೇ. – ಅತಃ, ಉಪಧಾಯಾಃ।

ಅ. ವೃ.- "ಮೃಜೇರ್ವೃದ್ಧಿಃ" ಎಂಬ ಸೂತ್ರದಿಂದ 'ವೃದ್ಧಿಃ' ಎಂಬ ಪದವೂ ಹಾಗೇಯೇ "ಅಚೋಞ್ಣಿತಿ" ಎಂಬ ಸೂತ್ರದಿಂದ 'ಞ್ಣಿತಿ' ಎಂಬ ಪದವು ಅನುವೃತ್ತವಾಗುತ್ತವೆ.

ಅರ್ಥ- ಞಿತ್, ಮತ್ತು ಣಿತ್ ಪ್ರತ್ಯಯಗಳು ಪರದಲ್ಲಿದ್ದಾಗ, ಉಪಧೆಯ ಹ್ರಸ್ವ 'ಅ' ಕಾರಕ್ಕೆ ವೃದ್ಧಿ(ಆ) ಯು ಬರುತ್ತದೆ.

**ಲಿಟ್**: ಉದಾ- ಜಗಾದ- 'ಗದ್' ಧಾತುವಿನ ನಂತರ 'ಲಿಟ್' 'ಲ್' ಕಾರದ ಪ್ರಥಮ ಪುರುಷ ಏಕವಚನದಲ್ಲಿ ಮೂಲ ಆಖ್ಯಾತ ಪ್ರತ್ಯಯವಾದ 'ತಿಪ್' ಬಂದು ಗದ್+ತಿಪ್ ಎಂದಿದ್ದಾಗ, ಅದಕ್ಕೆ ಅಭಿನವ ಆಖ್ಯಾತ ಪ್ರತ್ಯಯವಾದ 'ಣಲ್(ಅ)' ಬಂದು, ಗದ್+ಅ ಎಂದಿರುತ್ತದೆ. ಅದಕ್ಕೆ ಅಭ್ಯಾಸವು ಬಂದು ಗದ್ ಗದ್+ಅ ಎಂದಿದ್ದಾಗ, "ಹಲಾದಿಃ ಶೇಷಃ" ಎಂಬುದರಿಂದ ಗ+ಗದ್+ಅ ಎಂದಿರುತ್ತದೆ. ಅಭ್ಯಾಸದಲ್ಲಿರುವ 'ಕ್' ವರ್ಗದ 'ಗ್' ಕಾರಕ್ಕೆ "ಕುಹೋಶ್ಚುಃ" ಎಂಬ ಸೂತ್ರದಿಂದ 'ಜ್' ಕಾರವು ಅದೇಶವಾಗಿ ಬಂದು, ಜ+ಗದ್+ಅ ಎಂದಿದ್ದಾಗ, 'ಗ್' ಕಾರದ ನಂತರ ಇರುವ ಉಪಧೆಯಾದ 'ಅ' ಕಾರಕ್ಕೆ ಪ್ರಕೃತ ಸೂತ್ರದಿಂದ ವೃದ್ಧಿ(ಆ) ಬಂದು ಜ+ಗಾದ್+ಅ=ಜಗಾದ ಎಂಬ ರೂಪವು ಸಿದ್ಧವಾಗುತ್ತದೆ.

ಇಲ್ಲಿ 'ಣಲ್(ಅ) ಪ್ರತ್ಯಯವು 'ಣಿತ್' ಆಗಿದೆ. ಈ ವೃದ್ಧಿ ಬರುವ ಕಾರ್ಯವು 'ಣಿತ್' ಆದ 'ಣಲ್' ಪ್ರತ್ಯಯವು ಪ್ರಥಮ ಮತ್ತು ಉತ್ತಮ ಪುರುಷ ಏಕವಚನಗಳಲ್ಲಿ ಮಾತ್ರ ಇರುವುದರಿಂದ ಅಲ್ಲಿ ಮಾತ್ರ ಹ್ರಸ್ವ 'ಅ' ಕಾರಕ್ಕೆ ದೀರ್ಘ(ಆ) ವು ಬರುತ್ತದೆ.

ಉದಾ- ಜಗದತುಃ, ಜಗದುಃ – ಪ್ರಥಮ ಪುರುಷ ದ್ವಿವಚನ ಬಹುವಚನಗಳಲ್ಲಿ 'ಗದ್'ಧಾತುವಿನ ನಂತರ 'ತಸ್' ಪ್ರತ್ಯಯ ಬಂದು ಅದಕ್ಕೆ 'ಅತುಸ್' ಆದೇಶ ಬಂದು ಧಾತುವಿಗೆ ದ್ವಿತ್ವ ಬಂದು, ಗದ್ ಗದ್+ಅತುಸ್ ಎಂದಿದ್ದಾಗ, "ಹಲಾದಿಃ ಶೇಷಃ" ಎಂಬ ಸೂತ್ರದಿಂದ ಅಭ್ಯಾಸದ ಆದಿ ಹಲ್ (ಗ್+ಅ) ಉಳಿದು ಗ+ಗದ್+ಅತುಸ್ ಎಂದಿದ್ದಾಗ, ಅಭ್ಯಾಸದಲ್ಲಿರುವ 'ಕ್' ವರ್ಗದ 'ಗ್' ಕಾರಕ್ಕೆ "ಕುಹೋಶ್ಚುಃ" ಎಂಬ ಸೂತ್ರದಿಂದ 'ಜ್' ಕಾರವು ಅದೇಶವಾಗಿ ಬಂದು, ಜ+ಗದ್+ಅತುಸ್=ಜಗದುಸ್ ಎಂದಾಗಿ ರುತ್ವ-ವಿಸರ್ಗಗಳಿಂದ ಜಗದತುಃ ಎಂಬ ರೂಪ ಸಿದ್ಧವಾಗುತ್ತದೆ.

ಇದೇ ರೀತಿಯಲ್ಲಿ ಪ್ರಥಮ ಪುರುಷ ಬಹುವಚನದ ರೂಪವಾದ ಜಗದುಃ ಎಂಬುದು ಸಿದ್ಧವಾಗುತ್ತದೆ.

ಉದಾ- ಜಗದಿಥ- ಮಧ್ಯಮಪುರುಷ ಏಕವಚನದಲ್ಲಿ ಹಿಂದಿನಂತೆಂಯೇ ಪ್ರಕ್ರಿಯೆ ನಡೆದು. 'ಸಿಪ್' ಗೆ 'ಥಲ್(ಥ) ಆದೇಶ ಬಂದು, ಅದಕ್ಕೆ 'ಇಟ್(ಇ)' ಆಗಮ ಬಂದು ಜಗದಿಥ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ – ಜಗದಥುಃ– ಮಧ್ಯಮಪುರುಷ ದ್ವಿವಚನದಲ್ಲಿ ಹಿಂದಿನಂತೆಂಯೇ ಪ್ರಕ್ರಿಯೆ ನಡೆದು 'ಅಥುಸ್' ಪ್ರತ್ಯಯವನ್ನು ಸೇರಿಸಿದಾಗ, ಜಗದಥುಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಜಗದ– ಮಧ್ಯಮಪುರುಷ ಬಹುವಚನದಲ್ಲಿ ಹಿಂದಿನಂತೆಂಯೇ ಪ್ರಕ್ರಿಯೆ ನಡೆದು, 'ಅ' ಪ್ರತ್ಯಯವನ್ನು ಸೇರಿಸಿದಾಗ, ಜಗದ ಎಂಬರೂಪವು ಸಿದ್ಧವಾಗುತ್ತದೆ.

**(ಣಿತ್ವವನ್ನು ಅತಿದೇಶವಾಗಿ ವಿಧಿಸುವ ಸೂತ್ರ)**

**ಸೂತ್ರ – 456. ಣಲುತ್ತಮೋ ವಾ (7.1.91)**

ವೃತ್ತಿಃ– ಉತ್ತಮೋ ಣಲ್ ವಾ ಣಿತ್ ಸ್ಯಾತ್। ಜಗಾದ, ಜಗದ । ಜಗದಿವ। ಜಗದಿಮ। ಗದಿತಾ। ಗದಿಷ್ಯತಿ। ಗದತು। ಅಗದತ್। ಗದೇತ್। ಗದ್ಯಾತ್।

ಪ. ಛೇ. – ಣಲ್, ಉತ್ತಮಃ, ವಾ।

ಅ. ವೃ. – "ಗೋತೋ ಣಿತ್" ಎಂಬ ಸೂತ್ರದಿಂದ 'ಣಿತ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– ಉತ್ತಮ ಪುರುಷದಲ್ಲಿ ವಿಧಿಸಲಾದ 'ಣಲ್(ಅ)' ಪ್ರತ್ಯಯವನ್ನು ವಿಕಲ್ಪದಿಂದ 'ಣಿತ್' ಆಗಿ ಭಾವಿಸಬೇಕು.

ಉದಾ– ಜಗಾದ, ಜಗದ ಉತ್ತಮ ಪುರುಷ ಏಕವಚನದಲ್ಲಿ 'ಣಲ್(ಅ)' ಪ್ರತ್ಯಯ ಸೇರಿಸಿದಾಗ, ವೈಕಲ್ಪಿಕ ಣಿತ್ವದಿಂದ ವೃದ್ಧಿ ಬಂದ ರೂಪ 'ಜಗಾದ' ಎಂದೂ ಹಾಗೂ ವೃದ್ಧಿ ಬಾರದ ರೂಪ ಜಗದ ಎಂದೂ ಸಿದ್ಧವಾಗುತ್ತವೆ.

ಉದಾ– ಜಗದಿವ, ಜಗದಿಮ ದ್ವಿವಚನ ಮತ್ತು ಬಹುವಚನಗಳಲ್ಲಿ ಹಿಂದಿನಂತೆಂಯೇ ಪ್ರಕ್ರಿಯೆ ನಡೆದು, 'ಇಟ್' ಆಗಮ ಬಂದಮೇಲೆ 'ವಸ್' ಗೆ 'ವ' ಮತ್ತು 'ಮಸ್' ಗೆ 'ಮ' ಆದೇಶಗಳು ಬಂದು ಜಗದಿವ, ಜಗದಿಮ ಎಂಬ ರೂಪಗಳು ಸಿದ್ಧವಾಗುತ್ತವೆ.

'ಲಿಟ್' 'ಲ್' ಕಾರದ ಎಲ್ಲ ರೂಪಗಳು: ಜಗಾದ ಜಗದತುಃ, ಜಗದುಃ, ಜಗದಿಥ, ಜಗದಥುಃ, ಜಗದ। ಜಗಾದ/ಜಗದ, ಜಗದಿವ, ಜಗದಿಮ।

**ಲುಟ್**: ಉದಾ– ಗದಿತಾ – 'ಗದ್' ಧಾತುವಿನ ನಂತರ 'ಲುಟ್' ಗೆ 'ತಿಪ್' ಆದೇಶ ಬಂದು ಗದ್+ತಿಪ್ ಎಂದಿದ್ದಾಗ ಅದಕ್ಕೆ ಸಾರ್ವಧಾತುಕ ಸಂಜ್ಞೆ ಬಂದು 'ಶಪ್(ಅ)' ಪ್ರತ್ಯಯವನ್ನು ಬಾಧಿಸಿ 'ತಾಸಿ(ತಾಸ್)' ಪ್ರತ್ಯಯವು ಬಂದು ಅದಕ್ಕೆ ಆರ್ಧಧಾತುಕ ಸಂಜ್ಞೆ ಬಂದು, ಗದ್+ತಾಸ್+ತಿಪ್ ಎಂದಿದ್ದಾಗ, 'ಇಟ್' ಆಗಮವು ಬಂದು ಗದ್+ಇ+ತಾಸ್+ತಿಪ್ ಎಂದಿರುತ್ತದೆ, ಆಗ 'ತಿಪ್' ಗೆ "ಡಾರೌರಸಃ" ಎಂಬ ಸೂತ್ರದಿಂದ 'ಡಾ(ಆ)' ಆದೇಶ ಬಂದು ಗದ್+ ಇ+ತಾಸ್+ಆ ಎಂದಿದ್ದಾಗ 'ಟಿ(ಆಸ್)' ಗೆ ಲೋಪ ಬಂದು, ಗದ್+ ಇ+ತ್+ಆ=ಗದಿತಾ ಎಂಬ ರೂಪವು ಸಿದ್ಧವಾಗುತ್ತದೆ. ಇದೇ ರೀತಿಯಲ್ಲಿ ಉಳಿದ ರೂಪಗಳೂ ಸಿದ್ಧವಾಗುತ್ತವೆ.

ರೂಪಗಳು: ಗದಿತಾ, ಗದಿತಾರೌ, ಗದಿತಾರಃ। ಗದಿತಾಸಿ, ಗದಿತಾಸ್ಥಃ, ಗದಿತಾಸ್ಥ।

ಗದಿತಾಸ್ಮಿ, ಗದಿತಾಸ್ವಃ, ಗದಿತಾಸ್ಮಃ।

**ಲೃಟ್**: ಇದರ ಪ್ರಕ್ರಿಯೆಯು ಅತಿ ಪ್ರಸಿದ್ಧವಾಗಿದೆ.

ರೂಪಗಳು: ಗದಿಷ್ಯತಿ, ಗದಿಷ್ಯತಃ, ಗದಿಷ್ಯನ್ತಿ। ಗದಿಷ್ಯಸಿ, ಗದಿಷ್ಯಥಃ, ಗದಿಷ್ಯಥ। ಗದಿಷ್ಯಾಮಿ, ಗದಿಷ್ಯಾವಃ, ಗದಿಷ್ಯಾಮಃ।

**ಲೋಟ್**: ರೂಪಗಳು: ಗದತು/ಗದತಾತ್, ಗದತಾಮ್, ಗದನ್ತು। ಗದ/ಗದತಾತ್, ಗದತಮ್, ಗದತ। ಗದಾನಿ, ಗದಾವ, ಗದಾಮ।

**ಲಙ್**: ರೂಪಗಳು: ಅಗದತ್, ಅಗದತಾಮ್, ಅಗದನ್। ಅಗದಃ, ಅಗದತಮ್, ಅಗದತ। ಅಗದಮ್, ಅಗದಾವ, ಅಗದಾಮ।

**ವಿಧಿಲಿಙ್**: ರೂಪಗಳು–ಗದೇತ್, ಗದೇತಾಮ್, ಗದೇಯುಃ। ಗದೇಃ, ಗದೇತಮ್, ಗದೇತ। ಗದೇಯಮ್,ಗದೇವ, ಗದೇಮ।

**ಆಶೀರ್ಲಿಙ್**: ರೂಪಗಳು: ಗದ್ಯಾತ್, ಗದ್ಯಾಸ್ತಾಮ್, ಗದ್ಯಾಸುಃ। ಗದ್ಯಾಃ, ಗದ್ಯಾಸ್ತಮ್, ಗದ್ಯಾಸ್ತ। ಗದ್ಯಾಸಮ್, ಗದ್ಯಾಸ್ವ, ಗದ್ಯಾಸ್ಮ।

**(ವೈಕಲ್ಪಿಕವಾಗಿ ವೃದ್ಧಿಯನ್ನು ವಿಧಿಸುವ ಸೂತ್ರ)**

**ಸೂತ್ರ – 457.ಅತೋ ಹಲಾದೇರ್ಲಘೋಃ (7.2.7)**

ವೃತ್ತಿಃ–ಹಲಾದೇಃ ಲಘೋಃ ಅಕಾರಸ್ಯ ವೃದ್ಧಿಃ ವಾ ಇಡಾದೌ ಪರಸ್ಮೈಪದೇ ಸಿಚಿ। ಅಗಾದೀತ್, ಅಗದೀತ್। ಅಗದಿಷ್ಯತ್। ಣದ ಅವ್ಯಕ್ತೇ ಶಬ್ದೇ।7।

ಪ. ಛೇ. – ಅತಃ, ಹಲಾದೇಃ, ಲಘೋಃ।

ಅ.ವೃ.– "ನೇಟಿ" ಎಂಬ ಸೂತ್ರದಿಂದ 'ಇಟಿ' ಎಂಬ ಪದವೂ, "ಊರ್ಣೋತೇರ್ವಿಭಾಷಾ" ಎಂಬ ಸೂತ್ರದಿಂದ 'ವಿಭಾಷಾ' ಎಂಬ ಪದವೂ, ಮತ್ತು "ಸಿಚಿ ವೃದ್ಧಿಃ ಪರಸ್ಮೈಪದೇಷು" ಎಂಬ ಸೂತ್ರವು ಅನುವೃತ್ತವಾಗುತ್ತವೆ.

ಅರ್ಥ– ಹಲಾದಿ ಧಾತುವಿನ ಲಘು ಸಂಜ್ಞೆಯುಳ್ಳ 'ಅ' ಕಾರಕ್ಕೆ ವಿಕಲ್ಪವಾಗಿ ವೃದ್ಧಿಯು ಬರುತ್ತದೆ.

ವಿಶೇಷ – "ವದ–ವ್ರಜ–ಹಲನ್ತಸ್ಯಾಚಃ" ಎಂಬ ಸೂತ್ರದಿಂದ ಬರಬೇಕಾದ ವೃದ್ಧಿಯು "ನೇಟಿ" ಎಂಬ ಸೂತ್ರದಿಂದ ನಿಷೇಧವಾಗಬೇಕಾಗಿತ್ತು. ಅದನ್ನೂ ಬಾಧಿಸಿ ಇಡಾಗಮವನ್ನು ಆದಿಯಲ್ಲಿ ಉಳ್ಳ 'ಸಿಚ್' ಪರದಲ್ಲಿದ್ದಾಗ 'ಹಲಾದಿ' ಧಾತುವಿನಲ್ಲಿರುವ ಹ್ರಸ್ವ 'ಅ' ಕಾರಕ್ಕೆ ಪ್ರಕೃತ ಸೂತ್ರವು ವಿಕಲ್ಪವಾಗಿ ವೃದ್ಧಿಯನ್ನು ವಿಧಾನ ಮಾಡುತ್ತದೆ.

ಲುಙ್: ಉದಾ– ಅಗಾದೀತ್/ಅಗದೀತ್– ಪ್ರಥಮಪುರುಷ ಏಕವಚನದಲ್ಲಿ 'ಗದ್' ಧಾತುವಿನ ನಂತರ 'ಲುಙ್' ಬಂದು ಧಾತುವಿಗೆ ಅಡಾಗಮ ಬಂದಮೇಲೆ 'ತಿಪ್' ಆದೇಶವು ಬರುತ್ತದೆ. ಆಗ ಅಗದ್+ತಿ ಎಂದಿರುತ್ತದೆ. ಅನಂತರ 'ಚ್ಲಿ' ಬಂದು ಅದಕ್ಕೆ 'ಸಿಚ್(ಸ್) ಆದೇಶ ಬಂದು ಅಗದ್+ಸ್+ತಿ ಎಂದಿದ್ದಾಗ, ಆರ್ಧಧಾತುಕ ಸಂಜ್ಞೆ ಬಂದು, ವಲಾದಿ ಪ್ರತ್ಯಯವು ಪರದಲ್ಲಿಇದ್ದಾಗ 'ಸ್' ಕಾರಕ್ಕೆ ಪೂರ್ವದಲ್ಲಿ 'ಇಟ್'

ಆಗಮ ಬಂದು ಅಗದ್+ಇಸ್+ತಿ ಎಂದಿರುತ್ತದೆ. 'ತಿ' ಯಲ್ಲಿರುವ 'ಇ' ಕಾರಕ್ಕೆ ಲೋಪ ಬಂದು ಅಗದ್+ಇಸ್+ತ್ ಎಂದಿದ್ದಾಗ, "ಅಸ್ತಿಸಿಚೋಽಪೃಕ್ತೇ" ಎಂಬ ಸೂತ್ರದಿಂದ 'ತ್' ಗೆ 'ಈಟ್' ಆಗಮವು ಬಂದು ಅಗದ್+ಇಸ್+ಈತ್ ಎಂದಾಗುತ್ತದೆ. ನಂತರ "ವದ-ವ್ರಜ-ಹಲನ್ತಸ್ಯಾಚಃ" ಎಂಬ ಸೂತ್ರದಿಂದ ಬರಬೇಕಾದ ವೃದ್ಧಿಯು "ನೇಟಿ" ಎಂಬ ಸೂತ್ರದಿಂದ ನಿಷೇಧವಾಗಬೇಕಾಗಿತ್ತು. ಅದನ್ನೂ ಬಾಧಿಸಿ ಪ್ರಕೃತ ಸೂತ್ರದಿಂದ ಹಲಾದಿ ಧಾತುವಿನಲ್ಲಿರುವ ಹ್ರಸ್ವ 'ಅ' ಕಾರಕ್ಕೆ ವಿಕಲ್ಪವಾಗಿ ವೃದ್ಧಿಯು ಬಂದು ಅಗಾದೀತ್ ಎಂದೂ ವೃದ್ಧಿಬಾರದ ಪಕ್ಷದಲ್ಲಿ ಅಗದೀತ್ ಎಂದೂ ಎರಡು ರೂಪಗಳಾಗುತ್ತವೆ.

**ಲುಙ್**: ವೃದ್ಧಿ ಬಂದ ಪಕ್ಷದಲ್ಲಿ ರೂಪಗಳು: ಅಗಾದೀತ್, ಅಗಾದಿಷ್ಟಾಮ್, ಅಗಾದಿಷುಃ। ಅಗಾದೀಃ, ಅಗಾದಿಷ್ಟಮ್, ಅಗಾದಿಷ್ಟ। ಅಗಾದಿಷಮ್, ಅಗಾದಿಷ್ವ, ಅಗಾದಿಷ್ಮ।

ವೃದ್ಧಿ ಬಾರದ ಪಕ್ಷದಲ್ಲಿ ರೂಪಗಳು: ಅಗದೀತ್, ಅಗದಿಷ್ಟಾಮ್, ಅಗದಿಷುಃ। ಅಗದೀಃ, ಅಗದಿಷ್ಟಮ್, ಅಗದಿಷ್ಟ। ಅಗದಿಷಮ್, ಅಗದಿಷ್ವ, ಅಗದಿಷ್ಮ।

**ಲೃಙ್**: ರೂಪಗಳು: ಅಗದಿಷ್ಯತ್, ಅಗದಿಷ್ಯತಾಮ್, ಅಗದಿಷ್ಯನ್। ಅಗದಿಷ್ಯಃ, ಅಗದಿಷ್ಯತಮ್, ಅಗದಿಷ್ಯತ। ಅಗದಿಷ್ಯಮ್, ಅಗದಿಷ್ಯಾವ, ಅಗದಿಷ್ಯಾಮ।

ಧಾತು 7. ಣದ ಅವ್ಯಕ್ತ ಶಬ್ದೇ- (ಅಸ್ಪಷ್ಟವಾಗಿ ಶಬ್ದ ಮಾಡುವುದು) - ಇದರಲ್ಲಿ 'ಣದ್' ಮಾತ್ರ ಉಳಿಯುತ್ತದೆ, "ಣೋನಃ" ಎಂಬ ಸೂತ್ರದಿಂದ 'ಣ್' ಕಾರಕ್ಕೆ 'ನ್' ಕಾರವು ಆದೇಶವಾಗಿ ಬಂದು 'ನದ್' ಎಂದಾಗುತ್ತದೆ.

**(ಣ್ ಕಾರಕ್ಕೆ ನ್ ಕಾರವನ್ನು ಆದೇಶವಾಗಿ ವಿಧಿಸುವ ಸೂತ್ರ)**

**ಸೂತ್ರ - 458.ಣೋ ನಃ (6.1.65)**

ವೃತ್ತಿಃ- ಧಾತ್ವಾದೇಃ ಣಸ್ಯ ನಃ। ಣೋಪದೇಶಾಸ್ತು ಅನರ್ದ್-ನಾಟಿ-ನಾಥ-ನಾಧ-ನನ್ದ-ನಕ್ಕ-ನೄ-ನೃತಃ।

ಪ. ಛೇ. - ಣಃ, ನಃ।

ಅ. ವೃ.- ಧಾತ್ವಾದೇಃ ಷಃ ಸಃ" ಎಂಬ ಸೂತ್ರದಿಂದ 'ಧಾತ್ವಾದೇಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- ಧಾತು ಆದಿಯಲ್ಲಿರುವ 'ಣ್' ಕಾರಕ್ಕೆ 'ನ್'ಕಾರ ಆದೇಶವಾಗಿ ಬರುತ್ತದೆ.

ವಿವರಣೆ- ಣೋಪದೇಶಾಸ್ತು ಅನರ್ದ್-ನಾಟಿ-ನಾಥ-ನಾಧ-ನನ್ದ-ನಕ್ಕ-ನೄ-ನೃತಃ- ಇಲ್ಲಿ 'ದ್ವನ್ದ್ವ' ಸಮಾಸ ಮಾಡಿದಮೇಲೆ 'ನಞ್' ಸಮಾಸವನ್ನು ಮಾಡಲಾಗಿದೆ. ನರ್ದ್ ಮೊದಲಾದ 8 ಧಾತುಗಳನ್ನು ಹೊರತುಪಡಿಸಿ ಉಳಿದ 'ನ್' ಕಾರಾದಿ ಧಾತುಗಳಿಗೆ ಧಾತುಪಾಠದಲ್ಲಿ ಣೋಪದೇಶವು ಬಂದಿದೆ. ಹೀಗಾಗಿ ಎಲ್ಲ ಧಾತುಗಳೂ ಪ್ರಯೋಗದಲ್ಲಿ 'ನ್' ಕಾರಾದಿಯಾಗಿಯೇ ಇರುತ್ತವೆ. ಈ ವ್ಯತ್ಯಾಸವನ್ನು ಈ ಸೂತ್ರದಿಂದ ತಿಳಿಯಬಹುದಾಗಿದೆ.

ಈ ಮೇಲಿನ 8 ಧಾತುಗಳಲ್ಲಿ ನರ್ದ-ಶಬ್ದೇ ಎಂಬುದು ಭ್ವಾದಿಗಣದಲ್ಲಿ ಇದೆ, ನಟ ಅವಸ್ಯನ್ದನೇ ಎಂಬುದು ಚುರಾದಿ ಗಣದಲ್ಲಿದೆ. ನಾಥೃ, ನಾಧೃ ಯಾಞ್ಚಾದೌ ಎಂಬ ಎರಡು ಧಾತುಗಳು ಭ್ವಾದಿಗಣದಲ್ಲಿ ಇವೆ. ಹಾಗೆಯೇ ಟುನದಿ ಸಮೃದ್ಧೌ ಎಂಬುದು ಭ್ವಾದಿಗಣದಲ್ಲಿದೆ, ನಕ್ಕ-ನಾಶನೇ ಎಂಬುದು ಚುರಾದಿಯಲ್ಲಿದೆ. ನೃ-ನಯೇ ಎಂಬುದು ಕ್ರ್ಯಾದಿಯಲ್ಲಿದೆ. ನೃತೀ-ಗಾತ್ರವಿಕ್ಷೇಪೇ ಎಂಬುದು ದಿವಾದಿಯಲ್ಲಿದೆ.

ಭ್ವಾದಿಗಣ ಧಾತುಗಳು: (4) ನರ್ದ ಶಬ್ದೇ, ನಾಥೃ, ನಾಧೃ ಯಾಞ್ಚಾದೌ, ಟುನದಿ ಸಮೃದ್ಧೌ

ದಿವಾದಿಗಣ ಧಾತುಗಳು: (1) ನೃತೀ ಗಾತ್ರವಿಕ್ಷೇಪೇ।

ಕ್ರ್ಯಾದಿ ಗಣ ಧಾತುಗಳು :(1) ನೃ ನಯೇ

ಚುರಾದಿಗಣ ಧಾತುಗಳು: (2) ನಟ ಅವಸ್ಯನ್ದನೇ, ನಕ್ಕ ನಾಶನೇ।

(ಣತ್ವವನ್ನು ವಿಧಿಸುವ ಸೂತ್ರ)

ಸೂತ್ರ – 459.ಉಪಸರ್ಗಾದಸಮಾಸೇಽಪಿ ಣೋಪದೇಶಸ್ಯ (8.4.14)

ವೃತ್ತಿಃ-ಉಪಸರ್ಗಸ್ಥಾತ್ ನಿಮಿತ್ತಾತ್ ಪರಸ್ಯ ಣೋಪದೇಶಸ್ಯ ಧಾತೋಃ ನಸ್ಯ ಣಃ। ಪ್ರಣದತಿ। ಪ್ರಣಿನದತಿ। ನದತಿ। ನನಾದ।

ಪ. ಛೇ. – ಉಪಸರ್ಗಾತ್, ಅಸಮಾಸೇಽಪಿ, ಣೋಪದೇಶಸ್ಯ।

ಅ.ವೃ.– 'ರಷಾಭ್ಯಾಮ್ ನೋ ಣಃ', 'ಅಟ್ಕುಪ್ವಾಙ್ನುಮ್ ವ್ಯವಾಯೇಽಪಿ' ಮತ್ತು ಉಪಸರ್ಗಾತ್ ಎಂಬಸೂತ್ರಪದಗಳು ಅನುವೃತ್ತವಾಗಿವೆ.

ಅರ್ಥ– ಉಪಸರ್ಗದಲ್ಲಿರುವ ನಿಮಿತ್ತಕ್ಕಿಂತ ಪರದಲ್ಲಿ ಣೊಪದೇಶ ಧಾತುವಿನ 'ನ್' ಕಾರಕ್ಕೆ 'ಣ್' ಕಾರವು ಆದೇಶವಾಗಿ ಬರುತ್ತದೆ.

**ಲಟ್**: ಉದಾ– ನದತಿ– ಣದ್ ಧಾತುವಿನಮೇಲೆ 'ತಿಪ್' ಆದೇಶ ಬಂದು ಸಾರ್ವಧಾತುಕಸಂಜ್ಞೆಯಿಂದ 'ಶಪ್(ಅ)' ಪ್ರತ್ಯಯ ಬಂದು ನದ್+ಅ+ತಿ=ನದತಿ ಎಂಬ ರೂಪವು ಸಿದ್ಧವಾಗಿದೆ. ಹೀಗೆ ನದತಿ, ನದತಃ ಇತ್ಯಾದಿ। ರೂಪಗಳು ಸಿದ್ಧವಾಗುತ್ತವೆ.

ಉದಾ– ಪ್ರಣದತಿ, – ಇಲ್ಲಿ 'ಣದ' ಎಂಬುದು 'ನದ' ವಾಗಿತ್ತು ಆದರೆ ಇಲ್ಲಿ 'ಪ್ರ' ಉಪಸರ್ಗದಲ್ಲಿರುವ ರೇಫದ ನಿಮಿತ್ತವಾಗಿ ಮತ್ತೆ ನದವು ಣದವಾಗಿದೆ. ಹೀಗೆ ಪ್ರ+ನದತಿ=ಪ್ರಣದತಿ ಎಂದು ರೂಪವಾಗಿದೆ.

ಉದಾ– ಪ್ರಣಿನದತಿ– ಪ್ರ ಮತ್ತು ನಿ ಎಂಬ ಉಪಸರ್ಗಗಳು ಸೇರಿದಾಗ ಪ್ರನಿ+ನದತಿ ಎಂದಿರುತ್ತದೆ. "ನೇರ್ಗದ-ನದ-ಪತ-ಪದ-ಘು-ಮಾ-ಸ್ಯತಿ-ಹನ್ತಿ-0ಯಾತಿ-ವಾತಿ-ದ್ರಾತಿ-ಪ್ಸಾತಿ-ವಪತಿ-ವಹತಿ-ಶಾಮ್ಯತಿ-ಚಿನೋತಿ-ದೇಗ್ಧಿಷು ಚ" ಎಂಬ ಸೂತ್ರದಿಂದ ಎರಡನೇ ಉಪಸರ್ಗವಾದ 'ನಿ'0ಯಲ್ಲಿರುವ 'ನ್' ಕಾರಕ್ಕೆ ಣತ್ವ ಬಂದು ಪ್ರಣಿ+ನದತಿ=ಪ್ರಣಿನದತಿ ಎದು ರೂಪವಾಗಿದೆ. ಈ ಣತ್ವಕ್ಕೆ ಬೇರೆ ಸೂತ್ರವು ಕಾರಣವಲ್ಲ.

**ಲಿಟ್**: ಉದಾ–ನನಾದ – 'ನದ್' ಧಾತುವಿನಮೇಲೆ ಲಿಟ್ 'ಲ್' ಕಾರದ 'ತಿಪ್'

ಆದೇಶ ಬಂದು ನದ್+ತಿ(ತಿಪ್) ಎಂದಿದ್ದಾಗ, 'ತಿಪ್' ಗೆ ಣಲ್(ಅ) ಆದೇಶ ಬಂದು, ಧಾತುವಿಗೆ ದ್ವಿತ್ವ, ಅಭ್ಯಾಸ, ಮತ್ತು ಹಲಾದಿಶೇಷ ಮಾಡಿದಮೇಲೆ ನನದ್+ಅ ಎಂದಿದ್ದಾಗ, "ಅಚೋಽಙ್ಣಿತಿ" ಎಂಬ ಸೂತ್ರದಿಂದ ಉಪಧೆಗೆ ವೃದ್ಧಿ ಬಂದು ನನಾದ ಎಂದು ರೂಪವಾಗುತ್ತದೆ.

**(ಏತ್ವ ಮತ್ತು ಅಭ್ಯಾಸ ಲೋಪಗಳನ್ನು ವಿಧಿಸುವ ಮೊದಲನೆಯ ಸೂತ್ರ)**

**ಸೂತ್ರ – 460. ಅತ ಏಕಹಲ್ಮಧ್ಯೇನಾದೇಶಾದೇರ್ಲಿಟಿ (6.4.120)**

ವೃತ್ತಿಃ– ಲಿಟ್–ನಿಮಿತ್ತ–ಆದೇಶಾದಿಕಂ ನ ಭವತಿ ಯದಙ್ಗಂ, ತದವಯವಸ್ಯ ಅಸಂಯುಕ್ತ ಹಲ್ ಮಧ್ಯಸ್ಥಸ್ಯ ಆತಃ ಏತ್ವಮ್ ಅಭ್ಯಾಸಲೋಪಶ್ಚ ಕಿತಿ ಲಿಟಿ । ನೇದತುಃ। ನೇದುಃ।

ಪ. ಛೇ. – ಅತಃ, ಏಕಹಲ್ಮಧ್ಯೇ, ಅನಾದೇಶಾದೇಃ, ಲಿಟಿ।

ಅ. ವೃ – "ಗಮ–ಹನ–ಜನ–ಖನ–ಘಸಾಂ ಲೋಪಃ ಕ್ಙಿತ್ಯನಙಿ" ಎಂಬ ಸೂತ್ರದಿಂದ 'ಕಿತಿ' ಎಂಬ ಶಬ್ದವೂ ಮತ್ತು "ಘ್ವಸೋರೇತ್ವಾಭ್ಯಾಸಸ್ಯ ಲೋಪಶ್ಚ" ಎಂಬ ಸೂತ್ರದಿಂದ 'ಏತ್' ಮತ್ತು 'ಅಭ್ಯಾಸ ಲೋಪಶ್ಚ' ಎಂಬ ಶಬ್ದಗಳು ಅನುವೃತ್ತವಾಗುತ್ತವೆ. ಇಲ್ಲಿ 'ಅಙ್ಗಸ್ಯ" ಎಂಬುದು ಅಧಿಕಾರ ಸೂತ್ರವಾಗಿದೆ.

ಅರ್ಥ – ಈ ಸೂತ್ರದಲ್ಲಿ 'ಲಿಟ್' ಎಂಬ ಶಬ್ದದ ಆವೃತ್ತಿಯೂ ಆಗಿದೆ. ಒಂದುಕಡೆಯಲ್ಲಿ 'ನಿಮಿತ್ತ ಸಪ್ತಮಿಯಾಗಿಯೂ' ಇದೆ. ಅದು 'ಅನಾದೇಶಾದೇಃ' ಎಂಬುದರಲ್ಲಿರುವ 'ಆದೇಶಾದೇಃ' ಎಂಬುದರ ಜೊತೆಗೆ ಅನ್ವಯವಾಗುತ್ತದೆ. ಅಂದರೆ 'ಲಿಟ್' ನ್ನು ನಿಮಿತ್ತವಾಗಿ ಭಾವಿಸಿ ಆದೇಶವಾಗಿ ಆಗಿರುವುದಿಲ್ಲ. ಎರಡನೆಯದಾದ 'ಲಿಟಿ' ಎಂಬ ಪದವೂ 'ಕಿತಿ' ಎಂಬುದಕ್ಕೆ ವಿಶೇಷ್ಯವಾಗಿದೆ. "ಅಂಗಸ್ಯ" ಎಂಬುದು 'ಅವಯವ ಷಷ್ಠೀ' ಆಗಿದೆ.

ವಿವರಣೆ – 'ಲಿಟ್' 'ಲ್' ಕಾರವನ್ನು ನಿಮಿತ್ತವಾಗಿ ಭಾವಿಸಿ ಆದೇಶ ಮೊದಲಾದವು ಇಲ್ಲದಿರುವ ಅಂಗಕ್ಕೆ ಅಸಂಯುಕ್ತವಾದ ವ್ಯಂಜನ ವರ್ಣಗಳ ಮಧ್ಯದಲ್ಲಿರುವ ಹ್ರಸ್ವ 'ಅ' ಕಾರಕ್ಕೆ 'ಏ' ಕಾರವು ಆದೇಶವಾಗಿ ಬಂದು ಅಭ್ಯಾಸಕ್ಕೆ ಲೋಪವು ಬರುತ್ತದೆ– 'ಕಿತ್' ಆದ 'ಲಿಟ್' ಪರದಲ್ಲಿದ್ದಾಗ.

**ಲೃಟ್**: ಉದಾ– ನೇದತುಃ– ಪ್ರಥಮ ಪುರುಷ ದ್ವಿವಚನ 'ನದ್' ಧಾತುವಿನ ನಂತರ 'ಲಿಟ್' 'ಲ್' ಕಾರದಲ್ಲಿ 'ತಸ್' ಎಂಬ ಮೂಲ ಆಖ್ಯಾತಪ್ರತ್ಯಯವಿದ್ದು ಅದಕ್ಕೆ ಅಭಿನವ ಆಖ್ಯಾತ ಪ್ರತ್ಯಯವಾದ 'ಅತುಸ್' ಬಂದು ನದ್+ಅತುಸ್ ಎಂದಿದ್ದಾಗ, ಧಾತುವಿಗೆ ದ್ವಿತ್ವ ಮತ್ತು ಅಭ್ಯಾಸ ಸಂಜ್ಞೆ ತದನಂತರ ಹಲಾದಿಶೇಷವಾದಮೇಲೆ, ನ+ನದ್+ಅತುಸ್ ಎಂದಿರುತ್ತದೆ. 'ಲಿಟ್''ಲ್' ಕಾರಕ್ಕೆ ಬರುವ 'ಅತುಸ್' ಗೆ "ಅಸಂಯೋಗಾಲ್ಲಿಟ್ ಕಿತ್" ಎಂಬ ಸೂತ್ರದಿಂದ 'ಕಿದ್ವದ್ಭಾವ' ಬರುತ್ತದೆ. ಅನಂತರ ಪ್ರಕೃತ ಸೂತ್ರವು ಪ್ರವೃತ್ತವಾಗುತ್ತದೆ. ಇಲ್ಲಿ 'ಲಿಟ್' 'ಲ್' ಕಾರವನ್ನು ಆಶ್ರಯಿಸಿ ಬೇರೆ ಯಾವ ಆದೇಶವೂ ಬರುವುದಿಲ್ಲ. ಕಿದ್ವದ್ಭಾವವನ್ನು ಹೊಂದಿರುವ ಈ 'ಲಿಟ್' 'ಲ್'

ಕಾರದ 'ಅತುಸ್' ಪರಕವಾದ ಧಾತುವಿನಲ್ಲಿ ಸಂಯೋಗವು ಇರುವುದಿಲ್ಲ. ಅದುದರಿಂದ ಅಭ್ಯಾಸ ಸಂಜ್ಞೆಯನ್ನು ಹೊಂದಿರುವ ಅಭ್ಯಾಸವಾದ ಮೊದಲನೆಯ (ನ+ನದ್+ಅತುಸ್) 'ನ್' ಕಾರಕ್ಕೆ ಲೋಪ, ಮತ್ತು ಎರಡನೆಯ 'ನ್' ಕಾರದ ನಂತರವಿರುವ ಹ್ರಸ್ವ 'ಅ'ಕಾರದ ಸ್ಥಾನದಲ್ಲಿ 'ಏ'ಕಾರವು ಆದೇಶವಾಗಿ ಬಂದು ನೇದ್+ಅತುಸ್=ನೇದತುಸ್ ಎಂದಾಗಿ 'ಸ್' ಕಾರಕ್ಕೆ ರುತ್ವ-ವಿಸರ್ಗಗಳು ಬಂದು ನೇದತುಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ- ನೇದುಃ-ಇದೇ ರೀತಿಯಲ್ಲಿ ಪ್ರಥಮ ಪುರುಷ ಬಹುವಚನದಲ್ಲಿ ನ+ನದ್+ಝಿ ಎಂದಿದ್ದಾಗ, 'ಝಿ' ಗೆ ಉಸ್ ಆದೇಶ ಬಂದು, ಹಿಂದಿನಂತೆ ಏತ್ವ ಅಭ್ಯಾಸಗಳನ್ನು ಮಾಡಿದಮೇಲೆ 'ನೇದುಸ್' ಎಂದಾಗಿ 'ಸ್' ಕಾರಕ್ಕೆ ರುತ್ವ-ವಿಸರ್ಗಗಳು ಬಂದು ನೇದುಃ ಎಂಬ ರೂಪವು ಸಿದ್ಧವಾಗುತ್ತದೆ.

**(ಏತ್ವ ಮತ್ತು ಅಭ್ಯಾಸ ಲೋಪಗಳನ್ನು ವಿಧಿಸುವ ಎರಡನೆಯ ಸೂತ್ರ)**

**ಸೂತ್ರ - 461 .ಥಲಿ ಚ ಸೇಟಿ (6.4.121)**

ವೃತ್ತಿಃ-ಪ್ರಾಗುಕ್ತಂ ಸ್ಯಾತ್। ನೇದಿಥ। ನೇದಥುಃ। ನೇದ। ನನಾದ, ನನದ। ನೇದಿವ ।ನೇದಿಮ ।ನದಿತಾ। ನದಿಷ್ಯತಿ। ನದತು। ಅನದತ್। ನದೇತ್। ನದ್ಯಾತ್। ಅನಾದೀತ್। ಅನದೀತ್। ಅನದಿಷ್ಯತ್। ಟುನದಿ ಸಮೃದ್ಧೌ।

ಅ. ವ್ಯ.-" ಅತ, ಏಕಹಲ್‌ಮಧ್ಯೇ, ಅನಾದೇಶಾದೇಃ, ಲಿಟಿ" ಎಂಬ ಸೂತ್ರವು ಅನುವೃತ್ತವಾಗುತ್ತದೆ.

ಅರ್ಥ- 'ಲಿಟ್' 'ಲ್' ಕಾರವನ್ನು ನಿಮಿತ್ತವಾಗಿ ಭಾವಿಸಿ ಆದೇಶ ಮೊದಲಾದವು ಇಲ್ಲದಿರುವ ಅಂಗಕ್ಕೆ ಅಸಂಯುಕ್ತವಾದ ವ್ಯಂಜನ ವರ್ಣಗಳ ಮಧ್ಯದಲ್ಲಿರುವ ಹ್ರಸ್ವ 'ಅ' ಕಾರಕ್ಕೆ 'ಏ' ಕಾರವು ಆದೇಶವಾಗಿ ಬಂದು ಅಭ್ಯಾಸಕ್ಕೆ ಲೋಪವು ಬರುತ್ತದೆ- ಇಡಾಗಮದಿಂದ ಕೂಡಿದ 'ಥಲ್' ಪ್ರತ್ಯಯವು ಪರದಲ್ಲಿದ್ದಾಗ.

ಸೂಚನೆ- ಈ ಸೂತ್ರವು ಬರಲು ಕಾರಣವೇನೆಂದರೆ, ಪೂರ್ವ ಸೂತ್ರದಲ್ಲಿ 'ಥಲ್' ಪ್ರತ್ಯಯ ಪರದಲ್ಲಿದ್ದಾಗ, ಹ್ರಸ್ವ 'ಅ' ಕಾರಕ್ಕೆ 'ಏತ್ವ, ಅಭ್ಯಾಸಗಳು ಬರುತ್ತಿದ್ದಿಲ್ಲ. ಯಾಕೆಂದರೆ- ಅಪಿತ್ ಆದ 'ಲಿಟ್' ಕಿದ್ವದ್ಭಾವವನ್ನು ಹೊಂದಿರುತ್ತದೆ. ಮತ್ತು 'ಕಿತ್' ಪರದಲ್ಲಿದ್ದಾಗ ಮಾತ್ರ ಅದು ಸಂಭವಿಸುತ್ತದೆ. ಆದರೆ ಸ್ಥಾನಿವದ್ಭಾವದಿಂದ 'ಥಲ್' ಪ್ರತ್ಯಯವೂ ಕೂಡ 'ಪಿತ್' ಆಗುತ್ತದೆ. ಆದುದರಿಂದ 'ಕಿದ್ವದ್ಭಾವ' ಬರುವುದಿಲ್ಲ.

ಉದಾ- ನೇದಿಥ- ಮಧ್ಯಮಪುರುಷ ಏಕವಚನದಲ್ಲಿ 'ನದ್' ಧಾತುವಿನ ನಂತರ 'ಸಿಪ್' ಪ್ರತ್ಯಯವು ಬಂದು ನದ್+ಸಿಪ್ ಎಂದಿದ್ದಾಗ, 'ಸಿಪ್' ಗೆ 'ಥಲ್(ಥ)' ಆದೇಶವಾಗಿ ಬಂದು ಹಿಂದಿನಂತೆಯೇ ದ್ವಿತ್ವ ಮೊದಲಾದ ಕಾರ್ಯಗಳಾದಮೇಲೆ, ನ+ನದ್+ಥ ಎಂದಿರುತ್ತದೆ. "ಆರ್ಧಧಾತುಕಸ್ಯೇಡ್ ವಲಾದೇಃ" ಎಂಬ ಸೂತ್ರದಿಂದ 'ಥ' ಪ್ರತ್ಯಯಕ್ಕೆ ಆದ್ಯವಯವವಾಗಿ 'ಇಟ್(ಇ)' ಆಗಮ ಬಂದು ನ+ನದ್+ಇಥ ಎಂದಿರುತ್ತದೆ. "ಥಲಿಚ ಸೇಟಿ" ಎಂಬ ಸೂತ್ರದಿಂದ ಏತ್ವ ಮತ್ತು ಅಭ್ಯಾಸ(ನ)ಲೋಪ

ವಾಗಿ ನ್+ಏ+ದ್+ಇಥ=ನೇದಿಥ ಎಂದು ರೂಪವಾಗುತ್ತದೆ.

ಉದಾ– ನೇದಥುಃ, ನೇದ – ಮಧ್ಯಮಪುರುಷ ದ್ವಿವಚನ ಬಹುವಚನಗಳಲ್ಲಿ ಮೂಲ ಆಖ್ಯಾತ ಪ್ರತ್ಯಯಗಳಾದ 'ಥಸ್' ಮತ್ತು ಥ ಪ್ರತ್ಯಯಗಳಿದ್ದಾಗ, ನದ್+ಥಸ್, ಮತ್ತು ನದ್+ಥ ಎಂದಿದ್ದಾಗ, ಧಾತುವಿಗೆ ದ್ವಿತ್ವ ಮತ್ತು ಹಲಾದಿ ಶೇಷ ಕಾರ್ಯಗಳಾದಮೇಲೆ ನ+ನದ್+ಥಸ್, ಮತ್ತು ನ+ನದ್+ಥ ಎಂದಿರುತ್ತದೆ. "ಅತಏಕಹಲ್ಮಧ್ಯೇನಾದೇಶಾದೇರ್ಲಿಟಿ" ಎಂಬುದರಿಂದ ಹಿಂದಿನಂತೆಯೇ ಅಭ್ಯಾಸದ 'ನ್' ಕಾರಕ್ಕೆ ಲೋಪಬಂದು ನಂತರ 'ನದ್' ನಲ್ಲಿರುವ 'ಅ'ಕಾರಕ್ಕೆ ಏತ್ವ ಬಂದು ನೇದ್+ಥಸ್ ಮತ್ತು ನೇದ್+ಥ ಎಂದಿದ್ದಾಗ, ಕ್ರಮವಾಗಿ ಥಸ್ ಗೆ ಅತುಸ್ ಮತ್ತು ಥ ಗೆ 'ಅ' ಆದೇಶ ಬಂದು ನೇದಥುಃ ಮತ್ತು ನೇದ ಎಂಬ ರೂಪಗಳು ಸಿದ್ಧವಾಗುತ್ತವೆ.

ಉದಾ– ನನಾದ, ನನದ – ಉತ್ತಮರುಷ ಏಕವಚನದಲ್ಲಿ ನದ್+ಮಿಪ್ ಎಂದಿದ್ದಾಗ, ಹಿಂದಿನಂತೆಯೇ ಪ್ರಕ್ರಿಯೆ ನಡೆದು ಮಿಪ್ ಗೆ ಣಲ್ (ಅ) ಆದೇಶ ಬಂದು ನ+ನದ್+ಅ ಎಂದಿದ್ದಾಗ, "ಣಲುತ್ತಮೋ ವಾ" ಎಂಬ ಸೂತ್ರದಿಂದ ಉಪಧಾ 'ಅ' ಕಾರಕ್ಕೆ ವೈಕಲ್ಪಿಕವಾಗಿ ದೀರ್ಘ ಬಂದು ನ+ನಾದ್+ಅ=ನನಾದ ಎಂದೂ, ದೀರ್ಘ ಬಾರದ ಪಕ್ಷದಲ್ಲಿ ನನದ ಎಂದು ಎರಡು ರೂಪಗಳಾಗುತ್ತವೆ.

ಉದಾ– ನೇದಿವ, ನೇದಿಮ – ಉತ್ತಮಪುರುಷ ದ್ವಿವಚನ ಬಹುವಚನಗಳಲ್ಲಿ ನದ್+ವಸ್, ಮತ್ತು ನದ್+ಮಸ್ ಎಂದಿದ್ದಾಗ ಹಿಂದಿನಂತೆಯೇ ಪ್ರಕ್ರಿಯೆ ನಡೆದು

ವಸ್ ಮತ್ತು ಮಸ್ ಗಳಿಗೆ ಕ್ರಮವಾಗಿ 'ವ' 'ಮ' ಗಳು ಆದೇಶವಾಗಿ ಬಂದು ಇಡಾಗಮ(ಇ) ಬಂದಮೇಲೆ ನೇದಿವ, ನೇದಿಮ ಎಂಬ ರೂಪಗಳು ಸಿದ್ಧವಾಗುತ್ತವೆ.

ರೂಪಗಳು: ನನಾದ, ನೇದತುಃ, ನೇದುಃ।ನೇದಿಥ, ನೇದಥುಃ, ನೇದ। ನನಾದ/ ನನದ, ನೇದಿವ,ನೇದಿಮ।

**ಲುಟ್**: ಉದಾ– ನದಿತಾ – ನದ್ ಧಾತುವಿನ ನಂತರ ಪ್ರಥಮ ಪುರುಷದಲ್ಲಿ ತಿಪ್, ತಸ್, ಝಿ ಗಳಿಗೆ ಕ್ರಮವಾಗಿ ಡಾ, ರೌ, ರಸ್ ಗಳು ಆದೇಶವಾಗಿ ಬಂದು ನಂತರ ಇಡಾಗಮ ಬಂದಮೇಲೆ., ನದಿತಾ, ನದಿತಾರೌ, ನದಿತಾರಃ ಎಂಬ ರೂಪಗಳು ಸಿದ್ಧವಾಗುತ್ತವೆ.

ಉದಾ– ನದಿತಾಸಿ, ನದಿತಾಸ್ಥಃ, ನದಿತಾಸ್ಥ –ನದ್ ಧಾತುವಿನ ನಂತರ ಮಧ್ಯಮ ಪುರುಷದಲ್ಲಿ ಹಿಂದಿನ 'ಲುಟ್' 'ಲ್' ಕಾರಗಳಲ್ಲಿ ಜರುಗಿದ ಪ್ರಕ್ರಿಯೆಯನ್ನು ಅನುಸರಿಸಿ ನದಿತಾಸಿ, ನದಿತಾಸ್ಥಃ, ನದಿತಾಸ್ಥ ಎಂಬ ರೂಪಗಳು ಸಿದ್ಧವಾಗುತ್ತವೆ.

ಉದಾ– ನದಿತಾಸ್ಮಿ, ನದಿತಾಸ್ವಃ, ನದಿತಾಸ್ಮಃ–ನದ್ ಧಾತುವಿನ ನಂತರ ಉತ್ತಮ ಪುರುಷದಲ್ಲಿ ಹಿಂದಿನ 'ಲುಟ್' 'ಲ್' ಕಾರಗಳಲ್ಲಿ ಜರುಗಿದ ಪ್ರಕ್ರಿಯೆಯನ್ನು ಅನುಸರಿಸಿ ನದಿತಾಸ್ಮಿ, ನದಿತಾಸ್ವಃ, ನದಿತಾಸ್ಮಃ ಎಂಬ ರೂಪಗಳು ಸಿದ್ಧವಾಗುತ್ತವೆ.

ರೂಪಗಳು; ನದಿತಾ, ನದಿತಾರೌ, ನದಿತಾರಃ। ನದಿತಾಸಿ, ನದಿತಾಸ್ಥಃ, ನದಿತಾಸ್ಥ। ನದಿತಾಸ್ಮಿ, ನದಿತಾಸ್ವಃ, ನದಿತಾಸ್ಮಃ

**ಲೃಟ್**: ರೂಪಗಳು: ನದಿಷ್ಯತಿ, ನದಿಷ್ಯತಃ, ನದಿಷ್ಯನ್ತಿ। ನದಿಷ್ಯಸಿ, ನದಿಷ್ಯಥಃ, ನದಿಷ್ಯಥ। ನದಿಷ್ಯಾಮಿ, ನದಿಷ್ಯಾವಃ, ನದಿಷ್ಯಾಮಃ।

**ಲೋಟ್**: ರೂಪಗಳು: ನದತು/ನದತಾತ್, ನದತಾಮ್, ನದನ್ತು। ನದ/ನದತಾತ್, ನದತಮ್, ನದತ। ನದಾನಿ, ನದಾವ, ನದಾಮ।

**ಲಙ್**: ರೂಪಗಳು: ಅನದತ್, ಅನದತಾಮ್, ಅನದನ್। ಅನದಃ, ಅನದತಮ್, ಅನದತ। ಅನದಮ್, ಅನದಾವ, ಅನದಾಮ।

**ವಿಧಿಲಿಙ್**: ರೂಪಗಳು: ನದೇತ್, ನದೇತಾಮ್, ನದೇಯುಃ। ನದೇಃ, ನದೇತಮ್, ನದೇತ। ನದೇಯಮ್, ನದೇವ, ನದೇಮ।

**ಆಶೀರ್ಲಿಙ್**: ರೂಪಗಳು: ನದ್ಯಾತ್, ನದ್ಯಾಸ್ತಾಮ್, ನದ್ಯಾಸುಃ। ನದ್ಯಾಃ, ನದ್ಯಾಸ್ತಮ್, ನದ್ಯಾಸ್ತ। ನದ್ಯಾಸಮ್, ನದ್ಯಾಸ್ವ, ನದ್ಯಾಸ್ಮ।

**ಲುಙ್**: ರೂಪಗಳು (ವೃದ್ಧಿಪಕ್ಷ): ಅನಾದೀತ್, ಅನಾದಿಷ್ಟಾಮ್, ಅನಾದಿಷುಃ। ಅನಾದೀಃ, ಅನಾದಿಷ್ಟಮ್, ಅನಾದಿಷ್ಟ। ಅನಾದಿಷಮ್ ,ಅನಾದಿಷ್ವ, ಅನಾದಿಷ್ಮ।

ರೂಪಗಳು (ವೃದ್ಧಿ ಬಾರದ ಪಕ್ಷ): ಅನದೀತ್, ಅನದಿಷ್ಟಾಮ್, ಅನದಿಷುಃ। ಅನದೀಃ, ಅನದಿಷ್ಟಮ್, ಅನದಿಷ್ಟ। ಅನದಿಷಮ್ ,ಅನದಿಷ್ವ, ಅನದಿಷ್ಮ।

**ಲೃಙ್**: ರೂಪಗಳು: ಅನದಿಷ್ಯತ್, ಅನದಿಷ್ಯತಾಮ್, ಅನದಿಷ್ಯನ್। ಅನದಿಷ್ಯಃ, ಅನದಿಷ್ಯತಮ್, ಅನದಿಷ್ಯತ। ಅನದಿಷ್ಯಮ್, ಅನದಿಷ್ಯಾವ, ಅನದಿಷ್ಯಾಮ।

8. ಟುನದಿ ಸಮೃದ್ಧೌ (ಬೆಳವಣಿಗೆ ಆಗುವುದು)– ಇದರಲ್ಲಿ 'ನದ್' ಮಾತ್ರ ಉಳಿಯುತ್ತದೆ.

**(ಇತ್ ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ – 462. ಆದಿರ್ಞಿ–ಟು–ಡವಃ (1.3.4)**

ವೃತ್ತಿಃ–ಉಪದೇಶೇ ಧಾತೋಃ ಆದ್ಯಾಃ ಏತೇ ಇತಃ ಸ್ಯುಃ।

ಪ. ಛೇ. – ಆದಿಃ, ಞಿಟುಡವಃ।

ಅ. ವ್ಯ.–"ಉಪದೇಶೇ ಅಜನನುನಾಸಿಕ ಇತ್" ಎಂಬ ಸೂತ್ರದಿಂದ 'ಉಪದೇಶೇ' ಮತ್ತು 'ಇತ್' ಎಂಬ ಎರಡು ಪದಗಳು ಅನುವೃತ್ತವಾಗುತ್ತವೆ.

ಅರ್ಥ–ಉಪದೇಶರೂಪವಾದ ಧಾತುಗಳ ಆದಿಯಲ್ಲಿರುವ ಞಿ,ಟು ಮತ್ತು ಡು ಇವುಗಳು 'ಇತ್' ಸಂಜ್ಞೆಯನ್ನು ಹೊಂದುತ್ತವೆ.

**(ನುಮ್ ಆಗಮವನ್ನು ವಿಧಿಸುವ ಸೂತ್ರ)**

**ಸೂತ್ರ – 463. ಇದಿತೋ ನುಮ್ ಧಾತೋಃ (7.1.58)।**

ವೃತ್ತಿಃ– ನಂದತಿ। ನನಂದ। ನಂದಿತಾ। ನಂದಿಷ್ಯತಿ। ನಂದತು। ಅನಂದತ್। ನಂದೇತ। ನಂದ್ಯಾತ್। ಅನಂದೀತ್। ಅನಂದಿಷ್ಯತ್ । ಅರ್ಚ ಪೂಜಾಯಾಂ। 9 । ಅರ್ಚತಿ।

ಪ. ಛೇ. – ಇದಿತಃ, ನುಮ್, ಧಾತೋಃ।

ಅರ್ಥ– ಹ್ರಸ್ವ 'ಇ' ಕಾರವನ್ನು 'ಇತ್' ಆಗಿ ಉಳ್ಳ ಧಾತುವಿಗೆ 'ನುಮ್(ನ್)' ಆಗಮವು ಬರುತ್ತದೆ. ಇದು 'ಮಿತ್' ಆಗಿರೋಣದರಿಂದ "ಮಿದಚೋಽನ್ತ್ಯಾತ್ ಪರಃ" ಎಂಬ ಸೂತ್ರದಿಂದ 'ನುಮ್' ಆಗಮದಲ್ಲಿರುವ 'ನ್' ಎಂಬುದು ಅನ್ತ್ಯವಾದ 'ಅಚ್' ನ ಪರದಲ್ಲಿ ಬರುತ್ತದೆ.

**ಲಟ್**: ಉದಾ– ನಂದತಿ – 'ನದ್' ಧಾತುವು 'ಇದಿತ್' ಆಗಿರೋಣದರಿಂದ ನುಮಾಗಮ(ನ್) ಬಂದು ನಂದ್ ಎಂದಾಗಿದೆ. ಪ್ರಥಮ ಪುರುಷ ಏಕವಚನದಲ್ಲಿ ನನ್ದ್+ಶಪ್(ಅ)+ತಿ ಎಂದಾಗಿ ನನ್ದತಿ ಎಂದು ರೂಪವಾಗುತ್ತದೆ.

ರೂಪಗಳು: ನನ್ದತಿ, ನನ್ದತಃ, ನನ್ದನ್ತಿ। ನನ್ದಸಿ, ನನ್ದಥಃ, ನನ್ದಥ। ನನ್ದಾಮಿ, ನನ್ದಾವಃ, ನನ್ದಾಮಃ।

**ಲಿಟ್**: ರೂಪಗಳು: ನನನ್ದ, ನನನ್ದತುಃ, ನನನ್ದುಃ। ನನನ್ದಿಥ, ನನನ್ದಥುಃ, ನನನ್ದ। ನನನ್ದ, ನನನ್ದಿವ, ನನನ್ದಿಮ।

**ಲುಟ್**: ರೂಪಗಳು: ನನ್ದಿತಾ, ನನ್ದಿತಾರೌ, ನನ್ದಿತಾರಃ। ನನ್ದಿತಾಸಿ, ನನ್ದಿತಾಸ್ಥಃ, ನನ್ದಿತಾಸ್ಥ। ನನ್ದಿತಾಸ್ಮಿ, ನನ್ದಿತಾಸ್ವಃ, ನನ್ದಿತಾಸ್ಮಃ।

**ಲೃಟ್**: ರೂಪಗಳು: ನನ್ದಿಷ್ಯತಿ, ನನ್ದಿಷ್ಯತಃ, ನನ್ದಿಷ್ಯನ್ತಿ। ನನ್ದಿಷ್ಯಸಿ, ನನ್ದಿಷ್ಯಥಃ, ನನ್ದಿಷ್ಯಥ। ನನ್ದಿಷ್ಯಾಮಿ, ನನ್ದಿಷ್ಯಾವಃ, ನನ್ದಿಷ್ಯಾಮಃ।

**ಲೋಟ್**: ರೂಪಗಳು: ನನ್ದತು/ನನ್ದತಾತ್, ನನ್ದತಾಮ್, ನನ್ದನ್ತು। ನನ್ದ/ನನ್ದತಾತ್, ನನ್ದತಮ್, ನನ್ದತ। ನನ್ದಾನಿ,ನನ್ದಾವ, ನನ್ದಾಮ।

**ಲಙ್**: ರೂಪಗಳು: ಅನನ್ದತ್, ಅನನ್ದತಾಮ್, ಅನನ್ದನ್। ಅನನ್ದಃ, ಅನನ್ದತಮ್, ಅನನ್ದತ। ಅನನ್ದಮ್, ಅನನ್ದಾವ, ಅನನ್ದಾಮ।

**ವಿಧಿಲಿಙ್**: ರೂಪಗಳು: ನನ್ದೇತ, ನನ್ದೇತಾಮ್, ನನ್ದೇಯುಃ। ನನ್ದೇಃ, ನನ್ದೇತಮ್, ನನ್ದೇತ। ನನ್ದೇಯಮ್, ನನ್ದೇವ, ನನ್ದೇಮ।

**ಆಶೀರ್ಲಿಙ್**: ರೂಪಗಳು: ನನ್ದ್ಯಾತ್, ನನ್ದ್ಯಾಸ್ತಾಮ್, ನನ್ದ್ಯಾಸುಃ। ನನ್ದ್ಯಾಃ, ನನ್ದ್ಯಾಸ್ತಮ್, ನನ್ದ್ಯಾಸ್ತ। ನನ್ದ್ಯಾಸಮ್, ನನ್ದ್ಯಾಸ್ವ, ನನ್ದ್ಯಾಸ್ಮ।

**ಲುಙ್**: ರೂಪಗಳು: ಅನನ್ದೀತ್, ಅನನ್ದಿಷ್ಟಾಮ್, ಅನನ್ದಿಷುಃ। ಅನನ್ದೀಃ, ಅನನ್ದಿಷ್ಟಮ್, ಅನನ್ದಿಷ್ಟ। ಅನನ್ದಿಷಮ್,ಅನನ್ದಿಷ್ವ, ಅನನ್ದಿಷ್ಮ।

**ಲೃಙ್**: ರೂಪಗಳು: ಅನನ್ದಿಷ್ಯತ್, ಅನನ್ದಿಷ್ಯತಾಮ್, ಅನನ್ದಿಷ್ಯನ್ । ಅನನ್ದಿಷ್ಯಃ, ಅನದಿಷ್ಯತಮ್, ಅನನ್ದಿಷ್ಯತ। ಅನನ್ದಿಷ್ಯಮ್, ಅನನ್ದಿಷ್ಯಾವ, ಅನನ್ದಿಷ್ಯಾಮ।

9. ಅರ್ಚ ಪೂಜಾಯಾಂ (ಪೂಜೆ ಮಾಡುವುದು)–ಇದರಲ್ಲಿ 'ಅರ್ಚ್' ಮಾತ್ರ ಉಳಿಯುತ್ತದೆ.

**ಲಟ್**: ಉದಾ– ಅರ್ಚತಿ– ಪ್ರಥಮಪುರುಷ ಏಕವಚನದಲ್ಲಿ ಅರ್ಚ್+ತಿಪ್ ಎಂದಿದ್ದಾಗ,

ಧಾತುವಿನ ನಂತರ ಶಪ್(ಅ) ಪ್ರತ್ಯಯ ಬಂದು ಅರ್ಚ್+ ಅ+ತಿ=ಅರ್ಚತಿ ಎಂದು ರೂಪವಾಗುತ್ತದೆ.

**ರೂಪಗಳು: ಅರ್ಚತಿ, ಅರ್ಚತಃ, ಅರ್ಚನ್ತಿ ಅರ್ಚಸಿ, ಅರ್ಚಥಃ, ಅರ್ಚಥ। ಅರ್ಚಾಮಿ, ಅರ್ಚಾವಃ, ಅರ್ಚಾಮಃ।**

**(ನುಟ್(ನ್) ಆಗಮವನ್ನು ವಿಧಿಸುವ ಸೂತ್ರ)**

**ಸೂತ್ರ - 464.ತಸ್ಮಾನ್ನುಡ್ ದ್ವಿಹಲಃ (7.4.71)**

ವೃತ್ತಿಃ–ದ್ವಿಹಲಃ ಧಾತೋಃ ದೀರ್ಘೀಭೂತಾತ್ ಅಕಾರಾತ್ ಪರಸ್ಯ ನುಟ್ ಸ್ಯಾತ್। ಆನರ್ಚ। ಆನರ್ಚತುಃ। ಅರ್ಚಿತಾ। ಅರ್ಚಿಷ್ಯತಿ। ಅರ್ಚತು। ಆರ್ಚತ್। ಅರ್ಚೇತ್। ಆರ್ಚೀತ್। ಆರ್ಚಿಷ್ಯತ್।

ವ್ರಜ ಗತೌ।10। ವ್ರಜತಿ। ವವ್ರಾಜ। ವ್ರಜಿತಾ। ವ್ರಜಿಷ್ಯತಿ। ವ್ರಜತು। ಅವ್ರಜತ್। ವ್ರಜೇತ್। ವ್ರಜ್ಯಾತ್।

ಪ. ಛೇ. – ತಸ್ಮಾತ್, ನುಟ್, ದ್ವಿಹಲಃ।

ಅ. ವೃ.– "ಅಂಗಸ್ಯ" ಎಂಬುದು ಅಧಿಕಾರ ಸೂತ್ರವಾಗಿದೆ.

ಅರ್ಥ– ಎರಡು ವ್ಯಂಜನಗಳಿಂದ ಕೂಡಿದ ಧಾತುವಿನ ದೀರ್ಘೀಭೂತವಾದ ಅಭ್ಯಾಸದ ಆ– ಕಾರದ ಪರದಲ್ಲಿ ಇರುವ ಅಂಗಕ್ಕೆ ನುಟ್ ಆಗಮವು ಬರುತ್ತದೆ.

ವಿಶೇಷ: "ಅತ ಆದೇಃ" ಎಂಬ ಸೂತ್ರದ ನಂತರ ಪ್ರಕೃತ ಸೂತ್ರವಿರೋಣದರಿಂದ 'ತಸ್ಮಾತ್' ಎಂಬ ಸರ್ವನಾಮ ಶಬ್ದವನ್ನು ಪ್ರಯೋಗಿಸಲಾಗಿದೆ. ಆದ್ದರಿಂದ ತಸ್ಮಾತ್ ಎಂದರೆ ದೀರ್ಘೀಭೂತವಾದ 'ಆ' ಕಾರದ ನಂತರವೆಂದು ಅರ್ಥ ಮಾಡಬೇಕು.

**ಲಿಟ್**: ಉದಾ–ಆನರ್ಚ– ಪ್ರಥಮಪುರುಷ ಏಕವಚನದಲ್ಲಿ ಅರ್ಚ್ ಧಾತುವಿನ ನಂತರ 'ಲ್' ಕಾರಾದೇಶವಾದ (ಮೂಲ ಆಖ್ಯಾತ ಪ್ರತಯವಾದ) ತಿಪ್(ತಿ) ಬಂದಮೇಲೆ ಅದಕ್ಕೆ ಅಭಿನವ ಆಖ್ಯಾತ ಪ್ರತ್ಯಯವಾದ 'ಣಲ್(ಅ)' ಆದೇಶವಾಗಿ ಬಂದು ಅರ್ಚ್+ಅ ಎಂದಿರುತ್ತದೆ ಧಾತುವಿಗೆ ದ್ವಿತ್ವ ಮತ್ತು ಹಲಾದಿಶೇಷ ಕಾರ್ಯವಾದಮೇಲೆ ಅ+ಅರ್ಚ್+ಅ ಎಂದಿರುತ್ತದೆ. ಅಭ್ಯಾಸದ 'ಅ'ಕಾರಕ್ಕೆ "ಅತ ಆದೇಃ" ಎಂಬ ಸೂತ್ರದಿಂದ ದೀರ್ಘ (ಆ) ಬಂದು ಆ+ಅರ್ಚ್+ಅ ಎಂದಿದ್ದಾಗ, ದೀರ್ಘೀಭೂತವಾದ 'ಆ' ಕಾರದ ನಂತರ ಇರುವ 'ಅರ್ಚ್' ಗೆ ಪ್ರಕೃತ ಸೂತ್ರದಿಂದ 'ಟಿತ್' ಆದ ನುಡಾಗಮವು ಆದ್ಯವಯವಾಗಿ ಬಂದು, ಆ+ನ್+ಅರ್ಚ್+ಅ=ಆನರ್ಚ ಎಂಬ ರೂಪವು ಸಿದ್ಧವಾಗುತ್ತದೆ.

ಇದೇ ರೀತಿಯಲ್ಲಿ ಉಳಿದ ರೂಪಗಳು ಸಿದ್ಧವಾಗುತ್ತವೆ.

ರೂಪಗಳು: ಆನರ್ಚ, ಆನರ್ಚತುಃ, ಆನರ್ಚುಃ। ಆನರ್ಚಿಥ, ಆನರ್ಚಥುಃ, ಆನರ್ಚ। ಆನರ್ಚ, ಆನರ್ಚಿವ, ಆನರ್ಚಿಮ।

**ಲುಟ್**: ರೂಪಗಳು: ಅರ್ಚಿತಾ, ಅರ್ಚಿತಾರೌ, ಅರ್ಚಿತಾರಃ। ಅರ್ಚಿತಾಸಿ, ಅರ್ಚಿತಾಸ್ಥಃ, ಅರ್ಚಿತಾಸ್ಥ। ಅರ್ಚಿತಾಸ್ಮಿ, ಅರ್ಚಿತಾಸ್ವಃ, ಅರ್ಚಿತಾಸ್ಮಃ।

**ಲೃಟ್**: ರೂಪಗಳು: ಅರ್ಚಿಷ್ಯತಿ, ಅರ್ಚಿಷ್ಯತಃ, ಅರ್ಚಿಷ್ಯನ್ತಿ। ಅರ್ಚಿಷ್ಯಸಿ, ಅರ್ಚಿಷ್ಯಥಃ, ಅರ್ಚಿಷ್ಯಥ। ಅರ್ಚಿಷ್ಯಾಮಿ, ಅರ್ಚಿಷ್ಯಾವಃ, ಅರ್ಚಿಷ್ಯಾಮ:

**ಲೋಟ್**: ರೂಪಗಳು: ಅರ್ಚತು/ಅರ್ಚತಾತ್, ಅರ್ಚತಾಮ್, ಅರ್ಚನ್ತು। ಅರ್ಚ/ಅರ್ಚತಾತ್, ಅರ್ಚತಮ್, ಅರ್ಚತ। ಅರ್ಚಾನಿ, ಅರ್ಚಾವ, ಅರ್ಚಾಮ।

ವಿಶೇಷ "ಆಟಶ್ಚ" ಎಂಬ ಸೂತ್ರದಿಂದ ಲಙ್, ಲುಙ್, ಲೃಙ್ ಗಳಲ್ಲಿ ಅಡಾಗಮಕ್ಕೆ ವೃದ್ಧಿ ಬಂದು ಅಟ್ ಗೆ ಬದಲಾಗಿ 'ಆಟ್' ಬರುತ್ತದೆ. ಇದನ್ನು ಮೇಲಿನ 3 'ಲ್' ಕಾರಗಳಲ್ಲಿ ಕಾಣಬಹುದು.

**ಲಙ್**: ರೂಪಗಳು: ಆರ್ಚತ್, ಆರ್ಚತಾಮ್, ಆರ್ಚನ್। ಆರ್ಚಃ, ಆರ್ಚತಮ್, ಆರ್ಚತ। ಆರ್ಚಮ್, ಆರ್ಚಾವ, ಆರ್ಚಾಮ।

**ವಿಧಿಲಿಙ್**: ರೂಪಗಳು: ಅರ್ಚೇತ್, ಅರ್ಚೇತಾಮ್, ಅರ್ಚೇಯುಃ। ಅರ್ಚೇಃ, ಅರ್ಚೇತಮ್, ಅರ್ಚೇತ। ಅರ್ಚೇಯಮ್, ಅರ್ಚೇವ, ಅರ್ಚೇಮ।

**ಆಶೀರ್ಲಿಙ್**: ರೂಪಗಳು: ಅರ್ಚ್ಯಾತ್, ಅರ್ಚ್ಯಾಸ್ತಾವ್, ಅರ್ಚ್ಯಾಸುಃ। ಅರ್ಚ್ಯಾಃ,ಅರ್ಚ್ಯಾಸ್ತಮ್, ಅರ್ಚ್ಯಾಸ್ತ। ಅರ್ಚ್ಯಾಸಮ್, ಅರ್ಚ್ಯಾಸ್ವ, ಅರ್ಚ್ಯಾಸ್ಮ।

**ಲುಙ್**: ರೂಪಗಳು: ಆರ್ಚೀತ್, ಆರ್ಚಿಷ್ಟಾಮ್, ಆರ್ಚಿಷುಃ। ಆರ್ಚೀಃ, ಆರ್ಚಿಷ್ಟಮ್, ಆರ್ಚಿಷ್ಟ। ಆರ್ಚಿಷಮ್, ಆರ್ಚಿಷ್ವ, ಆರ್ಚಿಷ್ಮ।

**ಲೃಙ್**: ರೂಪಗಳು: ಆರ್ಚಿಷ್ಯತ್, ಆರ್ಚಿಷ್ಯತಾಮ್, ಆರ್ಚಿಷ್ಯನ್। ಆರ್ಚಿಷ್ಯಃ, ಆರ್ಚಿಷ್ಯತಮ್, ಆರ್ಚಿಷ್ಯತ। ಆರ್ಚಿಷ್ಯಮ್, ಆರ್ಚಿಷ್ಯಾವ, ಆರ್ಚಿಷ್ಯಾಮ।

ಧಾತು 10. ವ್ರಜ ಗತೌ (ಗತ್ಯರ್ಥಕವಾಗಿದೆ)– ಇದರಲ್ಲಿ 'ವ್ರಜ್' ಮಾತ್ರ ಉಳಿಯುತ್ತದೆ.

**ಲಟ್**: ರೂಪಗಳು: ವ್ರಜತಿ, ವ್ರಜತಃ ವೃಜನ್ತಿ। ವ್ರಜಸಿ, ವ್ರಜಥಃ, ವ್ರಜಥ। ವ್ರಜಾಮಿ, ವ್ರಜಾವಃ, ವ್ರಜಾಮಃ।

**ಲಿಟ್**: ಲಿಟ್‌ನಲ್ಲಿ ಧಾತುವಿಗೆ ದ್ವಿತ್ವ ಮೊದಲಾದ ಕಾರ್ಯಗಳಾಗಿ ಕೆಳಗಿನಂತೆ ರೂಪಗಳಾಗುತ್ತವೆ. ರೂಪಗಳು; ವವ್ರಾಜ, ವವ್ರಜತುಃ, ವವ್ರಜುಃ। ವವ್ರಜಿಥ, ವವ್ರಜಥುಃ, ವವ್ರಜ। ವವ್ರಾಜ/ವವ್ರಜ, ವವ್ರಜಿವ, ವವ್ರಜಿಮ।

**ಲುಟ್**: ರೂಪಗಳು: ವ್ರಜಿತಾ, ವ್ರಜಿತಾರೌ, ವ್ರಜಿತಾರಃ। ವ್ರಜಿತಾಸಿ, ವ್ರಜಿತಾಸ್ಥಃ, ವ್ರಜಿತಾಸ್ಥ। ವ್ರಜಿತಾಸ್ಮಿ, ವ್ರಜಿತಾಸ್ವಃ, ವ್ರಜಿತಾಸ್ಮಃ।

**ಲೃಟ್**: ರೂಪಗಳು: ವ್ರಜಿಷ್ಯತಿ, ವ್ರಜಿಷ್ಯತಃ, ವ್ರಜಿಷ್ಯನ್ತಿ। ವ್ರಜಿಷ್ಯಸಿ, ವ್ರಜಿಷ್ಯಥಃ, ವ್ರಜಿಷ್ಯಥ। ವ್ರಜಿಷ್ಯಾಮಿ, ವ್ರಜಿಷ್ಯಾವಃ, ವ್ರಜಿಷ್ಯಾಮಃ।

**ಲೋಟ್**: ರೂಪಗಳು: ವ್ರಜತು/ವ್ರಜತಾತ್, ವ್ರಜತಾಮ್, ವ್ರಜನ್ತು। ವ್ರಜ/ವ್ರಜತಾತ್, ವ್ರಜತಮ್, ವ್ರಜತ। ವ್ರಜಾನಿ, ವ್ರಜಾವ, ವ್ರಜಾಮ।

**ಲಙ್**: ರೂಪಗಳು: ಅವ್ರಜತ್, ಅವ್ರಜತಾಮ್, ಅವ್ರಜನ್। ಅವ್ರಜಃ, ಅವ್ರಜತಮ್, ಅವ್ರಜತ। ಅವ್ರಜಮ್, ಅವ್ರಜಾವ, ಅವ್ರಜಾಮ।

**ವಿಧಿಲಿಙ್**: ರೂಪಗಳು: ವ್ರಜೇತ್, ವ್ರಜೇತಾಮ್, ವ್ರಜೇಯುಃ। ವ್ರಜೇಃ, ವ್ರಜೇತಮ್, ವ್ರಜೇತ। ವ್ರಜೇಯಮ್, ವ್ರಜೇವ, ವ್ರಜೇಮ।

**ಆಶೀರ್ಲಿಙ್**: ರೂಪಗಳು: ವ್ರಜ್ಯಾತ್, ವ್ರಜ್ಯಾಸ್ತಾಮ್, ವ್ರಜ್ಯಾಸುಃ। ವ್ರಜ್ಯಾಃ, ವ್ರಜ್ಯಾಸ್ತಮ್, ವ್ರಜ್ಯಾಸ್ತ। ವ್ರಜ್ಯಾಸಮ್, ವ್ರಜ್ಯಾಸ್ವ, ವ್ರಜ್ಯಾಸ್ಮ.

**(ವೃದ್ಧಿಯನ್ನು ವಿಧಿಸುವ ಸೂತ್ರ)**

**ಸೂತ್ರ - 465. ವದ-ವ್ರಜ-ಹಲನ್ತಸ್ಯಾಚಃ (7.2.3)**

ವೃತ್ತಿಃ-ಏಷಾಮ್ ಅಚಃ ವೃದ್ಧಿಃ ಸಿಚಿ ಪರಸ್ಮೈಪದೇಷು। ಅವ್ರಾಜೀತ್। ಅವ್ರಜಿಷ್ಯತ್। ಕಟೆ ವರ್ಷಾವರಣಯೋಃ। 11। ಕಟತಿ। ಚಕಾಟ। ಚಕಟತುಃ। ಕಟಿತಾ। ಕಟಿಷ್ಯತಿ। ಕಟತು। ಅಕಟತ್। ಕಟೇತ್। ಕಟ್ಯಾತ್।

ಪ. ಛೇ. – ವದ–ವ್ರಜ–ಹಲನ್ತಸ್ಯ, ಅಚಃ।

ಅ. ವೃ.–"ಸಿಚಿ ವೃದ್ಧಿಃ ಪರಸ್ಮೈಪದೇಷು" ಎಂಬ ಸೂತ್ರವೂ ಅನುವೃತ್ತವಾಗುತ್ತದೆ. ಇಲ್ಲಿ "ಅಂಗಸ್ಯ" ಎಂಬುದು ಅಧಿಕಾರ ಸೂತ್ರವಾಗಿದೆ.

ಅರ್ಥ–ವದ್,ವ್ರಜ್ ಮತ್ತು ಹಲನ್ತ ಧಾತುಗಳ ಅಂಗದ ಅವಯವದ 'ಅಚ್' ಗೆ ವೃದ್ಧಿ ಬರುತ್ತದೆ – 'ಸಿಚ್' ನ್ನು ಆದಿಯಲ್ಲಿ ಉಳ್ಳ ಪರಸ್ಮೈ ಪದವು ಪರದಲ್ಲಿದ್ದಾಗ.

ವಿಶೇಷ: "ಹಲನ್ತಸ್ಯ" ಎಂಬುದರಿಂದಲೇ ಕಾರ್ಯವು ಆಗುತ್ತಿರುವಾಗ, ವದ್, ವ್ರಜ್ ಧಾತುಗಳನ್ನು ಯಾಕೆ ಸೂತ್ರದಲ್ಲಿ ಪ್ರತ್ಯೇಕವಾಗಿ ಸೇರಿಸಬೇಕು ಎಂಬುದು ಇಲ್ಲಿ ಪ್ರಶ್ನೆ. ಸಮಾಧಾನ ಹೀಗಿದೆ. ಏನೆಂದರೆ ಈ ಧಾತುಗಳನ್ನು ಪ್ರತ್ಯೇಕವಾಗಿ ಅಲ್ಲಿ ಸೇರಿಸದಿದ್ದರೆ, "ಅತೋ ಹಲಾದೇರ್ಲಘೋಃ" ಎಂಬ ಸೂತ್ರದಿಂದ ವೈಕಲ್ಪಿಕ ವೃದ್ಧಿಯು ಬರುತ್ತಿತ್ತು. ಅದನ್ನು ತಪ್ಪಿಸಿ ನಿತ್ಯವಾಗಿ ವೃದ್ಧಿ ಬರಬೇಕೆಂಬ ದೃಷ್ಟಿಯಿಂದ ಪ್ರತ್ಯೇಕವಾಗಿ ಹೇಳಲಾಗಿದೆ.

**ಲುಙ್**: ಉದಾ– ಅವ್ರಾಜೀತ್– ಪ್ರಥಮಪುರುಷ ಏಕವಚನದಲ್ಲಿ ವ್ರಜ್ ಧಾತುವಿನ ನಂತರ ಲುಙ್ ಬಂದಮೇಲೆ ಧಾತುವಿಗೆ ಪೂರ್ವದಲ್ಲಿ ಅಡಾಗಮವು ಬರುತ್ತದೆ. ನಂತರ 'ತಿಪ್' ಪ್ರತ್ಯಯವನ್ನು ಸೇರಿಸಿದಾಗ, ಸಾರ್ವಧಾತುಕ ಸಂಜ್ಞೆ ಬಂದು ಧಾತುವಿನ ನಂತರ 'ಶಪ್(ಅ)' ಪ್ರತ್ಯಯವನ್ನು ಸೇರಿಸಬೇಕಾಗಿದ್ದಾಗ, ಅದನ್ನು ಬಾಧಿಸಿ 'ಚ್ಲಿ' ಸೇರಿಸಿ ಅದಕ್ಕೆ 'ಸಿಚ್(ಸ್)' ಆದೇಶವನ್ನು ವಿಧಿಸಿ ಅ+ವ್ರಜ್+ಸ್+ತಿ ಎಂದಿದ್ದಾಗ, 'ತಿ' ಯಲ್ಲಿನ 'ಇ' ಕಾರಕ್ಕೆ "ಇತಶ್ಚ" ಎಂಬುದರಿಂದ ಲೋಪ ಬಂದು ಅ+ವ್ರಜ್+ಸ್+ತ್ ಎಂದಿದ್ದಾಗ, ವಲಾದಿ ಪ್ರತ್ಯಯಕ್ಕೆ 'ಇಟ್(ಇ)' ಆಗಮ ಬಂದು, "ಅಸ್ತಿಸಿಚೋऽಪೃಕ್ತೇ" ಎಂಬ ಸೂತ್ರದಿಂದ 'ಈಟ್'(ಈ) ಆಗಮ ಬಂದು ಅ+ವ್ರಜ್+ಇಸ್+ಈ+ತ್ ಎಂದಿರುತ್ತದೆ. ಈಗ ಪ್ರಕೃತ ಸೂತ್ರದಿಂದ ವ್ರಜ್ ನಲ್ಲಿರುವ ಹ್ರಸ್ವ 'ಅ'ಕಾರಕ್ಕೆ ವೃದ್ಧಿ ಬಂದು ಅವ್ರಾಜ್+ಇಸ್+ ಈತ್ ಎಂದಿರುತ್ತದೆ. "ಇಟಈಟಿ" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬಂದು, ಅವ್ರಾಜ್+ಇ+ಈತ್ ಎಂದಿದ್ದಾಗ, "ಸಿಜ್ ಲೋಪ ಏಕಾದೇಶೇ ಸಿದ್ಧೋ ವಾಚ್ಯಃ" ಎಂಬ ವಾರ್ತಿಕದಿಂದ ಸವರ್ಣದೀರ್ಘ ಬಂದು ಅವ್ರಾಜೀತ್ ಎಂಬ ರೂಪವು ಸಿದ್ಧವಾಗುತ್ತದೆ.

ವಿಶೇಷ: ಲುಙ್ 'ಲ್' ಕಾರದ ಎಲ್ಲ ರೂಪಗಳಲ್ಲೂ ಪ್ರಕೃತ ಸೂತ್ರದಿಂದ ವೃದ್ಧಿಯು ಬರುತ್ತದೆ. 'ಈಟ್(ಈ)' ಆಗಮವು ಮಾತ್ರ 'ತಿಪ್' ಮತ್ತು 'ಸಿಪ್' ಗಳಿದ್ದಾಗ ಮಾತ್ರ ಬರುತ್ತದೆ. ಯಾಕೆಂದರೆ 'ಸಿಚ್' ಗೆ ಪರದಲ್ಲಿ ಅಪೃಕ್ತವಾದ 'ಹಲ್' 'ತ್' ಮತ್ತು 'ಸ್' ಗಳು ಇರುವಾಗಲೇ ಕೂಡುತ್ತವೆ. ಬೇರೆ ರೂಪಗಳಲ್ಲಿ 'ಇಟ್' ಆಗಮ ಬರುತ್ತದೆ. ಮತ್ತು

'ಸ್' ಕಾರಕ್ಕೆ ಷತ್ವವೂ ಬರುತ್ತದೆ. 'ತ್' ವರ್ಗವು ಪರದಲ್ಲಿದ್ದಾಗ, ಷ್ಟುತ್ವವು ಬರುತ್ತದೆ. 'ಅಚ್' ವರ್ಣವಿದ್ದಾಗ, ಕೇವಲ ಅಕ್ಷರಜೋಡಣೆಯಾಗುತ್ತದೆ. ರೂಪಗಳು: ಅವ್ರಾಜೀತ್, ಅವ್ರಾಜಿಷ್ಟಾಮ್, ಅವ್ರಾಜಿಷುಃ। ಅವ್ರಾಜೀಃ, ಅವ್ರಾಜಿಷ್ಟಮ್, ಅವ್ರಾಜಿಷ್ಟ। ಅವ್ರಾಜಿಷಮ್, ಅವ್ರಾಜಿಷ್ವ, ಅವ್ರಾಜಿಷ್ಮ।

**ಲೃಙ್**: ರೂಪಗಳು: ಅವ್ರಜಿಷ್ಯತ್, ಅವ್ರಜಿಷ್ಯತಾಮ್, ಅವ್ರಜಿಷ್ಯನ್। ಅವ್ರಜಿಷ್ಯಃ, ಅವ್ರಜಿಷ್ಯತಮ್, ಅವ್ರಜಿಷ್ಯತ। ಅವ್ರಜಿಷ್ಯಮ್, ಅವ್ರಜಿಷ್ಯಾವ, ಅವ್ರಜಿಷ್ಯಾಮ।

ಧಾತು 11. ಕಟೆ ವರ್ಷಾವರಣಯೋಃ (ಮಳೆಯಾಗುವುದು ಮತ್ತು ಮುಚ್ಚುವುದು)– ಇದರಲ್ಲಿ ಕಟ್ ಮಾತ್ರ ಉಳಿಯುತ್ತದೆ.

**ಲಟ್**: 'ಕಟ್' ಧಾತುವಿನ ನಂತರ ಲಟ್ 'ಲ್' ಕಾರ, ಅದಕ್ಕೆ ತಿಪ್ ಆದೇಶ ನಂತರ ಧಾತುವಿನ ಪರದಲ್ಲಿ 'ಶಪ್(ಅ)' ಬಂದು ಕಟ್+ಅ+ತಿ=ಕಟತಿ ಎಂದು ರೂಪವಾಗುತ್ತದೆ. ರೂಪಗಳು: ಕಟತಿ, ಕಟತಃ, ಕಟನ್ತಿ। ಕಟಸಿ, ಕಟಥಃ, ಕಟಥ। ಕಟಾಮಿ, ಕಟಾವಃ, ಕಟಾಮಃ।

**ಲಿಟ್**: ಹಿಂದಿನಂತೆಯೇ ದ್ವಿತ್ವಾದಿಗಳು ಆಗಿ ಕಕಟ್+ಅ ಎಂದಿದ್ದಾಗ, "ಕುಹೋಶ್ಚುಃ" ಎಂಬ ಸೂತ್ರದಿಂದ ಅಭ್ಯಾಸದ 'ಕ್' ಕಾರಕ್ಕೆ 'ಚ್' ಕಾರ ಬಂದು ಉಪಧಾವೃದ್ಧಿಯಾದಮೇಲೆ ಚಕಾಟ ಎಂದು ರೂಪವಾಗುತ್ತದೆ.

ರೂಪಗಳು: ಚಕಾಟ, ಚಕಟತುಃ, ಚಕಟುಃ। ಚಕಟಿಥ, ಚಕಟಥುಃ, ಚಕಟ। ಚಕಾಟ/ ಚಕಟ, ಚಕಟಿವ, ಚಕಟಿಮ।

**ಲುಟ್**: ರೂಪಗಳು: ಕಟಿತಾ, ಕಟಿತಾರೌ, ಕಟಿತಾರಃ। ಕಟಿತಾಸಿ, ಕಟಿತಾಸ್ಥಃ, ಕಟಿತಾಸ್ಥ। ಕಟಿತಾಸ್ಮಿ, ಕತಿತಾಸ್ವಃ, ಕಟಿತಾಸ್ಮಃ।

**ಲೃಟ್**: ರೂಪಗಳು: ಕಟಿಷ್ಯತಿ, ಕಟಿಷ್ಯತಃ, ಕಟಿಷ್ಯನ್ತಿ। ಕಟಿಷ್ಯಸಿ, ಕಟಿಷ್ಯಥಃ, ಕಟಿಷ್ಯಥ। ಕಟಿಷ್ಯಾಮಿ, ಕಟಿಷ್ಯಾವಃ, ಕಟಿಷ್ಯಾಮಃ।

**ಲೋಟ್**: ರೂಪಗಳು ಕಟತು/ಕಟತಾತ್, ಕಟತಾಮ್, ಕಟನ್ತು। ಕಟ/ಕಟತಾತ್, ಕಟತಮ್, ಕಟತ। ಕಟಾನಿ, ಕಟಾವ, ಕಟಾಮ।

**ಲಙ್**: ರೂಪಗಳು: ಅಕಟತ್, ಅಕಟತಾಮ್, ಅಕಟನ್। ಅಕಟಃ, ಅಕಟತಮ್, ಅಕಟತ। ಅಕಟಮ್, ಅಕಟಾವ, ಅಕಟಾಮ।

**ವಿಧಿಲಿಙ್**: ರೂಪಗಳು: ಕಟೇತ್, ಕಟೇತಾಮ್, ಕಟೇಯುಃ। ಕಟೇಃ ಕಟೇತಮ್, ಕಟೇತ। ಕಟೇಯಮ್, ಕಟೇವ, ಕಟೇಮ।

**ಆಶೀರ್ಲಿಙ್:** ರೂಪಗಳು: ಕಟ್ಯಾತ್, ಕಟ್ಯಾಸ್ತಾಮ್, ಕಟ್ಯಾಸುಃ। ಕಟ್ಯಾಃ ಕಟ್ಯಾಸ್ತಮ್, ಕಟ್ಯಾಸ್ತ। ಕಟ್ಯಾಸಮ್, ಕಟ್ಯಾಸ್ವ, ಕಟ್ಯಾಸ್ಮ।

**(ವೃದ್ಧಿಯನ್ನು ನಿಷೇಧಿಸುವ ಸೂತ್ರ)**

**ಸೂತ್ರ - 466. ಹ್ಮ್ಯನ್ತಕ್ಷಣಶ್ವಸ-ಜಾಗೃ-ಣಿ-ಶ್ವ್ಯೇದಿತಾಮ್ (7.2.4)**

ವೃತ್ತಿಃ-ಹ-ಮ-ಯಾಂತಸ್ಯ ಕ್ಷಣಾದೇಃ ಣ್ಯನ್ತಸ್ಯ ಶ್ವಯತೇಃ ಏದಿತಶ್ಚ ವೃದ್ಧಿಃ ನ ಇಡಾದೌ ಸಿಚಿ। ಅಕಟೀತ್। ಅಕಟಿಷ್ಯತ್। ಗುಪೂ ರಕ್ಷಣೇ।12।

ಪ. ಛೇ. - ಹ್ಮ್ಯನ್ತ-ಕ್ಷಣ-ಶ್ವಸ-ಜಾಗೃ-ಣಿ-ಶ್ವಿ-ಏದಿತಾಮ್।

ಅ. ವೃ.- "ಸಿಚಿವೃದ್ಧಿಃ ಪರಸ್ಮೈಪದೇಷು" ಎಂಬ ಸೂತ್ರವು ಅನುವೃತ್ತವಾಗುತ್ತದೆ. ಮತ್ತು "ನೇಟಿ" ಎಂಬ ಸೂತ್ರದಿಂದ 'ನ' ಎಂಬ ಪದವು ಅನುವೃತ್ತವಾಗುತ್ತದೆ. "ಅಂಗಸ್ಯ" ಎಂಬುದು ಅಧಿಕಾರಸೂತ್ರ.

ಅರ್ಥ- ಇಡಾದಿ ಸಿಚ್ ಗೆ ಪರದಲ್ಲಿರುವ ಹ್, ಮ್, ಯ್ ಕಾರಾನ್ತ ಧಾತುಗಳು, ಹಾಗೂ ಕ್ಷಣ್, ಶ್ವಸ್, ಜಾಗೃ, ಣಿಚ್ ಪ್ರತ್ಯಯಾನ್ತ ಧಾತುಗಳು, ಮತ್ತು ಶ್ವಿ ಹಾಗೂ ಏದಿತ್ ಧಾತುಗಳ ಅಂಗಕ್ಕೆ ವೃದ್ಧಿಯು ಬರುವುದಿಲ್ಲ.

ವಿಶೇಷ: ಇಲ್ಲಿ ವರದರಾಜರು ಕಟ್ ಧಾತುವಿನ ಲುಙ್ ಮತ್ತು ಲೃಙ್ 'ಲ್' ಕಾರಗಳ ರೂಪವನ್ನು ಮಾತ್ರ ವಿವರಿಸಿದ್ದಾರೆ.

**ಲುಙ್:** ಉದಾ- ಅಕಟೀತ್- ಪ್ರಥಮ ಪುರುಷ ಏಕವಚನದಲ್ಲಿ ಕಟ್ ಧಾತುವಿನಮೇಲೆ 'ಲುಙ್' ಲ್'ಕಾರ ಬಂದಮೇಲೆ ಧಾತುವಿಗೆ ಅಡಾಗಮ ಬಂದು ನಂತರ ಲಾದೇಶವಾದ 'ತಿಪ್(ತಿ)'ಬಂದು 'ತಿ' ನಲ್ಲಿರುವ 'ಇ' ಕಾರವು "ಇತಶ್ಚ" ಎಂಬ ಸೂತ್ರದಿಂದ ಲೋಪ ಹೊಂದಿ, ಧಾತುವಿನ ನಂತರ ಬರಬೇಕಾದ 'ಶಪ್(ಅ)'ನ್ನು ಬಾಧಿಸಿ 'ಚ್ಲಿ' ಬಂದು, ಅದಕ್ಕೆ 'ಸಿಚ್(ಸ್)' ಆದೇಶ ಬಂದು, 'ಸಿಚ್' ನ 'ಸ್' ಕಾರಕ್ಕೆ 'ಇಟ್(ಇ)' ಆಗಮ ಬಂದು, ಅಪೃಕ್ತವಾದ 'ತ್' ಗೆ 'ಈಟ್(ಈ)' ಆಗಮ ಬಂದು, ಅಕಟ್+ಇ+ಸ್+ಈ+ತ್ ಎಂದಿರುತ್ತದೆ. "ವದ-ವ್ರಜ- ಹಲನ್ತಸ್ಯಾಚಃ" ಎಂಬ ಸೂತ್ರದಿಂದ

ನಿತ್ಯವಾಗಿ ಬರಬೇಕಾಗಿದ್ದ ವೃದ್ಧಿಯನ್ನು ಬಾಧಿಸಿ "ಅತೋ ಹಲಾದೇರ್ಲಘೋಃ" ಎಂಬ ಸೂತ್ರದಿಂದ ವೃದ್ಧಿಯು ವಿಕಲ್ಪವಾಗಿ ಬರಬೇಕಾಗಿತ್ತು. ಇದನ್ನು ಪ್ರಕೃತ ಸೂತ್ರವು ಬಾಧಿಸಿದ ನಂತರ "ಇಟ ಈಟಿ" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬಂದು ಇ ಮತ್ತು ಈಗಳಿಗೆ ಸವರ್ಣದೀರ್ಘ ಬಂದು,ಅಕಟ್+ಈತ್=ಅಕಟೀತ್ ಎಂಬ ರೂಪವು ಸಿದ್ಧಿಸುತ್ತದೆ. ರೂಪಗಳು: ಅಕಟೀತ್, ಅಕಟಿಷ್ಟಾಮ್, ಅಕಟಿಷುಃ।ಅಕಟೀಃ, ಅಕಟಿಷ್ಟಮ್, ಅಕಟಿಷ್ಟ। ಅಕಟಿಷಮ್, ಅಕಟಿಷ್ವ, ಅಕಟಿಷ್ಮ।

**ಲೃಙ್:** ರೂಪಗಳು: ಅಕಟಿಷ್ಯತ್, ಅಕಟಿಷ್ಯತಾಮ್, ಅಕಟಿಷ್ಯನ್। ಅಕಟಿಷ್ಯಃ, ಅಕಟಿಷ್ಯತಮ್, ಅಕಟಿಷ್ಯತ। ಅಕಟಿಷ್ಯಮ್, ಅಕಟಿಷ್ಯಾವ, ಅಕಟಿಷ್ಯಾಮ।

ಧಾತು 12. ಗುಪೂ ರಕ್ಷಣೇ (ರಕ್ಷಿಸುವುದು) ಇದರಲ್ಲಿ 'ಗುಪ್' ಮಾತ್ರ ಉಳಿಯುತ್ತದೆ. ಈ ಧಾತುವು'ಊದಿತ್' ಆಗಿರೋಣದರಿಂದ ವೈಕಲ್ಪಿಕವಾಗಿ 'ಇಟ್' ಆಗಮ

ಮೊದಲಾದವುಗಳು ಬರುತ್ತವೆ. ಈ ಧಾತುವಿಗೆ ಸ್ವಾರ್ಥದಲ್ಲಿ 'ಆಯ' ಪ್ರತ್ಯಯವು ಬರುತ್ತದೆ.

**(ಸ್ವಾರ್ಥದಲ್ಲಿ ಆಯ ಪ್ರತ್ಯವನ್ನು ವಿಧಿಸುವ ಸೂತ್ರ)**

**ಸೂತ್ರ - 467. ಗುಪೂ-ಧೂಪ-ವಿಚ್ಛಿ-ಪಣಿ-ಪನಿಭ್ಯ ಆಯಃ (3.1.28)**

ವೃತ್ತಿಃ-ಏಭ್ಯಃ ಆಯ-ಪ್ರತ್ಯಯಃ ಸ್ಯಾತ್ ಸ್ವಾರ್ಥೇ।

ಪ. ಛೇ. - ಗುಪೂ-ಧೂಪ-ವಿಚ್ಛಿ-ಪಣಿ-ಪನಿಭ್ಯಃ, ಆಯಃ।

ಅ. ವೃ- "ಧಾತೋರೇಕಾಚೋ ಹಲಾದೇಃ ಕ್ರಿಯಾಸಮಭಿಹಾರೇ ಯಙ್" ಎಂಬ ಸೂತ್ರದಿಂದ 'ಧಾತೋಃ' ಎಂಬುದನ್ನು ಧಾತುಭ್ಯಃ ಎಂದು ವಚನ ವಿಪರಿಣಾಮ ಮಾಡಿ ಅನುವೃತ್ತಿ ಮಾಡಲಾಗಿದೆ.

ಅರ್ಥ- ಗುಪೂ-ಧೂಪ-ವಿಚ್ಛಿ-ಪಣಿ-ಪನಿ ಈ ಧಾತುಗಳ ನಂತರ ಸ್ವಾರ್ಥದಲ್ಲಿ ಅ- ಕಾರಾನ್ತವಾದ 'ಆಯ' ಪ್ರತ್ಯಯವು ಬರುತ್ತದೆ.

ಅನಿರ್ದಿಷ್ಟಾರ್ಥಾಃ ಪ್ರತ್ಯಯಾಃ ಸ್ವಾರ್ಥೇ ಭವನ್ತಿ. ವಿಶೇಷಾರ್ಥವಿಲ್ಲದೇ ಪ್ರತ್ಯಯದ ಅರ್ಥವನ್ನು ಮಾತ್ರ ಹೇಳುವಂಥವು ಸ್ವಾರ್ಥದಲ್ಲಿರುತ್ತವೆ. ಇಲ್ಲಿ 'ಆಯ' ಪ್ರತ್ಯಯವು ಸ್ವಾರ್ಥದಲ್ಲಿಯೇ ಇದೆ.

ವಿವರಣೆ- ಗುಪ್ ಧಾತುವಿಗೆ 'ಆಯ' ಪ್ರತ್ಯಯವನ್ನು ಸೇರಿಸಿದಮೇಲೆ ಗುಪ್+ಆಯ ಎಂದು ಇರುತ್ತದೆ. "ಆರ್ಧಧಾತುಕಂ ಶೇಷಃ" ಎಂಬ ಸೂತ್ರದಿಂದ ಆರ್ಧಧಾತುಕ ಸಂಜ್ಞೆಯು ಬರುತ್ತದೆ. "ಪುಗನ್ತ ಲಘೂಪಧಸ್ಯ ಚ" ಎಂಬಸೂತ್ರದಿಂದ ಉಪಧೆಯಾದ, 'ಉ' ಕಾರಕ್ಕೆ ಗುಣ ಬಂದು ಗೋಪ್+ಆಯ=ಗೋಪಾಯ ಎಂದಾಗುತ್ತದೆ. ಮುಂದಿನ ಸೂತ್ರದಲ್ಲಿ ಈ ರೂಪಕ್ಕೆ ಧಾತು ಸಂಜ್ಞೆಯನ್ನು ವಿಧಿಸಲಾಗುತ್ತದೆ.

**(ಧಾತುಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ - 468. ಸನಾದ್ಯನ್ತಾ ಧಾತವಃ (3.1.32)**

ವೃತ್ತಿಃ-ಸನಾದಯಃ ಕಮೇಃ ಣಿಙನ್ತಾಃ ಪ್ರತ್ಯಯಾ ಅನ್ತೇ ಯೇಷಾಂ ತೇ ಧಾತುಸಂಜ್ಞಕಾಃ। ಧಾತುತ್ವಾತ್ ಲಡಾದಯಃ। ಗೋಪಾಯತಿ।

ಪ. ಛೇ. - ಸನಾದ್ಯನ್ತಾಃ, ಧಾತವಃ।

ಸನ್-ಕ್ಯಚ್-ಕಾಮ್ಯಚ್=ಕ್ಯಙ್-ಕ್ಯಷೋಽಥಾಚಾರಕ್ವಿಬ್-ಣಿಜ್-ಯಙಸ್ತಥಾ।

ಯಗಾಯ- ಈಯಙ್-ಣಿಙ್ ಚೇತಿ ದ್ವಾದಶಾಮೀ ಸನಾದಯಃ॥

ಈ ಮೇಲಿನ 12 ಪ್ರತ್ಯಯಗಳಿಂದ ಕೂಡಿದ (ಸನಾದಿ) ರೂಪಗಳಿಗೆ ಪ್ರಕೃತ ಸೂತ್ರದಿಂದ ಧಾತು ಸಂಜ್ಞೆಯು ಬರುತ್ತದೆ. ಧಾತುವಾಗಿರೋಣದ್ದರಿಂದ ಇವುಗಳಿಗೆ ದಶ 'ಲ್' ಕಾರಗಳೂ ಬರುತ್ತವೆ.

**ಲಟ್**: ಉದಾ-ಗೋಪಾಯತಿ- ಪ್ರಥಮಪುರುಷ ಏಕವಚನದಲ್ಲಿ ಗೋಪಾಯ

ಎಂಬುದಕ್ಕೆ ಧಾತುಸಂಜ್ಞೆ ಬಂದಮೇಲೆ, 'ತಿಪ್(ತಿ)' ಆದೇಶ ಬಂದಮೇಲೆ 'ಶಪ್(ಅ)' ಬಂದು ಸಾರ್ವಧಾತುಕ ಸಂಜ್ಞೆಯನ್ನು ಪಡೆದಮೇಲೆ ಗೋಪಾಯ+ಅ+ತಿ ಎಂದಿರುತ್ತದೆ. "ಅತೋಗುಣೇ" ಎಂಬ ಸೂತ್ರದಿಂದ ಪರರೂಪ ಬಂದು ಗೋಪಾಯ+ತಿ=ಗೋಪಾಯತಿ ಎಂಬ ರೂಪವು ಸಿದ್ಧವಾಗುತ್ತದೆ.

ರೂಪಗಳು: ಗೋಪಾಯತಿ। ಗೋಪಾಯತಃ, ಗೋಪಾಯನ್ತಿ। ಗೋಪಾಯಸಿ, ಗೋಪಾಯಥಃ, ಗೋಪಾಯಥ। ಗೋಪಾಯಾಮಿ, ಗೋಪಾಯಾವಃ, ಗೋಪಾಯಾಮಃ॥

**(ವೈಕಲ್ಪಿಕವಾಗಿ ಆಯ ಮೊದಲಾದ ಪ್ರತ್ಯಯಗಳನ್ನು ವಿಧಿಸುವ ಸೂತ್ರ)**

**ಸೂತ್ರ - 469. ಆಯಾದಯ ಆರ್ಧಧಾತುಕೇ ವಾ (3.1.31)**

ವೃತ್ತಿಃ-ಆರ್ಧಧಾತುಕ-ವಿವಕ್ಷಾಯಾಂ ಆಯಾದಯೋ ವಾ ಸ್ಯುಃ।

(ವಾ॥ ಕಾಸ್ಯನೇಕಾಚ್ ಆಮ್ ವಕ್ತವ್ಯಃ ಲಿಟಿ)। ಆಸ್ಕಾಸೋಃ ಆಂ ವಿಧಾನಾತ್ ಮಸ್ಯ ನ ಇತ್ವಮ್।

ಪ. ಛೇ. - ಆಯಾದಯಃ, ಆರ್ಧಧಾತುಕೇ, ವಾ।

ಅರ್ಥ- ಆರ್ಧಧಾತುಕ (ಲಟ್-ಲಙ್-ಲಿಙ್-ಲೋಟ್ ಗಳನ್ನು ಹೊರತುಪಡಿಸಿದ 'ಲ್' ಕಾರಗಳು) ಪ್ರತ್ಯಯದ ವಿವಕ್ಷೆ ಇದ್ದಾಗ, 'ಆಯ' ಮೊದಲಾದ ಎಂದರೆ-(ಆಯ, ಈಯಙ್ ಮತ್ತು ಣಿಙ್) ಪ್ರತ್ಯಯಗಳು ವಿಕಲ್ಪದಿಂದ ವಿಧಿಸಲ್ಪಡುತ್ತವೆ.

ವಿಶೇಷ: ಲಿಟ್, ತಾಸಿ(ಲುಟ್), ಸ್ಯ(ಲೃಟ್), ಲಿಙ್, ಚ್ಲಿ(ಲುಙ್), ಸ್ಯ(ಲೃಙ್) ಇವುಗಳಿಗೆ ಆರ್ಧಧಾತುಕ ಸಂಜ್ಞೆಯು ಬರುತ್ತದೆ. ಈ ಸೂತ್ರದಿಂದ ಆಯಾದಿ ಪ್ರತ್ಯಯಗಳು ವಿಕಲ್ಪದಿಂದ ಬರುವುದರಿಂದ ಎರಡೆರಡು ರೂಪಗಳು ಬರುತ್ತವೆ ಎಂದು ತಿಳಿಯುತ್ತದೆ.

ವಾರ್ತಿಕ- ಕಾಸ್ಯನೇಕಾಚ್ ಆಮ್ ವಕ್ತವ್ಯಃ ಲಿಟಿ-

ಅರ್ಥ- 'ಲಿಟ್' ಪರದಲ್ಲಿದ್ದಾಗ, ಕಾಸ್ ಮತ್ತು ಅನೇಕಾಚ್ ಧಾತುಗಳನಂತರ 'ಆಮ್' ಪ್ರತ್ಯಯವು ವಿಧಿಸಲ್ಪಡುತ್ತದೆ.

ವಿಶೇಷ: 'ಆಮ್' ಪ್ರತ್ಯಯವು 'ಮಿತ್' ಎಂದು ಭಾವಿಸಿದರೆ 'ಆಸ್' 'ಕಾಸ್' ಗಳನಂತರವೂ "ಮಿದಚೋನ್ತ್ಯಾತ್ ಪರಃ" ಎಂಬ ಸೂತ್ರದ ನಿಯಮವನ್ನು ಪಾಲಿಸಬೇಕಾಗುತ್ತದೆ. ಆದರೆ ಆ ರೀತಿಯ ಪ್ರಯೋಗವಿಲ್ಲವಾದ್ದರಿಂದ 'ಆಮ್'ನಲ್ಲಿರುವ 'ಮ್' ಕಾರವು 'ಇತ್' ಆಗಿ ಭಾವಿಸಲ್ಪಟ್ಟಿಲ್ಲ. ಆದ್ದರಿಂದ 'ಆಸ್' 'ಕಾಸ್' ಮತ್ತು ಗೋಪಾಯ ಮೊದಲಾದ ಧಾತುಗಳ ನಂತರವೇ 'ಆಮ್' ಬರುತ್ತದೆ.

**ಲಿಟ್**: ಗೋಪಾಯ ಧಾತುವಿನ ನಂತರ ತಿಪ್ ಆದೇಶ ಬಂದು ಅದಕ್ಕೆ ಅಭಿನವ ಆಖ್ಯಾತ ಪ್ರತ್ಯಯವಾದ ಣಲ್(ಅ)' ಆದೇಶವಾಗಿ ಬಂದು ಗೋಪಾಯ+ಅ ಎಂದಿರುತ್ತದೆ. ಪ್ರಕೃತ ವಾರ್ತಿಕದಿಂದ ಧಾತುವಿನ ಪರದಲ್ಲಿ ಆಮ್ ಸೇರಿಸಿದಾಗ ಗೋಪಾಯ+ಆಮ್+ಅ ಎಂದಿರುತ್ತದೆ. ಆಮ್ ಗೆ ಆರ್ಧಧಾತುಕ ಸಂಜ್ಞೆಯು ಬರುತ್ತದೆ.

**(ಹ್ರಸ್ವ ಅ– ಕಾರಕ್ಕೆ ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ – 470. ಅತೋ ಲೋಪಃ (6.4.49)**

ವೃತ್ತಿಃ–ಆರ್ಧಧಾತುಕ ಉಪದೇಶೇ ಯತ್ ಅದನ್ತಂ ತಸ್ಯ ಅತಃ ಲೋಪಃ ಆರ್ಧ ಧಾತುಕೇ।

ಪ. ಛೇ. – ಅತಃ, ಲೋಪಃ।

ಅ. ವೃ.– ಅನುದಾತ್ತೋಪದೇಶ–ವನತಿ–ತನೋತ್ಯಾದೀನಾಮನುನಾಸಿಕ ಲೋಪೋ ಝಲಿ ಕ್ಙಿತಿ" ಎಂಬ ಸೂತ್ರದಿಂದ 'ಉಪದೇಶ' ಎಂಬ ಪದವನ್ನು ಸಪ್ತಮಿ ವಿಭಕ್ತಿಯಲ್ಲಿ ವಿಪರಿಣಾಮಗೊಳಿಸಿ ಅನುವೃತ್ತಿ ಮಾಡಲಾಗಿದೆ. "ಆರ್ಧಧಾತುಕೇ" ಮತ್ತು "ಅಂಗಸ್ಯ' ಎಂಬವು ಅಧಿಕಾರಸೂತ್ರಗಳಾಗಿವೆ.

ಅರ್ಥ– ಉಪದೇಶದಲ್ಲಿ ಆರ್ಧಧಾತುಕ ಪ್ರತ್ಯಯದ ಅದನ್ತ ಅಂಗವಾದ ಹ್ರಸ್ವ ಅ– ಕಾರಕ್ಕೆ ಲೋಪವು ಬರುತ್ತದೆ– ಆರ್ಧಧಾತುಕವು ಪರದಲ್ಲಿದ್ದಾಗ ಮಾತ್ರ.

**(ಕೃ, ಭೂ, ಅಸ್ ಗಳ 'ಲಟ್' ರೂಪದಿಂದ ಕೂಡಿದ ಅನುಪ್ರಯೋಗದ ಲಟ್ ರೂಪಗಳು)**

ಉದಾ– ಗೋಪಾಯಾಞ್ಚಕಾರ, ಗೋಪಾಯಾಮ್ ಬಭೂವ, ಗೋಪಾಯಾಮಾಸ– ಗೋಪಾಯ+ಆಮ್+ಣಲ್(ಅ) ಎಂದಿದ್ದಾಗ, ಗೋಪಾಯ ಎಂಬುದು ಆರ್ಧಧಾತುಕವಾಗಿ ಉಪದೇಶದ ಸಂದರ್ಭದಲ್ಲಿ ಅದನ್ತ ಅಂಗವಾಗಿದೆ. ಪರದಲ್ಲಿ ಆರ್ಧಧಾತುಕವಾದ 'ಆಮ್' ಪತ್ಯಯವೂ ಇದೆ. ಈಗ ಪ್ರಕೃತ ಸೂತ್ರದಿಂದ ಅನ್ತ್ಯ ಅ–ಕಾರ ಲೋಪವಾಗಿ ಗೋಪಾಯ್+ಆಮ್+ಅ ಎಂದಿದ್ದಾಗ–

**(ಆಮ್ ಗೆ ಪರದಲ್ಲಿರುವ ಪ್ರತ್ಯಯಕ್ಕೆ ಲುಕ್(ಲೋಪ) ಹೇಳುವ ಸೂತ್ರ)**

**ಸೂತ್ರ – 471. ಆಮಃ (2.4.81)**

ವೃತ್ತಿಃ– ಆಮಃ ಪರಸ್ಯ ಲುಕ್।

ಅ. ವೃ– " ಣ್ಯಕ್ಷತ್ರಿಯಾರ್ಷ ಞಿತಃ ಯೂನಿಲುಗಣಿಞೋಃ" ಎಂಬ ಸೂತ್ರದಿಂದ 'ಲುಕ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– ಆಮ್ ಗೆ ಪರದಲ್ಲಿರುವ ಪ್ರತ್ಯಯಕ್ಕೆ ಲುಕ್(ಲೋಪ) ಬರುತ್ತದೆ. ಗೋಪಾಯಾಮ್+ಅ ಎಂಬಲ್ಲಿ 'ಅ' ಕಾರವು 'ಆಮ್' ಪರಕವಾಗಿರೋಣದ್ದರಿಂದ 'ಲಿಟ್' 'ಲ್' ಕಾರದ 'ಅ (ಣಲ್)' ಪ್ರತ್ಯಯವು ಲೋಪವಾಗಿ ಗೋಪಾಯಾಮ್ ಎಂಬುದು ಮಾತ್ರ ಉಳಿಯುತ್ತದೆ.

**(ಕೃ, ಭೂ, ಅಸ್‌ಗಳನ್ನು ಅನುಪ್ರಯೋಗವಾಗಿ ವಿಧಿಸುವ ಸೂತ್ರ)**

**ಸೂತ್ರ – 472.ಕೃಞ್ಚಾನುಪ್ರಯುಜ್ಯತೇ ಲಿಟಿ (3.1.40)**

ವೃತ್ತಿಃ–ಆಮಂತಾತ್ ಲಿಟ್–ಪರಾಃ ಕೃ–ಭುವಃ ತಯೋಃ(?) ಅನುಪ್ರಯುಜ್ಯನ್ತೇ। ತೇಷಾಂ ದ್ವಿತ್ವಾದಿ।

ಪ. ಛೇ. – ಕೃಞ್, ಚ, ಅನುಪ್ರಯುಜ್ಯತೇ, ಲಿಟಿ।

ಅ. ವ್ಯ.– "ಕಾಸ್ ಪ್ರತ್ಯಯಾದಾಮಮನ್ತ್ರೇ ಲಿಟಿ" ಎಂಬ ಸೂತ್ರದಿಂದ 'ಆಮ್' ಎಂಬುದು ಪಞ್ಚಮೀ ವಿಭಕ್ತಿಯಲ್ಲಿ ವಿಪರಿಣಾಮ ಹೊಂದಿ 'ಆಮಃ' ಎಂದಾಗಿ ಅನುವೃತ್ತವಾಗಿದೆ.

ಅರ್ಥ– ಆಮ್ ಅನ್ನು ಅನ್ತವಾಗಿ ಉಳ್ಳ ಧಾತುವಿನ ನಂತರ 'ಲಿಟ್' 'ಲ್' ಕಾರದಿಂದ ಕೂಡಿದ ಕೃ, ಭೂ, ಮತ್ತು ಅಸ್ ಧಾತುಗಳಿಗೆ ಅನುಪ್ರಯೋಗ ವಿಧಿಸಲಾಗಿದೆ. (ಕೃ, ಭೂ, ಮತ್ತು ಅಸ್ ಧಾತುಗಳ ಲಿಟ್ ರೂಪಗಳು ಸೇರಿಸಲಾಗುತ್ತವೆ).

ವಿಶೇಷ: (ಕೃ, ಭೂ, ಮತ್ತು ಅಸ್ ಧಾತುಗಳ ಲಿಟ್ ರೂಪಗಳನ್ನು ಧಾತುವಿಗೆ ಸೇರಿಸಿದಮೇಲೂ ಆ ಧಾತುವಿಗೆ 'ಲಿಟ್' 'ಲ್' ಕಾರದ ಅರ್ಥವೇ ಬರುತ್ತದೆ.

**(ಅತ್ (ಅ) ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ – 473. ಉರತ್ (7.4.66)**

ವೃತ್ತಿಃ–ಅಭ್ಯಾಸ–ಋವರ್ಣಸ್ಯ ಅತ್(ಅ) ಸ್ಯಾತ್(ರ–ಪರಃ)। ವೃದ್ಧಿಃ । ಗೋಪಾಯಾಞ್ಚಕಾರ। ದ್ವಿತ್ವಾತ್ ಪರತ್ವಾತ್ ಯಣಿ ಪ್ರಾಪ್ತೇ–

ಪ. ಛೇ. – ಉಃ, ಅತ್।

ಅ. ವ್ಯ.– "ಅತ್ರಲೋಪೋಽಭ್ಯಾಸಸ್ಯ" ಎಂಬ ಸೂತ್ರದಿಂದ 'ಅಭ್ಯಾಸಸ್ಯ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– ಪ್ರತ್ಯಯವು ಪರದಲ್ಲಿದ್ದಾಗ, ಅಭ್ಯಾಸದ 'ಋ' ವರ್ಣಕ್ಕೆ 'ಅತ್' ಆದೇಶವು ರ–ಪರವಾಗಿ ಬರುತ್ತದೆ.

ಉದಾ– ಗೋಪಾಯಾಞ್ಚಕಾರ, ಗೋಪಾಯಾಂ ಚಕಾರ – ಲಿಟ್ 'ಲ್' ಕಾರದ ಪ್ರಥಮಪುರುಷ ಏಕವಚನದಲ್ಲಿ, ಹಿಂದೆ ಸಿದ್ಧವಾದ ಗೋಪಾಯಾಮ್ ಎಂಬ ರೂಪವಿದ್ದಾಗ, ಇದು 'ಮಾನ್ತ' ಕೃದನ್ತವಾಗಿದ್ದು, ಇದಕ್ಕೆ ಪ್ರಾತಿಪದಿಕ ಸಂಜ್ಞೆ ಬಂದಾಗ, ಇದಕ್ಕೆ 'ಸು' ಮೊದಲಾದ ವಿಭಕ್ತಿ ಪ್ರತ್ಯಯಗಳನ್ನು ಸೇರಿಸಿದಾಗ, "ಅವ್ಯಯಾದಾಪ್ ಸುಪಃ" ಎಂಬ ಸೂತ್ರದಿಂದ ವಿಭಕ್ತಿ ಪ್ರತ್ಯಯಗಳಿಗೆ ಲುಕ್(ಲೋಪ) ಬರುತ್ತದೆ. ಈ 'ಮಾನ್ತ' ಕೃದನ್ತ ಶಬ್ದಕ್ಕೆ "ಕೃನ್ಮೇಜನ್ತಃ" ಎಂಬ ಸೂತ್ರದಿಂದ ಅವ್ಯಯ ಸಂಜ್ಞೆಯು ಬರುತ್ತದೆ. "ಕೃಞ್ಚಾನುಪ್ರಯುಜ್ಯತೇ ಲಿಟಿ" ಎಂಬ ಸೂತ್ರದಿಂದ ಈ ಧಾತುವಿನ ಜೊತೆಗೆ ಕೃ, ಭೂ, ಅಸ್ ಧಾತುಗಳಲ್ಲಿ ಮೊದಲು 'ಕೃ' ಧಾತುವಿನ ಅನುಪ್ರಯೋಗ ಮಾಡಲಾಗಿ, ಗೋಪಾಯಾಮ್+ಕೃ+ಲಿಟ್ ಎಂದಿರುತ್ತದೆ. 'ಲಿಟ್' ಗೆ 'ತಿಪ್' ಆದೇಶ ಬಂದು, ಅದಕ್ಕೆ ಅಭಿನವ ಆಖ್ಯಾತ ಪ್ರತ್ಯಯವಾದ ಣಲ್(ಅ)' ಆದೇಶವಾಗಿ ಬಂದಾಗ, ಗೋಪಾಯಾಮ್+ಕೃ+ಅ ಎಂದಿರುತ್ತದೆ. 'ಕೃ' ಗೆ "ಲಿಟಿ ಧಾತೋರನಭ್ಯಾಸಸ್ಯ" ಎಂಬ ಸೂತ್ರದಿಂದ ದ್ವಿತ್ವ ಬಂದು, ಗೋಪಾಯಾಮ್+ಕೃ ಕೃ+ಅ ಎಂದಿರುತ್ತದೆ. ಮೊದಲನೇ 'ಕೃ'ಗೆ ಅಭ್ಯಾಸ ಸಂಜ್ಞೆ ಬಂದು ಪ್ರಕೃತ ಸೂತ್ರದಿಂದ 'ರ್'ಗೆ 'ಅತ್(ಅ)' ಆದೇಶ ರಪರವಾಗಿ (ಅರ್) ಬಂದು ಗೋಪಾಯಾಮ್+ಕರ್, ಕೃ+ಅ ಎಂದಿದ್ದಾಗ,

"ಹಲಾದಿಃ ಶೇಷಃ" ಎಂಬ ಸೂತ್ರದಿಂದ 'ಕರ್' ನಲ್ಲಿರುವ 'ಕ್' ಉಳಿದು ರೇಫವು ಲೋಪವಾಗುತ್ತದೆ. ಆಗ ಗೋಪಾಯಾಮ್+ಕಕೃ+ಅ ಎಂದಿರುತ್ತದೆ. "ಕುಹೋಶ್ಚುಃ" ಎಂಬ ಸೂತ್ರದಿಂದ ಅಭ್ಯಾಸದ 'ಕ್' ಕಾರಕ್ಕೆ 'ಚ್' ಕಾರವು ಆದೇಶವಾಗಿ ಬಂದು, ಗೋಪಯಾಮ್+ಚ+ಕೃ+ಅ ಎಂದಿರುತ್ತದೆ. ಗೋಪಾಯಾಮ್ ಎಂಬಲ್ಲಿರುವ 'ಮ್' ಕಾರಕ್ಕೆ "ಮೋಽನುಸ್ವಾರಃ" ಎಂಬುದರಿಂದ ಅನುಸ್ವಾರ ಬಂದು ಆ ಅನುಸ್ವಾರಕ್ಕೆ "ವಾ ಪದಾನ್ತಸ್ಯ" ಎಂಬುದರಿಂದ ವೈಕಲ್ಪಿಕ ಪರಸವರ್ಣ ಬಂದು 'ಞ್' ಕಾರವು ಆದೇಶವಾಗಿ ಬರುತ್ತದೆ. ಆಗ ಗೋಪಾಯಾಞ್ಚಕೃ ಎಂದಿರುತ್ತದೆ. ಈಗ 'ಋ' ಕಾರಕ್ಕೆ ವೃದ್ಧಿ(ಆರ್) ಬಂದು ಗೋಪಾಯಾಞ್ಚಕಾರ್+ಅ=ಗೋಪಾಯಾಂಚಕಾರ ಎಂದು ರೂಪವಾಗುತ್ತದೆ. ಅನುಸ್ವಾರ ಇದ್ದ ಪಕ್ಷದಲ್ಲಿ ಗೋಪಾಯಾಞ್ಚಕಾರ ಎಂದು ರೂಪವಾಗುತ್ತದೆ.

**(ಅಚ್ ಆದೇಶವಾವನ್ನು ನಿಷೇಧಿಸುವ ಸೂತ್ರ)**

**ಸೂತ್ರ – 474. ದ್ವಿರ್ವಚನೇಽಚಿ (1.1.59)**

ವೃತ್ತಿಃ–ದ್ವಿತ್ವನಿಮಿತ್ತೇ ಅಚಿ ಅಚಃ ಆದೇಶೋ ನ, ದ್ವಿತ್ವೇ ಕರ್ತವ್ಯೇ। ಗೋಪಾಯಾಞ್ಚಕ್ರತುಃ।

ಪ. ಛೇ. – ದ್ವಿರ್ವಚನೇ, ಅಚಿ।

ಅ. ವೃ–"ಅಚಃ ಪೂರ್ವವಿಧೌ" ಎಂಬ ಸೂತ್ರದಿಂದ 'ಅಚಃ' ಎಂಬ ಪದವೂ "ಸ್ಥಾನಿವದಾದೇಶೋಽನಲ್ವಿಧೌ" ಎಂಬ ಸೂತ್ರದಿಂದ 'ಆದೇಶಃ' ಎಂಬ ಪದವೂ, ಮತ್ತು "ನ ಪದಾನ್ತ–ದ್ವಿರ್ವಚನ–ವರೇ–ಯಲೋಪ–ಸ್ವರ–ಸವರ್ಣ–ಅನುಸ್ವಾರ–ದೀರ್ಘ–ಜಶ್–ಚರ್ವಿಧಿಷು" ಎಂಬ ಸೂತ್ರದಿಂದ 'ನ' ಎಂಬ ಪದವೂ ಅನುವೃತ್ತವಾಗುತ್ತದೆ.

ಅರ್ಥ– ದ್ವಿತ್ವ ಮಾಡಬೇಕಾದ ಸಂದರ್ಭದಲ್ಲಿ, ದ್ವಿತ್ವ ನಿಮಿತ್ತಕವಾದ 'ಅಚ್' ಎಂದು ಭಾವಿಸಿ, ಆ 'ಅಚ್' ಗೆ ಆದೇಶವು ಬರುವುದಿಲ್ಲ.

ಉದಾ– ಗೋಪಾಯಾಞ್ಚಕ್ರತುಃ, ಗೋಪಾಯಾಂಚಕ್ರತುಃ–ಪ್ರಥಮಪುರುಷ ದ್ವಿವಚನದಲ್ಲಿ ಗೋಪಾಯಾಮ್+ಕೃ+ಅತುಸ್ ಎಂದಿದ್ದಾಗ, 'ಕೃ' ಗೆ ದ್ವಿತ್ವ ಬಂದು ಗೋಪಾಯಾಮ್+ಕೃ ಕೃ+ಅತುಸ್ ಎಂದಿರುತ್ತದೆ. ಆಗ ಮೊದಲನೆ(ಅಭ್ಯಾಸದ) ಯ 'ಕೃ' ಗೆ 'ಉರತ್" ಎಂಬ ಸೂತ್ರದಿಂದ ಅತ್ವವು ರ–ಪರವಾಗಿ ಬಂದು, ಗೋಪಾಯಾಮ್+ಕರ್+ಕೃ+ಅತುಸ್ ಎಂದಿದ್ದಾಗ, 'ರ್' ಗೆ "ವಿಪ್ರತಿಷೇಧೇ ಪರಂ ಕಾರ್ಯಮ್" ಎಂಬ ಸೂತ್ರದಿಂದ ಮೊದಲಿಗೆ ಯಣ್ ಪ್ರಾಪ್ತವಾಗಿತ್ತು. ಆದರೆ ಪ್ರಕೃತ ಸೂತ್ರದಿಂದ ದ್ವಿತ್ವ ವಿವಕ್ಷೆ ಇದ್ದಾಗ ಬೇರೆ ಯಾವ ಆದೇಶಗಳೂ ಬರುವುದಿಲ್ಲ. ಹಲಾದಿಶೇಷವಾದಮೇಲೆ ರೇಫ (ರ್) ಹೋಗಿ ಗೋಪಾಯಾಮ್+ಕ+ಕೃ+ ಅತುಸ್ ಎಂದಿದ್ದಾಗ, "ಕುಹೋಶ್ಚುಃ" ಎಂಬ ಸೂತ್ರದಿಂದ ಅಭ್ಯಾಸದ 'ಕ್' ಕಾರಕ್ಕೆ ಚುತ್ವ(ಚ್) ಬಂದು ಗೋಪಾಯಾಮ್+ಚ+ಕೃ+ಅತುಸ್ ಎಂದಿದ್ದಾಗ 'ಋ' ಕಾರ 'ಅ' ಕಾರಗಳಿಗೆ ಯಣ್ ಸಂಧಿಯಿಂದ ರೇಫ್(ರ್) ಬಂದು ಗೋಪಾಯಾಮ್ ಚ+ಕ್+ರ್+ ಅತುಸ್=ಗೋಪಾಯಾಞ್ಚಕ್ರತುಸ್ ಎಂದಾಗಿ ರುತ್ವ–ವಿಸರ್ಗಗಳಿಂದ

ಗೋಪಾಯಾಞ್ಚಕ್ರತುಃ ಎಂದಾಗುತ್ತದೆ. ಇದು ಪರಸವರ್ಣ ಬಂದ ರೂಪವಾಗಿದೆ. ಇನ್ನು ಗೋಪಾಯಾಂಚಕಾರ ಎಂಬುದು ಪರಸವರ್ಣ ಬಾರದ ವೈಕಲ್ಪಿಕ ರೂಪ.

ಉದಾ– ಗೋಪಾಯಾಞ್ಚಕ್ರುಃ– ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯಕ್ಕೆ ಉಸ್ ಆದೇಶ ಬಂದು ಹಿಂದಿನಂತೆಯೇ ಪ್ರಕ್ರಿಯೆ ನಡೆದು ಗೋಪಾಯಾಞ್ಚಕ್ರುಃ ಎಂಬ ಪರಸವರ್ಣ ಬಂದ ರೂಪ, ಮತ್ತು ಗೋಪಾಯಾಂಚಕ್ರುಃ ಎಂಬ ವೈಕಲ್ಪಿಕ ರೂಪ ಹೀಗೆ ಎರಡು ರೂಪಗಳು ಸಿದ್ಧವಾಗುತ್ತವೆ.

**(ಇಟ್ ಆಗಮವನ್ನು ನಿಷೇಧಿಸುವ ಸೂತ್ರ)**

**ಸೂತ್ರ – 475. ಏಕಾಚ ಉಪದೇಶೇsನುದಾತ್ತಾತ್ (7.2.10)**

ವೃತ್ತಿ – ಉಪದೇಶೇ ಽಯೋ ಧಾತುರೇಕಾಚ್ ಅನುದಾತ್ತಶ್ಚ, ತತ ಆರ್ಧಧಾತುಕಸ್ಯ ಇಟ್ ನ।

ಊದ್ವೃದಂತ್ಯೈರ್ಯೌತಿ–ರು–ಕ್ಷ್ಣು–ಶೀಙ್–ಸ್ನು–ನು–ಕ್ಷು–ಶ್ವಿ–ಡೀಙ್–ಶ್ರಿಭಿಃ।

ವೃಙ್–ವೃಞ್–ಭ್ಯಾಂ ಚ ವಿನಾ ಏಕಾಚಃ ಅಜನ್ತೇಷು ನಿಹತಾಃ ಸ್ಮೃತಾಃ॥

–ಕಾನ್ತೇಷು–ಶಕ್ಲೃ ಏಕಃ। ಚಾನ್ತೇಷು– ಪಚ್–ಮುಚ್–ರಿಚ್–ವಚ್–ವಿಚ್–ಸಿಚಃ ಷಟ್। ಛಾನ್ತೇಷು–ಪ್ರಚ್ಛಿಃ– ಏಕಃ। ಜಾನ್ತೇಷು–ತ್ಯಜ್–ನಿಜಿರ್–ಭಜ್–ಭಂಜ್–ಭುಜ್–ಭ್ರಸ್ಜ್–ಮಸ್ಜ್–ಯಜ್–ಯುಜ್–ಋಜ್–ರಞ್ಜ–ವಿಜಿರ್–ಸ್ವಞ್ಜ್–ಸಞ್ಜ್–ಸೃಜಃ ಪಞ್ಚದಶ । ದಾನ್ತೇಷು–ಅದ್–ಕ್ಷುದ್–ಖಿದ್–ಛಿದ್–ತುದ್–ನುದ್–ಪದ್ಯ–ಭಿದ್, ವಿದ್ಯತಿ–ವಿನದ್–ವಿನ್ದ–ಶದ್–ಸದ್–ಸ್ವಿದ್ಯ್–ಸ್ಕನ್ದ್–ಹದಃ ಷೋಡಶ। ಧಾನ್ತೇಷು– ಕೃಧ್–ಕ್ಷುಧ್–ಬುಧ್–ಬನ್ಧ್–ಯುಧ್–ರುಧ್–ರಾಧ್–ವ್ಯಧ್ –ಶುಧ್–ಸಾಧ್–ಸಿಧ್ಯಾ ಏಕಾದಶ। ನಾನ್ತೇಷು–ಮನ್ಯ–ಹನೌ ದ್ವೌ ಪಾನ್ತೇಷು– ಆಪ್–ಕ್ಷಿಪ್–ಕ್ಷುಪ್–ತಪ್–ತಿಪ್–ತೃಪ್ಯ್–ದೃಪ್–ದ್ರುಪ್ಯ–ಲಿಪ್–ಲುಪ್–ವಪ್–ಶಪ್–ಸ್ವಪ್–ಸೃಪಃ–ತ್ರಯೋದಶ। ಭಾನ್ತೇಷು ಯಭ್–ರಭ್–ಲಭಃ ತ್ರಯಃ। ಮಾನ್ತೇಷು– ಗಮ್–ನಮ್–ಯಮ್–ರಮಃ ಚತ್ವಾರಃ। ಶಾನ್ತೇಷು– ಕ್ರುಶ್–ದಂಶ್–ದಿಶ್–ದೃಶ್–ಮೃಶ್–ರಿಶ್–ರುಶ್–ಲಿಶ್–ವಿಶ್–ಸ್ಪೃಶಃ–ದಶ। ಷಾನ್ತೇಷು– ಕೃಷ್–ತ್ವಿಷ್–ತುಷ್–ದ್ವಿಷ್–ದುಷ್–ಪುಷ್ಯ್–ಪಿಷ್–ವಿಷ್–ಶಿಷ್–ಶುಷ್–ಶ್ಲಿಷ್ಯಾಃ ಏಕಾದಶ। ಸಾನ್ತೇಷು– ಘಸ್–ವಸತೀ ದ್ವೌ ಹಾನ್ತೇಷು– ದಹ್–ದಿಹ್–ದುಹ್–ನಹ್–ಮಿಹ್–ರುಹ್–ಲಿಹ್–ವಹಃ ಅಷ್ಟೌ। ಅನುದಾತ್ತಾ ಹಲನ್ತೇಷು ಧಾತವಃ ತ್ರ್ಯಧಿಕಂ ಶತಮ್(103)। ಗೋಪಾಯಾಞ್ಚಕರ್ಥ। ಗೋಪಾಯಾಞ್ಚಕ್ರಥುಃ ।ಗೋಪಾಯಾಞ್ಚಕರ। ಗೋಪಾಯಾಞ್ಚಕಾರ। ಗೋಪಾಯಾಞ್ಚಕರ।ಗೋಪಾಯಾಞ್ಚಕೃವ।

ಗೋಪಾಯಾಞ್ಚಕೃಮ। ಗೋಪಾಯಾಂಬಭೂವ। ಗೋಪಾಯಾಮಾಸ। ಜುಗೋಪ। ಜುಗುಪತುಃ। ಜುಗುಪುಃ।

ಪ. ಛೇ. – ಏಕಾಚಃ, ಉಪದೇಶೇ, ಅನುದಾತ್ತಾತ್।

ಅ. ವ್ಯ.– ಋತ ಇದ್ಧಾತೋಃ" ಎಂಬ ಸೂತ್ರದಿಂದ 'ಧಾತೋಃ' ಎಂಬ ಪದವೂ, "ನೇಡ್ ವಶಿಕೃತಿ" ಎಂಬ ಸೂತ್ರದಿಂದ 'ನ' ಮತ್ತು 'ಇತ್' ಎಂಬ ಪದಗಳು

ಅನುವೃತ್ತವಾಗುತ್ತವೆ.

ಅರ್ಥ– ಉಪದೇಶಕಾಲದಲ್ಲಿ ಏಕಾಚ್ ಆಗಿಯೂ ಮತ್ತು ಅನುದಾತ್ತವಾಗಿಯೂ ಯಾವ ಧಾತು ಇರುತ್ತದೋ ಆ ಧಾತುವಿನ ಪರದಲ್ಲಿ ಇರುವ ಆರ್ಧಧಾತುಕ ಪ್ರತ್ಯಯಕ್ಕೆ 'ಇಟ್(ಇ)' ಆಗಮವು ಬರುವುದಿಲ್ಲ.

ಇಲ್ಲಿ ಇಡಾಗಮವನ್ನು ನಿಷೇಧಿಸಲಾಗಿದೆ. ಬೇರೆ ಸ್ಥಳಗಳಲ್ಲಿ "ಆರ್ಧಧಾತುಕಸ್ಯೇಡ್ ವಲಾದೇಃ" ಎಂಬ ಸೂತ್ರದಿಂದ ಇಡಾಗಮವು ವಿಧಿಸಲ್ಪಟ್ಟಿದೆ. ಸೂತ್ರದಲ್ಲಿರುವ 'ಉಪದೇಶೇ' ಎಂಬ ಶಬ್ದವು ಏಕಾಚಃ ಮತ್ತು ಅನುದಾತ್ತಾತ್ ಎಂಬ ಎರಡು ಶಬ್ದಗಳ ಜೊತೆಗೆ ಅನ್ವಯಿಸಲಾಗುತ್ತದೆ.

ಈ ಕೇಳಗಿನ ಶ್ಲೋಕದಲ್ಲಿ ಅಜನ್ತ ಏಕಾಚ್ ಧಾತುಗಳಲ್ಲಿ ಅನುದಾತ್ತ ಧಾತುಗಳ ಬಗ್ಗೆ ಸ್ಪಷ್ಟೀಕರಣ ಮಾಡಲಾಗಿದೆ.

**ಊದೃದಂತೈರ್ಯೌತಿ–ರು–ಕ್ಷ್ಣು–ಶೀಙ್–ಸ್ನು–ನು–ಕ್ಷು–ಶ್ವಿ–ಡೀಙ್ಶ್ರಿಭಿಃ।**
**ವೃಙ್–ವೃಞ್–ಭ್ಯಾಂ ಚ ವಿನಾ ಏಕಾಚಃ ಅಜನ್ತೇಷು ನಿಹತಾಃ ಸ್ಮೃತಾಃ॥**

ದೀರ್ಘ 'ಊ' ಕಾರಾನ್ತ ಮತ್ತು ದೀರ್ಘ ಋ ಕಾರಾನ್ತ ಧಾತುಗಳು ಮತ್ತು ಯು–ರು–ಕ್ಷ್ಣು–ಶೀಙ್–ಸ್ನು–ನು–ಕ್ಷು–ಶ್ವಿ–ಡೀಙ್–ಶ್ರಿ–ವೃಙ್–ವೃಞ್ ಧಾತುಗಳನ್ನು ಹೊರತುಪಡಿಸಿ ಬೇರೆ ಯಾವ ಅಜನ್ತ ಧಾತುಗಳಿವೆಯೋ ಅವುಗಳಲ್ಲಿ ಏಕಾಚ್ ಆಗಿರುವ ಎಲ್ಲ ಧಾತುಗಳು ಅನುದಾತ್ತಗಳಾಗಿವೆ ಎಂದು ತಿಳಿಯಬೇಕು. ಉದಾತ್ತ ಧಾತುಗಳು ಅಜನ್ತದಲ್ಲಿ ಕಡಿಮೆ ಆಗಿರೋಣದರಿಂದ ಅವುಗಳನ್ನು ಸಂಗ್ರಹಿಸಿ ತದ್ಭಿನ್ನವಾದ ಧಾತುಗಳು ಅನುದಾತ್ತವೆಂದು ಹೇಳುವದಕ್ಕೆ ಈ ಮೇಲಿನ ಶ್ಲೋಕವನ್ನು ಸಂಗ್ರಹಿಸಿದ್ದಾರೆ.

ಉದಾ–ಗೋಪಾಯಾಞ್ಚಕರ್ಥ– ಮಧ್ಯಮಪುರುಷ ಏಕವಚನದಲ್ಲಿ 'ಗುಪ್' ಧಾತುವಿನ ನಂತರ ಅನುಪ್ರಯುಜ್ಯಮಾನ 'ಕೃ' ಧಾತುವು ಉಪದೇಶಾವಸ್ಥೆಯಲ್ಲಿ 'ಏಕಾಚ್' ಮತ್ತೂ 'ಊದೃದನ್ತೈಃ...' ಎಂಬ ಶ್ಲೋಕಸಂಗ್ರಹದಲ್ಲಿ ಇದು ಉದಾತ್ತವಾಗಿಲ್ಲದೇ ಇರುವುದರಿಂದ ಅನುದಾತ್ತವೆಂದು ತಿಳಿಯಲಾಗಿದೆ. ಆದ್ದರಿಂದ ಆರ್ಧಧಾತುಕವು ಪರದಲ್ಲಿದ್ದಾಗ, ಪ್ರಕೃತ ಸೂತ್ರದಿಂದ 'ಇಟ್(ಇ)' ಆಗಮವೂ ನಿಷೇಧಿಸಲ್ಪಟ್ಟಿದೆ. ಆದ್ದರಿಂದ ಗೋಪಾಯಾಮ್+ಚಕ್ರ+ಥ ಎಂಬಲ್ಲಿ ಇಡಾಗಮವು ಬರಲಿಲ್ಲ. ಆದರೆ "ಸಾರ್ವಧಾತುಕಾರ್ಧಧಾತುಕಯೋಃ" ಎಂಬ ಸೂತ್ರದಿಂದ 'ಋ' ಕಾರಕ್ಕೆ ಗುಣ ಬಂದು 'ಅರ್' ಎಂದಾಗಿದೆ. ಗೋಪಾಯಾಮ್+ಚಕರ್+ಥ ಎಂದಿದ್ದಾಗ, 'ಮ್' ಕಾರಕ್ಕೆ ಅನುಸ್ವಾರ ಮತ್ತು ಪರಸವರ್ಣಗಳು ಬಂದು ಗೋಪಾಯಾಂಚಕರ್ಥ, ಗೋಪಾಯಾಞ್ಚಕರ್ಥ, ಎಂದು ಎರಡು ರೂಪಗಳಾಗುತ್ತವೆ. ಪರಸವರ್ಣದ ರೂಪಗಳನ್ನು ಮಾತ್ರ ಇಲ್ಲಿ ಕೆಳಗೆ ಕೊಡಲಾಗಿದೆ. ಅನುಸ್ವಾರಬಂದ ರೂಪಗಳನ್ನು ಸುಲಭವಾಗಿ ಗುರುತಿಸಬಹುದು.

ರೂಪಗಳು: ಗೋಪಾಯಾಞ್ಚಕಾರ, ಗೋಪಾಯಾಞ್ಚಕ್ರತುಃ, ಗೋಪಾಯಾಞ್ಚಕ್ರುಃ। ಗೋಪಾಯಾಞ್ಚಕರ್ಥ, ಗೋಪಾಯಾಞ್ಚಕ್ರಥುಃ। ಗೋಪಾಯಾಞ್ಚಕ್ರ। ಗೋಪಾಯಾಞ್ಚಕಾರ/ಗೋಪಾಯಾಞ್ಚಕರ,ಗೋಪಾಯಾಞ್ಚಕೃವ, ಗೋಪಾಯಾಞ್ಚಕೃಮ।

ಉದಾ – ಗೋಪಾಯಾಮ್ಬಭೂವ– ಮಧ್ಯಮಪುರುಷ ದ್ವಿವಚನದಲ್ಲಿ ಗೋಪಾಯಾಮ್ ಧಾತುವಿನ ನಂತರ 'ಭೂ' ಧಾತುವಿನ ಅನುಪ್ರಯೋಗವಾದಾಗ, ಗೋಪಾಯಾಮ್+ಭೂ+ಲಿಟ್ ಎಂದಿರುತ್ತದೆ. 'ಭೂ' ಧಾತುವಿನ 'ಲಿಟ್' ರೂಪ ಬಭೂವ ಎಂದಿರುತ್ತದೆ. ಇದನ್ನು ಸೇರಿಸಿದಾಗ ಗೋಪಾಯಾಮ್ಬಭೂವ ಎಂಬ ವೈಕಲ್ಪಿಕ ರೂಪವು ಸಿದ್ಧವಾಗುತ್ತದೆ. ಅನುಸ್ವಾರ ಮಾಡಿದಾಗ ಗೋಪಾಯಾಂ ಬಭೂವ ಎಂದು ರೂಪವಾಗುತ್ತದೆ.

ರೂಪಗಳು: ಗೋಪಾಯಾಂಬಭೂವ, ಗೋಪಾಯಾಂಬಭೂವತುಃ, ಗೋಪಾಯಾಂಬಭೂವುಃ। ಗೋಪಾಯಾಂಬಭೂವಿಥ, ಗೋಪಾಯಾಂಬಭೂವತುಃ, ಗೋಪಾಯಾಂಬಭೂವ। ಗೋಪಾಯಾಂಬಭೂವ, ಗೋಪಾಯಾಂಬಭೂವಿವ, ಗೋಪಾಯಾಂಬಭೂವಿಮ। ಇದೇ ರೀತಿಯಲ್ಲಿ ಪರಸವರ್ಣದ ರೂಪಗಳನ್ನು ಸುಲಭವಾಗಿ ತಿಳಿಯಬಹುದಾಗಿದೆ.

ಗೋಪಾಯಾಮ್ ಧಾತುವಿನ ನಂತರ 'ಅಸ್' ಧಾತುವಿನ ಅನುಪ್ರಯೋಗ ಮಾಡಿದಮೇಲೆ ಗೋಪಾಯಾಮ್+ಲಿಟ್ ಎಂದಿದ್ದಾಗ 'ಆಮ್' ನಂತರ 'ಅಸ್' ಬಂದು ಗೋಪಾಯಾಮ್+ಅಸ್+ಲಿಟ್ ಎಂದಿರುತ್ತದೆ. 'ಲಿಟ್' ಗೆ 'ತಿಪ್' ಬಂದು ಅದಕ್ಕೆ ಅಭಿನವ ಆಖ್ಯಾತಪ್ರತ್ಯಯವಾದ 'ಣಲ್(ಅ)' ಬಂದು ಗೋಪಾಯಾಮ್+ಅಸ್+ಅ ಎಂದಿದ್ದಾಗ, ಅಸ್ ಗೆ ದ್ವಿತ್ವ ಬಂದು ಗೋಪಾಯಾಮ್+ಅಸ್ ಅಸ್+ಅ ಎಂದಿದ್ದಾಗ, ಹಲಾದಿಶೇಷದಿಂದ ಗೋಪಾಯಾಮ್+ಅ+ಅಸ್+ಅ ಎಂದಿದ್ದಾಗ "ಅತ ಆದೇಃ" ಎಂಬ ಸೂತ್ರದಿಂದ ಮೊದಲ ಎರಡು ಅ–ಕಾರಗಳಿಗೆ ಸವರ್ಣದೀರ್ಘ ಬಂದು ಗೋಪಾಯಾಮ್+ಆ+ಅಸ್+ಅ ಎಂದಿರುತ್ತದೆ. ಆ ಮತ್ತು ಅ ಗಳಿಗೆ ಮತ್ತೊಮ್ಮೆ ಸವರ್ಣದೀರ್ಘವಾಗಿ ಗೋಪಾಯಾಮ್+ಆಸ್+ ಅ=ಗೋಪಾಯಾಮಾಸ ಎಂದು ರೂಪವು ಸಿದ್ಧವಾಗುತ್ತದೆ.

ರೂಪಗಳು: ಗೋಪಾಯಾಮಾಸ, ಗೋಪಾಯಾಮಾಸತುಃ, ಗೋಪಾಯಾಮಾಸುಃ। ಗೋಪಾಯಾಮಾಸಿಥ, ಗೋಪಾಯಾಮಾಸಥುಃ, ಗೋಪಾಯಾಮಾಸ। ಗೋಪಾಯಾಮಾಸ, ಗೋಪಾಯಾಮಾಸಿವ, ಗೋಪಾಯಾಮಾಸಿಮ।

**ಆಯ ಬಾರದ ಪಕ್ಷದ ಲಿಟ್ ರೂಪಗಳು**:

ಉದಾ– ಜುಗೋಪ, ಜುಗುಪತುಃ, ಜುಗುಪುಃ – ಪ್ರಥಮಪುರುಷದ ಏಕವಚನದಲ್ಲಿ ಗುಪ್ ಧಾತುವಿನಮೇಲೆ ಲಿಡಾದೇಶವಾದ 'ತಿಪ್' ಬಂದು ಅದಕ್ಕೆ ಅಭಿನವ ಆಖ್ಯಾತಪ್ರತ್ಯಯವಾದ 'ಣಲ್(ಅ)' ಆದೇಶವು ಬಂದಾಗ, ಗುಪ್+ಅ ಎಂದಿರುತ್ತದೆ. ಧಾತುವಿಗೆ ದ್ವಿತ್ವ ಬಂದು ಗುಪ್ ಗುಪ್+ಅ ಎಂದಿದ್ದಾಗ, ಹಲಾದಿಶೇಷ ದಿಂದ ಗು ಗುಪ್+ಅ ಎಂದಿರುತ್ತದೆ. "ಕುಹೋಶ್ಚುಃ" ಎಂಬ ಸೂತ್ರದಿಂದ 'ಗ್' ಕಾರಕ್ಕೆ 'ಜ್' ಕಾರ ಬಂದು ಜುಗುಪ್+ಅ ಎಂದಿದ್ದಾಗ, "ಪುಗನ್ತ ಲಘೂಪದಸ್ಯ ಚ" ಎಂಬ ಸೂತ್ರದಿಂದ ಉಪಧೆಯಾದ 'ಉ' ಕಾರಕ್ಕೆ ಗುಣ ಬಂದು ಜುಗೋಪ್+ಅ=ಜುಗೋಪ ಎಂದು ರೂಪವಾಗುತ್ತದೆ. ಮೂರು ಪುರುಷಗಳ ಏಕ ವಚನಗಳಲ್ಲಿ ಮಾತ್ರ 'ಪಿತ್' ಪ್ರತ್ಯಯಗಳು

(ತಿಪ್. ಸಿಪ್. ಮಿಪ್) ಇವೆ. ಇವುಗಳನ್ನು ಬಿಟ್ಟು ಬೇರೆಕಡೆಗಳಲ್ಲಿ "ಅಸಂಯೋಗಾಲ್ಲಿಟ್ ಕಿತ್" ಎಂಬ ಸೂತ್ರದಿಂದ ಕಿದ್ವದ್ಭಾವ ಬಂದು "ಕ್ಙಿತಿ ಚ" ಎಂಬ ಸೂತ್ರದಿಂದ ಗುಣವು ಬರುವುದಿಲ್ಲ. ಆದ್ದರಿಂದ ದ್ವಿವಚನ, ಬಹುವಚನಗಳಲ್ಲಿ ಜುಗುಪತುಃ, ಜುಗುಪುಃ ಎಂಬ ರೂಪಗಳು ಸಿದ್ಧವಾಗುತ್ತವೆ.

## (ವಲಾದಿ ಪ್ರತ್ಯಯಗಳು ಪರದಲ್ಲಿದ್ದಾಗ ವೈಕಲ್ಪಿಕವಾಗಿ 'ಇಟ್' ಆಗಮವನ್ನು ವಿಧಿಸುವ ಸೂತ್ರ)

**ಸೂತ್ರ –476. ಸ್ವರತಿ–ಸೂತಿ–ಸೂಯತಿ–ಧೂಞೂದಿತೋ ವಾ (7.2.44)**

ವೃತ್ತಿಃ–ಸ್ವರತ್ಯಾದೇಃ ಊದಿತಃ ಚ ಪರಸ್ಯ ವಲಾದೇಃ ಆರ್ಧಧಾತುಕಸ್ಯ ಇಡ್ ವಾ ಸ್ಯಾತ್। ಜುಗೋಪಿಥ, ಜುಗೋಪ್ಥ। ಗೋಪಾಯಿತಾ, ಗೋಪಿತಾ, ಗೋಪ್ತಾ। ಗೋಪಾಯಿಷ್ಯತಿ, ಗೋಪಿಷ್ಯತಿ, ಗೋಪ್ಸ್ಯತಿ। ಗೋಪಾಯತು। ಅಗೋಪಾಯತ್। ಗೋಪಾಯೇತ್। ಗೋಪಾಯ್ಯಾತ್, ಗುಪ್ಯಾತ್। ಅಗೋಪಾಯೀತ್।

ಪ. ಛೇ. – ಸ್ವರತಿ–ಸೂತಿ–ಸೂಯತಿ–ಧೂಞೂದಿತಃ, ವಾ।

ಅ. ವೃ. – "ಆರ್ಧಧಾತುಕಸ್ಯೇಡ್ ವಲಾದೇಃ" ಎಂಬ ಸೂತ್ರವು ಅನುವೃತ್ತವಾಗುತ್ತದೆ.

ಅರ್ಥ– ಸ್ವರತಿ(ಸ್ವೃ) ಮತ್ತು 'ಊದಿತ್' ಧಾತುಗಳ ಪರದಲ್ಲಿರುವ ಆರ್ಧಧಾತುಕ ಪ್ರತ್ಯಯಗಳಿಗೆ ವೈಕಲ್ಪಿಕವಾಗಿ 'ಇಟ್' ಆಗಮವು ಬರುತ್ತದೆ.

ಸೂತ್ರದಲ್ಲಿ ಮೂರು ಧಾತುಗಳನ್ನು ಹೇಳಲಾಗಿದೆ. ಸ್ವೃ–ಶಬ್ದೋಪತಾಪಯೋಃ, ಷೂಙ್(ಷೂ)– ಪ್ರಾಣಿಗರ್ಭವಿಮೋಚನೇ ಅಥವಾ ಪ್ರಸವೇ ಚ, ಧೂಞ್(ಧೂ)– ಕಂಪನೇ ಪ್ರಕೃತ 'ಗುಪೂ' (ಗುಪ್)ಧಾತುವೂ 'ಊದಿತ್' ಆಗಿದೆ.

ಉದಾ– ಜುಗೋಪಿಥ, ಜುಗೋಪ್ಥ– ಈ ಎರಡು ರೂಪಗಳಲ್ಲಿ ವಲಾದಿ ಪ್ರತ್ಯಯವು ಇರೋಣದರಿಂದ ಇಡಾಗಮವು ಆದ್ಯವಯವವಾಗಿ ಬಂದು ವೈಕಲ್ಪಿಕವಾಗಿ ಇಡಾಗಮ ಬಂದ ಮತ್ತು ಬಾರದೇಇರುವ ರೂಪಗಳಾದ ಜುಗೋಪಿಥ, ಜುಗೋಪ್ಥ ಎಂಬ ರೂಪಗಳು ಸಿದ್ಧವಾಗಿವೆ. ರೂಪಗಳು: ಜುಗೋಪ, ಜುಗುಪಥುಃ, ಜುಗುಪುಃ। ಜುಗೋಪಿಥ/ಜುಗೋಪ್ಥ, ಜುಗುಪಥುಃ, ಜುಗುಪ। ಜುಗೋಪ, ಜುಗುಪಿವ/ಜುಗುಪ್ವ, ಜುಗುಪಿಮ/ಜುಗುಪ್ಮ।

ಈ 'ಲಿಟ್' ನ ಜೊತೆಗೆ 'ಲುಟ್' ಲೃಟ್, ಆಶೀರ್ಲಿಙ್, ಲುಙ್, ಮತ್ತು 'ಲೃಙ್' ಗಳೂ ಆರ್ಧಧಾತುಕ 'ಲ್' ಕಾರಗಳಾಗಿವೆ. (ಲಟ್, ಲಙ್, ವಿಧಿಲಿಙ್ ಮತ್ತು ಲೋಟ್ 'ಲ್' ಕಾರಗಳು ಮಾತ್ರ ಸಾರ್ವಧಾತುಕಗಳಾಗಿವೆ).

**ಲುಟ್**: ಮೇಲೆ ಹೇಳಿದ ಆರ್ಧಧಾತುಕ 'ಲ್' ಕಾರಗಳಲ್ಲಿ 'ಆಯ' ಪ್ರತ್ಯಯವು ವೈಕಲ್ಪಿಕವಾಗಿ ಬರುತ್ತದೆ. 1. 'ಆಯ' ಮತ್ತು 'ಇಟ್' ಇವೆರಡೂ ಬರುವ ಪಕ್ಷ. 2. 'ಆಯ' ಬಾರದೇ ಪ್ರಕೃತ ಸೂತ್ರದಿಂದ ಇಟ್ ಬರುವ ಪಕ್ಷ 3. ಆಯ ಮತ್ತು ಇಡಾಗಮ ಬಾರದಿರುವ ಪಕ್ಷ ಹೀಗೆ ಮೂರು, ಮೂರು ರೂಪಗಳು ಆಗುತ್ತವೆ.

**1.'ಆಯ' ಮತ್ತು 'ಇಟ್' ಇವೆರಡೂ ಬರುವ ಪಕ್ಷ-**

ರೂಪಗಳು: ಗೋಪಾಯಿತಾ, ಗೋಪಾಯಿತಾರೌ, ಗೋಪಾಯಿತಾರಃ। ಗೋಪಾಯಿತಾಸಿ, ಗೋಪಾಯಿತಾಸ್ಥಃ, ಗೋಪಾಯಿತಾಸ್ಥ। ಗೋಪಾಯಿತಾಸ್ಮಿ, ಗೋಪಾಯಿತಾಸ್ವಃ, ಗೋಪಾಯಿತಾಸ್ಮಃ।

**2.'ಆಯ' ಬಾರದೇ ಪ್ರಕೃತ ಸೂತ್ರ ದಿಂದ ಇಟ್ ಬರುವ ಪಕ್ಷ-**

ರೂಪಗಳು: ಗೋಪಿತಾ, ಗೋಪಿತಾರೌ, ಗೋಪಿತಾರಃ। ಗೋಪಿತಾಸಿ, ಗೋಪಿತಾಸ್ಥಃ, ಗೋಪಿತಾಸ್ಥ। ಗೋಪಿತಾಸ್ಮಿ, ಗೋಪಿತಾಸ್ವಃ, ಗೋಪಿತಾಸ್ಮಃ।

**3. ಆಯ ಮತ್ತು ಇಡಾಗಮ ಬಾರದಿರುವ ಪಕ್ಷ-**

ರೂಪಗಳು: ಗೋಪ್ತಾ, ಗೋಪ್ತಾರೌ, ಗೋಪ್ತಾರಃ। ಗೋಪ್ತಾಸಿ, ಗೋಪ್ತಾಸ್ಥಃ, ಗೋಪ್ತಾಸ್ಥ। ಗೋಪ್ತಾಸ್ಮಿ, ಗೋಪ್ತಾಸ್ವಃ, ಗೋಪ್ತಾಸ್ಮಃ।

**ಲೃಟ್**:

**1.'ಆಯ' ಮತ್ತು 'ಇಟ್' ಇವೆರಡೂ ಬರುವ ಪಕ್ಷ-**

ರೂಪಗಳು: ಗೋಪಾಯಿಷ್ಯತಿ, ಗೋಪಾಯಿಷ್ಯತಃ, ಗೋಪಾಯಿಷ್ಯನ್ತಿ। ಗೋಪಾಯಿಷ್ಯಸಿ, ಗೋಪಾಯಿಷ್ಯಥಃ, ಗೋಪಾಯಿಷ್ಯಥ। ಗೋಪಾಯಿಷ್ಯಾಮಿ, ಗೋಪಾಯಿಷ್ಯಾವಃ, ಗೋಪಾಯಿಷ್ಯಾಮಃ।

**2.'ಆಯ' ಬಾರದೇ ಪ್ರಕೃತ ಸೂತ್ರ ದಿಂದ ಇಟ್ ಬರುವ ಪಕ್ಷ-**

ರೂಪಗಳು: ಗೋಪಿಷ್ಯತಿ, ಗೋಪಿಷ್ಯತಃ, ಗೋಪಿಷ್ಯನ್ತಿ। ಗೋಪಿಷ್ಯಸಿ, ಗೋಪಿಷ್ಯಥಃ, ಗೋಪಿಷ್ಯಥ। ಗೋಪಿಷ್ಯಾಮಿ, ಗೋಪಿಷ್ಯಾವಃ, ಗೋಪಿಷ್ಯಾಮಃ।

**3. ಆಯ ಮತ್ತು ಇಡಾಗಮ ಬಾರದಿರುವ ಪಕ್ಷ**

ರೂಪಗಳು: ಗೋಪ್ಸ್ಯತಿ, ಗೋಪ್ಸ್ಯತಃ, ಗೋಪ್ಸ್ಯನ್ತಿ। ಗೋಪ್ಸ್ಯಸಿ, ಗೋಪ್ಸ್ಯಥಃ, ಗೋಪ್ಸ್ಯಥ। ಗೋಪ್ಸ್ಯಾಮಿ, ಗೋಪ್ಸ್ಯಾವಃ, ಗೋಪ್ಸ್ಯಾಮಃ।

ಲಟ್, ಲಙ್, ವಿಧಿಲಿಙ್ ಮತ್ತು ಲೋಟ್ 'ಲ್' ಕಾರಗಳು ಸಾರ್ವಧಾತುಕವಾಗಿರುವುದರಿಂದ ಅಲ್ಲಿ ನಿತ್ಯವಾಗಿ 'ಆಯ' ಪ್ರತ್ಯಯವೇ ಬರುತ್ತದೆ.

**ಲೋಟ್**: ರೂಪಗಳು: ಗೋಪಾಯತು / ಗೋಪಾಯತಾತ್, ಗೋಪಾಯತಾಮ್, ಗೋಪಾಯನ್ತು। ಗೋಪಾಯ/ ಗೋಪಾಯತಾತ್, ಗೋಪಾಯತಮ್, ಗೋಪಾಯತ। ಗೋಪಾಯಾನಿ, ಗೋಪಾಯಾವ, ಗೋಪಾಯಾಮ।

ಲಙ್: ರೂಪಗಳು: ಅಗೋಪಾಯತ್, ಅಗೋಪಾಯತಾಮ್, ಅಗೋಪಾಯನ್। ಅಗೋಪಾಯಃ, ಅಗೋಪಾಯತಮ್,ಅಗೋಪಾಯತ। ಅಗೋಪಾಯಮ್, ಅಗೋಪಾಯಾವ, ಅಗೋಪಾಯಾಮ।

**ವಿಧಿಲಿಙ್**: ರೂಪಗಳು: ಗೋಪಾಯೇತ್, ಗೋಪಾಯೇತಾಮ್,

ಗೋಪಾಯೇಯುಃ। ಗೋಪಾಯೇಃ, ಗೋಪಾಯೇತಮ್, ಗೋಪಾಯೇತ। ಗೋಪಾಯೇಯಮ್, ಗೋಪಾಯೇವ, ಗೋಪಾಯೇಮ।

**ಆಶೀರ್ಲಿಙ್:** ವಲಾದಿ ಆರ್ಧಧಾತುಕವು ಪರದಲ್ಲಿ ಇಲ್ಲದೇ ಇರೋಣದರಿಂದ ಇಡಾಗಮವು(ಆದ್ಯವಯವವಾಗಿ) ಬರುವುದಿಲ್ಲ.

ರೂಪಗಳು: 1. 'ಆಯ' ಬಂದ ಪಕ್ಷದಲ್ಲಿ– ಗೋಪಾಯ್ಯಾತ್, ಗೋಪಾಯ್ಯಾಸ್ತಾಮ್, ಗೋಪಾಯ್ಯಾಸುಃ। ಗೋಪಾಯ್ಯಾಃ, ಗೋಪಾಯ್ಯಾಸ್ತಮ್, ಗೋಪಾಯ್ಯಾಸ್ತ। ಗೋಪಾಯ್ಯಾಸಮ್, ಗೋಪಾಯ್ಯಾಸ್ವ, ಗೋಪಯ್ಯಾಸ್ಮ।

2. 'ಆಯ, ಬಾರದ ಪಕ್ಷದಲ್ಲಿ – ಗುಪ್ಯಾತ್, ಗುಪ್ಯಾಸ್ತಾಮ್, ಗುಪ್ಯಾಸುಃ। ಗುಪ್ಯಾಃ, ಗುಪ್ಯಾಸ್ತಮ್, ಗೂಪ್ಯಾಸ್ತ। ಗುಪ್ಯಾಸಮ್, ಗುಪ್ಯಾಸ್ವ, ಗುಪ್ಯಾಸ್ಮ।

**ಲುಙ್:** ಉದಾ– ಅಗೋಪಾಯೀತ್– ಗೋಪಾಯ ಧಾತುವಿನ ನಂತರ ಲುಙ್ ಬಂದು ಅದರಿಂದ ಧಾತುವಿಗೆ 'ಅಟ್(ಅ)' ಆಗಮ ಬಂದು ನಂತರ ಲುಙ್ ಗೆ 'ತಿಪ್' ಆದೇಶ ಬಂದು 'ಶಪ್' ಪ್ರಾಪ್ತವಾದಾಗ ಅದನ್ನು ಬಾಧಿಸಿ 'ಚ್ಲಿ' ಬಂದು ಅದಕ್ಕೆ 'ಸಿಚ್(ಸ್)' ಆಗಮ ಬಂದು ನಂತರ 'ಇಟ್(ಇ)' ಆಗಮ ಬಂದಾಗ, 'ತಿ' ಯಲ್ಲಿರುವ 'ಇ' ಕಾರಕ್ಕೆ "ಇತಶ್ಚ ಲೋಪಃ" ಎಂಬ ಸೂತ್ರದಿಂದ ಲೋಪ ಬಂದು ಅಗೋಪಾಯ+ಇಸ್+ತ್ ಎಂದಿದ್ದಾಗ 'ತ್' ಗೆ 'ಈಟ್(ಈ)' ಬಂದು ಅಗೋಪಾಯ+ಇಸ್+ ಈತ್ ಎಂದಿರುತ್ತದೆ. "ಅತೋ ಲೋಪಃ" ಎಂಬ ಸೂತ್ರದಿಂದ ಅಗೋಪಾಯ ಎಂಬಲ್ಲಿರುವ ಅಂತ್ಯ 'ಅ' ಕಾರವು ಲೋಪವಾಗಿ ಅಗೋಪಾಯ್+ಇಸ್+ ಈತ್ ಎಂದಿರುತ್ತದೆ. "ಇಟ ಈಟಿ" ಎಂಬ ಸೂತ್ರದಿಂದ 'ಸ್' (ಸಿಚ್) ಕಾರಕ್ಕೆ ಲುಕ್(ಲೋಪ) ಬಂದು, ಇ–ಕಾರ ಈ–ಕಾರಗಳಿಗೆ ಸವರ್ಣದೀರ್ಘ ಬಂದು ಅಗೋಪಾಯ್+ಈತ್=ಅಗೋಪಾಯೀತ್ ಎಂದು ರೂಪವಾಗುತ್ತದೆ.

**(ವೃದ್ಧಿಯನ್ನು ನಿಷೇಧಿಸುವ ಸೂತ್ರ)**

**ಸೂತ್ರ – 477.ನೇಟಿ (7.2.4)**

ವೃತ್ತಿಃ–ಇಡಾದೌ ಸಿಚಿ ಹಲನ್ತಸ್ಯ ವೃದ್ಧಿಃ ನ। ಅಗೋಪೀತ್। ಅಗೌಪ್ಸೀತ್।

ಪ. ಛೇ. – ನ, ಇಟಿ।

ಅ. ವೃ.– " ಸಿಚಿ ವೃದ್ಧಿಃ ಪರಸ್ಮೈಪದೇಷು। ಎಂಬ ಸೂತ್ರವು ಅನುವೃತ್ತವಾಗುತ್ತದೆ.

ವಿಶೇಷ– ಹಿಂದಿನ ಸೂತ್ರದ ಪ್ರಕಾರ ಇಲ್ಲಿ ಆರ್ಧಧಾತುಕ ಪ್ರತ್ಯಯದ ಅಪೇಕ್ಷೆ ಇತ್ತು, ಆದುದರಿಂದ "ಆಯಾದಯಃ ಆರ್ಧಧಾತುಕೇ ವಾ" ಎಂಬ ಸೂತ್ರದಿಂದ ಆಯ ಪ್ರತ್ಯಯವು ವಿಕಲ್ಪದಿಂದ ಬಂದಿದೆ. ಆಯ ಬಾರದ ಪಕ್ಷದಲ್ಲಿ, ಹಾಗೂ ಇದರಜೊತೆಗೆ "ಸ್ವರತಿ–ಸೂತಿ–ಸೂಯತಿ–ಧೂಞೂದಿತೋ ವಾ" ಎಂಬ ಸೂತ್ರದಿಂದ 'ಇಟ್' ಬಂದ ಪಕ್ಷದಲ್ಲಿ ಅಗುಪ್+ಇಸ್+ಈತ್ ಎಂದಿರುತ್ತದೆ. ಹಲನ್ತವಾಗಿರೋಣದರಿಂದ "ವದ–ವ್ರಜ–ಹಲನ್ತಸ್ಯಾಚಃ" ಎಂಬ ಸೂತ್ರದಿಂದ ಗುಪ್ ಧಾತುವಿನಲ್ಲಿರುವ 'ಉ' ಕಾರಕ್ಕೆ ವೃದ್ಧಿ ಪ್ರಾಪ್ತವಾಗುತ್ತದೆ. ಅದನ್ನು ಪ್ರಕೃತ ಸೂತ್ರವು ನಿಷೇಧಿಸುತ್ತದೆ.

ಅರ್ಥ- 'ಇಟ್' ಪ್ರತ್ಯಯವನ್ನು ಆದಿಯಲ್ಲಿ ಉಳ್ಳ 'ಸಿಚ್' ಪರದಲ್ಲಿದ್ದಾಗ, ಹಲನ್ತ ಧಾತುವಿಗೆ ವೃದ್ಧಿಯು ಬರುವುದಿಲ್ಲ.

ವಿವರಣೆ-"ವದ-ವ್ರಜ-ಹಲನ್ತಸ್ಯಾಚಃ" ಎಂಬ ಸೂತ್ರದಿಂದ ವದ್, ವ್ರಜ್ (ವದ, ವ್ರಜ) ಮತ್ತು ಹಲನ್ತ ಧಾತುಗಳಿಗೆ 'ಸಿಚ್' ಪರದಲ್ಲಿದ್ದಾಗ ಹೇಳಲಾದ ವೃದ್ಧಿಯನ್ನು 'ಇಟ್'ನ್ನು ಆದಿಯಲ್ಲಿ ಉಳ್ಳ 'ಸಿಚ್' ಪರದಲ್ಲಿದ್ದಾಗ ಪ್ರಕೃತ ಸೂತ್ರವು ನಿಷೇದಿಸಿತ್ತು. ಆದರೆ ಪ್ರಕೃತ ಸೂತ್ರದಿಂದ ವದ್(ವದ) ಮತ್ತು ವ್ರಜ (ವ್ರಜ) ಧಾತುಗಳಿಗೆ ಮಾತ್ರ ಈ ವೃದ್ಧಿನಿಷೇಧ ಅನ್ವಯಿಸುವುದಿಲ್ಲ. ಅಂದರೆ ಕೇವಲ ಹಲನ್ತ ಧಾತುಗಳಿಗೆ ಮಾತ್ರ ವೃದ್ಧಿನಿಷೇಧವು ಅನ್ವಯಿಸುತ್ತದೆ ಎಂದು ತಿಳಿಯಬೇಕು.

ಲುಙ್: ಉದಾ- ಅಗೋಪೀತ್, ಅಗೌಪ್ಸೀತ್- ಪ್ರಥಮಪುರುಷ ಏಕವಚನದಲ್ಲಿ ಹಿಂದಿನಂತೆ ಅಗುಪ್+ಇಸ್+ಈತ್ ಎಂದಿದ್ದಾಗ, "ವದ-ವ್ರಜ-ಹಲನ್ತಸ್ಯಾಚಃ" ಎಂಬ ಸೂತ್ರದಿಂದ ಗುಪ್ ಧಾತುವಿನಲ್ಲಿರುವ 'ಉ' ಕಾರಕ್ಕೆ ಪ್ರಾಪ್ತವಾದ ವೃದ್ಧಿ ಪ್ರಕೃತ ಸೂತ್ರದಿಂದ ನಿಷೇಧಿಸಲ್ಪಟ್ಟಿದೆ. ವೃದ್ಧಿ ಬಾರದೇ ಇದ್ದಾಗ, "ಪುಗನ್ತ ಲಘೂಪಧಸ್ಯ ಚ" ಎಂಬ ಸೂತ್ರದಿಂದ ಉಪಧೆಯಾದ 'ಉ' ಕಾರಕ್ಕೆ ಗುಣ ರೂಪವಾದ 'ಓ' ಕಾರವು ಬರುತ್ತದೆ. ಆಗ ಅಗೋಪ್+ಇಸ್+ಈತ್ ಎಂದಿರುತ್ತದೆ. ಹಿಂದಿನಂತೆ 'ಸ್' ಕಾರಕ್ಕೆ ಲೋಪ ಮತ್ತು ಸವರ್ಣದೀರ್ಘಗಳಾಗಿ ಅಗೋಪೀತ್ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ- ಅಗೌಪ್ಸೀತ್- ಇಡಾಗಮ ಬಾರದ ಪಕ್ಷದಲ್ಲಿ ಅಗುಪ್+ಸ್+ಈತ್ ಎಂದಿದ್ದಾಗ 'ಸ್' ಕಾರಕ್ಕೆ ವಲಾದಿಯಿಂದ ಬರಬೇಕಾದ ಇಡಾಗಮವು ಬರುವುದಿಲ್ಲ. ಮತ್ತು ಅಪೃಕ್ತವೆಂದು ಭಾವಿಸಿ 'ಈತ್' ನಲ್ಲಿರುವ 'ತ್' ಕಾರಕ್ಕೆ ಅಪೃಕ್ತಸಂಜ್ಞೆ ಇರೋಣದ್ದರಿಂದ "ಅಸ್ತಿ ಸಿಚೋಽಪೃಕ್ತೇ" ಎಂಬ ಸೂತ್ರದಿಂದ 'ಈಟ್' ಆಗಮವು ಬಂದಿರುತ್ತದೆ. ಇಲ್ಲಿ ಪ್ರಕೃತ ಸೂತ್ರದಿಂದ ವೃದ್ಧಿ ನಿಷೇಧವಾಗಲಿಲ್ಲ. ಯಾಕೆಂದರೆ- 'ಇಟ್' ಬಾರದೇ ಇದ್ದದ್ದರಿಂದ ಇಡಾದಿಯಾದ ಸಿಚ್ ಇರುವುದಿಲ್ಲ. ಆದುದರಿಂದ "ವದ-ವ್ರಝ-ಹಲನ್ತಸ್ಯಾಚಃ" ಎಂಬ ಸೂತ್ರದಿಂದ ವೃದ್ಧಿ ಬಂದು ಅಗೌಪ್+ಸ್+ಈತ್=ಅಗೌಪ್ಸೀತ್ ಎಂಬ ರೂಪವು ಸಿದ್ಧವಾಗುತ್ತದೆ. ಇಲ್ಲಿ "ಇಟ ಈಟಿ" ಎಂಬ ಸೂತ್ರಕ್ಕೆ ಅವಕಾಶವಿಲ್ಲದ್ದರಿಂದ 'ಸ್' ಕಾರಕ್ಕೆ ಲೋಪವು ಬರಲಿಲ್ಲ.

ಉದಾ- ಅಗೋಪಾಯಿಷ್ಟಾಮ್-(ಆಯ ಮತ್ತು ಇಟ್ ಬಂದ ಪಕ್ಷದಲ್ಲಿ) ಪ್ರಥಮಪುರುಷ ದ್ವಿವಚನದಲ್ಲಿ ಅಗೋಪ್+ಆಯ+ಇಸ್+ತಾಮ್ ಎಂದಿದ್ದಾಗ, "ಅತೋ ಲೋಪಃ" ಎಂಬ ಸೂತ್ರದಿಂದ 'ಯ್' ಕಾರೋತ್ತರ 'ಅ' ಕಾರಕ್ಕೆ ಲೋಪ ಬಂದು ಅಗೋಪ್+ಆಯ್+ಇಸ್+ತಾಮ್ ಎಂದಿದ್ದಾಗ 'ತ್' ಕಾರಕ್ಕೆ ಷ್ಟುತ್ವ ಬಂದು ಅಗೋಪಾಯೀಷ್ಟಾಮ್ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ- ಅಗೋಪಿಷ್ಟಾಮ್ (ಆಯ ಬಾರದೇ ಇಟ್ ಮಾತ್ರ ಬಂದ ಪಕ್ಷದಲ್ಲಿ) ಮೇಲಿನಂತೆಯೇ ಪ್ರಕ್ರಿಯೆ ನಡೆದು ಅಗೋಪಿಷ್ಟಾಮ್ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ- ಅಗೌಪ್ತಾಮ್ (ಇಟ್ ಬಾರದ ಪಕ್ಷದಲ್ಲಿ) - ಈ ರೂಪವು ಮುಂದಿನ ಸೂತ್ರದಿಂದ ಸಿದ್ಧವಾಗುತ್ತದೆ.

**(ಸ್- ಕಾರ ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ - 478. ಝಲೋ ಝಲಿ (8.2.26)**

ವೃತ್ತಿಃ -ಝಲಃ ಪರಸ್ಯ ಸಸ್ಯ ಲೋಪಃ ಝಲಿ। ಅಗೌಪ್ತಾಮ್। ಅಗೌಪ್ಸುಃ। ಅಗೌಪ್ಸೀಃ। ಅಗೌಪ್ತಮ್। ಅಗೌಪ್ತ। ಅಗೌಪ್ಸಮ್। ಅಗೌಪ್ಸ್ವ। ಅಗೌಪ್ಸ್ಮ। ಅಗೋಪಾಯಿಷ್ಯತ್। ಅಗೋಪಿಷ್ಯತ್। ಅಗೋಪ್ಸ್ಯತ್।ಕ್ಷಿ ಕ್ಷಯೇ।13। ಕ್ಷಯತಿ। ಚಿಕ್ಷಾಯ। ಚಿಕ್ಷಿಯತುಃ ಚಿಕ್ಷಿಯುಃ। "(475) ಏಕಾಚ್" ಇತಿ ನಿಷೇಧೇ ಪ್ರಾಪ್ತೇ-

ಪ. ಛೇ. - ಝಲಃ, ಝಲಿ।

ಅ. ವೃ.- "ರಾತ್ ಸಸ್ಯ" ಎಂಬ ಸೂತ್ರದಿಂದ 'ಸಸ್ಯ' ಮತ್ತು"ಸಂಯೋಗಾನ್ತಸ್ಯ ಲೋಪಃ" ಎಂಬ ಸೂತ್ರದಿಂದ 'ಲೋಪಃ' ಎಂಬ ಶಬ್ದವೂ ಅನುವೃತ್ತವಾಗುತ್ತವೆ.

ಅರ್ಥ- 'ಝಲ್' ಪರದಲ್ಲಿದ್ದಾಗ ಪೂರ್ವದಲ್ಲಿರುವ 'ಝಲ್' ವರ್ಣದ 'ಸ್' ಕಾರಕ್ಕೆ ಲೋಪವು ಬರುತ್ತದೆ.

ಉದಾ- ಅಗೌಪ್ತಾಮ್।(ಇಟ್ ಬಾರದ ಪಕ್ಷದಲ್ಲಿ 'ಸ್' ಕಾರದ ಲೋಪ)- ಪ್ರಥಮ ಪುರುಷ ದ್ವಿವಚನದಲ್ಲಿ ಅಗುಪ್+ಸ್+ತಾಮ್ ಎಂದಿದ್ದಾಗ, ಉಪಧೆಯ 'ಉ' ಕಾರಕ್ಕೆ ವೃದ್ಧಿ(ಔ) ಬಂದು ಅಗೌಪ್+ಸ್+ತಾಮ್ ಎಂದಿದ್ದಾಗ ಪ್ರಕೃತ ಸೂತ್ರದಿಂದ 'ಸ್' ಕಾರಕ್ಕೆ ಲೋಪವಾಗಿ ಅಗೌಪ್+ತಾಮ್=ಅಗೌಪ್ತಾಮ್ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ- ಅಗೌಪ್ಸುಃ- ಪ್ರಥಮಪುರುಷ ಬಹುವಚನದಲ್ಲಿ ಅಗುಪ್+ಸ್+ಉಸ್ ಎಂದಿದ್ದಾಗ ಹಿಂದಿನಂತೆ ಉಪಧೆಯು 'ಉ' ಕಾರಕ್ಕೆ ವೃದ್ಧಿ(ಔ) ಬಂದು ಅಗೌಪ್+ಸ್+ಉಸ್ ಎಂದಿರುತ್ತದೆ. 'ಝಲ್' ಪರದಲ್ಲಿ ಇಲ್ಲದೇ ಇರೋಣದರಿಂದ 'ಸ್' ಕಾರಕ್ಕೆ ಲೋಪವು ಬಾರದೇ ರುತ್ವ- ವಿಸರ್ಗಗಳಿಂದ ಅಗೌಪ್ಸುಃ ಎಂಬ ರೂಪವು ಸಿದ್ಧವಾಗಿದೆ,

**'ಲುಙ್' ನಲ್ಲಿ ಗುಪ್ ಧಾತುವಿನ ರೂಪಗಳು** :

1.ಆಯ ಮತ್ತು ಇಡಾಗಮ ಬರುವ ಪಕ್ಷ- ಅಗೋಪಾಯೀತ್, ಅಗೋಪಾಯಿಷ್ಟಾಮ್, ಅಗೋಪಾಯಿಷುಃ। ಅಗೋಪಾಯೀಃ, ಅಗೋಪಾಯಿಷ್ಟಮ್, ಅಗೋಪಾಯಿಷ್ಟ। ಅಗೋಪಾಯಿಷಮ್, ಅಗೋಪಾಯಿಷ್ವ, ಅಗೋಪಾಯಿಷ್ಮ।

2.ಆಯ ಬಾರದೇ ಇಡಾಗಮ ಬರುವ ಪಕ್ಷ- ಅಗೋಪೀತ್, ಅಗೋಪಿಷ್ಟಾಮ್, ಅಗೋಪಿಷುಃ। ಅಗೋಪೀಃ ಅಗೋಪಿಷ್ಟಮ್, ಅಗೋಪಿಷ್ಟ। ಅಗೋಪಿಷಮ್, ಅಗೋಪಿಷ್ವ, ಅಗೋಪಿಷ್ಮ।

3.ಆಯ ಮತ್ತು ಇಟ್ ಗಳು ಬಾರದಿರುವ ಪಕ್ಷ- ಅಗೌಪ್ಸೀತ್, ಅಗೌಪ್ತಾಮ್, ಅಗೌಪ್ಸುಃ। ಅಗೌಪ್ಸೀಃ, ಅಗೌಪ್ತಮ್, ಅಗೌಪ್ತ। ಅಗೌಪ್ಸಮ್, ಅಗೌಪ್ಸ್ವ, ಅಗೌಪ್ಸ್ಮ।

**ಲೃಙ್**: ಉದಾ-ಅಗೋಪಾಯಿಷ್ಯತ್- ಲೃಙ್ 'ಲ್' ಕಾರದಲ್ಲಿ ಪ್ರಥಮಪುರುಷ ಏಕವಚನದಲ್ಲಿ ಧಾತುವಿಗೆ ಪೂರ್ವದಲ್ಲಿ ಅಡಾಗಮ ಬಂದಮೇಲೆ 'ಆಯ' ಎಂಬ

ಪ್ರತ್ಯಯವು ವೈಕಲ್ಪಿಕವಾಗಿ ಬರುತ್ತದೆ. 'ಸ್ಯ' ಎಂಬ ಆರ್ಧಧಾತುಕ ಪ್ರತ್ಯಯವು ಇಡಾಗಮಸಹಿತವಾಗಿ ಧಾತುವಿನ ನಂತರ ಬರುತ್ತದೆ. ಕೊನೆಯಲ್ಲಿ 'ತ್' ಎಂಬ ಆಖ್ಯಾತ ಪ್ರತ್ಯಯವೂ ಇರುತ್ತದೆ. ಆಗ ಅಗೋಪಾಯ+ಇಸ್ಯ+ತ್ ಎಂದಿದ್ದಾಗ, "ಅತೋ ಲೋಪಃ" ಎಂಬ ಸೂತ್ರದಿಂದ ಧಾತುವಿನ ಕೊನೆಯಲ್ಲಿರುವ 'ಅ' ಕಾರವು ಲೋಪವಾಗುತ್ತದೆ. 'ಸ್ಯ' ನಲ್ಲಿರುವ 'ಸ್' ಕಾರಕ್ಕೆ 'ಷತ್ವ' ಬರುತ್ತದೆ. ಹೀಗಾಗಿ 'ಅಗೋಪಾಯಿಷ್ಯತ್' ಎಂದು ರೂಪವು ಸಿದ್ಧವಾಗುತ್ತದೆ.

1. ಆಯ ಪ್ರತ್ಯಯ ಬಂದ ರೂಪಗಳು–ಅಗೋಪಾಯಿಷ್ಯತ್, ಅಗೋಪಾಯಿಷ್ಯತಾಮ್, ಅಗೋಪಾಯಿಷ್ಯನ್। ಅಗೋಪಾಯಿಷ್ಯಃ, ಅಗೋಪಾಯಿಷ್ಯತಮ್, ಅಗೋಪಾಯಿಷ್ಯತ। ಅಗೋಪಾಯಿಷ್ಯಮ್, ಅಗೋಪಾಯಿಷ್ಯಾವ, ಅಗೋಪಾಯಿಷ್ಯಾಮ।

2. ಆಯ ಪ್ರತ್ಯಯ ಬಾರದೇ ವೈಕಲ್ಪಿಕ ಇಡಾಗಮ ಬಂದ ರೂಪಗಳು– ಅಗೋಪಿಷ್ಯತ್, ಅಗೋಪಿಷ್ಯತಾಮ್, ಅಗೋಪಿಷ್ಯನ್। ಅಗೋಪಿಷ್ಯಃ, ಅಗೋಪಿಷ್ಯತಮ್, ಅಗೋಪಿಷ್ಯತ। ಅಗೋಪಿಷ್ಯಮ್, ಅಗೋಪಿಷ್ಯಾವ, ಅಗೋಪಿಷ್ಯಾಮ।

3. ಆಯ ಮತ್ತು ಇಟ್‌ಗಳು ಬಾರದಿರುವ ಪಕ್ಷ–ಅಗೋಪ್ಸ್ಯತ್,ಅಗೋಪ್ಸ್ಯತಾಮ್, ಅಗೋಪ್ಸ್ಯನ್। ಅಗೋಪ್ಸ್ಯಃ, ಅಗೋಪ್ಸ್ಯತಮ್, ಅಗೋಪ್ಸ್ಯತ। ಅಗೋಪ್ಸ್ಯಮ್, ಅಗೋಪ್ಸ್ಯಾವ, ಅಗೋಪ್ಸ್ಯಾಮ।

13. ಕ್ಷಿ ಕ್ಷಯೇ (ನಾಶವಾಗುವುದು(ಅಕರ್ಮಕ) ಅಥವಾ ಕ್ಷೀಣವಾಗುವುದು) – 'ಕ್ಷಿ' ಧಾತುವಿನಲ್ಲಿ ಅನ್ತ್ಯ 'ಇ' ಕಾರವು ಇತ್ ಸಂಜ್ಞಕವಲ್ಲ.

**ಲಟ್**: ಉದಾ– ಕ್ಷಯತಿ– 'ಕ್ಷಿ' ಧಾತುವಿನ ನಂತರ 'ಲಟ್' ಆದೇಶವಾದ ತಿಪ್ ಬಂದು, ಧಾತುವಿನ ನಂತರ 'ಶಪ್(ಅ)' ಸೇರಿಸಿದಾಗ ಕ್ಷಿ+ಅ+ತಿ ಎಂದಿರುತ್ತದೆ. "ಸಾರ್ವಧಾತುಕಾರ್ಧಧಾತುಕಯೋಃ" ಎಂಬ ಸೂತ್ರದಿಂದ 'ಇ' ಕಾರಕ್ಕೆ ಗುಣ (ಏ) ಬಂದು ಅದಕ್ಕೆ ಯಾನ್ತಾದೇಶದಿಂದ 'ಅಯ್' ಆದೇಶ ಬಂದು ಕ್ಷ್+ಅಯ್+ಅ+ತಿ=ಕ್ಷಯತಿ ಎಂದು ರೂಪವು ಸಿದ್ಧವಾಗುತ್ತದೆ.

ರೂಪಗಳು: ಕ್ಷಯತಿ, ಕ್ಷಯತಃ, ಕ್ಷಯನ್ತಿ। ಕ್ಷಯಸಿ, ಕ್ಷಯಥಃ, ಕ್ಷಯಥ। ಕ್ಷಯಾಮಿ, ಕ್ಷಯಾವಃ, ಕ್ಷಯಾಮಃ।

**ಲಿಟ್**: ಉದಾ–ಚಿಕ್ಷಾಯ– ಪ್ರಥಮಪುರುಷ ಏಕವಚನದಲ್ಲಿ 'ಕ್ಷಿ' ಧಾತುವಿನ ನಂತರ 'ಲಿಟ್' ಆದೇಶವಾದ 'ತಿಪ್' ಬಂದಮೇಲೆ ಅದಕ್ಕೆ ಅಭಿನವ ಆಖ್ಯಾತ ಪ್ರತ್ಯಯವಾದ 'ಣಲ್(ಅ)' ಬಂದು, ಕ್ಷಿ+ಅ ಎಂದಿರುತ್ತದೆ. ಧಾತುವಿಗೆ ದ್ವಿತ್ವ ಬಂದಮೇಲೆ ಕ್ಷಿ ಕ್ಷಿ+ಅ ಎಂದಿರುತ್ತದೆ. "ಹಲಾದಿ ಶೇಷ'ದಿಂದ ಅಭ್ಯಾಸದ 'ಕ್ಷಿ' ನಲ್ಲಿರುವ ಎರಡನೆಯ ವರ್ಣವಾದ 'ಷ' ಕಾರವು ಲೋಪವಾಗಿ 'ಕಿ+ಕ್ಷಿ+ಅ ಎಂದಿರುತ್ತದೆ. 'ಕ್' ಕಾರಕ್ಕೆ "ಕುಹೋಶ್ಚುಃ" ಎಂಬುದರಿಂದ ಚುತ್ವವು ಬಂದು ಚಿಕ್ಷಿ+ಅ ಎಂದಿರುತ್ತದೆ. ಕ್ಷಿ ನಲ್ಲಿರುವ 'ಇ' ಕಾರಕ್ಕೆ "ಅಚೋಞ್ಣಿತಿ" ಎಂಬ ಸೂತ್ರದಿಂದ ವೃದ್ಧಿ ಬಂದು ಚಿಕ್ಷೈ+ಅ ಎಂದಿದ್ದಾಗ, ಯಾನ್ತಾದೇಶ ಬಂದು ಚಿಕ್ಷ್+ಆಯ್+ಅ=ಚಿಕ್ಷಾಯ ಎಂದು ರೂಪವು ಸಿದ್ಧವಾಗುತ್ತದೆ.

ಉದಾ–ಚಿಕ್ಷಿಯತುಃ – ಪ್ರಥಮಪುರುಷ ದ್ವಿವಚನದಲ್ಲಿ 'ಕ್ಷಿ' ಧಾತುವಿನ ನಂತರ ಹಿಂದಿನಂತೆ 'ಲಿಟ್' ಗೆ 'ಅತುಸ್' ಬಂದು, ಕ್ಷಿ+ಅತುಸ್ ಎಂದಿದ್ದಾಗ, ಹಿಂದಿನಂತೆ ದ್ವಿತ್ವಾದಿಗಳು ಬಂದು ಚಿಕ್ಷಿ+ಅತುಸ್ ಎಂದಿರುತ್ತದೆ. 'ಣಿತ್' ಅಲ್ಲವಾದ್ದರಿಂದ ವೃದ್ಧಿ ಬರುವುದಿಲ್ಲ."ಅಸಂಯೋಗಾಲ್ಲಿಟ್ಕಿತ್" ಎಂಬುದರಿಂದ ಕಿದ್ವದ್ಭಾವ ಬಂದು "ಕ್ಙಿತಿಚ" ಎಂಬ ಸೂತ್ರದಿಂದ ಗುಣ ನಿಷೇಧವಾಗುತ್ತದೆ. ಆಗ ಚಿಕ್ಷಿ+ಅತುಸ್ ಎಂದಿದ್ದಾಗ, 'ಇ' ಕಾರಕ್ಕೆ "ಅಚಿ ಶ್ನುಧಾತುಭ್ರುವಾಮ್ ಯ್ವೋರಿಯಙುವಙೌ" ಎಂಬ ಸೂತ್ರದಿಂದ 'ಇಯಙ್(ಇಯ್)' ಆದೇಶವು ಬರುತ್ತದೆ. ಆಗ ಚಿಕ್ಷ್+ಇಯ್+ಅತುಸ್ ಎಂದಿದ್ದಾಗ 'ಸ್' ಕಾರಕ್ಕೆ ರುತ್ವ–ವಿಸರ್ಗಗಳಿಂದ ಚಿಕ್ಷಿಯತುಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಚಿಕ್ಷಿಯುಃ – ಪ್ರಥಮಪುರುಷ ಬಹುವಚನದಲ್ಲಿ ಹಿಂದಿನಂತೆಯೇ ಪ್ರಕ್ರಿಯೆ ನಡೆದು ಚಿಕ್ಷ್+ಇಯ್+ಉಸ್=ಚಿಕ್ಷಿಯುಃ ಎಂಬ ರೂಪವು ಸಿದ್ಧವಾಗುತ್ತದೆ. ("(475) ಏಕಾಚ್"ಇತಿ ನಿಷೇಧೇ ಪ್ರಾಪ್ತೇ) –

**(ಇಟ್ ಆಗಮವನ್ನು ವಿಧಿಸುವ ಸೂತ್ರ)**

**ಸೂತ್ರ – 479.ಕೃ–ಸೃ–ಭೃ–ವೃ–ಸ್ತು–ದ್ರು–ಸ್ರು–ಶ್ರುವೋ ಲಿಟಿ। (7.2.13)**

ವೃತ್ತಿಃ–ಕ್ರಾದಿಭ್ಯಃ ಏವ ಲಿಟಃ ಇಣ್ ನ ಸ್ಯಾತ್ ಅನ್ಯಸ್ಮಾತ್ ಅನಿಟಃ ಅಪಿ ಸ್ಯಾತ್।

ಪ. ಛೇ. – ಕೃ–ಸೃ–ಭೃ–ವೃ–ಸ್ತು–ದ್ರು–ಸ್ರು–ಶ್ರುವಃ, ಲಿಟಿ।

ಅ. ವೃ –"ನೇಡ್ವಶಿಕೃತಿ" ಎಂಬ ಸೂತ್ರದಿಂದ 'ನ' ಮತ್ತು 'ಇಟ್' ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ– ಕೃ–ಸೃ–ಭೃ–ವೃ–ಸ್ತು–ದ್ರು–ಸ್ರು ಮತ್ತು ಶ್ರು ಧಾತುಗಳ ನಂತರ 'ಲಿಟ್' ಲ್' ಕಾರದಲ್ಲಿ ಇಡಾಗಮವು ಬರುವುದಿಲ್ಲ. ಅನ್ಯ ಅನಿಟ್ ಧಾತುಗಳನಂತರವೇ 'ಲಿಟ್' 'ಲ್' ಕಾರದಲ್ಲಿ ಇಡಾಗಮವು ಬರುತ್ತದೆ.

ವಿವರಣೆ– ಈ ಸೂತ್ರದಲ್ಲಿ ಹೇಳಿರುವ 4 ಧಾತುಗಳಿಗಿಂತ ಭಿನ್ನವಾದ ಸ್ತು, ದ್ರು, ಸ್ರು ಮತ್ತು ಶ್ರು ಧಾತುಗಳನ್ನು ನಿಯಮಾರ್ಥವಾಗಿ ಸ್ವೀಕರಿಸಲಾಗಿಲ್ಲ. ಬೇರೆ ಪ್ರಯೋಜನಕ್ಕಾಗಿ ಪಠಿಸಲಾಗಿದೆ. ಅದೇನೆಂದರೆ– ಈ ಧಾತುಗಳಮೇಲೆ ಬರುವ 'ಥಲ್' ಪ್ರತ್ಯಯಕ್ಕೆ "ಋತೋ ಭಾರದ್ವಾಜಸ್ಯ" ಎಂಬ ಸೂತ್ರದಿಂದ ವೈಕಲ್ಪಿಕವಾಗಿ 'ಇಟ್' ಪ್ರಾಪ್ತವಾಗಿತ್ತು. ಹಾಗೆಯೇ 'ವಸ್' ಮಸ್' ಗಳಿಗೆ ಕ್ರಾದಿ ನಿಯಮದಿಂದ 'ಇಟ್' ಪ್ರಾಪ್ತವಾಗಿತ್ತು. ಅದನ್ನು ತಡೆಯುವದರ ಸಲುವಾಗಿ ಸ್ತು, ದ್ರು, ಸ್ರು ಮತ್ತು ಶ್ರು ಧಾತುಗಳನ್ನು ಸ್ವೀಕರಿಸಲಾದೆ. ಅಂದರೆ 'ಲಿಟ್' 'ಲ್' ಕಾರದಲ್ಲಿ ಮೇಲೆ ಹೇಳಿದ 4 ಧಾತುಗಳಿಗೆ ಯಾಗಾಗಲೂ 'ಇಟ್' ಬರುವುದಿಲ್ಲ. ಆದ್ದರಿಂದ ಈ 8 ಧಾತುಗಳ ಪರದಲ್ಲಿ 'ಲಿಟ್'ಗೆ ಸಂಬಂಧಿಸಿದ ಎಲ್ಲ ವಲಾದಿಆರ್ಧಧಾತುಕಗಳಿಗೆ ಇಡಾಗಮ ಬರದು.

ಕ್ರಾದಿ ನಿಯಮವೆಂದರೆ ಕೃ ಮೊದಲಾದ ಧಾತುಗಳ ನಂತರವೇ ಇಡಾಗಮವು ಬರುವುದಿಲ್ಲ. ಇದಕ್ಕಿಂತ ಭಿನ್ನವಾದ ಅನಿಟ್ ಧಾತುಗಳ ಪರದಲ್ಲಿ 'ಲಿಟ್' ಗೆ ಇಡಾಗಮವು ಬರುತ್ತದೆ. ಈ ನಿಯಮದ ಪ್ರಕಾರ 'ಕೃ' ಮೊದಲಾದ ಧಾತುಗಳಿಗಿಂತ ಭಿನ್ನ

ಧಾತುಗಳನಂತರ 'ಲಿಟ್' ಗೆ ಎಲ್ಲಿ ಇಡಾಗಮ ನಿಷೇಧ ಮಾಡಲಾಗಿದೆಯೋ ಅಲ್ಲಿಯೂ 'ಇಟ್' ಬರುತ್ತದೆ.

**(ಇಟ್ ಆಗಮವನ್ನು ನಿಷೇಧಿಸುವ ಸೂತ್ರ)**

**ಸೂತ್ರ – 480.ಅಚಸ್ತಾಸ್ವತ್ಥಲ್ಯನಿಟೋ ನಿತ್ಯಮ್ (7.2.61)**

ವೃತ್ತಿಃ–ಉಪದೇಶೇ ಅಜನ್ತಃ ೦ಯಃ ಧಾತುಃ ತಾಸೌ ನಿತ್ಯಂ ಅನಿಟ್, ತತಃ ಥಲಃ ಇಟ್ ನ।

ಪ. ಛೇ. – ಅಚಃ, ತಾಸ್ವತ್, ಥಲಿ, ಅನಿಟಃ, ನಿತ್ಯಮ್।

ಅ. ವೃ – "ಉಪದೇಶೇಽತ್ವತಃ" ಎಂಬ ಸೂತ್ರದಿಂದ 'ಉಪದೇಶೇ' ಎಂಬ ಶಬ್ದವು ಅಪಕೃಷ್ಟವಾಗಿದೆ. "ತಾಸಿ ಚ ಕ್ಲೃಪಃ" ಎಂಬ ಸೂತ್ರದಿಂದ 'ತಾಸಿ' ಎಂಬ ಪದವೂ "ಗಮೇರಿಟ್ ಪರಸ್ಮೈಪದೇಷು" ಎಂಬ ಸೂತ್ರದಿಂದ 'ಇಟ್' ಎಂಬ ಪದವೂ ಮತ್ತು "ನ ವೃದ್ಭ್ಯಶ್ಚತುರ್ಭ್ಯಃ" ಎಂಬ ಸೂತ್ರದಿಂದ 'ನ' ಎಂಬ ಪದವೂ ಅನುವೃತ್ತವಾಗುತ್ತದೆ.

ಅರ್ಥ–ಉಪದೇಶದಲ್ಲಿ ಅಜನ್ತ ಧಾತುವಿನ ನಂತರ 'ತಾಸಿ' ಪ್ರತ್ಯಯವು ಇದ್ದಾಗ, ಆ ಧಾತುವು 'ಅನಿಟ್' ಆಗುತ್ತದೆ. ಅದರ ಪರದಲ್ಲಿ 'ಥಲ್' ಪ್ರತ್ಯಯವಿದ್ದಾಗ, ಅದಕ್ಕೆ ಇಡಾಗಮವು ಬರುವುದಿಲ್ಲ. ಯಾವ ರೀತಿ 'ಕ್ಷಿ' ಧಾತುವು ಉಪದೇಶಾವಸ್ಥೆಯಲ್ಲಿ ಅಜನ್ತವಾಗಿರುತ್ತದೆ, ಅದರ ಪರದಲ್ಲಿ ತಾಸಿ ಪ್ರತ್ಯಯವು ಬಂದಾಗ ನಿತ್ಯವಾಗಿ ಅನಿಟ್ ಆಗಿ ಇರುತ್ತದೆ. ಇದರಿಂದ ಕ್ಷೇತಾ ಎಂಬ ರೂಪವು ಸಿದ್ಧವಾಗುತ್ತದೆ.

ಕ್ರಾದಿ ನಿಯಮದಿಂದ 'ಕೃ' ಮೊದಲಾದ ಧಾತುಗಳನಂತರವೇ 'ಲಿಟ್' ನಲ್ಲಿ 'ಇಟ್' ಬರುವುದಿಲ್ಲ. ಬೇರೆ ಧಾತುಗಳಿಗೆ ಬರುತ್ತದೆ. ಕ್ರಾದಿ ನಿಯಮದಿಂದ ಇಲ್ಲಿ 'ಇಟ್' ಬರಲು ಅವಕಾಶವಿತ್ತು, ಪ್ರಕೃತ ಸೂತ್ರದಿಂದ ಪ್ರಾಪ್ತವಾದ 'ಇಟ್' ಗೆ 'ಥಲ್' ಪ್ರತ್ಯಯ ಬಂದಾಗ ಮಾತ್ರ ಇಡಾಗಮವನ್ನು ನಿಷೇಧಿಸಲಾಗಿದೆ.

**(ಇಟ್ ಆಗಮವನ್ನು ನಿಷೇಧಿಸುವ ಸೂತ್ರ)**

**ಸೂತ್ರ – 481.ಉಪದೇಶೇಽತ್ವತಃ (7.2.62)**

ವೃತ್ತಿಃ–ಉಪದೇಶೇ ಅಕಾರವತಃ ತಾಸೌ ನಿತ್ಯ –ಅನಿಟಃ ಪರಸ್ಯ ಥಲಃ ಇಟ್ ನ ಸ್ಯಾತ್।

ಪ. ಛೇ. – ಉಪದೇಶೇ, ಅತ್ವತಃ।

ಅ. ವೃ– "ಅಚಸ್ತಾಸ್ವತ್ಥಲ್ಯನಿಟೋ ನಿತ್ಯಮ್" ಎಂಬ ಸೂತ್ರದಿಂದ 'ತಾಸ್ವತ್' 'ಥಲಿ' 'ಅನಿಟ್' ಮತ್ತು 'ನಿತ್ಯಮ್' ಎಂಬ ಪದಗಳು, "ತಾಸಿ ಚ ಕ್ಲೃಪಃ" ಎಂಬ ಸೂತ್ರದಿಂದ 'ತಾಸಿ' ಎಂಬ ಪದವೂ "ಗಮೇರಿಟ್ ಪರಸ್ಮೈಪದೇಷು" ಎಂಬ ಸೂತ್ರದಿಂದ 'ಇಟ್' ಎಂಬ ಪದವೂ ಮತ್ತು "ನ ವೃದ್ಭ್ಯಶ್ಚತುರ್ಭ್ಯಃ" ಎಂಬ ಸೂತ್ರದಿಂದ 'ನ' ಎಂಬ ಪದವೂ ಅನುವೃತ್ತವಾಗುತ್ತದೆ.

ಅರ್ಥ– ಉಪದೇಶಾವಸ್ಥೆಯಲ್ಲಿ ಹ್ರಸ್ವ 'ಅ' ಕಾರವುಳ್ಳ ಯಾವ ಧಾತು ಇದೆಯೋ

ಅದಕ್ಕೆ ಪರದಲ್ಲಿರುವ 'ತಾಸಿ' ಪ್ರತ್ಯಯವಿದ್ದಾಗ ಆ ಧಾತುವು ನಿತ್ಯವಾಗಿ 'ಅನಿಟ್' ಆಗುತ್ತದೆ. ಇದರ ಪರದಲ್ಲಿ 'ಥಲ್' ಪ್ರತ್ಯಯವಿದ್ದಾಗ, 'ಇಟ್' ಬರುವುದಿಲ್ಲ.

ಹಿಂದಿನ ಸೂತ್ರದಲ್ಲಿ ಅಜನ್ತ ಧಾತುಗಳಲ್ಲಿ 'ಇಟ್' ನ್ನು ನಿಷೇಧ ಮಾಡಲಾಗಿತ್ತು. ಪ್ರಕೃತ ಸೂತ್ರದಲ್ಲಿ ಹ್ರಸ್ವ 'ಅ' ಕಾರಾನ್ತವಾದ ಧಾತುಗಳ ಪರದಲ್ಲಿ 'ಥಲ್' ಗೆ ಇಡಾಗಮವನ್ನು ನಿಷೇಧಿಸಲಾಗಿದೆ.

ಈ ಎರಡು ಸೂತ್ರಗಳಲ್ಲಿ 'ತಾಸಿ' ಪ್ರತ್ಯಯ ಪರದಲ್ಲಿದ್ದಾಗ, ಅನಿಟ್ ಆಗುವ ಅಜನ್ತ ಮತ್ತು ಹ್ರಸ್ವ 'ಅ' ಕಾರವುಳ್ಳ ಧಾತುಗಳನಂತರ ಇರುವ 'ಥಲ್' ಪ್ರತ್ಯಯಕ್ಕೆ ಇಡಾಗಮವನ್ನು ನಿಷೇಧಿಸಲಾಗಿದೆ.

**(ಥಲ್ ವಿಷಯಕವಾದ ಭಾರದ್ವಾಜ ನಿಯಮ ಸೂತ್ರ)**

**ಸೂತ್ರ – 482.ಋತೋ ಭಾರದ್ವಾಜಸ್ಯ (7.2.63)**

ವೃತ್ತಿಃ–ತಾಸೌ ನಿತ್ಯ–ಅನಿಟಃ ಋದಂತಾತ್ ಏವ ಥಲಃ ನ ಇಟ್ ಭಾರದ್ವಾಜಸ್ಯ ಮತೇ। ತೇನ ಅನ್ಯಸ್ಯ ಧಾತೋಃ ಸ್ಯಾದೇವ।

ಅಯಮತ್ರ ಸಂಗ್ರಹಃ –

"ಅಜನ್ತೋಕಾರವಾನ್ ವಾಚ್ಯಃ ತಾಸ್ಯನಿಟ್ ಥಲಿ ವೇಡಯಮ್।

ಋದನ್ತ ಈದೃಙ್ ನಿತ್ಯಾನಿಟ್ ಕ್ರಾದ್ಯನ್ಯೋ ಲಿಟಿ ಸೇಡ್‌ಭವೇತ್॥"

ಚಿಕ್ಷಯಿಥ, ಚಿಕ್ಷೇಥ । ಚಿಕ್ಷಿಯಥುಃ। ಚಿಕ್ಷಿಯ। ಚಿಕ್ಷಾಯ, ಚಿಕ್ಷಯ। ಚಿಕ್ಷಿಯಿವ। ಚಿಕ್ಷಿಯಿಮ। ಕ್ಷೇತಾ। ಕ್ಷೇಷ್ಯತಿ। ಕ್ಷಯತು। ಅಕ್ಷಯತ್। ಕ್ಷಯೇತ್।

ಪ. ಛೇ. – ಋತಃ, ಭಾರದ್ವಾಜಸ್ಯ।

ಅ. ವೃ– "ಅಚಸ್ತಾಸ್ವತ್ಥಲ್ಯನಿಟೋ ನಿತ್ಯಮ್" ಎಂಬ ಸೂತ್ರದಿಂದ 'ತಾಸ್ವತ್' 'ಥಲಿ' 'ಅನಿಟ್' ಮತ್ತು 'ನಿತ್ಯಮ್' ಎಂಬ ಪದಗಳು, "ತಾಸಿ ಚ ಕ್ಲೃಪಃ" ಎಂಬ ಸೂತ್ರದಿಂದ 'ತಾಸಿ' ಎಂಬ ಪದವೂ "ಗಮೇರಿಟ್ ಪರಸ್ಮೈದೇಷು" ಎಂಬ ಸೂತ್ರದಿಂದ 'ಇಟ್' ಎಂಬ ಪದವೂ ಮತ್ತು "ನ ವೃದ್ಭ್ಯಶತುರ್ಭ್ಯಃ" ಎಂಬ ಸೂತ್ರದಿಂದ 'ನ' ಎಂಬ ಪದವೂ ಅನುವೃತ್ತವಾಗುತ್ತದೆ.

ಅರ್ಥ– ಭಾರದ್ವಾಜ ಋಷಿಗಳ ಮತದ ಪ್ರಕಾರ 'ತಾಸಿ' ಪ್ರತ್ಯಯವು ಪರದಲ್ಲಿದ್ದಾಗ, ನಿತ್ಯವಾಗಿ ಅನಿಟ್ ಆಗುವ ಕೇವಲ ಹ್ರಸ್ವ 'ಋ' ಕಾರಾನ್ತ ಧಾತುಗಳ ನಂತರವೇ 'ಥಲ್' ಪ್ರತ್ಯಯವಿದ್ದಾಗ, 'ಇಟ್' ಆಗಮವು ಬರುವುದಿಲ್ಲ. ಬೇರೆ ಧಾತುಗಳಿಗೆ ಇಂತಹ ಸಂದರ್ಭದಲ್ಲಿ 'ಇಟ್' ಬರುತ್ತದೆ.

ವಿಶೇಷ: 'ಸಿದ್ಧೇಸತಿ ಆರಭ್ಯಮಾಣೋ ವಿಧಿಃ ನಿಯಮಾಯ ಭವತಿ' ಎಂದರೆ ಸಿದ್ಧವಾದ ಕಾರ್ಯವನ್ನು ಮತ್ತೆ ವಿಧಿಸುವದೆಂದರೆ ನಿಯಮೇನ ಬಂದೇ ಬರುತ್ತದೆಂದು ಅರ್ಥ. ನಿಯಮವೆಂದರೆ 'ತಾಸಿ' ಎಂಬುದರ ಪರದಲ್ಲಿ ನಿತ್ಯವಾಗಿ ಅನಿಟ್ ಕೇವಲ ಋದನ್ತ–ಧಾತುವಿನ ಪರದಲ್ಲಿಯೇ 'ಥಲ್' ಗೆ 'ಇಟ್' ಬರುವುದಿಲ್ಲ. ಬೇರೆಧಾತುಗಳ

ಪರದಲ್ಲಿ 'ಥಲ್' ಗೆ 'ಇಟ್' ಬರುತ್ತದೆ ಎಂಬುದು ಭಾರದ್ವಾಜರ ಅಭಿಪ್ರಾಯ. ಆದರೆ ಇದು ಪಾಣಿನಿಯವರ ಅಭಿಪ್ರಾಯವಲ್ಲ. ಹೀಗೆ ಎರಡು ಮತಗಳಿರುವಾಗ, ಭಾರದ್ವಾಜ ಋಷಿಗಳ ಅಭಿಪ್ರಾಯವು ಪಾಣಿನಿಯವರಿಗೆ ಸಮ್ಮತವಾಗಿರೋಣದರಿಂದ ಅವರ ಮತವು ಗ್ರಾಹ್ಯವಾಗಿದೆ. ಹೀಗಾಗಿ ಎರಡೂ ಅಭಿಪ್ರಾಯಗಳು ಗ್ರಾಹ್ಯವಾಗಿವೆ. ಭಾರದ್ವಾಜರ ಪ್ರಕಾರ ಋದನ್ತಕ್ಕಿಂತ ಬೇರೆಯಾದ ಧಾತುಗಳ ಪರದಲ್ಲಿ ಇರುವ 'ಥಲ್' ಗೆ 'ಇಟ್' ಆಗಮವು ಬರುತ್ತದೆ.

ಪಾಣಿನಿಯವರ ಮತದಲ್ಲಿ 'ಇಟ್' ಬರುವುದಿಲ್ಲ.

ಉದಾ– 'ಯಾ' ಧಾತುವಿನ ನಂತರ 'ತಾಸಿ' ಪ್ರತ್ಯಯವಿದ್ದಾಗ, ಅದು ಅನಿಟ್ ಆಗಿರುತ್ತದೆ. ಋದನ್ತಕ್ಕಿಂತ ಭಿನ್ನವಾಗಿಯೂ ಇರುತ್ತದೆ. ಭಾರದ್ವಾಜರ ಮತದಲ್ಲಿ 'ಥಲ್' ಪರದಲ್ಲಿದ್ದಾಗ 'ಇಟ್' ಬರುತ್ತದೆ. ಆಗ ಯಯಿಥ ಎಂದು ರೂಪವಾಗುತ್ತದೆ. ಪಾಣಿನಿಯವರ ಪ್ರಕಾರ ಇಟ್ ಬಾರದೇ ಯಯಾಥ ಎಂದು ರೂಪವಾಗುತ್ತದೆ.

ಹಿಂದಿನ ನಾಲ್ಕು ಸೂತ್ರಗಳ ಸಾರವನ್ನು 'ಅಜನ್ತೋಽಕಾರವಾನ್ ವಾಚ್ಯಃ' ಎಂಬ ಶ್ಲೋಕದಲ್ಲಿ ಸಂಗ್ರಹಿಸಲಾಗಿದೆ. ಈ ಶ್ಲೋಕದಲ್ಲಿ 3 ಭಾಗಗಳಿವೆ.

1. ಶ್ಲೋಕದ ಒಂದನೇ ಭಾಗ–'ಅಜನ್ತೋಕಾರವಾನ್ ವಾಚ್ಯಃ ತಾಸ್ಯನಿಟ್ ಥಲಿ ವೇಡಂಯಮ್' – ಯಾವ ಧಾತುವು 'ತಾಸಿ' ಪ್ರತ್ಯಯಪರಕವಾದಾಗ, ನಿತ್ಯವಾಗಿ ಅನಿಟ್ ಆಗುವ ಅಜನ್ತ ಅಥವಾ ಅಕಾರವನ್ನುಳ್ಳ ಧಾತುವಾಗಿ ಇರುತ್ತದೆಯೋ ಅದು 'ಥಲ್' ಪರದಲ್ಲಿದ್ದಾಗ, ವೈಕಲ್ಪಿಕವಾಗಿ 'ಇಟ್' ನಿಂದ ಕೂಡಿಕೊಂಡಿರುತ್ತದೆ.

ಉದಾ– ಪಪಿಥ ಮತ್ತು ಪಪಾಥ ಇದು "ಋತೋ ಭಾರದ್ವಾಜಸ್ಯ" ಎಂಬ ಸೂತ್ರಕ್ಕೆ ಉದಾಹರಣೆಯಾಗಿದೆ. ಈ ಉದಾಹರಣೆಯಲ್ಲಿ "ಅಚಸ್ತಾಸ್ವತ್ಥಲ್ಯನಿಟೋ ನಿತ್ಯಮ್" ಮತ್ತು "ಉಪದೇಶೇತ್ವತಃ" ಎಂಬ ಎರಡು ಸೂತ್ರಗಳು 'ಥಲ್' ಗೆ ಇಡಾಗಮವನ್ನು ಮಾಡುತ್ತಿದ್ದವು. ಆದರೆ ಋದನ್ತಕ್ಕಿಂತ ಬೇರೆಯಾಗಿರೋಣದರಿಂದ ಭಾರದ್ವಾಜ ನಿಯಮದಿಂದ 'ಇಟ್' ಬರುತ್ತದೆ. ಆದರೆ ಬೇರೆಯವರ ಮತದಲ್ಲಿ 'ಇಟ್' ಬರುವುದಿಲ್ಲ.

2. ಶ್ಲೋಕದ ಎರಡನೇ ಭಾಗ– ಋದನ್ತ ಈದೃಙ್ ನಿತ್ಯಾನಿಟ್– ಈ ರೀತಿಯಾಗಿ 'ತಾಸಿ' ಪ್ರತ್ಯಯವು ಪರದಲ್ಲಿದ್ದಾಗ, ನಿತ್ಯವಾಗಿ ಅನಿಟ್ ಇರುತ್ತದೆ. ಹ್ರಸ್ವ ಋಕಾರಾನ್ತ ಧಾತುವು 'ಥಲ್' ಪರದಲ್ಲಿದ್ದಾಗಲೂ ನಿತ್ಯವಾಗಿ ಅನಿಟ್ ಆಗಿಯೇ ಇರುತ್ತದೆ. "ಅಚಸ್ತಾಸ್ವತ್ಥಲ್ಯನಿಟೋ ನಿತ್ಯಮ್" ಮತ್ತು "ಉಪದೇಶೇತ್ವತಃ" ಎಂಬ ಎರಡು ಸೂತ್ರಗಳು ಇಡಾಗಮವನ್ನು ನಿಷೇಧಿಸುತ್ತವೆ. ಅಲ್ಲದೇ ಭಾರದ್ವಾಜ ಋಷಿಗಳೂ ಸಹ ಹೀಗೆಯೇ ಅಭಿಪ್ರಾಯಪಟ್ಟಿದ್ದಾರೆ. ಇದರಿಂದ ಋದನ್ತ ಧಾತುವಿನ ಪರದಲ್ಲಿ 'ಥಲ್' ಇದ್ದಾಗ ಆ ಧಾತು ನಿತ್ಯವಾಗಿ ಅನಿಟ್ ಆಗಿಯೇ ಇರುತ್ತದೆ.

3.ಶ್ಲೋಕದ ಮೂರನೇ ಭಾಗ– ಕ್ರಾದ್ಯನ್ಯೋ ಲಿಟಿ ಸೇಡ್ ಭವೇತ್ – ಈ ಭಾಗದ ಅರ್ಥವು ಹೀಗಿದೆ. ಕೃ–ಸೃ–ಭೃ–ವೃ–ಸ್ತು–ದ್ರು–ಸ್ರು–ಶ್ರು ಈ 8 ಧಾತುಗಳನ್ನು ಬಿಟ್ಟು

ಉಳಿದ ಎಲ್ಲ ಅನುದಾತ್ತ ಧಾತುಗಳು 'ಲಿಟ್' 'ಲ್' ಕಾರದಲ್ಲಿ ಸೇಟ್ ಆಗಿಯೇ ಇರುತ್ತವೆ. ಅಂದರೆ ಇಡಾಗಮದಿಂದ ಕೂಡಿರುತ್ತವೆ. ಛಿದ್, ಭಿದ್, ಮೊದಲಾದ ಧಾತುಗಳು ಮೇಲೆ ಹೇಳಿದ 8 ಧಾತುಗಳಿಗಿಂತ ಬೇರೆ ಆಗಿವೆ. ಆದ್ದರಿಂದ ಅನುದಾತ್ತವಾಗಿ ಇದ್ದರೂ ಇವುಗಳ ಪರದಲ್ಲಿ ಇರುವ 'ಲಿಟ್' ಗೆ 'ಇಟ್' ಆಗಮವು ಬರುತ್ತದೆ.

ಉದಾ– ಬಿಭೇದಿಥ, ಬಿಭೇದಿವ, ಬಿಭೇದಿಮ ಹಾಗೇಯೇ ಚಿಚ್ಛೇದಿಥ, ಚಿಚ್ಛೇದಿವ, ಚಿಚ್ಛೇದಿಮ. "ಕೃ–ಸೃ–ಭೃ–ವೃ–ಸ್ತು–ದ್ರು–ಸ್ರು–ಶ್ರುವೋ ಲಿಟಿ" ಎಂಬ ಸೂತ್ರವು ಪ್ರಕೃತ 3 ನೇ ಭಾಗಕ್ಕೆ ಸಂಬಂಧಿಸಿದ್ದಾಗಿದೆ.

'ಕ್ಷಿ' ಮೊದಲಾದ ಧಾತುಗಳು 'ಕೃ' ಮೊದಲಾದ ಧಾತುಗಳಿಗಿಂತ ಭಿನ್ನವಾಗಿವೆ. ಆದುದರಿಂದ ಇವುಗಳ ಪರದಲ್ಲಿ 'ಲಿಟ್' ಇದ್ದಾಗ 'ಇಟ್' ಆಗಮವು ಬರುತ್ತದೆ. ಇಲ್ಲಿ ವ್ಯತ್ಯಾಸವೇನೆಂದರೆ– 'ಲಿಟ್' ಗೆ 'ಥಲ್' ಪರದಲ್ಲಿದ್ದಾಗ, ಭಾರದ್ವಾಜ ನಿಯಮದ ಪ್ರಕಾರ ವೈಕಲ್ಪಿಕವಾಗಿ 'ಇಟ್' ಬರುತ್ತದೆ. ಉದಾ– ಚಿಕ್ಷಯಿಥ, ಚಿಕ್ಷೇಥ.

ಉದಾ– ಚಿಕ್ಷಯಿಥ/ಚಿಕ್ಷೇಥ– ಮಧ್ಯಮಪುರುಷ ಏಕವಚನದಲ್ಲಿ 'ಕ್ಷಿ' ಧಾತುವಿನ ನಂತರ ಲಿಡಾದೇಶವಾದ 'ಸಿಪ್(ಸಿ)' ಬಂದು, ಅದಕ್ಕೆ ಅಭಿನವ ಆಖ್ಯಾತ ಪ್ರತ್ಯಯವಾದ 'ಥಲ್(ಥ)' ಆದೇಶ ಬಂದಾಗ, ಧಾತುವಿಗೆ ದ್ವಿತ್ವ ದ ನಂತರ ಹಲಾದಿಶೇಷ ಹಾಗೂ ಚುತ್ವ ಮೊದಲಾದವುಗಳನ್ನು ಮಾಡಿದಮೇಲೆ ಚಿಕ್ಷಿ+ಥ ಎಂದಿರುತ್ತದೆ. 'ಥ'ಗೆ "ಆರ್ಧಧಾತುಕಸ್ಯೇಡ್ವಲಾದೇಃ" ಎಂಬ ಸೂತ್ರದಿಂದ ಇಡಾಗಮವು ಬಂದು ಚಿಕ್ಷಿ+ಇ+ಥ ಎಂದಿರುತ್ತದೆ. "ಸಾರ್ವಧಾತುಕಾರ್ಧಧಾತುಕಯೋಃ" ಎಂಬ ಸೂತ್ರದಿಂದ ಧಾತುವಿನ ಕೊನೆಯಲ್ಲಿರುವ 'ಇ' ಕಾರಕ್ಕೆ ಗುಣ ಬಂದು ಚಿಕ್ಷೇ+ಇ+ಥ ಎಂದಾಗಿ, ನಂತರ ಯಾನ್ತಾದೇಶದಿಂದ ಚಿಕ್ಷಯಿಥ ಎಂಬ ರೂಪವು ಸಿದ್ಧವಾಗುತ್ತದೆ. ಇಟ್ ಬಾರದ ಪಕ್ಷದಲ್ಲಿ ಚಿಕ್ಷೇಥ ಎಂಬ ರೂಪವು ಸಿದ್ಧವಾಗುತ್ತದೆ. ಮಧ್ಯಮಪುರುಷ ದ್ವಿವಚನದಲ್ಲಿ ಅಥುಸ್ ಪ್ರತ್ಯಯವುಬಂದಾಗ ಅದು ಅಜಾದಿಯಾಗಿರೋಣದರಿಂದ ಇಡಾಗಮಕ್ಕೆ ಅವಕಾಶವಿಲ್ಲವಾದ್ದರಿಂದ ಚಿಕ್ಷಿಯಥುಃ ಎಂದು ರೂಪವಾಗುತ್ತದೆ. ಮಧ್ಯಮಪುರುಷ ಬಹುವಚನದಲ್ಲಿಯೂ 'ಅ' ಪ್ರತ್ಯಯವಿರೋಣದರಿಂದ ಇಡಾಗಮ ಬಾರದೇ ಚಿಕ್ಷಿಯ ಎಂದು ರೂಪವಾಗುತ್ತದೆ.

ಉತ್ತಮಪುರುಷ ಏಕವಚನದಲ್ಲಿ ವಲಾದಿ ಪ್ರತ್ಯಯವಿಲ್ಲದ್ದರಿಂದ ಚಿಕ್ಷಾಯ, ಚಿಕ್ಷಯ ಎಂಬ ಎರಡು ರೂಪಗಳು ಸಿದ್ಧವಾಗುತ್ತವೆ.

ಉತ್ತಮಪುರುಷ ದ್ವಿವಚನ–ಬಹುವಚನಗಳಲ್ಲಿ ಥಲ್ ಇಲ್ಲದೇ, ವ, ಮ ಗಳೇ ಇರೋಣದರಿಂದ ಥಲ್ ಗೆ ಸಂಬಂಧಿದಿಸಿದ 3 ಸೂತ್ರಗಳು ಪ್ರವರ್ತವಾಗುವುದಿಲ್ಲ. ಹೀಗಾಗಿ ಚಿಕ್ಷಿಯಿವ, ಚಿಕ್ಷಿಯಿಮ, ಎಂಬ ರೂಪಗಳು ಸಿದ್ಧವಾಗುತ್ತವೆ.

ಈ ಪ್ರಕೃತ ರೂಪಗಳಲ್ಲಿ "ಏಕಾಚ ಉಪದೇಶೇಽನುದಾತ್ತಾತ್" ಎಂಬ ಸೂತ್ರದಿಂದ 'ಇಟ್' ನಿಷೇಧವಾಗಿತ್ತು. ಕ್ರಾದಿ ನಿಯಮದಿಂದ 'ಇಟ್' ಪ್ರಾಪ್ತವಾಗಿದೆ.

ರೂಪಗಳು: ಚಿಕ್ಷಾಯ, ಚಿಕ್ಷಿಯತುಃ, ಚಿಕ್ಷಿಯುಃ। ಚಿಕ್ಷಯಿಥ/ಚಿಕ್ಷೇಥ, ಚಿಕ್ಷಿಯಥುಃ,

ಚಿಕ್ಷಿಯ। ಚಿಕ್ಷಾಯ/ಚಿಕ್ಷಯ, ಚಿಕ್ಷಯಿವ, ಚಿಕ್ಷಯಿಮ।

**ಲುಟ್**: ರೂಪಗಳು: ಕ್ಷೇತಾ, ಕ್ಷೇತಾರೌ, ಕ್ಷೇತಾರಃ। ಕ್ಷೇತಾಸಿ, ಕ್ಷೇತಾಸ್ಥಃ, ಕ್ಷೇತಾಸ್ಥ। ಕ್ಷೇತಾಸ್ಮಿ, ಕ್ಷೇತಾಸ್ವಃ, ಕ್ಷೇತಾಸ್ಮಃ।

ವಿಶೇಷ: ಲುಟ್, ಲೃಟ್, ಲುಙ್, ಲೃಙ್ 'ಲ್' ಕಾರಗಳಲ್ಲಿ ಇಡಾಗಮವು ಬರುವುದಿಲ್ಲ. ಕಾರಣ ಊದ್ರ್ಯದನ್ತ್ಯೈಃ... ಎಂಬ ಶ್ಲೋಕದಲ್ಲಿ ಹೇಳಿರುವ ಪ್ರಕಾರ ಯಾವ ಧಾತುವು ಉಪದೇಶಾವಸ್ಥೆಯಲ್ಲಿ ಏಕಾಚ್ ಆಗಿಯೂ ಅನುದಾತ್ತವಾಗಿಯೂ ಇರುವದೋ ಅದು "ಏಕಾಚ ಉಪದೇಶೇಽನುದಾತ್ತಾತ್" ಎಂಬ ಸೂತ್ರದಿಂದ ಇಡಾಗಮವು ನಿಷೇಧಿಸಲ್ಪಟ್ಟಿದೆ.

**ಲೃಟ್**: ರೂಪಗಳು: ಕ್ಷೇಷ್ಯತಿ, ಕ್ಷೇಷ್ಯತಃ, ಕ್ಷೇಷ್ಯನ್ತಿ। ಕ್ಷೇಷ್ಯಸಿ, ಕ್ಷೇಷ್ಯಥಃ, ಕ್ಷೇಷ್ಯಥ। ಕ್ಷೇಷ್ಯಾಮಿ, ಕ್ಷೇಷ್ಯಾವಃ, ಕ್ಷೇಷ್ಯಾಮಃ।

**ಲೋಟ್**: ರೂಪಗಳು: ಕ್ಷಯಿತು/ಕ್ಷಯತಾತ್, ಕ್ಷಯತಾಮ್, ಕ್ಷಯನ್ತು। ಕ್ಷಯ/ ಕ್ಷಯತಾತ್, ಕ್ಷಯತಮ್, ಕ್ಷಯತ। ಕ್ಷಯಾಣಿ, ಕ್ಷಯಾವ, ಕ್ಷಯಾಮ।

**ಲಙ್**: ರೂಪಗಳು: ಅಕ್ಷಯಿತ್, ಅಕ್ಷಯತಾಮ್, ಅಕ್ಷಯನ್। ಅಕ್ಷಯಃ, ಅಕ್ಷಯತಮ್, ಅಕ್ಷಯತ। ಅಕ್ಷಯಮ್, ಅಕ್ಷಯಾವ, ಅಕ್ಷಯಾಮ।

**ವಿಧಿಲಿಙ್**: ರೂಪಗಳು: ಕ್ಷಯೇತ್, ಕ್ಷಯೇತಾಮ್, ಕ್ಷಯೇಯುಃ। ಕ್ಷಯೇಃ, ಕ್ಷಯೇತಮ್, ಕ್ಷಯೇತ। ಕ್ಷಯೇಯಮ್, ಕ್ಷಯೇವ, ಕ್ಷಯೇಮ।

**(ಅಜನ್ತ ಅಂಗಕ್ಕೆ ದೀರ್ಘವನ್ನು ವಿಧಿಸುವ ಸೂತ್ರ)**

**ಸೂತ್ರ – 483.ಅಕೃತ್ಸಾರ್ವಧಾತುಕಯೋರ್ದೀರ್ಘಃ (7.4.25)**

ವೃತ್ತಿಃ–ಅಜನ್ತ–ಅಙ್ಗಸ್ಯ ದೀರ್ಘಃ ಯಾದೌ ಪ್ರತ್ಯಯೇ, ನ ತು ಕೃತ್–ಸಾರ್ವಧಾತುಕಯೋಃ। ಕ್ಷೀಯಾತ್।

ಪ. ಛೇ. – ಅಕೃತ್– ಸಾರ್ವಧಾತುಕಯೋಃ, ದೀರ್ಘಃ।

ಅ. ವ್ಯ– ಇಲ್ಲಿ "ಅಂಗಸ್ಯ" ಎಂಬುದು ಅಧಿಕಾರಸೂತ್ರ, "ಅಚಶ್ಚ" ಎಂಬ ಪಾರಿಭಾಷಿಕ ಸೂತ್ರದಿಂದ 'ಅಚಃ' ಎಂಬ ಪದವನ್ನೂ ಇಲ್ಲಿ ಸೇರಿಸಿಕೊಳ್ಳಬೇಕು. "ಅಯಙ್ ಯಿ ಕ್ಙಿತಿ" ಎಂಬ ಸೂತ್ರದಿಂದ 'ಯಿ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– ಯಕಾರಾದಿಯಾದ ಪ್ರತ್ಯಯವು ಪರದಲ್ಲಿದ್ದಾಗ, ಅಜನ್ತ ಅಂಗಕ್ಕೆ ದೀರ್ಘವು ಬರುತ್ತದೆ. ಆದರೆ 'ಕೃತ್' ಸಂಜ್ಞಕ ಮತ್ತು ಸಾರ್ವಧಾತುಕ ಪ್ರತ್ಯಯಗಳ ಪರದಲ್ಲಿದ್ದಾಗ, ಅಜನ್ತ ಅಂಗಕ್ಕೆ ದೀರ್ಘವು ಬರುವುದಿಲ್ಲ

**ಆಶೀರ್ಲಿಙ್**: ಉದಾ– ಕ್ಷೀಯಾತ್ – ಪ್ರಥಮಪುರುಷ ಏಕವಚನದಲ್ಲಿ ಆಶೀರರ್ಥದಲ್ಲಿ 'ಕ್ಷಿ' ಧಾತುವಿನ ನಂತರ 'ತಿಪ್' ಆದೇಶ ಬಂದಮೇಲೆ 'ಯಾಸುಟ್'(ಯಾಸ್)ಆಗಮ ಬಂದು ಕ್ಷಿ+ಯಾಸ್+ತಿ ಎಂದಿರುತ್ತದೆ. "ಇತಶ್ಚ" ಎಂಬ ಸೂತ್ರದಿಂದ 'ತಿ' ನಲ್ಲಿಯ 'ಇ' ಕಾರವು ಲೋಪವಾಗಿ, "ಲಿಙಃ ಸಲೋಪೋಽನನ್ತ್ಯಸ್ಯ" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬಂದು ಕ್ಷಿ+ಯಾ+ತ್ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ' ಕ್ಷಿ'

ನಲ್ಲಿರುವ 'ಇ' ಕಾರಕ್ಕೆ ದೀರ್ಘ ಬಂದು ಕ್ಷೀಯಾತ್ ಎಂದು ರೂಪವು ಸಿದ್ಧವಾಗುತ್ತದೆ.

ರೂಪಗಳು: ಕ್ಷೀಯಾತ್, ಕ್ಷೀಯಾಸ್ತಾಮ್, ಕ್ಷೀಯಾಸುಃ। ಕ್ಷೀಯಾಃ, ಕ್ಷೀಯಾಸ್ತಮ್, ಕ್ಷೀಯಾಸ್ತ। ಕ್ಷೀಯಾಸಮ್, ಕ್ಷೀಯಾಸ್ವ, ಕ್ಷೀಯಾಸ್ಮ।

**(ವೃದ್ಧಿಯನ್ನು ವಿಧಿಸುವ ಸೂತ್ರ)**

**ಸೂತ್ರ – 484.ಸಿಚಿ ವೃದ್ಧಿಃ ಪರಸ್ಮೈಪದೇಷು (7.2.1)**

ವೃತ್ತಿಃ–ಇಗನ್ತ–ಅಙ್ಗಸ್ಯ ವೃದ್ಧಿಃ ಸ್ಯಾತ್ ಪರಸ್ಮೈಪದೇ ಸಿಚಿ। ಅಕ್ಷೈಷೀತ್। ಅಕ್ಷೈಷ್ಟಾಮ್। ಅಕ್ಷೈಷುಃ। ಅಕ್ಷೇಷ್ಯತ್।

ತಪ ಸನ್ತಾಪೇ। 14। ತಪತಿ। ತತಾಪ। ತೇಪತುಃ। ತೇಪುಃ। ತೇಪಿಥ। ತತಪ್ಥ। ತಪ್ತಾ। ತಪ್ಸ್ಯತಿ। ತಪತು। ಅತಪತ್। ತಪೇತ್। ತಪ್ಯಾತ್। ಅತಾಪ್ಸೀತ್। ಅತಾಪ್ತಾಮ್। ಅತಪ್ಸ್ಯತ್। ಕ್ರಮು ಪಾದವಿಕ್ಷೇಪೇ ।15।

ಅ. ವ್ಯ.– "ಅಂಗಸ್ಯ" ಎಂಬುದು ಅಧಿಕಾರಸೂತ್ರ, "ಇಕೋ ಗುಣವೃದ್ಧೀ" ಎಂಬ ಸೂತ್ರದಿಂದ 'ಇಕಃ' ಎಂಬ ಪದವು ಅನುವೃತ್ತವಾಗುತ್ತದೆ. "ಅಲೋಽನ್ತ್ಯಸ್ಯ" ಎಂಬ ಸೂತ್ರದ ಅರ್ಥವೂ ಇಲ್ಲಿ ಅನ್ವಯಿಸಲಾಗುತ್ತದೆ.

ಅರ್ಥ– ಪರಸ್ಮೈಪದಗಳಲ್ಲಿ ಇಗನ್ತಾಂಗ ಧಾತುವಿನ ಪರದಲ್ಲಿ 'ಸಿಚ್' ಇದ್ದಾಗ, ಆ ಇಗನ್ತ ಅಂಗಕ್ಕೆ ವೃದ್ಧಿಯು ಬರುತ್ತದೆ.

ಲುಙ್: ಉದಾ– ಅಕ್ಷೈಷೀತ್: ಪ್ರಥಮಪುರುಶ ಏಕವಚನದಲ್ಲಿ 'ಕ್ಷಿ' ಧಾತುವಿನ ಮೇಲೆ ಲಡಾದೇಶವಾದ ತಿಪ್ ಬಂದು ಕ್ಷಿ+ತಿ ಎಂದಿದ್ದಾಗ, ಧಾತುವಿಗೆ ಅಡಾಗಮ ಬಂದು ಅಕ್ಷಿ+ತಿ ಎಂದಿರುತ್ತದೆ. 'ತಿ' ನಲ್ಲಿರುವ 'ಇ' ಕಾರಕ್ಕೆ "ಇತಶ್ಚ" ಎಂಬ ಸೂತ್ರದಿಂದ ಲೋಪ ಬಂದು ಅಕ್ಷಿ+ತ್ ಎಂದಿರುತ್ತದೆ. ಧಾತುವಿನ ನಂತರ 'ಚ್ಲಿ' ಬಂದು ಅದಕ್ಕೆ 'ಸಿಚ್(ಸ್)' ಆದೇಶ ಬಂದು ಅಕ್ಷಿ+ಸ್+ತ್ ಎಂದಿರುತ್ತದೆ. ಈ ಧಾತುವು ಅನಿಟ್ ಆಗಿರೋಣದರಿಂದ 'ಇಟ್' ಬರುವುದಿಲ್ಲ ಆದರೆ 'ತ್' ಎಂಬುದನ್ನು ಅಪೃಕ್ತವಾಗಿ ಸ್ವೀಕಾರ ಮಾಡಿದಾಗ "ಅಸ್ತಿ ಸಿಚೋಽಪೃಕ್ತೇ" ಎಂಬ ಸೂತ್ರದಿಂದ 'ಈಟ್' ಆಗಮ ಬಂದು ಅಕ್ಷಿ+ಸ್+ಈ+ತ್ ಎಂದಿರುತ್ತದೆ. ಸಿಚ್ ಪರದಲ್ಲಿರೋಣದರಿಂದ ಪ್ರಕೃತ ಸೂತ್ರದಿಂದ ಧಾತುವಿನ ಇಗನ್ತಾಂಗ ಧಾತುವಿಗೆ ಅಂದರೆ 'ಇ' ಕಾರಕ್ಕೆ ವೃದ್ಧಿ ಬಂದು ಅಕ್ಷೈ+ಸ್+ಈತ್ ಎಂದಿದ್ದಾಗ 'ಸ್' ಕಾರಕ್ಕೆ "ಆದೇಶಪ್ರತ್ಯಯಯೋಃ" ಎಂಬ ಸೂತ್ರದಿಂದ ಷತ್ವ ಬಂದು ಅಕ್ಷೈಷೀತ್ ಎಂಬ ರೂಪವು ಸಿದ್ಧವಾಗುತ್ತದೆ.

ವಿಶೇಷ: ಪ್ರಕೃತ ಸೂತ್ರದಿಂದ ಬರುವ 'ಈಟ್' ಆಗಮವು 'ತಿಪ್' ಮತ್ತು 'ಸಿಪ್' ಪ್ರತ್ಯಯಗಳಿದ್ದಾಗ ಮಾತ್ರ ಬರುತ್ತದೆ. ಕಾರಣ ಬೇರೆ ಕಡೆಗೆ ಅಪೃಕ್ತ ವರ್ಣವು ಇರುವುದಿಲ್ಲ.

ರೂಪಗಳು: ಅಕ್ಷೈಷೀತ್, ಅಕ್ಷೈಷ್ಟಾಮ್,ಅಕ್ಷೈಷುಃ। ಅಕ್ಷೈಷೀಃ, ಅಕ್ಷೈಷ್ಟಮ್, ಅಕ್ಷೈಷ್ಟ। ಅಕ್ಷೈಷಮ್, ಅಕ್ಷೈಷ್ವ, ಅಕ್ಷೈಷ್ಮ।

**ಲೃಙ್**: ರೂಪಗಳು : ಅಕ್ಷೇಷ್ಯತ್, ಅಕ್ಷೇಷ್ಯತಾಮ್, ಅಕ್ಷೇಷ್ಯನ್। ಅಕ್ಷೇಷ್ಯಃ, ಅಕ್ಷೇಷ್ಯತಮ್, ಅಕ್ಷೇಷ್ಯತ। ಅಕ್ಷೇಷ್ಯಮ್, ಅಕ್ಷೇಷ್ಯಾವ, ಅಕ್ಷೇಷ್ಯಾಮ।

ಧಾತು 14. ತಪ ಸಂತಾಪೇ – (ತಪಸ್ಸು ಮಾಡುವುದು, ಹೊಳೆಯುವುದು, ದುಃಖಿಸುವುದು, ಬಿಸಿ ಮಾಡುವುದು ಇತ್ಯಾದಿ। ಅರ್ಥಗಳುಇವೆ.) ಇದರಲ್ಲಿ 'ತಪ್' ಮಾತ್ರ ಉಳಿಯುತ್ತದೆ. ಇದು ಅನಿಟ್ ಆಗಿರೋಣದರಿಂದ 'ಥಲ್' ಪ್ರತ್ಯಯ ಬಂದಾಗ ವೈಕಲ್ಪಿಕವಾಗಿ ಇಡಾಗಮವು ಬರುತ್ತದೆ.

**ಲಟ್**: ರೂಪಗಳು: ತಪತಿ, ತಪತಃ, ತಪನ್ತಿ। ತಪಸಿ, ತಪಥಃ, ತಪಥ। ತಪಾಮಿ, ತಪಾವಃ, ತಪಾಮಃ।

**ಲಿಟ್**: ರೂಪಗಳು:ತತಾಪ, ತೇಪತುಃ, ತೇಪುಃ। ತೇಪಿಥ/ತತಪ್ಥ, ತೇಪಥುಃ, ತೇಪ। ತತಾಪ/ತತಪ, ತೇಪಿವ, ತೇಪಿಮ।

**ಲುಟ್**: ರೂಪಗಳು: ತಪ್ತಾ, ತಪ್ತಾರೌ, ತಪ್ತಾರಃ। ತಪ್ತಾಸಿ, ತಪ್ತಾಸ್ಥಃ, ತಪ್ತಾಸ್ಥ। ತಪ್ತಾಸ್ಮಿ, ತಪ್ತಾಸ್ವಃ, ತಪ್ತಾಸ್ಮಃ।

**ಲೃಟ್**: ರೂಪಗಳು: ತಪ್ಸ್ಯತಿ, ತಪ್ಸ್ಯತಃ, ತಪ್ಸ್ಯನ್ತಿ। ತಪ್ಸ್ಯಸಿ, ತಪ್ಸ್ಯಥಃ, ತಪ್ಸ್ಯಥ" ತಪ್ಸ್ಯಾಮಿ, ತಪ್ಸ್ಯಾವಃ, ತಪ್ಸ್ಯಾಮಃ।

**ಲೋಟ್**: ರೂಪಗಳು: ತಪತು/ತಪತಾತ್, ತಪತಾಮ್, ತಪನ್ತು। ತಪ/ತಪತಾತ್, ತಪತಮ್, ತಪತ। ತಪಾನಿ, ತಪಾವ, ತಪಾಮ।

**ಲಙ್**: ರೂಪಗಳು:ಅತಪತ್, ಅತಪತಾಮ್, ಅತಪನ್। ಅತಪಃ, ಅತಪತಮ್, ಅತಪತ। ಅತಪಮ್, ಅತಪಾವ, ಅತಪಾಮ।

**ವಿಧಿಲಿಙ್**: ರೂಪಗಳು: ತಪೇತ್, ತಪೇತಾಮ್, ತಪೇಯುಃ। ತಪೇಃ, ತಪೇತಮ್, ತಪೇತ। ತಪೇಯಮ್, ತಪೇವ, ತಪೇಮ।

**ಆಶೀರ್ಲಿಙ್**: ರೂಪಗಳು: ತಪ್ಯಾತ್, ತಪ್ಯಾಸ್ತಾಮ್, ತಪ್ಯಾಸುಃ। ತಪ್ಯಾಃ, ತಪ್ಯಾಸ್ತಮ್, ತಪ್ಯಾಸ್ತ। ತಪ್ಯಾಸಮ್, ತಪ್ಯಾಸ್ವ, ತಪ್ಯಾಸ್ಮ।

**ಲುಙ್**: ರೂಪಗಳು: ಅತಾಪ್ಸೀತ್, ಅತಾಪ್ತಾಮ್, ಅತಾಪ್ಸುಃ। ಅತಾಪ್ಸೀಃ, ಅತಾಪ್ತಮ್, ಅತಾಪ್ತ। ಅತಾಪ್ಸಮ್, ಅತಾಪ್ಸ್ವ, ಅತಾಪ್ಸ್ಮ।

**ಲೃಙ್**: ರೂಪಗಳು: ಅತಪ್ಸ್ಯತ್, ಅತಪ್ಸ್ಯತಾಮ್, ಅತಪ್ಸ್ಯನ್। ಅತಪ್ಸ್ಯಃ, ಅತಪ್ಸ್ಯತಮ್, ಅತಪ್ಸ್ಯತ। ಅತಪ್ಸ್ಯಮ್, ಅತಪ್ಸ್ಯಾವ, ಅತಪ್ಸ್ಯಾಮ।

15. ಕ್ರಮು ಪಾದವಿಕ್ಷೇಪೇ (ಹೆಜ್ಜೆ ಮುಂದಿಡುವುದು/ನಡೆಯುವುದು) ಇದರಲ್ಲಿ 'ಕ್ರಮ್' ಮಾತ್ರ ಉಳಿಯುತ್ತದೆ. ಇದು ಉದಿತ್ ಧಾತುವಾಗಿರುವುದರಿಂದ "ಉದಿತೋವಾ" ಎಂಬ ಸೂತ್ರವು 'ಕೃತ್' ಪ್ರಕರಣದಲ್ಲಿ ಕಾಣುತ್ತೇವೆ. ಈ ಧಾತುವು ಸೇಟ್ ಆಗಿರುವುದರಿಂದ 'ಥ' ಮತ್ತು 'ತಾಸಿ' ಮೊದಲಾದ ಸ್ಥಳಗಳಲ್ಲಿ ಇಡಾಗಮ(ಇ)ವು ಬರುತ್ತದೆ.

**(ವೈಕಲ್ಪಿಕವಾಗಿ ಶ್ಯನ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ – 485.ವಾ ಭ್ರಾಶ-ಭ್ಲಾಶ-ಭ್ರಮು-ಕ್ರಮು-ಕ್ಲಮು-ತ್ರಸಿ-ತ್ರುಟಿ-ಲಷಃ (3.1.70)**

ವೃತ್ತಿಃ–ಏಭ್ಯಃ ಶ್ಯನ್ ವಾ ಕರ್ತರ್ಥೇ ಸಾರ್ವಧಾತುಕೇ ಪರೇ। ಪಕ್ಷೇ ಶಪ್।

ಅ. ವೃ – "ದಿವಾದಿಭ್ಯಃ ಶ್ಯನ್" ಎಂಬ ಸೂತ್ರದಿಂದ 'ಶ್ಯನ್' ಎಂಬ ಪದವೂ, "ಸಾರ್ವಧಾತುಕೇ ಯಕ್" ಎಂಬ ಸೂತ್ರದಿಂದ 'ಸಾರ್ವಧಾತುಕೇ' ಎಂಬ ಪದವೂ ಮತ್ತು "ಕರ್ತರಿ ಶಪ್" ಎಂಬ ಸೂತ್ರದಿಂದ 'ಕರ್ತರಿ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ– ಕರ್ತ್ರರ್ಥಕವಾದ ಸಾರ್ವಧಾತುಕ ಪ್ರತ್ಯಯವು ಪರದಲ್ಲಿದ್ದಾಗ ಭ್ರಾಶ್, ಭ್ಲಾಶ್, ಭ್ರಮ್, ಕ್ರಮ್, ಕ್ಲಮ್, ತಸ್, ತ್ರುಟಿ ಮತ್ತು ಲಷ್ ಧಾತುಗಳ ನಂತರ ವೈಕಲ್ಪಿಕವಾಗಿ 'ಶ್ಯನ್' ಬರುತ್ತದೆ.

[ಇಲ್ಲಿ 'ವೈಕಲ್ಪಿಕವಾಗಿ' ಎಂದು ಹೇಳಿದ್ದರಿಂದ 'ಶಪ್(ಅ)' ನ್ನು ಬಾಧಿಸಿ 'ಶ್ಯನ್(ಯ)' ಬರುತ್ತದೆ. 'ಶ್ಯನ್(ಯ)' ಬಾರದ ಪಕ್ಷದಲ್ಲಿ 'ಶಪ್(ಅ)' ಪ್ರತ್ಯಯವು ಬರುತ್ತದೆ].

ವಿಶೇಷ:– ಭ್ವಾದಿಗಣದಲ್ಲಿ ಸಾಮಾನ್ಯವಾಗಿ 'ಶಪ್(ಅ)' ಪ್ರತ್ಯಯವೇ ಬರುತ್ತದೆ, ದಿವಾದಿಗಣದಲ್ಲಿ 'ಶ್ಯನ್(ಯ)' ಮಾತ್ರ ಬರುತ್ತದೆ. ಆದರೆ ಮೇಲೆ ಹೇಳಿದ ಭ್ವಾದಿಗಣ ಧಾತುಗಳಿಗೆ ಕರ್ತ್ರರ್ಥದಲ್ಲಿ 'ಶಪ್(ಅ)' ಹಾಗೂ ವೈಕಲ್ಪಿಕವಾಗಿ 'ಶ್ಯನ್(ಯ)' ಪ್ರತ್ಯಯ ಬರುತ್ತದೆ.

### (ಕ್ರಮ್ ಧಾತುವಿಗೆ ದೀರ್ಘವನ್ನು ವಿಧಿಸುವ ಸೂತ್ರ)

**ಸೂತ್ರ – 486.ಕ್ರಮಃ ಪರಸ್ಮೈಪದೇಷು (7.3.76)**

ವೃತ್ತಿಃ–ಕ್ರಮಃ ದೀರ್ಘಃ ಪರಸ್ಮೈಪದೇ ಶಿತಿ। ಕ್ರಾಮ್ಯತಿ, ಕ್ರಾಮತಿ। ಚಕ್ರಾಮ। ಕ್ರಮಿತಾ। ಕ್ರಮಿಷ್ಯತಿ। ಕ್ರಾಮ್ಯತು, ಕ್ರಾಮತು। ಅಕ್ರಾಮ್ಯತ್, ಅಕ್ರಾಮತ್। ಕ್ರಾಮ್ಯೇತ್, ಕ್ರಾಮೇತ್,। ಕ್ರಮ್ಯಾತ್। ಅಕ್ರಮೀತ್। ಅಕ್ರಮಿಷ್ಯತ್। ಪಾ ಪಾನೇ।16।

ಅ. ವೃ.– "ಷ್ಠಿವು–ಕ್ಲಮು–ಚಮಾಮ್ ಶಿತಿ" ಎಂಬ ಸೂತ್ರದಿಂದ 'ಶಿತಿ' ಎಂಬ ಪದವೂ, ಮತ್ತು "ಶಮಾಮಷ್ಟಾನಾಂ ದೀರ್ಘಃ ಶ್ಯನಿ" ಎಂಬ ಸೂತ್ರದಿಂದ 'ದೀರ್ಘಃ' ಎಂಬ ಪದವು ಅನುವೃತ್ತವಾಗುತ್ತದೆ. "ಅಂಗಸ್ಯ" ಎಂಬುದು ಅಧಿಕಾರ ಸೂತ್ರ.

ಅರ್ಥ– ಶಿತ್ ಆದ ಪರಸ್ಮೈಪದ ಪ್ರತ್ಯಯವು ಪರದಲ್ಲಿದ್ದಾಗ, 'ಕ್ರಮ್' ಧಾತುವಿನಲ್ಲಿರುವ 'ಅ' ಕಾರಕ್ಕೆ ದೀರ್ಘವು ಬರುತ್ತದೆ. ಅಂದರೆ–"ಅಚಶ್ಚ" ಎಂಬ ಸೂತ್ರದಿಂದ ಅಚಃ ಎಂಬ ಪದವು ಅನ್ವಯಿಸೋಣದರಿಂದ 'ಕ್ರಮ್' ಧಾತುವಿನಲ್ಲಿರುವ 'ಕ್' ಕಾರೋತ್ತರ ಹ್ರಸ್ವ 'ಅ' ಕಾರಕ್ಕೆ ದೀರ್ಘ(ಆ)ವು ಆದೇಶವಾಗಿ ಬರುತ್ತದೆ. 'ಪರಸ್ಮೈಪದೇಷು' ಎಂದು ಸೂತ್ರದಲ್ಲಿ ಹೇಳಿರೋಣದರಿಂದ ಪರಸ್ಮೈ ಪದದಲ್ಲಿಯೇ ಹ್ರಸ್ವ 'ಅ' ಕಾರಕ್ಕೆ ದೀರ್ಘ(ಆ) ವು ಬರುತ್ತದೆ ಎಂದು ತಿಳಿಯಬೇಕು. ಇದೇ ಧಾತುವು ಉಪಸರ್ಗಗಳಿಂದ ಕೂಡಿದಾಗ, ಈ ಧಾತುವಿಗೆ ದೀರ್ಘವು ಬರುವುದಿಲ್ಲ ಉದಾ– ಪ್ರಕ್ರಮತೇ, ಆಕ್ರಮತೇ ಇಲ್ಲಿ ಉಪಸರ್ಗದ ದೆಸೆಯಿಂದ ಅರ್ಥಭೇದವೂ ಉಂಟಾಗಿದೆ.

**ಲಟ್**: ಉದಾ– ಕ್ರಾಮ್ಯತಿ– ಪ್ರಥಮಪುರುಷ ಏಕವಚನದಲ್ಲಿ 'ಕ್ರಮ್' ಧಾತುವಿನ ನಂತರ 'ಲಟ್' 'ಲ್' ಕಾರಕ್ಕೆ ತಿಪ್(ತಿ) ಆದೇಶ ಬಂದು ಕ್ರಮ್+ತಿ ಎಂದಿದ್ದಾಗ, "ಕರ್ತರಿ ಶಪ್" ಎಂಬುದರಿಂದ ಬರಬೇಕಾದ 'ಶಪ್(ಅ)' ಪ್ರತಯವನ್ನು ಬಾಧಿಸಿ "ವಾ ಭ್ರಾಶ–ಭ್ಲಾಶ–ಭ್ರಮು–ಕ್ರಮು–ಕ್ಲಮು–ತ್ರಸಿ– ತ್ರುಟಿ–ಲಷಃ' ಎಂಬ ಸೂತ್ರದಿಂದ

ವೈಕಲ್ಪಿಕವಾಗಿ 'ಶ್ಯನ್'(ಯ) ಬಂದು ಕ್ರಮ್+ಯ+ತಿ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ಧಾತುವಿನ ಹ್ರಸ್ವ 'ಅ' ಕಾರಕ್ಕೆ ದೀರ್ಘ ಬಂದು, ಕ್ರಾಮ್+ಯ+ತಿ=ಕ್ರಾಮ್ಯತಿ ಎಂದು ರೂಪವು ಸಿದ್ಧವಾಗುತ್ತದೆ. 'ಶ್ಯನ್' ಬಾರದ ಪಕ್ಷದಲ್ಲಿ 'ಶಪ್(ಅ)' ಪ್ರತ್ಯಯವೇ ಬಂದು ಕ್ರಾಮತಿ ಎಂದು ರೂಪವು ಸಿದ್ಧವಾಗುತ್ತದೆ.

ರೂಪಗಳು– 1. (ಶ್ಯನ್ ಬಂದ ಪಕ್ಷದಲ್ಲಿ)– ಕ್ರಾಮ್ಯತಿ, ಕ್ರಾಮ್ಯತಃ, ಕ್ರಾಮ್ಯನ್ತಿ। ಕ್ರಾಮ್ಯಸಿ, ಕ್ರಾಮ್ಯಥಃ, ಕ್ರಾಮ್ಯಥ। ಕ್ರಾಮ್ಯಾಮಿ, ಕ್ರಾಮ್ಯಾವಃ, ಕ್ರಾಮ್ಯಾಮಃ।

2. 'ಶಪ್' ಬಂದ ಪಕ್ಷದಲ್ಲಿ – ಕ್ರಾಮತಿ, ಕ್ರಾಮತಃ, ಕ್ರಾಮನ್ತಿ। ಕ್ರಾಮಸಿ, ಕ್ರಾಮಥಃ, ಕ್ರಾಮಥ। ಕ್ರಾಮಾಮಿ, ಕ್ರಾಮಾವಃ, ಕ್ರಾಮಾಮಃ।

**ಲಿಟ್**: ರೂಪಗಳು: ಚಕ್ರಾಮ, ಚಕ್ರಮತುಃ, ಚಕ್ರಮುಃ। ಚಕ್ರಮಿಥ, ಚಕ್ರಮಥುಃ, ಚಕ್ರಮ। ಚಕ್ರಾಮ/ಚಕ್ರಮ, ಚಕ್ರಮಿವ, ಚಕ್ರಮಿಮ।

**ಲುಟ್**: ರೂಪಗಳು: ಕ್ರಮಿತಾ, ಕ್ರಮಿತಾರೌ, ಕ್ರಮಿತಾರಃ। ಕ್ರಮಿತಾಸಿ, ಕ್ರಮಿತಾಸ್ಥಃ, ಕ್ರಮಿತಾಸ್ಥ। ಕ್ರಮಿತಾಸ್ಮಿ, ಕ್ರಮಿತಾಸ್ವಃ, ಕ್ರಮಿತಾಸ್ಮಃ।

**ಲೃಟ್**: ರೂಪಗಳು: ಕ್ರಮಿಷ್ಯತಿ, ಕ್ರಮಿಷ್ಯತಃ, ಕ್ರಮಿಷ್ಯನ್ತಿ। ಕ್ರಮಿಷ್ಯಸಿ, ಕ್ರಮಿಷ್ಯಥಃ, ಕ್ರಮಿಷ್ಯಥ। ಕ್ರಮಿಷ್ಯಾಮಿ, ಕ್ರಮಿಷ್ಯಾವಃ, ಕ್ರಮಿಷ್ಯಾಮಃ।

**ಲೋಟ್**: ರೂಪಗಳು: 1. (ಶ್ಯನ್ ಬಂದ ಪಕ್ಷದಲ್ಲಿ)– ಕ್ರಾಮ್ಯತು/ಕ್ರಾಮ್ಯತಾತ್, ಕ್ರಾಮ್ಯತಾಮ್, ಕ್ರಾಮ್ಯನ್ತು। ಕ್ರಾಮ್ಯ/ಕ್ರಾಮ್ಯತಾತ್, ಕ್ರಾಮ್ಯತಮ್, ಕ್ರಾಮ್ಯತ। ಕ್ರಾಮ್ಯಾನಿ, ಕ್ರಾಮ್ಯಾವ, ಕ್ರಾಮ್ಯಾಮ।

2. 'ಶಪ್(ಅ)' ಬಂದ ಪಕ್ಷದಲ್ಲಿ– ಕ್ರಾಮತು/ಕ್ರಾಮತಾತ್, ಕ್ರಾಮತಾಮ್, ಕ್ರಾಮನ್ತು। ಕ್ರಾಮ/ಕ್ರಾಮತಾತ್, ಕ್ರಾಮತಮ್, ಕ್ರಾಮತ। ಕ್ರಾಮಾನಿ, ಕ್ರಾಮಾವ, ಕ್ರಾಮಾಮ।

ಲಙ್: ರೂಪಗಳು: 1. (ಶ್ಯನ್ ಬಂದ ಪಕ್ಷದಲ್ಲಿ)– ಅಕ್ರಾಮ್ಯತ್, ಅಕ್ರಾಮ್ಯತಾಮ್, ಅಕ್ರಾಮ್ಯನ್। ಅಕ್ರಾಮ್ಯಃ, ಅಕ್ರಾಮ್ಯತಮ್, ಅಕ್ರಾಮ್ಯತ। ಅಕ್ರಾಮ್ಯಮ್, ಅಕ್ರಾಮ್ಯಾವ, ಅಕ್ರಾಮ್ಯಾಮ।

2. 'ಶಪ್(ಅ)' ಬಂದ ಪಕ್ಷದಲ್ಲಿ– ಅಕ್ರಾಮತ್, ಅಕ್ರಾಮತಾಮ್, ಅಕ್ರಾಮನ್। ಅಕ್ರಾಮಃ, ಅಕ್ರಾಮತಮ್, ಅಕ್ರಾಮತ। ಅಕ್ರಾಮಮ್, ಅಕ್ರಾಮಾವ, ಅಕ್ರಾಮಾಮ।

**ವಿಧಿಲಿಙ್**: ರೂಪಗಳು: 1. (ಶ್ಯನ್ ಬಂದ ಪಕ್ಷದಲ್ಲಿ)– ಕ್ರಾಮ್ಯೇತ್, ಕ್ರಾಮ್ಯೇತಾಮ್, ಕ್ರಾಮ್ಯೇಯುಃ। ಕ್ರಾಮ್ಯೇಃ, ಕ್ರಾಮ್ಯೇತಮ್, ಕ್ರಾಮ್ಯೇತ। ಕ್ರಾಮ್ಯೇಯಮ್, ಕ್ರಾಮ್ಯೇವ, ಕ್ರಾಮ್ಯೇಮ।

2. 'ಶಪ್(ಅ)' ಬಂದ ಪಕ್ಷದಲ್ಲಿ– ಕ್ರಾಮೇತ್, ಕ್ರಾಮೇತಾಮ್, ಕ್ರಾಮೇಯುಃ। ಕ್ರಾಮೇಃ, ಕ್ರಾಮೇತಮ್, ಕ್ರಾಮೇತ। ಕ್ರಾಮೇಯಮ್, ಕ್ರಾಮೇವ, ಕ್ರಾಮೇಮ।

**ಆಶೀರ್ಲಿಙ್**: ರೂಪಗಳು: ಕ್ರಮ್ಯಾತ್, ಕ್ರಮ್ಯಾಸ್ತಾಮ್, ಕ್ರಮ್ಯಾಸುಃ। ಕ್ರಮ್ಯಾಃ, ಕ್ರಮ್ಯಾಸ್ತಮ್, ಕ್ರಮ್ಯಾಸ್ತ। ಕ್ರಮ್ಯಾಸಮ್, ಕ್ರಮ್ಯಾಸ್ವ, ಕ್ರಮ್ಯಾಸ್ಮ।

**ಲುಙ್:** 'ಕ್ರಮ್' ಧಾತುವಿಗೆ ಅಡಾಗಮ ಬಂದು ಪ್ರಥಮಪುರುಷ ಏಕವಚನದಲ್ಲಿ ಅಕ್ರಮ್+ಈತ್ ಎಂದಿದ್ದಾಗ, ಹಿಂದಿನ 'ಲುಙ್' 'ಲ್' ಕಾರಗಳಲ್ಲಿ ಬಂದಂತೆ 'ಚ್ಲಿ' ಬಂದು ಅದಕ್ಕೆ 'ಸಿಚ್(ಸ್)' ಆದೇಶ ಬಂದು, 'ಸ್' ಕಾರಕ್ಕೆ ಇಡಾಗಮ ಬಂದು ಅಕ್ರಮ್+ಇಸ್+ಈತ್ ಎಂದಿದ್ದಾಗ, "ಇಟ ಈಟಿ" ಎಂಬುದರಿಂದ 'ಸ್' ಕಾರಕ್ಕೆ ಲೋಪ ಬಂದು ಅಕ್ರಮ್+ಇ+ಈತ್ ಎಂದಿದ್ದಾಗ, ಹ್ರಸ್ವ-ದೀರ್ಘ 'ಇ' ಕಾರಗಳಿಗೆ ಸವರ್ಣದೀರ್ಘ ಬಂದು ಅಕ್ರಮೀತ್ ಎಂಬ ರೂಪವು ಸಿದ್ಧವಾಗುತ್ತದೆ.

ವಿಶೇಷ: ಇಲ್ಲಿ "ವದ-ವ್ರಜ ಹಲನ್ತಸ್ಯಾಚಃ" ಎಂಬ ಸೂತ್ರದಿಂದ ಬರಬೇಕಾದ ವೃದ್ಧಿಯು "ನೇಟಿ" ಎಂಬುದರಿಂದ ನಿಷೇಧವಾಯಿತು. ಆ ನಿಷೇಧವನ್ನು "ಅತೋ ಹಲಾದೇಃ" ಎಂಬ ಸೂತ್ರವು ಬಾಧಿಸಿ ಇಡಾಗಮವು ವೈಕಲ್ಪಿಕವಾಗಿ ಬರಬೇಕಾಗಿತ್ತು. ಧಾತುವು 'ಮ್' ಕಾರಾನ್ತವಾಗಿರೋಣದರಿಂದ ಅದನ್ನು ಬಾಧಿಸಿ "ಹ್ಯನ್ತ-ಕ್ಷಣ-ಶ್ವಸ-ಜಾಗ್ರ್-ನಿ- ಶ್ವೇದಿತಾಮ್" ಎಂಬ ಸೂತ್ರದಿಂದ ನಿಷೇಧಿಸಲಾಗಿದೆ ಎಂದು ತಿಳಿಯಬೇಕು.

ರೂಪಗಳು: ಅಕ್ರಮೀತ್, ಅಕ್ರಮಿಷ್ಟಾಮ್, ಅಕ್ರಮಿಷುಃ। ಅಕ್ರಮೀಃ, ಅಕ್ರಮಿಷ್ಟಮ್, ಅಕ್ರಮಿಷ್ಟ। ಅಕ್ರಮಿಷಮ್, ಅಕ್ರಮಿಷ್ವ, ಅಕ್ರಮಿಷ್ಮ।

**ಲೃಙ್:** ರೂಪಗಳು: ಅಕ್ರಮಿಷ್ಯತ್, ಅಕ್ರಮಿಷ್ಯತಾಮ್, ಅಕ್ರಮಿಷ್ಯನ್। ಅಕ್ರಮಿಷ್ಯಃ, ಅಕ್ರಮಿಷ್ಯತಮ್, ಅಕ್ರಮಿಷ್ಯತ। ಅಕ್ರಮಿಷ್ಯಮ್, ಅಕ್ರಮಿಷ್ಯಾವ, ಅಕ್ರಮಿಷ್ಯಾಮ।

16. ಪಾ ಪಾನೇ(ಕುಡಿಯುವುದು) – ಈ ಧಾತುವು ಅನಿಟ್ ಆಗಿದೆ.

**(ಪಾ ಮೊದಲಾದ ಧಾತುಗಳಿಗೆ 'ಪಿಬ' ಮೊದಲಾದ ಆದೇಶ ವಿಧಿಸುವ ಸೂತ್ರ)**

**ಸೂತ್ರ – 487.ಪಾ-ಘ್ರಾ-ಧ್ಮಾ-ಸ್ಥಾ-ಮ್ನಾ-ದಾಣ್-ದೃಶ್ಯರ್ತಿ-ಸರ್ತಿ-ಶದ್-ಸದಾಂ-ಪಿಬ-ಜಿಘ್ರ-ಧಮ-ತಿಷ್ಠ-ಮನ-0ಯಚ್ಛ- ಪಶ್ಯರ್ಚ್ಛ-ಧೌ-ಶೀ0ಯ-ಸೀದಾಃ (7.3.78)**

ವೃತ್ತಿಃ-ಪಾದೀನಾಂ ಪಿಬಾದ0ಯಃ ಸ್ಯುಃ। ಇತ್ ಸಂಜ್ಞಕ। ಶಕಾರಾದೌ ಪ್ರತ್ಯ0ಯೇ ಪರೇ। ಪಿಬಾದೇಶಃ ಅದನ್ತಃ ತೇನ ನ ಗುಣಃ। ಪಿಬತಿ।

ಪ. ಛೇ. – ಪಾ-ಘ್ರಾ-ಧ್ಮಾ-ಸ್ಥಾ-ಮ್ನಾ-ದಾಣ್-ದೃಶಿ-ಅರ್ತಿ-ಸರ್ತಿ-ಶದ್-ಸದಾಂ,

ಪಿಬ-ಜಿಘ್ರ-ಧಮ-ತಿಷ್ಠ-ಮನ-0ಯಚ್ಛ- ಪಶ್ಯ-ಋಚ್ಛ-ಧೌ-ಶೀ0ಯ-ಸೀದಾಃ।

ಅ. ವೃ. – "ಷ್ಠಿವು-ಕ್ಲಮು-ಚಮಾಂ ಶಿತಿ" ಎಂಬ ಸೂತ್ರದಿಂದ 'ಶಿತಿ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ-'ಇತ್' ಸಂಜ್ಞೆಯುಳ್ಳ 'ಶ್' ಕಾರ ಮೊದಲಾದ ಪ್ರತ್ಯಯಗಳು ಪರದಲ್ಲಿದ್ದಾಗ, ಪಾ-ಘ್ರಾ ಮೊದಲಾದ ಧಾತುಗಳಿಗೆ ಪಿಬ, ಜಿಘ್ರ ಮೊದಲಾದವು ಕ್ರಮವಾಗಿ ಆದೇಶಗಳಾಗಿ ಬರುತ್ತವೆ. ತಿಙನ್ತ ಪ್ರಕರಣದಲ್ಲಿ ಶಪ್, ಶ್ಯನ್, ಶ, ಮೊದಲಾದವು ಮತ್ತು ಕೃದನ್ತ ಪ್ರಕರಣದಲ್ಲಿ ಶತೃ, ಶಾನಚ್, ಖಶ್ ಮೊದಲಾದ ಪ್ರತ್ಯಯಗಳು 'ಶಿತ್' ಗಳಾಗಿವೆ. ಇಂತಹ ಪ್ರತ್ಯಯಗಳು ಪರದಲ್ಲಿದ್ದಾಗ, ಪಾ-ಘ್ರಾ ಮೊದಲಾದ ಧಾತುಗಳಿಗೆ ಕ್ರಮವಾಗಿ ಪಿಬ, ಜಿಘ್ರ್ ಮೊದಲಾದವು ಆದೇಶಗಳಾಗಿ ಬರುತ್ತವೆ. ಇಲ್ಲಿ ಎಲ್ಲ ಆದೇಶಗಳು

ಸರ್ವಾದೇಶಗಳಾಗಿ ಬರುತ್ತವೆ. ಆದರೆ– ಆರ್ಧಧಾತುಕ 'ಲ್' ಕಾರಗಳಲ್ಲಿ ಈ ಆದೇಶಗಳು ಬರುವುದಿಲ್ಲ.

ವಿಶೇಷ: ಆರ್ಧಧಾತುಕ 'ಲ್' ಕಾರಗಳಲ್ಲಿ 'ಶಿತ್' ಆದ ವಿಕರಣಪ್ರತ್ಯಯಗಳೇ ಬರುವುದಿಲ್ಲ. ಆದ್ದರಿಂದ ಈ ಮೇಲಿನ ಆದೇಶಗಳು ಬರುವುದಿಲ್ಲ. 'ಪಿಬ' ಮೊದಲಾದ ಆದೇಶಗಳು ಅದನ್ತವಾಗಿವೆ. ಹಲನ್ತವಾದ ಆದೇಶಗಳಾಗಿದ್ದರೆ "ಪುಗನ್ತ ಲಘೂಪದಸ್ಯ ಚ" ಎಂಬ ಸೂತ್ರದಿಂದ ಗುಣ ಬಂದು ಪೇಬತಿ ಮೊದಲಾದ ಅನಿಷ್ಟರೂಪಗಳು ಉಂಟಾಗುತ್ತಿದ್ದವು. ಅದುದರಿಂದ ಎಲ್ಲ ಧಾತುಗಳು ಅದನ್ತಗಳಾಗಿಯೇ ಇವೆ.

ಸ್ಥಾನಿಯ ರೂಪದಲ್ಲಿರುವ ಧಾತುಗಳಿಗೆ ಬರುವ ಆದೇಶಗಳು ಈ ಕೆಳಗಿನಂತಿವೆ

ಸ್ಥಾನೀ –ಪಾಘ್ರಾಧ್ಮಾಸ್ಥಾಮ್ನಾದಾಣ್‌ದೃಶ್ ಋ ಸೃ ಶದ್ ಸದ್। (ಅರ್ತಿ) (ಸರ್ತಿ)

ಆದೇಶ–ಪಿಬಜಿಘ್ರಧಮತಿಷ್ಠಮನಯಚ್ಛಪಶ್ಯ ಋಚ್ಛ ಧೌ ಶೀಯ ಸೀದ।

**ಲಟ್:** ಉದಾ– ಪಿಬತಿ – ಪ್ರಥಮಪುರುಷ ಏಕವಚನದಲ್ಲಿ 'ಪಾ(ಪಾನೇ)' ಧಾತುವಿನ ನಂತರ ಲಡಾದೇಶವಾದ 'ತಿಪ್' ಬಂದು ಪಾ+ತಿ(ತಿಪ್) ಎಂದಿದ್ದಾಗ, 'ಸಾರ್ವಧಾತುಕ–ಸಂಜ್ಞೆ ಬಂದು "ಕರ್ತರಿ ಶಪ್" ಎಂಬ ಸೂತ್ರದಿಂದ ಧಾತುವಿನ ನಂತರ 'ಶಪ್(ಅ)' ವಿಕರಣ ಪ್ರತ್ಯಯವು ಬಂದು ಪಾ+ಅ+ತಿ ಎಂದಿರುತ್ತದೆ. ಧಾತುವಿನ ಪರದಲ್ಲಿ 'ಶಿತ್' ಆದ 'ಶಪ್' ಪ್ರತ್ಯಯವು ಇರೋಣದರಿಂದ, ಪ್ರಕೃತ ಸೂತ್ರದಿಂದ 'ಪಾ' ಧಾತುವಿಗೆ 'ಪಿಬ' ಎಂಬುದು ಸರ್ವಾದೇಶವಾಗಿ ಬರುತ್ತದೆ. ಆಗ ಪಿಬ+ಅ+ತಿ ಎಂದಿರುತ್ತದೆ. ಪಿಬ+ಅ ಎಂಬಲ್ಲಿ ಇರುವ ಎರಡು 'ಅ' ಕಾರಗಳಿಗೆ 'ಸವರ್ಣದೀರ್ಘ ಬಾರದೇ' "ಅತೋ ಗುಣೇ" ಎಂಬುದರಿಂದ ಪರರೂಪದ ಗುಣಾಕ್ಷರ '(ಅ) ಬಂದು, ಪಿಬ+ತಿ=ಪಿಬತಿ ಎಂದು ರೂಪವು ಸಿದ್ಧವಾಗುತ್ತದೆ.

ರೂಪಗಳು: ಪಿಬತಿ. ಪಿಬತಃ, ಪಿಬನ್ತಿ। ಪಿಬಸಿ, ಪಿಬಥಃ, ಪಿಬಥ। ಪಿಬಾಮಿ, ಪಿಬಾವಃ, ಪಿಬಾಮಃ।

### (ಔ ಕಾರವನ್ನು ಆದೇಶವಾಗಿ ವಿಧಿಸುವ ಸೂತ್ರ)

**ಸೂತ್ರ – 488.ಆತ ಔ ಣಲಃ (7.1.34)**

ವೃತ್ತಿಃ–ಆದನ್ತಾತ್ ಧಾತೋಃ ಣಲ ಔಕಾರಾದೇಶಃ ಸ್ಯಾತ್। ಪಪೌ।

ಪ. ಛೇ. – ಆತಃ, ಔ, ಣಲಃ।

ಅರ್ಥ– 'ಆ' ಕಾರಾನ್ತ ಧಾತುವಿನ ನಂತರ ಇರುವ 'ಲಿಟ್' 'ಲ್' ಕಾರದ ಆದೇಶವಾದ 'ತಿಪ್' ಗೆ ಬಂದ 'ಣಲ್(ಅ)' ಆದೇಶಕ್ಕೆ 'ಔ' ಕಾರವು ಆದೇಶವಾಗಿ ಬರುತ್ತದೆ.

**ಲಿಟ್:** ಉದಾ: ಪಪೌ– ಪ್ರಥಮಪುರುಷ ಏಕವಚನದಲ್ಲಿ 'ಪಾ' ಧಾತುವಿನ ನಂತರ ಲಿಡಾದೇಶವಾದ 'ತಿಪ್' ಗೆ 'ಣಲ್(ಅ)' ಬಂದು, ಪಾ+ಅ ಎಂದಿರುತ್ತದೆ. ಇದು ಆರ್ಧಧಾತುಕವಾಗಿರೋಣದರಿಂದ ವಿಕರಣ ಪ್ರತ್ಯಯವು ಬರುವುದಿಲ್ಲ. ಆದ್ದರಿಂದ 'ಶಿತ್' ಗೆ ಅವಕಾಶವಿರುವುದಿಲ್ಲ. ಪ್ರಕೃತ ಸೂತ್ರದಿಂದ 'ಣಲ್(ಅ)' ಗೆ 'ಔ' ಕಾರವು ಆದೇಶವಾಗಿ ಬಂದು ಪಾ+ಔ ಎಂದಿರುತ್ತದೆ. ನಂತರ ಧಾತುವಿಗೆ ದ್ವಿತ್ವ ಬಂದು, ಪಾ

ಪಾ+ಔ ಎಂದಿದ್ದಾಗ, ಅಭ್ಯಾಸದಲ್ಲಿ ಆದಿ ಹಲ್ ಒಂದೇ ಇರೋಣದರಿಂದ ಹಲಾದಿಶೇಷಕ್ಕೆ ಅವಕಾಶವಿರುವುದಿಲ್ಲ. ಈಗ "ಹ್ರಸ್ವಃ" ಎಂಬ ಸೂತ್ರದಿಂದ ಅಭ್ಯಾಸದಲ್ಲಿರುವ ಪಾ ನಲ್ಲಿರುವ 'ಆ' ಕಾರಕ್ಕೆ ಹ್ರಸ್ವ 'ಅ' ಕಾರವು ಆದೇಶವಾಗಿ ಬಂದು, ಪ ಪಾ+ಔ ಎಂದಿರುತ್ತದೆ. ವೃದ್ಧಿ ಸಂಧಿಯಿಂದ ಪಪೌ ಎಂದು ರೂಪವಾಗುತ್ತದೆ.

**('ಆ' ಕಾರಕ್ಕೆ ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ - 489.ಆತೋ ಲೋಪ ಇಟಿ ಚ (6.4.64)**

ವೃತ್ತಿಃ-ಅಜಾದ್ಯೋಃ ಆರ್ಧಧಾತುಕಯೋಃ ಕ್ಙಿತ್ ಇಟೋಃ ಪರಯೋಃ ಆತೋ ಲೋಪಃ। ಪಪತುಃ। ಪಪುಃ। ಪಪಿಥ, ಪಪಾಥ। ಪಪಥುಃ। ಪಪ। ಪಪೌ। ಪಪಿವ। ಪಪಿಮ। ಪಾತಾ। ಪಾಸ್ಯತಿ। ಪಿಬತು। ಅಪಿಬತ್। ಪಿಬೇತ್।

ಪ. ಛೇ. – ಆತಃ, ಲೋಪಃ, ಇಟಿ, ಚ।

ಅ.ವ್ಯ.-"ಆರ್ಧಧಾತುಕೇ" ಎಂಬುದು ಇಲ್ಲಿ ಅಧಿಕಾರ ಸೂತ್ರವಾಗಿದೆ. "ದೀಜೋೀಯುಡಚಿ ಕ್ಙಿತಿ" ಎಂಬ ಸೂತ್ರದಿಂದ 'ಕ್ಙಿತಿ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– ಅಜಾದಿಯಾದ ಆರ್ಧಧಾತುಕ 'ಕಿತ್' 'ಙಿತ್' ಪ್ರತ್ಯಯ ಮತ್ತು ಆರ್ಧಧಾತುಕ 'ಇಟ್' ಆಗಮವು ಪರದಲ್ಲಿದ್ದಾಗ, 'ಆ' ಕಾರಕ್ಕೆ ಲೋಪವು ಬರುತ್ತದೆ.

ಉದಾ–ಪಪತುಃ– ಪ್ರಥಮಪುರುಷ ದ್ವಿವಚನದಲ್ಲಿ 'ಪಾ' ಧಾತುವಿನ ಮೇಲೆ ಲಿಡಾದೇಶವಾದ 'ತಸ್' ಬಂದು ಅದಕ್ಕೆ 'ಅತುಸ್' ಆದೇಶ ಬಂದು "ಲಿಟ್ ಚ" ಎಂಬ ಸೂತ್ರದಿಂದ ಆರ್ಧಧಾತುಕ ಸಂಜ್ಞೆ ಬಂದು ಪಾ+ಅತುಸ್ ಎಂದಿದ್ದಾಗ, ಧಾತುವಿಗೆ ದ್ವಿತ್ವ ಬಂದು ಪಾ ಪಾ+ಅತುಸ್ ಎಂದಿದ್ದಾಗ, ಅಭ್ಯಾಸದ 'ಪಾ' ನಲ್ಲಿರುವ 'ಆ' ಕಾರಕ್ಕೆ "ಹ್ರಸ್ವಃ" ಎಂಬ ಸೂತ್ರದಿಂದ 'ಅ' ಕಾರ ಬಂದು ಪ ಪಾ+ಅತುಸ್ ಎಂದಿದ್ದಾಗ, ಅಜಾದಿ ಆರ್ಧಧಾತುಕವು ಪರದಲ್ಲಿರೋಣದರಿಂದ ಪ್ರಕೃತ ಸೂತ್ರದಿಂದ ಅನಭ್ಯಾಸ 'ಪಾ' ದಲ್ಲಿರುವ 'ಆ' ಕಾರಕ್ಕೆ ಲೋಪ ಬಂದು ಪ ಪ್+ಅತುಸ್ ಎಂದಿದ್ದಾಗ, ರುತ್ವ–ವಿಸರ್ಗಗಳಿಂದ ಪಪತುಃ ಎಂಬ ರೂಪವು ಸಿದ್ಧವಾಗುತ್ತದೆ.

ಇದೇ ರೀತಿಯಲ್ಲಿ ಪ್ರಥಮಪುರುಷ ಬಹುವಚನದಲ್ಲಿ 'ಉಸ್' ಪ್ರತ್ಯಯವನ್ನು ಸೇರಿಸಿದಾಗ ಮೇಲಿನಂತೆಯೇ ಪ್ರಕ್ರಿಯೆ ನಡೆದು ಪಪುಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ–ಪಪಿಥ/ಪಪಾಥ – ಮಧ್ಯಮಪುರುಷ ಏಕವಚನದಲ್ಲಿ 'ಪಾ' ಧಾತುವಿನ ನಂತರ ಲಿಡಾದೇಶವಾದ 'ಸಿಪ್' ಬಂದು ಅದಕ್ಕೆ 'ಥಲ್(ಥ)' ಬಂದು, ಧಾತುವಿಗೆ ದ್ವಿತ್ವ ಬಂದ ನಂತರ ಪಾ ಪಾ+ಥ ಎಂದಿದ್ದಾಗ, "ಹ್ರಸ್ವಃ" ಎಂಬ ಸೂತ್ರದಿಂದ ಅಭ್ಯಾಸದ 'ಆ' ಕಾರಕ್ಕೆ ಹ್ರಸ್ವ(ಅ)ವು ಬಂದು ಪಪಾ+ಥ ಎಂದಿರುತ್ತದೆ. "ಆರ್ಧಧಾತುಕಸ್ಯೇಡ್ ವಲಾದೇಃ" ಎಂಬ ಸೂತ್ರದಿಂದ 'ಇಟ್' ಪ್ರಾಪ್ತವಾಗಿತ್ತು. ಅದಕ್ಕೆ "ಏಕಾಚ ಉಪದೇಶೇಽನುದಾತ್ತಾತ್" ಎಂಬ ಸೂತ್ರದಿಂದ 'ಇಟ್' ನಿಷೇಧವು ಪ್ರಾಪ್ತವಾಗಿತ್ತು. ಅದನ್ನೂ ಬಾಧಿಸಿ "ಋತೋ ಭಾರದ್ವಾಜಸ್ಯ" ಎಂಬ ಸೂತ್ರದಿಂದ ವೈಕಲ್ಪಿಕವಾಗಿ ಇಡಾಗಮವು ಬರುತ್ತದೆ. ಇಡಾಗಮ ಬಂದ ಪಕ್ಷದಲ್ಲಿ ಪಕೃತ ಸೂತ್ರದಿಂದ ಅನಭ್ಯಾಸದ

'ಆ' ಕಾರಕ್ಕೆ ಲೋಪ ಬಂದು ಪ ಪ್+ಇ+ಥ=ಪಪಿಥ ಎಂಬ ರೂಪವು ಸಿದ್ಧವಾಗುತ್ತದೆ. ಇಡಾಗಮ ಬಾರದ ಪಕ್ಷದಲ್ಲಿ ಪಪಾಥ ಎಂಬ ವೈಕಲ್ಪಿಕ ರೂಪವು ಸಿದ್ಧವಾಗುತ್ತದೆ.

ಉದಾ– ಪಪಥುಃ, ಪಪ– ಮಧ್ಯಮಪುರುಷ ದ್ವಿವಚನ–ಬಹುವಚನಗಳಲ್ಲಿ (ಕ್ರಮವಾಗಿ)ಧಾತುವಿನ ನಂತರ ಲಿಡಾದೇಶವಾದ 'ಥಸ್' ಮತ್ತು 'ಥ' ಗಳು ಬಂದು ಅವುಗಳ ಸ್ಥಾನದಲ್ಲಿ ಕ್ರಮವಾಗಿ 'ಅತುಸ್' ಮತ್ತು 'ಅ' ಗಳು ಆದೇಶವಾಗಿ ಬಂದು ಧಾತುವಿಗೆ ದ್ವಿತ್ವ ಬಂದು, ಪಾ ಪಾ+ಅಥುಸ್, ಮತ್ತು ಪಾ ಪಾ+ಥ ಎಂದಿದ್ದಾಗ, ಅಭ್ಯಾಸದ 'ಆ' ಕಾರಕ್ಕೆ "ಹ್ರಸ್ವಃ" ಎಂಬುದರಿಂದ ಹ್ರಸ್ವ 'ಅ' ಕಾರ ಬಂದು, ಪ ಪಾ+ಅಥುಸ್, ಮತ್ತು ಪ ಪಾ+ಥ ಎಂದಿದ್ದಾಗ, ಪ್ರಕೃತ ಸೂತ್ರದಿಂದ ಅನಭ್ಯಾಸದ 'ಆ' ಕಾರಕ್ಕೆ ಲೋಪ ಬಂದು, ಪ ಪ್+ಅಥುಸ್, ಮತ್ತು ಪ ಪ್+ಥ ಎಂದಿದ್ದಾಗ, ಎರಡು 'ಅ' ಕಾರಗಳಿಗೆ ಪರರೂಪ ಬಂದು ಪಪಥುಸ್ ಎಂದಾಗಿ ನಂತರ ರುತ್ವ– ವಿಸರ್ಗಗಳಿಂದ ಪಪಥುಃ ಎಂಬ ರೂಪವೂ ಮತ್ತು ಪಪ ಎಂಬ ಬಹುವಚನದ ರೂಪವೂ ಸಿದ್ಧವಾಗುತ್ತವೆ.

ಉದಾ – ಪಪೌ–ಉತ್ತಮಪುರುಷ ಏಕವಚನದಲ್ಲಿ ಪ್ರಥಮಪುರುಷ ಏಕವಚನದಲ್ಲಿಯಂತೆ 'ಣಲ್(ಅ)' ಪ್ರತ್ಯಯವು ಬರೋಣದರಿಂದ ಪ್ರಥಮಪುರುಷ ಏಕವಚನದಲ್ಲಿಯಂತೆ ಪಪೌ ಎಂದು ರೂಪವು ಸಿದ್ಧವಾಗುತ್ತದೆ.

ಉದಾ–ಪಪಿವ, ಪಪಿಮ–ಉತ್ತಮಪುರುಷ ದ್ವಿವಚನ ಮತ್ತು ಬಹುವಚನಗಳಲ್ಲಿ 'ಪಾ' ಧಾತುವಿನ ನಂತರ ಲಿಡಾದೇಶವಾದ 'ವಸ್' 'ಮಸ್' ಗಳು ಬಂದು ಧಾತುವಿಗೆ ದ್ವಿತ್ವ ಬಂದನಂತರ ಪಾ ಪಾ+ವಸ್, ಮತ್ತು ಪಾ ಪಾ+ಮಸ್ ಎಂದಿದ್ದಾಗ, "ಹ್ರಸ್ವಃ" ಎಂಬ ಸೂತ್ರದಿಂದ ಅಭ್ಯಾಸದ 'ಆ' ಕಾರಕ್ಕೆ ಹ್ರಸ್ವ(ಅ)ವು ಬಂದು ಪ ಪಾ+ವಸ್, ಮತ್ತು ಪ ಪಾ+ಮಸ್ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ಅನಭ್ಯಾಸದ 'ಆ' ಕಾರಕ್ಕೆ ಲೋಪ ಬಂದು, ಪ ಪ್+ವಸ್, ಮತ್ತು ಪ ಪ್+ಮಸ್ ಎಂದಿದ್ದಾಗ, "ಆರ್ಧಧಾತುಕಸ್ಯೇಡ್ ವಲಾದೇಃ" ಎಂಬ ಸೂತ್ರದಿಂದ 'ಇಟ್(ಇ)' ಆಗಮವಾಗಿ ಬಂದು ಪ ಪ್+ಇವಸ್, ಮತ್ತು ಪ ಪ್+ಇಮಸ್ ಎಂದಿದ್ದಾಗ, 'ವಸ್' 'ಮಸ್' ಗಳಿಗೆ ಅಭಿನವ ಆಖ್ಯಾತ ಪ್ರತ್ಯಯಗಳಾದ 'ವ' 'ಮ' ಗಳು ಬಂದು, ಪ ಪ್+ಇವ, ಮತ್ತು ಪ ಪ್+ಇಮ ಎಂದಾಗಿ ಪಪಿವ ಮತ್ತು ಪಪಿಮ ರೂಪಗಳು ಸಿದ್ಧವಾಗುತ್ತವೆ. ರೂಪಗಳು: ಪಪೌ, ಪಪತುಃ, ಪಪುಃ। ಪಪಿಥ/ಪಪಾಥ, ಪಪಥುಃ, ಪಪ। ಪಪೌ, ಪಪಿವ, ಪಪಿಮ।

ವಿಶೇಷ: "ಏಕಾಚ ಉಪದೇಶೇಽನುದಾತ್ತಾತ್" ಎಂಬ ಸೂತ್ರದಿಂದ ಇಡಾಗಮವು ನಿಷೇಧಿಸಲ್ಪಟ್ಟಿರೋಣದರಿಂದ, ಈ ಧಾತುವು ಅನಿಟ್ ಆಗಿದೆ. ಲುಟ್, ಲೃಟ್, ಮತ್ತು ಲುಙ್ ಗಳ ಪ್ರತ್ಯಯಗಳಾದ ತಾಸಿ, ಸ್ಯ, ಮತ್ತು ಸಿಚ್ ಗಳು ಈ ಅನಿಟ್ ಆದ ಪ್ರಕೃತ ಧಾತುವಿನ ಪರದಲ್ಲಿದ್ದಾಗಲೂ ಇಡಾಗಮವು ಬರುವುದಿಲ್ಲ.

**ಲುಟ್**: ಉದಾ– ಪಾತಾ– ಪ್ರಥಮಪುರುಷ ಏಕವಚನದಲ್ಲಿ 'ಪಾ' ಧಾತುವಿನ ನಂತರ ಲುಡಾದೇಶವಾದ 'ತಿಪ್' ಬಂದು ಪಾ+ತಿ(ತಿಪ್) ಎಂದಿದ್ದಾಗ, ಲುಟ್ 'ಲ್' ಕಾರದಲ್ಲಿ ಧಾತುವಿನ ನಂತರ "ಸ್ಯತಾಸೀಲ್ಲೃಲುಟೋಃ" ಎಂಬಸೂತ್ರದಿಂದ 'ತಾಸಿ'

ಬಂದಾಗ, ಇಡಾಗಮ ನಿಷೇಧಿಸಲ್ಪಟ್ಟಿದ್ದರಿಂದ, ಇಡಾಗಮ ಬಾರದೇ "ಉಪದೇಶೇऽಜನುನಾಸಿಕ ಇತ್" ಎಂಬ ಸೂತ್ರದಿಂದ 'ಸ್' ಕಾರೋತ್ತರ 'ಇ' ಕಾರ ಲೋಪವಾಗಿ, ಪಾ+ತಾಸ್+ತಿ ಎಂದಿದ್ದಾಗ "ಲುಟಃಪ್ರಥಮಸ್ಯ ಡಾರೌರಸಃ" ಎಂಬ ಸೂತ್ರದಿಂದ 'ತಿ' ಗೆ 'ಡಾ(ಆ)' ಆದೇಶವಾಗಿ ಬಂದು ಪಾ+ತಾಸ್+ಆ(ಡಾ) ಎಂದಿದ್ದಾಗ, "ಅಚೋऽನ್ತ್ಯಾದಿ ಟಿ" ಎಂಬ ಸೂತ್ರದಿಂದ 'ತಾಸಿ' ಯಲ್ಲಿನ 'ಆಸ್' ಗೆ ಲೋಪ ಬಂದು, ಪಾ+ತ್+ಆ=ಪಾತಾ ಎಂಬ ರೂಪವು ಸಿದ್ಧವಾಗುತ್ತದೆ. ರೂಪಗಳು:ಪಾತಾ, ಪಾತಾರೌ, ಪಾತಾರಃ। ಪಾತಾಸಿ, ಪಾತಾಸ್ಥಃ,ಪಾತಾಸ್ಥ। ಪಾತಾಸ್ಮಿ, ಪಾತಾಸ್ವಃ, ಪಾತಾಸ್ಮಃ।

**ಲೃಟ್**: ರೂಪಗಳು:ಪಾಸ್ಯತಿ, ಪಾಸ್ಯತಃ, ಪಾಸ್ಯನ್ತಿ। ಪಾಸ್ಯಸಿ, ಪಾಸ್ಯಥಃ, ಪಾಸ್ಯಥ। ಪಾಸ್ಯಾಮಿ, ಪಾಸ್ಯಾವಃ, ಪಾಸ್ಯಾಮಃ।

**ಲೋಟ್**: ರೂಪಗಳು:ಪಿಬತು/ಪಿಬತಾತ್, ಪಿಬತಾಮ್, ಪಿಬನ್ತು। ಪಿಬ/ ಪಿಬತಾತ್, ಪಿಬತಮ್,ಪಿಬತ।ಪಿಬಾನಿ, ಪಿಬಾವ, ಪಿಬಾಮ।

**ಲಙ್**: ರೂಪಗಳು: ಅಪಿಬತ್, ಅಪಿಬತಾಮ್,ಅಪಿಬನ್।ಅಪಿಬಃ, ಅಪಿಬತಮ್, ಅಪಿಬತ।ಅಪಿಬಮ್, ಅಪಿಬಾವ, ಅಪಿಬಾಮ।

**ವಿಧಿಲಿಙ್**: ರೂಪಗಳು: ಪಿಬೇತ್, ಪಿಬೇತಾಮ್, ಪಿಬೇಯುಃ। ಪಿಬೇಃ, ಪಿಬೇತಮ್, ಪಿಬೇತ।ಪಿಬೇಯಮ್, ಪಿಬೇವ, ಪಿಬೇಮ।

### (ಏತ್ವವನ್ನು ವಿಧಿಸುವ ಸೂತ್ರ)

**ಸೂತ್ರ – 490.ಏರ್ಲಿಙಿ (6.4.67)**

ವೃತ್ತಿಃ –ಘು ಸಂಜ್ಞಕಾನಾಂ। ಮಾಸ್ಥಾದೀನಾಂ ಚ ಏತ್ವಂ ಸ್ಯಾತ್ ಆರ್ಧಧಾತುಕೇ ಕಿತಿ ಲಿಙಿ। ಪೇಯಾತ್। (439) ಗಾತಿಸ್ಥೇತಿ ಸಿಚೋ ಲುಕ್। ಅಪಾತ್।ಅಪಾತಾಮ್।

ಪ. ಛೇ. – ಏಃ, ಲಿಙಿ।

ಅ. ವ್ಯ. –"ಘುಮಾಸ್ಥಾಗಾಪಾಜಹಾತಿಸಾಮ್ ಹಲಿ" ಎಂಬ ಸೂತ್ರದಿಂದ 'ಘುಮಾಸ್ಥಾಗಾಪಾಜಹಾತಿಸಾಮ್' ಎಂಬ ಪದವೂ, "ದೀಙೋಯುಡಚಿ ಕ್ಙಿತಿ" ಎಂಬ ಸೂತ್ರದಿಂದ 'ಕ್ಙಿತಿ' ಎಂಬ ಪದವೂ ಅನುವೃತ್ತವಾಗುತ್ತದೆ.

ಅರ್ಥ–ಆರ್ಧಹ್ದಾತುಕ ಸಂಜ್ಞೆಯುಳ್ಳ 'ಕಿತ್' ಮತ್ತು 'ಲಿಙ್' ಪರದಲ್ಲಿದ್ದಾಗ, 'ಘು' ಸಂಜ್ಞಕ ಧಾತು ಹಾಗೂ ಮಾ, ಸ್ಥಾ, ಗಾ, ಪಾ, ಹಾ ಮತ್ತು ಶೋ ಧಾತುಗಳಿಗೆ 'ಏ' ಕಾರವು ಆದೇಶವಾಗಿ ಬರುತ್ತದೆ.

ವಿಶೇಷ: ಈ ಆದೇಶವು ಧಾತುವಿನ ಅಙ್ಗದ ಕೊನೆಯ 'ಆ' ಕಾರಕ್ಕೇನೇ ಬರುತ್ತದೆ.

**ಆಶೀರ್ಲಿಙ್**: ಉದಾ–ಪೇಯಾತ್– ಆಶೀರ್ಲಿಙ್ ನ ಪ್ರಥಮಪುರುಷ ಏಕವಚದಲ್ಲಿ 'ಪಾ' ಧಾತುವಿನ ನಂತರ 'ಲಿಙ್' 'ಲ್' ಕಾರಕ್ಕೆ ತಿಬಾದೇಶ ಬಂದುಮೇಲೆ "ಕಿದಾಶಿಷೀ" ಎಂಬ ಸೂತ್ರದಿಂದ 'ಯಾಸುಟ್(ಯಾಸ್)' ಆಗಮ ಬಂದು, 'ಯಾಸುಟ್' ಗೆ ಕಿದ್ವದ್ಭಾವ ಬಂದು, "ಸ್ಕೋಃ ಸಂಯೋಗಾದ್ಯೋಃ" ಎಂಬ ಸೂತ್ರದಿಂದ 'ಯಾಸ್' ನ 'ಸ್'

ಕಾರಕ್ಕೆ ಲೋಪ ಬಂದು, ಪಾ+ಯಾ+ತ್ ಎಂದಿದ್ದಾಗ, "ಪ್ರಕೃತ ಸೂತ್ರದಿಂದ 'ಪಾ' ಧಾತುವಿನ ಅಂತ್ಯ 'ಅ' ಕಾರಕ್ಕೆ 'ಏ' ಕಾರವು ಆದೇಶವಾಗಿ ಬಂದು, ಪೇ+ಯಾ+ತ್=ಪೇಯಾತ್ ಎಂಬ ರೂಪವು ಸಿದ್ಧವಾಗುತ್ತದೆ.

ರೂಪಗಳು: ಪೇಯಾತ್, ಪೇಯಾಸ್ತಾಮ್, ಪೇಯಾಸುಃ। ಪೇಯಾಃ, ಪೇಯಾಸ್ತಮ್, ಪೇಯಾಸ್ತ। ಪೇಯಾಸಮ್, ಪೇಯಾಸ್ವ, ಪೇಯಾಸ್ಮ।

**ಲುಙ್**: ಉದಾ– ಅಪಾತ್– 'ಲುಙ್' 'ಲ್' ಕಾರದ ಪ್ರಥಮಪುರುಷ ಏಕವಚನದಲ್ಲಿ, ಪಾ ಧಾತುವಿನ ಮೇಲೆ 'ಲ್' ಕಾರಕ್ಕೆ 'ತಿಪ್' ಆದೇಶವಾಗಿ ಬಂದು, ಧಾತುವಿಗೆ ಅಡಾಗಮ ಬಂದಮೇಲೆ ಅ+ಪಾ+ತಿ ಎಂದಿದ್ದಾಗ,"ಇತಶ್ಚ" ಎಂಬ ಸೂತ್ರದಿಂದ 'ಇ' ಕಾರ ಲೋಪವಾಗಿ ಅ+ಪಾ+ತ್ ಎಂದಿರುತ್ತದೆ. ಧಾತುವಿನ ನಂತರ 'ಚ್ಲಿ' ಆಗಮ ಬಂದು, ಅದಕ್ಕೆ 'ಸಿಚ್(ಸ್)' ಆದೇಶ ಬಂದು "ಗಾತಿಸ್ಥಾಘುಪಾಭೂಭ್ಯಃ ಸಿಚಃ ಪರಸ್ಮೈಪದೇಷು" ಎಂಬ ಸೂತ್ರದಿಂದ 'ಸ್'(ಸಿಚ್) ಕಾರಕ್ಕೆ ಲೋಪ ಬಂದು ಅ+ಪಾ+ತ್=ಅಪಾತ್ ಎಂದು ರೂಪವು ಸಿದ್ಧವಾಗುತ್ತದೆ.

ವಿಶೇಷ: 1. ಈ ಧಾತುವು ಅನಿಟ್ ಆಗಿರೋಣದರಿಂದ ಇಡಾಗಮವು ಬರಲಿಲ್ಲ. 2. ಈ ಪ್ರಕ್ರಿಯೆಯಲ್ಲಿ 'ಸಿಚ್(ಸ್)' ಲೋಪವಾಗಿರೋಣದ್ದರಿಂದ "ಅಸ್ತಿಸಿಚೋಽಪೃಕ್ತೇ" ಎಂಬ ಸೂತ್ರದಿಂದ ದೀರ್ಘವಾದ 'ಈಟ್' ಆಗಮವು ಬರಲಿಲ್ಲ.

ಉದಾ– ಅಪಾತಾಮ್ – ಪ್ರಥಮಪುರುಷ ದ್ವಿವಚನದಲ್ಲಿ, ಪಾ+ತಾಮ್ ಎಂದಿದ್ದಾಗ ಹಿಂದಿನಂತೆಯೇ ಪ್ರಕ್ರಿಯೆ ನಡೆದು ಅಪಾತಾಮ್ ಎಂದು ರೂಪಸಿದ್ಧವಾಗಿದೆ.

**(ಜುಸ್(ಉಸ್) ಆದೇಶವನ್ನು ವಿಧಿಸುವ ನಿಯಮ ಸೂತ್ರ)**

**ಸೂತ್ರ – 491. ಆತಃ (3.4.110)**

ವೃತ್ತಿಃ–ಸಿಚ್‌ಲುಕಿ ಆದನ್ತಾತ್ ಏವ ಝೇಃ ಜುಸ್।

ಅ. ವೃ.– "ಸಿಜಭ್ಯಸ್ತವಿದಿಭ್ಯಶ್ಚ)" ಎಂಬ ಸೂತ್ರದಿಂದ 'ಸಿಚಃ' ಎಂಬ ಪದವೂ, ಮತ್ತು "ಝೇರ್ಜುಸ್" ಎಂಬ ಸೂತ್ರವೂ ಅನುವೃತ್ತವಾಗುತ್ತವೆ.

ಅರ್ಥ– 'ಸಿಚ್(ಸ್)'ಗೆ ಲುಕ್(ಲೋಪ) ಬಂದಮೇಲೆ ಆದನ್ತ ಧಾತುವಿನ ಪರದಲ್ಲಿಯೇ 'ಝಿ' ಗೆ 'ಜುಸ್(ಉಸ್)' ಆದೇಶವು ಬರುತ್ತದೆ, 'ಏವ' ಎಂದು ಹೇಳಿರುವುದರಿಂದ ಬೇರೆ ಧಾತುಗಳಿಗೆ ಬರುವುದಿಲ್ಲವೆಂದು ತಿಳಿಯಬೇಕು.

ವಿಶೇಷಃ ಇಲ್ಲಿ 'ಸಿಚ್(ಸ್)' ಗೆ ಲುಕ್(ಲೋಪ) ಬಂದಮೇಲೆ' ಎಂದು ಹೇಳಿರುವದಕ್ಕೆ ಕಾರಣ "ಗಾತಿಸ್ಥಾಘುಪಾಭೂಭ್ಯಃ ಸಿಚಃ ಪರಸ್ಮೈಪದೇಷು" ಎಂಬ ಸೂತ್ರದಿಂದ 'ಸ್'(ಸಿಚ್)ಕಾರಕ್ಕೆ ಲೋಪ ಬಂದಿದೆ ಎಂದು ತಿಳಿಯಬೇಕು. 'ಸಿದ್ಧೇ ಸತ್ಯಾರಭ್ಯಮಾಣೋ ವಿಧಿಃ ನಿಯಮಾಯ ಭವತಿ' ಎಂಬ ನಿಯಮದಿಂದ ಪ್ರಕೃತ ಸೂತ್ರವು ನಿಯಮ ಸೂತ್ರವಾಗಿದೆ. ಯಾಕೆಂದರೆ 'ಝಿ' ಗೆ 'ಜುಸ್' ಆದೇಶ ಬರುವುದು "ಸಿಜಭ್ಯಸ್ತವಿದಿಭ್ಯಶ್ಚ" ಎಂಬ ಸೂತ್ರದಿಂದಲೇ ಸಿದ್ಧವಾಗಿದೆ.

**(ಪರರೂಪವನ್ನು ವಿಧಿಸುವ ಸೂತ್ರ)**

**ಸೂತ್ರ – 492.ಉಸ್ಯಪದಾನ್ತಾತ್ (6.1.96)**

ವೃತ್ತಿಃ–ಅಪದಾನ್ತಾತ್ ಅಕಾರಾತ್ ಉಸಿ ಪರೇ ಪರರೂಪಮೇಕಾದೇಶಃ। ಅಪುಃ। ಅಪಾಸ್ಯತ್।

ಗ್ಲೈ ಹರ್ಷಕ್ಷಯೇ।17। ಗ್ಲಾಯತಿ।

ಪ. ಛೇ. – ಉಸಿ, ಅಪದಾನ್ತಾತ್।

ಅ. ವ್ಯ– "ಆದ್ಗುಣಃ" ಎಂಬ ಸೂತ್ರದಿಂದ 'ಅತ್' ಎಂಬ ಪದವೂ, "ಇಕೋಯಣಚಿ" ಎಂಬ ಸೂತ್ರದಿಂದ 'ಅಚಿ' ಎಂಬ ಪದವೂ ಅನುವೃತ್ತವಾಗುತ್ತವೆ. "ಏಕಃಪೂರ್ವಪರಯೋಃ" ಎಂಬ ಸೂತ್ರವು ಅಧಿಕಾರ ಸೂತ್ರವಾಗಿದೆ.

ಅರ್ಥ–ಪದಾನ್ತವಲ್ಲದ 'ಅ' ಕಾರದ ನಂತರ 'ಉಸ್' ಪರದಲ್ಲಿದ್ದಾಗ, ಪೂರ್ವ–ಪರಗಳ ಸ್ಥಾನದಲ್ಲಿ ಪರರೂಪವು ಏಕಾದೇಶವಾಗಿ ಬರುತ್ತದೆ.

ಉದಾ– ಅಪುಃ – ಪ್ರಥಮಪುರುಷ ಬಹುವಚನದಲ್ಲಿ ಲುಙ್ 'ಲ್' ಕಾರಕ್ಕೆ 'ಝಿ' ಆದೇಶ ಬಂದು ಧಾತುವಿಗೆ ಅಡಾಗಮ ಬಂದಮೇಲೆ, ಧಾತುವಿನ ನಂತರ 'ಚ್ಲಿ' ಬಂದು ಅದಕ್ಕೆ 'ಸಿಚ್' ಆದೇಶ ಬಂದಮೇಲೆ ಆ 'ಸಿಚ್' ಗೆ 'ಲುಕ್(ಲೋಪ)' ಬಂದಮೇಲೆ ಅ+ಪಾ+ಝಿ ಎಂದಿರುತ್ತದೆ. 'ಝಿ' ಗೆ "ಆತಃ" ಎಂಬ ಸೂತ್ರದಿಂದ 'ಜುಸ್(ಉಸ್)' ಆದೇಶ ಬಂದು ಅ+ಪಾ+ಉಸ್ ಎಂದಾಗುತ್ತದೆ. "ಆದ್ಗುಣಃ" ಎಂಬ ಸೂತ್ರದಿಂದ ಬರಬೇಕಾದ 'ಥಾ' ಪ್ರತ್ಯಯವನ್ನು ಬಾಧಿಸಿ ಪ್ರಕೃತ ಸೂತ್ರದಿಂದ 'ಪಾ' ದಲ್ಲಿರುವ 'ಆ' ಕಾರ 'ಉಸ್' ನಲ್ಲಿರುವ 'ಉ' ಕಾರಗಳಿಗೆ ಪರರೂಪವಾಗಿ 'ಉ' ಕಾರವೇ ಬಂದು ಅಪ್+ಉಸ್=ಅಪುಸ್ ಎಂದಾಗಿ ರುತ್ವ–ವಿಸರ್ಗಗಳಿಂದ ಅಪುಃ ಎಂಬ ರೂಪವು ಸಿದ್ಧವಾಗುತ್ತದೆ. ರೂಪಗಳು: ಅಪಾತ್, ಅಪಾತಾಮ್, ಅಪುಃ। ಅಪಾಃ, ಅಪಾತಮ್, ಅಪಾತ। ಅಪಾಮ್, ಅಪಾವ, ಅಪಾಮ।

**ಲೃಙ್**: ರೂಪಗಳು: ಅಪಾಸ್ಯತ್, ಅಪಾಸ್ಯತಾಮ್, ಅಪಾಸ್ಯನ್। ಅಪಾಸ್ಯಃ, ಅಪಾಸ್ಯತಮ್, ಅಪಾಸ್ಯತ। ಅಪಾಸ್ಯಮ್, ಅಪಾಸ್ಯಾವ, ಅಪಾಸ್ಯಾಮ।

ಧಾತು 12. ಗ್ಲೈ– ಹರ್ಷಕ್ಷಯೇ(ಆನಂದಹ್ರಾಸವಾಗುವುದು, ಅಥವಾ ದುಃಖಿಯಾಗುವುದು ದಣಿಯುವುದು ಇತ್ಯಾದಿ। ಅರ್ಥಗಳು)–ಧಾತುಪಾಠದಲ್ಲಿ 'ಐ' ಕಾರವು ಕೊನೆಯಲ್ಲಿರೋಣದರಿಂದ ಇದನ್ನು ಏಜನ್ತ ಧಾತುವಾಗಿ ಪರಿಗಣಿಸಲಾಗಿದೆ. ಇದರಲ್ಲಿ ಯಾವ ವರ್ಣವೂ 'ಇತ್' ಸಂಜ್ಞಕವಾಗಿಲ್ಲ.

**ಲಟ್**: ಉದಾ– ಗ್ಲಾಯತಿ – ಪ್ರಥಮಪುರುಷ ಏಕವಚನದಲ್ಲಿ 'ಗ್ಲೈ' ಧಾತುವಿನ ನಂತರ ಲಡಾದೇಶವಾದ 'ತಿಪ್ (ತಿ)' ಬಂದು ಗ್ಲೈ+ತಿ ಎಂದಿದ್ದಾಗ, "ಕರ್ತರಿ ಶಪ್" ಎಂಬ ಸೂತ್ರದಿಂದ 'ಶಪ್ (ಅ)' ವಿಕರಣ ಬಂದು ಗ್ಲೈ+ಅ+ತಿ ಎಂದಿರುತ್ತದೆ. ಆಗ 'ಏಚೋಽಯವಾಯಾವಃ" ಎಂಬ ಸೂತ್ರದಿಂದ 'ಐ' ಕಾರಕ್ಕೆ 'ಆಯ್' ಆದೇಶ ಬಂದು ಗ್ಲ್+ಆಯ್+ಅ+ತಿ=ಗ್ಲಾಯತಿ ಎಂಬ ರೂಪವು ಸಿದ್ಧವಾಗುತ್ತದೆ.

ರೂಪಗಳು: ಗ್ಲಾಯತಿ, ಗ್ಲಾಯತಃ, ಗ್ಲಾಯನ್ತಿ।ಗ್ಲಾಯಸಿ,ಗ್ಲಾಯಥಃ, ಗ್ಲಾಯಥ। ಗ್ಲಾಯಾಮಿ, ಗ್ಲಾಯಾವಃ. ಗ್ಲಾಯಾಮಃ।

**(ಆತ್ವವನ್ನು ವಿಧಿಸುವ ಸೂತ್ರ)**

**ಸೂತ್ರ – 493.ಆದೇಚ ಉಪದೇಶೇಽಶಿತಿ (6.4.45)**

ವೃತ್ತಿಃ–ಉಪದೇಶೇ ಏಜನ್ತಸ್ಯ ಧಾತೋಃ ಆತ್ವಂ ನ ತು ಶಿತಿ। ಜಗ್ಲೌ। ಗ್ಲಾತಾ। ಗ್ಲಾಸ್ಯತಿ। ಗ್ಲಾಯತು। ಅಗ್ಲಾಯತ್।ಗ್ಲಾಯೇತ್।

ಪ. ಛೇ. – ಆತ್(ಆ), ಏಚಃ, ಉಪದೇಶೇ, ಅಶಿತಿ।

ಅ. ವೃ– "ಲಿಟಿ ಧಾತೋರನಭ್ಯಾಸಸ್ಯ" ಎಂಬ ಸೂತ್ರದಿಂದ 'ಧಾತೋಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– ಉಪದೇಶ(ಸೂತ್ರದಲ್ಲಿ)ದಲ್ಲಿ ಏಜನ್ತ ಧಾತುವಿನ ಅಂತ್ಯ ವರ್ಣಕ್ಕೆ ಆ (ದೀರ್ಘ) ಕಾರವು ಆದೇಶವಾಗಿ ಬರುತ್ತದೆ. ಆದರೆ 'ಶಿತ್' ಪ್ರತ್ಯಯವು ಇದ್ದಾಗ ಮಾತ್ರ ಬರುವುದಿಲ್ಲ.

ವಿಶೇಷ: ಆರ್ಧಧಾತುಕ 'ಲ್' ಕಾರಗಳಾದ ಲಿಟ್, ಲುಟ್, ಲೃಟ್, ಆಶೀರ್ಲಿಙ್, ಲುಙ್ ಮತ್ತು ಲೃಙ್ ಗಳಿದ್ದಾಗ, ಶಪ್. ಶ್ಯನ್, ಶ ಮತ್ತು 'ಅಯ(ಣಿಚ್+ಶಪ್)' ಈ ವಿಕರಣ ಪ್ರತ್ಯಯಗಳು ಬರುವುದಿಲ್ಲ. ಯಾಕೆಂದರೆ ಅವು ಸಾರ್ವಧಾತುಕ 'ಲ್' ಕಾರಗಳಿದ್ದಾಗ ಮಾತ್ರ ಬರುವಂಥವು, ಮತ್ತು ಅವು 'ಶಿತ್' ಆಗಿಯೂ ಇರುವವು. "ಅಲೋಽನ್ತ್ಯಸ್ಯ" ಎಂಬ ಸೂತ್ರದಿಂದ 'ಏಚ್' ವರ್ಣಗಳಾದ ಏ,ಓ,ಐ ಮತ್ತು ಔ ವರ್ಣಗಳಿಗೆ 'ಆ'(ದೀರ್ಘ) ಕಾರವು ಆದೇಶವಾಗಿ ಬರುತ್ತದೆ.

**ಲಿಟ್**: ಉದಾ– ಜಗ್ಲೌ ಪ್ರಥಮಪುರುಷ ಏಕವಚನದಲ್ಲಿ ಗ್ಲೈ ಧಾತುವಿನ ನಂತರ ಲಿಡಾದೇಶವಾದ 'ತಿಪ್(ತಿ)' ಬಂದು ಗ್ಲೈ+ತಿ ಎಂದಿದ್ದಾಗ, 'ತಿಪ್(ತಿ)ಗೆ ಅಭಿನವ ಆಖ್ಯಾತಪ್ರತ್ಯಯವಾದ ಣಲ್(ಅ) ಆದೇಶವಾಗಿ ಬಂದು ಗ್ಲೈ+ಅ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ಏಜನ್ತವಾದ ಐ ಕಾರಕ್ಕೆ 'ಆ' ಕಾರವು ಆದೇಶವಾಗಿ ಬಂದು ಗ್ಲಾ+ಅ ಎಂದಿರುತ್ತದೆ "ಆತ ಔ ಣಲಃ" ಎಂಬ ಸೂತ್ರದಿಂದ 'ಣಲ್' ನ 'ಅ' ಕಾರಕ್ಕೆ 'ಔ' ಕಾರಾದೇಶವು ಬಂದು ಗ್ಲಾ+ಔ ಎಂದಿರುತ್ತದೆ. 'ಗ್ಲಾ' ಧಾತುವಿಗೆ ದ್ವಿತ್ವ ಹಾಗೂ ಹಲಾದಿಶೇಷ ವಾದಮೇಲೆ ಗಾ ಗ್ಲಾ+ಔ ಎಂದಾಗಿ "ಹ್ರಸ್ವಃ" ಎಂಬ ಸೂತ್ರದಿಂದ 'ಗ್ಲಾ' ನಲ್ಲಿರುವ 'ಆ' ಕಾರಕ್ಕೆ ಹ್ರಸ್ವ 'ಅ' ಕಾರವು ಆದೇಶವಾಗಿ ಬಂದು ಗ ಗ್ಲಾ+ಔ ಎಂದಿರುತ್ತದೆ. "ಕುಹೋಶ್ಚುಃ" ಎಂಬ ಸೂತ್ರದಿಂದ 'ಗ್' ಗೆ ಚುತ್ವ(ಜ್) ಬಂದು ಜಗ್ಲಾ+ಔ ಎಂದಿದ್ದಾಗ, ವೃದ್ಧಿಸಂಧಿಯಿಂದ ಜಗ್ಲೌ ಎಂಬ ರೂಪವು ಸಿದ್ಧವಾಗುತ್ತದೆ.

ರೂಪಗಳು: ಜಗ್ಲೌ, ಜಗ್ಲತುಃ, ಜಗ್ಲುಃ। ಜಗ್ಲಾಥ/ಜಗ್ಲಿಥ, ಜಗ್ಲಥುಃ, ಜಗ್ಲ। ಜಗ್ಲೌ, ಜಗ್ಲಿವ, ಜಗ್ಲಿಮ।

**ಲುಟ್**: ರೂಪಗಳು: ಗ್ಲಾತಾ,ಗ್ಲಾತಾರೌ, ಗ್ಲಾತಾರಃ। ಗ್ಲಾತಾಸಿ, ಗ್ಲಾತಾಸ್ಥಃ, ಗ್ಲಾತಾಸ್ಥ। ಗ್ಲಾತಾಸ್ಮಿ, ಗ್ಲಾತಾಸ್ವಃ, ಗ್ಲಾತಾಸ್ಮಃ।

**ಲೃಟ್**: ರೂಪಗಳು: ಗ್ಲಾಸ್ಯತಿ, ಗ್ಲಾಸ್ಯತಃ, ಗ್ಲಾಸ್ಯನ್ತಿ। ಗ್ಲಾಸ್ಯಸಿ, ಗ್ಲಾಸ್ಯಥಃ, ಗ್ಲಾಸ್ಯಥ। ಗ್ಲಾಸ್ಯಾಮಿ, ಗ್ಲಾಸ್ಯಾವಃ, ಗ್ಲಾಸ್ಯಾಮಃ।

**ಲೋಟ್**: ರೂಪಗಳು: ಗ್ಲಾಯತು/ಗ್ಲಾಯತಾತ್, ಗ್ಲಾಯತಾಮ್, ಗ್ಲಾಯನ್ತು। ಗ್ಲಾಯ/ಗ್ಲಾಯತಾತ್, ಗ್ಲಾಯತಮ್, ಗ್ಲಾಯತ। ಗ್ಲಾಯಾನಿ, ಗ್ಲಾಯಾವ, ಗ್ಲಾಯಾಮ।

ಲಙ್: ರೂಪಗಳು: ಅಗ್ಲಾಯತ್, ಅಗ್ಲಾಯತಾಮ್, ಅಗ್ಲಾಯನ್। ಅಗ್ಲಾಯಃ, ಅಗ್ಲಾಯತಮ್, ಅಗ್ಲಾಯತ। ಅಗ್ಲಾಯಮ್, ಅಗ್ಲಾಯಾವ, ಅಗ್ಲಾಯಾಮ।

**ವಿಧಿಲಿಙ್**: ರೂಪಗಳು: ಗ್ಲಾಯೇತ್, ಗ್ಲಾಯೇತಾಮ್, ಗ್ಲಾಯೇಯುಃ। ಗ್ಲಾಯೇಃ, ಗ್ಲಾಯೇತಮ್, ಗ್ಲಾಯೇತ। ಗ್ಲಾಯೇಯಮ್, ಗ್ಲಾಯೇವ, ಗ್ಲಾಯೇಮ।

**(ವೈಕಲ್ಪಿಕವಾಗಿ ಧಾತುವಿನ ದೀರ್ಘ 'ಆ' ಕಾರಕ್ಕೆ ವೈಕಲ್ಪಿಕವಾಗಿ ಏತ್ವವನ್ನು ವಿಧಿಸುವ ಸೂತ್ರ)**

**ಸೂತ್ರ – 494.ವಾನ್ಯಸ್ಯ ಸಂಯೋಗಾದೇಃ (6.4.68)**

ವೃತ್ತಿಃ–ಘುಮಾಸ್ಥಾದೇಃ ಅನ್ಯಸ್ಯ ಸಂಯೋಗಾದೇಃ ಧಾತೋಃ ಆತ ಏತ್ವಂ ವಾ ಆರ್ಧಧಾತುಕೇ ಕಿತಿ ಲಿಙಿ। ಗ್ಲೇಯಾತ್। ಗ್ಲಾಯಾತ್।

ಪ. ಛೇ. – ವಾ, ಅನ್ಯಸ್ಯ, ಸಂಯೋಗಾದೇಃ।

ಅ. ವೃ.– "ಏರ್ಲಿಙಿ" ಎಂಬ ಸೂತ್ರದಿಂದ 'ಲಿಙಿ' ಎಂಬ ಪದವೂ, "ಆತೋ ಲೋಪ ಇಟಿಚ" ಎಂಬ ಸೂತ್ರದಿಂದ 'ಆತಃ' ಎಂಬ ಪದವೂ ಮತ್ತು "ದೀಙೋಯುಡಚಿ ಕ್ಙಿತಿ" ಎಂಬ ಸೂತ್ರದಿಂದ 'ಕಿತಿ' ಎಂಬ ಪದವು ಅನುವೃತ್ತವಾಗುತ್ತದೆ. "ಆರ್ಧಧಾತುಕೇ" ಮತ್ತು "ಅಙ್ಗಸ್ಯ" ಎಂಬವು ಅಧಿಕಾರಸೂತ್ರಗಳಾಗಿವೆ.

ಅರ್ಥ– ಘು, ಮಾ, ಸ್ಥಾ ಮೊದಲಾದ ಧಾತುಗಳಿಗಿಂತ ಭಿನ್ನವಾಗಿರುವ, ಸಂಯೋಗವನ್ನು ಆದಿಯಲ್ಲಿ ಉಳ್ಳ ಧಾತುವಿನ 'ಅ' ಕಾರಕ್ಕೆ 'ಏ' ಕಾರವು ವೈಕಲ್ಪಿಕವಾಗಿ ಆದೇಶವಾಗಿ ಬರುತ್ತದೆ–ಆರ್ಧಾಧಾತುಕ 'ಕಿತ್' ಆದ 'ಆಶೀರ್ಲಿಙ್' ಪರದಲ್ಲಿದ್ದಾಗ.

ವಿಶೇಷ: ಪಾಣಿನಿಯ ಸೂತ್ರಪಾಠದಲ್ಲಿ, ಪ್ರಕೃತ ಸೂತ್ರಕ್ಕಿಂತ ಎರಡು ಸೂತ್ರಗಳ ಪೂರ್ವದಲ್ಲಿ "ಘುಮಾಸ್ಥಾಗಾಪಾಜಹಾತಿಸಾಮ್ ಹಲಿ" ಎಂಬ ಸೂತ್ರವನ್ನು ಪಠಿಸಲಾಗಿದೆ. ಆ ಸೂತ್ರದಲ್ಲಿ ಪಠಿತವಾದ ಧಾತುಗಳಿಗಿಂತ ಭಿನ್ನವಾದ ಎಂಬುದನ್ನೇ ಅನ್ಯಸ್ಯ ಎಂಬ ಶಬ್ದದಿಂದ ಹೇಳಲಾಗಿದೆ. ಇದಕ್ಕೂ ಪೂರ್ವ ಪ್ರಸಂಗದಲ್ಲಿ ಬಂದಿರುವ ಧಾತುಗಳಿಗಿಂತ ಅನ್ಯ ಧಾತುಗಳು ಸಂಯೋಗಾದಿಯಾಗಿಯೋ ಅಥವಾ ಅಂತ್ಯದಲ್ಲಿ 'ಆ' ಕಾರವುಳ್ಳದ್ದಾಗಿದ್ದ ಪಕ್ಷದಲ್ಲಿ, ಆಧಾತುಗಳ 'ಆ' ಕಾರಕ್ಕೆ 'ಏ' ಕಾರವು ಆದೇಶವಾಗಿ ಬರುತ್ತದೆ– ಕಿತ್ ಆದ 'ಲಿಙ್' ಅಂದರೆ ಆಶೀರ್ಲಿಙ್ 'ಲ್' ಕಾರದಲ್ಲಿ ಬರುವ ಯಾಸುಟ್ ಪರದಲ್ಲಿದ್ದಾಗ.

**ಆಶೀರ್ಲಿಙ್**: ಉದಾ– ಗ್ಲೇಯಾತ್/ಗ್ಲಾಯಾತ್–ಪ್ರಥಮಪುರುಷ ಏಕವಚನದಲ್ಲಿ 'ಗ್ಲೈ' ಧಾತುವಿನ ನಂತರ ಆಶೀರ್ಲಿಙ್‌ನ 'ತಿಪ್(ತಿ)' ಆದೇಶ ಬಂದು, ಧಾತುವಿನ ನಂತರ 'ಯಾಸುಟ್(ಯಾ)' ಆಗಮ ಬಂದು, ಅದಕ್ಕೆ ಕಿದ್ವದ್ಭಾವ ಮಾಡಿ, "ಆದೇಚ ಉಪದೇಶೇಽಶಿತಿ" ಎಂಬ ಸೂತ್ರದಿಂದ ಏಚ್ ಆದ 'ಐ' ಗೆ 'ಆತ್ವ(ಆ)' ಬಂದು

ಗ್ಲಾ+ಯಾಸ್+ತ್ ಎಂದಿರುತ್ತದೆ. "ವಾಽನ್ಯಸ್ಯ ಸಂಯೋಗಾದೇಃ" ಎಂಬ ಸೂತ್ರದಿಂದ ವೈಕಲ್ಪಿಕವಾಗಿ 'ಆ' ಕಾರಕ್ಕೆ 'ಏ' ಕಾರ ಆದೇಶವು ಬಂದಾಗ ಗ್ಲೇಯಾಸ್+ತ್ ಎಂದಿರುತ್ತದೆ. ಸಂಯೋಗಾದಿಯಾದ ಧಾತುವಿನ 'ಸ್' ಕಾರಕ್ಕೆ ಲೋಪ ಬಂದು ಗ್ಲೇಯಾತ್ ಎಂಬ ರೂಪವು ಸಿದ್ಧವಾಗುತ್ತದೆ. 'ಏ' ಕಾರವು ಆದೇಶವಾಗಿ ಬಾರದ ಪಕ್ಷದಲ್ಲಿ 'ಆ' ಕಾರವು ಹಾಗೆಯೇ ಉಳಿಯೋಣದ್ದರಿಂದ 'ಗ್ಲಾಯಾತ್' ಎಂದೇ ರೂಪವಿರುತ್ತದೆ. ಹೀಗಾಗಿ 'ಗ್ಲೇಯಾತ್' ಮತ್ತು 'ಗ್ಲಾಯಾತ್' ಎಂಬ ಎರಡು ರೂಪಗಳು ಸಿದ್ಧವಾಗುತ್ತವೆ.

ರೂಪಗಳು: 1. ಏತ್ವ ಬಂದ ಪಕ್ಷದಲ್ಲಿ – ಗ್ಲೇಯಾತ್, ಗ್ಲೇಯಾಸ್ತಾಮ್, ಗ್ಲೇಯಾಸುಃ। ಗ್ಲೇಯಾಃ, ಗ್ಲೇಯಾಸ್ತಮ್, ಗ್ಲೇಯಾಸ್ತ। ಗ್ಲೇಯಾಸಮ್, ಗ್ಲೇಯಾಸ್ವ, ಗ್ಲೇಯಾಸ್ಮ।

2. ಏತ್ವ ಬಾರದ ಪಕ್ಷದಲ್ಲಿ – ಗ್ಲಾಯಾತ್, ಗ್ಲಾಯಾಸ್ತಾಮ್, ಗ್ಲಾಯಾಸುಃ। ಗ್ಲಾಯಾಃ, ಗ್ಲಾಯಾಸ್ತಮ್, ಗ್ಲಾಯಾಸ್ತ। ಗ್ಲಾಯಾಸಮ್, ಗ್ಲಾಯಾಸ್ವ, ಗ್ಲಾಯಾಸ್ಮ।

**(ಇಡಾಗಮ ಮತ್ತು ಸಕ್ ಆಗಮಗಳನ್ನು ವಿಧಿಸುವ ಸೂತ್ರ)**

**ಸೂತ್ರ – 495.ಯಮ-ರಮ-ನಮಾತಾಂ ಸಕ್ ಚ (7.2.73)**

ವೃತ್ತಿಃ–ಏಷಾಂ ಸಕ್ ಸ್ಯಾತ್ ಏಭ್ಯಃ ಸಿಚಃ ಇಟ್ ಸ್ಯಾತ್ ಪರಸ್ಮೈಪದೇಷು। ಅಗ್ಲಾಸೀತ್, ಅಗ್ಲಾಸ್ಯತ್। ಹ್ವೃ ಕೌಟಿಲ್ಯೇ 18 । ಹ್ವರತಿ।

ಪ. ಛೇ. – 0ಯಮ-ರಮ-ನಮಾತಾಂ, ಸಕ್, ಚ।

ಅ. ವೃ. – "ಅಞ್ಜೇಃ ಸಿಚಿ" ಎಂಬ ಸೂತ್ರದಿಂದ 'ಸಿಚಿ' ಎಂಬ ಪದವೂ ಹಾಗೂ "ಸ್ತು-ಸು- ಧೂಞ್ಭ್ಯಃ ಪರಸ್ಮೈಪದೇಷು" ಎಂಬ ಸೂತ್ರದಿಂದ 'ಪರಸ್ಮೈಪದೇಷು' ಎಂಬ ಪದವೂ, ಮತ್ತು "ಇಡತ್ಯರ್ತಿ ವ್ಯಯತೀನಾಮ್" ಎಂಬ ಸೂತ್ರದಿಂದ 'ಇಟ್' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ– ಪರಸ್ಮೈ ಪದದಲ್ಲಿ 'ಸಿಚ್' ಪರದಲ್ಲಿದ್ದಾಗ, ಯಮ್, ರಮ್, ನಮ್ ಮತ್ತು 'ಆ' ಕಾರಾನ್ತ ಧಾತುಗಳಿಗೆ 'ಸಕ್(ಸ್)' ಆಗಮವು ಬರುತ್ತದೆ. ಇದರಲ್ಲಿ 'ಸ್' ಮಾತ್ರ ಉಳಿಯುತ್ತದೆ. ಜೊತೆಗೆ 'ಸಿಚ್' ಗೆ ಇಡಾಗಮವೂ ಬರುತ್ತದೆ.

ವಿಶೇಷ: ಈ ರೀತಿಯಾಗಿ ಪ್ರಕೃತ ಸೂತ್ರದಿಂದ 'ಸಕ್' ಆಗಮ ಮತ್ತು 'ಇಡಾಗಮ' ಹೀಗೆ ಎರಡು ಕಾರ್ಯಗಳು ಸಂಭವಿಸುತ್ತವೆ.

**ಲುಙ್**: ಉದಾ-ಅಗ್ಲಾಸೀತ್– ಪ್ರಥಮಪುರುಷ ಏಕವಚನದಲ್ಲಿ 'ಗ್ಲೈ' ಧಾತುವಿಗೆ ಅಡಾಗಮ ಬಂದು ನಂತರ 'ಲುಙ್' ಗೆ 'ತಿಪ್(ತಿ)' ಆದೇಶ ಬಂದು ಅಗ್ಲೈ+ತಿ ಎಂದಿದ್ದಾಗ, ಧಾತುವಿನ ನಂತರ 'ಸಿಚ್(ಸ್)' ಬಂದು, ಅಗ್ಲೈ+ಸ್+ತಿ "ಇತಶ್ಚ" ಎಂಬುದರಿಂದ 'ತಿ' ನಲ್ಲಿರುವ 'ಇ' ಕಾರ ಲೋಪವಾಗಿ, ಅಗ್ಲೈ+ಸ್+ತ್ ಎಂದಿದ್ದಾಗ, "ಆದೇಚ ಉಪದೇಶೇಽಶಿತಿ" ಎಂಬ ಸೂತ್ರದಿಂದ ಏಚ್ ಆದ 'ಐ' ಗೆ 'ಆತ್ವ(ಆ)' ಬಂದು, ಅಗ್ಲಾ+ಸ್+ತ್ ಎಂದಿದ್ದಾಗ, "ಅಸ್ತಿಸಿಚೋಽಪೃಕ್ತೇ" ಎಂಬ ಸೂತ್ರದಿಂದ ಅಪೃಕ್ತವಾದ 'ತ್' ಗೆ 'ಈಟ್(ಈ)' ಆಗಮವು ಬಂದು, ಅಗ್ಲಾ+ಸ್+ಈ+ತ್ ಎಂದಿರುತ್ತದೆ. ಪ್ರಕೃತ ಸೂತ್ರದಿಂದ 'ಸಕ್(ಸ್)' ಮತ್ತು 'ಇಟ್(ಇ)' ಆಗಮಗಳು ಬಂದು,

ಅಗ್ಲಾ+ಸ್+ಇ+ಸ್+ಈತ್ ಎಂದಿದ್ದಾಗ, "ಇಟಈಟಿ" ಎಂಬುದರಿಂದ 'ಇಟ್' ಮತ್ತು 'ಈಟ್'ಗಳ ಮಧ್ಯದಲ್ಲಿರುವ 'ಸ್' ಕಾರಕ್ಕೆ ಲೋಪ ಬಂದು ಅಗ್ಲಾ+ಸ್+ಇ+ಈತ್ ಎಂದಿರುತ್ತದೆ 'ಇ'ಕಾರ 'ಈ' ಕಾರಗಳಿಗೆ ಸವರ್ಣದೀರ್ಘವಾಗಿ ಅಗ್ಲಾಸೀತ್ ಎಂಬ ರೂಪವು ಸಿದ್ಧಿಸುತ್ತದೆ.

ಉದಾ– ಅಗ್ಲಾಸಿಷ್ಟಾಮ್– ಪ್ರಥಮಪುರುಷ ದ್ವಿವಚನದಲ್ಲಿ 'ಆಗ್ಲಾಸಿಸ್' ವರೆಗಿನ ಪ್ರಕ್ರಿಯೇಯು ಹಿಂದಿನಂತೆಯೇ ಇದ್ದು ಅಗ್ಲಾಸಿಸ್+ತಾಮ್ ಎಂದಿದ್ದಾಗ, 'ಇ' ಕಾರದ ಪರದಲ್ಲಿರುವ 'ಸ್' ಕಾರಕ್ಕೆ "ಆದೇಶಪ್ರತ್ಯಯಯೋಃ" ಎಂಬ ಸೂತ್ರದಿಂದ **ಷತ್ವ** ಬಂದು ಅಗ್ಲಾಸಿಷ್+ತಾಮ್ ಎಂದಿದ್ದಾಗ, ನಂತರ ಷ್ಟುತ್ವಸಂಧಿಯಿಂದ ಅಗ್ಲಾಸಿಷ್ಟಾಮ್ ಎಂಬ ರೂಪವು ಸಿದ್ಧವಾಗುತ್ತದೆ.

ವಿಶೇಷ: ದ್ವಿವಚನದಲ್ಲಿ 'ಈಟ್' ಆಗಮವು ಬರುವುದಿಲ್ಲ, ಆದರೆ 'ಸಕ್' ಮತ್ತು 'ಇಟ್' ಆಗಮಗಳು ಮಾತ್ರ ಬರುತ್ತವೆ. ಅದುದರಿಂದ 'ಸಿಚ್' ನ 'ಸ್' ಕಾರಕ್ಕೆ ಲೋಪವು ಬರುವುದಿಲ್ಲ.

ರೂಪಗಳು: ಅಗ್ಲಾಸೀತ್, ಅಗ್ಲಾಸಿಷ್ಟಾಮ್, ಅಗ್ಲಾಸಿಷುಃ।ಅಗ್ಲಾಸೀಃ, ಅಗ್ಲಾಸಿಷ್ಟಮ್, ಅಗ್ಲಾಸಿಷ್ಟ। ಅಗ್ಲಾಸಿಷಮ್, ಅಗ್ಲಾಸಿಷ್ವ, ಅಗ್ಲಾಸಿಷ್ಮ।

**ಲೃಙ್**: ರೂಪಗಳು: ಅಗ್ಲಾಸ್ಯತ್, ಅಗ್ಲಾಸ್ಯತಾಮ್, ಅಗ್ಲಾಸ್ಯನ್।ಅಗ್ಲಾಸ್ಯಃ, ಅಗ್ಲಾಸ್ಯತಮ್, ಅಗ್ಲಾಸ್ಯತ। ಅಗ್ಲಾಸ್ಯಮ್, ಅಗ್ಲಸ್ಯಾವ, ಅಗ್ಲಾಸ್ಯಾಮ।

ಧಾತು 18. ಹ್ವೃ (ಹ್+ವ್+ಋ) ಕೌಟಿಲ್ಯೇ(ಮೋಸದ ವ್ಯಾಪಾರ)– ಈ ಧಾತುವು 'ಅನಿಟ್' ಆಗಿದೆ.

**ಲಟ್**: ಉದಾ– ಹ್ವರತಿ – ಪ್ರಥಮಪುರುಷ ಏಕವಚನದಲ್ಲಿ 'ಹ್ವೃ' ಧಾತುವಿನ ನಂತರ 'ಲಟ್' ಗೆ 'ತಿಪ್(ತಿ)' ಆದೇಶ ಬಂದು ಧಾತುವಿನ ಪರದಲ್ಲಿ ಶಪ್(ಅ) ಬಂದು ಹ್ವೃ+ಅ+ತಿ ಎಂದಿದ್ದಾಗ, 'ಋ' ಕಾರ 'ಅ' ಕಾರಗಳು ಸೇರಿದಾಗ 'ಋ' ಕಾರಕ್ಕೆ 'ಅರ್' ಬಂದು ಹ್ವ್+ಅರ್+ಅ+ತಿ=ಹ್ವರತಿ ಎಂದು ರೂಪವು ಸಿದ್ಧವಾಗುತ್ತದೆ.

ರೂಪಗಳು: ಹ್ವರತಿ, ಹ್ವರತಃ, ಹ್ವರನ್ತಿ।ಹ್ವರಸಿ, ಹ್ವರಥಃ, ಹ್ವರಥ। ಹ್ವರಾಮಿ, ಹ್ವರಾವಃ, ಹ್ವರಾಮಃ।

### (ಗುಣವನ್ನು ವಿಧಿಸುವ ಸೂತ್ರ)

**ಸೂತ್ರ – 496.ಋತಶ್ಚ ಸಂಯೋಗಾದೇರ್ಗುಣಃ (7.4.10)**

ವೃತ್ತಿಃ–ಋದನ್ತಸ್ಯ ಸಂಯೋಗಾದೇಃ ಅಙ್ಗಸ್ಯ ಗುಣಃ ಲಿಟಿ। ಉಪಧಾಯಾಃ ವೃದ್ಧಿಃ। ಜಹ್ವಾರ, ಜಹ್ವರತುಃ। ಜಹ್ವರುಃ। ಜಹ್ವರ್ಥ, ಜಹ್ವರಥುಃ। ಜಹ್ವರ। ಜಹ್ವಾರ, ಜಹ್ವರ। ಜಹ್ವರಿವ। ಜಹ್ವರಿಮ। ಹ್ವರ್ತಾ।

ಪ. ಛೇ. – ಋತಃ, ಚ, ಸಂಯೋಗಾದೇಃ, ಗುಣಃ।

ಅ. ವ್ಯ. – "ದಯೇತೇರ್ದಿಗಿ ಲಿಟಿ" ಎಂಬ ಸೂತ್ರದಿಂದ 'ಲಿಟಿ' ಎಂಬ ಪದವು

ಅನುವೃತ್ತವಾಗುತ್ತದೆ.

ಅರ್ಥ– ಸಂಯೋಗವನ್ನು ಆದಿಯಲ್ಲಿ ಉಳ್ಳ ಋದನ್ತ ಅಙ್ಗಕ್ಕೆ ಗುಣವು ಬರುತ್ತದೆ. – 'ಲಿಟ್' ಪರದಲ್ಲಿದ್ದಾಗ.

**ಲಿಟ್**: ಉದಾ– ಜಹ್ವಾರ– ಪ್ರಥಮಪುರುಷ ಏಕವಚನದಲ್ಲಿ 'ಹ್ವೃ' ಧಾತುವಿನ ನಂತರ 'ಲಿಟ್' ಗೆ 'ತಿಪ್(ತಿ)' ಆದೇಶ ಬಂದು, 'ತಿಪ್' ಗೆ 'ಣಲ್ (ಅ)' ಆದೇಶವು ಬಂದು ಹ್ವೃ+ಅ ಎಂದಿದ್ದಾಗ, "ದ್ವಿರ್ವಚನೇಽಚಿ" ಎಂಬ ಸೂತ್ರದಿಂದ ಮೊಟ್ಟಮೊದಲಾಗಿ 'ದ್ವಿತ್ವ' ಬಂದು ಹ್ವೃ ಹ್ವೃ+ಅ ಎಂದಿದ್ದಾಗ, ಅಭ್ಯಾಸದ 'ಋ' ಕಾರಕ್ಕೆ 'ಉರತ್' ಎಂಬ ಸೂತ್ರದಿಂದ 'ಅರ್' ಬಂದು ಹ್ವರ್+ಹ್ವೃ+ಅ ಎಂದಿದ್ದಾಗ, ಹಲಾದಿಶೇಷದಿಂದ 'ವ್' ಕಾರ 'ರೇಫ(ರ್)' ಗಳ ಲೋಪವಾದಮೇಲೆ ಹ್ ಹ್ವೃ+ಅ ಎಂದಿದ್ದಾಗ, "ಕುಹೋಶ್ಚುಃ" ಎಂಬ ಸೂತ್ರದಿಂದ 'ಹ್' ಕಾರಕ್ಕೆ ಚುತ್ವ ಮಾಡಿದಾಗ, ಅಭ್ಯಾಸದ 'ಹ್' ಕಾರಕ್ಕೆ 'ಝ್' ಆದೇಶ ಬಂದು, ಝ ಹ್ವ ಋ+ಅ ಎಂದಿರುತ್ತದೆ. "ಅಭ್ಯಾಸೇ ಚರ್ಚ" ಎಂಬ ಸೂತ್ರದಿಂದ 'ಝ್' ಕಾರಕ್ಕೆ ಚರ್ತ್ವ(ಜ್) ಕಾರ ಬಂದು, ಜ ಹ್ವೃ+ಅ ಎಂದಿರುತ್ತದೆ. "ಅಚೋಞ್ಣಿತಿ" ಎಂಬ ಸೂತ್ರದಿಂದ ವೃದ್ಧಿ ಬರಬೇಕಾಗಿದ್ದಾಗ, ಅದನ್ನು ಬಾಧಿಸಿ ಪ್ರಕೃತ ಸೂತ್ರದಿಂದ ಅನಭ್ಯಸ್ತ 'ಋ' ಕಾರಕ್ಕೆ ಗುಣ (ಅರ್) ಬಂದು ಜಹ್ವರ್+ಅ ಎಂದಾಗುತ್ತದೆ. ನಂತರ, "ಅತ ಉಪಧಾಯಾಃ" ಎಂಬ ಸೂತ್ರದಿಂದ ಉಪಧೆಗೆ ವೃದ್ಧಿ ಬಂದು ಜಹ್ವಾರ್+ಅ=ಜಹ್ವಾರ ಎಂದು ರೂಪವು ಸಿದ್ಧವಾಗುತ್ತದೆ.

ವಿಶೇಷ– ತಸ್ ಮೊದಲಾದ ಪ್ರತ್ಯಯಗಳು ಬಂದಾಗಲೂ ಪ್ರಕ್ರಿಯೆಯು ಹೀಗೆಯೇ ಇರುತ್ತದೆ. ಅಲ್ಲಿ ವೃದ್ಧಿ ಬರುವುದಿಲ್ಲ. ಆದರೆ "ಸಾರ್ವಧಾತುಕಾರ್ಧಧಾತುಕಯೋಃ" ಎಂಬ ಸೂತ್ರದಿಂದ ಪ್ರಾಪ್ತವಾದ ಗುಣಕ್ಕೆ "ಅಸಂಯೋಗಾಲ್ಲಿಟ್ ಕಿತ್" ಎಂಬ ಸೂತ್ರದಿಂದ 'ಕಿತ್ವ(ಕ್)' ಬರುತ್ತದೆ. ಅಗ 'ಕ್ಙಿತಿಚ" ಎಂಬ ಸೂತ್ರದಿಂದ ಗುಣಕ್ಕೆ ನಿಷೇಧ ಬರುಬೇಕಾಗಿತ್ತು, ಆದರೆ ಪ್ರಕೃತ ಸೂತ್ರದಿಂದ ಮತ್ತೆ ಗುಣವೇ ಬಂದಿದೆ. 'ಥಲ್' ಪ್ರತ್ಯಯವಿರುವಾಗ, ಋದನ್ತ ಧಾತುವಾಗಿರೋಣದ್ದರಿಂದ ಬೇರೆಯವರ ಮತ ಮತ್ತು ಭಾರದ್ವಾಜ ಮತ ಇವುಗಳ ನಿಯಮದಿಂದ 'ಇಟ್' ಬರುವುದಿಲ್ಲ.

ರೂಪಗಳು: ಜಹ್ವಾರ, ಜಹ್ವರತುಃ, ಜಹ್ವರುಃ। ಜಹ್ವರ್ಥ, ಜಹ್ವರಥುಃ, ಜಹ್ವರ।ಜಹ್ವಾರ/ ಜಹ್ವರ, ಜಹ್ವರಿವ, ಜಹ್ವರಿಮ।

**ಲುಟ್**: ರೂಪಗಳು: ಹ್ವರ್ತಾ, ಹ್ವರ್ತಾರೌ, ಹ್ವರ್ತಾರಃ।ಹ್ವರ್ತಾಸಿ, ಹ್ವರ್ತಾಸ್ಥಃ, ಹ್ವರ್ತಾಸ್ಥ। ಹ್ವರ್ತಾಸ್ಮಿ, ಹ್ವರ್ತಾಸ್ವಃ, ಹ್ವರ್ತಾಸ್ಮಃ.

ಈ ಧಾತುವು ಅನಿಟ್ ಆಗಿರೋಣದರಿಂದ ಈ ರೂಪಗಳು ಬಂದಿವೆ.

**(ಇಡಾಗಮವನ್ನು ವಿಧಿಸುವ ಸೂತ್ರ)**

**ಸೂತ್ರ – 497.ಋದ್ಧನೋಃ ಸ್ಯೇ (7.2.70)**

ವೃತ್ತಿಃ–ಋತೋ ಹನ್ತೇಶ್ಚ ಸ್ಯಸ್ಯ ಇಟ್ ಸ್ಯಾತ್। ಹ್ವರಿಷ್ಯತಿ। ಹ್ವರತು। ಅಹ್ವರತ್।

ಹ್ವರೇತ್।

ಅ. ವ್ಯ. –"ಆರ್ಧಧಾತುಕಸ್ಯೇಡ್ ವಲಾದೇಃ" ಎಂಬ ಸೂತ್ರದಿಂದ 'ಇಟ್' ಎಂಬ ಪದವು ಅನುವೃತ್ತವಾಗುತ್ತದೆ. "ಅಙ್ಗಸ್ಯ" ಎಂಬುದು ಅಧಿಕಾರ ಸೂತ್ರ.

ಅರ್ಥ– ಋದನ್ತ ಧಾತು ಮತ್ತು 'ಹನ್' ಧಾತುಗಳ ಪರದಲ್ಲಿ ಬರುವ 'ಸ್ಯ' ಗೆ 'ಇಟ್ (ಇ)' ಆಗಮವು ಬರುತ್ತದೆ.

ವಿಶೇಷಃ– 'ಹನ್' (2ನೇ ಗಣ) ಧಾತು ಮತ್ತು ಋಕಾರಾನ್ತ ಧಾತುಗಳು ಅನುದಾತ್ತ ಮತ್ತು ಏಕಾಚ್ ಆಗಿರೋಣದರಿಂದ 'ಅನಿಟ್' ಆಗಿರುತ್ತವೆ. ಆದುದರಿಂದ 'ತಾಸಿ' ಪ್ರತ್ಯಯವು ಪರದಲ್ಲಿದ್ದಾಗಲೂ ಅನಿಟ್ ಆಗಿಯೇ ಇರುತ್ತದೆ. ಮತ್ತು 'ಸ್ಯ' ಪ್ರತ್ಯಯದ ಪರದಲ್ಲೂ ಅನಿಟ್ ಆಗಿಯೇ ಇದ್ದವು, ಆದರೆ ಆಚಾರ್ಯ ಪಾಣಿನಿಯವರು 'ಸ್ಯ' ಪ್ರತ್ಯಯಕ್ಕೆ ಇಡಾಗಮವನ್ನು ಮಾಡಿದ್ದಾರೆ. ಅದ್ದರಿಂದ ಈ ಸೂತ್ರವು ಪ್ರವೃತ್ತವಾಗಿದೆ. ಈ ಧಾತುವು ಭ್ವಾದಿ ಗಣದಲ್ಲಿ ಸೇರಿರೋಣದರಿಂದ 'ಹ್ವೃ' ಧಾತುವನ್ನು ಮಾತ್ರ ವರದರಾಜರು ಆರಿಸಿಕೊಂಡಿದ್ದಾರೆ. 'ಹನ್' ಧಾತುವನ್ನು ಆರಿಸಿಕೊಳ್ಳಲಿಲ್ಲ ಯಾಕೆಂದರೆ ಅದು ಎರಡನೇ ಗಣಕ್ಕೆ ಸೇರಿದ್ದಾಗಿದೆ.

**ಲೃಟ್**: ಉದಾ– ಹ್ವರಿಷ್ಯತಿ– ಪ್ರಥಮಪುರುಷ ಏಕವಚನದಲ್ಲಿ ಹ್ವೃ ಧಾತುವಿನ ನಂತರ ಲೃಟ್ 'ಲ್' ಕಾರಕ್ಕೆ 'ತಿಪ್(ತಿ)' ಆದೇಶ ಬಂದ ಮೇಲೆ ಧಾತುವಿನ ನಂತರ 'ಸ್ಯ' ಪ್ರತ್ಯಯವನ್ನು ಸೇರಿಸಿದಾಗ ಹ್ವೃ+ಸ್ಯ+ತಿ ಎಂದಿದ್ದಾಗ, ಅನಿಟ್ ಆಗಿಯೇ ಇರುತ್ತದೆ. ಮತ್ತು ಇದು ಆರ್ಧಧಾತುಕ ಸಂಜ್ಞೆಯನ್ನು ಹೊಂದಿರುತ್ತದೆ. ಇದು ಅನುದಾತ್ತವಾಗಿರೋಣದರಿಂದ "ಏಕಾಚ್ ಉಪದೇಶೇಽನುದಾತ್ತಾತ್" ಎಂಬ ಸೂತ್ರದಿಂದ ಇಡಾಗಮದ ನಿಷೇಧವು ಪ್ರಾಪ್ತವಾಗಿತ್ತು ಆದರೆ ಪ್ರಕೃತ ಸೂತ್ರದಿಂದ 'ಸ್ಯ'ಗೆ ಇಡಾಗಾಮವನ್ನು ಮಾಡಿದಾಗ ಹ್ವೃ+ಇ+ಸ್ಯ+ತಿ ಎಂದಿದ್ದಾಗ, "ಸಾರ್ವಧಾತುಕಾರ್ಧಧಾತುಕಯೋಃ" ಎಂಬ ಸೂತ್ರದಿಂದ ಗುಣ ಮಾಡಿದಾಗ, ಹ್ವರ್+ಇ+ಸ್ಯ+ತಿ ಎಂದಿರುತ್ತದೆ. 'ಸ್ಯ' ನಲ್ಲಿರುವ 'ಸ್' ಗೆ ಷತ್ವ ಬಂದು ಹ್ವರಿಷ್ಯತಿ ಎಂಬ ರೂಪವು ಸಿದ್ಧವಾಗುತ್ತದೆ.

ರೂಪಗಳು: ಹ್ವರಿಷ್ಯತಿ, ಹ್ವರಿಷ್ಯತಃ, ಹ್ವರಿಷನ್ತಿ। ಹ್ವರಿಷ್ಯಸಿ, ಹ್ವರಿಷ್ಯಥಃ, ಹ್ವರಿಷ್ಯಥ। ಹ್ವರಿಷ್ಯಾಮಿ, ಹ್ವರಿಷ್ಯಾವಃ, ಹ್ವರಿಷ್ಯಾಮಃ

**ಲೋಟ್**: ರೂಪಗಳು: ಹ್ವರತು/ಹ್ವರತಾತ್, ಹ್ವರತಾಮ್, ಹ್ವರನ್ತು। ಹ್ವರ/ಹ್ವರತಾತ್, ಹ್ವರತಮ್, ಹ್ವರತ। ಹ್ವರಾಣಿ, ಹ್ವರಾವ, ಹ್ವರಾಮ।

**ಲಙ್**: ರೂಪಗಳು: ಅಹ್ವರತ್, ಅಹ್ವರತಾಮ್, ಅಹ್ವರನ್। ಅಹ್ವರಃ, ಅಹ್ವರತಮ್, ಅಹ್ವರತ। ಅಹ್ವರಮ್, ಅಹ್ವರಾವ, ಅಹ್ವರಾಮ।

**ವಿಧಿಲಿಙ್**: ರೂಪಗಳು: ಹ್ವರೇತ್, ಹ್ವರೇತಾಮ್, ಹ್ವರೇಯುಃ। ಹ್ವರೇಃ, ಹ್ವರೇತಮ್, ಹ್ವರೇತ। ಹ್ವರೇಯಮ್, ಹ್ವರೇವ, ಹ್ವರೇಮ।

(ಗುಣವನ್ನು ವಿಧಿಸುವ ಸೂತ್ರ)

**ಸೂತ್ರ – 498.ಗುಣೋಽರ್ತಿ–ಸಂಯೋಗಾದ್ಯೋಃ (7.4.29)**

ವೃತ್ತಿಃ–ಅರ್ತೇಃ ಸಂಯೋಗಾದೇಃ ಋದಂತಸ್ಯ ಚ ಗುಣಃ ಸ್ಯಾತ್ ಯಕಿ ಯಾದೌ ಆರ್ಧಧಾತುಕೇ ಲಿಜಿ ಚ। ಹ್ವರ್ಯಾತ್।ಅಹ್ವಾರ್ಷೀತ್।ಅಹ್ವರಿಷ್ಯತ್। ಶ್ರು ಶ್ರವಣೇ। 19।

ಪ. ಛೇ. – ಗುಣಃ, ಅರ್ತಿ–ಸಂಯೋಗಾದ್ಯೋಃ।

ಅ.ವ್ಯ. – "ರೀಙ್ ಋತಃ" ಎಂಬ ಸೂತ್ರದಿಂದ 'ಋತಃ' ಎಂಬ ಪದವೂ ಹಾಗೂ "ಅಕೃತ್ ಸಾರ್ವಧಾತುಕಯೋಃ" ಎಂಬ ಸೂತ್ರದಿಂದ 'ಅಸಾರ್ವಧಾತುಕೇ' ಎಂಬ ಪದವೂ ಮತ್ತು "ರಿಙ್ ಶಯಗ್ಲಿಙ್‌ಕ್ಷು" ಎಂಬ ಸೂತ್ರದಿಂದ 'ಯಙ್–ಲಿಙೋಃ' ಎಂಬ ಪದವೂ. "ಅಯಙ್ ಯಿ ಕ್ಙಿತಿ" ಎಂಬ ಸೂತ್ರದಿಂದ 'ಯಿ' ಎಂಬ ಪದವೂ ಅನುವೃತ್ತವಾಗುತ್ತದೆ. (ಇಲ್ಲಿ 'ಅಸಾರ್ವಧಾತುಕ' ಎಂಬ ಪದಕ್ಕೆ 'ಆರ್ಧಧಾತುಕ' ಎಂದು ಅರ್ಥ ಮಾಡಿ ಅನುವೃತ್ತಿ ಮಾಡಲಾಗಿದೆ). "ಅಙ್ಗಸ್ಯ" ಎಂಬುದು ಅಧಿಕಾರ ಸೂತ್ರ.

ಅರ್ಥ– 'ಋ' ಧಾತು ಮತ್ತು ಸಂಯೋಗಾದಿ ಋದನ್ತ ಧಾತು ಇವುಗಳ ಅಙ್ಗಕ್ಕೆ ಗುಣವು ಬರುತ್ತದೆ – ಯಕ್ ಪ್ರತ್ಯಯ ಅಥವಾ ಯ–ಕಾರಾದಿ ಆರ್ಧಧಾತುಕ ಲಿಙ್(ಆಶೀರ್ಲಿಙ್) ಪರದಲ್ಲಿದ್ದಾಗ,

**ಆಶೀರ್ಲಿಙ್**: ಉದಾ– ಹ್ವರ್ಯಾತ್– ಪ್ರಥಮಪುರುಷ ಏಕವಚನದಲ್ಲಿ 'ಹ್ವೃ (ಹ್ವೃ)' ಧಾತುವಿನ ನಂತರ ಆಶೀರ್ಲಿಙ್ 'ಲ್' ಕಾರಕ್ಕೆ 'ತಿಪ್(ತಿ)' ಆದೇಶ ಬಂದು "ಲಿಙಾಶಿಷಿ" ಎಂಬ ಸೂತ್ರದಿಂದ ಆರ್ಧಧಾತುಕಸಂಜ್ಞೆ ಬಂದಮೇಲೆ 'ಯಾಸುಟ್' ಆಗಮವು ಬಂದಾಗ ಅದಕ್ಕೆ "ಕಿದಾಶಿಷಿ" ಎಂಬ ಸೂತ್ರದಿಂದ ಕಿದ್ವದ್ಭಾವ ಬಂದು ಹ್ವೃ+ಯಾಸ್+ತ್ ಎಂದಿದ್ದಾಗ, "ಕ್ಙಿತಿಚ" ಎಂಬ ಸೂತ್ರದಿಂದ ಗುಣಕ್ಕೆ ಜಿತ್ ನಿಷೇಧ ಪ್ರಾಪ್ತವಾಗಿತ್ತು. ಅದನ್ನು ಬಾಧಿಸಿ ಪ್ರಕೃತ ಸೂತ್ರದಿಂದ ಗುಣವು ಬಂದು ಹ್ವರ್+ಯಾಸ್+ತ್ಎಂದಿದ್ದಾಗ, 'ಸ್' ಕಾರಕ್ಕೆ "ಸ್ಕೋಃ ಸಂಯೋಗಾದ್ಯೋರಂತೇ ಚ" ಎಂಬ ಸೂತ್ರದಿಂದ ಲೋಪ ಬಂದು, ಹ್ವರ್+ಯಾ+ತ್=ಹ್ವರ್ಯಾತ್ ಎಂದು ರೂಪವು ಸಿದ್ಧವಾಗಿದೆ.

ರೂಪಗಳು: ಹ್ವರ್ಯಾತ್, ಹ್ವರ್ಯಾಸ್ತಾಮ್, ಹ್ವರ್ಯಾಸುಃ। ಹ್ವರ್ಯಾಃ, ಹ್ವರ್ಯಾಸ್ತಮ್, ಹ್ವರ್ಯಾಸ್ತ। ಹ್ವರ್ಯಾಸಮ್, ಹ್ವರ್ಯಾಸ್ವ, ಹ್ವರ್ಯಾಸ್ಮ।

**ಲುಙ್**: ಉದಾ– ಅಹ್ವಾರ್ಷೀತ್– ಪ್ರಥಮಪುರುಷ ಏಕವಚನದಲ್ಲಿ 'ಹ್ವೃ (ಹ್ವೃ)' ಧಾತುವಿನ ನಂತರ 'ಲುಙ್' 'ಲ್' ಕಾರಕ್ಕೆ 'ತಿಪ್(ತಿ)' ಆದೇಶ ಬಂದು, ಹ್ವೃ (ಹ್ವೃ)+ತಿ ಎಂದಿದ್ದಾಗ, "ಇತಶ್ಚ" ಎಂಬುದರಿಂದ 'ತಿ' ನಲ್ಲಿಯ 'ಇ' ಕಾರಕ್ಕೆ ಲೋಪ ಬಂದು ಹ್ವೃ (ಹ್ವೃ)+ತ್ ಎಂದಿದ್ದಾಗ, ಧಾತುವಿನ ನಂತರ 'ಚ್ಲಿ' ಆಗಮ ಬಂದು ಹ್ವೃ (ಹ್ವೃ)+ಚ್ಲಿ+ತ್ ಎಂದಿದ್ದಾಗ, ಅದಕ್ಕೆ 'ಸಿಚ್(ಸ್)' ಆದೇಶ ಬಂದು ಹ್ವೃ (ಹ್ವೃ)+ಸ್+ತ್ ಎಂದಿದ್ದಾಗ, 'ತ್' ಕಾರಕ್ಕೆ ಈಟ್(ಈ)' ಆಗಮ ಬಂದು ನಂತರ

ಧಾತುವಿನ ಪೂರ್ವದಲ್ಲಿ ಅಡಾಗಮ(ಅ) ಬಂದಾಗ, ಅಹ್ವೃ (ಅಹ್ವೃ)+ಸ್+ಈತ್ ಎಂದಿದ್ದಾಗ, "ಸಿಚಿ ವೃದ್ಧಿಃ ಪರಸ್ಮೈಪದೇಷು" ಎಂಬ ಸೂತ್ರದಿಂದ 'ಋ' ಕಾರಕ್ಕೆ ವೃದ್ಧಿ ಬಂದು ಅಹ್ವಾರ್+ಸ್+ಈತ್ ಎಂದಿರುತ್ತದೆ. ಆಗ 'ಸ್' ಕಾರಕ್ಕೆ "ಆದೇಶಪ್ರತ್ಯಯಯೋಃ" ಎಂಬುದರಿಂದ ಷತ್ವ ಬಂದು ಅಹ್ವಾರ್+ಷ್+ಈತ್=ಅಹ್ವಾರ್ಷೀತ್ ಎಂಬ ರೂಪವು ಸಿದ್ಧಿಸುತ್ತದೆ.

ರೂಪಗಳು: ಅಹ್ವಾರ್ಷೀತ್, ಅಹ್ವಾರ್ಷ್ಟಾಮ್, ಅಹ್ವಾರ್ಷುಃ। ಅಹ್ವಾರ್ಷೀಃ, ಅಹ್ವಾರ್ಷ್ಟಮ್, ಅಹ್ವಾರ್ಷ್ಟ। ಅಹ್ವಾರ್ಷಮ್, ಅಹ್ವಾರ್ಷ್ವ, ಅಹ್ವಾರ್ಷ್ಮ।

**ಲೃಙ್**: ರೂಪಗಳು: ಅಹ್ವರಿಷ್ಯತ್, ಅಹ್ವರಿಷ್ಯತಾಮ್, ಅಹ್ವರಿಷ್ಯನ್। ಅಹ್ವರಿಷ್ಯಃ, ಅಹ್ವರಿಷ್ಯತಮ್, ಅಹ್ವರಿಷ್ಯತ। ಅಹ್ವರಿಷ್ಯಮ್, ಅಹ್ವರಿಷ್ಯಾವ, ಅಹ್ವರಿಷ್ಯಾಮ।

ವಿಶೇಷ: ಸೂತ್ರದಲ್ಲಿ ಅರ್ತಿ ಎಂಬ ಶಬ್ದ ಪ್ರಯೋಗವು 'ಋ' ಧಾತುವನ್ನು ಗುರುತಿಸುತ್ತದೆ. ಇದು "ಇಕ್ –ಶ್ತಿಪೌ ಧಾತು ನಿರ್ದೇಶೇ" ಎಂಬುದರಿಂದ 'ಅರ್ತಿ' ಎಂದು ರೂಪವಾಗಿದೆ. ಋತಃ ಎಂಬ ಪದವು ಅನುವೃತ್ತವಾಗಿರೋಣದರಿಂದ 'ಸಂಯೋಗಾದೇಃ' ಎಂಬುದಕ್ಕೆ ವಿಶೇಷಣವಾಗಿದೆ. ಆದುದರಿಂದಲೇ 'ಹ್ವೃ' ಎಂಬುದು ಸಂಯೋಗಾದಿಯಾಗಿಯೂ 'ಋದನ್ತ'ವಾಗಿಯೂ ಇದೆ. ಯಾಸುಟ್ ಆಗಮದಿಂದ 'ಯ್' ಕಾರಾದಿಯಾಗಿಯೂ ಆರ್ಧಧಾತುಕವಾಗಿಯೂ ಇದೆ. "ಕ್ಙಿತಿಚ" ಎಂಬ ಸೂತ್ರದಿಂದ ಪ್ರಾಪ್ತವಾದ ಗುಣ ನಿಷೇಧಕ್ಕೆ ನಿಷೇಧ ಬಂದಿದೆ. ಅಂದರೆ ಗುಣವೇ ಬಂದಿದೆ ಎಂದು ಅರ್ಥ

ಧಾತು– 19. ಶ್ರು ಶ್ರವಣೇ।

**(ಶ್ರು ಎಂಬುದಕ್ಕೆ ಶೃ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ – 499.ಶ್ರುವಃ ಶೃ ಚ (3.1.74)**

ವೃತ್ತಿಃ–ಶ್ರುವಃ ಶೃ ಇತ್ಯಾದೇಶಃ ಸ್ಯಾತ್ ಶ್ನು ಪ್ರತ್ಯಯಶ್ಚ । ಶೃಣೋತಿ।

ಅ. ವ್ಯ.– "ಸ್ವಾದಿಭ್ಯಃ ಶ್ನುಃ" ಎಂಬ ಸೂತ್ರದಿಂದ 'ಶ್ನುಃ' ಎಂಬ ಪದವೂ, "ಕರ್ತರಿ ಶಪ್" ಎಂಬ ಸೂತ್ರದಿಂದ 'ಕರ್ತರಿ' ಎಂಬ ಪದವೂ "ಸಾರ್ವಧಾತುಕೇ ಯಕ್" ಎಂಬ ಸೂತ್ರದಿಂದ 'ಸಾರ್ವಧಾತುಕೇ' ಎಂಬ ಪದವೂ, ಅನುವೃತ್ತವಾಗುತ್ತವೆ.

ಅರ್ಥ– ಕರ್ತ್ರರ್ಥವನ್ನು ಹೇಳುವ ಸಾರ್ವಧಾತುಕ ಪ್ರತ್ಯಯವು ಪರದಲ್ಲಿದ್ದಾಗ, 'ಶ್ರು' ಗೆ 'ಶೃ' ಆದೇಶವು ಬರುತ್ತದೆ. ಮತ್ತು ಅದರ ಪರದಲ್ಲಿ 'ಶ್ನು(ನು)' ಪ್ರತ್ಯಯವೂ ಬರುತ್ತದೆ.

ವಿಶೇಷ: ಈ ಸೂತ್ರದಿಂದ ಎರಡು ಕಾರ್ಯಗಳು ವಿಧಿಸಲ್ಪಟ್ಟಿವೆ. 'ಶ್ರು' ಧಾತುವಿಗೆ 'ಶೃ' ಆದೇಶ ಮತ್ತು "ಕರ್ತರಿ ಶಪ್" ಎಂಬ ಸೂತ್ರದಿಂದ ಬರಬೇಕಾದ 'ಶಪ್' ಪ್ರತ್ಯಯವನ್ನು ಬಾಧಿಸಿ 'ಶ್ನು(ನು)' ಪ್ರತಯವನ್ನು ವಿಧಿಸಲಾಗಿದೆ. ಈ ಪ್ರತ್ಯಯವು 'ಶಿತ್' ಆಗಿರೋಣದರಿಂದ ಸಾರ್ವಧಾತುಕವಾಗಿಯೂ ಮತ್ತು 'ಅಪಿತ್' ಆಗಿಯೂ ಇರುವುದರಿಂದ ಙಿದ್ವದ್ಭಾವವನ್ನು ಹೊಂದುತ್ತದೆ (ಸಾರ್ವಧಾತುಕಮಪಿತ್). ಆದುದರಿಂದ

"ಕ್ಙಿತಿಚ" ಎಂಬ ಸೂತ್ರದಿಂದ 'ಶ್ರು' ಗೆ ಬರಬೇಕಾದ ಗುಣವು ನಿಷೇಧಿಸಲಾಗಿದೆ.

**ಲಟ್**: ಉದಾ– ಶೃಣೋತಿ – ಪ್ರಥಮಪುರುಷ ಏಕವಚನದಲ್ಲಿ 'ಶೃ' ಧಾತುವಿನ ನಂತರ 'ಲಟ್' ಗೆ 'ತಿಪ್(ತಿ)' ಆದೇಶ ಬಂದನಂತರ 'ಶಪ್' ವಿಕರಣ ಪ್ರತ್ಯಯವು ಬರಬೇಕಾಗುತ್ತದೆ. ಇಲ್ಲಿ ಎರಡು ಕಾರ್ಯಗಳು ಜರುಗುತ್ತವೆ 'ಶ್ರು' ಗೆ 'ಶೃ' ಆದೇಶ ಮತ್ತು 'ಶಪ್' ನ್ನು ಬಾಧಿಸಿ 'ಶ್ನು(ನು)' ವಿಕರಣ ಪ್ರತ್ಯಯವು ಆದೇಶವಾಗಿ ಬರುತ್ತದೆ. ಆಗ ಶೃ+ನು+ತಿ ಎಂದಿರುತ್ತದೆ. 'ನು' ಪ್ರತ್ಯಯವು ಸಾರ್ವಧಾತುಕ ಸಂಜ್ಞೆ ಮತ್ತು ಅಪಿತ್‌ಸಂಜ್ಞೆಯನ್ನು ಹೊಂದಿದಾಗ "ಸಾರ್ವಧಾತುಕಮಪಿತ್" ಎಂಬ ಸೂತ್ರದಿಂದ 'ಙಿದ್ವದ್ಭಾವ'ವು ಬರುತ್ತದೆ. ಇದರಿಂದ 'ಶೃ' ನಲ್ಲಿರುವ ಇಗನ್ತಾಂಗದ ಅನ್ತವಾದ 'ಋ' ಕಾರಕ್ಕೆ ಗುಣವು ಪ್ರಾಪ್ತವಾದಾಗ, 'ಕ್ಙಿತಿಚ" ಎಂಬುದರಿಂದ ನಿಷೇಧವು ಬರುತ್ತದೆ. ಆದರೆ 'ತಿ' ಎಂಬುದನ್ನು ಸಾರ್ವಧಾತುಕವೆಂದು ಭಾವಿಸೋಣದ್ದರಿಂದ ಈ ಹಿಂದೆ ಗುಣವು ನಿಷೇಧಿಸಲ್ಪಟ್ಟಿದ್ದರೂ 'ನು' ನಲ್ಲಿರುವ 'ಉ' ಕಾರಕ್ಕೆ "ಸಾರ್ವಧಾತು–ಕಾರ್ಧಧಾತುಕಯೋಃ" ಎಂಬುದರಿಂದ ಗುಣವು ಬರುತ್ತದೆ. ಆಗ ಶೃ+ನೋ+ತಿ ಎಂದಿರುತ್ತದೆ. ಆಗ, "ಋವರ್ಣಾತ್ ನಸ್ಯ ಣತ್ವಂ ವಾಚ್ಯಮ್" ಎಂಬ ವಾರ್ತಿಕದಿಂದ ಣತ್ವ(ಣ್) ಬಂದು ಶೃಣೋತಿ ಎಂಬ ರೂಪವು ಸಿದ್ಧವಾಗುತ್ತದೆ.

**(ಅಪಿತ್ ಆದ ಸಾರ್ವಧಾತುಕಕ್ಕೆ ಙಿದ್ವದ್ಭಾವವನ್ನು ಹೇಳುವ ಅತಿದೇಶ ಸೂತ್ರ)**

**ಸೂತ್ರ – ೨೦೦. ಸಾರ್ವಧಾತುಕಮಪಿತ್ (1.2.4)**

ವೃತ್ತಿಃ–ಅಪಿತ್ ಸಾರ್ವಧಾತುಕಂ ಙಿದ್ವತ್ । ಶೃಣುತಃ।

ಪ. ಛೇ. – ಸಾರ್ವಧಾತುಕಮ್, ಅಪಿತ್।

ಅ. ವೃ. – "ಗಾಙ್‌ಕುಟಾದಿಭ್ಯೋಽಞ್ಣಿನ್ಙಿತ್" ಎಂಬ ಸೂತ್ರದಿಂದ 'ಙಿತ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– ಅಪಿತ್(ಪಿತ್ ಅಲ್ಲದ) ಸಾರ್ವಧಾತುಕವು ಙಿದ್ವದ್ಭಾವವನ್ನು ಹೊಂದುತ್ತದೆ.

ವಿಶೇಷ: ಇದಕ್ಕೆ ಅತಿದೇಶವೆಂದು ಹೇಳುತ್ತಾರೆ. ಙಿದ್ವದ್ಭಾವವಿಲ್ಲದಿದ್ದರೂ, ಈ ಸನ್ನಿವೇಶದಲ್ಲಿ ಙಿದ್ವದ್ಭಾವವನ್ನು ಆರೋಪಿಸಲಾಗಿದೆ. ಇದರಿಂದ ಙಿದ್ವದ್ಭಾವದಿಂದ ಆಗಬೇಕಾದ ಗುಣ–ವೃದ್ಧಿ–ನಿಷೇಧ ಮೊದಲಾದ ಎಲ್ಲ ಕಾರ್ಯಗಳೂ ಜರುಗುತ್ತವೆ. ತಿಪ್, ತಸ್, ಝಿ ಮೊದಲಾದ ಪರಸ್ಮೈ ಪದದಲ್ಲಿ ಸಿಪ್, ತಿಪ್ ಮತ್ತು ಮಿಪ್ ಗಳು ಮಾತ್ರ ಪಿತ್ ಗಳಾಗಿವೆ. ಆದರೆ ಆತ್ಮನೇ ಪದದಲ್ಲಿ ಪಿತ್ ಪ್ರತ್ಯಯಗಳಿಲ್ಲ. ಅಂದರೆ ಎಲ್ಲವೂ ಅಪಿತ್ ಗಳೇ ಆಗಿವೆ. ಹೀಗಾಗಿ ಪರಸ್ಮೈಪದದಲ್ಲಿ 6 ಮತ್ತು ಆತ್ಮನೇಪದದಲ್ಲಿ 9 ಸೇರಿ ಒಟ್ಟು 15 ಪ್ರತ್ಯಯಗಳು ಙಿದ್ವದ್ಭಾವನ್ನು ಹೊಂದುತ್ತವೆ.

ಉದಾ–ಶೃಣುತಃ– ಪ್ರಥಮಪುರುಷ ದ್ವಿ–ವಚನದಲ್ಲಿ 'ಶ್ರು' ಧಾತುವಿನ ನಂತರ ಇರುವ 'ಲಟ್' 'ಲ್' ಕಾರಕ್ಕೆ 'ತಸ್' ಆದೇಶ ಬಂದು ಧಾತುವಿನ ನಂತರ 'ಶಪ್(ಅ)' ಬಂದಾಗ, ಇದನ್ನು ಬಾಧಿಸಿ "ಶ್ರುವಃ ಶೃ ಚ" ಎಂಬ ಸೂತ್ರದಿಂದ 'ಶ್ರು' ಗೆ 'ಶೃ' ಆದೇಶ ಬಂದು ಅದರ ನಂತರ 'ಶ್ನು(ನು)' ಪ್ರತ್ಯಯ ಬಂದಾಗ, ಶೃ+ನು+ತಸ್

ಎಂದಿರುತ್ತದೆ. ಇಲ್ಲಿ 'ಶ್ನು(ನು)' ಪ್ರತ್ಯಯ ಹಾಗೂ 'ತಸ್' ಪ್ರತ್ಯಯಗಳು 'ಅಪಿತ್' ಹಾಗೂ ಸಾರ್ವಧಾತುಕವಾಗಿಯೂ ಇವೆ. ಆದ್ದರಿಂದ ಇವೆರಡೂ ಪ್ರಕೃತ ಸೂತ್ರದಿಂದ ಙಿದ್ವದ್ಭಾವವನ್ನು ಹೊಂದಿ "ಕ್ಙಿತಿಚ" ಎಂಬ ಸೂತ್ರದಿಂದ ಗುಣ ನಿಷೇಧವಾದಮೇಲೆ ಶೃ+ನು+ತಸ್ ಎಂದಿದ್ದಾಗ, ಹಿಂದಿನಂತೆ ಣತ್ವ ಬಂದು ರುತ್ವ–ವಿಸರ್ಗಗಳಿಂದ ಶೃಣುತಃ ಎಂಬ ರೂಪವು ಸಿದ್ಧವಾಗುತ್ತದೆ.

### (ಯಣ್ ಆದೇಶವನ್ನು ವಿಧಿಸುವ ಸೂತ್ರ)

**ಸೂತ್ರ – 501. ಹುಶ್ನುವೋಃ ಸಾರ್ವಧಾತುಕೇ (6.4.87)**

ವೃತ್ತಿಃ– ಹು ಶ್ನುವೋಃ ಅನೇಕಾಚೋಽಸಂಯೋಗಪೂರ್ವಸ್ಯ ಉವರ್ಣಸ್ಯ ಯಣ್ ಸ್ಯಾತ್ ಅಚಿ ಸಾರ್ವಧಾತುಕೇ। ಶೃಣ್ವನ್ತಿ। ಶೃಣೋಷಿ।ಶೃಣುಥಃ।ಶೃಣುಥ।ಶೃಣೋಮಿ।

ಪ. ಛೇ. – ಹುಶ್ನುವೋಃ, ಸಾರ್ವಧಾತುಕೇ।

ಅ. ವೃ. –"ಅಚಿ ಶ್ನುಧಾತುಭ್ರುವಾಮ್‌ಯ್ವೋರಿಯಙುವಙೌ" ಎಂಬ ಸೂತ್ರದಿಂದ 'ಅಚಿ' ಎಂಬ ಪದವೂ, "ಇಣೋಯಣ್" ಎಂಬ ಸೂತ್ರದಿಂದ 'ಯಣ್' ಎಂಬ ಪದವೂ "ಏರನೇಕಾಚೋಽಸಂಯೋಗಪೂರ್ವಸ್ಯ" ಎಂಬ ಸೂತ್ರದಿಂದ 'ಅನೇಕಾಚಃ' ಮತ್ತು 'ಅಸಂಯೋಗಪೂರ್ವಸ್ಯ' ಎಂಬ ಪದಗಳೂ, ಹಾಗೂ "ಓಃ ಸುಪಿ" ಎಂಬ ಸೂತ್ರದಿಂದ 'ಓಃ' ಎಂಬ ಪದವೂ ಅನುವೃತ್ತವಾಗಿವೆ.

ಅರ್ಥ–'ಹು' ಧಾತು ಹಾಗೆಯೇ 'ಶ್ನು(ನು)' ಪ್ರತ್ಯಯಾನ್ತವಾದ ಯಾವ ಅನೇಕಾಚ್ ಆದ ಅಂಗವಿರುವದೋ, ಅದರ ಅಸಂಯೋಗ ಪೂರ್ವ 'ಉ' ಕಾರಕ್ಕೆ 'ಯಣ್' ಆದೇಶವು ಬರುತ್ತದೆ– ಅಜಾದಿ ಸಾರ್ವಧಾತುಕವು ಪರದಲ್ಲಿದ್ದಾಗ.

ವಿಶೇಷ: ಹು ಧಾತು ಮತ್ತು ಶ್ನು(ನು) ಪ್ರತ್ಯಯದ 'ಉ' ಕಾರಕ್ಕೆ ಗುಣವು ಬರುವುದು. ಯಾವಾಗ ಅಂದರೆ 'ಶ್ನು(ಉ)' ವಿನ 'ಉ' ಕಾರದ ಪೂರ್ವದಲ್ಲಿ ಸಂಯೋಗವಿರಬಾರದು. ಮತ್ತು 'ನು' ವನ್ನು ಸೇರಿಸಿಕೊಂಡು ಅನೇಕಾಚ್ ಆಗಿದ್ದರೆ ಮಾತ್ರ, ಯಾವ ಧಾತುವಿನ ವಿಷಯದಲ್ಲೂ 'ನು' ಸೇರಿದ ನಂತರ ಅದು ಅನೇಕಾಚ್ ಆಗಿಯೇ ಆಗುತ್ತದೆ. ಅನೇಕಾಚ್ ಅಂಗ ಮತ್ತು 'ಉ–ಕಾರಕ್ಕೆ ಪೂರ್ವದಲ್ಲಿ ಸಂಯೋಗವು ಆಗದಿದ್ದರೆ', ಎಂದು ಹೇಳೋಣದರಿಂದ ಆಪ್+ನು+ಅನ್ತಿ ಎಂಬಲ್ಲಿ 'ಉ' ಕಾರಕ್ಕೆ ಪೂರ್ವದಲ್ಲಿ 'ಪ್' ಕಾರ ಇರೋಣದರಿಂದ 'ಪ್' ಕಾರ 'ನ್' ಕಾರಗಳಿಗೆ ಸಂಯೋಗವಿರುತ್ತದೆ. ಆದುದರಿಂದ 'ನ್' ಕಾರೋತ್ತರ 'ಉ' ಕಾರಕ್ಕೆ 'ಯಣ್' ಸಂಧಿ ಬಾರದೇ 'ಉವಙ್(ಉವ್)' ಆದೇಶವೇ ಬರುತ್ತದೆ. ಆಪ್+ನ್+ಉವ್+ಅನ್ತಿ=ಆಪ್ನುವನ್ತಿ ಎಂದಾಗುತ್ತದೆ.

ಉದಾ– ಶೃಣ್ವನ್ತಿ– ಪ್ರಥಮಪುರುಷ ಬಹುವಚನದಲ್ಲಿ 'ಶ್ರು' ಧಾತುವಿನ ನಂತರ 'ಲಟ್' ಗೆ 'ಝಿ' ಆದೇಶ ಬಂದು ಅದಕ್ಕೆ "ಝೋಽನ್ತಃ" ಎಂಬುದರಿಂದ 'ಅನ್ತ್' ಆದೇಶ ಬಂದು, 'ಶ್ರು' ಧಾತುವಿಗೆ 'ಶೃ' ಆದೇಶ ಬಂದು, ಆ ಧಾತುವಿಗೆ 'ಶ್ನು(ನು)' ಸೇರಿಸಿದಾಗ ಶೃ+ನು+ಅನ್ತಿ ಎಂದಿರುತ್ತದೆ. ಶೃನು ಎಂಬುದು ಅನೇಕಾಚ್ ಆದ ಅಂಗವಾಗಿದೆ. 'ನು'ನಲ್ಲಿರುವ 'ಉ' ಕಾರ ಅಸಂಯೋಗ ಪೂರ್ವವಾಗಿಯೂ ಇದೆ. ಅದುದರಿಂದ

ಪ್ರಕೃತ ಸೂತ್ರದಿಂದ 'ಉ' ಕಾರ ಬಂದು 'ಯಣ್' ಸಂಧಿಯಾಗಿ 'ವ್' ಕಾರವು 'ಉ' ಕಾರದ ಸ್ಥಾನದಲ್ಲಿ ಬಂದಿದೆ. (ಇಲ್ಲಿ 'ಉ' ಕಾರದ ಪೂರ್ವದಲ್ಲಿ ಸಂಯೋಗವಿಲ್ಲದ್ದರಿಂದ ಉವಙ್ ಆದೇಶಕ್ಕೆ ಅವಕಾಶವಿಲ್ಲ). ಆಗ ಶೃ+ನ್+ವ್+ಅನ್ತಿ ಎಂದಿದ್ದಾಗ, 'ಋವರ್ಣಾತ್ ನಸ್ಯ ಣತ್ವಂ ವಾಚ್ಯಮ್' ಎಂಬ ವಾರ್ತಿಕದಿಂದ 'ಣತ್ವ' ಬಂದು ಶೃಣ್ವನ್ತಿ ಎಂಬ ರೂಪವು ಸಿದ್ಧವಾಗಿದೆ.

ಉದಾ- ಶೃಣೋಷಿ- ಮಧ್ಯಮಪುರುಷ ಏಕವಚನದಲ್ಲಿ ಪ್ರಕ್ರಿಯೆಯು ಶೃಣೋತಿ ಎಂಬಲ್ಲಿರುವಂತೆ ನಡೆದು 'ಸ್' ಕಾರಕ್ಕೆ ಷತ್ವ ಬಂದು ಶೃಣೋಷಿ ಎಂದು ರೂಪವಾಗಿದೆ.

ಉದಾ- ಶೃಣುಥಃ, ಶೃಣುಥ- ಮಧ್ಯಮಪುರುಷ ದ್ವಿವಚನ, ಬಹುವಚನಗಳಲ್ಲಿ ಶೃಣುತಃ ಎಂಬಲ್ಲಿಯ ಪ್ರಕ್ರಿಯೆಯನ್ನು ಅನುಕರಣೆ ಮಾಡಿವೆ.

ಉದಾ- ಶೃಣೋಮಿ – ಉತ್ತಮ ಪುರುಷ ಏಕವಚನದಲ್ಲಿರುವ ಈ ರೂಪವು 'ಶೃಣೋತಿ' ಎಂಬಲ್ಲಿರುವ ಪ್ರಕ್ರಿಯೆಯನ್ನು ಅನುಕರಣೆ ಮಾಡಿದೆ.

**(ವೈಕಲ್ಪಿಕವಾಗಿ 'ಉ' ಕಾರ ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ-502. ಲೋಪಶ್ಚಾಸ್ಯಾನ್ಯತರಸ್ಯಾಂ ಮ್ವೋಃ (6.4.107)**

ವೃತ್ತಿಃ-ಅಸಂಯೋಗಪೂರ್ವಸ್ಯ ಪ್ರತ್ಯಯ-ಉಕಾರಸ್ಯ ಲೋಪೋ ವಾ ಮ್ವೋಃ ಪರಯೋಃ। ಶೃಣ್ವಃ। ಶೃಣುವಃ। ಶೃಣ್ಮಃ, ಶೃಣುಮಃ। ಶುಶ್ರಾವ। ಶುಶ್ರುವತುಃ। ಶುಶ್ರುವುಃ। ಶುಶ್ರೋಥ। ಶುಶ್ರುವಥುಃ। ಶುಶ್ರುವ। ಶುಶ್ರಾವ, ಶುಶ್ರವ। ಶುಶ್ರುವ। ಶುಶ್ರುಮ । ಶ್ರೋತಾ। ಶ್ರೋಷ್ಯತಿ। ಶೃಣೋತು। ಶೃಣುತಾತ್। ಶೃಣುತಾಮ್। ಶೃಣ್ವನ್ತು।

ಪ. ಛೇ. – ಲೋಪಃ, ಚ, ಅಸ್ಯ, ಅನ್ಯತರಸ್ಯಾಂ, ಮ್ವೋಃ(ಮ-ವಯೋಃ)।

ಅ. ವ್ಯ. – "ಉತಶ್ಚ ಪ್ರತ್ಯಯಾದಸಂಯೋಗಪೂರ್ವಾತ್" ಎಂಬ ಸೂತ್ರದಿಂದ 'ಉತಃ' ಎಂಬ ಪದವು ಅನುವೃತ್ತವಾಗುತ್ತದೆ. "ಅಂಗಸ್ಯ" ಎಂಬುದು ಅಧಿಕಾರ ಸೂತ್ರ, ಸೂತ್ರದಲ್ಲಿರುವ 'ಅಸ್ಯ' ಎಂಬ ಪದವು ಪೂರ್ವಸೂತ್ರದ ಸಂಬಂಧವನ್ನು ಸೂಚಿಸುತ್ತದೆ.

ಅರ್ಥ- ಅಸಂಯೋಗ-ಪೂರ್ವವಾದ ಪ್ರತ್ಯಯದ 'ಉ' ಕಾರಕ್ಕೆ ವೈಕಲ್ಪಿಕವಾಗಿ ಲೋಪ ಬರುತ್ತದೆ- 'ಮ್' ಮತ್ತು 'ವ್' ವರ್ಣಗಳು ಪರದಲ್ಲಿದ್ದಾಗ.

ಉದಾ- ಶೃಣ್ವಃ/ಶೃಣುವಃ, ಶೃಣ್ಮಃ/ಶೃಣುಮಃ- ಉತ್ತಮಪುರುಷದ ದ್ವಿ-ವಚನ,ಬಹುವಚನದ ಈ ರೂಪಗಳು 'ವಸ್' 'ಮಸ್' ಎಂಬ ಮೂಲ ಆಖ್ಯಾತ ಪ್ರತ್ಯಯಗಳನ್ನು ಕ್ರಮವಾಗಿ ಸೇರಿಸಿದಾಗ, ಪ್ರಕೃತ ಸೂತ್ರದಿಂದ 'ಉ' ಕಾರ ಲೋಪವನ್ನು ಮಾಡಿದಾಗ ಶೃಣ್ವಃ ಮತ್ತು ಶೃಣ್ಮಃ ಎಂದೂ ಲೋಪ ಮಾಡದೇ ಇದ್ದಾಗ, ಶೃಣುವಃ ಮತ್ತು ಶೃಣುಮಃ ಎಂದೂ ರೂಪಗಳು ಸಿದ್ಧವಾಗುತ್ತದೆ.

ರೂಪಗಳು: ಶೃಣೋತಿ, ಶೃಣುತಃ, ಶೃಣ್ವನ್ತಿ। ಶೃಣೋಷಿ, ಶೃಣುಥಃ, ಶೃಣುಥ। ಶೃಣೋಮಿ।ಶೃಣ್ವಃ/ಷ್ಯಣುವಃ, ಶೃಣ್ಮಃ/ಶೃಣುಮಃ।

**ಲಿಟ್**: ಉದಾ – ಶುಶ್ರಾವ- ಪ್ರಥಮಪುರುಷ ಏಕವಚನದಲ್ಲಿ 'ಶ್ರು' ಧಾತುವಿನ

ನಂತರ 'ಲಿಟ್' 'ಲ್' ಕಾರಕ್ಕೆ 'ತಿಪ್(ತಿ)' ಆದೇಶ ಬಂದು, ಅದಕ್ಕೆ ಅಭಿನವ ಆಖ್ಯಾತ ಪ್ರತ್ಯಯವಾದ 'ಣಲ್(ಅ)' ಆದೇಶ ಬಂದು ಶ್ರು+ಅ ಎಂದಿರುತ್ತದೆ. ಧಾತುವಿಗೆ ದ್ವಿತ್ವ ಬಂದಮೇಲೆ ಶ್ರು ಶ್ರು+ಅ ಎಂದಿದ್ದಾಗ, ಹಲಾದಿ ಶೇಷದಿಂದ ಶು ಶ್ರೃ+ಅ ಎಂದಾಗುತ್ತದೆ. ನಂತರ "ಅಚೋಞ್ಣಿತಿ" ಎಂಬ ಸೂತ್ರದಿಂದ ಅನಭ್ಯಸ್ತ 'ಶ್ರು' ಗೆ 'ವೃದ್ಧಿ' ಬಂದು ಶುಶ್ರೌ+ಅ ಎಂದಾಗುತ್ತದೆ. "ಏಚೋಽಯವಾಯಾವಃ" ಎಂಬ ಸೂತ್ರದಿಂದ 'ಔ' ಗೆ 'ಆವ್' ಆದೇಶ ಬಂದು, ಶುಶ್ರಾವ ಎಂದು ರೂಪವಾಗುತ್ತದೆ.

ವಿಶೇಷ: 'ಲಿಟ್' 'ಲ್' ಕಾರವು ಆರ್ಧಧಾತುಕವಾಗಿರೋಣದರಿಂದ 'ಶಪ್(ಅ)' ವಿಕರಣ ಪ್ರತ್ಯಯವು ಬರುವುದಿಲ್ಲ. ಮತ್ತು 'ಶ್ರೃ' ಆದೇಶವೂ ಮತ್ತೂ 'ಶ್ನು' ಪ್ರತ್ಯಯವೂ ಬರುವುದಿಲ ಎಂಬುದನ್ನು ಗಮನಿಸಬೇಕು.

ಉದಾ– ಶುಶ್ರುವತುಃ– ಪ್ರಥಮಪುರುಷ ದ್ವಿ ವಚನದಲ್ಲಿ 'ಶ್ರೃ' ಧಾತುವಿನ ನಂತರ 'ಅತುಸ್' ಪ್ರತ್ಯಯವನ್ನು ಸೇರಿಸಿದಾಗ ಶ್ರು+ಅತುಸ್ ಎಂದಿರುತ್ತದೆ. "ಅಸಂಯೋಗಾಲ್ಲಿಟ್ ಕಿತ್" ಎಂಬ ಸೂತ್ರದಿಂದ ಕಿದ್ವದ್ಭಾವವು ಅತಿದೇಶವಾಗಿ ಬರುತ್ತದೆ. "ಸಾರ್ವಧಾತು–ಕಾರ್ಧಧಾತುಕಯೋಃ" ಎಂಬ ಸೂತ್ರದಿಂದ ಬರಬೇಕಾದ ಗುಣವು ಬಾರದೇ ಕಿದ್ವದ್ಭಾವದ ಕಾರಣದಿಂದ "ಕ್ಙಿತಿಚ" ಎಂಬ ಸೂತ್ರದಿಂದ ನಿಷೇಧವಾಗುತ್ತದೆ. ಮತ್ತು "ಅಚಿ ಶ್ನುಧಾತುಭ್ರುವಾಮ್‌ವರ್ಯ್ವೋರಿಯಙುವಙೌ" ಎಂಬ ಸೂತ್ರದಿಂದ 'ಉವಙ್' ಆದೇಶ ಬರಬೇಕಾಗಿತ್ತು. ಆದರೆ "ದ್ವಿರ್ವಚನೇಽಚಿ" ಎಂಬ ಸೂತ್ರದಿಂದ ಅದು ನಿಷೇಧಿಸಲ್ಪಟ್ಟಿದೆ. ಧಾತುವಿಗೆ ದ್ವಿತ್ವವು ಆಗಿದೆ. "ಹಲಾದಿ ಶೇಷ"ದಿಂದ ಅಭ್ಯಾಸದಲ್ಲಿಯ ಆದಿ 'ಹಲ್' ಮಾತ್ರ ಉಳಿದು ಶುಶ್ರು+ಅತುಸ್ ಎಂದಾಗಿದೆ. ಈಗ ಪ್ರಕೃತ 'ಉವಙ್(ಉವ್)' ಆದೇಶ ಬಂದು ಶುಶ್+ಉವ್+ಅತುಸ್ ಎಂದಾದ ಮೇಲೆ ರುತ್ವ–ವಿಸರ್ಗಗಳಿಂದ ಶುಶ್ರುವತುಃ ಎಂದು ರೂಪವಾಗಿದೆ.

ಉದಾ– ಶುಶ್ರುವುಃ– ಪ್ರಥಮಪುರುಷ ಬಹುವಚನದಲ್ಲಿ ಶುಶ್ರುವುಃ ಎಂಬ ಈ ರೂಪವು ದ್ವಿವಚನದಂತೆಯೇ ರೂಪವನ್ನು ಹೊಂದುತ್ತದೆ.

ಉದಾ– ಶುಶ್ರೋಥ– ಮಧ್ಯಮಪುರುಷ ಏಕವಚನದಲ್ಲಿ 'ಶ್ರು' ಧಾತುವಿನ ಮೇಲೆ ಮೂಲ ಆಖ್ಯಾತ ಪ್ರತ್ಯಯವಾದ 'ಸಿಪ್' ಸೇರಿಸಿದಾಗ ಶ್ರು+ಸಿಪ್ ಎಂದಿರುತ್ತದೆ. 'ಸಿಪ್' ಇದು ಅಪಿತ್ ಆಗಿರುವುದಿಲ್ಲ. ಈ ಸಿಪ್ ಗೆ ಅಭಿನವ ಆಖ್ಯಾತ ಪ್ರತ್ಯಯವಾದ 'ಥಲ್(ಥ)' ಆದೇಶವಾಗಿ ಬಂದು, ಶ್ರು+ಥ ಎಂದಿದ್ದಾಗ, 'ಸಿಪ್' ನ ಸ್ಥಾನದಲ್ಲಿ ಆದೇಶವಾಗಿ ಬಂದ 'ಥ' ಕೂಡ 'ಅಪಿತ್' ಆಗಿರುವುದಿಲ್ಲ. ಆದ್ದರಿಂದ "ಕಿದ್ವದ್ಭಾವವು' ಬರುವುದಿಲ್ಲ. ಆದ್ದರಿಂದ ಗುಣನಿಷೇಧವೂ ಬರುವುದಿಲ್ಲ. ನಂತರ ಧಾತುವಿಗೆ ದ್ವಿತ್ವ ಬಂದು ಶ್ರು ಶ್ರು+ಥ ಎಂದಿದ್ದಾಗ, "ಹಲಾದಿಶೇಷದಿಂದ ಶುಶ್ರು+ಥ ಎಂದಿದ್ದಾಗ, ಅನಭ್ಯಸ್ಥ ರೂಪದಲ್ಲಿರುವ 'ಶ್ರು' ವಿನ 'ಉ' ಕಾರಕ್ಕೆ ಗುಣ ಬಂದು ಶುಶ್ರೋಥ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಶುಶ್ರುವಥುಃ, ಶುಶ್ರುವ– ಈ ಎರಡೂ ರೂಪಗಳು 'ಶುಶ್ರುವತುಃ' ಎಂಬ ರೂಪದ ಪ್ರಕ್ರಿಯೆಯನ್ನು ಅನುಸರಿಸಿವೆ.

ಉದಾ–ಶುಶ್ರಾವ/ಶುಶ್ರವ – ಉತ್ತಮಪುರುಷ ಏಕವಚನದಲ್ಲಿ 'ಮಿಪ್' ಗೆ 'ಣಲ್(ಅ)' ಆದೇಶವಾಗಿ ಬರೋಣದರಿಂದ ಪ್ರಥಮಪುರುಷ ಏಕವಚನದಲ್ಲಿರುವಂತೆ ಶುಶ್ರಾವ ಎಂಬ ಮೊದಲನೆಯ ರೂಪವು ಬಂದಿದೆ. "ಣಲುತ್ತಮೋ ವಾ" ಎಂಬ ಸೂತ್ರದಿಂದ ವೈಕಲ್ಪಿಕ ಣಿದ್ವದ್ಭಾವವು ಇರೋಣದರಿಂದ ಣಿತ್ವ ಪಕ್ಷದಲ್ಲಿ ವೃದ್ಧಿ ಬಂದು ಶುಶ್ರಾವ ಎಂದೂ, ಣಿತ್ವ ಬಾರದ ಪಕ್ಷದಲ್ಲಿ ಶುಶ್ರು+ಅ ಎಂದಿದ್ದಾಗ 'ಉ' ಕಾರಕ್ಕೆ ಗುಣ(ಓ) ಬಂದು ಶು ಶ್ರೋ+ಅ ಎಂದಿದ್ದಾಗ, 'ಓ' ಗೆ 'ಅವ್' ಆದೇಶ ಬಂದು ಶು ಶ್+ಅವ್+ಅ=ಶುಶ್ರವ ಎಂದು ರೂಪವು ಸಿದ್ಧಿಸುತ್ತದೆ.

ಉದಾ–ಶುಶ್ರುವ, ಶುಶ್ರುಮ– ಉತ್ತಮಪುರುಷ ದ್ವಿವಚನ–ಬಹುವಚನಗಳಲ್ಲಿ 'ವಸ್' 'ಮಸ್' ಪ್ರತ್ಯಯಗಳಿದ್ದಾಗ 'ವ' 'ಮ' ಗಳು ಆದೇಶವಾಗಿ ಬಂದು ಶುಶ್ರುವ, ಶುಶ್ರುಮ ಎಂಬ ರೂಪಗಳು ಸಿದ್ಧವಾಗುತ್ತವೆ.

ರೂಪಗಳು: ಶುಶ್ರಾವ, ಶುಶ್ರುವತುಃ, ಶುಶ್ರುವುಃ। ಶುಶ್ರೋಥ, ಶುಶ್ರುವಥುಃ, ಶುಶ್ರುವ। ಶುಶ್ರಾವ/ಶುಶ್ರವ, ಶುಶ್ರುವ, ಶುಶ್ರುಮ।

**ಲುಟ್**: ರೂಪಗಳು: ಶ್ರೋತಾ। ಶ್ರೋತಾರೌ। ಶ್ರೋತಾರಃ।ಶ್ರೋತಾಸಿ, ಶ್ರೋತಾಅಥ್ಥಃ, ಶ್ರೋತಾಸ್ಥ। ಶ್ರೋತಾಸ್ಮಿ, ಶ್ರೋತಾಸ್ವಃ, ಶ್ರೋತಾಸ್ಮಃ।

**ಲೃಟ್**: ರೂಪಗಳು: ಶ್ರೋಷ್ಯತಿ,ಶ್ರೋಷ್ಯತಃ, ಶ್ರೋಷ್ಯನ್ತಿ। ಶ್ರೋಷ್ಯಸಿ, ಶ್ರೋಷ್ಯಥಃ, ಶ್ರೋಷ್ಯಥ। ಶ್ರೋಷ್ಯಾಮಿ, ಶ್ರೋಷ್ಯಾವಃ, ಶ್ರೋಷ್ಯಾಮಃ।

ವಿಶೇಷ– ಲುಟ್ ಮತ್ತು ಲೃಟ್ 'ಲ್' ಕಾರಗಳು ಆರ್ಧಧಾತುಕಗಳಾಗಿರೋಣದರಿಂದ ಇಡಾಗಮವು ಬರಬೇಕಾಗಿತ್ತು, ಆದರೆ ಈ ಧಾತುವು ಏಕಾಚ್ ಮತ್ತು ಅನುದಾತ್ತವಾಗಿರೋಣದರಿಂದ ಈ 'ಲ್' ಕಾರಗಳಲ್ಲಿ ಇಡಾಗಮವು ಬರುವುದಿಲ್ಲ.

**ಲೋಟ್**: ಉದಾ– ಶೃಣೋತು/ಶೃಣುತಾತ್ ಪ್ರಥಮಪುರುಷ ಏಕವಚನದಲ್ಲಿ 'ಶ್ರು' ಧಾತುವಿನ ನಂತರ ಇರುವ 'ಲೋಟ್' 'ಲ್' ಕಾರಕ್ಕೆ 'ತಿಪ್(ಇ)' ಆದೇಶ ಬಂದು, ಧಾತುವಿಗೆ 'ಶೃ' ಆದೇಶ ಮತ್ತು ಶ್ನು(ನು) ಪ್ರತ್ಯಯವು ಬಂದಮೇಲೆ ವಿಕರಣಪ್ರತ್ಯಯದ 'ಉ' ಕಾರಕ್ಕೆ ಗುಣ ಬಂದು 'ನ್' ಕಾರಕ್ಕೆ ಣತ್ವ(ಣ್) ಬಂದು "ಏರುಃ" ಎಂಬ ಸೂತ್ರದಿಂದ 'ತಿ' ನಲ್ಲಿರುವ 'ಇ' ಕಾರಕ್ಕೆ ಉತ್ವ(ಉ) ಬಂದು ಶೃಣೋತು ಎಂದು ರೂಪವಾಗುತ್ತದೆ.

ತಾತಙ್ (ತಾತ್) ಬಂದ ಪಕ್ಷದಲ್ಲಿ ಶೃಣುತಾತ್ ಎಂಬ ವೈಕಲ್ಪಿಕ ರೂಪವು ಸಿದ್ಧವಾಗುತ್ತದೆ.

ಉದಾ– ಶೃಣುತಾಮ್– ಪ್ರಥಮಪುರುಷ ದ್ವಿವಚನದಲ್ಲಿ 'ಶ್ರು' ಧಾತುವಿನ ನಂತರ ತಸ್ ಬದಾಗ 'ತಸ್' ಗೆ "ತಸ್–ಥಸ್–ಥ್–ಮಿಪಾಮ್‌ತಾಮ್–ತಮ್–ತ–ಆಮಃ(ಅ)" ಎಂಬ ಸೂತ್ರದಿಂದ ಅಭಿನವ ಆಖ್ಯಾತ ಪ್ರತ್ಯಯವಾದ ತಾಮ್ ಆದೇಶವಾಗಿ ಬಂದು, ನಂತರ ಹಿಂದಿನಂತೆಯೇ ಪ್ರಕ್ರಿಯೆ ನಡೆದು ಶೃಣುತಾಮ್ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಶೃಣ್ವನ್ತು– ಪ್ರಥಮಪುರುಷ ಬಹುವಚನದಲ್ಲಿ 'ಲಟ್' 'ಲ್' ಕಾರದಲ್ಲಿ

ಶೃಣ್ವನ್ತಿ ಎಂದು ರೂಪವು ಸಿದ್ಧವಾದಮೇಲೆ "ಏರುಃ" ಎಂಬ ಸೂತ್ರದಿಂದ 'ಇ' ಕಾರಕ್ಕೆ ಉತ್ವ(ಉ) ಬಂದು ಶೃಣ್ವನ್ತು ಎಂದು ರೂಪವು ಸಿದ್ಧವಾಗಿದೆ.

**(ಮಧ್ಯಮ ಪುರುಷ ಏಕವಚನದ 'ಹಿ'ಗೆ ಲುಕ್ (ಲೋಪ)ವನ್ನು ವಿಧಿಸುವ ಸೂತ್ರ)**

**ಸೂತ್ರ – ೫೦೩.ಉತಶ್ಚ ಪ್ರತ್ಯಯಾದಸಂಯೋಗಪೂರ್ವಾತ್ (6.4.106)**

ವೃತ್ತಿಃ–ಅಸಂಯೋಗಪೂರ್ವಾತ್ ಪ್ರತ್ಯಯ–ಉತಃ ಹೇಃ ಲುಕ್। ಶೃಣು, ಶೃಣುತಾತ್। ಶೃಣುತಮ್। ಶೃಣುತ। ಗುಣ–ಅವಾದೇಶೌ। ಶೃಣವಾನಿ। ಶೃಣವಾವ। ಶೃಣವಾಮ। ಅಶೃಣೋತ್। ಅಶೃಣುತಾಮ್। ಅಶೃಣ್ವನ್। ಅಶೃಣೋಃ। ಅಶೃಣುತಮ್। ಅಶೃಣುತ। ಅಶೃಣವಮ್। ಅಶೃಣ್ವ, ಅಶೃಣುವ। ಅಶೃಣ್ಮ, ಅಶೃಣುಮ। ಶೃಣುಯಾತ್। ಶೃಣುಯಾತಾಮ್। ಶೃಣುಯುಃ। ಶೃಣುಯಾಃ। ಶೃಣುಯಾತಮ್। ಶೃಣುಯಾತ। ಶೃಣುಯಾಮ್। ಶೃಣುಯಾವ। ಶೃಣುಯಾಮ। ಶ್ರೂಯಾತ್। ಅಶ್ರೌಷೀತ್।, ಅಶ್ರೋಷ್ಯತ್। ಗಮ್ಲೃ ಗತೌ। 20 ।

ಪ. ಛೇ. – ಉತಃ, ಚ, ಪ್ರತ್ಯಯಾತ್, ಅಸಂಯೋಗಪೂರ್ವಾತ್।

ಅ. ವ್ಯ. – "ಅತೋ ಹೇಃ" ಎಂಬ ಸೂತ್ರದಿಂದ 'ಹೇಃ' ಎಂಬ ಪದವೂ, ಮತ್ತು "ಚಿಣೋಲುಕ್" ಎಂಬ ಸೂತ್ರದಿಂದ 'ಲುಕ್' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ– ಪೂರ್ವದಲ್ಲಿ ಸಂಯೋಗವಿಲ್ಲದಿರುವ ಪ್ರತ್ಯಯದ ಅವಯಯವಾದ 'ಉ' ಕಾರಕ್ಕೆ ಪರದಲ್ಲಿರುವ ಮಧ್ಯಮ ಪುರುಷ ಏಕವಚನದ 'ಹಿ' ಗೆ ಲುಕ್(ಲೋಪ) ಬರುತ್ತದೆ.

ಉದಾ– ಶೃಣು/ಶೃಣುತಾತ್– ಮಧ್ಯಮ ಪುರುಷ ಏಕವಚನದಲ್ಲಿ ಶ್ರು+ಹಿ ಎಂದಿದ್ದಾಗ ಧಾತುವಿಗೆ ಹಿಂದಿನಂತೆಯೇ 'ಶೃ' ಆದೇಶ, 'ಶ್ನು(ನು) ವಿಕರಣ ಪ್ರತ್ಯಯ ಣತ್ವ(ಣ್)ಗಳು ಬಂದು, ಶೃಣು+ಹಿ ಎಂದಿದ್ದಾಗ 'ಣು' ವಿನ 'ಉ' ಕಾರದ ಪರದಲ್ಲಿರುವ 'ಹಿ'ಗೆ ಪ್ರಕೃತ ಸೂತ್ರದಿಂದ ಲುಕ್(ಲೋಪ) ಬಂದು ಶೃಣು ಎಂದು ರೂಪವು ಸಿದ್ಧವಾಗುತ್ತದೆ. ತಾತಙ್(ತಾತ್) ಆದೇಶ ಬಂದ ಪಕ್ಷದಲ್ಲಿ ಶೃಣುತಾತ್ ಎಂಬ ವೈಕಲ್ಪಿಕ ರೂಪವು ಸಿದ್ಧವಾಗುತ್ತದೆ. ದ್ವಿವಚನ ಮತ್ತು ಬಹುವಚನಗಳಲ್ಲಿ ಕ್ರಮವಾಗಿ 'ತಮ್' ಮತ್ತು 'ತ' ಪ್ರತ್ಯಯ ಸೇರಿಸಿದಾಗ, ಶೃಣುತಮ್ ಮತ್ತು ಶೃಣುತ ಎಂಬ ರೂಪಗಳು ಸಿದ್ಧವಾಗುತ್ತವೆ.

ಉದಾ– ಶೃಣವಾನಿ– ಉತ್ತಮಪುರುಷ ಏಕವಚನದಲ್ಲಿ ಹಿಂದಿನಂತೆಯೇ ಶೃ+ನು (ಶ್ನು)+ಮಿ ಎಂದಿದ್ದಾಗ "ಮೇರ್ನಿಃ" ಎಂಬ ಸೂತ್ರದಿಂದ 'ಮಿ' ಗೆ 'ನಿ' ಆದೇಶ ಬಂದು ಶೃ+ನು+ನಿ ಎಂದಿದ್ದಾಗ, ವಿಕರಣ ಪ್ರತ್ಯಯದ 'ನ್' ಕಾರಕ್ಕೆ ಣತ್ವ(ಣ್) ಬಂದು ಶೃಣುನಿ ಎಂದಿರುತ್ತದೆ. "ಆಡುತ್ತಮಸ್ಯ ಪಿಚ್ಚ" ಎಂಬ ಸೂತ್ರದಿಂದ 'ಆಟ್(ಆ) ಆಗಮ ಬಂದು ಶೃಣು+ಆನಿ ಎಂದಿದ್ದಾಗ 'ಉ' ಕಾರಕ್ಕೆ ಗುಣ ಬಂದು, ಶೃಣೋ+ಆನಿ ಎಂದಾಗಿ, ನಂತರ 'ಓ' ಕಾರಕ್ಕೆ 'ಅವ್' ಆದೇಶ ಬಂದು ಶೃಣವಾನಿ ಎಂದು ರೂಪವು ಸಿದ್ಧವಾಗುತ್ತದೆ.

ಉದಾ–ಶೃಣವಾವ,ಶೃಣವಾಮ–ಉತ್ತಮಪುರುಷ ದ್ವಿವಚನ ಮತ್ತು ಬಹುವಚನಗಳಲ್ಲಿ ಶೃಣು+ವಸ್ ಮತ್ತು ಶೃಣು+ಮಸ್ ಎಂದಿದ್ದಾಗ, "ಆಡುತ್ತಮಸ್ಯ ಪಿಚ್ಚ" ಎಂಬ ಸೂತ್ರದಿಂದ 'ಆಟ್(ಆ) ಆಗಮ ಬಂದು, ಶೃಣು+ಆ+ವಸ್ ಮತ್ತು ಶೃಣು+ಆ+ಮಸ್ ಎಂದಿದ್ದಾಗ, ಹಿಂದಿನಂತೆಯೇ ಗುಣ, ಅವಾದೇಶಗಳು ಬಂದು ಶೃಣುವಾವಸ್ ಮತ್ತು ಶೃಣವಾಮಸ್ ಎಂದಿದ್ದಾಗ "ಸಾರ್ವಧಾತುಕಮಪಿತ್ ಜಿದ್ವತ್ ಸ್ಯಾತ್" ಎಂಬ ಸೂತ್ರದಿಂದ ಜಿದ್ವದ್ಭಾವ ಬಂದು "ನಿತ್ಯಮ್ ಜಿತಃ" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬಂದು ಶೃಣವಾವ ಮತ್ತು ಶೃಣಮಾಮ ಎಂಬ ರೂಪಗಳು ಸಿದ್ಧವಾಗುತ್ತವೆ.

**ಲಙ್**: ರೂಪಗಳು:ಅಶೃಣೋತ್, ಅಶೃಣುತಾಮ್, ಅಶೃಣ್ವನ್। ಅಶೃಣೋಃ, ಅಶೃಣುತಮ್, ಅಶೃಣುತ। ಅಶೃಣವಮ್, ಅಶೃಣ್ವ/ಅಶೃಣುವ,ಅಶೃಣ್ಮ/ಅಶೃಣುಮ।

ವಿಶೇಷ– ವಸ್, ಮಸ್‌ಗಳಿಗೆ "ಲೋಪಶ್ಚಾನ್ಯತರಸ್ಯಾಮ್ವೋಃ"ಎಂಬ ಸೂತ್ರದಿಂದ ವಿಕಲ್ಪದಿಂದ 'ಉ' ಕಾರಕ್ಕೆ ಲೋಪ ಬಂದು ಎರಡು ರೂಪಗಳು ಸಿದ್ಧವಾಗಿವೆ.

**ವಿಧಿಲಿಙ್**: ರೂಪಗಳು:ಶೃಣುಯಾತ್,ಶೃಣುಯಾತಾಮ್,ಶೃಣುಯುಃ।ಶೃಣುಯಾಃ, ಶೃಣುಯಾತಮ್, ಶೃಣುಯಾತ। ಶೃಣುಯಾಮ್, ಶೃಣುಯಾವ, ಶೃಣುಯಾಮ।

ವಿಶೇಷ– ವಿಧಿಲಿಙ್ ನಲ್ಲಿ 'ಯಾಸ್' ಎಂಬುದಕ್ಕೆ 'ಇಯ್' ಆದೇಶವು ಬರುವುದಿಲ್ಲ. ಕಾರಣ ಅದು ಅದನ್ತ ಅಂಗದ ಪರದಲ್ಲಿ ಇಲ್ಲ. ಆದರೆ "ಲಿಙಃ ಸಲೋಪೋऽನನ್ತ್ಯಸ್ಯ" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬಂದು ಈ ರೂಪಗಳು ಸಿದ್ಧವಾಗಿವೆ.

**ಆಶೀರ್ಲಿಙ್**: ರೂಪಗಳು: ಶ್ರೂಯಾತ್, ಶ್ರೂಯಾಸ್ತಾಮ್, ಶ್ರೂಯಾಸುಃ। ಶ್ರೂಯಾಃ, ಶ್ರೂಯಾಸ್ತಮ್, ಶ್ರೂಯಾಸ್ತ। ಶ್ರೂಯಾಸಮ್, ಶ್ರೂಯಾಸ್ವ, ಶ್ರೂಯಾಸ್ಮ।

ವಿಶೇಷ– ಈ 'ಲ್' ಕಾರದಲ್ಲಿ 'ಶ್ರು' ಧಾತುವಿಗೆ 'ಯಾಸ್' ಪ್ರತ್ಯಯವು ಪರದಲ್ಲಿದ್ದಾಗ, 'ಶ್ರು' ವಿನಲ್ಲಿರುವ 'ಉ' ಕಾರಕ್ಕೆ "ಅಕೃತ್ಸಾರ್ವಧಾತುಕಯೋಃ" ಎಂಬ ಸೂತ್ರದಿಂದ ದೀರ್ಘವು(ಊ) ಬರುತ್ತದೆ.

**ಲುಙ್**: ರೂಪಗಳು: ಅಶ್ರೌಷೀತ್, ಅಶ್ರೌಷ್ಟಾಮ್, ಅಶ್ರೌಷುಃ। ಅಶ್ರೌಷೀಃ, ಅಶ್ರೌಷ್ಟಮ್, ಅಶ್ರೌಷ್ಟ। ಅಶ್ರೌಷಮ್, ಅಶ್ರೌಷ್ವ, ಅಶ್ರೌಷ್ಮ।

ವಿಶೇಷ– ಈ 'ಲ್' ಕಾರದಲ್ಲಿ 'ತಿಪ್' ಮತ್ತು 'ಸಿಪ್' ಪ್ರತ್ಯಯಗಳು ಅನಿಟ್ ಆಗಿರೋಣದರಿಂದ 'ಸಿಚ್' ಗೆ ಇಡಾಗಮವು ಬರುವುದಿಲ್ಲ. ಆದರೆ ಅಪೃಕ್ತವಾದ 'ತ್' ಮತ್ತು 'ಸ್' ಗಳಿಗೆ 'ಈಟ್(ಈ)' ಆಗಮವು ಬರುತ್ತದೆ. ಬೇರೆಕಡೆ ಅಪೃಕ್ತವರ್ಣವು ಇಲ್ಲದೇ ಇರೋಣದರಿಂದ 'ಈಟ್(ಈ)' ಬಾರದೇ "ಸಿಚಿವೃದ್ಧಿಃ ಪರಸ್ಮೈಪದೇಷು" ಎಂಬ ಸೂತ್ರದಿಂದ ವೃದ್ಧಿಯೂ,ಮತ್ತು 'ಸಿಚ್'ನಲ್ಲಿರುವ 'ಸ್'ಕಾರಕ್ಕೆ "ಆದೇಶಪ್ರತ್ಯಯಯೋಃ" ಎಂಬ ಸೂತ್ರದಿಂದ ಷತ್ವವು ಬಂದಿರುವುದು.

**ಲೃಙ್**: ರೂಪಗಳು–ಅಶ್ರೋಷ್ಯತ್,ಅಶ್ರೋಷ್ಯತಾಮ್,ಅಶ್ರೋಷ್ಯನ್।ಅಶ್ರೋಷ್ಯಃ, ಅಶ್ರೋಷ್ಯತಮ್, ಅಶ್ರೋಷ್ಯತ। ಅಶ್ರೋಷ್ಯಮ್, ಅಶ್ರೋಷ್ಯಾವ ,ಅಶ್ರೋಷ್ಯಾಮ।

ಧಾತು–20. ಗಮ್ಲೃ ಗತೌ –(ಹೋಗುವುದು)– ಇದರಲ್ಲಿ ಗಮ್ ಮಾತ್ರ ಉಳಿಯುತ್ತದೆ.

**(ಛತ್ವವನ್ನು ವಿಧಿಸುವ ಸೂತ್ರ)**

**ಸೂತ್ರ – 504.ಇಷು–ಗಮಿ–ಯಮಾಂ, ಛಃ (7.1.77)**

ವೃತ್ತಿಃ–ಏಷಾಂ ಛಃ ಸ್ಯಾತ್ ಶಿತಿ। ಗಚ್ಛತಿ। ಜಗಾಮ।

ಅ. ವೃ–"ಷ್ಠಿವು–ಕ್ಲಮು ಚಮಾಮ್ ಶಿತಿ" ಎಂಬ ಸೂತ್ರದಿಂದ 'ಶಿತಿ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ–'ಶಿತ್' ಪರದಲ್ಲಿದ್ದಾಗ, ಇಷ್,ಗಮ್ ಮತ್ತು ಯಮ್ ಧಾತುಗಳಿಗೆ (ಅನ್ತ್ಯ ವರ್ಣಕ್ಕೆ) 'ಛ್' ಕಾರವು ಆದೇಶವಾಗಿ ಬರುತ್ತದೆ.

**ಲಟ್**: ಉದಾ– ಗಚ್ಛತಿ – ಪ್ರಥಮಪುರುಷ ಏಕವಚನದಲ್ಲಿ 'ಗಮ್' ಧಾತುವಿನ ನಂತರ ಇರುವ 'ಲಟ್' 'ಲ್' ಕಾರಕ್ಕೆ 'ತಿಪ್(ತಿ)' ಆದೇಶ ಬಂದು, ಧಾತುವಿನ ಪರದಲ್ಲಿ 'ಶಪ್(ಅ)' ವಿಕರಣ ಪ್ರತ್ಯಯವು ಬಂದಾಗ ಗಮ್+ಅ+ತಿ ಎಂದಿರುತ್ತದೆ. ಪ್ರಕೃತ ಸೂತ್ರದಿಂದ 'ಮ್' ಕಾರಕ್ಕೆ 'ಛ್' ಕಾರವು ಆದೇಶವಾಗಿ ಬಂದು ಗಛ್+ಅ+ತಿ ಎಂದಿದ್ದಾಗ, "ಛೇ ಚ" ಎಂಬ ಸೂತ್ರದಿಂದ 'ಛ್' ಕಾರಕ್ಕೆ 'ತುಕ್(ತ್)' ಆಗಮ ಬಂದು ಗ+ತ್ಛ್+ಅ+ತಿ ಎಂದಿದ್ದಾಗ, "ಸ್ತೋಃ ಶ್ಚುನಾ ಶ್ಚುಃ" ಎಂಬ ಸೂತ್ರದಿಂದ 'ತ್' ಕಾರಕ್ಕೆ 'ಚುತ್ವ(ಚ್)' ಬಂದು ಗಚ್ಛ್+ಅ+ತಿ=ಗಚ್ಛತಿ ಎಂಬ ರೂಪವು ಸಿದ್ಧವಾಗುತ್ತದೆ.

ರೂಪಗಳು: ಗಚ್ಛತಿ, ಗಚ್ಛತಃ, ಗಚ್ಛನ್ತಿ। ಗಚ್ಛಸಿ, ಗಚ್ಛಥಃ, ಗಚ್ಛಥ। ಗಚ್ಛಾಮಿ, ಗಚ್ಛಾವಃ, ಗಚ್ಛಾಮಃ।

**ಲಿಟ್**: ಉದಾ– ಜಗಾಮ – ಪ್ರಥಮಪುರುಷ ಏಕವಚನದಲ್ಲಿ 'ಗಮ್' ಧಾತುವಿನಮೇಲೆ ಲಿಡಾದೇಶ, ಅದಕ್ಕೆ 'ತಿಪ್(ತಿ)' ಬಂದು ಗಮ್+ತಿಪ್(ತಿ) ಎಂದಿದ್ದಾಗ, 'ತಿಪ್(ತಿ)' ಗೆ ಣಲ್(ಅ) ಆದೇಶ ಬಂದು ಗಮ್+ಅ ಎಂದಿದ್ದಾಗ, ಧಾತುವಿಗೆ ದ್ವಿತ್ವ ಬಂದು ಗಮ್ ಗಮ್+ಅ ಎಂದಿದ್ದಾಗ, ಮೊದಲನೇ ಗಮ್ ರೂಪಕ್ಕೆ ಅಭ್ಯಾಸಸಂಜ್ಞೆ ಬಂದು ಹಲಾದಿ ಶೇಷವಾಗಿ, ಗಗಮ್+ಅ ಎಂದಿದ್ದಾಗ, "ಕುಹೋಶ್ಚುಃ" ಎಂಬ ಸೂತ್ರದಿಂದ ಪೂರ್ವ'ಗ' ಕಾರಕ್ಕೆ ಚುತ್ವ(ಜ್) ಬಂದು, ಜ್+ಅ+ಗಮ್+ಅ ಎಂದಿದ್ದಾಗ, "ಅತ ಉಪಧಾಯಾಃ" ಎಂಬ ಸೂತ್ರದಿಂದ 'ಗ್' ಕಾರೋತ್ತರ 'ಅ' ಕಾರಕ್ಕೆ ವೃದ್ಧಿ ಬಂದು ಜಗಮ್+ಆ=ಜಗಾಮ ಎಂಬ ರೂಪವು ಸಿದ್ಧವಾಗುತ್ತದೆ.

**(ಉಪಧೆಗೆ ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ – 505.ಗಮ–ಹನ–ಜನ–ಖನ–ಘಸಾಂ–ಲೋಪಃ ಕ್ಙಿತ್ಯನಙಿ (6.4.98)**

ವೃತ್ತಿಃ–ಏಷಾಮ್ ಉಪಧಾಯಾಃ ಲೋಪಃ ಅಜಾದೌ ಕ್ಙಿತಿ ನ ತು ಅಙಿ। ಜಗ್ಮತುಃ। ಜಗ್ಮುಃ। ಜಗಮಿಥ। ಜಗನ್ಥ। ಜಗ್ಮಥುಃ। ಜಗ್ಮ। ಜಗಾಮ, ಜಗಮ। ಜಗ್ಮಿವ। ಜಗ್ಮಿಮ। ಗನ್ತಾ।

ಪ. ಛೇ. – ಗಮ–ಹನ–ಜನ–ಖನ–ಘಸಾಂ, ಲೋಪಃ, ಕ್ಙಿತಿ, ಅನಙಿ।

ಉದಾ–ಶೃಣವಾವ,ಶೃಣವಾಮ–ಉತ್ತಮಪುರುಷ ದ್ವಿವಚನ ಮತ್ತು ಬಹುವಚನಗಳಲ್ಲಿ ಶೃಣು+ವಸ್ ಮತ್ತು ಶೃಣು+ಮಸ್ ಎಂದಿದ್ದಾಗ, "ಆಡುತ್ತಮಸ್ಯ ಪಿಚ್ಚ" ಎಂಬ ಸೂತ್ರದಿಂದ 'ಆಟ್(ಆ) ಆಗಮ ಬಂದು, ಶೃಣು+ಆ+ವಸ್ ಮತ್ತು ಶೃಣು+ಆ+ಮಸ್ ಎಂದಿದ್ದಾಗ, ಹಿಂದಿನಂತೆಯೇ ಗುಣ, ಅವಾದೇಶಗಳು ಬಂದು ಶೃಣುವಾವಸ್ ಮತ್ತು ಶೃಣವಾಮಸ್ ಎಂದಿದ್ದಾಗ "ಸಾರ್ವಧಾತುಕಮಪಿತ್ ಜಿದ್ವತ್ ಸ್ಯಾತ್" ಎಂಬ ಸೂತ್ರದಿಂದ ಜಿದ್ವದ್ಭಾವ ಬಂದು "ನಿತ್ಯಮ್ ಜಿತಃ" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬಂದು ಶೃಣವಾವ ಮತ್ತು ಶೃಣಮಾಮ ಎಂಬ ರೂಪಗಳು ಸಿದ್ಧವಾಗುತ್ತವೆ.

**ಲಜ್**: ರೂಪಗಳು:ಅಶೃಣೋತ್, ಅಶೃಣುತಾಮ್, ಅಶೃಣ್ವನ್। ಅಶೃಣೋಃ, ಅಶೃಣುತಮ್, ಅಶೃಣುತ। ಅಶೃಣವಮ್, ಅಶೃಣ್ವ/ಅಶೃಣುವ,ಅಶೃಣ್ಮ/ಅಶೃಣುಮ।

ವಿಶೇಷ– ವಸ್, ಮಸ್‌ಗಳಿಗೆ "ಲೋಪಶ್ಚಾನ್ಯತರಸ್ಯಾಮ್ವೋಃ"ಎಂಬ ಸೂತ್ರದಿಂದ ವಿಕಲ್ಪದಿಂದ 'ಉ' ಕಾರಕ್ಕೆ ಲೋಪ ಬಂದು ಎರಡು ರೂಪಗಳು ಸಿದ್ಧವಾಗಿವೆ.

**ವಿಧಿಲಿಜ್**: ರೂಪಗಳು:ಶೃಣುಯಾತ್,ಶೃಣುಯಾತಾಮ್,ಶೃಣುಯುಃ।ಶೃಣುಯಾಃ, ಶೃಣುಯಾತಮ್, ಶೃಣುಯಾತ। ಶೃಣುಯಾಮ್, ಶೃಣುಯಾವ, ಶೃಣುಯಾಮ।

ವಿಶೇಷ– ವಿಧಿಲಿಜ್ ನಲ್ಲಿ 'ಯಾಸ್' ಎಂಬುದಕ್ಕೆ 'ಇಯ್' ಆದೇಶವು ಬರುವುದಿಲ್ಲ. ಕಾರಣ ಅದು ಅದನ್ತ ಅಂಗದ ಪರದಲ್ಲಿ ಇಲ್ಲ. ಆದರೆ "ಲಿಜಃ ಸಲೋಪೋಽನನ್ತ್ಯಸ್ಯ" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬಂದು ಈ ರೂಪಗಳು ಸಿದ್ಧವಾಗಿವೆ.

**ಆಶೀರ್ಲಿಜ್**: ರೂಪಗಳು: ಶ್ರೂಯಾತ್, ಶ್ರೂಯಾಸ್ತಾಮ್, ಶ್ರೂಯಾಸುಃ। ಶ್ರೂಯಾಃ, ಶ್ರೂಯಾಸ್ತಮ್, ಶ್ರೂಯಾಸ್ತ। ಶ್ರೂಯಾಸಮ್, ಶ್ರೂಯಾಸ್ವ, ಶ್ರೂಯಾಸ್ಮ।

ವಿಶೇಷ– ಈ 'ಲ್' ಕಾರದಲ್ಲಿ 'ಶ್ರು' ಧಾತುವಿಗೆ 'ಯಾಸ್' ಪ್ರತ್ಯಯವು ಪರದಲ್ಲಿದ್ದಾಗ, 'ಶ್ರು' ವಿನಲ್ಲಿರುವ 'ಉ' ಕಾರಕ್ಕೆ "ಅಕೃತ್ಸಾರ್ವಧಾತುಕಯೋಃ" ಎಂಬ ಸೂತ್ರದಿಂದ ದೀರ್ಘವು(ಊ) ಬರುತ್ತದೆ.

**ಲುಜ್**: ರೂಪಗಳು: ಅಶ್ರೌಷೀತ್, ಅಶ್ರೌಷ್ಟಾಮ್, ಅಶ್ರೌಷುಃ। ಅಶ್ರೌಷೀಃ, ಅಶ್ರೌಷ್ಟಮ್, ಅಶ್ರೌಷ್ಟ। ಅಶ್ರೌಷಮ್, ಅಶ್ರೌಷ್ವ, ಅಶ್ರೌಷ್ಮ।

ವಿಶೇಷ– ಈ 'ಲ್' ಕಾರದಲ್ಲಿ 'ತಿಪ್' ಮತ್ತು 'ಸಿಪ್' ಪ್ರತ್ಯಯಗಳು ಅನಿಟ್ ಆಗಿರೋಣದರಿಂದ 'ಸಿಚ್' ಗೆ ಇಡಾಗಮವು ಬರುವುದಿಲ್ಲ. ಆದರೆ ಅಪೃಕ್ತವಾದ 'ತ್' ಮತ್ತು 'ಸ್' ಗಳಿಗೆ 'ಈಟ್(ಈ)' ಆಗಮವು ಬರುತ್ತದೆ. ಬೇರೆಕಡೆ ಅಪೃಕ್ತವರ್ಣವು ಇಲ್ಲದೇ ಇರೋಣದರಿಂದ 'ಈಟ್(ಈ)' ಬಾರದೇ "ಸಿಚಿವೃದ್ಧಿಃ ಪರಸ್ಮೈಪದೇಷು" ಎಂಬ ಸೂತ್ರದಿಂದ ವೃದ್ಧಿಯೂ,ಮತ್ತು 'ಸಿಚ್'ನಲ್ಲಿರುವ 'ಸ್'ಕಾರಕ್ಕೆ "ಆದೇಶಪ್ರತ್ಯಯಯೋಃ" ಎಂಬ ಸೂತ್ರದಿಂದ ಷತ್ವವು ಬಂದಿರುವುದು.

**ಲೃಜ್**: ರೂಪಗಳು–ಅಶ್ರೋಷ್ಯತ್,ಅಶ್ರೋಷ್ಯತಾಮ್,ಅಶ್ರೋಷ್ಯನ್।ಅಶ್ರೋಷ್ಯಃ, ಅಶ್ರೋಷ್ಯತಮ್, ಅಶ್ರೋಷ್ಯತ। ಅಶ್ರೋಷ್ಯಮ್, ಅಶ್ರೋಷ್ಯಾವ ,ಅಶ್ರೋಷ್ಯಾಮ।

ಧಾತು–20. ಗಮ್ಲೃ ಗತೌ –(ಹೋಗುವುದು)– ಇದರಲ್ಲಿ ಗಮ್ ಮಾತ್ರ ಉಳಿಯುತ್ತದೆ.

**(ಛತ್ವವನ್ನು ವಿಧಿಸುವ ಸೂತ್ರ)**

**ಸೂತ್ರ – 504.ಇಷು–ಗಮಿ–ಯಮಾಂ, ಛಃ (7.1.77)**

ವೃತ್ತಿಃ–ಏಷಾಂ ಛಃ ಸ್ಯಾತ್ ಶಿತಿ। ಗಚ್ಛತಿ। ಜಗಾಮ।

ಅ. ವೃ–"ಷ್ಠಿವು–ಕ್ಲಮು ಚಮಾಮ್ ಶಿತಿ" ಎಂಬ ಸೂತ್ರದಿಂದ 'ಶಿತಿ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ–'ಶಿತ್' ಪರದಲ್ಲಿದ್ದಾಗ, ಇಷ್,ಗಮ್ ಮತ್ತು ಯಮ್ ಧಾತುಗಳಿಗೆ (ಅನ್ತ್ಯ ವರ್ಣಕ್ಕೆ) 'ಛ್' ಕಾರವು ಆದೇಶವಾಗಿ ಬರುತ್ತದೆ.

**ಲಟ್**: ಉದಾ– ಗಚ್ಛತಿ – ಪ್ರಥಮಪುರುಷ ಏಕವಚನದಲ್ಲಿ 'ಗಮ್' ಧಾತುವಿನ ನಂತರ ಇರುವ 'ಲಟ್' 'ಲ್' ಕಾರಕ್ಕೆ 'ತಿಪ್(ತಿ)' ಆದೇಶ ಬಂದು, ಧಾತುವಿನ ಪರದಲ್ಲಿ 'ಶಪ್(ಅ)' ವಿಕರಣ ಪ್ರತ್ಯಯವು ಬಂದಾಗ ಗಮ್+ಅ+ತಿ ಎಂದಿರುತ್ತದೆ. ಪ್ರಕೃತ ಸೂತ್ರದಿಂದ 'ಮ್' ಕಾರಕ್ಕೆ 'ಛ್' ಕಾರವು ಆದೇಶವಾಗಿ ಬಂದು ಗಛ್+ಅ+ತಿ ಎಂದಿದ್ದಾಗ, "ಛೇ ಚ" ಎಂಬ ಸೂತ್ರದಿಂದ 'ಛ್' ಕಾರಕ್ಕೆ 'ತುಕ್(ತ್)' ಆಗಮ ಬಂದು ಗ+ತ್ಛ್+ಅ+ತಿ ಎಂದಿದ್ದಾಗ, "ಸ್ತೋಃ ಶ್ಚುನಾ ಶ್ಚುಃ" ಎಂಬ ಸೂತ್ರದಿಂದ 'ತ್' ಕಾರಕ್ಕೆ 'ಚುತ್ವ(ಚ್)' ಬಂದು ಗಚ್ಛ್+ಅ+ತಿ=ಗಚ್ಛತಿ ಎಂಬ ರೂಪವು ಸಿದ್ಧವಾಗುತ್ತದೆ.

ರೂಪಗಳು: ಗಚ್ಛತಿ, ಗಚ್ಛತಃ, ಗಚ್ಛನ್ತಿ। ಗಚ್ಛಸಿ, ಗಚ್ಛಥಃ, ಗಚ್ಛಥ। ಗಚ್ಛಾಮಿ, ಗಚ್ಛಾವಃ, ಗಚ್ಛಾಮಃ।

**ಲಿಟ್**: ಉದಾ– ಜಗಾಮ – ಪ್ರಥಮಪುರುಷ ಏಕವಚನದಲ್ಲಿ 'ಗಮ್' ಧಾತುವಿನಮೇಲೆ ಲಿಡಾದೇಶ, ಅದಕ್ಕೆ 'ತಿಪ್(ತಿ)' ಬಂದು ಗಮ್+ತಿಪ್(ತಿ) ಎಂದಿದ್ದಾಗ, 'ತಿಪ್(ತಿ)' ಗೆ ಣಲ್(ಅ) ಆದೇಶ ಬಂದು ಗಮ್+ಅ ಎಂದಿದ್ದಾಗ, ಧಾತುವಿಗೆ ದ್ವಿತ್ವ ಬಂದು ಗಮ್ ಗಮ್+ಅ ಎಂದಿದ್ದಾಗ, ಮೊದಲನೇ ಗಮ್ ರೂಪಕ್ಕೆ ಅಭ್ಯಾಸಸಂಜ್ಞೆ ಬಂದು ಹಲಾದಿ ಶೇಷವಾಗಿ, ಗಗಮ್+ಅ ಎಂದಿದ್ದಾಗ, "ಕುಹೋಶ್ಚುಃ" ಎಂಬ ಸೂತ್ರದಿಂದ ಪೂರ್ವ'ಗ' ಕಾರಕ್ಕೆ ಚುತ್ವ(ಜ್) ಬಂದು, ಜ್+ಅ+ಗಮ್+ಅ ಎಂದಿದ್ದಾಗ, "ಅತ ಉಪಧಾಯಾಃ" ಎಂಬ ಸೂತ್ರದಿಂದ 'ಗ್' ಕಾರೋತ್ತರ 'ಅ' ಕಾರಕ್ಕೆ ವೃದ್ಧಿ ಬಂದು ಜಗಮ್+ಆ=ಜಗಾಮ ಎಂಬ ರೂಪವು ಸಿದ್ಧವಾಗುತ್ತದೆ.

**(ಉಪಧೆಗೆ ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ – 505.ಗಮ–ಹನ–ಜನ–ಖನ–ಘಸಾಂ–ಲೋಪಃ ಕ್ಙಿತ್ಯನಙೆ (6.4.98)**

ವೃತ್ತಿಃ–ಏಷಾಮ್ ಉಪಧಾಯಾಃ ಲೋಪಃ ಅಜಾದೌ ಕ್ಙಿತಿ ನ ತು ಅಙಿ। ಜಗ್ಮತುಃ। ಜಗ್ಮುಃ। ಜಗಮಿಥ। ಜಗನ್ಥ। ಜಗ್ಮಥುಃ। ಜಗ್ಮ। ಜಗಾಮ, ಜಗಮ। ಜಗ್ಮಿವ। ಜಗ್ಮಿಮ। ಗನ್ತಾ।

ಪ. ಛೇ. – ಗಮ–ಹನ–ಜನ–ಖನ–ಘಸಾಂ, ಲೋಪಃ, ಕ್ಙಿತಿ, ಅನಙಿ।

ಅ. ವ್ಯ. – "ಅಚಿಶ್ನುಧಾತುಭ್ರುವಾಮ್‌ಯ್ವೋರಿಯಙುವಙೌ" ಎಂಬ ಸೂತ್ರದಿಂದ 'ಅಚಿ' ಎಂಬ ಪದವೂ, ಮತ್ತು "ಉದುಪಧಾಯಾಃ ಗೋಹಃ" ಎಂಬ ಸೂತ್ರದಿಂದ 'ಉಪಧಾಯಾಃ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ– ಅಜಾದಿಯಾದ ಕಿತ್ ಮತ್ತು ಙಿತ್ ಪ್ರತ್ಯಯಗಳು ಪರದಲ್ಲಿದ್ದಾಗ ಗಮ್–ಹನ್–ಜನ್–ಖನ್ ಮತ್ತು ಘಸ್ ಧಾತುಗಳ ಉಪಧೆಗೆ ಲೋಪವು ಬರುತ್ತದೆ. ಆದರೆ ಪ್ರತ್ಯಯವು 'ಙಿತ್' ಉಳ್ಳದ್ದಾಗಿದ್ದರೂ 'ಅಙ್' ಆಗಿದ್ದರೆ ಲೋಪವು ಬರುವುದಿಲ್ಲ.

ಉದಾ– ಜಗ್ಮತುಃ– ಪ್ರಥಮಪುರುಷ ದ್ವಿವಚನದಲ್ಲಿ ಗಮ್ ಧಾತುವಿನ ನಂತರ ಇರುವ ಲಿಟ್ ಗೆ ತಸ್ ಆದೇಶ ಬಂದು ಅದಕ್ಕೆ ಅಭಿನವ ಆಖ್ಯಾತ ಪ್ರತ್ಯಯವಾದ ಅತುಸ್ ಆದೇಶ ಬಂದಾಗ ಗಮ್+ಅತುಸ್ ಎಂದಿರುತ್ತದೆ ಹಿಂದಿನಂತೆಯೇ ಧಾತುವಿಗೆ ದ್ವಿತ್ವ, ಹಲಾದಿಶೇಷ ಆದಮೇಲೆ, "ಕುಹೋಶ್ಚುಃ" ಎಂಬ ಸೂತ್ರದಿಂದ ಪೂರ್ವ 'ಗ' ಕಾರಕ್ಕೆ ಚುತ್ವ(ಜ್) ಬಂದು ಜ್+ಅ+ಗಮ್+ಅತುಸ್ ಎಂದಿದ್ದಾಗ, 'ಗ್' ಕಾರೋತ್ತರ 'ಅ' ಕಾರ(ಉಪಧೆಗೆ)ಕ್ಕೆ ಲೋಪ ಬಂದು ಜಗ್‌ಮ್+ಅತುಸ್ ಎಂದಿದ್ದಾಗ ಜಗ್ಮತುಸ್ ಎಂದಾಗಿ ರುತ್ವ–ವಿಸರ್ಗಗಳಿಂದ ಜಗ್ಮತುಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಜಗ್ಮುಃ– ಪ್ರಥಮ ಪುರುಷ ಬಹುವಚನದಲ್ಲಿ ಹಿಂದಿನಂತೆಯೇ ಪ್ರಕ್ರಿಯೆ ನಡೆದು ಜಗ್‌ಮ್+ಉಸ್=ಜಗ್ಮುಸ್ ಎಂದಾಗಿ ರುತ್ವ–ವಿಸರ್ಗಗಳಿಂದ ಜಗ್ಮುಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಜಗಮಿಥ/ಜಗನ್ಥ– ಮಧ್ಯಮಪುರುಷ ಏಕವಚನದಲ್ಲಿ – ಗಮ್ ಧಾತುವಿನ ನಂತರ 'ಲಿಟ್' 'ಲ್' ಕಾರಕ್ಕೆ 'ಸಿಪ್' ಆದೇಶ ಬಂದು ಅದಕ್ಕೆ ಅಭಿನವ ಆಖ್ಯಾತ ಪ್ರತ್ಯಯವಾದ 'ಥಲ್(ಥ)' ಆದೇಶ ಬಂದು, ಧಾತುವಿಗೆ ಹಿಂದಿನಂತೆ ದ್ವಿತ್ವಾದಿಗಳು ಬಂದವೇಲೆ ಜಗವಮ್+ಥ ಎಂದಿದ್ದಾಗ, ಗವಮ್ ಧಾತುವು "ಏಕಾಚ ಉಪದೇಶೇಽನುದಾತ್ತಾತ್" ಎಂಬ ಸೂತ್ರದಿಂದ ಇಡಾಗಮ ನಿಷಿದ್ಧವಾಗಿರೋಣದರಿಂದ 'ಅನಿಟ್' ಆಗಿದೆ. ಹಾಗಿದ್ದರೂ "ಋತೋ ಭಾರದ್ವಾಜಸ್ಯ" ಎಂಬ ನಿಯಮದಿಂದ ಇಡಾಗಮವು ವೈಕಲ್ಪಿಕವಾಗಿ ಬಂದು ಜಗಮ್+ಇಥ=ಜಗಮಿಥ ಎಂಬ ವೈಕಲ್ಪಿಕ ರೂಪವಾಗುತ್ತದೆ. ಇಡಾಗಮ ಬಾರದ ಪಕ್ಷದಲ್ಲಿ "ಉಪದೇಶೇಽತ್ವತಃ" ಎಂಬ ಸೂತ್ರದಿಂದ ಜಗಮ್+ಥ ಎಂದಾಗಿ. "ನಶ್ಚಾಪದಾನ್ತಸ್ಯ ಝಲಿ" ಎಂಬ ಸೂತ್ರದಿಂದ 'ಮ್' ಕಾರಕ್ಕೆ ಅನುಸ್ವಾರ ಬಂದು ನಂತರ "ಅನುಸ್ವಾರಸ್ಯ ಯಯಿ ಪರಸವರ್ಣಃ" ಎಂಬ ಸೂತ್ರದಿಂದ ಪರಸವರ್ಣ ಬಂದು ಅನುಸ್ವಾರಕ್ಕೆ 'ನ್' ಕಾರ ಆದೇಶವಾಗಿ ಬಂದು ಜಗನ್ಥ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಜಗ್ಮಥುಃ, ಜಗ್ಮ– ಮಧ್ಯಮಪುರುಷ ದ್ವಿವಚನ–ಬಹುವಚನಗಳಲ್ಲಿ ಧಾತುವಿಗೆ ಕ್ರಮವಾಗಿ 'ಅಥುಸ್' ಮತ್ತು 'ಅ' ಪ್ರತ್ಯಯಗಳು ಸೇರಿದಾಗ, ಹಿಂದಿನಂತೆಯೇ ಪ್ರಕ್ರಿಯೆಯು ನಡೆದು, ಜಗ್ಮತುಃ ಎಂಬಲ್ಲಿರುವಂತೆ ನಡೆದು ಜಗ್ಮಥುಃ, ಜಗ್ಮ ಎಂಬ ರೂಪಗಳು ಸಿದ್ಧವಾಗುತ್ತವೆ.

ಉದಾ– ಜಗಾಮ/ಜಗಮ– ಉತ್ತಮಪುರುಷ ಏಕವಚನದಲ್ಲಿ ಜಗಾಮ ಎಂಬ ರೂಪವು ಪ್ರಥಮಪುರುಷ ಏಕವಚನದ 'ಜಗಾಮ' ಎಂಬ ರೂಪದಲ್ಲಿದ್ದಂತೆಯೇ ಇರುತ್ತದೆ. ಅದರೆ "ಣಲುತ್ತಮೋ ವಾ" ಎಂಬ ಸೂತ್ರದಿಂದ 'ಣಿತ್ವ' ವು ವಿಕಲ್ಪವಾಗಿ ಬರೋಣದ್ದರಿಂದ ಣಿತ್ವ ಬಂದ ಪಕ್ಷದಲ್ಲಿ "ಅತ ಉಪಧಾಯಾಃ" ಎಂಬ ಸೂತ್ರದಿಂದ ವೃದ್ಧಿ ಬಂದು ಜಗಾಮ ಎಂದು ರೂಪವಾಗುತ್ತದೆ. ಣಿತ್ವ ಬಾರದ ಪಕ್ಷದಲ್ಲಿ ಜಗಮ ಎಂದೇ ರೂಪವು ಇರುತ್ತದೆ.

ಉದಾ– ಜಗ್ಮಿವ, ಜಗ್ಮಿಮ – ಉತ್ತಮಪುರುಷ ದ್ವಿವಚನ ಬಹುವಚನಗಳಲ್ಲಿ ಹಿಂದಿನಂತೆಯೇ ಪ್ರಕ್ರಿಯೆ ನಡೆದು ವಸ್, ಮಸ್ ಪ್ರತ್ಯಯಗಳಿಗೆ ವ, ಮ ಪ್ರತ್ಯಯಗಳು ಆದೇಶವಾಗಿ ಬಂದು, ಜಗಮ್+ವ ಮತ್ತು ಜಗಮ್+ಮ ಎಂದಿದ್ದಾಗ, ಕ್ರಾದಿ ನಿಯಮದಿಂದ ಇಡಾಗಮ ಬಂದು, ಜಗಮ್ ನಲ್ಲಿರುವ 'ಗ್' ಕಾರೋತ್ತರವರ್ತಿ ಉಪಧೆಯಾದ 'ಅ' ಕಾರಕ್ಕೆ ಪ್ರಕೃತ ಸೂತ್ರದಿಂದ ಲೋಪ ಬಂದು ಜಗ್ಮಿವ ಮತ್ತು ಜಗ್ಮಿಮ ಎಂಬ ರೂಪಗಳು ಸಿದ್ಧವಾಗುತ್ತವೆ.

ರೂಪಗಳು: ಜಗಾಮ, ಜಗ್ಮತುಃ, ಜಗ್ಮುಃ। ಜಗಮಿಥ/ಜಗನ್ಥ, ಜಗ್ಮಥುಃ, ಜಗ್ಮ। ಜಗಾಮ/ಜಗಮ, ಜಗ್ಮಿವ, ಜಗ್ಮಿಮ।

ಲುಟ್: ಉದಾ–ಗನ್ತಾ– ಪ್ರಥಮಪುರುಷ ಏಕವಚನದಲ್ಲಿ ಗಮ್ ಧಾತುವಿನ ನಂತರ 'ಶಪ್' ನ್ನು ಬಾಧಿಸಿ "ಸ್ಯತಾಸೀಲ್ಲೃಲುಟೋಃ" ಎಂಬ ಸೂತ್ರದಿಂದ ತಾಸ್ ಬಂದು, ಅದರ ನಂತರ ಲುಟ್ 'ಲ್' ಕಾರಕ್ಕೆ ತಿಪ್(ತಿ) ಬಂದು ಗಮ್+ತಾಸ್+ತಿ ಎಂದಿದ್ದಾಗ, "ಡಾರೌರಸಃ" ಎಂಬ ಸೂತ್ರದಿಂದ 'ತಿ' ಗೆ ಡಾ(ಆ) ಆದೇಶ ಬಂದು ಗಮ್+ತಾಸ್+ಆ ಎಂದಿದ್ದಾಗ, "ಅಚೋಽನ್ತ್ಯಾದಿ ಟಿ" ಎಂಬ ಸೂತ್ರದಿಂದ 'ತಾಸ್' ನಲ್ಲಿರುವ 'ಆಸ್(ಟಿ) ಗೆ "ಟೇಃ" ಎಂಬ ಸೂತ್ರದಿಂದ ಲೋಪ ಬಂದು, ಗಮ್+ತ್+ಆ ಎಂದಿದ್ದಾಗ, 'ಗಮ್' ನಲ್ಲಿರುವ 'ಮ್' ಕಾರಕ್ಕೆ ಅನುಸ್ವಾರ ಹಾಗೂ 'ನ್' ಕಾರ ಆದೇಶವಾಗಿ ಬಂದು ಪರಸವರ್ಣದಿಂದ 'ಗನ್ತಾ' ಎಂಬ ರೂಪವು ಸಿದ್ಧವಾಗುತ್ತದೆ.

ರೂಪಗಳು: ಗನ್ತಾ, ಗನ್ತಾರೌ, ಗನ್ತಾರಃ। ಗನ್ತಾಸಿ, ಗನ್ತಾಸ್ಥಃ, ಗನ್ತಾಸ್ಥ। ಗನ್ತಾಸ್ಮಿ, ಗನ್ತಾಸ್ವಃ, ಗನ್ತಾಸ್ಮಃ।

**(ಇಟ್ ಆಗಮವನ್ನು ವಿಧಿಸುವ ಸೂತ್ರ)**

**ಸೂತ್ರ – 506.ಗಮೇರಿಟ್ ಪರಸ್ಮೈಪದೇಷು (7.2.58)**

ವೃತ್ತಿಃ–ಗಮೇಃ ಪರಸ್ಯ ಸಾದೇಃ ಆರ್ಧಧಾತುಕಸ್ಯ ಇಟ್ ಸ್ಯಾತ್ ಪರಸ್ಮೈಪದೇಷು। ಗಮಿಷ್ಯತಿ। ಗಚ್ಛತು। ಅಗಚ್ಛತ್। ಗಚ್ಛೇತ್। ಗಮ್ಯಾತ್।

ಪ. ಛೇ. –ಗಮೇಃ, ಇಟ್, ಪರಸ್ಮೈಪದೇಷು।

ಅ. ವೃ.– "ಸೇಽಸಿಚಿ ಕೃತ–ಚೃತ–ಚ್ಛೃದ–ತೃದ–ನೃತಃ"ಎಂಬ ಸೂತ್ರದಿಂದ 'ಸೇ' ಎಂಬ ಪದವೂ, "ಆರ್ಧಧಾತುಕಸ್ಯೇಡ್ ವಲಾದೇಃ" ಎಂಬ ಸೂತ್ರದಿಂದ 'ಆರ್ಧಧಾತುಕಸ್ಯ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ– ಗಮ್ ಧಾತುವಿನ ಪರದಲ್ಲಿ ಇರುವ 'ಸ್' ಕಾರಾದಿ ಆರ್ಧಧಾತುಕ ಪ್ರತ್ಯಯಕ್ಕೆ 'ಇಟ್' ಆಗಮವು ಬರುತ್ತದೆ– ಪರಸ್ಮೈಪದದಲ್ಲಿ.

ವಿಶೇಷ– ಗಮ್ ಧಾತುವು ಅನಿಟ್ ಆಗಿರುವುದರಿಂದ ಆರ್ಧಧಾತುಕ 'ಲ್'ಕಾರವಾದ 'ಲೃಟ್' ಗೆ ಪೂರ್ವದಲ್ಲಿ ಬರುವ 'ಸ್ಯ' ಪ್ರತ್ಯಯಕ್ಕೆ 'ಇಟ್' ಆಗಮವನ್ನು ವಿಧಿಸಲಾಗಿದೆ.

ಉದಾ– ಗಮಿಷ್ಯತಿ– ಪ್ರಥಮಪುರುಷ ಏಕವಚನದಲ್ಲಿ 'ಗಮ್' ಧಾತುವಿನಂತರ 'ಲೃಟ್'ನ 'ಲ್' ಕಾರಕ್ಕೆ 'ತಿಪ್(ತಿ)' ಆದೇಶ ಬಂದು, ಧಾತುವಿನ ನಂತರ ಬರಬೇಕಾದ 'ಶಪ್' ನ್ನು ಬಾಧಿಸಿ "ಸ್ಯತಾಸೀಲ್ಲೃಲುಟೋಃ" ಎಂಬ ಸೂತ್ರದಿಂದ 'ಸ್ಯ' ಪ್ರತ್ಯಯವು ಬಂದು "ಆರ್ಧಧಾತುಕಂ ಶೇಷಃ" ಎಂಬ ಸೂತ್ರದಿಂದ ಆರ್ಧಧಾತುಕಸಂಜ್ಞೆ ಬಂದಮೇಲೆ "ಆರ್ಧಧಾತುಕಸ್ಯೇಡ್ ವಲಾದೇಃ" ಎಂಬ ಸೂತ್ರದಿಂದ ಬರಬೇಕಾದ 'ಇಟ್' ನ್ನು "ಏಕಾಚ ಉಪದೇಶೇಽನುದಾತ್ತಾತ್" ಎಂಬುದರಿಂದ ನಿಷೇಧ ಬಂದು ಅದನ್ನೂ ಬಾಧಿಸಿ, ಪ್ರಕೃತ ಸೂತ್ರದಿಂದ 'ಇಟ್' ಆಗಮವು 'ಸ್ಯ' ಪ್ರತ್ಯಯದ ಆದ್ಯಯವಯವವಾಗಿ ಬಂದು ಗಮ್+ಇ+ಸ್ಯ+ತಿ ಎಂದಿದ್ದಾಗ, "ಆದೇಶ–ಪ್ರತ್ಯಯಯೋಃ" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಷತ್ವ ಬಂದು ಗಮ್+ಇಷ್ಯ+ತಿ=ಗಮಿಷ್ಯತಿ ಎಂದು ರೂಪವಾಗುತ್ತದೆ.

ರೂಪಗಳು: ಗಮಿಷ್ಯತಿ, ಗಮಿಷ್ಯತಃ, ಗಮಿಷ್ಯನ್ತಿ। ಗಮಿಷ್ಯಸಿ, ಗಮಿಷ್ಯಥಃ, ಗಮಿಷ್ಯಥ। ಗಮಿಷ್ಯಾಮಿ, ಗಮಿಷ್ಯಾವಃ, ಗಮಿಷ್ಯಾಮಃ।

**ಲೋಟ್**: ಉದಾ–ಗಚ್ಛತು/ಗಚ್ಛತಾತ್ –ಪ್ರಥಮಪುರುಷ ಏಕವಚನದಲ್ಲಿ 'ಗಮ್' ಧಾತುವಿನ ನಂತರ 'ಲೋಟ್' 'ಲ್' ಕಾರಕ್ಕೆ 'ಲಟ್' 'ಲ್' ಕಾರದಾಲ್ಲಿಯಂತೆ 'ಗಚ್ಛತಿ' ಎಂಬ ರೂಪ ಬಂದಮೇಲೆ "ಏರುಃ" ಎಂಬ ಸೂತ್ರದಿಂದ 'ಇ' ಕಾರಕ್ಕೆ 'ಉ' ಕಾರ ಬಂದು ಗಚ್ಛತು ಎಂದು ರೂಪವು ಸಿದ್ಧವಾಗುತ್ತದೆ "ತುಹ್ಯೋಸ್ತಾತಙ್ಙಾಶಿಷ್ಯನ್ಯತರಸ್ಯಾಮ್" ಎಂಬ ಸೂತ್ರದಿಂದ 'ತಾತಙ್(ತಾತ್)' ಆದೇಶವು ವೈಕಲ್ಪಿಕವಾಗಿ ಬಂದು, ಗಚ್ಛತಾತ್ ಎಂಬ ವೈಕಲ್ಪಿಕರೂಪವು ಸಿದ್ಧಿಸುತ್ತದೆ.

ಉದಾ– ಗಚ್ಛ/ಗಚ್ಛತಾತ್– ಮಧ್ಯಮಪುರುಷ ಏಕವಚನದಲ್ಲಿ ಪ್ರಥಮಪುರುಷ ಏಕವಚನದಲ್ಲಿಯಂತೆ 'ಗಚ್ಛ' ರೂಪ ಬಂದಮೇಲೆ ಧಾತುವಿನ ನಂತರ ಇರುವ 'ಸಿಪ್' ನ ಸ್ಥಾನದಲ್ಲಿ ಬಂದಿರುವ 'ಹಿ' ಪ್ರತ್ಯಯಕ್ಕೆ ಲೋಪ ಬಂದು ಗಚ್ಛ ರೂಪವು ಸಿದ್ಧಿಸುತ್ತದೆ. ಹಿಂದಿನಂತೆಯೇ ವೈಕಲ್ಪಿಕವಾಗಿ 'ತಾತಙ್' ಆದೇಶ ಬಂದು ಗಚ್ಛತಾತ್ ಎಂಬ ರೂಪವು ಸಿದ್ಧಿಸುತ್ತದೆ. ಉತ್ತಮ ಪುರುಷದಲ್ಲಿ ಮಿಪ್, ವಸ್ ಮತ್ತು ಮಸ್ ಪ್ರತ್ಯಯಗಳಿದ್ದಾಗ, ಅವುಗಳಿಗೆ ಕ್ರಮವಾಗಿ ನಿ,ವ ಮತ್ತು ಮ ಪ್ರತ್ಯಯಗಳು ಆದೇಶವಾಗಿ ಬಂದು "ಅತೋದೀರ್ಘೋಯಞಿ" ಎಂಬ ಸೂತ್ರದಿಂದ 'ಅ' ಕಾರಕ್ಕೆ ದೀರ್ಘವು ಬಂದು ಗಚ್ಛಾನಿ, ಗಚ್ಛಾವ ಮತ್ತು ಗಚ್ಛಾಮ ಎಂಬ ರೂಪಗಳು ಸಿದ್ಧವಾಗುತ್ತವೆ.

ರೂಪಗಳು: ಗಚ್ಛತು/ಗಚ್ಛತಾತ್, ಗಚ್ಛತಾಮ್, ಗಚ್ಛನ್ತು। ಗಚ್ಛ/ಗಚ್ಛತಾತ್, ಗಚ್ಛತಮ್, ಗಚ್ಛತ। ಗಚ್ಛಾನಿ, ಗಚ್ಛಾವ, ಗಚ್ಛಾಮ।

**ಲಙ್**: ರೂಪಗಳು: ಅಗಚ್ಛತ್, ಅಗಚ್ಛತಾಮ್ ಅಗಚ್ಛನ್। ಅಗಚ್ಛಃ, ಅಗಚ್ಛತಮ್, ಅಗಚ್ಛತ। ಅಗಚ್ಛಮ್, ಅಗಚ್ಛಾವ, ಅಗಚ್ಛಾಮ।

**ವಿಧಿಲಿಙ್**: ರೂಪಗಳು: ಗಚ್ಛೇತ್, ಗಚ್ಛೇತಾಮ್, ಗಚ್ಛೇಯುಃ। ಗಚ್ಛೇಃ, ಗಚ್ಛೇತಮ್, ಗಚ್ಛೇತ। ಗಚ್ಛೇಯಮ್, ಗಚ್ಛೇವ, ಗಚ್ಛೇಮ।

**ಆಶೀರ್ಲಿಙ್**: ರೂಪಗಳು: ಗಮ್ಯಾತ್, ಗಮ್ಯಾಸ್ತಾಮ್, ಗಮ್ಯಾಸು:। ಗಮ್ಯಾಃ, ಗಮ್ಯಾಸ್ತಮ್, ಗಮ್ಯಾಸ್ತ। ಗಮ್ಯಾಸಮ್, ಗಮ್ಯಾಸ್ವ, ಗಮ್ಯಾಸ್ಮ।

**(ಅಙ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ – 507.ಪುಷಾದಿ-ದ್ಯುತಾದ್ಯ್-ಲೃದಿತಃ ಪರಸ್ಮೈಪದೇಷು (3.1.55)**

ವೃತ್ತಿಃ-ಶ್ಯನ್ ವಿಕರಣ ಪುಷಾದೇಃ, ದ್ಯುತಾದೇಃ, ಲೃದಿತಃ ಚ ಪರಸ್ಯ ಚ್ಲೇಃ ಅಙ್ ಪರಸ್ಮೈಪದೇಷು। ಅಗಮತ್। ಅಗಮಿಷ್ಯತ್। ಇತಿ ಪರಸ್ಮೈಪದಿನಃ।

ಪ. ಛೇ. – ಪುಷಾದಿ-ದ್ಯುತಾದ್ಯ್-ಲೃದಿತಃ, ಪರಸ್ಮೈಪದೇಷು।

ಅ. ವೃ.– "ಚ್ಲೇಃ ಸಿಚ್" ಎಂಬ ಸೂತ್ರದಿಂದ 'ಚ್ಲೇಃ' ಎಂಬ ಪದವೂ, ಮತ್ತು "ಅಸ್ಯತಿ-ವಕ್ತಿ-ಖ್ಯಾತಿಭ್ಯೋಽಙ್" ಎಂಬ ಸೂತ್ರದಿಂದ 'ಅಙ್' ಎಂಬ ಪದವೂ ಅನುವೃತ್ತವಾಗುತ್ತವೆ,

ಅರ್ಥ– ಪುಷ ಮೊದಲಾದ ಧಾತುಗಳು, ದ್ಯುತ ಮೊದಲಾದ ಧಾತುಗಳು ಮತ್ತು 'ಲೃ' ವರ್ಣವನ್ನು 'ಇತ್' ಆಗಿ ಉಳ್ಳಂಥ ಧಾತುಗಳ ಅನಂತರ ಇರುವ 'ಚ್ಲಿ' ಗೆ 'ಅಙ್' ಆದೇಶವು ಬರುತ್ತದೆ– ಪರಸ್ಮೈ ಪದದಲ್ಲಿ.

**ಲುಙ್**: ಉದಾ– ಅಗಮತ್– ಪ್ರಥಮಪುರುಷ ಏಕವಚನದಲ್ಲಿ 'ಗಮ್' ಧಾತುವಿನ ನಂತರ ಇರುವ 'ಲುಙ್' ಗೆ 'ತಿಪ್(ತಿ)' ಆದೇಶ ಬಂದು, "ಇತಶ್ಚ" ಎಂಬ ಸೂತ್ರದಿಂದ 'ಇ' ಕಾರ ಲೋಪವಾಗಿ, ಧಾತುವಿಗೆ ಅಡಾಗಮ ಬಂದು ಅ+ಗಮ್+ತ್ ಎಂದಿರುತ್ತದೆ. ಇದು ಸಾರ್ವಧಾತುಕವಾಗಿರೋಣದರಿಂದ "ಕರ್ತರಿ ಶಪ್" ಎಂಬ ಸೂತ್ರದಿಂದ ಪ್ರಾಪ್ತವಾದ 'ಶಪ್' ವಿಕರಣ ಪ್ರತ್ಯಯವನ್ನು ಬಾಧಿಸಿ 'ಚ್ಲಿ ಲುಙಿ" ಎಂಬ ಸೂತ್ರದಿಂದ 'ಚ್ಲಿ' ಪ್ರತ್ಯಯವು ಬಂದು ಅದಕ್ಕೆ "ಚ್ಲೇಃ ಸಿಚ್" ಎಂಬುದರಿಂದ 'ಸಿಚ್' ಆದೇಶವು ಬರಬೇಕಾಗಿದ್ದಾಗ, ಅದನ್ನು ಬಾಧಿಸಿ ಪ್ರಕೃತ ಸೂತ್ರದಿಂದ 'ಅಙ್' ಆದೇಶವು ಬಂದಿದೆ. ಆಗ ಅ+ಗಮ್+ಅ(ಅಙ್)+ತ್=ಅಗಮತ್ ಎಂಬ ರೂಪವು ಸಿದ್ಧವಾಗುತ್ತದೆ. ಇದು ಅನಿಟ್ ಆದ ಧಾತುವಾಗಿರುವುದರಿಂದ ಇಡಾಗಮವು ಬರುವುದಿಲ್ಲ.

ರೂಪಗಳು: ಅಗಮತ್, ಅಗಮತಾಮ್, ಅಗಮನ್। ಅಗಮಃ ಅಗಮತಮ್, ಅಗಮತ। ಅಗಮಮ್, ಅಗಮಾವ, ಅಗಮಾಮ। ಲೃಙ್:ರೂಪಗಳು: ಅಗಮಿಷ್ಯತ್, ಅಗಮಿಷ್ಯತಾಮ್, ಅಗಮಿಷ್ಯನ್। ಅಗಮಿಷ್ಯಃ, ಅಗಮಿಷ್ಯತಮ್, ಅಗಮಿಷ್ಯತ। ಅಗಮಿಷ್ಯಮ್, ಅಗಮಿಷ್ಯಾವ, ಅಗಮಿಷ್ಯಾಮ। ವಿಶೇಷ"ಗಮೇರಿಟ್ ಪರಸ್ಮೈಪದೇಷು" ಎಂಬ ಸೂತ್ರದಿಂದ 'ಸ್ಯ' ಪ್ರತ್ಯಯಕ್ಕೆ ಇಡಾಗಮವು ಆದ್ಯವಯವವಾಗಿ ಬಂದು ಮೇಲಿನ ರೂಪಗಳು ಸಿದ್ಧವಾಗಿವೆ. ಹಾಗೆಯೇ "ಆದೇಶ ಪ್ರತ್ಯಯಯೋಃ" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಷತ್ವವು ಬಂದಿದೆ.

**ಇಲ್ಲಿಗೆ ಭ್ವಾದಿಗಣದಲ್ಲಿ ಪರಸ್ಮೈಪದಿ ಪ್ರಕರಣವು ಮುಗಿಯಿತು.**

## ॥ಅಥ ಆತ್ಮನೇಪದಿನಃ॥

### ಏಧ್-ವೃದ್ಧೌ॥

**(ಏತ್ವವನ್ನು ವಿಧಿಸುವ ಸೂತ್ರ)**

**ಸೂತ್ರ – 508.ಟಿತ ಆತ್ಮನೇಪದಾನಾಂ ಟೇರೇ। (3.4.79)**

ವೃತ್ತಿಃ–ಟಿತಃ ಲಸ್ಯ ಆತ್ಮನೇಪದಾನಾಂ ಟೇಃ ಏತ್ವಮ್। ಏಧತೇ।

ಪ. ಛೇ. – ಟಿತಃ ಆತ್ಮನೇಪದಾನಾಂ, ಟೇಃ, ಏ।

ಅ. ವೃ. – ಇಲ್ಲಿ "ಲಸ್ಯ" ಎಂಬುದು ಅಧಿಕಾರ ಸೂತ್ರವಾಗಿದೆ.

ಅರ್ಥ– ಟಿತ್ 'ಲ್' ಕಾರದ ಆತ್ಮನೇಪದ ಪ್ರತ್ಯಯಗಳ 'ಟಿ' ಸ್ಥಾನದಲ್ಲಿ 'ಏ' ಕಾರವು ಆದೇಶವಾಗಿ ಬರುತ್ತದೆ. ಇಲ್ಲಿ 'ಟಿ' ಎಂದರೆ "ಅಚೋಽನ್ತ್ಯಾದಿ ಟಿ" ಎಂದರ್ಥ. ಅಂದರೆ ಅನ್ತ್ಯವಾದ 'ಅಚ್' ಗೆ 'ಟಿ' ಸಂಜ್ಞೆ ಬರುತ್ತದೆ. ಆ 'ಟಿ' ಗೆ 'ಏ' ಆದೇಶವು ಬರುತ್ತದೆ.

ಧಾತು– 1. ಏಧ– (ವೃದ್ಧಿ ಹೊಂದುವುದು) – ಇದರಲ್ಲಿ 'ಏಧ್' ಮಾತ್ರ ಉಳಿಯುತ್ತದೆ.

**ಲಟ್**: ಉದಾ – ಏಧತೇ– ಪ್ರಥಮಪುರುಷ ಏಕವಚನದಲ್ಲಿ 'ಏಧ್' ಧಾತುವಿನ ನಂತರ ಇರುವ 'ಲಟ್' 'ಲ್' ಕಾರಕ್ಕೆ ಅತ್ಮನೇ ಪದದಲ್ಲಿ 'ತ' ಆದೇಶವು ಬರುತ್ತದೆ. ಆಗ ಏಧ್+ತ ಎಂದಿರುತ್ತದೆ. ಇದಕ್ಕೆ ಸಾರ್ವಧಾತುಕ ಸಂಜ್ಞೆ ಬಂದು "ಕರ್ತರಿ ಶಪ್" ಎಂಬ ಸೂತ್ರದಿಂದ 'ಶಪ್(ಅ)' ಪ್ರತ್ಯಯವು ಬರುತ್ತದೆ. ಆಗ ಏಧ್+ಅ+ತ=ಏಧತ ಎಂದಿರುತ್ತದೆ. "ಅಚೋಽನ್ತ್ಯಾದಿ ಟಿ" ಎಂಬ ಸೂತ್ರದಿಂದ ಏಧತ ಎಂಬಲ್ಲಿರುವ ಅನ್ತ್ಯ 'ಅ' ಕಾರವು 'ಟಿ' ಸಂಜ್ಞೆಯುಳ್ಳದ್ದಾಗಿರೋಣದರಿಂದ ಅದಕ್ಕೆ ಪ್ರಕೃತ ಸೂತ್ರದಿಂದ ಏತ್ವ(ಏ) ಬಂದು ಏಧತೇ ಎಂಬ ರೂಪವು ಸಿದ್ಧವಾಗುತ್ತದೆ.

**(ಇಯ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ – 509.ಆತೋ಼ ಙಿತಃ (7.2.81)**

ವೃತ್ತಿಃ–ಆತಃ ಪರಸ್ಯ ಙಿತಾಂ ಆಕಾರಸ್ಯ ಇಯ್ ಸ್ಯಾತ್। ಏಧೇಥೇ। ಏಧನ್ತೇ।

ಪ. ಛೇ. – ಆತಃ, ಙಿತಃ।

ಅ. ವೃ. – "ಅತೋ ಯೇಯಃ" ಎಂಬ ಸೂತ್ರವು ಅನುವೃತ್ತವಾಗುತ್ತದೆ. "ಅಙ್ಗಸ್ಯ" ಎಂಬುದು ಅಧಿಕಾರ ಸೂತ್ರ

ಅರ್ಥ– ಅದನ್ತ ವಾದ ಅಂಗದ ಪರದಲ್ಲಿರುವ 'ಙಿತ್' ಪ್ರತ್ಯಯಗಳ 'ಆ' ಕಾರಕ್ಕೆ 'ಇಯ್' ಆದೇಶವು ಬರುತ್ತದೆ.

ವಿಶೇಷ: ಪ್ರಕೃತದಲ್ಲಿ 'ಆತಾಮ್' ಮತ್ತು 'ಆಥಾಮ್' ಎಂಬ ಎರಡು ಪ್ರತ್ಯಯಗಳ ಆದಿಯಲ್ಲಿ 'ಆ' ಕಾರವು ಇದೆ. ಅದಕ್ಕೆ 'ಇಯ್' ಆದೇಶವು ಬರುತ್ತದೆ. ಇಲ್ಲಿ ಆದಿಯಲ್ಲಿರುವ 'ಆ' ಕಾರವನ್ನೇ ಹೇಳಿದೆಯೆ ಹೊರತು ಅನ್ತ್ಯ 'ಆ' ಕಾರವಲ್ಲ. "ಲೋಪೋವ್ಯೋರ್ವಲಿ"

ಎಂಬ ಸೂತ್ರದಿಂದ 'ಇಯ್' ನಲ್ಲಿರುವ 'ಯ್' ಕಾರಕ್ಕೆ ಲೋಪವು ಬರುತ್ತದೆ ಎಂದು ತಿಳಿಯಬೇಕು.

ಉದಾ– ಏಧೇತೇ– ಪ್ರಥಮಪುರುಷ ದ್ವಿವಚನದಲ್ಲಿ 'ಏಧ್' ಧಾತುವಿನ ನಂತರ 'ಆತಾಮ್' ಪ್ರತ್ಯಯವು ಬಂದಾಗ ಏಧ್+ಆತಾಮ್ ಎಂದಿರುತ್ತದೆ. ಇದಕ್ಕೆ ಸಾರ್ವಧಾತುಕ ಸಂಜ್ಞೆ ಬಂದಿರೋಣದರಿಂದ 'ಶಪ್(ಅ)' ವಿಕರಣಪ್ರತ್ಯಯವು ಧಾತುವಿನ ನಂತರ ಬರುತ್ತದೆ. ಆಗ ಏಧ್+ಅ+ಆತಾಮ್ ಎಂದಿರುತ್ತದೆ. "ಸಾರ್ವಧಾತುಕಮಪಿತ್" ಎಂಬ ಸೂತ್ರದಿಂದ ಜಿದ್ವದ್ಭಾವ ಬಂದು ಪ್ರಕೃತ ಸೂತ್ರದಿಂದ 'ಆತಾಮ್' ಎಂಬಲ್ಲಿರುವ 'ಆ' ಕಾರಕ್ಕೆ 'ಇಯ್' ಆದೇಶ ಬಂದು ಏಧ್+ಅ+ಇಯ್+ತಾಮ್ ಎಂದಿರುತ್ತದೆ. "ಲೋಪೋವ್ಯೋರ್ವಲಿ" ಎಂಬ ಸೂತ್ರದಿಂದ 'ಇಯ್' ನಲ್ಲಿರುವ 'ಯ್' ಕಾರಕ್ಕೆ ಲೋಪವು ಬಂದು ಏಧ್+ಅ+ಇ+ತಾಮ್ ಎಂದಿದ್ದಾಗ, 'ಅ' ಕಾರ 'ಇ' ಕಾರಗಳಿಗೆ ಗುಣ ಬಂದು ಏಧ+ಏ+ತಾಮ್=ಏಧೇತಾಮ್ ಎಂದು ರೂಪವಾಗುತ್ತದೆ. ಇಲ್ಲಿ 'ಆಮ್' ಎಂಬುದು 'ಟಿ' ಆಗಿರೋಣದರಿಂದ ಅದಕ್ಕೆ "ಟಿತ ಆತ್ಮನೇ ಪದಾನಾಂ ಟೇರೇ" ಎಂಬ ಸೂತ್ರದಿಂದ ಏತ್ವ ಬಂದು ಏಧೇತೇ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ – ಏಧನ್ತೇ– ಪ್ರಥಮಪುರುಷ ಬಹುವಚನದಲ್ಲಿ 'ಏಧ್' ಧಾತುವಿನ ನಂತರ 'ಶಪ್(ಅ)' ಮತ್ತು 'ಝ' ಪ್ರತ್ಯಯವನ್ನು ಸೇರಿಸಿದಾಗ ಏಧ್+ಅ+ಝ ಎಂದಿರುತ್ತದೆ. "ಝೋಽನ್ತಃ" ಎಂಬ ಸೂತ್ರದಿಂದ ಝ' ನಲ್ಲಿರುವ 'ಝ್' ಗೆ 'ಅನ್ತ್' ಆದೇಶ ಬಂದು ಏಧ್+ಅ+ಅನ್ತ್+ಅ ಎಂದಿರುತ್ತದೆ. 'ಅ' ಮತ್ತು 'ಅನ್ತ್' ನಲ್ಲಿರುವ 'ಅ' ಕಾರಗಳಿಗೆ "ಅತೋಗುಣೇ" ಎಂಬುದರಿಂದ ಪರರೂಪ ಬಂದು ಏಧ್+ಅನ್ತ್+ಅ ಎಂದಿರುತ್ತದೆ. ಇದರಲ್ಲಿ ಕೊನೆಯಲ್ಲಿರುವ 'ಅಚ್' ಎಂದರೆ 'ಅನ್ತ' ದಲ್ಲಿನ ಅನ್ತ್ಯ 'ಅ' ಕಾರವು 'ಟಿ' ಸಂಜ್ಞೆಯನ್ನು ಹೊಂದಿರೋಣದರಿಂದ "ಟಿತ ಆತ್ಮನೇಪದಾನಾಂ ಟೇರೇ" ಎಂಬ ಸೂತ್ರದಿಂದ 'ಟಿ' ಸಂಜ್ಞೆಯುಳ್ಳ 'ಅ' ಕಾರಕ್ಕೆ 'ಏ' ಆದೇಶ ಬಂದು ಏಧನ್ತೇ ಎಂಬ ರೂಪವು ಸಿದ್ಧವಾಗುತ್ತದೆ.

**(ಸೇ ಎಂಬ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ – 510.ಥಾಸಃ ಸೇ (3.4.80)**

ವೃತ್ತಿಃ–ಟಿತೋ ಲಸ್ಯ ಥಾಸಃ ಸೇ ಸ್ಯಾತ್। ಏಧಸೇ। ಏಧೇಥೇ। ಏಧಧ್ವೇ। "(274) ಅತೋ ಗುಣೇ"। ಏಧೇ। ಏಧಾವಹೇ। ಏಧಾಮಹೇ।

ಅ. ವೃ – "ಟಿತ ಆತ್ಮನೇಪದಾನಾಂ ಟೇರೇ" ಎಂಬ ಸೂತ್ರದಿಂದ 'ಟಿತಃ' ಎಂಬ ಪದವು ಅನುವೃತ್ತವಾಗುತ್ತದೆ.

"ಲಸ್ಯ" ಎಂಬುದು ಅಧಿಕಾರ ಸೂತ್ರ.

ಅರ್ಥ– 'ಟಿತ್' ಆದ 'ಲ್' ಕಾರಕ್ಕೆ ಆದೇಶವಾಗಿ ಬರುವ 'ಥಾಸ್' ಗೆ 'ಸೇ' ಎಂಬ ಆದೇಶವು ಬರುತ್ತದೆ.

ಉದಾ– ಏಧಸೇ – ಮಧ್ಯಮ ಪುರುಷ ಏಕವಚನದಲ್ಲಿ 'ಏಧ್' ಧಾತುವಿನ ನಂತರ

ಲಾದೇಶವಾದ 'ಥಾಸ್' ಬಂದು ಏಧ್+ಥಾಸ್ ಎಂದಿದ್ದಾಗ ಅದಕ್ಕೆ ಸಾರ್ವಧಾತುಕ ಸಂಜ್ಞೆ ಬಂದು ಧಾತುವಿನ ನಂತರ ಶಪ್(ಅ) ಪ್ರತ್ಯಯವನ್ನು ಸೇರಿಸಿದಾಗ ಏಧ್+ಅ+ಥಾಸ್ ಎಂದಿರುತ್ತದೆ. ಪ್ರಕೃತ ಸೂತ್ರದಿಂದ 'ಥಾಸ್' ಗೆ 'ಸೇ' ಆದೇಶವು ಬಂದು ಏಧಸೇ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಏಧೇಥೇ–ಮಧ್ಯಮಪುರುಷ ದ್ವಿವಚನದಲ್ಲಿ ಧಾತುವಿನ ನಂತರ ಶಪ್(ಅ) ವಿಕರಣ ಪ್ರತ್ಯಯ ಹಾಗೂ ಮೂಲ ಆಖ್ಯಾತ ಪ್ರತ್ಯಯವಾದ ಆಥಾಮ್ ಸೇರಿಸಿದಾಗ, ಏಧ್+ಅ+ಆಥಾಮ್ ಎಂದಿರುತ್ತದೆ. "ಸಾರ್ವಧಾತುಕಮಪಿತ್" ಎಂಬುದರಿಂದ ಙಿದ್ವದ್ಭಾವ ಬಂದು, "ಆತೋ ಙಿತಃ" ಎಂಬ ಸೂತ್ರದಿಂದ 'ಆಥಾಮ್' ಎಂಬಲ್ಲಿರುವ 'ಆ' ಕಾರಕ್ಕೆ 'ಇಯ್' ಆದೇಶ ಬಂದು, "ಲೋಪೋವ್ಯೋರ್ವಲಿ" ಎಂಬ

ಸೂತ್ರದಿಂದ 'ಯ್' ಕಾರ ಲೋಪವಾಗಿ, ಏಧ್+ಅ+ಇ+ಥಾಮ್ ಎಂದಿದ್ದಾಗ, 'ಅ' ಕಾರ 'ಇ' ಕಾರಗಳಿಗೆ ಗುಣ ಬಂದು ಏಧ್+ಏ+ಥಾಮ್ ಎಂದಿರುತ್ತದೆ ಕೊನೆಯಲ್ಲಿರುವ 'ಆಮ್' ಗೆ 'ಟಿ' ಸಂಜ್ಞೆ ಬಂದು, ಅದಕ್ಕೆ ಏತ್ವ ಆದೇಶ ಬಂದು ಏಧೇಥೇ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಏಧಧ್ವೇ– ಮಧ್ಯಮಪುರುಷ ಬಹುವಚನದಲ್ಲಿ ಧಾತುವಿನ ನಂತರ ಶಪ್(ಅ) ವಿಕರಣ ಪ್ರತ್ಯಯ ಹಾಗೂ ಮೂಲ ಆಖ್ಯಾತ ಪ್ರತ್ಯಯವಾದ ಧ್ವಮ್ ಸೇರಿಸಿದಾಗ, ಏಧ್+ಅ+ ಧ್ವಮ್ ಎಂದಿದ್ದಾಗ, 'ಧ್ವಮ್' ನಲ್ಲಿರುವ 'ಅಮ್' ಗೆ 'ಟಿ' ಸಂಜ್ಞೆ ಬಂದು ಹಿಂದಿನಂತೆ ಅದಕ್ಕೆ ಏತ್ವ ಆದೇಶ ಬಂದು ಏಧ್+ಅ+ಧ್ವೇ=ಏಧಧ್ವೇ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಏಧೇ–ಉತ್ತಮ ಪುರುಷ ಏಕ ವಚನದಲ್ಲಿ 'ಏಧ್' ಧಾತುವಿನ ನಂತರ 'ಇ(ಇಟ್)' ಆಖ್ಯಾತ ಪ್ರತ್ಯಯ ಬಂದಾಗ ಏಧ್+ಇ ಎಂದಿರುತ್ತದೆ. ಧಾತುವಿನ ನಂತರ 'ಶಪ್(ಅ)' ಪ್ರತ್ಯಯ ಬಂದು ಏಧ್+ಅ+ಇ ಎಂದಿದ್ದಾಗ, 'ಇ' ಕಾರವು 'ಟಿ' ಆಗಿರೋಣದರಿಂದ ಅದಕ್ಕೆ ಏತ್ವ ಬಂದು ಏಧ್+ಅ+ಏ ಎಂದಿದ್ದಾಗ, "ಅತೋಗುಣೇ" ಎಂಬ ಸೂತ್ರದಿಂದ ಪರರೂಪ ಬಂದು ಏಧ್+ಏ=ಏಧೇ ಎಂದು ರೂಪವು ಸಿದ್ಧಿಸುತ್ತದೆ.

ಉದಾ– ಏಧಾವಹೇ– ಉತ್ತಮಪುರುಷ ದ್ವಿವಚನದಲ್ಲಿ 'ಏಧ್' ಧಾತುವಿನ ನಂತರ 'ವಹಿ' ಪ್ರತ್ಯಯವನ್ನು ಸೇರಿಸಿದಮೇಲೆ ಧಾತುವಿನ ನಂತರ 'ಶಪ್(ಅ)' ವಿಕರಣ ಪ್ರತ್ಯಯ ಬಂದು ಏಧ್+ಅ+ವಹಿ ಎಂದಿರುತ್ತದೆ. 'ವಹಿ' ಯಲ್ಲಿರುವ 'ಇ' ಕಾರಕ್ಕೆ 'ಟಿ' ಸಂಜ್ಞೆ ಬಂದು ಹಿಂದಿನಂತೆ ಅದಕ್ಕೆ 'ಏತ್ವ' ಬಂದು ಏಧ್+ಅ+ವಹೇ ಎಂದಿದ್ದಾಗ, "ಅತೋ ದೀರ್ಘೋ ಯಞಿ" ಎಂಬ ಸೂತ್ರದಿಂದ 'ವ' ಕಾರದ ಪೂರ್ವದಲ್ಲಿರುವ 'ಅ' ಕಾರಕ್ಕೆ ದೀರ್ಘ ಬಂದು ಏಧಾವಹೇ ಎಂದು ರೂಪವು ಸಿದ್ಧವಾಗುತ್ತದೆ.

ಉದಾ – ಏಧಾಮಹೇ– ಉತ್ತಮಪುರುಷ ಬಹುವಚನದಲ್ಲಿ 'ಏಧ್' ಧಾತುವಿನ ನಂತರ 'ಮಹಿಙ್(ಮಹಿ)' ಪ್ರತ್ಯಯ ಬಂದು ಏಧ್+ಅ+ಮಹಿ ಎಂದಿದ್ದಾಗ ಹಿಂದಿನಂತೆ 'ಟಿ' ಗೆ 'ಏತ್ವ' ಮತ್ತು 'ಮ್' ಕಾರದ ಪೂರ್ವದಲ್ಲಿರುವ 'ಅ' ಕಾರಕ್ಕೆ ದೀರ್ಘ ಬಂದು ಏಧಾಮಹೇ ಎಂದು ರೂಪವು ಸಿದ್ಧವಾಗುತ್ತದೆ.

ರೂಪಗಳು: ಏಧತೇ, ಏಧೇತೇ, ಏಧನ್ತೇ। ಏಧಸೇ, ಏಧೇಥೇ, ಏಧಧ್ವೇ। ಏಧೇ, ಏಧಾವಹೇ, ಏಧಾಮಹೇ।

**ಲಿಟ್**: (ಇನ್ನು ಮುಂದೆ ಲಿಟ್' 'ಲ್' ಕಾರದ ಪ್ರಕ್ರಿಯೆಯು ಪ್ರಾರಂಭವಾಗುತ್ತದೆ).

**(ಆಮ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ - 511. ಇಜಾದೇಶ್ಚ ಗುರುಮತೋಽನೃಚ್ಛಃ (3.1.36)**

ವೃತ್ತಿಃ-ಇಜಾದಿಃ ಯಃ ಧಾತುಃ ಗುರುಮಾನ್ ಋಚ್ಛತ್ಯನ್ಯಃ ತತಃ ಆಮ್ ಸ್ಯಾತ್ ಲಿಟಿ।

ಪ. ಛೇ. - ಇಜಾದೇಃ, ಚ, ಗುರುಮತಃ, ಅನೃಚ್ಛಃ।

ಅ. ವೃ.- "ಧಾತೋರೇಕಾಚೋ ಹಲಾದೇಃ ಕ್ರಿಯಾ ಸಮಭಿಹಾರೇ ಯಙ್" ಎಂಬ ಸೂತ್ರದಿಂದ 'ಧಾತೋಃ' ಎಂಬ ಪದವೂ, ಮತ್ತು "ಕಾಸ್ ಪ್ರತ್ಯಯಾತ್ ಆಮಮಂತ್ರೇ ಲಿಟಿ" ಎಂಬ ಸೂತ್ರದಿಂದ 'ಲಿಟಿ' ಎಂಬ ಪದವೂ ಅನುವೃತ್ತವಾಗುತ್ತವೆ. "ಧಾತೋಃ", "ಪ್ರತ್ಯಯಾಃ", "ಪರಶ್ಚ" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-'ಋಚ್ಛ' ಧಾತುವಿಗಿಂತ ಭಿನ್ನವಾದ, ಇಜಾದಿಯಾದ, ಗುರುವರ್ಣದಿಂದ ಕೂಡಿದ ಧಾತುವಿನ ಪರದಲ್ಲಿ 'ಆಮ್' ಪ್ರತ್ಯಯವು ಬರುತ್ತದೆ- ಲಿಟ್ ಪರದಲ್ಲಿದ್ದಾಗ.

ವಿಶೇಷಃ- 'ಅನೃಚ್ಛಃ' ಎಂದರೆ 'ಋಚ್ಛ' ಧಾತುವಿಗಿಂತ ಭಿನ್ನವಾದದ್ದು ಎಂದರ್ಥ. 'ಋಚ್ಛ' ಎಂಬುದು ಇಜಾದಿಯಾಗಿದೆ. ಕಾರಣ 'ಋ' ಎಂಬುದು 'ಇಚ್' ಪ್ರತ್ಯಾಹಾರಾನ್ತರ್ಗತ ವರ್ಣವಾಗಿದೆ. ಆದುದರಿಂದ ಇದನ್ನು 'ಇಜಾದಿ' ಎಂದು ಕರೆಯುತ್ತಾರೆ. ಸಂಯುಕ್ತಾಕ್ಷರವು ಪರದಲ್ಲಿದ್ದರೆ ಪೂರ್ವ ವರ್ಣಕ್ಕೆ 'ಗುರು' ಎಂದು ಕರೆಯುತ್ತಾರೆ. 'ದೀರ್ಘವರ್ಣ'ಕ್ಕೂ ಗುರು ಸಂಜ್ಞೆ ಇದೆ. 'ಋಚ್ಛ' ಎಂಬಲ್ಲಿ 'ಋ' ಕಾರದ ಪರದಲ್ಲಿ ಸಂಯುಕ್ತಾಕ್ಷರವಿರೋಣದರಿಂದ 'ಋ' ಕಾರಕ್ಕೆ 'ಗುರು' ಸಂಜ್ಞೆ ಬಂದು ಗುರುಮಾನ್ ಎಂದಾಗುತ್ತದೆ. 'ಋಚ್ಛ' ಧಾತುವಿನ ನಂತರ 'ಆಮ್' ಪ್ರತ್ಯಯವು ಬರಬಾರದೆಂಬ ಕಾರಣದಿಂದ 'ಅನೃಚ್ಛಃ' ಎಂದು ಹೇಳಲಾಗಿದೆ.

**(ಆತ್ಮನೇ ಪದವನ್ನು ವಿಧಿಸುವ ಸೂತ್ರ)**

**ಸೂತ್ರ - 512.ಆಮ್ಪ್ರತ್ಯಯವತ್ ಕೃಞೋಽನುಪ್ರಯೋಗಸ್ಯ (1.3.63)**

ವೃತ್ತಿಃ-ಆಮ್-ಪ್ರತ್ಯಯಃ ಯಸ್ಮಾತ್ ಇತಿ ಅತದ್ಗುಣಸಂವಿಜ್ಞಾನಃ ಬಹುವ್ರೀಹಿಃ। ಆಮ್ ಪ್ರಕೃತ್ಯಾ ತುಲ್ಯಮ್ ಅನುಪ್ರಯುಜ್ಯಮಾನಾತ್ ಕೃಞಃಅಪಿ ಆತ್ಮನೇ ಪದಮ್।

ಪ. ಛೇ. - ಆಮ್, ಪ್ರತ್ಯಯವತ್, ಕೃಞಃ, ಅನುಪ್ರಯೋಗಸ್ಯ।

ಅ. ವೃ. - "ಅನುದಾತ್ತ ಙಿತ ಆತ್ಮನೇ ಪದಮ್" ಎಂಬ ಸೂತ್ರದಿಂದ 'ಆತ್ಮನೇಪದಮ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- ಯಾವ ಧಾತುವಿನ ನಂತರ 'ಆಮ್' ಪ್ರತ್ಯಯವು ಇರುತ್ತದೋ ಅಂತಹ ಧಾತುವಿಗೆ ಸಮಾನವಾದ ಅನುಪ್ರಯೋಗ ಉಳ್ಳ 'ಕೃ' ಧಾತುವಿನ ನಂತರವೂ 'ಆತ್ಮನೇಪದವೇ' ಬರುತ್ತದೆ.

ವಿಶೇಷಃ– 'ವತ್' ಎಂಬ ಪ್ರತ್ಯಯಕ್ಕೆ 'ಇವ' ಅಥವಾ 'ಸಮಾನ' ಅಥವಾ 'ತುಲ್ಯ' ಎಂಬ ಅರ್ಥಗಳು ಇರುತ್ತವೆ. ಇಲ್ಲಿ 'ಆಮ್' ಪ್ರತ್ಯಯದಲ್ಲಿ 'ಅತದ್ಗುಣಸಂವಿಜ್ಞಾನ ಬಹುವ್ರೀಹಿ'ಯು ಇರುತ್ತದೆ. ಯಾವ ಧಾತುವಿನ ನಂತರ 'ಆಮ್' ಪ್ರತ್ಯಯವನ್ನು ವಿಧಿಸಲಾಗುತ್ತದೋ ಅಂತಹ ಧಾತುವಿಗೆ 'ಆಮ್‌ಪ್ರಕೃತಿಕಾ' ಎಂದು ಹೇಳುತ್ತಾರೆ. 'ಕೃಞ್' ಧಾತು 'ಞಿತ್' ಆಗಿರೋಣದರಿಂದ ಪರಸ್ಮೈಪದಿ, ಆತ್ಮನೇಪದಿ ಮತ್ತು ಉಭಯಪದಿಯೂ ಆಗಿರುತ್ತದೆ. 'ಏಧ್' ಧಾತುವು ಕೇವಲ ಆತ್ಮನೇಪದಿಯಾಗಿದೆ. ಅನುಪ್ರಯುಜ್ಯಮಾನ 'ಕೃ' ಧಾತುವಿನ ನಂತರ ಕೇವಲ ಆತ್ಮನೇ ಪದಿಯಾಗಿಯೇ ಇರುತ್ತದೆ. ಪರಸ್ಮೈಪದಿ ಯಾಕೆ ಆಗಬಾರದೆಂದರೆ ಅದು ಉಭಯಪದಿ ಆಗಿದ್ದರೂ 'ಏಧ್' ಧಾತುವು ಕೇವಲ ಆತ್ಮನೇಪದಿಯಾಗಿರುತ್ತದೆ. 'ಭೂ' ಮತ್ತು 'ಅಸ್' ಧಾತುಗಳು ಕೇವಲ ಪರಸ್ಮೈಪದಿಗಳು. ಅನುಪ್ರಯೋಗದ ಪೂರ್ವದಲ್ಲಿ ಯಾವಧಾತುವು ಯಾವ ಪದದಲ್ಲಿದೆಯೋ ಅದೇ ಪದದಲ್ಲಿಯೇ ಅನುಪ್ರಯೋಗದ ಧಾತುವಿನ ರೂಪವಿರಬೇಕು. ಅದಕ್ಕೆ ಬೇರೆ ಪದದಲ್ಲಿ ರೂಪಗಳಿದ್ದರೂ ಆ ರೂಪವನ್ನು ಉಪಯೋಗಿಸಬಾರದು. ಅಂದರೆ ಪೂರ್ವಧಾತುವು ಯಾವ ಪದಕ್ಕೆ ಸೇರಿರುವದೋ ಅದೇ ಪದದಲ್ಲಿಯೇ ಅನುಪ್ರಯೋಗ ಧಾತುವನ್ನು ಉಪಯೋಗಿಸಬೇಕು.

'ಏಧ್' ಧಾತುವಿನ ನಂತರ 'ಕೃ' 'ಭೂ' 'ಅಸ್' ಧಾತುಗಳ ಅನುಪ್ರಯೋಗದ ರೂಪಗಳ ಸಿದ್ಧಿ ಈ ಕೆಳಗಿನಂತೆ ಇರುತ್ತದೆ.

**(ಕೃ ಧಾತುವಿನ ಅನುಪ್ರಯೋಗದ ಪ್ರಕ್ರಿಯೆ)**

**(ಏಶ್-ಇರೇಚ್ ಗಳನ್ನು ಆದೇಶವಾಗಿ ವಿಧಿಸುವ ಸೂತ್ರ)**

ಸೂತ್ರ – 513.ಲಿಟಸ್ತಝೋರೇಶಿರೇಚ್ (3.4.81)

ವೃತ್ತಿಃ–ಲಿಡಾದೇಶಯೋಃ ತ–ಝಯೋಃ ಏಶ್–ಇರೇಚ್ ಏತೌ ಸ್ತಃ । ಏಧಾಞ್ಚಕ್ರೇ। ಏಧಾಞ್ಚಕ್ರಾತೇ। ಏಧಾಞ್ಚಕ್ರಿರೇ। ಏಧಾಞ್ಚಕೃಷೇ। ಏಧಾಞ್ಚಕ್ರಾಥೇ।

ಪ. ಛೇ. – ಲಿಟಃ, ತ–ಝಯೋಃ, ಏಶ್–ಇರೇಚ್।

ಅರ್ಥ– 'ಲಿಟ್' 'ಲ್' ಕಾರದ ಸ್ಥಾನದಲ್ಲಿ ಬರುವ ಮೂಲ ಆಖ್ಯಾತಪ್ರತ್ಯಯಗಳಾದ 'ತ' ಮತ್ತು 'ಝ'ಗಳಿಗೆ ಕ್ರಮವಾಗಿ 'ಏಶ್' ಮತ್ತು 'ಇರೇಚ್' ಎಂಬ ಆದೇಶಗಳು ಬರುತ್ತವೆ.

**ಅನುಪ್ರಯೋಗ ಲಿಟ್**: ಉದಾ– ಏಧಾಞ್ಚಕ್ರೇ– ಪ್ರಥಮಪುರುಷ ಏಕವಚನದಲ್ಲಿ 'ಏಧ್' ಧಾತುವಿನ ನಂತರ 'ಲಿಟ್' 'ಲ್' ಕಾರಕ್ಕೆ 'ತ' ಆದೇಶ ಬಂದು ಏಧ್+ತ ಎಂದಿದ್ದಾಗ, "ಇಜಾದೇಶ್ಚ ಗುರುಮತೋಽನೃಚ್ಛಃ" ಎಂಬ ಸೂತ್ರವು ಪ್ರವೃತ್ತವಾಗುತ್ತದೆ. 'ಏಧ್' ಧಾತುವಿನಲ್ಲಿ 'ಏ' ಕಾರವು ಇಜಾದಿಯಾಗಿದೆ, ಪರದಲ್ಲಿ 'ಲಿಟ್' 'ಲ್' ಕಾರವೂ ಇದೆ. ಆದುದರಿಂದ ಧಾತುವಿನ ಪರದಲ್ಲಿ 'ಆಮ್' ಪ್ರತ್ಯಯವು ಬಂದು ಏಧಾಮ್+ತ ಎಂದಿರುತ್ತದೆ. "ಆಮಃ" ಎಂಬ ಸೂತ್ರದಿಂದ 'ಆಮ್' ಪ್ರತ್ಯಯದ ಪರದಲ್ಲಿರುವ ಲಿಡಾದೇಶವಾದ 'ತ' ಪ್ರತ್ಯಯಕ್ಕೆ ಲೋಪ ಬಂದು ಏಧಾಮ್ ಎಂದಿರುತ್ತದೆ.

"ಕೃಞ್ಚಾನುಪ್ರಯುಜ್ಯತೇ ಲಿಟಿ" ಎಂಬ ಸೂತ್ರದಿಂದ 'ಲಿಟ್'ನ್ನು ಜೊತೆಗೆ ಸೇರಿಸಿಕೊಂಡು 'ಕೃ' ಧಾತುವಿಗೆ ಅನುಪ್ರಯೋಗವು ಬಂದು ಏಧಾಮ್+ಕೃ+ಲಿಟ್(ಆಖ್ಯಾತಪ್ರತ್ಯಯ) ಇರುತ್ತದೆ. "ಆಮ್ಪ್ರತ್ಯಯವತ್ ಕೃಞೋಽನುಪ್ರಯೋಗಸ್ಯ" ಎಂಬ ಸೂತ್ರದಿಂದ ಅತ್ಮನೇ ಪದದಲ್ಲಿ 'ಲಿಟ್' ಗೆ 'ತ' ಆದೇಶ ಬಂದು ಏಧಾಮ್+ಕೃ+ತ ಎಂದಿರುತ್ತದೆ. ಪ್ರಕೃತ ಸೂತ್ರದಿಂದ 'ತ' ಪ್ರತ್ಯಯಕ್ಕೆ 'ಏಶ್(ಏ)' ಆದೇಶ ಬಂದು ಏಧಾಮ್+ಕೃ+ಏ ಎಂದಿರುತ್ತದೆ. ಈಗ ಯಣ್ ಸಂಧಿಗೆ ಅವಕಾಶವಿರುತ್ತದೆ. ಆದರೆ "ದ್ವಿರ್ವಚನೇಽಚಿ" ಎಂಬ ಸೂತ್ರದಿಂದ ಅದಕ್ಕೆ ನಿಷೇಧ ಬರುತ್ತದೆ. "ಲಿಟಿ ಧಾತೋರನಭ್ಯಾಸಸ್ಯ" ಎಂಬ ಸೂತ್ರದಿಂದ 'ಕೃ' ಧಾತುವಿಗೆ ದ್ವಿತ್ವ ಬಂದು ಏಧಾಮ್+ಕೃಕೃ+ಏ ಎಂದಿರುತ್ತದೆ. ಅಭ್ಯಾಸ ಸಂಜ್ಞೆಯನ್ನು ಹೊಂದಿರುವ ಮೊದಲನೇ 'ಕೃ' ನಲ್ಲಿರುವ 'ಋ' ಕಾರಕ್ಕೆ "ಉರತ್" ಎಂಬ ಸೂತ್ರದಿಂದ 'ಅತ್(ಅ)' ಆದೇಶ ಬರುತ್ತದೆ. ಆಗ "ಉರಣ್ರಪರಃ" ಎಂಬ ಸೂತ್ರದಿಂದ 'ಅ' ಕಾರವು 'ಅರ್' ಆಗಿ ಬರುತ್ತದೆ. ಆಗ ಏಧಾಮ್+ಕರ್+ಕೃ+ಏ ಎಂದಿರುತ್ತದೆ. "ಹಲಾದಿ ಶೇಷಃ" ಎಂಬುದರಿಂದ ಅಭ್ಯಸ್ಥವಾದ 'ಕರ್' ಎಂಬ ರೂಪದಲ್ಲಿ ಮೊದಲನೇ ವ್ಯಞ್ಜನ ಮತ್ತು 'ಅ' (ರೇಫಸಹಿತವಾಗಿ) ಕಾರ ಇವು ಉಳಿದು ಏಧಾಮ್+ಕ+ಕೃ+ಏ ಎಂದಿರುತ್ತದೆ. ಅಭ್ಯಾಸದ 'ಕ್' ಕಾರಕ್ಕೆ ಚುತ್ವ ಬಂದು ಏಧಾಮ್+ಚಕೃ(ಕ್ಋ)+ಏ ಎಂದಿರುತ್ತದೆ. 'ಏಧಾಮ್' ಎಂಬುದು ಮಾನ್ತವಾಗಿಯೂ ಲಿಟ್ 'ಲ್' ಕಾರದ ಧಾತುವಾಗಿಯೂ ಇರೋಣದರಿಂದ ಇದು ಕೃದನ್ತವಾಗುತ್ತದೆ. ಆದುದರಿಂದ "ಕೃತ್ತದ್ಧಿತಸಮಾಸಾಶ್ಚ" ಎಂಬ ಸೂತ್ರದಿಂದ ಇದಕ್ಕೆ ಪ್ರಾತಿಪದಿಕ ಸಂಜ್ಞೆ ಬರುತ್ತದೆ. ಆಗ 'ಸುಪ್' ಪ್ರತ್ಯಯಕ್ಕೂ ಅವಕಾಶವಿರುತ್ತದೆ. ಆದರೆ "ಕೃನ್ಮೇಜನ್ತಃ" ಎಂಬ ಸೂತ್ರದಿಂದ 'ಅವ್ಯಯ' ಸಂಜ್ಞೆ ಬಂದು "ಅವ್ಯಯಾದಾಪ್ಸುಪಃ" ಎಂಬ ಸೂತ್ರದಿಂದ 'ಸುಪ್' ಪ್ರತ್ಯಯವು ಲೋಪವಾಗಿ "ಏಕದೇಶವಿಕೃತಮ್ ಅನನ್ಯವತ್" ಎಂಬ ನ್ಯಾಯದಿಂದ ಏಧಾಮ್ ಎಂಬುದಕ್ಕೆ ಪದಸಂಜ್ಞೆಯು ಬರುತ್ತದೆ. ಇದು ಪದಾನ್ತದಲ್ಲಿರೋಣದರಿಂದ 'ಮ್' ಕಾರಕ್ಕೆ ಅನುಸ್ವಾರ(ಂ) ಬಂದು ಆ ಅನುಸ್ವಾರಕ್ಕೆ ಪರಸವರ್ಣ (ಞ್) ಕಾರವು ಆದೇಶವಾಗಿ ಬಂದು ಏಧಾಞ್ಚಕೃ+ಏ ಎಂದಾಗುತ್ತದೆ. ಕೊನೆಯಲ್ಲಿರುವ 'ಏ' ಕಾರವು "ಲಿಟ್ಚ" ಸೂತ್ರದಿಂದ ಅರ್ಧಧಾತುಕ ಸಂಜ್ಞೆಯನ್ನೇ ಹೊಂದಿರುತ್ತದೆ. "ಸಾರ್ವಧಾತುಕಾರ್ಧಧಾತು ಕಯೋಃ" ಎಂಬ ಸೂತ್ರದಿಂದ ಗುಣ ಬರಬೇಕಾಗಿತ್ತು, ಆದರೆ "ಅಸಂಯೋಗಾಲ್ಲಿಟ್ಕಿತ್" ಎಂಬ ಸೂತ್ರದಿಂದ ಲಿಟ್ ಗೆ ಕಿತ್ವ ಬಂದು "ಕ್ಙಿತಿಚ" ಎಂಬುದರಿಂದ ಗುಣವು ನಿಷೇಧಿಸಲಾಗಿದೆ. ಏಧಾಞ್ಚಕೃ+ಏ ಎಂಬಲ್ಲಿ ಯಣ್ ಸಂಧಿಯಿಂದ 'ಋ' ಕಾರಕ್ಕೆ ರೇಫ(ರ್)ವು ಆದೇಶವಾಗಿ ಏಧಾಞ್+ಚಕ್+ರ್+ಏ=ಏಧಾಞ್ಚಕ್ರೇ ಎಂದಾಗುತ್ತದೆ.

ಉದಾ– ಏಧಾಞ್ಚಕ್ರಾತೇ – ಪ್ರಥಮಪುರುಷ ದ್ವಿವಚನದಲ್ಲಿ ಹಿಂದಿನಂತೆಯೇ ಪ್ರಕ್ರಿಯೆ ನಡೆದು ಏಧಾಞ್+ಚಕ್+ರ್ ಎಂದಿದ್ದಾಗ ದ್ವಿವಚನ ಪ್ರತ್ಯಯವಾದ 'ಆತಾಮ್' ಎಂಬ ಪ್ರತ್ಯಯವನ್ನು ಸೇರಿಸಬೇಕಾದಾಗ, ಆತಾಮ್ ನಲ್ಲಿಯ 'ಆಮ್'ಗೆ 'ಟಿ' ಸಂಜ್ಞೆ ಬಂದು, ಅದಕ್ಕೆ "ಟಿತ ಆತ್ಮನೇಪದಾನಾಮ್ ಟೇರೇ" ಎಂಬುದರಿಂದ ಏತ್ವ ಬಂದು ಏಧಾಞ್+ಚಕ್+ರ್+ಆತ್+ಏ ಎಂದಿರುತ್ತದೆ. ಉಳಿದ ಪ್ರಕ್ರಿಯೆಗಳೆಲ್ಲ ಹಿಂದಿನಂತೆ ನಡೆದು ಏಧಾಞ್ಚಕ್ರಾತೇ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಏಧಾಞ್ಚಕ್ರಿರೇ – ಪ್ರಥಮಪುರುಷ ಬಹುವಚನದಲ್ಲಿ 'ಏಧ್' ಧಾತುವಿನ ನಂತರ ಏಧಾಞ್+ಚಕೃ ವರೆಗೂ ಹಿಂದಿನಂತೆಯೇ ಪ್ರಕ್ರಿಯೆ ನಡೆದು ಅನುಪ್ರಯೋಗ 'ಕೃ' ಧಾತುವಿನ ನಂತರ 'ಝ್' ಪ್ರತ್ಯಯವನ್ನು ಸೇರಿಸಿದಾಗ ಏಧಾಞ್+ಚಕೃ+ಝ ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ಝ್'ಗೆ 'ಇರೇ (ಇರೇಶ್)' ಆದೇಶವು ಬಂದು ಉಳಿದ ಪ್ರಕ್ರಿಯೆಗಳು ಹಿಂದಿನಂತೆಯೇ ನಡೆದು ಏಧಾಞ್ ಚಕ್+ರ್+ಇರೇ= ಏಧಾಞ್ಚಕ್ರಿರೇ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಏಧಾಞ್ಚಕೃಷೇ – ಮಧ್ಯಮಪುರುಷ ಏಕವಚನದಲ್ಲಿ ಏಧ್ ಧಾತುವಿಗೆ 'ಲಿಟ್' 'ಲ್' ಕಾರದಲ್ಲಿ ಏಧಾಞ್ಚಕೃ ವರೆಗೂ ಹಿಂದಿನಂತೆಯೇ ಪ್ರಕ್ರಿಯೆ ನಡೆದು ಮೂಲ ಆಖ್ಯಾತ ಪ್ರತ್ಯಯವಾದ 'ಥಾಸ್' ಪ್ರತ್ಯಯವನ್ನು ಸೇರಿಸಿದಾಗ ಏಧಾಞ್ಚಕೃ+ಥಾಸ್ ಎಂದಿದ್ದಾಗ, "ಥಾಸಃ ಸೇ" ಎಂಬ ಸೂತ್ರದಿಂದ 'ಥಾಸ್' ಗೆ 'ಸೇ' ಪ್ರತ್ಯಯವು ಆದೇಶವಾಗಿ ಬಂದು ಏಧಾಞ್ಚಕೃ+ಸೇ ಎಂದಿದ್ದಾಗ "ಆದೇಶಪ್ರತ್ಯಯಯೋಃ" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಷತ್ವ ಬಂದು ಏಧಾಞ್ಚಕೃಷೇ ಎಂಬ ರೂಪವು ಸಿದ್ಧವಾಗುತ್ತದೆ.

ವಿಶೇಷ: ಇಲ್ಲಿ ವಲಾದಿ ಪ್ರತ್ಯಯವು ಪರದಲ್ಲಿದ್ದರೂ 'ಕೃ' ಧಾತುವು ಅನಿಟ್ ಆಗಿರುವುದರಿಂದ ಇಡಾಗಮವು ಬರುವುದಿಲ್ಲ.

ಉದಾ– ಏಧಾಞ್ಚಕ್ರಾಥೇ – ಮಧ್ಯಮಪುರುಷ ದ್ವಿವಚನದಲ್ಲಿ ಏಧ್ ಧಾತುವಿನ ನಂತರ ಅನುಪ್ರಯೋಗದ 'ಕೃ' ಧಾತುವು ಇದ್ದಾಗ, ಏಧಾಞ್ಚಕೃ ವರೆಗೂ ಹಿಂದಿನಂತೆಯೇ ಪ್ರಕ್ರಿಯೆ ನಡೆದು ಮೂಲ ಆಖ್ಯಾತ ಪ್ರತ್ಯಯವಾದ 'ಆಥಾಮ್' ಪ್ರತ್ಯಯವನ್ನು ಸೇರಿಸಿದಾಗ ಏಧಾಞ್ಚಕೃ+ಆಥಾಮ್ ಎಂದಿದ್ದಾಗ, 'ಆಮ್' ಗೆ 'ಟಿ' ಸಂಜ್ಞೆ ಬಂದು ಹಿಂದಿನಂತೆ ಅದಕ್ಕೆ ಏತ್ವ ಬಂದು ಏಧಾಞ್ಚಕೃ+ಆಥೇ ಎಂದಿದ್ದಾಗ, 'ಯಣ್' ಸಂಧಿಯಿಂದ 'ಋ' ಕಾರಕ್ಕೆ ರೇಫವು(ರ್) ಆದೇಶವಾಗಿ ಬಂದು ಏಧಾಞ್ಚಕ್+ ರ್+ಆಥೇ=ಏಧಾಞ್ಚಕ್ರಾಥೇ ಎಂಬ ರೂಪವು ಸಿದ್ಧವಾಗುತ್ತದೆ.

**(ಢತ್ವವನ್ನು ಆದೇಶವಾಗಿ ವಿಧಿಸುವ ಸೂತ್ರ)**

**ಸೂತ್ರ – 514.ಇಣಃ ಷೀಧ್ವಂ ಲುಙ್ ಲಿಟಾಂ ಧೋಽಙ್ಗಾತ್ (8.3.78)**

ವೃತ್ತಿಃ–ಇಣನ್ತಾತ್ ಅಙ್ಗಾತ್ ಪರೇಷಾಂ ಷೀಧ್ವಂ ಲುಙ್ ಲಿಟಾಂ ಧಸ್ಯ ಢಃ ಸ್ಯಾತ್। ಏಧಾಞ್ಚಕೃಢ್ವೇ। ಏಧಾಞ್ಚಕ್ರೇ। ಏಧಾಞ್ಚಕೃವಹೇ। ಏಧಾಞ್ಚಕೃಮಹೇ। ಏಧಾಂಬಭೂವ। ಏಧಾಮಾಸ। ಏಧಿತಾ। ಏಧಿತಾರೌ। ಏಧಿತಾರಃ। ಏಧಿತಾಸೇ। ಏಧಿತಾಸಾಥೇ।

ಪ. ಛೇ. – ಇಣಃ, ಷೀಧ್ವಂ–ಲುಙ್–ಲಿಟಾಂ, ಧಃ, ಅಙ್ಗಾತ್।

ಅ. ವೃ. – "ಅಪದಾನ್ತಸ್ಯ ಮೂರ್ಧನ್ಯಃ" ಎಂಬ ಸೂತ್ರದಿಂದ 'ಮೂರ್ಧನ್ಯಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– 'ಇಣ್' ಪ್ರತ್ಯಾಹಾರಾನ್ತರ್ಗತ ವರ್ಣವನ್ನು ಅನ್ತ್ಯವಾಗಿ ಉಳ್ಳ ಅಂಗದ ನಂತರ ಷೀಧ್ವಂ, ಲುಙ್ ಮತ್ತು ಲಿಟ್ 'ಲ್' ಕಾರಗಳಿಗೆ ಸಂಬಂಧಿಸಿದ 'ಧ್' ಕಾರಕ್ಕೆ 'ಢ್(ಮಹಾಪ್ರಾಣ)' ಕಾರವು "ತುಲ್ಯಾಸ್ಯಪ್ರಯತ್ನಂ ಸವರ್ಣಮ್" ಎಂಬ ಸೂತ್ರದಿಂದ

ಆದೇಶವಾಗಿ ಬರುತ್ತದೆ.

ಉದಾ– ಏಧಾಞ್ಚಕೃಢ್ವೇ – ಮಧ್ಯಮಪುರುಷ ಬಹುವಚನದಲ್ಲಿ 'ಏಧ್' ಧಾತುವಿನ ನಂತರ ಅನುಪ್ರಯೋಗದ 'ಕೃ' ಧಾತುವು ಇದ್ದಾಗ, ಏಧಾಞ್ಚಕೃ ವರೆಗೂ ಹಿಂದಿನಂತೆಯೇ ಪ್ರಕ್ರಿಯೆ ನಡೆದು ಮೂಲ ಆಖ್ಯಾತ ಪ್ರತ್ಯಯವಾದ 'ಧ್ವಮ್' ಸೇರಿಸಿದಾಗ ಏಧಾಞ್ಚಕೃ+ಧ್ವ ಎಂದಿರುತ್ತದೆ. ಪ್ರಕೃತ ಸೂತ್ರದಿಂದ 'ಧ್ವಮ್' ನಲ್ಲಿರುವ 'ಧ್' ಕಾರಕ್ಕೆ 'ಢ್' ಕಾರವು ಆದೇಶವಾಗಿ ಬಂದು ಏಧಞ್ಚಕೃ+ಢ್ವಮ್ ಎಂದಿರುತ್ತದೆ. ಹಿಂದಿನಂತೆ 'ಅಮ್' ಗೆ ಏತ್ವ ಬಂದು ಏಧಾಞ್ಚಕೃಢ್ವೇ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಏಧಾಞ್ಚಕ್ರೇ – ಉತ್ತಮಪುರುಷ ಏಕವಚನದಲ್ಲಿ ಪ್ರಥಮಪುರುಷ ಏಕವಚನದ ಪ್ರಕ್ರಿಯೆಯನ್ನೇ ಅನುಸರಿಸಿ ಈ ರೂಪವು ಸಿದ್ಧವಾಗಿದೆ.

ಉದಾ– ಏಧಾಞ್ಚಕೃವಹೇ, ಏಧಾಞ್ಚಕೃಮಹೇ– ಉತ್ತಮಪುರುಷ ದ್ವಿವಚನ ಮತ್ತು ಬಹುವಚನಗಳಲ್ಲಿ ಏಧಾಞ್ಚಕೃ ವರೆಗೂ ಪ್ರಕ್ರಿಯೆಯು ಹಿಂದಿನಂತೆಯೇ ನಡೆದು ಅದಕ್ಕೆ ಕ್ರಮವಾಗಿ 'ವಹಿ' 'ಮಹಿಙ್(ಮಹಿ)' ಪ್ರತ್ಯಯಗಳನ್ನು ಸೇರಿಸಿದಾಗ, 'ಇ' ಕಾರವು 'ಟಿತ್' ಆಗಿರೋಣದರಿಂದ ಅದಕ್ಕೆ ಏತ್ವ ಬಂದು ಏಧಾಞ್ಚಕೃವಹೇ, ಏಧಾಞ್ಚಕೃಮಹೇ ಎಂಬ ರೂಪಗಳು ಸಿದ್ಧವಾಗುತ್ತವೆ.

**'ಏಧ್' ಧಾತುವಿನ ಅನುಪ್ರಯೋಗ 'ಲಟ್' ನ ರೂಪಗಳು**

ರೂಪಗಳು: ಏಧಾಞ್ಚಕ್ರೇ, ಏಧಾಞ್ಚಕ್ರಾತೇ, ಏಧಾಞ್ಚಕ್ರಿರೇ। ಏಧಾಞ್ಚಕೃಷೇ, ಏಧಾಞ್ಚಕ್ರಾಥೇ, ಏಧಾಞ್ಚಕೃಢ್ವೇ। ಏಧಾಞ್ಚಕ್ರೇ, ಏಧಾಞ್ಚಕೃವಹೇ, ಏಧಾಞ್ಚಕೃಮಹೇ।}

**(ಭೂ ಧಾತುವಿನ ಅನುಪ್ರಯೋಗ ಲಟ್ ಪ್ರಕ್ರಿಯೆ)**

ಗಮನಿಸಬೇಕಾದ ಅಂಶ– 'ಏಧಾಮ್' ಎಂಬ ರೂಪದನಂತರ 'ಭೂ' ಧಾತುವಿನ ಅನುಪ್ರಯೋಗವನ್ನು ಮಾಡುವಾಗ ಏಧಾಮ್+ಭೂ ಎಂದಿದ್ದಾಗ 'ಭೂ ಧಾತುವಿನ 'ಲಿಟ್' ರೂಪಗಳನ್ನು ಅನುಪ್ರಯೋಗವಾಗಿ ಸೇರಿಸಿದಾಗ ಏಧಾಮ್+ಬಭೂವ ಎಂದಿದ್ದಾಗ, 'ಮ್' ಕಾರಕ್ಕೆ "ಮೋಽನುಸ್ವಾರಃ" ಎಂಬ ಸೂತ್ರದಿಂದ ಅನುಸ್ವಾರ ಮತ್ತು "ವಾ ಪದಾನ್ತಸ್ಯ" ಎಂಬ ಸೂತ್ರದಿಂದ ಪರಸವರ್ಣದಿಂದ 'ಮ್' ಕಾರವು ಆದೇಶವಾಗಿ ಬಂದು 'ಏಧಾಮ್ ಬಭೂವ' ಎಂದು ರೂಪವು ಸಿದ್ಧವಾಗುತ್ತದೆ. ಇಲ್ಲಿ 'ಭೂ' ಧಾತುವು ಪರಸ್ಮೈಪದವಾಗಿಯೇ ಇರುವುದರಿಂದ 'ಏಧ್' ಧಾತುವು ಆತ್ಮನೇಪದವಾಗಿದ್ದರೂ ಪ್ರಕ್ರಿಯೆಗೆ ಭಂಗ ಬರುವುದಿಲ್ಲ. ಯಾವ ಅನುಪ್ರಯೋಗದ ಧಾತುವು ಉಭಯಪದಿಯಾಗಿರುತ್ತದೋ, ಅಲ್ಲಿ ಪೂರ್ವದಲ್ಲಿರುವ ಧಾತುವಿನ ಪದವನ್ನು ಅನುಸರಿಸಿಯೇ ಅನುಪ್ರಯೋಗದ ಧಾತುವನ್ನು ಸೇರಿಸಬೇಕು. ಪೂರ್ವದಲ್ಲಿರುವ ಧಾತುವು ಉಭಯಪದಿಯಾಗಿದ್ದು ಅನುಪ್ರಯೋಗವೂ ಉಭಯಪದಿಯಾಗಿದ್ದಾಗ, ಎರಡೂ ಪದಗಳಲ್ಲೂ ಅನುಪ್ರಯೋಗ ಲಿಟ್ ರೂಪಗಳನ್ನು ಸೇರಿಸಬಹುದು.

'ಏಧ್' ಧಾತುವಿನ ನಂತರ 'ಭೂ' ಧಾತುವಿನ ಅನುಪ್ರಯೋಗದ 'ಲಿಟ್' ರೂಪಗಳು– ಕೇವಲ ಪರಸ್ಮೈಪದದ ರೂಪಗಳೇ, ಕಾರಣ ಅದು ಕೇವಲ ಪರಸ್ಮೈ ಪದ.

ರೂಪಗಳು: ಏಧಾಮ್‌ಬಭೂವ, ಏಧಾಮ್‌ಬಭೂವತುಃ। ಏಧಾಮ್‌ಬಭೂವುಃ। ಏಧಾಮ್‌ಬಭೂವಿಥ। ಏಧಾಮ್‌ಬಭೂವಥುಃ। ಏಧಾಮ್‌ಬಭೂವ। ಏಧಾಮ್‌ಬಭೂವ। ಏಧಾಮ್‌ಬಭೂವಿವ। ಏಧಾಮ್‌ಬಭೂವಿಮ।

**(ಅಸ್ ಧಾತುವಿನ ಅನುಪ್ರಯೋಗ ಲಿಟ್ ಪ್ರಕ್ರಿಯೆ)**

ಉದಾ–ಏಧಾಮಾಸ– ಪ್ರಥಮಪುರುಷ ಏಕವಚನದಲ್ಲಿ 'ಏಧ್' ಧಾತುವಿನ ನಂತರ 'ಅಸ್' ಧಾತುವಿನ ಅನುಪ್ರಯೋಗವು ಮಾಡಿದಾಗ, ಏಧ್+ಅಸ್+ಲಿಟ್ ಎಂದಿದ್ದಾಗ, 'ಲಿಟ್' ಗೆ ಮೂಲ ಆಖ್ಯಾತ ಪ್ರತ್ಯಯವಾದ 'ತಿಪ್' ಆದೇಶ ಬಂದು ಅದಕ್ಕೆ ಅಭಿನವ ಆಖ್ಯಾತ ಪ್ರತ್ಯಯವಾದ 'ಣಲ್(ಅ)' ಬಂದು ನಂತರ 'ಅಸ್' ಧಾತುವಿಗೆ ದ್ವಿತ್ವ ಬಂದು "ಹಲಾದಿಃ ಶೇಷಃ" ಎಂಬ ಸೂತ್ರದಿಂದ ಅಭ್ಯಾಸದ 'ಸ್' ಕಾರಕ್ಕೆ ಲೋಪ ಬಂದು ಏಧ್+ಅ+ಅಸ್ ಎಂದಿರುತ್ತದೆ. "ಅತ ಆದೇಃ" ಎಂಬ ಸೂತ್ರದಿಂದ ಎರಡು ಅ– ಕಾರಗಳಿಗೂ ಸವರ್ಣದೀರ್ಘ ಬಂದು, ಏಧ್+ಆಸ್+ಅ ಎಂದಿರುತ್ತದೆ. 'ಏಧ್' ಧಾತುವಿನ ಜೊತೆಗೆ 'ಆಮ್' ಪ್ರತ್ಯಯವು ಸೇರಿದಾಗ ಏಧಾಮ್+ಆಸ್+ಅ ಇವುಗಳನ್ನು ಸೇರಿಸಿದಾಗ ಏಧಾಮಾಸ್+ಅ=ಏಧಾಮಾಸ ಎಂದು ರೂಪವು ಸಿದ್ಧವಾಗುತ್ತದೆ.

ಪ್ರಥಮಪುರುಷ ದ್ವಿವಚನ ಬಹುವಚನಗಳಲ್ಲಿ ಕ್ರಮವಾಗಿ ಏಧಾಮಾಸ+ಅತುಸ್, ಮತ್ತು **ಏಧಾಮಾಸ+ಉಸ್=ಏಧಾಮಾಸತುಸ್** ಮತ್ತು ಏಧಾಮಸುಸ್ ಎಂದಾಗಿ 'ಸ್' ಕಾರಕ್ಕೆ ರುತ್ವ–ವಿಸರ್ಗಗಳು ಬಂದು ಏಧಾಮಾಸತುಃ ಮತ್ತು ಏಧಾಮಾಸುಃ ಎಂಬ ರೂಪಗಳು ಸಿದ್ಧವಾಗುತ್ತವೆ.

ಮುಂದಿನ ರೂಪಗಳಲ್ಲಿ **ವಲಾದಿ** ಪ್ರತ್ಯಯವು ಪರದಲ್ಲಿದ್ದಾಗ, ಇಡಾಗಮವು ಆದ್ಯವಯಯವಾಗಿ ಬರುತ್ತದೆ.

ರೂಪಗಳು: **ಏಧಾಮಾಸ, ಏಧಾಮಾಸತುಃ, ಏಧಾಮಾಸುಃ**। ಏಧಾಮಾಸಿಥ, ಏಧಾಮಾಸಥುಃ, ಏಧಾಮಾಸ। ಏಧಾಮಾಸ, ಏಧಾಮಾಸಿವ, ಏಧಾಮಾಸಿಮ।

**ಲುಟ್**: ಉದಾ–ಏಧಿತಾ – ಪ್ರಥಮಪುರುಷ ಏಕವಚನದಲ್ಲಿ 'ಏಧ್' ಧಾತುವಿನ ನಂತರ ಏಧ್+ಲುಟ್ ಎಂದಿದ್ದಾಗ, 'ಲುಟ್' ಗೆ ಮೂಲ ಆಖ್ಯಾತಪ್ರತ್ಯಯವಾದ 'ತ' ಆದೇಶ ಬಂದು ಏಧ್+ತ ಎಂದಿದ್ದಾಗ, "ಸ್ಯತಾಸೀಲ್ಲೃಲುಟೋಃ" ಎಂಬ ಸೂತ್ರದಿಂದ ಧಾತುವಿನ ನಂತರ ತಾಸ್ ಪ್ರತ್ಯಯ ಬಂದು ಏಧ್+ತಾಸ್+ತ ಎಂದಿರುತ್ತದೆ. ಇದು ಆರ್ಧಧಾತುಕ 'ಲ್' ಕಾರವಾಗಿರೋಣದರಿಂದ "ಆರ್ಧಧಾತುಕಸ್ಯೇಡ್ವಲಾದೇಃ" ಎಂಬ ಸೂತ್ರದಿಂದ 'ಇಟ್(ಇ)' ಆಗಮ ಬಂದು ಏಧ್+ಇತಾಸ್+ತ ಎಂದಿರುತ್ತದೆ. ಮೂಲ ಆಖ್ಯಾತ ಪ್ರತ್ಯಯವಾದ 'ತ' ಗೆ 'ಡಾ(ಆ)' ಆದೇಶ ಬಂದು, ಏಧಿತಾಸ್+ಆ ಎಂದಿರುತ್ತದೆ. ಏಧಿತಾಸ್ ನಲ್ಲಿರುವ 'ಆಸ್' ರೂಪದಲ್ಲಿರುವ 'ಟಿ'ಗೆ ಲೋಪ ಬಂದು ಏಧಿತ್+ಆ=ಏಧಿತಾ ಎಂದು ರೂಪವಾಗುತ್ತದೆ.

ಇದೇ ರೀತಿಯಲ್ಲಿ ಉಳಿದ ರೂಪಗಳಾದ ಏಧಿತಾರೌ, ಏಧಿತಾರಃ, ಏಧಿತಾಸೇ, ಏಧಿತಾಸಾಥೇ ಎಂಬ ರೂಪಗಳು ಸಿದ್ಧವಾಗುತ್ತವೆ.

**(ಸ್- ಕಾರ ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ - 515.ಧಿ ಚ (8.2.25)**

ವೃತ್ತಿಃ-ಧಾದೌ ಪ್ರತ್ಯಯೇ ಪರೇ ಸಸ್ಯ ಲೋಪಃ। ಏಧಿತಾಧ್ವೇ।

ಅ. ವ್ಯ.- ರಾತ್ ಸಸ್ಯ" ಎಂಬ ಸೂತ್ರದಿಂದ 'ಸಸ್ಯ' ಎಂಬ ಪದವೂ, ಮತ್ತು "ಸಂಯೋಗಾನ್ತಸ್ಯ ಲೋಪಃ" ಎಂಬ ಸೂತ್ರದಿಂದ 'ಲೋಪಃ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ- 'ಧ್' ಕಾರಾದಿ ಪ್ರತ್ಯಯವು ಪರದಲ್ಲಿದ್ದಾಗ, ಪೂರ್ವದಲ್ಲಿರುವ 'ಸ್' ಕಾರಕ್ಕೆ ಲೋಪವು ಬರುತ್ತದೆ.

ಉದಾ- ಏಧಿತಾಧ್ವೇ- ಮಧ್ಯಮಪುರುಷ ಬಹುವಚನದಲ್ಲಿ 'ಏಧ್' ಧಾತುವಿನ ನಂತರ 'ಲುಟ್' 'ಲ್' ಕಾರ ಬಂದು ಅದಕ್ಕೆ 'ಧ್ವಮ್' ಆದೇಶ ಬಂದಾಗ, ಏಧ್+ಧ್ವಮ್ ಎಂದಿರುತ್ತದೆ. "ಸ್ಯತಾಸೀ ಲೃಲುಟೋಃ" ಎಂಬ ಸೂತ್ರದಿಂದ ಧಾತುವಿನ ನಂತರ 'ತಾಸ್' ಬಂದು ಏಧ್+ತಾಸ್+ಧ್ವಮ್ ಎಂದಿದ್ದಾಗ, ಆರ್ಧಧಾತುಕವಾದ ಈ 'ಲ್'ಕಾರಕ್ಕೆ ಹಿಂದಿನಂತೆ ಇಡಾಗಮ ಬಂದು , ಏಧ್+ಇತಾಸ್+ಧ್ವಮ್=ಏಧಿತಾಸ್+ಧ್ವಮ್ ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬಂದು ಏಧಿತಾ+ಧ್ವಮ್ ಎಂದಿರುತ್ತದೆ. 'ಧ್ವಮ್' ನಲ್ಲಿರುವ 'ಅಮ್' ಗೆ 'ಟಿ' ಸಂಜ್ಞೆ ಬಂದು ಆ 'ಟಿ' ಗೆ ಏತ್ವ(ಏ) ಬಂದು ಏಧಿತಾಧ್ವೇ ಎಂಬ ರೂಪವು ಸಿದ್ಧವಾಗುತ್ತದೆ.

**(ಹ್ ಕಾರವನ್ನು ಆದೇಶವಾಗಿ ವಿಧಿಸುವ ಸೂತ್ರ)**

**ಸೂತ್ರ - 516.ಹ ಏತಿ (7.4.52)**

ವೃತ್ತಿಃ-ತಾಸ್-ಅಸ್ತ್ಯೋಃ ಸಸ್ಯ ಹಃ ಸ್ಯಾತ್ ಏತಿ ಪರೇ । ಏಧಿತಾಹೇ। ಏಧಿತಾಸ್ವಹೇ। ಏಧಿತಾಸ್ಮಹೇ। ಏಧಿಷ್ಯತೇ। ಏಧಿಷ್ಯೇತೇ। ಏಧಿಷ್ಯನ್ತೇ। ಏಧಿಷ್ಯಸೇ। ಏಧಿಷ್ಯೇಥೇ। ಏಧಿಷ್ಯಧ್ವೇ। ಏಧಿಷ್ಯೇ। ಏಧಿಷ್ಯಾವಹೇ। ಏಧಿಷ್ಯಾಮಹೇ।

ಪ. ಛೇ.- ಹಃ, ಏತಿ।

ಅ.ವ್ಯ.- " ತಾಸಸ್ತ್ಯೋರ್ಲೋಪಃ" ಎಂಬ ಸೂತ್ರದಿಂದ 'ತಾಸಸ್ತ್ಯೋಃ' ಎಂಬ ಪದವೂ, ಮತ್ತು "ಸಃಸ್ಯಾರ್ಧಧಾತುಕೇ" ಎಂಬ ಸೂತ್ರದಿಂದ 'ಸಃ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ- 'ಏ' ಕಾರಕ್ಕೆ 'ಧ್' ಕಾರದಿಂದ ವ್ಯವಹಿತವಾಗಿ ಪರದಲ್ಲಿರುವ 'ತಾಸ್' ಪ್ರತ್ಯಯದ ಮತ್ತು 'ಅಸ್' ಧಾತುವಿನ 'ಸ್' ಕಾರಗಳಿಗೆ 'ಹ್' ಕಾರವು ಆದೇಶವಾಗಿ ಬರುತ್ತದೆ.

ಉದಾ- ಏಧಿತಾಹೇ- ಉತ್ತಮಪುರುಷ ಏಕವಚನದಲ್ಲಿ 'ಏಧ್' ಧಾತುವಿನ ನಂತರ 'ಲುಟ್' 'ಲ್' ಕಾರ ಬಂದು, ಅದಕ್ಕೆ ಮೂಲ ಆಖ್ಯಾತ ಪ್ರತ್ಯಯವಾದ 'ಇಟ್(ಇ)' ಆದೇಶವಾಗಿ ಬಂದು ಏಧ್+ಇ ಎಂದಿರುತ್ತದೆ. "ಸ್ಯತಾಸೀಲ್ಸಲುಟೋಃ" ಎಂಬ ಸೂತ್ರದಿಂದ ಧಾತುವಿನ ನಂತರ 'ತಾಸ್' ಪ್ರತ್ಯಯ ಬಂದು ಏಧ್+ತಾಸ್+ಇ ಎಂದಿರುತ್ತದೆ.

ಇದು ಆರ್ಧಧಾತುಕ 'ಲ್' ಕಾರವಾಗಿರೋಣದ್ದರಿಂದ 'ತಾಸ್' ಗೆ 'ಇಟ್(ಇ)' ಆಗಮವು ಆದ್ಯಯವಯವವಾಗಿ ಬಂದು ಏಧ್+ಇತಾಸ್+ಇ ಎಂದಿರುತ್ತದೆ, ಕೊನೆಯಲ್ಲಿರುವ 'ಇ' ಕಾರಕ್ಕೆ 'ಟಿ' ಸಂಜ್ಞೆ ಬರೋಣದರಿಂದ ಅದಕ್ಕೆ 'ಏತ್ವ' ಬಂದು ಏಧಿತಾಸ್+ಏ ಎಂದಿರುತ್ತದೆ. ಪ್ರಕೃತ ಸೂತ್ರದಿಂದ 'ಸ್' ಕಾರಕ್ಕೆ 'ಹ್' ಕಾರವು ಆದೇಶವಾಗಿ ಬಂದು ಏಧಿತಾಹ್+ಏ=ಏದಿತಾಹೇ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಏಧಿತಾಸ್ವಹೇ, ಏಧಿತಾಸ್ಮಹೇ – ಉತ್ತಮಪುರುಷ ದ್ವಿವಚನ ಬಹುವಚನಗಳಲ್ಲಿ 'ಏಧ್' ಧಾತುವಿನ ನಂತರ 'ಲುಟ್' 'ಲ್' ಕಾರದ ಆದೇಶಗಳಾದ 'ವಹಿ' ಮತ್ತು 'ಮಹಿಙ್(ಮಹಿ)' ಪ್ರತ್ಯಯಗಳು ಬಂದಮೇಲೆ ಹಿಂದಿನಂತೆ ಧಾತುವಿನ ನಂತರ 'ತಾಸ್' ಪ್ರತ್ಯಯ ಬಂದು ಹಾಗೆಯೇ 'ತಾಸ್' ಗೆ 'ಇಟ್' ಆಗಮ ಬಂದು ಏಧ್+ಇತಾಸ್+ವಹಿ=ಏಧಿತಾಸ್ವಹಿ ಮತ್ತು ಏಧ್+ಇತಾಸ್+ಮಹಿ=ಏಧಿತಾಸ್ಮಹಿ ಎಂದಿದ್ದಾಗ, "ಟಿತ ಆತ್ಮನೇಪದಾನಾಂ ಟೇರೇ" ಎಂಬ ಸೂತ್ರದಿಂದ ಕೊನೆಯ 'ಇ' ಕಾರಗಳಿಗೆ ಏತ್ವ ಬಂದು ಏಧಿತಾಸ್ವಹೇ, ಏಧಿತಾಸ್ಮಹೇ ಎಂಬ ರೂಪಗಳು ಸಿದ್ಧಿಸುತ್ತವೆ.

ರೂಪಗಳು: ಏಧಿತಾ, ಏಧಿತಾರೌ, ಏಧಿತಾರಃ। ಏಧಿತಾಸೇ, ಏಧಿತಾಸಾಥೇ, ಏಧಿತಾಧ್ವೇ। ಏಧಿತಾಹೇ, ಏಧಿತಾಸ್ವಹೇ, ಏಧಿತಾಸ್ಮಹೇ।

**ಲೃಟ್**: ರೂಪಗಳು: ಏಧಿಷ್ಯತೇ। ಏಧಿಷ್ಯೇತೇ। ಏಧಿಷ್ಯನ್ತೇ। ಏಧಿಷ್ಯಸೇ। ಏಧಿಷ್ಯೇಥೇ। ಏಧಿಷ್ಯಧ್ವೇ। ಏಧಿಷ್ಯೇ। ಏಧಿಷ್ಯಾವಹೇ। ಏಧಿಷ್ಯಾಮಹೇ।

ವಿಶೇಷ: ಇಲ್ಲಿ ಧಾತುವಿನ ನಂತರ 'ಸ್ಯ' ಪ್ರತ್ಯಯವು ಬಂದಿದೆ. ಮತ್ತು ಆರ್ಧಧಾತುಕವಾಗಿರೋಣದರಿಂದ 'ತಾಸ್' ಗೆ ಆದ್ಯವಯವಾಗಿ ಇಡಾಗಮವು ಬಂದಿದೆ.

**(ಆಮ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ – 517.ಆಮೇತಃ (3.4.90)**

ವೃತ್ತಿಃ–ಲೋಟಃ ಏಕಾರಸ್ಯ ಆಮ್ ಸ್ಯಾತ್। ಏಧತಾಮ್। ಏಧೇತಾಮ್।ಏಧನ್ತಾಮ್।

ಪ. ಛೇ. – ಆಮ್, ಏತಃ।

ಅ. ವ್ಯ.– "ಲೋಟೋ ಲಙ್‌ವತ್" ಎಂಬ ಸೂತ್ರದಿಂದ 'ಲೋಟಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– 'ಲೋಟ್' 'ಲ್' ಕಾರದ 'ಏ' ಕಾರಕ್ಕೆ 'ಆಮ್' ಆದೇಶವು ಬರುತ್ತದೆ.

ಉದಾ– ಏಧತಾಮ್– ಪ್ರಥಮಪುರುಷ ಏಕವಚನದಲ್ಲಿ 'ಏಧ್' ಧಾತುವಿನ ನಂತರ 'ಲೋಟ್' 'ಲ್' ಕಾರ ಬಂದು ಅದಕ್ಕೆ ಮೂಲ ಆಖ್ಯಾತ ಪ್ರತ್ಯಯವಾದ 'ತ' ಆದೇಶವಾಗಿ ಬಂದು ಏಧ್+ತ ಎಂದಿರುತ್ತದೆ. ಇದು ಸಾರ್ವಧಾತುಕವಾಗಿ ಇರುವುದರಿಂದ ಧಾತುವಿನ ನಂತರ "ಕರ್ತರಿ ಶಪ್" ಎಂಬ ಸೂತ್ರದಿಂದ 'ಶಪ್(ಅ)' ಪ್ರತ್ಯಯವು ಬಂದು ಏಧ್+ಅ+ತ ಎಂದಿರುತ್ತದೆ. 'ತ' ನಲ್ಲಿರುವ 'ಅ' ಕಾರವು 'ಟಿ' ಆಗಿರೋಣದರಿಂದ ಅದಕ್ಕೆ 'ಏತ್ವ' ಬಂದು ಏಧತೇ ಎಂದಾಗುತ್ತದೆ. ಪ್ರಕೃತ ಸೂತ್ರದಿಂದ 'ಏ' ಕಾರಕ್ಕೆ 'ಆಮ್' ಆದೇಶವು ಬಂದು ಏಧತ್+ಆಮ್=ಏಧತಾಮ್ ಎಂದು ರೂಪವಾಗುತ್ತದೆ.

ಉದಾ– ಏಧೇತಾಮ್– ಪ್ರಥಮಪುರುಷ ದ್ವಿವಚನದಲ್ಲಿ 'ಏಧ್' ಧಾತುವಿನಮೇಲೆ 'ಲೋಟ್' 'ಲ್' ಕಾರ ಬಂದು ಅದಕ್ಕೆ 'ಆತಾಮ್' ಆದೇಶ ಬಂದು ಏಧ್+ಆತಾಮ್ ಎಂದಿದ್ದಾಗ ಇದಕ್ಕೆ ಸಾರ್ವಧಾತುಕ ಸಂಜ್ಞೆ ಬಂದು "ಕರ್ತರಿ ಶಪ್" ಎಂಬ ಸೂತ್ರದಿಂದ ಧಾತುವಿನ ನಂತರ 'ಶಪ್(ಅ)' ವಿಕರಣ ಪ್ರತ್ಯಯ ಬಂದು ಏಧ್+ಅ+ಆತಾಮ್ ಎಂದಿರುತ್ತದೆ. "ಆತೋಙಿತಃ" ಎಂಬ ಸೂತ್ರದಿಂದ 'ಆತಾಮ್' ಎಂಬಲ್ಲಿರುವ 'ಆ' ಕಾರಕ್ಕೆ 'ಇಯ್' ಆದೇಶ ಬಂದು ಏಧ್+ಅ+ಇಯ್+ತಾಮ್ ಎಂದಿರುತ್ತದೆ "ಲೋಪೋವ್ಯೋರ್ವಲಿ" ಸೂತ್ರದಿಂದ 'ಯ್'ಕಾರಕ್ಕೆ ಲೋಪ ಬಂದು ಏಧ್+ಅ+ಇ+ ತಾಮ್ ಎಂದಿರುತ್ತದೆ. ಈಗ 'ಅ' ಕಾರ 'ಇ' ಕಾರಗಳಿಗೆ ಗುಣ ಬಂದು ಏಧ್+ಏ+ತಾಮ್= ಏಧೇತಾಮ್ ಎಂದಾಗುತ್ತದೆ. ಇದರಲ್ಲಿ 'ಆಮ್' ಎಂಬುದು 'ಟಿ' ಆಗಿರೋಣದರಿಂದ ಇದಕ್ಕೆ 'ಏತ್ವ' ಬಂದು, ಏಧೇತೇ ಎಂದು ರೂಪವಾಗುತ್ತದೆ. ಕೊನೆಯಲ್ಲಿ 'ಏ' ಕಾರಕ್ಕೆ ಪ್ರಕೃತ ಸೂತ್ರದಿಂದ ಪುನಃ 'ಆಮ್' ಆದೇಶವೇ ಬಂದು ಏಧೇತಾಮ್ ಎಂದಾಗುತ್ತದೆ.

ಉದಾ– ಏಧನ್ತಾಮ್ – ಪ್ರಥಮಪುರುಷ ಬಹುವಚನದಲ್ಲಿ 'ಏಧ್' ಧಾತುವಿನಮೇಲೆ 'ಲೋಟ್' 'ಲ್' ಕಾರ ಬಂದು ಅದಕ್ಕೆ 'ಝ' ಆದೇಶ ಬಂದು, ಅದಕ್ಕೆ "ಝೋಽನ್ತಃ" ಎಂಬ ಸೂತ್ರದಿಂದ (ಝ್+ ಅ) ನಲ್ಲಿಯ 'ಝ್' ಮಾತ್ರ ಕ್ಕೆ 'ಅನ್ತ್' ಆದೇಶ ಬಂದು ಏಧ್+ಅನ್ತ (ಅನ್ತ್+ಅ) ಎಂದಿರುತ್ತದೆ. ಇದು ಸಾರ್ವಧಾತುಕವಾಗಿರೋಣದರಿಂದ

ಹಿಂದಿನಂತೆಯೇ 'ಶಪ್(ಅ)' ಪ್ರತ್ಯಯ ಬಂದು ಏಧ್+ಅ+ಅನ್ತ ಎಂದಿರುತ್ತದೆ. ಇದರಲ್ಲಿಯ ಎರಡು 'ಅ' ಕಾರಗಳಿಗೆ "ಅತೋಗುಣೇ" ಎಂಬುದರಿಂದ ಪರರೂಪ ಬಂದು, ಏಧ್+ಅನ್ತ ಎಂದಿರುತ್ತದೆ. ಕೊನೆಯ 'ಅ' ಕಾರಕ್ಕೆ 'ಟಿ' ಸಂಜ್ಞೆ ಇರೋಣದರಿಂದ ಅದಕ್ಕೆ ಏತ್ವ ಬಂದು ಏಧನ್ತೇ ಎಂದಾಗುತ್ತದೆ. 'ತೇ' ನಲ್ಲಿರುವ 'ಏ' ಕಾರಕ್ಕೆ ಪ್ರಕೃತ ಸೂತ್ರದಿಂದ ಆಮ್ ಆದೇಶ ಬಂದು ಏಧನ್ತಾಮ್ ಎಂದು ರೂಪವಾಗುತ್ತದೆ.

**(ವ್ ಕಾರ ಮತ್ತು ಅಮ್ ಆದೇಶಗಳನ್ನು ವಿಧಿಸುವ ಸೂತ್ರ)**

**ಸೂತ್ರ – 518. ಸವಾಭ್ಯಾಂ ವಾಮೌ (3.4.91)**

ವೃತ್ತಿಃ–ಸ–ವಾಭ್ಯಾಂ ಪರಸ್ಯ ಲೋಟ್ ಏತಃ ಕ್ರಮಾತ್ ವ–ಆಮೌ ಸ್ತಃ। ಏಧಸ್ವ ಏಧೇಥಾಮ್। ಏಧಧ್ವಮ್।

ಅ. ವ್ಯ.– "ಲೋಟೋಲಙ್ವತ್" ಎಂಬ ಸೂತ್ರದಿಂದ 'ಲೋಟಃ' ಎಂಬ ಪದವೂ, "ಆಮೇತಃ" ಎಂಬ ಸೂತ್ರದಿಂದ 'ಏತಃ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ– 'ಸ್' ಮತ್ತು 'ವ್' ಗಳ ಪರದಲ್ಲಿರುವ 'ಲೋಟ್' 'ಲ್' ಕಾರದ 'ಏ' ಕಾರಗಳಿಗೆ ಕ್ರಮವಾಗಿ 'ವ' ಮತ್ತು 'ಅಮ್' ಆದೇಶಗಳು ಬರುತ್ತವೆ.

ಉದಾ– ಏಧಸ್ವ– ಮಧ್ಯಮಪುರುಷ ಏಕವಚನದಲ್ಲಿ 'ಏಧ್' ಧಾತುವಿನ ನಂತರ 'ಲೋಟ್' 'ಲ್' ಕಾರಕ್ಕೆ 'ಥಾಸ್' ಆದೇಶ ಬಂದಮೇಲೆ ಇದು ಸಾರ್ವಧಾತುಕವಾಗಿರೋಣದರಿಂದ ಧಾತುವಿನ ನಂತರ 'ಶಪ್(ಅ)' ವಿಕರಣ ಪ್ರತ್ಯಯ ಬಂದು ಏಧ್+ಅ+ಥಾಸ್ ಎಂದಿರುತ್ತದೆ. "ಥಾಸಃ ಸೇ" ಎಂಬ ಸೂತ್ರದಿಂದ 'ಥಾಸ್'

ಪ್ರತ್ಯಯಕ್ಕೆ 'ಸೇ' ಆದೇಶ ಬಂದನಂತರ 'ಸೇ' ನಲ್ಲಿರುವ 'ಸ್' ಕಾರದ ಪರದಲ್ಲಿರುವ 'ಏ' ಕಾರಕ್ಕೆ ಪ್ರಕೃತ ಸೂತ್ರದಿಂದ 'ವ' ಆದೇಶ ಬಂದು ಏಧ್+ಅ+ಸ್+ವ=ಏಧಸ್ವ ಎಂದು ರೂಪವಾಗುತ್ತದೆ.

ಉದಾ– ಏಧೇಥಾಮ್– ಮಧ್ಯಮಪುರುಷ ದ್ವಿವಚನದಲ್ಲಿ 'ಏಧ್' ಧಾತುವಿನ ನಂತರ 'ಲೋಟ್' 'ಲ್' ಕಾರಕ್ಕೆ 'ಆಥಾಮ್' ಆದೇಶ ಬಂದಮೇಲೆ ಇದು ಸಾರ್ವಧಾತುಕವಾಗಿ ಇರುವುದರಿಂದ ಧಾತುವಿನ ನಂತರ 'ಶಪ್(ಅ)' ವಿಕರಣ ಪ್ರತ್ಯಯ ಬಂದು ಏಧ್+ಅ+ಆಥಾಮ್ ಎಂದಿರುತ್ತದೆ. "ಆತೋಜಿತಃ" ಎಂಬ ಸೂತ್ರದಿಂದ 'ಆಥಾವನ್' ಎಂಬಲ್ಲಿರುವ 'ಆ' ಕಾರಕ್ಕೆ 'ಇಯ್' ಆದೇಶ ಬಂದು, ಏಧ್+ಅ+ಇಯ್+ಥಾಮ್ ಎಂದಿರುತ್ತದೆ. "ಲೋಪೋವ್ಯೋರ್ವಲಿ" ಎಂಬ ಸೂತ್ರದಿಂದ 'ಯ್' ಕಾರಕ್ಕೆ ಲೋಪ ಬಂದು ಏಧ್+ಅ+ಇ+ಥಾಮ್ ಎಂದಿದ್ದಾಗ, 'ಅ' ಕಾರ 'ಇ' ಕಾರಗಳಿಗೆ ಗುಣ ಬಂದು ಏಧ್+ಏ+ಥಾಮ್=ಏಧೇಥಾಮ್ ಎಂದಿದ್ದಾಗ , ಕೊನೆಯ 'ಆಮ್' ಇದು 'ಟಿ' ಆಗಿರೋಣದರಿಂದ ಅದಕ್ಕೆ ಏತ್ವ ಬಂದು ಏಧೇಥೇ ಎಂದು ರೂಪವಾದಮೇಲೆ 'ಥೇ' ನಲ್ಲಿರುವ 'ಏ' ಕಾರಕ್ಕೆ "ಆಮೇತಃ" ಎಂಬ ಸೂತ್ರದಿಂದ ಪುನಃ 'ಆಮ್' ಆದೇಶವೇ ಬಂದು ಏಧೇಥಾಮ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಏಧಧ್ವಮ್– ಮಧ್ಯಮಪುರುಷ ಬಹು ವಚನದಲ್ಲಿ 'ಏಧ್' ಧಾತುವಿನ ನಂತರ 'ಲೋಟ್' 'ಲ್' ಕಾರಕ್ಕೆ 'ಧ್ವಮ್' ಆದೇಶ ಬಂದಮೇಲೆ ಇದು ಸಾರ್ವಧಾತುಕವಾಗಿ ಇರುವುದರಿಂದ ಧಾತುವಿನ ನಂತರ 'ಶಪ್(ಅ)' ವಿಕರಣ ಪ್ರತ್ಯಯ ಬಂದು ಏಧ್+ಅ+ಧ್ವಮ್ ಎಂದಿರುತ್ತದೆ. 'ಧ್ವಮ್' ನಲ್ಲಿರುವ 'ಅಮ್' 'ಟಿ' ಸಂಜ್ಞೆ ಬರೋಣದರಿಂದ ಅದಕ್ಕೆ ಏತ್ವ ಬಂದು ಏಧ್+ಅ+ಧ್ವೇ ಎಂದಾಗುತ್ತದೆ 'ವ್' ಕಾರದ ನಂತರ ಇರುವ 'ಏ' ಕಾರಕ್ಕೆ "ಸವಾಭ್ಯಾಮ್ ವಾಮೌ" ಎಂಬ ಸೂತ್ರದಿಂದ 'ಅಮ್' ಆದೇಶ ಬರುತ್ತದೆ. ಆಗ ಏಧ್+ಅ+ಧ್ವಮ್=ಏಧಧ್ವಮ್ ಎಂದು ರೂಪವು ಸಿದ್ಧವಾಗುತ್ತದೆ.

**(ಐ ಕಾರವನ್ನು ಆದೇಶವಾಗಿ ವಿಧಿಸುವ ಸೂತ್ರ)**

**ಸೂತ್ರ – 519.ಏತ ಐ (3.4.93)**

ವೃತ್ತಿಃ–ಲೋಡುತ್ತಮಸ್ಯ ಏತಃ ಐ ಸ್ಯಾತ್। ಏಧೈ। ಏಧಾವಹೈ। ಏಧಾಮಹೈ। "(197) ಆಟಶ್ಚ"। ಐಧತ। ಐಧೇತಾಮ್। ಐಧನ್ತ। ಐಧಥಾಃ। ಐಧೇಥಾಮ್। ಐಧಧ್ವಮ್। ಐಧೇ। ಐಧಾವಹಿ। ಐಧಾಮಹಿ।

ಪ.ಛೇ – ಏತಃ, ಐ।

ಅ. ವ್ಯ.– "ಲೋಟೋಲಙ್ವತ್" ಎಂಬ ಸೂತ್ರದಿಂದ 'ಲೋಟಃ' ಎಂಬ ಪದವೂ ಹಾಗೂ "ಆಡುತಮಸ್ಯ ಪಿಚ್ಚ" ಎಂಬ ಸೂತ್ರದಿಂದ 'ಉತ್ತಮಸ್ಯ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ– 'ಲೋಟ್' 'ಲ್' ಕಾರದ ಉತ್ತಮಪುರುಷ ಪ್ರತ್ಯಯದ 'ಏ' ಕಾರಕ್ಕೆ 'ಐ' ಕಾರವು ಆದೇಶವಾಗಿ ಬರುತ್ತದೆ.

ಉದಾ – ಏಧ್ಯೈ- ಉತ್ತಮ ಪುರುಷ ಏಕವಚನದಲ್ಲಿ 'ಏಧ್' ಧಾತುವಿನ ನಂತರ 'ಲೋಟ್' 'ಲ್' ಕಾರ ಬಂದು ಅದಕ್ಕೆ "ಲೋಟೋಲಙ್ವತ್" ಎಂಬುದರಿಂದ 'ಇ' ಆದೇಶ ಬಂದು, ಏಧ್+ಇ ಎಂದಿರುತ್ತದೆ. 'ಇ' ಕಾರಕ್ಕೆ 'ಟಿ' ಸಂಜ್ಞೆ ಬಂದು ಅದಕ್ಕೆ "ಟಿತ ಆತ್ಮನೇಪದಾನಾಂ ಟೇರೇ" ಎಂಬ ಸೂತ್ರದಿಂದ ಏತ್ವ(ಏ) ಬಂದು ಏಧ್+ಏ ಎಂದಿದ್ದಾಗ, ಇದು ಸಾರ್ವಧಾತುಕ ವಾಗಿರೋಣದ್ದರಿಂದ "ಕರ್ತರಿ ಶಪ್" ಎಂಬ ಸೂತ್ರದಿಂದ 'ಶಪ್(ಅ)' ವಿಕರಣಪ್ರತ್ಯಯ ಬಂದು ಏಧ್+ಅ+ಏ ಎಂದಿದ್ದಾಗ, ಪ್ರಕೃತಸೂತ್ರದಿಂದ ಪ್ರತ್ಯಯದ 'ಏ' ಕಾರಕ್ಕೆ 'ಐ' ಕಾರ ಆದೇಶವಾಗಿ ಬಂದು ಏಧ್+ಅ+ಐ ಎಂದಿರುತ್ತದೆ. ಈಗ "ಆಡುತ್ತಮಸ್ಯ ಪಿಚ್ಚ" ಎಂಬುದರಿಂದ ಆಖ್ಯಾತ ಪ್ರತ್ಯಯಕ್ಕೆ 'ಆಟ್' ಎಂಬುದು ಆದ್ಯವಯವಾಗಿ ಬಂದು ಏಧ+ಆ+ಐ ಎಂದಿದ್ದಾಗ, 'ಆ' ಕಾರ 'ಐ' ಕಾರಗಳಿಗೆ "ಆಟಶ್ಚ" ಎಂಬುದರಿಂದ ವೃದ್ಧಿ ಬಂದು ಏಧ್+ಐ=ಏಧ್ಯೈ ಎಂದು ರೂಪವಾಗುತ್ತದೆ.

ಉದಾ- ಏಧಾವಹೈ, ಏಧಾಮಹೈ- ಉತ್ತಮಪುರುಷ ದ್ವಿವಚನ, ಬಹುವಚನಗಳಲ್ಲಿ ಏಧ್ ಧಾತುವಿನ ನಂತರ 'ವಹಿ' ಮತ್ತು 'ಮಹಿ' ಪ್ರತ್ಯಯಗಳನ್ನು ಸೇರಿಸಿ, ಧಾತುವಿನ ನಂತರ 'ಶಪ್(ಅ)' ವಿಕರಣ ಪ್ರತ್ಯಯವು ಬಂದು, ಏಧ್+ಅ+ವಹಿ, ಮತ್ತು ಏಧ್+ಅ+ಮಹಿ ಎಂದಿದ್ದಾಗ, "ಅತೋದೀರ್ಘೋಯಞಿ" ಎಂಬ ಸೂತ್ರದಿಂದ ಹ್ರಸ್ವ 'ಅ' ಕಾರಕ್ಕೆ ದೀರ್ಘ ಬಂದು, ಹಾಗೆಯೇ ವಹಿ , ಮಹಿ ಗಳಲ್ಲಿರುವ 'ಇ' ಕಾರ (ಟಿ) ಗೆ ಏತ್ವ ಬಂದು ಏಧ್+ಆ+ವಹೇ ಮತ್ತು ಏಧ್+ಆ+ಮಹೇ ಎಂದಿದ್ದಾಗ, ಪ್ರಕೃತ ಸೂತ್ರದಿಂದ ಅಂತ್ಯ 'ಏ' ಕಾರಕ್ಕೆ 'ಐ' ಕಾರ ಬಂದು ಏಧಾವಹೈ ಮತ್ತು ಏಧಾಮಹೈ ಎಂದು ರೂಪಗಳು ಸಿದ್ಧವಾಗುತ್ತವೆ.

ರೂಪಗಳು: ಏಧತಾಮ್, ಏಧೇತಾಮ್, ಏಧನ್ತಾಮ್। ಏಧಸ್ವ, ಏಧೇಥಾಮ್, ಏಧಧ್ವಮ್। ಏಧ್ಯೈ, ಏಧಾವಹೈ, ಏಧಾಮಹೈ।

**ಲಙ್**: ಉದಾ- ಐಧತ- ಪ್ರಥಮಪುರುಶ ಏಕವಚನದಲ್ಲಿ ಏಧ್ ಧಾತುವಿನ ನಂತರ 'ಲಙ್' 'ಲ್' ಕಾರ ಬಂದು ಅದಕ್ಕೆ 'ತ' ಆದೇಶ ಬಂದು ಏಧ್+ತ ಎಂದಿರುತ್ತದೆ. "ಲಙ್-ಲುಙ್-ಲೃಙ್ಕ್ಷ್ವಡುದಾತ್ತಃ" ಎಂಬ ಸೂತ್ರವನ್ನು ಬಾಧಿಸಿ, ಅಜಾದಿಯಾದ 'ಏಧ್' ಧಾತುವಿಗೆ "ಆಡಜಾದೀನಾಮ್" ಎಂಬ ಸೂತ್ರದಿಂದ ಧಾತುವಿಗೆ ಆದ್ಯವಯಾವವಾಗಿ 'ಆಟ್(ಆ)' ಆಗಮ ಬಂದು ಆ+ಏಧ್+ತ ಎಂದಿರುತ್ತದೆ. ಇದು ಸಾರ್ವಧಾತುಕವಾಗಿರೋಣದರಿಂದ, ಧಾತುವಿನ ಪರದಲ್ಲಿ 'ಶಪ್(ಅ)' ವಿಕರಣಪ್ರತ್ಯಯ ಬಂದು ಆ+ಏಧ್+ಅ+ತ ಎಂದಿರುತ್ತದೆ. "ಆಟಶ್ಚ" ಎಂಬ ಸೂತ್ರದಿಂದ 'ಆ' 'ಏ' ಗಳಿಗೆ ವೃದ್ಧಿ ಬಂದು, ಐಧ್+ಅ+ತ=ಐಧತ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ- ಐಧೇತಾಮ್- ಪ್ರಥಮಪುರುಷ ದ್ವಿವಚನದಲ್ಲಿ ಏಧ್ ಧಾತುವಿನ ನಂತರ 'ಲಙ್' 'ಲ್' ಕಾರ ಬಂದು ಅದಕ್ಕೆ 'ಆತಾಮ್' ಆದೇಶ ಬಂದು ಏಧ್+ಆತಾಮ್ ಎಂದಿರುತ್ತದೆ. ಇದು ಸಾರ್ವಧಾತುಕವಾಗಿರೋಣದರಿಂದ, ಧಾತುವಿನ ಪರದಲ್ಲಿ 'ಶಪ್(ಅ)' ವಿಕರಣಪ್ರತ್ಯಯ ಬಂದು ಏಧ್+ಅ+ಆತಾಮ್ ಎಂದಿರುತ್ತದೆ. "ಆತೋಙಿತಃ"

ಎಂಬಸೂತ್ರದಿಂದ 'ಆತಾಮ್' ನಲ್ಲಿರುವ 'ಆ' ಕಾರಕ್ಕೆ 'ಇಯ್' ಆದೇಶವಾಗಿ ಬಂದು "ಲೋಪೋವ್ಯೋರ್ವಲಿ" ಎಂಬ ಸೂತ್ರದಿಂದ 'ಯ್' ಕಾರ ಲೋಪವಾಗಿ ಏಧ+ಇ+ತಾಮ್ ಎಂದಿರುತ್ತದೆ. "ಲಜ್-ಲುಙ್-ಲೃಙ್ಕ್ಷ್ವಡುದಾತ್ತಃ" ಎಂಬ ಸೂತ್ರವನ್ನು ಬಾಧಿಸಿ, ಅಜಾದಿಯಾದ 'ಏಧ್' ಧಾತುವಿಗೆ "ಆಡಜಾದೀನಾಮ್" ಎಂಬ ಸೂತ್ರದಿಂದ ಧಾತುವಿಗೆ ಆದ್ಯವಯವವಾಗಿ 'ಆಟ್(ಆ)' ಆಗಮ ಬಂದು, ಆ+ಏಧ+ಇ+ತಾಮ್=ಐಧೇತಾಮ್ ಎಂದು ರೂಪವಾಗುತ್ತದೆ.

ಉದಾ- ಐಧನ್ತ - ಪ್ರಥಮಪುರುಷ ಬಹುವಚನದಲ್ಲಿ ಏಧ್ ಧಾತುವಿನ ನಂತರ ಮೂಲ ಆಖ್ಯಾತ ಪ್ರತ್ಯಯವಾದ 'ಝ್(ಝ್+ಅ) ಪ್ರತ್ಯಯ ಬಂದು, ಏಧ್+ಝ್ (ಝ್+ಅ) ಎಂದಿದ್ದಾಗ, 'ಝ್' ಗೆ ಮಾತ್ರ 'ಅನ್ತ್' ಆದೇಶ ಬಂದು ಉಳಿದ ಪ್ರಕ್ರಿಯೆಗಳೆಲ್ಲ ಹಿಂದಿನಂತೆಯೇ ನಡೆದು ಐಧ+ಅನ್ತ ಎಂದಿದ್ದಾಗ, "ಅತೋಗುಣೇ" ಎಂಬುದರಿಂದ ಪರರೂಪ ಬಂದು ಐಧನ್ತ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ- ಐಧಥಾಃ - ಮಧ್ಯಮಪುರುಷ ಏಕವಚನದಲ್ಲಿ ಏಧ್ ಧಾತುವಿನ ನಂತರ ಮೂಲ ಆಖ್ಯಾತ ಪ್ರತ್ಯಯವಾದ 'ಥಾಸ್' ಪ್ರತ್ಯಯ ಬಂದು, ಏಧ್+ಥಾಸ್ ಎಂದಿದ್ದಾಗ, ಹಿಂದಿನಂತೆಯೇ ಪ್ರಕ್ರಿಯೆ ನಡೆದು ಐಧಥಾಸ್ ಎಂದಾಗಿ ರುತ್ವ-ವಿಸರ್ಗಗಳಿಂದ ಐಧಥಾಃ ಎಂದು ರೂಪವಾಗುತ್ತದೆ.

ಉದಾ- ಐಧೇಥಾಮ್- ಮಧ್ಯಮಪುರುಷ ದ್ವಿವಚನದಲ್ಲಿ ಏಧ್ ಧಾತುವಿನ ನಂತರ ಮೂಲ ಆಖ್ಯಾತ ಪ್ರತ್ಯಯವಾದ 'ಇಥಾಮ್' ಪ್ರತ್ಯಯ ಬಂದು, ಪ್ರಕ್ರಿಯೆ ಹಿಂದಿನಂತೆಯೇ ನಡೆದು ಐಧ+ಇಥಾಮ್ ಎಂದಿದ್ದಾಗ, ಗುಣ ಬಂದು ಐಧೇಥಾಮ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ- ಐಧಧ್ವಮ್- ಮಧ್ಯಮಪುರುಷ ಬಹುವಚನದಲ್ಲಿ ಏಧ್ ಧಾತುವಿನ ನಂತರ ಮೂಲ ಆಖ್ಯಾತ ಪ್ರತ್ಯಯವಾದ 'ಧ್ವಮ್' ಪ್ರತ್ಯಯ ಬಂದು, ಪ್ರಕ್ರಿಯೆ ಹಿಂದಿನಂತೆಯೇ ನಡೆದು ಐಧ+ಧ್ವಮ್=ಐಧಧ್ವಮ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ- ಐಧೇ, ಐಧಾವಹಿ, ಐಧಾಮಹಿ- ಉತ್ತಮಪುರುಷದ ಮೂರೂ ವಚನಗಳಲ್ಲಿ ಕ್ರಮವಾಗಿ 'ಇ' 'ವಹಿ' ಮಹಿ(ಮಹಿಙ್) ಪ್ರತ್ಯಯಗಳನ್ನು ಸೇರಿಸಿದಾಗ, ಹಿಂದಿನಂತೆಯೇ ಪ್ರಕ್ರಿಯೆ ನಡೆದು ಏಕವಚನದಲ್ಲಿ ಐಧೇ ಎಂದೂ ದ್ವಿವಚನ, ಬಹುವಚನಗಳಲ್ಲಿ 'ವ್' ಕಾರ 'ಮ್' ಕಾರಗಳ ಪೂರ್ವದಲ್ಲಿರುವ ಹ್ರಸ್ವ 'ಅ' ಕಾರಕ್ಕೆ "ಅತೋದೀರ್ಘೋಯಞಿ" ಎಂಬುದರಿಂದ ದೀರ್ಘ ಬಂದು ಐಧಾವಹಿ, ಐಧಾಮಹಿ ಎಂಬ ರೂಪಗಳು ಸಿದ್ಧವಾಗುತ್ತವೆ. ರೂಪಗಳು: ಐಧತ, ಐಧೇತಾಮ್, ಐಧನ್ತ। ಐಧಥಾಃ, ಐಧೇತಾಮ್, ಐಧಧ್ವಮ್। ಐಧೇ, ಐಧಾವಹಿ, ಐಧಾಮಹಿ।

**(ಸೀಯುಟ್ ಆಗಮವನ್ನು ವಿಧಿಸುವ ಸೂತ್ರ)**

**ಸೂತ್ರ - 520.ಲಿಙಃ ಸೀಯುಟ್ (3.4.102)**

ವೃತ್ತಿಃ-ಸಲೋಪಃ। ಏಧೇತ। ಏಧೇಯಾತಾಮ್। (ಇಲ್ಲಿ 'ಸ್' ಲೋಪವು

"ಸಲೋಪೋಽನನ್ತ್ಯಸ್ಯ" ಎಂಬ ಸೂತ್ರದಿಂದ ಆಗುತ್ತದೆ).

ಅರ್ಥ- 'ಲಿಙ್' 'ಲ್' ಕಾರಕ್ಕೆ 'ಸೀಯುಟ್(ಸೀಯ್)' ಆಗಮವು ಬರುತ್ತದೆ.

ಇದರಲ್ಲಿ 'ಸೀಯ್' ಮಾತ್ರ ಉಳಿಯುತ್ತದೆ. ಇದು 'ಟಿತ್' ಆಗಿರೋಣದರಿಂದ ಆಖ್ಯಾತ ಪ್ರತ್ಯಯಕ್ಕೆ ಆದ್ಯವಯವವಾಗಿ ಬರುತ್ತದೆ.

ಉದಾ- ಏಧೇತ - ಪ್ರಥಮಪುರುಷ ಏಕವಚನದಲ್ಲಿ 'ಏಧ್' ಧಾತುವಿನನಂತರ 'ಲಿಙ್' 'ಲ್' ಕಾರವು ಬಂದು ಅದಕ್ಕೆ 'ತ' ಆದೇಶ ಬಂದಮೇಲೆ ಧಾತುವಿನ ನಂತರ 'ಶಪ್(ಅ)' ಬಂದು, ಏಧ್+ಅ+ತ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ಆಖ್ಯಾತ ಪ್ರತ್ಯಯಕ್ಕೆ ಆದ್ಯವಯವವಾಗಿ 'ಸೀಯುಟ್(ಸೀಯ್)'ಆಗಮ ಬಂದು ಏಧ್+ಅ+ಸೀಯ್+ತ ಎಂದಿರುತ್ತದೆ. "ಲಿಙಃ ಸಲೋಪೋಽನನ್ತ್ಯಸ್ಯ" ಎಂಬ ಸೂತ್ರದಿಂದ 'ಸೀಯ್' ನಲ್ಲಿರುವ 'ಸ್' ಕಾರಕ್ಕೆ ಲೋಪ ಬಂದು ಏಧ್+ಅ+ಈಯ್+ತ ಎಂದಿರುತ್ತದೆ. "ಲೋಪೋವ್ಯೋರ್ವಲಿ" ಎಂಬ ಸೂತ್ರದಿಂದ 'ಯ್' ಕಾರಕ್ಕೆ ಲೋಪ ಬಂದು ಏಧ್+ಈ+ತ ಎಂದಿರುತ್ತದೆ. 'ಅ' ಕಾರ 'ಈ'ಕಾರಗಳಿಗೆ ಗುಣ ಬಂದು ಏಧೇತ ಎಂದು ರೂಪವು ಸಿದ್ಧವಾಗುತ್ತದೆ.

ಉದಾ- ಏಧೇಯಾತಾಮ್- ಪ್ರಥಮಪುರುಷ ದ್ವಿವಚನದಲ್ಲಿ ಏಧ್+ಅ+ಈಯ್ ವರೆಗೂ ಹಿಂದಿನಂತೆಯೇ ಪ್ರಕ್ರಿಯೆ ನಡೆದು 'ಆತಾಮ್' ಪ್ರತ್ಯಯವನ್ನು ಸೇರಿಸಿದಾಗ ಏಧ್+ಅ+ಈಯ್+ಆತಾಮ್ ಎಂದಿರುತ್ತದೆ. 'ಅ' ಕಾರ 'ಈ' ಕಾರಗಳಿಗೆ ಗುಣ ಬಂದು ಏಧೇಯ್+ಆತಾಮ್=ಏಧೇಯಾತಾಮ್ ಎಂದು ರೂಪವು ಸಿದ್ಧವಾಗುತ್ತದೆ.

**('ಝ' ಗೆ ರನ್-ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ - 521.ಝಸ್ಯ ರನ್ (3.4.105)**

ವೃತ್ತಿಃ-ಲಿಙೋ ಝಸ್ಯ ರನ್ ಸ್ಯಾತ್। ಏಧೇರನ್। ಏಧೇಥಾಃ। ಏಧೇಯಾಥಾಮ್। ಏಧೇಧ್ವಮ್।

ಅ.ವೃ-"ಲಿಙಃ ಸೀಯುಟ್"ಎಂಬ ಸೂತ್ರದಿಂದ 'ಲಿಙಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- 'ಲಿಙ್' 'ಲ್' ಕಾರಕ್ಕೆ ಆದೇಶವಾಗಿ ಬರುವ ಮೂಲ ಆಖ್ಯಾತ ಪ್ರತ್ಯಯವಾದ 'ಝ' ಕಾರಕ್ಕೆ 'ರನ್' ಎಂಬ ಅಭಿನವ ಆಖ್ಯಾತ ಪ್ರತ್ಯಯವು ಆದೇಶವಾಗಿ ಬರುತ್ತದೆ.

ಉದಾ- ಏಧೇರನ್ - ಪ್ರಥಮಪುರುಷ ಬಹುವಚನದಲ್ಲಿ 'ಏಧ್' ಧಾತುವಿನ ನಂತರ 'ವಿಧಿಲಿಙ್' ಗೆ 'ಝ' ಆದೇಶ ಬಂದು, "ಝೋಽನ್ತಃ" ಎಂಬ ಸೂತ್ರವನ್ನು ಬಾಧಿಸಿ ಪ್ರಕೃತ ಸೂತ್ರದಿಂದ ಆ 'ಝ' ಗೆ 'ರನ್' ಆದೇಶವು ಬಂದು ನಂತರ 'ಶಪ್(ಅ)' ಪ್ರತ್ಯಯ ಬಂದಮೇಲೆ ಏಧ್+ಅ+ರನ್ ಎಂದಿರುತ್ತದೆ. ಹಿಂದಿನಂತೆ 'ಸೀಯುಟ್(ಸೀಯ್)' ಆಗಮ ಬಂದು ಹಿಂದಿನಂತೆಯೇ 'ಸ್' ಕಾರ 'ಯ್' ಕಾರಗಳು ಲೋಪವಾಗಿ ಏಧೇರನ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಏಧೇಥಾಃ – ಮಧ್ಯಮಪುರುಷ ಏಕವಚನದಲ್ಲಿ 'ಏಧ್' ಧಾತುವಿನನಂತರ 'ವಿಧಿಲಿಙ್' 'ಲ್' ಕಾರ ಬಂದು ಅದಕ್ಕೆ 'ಥಾಸ್' ಆದೇಶ ಬಂದಮೇಲೆ, ಧಾತುವಿನ ನಂತರ 'ಶಪ್(ಅ)' ಪ್ರತ್ಯಯ ಬಂದು, ಏಧ್+ಅ+ಥಾಸ್ ಎಂದಿದ್ದಾಗ, ಅದಕ್ಕೆ ಹಿಂದಿನಂತೆಯೇ 'ಸೀಯುಟ್(ಸೀಯ್)' ಆಗಮ ಬಂದು, ನಂತರ ಹಿಂದಿನಂತೆಯೇ 'ಸ್' ಕಾರ 'ಯ್' ಕಾರಗಳು ಲೋಪವಾಗಿ ಏಧ್+ಅ+ಈ+ಥಾಸ್ ಎಂದಿದ್ದಾಗ, 'ಅ' ಕಾರ 'ಈ' ಕಾರಗಳಿಗೆ ಗುಣ ಬಂದಮೇಲೆ ಕೊನೆಯ 'ಸ್' ಕಾರಕ್ಕೆ ರುತ್ವ–ವಿಸರ್ಗಗಳು ಬಂದು ಏಧೇಥಾಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಏಧೇಯಾಥಾಮ್– ಮಧ್ಯಮಪುರುಷ ದ್ವಿವಚನದಲ್ಲಿ 'ಏಧ್' ಧಾತುವಿನ ನಂತರ 'ವಿಧಿಲಿಙ್' 'ಲ್' ಕಾರ ಬಂದು ಅದಕ್ಕೆ 'ಆಥಾಮ್' ಆದೇಶ ಬಂದಮೇಲೆ, ಧಾತುವಿನ ನಂತರ 'ಶಪ್(ಅ)' ಪ್ರತ್ಯಯ ಬಂದು, ಏಧ್+ಅ+ಆಥಾಮ್ ಎಂದಿದ್ದಾಗ, ಅದಕ್ಕೆ ಹಿಂದಿನಂತೆಯೇ 'ಸೀಯುಟ್(ಸೀಯ್)' ಆಗಮ ಬಂದು, ನಂತರ ಹಿಂದಿನಂತೆಯೇ 'ಸ್' ಕಾರ ಲೋಪವಾಗಿ ಏಧ್+ಅ+ಈಯ್+ಆಥಾಮ್ ಎಂದಿದ್ದಾಗ, 'ಅ' ಕಾರ 'ಈ' ಕಾರಗಳಿಗೆ ಗುಣ ಬಂದು ಏಧ+ಏಯ್+ಆಥಾಮ್=ಏಧೇಯಾಥಾಮ್ ಎಂದು ರೂಪವಾಗುತ್ತದೆ.

ಉದಾ – ಏಧೇಧ್ವಮ್– ಮಧ್ಯಮಪುರುಷ ಬಹುವಚನದಲ್ಲಿ 'ಏಧ್' ಧಾತುವಿನ ನಂತರ 'ವಿಧಿಲಿಙ್' 'ಲ್' ಕಾರ ಬಂದು ಅದಕ್ಕೆ 'ಧ್ವಮ್' ಆದೇಶ ಬಂದಮೇಲೆ, ಧಾತುವಿನ ನಂತರ 'ಶಪ್(ಅ)' ಪ್ರತ್ಯಯ ಬಂದು, ಏಧ್+ಅ+ಧ್ವಮ್ ಎಂದಿದ್ದಾಗ, ಅದಕ್ಕೆ ಹಿಂದಿನಂತೆಯೇ 'ಸೀಯುಟ್(ಸೀಯ್)' ಆಗಮ ಬಂದು, ನಂತರ ಹಿಂದಿನಂತೆಯೇ 'ಸ್' ಕಾರ ಲೋಪವಾಗಿ ಏಧ್+ಅ+ಈಯ್+ಧ್ವಮ್ ಎಂದಿದ್ದಾಗ, 'ಅ' ಕಾರ 'ಈ' ಕಾರಗಳಿಗೆ ಗುಣ ಬಂದು ಏಧ+ಏಯ್+ಧ್ವಮ್ಎಂದಿದ್ದಾಗ "ಲೋಪೋವ್ಯೋರ್ವಲಿ" ಎಂಬ ಸೂತ್ರದಿಂದ 'ಯ್' ಕಾರಕ್ಕೆ ಲೋಪ ಬಂದು ಏಧೇಧ್ವಮ್ ಎಂದು ರೂಪವಾಗುತ್ತದೆ.

**(ಅತ್(ಹ್ರಸ್ವ ಅ–ಕಾರ) ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ – 522.ಇಟೋಽತ್ (3.4.106)**

ವೃತ್ತಿಃ–ಲಿಙಾದೇಶಸ್ಯ ಇಟಃ ಅತ್ ಸ್ಯಾತ್। ಏಧೇಯ। ಏಧೇವಹಿ। ಏಹೇಮಹಿ।

ಪ. ಛೇ. – ಇಟಃ, ಅತ್।

ಅ. ವ್ಯ.– "ಲಿಙಃಸೀಯುಟ್" ಎಂಬ ಸೂತ್ರದಿಂದ 'ಲಿಙಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– 'ವಿಧಿಲಿಙ್' ಗೆ ಆದೇಶವಾಗಿ ಬರುವ 'ಇಟ್' ಗೆ 'ಅತ್(ಅ)' ಆದೇಶವಾಗಿ ಬರುತ್ತದೆ.

ಉದಾ– ಏಧೇಯ– ಉತ್ತಮಪುರುಷ ಏಕವಚನದಲ್ಲಿ 'ಏಧ್' ಧಾತುವಿನ ನಂತರ 'ಲಿಙ್' 'ಲ್' ಕಾರಕ್ಕೆ 'ಇಟ್(ಇ)' ಆದೇಶವಾಗಿ ಬಂದು, ಏಧ್+ಇ ಎಂದಿದ್ದಾಗ,

ಧಾತುವಿನ ನಂತರ 'ಶಪ್(ಅ)' ವಿಕರಣ ಪ್ರತ್ಯಯವು ಬಂದು ನಂತರ 'ಸೀಯುಟ್(ಸೀಯ್)' ಆಗಮ ಬರುತ್ತದೆ. ಏಧ್+ಅ+ಸೀಯ್+ಇ ಎಂದಿರುತ್ತದೆ. ಹಿಂದಿನಂತೆಯೇ 'ಸ್' ಕಾರಕ್ಕೆ ಲೋಪ ಬಂದು ಏಧ್+ಅ+ಈಯ್+ಇ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ಕೊನೆಯ 'ಇ' ಕಾರಕ್ಕೆ ಹ್ರಸ್ವ 'ಅ' ಕಾರವು ಆದೇಶವಾಗಿ ಬಂದು ಏಧ್+ಅ+ಈಯ್+ಅ ಎಂದಿದ್ದಾಗ 'ಅ' ಕಾರ 'ಈ' ಕಾರಗಳಿಗೆ ಗುಣ ಬಂದು, ಏಧೇಯ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಏಧೇವಹಿ, ಏಧೇಮಹಿ – ಉತ್ತಮಪುರುಷ ಬಹುವಚನದಲ್ಲಿ ಏಧ್ ಧಾತುವಿನ ನಂತರ 'ಲಿಙ್' 'ಲ್' ಕಾರ ಬಂದು ಅದಕ್ಕೆ ವಹಿ, ಮಹಿಙ್(ಮಹಿ) ಪ್ರತ್ಯಯಗಳನ್ನು ಸೇರಿಸಿದಾಗ, ಕ್ರಮವಾಗಿ ಏಧ್+ವಹಿ ಮತ್ತು ಏಧ್+ಮಹಿ ಎಂದಿದ್ದಾಗ, ಹಿಂದಿನಂತೆಯೇ 'ಶಪ್(ಅ)' ವಿಕರಣ ಪ್ರತ್ಯಯ, ಹಾಗೂ 'ಸೀಯುಟ್(ಸೀಯ್)'ಆಗಮ ಬಂದು ಕ್ರಮವಾಗಿ ಏಧ್+ಅ+ಸೀಯ್+ವಹಿ, ಮತ್ತು ಏಧ್+ಅ+ಸೀಯ್+ಮಹಿ ಎಂದಿದ್ದಾಗ, ಹಿಂದಿನಂತೆಯೇ 'ಸ್' 'ಯ್' ಗಳು ಲೋಪವಾಗಿ ಏಧ್+ಅ+ಈ+ವಹಿ, ಮತ್ತು ಏಧ್+ಅ+ಈ+ಮಹಿ ಎಂದಿದ್ದಾಗ, 'ಅ' ಕಾರ ' ಈ' ಕಾರಗಳಿಗೆ ಗುಣ ಬಂದು ಏಧೇವಹಿ ಮತ್ತು ಏಧೇಮಹಿ ಎಂಬ ರೂಪಗಳು ಸಿದ್ಧವಾಗುತ್ತವೆ.

ರೂಪಗಳು: ಏಧೇತ, ಏಧೇಯಾತಾಮ್, ಏಧೇರನ್। ಏಧೇಥಾಃ, ಏಧೇಯಾಥಾಮ್, ಏಧೇಧ್ವಮ್। ಏಧೇಯ, ಏಧೇವಹಿ, ಏಧೇಮಹಿ।

### (ಸುಟ್ ಆಗಮವನ್ನು ವಿಧಿಸುವ ಸೂತ್ರ)

**ಸೂತ್ರ – 523.ಸುಟ್ ತಿಥೋಃ (3.4.107)**

ವೃತ್ತಿಃ–ಲಿಙಃ ತಿಥೋಃ ಸುಟ್। 0ಯಲೋಪಃ। ಆರ್ಧಧಾತುಕತ್ವಾತ್ ಸಲೋಪೋ ನ। ಏಧಿಷೀಷ್ಟ ಏಧಿಷೀ0ಯಾಸ್ತಾಮ್। ಏಧಿಷೀರನ್। ಏಧಿಷೀಷ್ಠಾಃ। ಏಧಿಷೀ0ಯಾಸ್ಥಾಮ್। ಏಧಿಷೀಧ್ವಮ್। ಏಧಿಷೀ0ಯ। ಏಧಿಷೀವಹಿ। ಏಧಿಷೀಮಹಿ। ಏಧಿಷ್ಟ ಏಧಿಷಾತಾಮ್।

ಅ. ವೃ.– "ಲಿಙಃ ಸೀಯುಟ್" ಎಂಬ ಸೂತ್ರದಿಂದ 'ಲಿಙಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– 'ಲಿಙ್' 'ಲ್' ಕಾರದ 'ತ' ಮತ್ತು 'ಥ' ಆದೇಶಗಳಿಗೆ 'ಸುಟ್(ಸ್)' ಆಗಮವು ಆದ್ಯವಯವವಾಗಿ ಬರುತ್ತದೆ.

**ಆಶೀರ್ಲಿಙ್**: ಉದಾ– ಏಧಿಷೀಷ್ಟ – ಪ್ರಥಮಪುರುಷ ಏಕವಚನದಲ್ಲಿ 'ಏಧ್' ಧಾತುವಿನ ನಂತರ 'ಆಶೀರ್ಲಿಙ್' 'ಲ್' ಕಾರ ಬಂದು ಅದಕ್ಕೆ 'ತ' ಆದೇಶ ಬಂದು, "ಲಿಙಾಶಿಷೀ" ಎಂಬುದರಿಂದ ಆರ್ಧಧಾತುಕವಾಗಿ "ಲಿಙಃ ಸೀಯುಟ್" ಎಂಬ ಸೂತ್ರದಿಂದ 'ಸೀಯುಟ್(ಸೀಯ್)' ಆಗಮ ಬಂದು ಏಧ್+ಸೀಯ್+ತ ಎಂದಿರುತ್ತದೆ. "ಆರ್ಧಧಾತುಕಸ್ಯೇಡ್ವಲಾದೇಃ" ಎಂಬ ಸೂತ್ರದಿಂದ 'ಸೀಯ್' ಗೆ

ಆದ್ಯವಯವವಾಗಿ 'ಇಟ್(ಇ)' ಆಗಮ ಬಂದು, ಏಧ್+ಇ+ಸೀಯ್+ತ ಎಂದಿರುತ್ತದೆ. ಪ್ರಕೃತ ಸೂತ್ರದಿಂದ 'ತ' ಎಂಬ ಆಖ್ಯಾತ ಪ್ರತ್ಯಯಕ್ಕೆ 'ಸುಟ್(ಸ್)'

ಆಗಮ ಆದ್ಯವಯವವಾಗಿ ಬಂದು ಏಧ್+ಇ+ಸೀಯ್+ಸ್ತ ಎಂದಿರುತ್ತದೆ. ಹಿಂದಿನಂತೆಯೇ 'ಯ್' ಕಾರ ಲೋಪ ಬಂದು ಏಧ್+ಇ+ಸೀ+ಸ್ತ ಎಂದಿರುತ್ತದೆ. 'ಸೀ' ಮತ್ತು 'ಸ್ತ' ಎಂಬಲ್ಲಿರುವ 'ಸ್' ಕಾರಗಳಿಗೆ "ಆದೇಶಪ್ರತ್ಯಯಯೋಃ" ಎಂಬುದರಿಂದ ಷತ್ವ(ಷ್) ಬಂದು ನಂತರ 'ಷ್' ಕಾರದ ಪರದಲ್ಲಿರುವ 'ತ್' ಕಾರಕ್ಕೆ ಟುತ್ವ(ಟ್) ಆದೇಶವಾಗಿ ಬಂದು, ಏಧ್+ಇ+ಷೀ+ಷ್ಟ=ಏಧಿಷೀಷ್ಟ ಎಂಬ ರೂಪವು ಸಿದ್ಧವಾಗುತ್ತದೆ.

ಸೂಚನೆ: ಇದೇ ರೀತಿಯಲ್ಲಿ ಏಧಿಷೀ ವರೆಗೂ ರೂಪ ಸಿದ್ಧವಾದಮೇಲೆ ಹಿಂದಿನಂತೆಯೇ 'ಸುಟ್(ಸ್)' ಆಗಮ, 'ಸ್' ಕಾರಕ್ಕೆ ಷತ್ವ ಮತ್ತು 'ತ' 'ಥ' ಗಳಿಗೆ 'ಟುತ್ವ' ಮತ್ತು ಕೊನೆಯ 'ಇ' ಕಾರಕ್ಕೆ 'ಅ' ಕಾರಾದೇಶ ಇತ್ಯಾದಿಗಳು ಬಂದು ಏಧಿಷೀಢ್ವಮ್, ವರೆಗೂ ಕೆಳಗಿನಂತೆ ರೂಪಗಳು ಸಿದ್ಧವಾಗುತ್ತವೆ.

ರೂಪಗಳು: ಏಧಿಷೀಯಾಸ್ತಾಮ್, ಏಧಿಷೀರನ್। ಏಧಿಷೀಷ್ಠಾಃ। ಏಧಿಷೀಯಾಸ್ಥಾಮ್। ಏಧಿಷೀಢ್ವಮ್।

ಉದಾ – ಏಧಿಷೀಯ। ಏಧಿಷೀವಹಿ। ಏಧಿಷೀಮಹಿ। ಉತ್ತಮಪುರುಷದ ಮೂರೂ ವಚನಗಳಲ್ಲೂ 'ಏಧಿಷೀ' ವರೆಗೂ ರೂಪಸಿದ್ಧವಾದಮೇಲೆ 'ಈಯ್', 'ಈವಹಿ', 'ಈಮಹಿ' ಪ್ರತ್ಯಯಗಳ್ನು ಸೇರಿಸಿದಾಗ ಏಧಿಷೀಯ। ಏಧಿಷೀವಹಿ। ಏಧಿಷೀಮಹಿ। ಎಂದು ರೂಪಗಳು ಸಿದ್ಧವಾಗುತ್ತವೆ.

**ಲುಙ್**: ಉದಾ– ಐಧಿಷ್ಟ – ಪ್ರಥಮಪುರುಷ ಏಕವಚನದಲ್ಲಿ 'ಏಧ್' ಧಾತುವಿನ ನಂತರ 'ಲುಙ್' 'ಲ್' ಕಾರಕ್ಕೆ 'ತ' ಆಖ್ಯಾತ ಪ್ರತ್ಯಯವು ಆದೇಶವಾಗಿ ಬಂದು, ಧಾತುವಿಗೆ "ಆಡಜಾದೀನಾಮ್" ಎಂಬ ಸೂತ್ರದಿಂದ 'ಆಟ್(ಆ)' ಆಗಮ ಬಂದು, ಆ+ಏಧ್+ತ ಎಂದಿರುತ್ತದೆ. ಧಾತುವಿನ ನಂತರ 'ಚ್ಲಿ' ಪ್ರತ್ಯಯವು ಬಂದು ಅದಕ್ಕೆ 'ಸಿಚ್(ಸ್)' ಬಂದು, ಅದಕ್ಕೆ "ಆರ್ಧಧಾತುಕಸ್ಯೇಡ್ವಲಾದೇಃ" ಎಂಬುದರಿಂದ 'ಇಟ್' ಆಗಮ ಬಂದು ಐಧ್+ಇ+ಸ್+ತ ಎಂದಿದ್ದಾಗ, 'ಸ್' ಕಾರಕ್ಕೆ ಷತ್ವ ಬಂದು, ನಂತರ 'ತ್' ಕಾರಕ್ಕೆ ಟುತ್ವ(ಟ್) ಬಂದು ಐಧಿಷ್ಟ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಐಧಿಷಾತಾಮ್– ಪ್ರಥಮಪುರುಷ ದ್ವಿವಚನದಲ್ಲಿ'ಏಧ್' ಧಾತುವಿನ ನಂತರ 'ಲುಙ್' 'ಲ್' ಕಾರಕ್ಕೆ 'ಆತಾಮ್' ಆಖ್ಯಾತ ಪ್ರತ್ಯಯವು ಆದೇಶವಾಗಿ ಬಂದು, ಏಧ್+ಆತಾಮ್ ಎಂದಿದ್ದಾಗ, ಮೇಲಿನಂತೆಯೇ ಪ್ರಕ್ರಿಯೆ ನಡೆದು ಐಧಿಷಾತಾಮ್ ಎಂಬ ರೂಪವು ಸಿದ್ಧಿಸುತ್ತದೆ.

**('ಝ್' ಗೆ ಅತ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ – 524.ಆತ್ಮನೇಪದೇಷ್ವನತಃ (7.1.5)**

ವೃತ್ತಿಃ– ಅನಕಾರಾತ್ ಪರಸ್ಯ ಆತ್ಮನೇಪದೇಷು ಝಸ್ಯ ಅತ್ ಇತ್ಯಾದೇಶಃ ಸ್ಯಾತ್। ಐಧಿಷತ। ಐಧಿಷ್ಠಾಃ। ಐಧಿಷಾಥಾಮ್। ಐಧಿಢ್ವಮ್। ಐಧಿಷಿ। ಐಧಿಷ್ವಹಿ। ಐಧಿಷ್ಮಹಿ। ಐಧಿಷ್ಯತ। ಐಧಿಷ್ಯೇತಾಮ್। ಐಧಿಷ್ಯನ್ತ। ಐಧಿಷ್ಯಥಾಃ। ಐಧಿಷ್ಯೇಥಾಮ್। ಐಧಿಷ್ಯಧ್ವಮ್। ಐಧಿಷ್ಯೇ। ಐಧಿಷ್ಯಾವಹಿ। ಐಧಿಷ್ಯಾಮಹಿ। ಕಮು ಕಾಂತೌ।2।

ಪ. ಛೇ. – ಆತ್ಮನೇಪದೇಷು, ಅನ್ತಃ।

ಅ. ವೃ. – "ಝೋಽನ್ತಃ" ಎಂಬ ಸೂತ್ರದಿಂದ 'ಝಃ' ಎಂಬ ಪದವೂ ಹಾಗೆಯೇ "ಅದಭ್ಯಸ್ತಾತ್" ಎಂಬ ಸೂತ್ರದಿಂದ 'ಅತ್' ಎಂಬ ಪದವೂ ಅನುವೃತ್ತವಾಗುತ್ತದೆ.

ಅರ್ಥ– ಹ್ರಸ್ವ 'ಅ' ಕಾರಕ್ಕಿಂತ ಭಿನ್ನವಾದ ವರ್ಣಕ್ಕಿಂತ ಪರದಲ್ಲಿ ಇರುವ ಆತ್ಮನೇ ಪದದ 'ಝ್' ಕಾರಕ್ಕೆ 'ಅತ್' ಆದೇಶವಾಗಿ ಬರುತ್ತದೆ.

ಉದಾ– ಐಧಿಷತ – ಪ್ರಥಮಪುರುಷ ಬಹುವಚನದಲ್ಲಿ 'ಏಧ್' ಧಾತುವಿನ ನಂತರ ಇರುವ 'ಲುಙ್' 'ಲ್' ಕಾರಕ್ಕೆ ಮೂಲ ಆಖ್ಯಾತ ಪ್ರತ್ಯಯವಾದ 'ಝ್(ಝ್+ಅ)' ಬಂದು, ಪ್ರಕೃತ ಸೂತ್ರದಿಂದ 'ಝ್' ಗೆ 'ಅತ್' ಆದೇಶ ಬಂದು ಏಧ್+ಅತ್+ಅ ಎಂದಿರುತ್ತದೆ. ಹಿಂದಿನಂತೆ ಧಾತುವಿಗೆ 'ಆಟ್(ಆ)' ಆಗಮ ಬಂದಮೇಲೆ, ಧಾತುವಿನ ನಂತರ 'ಚ್ಲಿ' ಬಂದು, ಅದಕ್ಕೆ 'ಸಿಚ್(ಸ್)' ಆದೇಶ ಬಂದು, ವಲಾದಿಯಾದ 'ಸ್' ಕಾರಕ್ಕೆ 'ಇಟ್(ಇ)' ಆಗಮ ಬಂದು ಆ+ಏಧ್+ಇಸ್+ಅತ ಎಂದಿರುತ್ತದೆ. 'ಆ' ಕಾರ 'ಏ' ಕಾರಗಳಿಗೆ ವೃದ್ಧಿ ಬಂದು ನಂತರ 'ಸ್' ಕಾರಕ್ಕೆ 'ಷತ್ವ(ಷ)' ಬಂದು ಐಧಿಷತ ಎಂದು ರೂಪವು ಸಿದ್ಧವಾಗುತ್ತದೆ. ಇದೇ ರೀತಿಯಲ್ಲಿ 'ಆಟ್'(ಆ) ಆಗಮ 'ಚ್ಲಿ' ಅದಕ್ಕೆ 'ಸಿಚ್(ಸ್) ಆದೇಶ ಮತ್ತು ಆರ್ಧಧಾತುಕಸಂಜ್ಞೆಯಿಂದ 'ಇಟ್' ಆಗಮ, 'ಆ' ಕಾರ 'ಏ' ಕಾರಗಳಿಗೆ ವೃದ್ಧಿ ಮತ್ತು 'ಸ್' ಕಾರಕ್ಕೆ ಷತ್ವ(ಷ) ಗಳು ಆಗಿ ಕೆಳಗಿನ ರೂಪಗಳು ಸಿದ್ಧವಾಗುತ್ತವೆ.

ರೂಪಗಳು: ಐಧಿಷ್ಟ, ಐಧಿಷಾತಾಮ್, ಐಧಿಷತ। ಐಧಿಷ್ಠಾಃ, ಐಧಿಷಾಥಾಮ್, ಐಧಿಢ್ವಮ್। ಐಧಿಷಿ, ಐಧಿಷ್ವಹಿ, ಐಧಿಷ್ಮಹಿ।

**ಲೃಙ್:**

ಉದಾ: ಐಧಿಷ್ಯತ– ಪ್ರಥಮಪುರುಷದ ಏಕವಚನದಲ್ಲಿ 'ಏಧ್' ಧಾತುವಿನಮೇಲೆ 'ಲೃಙ್' 'ಲ್' ಕಾರವು ಬಂದು ಅದಕ್ಕೆ 'ತ' ಆದೇಶ ಬಂದು, ಅಜಾದಿಯಾದ 'ಏಧ್' ಧಾತುವಿಗೆ 'ಆಟ್'(ಆ)' ಆಗಮ ಬಂದು ಆ+ಏಧ್+ತ ಎಂದಿರುತ್ತದೆ. "ಸ್ಯತಾಸೀ ಲೃಲುಟೋಃ" ಎಂಬುದರಿಂದ ಧಾತುವಿನ ನಂತರ 'ಸ್ಯ' ಪ್ರತ್ಯಯ ಬಂದು "ಆರ್ಧಧಾತುಕಸ್ಯೇಡ್ವಲಾದೇಃ" ಎಂಬುದರಿಂದ ಅದಕ್ಕೆ 'ಇಟ್(ಇ)' ಆಗಮ ಬಂದು, ಆ+ಏಧ್+ಇ+ಸ್ಯ+ತ ಎಂದಿರುತ್ತದೆ. "ಆಟಶ್ಚ" ಎಂಬ ಸೂತ್ರದಿಂದ ವೃದ್ಧಿ ಬಂದು ಆ+ಏಧ್=ಐಧ್ ಎಂದಾಗುತ್ತದೆ. ಐಧ್+ಇ+ಸ್ಯ+ತ ಎಂದಿದ್ದಾಗ, "ಆದೇಶ ಪ್ರತ್ಯಯಯೋಃ" ಎಂಬುದರಿಂದ 'ಸ್' ಕಾರಕ್ಕೆ 'ಷತ್ವ(ಷ್)' ಬಂದು ಐಧಿಷ್ಯತ ಎಂಬ ರೂಪವು ಸಿದ್ಧವಾಗುತ್ತದೆ.

ಧಾತುವಿಗೆ 'ಲೃಙ್' 'ಲ್' ಕಾರದ ಉಳಿದ ಪ್ರತ್ಯಯಗಳನ್ನು ಸೇರಿಸಿದಾಗ, ರೂಪಗಳು ಕೆಳಗಿನಂತೆ ಸಿದ್ಧಿಸುತ್ತವೆ.

ರೂಪಗಳು: ಐಧಿಷ್ಯತ। ಐಧಿಷ್ಯೇತಾಮ್। ಐಧಿಷ್ಯನ್ತ। ಐಧಿಷ್ಯಥಾಃ। ಐಧಿಷ್ಯೇಥಾಮ್। ಐಧಿಷ್ಯಧ್ವಮ್। ಐಧಿಷ್ಯೇ। ಐಧಿಷ್ಯಾವಹಿ। ಐಧಿಷ್ಯಾಮಹಿ।

ಧಾತು 2. ಕಮು ಕಾಂತೌ (ಇಚ್ಛಿಸುವುದು)–ಇದರಲ್ಲಿ 'ಉ' ಕಾರ 'ಇತ್' ಆದ್ದರಿಂದ 'ಕಮ್' ಮಾತ್ರ ಉಳಿಯುತ್ತದೆ. ಸ್ವಾರ್ಥದಲ್ಲಿ ಧಾತುವಿನ ನಂತರ 'ಣಿಙ್(ಇ)' ಪ್ರತ್ಯಯ ಬರುತ್ತದೆ. "ಸನಾದ್ಯನ್ತಾ ಧಾತವಃ" ಎಂಬ ಸೂತ್ರದಿಂದ ಧಾತು ಸಂಜ್ಞೆ ಬರುತ್ತದೆ.

**(ಣಿಙ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ – 525.ಕಮೇರ್ಣಿಙ್ (3.1.30)**

ವೃತ್ತಿಃ–ಸ್ವಾರ್ಥೇ, ಙಿತ್ವಾತ್ ತಙ್। ಕಾಮಯತೇ।

ಪ. ಛೇ. – ಕಮೇಃ, ಣಿಙ್।

ಅರ್ಥ– 'ಕಮ್' ಧಾತುವಿನ ನಂತರ ಸ್ವಾರ್ಥದಲ್ಲಿ 'ಣಿಙ್(ಇ)' ಪ್ರತ್ಯಯ ಬರುತ್ತದೆ.

**ಲಟ್**: ಉದಾ– ಕಾಮಯತೇ– ಪ್ರಥಮಪುರುಷ ಏಕವಚನದಲ್ಲಿ 'ಕಮ್' ಧಾತುವಿನ ನಂತರ 'ಣಿಙ್(ಇ)' ಪ್ರತ್ಯಯ ಬಂದು, ಕಮ್+ಇ ಎಂದಿರುತ್ತದೆ. "ಅತ ಉಪಧಾಯಾಃ" ಎಂಬ ಸೂತ್ರದಿಂದ 'ಕಮ್' ನಲ್ಲಿರುವ ಉಪಧಾ 'ಅ' ಕಾರಕ್ಕೆ ವೃದ್ಧಿ ಬಂದು ಕಾಮ್+ಇ=ಕಾಮಿ ಎಂದಾದಮೇಲೆ "ಸನಾದ್ಯನ್ತಾ ಧಾತವಃ" ಎಂಬ ಸೂತ್ರದಿಂದ ಧಾತು ಸಂಜ್ಞೆ ಬರುತ್ತದೆ. ನಂತರ 'ಲಟ್' 'ಲ್' ಕಾರವನ್ನು ಸೇರಿಸಿ ನಂತರ ಅದಕ್ಕೆ 'ತ' ಆದೇಶ ಬಂದು, ಧಾತುವಿನ ನಂತರ 'ಶಪ್(ಅ)' ವಿಕರಣ ಪ್ರತ್ಯಯವು ಬಂದು, ಕಾಮಿ+ಅ+ತ ಎಂದಿರುತ್ತದೆ. "ಸಾರ್ವಧಾತುಕಾರ್ಧಧಾತುಕಯೋಃ" ಎಂಬ ಸೂತ್ರದಿಂದ ಇಗನ್ತಾಂಗವಾದ 'ಕಾಮಿ' ಧಾತುವಿನ 'ಇ' ಕಾರಕ್ಕೆ ಗುಣ ಬಂದು ಕಾಮೇ+ಅ+ತ ಎಂದಿರುತ್ತದೆ. ಆಗ "ಏಚೋಽಯವಾಯಾವಃ" ಎಂಬ ಸೂತ್ರದಿಂದ 'ಏ' ಕಾರಕ್ಕೆ 'ಅಯ್' ಆದೇಶ ಬಂದು ಕಾಮ್+ಅಯ್+ಅತ=ಕಾಮಯತ ಎಂದಿರುತ್ತದೆ. "ಟಿತ ಅತ್ಮನೇಪದಾನಾಂ ಟೇರೆ" ಎಂಬ ಸೂತ್ರದಿಂದ ಕೊನೆಯ 'ಅ' ಕಾರಕ್ಕೆ ಏತ್ವ ಬಂದು ಕಾಮಯತೇ ಎಂದು ರೂಪವು ಸಿದ್ಧವಾಗುತ್ತದೆ.

ರೂಪಗಳು: ಕಾಮಯತೇ, ಕಾಮಯೇತೇ, ಕಾಮಯನ್ತೇ। ಕಾಮಯಸೇ, ಕಾಮಯೇಥೇ, ಕಾಮಯಧ್ವೇ। ಕಾಮಯೇ, ಕಾಮಯಾವಹೇ, ಕಾಮಯಾಮಹೇ।

ವಿಶೇಷ: "ಅನಿರ್ದಿಷ್ಟಾರ್ಥಾಃ ಪ್ರತ್ಯಯಾಃ ಸ್ವಾರ್ಥೇ ಭವನ್ತಿ" ಎಂಬ ನಿಯಮದಿಂದ ಸೂತ್ರದಲ್ಲಿ ಯಾವಾರ್ಥವೂನಿರ್ದಿಷ್ಟವಾಗಿಲ್ಲ. ಈ ಪ್ರತ್ಯಯವು ಕೇವಲ ಸ್ವಾರ್ಥವನ್ನು ಮಾತ್ರ ಹೇಳುತ್ತದೆ. ಧಾತುವಿನ ಅರ್ಥಕ್ಕೆ ಪುಷ್ಟಿಯನ್ನು ಕೊಡುತ್ತದೆ. "ಅನುದಾತ್ತಙಿತ ಆತ್ಮನೇಪದಮ್" ಎಂಬ ಸೂತ್ರದಿಂದ ಆತ್ಮನೇ ಪದದಲ್ಲಿ ಇರುತ್ತದೆ. ಇದು 'ಣಿತ್' ಆಗಿರೋಣದರಿಂದ ಅದರ ಕಾರ್ಯಗಳು ನಡೆಯುತ್ತವೆ.

**ಲಟ್: (ಅಯ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ – 526.ಅಯಾಮನ್ತಾಲ್ವಾಯ್ಯೇತ್ನ್ವಿಷ್ಣುಷು (6.4.55)**

ವೃತ್ತಿಃ–ಆಮ್–ಅಂತ–ಆಲು–ಆಯ್ಯ–ಇತ್ನು–ಇಷ್ಣು ಏಷು ಣೇಃ ಅಯ್–ಆದೇಶಃ ಸ್ಯಾತ್। ಕಾಮಯಾಞ್ಚಕ್ರೇ। "(495)" "ಆಯಾದಯ" ಇತಿ ಣಿಙ್ ವಾ । ಚಕಮೇ। ಚಕಮಾತೇ। ಚಕಮಿರೇ। ಚಕಮಿಷೇ। ಚಕಮಾಥೇ। ಚಕಮಿಧ್ವೇ। ಚಕಮೇ। ಚಕಮಿವಹೇ।

ಚಕಮಿಮಹೇ। ಕಾಮಯಿತಾ, ಕಮಿತಾ। ಕಾಮಯಿತಾಸೇ। ಕಾಮಯಿಷ್ಯತೇ, ಕಮಿಷ್ಯತೇ। ಕಾಮಯಿತಾಮ್। ಅಕಾಮಯಿತ। ಕಾಮಯೇತ। ಕಾಮಯಿಷೀಷ್ಟ।

ಪ. ಛೇ. – ಅಯ್, ಆಮ್, ಅನ್ತ, ಆಲು, ಆಯ್ಯ, ಇತ್ನು, ಇಷ್ಣುಷು।

ಅ. ವೃ.– "ಣೇರನಿಟಿ" ಎಂಬ ಸೂತ್ರದಿಂದ 'ಣೇಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– ಆಮ್-ಅಂತ-ಆಲು-ಆಯ್ಯ-ಇತ್ನು ಮತ್ತು ಇಷ್ಣು ಇವುಗಳ ಪರದಲ್ಲಿ ಬರುವ 'ಣಿ' ಗೆ 'ಅಯ್' ಆದೇಶವು ಬರುತ್ತದೆ.

ವಿಶೇಷ: "ಣೇರನಿಟಿ" ಎಂಬ ಸೂತ್ರದಿಂದ 'ಣಿ' ಗೆ ಲೋಪವು ಬರಬೇಕಾಗಿತ್ತು, ಆದರೆ ಪ್ರಕೃತ ಸೂತ್ರವು ಇದನ್ನು ಬಾಧಿಸುತ್ತದೆ.

**ಕಮ್ ಧಾತುವಿನ ಅನುಪ್ರಯೋಗ ಲಟ್**:

ಉದಾ– ಕಾಮಯಾಞ್ಚಕ್ರೇ– ಪ್ರಥಮಪುರುಷ ಏಕವಚನದಲ್ಲಿ 'ಕಮ್' ಧಾತುವಿನ ನಂತರ 'ಲಿಟ್' 'ಲ್' ಕಾರ ಬಂದು "ಆಯಾದಯಃ ಆರ್ಧಧಾತುಕೇ ವಾ" ಎಂಬ ಸೂತ್ರದ ಬಲದಿಂದ "ಕಮೇರ್ಣಿಙ್" ಎಂಬ ಸೂತ್ರದಿಂದ 'ಣಿಙ್(ಇ)' ಪತ್ಯಯ ಬಂದು 'ಕಮ್' ನ ಉಪಧೆಗೆ ದೀರ್ಘ ಬಂದು ಕಾಮ್+ಇ ಎಂದಾದಮೇಲೆ ಅದಕ್ಕೆ ಧಾತು ಸಂಜ್ಞೆ ಬಂದು ಅದರ ಪರದಲ್ಲಿ 'ಲಿಟ್' ಬಂದು ಅದಕ್ಕೆ 'ತ' ಆದೇಶ ಬರುತ್ತದೆ. ಕಾಮಿ+ತ ಎಂದಿರುತ್ತದೆ. "ಕಾಸ್ಯನೇಕಾಚ ಆಮ್ ವಕ್ತವ್ಯೋ ಲಿಟಿ" ಎಂಬ ವಾರ್ತಿಕದಿಂದ 'ಆಮ್' ಬಂದು "ಆಮಃ" ಎಂಬ ಸೂತ್ರದಿಂದ 'ಲಿಟ್' ಗೆ 'ಲುಕ್' ಬಂದು "ಕೃಞ್ಚಾನುಪ್ರಯುಜ್ಯತೇ ಲಿಟಿ" ಎಂಬ ಸೂತ್ರದಿಂದ 'ಕೃ' ಧಾತುವಿನ ಅನುಪ್ರಯೋಗ ಮಾಡಿ ಕಾಮಿ+ಕೃ ಎಂದಿದ್ದಾಗ, ಅದು ಉಭಯಪದವಾಗಿರೋಣದರಿಂದ, ಆಮ್

ಪ್ರತ್ಯಯವತ್-ಕೃಞೋಽನುಪ್ರಯೋಗಸ್ಯ" ಎಂಬ ಸೂತ್ರದಿಂದ ಆತ್ಮನೇಪದವೇ ಆಗುತ್ತದೆ. ಆಗ ಕಾಮಿ+ಆಮ್+ಕೃ+ತ ಎಂದಿರುತ್ತದೆ. 'ಕಾಮಿ' ಎಂಬ ಇಗನ್ತಧಾತುವಿನ 'ಇ' ಕಾರಕ್ಕೆ ಗುಣ ಬರಬೇಕಾಗಿತ್ತು. ಆದರೆ "ಣೇರನಿಟಿ" ಎಂಬ ಸೂತ್ರದಿಂದ 'ಇ' ಕಾರಕ್ಕೆ ಲೋಪವು ಬರಬೇಕಾಗಿತ್ತು ಅದನ್ನೂ ಬಾಧಿಸಿ ಪ್ರಕೃತ ಸೂತ್ರದಿಂದ 'ಅಯ್' ಆದೇಶ ಬಂದು ಕಾಮ್+ಅಯ್+ಆಮ್+ಕೃ+ತ ಎಂದಿದ್ದಾಗ, 'ಕೃ' ಧಾತುವಿಗೆ ದ್ವಿತ್ವ ಬಂದು 'ಋ' ಗೆ 'ಅರ್' ಬಂದು ಹಲಾದಿಶೇಷ ಹಾಗು ಚುತ್ವಗಳು ಬಂದು, ಆಖ್ಯಾತ ಪ್ರತ್ಯಯವಾದ 'ತ' ಗೆ 'ಏಶ್' ಆದೇಶವು ಬಂದು, ಯಣ್ ಸಂಧಿಯಾಗಿ, ಕಾಮಯಾಞ್ಚಕ್+ರ್+ಏ ಎಂದಾಗಿ ಕಾಮಯಾಞ್ಚಕ್ರೇ ಎಂಬ ರೂಪವು ಸಿದ್ಧವಾಗುತ್ತದೆ.

ರೂಪಗಳು: ಕಾಮಯಾಞ್ಚಕ್ರೇ, ಕಾಮಯಾಞ್ಚಕ್ರಾತೇ, ಕಾಮಯಾಞ್ಚಕ್ರಿರೇ। ಕಾಮಯಾಞ್ಚಕೃಷೇ, ಕಾಮಯಾಞ್ಚಕ್ರಾಥೇ, ಕಾಮಯಾಞ್ಚಕೃಢ್ವೇ। ಕಾಮಯಾಞ್ಚಕ್ರೇ, ಕಾಮಯಾಞ್ಚಕೃವಹೇ, ಕಾಮಯಾಞ್ಚಕೃಮಹೇ।

**'ಭೂ' ಧಾತುವಿನ ಅನುಪ್ರಯೋಗ ಲಟ್**

ರೂಪಗಳು: ಕಾಮಯಾಂಬಭೂವ, ಕಾಮಯಾಂಬಭೂವತುಃ, ಕಾಮಯಾಂಬಭೂವುಃ। ಕಾಮಯಾಂಬಭೂವಿಥ, ಕಾಮಯಾಂಬಭೂವಥುಃ,

ಕಾಮಯಾಂಬಭೂವ। ಕಾಮಯಾಂಬಭೂವ, ಕಾಮಯಾಂಬಭೂವಿವ, ಕಾಮಯಾಂಬಭೂವಿಮ।

**'ಅಸ್' ಧಾತುವಿನ ಅನುಪ್ರಯೋಗ ಲಿಟ್**

ರೂಪಗಳು: ಕಾಮಯಾಮಾಸ, ಕಾಮಯಾಮಾಸತುಃ, ಕಾಮಯಾಮಾಸುಃ। ಕಾಮಯಾಮಾಸಿಥ, ಕಾಮಯಾಮಾಸಥುಃ, ಕಾಮಯಾಮಾಸ। ಕಾಮಯಾಮಾಸ, ಕಾಮಯಾಮಾಸಿವ, ಕಾಮಯಾಮಾಸಿಮ।

**ಲಿಟ್: 'ಣಿಙ್' ಬಾರದ ಪಕ್ಷದಲ್ಲಿ 'ಕಮ್' ಧಾತುವಿನ 'ಲಿಟ್' ರೂಪಗಳು**

ರೂಪಗಳು: ಚಕಮೇ। ಚಕಮಾತೇ। ಚಕಮಿರೇ। ಚಕಮಿಷೇ। ಚಕಮಾಥೇ। ಚಕಮಿಧ್ವೇ। ಚಕಮೇ। ಚಕಮಿವಹೇ। ಚಕಮಿಮಹೇ। 'ಣಿಙ್' ಬಂದ ಪಕ್ಷದಲ್ಲಿ 'ಕಮ್' ಧಾತುವಿನ ಲಿಟ್ ರೂಪಗಳನ್ನು ಮೇಲೆ ಹೇಳಲಾಗಿದೆ.

**ಲುಟ್:**

'ಣಿಙ್' ಬಂದ ಪಕ್ಷದಲ್ಲಿ 'ಕಮ್' ಧಾತುವಿನ 'ಲುಟ್' ರೂಪಗಳು: ಕಾಮಯಿತಾ, ಕಾಮಯಿತಾರೌ, ಕಾಮಯಿತಾರಃ। ಕಾಮಯಿತಾಸೇ, ಕಾಮಯಿತಾಸಾಥೇ, ಕಾಮಯಿತಾಧ್ವೇ। ಕಾಮಯಿತಾಹೇ, ಕಾಮಯಿತಾಸ್ವಹೇ, ಕಾಮಯಿತಾಸ್ಮಹೇ।

'ಣಿಙ್' ಬಾರದ ಪಕ್ಷದಲ್ಲಿ ರೂಪಗಳು: ಕಮಿತಾ, ಕಮಿತಾರೌ, ಕಮಿತಾರಃ। ಕಮಿತಾಸೇ, ಕಮಿತಾಸಾಥೇ, ಕಮಿತಾಧ್ವೇ। ಕಮಿತಾಹೇ, ಕಮಿತಾಸ್ವಹೇ, ಕಮಿತಾಸ್ಮಹೇ।

**ಲೃಟ್:**

'ಣಿಙ್' ಬಂದ ಪಕ್ಷದಲ್ಲಿ–ರೂಪಗಳು: ಕಾಮಯಿಷ್ಯತೇ, ಕಾಮಯಿಷ್ಯೇತೇ, ಕಾಮಯಿಷ್ಯನ್ತೇ। ಕಾಮಯಿಷ್ಯಸೇ, ಕಾಮಯಿಷ್ಯೇಥೇ, ಕಾಮಯಿಷ್ಯಧ್ವೇ। ಕಾಮಯಿಷ್ಯೇ, ಕಾಮಯಿಷ್ಯಾವಹೇ, ಕಾಮಯಿಷ್ಯಾಮಹೇ।

'ಣಿಙ್' ಬಾರದ ಪಕ್ಷದಲ್ಲಿ– ರೂಪಗಳು: ಕಮಿಷ್ಯತೇ, ಕಮಿಷ್ಯೇತೇ, ಕಮಿಷ್ಯನ್ತೇ। ಕಮಿಷ್ಯಸೇ, ಕಮಿಷ್ಯೇಥೇ, ಕಮಿಷ್ಯಧ್ವೇ। ಕಮಿಷ್ಯೇ, ಕಮಿಷ್ಯಾವಹೇ, ಕಮಿಷ್ಯಾಮಹೇ।

**ಲೋಟ್:** ಈ 'ಲ್' ಕಾರದಲ್ಲಿ ನಿತ್ಯವಾಗಿ 'ಣಿಙ್(ಇ) ಬರುತ್ತದೆ.

ರೂಪಗಳು : ಕಾಮ0ಯತಾಮ್, ಕಾಮಯೇತಾಮ್, ಕಾಮಯನ್ತಾಮ್। ಕಾಮಯಸ್ವ, ಕಾಮಯೇಥಾಮ್, ಕಾಮಯಧ್ವಮ್। ಕಾಮಯೈ, ಕಾಮಯಾವಹೈ, ಕಾಮಯಾಮಹೈ।

**ಲಙ್:** ರೂಪಗಳು: ಅಕಾಮ0ಯತ, ಅಕಾಮಯೇತಾಮ್, ಅಕಾಮಯನ್ತ। ಅಕಾಮಯಥಾಃ, ಅಕಾಮಯೇಥಾಮ್, ಅಕಾಮಯಧ್ವಮ್। ಅಕಾಮಯೇ, ಅಕಾಮಯಾವಹಿ, ಅಕಾಮಯಾಮಹಿ।

**ವಿಧಿಲಿಙ್:** ರೂಪಗಳು: ಕಾಮ0ಯೇತ, ಕಾಮಯೇತಾಮ್, ಕಾಮಯೇರನ್। ಕಾಮಯೇಥಾಃ, ಕಾಮಯೇಥಾಮ್, ಕಾಮಯೇಧ್ವಮ್। ಕಾಮಯೇಯ, ಕಾಮಯೇವಹಿ, ಕಾಮಯೇಮಹಿ।

**ಆಶೀರ್ಲಿಙ್:** ಪ್ರಥಮಪುರುಷ ಏಕವಚನದಲ್ಲಿ ಕಾಮಿ+ಇ+ಸೀಯ್+ತ ಎಂದಿದ್ದಾಗ, 'ಯ್' ಕಾರಕ್ಕೆ ಲೋಪ ಬರುತ್ತದೆ. ಇದು ಆರ್ಧಧಾತುಕವಾಗಿದೆ. ಆದ್ದರಿಂದ 'ಕಾಮಿ' ಯಲ್ಲಿರುವ 'ಇ' ಕಾರಕ್ಕೆ ಗುಣ ಬಂದು, ಕಾಮೇ+ಇ+ಸೀ+ತ ಎಂದಿದ್ದಾಗ, 'ಏ' ಕಾರಕ್ಕೆ 'ಅಯ್' ಆದೇಶ ಬಂದು ಕಾಮಯ್+ಇ+ಸೀ+ತ ಎಂದಿದ್ದಾಗ, ಸೀ ಗೆ ಷತ್ವ ಬಂದು ಕಾಮಯ್+ಇ+ಷೀ+ತ ಎಂದಾಗಿ, ಆಖ್ಯಾತ

ಪ್ರತ್ಯಯವಾದ 'ತ' ಕಾರಕ್ಕೆ 'ಸುಟ್(ಸ್)' ಆಗಮವು ಆದ್ಯವಯವಾಗಿ ಬಂದು, ಕಾಮಯ್+ಇ+ಷೀ+ಸ್ತ ಎಂದಿದ್ದಾಗ, ಆ 'ಸ್' ಕಾರಕ್ಕೆ ಷತ್ವ ಬಂದು 'ಷ್' ಕಾರ 'ತ' ಕಾರಕ್ಕೆ ಷ್ಟುತ್ವದಿಂದ 'ಟ್' ಕಾರ ಬಂದು ಕಾಮಯಿಷೀಷ್ಟ ಎಂದು ರೂಪವು ಸಿದ್ಧವಾಗುತ್ತದೆ.

**(ವೈಕಲ್ಪಿಕವಾಗಿ ಢತ್ವವನ್ನು ವಿಧಿಸುವ ಸೂತ್ರ)**

**ಸೂತ್ರ – 527.ವಿಭಾಷೇಟಃ (8.3.79)**

ವೃತ್ತಿಃ-ಇಣಃ ಪರೋ ಽಯಃ ಇಟ್, ತತಃ ಪರೇಷಾಂ ಷೀಧ್ವಂಲುಙ್‌ಲಿಟಾಂ, ಧಸ್ಯ ವಾ ಢಃ। ಕಾಮಯಿಷೀಢ್ವಮ್, ಕಾಮಯಿಷೀಧ್ವಮ್। ಕಮಿಷೀಷ್ಟ। ಕಮಿಷೀಧ್ವಮ್।

ಪ. ಛೇ. – ವಿಭಾಷಾ, ಇಟಃ।

ಅ.ವೃ.-"ಇಣಃ ಷೀಧ್ವಂ ಲುಙ್ಲಿಟಾಮ್ ಧೋಽಙ್ಗಾತ್" ಎಂಬ ಸೂತ್ರವು ಹಾಗೂ "ಅಪದಾನ್ತಸ್ಯ ಮೂರ್ಧನ್ಯಃ" ಎಂಬ ಸೂತ್ರದಿಂದ 'ಮೂರ್ಧನ್ಯಃ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ-'ಇಣ್' ಪ್ರತ್ಯಾಹಾರದ ಪರದಲ್ಲಿರುವ 'ಇಟ್' ನ ಪರದಲ್ಲಿ ಷೀಧ್ವಮ್, ಲುಙ್ ಮತ್ತು ಲಿಟ್ ಇವುಗಳ 'ಧ್' ಕಾರಕ್ಕೆ ವೈಕಲ್ಪಿಕವಾಗಿ 'ಢ್' ಕಾರವು ಆದೇಶವಾಗಿ ಬರುತ್ತದೆ.

ಉದಾ- ಕಾಮಯೀಷೀಧ್ವಮ್, ಕಾಮಯೀಷೀಢ್ವಮ್- ಇದರಲ್ಲಿರುವ 'ಧ್' ಕಾರಕ್ಕೆ ವೈಕಲ್ಪಿಕವಾಗಿ ಢತ್ವವು ಬಂದು ಕಾಮಯಿಷೀಢ್ವಮ್, ಕಾಮಯಿಷೀಧ್ವಮ್। ಎಂದು ರೂಪಗಳಾಗುತ್ತವೆ.

'ಣಿಙ್' ಬಂದ ಪಕ್ಷದಲ್ಲಿ-ರೂಪಗಳು: ಕಾಮಯಿಷೀಷ್ಟ, ಕಾಮಯಿಷೀಯಾಸ್ತಾಮ್, ಕಾಮಯಿಷೀರನ್। ಕಾಮಯಿಷೀಷ್ಠಾಃ, ಕಾಮಯಿಷೀಯಾಸ್ಥಾಮ್, ಕಾಮಯಿಷೀಢ್ವಮ್/ ಕಾಮಯಿಷೀಧ್ವಮ್। ಕಾಮಯಿಷೀಯ, ಕಾಮಯಿಷೀವಹಿ, ಕಾಮಯಿಷೀಮಹಿ।

'ಣಿಙ್' ಬಾರದ ಪಕ್ಷದಲ್ಲಿ-ರೂಪಗಳು: ಕಮಿಷೀಷ್ಟ, ಕಮಿಷೀಯಾಸ್ತಾಮ್, ಕಮಿಷೀರನ್। ಕಮಿಷೀಷ್ಠಾಃ, ಕಮಿಷೀಯಾಸ್ಥಾಮ್, ಕಮಿಷೀಧ್ವಮ್। ಕಮಿಷೀಯ, ಕಮಿಷೀವಹಿ, ಕಮಿಷೀಮಹಿ।

**ಲುಙ್: (ಚ್ಲಿ ಗೆ 'ಚಙ್' ಆದೇಶವನ್ನು ವಿಧಿಸುವ ಸೂತ್ರ)**

ಸೂತ್ರ – 528. ಣಿ-ಶ್ರಿ-ದ್ರು-ಸ್ರುಭ್ಯಃ ಕರ್ತರಿ ಚಙ್ (3.1.48)

ವೃತ್ತಿಃ-ಣ್ಯನ್ತಾತ್ ಶ್ರಿ, ದ್ರು, ಶ್ರ್ವಾದಿಭ್ಯಶ್ಚ ಚ್ಲೇಃ ಚಙ್ ಸ್ಯಾತ್ ಕರ್ತ್ರರ್ಥೇ ಲುಙಿಪರೇ।

ಅಕಾಮಿ+ಅ+ತ ಇತಿ ಸ್ಥಿತೇ–

ಅ. ವೃ– "ಚ್ಲಿ ಲುಜಿ" ಎಂಬ ಸೂತ್ರದಿಂದ 'ಲುಜಿ' ಎಂಬ ಪದವೂ, "ಚ್ಲೇಃ ಸಿಚ್" ಎಂಬ ಸೂತ್ರದಿಂದ 'ಚ್ಲೇಃ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ–'ಣಿ'ಯನ್ನು ಅಂತದಲ್ಲಿ ಉಳ್ಳ ಧಾತು ಮತ್ತು ಶ್ರಿ, ದ್ರು, ಸ್ರು ಧಾತುಗಳ ಪರದಲ್ಲಿ ಇರುವ 'ಚ್ಲಿ' ಗೆ 'ಚಙ್' ಆದೇಶವು ಬರುತ್ತದೆ. – ಕರ್ತ್ರರ್ಥದಲ್ಲಿ 'ಲುಙ್' ಪರದಲ್ಲಿದ್ದಾಗ, 'ಪ್ರತ್ಯಯಗ್ರಹಣೇ ತದನ್ತಗ್ರಹಣಮ್' ಎಂಬ ಪರಿಭಾಷೆಯಿಂದ ಪ್ರತ್ಯಯಕ್ಕೆ ಬರುವ ನಿಯಮಗಳೆಲ್ಲ ಪ್ರತ್ಯಯಾಂತಕ್ಕೂ ಬರುತ್ತವೆ. 'ಣಿ' ಇದ್ದಾಗ ಬರುವ ಕಾರ್ಯಗಳೆಲ್ಲ 'ಣಿ' ಯನ್ನು ಅಂತವಾಗಿಯುಳ್ಳ ಪ್ರತ್ಯಯಗಳು ಇದ್ದಾಗಲೂ ಬರುತ್ತವೆ. 'ಚಙ್'ನಲ್ಲಿ 'ಅ' ಕಾರ ಮಾತ್ರ ಉಳಿಯುತ್ತದೆ.

### (ಣಿ–ಲೋಪವನ್ನು ವಿಧಿಸುವ ಸೂತ್ರ)

**ಸೂತ್ರ – 529.ಣೇರನಿಟಿ (6.4.51)**

ವೃತ್ತಿಃ–ಅನಿಡಾದೌ ಆರ್ಧಧಾತುಕೇ ಪರೇ ಣೇಃ ಲೊಪಃ ಸ್ಯಾತ್।

ಪ. ಛೇ. – ಣೇಃ, ಅನಿಟಿ।

ಅ. ವೃ.– "ಅತೋಲೋಪಃ" ಎಂಬ ಸೂತ್ರದಿಂದ 'ಲೋಪಃ' ಎಂಬ ಪದವು ಅನುವೃತ್ತವಾಗುತ್ತದೆ. "ಆರ್ಧಧಾತುಕೇ" ಎಂಬುದು ಅಧಿಕಾರ ಸೂತ್ರ.

ಅರ್ಥ– 'ಅನಿಟ್' ಆದಿಯಲ್ಲಿರುವ ('ಇಟ್' ಆದಿಯಲ್ಲಿ ಇಲ್ಲದೇ ಇರುವ) ಆರ್ಧಧಾತುಕವು ಪರದಲ್ಲಿದ್ದಾಗ, 'ಣಿ' ಗೆ ಲೋಪವು ಬರುತ್ತದೆ. ಇಲ್ಲಿ 'ಣಿ' ಎಂಬುದು ಅನುಬಂಧ ರಹಿತವಾದದ್ದಾಗಿದೆ. ಹೀಗೆ ಹೇಳಿದ್ದರಿಂದ 'ಣಿಙ್' ಮತ್ತು 'ಣಿಚ್' ಗಳಲ್ಲಿರುವ ಅನುಬಂಧಸಹಿತವಾದ 'ಣಿ' ಯ 'ಇ' ಕಾರಕ್ಕೆ ಲೋಪವು ಬರುತ್ತದೆ ಎಂದು ಹೇಳಿದಂತಾಗುತ್ತದೆ.

### (ಉಪಧೆಗೆ ಹ್ರಸ್ವವನ್ನು ವಿಧಿಸುವ ಸೂತ್ರ)

**ಸೂತ್ರ – 530.ಣೌ ಚಙ್ಯುಪಧಾಯಾ ಹ್ರಸ್ವಃ (7.4.1)**

ವೃತ್ತಿಃ–ಚಙ್ ಪರೇ ಣೌ ೦ಯದಙ್ಗಂ ತಸ್ಯ ಉಪಧಾ೦ಯಾಃ ಹ್ರಸ್ವಃ ಸ್ಯಾತ್।

ಪ. ಛೇ. – ಣೌ, ಚಙಿ, ಉಪಧಾ೦ಯಾಃ, ಹ್ರಸ್ವಃ।

ಅ. ವೃ – "ಅಂಗಸ್ಯ" ಎಂಬುದು ಅಧಿಕಾರ ಸೂತ್ರ.

ಅರ್ಥ– 'ಚಙ್' ಪರಕವಾದ 'ಣಿ' ಪರದಲ್ಲಿ ಇದ್ದಾಗ ಪೂರ್ವದಲ್ಲಿರುವ ಅಂಗದ ಉಪಧೆಗೆ ಹ್ರಸ್ವವು ಬರುತ್ತದೆ.

ವಿಶೇಷ: 'ಚಙ್' ಪರಕ 'ಣಿ' ಎಂದರೆ ಮೊದಲು 'ಣಿ' ನಂತರ 'ಚಙ್' ಎಂದು ಅರ್ಥ. ಅಂದರೆ 'ಚಙ್' ನ್ನು ಪರದಲ್ಲಿಯುಳ್ಳ 'ಣಿ' ಎಂದರ್ಥ. ಇಂತಹ 'ಣಿ' ಯು ಪರದಲ್ಲಿದ್ದಾಗ ಪೂರ್ವದಲ್ಲಿರುವ ಅಂಗದ ಉಪಧೆಗೆ ಹ್ರಸ್ವವು ಬರುತ್ತದೆ ಎಂದು ಅರ್ಥ. (ಮೊದಲು ಅಂಗ, ನಂತರ 'ಣಿ' ತದನಂತರ 'ಚಙ್' ಹೀಗೆ ಇದ್ದಾಗ,

ಉಪಧೆಗೆ ಹ್ರಸ್ವವು ಬರುತ್ತದೆ).

**(ದ್ವಿತ್ವವನ್ನು ವಿಧಿಸುವ ಸೂತ್ರ)**

**ಸೂತ್ರ – 531.ಚಙಿ (6.1.11)**

ವೃತ್ತಿಃ–ಚಙಿ ಪರೇ ಅನಭ್ಯಾಸಸ್ಯ ಧಾತ್ವವಯವಸ್ಯ ಏಕಾಚಃ ಪ್ರಥಮಸ್ಯ ದ್ವೇ ಸ್ತಃ ಅಜಾದೇಃ ದ್ವಿತೀಯಸ್ಯ।

ಅ. ವೃ.– "ಲಿಟಿ ಧಾತೋರನಭ್ಯಾಸಸ್ಯ" ಎಂಬ ಸೂತ್ರದಿಂದ 'ಧಾತೋಃ' ಮತ್ತು 'ಅನಭ್ಯಾಸಸ್ಯ' ಎಂಬ ಎರಡು ಪದಗಳು ಅನುವೃತ್ತವಾಗುತ್ತವೆ. "ಏಕಾಚೋ ದ್ವೇ ಪ್ರಥಮಸ್ಯ" ಮತ್ತು "ಅಜಾದೇರ್ದ್ವಿತೀಯಸ್ಯ" ಎಂಬವು ಅಧಿಕಾರಸೂತ್ರಗಳು.

ಅರ್ಥ– 'ಚಙ್' ಪರದಲ್ಲಿದ್ದಾಗ ಯಾವದಕ್ಕೆ ಅಭ್ಯಾಸ ಸಂಜ್ಞೆ ಇರುವುದಿಲ್ಲವೋ(ಅನಭ್ಯಾಸ) ಅಂತಹ ಧಾತ್ವವಯವದ ಪ್ರಥಮ 'ಏಕಾಚ್' ಭಾಗಕ್ಕೆ ದ್ವಿತ್ವವು ಬರುತ್ತದೆ. ಆದರೆ ಧಾತುವು ಅಜಾದಿಯಾಗಿಯೋ, ಅಥವಾ 'ಅನೇಕಾಚ್' ಆಗಿಯೂ ಇದ್ದರೆ ದ್ವಿತೀಯ 'ಏಕಾಚ್' ಭಾಗಕ್ಕೆ ದ್ವಿತ್ವವು ಬರುತ್ತದೆ.

**(ಸನ್ವದ್ಭಾವವನ್ನು ವಿಧಿಸುವ ಸೂತ್ರ)**

**ಸೂತ್ರ – 532.ಸನ್ವಲ್ಲಘುನಿ ಚಙ್ ಪರೇಽನಗ್ಲೋಪೇ (7.4.93)**

ವೃತ್ತಿಃ–ಚಙ್–ಪರೇ ಣೌ ಯದಙ್ಗಂ ತಸ್ಯ ಯಃ ಅಭ್ಯಾಸಃ ಲಘುಪರಃ ತಸ್ಯ ಸನಿ ಇವ ಕಾರ್ಯಂ ಸ್ಯಾತ್ ಅನಗ್ಲೋಪೇಸತಿ।

ಪ. ಛೇ. – ಸನ್ವತ್, ಲಘುನಿ, ಚಙ್, ಪರೇ, ಅನಗ್ಲೋಪೇ।

ಅರ್ಥ– 'ಚಙ್' ಪರಕವಾದ 'ಣಿ' ಪರದಲ್ಲಿರುವಾಗ ಯಾವುದು ಅಂಗವಾಗಿರುತ್ತದೋ, ಅದರ ಅಭ್ಯಾಸಕ್ಕೆ 'ಲಘು' ವರ್ಣವು ಪರವಾಗಿರುವಾಗ, 'ಸನ್' ಪರದಲ್ಲಿದ್ದಾಗ ಆಗುವ ಕಾರ್ಯವೇ(ಸನ್ವದ್ಭಾವದ ಕಾರ್ಯ) ಆಗುತ್ತದೆ. ಆದರೆ 'ಣಿ' ನಿಮಿತ್ತವಾದ 'ಅಕ್(ಅ,ಇ,ಉ,ಋ,ಲೃ)' ಲೋಪವು ಆಗಿರಬಾರದು. ಇಲ್ಲಿ 'ಚಙ್ ಪರೇ ಣೌ' ಎಂಬಲ್ಲಿ 'ಣಿ' ಯು "ಪ್ರತ್ಯಯಲೋಪೇ ಪ್ರತ್ಯಯಲಕ್ಷಣಮ್' ಎಂಬ ನಿಯಮದಿಂದ 'ಸ್ಥಾನಿವದ್ಭಾವ'ದಿಂದ ಇದೆ ಎಂದು ತಿಳಿಯಬೇಕು.

ಉದಾ– ಅಚಕಮ್+ಅ+ತ ಎಂದಿದ್ದಾಗ, 'ಚಙ್ ಪರಕವಾದ 'ಣಿ' ಇದೆ. ಅದರ ಅಂಗ 'ಚಕಮ್' ಎಂಬುದು. ಅದರಲ್ಲಿ ಅಭ್ಯಾಸವೆಂದರೆ 'ಚ' ಇದು ಲಘುಪರಕವಾಗಿದೆ. (ಇದರ ಪರದಲ್ಲಿರುವ 'ಕ' ಕಾರವು ಲಘ್ವಕ್ಷರವಾದ 'ಅ' ಕಾರದ ಜೊತೆಗೆ ಕೂಡಿರೋಣದರಿಂದ ಅದು 'ಲಘು' ಎಂದು ಭಾವಿಸಲಾಗಿದೆ). ಇಲ್ಲಿ 'ಣಿ' ಯನ್ನು ನಿಮಿತ್ತವಾಗಿ ಮಾಡಿಕೊಂಡು 'ಅಕ್(ಅ,ಇ,ಉ,ಋ,ಲೃ)'ಗೆ ಲೋಪವು ಬರಲಿಲ್ಲ. ಅದುದರಿಂದ 'ಸನ್ವದ್ಭಾವ'ವು ಬರುತ್ತದೆ. ಮುಂದಿನ ಸೂತ್ರಗಳಿಂದ 'ಇತ್ವ' ಮತ್ತು ದೀರ್ಘಗಳು ಬಂದು ಅಚೀಕಮತ ಎಂಬ ರೂಪವು ಸಿದ್ಧವಾಗಬೇಕಾಗಿದೆ.

['ಸಿದ್ಧಾನ್ತಕೌಮುದೀ' ಯಲ್ಲಿ ಈಸೂತ್ರದ ಬಗ್ಗೆ ಈಕೆಳಗಿನಂತೆ ವಿವರಣೆ ಇದೆ.

ಇದು ಭಾಷ್ಯ ಸಮ್ಮತವೆಂದು ಹೇಳಲಾಗಿದೆ].

ವಿವರಣೆ: 'ಚಙ್ ಪರಃ ಯಸ್ಮಾತ್ ಸಃ ಚಙ್ ಪರಃ ಎಂದು ಬಹುವ್ರೀಹಿ ಸಮಾಸವಿದೆ. ಇದರಿಂದ 'ಚಙ್ ಪರೇ ಣೌ' ಎಂಬ ಅರ್ಥ ಬರುತ್ತದೆ. 'ಚಙ್ ಪರಕವಾದ ಣಿ' ಮತ್ತು 'ಅಂಗಸ್ಯ' ಎಂಬ ಈ ಎರಡು ಪದಗಳ ಅನುವೃತ್ತಿಯು ಎರಡು ಸಲ ಆಗುತ್ತದೆ. 1. 'ಚಙ್ ಪರೇ ಣೌ ಯತ್ ಲಘು ತಸ್ಮಿನ್ ಪರತಃ' ಎಂಬುದು ಒಂದು ರೀತಿಯ ಅನ್ವಯ. 2. 'ಣೌ ಪರತಃ ಯಃ ಅಗ್ಲೋಪಃ ತಸ್ಯ ಅಭಾವೇ ಸತಿ' ಎಂಬುದು ಎರಡನೇ ರೀತಿಯ ಅನ್ವಯ. 'ಅಂಗಸ್ಯ' ಎಂಬ ಪದದ ಆವೃತ್ತಿ ಮಾಡಿದಾಗ, ಇದು 'ಚಙ್ ಪರೇ' ಎಂಬಲ್ಲಿ ಅನ್ವಯವಾಗುತ್ತದೆ. ಇದರ ಅರ್ಥ ಏನೆಂದರೆ 'ಅಂಗಸಂಜ್ಞಾನಿಮಿತ್ತಭೂತೇ ಚಙ್ ಪರಕೇ ವರ್ಣೇ ಪರೆ' ಎಂದು ಅರ್ಥವಾಗುತ್ತದೆ. 'ಚಙ್' ಪರಕ ವರ್ಣವೆಂದರೆ 'ಣಿ' ಎಂದರ್ಥ. 2. 'ಅಂಗಸ್ಯ' ಎಂಬ ಪದವು 'ಅಭ್ಯಾಸಸ್ಯ' ಎಂಬುದನ್ನೂ ಅನುವೃತ್ತಿ ಮಾಡಿದಮೇಲೆ ಅದರಜೊತೆಗೆ ಅನ್ವಯವಾಗುತ್ತದೆ.

'ಅಂಗಸ್ಯ' ಎಂಬುದರ ಆವೃತ್ತಿಯಾದ ಪಕ್ಷದಲ್ಲಿ – ಅಂಗ ಸಂಜ್ಞೆಗೆ ನಿಮಿತ್ತವಾದ ಯಾವ 'ಚಙ್ ಪರಕವಾದ 'ಣಿ' ಪರದಲ್ಲಿದ್ದಾಗ, ಪೂರ್ವದಲ್ಲಿರುವ ಲಘುವರ್ಣಕ್ಕೆ ಸನ್ವದ್ಭಾವ ಕಾರ್ಯವು ಆಗುತ್ತದೆ. ಯಾವರೀತಿಯ ಸನ್ವದ್ಭಾವವೆಂದರೆ, ಪರದಲ್ಲಿ ಲಘುವರ್ಣವಿದ್ದು ಪೂರ್ವದಲ್ಲಿ ಅಂಗದ ಅಭ್ಯಾಸಸಂಜ್ಞಕ ಭಾಗಕ್ಕೆ 'ಸನ್' ಪರದಲ್ಲಿದ್ದಾಗ ಯಾವ ಅಂಗ ಕಾರ್ಯವಾಗುತ್ತದೋ ಆ ಕಾರ್ಯವು ಆಗುತ್ತದೆ. ಆದರೆ 'ಣಿ' ಪರದಲ್ಲಿದ್ದಾಗ 'ಅಕ್' ಪ್ರತ್ಯಾಹಾರಾನ್ತರ್ಗತ ವರ್ಣದ ಲೋಪವು ಆಗಿರಬಾರದು.

**(ಇತ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ – 533.ಸನ್ಯತಃ (7.4.79)**

ವೃತ್ತಿಃ–ಅಭ್ಯಾಸಸ್ಯ ಅತಃ ಇತ್ ಸ್ಯಾತ್ ಸನಿ।

ಪ. ಛೇ. – ಸನಿ, ಅತಃ॥

ಅ. ವೃ– "ಅತ್ರಲೋಪೋಽಭ್ಯಾಸಸ್ಯ" ಎಂಬ ಸೂತ್ರದಿಂದ, 'ಅಭ್ಯಾಸಸ್ಯ' ಎಂಬ ಪದವೂ "ಭ್ರಿಯಾಮಿತ್" ಎಂಬ ಸೂತ್ರದಿಂದ 'ಇತ್' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ– 'ಸನ್' ಪರದಲ್ಲಿದ್ದಾಗ ಅಭ್ಯಾಸದ 'ಅತ್(ಅ)' ಗೆ 'ಇತ್(ಇ)' ಬರುತ್ತದೆ.

**(ಅಭ್ಯಾಸಕ್ಕೆ ದೀರ್ಘವನ್ನು ವಿಧಿಸುವ ಸೂತ್ರ)**

**ಸೂತ್ರ – 534.ದೀರ್ಘೋ ಲಘೋಃ (7.4.94)**

ವೃತ್ತಿಃ–ಲಘೋಃ ಅಭ್ಯಾಸಸ್ಯ ದೀರ್ಘಃ ಸ್ಯಾತ್ ಸನ್ವದ್ಭಾವವಿಷಯೇ। ಅಚೀಕಮತ। ಣಿಙ್–ಅಭಾವಪಕ್ಷೇ (ವಾ॥ ಕಮೇಃ ಚ್ಲೇಃ ಚಙ್ ವಾಚ್ಯಃ) ಅಚಕಮತ್। ಅಕಾಮಯಿಷ್ಯತ। ಅಕಮಿಷ್ಯತ। ಅಯ ಗತೌ ।3। ಅಯತೇ।

ಪ. ಛೇ. – ದೀರ್ಘಃ, ಲಘೋಃ॥

ಅ.ವೃ.– "ಅತ್ರಲೋಪೋಽಭ್ಯಾಸಸ್ಯ" ಎಂಬ ಸೂತ್ರದಿಂದ, 'ಅಭ್ಯಾಸಸ್ಯ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– ಸನ್ವದ್ಭಾವದ ವಿಷಯದಲ್ಲಿ ಅಭ್ಯಾಸ 'ಲಘು' ವರ್ಣಕ್ಕೆ ದೀರ್ಘವು ಬರುತ್ತದೆ.

ಲುಙ್:

ಉದಾ– ಅಚೀಕಮತ– ಪ್ರಥಮಪುರುಷ ಏಕವಚನದಲ್ಲಿ 'ಕಮ್' ಧಾತುವಿಗೆ 'ಕಾಮಿ' ಎಂದು ರೂಪವಾದಮೇಲೆ 'ಲುಙ್' 'ಲ್' ಕಾರಕ್ಕೆ 'ತ' ಆದೇಶ ಬಂದು, ಧಾತುವಿಗೆ ಅಡಾ(ಅ)ಗಮ ಬಂದು ಅಕಾಮಿ+ತ ಎಂದಿದ್ದಾಗ, "ಚ್ಲಿ ಲುಙಿ" ಎಂಬುದರಿಂದ 'ಚ್ಲಿ' ಬಂದು ಅದಕ್ಕೆ "ಚ್ಲೇಃ ಸಿಚ್" ಎಂಬುದರಿಂದ 'ಸಿಚ್' ಬರಬೇಕಾಗಿದ್ದಾಗ, ಅದನ್ನು ಬಾಧಿಸಿ "ಣಿ–ಶ್ರಿ–ದ್ರು–ಸ್ರುಭ್ಯಃ ಕರ್ತರಿ ಚಙ್" (3.1.48) ಎಂಬ ಸೂತ್ರದಿಂದ 'ಚಙ್(ಅ)' ಆದೇಶ ಬಂದು ಅಕಾಮಿ+ಅ+ತ ಎಂದಿರುತ್ತದೆ "ಣೇರನಿಟಿ" ಎಂಬ ಸೂತ್ರದಿಂದ 'ಣಿ' ಯಲ್ಲಿರುವ 'ಇ' ಕಾರಕ್ಕೆ ಲೋಪ ಬಂದು ಅಕಾಮ್+ಅ+ತ ಎಂದಿರುತ್ತದೆ. "ಣೌಚಙ್ಯುಪಧಾಯಾಃ ಹ್ರಸ್ವಃ" ಎಂಬ ಸೂತ್ರದಿಂದ 'ಕಾ' ನಲ್ಲಿರುವ 'ಆ' ಕಾರಕ್ಕೆ ಹ್ರಸ್ವ ಬಂದು ಅಕಮ್+ಅ+ತ ಎಂದಿರುತ್ತದೆ. "ಚಙಿ" ಎಂಬ ಸೂತ್ರದಿಂದ 'ಕಮ್' ಧಾತುವಿಗೆ ದ್ವಿತ್ವ ಬಂದು ಕಮ್ ಕಮ್ ಎಂದಾಗಿ ಹಲಾದಿಶೇಷದಿಂದ ಕಕಮ್ ಎಂದಾಗುತ್ತದೆ. "ಕುಹೋಶ್ಚುಃ" ಎಂಬ ಸೂತ್ರದಿಂದ ಚುತ್ವ ಬಂದು ಅ+ಚಕಮ್+ಅ+ತ ಎಂದಿರುತ್ತದೆ. "ಪ್ರತ್ಯಯಲೋಪೇಪ್ರತ್ಯಯಲಕ್ಷಣಮ್" ಎಂಬ ನಿಯಮದಿಂದ 'ಣಿ' ಗೆ ಲೋಪ ಬಂದರೂ ಸ್ಥಾನಿವದ್ಭಾವದಿಂದ ಅಂಗ ಕಾರ್ಯವು ಆಗುತ್ತದೆ. 'ಅ' ಕಾರ ರೂಪ ಪ್ರತ್ಯಯವು ಪರದಲ್ಲಿರೋಣದರಿಂದ ಚಕಮ್ ಎಂಬುದು ಅಂಗವಾಗುತ್ತದೆ. "ಸನ್ವಲ್ಲಘುನಿ ಚಙ್ ಪರೇನಗ್ಲೋಪೇ" (7.4.93) ಎಂಬುದರಿಂದ 'ಸನ್ವದ್ಭಾವ'ವು ಬರುತ್ತದೆ.

"ಸನ್ಯತಃ" ಎಂಬ ಸೂತ್ರದಿಂದ ಅಚಕಮ್+ಅ+ತ ಎಂಬಲ್ಲಿ 'ಚ್' ಕಾರ ಪರವಾದ 'ಅ' ಕಾರಕ್ಕೆ 'ಇತ್ವ(ಇ)' ಬಂದು ಅಚಿಕಮ್+ಅ+ತ ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ಚಿ' ಯಲ್ಲಿರುವ 'ಇ' ಕಾರಕ್ಕೆ ದೀರ್ಘ ಬಂದು ಅಚೀಕಮತ ಎಂದು ರೂಪವಾಗುತ್ತದೆ.

**'ಲುಙ್' ನಲ್ಲಿ 'ಣಿಙ್' ಬಂದ ಪಕ್ಷದಲ್ಲಿ–**

ರೂಪಗಳು: ಅಚೀಕಮತ, ಅಚೀಕಮೇತಾಮ್, ಅಚೀಕಮನ್ತ। ಅಚೀಕಮಥಾಃ, ಅಚೀಕಮೇಥಾಮ್, ಅಚೀಕಮಧ್ವಮ್। ಅಚೀಕಮೇ, ಅಚೀಕಮಾವಹಿ, ಅಚೀಕಮಾಮಹಿ।

'ಣಿಙ್' ಬಾರದ ಪಕ್ಷದಲ್ಲಿ (ವಾ॥ ಕಮೇಃ ಚ್ಲೇಃ ಚಙ್ ವಾಚ್ಯಃ) ಈ ವಾರ್ತಿಕವು ಹೊರಟಿದೆ. ಉದಾ– ಅಚಕಮತ– ಈ ಪ್ರಕ್ರಿಯೆಯಲ್ಲಿ ಪ್ರಕೃತ ವಾರ್ತಿಕದಿಂದ 'ಚಙ್' ಬರೋಣದ್ದರಿಂದ ದ್ವಿತ್ವಾದಿಗಳು ಬರುವದನ್ನು ಗಮನಿಸಬಹುದು. 'ಣಿಙ್' ಬಾರದ ಪಕ್ಷದಲ್ಲಿ 'ಸನ್ವದ್ಭಾವ'ವು ಬರುವುದಿಲ್ಲ. 'ಇತ್ವವೂ' ಬರುವುದಿಲ್ಲ.

ಪ್ರಥಮಪುರುಷ ಏಕವಚನದಲ್ಲಿ 'ಕಮ್' ಧಾತುವಿನ ನಂತರ ಪ್ರಕೃತ ವಾರ್ತಿಕದಿಂದ 'ಚಙ್' ಬರೋಣದ್ದರಿಂದ ದ್ವಿತ್ವ ಮೊದಲಾದ ಕಾರ್ಯಗಳು ಆಗುತ್ತವೆ. ಅಕಾಮಿ+ಅ+ತ

ಎಂದಿದ್ದಾಗ "ಣೇರನಿಟಿ" ಎಂಬಸೂತ್ರದಿಂದ ಅಕಾಮಿ ಎಂಬಲ್ಲಿರುವ 'ಇ(ಣಿ)' ಕಾರ ಲೋಪವಾದಮೇಲೆ, ಅಕಾಮ್+ಅ+ತ ಎಂದಿರುತ್ತದೆ. 'ಕಾಮ್' ನಲ್ಲಿರುವ 'ಆ' ಕಾರಕ್ಕೆ ಹ್ರಸ್ವ ಬಂದು, ಅಕಮ್+ಅ+ತ ಎಂದಿರುತ್ತದೆ. ಆಗ ಧಾತುವಿಗೆ ದ್ವಿತ್ವ ಬಂದು ಅ+ಕಮ್ ಕಮ್+ಅ+ತ ಎಂದಾಗಿ, ಹಲಾದಿಶೇಷದಿಂದ ಅ+ಕಕಮ್+ಅ+ತ ಎಂದಾಗಿ ಚುತ್ವದಿಂದ ಅ+ಚಕಮ್+ಅ+ತ=ಅಚಕಮತ ಎಂದು ರೂಪವು ಸಿದ್ಧವಾಗುತ್ತದೆ.

**ಣಿಜ್ ಬಾರದ ಪಕ್ಷದಲ್ಲಿ** – ರೂಪಗಳು: ಅಚಕಮತ, ಅಚಕಮೇತಾಮ್, ಅಚಕಮನ್ತ। ಅಚಕಮಥಾಃ, ಅಚಕಮೇಥಾಮ್, ಅಚಕಮಧ್ವಮ್। ಅಚಕಮೇ, ಅಚಕಮಾವಹಿ, ಅಚಕಮಾಮಹಿ।

**ಲೃಙ್**: ಣಿಜ್ ಬಂದ ಪಕ್ಷದಲ್ಲಿ– ರೂಪಗಳು: ಅಕಾಮಯಿಷ್ಯತ, ಅಕಾಮಯಿಷ್ಯೇತಾಮ್, ಅಕಾಮಯಿಷ್ಯನ್ತ। ಅಕಾಮಯಿಷ್ಯಥಾಃ, ಅಕಾಮಯಿಷ್ಯೇಥಾಮ್, ಅಕಾಮಯಿಷ್ಯಧ್ವಮ್। ಅಕಾಮಯಿಷ್ಯೇ, ಅಕಾಮಯಿಷ್ಯಾವಹಿ, ಅಕಾಮಯಿಷ್ಯಾಮಹಿ।

**ಣಿಜ್ ಬಾರದ ಪಕ್ಷದಲ್ಲಿ**–

ರೂಪಗಳು: ಅಕಮಿಷ್ಯತ, ಅಕಮಿಷ್ಯೇತಾಮ್, ಅಕಮಿಷ್ಯನ್ತ। ಅಕಮಿಷ್ಯಥಾಃ, ಅಕಮಿಷ್ಯೇಥಾಮ್, ಅಕಮಿಷ್ಯಧ್ವಮ್। ಅಕಮಿಷ್ಯೇ, ಅಕಮಿಷ್ಯಾವಹಿ, ಅಕಮಿಷ್ಯಾಮಹಿ।

3. ಅಯ ಗತೌ (ಇದು ಗತ್ಯರ್ಥಕ ಧಾತುವಾಗಿದೆ). – ಗತಿ ಶಬ್ದಕ್ಕೆ ಗಮನ, ಜ್ಞಾನ, ಪ್ರಾಪ್ತಿ ಮತ್ತು ಮೋಕ್ಷ ಎಂದು ನಾಲ್ಕು ಅರ್ಥಗಳಿವೆ. ಆದ್ದರಿಂದ ಸಂದರ್ಭಕ್ಕೆ ತಕ್ಕಂತೆ ಅರ್ಥಗಳನ್ನು ತೆಗೆದುಕೊಳ್ಳಬೇಕು. ಈ ಧಾತುವಿನಲ್ಲಿ 'ಅಯ್' ಮಾತ್ರ ಉಳಿಯುತ್ತದೆ. ಇದು ಅನುದಾತ್ತೇತ್ತಾಗಿ ಆತ್ಮನೇಪದದಲ್ಲಿ ಇರುತ್ತದೆ.

**ಲಟ್**: ಉದಾ– ಅಯತೇ – ಪ್ರಥಮಪುರುಷ ಏಕವಚನದಲ್ಲಿ 'ಅಯ್' ಧಾತುವಿನ ನಂತರ 'ಲಟ್' 'ಲ್' ಕಾರಕ್ಕೆ 'ತ' ಆದೇಶ ಬಂದು, ಧಾತುವಿನ ಪರದಲ್ಲಿ 'ಶಪ್(ಅ)' ಬಂದಮೇಲೆ "ಟಿತ ಆತ್ಮನೇಪದಾನಾಂ ಟೇರೇ" ಎಂಬುದರಿಂದ 'ತ್' ಕಾರೋತ್ತರ 'ಅ' ಕಾರಕ್ಕೆ ಏತ್ವ ಬಂದು ಅಯ್+ಅ+ತೇ=ಅಯತೇ ಎಂಬ ರೂಪವು ಸಿದ್ಧವಾಗುತ್ತದೆ. ರೂಪಗಳು: ಅಯತೇ, ಅಯೇತೇ, ಅಯನ್ತೇ। ಅಯಸೇ, ಅಯೇಥೇ, ಅಯಧ್ವೇ। ಅಯೇ, ಅಯಾವಹೇ, ಅಯಾಮಹೇ।

**(ಉಪಸರ್ಗದ ರೇಫಕ್ಕೆ ಲತ್ವವನ್ನು ವಿಧಿಸುವ ಸೂತ್ರ)**

**ಸೂತ್ರ – ೫೩೫.ಉಪಸರ್ಗಸ್ಯಾಯತೌ (8.2.19)**

ವೃತ್ತಿಃ–ಅಯತಿ ಪರಸ್ಯ ಉಪಸರ್ಗಸ್ಯ ಯಃ ರೇಫಃ ತಸ್ಯ ಲತ್ವಂ ಸ್ಯಾತ್। ಪ್ಲಾಯತೇ। ಪಲಾಯತೇ।

ಪ. ಛೇ. – ಉಪಸರ್ಗಸ್ಯ, ಅಯತೌ।

ಅ. ವೃ– "ಕೃಪೋ ರೋ ಲಃ" ಎಂಬ ಸೂತ್ರದಿಂದ 'ರಃ' ಮತ್ತು 'ಲಃ' ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ– 'ಅಯ್' ಧಾತುವು ಪರದಲ್ಲಿ ಇದ್ದಾಗ ಪೂರ್ವದಲ್ಲಿರುವ ಉಪಸರ್ಗದ ರೇಫಕ್ಕೆ 'ಲ್' ಕಾರವು ಆದೇಶವಾಗಿ ಬರುತ್ತದೆ.

ಉದಾ– ಪ್ಲಾಯತೇ– 'ಪ್ರ' ಉಪಸರ್ಗಪೂರ್ವಕ ಅಯತೇ ಎಂಬಲ್ಲಿ ಪ್ರಕೃತ ಸೂತ್ರದಿಂದ 'ಪ್ರ' ನಲ್ಲಿರುವ ರೇಫಕ್ಕೆ 'ಲ್' ಕಾರ ಆದೇಶವಾಗಿ ಬಂದು ಪ್ಲ+ಅಯತೇ ಎಂದಿದ್ದಾಗ, ಸವರ್ಣದೀರ್ಘದಿಂದ ಪ್ಲಾಯತೇ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಪಲಾಯತೇ– ಪರಾ+ಅಯತೇ ಎಂಬಲ್ಲಿಯೂ ರೇಫಕ್ಕೆ 'ಲ್' ಕಾರವು ಬಂದು ಪಲಾ+ಅಯತೇ ಎಂದಿದ್ದಾಗ ಸವರ್ಣದೀರ್ಘ ಸಂಧಿಯಿಂದ ಪಲಾಯತೇ ಎಂದು ರೂಪವು ಸಿದ್ಧವಾಗುತ್ತದೆ.

**(ಆಮ್ ಆಗಮವನ್ನು ವಿಧಿಸುವ ಸೂತ್ರ)**

**ಸೂತ್ರ – 536.ದಯಾಯಾಸಶ್ಚ (3.1.37)**

ವೃತ್ತಿಃ–ದಯ್, ಅಯ್, ಆಸ್, ಏಭ್ಯಃ ಆಮ್ ಸ್ಯಾತ್ ಲಿಟಿ। ಅಯಾಞ್ಚಕ್ರೇ। ಅಯಿತಾ। ಅಯಿಷ್ಯತೇ। ಅಯತಾಮ್। ಆಯತ। ಅಯೇತ। ಅಯಿಷೀಷ್ಟ (527) ವಿಭಾಷೇಟಃ)। ಅಯಿಷೀಢ್ವಮ್, ಅಯಿಷೀಧ್ವಮ್। ಆಯಿಷ್ಟ। ಆಯಿಢ್ವಮ್, ಆಯಿಧ್ವಮ್। ಆಯಿಷ್ಯತ। ದ್ಯುತ ದೀಪ್ತೌ।4। ದ್ಯೋತತೇ।

ಪ. ಛೇ. – ದಯ–ಅಯ–ಆಸಃ, ಚ।

ಅ. ವೃ.– "ಕಾಸ್ ಪ್ರತ್ಯಯಾದಾಮಮನ್ತ್ರೇ ಲಿಟಿ" ಎಂಬ ಸೂತ್ರದಿಂದ 'ಲಿಟಿ' ಎಂಬ ಪದವು ಅನುವೃತವಾಗುತ್ತದೆ.

ಅರ್ಥ– 'ಲಿಟ್' 'ಲ್' ಕಾರವು ಪರದಲ್ಲಿದ್ದಾಗ, ದಯ್, ಅಯ್, ಮತ್ತು ಆಸ್ ಈ ಧಾತುಗಳಮೇಲೆ 'ಆಮ್' ಪ್ರತ್ಯಯವು ಬರುತ್ತದೆ.

**ಅನುಪ್ರಯೋಗ ಲಿಟ್**: ಉದಾ–ಅಯಾಞ್ಚಕ್ರೇ – ಪ್ರಥಮಪುರುಷ ಏಕವಚನದಲ್ಲಿ 'ಅಯ್' ಧಾತುವಿನ ನಂತರ 'ಲಿಟ್' 'ಲ್' ಕಾರ ಬಂದು ಪ್ರಕೃತ ಸೂತ್ರದಿಂದ 'ಆಮ್' ಪ್ರತ್ಯಯ ಬಂದಮೇಲೆ ಪರದಲ್ಲಿರುವ 'ಲಿಟ್' 'ಲ್' ಕಾರಕ್ಕೆ 'ಲುಕ್(ಲೋಪ)' ಬರುತ್ತದೆ. ನಂತರ 'ಕೃ' ಧಾತುವಿನ ಆತ್ಮನೇಪದದ ಅನುಪ್ರಯೋಗ ಬಂದಾಗ, ಅಯಾಮ್+ಕೃ+ತ ಎಂದಿರುತ್ತದೆ. ಧಾತುವಿಗೆ ದ್ವಿತ್ವ, 'ಉರತ್' ಎಂಬ ಸೂತ್ರದಿಂದ 'ಅತ್ವ(ಅ)' ಬಂದು ಹಲಾದಿಶೇಷ, ಚುತ್ವ, 'ಏಶ್' ಮೊದಲಾದವುಗಳು ಬಂದು ಅಯಾಞ್ಚಕ್ರೇ ಎಂಬ ರೂಪವು ಸಿದ್ಧವಾಗುತ್ತದೆ.

'ಲಿಟ್' 'ಲ್' ಕಾರದ 'ಕೃ' ಧಾತುವಿನ ಆತ್ಮನೇ ಪದದ ಅನುಪ್ರಯೋಗ:

ರೂಪಗಳು: ಅಯಾಞ್ಚಕ್ರೇ, ಅಯಾಞ್ಚಕ್ರಾತೇ, ಅಯಾಞ್ಚಕ್ರಿರೇ। ಅಯಾಞ್ಚಕೃಷೇ, ಅಯಾಞ್ಚಕ್ರಾಥೇ, ಅಯಾಞ್ಚಕೃಢ್ವೇ। ಅಯಾಞ್ಚಕ್ರೇ, ಯಾಞ್ಚಕೃವಹೇ, ಅಯಾಞ್ಚಕೃಮಹೇ।

ಪರಸ್ಮೈಪದಿಯಾದ 'ಭೂ' ಧಾತುವಿನ ಅನುಪ್ರಯೋಗ:

ರೂಪಗಳು: ಅಯಾಮ್ಬಭೂವ, ಅಯಾಮ್ಬಭೂವತುಃ, ಅಯಾಮ್ಬಭೂವುಃ।

ಅಯಾಮ್ಬಭೂವಿಥ, ಅಯಾಮ್ಬಭೂವಥುಃ, ಅಯಾಮ್ಬಭೂವ। ಅಯಾಮ್ಬಭೂವ, ಅಯಾಮ್ಬಭೂವಿವ, ಅಯಾಮ್ಬಭೂವಿಮ।

**ಪರಸ್ಮೈಪದಿಯಾದ 'ಅಸ್' ಧಾತುವಿನ ಅನುಪ್ರಯೋಗ:**

ರೂಪಗಳು: ಅಯಾಮಾಸ, ಅಯಾಮಾಸತುಃ, ಅಯಾಮಾಸುಃ। ಅಯಾಮಾಸಿಥ, ಅಯಾಮಾಸಥುಃ, ಅಯಾಮಾಸ। ಅಯಾಮಾಸ, ಅಯಾಮಾಸಿವ, ಅಯಾಮಾಸಿಮ।

**ಲುಟ್**: ರೂಪಗಳು: ಅಯಿತಾ, ಅಯಿತಾರೌ, ಅಯಿತಾರಃ। ಅಯಿತಾಸೇ, ಅಯಿತಾಸಾಥೇ, ಅಯಿತಾಧ್ವೇ। ಅಯಿತಾಹೇ, ಅಯಿತಾಸ್ವಹೇ, ಅಯಿತಾಸ್ಮಹೇ।

**ಲೃಟ್**: ರೂಪಗಳು: ಅಯಿಷ್ಯತೇ, ಅಯಿಷ್ಯೇತೇ, ಅಯಿಷ್ಯನ್ತೇ। ಅಯಿಷ್ಯಸೇ, ಅಯಿಷ್ಯೇಥೇ, ಅಯಿಷ್ಯಧ್ವೇ।ಅಯಿಷ್ಯೇ, ಅಯಿಷ್ಯಾವಹೇ, ಅಯಿಷ್ಯಾಮಹೇ।

**ಲೋಟ್**: ರೂಪಗಳು: ಅಯಿತಾಮ್, ಅಯೇತಾಮ್, ಅಯನ್ತಾಮ್। ಅಯಸ್ವ, ಅಯೇಥಾಮ್, ಅಯಧ್ವಮ್। ಅಯೈ, ಅಯಾವಹೈ, ಅಯಾಮಹೈ।

**ಲಙ್**: ರೂಪಗಳು: ಆಯಿತ , ಆಯೇತಾಮ್, ಆಯನ್ತ ಆಯಥಾಃ, ಆಯೇಥಾಮ್, ಆಯಧ್ವಮ್। ಆಯೇ, ಆಯಾವಹಿ, ಆಯಾಮಹಿ।

**ವಿಧಿಲಿಙ್**: ರೂಪಗಳು: ಅಯೇತ, ಅಯೇತಾಮ್, ಅಯೇರನ್। ಅಯೇಥಾಃ, ಅಯೇಥಾಮ್, ಅಯೇಧ್ವಮ್। ಅಯೇಯ, ಅಯೇವಹಿ, ಅಯೇಮಹಿ।

**ಆಶೀರ್ಲಿಙ್**: ರೂಪಗಳು: ಅಯಿಷೀಷ್ಟ, ಅಯಿಷೀಯಾಸ್ತಾಮ್, ಅಯಿಷೀರನ್। ಅಯೀಷೀಷ್ಠಾಃ, ಅಯಿಷೀಯಾಸ್ಥಾಮ್, (527) (ವಿಭಾಷೇಟಃ), ಅಯಿಷೀಢ್ವಮ್/ ಅಯಿಷೀಧ್ವಮ್। ಅಯಿಷೀಯ, ಅಯಿಷೀವಹಿ, ಅಯಿಷೀಮಹಿ।

**ಲುಙ್**: ರೂಪಗಳು: ಆಯಿಷ್ಟ, ಆಯಿಷಾತಾಮ್, ಆಯಿಷತ। ಆಯಿಷ್ಠಾಃ, ಆಯಿಷಾಥಾಮ್, ಆಯಿಢ್ವಮ್, ಆಯಿಧ್ವಮ್। ಆಯಿಷಿ, ಆಯಿಷ್ವಹಿ, ಆಯಿಷ್ಮಹಿ।

**ಲೃಙ್**: ರೂಪಗಳು: ಆಯಿಷ್ಯತ, ಆಯಿಷ್ಯೇತಾಮ್, ಆಯಿಷ್ಯನ್ತ। ಆಯಿಷ್ಯಥಾಃ, ಅಯಿಷ್ಯೇಥಾಮ್, ಆಯಿಷ್ಯಧ್ವಮ್, ಆಯಿಷ್ಯೇ, ಆಯಿಷ್ಯಾವಹಿ, ಆಯಿಷ್ಯಾಮಹಿ।

ಧಾತು 4. ದ್ಯುತ ದೀಪ್ತೌ (ಪ್ರಕಾಶಿತವಾಗುವುದು, ಹೊಳೆಯುವುದು, ಪ್ರಕಟವಾಗುವುದು)– ಇದರಲ್ಲಿ 'ದ್ಯುತ್' ಮಾತ್ರ ಉಳಿಯುತ್ತದೆ.

**ಲಟ್**: ಉದಾ– ದ್ಯೋತತೇ– ಪ್ರಥಮಪುರುಷ ಏಕವಚನದಲ್ಲಿ, 'ದ್ಯುತ್' ಧಾತುವಿನ ನಂತರ 'ಲಟ್' 'ಲ್' ಕಾರ ಬಂದು, ಅದಕ್ಕೆ 'ತ' ಆದೇಶ ಬಂದಮೇಲೆ ಧಾತುವಿನ ನಂತರ 'ಶಪ್(ಅ)' ಬಂದು, ಉಪಧೆಗೆ ಗುಣ ಬಂದು,"ಟಿತ ಆತ್ಮನೇಪದಾನಾಂ ಟೇರೇ" ಎಂಬುದರಿಂದ ಏತ್ವ(ಏ) ಬಂದು ದ್ಯೋತತೇ ಎಂಬ ರೂಪವು ಸಿದ್ಧವಾಗುತ್ತದೆ.

ರೂಪಗಳು: ದ್ಯೋತತೇ, ದ್ಯೋತೇತೆ, ದ್ಯೋತನ್ತೇ। ದ್ಯೋತಸೇ, ದ್ಯೋತೇಥೇ, ದ್ಯೋತಧ್ವೇ। ದ್ಯೋತೇ, ದ್ಯೋತಾವಹೇ, ದ್ಯೋತಾಮಹೇ।

**(ಅಭ್ಯಾಸಕ್ಕೆ ಸಂಪ್ರಸಾರಣವನ್ನು ವಿಧಿಸುವ ಸೂತ್ರ)**

**ಸೂತ್ರ - 537.ದ್ಯುತಿ-ಸ್ವಾಪ್ಯೋಃ ಸಂಪ್ರಸಾರಣಮ್ (7.4.69)**

ವೃತ್ತಿಃ-ಅನಯೋಃ ಅಭ್ಯಾಸಸ್ಯ ಸಂಪ್ರಸಾರಣಂ ಸ್ಯಾತ್। ದಿದ್ಯುತೇ।

ಅ.ವೃ.- "ಅತ್ರ ಲೋಪೋಽಭ್ಯಾಸಸ್ಯ" ಎಂಬ ಸೂತ್ರದಿಂದ 'ಅಭ್ಯಾಸಸ್ಯ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- 'ದ್ಯುತ್' ಧಾತು ಹಾಗೂ ಣ್ಯನ್ತವಾದ 'ಸ್ವಪ್' ಧಾತುವಿನ ಅಭ್ಯಾಸಕ್ಕೆ ಸಂಪ್ರಸಾರಣ ಸಂಜ್ಞೆಯು ಬರುತ್ತದೆ.

ಸೂಚನೆ: 'ದ್ಯುತ್' ಧಾತುವಿಗೆ ದ್ವಿತ್ವ ಮಾಡಿದಮೇಲೆ ಅಭ್ಯಾಸದಲ್ಲಿ ಸಂಪ್ರಸಾರಣವು ಬರುತ್ತದೆ. ಅಂದರೆ ಅಲ್ಲಿರುವ 'ಯ್' ಕಾರಕ್ಕೆ 'ಓ' ಕಾರವು ಆದೇಶವಾಗಿ ಬರುತ್ತದೆ.

**ಲಿಟ್:**

ಉದಾ- ದಿದ್ಯುತೇ- ಪ್ರಥಮಪುರುಷ ಏಕವಚನದಲ್ಲಿ- 'ದ್ಯುತ್' ಧತುವಿನ ಮೇಲೆ 'ಲಿಟ್' 'ಲ್' ಕಾರ ಬಂದು, ಅದಕ್ಕೆ 'ತ' ಆದೇಶ ಬಂದಮೇಲೆ, ಅದಕ್ಕೆ 'ಏಶ್(ಏ)' ಆದೇಶವು ಬಂದು, ದ್ವಿತ್ವ ಮಾಡಿದಮೇಲೆ ದ್ಯುತ್ ದ್ಯುತ್+ಏ ಎಂದಿದ್ದಾಗ, ಅಭ್ಯಾಸ ಸಂಜ್ಞೆಯನ್ನು ಹೊಂದಿರುವ 'ದ್ಯುತ್' ನಲ್ಲಿರುವ 'ಯ್' ಕಾರಕ್ಕೆ ಪ್ರಕೃತ ಸೂತ್ರದಿಂದ 'ಇ' ಕಾರವು ಸಂಪ್ರಸಾರಣ ಆದೇಶವಾಗಿ ಬಂದು ದ್+ಇ+ಉತ್ ಎಂದಿರುತ್ತದೆ. "ಸಂಪ್ರಸಾರಣಾಚ್ಚ" ಎಂಬ ಸೂತ್ರದಿಂದ 'ಇ' 'ಉ' ಗಳು ಸೇರಿದಾಗ, ಪೂರ್ವರೂಪ ದಿಂದ 'ಇ' ಕಾರವೇ ಬಂದು ದಿತ್ ಎಂದೇ ಉಳಿಯುತ್ತದೆ. ಆಗ ದಿತ್+ದ್ಯುತ್+ಏ ಎಂದಿದ್ದಾಗ, ಹಲಾದಿಶೇಷದಿಂದ ದಿದ್ಯುತ್+ಏ=ದಿದ್ಯುತೇ ಎಂಬ ರೂಪವು ಸಿದ್ಧವಾಗುತ್ತದೆ.

ರೂಪಗಳು: ದಿದ್ಯುತೇ, ದಿದ್ಯುತಾತೇ, ದಿದ್ಯುತಿರೇ। ದಿದ್ಯುತಿಷೇ, ದಿದ್ಯುತಾಥೇ, ದಿದ್ಯುತಿಧ್ವೇ। ದಿದ್ಯುತೇ, ದಿದ್ಯುತಿವಹೇ, ದಿದ್ಯುತಿಮಹೇ।

**ಲುಟ್**: ರೂಪಗಳು: ದ್ಯೋತಿತಾ, ದ್ಯೋತಿತಾರೌ, ದ್ಯೋತಿತಾರಃ। ದ್ಯೋತಿತಾಸೇ, ದ್ಯೋತಿತಾಸಾಥೇ,ದ್ಯೋತಿತಾಧ್ವೇ। ದ್ಯೋತಿತಾಹೇ, ದ್ಯೋತಿತಾಸ್ವಹೇ, ದ್ಯೋತಿತಾಸ್ಮಹೇ।

**ಲೃಟ್**: ರೂಪಗಳು: ದ್ಯೋತಿಷ್ಯತೇ, ದ್ಯೋತಿಷ್ಯೇತೇ, ದ್ಯೋತಿಷ್ಯನ್ತೇ। ದ್ಯೋತಿಷ್ಯಸೇ, ದ್ಯೋತಿಷ್ಯೇಥೇ, ದ್ಯೋತಿಷ್ಯಧ್ವೇ। ದ್ಯೋತಿಷ್ಯೇ, ದ್ಯೋತಿಷ್ಯಾವಹೇ, ದ್ಯೋತಿಷ್ಯಾಮಹೇ।

**ಲೋಟ್**: ರೂಪಗಳುಃ ದ್ಯೋತತಾಮ್, ದ್ಯೋತೇತಾಮ್, ದ್ಯೋತನ್ತಾಮ್। ದ್ಯೋತಸ್ವ ದ್ಯೋತೇಥಾಮ್, ದ್ಯೋತಧ್ವಮ್। ದ್ಯೋತೈ, ದ್ಯೋತಾವಹೈ, ದ್ಯೋತಾನಹೈ।

**ಲಙ್**: ರೂಪಗಳು: ಅದ್ಯೋತತ, ಅದ್ಯೋತೇತಾಮ್, ಅದ್ಯೋತನ್ತ। ಅದ್ಯೋತಥಾಃ, ಅದ್ಯೋತೇಥಾಮ್, ಅದ್ಯೋತಧ್ವಮ್। ಅದ್ಯೋತೇ, ಅದ್ಯೋತಾವಹಿ, ಅದ್ಯೋತಾಮಹಿ।

**ವಿಧಿಲಿಙ್**: ರೂಪಗಳು: ದ್ಯೋತೇತ, ದ್ಯೋತೇಯಾತಾಮ್, ದ್ಯೋತೇರನ್। ದ್ಯೋತೇಥಾಃ, ದ್ಯೋತೇಯಾಥಾಮ್, ದ್ಯೋತೇಧ್ವಮ್। ದ್ಯೋತೇಯ, ದ್ಯೋತೇವಹಿ,

ದ್ಯೋತೇಮಹಿ।

**ಆಶೀರ್ಲಿಙ್**: ರೂಪಗಳು: ದ್ಯೋತಿಷೀಷ್ಟ, ದ್ಯೋತಿಷೀಯಾಸ್ತಾಮ್, ದ್ಯೋತಿಷೀರನ್। ದ್ಯೊತಿಷೀಷ್ಠಾಃ, ದ್ಯೋತಿಷೀಯಾಸ್ಥಾಮ್, ದ್ಯೊತಿಷೀಧ್ವಮ್। ದ್ಯೋತಿಷೀಯ, ದ್ಯೋತಿಷೀವಹಿ, ದ್ಯೋತಿಷೀಮಹಿ।

**(ವೈಕಲ್ಪಿಕವಾಗಿ ಪರಸ್ಮೈಪದವನ್ನು ವಿಧಿಸುವ ಸೂತ್ರ)**

**ಸೂತ್ರ – 538.ದ್ಯುದ್ಭ್ಯೋ ಲುಙಿ (1.3.91)**

ವೃತ್ತಿಃ–ದ್ಯುತಾದಿಭ್ಯೋ ಲುಙಃ ಪರಸ್ಮೈಪದಂ ವಾ ಸ್ಯಾತ್। (507) ಪುಷಾದಿ ಇತಿ ಅಙ್ ಅದ್ಯುತತ್। ಅದ್ಯೋತಿಷ್ಟ ಅದ್ಯೋತಿಷ್ಯತ। ಏವಂ "ಶ್ವಿತಾ ವರ್ಣೇ"। 5। ಞಿಮಿದಾ ಸ್ನೇಹನೇ।6। ಞಿಷ್ವಿದಾ ಸ್ನೇಹನಮೋಚನಯೋಃ। 7। ಮೋಹನಯೋಃ ಇತ್ಯೇಕೇ। ಞಿಕ್ಷ್ವಿದಾ ಚ ಇತ್ಯೇಕೇ।ರುಚ ದೀಪ್ತೌ ಅಭಿಪ್ರೀತೌ। ಚ। 8 । ಘುಟ ಪರಿವರ್ತನೇ। 9। ಶುಭ ದೀಪ್ತೌ। 10। ಕ್ಷುಭ ಸಞ್ಚಲನೇ। 11 । ಣಭ। 12। ತುಭ ಹಿಂಸಾಯಾಮ್। 13। ಸ್ರಂಸು–14, ಭ್ರಂಸು–15, ಧ್ವಂಸು–ಅವಸ್ರಂಸನೇ। 16(ಅ) । ಧ್ವಂಸು ಗತೌ ಚ। 16(ಬ) । ಸ್ರಂಭು ವಿಶ್ವಾಸೇ। 17। ವೃತು ವರ್ತನೇ। 18। ವರ್ತತೇ, ವವೃತೇ। ವರ್ತಿತಾ। ಪ. ಭೇ. – ದ್ಯುದ್ಭ್ಯಃ, ಲುಙಿ।

ಅ. ವೃ.– "ವಾ ಕ್ಯಷಃ" ಎಂಬ ಸೂತ್ರದಿಂದ 'ವಾ' ಎಂಬ ಪದವೂ ಮತ್ತು "ಶೇಷಾತ್ ಕರ್ತರಿ ಪರಸ್ಮೈಪದಮ್" ಎಂಬಸೂತ್ರದಿಂದ 'ಪರಸ್ಮೈಪದಮ್' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ– ದ್ಯುತ್ ಮೊದಲಾದ ಧಾತುಗಳ ನಂತರ ಇರುವ 'ಲುಙ್'ಗೆ ವೈಕಲ್ಪಿಕವಾಗಿ ಪರಸ್ಮೈಪದವು ಬರುತ್ತದೆ.

ವಿಶೇಷ: ದ್ಯುತಾದಿ ಗಣದಲ್ಲಿ 22 ಧಾತುಗಳು ಹೇಳಲ್ಪಟ್ಟಿವೆ. ಅವುಗಳು ಇಲ್ಲಿ ಗ್ರಹೀತವಾಗಿವೆ. ವಿಕಲ್ಪದಿಂದ ಅವು ಬರೋಣದ್ದರಿಂದ 'ಲುಙ್' ನಲ್ಲಿ ವೈಕಲ್ಪಿಕವಾಗಿ ಪರಸ್ಮೈಪದ ಮತ್ತು ಆತ್ಮನೇ ಪದಗಳು ಬರುತ್ತವೆ. ಈ ನಿಯಮವು 'ಲುಙ್' 'ಲ್' ಕಾರದಲ್ಲಿ ಮಾತ್ರ ಅನ್ವಯಿಸುತ್ತದೆ ಬೇರೆಕಡೆಗೆ ಅಲ್ಲ.

**ಲುಙ್**: ಉದಾ– ಅದ್ಯುತತ್–ಪ್ರಥಮಪುರುಷ ಏಕವಚನದಲ್ಲಿ 'ದ್ಯುತ್' ಧಾತುವಿನ ನಂತರ 'ಲುಙ್' 'ಲ್' ಕಾರ ಬಂದು ವೈಕಲ್ಪಿಕವಾಗಿ ಪರಸ್ಮೈಪದವೂ ಬರುತ್ತದೆ. ಅಲ್ಲಿ ಧಾತುವಿಗೆ ಅಡಾಗಮ ಬಂದು ಧಾತುವಿನ ನಂತರ ಇರುವ 'ತಿ' ಎಂಬ ಆಖ್ಯಾತ ಪ್ರತ್ಯಯದಲ್ಲಿ ಇರುವ 'ಇ' ಕಾರಕ್ಕೆ "ಇತಶ್ಚ" ಎಂಬುದರಿಂದ ಲೋಪವು ಬರುತ್ತದೆ. ಆಗ ಅದ್ಯುತ್+ತ್ ಎಂದಿರುತ್ತದೆ. ಇದಕ್ಕೆ 'ಚ್ಲಿ' ಬಂದಾಗ ಅದರ ಸ್ಥಾನದಲ್ಲಿ "ಪುಷಾದಿ ದ್ಯುತಾದ್ಯ್ಲೃದಿತಃ ಪರಸ್ಮೈಪದೇಷು " ಎಂಬ ಸೂತ್ರದಿಂದ 'ಅಙ್(ಅ)' ಆದೇಶ ಬಂದು ಅದ್ಯುತ್+ಅ+ತ್ ಎಂದಿರುತ್ತದೆ. 'ಅಙ್' ಇದು 'ಙಿತ್' ಆಗಿರೋಣದರಿಂದ ಗುಣ ಬಾರದೇ ಅದ್ಯುತತ್ ಎಂದು ರೂಪವು ಸಿದ್ಧವಾಗುತ್ತದೆ.

ಪರಸ್ಮೈಪದವಲ್ಲದ ವೈಕಲ್ಪಿಕ ಆತ್ಮನೇ ಪದದಲ್ಲಿ 'ಚ್ಲಿ' ಗೆ 'ಸಿಚ್(ಇ)' ಬರುತ್ತದೆ.

'ಅಜ್' ಪ್ರತ್ಯಯವೂ ಬರುವುದಿಲ್ಲ. ಯಾಕೆಂದರೆ ಅದು ಪರಸ್ಮೈಪದದಲ್ಲಿ ಮಾತ್ರ ಬರುತ್ತದೆ ಎಂಬುದನ್ನು ಗಮನಿಸಬೇಕು. ಈಗ 'ಸಿಚ್' ಗೆ ಇಡಾಗಮ ಬಂದದ್ದರಿಂದ ಲಘೂಪಧೆಗೆ ಗುಣ ಬರುತ್ತದೆ.

**(ವೈಕಲ್ಪಿಕ ಆತ್ಮನೇಪದ)**: ರೂಪಗಳು: ಅದ್ಯೋತಿಷ್ಟ, ಅದ್ಯೋತಿಷಾತಾಮ್, ಅದ್ಯೋತಿಷತ। ಅದ್ಯೋತಿಷ್ಠಾಃ, ಅದ್ಯೋತಿಷಾಥಾಮ್, ಅದ್ಯೊತಿಷಡ್ವಮ್। ಅದ್ಯೋತಿಷಿ, ಅದ್ಯೋತಿಷ್ವಹಿ, ಅದ್ಯೋತಿಷ್ಮಹಿ।

**ಪರಸ್ಮೈಪದದ ರೂಪಗಳು**: ಅದ್ಯುತತ್, ಅದ್ಯುತತಾಮ್, ಅದ್ಯುತನ್। ಅದ್ಯುತಃ, ಅದ್ಯುತತಮ್, ಅದ್ಯುತತ। ಅದ್ಯುತಮ್, ಅದ್ಯುತಾವ, ಅದ್ಯುತಾಮ।

**ಲೃಙ್**: ರೂಪಗಳು: ಅದ್ಯೋತಿಷ್ಯತ, ಅದ್ಯೋತಿಷ್ಯೇತಾಮ್, ಅದ್ಯೋತಿಷ್ಯನ್ತ। ಅದ್ಯೋತಿಷ್ಯಥಾಃ, ಅದ್ಯೋತಿಷ್ಯೇಥಾಮ್, ಅದ್ಯೋತಿಷ್ಯಧ್ವಮ್। ಅದ್ಯೋತಿಷ್ಯೇ, ಅದ್ಯೋತಿಷ್ಯಾವಹಿ, ಅದ್ಯೋತಿಷ್ಯಾಮಹಿ।

ಧಾತು 5. ಶ್ವಿತಾ ವರ್ಣೇ (ಬಿಳಿಬಣ್ಣವಾಗುವುದು)– ಇದರಲ್ಲಿ 'ಶ್ವಿತ್' ಮಾತ್ರ ಉಳಿಯುತ್ತದೆ ಇದರ ರೂಪಗಳು 'ದ್ಯುತ್' ಧಾತುವಿನ ರೂಪಗಳಂತೆಯೇ ಇರುತ್ತವೆ. 'ಶ್ವಿತ್' ದಲ್ಲಿರುವ 'ಇ' ಕಾರಕ್ಕೆ 'ಏ' ಕಾರವು ಗುಣವಾಗಿ ಬರುತ್ತದೆ.

**ಲಟ್**: ರೂಪಗಳು: ಶ್ವೇತತೇ, ಶ್ವೇತೇತೇ, ಶ್ವೇತನ್ತೇ। ಶ್ವೇತಸೇ, ಶ್ವೇತೇಥೇ, ಶ್ವೇತಧ್ವೇ। ಶ್ವೇತೇ, ಶ್ವೇತಾವಹೇ, ಶ್ವೇತಾಮಹೇ

**ಲಿಟ್**: ರೂಪಗಳು: ಶಿಶ್ವಿತೇ, ಶಿಷ್ವಿತಾತೇ, ಶಿಶ್ವಿತಿರೇ। ಶಿಶ್ವಿತಿಷೇ, ಶಿಶ್ವಿತಾಥೇ, ಶಿಶ್ವಿತಿಧ್ವೇ। ಶಿಶ್ವಿತೇ, ಶಿಶ್ವಿತಿವಹೇ, ಶಿಶ್ವಿತಿಮಹೇ।

**ಲುಟ್**: ರೂಪಗಳು: ಶ್ವೇತಿತಾ, ಶ್ವೇತಿತಾರೌ, ಶ್ವೇತಿತಾರಃ। ಶ್ವೇತಿತಾಸೇ, ಶ್ವೇತಿತಾಸಾಥೇ, ಶ್ವೇತಿತಾಧ್ವೆ ಶ್ವೇತಿತಾಹೇ, ಶ್ವೇತಿತಾಸ್ವಹೇ, ಶ್ವೇತಿತಾಸ್ಮಹೆ।

**ಲೃಟ್**: ರೂಪಗಳು: ಶ್ವೇತಿಷ್ಯತೇ, ಶ್ವೇತಿಷ್ಯೇತೆ, ಶ್ವೇತಿಷ್ಯನ್ತೇ। ಶ್ವೇತಿಷ್ಯಸೇ, ಶ್ವೇತಿಷ್ಯೇಥೇ, ಶ್ವೇತಿಷ್ಯಧ್ವೇ। ಶ್ವೇತಿಷ್ಯೇ, ಶ್ವೇತಿಷ್ಯಾವಹೇ, ಶ್ವೇತಿಷ್ಯಾಮಹೇ।

**ಲೋಟ್**: ರೂಪಗಳು: ಶ್ವೇತತಾಮ್,ಶ್ವೇತೇತಾಮ್, ಶ್ವೇತನ್ತಾಮ್।ಶ್ವೇತಸ್ವ, ಶ್ವೇತೇಥಾಮ್, ಶ್ವೇತಧ್ವಮ್। ಶ್ವೇತೈ, ಶ್ವೇತಾವಹೈ, ಶ್ವೇತಾಮಹೈ।

**ಲಙ್**: ರೂಪಗಳು: ಅಶ್ವೇತತ, ಅಶ್ವೇತೇತಾಮ್, ಅಶ್ವೇತನ್ತ ಅಶ್ವೇತಥಾಃ, ಅಶ್ವೇತೇಥಾಮ್, ಅಶ್ವೇತಧ್ವಮ್। ಅಶ್ವೇತೇ, ಅಶ್ವೇತಾವಹಿ, ಅಶ್ವೇತಾಮಹಿ।

**ವಿಧಿಲಿಙ್**: ರೂಪಗಳು: ಶ್ವೇತೇತ, ಶ್ವೇತೇಯಾತಾಮ್, ಶ್ವೇತೇರನ್। ಶ್ವೇತೇಥಾಃ, ಶ್ವೇತೇಯಾಥಾಮ್, ಶ್ವೇತೇಧ್ವಮ್। ಶ್ವೇತೇಯ, ಶ್ವೇತೇವಹಿ, ಶ್ವೇತೇಮಹಿ।

**ಆಶೀರ್ಲಿಙ್**: ರೂಪಗಳು:ಶ್ವೇತಿಷೀಷ್ಟ,ಶ್ವೇತಿಷೀಯಾಸ್ತಾಮ್, ಶ್ವೇತಿಷೀರನ್।ಶ್ವೇತಿಷಿಷ್ಠಾಃ, ಶ್ವೇತಿಷೀಯಾಸ್ಥಾಮ್, ಶ್ವೇತಿಷೀಧ್ವಮ್। ಶ್ವೇತಿಷೀಯ,

ಶ್ವೇತಿಷೀವಹಿ, ಶ್ವೇತಿಷೀಮಹಿ।

**ಲುಙ್**: ರೂಪಗಳು: ಅಶ್ವೇತಿಷ್ಟ, ಅಶ್ವೇತಿಷಾತಾಮ್, ಅಶ್ವೇತಿಷತ। ಅಶ್ವೇತಿಷ್ಠಾಃ, ಅಶ್ವೇತಿಷಾಥಾಮ್, ಅಶ್ವೇತಿಢ್ವಮ್। ಅಶ್ವೇತಿಷಿ, ಅಶ್ವೇತಿಷ್ವಹಿ, ಅಶ್ವೇತಿಷ್ಮಹಿ।

**ಪ್ರಕೃತ ಸೂತ್ರದಿಂದ**

ವೈಕಲ್ಪಿಕ ಪರಸ್ಮೈಪದ ರೂಪಗಳು: ಅಶ್ವಿತತ್,ಅಶ್ವಿತತಾಮ್, ಅಶ್ವಿತನ್। ಅಶ್ವಿತಃ, ಅಶ್ವಿತತಮ್, ಅಶ್ವಿತತ। ಅಶ್ವಿತಮ್, ಅಶ್ವಿತಾವ, ಅಶ್ವಿತಾಮ।

**ಲೃಙ್**: ರೂಪಗಳು: ಅಶ್ವೇತಿಷ್ಯತ, ಅಶ್ವೇತಿಷ್ಯೇತಾಮ್, ಅಶ್ವೇತಿಷತ। ಅಶ್ವೇತಿಷ್ಯಥಾಃ, ಅಶ್ವೇತಿಷ್ಯೇಥಾಮ್, ಅಶ್ವೇತಿಷ್ಯಧ್ವಮ್। ಅಶ್ವೇತಿಷ್ಯೇ, ಅಶ್ವೇತಿಷ್ಯಾವಹಿ, ಅಶ್ವೇತಿಷ್ಯಾಮಹಿ।

ಧಾತು 6. ಞಿಮಿದಾ ಸ್ನೇಹನೇ (ಸ್ನೇಹಮಾಡುವುದು, ಸ್ನಿಗ್ಧವಾಗಿಮಾಡುವುದು, ಮೃದುಮಾಡುವುದು) – ಇದರಲ್ಲಿ 'ಮಿದ್' ಮಾತ್ರ ಉಳಿಯುತ್ತದೆ.

ಸೂಚನೆ – ಈ ಧಾತುವು 4 ನೇ ಗಣದಲ್ಲಿಯೂ ಪರಸ್ಮೈಪದದಲ್ಲಿ ಇದ್ದು ಅದರ ಪ್ರಕಾರ ಕೆಳಗಿನಂತ ರೂಪಗಳನ್ನು ಹೊಂದುತ್ತದೆ.

**ಲಟ್**: ರೂಪಗಳು: ಮೇದತೇ, ಮೇದೇತೇ, ಮೇದನ್ತೇ। ಮೇದಸೇ, ಮೇದೇಥೇ, ಮೇದಧ್ವೇ। ಮೇಧೇ, ಮೇಧಾವಹೇ, ಮೇಧಾಮಹೇ।

**ಲಿಟ್**: ರೂಪಗಳು: ಮಿಮಿದೇ, ಮಿಮಿದಾತೇ, ಮಿಮಿದಿರೇ।ಮಿಮಿದಿಷೇ, ಮಿಮಿದಾಥೇ, ಮಿಮಿದಿಧ್ವೇ। ಮಿಮಿದೇ, ಮಿಮಿದಿವಹೇ, ಮಿಮಿದಿಮಹೇ।

**ಲುಟ್**: ರೂಪಗಳು: ಮೇದಿತಾ, ಮೇದಿತಾರೌ, ಮೇದಿತಾರಃ। ಮೇದಿತಾಸೇ, ಮೇದಿತಾಸಾಥೇ, ಮೇದಿತಾಧ್ವೇ। ಮೇದಿತಾಹೇ, ಮೇದಿತಾಸ್ವಹೇ, ಮೇದಿತಾಸ್ಮಹೇ।

**ಲೃಟ್**: ರೂಪಗಳು: ಮೇದಿಷ್ಯತೇ, ಮೇದಿಷ್ಯೇತೇ, ಮೇದಿಷ್ಯನ್ತೇ। ಮೇದಿಷ್ಯಸೇ, ಮೇದಿಷ್ಯೇಥೇ, ಮೇದಿಷ್ಯಧ್ವೇ। ಮೇದಿಷ್ಯೇ, ಮೇದಿಷ್ಯಾವಹೇ, ಮೇದಿಷ್ಯಾಮಹೇ।

**ಲೋಟ್**: ರೂಪಗಳು: ಮೇದತಾಮ್, ಮೇದೇತಾಮ್, ಮೇದನ್ತಾಮ್। ಮೇದಸ್ವ ಮೇದೇಥಾಮ್, ಮೇದಧ್ವಮ್। ಮೇದೈ, ಮೇದಾವಹೈ, ಮೇದಾಮಹೈ।

**ಲಙ್**: ರೂಪಗಳು: ಅಮೇದತ, ಅಮೇದೇತಾಮ್, ಅಮೇದನ್ತ। ಅಮೇದಥಾಃ, ಅಮೇದೇಥಾಮ್, ಅಮೇದಧ್ವಮ್। ಅಮೇದೇ, ಅಮೇದಾವಹಿ, ಅಮೇದಾಮಹಿ।

**ವಿಧಿಲಿಙ್**: ರೂಪಗಳು: ಮೇದೇತ, ಮೇದೇಯಾತಾಮ್, ಮೇದೇರನ್। ಮೇದೇಥಾಃ, ಮೇದೇಯಾಥಾಮ್, ಮೇದೇಧ್ವಮ್। ಮೇದೇಯ, ಮೇದೇವಹಿ, ಮೇದೇಮಹಿ।

**ಆಶೀರ್ಲಿಙ್**: ರೂಪಗಳು: ಮೇದಿಷೀಷ್ಟ, ಮೇದಿಷೀಯಾಸ್ತಾಮ್, ಮೇದಿಷೀರನ್। ಮೇದಿಷೀಷ್ಠಾಃ, ಮೇದಿಷೀಯಾಸ್ಥಾಮ್, ಮೇದಿಷೀಧ್ವಮ್। ಮೇದಿಷೀಯ, ಮೇದಿಷೀವಹಿ, ಮೇದಿಷೀಮಹಿ।

**ಲುಙ್**: ರೂಪಗಳು: ಅಮೇದಿಷ್ಟ, ಅಮೇದಿಷಾತಾಮ್, ಅಮೇದಿಷತ। ಅಮೇದಿಷ್ಠಾಃ, ಅಮೇದಿಷಾಥಾಮ್, ಅಮೇದಿಢ್ವಮ್/ಅಮೇದಿಧ್ವಮ್। ಅಮೇದಿಷಿ, ಅಮೇದಿಷ್ವಹಿ, ಅಮೇದಿಷ್ಮಹಿ।

**ಪ್ರಕೃತ ಸೂತ್ರದಿಂದ ವೈಕಲ್ಪಿಕ ಪರಸ್ಮೈಪದ**

ರೂಪಗಳು: ಅಮಿದತ್, ಅಮಿದತಾಮ್, ಅಮಿದನ್। ಅಮಿದಃ, ಅಮಿದತಮ್, ಅಮಿದತ। ಅಮಿದಮ್, ಅಮಿದಾವ, ಅಮಿದಾಮ।

**ಲೃಙ್**: ರೂಪಗಳು: ಅಮೇದಿಷ್ಯತ, ಅಮೇದಿಷ್ಯೇತಾಮ್, ಅಮೇದಿಷ್ಯನ್ತ। ಅಮೇದಿಷ್ಯಥಾಃ, ಅಮೇದಿಷ್ಯೇಥಾಮ್, ಅಮೇದಿಷ್ಯಧ್ವಮ್। ಅಮೇದಿಷ್ಯೇ, ಅಮೇದಿಷ್ಯಾವಹಿ, ಅಮೇದಿಷ್ಯಾಮಹಿ।

7. ಞಿಷ್ವಿದಾ ಸ್ನೇಹನಮೋಚನಯೋಃ। ಮೋಹನಯೋಃ ಇತ್ಯೇಕೇ । ಞಿಕ್ಷ್ವಿದಾ ಚ ಇತ್ಯೇಕೇ। –(ಞಿಷ್ವಿದಾ ಎಂಬ ಧಾತುವು ಜಿಗುಟಾಗುವುದು, ಬೆವರುವುದು ಎಂಬ ಅರ್ಥದಲ್ಲಿದೆ. ಕೆಲವು ವೈಯ್ಯಾಕರಣಿಗಳು ಸ್ನೇಹವಾಗುವುದು, ಮೋಹಿತವಾಗುವುದು ಎಂಬ ಅರ್ಥವನ್ನು ಸ್ವೀಕರಿಸುತ್ತಾರೆ. ಇನ್ನೂ ಕೆಲವು ವೈಯ್ಯಾಕರಣಿಗಳು ಪ್ರಕೃತ ಧಾತುವಿಗೆ ಬದಲಾಗಿ ಞಿಕ್ಷ್ವಿದಾ ಎಂದು ಭಾವಿಸುತ್ತಾರೆ). ಇದರಲ್ಲಿ "ಧಾತ್ವಾದೇಃ ಷಃ ಸಃ" ಎಂಬ ಸೂತ್ರದಿಂದ 'ಷ್ವಿದ್' ನಲ್ಲಿರುವ 'ಷ್' ಕಾರಕ್ಕೆ 'ಸ್' ಕಾರವು ಆದೇಶವಾಗಿ ಬರುತ್ತದೆ. ಆಗ 'ಸ್ವಿದ್' ಎಂಬ ರೂಪವು ಉಳಿಯುತ್ತದೆ. ಞಿಕ್ಷ್ವಿದಾ ಎಂಬ ರೂಪವನ್ನು ಸ್ವೀಕರಿಸಿದ ಪಕ್ಷದಲ್ಲಿ 'ಕ್ಷ್ವಿದ್' ಮಾತ್ರ ಉಳಿಯುತ್ತದೆ.

**ಲಟ್**: ರೂಪಗಳು: ಸ್ವೇದತೇ, ಸ್ವೇದೇತೇ, ಸ್ವೇದನ್ತೇ... ಇತ್ಯಾದಿ।

**ಲಿಟ್**: ರೂಪಗಳು: ಸಿಸ್ವಿದೇ, ಸಿಸ್ವಿದಾತೇ, ಸಿಸ್ವಿದಿರೇ... ಇತ್ಯಾದಿ।

**ಲುಟ್**: ರೂಪಗಳು: ಸ್ವೇದಿತಾ, ಸ್ವೇದಿತಾರೌ, ಸ್ವೇದಿತಾರಃ। ಸ್ವೇದಿತಾಸೇ... ಇತ್ಯಾದಿ।

**ಲೃಟ್**: ರೂಪಗಳು: ಸ್ವೇದಿಷ್ಯತೇ, ಸ್ವೇದಿಷ್ಯೇತೇ, ಸ್ವೇದಿಷ್ಯನ್ತೇ।... ಇತ್ಯಾದಿ।

**ಲೋಟ್**: ರೂಪಗಳು: ಸ್ವೇದತಾಮ್, ಸ್ವೇದೇತಾಮ್, ಸ್ವೇದನ್ತಾಮ್।... ಇತ್ಯಾದಿ।

**ಲಙ್**: ರೂಪಗಳು: ಅಸ್ವೇದತ, ಅಸ್ವೇದೇತಾಮ್, ಅಸ್ವೇದನ್ತ। ... ಇತ್ಯಾದಿ।

**ವಿಧಿಲಿಙ್**: ರೂಪಗಳು: ಸ್ವೇದೇತ, ಸ್ವೇದೇಯಾತಾಮ್, ಸ್ವೇದೇರನ್।... ಇತ್ಯಾದಿ।

**ಆಶೀರ್ಲಿಙ್**: ರೂಪಗಳು: ಸ್ವೇದಿಷೀಷ್ಟ, ಸ್ವೇದಿಷೀಯಾಸ್ತಾಮ್,ಸ್ವೇದಿಷೀರನ್।... ಇತ್ಯಾದಿ।

**ಲುಙ್**: ರೂಪಗಳು: ಅಸ್ವೇದಿಷ್ಟತ, ಅಸ್ವೇದಿಷ್ಯೇತಾಮ್, ಅಸ್ವೇದಿಷ್ಯನ್ತ।... ಇತ್ಯಾದಿ।

**ಪ್ರಕೃತ ಸೂತ್ರದಿಂದ ವೈಕಲ್ಪಿಕ ಪರಸ್ಮೈಪದ**

ರೂಪಗಳು: ಅಸ್ವಿದತ್, ಅಸ್ವಿದತಾಮ್, ಅಸ್ವಿದನ್।... ಇತ್ಯಾದಿ।

**ಲೃಙ್**: 'ಕ್ಷ್ವಿದ್' ಧಾತುವಿನ ರೂಪಗಳನ್ನೂ ಈ ಮೇಲಿನಂತೆಯೇ ಊಹಿಸಿಕೊಳ್ಳಬೇಕು

ಧಾತು 8. ರುಚ ದೀಪ್ತೌ, ಅಭಿಪ್ರೀತೌ ಚ। (ಹೊಳೆಯುವುದು, ರುಚಿಸುವುದು) ಇದರಲ್ಲಿ 'ರುಚ್' ಮಾತ್ರ ಉಳಿಯುತ್ತದೆ.

**ಲಟ್**: ರೂಪಗಳು: ರೋಚತೇ, ರೋಚೇತೇ, ರೋಚನ್ತೇ।... ಇತ್ಯಾದಿ।

**ಲಿಟ್**: ರೂಪಗಳು: ರುರುಚೇ, ರುರುಚಾತೇ, ರುರುಚಿರೇ।... ಇತ್ಯಾದಿ।

**ಲುಟ್**: ರೂಪಗಳು: ರೋಚಿತಾ, ರೋಚಿತಾರೌ, ರೋಚಿತಾರಃ।... ಇತ್ಯಾದಿ।

**ಲೃಟ್**: ರೂಪಗಳು: ರೋಚಿಷ್ಯತೇ, ರೋಚಿಷ್ಯೇತೇ, ರೋಚಿಷ್ಯನ್ತೇ।... ಇತ್ಯಾದಿ।

**ಲೋಟ್**: ರೂಪಗಳು: ರೋಚತಾಮ್, ರೋಚೇತಾಮ್, ರೋಚನ್ತಾಮ್।... ಇತ್ಯಾದಿ।

**ಲಙ್**: ರೂಪಗಳು: ಅರೋಚತ, ಅರೋಚೇತಾಮ್, ಅರೋಚನ್ತ।... ಇತ್ಯಾದಿ।

**ವಿಧಿಲಿಙ್**: ರೂಪಗಳು: ರೋಚೇತ, ರೋಚೇಯಾತಾಮ್, ರೋಚೇರನ್।... ಇತ್ಯಾದಿ।

**ಆಶೀರ್ಲಿಙ್**: ರೂಪಗಳು: ರೋಚಿಷೀಷ್ಟ, ರೋಚಿಷೀಯಾಸ್ತಾಮ್, ರೋಚಿಷೀರನ್।... ಇತ್ಯಾದಿ।

**ಲುಙ್**: ರೂಪಗಳು: ಅರೋಚಿಷ್ಟ, ಅರೋಚಿಷಾತಾಮ್, ಅರೋಚಿಷತ।... ಇತ್ಯಾದಿ।

**ಪ್ರಕೃತ ಸೂತ್ರದಿಂದ ವೈಕಲ್ಪಿಕ ಪರಸ್ಮೈಪದ**

ರೂಪಗಳು: ಅರುಚತ್, ಅರುಚತಾಮ್, ಅರುಚನ್।... ಇತ್ಯಾದಿ।

**ಲೃಙ್**: ರೂಪಗಳು: ಅರೋಚಿಷ್ಯತ, ಅರೋಚಿಷ್ಯೇತಾಮ್, ಅರೋಚಿಷ್ಯನ್ತ।... ಇತ್ಯಾದಿ।

ಧಾತು 9. ಘುಟ ಪರಿವರ್ತನೇ (ಬದಲಾಯಿಸುವುದು, ಹಿಂದಿರುಗುವುದು) ಇದರಲ್ಲಿ **'ಘುಟ್'** ಮಾತ್ರ ಉಳಿಯುತ್ತದೆ.

**ಲಟ್**: ರೂಪಗಳು: ಘೋಟತೇ, ಘೋಟೇತೇ, ಘೋಟನ್ತೇ।... ಇತ್ಯಾದಿ।

**ಲಿಟ್**: ರೂಪಗಳು: ಜುಘುಟೇ, ಜುಘುಟಾತೇ, ಜುಘುಟಿರೇ।... ಇತ್ಯಾದಿ।

**ಲುಟ್**: ರೂಪಗಳು: ಘೋಟಿತಾ, ಘೋಟಿತಾರೌ, ಘೋಟಿತಾರ: ।... ಇತ್ಯಾದಿ।

**ಲೃಟ್**: ರೂಪಗಳು: ಘೋಟಿಷ್ಯತೇ, ಘೋಟಿಷ್ಯೇತೇ, ಘೋಟಿಷ್ಯನ್ತೇ।... ಇತ್ಯಾದಿ।

**ಲೋಟ್**: ರೂಪಗಳು: ಘೋಟತಾಮ್, ಘೋಟೇತಾಮ್, ಘೋಟನ್ತಾಮ್।... ಇತ್ಯಾದಿ।

**ಲಙ್**: ರೂಪಗಳು: ಅಘೋಟತ, ಅಘೋಟೇತಾಮ್,ಅಘೋಟನ್ತ।... ಇತ್ಯಾದಿ।

**ವಿಧಿಲಿಙ್**: ರೂಪಗಳು: ಘೋಟೇತ, ಘೋಟೇಯಾತಾಮ್,ಘೋಟೇರನ್।... ಇತ್ಯಾದಿ।

**ಆಶೀರ್ಲಿಙ್**: ರೂಪಗಳು: ಘೋಟಿಷೀಷ್ಟ, ಘೋಟಿಷೀಯಾಸ್ತಾಮ್, ಘೋಟಿಷೀರನ್।... ಇತ್ಯಾದಿ।

**ಲುಙ್**: ರೂಪಗಳು: ಅಘೋಟಿಷ್ಟ, ಅಘೋಟಿಷಾತಾಮ್, ಅಘೋಟಿಷತ।... ಇತ್ಯಾದಿ।

**ಪ್ರಕೃತ ಸೂತ್ರದಿಂದ ವೈಕಲ್ಪಿಕ ಪರಸ್ಮೈಪದ**

ರೂಪಗಳು: ಅಘುಟತ್, ಅಘುಟತಾಮ್, ಅಘುಟನ್।... ಇತ್ಯಾದಿ।

**ಲೃಙ್**: ರೂಪಗಳು: ಅಘೋಟಿಷ್ಯತ, ಅಘೋಟಿಷ್ಯೇತಾಮ್, ಅಘೋಟಿಷ್ಯನ್ತ।...

ಧಾತು 10. ಶುಭ ದೀಪ್ತೌ (ಹೊಳೆಯುವುದು, ಶೋಭಿಸುವುದು) ಇದರಲ್ಲಿ 'ಶುಭ್' ಮಾತ್ರ ಉಳಿಯುತ್ತದೆ.

**ಲಟ್**: ರೂಪಗಳು: ಶೋಭತೇ, ಶೋಭೇತೇ, ಶೋಭನ್ತೇ॥... ಇತ್ಯಾದಿ।

**ಲಿಟ್**: ರೂಪಗಳು: ಶುಶುಭೇ, ಶುಶುಭಾತೇ, ಶುಶುಭಿರೇ।... ಇತ್ಯಾದಿ।

**ಲುಟ್**: ರೂಪಗಳು:ಶೋಭಿತಾ, ಶೋಭಿತಾರೌ, ಶೋಭಿತಾರಃ।... ಇತ್ಯಾದಿ।

**ಲೃಟ್**: ರೂಪಗಳು: ಶೋಭಿಷ್ಯತೇ, ಶೋಭಿಷ್ಯೇತೆ, ಶೋಭಿಷ್ಯನ್ತೇ।... ಇತ್ಯಾದಿ।

**ಲೋಟ್**: ರೂಪಗಳು: ಶೋಭತಾಮ್, ಶೋಭೇತಾಮ್, ಶೋಭನ್ತಾಮ್।... ಇತ್ಯಾದಿ।

**ಲಙ್**: ರೂಪಗಳು: ಅಶೋಭತ, ಅಶೋಭೇತಾಮ್, ಅಶೋಭನ್ತ॥... ಇತ್ಯಾದಿ।

**ವಿಧಿಲಿಙ್**: ರೂಪಗಳು: ಶೋಭೇತ, ಶೋಭೇಯಾತಾಮ್, ಶೋಭೇರನ್।...

**ಆಶೀರ್ಲಿಙ್**: ರೂಪಗಳು: ಶೋಭಿಷೀಷ್ಟ, ಶೋಭಿಷೀಯಾಸ್ತಾಮ್, ಶೋಭಿಷೀರನ್।...

**ಲುಙ್**: ರೂಪಗಳು: ಅಶೋಭಿಷ್ಟ, ಅಶೋಭಿಷಾತಾಮ್, ಅಶೋಭಿಷತ॥... ಇತ್ಯಾದಿ।

**ಪ್ರಕೃತ ಸೂತ್ರದಿಂದ ವೈಕಲ್ಪಿಕ ಪರಸ್ಮೈಪದ**

ರೂಪಗಳು: ಅಶುಭತ್, ಅಶುಭತಾಮ್, ಅಶುಭನ್।... ಇತ್ಯಾದಿ।

**ಲೃಙ್**: ರೂಪಗಳು:ಅಶೋಭಿಷ್ಯತ, ಅಶೋಭಿಷ್ಯತಾಮ್, ಅಶೋಭಿಷ್ಯನ್ತ।... ಇತ್ಯಾದಿ।

ಧಾತು 11. ಕ್ಷುಭ ಸಞ್ಚಲನೇ (ವ್ಯಾಕುಲಗೊಳ್ಳುವುದು) ಇದರಲ್ಲಿ 'ಕ್ಷುಬ್' ಮಾತ್ರ ಉಳಿಯುತ್ತದೆ.

**ಲಟ್**: ರೂಪಗಳು: ಕ್ಷೋಭತೇ, ಕ್ಷೋಭೇತೆ, ಕ್ಷೋಭನ್ತೇ।... ಇತ್ಯಾದಿ।

**ಲಿಟ್**: ರೂಪಗಳು: ಚುಕ್ಷುಭೇ, ಚುಕ್ಷುಭಾತೇ, ಚುಕ್ಷುಭಿರೇ॥... ಇತ್ಯಾದಿ।

**ಲುಟ್**: ರೂಪಗಳು: ಕ್ಷೋಭಿತಾ ಕ್ಷೋಭಿತಾರೌ, ಕ್ಷೋಭಿತಾರಃ।... ಇತ್ಯಾದಿ।

**ಲೃಟ್**: ರೂಪಗಳು: ಕ್ಷೋಭಿಷ್ಯತೇ, ಕ್ಷೋಭಿಷ್ಯೇತೇ, ಕ್ಷೋಭಿಷ್ಯನ್ತೇ।... ಇತ್ಯಾದಿ।

**ಲೋಟ್**: ರೂಪಗಳು: ಕ್ಷೋಭತಾಮ್, ಕ್ಷೋಭೇತಾಮ್, ಕ್ಷೋಭನ್ತಾಮ್।... ಇತ್ಯಾದಿ।

**ಲಙ್**: ರೂಪಗಳು: ಅಕ್ಷೋಭತ, ಅಕ್ಷೋಭೇತಾಮ್, ಅಕ್ಷೋಭನ್ತ।... ಇತ್ಯಾದಿ।

**ವಿಧಿಲಿಙ್**: ರೂಪಗಳು: ಕ್ಷೋಭೇತ, ಕ್ಷೋಭೇಯಾತಾಮ್, ಕ್ಷೋಭೇರನ್।... ಇತ್ಯಾದಿ।

**ಆಶೀರ್ಲಿಙ್**: ರೂಪಗಳು:ಕ್ಷೋಭಿಷೀಷ್ಟಕ್ಷೋಭಿಷೀಯಾಸ್ತಾಮ್, ಕ್ಷೋಭೀಷೀರನ್।... ಇತ್ಯಾದಿ।

**ಲುಙ್**: ರೂಪಗಳು: ಅಕ್ಷುಭತ, ಅಕ್ಷುಭೇತಾಮ್, ಅಕ್ಷುಭನ್ತ॥... ಇತ್ಯಾದಿ।

**ಪ್ರಕೃತ ಸೂತ್ರದಿಂದ ವೈಕಲ್ಪಿಕ ಪರಸ್ಮೈಪದ**

ರೂಪಗಳು: ಅಕ್ಷೋಭಿಷ್ಟ, ಅಕ್ಷೋಭಿಷಾತಾಮ್, ಅಕ್ಷೋಭಿಷತ।... ಇತ್ಯಾದಿ।

**ಲೃಙ್**: ರೂಪಗಳು: ಅಕ್ಷೋಭಿಷ್ಯತ, ಅಕ್ಷೋಭಿಷ್ಯೇತಾಮ್, ಅಕ್ಷೋಭಿಷ್ಯನ್ತ।... ಇತ್ಯಾದಿ।

12. ಣಭ ಹಿಂಸಾಯಾಮ್(ಹಿಂಸೆ ಮಾಡುವುದು) ಇದರಲ್ಲಿ **"ಣೋ ನಃ"** ಎಂಬ ಸೂತ್ರದಿಂದ **'ಣ್'** ಕಾರಕ್ಕೆ **'ನ್'** ಕಾರವು ಆದೇಶವಾಗಿ ಬಂದು **'ನಭ'** ಎಂದಿರುತ್ತದೆ. ಇದರಲ್ಲ **'ನಭ್'** ಮಾತ್ರ ಉಳಿಯುತ್ತದೆ.

**ಲಟ್**: ರೂಪಗಳು: ನಭತೇ, ನಭೇತೇ, ನಭನ್ತೇ।... ಇತ್ಯಾದಿ।

**ಲಿಟ್**: ರೂಪಗಳು: ನೇಭೇ, ನೇಭಾತೇ, ನೇಭಿರೇ ।... ಇತ್ಯಾದಿ।

**ಲುಟ್**: ರೂಪಗಳು: ನಭಿತಾ, ನಭಿತಾರೌ, ನಭಿತಾರಃ।... ಇತ್ಯಾದಿ।

**ಲೃಟ್**: ರೂಪಗಳು: ನಭಿಷ್ಯತೇ, ನಭಿಷ್ಯೇತೇ, ನಭಿಷ್ಯನ್ತೇ।... ಇತ್ಯಾದಿ।

**ಲೋಟ್**: ರೂಪಗಳು: ನಭತಾಮ್, ನಭೇತಾಮ್, ನಭನ್ತಾಮ್।... ಇತ್ಯಾದಿ।

**ಲಙ್**: ರೂಪಗಳು: ಅನಭತ, ಅನಭೇತಾಮ್, ಅನಭನ್ತ।... ಇತ್ಯಾದಿ।

**ವಿಧಿಲಿಙ್**: ರೂಪಗಳು: ನಭೇತ, ನಭೇಯಾತಾಮ್, ನಭೇರನ್।... ಇತ್ಯಾದಿ।

**ಆಶೀರ್ಲಿಙ್**: ರೂಪಗಳು: ನಭಿಷೀಷ್ಟ, ನಭಿಷೀಯಾಸ್ತಾಮ್, ನಭಿಷೀರನ್।... ಇತ್ಯಾದಿ।

**ಲುಙ್**: ರೂಪಗಳು: ಅನಭಿಷ್ಟ, ಅನಭಿಷಾತಾಮ್, ಅನಭಿಷತ।... ಇತ್ಯಾದಿ।

**ಪ್ರಕೃತ ಸೂತ್ರದಿಂದ ವೈಕಲ್ಪಿಕ ಪರಸ್ಮೈಪದ**

ರೂಪಗಳು: ಅನಭತ್, ಅನಭತಾಮ್, ಅನಭನ್।... ಇತ್ಯಾದಿ।

**ಲೃಙ್**: ರೂಪಗಳು: ಅನಭಿಷ್ಯತ, ಅನಭಿಷ್ಯೇತಾಮ್, ಅನಭಿಷ್ಯನ್ತ।...

ಧಾತು– 13. ತುಭ ಹಿಂಸಾ0ಯಾಮ್ (ಹಿಂಸೆ ಮಾಡುವುದು) ಇದರಲ್ಲಿ **'ತುಭ್'** ಮಾತ್ರ ಉಳಿಯುತ್ತದೆ.

**ಲಟ್**: ರೂಪಗಳು: ತೋಭತೇ, ತೋಭೇತೇ, ತೋಭನ್ತೇ।... ಇತ್ಯಾದಿ।

**ಲಿಟ್**: ರೂಪಗಳು: ತುತುಭೇ, ತುತುಭಾತೇ, ತುತುಭಿರೇ।... ಇತ್ಯಾದಿ।

**ಲುಟ್**: ರೂಪಗಳು: ತೋಭಿತಾ, ತೋಭಿತಾರೌ, ತೋಭಿತಾರಃ।... ಇತ್ಯಾದಿ।

**ಲೃಟ್**: ರೂಪಗಳು: ತೋಭಿಷ್ಯತೇ, ತೋಭಿಷ್ಯೇತೇ, ತೋಭಿಷ್ಯನ್ತೇ।... ಇತ್ಯಾದಿ।

**ಲೋಟ್**: ರೂಪಗಳು: ತೋಭತಾಮ್, ತೋಭೇತಾಮ್, ತೋಭನ್ತಾಮ್।... ಇತ್ಯಾದಿ।

**ಲಙ್**: ರೂಪಗಳು: ಅತೋಭತ, ಅತೋಭೇತಾಮ್, ಅತೋಭನ್ತ।... ಇತ್ಯಾದಿ।

**ವಿಧಿಲಿಙ್**: ರೂಪಗಳು: ತೋಭೇತ, ತೋಭೇಯಾತಾಮ್,ತೋಭೇರನ್।... ಇತ್ಯಾದಿ।

**ಆಶೀರ್ಲಿಙ್**: ರೂಪಗಳು: ತೋಭಿಷೀಷ್ಟ, ತೋಭಿಷೀಯಾಸ್ತಾಮ್, ತೋಭಿಷೀರನ್।... ಇತ್ಯಾದಿ।

**ಲುಙ್**: ರೂಪಗಳು: ಅತೋಭಿಷ್ಟ, ಅತೋಭಿಷಾತಾಮ್, ಅತೋಭಿಷತ।... ಇತ್ಯಾದಿ।

**ಪ್ರಕೃತ ಸೂತ್ರದಿಂದ ವೈಕಲ್ಪಿಕ ಪರಸ್ಮೈಪದ**

ರೂಪಗಳು: ಅತುಭತ್, ಅತುಭತಾಮ್, ಅತುಭನ್।... ಇತ್ಯಾದಿ।

**ಲೃಙ್**: ರೂಪಗಳು: ಅತೋಭಿಷ್ಯತ, ಅತೋಷ್ಯೇತಾಮ್, ಅತೋಭಿಷ್ಯನ್ತ... ಇತ್ಯಾದಿ।

ಧಾತು– 14. ಸ್ರಂಸು, 15–ಭ್ರಂಸು, 16(ಅ)–ಧ್ವಂಸು (ಕೆಳಗೆ ಬೀಳುವುದು) ಇವುಗಳಲ್ಲಿ 'ಸ್ರಂಸ್' 'ಭ್ರಂಸ್' 'ಧ್ವಂಸ್' ಮಾತ್ರ ಉಳಿಯುತ್ತವೆ.

**ಲಟ್**: ರೂಪಗಳು: 14. ಸ್ರಂಸತೇ, ಸ್ರಂಸೇತೇ, ಸ್ರಂಸನ್ತೇ। 15. ಭ್ರಂಸತೇ, ಭ್ರಂಸೇತೇ, ಭ್ರಂಸನ್ತೇ। 16. ಧ್ವಂಸತೇ, ಧ್ವಂಸೇತೇ, ಧ್ವಂಸಂತೇ।

**ಲಿಟ್**: ರೂಪಗಳು: 14. ಸಸ್ರಂಸೇ, ಸಸ್ರಂಸಾತೇ, ಸಸ್ರಂಸಿರೇ। 15. ಬಭ್ರಂಸೇ, ಬಭ್ರಂಸಾತೇ, ಬಭ್ರಂಸಿರೆ। 16. ದಧ್ವಂಸೇ, ದಧ್ವಂಸಾತೇ, ದಧ್ವಂಸಿರೇ।

**ಲುಟ್**: ರೂಪಗಳು: 14. ಸ್ರಂಸಿತಾ, ಸ್ರಂಸಿತಾರೌ, ಸ್ರಂಸಿತಾರಃ। 15. ಭ್ರಂಸಿತಾ, ಭ್ರಂಸಿತಾರೌ, ಭ್ರಂಸಿತಾರಃ। 16.ಧ್ವಂಸಿತಾ ಧ್ವಂಸಿತಾರೌ, ಧ್ವಂಸಿತಾರಃ।

**ಲೃಟ್**: ರೂಪಗಳು: 14. ಸ್ರಂಸಿಷ್ಯತೇ, ಸ್ರಂಸಿಷ್ಯೇತೇ, ಸಂಸಿಷ್ಯನ್ತೇ। 15.ಭ್ರಂಸಿಷ್ಯತೇ, ಭ್ರಂಸಿಷ್ಯೇತೇ, ಭ್ರಂಸಿಷ್ಯನ್ತೇ। 16. ಧ್ವಂಸಿಷ್ಯತೇ, ಧ್ವಂಸಿಷ್ಯೇತೇ, ಧ್ವಂಸಿಷ್ಯನ್ತೇ।

**ಲೋಟ್**: ರೂಪಗಳು; 14.ಸ್ರಂಸತಾಮ್, ಸ್ರಂಸೇತಾಮ್,ಸ್ರಂಸನ್ತಾಮ್।15. ಭ್ರಂಸತಾಮ್, ಭ್ರಂಸೇತಾಮ್, ಭ್ರಂಸನ್ತಾಮ್।6. ಧ್ವಂಸತಾಮ್, ಧ್ವಂಸೇತಾಮ್, ಧ್ವಂಸನ್ತಾಮ್।

**ಲಙ್**: ರೂಪಗಳು; 14. ಅಸ್ರಂಸತ, ಅಸ್ರಂಸೇತಾಮ್, ಅಸ್ರಂಸನ್ತ। 15. ಅಭ್ರಂಸತ, ಅಭ್ರಂಸೇತಾಮ್, ಅಭ್ರಂಸನ್ತ। 16.ಅಧ್ವಂಸತ, ಅಧ್ವಂಸೇತಾಮ್, ಅಧ್ವಂಸನ್ತ।

**ವಿಧಿಲಿಙ್**: ರೂಪಗಳು:14. ಸ್ರಂಸೇತ, ಸ್ರಂಸೇಯಾತಾಮ್, ಸ್ರಂಸೇರನ್। ಅ5. ಭ್ರಂಸೇತ, ಭ್ರಂಸೇಯಾತಾಮ್, ಭ್ರಂಸೇರನ್।16. ಧ್ವಂಸೇತ, ಧ್ವಂಸೇಯಾತಾಮ್,ಧ್ವಂಸೇರನ್।

**ಆಶೀರ್ಲಿಙ್**: ರೂಪಗಳು: 14. ಸ್ರಂಸಿಷೀಷ್ಟ ಸ್ರಂಸಿಷೀಯಾಸ್ತಾಮ್, ಸ್ರಂಸಿಷೀರನ್।15. ಭ್ರಂಸಿಷೀಷ್ಟ ಭ್ರಂಸಿಷೀಯಾಸ್ತಾಮ್ ಭ್ರಂಸಿಷೀರನ್।16. ಧ್ವಂಸಿಷೀಷ್ಟ ಧ್ವಂಸಿಷೀಯಾಸ್ತಾಮ್, ಧ್ವಂಸಿಷೀರನ್।

**ಲುಙ್**: ರೂಪಗಳು: 14. ಅಸ್ರಂಸೀಷ್ಟ, ಅಸ್ರಂಸಿಷಾತಾಮ್, ಅಸ್ರಂಸಿಷತ। 15. ಅಭ್ರಂಸೀಷ್ಟ ಅಭ್ರಂಸಿಷಾತಾಮ್, ಅಭ್ರಂಸಿಷತ। ಅಧ್ವಂಸಿಷ್ಟ ಅಧ್ವಂಸಿಷಾತಾಮ್, ಅಧ್ವಂಸಿಷತ।

**ಪ್ರಕೃತ ಸೂತ್ರದಿಂದ ವೈಕಲ್ಪಿಕ ಪರಸ್ಮೈಪದ**

ವಿಶೇಷ : "ಅನಿದಿತಾಮ್ ಹಲ ಉಪಧಾಯಾಃ ಕ್ಙಿತಿ" ಎಂಬ ಸೂತ್ರದಿಂದ 'ನ್' ಕ್ಕೆ ಲೋಪ ಬಂದದ್ದರಿಂದ ಅನುಸ್ವಾರಕ್ಕೂ ಲೋಪ ಬಂದಿದೆ. ಹೀಗೆಯೇ ಈ 'ಲ್' ಕಾರದಲ್ಲಿ ಮಾತ್ರ ಇನ್ನುಳಿದ ಧಾತುಗಳ 'ನ್' ಕಾರಕ್ಕೂ ಲೋಪ ಬರುತ್ತದೆ.

ರೂಪಗಳು:14. ಅಸ್ರಸತ್, ಅಸ್ರಸತಾಮ್, ಅಸ್ರಸನ್।15. ಅಭ್ರಸತ್, ಅಭ್ರಸತಾಮ್,

ಅಧ್ವಸನ್। 16.ಅಧ್ವಸತ್, ಅಧ್ವಸತಾಮ್, ಅಧ್ವಸನ್।

16 (ಬಿ). ಧ್ವಂಸು ಗತೌ ಚ (ಗತ್ಯರ್ಥ)

ರೂಪಗಳು: ಮೇಲಿನ ಧ್ವಂಸ್ ಧಾತುವಿನಂತೆಯೇ ರೂಪಗಳು ಇರುತ್ತವೆ.

17. ಸ್ರಂಭು ವಿಶ್ವಾಸೇ(ವಿಶ್ವಾಸ ಮಾಡುವುದು) – ಇದರಲ್ಲಿ 'ಸ್ರಂಭ್' ಮಾತ್ರ ಉಳಿಯುತ್ತದೆ. ಸ್ರನ್+ಭ್ ಎಂದಿದ್ದಾಗ 'ನ್' ಕಾರಕ್ಕೆ ಅನುಸ್ವಾರ ಹಾಗು ಪರಸವರ್ಣ ಬಂದು 'ಸ್ರಂಭ್' ಎಂದಾಗಿದೆ.

**ಲಟ್**: ರೂಪಗಳು: ಸ್ರಂಭತೇ, ಸ್ರಂಭೇತೇ, ಸ್ರಂಭನ್ತೇ।... ಇತ್ಯಾದಿ।

**ಲಿಟ್**: ರೂಪಗಳು: ಸಸ್ರಂಭೇ, ಸಸ್ರಂಭಾತೇ, ಸಸ್ರಂಭಿರೇ।... ಇತ್ಯಾದಿ।

**ಲುಟ್**: ರೂಪಗಳು: ಸ್ರಂಭಿತಾ, ಸ್ರಂಭಿತಾರೌ, ಸ್ರಂಭಿತಾರಃ।... ಇತ್ಯಾದಿ।

**ಲೃಟ್**: ರೂಪಗಳು: ಸ್ರಂಭಿಷ್ಯತೇ, ಸ್ರಂಭಿಷ್ಯೇತೇ, ಸ್ರಂಭಿಷ್ಯನ್ತೇ।... ಇತ್ಯಾದಿ।

**ಲೋಟ್**: ರೂಪಗಳು: ಸ್ರಂಭತಾಮ್, ಸ್ರಂಭೇತಾಮ್, ಸ್ರಂಭನ್ತಾಮ್।... ಇತ್ಯಾದಿ।

**ಲಙ್**: ರೂಪಗಳು: ಅಸ್ರಂಭತ, ಅಸ್ರಂಭೇತಾಮ್, ಅಸ್ರಂಭನ್ತ।... ಇತ್ಯಾದಿ।

**ವಿಧಿಲಿಙ್**: ರೂಪಗಳು: ಸ್ರಂಭೇತ, ಸ್ರಂಭೇಯಾತಾಮ್, ಸ್ರಂಭೇರನ್।... ಇತ್ಯಾದಿ।

**ಆಶೀರ್ಲಿಙ್**: ರೂಪಗಳು: ಸ್ರಂಭಿಷೀಷ್ಟ, ಸ್ರಂಭಿಷೀಯಾಸ್ತಾಮ್, ಸ್ರಂಭಿಷೀರನ್।

**ಲುಙ್**: ರೂಪಗಳು: ಅಸ್ರಂಭಿಷ್ಟ, ಅಸ್ರಂಭಿಷೀಯಾಸ್ತಾಮ್, ಅಸ್ರಂಭಿಷೀರನ್।....

**ಪ್ರಕೃತ ಸೂತ್ರದಿಂದ ವೈಕಲ್ಪಿಕ ಪರಸ್ಮೈಪದ**:

ರೂಪಗಳು: ಅಸ್ರಭತ್, ಅಸ್ರಭತಾಮ್, ಅಸ್ರಭನ್। ಇತ್ಯಾದಿ।

**ಲೃಙ್**: ರೂಪಗಳು: ಅಸ್ರಂಭಿಷ್ಯತ, ಅಸ್ರಂಭಿಷ್ಯೇತಾಮ್, ಅಸ್ರಂಭಿಷ್ಯನ್ತ।... ಇತ್ಯಾದಿ।

18. ವೃತು ವರ್ತನೇ–(ವರ್ತಿಸುವುದು, ಇರುವುದು) ಇದರಲ್ಲಿ 'ವೃತ್' ಮಾತ್ರ ಉಳಿಯುತ್ತದೆ.

**ಲಟ್**: ರೂಪಗಳು: ವರ್ತತೇ, ವರ್ತೇತೇ, ವರ್ತನ್ತೇ ।... ಇತ್ಯಾದಿ।

**ಲಿಟ್**: ರೂಪಗಳು: ವವೃತೇ। ವವೃತಾತೇ, ವವೃತಿರೇ।... ಇತ್ಯಾದಿ।

**ಲುಟ್**: ರೂಪಗಳು: ವರ್ತಿತಾ, ವರ್ತಿತಾರೌ, ವರ್ತಿತಾರಃ।... ಇತ್ಯಾದಿ।

**(ವೈಕಲ್ಪಿಕವಾಗಿ ಪರಸ್ಮೈಪದವನ್ನು ವಿಧಿಸುವ ಸೂತ್ರ)**

**ಸೂತ್ರ – 539. ವೃದ್ಭ್ಯಃ ಸ್ಯಸನೋಃ (1.3.92)**

ವೃತ್ತಿಃ–ವೃತಾದಿಭ್ಯಃ ಪಞ್ಚಭ್ಯೋ ವಾ ಪರಸ್ಮೈಪದಂ ಸ್ಯಾತ್ ಸ್ಯೇ ಸನಿ ಚ।

ಅ. ವೃ.– "ವಾ ಕ್ಯಷಃ" ಎಂಬ ಸೂತ್ರದಿಂದ 'ವಾ' ಎಂಬ ಪದವೂ, "ಶೇಷಾತ್ ಕರ್ತರಿ ಪರಸ್ಮೈಪದಮ್" ಎಂಬ ಸೂತ್ರದಿಂದ 'ಪರಸ್ಮೈಪದಮ್' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ-'ಸ್ಯ' ಮತ್ತು 'ಸನ್'ಗಳ ಪರದಲ್ಲಿ ಇರುವಾಗ 'ವೃತ್' ಮೊದಲಾದ 5 ಧಾತುಗಳಿಗೆ ವೈಕಲ್ಪಿಕವಾಗಿ ಪರಸ್ಮೈಪದವು ಬರುತ್ತದೆ. ಈ 5 ಧಾತುಗಳು ಈ ಪ್ರಕಾರ ಇರುತ್ತವೆ.- 1. ವೃತು-ವರ್ತನೇ(ಆಗುವುದು),2. ವೃಧು-ವೃದ್ಧೌ (ಬೆಳೆಯುವುದು), 3. ಶೃಧು- ಶಬ್ದಕುತ್ಸಾಯಾಮ್(ಕುತ್ಸಿತ ಶಬ್ದವನ್ನು ಮಾಡುವುದು), 4. ಸ್ಯಂದೂ-ಪ್ರಸ್ರವಣೇ(ನೀರು ದ್ರವ ಹರಿಯುವುದು), 5. ಕೃಪೂ-ಸಾಮರ್ಥ್ಯೇ(ಸಮರ್ಥನಾಗುವುದು)

**(ಇಡಾಗಮವನ್ನು ನಿಷೇಧಿಸುವ ಸೂತ್ರ)**

**ಸೂತ್ರ - 540.ನ ವೃದ್ಭ್ಯಶ್ಚತುರ್ಭ್ಯಃ (7.2.59)**

ವೃತ್ತಿಃ-ವೃತು-ವೃಧು-ಶೃಧು-ಸ್ಯನ್ದುಭ್ಯಃ ಶಕಾರಾದೇಃ ಆರ್ಧಧಾತುಕಸ್ಯ ಇಟ್ ನ ಸ್ಯಾತ್। ತಙ್-ಆನಯೋಃ ಅಭಾವೇ ।ವರ್ತ್ಸ್ಯತಿ, ವರ್ತಿಷ್ಯತೇ। ವರ್ತತಾಮ್। ಅವರ್ತತ। ವರ್ತೇತ। ವರ್ತಿಷೀಷ್ಟ। ಅವರ್ತಿಷ್ಟ। ಅವರ್ತ್ಸ್ಯತ್, ಅವರ್ತಿಷ್ಯತ। ದದ ದಾನೇ। 19। ದದತೇ। ಪ. ಛೇ. - ನ, ವೃದ್ಭ್ಯಃ, ಚತುರ್ಭ್ಯಃ।

ಅ. ವೃ.- "ಸೇऽಸಿಚಿ" ಎಂಬ ಸೂತ್ರದಿಂದ 'ಸೇ' ಎಂಬ ಪದವೂ, "ಆರ್ಧಧಾತುಕಸ್ಯೇಡ್ ವಲಾದೇಃ" ಎಂಬ ಸೂತ್ರದಿಂದ 'ಆರ್ಧಧಾತುಕಸ್ಯ' ಎಂಬ ಪದವೂ ಮತ್ತು "ಗಮೇರಿಟ್ ಪರಸ್ಮೈಪದೇಷು" ಎಂಬ ಸೂತ್ರದಿಂದ 'ಪರಸ್ಮೈಪದೇಷು' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ- ಪರಸ್ಮೈ ಪದಕ್ಕೆ ಸಂಬಂಧಿಸಿದ 'ವೃತ್' ಮೊದಲಾದ ಧಾತುಗಳ ನಂತರ 'ಸ್' ಕಾರಾದಿ ಆರ್ಧಧಾತುಕ ಪ್ರತ್ಯಯಗಳು ಪರದಲ್ಲಿ ಇದ್ದಾಗ ಅವುಗಳಿಗೆ ಆದ್ಯವಯವವಾಗಿ ಬರಬೇಕಾದ 'ಇಡಾಗಮ' ವು ಬರುವುದಿಲ್ಲ.

ಉದಾ- ವೃದ್ಭ್ಯಃ - 'ವೃತ್' ಗಣದಲ್ಲಿ ವೃತು, ವೃಧು, ಶೃಧು ಮತ್ತು ಸ್ಯನ್ದೂ ಎಂಬ ನಾಲ್ಕು ಧಾತುಗಳಿವೆ. 'ಲೃಟ್' ಮತ್ತು 'ಲೃಙ್' 'ಲ್' ಕಾರಗಳು ಆರ್ಧಧಾತುಕವಾಗಿರೋಣದರಿಂದ 'ಸ್ಯ' ಎಂಬ 'ಸ್' ಕಾರಾದಿಯಾದ ಪ್ರತ್ಯಯವು ಧಾತುವಿನ ನಂತರ ಬರುತ್ತದೆ.

**ಲೃಟ್**: ರೂಪಗಳು: ವರ್ತಿಷ್ಯತೇ, ವರ್ತಿಷ್ಯೇತೇ, ವರ್ತಿಷ್ಯನ್ತೇ॥... ಇತ್ಯಾದಿ।

ಪರಸ್ಮೈಪದಿಯಲ್ಲಿವೈಕಲ್ಪಕ ರೂಪಗಳು : ವರ್ತ್ಸ್ಯತಿ, ವರ್ತ್ಸ್ಯತಃ, ವರ್ತ್ಸ್ಯನ್ತಿ... ಇತ್ಯಾದಿ। (ಇಲ್ಲಿ 'ಸ್ಯ' ಎಂಬ 'ಸ್' ಕಾರಾದಿಯಾದ ಆರ್ಧಧಾತುಕ ಪ್ರತ್ಯಯವು ಧಾತುವಿನ ಪರದಲ್ಲಿ ಇರುವಾಗ ಪ್ರಕೃತ ಇಡಾಗಮವು ನಿಷೇಧಿಸಲ್ಪಟ್ಟಿದೆ. ಆತ್ಮನೇ ಪದದಲ್ಲಿ ನಿಷೇಧವಿಲ್ಲದ್ದರಿಂದ 'ಸ್' ಕಾರದಿಯಾದ ಪ್ರತ್ಯಯಕ್ಕೆ ಇಡಾಗಮ ಬಂದಿದೆ).

**ಲೋಟ್**: ರೂಪಗಳು: ವರ್ತತಾಮ್, ವರ್ತೇತಾಮ್, ವರ್ತನ್ತಾಮ್।... ಇತ್ಯಾದಿ।

**ಲಙ್**: ರೂಪಗಳು: ಅವರ್ತತ, ಅವರ್ತೇತಾಮ್, ಅವರ್ತನ್ತ।... ಇತ್ಯಾದಿ।

**ವಿಧಿಲಿಙ್**: ರೂಪಗಳು:ವರ್ತೇತ, ವರ್ತೇಯಾತಾಮ್, ವರ್ತೇರನ್।... ಇತ್ಯಾದಿ।

**ಆಶೀರ್ಲಿಙ್**: ರೂಪಗಳು: ವರ್ತಿಷೀಷ್ಟ, ವರ್ತಿಷೀಯಾಸ್ತಾಮ್, ವರ್ತಿಷೀರನ್॥

ಅಧ್ವಸನ್। 16.ಅಧ್ವಸತ್, ಅಧ್ವಸತಾಮ್, ಅಧ್ವಸನ್।

16 (ಬಿ). ಧ್ವಂಸು ಗತೌ ಚ (ಗತ್ಯರ್ಥ)

ರೂಪಗಳು: ಮೇಲಿನ ಧ್ವಂಸ್ ಧಾತುವಿನಂತೆಯೇ ರೂಪಗಳು ಇರುತ್ತವೆ.

17. ಸ್ರಂಭು ವಿಶ್ವಾಸೇ(ವಿಶ್ವಾಸ ಮಾಡುವುದು) – ಇದರಲ್ಲಿ 'ಸ್ರಂಭ್' ಮಾತ್ರ ಉಳಿಯುತ್ತದೆ. ಸ್ರನ್+ಭ್ ಎಂದಿದ್ದಾಗ 'ನ್' ಕಾರಕ್ಕೆ ಅನುಸ್ವಾರ ಹಾಗು ಪರಸವರ್ಣ ಬಂದು 'ಸ್ರಂಭ್' ಎಂದಾಗಿದೆ.

**ಲಟ್**: ರೂಪಗಳು: ಸ್ರಂಭತೇ, ಸ್ರಂಭೇತೇ, ಸ್ರಂಭನ್ತೇ।... ಇತ್ಯಾದಿ।

**ಲಿಟ್**: ರೂಪಗಳು: ಸಸ್ರಂಭೇ, ಸಸ್ರಂಭಾತೇ, ಸಸ್ರಂಭಿರೇ।... ಇತ್ಯಾದಿ।

**ಲುಟ್**: ರೂಪಗಳು: ಸ್ರಂಭಿತಾ, ಸ್ರಂಭಿತಾರೌ, ಸ್ರಂಭಿತಾರಃ।... ಇತ್ಯಾದಿ।

**ಲೃಟ್**: ರೂಪಗಳು: ಸ್ರಂಭಿಷ್ಯತೇ, ಸ್ರಂಭಿಷ್ಯೇತೇ, ಸ್ರಂಭಿಷ್ಯನ್ತೇ।... ಇತ್ಯಾದಿ।

**ಲೋಟ್**: ರೂಪಗಳು: ಸ್ರಂಭತಾಮ್, ಸ್ರಂಭೇತಾಮ್, ಸ್ರಂಭನ್ತಾಮ್।... ಇತ್ಯಾದಿ।

**ಲಙ್**: ರೂಪಗಳು: ಅಸ್ರಂಭತ, ಅಸ್ರಂಭೇತಾಮ್, ಅಸ್ರಂಭನ್ತ।... ಇತ್ಯಾದಿ।

**ವಿಧಿಲಿಙ್**: ರೂಪಗಳು: ಸ್ರಂಭೇತ, ಸ್ರಂಭೇಯಾತಾಮ್, ಸ್ರಂಭೇರನ್।... ಇತ್ಯಾದಿ।

**ಆಶೀರ್ಲಿಙ್**: ರೂಪಗಳು: ಸ್ರಂಭಿಷೀಷ್ಟ, ಸ್ರಂಭಿಷೀಯಾಸ್ತಾಮ್, ಸ್ರಂಭಿಷೀರನ್।

**ಲುಙ್**: ರೂಪಗಳು: ಅಸ್ರಂಭಿಷ್ಟ, ಅಸ್ರಂಭಿಷೀಯಾಸ್ತಾಮ್, ಅಸ್ರಂಭಿಷೀರನ್।....

**ಪ್ರಕೃತ ಸೂತ್ರದಿಂದ ವೈಕಲ್ಪಿಕ ಪರಸ್ಮೈಪದ**:

ರೂಪಗಳು: ಅಸ್ರಭತ್, ಅಸ್ರಭತಾಮ್, ಅಸ್ರಭನ್। ಇತ್ಯಾದಿ।

**ಲೃಙ್**: ರೂಪಗಳು: ಅಸ್ರಂಭಿಷ್ಯತ, ಅಸ್ರಂಭಿಷ್ಯೇತಾಮ್, ಅಸ್ರಂಭಿಷ್ಯನ್ತ।... ಇತ್ಯಾದಿ।

18. ವೃತು ವರ್ತನೇ–(ವರ್ತಿಸುವುದು, ಇರುವುದು) ಇದರಲ್ಲಿ 'ವೃತ್' ಮಾತ್ರ ಉಳಿಯುತ್ತದೆ.

**ಲಟ್**: ರೂಪಗಳು: ವರ್ತತೇ, ವರ್ತೇತೇ, ವರ್ತನ್ತೇ ।... ಇತ್ಯಾದಿ।

**ಲಿಟ್**: ರೂಪಗಳು: ವವೃತೇ। ವವೃತಾತೇ, ವವೃತಿರೇ।... ಇತ್ಯಾದಿ।

**ಲುಟ್**: ರೂಪಗಳು: ವರ್ತಿತಾ, ವರ್ತಿತಾರೌ, ವರ್ತಿತಾರಃ।... ಇತ್ಯಾದಿ।

**(ವೈಕಲ್ಪಿಕವಾಗಿ ಪರಸ್ಮೈಪದವನ್ನು ವಿಧಿಸುವ ಸೂತ್ರ)**

**ಸೂತ್ರ – 539. ವೃದ್ಭ್ಯಃ ಸ್ಯಸನೋಃ (1.3.92)**

ವೃತ್ತಿಃ–ವೃತಾದಿಭ್ಯಃ ಪಞ್ಚಭ್ಯೋ ವಾ ಪರಸ್ಮೈಪದಂ ಸ್ಯಾತ್ ಸ್ಯೇ ಸನಿ ಚ।

ಅ. ವ್ಯ.– "ವಾ ಕ್ಯಷಃ" ಎಂಬ ಸೂತ್ರದಿಂದ 'ವಾ' ಎಂಬ ಪದವೂ, "ಶೇಷಾತ್ ಕರ್ತರಿ ಪರಸ್ಮೈಪದಮ್" ಎಂಬ ಸೂತ್ರದಿಂದ 'ಪರಸ್ಮೈಪದಮ್' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ-'ಸ್ಯ' ಮತ್ತು 'ಸನ್'ಗಳ ಪರದಲ್ಲಿ ಇರುವಾಗ 'ವೃತ್' ಮೊದಲಾದ 5 ಧಾತುಗಳಿಗೆ ವೈಕಲ್ಪಿಕವಾಗಿ ಪರಸ್ಮೈಪದವು ಬರುತ್ತದೆ. ಈ 5 ಧಾತುಗಳು ಈ ಪ್ರಕಾರ ಇರುತ್ತವೆ.- 1. ವೃತು-ವರ್ತನೇ(ಆಗುವುದು),2. ವೃಧು-ವೃದ್ಧೌ (ಬೆಳೆಯುವುದು), 3. ಶೃಧು- ಶಬ್ದಕುತ್ಸಾಯಾಮ್(ಕುತ್ಸಿತ ಶಬ್ದವನ್ನು ಮಾಡುವುದು), 4. ಸ್ಯಂದೂ-ಪ್ರಸ್ರವಣೇ(ನೀರು ದ್ರವ ಹರಿಯುವುದು), 5. ಕೃಪೂ-ಸಾಮರ್ಥ್ಯೇ(ಸಮರ್ಥನಾಗುವುದು)

**(ಇಡಾಗಮವನ್ನು ನಿಷೇಧಿಸುವ ಸೂತ್ರ)**

**ಸೂತ್ರ - 540.ನ ವೃದ್ಭ್ಯಶ್ಚತುರ್ಭ್ಯಃ (7.2.59)**

ವೃತ್ತಿಃ-ವೃತು-ವೃಧು-ಶೃಧು-ಸ್ಯನ್ದುಭ್ಯಃ ಶಕಾರಾದೇಃ ಆರ್ಧಧಾತುಕಸ್ಯ ಇಟ್ ನ ಸ್ಯಾತ್। ತಙ್-ಆನಯೋಃ ಅಭಾವೇ ।ವರ್ತ್ಸ್ಯತಿ, ವರ್ತಿಷ್ಯತೇ। ವರ್ತತಾಮ್। ಅವರ್ತತ। ವರ್ತೇತ। ವರ್ತಿಷೀಷ್ಟ। ಅವರ್ತಿಷ್ಟ। ಅವರ್ತ್ಸ್ಯತ್, ಅವರ್ತಿಷ್ಯತ। ದದ ದಾನೇ। 19। ದದತೇ। ಪ. ಛೇ. - ನ, ವೃದ್ಭ್ಯಃ, ಚತುರ್ಭ್ಯಃ।

ಅ. ವೃ.- "ಸೇSಸಿಚಿ" ಎಂಬ ಸೂತ್ರದಿಂದ 'ಸೇ' ಎಂಬ ಪದವೂ, "ಆರ್ಧಧಾತುಕಸ್ಯೇಡ್ ವಲಾದೇಃ" ಎಂಬ ಸೂತ್ರದಿಂದ 'ಆರ್ಧಧಾತುಕಸ್ಯ' ಎಂಬ ಪದವೂ ಮತ್ತು "ಗಮೇರಿಟ್ ಪರಸ್ಮೈಪದೇಷು" ಎಂಬ ಸೂತ್ರದಿಂದ 'ಪರಸ್ಮೈಪದೇಷು' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ- ಪರಸ್ಮೈ ಪದಕ್ಕೆ ಸಂಬಂಧಿಸಿದ 'ವೃತ್' ಮೊದಲಾದ ಧಾತುಗಳ ನಂತರ 'ಸ್' ಕಾರಾದಿ ಆರ್ಧಧಾತುಕ ಪ್ರತ್ಯಯಗಳು ಪರದಲ್ಲಿ ಇದ್ದಾಗ ಅವುಗಳಿಗೆ ಆದ್ಯವಯವವಾಗಿ ಬರಬೇಕಾದ 'ಇಡಾಗಮ' ವು ಬರುವುದಿಲ್ಲ.

ಉದಾ- ವೃದ್ಭ್ಯಃ - 'ವೃತ್' ಗಣದಲ್ಲಿ ವೃತು, ವೃಧು, ಶೃಧು ಮತ್ತು ಸ್ಯನ್ದೂ ಎಂಬ ನಾಲ್ಕು ಧಾತುಗಳಿವೆ. 'ಲೃಟ್' ಮತ್ತು 'ಲೃಙ್' 'ಲ್' ಕಾರಗಳು ಆರ್ಧಧಾತುಕವಾಗಿರೋಣದರಿಂದ 'ಸ್ಯ' ಎಂಬ 'ಸ್' ಕಾರಾದಿಯಾದ ಪ್ರತ್ಯಯವು ಧಾತುವಿನ ನಂತರ ಬರುತ್ತದೆ.

**ಲೃಟ್**: ರೂಪಗಳು: ವರ್ತಿಷ್ಯತೇ, ವರ್ತಿಷ್ಯೇತೇ, ವರ್ತಿಷ್ಯನ್ತೇ॥... ಇತ್ಯಾದಿ।

ಪರಸ್ಮೈಪದಿಯಲ್ಲಿವೈಕಲ್ಪಕ ರೂಪಗಳು : ವರ್ತ್ಸ್ಯತಿ, ವರ್ತ್ಸ್ಯತಃ, ವರ್ತ್ಸ್ಯನ್ತಿ... ಇತ್ಯಾದಿ। (ಇಲ್ಲಿ 'ಸ್ಯ' ಎಂಬ 'ಸ್' ಕಾರಾದಿಯಾದ ಆರ್ಧಧಾತುಕ ಪ್ರತ್ಯಯವು ಧಾತುವನ ಪರದಲ್ಲಿ ಇರುವಾಗ ಪ್ರಕೃತ ಇಡಾಗಮವು ನಿಷೇಧಿಸಲ್ಪಟ್ಟಿದೆ. ಆತ್ಮನೇ ಪದದಲ್ಲಿ ನಿಷೇಧವಿಲ್ಲದ್ದರಿಂದ 'ಸ್' ಕಾರದಿಯಾದ ಪ್ರತ್ಯಯಕ್ಕೆ ಇಡಾಗಮ ಬಂದಿದೆ).

**ಲೋಟ್**: ರೂಪಗಳು: ವರ್ತತಾಮ್, ವರ್ತೇತಾಮ್, ವರ್ತನ್ತಾಮ್।... ಇತ್ಯಾದಿ।

**ಲಙ್**: ರೂಪಗಳು: ಅವರ್ತತ, ಅವರ್ತೇತಾಮ್, ಅವರ್ತನ್ತ।... ಇತ್ಯಾದಿ।

**ವಿಧಿಲಿಙ್**: ರೂಪಗಳು:ವರ್ತೇತ, ವರ್ತೇಯಾತಾಮ್, ವರ್ತೇರನ್।... ಇತ್ಯಾದಿ।

**ಆಶೀರ್ಲಿಙ್**: ರೂಪಗಳು: ವರ್ತಿಷೀಷ್ಟ, ವರ್ತಿಷೀಯಾಸ್ತಾಮ್, ವರ್ತಿಷೀರನ್॥

**ಲುಙ್**: "ದ್ಯುಭ್ಯೋ ಲುಙೀ' ಎಂಬ ಸೂತ್ರದಿಂದ ವೈಕಲ್ಪಿಕ ಪಕ್ಷದಲ್ಲಿ ಪರಸ್ಮೈಪದ ಮತ್ತು "ಪುಷಾದಿ ದ್ಯುತಾದ್ಯ್ಲೃದಿತಃ ಪರಸ್ಮೈಪದೇಷು " ಎಂಬ ಸೂತ್ರದಿಂದ 'ಅಙ್(ಅ)' ಆದೇಶವೂ ಬರುತ್ತದೆ. ಆದರೆ ಇಡಾಗಮವು ಬರುವುದಿಲ್ಲ.

ಪರಸ್ಮೈಪದದಲ್ಲಿ– ರೂಪಗಳು: ಅವೃತತ್, ಅವೃತತಾಮ್, ಅವ್ೃತನ್।... ಇತ್ಯಾದಿ।

'ಆತ್ಮನೇ ಪದದಲ್ಲಿ– ಇಡಾಗಮ ಬಂದು ಕೆಳಗಿನ ರೂಪಗಳು ಸಿದ್ಧಿಸುತ್ತವೆ.

ರೂಪಗಳು: ಅವರ್ತಿಷ್ಟ, ಅವರ್ತಿಷಾತಾಮ್, ಅವರ್ತಿಷತ।... ಇತ್ಯಾದಿ।

**ಲೃಙ್**: "ವೃದ್ಭ್ಯಸ್ಯಸನೋಃ" ಎಂಬ ಸೂತ್ರದಿಂದ ಪರಸ್ಮೈಪದದಲ್ಲಿ ಇಡಾಗಮವು ಬರುವುದಿಲ್ಲ. ಮತ್ತು ಆತ್ಮನೇ ಪದದಲ್ಲಿ ಇಡಾಗಮವು ಬರುತ್ತದೆ.

(ಪರಸ್ಮೈಪದದಲ್ಲಿ) ರೂಪಗಳು:– ಅವರ್ತ್ಸ್ಯತ್, ಅವರ್ತ್ಸ್ಯತಾಮ್, ಅವರ್ತ್ಸ್ಯನ್।

ಆತ್ಮನೇಪದದಲ್ಲಿ– ರೂಪಗಳು:ಅವರ್ತಿಷ್ಯತ, ಅವರ್ತಿಷ್ಯೇತಾಮ್, ಅವರ್ತಿಷ್ಯನ್ತ।

ಧಾತು–19. ದದ ದಾನೇ(ದಾನ ಮಾಡುವುದು ಕೊಡುವುದು) – ಇದರಲ್ಲಿ 'ದದ್' ಮಾತ್ರ ಉಳಿಯುತ್ತದೆ.

**ಲಟ್**: ಉದಾ– ದದತೇ – ಪ್ರಥಮ ಪುರುಷ ಏಕವಚನದಲ್ಲಿ 'ದದ್' ಧಾತುವಿನ ನಂತರ 'ಲಟ್' 'ಲ್' ಕಾರಕ್ಕೆ 'ತ್' ಆದೇಶವು ಬಂದು ಧಾತುವಿನ ನಂತರ 'ಶಪ್(ಅ)' ಪ್ರತ್ಯಯ ಬಂದು ದದತ್ ಎಂದಾದಮೇಲೆ "ಟಿತ ಆತ್ಮನೇಪದಾನಾಂ ಟೇರೇ"– ಎಂಬ ಸೂತ್ರದಿಂದ 'ಏತ್ವ' ಬಂದು, ದದತೇ ಎಂದು ರೂಪವು ಸಿದ್ಧವಾಗುತ್ತದೆ.

ರೂಪಗಳು: ದದತೇ, ದದೇತೇ, ದದನ್ತೇ।... ಇತ್ಯಾದಿ।

**(ಏತ್ವವನ್ನೂ ಮತ್ತು ಅಭ್ಯಾಸವನ್ನು ನಿಷೇಧಿಸುವ ಸೂತ್ರ)**

**ಸೂತ್ರ – 541.ನ ಶಶ–ದದ–ವಾದಿ–ಗುಣಾನಾಮ್ (6.4.126)**

ವೃತ್ತಿಃ–ಶಶೇಃ ದದೇಃ ವಕಾರಾದೀನಾಂ ಗುಣಶಬ್ದೇನ ವಿಹಿತಃ ೦ಯಃ ಅಕಾರಃ ತಸ್ಯ ಚ ಏತ್ವ– ಅಭ್ಯಾಸ ಲೋಪೌ ನ। ದದದೇ।ದದದಾತೇ। ದದದಿರೇ। ದದಿತಾ। ದದಿಷ್ಯತೇ। ದದತಾಮ್। ಅದದತ್। ದದೇತ। ದದಿಷೀಷ್ಟ ಅದದಿಷ್ಟ ಅದದಿಷ್ಯತ। ತ್ರಪೂಷ್ ಲಜ್ಜಾ೦ಯಾಮ್। 21। ತ್ರಪತೇ।

ಅ. ವೃ– "ಅತ ಏಕ ಹಲ್ ಮಧ್ಯೇಽನಾದೇಶಾದೇರ್ಲಿಟಿ" ಎಂಬ ಸೂತ್ರದಿಂದ 'ಅತಃ' ಎಂಬ ಪದವೂ, "ಘ್ವಸೋರೇದ್ಧಾವಭ್ಯಾಸ ಲೋಪಶ್ಚ" ಎಂಬ ಸೂತ್ರದಿಂದ 'ಏತ್' ಮತ್ತು 'ಅಭ್ಯಾಸಲೋಪಃ' ಮತ್ತು 'ಚ' ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ– 'ಶಸ್' ದದ್ ಹಾಗೂ ವ–ಕಾರಾದಿ ಧಾತುಗಳ ಹ್ರಸ್ವ ಅ–ಕಾರ ಹಾಗೂ ಗುಣ ಶಬ್ದದಿಂದ ವಿಹಿತವಾದ 'ಅ' ಕಾರಕ್ಕೆ ಏತ್ವ ಮತ್ತು ಅಭ್ಯಾಸಲೋಪ ಬರುವುದಿಲ್ಲ.

**ಲಿಟ್**: ಪ್ರಥಮಪುರುಷ ಏಕವಚನದಲ್ಲಿ ದದ್ ಧಾತುವಿನ ನಂತರ ಲಿಡಾದೇಶವಾದ 'ತ್' ಬಂದು ಅದಕ್ಕೆ 'ಏಶ್(ಏ)' ಆದೇಶವು ಬಂದು ಧಾತುವಿಗೆ ದ್ವಿತ್ವ ಬಂದಮೇಲೆ ದ+ದದ್+ಏ ಎಂದಿರುತ್ತದೆ. ಏತ್ವ ಮತ್ತು ಅಭ್ಯಾಸಲೋಪ ಬರಬೇಕಾಗಿದ್ದಾಗ, ಅದನ್ನು

ಪ್ರಕೃತಸೂತ್ರವು ಬಾಧಿಸುತ್ತದೆ. ಆಗ ದದದ್+ಏ=ದದದೇ ಎಂಬ ರೂಪವು ಸಿದ್ಧವಾಗುತ್ತದೆ.

ರೂಪಗಳು– ದದದೇ, ದದದಾತೇ, ದದದಿರೇ॥... ಇತ್ಯಾದಿ।

**ಲುಟ್**: ರೂಪಗಳು: ದದಿತಾ, ದದಿತಾರೌ, ದದಿತಾರಃ॥... ಇತ್ಯಾದಿ।

**ಲೃಟ್**: ರೂಪಗಳು: ದದಿಷ್ಯತೇ, ದದಿಷ್ಯೇತೇ, ದದಿಷ್ಯನ್ತೇ॥... ಇತ್ಯಾದಿ।

**ಲೋಟ್**: ರೂಪಗ್ಳು: ದದತಾಮ್, ದದೇತಾಮ್, ದದನ್ತಾಮ್॥... ಇತ್ಯಾದಿ।

**ಲಙ್**: ರೂಪಗಳು: ಅದದತ, ಅದದೇತಾಮ್, ಅದದನ್ತ॥... ಇತ್ಯಾದಿ।

**ವಿಧಿಲಿಙ್**: ರೂಪಗಳು: ದದೇತ, ದದೇಯಾತಾಮ್, ದದೇರನ್॥... ಇತ್ಯಾದಿ।

**ಆಶೀರ್ಲಿಙ್**: ರೂಪಗಳು: ದದಿಷೀಷ್ಟ, ದದಿಷೀಯಾಸ್ತಾಮ್, ದದಿಷೀರನ್॥......

**ಲುಙ್**: ರೂಪಗಳು: ಅದದಿಷ್ಟ, ಅದದಿಷಾತಾಮ್, ಅದದಿಷತ॥... ಇತ್ಯಾದಿ।

**ಲೃಙ್**: ರೂಪಗಳು: ಅದದಿಷ್ಯತ, ಅದದಿಷ್ಯೇತಾಮ್, ಅದದಿಷ್ಯನ್ತ।... ಇತ್ಯಾದಿ।

ಧಾತು–20. ತ್ರಪೂಷ್– ಲಜ್ಜಾಯಾಮ್(ನಾಚುವುದು)–ಇದರಲ್ಲಿ 'ತ್ರಪ್' ಮಾತ್ರ ಉಳಿಯುತ್ತದೆ.

**ಲಟ್**: ಉದಾ– ತ್ರಪತೇ– ಪ್ರಥಮಪುರುಷ ಏಕವಚನದಲ್ಲಿ 'ತ್ರಪ್' ಧಾತುವಿನ ನಂತರ 'ಲಟ್' ಆದೇಶವಾದ 'ತ' ಬಂದು ಧಾತುವಿನ ನಂತರ 'ಶಪ್(ಅ)' ಬಂದಮೇಲೆ ತ್ರಪ್+ಅ+ತ ಎಂದಿದ್ದಾಗ, "ಟಿತ ಆತ್ಮನೇಪದಾನಾಂ ಟೇರೇ" ಎಂಬ ಸೂತ್ರದಿಂದ 'ತ' ಕಾರೋತ್ತರ 'ಅ' ಕಾರಕ್ಕೆ ಏತ್ವ (ಏ) ಬಂದು ತ್ರಪತೇ ಎಂದು ರೂಪವು ಸಿದ್ಧವಾಗುತ್ತದೆ.

ರೂಪಗಳು: ತ್ರಪತೇ, ತ್ರಪೇತೇ, ತ್ರಪನ್ತೇ।... ಇತ್ಯಾದಿ।

### (ಏತ್ವ ಮತ್ತು ಅಭ್ಯಾಸಗಳ ಲೋಪವನ್ನು ವಿಧಿಸುವ ಸೂತ್ರ)

**ಸೂತ್ರ – 542.ತೄ-ಫಲ-ಭಜ-ತ್ರಪಶ್ಚ (6.4.122)**

ವೃತ್ತಿಃ–ಏಷಾಂ ಅತಃ ಏತ್ವಮ್ ಅಭ್ಯಾಸ ಲೋಪಶ್ಚ ಸ್ಯಾತ್ ಕಿತಿ ಲಿಟಿ ಸೇಟಿ ಥಲಿ ಚ। ತ್ರೇಪೇ। ತ್ರಪಿತಾ, ತ್ರಪ್ತಾ। ತ್ರಪಿಷ್ಯತೇ, ತ್ರಪ್ಸ್ಯತೇ। ತ್ರಪತಾಮ್। ಅತ್ರಪತ। ತ್ರಪೇತ। ತ್ರಪಿಷೀಷ್ಟ, ತ್ರಪ್ಸೀಷ್ಟ। ಅತ್ರಪಿಷ್ಟ, ಅತ್ರಪ್ತ। ಅತ್ರಪಿಷ್ಯತ, ಅತ್ರಪ್ಸ್ಯತ। ಇತಿ ಆತ್ಮನೇಪದಿನಃ

ಪ. ಛೇ. ತೄ–ಫಲ–ಭಜ–ತ್ರಪಃ, ಚ।

ಅ. ವೃ.– "ಅತ ಏಕ ಹಲ್ಮಧ್ಯೇ ಅನಾದೇಶಾದೇರ್ಲಿಟಿ" ಎಂಬ ಸೂತ್ರದಿಂದ 'ಅತಃ' ಎಂಬ ಪದವೂ, "ಘ್ವಸೋರೇದ್ಧಾವಭ್ಯಾಸ ಲೋಪಶ್ಚ" ಎಂಬ ಸೂತ್ರದಿಂದ ಏತ್, ಅಭ್ಯಾಸಲೋಪಃ ಮತ್ತು ಚ ಎಂಬ ಪದಗಳು ಅನುವೃತ್ತವಾಗುತ್ತವೆ. ಮತ್ತು "ಗಮ–ಹನ–ಜನ–ಖನ ಘಸಾಂ ಲೋಪಃ ಕ್ಙಿತ್ಯನಙಿ" ಎಂಬ ಸೂತ್ರದಿಂದ 'ಕಿತಿ' ಎಂಬ ಪದವೂ ಮತ್ತು "ಥಲಿ ಚ ಸೇಟಿ"– ಎಂಬ ಸೂತ್ರವು ಅನುವೃತ್ತವಾಗುತ್ತದೆ.

ಅರ್ಥ– ತೄ, ಫಲ್, ಭಜ್, ಮತ್ತು ತ್ರಪ್ ಧಾತುಗಳ 'ಅ' ಕಾರಕ್ಕೆ 'ಏ' ಕಾರವು ಆದೇಶವಾಗಿ ಬರುತ್ತದೆ. ಮತ್ತು ಅಭ್ಯಾಸದ ಲೋಪವೂ ಆಗುತ್ತದೆ– ಕಿತ್, ಲಿಟ್,

ಸೇಟ್ ಮತ್ತು ಥಲ್ ಇವು ಪರದಲ್ಲಿರುವಾಗ.

**ಲಿಟ್**: ಉದಾ– ತ್ರೇಪೇ– ಪ್ರಥಮಪುರುಷ ಏಕವಚನದಲ್ಲಿ 'ತ್ರಪ್' ಧಾತುವಿನ ನಂತರ 'ಲಿಟ್' ಗೆ 'ತ' ಆದೇಶ ಬಂದು ಅದಕ್ಕೆ 'ಏಶ್(ಏ)' ಆದೇಶ ಬಂದು ಧಾತುವಿಗೆ ದ್ವಿತ್ವ ಬಂದಮೇಲೆ ಹಲಾದಿಶೇಷವಾದಮೇಲೆ ತತ್ರಪ್+ಏ ಎಂದು ಇರುತ್ತದೆ. ಆಗ ಪ್ರಕೃತ ಸೂತ್ರದಿಂದ ಅಭ್ಯಾಸ(ತ) ಲೋಪ ಮತ್ತು 'ತ್ರಪ್' ನಲ್ಲಿರುವ 'ಅ' ಕಾರಕ್ಕೆ 'ಏ'ಕಾರವು ಆದೇಶವಾಗಿ ಬಂದು ತ್ರೇಪ್+ಏ=ತ್ರೇಪೇ ಎಂದು ರೂಪವು ಸಿದ್ಧವಾಗುತ್ತದೆ.

ರೂಪಗಳು: ತ್ರೇಪೇ, ತ್ರೇಪಾತೇ, ತ್ರೇಪಿರೇ।... ಇತ್ಯಾದಿ।

**ಲುಟ್**: ಇಡಾಗಮ ಬಂದ ಪಕ್ಷದಲ್ಲಿ ರೂಪಗಳು:ತ್ರಪಿತಾ, ತ್ರಪಿತಾರೌ, ತ್ರಪಿತಾರಃ।.....

ಇಡಾಗಮ ಬಾರದ ಪಕ್ಷದಲ್ಲಿ ರೂಪಗಳು: ತ್ರಪ್ತಾ, ತ್ರಪ್ತಾರೌ, ತ್ರಪ್ತಾರಃ।... ಇತ್ಯಾದಿ।

**ಲೃಟ್**: ಇಡಾಗಮ ಬಂದ ಪಕ್ಷದಲ್ಲಿ ರೂಪಗಳು: ತ್ರಪಿಷ್ಯತೇ, ತ್ರಪಿಷ್ಯೇತೇ, ತ್ರಪಿಷ್ಯನ್ತೇ।....

ಇಡಾಗಮಬಾರದ ಪಕ್ಷದಲ್ಲಿ ರೂಪಗಳು: ತ್ರಪ್ಸ್ಯತೇ, ತ್ರಪ್ಸ್ಯೇತೇ, ತ್ರಪ್ಸ್ಯನ್ತೇ।.....

**ಲೋಟ್**: ರೂಪಗಳು: ತ್ರಪತಾಮ್, ತ್ರಪೇತಾಮ್, ತ್ರಪನ್ತಾಮ್।... ಇತ್ಯಾದಿ।

**ಲಙ್**: ರೂಪಗಳು: ಅತ್ರಪತ, ಅತ್ರಪೇತಾಮ್, ಅತ್ರಪನ್ತ।... ಇತ್ಯಾದಿ।

**ವಿಧಿಲಿಙ್**: ರೂಪಗಳು: ತ್ರಪೇತ, ತ್ರಪೇಯಾತಾಮ್, ತ್ರಪೇರನ್।... ಇತ್ಯಾದಿ।

**ಆಶೀರ್ಲಿಙ್**: ಇಡಾಗಮ ಬಂದ ಪಕ್ಷದಲ್ಲಿ ರೂಪಗಳು: ತ್ರಪಿಷೀಷ್ಟ, ತ್ರಪಿಷೀಯಾಸ್ತಾಮ್, ತ್ರಪಿಷೀರನ್।... ಇತ್ಯಾದಿ।

ಇಡಾಗಮಬಾರದ ಪಕ್ಷದಲ್ಲಿ ರೂಪಗಳು: ತ್ರಪ್ಸೀಷ್ಟ, ತ್ರಪ್ಸೀಯಾಸ್ತಾಮ್, ತ್ರಪ್ಸೀರನ್।....

**ಲುಙ್**: ಇಡಾಗಮ ಬಂದ ಪಕ್ಷದಲ್ಲಿ ರೂಪಗಳು: ಅತ್ರಪಿಷ್ಟ, ಅತ್ರಪಿಷಾತಾಮ್, ಅತ್ರಪಿಷತ।... ಇತ್ಯಾದಿ।

ಇಡಾಗಮಬಾರದ ಪಕ್ಷದಲ್ಲಿ ರೂಪಗಳು: ಅತ್ರಪ್ತ, ಅತ್ರಪ್ಸಾತಾಮ್, ಅತ್ರಪ್ಸತ।.....

**ಲೃಙ್**: ಇಡಾಗಮ ಬಂದ ಪಕ್ಷದಲ್ಲಿ ರೂಪಗಳು: ಅತ್ರಪಿಷ್ಯತ, ಅತ್ರಪಿಷ್ಯೇತಾಮ್, ಅತ್ರಪಿಷ್ಯನ್ತ।... ಇತ್ಯಾದಿ।

ಇಡಾಗಮಬಾರದ ಪಕ್ಷದಲ್ಲಿ ರೂಪಗಳು: ಅತ್ರಪ್ಸ್ಯತ, ಅತ್ರಪ್ಸ್ಯೇತಾಮ್, ಅತ್ರಪ್ಸ್ಯನ್ತ।....

**॥ ಇತಿ ಆತ್ಮನೇ ಪದಿನಃ ॥**

**॥ ಇಲ್ಲಿಗೆ ಆತ್ಮನೇಪದ ಧಾತುಗಳ ರೂಪಗಳು ಮುಗಿದವು ॥**

## ॥ ಅಥ ಉಭಯಪದಿನಃ ॥

ಶ್ರಿಞ್ ಸೇವಾಯಾಮ್॥1॥ ಶ್ರಯತಿ।ಶ್ರಯತೇ। ಶಿಶ್ರಾಯ, ಶಿಶ್ರಿಯೇ। ಶ್ರಯಿತಾಸಿ। ಶ್ರಯಿತಾಸೇ। ಶ್ರಯಿಷ್ಯತಿ, ಶ್ರಯಿಷ್ಯತೇ। ಶ್ರಯತು, ಶ್ರಯತಾಮ್। ಅಶ್ರಯತ್, ಅಶ್ರಯತ। ಶ್ರಯೇತ್, ಶ್ರಯೇತ। ಶ್ರೀಯಾತ್, ಶ್ರಯಿಷೀಷ್ಟ। ಚಙ್। ಅಶಿಶ್ರಯತ್, ಅಶಿಶ್ರಯತ। ಅಶ್ರಯಿಷ್ಯತ್। ಅಶ್ರಯಿಷ್ಯತ। ಭೃಞ್ ಭರಣೇ। 2।ಭರತಿ, ಭರತೇ। ಬಭಾರ। ಬಭ್ರತುಃ। ಬಭ್ರುಃ। ಬಭರ್ಥ। ಬಭೃವ। ಬಭೃಮ। ಬಭ್ರೇ। ಬಭೃಷೇ। ಭರ್ತಾಸಿ, ಭರ್ತಾಸೇ। ಭರಿಷ್ಯತಿ, ಭರಿಷ್ಯತೇ। ಭರತು, ಭರತಾಮ್। ಅಭರತ್, ಅಭರತ। ಭರೇತ್, ಭರೇತ।

ವರದರಾಜರು ಕೇವಲ ಪರಸ್ಮೈಪದಿ ಮತ್ತು ಕೇವಲ ಆತ್ಮನೇಪದಿ ಧಾತುಗಳ ರೂಪಗಳನ್ನು ಹೇಳಿದಮೇಲೆ ಭ್ವಾದಿಗಣಕ್ಕೆ ಸೇರಿದ ಉಭಯಪದಿ ಧಾತುಗಳನ್ನು ಸಂಗ್ರಹಿಸುತ್ತಾರೆ. ಆತ್ಮನೇಪದಿ ಮತ್ತು ಪರಸ್ಮೈಪದಿ ಧಾತುಗಳ ನಿಯಮಗಳನ್ನು ಈ ಪ್ರಕರಣದ ಆರಂಭದಲ್ಲಿಯೇ ವಿಸ್ತಾರವಾಗಿ ಹೇಳಿದ್ದಾರೆ.

1. ಶ್ರಿಞ್ ಸೇವಾಯಾಮ್(ಸೆವಿಸುವದು)-ಇದರಲ್ಲಿ 'ಶ್ರಿ' ಮಾತ್ರ ಉಳಿಯುತ್ತದೆ.

ಉದಾ- ಶ್ರಯತಿ, ಶ್ರಯತೇ – ಪ್ರಥಮಪುರುಷ ಏಕವಚನದಲ್ಲಿ ಶ್ರಿ ಧಾತುವಿನ ನಂತರ ಪರಸ್ಮೈ ಪದದಲ್ಲಿ 'ಲಟ್' 'ಲ್' ಕಾರಕ್ಕೆ 'ತಿಪ್(ತಿ) ಆದೇಶ ಬಂದು ಧಾತುವಿನ ನಂತರ 'ಶಪ್(ಅ)' ಬಂದು ಶ್ರಿ+ಅ+ತಿ ಎಂದಿರುತ್ತದೆ. "ಸಾರ್ವಧಾತುಕಾರ್ಧ-ಧಾತುಕಯೋಃ" ಎಂಬ ಸೂತ್ರದಿಂದ ಇಗನ್ತಾಂಗವಾದ 'ಇ' ಕಾರಕ್ಕೆ ಗುಣ ಬಂದು ಶ್ರೇ+ಅ+ತಿ ಎಂದಾಗಿ "ಏಚೋಽಯವಾಯಾವಃ" ಎಂಬ ಸೂತ್ರದಿಂದ 'ಏ' ಕಾರಕ್ಕೆ 'ಅಯ್' ಆದೇಶ ಬಂದು ಶ್ರ್+ಅಯ್+ಅತಿ=ಶ್ರಯತಿ ಎಂದು ರೂಪವಾಗುತ್ತದೆ.

ಉದಾ- ಶ್ರಯತೇ-ಆತ್ಮನೇ ಪದದಲ್ಲಿ ಪ್ರಥಮಪುರುಷ ಏಕವಚನದಲ್ಲಿ ಶ್ರಿ ಧಾತುವಿನ ನಂತರ 'ಲಟ್' 'ಲ್' ಕಾರಕ್ಕೆ 'ತ' ಆದೇಶ ಬಂದು ಧಾತುವಿನ ನಂತರ 'ಶಪ್(ಅ)' ಬಂದಮೇಲೆ ಶ್ರಿ+ಅ+ತ ಎಂದಿದ್ದಾಗ "ಟಿತ ಆತ್ಮನೇಪದಾನಾಂ ಟೇರೇ" ಎಂಬುದರಿಂದ ಅಂತ್ಯ 'ಅ' ಕಾರಕ್ಕೆ ಏತ್ವ ಬಂದು ಉಳಿದ ಪ್ರಕ್ರಿಯೆ ಎಲ್ಲವು ಹಿಂದಿನಂತೆ ಸಮಾನವಾಗಿದ್ದು, ಶ್ರಯತೇ ಎಂದು ರೂಪವು ಸಿದ್ಧವಾಗುತ್ತದೆ.

ಲಟ್:ಪರಸ್ಮೈ ಪದದ ರೂಪಗಳು: ಶ್ರಯತಿ ಶ್ರಯತಃ, ಶ್ರಯನ್ತಿ ।... ಇತ್ಯಾದಿ।

ಆತ್ಮನೇಪದದ ರೂಪಗಳು: ಶ್ರಯತೇ, ಶ್ರಯೇತೇ, ಶ್ರಯನ್ತೇ।... ಇತ್ಯಾದಿ।

ಲಿಟ್: ಪರಸ್ಮೈಪದದ ಪ್ರಥಮಪುರುಷ ಏಕವಚನದಲ್ಲಿ 'ಶ್ರಿ' ಧಾತುವಿನ ನಂತರ ಲಿಡಾದೇಶವಾದ 'ತಿಪ್(ಇ)' ಬಂದು ಅದಕ್ಕೆ ಅಭಿನವ ಆಖ್ಯಾತ ಪ್ರತ್ಯಯವಾದ 'ಣಲ್(ಅ)' ಆದೇಶವಾಗಿ ಬಂದು ಶ್ರಿ+ಅ ಎಂದಿರುತ್ತದೆ. ಧಾತುವಿಗೆ ದ್ವಿತ್ವ ಮಾಡಿದಮೇಲೆ ಹಲಾದಿ ಶೇಷದಿಂದ ಶಿಶ್ರಿ+ಅ ಎಂದಿದ್ದಾಗ, "ಅಚಿ ಶ್ನುಧಾತುಭ್ರುವಾಂಯ್ವೋರಿಯಙುವಙೌ" ಎಂಬ ಸೂತ್ರದಿಂದ 'ಇ' ಕಾರಕ್ಕೆ 'ಇಯಙ್' ಬರಬೇಕಿದ್ದಾಗ, ಅದನ್ನು ಬಾಧಿಸಿ "ಅಚೋಞ್ಣಿತಿ" ಎಂಬ ಸೂತ್ರದಿಂದ ವೃದ್ಧಿ ಬಂದು ಶಿಶ್ರೈ+ಅ ಎಂದಿದ್ದಾಗ, 'ಅಯ್' ಗೆ 'ಆಯ್' ಆದೇಶವು ಬಂದು ಶಿಶ್ರ್+ಆಯ್+ಅ=ಶಿಶ್ರಾಯ ಎಂದು ರೂಪವು

ಸಿದ್ಧಿಸುತ್ತದೆ.

ಆತ್ಮನೇಪದದ ಎಲ್ಲ ರೂಪಗಳಲ್ಲೂ 'ಇಯಜ್(ಇ)' ಪ್ರತ್ಯಯವೇ ಆದೇಶ ವಾಗಿ ಬರುತ್ತದೆ.

ಪರಸ್ಮೈ ಪದದ ರೂಪಗಳು: ಶಿಶ್ರಾಯ, ಶಿಶ್ರಿಯತುಃ, ಶಿಶ್ರಿಯುಃ ।... ಇತ್ಯಾದಿ।

ಆತ್ಮನೇಪದದ ರೂಪಗಳು: ಶಿಶ್ರಿಯೇ, ಶಿಶ್ರಿಯಾತೇ, ಶಿಶ್ರಿಯಿರೇ ।... ಇತ್ಯಾದಿ।

ಲುಟ್:ಪರಸ್ಮೈ ಪದದ ರೂಪಗಳು: ಶ್ರಯಿತಾ ಶ್ರಯಿತಾರೌ, ಶ್ರಯಿತಾರಃ।ಶ್ರಯಿತಾಸಿ... ಇತ್ಯಾದಿ।

ಆತ್ಮನೇಪದದ ರೂಪಗಳು: ಶ್ರಯಿತಾ, ಶ್ರಯಿತಾರೌ, ಶ್ರಯಿತಾರಃ । ಶ್ರಯಿತಾಸೇ... ಇತ್ಯಾದಿ।

**ಲೃಟ್**: ಪರಸ್ಮೈ ಪದದ ರೂಪಗಳು: ಶ್ರಯಿಷ್ಯತಿ, ಶ್ರಯಿಷ್ಯತಃ, ಶ್ರಯಿಷ್ಯನ್ತಿ।... ಇತ್ಯಾದಿ।

ಆತ್ಮನೇಪದದ ರೂಪಗಳು: ಶ್ರಯಿಷ್ಯತೇ, ಶ್ರಯಿಷ್ಯೇತೇ, ಶ್ರಯಿಷ್ಯನ್ತೇ ।... ಇತ್ಯಾದಿ।

ಲೋಟ್: ಪರಸ್ಮೈ ಪದದ ರೂಪಗಳು: ಶ್ರಯತು/ಶ್ರಯ ತಾತ್, ಶ್ರಯತಾಮ್, ಶ್ರಯನ್ತು ।... ಇತ್ಯಾದಿ।

ಆತ್ಮನೇಪದದ ರೂಪಗಳು: ಶ್ರಯತಾಮ್, ಶ್ರಯೇತಾಮ್, ಶ್ರಯನ್ತಾಮ್।... ಇತ್ಯಾದಿ।

ಲಙ್: ಪರಸ್ಮೈ ಪದದ ರೂಪಗಳು: ಅಶ್ರಯತ್, ಅಶ್ರಯತಾಮ್, ಅಶ್ರಯನ್ । ... ಇತ್ಯಾದಿ।

ಆತ್ಮನೇಪದದ ರೂಪಗಳು: ಅಶ್ರಯತ, ಅಶ್ರಯೇತಾಮ್, ಅಶ್ರಯನ್ತ।... ಇತ್ಯಾದಿ।

**ವಿಧಿಲಿಙ್**: ಈ ಪ್ರಕ್ರಿಯೆಯಲ್ಲಿ, ಧಾತುವಿನ ನಂತರ 'ಶಪ್(ಅ)' ಬಂದು ಯಾಸುಟ್ ಆಗಮ, ಗುಣ ಮತ್ತು 'ಅಯ್' ಆದೇಶಗಳು ಬಂದು ರೂಪಗಳು ಸಿದ್ಧವಾಗುತ್ತವೆ.

ಪರಸ್ಮೈ ಪದದ ರೂಪಗಳು: ಶ್ರಯೇತ್, ಶ್ರಯೇತಾಮ್, ಶ್ರಯೇಯುಃ।... ಇತ್ಯಾದಿ।

ಆತ್ಮನೇಪದದ ರೂಪಗಳು: ಶ್ರಯೇತ, ಶ್ರಯೇಯಾತಾಮ್, ಶ್ರಯೇರನ್।... ಇತ್ಯಾದಿ. (ಇಲ್ಲಿ ಯಾಸುಟ್ ಬಾರದೇ 'ಸೀಯುಟ್' ಬಂದಿದೆ.

**ಆಶೀರ್ಲಿಙ್**: ಪರಸ್ಮೈ ಪದದ ರೂಪಗಳು: ಶ್ರಿಯಾತ್, ಶ್ರಿಯಾಸ್ತಾಮ್, ಶ್ರಿಯಾಸುಃ।... ಇತ್ಯಾದಿ.

ಆತ್ಮನೇಪದದ ರೂಪಗಳು: ಶ್ರಯಿಷೀಷ್ಟ, ಶ್ರಯಿಷೀಯಾಸ್ತಾಮ್, ಶ್ರಯಿಷೀರನ್ ।... ಇತ್ಯಾದಿ.

(ಇಲ್ಲಿ 'ಸೀಯುಟ್, ಇಡಾಗಮ, 'ತ' ಮತ್ತು 'ಥ' ಪ್ರತ್ಯಯಗಳಿಗೆ 'ಸುಟ್' ಆಗಮ ಹಾಗೂ 'ಸ್' ಕಾರಕ್ಕೆ ಷತ್ವ, ಧಾತುವಿನಲ್ಲಿ ಗುಣ, ಅಯಾದೇಶಗಳು ಬಂದು ಈ ರೂಪಗಳು ಸಿದ್ಧವಾಗಿವೆ.

**ಲುಙ್**:ಉದಾ– ಅಶಿಶ್ರಿಯತ್– ಪ್ರಥಮಪುರುಷ ಏಕವಚನದಲ್ಲಿ 'ಶ್ರಿ' ಧಾತುವಿನ

ನಂತರ 'ಲುಙ್' 'ಲ್' ಕಾರಕ್ಕೆ 'ತಿಪ್(ತಿ)' ಆದೇಶ ಬಂದು ಧಾತುವಿಗೆ 'ಅಟ್ (ಅ)' ಆಗಮ ಬಂದಾಗ ಅ+ಶ್ರಿ+ತಿ ಎಂದಿರುತ್ತದೆ. 'ತಿ' ನಲ್ಲಿರುವ 'ಇ' ಕಾರಕ್ಕೆ "ಇತಶ್ಚ" ಎಂಬುದರಿಂದ ಲೋಪ ಬಂದು 'ಚ್ಲಿ' ಗೆ ಬರಬೇಕಾದ 'ಸಿಚ್' ನ್ನು ಬಾಧಿಸಿ "ಣಿಶ್ರಿದುಸ್ರುಭ್ಯಃ ಕರ್ತರಿ ಚಙ್" ಎಂಬುದರಿಂದ 'ಚಙ್(ಅ)' ಬಂದು ಅ+ಶ್ರಿ+ಅ+ತ್ ಎಂದಿರುತ್ತದೆ. "ಚಙಿ" ಎಂಬ ಸೂತ್ರದಿಂದ ಧಾತುವಿಗೆ ದ್ವಿತ್ವ ಬಂದು ಅ+ಶ್ರಿಶ್ರಿ+ಅ+ತ್ ಎಂದಿದ್ದಾಗ, ಅಭ್ಯಾಸಸಂಜ್ಞೆ ಬಂದು ಹಲಾದಿಶೇಷವಾದಮೇಲೆ ಅ+ಶಿಶ್ರಿ+ಅ+ತ್ ಎಂದಿರುತ್ತದೆ. 'ಶ್ರಿ' ನಲ್ಲಿರುವ 'ಇ' ಕಾರಕ್ಕೆ 'ಇಯಙ್(ಇಯ್)' ಆದೇಶ ಬಂದು ಅಶಿಶ್ರ್+ಇಯ್+ಅತ್=ಅಶಿಶ್ರಿಯತ್ ಎಂದು ರೂಪವು ಸಿದ್ಧವಾಗುತ್ತದೆ.

ಪರಸ್ಮೈ ಪದದ ರೂಪಗಳು: ಅಶಿಶ್ರಿಯತ್, ಅಶಿಶ್ರಿಯತಾಮ್, ಅಶಿಶ್ರಿಯನ್।... ಇತ್ಯಾದಿ। ಇದೇ ರೀತಿಯಲ್ಲಿ ಆತ್ಮನೇಪದದ ರೂಪಗಳೂ ಸಿದ್ಧಿಸುತ್ತವೆ.

ಆತ್ಮನೇಪದದ ರೂಪಗಳು: ಅಶಿಶ್ರಿಯತ, ಅಶಿಶ್ರಿಯೇತಾಮ್, ಅಶಿಶ್ರಿಯನ್ತ..... ಇತ್ಯಾದಿ।

**ಲೃಙ್**: ಇಲ್ಲಿ ಧಾತುವಿಗೆ ಅಡಾಗಮ ಬಂದು 'ಲೃಟ್' 'ಲ್' ಕಾರದಂತೆ ರೂಪಗಳು ಸಿದ್ಧಿಸುತ್ತವೆ.

ಪರಸ್ಮೈ ಪದದ ರೂಪಗಳು: ಅಶ್ರಯಿಷ್ಯತ್, ಅಶ್ರಯಿಷ್ಯತಾಮ್, ಅಶ್ರಯಿಷ್ಯನ್।... ಇತ್ಯಾದಿ।

ಆತ್ಮನೇಪದದ ರೂಪಗಳು: ಅಶ್ರಯಿಷ್ಯತ, ಅಶ್ರಯಿಷ್ಯೇತಾಮ್, ಅಶ್ರಯಿಷ್ಯನ್ತ ।... ಇತ್ಯಾದಿ।

ಧಾತು 2.ಭೃಞ್- ಭರಣೇ(ಪಾಲನೆ ಮಾಡುವದು, ತುಂಬುವದು) - ಇದರಲ್ಲಿ 'ಭೃ' ಮಾತ್ರ ಉಳಿಯುತ್ತದೆ.

**ಲಟ್**: ಪರಸ್ಮೈಪದದ ಪ್ರಥಮ ಪುರುಷ ಏಕವಚನದಲ್ಲಿ 'ಭೃ' ಧಾತುವಿನ ನಂತರ 'ಲಟ್' ಗೆ 'ತಿಪ್' ಆದೇಶ ಬಂದಮೇಲೆ ಧಾತುವಿನ ನಂತರ 'ಶಪ್' ಪ್ರತ್ಯಯ ಬಂದು 'ಋ' ಕಾರಕ್ಕೆ ಗುಣ(ಅರ್) ಬಂದು ಭರ್+ಅ+ತಿ=ಭರತಿ ಎಂದು ರೂಪವಾಗುತ್ತದೆ.

ಆತ್ಮನೇ ಪದದ ಪ್ರಥಮಪುರುಷ ಏಕವಚನದಲ್ಲಿ 'ಭೃ' ಧಾತುವಿನ ನಂತರ 'ಲಟ್' ಗೆ 'ತ' ಆದೇಶ ಬಂದಮೇಲೆ ಧಾತುವಿನ ನಂತರ 'ಶಪ್' ಪ್ರತ್ಯಯ ಬಂದು 'ಋ' ಕಾರಕ್ಕೆ ಗುಣ(ಅರ್) ಬಂದು ಭರ್+ಅ+ತ ಎಂದಿದ್ದಾಗ, 'ತ' ಕಾರೋತ್ತರ 'ಅ' ಕಾರಕ್ಕೆ ಏತ್ವ ಬಂದು ಭರತೇ ಎಂದು ರೂಪವಾಗುತ್ತದೆ.

ಪರಸ್ಮೈ ಪದದ ರೂಪಗಳು: ಭರತಿ, ಭರತಃ, ಭರನ್ತಿ ।... ಇತ್ಯಾದಿ।

ಆತ್ಮನೇಪದದ ರೂಪಗಳು: ಭರತೇ, ಭರೇತೇ, ಭರನ್ತೇ ।... ಇತ್ಯಾದಿ।

ಲಿಟ್: ಉದಾ- ಬಭಾರ - ಪರಸ್ಮೈಪದದ ಪ್ರಥಮ ಪುರುಷ ಏಕವಚನದಲ್ಲಿ 'ಭೃ' ಧಾತುವಿನ ನಂತರ 'ತಿಪ್' ಆದೇಶ ಬಂದು ಅದಕ್ಕೆ ಅಭಿನವ ಆಖ್ಯಾತ ಪ್ರತ್ಯಯವಾದ 'ಣಲ್(ಅ)' ಆದೇಶ ಬಂದು ನಂತರ ಧಾತುವಿಗೆ ದ್ವಿತ್ವ, ಮತ್ತು ಹಲಾದಿಶೇಷಗಳನ್ನು ಮಾಡಿದಮೇಲೆ ಬಭೃ+ಅ ಎಂದಿದ್ದಾಗ "ಅಚೋಽಞ್ಣಿತಿ" ಎಂಬುದರಿಂದ ವೃದ್ಧಿ

ಬಂದು ಬಭಾರ್+ಅ=ಬಭಾರ ಎಂದು ರೂಪವಾಗುತ್ತದೆ

ಉದಾ– ಬಭ್ರೇ – ಆತ್ಮನೇ ಪ್ರಥಮ ಪುರುಷ ಏಕವಚನದಲ್ಲಿ 'ಭೃ' ಧಾತುವಿನ ನಂತರ 'ತಿಪ್' ಆದೇಶ, ಅಭಿನವ ಆಖ್ಯಾತ ಪ್ರತ್ಯಯವಾದ 'ಏ' ಬಂದು ಧಾತುವಿಗೆ ದ್ವಿತ್ವ ಮತ್ತು ಹಲಾದಿಶೇಷಗಳನ್ನು ಮಾಡಿದಮೇಲ ಬಭೃ+ಏ ಎಂದಿದ್ದಾಗ, 'ಯಣ್' ಸಂಧಿಯಿಂದ 'ಋ' ಕಾರಕ್ಕೆ ರೇಫ(ರ್) ಬಂದು ಬಭ್+ರ್+ಏ=ಬಭ್ರೇ ಎಂದಾಗುತ್ತದೆ.

ಪರಸ್ಮೈ ಪದದ ರೂಪಗಳು: ಬಭಾರ, ಬಭ್ರತುಃ, ಬಭ್ರುಃ।... ಇತ್ಯಾದಿ।

ಆತ್ಮನೇಪದದ ರೂಪಗಳು: ಬಭ್ರೇ, ಬಭ್ರಾತೇ, ಬಭ್ರಿರೇ ।... ಇತ್ಯಾದಿ।

**ಲುಟ್**: ಪರಸ್ಮೈ ಪದದ ರೂಪಗಳು: ಭರ್ತಾ, ಭರ್ತಾರೌ, ಭರ್ತಾರಃ। ಭರ್ತಾಸಿ।...

ಆತ್ಮನೇಪದದ ರೂಪಗಳು: ಭರ್ತಾ, ಭರ್ತಾರೌ, ಭರ್ತಾರಃ। ಭರ್ತಾಸೇ।... ಇತ್ಯಾದಿ।

**ಲೃಟ್**: "ಋದ್ಧನೋಃ ಸ್ಯೇ" ಎಂಬ ಸೂತ್ರದಿಂದ ಕೆಳಗಿನ ರೂಪಗಳು ಸಿದ್ಧಿಸುತ್ತವೆ.

ಪರಸ್ಮೈ ಪದದ ರೂಪಗಳು: ಭರಿಷ್ಯತಿ, ಭರಿಷ್ಯತಃ, ಭರಿಷ್ಯನ್ತಿ।... ಇತ್ಯಾದಿ।

ಆತ್ಮನೇಪದದ ರೂಪಗಳು: ಭರಿಷ್ಯತೇ, ಭರಿಷ್ಯೇತೇ, ಭರಿಷ್ಯನ್ತೇ।... ಇತ್ಯಾದಿ।

**ಲೋಟ್**: ಪರಸ್ಮೈ ಪದದ ರೂಪಗಳು: ಭರತು/ಭರತಾತ್, ಭರತಾಮ್, ಭರನ್ತು।...

ಆತ್ಮನೇಪದದ ರೂಪಗಳು: ಭರತಾಮ್, ಭರೇತಾಮ್, ಭರನ್ತಾಮ್।... ಇತ್ಯಾದಿ।

**ಲಙ್**: ಪರಸ್ಮೈ ಪದದ ರೂಪಗಳು: ಅಭರತ್, ಅಭರತಾಮ್, ಅಭರನ್।...

ಆತ್ಮನೇಪದದ ರೂಪಗಳು: ಅಭರತ, ಅಭರೇತಾಮ್, ಅಭರನ್ತ।... ಇತ್ಯಾದಿ।

**ವಿಧಿಲಿಙ್**: ಪರಸ್ಮೈ ಪದದ ರೂಪಗಳು: ಭರೇತ್, ಭರೇತಾಮ್, ಭರೇಯುಃ।...

ಆತ್ಮನೇಪದದ ರೂಪಗಳು: ಭರೇತ, ಭರೇಯಾತಾಮ್, ಭರೇರನ್।... ಇತ್ಯಾದಿ।

**(ರಿಙ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ– 543.ರಿಙ್-ಶಯಗ್-ಲಿಙ್‌ಕ್ಷು** (7.4.28)

ವೃತ್ತಿಃ– ಶೇ ಯಕಿ ಯಾದೌ ಆರ್ಧಧಾತುಕೇ ಲಿಙಿ ಚ ಋತೋ ರಿಙ್ ಆದೇಶಃ ಸ್ಯಾತ್।

ರಿಙಿ ಚ ಪ್ರಕೃತೇ ರಿಙ್ ವಿಧಾನಸಾಮರ್ಥ್ಯಾತ್ ದೀರ್ಘೋ ನ। ಭ್ರಿಯಾತ್।

ಅ. ವ್ಯ. – "ಅಯಙ್ ಯಿ ಕ್ಙಿತಿ" ಎಂಬ ಸೂತ್ರದಿಂದ 'ಇ' ಎಂಬ ಪದವೂ, "ಅಕೃತ್ ಸಾರ್ವಧಾತುಕಯೋರ್ದೀರ್ಘಃ" ಎಂಬ ಸೂತ್ರದಿಂದ 'ಅಸಾರ್ವಧಾತುಕೇ' ಎಂಬ ಪದವೂ, "ರೀಙ್ ಋತಃ" ಎಂಬ ಸೂತ್ರದಿಂದ 'ಋತಃ' ಎಂಬ ಪದವೂ ಅನುವೃತ್ತವಗುತ್ತವೆ. "ಅಂಗಸ್ಯ" ಎಂಬುದು ಅಧಿಕಾರಸೂತ್ರವಾಗಿದೆ.

ಅರ್ಥ– 'ಶ' 'ಯಕ್' ಅಥವಾ 'ಯ' ಕಾರಾದಿ ಆರ್ಧಧಾತುಕ 'ಲಿಙ್' (ಆಶೀರ್ಲಿಙ್) ಪರದಲ್ಲಿದ್ದಾಗ, ಪೂರ್ವದಲ್ಲಿರುವ ಹ್ರಸ್ವ 'ಋ' ಕಾರಕ್ಕೆ 'ರಿಙ್(ರಿ)' ಆದೇಶವು ಬರುತ್ತದೆ.

**ಆಶೀರ್ಲಿಙ್**: ಉದಾ– ಭ್ರಿಯಾತ್– ಪರಸ್ಮೈಪದದ ಪ್ರಥಮ ಪುರುಷ ಏಕವಚನದಲ್ಲಿ

'ಭೃ' ಧಾತುವಿನ ನಂತರ 'ಲಿಙ್' ಗೆ 'ತಿಪ್' ಆದೇಶ ಬಂದು, 'ತಿ' ನಲ್ಲಿರುವ 'ಇ' ಕಾರಕ್ಕೆ "ಇತಶ್ಚ" ಎಂಬುದರಿಂದ ಲೋಪ ಬಂದು, ಧಾತುವಿನ ನಂತರ 'ಯಾಸುಟ್(ಯಾಸ್)'

ಆಗಮ ಬಂದು ಭೃ+ಯಾಸ್+ತ್ ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ಭೃ' ನಲ್ಲಿರುವ 'ಋ' ಕಾರಕ್ಕೆ 'ರಿಙ್(ರಿ)' ಆದೇಶ ಬಂದು ಭ್+ರಿ+ಯಾಸ್+ತ್ ಎಂದಿದ್ದಾಗ, "ಲಿಙಃ ಸಲೋಪೋऽನನ್ತ್ಯಸ್ಯ" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬಂದು ಭ್+ರಿ+ಯಾ+ತ್=ಭ್ರಿಯಾತ್ ಎಂದು ರೂಪವಾಗುತ್ತದೆ. ಪರಸ್ಮೈ ಪದದ ರೂಪಗಳು: ಭ್ರಿಯಾತ್, ಭ್ರಿಯಾಸ್ತಾಮ್, ಭ್ರಿಯಾಸುಃ ।... ಇತ್ಯಾದಿ।

**(ಆಶೀರ್ಲಿಙ್ ನ ಆತ್ಮನೇಪದದಲ್ಲಿ ಕಿದ್ವದ್ಭಾವವನ್ನು ವಿಧಿಸುವ ಅತಿದೇಶ ಸೂತ್ರ)**
**ಸೂತ್ರ- 544.ಉಶ್ಚ (1.2.12)**

ವೃತ್ತಿಃ- ಋ ವರ್ಣಾತ್ ಪರೌ ಝಲಾದಿ ಲಿಙ್-ಸಿಚೌ ಕಿತೌ ಸ್ತಃ ತಙಿ। ಭೃಷೀಷ್ಟ। ಭೃಷೀಯಾಸ್ತಾಮ್। ಅಭಾರ್ಷೀತ್।

ಪ. ಛೇ. - ಉಃ, ಚ ।

ಅ. ವ್ಯ.- "ಇಕೋ ಝಲ್" ಎಂಬ ಸೂತ್ರದಿಂದ ವಚನವಿಪರಿಣಾಮ ಮಾಡಿದಮೇಲೆ "ಝಲೌ" ಎಂಬ ಪದವು ಅನುವೃತ್ತವಾಗುತ್ತದೆ. ಹಾಗೆಯೇ "ಲಿಙ್ ಸಿಚಾವಾತ್ಮನೇಪದೇಷು" ಎಂಬ ಸೂತ್ರದಿಂದ 'ಆತ್ಮನೇ ಪದೇಷು' ಎಂಬ ಪದವೂ ಮತ್ತು "ಅಸಂಯೋಗಾಲ್ಲಿಟ್ ಕಿತ್" ಎಂಬ ಸೂತ್ರದಿಂದ 'ಕಿತ್' ಎಂಬ ಪದವನ್ನು 'ಕಿತೌ' ಎಂದು ವಚನ ವಿಪರಿಣಾಮ ಮಾಡಿದಮೇಲೆ ಅನುವೃತ್ತಿ ಮಾಡಲಾಗಿದೆ.

ಅರ್ಥ- 'ಋ' ವರ್ಣಕ್ಕಿಂತ ಪರದಲ್ಲಿ ಆತ್ಮನೇಪದಕ್ಕೆ ಸಂಬಂಧಿಸಿದ ಝಲಾದಿಯಾದ 'ಲಿಙ್' ಮತ್ತು 'ಸಿಚ್' ಇವು 'ಕಿತ್'ನಂತೆ ಕಿದ್ವದ್ಭಾವವನ್ನು ಹೊಂದುತ್ತವೆ. ಇದು 'ಕಿತ್' ಆಗಿ ಇಲ್ಲದೇ ಇದ್ದರೂ ಗುಣ ನಿಷೇಧಕ್ಕಾಗಿ ಕಿದ್ವದ್ಭಾವದಿಂದ 'ಅತಿದೇಶ' ಮಾಡಲಾಗಿದೆ.

'ಭೃ' ಧಾತುವಿನ ಆತ್ಮನೇಪದದ ರೂಪಗಳು:-ಆಶೀರ್ಲಿಙ್:

ಉದಾ ಭೃಷೀಷ್ಟ- ಪ್ರಥಮ ಪುರುಷ ಏಕವಚನದಲ್ಲಿ 'ಭೃ' ಧಾತುವಿನ ನಂತರ ಆತ್ಮನೇ ಪದದ ಆಶೀರ್ಲಿಙ್ ಗೆ 'ತ' ಆದೇಶ ಬಂದು, ಧಾತುವಿನ ನಂತರ 'ಸೀಯುಟ್(ಸೀಯ್)' ಆಗಮ, ಅನಂತರ 'ಸುಟ್(ಸ್)' ಆಗಮ ಬಂದು ಭೃ+ಸೀಯ್+ಸ್+ತ ಎಂದಿರುತ್ತದೆ. ಪ್ರಕೃತ ಸೂತ್ರದಿಂದ 'ಸ್' ಕಾರಾದಿಯಾದ 'ಲಿಙ್' ನ 'ತ' ಕಾರಕ್ಕೆ ಕಿದ್ವದ್ಭಾವ ಬರುತ್ತದೆ. "ಕ್ಙಿತಿಚ" ಎಂಬ ಸೂತ್ರದಿಂದ 'ಭೃ' ನಲ್ಲಿರುವ 'ಋ' ಕಾರಕ್ಕೆ ಗುಣದ ನಿಷೇಧವಾಗುವಾಗುತ್ತದೆ. 'ಯ್' ಕಾರ ಲೋಪ ಮುತ್ತು ಷತ್ವ ಮತ್ತು ಷ್ಟುತ್ವಗಳಿಂದ ಭೃಷೀಷ್ಟ ಎಂಬ ರೂಪವು ಸಿದ್ಧವಾಗುತ್ತದೆ.

ಆತ್ಮನೇಪದದ ರೂಪಗಳು: ಭೃಷೀಷ್ಟ, ಭೃಷೀಯಾಸ್ತಾಮ್, ಭೃಷೀರನ್।... ಇತ್ಯಾದಿ।

ಲುಙ್:ಉದಾ- ಅಭಾರ್ಷೀತ್: ಪರಸ್ಮೈಪದದ ಪ್ರಥಮಪುರುಷ ಏಕವಚನದಲ್ಲಿ 'ಭೃ' ಧಾತುವಿನ ನಂತರ 'ಲುಙ್' 'ಲ್' ಕಾರಕ್ಕೆ 'ತಿ' ಆದೇಶವು ಬಂದು, ಧಾತುವಿಗೆ

ಅಡಾಗಮ ಬಂದು 'ತಿ' ಯಲ್ಲಿರುವ 'ಇ' ಕಾರಕ್ಕೆ "ಇತಶ್ಚ" ಎಂಬುದರಿಂದ ಲೋಪ ಬಂದು, ಧಾತುವಿನ ನಂತರ ಬಂದ 'ಚ್ಲಿ' ಗೆ 'ಸಿಚ್(ಸ್)' ಆದೇಶ ಬಂದು "ಅಸ್ತಿಸಿಚೋಽಪೃಕ್ತೇ" ಎಂಬ ಸೂತ್ರದಿಂದ 'ಈಟ್(ಈ)' ಆಗಮ ಬಂದಾಗ, ಅಭೃ+ಸ್+ಈತ್ ಎಂದಿರುತ್ತದೆ. "ಸಿಚಿವೃದ್ಧಿಃ ಪರಸ್ಮೈಪದೇಷು" ಎಂಬ ಸೂತ್ರದಿಂದ ಧಾತುವಿನ 'ಋ' ಕಾರಕ್ಕೆ ವೃದ್ಧಿ ಬಂದು ಅಭಾರ್+ಸ್+ಈತ್ ಎಂದಿದ್ದಾಗ, 'ಸ್' ಕಾರಕ್ಕೆ ಷತ್ವ ಬಂದು ಅಭಾರ್ಷೀತ್ ಎಂದು ರೂಪವಾಗುತ್ತದೆ.

ಪರಸ್ಮೈಪದದ ರೂಪಗಳು: ಅಭಾರ್ಷೀತ್, ಅಭಾರ್ಷ್ಟಾಮ್, ಅಭಾರ್ಷುಃ।... ಇತ್ಯಾದಿ।

**(ಆತ್ಮನೇ ಪದದಲ್ಲಿ 'ಸಿಚ್(ಸ್)'-ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ- 545.ಹ್ರಸ್ವಾದಙ್ಗಾತ್ (8.2.27)**

ವೃತ್ತಿಃ-ಸಿಚೋ ಲೋಪೋ ಝಲಿ । ಅಭೃತ। ಅಭೃಷಾತಾಮ್। ಅಭರಿಷ್ಯತ್, ಅಭರಿಷ್ಯತ। ಹೃಞ್ ಹರಣೇ। 3। ಹರತಿ, ಹರತೇ। ಜಹಾರ । ಜಹರ್ಥ। ಜಹ್ರಿವ। ಜಹ್ರಿಮ। ಜಹ್ರೇ। ಜಹ್ರಿಷೇ। ಹರ್ತಾಸಿ, ಹರ್ತಾಸೇ। ಹರಿಷ್ಯತಿ ಹರಿಷ್ಯತೇ। ಹರತು, ಹರತಾಮ್। ಅಹರತ್, ಅಹರತ। ಹರೇತ್, ಹರೇತ। ಹ್ರಿ0ಯಾತ್, ಹೃಷೀಷ್ಟ। ಹೃಷೀ0ಯಾಸ್ತಾಮ್। ಅಹಾರ್ಷೀತ್, ಅಹೃತ। ಅಹರಿಷ್ಯತ್, ಅಹರಿಷ್ಯತ। ಧೃಞ್ ಧಾರಣೇ।4। ಧರತಿ ಧರತೇ। ಣೀಞ್ ಪ್ರಾಪಣೇ । 5। ನ0ಯತಿ, ನ0ಯತೇ। ಡುಪಚಷ್ ಪಾಕೇ।6। ಪಚತಿ, ಪಚತೇ। ಪಪಾಚ। ಪೇಚಿಥ।, ಪಪಕ್ಥ। ಪೇಚೇ, ಪಕ್ತಾಸಿ, ಪಕ್ತಾಸೇ। ಭಜ ಸೇವಾ0ಯಾಮ್।7। ಭಜತಿ, ಭಜತೇ। ಬಭಾಜ, ಭೇಜೇ। ಭಕ್ತಾಸಿ, ಭಕ್ತಾಸೇ। ಭಕ್ಷ್ಯತಿ, ಭಕ್ಷ್ಯತೇ। ಅಭಾಕ್ಷೀತ್, ಅಭಕ್ತ। ಅಭಕ್ಷಾತಾಮ್। 0ಯಜ ದೇವಪೂಜಾ ಸಙ್ಗತಿಕರಣ ದಾನೇಷು ।8 । ಯಜತಿ, ಯಜತೇ।

ಪ. ಛೇ. – ಹ್ರಸ್ವಾತ್, ಅಙ್ಗಾತ್।

ಅ. ವೃ.- "ರಾತ್ ಸಸ್ಯ" ಎಂಬ ಸೂತ್ರದಿಂದ 'ಸಸ್ಯ' ಎಂಬ ಪದವೂ, "ಸಂಯೋಗಾನ್ತಸ್ಯ ಲೋಪಃ" ಎಂಬ ಸೂತ್ರದಿಂದ 'ಲೋಪಃ' ಎಂಬ ಪದವೂ "ಝಲೋಝಲಿ" ಎಂಬ ಸೂತ್ರದಿಂದ 'ಝಲಿ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ- ಹ್ರಸ್ವಾನ್ತವಾದ ಅಂಗದ ಪರದಲ್ಲಿ ಇರುವ 'ಸಿಚ್(ಸ್)'ಗೆ ಲೋಪವು ಬರುತ್ತದೆ- ಝಲ್ ಪರದಲ್ಲಿದ್ದಾಗ,

**ಲುಙ್**: ಆತ್ಮನೇಪದ: ಉದಾ- ಅಭೃತ- ಪ್ರಥಮಪುರುಷ ಏಕವಚನದಲ್ಲಿ ಆತ್ಮನೇ ಪದದ ಲುಙ್ ಗೆ 'ತ' ಕಾರವು ಆದೇಶವಾಗಿ ಬಂದು ಧಾತುವಿಗೆ ಅಡಾಗಮ ಬಂದಮೇಲೆ ಧಾತುವಿನ ಪರದಲ್ಲಿ ಬಂದಿರುವ 'ಚ್ಲಿ' ಗೆ 'ಸಿಚ್(ಸ್)' ಆದೇಶ ಬಂದು ಅಭೃ+ಸ್+ತ ಎಂದಿರುತ್ತದೆ. "ಉಶ್ಚ" ಎಂಬ ಹಿಂದಿನ ಸೂತ್ರದಿಂದ ಅತಿದೇಶದಿಂದ ಕಿದ್ವದ್ಭಾವ ಬಂದಿರೋಣದರಿಂದ ಗುಣವು ನಿಷೇದಿಸಲ್ಪಟ್ಟಿದೆ. ಪ್ರಕೃತ ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬಂದು ಅಭೃತ ಎಂದು ರೂಪವಾಗಿದೆ.

ಆತ್ಮನೇ ಪದದ ರೂಪಗಳು: ಅಭೃತ, ಅಭೃಷಾತಾಮ್, ಅಭೃಷತ।... ಇತ್ಯಾದಿ।

**ಲೃಙ್**: ಪರಸ್ಮೈ ಪದದ ರೂಪಗಳು: ಅಭರಿಷ್ಯತ್, ಅಭರಿಷ್ಯಾತಾಮ್, ಅಭರಿಷ್ಯನ್।... ಇತ್ಯಾದಿ।

ಆತ್ಮನೇ ಪದದ ರೂಪಗಳು: ಅಭರಿಷ್ಯತ, ಅಭರಿಷ್ಯೇತಾಮ್, ಅಭ್ಅರಿಷ್ಯನ್ತ।... ಇತ್ಯಾದಿ।

ಧಾತು 2. ಹೃಞ್ ಹರಣೇ (ಅಪಹರಿಸುವದು, ಹರಣ ಎಂಬುದಕ್ಕೆ 4 ಅರ್ಥಗಳಿವೆ – ಹೊತ್ತುಕೊಂಡು ಹೋಗುವದು, ಪದಾರ್ಥವನ್ನು ಬೇರೆಡೆಗೆ ಸಾಗಿಸುವದು, ಸ್ವೀಕರಿಸುವದು, ಸ್ತೇಯ (ಕಳವು), ನಾಶಮಾಡುವದು– ಈ ಧಾತುವಿನಲ್ಲಿ 'ಹೃ' ಮಾತ್ರ ಉಳಿಯುತ್ತದೆ.

**ಲಟ್**: ಉದಾ–ಹರತಿ/ಹರತೇ– ಪರಸ್ಮೈಪದ ಪ್ರಥಮಪುರುಷ ಏಕವಚನದಲ್ಲಿ 'ಹೃ' ಧಾತುವಿನಮೇಲೆ 'ಲಟ್' 'ಲ್' ಕಾರದಮೇಲೆ 'ತಿಪ್(ತಿ)' ಬಂದು, ಧಾತುವಿನ ಪರದಲ್ಲಿ 'ಶಪ್(ಅ)' ವಿಕರಣ ಬಂದು ಹೃ+ಅ+ತಿ ಎಂದಿದ್ದಾಗ, 'ಋ' ಕಾರಕ್ಕೆ ಗುಣ (ಅರ್) ಬಂದು ಹ್+ಅರ್+ಅ+ತಿ=ಹರತಿ ಎಂದು ರೂಪವು ಸಿದ್ಧವಾಗುತ್ತದೆ.

ರೂಪಗಳು: ಹರತಿ, ಹರತಃ, ಹರನ್ತಿ।... ಇತ್ಯಾದಿ।

ಆತ್ಮನೇ ಪದದ ಪ್ರಥಮಪುರುಷ ಏಕವಚನದಲ್ಲಿ 'ಹೃ' ಧಾತುವಿನ ನಂತರ 'ಲಟ್' ಗೆ 'ತ' ಆದೇಶ ಬಂದಮೇಲೆ ಧಾತುವಿನ ನಂತರ 'ಶಪ್' ಪ್ರತ್ಯಯ ಬಂದು 'ಋ' ಕಾರಕ್ಕೆ ಗುಣ(ಅರ್) ಬಂದು ಹರ್+ಅ+ತ ಎಂದಿದ್ದಾಗ, 'ತ' ಕಾರೋತ್ತರ 'ಅ' ಕಾರಕ್ಕೆ ಏತ್ವ ಬಂದು ಹರತೇ ಎಂದು ರೂಪವಾಗುತ್ತದೆ.

ರೂಪಗಳು: ಹರತೇ, ಹರೇತೇ, ಹರನ್ತೇ।... ಇತ್ಯಾದಿ।

**ಲಿಟ್**: ಈ 'ಲ್' ಕಾರದಲ್ಲಿ ಧಾತುವಿಗೆ ದ್ವಿತ್ವ ಮತ್ತು ಹಲಾದಿಶೇಷವಾದಮೇಲೆ "ಕುಹೋಶ್ಚುಃ" ಎಂಬ ಸೂತ್ರದಿಂದ ಚುತ್ವ(ಜ್) ಬಂದು ರೂಪಗಳು ಸಿದ್ಧವಾಗುತ್ತವೆ. ಪರಸ್ಮೈದದಲ್ಲಿ ರೂಪಗಳು: ಜಹಾರ, ಜಹ್ರತುಃ, ಜಹ್ರುಃ। ಜಹರ್ಥ, ಜಹ್ರಥುಃ, ಜಹ್ರ ಜಹಾರ/ ಜಹರ ಜಹ್ರಿವ, ಜಹ್ರಿಮ.।

ಆತ್ಮನೇಪದದಲ್ಲಿ ರೂಪಗಳು: ಜಹ್ರೇ, ಜಹ್ರಾತೇ, ಜಹ್ರಿರೇ। ಜಹ್ರಿಷೇ, ಜಹ್ರಾಥೇ, ಜಹ್ರಿಡ್ವೇ/ಜಹ್ರಿಧ್ವೇ। ಜಹ್ರೇ, ಜಹ್ರಿವಹೇ, ಜಹ್ರಿಮಹೇ।

**ಲುಟ್**: ಪರಸ್ಮೈಪದದ ರೂಪಗಳು: ಹರ್ತಾ, ಹರ್ತಾರೌ, ಹರ್ತಾರಃ। ಹರ್ತಾಸಿ।...

ಆತ್ಮನೇಪದದಲ್ಲಿ ರೂಪಗಳು: ಹರ್ತಾ, ಹರ್ತಾರೌ, ಹರ್ತಾರಃ। ಹರ್ತಾಸೇ।...

**ಲೃಟ್**: ಪರಸ್ಮೈಪದದ ರೂಪಗಳು: ಹರಿಷ್ಯತಿ, ಹರಿಷ್ಯತಃ, ಹರಿಷ್ಯನ್ತಿ।... ಇತ್ಯಾದಿ।

ಆತ್ಮನೇಪದದಲ್ಲಿ ರೂಪಗಳು: ಹರಿಷ್ಯತೇ, ಹರಿಷ್ಯೇತೇ, ಹರಿಷ್ಯನ್ತೇ।... ಇತ್ಯಾದಿ।

**ಲೋಟ್**: ಪರಸ್ಮೈಪದದ ರೂಪಗಳು: ಹರತು/ಹರತಾತ್,ಹರತಾಮ್, ಹರನ್ತು।...

ಆತ್ಮನೇಪದದಲ್ಲಿ ರೂಪಗಳು: ಹರತಾಮ್, ಹರೇತಾಮ್, ಹರನ್ತಾಮ್।... ಇತ್ಯಾದಿ।

**ಲಙ್**: ಪರಸ್ಮೈಪದದ ರೂಪಗಳು: ಅಹರತ್, ಅಹರತಾಮ್, ಅಹರನ್।... ಇತ್ಯಾದಿ।

ಆತ್ಮನೇಪದದಲ್ಲಿ ರೂಪಗಳು: ಅಹರತ, ಅಹರೇತಾಮ್, ಅಹರನ್ತ।... ಇತ್ಯಾದಿ।

**ವಿಧಿಲಿಙ್**: ಪರಸ್ಮೈಪದದ ರೂಪಗಳು: ಹರೇತ್, ಹರೇತಾಮ್, ಹರೇಯುಃ।...
ಆತ್ಮನೇಪದದಲ್ಲಿ ರೂಪಗಳು: ಹರೇತ, ಹರೇಯಾತಾಮ್, ಹರೇರನ್।... ಇತ್ಯಾದಿ
**ಆಶೀರ್ಲಿಙ್**: ಪರಸ್ಮೈಪದದ ರೂಪಗಳು: ಹ್ರಿಯಾತ್, ಹ್ರಿಯಾಸ್ತಾಮ್, ಹ್ರಿಯಾಸುಃ...
ಆತ್ಮನೇಪದದಲ್ಲಿ ರೂಪಗಳು: ಹೃಷೀಷ್ಟ, ಹೃಷೀಯಾಸ್ತಾಮ್, ಹೃಷೀರನ್।.... ಇತ್ಯಾದಿ
ಲುಙ್:ಪರಸ್ಮೈಪದದ ರೂಪಗಳು: ಅಹಾರ್ಷೀತ್, ಅಹಾರ್ಷ್ಟಾಮ್, ಅಹಾರ್ಷುಃ।...
ಆತ್ಮನೇಪದದಲ್ಲಿ ರೂಪಗಳು: ಅಹೃತ, ಅಹೃಷಾತಾಮ್, ಅಹೃಷತ।... ಇತ್ಯಾದಿ
ಲೃಙ್: ಪರಸ್ಮೈಪದದ ರೂಪಗಳು: ಅಹರಿಷ್ಯತ್, ಅಹರಿಷ್ಯತಾಮ್, ಅಹರಿಷ್ಯನ್।...
ಆತ್ಮನೇಪದದಲ್ಲಿ ರೂಪಗಳು: ಅಹರಿಷ್ಯತ, ಅಹರಿಷ್ಯೇತಾಮ್, ಅಹರಿಷ್ಯನ್ತ।... ಇತ್ಯಾದಿ
ಧಾತು 4 ಧೃಞ್ ಧಾರಣೇ(ಧರಿಸುವದು)– ಇದರಲ್ಲಿ 'ಧೃ' ಮಾತ್ರ ಉಳಿಯುತ್ತದೆ.
ಲಟ್: ಪರಸ್ಮೈಪದದ ರೂಪಗಳು: ಧರತಿ, ಧರತಃ, ಧರನ್ತಿ।.... ಇತ್ಯಾದಿ
ಆತ್ಮನೇಪದದಲ್ಲಿ ರೂಪಗಳು: ಧರತೇ, ಧರೇತೇ, ಧರನ್ತೇ... ಇತ್ಯಾದಿ
ಲಿಟ್: ಪರಸ್ಮೈಪದದ ರೂಪಗಳು: ದಧಾರ, ದಧ್ರತುಃ, ದಧ್ರುಃ।... ಇತ್ಯಾದಿ
ಆತ್ಮನೇಪದದಲ್ಲಿ ರೂಪಗಳು: ದಧ್ರೇ, ದಧ್ರಾತೇ, ದಧ್ರಿರೇ।... ಇತ್ಯಾದಿ
ಲುಟ್: ಪರಸ್ಮೈಪದದ ರೂಪಗಳು; ಧರ್ತಾ, ಧರ್ತಾರೌ, ಧರ್ತಾರಃ। ಧರ್ತಾಸಿ...
ಆತ್ಮನೇಪದದಲ್ಲಿ ರೂಪಗಳು: ಧರ್ತಾ, ಧರ್ತಾರೌ, ಧರ್ತಾರಃ। ಧರ್ತಾಸೇ... ಇತ್ಯಾದಿ
ಲೃಟ್:ಪರಸ್ಮೈಪದದ ರೂಪಗಳು: ಧರಿಷ್ಯತಿ, ಧರಿಷ್ಯತಃ, ಧರಿಷ್ಯನ್ತಿ।.... ಇತ್ಯಾದಿ
ಆತ್ಮನೇಪದದಲ್ಲಿ ರೂಪಗಳು: ಧರಿಷ್ಯತೇ, ಧರಿಷ್ಯೇತೇ, ಧರಿಷ್ಯನ್ತೇ।... ಇತ್ಯಾದಿ
ಲೋಟ್:ಪರಸ್ಮೈಪದದ ರೂಪಗಳು: ಧರತು/ಧರತಾತ್, ಧರತಾಮ್, ಧರನ್ತು।...
ಆತ್ಮನೇಪದದಲ್ಲಿ ರೂಪಗಳು: ಧರತಾಮ್, ಧರೇತಾಮ್, ಧರನ್ತಾಮ್।.... ಇತ್ಯಾದಿ
**ಲಙ್**: ಪರಸ್ಮೈಪದದ ರೂಪಗಳು: ಅಧರತ್, ಅಧರತಾಮ್, ಅಧರನ್।... ಇತ್ಯಾದಿ।
ಆತ್ಮನೇಪದದಲ್ಲಿ ರೂಪಗಳು: ಅಧರತ, ಅಧರೇತಾಮ್, ಅಧರನ್ತ।... ಇತ್ಯಾದಿ।
**ವಿಧಿಲಿಙ್**: ಪರಸ್ಮೈಪದದ ರೂಪಗಳು: ಧರೇತ್, ಧರೇತಾಮ್, ಧರೇಯುಃ। ... ಇತ್ಯಾದಿ।
ಆತ್ಮನೇಪದದಲ್ಲಿ ರೂಪಗಳು: ಧರೇತ, ಧರೇಯಾತಾಮ್, ಧರೇರನ್।... ಇತ್ಯಾದಿ।
**ಅಶೀರ್ಲಿಙ್**: ಪರಸ್ಮೈಪದದ ರೂಪಗಳು: ಧ್ರಿಯಾತ್, ಧ್ರಿಯಾಸ್ತಾಮ್, ಧ್ರಿಯಾಸುಃ।... ಇತ್ಯಾದಿ।
ಆತ್ಮನೇಪದದಲ್ಲಿ ರೂಪಗಳು: ಧ್ರಿಷೀಷ್ಟ, ಧ್ರಿಷೀಯಾಸ್ತಾಮ್, ಧ್ರಿಷೀರನ್... ಇತ್ಯಾದಿ।
**ಲುಙ್**: ಪರಸ್ಮೈಪದದ ರೂಪಗಳು: ಅಧಾರ್ಷೀತ್, ಅಧಾರ್ಷ್ಟಾಮ್, ಅಧಾರ್ಷುಃ।... ಇತ್ಯಾದಿ।

ಆತ್ಮನೇಪದದಲ್ಲಿ ರೂಪಗಳು: ಅಧೃತ, ಅಧೃಷಾತಾಮ್, ಅಧೃಷತ।... ಇತ್ಯಾದಿ।

**ಲೃಙ್**: ಪರಸ್ಮೈಪದದ ರೂಪಗಳು: ಅಧೃಷ್ಯತ್, ಅಧೃಷ್ಯತಾಮ್, ಅಧೃಷ್ಯನ್।... ಇತ್ಯಾದಿ।

ಆತ್ಮನೇಪದದಲ್ಲಿ ರೂಪಗಳು: ಅಧರಿಷ್ಯತ, ಅಧರಿಷ್ಯೇತಾಮ್, ಅಧರಿಷ್ಯನ್ತ।... ಇತ್ಯಾದಿ।

ಧಾತು 5. ಣೀಞ್ – ಪ್ರಾಪಣೇ(ತೆಗೆದುಕೊಂಡು ಹೋಗುವದು) "ಣೋ ನಃ" ಎಂಬ ಸೂತ್ರದಿಂದ ಧಾತುಪಾಠದಲ್ಲಿ ಹೇಳಿರುವ 'ಣ್' ಕಾರಕ್ಕೆ 'ನ್' ಕಾರವು ಆದೇಶವಾಗಿ ಬರುತ್ತದೆ. ಇದರಲ್ಲಿ 'ನೀ' ಮಾತ್ರ ಉಳಿಯುತ್ತದೆ.

**ಲಟ್**: ಉದಾ– ನಯತಿ– ಪರಸ್ಮೈಪದದ ಪ್ರಥಮಪುರುಷ ಏಕವಚನದಲ್ಲಿ 'ನೀ' ಧಾತುವಿನ ನಂತರ 'ಲಟ್' 'ಲ್' ಕಾರಕ್ಕೆ 'ತಿಪ್(ತಿ)' ಆದೇಶಬಂದು ಧಾತುವಿನ ನಂತರ 'ಶಪ್(ಅ)' ವಿಕರಣ ಪ್ರತ್ಯಯ ಬಂದು ಧಾತುವಿನಲ್ಲಿರುವ 'ಇ' ಕಾರಕ್ಕೆ ಗುಣ ಬಂದು 'ನೇ' ಎಂದಾಗಿ ಅದಕ್ಕೆ 'ಅಯ್' ಆದೇಶ ಬಂದು ನಯತಿ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ನಯತೇ– ಆತ್ಮನೇಪದದ ಪ್ರಥಮಪುರುಷ ಏಕವಚನದಲ್ಲಿ 'ನೀ' ಧಾತುವಿನ ನಂತರ 'ಲಟ್' 'ಲ್' ಕಾರಕ್ಕೆ 'ತ' ಆದೇಶಬಂದು ಧಾತುವಿನ ನಂತರ

'ಶಪ್(ಅ)' ವಿಕರಣ ಪ್ರತ್ಯಯ ಬಂದು ಧಾತುವಿನಲ್ಲಿರುವ 'ಇ' ಕಾರಕ್ಕೆ ಗುಣ ಬಂದು 'ನೇ' ಎಂದಾಗಿ ಅದಕ್ಕೆ 'ಅಯ್' ಆದೇಶ ಬಂದು ನಯ+ತ ಎಂದಿದ್ದಾಗ "ಟಿತ ಅತ್ಮನೇಪದಾನಾಂ ಟೇರೇ" ಎಂಬ ಸೂತ್ರದಿಂದ 'ತ' ಕಾರೋತ್ತರ 'ಅ' ಕಾರಕ್ಕೆ ಏತ್ವ ಬಂದು ನಯತೇ ಎಂಬ ರೂಪವು ಸಿದ್ಧವಾಗುತ್ತದೆ.

ಪರಸ್ಮೈಪದದ ರೂಪಗಳು: ನಯತಿ, ನಯತಃ, ನಯನ್ತಿ।... ಇತ್ಯಾದಿ।

ಆತ್ಮನೇಪದದಲ್ಲಿ ರೂಪಗಳು: ನಯತೇ, ನಯೇತೇ, ನಯನ್ತೇ।... ಇತ್ಯಾದಿ।

**ಲಿಟ್**: ಉದಾ– ನಿನಾಯ, – ಪರಸ್ಮೈಪದದ ಪ್ರಥಮಪುರುಷ ಏಕವಚನದಲ್ಲಿ 'ನೀ' ಧಾತುವಿನ ನಂತರ 'ಲಿಟ್(ಲ್)' ಕಾರವು ಬಂದು ಅದಕ್ಕೆ 'ಣಲ್(ಅ)' ಆದೇಶ ಬಂದು ಧಾತುವಿಗೆ ದ್ವಿತ್ವಾದಿಗಳನ್ನು ಮಾಡಿದಮೇಲೆ ನಿ ನಿ+ಅ ಎಂದಿದ್ದಾಗ ಅನಭ್ಯಸ್ತ 'ಇ' ಕಾರಾಕ್ಕೆ ವೃದ್ಧಿ ಬಂದು ನಿ+ನೈ+ಅ ಎಂದಿದ್ದಾಗ, 'ಐ' ಗೆ 'ಆಯ್' ಆದೇಶ ಬಂದು ನಿನಾಯ ಎಂದು ರೂಪವು ಸಿದ್ಧಿಸುತ್ತದೆ.

ಪರಸ್ಮೈಪದದ ರೂಪಗಳು: ನಿನಾಯ, ನಿನ್ಯತುಃ, ನಿನ್ಯುಃ।... ಇತ್ಯಾದಿ।

ಆತ್ಮನೇಪದದಲ್ಲಿ ರೂಪಗಳು: ನಿನ್ಯೇ, ನಿನ್ಯಾತೇ, ನಿನ್ಯಿರೇ।... ಇತ್ಯಾದಿ।

**ಲುಟ್**: ಪರಸ್ಮೈಪದದ ರೂಪಗಳು: ನೇತಾ, ನೇತಾರೌ, ನೇತಾರಃ। ನೇತಾಸಿ...

ಆತ್ಮನೇಪದದಲ್ಲಿ ರೂಪಗಳು: ನೇತಾ, ನೇತಾರೌ, ನೇತಾರಃ।ನೇತಾಸೇ... ಇತ್ಯಾದಿ।

**ಲೃಟ್**: ಪರಸ್ಮೈಪದದ ರೂಪಗಳು: ನೇಷ್ಯತಿ, ನೇಷ್ಯತಃ, ನೇಷ್ಯನ್ತಿ।... ಇತ್ಯಾದಿ।

ಆತ್ಮನೇಪದದಲ್ಲಿ ರೂಪಗಳು: ನೇಷ್ಯತೇ, ನೇಷ್ಯೇತೆ ನೇಷ್ಯನ್ತೇ।... ಇತ್ಯಾದಿ।

**ಲೋಟ್**: ಪರಸ್ಮೈಪದದ ರೂಪಗಳು: ನಯತು/ನಯತಾತ್, ನಯತಾಮ್, ನಯನ್ತು।
ಆತ್ಮನೇಪದದಲ್ಲಿ ರೂಪಗಳು: ನಯತಾಮ್, ನಯೇತಾಮ್, ನಯನ್ತಾಮ್।...ಇತ್ಯಾದಿ।
ಲಙ್: ಪರಸ್ಮೈಪದದ ರೂಪಗಳು: ಅನಯತ್, ಅನಯತಾಮ್, ಅನಯನ್।...
ಆತ್ಮನೇಪದದಲ್ಲಿ ರೂಪಗಳು: ಅನಯತ, ಅನಯೇತಾಮ್, ಅನಯನ್ತ ।... ಇತ್ಯಾದಿ।
**ವಿಧಿಲಿಙ್**: ಪರಸ್ಮೈಪದದ ರೂಪಗಳು: ನಯೇತ್, ನಯೇತಾಮ್, ನಯೇಯುಃ।
ಆತ್ಮನೇಪದದಲ್ಲಿ ರೂಪಗಳು: ನಯೇತ, ನಯೇಯಾತಮ್, ನಯೇರನ್। ...
ಆಶೀರ್ಲಿಙ್ :–ಪರಸ್ಮೈಪದದ ರೂಪಗಳು: ನೀಯಾತ್, ನೀಯಾಸ್ತಾಮ್, ನೀಯಾಸುಃ ।... ಇತ್ಯಾದಿ।
ಆತ್ಮನೇಪದದಲ್ಲಿ ರೂಪಗಳು: ನೇಷೀಷ್ಟ, ನೇಷೀಯಾಸ್ತಾಮ್, ನೇಷೀರನ್ ।...
**ಲುಙ್**: ಪರಸ್ಮೈಪದದ ರೂಪಗಳು: ಅನೈಷೀತ್, ಅನೈಷ್ಟಾಮ್, ಅನೈಷುಃ ...
ಆತ್ಮನೇಪದದಲ್ಲಿ ರೂಪಗಳು: ಅನೇಷ್ಟ, ಅನೇಷಾತಾಮ್, ಅನೇಷತ ।... ಇತ್ಯಾದಿ।
**ಲೃಙ್**: ಪರಸ್ಮೈಪದದ ರೂಪಗಳು: ಅನೇಷ್ಯತ್, ಅನೇಷ್ಯತಾಮ್, ಅನೇಷ್ಯನ್। ...
ಆತ್ಮನೇಪದದಲ್ಲಿ ರೂಪಗಳು: ಅನೇಷ್ಯತ, ಅನೇಷ್ಯೇತಾಮ್, ಅನೇಷ್ಯನ್ತ ।... ಇತ್ಯಾದಿ।
ಧಾತು 6– ಡುಪಚಷ್ ಪಾಕೇ–(ಬೇಯಿಸುವದು) ಇದರಲ್ಲಿ 'ಪಚ್' ಮಾತ್ರ ಉಳಿಯುತ್ತದೆ.
**ಲಟ್**: ಪರಸ್ಮೈಪದದ ರೂಪಗಳು: ।ಪಚತಿ, ಪಚತಃ, ಪಚನ್ತಿ।... ಇತ್ಯಾದಿ।
ಆತ್ಮನೇಪದದಲ್ಲಿ ರೂಪಗಳು: ಪಚತೇ, ಪಚೇತೇ, ಪಚನ್ತೇ।... ಇತ್ಯಾದಿ।
**ಲಿಟ್**: ಪರಸ್ಮೈಪದದ ರೂಪಗಳು: ಪಪಾಚ, ಪೇಚತುಃ, ಪೇಚುಃ... ಇತ್ಯಾದಿ।
ಆತ್ಮನೇಪದದಲ್ಲಿ ರೂಪಗಳು: ಪೇಚೇ, ಪೇಚಾತೇ, ಪೇಚಿರೇ ।... ಇತ್ಯಾದಿ।
ಲುಟ್:ಪರಸ್ಮೈಪದದ ರೂಪಗಳು: ।ಪಕ್ತಾ, ಪಕ್ತಾರೌ, ಪಕ್ತಾರಃ।ಪಕ್ತಾಸಿ... ಇತ್ಯಾದಿ।
ಆತ್ಮನೇಪದದಲ್ಲಿ ರೂಪಗಳು: ।ಪಕ್ತಾ, ಪಕ್ತಾರೌ, ಪಕ್ತಾರಃ।ಪಕ್ತಾಸೇ... ಇತ್ಯಾದಿ।
**ಲೃಟ್**: ಪರಸ್ಮೈಪದದ ರೂಪಗಳು: ।ಪಕ್ಷ್ಯತಿ, ಪಕ್ಷ್ಯತಃ, ಪಕ್ಷ್ಯನ್ತಿ।... ಇತ್ಯಾದಿ।
ಆತ್ಮನೇಪದದಲ್ಲಿ ರೂಪಗಳು: ಪಕ್ಷ್ಯತೇ, ಪಕ್ಷ್ಯೇತೇ, ಪಕ್ಷ್ಯನ್ತೇ ।... ಇತ್ಯಾದಿ।
**ಲೋಟ್**: ಪರಸ್ಮೈಪದದ ರೂಪಗಳು: ಪಚತು/ಪಚತಾತ್, ಪಚತಾಮ್, ಪಚನ್ತು ।
ಆತ್ಮನೇಪದದಲ್ಲಿ ರೂಪಗಳು: ಪಚತಾಮ್, ಪಚೇತಾಮ್, ಪಚನ್ತಾಮ್ ।... ಇತ್ಯಾದಿ।
**ಲಙ್**: ಪರಸ್ಮೈಪದದ ರೂಪಗಳು: ಅಪಚತ್, ಅಪಚತಾಮ್, ಅಪಚನ್।... ಇತ್ಯಾದಿ।
ಆತ್ಮನೇಪದದಲ್ಲಿ ರೂಪಗಳು: ಅಪಚತ, ಅಪಚೇತಾಮ್, ಅಪಚನ್ತ ।... ಇತ್ಯಾದಿ।
**ವಿಧಿಲಿಙ್**: ಪರಸ್ಮೈಪದದ ರೂಪಗಳು:ಪಚೇತ್, ಪಚೇತಾಮ್, ಪಚೇಯುಃ ...
ಆತ್ಮನೇಪದದಲ್ಲಿ ರೂಪಗಳು:ಪಚೇತ, ಪಚೇಯಾತಾಮ್, ಪಚೇರನ್ ।... ಇತ್ಯಾದಿ।

**ಅಶೀರ್ಲಿಙ್**: ಪರಸ್ಮೈಪದದ ರೂಪಗಳು: ಪಚ್ಯಾತ್, ಪಚ್ಯಾಸ್ತಾಮ್, ಪಚ್ಯಾಸುಃ।...
ಆತ್ಮನೇಪದದಲ್ಲಿ ರೂಪಗಳು:ಪಕ್ಷೀಷ್ಟ, ಪಕ್ಷೀಯಾಸ್ತಾಮ್, ಪಕ್ಷೀರನ್ ।... ಇತ್ಯಾದಿ।
**ಲುಙ್**: ಧಾತು ಅನಿಟ್ ಆಗಿರೋಣದರಿಂದ ಲುಙ್‌ನಲ್ಲಿ ಇಡಾಗಮವು ಬರುವುದಿಲ್ಲ.
ಪರಸ್ಮೈಪದದ ರೂಪಗಳು: ಅಪಾಕ್ಷೀತ್ ಅಪಾಕ್ತಾಮ್, ಅಪಾಕ್ಷುಃ ।... ಇತ್ಯಾದಿ।
ಆತ್ಮನೇಪದದಲ್ಲಿ ರೂಪಗಳು: ಅಪಕ್ತ, ಅಪಕ್ಷಾತಾಮ್, ಅಪಕ್ಷತ।... ಇತ್ಯಾದಿ।
**ಲೃಙ್**: ಪರಸ್ಮೈಪದದ ರೂಪಗಳು:ಅಪಕ್ಷ್ಯತ್, ಅಪಕ್ಷ್ಯತಾಮ್, ಅಪಕ್ಷ್ಯನ್। ...
ಆತ್ಮನೇಪದದಲ್ಲಿ ರೂಪಗಳು: ಅಪಕ್ಷ್ಯತ, ಅಪಕ್ಷ್ಯೇತಾಮ್, ಅಪಕ್ಷ್ಯನ್ತ ।... ಇತ್ಯಾದಿ।

ಧಾತು 7–ಭಜ ಸೇವಾಯಾಮ್(ಸೇವೆ ಮಾಡುವದು)– ಇದರಲ್ಲಿ 'ಭಜ್' ಮಾತ್ರ ಉಳಿಯುತ್ತದೆ.

**ಲಟ್**: ಉದಾ– ಭಜತಿ/ಭಜತೇ – ಪರಸ್ಮೈಪದದ ಏಕವಚನದಲ್ಲಿ 'ಭಜ್' ಧಾತುವಿನಮೇಲೆ 'ಲಟ್' 'ಲ್' ಕಾರದ 'ತಿಪ್' ಬಂದು, ಧಾತುವಿನ ಪರದಲ್ಲಿ 'ಶಪ್(ಅ)' ಬಂದು ಭಜ್+ಅ+ತಿ=ಭಜತಿ ಎಂದು ರೂಪವು ಸಿದ್ಧವಾಗುತ್ತದೆ. ಪರಸ್ಮೈಪದದ ಏಕವಚನದಲ್ಲಿ 'ಭಜ್' ಧಾತುವಿನಮೇಲೆ 'ಲಟ್' 'ಲ್' ಕಾರದ 'ತ' ಬಂದು, ಧಾತುವಿನ ಪರದಲ್ಲಿ 'ಶಪ್(ಅ)' ಬಂದು ಭಜ್+ಅ+ತ ಎಂದಿದ್ದಾಗ 'ತ್' ಕಾರೋತ್ತರ 'ಅ' ಕಾರಕ್ಕೆ "ಟಿತ ಆತ್ಮನೇಪದಾನಾಂ ಟೇರೇ" ಎಂಬುದರಿಂದ ಏತ್ವ ಬಂದು ಭಜ್+ಅ+ತ್+ಏ=ಭಜತೇ ಎಂದು ರೂಪವಾಗುತ್ತದೆ.

ಪರಸ್ಮೈಪದದ ರೂಪಗಳು: ಭಜತಿ, ಭಜತಃ, ಭಜನ್ತಿ ।... ಇತ್ಯಾದಿ।
ಆತ್ಮನೇಪದದಲ್ಲಿ ರೂಪಗಳು: ಭಜತೇ, ಭಜೇತೇ, ಭಜನ್ತೇ ।... ಇತ್ಯಾದಿ।

**ಲಿಟ್**: ಪರಸ್ಮೈಪದದ ರೂಪಗಳು:ಬಭಾಜ, ಭೇಜತುಃ, ಭೇಜುಃ। ಭೇಜಿಥ/ಬಭಕ್ತ, ಭೇಜಥುಃ, ಭೇಜ। ಬಭಾಜ/ಬಭಜ, ಭೇಜಿವ, ಭೇಜಿಮ।

ಆತ್ಮನೇಪದದಲ್ಲಿ ಏತ್ವ ಮತ್ತು ಅಭ್ಯಾಸ ಲೋಪಗಳಿಂದ ರೂಪಗಳು ಸಿದ್ಧವಾಗುತ್ತವೆ.
ಆತ್ಮನೇಪದದಲ್ಲಿ ರೂಪಗಳು: ಭೇಜೇ, ಭೇಜಾತೇ, ಭೇಜಿರೇ। ಭೇಜಿಷೇ, ಭೇಜಾಥೇ, ಭೇಜಿಧ್ವೇ। ಭೇಜೇ, ಭೇಜಿವಹೇ, ಭೇಜಿಮಹೇ।

**ಲುಟ್**: ಪರಸ್ಮೈಪದದ ರೂಪಗಳು: ಭಕ್ತಾ, ಭಕ್ತಾರೌ, ಭಕ್ತಾರಃ ।ಭಕ್ತಾಸಿ... ಇತ್ಯಾದಿ।
ಆತ್ಮನೇಪದದಲ್ಲಿ ರೂಪಗಳು: ಭಕ್ತಾ, ಭಕ್ತಾರೌ, ಭಕ್ತಾರಃ ।ಭಕ್ತಾಸೇ ।... ಇತ್ಯಾದಿ।
ಲೃಟ್:ಪರಸ್ಮೈಪದದ ರೂಪಗಳು:ಭಕ್ಷ್ಯತಿ, ಭಕ್ಷ್ಯತಃ, ಭಕ್ಷ್ಯನ್ತಿ ।... ಇತ್ಯಾದಿ।
ಆತ್ಮನೇಪದದಲ್ಲಿ ರೂಪಗಳು: ಭಕ್ಷ್ಯತೆ2ೀ, ಭಕ್ಷ್ಯೇತೇ, ಭಕ್ಷ್ಯನ್ತೇ ।... ಇತ್ಯಾದಿ।
ಲೋಟ್:ಪರಸ್ಮೈಪದದ ರೂಪಗಳು:ಭಜತು/ಭಜತಾತ್, ಭಜತಾಮ್, ಭಜನ್ತು।...
ಆತ್ಮನೇಪದದಲ್ಲಿ ರೂಪಗಳು: ಭಜತಾಮ್, ಭಜೇತಾಮ್, ಭಜನ್ತಾಮ್।... ಇತ್ಯಾದಿ।
ಲಙ್: ಪರಸ್ಮೈಪದದ ರೂಪಗಳು:ಅಭಜತ್, ಅಭಜತಾಮ್, ಅಭಜನ್ ।... ಇತ್ಯಾದಿ।

ಆತ್ಮನೇಪದದಲ್ಲಿ ರೂಪಗಳು: ಅಭಜತ, ಅಭಜೇತಾಮ್, ಅಭಜನ್ತ।... ಇತ್ಯಾದಿ।

**ವಿಧಿಲಿಙ್:**

ಪರಸ್ಮೈಪದದ ರೂಪಗಳು: ಭಜೇತ್, ಭಜೇತಾಮ್, ಭಜೇಯುಃ।... ಇತ್ಯಾದಿ।

ಆತ್ಮನೇಪದದಲ್ಲಿ ರೂಪಗಳು: ಭಜೇತ, ಭಜೇಯಾತಾಮ್, ಭಜೇರನ್ ।... ಇತ್ಯಾದಿ।

**ಆಶೀರ್ಲಿಙ್**: ಪರಸ್ಮೈಪದದ ರೂಪಗಳು: ಭಜ್ಯಾತ್, ಭಜ್ಯಾಸ್ತಾಮ್, ಭಜ್ಯಾಸುಃ।

ಆತ್ಮನೇಪದದಲ್ಲಿ ರೂಪಗಳು: ಭಕ್ಷೀಷ್ಟ, ಭಕ್ಷೀಯಾಸ್ತಾಮ್, ಭಕ್ಷೀರನ್ ।... ಇತ್ಯಾದಿ।

**ಲುಙ್**: ಪರಸ್ಮೈಪದದ ರೂಪಗಳು: ಅಭಾಕ್ಷೀತ್, ಅಭಾಕ್ತಾಮ್,ಅಭಾಕ್ಷುಃ। ಅಭಾಕ್ಷೀಃ, ಅಭಾಕ್ತಮ್, ಅಭಾಕ್ತ। ಅಭಾಕ್ಷಂ, ಅಭಾಕ್ಷ್ವ ಅಭಾಕ್ಷ್ಮ।

ಆತ್ಮನೇಪದದಲ್ಲಿ ರೂಪಗಳು: ಅಭಕ್ತ, ಅಭಕ್ಷಾತಾಮ್, ಅಭಕ್ಷತ । ಅಭಕ್ಥಾಃ, ಅಭಕ್ಷಾಥಾಮ್, ಅಭಗ್ಧ್ವಮ್। ಅಭಕ್ಷಿ, ಅಭಕ್ಷ್ವಹಿ, ಅಭಕ್ಷ್ಮಹಿ।

**ಲೃಙ್**: ಪರಸ್ಮೈಪದದ ರೂಪಗಳು: ಅಭಕ್ಷ್ಯತ್, ಅಭಕ್ಷ್ಯತಾಮ್, ಅಭಕ್ಷ್ಯನ್।...

ಆತ್ಮನೇಪದದಲ್ಲಿ ರೂಪಗಳು: ಅಭಕ್ಷ್ಯತ, ಅಭಕ್ಷ್ಯೇತಾಮ್, ಅಭಕ್ಷ್ಯನ್ತ ।... ಇತ್ಯಾದಿ।

ಧಾತು 8. ೦ಯಜ ದೇವಪೂಜಾ ಸಙ್ಗತಿಕರಣ ದಾನೇಷು (ದೇವಪೂಜೆಮಾಡುವದು, ಸಂಗತಿ ಮಾಡುವದು, ದಾನಕೊಡುವದು). ಇದರಲ್ಲಿ 'ಯಜ್' ಮಾತ್ರ ಉಳಿಯುತದೆ.

**ಲಟ್**: ಪರಸ್ಮೈಪದದಲ್ಲಿ ರೂಪಗಳು: ಯಜತಿ, ಯಜತಃ, ಯಜನ್ತಿ। ಇತ್ಯಾದಿ।

ಆತ್ಮನೇಪದದಲ್ಲಿ ರೂಪಗಳು: ಯಜತೇ, ಯಜೇತೇ, ಯಜನ್ತೇ। ಇತ್ಯಾದಿ।

**(ಅಭ್ಯಾಸಕ್ಕೆ ಸಂಪ್ರಸಾರಣವನ್ನು ವಿಧಿಸುವ ಸೂತ್ರ)**

**ಸೂತ್ರ- 546.ಲಿಟ್ಯಭ್ಯಾಸಸ್ಯೋಭಯೇಷಾಮ್** (6.1.17)

ವೃತ್ತಿಃ–ವಚ್ಯಾದೀನಾಂ ಗ್ರಹ್ಯಾದೀನಾಂ ಚ ಅಭ್ಯಾಸಸ್ಯ ಸಂಪ್ರಸಾರಣಂ ಲಿಟಿ। ಇ೦ಯಾಜ।

ಪ. ಛೇ. – ಲಿಟಿ, ಅಭ್ಯಾಸಸ್ಯ, ಉಭ೦ಯೇಷಾಮ್।

ಅ. ವೃ.– "ಷ್ಯಙಃ ಸಮ್ಪ್ರಸಾರಣಮ್" ಎಂಬ ಸೂತ್ರದಿಂದ 'ಸಮ್ಪ್ರಸಾರಣಮ್' ಎಂಬ ಪದವು ಅನುವೃತ್ತವಾಗುತ್ತದೆ. 'ಉಭಯೇಷಾಮ್' ಎಂಬ ಪದದಿಂದ "ವಚಿಸ್ವಪಿಂಯಜಾದೀನಾವಿ ಕಿತಿ" ಎಂಬಲ್ಲಿರುವ ವಚ್ಯಾದಿ ಮತ್ತು "ಗ್ರಹಿಜ್ಯಾವಯಿವ್ಯಧಿವಷ್ಟಿವಿಚತಿವೃಶ್ಚತಿಪೃಚ್ಛತಿಭೃಜ್ಯತೀನಾಂ ಙ್ಗಿತಿಚ" ಎಂಬಲ್ಲಿರುವ ಗ್ರಹ್ಯಾದಿ ಎಂಬ ಎರಡು ಧಾತುಗಣಗಳು ಸ್ವೀಕೃತವಾಗಿವೆ.

ಅರ್ಥ– ಲಿಟ್ ಪರದಲ್ಲಿದ್ದಾಗ, ವಚ್ ಮೊದಲಾದ ಧಾತುಗಳ ಮತ್ತು ಗ್ರಹ್ ಮೊದಲಾದ ಧಾತುಗಳ ಅಭ್ಯಾಸಕ್ಕೆ ಸಮ್ಪ್ರಸಾರಣ ಬರುತ್ತದೆ.

ಗಮನಕ್ಕೆ: ವಚ್ಯಾದಿಗಣದಲ್ಲಿ ವಚ್, ಸ್ವಪ್, ಯಜ್,ವಪ್, ವಹ್, ವಸ್, ವೇಞ್, ವ್ಯೇಞ್, ಹ್ವೇಞ್, ವದ್, ಮತ್ತು ಶ್ವಿ ಎಂಬ 11 ಧಾತುಗಳಿವೆ, ಗ್ರಹ್ಯಾದಿಗಣದಲ್ಲೂ, ಗ್ರಹ್, ಜ್ಯಾವಯ್,ವ್ಯಧ್,ವಶ್,ವ್ಯಚ್,ವ್ರಸ್ಚ್, ಪ್ರಚ್ಛ್ ಮತ್ತು ಭ್ರಸ್ಜ್ ಎಂಬ 9 ಧಾತುಗಳಿವೆ.

**ಲಿಟ್**: ಉದಾ-ಇಯಾಜ -ಪರಸ್ಮೈಪದದ ಪ್ರಥಮಪುರುಷ ಏಕವಚನದಲ್ಲಿ 'ಯಜ್' ಧಾತುವಿನ ನಂತರ 'ಲಿಟ್'ಗೆ 'ತಿಪ್' ಆದೇಶ ಬಂದು ಅದಕ್ಕೆ ಅಭಿನವ ಆಖ್ಯಾತಪ್ರತ್ಯಯ ವಾದ 'ಣಲ್(ಅ)' ಆದೇಶವಾಗಿ ಬಂದು ಧಾತುವಿಗೆ ದ್ವಿತ್ವ ಮತ್ತು ಹಲಾದಿಶೇಷಗಳನ್ನು ಮಾಡಿದಮೇಲೆ ಯಯಜ್+ಅ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ಅಭ್ಯಾಸದ 'ಯ್'(ಯ್+ಅ) ಕಾರಕ್ಕೆ ಸಂಪ್ರಸಾರಣ ಬಂದು ಇ+ಅ ಎಂದಾಗುತ್ತದೆ. ಇಲ್ಲಿ "ಸಂಪ್ರಸಾರಾಣಾಚ್ಚ" ಎಂಬ ಸೂತ್ರದಿಂದ ಪೂರ್ವರೂಪವು ಬಂದು 'ಇ' ಮಾತ್ರ ಉಳಿದು ಇಯಜ್+ಅ ಎಂದಿರುತ್ತದೆ. "ಅತ ಉಪಧಾಯಾಃ" ಎಂಬುದರಿಂದ 'ಯ' ಕಾರೋತ್ತರ 'ಅ' ಕಾರಕ್ಕೆ ವೃದ್ಧಿ ಬಂದು ಇ+ಯಾಜ್+ಅ=ಇಯಾಜ ರೂಪವು ಸಿದ್ಧ.

**(ಕಿತ್ ಪರದಲ್ಲಿದ್ದಾಗ, ಸಂಪ್ರಸಾರಣವನ್ನು ವಿಧಿಸುವ ಸೂತ್ರ)**

**ಸೂತ್ರ- 547.ವಚಿ-ಸ್ವಪಿ-ಯಜಾದೀನಾಂ ಕಿತಿ (6.1.15)**

ವೃತ್ತಿಃ-ವಚಿ-ಸ್ವಪ್ಯೋಃ ಯಜಾದೀನಾಂ ಚ ಸಂಪ್ರಸಾರಣಮ್ ಸ್ಯಾತ್ ಕಿತಿ। ಈಜತುಃ। ಈಜುಃ। ಇಯಜಿಥ, ಇಯಷ್ಠ। ಈಜೇ। ಯಷ್ಟಾ।

ಅ. ವೃ.- ಷ್ಯಜಃ ಸಂಪ್ರಸಾರಣಮ್" ಎಂಬ ಸೂತ್ರದಿಂದ 'ಸಂಪ್ರಸಾರಣಮ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- 'ಕಿತ್' ಆದ ಪ್ರತ್ಯಯವು ಪರದಲ್ಲಿದ್ದಾಗ, ವಚ್, ಸ್ವಪ್, ಹಾಗೂ ಯಜಾದಿ ಧಾತುಗಳಿಗೆ ಸಂಪ್ರಸಾರಣವು ಬರುತ್ತದೆ. ತಿಪ್, ಸಿಪ್ ಮತ್ತು ಮಿಪ್ ಇವುಗಳನ್ನು ಬಿಟ್ಟು ಉಳಿದ ಪ್ರತ್ಯಯಗಳು 'ಕಿತ್' ಆಗಿರುತ್ತವೆ. ಆದ್ದರಿಂದ ಅಲ್ಲಿಯೂ ಸಂಪ್ರಸಾರಣವು ಆಗುತ್ತದೆ. 'ಸಂಪ್ರಸಾರಣಂ ತದಾಶ್ರಯಂ ಚ ಕಾರ್ಯಂ ಬಲವತ್' ಎಂಬ ನ್ಯಾಯದಿಂದ ಸಂಪ್ರಸಾರಣ ಮತ್ತು ಸಂಪ್ರಸಾರಣವನ್ನು ಅಶ್ರಯಿಸಿದ ಕಾರ್ಯವು ಪೂರ್ವರೂಪ ವೊದಲಾದವುಗಳಿಂದ ಬಲಿಷ್ಟವಾಗುತ್ತದೆ. ಅದುದರಿಂದ ವೊದಲು ಸಂಪ್ರಸಾರಣವಾಗುತ್ತದೆ. ಆಗ ದ್ವಿತ್ವಾದಿ ಕಾರ್ಯಗಳು ಆಗುತ್ತವೆ. 'ಇಯಾಜ' ಎಂಬಲ್ಲಿ ಮೊಟ್ಟಮೊದಲಿಗೆ ದ್ವಿತ್ವ ಯಾಕೆ ಆಗಿದೆ ಎಂದರೆ- "ಲಿಟ್ಯಭ್ಯಾಸಸ್ಯೋಭಯೇಷಾಮ್" ಎಂಬ ಸೂತ್ರವು ಅಭ್ಯಾಸಕ್ಕೇನೇ ದ್ವಿತ್ವವನ್ನುಮಾಡುತ್ತದೆ. ಮತ್ತು ದ್ವಿತ್ವ ಮಾಡಿದಮೇಲೆಯೇ ಅಭ್ಯಾಸವಾಗುತ್ತದೆ.

ವಿವರಣೆ: ಪ್ರಕೃತಸೂತ್ರ ಮತ್ತು ಅದರ ಹಿಂದಿನ ಸೂತ್ರ ಇವೆರಡೂ ಸಂಪ್ರಸಾರಣವನ್ನು ಹೇಳುತ್ತವೆ. ಇವುಗಳಲ್ಲಿ ವ್ಯತ್ಯಾಸವೇನೆಂದರೆ- ತಿಪ್' ಸಿಪ್' ಮತ್ತು ಮಿಪ್ ಗಳನ್ನು ಬಿಟ್ಟು ಬೇರೆ ಪ್ರತ್ಯಯಗಳಿರುವಾಗ, ಕಿತ್ ಪರದಲ್ಲಿದ್ದಾಗ, ಪ್ರಕೃತ ಸೂತ್ರವು ದ್ವಿತ್ವವಾಗುವದಕ್ಕೆ ಮೊದಲೇನೇ ಸಂಪ್ರಸಾರಣವನ್ನು ಮಾಡುತ್ತದೆ. ಮತ್ತು 'ಲಿಟ್' ನಲ್ಲಿ ತಿಪ್, ಸಿಪ್, ಮತ್ತು ಮಿಪ್ ಗಳಿದ್ದಾಗ, ಪ್ರಕೃತಸೂತ್ರದ ಹಿಂದಿನ ಸೂತ್ರವು ದ್ವಿತ್ವವಾದಮೇಲೆ ಅಭ್ಯಾಸಕ್ಕೆ ಸಂಪ್ರಸಾರಣವನ್ನು ಮಾಡುತ್ತದೆ. ಎಂಬುದಾಗಿ ತಿಳಿಯಬೇಕು.

ಉದಾ- ಈಜತುಃ- ಪರಸಮ್ಮೈ ಪದದ ಪ್ರಥಮಪುರುಷ ದ್ವಿವಚನದಲ್ಲಿ 'ಲಿಟ್' ನಲ್ಲಿ 'ಯಜ್' ಧಾತುವಿನ ನಂತರ 'ಲಿಟ್' ಗೆ 'ತಸ್' ಬಂದು ಅದಕ್ಕೆ ಅಭಿನವ ಆಖ್ಯಾತ

ಪ್ರತ್ಯಯವಾದ 'ಅತುಸ್' ಆದೇಶವು ಬಂದು ಯಜ್+ಅತುಸ್ ಎಂದಿರುತ್ತದೆ, 'ಯಜ್' ನಲ್ಲಿ ಯ್+ಅ+ಜ್ ಎಂಬ ಮೂರು ಅಕ್ಷರಗಳಿವೆ. ಇಲ್ಲಿ "ಲಿಟಿ ಧಾತೋರನಭ್ಯಾಸಸ್ಯ" ಎಂಬ ಸೂತ್ರದಿಂದ ದ್ವಿತ್ವವು ಬರಬೇಕಾಗಿತ್ತು. ಆದರೆ ಪ್ರಕೃತ ಸೂತ್ರವು ಅದಕ್ಕಿಂತ ಪರದಲ್ಲಿ ಇರುವದರಿಂದ ಅದನ್ನು ಬಾಧಿಸಿ ಪ್ರಕೃತಸೂತ್ರದಿಂದ 'ಯಜ್'ನಲ್ಲಿರುವ 'ಯ್' ಕಾರಕ್ಕೆ ಸಂಪ್ರಸಾರಣವಾದ 'ಇ' ಕಾರವು ಆದೇಶವಾಗಿ ಬಂದು, ಇ+ಅ+ಜ್+ಅತುಸ್ ಎಂದಿದ್ದಾಗ, 'ಇ' ಕಾರ 'ಅ' ಕಾರಗಳಿಗೆ ಪೂರ್ವರೂಪ ಬಂದು ಇಜ್+ಅತುಸ್ ಎಂದಿರುತ್ತದೆ. ಈಗ ದ್ವಿತ್ವ ಆಗಿ ಇಜ್ ಇಜ್+ಅತುಸ್ ಎಂದಾದಮೇಲೆ ಅಭ್ಯಾಸ ಕಾರ್ಯಗಳಾಗಿ ಇಇಜ್+ಅತುಸ್ ಎಂದಾಗಿ, ಎರಡು 'ಇ' ಕಾರಗಳಿಗೆ ಸವರ್ಣದೀರ್ಘ ಬಂದು ಈಜ್+ಅತುಸ್ =ಈಜತುಸ್ ಎಂದಾಗಿ ರುತ್ವ–ವಿಸರ್ಗಗಳಿಂದ ಈಜತುಃ ಎಂದು ರೂಪವು ಸಿದ್ಧವಾಗುತ್ತದೆ. 'ಕಿತ್' ಗಳಲ್ಲಿ ಪ್ರಕ್ರಿಯೆಯು ಇದೇ ರೀತಿಯಲ್ಲಿ ಇರುವದು.

ಉದಾ– ಈಜುಃ – ಪ್ರಥಮಪುರುಷ ಬಹುವಚನದಲ್ಲಿ ಇದೇ ರೀತಿಯಲ್ಲಿ ಪ್ರಕ್ರಿಯೆ ನಡೆದು, 'ಉಸ್' ಪ್ರತ್ಯಯವನ್ನು ಸೇರಿಸಿದಾಗ ಈಜ್+ಉಸ್=ಈಜುಃ ಎಂದು ರೂಪವಾಗುತ್ತದೆ.

ಉದಾ–ಇಯಜಿಥ, ಇಯಷ್ಠ– ಮಧ್ಯಮಪುರುಷ ಏಕವಚನದಲ್ಲಿ 'ಥಲ್' ಪ್ರತ್ಯಯವು ಪರದಲ್ಲಿದ್ದಾಗ, ಭರದ್ವಾಜನಿಯಮದಿಂದ ಇಡಾಗಮವು ವಿಕಲ್ಪದಿಂದ ಬರುತ್ತದೆ. "ಲಿಟ್ಯಭ್ಯಾಸಸ್ಯೋಭಯೇಷಾಮ್" ಎಂಬ ಸೂತ್ರದಿಂದ ಅಭ್ಯಾಸಕ್ಕೆ ಸಂಪ್ರಸಾರಣ ಬಂದು, ಇಡಾಗಮಪಕ್ಷದಲ್ಲಿ ಇಯಜಿಥ ಎಂದು ರೂಪವಾಗುತ್ತದೆ. ಇಡಾಗಮ ಬಾರದ ಪಕ್ಷದಲ್ಲಿ "ವ್ರಶ್ಚಭ್ರಸ್ಜ ...ಷಃ" ಎಂಬ ಸೂತ್ರದಿಂದ 'ಜ್' ಕಾರಕ್ಕೆ 'ಷ್' ಕಾರ ನಂತರ 'ಥ್' ಕಾರಕ್ಕೆ ಷ್ಟುತ್ವದಿಂದ 'ಠ್' ಕಾರ ಬಂದು, ಇಯಷ್ಠ ಎಂದು ರೂಪವು ಸಿದ್ಧವಾಗುತ್ತದೆ. 'ವ' ಕಾರ 'ಮ' ಕಾರಗಳಿಗೆ ಕ್ರಾದಿನಿಯಮದಿಂದ ನಿತ್ಯವಾಗಿ ಇಡಾಗಮ ಬರುತ್ತದೆ.

ಪರಸ್ಮೈಪದದ ರೂಪಗಳು: ಇಯಾಜ, ಈಜತುಃ, ಈಜುಃ। ಇಯಜಿಥ/ಇಯಷ್ಠ, ಈಜಥುಃ, ಈಜ। ಇಯಾಜ/ಇಯಜ, ಈಜಿವ, ಈಜಿಮ।

ಆತ್ಮನೇಪದದಲ್ಲಿ ಏತ್ವಾದೇಶ ಮತ್ತು ಅಭ್ಯಾಸ ಲೋಪಗಳಿಂದ ರೂಪಗಳು ಸಿದ್ಧವಾಗುತ್ತವೆ.

ಆತ್ಮನೇಪದದಲ್ಲಿ ರೂಪಗಳು: ಈಜೇ, ಈಜಾತೇ, ಈಜಿರೇ। ಈಜಿಷೇ, ಈಜಾಥೇ, ಈಜಿಧ್ವೇ। ಈಜ, ಈಜಿವಹೇ, ಈಜಿಮಹೇ।

ಲುಟ್: ಈ 'ಲ್' ಕಾರದಲ್ಲಿ, ಎರಡೂ ಪದಗಳಲ್ಲೂ, 'ಜ್' ಕಾರಕ್ಕೆ "ವ್ರಶ್ಚಭ್ರಸ್ಜ ...ಷಃ" ಎಂಬ ಸೂತ್ರದಿಂದ 'ಷ್' ಕಾರವು ಆದೇಶವಾಗಿ ಬಂದು ಷ್ಟುತ್ವಸಂಧಿಯಿಂದ ಯಷ್ಟಾ ಎಂದು ರೂಪವಾಗುತ್ತದೆ.

ಪರಸ್ಮೈಪದದ ರೂಪಗಳು: ಯಷ್ಟಾ, ಯಷ್ಟಾರೌ, ಯಷ್ಟಾರಃ।ಯಷ್ಟಾಸಿ... ಇತ್ಯಾದಿ।

ಆತ್ಮನೇಪದದಲ್ಲಿ ರೂಪಗಳು: ಯಷ್ಟಾ, ಯಷ್ಟಾರೌ, ಯಷ್ಟಾರಃ। ಯಷ್ಟಾಸೇ.....

ಇತ್ಯಾದಿ।

**(ಕತ್ವವನ್ನು ಆದೇಶವಾಗಿ ವಿಧಿಸುವ ಸೂತ್ರ)**

**ಸೂತ್ರ- 548.ಷಢೋಃ ಕಃ ಸಿ। (8.2.41)**

ವೃತ್ತಿಃ-0ಯಕ್ಷ್ಯತಿ, 0ಯಕ್ಷ್ಯತೇ। ಇಜ್ಯಾತ್, 0ಯಕ್ಷೀಷ್ಟ ಅ0ಯಾಕ್ಷೀತ್, ಅ0ಯಷ್ಟ ವಹ ಪ್ರಾಪಣೇ। 9। ವಹತಿ, ವಹತೇ। ಉವಾಹ। ಊಹತುಃ। ಊಹುಃ। ಉವಹಿಥ।

ಅರ್ಥ- 'ಸ್' ಕಾರವು ಪರದಲ್ಲಿದ್ದಾಗ, 'ಷ್' ಮತ್ತು 'ಢ್' ಕಾರಗಳಿಗೆ 'ಕ್' ಕಾರವು ಆದೇಶವಾಗಿ ಬರುತ್ತದೆ.

**ಲೃಟ್**: ಉದಾ- ಯಕ್ಷ್ಯತಿ- 'ಲೃಟ್' 'ಲ್' ಕಾರದ ಪರಸ್ಮೈ ಮತ್ತು ಆತ್ಮನೇ ಪದಗಳ ಪ್ರಥಮಪುರುಷ ಏಕವಚನದಲ್ಲಿ 'ಯಜ್' ಧಾತುವಿನ ನಂತರ 'ಸ್ಯ' ಪ್ರತ್ಯಯ ಬಂದು "ವ್ರಶ್ಚಭ್ರಸ್ಜ.........ಷಃ" ಎಂಬ ಸೂತ್ರದಿಂದ 'ಜ್' ಕಾರಕ್ಕೆ 'ಷ್' ಕಾರವು ಆದೇಶವಾಗಿ ಬಂದು ಯಷ್+ಸ್ಯ ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ಷ್' ಕಾರಕ್ಕೆ 'ಕ್' ಕಾರವು ಆದೇಶವಾಗಿ ಬಂದು, ಯಕ್+ಸ್ಯ ಎಂದಿರುತ್ತದೆ. 'ಕ್' ಕಾರದ ಪರದಲ್ಲಿರುವ 'ಸ್' ಕಾರಕ್ಕೆ ಷತ್ವವು ಬಂದು ಯಕ್+ಷ್ಯ ಎಂದಾಗಿ 'ಕ್' ಮತ್ತು 'ಷ್' ಗಳು ಸೇರಿ 'ಕ್ಷ್' ಎಂದಾಗಿ ಯಕ್ಷ್ಯ ಎಂದಾಗುತ್ತದೆ ಇದಕ್ಕೆ 'ತಿಪ್(ತಿ)' ಸೇರಿಸಿದಾಗ ಯಕ್ಷ್ಯತಿ ಎಂದೂ, ಆತ್ಮನೇ ಪದದಲ್ಲಿ ಯಕ್ಷ್ಯ+ತ ಎಂದಿದ್ದಾಗ, "ಟಿತ ಆತ್ಮನೇಪದಾನಾಂ ಟೇರೇ" ಎಂಬುದರಿಂದ ಅಂತ್ಯ 'ಅ' ಕಾರಕ್ಕೆ ಏತ್ವ ಬಂದು ಯಕ್ಷ್ಯತೇ ಎಂದು ರೂಪವು ಸಿದ್ಧವಾಗುತ್ತದೆ.

ಪರಸ್ಮೈಪದದ ರೂಪಗಳು: ಯಕ್ಷ್ಯತಿ, ಯಕ್ಷ್ಯತಃ, ಯಕ್ಷ್ಯನ್ತಿ।... ಇತ್ಯಾದಿ।

ಆತ್ಮನೇಪದದಲ್ಲಿ ರೂಪಗಳು: ಯಕ್ಷ್ಯತೇ, ಯಕ್ಷ್ಯೇತೇ, ಯಕ್ಷ್ಯನ್ತೇ ।... ಇತ್ಯಾದಿ।

**ಲೋಟ್**: ಪರಸ್ಮೈಪದದ ರೂಪಗಳು: ಯಜತು/ಯಜತಾತ್, ಯಜತಾಮ್, ಯಜನ್ತು। ... ಇತ್ಯಾದಿ।

ಆತ್ಮನೇಪದದಲ್ಲಿ ರೂಪಗಳು: ಯಜತಾಮ್, ಯಜೇತಾಮ್, ಯಜನ್ತಾಮ್ । ...

**ಲಙ್**: ಪರಸ್ಮೈಪದದ ರೂಪಗಳು: ಅಯಜತ್, ಅಯಜತಾಮ್, ಅಯಜನ್।...

**ಲೋಟ್**: ಪರಸ್ಮೈಪದದ ರೂಪಗಳು: ವಹತು/ವಹತಾತ್, ವಹತಾಮ್, ವಹನ್ತು।

ಆತ್ಮನೇಪದದಲ್ಲಿ ರೂಪಗಳು:ವಹತಾಮ್, ವಹೇತಾಮ್ ವಹನ್ತಾಮ್।... ಇತ್ಯಾದಿ।

ಲಙ್:ಪರಸ್ಮೈಪದದ ರೂಪಗಳು: ಅವಹತ್, ಅವಹತಾಮ್, ಅವಹನ್ । ...

ಆತ್ಮನೇಪದದಲ್ಲಿ ರೂಪಗಳು:ಅವಹತ, ಅವಹೇತಾಮ್, ಅವಹನ್ತ ।... ಇತ್ಯಾದಿ।

**ವಿಧಿಲಿಙ್**: ಪರಸ್ಮೈಪದದ ರೂಪಗಳು:ವಹೇತ್, ವಹೇತಾಮ್, ವಹೇಯುಃ।...

ಆತ್ಮನೇಪದದಲ್ಲಿ ರೂಪಗಳು: ವಹೇತ, ವಹೇಯಾತಾಮ್, ವಹೇರನ್। ... ಇತ್ಯಾದಿ।

**ಆಶೀರ್ಲಿಙ್**: ಪರಸ್ಮೈಪದದ ರೂಪಗಳು: ಉಹ್ಯಾತ್, ಉಹ್ಯಾಸ್ತಾಮ್, ಉಹ್ಯಾಸುಃ।

ಆತ್ಮನೇಪದದಲ್ಲಿ ರೂಪಗಳು: ವಕ್ಷೀಷ್ಟ, ವಕ್ಷೀಯಾಸ್ತಾಮ್, ವಕ್ಷೀರನ್ ।... ಇತ್ಯಾದಿ।

**ಲುಙ್**: ಪರಸ್ಮೈಪದದ ರೂಪಗಳು: ಅವಾಕ್ಷೀತ್, ಅವೋಢಾಮ್, ಅವಾಕ್ಷುಃ। ...

ಆತ್ಮನೇಪದದಲ್ಲಿ ರೂಪಗಳು: ಅವೋಢ, ಅವಕ್ಷಾತಾಮ್, ಅವಕ್ಷತ ।... ಇತ್ಯಾದಿ।

**ಲೃಙ್**: ಪರಸ್ಮೈಪದದ ರೂಪಗಳು: ಅವಕ್ಷ್ಯತ್, ಅವಕ್ಷ್ಯತಾಮ್, ಅವಕ್ಷ್ಯನ್। ...

ಆತ್ಮನೇಪದದಲ್ಲಿ ರೂಪಗಳು: ಅವಕ್ಷ್ಯತ, ಅವಕ್ಷ್ಯೇತಾಮ್, ಅವಕ್ಷ್ಯನ್ತ ।... ಇತ್ಯಾದಿ।

**॥ಇತಿ ಉಭಯಪದಿನಃ॥**

**॥ಇತಿ ಭ್ವಾದಯಃ – ಪ್ರಥಮಗಣಃ ಸಮಾಪ್ತಃ॥**

**ಇಲ್ಲಿಗೆ ಭ್ವಾದಿ ಪ್ರಕರಣ (12) ಮುಗಿಯಿತು.**

ಆತ್ಮನೇಪದದಲ್ಲಿ ರೂಪಗಳು: ಅಯಜತ, ಅಯಜೇತಾಮ್, ಅಯಜನ್ತ। ... ಇತ್ಯಾದಿ।

**ವಿಧಿಲಿಙ್**: ಪರಸ್ಮೈಪದದ ರೂಪಗಳು: ಯಜೇತ್, ಯಜೇತಾಮ್, ಯಜೇಯುಃ।...

ಆತ್ಮನೇಪದದಲ್ಲಿ ರೂಪಗಳು: ಯಜೇತ, ಯಜೇಯಾತಾಮ್, ಯಜೇರನ್। ...

**ಅಶೀರ್ಲಿಙ್**: ಪರಸ್ಮೈಪದದ ರೂಪಗಳು: ಇಜ್ಯಾತ್, ಇಜ್ಯಾಸ್ತಾಮ್, ಇಜ್ಯಾಸುಃ ।

ಆತ್ಮನೇಪದದಲ್ಲಿ ರೂಪಗಳು: ಯಕ್ಷೀಷ್ಟ, ಯಕ್ಷೀಯಾಸ್ತಾಮ್, ಯಕ್ಷೀರನ್।... ಇತ್ಯಾದಿ।

ಲುಙ್:ಪರಸ್ಮೈಪದದ ರೂಪಗಳು: ಅಯಾಕ್ಷೀತ್, ಅಯಾಷ್ಟಾಮ್, ಅಯಾಕ್ಷುಃ।

ಆತ್ಮನೇಪದದಲ್ಲಿ ರೂಪಗಳು: ಅಯಷ್ಟ, ಅಯಕ್ಷಾತಾಮ್, ಅಯಕ್ಷತ॥... ಇತ್ಯಾದಿ।

ಲೃಙ್:ಪರಸ್ಮೈಪದದ ರೂಪಗಳು: ಅಯಕ್ಷ್ಯತ್, ಅಯಕ್ಷ್ಯತಾಮ್, ಅಯಕ್ಷ್ಯನ್।

ಆತ್ಮನೇಪದದಲ್ಲಿ ರೂಪಗಳು: ಅಯಕ್ಷ್ಯತ, ಅಯಕ್ಷ್ಯೇತಾಮ್, ಅಯಕ್ಷ್ಯನ್ತ। ...

ಧಾತು 9.ವಹ ಪ್ರಾಪಣೇ (ತೆಗೆದುಕೊಂಡು ಹೋಗುವದು) – ಇದರಲ್ಲಿ 'ವಹ್' ಮಾತ್ರ ಉಳಿಯುತ್ತದೆ.

**ಲಟ್**: ಉದಾ– ವಹತಿ, ವಹತೇ – 'ಲಟ್' 'ಲ್' ಕಾರದ ಪರಸ್ಮೈ ಮತ್ತು ಆತ್ಮನೇ ಪದಗಳ ಪ್ರಥಮಪುರುಷ ಏಕವಚನದಲ್ಲಿ 'ವಹ್' ಧಾತುವಿನ ನಂತರ 'ಲಟ್' ಗೆ ಪರಸ್ಮೈಪದದಲ್ಲಿ 'ತಿಪ್(ತಿ) ಆದೇಶ ಮತ್ತು ಆತ್ಮನೇಪದದಲ್ಲಿ 'ತ' ಆದೇಶಗಳು ಬಂದು ಧಾತುವಿನ ನಂತರ 'ಶಪ್(ಅ)' ಬಂದು ವಹ್+ಅ+ತಿ, ಮತ್ತು ವಹ್+ಅ+ತ ಎಂದಿದ್ದಾಗ, ಪರಸ್ಮೈ ಪದದಲ್ಲಿ ವಹತಿ ಎಂಬ ರೂಪ, ಆತ್ಮನೇಪದದಲ್ಲಿ ಅನ್ತ್ಯ 'ಅ' ಕಾರಕ್ಕೆ ಏತ್ವ ಬಂದು ವಹತೇ ಎಂದೂ ರೂಪಗಳು ಸಿದ್ಧವಾಗುತ್ತವೆ.

ಪರಸ್ಮೈಪದದ ರೂಪಗಳು: ವಹತಿ, ವಹತಃ, ವಹನ್ತಿ ।... ಇತ್ಯಾದಿ।

ಆತ್ಮನೇಪದದಲ್ಲಿ ರೂಪಗಳು: ವಹತೇ, ವಹೇತೇ, ವಹನ್ತೇ।... ಇತ್ಯಾದಿ।

**ಲಿಟ್**: ಉದಾ– ಉವಾಹ– 'ಲಿಟ್' 'ಲ್' ಕಾರದ ಪರಸ್ಮೈ ಪದದ ಪ್ರಥಮಪುರುಷ ಏಕವಚನದಲ್ಲಿ 'ವಹ್' ಧಾತುವಿನ ನಂತರ 'ಲಿಟ್' ಗೆ 'ತಿಪ್(ತಿ)' ಆದೇಶ ಬಂದು, ಅದಕ್ಕೆ ಅಭಿನವ ಆಖ್ಯಾತ ಪ್ರತ್ಯಯವಾದ 'ಣಲ್'(ಅ) ಆದೇಶವಾಗಿ ಬಂದು ವಹ್+ಅ

ಎಂದಿದ್ದಾಗ ಧಾತುವಿಗೆ ದ್ವಿತ್ವ ಬಂದು ವಹ್ ವಹ್+ಅ ಎಂದಿದ್ದಾಗ, ಹಲಾದಿಶೇಷ ಮಾಡಿದಮೇಲೆ ವವಹ್+ಅ ಎಂದಿದ್ದಾಗ, ಅಭ್ಯಾಸದ 'ವ್' ಕಾರಕ್ಕೆ ಸಂಪ್ರಸಾರಣ(ಉ) ಬಂದು, ಉ+ಅ+ವಹ್+ಅ ಎಂದಿದ್ದಾಗ, 'ಉ' ಕಾರ 'ಅ' ಕಾರಗಳಿಗೆ ಪೂರ್ವರೂಪ(ಉ) ಬಂದು ಉವಹ್+ಅ ಎಂದಿದ್ದಾಗ, "ಅತ ಉಪಧಾಯಾಃ" ಎಂಬುದರಿಂದ ಉಪಧಾ ದೀರ್ಘ ಬಂದು ಉವಾಹ ಎಂದು ರೂಪವು ಸಿದ್ಧವಾಗುತ್ತದೆ.

ಮಧ್ಯಮಪುರುಷ ಏಕವಚನದಲ್ಲಿ 'ಋತೋ ಭಾರದ್ವಾಜಸ್ಯ' ಎಂಬ ಭಾರದ್ವಜ ನಿಯಮ ದಿಂದ 'ಥಲ್' ಪ್ರತ್ಯಯವು ಪರದಲ್ಲಿದ್ದಾಗ, ವೈಕಲ್ಪಿಕವಾಗಿ ಇಡಾಗಮವು ಬಂದು ಉವಹಿಥ ಎಂದು ರೂಪವಾಗುತ್ತದೆ.

ಇಡಾಗಮ ಬಾರದ ಪಕ್ಷದಲ್ಲಿ ಉವಹ್+ಥ ಎಂದಿದ್ದಾಗ, "ಹೋ ಢಃ" ಎಂಬ ಸೂತ್ರದಿಂದ 'ಹ್' ಕಾರಕ್ಕೆ 'ಢ್' ಕಾರವು ಬಂದು ಉವಢ್+ಥ ಎಂದಿದ್ದಾಗ.

ಪರಸ್ಮೈಪದದ ರೂಪಗಳು: ಉವಾಹ, ಊಹತುಃ ಊಹುಃ ।... ಇತ್ಯಾದಿ।

**(ಧ ಆದೇಶವನ್ನು ವಿಧಿಸುವ ಸೂತ್ರ )**

**ಸೂತ್ರ- 549.ಝಷಸ್ತಥೋರ್ಧೋಽಧಃ (8.2.40)**

ವೃತ್ತಿಃ-ಝಷಃ ಪರಯೋಃ ತಥೋಃ ಧಃ ಸ್ಯಾತ್ ನತು ದಧಾತೇಃ।

ಪ. ಛೇ. – ಝಷಃ, ತಥೋಃ, ಧಃ, ಅಧಃ।

ಅರ್ಥ– 'ಝಷ್' ಪ್ರತ್ಯಾಹಾರಾನ್ತರ್ಗತ ವರ್ಣಗಳ ಪರದಲ್ಲಿ ಇರುವ 'ತ್' ಕಾರ 'ಥ್' ಕಾರಗಳಿಗೆ 'ಧ' ಕಾರವು ಆದೇಶವಾಗಿ ಬರುತ್ತದೆ. ಆದರೆ 'ಧಾ' ಧಾತುವಿನ ಪರದಲ್ಲಿ ಇರುವ 'ತ್' ಕಾರ 'ಥ್' ಕಾರಗಳಿಗೆ 'ಧ' ಕಾರವು ಆದೇಶವಾಗಿ ಬರುವುದಿಲ್ಲ. ಉವಢ್+ಥ ಎಂದಿದ್ದಾಗ, 'ಥ್' ಕಾರಕ್ಕೆ ಷ್ಟುತ್ವದಿಂದ 'ಢ್' ಕಾರವು ಬರುತ್ತದೆ.

**(ಢ್ ಕಾರಕ್ಕೆ ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ- 550.ಢೋ ಢೇ ಲೋಪಃ (8.3.13)**

ವೃತ್ತಿಃ– ಢಃ ಲೋಪಃ ಸ್ಯಾತ್ ಢೇ ಪರೇ।

ಪ. ಛೇ – ಢಃ, ಢೇ, ಲೋಪಃ।

ಅರ್ಥ– 'ಢ್' ಕಾರವು ಪರದಲ್ಲಿದ್ದಾಗ, ಪೂರ್ವ 'ಢ್' ಕಾರಕ್ಕೆ ಲೋಪವು ಬರುತ್ತದೆ. ಹೀಗೆ ಉವಢ್+ಢ ಎಂದಿದ್ದಾಗ, ಪೂರ್ವ 'ಢ್' ಕಾರಕ್ಕೆ ಲೋಪ ಬಂದು ಉವಢ ಎಂದಿರುತ್ತದೆ.

**(ಓತ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ- 551.ಸಹಿವಹೋರೋದವರ್ಣಸ್ಯ (6.3.112)**

ವೃತ್ತಿಃ-ಅನಯೋಃ ಅವರ್ಣಸ್ಯ ಓತ್ ಸ್ಯಾತ್ ಢಲೋಪೇ। ಉವೋಢ। ಊಹೇ। ವೋಢಾ। ವಕ್ಷ್ಯತಿ। ಅವಾಕ್ಷೀತ್, ಅವೋಢಾಮ್, ಅವಾಕ್ಷುಃ। ಅವಾಕ್ಷೀಃ, ಅವೋಢಮ್, ಅವೋಢ। ಅವಾಕ್ಷಮ್। ಅವಾಕ್ಷ್ವ। ಅವಾಕ್ಷ್ಮ। ಅವೋಢ, ಅವಕ್ಷಾತಾಮ್, ಅವಕ್ಷತ। ಅವೋಢಾಃ,

ಅವಕ್ಷಾಥಾಮ್, ಅವೋಢ್ವಮ್। ಅವಕ್ಷಿ, ಅವಕ್ಷ್ವಹಿ, ಅವಕ್ಷ್ಮಹಿ। ಅವಕ್ಷ್ಯತ್। ಅವಕ್ಷ್ಯತ।

ಪ. ಛೇ. – ಸಹಿ–ವಹೋಃ, ಓತ್, ಅವರ್ಣಸ್ಯ।

ಅ. ವೃ – "ಢ್ರಲೋಪೇ ಪೂರ್ವಸ್ಯ ದೀರ್ಘೋಽಣಃ" ಎಂಬ ಸೂತ್ರದಿಂದ 'ಢಲೋಪೇ' ಎಂಬ ಅಂಶವು ಅನುವೃತ್ತವಾಗುತ್ತದೆ.

ಅರ್ಥ– 'ಢ' ವರ್ಣದ ಲೋಪವು ಆದಾಗ 'ಸಹ್' ಮತ್ತು 'ವಹ್' ಧಾತುಗಳಲ್ಲಿರುವ 'ಅ' ಕಾರಕ್ಕೆ 'ಓ' ಕಾರವು ಆದೇಶವಾಗಿ ಬರುತ್ತದೆ.

ವಿವರಣೆ: 'ವಹ್' ಧಾತು 'ಹ್' ಕಾರಾಂತ ಅನುದಾತ್ತವಾಗಿದೆ. ಆದ್ದರಿಂದ "ಏಕಾಚ ಉಪದೇಶೇಽನುದಾತ್ತಾತ್" ಎಂಬ ಸೂತ್ರದಿಂದ 'ಅನಿಟ್' ಆಗುತ್ತದೆ. ಆದರೆ 'ಥ' ಪ್ರತ್ಯಯವಿದ್ದಾಗ, ಭಾರದ್ವಾಜನಿಯಮದಿಂದ "ಋತೋಭಾರದ್ವಾಜಸ್ಯ" ಎಂಬ ಸೂತ್ರದಿಂದ ಋದನ್ತಭಿನ್ನವಾಗಿರೋಣದರಿಂದ 'ಇಟ್' ಆಗುತ್ತದೆ. ಬೇರೆಯವರ ಮತದಲ್ಲಿ ಇಲ್ಲ. ಆದುದರಿಂದ ವಿಕಲ್ಪದಿಂದ ಇಡಾಗಮವು ಬರುತ್ತದೆ. ಇಲ್ಲಿ 'ಸಿಪ್' ಸ್ಥಳದಲ್ಲಿ ಬಂದಿರುವ 'ಥಲ್' ಸ್ಥಾನಿವದ್ಭಾವದಿಂದ 'ಪಿತ್' ಕೂಡಾ ಆಗುತ್ತದೆ. ಆದುದರಿಂದ "ಅಸಂಯೋಗಾಲ್ಲಿಟ್ಕಿತ್" ಎಂಬ ಸೂತ್ರದಿಂದ 'ಕಿತ್' ಆಗುವುದಿಲ್ಲ. ಆದುದರಿಂದ "ಲಿಟ್ಯಭ್ಯಾಸಸ್ಯೋಭಯೇಷಾಮ್" ಎಂಬ ಸೂತ್ರದಿಂದ ಅಭ್ಯಾಸಕ್ಕೆ ಸಂಪ್ರಸಾರಣವು ಬರುತ್ತದೆ. ಆದ್ದರಿಂದ ಉವಹಿಥ ಮತ್ತು ಉವೋಢ ಎಂಬ ಎರಡು ರೂಪಗಳು ಸಿದ್ಧವಾಗುತ್ತವೆ.

'ಇಟ್' ಆಗಮ ಬಾರದ ಪಕ್ಷದಲ್ಲಿ, ಉವಹ್+ಥ ಎಂದಿದ್ದಾಗ, 'ಹ್' ಕಾರಕ್ಕೆ "ಹೋಢಃ" ಎಂಬ ಸೂತ್ರದಿಂದ 'ಢ್' ಕಾರವು ಆದೇಶವಾಗಿ ಬರುತ್ತದೆ. ಇದರ ಪರದಲ್ಲಿರುವ 'ಥ್' ಕಾರಕ್ಕೆ "ಝಷಸ್ತಥೋರ್ಧೋಽಧಃ" ಎಂಬ ಸೂತ್ರದಿಂದ 'ಧ್' ಕಾರವು ಆದೇಶವಾಗಿ ಬಂದು ಉವಢ್+ಧ ಎಂದಿರುತ್ತದೆ. 'ಢ್' ಕಾರ 'ಧ್' ಕಾರಗಳಿಗೆ ಷ್ಟುತ್ವ ಬಂದು 'ಢ್' ಕಾರವು ಬಂದು ಉವಢ್+ಢ್ ಎಂದಿರುತ್ತದೆ. "ಢೋ ಢೇ ಲೋಪಃ" ಎಂಬ ಸೂತ್ರದಿಂದ ಪೂರ್ವ 'ಷ್' ಕಾರಕ್ಕೆ ಲೋಪ ಬಂದು ಉವ+ಢ್ ಎಂದಿರುತ್ತದೆ. "ಢ್ರಲೋಪೇ ಪೂರ್ವಸ್ಯ ದೀರ್ಘೋಽಣಃ" ಎಂಬ ಸೂತ್ರದಿಂದ 'ಉವ' ಎಂಬಲ್ಲಿರುವ 'ಅ' ಕಾರಕ್ಕೆ ದೀರ್ಘ ಬರಬೇಕಾಗಿತ್ತು. ಅದನ್ನು ಬಾಧಿಸಿ ಪ್ರಕೃತ ಸೂತ್ರದಿಂದ 'ಅ' ಕಾರಕ್ಕೆ 'ಓ' ಕಾರವು ಆದೇಶವಾಗಿ ಬಂದು ಉವೋಢ ಎಂಬ ರೂಪವು ಸಿದ್ಧವಾಗಿದೆ. ಇಡಾಗಮ ಬಂದ ಪಕ್ಷದಲ್ಲಿ, ಉವಹಿಥ ಎಂದು ರೂಪವು ಸಿದ್ಧವಾಗುತ್ತದೆ.

ಪರಸ್ಮೈಪದದ ರೂಪಗಳು: ಉವಾಹ, ಊಹತುಃ, ಊಹುಃ।ಉವಹಿಥ/ಉವೋಢ, ಊಹಥುಃ, ಊಹ। ಉವಾಹ/ಉವಹ, ಊಹಿವ, ಊಹಿಮ।

ಆತ್ಮನೇಪದದಲ್ಲಿ ಆಖ್ಯಾತ ಪ್ರತ್ಯಯಗಳು 'ಅಪಿತ್' ಆಗಿರುವುದರಿಂದ ಕಿದ್ವದ್ಭಾವ ಬಂದು ಸಂಪ್ರಸಾರಣದಿಂದ ಪ್ರಥಮಪುರುಷದಲ್ಲಿ ಊಹೇ, ಊಹಾತೇ, ಊಹಿರೇ ಎಂದು ರೂಪಗಳು ಸಿದ್ಧವಾಗುತ್ತವೆ.

ಆತ್ಮನೇಪದದಲ್ಲಿ ರೂಪಗಳು: ಊಹೇ, ಊಹಾತೇ, ಊಹಿರೆ । ಊಹಿಷೇ, ಊಹಾಥೇ, ಊಹಿಢ್ವೆ/ಊಹಿಧ್ವೇ। ಊಹೇ, ಊಹಿವಹೇ, ಊಹಿಮಹೇ।

**ಲುಟ್**: ಲುಟ್ 'ಲ್' ಕಾರದಲ್ಲಿ– ಪರಸ್ಮೈಪದ ಮತ್ತು ಆತ್ಮನೇ ಪದಗಳಲ್ಲಿ 'ಹ್' ಕಾರಕ್ಕೆ "ಹೋಢಃ" ಎಂಬ ಸೂತ್ರದಿಂದ್ 'ಢ್' ಕಾರವು ಆದೇಶವಾಗಿ ಬಂದು ವಢ್+ತಾಸ್ ಎಂದಿರುತ್ತದೆ. "ಝಷಸ್ತಥೋರ್ಧೋಽಧಃ" ಎಂಬ ಸೂತ್ರದಿಂದ 'ತಾಸ್' ಎಂಬಲ್ಲಿರುವ 'ತ್' ಕಾರಕ್ಕೆ 'ಧ್' ಕಾರವು ಆದೇಶವಾಗಿ ಬಂದು "ತಾಸಸ್ತ್ಯೋರ್ಲೋಪಃ" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬಂದು ವಢ್+ಧಾ ಎಂದಿದ್ದಾಗ, 'ಢ್' ಕಾರ ಮತ್ತು 'ಧ್' ಕಾರಗಳಿಗೆ ಷ್ಟುತ್ವ ಬಂದು 'ಢ್' ಕಾರವು ಆದೇಶವಾಗಿ ಬಂದು ವಢ್+ಢಾ ಎಂದಿರುತ್ತದೆ. "ಢೋ ಢೇ ಲೋಪಃ" ಎಂಬ ಸೂತ್ರದಿಂದ ಪೂರ್ವ 'ಢ್' ಕಾರಕ್ಕೆ ಲೋಪ ಬಂದು ವ+ಢಾ ಎಂದಿರುತ್ತದೆ. "ಢ್ರಲೋಪೇ ಪೂರ್ವಸ್ಯ ದೀರ್ಘೋಽಣಃ" ಎಂಬ ಸೂತ್ರದಿಂದ 'ವ' ಕಾರೋತ್ತರ 'ಅ' ಕಾರಕ್ಕೆ ದೀರ್ಘ ಬರಬೇಕಾಗಿತ್ತು. ಆದರೆ ಅದನ್ನು ಬಾಧಿಸಿ ಪ್ರಕೃತ ಸೂತ್ರದಿಂದ 'ಅ' ಕಾರಕ್ಕೆ 'ಓ' ಕಾರವು ಆದೇಶವಾಗಿ ಬಂದು ವ್+ಓ+ಢಾ=ವೋಢಾ ಎಂದು ರೂಪವು ಸಿದ್ಧವಾಗುತ್ತದೆ.

ಪರಸ್ಮೈಪದದ ರೂಪಗಳು: ವೋಢಾ, ವೋಢಾರೌ, ಓಢಾರಃ। ವೋಢಾಸಿ, ವೋಢಾಸ್ಥಃ, ವೋಢಾಸ್ಥ। ವೋಢಾಸ್ಮಿ, ವೋಢಾಸ್ವಃ, ವೋಢಾಸ್ಮಃ।

ಆತ್ಮನೇಪದದಲ್ಲಿ ರೂಪಗಳು: ವೋಢಾ, ವೋಢಾರೌ, ವೋಢಾರಃ। ವೋಢಾಸೇ, ವೋಢಾಸಾಥೇ, ವೋಡಾಢ್ವೇ। ವೋಢಾಹೇ, ವೋಢಾಸ್ವಹೇ, ವೋಢಾಸ್ಮಹೇ।

**ಲೃಟ್**: ಉದಾ– ವಕ್ಷ್ಯತಿ, ವಕ್ಷ್ಯತೇ – 'ಲೃಟ್' 'ಲ್' ಕಾರದಲ್ಲಿ ವಹ್+ಸ್ಯ+ತಿ ಎಂದಿದ್ದಾಗ, "ಹೋಢಃ" ಎಂಬ ಸೂತ್ರದಿಂದ 'ಹ್' ಕಾರಕ್ಕೆ ಢತ್ವ ಮತ್ತು "ಷಢೋಃ ಕಃ ಸಿ" ಎಂಬ ಸೂತ್ರದಿಂದ 'ಢ್' ಕಾರಕ್ಕೆ 'ಕ್' ಕಾರ ಮತ್ತು "ಆದೇಶಪ್ರತ್ಯಯಯೋಃ" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಷತ್ವ ಮಾಡಿದಾಗ, ವಕ್ಷ್ಯತಿ ಎಂಬ ಪರಸ್ಮೈಪದ ರೂಪವು ಸಿದ್ಧವಾಗುತ್ತದೆ. ಇದೇ ರೀತಿಯಲ್ಲಿ ಆತ್ಮನೇ ಪದದಲ್ಲಿಯೂ ವಕ್ಷ್ಯತೇ ಎಂಬ ರೂಪವು ಸಿದ್ಧವಾಗುತ್ತದೆ.

ಪರಸ್ಮೈಪದದ ರೂಪಗಳು: ವಕ್ಷ್ಯತಿ, ವಕ್ಷ್ಯತಃ, ವಕ್ಷ್ಯನ್ತಿ।... ಇತ್ಯಾದಿ।

ಆತ್ಮನೇಪದದಲ್ಲಿ ರೂಪಗಳು:ವಕ್ಷ್ಯತೇ, ವಕ್ಷ್ಯೇತೇ, ವಕ್ಷ್ಯನ್ತೇ ।... ಇತ್ಯಾದಿ।

ಲೋಟ್:ಪರಸ್ಮೈಪದದ ರೂಪಗಳು: ವಹತು/ವಹತಾತ್, ವಹತಾಮ್, ವಹನ್ತು।... ಇತ್ಯಾದಿ।

ಆತ್ಮನೇಪದದಲ್ಲಿ ರೂಪಗಳು:ವಹತಾಮ್, ವಹೇತಾಮ್ ವಹನ್ತಾಮ್।... ಇತ್ಯಾದಿ।

**ಲಙ್**: ಪರಸ್ಮೈಪದದ ರೂಪಗಳು: ಅವಹತ್, ಅವಹತಾಮ್, ಅವಹನ್ । ... ಇತ್ಯಾದಿ।

ಆತ್ಮನೇಪದದಲ್ಲಿ ರೂಪಗಳು:ಅವಹತ, ಅವಹೇತಾಮ್, ಅವಹನ್ತ ।... ಇತ್ಯಾದಿ।

**ವಿಧಿಲಿಙ್**: ಪರಸ್ಮೈಪದದ ರೂಪಗಳು:ವಹೇತ್, ವಹೇತಾಮ್, ವಹೇಯುಃ।... ಇತ್ಯಾದಿ।

ಆತ್ಮನೇಪದದಲ್ಲಿ ರೂಪಗಳು: ವಹೇತ, ವಹೇಯಾತಾಮ್, ವಹೇರನ್ ।... ಇತ್ಯಾದಿ।

**ಆಶೀರ್ಲಿಙ್**: ಪರಸ್ಮೈಪದದ ರೂಪಗಳು: ಉಹ್ಯಾತ್, ಉಹ್ಯಾಸ್ತಾಮ್, ಉಹ್ಯಾಸುಃ। ... ಇತ್ಯಾದಿ।

ಆತ್ಮನೇಪದದಲ್ಲಿ ರೂಪಗಳು: ವಕ್ಷೀಷ್ಟ, ವಕ್ಷೀಯಾಸ್ತಾಮ್, ವಕ್ಷೀರನ್ ।... ಇತ್ಯಾದಿ।

**ಲುಙ್**: ಪರಸ್ಮೈಪದದ ರೂಪಗಳು: ಅವಾಕ್ಷೀತ್, ಅವೋಢಾಮ್, ಅವಾಕ್ಷುಃ।... ಇತ್ಯಾದಿ।

ಆತ್ಮನೇಪದದಲ್ಲಿ ರೂಪಗಳು: ಅವೋಢ, ಅವಕ್ಷಾತಾಮ್, ಅವಕ್ಷತ ।... ಇತ್ಯಾದಿ।

**ಲೃಙ್**: ಪರಸ್ಮೈಪದದ ರೂಪಗಳು: ಅವಕ್ಷ್ಯತ್, ಅವಕ್ಷ್ಯತಾಮ್, ಅವಕ್ಷ್ಯನ್।... ಇತ್ಯಾದಿ।

ಆತ್ಮನೇಪದದಲ್ಲಿ ರೂಪಗಳು: ಅವಕ್ಷ್ಯತ, ಅವಕ್ಷ್ಯೇತಾಮ್, ಅವಕ್ಷ್ಯನ್ತ ।... ಇತ್ಯಾದಿ।

**॥ಇತಿ ಉಭಯಪದಿನಃ॥**

**॥ಇತಿ ಭ್ವಾದಯಃ - ಪ್ರಥಮಗಣಃ ಸಮಾಪ್ತಃ॥**

**ಇಲ್ಲಿಗೆ ಭ್ವಾದಿ ಪ್ರಕರಣ (12) ಮುಗಿಯಿತು.**

# ಪ್ರಕರಣ-13

**ಅದಾದಯಃ (2ನೇ ಗಣ)**

**ಸೂತ್ರಸಂಖ್ಯೆ 552 ಇಂದ 604**

ಈ ಗಣದಲ್ಲಿ 72 ಧಾತುಗಳು ಪಠಿತವಾಗಿವೆ. ಅವುಗಳಲ್ಲಿ ವರದರಾಜರು ಈ ಕೆಳಗಿನ 25 ಧಾತುಗಳನ್ನು ರೂಪಸಿದ್ಧಿಗಾಗಿ ಆರಿಸಿಕೊಂಡಿದ್ದಾರೆ:

ಪರಸ್ಮೈಪದಿ ಧಾತುಗಳು-(18)- 1. ಅದ-(ಭಕ್ಷಿಸುವುದು), 2. ಹನ-(ಹಿಂಸಿಸುವುದು), 3. ಯು-ಸೇರಿಸುವುದು ಅಥವಾ ಬಿಡಿಸುವುದು), 4. ಯಾ-(ತಲುಪುವುದು ಅಥವಾ ಹೋಗುವುದು), 5. ವಾ- (ಗಾಳಿ ಬೀಸುವುದು ಅಥವಾ ಸುವಾಸನೆಗೊಳಿಸುವುದು), 6. ಭಾ-(ಹೊಳೆಯುವುದು), 7.ಷ್ಣಾ(ಸ್ನಾನ ಮಾಡುವುದು ಅಥವಾ ಶುದ್ಧವಾಗುವುದು). 8. ಶ್ರಾ-(ಬೇಯಿಸುವುದು), 9. ದ್ರಾ-(ಕೆಟ್ಟದಾಗಿ ಪ್ರವರ್ತಿಸುವುದು), 10. ಪ್ಸಾ-(ತಿನ್ನುವುದು), 11. ರಾ-(ಕೊಡುವುದು), 12. ಲಾ-(ತೆಗೆದುಕೊಳ್ಳುವುದು), 13. ದಾಪ್-(ಕತ್ತರಿಸುವುದು), 14. ಪಾ-(ರಕ್ಷಿಸುವುದು), 15. ಹ್ಯಾ-(ಹೇಳುವುದು), 16. ವಿದ-(ತಿಳಿದುಕೊಳ್ಳುವುದು), 17. ಅಸ- (ಇರುವುದು), 18. ಇಣ್-(ಹೋಗುವುದು),

ಆತ್ಮನೇಪದಿ ಧಾತುಗಳು (2)- 1. ಶೀಙ್-(ಮಲಗುವುದು), 2. ಇಙ್-(ಓದುವುದು)

ಉಭಯಪದಿ ಧಾತುಗಳು (5) - 1. ದುಹ-(ಕರೆಯುವುದು (ಹಾಲು), 2. ದಿಹ- (ಬೆಳೆಯುವುದು), 3. ಲಿಹ-(ನೆಕ್ಕುವುದು), 4. ಬ್ರೂಞ್(ಮಾತನಾಡುವುದು), 5. ಊರ್ಣುಞ್ -(ಮುಚ್ಚುವುದು)

**(ಶಪ್ ಪ್ರತ್ಯಯಕ್ಕೆ ಲುಕ್(ಲೋಪ) ವಿಧಿಸುವ ಸೂತ್ರ)**

1. **ಅದ ಭಕ್ಷಣೇ ।-(ತಿನ್ನುವುದು)- ಇದರಲ್ಲಿ 'ಅದ್' ಮಾತ್ರ ಉಳಿಯುತ್ತದೆ.**

**ಸೂತ್ರ- 552. ಅದಿಪ್ರಭೃತಿಭ್ಯಃ ಶಪಃ। (2.4.72)**

ವೃತ್ತಿಃ-ಲುಕ್ ಸ್ಯಾತ್। ಅತ್ತಿ। ಅತ್ತಃ। ಅದನ್ತಿ। ಅತ್ಸಿ। ಅತ್ಥಃ। ಅತ್ಥ। ಅದ್ಮಿ। ಅದ್ವಃ। ಅದ್ಮಃ।

ಅ. ವ್ಯ.- "ಣ್ಯ ಕ್ಷತ್ರಿಯಾರ್ಷ ಞಿತೋಯೂನಿಲುಗಣಿಞೋಃ" ಸೂತ್ರದಿಂದ 'ಲುಕ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- ಅದಾದಿಗಣ ಪಠಿತ ಧಾತುಗಳಮೇಲೆ ಬರುವ 'ಶಪ್' ಪ್ರತ್ಯಯಕ್ಕೆ 'ಲುಕ್' (ಲೋಪ) ಬರುತ್ತದೆ. 'ಲುಕ್' ಬಂದರೂ 'ಪ್ರತ್ಯಯಲೋಪೇಪ್ರತ್ಯಯಲಕ್ಷಣಮ್' ನಿಯಮ ಇರದು. ಆದನ್ನೇ 'ಲೋಪ' ಶಬ್ದದಿಂದ ಹೇಳಿದರೆ ಸ್ಥಾನಿವದ್ಭಾವಕ್ಕೆ ಅವಕಾಶವಿರುತ್ತದೆ.

ಲಟ್: ಉದಾ- ಅತ್ತಿ, ಅತ್ತಃ - ಪ್ರಥಮಪುರುಷ ಏಕವಚನದಲ್ಲಿ 'ಅದ್' ಧತುವಿನಮೇಲೆ 'ತಿಪ್ (ತಿ)' ಬಂದಾಗ ಸಾರ್ವಧಾತುಕ ಸಂಜ್ಞೆ ಬಂದು ಧಾತುವಿನಮೇಲೆ "ಕರ್ತರಿ ಶಪ್" ಎಂಬ ಸೂತ್ರದಿಂದ 'ಶಪ್ (ಅ)' ಬಂದು ಪ್ರಕೃತ ಸೂತ್ರದಿಂದ ಅದಕ್ಕೆ ಲುಕ್ ಬಂದು ಅದ್+ತಿ ಎಂದಿದ್ದಾಗ, 'ದ್' ಕಾರಕ್ಕೆ "ಖರಿಚ" ಎಂಬ ಸೂತ್ರದಿಂದ ಚರ್ತ್ವ (ತ್) ಬಂದು ಅತ್+ತಿ=ಅತ್ತಿ ಎಂದು ರೂಪವಾಗುತ್ತದೆ. ಇದೇ ರೀತಿಯಲ್ಲಿ ದ್ವಿವಚನದಲ್ಲಿ

ಧಾತುವಿನಮೇಲೆ 'ತಸ್' ಪ್ರತ್ಯಯವನ್ನು ಸೇರಿಸಿದಾಗ ಹಿಂದಿನಂತೆಯೇ ಪ್ರಕ್ರಿಯೆ ನಡೆದು ಅತ್+ತಸ್ ಎಂದಿದ್ದಾಗ, 'ಸ್' ಕಾರಕ್ಕೆ ರುತ್ವ-ವಿಸರ್ಗಗಳು ಬಂದು ಅತ್ತಃ ಎಂದಾಗುತ್ತದೆ.

ಉದಾ – ಅದನ್ತಿ– ಪ್ರಥಮಪುರುಷ ಬಹುವಚನದಲ್ಲಿ ಅದ್+ಝಿ ಎಂದಿದ್ದಾಗ, ಹಿಂದಿನಂತೆಯೆ ವಿಕರಣಪ್ರತ್ಯಯ ಲೋಪವಾದಮೇಲೆ "ಝೋಽನ್ತಃ" ಎಂಬುದರಿಂದ 'ಝ್' ಮಾತ್ರಕ್ಕೆ 'ಅನ್ತ್' ಆದೇಶ ಬಂದು ಅದ್+ಅನ್ತ್+ಇ=ಅದನ್ತಿ ಎಂದಾಗುತ್ತದೆ.

ರೂಪಗಳು: ಅತ್ತಿ, ಅತ್ತಃ, ಅದನ್ತಿ। ಅತ್ಸಿ, ಅತ್ಥಃ, ಅತ್ಥ। ಅದ್ಮಿ, ಅದ್ವಃ, ಅದ್ಮಃ।

**(ಲಿಟ್ 'ಲ್' ಕಾರದಲ್ಲಿ ಘಸ್ಲೃ ಆದೇಶವನ್ನು ವೈಕಲ್ಪಿಕವಾಗಿ ವಿಧಿಸುವ ಸೂತ್ರ)**

**ಸೂತ್ರ– 553. ಲಿಟ್ಯನ್ಯತರಸ್ಯಾಮ್ (2.4.40)**

ವೃತ್ತಿಃ–ಅದಃ ಘಸ್ಲೃ ವಾ ಸ್ಯಾತ್ ಲಿಟಿ। ಜಘಾಸ। ಉಪಧಾಲೋಪಃ।

ಪ. ಛೇ. – ಲಿಟಿ, ಅನ್ಯತರಸ್ಯಾಮ್।

ಅ.ವೃ– "ಅದೋಜಗ್ಧಿರ್ಲ್ಯಪ್ತಿಕಿತಿ" ಸೂತ್ರದಿಂದ 'ಅದಃ' ಎಂಬ ಪದವೂ ಹಾಗೆಯೇ "ಲುಙ್ಸನೋರ್ಘಸ್ಲೃ" ಸೂತ್ರದಿಂದ 'ಘಸ್ಲೃ' ಎಂಬ ಪದವೂ ಅನುವೃತ್ತವಾಗುತ್ತದೆ.

ಅರ್ಥ– ಲಿಟ್ 'ಲ್' ಕಾರವು ಪರದಲ್ಲಿದ್ದಾಗ, 'ಅದ್' ಧಾತುವಿಗೆ ವಿಕಲ್ಪದಿಂದ 'ಘಸ್ಲೃ' ಆದೇಶವು ಬರುತ್ತದೆ. ಇದರಲ್ಲಿ 'ಘಸ್' ಮಾತ್ರ ಉಳಿಯುತ್ತದೆ.

**ಲಿಟ್**: ಉದಾ– ಜಘಾಸ – ಪ್ರಥಮಪುರುಷ ಏಕವಚನದಲ್ಲಿ 'ಅದ್' ಧಾತುವಿನ ನಂತರ 'ಲಿಟ್' 'ಲ್' ಕಾರಕ್ಕೆ 'ತಿಪ್' ಆದೇಶ ಬಂದು ಅದಕ್ಕೆ ಅಭಿನವ ಆಖ್ಯಾತ ಪ್ರತ್ಯಯವಾದ 'ಣಲ್(ಅ)' ಆದೇಶ ಬಂದು ಅದ್+ಅ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ಧಾತುವಿಗೆ 'ಘಸ್ಲೃ' ಆದೇಶ ಬಂದು ಘಸ್+ಅ ಎಂದಿರುತ್ತದೆ. "ಲಿಟಿಧಾತೋರನಭ್ಯಾಸಸ್ಯ" ಎಂಬ ಸೂತ್ರದಿಂದ ಧಾತುವಿಗೆ ದ್ವಿತ್ವ ಬಂದು ಘಸ್ ಘಸ್+ಅ ಎಂದಿದ್ದಾಗ, ಹಲಾದಿಶೇಷವಾಗಿ ಘಘಸ್+ಅ ಎಂದಿರುತ್ತದೆ. "ಕುಹೋಶ್ಚುಃ" ಎಂಬ ಸೂತ್ರದಿಂದ ಚುತ್ವ ಬಂದು ಅಭ್ಯಾಸದ 'ಘ್' ಕಾರಕ್ಕೆ 'ಝ್' ಕಾರವು ಬಂದು "ಅಭ್ಯಾಸೇ ಚರ್ಚ" ಎಂಬ ಸೂತ್ರದಿಂದ 'ಜಶ್ತ್ವ(ಜ್)' ಬಂದು ಜಘಸ್+ಅ ಎಂದಿರುತ್ತದೆ. "ಅತ ಉಪಧಾಯಾಃ" ಎಂಬುದರಿಂದ 'ಘ್' ಕಾರದ ನಂತರ ಇರುವ 'ಅ' ಕಾರಕ್ಕೆ (ಉಪಧೆ)ಗೆ ವೃದ್ಧಿ ಬಂದು ಜಘಾಸ್+ಅ=ಜಘಾಸ ಎಂಬ ರೂಪವು ಸಿದ್ಧವಾಗುತ್ತದೆ.

ಪ್ರಥಮಪುರುಷ ದ್ವಿವಚನದಲ್ಲಿ 'ಅತುಸ್' ಪ್ರತ್ಯಯವು ಪರದಲ್ಲಿದ್ದಾಗ, ಜಘಸ್+ ಅತುಸ್ ಎಂದಿರುತ್ತದೆ. 'ಅತುಸ್' ಕಿತ್ ಆಗಿರುವುದರಿಂದ "ಗಮ–ಹನ–ಜನ–ಖನ–ಘಸಾಮ್ ಲೋಪಃ ಕ್ಙಿತ್ಯಙಿ" ಎಂಬ ಸೂತ್ರದಿಂದ ಉಪಧರೂಪವಾದ 'ಅ' ಕಾರಕ್ಕೆ ಲೋಪ ಬಂದು ಜಘ್ಸ್+ಅತುಸ್ ಎಂದಿದ್ದಾಗ–

**(ಸ್ –ಕಾರಕ್ಕೆ ಷತ್ವವನ್ನು ವಿಧಿಸುವ ಸೂತ್ರ)**

**ಸೂತ್ರ– 554.ಶಾಸಿ–ವಸಿ–ಘಸೀನಾಂ ಚ (8.3.60)**

ವೃತ್ತಿಃ–ಇಣ್ಕುಭ್ಯಾಂ ಪರಸ್ಯ ಏಷಾಂ ಸಸ್ಯ ಷಃ ಸ್ಯಾತ್। ಘಸ್ಯ ಚರ್ತ್ವಮ್। ಜಕ್ಷತುಃ।

ಜಕ್ಷುಃ। ಜಘಸಿಥ। ಜಕ್ಷಥುಃ। ಜಕ್ಷ। ಜಘಾಸ, ಜಘಸ। ಜಕ್ಷಿವ। ಜಕ್ಷಿಮ। ಆದ। ಆದತುಃ। ಆದುಃ।

ಅ. ವೃ- "ಅಪದಾನ್ತಸ್ಯ ಮೂರ್ಧನ್ಯಃ" ಎಂಬ ಸೂತ್ರದಿಂದ 'ಮೂರ್ಧನ್ಯಃ' ಎಂಬ ಪದವು ಅನುವೃತ್ತವಾಗುತ್ತದೆ. "ಇಣ್ಕೋಃ" ಎಂಬ ಅಧಿಕಾರಸೂತ್ರವು ಅನುವೃತ್ತವಾಗುತ್ತದೆ. "ಸಹೇಃ ಸಾಢಃ ಸಃ" ಸೂತ್ರದಿಂದ 'ಸಃ' ಪದವು ಅನುವೃತ್ತವಾಗುತ್ತದೆ.

ಅರ್ಥ- 'ಇಣ್' ಪ್ರತ್ಯಾಹಾರಾನ್ತರ್ಗತ ವರ್ಣಗಳಿಗಿಂತ; ಕವರ್ಗಕ್ಕಿಂತ ಪರದಲ್ಲಿರುವ ಶಾಸ್, ವಸ್, ಘಸ್ ಧಾತುಗಳ ಅವಯವವಾದ 'ಸ್' ಕಾರಕ್ಕೆ 'ಷತ್ವ'ವು ಬರುತ್ತದೆ.

ಉದಾ- ಜಕ್ಷತುಃ – ಪ್ರಥಮಪುರುಷ ದ್ವಿವಚನದಲ್ಲಿ ಜಘ್ಸ್+ಅತುಸ್ ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ಸ್' ಕಾರಕ್ಕೆ ಷತ್ವ, 'ಘ್' ಕಾರಕ್ಕೆ "ಖರಿ ಚ" ಎಂಬ ಸೂತ್ರದಿಂದ ಚರ್ತ್ವ(ಕ್), ಬಂದು ಜಕ್ಷ್+ಅತುಸ್ ಎಂದಿದ್ದಾಗ, 'ಕ್' ಷ್'ಗಳು ಸೇರಿ 'ಕ್ಷ್' ಆದಮೇಲೆ ಜಕ್ಷ್+ಅತುಸ್=ಜಕ್ಷತುಃ ಎಂಬ ರೂಪವು ಸಿದ್ಧಿಸುತ್ತದೆ.

ಗಮನಕ್ಕೆ: 'ಕಿತ್' ಆದ 'ಲಿಟ್' ಪರದಲ್ಲಿದ್ದಾಗ, ಇದೇ ರೀತಿಯಲ್ಲಿ ಉಪಧಾಲೋಪ, ಷತ್ವ, ಮತ್ತು ಚರ್ತ್ವಗಳು ಆಗುತ್ತವೆ.

ಉದಾ- ಜಕ್ಷುಃ–ಪ್ರಥಮಪುರುಷ ಬಹುವಚನದಲ್ಲಿ ಹಿಂದಿನಂತೆ 'ಜಕ್ಷ್' ರೂಪವಾದಮೇಲೆ 'ಉಸ್' ಪ್ರತ್ಯಯ ಸೇರಿಸಿದಾಗ ಜಕ್ಷ್+ಉಸ್=ಜಕ್ಷುಃ ಎಂದಾಗುತ್ತದೆ.

ರೂಪಗಳು: ಜಘಾಸ, ಜಕ್ಷತುಃ, ಜಕ್ಷುಃ। ಜಘಸಿಥ। ಜಕ್ಷಥುಃ। ಜಕ್ಷ। ಜಘಾಸ, ಜಘಸ। ಜಕ್ಷಿವ। ಜಕ್ಷಿಮ।

"ಅಸಂಯೋಗಾಲ್ಲಿಟ್ ಕಿತ್" ಎಂಬ ಸೂತ್ರದಿಂದ 'ತಿಪ್' 'ಸಿಪ್' 'ಮಿಪ್' ಪ್ರತ್ಯಯಗಳನ್ನು ಬಿಟ್ಟು ಉಳಿದ 6 ಪ್ರತ್ಯಯಗಳಿಗೆ ಕಿದ್ವದ್ಭಾವವು ಬರುತ್ತದೆ. ಆದ್ದರಿಂದ ಈ 6 ಪ್ರತ್ಯಯಗಳು ಪರದಲ್ಲಿದ್ದಾಗ, "ಗಮ–ಹನ–ಜನ–ಖನ–ಘಸಾಂ ಲೋಪಃ "ಕ್ಙಿತ್ಯನಙಿ" ಎಂಬ ಸೂತ್ರದಿಂದ ಉಪಧೆಗೆ ಲೋಪವಾಗಿ 'ಜಕ್ಷ್' ಎಂದಾದಮೇಲೆ ಪ್ರತ್ಯಯಗಳನ್ನು ಸೇರಿಸಿದಾಗ, ಕೆಳಗಿನ ರೂಪಗಳು ಸಿದ್ಧವಾಗುತ್ತವೆ. ಇದೇ ರೀತಿಯಲ್ಲಿ 'ಅದ್' ಧಾತುವಿಗೆ 'ಘಸ್ಲೃ' ಆದೇಶ ಬಂದ ಪಕ್ಷದಲ್ಲಿ ಆದ ರೂಪಗಳು. ಸಿಪ್, ತಿಪ್, ಮಿಪ್ ಪ್ರತ್ಯಯಗಳಿದ್ದಾಗ 'ಘಸ್ಲೃ' ಆದೇಶ ಬಂದ ರೂಪಗಳನ್ನು ಏಕವಚನಗಳಲ್ಲಿ ಕಾಣಬಹುದು.

ರೂಪಗಳು: ಜಘಾಸ, ಜಕ್ಷತುಃ, ಜಕ್ಷುಃ। ಜಘಸಿಥ। ಜಕ್ಷಥುಃ। ಜಕ್ಷ। ಜಘಾಸ, ಜಘಸ। ಜಕ್ಷಿವ। ಜಕ್ಷಿಮ।– ಈ 9 ರೂಪಗಳಲ್ಲಿ ಏಕವಚನರೂಪಗಳು 'ಘಸ್ಲೃ(ಘಸ್)' ಆದೇಶವನ್ನು ಹೊಂದಿವೆ. ಉಳಿದ 6 ರೂಪಗಳಲ್ಲಿ ಈ ಆದೇಶವು ಇರುವುದಿಲ್ಲ. ಈ ಆದೇಶವು ವೈಕಲ್ಪಿಕವಾಗಿ ಇರುವುದರಿಂದ 'ಘಸ್ಲೃ(ಘಸ್)' ಆದೇಶವನ್ನೇ ಪಡೆಯದ ರೂಪಗಳು ಇರುತ್ತವೆ. ಅವುಗಳಲ್ಲಿ ಆದ, ಆದತುಃ, ಆದುಃ ಎಂಬವುಗಳವರೆಗೆ, ನಿರೂಪಣೆ ಮಾಡಲಾಗಿದೆ. ಮುಂದಿನ ರೂಪಗಳನ್ನು ಮುಂದಿನ ಸೂತ್ರಗಳಲ್ಲಿ ಹೇಳಲಾಗಿರುತ್ತದೆ.

ಲಿಟ್ ನಲ್ಲಿ 'ಘಸ್ಲೃ' ಆದೇಶವು ವೈಕಲ್ಪಿಕವಾಗಿರುವುದರಿಂದ ಈ ಆದೇಶ ಬಾರದ ಪಕ್ಷದಲ್ಲಿ 'ಅದ್' ಧಾತುವಿಗೆ ದ್ವಿತ್ವ, ಮತ್ತು ಹಲಾದಿಶೇಷವಾದಮೇಲೆ ಅ+ಅದ್

ಎಂದಿರುತ್ತದೆ. "ಅತ ಆದೇಃ" ಎಂಬ ಸೂತ್ರದಿಂದ ದೀರ್ಘ ಬಂದು ಆ+ಅದ್ ಎಂದಾಗುತ್ತದೆ. ಸವರ್ಣದೀರ್ಘ ಬಂದಮೇಲೆ 'ಆದ್' ಎಂದಾಗುತ್ತದೆ. "ಣಲ್ (ಅ)" ಪ್ರತ್ಯಯವನ್ನು ಸೇರಿಸಿದಾಗ, 'ಆದ' ಎಂದು ರೂಪವು ಸಿದ್ಧಿಸುತ್ತದೆ.

ಇದೇ ರೀತಿಯಲ್ಲಿ 'ಅತುಸ್' ಮತ್ತು 'ಉಸ್' ಪ್ರತ್ಯಯಗಳನ್ನು ಸೇರಿಸಿದಾಗ, ಆದತುಃ ಮತ್ತು ಆದುಃ ಎಂಬ ರೂಪಗಳು ಸಿದ್ಧಿಸುತ್ತವೆ.

**(ಇಡಾಗಮವನ್ನು ವಿಧಿಸುವ ಸೂತ್ರ)**

**ಸೂತ್ರ- 555.ಇಡತ್ತ್ಯರ್ತಿವ್ಯಯತೀನಾಮ್ (7.2.66)**

ವೃತ್ತಿಃ-ಅದ್, ಋ, ವ್ಯೇಞ್ ಏಭ್ಯಃ ಥಲಃ ನಿತ್ಯಮ್ ಇಟ್ ಸ್ಯಾತ್। ಆದಿಥ। ಅತ್ತಾ। ಅತ್ಸ್ಯತಿ। ಅತ್ತು/ಅತ್ತಾತ್ ಅತ್ತಾಮ್। ಅದನ್ತು।

ಪ. ಛೇ. -ಇಟ್, ಅತ್ತ್ಯರ್ತಿವ್ಯಯತೀನಾಮ್।

ಅ. ವೃ- "ಅಚಸ್ತಾಸ್ವತ್ ಥಲ್ಯನಿಟೋ ನಿತ್ಯಮ್" ಎಂಬ ಸೂತ್ರದಿಂದ ವಿಭಕ್ತಿಪರಿಣಾಮ ಮಾಡಿ 'ಥಲಃ' ಎಂಬ ಶಬ್ದವನ್ನೂ 'ನಿತ್ಯಮ್' ಎಂಬ ಶಬ್ದವನ್ನು ಅನುವೃತ್ತಿಗೊಳಿಸಲಾಗಿದೆ.

ಅರ್ಥ- ಅದ್, ಋ ಮತ್ತು ವೇಞ್ ಈ ಮೂರು ಧಾತುಗಳ ಪರದಲ್ಲಿ ಇರುವ 'ಥಲ್' ಗೆ ನಿತ್ಯವಾಗಿ ಇಡಾಗಮವು ಬರುತ್ತದೆ.

ಉದಾ- ಆದಿಥ- ಮಧ್ಯಮಪುರುಷ ಏಕವಚನದಲ್ಲಿ 'ಅದ್' ಧಾತುವಿನ ನಂತರ 'ಥ' ಪ್ರತ್ಯಯವಿದ್ದಾಗ, ಭಾರದ್ವಾಜನಿಯಮದಿಂದ ಬರಬೇಕಾದ ವೈಕಲ್ಪಿಕವಾದ 'ಇಟ್'ನ್ನು ಬಾಧಿಸಿ ಪ್ರಕೃತ ಸೂತ್ರದಿಂದ ನಿತ್ಯವಾಗಿ ಬರುವುದರಿಂದ ಆದಿಥ ರೂಪವು ಬಂದಿದೆ.

ರೂಪಗಳು: ಆದ, ಆದತುಃ, ಆದುಃ। ಆದಿಥ, ಆದಥುಃ, ಆದ। ಆದ, ಆದಿವ, ಆದಿಮ। (ಹಿಂದೆ ಹೇಳಿದಂತೆ ಈ ಮೇಲಿನ ರೂಪಗಳಲ್ಲಿ ವೈಕಲ್ಪಿಕ 'ಘಸ್ಲೃ' ಆದೇಶ ಇಲ್ಲದಿರುವುದು ಸ್ಪಷ್ಟವಾಗುತ್ತದೆ). (ಈ 'ಅದ್' ಧಾತುವಿನ ಪರದಲ್ಲಿ 'ಥಲ್' ಪ್ರತ್ಯಯ ಇದ್ದಾಗ, 'ಸೇಟ್' ಆಗಿರುತ್ತದೆ. 'ತಾಸಿ' ಮೊದಲಾದ ಪ್ರತ್ಯಯ ಪರದಲ್ಲಿದ್ದಾಗ ಇಡಾಗಮ ಇರದೆಂಬುದನ್ನು ಗಮನಿಸಿ).

**ಲುಟ್**: ಉದಾ- ಅತ್ತಾ- ಲುಟ್ 'ಲ್' ಕಾರದ ಪ್ರಥಮಪುರುಷ ಏಕವಚನದಲ್ಲಿ – 'ಅದ್' ಧಾತುವಿನ ನಂತರ 'ತಿಪ್(ತಿ)' ಸೇರಿಸಿದಾಗ ಅದ್+ತಿ ಎಂದಿದ್ದಾಗ, "ಇತಶ್ಚ" ಎಂಬುದರಿಂದ 'ಇ' ಕಾರ ಲೋಪವಾಗಿ ಅದ್+ತ್ ಎಂದಿದ್ದಾಗ, 'ತ್' ಗೆ 'ಡಾ(ಆ)' ಆದೇಶ ಬಂದಾಗ ಅದ್+ತಾ ಎಂದಿರುತ್ತದೆ. 'ದ್' ಕಾರಕ್ಕೆ ಚರ್ತ್ವದಿಂದ 'ತ್' ಕಾರ ಬಂದು, ಅತ್+ತಾ=ಅತ್ತಾ ಎಂದು ರೂಪವು ಸಿದ್ಧವಾಗುತ್ತದೆ.

ರೂಪಗಳು: ಅತ್ತಾ, ಅತ್ತಾರೌ, ಅತ್ತಾರಃ। ಅತ್ತಾಸಿ, ಅತ್ತಾಸ್ಥಃ, ಅತ್ತಾಸ್ಥ। ಅತ್ತಾಸ್ಮಿ, ಅತ್ತಾಸ್ವಃ, ಅತ್ತಾಸ್ಮಃ।

**ಲೃಟ್**: ಉದಾ- ಅತ್ಸ್ಯತಿ- ಪ್ರಥಮಪುರುಷ ಏಕವಚನದಲ್ಲಿ 'ಅದ್' ಧಾತುವಿನ ನಂತರ 'ತಿಪ್' ಪ್ರತ್ಯಯ ಬಂದು ಧಾತುವಿನ ಪರದಲ್ಲಿ 'ಸ್ಯ' ಬಂದಮೇಲೆ ಅದ್+ಸ್ಯ+ತಿ ಎಂದಿರುತ್ತದೆ. 'ದ್' ಕಾರಕ್ಕೆ ಚರ್ತ್ವದಿಂದ 'ತ್' ಕಾರವು ಬಂದು ಅತ್ಸ್ಯತಿ ಎಂದಾಗುತ್ತದೆ.

ರೂಪಗಳು: ಅತ್ಸ್ಯತಿ, ಅತ್ಸ್ಯತಃ, ಅತ್ಸ್ಯನ್ತಿ। ಅತ್ಸ್ಯಸಿ, ಅತ್ಸ್ಯಥಃ, ಅತ್ಸ್ಯಥ। ಅತ್ಸ್ಯಾಮಿ, ಅತ್ಸ್ಯಾವಃ, ಅತ್ಸ್ಯಾಮಃ।

**ಲೋಟ್**: ಉದಾ- ಅತ್ತು/ಅತ್ತಾತ್- 'ಲೋಟ್' 'ಲ್' ಕಾರದ ಪ್ರಥಮಪುರುಷ ಏಕವಚನದಲ್ಲಿ - 'ಲಟ್' 'ಲ್' ಕಾರದ 'ಅತ್ತಿ' ಎಂಬ ರೂಪವಾದ ಮೇಲೆ "ಏರುಃ" ಎಂಬ ಸೂತ್ರದಿಂದ 'ಇ'ಕಾರಕ್ಕೆ 'ಉ' ಕಾರವು ಬಂದು ಅತ್ತು ಎಂದು ರೂಪವಾಗುತ್ತದೆ. ವೈಕಲ್ಪಿಕಪಕ್ಷದಲ್ಲಿ "ತುಹ್ಯೋಸ್ತಾತಙ್ಙಾಶಿಷ್ಯನ ತರಸ್ಯಾಮ್" ಎಂಬ ಸೂತ್ರದಿಂದ 'ತಾತಙ್ (ತಾತ್)' ಆದೇಶ ಬಂದು ಅತ್ತಾತ್ ಎಂಬ ರೂಪವು; ಇದೇ ರೀತಿಯಲ್ಲಿ ಉಳಿದ ಎರಡು ವಚನಗಳ ರೂಪಗಳಾದ ಅತ್ತಾಮ್, ಅದನ್ತು ಎಂಬ ರೂಪಗಳು ಸಿದ್ಧವಾಗುತ್ತವೆ.

### (ಹೇರ್ಧಿಃ ಎಂಬ ಸೂತ್ರವನ್ನು ವಿಧಿಸುವ ಸೂತ್ರ)

**ಸೂತ್ರ- ೨೨೬.ಹುಝುಲ್ಭ್ಯೋ ಹೇರ್ಧಿಃ। (6.4.101)**

ವೃತ್ತಿಃ-ಹೋಃ ಝುಲನ್ತೇಭ್ಯಃ ಚ ಹೇಃ ಧಿಃ ಸ್ಯಾತ್। ಅದ್ಧಿ, ಅತ್ತಾತ್। ಅತ್ತಮ್। ಅತ್ತ। ಅದಾನಿ। ಅದಾವ। ಅದಾಮ।

ಪ. ಛೇ. - ಹು-ಝುಲ್ಭ್ಯಃ, ಹೇಃ, ಧಿಃ।

ಅರ್ಥ- ಹು ಮತ್ತು ಝುಲನ್ತ ಧಾತುಗಳ ನಂತರ ಇರುವ 'ಹಿ' ಗೆ 'ಧಿ' ಆದೇಶವು ಬರುತ್ತದೆ.

**ಲೋಟ್**: ಉದಾ- ಅದ್ಧಿ - ಮಧ್ಯಮಪುರುಷ ಏಕವಚನದಲ್ಲಿ 'ಅದ್' ಧಾತುವಿನ ನಂತರ 'ಲೋಟ್' 'ಲ್' ಕಾರ ಬಂದು ಅದಕ್ಕೆ 'ಸಿಪ್(ಸಿ)' ಆದೇಶ ಬಂದು ನಂತರ ಧಾತುವಿನಪರದಲ್ಲಿ 'ಶಪ್(ಅ)' ಬಂದು, ಅದಕ್ಕೆ ಲುಕ್(ಲೋಪ) ಬಂದಮೇಲೆ "ಸೇರ್ಹ್ಯಪಿಚ್ಚ" ಎಂಬ ಸೂತ್ರದಿಂದ 'ಸಿ' ಗೆ 'ಹಿ' ಆದೇಶ ಬಂದು ಅದ್+ಹಿ ಎಂದಿರುತ್ತದೆ. 'ಹಿ' ಗೆ ಪ್ರಕೃತ ಸೂತ್ರದಿಂದ 'ಧಿ' ಆದೇಶ ಬಂದು, ಅದ್ಧಿ ಎಂದು ರೂಪವು ಸಿದ್ಧವಾಗುತ್ತದೆ. ದ್ವಿವಚನ ಮತ್ತು ಬಹುವಚನ ಪ್ರತ್ಯಯಗಳಾದ 'ಥಸ್' ಮತ್ತು 'ಥ' ಪ್ರತ್ಯಯಗಳು ಬಂದಾಗ, "ತಸ್ಥಸ್ಥಮಿಪಾಂ-ತಾಮ್ತನ್ತಾಮಃ" ಎಂಬ ಸೂತ್ರದಿಂದ ತಿಙನ್ತೇ ಅದಾದಿ (ಪರಸ್ಮೈ ಪದದ ರೂಪಗಳು) 'ತಮ್' ಮತ್ತು 'ತ' ಆದೇಶಗಳು ಬಂದು ಅತ್ತಮ್, ಮತ್ತು ಅತ್ತ ಎಂಬ ರೂಪಗಳು ಸಿದ್ಧವಾಗುತ್ತವೆ.

ಉತ್ತಮಪುರುಷ ಏಕವಚನದಲ್ಲಿ 'ಅದ್' ಧಾತುವಿಗೆ 'ಮಿಪ್' ಪ್ರತ್ಯಯ ಸೇರಿಸಿ ಅದ್+ಮಿಪ್(ಮಿ) ಎಂದಿದ್ದಾಗ, 'ಮಿ' ಗೆ 'ಆಟ್(ಆ) ಆಗಮ ಬಂದಮೇಲೆ "ಮೇರ್ನಿಃ" ಎಂಬ ಸೂತ್ರದಿಂದ 'ಮಿ' ಗೆ 'ನಿ' ಆದೇಶವಾಗಿ ಬಂದು ಅದ್+ಆ+ನಿ=ಅದಾನಿ ಎಂಬ ರೂಪವು ಸಿದ್ಧವಾಗುತ್ತದೆ.

ಉತ್ತಮಪುರುಷ ದ್ವಿವಚನ, ಬಹುವಚನಗಳಲ್ಲಿ ವಸ್, ಮಸ್ ಪ್ರತ್ಯಯಗಳು ಬಂದಾಗ ಅವುಗಳ ಪೂರ್ವದಲ್ಲಿ "ಆಡುತ್ತಮಸ್ಯಪಿಚ್ಚ" ಎಂಬ ಸೂತ್ರದಿಂದ ಪಿದ್ವದ್ಭಾದಿಂದ 'ಆಟ್(ಆ)' ಆಗಮ ಮತ್ತು 'ಸ್' ಕಾರಕ್ಕೆ ಲೋಪಗಳು ಬಂದು ಅದ್+ಆವ=ಆದಾವ ಮತ್ತು ಅದ್+ಆಮ=ಅದಾಮ ಎಂದು ರೂಪಗಳು ಸಿದ್ಧವಾಗುತ್ತವೆ.

ರೂಪಗಳು: ಅತ್ತು/ಅತ್ತಾತ್, ಅತ್ತಾಮ್, ಅದನ್ತು। ಅದ್ಧಿ/ಅತ್ತಾತ್, ಅತ್ತಮ್, ಅತ್ತ। ಅದಾನಿ, ಅದಾವ, ಅದಾಮ।

**(ಎಲ್ಲ ಆಚಾರ್ಯರ ದೃಷ್ಟಿಯಲ್ಲಿ ಅಟ್(ಅ) ಆಗಮವನ್ನು ವಿಧಿಸುವ ಸೂತ್ರ)**

**ಸೂತ್ರ- 557.ಅದಃ ಸರ್ವೇಷಾಮ್** (7.3.100)

ವೃತ್ತಿಃ-ಅದಃ ಪರಸ್ಯ ಅಪೃಕ್ತ ಸಾರ್ವಧಾತುಕಸ್ಯ ಅಟ್ ಸ್ಯಾತ್ ಸರ್ವಮತೇನ। ಆದತ್, ಆತ್ತಾಮ್, ಆದನ್। ಆದಃ, ಆತ್ತಮ್ ಆತ್ತ। ಆದಮ್, ಆದ್ವ, ಆದ್ಮ। ಅದ್ಯಾತ್, ಅದ್ಯಾತಾಮ್, ಅದ್ಯುಃ। ಅದ್ಯಾತ್, ಅದ್ಯಾಸ್ತಾಮ್, ಅದ್ಯಾಸುಃ।

ಅ. ವೃ.- "ಅಸ್ತಿಸಿಚೋಽಪೃಕ್ತೇ" ಎಂಬ ಸೂತ್ರದಿಂದ 'ಅಪೃಕ್ತೇ' ಎಂಬುದನ್ನು ಷಷ್ಠೀವಿಭಕ್ತಿಯಲ್ಲಿ ವಿಪರಿಣಾಮಗೊಳಿಸಿ 'ಅಪೃಕ್ತಸ್ಯ' ಎಂದೂ, "ತುರುಸ್ತುಶ್ಯಮ್ಯಮಃ ಸಾರ್ವಧಾತುಕೇ" ಎಂಬ ಸೂತ್ರದಿಂದ 'ಸಾರ್ವಧಾತುಕೇ' ಎಂಬ ಪದವನ್ನು, 'ಸಾರ್ವಧಾತುಕಸ್ಯ' ಎಂದು ಷಷ್ಠೀವಿಭಕ್ತಿಯಲ್ಲಿ ವಿಪರಿಣಾಮಗೊಳಿಸಿ ಅನುವೃತ್ತಿ ಮಾಡಲಾಗಿದೆ. "ಅಡ್-ಗಾರ್ಗ್ಯಗಾಲವಯೋಃ" ಎಂಬ ಸೂತ್ರದಿಂದ 'ಅಟ್' ಎಂಬ ಪದವು ಅನುವೃತ್ತವಾಗಿದೆ.

ಅರ್ಥ- ಎಲ್ಲ ಆಚಾರ್ಯಯರ ಮತದಲ್ಲಿ 'ಅದ್' ಧಾತುವಿನ ನಂತರ ಇರುವ 'ಅಪೃಕ್ತ' ಸಂಜ್ಞೆಯುಳ್ಳ ಸಾರ್ವಧಾತುಕ ಪ್ರತ್ಯಯಕ್ಕೆ 'ಅಟ್' ಆಗಮವು ಬರುತ್ತದೆ.

**ಲಙ್**: ಉದಾ- ಆದತ್- ಪ್ರಥಮಪುರುಷ ಏಕವಚನದಲ್ಲಿ ಅದ್ ಧಾತುವಿನ ನಂತರ 'ಲಙ್' 'ಲ್' ಕಾರಕ್ಕೆ 'ತಿಪ್(ತಿ)' ಆದೇಶ ಬಂದು ಅದ್+ತಿ ಎಂದಿದ್ದಾಗ, "ಆಡಜಾದೀನಾಮ್" ಎಂಬ ಸೂತ್ರದಿಂದ ಸ್ವರಾದಿಯಾದ 'ಅದ್' ಧಾತುವಿಗೆ 'ಆಟ್(ಆ)' ಆಗಮ ಬಂದು ಧಾತುವಿನನಂತರ ಬಂದ 'ಶಪ್(ಅ)' ಗೆ ಲುಕ್(ಲೋಪ) ಬಂದು , ಹಾಗೆಯೇ 'ತಿ' ಯಲ್ಲಿರುವ 'ಇ' ಕಾರಕ್ಕೆ "ಇತಶ್ಚ" ಎಂಬುದರಿಂದ ಲೋಪ ಬಂದು ಆ+ಅದ್+ತ್ ಎಂದಿರುತ್ತದೆ. 'ತ್' ಎಂಬುದು ಅಪೃಕ್ತ ("ಅಪೃಕ್ತಮ್ ಏಕಾಲ್ ಪ್ರತ್ಯಯಃ") ಸಂಜ್ಞೆಯನ್ನು ಹೊಂದಿರೋಣದರಿಂದ ಅದಕ್ಕೆ ಪ್ರಕೃತ ಸೂತ್ರದಿಂದ ಅಡಾಗಮ ಬಂದು, ಆ+ಅದ್+ಅತ್ ಎಂದಿರುತ್ತದೆ. 'ಆ' ಮತ್ತು 'ಅ' ಗಳಿಗೆ "ಆಟಶ್ಚ" ಎಂಬುದರಿಂದ ವೃದ್ಧಿ(ಆ) ಬಂದು ಆದತ್ ಎಂಬ ರೂಪವು ಸಿದ್ಧವಾಗುತ್ತದೆ.

ಮಧ್ಯಮಪುರುಷ ಏಕವಚನದಲ್ಲಿ 'ಸಿಪ್(ಸಿ)' ಪ್ರತ್ಯಯ ಬಂದಾಗ, ಅದ್+ಸಿ ಎಂದಿದ್ದಾಗ 'ಸಿ' ನಲ್ಲಿರುವ 'ಇ' ಕಾರವು "ಇತಶ್ಚ" ಎಂಬ ಸೂತ್ರದಿಂದ ಲೋಪವಾಗಿ ಅಪೃಕ್ತ 'ಸ್' ಮಾತ್ರ ಉಳಿದು ಅದ್+ಸ್ ಎಂದಿದ್ದಾಗ, ಪ್ರಕೃತ ಸೂತ್ರದಿಂದ ಅಡಾಗಮ ಬಂದು, "ಆಡಜಾದೀನಾಮ್" ಎಂಬ ಸೂತ್ರದಿಂದ ಸ್ವರಾದಿಯಾದ 'ಅದ್' ಧಾತುವಿಗೆ 'ಆಟ್(ಆ)' ಆಗಮ ಬಂದು ಆ+ಅದ್+ಸ್=ಆದಸ್ ಎಂದಾಗಿ ರುತ್ವ-ವಿಸರ್ಗಗಳಿಂದ ಆದಃ ಎಂದು ರೂಪವು ಸಿದ್ಧವಾಗುತ್ತದೆ. ಇದೇ ರೀತಿ ಉಳಿದ ರೂಪಗಳು ಸಿದ್ಧವಾಗುತ್ತವೆ.

ರೂಪಗಳು: ಆದತ್, ಆತ್ತಾಮ್, ಆದನ್। ಆದಃ, ಆತ್ತಮ್, ಆತ್ತ। ಆದಮ್, ಆದ್ವ, ಆದ್ಮ।

**(ಲುಙ್ ನಲ್ಲಿ ಘಸ್ಲೃ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ- ೫೫೮.ಲುಙ್ ಸನೋರ್ಘಸ್ಲೃ (2.4.37)**

ವೃತ್ತಿಃ-ಅದಃ ಘಸ್ಲೃ ಸ್ಯಾತ್ ಲುಙಿ ಸನಿ ಚ। ಲೃದಿತ್ವಾತ್ ಅಙ್। ಅಘಸತ್। ಆತ್ಸ್ಯತ್। ಹನ ಹಿಂಸಾ ಗತ್ಯೋಃ। 2 । ಹನ್ತಿ।

ಪ. ಛೇ. – ಲುಙ್-ಸನೋಃ, ಘಸ್ಲೃ।

ಅ. ವೃ.-"ಅಧೋಜಗ್ಧಿರ್ಲ್ಯಪ್ತಿ ಕಿತಿ" ಎಂಬ ಸೂತ್ರದಿಂದ 'ಅದಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ-'ಲುಙ್' 'ಲ್' ಕಾರ ಮತ್ತು 'ಸನ್' ಪ್ರತ್ಯಯವು ಪರದಲ್ಲಿದ್ದಾಗ, 'ಅದ್' ಧಾತುವಿಗೆ 'ಘಸ್ಲೃ' ಆದೇಶವು ಬರುತ್ತದೆ. ಇದರಲ್ಲಿ 'ಘಸ' ಮಾತ್ರ ಉಳಿಯುತ್ತದೆ.

**ಲುಙ್**: ಉದಾ- ಅಘಸತ್-ಪ್ರಥಮಪುರುಷ ಏಕವಚನದಲ್ಲಿ 'ಅದ್' ಧಾತುವಿನ ನಂತರ 'ಲುಙ್' 'ಲ್' ಕಾರ ಬಂದು ಧಾತುವಿಗೆ ಅಡಾಗಮವು ಬಂದು 'ಲುಘ್' ಗೆ 'ತಿಪ್(ತಿ)' ಆದೇಶ ಬಂದಮೇಲೆ 'ಅದ್' ಧಾತುವಿಗೆ ಪ್ರಕೃತ ಸೂತ್ರದಿಂದ 'ಘಸ್ಲೃ(ಘಸ್) ಆದೇಶವು ಬಂದು ಅದ್+ಘಸ್ ಎಂದಿರುತ್ತದೆ. ಧಾತುವಿನ ನಂತರ 'ಶಪ್(ಅ)' ಪ್ರತ್ಯಯವು ಬಂದು ಅದಕ್ಕೆ 'ಚ್ಲಿ' ಆದೇಶ ಬಂದಮೇಲೆ ಆ 'ಚ್ಲಿ' ಗೆ "ಪುಷಾದಿದ್ಯುತಾದ್ಯ್-ಲೃದಿತಃ ಪರಸ್ಮೈಪದೇಷು" ಸೂತ್ರದಿಂದ 'ಅಙ್(ಅ)' ಆದೇಶ ಬಂದು ಅಘಸ್+ಅತ್= ಅಘಸತ್' ಎಂದಾಗುತ್ತದೆ. ರೂಪಗಳು: ಅಘಸತ್, ಅಘಸತಾಮ್, ಅಘಸನ್। ಅಘಸಃ, ಅಘಸತಮ್, ಅಘಸತ। ಅಘಸಮ್, ಅಘಸಾವ, ಅಘಸಾಮ।

**ಲೃಙ್**: 'ಲೃಙ್' 'ಲ್' ಕಾರದಲ್ಲಿ 'ಅದ್' ಧಾತುವಿನ ನಂತರ 'ಲೃಙ್' 'ಲ್' ಕಾರ ಬಂದು ಧಾತುವಿಗೆ 'ಆಟ್' ಆಗಮ ಬಂದಮೇಲೆ ಧಾತುವಿನ ನಂತರ 'ಸ್ಯ' ಪ್ರತ್ಯಯ ಬಂದಮೇಲೆ ಕೆಳಗಿನಂತೆ ರೂಪಗಳು ಸಿದ್ಧವಾಗುತ್ತವೆ.

ರೂಪಗಳು: ಆತ್ಸ್ಯತ್, ಆತ್ಸ್ಯತಾಮ್, ಆತ್ಸ್ಯನ್। ಆತ್ಸ್ಯಃ, ಆತ್ಸ್ಯತಮ್, ಆತ್ಸ್ಯತ। ಆತ್ಸ್ಯಮ್, ಆತ್ಸ್ಯಾವ, ಆತ್ಸ್ಯಾಮ।

2. ಹನ – ಹಿಂಸಾಗತ್ಯೋಃ-(ಹಿಂಸೆ ಮಾಡುವುದು ಮತ್ತು ಗತ್ಯರ್ಥಕವಾಗಿಯೂ ಇದೆ.) ಇದರಲ್ಲಿ 'ಹನ್' ಮಾತ್ರ ಉಳಿಯುತ್ತದೆ.

**ಲಟ್**: ಉದಾ- ಹನ್ತಿ- ಪ್ರಥಮಪುರುಷ ಏಕವಚನದಲ್ಲಿ 'ಹನ್' ಧಾತುವಿನ ನಂತರ 'ಲಟ್' ಬಂದು ಅದಕ್ಕೆ 'ತಿಪ್ (ತಿ)' ಆದೇಶ ಬಂದಮೇಲೆ ಧಾತುವಿನ ನಂತರ 'ಶಪ್(ಅ)' ಬಂದು ಅದಕ್ಕೆ ಲೋಪ ಬಂದಮೇಲೆ ಹನ್+ತಿ ಎಂದಿರುತ್ತದೆ 'ನ್' ಕಾರದ ಸ್ಥಾನದಲ್ಲಿ "ನಶ್ಚಾಪದಾನ್ತಸ್ಯ ಝಲಿ" ಎಂಬ ಸೂತ್ರದಿಂದ ಅನುಸ್ವಾರ ಬಂದು ಆ ಅನುಸ್ವಾರಕ್ಕೆ "ಅನುಸ್ವಾರಸ್ಯ ಯಯಿ ಪರಸವರ್ಣಃ" ಎಂಬ ಸೂತ್ರದಿಂದ ಪರಸವರ್ಣ ಮಾಡಿದಮೇಲೆ ಮತ್ತೆ 'ನ್' ಕಾರವೇ ಬಂದು ಹನ್ತಿ ಎಂದು ರೂಪವು ಸಿದ್ಧವಾಗುತ್ತದೆ.

**(ಅನುನಾಸಿಕ ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ- ೫೫೯.ಅನುದಾತ್ತೋಪದೇಶ-ವನತಿ-**

**ತನೋತ್ಯಾದೀನಾಮನುನಾಸಿಕಲೋಪೋ ಝಲಿ ಕ್ಙಿತಿ। (6.4.37)**

ವೃತ್ತಿಃ–ಅನುನಾಸಿಕಾಂತಾನಾಮ್ ಏಷಾಂ ವನತೇಶ್ಚ ಲೋಪಃ ಸ್ಯಾತ್ ಝಲಾದೌ **ಕಿತಿ–ಙಿತಿ** ಚ ಪರೇ। (ಯಮಿ–ನಮಿ–ರಮಿ–ಗಮಿ–ಹನಿ ಮನ್ಯತಯಃ ಅನುದಾತ್ತ ಉಪದೇಶಾಃ। ತನು–ಕ್ಷಣು–ಕ್ಷಿಣು– ಋಣು–ತೃಣು–ಘೃಣು– ವನು–ಮನು– ತನೋತ್ಯಾದಯಃ। ಹತಃ। ಘ್ನನ್ತಿ। ಹಂಸಿ। ಹಥಃ। ಹಥ। ಹನ್ಮಿ।ಹನ್ವಃ। ಹನ್ಮಃ। ಜಘಾನ। ಜಘ್ನತುಃ। ಜಘ್ನುಃ।

ಪ. ಛೇ.– ಅನುದಾತ್ತೋಪದೇಶ–ವನತಿ–ತನೋತ್ಯಾದೀನಾಮ್, ಅನುನಾಸಿಕಲೋಪಃ, ಝಲಿ, ಕ್ಙಿತಿ।

ಅರ್ಥ– ಹನ್ ಧಾತು ಅನುನಾಸಿಕಾನ್ತ ಅನುದಾತ್ತೋಪದೇಶ ಧಾತು ಮತ್ತು ಅನುನಾಸಿಕ ತನ್ ಮೊದಲಾದ ಧಾತುಗಳ ಅನುನಾಸಿಕದ ಲೋಪವು ಆಗುತ್ತದೆ– ಝಲಾದಿಯಾದ ಕಿತ್, ಮತ್ತು ಙಿತ್ ಪ್ರತ್ಯಯಗಳು ಪರದಲ್ಲಿದ್ದಾಗ.

ಉದಾ– ಹತಃ– ಪ್ರಥಮಪುರುಷ ದ್ವಿವಚನದಲ್ಲಿ 'ಹನ್' ಧಾತುವಿನ ನಂತರ 'ಲಟ್' 'ಲ್' ಕಾರಕ್ಕೆ 'ತಸ್' ಆದೇಶ ಬಂದು ಧಾತುವಿನ ನಂತರ 'ಶಪ್' ಬಂದು 'ಲೋಪ(ಲುಕ್)' ವಾದಮೇಲೆ ಹನ್+ತಸ್ ಎಂದಿದ್ದಾಗ, ತಸ್ ಇದು ಅಪಿತ್ ಆದ ಸಾರ್ವಧಾತುಕ ವಾಗಿರುವುದರಿಂದ "ಸಾರ್ವಧಾತುಕಮಪಿತ್" ಎಂಬ ಸೂತ್ರದಿಂದ 'ಙಿದ್ವದ್ಭಾವ'ವನ್ನು ಹೊಂದಿ 'ತಸ್' ಇದು ಝಲಾದಿಯಾಗಿರುವುದರಿಂದ ಮತ್ತು 'ಹನ್' ಧಾತುವು ಅನುನಾಸಿಕ ಅನುದಾತ್ತೋಪದೇಶವಾಗಿರುವುದರಿಂದ 'ಹನ್' ಧಾತುವಿನ 'ನ್' ಕಾರಕ್ಕೆ ಪ್ರಕೃತ ಸೂತ್ರದಿಂದ ಲೋಪ ಬಂದು ಹ+ತಸ್=ಹತಸ್ ಎಂದಾಗಿ 'ಸ್' ಕಾರಕ್ಕೆ ರುತ್ವ–ವಿಸರ್ಗಗಳಿಂದ ಹತಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ ಘ್ನನ್ತಿ– ಪ್ರಥಮಪುರುಷ ಬಹುವಚನದಲ್ಲಿ 'ಹನ್' ಧಾತುವಿನಮೇಲೆ "ಝಿ' ಪ್ರತ್ಯಯ ಬಂದಮೇಲೆ "ಝೋನ್ತಃ" ಎಬುದರಿಂದ 'ಝ್' ಗೆ 'ಅನ್ತ್' ಆದೇಶ ಬಂದು ಹನ್+ಅನ್ತ್+ಇ ಎಂದಿದ್ದಾಗ ಈ ಪ್ರತ್ಯಯವು ಝಲಾದಿಯಲ್ಲವಾದ್ದರಿಂದ ಅನುನಾಸಿಕ ಲೋಪವಾಗದೇ "ಗಮ– ಹನ– ಜನ– ಖನ– ಘಸಾಂ ಲೋಪಃ ಕ್ಙಿತ್ಯನಙಿ" ಎಂಬ ಸೂತ್ರದಿಂದ ಉಪಧೆಯಾಗಿರುವ 'ಹನ್' ನ 'ಅ' ಕಾರಕ್ಕೆ ಲೋಪ ಬಂದು ಹ್+ನ್+ಅನ್ತಿ ಎಂದಿದ್ದಾಗ, 'ನ್' ಕಾರವು ಪರದಲ್ಲಿರುವುದರಿಂದ "ಹೋಹನ್ತೇರ್ಞ್ಣಿನ್ನೇಷು" ಎಂಬ ಸೂತ್ರದಿಂದ 'ಹ್' ಕಾರಕ್ಕೆ 'ಘ್' ಕಾರವು ಆದೇಶವಾಗಿ ಬಂದು ಘ್+ನ್+ಅನ್ತಿ=ಘ್ನನ್ತಿ ಎಂಬ ರೂಪವು ಸಿದ್ಧವಾಗುತ್ತದೆ.

ರೂಪಗಳು: ಹನ್ತಿ, ಹತಃ, ಘ್ನನ್ತಿ। ಹಂಸಿ, ಹಥಃ, ಹಥ। ಹನ್ಮಿ, ಹನ್ವಃ, ಹನ್ಮಃ।

**ಲಿಟ್**: ಉದಾ– ಜಘಾನ – ಪ್ರಥಮಪುರುಷ ಏಕವಚನದಲ್ಲಿ 'ಹನ್' ಧಾತುವಿನ ನಂತರ 'ಲಿಟ್' 'ಲ್' ಕಾರಕ್ಕೆ ಮೂಲ ಆಖ್ಯಾತಪ್ರತ್ಯಯವಾದ 'ತಿಪ್'(ತಿ) ಆದೇಶವಾಗಿ ಬಂದು ಅದಕ್ಕೆ ಅಭಿನವ ಆಖ್ಯಾತ ಪ್ರತ್ಯಯವಾದ 'ಣಲ್(ಅ)' ಆದೇಶವಾಗಿ ಬಂದಮೇಲೆ ಹನ್+ಅ ಎಂದಿದ್ದಾಗ, ಧಾತುವಿಗೆ ದ್ವಿತ್ವ ಮತ್ತು ಹಲಾದಿಶೇಷವಾದಮೇಲೆ ಹ ಹನ್+ಅ ಎಂದಿರುತ್ತದೆ. "ಕುಹೋಶ್ಚುಃ" ಎಂಬ ಸೂತ್ರದಿಂದ 'ಹ್' ಕಾರಕ್ಕೆ ಚುತ್ವ(ಝ್) ಬಂದು,

ಅದಕ್ಕೆ "ಅಭ್ಯಾಸೇ ಚರ್ಚ" ಎಂಬುದರಿಂದ ಜಶ್ತ್ವ(ಜ್) ಬಂದು ಜ ಹನ್+ಅ ಎಂದಿದ್ದಾಗ, 'ಣಲ್(ಅ)' ಪ್ರತ್ಯಯ 'ಣಿತ್' ಆಗಿರುವುದದರಿಂದ "ಹೋಹನ್ತೇರ್ಞ್ಣಿನ್ನೇಷು" ಎಂಬ ಸೂತ್ರದಿಂದ ಕುತ್ವ(ಘ್) ಬಂದು ಜಘನ್+ಅ ಎಂದಿದ್ದಾಗ, "ಅತ ಉಪಧಾಯಾಃ" ಎಂಬ ಸೂತ್ರದಿಂದ ವೃದ್ಧಿಯಾದಮೇಲೆ ಜಘಾನ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಜಘ್ನತುಃ, ಜಘ್ನುಃ– ಪ್ರಥಮಪುರುಷ ದ್ವಿವಚನ ಮತ್ತು ಬಹುವಚನಗಳಲ್ಲಿ "ಅಸಂಯೋಗಾಲ್ಲಿಟ್ಕಿತ್" ಎಂಬ ಸೂತ್ರದಿಂದ ಕಿದ್ವದ್ಭಾವ ಬರುವುದರಿಂದ "ಗಮ-ಹನ-ಜನ-ಖನ-ಘಸಾಂ ಲೋಪಃ ಕ್ಙಿತ್ಯನಙಿ" ಎಂಬ ಸೂತ್ರದಿಂದ ಉಪಧಾ ಲೋಪವಾಗಿ ನಂತರ ಕುತ್ವ(ಘ್) ಬಂದು ಜಘ್ನತುಃ ಮತ್ತು ಜಘ್ನುಃ ಎಂದಾಗುತ್ತವೆ.

**(ಕುತ್ವವನ್ನು ವಿಧಿಸುವ ಸೂತ್ರ)**

**ಸೂತ್ರ– 560.ಅಭ್ಯಾಸಾಚ್ಚ (7.3.55)**

ವೃತ್ತಿಃ–ಅಭ್ಯಾಸಾತ್ ಪರಸ್ಯ ಹಂತೇಃ ಹಸ್ಯ ಕುತ್ವಂ ಸ್ಯಾತ್। ಜಘನಿಥ। ಜಘಂಥ। ಜಘ್ನತುಃ। ಜಘ್ನ। ಜಘಾನ, ಜಘನ। ಜಘ್ನಿವ। ಜಘ್ನಿಮ। ಹನ್ತಾ। ಹನಿಷ್ಯತಿ। ಹಂತು, ಹತಾತ್। ಹತಾಮ್। ಘ್ನನ್ತು।

ಪ. ಛೇ. – ಅಭ್ಯಾಸಾತ್, ಚ।

ಅ. ವೃ – "ಹೋಹನ್ತೇರ್ಞ್ಣಿನ್ನೇಷು" ಎಂಬ ಸೂತ್ರದಿಂದ 'ಹಃ' ಎಂಬ ಪದವೂ, ಮತ್ತು "ಚಜೋಃಕುಘಿಣ್ಯತೋಃ" ಎಂಬ ಸೂತ್ರದಿಂದ 'ಕು' ಪದವೂ ಅನುವೃತ್ತವಾಗುತ್ತದೆ.

ಅರ್ಥ– ಅಭ್ಯಾಸದಪರದಲ್ಲೂ 'ಹನ್' ಧಾತುವಿನ 'ಹ್' ಕಾರಕ್ಕೆ 'ಕವರ್ಗ(ಘ್)ವು' ಆದೇಶವಾಗಿ ಬರುತ್ತದೆ.

ಉದಾ– ಜಗನಿಥ/ಜಗನ್ಥ – ಮಧ್ಯಮಪುರುಷ ಏಕ ವಚನದಲ್ಲಿ 'ಹನ್' ಧಾತುವಿನ ನಂತರ ಅನಿಟ್ ಆದಮೇಲೂ 'ಥಲ್' ಪ್ರತ್ಯಯವಿದ್ದಾಗ, ಭಾರದ್ವಾಜನಿಯಮದಿಂದ ವಿಕಲ್ಪದಿಂದ 'ಇಟ್' ಬರುತ್ತದೆ, 'ಇಟ್' ಮತ್ತು 'ಅನಿಟ್' ಪಕ್ಷಗಳಲ್ಲಿ "ಹೋಹನ್ತೇರ್ಞ್ಣಿನ್ನೇಷು" ಎಂಬ ಸೂತ್ರದಿಂದ ಕುತ್ವವು ಬರುವುದಿಲ್ಲ. ಆದುದರಿಂದ ಪ್ರಕೃತ ಸೂತ್ರದಿಂದ 'ಹ್' ಕಾರಕ್ಕೆ ಕುತ್ವ ಬಂದು 'ಜಗನಿಥ' ಮತ್ತು 'ಜಗನ್ಥ' ಎಂಬ ರೂಪಗಳು ಸಿದ್ಧವಾಗುತ್ತವೆ.

ರೂಪಗಳು: ಜಘಾನ, ಜಘ್ನತುಃ, ಜಗ್ನುಃ। ಜಗನಿಥ/ಜಗನ್ಥ, ಜಘನ್ಥುಃ, ಜಘ್ನ। ಜಘಾನ/ಜಘನ, ಜಘ್ನಿವ, ಜಘ್ನಿಮ।

**ಲುಟ್**: ರೂಪಗಳು: ಹನ್ತಾ, ಹನ್ತಾರೌ, ಹನ್ತಾರಃ। ಹನ್ತಾಸಿ, ಹನ್ತಾಸ್ಥಃ, ಹನ್ತಾಸ್ಥ। ಹನ್ತಾಸ್ಮಿ, ಹನ್ತಾಸ್ವಃ, ಹನ್ತಾಸ್ಮಃ।

**ಲೃಟ್**: ರೂಪಗಳು: ಹನಿಷ್ಯತಿ, ಹನಿಷ್ಯತಃ, ಹನಿಷ್ಯನ್ತಿ। ಹನಿಷ್ಯಸಿ, ಹನಿಷ್ಯಥಃ, ಹನಿಷ್ಯಥ। ಹನಿಷ್ಯಾಮಿ, ಹನಿಷ್ಯಾವಃ, ಹನಿಷ್ಯಾಮಃ।

**ಲೋಟ್**: ಹನ್ತು/ಹತಾತ್– ಪ್ರಥಮಪುರುಷ ಏಕವಚನದಲ್ಲಿ 'ಹನ್' ಧಾತುವಿನ

ನಂತರ 'ಲೋಟ್' 'ಲ್' ಕಾರದ, 'ಲಟ್' 'ಲ್' ಕಾರದ ಪ್ರಥಮಪುರುಷ ಏಕವಚನದ ರೂಪವಾದ 'ಹನ್ತಿ' ಎಂಬ ರೂಪವಾದಮೇಲೆ "ಏರುಃ" ಎಂಬ ಸೂತ್ರದಿಂದ 'ಇ' ಕಾರಕ್ಕೆ 'ಉತ್ವ(ಉ)' ಬಂದು ಹನ್ತು ಎಂಬ ರೂಪವು ಸಿದ್ಧವಾಗುತ್ತದೆ. ಆದರೆ "ತುಹ್ಯೋಸ್ತಾತಙ್ಙಾಶಿಷ್ಯನ್ಯತರಸ್ಯಾಮ್" ಎಂಬ ಸೂತ್ರದಿಂದ 'ತಾತಙ್(ತಾತ್)' ಆದೇಶ ಬಂದಾಗ ಹನ್+ತಾತ್ ಎಂದಿರುತ್ತದೆ. "ಅನುದಾತ್ತೋಪದೇಶವನತಿತನೋತ್ಯಾದೀ–ನಾಮನುನಾಸಿಕಲೋಪೋ ಝಲಿ ಕ್ಙಿತಿ" ಎಂಬ ಸೂತ್ರದಿಂದ 'ನ್' ಕಾರಕ್ಕೆ ಲೋಪ ಬಂದು ಹತಾತ್ ಎಂಬ ರೂಪವು ಸಿದ್ಧವಾಗುತ್ತದೆ.

ಇದೇ ರೀತಿಯಲ್ಲಿ ಹತಾಮ್ ಮತ್ತು ಘ್ನನ್ತು ಎಂಬ ದ್ವಿವಚನ ಬಹುವಚನ ರೂಪಗಳನ್ನೂ 'ಲಟ್' 'ಲ್' ಕಾರದ ಪ್ರಕ್ರಿಯೆಯನ್ನು ಅನುಸರಿಸಿ ತಿಳಿದುಕೊಳ್ಳಬೇಕು.

**(ಜ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ– 561.ಹನ್ತೇರ್ಜಃ (6.4.36)**

ವೃತ್ತಿಃ–ಹೌ ಪರೇ।

ಪ. ಛೇ. – ಹನ್ತೇಃ, ಜಃ।

ಅ. ವೃ.– "ಶಾ ಹೌ" ಎಂಬ ಸೂತ್ರದಿಂದ 'ಹೌ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– 'ಹಿ' ಪರದಲ್ಲಿದ್ದಾಗ, 'ಹನ್' ಧಾತುವಿನ 'ಹನ್' ರೂಪಕ್ಕೆ 'ಜ' ಆದೇಶವು ಬರುತ್ತದೆ.

**(ಅತಿದೇಶವನ್ನು ವಿಧಿಸುವ ಅಧಿಕಾರ ಸೂತ್ರ)**

**ಸೂತ್ರ– 562.ಅಸಿದ್ಧವದತ್ರಾಭಾತ್ (6.4.22)**

ವೃತ್ತಿಃ–ಇತಃ ಊರ್ಧ್ವಮ್ ಆಪಾದಸಮಾಪ್ತೇಃ ಆಭೀಯಂ ಸಮಾನಾಶ್ರಯೇ ತಸ್ಮಿನ್ ಕರ್ತವ್ಯೇ ತತ್ ಅಸಿದ್ಧಮ್। ಇತಿ ಜಸ್ಯ ಅಸಿದ್ಧತ್ವಾತ್ ನ ಹೇಃ ಲುಕ್। ಜಹಿ। ಹತಾತ್। ಹತಮ್। ಹತ। ಹನಾನಿ। ಹನಾವ। ಹನಾಮ। ಅಹನ್, ಅಹತಾಮ್, ಅಘ್ನನ್। ಅಹನ್, ಅಹತಮ್, ಅಹತ। ಅಹನಮ್, ಅಹನ್ವ, ಅಹನ್ಮ। ಹನ್ಯಾತ್। ಹನ್ಯಾತಾಮ್, ಹನ್ಯುಃ।

ಪ. ಛೇ. – ಅಸಿದ್ಧವತ್, ಅತ್ರ, ಆ, ಭಾತ್।

ಅರ್ಥ– "ಭಸ್ಯ" ಎಂಬ ಅಧಿಕಾರವು 6ನೆಯ ಅಧ್ಯಾಯದ 4 ನೆಯ ಪಾದದವರೆಗೆ ಇರುವುದು. ಇದಕ್ಕೆ ಭಾಧಿಕಾರ ಎಂದು ಹೇಳುತ್ತಾರೆ. ಆದುದರಿಂದ ಈ ಸೂತ್ರವು ಮೊದಲು ಈ ಪಾದಾನ್ತದವರೆಗೆ ಆಭೀಯ ವೆಂದು ಹೇಳುತ್ತಾರೆ. ಒಂದು ಕಾರ್ಯವನ್ನು ಮಾಡಿದಮೇಲೆ ಮತ್ತೊಂದು ಸಮಾನಾಶ್ರಯ ಕಾರ್ಯ ಮಾಡಬೇಕಾದಾಗ, ಆ ಮೊದಲನೇ ಕಾರ್ಯವು ಅಸಿದ್ಧದನ್ತಿರುವುದು. ಇಲ್ಲಿ 'ಹಿ' ಶಬ್ದವನ್ನು ಪರದಲ್ಲಿ ಉಳ್ಳ 'ಹನ್' ಧಾತುವಿಗೆ 'ಜ್' ಎಂಬ ಆದೇಶವು ಮಾಡಲಾಗಿದೆ. ಈಗ 'ಜಹಿ' ಎಂದಿದ್ದಾಗ, "ಅತೋ ಹೇಃ" ಎಂಬ ಸೂತ್ರದಿಂದ 'ಹಿ' ಗೆ ಲೋಪವು ಬರಬೇಕಾಗಿತ್ತು, 'ಜ್' ಆದೇಶವು ಬರುವದಕ್ಕೆ 'ಹನ್' ಎಂಬ ಪಕೃತಿಯು ಮತ್ತು 'ಹಿ' ಎಂಬ ಪ್ರತ್ಯಯವೂ ನಿಮಿತ್ತವಾಗಿರುತ್ತದೆ. ಅಂದರೆ ಆಶ್ರಯವಾಗಿರುತ್ತದೆ. 'ಹಿ' ಲೋಪವು ಬರುದಕ್ಕೂ ಸಹ ಈ ಪ್ರಕೃತಿ(ಜ್)

ಪ್ರತ್ಯಯಗಳೇ ನಿಮಿತ್ತಗಳಾಗಿರುತ್ತವೆ. ಆದುದರಿಂದ ಈ ಸೂತ್ರದಿಂದ ಮೊದಲು ಬಂದ 'ಜ್' ಆದೇಶವು ಎರಡನೆಯದಾದ 'ಹಿ' ವರ್ಣದ ಲೋಪರೂಪವಾದ ಆಭೀಯ ಕಾರ್ಯವನ್ನು ಮಾಡುವಾಗ, ಅಸಿದ್ಧದನ್ತಿರುತ್ತದೆ. ಅಂದರೆ ಲೋಪವನ್ನು ಹೇಳುವ ಸೂತ್ರಕ್ಕೆ 'ಹನ್' ಎಂಬುದೇ ಇರುವಂತೆ ಕಾಣುತ್ತದೆ. 'ಹಿ' ಲೋಪವು ಬರುವುದಿಲ್ಲ. ಆದುದರಿಂದ 'ಜಹಿ' ಎಂದೇ ಇರುತ್ತದೆ.

'ತಾತ್' ಮೊದಲಾದ ಪ್ರತ್ಯಯಗಳು ಪರವಾದಾಗ, 'ನ್' ಕಾರಲೋಪ, ಮತ್ತು ಉತ್ತಮಪುರುಷದಲ್ಲಿ "ಆಡುತ್ತಮಸ್ಯ ಪಿಚ್ಚ" ಎಂಬ ಸೂತ್ರದಿಂದ 'ಆಟ್' ಆಗಮವು ಬಂದು ಹನಾನಿ ಇತ್ಯಾದಿ ರೂಪಗಳಾಗುವವು.

ರೂಪಗಳು: ಹನ್ತು/ಹತಾತ್, ಹತಾಮ್,ಘ್ನನ್ತು।ಜಹಿ/ಹತಾತ್, ಹತಮ್, ಹತ। ಹನಾನಿ, ಹನಾವ, ಹನಾಮ।

**ಲಙ್**: ಉದಾ- ಅಹನ್-ಪ್ರಥಮಪುರುಷ ಏಕವಚನದಲ್ಲಿ 'ಹನ್' ಧಾತುವಿನ ನಂತರ 'ತಿಪ್(ತಿ)' ಬಂದು, ನಂತರ ಧಾತುವಿನ ಪರದಲ್ಲಿ 'ಶಪ್(ಅ)' ಬಂದು, ಅದು ಲೋಪವಾದಮೇಲೆ ಧಾತುವಿಗೆ ಪೂರ್ವದಲ್ಲಿ 'ಅಟ್(ಅ)' ಆಗಮ ಬಂದು 'ತಿ' ಯಲ್ಲಿರುವ 'ಇ' ಕಾರಕ್ಕೆ "ಇತಶ್ಚ" ಎಂಬುದರಿಂದ ಲೋಪ ಬಂದು ಅಹನ್+ತ್ ಎಂದಿರುತ್ತದೆ.

'ತ್' ಕಾರಕ್ಕೆ "ಸಂಯೋಗಾನ್ತಸ್ಯ ಲೋಪಃ" ಎಂಬುದರಿಂದ ಲೋಪ ಬಂದು ಅಹನ್ ಎಂದು ರೂಪ ಸಿದ್ಧವಾಗುತ್ತದೆ.

ಉದಾ- ಅಹತಾಮ್- ಪ್ರಥಮಪುರುಷ ದ್ವಿವಚನದಲ್ಲಿ 'ಹನ್' ಧಾತುವಿನ ನಂತರ 'ತಸ್' ಬಂದು ಅದಕ್ಕೆ ಅಭಿನವ ಆಖ್ಯಾತ ಪ್ರತ್ಯಯವಾದ 'ತಾಮ್' ಆದೇಶ ಬಂದಮೇಲೆ ಹಿಂದಿನಂತೆಯೇ 'ಶಪ್(ಅ)' ಲೋಪ ಮತ್ತು ಧಾತುವಿನ ಪೂರ್ವಕ್ಕೆ ಅಡಾಗಮ ಬಂದು ಅಹನ್+ತಾಮ್ ಎಂದಿರುತ್ತದೆ. 'ತಾಮ್' ಪ್ರತ್ಯಯವು ಪರದಲಿರುವುದರಿಂದ ಹಿಂದಿನಂತೆ ಅನುನಾಸಿಕವಾದ 'ನ್' ಕಾರಕ್ಕೆ ಲೋಪ ಬಂದು, ಅಹತಾಮ್ ಎಂದು ರೂಪವಾಗುತ್ತದೆ.

ಉದಾ- ಅಘ್ನನ್- ಪ್ರಥಮಪುರುಷ ಬಹುವಚನದಲ್ಲಿ 'ಹನ್' ಧಾತುವಿನ ನಂತರ 'ಝಿ' ಪ್ರತ್ಯಯ ಬಂದು ಹಿಂದಿನಂತೆ ಪ್ರಕ್ರಿಯೆ ನಡೆದು ಅಹನ್+ಅನ್ತ್ ಎಂದಿದ್ದಾಗ, "ಗಮ-ಹನ-ಜನ-ಖನ-ಘಸಾಂ ಲೋಪಃ ಕ್ಙಿತ್ಯನಙಿ" ಎಂಬ ಸೂತ್ರದಿಂದ ಉಪಧಾ (ಹ ಕಾರೋತ್ತರ ಅ-ಕಾರ) ಲೋಪವಾಗಿ ಅಹ್‌ನ್+ಅನ್ತ್ ಎಂದಿದ್ದಾಗ, 'ಹ್' ಕಾರಕ್ಕೆ 'ನ್' ಕಾರವು ಪರದಲ್ಲಿರೋಣದರಿಂದ " ಹೋ ಹನ್ತೇರ್ಞ್ಣಿನ್ನೇಷು" ಎಂಬ ಸೂತ್ರದಿಂದ ಕುತ್ವ(ಘ್) ಬಂದು 'ತ್' ಕಾರಕ್ಕೆ "ಸಂಯೋಗಾನ್ತಸ್ಯ ಲೋಪಃ" ಎಂಬ ಸೂತ್ರದಿಂದ ಲೋಪ ಬಂದು ಅಘ್ನನ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ- ಅಹನ್-ಮಧ್ಯಮಪುರುಷ ಏಕವಚನದಲ್ಲಿ 'ಹನ್' ಧಾತುವಿನಮೇಲೆ 'ಸಿಪ್' ಪರದಲ್ಲಿದ್ದಾಗ, ಪ್ರಥಮಪುರುಷ ಏಕವಚನದ ಪ್ರಕ್ರಿಯೆಯಂತೆ ಪ್ರಕ್ರಿಯೇ ನಡೆದು ಅಹನ್ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ- ಅಹತಮ್, ಅಹತ - ಮಧ್ಯಮಪುರುಷ ದ್ವಿವಚನ ಬಹುವಚನಗಳಲ್ಲಿ ಹಿಂದಿನಂತೆಯೇ ಪ್ರಕ್ರಿಯೆಗಳು ನಡೆದು ಅಹತಮ್, ಅಹತ ಎಂಬ ರೂಪಗಳು ಸಿದ್ಧವಾಗುತ್ತವೆ.

ಉದಾ- ಅಹನಮ್, ಅಹನ್ವ ಅಹನ್ಮ- ಉತ್ತಮಪುರುಷ ಮೂರೂ ವಚನಗಳಲ್ಲಿಯೂ ಯಾವದೇ ವಿಶೇಷ ಪ್ರಕ್ರಿಯೆ ನಡೆಯದೆ ಹಿಂದಿನಂತೆಯೇ ಅಹನಮ್, ಅಹನ್ವ, ಅಹನ್ಮ ಎಂಬ ಈ ರೂಪಗಳು ಸಿದ್ಧವಾಗುತ್ತವೆ.

ರೂಪಗಳು: ಅಹನ್, ಅಹತಾಮ್, ಅಘ್ನನ್। ಅಹನ್, ಅಹತಮ್, ಅಹತ। ಅಹನಮ್, ಅಹನ್ವ, ಅಹನ್ಮ।

**ವಿಧಿಲಿಙ್**: ರೂಪಗಳು: ಹನ್ಯಾತ್, ಹನ್ಯಾತಾಮ್, ಹನ್ಯುಃ।ಹನ್ಯಾಃ, ಹನ್ಯಾತಮ್, ಹನ್ಯಾತ। ಹನ್ಯಾಮ್, ಹನ್ಯಾವ, ಹನ್ಯಾಮ।

**(ಅಧಿಕಾರ ಸೂತ್ರ)**

**ಸೂತ್ರ- 563.ಆರ್ಧಧಾತುಕೇ (2.4.35)**

ವೃತ್ತಿಃ-ಇತ್ಯಧಿಕೃತ್ಯ।

ಅರ್ಥ- ಆರ್ಧಧಾತುಕದಲ್ಲಿ ಎಂದರೆ ಆರ್ಧಧಾತುಕ ಅಧಿಕಾರದಲ್ಲಿ ಅಥವಾ ಆರ್ಧಧಾತುಕ ವಿವಕ್ಷೆಯಲ್ಲಿ -

**(ವಧಾದೇಶವನ್ನು ವಿಧಿಸುವ ಸೂತ್ರ)**

**ಸೂತ್ರ- 564.ಹನೋ ವಧ ಲಿಙಿ। (2.4.42)**

ಪ. ಛೇ. - ಹನಃ, ವಧ(ಲುಪ್ತ ಪ್ರಥಮಾಕಂ ಪದಮ್), ಲಿಙಿ।

ಅ. ವ್ಯ. -ಅರ್ಧಧಾತುಕೇ" ಎಂಬುದು ಅಧಿಕಾರ ಸೂತ್ರವಾಗಿದೆ.

ಅರ್ಥ- ಆರ್ಧಧಾತುಕ ಲಿಙ್(ಆಶೀರ್ಲಿಙ್) 'ಲ್' ಕಾರದ ವಿವಕ್ಷೆ ಇದ್ದಾಗ, 'ಹನ್' ದಾತುವಿಗೆ 'ವಧ್' ಆದೇಶವು ಬರುತ್ತದೆ.

ಆರ್ಧಧಾತುಕ ಅಧಿಕಾರದಲ್ಲಿ ಇರುವ ಈ 'ಆಶೀರ್ಲಿಙ್'ನಲ್ಲಿ 'ಹನ್' ಧತುವಿಗೆ 'ವಧ್' ಬರುತ್ತದೆ. ಯಾಕೆಂದರೆ "ಲಿಙಾಶಿಷೀ" ಎಂಬ ಸೂತ್ರದಿಂದ 'ಆಶೀರ್ಲಿಙ್' ಗೆ ಆರ್ಧಧಾತುಕ ಸಂಜ್ಞೆಯು ಬರುತ್ತದೆ.

**ಸೂತ್ರ- 565.ಲುಙಿ ಚ (2.4.43)**

ವೃತ್ತಿಃ-ವಧಾದೇಶಃ ಅದನ್ತಃ ಆರ್ಧಧಾತುಕೇ ಇತಿ ವಿಷಯಸಪ್ತಮೀ। ತೇನ ಆರ್ಧಧಾತುಕ ಉಪದೇಶೇ ಅಕಾರಾಂತತ್ವಾತ್ ಅತಃ ಲೋಪಃ। ವಧ್ಯಾತ್। ವಧ್ಯಾಸ್ತಾಮ್। ಅದೇಶಸ್ಯ 'ಅನೇಕಾಚಿತ್ವಾತ್ ಏಕಾಚ್' ಇತಿ ಇಣ್-ನಿಷೇಧಾಭಾವಾತ್ ಇಟ್। "ಅತೋ ಹಲಾದೇಃ" ಇತಿ ವೃದ್ಧೌ ಪ್ರಾಪ್ತಾಯಾಮ್।

ಅ. ವ್ಯ.- "ಹನ-ವಧ-ಲಿಙಿ" ಎಂಬ ಸೂತ್ರದಿಂದ 'ಹನ' ಮತ್ತು 'ವಧ' ಎಂಬ ಪದಗಳು ಅನುವೃತ್ತವಾಗಿವೆ. "ಆರ್ಧಧಾತುಕೇ" ಎಂಬುದು ಅಧಿಕಾರಸೂತ್ರವಾಗಿದೆ.

ಅರ್ಥ- ಆರ್ಧಧಾತುಕ ಲುಙ್ 'ಲ್' ಕಾರದ ವಿವಕ್ಷೆ ಇದಾಗ, 'ಹನ್' ಧಾತುವಿಗೆ 'ವಧ(ವಧ್)' ಎಂಬುದು ಆದೇಶವಾಗಿ ಬರುತ್ತದೆ. ಆರ್ಧಧಾತುಕ ಉಪದೇಶದಲ್ಲಿ ಈ ಧಾತುರೂಪ ಆದೇಶವು ಅದನ್ತವಾಗಿ ಇದೆ. ಆದರೆ "ಅತೋಲೋಪಃ" ಎಂಬುದರಿಂದ 'ಅ' ಕಾರಕ್ಕೆ ಲೋಪವು ಬರುತ್ತದೆ.

ಗಮನಕ್ಕೆ- ಹಲವಾರು ವೈಯ್ಯಾಕರಣಿಗಳು ಈ ಎರಡು ಸೂತ್ರಗಳನ್ನು ಸೇರಿಸಿ ವ್ಯಾಖ್ಯಾನ ಮಾಡಿದ್ದಾರೆ - ಹನ್ ಧಾತುವಿನ ಸ್ಥಾನದಲ್ಲಿ ವಧ(ವಧ್) ಆದೇಶವು ಬರುತ್ತದೆ. ಆರ್ಧಧಾತುಕ 'ಲಿಙ್' 'ಲುಙ್' ಗಳ ವಿವಕ್ಷೆ ಇದ್ದಾಗ.

**ಆಶೀರ್ಲಿಙ್**: ಉದಾ- ವಧ್ಯಾತ್- ಪ್ರಥಮಪುರುಷ ಏಕವಚನದಲ್ಲಿ 'ಹನ್' ಧಾತುವಿನ ನಂತರ ಆಶೀರ್ಲಿಙ್ ನಲ್ಲಿ "ಹನೋವಧಲಿಙಿ" ಎಂಬ ಸೂತ್ರದಿಂದ 'ಹನ್' ಗೆ ವಧ(ವಧ್) ಆದೇಶವು ಬಂದಮೇಲೆ ಲಿಙಾದೇಶವಾದ 'ತಿಙ್' ಬಂದು ಧಾತುವಿನ ಪರದಲ್ಲಿ 'ಯಾಸುಟ್(ಯಾಸ್)' ಆಗಮ ಬಂದಮೇಲೆ ವಧ+ಯಾಸ್+ತಿ ಎಂದಿದ್ದಾಗ "ಇತಶ್ಚ" ಎಂಬುದರಿಂದ 'ಇ' ಕಾರ ಲೋಪವಾದಾಮೇಲೆ ವಧ+ಯಾಸ್+ತ್ ಎಂದಿರುತ್ತದೆ. "ಅತೋಲೋಪಃ" ಎಂಬುದರಿಂದ ವಧ ಎಂಬಲ್ಲಿರುವ 'ಧ್' ಕಾರೋತ್ತರ 'ಅ' ಕಾರಕ್ಕೆ ಲೋಪ ಬಂದು "ಸ್ಕೋಃ ಸಂಯೋಗಾದ್ಯೋರನ್ತೇಚ" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬಂದು ವಧ್ಯಾತ್ ಎಂದು ರೂಪವಾಗುತ್ತದೆ.

ರೂಪಗಳು: ವಧ್ಯಾತ್, ವಧ್ಯಾಸ್ತಾಮ್, ವಧ್ಯಾಸುಃ। ವಧ್ಯಾಃ, ವಧ್ಯಾಸ್ತಮ್ ವಧ್ಯಾಸ್ತ। ವಧ್ಯಾಸಮ್, ವಧ್ಯಾಸ್ವ, ವಧ್ಯಾಸ್ಮ।

**(ಸ್ಥಾನಿವದ್ಭಾವವನ್ನು ವಿಧಿಸುವ ಅತಿದೇಶ ಸೂತ್ರ)**

**ಲುಙ್**:

ಸೂತ್ರ- 566. ಅಚಃ ಪರಸ್ಮಿನ್ ಪೂರ್ವವಿಧೌ। (1.1.57)

ವೃತ್ತಿಃ - ಪರನಿಮಿತ್ತಃ ಅಜಾದೇಶಃ ಸ್ಥಾನಿವತ್, ಸ್ಥಾನಿಭೂತಾದಚಃ ಪೂರ್ವತ್ವೇನ ದೃಷ್ಟಸ್ಯ ವಿಧೌ ಕರ್ತವ್ಯೇ। ಇತಿ ಅಲ್ಲೋಪಸ್ಯ ಸ್ಥಾನಿವತ್ವಾತ್ ನ ವೃದ್ಧಿಃ। ಅವಧೀತ್। ಅಹನಿಷ್ಯತ್। ಯು ಮಿಶ್ರಣಾಮಿಶ್ರಣಯೋಃ (3)

ಅ. ವೃ.- "ಸ್ಥಾನಿವದಾದೇಶೋಽನಲ್ವಿಧೌ" ಎಂಬ ಸೂತ್ರದಿಂದ 'ಸ್ಥಾನಿವತ್' ಮತ್ತು 'ಆದೇಶಃ' ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥಃ- ಪರನಿಮಿತ್ತವಾದ (ಪರದಲ್ಲಿ ಇರುವದನ್ನು ನಿಮಿತ್ತವಾಗಿ ಮಾಡಿಕೊಂಡು ಬಂದಿರುವ) ಅಜಾದೇಶವು (ಅಚ್ ಸ್ಥಾನದಲ್ಲಿ ಬಂದ ಆದೇಶವು) ಸ್ಥಾನಿಯಾದ ಅಚ್ ಗಿಂತ ಪೂರ್ವದಲ್ಲಿರುವದಕ್ಕೆ ಕಾರ್ಯವನ್ನು ಮಾಡಬೇಕು ಎಂದಿದ್ದಾಗ, ಸ್ಥಾನಿಯಂತೆಯೇ ಇರುವುದು.

**ಲುಙ್**: ಉದಾ-ಅವಧೀತ್- ಪ್ರಥಮಪುರುಷ ಏಕವಚನದಲ್ಲಿ 'ಹನ್' ಧಾತುವಿಗೆ ವಧ(ವಧ್) ಆದೇಶ ಬಂದಮೇಲೆ 'ಲುಙ್' 'ಲ್' ಕಾರಾದೇಶವಾದ 'ತಿಪ್(ತಿ)' ಬಂದು "ಇತಶ್ಚ" ಎಂಬುದರಿಂದ 'ಇ' ಕಾರ ಲೋಪವಾಗಿ ಧಾತುವಿಗೆ ಪೂರ್ವದಲ್ಲಿ

'ಅಟ್(ಅ)' ಆಗಮ ಬಂದು ಅ+ವಧ+ತ್ ಎಂದಿದ್ದಾಗ, ಧಾತುವಿನ ನಂತರ 'ಚ್ಲಿ' ಬಂದು ಅದಕ್ಕೆ 'ಸಿಚ್(ಸ್)' ಆದೇಶ ಬಂದು ಅವಧ+ಸ್+ತ್ ಎಂದಿರುತ್ತದೆ. ಈ ಧಾತುವು ಏಕಾಚ್ ಆಗಿರುವುದರಿಂದ ಅನಿಟ್ ಆಗಿದೆ. ಆದರೆ 'ವಧ' ಆದೇಶ ಬಂದಿರೋಣದ್ದರಿಂದ ಅನೇಕಾಚ್ ಆಗಿ ಸೇಟ್ ಆಗುತ್ತದೆ. ಆದುದರಿಂದ "ಆರ್ಧಧಾತುಕಸ್ಯೇಡ್ವಲಾದೇಃ" ಎಂಬುದರಿಂದ 'ಸ್' ಗೆ ಆದ್ಯವಯವವಾಗಿ 'ಇಟ್(ಇ)' ಆಗಮವು ಬಂದು ಅವಧ+ಇಸ್+ತ್ ಎಂದಿದ್ದಾಗ "ಅಸ್ತಿ ಸಿಚೋऽಪೃಕ್ತೇ" ಎಂಬುದರಿಂದ 'ತ್' ಗೆ 'ಈಟ್' ಆಗಮ ಬಂದು ಅವಧ+ಇಸ್+ಈತ್ ಎಂದಿರುತ್ತದೆ. "ಅತೋಲೋಪಃ" ಎಂಬುದರಿಂದ ಅನ್ತ್ಯ 'ಅ' ಕಾರಕ್ಕೆ ಲೋಪ ಬಂದು ಅವಧ್ ಎಂದು ಹಲನ್ತ ಧಾತುವಾಗಿ ಭಾವಿಸುವುದರಿಂದ "ಅತೋಹಲಾದೇರ್ಲಘೋಃ" ಎಂಬುದರಿಂದ 'ವ' ಕಾರೋತ್ತರ 'ಅ' ಕಾರಕ್ಕೆ ವೈಕಲ್ಪಿಕವಾಗಿ ವೃದ್ಧಿಯು ಪ್ರಾಪ್ತವಾದಾಗ ಪ್ರಕೃತ ಸೂತ್ರದಿಂದ ಸ್ಥಾನಿವದ್ಭಾವವು ಬಂದು ಅಂದರೆ 'ಅ' ಕಾರದ ಲೋಪಕ್ಕೆ ಸ್ಥಾನಿವದ್ಭಾವ ಮಾಡಿ ಅದನ್ತವಾಗಿಯೇ ತೋರುತ್ತದೆ. ವಧ ಎಂಬಲ್ಲಿರುವ 'ಅ' ಕಾರವು ಸ್ಥಾನಿಭೂತ 'ಅಚ್' ಆಗಿದೆ. 'ಅ' ಕಾರದ ಪೂರ್ವದಲ್ಲಿ ವೃದ್ಧಿಯು ಪ್ರಾಪ್ತವಾಗಿದೆ. ಸ್ಥಾನಿವದ್ಭಾವದಿಂದ ಧಾತು ಮತ್ತು ಸಿಚ್ ಗಳ ಮಧ್ಯದಲ್ಲಿ 'ಅ' ಕಾರವು ಇದ್ದಂತೆಯೇ ಭಾವಿಸುವುದರಿಂದ ವೃದ್ಧಿಯು ಬರುವುದಿಲ್ಲ. "ಇಟಈಟಿ" ಎಂಬ ಸೂತ್ರದಿಂದ ಮಧ್ಯದಲ್ಲಿರುವ 'ಸ್' ಕಾರಕ್ಕೆ ಲೋಪ ಬಂದು ಸವರ್ಣದೀರ್ಘಸಂಧಿಯಿಂದ ಅವಧೀತ್ ಎಂಬ ರೂಪವು ಸಿದ್ಧವಾಗುತ್ತದೆ.

ರೂಪಗಳು: ಅವಧೀತ್, ಅವಧಿಷ್ಟಾಮ್, ಅವಧಿಷುಃ। ಅವಧೀಃ, ಅವಧಿಷ್ಟಮ್, ಅವಧಿಷ್ಟ ಅವಧಿಷಮ್, ಅವಧಿಷ್ವ, ಅವಧಿಷ್ಮ।

**ಲೃಜ್**: ರೂಪಗಳು: ಅಹನಿಷ್ಯತ್, ಅಹನಿಷ್ಯತಾಮ್, ಅಹನಿಷ್ಯನ್। ಅಹನಿಷ್ಯಃ, ಅಹನಿಷ್ಯತಮ್, ಅಹನಿಷ್ಯತ। ಅಹನಿಷ್ಯಮ್, ಅಹನಿಷ್ಯಾವ, ಅಹನಿಷ್ಯಾಮ।

3. ಯು–ಮಿಶ್ರಣಾಮಿಶ್ರಣಯೋಃ (ಸೇರುವುದು ಮತ್ತು ಬಿಡುಗಡೆಯಾಗುವುದು) – ಈ ಧಾತುವು 'ಸೇಟ್' ಆಗಿದೆ.

### (ವೃದ್ಧಿಯನ್ನು ವಿಧಿಸುವ ಸೂತ್ರ)

**ಸೂತ್ರ– 567.ಉತೋವೃದ್ಧಿರ್ಲುಕಿ ಹಲಿ। (7.3.89)**

ವೃತ್ತಿಃ–ಲುಗ್ವಿಷಯೇ ಉತಃ ವೃದ್ಧಿಃ ಪಿತಿ ಹಲಾದೌ ಸಾರ್ವಧಾತುಕೇ ನ ತು ಅಭ್ಯಸ್ತಸ್ಯ। ಯೌತಿ, ಯುತಃ, ಯುವಂತಿ। ಯೌಷಿ, ಯುಥಃ, ಯುಥ। ಯೌಮಿ, ಯುವಃ, ಯುಮಃ। ಯುಯಾವ। ಯವಿತಾ। ಯವಿಷ್ಯತಿ। ಯೌತು। ಯುತಾತ್। ಅಯೌತ್। ಅಯುತಾಮ್। ಅಯುವನ್। ಯುಯಾತ್। ಇಹ ಉತೋ ವೃದ್ಧಿಃ ನ। ಭಾಷ್ಯೇ 'ಪಿಚ್ಚ ಜಿತ್ ನ' 'ಜಿಚ್ಚ ಪಿತ್ ನ' ಇತಿ ವ್ಯಾಖ್ಯಾನಾತ್। ಯುಯಾತಮ್। ಯುಯುಃ। ಯೂಯಾತ್। ಯೂಯಾಸ್ತಾಮ್। ಯೂಯಾಸುಃ। ಅಯಾವೀತ್। ಅಯವಿಷ್ಯತ್। ಯಾ ಪ್ರಾಪಣೇ।4। ಯಾತಿ। ಯಾತಃ। ಯಾಂತಿ। ಯಯೌ। ಯಾತಾ। ಯಾಸ್ಯತಿ। ಯಾತು। ಅಯಾತ್। ಅಯಾತಾಮ್।

ಪ. ಛೇ. – ಉತಃ, ವೃದ್ಧಿಃ, ಲುಕಿ, ಹಲಿ।

ಅ. ವೃ.- "ನಾಭ್ಯಸ್ತಸ್ಯಾಚಿ ಪಿತಿ ಸಾರ್ವಧಾತುಕೇ" ಎಂಬ ಸೂತ್ರದಿಂದ ನ, ಅಭ್ಯಸ್ತಸ್ಯ, ಪಿತಿ ಮತ್ತು ಸಾರ್ವಧಾತುಕೇ ಎಂಬ 4 ಪದಗಳು ಅನುವೃತ್ತವಾಗುತ್ತವೆ. "ಅಂಗಸ್ಯ" ಎಂಬುದು ಅಧಿಕಾರ ಸೂತ್ರ.

ಅರ್ಥ- ಹಲಾದಿಯಾಗಿದ್ದು ಪಿತ್ ಆದ ಸಾರ್ವಧಾತುಕ ಪ್ರತ್ಯಯವು ಪರದಲ್ಲಿದ್ದಾಗ, 'ಲುಕ್(ಲೋಪ)' ನ ವಿಷಯದಲ್ಲಿ ಅನಭ್ಯಸ್ತ ಉದನ್ತ ಅಂಗಕ್ಕೆ ವೃದ್ಧಿಯು ಬರುತ್ತದೆ.

ಉದಾ- ಯೌತಿ-ಪ್ರಥಮಪುರುಷ ಏಕವಚನದಲ್ಲಿ ಯು ಧಾತುವಿನ ಅಂತರ 'ಲಟ್' ಬಂದು ಅದಕ್ಕೆ ಆದೇಶವಾಗಿ ತಿಪ್(ತಿ) ಬಂದು ಧಾತುವಿನ ನಂತರ 'ಶಪ್(ಅ)' ಪ್ರತ್ಯಯ ಬಂದು ಅದು ಲೋಪವಾದಮೇಲೆ ಯು+ತಿ ಎಂದಿರುತ್ತದೆ. 'ತಿ (ತಿಪ್)' ಪ್ರತ್ಯಯವು 'ಪಿತ್' ಆಗಿರುವುದರಿಂದ ಸಾರ್ವಧಾತುಕವಾಗಿದೆ. ಪ್ರಕೃತ ಸೂತ್ರದಿಂದ 'ಯು' ನಲ್ಲಿರುವ 'ಉ' ಕಾರಕ್ಕೆ ವೃದ್ಧಿ ಬಂದು ಯೌ+ತಿ=ಯೌತಿ ಎಂದಾಗುತ್ತದೆ.

ಸೂಚನೆ –ಮಧ್ಯಮಪುರುಷ, ಏಕವಚನ ಮತ್ತು ಉತ್ತಮಪುರುಷ ಏಕವಚನಗಳಲ್ಲಿ ಇದೇ ರೀತಿ ಪ್ರಕ್ರಿಯೆಯು ನಡೆದು ಯೌಷಿ ಮತ್ತು ಯೌಮಿ ಎಂಬ ರೂಪಗಳು ಕ್ರಮವಾಗಿ ಸಿದ್ಧಿಸುತ್ತವೆ. ಉಳಿದ 6 ಪ್ರತ್ಯಯಗಳು ಪಿತ್ ಆಗಿ ಇಲ್ಲದೇ ಇರುವುದರಿಂದ ವೃದ್ಧಿಯು ಬರುವುದಿಲ್ಲ.

ಉದಾ- 0ಯುವನ್ತಿ –ಪ್ರಥಮಪುರುಷ ಬಹುವಚನದಲ್ಲಿ ಯು+ಅನ್ತ್+ಇ=ಯು+ಅನ್ತಿ ಎಂದಿದ್ದಾಗ, ಅಜಾದಿ ಪ್ರತ್ಯಯ(ಅನ್ತಿ) ವು ಪರದಲ್ಲಿರೋಣದರಿಂದ "ಅಚಿ ಶ್ನುಧಾತುಭ್ರುವಾಮ್ ಯ್ವೋರಿಯಙುವಙೌ" ಎಂಬ ಸೂತ್ರದಿಂದ 'ಯು'ನಲ್ಲಿರುವ 'ಉ' ಕಾರಕ್ಕೆ 'ಉವಙ್(ಉವ್)' ಆದೇಶ ಬಂದು ಯ್+ಉವ್+ಅನ್ತಿ=ಯುವನ್ತಿ ಎಂಬ ರೂಪವು ಸಿದ್ಧವಾಗುತ್ತದೆ.

ರೂಪಗಳು: 0ಯೌತಿ, 0ಯುತಃ, 0ಯುವನ್ತಿ। 0ಯೌಷಿ, 0ಯುಥಃ, 0ಯುಥ। 0ಯೌಮಿ, 0ಯುವಃ, 0ಯುಮಃ।

**ಲಿಟ್**: ಉದಾ-ಯುಯಾವ- ಪ್ರಥಮಪುರುಷ ಏಕವಚನದಲ್ಲಿ 'ಯು' ಧಾತುವಿನ ನಂತರ ಲಿಡಾದೇಶವಾದ 'ತಿಪ್(ತಿ)' ಬಂದು, ಅದಕ್ಕೆ ಅಭಿನವ ಆಖ್ಯಾತ ಪ್ರತ್ಯಯವಾದ 'ಣಲ್(ಅ)' ಆದೇಶವಾಗಿ ಬಂದು ಧಾತುವಿಗೆ ದ್ವಿತ್ವಬಂದಮೇಲೆ ಯುಯು+ಅ ಎಂದಿರುತ್ತದೆ. "ಅಚೋಞ್ಣಿತಿ" ಎಂಬ ಸೂತ್ರದಿಂದ ಅನಭ್ಯಸ್ತ 'ಯು' ನಲ್ಲಿರುವ 'ಉ' ಕಾರಕ್ಕೆ ವೃದ್ಧಿ ಬಂದು ಯುಯೌ+ಅ ಎಂದಿದ್ದಾಗ, ವಾನ್ತಾದೇಶ ಸಂಧಿಯಿಂದ 'ಔ' ಕಾರಕ್ಕೆ 'ಆವ್' ಆದೇಶ ಬಂದು ಯುಯಾವ ಎಂದು ರೂಪವು ಸಿದ್ಧವಾಗುತ್ತದೆ.

ರೂಪಗಳು: ಯುಯಾವ, ಯುಯುವತುಃ, ಯುಯುವುಃ। ಯುಯವಿಥ, ಯುಯುವಥುಃ, ಯುಯುವ। ಯುಯಾವ/ಯುಯವ, ಯುಯುವಿವ, ಯುಯುವಿಮ।

**ಲುಟ್**: ರೂಪಗಳು: ಯವಿತಾ, ಯವಿತಾರೌ, ಯವಿತಾರಃ। ಯವಿತಾಸಿ, ಯವಿತಾಸ್ಥಃ, ಯವಿತಾಸ್ಥ। ಯವಿತಾಸ್ಮಿ, ಯವಿತಾಸ್ವಃ, ಯವಿತಾಸ್ಮಃ।

**ಲೃಟ್**: ರೂಪಗಳು: ಯವಿಷ್ಯತಿ, ಯವಿಷ್ಯತಃ, ಯವಿಷ್ಯನ್ತಿ। ಯವಿಷ್ಯಸಿ, ಯವಿಷ್ಯಥಃ, ಯವಿಷ್ಯಥ। ಯವಿಷ್ಯಾಮಿ, ಯವಿಷ್ಯಾವಃ, ಯವಿಷ್ಯಾಮಃ।

**ಲೋಟ್**: ರೂಪಗಳು: ಯೌತು/ಯುತಾತ್, ಯುತಾಮ್, ಯುವನ್ತು। ಯುಹಿ/ ಯುತಾತ್, ಯುತಮ್, ಯುತ। ಯವಾನಿ, ಯವಾವ, ಯವಾಮ।

**ಲಙ್**: ರೂಪಗಳು: ಅಯೌತ್, ಅಯುತಾಮ್, ಅಯುವನ್। ಅಯೌಃ, ಅಯುತಮ್, ಅಯುತ। ಅಯುವಮ್, ಅಯುವ, ಅಯುಮ।

**ವಿಧಿಲಿಙ್**: ಉದಾ– ೦ಯು೦ಯಾತ್–ಪ್ರಥಮ ಪುರುಷ ಏಕವಚನದಲ್ಲಿ 'ಯು' ಧಾತುವಿನ ನಂತರ 'ಲಿಙ್' ಗೆ 'ತಿಪ್(ತಿ)' ಆದೇಶ ಬಂದು ಧಾತುವಿನ ನಂತರ 'ಯಾಸುಟ್(ಯಾಸ್)' ಅಗಮ ಬಂದು, 'ತಿ' ನಲ್ಲಿರುವ 'ಇ' ಕಾರಕ್ಕೆ "ಇತಶ್ಚ" ಎಂಬುದರಿಂದ ಲೋಪ ಬಂದಮೇಲೆ ಯು+ಯಾಸ್+ತ್ ಎಂದಿರುತ್ತದೆ. "ಯಾಸುಟ್ ಪರಸ್ಮೈಪದೇಷೂದಾತ್ತೋ ಙಿಚ್ಚ" ಎಂಬುದರಿಂದ 'ಙಿತ್' ಆಗಿದೆ. ಆದರೆ 'ತಿ' ಯಲ್ಲಿರುವ 'ಪಿತ್ತ್ವ' ಇದಕ್ಕೆ ಬರುವ ಆಗಮ ಯಾಸುಟ್ ಆಗಮದಲ್ಲಿಯೂ ಇದೆ. 'ಯದಾಗಮಾಃ ತದ್ಗುಣೀಭೂತಾಃ ತದ್ಗ್ರಹಣೇನ ಗೃಹ್ಯನ್ತೇ' ಎಂಬ ನ್ಯಾಯದಿಂದ 'ಯಾಸ್' ಪ್ರತ್ಯಯವನ್ನು 'ಪಿತ್' ಆಗಿ ಭಾವಿಸಿ ಪ್ರಕೃತ ಸೂತ್ರದಿಂದ ವೃದ್ಧಿಯು ಆಗಬೇಕು, ಇದಕ್ಕೆ ಸಮಾಧಾನವಾಗಿ ಪತಂಜಲಿಯು ತನ್ನ ಭಾಷ್ಯದಲ್ಲಿ ಬೇರೊಂದು ಉಪಾಯದಿಂದ ವೃದ್ಧಿಯನ್ನು ನಿಷೇಧಿಸಿದ್ದಾರೆ. ಅವರ ಪ್ರಕಾರ "ಙಿಚ್ಚ ಪಿನ್ನ, ಪಿಚ್ಚ ಙಿನ್ನ" (ಙಿತ್ ಆದದ್ದು ಪಿತ್ ಆಗಿರುವುದಿಲ್ಲ ಮತ್ತು ಪಿತ್ ಆಗಿರುವುದು ಙಿತ್ ಆಗಿರುವುದಿಲ್ಲ) ಎಂಬ ನ್ಯಾಯದಿಂದ ಯಾಸುಟ್ ಙಿತ್ ಆಗಿ ಇರುವುದರಿಂದ ಅಲ್ಲಿ ಪಿತ್ವ ಬರುವುದಿಲ್ಲ 'ಪಿತ್ವ' ವಿಲ್ಲದ್ದರಿಂದ ವೃದ್ಧಿಧ್ಧಿಯೂ ಬರುವವುದಿಲ್ಲ. ಆದುದರಿಂದ ಯುಯಾತ್ ಎಂದೇ ಆಗುತ್ತದೆ.

ರೂಪಗಳು: ಯುಯಾತ್, ಯುಯಾತಾಮ್, ಯುಯುಃ। ಯುಯಾಃ, ಯುಯಾತಮ್, ಯುಯಾತ। ಯುಯಾಮ್, ಯುಯಾವ, ಯುಯಾಮ।

**ಆಶೀರ್ಲಿಙ್**: ಆಶೀರ್ಲಿಙ್ ಇದು ಆರ್ಧಧಾತುಕವಾಗಿದೆ. ಸಾರ್ವಧಾತುಕದಲ್ಲಿ ಬರಬೇಕಾದ ವೃದ್ಧಿಯು ಬರುವುದಿಲ್ಲ. "ಅಕೃತ್ ಸಾರ್ವಧಾತುಕಯೋಃ ದೀರ್ಘಃ" ಎಂಬ ಸೂತ್ರದಿಂದ ದೀರ್ಘ ಬಂದು ರೂಪಗಳು ಸಿದ್ಧವಾಗುತ್ತವೆ.

ರೂಪಗಳು: ಯೂಯಾತ್, ಯೂಯಾಸ್ತಾಮ್, ಯೂಯಾಸುಃ। ಯೂಯಾಃ, ಯೂಯಾಸ್ತಮ್, ಯೂಯಾಸ್ತ। ಯೂಯಾಸಮ್, ಯೂಯಾಸ್ವ, ಯೂಯಾಸ್ಮ।

**ಲುಙ್**: ಪ್ರಥಮಪುರುಷ ಏಕವಚನದಲ್ಲಿ 'ಯು' ಧಾತುವಿನನಂತರ 'ಲುಙ್' ಆದೇಶವಾದ 'ತಿಪ್(ತಿ)' ಬಂದು ಧಾತುವಿಗೆ ಅಡಾಗಮ ಬಂದಮೇಲೆ ಅ+ಯು+ ತಿ ಎಂದಿದ್ದಾಗ 'ತಿ' ಗೆ "ಇತಶ್ಚ" ಎಂಬುದರಿಂದ ಲೋಪ ಬಂದಮೇಲೆ ಅ+ಯು+ತ್ ಎಂದಿರುತ್ತದೆ. ಧಾತುವಿನ ನಂತರ 'ಸಿಚ್(ಸ್)' ಬಂದು, "ಆರ್ಧಧಾತುಕಸ್ಯೇಡ್ವಲಾದೇಃ" ಎಂಬುದರಿಂದ 'ಇಟ್(ಇ)' ಆಗಮ ಬಂದು, ಅಯು+ಇಸ್+ತ್ ಎಂದಿರುತ್ತದೆ. ಆಗ "ಅಸ್ತಿಸಿಚೋಽಪೃಕ್ತೇ" ಎಂಬ ಸೂತ್ರದಿಂದ 'ಈಟ್(ಈ)' ಆಗಮ ಬಂದು ಅಯು+ಇಸ್+ಈತ್ ಎಂದಿರುತ್ತದೆ. "ಸಿಚಿವೃದ್ಧಿಃ ಪರಸ್ಮೈಪದೇಷು" ಎಂಬುದರಿಂದ

'ಯು' ನಲ್ಲಿರುವ 'ಉ' ಕಾರಕ್ಕೆ ವೃದ್ಧಿ ಬಂದು ಅಯೌ+ಇಸ್+ಈತ್ ಎಂದಿದ್ದಾಗ, "ಇಟ ಈಟಿ" ಎಂಬುದರಿಂದ 'ಸ್' ಕಾರಕ್ಕೆ ಲೋಪ ಬಂದು ಸವರ್ಣದೀರ್ಘದಿಂದ ಅಯೌ+ಈತ್ ಎಂದಿದ್ದಾಗ, 'ಏಚೋಽಯವಾಯಾವಃ" ಎಂಬುದರಿಂದ 'ಆವ್' ಆದೇಶ ಬಂದು ಅಯಾವೀತ್ ಎಂದು ರೂಪವು ಸಿದ್ಧವಾಗುತ್ತದೆ.

ರೂಪಗಳು: ಅಯಾವೀತ್, ಅಯಾವಿಷ್ಟಾಮ್, ಅಯಾವಿಷುಃ। ಅಯಾವೀಃ, ಅಯಾವಿಷ್ಟಮ್, ಅಯಾವಿಷ್ಟ। ಅಯಾವಿಷಮ್, ಅಯಾವಿಷ್ವ, ಅಯಾವಿಷ್ಮ।

**ಲೃಙ್**: ರೂಪಗಳು: ಅಯವಿಷ್ಯತ್, ಅಯಾವಿಷ್ಯತಾಮ್, ಅಯಾವಿಷ್ಯನ್। ಅಯವಿಷ್ಯಃ, ಅಯವಿಷ್ಯತಮ್, ಅಯವಿಷ್ಯತ। ಅಯವಿಷ್ಯಮ್, ಅಯವಿಷ್ಯಾವ, ಅಯವಿಷ್ಯಾಮ।

4. ಯಾ ಪ್ರಾಪಣೇ- (ಹೋಗುವುದು) ಈ ಧಾತುವು 'ಅನಿಟ್' ಆಗಿದೆ.

**ಲಟ್**: ರೂಪಗಳು: ಯಾತಿ, ಯಾತಃ, ಯಾನ್ತಿ। ಯಾಸಿ, ಯಾಥಃ, ಯಾಥ। ಯಾಮಿ, ಯಾವಃ, ಯಾಮಃ।ಲಿಟ್:ರೂಪಗಳು: ಯಯೌ, ಯಯತುಃ, ಯಯುಃ। ಯಯಿಥ/ಯಯಾಥ, ಯಯಥುಃ, ಯಯ। ಯಯೌ, ಯಯಿವ, ಯಯಿಮ।

**ಲುಟ್**: ರೂಪಗಳು: ಯಾತಾ, ಯಾತಾರೌ, ಯಾತಾರಃ। ಯಾತಾಸಿ, ಯಾತಾಸ್ಥಃ, ಯಾತಾಸ್ಥ। ಯಾತಾಸ್ಮಿ, ಯಾತಾಸ್ವಃ, ಯಾತಾಸ್ಮಃ।

**ಲೃಟ್**: ಯಾಸ್ಯತಿ, ಯಾಸ್ಯತಃ, ಯಾಸ್ಯನ್ತಿ। ಯಾಸ್ಯಸಿ, ಯಾಸ್ಯಥಃ, ಯಾಸ್ಯಥ। ಯಾಸ್ಯಾಮಿ, ಯಸ್ಯಾವಃ, ಯಾಸ್ಯಾಮಃ।

**ಲೋಟ್**: ರೂಪಗಳು: ಯಾತು/ಯಾತಾತ್, ಯಾತಾಮ್, ಯಾನ್ತು। ಯಾಹಿ/ ಯಾತಾತ್, ಯಾತಮ್, ಯಾತ। ಯಾನಿ, ಯಾವ, ಯಾಮ।

**(ವೈಕಲ್ಪಿಕವಾಗಿ ಜುಸ್ ಆದೇಶವನ್ನು ವಿಧಿಸುವ ಸೂತ್ರ)**

**ಲಙ್**:

**ಸೂತ್ರ- ೫೬೮.ಲಙಃ ಶಾಕಟಾಯನಸ್ಯೈವ (೩.೪.೧೧೧)**

ವೃತ್ತಿಃ-ಆದಂತಾತ್ ಪರಸ್ಯ ಲಙಃ ಝೇಃ ಜುಸ ವಾ ಸ್ಯಾತ್ । ಅ0ಯುಃ, ಅ0ಯಾನ್। 0ಯಾ0ಯಾತ್। 0ಯಾ0ಯಾತಾಮ್ ।0ಯಾ0ಯುಃ। 0ಯಾ0ಯಾತ್। 0ಯಾ0ಯಾಸ್ತಾಮ್। 0ಯಾ0ಯಾಸುಃ। ಅ0ಯಾಸೀತ್। ಅ0ಯಾಸ್ಯತ್। ವಾ ಗತಿಗಂಧನ0ಯೋಃ। 5 । ಭಾ ದೀಪ್ತೌ। 6 । ಷ್ಣಾ ಶೌಚೇ। 7 । ಶ್ರಾ ಪಾಕೇ । 8 । ದ್ರಾ ಕುತ್ಸಾ0ಯಾಂ ಗತೌ । 9 । ಪ್ಸಾ ಭಕ್ಷಣೇ। 10 ರಾ ದಾನೇ । 11 । ಲಾ ಆದಾನೇ । 12 ದಾಪ್ ಲವನೇ ।13 । ಪಾ ರಕ್ಷಣೇ। 14। ಖ್ಯಾ ಪ್ರಕಥನೇ । 15 । ಅ0ಯಂ ಸಾರ್ವಧಾತುಕೇ ಏವ ಪ್ರಯೋಕ್ತವ್ಯಃ । ವಿದ ಜ್ಞಾನೇ। 16।

ಪ. ಛೇ. - ಲಙಃ, ಶಾಕಟಾ0ಯನಸ್ಯ, ಏವ।

ಅ. ವೃ.- "ಆತಃ" ಮತ್ತು "ಝೇರ್ಜುಸ್"-ಎರಡು ಸೂತ್ರಗಳು ಅನುವೃತ್ತವಾಗುತ್ತವೆ.

ಅರ್ಥ- ಆದನ್ತವಾದ ಧಾತುವಿನ ನಂತರ 'ಲಙ್' 'ಲ್' ಕಾರದ 'ಝಿ' ಪ್ರತ್ಯಯಕ್ಕೆ ವೈಕಲ್ಪಿಕವಾಗಿ 'ಜುಸ್(ಉಸ್)' ಆದೇಶವು ಬರುತ್ತದೆ.

ಲಙ್: ಉದಾ– ಅಯಾತ್, ಅಯಾತಾಮ್, ಅಯುಃ/ಅಯಾನ್ – 'ಲಙ್' 'ಲ್' ಕಾರದಲ್ಲಿ ಪ್ರಥಮಪುರುಷ ಏಕವಚನ, ದ್ವಿವಚನಗಳಲ್ಲಿ 'ಯಾ' ಧಾತುವಿನ ನಂತರ 'ತಿಪ್' ಬಂದಾಗ ಧಾತುವಿಗೆ ಅಡಾಗಮ(ಅ) ಬಂದು, ಅಯಾತ್ ಎಂದೂ, ತಸ್ ಬಂದಾಗ, ತಿಙನ್ತೇ ಅದಾದಿ (ಪರಸ್ಮೈ ಪದದ ರೂಪಗಳು)

ಅಯಾತಾಮ್ ಎಂದೂ ರೂಪಗಳಾಗುತ್ತವೆ. 'ಝಿ' ಪ್ರತ್ಯಯಕ್ಕೆ ಪ್ರಕೃತ ಸೂತ್ರದಿಂದ ವೈಕಲ್ಪಿಕವಾಗಿ 'ಜುಸ್(ಉಸ್)' ಆದೇಶ ಬಂದು ಅಯಾ+ಉಸ್ ಎಂದಾಗಿದೆ. 'ಆ' ಕಾರ, 'ಉ' ಕಾರಗಳ ಸ್ಥಾನದಲ್ಲಿ "ಉಸ್ಯಪದಾನ್ತಾತ್" ಎಂಬ ಸೂತ್ರದಿಂದ ಪರರೂಪ ಬಂದು ಅಯುಸ್ ಎಂದಾಗಿ ರುತ್ವ–ವಿಸರ್ಗಗಳಿಂದ ಅಯುಃ ಎಂದು ರೂಪವಾಗಿದೆ. ವೈಕಲ್ಪಿಕವಾಗಿ 'ಉಸ್' ಬಾರದ ಪಕ್ಷದಲ್ಲಿ ಅನ್ತ್ ಆದೇಶ ಬಂದು, 'ತ್' ಕಾರಕ್ಕೆ "ಸಂಯೋಗಾನ್ತಸ್ಯ ಲೋಪಃ" ಕಾರಣದಿಂದ ಲೋಪ ಬಂದು ಅಯಾನ್ ಎಂದಾಗುತ್ತದೆ.

ರೂಪಗಳು: ಅಯಾತ್, ಅಯಾತಾಮ್, ಅಯುಃ/ಅಯಾನ್। ಅಯಾಃ, ಅಯಾತಮ್, ಅಯಾತ। ಅಯಾಮ್, ಅಯಾವ, ಅಯಾಮ।

**ವಿಧಿಲಿಙ್**: ರೂಪಗಳು: ಯಾಯಾತ್, ಯಾಯಾತಾಮ್, ಯಾಯುಃ। ಯಾಯಾಃ, ಯಾಯಾತಮ್, ಯಾಯಾತ। ಯಾಯಾಮ್, ಯಾಯಾವ, ಯಾಯಾಮ।

**ಆಶೀರ್ಲಿಙ್**: ರೂಪಗಳು: ಯಾಯಾತ್, ಯಾಯಾಸ್ತಾಮ್, ಯಾಯಾಸುಃ,। ಯಾಯಾಃ, ಯಾಯಾಸ್ತಮ್, ಯಾಯಾಸ್ತ। ಯಾಯಾಸಮ್, ಯಾಯಾಸ್ವ, ಯಾಯಾಸ್ಮ।

**ಲುಙ್**: "ಯಮ–ರಮನಮಾತಾಂ ಸಕ್ ಚ" ಎಂಬ ಸೂತ್ರದಿಂದ 'ಇಟ್' ಮತ್ತು 'ಸಕ್' ಗಳು ಬಂದು ಕೆಳಗಿನ ರೂಪಗಳು ಸಿದ್ಧವಾಗುತ್ತವೆ.

ರೂಪಗಳು: ಅಯಾಸೀತ್, ಅಯಾಸಿಷ್ಟಾಮ್, ಅಯಾಸಿಷುಃ। ಅಯಾಸೀಃ, ಅಯಾಸಿಷ್ಟಮ್, ಅಯಾಸಿಷ್ಟ। ಅಯಾಸಿಷಮ್, ಅಯಾಸಿಷ್ವ, ಅಯಾಸಿಷ್ಮ।

**ಲೃಙ್**: ರೂಪಗಳು: ಅಯಾಸ್ಯತ್, ಅಯಾಸ್ಯತಾಮ್, ಅಯಾಸ್ಯನ್। ಅಯಾಸ್ಯಃ, ಅಯಾಸ್ಯತಮ್, ಅಯಾಸ್ಯತ। ಅಯಾಸ್ಯಮ್, ಅಯಾಸ್ವ, ಅಯಾಸ್ಮ।

5. ವಾ ಗತಿಗಂಧನಯೋಃ– (ಗತ್ಯರ್ಥಕ) ಈ ಧಾತುವು ಗತ್ಯರ್ಥಕವಾಗಿದೆ ಮತ್ತು ಗಂಧನ ಎಂದರೆ, ಸೂಚಿಸುವುದು ಮತ್ತು ಹಿಂಸಿಸುವುದು, ಉತ್ಸಾಹಗೊಳಿಸುವುದು ಮೊದಲಾದ ಅರ್ಥಗಳಲ್ಲಿದೆ.

**ಲಟ್**: ರೂಪಗಳು: ವಾತಿ, ವಾತಃ, ವಾನ್ತಿ।ವಾಸಿ, ವಾಥಃ, ವಾಥ। ವಾಮಿ, ವಾವಃ, ವಾಮಃ।

**ಲಿಟ್**: ರೂಪಗಳು: ವವೌ, ವವತುಃ, ವವುಃ। ವವಿಥ/ವವಾಥ, ವವಥುಃ, ವವ। ವವೌ, ವವಿವ, ವವಿಮ।

**ಲುಟ್**: ರೂಪಗಳು: ವಾತಾ, ವಾತಾರೌ, ವಾತಾರಃ। ವಾತಾಸಿ, ವಾತಾಸ್ಥಃ, ವಾತಾಸ್ಥ। ವಾತಾಸ್ಮಿ, ವಾತಾಸ್ವಃ, ವಾತಾಸ್ಮಃ।

**ಲೃಟ್**: ರೂಪಗಳು: ವಾಸ್ಯತಿ, ವಾಸ್ಯತಃ, ವಾಸ್ಯನ್ತಿ। ವಾಸ್ಯಸಿ, ವಾಸ್ಯಥಃ, ವಾಸ್ಯಥ।

ವಾಸ್ಯಾಮಿ, ವಾಸ್ಯಾವಃ, ವಾಸ್ಯಾಮಃ।

**ಲೋಟ್**: ರೂಪಗಳು: ವಾತು/ವಾತಾತ್,ವಾತಾಮ್, ವಾನ್ತು। ವಾಹಿ/ವಾತಾತ್, ವಾತಮ್, ವಾತ। ವಾನಿ, ವಾವ, ವಾಮ।

**ಲಙ್**: ರೂಪಗಳು: ಅವಾತ್, ಅವಾತಾಮ್, ಅವುಃ/ಅವಾನ್। ಅವಾಃ, ಅವಾತಮ್, ಅವಾತ। ಅವಾಮ್, ಅವಾವ, ಅವಾಮ।

**ವಿಧಿಲಿಙ್**: ರೂಪಗಳು: ವಾಯಾತ್, ವಾಯಾತಾಮ್, ವಾಯುಃ।ವಾಯಾಃ, ವಾಯಾತಮ್, ವಾಯಾತ। ವಾಯಾಮ್, ವಾಯಾವ, ವಾಯಾಮ।

**ಆಶೀರ್ಲಿಙ್**: ರೂಪಗಳು: ವಾಯಾತ್, ವಾಯಾಸ್ತಾಮ್, ವಾಯಾಸುಃ। ವಾಯಾಃ, ವಾಯಾಸ್ತಮ್, ವಾಯಾಸ್ತ। ವಾಯಾಸಮ್, ವಾಯಾಸ್ವ, ವಾಯಾಸ್ಮ।

ಲುಙ್: ರೂಪಗಳು: ಅವಾಸೀತ್, ಅವಾಸಿಷ್ಟಾಮ್, ಅವಾಸಿಷುಃ। ಅವಾಸೀಃ, ಅವಾಸಿಷ್ಟಮ್, ಅವಾಸಿಷ್ಟ। ಅವಾಸಿಷಮ್, ಅವಾಸಿಷ್ವ, ಅವಾಸಿಷ್ಮ।

**ಲೃಙ್**: ರೂಪಗಳು: ಅವಾಸ್ಯತ್, ಅವಾಸ್ಯತಾಮ್, ಅವಾಸ್ಯನ್। ಅವಾಸ್ಯಃ, ಅವಾಸ್ಯತಮ್, ಅವಾಸ್ಯತ। ಅವಾಸ್ಯಮ್, ಅವಾಸ್ಯಾವ, ಅವಾಸ್ಯಾಮ।

6. ಭಾ ದೀಪ್ತೌ(ಹೊಳೆಯುವುದು) ಇದು 'ವಾ' ಧಾತುವಿನಂತೆಯೇ ಇದೆ. ಆದ್ದರಿಂದ 'ವಾ' ಧಾತುವಿನಂತೆಯೇ ರೂಪಗಳನ್ನು ಹೊಂದುತ್ತದೆ.

**ಲಟ್**: ರೂಪಗಳು: ಭಾತಿ, ಭಾತಃ, ಭಾನ್ತಿ।ಭಾಸಿ, ಭಾಥಃ, ಭಾಥ।ಭಾಮಿ, ಭಾವಃ, ಭಾಮಃ।

**ಲಿಟ್**: ರೂಪಗಳು: ಬಭೌ, ಬಭತುಃ, ಬಭುಃ। ಬಭಿಥ/ಬಭಾಥ, ಬಭಥುಃ, ಬಭ। ಬಭೌ, ಬಭಿವ, ಬಭಿಮ।

**ಲುಟ್**: ರೂಪಗಳು: ಭಾತಾ, ಭಾತಾರೌ, ಭಾತಾರಃ। ಭಾತಾಸಿ, ಭಾತಾಸ್ಥಃ, ಭಾತಾಸ್ಥ। ಭಾತಾಸ್ಮಿ, ಭಾತಾಸ್ವಃ, ಭಾತಾಸ್ಮಃ।

**ಲೃಟ್**: ರೂಪಗಳು: ಭಾಸ್ಯತಿ, ಭಾಸ್ಯತಃ, ಭಾಸ್ಯನ್ತಿ। ಭಾಸ್ಯಸಿ, ಭಾಸ್ಯಥಃ, ಭಾಸ್ಯಥ। ಭಾಸ್ಯಾಮಿ, ಭಾಸ್ಯಾವಃ, ಭಾಸ್ಯಾಮಃ।

**ಲೋಟ್**: ರೂಪಗಳು: ಭಾತು/ಭಾತಾತ್, ಭಾತಾಮ್, ಭಾನ್ತು। ಭಾಹಿ/ಭಾತಾತ್, ಭಾತಮ್, ಭಾತ। ಭಾನಿ, ಭಾವ, ಭಾಮ।

**ಲಙ್**: ರೂಪಗಳು ಅಭಾತ್, ಅಭಾತಾಮ್, ಅಭುಃ/ಅಭಾನ್। ಅಭಾಃ, ಅಭಾತಮ್, ಅಭಾತ। ಅಭಾಮ್, ಅಭಾವ, ಅಭಾಮ।

**ವಿಧಿಲಿಙ್**: ರೂಪಗಳು: ಭಾಯಾತ್, ಭಾಯಾತಾಮ್, ಭಾಯುಃ। ಭಾಯಾಃ, ಭಾಯಾತಮ್, ಭಾಯಾತ। ಭಾಯಾಮ್, ಭಾಯಾವ, ಭಾಯಾಮ।

**ಆಶೀರ್ಲಿಙ್**: ರೂಪಗಳು: ಭಾಯಾತ್, ಭಾಯಾಸ್ತಾಮ್, ಭಾಯಾಸುಃ। ಭಾಯಾಃ, ಭಾಯಾಸ್ತಮ್, ಭಾಯಾಸ್ತ।ಭಾಯಾಸಮ್, ಭಾಯಾಸ್ವ, ಭಾಯಾಸ್ಮ।

**ಲುಙ್**: ರೂಪಗಳು: ಅಭಾಸೀತ್, ಅಭಾಸಿಷ್ಟಾಮ್, ಅಭಾಸಿಷುಃ। ಅಭಾಸೀಃ, ಅಭಾಸಿಷ್ಟಮ್, ಅಭಾಸಿಷ್ಟ। ಅಭಾಸಿಷಮ್, ಅಭಾಸಿಷ್ವ, ಅಭಾಸಿಷ್ಮ।

**ಲೃಙ್**: ರೂಪಗಳು: ಅಭಾಸ್ಯತ್, ಅಭಾಸ್ಯತಾಮ್, ಅಭಾಸ್ಯನ್। ಅಭಾಸ್ಯಃ, ಅಭಾಸ್ಯತಮ್, ಅಭಾಸ್ಯತ। ಅಭಾಸ್ಯಮ್, ಅಭಾಸ್ಯಾವ, ಅಭಾಸ್ಯಾಮ।

7.ಷ್ಣಾ ಶೌಚೇ-(ಸ್ನಾನಮಾಡುವುದು) ಈ ಧಾತುವಿನ ಆದಿಯಲ್ಲಿರುವ 'ಷ್' ಕಾರಕ್ಕೆ "ಧಾತ್ವಾದೇಃ ಷಃ ಸಃ"ಎಂಬ ಸೂತ್ರದಿಂದ 'ಸ್' ಕಾರವು ಆದೇಶವಾಗಿ ಬರುತ್ತದೆ. ಮತ್ತು 'ನಿಮಿತ್ತಾಪಾಯೇ ನೈಮಿತ್ತಿಕಸ್ಯಾಪ್ಯಪಾಯಃ' ಎಂಬ ನಿಯಮದಿಂದ 'ಣ್' ಕಾರಕ್ಕೂ 'ನ್' ಕಾರವು ಬರುತ್ತದೆ.

ಈ ಧಾತುವೂ ಸಹ 'ವಾ' ಧಾತುವಿನಂತೆಯೇ ರೂಪಗಳನ್ನು ಪಡೆಯುತ್ತದೆ.

**ಲಟ್**: ರೂಪಗಳು: ಸ್ನಾತಿ, ಸ್ನಾತಃ, ಸ್ನಾನ್ತಿ। ಸ್ನಾಸಿ, ಸ್ನಾಥಃ, ಸ್ನಾಥ। ಸ್ನಾಸ್ಮಿ, ಸ್ನಾಸ್ವಃ, ಸ್ನಾಸ್ಮಃ।

**ಲಿಟ್**: ಈ 'ಲ್' ಕಾರದಲ್ಲಿ ಧಾತುವು ದ್ವಿತ್ವವನ್ನು ಹೊಂದಿ ಸ್ನಾ ಸ್ನಾ ಎಂದಾದಮೇಲೆ ಹಲಾದಿಶೇಷದಿಂದ ಸಾಸ್ನಾ+ತಿಪ್ ಎಂದಿದ್ದಾಗ, 'ತಿಪ್' ಗೆ ಣಲ್(ಅ) ಬಂದು ಸಾಸ್ನಾ+ಅ ಎಂದಾಗುತ್ತದೆ. 'ಣಲ್(ಅ)' ಗೆ ವೃದ್ಧಿ ಬಂದು ಸಾಸ್ನಾ+ಔ ಎಂದಿದ್ದಾಗ, ಅಭ್ಯಾಸದ 'ಆ' ಕಾರಕ್ಕೆ ಹ್ರಸ್ವ ಬಂದು ಸಸ್ನಾ+ಔ=ಸಸ್ನೌ ಎಂದು ರೂಪವಾಗುತ್ತದೆ.

ರೂಪಗಳು: ಸಸ್ನೌ, ಸಸ್ನತುಃ, ಸಸ್ನುಃ। ಸಸ್ನಿಥ/ಸಸ್ನಾಥ, ಸಸ್ನಥುಃ, ಸಸ್ನ। ಸಸ್ನೌ, ಸಸ್ನಿವ, ಸಸ್ನಿಮ।

**ಲುಟ್**: ರೂಪಗಳು: ಸ್ನಾತಾ, ಸ್ನಾತಾರೌ, ಸ್ನಾತಾರಃ। ಸ್ನಾತಾಸಿ, ಸ್ನಾತಾಸ್ಥಃ, ಸ್ನಾತಾಸ್ಥ। ಸ್ನಾತಾಸ್ಮಿ, ಸ್ನಾತಾಸ್ವಃ, ಸ್ನಾತಾಸ್ಮಃ।

**ಲೃಟ್**: ರೂಪಗಳು: ಸ್ನಾಸ್ಯತಿ, ಸ್ನಾಸ್ಯತಃ, ಸ್ನಾಸ್ಯನ್ತಿ। ಸ್ನಾಸ್ಯಸಿ, ಸ್ನಾಸ್ಯಥಃ, ಸ್ನಾಸ್ಯಥ। ಸ್ನಾಸ್ಯಾಮಿ, ಸ್ನಾಸ್ಯಾವಃ, ಸ್ನಾಸ್ಯಾಮಃ।

**ಲೋಟ್**: ರೂಪಗಳು: ಸ್ನಾತು/ಸ್ನಾತಾತ್, ಸ್ನಾತಾಮ್, ಸ್ನಾನ್ತು। ಸ್ನಾಹಿ/ಸ್ನಾತಾತ್, ಸ್ನಾತಮ್, ಸ್ನಾತ। ಸ್ನಾನಿ, ಸ್ನಾವ, ಸ್ನಾಮ।

ಲಙ್:ರೂಪಗಳು: ಅಸ್ನಾತ್, ಅಸ್ನಾತಾಮ್, ಅಸ್ನುಃ/ಅಸ್ನಾನ್। ಅಸ್ನಾಃ, ಅಸ್ನಾತಮ್, ಅಸ್ನಾತ। ಅಸ್ನಾಮ್, ಅಸ್ನಾವ, ಅಸ್ನಾಮ।

**ವಿಧಿಲಿಙ್**: ರೂಪಗಳು: ಸ್ನಾಯಾತ್, ಸ್ನಾಯಾತಾಮ್, ಸ್ನಾಯುಃ। ಸ್ನಾಯಾಃ, ಸ್ನಾಯಾತಮ್, ಸ್ನಾಯಾತ। ಸ್ನಾಯಾಮ್, ಸ್ನಾಯಾವ, ಸ್ನಾಯಾಮ।

**ಆಶೀರ್ಲಿಙ್**: ರೂಪಗಳು– ಸ್ನಾಯಾತ್, ಸ್ನಾಯಾಸ್ತಾಮ್, ಸ್ನಾಯಾಸುಃ। ಸ್ನಾಯಾಃ, ಸ್ನಾಯಾಸ್ತಮ್, ಸ್ನಾಯಾಸ್ತ। ಸ್ನಾಯಾಸಮ್,ಸ್ನಾಯಾಸ್ವ, ಸ್ನಾಯಾಸ್ಮ।

**ಲುಙ್**: ರೂಪಗಳು: ಅಸ್ನಾಸೀತ್, ಅಸ್ನಾಸಿಷ್ಟಾಮ್, ಅಸ್ನಾಸಿಷುಃ। ಅಸ್ನಾಸೀಃ, ಅಸ್ನಾಸಿಷ್ಟಮ್, ಅಸ್ನಾಸಿಷ್ಟ। ಅಸ್ನಾಸಿಷಮ್, ಅಸ್ನಾಸಿಷ್ವ, ಅಸ್ನಾಸಿಷ್ಮ।

**ಲೃಙ್**: ರೂಪಗಳು: ಅಸ್ನಾಸ್ಯತ್, ಅಸ್ನಸ್ಯತಾಮ್, ಅಸ್ನಾಸ್ಯನ್। ಅಸ್ನಾಸ್ಯಃ, ಅಸ್ನಾಸ್ಯತಮ್, ಅಸ್ನಾಸ್ಯತ। ಅಸ್ನಾಸ್ಯಮ್, ಅಸ್ನಾಸ್ಯಾವ, ಅಸ್ನಾಸ್ಯಾಮ।

7. ಶ್ರಾ- ಪಾಕೇ(ಅಡಿಗೆ ಮಾಡುವುದು) ಈ ಧಾತುವು ಬೇಯಿಸುವುದು ಎಂಬ ಅರ್ಥದಲ್ಲಿ ಅದು ಸಕರ್ಮಕ. ಆದರೆ ಪಕ್ವವಾಗುವುದು ಎಂಬ ಅರ್ಥದಲ್ಲಿ ಅಕರ್ಮಕ ವಾಗುತ್ತದೆ. ಇದರ ಎಲ್ಲ ಪ್ರಕ್ರಿಯೆಯು 'ವಾ' ಧಾತುವಿನಂತೆಯೇ ಇರುವುದು. ಆದರೆ ಆಶೀರ್ಲಿಙ್ ನಲ್ಲಿ ಮಾತ್ರ "ವಾನ್ಯಸ್ಯ ಸಂಯೋಗಾದೇಃ" ಎಂಬ ಸೂತ್ರದಿಂದ ವೈಕಲ್ಪಿಕವಾಗಿ 'ಏತ್ವ' ಬಂದು ಎರಡೆರಡು ರೂಪಗಳು ಸಿದ್ಧವಾಗುತವೆ.

**ಲಟ್**: ರೂಪಗಳು: ಶ್ರಾತಿ, ಶ್ರಾತಃ, ಶ್ರಾನ್ತಿ। ಶ್ರಾಸಿ, ಶ್ರಾಥಃ, ಶ್ರಾಥ। ಶ್ರಾಮಿ, ಶ್ರಾವಃ, ಶ್ರಾಮಃ।

**ಲಿಟ್**: ರೂಪಗಳು: ಶಶ್ರೌ, ಶಶ್ರತುಃ, ಶಶ್ರುವುಃ। ಶಶ್ರಿಥ/ಶಶ್ರಾಥ ಶಶ್ರಥುಃ, ಶಶ್ರಥ। ಶಶ್ರೌ, ಶಶ್ರಿವ, ಶಶ್ರಿಮ।

**ಲುಟ್**: ರೂಪಗಳು ಶ್ರಾತಾ, ಶ್ರಾತಾರೌ, ಶ್ರಾತಾರಃ। ಶ್ರಾತಾಸಿ, ಶ್ರಾತಾಸ್ಥಃ, ಶ್ರಾತಾಸ್ಥ। ಶ್ರಾತಾಸ್ಮಿ, ಶ್ರಾತಾಸ್ವಃ, ಶ್ರಾತಾಸ್ಮಃ।

**ಲೃಟ್**: ರೂಪಗಳು: ಶ್ರಾಸ್ಯತಿ, ಶ್ರಾಸ್ಯತಃ, ಶ್ರಾಸ್ಯನ್ತಿ। ಶ್ರಾಸ್ಯಸಿ, ಶ್ರಾಸ್ಯಥಃ, ಶ್ರಾಸ್ಯಥ। ಶ್ರಾಸ್ಯಾಮಿ, ಶ್ರಾಸ್ಯಾವಃ, ಶ್ರಾಸ್ಯಾಮಃ।

ಲೋಟ್:ರೂಪಗಳು: ಶ್ರಾತು/ಶ್ರಾತಾತ್, ಶ್ರಾತಾಮ್, ಶ್ರಾನ್ತು। ಶ್ರಾಹಿ/ಶ್ರಾತಾತ್, ಶ್ರಾತಮ್, ಶ್ರಾತ। ಶ್ರಾನಿ, ಶ್ರಾವ, ಶ್ರಾಮ।

**ಲಙ್**: ರೂಪಗಳು: ಅಶ್ರಾತ್, ಅಶ್ರಾತಾಮ್, ಅಶ್ರುಃ/ಅಶ್ರಾನ್। ಅಶ್ರಾಃ, ಅಶ್ರಾತಮ್, ಅಶ್ರಾತ।ಅಶ್ರಾಮ್, ಅಶ್ರಾವ, ಅಶ್ರಾಮ।

**ವಿಧಿಲಿಙ್**: ರೂಪಗಳು: ಶ್ರಾಯಾತ್, ಶ್ರಾಯಾತಾಮ್, ಶ್ರಾಯುಃ। ಶ್ರಾಯಾಃ, ಶ್ರಾಯಾತಮ್, ಶ್ರಾಯಾತ। ಶ್ರಾಯಾಮ್, ಶ್ರಾಯಾವ, ಶ್ರಾಯಾಮ।

**ಆಶೀರ್ಲಿಙ್**: ರೂಪಗಳು:

1. ಏತ್ವ ಬಂದ ಪಕ್ಷದಲ್ಲಿ; ಶ್ರೇಯಾತ್, ಶ್ರೇಯಾಸ್ತಾಮ್, ಶ್ರೇಯಾಸುಃ। ಶ್ರೇಯಾಃ, ಶ್ರೇಯಾಸ್ತಮ್, ಶ್ರೇಯಾಸ್ತ। ಶ್ರೇಯಾಸಮ್, ಶ್ರೇಯಾಸ್ವ, ಶ್ರೇಯಾಸ್ಮ।

2. ಏತ್ವ ಬಾರದ ಪಕ್ಷದಲ್ಲಿ: ಶ್ರಾಯಾತ್, ಶ್ರಾಯಾಸ್ತಾಮ್, ಶ್ರಾಯಾಸುಃ। ಶ್ರಾಯಾಃ, ಶ್ರಾಯಾಸ್ತಮ್, ಶ್ರಾಯಾಸ್ತ। ಶ್ರಾಯಾಸಮ್, ಶ್ರಾಯಾಸ್ವ, ಶ್ರಾಯಾಸ್ಮ।

**ಲುಙ್**: ರೂಪಗಳು: ಅಶ್ರಾಸೀತ್, ಅಶ್ರಾಸಿಷ್ಟಾಮ್, ಅಶ್ರಾಸಿಷುಃ। ಅಶ್ರಾಸೀಃ, ಅಶ್ರಾಸಿಷ್ಟಮ್, ಅಶ್ರಾಸಿಷ್ಟ।ಅಶ್ರಾಸಿಷಮ್, ಅಶ್ರಾಸಿಷ್ವ, ಅಶ್ರಾಸಿಷ್ಮ।

**ಲೃಙ್**: ರೂಪಗಳು: ಅಶ್ರಾಸ್ಯತ್, ಅಶ್ರಾಸ್ಯತಾಮ್, ಅಶ್ರಾಸ್ಯನ್। ಅಶ್ರಾಸ್ಯಃ, ಅಶ್ರಾಸ್ಯತಮ್, ಅಶ್ರಾಸ್ಯತ। ಅಶ್ರಾಸ್ಯಮ್, ಅಶ್ರಾಸ್ಯಾವ, ಅಶ್ರಾಸ್ಯಾಮ।

8. ದ್ರಾ-ಕುತ್ಸಾಯಾಮ್ ಗತೌ(ಕೆಟ್ಟರೀತಿಯಲ್ಲಿ ಪ್ರವರ್ತಿಸುವುದು) – ಈ ಧಾತುವು

'ಶ್ರಾ' ಧಾತುವಿನಂತೆಯೇ ರೂಪಗಳನ್ನು ಪಡೆಯುತ್ತದೆ. (ಒಂದೊಂದು ರೂಪಗಳನ್ನು ಮಾತ್ರ ಕೊಡಲಾಗಿದೆ).

**ಲಟ್**: ದ್ರಾತಿ, ಲಿಟ್:ದದ್ರೌ, ಲುಟ್: ದ್ರಾತಾ' ಲೃಟ್: ದಾಸ್ಯತಿ, ಲೋಟ್: ದ್ರಾತು/ ದ್ರಾತಾತ್, ಲಙ್: ಅದ್ರಾತ್, ವಿಧಿಲಿಙ್: ದ್ರಾಯಾತ್, ಆಶೀರ್ಲಿಙ್: ದ್ರೇಯಾತ್/ ದ್ರಾಯಾತ್, ಲುಙ್: ಅದ್ರಾಸೀತ್, ಲೃಙ್: ಅದ್ರಾಸ್ಯತ್.

9. ಪ್ಸಾ– ಭಕ್ಷಣೇ (ತಿನ್ನುವುದು) – (ಒಂದೊಂದು ರೂಪಗಳನ್ನು ಮಾತ್ರ ಕೊಡಲಾಗಿದೆ).

ರೂಪಗಳು: ಲಟ್: ಪ್ಸಾತಿ, ಲಿಟ್: ಪಪ್ಸೌ, ಲುಟ್: ಪ್ಸಾತಾ, ಲೃಟ್: ಪ್ಸಾಸ್ಯತಿ, ಲೋಟ್: ಪ್ಸಾತು/ಪ್ಸಾತಾತ್, ಲಙ್; ಅಪ್ಸಾತ್, ವಿಧಿಲಿಙ್: ಪ್ಸಾಯಾತ್, ಆಶೀರ್ಲಿಙ್: ಪ್ಸೇಯಾತ್/ಪ್ಸಾಯಾತ್, ಲುಙ್; ಅಪ್ಸಾಸೀತ್, ಲೃಙ್: ಅಪ್ಸಾಸ್ಯತ್।

10. ರಾ–ದಾನೇ(ಕೊಡುವುದು) – (ಒಂದೊಂದು ರೂಪಗಳನ್ನು ಮಾತ್ರ ಕೊಡಲಾಗಿದೆ).

ರೂಪಗಳು– ಲಟ್: ರಾತಿ, ಲಿಟ್: ರರೌ, ಲುಟ್: ರಾತಾ, ಲೃಟ್: ರಾಸ್ಯತಿ, ಲೋಟ್: ರಾತು/ರಾತಾತ್, ಲಙ್; ಅರಾತ್, ವಿಧಿಲಿಙ್: ರಾಯಾತ್, ಆಶೀರ್ಲಿಙ್: ರಾಯಾತ್, ಲುಙ್; ಅರಾಸೀತ್, ಲೃಙ್: ಅರಾಸ್ಯತ್।

11. ಲಾ–ಆದಾನೇ(ಸ್ವೀಕರಿಸುವುದು) – (ಒಂದೊಂದು ರೂಪಗಳನ್ನು ಮಾತ್ರ ಕೊಡಲಾಗಿದೆ).

ರೂಪಗಳು: ಲಟ್: ಲಾತಿ, ಲಿಟ್: ಲಲೌ, ಲುಟ್: ಲಾತಾ, ಲೃಟ್: ಲಾಸ್ಯತಿ,

**ಲೋಟ್**: ಲಾತು/ಲಾತಾತ್, ಲಙ್; ಅಲಾತ್,

ವಿಧಿಲಿಙ್: ಲಾಯಾತ್, ಆಶೀರ್ಲಿಙ್: ಲಾಯಾತ್, ಲುಙ್; ಅಲಾಸೀತ್, ಲೃಙ್: ಅಲಾಸ್ಯತ್।

12. ದಾಪ್– ಲವನೇ (ತುಂಡು ಮಾಡುವುದು) ಈ ಧಾತುವಿನಲ್ಲಿ 'ದಾ' ಮಾತ್ರ ಉಳಿಯುತ್ತದೆ. (ಒಂದೊಂದು ರೂಪಗಳನ್ನು ಮಾತ್ರ ಕೊಡಲಾಗಿದೆ).

ರೂಪಗಳು: ಲಟ್: ದಾತಿ, ಲಿಟ್: ದದೌ, ಲುಟ್: ದಾತಾ, ಲೃಟ್: ದಾಸ್ಯತಿ

**ಲೋಟ್**: ದಾತು/ದಾತಾತ್, ಲಙ್; ಅದಾತ್

**ವಿಧಿಲಿಙ್**: ದಾಯಾತ್, ಆಶೀರ್ಲಿಙ್: ದಾಯಾತ್, ಲುಙ್; ಅದಾಸೀತ್, ಲೃಙ್: ಅದಾಸ್ಯತ್।

13. ಪಾ– ರಕ್ಷಣೇ(ಪಾಲಿಸುವುದು)– ಈ ಧಾತುವಿನಲ್ಲಿ 'ಪಾ' ಮಾತ್ರ ಉಳಿಯುತ್ತದೆ.

ರೂಪಗಳು: ಲಟ್: ಪಾತಿ, ಪಾತಃ, ಪಾನ್ತಿ। ಲಿಟ್: ಪಪೌ, ಪಪತುಃ, ಪಪುಃ। ಲುಟ್: ಪಾತಾ, ಪಾತಾರೌ, ಪಾತಾರಃ। ಲೃಟ್: ಪಾಸ್ಯತಿ, ಪಾಸ್ಯತಃ, ಪಾಸ್ಯನ್ತಿ। ಲೋಟ್: ಪಾತು/ ಪಾತಾತ್, ಪಾತಾಮ್, ಪಾನ್ತು। ಲಙ್; ಅಪಾತ್, ಅಪಾತಾಮ್, ಅಪುಃ। ವಿಧಿಲಿಙ್:

ಪಾಯಾತ್, ಪಾಯಾತಾಮ್, ಪಾಯುಃ। ಆಶೀರ್ಲಿಙ್: ಪಾಯಾತ್, ಪಾಯಾಸ್ತಾಮ್, ಪಾಯಾಸುಃ। ಲುಙ್; ಅಪಾಸೀತ್, ಅಪಾಸಿಷ್ಟಾಮ್, ಅಪಾಶಿಷುಃ। ಲೃಙ್: ಅಪಾಸ್ಯತ್, ಅಪಾಸ್ಯತಾಮ್, ಅಪಾಸ್ಯನ್।

14. ಖ್ಯಾ- ಪ್ರಕಥನೇ(ಹೇಳುವುದು) ಈ ಧಾತುವು ಸಾರ್ವಧಾತುಕ (ಲಟ್, ಲಙ್, ಲಿಙ್, ಲೋಟ್) 'ಲ್' ಕಾರಗಳಲ್ಲಿ ಮಾತ್ರ ಪ್ರಯೋಗಿಸಲ್ಪಡುತ್ತದೆ

ರೂಪಗಳು: ಲಟ್: ಖ್ಯಾತಿ, ಖ್ಯಾತಃ, ಖ್ಯಾನ್ತಿ। ಲೋಟ್: ಖ್ಯಾತು/ಖ್ಯಾತಾತ್, ಖ್ಯಾತಾಮ್, ಖ್ಯಾನ್ತು। ಲಙ್; ಅಖ್ಯಾತ್, ಅಖ್ಯಾತಾಮ್, ಅಖ್ಯುಃ। ವಿಧಿಲಿಙ್: ಖ್ಯಾಯಾತ್, ಖ್ಯಾಯಾತಾಮ್, ಖ್ಯಾಯುಃ।

15. ವಿದ – ಜ್ಞಾನೇ(ತಿಳಿದುಕೊಳ್ಳುವುದು) ಇದರಲ್ಲಿ 'ವಿದ್' ಮಾತ್ರ ಉಳಿಯುತ್ತದೆ.

**(ಣಲ್ ಮೊದಲಾದ ಆದೇಶಗಳನ್ನು ವಿಧಿಸುವ ಸೂತ್ರ)**

**ಸೂತ್ರ- 569.ವಿದೋ ಲಟೋ ವಾ। (3.4.83)**

ವೃತ್ತಿಃ–ವೇತ್ತೇಃ ಲಟಃ ಪರಸ್ಮೈಪದಾನಾಂ ಣಲಾದಯಃ ವಾ ಸ್ಯುಃ। ವೇದ, ವಿದತುಃ ವಿದುಃ। ವೇತ್ಥ, ವಿದಥುಃ, ವಿದ। ವೇದ, ವಿದ್ವ, ವಿದ್ಮ। ಪಕ್ಷೇ–ವೇತ್ತಿ। ವಿತ್ತಃ। ವಿದಂತಿ।

ಪ. ಛೇ. – ವಿದಃ, ಲಟಃ, ವಾ।

ಅರ್ಥ– ವಿದ್ ಧಾತುವಿನ ನಂತರ 'ಲಟ್' ನ ಪರಸ್ಮೈಪದಕ್ಕೆ 'ಣಲ್' ಮೊದಲಾದ ಪ್ರತ್ಯಯಗಳು ವಿಕಲ್ಪದಿಂದ ಬರುತ್ತವೆ. ಈ ಣಲಾದಿ ಪ್ರತ್ಯಯಗಳು ಕೇವಲ 'ವಿದ್' ಧಾತುವಿನ 'ಲಟ್' 'ಲ' ಕಾರಕ್ಕೂ, ಆದೇಶವಾಗಿ ಬರುತ್ತವೆ. ಆದರೆ 'ಲಿಟ್' 'ಲ್' ಕಾರದಲ್ಲಿ ಬರುವ ದ್ವಿತ್ವಾದಿಗಳು ಇರುವುದಿಲ್ಲ.

**ಲಟ್**: ಉದಾ– ವೇದ – ಪ್ರಥಮಪುರುಷ ಏಕವಚನದಲ್ಲಿ 'ವಿದ್' ಧಾತುವಿನ ನಂತರ 'ಲಟ್' ಆದೇಶವಾದ 'ತಿಪ್(ತಿ)' ಬಂದು ಅದಕ್ಕೆ ಅಭಿನವ ಆಖ್ಯಾತ ಪ್ರತ್ಯಯವಾದ 'ಣಲ್(ಅ)' ಆದೇಶ ಬಂದು ನಂತರ ಧಾತುವಿನ ಪರದಲ್ಲಿ 'ಶಪ್(ಅ)' ಬಂದು ಲೋಪವಾದಮೇಲೆ ವಿದ್+ಅ ಎಂದಿರುತ್ತದೆ. "ಪುಗನ್ತ ಲಘೂಪದಸ್ಯ ಚ" ಎಂಬ ಸೂತ್ರದಿಂದ 'ಇ' ಕಾರಕ್ಕೆ ಗುಣ ಬಂದು ವೇದ್+ಅ=ವೇದ–ರೂಪವು ಆಗುತ್ತದೆ.

ಉದಾ– ವೇತ್ಥ – ಮಧ್ಯಮಪುರುಷ ಏಕವಚನದಲ್ಲಿ 'ವಿದ್' ಧಾತುವಿನ ನಂತರ 'ಸಿಪ್(ಸಿ)' ಬಂದು ಅದಕ್ಕೆ ಅಭಿನವ ಆಖ್ಯಾತ ಪ್ರತ್ಯಯವಾದ 'ಥಲ್(ಥ)' ಬಂದು, ವಿದ್+ಥ ಎಂದಿದ್ದಾಗ, ಧಾತುವಿನ 'ಇ' ಕಾರಕ್ಕೆ ಹಿಂದಿನಂತೆಯೇ ಗುಣ ಬಂದು ವೇದ್+ಥ ಎಂದಾಗಿ "ಖರಿಚ" ಎಂಬುದರಿಂದ 'ದ್' ಕಾರಕ್ಕೆ ಚರ್ತ್ವ(ತ್) ಬಂದು ವೇತ್+ಥ=ವೇತ್ಥ ಎಂದು ರೂಪವಾಗುತ್ತದೆ.

ಉದಾ– ವೇದ– ಉತ್ತಮಪುರುಷ ಏಕವಚನದಲ್ಲಿ 'ವಿದ್' ಧಾತುವಿಗೆ 'ಮಿಪ್(ಮಿ) ಬಂದು ಅಭಿನವ ಆಖ್ಯಾತ ಪ್ರತ್ಯಯವಾದ 'ಣಲ್(ಅ)' ಬಂದು ಪ್ರಥಮಪುರುಷ ಏಕವಚನದಲ್ಲಿಯಂತೆಯೇ ವೇದ ಎಂದು ರೂಪವಾಗುತ್ತದೆ.

ರೂಪಗಳು: ವೇದ, ವಿದತುಃ, ವಿದುಃ। ವೇತ್ಥ, ವಿದಥುಃ, ವಿದ। ವೇದ, ವಿದ್ವ, ವಿದ್ಮ।

ವಿವರಣೆ: "ಸಾರ್ವಧಾತುಕಮಪಿತ್" ಎಂಬುದರಿಂದ ಅಪಿತ್ ಆದ ಆರು ಪ್ರತ್ಯಯಗಳಿರುವಾಗ 'ಙಿದ್ವದ್ಭಾವ'ವು ಇರುವುದರಿಂದ ಧಾತುವಿನ 'ಇ' ಕಾರಕ್ಕೆ ಗುಣವು ಬರುವುದಿಲ್ಲ. 'ಣಲ್(ಅ)' ಮೊದಲಾದ ಆದೇಶಗಳು ಬಾರದ ಪಕ್ಷದಲ್ಲಿ ವಿದ್+ತಿ ಎಂದಿದ್ದಾಗ, 'ವ್' ಕಾರೋತ್ತರ 'ಇ' ಕಾರಕ್ಕೆ ಗುಣ ಬಂದು ವೇತ್ತಿ ಎಂದು ರೂಪವಾಗುತ್ತದೆ. ಇದೇ ರೀತಿಯಲ್ಲಿ 'ಸಿಪ್' ಮತ್ತು 'ಮಿಪ್' ಪ್ರತ್ಯಯಗಳಿದ್ದಾಗಲೂ ಗುಣ ಬಂದು ವೇತ್ಸಿ, ವೇದ್ಮಿ ಎಂದು ಮಧ್ಯಮಪುರುಷ ಮತ್ತು ಉತ್ತಮಪುರುಷ ಏಕವಚನಗಳ ರೂಪಗಳಾಗುತ್ತವೆ. ಬೇರೆ ಆರು ಪ್ರತ್ಯಯ (ಅಪಿತ್)ಗಳಿರುವಾಗ ಗುಣವು ಬರುವುದಿಲ್ಲ.

ವೈಕಲ್ಪಿಕ ರೂಪಗಳು: ವೇತ್ತಿ, ವಿತ್ತಃ, ವಿದನ್ತಿ। ವೇತ್ಸಿ, ವಿತ್ಥಃ, ವಿತ್ಥ। ವೇದ್ಮಿ, ವಿದ್ವಃ, ವಿದ್ಮಃ।

**('ಲಿಟ್'ನಲ್ಲಿ ವೈಕಲ್ಪಿಕವಾಗಿ ಆಮ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಲಿಟ್:**

ಸೂತ್ರ– 570.ಉಷ–ವಿದ–ಜಾಗೃಭ್ಯೋನ್ಯತರಸ್ಯಾಮ್ (3.1.38)

ವೃತ್ತಿಃ–ಏಭ್ಯಃ ಲಿಟಿ ಆಮ್ ವಾ ಸ್ಯಾತ್। ವಿದೇಃ ಅದನ್ತತ್ವಪ್ರತಿಜ್ಞಾನಾತ್ ಆಮಿ ನ ಗುಣಃ। ವಿದಾಞ್ಚಕಾರ। ವಿವೇದ। ವೇದಿತಾ। ವೇದಿಷ್ಯತಿ।

ಪ. ಛೇ. – ಉಷ–ವಿದ–ಜಾಗೃಭ್ಯಃ, ಅನ್ಯತರಸ್ಯಾಮ್।

ಅ. ವ್ಯ.– "ಕಾಸ್–ಪ್ರತ್ಯಯಾದಾಮಮಂತ್ರೇ ಲಿಟಿ" ಎಂಬ ಸೂತ್ರದಿಂದ 'ಆಮ್' ಮತ್ತು 'ಲಿಟಿ' ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ– 'ಲಿಟ್' ಪರದಲ್ಲಿದ್ದಾಗ ಉಷ್, ವಿದ್ ಮತ್ತು ಜಾಗೃ ಧಾತುಗಳನಂತರ ವೈಕಲ್ಪಿಕವಾಗಿ 'ಆಮ್' ಪ್ರತ್ಯಯವು ಬರುತ್ತದೆ.

'ಆಮ್' ಪ್ರತ್ಯಯದ ಸಬಂಧದಿಂದ 'ವಿದ್' ಧಾತುವನ್ನು 'ವಿದ' ಎಂದು ಅದನ್ತವಾಗಿ ನಿಪಾತ ಮಾಡಲಾಗಿದೆ.

ಉದಾ– ವಿದಾಞ್ಚಕಾರ (ಅನುಪ್ರಯೋಗ ಲಿಟ್) – ಪ್ರಥಮಪುರುಷ ಏಕವಚನದಲ್ಲಿ 'ವಿದ್' ಧಾತುವಿನ ನಂತರ 'ಲಿಟ್' ಪರದಲ್ಲಿದ್ದಾಗ, ಪ್ರಕೃತ ಸೂತ್ರದಿಂದ 'ಆಮ್' ಮತ್ತು 'ವಿದ್' ಧಾತುವಿಗೆ 'ವಿದ' ಎಂದು ನಿಪಾತ ಮಾಡಿದಾಗ, ವಿದ+ಆಮ್+ ಲಿಟ್ ಎಂದಿರುತ್ತದೆ. 'ವಿದ್' ಧಾತುವನ್ನು ಹಲನ್ತವಾಗಿ ಭಾವಿಸಿದಾಗ, 'ಆಮ್' ನ್ನು ಆರ್ಧಧಾತುಕವಾಗಿ ಭಾವಿಸಿ "ಪುಗನ್ತಲಘೂಪಧಸ್ಯ ಚ" ಎಂಬುದರಿಂದ 'ವಿದ್' ನಲ್ಲಿರುವ 'ಇ' ಕಾರವಾದ ಉಪಧೆಗೆ ಗುಣವು ಬರಬೇಕಾಗಿತ್ತು. ಆದರೆ ಪ್ರಕೃತ ಸೂತ್ರದಲ್ಲಿ 'ವಿದ್' ಧಾತುವನ್ನು 'ವಿದ' ಎಂದು ಅಕಾರಾಂತವಾಗಿ ನಿಪಾತ ಮಾಡಿರೋಣದರಿಂದ ಗುಣವು ಬರುವುದಿಲ್ಲ. ಆದರೆ "ಅತೋಲೋಪಃ" ಎಂಬ ಸೂತ್ರದಿಂದ 'ಅ' ಕಾರಕ್ಕೆ ಲೋಪ ಬಂದರೂ, ಸ್ಥಾನಿವದ್ಭಾವದಿಂದ ಅದು ಇದ್ದಂತೆಯೇ ಭಾವಿಸಬೇಕಾಗಿರು

ವುದರಿಂದ 'ವಿದ್' ನಲ್ಲಿರುವ 'ಇ' ಕಾರವು ಲಘೂಪಧ ಆಗುವುದಿಲ್ಲವಾದ್ದರಿಂದ ಗುಣ ಬರುವುದಿಲ್ಲ. ಆದ್ದರಿಂದ ವಿದ್+ಆಮ್+ಲಿಟ್ ಎಂದಿದ್ದಾಗ, 'ಕೃ' ಧಾತುವಿನ 'ಲಿಟ್' ರೂಪವಾದ ಚಕಾರ ಎಂಬ ರೂಪವನ್ನು ಅನುಪ್ರಯೋಗ ರೂಪದಲ್ಲಿ ಸೇರಿಸಿ ವಿದಾಮ್+ಚಕಾರ=ವಿದಾಞ್ಚಕಾರ ಎಂದು ರೂಪವಾಗುತ್ತದೆ.

ಭೂ ಮತ್ತು ಅಸ್ ಧಾತುಗಳ 'ಲಿಟ್' ರೂಪಗಳನ್ನು ಸೇರಿಸಿದಾಗ ವಿದಾಮ್ಭೂವ ಮತ್ತು ವಿದಾಮಾಸ ಎಂಬ ರೂಪಗಳು ಸಿದ್ಧವಾಗುತ್ತವೆ.

*ಆಮ್ ಬಂದ ಪಕ್ಷದಲ್ಲಿ ಅನುಪ್ರಯೋಗ ಲಿಟ್ ರೂಪಗಳು: ವಿದಾಞ್ಚಕಾರ, ವಿದಾಞ್ಚಕ್ರತುಃ, ವಿದಾಞ್ಚಕ್ರುಃ। ವಿದಾಮ್ಬಭೂವ, ವಿದಾಮ್ಬಭೂವಥುಃ, ವಿದಾಮ್ಬಭೂವುಃ। ವಿದಾಮಾಸ, ವಿದಾಮಾಸತುಃ, ವಿದಾಮಾಸುಃ

**ಆಮ್ ಬಾರದ ಪಕ್ಷದಲ್ಲಿ ರೂಪಗಳು: ವಿವೇದ, ವಿವಿದತುಃ, ವಿವಿದುಃ। ಇತ್ಯಾದಿ

**ಲುಟ್**: ರೂಪಗಳು : ವೇದಿತಾ, ವೇದಿತಾರೌ, ವೇದಿತಾರಃ। ಇತ್ಯಾದಿ

**ಲೃಟ್**: ರೂಪಗಳು: ವೇದಿಷ್ಯತಿ, ವೇದಿಷ್ಯತಃ, ವೇದಿಷ್ಯನ್ತಿ। ಇತ್ಯಾದಿ.

**(ವಿಕಲ್ಪವಾಗಿ ನಿಪಾತವನ್ನು ಹೇಳುವಸೂತ್ರ)**

**ಲೋಟ್**:

**ಸೂತ್ರ- 571. ವಿದಾಙ್ಕುರ್ವನ್ತ್ವಿತ್ಯನ್ಯತರಸ್ಯಾಮ್ (3.1.41)**

ವೃತ್ತಿಃ-ವೇತ್ತೇಃ ಲೋಟಿ ಆಮ್ ಗುಣಾಭಾವಃ ಲೋಟಃ ಲುಕ್ ಲೋಡಂತ-ಕರೋತ್ಯನುಪ್ರಯೋಗಶ್ಚ ವಾ ನಿಪಾತ್ಯತೇ। ಪುರುಷವಚನೇ ನ ವಿವಕ್ಷಿತೇ।

ಪ. ಛೇ. - ವಿದಾಙ್ಕುರ್ವನ್ತು, ಇತಿ, ಅನ್ಯತರಸ್ಯಾಮ್।

ಅರ್ಥ- ಲೋಟ್ 'ಲ್' ಕಾರವು ಪರದಲ್ಲಿದ್ದಾಗ, 'ವಿದ್' ಧಾತುವಿನ ನಂತರ 'ಆಮ್' ಪ್ರತ್ಯಯ ಬರುತ್ತದೆ. ಆದರೆ ಗುಣವು ಬರುವುದಿಲ್ಲ. ಮತ್ತು 'ಲೋಟ್' ಗೆ ಲೋಪ ಬರುತ್ತದೆ. 'ಲೋಟ್' 'ಲ್' ಕಾರದ ನಂತರದಲ್ಲಿರುವ 'ಕೃಞ್' ಧಾತುವಿಗೆ ಅನುಪ್ರಯೋಗವು ಪ್ರಕೃತ ಸೂತ್ರದಿಂದ ವಿಕಲ್ಪದಿಂದ ನಿಪಾತ ಮಾಡಲಾಗಿದೆ.

ವಿವರಣೆ: ಪ್ರಕೃತ ಸೂತ್ರವು 'ವಿದಾಙ್ಕುರ್ವನ್ತು' ಎಂಬ ರೂಪವನ್ನು ವಿಕಲ್ಪವಾಗಿ ನಿಪಾತ ಮಾಡುತ್ತದೆ. 'ವಿದಾಙ್ಕುರ್ವನ್ತು' ಎಂಬುದು ಪ್ರಥಮಪುರುಷ ಬಹುವಚನ ರೂಪವಾದರೂ, ಇಂತಹ 'ಆಮ್' ಪ್ರತ್ಯಯಾದಿಗಳಿಂದ ಕೂಡಿದ ರೂಪವು ಪ್ರಥಮಪುರುಷ ಬಹುವಚನದಲ್ಲಿ ಮಾತ್ರ ಬರಬೇಕೆಂಬ ನಿಯಮವೇನಿಲ್ಲ. 'ಲೋಟ್' ನಲ್ಲಿ ಎಲ್ಲ ಪುರುಷ, ಮತ್ತು ಎಲ್ಲ ವಚನಗಳಲ್ಲೂ ಇಂತಹ ರೂಪಗಳಿರುವವು. ಈ ರೀತಿಯಾಗಿ ಪ್ರಥಮಪುರುಷ ಏಕವಚನದಲ್ಲಿ ವಿದಾಮ್+ಕೃ+ತಿ ಎಂದಿದ್ದಾಗ, 'ಶಪ್(ಅ)' ಬರಬೇಕಾಗಿದ್ದಾಗ-

**(ಉ-ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ- 572.ತನಾದಿಕೃಞ್ಭ್ಯ ಉಃ (3.1.79)**

ವೃತ್ತಿಃ-ತನಾದೇಃ ಕೃಞ್ಚ ಉಃ ಪ್ರತ್ಯಯಃ ಸ್ಯಾತ್। ಶಪೋಽಪವಾದಃ ವಿದಾಙ್ಕರೋತು।

ಪ. ಛೇ. – ತನಾದಿಕೃಞ್ಭ್ಯಃ, ಉಃ।

ಅ.ವ್ಯ. –"ಕರ್ತರಿ ಶಪ್" ಎಂಬ ಸೂತ್ರದಿಂದ 'ಕರ್ತರಿ' ಎಂಬ ಪದವೂ ಮತ್ತು "ಸಾರ್ವಧಾತುಕೇ ಯಕ್" ಎಂಬ ಸೂತ್ರದಿಂದ 'ಸಾರ್ವಧಾತುಕೇ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ– ಕರ್ತ್ರರ್ಥಕ ಸಾರ್ವಧಾತುಕವು ಪರದಲ್ಲಿದ್ದಾಗ, ತನಾದಿ ಗಣಕ್ಕೆ ಸೇರಿದ ಧಾತು, ಮತ್ತು 'ಕೃ' ಧಾತುಗಳ ನಂತರ ಅಪವಾದವಾಗಿ 'ಶಪ್' ಪ್ರತ್ಯಯಕ್ಕೆ ಬದಲಾಗಿ 'ಉ' ವಿಕರಣ ಪ್ರತ್ಯಯವು ಬರುತ್ತದೆ.

ಉದಾ– ವಿದಾಙ್ಕರೋತು – ಪ್ರಥಮಪುರುಷ ಏಕವಚನದಲ್ಲಿ 'ವಿದ್' ಧಾತುವಿನ ನಂತರ 'ಲೋಟ್' ಆದೇಶವಾದ 'ತಿಪ್(ತಿ)' ಬಂದು ಧಾತುವಿನ ಪರದಲ್ಲಿ 'ಶಪ್(ಅ)' ಬಂದು, ಅದು ಲೋಪವಾದಮೇಲೆ ವಿದಾಙ್ಕುರ್ವನ್ತ್ವಿತ್ಯನ್ಯತರಸ್ಯಾಮ್ (570) ಎಂಬ ಸೂತ್ರದಿಂದ 'ಆಮ್' ಪ್ರತ್ಯಯ ಬಂದು, 'ಲಘೂಪಧಗುಣ' ಬಾರದೇ 'ಲೋಟ್'ಗೆ ಲುಕ್ (ಲೋಪ) ಬಂದು, 'ಲೋಟ್' ನ್ನು ಪರದಲ್ಲಿ ತೆಗೆದುಕೊಂಡು 'ಕೃ' ಧಾತುವಿನ ಅನುಪ್ರಯೋಗ ಮೊದಲಾದವು ನಿಪಾತಿತವಾದಮೇಲೆ ವಿದಾಮ್+ಕೃತಿ ಎಂದಿರುತ್ತದೆ. 'ಕೃ' ನ ಪರದಲ್ಲಿ 'ತಿ' ಇದ್ದಾಗ, 'ಶಪ್(ಅ)' ಪ್ರತ್ಯಯವು ಬರಬೇಕಾಗಿತ್ತು. ಅದನ್ನು ಬಾಧಿಸಿ ಪ್ರಕೃತ ಸೂತ್ರದಿಂದ 'ಉ' ವಿಕರಣ ಪ್ರತ್ಯಯವು ಬಂದು, ವಿದಾಮ್+ಕೃ+ ಉ+ತಿ ಎಂದಿರುತ್ತದೆ. 'ಉ' ಗೆ ಆರ್ಧಧಾತುಕಸಂಜ್ಞೆ ಬಂದು ಅದು 'ಕೃ' ಗೆ ಪರವಾದಾಗ, "ಸಾರ್ವಧಾತುಕಾರ್ಧಧಾತುಕಯೋಃ" ಎಂಬ ಸೂತ್ರದಿಂದ 'ಕೃ' ನಲ್ಲಿರುವ 'ಋ' ಕಾರಕ್ಕೆ ಗುಣ ಬಂದು "ಉರಣ್ ರಪರಃ" ಎಂಬುದರಿಂದ 'ಅರ್' ಎಂದಾಗಿ ವಿದಾಮ್ +ಕರ್+ಉ+ತಿ ಎಂದಿರುತ್ತದೆ. ಆಗ 'ಉ' ಕಾರಕ್ಕೂ ಗುಣವು ಬಂದು 'ಓ' ಕಾರವಾಗೋಣದರಿಂದ 'ತಿ' ಯಲ್ಲಿರುವ 'ಇ' ಕಾರಕ್ಕೆ "ಏರುಃ" ಎಂಬುದರಿಂದ 'ಉ' ಕಾರವು ಆದೇಶವಾಗಿ ಬಂದು ವಿದಾಮ್+ಕರೋತು ಎಂದಿರುತದೆ. ಈಗ 'ವಿದಾಮ್' ನಲ್ಲಿರುವ 'ಮ್' ಕಾರಕ್ಕೆ "ಮೋಽನುಸ್ವಾರಃ" ಎಂಬುದರಿಂದ ಅನುಸ್ವಾರ ಬಂದು ಅದಕ್ಕೆ "ವಾ ಪದಾನ್ತಸ್ಯ" ಎಂಬುದರಿಂದ ಪರಸವರ್ಣ ಬಂದು ವಿದಾಙ್ಕರೋತು ಎಂಬ ರೂಪವು ಸಿದ್ಧವಾಗುತ್ತದೆ.

"ತುಹ್ಯೋಸ್ತಾತಙ್ಙಾಶಿಷ್ಯನ್ಯತರಸ್ಯಾಮ್" ಎಂಬ ಸೂತ್ರದಿಂದ 'ತು'ಗೆ 'ತಾತಙ್(ತಾತ್)' ಆದೇಶ ಬಂದು 'ವಿದಾಙ್ಕುರುತಾತ್' ರೂಪವು ಮುಂದಿನ ಸೂತ್ರದಿಂದ ಸಿದ್ಧವಾಗುತ್ತದೆ.

**(ಹ್ರಸ್ವ ಅ– ಕಾರಕ್ಕೆ ಹ್ರಸ್ವ 'ಉ– ಕಾರವನ್ನು ಆದೇಶವಾಗಿ ವಿಧಿಸುವ ಸೂತ್ರ)**

**ಸೂತ್ರ– 573.ಅತ ಉತ್ ಸಾರ್ವಧಾತುಕೇ (6.4.110)**

ವೃತ್ತಿಃ-ಉಪ್ರತ್ಯಯಾಂತಸ್ಯ ಕೃಞಃ ಅತಃ ಉತ್ ಸಾರ್ವಧಾತುಕೇ ಕ್ಙಿತಿ। ವಿದಾಙ್ಕುರುತಾತ್। ವಿದಾಙ್ಕುರುತಾಮ್। ವಿದಾಙ್ಕುರ್ವನ್ತು। ವಿದಾಙ್ಕುರು। ವಿದಾಙ್ಕರವಾಣಿ। ಅವೇತ್। ಅವಿತ್ತಾಮ್। ಅವಿದುಃ।

ಪ. ಛೇ. – ಅತಃ, ಉತ್, ಸಾರ್ವಧಾತುಕೇ।

ಅ. ವೃ.–" ಉತಶ್ಚ ಪ್ರತ್ಯಯದಸಂಯೋಗಪೂರ್ವಾತ್" ಎಂಬ ಸೂತ್ರದಿಂದ 'ಉತಃ' ಮತ್ತು 'ಪ್ರತ್ಯಯಾತ್' ಎಂಬ ಪದಗಳು "ನಿತ್ಯಂ ಕರೋತೇಃ" ಎಂಬ ಸೂತ್ರದಿಂದ 'ಕರೋತೇಃ' ಎಂಬ ಪದವೂ ಮತ್ತು "ಗಮ-ಹನ-ಜನ-ಖನ-ಘಸಾಮ್ ಲೋಪಃ ಕ್ಙಿನಿತ್ಯಜಿ" ಎಂಬ ಸೂತ್ರದಿಂದ 'ಕ್ಙಿತಿ' ಎಂಬ ಪದವೂ ಅನುವೃತವಾಗುತ್ತವೆ.

ಅರ್ಥ– ಸಾರ್ವಧಾತುಕ 'ಕಿತ್' 'ಙಿತ್' ಪ್ರತ್ಯಯಗಳು ಪರದಲ್ಲಿದ್ದಾಗ, 'ಉ' ಪ್ರತ್ಯಯಾನ್ತ 'ಕೃಞ್' ಧಾತುವಿನ ಹ್ರಸ್ವ 'ಅ' ಕಾರಕ್ಕೆ ಹ್ರಸ್ವ 'ಉ' ಕಾರವು ಆದೇಶವಾಗಿ ಬರುತ್ತದೆ.

'ತಾತಙ್' ಪ್ರತ್ಯಯವು 'ಙಿತ್' ಆದ ಸಾರ್ವಧಾತುಕವಾಗಿರುವುದರಿಂದ 'ಕೃಞ್' ಎಂಬುದು 'ಕರ್' ಎಂದಾದಾಗ, 'ಕ' ಕಾರೋತ್ತರವರ್ತಿ 'ಅ' ಕಾರಕ್ಕೆ 'ಉ' ಕಾರವು ಆದೇಶವಾಗಿ ಬಂದು ವಿದಾಙ್ಕುರುತಾತ್ ಎಂದು ರೂಪವಗುತ್ತದೆ.

ಪ್ರಥಮಪುರುಷ ದ್ವಿವಚನದಲ್ಲಿ 'ತಾಮ್' ಮೊದಲಾದ ಪ್ರತ್ಯಯಗಳೂ ಕೂಡ "ಸಾರ್ವಧಾತುಕಮಪಿತ್" ಎಂಬ ಸೂತ್ರದಿಂದ 'ಙಿತ್' ಆಗುವುದರಿಂದ ಪ್ರಕೃತ ಸೂತ್ರದಿಂದ 'ಅ' ಕಾರಾಕ್ಕೆ 'ಉ' ಕಾರ ಬಂದು ವಿದಾಙ್ಕುರುತಾಮ್ ಎಂದು ರೂಪವಾಗುತ್ತದೆ. ಪ್ರಥಮಪುರುಷ ಬಹುವಚನದಲ್ಲಿ ವಿದ್+ಆಮ್+ಕುರು+ಅನ್ತು= ವಿದಾಙ್ಕುರ್ವನ್ತು ಎಂದು ರೂಪವಾಗುತ್ತದೆ.

ಉದಾ– ವಿದಾಙ್ಕುರು/ವಿದಾಙ್ಕುತಾತ್, ವಿದಾಙ್ಕುರುತಮ್, ವಿದಾಙ್ಕುರುತ – ಮಧ್ಯಮಪುರುಷ ಏಕವಚನ, ದ್ವಿವಚನ ಮತ್ತು ಬಹುವಚನಗಳಲ್ಲಿ ಹಿಂದಿನಂತೆಯೇ ಪ್ರಕ್ರಿಯೆ ನಡೆದು ವಿದಾಙ್ಕುರು/ವಿದಾಙ್ಕುತಾತ್, ವಿದಾಙ್ಕುರುತಮ್, ವಿದಾಙ್ಕುರುತ ಎಂಬ ರೂಪಗಳು ಸಿದ್ಧವಾಗುತ್ತವೆ.

ಉದಾ– ವಿದಾಙ್ಕರವಾಣಿ – ಉತ್ತಮಪುರುಷ ಏಕವಚನದಲ್ಲಿ 'ವಿದಾಮ್' ವರೆಗಿನ ಪ್ರಕ್ರಿಯೆಯು ಹಿಂದಿನಂತೆಯೇ ನಡೆದು, ವಿದಾಮ್+ಕೃ+ಮಿ(ಮಿಪ್) ಎಂದಿದ್ದಾಗ "ಮೇರ್ನಿ"ಃ ಎಂಬ ಸೂತ್ರದಿಂದ 'ಮಿ'ಗೆ 'ನಿ' ಆದೇಶವಾಗಿ ಬಂದು ವಿದಾಮ್+ಕೃ+ನಿ ಎಂದ್ದಾಗ, "ಆಡುತ್ತಮಸ್ಯ ಪಿಚ್ಚ" ಎಂಬ ಸೂತ್ರದಿಂದ 'ನಿ'ಗೆ 'ಆಟ್(ಆ)' ಆಗಮವು ಬಂದು ವಿದಾಮ್+ಕೃ+ಆನಿ ಎಂದಿದ್ದಾಗ, "ತನಾದಿಕೃಞ್ಭ್ಯ ಉಃ" ಎಂಬ ಸೂತ್ರದಿಂದ 'ಕೃ' ಧಾತುವಿನ ನಂತರ 'ಉ' ವಿಕರಣ ಪ್ರತ್ಯಯ ಬಂದು ವಿದಾಮ್+ಕೃ+ಉ+ಆನಿ ಎಂದಿದ್ದಾಗ, 'ಋ' ಕಾರಕ್ಕೆ "ಉರಣ್ ರಪರ" ಎಂಬುದರಿಂದ ರೇಫ(ರ್) ಪರಕವಾದ ಗುಣ(ಅರ್) ಬಂದು, ವಿದಾಮ್+ಕರ್+ಉ+ಆನಿ ಎಂದಿದ್ದಾಗ 'ಉ' ಕಾರಕ್ಕೆ ಗುಣ ಬಂದು ವಿದಾಮ್+ಕರ್+ಓ+ಆನಿ ಎಂದಿದ್ದಾಗ, 'ಓ' ಕಾರಕ್ಕೆ 'ಅವ್' ಆದೇಶ ಬಂದು ವಿದಾವ್+ಕ+ಅರ್+ಅವ್+ಆನಿ ಎಂದಿದ್ದಾಗ 'ನ್' ಕಾರಕ್ಕೆ ಣತ್ವ ಬಂದು ವಿದಾಮ್‌ಕರವಾಣಿ ಎಂದಿದ್ದಾಗ, ಅನುಸ್ವಾರ(ಮ್)ಕ್ಕೆ ಪರಸವರ್ಣ ಬಂದು ವಿದಾಙ್ಕರವಾಣಿ ಎಂದು ರೂಪವು ಸಿದ್ಧವಾಗುತ್ತದೆ. ದ್ವಿವಚನ ಮತ್ತು ಬಹುವಚನಗಳಲ್ಲಿ ಮೇಲಿನಂತೆಯೇ ಪ್ರಕ್ರಿಯೆಗಳು ನಡೆದು ವಿದಾಙ್ಕರವಾವ, ವಿದಾಙ್ಕರವಾಮ ಎಂಬ ರೂಪಗಳು ಸಿದ್ಧವಾಗುತ್ತವೆ.

ವಿವರಣೆ: ಉತ್ತಮಪುರುಷದಲ್ಲಿ "ಆಡುತ್ತಮಸ್ಯ ಪಿಚ್ಚ" ಎಂಬುದರಿಂದ ಬಂದಿರುವ 'ಆಟ್' ಆಗಮವು 'ಪಿತ್' ಆಗಿರುವುದರಿಂದ "ಸಾರ್ವಧಾತುಕಮಪಿತ್" ಎಂಬುದರಿಂದ 'ಜಿತ್ವ' ಬಾರದೇ ಇರೋಣದ್ದರಿಂದ 'ಅ' ಕಾರಕ್ಕೆ 'ಉ' ಕಾರ ಬರಲಿಲ್ಲ ಎಂಬುದನ್ನು ಗಮನಿಸಬೇಕು.

ಆಮ್ ಪ್ರತ್ಯಯವು ಬಾರದ ಪಕ್ಷದಲ್ಲಿ ಆರ್ಧಧಾತುಕದಲ್ಲಿ ಇರುವಂತೆ ವೇತ್ತು/ ವಿತ್ತಾತ್, ವಿತ್ತಾಮ್, ವಿದನ್ತು। ವಿದ್ಧಿ/ವಿತ್ತಾತ್, ವಿತ್ತಮ್, ವಿತ್ತ। ವೇದಾನಿ, ವೇದಾವ, ವೇದಾಮ। ಎಂಬ ರೂಪಗಳು ಸಿದ್ಧವಾಗುತ್ತವೆ.

**ಲಙ್:**

ಉದಾ– ಅವೇತ್– ಪ್ರಥಮಪುರುಷ ಏಕವಚನದಲ್ಲಿ – 'ವಿದ್' ಧಾತುವಿನ ನಂತರ 'ಲಙ್' 'ಲ್' ಕಾರ ಬಂದು ಅದಕ್ಕೆ ಮೂಲ ಆಖ್ಯಾತ ಪ್ರತ್ಯಯವಾದ 'ತಿಪ್(ತಿ)' ಬಂದು ವಿದ್+ತಿ ಎಂದಿದ್ದಾಗ ಧಾತುವಿಗೆ 'ಅಟ್(ಅ)' ಆಗಮ ಬಂದು ಅವಿದ್+ತಿ ಎಂದಿದ್ದಾಗ 'ತಿ' ನಲ್ಲಿರುವ 'ಇ' ಕಾರಕ್ಕೆ "ಇತಶ್ಚ"ಎಂಬುದರಿಂದ ಲೋಪ ಬಂದು ಅವಿದ್+ತ್ ಎಂದಿದ್ದಾಗ "ಸಾರ್ವಧಾತುಕಾರ್ಧಧಾತುಕಯೋಃ" ಎಂಬುದರಿಂದ 'ವ್' ಕಾರೋತ್ತರ 'ಇ' ಕಾರಕ್ಕೆ ಗುಣ ಬಂದು ಅವೇದ್+ತ್ ಎಂದಿದ್ದಾಗ, "ಖರಿ ಚ" ಎಂಬುದರಿಂದ 'ದ್' ಕಾರಕ್ಕೆ ಚರ್ತ್ವ(ತ್) ಬಂದು ಅವೇತ್+ತ್ ಎಂದಿದ್ದಾಗ "ಸಂಯೋಗಾನ್ತಸ್ಯ ಲೋಪಃ" ಎಂಬುದರಿಂದ ಅನ್ತ್ಯ 'ತ್' ಕಾರಕ್ಕೆ ಲೋಪ ಬಂದು ಅವೇತ್ ಎಂದು ರೂಪವಾಗುತ್ತದೆ.

ಉದಾ– ಅವಿತ್ತಾಮ್– ಪ್ರಥಮಪುರುಷ ದ್ವಿವಚನದಲ್ಲಿ ಅವಿದ್+ತಾಮ್ ಎಂದಿದ್ದಾಗ, 'ತಾಮ್' ಇದು ಅಪಿತ್ ಸಾರ್ವಧಾತುಕವಾಗಿರುವುದರಿಂದ 'ಜಿದ್ವದ್ಭಾವವಿರುವುದರಿಂದ "ಕ್ಜಿತಿಚ" ಎಂಬುದರಿಂದ ಗುಣವು ಬಾರದೇ ಅವಿದ್+ತಾಮ್ ಎಂದೇ ಇರುತ್ತದೆ. ನಂತರ "ಖರಿಚ" ಎಂಬುದರಿಂದ 'ದ್' ಕಾರಕ್ಕೆ ಚರ್ತ್ವದಿಂದ 'ತ್' ಕಾರ ಬಂದು ಅವಿತ್+ತಾಮ್=ಅವಿತ್ತಾಮ್ ಎಂದು ರೂಪವಾಗುತ್ತದೆ.

ಉದಾ– ಅವಿದುಃ – ಪ್ರಥಮಪುರುಷ ಬಹುವಚನಲ್ಲಿ "ಸಿಜಭ್ಯಸ್ತವಿಧಿಭ್ಯಶ್ಚ" ಎಂಬ ಸೂತ್ರದಿಂದ 'ಝಿ' ಗೆ 'ಜುಸ್' ಬಂದು ಅವಿದುಃ ಎಂದು ರೂಪವು ಸಿದ್ಧವಾಗುತ್ತದೆ.

**(ರುತ್ವವನ್ನು ವಿಧಿಸುವ ಸೂತ್ರ)**

**ಸೂತ್ರ – 574.ದಶ್ಚ (8.2.75)**

ವೃತ್ತಿಃ–ಧಾತೋಃ ದಸ್ಯ ಪದಾಂತಸ್ಯ ಸಿಪಿ ಪರೆ ರುರ್ವಾ। ಅವೇಃ, ಅವೇತ್। ವಿದ್ಯಾತ್। ವಿದ್ಯಾತಾಮ್। ವಿದ್ಯುಃ। ವಿದ್ಯಾತ್, ವಿದ್ಯಾಸ್ತಾಮ್ ಅವೇದೀತ್। ಅವೇದಿಷ್ಯತ್। ಅಸ ಭುವಿ ।27। ಅಸ್ತಿ।

ಪ. ಛೇ. – ದಃ, ಚ।

ಅ. ವ್ಯ. – "ಸಿಪಿ ಧಾತೋರುರ್ವಾ" ಎಂಬ ಸೂತ್ರವು ಅನುವೃತ್ತವಾಗುತ್ತದೆ. "ಪದಸ್ಯ" ಎಂಬುದು ಅಧಿಕಾರ ಸೂತ್ರ.

ಅರ್ಥ- ಸಿಪ್ ಪರದಲ್ಲಿದ್ದಾಗ, ಧಾತುವಿನ ಪದಾನ್ತ 'ದ್' ಕಾರಕ್ಕೆ ವಿಕಲ್ಪದಿಂದ 'ರು' ಆದೇಶವಾಗಿ ಬರುತ್ತದೆ.

**ಲಙ್**: ಉದಾ- ಅವೇಃ - ಮಧ್ಯಮಪುರುಷ ಏಕವಚನದಲ್ಲಿ 'ವಿದ್' ಧಾತುವಿನ ನಂತರ 'ಸಿಪ್(ಸ್)' ಬಂದು ಧಾತುವಿಗೆ 'ಅಟ್' ಆಗಮ ಬಂದಾಗ, ಅವಿದ್+ಸ್ ಎಂದಿರುತ್ತದೆ. "ಪುಗನ್ತಲಘೂಪದಸ್ಯ ಚ" ಎಂಬ ಸುತ್ರದಿಂದ ಧಾತುವಿನ 'ಇ' ಕಾರಕ್ಕೆ ಲಘೂಪದಗುಣ ಬಂದು ಅವೇದ್+ಸ್ ಎಂದಿದ್ದಾಗ, "ಸಂಯೋಗಾನ್ತಸ್ಯ ಲೋಪಃ" ಎಂಬುದರಿಂದ 'ಸ್' ಕಾರಕ್ಕೆ ಲೋಪ ಬಂದು, 'ದ್' ಕಾರಕ್ಕೆ "ದಶ್ಚ" ಎಂಬ ಪ್ರಕೃತ ಸೂತ್ರದಿಂದ ವೈಕಲ್ಪಿಕವಾಗಿ ರುತ್ವ ಬಂದು, ನಂತರ 'ರು(ರ್)' ಗೆ ವಿಸರ್ಗ ಬಂದು ಅವೇಃ ಎಂಬ ರೂಪವು ಸಿದ್ಧವಾಗುತ್ತದೆ. ರುತ್ವ ಬಾರದ ಪಕ್ಷದಲ್ಲಿ 'ಸ್' ಕಾರಕ್ಕೆ "ವಾಽವಸಾನೇ" ಎಂಬುದರಿಂದ ವೈಕಲ್ಪಿಕವಾಗಿ ಚರ್ತ್ವ ಬಂದು ಅವೇತ್ ಮತ್ತು ಅವೇದ್ ಎಂಬ ರೂಪಗಳು ಸಿದ್ಧವಾಗುತ್ತವೆ ಹೀಗಾಗಿ ಮೂರು ರೂಪಗಳಾಗುತ್ತವೆ.

ಉದಾ- ಅವಿತ್ತಮ್, ಅವಿತ್ತ-ಮಧ್ಯಮಪುರುಷ ದ್ವಿವಚನ ಬಹುವಚನಗಳಲ್ಲಿ 'ತಮ್' ಮತ್ತು 'ತ' ಪ್ರತ್ಯಯಗಳನ್ನು ಸೇರಿಸಿದಾಗ, ಅವಿದ್+ತಮ್, ಅವಿದ್+ತ ಎಂದಿದ್ದಾಗ, 'ದ್' ಕಾರಕ್ಕೆ ಚರ್ತ್ವದಿಂದ 'ತ್' ಕಾರ ಬಂದು ಅವಿತ್ತಮ್, ಮತ್ತು ಅವಿತ್ತ ಎಂಬ ರೂಪಗಳು ಸಿದ್ಧವಾಗುತ್ತವೆ.

ಉದಾ- ಅವೇದಮ್, ಅವಿದ್ವ, ಅವಿದ್ಮ - ಉತ್ತಮ ಪುರುಷ ಏಕವಚನದಲ್ಲಿ ಇದು 'ಪಿತ್' ಆಗಿರುವುದರಿಂದ ಙಿದ್ವದ್ಭಾವವು ಬಾರದೇ ಧಾತುವಿನ 'ಇ' ಕಾರಕ್ಕೆ ಗುಣ ಬಂದು ಅವೇದ್+ಅಮ್=ಅವೇದಮ್ ಎಂದು ರೂಪವಾಗುತ್ತದೆ.

ಉತ್ತಮಪುರುಷ ದ್ವಿವಚನ ಬಹುವಚನಗಳಲ್ಲಿ ಕ್ರಮವಾಗಿ 'ವ' 'ಮ' ಪ್ರತ್ಯಯಗಳನ್ನು ಸೇರಿಸಿದಾಗ, ಅವಿದ್+ವ=ಅವಿದ್ವ ಮತ್ತು ಅವಿದ್+ಮ=ಅವಿದ್ಮ ಎಂದಾಗುತ್ತದೆ.

ರೂಪಗಳು: ಅವೇತ್, ಅವಿತ್ತಾಮ್, ಅವಿದುಃ। ಅವೇಃ/ಅವೇತ್/ಅವೇದ್, ಅವಿತ್ತಮ್, ಅವಿತ್ತ। ಅವೇದಮ್, ಅವಿದ್ವ, ಅವಿದ್ಮ।

ವಿಧಿಲಿಙ್: ರೂಪಗಳು: ವಿದ್ಯಾತ್, ವಿದ್ಯಾತಾಮ್, ವಿದ್ಯುಃ। ವಿದ್ಯಾಃ, ವಿದ್ಯಾತಮ್, ವಿದ್ಯಾತ। ವಿದ್ಯಾಮ್, ವಿದ್ಯಾವ, ವಿದ್ಯಾಮ।

ಆಶೀರ್ಲಿಙ್: ರೂಪಗಳು: ವಿದ್ಯಾತ್, ವಿದ್ಯಾಸ್ತಾಮ್, ವಿದ್ಯಾಸುಃ। ವಿದ್ಯಾಃ, ವಿದ್ಯಾಸ್ತಮ್, ವಿದ್ಯಾಸ್ತ। ವಿದ್ಯಾಸಮ್, ವಿದ್ಯಾಸ್ವ, ವಿದ್ಯಾಸ್ಮ।

**ಲುಙ್**: ರೂಪಗಳು: ಅವೇದೀತ್, ಅವೇದಿಷ್ಟಾಮ್, ಅವೇದಿಷುಃ। ಅವೇದೀಃ, ಅವೇದಿಷ್ಟಮ್, ಅವೇದಿಷ್ಟ। ಅವೇದಿಷಮ್, ಅವೇದಿಷ್ವ, ಅವೇದಿಷ್ಮ।

**ಲೃಙ್**: ರೂಪಗಳು: ಅವೇದಿಷ್ಯತ್, ಅವೇದಿಷ್ಯತಾಮ್, ಅವೇದಿಷ್ಯನ್। ಅವೇದಿಷ್ಯಃ, ಅವೇದಿಷ್ಯತಮ್, ಅವೇದಿಷ್ಯತ। ಅವೇದಿಷ್ಯಮ್, ಅವೇದಿಷ್ಯಾವ, ಅವೇದಿಷ್ಯಾಮ।

16.ಅಸ-ಭುವಿ(ಸತ್ತಾ- ಇರುವಿಕೆ) ಅಸ್ತಿ- ಇದರಲ್ಲಿ 'ಅಸ್' ಮಾತ್ರ ಉಳಿಯುತ್ತದೆ. ಉದಾತ್ತೇತ್ತಾಗಿರುವುದರಿಂದ ಆತ್ಮನೇಪದದ ನಿಮಿತ್ತವಿಲ್ಲದೇ ಇರುವುದರಿಂದ ಇದು

ಪರಸ್ಮೈ ಪದವಾಗಿದೆ.

**ಲಟ್**: ಉದಾ– ಅಸ್ತಿ – ಪ್ರಥಮಪುರುಷ ಏಕವಚನದಲ್ಲಿ 'ಅಸ್' ಧಾತುವಿನ ನಂತರ ಲಡಾದೇಶವಾದ 'ತಿಪ್(ತಿ)' ಬಂದು ಧಾತುವಿನ ನಂತರ 'ಶಪ್(ಅ)' ಬಂದು, ಅದು ಲೋಪವಾದಮೇಲೆ ಅಸ್+ತಿ=ಅಸ್ತಿ ಎಂದು ರೂಪವು ಸಿದ್ಧವಾಗಿತ್ತದೆ.

**(ಅ– ಕಾರ ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ– 575.ಶ್ನಸೋರಲ್ಲೋಪಃ (6.4.111)**

ವೃತ್ತಿಃ–ಶ್ನಸ್ಯ ಅಸ್ತೇಃ ಚ ಅತಃ ಲೋಪಃ ಸಾರ್ವಧಾತುಕೇ ಕ್ಙಿತಿ। ಸ್ತಃ। ಸಂತಿ। ಅಸಿ। ಸ್ಥಃ। ಸ್ಥ। ಅಸ್ಮಿ। ಸ್ವಃ। ಸ್ಮಃ।

ಪ. ಛೇ. – ಶ್ನಸೋಃ, ಅಲ್ಲೋಪಃ।

ಅ. ವೃ.– "ಅತ ಉತ್ ಸಾರ್ವಧಾತುಕೇ" ಎಂಬ ಸೂತ್ರದಿಂದ 'ಸಾರ್ವಧಾತುಕೇ' ಎಂಬ ಪದವೂ, ಮತ್ತು "ಗಮ–ಹನ–ಜನ–ಖನ– ಘಸಾಮ್ ಲೋಪಃ ಕ್ಙಿತ್ಯನಙಿ" ಎಂಬ ಸೂತ್ರದಿಂದ 'ಕ್ಙಿತಿ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– 'ಶ್ನಮ್' ನಲ್ಲಿರುವ 'ಅ' ಕಾರ ಮತ್ತು 'ಅಸ್' ಧಾತುವಿನಲ್ಲಿವ 'ಅ' ಕಾರಗಳಿಗೆ ಲೋಪ ಬರುತ್ತದೆ–ಸಾರ್ವಧಾತುಕ 'ಕಿತ್' ಮತ್ತು 'ಙಿತ್' ಪರದಲ್ಲಿದ್ದಾಗ. ಏಕವಚನ ಪ್ರತ್ಯಯಗಳಾದ 'ತಿಪ್' 'ಸಿಪ್' ಮತ್ತು 'ಮಿಪ್' ಗಳು 'ಪಿತ್' ಆಗಿರುವುದರಿಂದ 'ಙಿತ್' ಆಗುವುದಿಲ್ಲ. ಆದುದರಿಂದ ಅಲ್ಲೋಪ(ಅ–ಕಾರ ಲೋಪ) ಆಗುವುದಿಲ್ಲ. ಉಳಿದ 6 ಪ್ರತ್ಯಯಗಳ ವಿಷಯದಲ್ಲಿ 'ಅಪಿತ್' ಆಗಿರುವುದರಿಂದ ಙಿದ್ವದ್ಭಾವ ಬಂದು 'ಅ' ಕಾರಕ್ಕೆ ಲೋಪ ಬರುತ್ತದೆ.

ಉದಾ– ಸ್ತಃ, – ಪ್ರಥಮಪುರುಷ ದ್ವಿವಚನದಲ್ಲಿ 'ಅಸ್' ಧಾತುವಿನ ಅಂತರ 'ತಸ್' ಪ್ರತ್ಯಯ ಬಂದು ಅಸ್+ತಸ್ ಎಂದಿರುತ್ತದೆ. ಧಾತುವಿನ ನಂತರ 'ಶಪ್(ಅ)' ಬಂದು ಲುಕ್(ಲೋಪ) ಆದಾಗ, "ಸಾರ್ವಧಾತುಕಮಪಿತ್" ಎಂಬುದರಿಂದ 'ಙಿದ್ವದ್ಭಾವ' ಬಂದು ಪ್ರಕೃತ ಸೂತ್ರದಿಂದ 'ಅಸ್' ನ 'ಅ' ಕಾರಕ್ಕೆ ಲೋಪ ಬಂದು ಸ್+ತಸ್=ಸ್ತಸ್ ಎಂದಾಗಿ ರುತ್ವ ವಿಸರ್ಗಗಳಿಂದ ಸ್ತಃ ಎಂದು ರೂಪವಾಗುತ್ತದೆ.

ಉದಾ– ಸನ್ತಿ– ಪ್ರಥಮಪುರುಷ ಬಹುವಚನದಲ್ಲಿ ಅಸ್+ಝಿ ಎಂದಿದ್ದಾಗ ಪ್ರಕೃತ ಸೂತ್ರದಿಂದ 'ಅಸ್' ನ 'ಅ' ಕಾರಕ್ಕೆ ಲೋಪ ಬಂದು ಸ್+ಝಿ ಎಂದಿದ್ದಾಗ, "ಝೋಽನ್ತಃ" ಎಂಬುದರಿಂದ 'ಝ್' ಗೆ 'ಅನ್ತ್' ಆದೇಶ ಬಂದು ಸ್+ಅನ್ತ್+ಇ=ಸನ್ತಿ ಎಂದು ರೂಪವಾಗುತ್ತದೆ. ಇದೇ ರೀತಿಯಲ್ಲಿ ಉಳಿದ ರೂಪಗಳು ಸಿದ್ಧವಾಗುತ್ತವೆ.

ರೂಪಗಳು: ಅಸ್ತಿ, ಸ್ತಃ, ಸನ್ತಿ। ಅಸಿ, ಸ್ಥಃ, ಸ್ಥ। ಅಸ್ಮಿ, ಸ್ವಃ, ಸ್ಮಃ।

**(ಷತ್ವವನ್ನು ವಿಧಿಸುವ ಸೂತ್ರ)**

**ಸೂತ್ರ– 576. ಉಪಸರ್ಗಪ್ರಾದುರ್ಭ್ಯಾಮಸ್ತಿರ್ಯಚ್ಪರಃ (8.3.87)**

ವೃತ್ತಿಃ–ಉಪಸರ್ಗೇಣಃ ಪ್ರಾದುಸಃ ಚ ಅಸ್ತೇಃ ಸಸ್ಯ ಷಃ ಯಕಾರೇ ಅಚಿ ಪರೇ। ನಿಷ್ಯಾತ್। ಪ್ರನಿಷಂತಿ। ಪ್ರಾದುಃಷಂತಿ। ಯಚ್ಪರಃ ಕಿಮ್ – ಅಭಿಸ್ತಃ।

ಪ. ಛೇ. – ಉಪಸರ್ಗಪ್ರಾದುರ್ಭ್ಯಾಂ, ಅಸ್ತಿಃ, ಯಚ್ಪರಃ।

ಅ. ವೃ.– "ಸಹೇಃ ಸಾಡಃ ಸಃ" ಎಂಬ ಸೂತ್ರದಿಂದ 'ಸಹ' ಎಂಬ ಪದವೂ, "ಅಪದಾನ್ತಸ್ಯ ಮೂರ್ಧನ್ಯಃ" ಎಂಬ ಸೂತ್ರದಿಂದ 'ಮೂರ್ಧನ್ಯಃ' ಎಂಬ ಪದವೂ, ಅನುವೃತ್ತವಾಗುತ್ತವೆ. "ಇಣ್ಕೋಃ" ಎಂಬುದು ಅಧಿಕಾರ ಸೂತ್ರ.

ಅರ್ಥ– ಉಪಸರ್ಗದ ಅವಯವವಾದ 'ಇಣ್'ಗಿಂತ ಅಥವಾ 'ಪ್ರಾದುಸ್' ಎಂಬ ಅವ್ಯಯದ ಪರದಲ್ಲಿರುವ 'ಅಸ್' ಧಾತುವಿನ 'ಸ್' ಕಾರಕ್ಕೆ ಷತ್ವವು ಆದೇಶವಾಗಿ ಬರುತ್ತದೆ – 'ಯ್' ಕಾರ ಅಥವಾ 'ಅಚ್' ಪರದಲ್ಲಿದ್ದಾಗ.

ಉಪಸರ್ಗಸಹಿತವಾದ 'ಅಸ್' ಧಾತುವಿನ ರೂಪ–'ಸ್' ಕಾರಕ್ಕೆ 'ಯ್' ಕಾರವು ಪರದಲ್ಲಿರುವ ಉದಾಹರಣೆ –

ಉದಾ– ನಿಷ್ಯಾತ್– 'ಸ್ಯಾತ್' ಎಂಬುದು 'ಅಸ್' ಧಾತುವಿನ 'ವಿಧಿಲಿಙ್' ರೂಪವಾಗಿದೆ. 'ಸ್ಯಾತ್' ಗೆ ಪೂರ್ವದಲ್ಲಿ 'ನಿ' ಎಂಬ ಉಪಸರ್ಗವಿದೆ. 'ನಿ' ಎಂಬ ಉಪಸರ್ಗದಲ್ಲಿರುವ 'ಇ' ಕಾರವು 'ಇಣ್' ಆಗಿದೆ. ಇದಕ್ಕಿಂತ ಪರದಲ್ಲಿ 'ಸ್' ಕಾರವು ಇರುವುದು. ಅದರಪರದಲ್ಲಿ 'ಯ್' ಕಾರವು ಇರುವುದರಿಂದ ಪ್ರಕೃತ ಸೂತ್ರದಿಂದ 'ಸ್' ಕಾರಕ್ಕೆ ಷತ್ವವು ಬಂದು ನಿಷ್ಯಾತ್ ಎಂಬ ರೂಪವು ಸಿದ್ಧವಾಗುತ್ತದೆ.

'ಸ್' ಕಾರಕ್ಕೆ 'ಅ' ಕಾರವು ಪರದಲ್ಲಿರುವ ಉದಾಹರಣೆ

1. ಉದಾ– ಪ್ರನಿಷನ್ತಿ – ಇದು 'ಸ್' ಕಾರಕ್ಕೆ 'ಅಚ್(ಅ)' ಪರದಲ್ಲಿರುವ ಉದಾಹರಣೆ – ಪ್ರನಿಷನ್ತಿ,

2. ಉದಾ– ಪ್ರಾದುಷನ್ತಿ – ಇಲ್ಲಿ ಪ್ರಾದುಸ್ ಎಂಬ ಅವ್ಯಯಕ್ಕೆ ಪರದಲ್ಲಿವ 'ಅಸ್' ಧಾತುವಿನ 'ಸ್' ಕಾರಕ್ಕೆ 'ಅಚ್(ಅ)' ಪರದಲ್ಲಿರೋಣದರಿಂದ ಷತ್ವ ಬಂದು ಪ್ರಾದುಷನ್ತಿ ಎಂದು ರೂಪವಾಗಿದೆ.

ಯಚ್ಪರಃ ಕಿಮ್ – ಅಭಿಸ್ತಃ – ಸೂತ್ರದಲ್ಲಿ 'ಯಚ್ಪರಃ(ಯ್ ಮತ್ತು ಅಚ್)' ಪರದಲ್ಲಿದ್ದಾಗ ಎಂದು ಹೇಳದಿದ್ದರೆ ಅಭಿ+ಸ್ತಃ ಎಂಬಲ್ಲಿ 'ಸ್' ಕಾರಕ್ಕೆ ಷತ್ವವು ಆಗುತ್ತಿತ್ತು. 'ಷ್' ಕಾರದ ಪರದಲ್ಲಿ 'ತ್' ಕಾರ ಇದ್ದಾಗ, ಷ್ಟುತ್ವ ಬಂದು ಅಭಿಷ್ಟಃ ಎಂಬ ಅನಿಷ್ಟ ರೂಪವು ಸಿದ್ಧವಾಗುತ್ತಿತ್ತು. "ಯಚ್ಪರಃ" ಎಂದು ಹೇಳಿದ್ದರಿಂದ ಇಲ್ಲಿ 'ಸ್' ಕಾರದ ನಂತರ 'ಯ್' ಕಾರವಾಗಲೀ 'ಅಚ್' ಆಗಲೀ ಇರುವುದಿಲ್ಲ. ಆದರೆ 'ತ್' ಕಾರ ಮಾತ್ರ ಪರದಲ್ಲಿರುತ್ತದೆ. ಆದುದರಿಂದ ಷತ್ವ ಬರುವುದಿಲ್ಲ. ಆದುದರಿಂದ 'ತ್' ಕಾರ ಪರದಲ್ಲಿದ್ದರೂ ಷತ್ವ ಬರದಿರೋಣದರಿಂದ ಷ್ಟುತ್ವಾದಿಗಳಿಂದ ಅನಿಷ್ಟ ರೂಪವು ಬರುವುದಿಲ್ಲ.

**(ಭೂ ಎಂಬ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ– 577. ಅಸ್ತೇರ್ಭೂಃ (2.4.52)**

ವೃತ್ತಿಃ–ಆರ್ಧಧಾತುಕೇ। ಬಭೂವ। ಭವಿತಾ। ಭವಿಷ್ಯತಿ। ಅಸ್ತು, ಸ್ತಾತ್। ಸ್ತಾಮ್। ಸನ್ತು।

ಪ. ಛೇ. –ಅಸ್ತೇಃ, ಭೂಃ।

ಅ. ವೃ- "ಆರ್ಧಧಾತುಕೇ" ಎಂಬುದು ಅಧಿಕಾರ ಸೂತ್ರವಾಗಿದೆ.

ಅರ್ಥ- ಆರ್ಧಧಾತುಕ ವಿವಕ್ಷೆಯಲ್ಲಿ 'ಅಸ್' ಧಾತುವಿಗೆ 'ಭೂ' ಎಂಬ ಆದೇಶವು ಬರುತ್ತದೆ.

**ಲಿಟ್**: ಉದಾ- ಬಭೂವ – ಪ್ರಥಮಪುರುಷ ಏಕವಚನದಲ್ಲಿ 'ಅಸ್' ಧಾತುವಿನ ನಂತರ 'ಲಿಟ್' 'ಲ್' ಕಾರಕ್ಕೆ ಮೂಲ ಆಖ್ಯಾತ ಪ್ರತ್ಯಯವಾದ 'ತಿಪ್(ತಿ)' ಬಂದು ಅದಕ್ಕೆ ಅಭಿನವ ಆಖ್ಯಾತ ಪ್ರತ್ಯಯವಾದ 'ಣಲ್(ಅ)' ಬಂದು ಅಸ್+ಅ ಎಂದಿರುತ್ತದೆ. ಪ್ರಕೃತ ಸೂತ್ರದಿಂದ 'ಅಸ್' ಗೆ 'ಭೂ' ಆದೇಶ ಬಂದಾಗ, ಭೂ+ಅ ಎಂದಿರುತ್ತದೆ. ಭ್ವಾದಿ ಗಣದಲ್ಲಿ 'ಭೂ' ಧಾತುವಿಗೆ 'ಲಿಟ್' ಲ' ಕಾರದಲ್ಲಿಯ ಪ್ರಕ್ರಿಯೆಯಂತೆ ಬಭೂವ ಮೊದಲಾದ ರೂಪಗಳು ಸಿದ್ಧಿಸುತ್ತವೆ.

ರೂಪಗಳು: ಬಭೂವ, ಬಭೂವತುಃ, ಬಭೂವುಃ। ಬಭೂವಿಥ, ಬಭೂವಥುಃ, ಬಭೂವ। ಬಭೂವ, ಬಭೂವಿವ, ಬಭೂವಿಮ।

**ಲುಟ್**: ಉದಾ- ಭವಿತಾ- ಪ್ರಥಮಪುರುಷ ಏಕವಚನದಲ್ಲಿ 'ಅಸ್' ಧಾತುವಿಗೆ 'ಲುಟ್' 'ಲ್' ಕಾರದಲ್ಲಿ 'ಭೂ' ಎಂಬ ಆದೇಶ ಬಂದು ಭೂ+ಲುಟ್ ಎಂದಿದ್ದಾಗ ಭ್ವಾದಿ ಪ್ರಕರಣದಲ್ಲಿ ಯಂತೆಯೇ ಪ್ರಕ್ರಿಯೆ ನಡೆದು ಭವಿತಾ ಎಂಬ ರೂಪವು ಸಿದ್ಧವಾಗುತ್ತದೆ. ಇದರಂತೆ ಉಳಿದ ರೂಪಗಳೂ ಸಿದ್ಧವಾಗುತ್ತವೆ

ರೂಪಗಳು: ಭವಿತಾ, ಭವಿತಾರೌ, ಭವಿತಾರಃ। ಭವಿತಾಸಿ, ಭವಿತಾಸ್ಥಃ, ಭವಿತಾಸ್ಥ। ಭವಿತಾಸ್ಮಿ, ಭವಿತಾಸ್ವಃ, ಭವಿತಾಸ್ಮಃ।

**ಲೃಟ್**: ಇಲ್ಲಿಯೂ 'ಅಸ್' ಧಾತುವಿಗೆ 'ಭೂ' ಆದೇಶ ಬಂದು 'ಲೃಟ್' 'ಲ್' ಕಾರದ ರೂಪಗಳು ಭ್ವಾದಿ ಪ್ರಕರಣದಲ್ಲಿಯಂತೆಯೇ ಸಿದ್ಧಿಸುತ್ತವೆ.

ರೂಪಗಳು: ಭವಿಷ್ಯತಿ, ಭವಿಷ್ಯತಃ, ಭವಿಷ್ಯನ್ತಿ। ಭವಿಷ್ಯಸಿ, ಭವಿಷಥಃ, ಭವಿಷ್ಯಥ" ಭವಿಷ್ಯಾಮಿ, ಭವಿಷ್ಯಾವಃ, ಭವಿಷ್ಯಾಮಃ।

**ಲೋಟ್**: (ಸಾರ್ವ ಧಾತುಕ 'ಲ್'ಕಾರ)ಇದು ಸಾರ್ವಧಾತುಕ 'ಲ್' ಕಾರವಾದುದರಿಂದ ಪ್ರಕೃತಸೂತ್ರದಿಂದ 'ಅಸ್' ಧಾತುವಿಗೆ 'ಭೂ' ಆದೇಶ ಬರುವುದಿಲ್ಲ.

ಉದಾ- ಅಸ್ತು/ಸ್ತಾತ್- ಪ್ರಥಮಪುರುಷ ಏಕವಚನದಲ್ಲಿ 'ಅಸ್' ಧಾತುವಿನ ನಂತರ 'ಲೋಟ್' 'ಲ್' ಕಾರ ಬಂದು, ಅದಕ್ಕೆ 'ತಿಪ್(ತಿ)' ಆದೇಶ ಬಂದು ಧಾತುವಿನ ನಂತರ 'ಶಪ್(ಅ)' ವಿಕರಣ ಬಂದು ಲೋಪವಾದಮೇಲೆ ಅಸ್+ತಿ ಎಂದಿದ್ದಾಗ, "ಏರುಃ" ಎಂಬ ಸೂತ್ರದಿಂದ 'ತಿ' ಯಲ್ಲಿರುವ 'ಇ' ಕಾರಕ್ಕೆ 'ಉ' ಕಾರ ಬಂದು ಅಸ್+ತ್+ಉ=ಅಸ್ತು ಎಂದು ರೂಪವು ಸಿದ್ಧವಾಗುತ್ತದೆ. 'ತು' ಗೆ ವೈಕಲ್ಪಿಕವಾಗಿ 'ತಾತಙ್(ತಾತ್)' ಎಂಬ ಆದೇಶ ಬಂದು ಇದು 'ಙಿತ್' ಆಗಿರುವುದರಿಂದ "ಶ್ನಸೋರಲ್ಲೋಪಃ" ಎಂಬುದರಿಂದ 'ಅಸ್' ನಲ್ಲಿರುವ 'ಅ' ಕಾರಕ್ಕೆ ಲೋಪ ಬಂದು, 'ಸ್ತಾತ್' ಎಂಬ ರೂಪವು ಸಿದ್ಧವಾಗುತ್ತದೆ.

ಉದಾ- ಸ್ತಾಮ್, ಸನ್ತು- ಪ್ರಥಮಪುರುಷ ದ್ವಿವಚನದಲ್ಲಿ 'ಅಸ್' ಧಾತುವಿನ 'ತಸ್'

ಗೆ ತಾಮ್ ಆದೇಶ ಬಂದು ಅಸ್+ತಾಮ್ ಎಂದಿದ್ದಾಗ "ಶ್ನಸೋರಲ್ಲೋಪಃ" ಎಂಬುದರಿಂದ 'ಅಸ್' ನಲ್ಲಿರುವ 'ಅ' ಕಾರಕ್ಕೆ ಲೋಪ ಬಂದು ಸ್ತಾಮ್ ಎಂದು ರೂಪವಾಗುತ್ತದೆ.

ಉದಾ- ಸನ್ತು - ಪ್ರಥಮಪುರುಷ ಬಹುವಚನದಲ್ಲಿ ಅಸ್+ಝಿ ಎಂದಿದ್ದಾಗ 'ಝ್' ಗೆ 'ಅನ್ತ್' ಅದೇಶ ಬಂದು ಅಸ್+ಅನ್ತ್+ಇ ಎಂದಿದ್ದಾಗ "ಏರುಃ" ಎಂಬುದರಿಂದ 'ಇ' ಕ್ಕೆ 'ಉ' ಕಾರ ಬಂದು "ಶ್ನಸೋರಲ್ಲೋಪಃ" ಎಂಬುದರಿಂದ 'ಅಸ್' ನಲ್ಲಿರುವ 'ಅ' ಕಾರಕ್ಕೆ ಲೋಪ ಬಂದು ಸನ್ತು ಎಂದು ರೂಪವಾಗುತ್ತದೆ.

ಉದಾ- ಏಧಿ/ಸ್ತಾತ್- ಮಧ್ಯಮಪುರುಷ ಏಕವಚನದಲ್ಲಿ -

**(ಏತ್ವ ಮತ್ತು ಅಭ್ಯಾಸ ಲೋಪಗಳನ್ನು ವಿಧಿಸುವ ಸೂತ್ರ)**

**ಸೂತ್ರ- 578. ಘ್ವಸೋರೇದ್ಧಾವಭ್ಯಾಸಲೋಪಶ್ಚ (6.4.119)**

ವೃತ್ತಿಃ-ಘೋಃ ಅಸ್ತೇಶ್ಚ ಏತ್ವಂ ಸ್ಯಾತ್ ಹೌ ಪರೇ ಅಭ್ಯಾಸಲೋಪಶ್ಚ। ಏತ್ವಸ್ಯ ಅಸಿದ್ಧತ್ವಾತ್ ಹೇಃ ಧಿಃ। ಶ್ನಸೋರಿತಿ ಅಲ್ಲೋಪಃ । ತಾತಙ್ ಪಕ್ಷೇ ಏತ್ವಂ ನ, ಪರೇಣ ತಾತಙಾ ಬಾಧಾತ್। ಏಧಿ, ಸ್ತಾತ್। ಸ್ತಮ್। ಸ್ತ। ಅಸಾನಿ। ಅಸಾವ। ಅಸಾಮ। ಆಸೀತ್। ಆಸ್ತಾಮ್। ಆಸನ್। ಸ್ಯಾತ್। ಸ್ಯಾತಾಮ್। ಸ್ಯುಃ। ಭೂಯಾತ್। ಅಭೂತ್, ಅಭವಿಷ್ಯತ್।

ಇಣ್ ಗತೌ। 18) ಏತಿ। ಇತಃ।

ಪ. ಛೇ. - ಘ್ವಸೋಃ, ಏತ್, ಹೌ, ಅಭ್ಯಾಸಲೋಪಃ, ಚ।

ಅರ್ಥ- 'ಹಿ' ಪರದಲ್ಲಿದ್ದಾಗ, 'ಘು' ಸಂಜ್ಞಕ ಧಾತು ಮತ್ತು 'ಅಸ್' ಧಾತುಗಳಿಗೆ 'ಏ' ಕಾರವು ಆದೇಶವಾಗಿ ಬರುತ್ತದೆ. ಮತ್ತು ಅಭ್ಯಾಸದ ಲೋಪವಾಗುತ್ತದೆ.

ಉದಾ- ಏಧಿ - ಮಧ್ಯಮಪುರುಷ ಏಕವಚನದಲ್ಲಿ 'ಅಸ್' ಧಾತುವಿನಮೇಲೆ 'ಸಿಪ್(ಸಿ)' ಬಂದು, ಅಸ್+ಸಿ ಎಂದಿದ್ದಾಗ ಧಾತುವಿನ ಪರದಲ್ಲಿ 'ಶಪ್(ಅ)' ಬಂದು ಅದಕ್ಕೆ ಲುಕ್(ಲೋಪ) ಬಂದು ಅಸ್+ಸಿ ಎಂದಿದ್ದಾಗ "ಸೇರ್ಹ್ಯಪಿಚ್ಚ" ಎಂಬುದರಿಂದ 'ಸಿಪ್' ನಲ್ಲಿರುವ 'ಸ್' ಗೆ 'ಹಿ' ಆದೇಶ ಬಂದು (ಅದು ಅಪಿತ್ ಆಗಿರುತ್ತದೆ) ಈ ರೀತಿಯಾಗಿ ಅಸ್+ಹಿ ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ಸ್' ಕಾರಕ್ಕೆ 'ಏ' ತ್ವ ಬಂದು ಅ+ಏ+ಹಿ ಎಂದಿರುತ್ತದೆ. "ಹೂಝಲ್ಭ್ಯೋ ಹೇರ್ಧಿಃ" ಎಂಬ ಸೂತ್ರದಿಂದ 'ಹಿ' ಗೆ 'ಧಿ' ಬರಬೇಕಾಗಿತ್ತು).

ಆದರೆ ಪ್ರಕೃತಸೂತ್ರವಾದ ಘ್ವಸೋರೇದ್ಧಾವಭ್ಯಾಸಲೋಪಶ್ಚ (6.4.119) ಎಂಬುದು ಪರಸೂತ್ರವಾಗೋಣದರಿಂದ ಪೂರ್ವಸೂತ್ರವಾದ "ಹೂಝಲ್ಭ್ಯೋ ಹೇರ್ಧಿಃ" (64-4-101) ಎಂಬುದನ್ನು ಬಾಧಿಸಿ ಪ್ರವೃತ್ತವಾಗುತ್ತದೆ. ಈಗ "ಅಲೋಽನ್ತ್ಯಸ್ಯ" ಪರಿಭಾಷೆಯಿಂದ 'ಅಸ್' ನಲ್ಲಿರುವ 'ಸ್' ಕಾರಕ್ಕೆ ಏತ್ವವು(ಏ) ಬರುವುದು. ಆಗ ಅ+ಏ+ಹಿ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ವಿಹಿತವಾದ 'ಏ' ಕಾರವು 'ಅಸಿದ್ಧವದತ್ರಾಭಾತ್" ಎಂಬ ಸೂತ್ರದಿಂದ ಅಸಿದ್ಧವಾಗಿರುವುದರಿಂದ ('ಏ' ಕಾರವು ಬಂದದ್ದು ಗೊತ್ತಾಗದೆ 'ಸ್' ಕಾರವು ಇರುವಂತೆಯೇ ಭಾವಿಸುತ್ತದೆ). ಆದ್ದರಿಂದ 'ಹಿ'

ಎಂಬ ವರ್ಣವು 'ಝಲ್' ವರ್ಣವಾದ 'ಸ್' ಕಾರದ ಪರದಲ್ಲಿರುವುದು. ಆದುದರಿಂದ 'ಹಿ' ಗೆ 'ಧಿ' ಆದೇಶವು ಬರುತ್ತದೆ. 'ಹಿ' ಇದು ಅಪಿತ್ ಆಗಿರುವುದರಿಂದ "ಸಾರ್ವಧಾತುಕಮಪಿತ್" ಎಂಬುದರಿಂದ ಜಿದ್ವದ್ಭಾವವು ಬರುವುದು. ಆದ್ದರಿಂದ "ಶ್ನಸೋರಲ್ಲೋಪಃ" ಎಂಬ ಸೂತ್ರದಿಂದ 'ಅ' ಕಾರ ಲೋಪವಾಗಿ ಏಧಿ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ–ಸ್ತಾತ್(ವೈಕಲ್ಪಿಕರೂಪ)–ಏತ್ವವಿಧಾಯಕ ಪ್ರಕೃತ ಸೂತ್ರಕ್ಕಿಂತ "ತುಹ್ಯೋಸ್ತಾತಙಾಶಿಷಿ ಅನ್ಯತರಸ್ಯಾಮ್" (7.1.35) ಎಂಬ ಸೂತ್ರವು ಪರವಾಗಿರುವುದರಿಂದ 'ಹಿ'ಗೆ ಪೂರ್ವದಲ್ಲಿಯೇ 'ತಾತಙ್(ತಾತ್)' ಆದೇಶವು ಬರುವುದು. ಅದು ಬಂದ ನಂತರ 'ಹಿ' ಇರುವುದಿಲ್ಲವಾದ್ದರಿಂದ ಏತ್ವವು ಬಾರದೇ ಸ್ತಾತ್ ಎಂಬ ವೈಕಲ್ಪಿಕ ರೂಪವು ಸಿದ್ಧವಾಗುತ್ತದೆ.

ಉದಾ– ಸ್ತಮ್– ಮಧ್ಯಮಪುರುಷ ದ್ವಿವಚನದಲ್ಲಿ ತಮ್ ಆದೇಶ ಬಂದು ಅಸ್+ತಮ್ ಎಂದಿದ್ದಾಗ, ಹಿಂದಿನಂತೆಯೇ 'ಅ' ಕಾರಲೋಪವಾಗಿ ಸ್+ತಮ್=ಸ್ತಮ್ ಎಂದಾಗುತ್ತದೆ.

ಉದಾ– ಸ್ತ–ಇದೇ ರೀತಿಯಲ್ಲಿ ಮಧ್ಯಮಪುರುಷ ಬಹುವಚನದಲ್ಲಿ 'ತ' ಪ್ರತ್ಯಯವನ್ನು ಸೇರಿಸಿದಾಗ, ಅಸ್+ತ ಎಂದಿದ್ದಾಗ ಹಿಂದಿನಂತೆಯೇ 'ಅ' ಕಾರಲೋಪವಾಗಿ ಸ್+ತ=ಸ್ತ ಎಂದಾಗುತ್ತದೆ.

ಉದಾ– ಅಸಾನಿ– ಉತ್ತಮಪುರುಷ ಏಕವಚನದಲ್ಲಿ "ಆಡುತ್ತಮಸ್ಯ ಪಿಚ್ಚ" ಎಂಬ ಸೂತ್ರದಿಂದ ಬಂದಿರುವ 'ಆಟ್' ಆಗಮವು 'ಪಿತ್' ಆಗಿರುವುದರಿಂದ ಜಿದ್ವದ್ಭಾವವು ಬರುವುದಿಲ್ಲ. ಆದ್ದರಿಂದ 'ಅ' ಕಾರಕ್ಕೆ ಲೋಪ ಬರುವುದಿಲ್ಲ. ಹೀಗೆ ಅಸ್+ಆನಿ=ಅಸಾನಿ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಅಸಾವ, ಅಸಾಮ– ಮೇಲಿನ ಏಕವಚನ ಪ್ರಕ್ರಿಯೆಯನ್ನು ಅನುಸರಿಸಿ ಉತ್ತಮಪುರುಷದ ದ್ವಿವಚನ ಮತ್ತು ಬಹುವಚನದ ರೂಪಗಳಾದ ಅಸ್+ಆವ=ಅಸಾವ, ಮತ್ತು ಅಸ್+ಆಮ =ಅಸಾಮ ಎಂಬ ರೂಪಗಳು ಸಿದ್ಧವಾಗಿವೆ.

**ಲಙ್**: ಉದಾ– ಆಸೀತ್ – ಪ್ರಥಮಪುರುಷ ಏಕವಚನದಲ್ಲಿ ಆ+ಅಸ್+ತಿ ಎಂದಿದ್ದಾಗ 'ತಿ' ನಲ್ಲಿರುವ 'ಇ' ಕಾರಕ್ಕೆ "ಇತಶ್ಚ" ಎಂಬುದರಿಂದ ಲೋಪ ಬಂದು ಆ+ಅಸ್+ತ್ ಎಂದಿದ್ದಾಗ, "ಅಸ್ತಿಸಿಚೋಽಪೃಕ್ತೇ" ಎಂಬುದರಿಂದ 'ತ್' ಗೆ 'ಈಟ್' ಆಗಮ ಬಂದು ಆ+ಅಸ್+ಈತ್ ಎಂದಿದ್ದಾಗ 'ಆ' ಕಾರ 'ಅ' ಕಾರಗಳಿಗೆ ಸವರ್ಣದೀರ್ಘ ಬಂದು ಆಸ್+ಈತ್=ಆಸೀತ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಆಸೀಃ – ಮಧ್ಯಮಪುರುಷ ಏಕವಚನದಲ್ಲಿ ಆ+ಅಸ್+ಸ್ ಎಂದಿದ್ದಾಗ, 'ಸ್' ಕಾರವು ಅಪೃಕ್ತವಾಗಿರುವುದರಿಂದ ಹಿಂದಿನಂತೆಯೇ ಅದಕ್ಕೆ 'ಈಟ್(ಈ)' ಆಗಮವು ಬಂದು ಆಸ್+ಅಸ್+ಈಸ್ ಎಂದಿದ್ದಾಗ, ಹಿಂದಿನ ಪ್ರಕ್ರಿಯೆಯಂತೆಯೆ ಪ್ರಕ್ರಿಯೆ ನಡೆದು ನಂತರ ರುತ್ವ–ವಿಸರ್ಗಗಳಿಂದ ಆಸೀಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಆಸಮ್– ಉತ್ತಮಪುರುಷ ಏಕವಚನದಲ್ಲಿ 'ಅಮ್' ಪ್ರತ್ಯಯವನ್ನು ಸೇರಿಸಿದಾಗ

ಹಿಂದಿನಂತೆಯೇ ಪ್ರಕ್ರಿಯೆ ನಡೆದು ಆಸಮ್ ಎಂಬ ರೂಪವು ಸಿದ್ಧವಾಗುತ್ತದೆ.

ದ್ವಿವಚನ ರೂಪಗಳಲ್ಲಿ "ಶ್ನಸೋರಲ್ಲೋಪಃ" ಎಂಬುದರಿಂದ 'ಅ' ಕಾರ ಲೋಪವಾದರೂ "ಆಡಜಾದೀನಾಮ್" ಎಂಬುದರಿಂದ ಬರುವ 'ಆ' ಕಾರವು ಇದ್ದೇ ಇರುತ್ತದೆ. ಹೀಗಾಗಿ ಈ ಅಪಿತ್ ಆದ 6 ರೂಪಗಳಲ್ಲೂ ತಾಮ್, ಅನ್, ಥಸ್, ಥ ಮತ್ತು ವ, ಮ ಎಂಬ ಆಖ್ಯಾತ ಪ್ರತ್ಯಯಗಳನ್ನು ಸೇರಿಸಿದಾಗ, ಹಿಂದಿನ ಪ್ರಕ್ರಿಯೆಯಂತೆಯೇ ಪ್ರಕ್ರಿಯೆ ನಡೆದು ಕ್ರಮವಾಗಿ ಆಸ್ತಾಮ್, ಆಸನ್, ಆಸಮ್, ಆಸ್ತ, ಆಸ್ವ ಆಸ್ಮ ಎಂಬ ರೂಪಗಳು ಸಿದ್ಧಿಸುತ್ತವೆ,

ರೂಪಗಳು: ಆಸೀತ್, ಆಸ್ತಾಮ್, ಆಸನ್। ಆಸೀಃ ಆಸ್ತಮ್, ಆಸ್ತ। ಆಸಮ್, ಆಸ್ವ, ಆಸ್ಮ।

**ವಿಧಿಲಿಙ್**: ರೂಪಗಳು: ಸ್ಯಾತ್, ಸ್ಯಾತಾಮ್, ಸ್ಯುಃ। ಸ್ಯಾಃ, ಸ್ಯಾತಮ್, ಸ್ಯಾತ। ಸ್ಯಾಮ್, ಸ್ಯಾವ , ಸ್ಯಾಮ।

ವಿವರಣೆ: 'ವಿಧಿಲಿಙ್'ನಲ್ಲಿ 'ಯಾಸುಟ್(ಯಾಸ್)' ಆಗಮ ಬಂದು ಅದಕ್ಕೆ ಙಿದ್ವದ್ಭಾವ ಬರುತ್ತದೆ. 9 ರೂಪಗಳಲ್ಲೂ, 'ಯಾಸುಟ್(ಯಾಸ್)' ಗೆ ಙಿದ್ವದ್ಭಾವ ಬರುವುದರಿಂದ "ಶ್ನಸೋರಲ್ಲೋಪಃ" ಎಂಬ ಸೂತ್ರದಿಂದ 'ಅಸ್' ನಲ್ಲಿರುವ 'ಅ' ಕಾರಕ್ಕೆ ಲೋಪ ಬಂದು 'ಸ್' ಮಾತ್ರ ಉಳಿಯುತ್ತದೆ. ಇದಕ್ಕೆ 'ಲಿಙ್' 'ಲ್' ಕಾರದ ಪ್ರತ್ಯಯಗಳನ್ನು ಸೇರಿಸಿದಾಗ, ಮೇಲಿನ ರೂಪಗಳು ಸಿದ್ಧವಾಗುತ್ತವೆ.

**ಆಶೀರ್ಲಿಙ್**: ರೂಪಗಳು: ಭೂಯಾತ್, ಭೂಯಾಸ್ತಾಮ್, ಭೂಯಾಸುಃ। ಭೂಯಾಃ, ಭೂಯಾಸ್ತಮ್, ಭೂಯಾಸ್ತ। ಭೂಯಾಸಮ್, ಭೂಯಾಸ್ವ, ಭೂಯಾಸ್ಮ।

ವಿವರಣೆ: 'ಆಶೀರ್ಲಿಙ್' ನಲ್ಲಿ 'ಲಿಙ್' 'ಲ್' ಕಾರಕ್ಕೆ 'ಲಿಙಾಶಿಷೀ" ಎಂಬ ಸೂತ್ರದಿಂದ ಆರ್ಧಧಾತುಕ ಸಂಜ್ಞೆ ಬಂದು "ಅಸ್ತೇರ್ಭೂಃ" ಎಂಬ ಸೂತ್ರದಿಂದ 'ಅಸ್' ಧಾತುವಿಗೆ 'ಭೂ' ಆದೇಶ ಬಂದು, ಮೊದಲನೇ ಗಣದ 'ಭೂ' ಧಾತುವಿನ ರೂಪದಂತಿರುವ ರೂಪಗಳು ಬಂದು ಮೇಲಿನ ರೂಪಗಳು ಸಿದ್ಧವಾಗುತ್ತವೆ.

**ಲುಙ್**: ರೂಪಗಳು: ಅಭೂತ್, ಅಭೂತಾಮ್, ಅಭೂವನ್। ಅಭೂಃ, ಅಭೂತಮ್, ಅಭೂತ। ಅಭೂವಮ್, ಅಭೂವ, ಅಭೂಮ।

ವಿವರಣೆ: ಇಲ್ಲಿ 'ಸಿಚ್' ಗೆ ಆರ್ಧಧಾತುಕ ಸಂಜ್ಞೆ ಬಂದು ಹಿಂದಿನಂತೆಯೇ 'ಅಸ್' ಗೆ 'ಭೂ' ಆದೇಶ ಬರುತ್ತದೆ. ಮೊದಲನೆಯ ಗಣದ 'ಭೂ' ಧಾತುವಿನಂತೆ 'ಸಿಚ್' ಗೆ 'ಲುಕ್(ಲೋಪ)' ಮೊದಲಾದವುಗಳು ಬಂದು ಮೇಲಿನ ರೂಪಗಳು ಸಿದ್ಧವಾಗುತ್ತವೆ.

**ಲೃಙ್**: ರೂಪಗಳು: ಅಭವಿಷ್ಯತ್, ಅಭವಿಷ್ಯತಾಮ್, ಅಭವಿಷ್ಯನ್। ಅಭವಿಷ್ಯಃ, ಅಭವಿಷ್ಯತಮ್, ಅಭವಿಷ್ಯತ। ಅಬವಿಷ್ಯಮ್, ಅಭವಿಷ್ಯಾವ, ಅಭವಿಷ್ಯಾಮ।

17. ಇಣ್ ಗತೌ– (ಗತ್ಯರ್ಥಕವಾಗಿದೆ.) ಇದರಲ್ಲಿ 'ಇ'ಮಾತ್ರ ಉಳಿಯುತ್ತದೆ.

ವಿವರಣೆ: ಈ ಧಾತುವಿಗೆ 'ಣ್' ಕಾರವು 'ಇತ್' ಆಗಿ ಧಾತುಪಾಠದಲ್ಲಿ ಸೇರಿಸಿರುವದರ ಉದ್ದೇಶವೇನೆಂದರೆ "ಇಣೋಯಣ್" ಮತ್ತು "ಇಣೋಗಾಲುಙಿ" ಮೊದಲಾದ

ಎಂಬ ವರ್ಣವು 'ಝಲ್' ವರ್ಣವಾದ 'ಸ್' ಕಾರದ ಪರದಲ್ಲಿರುವುದು. ಆದುದರಿಂದ 'ಹಿ' ಗೆ 'ಧಿ' ಆದೇಶವು ಬರುತ್ತದೆ. 'ಹಿ' ಇದು ಅಪಿತ್ ಆಗಿರುವುದರಿಂದ "ಸಾರ್ವಧಾತುಕಮಪಿತ್" ಎಂಬುದರಿಂದ ಜಿದ್ವದ್ಭಾವವು ಬರುವುದು. ಆದ್ದರಿಂದ "ಶ್ನಸೋರಲ್ಲೋಪಃ" ಎಂಬ ಸೂತ್ರದಿಂದ 'ಅ' ಕಾರ ಲೋಪವಾಗಿ ಏಧಿ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ–ಸ್ತಾತ್(ವೈಕಲ್ಪಿಕರೂಪ)–ಏತ್ವವಿಧಾಯಕ ಪ್ರಕೃತ ಸೂತ್ರಕ್ಕಿಂತ "ತುಹ್ಯೋಸ್ತಾತಙಾಶಿಷಿ ಅನ್ಯತರಸ್ಯಾಮ್" (7.1.35) ಎಂಬ ಸೂತ್ರವು ಪರವಾಗಿರುವುದರಿಂದ 'ಹಿ'ಗೆ ಪೂರ್ವದಲ್ಲಿಯೇ 'ತಾತಙ್(ತಾತ್)' ಆದೇಶವು ಬರುವುದು. ಅದು ಬಂದ ನಂತರ 'ಹಿ' ಇರುವುದಿಲ್ಲವಾದ್ದರಿಂದ ಏತ್ವವು ಬಾರದೇ ಸ್ತಾತ್ ಎಂಬ ವೈಕಲ್ಪಿಕ ರೂಪವು ಸಿದ್ಧವಾಗುತ್ತದೆ.

ಉದಾ– ಸ್ತಮ್– ಮಧ್ಯಮಪುರುಷ ದ್ವಿವಚನದಲ್ಲಿ ತಮ್ ಆದೇಶ ಬಂದು ಅಸ್+ತಮ್ ಎಂದಿದ್ದಾಗ, ಹಿಂದಿನಂತೆಯೇ 'ಅ' ಕಾರಲೋಪವಾಗಿ ಸ್+ತಮ್=ಸ್ತಮ್ ಎಂದಾಗುತ್ತದೆ.

ಉದಾ– ಸ್ತ–ಇದೇ ರೀತಿಯಲ್ಲಿ ಮಧ್ಯಮಪುರುಷ ಬಹುವಚನದಲ್ಲಿ 'ತ' ಪ್ರತ್ಯಯವನ್ನು ಸೇರಿಸಿದಾಗ, ಅಸ್+ತ ಎಂದಿದ್ದಾಗ ಹಿಂದಿನಂತೆಯೇ 'ಅ' ಕಾರಲೋಪವಾಗಿ ಸ್+ತ=ಸ್ತ ಎಂದಾಗುತ್ತದೆ.

ಉದಾ– ಅಸಾನಿ– ಉತ್ತಮಪುರುಷ ಏಕವಚನದಲ್ಲಿ "ಆಡುತ್ತಮಸ್ಯ ಪಿಚ್ಚ" ಎಂಬ ಸೂತ್ರದಿಂದ ಬಂದಿರುವ 'ಆಟ್' ಆಗಮವು 'ಪಿತ್' ಆಗಿರುವುದರಿಂದ ಜಿದ್ವದ್ಭಾವವು ಬರುವುದಿಲ್ಲ. ಆದ್ದರಿಂದ 'ಅ' ಕಾರಕ್ಕೆ ಲೋಪ ಬರುವುದಿಲ್ಲ. ಹೀಗೆ ಅಸ್+ಆನಿ=ಅಸಾನಿ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಅಸಾವ, ಅಸಾಮ– ಮೇಲಿನ ಏಕವಚನ ಪ್ರಕ್ರಿಯೆಯನ್ನು ಅನುಸರಿಸಿ ಉತ್ತಮಪುರುಷದ ದ್ವಿವಚನ ಮತ್ತು ಬಹುವಚನದ ರೂಪಗಳಾದ ಅಸ್+ಆವ=ಅಸಾವ, ಮತ್ತು ಅಸ್+ಆಮ =ಅಸಾಮ ಎಂಬ ರೂಪಗಳು ಸಿದ್ಧವಾಗಿವೆ.

**ಲಙ್**: ಉದಾ– ಆಸೀತ್ – ಪ್ರಥಮಪುರುಷ ಏಕವಚನದಲ್ಲಿ ಆ+ಅಸ್+ತಿ ಎಂದಿದ್ದಾಗ 'ತಿ' ನಲ್ಲಿರುವ 'ಇ' ಕಾರಕ್ಕೆ "ಇತಶ್ಚ" ಎಂಬುದರಿಂದ ಲೋಪ ಬಂದು ಆ+ಅಸ್+ತ್ ಎಂದಿದ್ದಾಗ, "ಅಸ್ತಿಸಿಚೋಽಪೃಕ್ತೇ" ಎಂಬುದರಿಂದ 'ತ್' ಗೆ 'ಈಟ್' ಆಗಮ ಬಂದು ಆ+ಅಸ್+ಈತ್ ಎಂದಿದ್ದಾಗ 'ಆ' ಕಾರ 'ಅ' ಕಾರಗಳಿಗೆ ಸವರ್ಣದೀರ್ಘ ಬಂದು ಆಸ್+ಈತ್=ಆಸೀತ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಆಸೀಃ – ಮಧ್ಯಮಪುರುಷ ಏಕವಚನದಲ್ಲಿ ಆ+ಅಸ್+ಸ್ ಎಂದಿದ್ದಾಗ, 'ಸ್' ಕಾರವು ಅಪೃಕ್ತವಾಗಿರುವುದರಿಂದ ಹಿಂದಿನಂತೆಯೇ ಅದಕ್ಕೆ 'ಈಟ್(ಈ)' ಆಗಮವು ಬಂದು ಆಸ್+ಅಸ್+ಈಸ್ ಎಂದಿದ್ದಾಗ, ಹಿಂದಿನ ಪ್ರಕ್ರಿಯೆಯಂತೆಯೆ ಪ್ರಕ್ರಿಯೆ ನಡೆದು ನಂತರ ರುತ್ವ–ವಿಸರ್ಗಗಳಿಂದ ಆಸೀಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಆಸಮ್– ಉತ್ತಪುರುಷ ಏಕವಚನದಲ್ಲಿ 'ಅಮ್' ಪ್ರತ್ಯಯವನ್ನು ಸೇರಿಸಿದಾಗ

ಹಿಂದಿನಂತೆಯೇ ಪ್ರಕ್ರಿಯೆ ನಡೆದು ಆಸಮ್ ಎಂಬ ರೂಪವು ಸಿದ್ಧವಾಗುತ್ತದೆ.

ದ್ವಿವಚನ ರೂಪಗಳಲ್ಲಿ "ಶ್ನಸೋರಲ್ಲೋಪಃ" ಎಂಬುದರಿಂದ 'ಅ' ಕಾರ ಲೋಪವಾದರೂ "ಆಡಜಾದೀನಾಮ್" ಎಂಬುದರಿಂದ ಬರುವ 'ಆ' ಕಾರವು ಇದ್ದೇ ಇರುತ್ತದೆ. ಹೀಗಾಗಿ ಈ ಅಪಿತ್ ಆದ 6 ರೂಪಗಳಲ್ಲೂ ತಾಮ್, ಅನ್, ಥಸ್, ಥ ಮತ್ತು ವ, ಮ ಎಂಬ ಆಖ್ಯಾತ ಪ್ರತ್ಯಯಗಳನ್ನು ಸೇರಿಸಿದಾಗ, ಹಿಂದಿನ ಪ್ರಕ್ರಿಯೆಯಂತೆಯೇ ಪ್ರಕ್ರಿಯೆ ನಡೆದು ಕ್ರಮವಾಗಿ ಆಸ್ತಾಮ್, ಆಸನ್, ಆಸಮ್, ಆಸ್ತ, ಆಸ್ವ ಆಸ್ಮ ಎಂಬ ರೂಪಗಳು ಸಿದ್ಧಿಸುತ್ತವೆ,

ರೂಪಗಳು: ಆಸೀತ್, ಆಸ್ತಾಮ್, ಆಸನ್। ಆಸೀಃ ಆಸ್ತಮ್, ಆಸ್ತ। ಆಸಮ್, ಆಸ್ವ, ಆಸ್ಮ।

**ವಿಧಿಲಿಙ್**: ರೂಪಗಳು: ಸ್ಯಾತ್, ಸ್ಯಾತಾಮ್, ಸ್ಯುಃ। ಸ್ಯಾಃ, ಸ್ಯಾತಮ್, ಸ್ಯಾತ। ಸ್ಯಾಮ್, ಸ್ಯಾವ , ಸ್ಯಾಮ।

ವಿವರಣೆ: 'ವಿಧಿಲಿಙ್'ನಲ್ಲಿ 'ಯಾಸುಟ್(ಯಾಸ್)' ಆಗಮ ಬಂದು ಅದಕ್ಕೆ ಙಿದ್ವದ್ಭಾವ ಬರುತ್ತದೆ. 9 ರೂಪಗಳಲ್ಲೂ, 'ಯಾಸುಟ್(ಯಾಸ್)' ಗೆ ಙಿದ್ವದ್ಭಾವ ಬರುವುದರಿಂದ "ಶ್ನಸೋರಲ್ಲೋಪಃ" ಎಂಬ ಸೂತ್ರದಿಂದ 'ಅಸ್' ನಲ್ಲಿರುವ 'ಅ' ಕಾರಕ್ಕೆ ಲೋಪ ಬಂದು 'ಸ್' ಮಾತ್ರ ಉಳಿಯುತ್ತದೆ. ಇದಕ್ಕೆ 'ಲಿಙ್' 'ಲ್' ಕಾರದ ಪ್ರತ್ಯಯಗಳನ್ನು ಸೇರಿಸಿದಾಗ, ಮೇಲಿನ ರೂಪಗಳು ಸಿದ್ಧವಾಗುತ್ತವೆ.

**ಆಶೀರ್ಲಿಙ್**: ರೂಪಗಳು: ಭೂಯಾತ್, ಭೂಯಾಸ್ತಾಮ್, ಭೂಯಾಸುಃ। ಭೂಯಾಃ, ಭೂಯಾಸ್ತಮ್, ಭೂಯಾಸ್ತ। ಭೂಯಾಸಮ್, ಭೂಯಾಸ್ವ, ಭೂಯಾಸ್ಮ।

ವಿವರಣೆ: 'ಆಶೀರ್ಲಿಙ್' ನಲ್ಲಿ 'ಲಿಙ್' 'ಲ್' ಕಾರಕ್ಕೆ 'ಲಿಙಾಶಿಷೀ" ಎಂಬ ಸೂತ್ರದಿಂದ ಆರ್ಧಧಾತುಕ ಸಂಜ್ಞೆ ಬಂದು "ಅಸ್ತೇರ್ಭೂಃ" ಎಂಬ ಸೂತ್ರದಿಂದ 'ಅಸ್' ಧಾತುವಿಗೆ 'ಭೂ' ಆದೇಶ ಬಂದು, ಮೊದಲನೇ ಗಣದ 'ಭೂ' ಧಾತುವಿನ ರೂಪದಂತಿರುವ ರೂಪಗಳು ಬಂದು ಮೇಲಿನ ರೂಪಗಳು ಸಿದ್ಧವಾಗುತ್ತವೆ.

**ಲುಙ್**: ರೂಪಗಳು: ಅಭೂತ್, ಅಭೂತಾಮ್, ಅಭೂವನ್। ಅಭೂಃ, ಅಭೂತಮ್, ಅಭೂತ। ಅಭೂವಮ್, ಅಭೂವ, ಅಭೂಮ।

ವಿವರಣೆ: ಇಲ್ಲಿ 'ಸಿಚ್' ಗೆ ಆರ್ಧಧಾತುಕ ಸಂಜ್ಞೆ ಬಂದು ಹಿಂದಿನಂತೆಯೇ 'ಅಸ್' ಗೆ 'ಭೂ' ಆದೇಶ ಬರುತ್ತದೆ. ಮೊದಲನೆಯ ಗಣದ 'ಭೂ' ಧಾತುವಿನಂತೆ 'ಸಿಚ್' ಗೆ 'ಲುಕ್(ಲೋಪ)' ಮೊದಲಾದವುಗಳು ಬಂದು ಮೇಲಿನ ರೂಪಗಳು ಸಿದ್ಧವಾಗುತ್ತವೆ.

**ಲೃಙ್**: ರೂಪಗಳು: ಅಭವಿಷ್ಯತ್, ಅಭವಿಷ್ಯತಾಮ್, ಅಭವಿಷ್ಯನ್। ಅಭವಿಷ್ಯಃ, ಅಭವಿಷ್ಯತಮ್, ಅಭವಿಷ್ಯತ। ಅಬವಿಷ್ಯಮ್, ಅಭವಿಷ್ಯಾವ, ಅಭವಿಷ್ಯಾಮ।

17. ಇಣ್ ಗತೌ– (ಗತ್ಯರ್ಥಕವಾಗಿದೆ.) ಇದರಲ್ಲಿ 'ಇ'ಮಾತ್ರ ಉಳಿಯುತ್ತದೆ.

ವಿವರಣೆ: ಈ ಧಾತುವಿಗೆ 'ಣ್' ಕಾರವು 'ಇತ್' ಆಗಿ ಧಾತುಪಾಠದಲ್ಲಿ ಸೇರಿಸಿರುವದರ ಉದ್ದೇಶವೇನೆಂದರೆ "ಇಣೋಯಣ್" ಮತ್ತು "ಇಣೋಗಾಲುಙಿ" ಮೊದಲಾದ

ಸೂತ್ರಗಳಲ್ಲಿ ಇದೇ ಧಾತುವು ಸ್ವೀಕೃತವಾಗಬೇಕೇ ಹೊರತು 'ಇಙ್' ಮೊದಲಾದವುಗಳು ಗೃಹೀತವಾಗಬಾರದೆಂಬುದು.

**ಲಟ್:** ಉದಾ– ಏತಿ– ಪ್ರಥಮಪುರುಷ ಏಕವಚನದಲ್ಲಿ 'ಇಣ್ (ಇ)' ಧಾತುವಿನ ನಂತರ ಲಡಾದೇಶವಾದ 'ತಿಪ್(ತಿ)' ಬಂದು ಧಾತುವಿನ ನಂತರ 'ಶಪ್(ಅ)' ಬಂದು ಆದಕ್ಕೆ 'ಲುಕ್ (ಲೋಪ)' ಬಂದಮೇಲೆ ಇ+ತಿ ಎಂದಿದ್ದಾಗ, "ಸಾರ್ವಧಾತುಕಾರ್ಧ ಧಾತುಕಯೋಃ" ಎಂಬ ಸೂತ್ರದಿಂದ 'ಇ' ಕಾರಕ್ಕೆ ಗುಣ ಬಂದು ಏತಿ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಇತಃ – ಪ್ರಥಮಪುರುಷ ದ್ವಿವಚನದಲ್ಲಿ– 'ಇ' ಧಾತುವಿನಮೇಲೆ 'ತಸ್' ಪ್ರತ್ಯಯ ಸೇರಿಸಿ ಇ+ತಸ್ ಎಂದಿದ್ದಾಗ, ರುತ್ವ–ವಿಸರ್ಗಗಳಿಂದ ಇತಃ ಎಂಬ ರೂಪವು ಸಿದ್ಧವಾಗುತ್ತದೆ.

**(ಯಣ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ– 579.ಇಣೋ ಯಣ್ (6.4.81)**

ವೃತ್ತಿಃ–ಅಜಾದೌ ಪ್ರತ್ಯಯೇ ಪರೇ। ಯನ್ತಿ।

ಪ. ಛೇ. – ಇಣಃ, ಯಣ್।

ಅ.ವ್ಯ.– "ಅಚಿ–ಶ್ನು–ಧಾತು ಭ್ರುವಾಮ್ ಯ್ವೋರಿಯಙುವಙೌ" ಎಂಬ ಸೂತ್ರದಿಂದ 'ಅಚಿ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– ಅಜಾದಿ ಪ್ರತ್ಯಯ ಪರದಲ್ಲಿದ್ದಾಗ, 'ಇಣ್(ಇ)' ಧಾತುವಿಗೆ 'ಯಣ್(ಯ್)' ಆದೇಶವು ಬರುತ್ತದೆ.

ಉದಾ– ಯನ್ತಿ – ಪ್ರಥಮಪುರುಷ ಬಹುವಚನದಲ್ಲಿ 'ಇಣ್(ಇ)' ಧಾತುವಿನ ನಂತರ 'ಝಿ' ಪ್ರತ್ಯಯವನ್ನು ಸೇರಿಸಿ ಇ+ಝಿ (ಝ್+ಇ) ಎಂದಿದ್ದಾಗ, "ಝೋಽನ್ತಃ" ಎಂಬುದರಿಂದ 'ಝ್' ಗೆ 'ಅನ್ತ್' ಆದೇಶ ಬಂದು ಇ+ಅನ್ತ್+ಇ ಎಂದಿದ್ದಾಗ, "ಇಕೋಯಣಚಿ" ಎಂಬ ಸೂತ್ರದಿಂದ 'ಯಣ್' ಆದೇಶ ಬರಬೇಕಾಗಿತ್ತು, ಆದರೆ ಅದನ್ನು ಬಾಧಿಸಿ "ಅಚಿ–ಶ್ನು–ಧಾತು ಭ್ರುವಾಮ್ ಯ್ವೋರಿಯಙುವಙೌ" ಎಂಬ ಸೂತ್ರದಿಂದ 'ಇಯಙ್(ಇಯ್)' ಆದೇಶವೂ ಬರಬೇಕಾಗಿತ್ತು, ಅದನ್ನೂ ಬಾಧಿಸಿ ಪ್ರಕೃತ ಸೂತ್ರದಿಂದ 'ಇ' ಕಾರಕ್ಕೆ 'ಯಣ್(ಯ್)' ಆದೇಶವಾಗಿ ಬಂದು ಯ್+ಅನ್ತ್+ಇ=ಯನ್ತಿ ಎಂದು ರೂಪವು ಸಿದ್ಧವಾಗುತ್ತದೆ.

ರೂಪಗಳು : ಏತಿ, ಇತಃ, ಯನ್ತಿ। ಏಷಿ, ಇಥಃ, ಇಥ। ಏಮಿ, ಇವಃ, ಇಮಃ।

**ಲಿಟ್:**

**(ಇಯಙ್–ಉವಙ್ ಆದೇಶಗಳನ್ನು ವಿಧಿಸುವ ಸೂತ್ರ)**

**ಸೂತ್ರ– 580.ಅಭ್ಯಾಸಸ್ಯಾಸವರ್ಣೇ (6.4.78)**

ವೃತ್ತಿಃ–ಅಭ್ಯಾಸಸ್ಯ ಇವರ್ಣ–ಉವರ್ಣಯೋಃ ಇಯಙ್–ಉವಙೌ ಸ್ತಃ, ಅಸವರ್ಣೇ

ಅಚಿ । ಇ0ಯಾ0ಯ।

ಪ. ಛೇ. – ಅಭ್ಯಾಸಸ್ಯ, ಅಸವರ್ಣೇ।

ಅ. ವೃ– "ಅಚಿ-ಶ್ನು-ಧಾತು ಭ್ರುವಾಮ್ ಯ್ವೋರಿಯಙುವಙೌ" ಎಂಬ ಸೂತ್ರದಿಂದ ಅಚಿ, ಯ್ವೋಃ, ಮತ್ತು ಇಯಙ್-ಉವಙೌ ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ– ಅಸವರ್ಣವಾದ 'ಅಚ್' ವರ್ಣವು ಪರದಲ್ಲಿದ್ದಾಗ, ಅಭ್ಯಾಸದ 'ಇ' ವರ್ಣ ಮತ್ತು 'ಉ' ವರ್ಣಗಳಸ್ಥಾನದಲ್ಲಿ ಕ್ರಮವಾಗಿ 'ಇಯಙ್' ಮತ್ತು 'ಉವಙ್' ಆದೇಶಗಳು ಬರುತ್ತವೆ.

**ಲಿಟ್**: ಉದಾ– ಇಯಾಯ – ಪ್ರಥಮ ಪುರುಷ ಏಕವಚನದಲ್ಲಿ 'ಇಣ್(ಇ)' ಧಾತುವಿನ ನಂತರ ಲಿಡಾದೇಶವಾದ 'ತಿಪ್(ತಿ)' ಎಂಬ ಮೂಲ ಆಖ್ಯಾತ ಪ್ರತ್ಯಯವು ಬಂದು, ಅದಕ್ಕೆ ಅಭಿನವ ಆಖ್ಯಾತ ಪ್ರತ್ಯಯವಾದ 'ಣಲ್(ಅ)' ಆದೇಶವಾಗಿ ಬಂದು ಇ+ಅ ಎಂದಿದ್ದಾಗ, ಧಾತುವಿಗೆ ದ್ವಿತ್ವ ಬಂದು ಇ ಇ+ಅ ಎಂದಿರುತ್ತದೆ. ಈಗ ದ್ವಿತೀಯ 'ಇ' ಕಾರಕ್ಕೆ "ಅಚೋಞ್ಣಿತಿ" ಎಂಬ ಸೂತ್ರದಿಂದ ವೃದ್ಧಿ ಬಂದು ಇ ಐ+ಅ ಎಂದಿರುತ್ತದೆ. ಈಗ 'ಐ' ಕಾರಕ್ಕೆ 'ಆಯ್' ಆದೇಶ ಬಂದು ಇ ಆಯ್+ಅ ಎಂದಿರುತ್ತದೆ. ಈಗ 'ಇ' ಕಾರಕ್ಕೆ ಪ್ರಕೃತ ಸೂತ್ರದಿಂದ 'ಇಯಙ್(ಇಯ್)' ಆದೇಶ ಬಂದು ಇಯ್+ಆಯ್+ಅ=ಇಯಾಯ ಎಂದು ರೂಪವು ಸಿದ್ಧವಾಗುತ್ತದೆ.

**(ದೀರ್ಘವನ್ನು ವಿಧಿಸುವ ಸೂತ್ರ)**

**ಸೂತ್ರ– 581.ದೀರ್ಘ ಇಣಃ ಕಿತಿ (7.4.69)**

ವೃತ್ತಿಃ–ಇಣೋಽಭ್ಯಾಸಸ್ಯ ದೀರ್ಘಃ ಸ್ಯಾತ್ ಕಿತಿ ಲಿಟಿ। ಈ0ಯತುಃ, ಈ0ಯುಃ। ಇ0ಯಯಿಥ/ಇ0ಯೇಥ। ಏತಾ। ಏಷ್ಯತಿ।ಏತು। ಐತ್। ಐತಾಮ್। ಆ0ಯನ್। ಇ0ಯಾತ್।

ಪ. ಛೇ. – ದೀರ್ಘಃ, ಇಣಃ, ಕಿತಿ।

ಅ. ವೃ– "ಅತ್ರಲೋಪೋಽಭ್ಯಾಸಸ್ಯ" ಎಂಬ ಸೂತ್ರದಿಂದ 'ಅಭ್ಯಾಸಸ್ಯ' ಎಂಬ ಪದವೂ ಮತ್ತು "ವ್ಯಥೋ ಲಿಟಿ" ಎಂಬ ಸೂತ್ರದಿಂದ 'ಲಿಟಿ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– 'ಕಿತ್' ಆದ 'ಲಿಟ್' ಪರದಲ್ಲಿದ್ದಾಗ, 'ಇಣ್' ಧಾತುವಿನ ಅಭ್ಯಾಸಕ್ಕೆ ದೀರ್ಘವು ಬರುತ್ತದೆ.

ಉದಾ– ಈಯತುಃ– ಪ್ರಥಮಪುರುಷ ದ್ವಿವಚನದಲ್ಲಿ ಧಾತುವಿಗೆ ದ್ವಿತ್ವ ಬಂದಮೇಲೆ ಅದಕ್ಕೆ 'ಅತುಸ್' ಪ್ರತ್ಯಯವನ್ನು ಸೇರಿಸಿದಾಗ ಇ ಇ+ಅತುಸ್ ಎಂದಿರುತ್ತದೆ. 'ಅತುಸ್' ಇದು 'ಕಿತ್' ಆದ 'ಲಿಟ್' ಆಗಿದೆ. ಆದ್ದರಿಂದ ಪ್ರಕೃತ ಸೂತ್ರದಿಂದ ಅಭ್ಯಾಸವಾದ 'ಇ' ವರ್ಣಕ್ಕೆ ದೀರ್ಘಬಂದು ಈ ಇ +ಅತುಸ್ ಎಂದಿರುತ್ತದೆ, "ಇಣೋಯಣ್" ಎಂಬ ಸೂತ್ರದಿಂದ ಅಭ್ಯಾಸವಾದ 'ಇ' ಕಾರಕ್ಕೆ 'ಯಣ್(ಯ್)' ಬಂದು ಈ+ಯ್+ಅತುಸ್ =ಈಯತುಸ್ ಎಂದಾಗಿ ರುತ್ವ-ವಿಸರ್ಗಗಳಿಂದ ಈಯತುಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಈಯುಃ– ಪ್ರಥಮಪುರುಷ ಬಹುವಚನದಲ್ಲಿ ಮೇಲಿನಂತೆಯೇ ಪ್ರಕ್ರಿಯೆ ನಡೆದು ಈಯುಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಇಯಯಿಥ/ಇಯೇಥ – ಮದ್ಯಮಪುರುಷ ಏಕವಚನದಲ್ಲಿ 'ಇ' ಧಾತು ಅನಿಟ್ ಆಗಿರುವುದರಿಂದ 'ಥಲ್(ಥ)' ಪ್ರತ್ಯಯ ಬಂದಾಗ ಇ+ಥ ಎಂದಿರುತ್ತದೆ. ಧಾತುವಿಗೆ ದ್ವಿತ್ವ ಮಾಡಿದಮೇಲೆ ಇ ಇ+ಥ ಎಂದಿದ್ದಾಗ, ಭಾರದ್ವಾಜ ನಿಯಮದಿಂದ ವೈಕಲ್ಪಿಕವಾಗಿ 'ಇಟ್(ಇ)' ಆಗಮ ಬಂದು ಇ ಇ+ಇಥ ಎಂದಿರುತ್ತದೆ. ಈಗ ಅನಭ್ಯಸ್ಥ 'ಇ' ಕಾರಕ್ಕೆ ಆರ್ಧಧಾತುಕ ಗುಣ ಬಂದು ಇ+ಏ+ಇಥ ಎಂದಿರುತ್ತದೆ. ಈಗ 'ಏ' ಕಾರ 'ಇ' ಕಾರಗಳಿಗೆ ಸಂಧಿಯಾಗುವಾಗ 'ಅಯ್' ಆದೇಶ ಬಂದು ಇ+ಅಯ್+ಇಥ ಎಂದಿದ್ದಾಗ, "ಅಭ್ಯಾಸಸ್ಯಾಸವರ್ಣೇ" ಎಂಬ ಸೂತ್ರದಿಂದ ಮೊದಲನೇ 'ಇ' ಕಾರಕ್ಕೆ 'ಇಯಙ್(ಇಯ್)" ಆದೇಶ ಬಂದು ಇಯ್+ಅಯ್+ಇಥ=ಇಯಯಿಥ ಎಂದು ರೂಪವು ಸಿದ್ಧವಾಗುತ್ತದೆ. ಇಡಾಗಮ ಬಾರದ ಪಕ್ಷದಲ್ಲಿ ಇಯೇಥ ಎಂದು ರೂಪವು ಸಿದ್ಧವಾಗುತ್ತದೆ.

ರೂಪಗಳು: ಇಯಾಯ, ಈಯತುಃ, ಈಯುಃ। ಇಯಯಿಥ/ಇಯೇಥ, ಈಯಥುಃ, ಈಯ। ಇಯಾಯ/ಇಯಯ, ಈಯಿವ, ಈಯಿಮ।

**ಲುಟ್**: ರೂಪಗಳು: ಏತಾ, ಏತಾರೌ, ಏತಾರಃ। ಏತಾಸಿ, ಏತಾಸ್ಥಃ, ಏತಾಸ್ಥ। ಏತಾಸ್ಮಿ, ಏತಾಸ್ವಃ, ಏತಾಸ್ಮಃ। (ಇಲ್ಲಿ ಧಾತುವಿನ 'ಇ' ಕಾರಕ್ಕೆ ಗುಣ ಬಂದಿದೆ)

**ಲೃಟ್**: ರೂಪಗಳು: ಏಷ್ಯತಿ, ಏಷ್ಯತಃ, ಏಷ್ಯನ್ತಿ। ಏಷ್ಯಸಿ, ಏಷ್ಯಥಃ, ಏಷ್ಯಥ। ಏಷ್ಯಾಮಿ, ಏಷ್ಯಾವಃ, ಏಷ್ಯಾಮಃ। (ಇಲ್ಲಿಯೂ ಧಾತುವಿನ 'ಇ' ಕಾರಕ್ಕೆ ಗುಣ ಬಂದಿದೆ).

**ಲೋಟ್**: ರೂಪಗಳು: ಇತು/ ಇತಾತ್, ಇತಾಮ್, ಯನ್ತು। ಇಃ/ ಇತಾತ್, ಇತಮ್, ಇತ। ಅಯಾನಿ, ಅಯಾವ, ಅಯಾಮ।

**ಲಙ್**: ಉದಾ– ಐತ್ –ಪ್ರಥಮಪುರುಷ ಏಕವಚನದಲ್ಲಿ "ಆಡಜಾದೀನಾಮ್" ಎಂಬ ಸೂತ್ರದಿಂದ 'ಇ' ಧಾತುವಿಗೆ 'ಆಟ್(ಆ)' ಆಗಮ ಬಂದು 'ತ್' ಪ್ರತ್ಯಯವು ಬಂದು ಆ+ಇ+ತ್ ಎಂದಿರುತ್ತದೆ. "ಆಟಶ್ಚ" ಎಂಬುದರಿಂದ 'ಇ' ಕಾರಕ್ಕೆ ವೃದ್ಧಿ ಬಂದು ಆ+ಐ+ತ್=ಐತ್ ಎಂದು ರೂಪವಾಗುತ್ತದೆ.

ಉದಾ– ಐತಾಮ್– ಪ್ರಥಮಪುರುಷ ದ್ವಿವಚನದಲ್ಲಿ 'ಇ' ಧಾತುವಿಗೆ ತಾಮ್ ಪ್ರತ್ಯಯ ಸೇರಿಸಿದಾಗ ಆ+ಇ+ತಾಮ್ ಎಂದಿದ್ದಾಗ, ಹಿಂದಿನಂತೆಯೇ ಪ್ರಕ್ರಿಯೆ ನಡೆದು ಐತಾಮ್ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಆಯನ್– ಪ್ರಥಮಪುರುಷ ಬಹುವಚನದಲ್ಲಿ ಆ+ಇ+ಅನ್ತಿ ಎಂದಿರುವಾಗ, ಅಂತ್ಯ 'ಇ' ಕಾರಕ್ಕೆ "ಇತಶ್ಚ" ಎಂಬುದರಿಂದ ಲೋಪ ಬಂದು ಅ+ಇ+ಅನ್ತ್ ಎಂದಿದ್ದಾಗ, "ಸಂಯೋಗಾನ್ತಸ್ಯ ಲೋಪಃ" ಎಂಬುದರಿಂದ ಅನ್ತ್ಯ 'ತ್' ಕಾರಾಕ್ಕೆ ಲೋಪ ಬಂದು ಆ+ಇ+ಅನ್ ಎಂದಿರುತ್ತದೆ. "ಆಟಶ್ಚ" ಎಂಬುದರಿಂದ 'ಇ' ಕಾರಕ್ಕೆ ವೃದ್ಧಿ ಬಂದು ಆ+ಐ+ಅನ್ ಎಂದಿರುತ್ತದೆ 'ಆ' ಕಾರ ಮತ್ತು 'ಐ' ಕಾರಗಳಿಗೆ ವೃದ್ಧಿ ಬಂದು

ಐ+ಅನ್ ಎಂದಾಗುತ್ತದೆ. 'ಐ' ಕಾರಕ್ಕೆ 'ಆಯ್' ಆದೇಶ ಬಂದು ಆಯ್+ಅನ್=ಆಯನ್ ಎಂದು ರೂಪವು ಸಿದ್ಧವಾಗುತ್ತದೆ. ಇದೇ ರೀತಿಯಲ್ಲಿ ಉಳಿದ ರೂಪಗಳೂ ಸಿದ್ಧವಾಗುತ್ತವೆ.

ರೂಪಗಳು: ಐತ್, ಐತಾಮ್, ಆಯನ್। ಐಃ, ಐತಮ್, ಐತ। ಆಯಮ್, ಐವ, ಐಮ।

**ವಿಧಿಲಿಙ್**: ರೂಪಗಳು: ಇಯಾತ್, ಇಯಾತಾಮ್, ಈಯುಃ। ಇಯಾಃ, ಇಯಾತಮ್, ಇಯಾತ। ಇಯಾಮ್, ಇಯಾವ ಇಯಾಮ।

ಆಶೀರ್ಲಿಙ್:ರೂಪಗಳು: ಈಯಾತ್, ಈಯಾಸ್ತಾಮ್, ಈಯಾಸುಃ। ಈಯಾಃ, ಈಯಾಸ್ತಮ್, ಈಯಾಸ್ತ। ಈಯಾಸಮ್, ಈಯಾಸ್ವ, ಈಯಾಸ್ಮ। (ಇಲ್ಲಿ "ಅಕೃತ್ಸಾರ್ವಧಾತುಕಯೋರ್ದೀರ್ಘಃ" ಎಂಬ ಸೂತ್ರದಿಂದ 'ಇ' ಗೆ ದೀರ್ಘ ಬಂದಿದೆ.

ಉಪಸರ್ಗಯುಕ್ತವಾದ 'ಇಣ್' ಧಾತುವಿನ ರೂಪವು ಮುಂದಿನ ಸೂತ್ರದಲ್ಲಿ.

**(ಉಪಸರ್ಗನಿಮಿತ್ತವಾದ ಇಣ್ ಧಾತುವಿನ ಅಣ್‌ಗೆ ಹ್ರಸ್ವವನ್ನು ವಿಧಿಸುವ ಸೂತ್ರ)**

**ಸೂತ್ರ- 582. ಏತೇರ್ಲಿಙಿ (7.4.24)**

ವೃತ್ತಿಃ-ಉಪಸರ್ಗಾತ್ ಪರಸ್ಯ ಇಣಃ ಅಣಃ ಹ್ರಸ್ವಃ ಆರ್ಧಧಾತುಕೇ ಕಿತಿ ಲಿಙಿ। ನಿರಿಯಾತ್। ಉಭಯತ ಆಶ್ರಯಣೇ। ನಾಂತಾದಿವತ್। ಅಭೀಯಾತ್। ಅಣಃ ಕಿಮ್-ಸಮೇಯಾತ್।

ಪ. ಛೇ. -ಏತೇಃ, ಲಿಙಿ।

ಅ. ವೃ.- "ಕೇಽಣಃ" ಎಂಬ ಸೂತ್ರದಿಂದ 'ಅಣಃ' ಎಂಬ ಪದವೂ, "ಉಪಸರ್ಗಾತ್ ಹ್ರಸ್ವ ಊಹತೇಃ" ಎಂಬ ಸೂತ್ರದಿಂದ 'ಉಪಸರ್ಗಾತ್' ಮತ್ತು 'ಹ್ರಸ್ವಃ' ಎಂಬ ಪದಗಳೂ ಹಾಗೆಯೇ "ಅಯಙ್ ಯಿ ಕ್ಙಿತಿ" ಎಂಬ ಸೂತ್ರದಿಂದ 'ಕಿತಿ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ- ಉಪಸರ್ಗದ ಪರದಲ್ಲಿರುವ 'ಇಣ್' ಧಾತುವಿನ 'ಅಣ್' ಗೆ ಹ್ರಸ್ವವು ಆದೇಶವಾಗಿ ಬರುತ್ತದೆ - ಆರ್ಧಧಾತುಕವಾದ 'ಕಿತ್' ಆದ 'ಲಿಙ್' ಪರದಲ್ಲಿರುವಾಗ.

ಉದಾ- ನಿರಿಯಾತ್- ಉಪಸರ್ಗಸಹಿತವಾದ 'ಇಣ್' ಧಾತುವಿಗೆ ಪ್ರಥಮಪುರುಷ ಏಕವಚನದಲ್ಲಿ ಆಶೀರ್ಲಿಙ್ ನಲ್ಲಿ ನಿರ್+ಈಯಾತ್ ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ಈ' ಗೆ ಹ್ರಸ್ವವು ಬಂದು ನಿರಿಯಾತ್ ಎಂದು ರೂಪವು ಸಿದ್ಧವಾಗುತ್ತದೆ.

ವಿವರಣೆ: 'ಉಭಯತ ಆಶ್ರಯಣೇ ನಾನ್ತಾದಿವತ್' ಎಂಬ ಪರಿಭಾಷೆಯಿಂದ ಒಂದೇ ಸಮಯದಲ್ಲಿ ಎರಡೂಕಡೆಯಿಂದ ಆಶ್ರಯಿಸಿಕೊಂಡಿದ್ದರೆ, "ಅನ್ತಾದಿವಚ್ಚ" ಎಂಬ ನಿಯಮವು ಇಲ್ಲಿ ಅನ್ವಯಿಸುವುದಿಲ್ಲ.

ಉದಾ- ಅಭೀಯಾತ್ - ಅಭಿ+ಈಯಾತ್=ಅಭೀಯಾತ್ ಎಂದಿರುತ್ತದೆ. ಇಲ್ಲಿ ಸವರ್ಣದೀರ್ಘದಿಂದ ಬಂದಿರುವ 'ಈ' ಕಾರಕ್ಕೆ "ಅನ್ತಾದಿವಚ್ಚ" ಎಂಬುದರಿಂದ

ಪರದ ಆದಿಯಾಗಿ ಭಾವಿಸಿ 'ಈಯಾತ್' ಎಂದಾಗುವುದರಿಂದ 'ಇಣ್' ಧಾತುವಿಗೆ **'ಅಣ್'** ಬರುತ್ತದೆ ಮತ್ತು ಇಲ್ಲಿ ಇದೇರೀತಿಯಲ್ಲಿ 'ಈ' ವರ್ಣವನ್ನು ಪೂರ್ವದ ಅಂತ ಭಾಗವಾಗಿ ಭಾವಿಸಿ ಅಭಿ ಎಂಬ ಉಪಸರ್ಗಕ್ಕೂ ಅನ್ವಯಿಸಲಾಗುತ್ತದೆ. ಈ ರೀತಿಯಾಗಿ ಉಪಸರ್ಗದ ಪರದಲ್ಲಿರುವ 'ಇಣ್' ನ 'ಇ' ಕಾರಕ್ಕೆ ಪ್ರಕೃತ ಸೂತ್ರದಿಂದ ಹ್ರಸ್ವವಾಗಬೇಕಿತ್ತು. ಈ ಸಂದರ್ಭದಲ್ಲಿ 'ಉಭಯತ ಆಶ್ರಯಣೇ ನಾನ್ತಾದಿವತ್' ಅಂದರೆ "ಅನ್ತಾದಿವಚ್ಚ" ಎಂಬುದರಿಂದ ಒಂದೇಕಡೆ ಆಶ್ರಯಿಸಿ ಅಂತಾದಿವದ್ಭಾವ ಮಾಡಬಹುದಾಗಿದೆ. ಆದರೆ ಎರಡೂ ಕಡೆಗಳನ್ನು ಆಶ್ರಯಿಸಿ ರೂಪಸಿದ್ಧಿ ಮಾಡಲು ಬರುವುದಿಲ್ಲ. ಯಾವರೀತಿಯಾಗಿ, ಉಪಸರ್ಗ ಮತ್ತು 'ಅಣ್' ಇವೆರಡರ ಆಶ್ರಯಯವೂ ಆಗುತ್ತಿದೆ. ಆದುದರಿಂದ ಅಂತಾದಿವದ್ಭಾವವು ಬರುವುದಿಲ್ಲ, ಮತ್ತು ಉಪಸರ್ಗದ ಪರದಲ್ಲಿ 'ಅಣ್' ಸೇರದೇ ಇರೋಣದರಿಂದ ಹ್ರಸ್ವವೂ ಬರುವುದಿಲ್ಲ. ಹೀಗೆ ಅಭೀಯಾತ್ ಎಂದೇ ರೂಪವಾಗುತ್ತದೆ.

ಅಣಃ ಕಿಮ್– ಸಮೇಯಾತ್।

ವಿವರಣೆ: ಒಂದುವೇಳೆ 'ಅಣಃ' ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳದಿದ್ದರೆ ಏನು ದೋಷ ಬರುತ್ತಿತ್ತು? ಎಂದರೆ ಸಮೇಯಾತ್ ಎಂಬಲ್ಲಿ 'ಸಮ್' ಮತ್ತು 'ಆ' ಎಂಬ ಎರಡು ಉಪಸರ್ಗಗಳು ಇವೆ. 'ಈಯಾತ್' ಎಂಬ ಆಶೀರ್ಲಿಙ್ ರೂಪವೂ ಇದೆ. ಹೀಗೆ ಆ+ಈಯಾತ್ ಎಂದಿದ್ದಾಗ, ಗುಣ ಬಂದು 'ಏಯಾತ್' ಎಂದಾಗುತ್ತದೆ. ನಂತರ ಸಮ್+ಏಯಾತ್=ಸಮೇಯಾತ್ ಎಂದು ರೂಪವು ಸಿದ್ಧಿಸುತ್ತದೆ. ಸೂತ್ರದಲ್ಲಿ 'ಅಣಃ' ಎಂದು ಹೇಳಿರೋಣದರಿಂದ 'ಏ' ಕಾರವು 'ಅಣ್' ಆಗುವುದಿಲ್ಲ. ಆದುದರಿಂದ ಹ್ರಸ್ವವೂ ಬರುವುದಿಲ್ಲ. ಇಲ್ಲದಿದ್ದರೆ ಮೇಲೆ ಹೇಳಿದ ಸೂತ್ರದಿಂದ ಹ್ರಸ್ವ ಬಂದು ಸಮಿಯಾತ್ ಎಂಬ ಅನಿಷ್ಟ ರೂಪವು ಬರುತ್ತಿತ್ತು.

**ಲುಙ್**:

**(ಗಾ – ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ– 583.ಇಣೋ ಗಾ ಲುಙಿ (2.4.45)**

ವೃತ್ತಿಃ–ಗಾತಿಸ್ಥೇತಿ ಸಿಚಃ ಲುಕ್। ಅಗಾತ್। ಐಷ್ಯತ್। ಶೀಙ್ ಸ್ವಪ್ನೇ। 19।

ಪ. ಛೇ. –ಇಣಃ, ಗಾ, ಲುಙಿ।

ಅರ್ಥ– 'ಲುಙ್' 'ಲ್' ಕಾರದ ವಿವಕ್ಷೆಯಲ್ಲಿ 'ಇಣ್' ಧಾತುವಿಗೆ 'ಗಾ' ಆದೇಶವು ಬರುತ್ತದೆ.

ವಿವರಣೆ: 'ಲುಙ್' 'ಲ್' ಕಾರದ ವಿವಕ್ಷೆ ಇದ್ದಾಗ, 'ಗಾ' ಆದೇಶವು ಬರುತ್ತದೆ. ಇಲ್ಲದಿದ್ದರೆ 'ಇಣ್' ಧಾತುವಿಗೆ ಅಜಾದಿಯಾಗಿರುವುದರಿಂದ "ಆಡಜಾದೀನಾಮ್" ಎಂಬ ಸೂತ್ರದಿಂದ 'ಆಟ್' ಅಗಮ ಬಂದಮೇಲೆಯೇ 'ಗಾ' ಆದೇಶವು ಬರುತ್ತಿತ್ತು. ಅದರೆ ಇಲ್ಲಿ 'ಗಾ' ಆದೇಶ ಮೊದಲೇ ಬಂದು ಅದು ಹಲಾದಿಯಾಗಿಬಿಟ್ಟದ್ದರಿಂದ 'ಆಟ್' ಆಗಮ ಬಾರದೆ 'ಅಟ್' ಆಗಮವೇ ಬರುತ್ತದೆ.

**ಲುಙ್**: ಉದಾ– ಅಗಾತ್– ಪ್ರಥಮಪುರುಷ ಏಕವಚನದಲ್ಲಿ 'ಇ' ಧಾತುವಿನ

ನಂತರ 'ಲುಙ್' ವಿವಕ್ಷೆಯಲ್ಲಿ 'ಗಾ' ಆದೇಶವು ಬಂದು ನಂತರ 'ಲುಙ್' 'ಲ್' ಕಾರವು ಬರುತ್ತದೆ. ಧಾತುವು ಹಲಾದಿಯಾಗಿದ್ದರಿಂದ 'ಅಟ್' ಆಗಮ ಬರುತ್ತದೆ. ನಂತರ 'ಲುಙ್' 'ಲ್' ಕಾರಕ್ಕೆ 'ತಿ(ತಿಪ್)' ಬಂದು "ಇತಶ್ಚ" ಎಂಬುದರಿಂದ 'ಇ' ಕಾರ ಲೋಪವಾಗಿ 'ತ್' ಮಾತ್ರ ಉಳಿಯುತ್ತದೆ ಆಗ ಅ+ಗಾ+ತ್ ಎಂದಿರುತ್ತದೆ. ಧಾತುವಿನ ನಂತರ 'ಚ್ಲಿ' ಬಂದು ಅದಕ್ಕೆ 'ಸಿಚ್ (ಸ್)' ಬಂದು ಅ+ಗಾ+ಸ್+ತ್ ಎಂದಿದ್ದಾಗ, "ಗಾತಿಸ್ಥಾಘುಪಾಭೂಭ್ಯಃ ಸಿಚಃ ಪರಸ್ಮೈಪದೇಷು" ಎಂಬಸೂತ್ರದಿಂದ 'ಸಿಚ್(ಸ್)' ಗೆ ಲುಕ್(ಲೋಪ) ಬಂದಮೇಲೆ "ಅಸ್ತಿಸಿಚೋಽಪೃಕ್ತೇ" ಎಂಬ ಸೂತ್ರದಿಂದ 'ಈಟ್' ಆಗಮವು ಬರುವುದಿಲ್ಲ. ಆದ್ದರಿಂದ ಅಗಾತ್ ಎಂದೇ ರೂಪವು ಸಿದ್ಧವಾಗುತ್ತದೆ.

ರೂಪಗಳು: ಅಗಾತ್, ಅಗಾತಾಮ್, ಅಗುಃ। ಅಗಃ, ಅಗಾತಮ್, ಅಗಾತ್। ಅಗಾಮ್, ಅಗಾವ, ಅಗಾಮ।

**ಲೃಙ್**: ರೂಪಗಳು: ಐಷ್ಯತ್, ಐಷ್ಯತಾಮ್, ಐಷ್ಯನ್। ಐಷ್ಯಃ, ಐಷ್ಯತಮ್, ಐಷ್ಯತ। ಐಷ್ಯಮ್, ಐಷ್ಯಾವ, ಐಷ್ಯಾಮ।

ಇಲ್ಲಿಯವರೆಗೆ ಪರಸ್ಮೈಪದದ ಧಾತುಗಳ ರೂಪಗಳ ವಿವರಣೆ ಮಾಡಲಾಯಿತು.

### ಆತ್ಮನೇಪದದ ಧಾತುಗಳ ರೂಪಗಳ ವಿವರಣೆ

1. **ಶೀಙ್**: ಸ್ವಪ್ನೇ (ಮಲಗುವುದು) ಇದರಲ್ಲಿ 'ಶೀ' ಮಾತ್ರ ಉಳಿಯುತ್ತದೆ. ಇದು 'ಙಿತ್' ಆಗಿರುವುದರಿಂದ "ಅನುದಾತ್ತ ಙಿತ ಆತ್ಮನೇಪದಮ್" ಎಂಬ ಸೂತ್ರದಿಂದ ಆತ್ಮನೇಪದಿಯಾಗಿರುತ್ತದೆ. ಇದು 'ಸೇಟ್' ಆಗಿರುವುದರಿಂದ ವಲಾದಿ ಆರ್ಧಧಾತುಕಗಳಿಗೆ 'ಇಟ್(ಇ)' ಆಗಮವು ಬರುತ್ತದೆ.

### (ಗುಣವನ್ನು ವಿಧಿಸುವ ಸೂತ್ರ)

**ಸೂತ್ರ- 584.ಶೀಙಃ ಸಾರ್ವಧಾತುಕೇ ಗುಣಃ (7.4.21)**

ವೃತ್ತಿಃ-ಕ್ಙಿತಿ ಚ ಇತ್ಯಸ್ಯ ಅಪವಾದಃ। ಶೇತೇ। ಶಯಾತೇ।

ಅರ್ಥ- ಸಾರ್ವಧಾತುಕವು ಪರದಲ್ಲಿದ್ದಾಗ 'ಶೀಙ್(ಶೀ)' ಗೆ ಗುಣವು ಬರುತ್ತದೆ.

ವಿವರಣೆ: ಆತ್ಮನೇ ಪದ ಪ್ರತ್ಯಯಗಳಲ್ಲಿ ಯಾವುದೂ 'ಪಿತ್' ಆಗಿ ಇಲ್ಲದೇ ಇರೋಣದರಿಂದ "ಸಾರ್ವಧಾತುಕಮಪಿತ್" ಎಂಬ ಸೂತ್ರದಿಂದ ಙಿದ್ವದ್ಭಾವವು ಬರುವುದರಿಂದ ಗುಣ ಬರುತ್ತಿರಲಿಲ್ಲ. ಆದ್ದರಿಂದ ಈ ಸೂತ್ರವು ಪ್ರವೃತ್ತವಾಗಿದೆ. ಕೇವಲ ಸಾರ್ವಧಾತುಕ (ಲಟ್, ಲಙ್, ಲಿಙ್, ಲೋಟ್) ಪರದಲ್ಲಿದ್ದಾಗ ಮಾತ್ರ ಈ ಸೂತ್ರವು ಪ್ರವೃತ್ತವಾಗುತ್ತದೆ.

**ಲಟ್**: ಉದಾ- ಶೇತೇ - ಪ್ರಥಮಪುರುಷ ಏಕವಚನದಲ್ಲಿ 'ಶೀ' ಧಾತುವಿನ ನಂತರ 'ಲಟ್' ಬಂದು ಅದಕ್ಕೆ 'ತ' ಬಂದಮೇಲೆ, ಧಾತುವಿನ ಪರದಲ್ಲಿ 'ಶಪ್(ಅ)' ಬಂದು ಅದಕ್ಕೆ ಲುಕ್(ಲೋಪ) ಬಂದಮೇಲೆ ಶೀ+ತ ಎಂದಿರುತ್ತದೆ. ಪ್ರಕೃತ ಸೂತ್ರದಿಂದ 'ಶೀ' ನಲ್ಲಿರುವ 'ಈ' ಕಾರಕ್ಕೆ ಗುಣ ಬಂದು ಶೇ+ತ ಎಂದಿರುತ್ತದೆ. "ಟಿತ ಆತ್ಮನೇಪದಾನಾಂ

ಟೇರೇ" ಎಂಬ ಸೂತ್ರದಿಂದ 'ತ್' ಕಾರೋತ್ತರ 'ಅ' ಕಾರಕ್ಕೆ ಏತ್ವ ಬಂದು ಶೇತೇ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಶಯಾತೇ– ಪ್ರಥಮಪುರುಷ ದ್ವಿವಚನದಲ್ಲಿ ಶೀ+ಆತಾಮ್ ಎಂದಿದ್ದಾಗ, 'ಈ' ಕಾರಕ್ಕೆ ಗುಣ ಬಂದು ಶೇ+ಆತಾಮ್ ಎಂದಿರುತ್ತದೆ. "ಟಿತ ಆತ್ಮನೇಪದಾನಾಂ ಟೇರೇ" ಎಂಬ ಸೂತ್ರದಿಂದ 'ತಾಮ್' ನಲ್ಲಿರುವ 'ಆಮ್' ಎಂಬ 'ಟಿ' ಗೆ ಏತ್ವ ಬಂದು ಶೇ+ಆತೇ ಎಂದಿರುತ್ತದೆ. 'ಶೇ' ನಲ್ಲಿರುವ 'ಏ' ಕಾರಕ್ಕೆ 'ಅಯ್' ಆದೇಶ ಬಂದು ಶ್+ಅಯ್+ಆತೆ=ಶಯಾತೇ ಎಂದು ರೂಪವಾಗುತ್ತದೆ.

**(ರುಟ್ ಆಗಮವನ್ನು ವಿಧಿಸುವ ಸೂತ್ರ)**

**ಸೂತ್ರ– 585.ಶೀಙೋ ರುಟ್ (7.1.6)**

ವೃತ್ತಿಃ–ಶೀಙಃ ಪರಸ್ಯ ಝ ಆದೇಶಸ್ಯ ಅತಃ ರುಟ್ ಆಗಮಃ ಸ್ಯಾತ್। ಶೇರತೇ। ಶೇಷೇ। ಶಯಾಥೇ। ಶೇಧ್ವೇ। ಶಯೇ। ಶೇವಹೇ। ಶೇಮಹೇ। ಶಿಶ್ಯೇ। ಶಿಶ್ಯಾತೇ। ಶಿಶ್ಯಿರೇ। ಶಯಿತಾ। ಶಯಿಷ್ಯತೇ। ಶೇತಾಮ್। ಶಯಾತಾಮ್। ಶೇರತಾಮ್। ಅಶೇತ। ಅಶಯಾತಾಮ್। ಅಶೇರತ। ಶಯೀತ। ಶಯೀಯಾತಾಮ್। ಶಯೀರನ್। ಶಯಿಶೀಷ್ಟ। ಅಶಯಿಷ್ಟ। ಅಶಯಿಷ್ಯತ್। ಇಙ್ ಅಧ್ಯಯನೇ। 20। ಇಙಿ ಕಾವಧ್ಯುಪಸರ್ಗತಃ ನ ವ್ಯಭಿಚಾರತಃ। ಅಧೀತೇ। ಅಧೀಯಾತೇ। ಅಧೀಯತೇ।

ಪ. ಛೇ. – ಶೀಙಃ, ರುಟ್।

ಅ. ವ್ಯ. "ರ್ಝೋಽನ್ತಃ" ಎಂಬ ಸೂತ್ರದಿಂದ 'ಝಃ' ಎಂಬ ಪದವು ಅನುವೃತ್ತವಾಗುತ್ತದೆ. "ಅಧಭ್ಯಸ್ತಾತ್" ಎಂಬ ಸೂತ್ರದಿಂದ ಷಷ್ಠ್ಯನ್ತವಾಗಿ ವಿಪರಿಣಾಮಗೊಳಿಸಿದ ನಂತರ 'ಅತಃ' ಎಂಬ ಪದವು, ಅನುವೃತ್ತವಾಗುತ್ತದೆ.

ಅರ್ಥ– 'ಶೀಙ್(ಶೀ)' ಧಾತುವಿನ ನಂತರ ಇರುವ 'ಝ್' ಗೆ ಆದೇಶವಾಗಿ ಬರುವ 'ಅತ್' ಗೆ 'ರುಟ್(ರ್)' ಆಗಮವು ಬರುತ್ತದೆ.

ಉದಾ– ಶೇರತೇ– ಪ್ರಥಮಪುರುಷ ಬಹುವಚನದಲ್ಲಿ 'ಶೀ' ಧಾತುವಿನ ನಂತರ 'ಝ(ಝ್+ಅ)' ಪ್ರತ್ಯಯವಿದ್ದಾಗ, ಧಾತುವಿನ ಪರದಲ್ಲಿ 'ಶಪ್(ಅ)' ಬಂದು ಅದು ಲುಕ್(ಲೋಪ) ಆಗಿ ಶೀ+ಝ್ ಎಂದಿರುತ್ತದೆ. 'ಝ್' ಗೆ "ಆತ್ಮನೇಪದೇಷ್ವನತಃ" ಎಂಬ ಸೂತ್ರದಿಂದ 'ಅತ್' ಆದೇಶ ಬಂದು ಶೀ+ಅತ್+ಅ ಎಂದಿರುತ್ತದೆ. ಪ್ರಕೃತ ಸೂತ್ರದಿಂದ 'ಅತ್' ಗೆ 'ರುಟ್(ರ್)' ಆಗಮವು ಆದ್ಯವಯಯವಾಗಿ ಬರುತ್ತದೆ, ಆಗ ಶೀ+ರ್+ಅತ=ಶೀ+ರತ ಎಂದಿರುತ್ತದೆ. "ಶೀಙಃ ಸಾರ್ವಧಾತುಕೇ ಗುಣಃ" ಎಂಬ ಸೂತ್ರದಿಂದ ಶಕಾರೋತ್ತರ 'ಈ' ಕಾರಕ್ಕೆ ಗುಣ ಬಂದು ಶೇ+ರತ ಎಂದಿರುತ್ತದೆ. 'ತ್' ಕಾರೋತ್ತರ 'ಅ' ಕಾರವಾದ 'ಟಿ' ಗೆ "ಟಿತ ಆತ್ಮನೇಪದಾನಾಂ ಟೇರೇ" ಎಂಬ ಸೂತ್ರದಿಂದ ಏತ್ವ ಬಂದು ಶೇರತೇ ಎಂದು ರೂಪವಾಗುತ್ತದೆ.

ರೂಪಗಳು: ಶೇತೇ, ಶಯಾತೇ, ಶೇರತೇ। ಶೇಷೇ, ಶಯಾಥೇ, ಶೇಧ್ವೇ। ಶಯೇ, ಶೇವಹೇ, ಶೇಮಹೇ।

ಲಿಟ್: ಉದಾ- ಶಿಶ್ಯೇ- ಪ್ರಥಮಪುರುಷ ಏಕವಚನದಲ್ಲಿ 'ಶೀ' ಧಾತುವಿನ ನಂತರ 'ಲಿಟ್' ಬಂದಮೇಲೆ, ಅದಕ್ಕೆ 'ತ' ಆದೇಶವಾಗಿ ಬಂದು ಧಾತುವಿಗೆ ದ್ವಿತ್ವವಾಗಿ ದ್ವಿತ್ವದ ಮೊದಲನೇ ಭಾಗಕ್ಕೆ ಅಭ್ಯಾಸ ಸಂಜ್ಞೆ ಬಂದು 'ಶೀ' ನಲ್ಲಿಯ 'ಈ' ಕಾರಕ್ಕೆ "ಹ್ರಸ್ವಃ" ಎಂಬ ಸೂತ್ರದಿಂದ ಹ್ರಸ್ವ 'ಇ' ಕಾರ ಬಂದು 'ತ' ಗೆ "ಲಿಟಸ್ತಝಯೋರೇಶಿರೇಚ್" ಎಂಬ ಸೂತ್ರದಿಂದ 'ಏಶ್(ಏ)' ಆದೇಶ ಬಂದು ಶಿಶೀ+ಏ ಎಂದಿದ್ದಾಗ 'ಯಣ್' ಸಂಧಿಯಾಗಿ ಶಿಶ್ಯೇ ಎಂದು ರೂಪವು ಸಿದ್ಧವಾಗುತ್ತದೆ.

ರೂಪಗಳು: ಶಿಶ್ಯೇ, ಶಿಶ್ಯಾತೇ. ಶಿಶ್ಯಿರೇ। ಶಿಶ್ಯಿಷೇ, ಶಿಶ್ಯಾಥೇ, ಶಿಶ್ಯಿಡ್ವೇ/ಶಿಶ್ಯಿಧ್ವೇ। ಶಿಶ್ಯೇ, ಶಿಶ್ಯಿವಹೇ, ಶಿಶ್ಯಿಮಹೇ।

**ಲುಟ್**: ರೂಪಗಳು: ಶಯಿತಾ, ಶಯಿತಾರೌ, ಶಯಿತಾರಃ। ಶಯಿತಾಸೇ, ಶಯಿತಾಸಾಥೇ, ಶಯಿತಾಧ್ವೇ। ಶಯಿತಾಹೇ, ಶಯಿತಾಸ್ವಹೇ, ಶಯಿತಾಸ್ಮಹೇ।

**ಲೃಟ್**: ರೂಪಗಳು: ಶಯಿಷ್ಯತೇ, ಶಯಿಷ್ಯೇತೇ, ಶಯಿಷ್ಯನ್ತೇ। ಶಯಿಷ್ಯಸೇ, ಶಯಿಷ್ಯೇಥೇ, ಶಯಿಷ್ಯಧ್ವೇ। ಶಯಿಷ್ಯೇ ಶಯಿಷ್ಯಾವಹೇ, ಶಯಿಷ್ಯಾಮಹೇ।

**ಲೋಟ್**: ರೂಪಗಳು: ಶೇತಾಮ್, ಶಯಾತಾಮ್, ಶೇರತಾಮ್। ಶೇಷ್ವ, ಶಯಾಥಾಮ್, ಶೇಧ್ವಮ್। ಶಯ್ಯೈ, ಶಯಾವಹೈ, ಶಯಾಮಹೈ।

**ಲಙ್**: ರೂಪಗಳು: ಅಶೇತ, ಅಶಯಾತಾಮ್, ಅಶೇರತ। ಅಶೇಥಾಃ, ಅಶಯಾಥಾಮ್, ಅಶೇಧ್ವಮ್। ಅಶಯಿ, ಅಶೇವಹಿ, ಅಶೇಮಹಿ।

**ವಿಧಿಲಿಙ್**: ರೂಪಗಳು: ಶಯೀತ, ಶಯೀಯಾತಾಮ್, ಶಯೀರನ್। ಶಯೀಥಾಃ, ಶಯೀಯಾಥಾಮ್, ಶಯೀಧ್ವಮ್।ಶಯೀಯ, ಶಯೀವಹಿ, ಶಯೀಮಹಿ।

**ಆಶೀರ್ಲಿಙ್**: ರೂಪಗಳು: ಶಯಿಷೀಷ್ಟ, ಶಯಿಷೀಯಾಸ್ತಾಮ್, ಶಯಿಷೀರನ್। ಶಯಿಷೀಷ್ಠಾಃ, ಶಯಿಷೀಯಾಸ್ಥಾಮ್, ಶಯಿಷೀಢ್ವಮ್/ ಶಯಿಷೀಧ್ವಮ್। ಶಯಿಷೀಯ, ಶಯಿಷೀವಹಿ, ಶಯಿಷೀಮಹಿ।

**ಲುಙ್**: ರೂಪಗಳು: ಅಶಯಿಷ್ಟ, ಅಶಯಿಷಾತಾಮ್, ಅಶಯಿಷತ। ಅಶಯಿಷ್ಠಾಃ, ಅಶಯೀಷಾಥಾಮ್, ಅಶಯಿಢ್ವಮ್/ಅಶಯಿಧ್ವಮ್। ಅಶಯಿಷಿ, ಅಶಯಿಷ್ವಹಿ, ಅಶಯಿಷ್ಮಹಿ।

**ಲೃಙ್**: ರೂಪಗಳು: ಅಶಯಿಷ್ಯತ, ಅಶಯಿಷ್ಯೇತಾಮ್, ಅಶಯಿಷ್ಯನ್ತ। ಅಶಯಿಷ್ಯಥಾಃ, ಅಶಯಿಷ್ಯೇಥಾಮ್, ಅಶಯಿಷ್ಯಧ್ವಮ್।ಅಶಯಿಷ್ಯೇ, ಅಶಯಿಷ್ಯಾವಾಹಿ, ಅಶಯಿಷ್ಯಾಮಹಿ।

2. ಇಙ್-ಅಧ್ಯಯನೇ -(ಅಧ್ಯಯನ ಮಾಡುವುದು) - ಇದರಲ್ಲಿ 'ಇ' ಮಾತ್ರ ಉಳಿಯುತ್ತದೆ.

ಸೂಚನೆ: 'ಇಙ್' ಧಾತು ಮತ್ತು 'ಇಕ್-ಸ್ಮರಣೇ' ಎಂಬ ಈ ಎರಡು ಧಾತುಗಳು 'ಅಧಿ' ಎಂಬ ಉಪಸರ್ಗದಜೊತೆಗೇನೇ ಪ್ರಯೋಗಿಸಲ್ಪಡುತ್ತವೆ.

ಲಟ್: ಉದಾ- ಅಧೀತೇ- ಪ್ರಥಮಪುರುಷ ಏಕವಚನದಲ್ಲಿ 'ಅಧಿ' ಎಂಬ ಉಪಸರ್ಗಪೂರ್ವಕ 'ಇ' ಧತುವಿನ ನಂತರ 'ಲಟ್' ಬಂದು ಅದಕ್ಕೆ 'ತ' ಆದೇಶ

ಬಂದಮೇಲೆ ಧಾತುವಿನ ನಂತರ 'ಶಪ್(ಅ)' ಬಂದು ಅದಕ್ಕೆ 'ಲುಕ್(ಲೋಪ)' ಬಂದಮೇಲೆ ಅಧಿ+ಇ+ತ ಎಂದಿರುತ್ತದೆ. "ಸಾರ್ವಧಾತುಕಮಪಿತ್" ಎಂಬುದರಿಂದ ಙಿದ್ವದ್ಭಾವ ಬಂದು ಗುಣನಿಷೇಧ ಬರುತ್ತದೆ. "ಟಿತ ಆತ್ಮನೇಪದಾನಾಂ ಟೇರೇ" ಎಂಬುದರಿಂದ 'ತ' ನಲ್ಲಿರುವ 'ಅ' ಕಾರಕ್ಕೆ ಏತ್ವ ಬಂದು ಅಧಿ+ಇತೇ ಎಂದಿರುತ್ತದೆ. ಸರ್ವರ್ಣದೀರ್ಘ ಸಂಧಿಯಿಂದ ದೀರ್ಘ ಬಂದು, ಅಧೀತೇ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಅಧೀಯಾತೇ– ಪ್ರಥಮಪುರುಷ ದ್ವಿವಚನದಲ್ಲಿ ಅಧಿ+ಇ+ಆತೇ ಎಂದಿದ್ದಾಗ, "ಅಚಿಶ್ನುಧಾತುಭ್ರುವಾಮ್ ಯ್ವೋರಿಯಙುವಙೌ" ಎಂಬುದರಿಂದ ಧಾತುವಿನ 'ಇ' ಕಾರಕ್ಕೆ 'ಇಯಙ್(ಇಯ್)' ಆದೇಶ ಬಂದು ಅದಿ+ ಯಾತೇ ಎಂದಿದ್ದಾಗ, ಸವರ್ಣದೀರ್ಘದಿಂದ ಅಧೀಯಾತೇ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಅಧೀಯತೇ –ಪ್ರಥಮಪುರುಷ ಬಹುವಚನದಲ್ಲಿ ಅಧಿ+ಇ+ಝ (ಝ್+ಅ) ಎಂದಿದ್ದಾಗ, 'ಝ್' ಗೆ 'ಅತ್' ಆದೇಶ ಬಂದು ಅಧಿ+ಇ+ಅತ್+ಅ ಎಂದಿದ್ದಾಗ, ಧಾತುವಿಗೆ 'ಇಯಙ್ (ಇಯ್)' ಆದೇಶ ಬಂದು ಅಧಿ+ಇಯ್+ಅತ್+ಅ ಎಂದಿದ್ದಾಗ, ಸವರ್ಣದಿರ್ಘ ಬಂದು ಅಧೀಯ್ ತ್+ಅ ಎಂದಿದ್ದಾಗ, ಅ– ಕಾರರೂಪವಾದ 'ಟಿ' ಗೆ "ಟಿತ ಆತ್ಮನೇಪದಾನಾಂ ಟೇರೇ" ಎಂಬುದರಿಂದ ಏತ್ವ ಬಂದು ಅಧೀಯ್+ಅತ್+ ಏ=ಅಧೀಯತೇ ಎಂದು ರೂಪವಾಗುತ್ತದೆ.

ಸೂಚನೆ: ಇತೇ, ಇಯಾತೇ, ಇಯತೇ ಎಂಬ ರೂಪಗಳು ಸಿದ್ಧವಾದಮೇಲೇನೇ ಅಧಿ ಎಂಬ ಉಪಸರ್ಗವನ್ನು ಸೇರಿಸಿದಾಗ, ರೂಪಗಳು ಸಿದ್ಧವಾಗುತ್ತವೆ ಎಂದು ತಿಳಿಯಬೇಕು.

ರೂಪಗಳು: ಅಧೀತೇ, ಅಧೀಯಾತೇ, ಅಧೀಯತೇ। ಅಧೀಷೇ, ಅಧೀಯಾಥೇ, ಅಧೀಧ್ವೇ। ಅಧೀಯೇ, ಅಧೀವಹೇ, ಅಧೀಮಹೇ।

**ಲಿಟ್:**

**(ಗಾಙ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ– 586.ಗಾಙ್ ಲಿಟಿ (2.4.49)**

ವೃತ್ತಿಃ–ಇಙಃ ಗಾಙ್ ಸ್ಯಾತ್ ಲಿಟಿ। ಅಧಿಜಗೇ। ಅಧಿಜಗಾತೇ। ಅಧಿಜಗಿರೇ। ಅಧ್ಯೇತಾ। ಅಧ್ಯೇಷ್ಯತೇ। ಅಧೀತಾಮ್। ಅಧೀಯಾತಾಮ್। ಅಧೀಯತಾಮ್। ಅಧೀಷ್ವ, ಅಧೀಯಾಥಾಮ್। ಅಧೀಧ್ವಮ್। ಅಧ್ಯಯೈ, ಅಧ್ಯಯಾವಹೈ। ಅಧ್ಯಯಾಮಹೈ। ಅಧ್ಯೈತ। ಅಧ್ಯೈಯಾತಾಮ್, ಅಧ್ಯೈಯತ। ಅಧ್ಯೈಥಾಃ।ಅಧ್ಯೈಯಾಥಾಮ್। ಅಧ್ಯೈಧ್ವಮ್।ಅಧ್ಯೈಯಿ। ಅಧ್ಯೈವಹಿ। ಅಧ್ಯೈಮಹಿ। ಅಧೀಯೀತ। ಅಧಿಯೀಯಾತಾಮ್। ಅಧೀಯೀರನ್। ಅಧ್ಯೇಷೀಷ್ಟ

ಅ. ವೃ– "ಇಙಶ್ಚ" ಎಂಬ ಸೂತ್ರದಿಂದ 'ಇಙಃ' ಎಂಬ ಪದವು ಅನುವೃತವಾಗುತ್ತದೆ.

ಅರ್ಥ– 'ಲಿಟ್' 'ಲ್' ಕಾರದ ವಿವಕ್ಷೆಯಲ್ಲಿ 'ಇಙ್(ಇ)' ಧಾತುವಿಗೆ 'ಗಾಙ್(ಗಾ)'

ಆದೇಶ ಬರುತ್ತದೆ.

**ಲಿಟ್**: ವಿವರಣೆ: ಏಶ್, ಇರೇಚ್ ಮತ್ತು ಆತೇ ಇತ್ಯಾದಿ ಪ್ರತ್ಯಯಗಳಿಗೆ ಕ್ರಾದಿ ನಿಯಮವನ್ನು ಅನುಸರಿಸಿ ಇಡಾಗಮವು ಬರುವುದರಿಂದ ಸೇ, ಧ್ವಮ್ ಮೊದಲಾವು ಅಜಾ(ಸ್ವರಾದಿ)ದಿಗಳಾಗುತ್ತವೆ. ಈ ರೀತಿಯಾಗಿ ಎಲ್ಲ ಪ್ರತ್ಯಯಗಳು ಅಜಾದಿಗಳಾಗೋಣದರಿಂದ 'ಅ'ಕಾರವು ಲೋಪವಾಗುತ್ತದೆ.

ಉದಾ- ಅಧಿಜಗೇ- ಪ್ರಥಮಪುರುಷ ಏಕವಚನದಲ್ಲಿ 'ಇಜ್(ಇ)' ಧಾತುವಿಗೆ 'ಗಾಙ್ (ಗಾ)' ಅದೇಶವು ಬಂದಮೇಲೆ, ಧಾತುವಿಗೆ ದ್ವಿತ್ವ, ಅಭ್ಯಾಸಕ್ಕೆ ಹ್ರಸ್ವ, "ಕುಹೋಶ್ಚುಃ" ಎಬುದರಿಂದ ಚುತ್ವ, "ಆತೋಲೋಪ ಇಟಿಚ" ಎಂಬುದರಿಂದ 'ಆ' ಕಾರಲೋಪ, "ಲಿಟಸ್ತಝಯೋರೇಶಿರೇಚ್" ಎಂಬ ಸೂತ್ರದಿಂದ 'ತ' ಪ್ರತ್ಯಯಕ್ಕೆ 'ಏಶ್(ಏ)' ಆದೇಶ ಬಂದು ಅಧಿಜಗೇ ಎಂದು ರೂಪವಾಗುತ್ತದೆ.

ರೂಪಗಳು: ಅಧಿಜಗೇ, ಅಧಿಜಗಾತೇ, ಅಧಿಜಗಿರೇ। ಅಧಿಜಗಿಷೆ, ಅಧಿಜಗಾಥೇ, ಅಧಿಜಗಿಧ್ವೇ। ಅದಿಜಗೇ, ಅಧಿಜಗಿವಹೇ, ಅಧಿಜಗಿಮಹೇ।

**ಲುಟ್**: ಉದಾ- ಅಧ್ಯೇತಾ- ಪ್ರಥಮಪುರುಷ ಏಕವಚನದಲ್ಲಿ ಅಧಿ ಉಪಸರ್ಗಪೂರ್ವಕ 'ಇಜ್(ಇ)' ಧಾತುವಿನ ನಂತರ 'ಲುಟ್' ಬಂದು ಅಧಿ+ಇ+ತಾ ಎಂದಿದ್ದಾಗ, "ಸಾರ್ವಧಾತುಕಾರ್ಧಧಾತುಕಯೋಃ" ಎಂಬುದರಿಂದ 'ಇ' ಧಾತುವೇ ಇಗನ್ತ ಅಂಗವಾಗಿರುವುದರಿಂದ ಅದಕ್ಕೆ ಗುಣ (ಏ) ಬಂದು ಅಧಿ+ಏತಾ ಎಂದಿದ್ದಾದ 'ಯಣ್' ಸಂಧಿಯಿಂದ ಅಧ್ಯೇತಾ ಎಂಬ ರೂಪವು ಸಿದ್ಧವಾಗುತ್ತದೆ.

ರೂಪಗಳು: ಅಧ್ಯೇತಾ, ಅಧ್ಯೇತಾರೌ, ಅಧ್ಯೇತಾರಃ। ಅಧ್ಯೇತಾಸೇ, ಅಧ್ಯೇತಾಸಾಥೇ, ಅಧ್ಯೇತಾಧ್ವೇ। ಅಧ್ಯೇತಾಹೇ, ಅಧ್ಯೇತಾಸ್ವಹೇ, ಅಧ್ಯೇತಾಸ್ಮಹೇ।

**ಲೃಟ್**: ಉದಾ- ಅಧ್ಯೇಷ್ಯತೇ- ಪ್ರಥಮಪುರುಷ ಏಕವಚನದಲ್ಲಿ ಅಧಿ ಉಪಸರ್ಗಪೂರ್ವಕ 'ಇಜ್ (ಇ)' ಧಾತುವಿನ ನಂತರ 'ಲೃಟ್' ಬಂದು, ಹಿಂದಿನಂತೆಯೇ 'ಇ' ಧಾತುವಿಗೆ ಗುಣ ಬಂದು ಧಾತುವಿನ ನಂತರ 'ಸ್ಯ' ಪ್ರತ್ಯಯವು ಬಂದು ಅದರ 'ಸ್' ಕಾರಕ್ಕೆ "ಆದೇಶಪ್ರತ್ಯಯಯೋಃ" ಎಂಬುದರಿಂದ 'ಷತ್ವ ಬಂದು ಅಧಿ+ಏಷ್ಯತೇ=ಅಧ್ಯೇಷ್ಯತೇ ಎಂದು ರೂಪವಾಗುತ್ತದೆ.

ರೂಪಗಳು: ಅಧ್ಯೇಷ್ಯತೇ, ಅಧ್ಯೇಷ್ಯೇತೇ, ಅಧ್ಯೇಷ್ಯನ್ತೇ। ಅಧ್ಯೇಷ್ಯಸೇ, ಅಧ್ಯೇಷ್ಯೇಥೇ, ಅಧ್ಯೇಷ್ಯಧ್ವೇ। ಅಧ್ಯೇಷ್ಯೇ, ಅಧ್ಯೇಷ್ಯಾವಹೇ, ಅಧ್ಯೇಷ್ಯಾಮಹೇ।

**ಲೋಟ್**: ಉದಾ- ಅಧೀತಾಮ್ - ಪ್ರಥಮಪುರುಷ ಏಕವಚನದಲ್ಲಿ ಅಧಿ ಉಪಸರ್ಗಪೂರ್ವಕ 'ಇಜ್(ಇ)' ಧಾತುವಿನ ನಂತರ 'ಲೋಟ್' ಬಂದು, 'ಲಟ್' 'ಲ್' ಕಾರದ ಅಧೀತೇ ಎಂಬ ರೂಪ ಸಿದ್ಧವಾದಮೇಲೆ "ಆಮೇತಃ" ಎಂಬ ಸೂತ್ರದಿಂದ 'ಆಮ್' ಮೊದಲಾದ ಕಾರ್ಯಗಳಾದಮೇಲೆ ಅಧೀತಾಮ್ ಎಂದು ರೂಪವು ಸಿದ್ಧವಾಗುತ್ತದೆ.

ರೂಪಗಳು: ಅಧೀತಾಮ್, ಅಧೀಯಾತಾಮ್, ಅಧೀಯತಾಮ್। ಅಧೀಷ್ವ,

ಅಧೀಯಾಥಾಮ್, ಅಧೀಢ್ವಮ್। ಅಧ್ಯಯ್ಯೆ, ಅಧ್ಯಯಾವಹೈ, ಅಧ್ಯಯಾಮಹೈ।

**ಲಙ್**: ಉದಾ– ಅಧ್ಯೈತ– ಪ್ರಥಮಪುರುಷ ಏಕವಚನದಲ್ಲಿ ಅಧಿ ಉಪಸರ್ಗಪೂರ್ವಕ 'ಇಙ್(ಇ)' ಧಾತುವಿನ ನಂತರ 'ಲಙ್' ಬಂದು, ಇ+ತ ಎಂದಿದ್ದಾಗ, ಧಾತುವಿನಪೂರ್ವದಲ್ಲಿ "ಆಡಜಾದೀನಾಮ್" ಎಂಬುದರಿಂದ 'ಆಟ್(ಆ)' ಆಗಮ ಬಂದು ಅಧಿ+ಆ+ಇ+ತ ಎಂದಿದ್ದಾಗ, ಆಡಾಗಮ ಸಂಬಂಧಿಯಾದ 'ಆ' ಕಾರಕ್ಕೂ ಧಾತ್ವವಯಯವಾದ 'ಇ' ಕಾರಕ್ಕೂ "ಆಟಶ್ಚ" ಎಂಬುದರಿಂದ ವೃದ್ಧಿ(ಐ) ಬಂದು ಅಧಿ+ಐ+ತ ಎಂದಿದ್ದಾಗ, ಉಪಸರ್ಗದಲ್ಲಿರುವ 'ಇ' ಕಾರಕ್ಕೆ ಯಣ್ ಸಂಧಿಯಿಂದ 'ಯ್' ಕಾರ ಬಂದು ಅಧ್+ಯ್+ಐ+ತ =ಅಧ್ಯೈತ ಎಂದು ರೂಪವಾಗುತ್ತದೆ.

ರೂಪಗಳು: ಅಧ್ಯೈತ, ಅಧ್ಯೈಯಾತಾಮ್, ಅಧ್ಯೈಯತ। ಅಧ್ಯೈಥಾಃ, ಅಧ್ಯೈಯಾಥಾಮ್, ಅಧ್ಯೈಢ್ವಮ್। ಅಧ್ಯೈಯಿ, ಅಧ್ಯೈವಹಿ, ಅಧ್ಯೈಮಹಿ।

**ವಿಧಿಲಿಙ್**: ಉದಾ– ಅಧೀಯೀತ – ಪ್ರಥಮಪುರುಷ ಏಕವಚನದಲ್ಲಿ ಅಧಿ ಉಪಸರ್ಗಪೂರ್ವಕ 'ಇಙ್(ಇ)' ಧಾತುವಿನ ನಂತರ 'ವಿಧಿಲಿಙ್' ಬಂದು, ಅಧಿ+ ಇ+ಈತ ಎಂದಿದ್ದಾಗ, "ಅಚಿಶ್ನುಧಾತುಭ್ರುವಾಮ್ ಯ್ವೋರಿಯಙುವಙೌ" ಎಂಬುದರಿಂದ ಧಾತುವಿನ 'ಇ' ಕಾರಕ್ಕೆ 'ಇಯಙ್(ಇಯ್)' ಆದೇಶ ಬಂದು ಅಧಿ+ಇಯ್+ ಈತ ಎಂದಿದ್ದಾಗ, ಮೊದಲ ಎರಡು 'ಇ' ಕಾರಗಳಿಗೆ ಸವರಣದೀರ್ಘ ಬಂದು ಅಧೀಯ್+ಈತ=ಅಧೀಯೀತ ಎಂದು ರೂಪವಾಗುತ್ತದೆ.

ರೂಪಗಳು: ಅಧಿಯೀತ, ಅಧೀಯೀಯಾತಾಮ್, ಅಧೀಯೀರನ್। ಅಧಿಯೀಥಾಃ, ಅಧೀಯೀಯಾಥಾಮ್, ಅಧೀಯೀಢ್ವಮ್। ಅಧೀಯೀಯ, ಅಧೀಯೀವಹಿ, ಅಧಿಯೀಮಹಿ।

**ಆಶೀರ್ಲಿಙ್**: ಉದಾ– ಅಧ್ಯೇಷೀಷ್ಟ– ಪ್ರಥಮಪುರುಷ ಏಕವಚನದಲ್ಲಿ ಅಧಿ ಉಪಸರ್ಗಪೂರ್ವಕ 'ಇಙ್(ಇ)' ಧಾತುವಿನ ನಂತರ 'ಆಶೀರ್ಲಿಙ್' ಗೆ 'ತ' ಆದೇಶ ಬಂದು ಅಧಿ+ಇ+ತ ಎಂದಿರುತ್ತದೆ. ಧಾತುವಿನ ನಂತರ ಸೀಯುಟ್(ಸೀಯ್) ಆಗಮ ಬಂದು ಅಧಿ+ಇ+ಸೀಯ್+ತ ಎಂದಿದ್ದಾಗ, "ಸುಟ್‌ತಿಥೋಃ" ಎಂಬ ಸೂತ್ರದಿಂದ 'ತ್' ಕಾರಕ್ಕೆ 'ಸುಟ್(ಸ್)' ಆಗಮ ಆದ್ಯವಯವವಾಗಿ ಬಂದು ಅಧಿ+ ಇ+ಸೀಯ್+ಸ್+ತ ಎಂದಿದ್ದಾಗ, "ಸಾರ್ವಧಾತುಕಾರ್ಧಧಾತುಕಯೋಃ" ಎಂಬ ಸೂತ್ರದಿಂದ ಧಾತುವಿನ 'ಇ' ಕಾರಕ್ಕೆ ಗುಣ ಬಂದು ಅಧಿ+ಏ+ಸೀಯ್+ಸ್+ತ ಎಂದಿದ್ದಾಗ, "ಲೋಪೋವ್ಯೋರ್ವಲಿ" ಎಂಬ ಸೂತ್ರದಿಂದ 'ಸೀಯ್' ನಲ್ಲಿರುವ 'ಯ್' ಕಾರಕ್ಕೆ ಲೋಪ ಬಂದು, ಅಧಿ+ಏ+ಸೀ+ಸ್+ತ ಎಂದಿದ್ದಾಗ ಅಧಿ ನಲ್ಲಿರುವ 'ಇ' ಕಾರಕ್ಕೆ ಯಣ್ ಸಂಧಿಯಿಂದ 'ಯ್' ಕಾರಬಂದು ಅಧ್ಯ್+ಏ+ಸೀ+ ಸ್+ತ ಎಂದಿದ್ದಾಗ, "ಆದೇಶ ಪ್ರತ್ಯಯಯೋಃ" ಎಂಬುದರಿಂದ 'ತ್' ಕಾರದ ಪೂರ್ವದಲ್ಲಿರ್ತುವ 'ಸ್' ಕಾರಕ್ಕೆ ಷತ್ವ, 'ತ್' ಕಾರಕ್ಕೆ "ಷ್ಟುನಾಷ್ಟುಃ" ಎಂಬುದರಿಂದ ಟುತ್ವ ಬಂದು ಅಧ್ಯೇಷೀಷ್ಟ ಎಂದು ರೂಪವಾಗುತ್ತದೆ.

ರೂಪಗಳು: ಅಧ್ಯೇಷೀಷ್ಟ, ಅಧ್ಯೇಷೀಯಾಸ್ತಾಮ್, ಅಧ್ಯೇಷೀರನ್। ಅಧ್ಯೇಶೀಷ್ಠಾಃ,

ಅಧ್ಯೇಶೀಯಾಸ್ಥಾಮ್, ಅಧ್ಯೇಶೀಢ್ವಮ್। ಅಧ್ಯೇಷೀಯ, ಅಧ್ಯೇಷೀವಹಿ, ಅಧ್ಯೇಷೀಮಹಿ।

ವಿವರಣೆ: ಅಜಾದಿ ಪ್ರತ್ಯಯಗಳು ಪರವಾದಾಗ, 'ಯಾಸುಟ್' ನಲ್ಲಿರುವ 'ಯ್' ಕಾರಕ್ಕೆ ಲೋಪವು ಬರುವುದಿಲ್ಲ ಎಂಬುದನ್ನು ಗಮನಿಸಬೇಕು.

**ಲುಙ್**:

**(ಲುಙ್ ಮತ್ತು ಲೃಙ್ 'ಲ್' ಕಾರಗಳಲ್ಲಿ ವೈಕಲ್ಪಿಕವಾಗಿ 'ಗಾಙ್(ಗಾ)' ಆದೇಶವನ್ನು ಸೂತ್ರ)**

**ಸೂತ್ರ- 587.ವಿಭಾಷಾ ಲುಙ್ಲೃಙೋಃ (2.4.50)**

ವೃತ್ತಿಃ-ಇಙೋ ಗಾಙ್ ವಾ ಸ್ಯಾತ್।

ಅ. ವೃ.- "ಇಙಶ್ಚ" ಎಂಬ ಸೂತ್ರದಿಂದ 'ಇಙಃ' ಎಂಬ ಪದವೂ, ಮತ್ತು "ಗಾಙ್ ಲಿಟಿ" ಎಂಬ ಸೂತ್ರದಿಂದ 'ಗಾಙ್' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ- ಲುಙ್ ಮತ್ತು ಲೃಙ್ 'ಲ್' ಕಾರಗಳ ವಿವಕ್ಷೆ ಇದ್ದಾಗ 'ಇಙ್(ಇ)' ಧಾತುವಿಗೆ ವೈಕಲ್ಪಿಕವಾಗಿ 'ಗಾಙ್' ಆದೇಶವು ಬರುತ್ತದೆ.

ಅವತರಣಿಕೆ: ಲುಙ್ ಸೇರಿಸಿದಾಗ, ಪ್ರಕೃತ ಸೂತ್ರದಿಂದ 'ಗಾಙ್(ಗಾ)' ಆದೇಶ ಮಾಡಿದಮೇಲೆ ಧಾತುವಿಗೆ ಅಡಾಗಮ, ನಂತರ 'ಚ್ಲಿ' ಬಂದು ಅದಕ್ಕೆ 'ಸಿಚ್(ಸ್)' ಆದೇಶವಾಗಿ ಬಂದಮೇಲೆ ಅಗಾಸ್+ತ ಎಂದಿದ್ದಾಗ-

**(ಙಿದ್ವದ್ಭಾವವನ್ನು ವಿಧಿಸುವ ಸೂತ್ರ)**

**ಸೂತ್ರ- 588.ಗಾಙ್ ಕುಟಾದಿಭ್ಯೋಽಞ್ಣಿನ್ಙಿತ್ (1.2.1)**

ವೃತ್ತಿಃ-ಗಾಙಾದೇಶಾತ್ ಕುಟಾದಿಭ್ಯಶ್ಚ ಪರೇ ಅಞ್ಣಿತಃ ಪ್ರತ್ಯಯಾಃ ಙಿತಃ ಸ್ಯುಃ।

ಪ. ಛೇ. - ಗಾಙ್-ಕುಟಾದಿಭ್ಯಃ, ಅಞ್ಣಿನ್, ಙಿತ್।

ಅರ್ಥ- ಗಾಙ್ ಆದೇಶ ಮತ್ತು ಕುಟಾದಿ ಧಾತುಗಳ ಪರದಲ್ಲಿ ಇರುವ ಞಿತ್, ಮತ್ತು ಣಿತ್ ಗಳಿಗಿಂತ ಭಿನ್ನವಾದ ಪ್ರತ್ಯಯಗಳು ಙಿದ್ವದ್ಭಾವವನ್ನು ಹೊಂದುತ್ತವೆ.

ಸೂಚನೆ: 'ಗಾ (ಗಾಙ್)' ಆದೇಶದ ಪರದಲ್ಲಿರುವ 'ಸಿಚ್(ಸ್)' ಇದು ಞಿತ್, ಮತ್ತು ಣಿತ್ ಗಳಿಗಿಂದ ಭಿನ್ನವಾಗಿದ್ದರಿಂದ ಙಿದ್ವದ್ಭಾವವನ್ನು ಹೊಂದುತ್ತದೆ.

**(ಈತ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ- 589.ಘು-ಮಾ-ಸ್ಥಾ-ಗಾ-ಪಾ-ಜಹಾತಿ-ಸಾಂ ಹಲಿ। (6.4.66)**

ವೃತ್ತಿಃ-ಏಷಾಮ್ ಆತಃ ಈತ್ ಸ್ಯಾತ್ ಹಲಾದೌ ಕ್ಙಿತಿ ಆರ್ಧಧಾತುಕೇ। ಅಧ್ಯಗೀಷ್ಟ ಅಧ್ಯೈಷ್ಟ। ಅಧ್ಯಗೀಷ್ಯತ। ಅಧ್ಯೈಷ್ಯತ। ದುಹ ಪ್ರಪೂರಣೇ।21। ದೋಗ್ಧಿ। ದುಗ್ಧಃ। ದುಹನ್ತಿ। ಧೋಕ್ಷಿ। ದುಗ್ಧೇ। ದುಹಾತೇ। ದುಹತೇ। ಧುಕ್ಷೇ। ದುಹಾಥೇ। ಧುಗ್ಧ್ವೇ। ದುಹೇ। ದುಹ್ವಹೇ। ದುಹ್ಮಹೇ। ದುದೋಹ। ದುದುಹೇ। ದೋಗ್ಧಾ। ಧೋಕ್ಷ್ಯತಿ। ಧೋಕ್ಷ್ಯತೇ। ದೋಗ್ಧು। ದುಗ್ಧಾತ್। ದುಗ್ಧಾವ್। ದುಹನ್ತು। ದುಗ್ಧಿ, ದುಗ್ಧಾತ್। ದುಗ್ಧವ್। ದುಗ್ಧ।

ದೋಹಾನಿ।ದೋಹಾವ। ದೋಹಾಮ। ದುಗ್ಧಾಮ್। ದುಹಾತಾಮ್। ದುಹತಾಮ್। ಧುಕ್ಷ್ವ। ದುಹಾಥಾಮ್। ಧುಗ್ಧ್ವಮ್। ದೋಹೈ। ದೋಹಾವಹೈ। ದೋಹಾಮಹೈ। ಅಧೋಕ್। ಅದುಗ್ಧಾಮ್। ಅದುಹನ್। ಅದೋಹಮ್। ಅದುಗ್ಧ। ಅದುಹಾತಾಮ್। ಅದುಹತ। ಅಧುಗ್ಧ್ವಮ್। ದುಹ್ಯಾತ್। ದುಹೀತ।

ಅ. ವೃ – "ದೀಙೋಯುಡಚಿಕ್ಙಿತಿ" ಎಂಬ ಸೂತ್ರದಿಂದ 'ಕ್ಙಿತಿ' ಎಂಬ ಪದವೂ, ಮತ್ತು "ಆತೋಲೋಪ ಇಟಿಚ" ಎಂಬ ಸೂತ್ರದಿಂದ 'ಆತಃ' ಎಂಬ ಪದವೂ ಮತ್ತು "ಈದ್ಯತಿ" ಎಂಬ ಸೂತ್ರದಿಂದ 'ಈತ್' ಎಂಬ ಪದವೂ ಅನುವೃತ್ತವಾಗುತ್ತವೆ. "ಆರ್ಧಧಾತುಕೇ" ಎಂಬುದು ಅಧಿಕಾರ ಸೂತ್ರವಾಗಿದೆ.

ಅರ್ಥ– ಘು–ಮಾ–ಸ್ಥಾ–ಗಾ–ಪಾ–ಹಾ(ಓಹಾಕ್) ಮತ್ತು 'ಸಾ(ಶೋ)' ಧಾತುಗಳ 'ಆ' ಕಾರಕ್ಕೆ 'ಈ' ಕಾರವು ಆದೇಶವಾಗಿ ಬರುತ್ತದೆ – ಹಲಾದಿ 'ಕಿತ್' ಮತ್ತು 'ಕ್ಙಿತ್' ಆರ್ಧಧಾತುಕ ಪ್ರತ್ಯಯಗಳು ಪರದಲ್ಲಿದ್ದಾಗ.

**ಲುಙ್**: ಉದಾ – ಅಧ್ಯಗೀಷ್ಟ– 'ಗಾಙ್' ಆದೇಶ ಬಂದಮೇಲೆ 'ಲುಙ್' ಗೆ 'ಚ್ಲಿ' ಬಂದು 'ಚ್ಲಿ' ಗೆ 'ಸಿಚ್(ಸ್) ಬಂದಮೇಲೆ ಅಗಾಸ್+ತ ಎಂದಿರುತ್ತದೆ. ಧಾತುವಿಗೆ ಅಧಿ ಎಂಬ ಉಪಸರ್ಗವನ್ನು ಸೇರಿಸಿದಾಗ ಅಧಿ+ಅಗಾಸ್+ತ ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ಗಾ' ನಲ್ಲಿರುವ 'ಆ' ಕಾರಕ್ಕೆ 'ಈ' ಕಾರ, ನಂತರ ಷತ್ವ, ಮತ್ತು ಟುತ್ವ ಗಳು ಬಂದು ಅಧ್ಯಗೀಷ್ಟ ಎಂಬ ರೂಪವು ಸಿದ್ಧವಾಗುತ್ತದೆ.

ರೂಪಗಳು: ಅಧ್ಯಗೀಷ್ಟ, ಅಧ್ಯಗೀಷಾತಾಮ್, ಅಧ್ಯಗೀಷತ। ಅಧ್ಯಗೀಷ್ಠಾಃ, ಅಧ್ಯಗೀಷಾಥಾಮ್, ಅಧ್ಯಗೀಢ್ವಮ್। ಅಧ್ಯಗೀಷಿ, ಅಧ್ಯಗೀಷ್ವಹಿ, ಅಧ್ಯಗೀಷ್ಮಹಿ।

ವೈಕಲ್ಪಿಕ ರೂಪ–[ಗಾಙ್(ಗಾ)] ಬಾರದಪಕ್ಷ:

ಉದಾ– ಅಧ್ಯೈಷ್ಟ– 'ಗಾಙ್' ಆದೇಶ ಬಾರದ ಪಕ್ಷದಲ್ಲಿ ಅಧಿ+ಆ+ಇಸ್+ತ ಎಂದಿದ್ದಾಗ, 'ಇ' ಕಾರಕ್ಕೆ ಗುಣ, ನಂತರ "ಆಟಶ್ಚ" ಎಂಬ ಸೂತ್ರದಿಂದ ಗುಣಕ್ಕೆ ವೃದ್ಧಿ, ಷತ್ವ, ಟುತ್ವಗಳು ಬಂದಮೇಲೆ ಉಪಸರ್ಗದ 'ಇ' ಕಾರಕ್ಕೆ ಯಣಾದೇಶ ಬಂದು ಅಧ್ಯೈಷ್ಟ ಎಂದು ರೂಪವು ಸಿದ್ಧವಾಗುತ್ತದೆ.

ರೂಪಗಳು: ಅಧ್ಯೈಷ್ಟ, ಅಧ್ಯೈಷಾತಾಮ್, ಅಧ್ಯೈಷತ।ಅಧ್ಯೈಷ್ಠಾಃ, ಅಧ್ಯೈಷಾಥಾಮ್, ಅಧ್ಯೈಢ್ವಮ್। ಅಧ್ಯೈಷಿ, ಅಧ್ಯೈಷ್ವಹಿ, ಅಧ್ಯೈಷ್ಮಹಿ।

**ಲೃಙ್**: ಉದಾ–ಅಧ್ಯಗೀಷ್ಯತ

1. ಗಾಙ್ ಆದೇಶ ಪಕ್ಷದಲ್ಲಿ– ಪ್ರಥಮಪುರುಷ ಏಕವಚನದಲ್ಲಿ, ಅಧಿ+ಇ +ತ ಎಂದಿದ್ದಾಗ, 'ಇಙ್' ಧಾತುವಿಗೆ 'ಗಾ' ಆದೇಶ ಬಂದು ಹಲಾದಿಯಾಗಿರುವುದರಿಂದ ಧಾತುವಿನ ಪೂರ್ವದಲ್ಲಿ ಅಡಾಗಮ ಬಂದು ಅಧಿ+ಅ+ಗಾ+ತ ಎಂದಿದ್ದಾಗ, 'ಆ' ಕಾರಕ್ಕೆ 'ಈ' ಕಾರ ಬಂದು ಅಧಿ+ಅ+ಗ್+ಈ+ತ ಎಂದಿದ್ದಾಗ, ಧಾತುವಿನ ಪರದಲ್ಲಿ 'ಸ್ಯ' ಬಂದು ಅಧಿ+ಅ+ಗ್+ಈ +ಸ್ಯ+ತ ಎಂದಿದ್ದಾಗ ಉಪಸರ್ಗದ 'ಇ' ಕಾರಕ್ಕೆ ಯಣಾದೇಶ, 'ಸ್' ಕಾರಕ್ಕೆ ಷತ್ವ ಬಂದು ಅಧ್ಯಗೀಷ್ಯತ ಎಂದು ರೂಪವು ಸಿದ್ಧವಾಗುತ್ತದೆ.

ರೂಪಗಳು: ಅಧ್ಯಗೀಷ್ಯತ, ಅಧ್ಯಗೀಷ್ಯೇತಾಮ್, ಅಧ್ಯಗೀಷ್ಯನ್ತ। ಅಧ್ಯಗೀಷ್ಯಥಾಃ, ಅಧ್ಯಗೀಷ್ಯೇಥಾಮ್, ಅಧ್ಯಗೀಷ್ಯಧ್ವಮ್। ಅಧ್ಯಗೀಷ್ಯೇ, ಅಧ್ಯಗೀಷ್ಯಾವಹಿ, ಅಧ್ಯಗೀಷ್ಯಾಮಹಿ।

2. ಗಾಙ್ ಆದೇಶ ಬಾರದ ಪಕ್ಷದಲ್ಲಿ-

ರೂಪಗಳು: ಅಧ್ಯೈಷ್ಯತ, ಅಧ್ಯೈಷ್ಯೇತಾಮ್, ಅಧ್ಯೈಷ್ಯನ್ತ। ಅದ್ಯೈಷ್ಯಥಾಃ, ಅಧ್ಯೈಷ್ಯೇಥಾಮ್, ಅಧ್ಯೈಷ್ಯಧ್ವಮ್। ಅಧ್ಯೈಷ್ಯೇ, ಅಧ್ಯೈಷ್ಯಾವಹಿ, ಅಧ್ಯೈಷ್ಯಾಮಹಿ।

**(ಇಲ್ಲಿಗೆ ಆತ್ಮನೇಪದಿ ಧಾತುಗಳ ಪ್ರಯೋಗಗಳು ಮುಗಿದವು)**

**ಈಗ ಉಭಯಪದಿ ಧಾತುಗಳ ಪ್ರಯೋಗಗಳು ಆರಂಭವಾಗುತ್ತವೆ.**

1. ದುಹ – ಪ್ರಪೂರಣೇ– ಈ ಧಾತುವಿಗೆ ಪ್ರಪೂರಣ ಎಂದು ಅರ್ಥ. ಪ್ರಪೂರಣ ಎಂದರೆ ತುಂಬುವುದು ಎಂದು ಅರ್ಥವಲ್ಲ, ಹೊರತು ಆಕಳಿನ ಕೆಚ್ಚಲನ್ನು ಖಾಲಿಮಾಡುವುದು ಎಂದು ಅರ್ಥ. (ಕಲಾಪೂರಂ ಎಂಬ ಅರ್ಥಕ್ಕೆ ವಿರುದ್ಧವಾದದ್ದು ಕಲಾಪ್ರಪೂರಣ ಎಂಬುದು ಅಂದರೆ ಕಲಾಶೂನ್ಯ ಎಂದು ಅರ್ಥವಾಗುತ್ತದೆ) ಇದರಲ್ಲಿ 'ದುಹ್' ಮಾತ್ರ ಉಳಿಯುತ್ತದೆ. ಈ ಧಾತುವು ಅನಿಟ್ ಧಾತುಗಳಲ್ಲಿ ಪರಿಗಣಿತವಾಗಿದೆ. ಆದರೂ ಈ ಅನಿಟ್ ಧಾತುವು ಅಜನ್ತ ವಾದರೂ 'ಅ' ಕಾರವನ್ನು ಕಳೆದುಕೊಳ್ಳೋಣದರಿಂದ ಇದಕ್ಕೆ 'ಥಲ್(ಥ)' ಪ್ರತ್ಯಯ ಬಂದಾಗ ನಿತ್ಯವಾಗಿ 'ಇಟ್' ಬರುತ್ತದೆ.

**ಲಟ್**: (ಪರಸ್ಮೈಪದ) ಉದಾ– ದೋಗ್ಧಿ – ಪ್ರಥಮಪುರುಷ ಎಕವಚನದಲ್ಲಿ 'ದುಹ್' ಧಾತುವಿನ ನಂತರ ಪರಸ್ಮೈಪದ ಲಡಾದೇಶವಾಗಿ 'ತಿ(ತಿಪ್)' ಬಂದು, ಧಾತುವಿನ ನಂತರ 'ಶಪ್(ಅ)' ಅದಕ್ಕೆ ಲುಕ್ ಬಂದಮೇಲೆ ದುಹ್+ತಿ ಎಂದಿರುತ್ತದೆ. 'ಉ' ಕಾರಕ್ಕೆ ಲಘೂಪಧಗುಣ ಬಂದು ದೋಹ್+ತಿ ಎಂದಾಗುತ್ತದೆ. "ದಾದೇರ್ಧಾತೋರ್ಘಃ" ಎಂಬ ಸೂತ್ರದಿಂದ 'ಹ್' ಕಾರಕ್ಕೆ 'ಘ್' ಕಾರವು ಆದೇಶವಾಗಿ ಬಂದು "ಝಷಸ್ತಥೋರ್ಧೋಽಧಃ" ಎಂಬ ಸೂತ್ರದಿಂದ 'ತಿ' ನಲ್ಲಿರುವ 'ತ್' ಕಾರಕ್ಕೆ 'ಧ್' ಕಾರವು ಆದೇಶವಾಗಿ ಬಂದು ದೋಘ್+ಧಿ ಎಂದಿರುತ್ತದೆ 'ಘ್' ಕಾರಕ್ಕೆ "ಝಲಾಂ ಜಶ್ ಝಶಿ" ಎಂಬ ಸೂತ್ರದಿಂದ ಜಶ್ತ್ವ(ಗ್) ಕಾರ ಬಂದು ದೋಗ್ಧಿ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ದುಗ್ಧಃ – ಪ್ರಥಮಪುರುಷ ದ್ವಿವಚನದಲ್ಲಿ ದುಹ್+ತಸ್ ಎಂದಿದ್ದಾಗ ಹಿಂದಿನಂತೆಯೇ ಪ್ರಕ್ರಿಯೆ ನಡೆದು ದೋಗ್ಧಿ ಎಂಬ ರೂಪದಂತೆ, ಆದರೆ "ಸಾರ್ವಧಾತುಕಮಪಿತ್" ಎಂಬ ಸೂತ್ರದಿಂದ ಅಪಿತ್ ಸಾರ್ವಧಾತುಕವು ಜಿದ್ವದ್ಭಾವವನ್ನು ಹೊಂದೋಣದರಿಂದ ಗುಣ ನಿಷೇಧವಾಗಿ ದುಗ್+ಧಸ್ ಎಂದಾಗಿ ರುತ್ವ-ವಿಸರ್ಗಗಳಿಂದ ದುಗ್ಧಃ ಎಂದು ರೂಪವಾಗುತ್ತದೆ.

ಉದಾ– ದುಹನ್ತಿ – ಪ್ರಥಮಪುರುಷ ದ್ವಿವಚನದಲ್ಲಿ ದುಹ್+ಝಿ(ಝ್+ಇ) ಎಂದಿದ್ದಾಗ, "ಝೋಽನ್ತಃ" ಎಂಬುದರಿಂದ 'ಝ್' ಗೆ 'ಅನ್ತ್' ಆದೇಶ ಬಂದು ದುಹ್+ಅನ್ತ್+ಇ=ದುಹನ್ತಿ ಎಂದು ರೂಪವಾಗುತ್ತದೆ.

ವಿವರಣೆ–'ಝಲ್' ಪರದಲ್ಲಿ ಇಲ್ಲದೇ ಇರೋಣದರಿಂದ "ದಾದೇರ್ಧಾತೋರ್ಘಃ" ಎಂಬ ಸೂತ್ರದಿಂದ 'ಘ್' ಕಾರವು ಆದೇಶವಾಗಿ ಬರಲಿಲ್ಲ ಹಾಗೆಯೇ ತ ಮತ್ತು ಥ ವರ್ಣಗಳು ಇಲ್ಲದ್ದರಿಂದ 'ಧ್' ಕಾರವೂ ಬರಲಿಲ್ಲ ಎಂದು ತಿಳಿಯಬೇಕು.

ಉದಾ–ಧೋಕ್ಷಿ– ಮಧ್ಯಮಪುರುಷ ಏಕವಚನದಲ್ಲಿ 'ದುಹ್' ಧಾತುವಿನ ನಂತರ 'ಸಿಪ್(ಸಿ)' ಬಂದಮೇಲೆ ಧಾತುವಿನ ಪರದಲ್ಲಿ 'ಶಪ್(ಅ)' ಬಂದು ಅದಕ್ಕೆ ಲುಕ್ ಬಂದಮೇಲೆ ದುಹ್+ಸಿ ಎಂದಿರುತ್ತದೆ. ಏಕವಚನದಲ್ಲಿಯಂತೆ 'ಉ' ಕಾರಕ್ಕೆ ಲಘೂಪದ ಗುಣ ಬಂದು ದೋಹ್+ಸಿ ಎಂದಿದ್ದಾಗ, "ದಾದೇರ್ಧಾತೋರ್ಘಃ" ಎಂಬ ಸೂತ್ರದಿಂದ 'ಹ್' ಕಾರಕ್ಕೆ 'ಘ್' ಕಾರವು ಆದೇಶವಾಗಿ ಬಂದು ದೋಘ್+ಸಿ ಎಂದಿರುತ್ತದೆ. "ಏಕಾಚೋಭಶೋಭಷ್‌ಝಷನ್ತಸ್ಯ ಸ್ಧ್ವೋಃ" ಎಂಬ ಸೂತ್ರದಿಂದ 'ಸ್' ಕಾರವು ಪರದಲ್ಲಿರೋಣದರಿಂದ ಧಾತುವಿನ 'ದ್' ಕಾರಕ್ಕೆ ಭಷ್(ಧ್) ಬಂದು ಧೋಘ್+ಸಿ ಎಂದಿರುತ್ತದೆ. 'ಘ್' ಕಾರಕ್ಕೆ ಜಶ್ತ್ವ(ಗ್) ಬಂದು, ಅದರ ಪರದಲ್ಲಿ 'ಸ್' ಕಾರವಿರೋಣದರಿಂದ "ಖರಿಚ" ಎಂಬ ಸೂತ್ರದಿಂದ ಚರ್ತ್ವ(ಕ್) ಬಂದು 'ಕ್' ಕಾರಕ್ಕೆ ಪರದಲ್ಲಿರುವ 'ಸಿ' ನಲ್ಲಿರುವ 'ಸ್' ಕಾರಕ್ಕೆ ಷತ್ವ ಬಂದು ಧೋಕ್+ಷಿ ಎಂದಿರುತ್ತದೆ ನಂತರ 'ಕ್' ಕಾರ 'ಷ್' ಕರಗಳು ಸೇರಿ 'ಕ್ಷ' ಎಂದಾಗಿ ದೋಕ್ಷಿ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ದುಗ್ಧಃ, ದುಗ್ಧ – ಪ್ರಥಮಪುರುಷ ದ್ವಿವಚನದಂತೆ ಮಧ್ಯಮಪುರುಷ ದ್ವಿವಚನ, ಬಹುವಚನಗಳಲ್ಲಿ, ಕ್ರಮವಾಗಿ ದುಹ್+ಥಸ್ ಮತ್ತು ದುಹ್+ಥ ಎಂದಿದ್ದಾಗ, ಪ್ರಥಮಪುರುಷ ದ್ವಿವಚನದಂತೆ ದುಗ್ಧಃ, ದುಗ್ಧ ಎಂಬ ರೂಪಗಳು ಆಗುತ್ತವೆ. ಹೇಗೆಂದರೆ– "ಝಷಸ್ತಥೋರ್ಧೋಽಧಃ" ಎಂಬ ಸೂತ್ರದಿಂದ ಇಲ್ಲಿ 'ತ್' ಕಾರ ಮತ್ತು 'ಥ್' ಕಾರಗಳ ಸ್ಥಾನದಲ್ಲಿ 'ಧ್' ಕಾರವೇ ಆದೇಶವಾಗಿ ಬರುತ್ತದೆ.

ಉದಾ– ದೋಹ್ಮಿ, ದುಹ್ವಃ, ದುಹ್ಮಃ – ಉತ್ತಮಪುರುಷದ ಮೂರೂ ವಚನಗಳಲ್ಲಿ ದುಹ್+ಮಿ(ಮಿಪ್), ದುಹ್+ವ(ವಸ್) ಮತ್ತು ದುಹ್+ಮ (ಮಸ್) ಎಂದಿದ್ದಾಗ, 'ಝಲ್' ವರ್ಣವು ಪರದಲ್ಲಿ ಇಲ್ಲದೇ ಇರೋಣದರಿಂದ 'ಘ್' ಕಾರಾದೇಶವು ಬರಲಿಲ್ಲ. ಇಲ್ಲಿ 'ಮಿಪ್' ಇದು ಪಿತ್ ಆಗಿರುವುದರಿಂದ 'ಉ' ಕಾರಕ್ಕೆ ಗುಣ ಬಂದು ದೋಹ್ಮಿ ಎಂದಾಗಿದೆ ಉಳಿದವು ಅಪಿತ್ ಆಗಿರುವುದರಿಂದ ಗುಣ ಬಾರದೇ ದುಹ್ವಃ ಮತ್ತು ದುಹ್ಮಃ ಎಂದು ರೂಪಗಳಾಗಿವೆ (ಹಿಂದೆ ಸಿಪ್ ಮತ್ತು ತಿಪ್ ಗಳಿದ್ದಾಗಲೂ ಇದೇರಿತಿಯಲ್ಲಿ ಗುಣ ಬಂದಿದ್ದನ್ನು ಗಮನಿಸಬೇಕು).

ರೂಪಗಳು: ದೋಗ್ಧಿ, ದುಗ್ಧಃ, ದುಹನ್ತಿ। ದೋಕ್ಷಿ, ದುಗ್ಧಃ, ದುಗ್ಧ। ದೋಹ್ಮಿ, ದುಹ್ವಃ, ದುಹ್ಮಃ।

**ಲಟ್**: (ಆತ್ಮನೇಪದ):ರೂಪಗಳು: ದುಗ್ಧೇ,ದುಹಾತೇ, ದುಹತೇ। ಧುಕ್ಷೇ, ದುಹಾಥೇ, ಧುಗ್ಧ್ವೇ। ದುಹೇ। ದುಹ್ವಹೇ। ದುಹ್ಮಹೇ। –

ವಿವರಣೆ: ಆತ್ಮನೇಪದದ ಆಖ್ಯಾತ ಪ್ರತ್ಯಯಗಳಲ್ಲಿ ಎಲ್ಲವೂ ಅಪಿತ್ ಆಗಿರುವುದರಿಂದ "ಸಾರ್ವಧಾತುಕಮಪಿತ್" ಎಂಬುದರಿಂದ 'ಙಿತ್' ಆಗಿರುವುದರಿಂದ ಗುಣ ಬರುವ

ಅವಕಾಶವಿರುವುದಿಲ್ಲ. ಆದರೆ 'ಘ್' ಕಾರ ಆದೇಶ, 'ಸ್' ಮತ್ತು 'ಧ್ವಮ್' ಗಳು ಪರದಲ್ಲಿ ಇರೋಣದರಿಂದ ಪೂರ್ವದಲ್ಲಿರುವ 'ದ್' ಕಾರಕ್ಕೆ 'ಧ್' ಕಾರವು ಆದೇಶವಾಗಿ ಬರುತ್ತದೆ. ಕೇವಲ 'ತ್' ಕಾರ ಸ್ಥಾನದಲ್ಲಿ 'ಧ್' ಕಾರವು ಆದೇಶವಾಗಿ ಬಂದು ಮೇಲಿನ ರೂಪಗಳು ಸಿದ್ಧವಾಗುತ್ತವೆ. ಜೊತೆಗೇನೇ ಆತಾಮ್, ಝ್, ಆಥಾಮ್ ಗಳಲ್ಲಿ ಅಜಾದಿಗಳು ಪರದಲ್ಲಿರೋಣದರಿಂದ ವರ್ಣಜೋಡಣೆ ಮಾತ್ರ ಇರುತ್ತದೆ. ಉತ್ತಮಪುರುಷದಲ್ಲಿ ಪರಸ್ಮೈ ಪದದಂತೆ ವರ್ಣ ಜೋಡಣೆ ಆಗಿರುತ್ತದೆ. ಉಳಿದ ಶಪ್, ಶಪ್‌ಲುಕ್, ಏತ್ವ ಮೊದಲಾದವುಗಳು ಆಗಿಯೇ ಆಗುತ್ತವೆ.

**ಲಿಟ್**: (ಪರಸ್ಮೈ ಪದ):ಉದಾ- ದುದೋಹ -ಪ್ರಥಮ ಪುರುಷ ಏಕವಚನದಲ್ಲಿ ದುಹ್ ಧಾತುವಿನಮೇಲೆ ಲಿಡಾದೇಶ ಬಂದು ದುಹ್+ತಿಪ್(ತಿ) ಎಂದಿದ್ದಾಗ, ಧಾತುವಿಗೆ ದ್ವಿತ್ವ ಬಂದು ದುಹ್ ದುಹ್+ತಿ ಎಂದಿದ್ದಾಗ, ಹಲಾದಿಶೇಷ ಮಾಡಿದಮೇಲೆ ದುದುಹ್+ತಿ ಎಂದಿದ್ದಾಗ, 'ತಿ' ಗ ಅಭಿನವ ಆಖ್ಯಾತ ಪ್ರತ್ಯಯವಾದ 'ಣಲ್(ಅ)' ಬಂದು ದುದುಹ್+ಅ ಎಂದಿದ್ದಾಗ, "ಪುಗಂತ ಲಘೂಪದಸ್ಯ ಚ್" ಎಂಬುದರಿಂದ ಅನಭ್ಯಸ್ತ 'ದ್' ಕಾರೋತ್ತರ 'ಉ' ಕಾರಕ್ಕೆ ಗುಣ ಬಂದು ದುದೋಹ ಎಂದು ರೂಪವಾಗುತ್ತದೆ.

ರೂಪಗಳು: ದುದೋಹ, ದುದುಹತುಃ, ದುದುಹುಃ। ದುದೋಹಿಥ, ದುದುಹಥುಃ, ದುದುಹ। ದುದೋಹ, ದುದುಹಿವ, ದುದುಹಿಮ।

ಆತ್ಮನೇಪದ-ರೂಪಗಳು: ದುದುಹೇ, ದುದುಹಾತೇ, ದುದುಹಿರೇ। ದುದುಹಿಷೇ ದುದುಹಾಥೇ, ದುದುಹಿಢ್ವೇ/ ದುದುಹಿಧ್ವೇ।ದುದುಹೇ, ದುದುಹಿವಹೇ, ದುದುಹಿಮಹೇ।

ಸೂಚನೆ: ಅನಿಟ್ ಧಾತುವಾಗಿದ್ದರೂ ಕೂಡ ಕ್ರಾದಿ ನಿಯಮದಿಂದ 'ಇಟ್' ಆಗಮ ಬರುತ್ತದೆ.

**ಲುಟ್**: (ಪರಸ್ಮೈ ಪದ): ಉದಾ- ದೋಗ್ಧಾ - ಪ್ರಥಮಪುರುಷ ಏಕವಚನದಲ್ಲಿ ದುಹ್+ತಾ ಎಂದಿದ್ದಾಗ, 'ತ್' ಕಾರವನ್ನು 'ಝಲ್' ಪರಕವೆಂದು ಭಾವಿಸಿ "ದಾದೇರ್ಧಾತೋರ್ಘಃ" ಎಂಬ ಸೂತ್ರದಿಂದ 'ಹ್' ಕಾರಕ್ಕೆ 'ಘ್' ಕಾರವು ಆದೇಶವಾಗಿ ಬಂದು ದುಘ್+ತಾ ಎಂದಿದ್ದಾಗ, 'ತ್' ಕಾರಕ್ಕೆ "ಝಷಸ್ತಥೋರ್ಧೋಽಧಃ" ಎಂಬ ಸೂತ್ರದಿಂದ ಇಲ್ಲಿ 'ತ್' ಕಾರಕ್ಕೆ 'ಧ್' ಕಾರ ಮತ್ತು 'ಉ' ಕಾರಕ್ಕೆ ಗುಣ ಬಂದು ದೋಗ್ಧಾ ಎಂದು ರೂಪವಾಗುತ್ತದೆ.

ರೂಪಗಳು: ದೋಗ್ಧಾ, ದೋಗ್ಧಾರೌ, ದೋಗ್ಧಾರಃ। ದೋಗ್ಧಾಸಿ, ದೋಗ್ಧಾಸ್ಥಃ, ದೋಗ್ಧಾಸ್ಥ। ದೋಗ್ಧಾಸ್ಮಿ, ದೋಗ್ಧಾಸ್ವಃ, ದೋಗ್ಧಾಸ್ಮಃ।

(ಆತ್ಮನೇ ಪದ)ಉದಾ- ದೋಗ್ಧಾ- ಹಿಂದಿನಂತೆಯೇ ಪ್ರಕ್ರಿಯೆ ಇರುತ್ತದೆ.

ರೂಪಗಳು: ದೋಗ್ಧಾ, ದೋಗ್ಧಾರೌ, ದೋಗ್ಧಾರಃ। ದೋಗ್ಧಾಸೆ, ದೋಗ್ಧಾಸಾಥೇ, ದೋಗ್ಧಾಧ್ವೇ। ದೋಗ್ಧಾಹೇ, ದೋಗ್ಧಾಸ್ವಹೇ, ದೋಗ್ಧಾಸ್ಮಹೇ।

**ಲೃಟ್**: (ಪರಸ್ಮೈಪದ)-ಉದಾ- ಧೋಕ್ಷ್ಯತಿ - ಪ್ರಥಮಪುರುಷ ಏಕವಚನದಲ್ಲಿ 'ದುಹ್' ಧಾತುವಿನ ನಂತರ 'ತಿ(ತಿಪ್)' ಸೇರಿಸಿದಾಗ ದುಹ್+ತಿ ಎಂದಿರುತ್ತದೆ.

ಅರ್ಧಧಾತುಕದಲ್ಲಿ ಧಾತುವಿನ ಪರದಲ್ಲಿ 'ಸ್ಯ' ಪ್ರತ್ಯಯವನ್ನು ಸೇರಿಸಿ ದುಹ್+ಸ್ಯ+ತಿ ಎಂದಿದ್ದಾಗ, 'ಸ್' ಕಾರವು ಪರದಲ್ಲಿರೋಣದರಿಂದ "ದಾದೇರ್ಧಾತೋರ್ಘಃ" ಎಂಬ ಸೂತ್ರದಿಂದ 'ಹ್' ಕಾರಕ್ಕೆ 'ಘ್' ಕಾರವು ಬಂದು ದುಘ್+ಸ್ಯ+ತಿ ಎಂದಿದ್ದಾಗ, 'ಉ' ಕಾರಕ್ಕೆ ಲಘೂಪಧಗುಣ ಬಂದು ದೋಘ್+ಸ್ಯ+ತಿ ಎಂದಿದ್ದಾಗ "ಏಕಾಚೋಭಶೋಭಷ್‌ಝುಷನ್ತಸ್ಯ ಸ್ಧ್ವೋಃ" ಸೂತ್ರದಿಂದ 'ಸ್' ಕಾರವು ಪರದಲ್ಲಿ ಇರುವುದರಿಂದ ಧಾತುವಿನ 'ದ್' ಕಾರಕ್ಕೆ ಭಷ್(ಧ್) ಬಂದು ಧೋಘ್+ಸ್ಯ+ತಿ ಎಂದಿದ್ದಾಗ, "ಖರಿ ಚ" ಎಂಬುದರಿಂದ 'ಘ್' ಕಾರಕ್ಕೆ ಚರ್ತ್ವದಿಂದ 'ಕ್' ಕಾರ ಬಂದು ಧೋಕ್+ಸ್ಯ+ತಿ ಎಂದಿದ್ದಾಗ, "ಆದೇಶ ಪ್ರತ್ಯಯಯೋಃ" ಎಂಬುದರಿಂದ 'ಸ್' ಕಾರಕ್ಕೆ ಷತ್ವ ಬಂದು, 'ಕ್' 'ಷ್' ಗಳು ಸೇರಿ 'ಕ್ಷ' ಆಗಿ ಧೋಕ್ಷ್+ಯ+ತಿ=ಧೋಕ್ಷ್ಯತಿ ಎಂದು ರೂಪವಾಗುತ್ತದೆ.

ರೂಪಗಳು: ಧೋಕ್ಷ್ಯತಿ, ಧೋಕ್ಷ್ಯತಃ, ಧೋಕ್ಷ್ಯನ್ತಿ। ಧೋಕ್ಷ್ಯಸಿ, ಧೋಕ್ಷ್ಯಥಃ, ಧೋಕ್ಷ್ಯಥ। ಧೋಕ್ಷ್ಯಾಮಿ, ಧೋಕ್ಷ್ಯಾವಃ, ಧೋಕ್ಷ್ಯಾಮಃ।

ಆತ್ಮನೇಪದ: ರೂಪಗಳು: ಧೋಕ್ಷ್ಯತೇ, ಧೋಕ್ಷ್ಯೇತೇ, ಧೋಕ್ಷ್ಯನ್ತೇ। ಧೋಕ್ಷ್ಯಸೇ, ಧೋಕ್ಷ್ಯೇಥೇ, ಧೋಕ್ಷ್ಯಧ್ವೇ। ಧೊಕ್ಷ್ಯೇ, ಧೋಕ್ಷ್ಯಾವಹೇ, ದೋಕ್ಷ್ಯಾಮಹೇ।

**ಲೋಟ್**: (ಪರಸ್ಮೈಪದ):ಈ 'ಲ್' ಕಾರದ ಕಾರ್ಯಗಳೆಲ್ಲವೂ 'ಲಟ್' 'ಲ್' ಕಾರದಂತೆ ಇರುತ್ತದೆ. ಆದರೆ 'ಲೋಟ್'ನ ವಿಶೇಷ ಕಾರ್ಯಗಳು ಮಾತ್ರ ಜರುಗಿ ರೂಪಗಳು ಸಿದ್ಧವಾಗುತ್ತವೆ.

ರೂಪಗಳು: ದೋಗ್ಧು/ದುಗ್ಧಾತ್, ದುಗ್ಧಾಮ್। ದುಹನ್ತು। ದುಗ್ಧಿ/ದುಗ್ಧಾತ್। ದುಗ್ಧಮ್। ದುಗ್ಧ। ದೋಹಾನಿ।ದೋಹಾವ। ದೋಹಾಮ।

ಆತ್ಮನೇ ಪದ– ರೂಪಗಳು: ದುಗ್ಧಾಮ್, ದುಹಾತಾಮ್, ದುಹತಾಮ್। ಧುಕ್ಷ್ವ ದುಹಾಥಾಮ್, ಧುಗ್ಧ್ವಮ್। ದೋಹೈ। ದೋಹಾವಹೈ, ದೋಹಾಮಹೈ।

**ಲಙ್**: (ಪರಸ್ಮೈಪದ)–ಉದಾ– ಅಧೋಕ್/ಅಧೋಗ್– ಪ್ರಥಮಪುರುಷ ಏಕವಚನದಲ್ಲಿ 'ದುಹ್' ಧಾತುವಿನ ನಂತರ 'ಲಙ್' 'ಲ್' ಕಾರಕ್ಕೆ 'ತಿಪ್(ತಿ)' ಆದೇಶ ಬಂದು ಧಾತುವಿನ ಪೂರ್ವದಲ್ಲಿ ಅಡಾಗಮ ಬಂದು, ಧಾತುವಿನ ಪರದಲ್ಲಿ 'ಶಪ್(ಅ)' ಬಂದು ಅದಕ್ಕೆ ಲುಕ್ ಬಂದು 'ತಿ' ಪ್ರತ್ಯಯದ 'ಇ' ಕಾರಕ್ಕೆ "ಇತಶ್ಚ" ಎಂಬುದರಿಂದ ಲೋಪ ಬಂದು, ಅದುಹ್+ತ್ ಎಂದಿರುತ್ತದೆ. "ಪುಗನ್ತಲಘೂಪದಸ್ಯ ಚ" ಎಂಬ ಸೂತ್ರದಿಂದ ಲಘೂಪದಗುಣ ಬಂದು ಅಧೋಹ್+ತ್ ಎಂದಿರುತ್ತದೆ. ಅಪೃಕ್ತವಾದ 'ತ್' ಕಾರಕ್ಕೆ "ಹಲ್ಙ್ಯಾಭ್ಯೋ ದೀರ್ಘಾತ್ ಸುತಿಸ್ಯಪೃಕ್ತಂ ಹಲ್" ಎಂಬುದರಿಂದ ಲೋಪ ಬಂದು ಅದೋಹ್ ಎಂದಿದ್ದಾಗ, ಪದಾನ್ತ 'ಹ್' ಕಾರಕ್ಕೆ "ದಾದೇರ್ಧಾತೋರ್ಘಃ" ಎಂಬ ಸೂತ್ರದಿಂದ 'ಘ್' ಕಾರವು ಆದೇಶವಾಗಿ ಬಂದು ಅದೋಘ್ ಎಂದಿರುತ್ತದೆ. ಧಾತುವಿನ ಆದಿಯಲ್ಲಿರುವ 'ದ್' ಕಾರಕ್ಕೆ "ಏಕಾಚೋಭಶೋಭಷ್‌ಝುಷನ್ತಸ್ಯ ಸ್ಧ್ವೋಃ" ಎಂಬ ಸೂತ್ರದಿಂದ ಭಷ್(ಧ್) ಬಂದು, ಅಧೋಘ್ ಎಂದಿದ್ದಾಗ ಆ 'ಘ್' ಕಾರಕ್ಕೆ ಜಶ್ತ್ವ ಬಂದು ಅಧೋಗ್ ಎಂದಿರುತ್ತದೆ.

"ವಾऽವಸಾನೇ" ಎಂಬ ಸೂತ್ರದಿಂದ 'ಗ್' ಕಾರಕ್ಕೆ ವೈಕಲ್ಪಿಕ ಚರ್ತ್ವ(ಕ್) ಬಂದು ಅಧೋಕ್, ಅಧೋಗ್ ಎರಡು ರೂಪಗಳು ಸಿದ್ಧವಾಗುತ್ತವೆ.

ಉದಾ-ಅದುಗ್ಧಾಮ್- ಪ್ರಥಮಪುರುಷ ದ್ವಿ ವಚನದಲ್ಲಿ ಅದುಹ್+ತಾಮ್ ಎಂದಿದ್ದಾಗ, ಹಿಂದಿನಂತೆ ಘತ್ವ, ಧತ್ವ, ಮತ್ತು ಜಶ್ತ್ವಗಳನ್ನು ಮಾಡಿದಾಗ, ಅದುಗ್ಧಾಮ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ- ಅದುಹನ್ - ಪ್ರಥಮಪುರುಷ ಬಹುವಚನದಲ್ಲಿ ಅದುಹ್+ಅನ್ತಿ ಎಂದಿದ್ದಾಗ, 'ತಿ' ನಲ್ಲಿರುವ 'ಇ' ಕಾರವು "ಇತಶ್ಚ" ಎಂಬುದರಿಂದ ಲೋಪವಾಗಿ ಅದುಹ್+ಅನ್ತ್ ಎಂದಿದ್ದಾಗ, "ಸಂಯೋಗಾನ್ತಸ್ಯ ಲೋಪಃ" ಎಂಬ ಸೂತ್ರದಿಂದ 'ತ್' ಕಾರವು ಲೋಪವಾಗಿ ಅದುಹ್+ಅನ್=ಅದುಹನ್ ಎಂದು ರೂಪವಾಗುತ್ತದೆ.

ಉದಾ- ಅಧೋಕ್/ಅಧೋಗ್-ಮಧ್ಯಮಪುರುಷ ಏಕವಚನದಲ್ಲಿ ಪ್ರಥಮಪುರುಷದಂತೆಯೇ ಅಧೋಕ್/ಅಧೋಗ್ ರೂಪವು ಸಿದ್ಧವಾಗಿವೆ.

ಉದಾ- ಅದುಗ್ಧಮ್, ಅದುಗ್ಧ- ಮಧ್ಯಮಪುರುಷ ದ್ವಿವಚನ, ಬಹುವಚನಗಳಲ್ಲಿ ದುಹ್ ಧಾತುವಿನ ನಂತರ ಕ್ರಮವಾಗಿ 'ಥಸ್' ಮತ್ತು 'ಥ' ಸೇರಿಸಿದಾಗ 'ತಸ್' ಪ್ರತ್ಯಯವನ್ನೆ ಸೇರಿಸಿದಾಗ ಹೇಗೋ ಹಾಗೆ ಅದುಗ್ಧಮ್, ಅದುಗ್ಧ ಎಂಬ ರೂಪಗಳು ಸಿದ್ಧವಾಗಿವೆ.

ಉದಾ- ಅದೋಹಮ್, ಅದುಹ್ವ, ಅದುಹ್ಮ- ಉತ್ತಮಪುರುಷದ ಮೂರೂ ವಚನಗಳಲ್ಲಿ ಅಮ್, ವ, ಮ ಗಳನ್ನು ಸೇರಿಸಿದಾಗ, ಅದೋಹಮ್, ಅದುಹ್ವ, ಅದುಹ್ಮ ಎಂಬ ರೂಪಗಳು ಸಿದ್ಧವಾಗುತ್ತವೆ.

ಗಮನಕ್ಕೆ: ತಿಪ್, ಸಿಪ್, ಮತ್ತು ಮಿಪ್ ಈ ಮೂರು ರೂಪಗಳು ಪಿತ್ ಆಗಿ ಇರೋಣದರಿಂದ ಧಾತುವಿಗೆ ಗುಣ ಬರುತ್ತದೆ ಉಳಿದ ಆರು ರೂಪಗಳಲ್ಲಿ ಅವು ಅಪಿತ್ ಆಗಿರುವುದರಿಂದ ಗುಣವು ಬರುವುದಿಲ್ಲ.

ಆತ್ಮನೇ ಪದ:ರೂಪಗಳು: ಅದುಗ್ಧ। ಅದುಹಾತಾಮ್। ಅದುಹತ। ಅದುಗ್ಧಾಃ, ಅದುಹಾಥಾಮ್, ಅದುಗ್ಧ್ವಮ್। ಅದುಹಿ, ಅದುಹ್ವಹಿ, ಅದುಹ್ಮಹಿ।

**ವಿಧಿಲಿಙ್**: (ಪರಸ್ಮೈಪದ):ರೂಪಗಳು: ದುಹ್ಯಾತ್, ದುಹ್ಯಾತಾಮ್, ದುಹ್ಯುಃ। ದುಹ್ಯಾಃ, ದುಹ್ಯಾತಮ್, ದುಹ್ಯಾತ। ದುಹ್ಯಾಮ್, ದುಹ್ಯಾವ,ದುಹ್ಯಾಮ।

ಆತ್ಮನೇ ಪದ: ರೂಪಗಳು: ದುಹೀತ, ದುಹೀಯಾತಾಮ್, ದುಹೀರನ್। ದುಹೀಥಾಃ, ದುಹೀಯಾಥಾಮ್, ದುಹೀಧ್ವಮ್। ದುಹೀಯ, ದುಹೀವಹಿ, ದುಹೀಮಹಿ।

**ಆಶೀರ್ಲಿಙ್**: (ಪರಸ್ಮೈಪದ):ರೂಪಗಳು: ದುಹ್ಯಾತ್, ದುಹ್ಯಾಸ್ತಾಮ್ ದುಹ್ಯಾಸುಃ। ದುಹ್ಯಾಃ ದುಹ್ಯಾಸ್ತಮ್, ದುಹ್ಯಾಸ್ತ। ದುಹ್ಯಾಸಮ್, ದುಹ್ಯಾಸ್ವ, ದುಹ್ಯಾಸ್ಮ।

**ಆಶೀರ್ಲಿಙ್**: ಆತ್ಮನೇ ಪದ-

**(ಆಶೀರ್ಲಿಙ್ ಆತ್ಮನೇ ಪದದಲ್ಲಿ ಕಿದ್ವದ್ಭಾವವನ್ನು ವಿಧಿಸುವ ಅತಿದೇಶ ಸೂತ್ರ)**

**ಸೂತ್ರ- 590. ಲಿಙ್ ಸಿಚಾವಾತ್ಮನೇಪದೇಷು (1.2.11)**

ವೃತ್ತಿಃ-ಇಕ್-ಸಮೀಪಾತ್ ಹಲಃ ಪರೌ ಝಲಾದೀ ಲಿಙ್ ಸಿಚೌ ಕಿತೌ ಸ್ತಃ ತಙಿ। ಧುಕ್ಷೀಷ್ಟ

ಪ. ಛೇ. -ಲಿಙ್‌ಸಿಚೌ, ಆತ್ಮನೇಪದೇಷು।

ಅ. ವ್ಯ. - "ಇಕೋ ಝಲ್" ಎಂಬ ಸೂತ್ರ ಮತ್ತು "ಹಲನ್ತಾಚ್ಚ" ಎಂಬ ಸೂತ್ರದಿಂದ 'ಹಲನ್ತಾತ್' ಎಂಬ ಪದವೂ ಹಾಗೆಯೇ "ಅಸಂಯೋಗಾಲ್ಲಿಟ್ ಕಿತ್" ಎಂಬ ಸೂತ್ರದಿಂದ 'ಕಿತ್' ಎಂಬ ಪದವೂ ಅನುವೃತ್ತವಾಗುತ್ತವೆ.

ವಿವರಣೆ: 'ಝಲ್' ಎಂಬುದು 'ಲಿಙ್‌ಸಿಚೌ' ಎಂಬುದಕ್ಕೆ ವಿಶೇಷಣವಾಗಿದೆ. 'ಹಲನ್ತಾತ್' ಎಂದರೆ ಸಮೀಪದಲ್ಲಿರುವ 'ಹಲ್' ನಂತರ ಎಂದು ತಿಳಿಯಬೇಕು.

ಅರ್ಥ- 'ಇಕ್' ಪ್ರತ್ಯಾಹಾರ ವರ್ಣಗಳಿಗೆ ಸಮೀಪದಲ್ಲಿರುವ 'ಹ್' ವರ್ಣದ ಪರದಲ್ಲಿ ಝಲಾದಿಯಾದ ಲಿಙ್ ಮತ್ತು ಸಿಚ್ ಗಳು 'ಕಿತ್' ಆಗುತ್ತವೆ- 'ತಙ್' ಪ್ರತ್ಯಯವು ಪರದಲ್ಲಿದ್ದಾಗ.

ವಿವರಣೆ: 'ಆಶೀರ್ಲಿಙ್' 'ಲ್' ಕಾರದಲ್ಲಿ 'ಲಿಙ್' 'ಲ್' ಕಾರಕ್ಕೆ 'ತ' 'ಆತಾಮ್' ಮೊದಲಾದ ಆದೇಶಗಳು ಬರುತ್ತವೆ. ಅವುಗಳಿಗೆ 'ಸೀಯುಟ್(ಸೀಯ್)' ಆಗಮ ಬಂದಮೇಲೆ ಅವು ಝಲಾದಿಯಾಗೋಣದರಿಂದ ಅವು ಕಿದ್ವದ್ಭಾವವನ್ನು ಹೊಂದುತ್ತವೆ. ಹಾಗೆಯೇ ಮುಂದೆ ಬರುವ 'ಲುಙ್' 'ಲ್' ಕಾರದ 'ಸಿಚ್' ಕೂಡ ಕಿದ್ವದ್ಭಾವವನ್ನು ಹೊಂದುತ್ತದೆ.

**ಆಶೀರ್ಲಿಙ್:** (ಆತ್ಮನೇ ಪದ): ಉದಾ- ದುಕ್ಷೀಷ್ಟ- ಪ್ರಥಮಪುರುಷ ಏಕವಚನದಲ್ಲಿ 'ದುಹ್' ಧಾತುವಿನ ನಂತರ ಆಶೀರ್ಲಿಙ್‌ಗೆ 'ತ' ಆದೇಶ ಬಂದು ದುಹ್+ತ ಎಂದಿದ್ದಾಗ ಅದಕ್ಕೆ 'ಸೀಯುಟ್(ಸೀಯ್)' ಆಗಮ ಬಂದಮೇಲೆ ದುಹ್+ಸೀ+ಸೀಯ್+ತ ಎಂದಿರುತ್ತದೆ. ನಚಿತರ 'ತ' ಗೆ 'ಸುಟ್(ಸ್)' ಆಗಮ ಬಂದು ದುಹ್+ ಸೀಯ್+ಸ್+ತ ಎಂದಿರುತ್ತದೆ. ಇಲ್ಲಿ 'ದ್' ಕಾರದ ನಂತರ ಇರುವ 'ಉ' ಕಾರವು 'ಇತ್' ಆಗಿರುವುದರಿಂದ ಇದರ ಸಮೀಪದಲ್ಲಿರುವ 'ಹಲ್' ವರ್ಣವೆಂದರೆ 'ಹ್' ಎಂಬುದು. ಇದರ ಪರದಲ್ಲಿ ಝಲಾದಿಯಾದ 'ಆಶೀರ್ಲಿಙ್' (ಸೀಯ್+ಸ್+ತ) ಇದೆ. ಆದುದರಿಂದ ಪ್ರಕೃತ ಸೂತ್ರದಿಂದ ಅದಕ್ಕೆ ಕಿದ್ವದ್ಭಾವವು ಬರುತ್ತದೆ. 'ಕಿತ್' ಪರದಲ್ಲಿರುವುದರಿಂದ 'ದು' ನಲ್ಲಿ ಬರಬೇಕಾದ ಲಘೂಪದಗುಣವು ನಿಷೇಧಿಸಲ್ಪಟ್ಟಿದೆ. 'ಹ' ಕಾರಕ್ಕೆ 'ಘ್' ಕಾರ, 'ಘ್' ಕಾರಕ್ಕೆ 'ಗ್' ಕಾರ ಬಂದು 'ದ್' ಕಾರಕ್ಕೆ ಭಷ್ತ್ವ (ಧ್) ಬರುತ್ತದೆ. 'ಸ್' ಕಾರವು ಪರದಲ್ಲಿರೋಣದರಿಂದ 'ಗ್' ಕಾರಕ್ಕೆ ಚರ್ತ್ವ (ಕ್) ಕಾರ ಬರುತ್ತದೆ. 'ಕ್' ಕಾರದ ಪರದಲ್ಲಿರುವ 'ಸ್' ಕಾರಕ್ಕೆ ಷತ್ವ ಬಂದು ಧುಕ್+ಷೀಯ್+ಸ್+ತ ಎಂದಿದ್ದಾಗ 'ಕ್' 'ಷ್' ಗಳು ಸೇರಿ 'ಕ್ಷ್' ಎಚಿದಾಗಿ ಧುಕ್ಷೀಯ್+ಸ್+ತ ಎಂದಿರುತ್ತದೆ. "ಲೋಪೋವ್ಯೋರ್ವಲಿ" ಎಂಬುದರಿಂದ 'ಯ್' ಕಾರಕ್ಕೆ ಲೋಪ ಬಂದು, 'ಸುಟ್(ಸ್)' ನ 'ಸ್' ಕಾರಕ್ಕೆ ಷತ್ವ ಬಂದು ಧುಕ್ಷೀಷ್+ತ ಎಂದಿದ್ದಾಗ ಷ್ಟುತ್ವ ಸಂಧಿಯಿಂದ 'ತ್' ಕಾರಕ್ಕೆ ಟುತ್ವ ಬಂದು ಧುಕ್ಷೀಷ್ಟ ಎಂದು ರೂಪವಾಗುತ್ತದೆ.

ಆಶೀರ್ಲಿಙ್ ನ ಆತ್ಮನೇಪದದ ರೂಪಗಳು:ಧುಕ್ಷೀಷ್ಟ, ಧುಕ್ಷೀಯಾಸ್ತಾಮ್, ಧುಕ್ಷೀರನ್। ಧಿಕ್ಷೀಷ್ಠಾಃ, ಧುಕ್ಷೀಯಾಸ್ತಾಮ್, ಧುಕ್ಷೀಢ್ವಮ್। ಧುಕ್ಷೀಯ, ಧುಕ್ಷೀವಹಿ, ಧುಕ್ಷೀಮಹಿ।

**ಲುಙ್**:

**(ಕ್ಸ ಎಂಬ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ- 591. ಶಲ ಇಗುಪಧಾದನಿಟಃ ಕ್ಸಃ (3.1.45)**

ವೃತ್ತಿಃ-ಇಗುಪಧಃ೦ಯಃ ಶಲನ್ತಃ ತಸ್ಮಾತ್ ಅನಿಟಃ ಚ್ಲೇಃ ಕ್ಸ- ಆದೇಶಃ ಸ್ಯಾತ್। ಅಧುಕ್ಷತ್।

ಪ. ಛೇ. – ಶಲ, ಇಗುಪಧಾತ್, ಅನಿಟಃ, ಕ್ಸಃ।

ಅ. ವ್ಯ. –"ಚ್ಲೇಃ ಸಿಚ್" ಎಂಬ ಸೂತ್ರದಿಂದ 'ಚ್ಲೇಃ' ಎಂಬ ಪದವೂ, ಮತ್ತು "ಧಾತೋರೇಕಾಚೋ ಹಲಾದೇಃ ಕ್ರಿಯಾಸಮಭಿಹಾರೇ ಯಙ್" ಎಂಬಸೂತ್ರದಿಂದ 'ಧಾತೋಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- 'ಇಕ್' ವರ್ಣವನ್ನು ಉಪಧೆಯಾಗುಳ್ಳ 'ಶಲ್' ಅನ್ತವಾದ ಧಾತುವು ಯಾವದಿದೆಯೋ ಅದರ ಪರದಲ್ಲಿ 'ಅನಿಟ್' ಆದ 'ಚ್ಲಿ' ಗೆ 'ಕ್ಸ' ಆದೇಶವು ಬರುತ್ತದೆ. ಈ ಸೂತ್ರವು "ಚ್ಲೇಃ" ಎಂಬ ಸೂತ್ರಕ್ಕೆ ಅಪವಾದವಾಗಿದೆ. 'ಕ್ಸ' ನಲ್ಲಿ 'ಕ್' ಕಾರವು 'ಇತ್' ಅಗೋಣದರಿಂದ 'ಸ' ಎಂಬುದು ಅದನ್ತವಾಗಿ ಇರುತ್ತದೆ.

ವಿಶೇಷ – 'ಕ್ಸ' ಎಂಬಲ್ಲಿ 'ಕ್' ಕಾರವು ಮಾತ್ರ 'ಇತ್' ಆಗಿರುವುದರಿಂದ ಅದು 'ಕಿತ್(ಕ್-ಇತ್)' ಆಗಿದೆ. ಅದು ಲೋಪವಾದಮೇಲೆ 'ಸ' ಎಂದು ಅದನ್ತವಾಗಿ ಉಳಿದಿದೆ. 'ಸಿಚ್' ನಲ್ಲಾದರೆ 'ಸ್' ಮಾತ್ರ ಉಳಿಯುತ್ತದೆ. ಉಳಿದವು ಇತ್ ಆಗುತ್ತವೆ.

**ಲುಙ್: (ಪರಸ್ಮೈಪದ)**

ಉದಾ– ಅಧುಕ್ಷತ್– ಪ್ರಥಮಪುರುಷ ಏಕವಚನದಲ್ಲಿ 'ದುಹ್' ಧಾತುವಿನ ನಂತರ 'ಲುಙ್' 'ಲ್' ಕಾರಕ್ಕೆ 'ತ್' ಆದೇಶ ಬಂದು ಧಾತುವಿಗೆ ಅಡಾಗಮ ಬಂದು ಅದುಹ್+ತ್ ಎಂದಿರುತ್ತದೆ. ಇದಕ್ಕೆ 'ಚ್ಲಿ' ಪ್ರತ್ಯಯವು ಬಂದು ಅದಕ್ಕೆ 'ಸಿಚ್(ಸ್)' ಆದೇಶವು ಬರಬೇಕಾಗಿದ್ದಾಗ, ಅದನ್ನು ಬಾಧಿಸಿ ಪ್ರಕೃತ ಸೂತ್ರದಿಂದ 'ಕ್ಸ (ಸ)' ಆದೇಶವು ಬಂದು ಅದುಹ್+ಸ+ತ್ ಎಂದಿರುತ್ತದೆ 'ಸ' ಎಂಬುದು 'ಕಿತ್' ಆಗಿರುವುದರಿಂದ 'ಕ್ಙಿತಿಚ" ಎಂಬುದರಿಂದ ಲಘೂಪದಗುಣದ ನಿಷೇಧವಾಗುತ್ತದೆ. ಹಿಂದಿನಂತೆಯೇ 'ಹ್' ಕಾರಕ್ಕೆ ಘತ್ವ, ಭಷ್ತ್ವ, ನಂತರ ಜಶ್ತ್ವ, ನಂತರ ಚರ್ತ್ವ ಮತ್ತು ಷತ್ವಗಳನ್ನು ಮಾಡಿದಾಗ, ಅಧುಕ್ಷತ್ ಎಂಬ ರೂಪವು ಸಿದ್ಧವಾಗುತ್ತದೆ.

ಲುಙ್ 'ಲ್' ಕಾರದ ಪರಸ್ಮೈಪದದ ರೂಪಗಳು:ಅಧುಕ್ಷತ್, ಅಧುಕ್ಷತಾಮ್, ಅಧುಕ್ಷನ್। ಅಧುಕ್ಷಃ, ಅಧುಕ್ಷತಮ್, ಅಧುಕ್ಷತ। ಅಧುಕ್ಷಮ್, ಅಧುಕ್ಷಾವ, ಅಧುಕ್ಷಾಮ।

**(ವೈಕಲ್ಪಿಕವಾಗಿ 'ಕ್ಸ' ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ- 592. ಲುಗ್ವಾದುಹ-ದಿಹ-ಲಿಹ-ಗುಹಾಮಾತ್ಮನೇಪದೇ ದನ್ತ್ಯೇ**

(7.3.73)

ವೃತ್ತಿಃ-ಏಷಾಂ ಕ್ಸಸ್ಯ ಲುಗ್ವಾ ಸ್ಯಾತ್ ದನ್ತ್ಯೇ ತಙಿ। ಅದುಗ್ಧ। ಅಧುಕ್ಷತ।

ಪ. ಛೇ. – ಲುಕ್, ವಾ, ದುಹ-ದಿಹ-ಲಿಹ-ಗುಹಾಮ್, ಅತ್ಮನೇಪದೇ, ದನ್ತ್ಯೇ।

ಅ. ವೃ– "ಕ್ಸಸ್ಯಾಚಿ" ಎಂಬ ಸೂತ್ರದಿಂದ 'ಕ್ಸಸ್ಯ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– ದುಹ-ದಿಹ-ಲಿಹ ಮತ್ತು ಗುಹ ಧಾತುಗಳ ಪರದಲ್ಲಿ ಬರುವ 'ಕ್ಸ' ಪ್ರತ್ಯಯಕ್ಕೆ ವೈಕಲ್ಪಿಕವಾಗಿ ಲುಕ್ ಬರುತ್ತದೆ– ದನ್ತ್ಯಾದಿ 'ತಙ್' ಪರದಲ್ಲಿದ್ದಾಗ. ಆತ್ಮನೇ ಪದದಲ್ಲಿ ದನ್ತ್ಯಾದಿ ಎಂದರೆ ತ, ಥಾಸ್, ಧ್ವಮ್ ಮತ್ತು ವಹಿ ಪ್ರತ್ಯಯಗಳು. ಈ ಪ್ರತ್ಯಯಗಳು ಪರದಲ್ಲಿದ್ದಾಗ ವೈಕಲ್ಪಿಕವಾಗಿ ಮುಂದಿನ ಸೂತ್ರದಿಂದ 'ಅಚ್' ಪರದಲ್ಲಿದ್ದಾಗ ನಿತ್ಯವಾಗಿ 'ಕ್ಸ' ವು ಲೋಪವಾಗುತ್ತದೆ. "ಅಲೋಽನ್ತ್ಯಸ್ಯ" ಎಂಬ ಸೂತ್ರದ ಪ್ರಭಾವದಿಂದ ಅನ್ತ್ಯ 'ಅಲ್' ಆದ 'ಅ' ಕಾರ ಮಾತ್ರ ಲೋಪ ಹೊಂದಿ, 'ಸ್' ಮಾತ್ರ ಉಳಿಯುತ್ತದೆ.

ಲುಙ್ 'ಲ್' ಕಾರದ ಆತ್ಮನೇಪದದ ರೂಪಗಳು:

ಉದಾ–ಅದುಗ್ಧ– 'ಸ' ದಲ್ಲಿರುವ 'ಅ' ಕಾರಕ್ಕೆ ಲೋಪ ಬಂದ ಪಕ್ಷದಲ್ಲಿ

ರೂಪ: ಪ್ರಥಮಪುರುಷ ಏಕವಚನದಲ್ಲಿ ದುಹ್ ಧಾತುವಿನಪರದಲ್ಲಿ 'ಲುಙ್' 'ಲ್' ಕಾರಕ್ಕೆ 'ತ' ಆದೇಶ ಬಂದು, ನಂತರ ಧಾತುವಿನ ಪೂರ್ವದಲ್ಲಿ 'ಅಟ್' ಆಗಮ ಬಂದು ಅದುಹ್+ತ ಎಂದಿರುತ್ತದೆ. ಧಾತುವಿನ ಪರದಲ್ಲಿ 'ಚ್ಲಿ' ಬಂದು ಅದಕ್ಕೆ 'ಸಿಚ್(ಸ್)' ಬರಬೇಕಾಗಿದ್ದಾಗ, ಅದನ್ನು ಬಾಧಿಸಿ "ಶಲ ಇಗುಪಧಾದನಿಟಃ ಕ್ಸಃ" ಎಂಬ ಸೂತ್ರದಿಂದ 'ಕ್ಸ' ಆದೇಶ ಬರುತ್ತದೆ. ಇದಕ್ಕೆ 'ತ' ಕಾರವು ಪರದಲ್ಲಿರೋಣದರಿಂದ "ಅಲೋಽನ್ತ್ಯಸ್ಯ" ಎಂಬ ಸೂತ್ರದ ಪ್ರಭಾವದಿಂದ ಪ್ರಕೃತ ಸೂತ್ರದಿಂದ ವೈಕಲ್ಪಿಕವಾಗಿ 'ಸ' ನಲ್ಲಿರುವ 'ಅ' ಕಾರಕ್ಕೆ ಲೋಪ ಬರುತ್ತದೆ. ಆಗ ಅದುಹ್+ಸ್+ತ ಎಂದಿರುತ್ತದೆ. "ಝಲೋಝಲಿ" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬರುತ್ತದೆ. ಆಮೇಲೆ 'ಹ್' ಕಾರಕ್ಕೆ ಘತ್ವ ಬಂದು ಅದುಘ್+ತ ಎಂದಿದ್ದಾಗ, 'ಸ್' ಕಾರಾದಿಯಾದ ಪ್ರತ್ಯಯವು ಬಾರದಿದ್ದಾಗ, 'ಭಷ್ತ್ವ(ಧ್) ಬರುವುದಿಲ್ಲ. 'ಘ್' ಕಾರದ ಪರದಲ್ಲಿ ಇರುವ 'ತ್' ಕಾರಕ್ಕೆ "ಝಷಸ್ತಥೋರ್ಧೋಽಧಃ" ಎಂಬ ಸೂತ್ರದಿಂದ 'ಧ್' ಕಾರವು ಆದೇಶವಾಗಿ ಬಂದು ಅದುಘ್+ಧ ಎಂದಿರುತ್ತದೆ. 'ಘ್' ಕಾರಕ್ಕೆ ಜಶ್ತ್ವ(ಗ್) ಕಾರವು ಬಂದು ಅದುಗ್ಧ ಎಂಬ ರೂಪವು ಸಿದ್ಧವಾಗುತ್ತದೆ.

'ಕ್ಸ' ಗೆ ಲೋಪ ಬಾರದ ಪಕ್ಷದಲ್ಲಿ– ಅದುಹ್+ಸ+ತ ಎಂದಿದ್ದಾಗ, 'ಹ್' ಕಾರಕ್ಕೆ ಘತ್ವ ಬಂದು ಅದುಘ್+ಸ+ತ ಎಂದಿದ್ದಾಗ, 'ದ್' ಕಾರಕ್ಕೆ ಭಷ್ತ್ವದಿಂದ ಅಧುಘ್+ಸ+ತ ಎಂದಿರುತ್ತದೆ. ನಂತರ 'ಘ್' ಕಾರಕ್ಕೆ ಚರ್ತ್ವದಿಂದ 'ಕ್' ಕಾರ ಬಂದು ಅಧುಕ್+ಸ+ತ ಎಂದಿದ್ದಾಗ, 'ಕ್' ಕಾರದ ಪರದಲ್ಲಿ ಇರುವ 'ಸ' ಕಾರಕ್ಕೆ ಷತ್ವ ಬಂದು, 'ಕ್' 'ಷ್' ಗಳು ಸೇರಿ 'ಕ್ಷ್' ಆಗಿ ಅಧುಕ್ಷತ ಎಂದು ರೂಪವು ಸಿದ್ಧವಾಗುತ್ತದೆ.

**(ನಿತ್ಯವಾಗಿ 'ಕ್ಸ' ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ– 593.ಕ್ಸಸ್ಯಾಚಿ (7.3.72)**

ವೃತ್ತಿಃ-ಅಜಾದೌ ತಙಿ ಕ್ಸಸ್ಯ ಲೋಪಃ। ಅಧುಕ್ಷಾತಾಮ್। ಅಧುಕ್ಷನ್ತ। ಅದುಗ್ಧಾಃ। ಅಧುಕ್ಷಥಾಃ। ಅಧುಕ್ಷಾಥಾಮ್। ಅಧುಗ್ಧ್ವಮ್। ಅಧುಕ್ಷಧ್ವಮ್। ಅಧುಕ್ಷಿ। ಅದುಹ್ವಹಿ। ಅಧುಕ್ಷಾವಹಿ। ಅಧುಕ್ಷಾಮಹಿ। ಅಧೋಕ್ಷ್ಯತ। ಏವಂ ದಿಹ ಉಪಚಯೇ।22। ಲಿಹ ಆಸ್ವಾದನೇ।23। ಲೇಢಿ। ಲೀಢಃ। ಲಿಹನ್ತಿ। ಲೇಕ್ಷಿ। ಲೀಢೆ। ಲಿಹಾತೆ।ಲಿಹತೆ। ಲಿಕ್ಷೇ। ಲಿಹಾಥೇ। ಲೀಢ್ವೇ। ಲಿಲೇಹ। ಲಿಲಿಹೇ। ಲೇಢಾಸಿ। ಲೇಢಾಸೇ। ಲೇಕ್ಷ್ಯತಿ। ಲೇಕ್ಷ್ಯತೇ। ಲೇಢು। ಲೀಢಾಮ್, ಲಿಹನ್ತು। ಲೀಢಿ। ಲೇಹಾನಿ। ಲೀಡಾಮ್। ಅಲೇಟ್। ಅಲೇಡ್। ಅಲಿಕ್ಷತ್। ಅಲೀಢ। ಅಲಿಕ್ಷತ। ಅಲೇಕ್ಷ್ಯತ್। ಅಲೇಕ್ಷ್ಯತ। ಬ್ರೂಞ್ ವ್ಯಕ್ತಾಯಾಂ ವಾಚಿ।24।

ಪ. ಛೇ.-ಕ್ಸಸ್ಯ, ಅಚಿ।

ಅ. ವೃ- "ಘೋರ್ಲೋಪೋ ಲೇಟಿ ವಾ" ಎಂಬ ಸೂತ್ರದಿಂದ 'ಲೋಪಃ' ಎಂಬ ಶಬ್ದವು ಅನುವೃತ್ತವಾಗಿದೆ. "ಲುಗ್ವಾ ದುಹ-ದಿಹ-ಲಿಹ-ಗುಹಾಮಾತ್ಮನೇಪದೇ

ದನ್ತ್ಯೇ" (7.3.73) ಎಂಬ ಸೂತ್ರದಿಂದ 'ತಙ್' ಶಬ್ದವನ್ನು ಸೂಚಿಸುವ ಆತ್ಮನೇಪದೇ ಎಂಬ ಪದವು ಅಪಕರ್ಷಣ ಮಾಡಿದಾಗ, 'ಅಚಿ' ಎಂಬ ಪದಕ್ಕೆ ವಿಶೇಷ್ಯವಾಗುತ್ತದೆ.

ಅರ್ಥ- ಅಜಾದಿಯಾದ 'ತಙ್' ಅಂದರೆ ಆತ್ಮನೇ ಪದವು ಪರದಲ್ಲಿದ್ದಾಗ 'ಕ್ಸ' ಗೆ ಲೋಪವು ಬರುತ್ತದೆ. ಇಲ್ಲಿಯೂ "ಅಲೋಽನ್ತ್ಯಸ್ಯ" ಎಂಬ ಸೂತ್ರದ ಪ್ರಭಾವದಿಂದ ಅನ್ತ್ಯ 'ಅಲ್' ಆದ 'ಅ' ಕಾರಕ್ಕೆ ಲೋಪ ಬಂದು 'ಸ್' ಮಾತ್ರ ಉಳಿಯುತ್ತದೆ. 'ಅ' ಕಾರ ಲೋಪದ ಪ್ರಯೋಜನವೇನೆಂದರೆ- "ಆತೋಙಿತಃ" ಎಂಬ ಸೂತ್ರದಿಂದ ಬರಬೇಕಾದ 'ಇಯ್' ಆದೇಶವನ್ನು ತಡೆಹಿಡಿಯುವದಕ್ಕಾಗಿ. ಇಲ್ಲದಿದ್ದರೆ 'ಸ' ವು ಅದನ್ತವಾದಾಗ, 'ಇಯ್' ಬಂದು ಅನಿಷ್ಟರೂಪವು ಬರುತ್ತಿತ್ತು.

ಉದಾ- ಅಧುಕ್ಷಾತಾಮ್- ಪ್ರಥಮಪುರುಷ ದ್ವಿ ವಚನದಲ್ಲಿ ದುಹ್+ಆತಾಮ್ ಎಂದಿದ್ದಾಗ, ಧಾತುವಿಗೆ ಅಡಾಗಮ ಬಂದು, ಅದುಹ್+ಆತಾಮ್ ಎಂದಿದ್ದಾಗ, 'ಕ್ಸ(ಸ)' ಪ್ರತ್ಯಯಬಂದು ಅದುಹ್+ಸ+ಆತಾಮ್ ಎಂದಿರುತ್ತದೆ. ಇಲ್ಲಿಯೂ ಅಜಾದಿಯಾದ 'ತಙ್(ಆತ್ಮನೇಪದ)' ಪರದಲ್ಲಿದೆ. ಆದ್ದರಿಂದ ಪ್ರಕೃತ ಸೂತ್ರದಿಂದ 'ಸ' ನಲ್ಲಿರುವ 'ಅ' ಕಾರಕ್ಕೆ ಲುಕ್ ಬಂದು ಅದುಹ್+ಸ್+ಆತಾಮ್ ಎಂದಿರುತ್ತದೆ. ಹಿಂದಿನಂತೆ 'ಹ್' ಕಾರಕ್ಕೆ ಘತ್ವ(ಘ್), 'ದ್' ಕಾರಕ್ಕೆ ಭಷ್ತ್ವ(ಧ್), ಗಳು ಬಂದು ಅಧುಘ್+ಸ್+ಆತಾಮ್ ಎಂದಿದ್ದಾಗ, 'ಘ್' ಕಾರಕ್ಕೆ ಜಶ್ತ್ವದಿಂದ 'ಗ್' ಕಾರ ಬಂದು ಅಧುಗ್+ಸ್+ಆತಾಮ್ ಎಂದಿದ್ದಾಗ, 'ಗ್' ಕಾರಕ್ಕೆ ಚರ್ತ್ವದಿಂದ 'ಕ್' ಕಾರ ಬಂದು ಅಧುಕ್+ಸ್+ಆತಾಮ್ ಎಂದಿದ್ದಾಗ, 'ಸ್' ಕಾರಕ್ಕೆ ಷತ್ವ ಬಂದು 'ಕ್' 'ಷ್' ಗಳು ಸೇರಿ 'ಕ್ಷ್' ಎಂದಾಗಿ ಅಧುಕ್ಷ್+ಆತಾಮ್=ಅಧುಕ್ಷಾತಾಮ್ ಎಂದಾಗುತ್ತದೆ.

ಉದಾ- ಅಧುಕ್ಷನ್ತ- ಪ್ರಥಮಪುರುಷ ಬಹುವಚನದಲ್ಲಿ ಅಧುಕ್ಷ್ ವರೆಗೂ ಹಿಂದಿನಂತೆ ಪ್ರಕ್ರಿಯೆ ನಡೆದು ಅಧುಕ್ಷ್+ಝ(ಝ್+ಅ) ಎಂದಿದ್ದಾಗ, 'ಝ್' ಗೆ 'ಅನ್ತ್' ಆದೇಶ ಬಂದು ಅಧುಕ್ಷ್+ಅನ್ತ್+ಅ=ಅಧುಕ್ಷನ್ತ ಎಂಬ ರೂಪವು ಸಿದ್ಧವಾಗುತ್ತದೆ.

ಲುಙ್ ಆತ್ಮನೇಪದದ ರೂಪಗಳು: ಅದುಗ್ಧ/ಅಧುಕ್ಷತ, ಅಧುಕ್ಷಾತಾಮ್, ಅಧುಕ್ಷನ್ತ।

ಅಧುಗ್ಧಾಃ/ಅಧುಕ್ಷಥಾಃ,ಅಧುಕ್ಷಾಥಾಮ್,ಅದುಗ್ಧ್ವಮ್/ಅಧುಕ್ಷಧ್ವಮ್। ಅಧುಹ್ವಹಿ/ ಅಧುಕ್ಷಾವಹಿ, ಅಧುಕ್ಷಾಮಹಿ।

ಗಮನಕ್ಕೆ: ಥಾಸ್, ಧ್ವಮ್ ಮತ್ತು ವಹಿ ಪ್ರತ್ಯಯಗಳಿದ್ದಾಗ ವಿಕಲ್ಪದಿಂದ 'ಕ್ಸ(ಸ)' ನಲ್ಲಿರುವ 'ಅ' ಕಾರಕ್ಕೆ ಲುಕ್ ಬಂದು 'ಕ್ಸ್' ಮಾತ್ರ ಉಳಿದು ಎರಡೆರಡು ರೂಪಗಳು ಸಿದ್ಧಿಸುತ್ತವೆ. 'ಆಥಾಮ್' ಪ್ರತ್ಯಯ ಬಂದಾಗ– ಪ್ರಕೃತ ಸೂತ್ರದಿಂದ ನಿತ್ಯವಾಗಿ 'ಕ್ಸ' ಗೆ ಲೋಪ ಬರುತ್ತದೆ, ಉಳಿದ ಸ್ಥಳಗಳಲ್ಲಿ 'ಕ್ಸ' ಪ್ರತ್ಯಯಕ್ಕೆ ಲುಕ್ ಬರುವುದಿಲ್ಲ.

**ಲೃಙ್**: **(ಪರಸ್ಮೈಪದ)**

ರೂಪಗಳು: ಅಧೋಕ್ಷ್ಯತ್, ಅಧೋಕ್ಷ್ಯತಾಮ್, ಅಧೋಕ್ಷ್ಯನ್। ಅಧೋಕ್ಷ್ಯಃ, ಅಧೋಕ್ಷ್ಯತಮ್, ಅಧೋಕ್ಷ್ಯತ। ಅಧೋಕ್ಷ್ಯಮ್, ಅಧೋಕ್ಷ್ಯಾವ, ಅಧೋಕ್ಷ್ಯಾಮ।

(ಆತ್ಮನೇ ಪದ) :ರೂಪಗಳು: ಅಧೋಕ್ಷ್ಯತ, ಅಧೋಕ್ಷ್ಯೇತಾಮ್, ಅಧೋಕ್ಷ್ಯನ್ತ। ಅಧೋಕ್ಷ್ಯಥಾಃ, ಅಧೋಕ್ಷ್ಯೇಥಾಮ್, ಅಧೋಕ್ಷ್ಯಧ್ವಮ್। ಅಧೋಕ್ಷ್ಯೇ, ಅಧೋಕ್ಷ್ಯಾವಹಿ, ಅಧೋಕ್ಷ್ಯಾಮಹಿ।

22. ದಿಹ ಉಪಚಯೇ (ಬೆಳೆಯುವುದು)– ಇದರಲ್ಲಿ ದಿಹ್ ಮಾತ್ರ ಉಳಿಯುತ್ತದೆ. 'ದ್' ಕಾರೋತ್ತರ 'ಇ' ಕಾರಕ್ಕೆ ಗುಣ ಬಂದು ದೇಹ್ ಎಂದಾಗುತ್ತದೆ. ಕೆಲವು ಆಚಾರ್ಯರ ಅಭಿಪ್ರಾಯದ ಪ್ರಕಾರ ಲೇಪಿಸುವುದು ಎಂಬ ಅರ್ಥವನ್ನೂ ಸ್ವೀಕರಿಸುತ್ತಾರೆ.

**ಲಟ್** (ಪರಸ್ಮೈಪದ):ರೂಪಗಳು: ದೇಗ್ಧಿ, ದಿಗ್ಧಃ, ದಿಹನ್ತಿ। ದೇಕ್ಷಿ, ದಿಗ್ಧಃ, ದಿಗ್ಧ। ದೇಹ್ಮಿ, ದಿಹ್ವಃ, ದಿಹ್ಮಃ।

(ಆತ್ಮನೇ ಪದ):ರೂಪಗಳು: ದಿಗ್ಧೇ, ದಿಹಾತೇ, ದಿಹತೇ। ದಿಕ್ಷೇ, ದಿಹಾಥೇ, ದಿಗ್ಧ್ವೇ। ದಿಹೇ, ದಿಹ್ವಹೇ, ದಿಹ್ಮಹೇ।

**ಲಿಟ್** (ಪರಸ್ಮೈಪದ)–ರೂಪಗಳು: ದಿದೇಹ, ದಿದಿಹತುಃ, ದಿದಿಹುಃ। ದಿದೇಹಿಥ, ದಿದಿಹಥುಃ, ದಿದಿಹ।ದಿದೇಹ, ದಿದಿಹಿವ, ದಿದಿಹಿಮ।

(ಆತ್ಮನೇ ಪದ):ರೂಪಗಳು: ದಿದಿಹೇ. ದಿದಿಹಾತೇ, ದಿದಿಹಿರೇ। ದಿದಿಹಿಷೇ, ದಿದಿಹಾಥೇ, ದಿದಿಹಿಢ್ವೇ/ದಿದಿಹಿಧ್ವೇ। ದಿದಿಹೇ, ದಿದಿಹಿವಹೇ, ದಿದಿಹಿಮಹೇ।

**ಲುಟ್**: (ಪರಸ್ಮೈಪದ):ರೂಪಗಳು: ದೇಗ್ಧಾ, ದೇಗ್ಧಾರೌ, ದೇಗ್ಧಾರಃ। ದೇಗ್ಧಾಸಿ, ದೇಗ್ಧಾಥಃ. ದೇಗ್ಧಾಥ। ದೇಗ್ಧಾಸ್ಮಿ, ದೇಗ್ಧಾಸ್ವಃ, ದೇಗ್ಧಾಸ್ಮಃ।

(ಆತ್ಮನೇ ಪದ): ರೂಪಗಳು: ದೇಗ್ಧಾ, ದೇಗ್ಧಾರೌ, ದೇಗ್ಧಾರಃ। ದೇಗ್ಧಾಸೇ, ದೇಗ್ಧಾಸಾಥೇ. ದೇಗ್ಧಾಧ್ವೇ। ದೇಗ್ಧಾಹೇ, ದೇಗ್ಧಾಸ್ವಹೇ, ದೇಗ್ಧಾಸ್ಮಹೇ।

**ಲೃಟ್**: (ಪರಸ್ಮೈಪದ):ರೂಪಗಳು: ದೇಕ್ಷ್ಯತಿ, ದೇಕ್ಷ್ಯತಃ, ದೇಕ್ಷ್ಯನ್ತಿ। ದೇಕ್ಷ್ಯಸಿ, ದೇಕ್ಷ್ಯಥಃ, ದೇಕ್ಷ್ಯಥ। ದೇಕ್ಷ್ಯಾಮಿ, ದೇಕ್ಷ್ಯಾವಃ, ದೇಕ್ಷ್ಯಾಮಃ।

ಆತ್ಮನೇಪದ:ದೇಕ್ಷ್ಯತೇ, ದೇಕ್ಷ್ಯೇತೇ, ದೇಕ್ಷ್ಯನ್ತೇ। ದೇಕ್ಷ್ಯಸೇ, ದೇಕ್ಷ್ಯೇಥೇ, ದೇಕ್ಷ್ಯಧ್ವೇ। ದೇಕ್ಷ್ಯೇ, ದೇಕ್ಷ್ಯಾವಹೇ, ದೇಕ್ಷ್ಯಾಮಹೇ।

**ಲೋಟ್**: (ಪರಸ್ಮೈಪದ):ರೂಪಗಳು: ದಿಗ್ಧು/ದಿಗ್ಧಾತ್, ದಿಗ್ಧಾಮ್, ದಿಹನ್ತು। ದಿಗ್ಧಿ/ ದಿಗ್ಧಾತ್, ದಿಗ್ಧಮ್, ದಿಗ್ಧ। ದೇಹಾನಿ, ದೇಹಾವ, ದೇಹಾಮ।

(ಆತ್ಮನೇಪದ):ರೂಪಗಳು: ದಿಗ್ಧಾಮ್, ದಿಹಾತಾಮ್, ದಿಹತಾಮ್। ದಿಕ್ಷ್ವ, ದಿಹಾಥಾಮ್, ದಿಗ್ಧ್ವಮ್। ದೇಹೈ, ದೇಹಾವಹೈ, ದೇಹಾಮಹೈ।

**ಲಙ್**: (ಪರಸ್ಮೈಪದ):ರೂಪಗಳು: ಅಧೇಕ್/ಅಧೇಗ್, ಅದಿಗ್ಧಾಮ್, ಅದಿಹನ್। ಅಧೇಕ್/ ಅಧೇಗ್, ಅದಿಗ್ಧಮ್, ಅದಿಗ್ಧ। ಅದೇಹಮ್, ಅದಿಹ್ವ, ಅದಿಹ್ಮ।

(ಆತ್ಮನೇಪದ):ರೂಪಗಳು: ಅದಿಗ್ಧ, ಅದಿಹಾತಾಮ್, ಅದಿಹತ। ಅದಿಗ್ಧಾಃ, ಅದಿಹಾಥಾಮ್, ದಿಗ್ಧ್ವಮ್। ಅದಿಹಿ, ಅದಿಹ್ವಹಿ, ಅದಿಹ್ಮಹಿ।

**ವಿಧಿಲಿಙ್**: (ಪರಸ್ಮೈಪದ):ರೂಪಗಳು: ದಿಹ್ಯಾತ್, ದಿಹ್ಯಾತಾಮ್, ದಿಹ್ಯುঃ। ದಿಹ್ಯಾಃ, ದಿಹ್ಯಾತಮ್, ದಿಹ್ಯಾತ। ದಿಹ್ಯಾಮ್, ದಿಹ್ಯಾವ, ದಿಹ್ಯಾಮ।

(ಆತ್ಮನೇಪದ):ರೂಪಗಳು: ದಿಹೀತ, ದಿಹೀಯಾತಾಮ್, ದಿಹೀರನ್। ದಿಹೀಥಾಃ, ದಿಹೀಯಾಥಾಮ್, ದಿಹೀಧ್ವಮ್। ದಿಹೀಯ, ದಿಹೀವಹಿ, ದಿಹೀಮಹಿ।

**ಆಶೀರ್ಲಿಙ್**: (ಪರಸ್ಮೈಪದ): ರೂಪಗಳು; ದಿಹ್ಯಾತ್, ದಿಹ್ಯಾಸ್ತಾಮ್, ದಿಹ್ಯಾಸುಃ। ದಿಹ್ಯಾಃ, ದಿಹ್ಯಾಸ್ತಮ್, ದಿಹ್ಯಾಸ್ತ। ದಿಹ್ಯಾಸಮ್, ದಿಹ್ಯಾಸ್ವ, ದಿಹ್ಯಾಸ್ಮ।

ಆತ್ಮನೇಪದ:ರೂಪಗಳು: ಧಿಕ್ಷೀಷ್ಟ, ಧಿಕ್ಷೀಯಾಸ್ತಾಮ್, ಧಿಕ್ಷೀರನ್। ಧಿಕ್ಷೀಷ್ಠಾಃ, ಧಿಕ್ಷೀಯಾಸ್ಥಾಮ್, ಧಿಕ್ಷೀಧ್ವಮ್। ಧಿಕ್ಷೀಯ, ಧಿಕ್ಷೀವಹಿ, ಧಿಕ್ಷೀಮಹಿ।

**ಲುಙ್**: (ಪರಸ್ಮೈಪದ):ರೂಪಗಳು: ಅಧಿಕ್ಷತ್, ಅಧಿಕ್ಷತಾಮ್, ಅಧಿಕ್ಷನ್। ಅಧಿಕ್ಷಃ, ಅಧಿಕ್ಷತಮ್, ಅಧಿಕ್ಷತ। ಅಧಿಕ್ಷಮ್, ಅಧಿಕ್ಷಾವ, ಅಧಿಕ್ಷಾಮ।

(ಆತ್ಮನೇಪದ):ರೂಪಗಳು: ಅದಿಗ್ಧ/ಅದಿಕ್ಷತ, ಅಧಿಕ್ಷಾತಾಮ್, ಅಧಿಕ್ಷನ್ತ। ಅದಿಗ್ಧಾಃ/ ಅದಿಕ್ಷಥಾಃ, ಅಧಿಕ್ಷಾಥಾಮ್, ಅಧಿಗ್ಧ್ವಮ್/ಅಧಿಕ್ಷಧ್ವಮ್। ಅಧಿಕ್ಷೀ, ಅದಿಹ್ವಹಿ/ಅಧಿಕ್ಷಾವಹಿ, ಅಧಿಕ್ಷಾಮಹಿ।

**ಲೃಙ್**: (ಪರಸ್ಮೈಪದ):ರೂಪಗಳು: ಅಧೇಕ್ಷ್ಯತ್, ಅಧೇಕ್ಷ್ಯತಾಮ್, ಅಧೇಕ್ಷ್ಯನ್। ಅಧೇಕ್ಷ್ಯಃ, ಅಧೇಕ್ಷ್ಯತಮ್, ಅಧೇಕ್ಷ್ಯತ। ಅಧೇಕ್ಷ್ಯಮ್, ಅಧೇಕ್ಷ್ಯಾವ, ಅಧೇಕ್ಷ್ಯಾಮ।

(ಆತ್ಮನೇಪದ):ರೂಪಗಳು: ಅಧೇಕ್ಷ್ಯತ, ಅಧೇಕ್ಷ್ಯೇತಾಮ್, ಅಧೇಕ್ಷ್ಯನ್ತ। ಅಧೇಕ್ಷ್ಯಥಾಃ, ಅಧೇಕ್ಷ್ಯೇಥಾಮ್, ಅಧೇಕ್ಷ್ಯಧ್ವಮ್। ಅಧೇಕ್ಷ್ಯೇ, ಅಧೇಕ್ಷ್ಯಾವಹಿ, ಅಧೇಕ್ಷ್ಯಾಮಹಿ।

23. ಲಿಹ ಆಸ್ವಾದನೇ (ನೆಕ್ಕುವುದು ) – ಇದರಲ್ಲಿ 'ಲಿಹ್' ಮಾತ್ರ ಉಳಿಯುತ್ತದೆ. (ಈ ಧಾತುವು ಸ್ವರಿತ 'ಅ' ಕಾರವು 'ಇತ್' ಆಗಿರುವುದರಿಂದ ಉಭಯಪದಿಯಾಗಿದೆ). ಇದು 'ದ್' ಕಾರಾದಿಯಾಗಿಲ್ಲದೇ ಇರುವುದರಿಂದ "ದಾದೇರ್ಧಾತೋರ್ಘಃ" ಸೂತ್ರವು ಅನ್ವಯಿಸುವುದಿಲ್ಲ. ಮತ್ತು 'ಬಶ್' ವರ್ಣ ಇಲ್ಲದೇ ಇರೋಣದರಿಂದ "ಏಕಾಚೋ ಬಶೋ ಭಶ್ ಝುಷನ್ತಸ್ಯ ಸ್ಧ್ವೋಃ" ಎಂಬ ಸೂತ್ರವೂ ಅನ್ವಯಿಸುವುದಿಲ್ಲ. 'ಹ್' ಕಾರಾನ್ತವಾಗಿರುವುದರಿಂದ "ಹೋಢಃ" ಎಂಬ ಸೂತ್ರದಿಂದ ಢತ್ವವು ಬರುತ್ತದೆ.

**ಲಟ್**: (ಪರಸ್ಮೈಪದಿ):ಉದಾ– ಲೇಢಿ – ಪ್ರಥಮಪುರುಷ ಏಕವಚನದಲ್ಲಿ 'ಲಿಹ್' ಧಾತುವಿನ ನಂತರ 'ಲಟ್' 'ಲ್' ಕಾರಕ್ಕೆ ಪರಸಮ್ಮೈಪದದಲ್ಲಿ 'ತಿಪ್(ತಿ)' ಆದೇಶ ಬಂದು ಧಾತುವಿನ ನಂತ 'ಶಪ್(ಅ)' ಬಂದು ಅದಕ್ಕೆ ಲುಕ್ ಬಂದಮೇಲೆ "ಪುಗಂತಲಘೂಪಧ ಸ್ಯ ಚ" ಎಂಬ ಸೂತ್ರದಿಂದ ಲಘೂಪದಗುಣ ಮಾಡಿದಮೇಲೆ ಲೇಹ್+ತಿ ಎಂದಿರುತ್ತದೆ. "ಹೋಢಃ" ಎಂಬುದರಿಂದ 'ಹ್' ಕಾರಕ್ಕೆ ಢತ್ವ ಮಾಡಿದಮೇಲೆ ಲೇಢ್+ತಿ ಎಂದಿರುತ್ತದೆ. "ಝಶಸ್ತತೋರ್ಧೋಽಧಃ" ಎಂಬ ಸೂತ್ರದಿಂದ 'ತಿ' ನಲ್ಲಿರುವ 'ತ್' ಕಾರಕ್ಕೆ 'ಧ್' ಕಾರವು ಆದೇಶವಾಗಿ ಬಂದು ಲೇಢ್+ಧಿ ಎಂದಿರುತ್ತದೆ. 'ಢ್' 'ಧ್' ಗಳು ಸೇರಿದಾಗ ಷ್ಟುತ್ವದಿಂದ 'ಧ್' ಕಾರಕ್ಕೆ 'ಢ್' ಕಾರವು ಬಂದು ಲೇಢ್+ಢಿ ಎಂದಿರುತ್ತದೆ "ಡೋಢೇಲ್ರೋಽಪಃ" ಎಂಬುದರಿಂದ ಪೂರ್ವ 'ಢ್' ಕಾರಕ್ಕೆ ಲೋಪ ಬಂದು ಲೇಢಿ ಎಂಬ ರೂಪವು ಸಿದ್ಧವಾಗುತ್ತದೆ.

ವಿವರಣೆ: ಪ್ರಥಮ, ಮಧ್ಯಮ ಮತ್ತು ಉತ್ತಮಪುರುಷ ಏಕವಚನಗಳಲ್ಲಿ ಮಾತ್ರ ಆಖ್ಯಾತ ಪ್ರತ್ಯಯಗಳು 'ಪಿತ್' ಆಗಿವೆ. ಉಳಿದ 6 ಆಖ್ಯಾತ ಪ್ರತ್ಯಯಗಳು 'ಅಪಿತ್' ಅಗಿರುವುದರಿಂದ "ಸಾರ್ವಧಾತುಕಮಪಿತ್" ಎಂಬ ಸೂತ್ರದಿಂದ 'ಜಿದ್ವದ್ಭಾವ'ವನ್ನು ಹೊಂದೋಣದರಿಂದ ಗುಣ ನಿಷೇಧವಾಗಿರುತ್ತದೆ. ಆದುದರಿಂದ –

ಉದಾ– ಲೀಢಃ – ಪ್ರಥಮಪುರುಷ ದ್ವಿವಚನದಲ್ಲಿ ಲಿಹ್+ತಸ್ ಎಂದಿದ್ದಾಗ, "ಹೋಢಃ" ಎಂಬುದರಿಂದ 'ಹ್' ಕಾರಕ್ಕೆ 'ಢ್' ಕಾರ ಬಂದು ಲಿಢ್+ತಸ್ ಎಂದಿದ್ದಾಗ, "ಝಶಸ್ತತೋರ್ಧೋಽಧಃ" ಎಂಬ ಸೂತ್ರದಿಂದ 'ತಸ್' ನಲ್ಲಿರುವ 'ತ್' ಕಾರಕ್ಕೆ 'ಧ್' ಕಾರವು ಆದೇಶವಾಗಿ ಬಂದು ಲಿಢ್+ಧಸ್ ಎಂದಿರುತ್ತದೆ. 'ಧ್' ಕಾರಕ್ಕೆ ಷ್ಟುತ್ವದಿಂದ 'ಢ್' ಕಾರವು ಬರುತ್ತದೆ. ಲಿಢ್+ಢಸ್ ಎಂದಿದ್ದಾಗ, 'ಢ್ರಲೋಪೇಪೂರ್ವಸ್ಯ ದೀರ್ಘೋಽಣಃ" ಎಂಬ ಸೂತ್ರದಿಂದ (ಅಪಿತ್ ಆಗಿರುವುದರಿಂದ) ಗುಣ ಬಾರದೇ ಮೊದಲನೆಯ 'ಢ್' ಕಾರ ಲೋಪವಾಗಿ ಅದರಪೂರ್ವದಲ್ಲಿರುವ 'ಇ' ಕಾರಕ್ಕೆ ದೀರ್ಘ ಬಂದು ಲೀಢಸ್ ಎಂದಾಗಿ ರುತ್ವ–ವಿಸರ್ಗಗಳಿಂದ ಲೀಢಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಲಿಹನ್ತಿ– ಪ್ರಥಮಪುರುಷ ಬಹುವಚನದಲ್ಲಿ ಲಿಹ್+ಝಿ ಎಂದಿದ್ದಾಗ 'ಝ್' ಗೆ 'ಅನ್ತ್' ಆದೇಶ ಬಂದು ಲಿಹ್+ಅನ್ತ್+ಇ=ಲಿಹನ್ತಿ ಎಂದು ರೂಪವಾಗುತ್ತದೆ.

ಸೂಚನೆ: ಈ ಧಾತುವಿನ ಎಲ್ಲ ಪ್ರಕ್ರಿಯೆಗಳಲ್ಲೂ 'ತ್' ಕಾರಾದಿ ಪ್ರತ್ಯಯಗಳು ಪರದಲ್ಲಿದ್ದಾಗ, ಯಥಾಸಂಭವ ಗುಣ ದೀರ್ಘಗಳು ಬಂದು ಪಕ್ರಿಯೆಯು ಇದೇ ರೀತಿಯಲ್ಲಿರುವುದು. ಅಜಾದಿ ಪ್ರತ್ಯಯಗಳು ಪರವಾದಾಗ, ಯಾವ ವಿಶೇಷ ಕಾರ್ಯಗಳಿರುವುದಿಲ್ಲ. (ಉದಾ– ಲಿಹನ್ತಿ)

ಉದಾ– ಲೇಕ್ಷಿ– ಮಧ್ಯಮಪುರುಷ ಏಕವಚನದಲ್ಲಿ ಲಿಹ್+ಸಿ(ಸಿಪ್) ಎಂದಿದ್ದಾಗ, ಹಿಂದಿನಂತೆಯೇ 'ಹ್' ಕಾರಕ್ಕೆ 'ಢ್' ಕಾರವು ಬಂದು ಲಿಢ್+ಸಿ ಎಂದಿದ್ದಾಗ, "ಷಢೋಃಕಃಸಿ" ಎಂಬ ಸೂತ್ರದಿಂದ 'ಢ್' ಕಾರಕ್ಕೆ 'ಕತ್ವ (ಕ್)' ಬಂದು, ಲಿಕ್+ಸಿ ಎಂದಿದ್ದಾಗ, "ಆದೇಶಪ್ರತ್ಯಯಯೋಃ" ಎಂಬ ಸೂತ್ರದಿಂದ 'ಸ್' ಕಾರಕ್ಕೆ 'ಷತ್ವ' ಬಂದು ಲಿಕ್+ಷ್+ಇ ಎಂದಿದ್ದಾಗ ಇದು 'ಪಿತ್' ಅಗಿರುವುದರಿಂದ 'ಇ' ಕಾಅಕ್ಕೆ

ಗುಣ ಬಂದು ಲೇಕ್ಷಿ ಎಂದು ರೂಪವಾಗುತ್ತದೆ.

ಉದಾ- ಲೀಢಃ- ಮಧ್ಯಮಪುರುಷ ದ್ವಿವಚನದಲ್ಲಿ ಲಿಹ್+ಥಸ್ ಎಂದಿದ್ದಾಗ ಪ್ರಥಮಪುರುಷ ದ್ವಿವಚನದಲ್ಲಿಯಂತೆಯೇ ಲೀಢಃ ಎಂಬ ರೂಪವು ಸಿದ್ಧವಾಗುತ್ತದೆ.

ಸೂಚನೆ: 'ಸ್' ಕಾರಾದಿ ಪ್ರತ್ಯಯಗಳು ಪರವಾದಾಗ ಈ ಮೇಲಿನ ಉದಾಹರಣೆಯಂತೆಯೇ ಢತ್ವ, ಕತ್ವ, ಷತ್ವ ಗಳು ಬರುತ್ತವೆ. 'ಮ್' ಕಾರ ಮತ್ತು 'ವ್' ಕಾರ ಪ್ರತ್ಯಯಗಳು ಪರವಾದಾಗ ಯಾವ ವಿಶೇಷಕಾರ್ಯಗಳೂ ಇರುವುದಿಲ್ಲ.

ಲಟ್ – ಪರಸ್ಮೈಪದಿ ರೂಪಗಳು: ಲೇಢಿ, ಲೀಢಃ, ಲಿಹನ್ತಿ। ಲೇಕ್ಷಿ, ಲೀಢಃ, ಲೀಢ। ಲೇಹ್ಮಿ, ಲಿಹ್ವಃ, ಲಿಹ್ಮಃ।

ಆತ್ಮನೇಪದಿ ರೂಪಗಳು: ಲೀಢೆ, ಲಿಹಾತೆ, ಲಿಹತೆ। ಲಿಕ್ಷೇ, ಲಿಹಾಥೇ, ಲೀಢ್ವೇ। ಲಿಹೇ, ಲಿಹ್ವಹೇ, ಲಿಹ್ಮಹೇ।

ಸೂಚನೆ: ಲೀಢ್ವೇ ಎಂಬಲ್ಲಿ 'ಧ್ವಮ್' ನಲ್ಲಿರುವ 'ಧ್' ಕಾರಕ್ಕೆ ಷ್ಟುತ್ವದಿಂದ ಢತ್ವವು ಬರುತ್ತದೆ. 'ಢ್' ಲೋಪ ಮತ್ತು ದಿರ್ಘ ಗಳು ಹಿಂದಿನಂತೆ ಬರುತ್ತವೆ.

**ಲಿಟ್**: ಪರಸ್ಮೈಪದರೂಪಗಳು: ಲಿಲೇಹ।, ಲಿಲಿಹತುಃ, ಲಿಲಿಹುಃ। ಲಿಲೇಹಿಥ, ಲಿಲಿಹಥುಃ, ಲಿಲಿಹ। ಲಿಲೇಹ, ಲಿಲಿಹಿವ, ಲಿಲಿಹಿಮ।

ಆತ್ಮನೇಪದ ರೂಪಗಳು: ಲಿಲಿಹೇ, ಲಿಲಿಹಾತೇ, ಲಿಲಿಹಿರೇ। ಲಿಲಿಹಿಷೇ, ಲಿಲಿಹಾಥೇ, ಲಿಲಿಹಿಢ್ವೇ/ ಲಿಲಿಹಿಧ್ವೇ। ಲಿಲಿಹೇ, ಲಿಲಿಹಿವಹೇ, ಲಿಲಿಹಿಮಹೇ।

**ಲುಟ್**: ಪರಸ್ಮೈಪದ ರೂಪಗಳು:, ಲೇಢಾ, ಲೇಢಾರೌ, ಲೇಢಾರಃ। ಲೇಢಾಸಿ, ಲೇಢಾಥಃ, ಲೇಢಾಥ। ಲೇಢಾಸ್ಮಿ, ಲೇಢಾಸ್ವಃ, ಲೇಧಾಸ್ಮಃ।

ಆತ್ಮನೇ ಪದ ರೂಪಗಳು: ಲೇಢಾ, ಲೇಢಾರೌ, ಲೇಢಾರಃ। ಲೇಢಾಸೇ, ಲೇಧಾಸಾಥೇ, ಲೇಢಾಧ್ವೇ। ಲೇಢಾಹೇ, ಲೇಢಾಸ್ವಹೇ, ಲೇಢಾಸ್ಮಹೇ।

ಸೂಚನೆ: ಇಲ್ಲಿ ಲಘೂಪಧಗುಣ ಬಂದು ಲೇಹ್+ತಾ ಎಂದಿದ್ದಾಗ, 'ಹ್' ಕಾರಕ್ಕೆ ಢತ್ವ, 'ತ್' ಕಾರಕ್ಕೆ ಧತ್ವ, 'ಢ್' 'ಧ್' 'ಥ'ಗಳಿಗೆ ಷ್ಟುತ್ವ ಮಾಡಿ, ಲೇಢ್+ಢಾ ಎಂದಿದ್ದಾಗ, "ಡೋಢೇಲೋಪಃ" ಎಂಬುದರಿಂದ ಪೂರ್ವ 'ಢ್' ಕಾರಕ್ಕೆ ಲೋಪ ಬಂದು ಲೇಢಾ ಎಂದು ರೂಪವು ಸಿದ್ಧವಾಗಿದೆ.

**ಲೃಟ್**: ಪರಸ್ಮೈಪದ ರೂಪಗಳು: ಲೇಕ್ಷ್ಯತಿ, ಲೇಕ್ಷ್ಯತಃ, ಲೇಕ್ಷ್ಯನ್ತಿ। ಲೇಕ್ಷ್ಯಸಿ, ಲೇಕ್ಷ್ಯಥಃ, ಲೇಕ್ಷ್ಯಥ। ಲೇಕ್ಷ್ಯಾಮಿ, ಲೇಕ್ಷ್ಯಾವಃ, ಲೇಕ್ಷ್ಯಾಮಃ।

ಆತ್ಮನೇಪದ ರೂಪಗಳು: ಲೇಕ್ಷ್ಯತೇ, ಲೇಕ್ಷ್ಯೇತೇ, ಲೇಕ್ಷ್ಯನ್ತೇ। ಲೇಕ್ಷ್ಯಸೇ, ಲೇಕ್ಷ್ಯೇಥೆ, ಲೇಕ್ಷ್ಯಧ್ವೇ। ಲೇಕ್ಷ್ಯೇ, ಲೇಕ್ಷ್ಯಾವಹೇ, ಲೇಕ್ಷ್ಯಾಮಹೇ।

ಸೂಚನೆ: ಈ 'ಲ್' ಕಾರದಲ್ಲಿ ಲಘೂಪಧಗುಣ, ಮತ್ತು ಢತ್ವ ಮಾಡಿದಾಗ, ಲೇಢ್+ಸ್ಯತಿ ಎಂದಿದ್ದಾಗ, "ಷಢೋಃಕಃಸಿ" ಎಂಬ ಸೂತ್ರದಿಂದ 'ಢ್' ಕಾರಕ್ಕೆ 'ಕತ್ವ (ಕ್)' ಬಂದು, 'ಕ್' ಕಾರದ ಪರದಲ್ಲಿರುವ 'ಸ್' ಕಾರಕ್ಕೆ "ಆದೇಶ ಪ್ರತ್ಯಯಯೋಃ"

ಎಂಬುದರಿಂದ ಷತ್ವ ಬಂದು ಲೇಕ್+ಷ್ಯತಿ ಎಂದಿರುತ್ತದೆ 'ಕ್' 'ಷ್'ಗಳು ಸೇರಿ 'ಕ್ಷ' ಎಂದಾಗಿ ಲೇಕ್ಷ್ಯತಿ/ಲೇಕ್ಷ್ಯತೇ ಎಂದು ರೂಪಗಳು ಸಿದ್ಧವಾಗುತ್ತವೆ.

**ಲೋಟ್**: (ಪರಸ್ಮೈಪದ): ರೂಪಗಳು: ಲೇಢು/ ಲೇಢಾತ್, ಲೀಢಾಮ್, ಲಿಹನ್ತು। ಲೀಢಿ/ಲೀಢಾತ್, ಲೀಢಮ್, ಲೀಢ। ಲೇಹಾನಿ, ಲೇಹಾವ, ಲೇಹಾಮ।

ಲೀಢಿ ಎಂಬುದಕ್ಕೆ ವಿವರಣೆ: ಮಧ್ಯಮಪುರುಷ ಏಕವಚನದಲ್ಲಿ 'ಸಿ'ಗೆ 'ಹಿ' ಆದೇಶವು ಬಂದಮೇಲೆ ಲಿಹ್+ಹಿ ಎಂದಿದ್ದಾಗ, " ಹುಝಲ್ಭ್ಯೋಹೇರ್ಧಿಃ" ಎಂಬ ಸೂತ್ರದಿಂದ 'ಹಿ' ಗೆ 'ಧಿ' ಆದೇಶವು ಅಪಿತ್ ಆಗಿ ಬರುತ್ತದೆ. ಆದುದರಿಂದ ಗುಣವು ಬರುವುದಿಲ್ಲ. ನಂತರ ಹಿಂದಿನಂತೆಯೇ ಢತ್ವ, ಷ್ಟುತ್ವ, ಮತ್ತು ಪೂರ್ವ 'ಢ್' ಕಾರ ಲೋಪ, ನಂತರ ಪೂರ್ವ ವರ್ಣಕ್ಕೆ ದೀರ್ಘಗಳು ಬಂದು ಲೀಢಿ ಎಂದು ರೂಪವು ಸಿದ್ಧವಾಗುತ್ತದೇ.

ಲೇಹಾನಿ ಎಂಬುದಕ್ಕೆ ವಿವರಣೆ: ಉತ್ತಮಪುರುಷದ ಮೂರೂ ವಚನಗಳಲ್ಲಿ ಲಿಹ್+ಆನಿ, ಲಿಹ್+ಆವ, ಲಿಹ್+ಆಮ ಎಂದಿದ್ದಾಗ, "ಆಡುತ್ತಮಸ್ಯ ಪಿಚ್ಚ" ಎಂಬುದರಿಂದ 'ಆಟ್' ಆಗಮವು ಬರುತ್ತದೆ. ಮತ್ತು ಅದು ಪಿತ್ ಆಗಿಯೂ ಇರುತ್ತದೆ. ಆದ್ದರಿಂದ ಮೂರೂ ವಚನಗಳಲ್ಲಿ 'ಲ್' ಕಾರೋತ್ತರ 'ಇ' ಕಾರಕ್ಕೆ ಗುಣವು ಬಂದು ಲೇಹಾನಿ, ಲೇಹಾವ, ಲೇಹಾಮ ಎಂದು ರೂಪಗಲಾಗುತ್ತವೆ.

ಆತ್ಮನೇ ಪದ ರೂಪಗಳು: ಲೀಢಾಮ್, ಲಿಹಾತಾಮ್, ಲಿಹತಾಮ್। ಲಿಕ್ಷ್ವ, ಲಿಹಾಥಾಮ್, ಲೀಢ್ವಮ್। ಲೇಹೈ, ಲೇಹಾವಹೈ, ಲೇಹಾಮಹೈ।

**ಲಙ್** : (ಪರಸ್ಮೈ ಪದ) ರೂಪಗಳು: ಅಲೇಟ್/ಅಲೇಡ್। ಅಲೀಢಾಮ್, ಅಲಿಹನ್। ಅಲೇಟ್/ಅಲೇಡ್, ಅಲೀಢಮ್, ಅಲೀಢ। ಅಲೇಹಮ್, ಅಲಿಹ್ವ, ಅಲಿಹ್ಮ।

ಅಲೇಟ್/ಅಲೇಡ್ ರೂಪಗಳ ವಿವರಣೆ: ಪ್ರಥಮ ಮತ್ತು ಮಧ್ಯಮಪುರುಷ ಏಕವಚನಗಳಲ್ಲಿ ಅಲೇಹ್+ತ್ ಮತ್ತು ಅಲೇಹ್+ಸ್ ಎಂದಿದ್ದಾಗ, "ಹಲ್ಙ್ಯಾದಿಭ್ಯೋ ದೀರ್ಘಾತ್ ಸುತಿಸ್ಯಪೃಕ್ತಂ ಹಲ್" ಎಂಬ ಸೂತ್ರದಿಂದ ಕ್ರಮಾವಾಗಿ 'ತ್' ಕಾರ 'ಸ್' ಕಾರಗಳಿಗೆ ಲೋಪ ಬರುತ್ತದೆ. 'ಹ್' ಕಾರಕ್ಕೆ ಢತ್ವವನ್ನು ಮಾಡಿದಮೇಲೆ ಚರ್ತ್ವವಿಕಲ್ಪದಿಂದ ಅಲೇಟ್, ಮತ್ತು ಅಲೇಡ್ ಎಂಬ ರೂಪಗಳು ಸಿದ್ಧವಾಗುತ್ತವೆ.

ಆತ್ಮನೇಪದ ರೂಪಗಳು: ಅಲಿಢ, ಅಲಿಹಾತಾಮ್, ಅಲಿಹತ। ಅಲೀಢಾಃ, ಅಲಿಹಾಥಾಮ್, ಅಲೀಢ್ವಮ್। ಅಲಿಕ್ಷಿ, ಅಲಿಹ್ವಹಿ, ಅಲಿಹ್ಮಹಿ।

**ವಿಧಿಲಿಙ್**: (ಪರಸ್ಮೈಪದ) ರೂಪಗಳು: ಲಿಹ್ಯಾತ್, ಲಿಹ್ಯಾತಾಮ್, ಲಿಹ್ಯಾಸುಃ। ಲಿಹ್ಯಾಃ, ಲಿಹ್ಯಾತಮ್, ಲಿಹ್ಯಾತ। ಲಿಹ್ಯಾಮ್, ಲಿಹ್ಯಾವ, ಲಿಹ್ಯಾಮ।

ಆತ್ಮನೇಪದ ರೂಪಗಳು: ಲಿಹೀತ, ಲಿಹೀಯಾತಾಮ್, ಲಿಹೀರನ್। ಲಿಹೀಹಿ, ಲಿಹೀತಮ್, ಲಿಹೀತ। ಲಿಹೀಯಮ್, ಲೀಹೀವ, ಲಿಹೀಮ।

**ಆಶೀರ್ಲಿಙ್**: ಪರಸ್ಮೈಪದ ರೂಪಗಳು: ಲಿಹ್ಯಾತ್, ಲಿಹ್ಯಸ್ತಾಮ್, ಲಿಹ್ಯಾಸುಃ। ಲಿಹ್ಯಾಃ, ಲಿಹ್ಯಾಸ್ತಮ್, ಲಿಹ್ಯಾಸ್ತ। ಲಿಹ್ಯಾಸಮ್, ಲಿಹ್ಯಾಸ್ವ, ಲಿಹ್ಯಾಸ್ಮ।

ಆತ್ಮನೇಪದ ರೂಪಗಳು: ಲಿಕ್ಷೀಷ್ಟ, ಲಿಕ್ಷೀಯಾಸ್ತಾಮ್, ಲಿಕ್ಷೀರನ್। ಲಿಕ್ಷೀಷ್ಠಾಃ,

ಲಿಕ್ಷೀಯಾಸ್ತಾಮ್, ಲಿಕ್ಷೀಧ್ವಮ್। ಲಿಕ್ಷೀಯ, ಲಿಕ್ಷೀವಹಿ, ಲಿಕ್ಷೀಮಹಿ।

**ಲುಙ್** : ಪರಸ್ಮೈಪದ ರೂಪಗಳು: ಅಲಿಕ್ಷತ್, ಅಲಿಕ್ಷತಾಮ್, ಅಲಿಕ್ಷನ್। ಅಲಿಕ್ಷಃ, ಅಲಿಕ್ಷತಮ್, ಅಲಿಕ್ಷತ। ಅಲಿಕ್ಷಮ್, ಅಲಿಕ್ಷಾವ, ಅಲಿಕ್ಷಾಮ।

ಆತ್ಮನೇಪದ ರೂಪಗಳು: ಅಲೀಢ/ಅಲಿಕ್ಷತ, ಅಲಿಕ್ಷಾತಾಮ್, ಅಲಿಕ್ಷನ್ತ। ಅಲೀಢಾಃ/ ಅಲಿಕ್ಷಥಾಃ, ಅಲಿಕ್ಷಾಥಮ್, ಅಲೀಢ್ವಮ್/ ಅಲಿಕ್ಷಧ್ವಮ್। ಅಲಿಕ್ಷಿ, ಅಲಿಹ್ವಹಿ/ ಅಲಿಕ್ಷಾವಹಿ,ಅಲಿಹ್ಮಹಿ/ಅಲಿಕ್ಷಾಮಹಿ।

**ಲೃಙ್** : (ಪರಸ್ಮೈಪದ ರೂಪಗಳು: ಅಲೇಕ್ಷ್ಯತ್, ಅಲೇಕ್ಷ್ಯತಾಮ್, ಅಲೇಕ್ಷ್ಯನ್। ಅಲೇಕ್ಷ್ಯಃ, ಅಲೇಕ್ಷ್ಯತಮ್, ಅಲೇಕ್ಷ್ಯತ। ಅಲೇಕ್ಷ್ಯಮ್, ಅಲೇಕ್ಷ್ಯಾವ, ಅಲೇಕ್ಷ್ಯಾಮ।

(ಆತ್ಮನೇಪದಿ) ರೂಪಗಳು: ಅಲೇಕ್ಷ್ಯತ, ಅಲೇಕ್ಷ್ಯೇತಾಮ್, ಅಲೇಕ್ಷ್ಯನ್ತ। ಅಲೇಕ್ಷ್ಯಥಾಃ, ಅಲೇಕ್ಷ್ಯೇಥಾಮ್, ಅಲೇಕ್ಷ್ಯಧ್ವಮ್। ಅಲೇಕ್ಷ್ಯೇ, ಅಲೇಕ್ಷ್ಯಾವಹಿ, ಅಲೇಕ್ಷ್ಯಾಮಹಿ।

4. ಬ್ರೂಞ್ ವ್ಯಕ್ತಾಯಾಂ ವಾಚಿ (ಸ್ಪಷ್ಟವಾಗಿ ಮಾತನಾಡುವುದು) ಇದು ಞಿತ್ ಆಗಿ ಇರುವುದರಿಂದ ಉಭಯಪದಿಯಾಗಿದೆ.

**(ಆಹ್ ಎಂಬುದನ್ನು ಆದೇಶವಾಗಿ ವಿಧಿಸುವ ಮತ್ತು ಣಲಾದಿಗಳನ್ನೂ ವಿಧಿಸುವ ಸೂತ್ರ)**

**ಸೂತ್ರ- 594.ಬ್ರುವಃ ಪಞ್ಚಾನಾಮಾದಿತ ಆಹೋ ಬ್ರುವಃ (3.4.84)**

ವೃತ್ತಿಃ-ಬ್ರುವಃ ಲಟಃ ತಿಬಾದೀನಾಂ ಪಞ್ಚಾನಾಂ ಣಲಾದಯಃ ಪಞ್ಚ ವಾ ಸ್ಯುಃ ಬ್ರುವಶ್ಚ ಆಹ್-ಆದೇಶಃ। ಆಹ। ಆಹತುಃ। ಆಹುಃ।

ಪ. ಛೇ. -ಬ್ರುವಃ, ಪಞ್ಚಾನಾಂ, ಆದಿತಃ, ಆಹಃ, ಬ್ರುವಃ।

ಅ. ವೃ.- "ವಿದೋಲಟೋ ವಾ" ಎಂಬ ಸೂತ್ರದಿಂದ 'ಲಟಃ' ಮತ್ತು 'ವಾ' ಎಂಬ ಪದಗಳೂ ಹಾಗೆಯೇ "ಪರಸ್ಮೈಪದಾನಾಂ ಣಲತುಸುಸ್ಥಲತುಸಣಲ್ವಮಾಃ"ಎಂಬ ಸೂತ್ರದಿಂದ 'ಪರಸ್ಮೈಪದಾನಾಂ' ಮತ್ತು 'ಲತುಸುಸ್ಥಲತುಸಃ' ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ- ಬ್ರೂ ಧಾತುವಿನನಂತರ ಇರುವ ಲಟ್ ಗೆ ಆದೇಶವಾಗಿ ಬರುವ ತಿಪ್, ತಸ್, ಝಿ, ಮತ್ತು ಸಿಪ್ ಮತ್ತು ಥಸ್, ಈ 5 ಪ್ರತ್ಯಯಗಳಿಗೆ ಕ್ರಮವಾಗಿ ಣಲ್, ಅತುಸ್, ಉಸ್, ಥಲ್ ಮತ್ತು ಅಥುಸ್ ಎಂಬ 5 ಆದೇಶಗಳು ವಿಕಲ್ಪದಿಂದ ಬರುತ್ತವೆ. ಜೊತೆಗೇನೇ 'ಬ್ರೂ' ಗೆ 'ಆಹ್' ಎಂಬ ಆದೇಶವು ಬರುತ್ತದೆ.

**ಲಟ್:** ಉದಾ- ಆಹ (ಹೇಳುತ್ತಾನೆ) ಪ್ರಥಮಪುರುಷಏಕವಚನದಲ್ಲಿ 'ಬ್ರೂ' ಧಾತುವಿನ ನಂತರ 'ಲಟ್' 'ಲ್' ಕಾರಕ್ಕೆ ತಿಪ್(ತಿ) ಆದೇಶ ಬಂದು ಧಾತುವಿನ ನಂತರ 'ಶಪ್(ಅ)' ಪ್ರತ್ಯಯ ಬಂದು ಅದಕ್ಕೆ ಲುಕ್ ಬಂದಮೇಲೆ ಬ್ರೂ+ತಿ ಎಂದಿರುತ್ತದೆ. ಪ್ರಕೃತ ಸೂತ್ರದಿಂದ 'ತಿ' ಗೆ 'ಣಲ್(ಅ)' ಆದೇಶ ಮತ್ತು 'ಬ್ರೂ' ಗೆ ವೈಕಲ್ಪಿಕವಾಗಿ 'ಆಹ್' ಆದೇಶ ಬಂದು ಆಹ್+ಣಲ್(ಅ)=ಆಹ ಎಂದು ರೂಪವಾಗುತ್ತದೆ. ಇದು ವೈಕಲ್ಪಿಕ ರೂಪ.

ಉದಾ– ಆಹತುಃ, ಆಹುಃ– ಪ್ರಥಮಪುರುಷ ದ್ವಿವಚನ ಬಹುವಚನಗಳಲ್ಲಿ 'ಬ್ರೂ' ಧಾತುವಿಗೆ 'ಆಹ್' ಆದೇಶ ಬಂದು ಆಹ್+ಅತುಸ್= ಆಹತುಃ ಎಂದೂ, ಅಹ್+ಉಸ್=ಆಹುಃ ಎಂದೂ ರೂಪಗಳಾಗುತ್ತವೆ. ಇವು ವೈಕಲ್ಪಿಕ ರೂಪಗಳು.

ಉದಾ– ಆತ್ಥ – ಮಧ್ಯಮಪುರುಷ ಏಕವಚನದಲ್ಲಿ ಬ್ರೂ+ಸಿಪ್(ಸಿ) ಎಂದಿದ್ದಾಗ, 'ಸಿಪ್' ಗೆ 'ಥಲ್(ಥ)' ಆದೇಶ ಬಂದು, 'ಬ್ರೂ' ಧಾತುವಿಗೆ 'ಆಹ್' ಎಂಬ

ಆದೇಶ ಬಂದಮೇಲೆ ಆಹ್+ಥ ಎಂದಿದ್ದಾಗ, 'ಆಹ್' ಗೆ 'ಥ್' ಕಾರವು ಬರಬೇಕಾಗಿದ್ದಾಗ –

**(ಥ ಕಾರವನ್ನುವಿಧಿಸುವ ಸೂತ್ರ)**

**ಸೂತ್ರ– 595.ಆಹಸ್ಥಃ (8.2.35)**

ವೃತ್ತಿಃ–ಝಲಿ ಪರೇ। ಚರ್ತ್ವಮ್। ಆತ್ಥ। ಆಹಥುಃ॥

ಪ. ಛೇ. –ಆಹಃ, ಥಃ॥

ಅ. ವೃ.– "ಝಲೋಝಲಿ" ಎಂಬ ಸೂತ್ರದಿಂದ 'ಝಲಿ' ಎಂಬ ಪದವು ಅನುವೃತ್ತವಾಗುತ್ತದೆ. ಷಷ್ಠೀ ನಿರ್ದಿಷ್ಟವಾಗಿರುವುದರಿಂದ "ಅಲೋಽನ್ತ್ಯಸ್ಯ" ಎಂಬ ಸೂತ್ರವು ಇಲ್ಲಿ ಪ್ರವೃತ್ತವಾಗುತ್ತದೆ.

ಅರ್ಥ– ' ಝಲ್' ವರ್ಣವು ಪರದಲ್ಲಿರುವಾಗ 'ಆಹ್' ನಲ್ಲಿರುವ ಅನ್ತ್ಯ ವರ್ಣವಾದ 'ಹ್' ಕಾರಕ್ಕೆ 'ಥ' ಕಾರವು ಆದೇಶವಾಗಿ ಬರುತ್ತದೆ.

ಹಿಂದಿನ ಸೂತ್ರದಲ್ಲಿ ಸಿದ್ಧವಾದ ಆಹ್+ಥ ಎಂದಿದ್ದಾಗ ಪ್ರಕೃತ ಸೂತ್ರದಿಂದ 'ಹ್' ಕಾರಕ್ಕೆ 'ಥ್' ಕಾರವು ಆದೇಶವಾಗಿ ಬಂದು ಆಥ್+ಥ ಎಂದಿದ್ದಾಗ "ಖರಿಚ" ಎಂಬ ಸೂತ್ರದಿಂದ ಮೊದಲನೇ 'ಥ್' ಕಾರಕ್ಕೆ 'ತ್' ಕಾರವು ಆದೇಶವಾಗಿ ಬಂದು ಆತ್+ಥ=ಆತ್ಥ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಆಹಥುಃ– ಮಧ್ಯಮಪುರುಷ ದ್ವಿ ವಚನದಲ್ಲಿ 'ಬ್ರೂ' ಆಗೆ 'ಆಹ್' ಆದೇಶ ಬಂದು ಆಹ್+ಅಥುಸ್=ಆಹಥುಃ ಎಂದು ರೂಪವಾಗುತ್ತದೆ.

**ಇಲ್ಲಿಗೆ ಣಲಾದಿ 5 ಆದೇಶಗಳಿಂದ ಬಂದ ವೈಕಲ್ಪಿಕ ಅರೂಪಗಳು ಮುಗಿದವು.**

***

ಣಲಾದಿ ಆದೇಶಗಳು ಬಾರದ ಪಕ್ಷದಲ್ಲಿ – ಪ್ರಥಮಪುರುಷ ಏಕವಚನದಲ್ಲಿ 'ಶಪ್(ಅ)' ಪ್ರತ್ಯಯಕ್ಕೆ ಲುಕ್ ಬಂದಮೇಲೆ ಬ್ರೂ+ತಿ ಎಂದಿದ್ದಾಗ–

**(ಈಟ್ ಆಗಮವನ್ನು ವಿಧಿಸುವ ಸೂತ್ರ)**

**ಸೂತ್ರ– 596.ಬ್ರುವ ಈಟ್ (7.3.93)**

ವೃತ್ತಿಃ–ಬ್ರುವಃ ಪರಸ್ಯ ಹಲಾದೇಃ ಪಿತಃ ಈಟ್ ಸ್ಯಾತ್। ಬ್ರವೀತಿ। ಬ್ರೂತಃ। ಬ್ರುವನ್ತಿ। ಬ್ರೂತೇ। ಬ್ರುವಾತೇ। ಬ್ರುವತೇ।

ಪ. ಛೇ. – ಬ್ರುವಃ, ಈಟ್।

ಅ. ವ್ಯ. –"ಉತೋ ವೃದ್ಧಿರ್ಲುಕಿ ಹಲಿ" ಸೂತ್ರದೀದ 'ಹಲಿ' ಎಂಬ ಪದವೂ ಮತ್ತು "ನಾಭ್ಯಸ್ತಸ್ಯಾಚಿ ಪಿತಿ ಸಾರ್ವಧಾತುಕೇ" ಎಂಬ ಸೂತ್ರದಿಂದ 'ಪಿತಿ' ಮತ್ತು 'ಸಾರ್ವಧಾತುಕೇ' ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ–'ಬ್ರೂ' ಧಾತುವಿನ ನಂತರ ಹಲಾದಿಯಾದ 'ಪಿತ್' ಗೆ 'ಈಟ್' ಆಗಮವು ಬರುತ್ತದೆ. ಇದರಿಂದ 'ಪಿತ್' ಗಳಾದ ಪ್ರಥಮ, ಮಧ್ಯಮ ಮತ್ತು ಉತ್ತಮಪುರುಷ ಏಕವಚಗಳಲ್ಲಿ ಮಾತ್ರ 'ಈಟ್' ಆಗಮವು ಬರುತ್ತದೆ.

ಉದಾ– ಬ್ರವೀತಿ – ಪ್ರಥಮಪುರುಷ ಏಕವಚನದಲ್ಲಿ ಬ್ರೂ+ತಿ ಎಂದಿದ್ದಾಗ, 'ತಿ' ಗೆ 'ಈಟ್ (ಈ)' ಆಗಮವು ಆದ್ಯವಯವವಾಗಿ ಬಂದು ಬ್ರೂ+ಈ+ತಿ ಎಂದಿದ್ದಾಗ, "ಸಾರ್ವಧಾತುಕಾರ್ಧಧಾತುಕಯೋಃ" ಎಂಬ ಸೂತ್ರದಿಂದ ಗುಣ ಮತ್ತು 'ಅವ್' ಆದೇಶಗಳು ಬಂದು ಬ್ರೋ+ಈ+ತಿ > ಬ್ರವ್+ಈ+ತಿ=ಬ್ರವೀತಿ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಬ್ರವೀಷಿ, ಬ್ರವೀಮಿ– ಮಧ್ಯಮ ಮತ್ತು ಉತ್ತಮಪುರುಷ ಏಕವಚನಗಳಲ್ಲಿ ಕ್ರಮವಾಗಿ ಬ್ರೂ+ಸಿ ಮತ್ತು ಬ್ರೂ+ಮಿ ಎಂದಿದ್ದಾಗ, ಹಿಂದಿನಂತೆಯೇ ಪ್ರಕ್ರಿಯೆ ನಡೆದು 'ಸ್' ಕಾರಕ್ಕೆ ಷತ್ವ ಬಂದು ಬ್ರವೀಷಿ ಎಂದೂ ಬ್ರವೀಮಿ ಎಂದಾಗುತ್ತದೆ.

ಉದಾ– ಬ್ರೂತಃ– ಪ್ರಥಮಪುರುಷ ದ್ವಿವಚನದಲ್ಲಿ ಬ್ರೂ+ತಸ್ ಎಂದಿದ್ದಾಗ ರುತ್ವ-ವಿಸರ್ಗಗಳಿಂದ ಬ್ರೂತಃ ಎಂದು ರೂಪವಾಗುತ್ತದೆ.

ಉದಾ– ಬ್ರುವನ್ತಿ–ಪ್ರಥಮಪುರುಷ ಬಹುವಚನದಲ್ಲಿ ಬ್ರೂ+ಅನ್ತಿ ಎಂದಿದ್ದಾಗ "ಅಚಿಶ್ನುಧಾತುಬ್ರುವಾಂ ಯ್ವೋರಿಯಙುವಙೌ" ಎಂಬ ಸೂತ್ರದಿಂದ 'ಊ' ಕಾರಕ್ಕೆ 'ಉವಙ್(ಉವ್)' ಆದೇಶ ಬಂದು ಬ್ರುವ್+ಅನ್ತಿ=ಬ್ರುವನ್ತಿ ಎಂದು ರೂಪವಾಗುತ್ತದೆ.

ಸೂಚನೆ: ಇತರ ಪ್ರತ್ಯಯ ಪರದಲ್ಲಿದ್ದಾಗ ಯಾವುದೇ ವಿಶೇಷ ಕಾರ್ಯ ಇರದು.

**ಲಟ್**: (ಪರಸ್ಮೈಪದ) ರೂಪಗಳು: ಬ್ರವೀತಿ, ಬ್ರೂತಃ, ಬ್ರುವನ್ತಿ। ಬ್ರವೀಷಿ, ಬ್ರೂಥಃ, ಬ್ರೂಥ। ಬ್ರವೀಮಿ, ಬ್ರೂವಃ, ಬ್ರೂಮಃ।

(ಆತ್ಮನೇಪದ) ರೂಪಗಳು: ಬ್ರೂತೇ, ಬ್ರುವಾತೇ, ಬ್ರುವತೇ। ಬ್ರೂಷೇ, ಬ್ರುವಾಥೇ, ಬ್ರೂಧ್ವೇ। ಬ್ರುವೇ, ಬ್ರೂವಹೇ, ಬ್ರೂಮಹೇ।

**(ವಚ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ– 597.ಬ್ರುವೋ ವಚಿಃ (2.4.53)**

ವೃತ್ತಿಃ–ಆರ್ಧಧಾತುಕೇ। ಉವಾಚ। ಊಚತುಃ। ಊಚುಃ। ಉವಚಿಥ, ಉವಕ್ಥ। ಊಚೇ। ವಕ್ತಾ। ವಕ್ತಾಸಿ। ವಕ್ತಾಸೇ। ವಕ್ಷ್ಯತಿ। ವಕ್ಷ್ಯತೇ। ಬ್ರವೀತು/ಬ್ರೂತಾತ್। ಬ್ರುವನ್ತು। ಬ್ರೂಹಿ/ಬ್ರೂತಾತ್। ಬ್ರವಾಣಿ। ಬ್ರೂತಾಮ್। ಬ್ರವೈ। ಅಬ್ರವೀತ್। ಅಬ್ರೂತ। ಬ್ರೂಯಾತ್। ಬ್ರುವೀತ। ಉಚ್ಯಾತ್। ವಕ್ಷೀಷ್ಟ।

ಪ. ಛೇ. ಬ್ರುವಃ, ವಚಿಃ।

ಉದಾ– ಆಹತುಃ, ಆಹುಃ– ಪ್ರಥಮಪುರುಷ ದ್ವಿವಚನ ಬಹುವಚನಗಳಲ್ಲಿ 'ಬ್ರೂ' ಧಾತುವಿಗೆ 'ಆಹ್' ಆದೇಶ ಬಂದು ಆಹ್+ಅತುಸ್= ಆಹತುಃ ಎಂದೂ, ಅಹ್+ಉಸ್=ಆಹುಃ ಎಂದೂ ರೂಪಗಳಾಗುತ್ತವೆ. ಇವು ವೈಕಲ್ಪಿಕ ರೂಪಗಳು.

ಉದಾ– ಆತ್ಥ – ಮಧ್ಯಮಪುರುಷ ಏಕವಚನದಲ್ಲಿ ಬ್ರೂ+ಸಿಪ್(ಸಿ) ಎಂದಿದ್ದಾಗ, 'ಸಿಪ್' ಗೆ 'ಥಲ್(ಥ)' ಆದೇಶ ಬಂದು, 'ಬ್ರೂ' ಧಾತುವಿಗೆ 'ಆಹ್' ಎಂಬ

ಆದೇಶ ಬಂದಮೇಲೆ ಆಹ್+ಥ ಎಂದಿದ್ದಾಗ, 'ಆಹ್' ಗೆ 'ಥ್' ಕಾರವು ಬರಬೇಕಾಗಿದ್ದಾಗ –

**(ಥ ಕಾರವನ್ನುವಿಧಿಸುವ ಸೂತ್ರ)**

**ಸೂತ್ರ– 595.ಆಹಸ್ಥಃ (8.2.35)**

ವೃತ್ತಿಃ–ಝಲಿ ಪರೇ। ಚರ್ತ್ವಮ್। ಆತ್ಥ। ಆಹಥುಃ।

ಪ. ಛೇ. –ಆಹಃ, ಥಃ।

ಅ. ವ್ಯ.– "ಝಲೋಝಲಿ" ಎಂಬ ಸೂತ್ರದಿಂದ 'ಝಲಿ' ಎಂಬ ಪದವು ಅನುವೃತ್ತವಾಗುತ್ತದೆ. ಷಷ್ಠೀ ನಿರ್ದಿಷ್ಟವಾಗಿರುವುದರಿಂದ "ಅಲೋಽನ್ತ್ಯಸ್ಯ" ಎಂಬ ಸೂತ್ರವು ಇಲ್ಲಿ ಪ್ರವೃತ್ತವಾಗುತ್ತದೆ.

ಅರ್ಥ– ' ಝಲ್' ವರ್ಣವು ಪರದಲ್ಲಿರುವಾಗ 'ಆಹ್' ನಲ್ಲಿರುವ ಅನ್ತ್ಯ ವರ್ಣವಾದ 'ಹ್' ಕಾರಕ್ಕೆ 'ಥ' ಕಾರವು ಆದೇಶವಾಗಿ ಬರುತ್ತದೆ.

ಹಿಂದಿನ ಸೂತ್ರದಲ್ಲಿ ಸಿದ್ಧವಾದ ಆಹ್+ಥ ಎಂದಿದ್ದಾಗ ಪ್ರಕೃತ ಸೂತ್ರದಿಂದ 'ಹ್' ಕಾರಕ್ಕೆ 'ಥ್' ಕಾರವು ಆದೇಶವಾಗಿ ಬಂದು ಆಥ್+ಥ ಎಂದಿದ್ದಾಗ "ಖರಿಚ" ಎಂಬ ಸೂತ್ರದಿಂದ ಮೊದಲನೇ 'ಥ್' ಕಾರಕ್ಕೆ 'ತ್' ಕಾರವು ಆದೇಶವಾಗಿ ಬಂದು ಆತ್+ಥ=ಆತ್ಥ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಆಹಥುಃ– ಮಧ್ಯಮಪುರುಷ ದ್ವಿ ವಚನದಲ್ಲಿ 'ಬ್ರೂ' ಆಗೆ 'ಆಹ್' ಆದೇಶ ಬಂದು ಆಹ್+ಅಥುಸ್=ಆಹಥುಃ ಎಂದು ರೂಪವಾಗುತ್ತದೆ.

**ಇಲ್ಲಿಗೆ ಣಲಾದಿ 5 ಆದೇಶಗಳಿಂದ ಬಂದ ವೈಕಲ್ಪಿಕ ಅರೂಪಗಳು ಮುಗಿದವು.**

***

ಣಲಾದಿ ಆದೇಶಗಳು ಬಾರದ ಪಕ್ಷದಲ್ಲಿ – ಪ್ರಥಮಪುರುಷ ಏಕವಚನದಲ್ಲಿ 'ಶಪ್(ಅ)' ಪ್ರತ್ಯಯಕ್ಕೆ ಲುಕ್ ಬಂದಮೇಲೆ ಬ್ರೂ+ತಿ ಎಂದಿದ್ದಾಗ–

**(ಈಟ್ ಆಗಮವನ್ನು ವಿಧಿಸುವ ಸೂತ್ರ)**

**ಸೂತ್ರ– 596.ಬ್ರುವ ಈಟ್ (7.3.93)**

ವೃತ್ತಿಃ–ಬ್ರುವಃ ಪರಸ್ಯ ಹಲಾದೇಃ ಪಿತಃ ಈಟ್ ಸ್ಯಾತ್। ಬ್ರವೀತಿ। ಬ್ರೂತಃ। ಬ್ರುವನ್ತಿ। ಬ್ರೂತೇ। ಬ್ರುವಾತೇ। ಬ್ರುವತೇ।

ಪ. ಛೇ. – ಬ್ರುವಃ, ಈಟ್।

ಅ. ವ್ಯ. –"ಉತೋ ವೃದ್ಧಿರ್ಲುಕಿ ಹಲಿ" ಸೂತ್ರದೀದ 'ಹಲಿ' ಎಂಬ ಪದವೂ ಮತ್ತು "ನಾಭ್ಯಸ್ತಸ್ಯಾಚಿ ಪಿತಿ ಸಾರ್ವಧಾತುಕೇ" ಎಂಬ ಸೂತ್ರದಿಂದ 'ಪಿತಿ' ಮತ್ತು 'ಸಾರ್ವಧಾತುಕೇ' ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ–'ಬ್ರೂ' ಧಾತುವಿನ ನಂತರ ಹಲಾದಿಯಾದ 'ಪಿತ್' ಗೆ 'ಈಟ್' ಆಗಮವು ಬರುತ್ತದೆ. ಇದರಿಂದ 'ಪಿತ್' ಗಳಾದ ಪ್ರಥಮ, ಮಧ್ಯಮ ಮತ್ತು ಉತ್ತಮಪುರುಷ ಏಕವಚಗಳಲ್ಲಿ ಮಾತ್ರ 'ಈಟ್' ಆಗಮವು ಬರುತ್ತದೆ.

ಉದಾ– ಬ್ರವೀತಿ – ಪ್ರಥಮಪುರುಷ ಏಕವಚನದಲ್ಲಿ ಬ್ರೂ+ತಿ ಎಂದಿದ್ದಾಗ, 'ತಿ' ಗೆ 'ಈಟ್ (ಈ)' ಆಗಮವು ಆದ್ಯವಯವವಾಗಿ ಬಂದು ಬ್ರೂ+ಈ+ತಿ ಎಂದಿದ್ದಾಗ, "ಸಾರ್ವಧಾತುಕಾರ್ಧಧಾತುಕಯೋಃ" ಎಂಬ ಸೂತ್ರದಿಂದ ಗುಣ ಮತ್ತು 'ಅವ್' ಆದೇಶಗಳು ಬಂದು ಬ್ರೋ+ಈ+ತಿ > ಬ್ರವ್+ಈ+ತಿ=ಬ್ರವೀತಿ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಬ್ರವೀಷಿ, ಬ್ರವೀಮಿ– ಮಧ್ಯಮ ಮತ್ತು ಉತ್ತಮಪುರುಷ ಏಕವಚನಗಳಲ್ಲಿ ಕ್ರಮವಾಗಿ ಬ್ರೂ+ಸಿ ಮತ್ತು ಬ್ರೂ+ಮಿ ಎಂದಿದ್ದಾಗ, ಹಿಂದಿನಂತೆಯೇ ಪ್ರಕ್ರಿಯೆ ನಡೆದು 'ಸ್' ಕಾರಕ್ಕೆ ಷತ್ವ ಬಂದು ಬ್ರವೀಷಿ ಎಂದೂ ಬ್ರವೀಮಿ ಎಂದಾಗುತ್ತದೆ.

ಉದಾ– ಬ್ರೂತಃ– ಪ್ರಥಮಪುರುಷ ದ್ವಿವಚನದಲ್ಲಿ ಬ್ರೂ+ತಸ್ ಎಂದಿದ್ದಾಗ ರುತ್ವ-ವಿಸರ್ಗಗಳಿಂದ ಬ್ರೂತಃ ಎಂದು ರೂಪವಾಗುತ್ತದೆ.

ಉದಾ– ಬ್ರುವನ್ತಿ–ಪ್ರಥಮಪುರುಷ ಬಹುವಚನದಲ್ಲಿ ಬ್ರೂ+ಅನ್ತಿ ಎಂದಿದ್ದಾಗ "ಅಚಿಶ್ನುಧಾತುಬ್ರುವಾಂ ಯ್ವೋರಿಯಙುವಙೌ" ಎಂಬ ಸೂತ್ರದಿಂದ 'ಊ' ಕಾರಕ್ಕೆ 'ಉವಙ್(ಉವ್)' ಆದೇಶ ಬಂದು ಬ್ರುವ್+ಅನ್ತಿ=ಬ್ರುವನ್ತಿ ಎಂದು ರೂಪವಾಗುತ್ತದೆ.

ಸೂಚನೆ: ಇತರ ಪ್ರತ್ಯಯ ಪರದಲ್ಲಿದ್ದಾಗ ಯಾವುದೇ ವಿಶೇಷ ಕಾರ್ಯ ಇರದು.

**ಲಟ್**: (ಪರಸ್ಮೈಪದ) ರೂಪಗಳು: ಬ್ರವೀತಿ, ಬ್ರೂತಃ, ಬ್ರುವನ್ತಿ। ಬ್ರವೀಷಿ, ಬ್ರೂಥಃ, ಬ್ರೂಥ। ಬ್ರವೀಮಿ, ಬ್ರೂವಃ, ಬ್ರೂಮಃ।

(ಆತ್ಮನೇಪದ) ರೂಪಗಳು: ಬ್ರೂತೇ, ಬ್ರುವಾತೇ, ಬ್ರುವತೇ। ಬ್ರೂಷೇ, ಬ್ರುವಾಥೇ, ಬ್ರೂಧ್ವೇ। ಬ್ರುವೇ, ಬ್ರೂವಹೇ, ಬ್ರೂಮಹೇ।

**(ವಚ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ– 597.ಬ್ರುವೋ ವಚಿಃ (2.4.53)**

ವೃತ್ತಿಃ–ಆರ್ಧಧಾತುಕೇ। ಉವಾಚ। ಊಚತುಃ। ಊಚುಃ। ಉವಚಿಥ, ಉವಕ್ಥ। ಊಚೇ। ವಕ್ತಾ। ವಕ್ತಾಸಿ। ವಕ್ತಾಸೇ। ವಕ್ಷ್ಯತಿ। ವಕ್ಷ್ಯತೇ। ಬ್ರವೀತು/ಬ್ರೂತಾತ್। ಬ್ರುವನ್ತು। ಬ್ರೂಹಿ/ಬ್ರೂತಾತ್। ಬ್ರವಾಣಿ। ಬ್ರೂತಾಮ್। ಬ್ರವೈ। ಅಬ್ರವೀತ್। ಅಬ್ರೂತ। ಬ್ರೂಯಾತ್। ಬ್ರುವೀತ। ಉಚ್ಯಾತ್। ವಕ್ಷೀಷ್ಟ।

ಪ. ಛೇ. ಬ್ರುವಃ, ವಚಿಃ।

ಅ. ವ್ಯ.– "ಆರ್ಧಧಾತುಕೇ" ಎಂಬುದು ಅಧಿಕಾರಸೂತ್ರ

ಅರ್ಥ– ಆರ್ಧಧಾತುಕ ವಿವಕ್ಷೆ ಇದ್ದಾಗ, 'ಬ್ರೂ' ಗೆ 'ವಚ್' ಆದೇಶವು ಬರುತ್ತದೆ.

ಲಿಟ್: (ಪರಸ್ಮೈಪದ):ಉದಾ– ಉವಾಚ– ಪ್ರಥಮಪುರುಷ ಏಕವಚನದಲ್ಲಿ 'ಬ್ರೂ' ಧಾತುವಿನ ನಂತರ 'ಲಿಟ್' 'ಲ್' ಕಾರವಿದ್ದಾಗ, ಆರ್ಧಧಾತುಕ ಸಂಜ್ಞೆ ಬರುತ್ತದೆ. ಆರ್ಧಧಾತುಕ ವಿವಕ್ಷೆಯಲ್ಲಿ ಪ್ರಕೃತ ಸೂತ್ರದಿಂದ 'ಬ್ರೂ' ಗೆ 'ವಚ್' ಆದೇಶ ಬಂದು ಅನಂತರ ಪರಸ್ಮೈಪದದಲ್ಲಿ 'ತಿಪ್(ತಿ)' ಸೇರಿಸಿದಾಗ, ಆ 'ತಿಪ್' ಗೆ ಅಭಿನವ ಆಖ್ಯಾತ ಪ್ರತ್ಯಯವಾದ 'ಣಲ್(ಅ)' ಬಂದು ವಚ್+ಅ ಎಂದಿರುತ್ತದೆ. ನಂತರ 'ವಚ್' ಧಾತುವಿಗೆ ದ್ವಿತ್ವ ಬಂದು ಹಲಾದಿಶೇಷವಾದಮೇಲೆ ವ+ವಚ್+ಅ ಎಂದಿರುತ್ತದೆ. 'ಲಿಟ್ಯಭ್ಯಾಸಸ್ಯೋಭಯೇಷಾಮ್" ಎಂಬ ಸೂತ್ರದಿಂದ ಅಭ್ಯಾಸದ 'ವ್' ಕಾರಕ್ಕೆ ಸಂಪ್ರಸಾರಣದಿಂದ 'ಉ' ಕಾರ ಬಂದು ಉ+ಅ+ವಚ್+ಅ ಎಂದಿರುತ್ತದೆ. "ಸಂಪ್ರಸಾರಣಚ್ಚ" ಎಂಬುದರಿಂದ ಪೂರ್ವರೂಪ ಬಂದು ಉವಚ್+ಅ ಎಂದಿದ್ದಾಗ "ಅತಉಪಧಾಯಾಃ" ಎಂಬ ಸೂತ್ರದಿಂದ ಉಪಧೆಯಾದ 'ವ' ಕಾರೋತ್ತರ 'ಅ' ಕಾರಕ್ಕೆ ವೃದ್ಧಿ(ಆ) ಬಂದು ಉವಾಚ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ–ಊಚತುಃ– ಪ್ರಥಮಪುರುಷ ದ್ವಿವಚನದಲ್ಲಿ 'ಬ್ರೂ' ಧಾತುವಿಗೆ 'ಅತುಸ್' ಪ್ರತ್ಯಯ ಸೇರಿಸಿದಾಗ "ಅಸಂಯೋಗಾಲ್ಲಿಟ್ ಕಿತ್" ಎಂಬ ಸೂತ್ರದಿಂದ ಅದು 'ಕಿತ್' ಆಗಿ ಪರದಲ್ಲಿರೋಣದರಿಂದ 'ಸಂಪ್ರಸಾರಣಂ ತದಾಶ್ರಯಂ ಚ ಕಾರ್ಯಮ್ ಬಲವತ್' ಎಂಬ ಪರಿಭಾಷೆಯಿಂದ ದ್ವಿತ್ವವನ್ನು ಮಾಡುವದಕ್ಕೆ ಪೂರ್ವದಲ್ಲಿಯೇ "ವಚಿ ಸ್ವಪಿ ಯಜಾದೀನಾಂ ಕಿತಿ" ಎಂಬ ಸೂತ್ರದಿಂದ ಸಂಪ್ರಸಾರಣ ಮಾಡಿದ ನಂತರ ಪೂರ್ವರೂಪ ಮಾಡಬೇಕು. ಹೀಗೆ ಉಚ್+ಅತುಸ್ ಎಂದಿದ್ದಾಗ, ಧಾತುವಿಗೆ ದ್ವಿತ್ವ ಬಂದು ಉಚ್ ಉಚ್+ಅತುಸ್ ಎಂದಿದ್ದಾಗ, ಹಲಾದಿಶೇಷದಿಂದ ಅಭ್ಯಾಸದ 'ಚ್' ಕಾರಕ್ಕೆ ಲೋಪ ಬಂದು ಉ+ಉಚ್+ಅತುಸ್ ಎಂದಿದ್ದಾಗ ಮೊದಲೆರಡು 'ಉ' ಕಾರಗಳಿಗೆ ಸವರ್ಣದೀರ್ಘ ಬಂದು ಊಚ್+ಅತುಸ್=ಊಚತುಃ ಎಂಬ ರೂಪವು ಸಿದ್ಧಿಸುತ್ತದೆ.

ಉದಾ–ಊಚುಃ – ಪ್ರಥಮಪುರುಷ ಬಹುವಚನದಲ್ಲಿ ಬ್ರೂ+ಉಸ್ ಎಂದಿದ್ದಾಗ, ಮೇಲಿನಂತೆಯೇ ಪ್ರಕ್ರಿಯೆ ನಡೆದು ಊಚುಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ–ಉವಚಿಥ – ಮಧ್ಯಮಪುರುಷ ಏಕವಚನದಲ್ಲಿ ಬ್ರೂ+ಸಿಪ್(ಸ್) ಎಂದಿದ್ದಾಗ 'ಸಿಪ್' ಗೆ ಥಲ್(ಥ)' ಆದೇಶ ಬಂದು ಬ್ರೂ+ಥ ಎಂದಿದ್ದಾಗ, ಕ್ರಾದಿನಿಯಮದಿಂದ 'ಇಟ್' ಪ್ರಾಪ್ತವಾದಾಗ, "ಉಪದೇಶೇಽತ್ವತಃ" ಎಂಬ ಸೂತ್ರದಿಂದ ಅದಕ್ಕೆ ನಿಷೇಧ ಬಂದು ಮತ್ತೆ "ಋತೋಭಾರದ್ವಾಜಸ್ಯ" ಎಂಬ ಸೂತ್ರದಿಂದ ವೈಕಲ್ಪಿಕವಾಗಿ 'ಇಟ್' ಬರುತ್ತದೆ. 'ಇಟ್' ಬಂದಪಕ್ಷದಲ್ಲಿ 'ಬ್ರೂ' ಗೆ 'ವಚ್' ಆದೇಶ ಬಂದಮೇಲೆ ವಚ್+ಇಥ ಎಂದಿರುತ್ತದೆ. 'ವಚ್' ಗೆ ದ್ವಿತ್ವ, ಹಲಾದಿಶೇಷ ಮತ್ತು ಸಂಪ್ರಸಾರಣ ಮಾಡಿದಾಗ, ಉವಚ್+ಇಥ=ಉವಚಿಥ ಎಂದು ರೂಪವಾಗುತ್ತದೆ. 'ಇಟ್' ಬಾರದ ಪಕ್ಷದಲ್ಲಿ: ಉವಚ್+ಥ ಎಂದಿದ್ದಾಗ – 'ಚ್' ಕಾರಕ್ಕೆ "ಚೋಃಕುಃ" ಎಂಬ ಸೂತ್ರದಿಂದ ಕುತ್ವ(ಕ್) ಬಂದು ಉವಕ್+ಥ=ಉವಕ್ಥ ಎಂದು ರೂಪವಾಗುತ್ತದೆ. ಇದೇ ರೀತಿಯಲ್ಲಿ ಉಳಿದ

ರೂಪಗಳು ಸಿದ್ಧವಾಗುತ್ತವೆ.

**ಲಿಟ್**: (ಪರಸ್ಮೈಪದ) ರೂಪಗಳು: ಉವಾಚ, ಊಚತುಃ, ಊಚುಃ। ಉವಚಿಥ/ ಉವಕ್ಥ, ಊಚಥುಃ, ಊಚ। ಉವಾಚ/ಉವಚ, ಊಚಿವ, ಊಚಿಮ।

(ಆತ್ಮನೇಪದ) ರೂಪಗಳು: ಊಚೇ, ಊಚಾತೇ, ಊಚಿರೇ। ಊಚಿಷೇ, ಊಚಾಥೇ, ಊಚಿಢ್ವೇ। ಊಚೇ ಊಚಿವಹೇ, ಊಚಿಮಹೇ।

ಸೂಚನೆ- "ವಚಿ ಸ್ವಪಿ ಯಜಾದೀನಾಂ ಕಿತಿ" ಎಂಬ ಸೂತ್ರದಿಂದ ಮೊದಲು ಸಂಪ್ರಸಾರಣವಾದಮೇಲೆ ಮೇಲಿನ ರೂಪಗಳು ಸಿದ್ಧವಾಗುತ್ತವೆ.

ಲುಟ್:(ಪರಸ್ಮೈಪದ):ಉದಾ- ವಕ್ತಾ, ವಕ್ತಾರೌ, ವಕ್ತಾರಃ - 'ಬ್ರೂ' ಧಾತುವಿಗೆ 'ವಚ್' ಆದೇಶ ಬಂದು ವಚ್+ತಿ ಎಂದಿದ್ದಾಗ, 'ತಿ' ಗೆ 'ಡಾ' ಆದೇಶ ಬಂದು ಧಾತುವಿನ ನಂತರ ತಾಸ್ ಪ್ರತ್ಯಯ ಬಂದು ವಚ್+ತಾಸ್+ಡಾ (ಆ) ಎಂದಿದ್ದಾಗ, "ಚೋಃಕುಃ" ಎಂಬುದರಿಂದ 'ಚ್' ಕಾರಕ್ಕೆ 'ಕ್' ಕಾರಬಂದು, "ತಾಸಸ್ತ್ಯೋರ್ಲೋಪಃ" ಎಂಬುದರಿಂದ 'ತಾಸ್' ನ 'ಸ್' ಕಾರಕ್ಕೆ ಲೋಪ ಬಂದು ವಕ್+ತಾ+ಆ=ವಕ್ತಾ ಎಂದು ರೂಪವಾಗುತ್ತದೆ. ರೂಪಗಳು: ವಕ್ತಾ, ವಕ್ತಾರೌ, ವಕ್ತಾರಃ। ವಕ್ತಾಸಿ, ವಕ್ತಾಸ್ಥ, ವಕ್ತಾಸ್ಥ। ವಕಾಸ್ಮಿ, ವಕ್ತಾಸ್ವಃ, ವಕ್ತಾಸ್ಮಃ।

(ಆತ್ಮನೇಪದ) ರೂಪಗಳು: ವಕ್ತಾ, ವಕ್ತಾರೌ, ವಕ್ತಾರಃ। ವಕ್ತಾಸೇ, ವಕ್ತಾಸಾಥೇ, ವಕ್ತಾಧ್ವೇ। ವಕ್ತಾಹೇ, ವಕ್ತಾಸ್ವಹೇ, ವಕ್ತಾಸ್ಮಹೇ।

**ಲೃಟ್**: (ಪರಸ್ಮೈಪದ)

ಉದಾ- ವಕ್ಷ್ಯತಿ - ಪ್ರಥಮಪುರುಷ ಏಕವಚನದಲ್ಲಿ 'ಬ್ರೂ' ಧಾತುವಿಗೆ 'ವಚ್' ಆದೇಶ ಬಂದು ಅದಕ್ಕೆ ತಿಬಾದೇಶ ಬಂದು ವಚ್+ತಿ ಎಂದಿದ್ದಾಗ, ಧಾತುವಿನ ಪರದಲ್ಲಿ "ಸ್ಯತಾಸೀಲೃಲುಟೋಃ" ಎಂಬುದರಿಂದ 'ಸ್ಯ' ಪ್ರತ್ಯಯ ಬಂದು ವಚ್+ಸ್ಯತಿ ಎಂದಿರುತ್ತದೆ. "ಚೋಃ ಕುಃ" ಎಂಬ ಸೂತ್ರದಿಂದ 'ಚ್' ಕಾರಕ್ಕೆ ಕುತ್ವ(ಕ್) ಬಂದು "ಆದೇಶಪ್ರತ್ಯಯಯೋಃ" ಎಂಬುದರಿಂದ 'ಸ್' ಕಾರಕ್ಕೆ ಷತ್ವ(ಷ್) ಬಂದು 'ಕ್' 'ಷ್' ಗಳು ಸೇರಿ 'ಕ್ಷ' ಆದಮೇಲೆ ವಕ್ಷ್ಯತಿ ಎಂದು ರೂಪವು ಸಿದ್ಧವಾಗುತ್ತದೆ.

ರೂಪಗಳು: ವಕ್ಷ್ಯತಿ, ವಕ್ಷ್ಯತಃ, ವಕ್ಷ್ಯನ್ತಿ। ವಕ್ಷ್ಯಸಿ, ವಕ್ಷ್ಯಥಃ, ವಕ್ಷ್ಯಥ। ವಕ್ಷ್ಯಾಮಿ, ವಕ್ಷ್ಯಾವಃ, ವಕ್ಷ್ಯಾಮಃ।

(ಆತ್ಮನೇಪದ ರೂಪಗಳು: ವಕ್ಷ್ಯತೇ, ವಕ್ಷ್ಯೇತೇ, ವಕ್ಷ್ಯನ್ತೇ।ವಕ್ಷ್ಯಸೇ, ವಕ್ಷ್ಯೇಥೇ, ವಕ್ಷಧ್ವೇ। ವಕ್ಷ್ಯೇ, ವಕ್ಷ್ಯಾವಹೇ, ವಕ್ಷ್ಯಾಮಹೇ।

**ಲೋಟ್**: (ಪರಸ್ಮೈಪದ) ರೂಪಗಳು: ಬ್ರವೀತು/ಬ್ರೂತಾತ್, ಬ್ರೂತಾಮ್, ಬ್ರುವನ್ತು। ಬ್ರೂಹಿ/ಬ್ರೂತಾತ್, ಬ್ರೂತಮ್, ಬ್ರೂತ। ಬ್ರವಾಣಿ, ಬ್ರವಾವ, ಬ್ರವಾಮ।

(ಆತ್ಮನೇಪದ) ರೂಪಗಳು: ಬ್ರೂತಾಮ್, ಬ್ರುವಾತಾಮ್, ಬ್ರುವತಾಮ್। ಬ್ರೂಷ್ವ, ಬ್ರುವಾಥಾಮ್, ಬ್ರೂಧ್ವಮ್। ಬ್ರವೈ, ಬ್ರವಾವಹೈ, ಬ್ರವಾಮಹೈ।

**ಲಙ್**: (ಪರಸ್ಮೈಪದ) ರೂಪಗಳು: ಅಬ್ರವೀತ್, ಅಬ್ರೂತಾಮ್, ಅಬ್ರುವನ್।

ಅಬ್ರವೀಹಿ, ಅಬ್ರೂತಮ್, ಅಬ್ರೂತ। ಅಬ್ರವಮ್, ಅಬ್ರೂವ, ಅಬ್ರೂಮ।

(ಆತ್ಮನೇಪದ)ರೂಪಗಳು: ಅಬ್ರೂತ, ಅಬ್ರುವಾತಾಮ್, ಅಬ್ರುವತ। ಅಬ್ರೂಥಾಃ, ಅಬ್ರುವಾಥಮ್, ಅಬ್ರೂಧ್ವಮ್। ಅಬ್ರುವಿ, ಅಬ್ರೂವಹಿ, ಅಬ್ರೂಮಹಿ।

**ವಿಧಿಲಿಙ್:** (ಪರಸ್ಮೈಪದ ರೂಪಗಳು: ಬ್ರೂಯಾತ್, ಬ್ರೂಯಾತಾಮ್, ಬ್ರೂಯುಃ। ಬ್ರೂಯಾಃ, ಬ್ರೂಯಾತಮ್, ಬ್ರೂಯಾತ। ಬ್ರೂಯಾಮ್, ಬ್ರೂಯಾವ, ಬ್ರೂಯಾಮ।

(ಆತ್ಮನೇಪದ ರೂಪಗಳು: ಬ್ರುವೀತ, ಬ್ರುವೀಯಾತಾಮ್, ಬ್ರುವೀರನ್। ಬ್ರುವೀಥಾಃ, ಬ್ರುವೀಯಾಥಾಮ್, ಬ್ರುವೀಧ್ವಮ್। ಬ್ರುವೀಯ, ಬ್ರುವೀವಹಿ, ಬ್ರುವೀಮಹಿ।

**ಆಶೀರ್ಲಿಙ್** : (ಪರಸ್ಮೈಪದ) ರೂಪಗಳು: ಉಚ್ಯಾತ್, ಉಚ್ಯಾಸ್ತಾಮ್, ಉಚ್ಯಾಸುಃ। ಉಚ್ಯಾಃ, ಉಚ್ಯಾಸ್ತಮ್, ಉಚ್ಯಾಸ್ತ। ಉಚ್ಯಾಸಮ್, ಉಚ್ಯಾಸ್ವ, ಉಚ್ಯಾಸ್ಮ।

ಆತ್ಮನೇಪದ ರೂಪಗಳು: ವಕ್ಷೀಷ್ಟ, ವಕ್ಷೀಯಾಸ್ತಾಮ್, ವಕ್ಷೀರನ್। ವಕ್ಷೀಷ್ಠಾಃ, ವಕ್ಷೀಯಾಸ್ಥಾಮ್, ವಕ್ಷೀಧ್ವಮ್। ವಕ್ಷೀಯ, ವಕ್ಷೀವಹಿ, ವಕ್ಷೀಮಹಿ।

**(ಚ್ಲಿ ಗೆ ಅಙ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ– 598.ಅಸ್ಯತಿ–ವಕ್ತಿ–ಖ್ಯಾತಿಭ್ಯೋಽಙ್ (3.1.52)**

ವೃತ್ತಿಃ–ಏಭ್ಯಃ ಚ್ಲೇಃ ಅಙ್ ಸ್ಯಾತ್।

ಪ. ಛೇ.– ಅಸ್ಯತಿ–ವಕ್ತಿ–ಖ್ಯಾತಿಭ್ಯಃ, ಅಙ್।

ಅ. ವ್ಯ. – "ಚ್ಲೇಃ ಸಿಚ್" ಎಂಬ ಸೂತ್ರದಿಂದ 'ಚ್ಲೇಃ' ಎಂಬ ಪದವೂ, ಮತ್ತು "ಣಿಶ್ರಿದ್ರುಸ್ರುಭ್ಯಃ ಕರ್ತರಿ ಚಙ್" ಎಂಬ ಸೂತ್ರದಿಂದ 'ಕರ್ತರಿ' ಎಂಬ ಪದವೂ, "ಚ್ಲಿ ಲುಙಿ" ಎಂಬ ಸೂತ್ರದಿಂದ 'ಲುಙಿ' ಎಂಬ ಪದವೂ ಅನುವೃತವಾಗುತ್ತವೆ.

ಅರ್ಥ– ಅಸ್, ವಚ್ ಮತ್ತು ಖ್ಯಾ ಈ ಧಾತುಗಳ ನಂತರ ಇರುವ 'ಚ್ಲಿ' ಗೆ 'ಅಙ್' ಆದೇಶವು ಬರುತ್ತದೆ.

**(ಉಮ್ ಆಗಮವನ್ನು ವಿಧಿಸುವ ಸೂತ್ರ)**

**ಸೂತ್ರ– 599.ವಚ ಉಮ್ (7.4.20)**

ವೃತ್ತಿಃ–ಅಙಿ ಪರೇ। ಅವೋಚತ್, ಅವೋಚತ। ಅವಕ್ಷ್ಯತ್।ಅವಕ್ಷ್ಯತ ಗಣಸೂತ್ರಮ್– ಚರ್ಕರೀತಂ ಚ ಚರ್ಕರೀತಂ ಇತಿ ಯಙ್ಲುಗನ್ತಸ್ಯ ಸಂಜ್ಞಾ ತದದಾದೌ ಬೋಧ್ಯಮ್। ಊರ್ಣುಞ್ ಆಚ್ಛಾದನೇ।25।

ಪ. ಛೇ. – ವಚಃ, ಉಮ್।

ಅ. ವ್ಯ – "ಋದ್ರುಶೋಽಙಿ ಗುಣಃ" ಎಂಬ ಸೂತ್ರದಿಂದ 'ಅಙಿ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ–'ಅಙ್' ಪರದಲ್ಲಿದ್ದಾಗ, 'ವಚ್' ಧಾತುವಿಗೆ 'ಉಮ್(ಉ)' ಆಗಮವು ಬರುತ್ತದೆ. ಈ ಆಗಮವು 'ಮಿತ್' ಆಗಿ ಇರುತ್ತದೆ.

**ಲುಙ್**: (ಪರಸ್ಮೈಪದ)

ಉದಾ- ಅವೋಚತ್ - ಪ್ರಥಮಪುರುಷ ಏಕವಚನದಲ್ಲಿ 'ಬ್ರೂ' ಧಾತುವಿನ ನಂತರ ಲುಙ್ ಸೇರಿಸಿದಾಗ, "ಬ್ರುವೋ ವಚಿಃ" ಎಂಬ ಸೂತ್ರದಿಂದ 'ವಚ್' ಆದೇಶವು ಬಂದು ವಚ್+ತಿ ಎಂದಿದ್ದಾಗ ಧಾತುವಿಗೆ ಅಡಾಗಮ ಬಂದು ಅವಚ್+ತಿ ಎಂದಿರುತ್ತದೆ. "ಇತಶ್ಚ" ಎಂಬುದರಿಂದ 'ತಿ' ನಲ್ಲಿರುವ 'ಇ' ಕಾರಕ್ಕೆ ಲೋಪ ಬಂದು ಅವಚ್+ತ್ ಎಂದಿರುತ್ತದೆ. 'ಚ್ಲಿ' ಗೆ 'ಸಿಚ್' ಬರಬೇಕಾದದ್ದನ್ನು ಬಾಧಿಸಿ "ಅಸ್ಯತಿ-ವಕ್ತಿ-ಖ್ಯಾತಿಭ್ಯೋಽಙ್" ಎಂಬ ಸೂತ್ರದಿಂದ 'ಅಙ್' ಆದೇಶ ಬಂದು ಅವಚ್+ಅ+ತ್ ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ಉಮ್' ಆಗಮವು ಬರುತ್ತದೆ. ಇದು 'ಮಿತ್' ಆಗಿರುವುದರಿಂದ "ಮಿದಚೋಂಽತ್ಯಾತ್ಪರಃ" ಎಂಬ ಸೂತ್ರದ ಪ್ರಕಾರ ವ್' ಕಾರೋತ್ತರ 'ಅ' ಕಾರದ ನಂತರ ಬಂದು ಅವ+ಉಚ್+ಅ+ತ್ ಎಂದಿರುತ್ತದೆ. 'ಅ' ಕಾರ 'ಉ' ಕಾರಗಳಿಗೆ ಗುಣ ಬಂದು ಅವೋಚ್+ಅತ್= ಅವೋಚತ್ ಎಂಬ ರೂಪವು ಸಿದ್ಧಿಸುತ್ತದೆ.

ರೂಪಗಳು: ಅವೋಚತ್, ಅವೋಚತಾಮ್, ಅವೋಚನ್। ಅವೋಚಃ, ಅವೋಚತಮ್, ಅವೋಚತ। ಅವೋಚಮ್, ಅವೋಚಾವ, ಅವೋಚಾಮ।

ಆತ್ಮನೇಪದ ರೂಪಗಳು: ಅವೋಚತ, ಅವೋಚೇತಾಮ್,ಅವೋಚನ್ತ। ಅವೋಚಥಾಃ, ಅವೋಚೇಥಾಮ್, ಅವೋಚಧ್ವಮ್। ಅವೋಚೇ, ಅವೋಚಾವಹಿ, ಅವೋಚಾಮಹಿ।

**ಲೃಙ್**: (ಪರಸ್ಮೈಪದ) ರೂಪಗಳು: ಅವಕ್ಷ್ಯತ್, ಅವಕ್ಷ್ಯತಾಮ್, ಅವಕ್ಷ್ಯನ್। ಅವಕ್ಷ್ಯಃ, ಅವಕ್ಷ್ಯತಮ್, ಅವಕ್ಷ್ಯತ। ಅವಕ್ಷ್ಯಮ್, ಅವಕ್ಷ್ಯಾವ, ಅವಕ್ಷ್ಯಾಮ।

ಆತ್ಮನೇಪದ ರೂಪಗಳು: ಅವಕ್ಷ್ಯತ, ಅವಕ್ಷ್ಯೇತಾಮ್, ಅವಕ್ಷ್ಯನ್ತ। ಅವಕ್ಷ್ಯಥಾಃ, ಅವಕ್ಷ್ಯೇಥಾಮ್, ಅವಕ್ಷ್ಯಧ್ವಮ್। ಅವಕ್ಷ್ಯೇ, ಅವಕ್ಷ್ಯಾವಹಿ, ಅವಕ್ಷ್ಯಾಮಹಿ।

{ಗಣಸೂತ್ರಮ್-ಚರ್ಕರೀತಂ ಚ-ಚರ್ಕರೀತ ಎಂಬುದು ಯಙ್ಲುಗನ್ತದ ಸಂಜ್ಞೆಯಾಗಿದೆ. ಪಾಣಿನಿಯವರು ಇದನ್ನು ಅದಾದಿಗಣದಲ್ಲಿ ಪಠಿಸಿದ್ದಾರೆ. ಪಾಣಿನಿಯವರಿಗಿಂತ ಪುರ್ವದಲ್ಲಿದ್ದ ಆಚಾರ್ಯರು ಯಙ್ಲುಗನ್ತ ಧಾತುಗಳಿಗೆ ಚರ್ಕರೀತ ಸಂಜ್ಞೆಯನ್ನು ಕೊಟ್ಟಿದ್ದರು. ಅದರ ಪ್ರಕ್ರಿಯೆಯನ್ನು ಪಾಣಿನಿಯವರು ಇಲ್ಲಿ ಉದಾಹರಿಸಿದ್ದಾರೆ. 'ಚರ್ಕರೀತ' ವನ್ನು ಪಠಿಸಿದ ಕಾರಣದಿಂದ ಯಙ್ಲುಗನ್ತದಲ್ಲಿ "ಅಧಿಪ್ರಭೃತಿಭ್ಯಃ ಸಹಪಃ" ಎಂಬ ಸೂತ್ರದಿಂದ 'ಶಪ್'ಗೆ ಲುಕ್ ಬರಬಹುದಾಗಿದೆ}.

5. ಊರ್ಣುಞ್ ಆಚ್ಛಾದನೇ (ಮುಚ್ಚುವುದು) - ಇದರಲ್ಲಿ ಊರ್ಣು ಮಾತ್ರ ಉಳಿಯುತ್ತದೆ. ಇದು ಞಿತ್ ಆಗಿ ಇರೋಣದರಿಂದ ಉಭಯಪದಿಯಾಗಿಯೂ, ಅನೇಕಾಚ್ ಆಗಿರುವುದರಿಂದ ಸೇಟ್ ಆಗಿಯೂ ಇರುತ್ತದೆ.

### (ವೈಕಲ್ಪಿಕವಾಗಿ ವೃದ್ಧಿಯನ್ನು ವಿಧಿಸುವ ಸೂತ್ರ)

**ಸೂತ್ರ- ೬೦೦.ಊರ್ಣೋತೇರ್ವಿಭಾಷಾ (7.3.90)**

ವೃತ್ತಿಃ-ವಾ ವೃದ್ಧಿಃ ಸ್ಯಾತ್ ಹಲಾದೌ ಪಿತಿ ಸಾರ್ವಧಾತುಕೇ। ಊರ್ಣೌತಿ/ ಊರ್ಣೋತಿ। ಊರ್ಣುತಃ। ಊರ್ಣುವನ್ತಿ। ಊರ್ಣುತೇ। ಊರ್ಣುವಾತೇ।

ಊರ್ಣುವತೇ।

ವಾ॥ ಊರ್ಣೋತೇರಾಮ್ ನೇತಿ ವಾಚ್ಯಮ್

ಪ. ಛೇ. – ಊರ್ಣೋತೇಃ, ವಿಭಾಷಾ।

ಅ. ವ್ಯ. –"ಉತೋವೃದ್ಧಿರ್ಲುಕಿ ಹಲಿ" ಎಂಬ ಸೂತ್ರದಿಂದ 'ವೃದ್ಧಿಃ' ಮತ್ತು 'ಹಲಿ' ಎಂಬ ಪದಗಳೂ, ಹಾಗೂ "ನಾಭ್ಯಸ್ತಸ್ಯಾಚಿ ಪಿತಿ ಸಾರ್ವಧಾತುಕೇ" ಎಂಬ ಸೂತ್ರದಿಂದ 'ಪಿತಿ' ಮತ್ತು 'ಸಾರ್ವಧಾತುಕೇ' ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ– ಹಲಾದಿಯೂ ಮತ್ತು 'ಪಿತ್' ಆದ ಸಾರ್ವಧಾತುಕವು ಪರದಲ್ಲಿದ್ದಾಗ, 'ಊರ್ಣುಞ್' ಧಾತುವಿಗೆ ವಿಕಲ್ಪವಾಗಿ ವೃದ್ಧಿಯು ಬರುತ್ತದೆ.

**ಲಟ್**: (ಪರಸ್ಮೈ ಪದ)

ಉದಾ– ಊರ್ಣೌತಿ/ಊರ್ಣೋತಿ – ಪ್ರಥಮಪುರುಷ ಏಕವಚನದಲ್ಲಿ 'ಊರ್ಣು' ಧಾತುವಿನ ನಂತರ 'ಲಟ್' ಆದೇಶವಾದ 'ತಿಪ್(ತಿ)' ಬಂದು, ಧಾತುವಿನ ನಂತರ 'ಶಪ್(ಅ)' ಬಂದು ಅದಕ್ಕೆ 'ಲುಕ್' ಬಂದಾಗ, ಊರ್ಣು+ತಿ ಎಂದಿರುತ್ತದೆ. 'ತಿ' ಇದು 'ಪಿತ್' ಆಗಿರುವುದರಿಂದ ಪ್ರಕೃತ ಸೂತ್ರದಿಂದ 'ಣು' ನಲ್ಲಿರುವ 'ಉ' ಕಾರಕ್ಕೆ ವೈಕಲ್ಪಿಕವಾಗಿ 'ವೃದ್ಧಿ(ಔ)' ಬಂದು ಊರ್ಣೌತಿ ಎಂದು ರೂಪವು ಸಿದ್ಧವಾಗುತ್ತದೆ. ವೃದ್ಧಿ ಬಾರದ ಪಕ್ಷದಲ್ಲಿ "ಸಾರ್ವಧಾತುಕಾರ್ಧಧಾತುಕಯೋಃ" ಎಂಬುದರಿಂದ 'ಉ' ಕಾರಕ್ಕೆ 'ಗುಣ' ಬಂದು ಊರ್ಣೋತಿ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಊರ್ಣೌಷಿ/ಊರ್ಣೋಷಿ, ಊರ್ಣೌಮಿ/ಊರ್ಣೋಮಿ – 'ಪಿತ್' ಆಗಿರುವ ಮಧ್ಯಮಪುರುಷ ಏಕವಚನ(ಸಿಪ್) ಮತ್ತು ಉತ್ತಮಪುರುಷಏಕವಚನ(ಮಿಪ್) ಇವೆರಡೂ ಪ್ರತ್ಯಯಗಳಿದ್ದಾಗ, ಇದೇರೀತಿಯಲ್ಲಿ ಮೇಲಿನಂತೆ ಎರಡೆರಡು ರೂಪಗಳು ಬರುತ್ತವೆ.

ಉದಾ– ಊರ್ಣುತಃ– ಪ್ರಥಮಪುರುಷ ದ್ವಿವಚನದಲ್ಲಿ ಇದು 'ಅಪಿತ್' ಅದ ಸಾರ್ವಧಾತುಕವಾಗಿರುವುದರಿಂದ ಜಿದ್ವದ್ಭಾವವನ್ನು ಹೊಂದಿ ಗುಣ ಬಾರದೇ ಊರ್ಣುತಃ ಎಂದು ರೂಪವಾಗುತ್ತದೆ.

ಉದಾ– ಊರ್ಣುವನ್ತಿ– ಪ್ರಥಮಪುರುಷ ಬಹುವಚನದಲ್ಲಿ 'ಝಿ' ಪ್ರತ್ಯಯವನ್ನು ಸೇರಿಸಿದಾಗ, 'ಝ್' ಗೆ 'ಅನ್ತ್' ಆದೇಶ ಬಂದು ಊರ್ಣು +ಅನ್ತ್+ಇ ಎಂದಿದ್ದಾಗ, "ಅಚಿಶ್ನುಧಾತುಭ್ರುವಾಂ ಯ್ವೋರಿಯಙುವಙೌ" ಎಂಬ ಸೂತ್ರದಿಂದ 'ಣು' ನಲಿರುವ 'ಉ'ಕಾರಕ್ಕೆ 'ಉವಙ್(ಉವ್)' ಆದೇಶ ಬಂದು ಊರ್ಣ್+ಉವ್+ಅನ್ತ್+ಇ= ಊರ್ಣುವನ್ತಿ ಎಂದು ರೂಪವಾಗುತ್ತದೆ.

ರೂಪಗಳು: ಊರ್ಣೌತಿ/ಊರ್ಣೋತಿ, ಊರ್ಣುತಃ, ಊರ್ಣುವನ್ತಿ। ಊರ್ಣೌಷಿ/ಊರ್ಣೋಷಿ, ಊರ್ಣುಥಃ, ಊರ್ಣುಥ। ಊರ್ಣೌಮಿ/ಊರ್ಣೋಮಿ, ಊರ್ಣುವಃ, ಊರ್ಣುಮಃ।

ಸೂಚನೆ: ಸಾರ್ವಧಾತುಕ 'ಲ್' ಕಾರಗಳಾದ ಲಟ್, ಲಙ್, ಲಿಙ್, ಲೋಟ್

ಗಳಲ್ಲಿ, ತಿಪ್, ಸಿಪ್, ಮಿಪ್, ಗಳು 'ಮಿತ್' ಆಗಿವೆ. ವಿಧಿಲಿಙ್ ನಲ್ಲಿ ಯಾಸುಟ್ ಆಗಮವು "ಸಾರ್ವಧಾತುಕಮಪಿತ್" ಎಂಬುದರಿಂದ ಙಿತ್ ಆಗೋಣದರಿಂದ ವೃದ್ಧಿಯು ಬರುವುದಿಲ್ಲ.

(ಆತ್ಮನೇಪದ) – ಆತ್ಮನೇಪದದಲ್ಲಿ ಎಲ್ಲ ಪ್ರತ್ಯಯಗಳೂ ಅಪಿತ್ ಆಗಿರುವುದರಿಂದ ಙಿದ್ವದ್ಭಾವವನ್ನು ಹೊಂದುವುದರಿಂದ "ಕ್ಙಿತಿ" ಎಂಬ ಸೂತ್ರದಿಂದ ಗುಣ-ವೃದ್ಧಿಗಳು ನಿಷೇಧಿಸಲ್ಪಟ್ಟಿವೆ.

ರೂಪಗಳು: ಊರ್ಣುತೇ, ಊರ್ಣುವಾತೇ, ಊರ್ಣುವತೇ। ಊರ್ಣುಷೇ, ಊರ್ಣುವಾಥೇ, ಊರ್ಣುದ್ವೇ। ಊರ್ಣುವೇ, ಊರ್ಣುವಹೇ, ಊರ್ಣುಮಹೇ।

**ಲಿಟ್**: (ಪರಸ್ಮೈಪದ)

ವಾ॥ ಊರ್ಣೋತೇರಾಮ್ ನೇತಿ ವಾಚ್ಯಮ್-

'ಊರ್ಣು' ಧಾತುವಿನ ನಂತರ 'ಲಿಟ್' ನಲ್ಲಿ 'ಆಮ್' ಪ್ರತ್ಯಯ ಬರುವುದಿಲ್ಲ.

"ಕಾಸ್ಯನೇಕಾಚ್ ಆವ್ ವಕ್ತವ್ಯಃ" ಎಂಬ ವಾರ್ತಿಕವು "ಇಜಾದೇಶ್ಚ ಗುರುಮತೋऽನೃಚ್ಛಃ" ಎಂಬ ಸೂತ್ರದಿಂದ ಬರಬೇಕಾದ 'ಆಮ್' ನ್ನು ಪ್ರಕೃತ ವಾರ್ತಿಕವು ನಿಷೇಧಿಸುತ್ತದೆ.

**(ದ್ವಿತ್ವವನ್ನು ನಿಷೇಧಿಸುವ ಸೂತ್ರ)**

**ಸೂತ್ರ- 601.ನ ನ್-ದ್-ರಾಃ ಸಂಯೋಗಾದಯಃ (6.1.3)**

ವೃತ್ತಿಃ-ಅಚಃ ಪರಾಃ ಸಂಯೋಗಾದಯಃ ನದರಾ ದ್ವಿಃ ನ ಭವನ್ತಿ। ನು ಶಬ್ದಸ್ಯ ದ್ವಿತ್ವಮ್। ಊರ್ಣುನಾವ। ಊರ್ಣುನುವತುಃ। ಊರ್ಣುನುವುಃ।

ಪ. ಛೇ. – ನ, ನ್-ದ್-ರಾಃ, ಸಂಯೋಗಾದಯಃ।

ಅ. ವೃ.-"ಅಜಾದೇರ್ದ್ವಿತೀಯಸ್ಯ" ಸೂತ್ರದಿಂದ 'ಅಜಾದೇಃ' ಎಂಬ ಪದವೂ,; "ಏಕಾಚೋ ದ್ವೇ ಪ್ರಥಮಸ್ಯ" ಸೂತ್ರದಿಂದ 'ದ್ವೇ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ- 'ಅಚ್'ಗಿಂತ ಪರದಲ್ಲಿರುವ ಸಂಯೋಗದ ಆದಿಯಲ್ಲಿ ಇರುವ ನ್, ದ್, ರ್, ಗಳಿಗೆ ದ್ವಿತ್ವವು ಬರುವುದಿಲ್ಲ.

ವಿವರಣೆ: 'ಊರ್ಣು' ಎಂಬಲ್ಲಿ ಆದಿಯಲ್ಲಿ 'ಅಚ್' ವರ್ಣವಾದ 'ಊ' ಕಾರವಿದೆ.

ಉದಾ- ಊರ್ಣು-"ಅಜಾದೇರ್ದ್ವಿತೀಯಸ್ಯ" ಎಂಬ ಸೂತ್ರದಿಂದ ಎರಡನೆಯ 'ಏಕಾಚ್' ಆದ 'ರ್ಣು' ಶಬ್ದಕ್ಕೆ ದ್ವಿತ್ವವು ಬರಬೇಕಾಗಿತ್ತು. ಆದರೆ ಈ 'ರ್ಣು' ಶಬದಕ್ಕೆ ದ್ವಿತ್ವ ಮಾಡಲು ಆಚಾರ್ಯರಿಗೆ ಇಷ್ಟವಿಲ್ಲ ಆದುದರಿಂದ ಪ್ರಕೃತ ಸೂತ್ರದಿಂದ ರೇಫ(ರ್) ಕ್ಕೆ ದ್ವಿತ್ವವು ನಿಷೇಧಿಸಲ್ಪಟ್ಟಿದೆ. ಆಗ 'ನು' ಗೆ ದ್ವಿತ್ವ ಬರಬಹುದೇ ಎಂದರೆ ಬರುವುದಿಲ್ಲ. ಯಾಕೆಂದರೆ ರೇಫದ ಸಂಬಂದವಿದ್ದಾಗ 'ನ್' ಕಾರಕ್ಕೆ ಣತ್ವವು ಆಗಿತ್ತು. ಈಗ ರೇಫವನ್ನು ಬೇರ್ಪಡಿಸಿದ್ದರಿಂದ 'ನಿಮಿತ್ತಾಪಾಯೇ ನೈಮಿತ್ತಿಕಸ್ಯಾಪ್ಯಪಾಯಃ' ಎಂಬ ನಿಯಮದಿಂದ 'ಣ್' ಕಾರವು 'ನ್' ಕಾರವಾಗಿದೆ. ಆದುದರಿಂದ 'ಣು' ವರ್ಣವು 'ನು' ವರ್ಣವಾಗಿದೆ.

ಆದ್ದರಿಂದ 'ನು' ವರ್ಣಕ್ಕೆ ಮಾತ್ರ ದ್ವಿತ್ವ ಬರುತ್ತದೆ. ಎಂದು ತಿಳಿಯಬೇಕು.

**ಲಿಟ್:** (ಪರಸಮೈಪದ) – ಉದಾ– ಊರ್ಣುನಾವ– ಪ್ರಥಮಪುರುಷ ಏಕವಚನದಲ್ಲಿ 'ಊರ್ಣು' ಧಾತುವಿನಮೇಲೆ 'ಲಿಟ್' ಆದೇಶವಾದ 'ತಿಪ್(ತಿ)' ಬಂದು ಅದಕ್ಕೆ ಅಭಿನವ ಆಖ್ಯಾತಪ್ರತ್ಯಯವಾದ 'ಣಲ್(ಅ)' ಬರುತ್ತದೆ. ಆಗ ಊರ್ಣು+ಅ ಎಂದಿರುತ್ತದೆ. ಊರ್+ಣು ಎಂಬಲ್ಲಿ ನಿಮಿತ್ತವಾದ ರೇಫ(ರ್)ವನ್ನು ಬೇರ್ಪಡಿಸಿದ್ದರಿಂದ ನೈಮಿತ್ತಿಕವಾದ 'ಣು' ವನ್ನು 'ನು' ಎಂದು ಭಾವಿಸಬೇಕು. ಆಗ ಊರ್+ನು+ಅ ಎಂದಿರುತ್ತದೆ. ಆಗ ಪ್ರಕೃತ ಸೂತ್ರದಿಂದ 'ನು'ಗೆ ದ್ವಿತ್ವ ಬಂದು ಊರ್+ನು+ನು+ಅ ಎಂದಿದ್ದಾಗ, ಅಭ್ಯಾಸದ 'ನ್' ಕಾರಕ್ಕೆ ರೇಫದ ಸಂಬಂಧವಿರುವುದರಿಂದ ಅದಕ್ಕೆ ಣತ್ವ(ಣು) ಬಂದು ಊರ್+ಣು+ನು+ಅ ಎಂದಿರುತ್ತದೆ. "ಅಚೋಞ್ಣಿತಿ" ಎಂಬ ಸೂತ್ರದಿಂದ ಕೊನೆಯ 'ಉ' ಕಾರಕ್ಕೆ ವೃದ್ಧಿ ಬಂದು ಊರ್ಣುನೌ+ಅ ಎಂದಿದ್ದಾಗ 'ಆವ್' ಆದೇಶ ಬಂದು ಊರ್ಣುನಾವ ಎಂಬ ರೂಪವು ಸಿದ್ಧಿಸುತ್ತದೆ.

ಉದಾ– ಊರ್ಣುನುವತುಃ, ಊರ್ಣುನುವುಃ– ಪ್ರಥಮಪುರುಷ ದ್ವಿವಚನ ಬಹುವಚನಗಳಲ್ಲಿ ಅತುಸ್ ಮತ್ತು ಉಸ್ ಎಂಬ ಅಭಿನವ ಆಖ್ಯಾತ ಪ್ರತ್ಯಯಗಳು ಆದೇಶಗಳಾಗಿ ಬಂದಾಗ, ಈ ಪ್ರತ್ಯಯಗಳು ಅಪಿತ್ ಆಗಿರುವುದರಿಂದ ವುಗಳಿಗೆ ಕಿದ್ವದ್ಭಾವ ಬರುವುದರಿಂದ 'ಉ' ಕಾರಕ್ಕೆ ಗುಣಬಾರದೇ "ಧಾತುಶ್ನುಭ್ರುವಾ ಯ್ವೋರಿಯಙುವಙೌ" ಎಂಬ ಸೂತ್ರದಿಂದ 'ಉವಙ್ (ಉವ್)' ಆದೇಶ ಬಂದು ಪ್ರಕೃತ ರೂಪಗಳು ಸಿದ್ಧವಾಗುತ್ತವೆ.

### (ವೈಕಲ್ಪಿಕವಾಗಿ ಙಿದ್ವದ್ಭಾವವನ್ನು ವಿಧಿಸುವ ಸೂತ್ರ)

**ಸೂತ್ರ– 602. ವಿಭಾಷೋರ್ಣೋಃ (1.2.3)**

ವೃತ್ತಿಃ–ಇಡಾದಿಪ್ರತ್ಯಯಃ ವಾ ಙಿತ್ ಸ್ಯಾತ್। ಊರ್ಣುನುವಿಥ, ಊರ್ಣುನವಿಥ। ಊರ್ಣುವಿತಾ, ಊರ್ಣವಿತಾ, ಊರ್ಣುವಿಷ್ಯತಿ, ಊರ್ಣವಿಷ್ಯತಿ। ಊರ್ಣೋತು, ಊರ್ಣೌತು। ಊರ್ಣವಾನಿ। ಊರ್ಣವೈ।

ಪ. ಛೇ.– ವಿಭಾಷಾ, ಊರ್ಣೋಃ।

ಅ.ವ್ಯ.–"ವಿಜ ಇಟ್" ಎಂಬ ಸೂತ್ರದಿಂದ 'ಇಟ್' ಎಂಬ ಪದವೂ ಮತು "ಗಾಙ್ ಕುಟಾದಿಭ್ಯೋಽಞ್ಣಿ ಙ್ಣಿತ್" ಎಂಬ ಸೂತ್ರದಿಂದ 'ಙಿತ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– 'ಊರ್ಣುಞ್(ಊರ್ಣು)' ಧಾತುವಿನಪರದಲ್ಲಿ ಇಡಾದಿ ಪ್ರತ್ಯಯವು ಇದ್ದಾಗ, ಪ್ರತ್ಯಯಕ್ಕೆ ವಿಕಲ್ಪದಿಂದ ಙಿದ್ವದ್ಭಾವವು ಬರುತ್ತದೆ.

ಗಮನಕ್ಕೆ: 'ಲಿಟ್' 'ಲ್'ಕಾರದಲ್ಲಿ ಥಲ್, ವ, ಮ ಎಂಬ ಅಭಿನವ ಆಖ್ಯಾತ ಪ್ರತ್ಯಯಗಳು ಪರದಲ್ಲಿದ್ದಾಗ, ಆ ಪ್ರತ್ಯಯಗಳಿಗೆ 'ಇಟ್(ಇ)' ಆಗಮವು ಬರುತ್ತದೆ. ಮತ್ತು ಲುಟ್ 'ಲ್' ಕಾರದ ತಾಸಿ, ಲೃಟ್ ಮತ್ತು ಲೃಙ್ 'ಲ್' ಕಾರಗಳ ಸ್ಯ, ಇದ್ದಾಗಲೂ ಮತ್ತು ಲುಙ್ 'ಲ್' ಕಾರದ ಸಿಚ್ ಇವುಗಳಿಗೂ 'ಇಟ್' ಆಗಮವು

ಬರುತ್ತದೆ. ಪ್ರಕೃತ ಸೂತ್ರದಲ್ಲಿ ವೈಕಲ್ಪಿಕವಾಗಿ ಜಿದ್ವದ್ಭಾವ ಬರುವುದರಿಂದ "ಕ್ಙಿತಿಚ" ಎಂಬ ಸೂತ್ರದಿಂದ ಗುಣದ ನಿಷೇಧವಾಗುತ್ತದೆ. ಗುಣಾಭಾವವಿಲ್ಲದಿದ್ದಾಗ, 'ಇಟ್' ನ್ನು ಅಜಾದಿ ಎಂದು ಭಾವಿಸಿದಾಗ, 'ಉವಙ್(ಉವ್)' ಆದೇಶವು ಬರುತ್ತದೆ. 'ಜಿತ್' ಬಾರದ ಪಕ್ಷದಲ್ಲಿ ಗುಣ ಬಂದು ಎರಡು ರೂಪಗಳು ಸಿದ್ಧವಾಗುತ್ತವೆ.

ಉದಾ-ಊರ್ಣುನುವಿಥ/ಊರ್ಣುನವಿಥ - ಮಧ್ಯಮ ಪುರುಷ ಏಕವಚನದಲ್ಲಿ 'ಊರ್ಣು' ಧಾತುವಿನ ಪರದಲ್ಲಿ 'ಸಿಪ್(ಸಿ)' ಬಂದು, ಅದಕ್ಕೆ 'ಥಲ್'(ಥ) ಆದೇಶ ಬಂದು ಅದಕ್ಕೆ 'ಇಟ್' ಆಗಮ ಬರುತ್ತದೆ. 'ನು' ಗೆ ದ್ವಿತ್ವ ಮಾಡಿದಾಗ, ಊರ್ಣು+ನು+ಇಥ ಎಂದಿರುತ್ತದೆ. ಇದು 'ಪಿತ್' ಆಗಿರುವುದರಿಂದ ಜಿದ್ವದ್ಭಾವವು ಬರುವುದಿಲ್ಲ, ಆದರಿಂದ ನಿತ್ಯವಾಗಿ ಸಾರ್ವಧಾತುಕ ಗುಣವು ಪ್ರಾಪ್ತವಾಗುತ್ತದೆ. ಆದರೆ ಪಕ್ರತ ಸೂತ್ರದಿಂದ 'ಜಿದ್ವದ್ಭಾವ' ಮಾಡಿದಾಗ, ಗುಣಕ್ಕೆ ನಿಷೇಧ ಬರುತ್ತದೆ. 'ನು' ವಿನಲ್ಲಿರುವ 'ಉ' ಕಾರಕ್ಕೆ 'ಉವಙ್(ಉವ್)' ಆದೇಶ ಬಂದು ಊರ್ಣು+ನ್+ಉವ್+ ಇಥ=ಊರ್ಣುನುವಿಥ ಎಂದು ರೂಪವಾಗುತ್ತದೆ. 'ಜಿದ್ವದ್ಭಾವವು' ವೈಕಲ್ಪಿಕವಾಗಿರು ವುದರಿಂದ ಅದು ಬಾರದ ಪಕ್ಷದಲ್ಲಿ "ಸಾರ್ವಧಾತುಕಾರ್ಧ-ಧಾತುಕಯೋಃ" ಎಂಬುದರಿಂದ 'ನು' ವಿನಲ್ಲಿರುವ 'ಉ' ಕಾರಕ್ಕೆ ಗುಣ ಬಂದು 'ಓ' ಕಾರವಾದಾಗ, ಊರ್ಣುನೋ+ಇಥ ಎಂದಿದ್ದಾಗ, 'ಓ' ಕಾರಕ್ಕೆ 'ಅವ್' ಆದೇಶ ಬಂದು ಉರ್ಣುನ್+ಅವ್+ ಇಥ=ಊರ್ಣುನವಿಥ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ- ಊರ್ಣುನುವಥುಃ,ಊರ್ಣುನುವ - ಮಧ್ಯಮಪುರುಷ ದ್ವಿವಚನ ಬಹುವಚನಗಳಲ್ಲಿ ಊರ್ಣು ಧಾತುವಿಗೆ 'ಅಥುಸ್' ಮತ್ತು 'ಅ' ಪ್ರತ್ಯಯಗಳನ್ನು ಸೇರಿಸಿದಾಗ, ಹಿಂದಿನಂತೆ 'ಉ' ಕಾರಕ್ಕೆ 'ಉವಙ್(ಉವ್) ಆದೇಶ ಬಂದು ಊರ್ಣುನ್+ಉವ್+ಅಥುಸ್= ಊರ್ಣುನುವಥುಃ, ಮತ್ತು ಊರ್ಣುನ್+ಉವ್+ಅ= ಊರ್ಣುನುವ ಎಂಬ ರೂಪಗಳು ಸಿದ್ಧವಾಗುತ್ತವೆ.

ಉದಾ- ಊರ್ಣುನಾವ/ಊರ್ಣುನವ - ಉತ್ತಮಪುರುಷ ಏಕವಚನದಲ್ಲಿ ಪ್ರಥಮಪುರುಷ ಏಕವಚನದಂತೆ ಊರ್ಣುನಾವ ಎಂಬ ಮೊದಲಿನ ರೂಪ ಸಿದ್ಧವಾಗುತ್ತದೆ. "ಣಲುತ್ತಮೋ ವಾ" ಎಂಬ ಸೂತ್ರದಿಂದ ವೈಕಲ್ಪಿಕವಾಗಿ 'ಣಿತ್' ಬರುವುದರಿಂದ ಊರ್ಣುನವ ಎಂಬ ವೈಕಲ್ಪಿಕ ರೂಪವು ಸಿದ್ಧವಾಗುತ್ತದೆ.

ಉದಾ-ಊರ್ಣುನುವಿವ, ಊರ್ಣುನುವಿಮ-ಉತ್ತಮಪುರುಷ ದ್ವಿವಚನ, ಬಹುವಚನಗಳಲ್ಲಿ 'ಇಟ್' ಆಗಮ ಬರುವುದರಿಂದ ಪಕ್ರತ ಸೂತ್ರದಿಂದ ವೈಕಲ್ಪಿಕವಾಗಿ ಜಿದ್ವದ್ಭಾವವು ಬರುತ್ತದೆ. ಆದರೆ "ಅಸಂಯೋಗಾಲ್ಲಿಟ್ಕಿತ್" ಎಂಬುದರಿಂದ 'ಕಿತ್ವ' ವಾಗುವುದರಿಂದ ಗುಣವು ಬರುವುದಿಲ್ಲ. ಆದ್ದರಿಂದ 'ಉವಙ್(ಉವ್)ಉಳ್ಳ ಊರ್ಣುನುವಿವ, ಊರ್ಣುನುವಿಮ ಎಂಬ ಒಂದೊಂದೇ ರೂಪಗಳು ಸಿದ್ಧವಾಗುತ್ತವೆ.

ಆತ್ಮನೇ ಪದದಲ್ಲಿ ಸೇ, ಧ್ವೇ, ವಹೇ, ಮಹೇ ಎಂಬ ಪ್ರತ್ಯಯಗಳಿದ್ದಾಗ, ಅವುಗಳಿಗೆ 'ಇಟ್' ಆಗಮ ಬರುತ್ತದೆ. ಆದರೆ "ಅಸಂಯೋಗಾಲ್ಲಿಟ್ಕಿತ್" ಎಂಬುದರಿಂದ ನಿತ್ಯವಾಗಿ 'ಕಿತ್ವ' ವಾಗೋಣದರಿಂದ ಗುಣವು ಬರುವುದಿಲ್ಲ. ಮತ್ತು 'ಉವಙ್' ಆದೇಶವು ಬಂದು

ಕೆಳಗಿನಂತೆ ರೂಪಗಳು ಸಿದ್ಧವಾಗುತ್ತವೆ.

**ಲಿಟ್**: ಪರಸ್ಮೈ ಪದದ ರೂಪಗಳು: ಊರ್ಣುನಾವ, ಊರ್ಣುನುವತುಃ, ಊರ್ಣುನುವುಃ। ಊರ್ಣುನುವಿಥ/ಊರ್ಣುನವಿಥ, ಊರ್ಣುನುವಥುಃ, ಊರ್ಣುನವ। ಊರ್ಣುನಾವ/ಊರ್ಣುನವ, ಊರ್ಣುನುವಿವ, ಊರ್ಣುನುವಿಮ।

ಆತ್ಮನೇ ಪದದ ರೂಪಗಳು: ಊರ್ಣುನುವೇ, ಊರ್ಣುನುವಾತೇ, ಊರ್ಣುನುವಿರೇ। ಊರ್ಣುನುವಿಷೇ, ಊರ್ಣುನುವಾಥೇ, ಊರ್ಣುನುವಿಢ್ವೇ/ ಊರ್ಣುನುವಿಧ್ವೇ। ಊರ್ಣುನುವೇ, ಊರ್ಣುನುವಿವಹೇ, ಊರ್ಣುನುವಿಮಹೇ।

**ಲುಟ್**: ಸೂಚನೆ: ಈ 'ಲ್' ಕಾರದಲ್ಲಿ ಇಡಾದಿ ಪತ್ಯಯ ಬರುವುದರಿಂದ ವಿಕಲ್ಪದಿಂದ 'ಜಿತ್' ಅಗೋಣದರಿಂದ 'ಜಿತ್' ಬಂದ ಪಕ್ಷಲ್ಲಿ 'ಉವಙ್(ಉವ್)' ಆದೇಶ ಬರುತ್ತದೆ. ಮತ್ತು 'ಜಿತ್' ಬಾರದ ಪಕ್ಷದಲ್ಲಿ ಗುಣ ಮತ್ತು ಅವಾದೇಶ ಬಂದು ಎರಡೆರಡು ರೂಪಗಳು ಸಿದ್ಧವಾಗುತ್ತವೆ.

**ಪರಸ್ಮೈಪದ**: ಜಿತ್ವ ಬಂದ ಪಕ್ಷದಲ್ಲಿ– ರೂಪಗಳು: ಊರ್ಣುವಿತಾ, ಊರ್ಣುವಿತಾರೌ, ಊರ್ಣುವಿತಾರಃ। ಊರ್ಣುವಿತಾಸಿ, ಊರ್ಣುವಿತಾಸ್ಥಃ. ಊರ್ಣುವಿತಾಸ್ಥ। ಊರ್ಣುವಿತಾಸ್ಮಿ, ಊರ್ಣುವಿತಾಸ್ವಃ, ಊರ್ಣುವಿತಾಸ್ಮಃ।

ಜಿತ್ವ ಬಾರದ ಪಕ್ಷದಲ್ಲಿ–ರೂಪಗಳು: ಊರ್ಣವಿತಾ, ಊರ್ಣವಿತಾರೌ, ಊರ್ಣವಿತಾರಃ। ಊರ್ಣವಿತಾಸಿ, ಊರ್ಣವಿತಾಸ್ಥಃ. ಊರ್ಣವಿತಾಸ್ಥ। ಊರ್ಣವಿತಾಸ್ಮಿ, ಊರ್ಣವಿತಾಸ್ವಃ, ಊರ್ಣವಿತಾಸ್ಮಃ।

ಆತ್ಮನೇ ಪದ:ಜಿತ್ವ ಬಂದ ಪಕ್ಷದಲ್ಲಿ: ಊರ್ಣುವಿತಾ, ಊರ್ಣುವಿತಾರೌ, ಊರ್ಣುವಿತಾರಃ। ಊರ್ಣುವಿತಾಸೇ, ಊರ್ಣುವಿತಾಸಾಥೇ, ಊರ್ಣುವಿತಾಧ್ವೇ। ಊರ್ಣುವಿತಾಹೇ ಊರ್ಣುವಿತಾಸ್ವಹೇ, ಊರ್ಣುವಿತಾಸ್ಮಹೇ।

ಜಿತ್ವ ಬಾರದ ಪಕ್ಷದಲ್ಲಿ: ಊರ್ಣವಿತಾ, ಊರ್ಣವಿತಾರೌ, ಊರ್ಣವಿತಾರಃ। ಊರ್ಣವಿತಾಸೇ, ಊರ್ಣವಿತಾಸಾಥೇ, ಊರ್ಣವಿತಾಧ್ವೇ। ಊರ್ಣವಿತಾಹೇ ಊರ್ಣವಿತಾಸ್ವಹೇ, ಊರ್ಣವಿತಾಸ್ಮಹೇ।

**ಲೃಟ್**: ಈ 'ಲ್' ಕಾರದಲ್ಲೂ ಮೇಲಿನಂತೆ ಎರಡೆರಡು ರೂಪಗಳು ಬರುತ್ತವೆ.

ಪರಸ್ಮೈಪದ (ಜಿತ್ವ ಬಂದ ಪಕ್ಷದಲ್ಲಿ)–ರೂಪಗಳು: ಊರ್ಣುವಿಷ್ಯತಿ, ಊರ್ಣುವಿಷ್ಯತಃ, ಊರ್ಣುವಿಷ್ಯನ್ತಿ। ಊರ್ಣುವಿಷ್ಯಸಿ, ಊರ್ಣುವಿಷ್ಯಥಃ, ಊರ್ಣುವಿಷ್ಯಥ। ಊರ್ಣುವಿಷ್ಯಾಮಿ, ಊರ್ಣುವಿಷ್ಯಾವಃ, ಊರ್ಣುವಿಷ್ಯಾಮಃ।

ಜಿತ್ವ ಬಾರದ ಪಕ್ಷದಲ್ಲಿ–ರೂಪಗಳು: ಊರ್ಣವಿಷ್ಯತಿ, ಊರ್ಣವಿಷ್ಯತಃ, ಊರ್ಣವಿಷ್ಯನ್ತಿ। ಊರ್ಣವಿಷ್ಯಸಿ, ಊರ್ಣವಿಷ್ಯಥಃ, ಊರ್ಣವಿಷ್ಯಥ। ಊರ್ಣವಿಷ್ಯಾಮಿ, ಊರ್ಣವಿಷ್ಯಾವಃ, ಊರ್ಣವಿಷ್ಯಾಮಃ।

**ಆತ್ಮನೇಪದ**: ಜಿತ್ವ ಬಂದ ಪಕ್ಷದಲ್ಲಿ: ರೂಪಗಳು: ಊರ್ಣುವಿಷ್ಯತೇ, ಊರ್ಣುವಿಷ್ಯೇತೇ, ಊರ್ಣುವಿಷ್ಯನ್ತೇ। ಊರ್ಣುವಿಷ್ಯಸೇ, ಊರ್ಣುವಿಷ್ಯೇಥೇ,

ಊರ್ಣುವಿಷ್ಯಧ್ವೇ। ಊರ್ಣುವಿಷ್ಯೇ, ಊರ್ಣುವಿಷ್ಯಾವಹೇ, ಊರ್ಣುವಿಷ್ಯಾಮಹೇ।

ಜಿತ್ವ ಬಾರದ ಪಕ್ಷದಲ್ಲಿ–ರೂಪಗಳು: ಊರ್ಣವಿಷ್ಯತೇ, ಊರ್ಣವಿಷ್ಯೇತೇ, ಊರ್ಣವಿಷ್ಯನ್ತೇ। ಊರ್ಣವಿಷ್ಯಸೇ, ಊರ್ಣವಿಷ್ಯೇಥೇ, ಊರ್ಣವಿಷ್ಯಧ್ವೇ। ಊರ್ಣವಿಷ್ಯೇ, ಊರ್ಣವಿಷ್ಯಾವಹೇ, ಊರ್ಣವಿಷ್ಯಾಮಹೇ।

**ಲೋಟ್**: ಪ್ರಥಮಪುರುಷ ಏಕವಚನದಲ್ಲಿ 'ಲಟ್' ಪ್ರಕ್ರಿಯೆಯಂತೆ ವೈಕಲ್ಪಿಕ ವೃದ್ಧಿ ಮಾಡಿದಮೇಲೆ "ಏರುಃ" ಎಂಬ ಸೂತ್ರದಿಂದ ಉತ್ವ ಮಾಡಿದಮೇಲೆ ಊರ್ಣೌತು/ ಊರ್ಣೋತು ಎಂದು ರೂಪಗಳಾಗುತ್ತವೆ. 'ತಾತಙ್(ತಾತ್)' ಬಂದ ಪಕ್ಷದಲ್ಲಿ, ಜಿದ್ವದ್ಭಾವವಿರೋಣದರಿಂದ ಅದು 'ಪಿತ್' ಆಗುವುದಿಲ್ಲ. ಕಾರಣ 'ಜಿಚ್ಚ ಪಿನ್ನ' 'ಪಿಚ್ಚ ಜಿನ್ನ' ಎಂದು ಪತಂಜಲಿಯವರ ಮಹಾ ಭಾಷ್ಯವು ಇದಕ್ಕೆ ಪ್ರಮಾಣವಾಗಿದೆ. 'ಪಿತ್' ಆಗದೇ ಇರೋಣದ್ದರಿಂದ ವೈಕಲ್ಪಿಕ ವೃದ್ಧಿಯು ಬರುವುದಿಲ್ಲ. ಆದ್ದರಿಂದ ಊರ್ಣುತಾತ್ ಎಂದು ವೈಕಲ್ಪಿಕ ರೂಪವಾಗುತ್ತದೆ. ಹೀಗೆ ಮೂರು ರೂಪಗಳು ಸಿದ್ಧವಾಗುತ್ತವೆ.

ಮಧ್ಯಮಪುರುಷ ಏಕವಚನದಲ್ಲಿ 'ಸಿಪ್' ಪ್ರತ್ಯಯ ಸೇರಿಸಿದಾಗ, ಅದಕ್ಕೆ 'ಹಿ' ಬಂದ ಪಕ್ಷದಲ್ಲಿ ಊರ್ಣುಹಿ ಎಂಬ ರೂಪವುಸಿದ್ಧವಾಗುತ್ತದೆ. ಇಲ್ಲಿ "ಉತಶ್ಚ ಪ್ರತ್ಯಯಾದಸಂಯೋಗಪೂರ್ವಾತ್" ಎಂಬುದರಿಂದ 'ಹಿ' ಗೆ ಲುಕ್ ಬರುವುದಿಲ್ಲ. ಕಾರಣ ಆ ಸೂತ್ರವು 'ಅಸಂಯೋಗ ಪೂರ್ವ' ಆದಾಗ ಮಾತ್ರ ಪ್ರವೃತ್ತವಾಗುತ್ತದೆ. ಆದರೆ ಇಲ್ಲಿ ಈ ಧಾತುವು ಸಂಯೋಗಪೂರ್ವಕವಾಗಿದೆ. ಮತ್ತು ತಾತಙ್(ತಾತ್) ಪಕ್ಷದಲ್ಲಿ ಊರ್ಣುತಾತ್ ಎಂದೇ ರೂಪವು ಸಿದ್ಧವಾಗುತ್ತದೆ. ಉತ್ತಮಪುರುಷದಲ್ಲಿ ಆಡುತ್ತಮಸ್ಯ "ಪಿಚ್ಚ" ಎಂಬ ಸೂತ್ರದಿಂದ 'ಆಟ್' ಆಗಮವು ಬರುತ್ತದೆ. ಇದು 'ಪಿತ್' ಆದಮೇಲೆಯೂ ಸಹ ಹಲಾದಿಯಾಗಿಲ್ಲದೇ ಇರುವುದರಿಂದ "ಊರ್ಣೋತೇರ್ವಿಭಾಷಾ" ಎಂಬ ಸೂತ್ರದಿಂದ ವೈಕಲ್ಪಿಕ ವೃದ್ಧಿಯು ಬರುವುದಿಲ್ಲ. ಊರ್ಣೋ+ಆನಿ ಎಂದಿದ್ದಾಗ, ಅವಾದೇಶ ಬಂದು ಊರ್ಣವಾನಿ ಎಂದು ರೂಪವು ಸಿದ್ಧವಾಗುತ್ತದೆ.

ಪರಸ್ಮೈಪದ: ರೂಪಗಳು: ಊರ್ಣೌತು/ಊರ್ಣೋತು/ಊರ್ಣುತಾತ್, ಊರ್ಣುತಾಮ್, ಊರ್ಣುವನ್ತು। ಊರ್ಣುಹಿ/ಊರ್ಣುತಾತ್, ಊರ್ಣುತಮ್, ಊರ್ಣುತ। ಊರ್ಣವಾನಿ, ಊರ್ಣವಾವ, ಊರ್ಣವಾಮ।

ಆತ್ಮನೇ ಪದ: ಇಲ್ಲಿ ಯಾವ ವಿಶೇಷವೂ ಇರುವುದಿಲ್ಲ.

ರೂಪಗಳು: ಊರ್ಣುತಾಮ್, ಊರ್ಣುವಾತಾಮ್, ಊರ್ಣುವತಾಮ್। ಊರ್ಣುಷ್ವ, ಊರ್ಣುವಾಥಾಮ್, ಊರ್ಣುಧ್ವಮ್। ಊರ್ಣವೈ, ಊರ್ಣವಾವಹೈ, ಊರ್ಣವಾಮಹೈ।

**(ಗುಣವಿಧಾಯಕ ಸೂತ್ರ)**

**ಸೂತ್ರ– 603.ಗುಣೋಽಪೃಕ್ತೇ (7.3.91)**

ವೃತ್ತಿಃ–ಊರ್ಣೋತೇಃ ಗುಣಃ ಅಪೃಕ್ತೇ ಹಲಾದೌ ಪಿತಿ ಸಾರ್ವಧಾತುಕೇ ವೃದ್ಧ್ಯಪವಾದಃ। ಔರ್ಣೋತ್। ಔರ್ಣೋಃ। ಊರ್ಣುಯಾತ್। ಊರ್ಣುಯಾಃ।

ಊರ್ಣುವೀತ। ಊರ್ಣುಯಾತ್। ಊರ್ಣುವಿಷೀಷ್ಟ ಊರ್ಣವಿಷೀಷ್ಟ

ಪ. ಛೇ. – ಗುಣಃ, ಅಪೃಕ್ತೇ।

ಅ. ವ್ಯ. – "ಉತೋ ವೃದ್ಧಿರ್ಲುಕಿ ಹಲಿ" ಎಂಬ ಸೂತ್ರದಿಂದ 'ಹಲಿ' ಎಂಬ ಪದವೂ, "ನಾಭ್ಯಸ್ತಸ್ಯಾಚಿ ಪಿತಿ ಸಾರ್ವಧಾತುಕೇ" ಎಂಬ ಸೂತ್ರದಿಂದ 'ಪಿತಿ' ಮತ್ತು 'ಸಾರ್ವಧಾತುಕೇ' ಎಂಬ ಪದಗಳು, ಹಾಗೂ "ಊರ್ಣೋರ್ತೇರ್ವಿಭಾಷಾ" ಎಂಬ ಸೂತ್ರದಿಂದ 'ಊರ್ಣೋತೇಃ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ– ಅಪೃಕ್ತವಾದ ಹಲಾದಿಯಾದ 'ಪಿತ್' ಸಾರ್ವಧಾತುಕವು ಪರದಲ್ಲಿದ್ದಾಗ, 'ಊರ್ಣು' ದಾತುವಿನ 'ಉ' ಕಾರಕ್ಕೆ ಗುಣವು ಬರುತ್ತದೆ. ಇದು "ಊರ್ಣೋರ್ತೆರ್ವಿಭಾಷಾ" ಎಂಬ ಸೂತ್ರಕ್ಕೆ ಅಪವಾದವಾಗಿದೆ. ಇಲ್ಲಿ 'ತಿಪ್' ಮತ್ತು 'ಸಿಪ್'ಗಳಲ್ಲಿ 'ತ್' ಮತ್ತು 'ಸ್' ಕಾರಗಳಲ್ಲಿ ಮಾತ್ರ ಅಪೃಕ್ತ ಹಲ್ ಸಿಗುತ್ತದೆ.

**ಲಙ್**: (ಪರಸ್ಮೈಪದ):ಉದಾ– ಔರ್ಣೋತ್– ಪ್ರಥಮಪುರುಷ ಏಕವಚನದಲ್ಲಿ 'ಊರ್ಣು' ಧಾತುವಿನ ನಂತರ 'ಲಙ್' ಸೇರಿಸಿದಾಗ, "ಆಡಜಾದೀನಾಮ್" ಎಂಬ ಸೂತ್ರದಿಂದ, ಧಾತುವಿಗೆ 'ಆಟ್' ಆಗಮವು ಬಂದು 'ತಿಪ್(ತಿ)' ಪ್ರತ್ಯಯವನ್ನು ಸೇರಿಸಿ ನಂತರ "ಇತಶ್ಚ" ಎಂಬುದರಿಂದ 'ತಿ' ನಲ್ಲಿರುವ 'ಇ' ಕಾರಕ್ಕೆ ಲೋಪ ಬಂದು ಧಾತುವಿನ ಪರದಲ್ಲಿ 'ಶಪ್' ಬಂದು ಅದಕ್ಕೆ ಲುಕ್ ಬಂದಮೇಲೆ ಆ+ಊರ್ಣು+ತ್ ಎದಿರುತ್ತದೆ ಆ+ಊರ್ಣು ವಿನಲ್ಲಿ "ಆಟಶ್ಚ" ಎಂಬ ಸೂತ್ರದಿದ 'ಆ' ಕಾರ 'ಊ' ಕಾರಗಳಿಗೆ ವೃದ್ಧಿ ಏಕಾದೇಶವಾಗಿ ಬಂದು ಔರ್ಣು+ತ್ ಎಂದಿರುತ್ತದೆ. 'ನು' ವಿನಲ್ಲಿರುವ 'ಉ' ಕಾರಕ್ಕೆ "ಊರ್ಣೋರ್ತೇರ್ವಿಭಾಷಾ" ಎಂಬುದರಿಂದ ವೈಕಲ್ಪಿಕವಾಗಿ ವೃದ್ಧಿಯು ಬರಬೇಕಾಗಿತ್ತು. ಅದನ್ನು ಬಾಧಿಸಿ ಪ್ರಕೃತ ಸೂತ್ರದಿಂದ ಔರ್ಣೋತ್ ಎಂದು ರೂಪವಾಗುತ್ತದೆ.

ಉದಾ–ಔರ್ಣೋಃ– ಮಧ್ಯಮಪುರುಷ ಏಕವಚನದಲ್ಲಿ ಪ್ರಥಮಪುರುಷ ಏಕವಚನದ ಪ್ರಕ್ರಿಯೆಯನ್ನು ಅನುಸರಿಸಲಾಗುತ್ತದೆ. ಆದರೆ ಅಪೃಕ್ತ 'ಸ್' ಕಾರಕ್ಕೆ ರುತ್ವ–ವಿಸರ್ಗಗಳು ಬಂದು ಔರ್ಣೋಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಔರ್ಣವಮ್– ಉತ್ತಮಪುರುಷ ಏಕವಚನದಲ್ಲಿ 'ಊರ್ಣು' ಧಾತುವಿನ ನಂತರ 'ಮಿಪ್(ಮಿ)' ಪ್ರತ್ಯಯ ಬಂದು ಊರ್ಣು+ಮಿಪ್(ಮಿ) ಎಂದಿದ್ದಾಗ, "ಆಡಜಾದೀನಾಮ್" ಎಂಬುದರಿಂದ ಧಾತುವಿಗೆ 'ಆಟ್(ಆ)' ಆಗಮ ಬಂದು ಆ+ಊರ್ಣು+ಮಿಪ್ ಎಂದಿದ್ದಾಗ, ಮಿಪ್ ಗೆ 'ಅಮ್' ಆದೇಶ ಬಂದು ಆ+ಊರ್ಣು+ಅಮ್ ಎಂದಿದ್ದಾಗ, 'ಅಮ್' ಪ್ರತ್ಯಯವು ಅನೇಕಾಲ್ ಆಗಿರುವುದರಿಂದ ಅದು ಅಪೃಕ್ತವಾಗಿರುವುದಿಲ್ಲ. ಹಲಾದಿಯಾಗಿಲ್ಲದೇ ಇರೋಣದರಿಂದ "ಆಟಶ್ಚ" ಎಂಬುದರಿಂದ ವೃದ್ಧಿ ಬಂದು, ಔರ್ಣು+ಅಮ್ ಎಂದಿದ್ದಾಗ, ಅಪೃಕ್ತವಾಗಿಲ್ಲದೇ ಇರೋಣದರಿಂದ ಪ್ರಕೃತ ಸೂತ್ರದಿಂದ ಗುಣ ಆಗುವುದಿಲ್ಲ. ಆದರೆ 'ಉ' ಕಾರಕ್ಕೆ ಸಾರ್ವಧಾತುಕಗುಣ ಬಂದು ಔರ್ಣೋ+ಅಮ್ ಎಂದಿದ್ದಾಗ, 'ಓ' ಕಾರಕ್ಕೆ ಅವಾದೇಶ ಬಂದು, ಔರ್ಣ್+ಅವ್+ಅಮ್= ಔರ್ಣವಮ್ ಎಂದು ರೂಪವು ಸಿದ್ಧವಾಗುತ್ತದೆ.

ರೂಪಗಳು: ಔರ್ಣೋತ್, ಔರ್ಣುತಾಮ್, ಔರ್ಣುವನ್। ಔರ್ಣೋಃ, ಔರ್ಣುತಮ್, ಔರ್ಣುತ। ಔರ್ಣವಮ್, ಔರ್ಣುವ, ಔರ್ಣುಮ।

**ಲಙ್**-ಆತ್ಮನೇಪದ:ರೂಪಗಳು: ಔರ್ಣುತ,ಔರ್ಣುವಾತಾಮ್, ಔರ್ಣುವತ। ಔರ್ಣುಥಾಃ, ಔರ್ಣುವಾಥಾಮ್, ಔರ್ಣುಧ್ವಮ್। ಔರ್ಣವಿ, ಔರ್ಣುವಹಿ, ಔರ್ಣುಮಹಿ।

**ವಿಧಿಲಿಙ್** (ಪರಸ್ಮೈಪದ): ರೂಪಗಳು: ಊರ್ಣುಯಾತ್, ಊರ್ಣುಯಾತಾಮ್, ಊರ್ಣುಯುಃ। ಊರ್ಣುಯಾಃ, ಊರ್ಣುಯಾತಮ್, ಊರ್ಣುಯಾತ। ಊರ್ಣುಯಾಮ್, ಊರ್ಣುಯಾವ, ಊರ್ಣುಯಾಮ್।

ಆತ್ಮನೇಪದ: ರೂಪಗಳು: ಊರ್ಣುವಿತ, ಊರ್ಣುವೀಯಾತಾಮ್, ಊರ್ಣುವೀರನ್। ಊರ್ಣುವೀಥಾಃ, ಊರ್ಣುವಿಯಾಥಾಮ್, ಊರ್ಣುವೀಧ್ವಮ್। ಊರ್ಣುವೀಯ, ಊರ್ಣುವೀವಹಿ, ಊರ್ಣುವೀಮಹಿ।

ಗಮನಕ್ಕೆ: ವಿಧಿಲಿಙ್ ನಲ್ಲಿ 'ಯಾಸುಟ್' ಇದು 'ಙಿತ್' ಆಗಿರುತ್ತದೆ. ಆದುದರಿಂದ ಅದು 'ಪಿತ್' ಆಗುವುದಿಲ್ಲ. ಇದರ ಫಲವಾಗಿ ವೈಕಲ್ಪಿಕ ವೃದ್ಧಿ ಆಗುವುದಿಲ್ಲ. ಙಿತ್ವದ ಕಾರಣದಿಂದ ಸಾರ್ವಧಾತುಕ ಗುಣದ ನಿಷೇಧವೂ ಆಗಿದೆ. ಆತ್ಮನೇ ಪದದಲ್ಲಿ 'ಸೀಯುಟ್' ನ 'ಸ್' ಕಾರಕ್ಕೆ "ಲಿಙಃ ಸಲೋಪೋಽನನ್ತ್ಯಸ್ಯ" ಎಂಬ ಸೂತ್ರದಿಂದ ಲೋಪ ಬರುವುದರಿಂದ ವರ್ಣಗಳ ಜೋಡಣೆಯಾಗುತ್ತದೆ. ಆದುದರಿಂದ 'ಉವಙ್(ಉ)' ಆದೇಶ ಬಂದು ರೂಪಗಳ ಸಿದ್ಧಿಯಾಗುತ್ತದೆ.

**ಆಶೀರ್ಲಿಙ್:** (ಪರಸ್ಮೈಪದ): ಇಲ್ಲಿ "ಅಕೃತ್ಸಾರ್ವಧಾತುಕಯೋಃ ದೀರ್ಘಃ" ಎಂಬ ಸೂತ್ರದಿಂದ 'ಉ'ಕಾರಕ್ಕೆ ದೀರ್ಘವು ಬರುವುದರಿಂದ ಕೆಳಗಿನ ರೂಪಗಳು ಸಿದ್ಧವಾಗುತ್ತವೆ. ರೂಪಗಳು: ಊರ್ಣೂಯಾತ್, ಊರ್ಣೂಯಾಸ್ತಾಮ್, ಊರ್ಣೂಯಾಸುಃ। ಊರ್ಣೂಯಾಃ, ಊರ್ಣೂಯಾಸ್ತಮ್, ಊರ್ಣೂಯಾಸ್ತ। ಊರ್ಣೂಯಾಸಮ್, ಊರ್ಣೂಯಾಸ್ವ, ಊರ್ಣೂಯಾಸ್ಮ।

ಆತ್ಮನೇಪದ: ಇಲ್ಲಿ 'ಸೀಯುಟ್ (ಸೀಯ್)' ಇಡಾಗಮವು ಬಂದಮೇಲೆ ಅದಕ್ಕೆ ಙಿತ್ವವು ವಿಕಲ್ಪವಾಗಿ ಬರುವುದರಿಂದ –

ಙಿತ್ವ ಪಕ್ಷದಲ್ಲಿ-'ಉವಙ್ (ಉವ್)' ಆದೇಶದಿಂದ ಕೆಳಗಿನಂತೆ ರೂಪಗಳು ಸಿದ್ಧಿಸುತ್ತವೆ.

ರೂಪಗಳು: ಊರ್ಣುವಿಶೀಷ್ಟ, ಊರ್ಣುವಿಷಿಯಾಸ್ತಾಮ್, ಊರ್ಣುವಿಷೀರನ್। ಊರ್ಣುವಿಷೀಷ್ಠಾಃ, ಊರ್ಣವಿಷೀಯಾಸ್ಥಾಮ್, ಊರ್ಣವಿಷೀಢ್ವಮ್। ಊರ್ಣುವಿಷೀಯ, ಊರ್ಣುವಿಷೀವಹಿ, ಊರ್ಣುವಿಷೀಮಹಿ।

ಙಿತ್ವ ಬಾರದ ಪಕ್ಷದಲ್ಲಿ: ಗುಣ ಮತ್ತು ಅವಾದೇಶಗಳಿಂದ ಕೆಳಗಿನ ರೂಪಗಳು ಸಿದ್ಧಿಸುತ್ತವೆ. ರೂಪಗಳು: ಊರ್ಣವಿಷೀಷ್ಟ, ಊರ್ಣವಿಷೀಯಾಸ್ತಾಮ್, ಊರ್ಣವಿಷೀರನ್। ಊರ್ಣವಿಷೀಷ್ಠಾಃ, ಊರ್ಣವಿಷೀಯಾಸ್ಥಾಮ್, ಊರ್ಣೈವಿಷೀಢ್ವಮ್। ಊರ್ಣವಿಷೀಯ, ಊರ್ಣವಿಷೀವಹಿ, ಊರ್ಣವಿಷೀಮಹಿ।

**ಲುಙ್:**

**(ವೈಕಲ್ಪಿಕವಾಗಿ ವೃದ್ಧಿಯನ್ನು ವಿಧಿಸುವ ಸೂತ್ರ)**

**ಸೂತ್ರ- 604.ಊರ್ಣೋತೇರ್ವಿಭಾಷಾ (7.2.6)**

ವೃತ್ತಿಃ-ಇಡಾದೌ ಪರಸ್ಮೈಪದೇ ಪರೇ ಸಿಚಿ ವಾ ವೃದ್ಧಿಃ। ಪಕ್ಷೇ ಗುಣಃ। ಔರ್ಣಾವೀತ್/ ಔರ್ಣುವೀತ್/ ಔರ್ಣವೀತ್। ಔರ್ಣಾವಿಷ್ಟಾಮ್, ಔರ್ಣುವಿಷ್ಟಾಮ್, ಔರ್ಣವಿಷ್ಟಾಮ್। ಔರ್ಣುವಿಷ್ಟ/ಔರ್ಣವಿಷ್ಟ। ಔರ್ಣುವಿಷ್ಯತ್/ಔರ್ಣವಿಷ್ಯತ್। ಔರ್ಣುವಿಷ್ಯತ,ಔರ್ಣವಿಷ್ಯತ।

ಇತ್ಯದಾದಯಃ (13)

ಪ. ಛೇ. –ಊರ್ಣೋತೇಃ, ವಿಭಾಷಾ।

ಅ. ವೃ.– "ಸಿಚಿ ವೃದ್ಧಿಃ ಪರಸ್ಮೈಪದೇಷು" ಎಂಬ ಸೂತ್ರವು ಅನುವೃತ್ತವಾಗುತ್ತದೆ. ಮತ್ತು "ನೇಟಿ" ಎಂಬ ಸೂತ್ರದಿಂದ 'ಇಟಿ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– ಪರಸ್ಮೈಪದದಲ್ಲಿ ಇಡಾದಿ 'ಸಿಚ್' ಪರವಾದಾಗ, ಊರ್ಣು ಧಾತುವಿಗೆ ವೈಕಲ್ಪಿಕವಾಗಿ ವೃದ್ಧಿಯು ಬರುತ್ತದೆ.

**ಲುಙ್**: 'ಲುಙ್' ಪರಸ್ಮೈಪದದಲ್ಲಿ ಇಡಾದಿ ಪ್ರತ್ಯಯಕ್ಕೆ ಙಿತ್ವವು ವೈಕಲ್ಪಿಕವಾಗಿ ಬರುತ್ತದೆ. ಙಿತ್ವ ಪಕ್ಷದಲ್ಲಿ 'ಉವಙ್(ಉವ್)' ಆದೇಶವು ಬರುತ್ತದೆ. ಙಿತ್ವ ಬಾರದ ಪಕ್ಷದಲ್ಲಿ ಪ್ರಕೃತ ಸೂತ್ರದಿಂದ ವೈಕಲ್ಪಿಕವಾಗಿ ವೃದ್ಧಿಯು ಬರುತ್ತದೆ. ವೃದ್ಧಿ ಬಾರದ ಪಕ್ಷದಲ್ಲಿ ಗುಣವು ಬಂದು ಕೆಳಗಿನಂತೆ ಮೂರು ರೂಪಗಳು ಸಿದ್ಧವಾಗುತ್ತವೆ.

ವೃದ್ಧಿ ಬಂದ ಪಕ್ಷದಲ್ಲಿ ರೂಪಗಳು: ಔರ್ಣಾವೀತ್, ಔರ್ಣಾವಿಷ್ಟಾಮ್, ಔರ್ಣಾವಿಷುಃ। ಔರ್ಣಾವೀಃ, ಔರ್ಣಾವಿಷ್ಟಮ್, ಔರ್ಣಾವಿಷ್ಟ।ಔರ್ಣಾವಿಷಮ್, ಔರ್ಣಾವಿಷ್ವ, ಔರ್ಣಾವಿಷ್ಮ

ವೃದ್ಧಿ ಬಾರದೇ ಙಿತ್ವ ಬಂದು (ಉವಙ್) ಪಕ್ಷದಲ್ಲಿ ರೂಪಗಳು: ಔರ್ಣುವೀತ್, ಔರ್ಣುವಿಷ್ಟಾಮ್, ಔರ್ಣುವಿಷುಃ। ಔರ್ಣುವೀಃ, ಔರ್ಣುವಿಷ್ಟಮ್, ಔರ್ಣೂವಿಷ್ಟ। ಔರ್ಣುವಿಷಮ್, ಔರ್ಣೂವಿಷ್ವ, ಔರ್ಣೂವಿಷ್ಮ।

ಙಿತ್ವ ಬಾರದೇ ಗುಣ ಬಂದ ಪಕ್ಷದಲ್ಲಿ ರೂಪಗಳು: ಔರ್ಣವೀತ್, ಔರ್ಣವಿಷ್ಟಾಮ್, ಔರ್ಣವಿಷುಃ। ಇತ್ಯಾದಿ

ಆತ್ಮನೇಪದ: ಆತ್ಮನೇಪದದಲ್ಲಿ 'ಉವಙ್(ಉವ್)' ಆದೇಶ ಮತ್ತು ಗುಣ ಇವುಗಳ ವಿಕಲ್ಪದಿಂದ ಔರ್ಣುವಿಷ್ಟ, ಔರ್ಣವಿಷ್ಟ ಇತ್ಯಾದಿ ಎರಡು ರೂಪಗಳಾಗುತ್ತವೆ. 'ಲೃಙ್'ನಲ್ಲೂ ಕೂಡ 'ಙಿತ್ವ' ವಿಕಲ್ಪದಿಂದ ಪರಸ್ಮೈಪದ ಮತ್ತು ಆತ್ಮನೇ ಪದಗಳಲ್ಲಿ ಎರಡೆರಡು ರೂಪಗಳು ಸಿದ್ಧಿಸುತ್ತವೆ.

ಪರಸ್ಮೈಪದದಲ್ಲಿ ಎರಡೆರಡು ರೂಪಗಳು: ಔರ್ಣುವಿಷ್ಯತ್, ಔರ್ಣವಿಷ್ಯತ್... ಇತ್ಯಾದಿ

ಆತ್ಮನೇಪದದ ರೂಪಗಳು: ಔರ್ಣುವಿಷ್ಯತ/ಔರ್ಣವಿಷ್ಯತ *** ಇತ್ಯಾದಿ

**॥ಇತಿ ಅದಾದಯಃ ದ್ವಿತೀಯ ಗಣಃ ಸಮಾಪ್ತಃ ॥**

**ಇಲ್ಲಿಗೆ ಅದಾದಿ ಪ್ರಕರಣ (13) ಮುಗಿಯಿತು.**

# ಪ್ರಕರಣ-14

## ಅಥ ಜುಹೋತ್ಯಾದಯಃ (3ನೇ ಗಣ)

### (ಸೂತ್ರ 605-629ರವರೆಗೆ)

ಜುಹೋತ್ಯಾದಿ ಗಣದಲ್ಲಿ 24 ಧಾತುಗಳು ಇವೆ. ವರದರಾಜರು ಇವುಗಳಲ್ಲಿ 11 ಧಾತುಗಳನ್ನು ಮಾತ್ರ ರೂಪಸಿದ್ಧಿಗಾಗಿ ಆರಿಸಿಕೊಂಡಿದ್ದಾರೆ.

ಪರಸ್ಮೈ ಪದಿ ಧಾತುಗಳು (5)- 1. ಹು-(ಹೋಮಿಸುವುದು ಅಥವಾ ತಿನ್ನುವುದು), 2-ಞಿಭಿ-(ಹೆದರುವುದು), 3. ಹ್ರೀ-(ನಾಚುವುದು), 4. ಪೃ- (ಪಾಲಿಸುವುದು ಅಥವಾ ಪೂರ್ಣ ಮಾಡುವುದು), 5. ಓಹಾಕ್-(ತ್ಯಜಿಸುವುದು),

ಆತ್ಮನೇ ಪದಿ ಧಾತುಗಳು (2) – 6. ಮಾಙ್-(ಅಳೆಯುವುದು,ಶಬ್ದ ಮಾಡುವುದು), 7. ಓಹಾಙ್- (ಗತ್ಯರ್ಥ),

ಉಭಯಪದಿ ಧಾತುಗಳು-(4)- 8. ಡುಭೃಞ್(ಧಾರಣ ಮಾಡುವುದು ಅಥವಾ ಪಾಲನೆ ಮಾದುವುದು), 9. ಡುದಾಞ್(ಕೊಡುವುದು), 10-ಡುಧಾಞ್(ಧಾರಣೆ ಮಾಡುವುದು),11. ಣಿಜಿರ್(ಶುದ್ಧ ಮಾಡುವುದು ಅಥವಾ ಪೋಷಣೆ ಮಾಡುವುದು)

1.ಹು- ದಾನಾದ೦ಯೋಃ -

(ಶಪ್ ಪ್ರತ್ಯಯಕ್ಕೆ ಶ್ಲು ಪ್ರತ್ಯಯವನ್ನು ಆದೇಶವಾಗಿ ವಿಧಿಸುವ ಸೂತ್ರ)

ಸೂತ್ರ- 604. ಜುಹೋತ್ಯಾದಿಭ್ಯಃ ಶ್ಲುಃ (2.4.75)

ವೃತ್ತಿ – ಶಪಃ ಶ್ಲುಃ ಸ್ಯಾತ್।

ಅ.ವ್ಯ. – "ಅಧಿ ಪ್ರಭೃತಿಭ್ಯಃ ಶಪಃ" ಎಂಬ ಸೂತ್ರದಿಂದ 'ಶಪಃ' ಎಂಬ ಪದವು ಅನುವೃತ್ತವಾಗುತದೆ.

ಅರ್ಥ – ಜುಹೋತ್ಯಾದಿ ಗಣಕ್ಕೆ ಸೇರಿದ ಧಾತುಗಳನಂತರ ಇರುವ 'ಶಪ್' ಪ್ರತ್ಯಯಕ್ಕೆ 'ಶ್ಲು' ಆದೇಶವಾಗಿ ಬರುತ್ತದೆ. ಇಲ್ಲಿ 'ಶ್ಲು' ವನ್ನು ಆದೇಶವಾಗಿ ವಿಧಿಸುವದಕ್ಕೆ ಕಾರಣ "ಪ್ರತ್ಯಯಲೋಪೇ ಪ್ರತ್ಯಯಲಕ್ಷಣಮ್" ಎಂಬ ಸೂತ್ರದಿಂದ ಬರುವ ಪ್ರತ್ಯಯ ಲಕ್ಷಣದ ಕಾರ್ಯಕ್ಕೆ "ನ ಲುಮತಾಙ್ಗಸ್ಯ" ಎಂಬ ಸೂತ್ರದಿಂದ ನಿಷೇಧ ಮಾಡಲಾಗಿದೆ. ಇದರಿಂದ 'ಶಪ್' ಗೆ 'ಲುಕ್(ಲೋಪ)' ಬಂದಮೇಲೆ ಲೋಪವಾದ ಪ್ರತ್ಯಯವು ಇರುವಂತೆ ಕಾರ್ಯವಾಗುವುದಿಲ್ಲ. ಅಂದರೆ ಸ್ಥಾನಿವದ್ಭಾವ ಬರುವುದಿಲ್ಲ ಎಂದು ಅರ್ಥ.

(ಧಾತುವಿಗೆ ದ್ವಿತ್ವವನ್ನು ವಿಧಿಸುವ ಸೂತ್ರ)

ಸೂತ್ರ- 606. ಶ್ಲೌ (6.1.10)

ವೃತ್ತಿ – ಧಾತೋಃ ದ್ವೇ ಸ್ತಃ । ಜುಹೋತಿ। ಜುಹುತಃ

ಅ.ವ್ಯ. – "ಲಿಟಿಧಾತೋರನಭ್ಯಾಸಸ್ಯ" ಎಂಬ ಸೂತ್ರದಿಂದ 'ಧಾತೋಃ' ಎಂಬ

ಪದವೂ ಮತ್ತು "ಏಕಾಚೋ ದ್ವೇ ಪ್ರಥಮಸ್ಯ" ಎಂಬ ಸೂತ್ರದಿಂದ 'ದ್ವೇ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ – 'ಶ್ಲು' ಪರದಲ್ಲಿದ್ದಾಗ ಧಾತುವಿಗೆ ದ್ವಿತ್ವವು ಬರುತ್ತದೆ.

**ಲಟ್:** ಉದಾ– ಜುಹೋತಿ– ಪ್ರಥಮಪುರುಷ ಏಕವಚನದಲ್ಲಿ 'ಹು' ಧಾತುವಿನ ನಂತರ ಲಡಾದೇಶವಾದ 'ತಿಪ್(ತಿ)' ಬಂದು ಅದಕ್ಕೆ ಸಾರ್ವಧಾತುಕಸಂಜ್ಞೆ ಬಂದಮೇಲೆ ಧಾತುವಿನ ಪರದಲ್ಲಿ ಇರುವ 'ಶಪ್' ಗೆ "ಜುಹೋತ್ಯಾದಿಭ್ಯಃ ಶ್ಲುಃ"ಎಂಬುದರಿಂದ 'ಶ್ಲು(ಲೋಪ)' ಬಂದು ಹು+ತಿ ಎಂದಿರುತ್ತದೆ. ನಂತರ ಪ್ರಕೃತ ಸೂತ್ರದಿಂದ ಧಾತುವಿಗೆ ದ್ವಿತ್ವ ಬಂದು ಹುಹು+ತಿ ಎಂದಿರುತ್ತದೆ. ಈಗ ಮೊದಲನೆಯ 'ಹು' ಎಂಬ ರೂಪಕ್ಕೆ 'ಅಭ್ಯಾಸ' ಸಂಜ್ಞೆ ಬರುತ್ತದೆ. ಆ ಅಭ್ಯಾಸದ 'ಹು' ಗೆ "ಕುಹೋಶ್ಚುಃ" ಎಂಬುದರಿಂದ ಚುತ್ವದಿಂದ 'ಹ್' ಕಾರಕ್ಕೆ 'ಝ್' ಕಾರ ಬಂದು ಝುಹು+ತಿ ಎಂದಿದ್ದಾಗ, "ಅಭ್ಯಾಸೇ ಚರ್ಚ' ಎಂಬ ಸೂತ್ರದಿಂದ ಆ 'ಝ್' ಕಾರಕ್ಕೆ ಜಶ್ತ್ವ(ಜ್) ಬಂದು ಜುಹು +ತಿ ಎಂದಿರುತ್ತದೆ. 'ತಿ' ಯನ್ನು ಸಾರ್ವಧಾತುಕವೆಂದು ಭಾವಿಸಿ ಅನಭ್ಯಸ್ತವಾದ 'ಹು' ನಲ್ಲಿರುವ 'ಉ' ಕಾರಕ್ಕೆ "ಸಾರ್ವಧಾತುಕಾರ್ಧಧಾತುಕಯೋಃ" ಎಂಬುದರಿಂದ ಗುಣ ಬಂದು ಜುಹೋ+ತಿ=ಜುಹೋತಿ ಎಂದು ರೂಪವಾಗುತ್ತದೆ.

ಉದಾ– ಜುಹುತಃ– ಮೂರು ಪುರುಷಗಳ ಏಕವಚನ ಪ್ರತ್ಯಯಗಳು ಅಂದರೆ ತಿಪ್, ಸಿಪ್ ಮತ್ತು ಮಿಪ್ ಗಳು ಮಾತ್ರ 'ಪಿತ್' ಆದ ಪ್ರತ್ಯಯಗಳಾಗಿರುತ್ತವೆ. ಆದ್ದರಿಂದ ಈ ಪ್ರತ್ಯಯಪರಕವಾದ ಧಾತುಗಳ ಅಂಗಕ್ಕೆ ಗುಣ ಬರುತ್ತದೆ. ಉಳಿದ ಆರು ಪ್ರತ್ಯಯಗಳು "ಸಾರ್ವಧಾತುಕಮಪಿತ್" ಎಂಬ ಸೂತ್ರದಿಂದ 'ಙಿದ್ವದ್ಭಾವ'ವನ್ನು ಹೊಂದುವುದರಿಂದ "ಕ್ಙಿತಿಚ" ಎಂಬುದರಿಂದ ಗುಣ ಬರುವುದಿಲ್ಲ. ಆದ್ದರಿಂದ ದ್ವಿವಚನ ಬಹುವಚನಗಳ ರೂಪಗಳಲ್ಲಿ ಗುಣ ಬಾರದೇ ಜುಹುತಃ ಇತ್ಯಾದಿ ರೂಪಗಳಾಗುತ್ತವೆ.

**(ಅತ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ– 607. ಅದಭ್ಯಸ್ತಾತ್ (7.1.4)**

ವೃತ್ತಿ – ಝಸ್ಯ ಅತ್ ಸ್ಯಾತ್। (501) "ಹುಶ್ನುವೋ"ರಿತಿ ೦ಯಣ್। ಜುಹ್ವತಿ।

ಪ.ಛೇ.– ಅತ್ ಅಭ್ಯಸ್ತಾತ್।

ಅ.ವ್ಯ.– "ಝೋಽನ್ತಃ" ಎಂಬ ಸೂತ್ರದಿಂದ 'ಝಃ' ಎಂಬ ಪದವೂ, ಮತ್ತು "ಆಯನೇಯೀನೀಯಿಯಃ ಫ–ಢ–ಖ–ಛ–ಘಾವ್ ಪ್ರತ್ಯಯಾದೀನಾಂ" ಎಂಬಸೂತ್ರದಿಂದ ವಚನವಿಪರಿಣಾಮ ಮಾಡಿದಮೇಲೆ "ಪ್ರತ್ಯಯಯಾದೇಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– ಅಭ್ಯಸ್ತಸಂಜ್ಞೆಯುಳ್ಳ ಧಾತುವಿನ ಪರದಲ್ಲಿ ಪ್ರತ್ಯಯದ ಆದಿ ಅವಯವವಾದ 'ಝ್' ಕಾರದ ಸ್ಥಾನದಲ್ಲಿ 'ಅತ್' ಎಂಬ ಆದೇಶವು ಬರುತ್ತದೆ.

ಉದಾ– ಜುಹ್ವತಿ– ಹಿಂದಿನಂತೆಯೇ ಪ್ರಕ್ರಿಯೆ ನಡೆದು 'ಜುಹು' ಎಂದು ರೂಪವಾದಮೇಲೆ ಅದಕ್ಕೆ "ಉಭೇ ಅಭ್ಯಸ್ತಮ್" ಎಂಬ ಸೂತ್ರದಿಂದ ಅಭ್ಯಸ್ತ ಸಂಜ್ಞೆ

ಬರುತ್ತದೆ. ಪ್ರಕೃತ ಸೂತ್ರದಿಂದ 'ಝಿ' ನಲ್ಲಿರುವ 'ಝ್' ಕಾರಕ್ಕೆ 'ಅತ್' ಆದೇಶ ಬಂದು ಜುಹು+ಅತ್+ಇ=ಜುಹು+ಅತಿ ಎಂದಿದ್ದಾಗ 'ಉ' ಕಾರಕ್ಕೆ 'ಯಣ್' ಬರಬೇಕಾಗಿತ್ತು. ಅದನ್ನು ಬಾಧಿಸಿ "ಅಚಿ ಶ್ನುಧಾತುಭ್ರುವಾಂ ಯ್ವೋರಿಯಙುವಙೌ" ಎಂಬ ಸೂತ್ರದಿಂದ 'ಉವಙ್ (ಉವ್)' ಪ್ರಾಪ್ತವಾಗಿತ್ತು. ಅದನ್ನು ಬಾಧಿಸಿ "ಹುಶ್ನುವೋಃ ಸಾರ್ವಧಾತುಕೇ" ಎಂಬುದರಿಂದ 'ಹ್' ಕಾರೋತ್ತರ 'ಉ' ಕಾರಕ್ಕೆ 'ಯಣ್ (ವ್)' ಆದೇಶವಾಗಿ ಬಂದು ಜುಹ್ವ್+ಅತಿ=ಜುಹ್ವತಿ ಎಂದು ರೂಪವು ಸಿದ್ಧವಾಗುತದೆ.

**ಲಟ್**: ರೂಪಗಳು: ಜುಹೋತಿ, ಜುಹುತಃ, ಜುಹ್ವತಿ। ಜುಹೋಷಿ, ಜುಹುಥಃ, ಜುಹುಥ। ಜುಹೋಮಿ, ಜುಹುವಃ, ಜುಹುಮಃ।

### (ಆಮ್ ಮೊದಲಾದ ಪ್ರತ್ಯಯಗಳನ್ನು ವೈಕಲ್ಪಿಕವಾಗಿ ವಿಧಿಸುವ ಅತಿದೇಶ ಸೂತ್ರ)

ಸೂತ್ರ– 608. ಭೀ–ಹ್ರೀ–ಭೃ–ಹುವಾಂ ಶ್ಲುವಚ್ಚ (3.1.39)

ವೃತ್ತಿ – ಏಭ್ಯಃ ಲಿಟಿ ಆಮ್ ವಾ ಸ್ಯಾತ್ ಆಮಿ ಶ್ಲೌ ಇವ ಕಾರ್ಯಂ ಚ । ಜುಹವಾಞ್ಚಕಾರ, ಜುಹಾವ, ಹೋತಾ। ಹೋಷ್ಯತಿ। ಜುಹೋತು, ಜುಹುತಾತ್। ಜುಹುತಾಮ್। ಜುಹ್ವತು। ಜುಹುಧಿ। ಜುಹವಾನಿ। ಅಜುಹೋತ್। ಅಜುಹುತಾಮ್।

ಪ.ಛೇ.– ಭೀ–ಹ್ರೀ–ಭೃ–ಹುವಾಂ, ಶ್ಲುವತ್, ಚ।

ಅ.ವೃ.– "ಕಾಸ್ ಪ್ರತ್ಯಯಾದಾಮಮನ್ತ್ರೇ ಲಿಟಿ" ಎಂಬ ಸೂತ್ರದಿಂದ 'ಲಿಟ್' ಎಂಬ ಪದವೂ, ಮತ್ತು "ಉಷ–ವಿದ್–ಜಾಗೃಭ್ಯೋಽನ್ಯತರಸ್ಯಾಮ್" ಎಂಬ ಸೂತ್ರದಿಂದ 'ಅನ್ಯತರಸ್ಯಾಮ್' ಎಂಬ ಪದವು ಅನುವೃತ್ತವಾಗುತ್ತದೆ. "ಪ್ರತ್ಯಯಃ" ಮತ್ತು "ಪರಶ್ಚ" ಎಂಬವು ಅಧಿಕಾರ ಸೂತ್ರಗಳು.

ಅರ್ಥ– ಭೀ, ಹ್ರೀ, ಭೃ ಮತ್ತು ಹು ಧಾತುಗಳ ನಂತರ ವೈಕಲ್ಪಿಕವಾಗಿ 'ಆಮ್' ಪ್ರತ್ಯಯವು ಬರುತ್ತದೆ. ಹಾಗೆಯೇ 'ಆಮ್' ಪರದಲ್ಲಿದ್ದಾಗ 'ಶ್ಲು' ಗೆ ಸಮಾನವಾದ ದ್ವಿತ್ವ ಮೊದಲಾದ ಕಾರ್ಯಗಳು ಆಗುತ್ತವೆ.

**ಅನುಪ್ರಯೋಗ ಲಟ್**:

ಉದಾ– ಜುಹವಾಞ್ಚಕಾರ – ಪ್ರಥಮಪುರುಷ ಏಕವಚನದಲ್ಲಿ ಧಾತುವಿನನಂತರ 'ಲಿಟ್' ಬಂದು, ಅದಕ್ಕೆ ಮೂಲ ಆಖ್ಯಾತ ಪ್ರತ್ಯಯವಾದ 'ತಿಪ್(ತಿ)' ಆದೇಶ, 'ತಿಪ್' ಗೆ ಅಭಿನವ ಆಖ್ಯಾತ ಪ್ರತ್ಯಯವಾದ 'ಣಲ್ (ಅ)' ಬಂದು, ಹು+ಅ ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ಆಮ್' ಮತ್ತು ಶ್ಲುವದ್ಭಾವ ಆದಮೇಲೆ "ಶ್ಲೌ" ಎಂಬ ಸೂತ್ರದಿಂದ 'ಹು' ಧಾತುವಿಗೆ ದ್ವಿತ್ವ ಬಂದು, ಹುಹು+ಅ ಎಂದಿದ್ದಾಗ, ಅದಕ್ಕೆ ಅಭ್ಯಾಸಸಂಜ್ಞೆ ಬಂದಮೇಲೆ, "ಕುಹೋಃಶ್ಚುಃ" ಎಂಬ ಸೂತ್ರದಿಂದ 'ಹ್' ಕಾರಕ್ಕೆ ಚುತ್ವ (ಝ್), ಕಾರ ಬಂದು "ಅಭ್ಯಾಸೇ ಚರ್ಚ" ಎಂಬುದರಿಂದ ಜಶ್ತ್ವ 'ಜ್' ಬಂದು ಜು+ಹು+ ಆಮ್+ಅ ಎಂದಿರುತ್ತದೆ. "ಆಮಃ" ಎಂಬ ಸೂತ್ರದಿಂದ 'ಲಿಟ್' ಗೆ ಲುಕ್ ಬಂದು, "ಕೃಞ್ಚಾನುಪ್ರಯುಜ್ಯತೇ ಲಿಟಿ" ಎಂಬ ಸೂತ್ರದಿಂದ 'ಲಿಟ್'ನ್ನು ಜೊತೆಗೆ ಸೇರಿಸಿಕೊಂಡು

'ಕೃ' ಧಾತುವಿನ ಅನುಪ್ರಯೋಗ ಮಾಡಿದಾಗ, ಜು+ಹು+ಆಮ್+ಕೃ+ಲಿಟ್ ಎಂದಿರುತ್ತದೆ. 'ಲಿಟ್' ಗೆ ಮೂಲ ಆಖ್ಯಾತ ಪ್ರತ್ಯಯವಾದ 'ತಿಪ್' ಆದೇಶ ಬಂದು, ಅದಕ್ಕೆ ಅಭಿನವ ಆಖ್ಯಾತ ಪ್ರತ್ಯಯವಾದ 'ಣಲ್(ಅ)' ಆದೇಶ ಬಂದು ಜು+ಹು+ಆಮ್+ಕೃ+ಅ ಎಂದಿರುತ್ತದೆ. 'ಆಮ್' ಎಂಬುದು 'ತಿಙ್' ಮತ್ತು 'ಶಿತ್' ಗಿಂತ ಭಿನ್ನವಾಗಿರುವುದರಿಂದ "ಆರ್ಧಧಾತುಕಂ ಶೇಷಃ" ಎಂಬ ಸೂತ್ರದಿಂದ ಆರ್ಧಧಾತುಕಸಂಜ್ಞೆ ಬರುತ್ತದೆ. ಇದು ಪರದಲ್ಲಿದ್ದಾಗ 'ಜುಹು'ನಲ್ಲಿರುವ 'ಹ್' ಕಾರೋತ್ತರ 'ಉ' ಕಾರಕ್ಕೆ "ಸಾರ್ವಧಾತುಕಾರ್ಧಧಾತುಕಯೋಃ" ಎಂಬ ಸೂತ್ರದಿಂದ 'ಗುಣ' ಬಂದು ಜುಹೋ+ಆಮ್ ಎಂದಿದ್ದಾಗ, 'ಓ' ಕಾರಕ್ಕೆ 'ಅವ್' ಆದೇಶ ಬಂದು, ಜುಹ್+ಅವ್+ಆಮ್=ಜುಹವಾಮ್ ಎಂದಿದ್ದಾಗ, ಪರದಲ್ಲಿರುವ ಕೃ+ಅ ಸೇರಿಕೊಂಡಾಗ, "ಲಿಟಿ ಧಾತೋರನಭ್ಯಾಸಸ್ಯ" ಎಂಬುದರಿಂದ 'ಕೃ' ಧಾತುವಿಗೆ 'ದ್ವಿತ್ವ' ಬಂದು ಕೃ ಕೃ ಎಂದಿದ್ದಾಗ ಅಭ್ಯಾಸದ 'ಕೃ' ನ 'ಋ' ಕಾರಕ್ಕೆ "ಉರತ್" ಎಂಬುದರಿಂದ 'ಅತ್(ಅ)' ಬಂದು ಕ್+ಅ+ಕೃ=ಕ+ಕೃ ಎಂದಿದ್ದಾಗ "ಕುಹೋಶ್ಚುಃ" ಎಂಬುದರಿಂದ ಅಭ್ಯಸ್ತ 'ಕ್' ಕಾರಕ್ಕೆ 'ಚುತ್ವ (ಚ್)' ಬಂದು ಚ+ಕೃ+ಅ ಎಂದಿದ್ದಾಗ, "ಅಚೋಞ್ಣಿತಿ" ಎಂಬುದರಿಂದ 'ಋ' ಕಾರಕ್ಕೆ ವೃದ್ಧಿ (ಆರ್) ಬಂದು, ಚಕಾರ್+ಅ =ಚಕಾರ ಎಂದಾದಮೇಲೆ ಜುಹವಾಮ್+ಚಕಾರ ಎಂದಿದ್ದಾಗ, 'ಮ್' ಕಾರಕ್ಕೆ "ಮೋನುಸ್ವಾರಃ" ಎಂಬುದರಿಂದ ಅನುಸ್ವಾರ ಬಂದು "ವಾ ಪದಾಂತಸ್ಯ" ಎಂಬ ಸೂತ್ರದಿಂದ ಪರಸವರ್ಣ ಮಾಡಿದಾಗ, ಜುಹವಾಞ್ಚಕಾರ ಎಂದು ರೂಪವು ಸಿದ್ಧವಾಗುತ್ತದೆ, ಮುಂದೆ ಎಲ್ಲ ರೂಪಗಳಲ್ಲೂ ಪರಸವರ್ಣವೇ ಬರುತ್ತದೆ.

'ಹು' ಧಾತುವಿಗೆ ಕೃ ಧಾತುವಿನ ಅನುಪ್ರಯೋಗ 'ಲಿಟ್'ನಲ್ಲಿ

ರೂಪಗಳು: ಜುಹವಾಞ್ಚಕಾರ, ಜುಹವಾಞ್ಚಕ್ರತುಃ, ಜುಹವಾಞ್ಚಕ್ರುಃ। ಜುಹವಾಞ್ಚಕರ್ಥ, ಜುಹವಾಞ್ಚಕ್ರಥುಃ, ಜುಹವಾಞ್ಚಕ್ರ। ಜುಹವಾಞ್ಚಕಾರ/ಜುಹವಾಞ್ಚಕರ, ಜುಹವಾಞ್ಚಕೃವ, ಜುಹವಾಞ್ಚಕೃಮ।

'ಹು' ಧಾತುವಿಗೆ 'ಭೂ' ಧಾತುವಿನ ಅನುಪ್ರಯೋಗದ 'ಲಿಟ್'ನಲ್ಲಿ

ರೂಪಗಳು: ಜುಹವಾಮ್ಬಭೂವ, ಜುಹವಾಮ್ಬಭೂವತುಃ, ಜುಹವಾಮ್ಬಭೂವುಃ। ಜುಹವಾಮ್ಬಭೂವಿಥ, ಜುಹವಾಮ್ಬಭೂವಥುಃ, ಜುಹವಾಮ್ಬಭೂವ। ಜುಹವಾಮ್ಬಭೂವ, ಜುಹವಾಮ್ಬಭೂವಿವ, ಜುಹವಾಬಭೂವಿಮ।

'ಹು' ಧಾತುವಿಗೆ 'ಅಸ್' ಧಾತುವಿನ ಅನುಪ್ರಯೋಗದ 'ಲಿಟ್'ನ ರೂಪಗಳು:

ಜುಹವಾಮಾಸ, ಜುಹವಾಮಾಸತುಃ, ಜುಹವಾಮಾಸುಃ। ಜುಹವಾಮಾಸಿಥ, ಜುಹವಾಮಾಸಥುಃ, ಜುಹವಾಮಾಸ। ಜುಹವಾಮಾಸ, ಜುಹವಾಮಾಸಿವ, ಜುಹವಾಮಾಸಿಮ।

'ಆಮ್' ಆದಿಗಳು ಬಾರದ ಪಕ್ಷದಲ್ಲಿ–

ಉದಾ– ಜುಹಾವ – ಪ್ರಥಮಪುರುಷ ಏಕವಚನದಲ್ಲಿ 'ಹು' ಧಾತುವಿನ ನಂತರ

'ಲಿಟ್' ಬಂದು ಅದಕ್ಕೆ ಮೂಲ ಆಖ್ಯಾದ ಪ್ರತ್ಯಯವಾದ 'ತಿಪ್(ತಿ)' ಆದೇಶ ಬಂದಮೇಲೆ ಆ 'ತಿಪ್'ಗೆ ಅಭಿನವ ಆಖ್ಯಾತ ಪ್ರತ್ಯಯವಾದ 'ಣಲ್(ಅ)' ಬಂದು, ಹು+ಅ ಎಂದಿದ್ದಾಗ, 'ಹು' ಧಾತುವಿಗೆ "ಲಿಟಿ ಧಾತೋರನಭ್ಯಾಸಸ್ಯ" ಎಂಬುದರಿಂದ ದ್ವಿತ್ವ ಬಂದು ಹು ಹು+ಅ ಎಂದಿದ್ದಾಗ, 'ಕುಹೋಶ್ಚುಃ" ಎಂಬುದರಿಂದ ಅಭ್ಯಾಸದ 'ಹ್' ಕಾರಕ್ಕೆ ಚುತ್ವ(ಝ್) ಬಂದು, ಅದಕ್ಕೆ ಜಶ್ತ್ವ(ಜ್) ಬಂದು ಜುಹು+ಅ ಎಂದಿದ್ದಾಗ, "ಅಚೋಞ್ಣಿತಿ" ಎಂಬುದರಿಂದ 'ಉ' ಕಾರಕ್ಕೆ ವೃದ್ಧಿ ಬಂದು, ಜುಹ್+ಔ+ಅ ಎಂದಿದ್ದಾಗ, "ಏಚೋऽಯವಾಯಾವಃ" ಎಂಬುದರಿಂದ 'ಔ' ಕಾರಕ್ಕೆ ಆವ್ ಆದೇಶ ಬಂದು ಜುಹ್+ಆವ್+ಅ=ಜುಹಾವ ಎಂದು ರೂಪವಾಗುತ್ತದೆ.

ಉದಾ– ಜುಹುವತುಃ– ಪ್ರಥಮಪುರುಷ ದ್ವಿವಚನದಲ್ಲಿ ಹಿಂದಿನಂತೆ ಪ್ರಕ್ರಿಯೆ ನಡೆದು ಜುಹು+ಅತುಸ್ ಎಂದಿದ್ದಾಗ, ಅಜಾದಿಪ್ರತ್ಯಯವು ಪರದಲ್ಲಿರುವುದರಿಂದ ಅನಭ್ಯಸ್ತವಾದ 'ಹು'ನಲ್ಲಿರುವ 'ಉ' ಕಾರಕ್ಕೆ "ಅಚಿ ಶ್ನುಧಾತುಭುವಾಂ ಯ್ವೋರಿಯಙುವಙೌ" ಎಂಬ ಸೂತ್ರದಿಂದ 'ಉವಙ್ (ಉವ್)' ಆದೇಶ ಬಂದು ಜುಹ್+ಉವ್+ಅತುಸ್ ಎಂದಿದ್ದಾಗ, 'ಸ್' ಕಾರಕ್ಕೆ ರುತ್ವ–ವಿಸರ್ಗಗಳಿಂದ ಜುಹುವತುಃ ಎಂಬ ರೂಪವು ಸಿದ್ಧವಾಗುತ್ತದೆ.

'ಆಮ್' ಆದಿಗಳು ಬಾರದ ಪಕ್ಷದಲ್ಲಿ–ರೂಪಗಳು: ಜುಹಾವ, ಜುಹುವತುಃ, ಜುಹುವುಃ। ಜುಹೋಥ/ಜುಹವಿಥ, ಜುಹುವಥುಃ, ಜುಹುವ। ಜುಹಾವ/ಜುಹವ, ಜುಹುವಿವ, ಜುಹುವಿಮ।

**ಲುಟ್**: (ಅನಿಟ್):ರೂಪಗಳು: ಹೋತಾ, ಹೋತಾರೌ, ಹೋತಾರಃ। ಹೋತಾಸಿ, ಹೋತಾಸ್ಥಃ, ಹೋತಾಸ್ಥ। ಹೋತಾಸ್ಮಿ, ಹೋತಾಸ್ವಃ, ಹೋತಾಸ್ಮಃ।

**ಲೃಟ್**: ರೂಪಗಳು: ಹೋಷ್ಯತಿ, ಹೋಷ್ಯತಃ, ಹೋಷ್ಯನ್ತಿ। ಹೋಷ್ಯಸಿ, ಹೋಷ್ಯಥಃ, ಹೋಷ್ಯಥ। ಹೋಷ್ಯಾಮಿ, ಹೋಷ್ಯಾವಃ, ಹೋಷ್ಯಾಮಃ।

**ಲೋಟ್**: ರೂಪಗಳು: ಜುಹೋತು/ಜುಹುತಾತ್, ಜುಹುತಾಮ್, ಜುಹ್ವತು। "ಹುಝಲ್ಭ್ಯೋ ಹೇರ್ಧಿಃ" ಎಂಬ ಸೂತ್ರದಿಂದ 'ಹಿ' ಗೆ 'ಧಿ' ಆದೇಶವು ಬಂದು ಜುಹುಧಿ ಎಂದು ರೂಪದ) ಜುಹುಧಿ/ ಜುಹುತಾತ್, ಜುಹುತಮ್, ಜುಹುತ। ಜುಹವಾನಿ , ಜುಹವಾವ, ಜುಹವಾಮ। ಎಂದು ರೂಪಗಳು.

**(ಇಗನ್ತ ಅಂಗಕ್ಕೆ ಗುಣವನ್ನು ವಿಧಿಸುವ ಸೂತ್ರ)**

**ಸೂತ್ರ– 609. ಜುಸಿ ಚ (7.3.83)**

ವೃತ್ತಿ – ಇಗನ್ತ ಅಙ್ಗಸ್ಯ ಗುಣಃ ಅಜಾದೌ ಜುಸಿ। ಅಜುಹವುಃ ।ಜುಹುಯಾತ್। ಹೂಯಾತ್। ಅಹೌಷೀತ್। ಅಹೋಷ್ಯತ್।ಞಿಭೀ ಭಯೇ 2। ಬಿಭೇತಿ।

ಅ.ವೃ – "ಕ್ಸಸ್ಯಾಚಿ" ಎಂಬ ಸೂತ್ರದಿಂದ 'ಅಚಿ' ಎಂಬ ಪದವೂ, ಮತ್ತು "ಮಿದೇರ್ಗುಣಃ" ಎಂಬ ಸೂತ್ರದಿಂದ 'ಗುಣಃ' ಎಂಬ ಪದವೂ ಅನುವೃತ್ತವಾಗುತ್ತವೆ. "ಅಂಗಸ್ಯ" ಎಂಬುದು ಅಧಿಕಾರ ಸೂತ್ರ.

ಅರ್ಥ– ಅಜಾದಿಯಾದ 'ಜುಸ್(ಉಸ್)' ಪರದಲ್ಲಿದ್ದಾಗ ಇಗನ್ತವಾದ ಅಂಗಕ್ಕೆ ಗುಣವು ಬರುತ್ತದೆ.

**ಲಙ್**: ಉದಾ– ಅಜುಹೋತ್–ಹಿಂದಿನಂತೆ ಪ್ರಕ್ರಿಯೆ ನಡೆದು 'ಜುಹು' ಎಂದಾದಮೇಲೆ ಪ್ರಥಮಪುರುಷ ಏಕವಚನದಲ್ಲಿ ಜುಹು+ತಿ ಎಂದಿದ್ದಾಗ , "ಇತಶ್ಚ" ಎಂಬುದರಿಂದ 'ತಿ' ನಲ್ಲಿರುವ 'ಇ' ಕಾರಕ್ಕೆ ಲೋಪ ಬಂದು ಜುಹು+ತ್ ಎಂದಿದ್ದಾಗ ಧಾತುವಿಗೆ ಅಡಾಗಮ ಮತ್ತು ಅನಭ್ಯಸ್ತ 'ಹು' ನಲ್ಲಿರುವ 'ಉ' ಅಕಾರಕ್ಕೆ ಗುಣ ಬಂದು ಅಜುಹೋತ್ ಎಂದು ರೂಪವಾಗುತ್ತದೆ.

ಉದಾ– ಅಜುಹುತಾಮ್: ಪ್ರಥಮಪುರುಷ ದ್ವಿವಚನದಲ್ಲಿ ತಾಮ್ ಪ್ರತ್ಯಯ ಸೇರಿಸಿದಾಗ ಮೇಲಿನಂತೆಯೇ ಪ್ರಕ್ರಿಯೆ ನಡೆದು ಅಜುಹುತಾಮ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಅಜುಹವುಃ– ಪ್ರಥಮಪುರುಷ ಬಹುವಚನದಲ್ಲಿ 'ಹು' ಧಾತುವಿನ ನಂತರ "ಝಿ' ಪ್ರತ್ಯಯವನ್ನು ಸೇರಿಸಿದಾಗ, ಹು+ಝಿ ಎಂದಿರುತ್ತದೆ. ಧಾತುವಿನ ನಂತರ 'ಶಪ್' ಪ್ರತ್ಯಯಕ್ಕೆ 'ಶ್ಲು(ಲುಕ್), ಬಂದು ಧಾತುವಿಗೆ ದ್ವಿತ್ವ, ಅಡಾಗಮಗಳು ಬಂದಮೇಲೆ 'ಝ್' ಗೆ "ಅದಭ್ಯಸ್ತಾತ್" ಎಂಬುದರಿಂದ 'ಅತ್' ಆದೇಶ ಪ್ರಾಪ್ತವಾದಾಗ, ಧಾತುವಿಗೆ ಅಭ್ಯಸ್ತ ಸಂಜ್ಞೆ ಬಂದಿರೋಣದರಿಂದ ಅದನ್ನು ಬಾಧಿಸಿ "ಸಿಜಭ್ಯಸ್ತವಿಧಿಭ್ಯಶ್ಚ" ಎಂಬುದರಿಂದ 'ಜುಸ್(ಉಸ್) ಆದೇಶ ಬಂದು ಅಜುಹು+ಉಸ್ ಎಂದಿದ್ದಾಗ ಪ್ರಕೃತ ಸೂತ್ರದಿಂದ 'ಹು'ನಲ್ಲಿರುವ 'ಉ' ಕಾರಕ್ಕೆ ಗುಣ ಬಂದು ಅಜುಹೋ+ಉಸ್ ಎಂದಾಗಿ 'ಓ' ಕಾರಕ್ಕೆ 'ಅವ್' ಆದೇಶ ಬಂದು ಅಜುಹ್+ಅವ್+ಉಸ್=ಅಜುಹವುಃ ಎಂದು ರೂಪವು ಸಿದ್ಧವಾಗುತ್ತದೆ.

ರೂಪಗಳು: ಅಜುಹೋತ್, ಅಜುಹುತಾಮ್, ಅಜುಹವುಃ। ಅಜುಹೋಃ, ಅಜುಹುತಮ್, ಅಜುಹುತ। ಅಜುಹವಮ್, ಅಜುಹುವ, ಅಜುಹುಮ।

**ವಿಧಿಲಿಙ್**: ರೂಪಗಳು: ಜುಹುಯಾತ್, ಜುಹುಯಾತಾಮ್, ಜುಹುಯುಃ। ಜುಹುಯಾಃ, ಜುಹುಯಾತಮ್, ಜುಹುಯಾತ। ಜುಹುಯಾಮ್, ಜುಹುಯಾವ, ಜುಹುಯಾಮ।

ಇಲ್ಲಿ (ವಿಧಿಲಿಙ್) 'ಹು' ಧಾತುವಿನ ನಂತರ 'ಶಪ್(ಅ)–' ಬಂದು ಅದಕ್ಕೆ 'ಶ್ಲು(ಲೋಪ)' ಬಂದಮೇಲೆ ಧಾತುವಿಗೆ ದ್ವಿತ್ವ, ತದನಂತರ 'ಯಾಸುಟ್(ಯಾಸ್)' ಬಂದಮೇಲೆ ಮೇಲಿನಂತೆ ರೂಪಗಳು ಸಿದ್ಧವಾಗುತ್ತವೆ.

**ಆಶೀರ್ಲಿಙ್**–ರೂಪಗಳು: ಹೂಯಾತ್, ಹೂಯಾಸ್ತಾಮ್, ಹೂಯಾಸುಃ। ಹೂಯಾಃ, ಹೂಯಾಸ್ತಮ್, ಹೂಯಾಸ್ತ। ಹೂಯಾಸಮ್, ಹೂಯಾಸ್ವ, ಹೂಯಾಸ್ಮ।

ಆಶೀರ್ಲಿಙ್‌ನಲ್ಲಿ 'ಹು' ಧಾತುವಿನ ನಂತರ 'ಯಾಸುಟ್(ಯಾಸ್)' ಬಂದಮೇಲೆ "ಅಕೃತ್ಸಾರ್ವಧಾತುಕಯೋಃ ದೀರ್ಘಃ" ಎಂಬ ಸೂತ್ರದಿಂದ 'ಹು'ನ 'ಉ' ಕಾರಕ್ಕೆ ದೀರ್ಘ ಬಂದು ಮೇಲಿನಂತೆ ರೂಪಗಳು ಸಿದ್ಧವಾಗುತ್ತವೆ.

**ಲುಙ್**: ಉದಾ– ಅಹೌಷೀತ್– ಪ್ರಥಮಪುರುಷ ಏಕವಚನದಲ್ಲಿ 'ಹು' ಧಾತುವಿನ ಮೇಲೆ 'ಲುಙ್' ಬಂದು ಧಾತುವಿಗೆ ಅಡಾಗಮ ಬಂದಮೇಲೆ 'ತಿಪ್(ತಿ)' ಬಂದು, "ಇತಶ್ಚ" ಎಂಬುದರಿಂದ 'ತಿಪ್ (ಇ)' ನಲ್ಲಿಯ 'ಇ' ಕಾರಕ್ಕೆ ಲೋಪ ಬಂದು ಅಹು+ತ್ ಎಂದಿದ್ದಾಗ, ಧಾತುವಿನ ಪರದಲ್ಲಿ 'ಚ್ಲಿ' ಪ್ರತ್ಯಯವು ಬಂದು 'ಚ್ಲಿ'ಗೆ 'ಸಿಚ್(ಸ್)' ಆದೇಶ ಬಂದಮೇಲ ಸಿಚ್‌ನಲ್ಲಿಯ 'ಇ' ಕಾರಕ್ಕೆ ಅನುಬಂಧ ಲೋಪ ಬಂದು ಅಹು+ಸ್+ತ್ ಎಂದಿದ್ದಾಗ, ಅಪೃಕ್ತ 'ಹಲ್' ಆದ 'ತ್'ಗೆ ಈಟ್(ಈ)' ಆಗಮ ಬಂದು ಅಹು+ಸ್+ಈತ್ ಎಂದಿರುತ್ತದೆ. 'ಸಿಚ್'ಗೆ ಸಂಬಂದಿಸಿದ 'ಸ್' ಕಾರವು ಧಾತುವಿನ ಪರದಲ್ಲಿರುವುದರಿಂದ "ಸಿಚಿವೃದ್ಧಿಃ ಪರಸ್ಮೈಪದೇಷು" ಎಂಬುದರಿಂದ ಧಾತುವಿನ 'ಉ' ಕಾರಕ್ಕೆ ವೃದ್ಧಿ ಬಂದು ಅಹೌ+ಸ್+ಈತ್ ಎಂದಿರುತ್ತದೆ. "ಆದೇಶಪ್ರತ್ಯಯಯೋಃ" ಎಂಬುದರಿಂದ 'ಸ್' ಕಾರಕ್ಕೆ ಷತ್ವ ಬಂದು ಅಹೌಷೀತ್ ಎಂದು ರೂಪವು ಸಿದ್ಧವಾಗುತ್ತದೆ.

ಸೂಚನೆ: ಈಟ್ ಆಗಮವು ತಿಪ್ ಮತ್ತು ಸಿಪ್ ಪ್ರತ್ಯಯಗಳಿದ್ದಾಗ ಮಾತ್ರ ಆಗುತ್ತದೆ. ಉಳಿದಕಡೆಗಳಲ್ಲಿ ವೃದ್ಧಿ, ಷತ್ವ ಮತ್ತು ಟುತ್ವ ಗಳಾದಮೇಲೆ ಕೆಳಗಿನಂತೆ ರೂಪಗಳು ಸಿದ್ಧವಾಗುತ್ತವೆ,

**ಲುಙ್**: ರೂಪಗಳು: ಅಹೌಷೀತ್, ಅಹೌಷ್ಟಾಮ್, ಅಹೌಷುಃ। ಅಹೌಷೀಃ, ಅಹೌಷ್ಟಮ್, ಅಹೌಷ್ಟ। ಅಹೌಷಮ್, ಅಹೌಷ್ವ, ಅಹೌಷ್ಮ।

**ಲೃಙ್**: ರೂಪಗಳು: ಅಹೋಷ್ಯತ್, ಅಹೋಷ್ಯತಾಮ್, ಅಹೋಷ್ಯನ್। ಅಹೋಷ್ಯಃ, ಅಹೋಷ್ಯತಮ್, ಅಹೋಷ್ಯತ। ಅಹೋಷ್ಯಮ್, ಅಹೋಷ್ಯಾವ, ಅಹೋಷ್ಯಾಮ।

2. ಞಿಭೀ ಭಯೇ – (ಹೆದರುವುದು) ಇದರಲ್ಲಿ ಭೀ ಮಾತ್ರ ಉಳಿಯುತ್ತದೆ ಇದು 'ಞಿತ್' ಆಗಿದ್ದರಿಂದ ಅನಿಟ್ ಆಗಿದೆ.

**ಲಟ್**: ಉದಾ– ಬಿಭೇತಿ – ಪ್ರಥಮಪುರುಷ ಏಕವಚನದಲ್ಲಿ 'ಭೀ' ಧಾತುವಿನಮೇಲೆ 'ಲಟ್' 'ಲ್' ಕಾರ ಬಂದು ಅದಕ್ಕೆ ಮೂಲ ಆಖ್ಯಾತ ಪ್ರತ್ಯಯವಾದ 'ತಿಪ್(ತಿ)' ಆದೇಶ ಬಂದು ಧಾತುವಿನ ಪರದಲ್ಲಿ 'ಶಪ್(ಅ)' ಬಂದಮೇಲೆ ಅದಕ್ಕೆ 'ಶ್ಲು(ಲೋಪ)' ಬಂದು "ಶ್ಲೌ" ಎಂಬ ಸೂತ್ರದಿಂದ ದ್ವಿತ್ವ ಬಂದು ಭೀಭೀ+ತಿ ಎಂದಿದ್ದಾಗ, ಮೊದಲನೆಯ ರೂಪ (ಭೀ)ಗೆ ಅಭ್ಯಾಸ ಸಂಜ್ಞೆ ಬಂದು "ಹ್ರಸ್ವಃ" ಎಂಬ ಸೂತ್ರದಿಂದ ಹ್ರಸ್ವ ಬಂದು ಭಿಭೀ+ತಿ ಎಂದಿದ್ದಾಗ, "ಅಭ್ಯಾಸೇ ಚರ್ಚ"ಎಂಬುದರಿಂದ ಅಭ್ಯಸ್ತವಾದ 'ಭ್' ಕಾರಕ್ಕೆ ಜಶ್ತ್ವ ಬಂದು ಬಿಭೀ+ತಿ ಎಂದಿರುತ್ತದೆ. ಅನಭ್ಯಸ್ತ 'ಭೀ' ನಲ್ಲಿರುವ 'ಈ' ಕಾರಕ್ಕೆ "ಸಾರ್ವಧಾತುಕಾರ್ಧಧಾತುಕಯೋಃ" ಎಂಬುದರಿಂದ ಗುಣ ಬಂದು ಬಿಭೇತಿ ಎಂದು ರೂಪವಾಗುತ್ತದೆ.

ಉದಾ– ಬಿಭೇಷಿ, ಬಿಭೇಮಿ– ಮಧ್ಯಮಪುರುಷ ಮತ್ತು ಉತ್ತಮಪುರುಷ ಏಕವಚನಗಳಲ್ಲಿ ಮೇಲಿನಂತೆಯೇ ಪ್ರಕ್ರಿಯೆ ನಡೆದು ಬಿಭೇ+ಸಿ , ಮತ್ತು ಬಿಭೇ+ಮಿ ಎಂದಿದ್ದಾಗ, 'ಸ'ಕಾರಕ್ಕೆ ಷತ್ವ ಬಂದು ಕ್ರಮವಾಗಿ ಬಿಭೇಷಿ ಮತ್ತು ಬಿಭೇಮಿ ಎಂದಾಗುತ್ತದೆ.

**(ವೈಕಲ್ಪಿಕವಾಗಿ 'ಇ' ಕಾರಾದೇಶವನ್ನು ವಿಧಿಸುವ ಸೂತ್ರ)**

**ಸೂತ್ರ- 610. ಭಿಯೋऽನ್ಯತರಸ್ಯಾಮ್ (6.4.115)**

ವೃತ್ತಿ – ಇಕಾರಃ ವಾ ಸ್ಯಾತ್ ಹಲಾದೌ ಕ್ಙಿತಿ ಸಾರ್ವಧಾತುಕೇ। ಬಿಭಿತಃ, ಬಿಭೀತಃ। ಬಿಭ್ಯತಿ। ಬಿಭಯಾಞ್ಚಕಾರ, ಬಿಭಾಯ। ಭೇತಾ। ಭೇಷ್ಯತಿ। ಬಿಭೇತು, ಬಿಭಿತಾತ್ ಬಿಭೀತಾತ್। ಅಬಿಭೇತ್। ಬಿಭೀಯಾತ್। ಭೀಯಾತ್। ಅಭೈಷೀತ್। ಅಭೇಷ್ಯತ್। ಹ್ರೀ ಲಜ್ಜಾಯಾಮ್।3। ಜಿಹ್ರೇತಿ। ಜಿಹ್ರೀತಃ। ಜಿಹ್ರೀಯತಿ। ಜಿಹ್ರಯಾಞ್ಚಕಾರ। ಜಿಹ್ರಾಯ। ಹ್ರೇತಾ। ಹ್ರೇಷ್ಯತಿ। ಜಿಹ್ರತು। ಅಜಿಹ್ರೇತ್।ಜಿಹ್ರೀಯಾತ್। ಹ್ರೀಯಾತ್। ಅಹ್ರೈಷೀತ್। ಅಹ್ರೇಷ್ಯತ್। ಪೄ ಪಾಲನ-ಪೋಷಣಯೋಃ (ಪೂರಣಯೋಃ)।4।

ಪ.ಛೇ.– ಭಿಯಃ ಅನ್ಯತರಸ್ಯಾಮ್।

ಅ.ವೃ.– "ಇದ್ ದರಿದ್ರಸ್ಯ" ಎಂಬ ಸೂತ್ರದಿಂದ 'ಇತ್' ಎಂಬ ಪದವೂ, "ಈ ಹಲ್ಯಘೋಃ" ಎಂಬಸೂತ್ರದಿಂದ 'ಹಲಿ' ಎಂಬ ಪದವೂ "ಗಮ–ಹನ–ಜನ–ಖನ್–ಘಸಾಂ ಲೋಪಃ ಕಿಙತ್ಯನಙಿ" ಎಂಬ ಸೂತ್ರದಿಂದ 'ಕ್ಙಿತಿ' ಎಂಬ ಪದವೂ "ಅತ ಉತ್ ಸಾರ್ವಧಾತುಕೇ" ಎಂಬ ಸೂತ್ರದಿಂದ 'ಸಾರ್ವಧಾತುಕೇ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ– ಹಲಾದಿಯಾದ ಕಿತ್, ಅಥವಾ ಙಿತ್ ಪ್ರತ್ಯಯಗಳು ಸಾರ್ವಧಾತುಕವು ಪರದಲ್ಲಿ ಇದ್ದಾಗ, 'ಭೀ' ಧಾತುವಿಗೆ 'ಇ' ಕಾರವು ವೈಕಲ್ಪಿಕವಾಗಿ ಆದೇಶವಾಗಿ ಬರುತ್ತದೆ.

ಉದಾ– ಬಿಭಿತಃ/ಬಿಭೀತಃ– ಪ್ರಥಮಪುರುಷ ದ್ವಿವಚನದಲ್ಲಿ, 'ಭೀ' ಧಾತುವಿನ ನಂತರ 'ತಸ್' ಬಂದು ಭೀ+ತಸ್ ಎಂದಿದ್ದಾಗ, ಹಿಂದಿನಂತೆಯೇ ಪ್ರಕ್ರಿಯೆ ನಡೆದು ಬಿ ಭೀ+ತಸ್ ಎಂದಿದ್ದಾಗ, 'ಅಲೋನ್ತ್ಯ' ಪರಿಭಾಷಾ ಸೂತ್ರದಿಂದ 'ಈ' ಕಾರಕ್ಕೆ ಪ್ರಕೃತ ಸೂತ್ರದಿಂದ 'ಇ' ಕಾರಾರಾದೇಶವು ಬಂದು ಬಿಭಿತಃ ಎಂದೂ, 'ಇ' ಕಾರವು ಬಾರದ ಪಕ್ಷದಲ್ಲಿ ಬಿಭೀತಃ ಎಂದು ರೂಪಗಳಾಗುತ್ತವೆ.

ಉದಾ– ಬಿಭ್ಯತಿ– ಪ್ರಥಮಪುರುಷ ಬಹುವಚನದಲ್ಲಿ, 'ಭೀ' ಧಾತುವಿನ ನಂತರ 'ಝಿ' ಬಂದು ಭೀ+ಝಿ ಎಂದಿದ್ದಾಗ, ಹಿಂದಿನಂತೆ ದ್ವಿತ್ವಾದಿಗಳು ಬಂದು ಬಿಭೀ+ಝಿ ಎಂದಿದ್ದಾಗ, 'ಝ್' ಗೆ 'ಅತ್' ಆದೇಶ ಬಂದು ಬಿಭೀ+ಅತ್+ಇ ಎಂದಿದ್ದಾಗ, "ಏಕಾಚೋऽಸಂಯೋಗ ಪೂರ್ವಸ್ಯ" ಎಂಬ ಸೂತ್ರದಿಂದ ಯಣ್ ಸಂಧಿಯಾಗಿ ಬಿಭ್ಯತಿ ಎಂದು ರೂಪವು ಸಿದ್ಧವಾಗುತ್ತದೆ. ಥಸ್, ಥ, ವಸ್, ಮತ್ತು ಮಸ್ ಗಳೂ ಕೂಡ 'ಙಿತ್' ಆದ ಹಲಾದಿ ಸಾರ್ವಧಾತುಕಗಳಾಗಿರುವುದರಿಂದ ಎರಡೆರಡು ರೂಪಗಳು ಸಿದ್ಧವಾಗುತ್ತವೆ.

**ಲಟ್**: ರೂಪಗಳು: ಬಿಭೇತಿ, ಬಿಭಿತಃ/ ಬಿಭೀತಃ, ಬಿಭ್ಯತಿ। ಬಿಭೇಷಿ ಬಿಭಿಥಃ/ ಬಿಭೀಥಃ, ಬಿಭಿಥ/ಬಿಭೀಥ। ಬಿಭೇಮಿ, ಬಿಭಿವಃ/ಬಿಭೀವಃ, ಬಿಭಿಮಃ/ಬಿಭೀಮಃ।

**ಲಿಟ್**: (ಅನುಪ್ರಯೋಗ)

ಉದಾ– ಬಿಭಯಾಞ್ಚಕಾರ– ಈ 'ಲ್' ಕಾರದಲ್ಲಿ ಪ್ರಥಮಪುರುಷ ಏಕವಚನದಲ್ಲಿ

'ಹೂ' ಧಾತುವಿನಂತೆ "ಭೀ–ಹ್ರೀ–ಭೃ–ಹುವಾಂ ಶ್ಲುವಚ್ಚ" (607) ಎಂಬ ಸೂತ್ರದಿಂದ 'ಆಮ್' ಬಂದು ಧಾತುವಿಗೆ ದ್ವಿತ್ವ ಮಾಡಿದಮೇಲೆ ಭೀಭೀ>ಬಿಭೀ ಎಂದಿದ್ದಾಗ ದೀರ್ಘ 'ಈ' ಕಾರಕ್ಕೆ ಗುಣ, ಅಯಾದೇಶಗಳು ಬಂದಮೇಲೆ ಬಿಭಯ್+ಆಮ್=ಬಿಭಯಾಮ್ ಎಂದಾದಮೇಲೆ 'ಕೃಞ್(ಕೃ)' ಧಾತುವಿನ ಅನುಪ್ರಯೋಗ ಮಾಡಿದಾಗ ಬಿಭಯಾಞ್ಚಕಾರ ಎಂದು ರೂಪವು ಸಿದ್ಧವಾಗುತ್ತದೆ.

'ಭೂ' ಧಾತುವಿನ ಅನುಪ್ರಯೋಗ ಮಾಡಿದಾಗ, ಬಿಭಯಾಂಬಭೂವ ಎಂದು ರೂಪವಗುತ್ತದೆ.

'ಅಸ್' ಧಾತುವಿನ ಅನುಪ್ರಯೋಗ ಮಾಡಿದಾಗ, ಬಿಭಯಾಮಾಸ ಎಂದು ರೂಪವಾಗುತ್ತದೆ.

'ಆಮ್' ಮೊದಲಾದವು ಬಾರದ ಪಕ್ಷದಲ್ಲಿ ಬಿಭಾಯ ಎಂದು ರೂಪವು ಸಿದ್ಧಿಸುತ್ತದೆ.

1.'ಕೃ' ಅನುಪ್ರಯೋಗದ ರೂಪಗಳು: ಬಿಭಯಾಞ್ಚಕಾರ, ಬಿಭಯಾಞ್ಚಕ್ರತುಃ, ಬಿಭಯಾಞ್ಚಕ್ರುಃ । ಬಿಭಯಾಞ್ಚಕರ್ಥ, ಬಿಭಯಾಞ್ಚಕ್ರಥುಃ, ಬಿಭಯಾಞ್ಚಕ್ರ । ಬಿಭಯಾಞ್ಚಕಾರ/ ಬಿಭಯಾಞ್ಚಕರ, ಬಿಭಯಾಞ್ಚಕೃವ, ಬಿಭಯಾಞ್ಚಕೃಮ।

2.'ಭೂ' ಅನುಪ್ರಯೋಗದ ರೂಪಗಳು: ಬಿಭಯಾಮ್ಬಭೂವ, ಬಿಭಯಾಮ್ಬಭೂವತುಃ, ಬಿಭಯಾಮ್ಬಭೂವುಃ। ಬಿಭಯಾಮ್ಬಭೂವಿಥ, ಬಿಭಯಾಮ್ಬಹೂವಥುಃ, ಬಿಭಯಾಮ್ಬಭೂವ। ಬಿಭಯಾಮ್ಬಭೂವ, ಬಿಭಯಾಮ್ಬಭೂವಿವ, ಬಿಭಯಾಮ್ಬಭೂವಿಮ।

3. 'ಅಸ್' ಧಾತುವಿನ ಅನುಪ್ರಯೋಗ ರೂಪಗಳು: ಬಿಭಯಾಮಾಸ, ಬಿಭಯಾಮಾಸತುಃ, ಬಿಭಯಾಮಾಸುಃ। ಬಿಭಯಾಮಾಸಿಥ, ಬಿಭಯಾಮಾಸಥುಃ, ಬಿಭಯಾಮಾಸ। ಬಿಭಯಾಮಾಸ, ಬಿಭಯಾಮಾಸಿವ, ಬಿಭಯಾಮಾಸಿಮ।

4.'ಆಮ್' ಮೊದಲಾದವು ಬಾರದ ಪಕ್ಷದಲ್ಲಿ ರೂಪಗಳು: ಬಿಭಾಯ, ಬಿಭ್ಯತುಃ, ಬಿಭ್ಯುಃ। ಬಿಭಯಿಥ/ಬಿಭೇಥ, ಬಿಭ್ಯಥುಃ, ಬಿಭ್ಯ। ಬಿಭಾಯ/ಬಿಭಯ, ಬಿಭ್ಯಿವ, ಬಿಭ್ಯಿಮ।

**ಲುಟ್**: ರೂಪಗಳು: ಭೇತಾ, ಭೇತಾರೌ, ಭೇತಾರಃ। ಭೇತಾಸಿ, ಭೇತಾಸ್ಥಃ, ಭೇತಾಸ್ಥ। ಭೇತಾಸ್ಮಿ, ಭೇತಾಸ್ವಃ, ಭೇತಾಸ್ಮಃ।

**ಲೃಟ್**: ರೂಪಗಳು: ಭೇಷ್ಯತಿ, ಭೇಷ್ಯತಃ, ಭೇಷ್ಯನ್ತಿ। ಭೇಷ್ಯಸಿ, ಭೇಷ್ಯಥಃ, ಭೇಷ್ಯಥ। ಭೇಷ್ಯಾಮಿ, ಭೇಷ್ಯಾವಃ, ಭೇಷ್ಯಾಮಃ।

**ಲೋಟ್**: ರೂಪಗಳು: ಬಿಭೇತು/ಬಿಭಿತಾತ್/ಬಿಭೀತಾತ್,ಬಿಭಿತಾಮ್/ಬಿಭೀತಾಮ್, ಬಿಭ್ಯತು।ಬಿಭಿಃ/ಬಿಭೀಃ/ಬಿಭಿತಾತ್, ಬಿಭೀತಾತ್, ಬಿಭಿತಮ್/ಬಿಭೀತಮ್, ಬಿಭಿತ/ಬಿಭೀತ। ಬಿಭಯಾನಿ, ಬಿಭಯಾವ, ಬಿಭಯಾಮ।

**ಲಙ್**: ರೂಪಗಳು: ಅಬಿಭೇತ್/ಅಬಿಭಿತಾಮ್/ಅಬಿಭೀತಾಮ್, ಅಬಿಭಯುಃ। ಅಬಿಭೇಃ, ಅಬಿಭಿತಮ್/ಅಬಿಭೀತಮ್, ಅಬಿಭಿತ/ಅಬಿಭೀತ। ಅಬಿಭಯಮ್, ಅಬಿಭಿವ/ ಅಬಿಭೀವ, ಅಬಿಭಿಮ/ಅಬಿಭೀಮ।

**ವಿಧಿಲಿಙ್**: ಇಲ್ಲಿ 'ಯಾಸುಟ್' ಬರುವುದರಿಂದ ಹಲಾದಿ ಜಿತ್ ಸಾರ್ವಧಾತುಕ

ವಾಗಿರುವುದರಿಂದ ಎಲ್ಲೆಡೆಯಲ್ಲೂ ವೈಕಲ್ಪಿಕವಾಗಿ 'ಇತ್ವ (ಇ)' ಬರುತ್ತದೆ.

ರೂಪಗಳು: ಬಿಭಿಯಾತ್/ಬಿಭೀಯಾತ್, ಬಿಭಿಯಾತಾಮ್/ಬಿಭೀಯಾತಾಮ್, ಬಿಭಿಯುಃ/ಬಿಭೀಯುಃ। ಬಿಭಿಯಾಃ/ಬಿಭೀಯಾಃ, ಬಿಭಿಯಾತಮ್/ಬಿಭೀಯಾತಮ್, ಬಿಭಿಯಾತ/ಬಿಭೀಯಾತ। ಬಿಭಿಯಾಮ್/ಬಿಭೀಯಾಮ್, ಬಿಭಿಯಾವ/ಬಿಭೀಯಾವ, ಬಿಭಿಯಾಮ/ಬಿಭೀಯಾಮ।

**ಆಶೀರ್ಲಿಙ್:** ರೂಪಗಳು: ಭೀಯಾತ್, ಭೀಯಾಸ್ತಾಮ್, ಭೀಯಾಸುಃ। ಭೀಯಾಃ, ಭೀಯಾಸ್ತಮ್, ಭೀಯಾಸ್ತ। ಭೀಯಾಸಮ್, ಭೀಯಾಸ್ವ, ಭೀಯಾಸ್ಮ।

**ಲುಙ್:** "ಸಿಚಿ ವೃದ್ಧಿಃ ಪರಸ್ಮೈಪದೇಷು" ಎಂಬ ಸೂತ್ರದಿಂದ 'ಇ' ಕಾರಕ್ಕೆ ವೃದ್ಧಿಯು ಬರುತ್ತದೆ.

ರೂಪಗಳು: ಅಭೈಷೀತ್, ಅಭೈಷ್ಟಾಮ್, ಅಭೈಷುಃ। ಅಭೈಷೀಃ, ಅಭೈಷ್ಟಮ್, ಅಭೈಷ್ಟ ಅಭೈಷಮ್, ಅಭೈಷ್ವ, ಅಭೈಷ್ಮ।

**ಲೃಙ್:** ರೂಪಗಳು: ಅಭೇಷ್ಯತ್, ಅಭೇಷ್ಯತಾಮ್, ಅಭೇಷ್ಯನ್। ಅಭೇಷ್ಯಃ, ಅಭೇಷ್ಯತಮ್, ಅಭೇಷ್ಯತ। ಅಭೇಷ್ಯಮ್, ಅಭೇಷ್ಯಾವ, ಅಭೇಷ್ಯಾಮ।

3.'ಹ್ರೀ' ಲಜ್ಜಾಯಾಮ್(ನಾಚುವುದು) – ಇದರಲ್ಲಿ ಯಾವವರ್ಣವೂ 'ಇತ್' ಆಗದೇ ಇರೋಣದರಿಂದ 'ಹ್ರೀ' ಎಂದೆ ಉಳಿಯುತ್ತದೆ ಮತ್ತು ಇದು ಪರಸ್ಮೈಪದಿಯಾಗಿದೆ. ಹಾಗೂ ಅನಿಟ್ ಆಗಿಯೂ ಇದೆ. ಸಂಯೋಗಪೂರ್ವವಾಗಿರುವುದರಿಂದ "ಏರನೇಕಾಚೋಽಸಂಯೋಗಪೂರ್ವಸ್ಯ" ಎಂಬುದು ಅನ್ವಯಿಸುವುದಿಲ್ಲ. ಅದರ ಸ್ಥಾನದಲ್ಲಿ "ಅಚಿ ಶ್ನುಧಾತುಭ್ರುವಾಂಯ್ವೋರಿಯಙುವಙೌ" ಎಂಬ ಸೂತ್ರದಿಂದ 'ಇಯಙ್(ಇಯ್)' ಆದೇಶವು ಬರುತ್ತದೆ.

**ಲಟ್:** ಉದಾ– ಜಿಹ್ರೇತಿ – ಪ್ರಥಮಪುರುಷ ಏಕವಚನದಲ್ಲಿ 'ಹ್ರೀ' ಧಾತುವಿಗೆ 'ತಿಪ್(ತಿ)' ಆದೇಶ ಬಂದು ಹ್ರೀ+ತಿ ಎಂದಿದ್ದಾಗ, ಧಾತುವಿಗೆ ದ್ವಿತ್ವಬಂದು ಹಲಾದಿಶೇಷದಿಂದ ರೇಫ ಲೋಪವಾದಮೇಲೆ "ಹ್ರಸ್ವಃ" ಎಂಬುದರಿಂದ ಅಭ್ಯಾಸದ ರೂಪಕ್ಕೆ ಹ್ರಸ್ವ ಬಂದು ಹಿ+ಹ್ರೀ+ತಿ ಎಂದಿರುತ್ತದೆ. "ಕುಹೋಶ್ಚುಃ" ಎಂಬುದರಿಂದ ಅಭ್ಯಾಸದ 'ಹ್' ಗೆ ಚುತ್ವ(ಝ್) ಬಂದು, ಝಿ ಹ್ರೀ+ತಿ ಎಂದಿರುತ್ತದೆ. "ಅಭ್ಯಾಸೇಚರ್ಚ" ಎಂಬುದರಿಂದ (ಝ್) ಗೆ ಜಶ್ತ್ವ(ಜ್) ಬಂದು ಜಿ+ಹ್ರೀ +ತಿ ಎಂದಿದ್ದಾಗ ಅನಭ್ಯಸ್ತ 'ಹ್ರಿ' ನಲ್ಲಿರುವ 'ಇ' ಕಾರಕ್ಕೆ "ಸಾರ್ವಧಾತುಕಾರ್ಧಧಾತುಕಯೋಃ" ಎಂಬುದರಿಂದ ಗುಣ ಬಂದು ಜಿ+ಹ್ರೇ+ತಿ=ಜಿಹ್ರೇತಿ ಎಂದು ರೂಪವಾಗುತ್ತದೆ.

ಉದಾ– ಜಿಹ್ರೀತಃ– ಪ್ರಥಮಪುರುಷ ದ್ವಿವಚನದಲ್ಲಿ ಹಿಂದಿನಂತೆಯೇ ಪ್ರಕ್ರಿಯೆ ನಡೆದು ಜಿಹ್ರೀ+ತಸ್ ಎಂದಿದ್ದಾಗ, ಇದು ಅಪಿತ್ ಆಗಿರುವುದರಿಂದ ಜಿದ್ವದ್ಭಾವದಿಂದ ಗುಣ ಬಾರದೇ, ರುತ್ವ–ವಿಸರ್ಗಗಳಿಂದ ಜಿಹ್ರೀತಃ ಎಂದು ರೂಪವಾಗುತ್ತದೆ.

ಉದಾ– ಜಿಹ್ರಿಯತಿ – ಪ್ರಥಮಪುರುಷ ಬಹುವಚನದಲ್ಲಿ ಜಿಹ್ರೀ ವರೆಗಿನ ಪ್ರಕ್ರಿಯೆ ಹಿಂದಿನಂತೆಯೇ ನಡೆದು ಜಿಹ್ರೀ+ಝಿ ಎಂದಿದ್ದಾಗ 'ಝ್' ಗೆ "ಅದಭ್ಯಸ್ತಾತ್"

ಎಂಬುದರಿಂದ 'ಅತ್' ಆದೇಶ ಬಂದು ಜಿಹ್ರೀ+ಅತ್+ಇ ಎಂದಿದ್ದಾಗ, ಅನಭ್ಯಸ್ತ 'ಈ' ಕಾರಕ್ಕೆ 'ಇಯಙ್(ಇಯ್)' ಆದೇಶ ಬಂದು ಜಿಹ್ರಿಯ್+ಅ+ತಿ=ಜಿಹ್ರಿಯತಿ ಎಂದು ರೂಪವಾಗುತ್ತದೆ.

ರೂಪಗಳು: ಜಿಹ್ರೇತಿ, ಜಿಹ್ರೀತಃ, ಜಿಹ್ರಿಯತಿ। ಜಿಹ್ರೇಷಿ, ಜಿಹ್ರೀಥಃ, ಜಿಹ್ರೀಥ। ಜಿಹ್ರೇಮಿ, ಜಿಹ್ರೀವಃ, ಜಿಹ್ರೀಮಃ।

ಲಿಟ್: (ಅನುಪ್ರಯೋಗ)–ಆಮ್ ಬಂದಪಕ್ಷದಲ್ಲಿ: 'ಕೃ' ಧಾತುವಿನ ರೂಪಗಳು:– ಜಿಹ್ರಯಾಞ್ಚಕಾರ, ಜಿಹ್ರಯಾಞ್ಚಕ್ರತುಃ, ಜಿಹ್ರಯಾಞ್ಚಕ್ರುಃ। ಜಿಹ್ರಯಾಞ್ಚಕರ್ಥ, ಜಿಹ್ರಯಞ್ಚಕ್ರಥುಃ, ಜಿಹ್ರಯಾಞ್ಚಕ್ರ। ಜಿಹ್ರಯಾಞ್ಚಕರ/ಜಿಹ್ರಯಾಞ್ಚಕರ, ಜಿಹ್ರಯಾಞ್ಚಕ್ರಿವ, ಜಿಹ್ರಯಾಞ್ಚಕ್ರಿಮ।

'ಭೂ' ಧಾತುವಿನ ಅನುಪ್ರಯೋಗ ಲಿಟ್ ರೂಪಗಳು: ಜಿಹ್ರಯಾಂಬಭೂವ, ಜಿಹ್ರಯಾಂಬಭೂವತುಃ, ಜಿಹ್ರಯಾಮ್ಬಭೂವುಃ। ಜಿಹ್ರಯಾಮ್ಬಭೂವಿಥ, ಜಿಹ್ರಯಾಮ್ಬಭೂವಥುಃ, ಇಹ್ರಯಾಮ್ಬಭೂವ। ಜಿಹ್ರಯಾಂಬಭೂವ, ಜಿಹ್ರಯಾಬಭೂವಿವ, ಜಿಹ್ರಯಾಮ್ಬಭೂವಿಮ।

'ಅಸ್' ಧಾತುವಿನ ಅನುಪ್ರಯೋಗ ಲಿಟ್ ರೂಪಗಳು: ಜಿಹ್ರಯಾಮಾಸ, ಜಿಹ್ರಯಾಮಾಸತುಃ, ಜಿಹ್ರಯಾಮಾಸುಃ। ಜಿಹ್ರಯಾಮಾಸಿಥ, ಜಿಹ್ರಯಾಮಾಸಥುಃ, ಜಿಹ್ರಯಾಮಾಸ। ಜಿಹ್ರಯಾಮಾಸ, ಜಿಹ್ರಯಾಮಾಸಿವ, ಜುಹ್ರಯಾಮಾಸಿಮ।

ಆಮ್ ಬಾರದ ಪಕ್ಷದಲ್ಲಿ ಲಿಟ್ ರೂಪಗಳು: ಜಿಹ್ರಾಯ, ಜಿಹ್ರೀಯತುಃ, ಜಿಹ್ರೀಯುಃ। ಜಿಹ್ರಯಿಥ/ಜಿಹ್ರೇಥ, ಜಿಹ್ರೀಯಥುಃ, ಜಿಹ್ರೀಯ। ಜಿಹ್ರಾಯ/ ಜಿಹ್ರಯ, ಜಿಹ್ರಯಿವ, ಜಿಹ್ರಯಿಮ।

**ಲುಟ್**: ರೂಪಗಳು: ಹ್ರೇತಾ, ಹ್ರೇತಾರೌ, ಹ್ರೇತಾರಃ। ಹ್ರೇತಾಸಿ, ಹ್ರೇತಾಸ್ಥಃ, ಹ್ರೇತಾಸ್ಥ। ಹ್ರೇತಾಸ್ಮಿ, ಹ್ರೆತಾಸ್ವಃ, ಹ್ರೇತಾಸ್ಮಃ।

**ಲೃಟ್**: ರೂಪಗಳು: ಹ್ರೇಷ್ಯತಿ, ಹ್ರೇಷ್ಯತಃ,ಹ್ರೇಷ್ಯನ್ತಿ। ಹ್ರೇಷ್ಯಸಿ, ಹ್ರೇಷ್ಯಥಃ, ಹ್ರೇಷ್ಯಥ। ಹ್ರೇಷ್ಯಾಮಿ, ಹ್ರೇಷ್ಯಾವಃ, ಹ್ರೇಷ್ಯಾಮಃ।

**ಲೋಟ್**: ರೂಪಗಳು: ಜಿಹ್ರೇತು/ಜಿಹ್ರೀತಾತ್, ಜಿಹ್ರೀತಾಮ್, ಜಿಹ್ರೀಯತು। ಜಿಹ್ರೀಃ/ ಜಿಹ್ರೀತಾತ್, ಜಿಹ್ರೀತಮ್, ಜಿಹ್ರೀತ। ಜಿಹ್ರಯಾಣಿ, ಜಿಹ್ರಯಾವ, ಜಿಹ್ರಯಾಮ।

**ಲಙ್**: ರೂಪಗಳು: ಅಜಿಹ್ರೇತ್, ಅಜಿಹ್ರೀತಾಮ್, ಅಜಿಹ್ರಯುಃ। ಅಜಿಹ್ರೇಃ, ಅಜಿಹ್ರೀತಮ್, ಅಜಿಹ್ರೀತ। ಅಜಿಹ್ರಯಮ್, ಅಜಿಹ್ರೀವ, ಅಜಿಹ್ರೀಮ।

**ವಿಧಿಲಿಙ್**: ರೂಪಗಳು: ಜಿಹ್ರೀಯಾತ್, ಜಿಹ್ರೀಯಾತಾಮ್, ಜಿಹ್ರೀಯುಃ। ಜಿಹ್ರೀಯಾಃ, ಜಿಹ್ರೀಯಾತಮ್, ಜಿಹ್ರೀಯಾತ। ಜಿಹ್ರೀಯಾಮ್, ಜಿಹ್ರೀಯಾವ, ಜಿಹ್ರೀಯಾಮ।

**ಆಶೀರ್ಲಿಙ್**: ರೂಪಗಳು: ಹ್ರೀಯಾತ್, ಹ್ರೀಯಾಸ್ತಾಮ್, ಹ್ರೀಯಾಸುಃ।ಹ್ರೀಯಾಃ, ಹ್ರೀಯಾಸ್ತಮ್, ಹ್ರೀಯಾಸ್ತ। ಹ್ರೀಯಾಸಮ್, ಹ್ರೀಯಾಸ್ವ, ಹ್ರೀಯಾಸ್ಮ।

**ಲುಙ್**: ರೂಪಗಳು: ಅಹ್ರೈಷೀತ್, ಅಹ್ರೈಷ್ಟಾಮ್, ಅಹ್ರೈಷ್ಟು ಅಹ್ರೈಷೀಃ, ಅಹ್ರೈಷ್ಟಮ್,

ಅಹ್ರೈಷ್ವ ಅಹ್ರೈಷಮ್, ಅಹ್ರೈಷ್ವ, ಅಹ್ರೈಷ್ಮ।

**ಲೃಙ್**: ರೂಪಗಳು: ಅಹ್ರೈಷ್ಯತ್, ಅಹ್ರೈಷತಾಮ್, ಅಹ್ರೈಷನ್। ಅಹ್ರೈಷ್ಯಃ, ಅಹ್ರೈಷತಮ್, ಅಹ್ರೈಷ್ಯತ। ಅಹ್ರೈಷ್ಯಮ್, ಅಹ್ರೈಷ್ಯಾವ, ಅಹ್ರೈಷ್ಯಾಮ।

4. ಪೄ ಪಾಲನ–ಪೋಷಣಯೋಃ (ಪೂರಣಯೋಃ) (ಪಾಲಿಸುವುದು ಮತ್ತು ಪೂರ್ಣಗೊಳಿಸುವುದು)– ಇದು 'ಋೂ(ದೀರ್ಘ)' ಕಾರಾನ್ತವಾಗಿದೆ. ಆದುದರಿಂದ ಇದು 'ಸೇಟ್' ಧಾತುವಾಗಿದೆ.

**('ಇ' ಕಾರನ್ತವನ್ನು ಆದೇಶವಾಗಿ ವಿಧಿಸುವ ಸೂತ್ರ)**

**ಸೂತ್ರ– 611. ಅರ್ತಿ–ಪಿಪರ್ತ್ಯೋಶ್ಚ (7.4.77)**

ವೃತ್ತಿ – ಅಭ್ಯಾಸಸ್ಯ ಇಕಾರಃ ಅನ್ತಾದೇಶಃ ಸ್ಯಾತ್ ಶ್ಲೌ। ಪಿಪರ್ತಿ।

ಪ.ಛೇ.– ಅರ್ತಿಪಿಪರ್ತ್ಯೋಃ, ಚ।

ಅ.ವೃ. – " ಅತ್ರಲೋಪೋಽಭ್ಯಾಸಸ್ಯ" ಎಂಬಸೂತ್ರದಿಂದ 'ಅಭ್ಯಾಸಸ್ಯ' ಎಂಬ ಪದವು, ಮತ್ತು "ಭೃಞಾಮಿತ್" ಎಂಬ ಸೂತ್ರದಿಂದ 'ಇತ್' ಎಂಬ ಪದವೂ, ಮತ್ತು ಅರ್ಥ– 'ಋೂ' ಧಾತು ಮತ್ತು 'ಪೄ' ಧಾತುವಿನ ಅಭ್ಯಾಸದ ಅನ್ತ್ಯ ವರ್ಣ(ಋೂ)ಕ್ಕೆ 'ಇ' ಕಾರವು ಆದೇಶವಾಗಿ ಬರುತ್ತದೆ– ಶ್ಲು ಪರದಲ್ಲಿದ್ದಾಗ,

**ಲಟ್**: ಉದಾ– ಪಿಪರ್ತಿ– ಪ್ರಥಮಪುರುಷ ಏಕವಚನದಲ್ಲಿ 'ಪೄ' ಧಾತುವಿನ ನಂತರ 'ಲಟ್' ಬಂದು ಅದಕ್ಕೆ 'ತಿಪ್(ತಿ)' ಆದೇಶ ಬಂದು ಪೄ+ತಿ ಎಂದಿದ್ದಾಗ, ಧಾತುವಿನ ಪರದಲ್ಲಿ ಶಪ್(ಅ) ಬಂದು ಅದಕ್ಕೆ 'ಶ್ಲು(ಲೋಪ)' ಬಂದಮೇಲೆ ದ್ವಿತ್ವ ಮಾಡಿದಾಗ, ಪೄಪೄ+ತಿ ಎಂದಿದ್ದಾಗ 'ಉರತ್' ಎಂಬುದರಿಂದ ಅಭ್ಯಸ್ತ 'ಪ' ಕಾರೋತ್ತರ 'ಋೂ' ಕಾರಕ್ಕೆ ಅರ್ ಆದೇಶ ಬಂದು ಪರ್ಪೄ+ತಿ ಎಂದಿದ್ದಾಗ, 'ಋೂ' ಕಾರಕ್ಕೆ 'ಅರ್' ಬಂದು ಹಲಾದಿಶೇಷವಾದಮೇಲೆ ಪ ಪೄ+ತಿ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ಅಭ್ಯಸ್ತ 'ಪ' ಕಾರೋತ್ತರ 'ಅ' ಕಾರಕ್ಕೆ 'ಇ' ಕಾರ ಬಂದು, ಪಿಪೄ+ತಿ ಎಂದಿದ್ದಾಗ, ಅನಭ್ಯಸ್ತ 'ಪೄ' ನಲಿರುವ 'ಋೂ' ಕಾರಕ್ಕೆ "ಸಾರ್ವಧಾತುಕಾರ್ಧಧಾತುಕಯೋಃ" ಎಂಬುದರಿಂದ ಗುಣ(ಅರ್) ಬಂದು ಪಿಪರ್+ತಿ= ಪಿಪರ್ತಿ ಎಂದು ರೂಪವಾಗುತ್ತದೆ.

**(ಉತ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ– 612. ಉದೋಷ್ಠ್ಯಪೂರ್ವಸ್ಯ (7.1.102)**

ವೃತ್ತಿ – ಅಙ್ಗಾವಯ–ಓಷ್ಠ್ಯಪೂರ್ವಃ ಯಃ ಋೂತ್ ತದನ್ತಸ್ಯ ಅಙ್ಗಸ್ಯ ಉತ್ ಸ್ಯಾತ್।

ಪ.ಛೇ.–ಉತ್, ಓಷ್ಠ್ಯಪೂರ್ವಸ್ಯ।

ಅ.ವೃ. – "ಋೂತ ಇದ್ಧಾತೋಃ" ಎಂಬ ಸೂತ್ರದಿಂದ 'ಋೂತಃ' ಎಂಬ ಪದವು ಅನುವೃತ್ತವಾಗುತ್ತದೆ. "ಅಂಗಸ್ಯ" ಎಂಬುದು ಅಧಿಕಾರ ಸೂತ್ರ.

ಅರ್ಥ – ಅಂಗಾವಯವವಾದ ಓಷ್ಠ್ಯ ವರ್ಣವನ್ನು ಪೂರ್ವದಲ್ಲಿಯುಳ್ಳ ಯಾವ

'ಋೂ' ಕಾರವು ಇರುವದೋ ಅದು ಅಂತದಲ್ಲಿರುವ ಅಂಗಕ್ಕೆ ಹ್ರಸ್ವ 'ಉ' ಕಾರವು ಆದೇಶವಾಗಿ ಬರುವುದು.

ಉದಾ– ಪಿಪೂರ್ತಃ – ಪ್ರಥಮಪುರುಷ ದ್ವಿವಚನದಲ್ಲಿ ಪಿಪ್ರೄ ವರೆಗಿನ ಪ್ರಕ್ರಿಯೆ ಹಿಂದಿನಂತೆಯೇ ನಡೆದು ಅದಕ್ಕೆ ತಸ್ ಪ್ರತ್ಯಯವನ್ನು ಸೇರಿಸಿದಾಗ ಪಿಪ್ರೄ+ತಸ್ ಎಂದಿದ್ದಾಗ–

"ಣಿಜಾಂ ತ್ರಯಾಣಾಂ ಗುಣಃ ಶ್ಲೌ" ಎಂಬ ಸೂತ್ರದಿಂದ 'ಶ್ಲೌ' ಎಂಬ ಪದವೂ ಅನುವೃತ್ತವಾಗುತ್ತವೆ. ಇಲ್ಲಿ ಪಿಪ್ರೄ ಎಂಬ ಅಂಗದ 'ಋೂ' ಕಾರದ ಪೂರ್ವದಲ್ಲಿ ಓಷ್ಠ್ಯ ವರ್ಣವಾದ 'ಪ್' ಕಾರವಿದೆ. ಆದ್ದರಿಂದ 'ಋೂ' ಕಾರಾನ್ತವಾದ ಅಂಗಕ್ಕೆ ಅಂದರೆ ಅಂಗದ ಅಂತ್ಯವರ್ಣವಾದ 'ಋೂ' ಕಾರಕ್ಕೆ ಪ್ರಕೃತ ಸೂತ್ರದಿಂದ ಹ್ರಸ್ವ 'ಉ' ಕಾರವು "ಅಲೋಽನ್ತ್ಯಸ್ಯ" ಎಂಬ ಸೂತ್ರದಿಂದ ರಪರವಾಗಿ (ಉರ್) ಆದೇಶವಾಗಿ ಬರುತ್ತದೆ ಎಂದು ಅರ್ಥ – ಹೀಗೆ ಪಿಪುರ್+ತಸ್ ಎಂದಿದ್ದಾಗ–

### (ಇಕ್ ವರ್ಣಕ್ಕೆ ದೀರ್ಘವನ್ನು ವಿಧಿಸುವ ಸೂತ್ರ)

**ಸೂತ್ರ– 613. ಹಲಿ ಚ (8.2.77)**

ವೃತ್ತಿ – ರೇಫ–ವಾನ್ತಸ್ಯ ಧಾತೋಃ ಉಪಧಾಯಾ ಇಕಃ ದೀರ್ಘಃ ಹಲಿ। ಪಿಪೂರ್ತಃ। ಪಿಪುರತಿ। ಪಪಾರ ।

ಅ.ವ್ಯ. – "ಸಿಪಿ ಧಾತೋರುರ್ವಾ" ಎಬ ಸೂತ್ರದಿಂದ 'ಧಾತೋಃ' ಎಂಬ ಪದವೂ, ಮತ್ತು "ರ್ವೋರುಪಧಾಯಾ ದೀರ್ಘ ಇಕಃ" ಎಂಬ ಪೂರ್ಣ ಸೂತ್ರವು ಅನುವೃತ್ತವಾಗುತ್ತವೆ.

ಅರ್ಥ– 'ಹಲ್' ವರ್ಣವು ಪರದಲ್ಲಿದ್ದಾಗ ರೇಫಾನ್ತ ಮತ್ತು 'ವ' ಕಾರಾನ್ತವಾದ ಧಾತುವಿನ ಉಪಧಾರೂಪವಾದ 'ಇಕ್' ವರ್ಣಕ್ಕೆ ದೀರ್ಘವು ಬರುತ್ತದೆ.

ಹಿಂದಿನ ಸೂತ್ರದಲ್ಲಿ ಸಿದ್ಧವಾಗಿರುವ ಪಿಪುರ್+ತಸ್ ಎಂದಿದ್ದಾಗ, "ರ್ವೋರುಪಧಾಯಾ ದೀರ್ಘ ಇಕಃ" ಎಂಬ ಸೂತ್ರದಿಂದ ಪದಾನ್ತದಲ್ಲಿರುವ 'ಇಕ್' ವರ್ಣವಾದ ಉಪಧಾರೂಪ 'ಉ' ಕಾರಕ್ಕೆ ಪ್ರಕೃತ ಸೂತ್ರದಿಂದ ದೀರ್ಘ ಬಂದು ಪಿಪೂರ್+ತಸ್ ಎಂದಿದ್ದಾಗ 'ಸ್' ಕಾರಕ್ಕೆ ರುತ್ವ–ವಿಸರ್ಗಗಳಿಂದ ಪಿಪೂರ್ತಃ ಎಂದು ರೂಪವಾಗುತ್ತದೆ.

["ರ್ವೋರುಪಧಾಯಾ ದೀರ್ಘ ಇಕಃ" ಎಂಬ ಇದೇ ಸೂತ್ರದಿಂದ ಅಪದಾನ್ತ ವಾಗಿರುವ 'ಇಕ್' ವರ್ಣಕ್ಕೆ ದೀರ್ಘವು ಬರುತ್ತದೆ. ಈ ಸೂತ್ರಕ್ಕೂ ಮತ್ತು "ಹಲಿಚ" ಎಂಬ ಸೂತ್ರಕ್ಕೂ ಇಷ್ಟೇ ವ್ಯತ್ಯಾಸವಿರುತ್ತದೆ].

ಉದಾ– ಪಿಪುರತಿ – ಪ್ರಥಮಪುರುಷ ಬಹುವಚನದಲ್ಲಿ ಪಿಪುರ್ ವರೆಗಿನ ಪ್ರಕ್ರಿಯೆ ಹಿಂದಿನಂತೆಯೇ ನಡೆದು ಪಿಪುರ್+ಝಿ ಎಂದಿದ್ದಾಗ, 'ಝ್'ಗೆ "ಅದಭ್ಯಸ್ತಾತ್" ಎಂಬ ಸೂತ್ರದಿಂದ 'ಅತ್' ಆದೇಶ ಬಂದು ಪಿಪುರ್+ಅತ್+ಇ=ಪಿಪುರತಿ ಎಂದು ರೂಪವಾಗುತ್ತದೆ.

ರೂಪಗಳು: ಪಿಪರ್ತಿ, ಪಿಪೂರ್ತಃ, ಪಿಪುರತಿ। ಪಿಪರ್ಷಿ, ಪಿಪೂರ್ಥಃ, ಪಿಪೂರ್ಥ। ಪಿಪರ್ಮಿ, ಪಿಪೂರ್ವಃ, ಪಿಪೂರ್ಮಃ।

**ಲಿಟ್**: ಉದಾ– ಪಪಾರ– ಪ್ರಥಮಪುರುಷ ಏಕವಚನದಲ್ಲಿ 'ಪೄ' ಧಾತುವಿನ ನಂತರ ಲಿಡಾದೇಶವಾದ ಮೂಲ ಆಖ್ಯಾತ ಪ್ರತ್ಯಯವಾದ 'ತಿಪ್(ತಿ) ಬಂದು, ನಂತರ ಅದಕ್ಕೆ ಅಭಿನವ ಆಖ್ಯಾತ ಪ್ರತ್ಯಯವಾದ 'ಣಲ್(ಅ)' ಆದೇಶವಾಗಿ ಬಂದು ಧಾತುವಿಗೆ ದ್ವಿತ್ವ ಮಾಡಿದಮೇಲೆ ಪೄಪೄ+ಅ ಎಂದಿದ್ದಾಗ, "ಉರತ್" ಎಂಬ ಸೂತ್ರದಿಂದ ಅಭ್ಯಾಸದ 'ಋ' ಕಾರಕ್ಕೆ 'ಅತ್(ಅ)' ಆದೇಶ 'ರ್' ಪರವಾಗಿ ಬಂದು ಪರ್+ಪೄ+ಅ ಎಂದಿದ್ದಾಗ, ಹಲಾದಿಶೇಷದಿಂದ ಅಭ್ಯಾಸದಲ್ಲಿ ರೇಫ(ರ್) ಲೋಪವಾಗಿ 'ಪ' ಮಾತ್ರ ಉಳಿದು, ಪ ಪೄ+ಅ ಎಂದಿದ್ದಾಗ, "ಅಚೋಞ್ಣಿತಿ" ಎಂಬ ಸೂತ್ರದಿಂದ ಅನಭ್ಯಸ್ತರೂಪದ 'ಋ' ಕಾರಕ್ಕೆ ವೃದ್ಧಿ(ಆರ್) ಬಂದು ಪಪಾರ್+ಅ=ಪಪಾರ ಎಂದುರೂಪವಾಗುತ್ತದೆ.

**(ವೈಕಲ್ಪಿಕವಾಗಿ ಹ್ರಸ್ವವನ್ನು ವಿಧಿಸುವ ಸೂತ್ರ)**

**ಸೂತ್ರ– 614. ಶೄ–ದೄ–ಪ್ರಾಂ ಹ್ರಸ್ವೋ ವಾ (7.4.12)**

ವೃತ್ತಿ – ಏಷಾಂ ಲಿಟಿ ಹ್ರಸ್ವಃ ವಾ ಸ್ಯಾತ್ । ಪಪ್ರತುಃ।

ಪ.ಛೇ.– ಶೃ–ದೃ–ಪ್ರಾಂ, ಹ್ರಸ್ವಃ, ವಾ।

ಅ.ವ್ಯ.– "ದಯತೇರ್ದಿಗಿಲಿಟಿ" ಎಂಬ ಸೂತ್ರದಿಂದ 'ಲಿಟಿ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ – (ಗುಣಕ್ಕೆ ಅಪವಾದವಾಗಿರುವುದರಿಂದಲೂ ಮತ್ತು ಆ ಗುಣವು 'ಕಿತ್' ನಲ್ಲಿ ಹೇಳಿರೋಣದರಿಂದಲೂ 'ಕಿತಿ' ಎಂದು ಸ್ವೀಕರಿಸಬೇಕಾಗುತ್ತದೆ). ಶೄ–ದೄ–ಪೄ ಎಂಬ ಈ ಮೂರು ಧಾತುಗಳಿಗೆ 'ಕಿತ್' ಆದ 'ಲಿಟ್' ಪರವಾಗಿರುವಾಗ ವೈಕಲ್ಪಿಕವಾಗಿ ಹ್ರಸ್ವವು ವಿಧಿಸಲ್ಪಟ್ಟಿದೆ.

ಉದಾ– ಪಪ್ರತುಃ– ಪ್ರಥಮಪುರುಷ ದ್ವಿವಚನದಲ್ಲಿ ಹಿಂದಿನಂತೆಯೇ ದ್ವಿತ್ವಾದಿ ಪ್ರಕ್ರಿಯೆಗಳು ನಡೆದು ಪಪೃ+ಅತುಸ್ ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ಋ' ಕಾರ 'ಅ' ಕಾರಗಳಿಗೆ ಯಣ್ ಸಂಧಿಯಿಂದ 'ಋ' ಕಾರಕ್ಕೆ ರೇಫ(ರ್) ಬಂದು ನಂತರ 'ಸ್' ಕಾರಕ್ಕೆ ರುತ್ವ–ವಿಸರ್ಗಗಳು ಬಂದು ಪಪ್ರತುಃ ಎಂದು ರೂಪವಾಗುತ್ತದೆ. ಹ್ರಸ್ವ ಬಾರದ ಪಕ್ಷದಲ್ಲಿ ಅದಕ್ಕೆ ಮುಂದಿನ ಸೂತ್ರದಲ್ಲಿ ಗುಣವನ್ನು ಹೇಳುತ್ತಾನೆ.

**(ಋದನ್ತ ಧಾತುವಿಗೆ ಗುಣವನ್ನು ವಿಧಿಸುವ ಸೂತ್ರ)**

**ಸೂತ್ರ– 615. ಋಚ್ಛತ್ಯೄತಾಮ್ (7.4.11)**

ವೃತ್ತಿ – ತೌದಾದಿಕ ಋಚ್ಛೇಃ ಋ ಧಾತೋಃ ಋೂತಾಂ ಚ ಗುಣಃ ಲಿಟಿ। ಪಪರತುಃ। ಪಪರುಃ।

ಅ.ವ್ಯ. – "ಋತಶ್ಚ ಸಂಯೋಗಾದೇರ್ಗುಣಃ" ಎಂಬ ಸೂತ್ರದಿಂದ 'ಗುಣಃ' ಎಂಬ ಪದವೂ ಮತ್ತು "ದಯತೇರ್ದಿಗಿ ಲಿಟಿ" ಎಂಬ ಸೂತ್ರದಿಂದ 'ಲಿಟಿ' ಎಂಬ

ಪದವೂ ಅನುವೃತ್ತವಾಗುತ್ತವೆ.

ಅರ್ಥ– ತುದಾದಿಗಣಕ್ಕೆ ಸೇರಿದ ಋಚ್ಛ ಧಾತು, 'ಋ' ಧಾತು ಮತ್ತು 'ೠ' ಕಾರಾನ್ತ ಧಾತುಗಳಿಗೆ ಗುಣವು ಬರುತ್ತದೆ. "ಇಕೋಗುಣವೃದ್ಧೀ" ಎಂಬ ಸೂತ್ರದ ಸಂಬಂಧದಿಂದ 'ಇಕ್' ಎಂದರೆ 'ಋ' ಕಾರ ಅಥವಾ 'ೠ' ಕಾರಗಳ ಸ್ಥಾನದಲ್ಲಿಯೇ ಗುಣವು ಬರುತ್ತದೆ.

ಉದಾ– ಪಪರತುಃ (ಹ್ರಸ್ವ ಬಾರದ ಪಕ್ಷದಲ್ಲಿ)– ಪ್ರಥಮಪುರುಷ ದಿವಚನದಲ್ಲಿ ಹಿಂದಿನಂತೆಯೇ ದ್ವಿತ್ವಾದಿಗಳನ್ನು ಮಾಡಿದಮೇಲೆ ಪಪೄ+ಅತುಸ್ ಎಂದಿದ್ದಾಗ, "ಶೄ–ದೄ–ಪ್ರಾಂ ಹ್ರಸ್ವೋ ವಾ(613)" ಎಂಬ ಸೂತ್ರದಿಂದ ಬರಬೇಕಾದ ಹ್ರಸ್ವ ಬಾರದೇ ಪ್ರಕೃತ ಸೂತ್ರದಿಂದ 'ೠ' ಕಾರಕ್ಕೆ ವೈಕಲ್ಪಿಕವಾಗಿ 'ಗುಣ(ಅರ್)' ಬಂದು ಪಪರ್+ಅತುಸ್ ಎಂದಿದ್ದಾಗ 'ಸ್' ಕಾರಕ್ಕೆ ರುತ್ವ–ವಿಸರ್ಗಗಳು ಬಂದು ಪಪರತುಃ ಎಂದು ವೈಕಲ್ಪಿಕ ರೂಪವಾಗುತ್ತದೆ. ಇದೇ ರೀತಿಯಲ್ಲಿ ಬಹುವಚನದಲ್ಲಿ ಪಪ್ರುಃ, ಪಪರುಃ ಎಂದು ಎರಡು ರೂಪಗಳಾಗುತ್ತವೆ.

ಲಿಟ್‌ನ ರೂಪಗಳು: ಪಪಾರ, ಪಪ್ರತುಃ/ಪಪರತುಃ, ಪಪ್ರುಃ/ ಪಪರುಃ। ಪಪರಿಥ, ಪಪ್ರಥುಃ/ಪಪರಥುಃ, ಪಪ್ರ/ಪಪರ। ಪಪಾರ/ಪಪರ। ಪಪ್ರಿವ/ಪಪರಿವ, ಪಪ್ರಿಮ/ಪಪರಿಮ।

**ಲುಟ್:**

**(ವೈಕಲ್ಪಿಕವಾಗಿ ಇಟ್ ಆಗಮವನ್ನು ವಿಧಿಸುವ ಸೂತ್ರ)**

**ಸೂತ್ರ– 616. ವೄತೋ ವಾ (7.2.38)**

ವೃತ್ತಿ – ವೃಙ್–ವೃಞ್–ಭ್ಯಾಂ ೠದನ್ತಾ ಚ್ಚ ಇಟಃ ದೀರ್ಘಃ ವಾ ಸ್ಯಾತ್ ನತು ಲಿಟಿ। ಪರೀತಾ, ಪರಿತಾ। ಪರೀಷ್ಯತಿ,ಪರಿಷ್ಯತಿ। ಪಿಪರ್ತು। ಅಪಿಪಃ। ಅಪಿಪೂರ್ತಾಮ್। ಅಪಿಪರುಃ। ಪಿಪೂರ್ಯಾತ್।ಪೂರ್ಯಾತ್।ಅಪಾರೀತ್।

ಪ.ಛೇ.– ವೄತಃ, ವಾ।

ಅ.ವೃ. – "ಆರ್ಧಧಾತುಕಸ್ಯೇಡ್ವಲಾದೇಃ" ಎಂಬ ಸೂತ್ರದಿಂದ 'ಇಟ್' ಎಂಬ ಪದವೂ ಮತ್ತು "ಗ್ರಹೋಽಲಿಟಿ ದೀರ್ಘಃ" ಎಂಬ ಸೂತ್ರದಿಂದ 'ದೀರ್ಘಃ' ಮತ್ತು 'ಅಲಿಟಿ' ಎಂಬ ಪದಗಳೂ ಅನುವೃತ್ತವಾಗುತ್ತವೆ.

ಅರ್ಥ – ವೃಙ್, ವೃಞ್, ಮತ್ತು ೠದನ್ತ ಧಾತುಗಳ ನಂತರ 'ಇಟ್' ಆಗಮವು ವಿಕಲ್ಪವಾಗಿ ದೀರ್ಘವಾಗುತ್ತದೆ. ಆದರೆ 'ಲಿಟ್' ಪರದಲ್ಲಿದ್ದಾಗ ಆಗುವುದಿಲ್ಲ. 'ವೄ' ನಲ್ಲಿ ಅನುಬಂಧವಿಲ್ಲದ್ದರಿಂದ 'ಙ್' ಕಾರ ಮತ್ತು 'ಞ್' ಕಾರಗಳನ್ನು ಅನುಬಂಧಗಳಾಗಿ ಉಳ್ಳ 'ವೃಙ್' ಮತ್ತು 'ವೃಞ್' ಗಳನ್ನೂ ಗ್ರಹಿಸಬಹುದಾಗಿದೆ. 'ಅಲಿಟಿ' ಎಂದರೆ ಲಿಟ್ ನಲ್ಲಿ ಆಗುವುದಿಲ್ಲ ಮತ್ತು ಉಳಿದ 'ಲ್' ಕಾರಗಳಲ್ಲಿ ಆಗುತ್ತದೆ ಎಂದು ಅರ್ಥ.

ಲುಟ್: ಉದಾ– ಪರಿತಾ/ಪರೀತಾ– ಪ್ರಥಮಪುರುಷ ಏಕವಚನದಲ್ಲಿ 'ಪೄ' ಧಾತುವಿನ ನಂತರ 'ಲುಟ್' ಬಂದು, ಪೄ+ತಿ ಎಂದಿದ್ದಾಗ, ಧಾತುವಿನ ನಂತರ ವಿಕರಣ ಪ್ರತ್ಯಯ ಬಾರದೇ "ಸ್ಯತಾಸೀ ಲೃಲುಟೋಃ" ಎಂಬ ಸೂತ್ರದಿಂದ 'ತಾಸಿ' ಪ್ರತ್ಯಯ ಆದೇಶವಾಗಿ

ಬಂದು ಪ್ಯಾ+ತಾಸಿ+ತಿ ಎಂದಿದ್ದಾಗ ಅದಕ್ಕೆ ಪ್ರಕೃತ ಸೂತ್ರದಿಂದ ವೈಕಲ್ಪಿಕವಾಗಿ 'ಇಟ್(ಇ)' ಆಗಮ ಬಂದು, ಪ್ಯಾ+ಇ+ತಾಸಿ+ತಿ ಎಂದಿದ್ದಾಗ, "ಉಪದೇಶೇಽಜನುನಾಸಿಕ ಇತ್" ಎಂಬುದರಿಂದ 'ಸ್' ಕಾರೋತ್ತರ 'ಇ' ಕಾರಕ್ಕೆ ಲೋಪ ಬಂದು ಪ್ಯಾ+ಇ+ತಾಸ್+ತಿ ಎಂದಿದ್ದಾಗ, 'ತಾಸ್' ನಲ್ಲಿರುವ್ 'ಟಿ' ರೂಪವಾದ 'ಆಸ್' ಗೆ ಲೋಪ ಬಂದು ಪ್ಯಾ+ಇ+ತ್+ತಿ ಎಂದಿದ್ದಾಗ, "ಲುಟಃಪ್ರಥಮಸ್ಯ ಡಾ–ರೌ–ರಸ" ಎಂಬುದರಿಂದ 'ತಿ' ಗೆ 'ಡಾ(ಆ)' ಪ್ರತ್ಯಯ ಆದೇಶವಾಗಿ ಬಂದು ಪ್ಯಾ+ಇ+ತ್+ಆ ಎಂದಿದ್ದಾಗ 'ಪ್' ಕಾರೋತ್ತರ 'ಋ' ಕಾರಕ್ಕೆ ಗುಣ (ಅರ್) ಬಂದು ಪರ್+ಇ+ತ್+ಆ=ಪರಿತಾ ಎಂದು ರೂಪವಾಗುತ್ತದೆ. ಪ್ರಕೃತ ಸೂತ್ರದಿಂದ 'ಇಟ್(ಇ)'ಗೆ ವೈಕಲ್ಪಿಕ ದೀರ್ಘ ಬಂದು ಪರೀತಾ ಎಂದು ವೈಕಲ್ಪಿಕ ರೂಪವು ಸಿದ್ಧವಾಗುತ್ತದೆ.

ಇಡಾಗಮದ ವೈಕಲ್ಪಿಕ ಹ್ರಸ್ವ ರೂಪಗಳು: ಪರಿತಾ, ಪರಿತಾರೌ, ಪರಿತಾರಃ। ಪರಿತಾಸಿ, ಪರಿತಾಸ್ಥಃ, ಪರಿತಾಸ್ಥ। ಪರಿತಾಸ್ಮಿ, ಪರಿತಾಸ್ವಃ, ಪರಿತಾಸ್ಮಃ।

ಇಡಾಗಮಕ್ಕೆ ವೈಕಲ್ಪಿಕವಾಗಿ ದೀರ್ಘ ಬಂದ ರೂಪಗಳು: ಪರೀತಾ, ಪರೀತಾರೌ, ಪರೀತಾರಃ। ಪರೀತಾಸಿ, ಪರೀತಾಸ್ಥಃ, ಪರೀತಾಸ್ಥ। ಪರೀತಾಸ್ಮಿ, ಪರೀತಾಸ್ವಃ, ಪರೀತಾಸ್ಮಃ।

**ಲೃಟ್**: ಇಡಾಗಮದ ವೈಕಲ್ಪಿಕ ಹ್ರಸ್ವ ರೂಪಗಳು: ಪರಿಷ್ಯತಿ, ಪರಿಷ್ಯತಃ, ಪರಿಷ್ಯನ್ತಿ। ಪರಿಷ್ಯಸಿ, ಪರಿಷ್ಯಥಃ, ಪರಿಷ್ಯಥ। ಪರಿಷ್ಯಾಮಿ, ಪರಿಷ್ಯಾವಃ, ಪರಿಷ್ಯಾಮಃ।

ಇಡಾಗಮಕ್ಕೆ ವೈಕಲ್ಪಿಕವಾಗಿ ದೀರ್ಘ ಬಂದ ರೂಪಗಳು: ಪರೀಷ್ಯತಿ, ಪರೀಷ್ಯತಃ, ಪರೀಷ್ಯನ್ತಿ। ಪರೀಷ್ಯಸಿ, ಪರೀಷ್ಯಥಃ, ಪರೀಷ್ಯಥ। ಪರೀಷ್ಯಾಮಿ, ಪರೀಷ್ಯಾವಃ, ಪರೀಷ್ಯಾಮಃ।

**ಲೋಟ್**: ರೂಪಗಳು: ಪಿಪರ್ತು/ಪಿಪೂರ್ತಾತ್, ಪಿಪೂರ್ತಾಮ್, ಪಿಪುರತು। ಪಿಪೂರ್ಹಿ/ಪಿಪೂರ್ತಾತ್, ಪಿಪೂರ್ತಮ್, ಪಿಪೂರ್ತ। ಪಿಪರಾಣಿ, ಪಿಪರಾವ, ಪಿಪರಾಮ।

ಈ 'ಲ್' ಕಾರದಲ್ಲಿ 'ತಾತ್' 'ತಾಮ್', ಝಿ , ಹಿ, ತಂ ಮತ್ತು ತ ಪ್ರತ್ಯಯಗಳು 'ಜಿತ್' ಆಗಿರುವುದರಿಂದ ಗುಣವು ಬರುವುದಿಲ್ಲ. "ಉದೋಷ್ಠ್ಯಪೂರ್ವಸ್ಯ" ಎಂಬುದರಿಂದ ಅನಭ್ಯಸ್ತ ರೂಪದ 'ಋ' ಕಾರಕ್ಕೆ 'ಉರ್' ಬಂದು 'ಉ' ಕಾರಕ್ಕೆ "ಹಲಿಚ" ಎಂಬುದರಿಂದ ದೀರ್ಘವು ಬರುತ್ತದೆ. 'ಝಿ' ಗೆ 'ಅತ್' ಆದೇಶವು ಬಂದಮೇಲೆ 'ಉರ್' ಬಂದರೂ 'ಹಲ್' ವರ್ಣವು ಪರದಲ್ಲಿ ಇಲ್ಲದೇ ಇರೋಣದರಿಂದ ದೀರ್ಘವು ಬರುವುದಿಲ್ಲ. ಉಳಿದ ರೂಪಗಳು 'ಪಿತ್' ಆಗಿರುವುದರಿಂದ ಗುಣವು ಬರುತ್ತದೆ. ಪ್ರಥಮಪುರುಷ ಏಕವಚನದಲ್ಲಿ ಹಾಗೂ ಉತ್ತಮಪುರುಷ ಏಕವಚನದಲ್ಲಿ

"ಆಡುತ್ತಮಸ್ಯ ಪಿಚ್ಚ" ಎಂಬ ಸೂತ್ರದಿಂದ 'ಆಟ್' ಆಗಮ ಬಂದು ಅದು 'ಪಿತ್' ಆಗಿರುವುದರಿಂದ ಗುಣ(ಅರ್)ವು ಬರುತ್ತದೆ. 'ಸಿಪ್' ಪ್ರತ್ಯಯವು 'ಪಿತ್' ಆಗಿದ್ದರೂ ಅದನ್ನು 'ಅಪಿತ್' ಆಗಿ ಭಾವಿಸಬೇಕೆಂದು ಸೂತ್ರದಲ್ಲಿ ಹಿಂದೆಯೇ ಹೇಳಲಾಗಿದೆ.

**ಲಙ್**: ಉದಾ– ಅಪಿಪಃ– ಪ್ರಥಮಪುರುಷಏಕವಚನದಲ್ಲಿ ಅಪಿಪರ್+ತ್ ಎಂದಿದ್ದಾಗ, ಅಪೃಕ್ತ 'ಹಲ್' ಆದ 'ತ್' ಕಾರಕ್ಕೆ "ಹಲ್ ಙ್ಯಾಭ್ಯೋ ದೀರ್ಘಾತ್ ಸು–ತಿ–ಸ್ಯಪೃಕ್ತಂ ಹಲ್" ಎಂಬ ಸೂತ್ರದಿಂದ ಲೋಪವು ಬರುತ್ತದೆ. ಅನ್ತ್ಯ ರೇಫಕ್ಕೆ ವಿಸರ್ಗ ಬಂದು

ಅಪಿಪಃ ಎಂದು ರೂಪವಾಗುತ್ತದೆ. ಮಧ್ಯಮಪುರುಷ ಏಕವಚನದಲ್ಲಿಯೂ ಕೂಡ ಅಪೃಕ್ತ 'ಹಲ್' ಆದ 'ಸ್' ಕಾರಕ್ಕೆ ಲೋಪ ಬಂದು ಮೇಲಿನ ರೂಪ(ಅಪಿಪಃ)ವೇ ಸಿದ್ಧವಾಗುತ್ತದೆ. ಉತ್ತಮಪುರುಷ ಏಕವಚನಲ್ಲಿ 'ಅಮ್' ಪಿತ್' ಆಗಿರುವುದರಿಂದ ಅಪಿಪರಮ್ ಎಂಬ ರೂಪವು ಸಿದ್ಧವಾಗುತ್ತದೆ. ಇತರ ಪ್ರತ್ಯಯಗಳೆಲ್ಲವೂ 'ಜಿತ್' ಗಳಾಗಿರುವುದರಿಂದ 'ಋ' ಕಾರಕ್ಕೆ 'ಉರ್' ಆದೇಶವು ಬರುತ್ತದೆ. ಹಲಾದಿ ಪ್ರತ್ಯಯಗಳು ಪರವಾದಾಗ 'ಉ' ಕಾರಕ್ಕೆ ದೀರ್ಘವು ಬರುತ್ತದೆ.

ಉದಾ– ಅಪಿಪರುಃ– ಪ್ರಥಮಪುರುಷ ಬಹುವಚನದಲ್ಲಿ "ಸಿಜಭ್ಯಸ್ತವಿಧಿಭ್ಯಶ್ಚ" ಎಂಬುದರಿಂದ 'ಜುಸ್(ಉಸ್)' ಆದೇಶವು ಬರುತ್ತದೆ. "ಜುಸಿಚ" ಎಂಬ ಸೂತ್ರದಿಂದ ಗುಣ(ಅರ್)ವು ಬಂದು ಅಪಿಪರುಃ ಎಂದು ರೂಪವು ಸಿದ್ಧವಾಗುತ್ತದೆ.

ರೂಪಗಳು: ಅಪಿಪಃ, ಅಪಿಪೂರ್ತಾಮ್, ಅಪಿಪರುಃ। ಅಪಿಪಃ, ಅಪಿಪೂರ್ತಮ್, ಅಪಿಪೂರ್ತ। ಅಪಿಪರಮ್, ಅಪಿಪೂರ್ವ, ಅಪಿಪೂರ್ಮ।

**ವಿಧಿಲಿಙ್:** ರೂಪಗಳು: ಪಿಪೂರ್ಯಾತ್, ಪಿಪೂರ್ಯಾತಾಮ್, ಪಿಪೂರ್ಯುಃ। ಪಿಪೂರ್ಯಾಃ, ಪಿಪೂರ್ಯಾತಮ್, ಪಿಪೂರ್ಯಾತ। ಪಿಪೂರ್ಯಾಮ್, ಪಿಪೂರ್ಯಾವ, ಪಿಪೂರ್ಯಾಮ।

ಸೂಚನೆ: ಇಲ್ಲಿ 'ಯಾಸುಟ್ (ಯಾಸ್)'ಗೆ ಜಿದ್ವದ್ಭಾವ ಬಂದಿರುವುದರಿಂದ ಗುಣವು ಬಂದಿರುವುದಿಲ್ಲ. ಆದುದರಿಂದ "ಉದೋಷ್ಠ್ಯಪೂರ್ವಸ್ಯ" ಸೂತ್ರದಿಂದ ಉತ್ವ(ಉ), ಮತ್ತು "ಹಲಿಚ" ಎಂಬುದರಿಂದ 'ಉ'ಕಾರಕ್ಕೆ ದೀರ್ಘ ಬಂದು ಈ ರೂಪವು ಬರುವುದು.

**ಆಶೀರ್ಲಿಙ್:** ರೂಪಗಳು: ಪೂರ್ಯಾತ್, ಪೂರ್ಯಾಸ್ತಾಮ್, ಪೂರ್ಯಾಸುಃ। ಪೂರ್ಯಾಃ, ಪೂರ್ಯಾಸ್ತಮ್, ಪೂರ್ಯಾಸ್ತ। ಪೂರ್ಯಾಸಮ್, ಪೂರ್ಯಾಸ್ವ, ಪೂರ್ಯಾಸ್ಮ।

ಸೂಚನೆ: ಈ 'ಲ್' ಕಾರವು ಆರ್ಧಧಾತುಕವಾಗಿರುವುದರಿಂದ 'ಶಪ್' ಮತ್ತು 'ಶ್ಲು'ಗಳು ಬರುವುದಿಲ್ಲ. ಈ ಕಾರಣದಿಂದ ದ್ವಿತ್ವಾದಿಗಳು ಆಗುವುದಿಲ್ಲ. 'ಯಾಸುಟ್' ಗೆ ಜಿದ್ವದ್ಭಾವ ಬರುವುದರಿಂದ ಗುಣ ಬಾರದೇ ಉತ್ವ ಬಂದು "ಹಲಿಚ" ಎಂಬುದರಿಂದ ಅದಕ್ಕೆ ದೀರ್ಘವು ಬರುತ್ತದೆ.

**ಲುಙ್:** ಉದಾ– ಅಪಾರೀತ್– ಪ್ರಥಮಪುರುಷ ಏಕವಚನದಲ್ಲಿ ಅಪ್ೃ+ಇಸ್+ಈತ್ ಎಂದಾದಮೇಲೆ, "ಸಿಚಿವೃದ್ಧಿಃ ಪರಸ್ಮೈಪದೇಷು" ಎಂಬುದರಿಂದ ಋ ಕಾರಕ್ಕೆ ದೀರ್ಘ ಬಂದು "ಇಟ ಈಟಿ" ಎಂಬುದರಿಂದ 'ಸ್' ಕಾರಕ್ಕೆ ಲೋಪ ಬಂದು 'ಇಈ'ಗಳಿಗೆ ಸವರ್ಣದೀರ್ಘ ಬಂದು ಅಪಾರೀತ್ ಎಂಬ ರೂಪವು ಸಿದ್ಧವಾಗುತ್ತದೆ.

**(ದೀರ್ಘದ ನಿಷೇಧವನ್ನು ವಿಧಿಸುವ ಸೂತ್ರ)**

**ಸೂತ್ರ– 617. ಸಿಚಿ ಚ ಪರಸ್ಮೈಪದೇಷು (7.2.40)**

ವೃತ್ತಿ – ಅತ್ರ ಇಟೋ ನ ದೀರ್ಘಃ। ಅಪಾರಿಷ್ಟಾಮ್, ಅಪರೀಷ್ಯತ್, ಅಪರಿಷ್ಯತ। ಓಹಾಕ್ ತ್ಯಾಗೇ।5। ಜಹಾತಿ।

ಅ.ವೃ.- ಋತೋ ವಾ" ಎಂಬ ಸೂತ್ರದಿಂದ 'ವೃತಃ' ಎಂಬ ಪದವೂ, "ಆರ್ಧಧಾತುಕಸ್ಯೇಡ್ವಲಾದೇಃ" ಎಂಬ ಸೂತ್ರದಿಂದ 'ಇಟ್' ಎಂಬ ಪದವೂ "ಗ್ರಹೋಽಲಿಟಿ ದೀರ್ಘಃ" ಎಂಬ ಸುತ್ರದಿಂದ 'ದೀರ್ಘಃ' ಎಂಬ ಪದವೂ "ನಲಿಜಿ" ಎಂಬ ಸೂತ್ರದಿಂದ 'ನ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ- ಪರಸ್ಮೈಪದವನ್ನು ಪರದಲ್ಲಿ ಉಳ್ಳ 'ಸಿಚ್' ಪರದಲ್ಲಿದ್ದಾಗ ವೃಙ್, ವೃಞ್, ಮತ್ತು ಋ ದನ್ತ ಧಾತುಗಳ ಪರದಲ್ಲಿ ಇರುವ 'ಇಟ್' ಗೆ ದೀರ್ಘವು ಬರುವುದಿಲ್ಲ, ಅಂದರೆ "ಋತೋ ವಾ" ಎಂಬ ಸೂತ್ರದಿಂದ 'ಇಟ್' ಗೆ ವೈಕಲ್ಪಿಕವಾಗಿ ದೀರ್ಘ ಬರಬೇಕಾಗಿತ್ತು. ಅದನ್ನು ಪ್ರಕೃತ ಸೂತ್ರವು ನಿಷೇಧ ಮಾಡುತ್ತದೆ.

ಉದಾ- ಅಪಾರಿಷ್ಟಾಮ್- ಪ್ರಥಮಪುರುಷ ದ್ವಿವಚನದಲ್ಲಿ ಹಿಂದಿನ ಪ್ರಕ್ರಿಯೆಯಂತೆ ಅಪಾರ್+ಇಸ್ ಎಂದಾದಮೇಲೆ ತಾಮ್ ಪ್ರತ್ಯಯವಿರುವುದರಿಂದ "ಋತೋ ವಾ" ಎಂಬ ಸೂತ್ರದಿಂದ 'ಇಟ್' ನಲ್ಲಿರುವ 'ಇ' ಕಾರಕ್ಕೆ ವೈಕಲ್ಪಿಕವಾಗಿ ದೀರ್ಘ ಬರಬೇಕಾಗಿತ್ತು ಅದನ್ನು ಪ್ರಕೃತ ಸೂತ್ರವು ನಿಷೇಧಿಸಿದೆ. 'ಸ್' ಕಾರಕ್ಕೆ ಷತ್ವವು ಮತ್ತು 'ಷ್' ಕಾರ 'ತ್' ಕಾರಗಳಿಗೆ ಷ್ಟುತ್ವ ಬಂದು ಅಪಾರಿಷ್ಟಾಮ್ ಎಂಬ ರೂಪವು ಸಿದ್ಧವಾಗಿದೆ.

ರೂಪಗಳು: ಅಪಾರೀತ್, ಅಪಾರಿಷ್ಟಾಮ್, ಅಪಾರಿಷುಃ। ಅಪಾರೀಃ, ಅಪಾರಿಷ್ಟಮ್, ಅಪಾರಿಷ್ಟ। ಅಪಾರಿಷಮ್, ಅಪಾರಿಷ್ವ, ಅಪಾರಿಷ್ಮ।

**ಲೃಙ್**: ದೀರ್ಘ ಬಂದ ರೂಪಗಳು: ಅಪರೀಷ್ಯತ್, ಅಪರೀಷ್ಯತಾಮ್, ಅಪರೀಷ್ಯನ್। ಅಪರೀಷ್ಯಃ, ಅಪರೀಷ್ಯತಮ್, ಅಪರೀಷ್ಯತ। ಅಪರೀಷ್ಯಮ್, ಅಪರೀಷ್ಯಾವ ಅಪರೀಷ್ಯಾಮ।

ದೀರ್ಘ ಬಾರದ ರೂಪಗಳು: ಅಪರಿಷ್ಯತ್, ಅಪರಿಷ್ಯತಾಮ್, ಅಪರಿಷ್ಯನ್। ಅಪರಿಷ್ಯಃ, ಅಪರಿಷ್ಯತಮ್, ಅಪರಿಷ್ಯತ। ಅಪರಿಷ್ಯಮ್, ಅಪರಿಷ್ಯಾವ, ಅಪರಿಷ್ಯಾಮ।

5. ಓಹಾಕ್ ತ್ಯಾಗೇ(ತ್ಯಜಿಸುವುದು)-"ಉಪದೇಶೇಽಜನುನಾಸಿಕ ಇತ್" ಎಂಬುದರಿಂದ 'ಓ' ಗೆ 'ಇತ್' ಸಜ್ಞೆ ಬಂದು ಲೋಪ ಬರುತ್ತದೆ. "ಹಲನ್ತ್ಯಮ್" ಎಂಬುದರಿಂದ 'ಕ್' ಕಾರಕ್ಕೆ ಲೋಪ ಬಂದು 'ಹಾ' ಮಾತ್ರ ಉಳಿಯುತ್ತದೆ. ಇದು ಪರಸ್ಮೈಪದಿಯಾಗಿದೆ. ಮತ್ತು ಅನಿಟ್ ಆಗಿಯೂ ಇದೆ.

**ಲಟ್**: ಉದಾ- ಜಹಾತಿ - ಪ್ರಥಮಪುರುಷ ಏಕವಚನದಲ್ಲಿ 'ಹಾ' ಧಾತುವಿನ ನಂತರ 'ಲಟ್' ಬಂದು ಅದಕ್ಕೆ ಮೂಲ ಆಖ್ಯಾತ ಪ್ರತ್ಯಯವಾದ 'ತಿಪ್(ತಿ)' ಆದೇಶವಾಗಿ ಬಂದು ಧಾತುವಿನ ಪರದಲ್ಲಿ 'ಶಪ್(ಅ)' ಬಂದು ಅದಕ್ಕೆ 'ಶ್ಲು(ಲೋಪ)' ಬಂದಮೇಲೆ ಅದೂ ಸರ್ವಾಪಹಾರ ಲೋಪವಾಗಿ ನಂತರ ಧಾತುವಿಗೆ ದ್ವಿತ್ವ ಮತ್ತು ದೀರ್ಘಕ್ಕೆ ಹ್ರಸ್ವ ಮತ್ತು "ಕುಹೋಶ್ಚುಃ" ಎಂಬುದರಿಂದ 'ಹ್' ಕಾರಕ್ಕೆ ಚುತ್ವ(ಝ್), ಮತ್ತು ಅದಕ್ಕೆ ಜಶ್ತ್ವ(ಜ್) ಬಂದು ಜಹಾತಿ ಎಂದು ರೂಪವು ಸಿದ್ಧವಾಗುತ್ತದೆ.)

**(ವೈಕಲ್ಪಿಕ ಇತ್ವವನ್ನು ವಿಧಿಸುವ ಸೂತ್ರ)**

**ಸೂತ್ರ- 618. ಜಹಾತೇಶ್ಚ (6.4.116)**

ವೃತ್ತಿ - ಇತ್ - ವಾ ಸ್ಯಾತ್ ಹಲಾದೌ ಕ್ಙಿತಿ ಸಾರ್ವಧಾತುಕೇ। ಜಹಿತಃ।

ಪ.ಛೇ.– ಜಹಾತೇಃ ಚ।

ಅ.ವೃ – "ಇದ್ ದರಿದ್ರಸ್ಯ" ಎಂಬ ಸೂತ್ರದಿಂದ 'ಇತ್' ಎಂಬ ಪದವೂ "ಭಿಯೋಽಇ್ಽನ್ಯತರಸ್ಯಾಮ್" ಎಂಬ ಸೂತ್ರದಿಂದ 'ಅನ್ಯತರಸ್ಯಾಮ್' ಎಂಬ ಪದವೂ "ಈ ಹಲ್ಯಘೋಃ" ಎಂಬ ಸೂತ್ರದಿಂದ 'ಹಲಿ' ಎಂಬ ಪದವೂ "ಗಮ–ಹನ–ಜನ–ಖನ–ಘಸಾಮ್ ಲೋಪಃ ಕ್ಙಿನಿತ್ಯನಙಿ" ಎಂಬ ಸೂತ್ರದಿಂದ 'ಕ್ಙಿತಿ' ಎಂಬ ಪದವೂ ಮತ್ತು "ಅತ ಉತ್ ಸಾರ್ವಧಾತುಕೇ" ಎಂಬಸೂತ್ರದಿಂದ 'ಸಾರ್ವಧಾತುಕೇ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ – ಹಲಾದಿಯಾದ 'ಕಿತ್' ಮತ್ತು 'ಙಿತ್' ಆದ ಸಾರ್ವಧಾತುವು ಪರದಲ್ಲಿದ್ದಾಗ, 'ಓಹಾಕ್(ಹಾ)' ಧಾತುವಿಗೆ ವಿಕಲ್ಪದಿಂದ ಹ್ರಸ್ವ 'ಇ' ಕಾರವು ಆದೇಶವಾಗಿ ಬರುತ್ತದೆ. 'ತಸ್' ಮೊದಲಾದ ಪ್ರತ್ಯಯಗಳು 'ಅಪಿತ್' ಆಗಿರುವುದರಿಂದ 'ಙಿದ್ವದ್ಭಾವವನ್ನು' ಹೊಂದುತ್ತವೆ. ಇತ್ವ ಬಂದರೆ ಜಹಿತಃ ಎಂದು ರೂಪವಾಗುತ್ತದೆ. ಇತ್ವ ಬಾರದಿದ್ದಾಗ, 'ಈತ್ವ(ಈ)' ವನ್ನು ಮುಂದಿನ ಸೂತ್ರದಲ್ಲಿ ಹೇಳುತ್ತಾನೆ.

**(ಶ್ನಾ ಮತ್ತು ಅಭ್ಯಸ್ತಗಳ 'ಆ' ಕಾರಕ್ಕೆ 'ಈ' ಕಾರವನ್ನು ವಿಧಿಸುವ ಸೂತ್ರ)**

**ಸೂತ್ರ– 619. ಈ ಹಲ್ಯಘೋಃ (6.4.113)**

ವೃತ್ತಿ – ಶ್ನಾ ಅಭ್ಯಸ್ತ0ಯೋಃ ಆತಃ ಈತ್ ಸ್ಯಾತ್ ಸಾರ್ವಧಾತುಕೇ ಕ್ಙಿತಿ ಹಲಾದೌ ನತು ಘೋಃ। ಜಹೀತಃ।

ಪ.ಛೇ.– ಈ, ಹಲಿ, ಅಘೋಃ।

ಅ.ವೃ.– "ಅತ ಉತ್ ಸಾರ್ವಧಾತುಕೇ" ಎಂಬ ಸೂತ್ರದಿಂದ 'ಸಾರ್ವಧಾತುಕೇ' ಎಂಬ ಪದವೂ, "ಶ್ನಾಭ್ಯಸ್ತಯೋರಾತಃ" ಎಂಬ ಸೂತ್ರದಿಂದ 'ಆತಃ' ಎಂಬ ಪದವೂ ಮತ್ತು "ಗಮ–ಹನ–ಜನ–ಖನ–ಘಸಾಂ ಲೋಪಃ ಕ್ಙಿತ್ಯನಙಿ" ಎಂಬ ಸೂತ್ರದಿಂದ 'ಕ್ಙಿತಿ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ – ಶ್ನಾ ಪತ್ಯಯ ಮತ್ತು ಅಭ್ಯಸ್ತ ಸಂಜ್ಞೆಯುಳ್ಳ ಧಾತುವಿನ 'ಆ' ಕಾರಕ್ಕೆ 'ಈ' ಕಾರವು ಆದೇಶವಾಗಿ ಬರುತ್ತದೆ. ಹಲಾದಿಯಾದ 'ಕಿತ್' ಮತ್ತು 'ಙಿತ್' ಆದ ಸಾರ್ವಧಾತುಕವು ಪರದಲ್ಲಿದ್ದಾಗ– ಆದರೆ 'ಘು' ಸಂಜ್ಞೆಯುಳ್ಳ ಧಾತುಗಳಿಗೆ ಅಲ್ಲ.

ಉದಾ– ಜಹಿತಃ/ಜಹೀತಃ– ಪ್ರಥಮಪುರುಷ ದ್ವಿವಚನದಲ್ಲಿ 'ಹಾ' ಧಾತುವಿನ ನಂತರ 'ತಸ್' ಮೂಲ ಆಖ್ಯಾತ ಪ್ರತ್ಯಯವು ಬಂದು ಹಾ+ತಸ್ ಎಂದಿದ್ದಾಗ, ಧಾತುವಿನ ಪರದಲ್ಲಿ 'ಶಪ್(ಅ)' ಬಂದು ಅದಕ್ಕೆ 'ಶ್ಲು(ಲೋಪ)' ಬಂದಾಗ ಧಾತುವಿಗೆ ದ್ವಿತ್ವ ಬಂದು ಹಾ ಹಾ+ತಸ್ ಎಂದಿದ್ದಾಗ, ಅಭ್ಯಸ್ತ 'ಆ' ಕಾರಕ್ಕೆ 'ಹ್ರಸ್ವ' ಬಂದು ಹಹಾ+ತಸ್ ಎಂದಿರುತ್ತದೆ. ಅಭ್ಯಸ್ತ 'ಹ್' ಗೆ ಚುತ್ವ(ಝ್) ಬಂದು ಅದಕ್ಕೆ "ಅಭ್ಯಾಸೇ ಚರ್ಚ" ಎಂಬುದರಿಂದ ಜಶ್ತ್ವ(ಜ್) ಬಂದು ಜಹಾ+ತಸ್ ಎಂದಿದ್ದಾಗ, "ಸಾರ್ವಧಾತುಕಮಪಿತ್" ಎಂಬುದರಿಂದ 'ತಸ್'ಗೆ ಙಿದ್ವದ್ಭಾವ ಬಂದು ಮತ್ತು ಹಲಾದಿಯಾಗಿಯೂ ಇರುತ್ತದೆ. ಆದುದರಿಂದ ಇದು ಪರದಲ್ಲಿರುವಾಗ ಮುಂದಿನ

ಸೂತ್ರವಾದ "ಶ್ನಾ ್ಯಭ್ಯಸ್ತಯೋರಾತಃ"(6.4.112) ಎಂಬುದರಿಂದ 'ಆ' ಕಾರಕ್ಕೆ ಲೋಪ ಬರಬೇಕಾಗಿತ್ತು. ಅದನ್ನು ಬಾಧಿಸಿ ಪ್ರಕೃತಸೂತ್ರದಿಂದ ದೀರ್ಘ 'ಈ' ಕಾರವು ಆದೇಶವಾಗಿ ಬರಬೇಕಾಗಿದ್ದಾಗ, ಅದನ್ನೂ ಬಾಧಿಸಿ "ಜಹಾತೇಶ್ಚ" ಎಂಬುದರಿಂದ 'ಹಾ' ನಲ್ಲಿರುವ 'ಆ'ಕಾರಕ್ಕೆ ವಿಕಲ್ಪದಿಂದ ಹ್ರಸ್ವ 'ಇ' ಕಾರವು ಆದೇಶವಾಗಿ ಬಂದು ಜಹಿ+ತಸ್= ಜಹಿತಃ ಎಂದು ರೂಪವಾಗುತ್ತದೆ. 'ಇ' ಕಾರ ಆದೇಶ ಬಾರದ ಪಕ್ಷದಲ್ಲಿ ಪ್ರಕೃತ ಸೂತ್ರದಿಂದ ನಿತ್ಯವಾಗಿ 'ಈ' ಕಾರವು ಆದೇಶವಾಗಿ ಬಂದು ಜಹೀ+ತಸ್= ಜಹೀತಃ ಎಂದು ಇನ್ನೊಂದು ರೂಪವು ಸಿದ್ಧವಾಗುತ್ತದೆ.

**('ಆ' ಕಾರಕ್ಕೆ ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ- 620. ಶ್ನಾಭ್ಯಸ್ತಯೋರಾತಃ (6.4.112)**

ವೃತ್ತಿ – ಅನಯೋಃ ಆತಃ ಲೋಪಃ ಕ್ಙಿತಿ ಸಾರ್ವಧಾತುಕೇ। ಜಹತಿ। ಜಹೌ। ಹಾತಾ। ಹಾಸ್ಯತಿ।ಜಹಾತು, ಜಹಿತಾತ್/ ಜಹೀತಾತ್।

ಪ.ಛೇ.– ಶ್ನಾಭ್ಯಸ್ತಯೋಃ, ಆತಃ।

ಅ.ವೃ.– "ಶ್ನಸೋರಲ್ಲೋಪಃ" ಎಂಬ ಸುತ್ರದಿಂದ 'ಲೋಪಃ' ಎಂಬ ಪದವೂ, "ಅತ ಉತ್ ಸಾರ್ವಧಾತುಕೇ" ಎಂಬುದರಿಂದ 'ಸಾರ್ವಧಾತುಕೇ" ಎಂಬ ಪದವೂ "ಗಮ–ಹನ–ಜನ–ಖನ–ಘಸಾಂ ಲೋಪಃ ಕ್ಙಿತ್ಯನಙಿ" ಎಂಬ ಸೂತ್ರದಿಂದ 'ಕ್ಙಿತಿ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ– ಕಿತ್ ಮತ್ತು ಙಿತ್ ಆದ ಸಾರ್ವಧಾತುಕವು ಪರದಲ್ಲಿದ್ದಾಗ 'ಶ್ನಾ' ಪ್ರತ್ಯಯಕ್ಕೆ ಮತ್ತು ಅಭ್ಯಸ್ತ ಸಂಜ್ಞೆಯುಳ್ಳ ಧಾತುವಿನ 'ಆ' ಕಾರಕ್ಕೆ ಲೋಪವು ಬರುತ್ತದೆ.

ಗಮನಕ್ಕೆ: ಈ ಸೂತ್ರದಿಂದ ಕೇವಲ 'ಝಿ' ಪರದಲ್ಲಿದ್ದಾಗ ಮಾತ್ರ 'ಆ' ಕಾರಕ್ಕೆ ಲೋಪವು ಬರುತ್ತದೆ. ಯಾಕೆಂದರೆ ಬೇರೆಡೆಯಲ್ಲಿ ಹಲಾದಿಗಳು ಸೇರೋಣದರಿಂದ ಇದನ್ನು ಬಾಧಿಸಿ "ಈ ಹಲ್ಯಘೋಃ (6.4.113)" ಎಂಬ ಸೂತ್ರವು ಪ್ರವೃತ್ತವಾಗುತ್ತದೆ.

ಉದಾ– ಜಹತಿ – ಪ್ರಥಮಪುರುಷ ಬಹುವಚನದಲ್ಲಿ 'ಹಾ' ಧಾತುವಿನ ಮೇಲೆ 'ಝಿ' ಬಂದು ಹಾ+ಝಿ ಎಂದಿದ್ದಾಗ ಜಹಾ ವರೆಗಿನ ಪ್ರಕ್ರಿಯೆ ಹಿಂದಿನಂತೆಯೇ ನಡೆದು ಜಹಾ+ಝಿ ಎಂದಿದ್ದಾಗ 'ಝ್' ಮಾತ್ರಕ್ಕೆ "ಅದಭ್ಯಸ್ತಾತ್"ಎಂಬುದರಿಂದ 'ಅತ್' ಆದೇಶ ಬಂದು ಜಹಾ+ಅತ್+ಇ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ಅನಭ್ಯಸ್ತರೂಪದ 'ಆ' ಕಾರಕ್ಕೆ ಲೋಪ ಬಂದು ಜಹ್+ಅತ್+ಇ=ಜಹತಿ ಎಂದು ರೂಪವು ಸಿದ್ಧವಾಗುತ್ತದೆ.

**ಲಟ್**: ರೂಪಗಳು: ಜಹಾತಿ, ಜಹಿತಃ/ಜಹೀತಃ, ಜಹತಿ। ಜಹಾಸಿ, ಜಹಿಥಃ/ ಜಹೀಥಃ, ಜಹಿಥ/ಜಹೀಥ। ಜಹಾಮಿ, ಜಹಿವಃ/ಜಹೀವಃ, ಜಹಿಮಃ/ಜಹೀಮಃ।

**ಲಿಟ್**: ಈ 'ಲ್' ಕಾರದಲ್ಲಿ ಧಾತುವು 'ಆ' ಕಾರಾನ್ತವಾಗಿರುವುದರಿಂದ 'ಪಾ' ಧಾತುವಿನ 'ಲಿಟ್' ರೂಪದಂತೆ ಪ್ರಕ್ರಿಯೆಯು ಇರುತ್ತದೆ. ಆದರೆ 'ಪಾ' ಧಾತುವಿನ 'ಪ್' ಕಾರಕ್ಕೆ ಯಾವ ಆದೇಶವೂ ಬರುವುದಿಲ್ಲ. ಆದರೆ 'ಹಾ' ಧಾತುವಿನ ಅಭ್ಯಾಸ 'ಹ್'

ಕಾರಕ್ಕೆ "ಕುಹೋಶ್ಚುಃ" ಎಂಬುದರಿಂದ ಚುತ್ವ(ಝ್) ಬಂದು ನಂತರ "ಅಭ್ಯಾಸೇ ಚರ್ಚ" ಎಂಬುದರಿಂದ 'ಝ್' ಕಾರಕ್ಕೆ ಜಶ್ತ್ವ(ಜ್) ಬರುತ್ತದೆ. ಇದರಿಂದ ಜಹೌ ಮೊದಲಾದ ರೂಪಗಳು ಸಿದ್ಧವಾಗುತ್ತವೆ.

ರೂಪಗಳು: ಜಹೌ, ಜಹತುಃ, ಜಹುಃ। ಜಹಿತ/ಜಹಾಥ, ಜಹಥುಃ, ಜಹ। ಜಹೌ, ಜಹಿವ, ಜಹಿಮ। ಇಲ್ಲಿ ಜಹಾಥ ಎಂಬ ರೂಪವು ಭಾರದ್ವಾಜನಿಯಮದಿಂದ 'ಇಟ್' ವಿಕಲ್ಪದ ರೂಪವಾಗಿದೆ.

**ಲುಟ್**: ಈ 'ಲ್' ಕಾರದಲ್ಲಿ 'ಹಾ' ಧಾತುವು ಅನಿಟ್ ಆಗಿರುವುದರಿಂದ ಕೆಳಗಿನಂತೆ ರೂಪಗಳಾಗುತ್ತವೆ. ರೂಪಗಳು: ಹಾತಾ, ಹಾತಾರೌ, ಹಾತಾರಃ। ಹಾತಾಸಿ, ಹತಾಸ್ಥಃ, ಹಾತಾಸ್ಥ। ಹಾತಾಸ್ಮಿ, ಹಾತಾಸ್ವಃ, ಹಾತಾಸ್ಮಃ।

**ಲೃಟ್**: ಈ 'ಲ್' ಕಾರದಲ್ಲಿ 'ಹಾ' ಧಾತುವು ಅನಿಟ್ ಆಗಿರುವುದರಿಂದ ಕೆಳಗಿನ ರೂಪಗಳು ಸಿದ್ಧವಾಗುತ್ತವೆ. ರೂಪಗಳು: ಹಾಸ್ಯತಿ, ಹಾಸ್ಯತಃ, ಹಾಸ್ಯನ್ತಿ। ಹಾಸ್ಯಸಿ, ಹಾಸ್ಯಥಃ, ಹಾಸ್ಯಥ। ಹಾಸ್ಯಾಮಿ, ಹಾಸ್ಯಾವಃ, ಹಾಸ್ಯಾಮಃ।6

**ಲೋಟ್**: ಉದಾ– ಜಹಾತು/ಜಹಿತಾತ್/ಜಹೀತಾತ್– ಪ್ರಥಮಪುರುಷ ಏಕವಚನದಲ್ಲಿ 'ಲಟ್' ಪ್ರಕ್ರಿಯೆಯಂತೆ ನಡೆದು ಜಹಾ+ತಿ ಎಂದಿರುವಾಗ "ಏರುಃ" ಎಂಬ ಸೂತ್ರದಿಂದ 'ಉತ್ವ(ಉ)' ಮಾಡಿದಮೇಲೆ ಜಹಾತು ಎಂಬ ರೂಪವು ಸಿದ್ಧವಾಗುತ್ತದೆ. ಇಲ್ಲಿ 'ಕಿತ್' 'ಙಿತ್' ಗಳು ಆಗದೇ ಇರೋಣದರಿಂದ 'ಇತ್ವ' 'ಈತ್ವ'ಗಳು ಆಗುವುದಿಲ್ಲ. ಆದರೆ ಇದಕ್ಕೆ ಬದಲಾಗಿ 'ತಾತಙ್(ತಾತ್)' ಬಂದಾಗ ಇದನ್ನು 'ಙಿತ್' ಆಗಿ ಭಾವಿಸಿ "ಜಹಾತೇಶ್ಚ" ಎಂಬುದರಿಂದ 'ಇತ್ವ' ಮಾಡಿ, "ಈ ಹಲ್ಯಘೋಃ" ಎಂಬುದರಿಂದ 'ಈತ್ವ' ಮಾಡಿದಮೇಲೆ ಜಹಿತಾತ್/ಜಹೀತಾತ್ ಎಂಬ ರೂಪಗಳು ಸಿದ್ಧವಾಗುತ್ತವೆ. ಹೀಗೆ ಜಹಾತು/ಜಹಿತಾತ್, ಜಹೀತಾತ್ ಎಂದು ಮೂರು ರೂಪಗಳು ಸಿದ್ಧವಾಗುತ್ತವೆ.

ಉದಾ– ಜಹಿತಾಮ್/ಜಹೀತಾಮ್– ಪ್ರಥಮ ಪುರುಷ ದ್ವಿವಚನದಲ್ಲಿ ಹ್ರಸ್ವ, ದೀರ್ಘ ರೂಪಗಳಿಂದ "ಜಹಾತೇಶ್ಚ" ಎಂಬುದರಿಂದ 'ಇತ್ವ' "ಈ ಹಲ್ಯಘೋಃ" ಎಂಬುದರಿಂದ 'ಈತ್ವ' ಬಂದು ಜಹಿತಾಮ್/ಜಹೀತಾಮ್ ಎಂಬ ರೂಪಗಳು ಸಿದ್ಧವಾಗುತ್ತವೆ.

ಉದಾ– ಜಹತು– ಪ್ರಥಮಪುರುಷ ಬಹುವಚನದಲ್ಲಿ ಜಹಾ+ಝಿ (ಝ್+ಇ) ಎಂದಿದ್ದಾಗ, 'ಝ್' ಗೆ "ಅದಭ್ಯಸ್ತಾತ್" ಎಂಬುದರಿಂದ 'ಅತ್' ಆದೇಶ ಬಂದು ಜಹಾ+ಅತ್+ಇ ಎಂದಿದ್ದಾಗ, "ಶ್ನಾಽಭ್ಯಸ್ತಯೋರಾತಃ" (6.4.112) ಎಂಬ ಸೂತ್ರದಿಂದ 'ಆ' ಕಾರಕ್ಕೆ ಲೋಪ ಬಂದು "ಏರುಃ" ಎಂಬುದರಿಂದ 'ಉತ್ವ(ಉ)' ಬಂದು ಜಹತು ಎಂದು ರೂಪವಾಗುತ್ತದೆ.

**(ಆ-ಕಾರಾದೇಶವನ್ನು ವಿಧಿಸುವ ಸೂತ್ರ)**

**ಸೂತ್ರ- 621. ಆ ಚ ಹೌ (6.4.117)**

ವೃತ್ತಿ – ಜಹಾತೇಃ ಹೌ ಪರೇ ಆ ಸ್ಯಾತ್ ಚಾತ್ ಇತ್–ಈತೌ। ಜಹಾಹಿ, ಜಹಿಹಿ, ಜಹೀಹಿ। ಅಜಹಾತ್। ಅಜಹಿತಾಮ್/ಅಜಹೀತಾಮ್। ಅಜಹುಃ।

ಅ.ವ್ಯ. – "ಇದ್ ದರಿದ್ರಸ್ಯ" ಎಂಬ ಸೂತ್ರದಿಂದ 'ಇತ್' ಎಂಬ ಪದವೂ, "ಈ ಹಲ್ಯಘೋಃ" ಎಂಬ ಸೂತ್ರದಿಂದ 'ಈ' ಎಂಬ ಪದವೂ "ಜಹಾತೇಶ್ಚ" ಎಂಬುದರಿಂದ 'ಜಹಾತೇಃ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ– 'ಹಿ' ಪರದಲ್ಲಿದ್ದಾಗ 'ಹಾ' ಧಾತುವಿನ 'ಆ' ಕಾರಕ್ಕೆ 'ಆ' ಕಾರವೇ ಆದೇಶವು ಬರುತ್ತದೆ. ಜೊತೆಗೇನೇ 'ಇ' ಕಾರ ಮತ್ತು 'ಈ' ಕಾರಗಳು ಆದೇಶವಾಗಿಯೂ ಬರುತ್ತವೆ.

**ಲೋಟ್**:

ಸೂಚನೆ: ಸೂತ್ರದಲ್ಲಿ 'ಚ' ಕಾರವು ಪಠಿತವಾಗಿರುವುದರಿಂದ ಪೂರ್ವ ಸೂತ್ರದಿಂದ ಹೇಳಲ್ಪಟ್ಟಿರುವ 'ಇ' ಕಾರ ಮತ್ತು 'ಈ' ಕಾರಗಳು ವಿಹಿತವಾಗಿವೆ. ಈ ರೀತಿಯಗಿ 'ಹಿ' ಪರದಲ್ಲಿ ಇರೋಣದರಿಂದ 'ಆ' ಕಾರ, 'ಇ' ಕಾರ ಮತ್ತು 'ಈ' ಕಾರಗಳಿಂದ ಕೂಡಿದ ಮೂರು ರೂಪಗಳು ಆಗುತ್ತವೆ.

ಉದಾ– ಜಹಾಹಿ/ಜಹಿಹಿ/ಜಹೀಹಿ– ಮಧ್ಯಮಪುರುಷ ಏಕವಚನದಲ್ಲಿ ಜಹಾ+ಸಿಪ್(ಸ್) ಎಂದಿದ್ದಾಗ, "ಸೇರ್ಹ್ಯಪಿಚ್ಚ" ಎಂಬುದರಿಂದ 'ಸಿ' ಗೆ 'ಹಿ' ಆದೇಶವಾಗಿ ಬಂದು ಜಹಾ+ಹಿ ಎಂದಿರುತ್ತದೆ. ಇದೇ ಸೂತ್ರದಿಂದ ಇದು 'ಅಪಿತ್' ಆಗುವುದರಿಂದ "ಸಾರ್ವಧಾತುಕಮಪಿತ್" ಎಂಬುದರಿಂದ 'ಙಿದ್ವದ್ಭಾವ'ವನ್ನು ಹೊಂದುತ್ತದೆ. ಆದುದರಿಂದ ಪೂರ್ವ ಸೂತ್ರಗಳಿಂದ 'ಇ' ಕಾರ ಮತ್ತು 'ಈ' ಕಾರಗಳು ಬರಬೇಕಾಗಿದ್ದಾಗ– ಪ್ರಕೃತ ಸೂತ್ರದಿಂದ 'ಆ' ಕಾರಾದೇಶವು ವಿಧಿಸಲಾಗಿರುವುದರಿಂದ 'ಹಾ'ನಲ್ಲಿರುವ 'ಆ' ಕಾರಕ್ಕೆ 'ಆ' ಕಾರವೇ ಆದೇಶವಾಗಿ ಒಂದು ಪಕ್ಷದಿಂದ ಬಂದಿದೆ. 'ಚ' ಕಾರದಿಂದ 'ಇ' ಕಾರ ಮತ್ತು 'ಈ' ಕಾರಗಳು ಆದೇಶವಾಗಿಯೂ ಬಂದಿವೆ. ಹೀಗಾಗಿ ಜಹಾಹಿ/ಜಹಿಹಿ/ ಜಹೀಹಿ– ಎಂಬ ಮೂರು ರೂಪಗಳು ಸಿದ್ಧವಾಗುತ್ತವೆ.

ರೂಪಗಳು: ಜಹಾತು/ ಜಹಿತಾತ್/ ಜಹೀತಾತ್, ಜಹಿತಾಮ್/ ಜಹೀತಾಮ್, ಜಹತು। ಜಹಾಹಿ/ ಜಹಿಹಿ/ ಜಹೀಹಿ/ ಜಹಿತಾತ್/ ಜಹೀತಾತ್, ಜಹಿತಮ್/ಜಹೀತಮ್, ಜಹಿತ/ಜಹೀತ। ಜಹಾನಿ/ ಜಹಾವ, ಜಹಾಮ।

**ಲಙ್**: ರೂಪಗಳು: ಅಜಹಾತ್, ಅಜಹಿತಾಮ್/ಅಜಹೀತಾಮ್, ಅಜಹುಃ। ಅಜಹಾಃ, ಅಜಹಿತಮ್/ಅಜಹೀತಮ್, ಅಜಹಿತ/ಅಜಹೀತ। ಅಜಹಾಮ್, ಅಜಹಿವ/ಅಜಹೀವ, ಅಜಹಿಮ/ಅಜಹೀಮ।

ಸೂಚನೆ: ಲಙ್ ರೂಪವು ಹಿಂದಿನಂತೆಯೇ ಇದೆ. ಆದರೆ 'ಝಿ'ಗೆ "ಸಿಜಭ್ಯಸ್ತವಿದಿಭ್ಯಶ್ಚ" ಎಂಬ ಸೂತ್ರದಿಂದ 'ಜುಸ್' ಬಂದಾಗ "ಶ್ನಾಭ್ಯಸ್ತಯೋರಾತಃ" (6.4.112) ಎಂಬ ಸೂತ್ರದಿಂದ 'ಆ' ಕಾರಕ್ಕೆ ಲೋಪ ಬರುತ್ತದೆ.

**('ಆ' ಕಾರ ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ– 622. ಲೋಪೋ ಯಿ (6.4.118)**

ವೃತ್ತಿ – ಜಹಾತೇಃ ಆ ಲೋಪಃ ಯಾದೌ ಸಾರ್ವಧಾತುಕೇ। ಜಹ್ಯಾತ್ (490)

ಏರ್ಲಿಙಿ। ಹೇಯಾತ್। ಅಹಾಸೀತ್। ಅಹಾಸ್ಯತ್। ಮಾಙ್ ಮಾನೇ ಶಬ್ದೇ ಚ ।6।

ಪ.ಛೇ.– ಲೋಪಃ, ಯಿ।

ಅ.ವ್ಯ.– "ಅತ ಉತ್ ಸಾರ್ವಧಾತುಕೇ" ಎಂಬ ಸೂತ್ರದಿಂದ 'ಸಾರ್ವಧಾತುಕೇ' ಎಂಬ ಪದವು, ಮತ್ತು "ಜಹಾತೇಶ್ಚ" ಎಂಬ ಸೂತ್ರದಿಂದ 'ಜಹಾತೇಃ' ಎಂಬ ಪದವು ಅನುವೃತ್ತವಾಗುತ್ತವೆ.

ಅರ್ಥ – 'ಯ್' ಕಾರಾದಿ ಸಾರ್ವಧಾತುಕ ಪ್ರತ್ಯಯವು ಪರದಲ್ಲಿದ್ದಾಗ, 'ಹಾ' ಧಾತುವಿನ 'ಆ' ಕಾರಕ್ಕೆ ಲೋಪ ಬರುತ್ತದೆ.

'ವಿಧಿಲಿಙ್' 'ಲ್' ಕಾರವು 'ಸಾರ್ವಧಾತುಕ'ವಾಗಿದೆ ಮತ್ತು 'ಆಶೀರ್ಲಿಙ್' 'ಲ್' ಕಾರವು "ಲಿಙಾಶಿಷೀ" ಎಂಬುದರಿಂದ ಆರ್ಧಧಾತುಕ ಸಂಜ್ಞೆಯನ್ನು ಪಡೆಯುತ್ತದೆ.

ವಿಧಿಲಿಙ್:ಉದಾ– ಜಹ್ಯಾತ್: ಪ್ರಥಮಪುರುಷ ಏಕಾವಚನದಲ್ಲಿ 'ಹಾ' ಧಾತುವಿನ ನಂತರ 'ಲಿಙ್' ಗೆ 'ತಿಪ್(ತಿ)' ಆದೇಶ ಬಂದು ಹಾ+ತಿ ಎಂದಿದ್ದಾಗ, 'ತಿಪ್' ನಲ್ಲಿರುವ 'ಇ'ಕಾರಕ್ಕೆ "ಇತಶ್ಚ" ಎಂಬುದರಿಂದ ಲೋಪ ಬಂದು ಹಾ+ತ್ ಎಂದಿದ್ದಾಗ,

ಧಾತುವಿನ ಪರದಲ್ಲಿ ಇರುವ 'ಶಪ್' ಗೆ 'ಶ್ಲು(ಲೋಪ)' ಬಂದು, ಧಾತುವಿಗೆ ದ್ವಿತ್ವ ಬಂದು ಹಾಹಾ+ತ್ ಎಂದಿದ್ದಾಗ, "ಹ್ರಸ್ವಃ" ಎಂಬುದರಿಂದ ಅಭ್ಯಸ್ತ 'ಹಾ' ಕಾರದ 'ಆ' ಕಾರಕ್ಕೆ 'ಅ' ಕಾರ ಬಂದು ಹ+ಹಾ+ತ್ ಎಂದಿದ್ದಾಗ, ಅಭ್ಯಸ್ತ 'ಹ್' ಕಾರಕ್ಕೆ 'ಚುತ್ವ(ಝ್)' ಬಂದು ನಂತರ ಅದಕ್ಕೆ "ಅಭ್ಯಾಸೇ ಚರ್ಚ" ಎಂಬುದರಿಂದ ಜಶ್ತ್ವ(ಜ್) ಬಂದು ಜ+ಹಾ+ತ್ ಎಂದಿರುತ್ತದೆ. ಪ್ರತ್ಯಯಕ್ಕೆ 'ಯಾಸುಟ್(ಯಾಸ್)' ಆಗಮ ಆದ್ಯವಯವಾಗಿ ಬಂದು ಜಹಾ+ಯಾಸ್+ತ್ ಎಂದಿದ್ದಾಗ ಪ್ರಕೃತ ಸೂತ್ರದಿಂದ ಅನಭ್ಯಸ್ತ 'ಹಾ' ಕಾರದ 'ಆ' ಕಾರಕ್ಕೆ ಲೋಪ ಬಂದು ಜಹ್+ಯಾತ್=ಜಹ್ಯಾತ್ ಎಂದು ರೂಪವಾಗುತ್ತದೆ.

ರೂಪಗಳು: ಜಹ್ಯಾತ್, ಜಹ್ಯಾತಾಮ್, ಜಹ್ಯುಃ। ಜಹ್ಯಾಃ, ಜಹ್ಯಾತಮ್, ಜಹ್ಯಾತ। ಜಹ್ಯಾಮ್, ಜಹ್ಯಾವ, ಜಹ್ಯಾಮ।

**ಅಶೀರ್ಲಿಙ್**: ಉದಾ– ಹೇಯಾತ್– ಪ್ರಥಮಪುರುಷ ಏಕವಚನದಲ್ಲಿ 'ಹಾ' ಧಾತುವಿನ ನಂತರ 'ತಿಪ್(ತಿ)' ಆದೇಶ ಬಂದು ಹಾ+ತಿ ಎಂದಿದ್ದಾಗ, 'ತಿಪ್' ನಲ್ಲಿರುವ 'ಇ'ಕಾರಕ್ಕೆ "ಇತಶ್ಚ" ಎಂಬುದರಿಂದ ಲೋಪ ಬಂದು ಹಾ+ತ್ ಎಂದಿದ್ದಾಗ, ಈ 'ಲ್' ಕಾರವು ಆರ್ಧಧಾತುಕವಾಗಿರುವುದರಿಂದ ಶಪ್, ಶ್ಲು ಮತ್ತು ಧಾತುವಿಗೆ ದ್ವಿತ್ವ ಬರುವುದಿಲ್ಲ. ಪ್ರತ್ಯಯಕ್ಕೆ 'ಯಾಸುಟ್(ಯಾಸ್)' ಆಗಮ ಆದ್ಯವಯವಾಗಿ ಬಂದು ಹಾ+ಯಾಸ್+ತ್ ಎಂದಿದ್ದಾಗ "ಲಿಙಃ ಸಲೋಪೋಽನನ್ತ್ಯಸ್ಯ" ಎಂಬುದರಿಂದ 'ಸ್' ಕಾರಕ್ಕೆ ಲೋಪ ಬಂದು ಹಾ+ಯಾ+ತ್ ಎಂದಿರುತ್ತದೆ. "ಏರ್ಲಿಙಿ" ಎಂಬುದರಿಂದ 'ಹಾ' ನಲ್ಲಿರುವ 'ಆ' ಕಾರಕ್ಕೆ ಏತ್ವ(ಏ) ಬಂದು ಹೇ+ಯಾ+ತ್=ಹೇಯಾತ್ ಎಂದು ರೂಪವು ಸಿದ್ಧವಾಗುತ್ತದೆ. ರೂಪಗಳು:ಹೇಯಾತ್, ಹೇಯಾಸ್ತಾಮ್, ಹೇಯಾಸುಃ। ಹೇಯಾಃ, ಹೇಯಾಸ್ತಮ್, ಹೇಯಾಸ್ತ। ಹೇಯಾಸಮ್, ಹೇಯಾಸ್ವ, ಹೇಯಾಸ್ಮ।

ಲುಙ್:ರೂಪಗಳು: ಅಹಾಸೀತ್, ಅಹಾಸಿಷ್ಟಾಮ್, ಅಹಾಸಿಷುಃ। ಅಹಾಸೀಃ,

ಅಹಾಸಿಷ್ವಮ್, ಅಹಾಸಿಷ್ವ ಅಹಾಸಿಷಮ್, ಅಹಾಸಿಷ್ವ, ಅಹಾಸಿಷ್ಮ।

ಸೂಚನೆ: ಈ 'ಲ್' ಕಾರದಲ್ಲಿ 'ಹಾ' ಧಾತುವಿಗೆ ಅಡಾಗಮ ಬಂದು ಅಹಾ+ತಿ ಎಂದಿದ್ದಾಗ, 'ತಿ' ನಲ್ಲಿರುವ 'ಇ'ಕಾರಕ್ಕೆ "ಇತಶ್ಚ" ಎಂಬುದರಿಂದ ಲೋಪ ಬಂದು ಅಹಾ+ತ್ ಎಂದಿದ್ದಾಗ, ಅಪೃಕ್ತ 'ಹಲ್' ಆದ 'ತ್' ಗೆ 'ಈಟ್(ಈ)' ಆಗಮ ಬಂದು ಅಹಾ+ಈತ್ ಎಂದಿದ್ದಾಗ, ಧಾತುವಿಗೆ 'ಸಿಚ್(ಸ್)' ಆಗಮ ಬಂದು ಅಹಾಸ್+ ಈತ್ ಎಂದಿದ್ದಾಗ, 'ಹಾ' ಧಾತುವು 'ಆ' ಕಾರನ್ತವಾಗಿರುವುದರಿಂದ "ಯಮ-ರಮ-ನಮಾತಾಮ್ ಸಕ್ ಚ" ಎಂಬುದರಿಂದ 'ಸಕ್(ಸ್)' ಆಗಮ ಧಾತುವಿಗೆ ಅಂತಾವಯುಯವಾಗಿಯೂ ಮತ್ತು 'ಸಿಚ್'ಗೆ 'ಇಟ್' ಆಗವು ಬಂದು ಅಹಾಸ್+ಇಸ್+ಈತ್ ಎಂದಿದ್ದಾಗ, "ಇಟ ಈಟಿ" ಎಂಬುದರಿಂದ 'ಇ' ಕಾರ 'ಈ' ಕಾರಗಳ ಮಧ್ಯದಲ್ಲಿರುವ 'ಸಿಚ್' ನ 'ಸ್' ಕಾರಕ್ಕೆ ಲೋಪ ಬಂದು ಅಹಾಸ್+ ಈತ್=ಅಹಾಸೀತ್ ಎಂದು ರೂಪವು ಸಿದ್ಧವಾಗುತ್ತದೆ.

**ಲೃಙ್**: ರೂಪಗಳು; ಅಹಾಸ್ಯತ್, ಅಹಾಸ್ಯತಾಮ್, ಅಹಾಸ್ಯನ್। ಅಹಾಸ್ಯಃ, ಅಹಾಸ್ಯತಮ್, ಅಹಾಸ್ಯತ। ಅಹಾಸ್ಯಮ್, ಅಹಾಸ್ಯಾವ, ಅಹಾಸ್ಯಾಮ।

**-: ಇಲ್ಲಿಗೆ ಪರಸ್ಮೈಪದಿ ಧಾತುಗಳು ಮುಗಿದವು :-**

**ಈಗ ಆತ್ಮನೇಪದಿ ಧಾತುಗಳ ಪ್ರಕ್ರಿಯೆ ಆರಂಭವಾಗುತ್ತದೆ.**

6. ಮಾಙ್ ಮಾನೇ ಶಬ್ದೇ ಚ (ಅಳೆಯುವುದು ಮತ್ತು ಶಬ್ದ ಮಾಡುವುದು.) – ಇದರಲ್ಲಿ 'ಮಾ' ಮಾತ್ರ ಉಳಿಯುತ್ತದೆ. ಇದು 'ಙಿತ್' ಆಗಿರುವುದರಿಂದ ಆತ್ಮನೇಪದಿಯಾಗಿಯೂ ಇದೆ. ಮತ್ತು ಈ ಧಾತುವು 'ಅನಿಟ್' ಆಗಿಯೂ ಇದೆ.

**(ಇತ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ- 623.ಭೃಞಾಮಿತ್** (7.4.76)

ವೃತ್ತಿ – ಭೃಞ್ ಮಾಙ್ ಓಹಾಙ್ ಏಷಾಂ ತ್ರಯಾಣಾಂ ಅಭ್ಯಾಸಸ್ಯ ಇತ್ ಸ್ಯಾತ್ ಶ್ಲೌ। ಮಿಮೀತೇ। ಮಿಮಾತೇ। ಮಿಮತೇ। ಮಮೇ। ಮಾತಾ। ಮಾಸ್ಯತೇ। ಮಿಮೀತಾಮ್। ಅಮಿಮೀತ। ಮಿಮೀತ। ಮಾಸೀಷ್ಟ ಅಮಾಸ್ತ। ಅಮಾಸ್ಯತ। ಓಹಾಙ್ ಗತೌ।7। ಜಿಹೀತೇ। ಜಿಹಾತೇ।ಜಿಹತೇ ।ಜಹೇ। ಹಾತಾ। ಹಾಸ್ಯತೇ। ಜಿಹೀತಾಮ್। ಅಜಿಹೀತ। ಜಿಹೀತ। ಹಾಸೀಷ್ಟ ಅಹಾಸ್ತ। ಅಹಾಸ್ಯತ। ಡುಭೃಞ್ ಧಾರಣಪೋಷಣಯೋಃ।8। ಬಿಭರ್ತಿ। ಬಿಭೃತಃ। ಬಿಭ್ರತಿ। ಬಿಭೃತೇ। ಬಿಭ್ರಾತೇ। ಬಿಭ್ರತೇ। 7ಡುದಾಞ್ ದಾನೇ।9।

ದದಾತಿ। ದತ್ತಃ। ದದತಿ। ದತ್ತೇ। ದದಾತೇ। ದದತೇ। ದದೌ, ದದೇ। ದಾತಾಸಿ।ದಾತಾಸೇ। ದಾಸ್ಯತಿ। ದಾಸ್ಯತೇ। ದದಾತು।

ಪ.ಛೇ.- ಭೃಞಾಮ್, ಇತ್।

ಅ.ವೃ – "ನಿಜಾಮ್ ತ್ರಯಾಣಾಂ ಗುಣಃ ಶ್ಲೌ" ಎಂಬ ಸೂತ್ರದಿಂದ 'ತ್ರಯಾಣಾಮ್', ಮತ್ತು 'ಶ್ಲೌ' ಎಂಬ ಪದಗಳೂ ಹಾಗೂ "ಅತ್ರಲೋಪೋಽಭ್ಯಾಸಸ್ಯ" ಎಂಬುದರಿಂದ 'ಅಭ್ಯಾಸಸ್ಯ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ--'ಶ್ಲು (ಲೋಪ)' ಪರದಲ್ಲಿದ್ದಾಗ, ಭೃಞ್, ಮಾಙ್, ಮತ್ತು ಓಹಾಙ್ ಧಾತುಗಳ ಅಭ್ಯಾಸಕ್ಕೆ ಹ್ರಸ್ವ 'ಇ' ಕಾರವು ಆದೇಶವಾಗಿ ಬರುತ್ತದೆ.

ಸೂಚನೆ: 'ಶ್ಲು' ಪರದಲ್ಲಿದ್ದಾಗ, ಈ ಸೂತ್ರವು ಅಭ್ಯಾಸಾಕ್ಕೆ 'ಇ' ಕಾರವನ್ನು ಹೇಳುತ್ತದೆ. ಆದ್ದರಿಂದ ಇದು 'ಲಿಟ್' ರೂಪಗಳಿಗೆ ಸಂಬಂಧಪಡುವುದಿಲ್ಲ.

**ಲಟ್**: ಉದಾ– ಮಿಮೀತೇ– ಪ್ರಥಮಪುರುಷ ಏಕವಚನದಲ್ಲಿ 'ಮಾ' ಧಾತುವಿನ ನಂತರ ಲಡಾದೇಶವಾದ ಆತ್ಮನೇಪದದ ಮೂಲ ಆಖ್ಯಾತ ಪ್ರತ್ಯಯವಾದ 'ತ' ಬಂದು ಮಾ+ತ ಎಂದಿದ್ದಾಗ, ಧಾತುವಿನ ಪರದಲ್ಲಿ 'ಶಪ್(ಅ)' ಬಂದು ಅದಕ್ಕೆ 'ಶ್ಲು(ಲೋಪ)' ಬಂದು, ಧಾತುವಿಗೆ ದ್ವಿತ್ವ ಮಾಡಿದಮೇಲೆ ಮಾಮಾ+ತ ಎಂದಿದ್ದಾಗ, ಧಾತುವಿಗೆ ಅಭ್ಯಾಸಸಂಜ್ಞೆ ಬಂದು, "ಹ್ರಸ್ವಃ" ಎಂಬುದರಿಂದ ಅಭ್ಯಾಸದ 'ಆ' ಕಾರಕ್ಕೆ 'ಹ್ರಸ್ವ(ಅ)' ಬಂದು ಮಮಾ +ತ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ಅಭ್ಯಾಸದ ಅದೇ 'ಮ' ಕಾರದಲ್ಲಿರುವ 'ಅ' ಕಾರಕ್ಕೆ 'ಇ' ಕಾರವು ಆದೇಶವಾಗಿ ಬಂದು, ಮಿಮಾ+ತ ಎಂದಾಗುತ್ತದೆ. ಹಲಾದಿಯಾದ 'ತ' ಕಾರವು ಪರದಲ್ಲಿರೋಣದರಿಂದ "ಈ ಹಲ್ಯಘೋಃ" ಎಂಬುದರಿಂದ ಅನಭ್ಯಸ್ತ 'ಮ್' ಕಾರದ 'ಆ' ಕಾರಕ್ಕೆ 'ಈ' ಕಾರವು ಬಂದು ಮಿಮೀ+ತ ಎಂದಿರುತದೆ "ಟಿತ ಆತ್ಮನೇಪದಾನಾಂ ಟೇರೆ" ಎಂಬುದರಿಂದ ಅನ್ತ್ಯ 'ಅ' ಕಾರಕ್ಕೆ 'ಏ' ಕಾರವು ಬಂದು ಮಿಮೀತೇ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಮಿಮಾತೇ– ಪ್ರಥಮಪುರುಷ ದ್ವಿವಚನದಲ್ಲಿ 'ಮಾ' ಧಾತುವಿನಮೇಲೆ ಲಡಾದೇಶವಾದ 'ಆತಾಮ್' ಎಂಬ ಅಜಾದಿಯಾದ ಪ್ರತ್ಯಯ ಬಂದು ಮಾ+ಆತಾಮ್ ಎಂದಿದ್ದಾಗ, ಹಿಂದಿನಂತೆಯೇ ಪ್ರಕ್ರಿಯೆ ನಡೆದು ಮಿಮಾ+ಆತಾಮ್ ಎಂದಿದ್ದಾಗ, "ಶ್ನಾಭ್ಯಸ್ತಯೋರಾತಃ" ಎಂಬುದರಿಂದ 'ಆ' ಕಾರಕ್ಕೆ ಅನಭ್ಯಸ್ತ 'ಮ್' ಕಾರೋತ್ತರ 'ಆ' ಕಾರಕ್ಕೆ ಲೋಪ ಬಂದು ಮಿಮ್+ಆತಾಮ್ ಎಂದಿರುತ್ತದೆ. "ಟಿತ ಆತ್ಮನೇಪದಾನಾಂ ಟೇರೇ" ಎಂಬುದರಿಂದ 'ಆತಾಮ್' ನಲ್ಲಿರುವ 'ಟಿ (ಆಮ್)' ಗೆ 'ಏತ್ವ (ಏ)' ಬಂದು ಮಿಮ್+ಆತ್+ಏ=ಮಿಮಾತೇ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಮಿಮತೇ– ಪ್ರಥಮಪುರುಷ ಬಹುವಚನದಲ್ಲಿ ಹಿಂದಿನಂತೆಯೇ ಪ್ರಕ್ರಿಯೆ ನಡೆದು ಮಿಮ್+ಝ ಎಂದಿದ್ದಾಗ, "ಅದಭ್ಯಾಸ್ತಾತ್" ಎಂಬುದರಿಂದ 'ಝ್' ಗೆ 'ಅತ್' ಆದೇಶ ಬಂದು ಮಿಮ್+ಅತ್+ಇ ಎಂದಿದ್ದಾಗ, "ಟಿತ ಆತ್ಮನೇಪದಾನಾಂ ಟೇರೇ" ಎಂಬುದರಿಂದ 'ಇ' ಗೆ 'ಏತ್ವ(ಏ)' ಬಂದು ಮಿಮ್+ಅತ್+ಏ=ಮಿಮತೇ ಎಂದು ರೂಪವಾಗುತ್ತದೆ.

ರೂಪಗಳು: ಮಿಮೀತೇ, ಮಿಮಾತೇ, ಮಿಮತೇ। ಮಿಮೀಷೇ, ಮಿಮಾಥೇ, ಮಿಮೀಧ್ವೇ। ಮಿಮೇ. ಮಿಮೀವಹೇ, ಮಿಮೀಮಹೇ।

ಲಿಟ್: ಉದಾ– ಮಮೇ – ಪ್ರಥಮಪುರುಷ ಏಕವಚನದಲ್ಲಿ 'ಮಾ' ಧಾತುನ ನಂತರ ಆತ್ಮನೇಪದದ ಪ್ರತ್ಯಯವಾದ 'ತ' ಬಂದು, ಮಾ+ತ ಎಂದಿದ್ದಾಗ, ಅದಕ್ಕೆ ಅಭಿನವ ಆಖ್ಯಾತ ಪ್ರತ್ಯಯವಾದ 'ಏ' ಬಂದು, ಮಾ+ಏ ಎಂದಿದ್ದಾಗ, ಧಾತುವಿಗೆ ದ್ವಿತ್ವ ಬಂದು ಮಾಮಾ+ಏ ಎಂದಿದ್ದಾಗ, "ಹ್ರಸ್ವಃ" ಎಂಬುದರಿಂದ ಅಭ್ಯಾಸದ 'ಆ'

ಕಾರಕ್ಕೆ ಹ್ರಸ್ವ ಬಂದು, ಮಮಾ+ಏ ಎಂದಿದ್ದಾಗ, "ಆತೋಲೋಪ ಇಟಿಚ" ಎಂಬುದರಿಂದ ಅನಭ್ಯಸ್ತ 'ಆ' ಕಾರಕ್ಕೆ ಲೋಪ ಬಂದು ಮಮ್+ಏ=ಮಮೇ ಎಂದು ರೂಪವಾಗುತ್ತದೆ. ರೂಪಗಳು: ಮಮೇ, ಮಮಾತೇ, ಮಮಿರೇ। ಮಮಿಷೇ, ಮಮಾಥೇ, ಮಮಿಧ್ವೇ। ಮಮೇ, ಮಮಿವಹೇ, ಮಮಿಮಹೇ।

**ಲುಟ್**: ರೂಪಗಳು: ಮಾತಾ, ಮಾತಾರೌ, ಮಾತಾರಃ। ಮಾತಾಸೇ, ಮಾತಾಸಾಥೇ, ಮಾತಾಧ್ವೇ। ಮಾತಾಹೇ, ಮಾತಾಸ್ವಹೇ, ಮಾತಾಸ್ಮಹೇ।

**ಲೃಟ್**: ರೂಪಗಳು; ಮಾಸ್ಯತೇ, ಮಾಸ್ಯೇತೇ, ಮಾಸ್ಯನ್ತೇ। ಮಾಸ್ಯಸೇ, ಮಾಸ್ಯೇಥೇ, ಮಾಸ್ಯಧ್ವೇ। ಮಾಸ್ಯೇ, ಮಾಸ್ಯಾವಹೇ, ಮಾಸ್ಯಾಮಹೇ।

**ಲೋಟ್**: ರೂಪಗಳು: ಮಿಮೀತಾಮ್, ಮಿಮಾತಾಮ್, ಮಿಮತಾಮ್।ಮಿಮೀಷ್ವ ಮಿಮಾಥಾಮ್, ಮಿಮೀಧ್ವಮ್। ಮಿಮೈ, ಮಿಮಾವಹೈ, ಮಿಮಾಮಹೈ।

**ಲಙ್**: ರೂಪಗಳು: ಅಮಿಮೀತ, ಅಮಿಮಾತಾಮ್, ಅಮಿಮತ। ಅಮಿಮೀಥಾಃ, ಅಮಿಮಾಥಾಮ್, ಅಮಿಮೀಧ್ವಮ್। ಅಮಿಮಿ, ಅಮಿಮೀವಹಿ, ಅಮಿಮೀಮಹಿ।

**ವಿಧಿಲಿಙ್**: ರೂಪಗಳು: ಮಿಮೀತ, ಮಿಮೀಯಾತಾಮ್, ಮಿಮೀರನ್। ಮಿಮೀಥಾಃ, ಮಿಮೀಯಾಥಾಮ್, ಮಿಮೀಧ್ವಮ್। ಮಿಮೀಯ, ಮಿಮೀವಹಿ, ಮಿಮೀಮಹಿ।

**ಆಶೀರ್ಲಿಙ್**: ರೂಪಗಳು: ಮಾಸೀಷ್ಟ, ಮಾಸೀಯಾಸ್ತಾಮ್,ಮಾಸೀರನ್। ಮಾಸೀಷ್ಠಾಃ, ಮಾಸೀಯಾಸ್ಥಾಮ್, ಮಾಸೀಧ್ವಮ್। ಮಾಸೀಯ, ಮಾಸೀವಹಿ, ಮಾಸೀಮಹಿ।

**ಲುಙ್**: ರೂಪಗಳು: ಅಮಾಸ್ತ, ಅಮಾಸಾತಾಮ್, ಅಮಾಸತ। ಅಮಾಸ್ಥಾಃ, ಅಮಾಸಾಥಾಮ್, ಅಮಾಧ್ವಮ್। ಅಮಾಸೀ, ಅಮಾಸ್ವಹೀ, ಅಮಾಸ್ಮಹೀ।

**ಲೃಙ್**: ರೂಪಗಳು: ಅಮಾಸ್ಯತ, ಅಮಾಸ್ಯೇತಾಮ್, ಅಮಾಸ್ಯನ್ತ। ಅಮಾಸ್ಯಥಾಃ, ಅಮಾಸ್ಯೇಥಾಮ್, ಅಮಾಸ್ಯಧ್ವಮ್। ಅಮಾಸ್ಯೇ, ಅಮಾಸ್ಯಾವಹಿ, ಅಮಾಸ್ಯಾಮಹಿ।

7. ಓಹಾಙ್–ಗತೌ (ಹೋಗುವುದು)– ಇದರಲ್ಲಿ "ಉಪದೇಶೇಽಜನುನಾಸಿಕ ಇತ್" ಎಂಬುದರಿಂದ 'ಓ' ಗೆ 'ಇತ್' ಸಜ್ಞೆ ಬಂದು ಲೋಪ ಬರುತ್ತದೆ. "ಹಲನ್ತ್ಯಮ್" ಎಂಬುದರಿಂದ 'ಙ್' ಕಾರ ಲೋಪವಾಗಿ 'ಹಾ' ಮಾತ್ರ ಉಳಿಯುತ್ತದೆ. ಇದು 'ಙಿತ್' ಆಗಿರುವುದರಿಂದ ಆತ್ಮನೇಪದಿಯಾಗಿಯೂ, ಮತ್ತು ಅನಿಟ್ ಆಗಿಯೂ ಇದೆ.

**ಲಟ್**: ಉದಾ– ಜಿಹೀತೆ – ಪ್ರಥಮಪುರುಷ ಏಕವಚನದಲ್ಲಿ 'ಹಾ' ಧಾತುವಿನಮೇಲೆ ಲಡಾದೇಶವಾದ 'ತ' ಬಂದು ಹಾ+ತ ಎಂದಿದ್ದಾಗ, ಧಾತುವಿನ ಪರದಲ್ಲಿ 'ಶಪ್(ಅ)' ಬಂದು ಅದಕ್ಕೆ 'ಶ್ಲು(ಲೋಪ)' ಬಂದಮೇಲೆ ಧಾತುವಿಗೆ ದ್ವಿತ್ವ ಬಂದು ಹಾ ಹಾ+ತ ಎಂದಿದ್ದಾಗ ಪ್ರಕೃತ ಸೂತ್ರದಿಂದ ಅಭ್ಯಾಸದ 'ಆ' ಕಾರಕ್ಕೆ 'ಇ' ಕಾರವು ಆದೇಶವಾಗಿ ಬಂದು, ಹಿ ಹಾ+ತ ಎಂದಿರುತ್ತದೆ. ಅಭ್ಯಸ್ತ 'ಹ್' ಕಾರಕ್ಕೆ ಚುತ್ವ(ಝ್) ಬಂದು ಅದಕ್ಕೆ "ಅಭ್ಯಾಸೇ ಚರ್ಚ" ಎಂಬುರಿಂದ ಜಶ್ತ್ವ(ಜ್) ಬಂದು ಜಿ ಹಾ+ತ ಎಂದಿದ್ದಾಗ, "ಈ ಹಲ್ಯಘೋಃ" ಎಂಬುದರಿಂದ ಅನಭ್ಯಸ್ತ 'ಹ್' ಕಾರದ 'ಆ' ಕಾರಕ್ಕೆ

ದೀರ್ಘ "ಈ" ಕಾರ ಬಂದು, ಜಿ ಹೀ+ತ ಎಂದಿದ್ದಾಗ, "ಟಿತ ಆತ್ಮನೇಪದಾನಾಂ ಟೇರೇ" ಎಂಬುದರಿಂದ 'ತ್' ಕಾರೋತ್ತರೆ 'ಅ' ಕಾರಕ್ಕೆ ಏತ್ವ ಬಂದು ಜಿಹೀ+ತೇ=ಜಿಹೀತೇ ಎಂದು ರೂಪವಾಗುತ್ತದೆ.

ರೂಪಗಳು: ಜಿಹೀತೇ, ಜಿಹಾತೇ, ಜಿಹತೇ। ಜಿಹೀಷೇ, ಜಿಹಾಥೇ, ಜಿಹೀಧ್ವೇ। ಜಿಹೇ, ಜಿಹೀವಹೇ, ಜಿಹೀಮಹೇ।

ಲಿಟ್: ರೂಪಗಳು: ಜಹೇ, ಜಹಾತೇ, ಜಹಿರೇ। ಜಹಿಷೇ, ಜಹಾಥೇ, ಜಹಿಢ್ವೇ/ ಜಹಿಧ್ವೇ। ಜಹೇ, ಜಹಿವಹೇ, ಜಹಿಮಹೇ।

**ಲುಟ್**: ರೂಪಗಳು: ಹಾತಾ, ಹಾತಾರೌ, ಹಾತಾರಃ। ಹಾತಾಸೇ, ಹಾತಾಸಾಥೇ, ಹಾತಾಧ್ವೇ। ಹಾತಾಹೇ, ಹಾತಾಸ್ವಹೇ, ಹಾತಾಸ್ಮಹೇ।

**ಲೃಟ್**: ರೂಪಗಳು: ಹಾಸ್ಯತೇ, ಹಾಸ್ಯೇತೇ, ಹಾಸ್ಯನ್ತೇ। ಹಾಸ್ಯಸೇ, ಹಾಸ್ಯೇಥೇ, ಹಾಸ್ಯಧ್ವೇ। ಹಾಸ್ಯೇ, ಹಾಸ್ಯಾವಹೇ, ಹಾಸ್ಯಾಮಹೇ।

**ಲೋಟ್**: ರೂಪಗಳು: ಜಿಹೀತಾಮ್, ಜಿಹಾತಾಮ್, ಜಿಹತಾಮ್। ಜಿಹಿಷ್ವ, ಜಿಹಾಥಾಮ್, ಜಿಹೀಧ್ವಮ್। ಜಿಹೈ, ಜಿಹಾವಹೈ, ಜಿಹಾಮಹೈ।

**ಲಙ್**: ರೂಪಗಳು– ಅಜಿಹೀತ, ಅಜಿಹಾತಾಮ್, ಅಜಿಹತ। ಅಜಿಹೀಥಾಃ, ಅಜಿಹಾಥಾಮ್, ಅಜಿಹೀಧ್ವಮ್। ಅಜಿಹಿ, ಅಜಿಹೀವಹಿ, ಅಜಿಹೀಮಹಿ।

**ವಿಧಿಲಿಙ್**: ರೂಪಗಳು: ಜಿಹೀತ, ಜಿಹೀಯಾತಾಮ್, ಜಿಹೀರನ್। ಜಿಹೀಥಾಃ, ಜಿಹೀಯಾಥಾಮ್, ಜಿಹೀಧ್ವಮ್। ಜಿಹೀಯ, ಜಿಹೀವಹಿ, ಜಿಹೀಮಹಿ।

**ಆಶೀರ್ಲಿಙ್**: ರೂಪಗಳು: ಹಾಸೀಷ್ಟ, ಹಾಸೀಯಾಸ್ತಾಮ್, ಹಾಸೀರನ್। ಹಾಸೀಷ್ಠಾಃ, ಹಾಸೀಯಾಸ್ಥಾಮ್, ಹಾಸೀಧ್ವಮ್। ಹಾಸೀಯ, ಹಾಸೀವಹಿ, ಹಾಸೀಮಹಿ।

**ಲುಙ್**: ರೂಪಗಳು: ಅಹಾಸ್ತ, ಅಹಾಸಾತಾಮ್, ಅಹಾಸತ। ಅಹಾಸ್ಥಾಃ, ಅಹಾಸಾಥಾಮ್, ಅಹಾಧ್ವಮ್। ಅಹಾಸಿ, ಅಹಾಸ್ವಹಿ, ಅಹಾಸ್ಮಹಿ।

**ಲೃಙ್**: ರೂಪಗಳು ಅಹಾಸ್ಯತ, ಅಹಾಸ್ಯೇತಾಮ್, ಅಹಾಸ್ಯನ್ತ। ಅಹಾಸ್ಯಥಾಃ, ಅಹಾಸ್ಯೇಥಾಮ್, ಅಹಾಸ್ಯಧ್ವಮ್। ಅಹಾಸ್ಯೇ, ಅಹಾಸ್ಯಾವಹಿ, ಅಹಾಸ್ಯಾಮಹಿ।

8. ಡುಭೃಞ್ – ಧಾರಣಪೋಷಣಯೋಃ (ಧರಿಸುವುದು ಮತ್ತು ಪೋಷಣೆ ಮಾಡುವುದು)। ಇದರಲ್ಲಿ 'ಭೃ' ಮಾತ್ರ ಉಳಿಯುತ್ತದೆ. ಇದು 'ಞಿತ್' ಇರೋಣದರಿಂದ "ಸ್ವರಿತಞಿತಃ ಕರ್ತ್ರಭಿಪ್ರಾಯೇ ಕ್ರಿಯಾಫಲೇ" ಎಂಬ ಸೂತ್ರದಿಂದ ಇದು ಉಭಯಪದಿಯಾಗಿರುತ್ತದೆ.

ವಿವರಣೆ: ಸಾರ್ವಧಾತುಕ 'ಲ್' ಕಾರಗಳಲ್ಲಿ ಧಾತುವಿನ ಪರದಲ್ಲಿ 'ಶಪ್(ಅ)' ಮತ್ತು ಅದಕ್ಕೆ 'ಶ್ಲು(ಲೋಪ)' ಹಾಗೂ ಧಾತುವಿಗೆ ದ್ವಿತ್ವ ಮತ್ತು ಅಭ್ಯಾಸದ 'ಋ' ಕಾರಕ್ಕೆ ಪಕೃತ ಸೂತ್ರದಿಂದ 'ಇತ್ವ'ವು ರ–ಪರವಾಗಿ ಬಂದು ಹಲಾದಿಶೇಷ ಮೊದಲಾದ ಕಾರ್ಯಗಳು ಆಗುತ್ತವೆ.

**ಲಟ್: (ಪರಸ್ಮೈಪದಿ)**

ಉದಾ– ಬಿಭರ್ತಿ– ಪ್ರಥಮಪುರುಷ ಏಕವಚನದಲ್ಲಿ 'ಭೃ' ಧಾತುವಿನ ನಂತರ ಲಡಾದೇಶವಾದ 'ತಿಪ್(ತಿ)' ಬಂದು ಧಾತುವಿನ ಪರದಲ್ಲಿ 'ಶಪ್(ಅ)' ಮತ್ತು ಅದಕ್ಕೆ 'ಶ್ಲು(ಲೋಪ)' ಬಂದಮೇಲೆ ಧಾತುವಿಗೆ 'ದ್ವಿತ್ವ' ಮಾಡಿದಾಗ ಭೃಭೃ+ತಿ ಎಂದಿರುತ್ತದೆ. ಅಭ್ಯಾಸದ 'ಋ' ಕಾರಕ್ಕೆ ಪ್ರಕೃತ ಸೂತ್ರದಿಂದ 'ಇ' ಕಾರಾದೇಶವು ರ–ಪರವಾಗಿ ಬಂದು ಭ್+ಇರ್+ಭೃ+ತಿ ಎಂದಿದ್ದಾಗ, ಹಲಾದಿಶೇಷದಿಂದ 'ಇರ್' ನ ರೇಫ(ರ್) ಲೋಪವಾವಾಗಿ ಭ್+ಇ+ಭೃ+ತಿ ಎಂದಿದ್ದಾಗ "ಅಭ್ಯಾಸೇ ಚರ್ಚ" ಎಂಬುದರಿಂದ ಅಭ್ಯಾಸದ 'ಭ್' ಕಾರಕ್ಕೆ ಜಶ್ತ್ವ(ಬ) ಬಂದು ಬ್+ಇ+ಭೃ+ತಿ ಎಂದಿರುತ್ತದೆ. ಅನಭ್ಯಸ್ತವಾದ 'ಭೃ' ನಲ್ಲಿರುವ ಇಗನ್ತಾಂಗವಾದ 'ಋ' ಕಾರಕ್ಕೆ ಗುಣ ಬಂದು ಬ್+ಇ+ಭರ್+ತಿ= ಬಿಭರ್ತಿ ಎಂದು ರೂಪವಾಗುತ್ತದೆ.

ಉದಾ– ಬಿಭೃತಃ– ಪ್ರಥಮಪುರುಷ ದ್ವಿವಚನದಲ್ಲಿ ತಸ್ ಮೊದಲಾದ ಪ್ರತ್ಯಯಗಳು ಬಂದಾಗ, "ಸಾರ್ವಧಾತುಕಮಪಿತ್" ಎಂಬುದರಿಂದ 'ತಸ್' ಗೆ 'ಙಿದ್ವದ್ಭಾವ' ಬಂದು ಗುಣವು ಬಾರದೇ ಬಿಭೃತಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಬಿಭ್ರತಿ– ಪ್ರಥಮಪುರುಷ ಬಹುವಚನದಲ್ಲಿ 'ಝಿ' ಪ್ರತ್ಯಯ ಬಂದು ಬಿಭೃ+ಝಿ(ಝ್+ಇ) ಎಂದಿದ್ದಾಗ, 'ಝ್' ಕಾರಕ್ಕೆ "ಅದಭ್ಯಸ್ತಾತ್" ಎಂಬುದರಿಂದ 'ಅತ್' ಆದೇಶ ಬಂದು ಬಿಭೃ+ಅತಿ ಎಂದಿದ್ದಾಗ, ಇಲ್ಲಿ 'ಋ' ಕಾರಕ್ಕೆ ಗುಣ ಬಾರದೇ ಯಣ್ ಸಂಧಿಯಿಂದ ರೇಫ(ರ್) ಬಂದು ಬಿಭ್+ರ್+ಅತಿ=ಬಿಭ್ರತಿ ಎಂದು ರೂಪವಾಗುತ್ತದೆ.

**ಲಟ್ (ಪರಸ್ಮೈಪದ):**

ರೂಪಗಳು: ಬಿಭರ್ತಿ, ಬಿಭೃತಃ, ಬಿಭ್ರತಿ। ಬಿಭರ್ಷಿ, ಬಿಭೃಥಃ, ಬಿಭೃಥ। ಬಿಭರ್ಮಿ, ಬಿಭೃವಃ, ಬಿಭೃಮಃ।

ಆತ್ಮನೇಪದದ ರೂಪಗಳು: ಬಿಭೃತೇ, ಬಿಭ್ರಾತೇ, ಬಿಭ್ರತೇ। ಬಿಭೃಷೇ, ಬಿಭ್ರಾಥೇ, ಬಿಭೃಧ್ವೇ। ಬಿಭ್ರೇ, ಬಿಭೃವಹೇ, ಬಿಭೃಮಹೇ।

**ಲಿಟ್**: (ಭೃಞ್ ಧಾತುವಿನ ಅನುಪ್ರಯೋಗ):ಉದಾ– ಬಿಭರಾಞ್ಚಕಾರ – ಪ್ರಥಮಪುರುಷ ಏಕವಚನದಲ್ಲಿ 'ಭೃ' ಧಾತುವಿನ ನಂತರ 'ಲಿಟ್' ಬಂದಾಗ, "ಭೀಹ್ರೀಭೃಹುವಾಂ ಶ್ಲುವಚ್ಚ" ಎಂಬ ಸೂತ್ರದಿಂದ ವೈಕಲ್ಪಿಕ 'ಆಮ್' ಮತ್ತು ಶ್ಲುವದ್ಭಾವ ಬರುತ್ತದೆ. 'ಆಮ್' ಬಂದ ಪಕ್ಷದಲ್ಲಿ ಭೃ+ಆಮ್ ಎಂದಿದ್ದಾಗ, ಧಾತುವಿಗೆ ದ್ವಿತ್ವ ಬಂದು ಭೃ+ಭೃ+ಆಮ್ ಎಂದಾದಮೇಲೆ ಅಭ್ಯಸ್ತ 'ಋ' ಕಾರಕ್ಕೆ ಗುಣ(ಅರ್) ಬಂದು ಭರ್+ಭೃ+ಆಮ್ ಎಂದಾಗಿ ಹಲಾದಿಶೇಷದಿಂದ ಭ+ಭೃ+ಆಮ್ ಎಂದಿದ್ದಾಗ, "ಅಭ್ಯಾಸೇ ಚರ್ಚ" ಎಂಬುದರಿಂದ ಅಭ್ಯಾಸದ 'ಭ್' ಕಾರಕ್ಕೆ ಜಶ್ತ್ವ(ಬ) ಬಂದು ಬ+ಭೃ+ಆಮ್ ಎಂದಿದ್ದಾಗ ಅಭ್ಯಾಸದ 'ಅ' ಕಾರಕ್ಕೆ 'ಇ' ಕಾರ ಬಂದು ಬಿಭೃ+ಆಮ್ ಎಂದಾಗುತ್ತದೆ. 'ಆಮ್' ಪರದಲ್ಲಿದ್ದಾಗ, ಭೃ ನಲ್ಲಿರುವ 'ಋ' ಕಾರಕ್ಕೆ ಗುಣ(ಅರ್) ಬಂದು ಬಿಭರ್+ ಆಮ್=ಬಿಭರಾಮ್ ಎಂದಿದ್ದಾಗ, 'ಕೃ' 'ಭೂ' ಮತ್ತು 'ಅಸ್' ಗಳ ಅನುಪ್ರಯೋಗ

ಮಾಡಲಾಗುತ್ತದೆ.

ಪರಸ್ಮೈ ಪದದಲ್ಲಿ 'ಆಮ್' ಮತ್ತು 'ಕೃ' ಧಾತುವಿನ ಅನುಪ್ರಯೋಗ ಬಂದ ಪಕ್ಷದಲ್ಲಿ– ಬಿಭರಾಞ್ಚಕಾರ, ಬಿಭರಾಞ್ಚಕ್ರತುಃ, ಬಿಭರಾಞ್ಚಕ್ರುಃ। ಬಿಭರಾಞ್ಚಕರ್ಥ, ಬಿಭರಾಞ್ಚಕ್ರಥುಃ, ಬಿಭರಾಞ್ಚಚಕ್ರ ಬಿಭರಾಞ್ಚಕಾರ/ ಬಿಭರಾಞ್ಚಕರ, । ಬಿಭರಾಞ್ಚಕೃವ,। ಬಿಭರಾಞ್ಚಕೃಮ।

ಆತ್ಮನೇ ಪದದಲ್ಲಿ 'ಆಮ್' ಮತ್ತು 'ಕೃ' ಧಾತುವಿನ ಅನುಪ್ರಯೋಗ ಬಂದ ಪಕ್ಷದಲ್ಲಿ–ಬಿಭರಾಞ್ಚಕ್ರೇ, ಬಿಭರಾಞ್ಚಕ್ರಾತೇ, ಬಿಭರಾಞ್ಚಕ್ರಿರೇಃ, ಬಿಭರಾಞ್ಚಕೃಷೇ, ಬಿಭರಾಞ್ಚಕ್ರಾಥೇ, ಬಿಭರಾಞ್ಚಕೃಢ್ವೇ। ಬಿಭರಾಞ್ಚಚಕ್ರೇ। ಬಿಭರಾಞ್ಚಕೃವಹೇ, । ಬಿಭರಾಞ್ಚಕೃಮಹೇ।

ಕೇವಲ ಪರಸ್ಮೈ ಪದದಲ್ಲಿ 'ಆಮ್' ಮತ್ತು 'ಭೂ' ಧಾತುವಿನ ಅನುಪ್ರಯೋಗ ಬಂದ ಪಕ್ಷದಲ್ಲಿ–ಬಿಭರಾಮ್ಬಭೂವ, ಬಿಭರಾಮ್ಬಭೂವತುಃ, ಬಿಭರಾಮ್ಬಭೂವುಃ।

ಬಿಭರಾಮ್ಬಭೂವಿಥ, ಬಿಭರಾಮ್ಬಭೂವಥುಃ, ಬಿಭರಾಮ್ಬಭೂವ। ಬಿಭರಾಮ್ಬಭೂವ, ಬಿಭರಾಮ್ಬಭೂವಿವ, ಬಿಭರಾಮ್ಬಭೂವಿಮ।

ಪರಸ್ಮೈ ಪದದಲ್ಲಿ 'ಆಮ್' ಮತ್ತು 'ಅಸ್' ಧಾತುವಿನ ಅನುಪ್ರಯೋಗ ಬಂದ ಪಕ್ಷದಲ್ಲಿ– ಬಿಭರಾಮಾಸ, ಬಿಭರಾಮಾಸತುಃ, ಬಿಭರಾಮಾಸುಃ। ಬಿಭರಾಮಾಸಿಥ, ಬಿಭರಾಮಾಸಥುಃ, ಬಿಭರಾಮಾಸ। ಬಿಭರಾಮಾಸ, ಬಿಭರಾಮಾಸಿವ, ಬಿಭರಾಮಾಸಿಮ।

ಪರಸ್ಮೈಪದದಲ್ಲಿ 'ಆಮ್' ಮತ್ತು ಶ್ಲುವದ್ಭಾವ ಬಾರದ ಪಕ್ಷದಲ್ಲಿ– ಬಭಾರ, ಬಭ್ರತುಃ, ಬಭ್ರುಃ। ಬಬರ್ಥ, ಬಭ್ರಥುಃ, ಬಭ್ರ ಬಭಾರ/ಬಭರ, ಬಭೃವ, ಬಭೃಮ।

ಆತ್ಮನೇ ಪದದಲ್ಲಿ 'ಆಮ್' ಮತ್ತು ಶ್ಲುವದ್ಭಾವ ಬಾರದ ಪಕ್ಷದಲ್ಲಿ– ಬಭ್ರೇ, ಬಭ್ರಾತೇ, ಬಭ್ರಿರೇ। ಬಭೃಷೇ, ಬಭ್ರಾಥೇ, ಬಭೃಢ್ವೇ/ಬಭೃಧ್ವೇ। ಬಭ್ರೇ, ಬಭೃವಹೇ, ಬಭೃಮಹೇ।

**ಲುಟ್**: (ಪರಸ್ಮೈಪದ):ರೂಪಗಳು: ಭರ್ತಾ, ಭರ್ತಾರೌ, ಭರ್ತಾರಃ। ಭರ್ತಾಸಿ, ಭರ್ತಾಸ್ಥಃ, ಭರ್ಥಾಸ್ಥ। ಭರ್ತಾಸ್ಮಿ, ಭರತಾಸ್ವಃ, ಭರ್ತಾಸ್ಮಃ।

(ಆತ್ಮನೇಪದಿ): ರೂಪಗಳು: ಭರ್ತಾ, ಭರ್ತಾರೌ, ಭರ್ತಾರಃ। ಭರ್ತಾಸೇ, ಭರ್ತಾಸಾಥೇ, ಭರ್ತಾಧ್ವೇ। ಭರ್ತಾಹೇ, ಭರ್ತಾಸ್ವಹೇ, ಭರ್ತಾಸ್ಮಹೇ।

**ಲೃಟ್**: (ಪರಸ್ಮೈಪದ):ರೂಪಗಳು: ಭರಿಷ್ಯತಿ, ಭರಿಷ್ಯತಃ, ಭರಿಷ್ಯನ್ತಿ। ಭರಿಷ್ಯಸಿ, ಭರಿಷ್ಯಥಃ, ಭರಿಷ್ಯಥ। ಭರಿಷ್ಯಾಮಿ, ಭರಿಷ್ಯಾವಃ, ಭರಿಷ್ಯಾಮಃ।

**ಲೃಟ್**: ಆತ್ಮನೇ ಪದ):ರೂಪಗಳು: ಭರಿಷ್ಯತೇ, ಭರಿಷ್ಯೇತೇ, ಭರಿಷ್ಯನ್ತೇ। ಭರಿಷ್ಯಸೇ, ಭರಿಷ್ಯೇಥೇ, ಭರಿಷ್ಯಧ್ವೇ। ಭರಿಷ್ಯೇ, ಭರಿಷ್ಯಾವಹೇಃ, ಭರಿಷ್ಯಾಮಹೇ।

ಗಮನಕ್ಕೆ: "ಋದ್ಧನೋಃ ಸ್ಯೇ" ಎಂಬ ಸೂತ್ರದಿಂದ ಇಲ್ಲಿ ಇಡಾಗಮವು ಬಂದಿದೆ.

**ಲೋಟ್** (ಪರಸ್ಮೈಪದ):ರೂಪಗಳು: ಬಿಭರ್ತು/ಬಿಭೃತಾತ್, ಬಿಭೃತಾಮ್, ಬಿಭ್ರತು। ಬಿಭೃಹಿ/ಬಿಭೃತಾತ್, ಬಿಭೃತಮ್, ಬಿಭೃತ। ಬಿಭರಾಣಿ, ಬಿಭರಾವ, ಬಿಭರಾಮ।

ಪ.ಛೇ.– ಸೃಜಿ–ದೃಶೋಃ, ಝಲಿ, ಅಮ್, ಅಕಿತಿ।

ಅರ್ಥ– ಕಿತ್–ಭಿನ್ನವಾದ ಝಲಾದಿ ಪ್ರತ್ಯಯಗಳು ಪರದಲ್ಲಿದ್ದಾಗ, 'ಸೃಜ್' ಮತ್ತು 'ದೃಶ್' ಧಾತುಗಳಿಗೆ 'ಅಮ್' ಆದೇಶವು ಬರುತ್ತದೆ.

ಲುಟ್:ಉದಾ– ಸ್ರಷ್ಟಾ– ಪ್ರಥಮಪುರುಷ ಏಕವಚನದಲ್ಲಿ 'ಸೃಜ್' ಧಾತುವಿನ ನಂತರ ಲುಡಾದೇಶವಾದ 'ತ'ಬಂದು ಸೃಜ್+ತ ಎಂದಿದ್ದಾಗ, ಧಾತುವಿನ ಪರದಲ್ಲಿ 'ತಾಸ್' ಪ್ರತ್ಯಯ ಬಂದು ಸೃಜ್+ತಾಸ್+ತ ಎಂದಿರುತ್ತದೆ. 'ಸೃಜ್' ಧಾತುವಿಗೆ 'ಮಿತ್' ಆದ 'ಅಮ್(ಅ)' ಆಗಮ ಬಂದು ಸೃ+ಅ+ಜ್+ತಾಸ್+ತ ಎಂದಿದ್ದಾಗ 'ಋ'ಕಾರಕ್ಕೆ 'ರ್' ಬಂದು ಸ್ರಜ್+ತಾಸ್+ತ ಎಂದಿದ್ದಾಗ, 'ತಾಸ್'ನಲ್ಲಿರುವ 'ಟಿ(ಆಸ್)' ಲೋಪವಾಗಿ ಸ್ರಜ್+ತ್+ತ ಎಂದಿದ್ದಾಗ, ಪ್ರತ್ಯಯದ 'ತ' ಕಾರಕ್ಕೆ ಅಭಿನವ ಆಖ್ಯಾತ ಪ್ರತ್ಯಯವಾದ ಡಾ(ಆ) ಬಂದು ಸ್ರಜ್+ತ್+ಆ ಎಂದಿದ್ದಾಗ, "ವ್ರಶ್ಚ–ಭ್ರಸ್ಜ–ಸೃಜ್–ಷಃ" ಎಂಬುದರಿಂದ 'ಜ್' ಕಾರಕ್ಕೆ 'ಷ್' ಕಾರವು ಬಂದು "ಷ್ಟುನಾಷ್ಟುಃ" ಎಂಬುದರಿಂದ 'ತ್' ಗೆ ಷ್ಟುತ್ವ(ಟ್) ಬಂದು ಸ್ರಷ್ಟಾ ಎಂಬ ರೂಪವು ಸಿದ್ಧವಾಗುತ್ತದೆ.

ರೂಪಗಳು: ಸ್ರಷ್ಟಾ, ಸ್ರಷ್ಟಾರೌ, ಸೃಷ್ಟಾರಃ। ಸ್ರಷ್ಟಾಸೇ, ಸ್ರಷ್ಟಾಸಾಥೇ, ಸ್ರಷ್ಟಾಧ್ವೇ। ಸ್ರಷ್ಟಾಹೇ, ಸ್ರಷ್ಟಾಸ್ವಹೇ, ಸ್ರಷ್ಟಾಸ್ಮಹೇ।

ಲೃಟ್: ಉದಾ– ಸ್ರಕ್ಷ್ಯತೇ– ಇಲ್ಲಿಯೂ 'ಸ್ಯ' ಎಂಬ ಪ್ರತ್ಯಯವೂ ಕಿದ್ಭಿನ್ನವಾದ ಝಲಾದಿ ಪ್ರತ್ಯಯವು ಪರದಲ್ಲಿರುವುದರಿಂದ ಲಘೂಪದಗುಣವನ್ನು ಬಾಧಿಸಿ 'ಅಮ್' ಆಗಮವು ಬಂದು ಹಿಂದಿನಂತೆಯೇ 'ಯಣ್' ಸಂಧಿಯಿಂದ 'ಸ್ರಜ್' ಎಂದಾಗಿದೆ

ಪ್ರಥಮಪುರುಷ ಏಕವಚನದಲ್ಲಿ ಸೃಜ್+ಸ್ಯ+ತೇ ಎಂದಿದ್ದಾಗ, "ವ್ರಶ್ಚ–ಭ್ರಸ್ಜ–ಸೃಜ್–ಷಃ" ಎಂಬುದರಿಂದ 'ಜ್' ಕಾರಕ್ಕೆ 'ಷ್' ಕಾರ ಬಂದು "ಷಡೋಃ ಕಃ ಸಿ" ಎಂಬುದರಿಂದ 'ಷ್' ಕಾರಕ್ಕೆ 'ಕ್' ಕಾರವು ಬಂದು "ಆದೇಶ ಪ್ರತ್ಯಯಯೋಃ" ಎಂಬ ಸೂತ್ರದಿಂದ ಪ್ರತ್ಯಯದ 'ಸ್' ಕಾರಕ್ಕೆ 'ಷ್' ಕರವು ಬಂದು 'ಕ್' ಷ್'ಗಳು ಸೇರಿ 'ಕ್ಷ್' ಆಗಿ ಸ್ರಕ್ಷ್ಯತೇ ಎಂಬ ರೂಪವು ಸಿದ್ಧವಾಗುತ್ತದೆ. ರೂಪಗಳು: ಸ್ರಕ್ಷ್ಯತೇ, ಸ್ರಕ್ಷ್ಯೇತೇ, ಸ್ರಕ್ಷ್ಯನ್ತೇ। ಸ್ರಕ್ಷ್ಯಸೇ, ಸ್ರಕ್ಷ್ಯೇಥೇ, ಸ್ರಕ್ಷದ್ವೇ। ಸ್ರಕ್ಷ್ಯೇ, ಸ್ರಕ್ಷ್ಯಾವಹೇ, ಸ್ರಕ್ಷ್ಯಾಮಹೇ।

ಲೋಟ್: ರೂಪಗಳು: ಸೃಜ್ಯತಾಮ್, ಸೃಜ್ಯೇತಾಮ್, ಸೃಜ್ಯನ್ತಾಮ್। ಸೃಜ್ಯಸ್ವ, ಸೃಜ್ಯೇಥಾಮ್, ಸೃಜ್ಯಧ್ವಮ್। ಸೃಜ್ಯೈ, ಸೃಜ್ಯಾವಹೈ, ಸೃಜ್ಯಾಮಹೈ।

ಲಙ್: ರೂಪಗಳು: ಅಸೃಜ್ಯತ, ಅಸೃಜ್ಯೇತಾಮ್, ಅಸೃಜ್ಯನ್ತ। ಅಸೃಜ್ಯಥಾಃ, ಅಸೃಜ್ಯೇಥಾಮ್, ಅಸೃಜ್ಯಧ್ವಮ್। ಅಸೃಜ್ಯೇ, ಅಸೃಜ್ಯಾವಹಿ, ಅಸೃಜ್ಯಾಮಹಿ।

ವಿಧಿಲಿಙ್: ರೂಪಗಳು: ಸೃಜ್ಯೇತ, ಸೃಜ್ಯೇಯಾತಾಮ್, ಸೃಜ್ಯೇರನ್। ಸ್ರುಜ್ಯೇಥಾಃ, ಸೃಜ್ಯೇಯಾಥಾಮ್, ಸ್ರುಜ್ಯೇಧ್ವಮ್। ಸೃಜ್ಯೇಯ, ಸೃಜ್ಯೇವಹಿ, ಸೃಜ್ಯೇಮಹಿ।

ಆಶೀರ್ಲಿಙ್:

ಸೂಚನೆ: ಈ 'ಲ್' ಕಾರವು "ಲಿಙ್‌ಸಿಚಾವಾತ್ಮನೇಪದೇಷು" ಎಂಬ ಸೂತ್ರದಿಂದ ಝಲಾದಿಯಾದ 'ಲಿಙ್' ಇದು ಕಿದ್ವದ್ಭಾವದಿಂದ 'ಕಿತ್' ಆಗಿದೆ. ಆದುದರಿಂದ

ಪ್ರಕೃತ ಸೂತ್ರದಲ್ಲಿ ಅಕಿತಿ ಎಂದು ಹೇಳಿರುವುದರಿಂದ 'ಅಮ್' ಆಗಮವು ಬರುವುದಿಲ್ಲ. ಆದ್ದರಿಂದ 'ಸ್ರಜ್' ಎಂದು ಆಗುವುದಿಲ್ಲ. 'ಕಿತ್' ಆಗಿರುವುದರಿಂದ ಲಘೂಪಧಗುಣವೂ ಬರುವುದಿಲ್ಲ.

ಉದಾ- ಸೃಕ್ಷೀಷ್ಟ- ಪ್ರಥಮಪುರುಷ ಏಕವಚನದಲ್ಲಿ ಸೃಜ್+ತ ಎಂದಿದ್ದಾಗ, ಧಾತುವಿನ ಪರದಲ್ಲಿ ಸೀಯುಟ್ (ಸೀಯ್) ಆಗಮ ಬಂದು ಸೀಯ್‌ನಲ್ಲಿರುವ 'ಯ್' ಕಾರವು "ಲೋಪೋವ್ಯೋರ್ವಲಿ" ಎಂಬುದರಿಂದ ಲೋಪವಾಗಿ 'ಸೀ' ಮಾತ್ರ ಉಳಿಯುತ್ತದೆ. ಹೀಗೆ ಸೃಜ್+ಸೀ+ತ ಎಂದಿದ್ದಾಗ, ಪ್ರತ್ಯಯಕ್ಕೆ 'ಸುಟ್'(ಸ್) ಆಗಮ ಬಂದು ಸೃಜ್+ಸೀ+ಸ್+ತ ಎಂದಿದ್ದಾಗ, "ವ್ರಶ್ಚ-ಭ್ರಸ್ಜ-ಸೃಜ್-ಷಃ" ಎಂಬುದರಿಂದ 'ಜ್' ಕಾರಕ್ಕೆ 'ಷ್' ಕಾರ, "ಷಡೋಃ ಕಃ ಸಿ" ಎಂಬುದರಿಂದ ಅದೇ 'ಷ್' ಕಾರಕ್ಕೆ 'ಕ್' ಕಾರವು ಬಂದು "ಆದೇಶ ಪ್ರತ್ಯಯಯೋಃ" ಎಂಬ ಸೂತ್ರದಿಂದ ಪ್ರತ್ಯಯದ ಅವಯವವಾದ 'ಸ್' ಕಾರಕ್ಕೆ 'ಷ್' ಕಾರವು ಬಂದು 'ಕ್' ಷ್'ಗಳು ಸೇರಿ 'ಕ್ಷ್' ಆಗಿ ಸೃಕ್ಷೀಷ್ಟ ಎಂಬ ರೂಪವು ಸಿದ್ಧವಾಗುತ್ತದೆ.

ರೂಪಗಳು: ಸೃಕ್ಷೀಷ್ಟ, ಸೃಕ್ಷೀಯಾಸ್ತಾಮ್, ಸೃಕ್ಷೀರನ್। ಸೃಕ್ಷೀಷ್ಠಾಃ, ಸೃಕ್ಷೀಯಾಸ್ಥಾಮ್, ಸೃಕ್ಷೀಢ್ವಮ್। ಸೃಕ್ಷೀಯ, ಸೃಕ್ಷೀವಹಿ, ಸೃಕ್ಷೀಮಹಿ।

ಲುಙ್: ರೂಪಗಳು: ಅಸೃಷ್ಟ, ಅಸೃಕ್ಷಾತಾಮ್, ಅಸೃಕ್ಷತ। ಅಸೃಷ್ಠಾಃ, ಅಸೃಕ್ಷಾಥಾಮ್, ಅಸೃಢ್ವಮ್। ಅಸೃಕ್ಷಿ, ಅಸೃಕ್ಷ್ವಹಿ, ಅಸೃಕ್ಷ್ಮಹಿ।

ಲೃಙ್: ರೂಪಗಳು: ಅಸ್ರಕ್ಷ್ಯತ, ಅಸ್ರಕ್ಷ್ಯೇತಾಮ್, ಅಸ್ರಕ್ಷ್ಯನ್ತ। ಅಸ್ರಕ್ಷ್ಯಥಾಃ, ಅಸ್ರಕ್ಷ್ಯೇಥಾಮ್, ಅಸ್ರಕ್ಷ್ಯಧ್ವಮ್। ಅಸ್ರಕ್ಷ್ಯೇ, ಅಸ್ರಕ್ಷ್ಯಾವಹಿ, ಅಸ್ರಕ್ಷ್ಯಾಮಹಿ।

**ಇಲ್ಲಿಗೆ ಆತ್ಮನೇಪದಿ ಧಾತುವಗಳ ರೂಪಗಳು ಮುಗಿದವು.**

## ಉಭಯಪದಿ ಧಾತುಗಳ ಪ್ರಕ್ರಿಯೆ ಆರಂಭ

26. ಮೃಷ್ ತಿತಿಕ್ಷಾಯಾಮ್ -(ಸಹಿಸುವುದು) - ಇದು ಸ್ವರಿತೇತ್ತಾಗಿರುವುದರಿಂದ ಸ್ವರಿತಞಿತಃ ಕರತ್ರಭಿಪ್ರಾಯೇ ಕ್ರಿಯಾ ಫಲೇ" ಎಂಬ ಸೂತ್ರದಿಂದ ಇದು ಉಭಯಪದಿಯಾಗಿರುತ್ತದೆ. ಅನುದಾತ್ತ ಧಾತುಗಳ ಗಣದಲ್ಲಿ ಪಠಿತವಾಗದಿರುವುದರಿಂದ ಇದು 'ಸೇಟ್' ಆಗಿದೆ.

ಲಟ್: ಪರಸ್ಮೈಪದದ ರೂಪಗಳು: ಮೃಷ್ಯತಿ, ಮೃಷ್ಯತಃ, ಮೃಷ್ಯನ್ತಿ। ಮೃಷ್ಯಸಿ, ಮೃಷ್ಯಥಃ, ಮೃಷ್ಯಥ। ಮೃಷ್ಯಾಮಿ, ಮೃಷ್ಯಾವಃ, ಮೃಷ್ಯಾಮಃ।

ಆತ್ಮನೇಪದದ ರೂಪಗಳು: ಮೃಷ್ಯತೇ, ಮೃಷ್ಯೇತೇ, ಮೃಷ್ಯನ್ತೇ। ಮೃಷ್ಯಸೇ, ಮೃಷ್ಯೇಥೇ, ಮೃಷ್ಯಧ್ವೇ। ಮೃಷ್ಯೇ, ಮೃಷ್ಯಾವಹೇ, ಮೃಷ್ಯಾಮಹೇ।

ಲಿಟ್: ಪರಸ್ಮೈಪದದ ರೂಪಗಳು: ಮಮರ್ಷ, ಮಮೃಷತುಃ, ಮಮೃಷುಃ। ಮಮರ್ಷಿಥ, ಮಮೃಷಥುಃ, ಮಮೃಷ। ಮಮರ್ಷ।ಮಮೃಷಿವ, ಮಮೃಷಿಮ।

ಆತ್ಮನೇಪದದ ರೂಪಗಳು: ಮಮೃಷೇ, ಮಮೃಷಾತೇ, ಮಮೃಷಿರೇ। ಮಮೃಷಿಷೇ, ಮಮೃಷಾಥೇ, ಮಮೃಷಿಧ್ವೆ ಮಮೃಷೇ, ಮಮೃಷಿವಹೇ, ಮಮೃಷಿಮಹೇ।

ಲುಟ್: ಪರಸ್ಮೈಪದದ ರೂಪಗಳು: ಮರ್ಷಿತಾ, ಮರ್ಷಿತಾರೌ, ಮರ್ಷಿತಾರಃ। ಮರ್ಷಿತಾಸಿ, ಮರ್ಷಿತಾಸ್ಥಃ, ಮರ್ಷಿತಾಸ್ಥ। ಮರ್ಷಿತಾಸ್ಮಿ, ಮರ್ಷಿತಾಸ್ವಃ, ಮರ್ಷಿತಾಸ್ಮಃ।

ಆತ್ಮನೇಪದದ ರೂಪಗಳು: ಮರ್ಷಿತಾ, ಮರ್ಷಿತಾರೌ, ಮರ್ಷಿತಾರಃ। ಮರ್ಷಿತಾಸೇ, ಮರ್ಷಿತಾಸಾಥೇ, ಮರ್ಷಿತಾಧ್ವೇ। ಮರ್ಷಿತಾಹೇ, ಮರ್ಷಿತಾಸ್ವಹೇ, ಮರ್ಷಿತಾಸ್ಮಹೇ।

ಲೃಟ್: ಪರಸ್ಮೈಪದದ ರೂಪಗಳು: ಮರ್ಷಿಷ್ಯತಿ, ಮರ್ಷಿಷ್ಯತಃ, ಮರ್ಷಿಷ್ಯನ್ತಿ। ಮರ್ಷಿಷ್ಯಸಿ, ಮರ್ಷಿಷ್ಯಥಃ, ಮರ್ಷಿಷ್ಯಥ। ಮರ್ಷಿಷ್ಯಾಮಿ, ಮರ್ಷಿಷ್ಯಾವಃ, ಮರ್ಷಿಷ್ಯಾಮಃ।

ಆತ್ಮನೇಪದದ ರೂಪಗಳು: ಮರ್ಷಿಷ್ಯತೇ, ಮರ್ಷಿಷ್ಯೇತೇ, ಮರ್ಷಿಷ್ಯನ್ತೇ। ಮರ್ಷಿಷ್ಯಸೇ, ಮರ್ಷಿಷ್ಯೇಥೇ, ಮರ್ಷಿಷ್ಯಧ್ವೇ। ಮರ್ಷಿಷ್ಯೇ, ಮರ್ಷಿಷ್ಯಾವಹೇ, ಮರ್ಷಿಷ್ಯಾಮಹೇ।

ಲೋಟ್: ಪರಸ್ಮೈಪದದ ರೂಪಗಳು: ಮೃಷ್ಯತು/ಮೃಷ್ಯತಾತ್, ಮೃಷ್ಯತಾಮ್, ಮೃಷ್ಯನ್ತು। ಮೃಷ್ಯ/ಮೃಷ್ಯತಾತ್, ಮೃಷ್ಯತಮ್, ಮೃಷ್ಯತ। ಮೃಷ್ಯಾಣಿ, ಮೃಷ್ಯಾವ, ಮೃಷ್ಯಾಮ।

ಆತ್ಮನೇಪದದ ರೂಪಗಳು: ಮೃಷ್ಯತಾಮ್, ಮೃಷ್ಯೇತಾಮ್, ಮೃಷ್ಯನ್ತಾಮ್। ಮೃಷ್ಯಸ್ವ, ಮೃಷ್ಯೇಥಾಮ್, ಮೃಷ್ಯಧ್ವಮ್। ಮೃಷ್ಯೈ, ಮೃಷ್ಯಾವಹೈ, ಮೃಷ್ಯಾಮಹೈ।

ಲಙ್: ಪರಸ್ಮೈಪದದ ರೂಪಗಳು: ಅಮೃಷ್ಯತ್, ಅಮೃಷ್ಯತಾಮ್, ಅಮೃಷ್ಯನ್। ಅಮೃಷ್ಯಃ, ಅಮೃಷ್ಯತಮ್, ಅಮೃಷ್ಯತ। ಅಮೃಷ್ಯಮ್, ಅಮೃಷ್ಯಾವ, ಅಮೃಷ್ಯಾಮ।

ಆತ್ಮನೇಪದದ ರೂಪಗಳು: ಅಮೃಷ್ಯತ, ಅಮೃಷ್ಯೇತಾಮ್, ಅಮೃಷ್ಯನ್ತ। ಅಮೃಷ್ಯಥಾಃ, ಅಮೃಷ್ಯೇಥಾಮ್, ಅಮೃಷ್ಯಧ್ವಮ್। ಅಮೃಷ್ಯೇ, ಅಮೃಷ್ಯಾವಹಿ, ಅಮೃಷ್ಯಾಮಹಿ।

ವಿಧಿಲಿಙ್: ಪರಸ್ಮೈಪದದ ರೂಪಗಳು: ಮೃಷ್ಯೇತ್, ಮೃಷ್ಯೇತಾಮ್, ಮೃಷ್ಯೇಯುಃ। ಮೃಷ್ಯೇಃ, ಮೃಷ್ಯೇತಮ್, ಮೃಷ್ಯೇತ। ಮೃಷ್ಯೇಯಮ್, ಮೃಷ್ಯೇವ, ಮೃಷ್ಯೇಮ।

ಆತ್ಮನೇಪದದ ರೂಪಗಳು: ಮೃಷ್ಯೇತ, ಮೃಷ್ಯೇಯಾತಾಮ್, ಮೃಷ್ಯೇರನ್। ಮೃಷ್ಯೇಥಾಃ, ಮೃಷ್ಯೇಯಾಥಾಮ್, ಮೃಷ್ಯೇಧ್ವಮ್। ಮೃಷ್ಯೇಯ, ಮೃಷ್ಯೇವಹಿ, ಮೃಷ್ಯೇಮಹಿ।

ಆಶೀರ್ಲಿಙ್: ಪರಸ್ಮೈಪದದ ರೂಪಗಳು: ಮೃಷ್ಯಾತ್, ಮೃಷ್ಯಾಸ್ತಾಮ್, ಮೃಷ್ಯಾಸುಃ। ಮೃಷ್ಯಾಃ, ಮೃಷ್ಯಾಸ್ತಮ್, ಮೃಷ್ಯಾಸ್ತ। ಮೃಷ್ಯಾಸಮ್, ಮೃಷ್ಯಾಸ್ವ, ಮೃಷ್ಯಾಸ್ಮ।

ಆತ್ಮನೇಪದದ ರೂಪಗಳು: ಮೃಷೀಷ್ಟ, ಮೃಷೀಯಾಸ್ತಾಮ್, ಮೃಷೀರನ್। ಮೃಷೀಷ್ಠಾಃ, ಮೃಷೀಯಾಸ್ಥಾಮ್, ಮೃಷೀಧ್ವಮ್। ಮೃಷೀಯ, ಮೃಷೀವಹಿ, ಮೃಷೀಮಹಿ।

ಲುಙ್: ಪರಸ್ಮೈಪದದ ರೂಪಗಳು: ಅಮರ್ಷೀತ್, ಅಮರ್ಷಿಷ್ಟಾಮ್, ಅಮರ್ಷಿಷುಃ। ಅಮರ್ಷೀಃ, ಅಮರ್ಷಿಷ್ಟಮ್, ಅಮರ್ಷಿಷ್ಟ। ಅಮರ್ಷಿಷಮ್, ಅಮರ್ಷಿಷ್ವ, ಅಮರ್ಷಿಷ್ಮ।

ಆತ್ಮನೇಪದದ ರೂಪಗಳು: ಅಮರ್ಷಿಷ್ಟ, ಅಮರ್ಷಿಷಾತಾಮ್, ಅಮರ್ಷಿಷತ। ಅಮರ್ಷಿಷ್ಠಾಃ, ಅಮರ್ಷಿಷಾಥಾಮ್, ಅಮರ್ಷಿಢ್ವಮ್। ಅಮರ್ಷಿಷಿ, ಅಮರ್ಷಿಷ್ವಹಿ, ಅಮರ್ಷಿಷ್ಮಹಿ।

ಲೃಙ್: ಪರಸ್ಮೈಪದದ ರೂಪಗಳು: ಅಮರ್ಷಿಷ್ಯತ್, ಅಮರ್ಷಿಷ್ಯತಾಮ್, ಅಮರ್ಷಿಷ್ಯನ್। ಅಮರ್ಷಿಷ್ಯಃ, ಅಮರ್ಷಿಷ್ಯತಮ್, ಅಮರ್ಷಿಷ್ಯತ। ಅಮರ್ಷಿಷ್ಯಮ್, ಅಮರ್ಷಿಷ್ಯಾವ, ಅಮರ್ಷಿಷ್ಯಾಮ।

ಆತ್ಮನೇಪದದ ರೂಪಗಳು: ಅಮರ್ಷಿಷ್ಯತ, ಅಮರ್ಷಿಷ್ಯೇತಾಮ್, ಅಮರ್ಷಿಷ್ಯನ್ತ। ಅಮರ್ಷಿಷ್ಯಥಾಃ, ಅಮರ್ಷಿಷ್ಯೇಥಾಮ್, ಅಮರ್ಷಿಷ್ಯಧ್ವಮ್। ಅಮರ್ಷಿಷ್ಯೇ, ಅಮರ್ಷಿಷ್ಯಾವಹಿ, ಅಮರ್ಷಿಷ್ಯಾಮಹಿ।

27. ಣಹ ಬಂಧನೇ-(ಬಂಧಿಸುವದು)-"ಣೋ ನಃ" ಎಂಬುದರಿಂದ 'ಣ್' ಕಾರಕ್ಕೆ 'ನ್' ಕಾರವು ಆದೇಶವಾಗಿ ಬಂದು ನಹ ಎಂದಾಗಿ ಅನ್ತ್ಯ 'ಅ' ಕಾರವು ಸ್ವರಿತೇತ್ತಾಗಿರುವುದರಿಂದ ಅದು ಲೋಪವಾಗಿ 'ನಹ್' ಮಾತ್ರ ಉಳಿಯುತ್ತದೆ. ಇದು ಸಕರ್ಮಕ, ಅನಿಟ್, ಮತ್ತು ಉಭಯಪದಿಯಾಗಿದೆ.

ಲಟ್: ಪರಸ್ಮೈಪದದ ರೂಪಗಳು: ನಹ್ಯತಿ, ನಹ್ಯತಃ, ನಹ್ಯನ್ತಿ। ನಹ್ಯಸಿ, ನಹ್ಯಥಃ, ನಹ್ಯಥ। ನಹ್ಯಾಮಿ, ನಹ್ಯಾವಃ, ನಹ್ಯಾಮಃ।

ಆತ್ಮನೇಪದದ ರೂಪಗಳು:ನಹ್ಯತೇ, ನಹ್ಯೇತೇ, ನಹ್ಯನ್ತೇ। ನಹ್ಯಸೇ, ನಹ್ಯೇಥೇ, ನಹ್ಯಧ್ವೇ। ನಹ್ಯೇ, ನಹ್ಯಾವಹೇ, ನಹ್ಯಾಮಹೇ।

ಲಿಟ್: ಪರಸ್ಮೈಪದದ ರೂಪಗಳು: ನನಾಹ, ನೇಹತುಃ, ನೇಹುಃ। ನೇಹಿಥ/ ನನದ್ಧ, ನೇಹಥುಃ, ನೇಹ। ನನಾಹ/ನನಹ, ನೇಹಿವ, ನೇಹಿಮ।

ಆತ್ಮನೇಪದದ ರೂಪಗಳು: ನೇಹೇ, ನೇಹಾತೇ, ನೇಹಿರೇ। ನೇಹಿಷೇ, ನೇಹಾಥೇ ನೇಹಿಢ್ವೇ/ನೇಹಿಧ್ವೇ। ನೇಹೇ, ನೇಹಿವಹೇ, ನೇಹಿಮಹೇ।

ಲುಟ್: ಪರಸ್ಮೈಪದದ ರೂಪಗಳು: ನದ್ಧಾ, ನದ್ಧಾರೌ, ನದ್ಧಾರಃ। ನದ್ಧಾಸಿ, ನದ್ಧಾಸ್ಥಃ, ನದ್ಧಾಸ್ಥ। ನದ್ಧಾಸ್ಮಿ, ನದ್ಧಾಸ್ವಃ, ನದ್ಧಾಸ್ಮಃ।

ಆತ್ಮನೇಪದದ ರೂಪಗಳು: ನದ್ಧಾ, ನದ್ಧಾರೌ, ನದ್ಧಾರಃ। ನದ್ಧಾಸೇ, ನದ್ಧಾಸಾಥೇ, ನದ್ಧಾಧ್ವೇ। ನದ್ಧಾಹೇ, ನದ್ಧಾಸ್ವಹೇ, ನದ್ಧಾಸ್ಮಹೇ।

ಲೃಟ್: ಪರಸ್ಮೈಪದದ ರೂಪಗಳು: ನತ್ಸ್ಯತಿ, ನತ್ಸ್ಯತಃ, ನತ್ಸ್ಯನ್ತಿ। ನತ್ಸ್ಯಸಿ, ನತ್ಸ್ಯಥಃ, ನತ್ಸ್ಯಥ। ನತ್ಸ್ಯಾಮಿ, ನತ್ಸ್ಯಾವಃ, ನತ್ಸ್ಯಾಮಃ।

ಆತ್ಮನೇಪದದ ರೂಪಗಳು: ನತ್ಸ್ಯತೇ, ನತ್ಸ್ಯೇತೇ, ನತ್ಸ್ಯನ್ತೇ। ನತ್ಸ್ಯಸೇ, ನತ್ಸ್ಯೇಥೇ, ನತ್ಸ್ಯಧ್ವೇ। ನತ್ಸ್ಯೇ, ನತ್ಸ್ಯಾವಹೇ, ನತ್ಸ್ಯಾಮಹೇ।

ಲೋಟ್: ಪರಸ್ಮೈಪದದ ರೂಪಗಳು: ನಹ್ಯತು/ನಹ್ಯತಾತ್, ನಹ್ಯತಾಮ್, ನಹ್ಯನ್ತು। ನಹ್ಯ/ನಹ್ಯತಾತ್, ನಹ್ಯತಮ್, ನಹ್ಯತ। ನಹ್ಯಾನಿ, ನಹ್ಯಾವ, ನಹ್ಯಾಮ।

ಆತ್ಮನೇಪದದ ರೂಪಗಳು: ನಹ್ಯತಾಮ್, ನಹ್ಯೇತಾಮ್, ನಹ್ಯನ್ತಾಮ್। ನಹ್ಯಸ್ವ, ನಹ್ಯೇಥಾಮ್, ನಹ್ಯಧ್ವಮ್। ನಹ್ಯೈ, ನಹ್ಯಾವಹೈ, ನಹ್ಯಾಮಹೈ।

ಲಙ್: ಪರಸ್ಮೈಪದದ ರೂಪಗಳು: ಅನಹ್ಯತ್, ಅನಹ್ಯತಾಮ್, ಅನಹ್ಯನ್। ಅನಹ್ಯಃ, ಅನಹ್ಯತಮ್, ಅನಹ್ಯತ। ಅನಹ್ಯಮ್, ಅನಹ್ಯಾವ, ಅನಹ್ಯಾಮ।

ಆತ್ಮನೇಪದದ ರೂಪಗಳು: ಅನಹ್ಯತ, ಅನಹ್ಯೇತಾಮ್, ಅನಹ್ಯನ್ತ। ಅನಹ್ಯಥಾಃ, ಅನಹ್ಯೇಥಾಮ್, ಅನಹ್ಯಧ್ವಮ್। ಅನಹ್ಯೇ, ಅನಹ್ಯಾವಹಿ, ಅನಹ್ಯಾಮಹಿ।

ವಿಧಿಲಿಙ್: ಪರಸ್ಮೈಪದದ ರೂಪಗಳು: ನಹ್ಯೇತ್, ನಹ್ಯೇತಾಮ್, ನಹ್ಯೇಯುಃ। ನಹ್ಯೇಃ, ನಹ್ಯೇತಮ್, ನಹ್ಯೇತ। ನಹ್ಯೇಯಮ್, ನಹ್ಯೇವ, ನಹ್ಯೇಮ।

ಆತ್ಮನೇಪದದ ರೂಪಗಳು: ನಹ್ಯೇತ, ನಹ್ಯೇಯಾತಾಮ್, ನಹ್ಯೇರನ್। ನಹ್ಯೇಥಾಃ, ನಹ್ಯೇಯಾಥಾಮ್ ನಹ್ಯೇಧ್ವಮ್। ನಹ್ಯೇಯ, ನಹ್ಯೇವಹಿ, ನಹ್ಯೇಮಹಿ।

ಆಶೀರ್ಲಿಙ್:ಪರಸ್ಮೈಪದದ ರೂಪಗಳು: ನಹ್ಯಾತ್, ನಹ್ಯಾಸ್ತಾಮ್, ನಹ್ಯಾಸುಃ। ನಹ್ಯಾಃ, ನಹ್ಯಾಸ್ತಮ್। ನಹ್ಯಾಸ್ತ। ನಹ್ಯಾಸಮ್, ನಹ್ಯಾಸ್ವ, ನಹ್ಯಾಸ್ಮ।

ಆತ್ಮನೇಪದದ ರೂಪಗಳು: ನತ್ಸೀಷ್ಟ, ನತ್ಸೀಯಾಸ್ತಾಮ್, ನತ್ಸೀರನ್। ನತ್ಸೀಷ್ಠಾಃ, ನತ್ಸೀಯಾಸ್ಥಾಮ್, ನತ್ಸೀಧ್ವಮ್। ನತ್ಸೀಯ, ನತ್ಸೀವಹಿ, ನತ್ಸೀಮಹಿ।

ಲುಙ್:ಪರಸ್ಮೈಪದದ ರೂಪಗಳು: ಅನಾತ್ಸೀತ್, ಅನಾದ್ಧಾಮ್, ಅನಾತ್ಸುಃ। ಅನಾತ್ಸೀಃ, ಅನಾದ್ಧಮ್, ಅನಾದ್ಧ। ಅನಾತ್ಸಮ್, ಅನಾತ್ಸ್ವ, ಅನಾತ್ಸ್ಮ।

ಆತ್ಮನೇಪದದ ರೂಪಗಳು: ಅನದ್ಧ, ಅನತ್ಸಾತಾಮ್, ಅನತ್ಸತ। ಅನದ್ಧಾಃ, ಅನತ್ಸಾಥಾಮ್, ಅನದ್‌ಧ್ವಮ್। ಅನತ್ಸಿ, ಅನತ್ಸ್ವಹಿ, ಅನತ್ಸ್ಮಹಿ।

ಲೃಙ್:ಪರಸ್ಮೈಪದದ ರೂಪಗಳು: ಅನತ್ಸ್ಯತ್, ಅನತ್ಸ್ಯತಾಮ್, ಅನತ್ಸ್ಯನ್। ಅನತ್ಸ್ಯಃ, ಅನತ್ಸ್ಯತಮ್, ಅನತ್ಸ್ಯತ। ಅನತ್ಸ್ಯಮ್, ಅನತ್ಸ್ಯಾವ, ಅನತ್ಸ್ಯಾಮ।

ಆತ್ಮನೇಪದದ ರೂಪಗಳು: ಅನತ್ಸ್ಯತ, ಅನತ್ಸ್ಯೇತಾಮ್, ಅನತ್ಸ್ಯನ್ತ। ಅನತ್ಸ್ಯಥಾಃ, ಅನತ್ಸ್ಯೇಥಾಮ್, ಅನತ್ಸ್ಯಧ್ವಮ್। ಅನತ್ಸ್ಯೇ, ಅನತ್ಸ್ಯಾವಹಿ, ಅನತ್ಸ್ಯಾಮಹಿ।

**ದಿವಾದಿಗಣ(೧೮) ಪ್ರಕರಣ ಮುಗಿದುದು.**

***

# ಪ್ರಕರಣ 16: ಅಥ ಸ್ವಾದಿಗಣ (5ನೇ ಗಣ)

**(ಸೂತ್ರ ಸಂಖ್ಯೆ 646 ರಿಂದ 652 ವರೆಗೆ)**

ಈ ಗಣದಲ್ಲಿ 35 ಧಾತುಗಳು ಇವೆ. ಅವುಗಳಲ್ಲಿ ಈ ಕೆಳಗಿನ 4 ಧಾತುಗಳ ರೂಪಗಳನ್ನು ವರದರಾಜರು ವಿವರಿಸಿದ್ದಾರೆ.

1. ಷುಞ್ (ಷು) (ಸಾನ್ನ ಮಾಡುವುದು), ಸೋಮರಸವನ್ನು ಹಿಂಡುವುದು...
2. ಚಿಞ್ (ಚಿ) (ಸಂಗ್ರಹಮಾಡುವುದು)
3. ಸ್ತೃಞ್ (ಸ್ತೃ) (ಮುಚ್ಚುವುದು)
4. ಧೂಞ್ (ಧೂ) (ನಡುಗುವುದು) ಇವೆಲ್ಲವೂ ಉಭಯ ಪದಿಗಳಾಗಿವೆ.

1. ಭ್ವಾದಿ, ಅದಾದಿ ಮತ್ತು ಜುಹೋತ್ಯಾದಿ ಗಣಗಳಲ್ಲಿ ಕರ್ತರಿ ಶಪ್ ಎಂಬ ಸೂತ್ರದಿಂದ 'ಶಪ್(ಅ)' ವಿಕರಣ ಪ್ರತ್ಯಯವು ಧಾತುವಿನ ಪರದಲ್ಲಿ ಬರುತ್ತದೆ. ಆದರೆ ಭ್ವಾದಿ ಗಣದಲ್ಲಿ, ಶಪ್ ವಿಕರಣ ಬಂದು ಅದರಲ್ಲಿ 'ಅ' ಮಾತ್ರ ಉಳಿಯುತ್ತದೆ. ಹಾಗೂ ಶಪ್ ಲೋಪವಾಗುವುದಿಲ್ಲ.

2. ಎರಡನೇ ಗಣವಾದ ಅದಾದಿಯಲ್ಲಿ ಇರುವ ಧಾತುಗಳ ನಂತರ ಶಪ್‌ಗೆ ಲುಕ್ (ಲೋಪ) ಬರುತ್ತದೆ.

3. ಮೂರನೆಯದಾದ ಜುಹೋತ್ಯಾದಿ ಗಣದಲ್ಲಿ ಧಾತುವಿನ ನಂತರ ಶಪ್ ಬಂದರೂ ಅದು ಲೋಪವಾಗುತ್ತದೆ. ಆದರೆ ಧಾತುವಿಗೆ ದ್ವಿತ್ವವು ಬರುತ್ತದೆ. ಅದಾದಿಗಣದಲ್ಲಾದರೋ ಧಾತುವಿಗೆ ದ್ವಿತ್ವ ಬರುವುದಿಲ್ಲ. ಕೇವಲ ಶಪ್‌ಗೆ ಮಾತ್ರ ಲೋಪ ಬಂದಿರುತ್ತದೆ. ಈ ವ್ಯತ್ಯಾಸದಿಂದ ಎರಡನೇ ಮತ್ತು ಮೂರನೆಯ ಗಣಗಳ ಧಾತುಗಳನ್ನು ಗುರುತಿಸಬಹುದಾಗಿದೆ. ನಾಲ್ಕನೇ ಗಣದಿಂದ ಆರಂಭಿಸಿ ಒಂಭತ್ತನೇ ಗಣದವರೆಗೂ ಧಾತುಗಳ ನಂತರ ಶಪ್ ಬಂದರೂ ಅದನ್ನು ಬಾಧಿಸಿ ಬೇರೆ ಬೇರೆ ವಿಕರಣ ಪ್ರತ್ಯಯಗಳು ಬರುತ್ತವೆ.

4. ದಿವಾದಿ ಗಣಗಳ ಧಾತುಗಳಿಗೆ ಶ್ಯನ್ (ಯ) ವಿಕರಣ ಪ್ರತ್ಯಯವು ಬರುತ್ತದೆ.

5. ಸ್ವಾಧಿ ಗಣಗಳ ಧಾತುಗಳಿಗೆ ಶ್ನು (ನು) ವಿಕರಣ ಪ್ರತ್ಯಯವು ಬರುತ್ತದೆ.

6. ತುದಾದಿ ಗಣಗಳ ಧಾತುಗಳಿಗೆ ಶ (ಅ) ವಿಕರಣ ಪ್ರತ್ಯಯವು ಬರುತ್ತದೆ.

ವಿವರಣೆ: ಭ್ವಾದಿ ಗಣ(1) ದಲ್ಲಿ ಶಪ್(ಅ) ಮತ್ತು ತುದಾದಿ(6) ಗಣದಲ್ಲಿಯೂ ಶ(ಅ) ಪ್ರತ್ಯಯವಿದ್ದರೂ ಅದರಿಂದ ಆಗುವ ಪರಿಣಾಮಗಳು ಬೇರೆಬೇರೆಯಾಗಿರುತ್ತವೆ. ಮೊದಲನೇ ಗಣದಲ್ಲಿ ಧಾತುವಿನ ನಂತರ ಶಪ್(ಅ) ಬಂದಾಗ ಧಾತುವಿನ ರೂಪದಲ್ಲಿ (ಗುಣ)–ವೃದ್ಧಿಗಳಾಗುತ್ತವೆ. ಉದಾ– ಭೂ+ಅ+ತಿ ಎಂದಿದ್ದಾಗ. ಭೋ+ಅ+ತಿ ಎಂದಾಗುತ್ತದೆ. ಆದರೆ ತುದಾದಿಯಲ್ಲಿ ಧಾತುವಿನ ಪರದಲ್ಲಿ ಶ (ಅ) ಇದ್ದಾಗ, ಧಾತುವಿನ ರೂಪದಲ್ಲಿ ಗುಣ–ವೃದ್ಧಿಗಳು ಬರುವುದಿಲ್ಲ. ಉದಾ–ತುದ್+ಅ+ತಿ=ತುದತಿ ಎಂದಾಗುತ್ತದೆ ಹೊರತು ತೋದತಿ ಎಂದಾಗುವುದಿಲ್ಲ.

7. ರುಧಾದಿ ಗಣಗಳ ಧಾತುಗಳಿಗೆ ಶ್ನಮ್ (ನ) ವಿಕರಣ ಪ್ರತ್ಯಯವು ಬರುತ್ತದೆ.
8. ತನಾದಿ ಗಣಗಳ ಧಾತುಗಳಿಗೆ ಉಃ (ಉ) ವಿಕರಣ ಪ್ರತ್ಯಯವು ಬರುತ್ತದೆ.
9. ಕ್ರ್ಯಾದಿ ಗಣಗಳ ಧಾತುಗಳಿಗೆ ಶ್ನಾ (ನಾ) ವಿಕರಣ ಪ್ರತ್ಯಯವು ಬರುತ್ತದೆ.

ಹೀಗಾಗಿ ನಾಲ್ಕನೇ ಗಣದ ಧಾತುಗಳಿಂದ ಆರಂಭಿಸಿ ಒಂಭತ್ತನೇ ಗಣದ ಧಾತುಗಳ ವರೆಗೆ ಶಪ್ ಪ್ರತ್ಯಯವನ್ನು ಬಾಧಿಸಿ ಮೇಲೆ ಹೇಳಿದ ಪ್ರತ್ಯಯಗಳು ಬರುತ್ತವೆ.

ಹತ್ತನೇ ಗಣ

10. ಈ ಗಣದಲ್ಲಿ ಧಾತುಗಳ ನಂತರ ಚುರಾಧಿಭ್ಯೋ 'ಣಿಚ್' ಎಂಬ ಸೂತ್ರದಿಂದ ಣಿಚ್ (ಇ) ವಿಕರಣ ಪ್ರತ್ಯಯವು ಬರುತ್ತದೆ.

ಇದು ಮಾತ್ರವಲ್ಲದೇ ಕರ್ತರಿ ಶಪ್ ಎಂಬ ಸೂತ್ರದಿಂದ ಶಪ್ (ಅ) ವಿಕರಣ ಪ್ರತ್ಯಯವೂ ಬರುತ್ತದೆ. ಹೀಗಾಗಿ ಇ+ಅ ಎಂದಿರುವಾಗ 'ಇ' ಕಾರಕ್ಕೆ 'ಗುಣ' ಬಂದು 'ಏ' ಎಂದಾಗುತ್ತದೆ. ಏ+ಅ ಎಂದಿದ್ದಾಗ ಯಾಂತಾದೇಶ ಸಂಧಿಯಿಂದ 'ಏ' ಗೆ 'ಅಯ್' ಆದೇಶವು ಬರುತ್ತದೆ. ಅಯ್+ಅ ಸೇರಿ ಅಯ ಆಗುತ್ತದೆ. ಇದೇ ಹತ್ತನೇ ಗಣದ ಧಾತುಗಳ ವಿಕರಣ ಪ್ರತ್ಯಯಗಳ ವಿಶೇಷವಾಗಿದೆ. ಪ್ರಾಯಶಃ ಸಾರ್ವಧಾತುಕವಾದ 'ಲ'ಕಾರಗಳಿದ್ದಾಗ ವಿಕರಣ ಪ್ರತ್ಯಯಗಳ ಉಪಯೋಗವಿರುತ್ತದೆ. ಆರ್ಧಧಾತುಕ 'ಲ'ಕಾರಗಳಲ್ಲಿ ಈ ವಿಕರಣ ಪ್ರತ್ಯಯವು ಬರುವುದಿಲ್ಲ. ಕೆಲವು ಆರ್ಧಧಾತುಕ 'ಲ್' ಕಾರಗಳಲ್ಲಿ ಬೇರೆ ಪ್ರತ್ಯಯಗಳು ಬರುತ್ತವೆ. ಕೆಲವದರಲ್ಲಿ ಬರುವದಿಲ್ಲ ಎಂಬುದನ್ನು ಗಮನಿಸಬಹುದು.

5ನೇ ಗಣದಲ್ಲಿ ಆರಿಸಿಕೊಂಡ 4 ಧಾತುಗಳು–

1. ಷುಞ್ (ಷು) (ಸ್ನಾನ ಮಾಡುವುದು), ಸೋಮರಸವನ್ನು ಹಿಂಡುವುದು ಇತ್ಯಾದಿ. 2. ಚಿಞ್ (ಚಿ) (ಸಂಗ್ರಹಮಾಡುವುದು) 3. ಸ್ತೃಞ್ (ಸ್ತೃ)(ಮುಚ್ಚುವುದು) 4. ಧೂಞ್ (ಧೂ) (ನಡುಗುವುದು) ಇವೆಲ್ಲವೂ ಉಭಯ ಪದಿಗಳಾಗಿವೆ.

1. ಷುಞ್ ಅಭಿಷವೇ– ಸ್ನಾನ ಮಾಡುವುದು ಮತ್ತು ಹಿಂಡುವದು ಮೊದಲಾದವು. ಇದರಲ್ಲಿ 'ಞ್' ಕಾರ 'ಇತ್' ಆಗಿರುವುದರಿಂದ ಅದು ಲೋಪವಾಗಿ 'ಷು' ಮಾತ್ರ ಉಳಿಯುತ್ತದೆ.

**(ಶ್ನು (ನು) ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ– 646. ಸ್ವಾದಿಭ್ಯಃ ಶ್ನುಃ (3.1.73)**

ವೃತ್ತಿ – ಶಪೋಽಪವಾದಃ। ಸುನೋತಿ। ಸುನುತಃ (501) ಹು–ಶ್ನುವೋರಿತಿ ಯಣ್। ಸುನ್ವನ್ತಿ। ಸುನ್ವಃ, ಸುನುವಃ। ಸುನುತೇ। ಸುನ್ವಾತೇ। ಸುನ್ವತೇ। ಸುನ್ವಹೇ, ಸುನುವಹೇ। ಸುಷಾವ। ಸುಷುವೇ। ಸೋತಾ। ಸುನು। ಸುನವಾನಿ, ಸುನವೈ। ಸುನುಯಾತ್। ಸೂಯಾತ್।

ಅ.ವೃ:– "ಕರ್ತರಿ ಶಪ್" ಎಂಬ ಸೂತ್ರದಿಂದ 'ಕರ್ತರಿ' ಎಂಬ ಪದವು, ಹಾಗೇಯೇ "ಸಾರ್ವಧಾತುಕೇ ಯಕ್" ಎಂಬ ಸೂತ್ರವೂ ಅನುವೃತ್ತವಾಗುತ್ತದೆ.

ಅರ್ಥ:- ಕರ್ತ್ರರ್ಥದಲ್ಲಿರುವ ಸಾರ್ವಧಾತುಕ ಸಂಜ್ಞೆಯುಳ್ಳ ಪ್ರತ್ಯಯವು ಪರದಲ್ಲಿ ಇದ್ದಾಗ, ಸ್ವಾದಿಗಣಕ್ಕೆ ಸೇರಿದ ಧಾತುವಿನ ನಂತರ ಶಪ್(ಅ) ಪ್ರತ್ಯಯವನ್ನು ಬಾಧಿಸಿ 'ಶ್ನು(ನು)' ಪ್ರತ್ಯಯವು ಬರುತ್ತದೆ. ಇದರಲ್ಲಿ 'ನು' ಮಾತ್ರ ಉಳಿಯುತ್ತದೆ. ಇದು ಶಿತ್-ಆಗಿರುವುದರಿಂದ, ಇದಕ್ಕೂ ಸಾರ್ವಧಾತುಕ ಸಂಜ್ಞೆಯು ಬರುತ್ತದೆ.

ಲಟ್:

ಉದಾ:- ಸುನೋತಿ- ಪ್ರಥಮಪುರುಷ ಏಕವಚನದಲ್ಲಿ 'ಷು' ಧಾತುವಿನ ಮೇಲೆ 'ಲಟ್' 'ಲ'ಕಾರದ ಆದೇಶವಾದ 'ತಿಪ್ (ತಿ)' ಬಂದು ಷು+ತಿ ಎಂದಿರುತ್ತದೆ. ಅದರಲ್ಲಿ 'ಷ್' ಕಾರಕ್ಕೆ "ಧಾತ್ವಾದೇಃ ಷಃ ಸಃ" ಎಂಬ ಸೂತ್ರದಿಂದ 'ಸ್' ಕಾರವು ಆದೇಶವಾಗಿ ಬಂದು ಸು+ತಿ ಎಂದಿದ್ದಾಗ ಪರಸ್ಮೈ ಪದದಲ್ಲಿ ಸಾರ್ವಧಾತುಕ ಸಂಜ್ಞೆ ಬರೋಣದ್ದರಿಂದ ಧಾತುವಿನ ನಂತರ 'ಶಪ್ (ಅ)' ಬರಬೇಕಾಗಿತ್ತು. ಅದನ್ನು ಬಾಧಿಸಿ ಪ್ರಕೃತ ಸೂತ್ರದಿಂದ ಶ್ನು (ನು) ಪ್ರತ್ಯಯವು ಆದೇಶವಾಗಿ ಬರುತ್ತದೆ. ಆಗ ಸು+ನು+ತಿ ಎಂದಿರುತ್ತದೆ. ಇಲ್ಲಿ 'ಶ್ನು(ನು)' ಎಂಬುದು 'ಶಿತ್' ಆಗಿರುವುದರಿಂದ 'ಅಪಿತ್' ಆಗುತ್ತದೆ. "ಸಾರ್ವಧಾತುಕಮಪಿತ್" ಎಂಬುದರಿಂದ ಅದಕ್ಕೆ 'ಜಿದ್ವದ್ಭಾವ' ಬಂದು ಗುಣ ನಿಷೇಧವಾಗಿದೆ. ಆದರೆ ರೂಪಸಿದ್ಧಿಗಾಗಿ ಗುಣ ಬರಲೇಬೇಕಾಗಿದೆ. ಆದ್ದರಿಂದ "ಸಾರ್ವಧಾತುಕಾರ್ಧಧಾತುಕಯೋಃ" ಎಂಬುದರಿಂದ 'ನು' ವಿಕರಣ ಪ್ರತ್ಯಯದ 'ಉ' ಕಾರಕ್ಕೆ ಗುಣವು ಬಂದು ಸು+ನೋ+ತಿ=ಸುನೋತಿ ಎಂದು ರೂಪವು ಸಿದ್ಧವಾಗುತ್ತದೆ.

ಉದಾ:- ಸುನುತಃ- 'ಷು' ಧಾತುವಿನ ಮೇಲೆ ಪ್ರಥಮ ಪುರುಷ ದ್ವಿವಚನದಲ್ಲಿ 'ತಸ್' ಆದೇಶವು ಬಂದು ಹಿಂದಿನಂತೆ ಪ್ರಕ್ರಿಯೆಯು ನಡೆದು ಸು+ನು+ತಸ್ ಎಂದಿದ್ದಾಗ 'ತಸ್' ಪ್ರತ್ಯಯವು ಅಪಿತ್ ಆಗಿರುವುದರಿಂದ ಅದಕ್ಕೆ 'ಜಿದ್ವದ್ಭಾವ' ಬಂದು 'ಶ್ನು(ನು)' ಪ್ರತ್ಯಯದ 'ಉ' ಕಾರಕ್ಕೆ 'ಗುಣ' ನಿಷೇಧಿಸಲಾಗಿದೆ. 'ಸ್' ಕಾರಕ್ಕೆ ರುತ್ವ-ವಿಸರ್ಗಗಳು ಬಂದು ಸುನುತಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ: ಸುನ್ವನ್ತಿ- 'ಷು(ಸು)' ಧಾತುವಿನ ಮೇಲೆ ಲಾದೇಶವಾದ ಝಿ ಬಂದು ಸು+ಝಿ ಎಂದಿದ್ದಾಗ, 'ಝ್' ಗೆ 'ಅನ್ತ್' ಆದೇಶ ಬಂದು ಧಾತುವಿನ ನಂತರ 'ಶ್ನು(ನು)' ಪ್ರತ್ಯಯವನ್ನು ಸೇರಿಸಿದಾಗ ಸು+ನು+ಅನ್ತ್+ಇ ಎಂದು ಇರುತ್ತದೆ. "ಅಚಿಶ್ನುಧಾತುಭ್ರುವಾಂ ಯ್ವೋರಿಯಙುವಙೌ" ಎಂಬುದರಿಂದ 'ಉ' ಕಾರಕ್ಕೆ 'ಉವಙ್ (ಉವ್)' ಆದೇಶವು ಬರಬೇಕಾಗಿತ್ತು. ಅದನ್ನು ಬಾಧಿಸಿ "ಹುಶ್ನುವೋಃ ಸಾರ್ವಧಾತುಕೇ" ಎಂಬ ಸೂತ್ರದಿಂದ 'ಶ್ನು (ನು)'ವಿನಲ್ಲಿರುವ 'ಉ'ಕಾರಕ್ಕೆ 'ವ್' ಕಾರವು (ಯಣ್ ಆದೇಶ) ಬಂದು ಸುನ್‌ವ್+ಅನ್ತಿ=ಸುನ್ವನ್ತಿ ಎಂದು ರೂಪವು ಸಿದ್ಧವಾಗಿದೆ.

ಉದಾ: ಸುನೋಷಿ- ಮಧ್ಯಮ ಪುರುಷ ಏಕ ವಚನದಲ್ಲಿ- ಸು+ನು+ಸಿ (ಸಿಪ್) ಎಂದಿದ್ದಾಗ, ಹಿಂದಿನಂತೆ ಪ್ರಕ್ರಿಯೆಯು ನಡೆದು ಪ್ರತ್ಯಯದ 'ಸ್' ಕಾರಕ್ಕೆ ಷತ್ವವು ಬಂದು ಸುನೋಷಿ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ: ಸುನುಥಃ-ಮಧ್ಯಮ ಪುರುಷ ದ್ವಿವಚನದಲ್ಲಿ ಸು+ನು+ಥಸ್ ಎಂದಿದ್ದಾಗ,

ಮಧ್ಯಮಪುರುಶ ಏಕವಚನದ ಪ್ರಕ್ರಿಯೆಯಂತೆ ಪ್ರಕ್ರಿಯೆ ನಡೆದು ಸುನುಥಸ್ ಎಂದಾಗಿ ರುತ್ವ-ವಿಸರ್ಗಗಳಿಂದ ಸುನುಥ: ಎಂದು ರೂಪವಾಗುತ್ತದೆ.

ಉದಾ : ಸುನುಥ- ಮಧ್ಯಮ ಪುರುಷ ಬಹು ವಚನದಲ್ಲಿ-ಸು+ನು+ಥ ಎಂದಿದ್ದಾಗ ದ್ವಿವಚನದಂತೆ ಪ್ರಕ್ರಿಯೆಯು ನಡೆದು ಸುನುಥ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ: ಸುನೋಮಿ – ಉತ್ತಮಪುರುಷ ಏಕವಚನದಲ್ಲಿ ಸು+ನು+ಮಿ ಎಂದಿದ್ದಾಗ, 'ಉ' ಕಾರಕ್ಕೆ ಹಿಂದಿನಂತೆ ಗುಣ ಬಂದು ಸುನೋಮಿ ಎಂದು ರೂಪವಾಗುತ್ತದೆ.

ಉದಾ: ಸುನ್ವಃ/ಸುನುವಃ, ಸುನ್ಮಃ/ಸುನುಮಃ-ಉತ್ತಮಪುರುಷ ದ್ವಿವಚನ ಬಹುವಚನಗಳಲ್ಲಿ ಸು+ನು+ವಸ್, ಮತ್ತು ಸು+ನು+ಮಸ್ ಎಂದಿದ್ದಾಗ ಸುನುಥಃ ಮತ್ತು ಸುನುಥ ಎಂಬಲ್ಲಿರುವ ಪ್ರಕ್ರಿಯೆಯನ್ನು ಅನುಸರಿಸಿ ಸುನುವಃ ಮತ್ತು ಸುನುಮಃ ಎಂಬ ಈ ಎರಡು ರೂಪಗಳು ಸಿದ್ಧಿಸುತ್ತವೆ.

'ವಸ್' ಮತ್ತು 'ಮಸ್' ಪ್ರತ್ಯಯಗಳು ಪರದಲ್ಲಿ ಇದ್ದಾಗ "ಲೋಪಶ್ಚಾಸ್ಯಾನ್ಯತರಸ್ಯಾಮ್ ಮ್ವೋಃ" ಎಂಬ ಸೂತ್ರದಿಂದ 'ಉ' ಕಾರಕ್ಕೆ ವೈಕಲ್ಪಿಕವಾಗಿ ಲೋಪ ಬಂದು ಸುನ್ವಃ ಮತ್ತು ಸುನ್ಮಃ ಎಂದು ರೂಪಗಳು ಆಗುತ್ತವೆ.

ಲಟ್: (ಪರಸ್ಮೈಪದ) ರೂಪಗಳು: ಸುನೋತಿ, ಸುನುತಃ, ಸುನ್ವನ್ತಿ। ಸುನೋಷಿ, ಸುನುಥಃ, ಸುನುಥ। ಸುನೋಮಿ, ಸುನುವಃ/ಸುನ್ವಃ, ಸುನುಮಃ/ಸುನ್ಮಃ।

ಆತ್ಮನೇ ಪದದಲ್ಲಿ ಯಾವ ಪಿತ್ವವು ಇರುವುದಿಲ್ಲ ಆದುದರಿಂದ "ಸಾರ್ವಧಾತುಕಮಪಿತ್" ಎಂಬ ಸೂತ್ರದಿಂದ ಎಲ್ಲವೂ 'ಜಿತ್' ಆಗಿಯೇ ಇರುತ್ತದೆ. ಆದುದರಿಂದ "ಕ್ಙಿತಿ ಚ" ಎಂಬ ಸೂತ್ರದಿಂದ 'ಗುಣ' ನಿಷೇಧವಾಗುತ್ತದೆ. ಪರಸ್ಮೈ ಪದದಂತೇಯೇ ರೂಪಗಳನ್ನು ಸಿದ್ಧಮಾಡಬೇಕು ಆದರೆ ಅಚ್ ಪರದಲ್ಲಿ ಇರುವಾಗ "ಹುಶ್ನುವೋಃ ಸಾರ್ವಧಾತುಕೇ" ಎಂಬ ಸೂತ್ರದಿಂದ 'ಯಣ್' ಆದೇಶ, ಮತ್ತು "ಟಿತ ಆತ್ಮಮನೇಪದಾಂ ಟೇರೇ" ಎಂಬುದರಿಂದ ಏತ್ವವನ್ನು ಮಾಡುವುದನ್ನು ಕೂಡ ಮರೆಯಬಾರದು.

ಆತ್ಮನೇ ಪದ – ರೂಪಗಳು:- ಸುನುತೇ, ಸುನ್ವಾತೇ, ಸುನ್ವತೇ। ಸುನುಷೇ, ಸುನ್ವಾಥೆ, ಸುನುಧ್ವೇ।ಸುನ್ವೇ, ನುನ್ವಹೇ/ಸುನುವಹೇ, ಸುನ್ಮಹೆ/ಸುನುಮಹೇ

ಲಿಟ್:- 'ಲಿಟ್' 'ಲ' ಕಾರದಲ್ಲಿ ದ್ವಿತ್ವಾದಿ ಕಾರ್ಯಗಳಾದ ಮೇಲೆ 'ಆದೇಶ ಪ್ರತ್ಯಯಯೋಃ' ಎಂಬ ಸೂತ್ರದಿಂದ ಎರಡನೇಯ 'ಸ್' ಕಾರಕ್ಕೆ 'ಷತ್ವ' ವು ಬರುತ್ತದೆ. 'ಲಿಟ್' 'ಲ' ಕಾರವು ಆರ್ದಧಾತುಕ 'ಲ'ಕಾರವಾಗಿದೆ. ಆಗ ಅಜಾದಿ ಪ್ರತ್ಯಯವು ಪರದಲ್ಲಿ ಇದ್ದಾಗ 'ಹುಶ್ನುವೋಃ ಸಾರ್ವಧಾತುಕೇ' ಎಂಬ ಸೂತ್ರದಿಂದ 'ಯಣ್' ಸಂಧಿ ಬಾರದೇ "ಅಚಿಶ್ನುಧಾತುಭ್ರುವಾಂ ಯ್ವೋರಿಯಙುವಙೌ" ಎಂಬ ಸೂತ್ರದಿಂದ ಉವಙ್ (ಉವ್) ಆದೇಶವೇ ಬರುತ್ತದೆ.

ಪರಸ್ಮೈಪದದ ರೂಪಗಳು:-ಸುಷಾವ, ಸುಷುವತು:, ಸುಷುವುঃ। ಸುಷವಿಥ/ಸುಷೋಥ, ಸುಷುವಥುಃ, ಸುಷುವ। ಸುಷಾವ/ಸುಷವ, ಸುಷುವಿವ, ಸುಷುವಿಮ।

ಆತ್ಮನೇ ಪದ ರೂಪಗಳು:ಸುಷುವೇ, ಸುಷುವಾತೇ, ಸುಷುವಿರೇ। ಸುಷುವಿಷೇ, ಸುಷುವಾಥೇ, ಸುಷುವಿಢ್ವೇ/ಸುಷುವಿಧ್ವೇ, ಸುಷುವೇ, ಸುಷುವಿವಹೇ, ಸುಷುವಿಮಹೇ।

ಲುಟ್: ಈ ಲಕಾರದಲ್ಲಿ ಆರ್ಧಧಾತುಕ ಪ್ರತ್ಯಯವು ಪರದಲ್ಲಿ ಇರುವುದರಿಂದ ಗುಣವು ಬರುತ್ತದೆ.

ಪರಸ್ಮೈ ಪದ: ರೂಪಗಳು: ಸೋತಾ, ಸೋತಾರೌ, ಸೋತಾರಃ। ಸೋತಾಸಿ, ಸೋತಾಸ್ಥಃ, ಸೋತಾಸ್ಥ। ಸೋತಾಸ್ಮಿ, ಸೋತಾಸ್ವಃ, ಸೋತಾಸ್ಮಃ।

ಆತ್ಮನೇ ಪದ ರೂಪಗಳು: ಸೋತಾ, ಸೋತಾರೌ, ಸೋತಾರಃ। ಸೋತಾಸೇ, ಸೋತಾಸಾಥೇ, ಸೋತಾಧ್ವೇ। ಸೋತಾಹೇ, ಸೋತಾಸ್ವಹೇ, ಸೋತಾಸ್ಮಹೇ।

ಲೃಟ್: ಪರಸ್ಮೈ ಪದ ರೂಪಗಳು:ಸೋಷ್ಯತಿ, ಸೋಷ್ಯತಃ, ಸೋಷ್ಯನ್ತಿ। ಸೋಷ್ಯಸಿ, ಸೋಷ್ಯಥಃ, ಸೋಷ್ಯಥ। ಸೋಷ್ಯಾಮಿ, ಸೋಷ್ಯಾವಃ, ಸೋಷ್ಯಾಮಃ।

ಆತ್ಮನೇ ಪದದ ರೂಪಗಳು: ಸೋಷ್ಯತೇ, ಸೋಷ್ಯೇತೇ, ಸೋಷ್ಯನ್ತೇ। ಸೋಷ್ಯಸೇ, ಸೋಷ್ಯೇಥೇ, ಸೋಷ್ಯಧ್ವೇ। ಸೋಷ್ಯೇ, ಸೋಷ್ಯಾವಹೇ, ಸೋಷ್ಯಾಮಹೇ।

ಲೋಟ್: ಪರಸ್ಮೈ ಪದದ ರೂಪಗಳು: ಸುನೋತು/ಸುನುತಾತ್, ಸುನುತಾಮ್, ಸುನ್ವನ್ತು। ಸುನು/ಸುನುತಾತ್, ಸುನುತಮ್, ಸುನುತ। ಸುನವಾನಿ, ಸುನವಾವ, ಸುನವಾಮ

ಆತ್ಮನೇ ಪದದ ರೂಪಗಳು: ಸುನುತಾಮ್, ಸುನ್ವಾತಾಮ್, ಸುನ್ವತಾಮ್। ಸುನುಷ್ವ, ಸುನ್ವಾಥಾಮ್, ಸುನುಧ್ವಮ್। ಸುನವೈ, ಸುನವಾವಹೈ,ಸುನವಾಮಹೈ।

ಲಙ್ ಪರಸ್ಮೈ ಪದದ ರೂಪಗಳು: ಅಸುನೋತ್, ಅಸುನುತಾಮ್, ಅಸುನ್ವನ್। ಅಸುನೋಃ, ಅಸುನುತಮ್, ಅಸುನುತ। ಅಸುನವಂ, ಅಸುನುವ/ಅಸುನ್ವ, ಅಸುನುಮ/ ಅಸುನ್ಮ

ಆತ್ಮನೇ ಪದದ ರೂಪಗಳು: ಅಸುನುತ, ಅಸುನ್ವಾತಾಂ, ಅಸುನ್ವತ।ಅಸುನುಥಾಃ, ಅಸುನ್ವಾಥಾಮ್, ಅಸುನುಧ್ವಮ್। ಅಸುನ್ವಿ, ಅಸುನುವಹಿ/ ಅಸುನ್ವಹಿ, ಅಸುನುಮಹಿ/ ಅಸುನ್ಮಹಿ।

ವಿಧಿಲಿಙ್: ಪರಸ್ಮೈ ಪದದ ರೂಪಗಳು: ಸುನುಯಾತ್, ಸುನುಯಾತಾಮ್, ಸುನುಯುಃ। ಸುನುಯಾಃ, ಸುನುಯಾತಮ್, ಸುನುಯಾತ। ಸುನುಯಾಮ್, ಸುನುಯಾವ, ಸುನುಯಾಮ।

ಆತ್ಮನೇ ಪದದ ರೂಪಗಳು: ಸುನ್ವೀತ,ಸುನ್ವೀಯಾತಾಮ್, ಸುನ್ವೀರನ್। ಸುನ್ವೀಥಾಃ, ಸುನ್ವೀಯಾಥಾಮ್, ಸುನ್ವೀಧ್ವಮ್। ಸುನ್ವೀಯ ಸುನ್ವೀವಹಿ, ಸುನ್ವೀಮಹಿ।

ಆಶೀರ್ಲಿಙ್: "ಅಕೃತ್-ಸಾರ್ವಧಾತುಕಯೋರ್ದೀರ್ಘಃ" ಎಂಬ ಸೂತ್ರದಿಂದ ದೀರ್ಘ ಬರುತ್ತದೆ.

ಪರಸ್ಮೈ ಪದದ ರೂಪಗಳು: ಸೂಯಾತ್, ಸೂಯಾಸ್ತಾಮ್, ಸೂಯಾಸುಃ। ಸೂಯಾಃ, ಸೂಯಾಸ್ಥಮ್, ಸೂಯಾಸ್ಥ। ಸೂಯಾಸಮ್, ಸೂಯಾಸ್ವ, ಸೂಯಾಸ್ಮ।

ಆತ್ಮನೇ ಪದದಲ್ಲಿ-ಸೀಯುಟ್ ಮತ್ತು ಸುಟ್ ಮಾಡಿದ ಮೇಲೆ ಈ ಕೆಳಗಿನ ರೂಪಗಳು ಸಿದ್ಧವಾಗುತ್ತವೆ.

ರೂಪಗಳು: ಸೋಷೀಷ್ಟ, ಸೋಷೀಯಾಸ್ತಾಮ್, ಸೋಷೀರನ್। ಸೋಷೀಷ್ಠಾಃ, ಸೋಷೀಯಾಸ್ಥಾಮ್, ಸೋಷೀಢ್ವಮ್ । ಸೊಷೀಯ, ಸೋಷೀವಹಿ, ಸೋಷೀಮಹಿ।

**(ಇಟ್ ಆಗಮವನ್ನು ವಿಧಿಸುವ ಸೂತ್ರ)**

**ಲುಙ್: ಸೂತ್ರ- 647. ಸ್ತು-ಸು-ಧೂಞ್ಭ್ಯಃ ಪರಸ್ಮೈಪದೇಷು (7.2.72)**

ವೃತ್ತಿ – ಏಭ್ಯಃ ಸಿಚಃ ಇಟ್ ಸ್ಯಾತ್ ಪರಸ್ಮೈಪದೇಷು। ಅಸಾವೀತ್। ಅಸೋಷ್ಟ। 2. ಚಿಞ್ ಚಯನೇ। ಚಿನೋತಿ। ಚಿನುತೇ।

ಅ.ವೃ. "ಅಞ್ಜೇಃಸಿಚಿ" ಎಂಬ ಸೂತ್ರದಿಂದ ಸಿಚಿ ಎಂಬ ಪದವನ್ನು ಷಷ್ಠೀ ವಿಭಕ್ತಿಯಲ್ಲಿ ವಿಪರಿಣಾಮಗೊಳಿಸಿ ಅನುವೃತ್ತಿ ಮಾಡಲಾಗಿದೆ. "ಇಡತ್ಯರ್ತಿ ವ್ಯಯತೀನಾಮ್" ಎಂಬ ಸೂತ್ರದಿಂದ ಇಟ್ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ:- ಪರಸ್ಮೈ ಪದದ ಪ್ರತ್ಯಯವು ಪರದಲ್ಲಿ ಇದ್ದಾಗ ಸ್ತು, ಸು ಮತ್ತು ಧೂಞ್ ಈ ಧಾತುಗಳ ಪರದಲ್ಲಿ ಇರುವ ಸಿಚ್ ಗೆ ಇಟ್ ಆಗಮವು ಬರುತ್ತದೆ.

'ಸು' ಧಾತುವು ಅನಿಟ್ ಆಗಿರುವುದರಿಂದ 'ಇಟ್' ಆಗಮವು ಪ್ರಾಪ್ತವಾಗಲಿಲ್ಲ. ಆದುದರಿಂದ ಪ್ರಕೃತ ಸೂತ್ರದಿಂದ ಸಿಚ್ ಗೆ ಇಟ್ ಆಗಮವನ್ನು ವಿಧಿಸಲಾಗಿದೆ. ಈ ಆಗಮವು 'ಟಿತ್' ಆಗಿರುವುದರಿಂದ ಸಿಚ್ ಗೆ ಆದ್ಯವಯವಾಗಿ ಬರುತ್ತದೆ.

ಉದಾ:- ಅಸಾವೀತ್- ಪ್ರಥಮ-ಪುರುಷ ಏಕವಚನದಲ್ಲಿ 'ಸು' ಧಾತುವಿಗೆ 'ಅಟ್(ಅ)' ಆಗಮ ಬಂದು, ನಂತರ ಧಾತುವಿನ ಪರದಲ್ಲಿ ತಿಪ್ ಬಂದು, ನಂತರ ಧಾತುವಿನ ಪರದಲ್ಲಿ 'ಚ್ಲಿ' ಬಂದು ಅದಕ್ಕೆ ಸಿಚ್(ಸ್) ಬಂದ ಮೇಲೆ ಅ+ಸು+ಸ್+ತಿ ಎಂದು ಇರುತ್ತದೆ. "ಇತಶ್ಚ" ಎಂಬುದರಿಂದ 'ತ್' ಕಾರೋತ್ತರ 'ಇ' ಕಾರಕ್ಕೆ ಲೋಪ ಬಂದು ಅ+ಸು+ಸ್+ತ್ ಎಂದಿರುತ್ತದೆ. "ಅಸ್ತಿ ಸಿಚೋಽಪೃಕ್ತೇ" ಎಂಬ ಸೂತ್ರದಿಂದ 'ಈಟ್' ಆಗಮವು ಬಂದು ಅ+ಸು+ಸ್(ಸಿಚ್)+ಈ+ತ್ ಎಂದು ಆಗುತ್ತದೆ. ಪ್ರಕೃತ ಸೂತ್ರದಿಂದ 'ಸಿಚ್'ಗೆ 'ಇಟ್(ಇ)' ಆಗಮವು ಆದ್ಯಯವಯವವಾಗಿ ಬಂದು ಅ+ಸು+ಇಸ್+ಈತ್ ಎಂದಿರುತ್ತದೆ. "ಸಿಚಿ ವೃದ್ಧಿಃ ಪರಸ್ಮೈಪದೇಷು" ಎಂಬ ಸೂತ್ರದಿಂದ 'ಸು' ಗೆ ವೃದ್ಧಿ (ಔ) ಬಂದು, ನಂತರ ಅದಕ್ಕೆ 'ಆವ್' ಆದೇಶ ಬಂದು ಅಸಾವ್ +ಇಸ್+ಈತ್ ಎಂದಾಗುತ್ತದೆ. ಆಗ "ಇಟ ಈಟಿ" ಎಂಬ ಸೂತ್ರದಿಂದ 'ಇ' ಕಾರ 'ಈ' ಕಾರಗಳ ಮಧ್ಯದಲ್ಲಿರುವ 'ಸ್' ಕಾರಕ್ಕೆ ಲೋಪ ಬಂದು ನಂತರ 'ಇ' ಕಾರ 'ಈ' ಕಾರಗಳಿಗೆ ಸವರ್ಣದಿರ್ಘವಾಗಿ ಅಸಾವೀತ್ ಎಂಬ ರೂಪವು ಸಿದ್ಧವಾಗುತ್ತದೆ.

ಲುಙ್:

ಪರಸ್ಮೈ ಪದದ ರೂಪಗಳು: ಅಸಾವೀತ್, ಅಸಾವಿಷ್ಟಾಮ್, ಅಸಾವಿಷುಃ। ಅಸಾವೀಃ, ಅಸಾವಿಷ್ಟಮ್,ಅಸಾವಿಷ್ಟ। ಅಸಾವಿಷಮ್, ಅಸಾವಿಷ್ವ, ಅಸಾವಿಷ್ಮ।

ಆತ್ಮನೇ ಪದದ ರೂಪಗಳು: ಅಸೋಷ್ಟ, ಅಸೋಷಾತಾಮ್, ಅಸೋಷತ।

ಅಸೋಷ್ಟಾಃ, ಅಸೋಷಾಥಾಮ್, ಅಸೋಢ್ವಮ್। ಅಸೋಷಿ, ಅಸೋಷ್ವಹಿ, ಅಸೋಷ್ಮಹಿ।

ಲೃಙ್ ಪರಸ್ಮೈ ಪದದ ರೂಪಗಳು: ಅಸೋಷ್ಯತ್, ಅಸೋಷ್ಯತಾಮ್, ಅಸೋಷ್ಯನ್। ಅಸೋಷ್ಯಃ, ಅಸೋಷ್ಯತಮ್, ಅಸೋಷ್ಯತ। ಅಸೋಷ್ಯಮ್, ಅಸೋಷ್ಯಾವ, ಅಸೋಷ್ಯಾಮ।

ಆತ್ಮನೇ ಪದದ ರೂಪಗಳು: ಅಸೋಷ್ಯತ, ಅಸೋಷ್ಯೇತಾಮ್, ಅಸೋಷ್ಯನ್ತ। ಅಸೋಷ್ಯಥಾಃ, ಅಸೋಷ್ಯೇಥಾಮ್, ಅಸೋಷ್ಯಧ್ವಮ್। ಅಸೋಷ್ಯೇ, ಅಸೋಷ್ಯಾವಹಿ, ಅಸೋಷ್ಯಾಮಹಿ।

(2) ಚಿಞ್ ಚಯನೆ (ಸಂಗ್ರಹ ಮಾಡುವುದು)–ಇಲ್ಲಿಯೂ ಞ್ ಕಾರವು ಇತ್ ಆಗಿರುವುದರಿಂದ, ಇದು ಉಭಯಪದಿಯಾಗಿದೆ.

ವಿಶೇಷಗಳು:– ತಾಸಿ ಮತ್ತು ಸ್ಯ ಪ್ರತ್ಯಯಗಳು ಅನಿಟ್ ಆಗಿವೆ. ಆದರೆ ಥಲ್ ನಲ್ಲಿ ವೇಟ್ ಆಗಿದೆ. ಅನ್ಯ 'ಲ'ಕಾರವಾದ 'ಲಿಟ್' ನಲ್ಲಿ 'ಸೇಟ್' ಆಗುತ್ತದೆ. ಇದರ ರೂಪವು 'ಸು' ಧಾತುವಿನ ರೂಪಗಳಂತೆ ಇರುತ್ತವೆ. ಆದರೆ ಈ ಧಾತುವಿನಲ್ಲಿ ಲುಙ್ 'ಲ'ಕಾರದಲ್ಲಿ ಇಟ್ ಆಗಮವು ಬರುವುದಿಲ್ಲ.

ಲಟ್:

ಪರಸ್ಮೈ ಪದದ ರೂಪಗಳು: ಚಿನೋತಿ, ಚಿನುತಃ, ಚಿನ್ವನ್ತಿ। ಚಿನೋಷಿ, ಚಿನುಥಃ, ಚಿನುಥ। ಚಿನೋಮಿ, ಚಿನುವಃ/ಚಿನ್ವಃ, ಚಿನುವಃ/ಚಿನ್ಮಃ।

ಆತ್ಮನೇ ಪದದ ರೂಪಗಳು: ಚಿನುತೇ, ಚಿನ್ವಾತೇ, ಚಿನ್ವತೇ। ಚಿನುಷೇ, ಚಿನ್ವಾಥೇ, ಚಿನುಧ್ವೇ। ಚಿನ್ವೇ, ಚಿನುವಹೇ/ಚಿನ್ವಹೇ, ಚಿನುಮಹೇ/ಚಿನ್ಮಹೇ।

**(ವೈಕಲ್ಪಿಕವಾಗಿ ಕುತ್ವವನ್ನು ವಿಧಿಸುವ ಸೂತ್ರ)**

**ಲಟ್: ಸೂತ್ರ– 648. ವಿಭಾಷಾ ಚೇಃ (7.3.58)**

ವೃತ್ತಿ– ಅಭ್ಯಾಸಾತ್ ಪರಸ್ಯ ಕುತ್ವಂ ವಾ ಸ್ಯಾತ್ ಸನಿ ಲಿಟಿ ಚ। ಚಿಕಾಯ, ಚಿಚಾಯ। ಚಿಕ್ಯೇ, ಚಿಚ್ಯೇ। ಅಚೈಷೀತ್। ಅಚೇಷ್ಟ।

3. ಸ್ತೃಞ್ – ಆಚ್ಛಾದನೇ। ಸ್ತೃಣೋತಿ, ಸ್ತೃಣುತೇ।

ಅ.ವೃ.:– "ಚಜೋಃ ಕುಘಿಣ್ಣ್ಯತೋಃ" ಎಂಬ ಸೂತ್ರದಿಂದ ಕು ಎಂಬ ಪದವು "ಅಭ್ಯಾಸಾಚ್ಚ" ಎಂಬ ಸೂತ್ರದಿಂದ ಅಭ್ಯಾಸಾತ್ ಎಂಬ ಪದವು ಮತ್ತು "ಸಂಲ್ಲಿಟೋರ್ಜೇಃ" ಎಂಬ ಸೂತ್ರದಿಂದ ಸಂಲ್ಲಿಟೋಃ ಎಂಬ ಪದವು ಅನುವೃತ್ತ ವಾಗುತ್ತದೆ.

ಅರ್ಥ:– ಅಭ್ಯಾಸಕ್ಕಿಂತ ಪರದಲ್ಲಿ ಇರುವ ಚಿಞ್ ಧಾತುವಿಗೆ ವೈಕಲ್ಪಿಕವಾಗಿ ಕುತ್ವವು ಬರುತ್ತದೆ– ಸನ್ ಅಥವಾ ಲಿಟ್ ಪರದಲ್ಲಿ ಇದ್ದಾಗ.

ಲಿಟ್: ಈ 'ಲ'ಕಾರದಲ್ಲಿ ದ್ವಿತ್ವ ಮೊದಲಾದ ಕಾರ್ಯಗಳಾದ ಮೇಲೆ ಪ್ರಕೃತ ಸೂತ್ರದಿಂದ ಅಭ್ಯಾಸಕ್ಕಿಂತ ಪರದಲ್ಲಿ ಇರುವ 'ಚ್' ಕಾರಕ್ಕೆ ಕುತ್ವವು ಆಗಿ ವೃದ್ಧಿ

ಬಂದು ಯಣ್ ಆದೇಶ ಮಾಡಿದ ಮೇಲೆ ರೂಪವು ಸಿದ್ಧಸುತ್ತದೆ.

ಕುತ್ವ ಮಾಡಿದ ಪಕ್ಷದಲ್ಲಿ ಬರುವ ರೂಪಗಳು: ಚಿಕಾಯ, ಚಿಕ್ಯತುಃ, ಚಿಕ್ಯುಃ ।ಚಿಕಯಿಥ/ಚಿಕೇಥ, ಚಿಕ್ಯಥುಃ, ಚಿಕ್ಯ। ಚಿಕಾಯ/ಚಿಕಯ, ಚಿಕ್ಯಿವ, ಚಿಕ್ಯಿಮ।

ಕುತ್ವ ಬಾರದಪಕ್ಷದಲ್ಲಿ ಬರುವ ರೂಪಗಳು:–ಚಿಚಾಯ, ಚಿಚ್ಯತುಃ, ಚಿಚ್ಯುಃ। ಚಿಚಯಿಥ/ಚಿಚೇಥ, ಚಿಚ್ಯಥುಃ, ಚಿಚ್ಯ। ಚಿಚಾಯ/ಚಿಚಯ, ಚಿಚ್ಯಿವ, ಚಿಚ್ಯಿಮ।

ಆತ್ಮನೇ ಪದದ ರೂಪಗಳು:–ಯಣ್ ಸಂಧಿಯಾದ ಮೇಲೆ ಕುತ್ವ ಬರುವ ಪಕ್ಷದಲ್ಲಿ–ರೂಪಗಳು: ಚಿಕ್ಯೇ, ಚಿಕ್ಯಾತೇ, ಚಿಕ್ಯಿರೇ। ಚಿಕ್ಯಿಷೇ, ಚಿಕ್ಯಾಥೇ, ಚಿಕ್ಯಿಢ್ವೇ/ಚಿಕ್ಯಿಧ್ವೇ। ಚಿಕ್ಯೇ, ಚಿಕ್ಯಿವಹೇ, ಚಿಕ್ಯಿಮಹೇ।

ಕುತ್ವ ಬಾರದ ಪಕ್ಷದಲ್ಲಿ ರೂಪಗಳು: ಚಿಚ್ಯೇ, ಚಿಚ್ಯಾತೇ, ಚಿಚ್ಯಿರೆ। ಚಿಚ್ಯಿಷೇ, ಚಿಚ್ಯಾಥೇ, ಚಿಚ್ಯಿಢ್ವೇ/ಚಿಚ್ಯಿಧ್ವೇ।, ಚಿಚ್ಯೇ, ಚಿಚ್ಯಿವಹೇ, ಚಿಚ್ಯಿಮಹೇ।

ಲುಟ್: ಆರ್ಧ ಧಾತುಕವಾಗಿರುವುದರಿಂದ ಇಲ್ಲಿ ಗುಣವು ಬರುತ್ತದೆ.

ಪರಸ್ಮೈ ಪದದ ರೂಪಗಳು: ಚೇತಾ, ಚೇತಾರೌ, ಚೇತಾರಃ। ಚೇತಾಸಿ, ಚೇತಾಸ್ಥಃ, ಚೇತಾಸ್ಥ। ಚೇತಾಸ್ಮಿ, ಚೇತಾಸ್ವಃ, ಚೇತಾಸ್ಮಃ।

ಆತ್ಮನೇ ಪದದ ರೂಪಗಳು: ಚೇತಾ, ಚೇತಾರೌ, ಚೇತಾರಃ। ಚೇತಾಸೇ, ಚೇತಾಸಾಥೇ, ಚೇತಾಧ್ವೇ। ಚೇತಾಹೇ, ಚೇತಾಸ್ವಹೇ, ಚೇತಾಸ್ಮಹೇ।

ಲೃಟ್ : ಪರಸ್ಮೈ ಪದದ ರೂಪಗಳು: ಚೇಷ್ಯತಿ, ಚೇಷ್ಯತಃ, ಚೇಷ್ಯನ್ತಿ। ಚೇಷ್ಯಸಿ, ಚೇಷ್ಯಥಃ, ಚೇಷ್ಯಥ। ಚೇಷ್ಯಾಮಿ, ಚೇಷ್ಯಾವಃ, ಚೇಷ್ಯಾಮಃ।

ಆತ್ಮನೇ ಪದದ ರೂಪಗಳು: ಚೇಷ್ಯತೇ, ಚೇಷ್ಯೇತೇ, ಚೇಷ್ಯನ್ತೇ। ಚೇಷ್ಯಸೇ, ಚೇಷ್ಯೇಥೇ, ಚೇಷ್ಯಧ್ವೇ। ಚೇಷ್ಯೇ, ಚೇಷ್ಯಾವಹೇ, ಚೇಷ್ಯಾಮಹೇ।

ಲೋಟ್: ಪರಸ್ಮೈ ಪದದ ರೂಪಗಳು: ಚಿನೋತು/ಚಿನುತಾತ್, ಚಿನುತಾಮ್, ಚಿನ್ವನ್ತು। ಚಿನು/ಚಿನುತಾತ್, ಚಿನುತಮ್, ಚಿನುತ। ಚಿನವಾನಿ, ಚಿನವಾವ, ಚಿನುವಾಮ।

ಆತ್ಮನೇ ಪದದ ರೂಪಗಳು: ಚಿನುತಾಮ್, ಚಿನ್ವಾವಾತಾಮ್, ಚಿನ್ವತಾಮ್। ಚಿನುಷ್ವ, ಚಿನ್ವಾಥಾಮ್, ಚಿನುಧ್ವಮ್। ಚಿನವೈ, ಚಿನವಾವಹೈ, ಚಿನವಾಮಹೈ।

ಲಙ್: ಪರಸ್ಮೈ ಪದದ ರೂಪಗಳು: ಅಚಿನೋತ್, ಅಚಿನುತಾಮ್, ಅಚಿನ್ವನ್। ಅಚಿನೋಃ, ಅಚಿನುತಮ್, ಅಚಿನುತ। ಅಚಿನವಮ್, ಅಚಿನುವ/ಅಚಿನ್ವ, ಅಚಿನುಮ/ಅಚಿನ್ಮ.

ಆತ್ಮನೇ ಪದದ ರೂಪಗಳು: ಅಚಿನುತ, ಅಚಿನ್ವಾತಾಮ್, ಅಚಿನ್ವತ। ಅಚಿನುಥಾಃ, ಅಚಿನ್ವಾಥಾಮ್,ಅಚಿನುಧ್ವಮ್। ಅಚಿನ್ವಿ, ಅಚಿನ್ವಹಿ/ಅಚಿನುವಹಿ,ಅಚಿನ್ಮಹಿ/ಅಚಿನುಮಹಿ।

ವಿಧಿಲಿಙ್: ಪರಸ್ಮೈಪದದ ರೂಪಗಳು: ಚಿನುಯಾತ್, ಚಿನುಯಾತಾಮ್, ಚಿನುಯುಃ। ಚಿನುಯಾಃ, ಚಿನುಯಾತಮ್, ಚಿನುಯಾತ। ಚಿನುಯಾಮ್, ಚಿನುಯಾವ, ಚಿನುಯಾಮ

ಆತ್ಮನೇ ಪದದ ರೂಪಗಳು: ಚಿನ್ವೀತ, ಚಿನ್ವೀಯಾತಾಮ್, ಚಿನ್ವೀರನ್। ಚಿನ್ವೀಥಾಃ,

ಚಿನ್ವೀಯಾಥಾಮ್, ಚಿನ್ವೀಢ್ವಮ್। ಚಿನ್ವೀಯ, ಚಿನ್ವೀವಹಿ, ಚಿನ್ವೀಮಹಿ।

ಆಶೀರ್ಲಿಂಗ್: "ಅಕೃತ್ ಸಾರ್ವಧಾತುಕಯೋಃ ದೀರ್ಘಃ" ಎಂಬ ಸೂತ್ರದಿಂದ ದೀರ್ಘ ಬಂದ ಮೇಲೆ ಈ ಕೆಳಗಿನ ರೂಪಗಳು ಬರುತ್ತವೆ.

ಪರಸ್ಮೈ ಪದದ ರೂಪಗಳು:- ಚೀಯಾತ್, ಚೀಯಾಸ್ತಾಮ್, ಚೀಯಾಸುಃ। ಚೀಯಾಃ, ಚೀಯಾಸ್ತಮ್, ಚೀಯಾಸ್ತ। ಚೀಯಾಸಮ್, ಚೀಯಾಸ್ವ, ಚೀಯಾಸ್ಮ।

ಆತ್ಮನೇ ಪದ: ಸಿಯುಟ್ ಮತ್ತು ಸ್ ಕಾರಗಳು ಲೋಪವಾದ ಮೇಲೆ ಈ ಕೆಳಗಿನ ರೂಪಗಳು ಸಿದ್ಧವಾಗುತ್ತವೆ.

ರೂಪಗಳು: ಚೇಷೀಷ್ಟ, ಚೇಷೀಯಾಸ್ತಾಮ್, ಚೇಷೀರನ್। ಚೇಷೀಷ್ಠಾಃ, ಚೇಷೀಯಾಸ್ಥಾಮ್, ಚೇಷೀಢ್ವಮ್। ಚೇಷೀಯ, ಚೇಷೀವಹಿ, ಚೇಷೀಮಹಿ।

ಲುಙ್: ಪರಸ್ಮೈ ಪದದ ರೂಪಗಳು: ಅಚೈಷೀತ್, ಅಚೈಷ್ಟಾಮ್, ಅಚೈಷುಃ। ಅಚೈಷೀಃ, ಅಚೈಷ್ಟಮ್, ಅಚೈಷ್ಟ। ಅಚೈಷಮ್, ಅಚೈಷ್ವ ಅಚೈಷ್ಮ।

ಆತ್ಮನೇ ಪದದ ರೂಪಗಳು: ಅಚೇಷ್ಟ, ಅಚೇಷಾತಾಮ್, ಅಚೇಷತ। ಅಚೇಷ್ಠಾಃ, ಅಚೇಷಾಥಾಮ್, ಅಚೇಢ್ವಮ್। ಅಚೇಷಿ, ಅಚೇಷ್ವಹಿ, ಅಚೇಷ್ಮಹಿ।

ಲೃಙ್: ಪರಸ್ಮೈ ಪದದ ರೂಪಗಳು: ಅಚೇಷ್ಯತ್, ಅಚೇಷ್ಯತಾಮ್, ಅಚೇಷ್ಯನ್। ಅಚೇಷ್ಯಃ, ಅಚೇಷ್ಯತಮ್, ಅಚೇಷ್ಯತ। ಅಚೇಷ್ಯಮ್, ಅಚೇಷ್ಯಾವ, ಅಚೇಷ್ಯಾಮ।

ಆತ್ಮನೇ ಪದದ ರೂಪಗಳು: ಅಚೇಷ್ಯತ, ಅಚೇಷ್ಯೇತಾಮ್, ಅಚೇಷ್ಯನ್ತ। ಅಚೇಷ್ಯಥಾಃ, ಅಚೇಷ್ಯೇಥಾಮ್, ಅಚೇಷ್ಯಧ್ವಮ್। ಅಚೇಷ್ಯೇ, ಅಚೇಷ್ಯಾವಹಿ, ಅಚೇಷ್ಯಾಮಹಿ।

(3) ಸ್ತೃಞ್-ಆಚ್ಛಾದನೆ (ಮುಚ್ಚುವುದು)

ಈ ಪ್ರಕೃತ ಧಾತುವು ಞಿತ್ ಆಗಿದೆ. ಆದ್ದರಿಂದ ಉಭಯಪದಿ ಯಾಗಿರುತ್ತದೆ, ಮತ್ತು 'ಊದ್ಯೃದನ್ತೈಃ' ಎಂಬ ಶ್ಲೋಕ ಸಂಗ್ರಹದಲ್ಲಿ ಇದು ಅನಿಟ್ ಆಗಿ ಪರಿಗಣತವಾಗಿದೆ. ಕ್ರಾದಿ ನಿಯಮದಿಂದ ಇಟ್ ಆಗುತ್ತದೆ. ಆದರೆ ಇದು 'ಋದನ್ತ'ವಾಗಿರುವುದರಿಂದ ಥಲ್ ಪ್ರತ್ಯಯ ಬಂದಾಗ ಭಾರದ್ವಾಜ ನಿಯಮದಿಂದ ವೈಕಲ್ಪಿಕ ರೂಪವನ್ನು ಹೊಂದುವುದಿಲ್ಲ. ಇದರಲ್ಲಿ 'ಸ್ತೃ' ಮಾತ್ರ ಉಳಿಯುತ್ತದೆ.

ಲಟ್: ಪರಸ್ಮೈ ಪದದ ರೂಪಗಳು: ಸ್ತೃಣೋತಿ, ಸ್ತೃಣುತಃ, ಸ್ತೃಣ್ವನ್ತಿ। ಸ್ತೃಣೋಷಿ, ಸ್ತೃಣುಥಃ, ಸ್ತೃಣುಥ। ಸ್ತೃಣೋಮಿ, ಸ್ತೃಣುವಃ/ಸ್ತೃಣ್ವಃ, ಸ್ತೃಣುಮಃ/ಸ್ತೃಣ್ಮಃ।

ಆತ್ಮನೇ ಪದದ ರೂಪಗಳು: ಸ್ತೃಣುತೇ, ಸ್ತೃಣ್ವಾತೇ, ಸ್ತೃಣ್ವತೇ। ಸ್ತೃಣುಷೇ, ಸ್ತೃಣ್ವಾಥೇ, ಸ್ತೃಣುಧ್ವೇ। ಸ್ತೃಣ್ವೇ, ಸ್ತೃಣುವಹೇ/ಸ್ತೃಣ್ವಹೇ, ಸ್ತೃಣುಮಹೇ/ಸ್ತೃಣ್ಮಹೇ।

**(ಅಭ್ಯಾಸದ ಶರ್ ಪೂರ್ವ ಖಯ್ ವರ್ಣಗಳನ್ನು ಉಳಿಸಿ, ಉಳಿದ ಹಲ್ ವರ್ಣಗಳಿಗೆ ಲೋಪ ವಿಧಿಸುವ ಸೂತ್ರ)**

**ಸೂತ್ರ- 649. ಶರ್ಪೂರ್ವಾಃ ಖಯಃ (7.4.61)**

ವೃತ್ತಿ-ಅಭ್ಯಾಸಸ್ಯ ಶರ್ಪೂರ್ವಾಃ ಖಯಃ ಶಿಷ್ಯನ್ತೇ ಅನ್ಯೇ ಹಲಃ ಲುಪ್ಯನ್ತೇ। ತಸ್ತಾರ।

ತಸ್ತರತುಃ। ತಸ್ತರುಃ। ತಸ್ತರೇ। (498)। ಗುಣೋರ್ತೀತಿ ಗುಣಃ। ಸ್ತರ್ಯಾತ್।

ಅ.ವ್ಯ:– "ಹಲಾದಿಃ ಶೇಷ:" ಎಂಬ ಸೂತ್ರದಿಂದ ಶೇಷ ಶಬ್ಧವನ್ನು ಬಹುವಚನದಲ್ಲಿ ಶೇಷಾಃ ಎಂದು ವಿಪರಿಣಾಮಗೊಳಿಸಿ ಅನುವೃತ್ತಿ ಮಾಡಲಾಗಿದೆ. "ಅತ್ರ ಲೋಪೋಽಭ್ಯಾಸ್ಯಃ" ಎಂಬ ಸೂತ್ರದಿಂದ ಅಭ್ಯಾಸಸ್ಯ ಎಂಬ ಪದವು ಅನುವೃತ್ತಿ ಮಾಡಲಾಗಿದೆ.

ಅರ್ಥ:– ಯಾವ ಅಭ್ಯಾಸದಲ್ಲಿ ಪೂರ್ವದಲ್ಲಿ 'ಶರ್' ವರ್ಣವಿರುತ್ತದೋ ಆ ಅಭ್ಯಾಸದಲ್ಲಿಖಯ್ ವರ್ಣವು ಮಾತ್ರ ಉಳಿಯುತ್ತದೆ. ಉಳಿದ ಹಲ್ ವರ್ಣಗಳು ಲೋಪವಾಗುತ್ತವೆ. (ಈ ಸೂತ್ರವು "ಹಲಾದಿಃ ಶೇಷಃ" ಎಂಬ ಸೂತ್ರಕ್ಕೆ ಬಾಧಕವಾಗಿದೆ).

ಲಿಟ್:– ಉದಾ: – ತಸ್ತಾರ– ಪ್ರಥಮಪುರುಷ ಏಕವಚನದಲ್ಲಿ 'ಸ್ತೃ' ಧಾತುವಿನ ಮೇಲೆ 'ಲಿಟ್' ಆದೇಶವಾದ 'ತಿಪ್ (ತಿ)' ಬಂದು, ಅದಕ್ಕೆ ಅಭಿನವ ಆಖ್ಯಾತ ಪ್ರತ್ಯಯವಾದ ಣಲ್ (ಅ) ಬಂದು, ಧಾತುವಿಗೆ ದ್ವಿತ್ವ ಬಂದ ಮೇಲೆ ಸ್ತೃ+ ಸ್ತೃ+ ಅ ಎಂದು ಇರುತ್ತದೆ. "ಉರತ್" ಎಂಬ ಸೂತ್ರದಿಂದ ಅಭ್ಯಾಸದ 'ಋ' ಕಾರಕ್ಕೆ 'ಅರ್' ಆದೇಶ ಬಂದು ಸ್ತರ್+ಸ್ತೃ+ಅ ಎಂದು ಇರುತ್ತದೆ. "ಹಲಾದಿಃ ಶೇಷಃ" ಎಂಬ ಸೂತ್ರದಿಂದ ಪೂರ್ವದಲ್ಲಿರುವ 'ಸ್' ಕಾರವು ಉಳಿದು ಅಂತ್ಯದಲ್ಲಿರುವ 'ತ್, ರ್'ಗಳಿಗೆ ಲೋಪ ಬರಬೇಕಾಗಿತ್ತು. ಆದರೆ ಪೂರ್ವದಲ್ಲಿ ಇರುವ 'ಸ್' ಕಾರವು ಶರ್ ವರ್ಣವಾಗಿರುವುದರಿಂದ ಅದರ ಪರದಲ್ಲಿ ಖಯ್ ಪ್ರತ್ಯಾಹಾರಾನ್ತರ್ಗತ 'ತ್' ಕಾರವು ಇರುವುದರಿಂದ ಅದನ್ನು ಬಾಧಿಸಿ ಪ್ರಕೃತ ಸೂತ್ರದಿಂದ 'ತ್' ಕಾರ ಮಾತ್ರ ಉಳಿಯುತ್ತದೆ. ಉಳಿದ ಹಲ್ ವರ್ಣಗಳು ಸ್ ಮತ್ತು ರ್ ವರ್ಣಗಳು ಲೋಪವಾಗುತ್ತವೆ. ಆಗ ತ+ಸ್ತೃ+ ಅ ಎಂದು ಇರುತ್ತದೆ. "ಋತಶ್ಚ ಸಂಯೋಗಾದೇರ್ಗುಣಃ" ಎಂಬ ಸೂತ್ರದಿಂದ 'ಋ' ಕಾರಕ್ಕೆ ಗುಣ(ಅರ್) ಬಂದು "ಆತ ಉಪಧಾಯಾಃ" ಎಂಬ ಸೂತ್ರದಿಂದ ವೃದ್ಧಿ ಬಂದು, ತಸ್ತಾರ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ತಸ್ತರತುಃ–ಪ್ರಥಮಪುರುಷ ದ್ವಿವಚನದಲ್ಲಿ 'ಸ್ತೃ' ಧಾತುವಿನ ನಂತರ ಲಿಡಾದೇಶವಾದ 'ತಸ್' ಬಂದು ಅದಕ್ಕೆ ಅಭಿನವ ಆಖ್ಯಾತಪ್ರತ್ಯಯವಾದ ಅತುಸ್ ಬಂದು ಧಾತುವಿಗೆ ದ್ವಿತ್ವವಾದಮೇಲೆ ಸ್ತೃ+ಸ್ತೃ+ಅ ಎಂದಿದ್ದಾಗ ಹಿಂದಿನಂತೆಯೇ ಪ್ರಕ್ರಿಯೆ ನಡೆದು ತ+ಸ್ತೃ+ಅತುಸ್ ಎಂದಿದ್ದಾಗ ಅನಭ್ಯಸ್ತ ರೂಪದಲ್ಲಿರುವ 'ಋ' ಕಾರಕ್ಕೆ "ಋತಶ್ಚ ಸಂಯೋಗಾದೇರ್ಗುಣಃ" ಎಂಬ ಸೂತ್ರದಿಂದ ಗುಣ(ಅರ್) ಬಂದು, ತ+ತರ್+ಅತುಸ್ ಎಂದಿದ್ದಾಗ 'ಸ್' ಕಾರಕ್ಕೆ ರುತ್ವ–ವಿಸರ್ಗಗಳಿಂದ ತಸ್ತರತುಃ ಎಂದು ರೂಪವಾಗುತ್ತದೆ.

ಉದಾ– ತಸ್ತರುಃ – ಪ್ರಥಮಪುರುಷ ಬಹುವಚನದಲ್ಲಿ ಸ್ತೃ+ಉಸ್ ಎಂದಿದ್ದಾಗ ಹಿಂದಿನಂತೆಯೇ ಪ್ರಕ್ರಿಯೇ ನಡೆದು ತಸ್ತರುಃ ಎಂದು ರೂಪವು ಸಿದ್ಧವಾಗುತ್ತದೆ. (ಗುಣವು ಎಲ್ಲಡೆಯಲ್ಲಿಯೂ ಇರುತ್ತದೆ. ಆದರೆ ಣಿತ್‌ನ್ನು ಬಿಟ್ಟು ಬೇರೆಕಡೆ ಎಲ್ಲಿಯೂ ವೃದ್ಧಿಯಾಗುವುದಿಲ್ಲ.

ಆತ್ಮನೇಪದದಲ್ಲೂ ಇದೇ ರೀತಿ ಪ್ರಕ್ರಿಯೆ ಇರುತ್ತದೆ.

ಪರಸ್ಮೈ ಪದದ ರೂಪಗಳು: ತಸ್ತಾರ, ತಸ್ತರತುಃ, ತಸ್ತರುঃ। ತಸ್ತರ್ಥ, ತಸ್ಥರಥುಃ, ತಸ್ತರ। ತಸ್ತಾರ/ತಸ್ತರ, ತಸ್ತರಿವ, ತಸ್ತರಿಮ।

ಆತ್ಮನೇ ಪದದ ರೂಪಗಳು: ತಸ್ತರೇ, ತಸ್ತರಾತೇ, ತಸ್ತರಿರೇ। ತಸ್ತರಿಷೇ, ತಸ್ತರಾಥೇ,ತಸ್ತರಿಢ್ವೇ/ತಸ್ತರಿಧ್ವೇ। ತಸ್ತರೇ, ತಸ್ತರಿವಹೇ, ತಸ್ತರಿಮಹೇ।

ಲುಟ್: ಪರಸ್ಮೈ ಪದದ ರೂಪಗಳು: ಸ್ತರ್ತಾ, ಸ್ತರ್ತಾರೌ, ಸ್ತರ್ತಾರಃ। ಸ್ತರ್ತಾಸಿ, ಸ್ತರ್ತಾಸ್ಥಃ, ಸ್ತರ್ತಾಸ್ಥ। ಸ್ತರ್ತಾಸ್ಮಿ, ಸ್ತರ್ತಾಸ್ವಃ, ಸ್ತರ್ತಾಸ್ಮಃ।

ಆತ್ಮನೇ ಪದದ ರೂಪಗಳು: ಸ್ತರ್ತಾ, ಸ್ತರ್ತಾರೌ, ಸ್ತರ್ತಾರಃ। ಸ್ತರ್ತಾಸೇ, ಸ್ತರ್ತಾಸಾಥೇ, ಸ್ತರ್ತಾಧ್ವೇ। ಸ್ತರ್ತಾಹೇ, ಸ್ತರ್ತಾಸ್ವಹೇ ಸ್ತರ್ತಾಸ್ಮಹೇ।

ವಿಶೇಷ: ಈ 'ಲ' ಕಾರದಲ್ಲಿ ಗುಣವು ಬರುತ್ತದೆ.

ಲೃಟ್: "ಋದ್ಧನೋಃ ಸ್ಯೇ" ಎಂಬ ಸೂತ್ರದಿಂದ ಇಟ್ ಆಗಮವು ಬಂದು ಈ ಕೆಳಗಿನ ರೂಪಗಳು ಸಿದ್ಧವಾಗುತ್ತವೆ.

ಪರಸ್ಮೈಪದದ ರೂಪಗಳು: ಸ್ತರಿಷ್ಯತಿ, ಸ್ತರಿಷ್ಯತಃ, ಸ್ತರಿಷ್ಯನ್ತಿ। ಸ್ತರಿಷ್ಯಸಿ, ಸರಿಷ್ಯಥಃ, ಸ್ತರಿಷ್ಯಥ। ಸ್ತರಿಷ್ಯಾಮಿ, ಸ್ತರಿಷ್ಯಾವಃ, ಸ್ತರಿಷ್ಯಾಮಃ।

ಆತ್ಮನೇ ಪದದ ರೂಪಗಳು: ಸ್ತರಿಷ್ಯತೇ, ಸ್ತರಿಷ್ಯೇತೇ, ಸ್ತರಿಷ್ಯನ್ತೇ। ಸ್ತರಿಷ್ಯಸೇ, ಸರಿಷ್ಯೇಥೇ, ಸ್ತರಿಷ್ಯಧ್ವೇ। ಸ್ತರಿಷ್ಯೇ, ಸ್ತರಿಷ್ಯಾವಹೇ, ಸ್ತರಿಷ್ಯಾಮಹೇ।

ಲೋಟ್: ಪರಸ್ಮೈ ಪದದ ರೂಪಗಳು:-ಸ್ತೃಣೋತು/ಸ್ತೃಣುತಾತ್, ಸ್ತೃಣುತಾಮ್, ಸ್ತೃಣ್ವನ್ತು। ಸ್ತೃಣು/ಸ್ತೃಣುತಾತ್, ಸ್ತೃಣುತಮ್, ಸ್ತೃಣುತ। ಸ್ತೃಣವಾನಿ, ಸ್ತೃಣುವಾವ, ಸ್ತೃಣುಮಾಮ।

ಆತ್ಮನೇ ಪದದ ರೂಪಗಳು: ಸ್ತೃಣುತಾಮ್,ಸ್ತೃಣ್ವಾತಾಮ್, ಸ್ತೃಣ್ವತಾಮ್। ಸ್ತೃಣುಷ್ವ ಸ್ತೃಣ್ವಾಥಾಮ್, ಸ್ತೃಣುಧ್ವಮ್। ಸ್ತೃಣವೈ, ಸ್ತೃಣವಾವಹೈ, ಸ್ತೃಣವಾಮಹೈ।

ಲಙ್:-ಪರಸ್ಮೈ ಪದದ ರೂಪಗಳು: ಅಸ್ತೃಣೋತ್, ಅಸ್ತೃಣುತಾಮ್, ಅಸ್ತೃಣ್ವನ್। ಅಸ್ತೃಣೋಃ, ಅಸ್ತೃಣುತಮ್, ಅಸ್ತೃಣುತ। ಅಸ್ತೃಣವಮ್, ಅಸ್ತೃಣುವ/ಅಸ್ತೃಣ್ವ, ಅಸ್ತೃಣುಮ/ಅಸ್ತೃಣ್ಮ।

ಆತ್ಮನೇಪದದ ರೂಪಗಳು: ಅಸ್ತೃಣುತ, ಅಸ್ತೃಣ್ವಾತಾವ್, ಅಸ್ತೃಣ್ವತ। ಅಸ್ತೃಣುಥಾಃ, ಅಸ್ತೃಣ್ವಾಥಾಮ್। ಅಸ್ತೃಣುಧ್ವಮ್। ಅಸ್ತೃಣ್ವಿ, ಅಸ್ತೃಣುವಹಿ/ಅಸ್ತೃಣ್ವಹಿ, ಅಸ್ತೃಣುಮಹಿ/ಅಸ್ತೃಣ್ಮಹಿ।

ವಿ.ಲಿಙ್ ಪರಸ್ಮೈಪದದ ರೂಪಗಳು: ಸ್ತೃಣುಯಾತ್, ಸ್ತೃಣುಯಾತಾಮ್, ಸ್ತೃಣುಯುಃ। ಸ್ತೃಣುಯಾಃ, ಸ್ತೃಣುಯಾತಮ್, ಸ್ತೃಣುಯಾತ। ಸ್ತೃಣುಯಾಮ್, ಸ್ತೃಣುಯಾವ, ಸ್ತೃಣುಯಾಮ

ಆತ್ಮನೇ ಪದದ ರೂಪಗಳು: ಸ್ತೃಣ್ವೀತ, ಸ್ತೃಣ್ವೀಯಾತಾಮ್, ಸ್ತೃಣ್ವೀರನ್। ಸ್ತೃಣ್ವೀಥಾಃ, ಸ್ತೃಣ್ವೀಯಾಥಾಮ್, ಸ್ತೃಣ್ವೀಧ್ವಮ್। ಸ್ತೃಣ್ವೀಯ, ಸ್ತೃಣ್ವೀವಹಿ, ಸ್ತೃಣ್ವೀಮಹಿ।

ಆಶೀರ್ಲಿಂಗ್: ಈ ಲಕಾರದ ಪರಸ್ಮೈ ಪದದಲ್ಲಿ "ಗುಣೋರ್ತಿ ಸಂಯೋಗಾದ್ಯೋಃ" ಎಂಬ ಸೂತ್ರದಿಂದ ಗುಣ ಬಂದು ಸ್ತರ್ಯಾತ್ ಎಂದು ರೂಪವು ಸಿದ್ಧವಾಗುತ್ತದೆ.

ಪರಸ್ಮೈ ಪದದ ರೂಪಗಳು: ಸ್ತರ್ಯಾತ್, ಸ್ತರ್ಯಾಸ್ತಾಮ್, ಸ್ತರ್ಯಾಸುಃ। ಸ್ತರ್ಯಾಃ, ಸ್ತರ್ಯಾಸ್ತಮ್, ಸ್ತರ್ಯಾಸ್ತ। ಸ್ತರ್ಯಾಸಮ್, ಸ್ತರ್ಯಾಸ್ವ, ಸ್ತರ್ಯಾಸ್ಮ।

ಆತ್ಮನೇ ಪದದ ರೂಪಗಳನ್ನು ಮುಂದಿನ ಸೂತ್ರದಲ್ಲಿ ಹೇಳಲಾಗಿದೆ.

ವಿಶೇಷ: ಆತ್ಮನೇ ಪದದ ರೂಪಕ್ಕಾಗಿ ಈ ಸೂತ್ರವು ಪ್ರವೃತ್ತವಾಗುತ್ತದೆ.

**(ಇಟ್ ಆಗಮಕ್ಕೆ ವಿಕಲ್ಪವನ್ನು ವಿಧಿಸುವ ಸೂತ್ರ)**

**ಸೂತ್ರ– ೬೫೦. ಋತಶ್ಚ ಸಂಯೋಗಾದೇಃ(7.2.43)**

ವೃತ್ತಿಃ– ಋದನ್ತಾತ್ ಸಂಯೋಗಾದೇಃ ಪರಯೋಃ 'ಲಿಙ್' ಸಿಚೋಃ ಇಟ್ ವಾ ಸ್ಯಾತ್ ತಙಿ। ಸ್ತರಿಷೀಷ್ಟ, ತೃಷೀಷ್ಟ। ಅಸ್ತರಿಷ್ಟ, ಅಸ್ತೃತ। ಧೂಞ್ ಕಂಪನೇ (4)। ಧುನೋತಿ, ಧೂನುತೇ, ದುಧಾವ,ಸ್ವರ್ತಿ ವೇಟ್ ದುಧವಿಥ, ದುದೋಥ।

ಪ.ಛೇ:– ಋತಃ, ಚ, ಸಂಯೋಗಾದೇಃ।

ಅ.ವೃ:– "ಲಿಂಗ್‌ಸಿಚಾವಾತ್ಮಮನೇಪದೇಷು" ಎಂಬ ಪೂರ್ಣ ಸೂತ್ರವು ಅನುವೃತ್ತವಾಗುತ್ತದೆ. "ಇಟ್ ಸನಿ ವಾ" ಎಂಬ ಸೂತ್ರದಿಂದ ಇಟ್ ಮತ್ತು ಸನಿ ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ: – ಸಂಯೋಗವನ್ನು ಆದಿಯಲ್ಲಿವುಳ್ಳ ಋದಂತ ಧಾತುವಿನ ಪರದಲ್ಲಿ ಇರುವ ಲಿಙ್ ಮತ್ತು 'ಸಿಚ್' ಗಳಿಗೆ ಆತ್ಮನೇ ಪದದಲ್ಲಿ 'ಇಟ್' ಆಗಮವು ವಿಕಲ್ಪವಾಗಿ ಬರುತ್ತದೆ.

ಆತ್ಮನೇಪದ:

ವಿಶೇಷ:– ಆಶೀರ್ಲಿಙ್ ಆತ್ಮನೇ ಪದದಲ್ಲಿ ಸೀಯಟ್ ಮೊದಲಾದವನ್ನು ಸೇರಿಸಿದ ಮೇಲೆ ಸ್ತೃ+ಸೀ+ಸ್+ತ ಎಂದಿರುತ್ತದೆ. ಇದು ಅನಿಟ್ ಆಗಿರುವುದರಿಂದ ಇಟ್ ಆಗಮವು ಬರುವುದಿಲ್ಲ. ಆದರೆ "ಋತಶ್ಚ ಸಂಯೋಗಾದೇಃ" ಎಂಬ ಸೂತ್ರದಿಂದ ವಿಕಲ್ಪದಿಂದ ಇಟ್ ಆಗಮವು ಬಂದು ಸ್ತೃ+ಇ+ಸೀ+ಸ್+ತ ಎಂದಿರುತ್ತದೆ. 'ಸ್ತೃ'ಗೆ ಸಾರ್ವಧಾತುಕ ಗುಣ ಬಂದು 'ಇ' ಕಾರದ ಪರದಲ್ಲಿ ಇರುವ 'ಸ್' ಕಾರಕ್ಕೆ ಷತ್ವ ಬಂದು ಮತ್ತು 'ಈ' ಕಾರಕ್ಕೆ ಪರದಲ್ಲಿ ಇರುವ ಸ್ ಕಾರಕ್ಕೂ ಷತ್ವ ಬಂದು ಆ 'ಷ' ಕಾರಕ್ಕೆ ಪರದಲ್ಲಿರುವ 'ತ್' ಕಾರಕ್ಕೆ 'ಷ್ಟುತ್ವ' ಬಂದು ಸ್ತರಿಷೀಷ್ಟ ಎಂದು ರೂಪವು ಸಿದ್ಧವಾಗುತ್ತದೆ. ಇಡಾಗಮ ಬಾರದ ಪಕ್ಷದಲ್ಲಿ "ಉಶ್ಚ" ಎಂಬ ಸೂತ್ರದಿಂದ 'ಲಿಙ್' ಗೆ ಜಿತ್ವ ಬರುವುದರಿಂದ "ಕ್ಜಿತಿಚ" ಎಂಬ ಸೂತ್ರದಿಂದ ಗುಣಕ್ಕೆ ನಿಷೇಧ ಬಂದಿದೆ. ಅದ್ದರಿಂದ ಸ್ತೃಷೀಷ್ಟ ಎಂದು ಎರಡನೇ ರೂಪವು ಸಿದ್ಧವಾಗುತ್ತದೆ.

ಆಶೀರ್ಲಿಙ್: ಆತ್ಮನೇ ಪದ– ಇಟ್ ಬಂದ ಪಕ್ಷದಲ್ಲಿ ರೂಪಗಳು: ಸ್ತರಿಷೀಷ್ಟ, ಸ್ತರಿಷೀಯಾಸ್ತಾಮ್, ಸ್ತರಿಷೀರನ್। ಸ್ತರಿಷೀಷ್ಠಾಃ, ಸ್ತರಿಷೀಯಾಸ್ಥಾಮ್, ಸ್ತರಿಷೀಢ್ವಮ್।

ಸ್ತರಿಷೀಯ, ಸ್ತರಿಷೀವಹಿ, ಸ್ತರಿಷೀಮಹಿ।

ಇಟ್ ಬಾರದ ಪಕ್ಷದಲ್ಲಿ ರೂಪಗಳು: ಸ್ತೃಷೀಷ್ಟ, ಸ್ತೃಷೀಯಾಸ್ತಾಮ್, ಸ್ತೃಷೀರನ್। ಸ್ತೃಷೀಷ್ಠಾಃ, ಸ್ತೃಷೀಯಾಸ್ಥಾಮ್, ಸ್ತೃಷೀಢ್ವಮ್। ಸ್ತೃಷೀಯ, ಸ್ತೃಷೀವಹಿ, ಸ್ತೃಷೀಮಹಿ।

ಲುಙ್: ಪರಸ್ಮೈ ಪದದ ರೂಪಗಳು: ಅಸ್ತಾರ್ಷೀತ್, ಅಸ್ತಾರ್ಷ್ಟಾಮ್, ಅಸ್ತಾರ್ಷುಃ। ಅಸ್ತಾರ್ಷೀಃ, ಅಸ್ತಾರ್ಷ್ಟಮ್, ಅಸ್ತಾರ್ಷ್ಟ। ಅಸ್ತಾರ್ಷಮ್, ಅಸ್ತಾರ್ಷ್ವ, ಅಸ್ತಾರ್ಷ್ಮ। ಆತ್ಮನೇ ಪದದ ರೂಪಗಳು: (ಇಟ್ ಬಂದ ಪಕ್ಷ): ಅಸ್ತರಿಷ್ಟ, ಅಸ್ತರಿಷಾತಾಮ್, ಅಸ್ತರಿಷತ। ಅಸ್ತರಿಷ್ಠಾಃ, ಅಸ್ತರಿಷಾಥಾಮ್, ಅಸ್ತರಿಢ್ವಮ್/ ಅಸ್ತರಿಧ್ವಮ್।, ಅಸ್ತರಿಷಿ, ಅಸ್ತರಿಷ್ವಹಿ, ಅಸ್ತರಿಷ್ಮಹಿ।

ಆತ್ಮನೇಪದದಲ್ಲಿ ಇಟ್ ಬಾರದ ಪಕ್ಷದಲ್ಲಿ- ಅಸ್ತೃ+ಸ್+ತ ಎಂದಿದ್ದಾಗ, "ಉಶ್ಚ" ಎಂಬ ಸೂತ್ರದಿಂದ ಇದು ಕಿತ್ ಆಗಿರುವುದರಿಂದ ಗುಣವೃದ್ಧಿಗಳು ಬರುವುದಿಲ್ಲ. "ಹ್ರಸ್ವಾದಙ್ಗಾತ್" ಎಂಬ ಸೂತ್ರದಿಂದ ಝಲ್ ಪರದಲ್ಲಿ ಇದ್ದಾಗ, ಎರಡನೇ 'ಸ್' ಕಾರಕ್ಕೆ ಲೋಪವು ಬಂದು ಅಸ್ತೃತ ಎಂದು ರೂಪವಾಗುತ್ತದೆ.

ರೂಪಗಳು (ಇಟ್ ಬಾರದ ಪಕ್ಷ): ಅಸ್ತೃತ, ಅಸ್ತೃಷಾತಾಮ್, ಅಸ್ತೃಷತ। ಅಸ್ತೃಥಾಃ, ಅಸ್ತೃಷಾಥಾಮ್, ಅಸ್ತೃಢ್ವಮ್। ಅಸ್ತೃಷಿ, ಅಸ್ತೃಷ್ವಹಿ, ಅಸ್ತೃಷ್ಮಹಿ।

ಲೃಙ್: ಪರಸ್ಮೈ ಪದದ ರೂಪಗಳು: ಅಸ್ತರಿಷ್ಯತ್, ಅಸ್ತರಿಷ್ಯತಾಮ್, ಅಸ್ತರಿಷ್ಯನ್। ಅಸ್ತರಿಷ್ಯಃ, ಅಸ್ತರಿಷ್ಯತಮ್, ಅಸ್ತರಿಷ್ಯತ। ಅಸ್ತರಿಷ್ಯಮ್, ಅಸ್ತರಿಷ್ಯಾವ, ಅಸ್ತರಿಷ್ಯಾಮ।

ಆತ್ಮನೇ ಪದದ ರೂಪಗಳು: ಅಸ್ತರಿಷ್ಯತ, ಅಸ್ತರಿಷ್ಯೇತಾಮ್, ಅಸ್ತರಿಷ್ಯನ್ತ। ಅಸ್ತರಿಷ್ಯಾಃ, ಅಸ್ತರಿಷ್ಯೇಥಾಮ್, ಅಸ್ತರಿಷ್ಯಧ್ವಮ್। ಅಸ್ತರಿಷ್ಯೇ, ಅಸ್ತರಿಷ್ಯಾವಹಿ, ಅಸ್ತರಿಷ್ಯಾಮಹಿ।

(4) ಧೂಞ್ ಕಂಪನೆ (ನಡುಗುವುದು)-ಇದರಲ್ಲಿ 'ಞ್' ಕಾರವು ಇತ್/ ಲೋಪವಾಗಿ 'ಧೂ' ಮಾತ್ರ ಉಳಿಯುತ್ತದೆ. ಈ ಧಾತುವು ಉಭಯಪದಿಯೂ ಮತ್ತು "ಸ್ವರತಿ-ಸೂತಿ-ಸೂಯತಿ ಧೂಞ್- ಊದಿತೋವಾ" ಎಂಬ ಸೂತ್ರದಿಂದ ವೇಟ್ ಆಗಿರುತ್ತದೆ.

ಲಟ್:-ಪರಸ್ಮೈ ಪದದ ರೂಪಗಳು: ಧೂನೋತಿ, ಧೂನುತಃ, ಧೂನ್ವನ್ತಿ। ಧೂನೋಷಿ, ಧೂನುಥಃ, ಧೂನುಥ। ಧೂನೋಮಿ, ಧೂನುವಃ/ ಧೂನ್ವಃ, ಧೂನುಮಃ/ಧೂನ್ಮಃ।

ಆತ್ಮನೇ ಪದದ ರೂಪಗಳು: ಧೂನುತೇ, ಧೂನ್ವಾತೇ, ಧೂನ್ವತೇ। ಧೂನುಷೇ, ಧೂನ್ವಾವಾಥೇ, ಧೂನುಧ್ವೇ। ಧೂನ್ವೇ, ಧೂನುವಹೇ/ಧೂನ್ವಹೇ,ಧೂನುಮಹೇ/ಧೂನ್ಮಹೇ।

ಲಿಟ್:-ಪರಸ್ಮೈಪದದ 'ಲಿಟ್' 'ಲ್' ಕಾರದಲ್ಲಿ ಪ್ರಥಮಪುರುಷ ಏಕವಚನದಲ್ಲಿ 'ಧೂ' ಧಾತುವಿಗೆ ಅಭಿನವ ಆಖ್ಯಾತ ಪ್ರತ್ಯಯವಾದ 'ಣಲ್ (ಅ)' ಬಂದಾಗ, ಧೂ+ಅ ಎಂದಿರುತ್ತದೆ. ಧಾತುವಿಗೆ ದ್ವಿತ್ವ ಬಂದು, ಧೂಧೂ+ಅ ಎಂದಿರುತ್ತದೆ. "ಅಭ್ಯಾಸೇ ಚರ್ಚ" ಎಂಬ ಸೂತ್ರದಿಂದ ಅಭ್ಯಾಸದ 'ಧ್' ಕಾರಕ್ಕೆ 'ದ್' ಕಾರವು ಬರುತ್ತದೆ. "ಹ್ರಸ್ವಃ" ಎಂಬ ಸೂತ್ರದಿಂದ ಅಭ್ಯಾಸದ 'ಊ' ಕಾರಕ್ಕೆ ಹ್ರಸ್ವ ಬಂದು ದು

ಧೂ+ಅ ಎಂದಿರುತ್ತದೆ. "ಅಚೋಞ್ಣಿತಿ" ಎಂಬುದರಿಂದ ದೀರ್ಘ 'ಊ' ಕಾರಕ್ಕೆ ವೃದ್ಧಿ ಬಂದು ನಂತರ ಅವಾದೇಶ ಬಂದು ದುಧಾವ ಎಂದು ರೂಪವು ಸಿದ್ಧವಾಗುತ್ತದೆ.

ಇದೇ ರೀತಿಯಲ್ಲಿ ಪ್ರಥಮಪುರುಷ ದ್ವಿ ವಚನದಲ್ಲಿ ದುಧೂ+ಅತುಸ್ ಎಂದಿದ್ದಾಗ, "ಅಚಿ ಶ್ನುಧಾತುಭ್ರುವಾಮ್ ಯ್ವೋರಿಯಙುವಙೌ" ಎಂಬ ಸೂತ್ರದಿಂದ 'ಉವಙ್' ಆದೇಶ ಬಂದು ದುಧುವಥುಃ ಎಂದೂ, ಪ್ರಥಮಪುರುಷ ಬಹುವಚನದಲ್ಲಿ ದುಧೂವುಃ ಎಂದೂ ರೂಪಗಳಾಗುತ್ತವೆ.

ಮಧ್ಯಮಪುರುಷ ಏಕವಚನದಲ್ಲಿ ದುಧೂ+ಥ ಎಂದಿದ್ದಾಗ, ಮತ್ತು "ಸ್ವರತಿ–ಸೂತಿ–ಸೂಯತಿ ಧೂಞ್– ಊದಿತೋವಾ" ಎಂಬ ಸೂತ್ರದಿಂದ 'ಥ'ಗೆ ವಿಕಲ್ಪವಾಗಿ ಇಡಾಗಮ ಬರುತ್ತದೆ. ಇಡಾಗಮ ಬಂದ ಪಕ್ಷದಲ್ಲಿ ಗುಣ– ಅವಾದೇಶಗಳು ಬಂದು ದುಧವಿಥ, ಎಂದೂ ಇಡಾಗಮ ಬಾರದ ಪಕ್ಷದಲ್ಲಿ, ಗುಣ ಮಾತ್ರ ಬಂದು ದುಧೋಥ ಎಂದು ರೂಪವಾಗುತ್ತದೆ.

ಮಧ್ಯಮಪುರುಷ ದ್ವಿವಚನ, ಬಹುವಚನಗಳಲ್ಲಿ ಮೇಲಿನಂತೆಯೇ ಪ್ರಕ್ರಿಯೆ ನಡೆದು ದುಧುವಥುಃ ಮತ್ತು ದುಧುವ ಎಂದು ರೂಪಗಳಾಗುತ್ತವೆ. ಉತ್ತಮಪುರುಷ ಏಕವಚನದಲ್ಲಿ ದುಧೂ+ಅ ಎಂದಿದ್ದಾಗ, "ಣಲುತ್ತಮೋವಾ" ಎಂಬುದರಿಂದ ಕ್ರಮವಾಗಿ ವೃದ್ಧಿ–ಗುಣಗಳು ಬಂದು ಧುಧಾವ/ದುಧವ ಎಂದು ರೂಪಗಳಾಗುತ್ತವೆ.

ರೂಪಗಳು: ದುಧಾವ, ದುಧುವತುಃ, ದುಧುವುಃ। ದುಧವಿಥ/ದುಧೋಥ, ದುಧುವಥುಃ, ದುಧುವ। ದುಧಾವ/ದುಧವ।

ಉದಾ– ದುಧುವಿವ, ದುಧುವಿಮ। ಉತ್ತಮಪುರುಷ ದ್ವಿವಚನ ಮತ್ತು ಬಹುವಚನಗಳಲ್ಲಿ ದುಧೂ+ವ ಮತ್ತು ದುಧೂ+ಮ ಎಂದಿದ್ದಾಗ, "ಸ್ವರತಿ–ಸೂತಿ–ಸೂಯತಿ ಧೂಞ್– ಊದಿತೋವಾ" ಎಂಬ ಸೂತ್ರದಿಂದ ವಿಕಲ್ಪವಾಗಿ 'ಇಟ್' ಆಗಮ ಬಂದಾಗ ಅದನ್ನು ಬಾಧಿಸಿ ನಿತ್ಯವಾಗಿ ನಿಷೇಧವನ್ನು ಮುಂದಿನ ಸೂತ್ರದಲ್ಲಿ ವಿಧಿಸಲಾಗುತ್ತದೆ.

**(ಉಗನ್ತಕ್ಕೆ ಇಟ್ ಆಗಮವನ್ನು ನಿಷೇಧಿಸುವ ಸೂತ್ರ)**

**ಸೂತ್ರ– 651. ಶ್ರ್ಯುಕಃ ಕ್ಕಿತಿ (7.2.11)**

ವೃತ್ತಿ – ಶ್ರಿಞಃ ಏಕಾಚಃ ಉಗನ್ತಾಚ್ಚ ಗಿತ್ಕಿತೋಃ ಇಣ್ ನ। ಪರಮಪಿ ಸ್ವರತ್ಯಾದಿ ವಿಕಲ್ಪಂ ಬಾಧಿತ್ವಾ ಪುರಸ್ತಾತ್ ಪ್ರತಿಷೇಧಕಾಣ್ಡಾರಂಭಸಾಮರ್ಥ್ಯಾತ್ ಅನೇನ ನಿಷೇಧೇ ಪ್ರಾಪ್ತೇ ಕ್ರಾದಿನಿಯಮಾತ್ ನಿತ್ಯಂ ಇಟ್। ದುಧುವಿವ। ದುಧುವೇ। ಅಧಾವೀತ್। ಅಧವಿಷ್ಟ। ಅಧೋಷ್ಟಅಧವಿಷ್ಯತ್। ಅಧೋಷ್ಯತ್। ಅಧವಿಷ್ಯತ। ಅಧೋಷ್ಯತ।

॥ **(16) ಇತಿ ಸ್ವಾದಯಃ** ॥

ಅ. ವೃ – "ಏಕಾಚ ಉಪದೇಶೇಽನುದಾತ್ತಾತ್" ಎಂಬ ಸೂತ್ರದಿಂದ ಏಕಾಚಃ ಎಂಬ ಪದವು ಮತ್ತು "ನೇಡ್ ವಶಿ ಕೃತಿ" ಎಂಬ ಸೂತ್ರದಿಂದ 'ನ' ಮತ್ತು 'ಇಟ್' ಎಂಬ ಪದಗಳು ಅನುವೃತ್ತವಾಗುತ್ತವೆ. ಸೂತ್ರದಲ್ಲಿ ಹೇಳಿರುವ 'ಉಕಃ' ಎಂಬ

ಪದವು 'ಉಕ್' ಪ್ರತ್ಯಾಹಾರವನ್ನು ಸೂಚಿಸುತ್ತದೆ.

ಅರ್ಥ:- ಶ್ರಿಞ್ ಧಾತುವಿನ ನಂತರ ಅಥವಾ ಏಕಾಚ್ ಆದ ಉಗನ್ತ ಧಾತುವಿನ ಪರದಲ್ಲಿ ಇರುವ ಗಿತ್ ಮತ್ತು ಕಿತ್ ಪ್ರತ್ಯಯಗಳಿಗೆ ಇಟ್ ಆಗಮವು ಬರುವುದಿಲ್ಲ.

ಇಲ್ಲಿ "ಆರ್ಧಧಾತುಕಸ್ಯೇಡ್ವಲಾದೇಃ" ಎಂಬ ಸೂತ್ರವು ಇಟ್ ಆಗಮವನ್ನು ವಿಧಿಸುವ ಸಾಧಾರಣ ಸೂತ್ರವಾಗಿದೆ. "ಶ್ರ್ಯುಕಃ ಕಿತಿ" ಎಂಬ ಸೂತ್ರವು ಇದಕ್ಕೆ ನಿಷೇಧಕವಾಗಿದೆ. ಮತ್ತು "ಸ್ವರತಿ-ಸೂತಿ-ಸೂಯತಿ ಧೂಞ್-ಉದಿತೋವಾ" ಎಂಬ ಸೂತ್ರದಿಂದ ವೈಕಲ್ಪಿಕವಾಗಿ ಇಟ್ ಆಗಮವನ್ನು ವಿಧಿಸಲಾಗಿದೆ. ಧೂಞ್ ಧಾತುವಿನ ಲಿಟ್ 'ಲ' ಕಾರದ ವಸ್ ಪ್ರತ್ಯಯವಿದ್ದಾಗ ಮೊದಲು ನಿತ್ಯವಾಗಿ ಇಟ್ ಪ್ರಾಪ್ತವಾಗಿತ್ತು. ಅದನ್ನು ಭಾದಿಸಿ ವಿಕಲ್ಪದಿಂದ ಇಟ್ ಪ್ರಾಪ್ತವಾಗಿದೆ. ಆದರೆ ಪ್ರಕೃತ ಸೂತ್ರದಿಂದ 'ಇಟ್' ನಿಷೇಧವು ಪ್ರಾಪ್ತವಾಗಿದೆ. ಈ ರಿತಿಯಾಗಿ ಎರಡು ಸೂತ್ರಗಳು ತಮ್ಮ ತಮ್ಮ ಕಾರ್ಯದಲ್ಲಿ ಚರಿತಾರ್ಥವಾಗಿವೆ. ಇಂತಹ ಸ್ಥಳದಲ್ಲಿ "ವಿಪ್ರ ತಿಷೇಧೇ ಪರಂ ಕಾರ್ಯಂ" ಎಂಬ ಸೂತ್ರದಿಂದ ಪರಕಾರ್ಯವಾದ ಇಟ್ ಆಗಮದ ವಿಕಲ್ಪವಾಗಬೇಕಾಗಿತ್ತು. ಆದರೆ ಹಾಗೆ ಆಗದೇ ಬೇರೆಯೇ ಆಗಿದೆ. ಇಲ್ಲಿ ನಿಷೇಧಕ್ಕೆ ಪ್ರಾಧಾನ್ಯವಿದೆ ಎಂದು ತಿಳಿದುಕೊಳ್ಳಬೇಕು. ಇಲ್ಲಿ ವಿಕಲ್ಪಬಾರದೇ ನಿಷೇಧವೇ ಬಂದಿದೆ. ಆದರೆ ಇಲ್ಲಿಯೂ ಕ್ರ್ಯಾದಿ ನಿಯಮದ ಪ್ರಾಬಲ್ಯದಿಂದ ನಿತ್ಯವಾಗಿ ಇಟ್ ಆಗಮವು ಬರುತ್ತದೆ.

ಲಿಟ್:

ಪರಸ್ಮೈ ಪದದ ರೂಪಗಳು: ದುಧಾವ, ದುಧುವತುಃ, ದುಧುವುಃ। ದುಧುವಿಥ/ ದುಧೋಥ, ದುಧುವಥುಃ, ದುಧುವ। ದುಧಾವ/ದುಧವ, ದುಧುವಿವ, ದುಧುವಿಮ।

ಆತ್ಮನೇ ಪದದ ರೂಪಗಳು: ದುಧುವೇ, ದುಧುವಾತೇ, ದುಧುವಿರೇ। ದುಧುವಿಷೇ, ದುಧುವಾಥೇ, ದುಧುವಿಢ್ವೇ/ದುಧುವಿಧ್ವೇ। ದುಧುವೇ, ದುಧುವಿವಹೇ, ದುಧುವಿಮಹೇ।

ಲುಟ್:

ಪರಸ್ಮೈ ಪದದ ಇಟ್ ಆಗಮ ಬಂದ ಪಕ್ಷದಲ್ಲಿ ರೂಪಗಳು: ಧವಿತಾ, ಧವಿತಾರೌ, ಧವಿತಾರಃ। ಧವಿತಾಸಿ, ಧವಿತಾಸ್ಥಃ, ಧವಿತಾಸ್ಥ। ಧವಿತಾಸ್ಮಿ, ಧವಿತಾಸ್ವಃ, ಧವಿತಾಸ್ಮಃ।

ಪರಸ್ಮೈ ಪದದ ಇಟ್ ಬಾರದ ಪಕ್ಷದಲ್ಲಿ-ರೂಪಗಳು: ಧೋತಾ, ಧೋತಾರೌ, ಧೋತಾರಃ। ಧೋತಾಸಿ, ಧೊತಾಸ್ಥಃ, ಧೋತಾಸ್ಥ। ಧೋತಾಸ್ಮಿ, ಧೋತಾಸ್ವಃ, ಧೊತಾಸ್ಮಃ।

ಆತ್ಮನೇ ಪದ ಇಟ್ ಬಂದ ಪಕ್ಷದಲ್ಲಿ ರೂಪಗಳು: ಧವಿತಾ, ಧವಿತಾರೌ, ಧವಿತಾರಃ। ಧವಿತಾಸೇ, ಧವಿತಾಸಾಥೇ, ಧವಿತಾಧ್ವೇ। ಧವಿತಾಹೇ, ಧವಿತಾಸ್ವಹೇ ಧವಿತಾಸ್ಮಹೇ।

ಇಟ್ ಬಾರದ ಪಕ್ಷದ ರೂಪಗಳು: ಧೋತಾ, ಧೋತಾರೌ, ಧೋತಾರಃ। ಧೋತಾಸೇ, ಧೊತಾಸಾಥೇ, ಧೋತಾಧ್ವೇ। ಧೋತಾಹೇ, ಧೋತಾಸ್ವಹೇ, ಧೊತಾಸ್ಮಹೇ।

ಲೋಟ್:-ಪರಸ್ಮೈ ಪದದ ರೂಪಗಳು: ಧೂನೊತು/ಧೂನುತಾತ್, ಧೂನುತಾಮ್, ಧೂನ್ವನ್ತು। ಧೂನು/ಧೂನುತಾತ್, ಧೂನುತಮ್, ಧೂನುತ ಧೂನವಾನಿ, ಧೂನವಾವ, ಧೂನವಾಮ।

ಆತ್ಮನೇ ಪದದ ರೂಪಗಳು: ಧೂನುತಾಮ್, ಧೂನ್ವಾತಾಮ್, ಧೂನ್ವತಾಮ್। ಧೂನುಷ್ವ ಧೂನ್ವಾಥಾಮ್, ಧೂನುಧ್ವಮ್। ಧೂನವೈ, ಧೂನವಾವಹೈ, ಧೂನವಾಮಹೈ।

ಲೃಟ್ ಲಕಾರ: ಪರಸ್ಮೈ ಪದದ ಇಟ್ ಬಂದ ಪಕ್ಷದಲ್ಲಿ ರೂಪಗಳು:– ಧವಿಷ್ಯತಿ, ಧವಿಷ್ಯತಃ, ಧವಿಷ್ಯನ್ತಿ। ಧವಿಷ್ಯಸಿ, ಧವಿಷ್ಯಥಃ, ಧವಿಷ್ಯಥ। ಧವಿಷ್ಯಾಮಿ, ಧವಿಷ್ಯಾವಃ, ಧವಿಷ್ಯಾಮಃ।

ಪರಸ್ಮೈ ಪದದ ಇಟ್ ಬಾರದ ಪಕ್ಷದಲ್ಲಿ ರೂಪಗಳು:– ಧೋಷ್ಯತಿ, ಧೋಷ್ಯತಃ, ಧೋಷ್ಯನ್ತಿ। ಧೋಷ್ಯಸಿ, ಧೋಷ್ಯಥಃ, ಧೋಷ್ಯಥ। ಧೋಷ್ಯಾಮಿ, ಧೋಷ್ಯಾವಃ, ಧೋಷ್ಯಾಮಃ।

ಆತ್ಮನೇ ಪದದ ರೂಪಗಳು:–

ಇಟ್ ಬಂದ ಪಕ್ಷದಲ್ಲಿ ರೂಪಗಳು: ಧವಿಷ್ಯತೇ, ಧವಿಷ್ಯೇತೇ, ಧವಿಷ್ಯನ್ತೇ। ಧವಿಷ್ಯಸೇ, ಧವಿಷ್ಯೇಥೇ, ಧವಿಷ್ಯಧ್ವೇ। ಧವಿಷ್ಯೇ, ಧವಿಷ್ಯಾವಹೇ, ಧವಿಷ್ಯಾಮಹೇ।

ಇಟ್ ಬಾರದ ಪಕ್ಷ ರೂಪಗಳು: ಧೋಷ್ಯತೇ, ಧೋಷ್ಯೇತೇ, ಧೋಷ್ಯನ್ತೇ। ಧೋಷ್ಯಸೇ, ಧೋಷ್ಯೇಥೇ, ಧೋಷ್ಯಧ್ವೇ। ಧೋಷ್ಯೇ, ಧೋಷ್ಯವಹೇ, ಧೋಷ್ಯಾಮಹೇ।

ಲಙ್:

ಪರಸ್ಮೈ ಪದದ ರೂಪಗಳು: ಅಧೂನೋತ್, ಅಧೂನುತಾಮ್, ಅಧೂನ್ವನ್। ಅಧೂನೋಃ, ಅಧೂನುತಮ್, ಅಧೂನುತ। ಅಧೂನವಮ್, ಅಧೂನುವ/ಅಧೂನ್ವ, ಅಧೂನುಮ/ಅಧೂನ್ಮ।

ಆತ್ಮನೇ ಪದದ ರೂಪಗಳು: ಅಧೂನುತ, ಅಧೂನ್ವಾತಾಮ್,ಅಧೂನ್ವತ। ಅಧೂನುಥಾಃ, ಅಧೂನ್ವಾಥಾಮ್, ಅಧೂನುಧ್ವಮ್। ಅಧೂನ್ವಿ, ಅಧೂನುವಹಿ/ ಅಧೂನ್ವಹಿ, ಅಧೂನುಮಹಿ/ಅಧೂನ್ಮಹಿ।

ವಿ. ಲಿಙ್: ಪರಸ್ಮೈ ಪದದ ರೂಪಗಳು: ಧೂನುಯಾತ್, ಧೂನುಯಾತಾಮ್, ಧೂನುಯುಃ। ಧೂನುಯಾಃ, ಧೂನುಯಾತಮ್, ಧೂನುಯಾತ। ಧೂನುಯಾಮ್, ಧೂನುಯಾವ, ಧೂನುಯಾಮ।

ಆತ್ಮನೇ ಪದದ ರೂಪಗಳು: ಧೂನ್ವೀತ, ಧೂನ್ವೀಯಾತಾಮ್, ಧೂನ್ವೀರನ್। ಧೂನ್ವೀಥಾಃ, ಧೂನ್ವೀಯಾಥಾಮ್, ಧೂನ್ವೀಧ್ವಮ್ ಧೂನ್ವೀಯ, ಧುನ್ವೀವಹಿ, ಧುನ್ವೀಮಹಿ।

ಲೋಟ್: ಪರಸ್ಮೈ ಪದದರೂಪಗಳು: ಧೂನೋತು/ಧೂನುತಾತ್, ಧೂನುತಾಮ್, ಧೂನ್ವನ್ತು। ಧೂನು/ಧೂನುತಾತ್, ಧೂನುತಮ್, ಧೂನುತ। ಧೂನವಾನಿ, ಧೂನವಾವ, ಧೂನವಾಮ।

ಆತ್ಮನೇಪದದ ರೂಪಗಳು: ಧೂನುತಾಮ್, ಧೂನ್ವಾತಾಮ್, ಧೂನ್ವತಾಮ್। ಧೂನುಷ್ವ ಧೂನ್ವಾಥಾಮ್, ಧೂನುಧ್ವಮ್। ಧೂನವೈ, ಧೂನವಾವಹೈ, ಧೂನವಾಮಹೈ।

ಲಙ್: ಪರಸ್ಮೈಪದದ ರೂಪಗಳು: ಅಧೂನೋತ್, ಅಧೂನುತಾಮ್, ಅಧೂನ್ವನ್।

ಅಧೂನೋಃ, ಅಧೂನುತಮ್, ಅಧೂನುತ। ಅಧೂನವಮ್, ಅಧೂನುವ/ಅಧೂನ್ವ, ಅಧೂನುಮ/ ಅಧೂನ್ಮ।

ಆತ್ಮನೇಪದ ರೂಪಗಳು: ಅಧೂನುತ, ಅಧೂನ್ವಾತಾಮ್, ಅಧೂನ್ವತ। ಅಧೂನುಥಾಃ, ಅಧೂನ್ವಾಥಾಮ್, ಅಧೂನುಧ್ವಮ್। ಅಧೂನ್ವಿ, ಅಧೂನುವಹಿ/ಅಧೂನ್ವಹಿ, ಅಧೂನುಮಹಿ, ಅಧೂನ್ಮಹಿ।

ವಿಧಿಲಿಙ್: ಪರಸ್ಮೈ ಪದದ ರೂಪಗಳು: ಧೂನುಯಾತ್, ಧೂನುಯಾತಾಮ್, ಧೂನುಯುಃ। ಧೂನುಯಾಃ, ಧೂನುಯಾತಮ್, ಧೂನುಯಾತ। ಧೂನುಯಾಮ್, ಧೂನುಯಾವ, ಧೂನುಯಾಮ।

ಆತ್ಮನೇಪದದ ರೂಪಗಳು: ಧೂನ್ವೀತ, ಧೂನ್ವೀಯಾತಾಮ್, ಧೂನ್ವೀರನ್। ಧೂನ್ವೀಥಾಃ, ಧೂನ್ವೀಯಾಥಾಮ್, ಧೂನ್ವೀಧ್ವಮ್। ಧೂನ್ವೀಯ, ಧೂನ್ವೀವಹಿ, ಧೂನ್ಮೀಮಹಿ।

ಆಶೀರ್ಲಿಂಗ್: ಪರಸ್ಮೈ ಪದದ ರೂಪಗಳು: ಧೂಯಾತ್, ಧೂಯಾಸ್ತಾಮ್, ಧೂಯಾಸುಃ। ಧೂಯಾಃ, ಧೂಯಾಸ್ತಮ್, ಧೂಯಾಸ್ತ। ಧೂಯಾಸಮ್, ಧೂಯಾಸ್ವ ಧೂಯಾಸ್ಮ ।

ಆತ್ಮನೇ ಪದದಲ್ಲಿ ಇಟ್ ಬಂದ ಪಕ್ಷದಲ್ಲಿ ರೂಪಗಳು: ಧಾವಿಷೀಷ್ಟ, ಧಾವಿಷೀಯಾಸ್ತಾಮ್, ಧಾವಿಷೀರನ್। ಧಾವಿಷೀಷ್ಠಾಃ, ಧಾವಿಷೀಯಾಸ್ಥಾಮ್, ಧಾವಿಷೀಢ್ವಮ್/ಧಾವಿಷೀಧ್ವಮ್। ಧಾವಿಷೀಯ, ಧಾವಿಷೀವಹಿ, ಧಾವಿಷೀಮಹಿ।

ಇಟ್ ಬಾರದ ಪಕ್ಷದಲ್ಲಿ ರೂಪಗಳು: ಧೋಷೀಷ್ಟ, ಧೋಷೀಯಾಸ್ತಾಮ್, ಧೋಷೀರನ್। ಧೋಷೀಷ್ಠಾಃ, ಧೋಷೀಯಾಸ್ಥಾಮ್, ಧೋಷೀಢ್ವಮ್/ಧೂಷೀಢ್ವಮ್। ಧೋಷೀಯ, ಧೋಷೀವಹಿ, ಧೋಷಿಮಹಿ।

ಲುಙ್:– ಪರಸ್ಮೈ ಪದದಲ್ಲಿ "ಸ್ವರತಿ–ಸೂತಿ–ಸೂಯತಿ ಧೂಞ್–ಉದಿತೋವಾ" ಎಂಬ ಸೂತ್ರದಿಂದ 'ಸಿಚ್'ಗೆ 'ಇಟ್' ವಿಕಲ್ಪವಿರುವುದಿಲ್ಲ."ಸ್ತು–ಸು–ಧೂಞ್‌ಭ್ಯಃ ಪರಸ್ಮೈಪದೇಷು" ಎಂಬ ಸೂತ್ರದಿಂದ ನಿತ್ಯವಾಗಿ ಇಟ್ ಬಂದು ಅಧಾವೀತ್ ಎಂದು ರೂಪವು ಸಿದ್ಧವಾಗುತ್ತದೆ.

ಪರಸ್ಮೈ ಪದ ಇಟ್ ಬಂದ ಪಕ್ಷದಲ್ಲಿ ರೂಪಗಳು: ಅಧಾವೀತ್, ಅಧಾವಿಷ್ಟಾಮ್, ಅಧಾವಿಷುಃ। ಅಧಾವೀಃ, ಅಧಾವಿಷ್ಟಮ್, ಅಧಾವಿಷ್ಟ। ಅಧಾವಿಷಮ್, ಅಧಾವಿಷ್ವ, ಅಧಾವಿಷ್ಮ।

ಆತ್ಮನೇ ಪದದಲ್ಲಿ 'ಸಿಚ್'ಗೆ ವಿಕಲ್ಪದಿಂದ ಇಟ್ ಬರುತ್ತದೆ. ಇಡಾಗಮ ಬಂದರೆ ಗುಣಾವಾದೇಶಗಳು ಬರುತ್ತವೆ. ಇಲ್ಲದಿದ್ದರೆ ಈ ಆದೇಶಗಳು ಇರುವುದಿಲ್ಲ.

ಇಟ್ ಬಂದ ಪಕ್ಷದಲ್ಲಿ ರೂಪಗಳು: ಅಧವಿಷ್ಟ, ಅಧವಿಷಾತಾಮ್, ಅಧವಿಷತ। ಅಧವಿಷ್ಠಾಃ, ಅಧವಿಷಾಥಾಮ್, ಅಧವಿಢ್ವಮ್/ಅಧವಿಧ್ವಮ್। ಅಧವಿಷಿ, ಅಧವಿಷ್ವಹಿ, ಅಧವಿಷ್ಮಹಿ।

ಇಟ್ ಬಾರದ ಪಕ್ಷದಲ್ಲಿ ರೂಪಗಳು: ಅಧೊಷ್ಟ, ಅಧೊಷಾತಾಮ್, ಅಧೊಷತ। ಅಧೋಷ್ಠಾಃ, ಅಧೋಷಾಥಾಮ್, ಅಧೋಷಡ್ಡ್ವಮ್/ಅಧೋಷಧ್ವಮ್। ಅಧೋಷಿ, ಅಧೋಷ್ವಹಿ, ಅಧೋಷ್ಮಹಿ।

ಲೃಙ್:ಪರಸ್ಮೈ ಪದ ಇಟ್ ಬಂದ ಪಕ್ಷದಲ್ಲಿ ರೂಪಗಳು: ಅಧವಿಷ್ಯತ್, ಅಧವಿಷ್ಯತಾಮ್, ಅಧವಿಷ್ಯನ್। ಅಧಿವಿಷ್ಯಃ, ಅಧವಿಷ್ಯತಮ್, ಅಧವಿಷ್ಯತ। ಅಧವಿಷ್ಯಮ್, ಅಧವಿಷ್ಯಾವ, ಅಧವಿಷ್ಯಾಮ।

ಇಟ್ ಬಾರದ ಪಕ್ಷದಲ್ಲಿ ರೂಪಗಳು: ಅಧೋಷ್ಯತ್, ಅಧೋಷ್ಯತಾಮ್, ಅಧೋಷ್ಯನ್। ಅಧೋಷ್ಯಃ, ಅಧೋಷ್ಯತಮ್, ಅಧೋಷ್ಯತ। ಅಧೋಷ್ಯಮ್, ಅಧೋಷ್ಯಾವ, ಅಧೋಷ್ಯಾಮ।

ಆತ್ಮನೇ ಪದ ಇಟ್ ಬಂದ ಪಕ್ಷದಲ್ಲಿ ರೂಪಗಳು: ಅಧವಿಷ್ಯತ, ಅಧವಿಷ್ಯೇತಾಮ್, ಅಧವಿಷ್ಯನ್ತ। ಅಧವಿಷ್ಯಥಾಃ, ಅಧವಿಷ್ಯೇಥಾಮ್, ಅಧವಿಷ್ಯಧ್ವಮ್। ಅಧವಿಷ್ಯೇ, ಅಧವಿಷ್ಯಾವಹಿ, ಅಧವಿಷ್ಯಾಮಹಿ।

ಇಟ್ ಬಾರದ ಪಕ್ಷದಲ್ಲಿ ರೂಪಗಳು: ಅಧೋಷ್ಯತ, ಅಧೋಷ್ಯೇತಾಮ್, ಅಧೋಷ್ಯನ್ತ। ಅಧೋಷ್ಯಥಾಃ, ಅಧೋಷ್ಯೇಥಾಮ್, ಅಧೋಷ್ಯಧ್ವಮ್। ಅಧೋಷ್ಯೇ, ಅಧೋಷ್ಯಾವಹಿ, ಅಧೋಷ್ಯಾಮಹಿ।

**ಇಲ್ಲಿಗೆ ಸ್ವಾದಿ (16) ಪ್ರಕರಣ ಮುಗಿಯಿತು**

# ಪ್ರಕರಣ 17: ಅಥ ತುದಾದಯಃ (6ನೇ ಗಣ)

ತುದಾದಿ ಗಣದಲ್ಲಿ 156 ಧಾತುಗಳು ಇವೆ. ಅವುಗಳಲ್ಲಿ ವರದರಾಜರು 45 ಧಾತುಗಳನ್ನು ರೂಪಸಿದ್ಧಿಗಾಗಿ ಆರಿಸಿಕೊಂಡಿರುವರು.

1. ಉಭಯಪದಿ ಧಾತುಗಳು(10)– 1. ತುದ (ಕಷ್ಟಪಡಿಸುವದು), 2. ಣುದ(ಪ್ರೇರೇಪಿಸುವದು), 3. ಭ್ರಸ್ಜ (ಅಡಿಗೆ ಮಾಡುವದು), 4. ಕೃಷ(ಉಳುವದು), 5. ಮಿಲ(ಸೇರುವದು), 6. ಮುಚ್‌ಲೃ(ತ್ಯಜಿಸುವದು), 7. ಲುಪ್‌ಲೃ (ಲೋಪಗೊಳಿಸುವದು), 8. ವಿದ್‌ಲೃ(ಹೊಂದುವದು), 9. ಷಿಚ(ಸಿಂಪಡಿಸುವದು), 10. ಲಿಪ (ವೃದ್ಧಿ ಹೊಂದುವದು),

2. ಪರಸ್ಮೈಪದಿ ಧಾತುಗಳು–(31)– 11. ಕೃತೀ(ಕಡಿಯುವದು), 12. ಖಿದ (ಖೇದಗೊಳಿಸುವದು), 13. ಪಿಶ (ವಿಭಾಗಮಾಡುವದು), 14. ಓವ್ರಶ್ಚು (ಛೇದಿಸುವದು), 15. ವ್ಯಚ (ಮೋಸಗೊಳಿಸುವದು), 16. ಉಛಿ (ಒಂದೊಂದು ಕಾಳಾಗಿ ಆರಿಸುವದು), 17. ಋಚ್ಛ(ಇಂದ್ರಿಯಗಳ ಬಲ ನಷ್ಟವಾಗುವದು ಅಥವಾ ಕಠಿಣ ಅಥವಾ ದೃಢವಾಗುವದು), 18.ಉಜ್ಝ (ತ್ಯಜಿಸುವದು), 19. ಲುಭ (ಮೋಹಗೊಳಿಸುವದು), 20. ತೃಪ(ತೃಪ್ತಿಗೊಳಿಸುವದು), 21. ತೃಮ್ಫ(ತೃಪ್ತಿಗೊಳಿಸುವದು), 22. ಮೃಢ(ಸುಖಪಡಿಸುವದು), 23. ಪೃಢ (ಸುಖಪಡಿಸುವದು) 24. ಶುನ (ಗತ್ಯರ್ಥ (ಹೋಗುವದು), 25. ಇಷು(ಇಚ್ಛಿಸುವದು), 26. ಕುಟ(ಮೋಸಗೊಳಿಸುವದು), 27. ಪುಟ( ಆಲಿಙ್ಗಿಸುವದು), 28. ಸ್ಫುಟ(ಅರಳುವದು), 29. ಸ್ಫುರ, 30. ಸ್ಫುಲ (ಸ್ಫುರಿಸುವದು) 31. ನು(ಸ್ತುತಿಸುವದು), 32. ಟುಮಸ್ಜೋ (ಶುದ್ಧವಾಗುವದು), 33. ರುಜೋ (ಭಂಗಗೊಳಿಸುವದು), 34. ಭುಜೋ (ಮೋಸಗೊಳಿಸುವದು), 35. ವಿಶ (ಪ್ರವೇಶಿಸುವದು), 36. ಮೃಶ(ಸ್ಪರ್ಶಿಸುವದು), 37. ಷದ್‌ಲೃ (ಬಟ್ಟೆಶೀಳುವದು), 8. ಶದ್‌ಲೃ (ಹಾಳಾಗುವದು), 39. ಕೃ(ಎಸೆಯುವದು), 40. ಗೄ (ನುಂಗುವದು), 41. ಪ್ರಚ್ಛ (ತಿಳಿದುಕೊಳ್ಳುವ ಇಚ್ಛೆ),

3.ಆತ್ಮನೇ ಪದಿ ಧಾತುಗಳು–42. ಮೃಙ್ (ಸಾಯುವದು), 43. ಪೃಙ್ಗ್ (ವ್ಯಾಯಾಮ ಮಾಡುವದು), 44. ಜುಷೀ (ಪ್ರೀತಿ ಮತ್ತು ಸೇವಿಸುವದು), 45. ಓವಿಜಿ (ಭಯಪಡುವದು ಮತ್ತು ಕಂಪಿಸುವದು), ಧಾತು 1 ತುದ ವ್ಯಥನೇ।

**(ಶ–ವಿಕರಣವನ್ನು ವಿಧಿಸುವ ಸೂತ್ರ)**

**ಸೂತ್ರ– 652. ತುದಾದಿಭ್ಯಃ ಶಃ (3.1.77)**

ವೃತ್ತಿ – ಶಪೋಽಪವಾದಃ । ತುದತಿ, ತುದತೇ। ತುತೋದ। ತುತೋದಿಥ। ತುತುದೇ। ತೋತ್ತಾ। ಅತೌತ್ಸೀತ್, ಅತುತ್ತ। 2. ಣುದ್ ಪ್ರೇರಣೇ। ನುದತಿ, ನುದತೇ। ನುನೋದ। ನೋತ್ತಾ।

3. ಭ್ರಸ್ಜ ಪಾಕೇ। ಗ್ರಹಿಜ್ಯೇತಿ (634) ಸಮ್ಪ್ರಸಾರಣಮ್। ಸಸ್ಯ ಶ್ಚುತ್ವೇನ ಶಃ, ಶಸ್ಯ ಜಶ್ತ್ವೇನ ಜಃ। ಭೃಜ್ಜತಿ, ಭೃಜ್ಜತೇ।

ಅ.ವ್ಯ.–"ಕರ್ತರಿ ಶಪ್" ಎಂಬ ಸೂತ್ರದಿಂದ 'ಕರ್ತರಿ' ಎಂಬ ಪದವೂ, "ಸಾರ್ವಧಾತುಕೇ ಯಕ್" ಎಂಬ ಸೂತ್ರದಿಂದ 'ಸಾರ್ವಧಾತುಕೇ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ–ಕರ್ತ್ರರ್ಥದಲ್ಲಿ, ಆಗುವ ಸಾರ್ವಧಾತುಕ ಸಂಜ್ಞೆಯುಳ್ಳ ಪ್ರತ್ಯಯವು ಪರದಲ್ಲಿದ್ದಾಗ, 'ತುದಾದಿ' ಧಾತುಗಳ ನಂತರ 'ಶಪ್ (ಅ)' ಪತ್ಯಯವನ್ನು ಬಾಧಿಸಿ 'ಶ (ಅ)' ಎಂಬ ವಿಕರಣ ಪ್ರತ್ಯಯವು ಬರುತ್ತದೆ. 'ಶ' ದಲ್ಲಿ 'ಅ' ಕಾರಮಾತ್ರ ಉಳಿಯುತ್ತದೆ. ಇದು 'ಶಿತ್' ಆಗಿರುವುದರಿಂದ ಇದಕ್ಕೂ 'ಸಾರ್ವಧಾತುಕ' ಸಂಜ್ಞೆ ಬರುತ್ತದೆ. 'ಶಪ್' 'ಪಿತ್' ಆಗಿದೆ, ಆದರೆ 'ಶ' 'ಪಿತ್' ಆಗಿ ಇಲ್ಲ.

ಉದಾ 1. ತುದ ವ್ಯಥನೇ (ದುಃಖವನ್ನು ಕೊಡುವದು, ನೋಯಿಸುವದು,): 'ತುದ್' ಧಾತುವಿನಲ್ಲಿ ಸ್ವರಿತ 'ಅ' ಕಾರಕ್ಕೆ 'ಇತ್' ಸಂಜ್ಞೆ ಇರೋಣದ್ದರಿಂದ "ಸ್ವರಿತ ಜಿತಃ ಕರ್ತ್ರಭಿಪ್ರಾಯೇ ಕ್ರಿಯಾಫಲೇ" ಎಂಬ ಸೂತ್ರದಿಂದ ಇದು ಉಭಯಪದಿ ಆಗಿರುತ್ತದೆ. "ಏಕಾಚ ಉಪದೇಶೇಽನುದಾತ್ತಾತ್" ಎಂಬ ಸೂತ್ರದಿಂದ 'ಇಟ್' ನಿಷೇಧವಾಗುವುದರಿಂದ 'ಅನಿಟ್' ಆಗಿಯೂ ಇದೆ. ಆದರೆ 'ಲಿಟ್' ನಲ್ಲಿ ಇದು 'ಸೇಟ್' ಆಗುತ್ತದೆ.

ವಿಶೇಷ: ಭ್ವಾದಿ ಗಣದಲ್ಲಿ ಸಾರ್ವಧಾತುಕ 'ಲ್' ಕಾರಗಳಲ್ಲಿ (ಲಟ್, ಲಙ್, ಲಿಙ್, ಲೋಟ್ ಗಳಲ್ಲಿ)ಧಾತುಗಳ ನಂತರ 'ಶಪ್(ಅ)' ವಿಕರಣ ಪ್ರತ್ಯಯ ಬರುತ್ತದೆ. ಈ ವಿಕರಣ ಪ್ರತ್ಯಯ ಬಂದಾಗ, ಪೂರ್ವದಲ್ಲಿರುವ ಧಾತುಗಳಲ್ಲಿ ಗುಣ–ವೃದ್ಧಿಗಳು ಬರುತ್ತವೆ.

ಉದಾ– ಭೂ+ಅ+ತಿ ಎಂಬಲ್ಲಿ 'ಊ' ಕಾರಕ್ಕೆ ಗುಣ ಬಂದು ಭೋ+ಅ+ತಿ ಎಂದಾಗುತ್ತದೆ. ನಂತರ ವಾನ್ತಾ(ಅವ್)ದೇಶ ಸಂಧಿಯಿಂದ ಭವ್+ಅ+ತಿ=ಭವತಿ ಎಂದಾಗುತ್ತದೆ.ಆದರೆ 'ತುದಾದಿ' ಗಣದಲ್ಲಿ ಸಾರ್ವಧಾತುಕ 'ಲ್' ಕಾರಗಳಲ್ಲಿ, 'ಶಪ್' ನ್ನು ಬಾಧಿಸಿ 'ಶ(ಅ)' ವಿಕರಣ ಪ್ರತ್ಯಯವು ನಿತ್ಯವಾಗಿ ಬರುತ್ತದೆ. ಆದ್ದರಿಂದ ಇಲ್ಲಿ ಪೂರ್ವದಲ್ಲಿರುವ ಧಾತುವಿಗೆ ಗುಣ–ವೃದ್ಧಿಗಳು ಬರುವುದಿಲ್ಲ.

ಉದಾ– ತುದ್+ಅ+ತಿ=ತುದತಿ (ಪ. ಪ), ತುದ್+ಅ+ತೇ=ತುದತೇ (ಆ. ಪ) ಇಲ್ಲಿ ಗುಣ ವೃದ್ಧಿಗಳು ಬರಲಿಲ್ಲ.

ಲಟ್: ಉದಾ– ತುದತಿ: 'ತುದ್' ಶಬ್ದದ ನಂತರ ಲಾದೇಶವಾದ 'ತಿಪ್' ಬಂದು ಸಾರ್ವಧಾತುಕ ಸಂಜ್ಞೆ ಬಂದಾಗ, 'ಶಪ್' ಪ್ರಾಪ್ತವಾಗುತ್ತದೆ. ಅದನ್ನು ಬಾಧಿಸಿ ಪ್ರಕೃತ ಸೂತ್ರದಿಂದ 'ಶ್(ಅ)' ಬಂದು ತುದ್+ಅ+ತಿ=ತುದತಿ ಎಂದು ರೂಪ ಸಿದ್ಧಿಯಾಗುತ್ತದೆ. ಇಲ್ಲಿ 'ಶ(ಅ)' ಪ್ರತ್ಯಯುವು 'ಅಪಿತ್' ಸಾರ್ವಧಾತುಕ ಆಗಿರುವುದರಿಂದ "ಸಾರ್ವಧಾತುಕಮಪಿತ್" ಎಂಬ ಸೂತ್ರದಿಂದ 'ಜಿದ್ವದ್ಭಾವವಾಗುವುದರಿಂದ 'ತುದ್'ನಲ್ಲಿರುವ 'ಉ' ಕಾರಕ್ಕೆ "ಪುಗನ್ತ ಲಘೂಪದಸ್ಯ ಚ" ಎಂಬ ಸೂತ್ರದಿಂದ ಪ್ರಾಪ್ತವಾದ ಲಘೂಪದಗುಣಕ್ಕೆ "ಕ್ಜಿತಿ ಚ" ಎಂಬ ಸೂತ್ರದಿಂದ ನಿಷೇಧವು ಬಂದಿದೆ ಎಂದು ತಿಳಿಯಬೇಕು.

ಲಟ್: ಪರಸ್ಮೈಪದದಲ್ಲಿ-ತುದತಿ, ತುದತಃ, ತುದನ್ತಿ। ತುದಸಿ, ತುದಥಃ, ತುದಥ। ತುದಾಮಿ, ತುದಾವಃ, ತುದಾಮಃ।

ಆತ್ಮನೇ ಪದದಲ್ಲಿ-ತುದತೇ, ತುದೇತೇ, ತುದನ್ತೇ। ತುದಸೇ, ತುದೇಥೇ, ತುದಧ್ವೇ।ತುದೇ, ತುದಾವಹೇ, ತುದಾಮಹೇ।

ಲಿಟ್: 'ಲಿಟ್' ನಲ್ಲಿ ಲಾದೇಶಕ್ಕೆ 'ತಿಪ್' ಬಂದು, ಮತ್ತೆ ಅದಕ್ಕೆ 'ಣಲ್(ಅ)' ಆದೇಶ, ಧಾತು ದ್ವಿತ್ವ, ಹಲಾದಿಶೇಷ, ಲಘೂಪಧಗುಣಗಳು ಬಂದು ಕೆಳಗಿನಂತೆ 'ಲಿಟ್' ರೂಪಗಳು ಸಿದ್ಧವಾಗುತ್ತವೆ. ಪರಸ್ಮೈಪದದಲ್ಲಿ- ತುತೋದ, ತುತುದತುಃ, ತುತುದುಃ। ತುತೋದಿಥ, ತುತುದಥುಃ, ತುತುದ। ತುತೋದ, ತುತುದಿವ, ತುತುದಿಮ।

ಆತ್ಮನೇ ಪದದಲ್ಲಿ- ತುತುದೇ, ತುತುದಾತೇ, ತುತುದಿರೆ। ತುತುದಿಷೇ, ತುತುದಾಥೇ, ತುತುದಿಧ್ವೇ। ತುತುದೇ, ತುತುದಿವಹೇ, ತುತುದಿಮಹೇ।

ಲುಟ್: ಮಧ್ಯಮ ಪುರುಷ ಏಕವಚನದಲ್ಲಿ ತುದ್+ತಾಸಿ ಎಂದಿದ್ದಾಗ, 'ತಾಸಿ' ಯಲ್ಲಿ ಇರುವ 'ತ್' ಕಾರವು ಪರದಲ್ಲಿದ್ದಾಗ, 'ತುದ್' ನಲ್ಲಿರುವ 'ದ್' ಕಾರಕ್ಕೆ "ಖರಿ ಚ" ಎಂಬ ಸೂತ್ರದಿಂದ ಚರ್ತ್ವ(ತ್) ಬರುತ್ತದೆ.

ಪರಸ್ಮೈಪದದಲ್ಲಿ – ತೋತ್ತಾ, ತೋತ್ತಾರೌ, ತೋತ್ತಾರಃ। ತೋತ್ತಾಸಿ, ತೋತ್ತಾಸ್ಥಃ, ತೋತ್ತಾಸ್ಥ। ತೋತ್ತಾಸ್ಮಿ, ತೋತ್ತಾಸ್ವಃ, ತೋತ್ತಾಸ್ಮಃ।

ಆತ್ಮನೇ ಪದದಲ್ಲಿ- ತೋತ್ತಾ, ತೋತ್ತಾರೌ, ತೋತ್ತಾರಃ। ತೋತ್ತಾಸೇ, ತೋತ್ತಾಸಾಥೇ, ತೋತ್ತಾಧ್ವೇ। ತೋತ್ತಾಹೇ, ತೋತ್ತಾಸ್ವಹೇ, ತೋತ್ತಾಸ್ಮಹೇ।

ಲೃಟ್: ಪರಸ್ಮೈಪದದಲ್ಲಿ – ತೋತ್ಸ್ಯತಿ, ತೋತ್ಸ್ಯತಃ, ತೋತ್ಸ್ಯನ್ತಿ। ತೋತ್ಸ್ಯಸಿ, ತೋತ್ಸ್ಯಥಃ, ತೋತ್ಸ್ಯಥ। ತೋತ್ಸ್ಯಾಮಿ, ತೋತ್ಸ್ಯಾವಃ, ತೋತ್ಸ್ಯಾಮಃ।

ಆತ್ಮನೇ ಪದದಲ್ಲಿ-ತೋತ್ಸ್ಯತೇ, ತೋತ್ಸ್ಯೇತೆ, ತೋತ್ಸ್ಯನ್ತೇ। ತೋತ್ಸ್ಯಸೇ, ತೋತ್ಸ್ಯೇಥೇ, ತೋತ್ಸ್ಯಧ್ವೇ। ತೋತ್ಸ್ಯೇ, ತೋತ್ಸ್ಯಾವಹೇ, ತೋತ್ಸ್ಯಾಮಹೇ।

ಲೋಟ್: ಪರಸ್ಮೈಪದದಲ್ಲಿ – ತುದತು/ತುದತಾತ್, ತುದತಾಮ್, ತುದನ್ತು। ತುದ/ತುದತಾತ್, ತುದತಮ್, ತುದತ। ತುದಾನಿ, ತುದಾವ, ತುದಾಮ।

ಆತ್ಮನೇ ಪದದಲ್ಲಿ –ತುದತಾಮ್, ತುದೇತಾಮ್, ತುದನ್ತಾಮ್।ತುದಸ್ವ, ತುದೇಥಾಮ್, ತುದಧ್ವಮ್। ತುದೈ, ತುದಾವಹೈ, ತುದಾಮಹೈ।

ಲಙ್: ಪರಸ್ಮೈಪದದಲ್ಲಿ-ಅತುದತ್, ಅತುದತಾಮ್, ಅತುದನ್। ಅತುದಃ, ಅತುದತಮ್, ಅತುದತ। ಅತುದಮ್, ಅತುದಾವ, ಅತುದಾಮ।

ಆತ್ಮನೇ ಪದದಲ್ಲಿ-ಅತುದತ, ಅತುದೇತಾಮ್, ಅತುದನ್ತ। ಅತುದಥಾಃ, ಅತುದೇಥಾಮ್, ಅತುದಧ್ವಮ್। ಅತುದೇ, ಅತುದಾವಹಿ, ಅತುದಾಮಹಿ।

ವಿ. ಲಿಙ್: ಪರಸ್ಮೈಪದದಲ್ಲಿ – ತುದೇತ್, ತುದೇತಾಮ್, ತುದೇಯುಃ। ತುದೇಃ, ತುದೇತಮ್, ತುದೇತ। ತುದೇಯಮ್, ತುದೇವ, ತುದೇಮ।

ಆತ್ಮನೇ ಪದದಲ್ಲಿ –ತುದೇತ, ತುದೇಯಾತಾಮ್, ತುದೇರನ್। ತುದೇಥಾಃ, ತುದೇಯಾಥಾಮ್, ತುದೇಧ್ವಮ್। ತುದೇಯ, ತುದೇವಹಿ, ತುದೇಮಹಿ।

ಆ. ಲಿಙ್: ಪರಸ್ಮೈಪದದಲ್ಲಿ – ತುದ್ಯಾತ್, ತುದ್ಯಾಸ್ತಾಮ್, ತುದ್ಯಾಸುಃ। ತುದ್ಯಾಃ, ತುದ್ಯಾಸ್ತಮ್, ತುದ್ಯಾಸ್ತ। ತುದ್ಯಾಸಮ್, ತುದ್ಯಾಸ್ವ, ತುದ್ಯಾಸ್ಮ।

ಆತ್ಮನೇ ಪದದಲ್ಲಿ –ತುತ್ಸೀಷ್ಟ, ತುತ್ಸೀಯಾಸ್ತಾಮ್, ತುತ್ಸೀರನ್। ತುತ್ಸೀಷ್ಠಾಃ, ತುತ್ಸೀಯಾಸ್ಥಾಮ್, ತುತ್ಸೀಧ್ವಮ್। ತುತ್ಸೀಯ, ತುತ್ಸೀವಹಿ, ತುತ್ಸೀಮಹಿ।

ಲುಙ್: ಉದಾ– ಅತೌತ್ಸೀತ್: ತುದ್ ಧಾತುವಿನಮೇಲೆ 'ಲುಙ್' 'ಲ್' ಕಾರವು ಬಂದು, ನಂತರ ಅಡಾಗಮ ಬಂದಮೆಲೆ 'ತಿಪ್' ಆದೇಶ ಬಂದು 'ಚ್ಲಿ'ಗೆ 'ಸಿಚ್ (ಇ)'ಆದೇಶ ಬಂದು ಸಿಚ್‌ನಲ್ಲಿಯ 'ಇ' ಕಾರಕ್ಕೆ ಲೋಪ ಬಂದು, ಅತುದ್+ಸತ್ ಎಂದಿರುತ್ತದೆ. "ಅಸ್ತಿ ಸಿಚೋಽಪೃಕ್ತೇ" ಎಂಬ ಸೂತ್ರದಿಂದ 'ಈಟ್(ಈ)' ಆಗಮ ಬಂದು, ಅತುದ್+ಸ್+ಈ+ತ್ ಎಂದಾಗುತ್ತದೆ. "ವದ–ವ್ರಜ ಹಲನ್ತಸ್ಯಾಚಃ" ಎಂಬ ಸೂತ್ರದಿಂದ 'ತುದ್' ನಲ್ಲಿರುವ 'ಉ' ಕಾರಕ್ಕೆ ವೃದ್ಧಿಯು ಬಂದು ಅತೌದ್+ಸ್+ಈತ್ ಎಂದಿರುತ್ತದೆ. 'ದ್' ಕಾರಕ್ಕೆ ಚರ್ತ್ವ ಮಾಡಿದಾಗ, ಅತೌತ್+ಸ್+ ಈತ್=ಅತೌತ್ಸೀತ್ ಎಂದು ರೂಪವಾಗುತ್ತದೆ.

ಉದಾ– ಅತೌತ್ತಾಮ್: ತುದ್ ಧಾತುವಿನಮೇಲೆ 'ಲುಙ್' 'ಲ್'ಕಾರದಲ್ಲಿ, 'ಅಟ್(ಅ)' ಆಗಮ ಬರುತ್ತದೆ. ದ್ವಿವಚನ ಪ್ರತ್ಯಯವಾದ 'ತಸ್' ಗೆ 'ತಾಮ್' ಆದೇಶ ಬರುತ್ತದೆ. 'ಚ್ಲಿ' ಗೆ 'ಸಿಚ್(ಸ್)' ಆದೇಶ ಬಂದು ಅತುದ್+ಸ್+ತಾಮ್ ಎಂದಿರುತ್ತದೆ. . "ವದ–ವ್ರಜ ಹಲನ್ತಸ್ಯಾಚಃ" ಎಂಬ ಸೂತ್ರದಿಂದ 'ತುದ್' ನಲ್ಲಿರುವ 'ಉ' ಕಾರಕ್ಕೆ ವೃದ್ಧಿಯು ಬಂದು ಅತೌದ್+ಸ್+ತಾಮ್ ಎಂದಿರುತ್ತದೆ. 'ಸ್' ಕಾರಕ್ಕೆ "ಝಲೋಝಲಿ" ಎಂಬ ಸೂತ್ರದಿಂದ ಲೋಪ ಬರುತ್ತದೆ. ಅತೌದ್ ಎಂಬಲ್ಲಿರುವ 'ದ್' ಕಾರಕ್ಕೆ "ಖರಿ ಚ" ಎಂಬ ಸೂತ್ರದಿಂದ ಚರ್ತ್ವ ಬಂದು ಅತೌತ್+ತಾಮ್=ಅತೌತ್ತಾಮ್ ಎಂದು ರೂಪವಾಗುತ್ತದೆ. ತಾಮ್, ತಮ್, ತ, ಥಾಸ್ ಮತ್ತು ಧ್ವಮ್ ಗಳಲ್ಲಿಯೂ ಕೂಡ 'ಸ್' ಕಾರಕ್ಕೆ "ಝಲೋಝಲಿ" ಎಂಬ ಸೂತ್ರದಿಂದ ಲೋಪ ಬರುತ್ತದೆ. ಆತ್ಮನೇ ಪದದಲ್ಲಿ ವೃದ್ಧಿಯು ಬರುವದೇ ಇಲ್ಲ. ಈ ರೀತಿಯಲ್ಲಿ ಪರಸ್ಮೈ ಪದದ ರೂಪಗಳು ಕೆಳಗಿನಂತೆ ಸಿದ್ಧವಾಗುತ್ತವೆ.

ಪರಸ್ಮೈಪದದಲ್ಲಿ – ಅತೌತ್ಸೀತ್, ಅತೌತ್ತಾಮ್, ಅತೌತ್ಸುಃ। ಅತೌತ್ಸೀಃ, ಅತೌತ್ತಮ್, ಅತೌತ್ತ। ಅತೌತ್ಸಮ್, ಅತೌತ್ಸ್ವ, ಅತೌತ್ಸ್ಮ।

ಆತ್ಮನೇ ಪದದಲ್ಲಿ –ಅತುತ್ತ, ಅತುತ್ಸಾತಾಮ್, ಅತುತ್ಸತ। ಅತುತ್ಥಾಃ, ಅತುತ್ಸಾಥಾಮ್, ಅತುದ್ಧ್ವಮ್। ಅತುತ್ಸಿ, ಅತುತ್ಸ್ವಹಿ, ಅತುತ್ಸ್ಮಹಿ।

ಲೃಙ್: ಪರಸ್ಮೈಪದದಲ್ಲಿ – ಅತೋತ್ಸ್ಯತ್, ಅತೋತ್ಸ್ಯತಾಮ್, ಅತೋತ್ಸ್ಯನ್। ಅತೋತ್ಸ್ಯಃ, ಅತೋತ್ಸ್ಯತಮ್, ಅತೋತ್ಸ್ಯತ। ಅತೋತ್ಸ್ಯಮ್, ಅತೋತ್ಸ್ಯಾವ, ಅತೋತ್ಸ್ಯಾಮ।

ಆತ್ಮನೇ ಪದದಲ್ಲಿ-ಅತೋತ್ಸ್ಯತ, ಅತೋತ್ಸ್ಯೇತಾವ್, ಅತೋತ್ಸ್ಯನ್ತ। ಅತೋತ್ಸ್ಯಥಾಃ, ಅತೋತ್ಸ್ಯೇಥಾವ್, ಅತೋತ್ಸ್ಯಧ್ವವ್। ಅತೋತ್ಸ್ಯೇ, ಅತೋತ್ಸ್ಯಾವಹಿ, ಅತೋತ್ಸ್ಯಾಮಹಿ।

ಧಾತು 2. ಣುದ ಪ್ರೇರಣೇ-(ಪ್ರೇರಣೆ ಮಾಡುವದು, ದೂರಕ್ಕೆ ಎಸೆಯುವದು, ದೂರ ಮಾಡುವದು)-ಇದರಲ್ಲಿ"ಣೋ ನಃ" ಸೂತ್ರದಿಂದ 'ಣ್' ಕಾರಕ್ಕೆ 'ನ್' ಕಾರ ಆದೇಶವಾಗಿ ಬಂದು 'ನುದ' ಎಂದಿದ್ದಾಗ 'ಅ' ಕಾರ 'ಇತ್' ಆಗಿರುವುದರಿಂದ 'ನುದ್' ಮಾತ್ರ ಉಳಿಯುತ್ತದೆ. ಈ ಧಾತುವು ಉಭಯಪದಿ ಆಗಿದೆ.

ಲಟ್: ಪರಸ್ಮೈಪದದಲ್ಲಿ – ನುದತಿ, ನುದತಃ, ನುದನ್ತಿ। ನುದಸಿ, ನುದಥಃ, ನುದಥ। ನುದಾಮಿ, ನುದಾವಃ, ನುದಾಮಃ।

ಆತ್ಮನೇ ಪದದಲ್ಲಿ– ನುದತೇ, ನುದೇತೇ, ನುದನ್ತೇ। ನುದಸೇ, ನುದೇಥೇ, ನುದಧ್ವೇ। ನುದೇ, ನುದಾವಹೇ, ನುದಾಮಹೇ।

ಲಿಟ್: ಪರಸ್ಮೈಪದದಲ್ಲಿ– ನುನೋದ, ನುನುದತುಃ, ನುನುದುಃ। ನುನೋದಿಥ, ನುನುದಥುಃ, ನುನುದ।, ನುನೋದ, ನುನುದಿವ, ನುನುದಿಮ।

ಆತ್ಮನೇ ಪದದಲ್ಲಿ –ನುನುದೇ, ನುನುದಾತೇ, ನುನುದಿರೇ। ನುನುದಿಷೇ, ನುನುದಾಥೇ, ನುನುದಿಧ್ವೇ। ನುನುದೇ, ನುನುದಿವಹೇ, ನುನುದಿಮಹೇ।

ಲುಟ್: ಪರಸ್ಮೈಪದದಲ್ಲಿ– ನೋತ್ತಾ, ನೋತ್ತಾರೌ, ನೋತ್ತಾರಃ। ನೋತ್ತಾಸಿ, ನೋತ್ತಾಸ್ಥಃ, ನೋತ್ತಾಸ್ಥ। ನೋತ್ತಾಸ್ಮಿ, ನೋತ್ತಾಸ್ವಃ, ನೋತ್ತಾಸ್ಮಃ।

ಆತ್ಮನೇ ಪದದಲ್ಲಿ –ನೋತ್ತಾ, ನೋತ್ತಾರೌ, ನೋತ್ತಾರಃ। ನೋತ್ತಾಸೇ, ನೋತ್ತಾಸಾಥೇ, ನೋತ್ತಾಧ್ವೇ। ನೋತ್ತಾಹೆ, ನೋತ್ತಾಸ್ವಹೇ, ನೋತ್ತಾಸ್ಮಹೇ।

ಲೃಟ್: ಪರಸ್ಮೈಪದದಲ್ಲಿ– ನೋತ್ಸ್ಯತಿ, ನೋತ್ಸ್ಯತಃ, ನೋತ್ಸ್ಯನ್ತಿ। ನೋತ್ಸ್ಯಸಿ, ನೋಸ್ಯಥಃ, ನೋತ್ಸ್ಯಥ। ನೋತ್ಸ್ಯಾಮಿ, ನೋತ್ಸ್ಯಾವಃ, ನೋತ್ಸ್ಯಾಮಃ।

ಆತ್ಮನೇ ಪದದಲ್ಲಿ –ನೋತ್ಸ್ಯತೇ, ನೋತ್ಸ್ಯೇತೇ, ನೋತ್ಸ್ಯನ್ತೇ। ನೋತ್ಸ್ಯಸೇ, ನೋತ್ಸ್ಯೇಥೆ, ನೋತ್ಸ್ಯಧ್ವೇ। ನೋತ್ಸ್ಯೇ, ನೋತ್ಸ್ಯಾವಹೇ, ನೋತ್ಸ್ಯಾಮಹೇ।

ಲೋಟ್: ಪರಸ್ಮೈಪದದಲ್ಲಿ– ನುದತು/ನುದತಾತ್, ನುದತಾಮ್, ನುದನ್ತು। ನುದ/ ನುದತಾತ್, ನುದತಮ್, ನುದತ। ನುದಾನಿ, ನುದಾವ, ನುದಾಮ।

ಆತ್ಮನೇ ಪದದಲ್ಲಿ–ನುದತಾಮ್, ನುದೇತಾಮ್, ನುದನ್ತಾಮ್। ನುದಸ್ವ, ನುದೇಥಾಮ್, ನುದಧ್ವಮ್। ನುದೈ, ನುದಾವಹೈ, ನುದಾಮಹೈ।

ಲಙ್: ಪರಸ್ಮೈಪದದಲ್ಲಿ– ಅನುದತ್, ಅನುದತಾಮ್, ಅನುದನ್। ಅನುದಃ, ಅನುದತಮ್, ಅನುದತ। ಅನುದಮ್, ಅನುದಾವ, ಅನುದಾಮ।

ಆತ್ಮನೇ ಪದದಲ್ಲಿ –ಅನುದತ, ಅನುದೇತಾಮ್, ಅನುದನ್ತ। ಅನುದಥಾಃ, ಅನುದೇಥಾಮ್, ಅನುದಧ್ವಮ್। ಅನುದೇ, ಅನುದಾವಹಿ, ಅನುದಾಮಹಿ।

ವಿ. ಲಿಙ್: ಪರಸ್ಮೈಪದದಲ್ಲಿ– ನುದೇತ್, ನುದೇತಾಮ್, ನುದೇಯುಃ। ನುದೇಃ, ನುದೇತಮ್, ನುದೇತ। ನುದೇಯಮ್, ನುದೇವ, ನುದೇಮ।

ಆತ್ಮನೇ ಪದದಲ್ಲಿ– ನುದೇತ, ನುದೇಯಾತಾಮ್, ನುದೇರನ್। ನುದೇಥಾಃ, ನುದೇಯಾಥಾಮ್, ನುದೇಧ್ವಮ್। ನುದೇಯ, ನುದೇವಹಿ, ನುದೇಮಹಿ।

ಆ. ಲಿಙ್: ಪರಸ್ಮೈಪದದಲ್ಲಿ– ನುದ್ಯಾತ್, ನುದ್ಯಾಸ್ತಾಮ್, ನುದ್ಯಾಸುಃ। ನುದ್ಯಾಃ, ನುದ್ಯಾಸ್ತಮ್, ನುದ್ಯಾಸ್ತ। ನುದ್ಯಾಸಮ್, ನುದ್ಯಾಸ್ವ, ನುದ್ಯಾಸ್ಮ।

ಆತ್ಮನೇ ಪದದಲ್ಲಿ– ನುತ್ಸೀಷ್ಟ, ನುತ್ಸೀಯಾಸ್ತಾಮ್, ನುತ್ಸೀರನ್। ನುತ್ಸೀಷ್ಠಾಃ, ನುತ್ಸೀಯಾಸ್ಥಾಮ್, ನುತ್ಸೀಧ್ವಮ್। ನುತ್ಸೀಯ, ನುತ್ಸೀವಹಿ, ನುತ್ಸೀಮಹಿ।

ಲುಙ್: ಪರಸ್ಮೈಪದದಲ್ಲಿ– ಅನೌತ್ಸೀತ್, ಅನೌತ್ತಾಮ್, ಅನೌತ್ಸುಃ। ಅನೌತ್ಸೀಃ, ಅನೌತ್ತಮ್, ಅನೌತ್ತ। ಅನೌತ್ಸಮ್, ಅನೌತ್ಸ್ವ, ಅನೌತ್ಸ್ಮ।

ಆತ್ಮನೇ ಪದದಲ್ಲಿ–ಅನುತ್ತ, ಅನುತ್ಸಾತಾಮ್, ಅನುತ್ಸತ। ಅನುತ್ಥಾಃ, ಅನುತ್ಸಾಥಾಮ್, ಅನುದ್‌ಧ್ವಮ್। ಅನುತ್ಸಿ, ಅನುತ್ಸ್ವಹಿ, ಅನುತ್ಸ್ಮಹಿ।

ಲೃಙ್: ಪರಸ್ಮೈಪದದಲ್ಲಿ– ಅನೋತ್ಸ್ಯತ್, ಅನೋತ್ಸ್ಯತಾಮ್, ಅನೋತ್ಸ್ಯನ್। ಅನೋತ್ಸ್ಯಃ, ಅನೋತ್ಸ್ಯತಮ್, ಅನೋತ್ಸ್ಯತ। ಅನೋತ್ಸ್ಯಮ್, ಅನೋತ್ಸ್ಯಾವ, ಅನೋತ್ಸ್ಯಾಮ।

ಆತ್ಮನೇ ಪದದಲ್ಲಿ–ಅನೋತ್ಸ್ಯತ, ಅನೋತ್ಸ್ಯೇತಾವ್, ಅನೋತ್ಸ್ಯನ್ತ। ಅನೋತ್ಸ್ಯಥಾಃ, ಅನೋತ್ಸ್ಯೇಥಾವ್, ಅನೋತ್ಸ್ಯಧ್ವವ್। ಅನೋತ್ಸ್ಯೇ, ಅನೋತ್ಸ್ಯಾವಹಿ, ಅನೋತ್ಸ್ಯಾಮಹಿ।

3. ಭ್ರಸ್ಜ ಪಾಕೇ (ಬೇಯಿಸುವದು): ಇದು ಸ್ವರಿತೇತ್ತಾಗಿರುವುದರಿಂದ, ಉಭಯಪದಿಯಾಗಿರುತ್ತದೆ. ಇದು ಅನುದಾತ್ತದಲ್ಲಿ ಪರಿಗಣಿತವಾಗಿರುವುದರಿಂದ 'ಅನಿಟ್' ಆಗಿದೆ. ಆದರೆ 'ಲಿಟ್' ನಲ್ಲಿ, ಕ್ರಾದಿ ನಿಯಮದಿಂದ 'ಇಟ್' ಆಗುತ್ತದೆ. ಇದರೊಂದಿಗೆ ಭಾರದ್ವಾಜ ನಿಯಮದಿಂದ 'ಥಲ್'ನಲ್ಲಿ ವಿಕಲ್ಪದಿಂದ 'ಇಟ್' ಆಗಿರುತ್ತದೆ.

ಲಟ್: ಪರಸ್ಮೈಪದದಲ್ಲಿ– ಭ್ರಸ್ಜ ಧಾತುವಿನಲ್ಲಿ ಭ್ರಸ್ಜ್ ಮಾತ್ರ ಉಳಿಯುತ್ತದೆ, ನಂತರ 'ಲಟ್' ಬಂದ ಮೇಲೆ 'ತಿಪ್' ಆದೇಶ ಬರುತ್ತದೆ. 'ಶ' ಮೊದಲಾದವುಗಳನ್ನು ಮಾಡಿದಮೇಲೆ, ಭ್ರಸ್ಜ್+ಅ+ತಿ ಎಂದಿರುತ್ತದೆ. "ಸಾರ್ವಧಾತುಕಮಪಿತ್" ಎಂಬ ಸೂತ್ರದಿಂದ 'ಶ' ಪ್ರತ್ಯಯದಲ್ಲಿರುವ 'ಅ' ಕಾರವು 'ಙಿತ್' ಆಗಿ ಭಾವಿಸಲಾಗುತ್ತದೆ. "ಗ್ರಹಿ–ಜ್ಯಾ–ವಯಿ–ವ್ಯಧಿ–ವಷ್ಟಿ–ವಿಚತಿ–ವ್ರಶ್ಚತಿ–ಪೃಚ್ಛತಿ–ಭೃಜ್ಜತೀನಾಮ್ ಙಿತಿ ಚ" ಎಂಬ ಸೂತ್ರದಿಂದ ಭ್ರಸ್ಜ್‌ನಲ್ಲಿರುವ ರೇಫಕ್ಕೆ ಸಂಪ್ರಸಾರಣ 'ಋ' ಕಾರ ಬಂದು ಭ್+ಋ+ಅಸ್ಜ್ ಎಂದಾಗುತ್ತದೆ. ಋ+ಅ ಎಂಬಲ್ಲಿ "ಸಮ್ಪ್ರಸಾರಣಾಚ್ಚ" ಎಂಬ ಸೂತ್ರದಿಂದ ಪೂರ್ವರೂಪವು ಏಕಾದೇಶವಾಗಿ ಬಂದು 'ಋ' ಕಾರವೇ ಆಗಿ 'ಭೃಸ್ಜ್' ಎಂದಾಗುತ್ತದೆ. 'ಸ್' ಕಾರ 'ಜ್' ಕಾರಗಳ ಸಂಬಂಧದಿಂದ "ಸ್ತೋಃ ಶ್ಚುನಾಶ್ಚುಃ" ಎಂಬ ಸೂತ್ರದಿಂದ ಶ್ಚುತ್ವ ಬಂದು 'ಶ್' ಕಾರವಾಗಿ "ಝಲಾಂ ಜಶ್ ಝಶಿ" ಎಂಬ

ಸೂತ್ರದಿಂದ 'ಜಶ್ತ್ವ' ಬಂದು 'ಜ್' ಕಾರವಾಗುತ್ತದೆ. ಆಗ ಭೃಜ್‌ಜ್+ಅತಿ=ಭೃಜ್ಜತಿ ಎಂದು ರೂಪವು ಸಿದ್ಧವಾಗುತ್ತದೆ.

ಲಟ್: ಪರಸ್ಮೈಪದಿ-ಭೃಜ್ಜತಿ, ಭೃಜ್ಜತಃ, ಭೃಜ್ಜನ್ತಿ। ಭೃಜ್ಜಸಿ, ಭೃಜ್ಜಥಃ, ಭೃಜ್ಜಥ। ಭೃಜ್ಜಾಮಿ, ಭೃಜ್ಜಾವಃ, ಭೃಜ್ಜಾಮಃ।

ಆತ್ಮನೇ ಪದದಲ್ಲಿ- ಭೃಜ್ಜತೇ, ಭೃಜ್ಜೇತೇ, ಭೃಜ್ಜನ್ತೇ।ಭೃಜ್ಜಸೇ, ಭೃಜ್ಜೇಥೆ, ಭೃಜ್ಜಧ್ವೇ। ಭೃಜ್ಜೇ, ಭೃಜ್ಜಾವಹೇ, ಭೃಜ್ಜಾಮಹೇ।

**(ರಮ್ ಆಗಮವನ್ನು ವಿಧಿಸುವ ಸೂತ್ರ)**

**ಸೂತ್ರ- 653. ಭ್ರಸ್ಜೋ ರೋಪಧಯೋಃ ರಮನ್ಯತರಸ್ಯಾಮ್ (6.4.47)**

ವೃತ್ತಿ - ಭ್ರಸ್ಜೇ ರೇಫಸ್ಯ ಉಪಧಾಯಾಶ್ಚ ಸ್ಥಾನೇ ರಮ್ ಆಗಮೋ ವಾ ಸ್ಯಾತ್ ಆರ್ಧಧಾತುಕೇ। ಮಿತ್ವಾತ್ ಅನ್ತ್ಯಾದಚಃ ಪರಃ। ಸ್ಥಾನ ಷಷ್ಠೀನಿರ್ದೇಶಾತ್ ರೋಪಧಯೋಃ ನಿವೃತ್ತಿಃ। ಬಭರ್ಜ। ಬಭರ್ಜತುಃ। ಬಭರ್ಜಿಥ। ಬಭರ್ಷ್ಠ। ಬಭ್ರಜ್ಜ। ಬಭ್ರಜ್ಜತುಃ। ಬಭ್ರಜ್ಜಿಥ। (309) ಸ್ಕೋರಿತಿ ಸಲೋಪಃ(307) ಭ್ರಶ್ಚ ಇತಿ ಷಃ। ಬಭ್ರಷ್ಠ। ಬಭರ್ಜೇ, ಬಭ್ರಜ್ಜೇ। ಭ್ರಷ್ಟಾ, ಭ್ರಷ್ಟಾ। ಭರ್ಕ್ಷ್ಯತಿ। ಭ್ರಕ್ಷ್ಯತಿ।

ವಾ॥ ಕ್ಙಿತಿ ರಮಾಗಮಂ ಬಾಧಿತ್ವಾ ಸಮ್ಪ್ರಸಾರಣಂ ಪೂರ್ವವಿಪ್ರತಿಷೇಧೇನ

ಭೃಜ್ಜ್ಯಾತ್। ಭೃಜ್ಜ್ಯಾಸ್ತಾಮ್। ಭೃಜ್ಜ್ಯಾಸುಃ। ಭರ್ಕ್ಷೀಷ್ಟ, ಭ್ರಕ್ಷೀಷ್ಟ। ಅಭಾರ್ಕ್ಷೀತ್। ಅಭ್ರಾಕ್ಷೀತ್। ಅಭರ್ಷ್ಟ, ಅಭ್ರಷ್ಟ। 4. ಕೃಷ್ ವಿಲೇಖನೇ। ಕೃಷತಿ, ಕೃಷತೇ। ಚಕರ್ಷ। ಚಕೃಷೇ।

ಪ.ಛೇ.- ಭ್ರಸ್ಜಃ, ರೋಪಧಯೋಃ, ರಮ್, ಅನ್ಯತರಸ್ಯಾಮ್।

ಅ.ವೃ. - "ಆರ್ಧಧಾತುಕೇ" ಎಂಬುದು ಅಧಿಕಾರಸೂತ್ರವಾಗಿದೆ.

ಅರ್ಥ- ಆರ್ಧಧಾತುಕವು ಪರದಲ್ಲಿದ್ದಾಗ, 'ಭ್ರಸ್ಜ್' ಧಾತುವಿನ ರೇಫ ಮತ್ತು ಉಪಧೆಗೆ ವಿಕಲ್ಪವಾಗಿ 'ರಮ್' ಆಗಮವು ಬರುತ್ತದೆ. 'ರಮ್' ನಲ್ಲಿ 'ರ್' ಮಾತ್ರ ಉಳಿಯುತ್ತದೆ.

ಲಿಟ್: ಉದಾ- ಬಭರ್ಜ: 'ಭ್ರಸ್ಜ್'ಧಾತುವಿನ ನಂತರ 'ಲಿಟ್' ಬಂದು ಅದಕ್ಕೆ 'ತಿಪ್' ಆದೇಶ ಮತ್ತು ಅದಕ್ಕೆ 'ಣಲ್ (ಅ)' ಆದೇಶ ಬಂದು ಭ್ರಸ್ಜ್+ಅ ಎಂದಿರುತ್ತದೆ. ಪ್ರಕೃತ ಸೂತ್ರದಿಂದ 'ರಮ್' ಆಗಮ ಮತ್ತು 'ರೇಫ' ಹಾಗೂ ಉಪಧೆಯಾಗಿರುವ 'ಸ್' ಕಾರದ ನಿವೃತ್ತಿಯಾದಾಗ, ಭರ್ಜ್+ಅ ಎಂದಾಗುತ್ತದೆ. ಇದಕ್ಕೆ ದ್ವಿತ್ವ ಮತ್ತು ಹಲಾದಿಶೇಷದಿಂದ ಭಭರ್ಜ್+ಅ ಎಂದಾಗುತ್ತದೆ. ಅಭ್ಯಾಸದ 'ಭ್' ಕಾರಕ್ಕೆ "ಅಭ್ಯಾಸೇ ಚರ್ಚ" ಎಂಬ ಸೂತ್ರದಿಂದ ಜಶ್ತ್ವ ಬಂದು ಬಭರ್ಜ್+ಅ=ಬಭರ್ಜ ಎಂದು ರೂಪವು ಸಿದ್ಧವಾಗುತ್ತದೆ. ಇದೇ ತರಹ ಬಭರ್ಜತುಃ, ಬಭರ್ಜುಃ ಎಂಬ ರೂಪಗಳೂ ಸಿದ್ಧವಾಗುತ್ತವೆ.

ಥಲ್ ಪ್ರತ್ಯಯ ಬಂದಾಗ ಭಾರದ್ವಾಜ ನಿಯಮದಿಂದ ವೈಕಲ್ಪಿಕ ಇಡಾಗಮವು ಬಂದು ಬಭರ್ಜಿಥ ಎಂಬ ರೂಪವು ಬರುತ್ತದೆ. ಇಡಾ(ಇಟ್)ಗಮಬಾರದ ಪಕ್ಷದಲ್ಲಿ

ಬಭರ್ಜ್+ಥ ಎಂಬಲ್ಲಿ ಝಲ್ ಪರದಲ್ಲಿರುತ್ತದೆ. ಅದುದರಿಂದ "ವ್ರಶ್ಚ-ಭ್ರಸ್ಜ-ಸೃಜ-ಮೃಜ-ಯಜ-ರಾಜ-ಭ್ರಾಜಚ್ಛಶಾಮ್ ಷಃ" ಎಂಬ ಸೂತ್ರದಿಂದ 'ಜ್' ಕಾರಕ್ಕೆ 'ಷ್' ಕಾರವು ಆದೇಶವಾಗಿ ಬಂದು, ಅದಕ್ಕೆ ಜಶ್ತ್ವ ಮತ್ತು 'ಥ್' ಕಾರಕ್ಕೆ ಷ್ಟುತ್ವ ಬಂದು ಬಭರ್ಷ್ಠ ಎಂದು ರೂಪವು ಸಿದ್ಧವಾಗುತ್ತದೆ.

ರಮ್ ಅಗಮ ಬಾರದ ಪಕ್ಷದಲ್ಲಿ ಭ್ರಸ್ಜ್ ಗೆ ದ್ವಿತ್ವ ಬಂದು, ಹಲಾದಿಶೇಷವಾದಮೇಲೆ ಬಭೃಸ್ಜ್ ಎಂದಿರುತ್ತದೆ. 'ಸ್' ಕಾರಕ್ಕೆ ಶ್ಚುತ್ವ ಮತ್ತು ಜಶ್ತ್ವ ಗಳಾದಮೇಲೆ 'ಜ್' ಕಾರವೇ ಇರುತ್ತದೆ. ಆಗ ಬಭ್ರಜ್ಜ್+ಅ=ಬಭ್ರಜ್ಜ ಎಂದು ರೂಪವು ಆಗುತ್ತದೆ.

ಪರಸ್ಮೈಪದದಲ್ಲಿ-'ರಮ್' ಆಗಮ ಪಕ್ಷದಲ್ಲಿ-ಬಭರ್ಜ, ಬಭರ್ಜತುಃ, ಬಭರ್ಜುಃ। ಬಭರ್ಜಿಥ/ಬಭರ್ಷ್ಠ, ಬಭರ್ಜಥುಃ, ಬಭರ್ಜ। ಬಭರ್ಜ, ಬಭರ್ಜಿವ, ಬಭರ್ಜಿಮ।

'ರಮ್' ಆಗಮ ಬಾರದ ಪಕ್ಷದಲ್ಲಿ-ಬಭ್ರಜ್ಜ, ಬಭ್ರಜ್ಜತುಃ, ಬಭ್ರಜ್ಜುಃ। ಬಭ್ರಜ್ಜಿಥ/ಬಭ್ರಷ್ಠ, ಬಭ್ರಜ್ಜಥುಃ, ಬಭ್ರಜ್ಜ। ಬಭ್ರಜ್ಜ, ಬಭ್ರಜ್ಜಿವ, ಬಭ್ರಜ್ಜಿಮ।

ಆತ್ಮನೇ ಪದದಲ್ಲಿ-'ರಮ್' ಆಗಮ ಪಕ್ಷದಲ್ಲಿ-ಬಭರ್ಜೇ, ಬಭರ್ಜಾತೇ, ಬಭರ್ಜಿರೇ। ಬಭರ್ಜಿಷೇ, ಬಭರ್ಜಾಥೇ, ಬಭ್ರಜಿಧ್ವೇ। ಬಭರ್ಜೇ, ಬಭರ್ಜಿವಹೇ, ಬಭರ್ಜಿಮಹೇ।

'ರಮ್' ಆಗಮ ಬಾರದ ಪಕ್ಷದಲ್ಲಿ-ಬಭ್ರಜ್ಜೇ, ಬಭ್ರಜ್ಜಾತೇ, ಬಭ್ರಜ್ಜಿರೇ। ಬಭ್ರಜ್ಜಿಷೇ, ಬಭ್ರಜ್ಜಾಥೇ, ಬಭ್ರಜ್ಜಿಧ್ವೇ। ಬಭ್ರಜ್ಜೇ, ಬಭ್ರಜ್ಜಿವಹೇ, ಬಭ್ರಜ್ಜಿಮಹೇ।

ಲುಟ್: ಪರಸ್ಮೈಪದದಲ್ಲಿ-'ರಮ್' ಆಗಮ ಪಕ್ಷದಲ್ಲಿ-ಭರ್ಷ್ಟಾ, ಭರ್ಷ್ಟಾರೌ, ಭರ್ಷ್ಟಾರಃ। ಭರ್ಷ್ಟಾಸಿ, ಭರ್ಷ್ಟಾಸ್ಥಃ, ಭರ್ಷ್ಟಾಸ್ಥ। ಭರ್ಷ್ಟಾಸ್ಮಿ, ಭರ್ಷ್ಟಾಸ್ವಃ, ಭರ್ಷ್ಟಾಸ್ಮಃ।

'ರಮ್' ಆಗಮ ಬಾರದ ಪಕ್ಷದಲ್ಲಿ-ಭ್ರಷ್ಟಾ, ಭ್ರಷ್ಟಾರೌ, ಭ್ರಷ್ಟಾರಃ। ಭ್ರಷ್ಟಾಸಿ, ಭ್ರಷ್ಟಾಸ್ಥಃ, ಭ್ರಷ್ಟಾಸ್ಥ। ಭ್ರಷ್ಟಾಸ್ಮಿ, ಭ್ರಷ್ಟಾಸ್ವಃ, ಭ್ರಷ್ಟಾಸ್ಮಃ।

ಆತ್ಮನೇ ಪದದಲ್ಲಿ-'ರಮ್' ಆಗಮ ಪಕ್ಷದಲ್ಲಿ- ಭರ್ಷ್ಟಾ, ಭರ್ಷ್ಟಾರೌ, ಭರ್ಷ್ಟಾರಃ। ಭರ್ಷ್ಟಾಸೇ, ಭರ್ಷ್ಟಾಸಾಥೇ, ಭರ್ಷ್ಟಾಧ್ವೇ। ಭರ್ಷ್ಟಾಹೇ, ಭರ್ಷ್ಟಾಸ್ವಹೇ, ಭರ್ಷ್ಟಾಸ್ಮಹೇ।

'ರಮ್' ಆಗಮ ಬಾರದ ಪಕ್ಷದಲ್ಲಿ- ಭ್ರಷ್ಟಾ, ಭ್ರಷ್ಟಾರೌ, ಭ್ರಷ್ಟಾರಃ। ಭ್ರಷ್ಟಾಸೇ, ಭ್ರಷ್ಟಾಸಾಥೇ, ಭ್ರಷ್ಟಾಧ್ವೇ। ಭ್ರಷ್ಟಾಹೇ, ಭ್ರಷ್ಟಾಸ್ವಹೇ, ಭ್ರಷ್ಟಾಸ್ಮಹೇ।

ಲೃಟ್: ಈ 'ಲ್' ಕಾರದಲ್ಲಿ 'ಸ್ಯ' ಪ್ರತ್ಯಯ ಬಂದಾಗ, 'ರಮ್' ಆಗಮ ಪಕ್ಷದಲ್ಲಿ, ಭರ್ಜ್+ಸ್ಯತಿ ಎಂದಿದ್ದಾಗ, 'ಜ್' ಕಾರಕ್ಕೆ 'ಷ್' ಕಾರವು ಆದೇಶವಾಗಿ ಬರುತ್ತದೆ. ಅದರ ಸ್ಥಾನದಲ್ಲಿ "ಷಢೋಃ ಕಃ ಸಿ" ಎಂಬ ಸೂತ್ರದಿಂದ 'ಕ್' ಕಾರವು ಆದೇಶವಾಗಿ ಬರುತ್ತದೆ. 'ಕ್' ಕಾರದ ಜೊತೆಗೆ 'ಸ್' ಕಾರವು ಸೇರಿದಾಗ 'ಸ್' ಕಾರಕ್ಕೆ 'ಷ್' ಕಾರವು ಬಂದು 'ಕ್ಷ್' ಎಂದಾಗಿ ಭರ್ಕ್ಷ್ಯತಿ ಎಂದು ಪರಸ್ಮೈ ಪದದಲ್ಲೂ, ಭರ್ಕ್ಷ್ಯತೇ ಎಂದು ಆತ್ಮನೇ ಪದದಲ್ಲೂ ರೂಪಗಳಾಗುತ್ತವೆ.

'ರಮ್' ಆಗಮ ಬಾರದ ಪಕ್ಷದಲ್ಲಿ, ಭ್ರಕ್ಷ್ಯತಿ ಎಂದು ಪರಸ್ಮೈ ಪದದಲ್ಲೂ, ಭ್ರಕ್ಷ್ಯತೇ ಎಂದು ಆತ್ಮನೇ ಪದದಲ್ಲೂ ರೂಪಗಳಾಗುತ್ತವೆ.

ಪರಸ್ಮೈಪದದಲ್ಲಿ-'ರಮ್' ಆಗಮ ಪಕ್ಷದಲ್ಲಿ- ಭರ್ಕ್ಷ್ಯತಿ, ಭರ್ಕ್ಷ್ಯತಃ, ಭರ್ಕ್ಷ್ಯನ್ತಿ। ಭರ್ಕ್ಷ್ಯಸಿ, ಭರ್ಕ್ಷ್ಯಥಃ, ಭರ್ಕ್ಷ್ಯಥ। ಭರ್ಕ್ಷ್ಯಾಮಿ, ಭರ್ಕ್ಷ್ಯಾವಃ, ಭರ್ಕ್ಷ್ಯಾಮಃ।

'ರಮ್' ಆಗಮ ಬಾರದ ಪಕ್ಷದಲ್ಲಿ- ಭ್ರಕ್ಷ್ಯತಿ, ಭ್ರಕ್ಷ್ಯತಃ, ಭಕ್ಷ್ಯನ್ತಿ। ಭ್ರಕ್ಷ್ಯಸಿ, ಭ್ರಕ್ಷ್ಯಥಃ, ಭ್ರಕ್ಷ್ಯಥ। ಭ್ರಕ್ಷ್ಯಾಮಿ, ಭ್ರಕ್ಷ್ಯಾವಃ, ಭ್ರಕ್ಷ್ಯಾಮಃ।

ಆತ್ಮನೇ ಪದದಲ್ಲಿ- 'ರಮ್' ಆಗಮ ಪಕ್ಷದಲ್ಲಿ- ಭರ್ಕ್ಷ್ಯತೇ, ಭರ್ಕ್ಷ್ಯೇತೇ, ಭರ್ಕ್ಷ್ಯನ್ತೇ। ಭರ್ಕ್ಷ್ಯಸೇ, ಭರ್ಕ್ಷ್ಯೇಥೇ, ಭರ್ಕ್ಷ್ಯಧ್ವೇ। ಭರ್ಕ್ಷ್ಯೇ, ಭರ್ಕ್ಷ್ಯಾವಹೇ, ಭರ್ಕ್ಷ್ಯಾಮಹೇ।

'ರಮ್' ಆಗಮ ಬಾರದ ಪಕ್ಷದಲ್ಲಿ- ಭ್ರಕ್ಷ್ಯತೇ, ಭ್ರಕ್ಷ್ಯೇತೇ ,ಭ್ರಕ್ಷ್ಯನ್ತೇ। ಭ್ರಕ್ಷ್ಯಸೇ, ಭ್ರಕ್ಷ್ಯೇಥೇ, ಭ್ರಕ್ಷ್ಯಧ್ವೇ । ಭ್ರಕ್ಷ್ಯೇ, ಭ್ರಕ್ಷ್ಯಾವಹೇ, ಭ್ರಕ್ಷ್ಯಾಮಹೇ।

ಲೋಟ್: ಪರಸ್ಮೈಪದದಲ್ಲಿ- ಭೃಜ್ಜತು/ಭೃಜ್ಜತಾತ್, ಭೃಜ್ಜತಾಮ್, ಭೃಜ್ಜನ್ತು। ಭೃಜ್ಜ/ ಭೃಜ್ಜತಾತ್, ಭೃಜ್ಜತಮ್, ಭೃಜ್ಜತ। ಭೃಜ್ಜಾನಿ, ಭೃಜ್ಜಾವ, ಭೃಜಾಮ।

ಆತ್ಮನೇ ಪದದಲ್ಲಿ-ಭೃಜ್ಜತಾಮ್ ಭೃಜ್ಜೇತಾಮ್, ಭೃಜ್ಜನ್ತಾಮ್। ಭೃಜ್ಜಸ್ವ, ಭೃಜ್ಜೇಥಾಮ್, ಭೃಜ್ಜಧ್ವಮ್। ಭೃಜ್ಜೈ, ಭೃಜ್ಜಾವಹೈ, ಭೃಜ್ಜಾಮಹೈ।

ಲಙ್: ಪರಸ್ಮೈಪದದಲ್ಲಿ-ಅಭೃಜ್ಜತ್, ಅಭೃಜ್ಜತಾಮ್, ಅಭೃಜ್ಜನ್। ಅಭೃಜ್ಜಃ, ಅಭೃಜ್ಜತಮ್, ಅಭೃಜ್ಜತ। ಅಭೃಜ್ಜಮ್, ಅಭೃಜ್ಜಾವ, ಅಭೃಜ್ಜಾಮ।

ಆತ್ಮನೇ ಪದದಲ್ಲಿ -ಅಭೃಜ್ಜತ, ಅಭೃಜ್ಜೇತಾಮ್, ಅಭೃಜ್ಜನ್ತ। ಅಭೃಜ್ಜಥಾಃ, ಅಭೃಜ್ಜೇಥಾಮ್, ಅಭೃಜ್ಜಧ್ವಮ್। ಅಭೃಜ್ಜೇ, ಅಭೃಜ್ಜಾವಹಿ, ಅಭೃಜ್ಜಾಮಹಿ।

ವಿ. ಲಿಙ್: ಪರಸ್ಮೈಪದದಲ್ಲಿ – ಭೃಜ್ಜೇತ್, ಭೃಜ್ಜೇತಾಮ್, ಭೃಜ್ಜೇಯುಃ। ಭೃಜ್ಜೇಃ, ಭೃಜ್ಜೇತಮ್, ಭೃಜ್ಜೇತ। ಭೃಜ್ಜೇಯಮ್, ಭೃಜ್ಜೇವ, ಭೃಜ್ಜೇಮ।

ಆತ್ಮನೇ ಪದದಲ್ಲಿ- ಭೃಜ್ಜೇತ, ಭೃಜ್ಜೇಯಾತಾಮ್, ಭೃಜ್ಜೇರನ್। ಭೃಜ್ಜೇಥಾಃ, ಭೃಜ್ಜೇಯಾಥಾಮ್, ಭೃಜ್ಜೇಧ್ವಮ್। ಭೃಜ್ಜೇಯ, ಭೃಜ್ಜೇವಹಿ, ಭೃಜ್ಜೇಮಹಿ।

ಆ. ಲಿಙ್: ಪರಸ್ಮೈ ಪದದಲ್ಲಿ ಭ್ರಸ್ಜ್ ನಂತರ ಆಶೀರ್ಲಿಙ್ ನಲ್ಲಿ 'ತಿಪ್' ಆದೇಶ ಬಂದು, ಆರ್ಧಧಾತುಕ ಸಂಜ್ಞೆ ಬಂದಮೇಲೆ 'ಯಾಸುಟ್' ಆಗಮ ಬಂದು, ಅದಕ್ಕೆ ಕಿತ್ವ ಬಂದಾಗ, ಭ್ರಸ್ಜ್+ಯಾಸ್+ತ್ ಎಂದಾಗುತ್ತದೆ. ವಾರ್ತಿಕದ ನಿಯಮದಿಂದ 'ರಮ್' ಆಗಮವನ್ನು ಬಾಧಿಸಿ ಸಮ್ಪ್ರಸಾರಣ 'ಋ' ಕಾರಾದೇಶ ಬಂದಮೇಲೆ ಭೃಸ್ಜ್+ಯಾತ್ ಎಂದಾಗುತ್ತದೆ. 'ಸ್' ಕಾರಕ್ಕೆ ಶ್ಚುತ್ವ ಮತ್ತು ಜಶ್ತ್ವ ಬಂದಮೇಲೆ, ಭೃಜ್ಜ್ಯಾತ್ ಎಂದು ರೂಪವಾಗುತ್ತದೆ.

ಪರಸ್ಮೈಪದದಲ್ಲಿ-ಭೃಜ್ಜ್ಯಾತ್, ಭೃಜ್ಜ್ಯಾಸ್ತಾಮ್, ಭೃಜ್ಜ್ಯಾಸುಃ। ಭೃಜ್ಜ್ಯಾಃ, ಭೃಜ್ಜ್ಯಾಸ್ತಮ್, ಭೃಜ್ಜ್ಯಾಸ್ತ। ಭೃಜ್ಜ್ಯಾಸಮ್, ಭೃಜ್ಜ್ಯಾಸ್ವ, ಭೃಜ್ಜ್ಯಾಸ್ಮ।

ಆತ್ಮನೇಪದದಲ್ಲಿ 'ಕಿತ್' ಅಥವಾ 'ಙಿತ್' ಬಾರದಿರುವುದರಿಂದ ಸಂಪ್ರಸಾರಣವು ಬರುವುದಿಲ್ಲ. ಆದರೆ ವೈಕಲ್ಪಿಕವಾಗಿ 'ರಮ್' ಆಗಮವು ಬಂದು, ಭರ್ಜ್+ಸೀಸ್+ತ

ಎಂದಿರುತ್ತದೆ, 'ಜ್' ಕಾರಕ್ಕೆ 'ಷ್' ಕಾರವು ಆದೇಶವಾಗಿ ಬರುತ್ತದೆ. ಅದರ ಸ್ಥಾನದಲ್ಲಿ "ಷಡೋಃ ಕಃ ಸಿ" ಎಂಬ ಸೂತ್ರದಿಂದ 'ಕ್' ಕಾರವು ಆದೇಶವಾಗಿ ಬರುತ್ತದೆ. 'ಕ್' ಕಾರದ ಜೊತೆಗೆ 'ಸ್' ಕಾರವು ಸೇರಿದಾಗ 'ಸ್' ಕಾರಕ್ಕೆ 'ಷ್' ಕಾರವು ಬಂದು 'ಕ್ಷ್' ಎಂದಾಗಿ ಭರ್ಕ್ಷೀಸ್+ತ ಎಂದಾಗುತ್ತದೆ 'ಈ' ಕಾರದ ಪರದಲ್ಲಿರುವ 'ಸ್' ಕಾರಕ್ಕೆ ಷತ್ವ ಬಂದು 'ಷ್' ಕಾರದ ಪರದಲ್ಲಿರುವ 'ತ್' ಕಾರಕ್ಕೆ ಷ್ಟುತ್ವ (ಟ್) ಬಂದು 'ಭರ್ಕ್ಷೀಷ್ಟ' ಎಂದು ರೂಪವಾಗುತ್ತದೆ.

ಆತ್ಮನೇ ಪದದಲ್ಲಿ-(ರಮ್ ಆಗಮ ಪಕ್ಷದಲ್ಲಿ)- ಭರ್ಕ್ಷೀಷ್ಟ, ಭರ್ಕ್ಷೀಯಾಸ್ತಾಮ್, ಭರ್ಕ್ಷೀರನ್। ಭರ್ಕ್ಷೀಷ್ಠಾಃ, ಭರ್ಕ್ಷೀಯಾಸ್ಥಾಮ್, ಭರ್ಕ್ಷೀಢ್ವಮ್। ಭರ್ಕ್ಷೀಯ, ಭರ್ಕ್ಷೀವಹಿ, ಭರ್ಕ್ಷೀಮಹಿ।

ರಮ್ ಆಗಮ ಬಾರದ ಪಕ್ಷದಲ್ಲಿ – ಭ್ರಕ್ಷೀಷ್ಟ, ಭ್ರಕ್ಷೀಯಾಸ್ತಾಮ್, ಭ್ರಕ್ಷೀರನ್। ಭ್ರಕ್ಷೀಷ್ಠಾಃ, ಭ್ರಕ್ಷೀಯಾಸ್ಥಾಮ್, ಭ್ರಕ್ಷೀಢ್ವಮ್। ಭ್ರಕ್ಷೀಯ, ಭ್ರಕ್ಷೀವಹಿ, ಭ್ರಕ್ಷೀಮಹಿ।

ಲುಙ್: ಪರಸ್ಮೈಪದದಲ್ಲಿ-(ರಮ್ ಅಗಮ ಪಕ್ಷದಲ್ಲಿ)- ಅಭಾರ್ಕ್ಷೀತ್, ಅಭಾರ್ಷ್ಟಾಮ್, ಅಭಾರ್ಕ್ಷುಃ। ಅಭಾರ್ಕ್ಷೀಃ, ಅಭಾರ್ಷ್ಟಮ್, ಅಭಾರ್ಷ್ಟ। ಅಭಾರ್ಕ್ಷಮ್, ಅಭಾರ್ಕ್ಷ್ವ, ಅಭಾರ್ಕ್ಷ್ಮ।

ರಮ್ ಆಗಮ ಬಾರದ ಪಕ್ಷದಲ್ಲಿ – ಅಭ್ರಾಕ್ಷೀತ್, ಅಭ್ರಾಷ್ಟಾಮ್, ಅಭ್ರಾಕ್ಷುಃ। ಅಭ್ರಾಕ್ಷೀಃ, ಅಭ್ರಾಷ್ಟಮ್, ಅಭ್ರಾಷ್ಟ। ಅಭ್ರಾಕ್ಷಮ್, ಅಭ್ರಾಕ್ಷ್ವ, ಅಭ್ರಾಕ್ಷ್ಮ।

ಆತ್ಮನೇ ಪದದಲ್ಲಿ -(ರಮ್ ಅಗಮ ಪಕ್ಷದಲ್ಲಿ)- ಅಭರ್ಜ್+ಸ್+ತ ಎಂದಿರುತ್ತದೆ. "ಝಲೋ ಝಲಿ" ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬಂದು, 'ಜ್' ಕಾರಕ್ಕೆ 'ಷತ್ವ' ಮತ್ತು 'ಷ್' ಕಾರಕ್ಕಿಂತ ಪರದಲ್ಲಿರುವ 'ತ್' ಕಾರಕ್ಕೆ ಷ್ಟುತ್ವ ಬಂದು ಅಭರ್ಷ್ಟ ಎಂದಾಗುತ್ತದೆ. ಆತಾಮ್ ಎಂಬಲ್ಲಿ 'ಝಲ್' ಪರದಲ್ಲಿರದೇ ಇರುವುದರಿಂದ 'ಸ್'ಕಾರಕ್ಕೆ ಲೋಪವು ಬರುವುದಿಲ್ಲ. ಆದುದರಿಂದ ಷತ್ವ, ಕತ್ವ, ಷತ್ವ ಮತ್ತು ಕ್ಷತ್ವಗಳು ಬಂದು, ಅಭಾರ್ಕ್ಷಾತಾಮ್ ಎಂದು ರೂಪವಾಗುತ್ತದೆ. ಹೀಗೆ ಕೆಳಗಿನಂತೆ ರೂಪಗಳಾಗುತ್ತವೆ.

'ರಮ್' ಆಗಮ ಪಕ್ಷದಲ್ಲಿ- ಅಭರ್ಷ್ಟ, ಅಭರ್ಕ್ಷಾತಾಮ್, ಅಭರ್ಕ್ಷತ। ಅಭರ್ಷ್ಠಾಃ, ಅಭರ್ಕ್ಷಾಥಾಮ್, ಅಭರ್ಡ್ವಮ್। ಅಭರ್ಕ್ಷಿ, ಅಭರ್ಕ್ಷ್ವಹಿ, ಅಭರ್ಕ್ಷ್ಮಹಿ।

'ರಮ್' ಆಗಮ ಬಾರದ ಪಕ್ಷದಲ್ಲಿ- ಅಭ್ರಷ್ಟ, ಅಭ್ರಕ್ಷಾತಾಮ್, ಅಭ್ರಕ್ಷತ। ಅಭ್ರಷ್ಠಾಃ, ಅಭ್ರಕ್ಷಾಥಾಮ್, ಅಭ್ರಡ್ವಮ್। ಅಭ್ರಕ್ಷಿ, ಅಭ್ರಕ್ಷ್ವಹಿ, ಅಭ್ರಕ್ಷ್ಮಹಿ।

ಲೃಙ್: ಪರಸ್ಮೈಪದದಲ್ಲಿ- (ರಮ್ ಆಗಮ ಪಕ್ಷದಲ್ಲಿ)- ಅಭರ್ಕ್ಷ್ಯತ್, ಅಭರ್ಕ್ಷ್ಯತಾಮ್, ಅಭರ್ಕ್ಷ್ಯನ್। ಅಭರ್ಕ್ಷ್ಯಃ, ಅಭರ್ಕ್ಷ್ಯತಮ್, ಅಭರ್ಕ್ಷ್ಯತ। ಅಭರ್ಕ್ಷ್ಯಮ್, ಅಭರ್ಕ್ಷ್ಯಾವ, ಅಭರ್ಕ್ಷ್ಯಾಮ।

'ರಮ್' ಆಗಮ ಬಾರದ ಪಕ್ಷದಲ್ಲಿ- ಅಭ್ರಕ್ಷ್ಯತ್, ಅಭ್ರಕ್ಷ್ಯತಾಮ್, ಅಭ್ರಕ್ಷ್ಯನ್। ಅಭ್ರಕ್ಷ್ಯಃ, ಅಭ್ರಕ್ಷ್ಯತಮ್, ಅಭ್ರಕ್ಷ್ಯತ। ಅಭ್ರಕ್ಷ್ಯಮ್, ಅಭ್ರಕ್ಷ್ಯಾವ, ಅಭ್ರಕ್ಷ್ಯಾಮ।

ಆತ್ಮನೇ ಪದದಲ್ಲಿ -(ರಮ್ ಆಗಮ ಪಕ್ಷದಲ್ಲಿ)- ಅಭರ್ಕ್ಷ್ಯತ, ಅಭರ್ಕ್ಷ್ಯೇತಾಮ್,

ಅಭಕ್ಷ್ರ್ಯನ್ತ। ಅಭಕ್ಷ್ರ್ಯಥಾಃ, ಅಭಕ್ಷ್ರ್ಯೇಥಾಮ್, ಅಭಕ್ಷ್ರ್ಯಧ್ವಮ್।ಅಭಕ್ಷ್ರ್ಯೇ, ಅಭಕ್ಷ್ರ್ಯಾವಹಿ, ಅಭಕ್ಷ್ರ್ಯಾಮಹಿ।

'ರಮ್' ಆಗಮ ಬಾರದ ಪಕ್ಷದಲ್ಲಿ– ಅಭ್ರಕ್ಷ್ಯತ, ಅಭ್ರಕ್ಷ್ಯೇತಾಮ್, ಅಭ್ರಕ್ಷ್ಯನ್ತ। ಅಭ್ರಕ್ಷ್ಯಥಾಃ, ಅಭ್ರಕ್ಷ್ಯೇಥಾಮ್, ಅಭ್ರಕ್ಷ್ಯಧ್ವಮ್।ಅಭ್ರಕ್ಷ್ಯೇ, ಅಭ್ರಕ್ಷ್ಯಾವಹಿ, ಅಭ್ರಕ್ಷ್ಯಾಮಹಿ।

ಧಾತು 4. ಕೃಷ– ವಿಲೇಖನೇ(ಊಳುವದು, ಎಳೆಯುವದು)– ಇದರಲ್ಲಿ 'ಕೃಷ್' ಮಾತ್ರ ಉಳಿಯುತ್ತದೆ. ಇದು ಸ್ವರಿತೇತ್ತಾಗಿರುವುದರಿಂದ, ಉಭಯಪದಿಯಾಗಿರುತ್ತದೆ. ಇದು ಅನುದಾತ್ತದಲ್ಲಿ ಪರಿಗಣಿತವಾಗಿರುವುದರಿಂದ 'ಅನಿಟ್' ಆಗಿದೆ. ಆದರೆ 'ಲಿಟ್' ನಲ್ಲಿ, ಕ್ರಾದಿ ನಿಯಮದಿಂದ 'ಇಟ್' ಆಗುತ್ತದೆ. ( ಭ್ವಾದಿಯಲ್ಲಿರುವ 'ಕೃಷ್' ಧಾತುವಿಗೆ ಕರ್ಷತಿ ಎಂದು ರೂಪವಾಗುತ್ತದೆ ಇಲ್ಲಿ ಧಾತುವಿಗೆ ಶಪ್ ಪರದಲ್ಲಿರುವಾಗ ಗುಣ (ಅರ್) ಬಂದು ಕರ್ಷತಿ ಎಂದಾಗಿದೆ. ಕರ್ಷತಿ ಎಂದರೆ ಎಳೆಯುತ್ತಾನೆ ಎಂದು ಅರ್ಥ). ತುದಾದಿಯಲ್ಲಿ 'ಶ(ಅ)' ವಿಕರಣ ಬಂದು ಗುಣವೃದ್ಧಿಗಳು ಬಾರದೇ 'ಕೃಷತಿ' ಎಂದು ರೂಪವಾಗುತ್ತದೆ.

ಲಟ್: ಪರಸ್ಮೈಪದದಲ್ಲಿ– ಕೃಷತಿ, ಕೃಷತಃ, ಕೃಷನ್ತಿ। ಕೃಷಸಿ, ಕೃಷಥಃ, ಕೃಷಥ। ಕೃಷಾಮಿ, ಕೃಷಾವಃ, ಕೃಷಾಮಃ।

ಆತ್ಮನೇ ಪದದಲ್ಲಿ– ಕೃಷತೇ, ಕೃಷೇತೇ, ಕೃಷನ್ತೇ। ಕೃಷಸೇ, ಕೃಷೇಥೆ, ಕೃಷಧ್ವೇ। ಕೃಷೇ, ಕೃಷಾವಹೇ, ಕೃಷಾಮಹೇ।

ಲಿಟ್: ಪರಸ್ಮೈಪದದಲ್ಲಿ– ಚಕರ್ಷ, ಚಕೃಷತುಃ, ಚಕೃಷುಃ। ಚಕರ್ಷಿಥ, ಚಕೃಷಥುಃ, ಚಕೃಷ। ಚಕರ್ಷ, ಚಕೃಷಿವ, ಚಕೃಷಿಮ।

ಆತ್ಮನೇ ಪದದಲ್ಲಿ –ಚಕೃಷೇ, ಚಕೃಷಾತೇ, ಚಕೃಷಿರೇ। ಚಕೃಷಿಷೇ, ಚಕೃಷಾಥೇ, ಚಕೃಷಿಧ್ವೇ। ಚಕೃಷೇ, ಚಕೃಷಿವಹೇ, ಚಕೃಷಿಮಹೇ।

**(ವೈಕಲ್ಪಿಕ 'ಅಮ್' ಆಗಮವನ್ನು ವಿಧಿಸುವ ಸೂತ್ರ)**

**ಸೂತ್ರ– 654. ಅನುದಾತ್ತಸ್ಯ ಚರ್ದುಪಧಸ್ಯಾನ್ಯತರಸ್ಯಾಮ್ ( 3.1.59)**

ವೃತ್ತಿ – ಉಪದೇಶೇ ಅನುದಾತ್ತಃ ಯಃ ಋದುಪಧಃ ತಸ್ಯ ಅಮ್ ವಾ ಸ್ಯಾತ್ ಝಲಾದೌ ಅಕಿತಿ। ಕ್ರಷ್ಟಾ, ಕರ್ಷ್ಟಾ ಕೃಕ್ಷೀಷ್ಟ

ವಾ॥ ಸ್ಪೃಶ–ಮೃಶ–ಕೃಷ–ತೃಪ–ದೃಪಾಂ ಚ್ಲೇಃ ಸಿಚ್ ವಾ ವಾಚ್ಯಃ

ಅಕ್ರಾಕ್ಷೀತ್, ಅಕಾರ್ಕ್ಷೀತ್। ಅಕೃಕ್ಷತ್। ಅಕೃಷ್ಟ ಅಕೃಕ್ಷಾತಾಮ್। ಅಕೃಕ್ಷತ। ಕ್ಸಪಕ್ಷೇ– ಅಕೃಕ್ಷತ। ಅಕೃಕ್ಷಾತಾಮ್। ಅಕೃಕ್ಷನ್ತ। 5. ಮಿಲ ಸಙ್ಗಮೇ। ಮಿಲತಿ, ಮಿಲತೇ। ಮಿಮೇಲ। ಮೇಲಿತಾ। ಅಮೇಲಿತ್। 6. ಮುಚ್ಲೃ ಮೋಚನೇ।

ಪ.ಛೇ.– ಅನುದಾತ್ತಸ್ಯ, ಚ, ಋದುಪಧಸ್ಯ, ಅನ್ಯತರಸ್ಯಾಮ್।

ಅ.ವೃ.– "ಆದೇಚ ಉಪದೇಶೇಽಶಿತಿ" ಎಂಬ ಸೂತ್ರದಿಂದ 'ಉಪದೇಶೇ' ಎಂಬ ಪದವೂ, ಮತ್ತು "ಸೃಜಿದೃಶೋರ್ಝಲ್ಯಮಕಿತಿ" ಎಂಬ ಸೂತ್ರದಿಂದ 'ಝಲಿ' 'ಅಮ್'

'ಅಕಿತಿ' ಎಂಬ ಪದಗಳು ಅನುವೃತ್ತವಾಗಿವೆ.

ಅರ್ಥ– ಉಪದೇಶಾವಸ್ಥೆಯಲ್ಲಿ ಯಾವ ಅನುದಾತ್ತ ಋದುಪಧ ಧಾತುವಿದೆಯೋ ಅದಕ್ಕೆ ವಿಕಲ್ಪದಿಂದ 'ಅಮ್' ಆಗಮವು ಬರುತ್ತದೆ– ಕಿತ್ ಗಿಂತ ಭಿನ್ನವಾದ ಝಲಾದಿ ಪ್ರತ್ಯಯವು ಪರದಲ್ಲಿದ್ದಾಗ. ಇದರಲ್ಲಿ 'ಮ್' ಕಾರವು ಇತ್ ಆಗಿದೆ. ಮಿತ್ ಆಗಿ ಇರುವುದರಿಂದ ಈ 'ಅ' ಕಾರವು "ಮಿದಚೋಽನ್ತ್ಯಾತ್ ಪರಃ" ಎಂಬ ಸೂತ್ರದಿಂದ ಅಂತ್ಯವಾದ 'ಅಚ್' ನ ನಂತರ ಸೇರಿಕೊಳ್ಳುತ್ತದೆ.

ಲುಟ್: ಉದಾ– ಕ್ರಷ್ಟಾ – ಕೃಷ್ ಧಾತುವಿನ ನಂತರ 'ಲುಟ್' 'ಲ್' ಕಾರದಲ್ಲಿ ಕೃಷ್+ತಾ ಎಂದಿದ್ದಾಗ, ಉಪದೇಶಾವಸ್ಥೆಯಲ್ಲಿ ಅನುದಾತ್ತ ಮತ್ತು 'ಋ' ಕಾರ ಉಪಧೆಯಾಗಿಯುಳ್ಳ ಧಾತುವಾಗಿರುವುದರಿಂದ 'ಅಕಿತ್' ಆದ ಝಲಾದಿಯಾದ 'ತಾ' ದ ಪರದಲ್ಲಿರೋಣದ್ದರಿಂದ ಪ್ರಕೃತ ಸೂತ್ರದಿಂದ 'ಅಮ್' ಆಗಮವು ವೈಕಲ್ಪಿಕವಾಗಿ ಬರುತ್ತದೆ. ಇದು ಮಿತ್ ಆಗಿ ಇರೋಣದ್ದರಿಂದ ಅಂತ್ಯವಾದ ಅಚ್ ನ ನಂತರ ಅಂದರೆ 'ಕೃ' ವಿನ 'ಋ' ಕಾರದ ನಂತರ ಬರುತ್ತದೆ. ಕೃ+ಅ+ಷ್+ತಾ ಎಂದಿರುತ್ತದೆ. 'ಋ' ಕಾರ 'ಅ' ಕಾರಗಳಿಗೆ ಯಣ್ ಸಂಧಿಯಾಗಿ ಕ್+ರ್+ಅ=ಕ್ರ, ಕ್ರಷ್+ ತಾ ಎಂಬಲ್ಲಿ 'ಷ್' ಕಾರದ ಸಂಬಂಧದಿಂದ 'ತ್' ಕಾರಕ್ಕೆ ಷ್ಟುತ್ವ ಬಂದು ಕ್ರಷ್ಟಾ ಎಂದು ರೂಪವು ಸಿದ್ಧವಾಗುತ್ತದೆ.

ಪರಸ್ಮೈಪದದಲ್ಲಿ–(ಅಮ್ ಆಗಮ ಪಕ್ಷದಲ್ಲಿ) –ಕ್ರಷ್ಟಾ, ಕ್ರಷ್ಟಾರೌ, ಕ್ರಷ್ಟಾರಃ। ಕ್ರಷ್ಟಾಸಿ, ಕ್ರಷ್ಟಾಸ್ಥಃ, ಕ್ರಷ್ಟಾಸ್ಥ। ಕ್ರಷ್ಟಾಸ್ಮಿ, ಕ್ರಷ್ಟಾಸ್ವಃ, ಕ್ರಷ್ಟಾಸ್ಮಃ।

ಅಮ್ ಆಗಮ ಬಾರದ ಪಕ್ಷದಲ್ಲಿ–ಕೃಷ್ ನಲ್ಲಿರುವ 'ಋ' ಕಾರಕ್ಕೆ ಉಪಧಾ ಗುಣ ಬಂದು ಕರ್ಷ್ ಎಂದಾಗಿ ಕರ್ಷ್+ತಾ ಎಂದಿದ್ದಾಗ ಷ್ಟುತ್ವ ಬಂದು ಕರ್ಷ್ಟಾ ಎಂದಾಗುತ್ತದೆ. ರೂಪಗಳು ; ಕರ್ಷ್ಟಾ, ಕರ್ಷ್ಟಾರೌ, ಕರ್ಷ್ಟಾರಃ। ಕರ್ಷ್ಟಾಸಿ, ಕರ್ಷ್ಟಾಸ್ಥಃ, ಕರ್ಷ್ಟಾಸ್ಥ। ಕರ್ಷ್ಟಾಸ್ಮಿ, ಕರ್ಷ್ಟಾಸ್ವಃ, ಕರ್ಷ್ಟಾಸ್ಮಃ।

ಆತ್ಮನೇ ಪದದಲ್ಲಿ – (ಅಮ್ ಆಗಮ ಪಕ್ಷದಲ್ಲಿ)– ಕ್ರಷ್ಟಾ, ಕ್ರಷ್ಟಾರೌ, ಕ್ರಷ್ಟಾರಃ। ಕ್ರಷ್ಟಾಸೇ, ಕ್ರಷ್ಟಾಸಾಥೆ, ಕ್ರಷ್ಟಾಧ್ವೇ। ಕ್ರಷ್ಟಾಹೇ, ಕ್ರಷ್ಟಾಸ್ವಹೇ, ಕ್ರಷ್ಟಾಸ್ಮಹೇ।

ಅಮ್ ಆಗಮ ಬಾರದ ಪಕ್ಷದಲ್ಲಿ– ಕರ್ಷ್ಟಾ, ಕರ್ಷ್ಟಾರೌ, ಕರ್ಷ್ಟಾರಃ। ಕರ್ಷ್ಟಾಸೇ, ಕರ್ಷ್ಟಾಸಾಥೇ, ಕರ್ಷ್ಟಾಧ್ವೇ। ಕರ್ಷ್ಟಾಹೇ, ಕರ್ಷ್ಟಾಸ್ವಹೇ, ಕರ್ಟಾಸ್ಮಹೇ।

ಲೃಟ್: ಪರಸ್ಮೈಪದದಲ್ಲಿ (ಅಮ್ ಆಗಮ ಪಕ್ಷದಲ್ಲಿ)– ಕ್ರಕ್ಷ್ಯತಿ, ಕ್ರಕ್ಷ್ಯತಃ, ಕ್ರಕ್ಷ್ಯನ್ತಿ। ಕ್ರಕ್ಷ್ಯಸಿ, ಕ್ರಕ್ಷ್ಯಥಃ, ಕ್ರಕ್ಷ್ಯಥ। ಕ್ರಕ್ಷ್ಯಾಮಿ, ಕ್ರಕ್ಷ್ಯಾವಃ, ಕ್ರಕ್ಷ್ಯಾಮಃ।

ಅಮ್ ಆಗಮ ಬಾರದ ಪಕ್ಷದಲ್ಲಿ – ಕರ್ಕ್ಷ್ಯತಿ, ಕರ್ಕ್ಷ್ಯತಃ, ಕರ್ಕ್ಷ್ಯನ್ತಿ। ಕರ್ಕ್ಷ್ಯಸಿ, ಕರ್ಕ್ಷ್ಯಥಃ, ಕರ್ಕ್ಷ್ಯಥ। ಕರ್ಕ್ಷ್ಯಾಮಿ, ಕರ್ಕ್ಷ್ಯಾವಃ, ಕರ್ಕ್ಷ್ಯಾಮಃ।

ಆತ್ಮನೇ ಪದದಲ್ಲಿ –(ಅಮ್ ಆಗಮ ಪಕ್ಷದಲ್ಲಿ)– ಕ್ರಕ್ಷ್ಯತೇ, ಕ್ರಕ್ಷ್ಯೇತೇ, ಕ್ರಕ್ಷ್ಯನ್ತೇ। ಕ್ರಕ್ಷ್ಯಸೇ, ಕ್ರಕ್ಷ್ಯೇಥೇ, ಕ್ರಕ್ಷ್ಯಧ್ವೇ। ಕ್ರಕ್ಷ್ಯೇ, ಕ್ರಕ್ಷ್ಯಾವಹೇ, ಕ್ರಕ್ಷ್ಯಾಮಹೇ।

ಅಮ್ ಆಗಮ ಬಾರದ ಪಕ್ಷದಲ್ಲಿ– ಕರ್ಕ್ಷ್ಯತೇ, ಕರ್ಕ್ಷ್ಯೇತೇ, ಕರ್ಕ್ಷ್ಯನ್ತೇ। ಕರ್ಕ್ಷ್ಯಸೇ,

ಕಕ್ಷ್ರ್ಯಾಥೇ, ಕಕ್ಷ್ರ್ಯಾಧ್ವೇ। ಕಕ್ಷ್ರ್ಯೇ, ಕಕ್ಷ್ರ್ಯಾವಹೇ, ಕಕ್ಷ್ರ್ಯಾಮಹೇ।

ಲೋಟ್: ಪರಸ್ಮೈಪದದಲ್ಲಿ – ಕೃಷತು/ಕೃಷತಾತ್, ಕೃಷತಾಮ್, ಕೃಷನ್ತು। ಕೃಷ/ಕೃಷತಾತ್, ಕೃಷತಮ್, ಕೃಷತ। ಕೃಷಾಣಿ, ಕೃಷಾವ, ಕೃಷಾಮ।

ಆತ್ಮನೇ ಪದದಲ್ಲಿ – ಕೃಷತಾಮ್, ಕೃಷೇತಾಮ್, ಕೃಷನ್ತಾಮ್। ಕೃಷಸ್ವ, ಕೃಷೇಥಾಮ್, ಕೃಷಧ್ವಮ್। ಕೃಷೈ, ಕೃಷಾವಹೈ, ಕೃಷಾಮಹೈ।

ಲಜ್:ಪರಸ್ಮೈಪದದಲ್ಲಿ– ಅಕೃಷತ್, ಅಕೃಷತಾಮ್, ಅಕೃಷನ್। ಅಕೃಷಃ, ಅಕೃಷತಮ್, ಅಕೃಷತ। ಅಕೃಷಮ್, ಅಕೃಷಾವ, ಅಕೃಷಾಮ।

ಆತ್ಮನೇ ಪದದಲ್ಲಿ–ಅಕೃಷತ, ಅಕೃಷೇತಾಮ್, ಅಕೃಷನ್ತ। ಅಕೃಷಥಾಃ, ಅಕೃಷೇಥಾಮ್, ಅಕೃಷಧ್ವಮ್। ಅಕೃಷೇ, ಅಕೃಷಾವಾಹಿ, ಅಕೃಷಾಮಹಿ।

ವಿ. ಲಿಜ್:ಪರಸ್ಮೈಪದದಲ್ಲಿ–ಕೃಷೇತ್, ಕೃಷೇತಾಮ್, ಕೃಷೇಯುಃ। ಕೃಷೇಃ, ಕೃಷೇತಮ್, ಕೃಷೇತ। ಕೃಷೇಯಮ್, ಕೃಷೇವ, ಕೃಷೇಮ।

ಆತ್ಮನೇ ಪದದಲ್ಲಿ–ಕೃಷೇತ, ಕೃಷೇಯಾತಾಮ್, ಕೃಷೇರನ್। ಕೃಷೇಥಾಃ, ಕೃಷೇಯಾಥಾಮ್, ಕೃಷೇಧ್ವಮ್। ಕೃಷೇಯ, ಕೃಷೇವಹಿ, ಕೃಷೇಮಹಿ।

ಆ. ಲಿಜ್: ಪರಸ್ಮೈಪದದಲ್ಲಿ– ಕೃಷ್ಯಾತ್, ಕೃಷ್ಯಾಸ್ತಾಮ್, ಕೃಷ್ಯಾಸುಃ। ಕೃಷ್ಯಾಃ, ಕೃಷ್ಯಾಸ್ತಮ್, ಕೃಷ್ಯಾಸ್ತ। ಕೃಷ್ಯಾಸಮ್, ಕೃಷ್ಯಾಸ್ವ, ಕೃಷ್ಯಾಸ್ಮ।

ಆತ್ಮನೇ ಪದದಲ್ಲಿ– ಕೃಕ್ಷೀಷ್ಟ, ಕೃಕ್ಷೀಯಾಸ್ತಾಮ್, ಕೃಕ್ಷೀರನ್। ಕೃಕ್ಷೀಷ್ಠಾಃ, ಕೃಕ್ಷೀಯಾಸ್ಥಾಮ್, ಕೃಕ್ಷೀಧ್ವಮ್। ಕೃಕ್ಷೀಯ, ಕೃಕ್ಷೀವಹಿ, ಕೃಕ್ಷೀಮಹಿ।

ಲುಜ್:

ಪರಸ್ಮೈಪದದಲ್ಲಿ –(ಅಮ್ ಭಾವದಲ್ಲಿ ಸಿಚ್ ಬಂದಾಗ)– ಅಕ್ರಾಕ್ಷೀತ್, ಅಕ್ರಾಷ್ಟಾಮ್, ಅಕ್ರಾಕ್ಷುಃ। ಅಕ್ರಾಕ್ಷೀಃ, ಅಕ್ರಾಷ್ಟಮ್, ಅಕ್ರಾಷ್ಟ ಅಕ್ರಾಕ್ಷಮ್, ಅಕ್ರಾಕ್ಷ್ವ, ಅಕ್ರಾಕ್ಷ್ಮ।

ಅಮ್ ಬಾರದ ಪಕ್ಷದಲ್ಲಿ – ಅಕಾರ್ಕ್ಷೀತ್, ಅಕಾರ್ಷ್ಟಾಮ್, ಅಕಾರ್ಕ್ಷುಃ। ಅಕಾರ್ಕ್ಷೀಃ, ಅಕಾರ್ಷ್ಟಮ್, ಅಕಾರ್ಷ್ಟ। ಅಕಾರ್ಕ್ಷಮ್, ಅಕಾರ್ಕ್ಷ್ವ, ಅಕಾರ್ಕ್ಷ್ಮ।

'ಕ್ಸ' ಬಂದ ಪಕ್ಷದಲ್ಲಿ – ಅಕೃಕ್ಷತ್, ಅಕೃಕ್ಷಾತಾಮ್, ಅಕೃಕ್ಷನ್। ಅಕೃಕ್ಷಃ, ಅಕೃಕ್ಷತಮ್, ಅಕೃಕ್ಷತ। ಅಕೃಕ್ಷಮ್, ಅಕೃಕ್ಷಾವ, ಅಕೃಕ್ಷಾಮ।

ಆತ್ಮನೇ ಪದದಲಿ–"ಸಿಚಿ ವೃದ್ಧಿಃ ಪರಸ್ಮೈ ಪದೇಷು" ಎಂಬ ಸೂತ್ರದಿಂದ ವೃದ್ಧಿಯು ಬರುವುದಿಲ್ಲ. ಮತ್ತು "ಲಿಜ್ ಸಿಚೌ ಆತ್ಮನೇ ಪದೇಷು" ಎಂಬ ಸೂತ್ರದಿಂದ ಕಿದ್ವದ್ಭಾವ ಬರುವುದರಿಂದ ಪ್ರಕೃತ ಸೂತ್ರದಿಂದ ಅಮ್ ಆಗಮವೂ ಬರುವುದಿಲ್ಲ.

ಸಿಚ್ ಬಂದಾಗ – ಅಕೃಷ್ಟ, ಅಕೃಕ್ಷಾತಾಮ್, ಅಕೃಕ್ಷತ। ಅಕೃಷ್ಠಾಃ, ಅಕೃಕ್ಷಾಥಾಮ್, ಅಕೃಢ್ಢ್ವಮ್। ಅಕೃಕ್ಷಿ, ಅಕೃಕ್ಷ್ವಹಿ, ಅಕೃಕ್ಷ್ಮಹಿ।

'ಕ್ಸ' ಬಂದ ಪಕ್ಷದಲ್ಲಿ–ಅಕೃಕ್ಷತ, ಅಕೃಕ್ಷಾತಾಮ್, ಅಕೃಕ್ಷನ್ತ। ಅಕೃಕ್ಷಥಾಃ, ಅಕೃಕ್ಷಾಥಾಮ್, ಅಕೃಕ್ಷಧ್ವಮ್। ಅಕೃಕ್ಷಿ, ಅಕೃಕ್ಷಾವಹಿ, ಅಕೃಕ್ಷಾಮಹಿ।

ಲೃಙ್: ಪರಸ್ಮೈಪದದಲ್ಲಿ – (ಅಮ್ ಪಕ್ಷದಲ್ಲಿ) – ಅಕ್ರಕ್ಷ್ಯತ್, ಅಕ್ರಕ್ಷ್ಯತಾಮ್, ಅಕ್ರಕ್ಷ್ಯನ್। ಅಕ್ರಕ್ಷ್ಯಃ, ಅಕ್ರಕ್ಷ್ಯತಮ್, ಅಕ್ರಕ್ಷ್ಯತ। ಅಕ್ರಕ್ಷ್ಯಮ್, ಅಕೃಕ್ಷ್ಯಾವ, ಅಕೃಕ್ಷ್ಯಾಮ।

ಅಮ್ ಬಾರದ ಪಕ್ಷದಲ್ಲಿ – ಅಕರ್ಕ್ಷ್ಯತ್, ಅಕರ್ಕ್ಷ್ಯತಾಮ್, ಅಕರ್ಕ್ಷ್ಯನ್। ಅಕರ್ಕ್ಷ್ಯಃ, ಅಕರ್ಕ್ಷ್ಯತಮ್, ಅಕರ್ಕ್ಷ್ಯತ। ಅಕರ್ಕ್ಷ್ಯಮ್, ಅಕರ್ಕ್ಷ್ಯಾವ, ಅಕರ್ಕ್ಷ್ಯಾಮ।

ಆತ್ಮನೇ ಪದದಲ್ಲಿ – (ಅಮ್ ಪಕ್ಷದಲ್ಲಿ)– ಅಕ್ರಕ್ಷ್ಯತ, ಅಕ್ರಕ್ಷ್ಯೇತಾಮ್, ಅಕ್ರಕ್ಷ್ಯನ್ತ। ಅಕ್ರಕ್ಷ್ಯಥಾಃ, ಅಕ್ರಕ್ಷ್ಯೇಥಾಮ್, ಅಕ್ರಕ್ಷ್ಯಧ್ವಮ್। ಅಕ್ರಕ್ಷ್ಯೇ, ಅಕೃಕ್ಷ್ಯಾವಹಿ, ಅಕೃಕ್ಷ್ಯಾಮಹಿ।

ಅಮ್ ಬಾರದ ಪಕ್ಷದಲ್ಲಿ – ಅಕರ್ಕ್ಷ್ಯತ, ಅಕರ್ಕ್ಷ್ಯೇತಾಮ್, ಅಕರ್ಕ್ಷ್ಯನ್ತ। ಅಕರ್ಕ್ಷ್ಯಥಾಃ, ಅಕರ್ಕ್ಷ್ಯೇಥಾಮ್, ಅಕರ್ಕ್ಷ್ಯಧ್ವಮ್। ಅಕರ್ಕ್ಷ್ಯೇ, ಅಕರ್ಕ್ಷ್ಯಾವಹಿ, ಅಕರ್ಕ್ಷ್ಯಾಮಹಿ।

ಧಾತು 5. ಮಿಲ ಸಂಗಮೇ (ಭೇಟಿಯಾಗುವದು, ಕೂಡಿಕೊಳ್ಳುವದು)– ಸ್ವರಿತ 'ಅ' ಕಾರಕ್ಕೆ 'ಇತ್' ಸಂಜ್ಞೆ ಇರೋಣದ್ದರಿಂದ ಉಭಯಪದಿ ಮತ್ತು ಸೇಟ್ ಆಗಿರುತ್ತದೆ.

ಲಟ್:ಪರಸ್ಮೈಪದದಲ್ಲಿ– ಮಿಲತಿ, ಮಿಲತಃ, ಮಿಲನ್ತಿ। ಮಿಲಸಿ, ಮಿಲಥಃ, ಮಿಲಥ। ಮಿಲಾಮಿ, ಮಿಲಾವಃ, ಮಿಲಾಮಃ।

ಆತ್ಮನೇ ಪದದಲ್ಲಿ– ಮಿಲತೇ, ಮಿಲೇತೇ, ಮಿಲನ್ತೇ। ಮಿಲಸೇ, ಮಿಲೇಥೇ, ಮಿಲಧ್ವೇ। ಮಿಲೇ, ಮಿಲಾವಹೇ, ಮಿಲಾಮಹೇ।

ಲಿಟ್:ಪರಸ್ಮೈಪದದಲ್ಲಿ– ಮಿಮೇಲ, ಮಿಮಿಲತುಃ, ಮಿಮಿಲುಃ। ಮಿಮೇಲಿಥ, ಮಿಮಿಲಥುಃ , ಮಿಮಿಲ। ಮಿಮೇಲ, ಮಿಮಿಲಿವ, ಮಿಮಿಲಿಮ।

ಆತ್ಮನೇ ಪದದಲ್ಲಿ –ಮಿಮಿಲೇ, ಮಿಮಿಲಾತೇ, ಮಿಮಿಲಿರೇ।, ಮಿಮಿಲಿಷೇ, ಮಿಮಿಲಾಥೇ, ಮಿಮಿಲಿಧ್ವೇ/ಮಿಮಿಲಿಢ್ವೇ। ಮಿಮಿಲೇ, ಮಿಮಿಲಿವಹೇ, ಮಿಮಿಲಿಮಹೇ।

ಲುಟ್: ಪರಸ್ಮೈಪದದಲ್ಲಿ – ಮೇಲಿತಾ, ಮೇಲಿತಾರೌ, ಮೇಲಿತಾರಃ। ಮೇಲಿತಾಸಿ, ಮೇಲಿತಾಸ್ಥಃ, ಮೇಲಿತಾಸ್ಥ। ಮೇಲಿತಾಸ್ಮಿ, ಮೇಲಿತಾಸ್ವಃ, ಮೇಲಿತಾಸ್ಮಃ।

ಆತ್ಮನೇ ಪದದಲ್ಲಿ – ಮೇಲಿತಾ, ಮೇಲಿತಾರೌ, ಮೇಲಿತಾರಃ। ಮೇಲಿತಾಸೇ, ಮೇಲಿತಾಸಾಥೇ, ಮೇಲಿತಾಢ್ವೇ/ಮೇಲಿತಾಧ್ವೇ। ಮೇಲಿತಾಹೇ, ಮೇಲಿತಾಸ್ವಹೇ, ಮೇಲಿತಾಸ್ಮಹೇ।

ಲೃಟ್: ಪರಸ್ಮೈಪದದಲ್ಲಿ– ಮೇಲಿಷ್ಯತಿ, ಮೇಲಿಷ್ಯತಃ, ಮೇಲಿಷ್ಯನ್ತಿ। ಮೇಲಿಷ್ಯಸಿ, ಮೇಲಿಷ್ಯಥಃ, ಮೇಲಿಷ್ಯಥ। ಮೇಲಿಷ್ಯಾಮಿ, ಮೇಲಿಷ್ಯಾವಃ, ಮೇಲಿಷ್ಯಾಮಃ।

ಆತ್ಮನೇ ಪದದಲ್ಲಿ–ಮೇಲಿಷ್ಯತೇ, ಮೇಲಿಷ್ಯೇತೇ, ಮೇಲಿಷ್ಯನ್ತೇ। ಮೇಲಿಷ್ಯಸೇ, ಮೇಲಿಷ್ಯೇಥೇ, ಮೇಲಿಷ್ಯಧ್ವೇ। ಮೇಲಿಷ್ಯೇ, ಮೇಲಿಷ್ಯಾವಹೇ, ಮೇಲಿಷ್ಯಾಮಹೇ।

ಲೋಟ್: ಪರಸ್ಮೈಪದದಲ್ಲಿ– ಮಿಲತು/ಮಿಲತಾತ್, ಮಿಲತಾಮ್, ಮಿಲನ್ತು। ಮಿಲ/ಮಿಲತಾತ್, ಮಿಲತಮ್, ಮಿಲತ। ಮಿಲಾನಿ, ಮಿಲಾವ, ಮಿಲಾಮ।

ಆತ್ಮನೇ ಪದದಲ್ಲಿ –ಮಿಲತಾಮ್, ಮಿಲೇತಾಮ್, ಮಿಲನ್ತಾಮ್। ಮಿಲಸ್ವ,

ಮಿಲೇಥಾಮ್, ಮಿಲಧ್ವಮ್। ಮಿಲ್ಯೆ, ಮಿಲಾವಹೈ, ಮಿಲಾಮಹೈ।

ಲಙ್: ಪರಸ್ಮೈಪದದಲ್ಲಿ – ಅಮಿಲತ್, ಅಮಿಲತಾಮ್, ಅಮಿಲನ್। ಅಮಿಲಃ, ಅಮಿಲತಮ್, ಅಮಿಲತ। ಅಮಿಲಮ್, ಅಮಿಲಾವ, ಅಮಿಲಾಮ।

ಆತ್ಮನೇ ಪದದಲ್ಲಿ –ಅಮಿಲತ, ಅಮಿಲೇತಾಮ್, ಅಮಿಲನ್ತ।ಅಮಿಲಥಾಃ, ಅಮಿಲೇಥಾಮ್, ಅಮಿಲಧ್ವಮ್। ಅಮಿಲೇ, ಅಮಿಲಾವಹಿ, ಅಮಿಲಾಮಹಿ।

ವಿ. ಲಿಙ್: ಪರಸ್ಮೈಪದದಲ್ಲಿ – ಮಿಲೇತ್, ಮಿಲೇತಾಮ್, ಮಿಲೇಯುಃ। ಮಿಲೇಃ, ಮಿಲೇತಮ್, ಮಿಲೇತ। ಮಿಲೇಯಮ್, ಮಿಲೇವ, ಮಿಲೇಮ।

ಆತ್ಮನೇ ಪದದಲ್ಲಿ–ಮಿಲೇತ, ಮಿಲೇಯಾತಾಮ್, ಮಿಲೇರನ್। ಮಿಲೇಥಾಃ, ಮಿಲೇಯಾಥಾಮ್, ಮಿಲೇಧ್ವಮ್। ಮಿಲೇಯ, ಮಿಲೇವಹಿ, ಮಿಲೇಮಹೀ।

ಆ. ಲಿಙ್: ಪರಸ್ಮೈಪದದಲ್ಲಿ – ಮಿಲ್ಯಾತ್, ಮಿಲ್ಯಾಸ್ತಾಮ್, ಮಿಲ್ಯಾಸುಃ। ಮಿಲ್ಯಾಃ, ಮಿಲ್ಯಾಸ್ತಮ್, ಮಿಲ್ಯಾಸ್ತ। ಮಿಲ್ಯಾಸಮ್, ಮಿಲ್ಯಾಸ್ವ, ಮಿಲ್ಯಾಸ್ಮ।

ಆತ್ಮನೇ ಪದದಲ್ಲಿ–ಮೇಲಿಷೀಷ್ಟ, ಮೇಲಿಷೀಯಾಸ್ತಾಮ್, ಮೇಲಿಷೀರನ್। ಮೇಲಿಷೀಷ್ಠಾಃ, ಮೇಲಿಷೀಯಾಸ್ಥಾವ್, ಮೇಲಿಷೀಢ್ವಮ್/ಮೇಲಿಷೀಧ್ವಮ್। ಮೇಲಿಷೀಯ, ಮೇಲಿಷೀವಹಿ, ಮೇಲಿಷೀಮಹಿ।

ಲುಙ್: ಪರಸ್ಮೈಪದದಲ್ಲಿ– ಅಮೇಲೀತ್, ಅಮೇಲಿಷ್ಟಾಮ್, ಅಮೇಲಿಷುಃ। ಅಮೇಲೀಃ, ಅಮೇಲಿಷ್ಟಮ್, ಅಮೇಲಿಷ್ಟ। ಅಮೇಲಿಷಮ್, ಅಮೇಲಿಷ್ವ, ಅಮೇಲಿಷ್ಮ।

ಆತ್ಮನೇ ಪದದಲ್ಲಿ –ಅಮೇಲಿಷ್ಟ, ಅಮೇಲಿಷಾತಾಮ್, ಅಮೇಲಿಷತ। ಅಮೇಲಿಷ್ಠಾಃ, ಅಮೇಲಿಷಾಥಾಮ್, ಅಮೇಲಿಢ್ವಮ್/ಅಮೇಲಿಧ್ವಮ್। ಅಮೇಲಿಷಿ,ಅಮೇಲಿಷ್ವಹಿ, ಅಮೇಲಿಷ್ಮಹಿ।

ಲೃಙ್: ಪರಸ್ಮೈಪದದಲ್ಲಿ– ಅಮೇಲಿಷ್ಯತ್, ಅಮೇಲಿಷ್ಯತಾಮ್, ಅಮೇಲಿಷ್ಯನ್। ಅಮೇಲಿಷ್ಯಾಃ, ಅಮೇಲಿಷ್ಯತಮ್, ಅಮೇಲಿಷ್ಯತ। ಅಮೇಲಿಷ್ಯಮ್, ಅಮೇಲಿಷ್ಯಾವ, ಅಮೇಲಿಷ್ಯಾಮ।

ಆತ್ಮನೇ ಪದದಲ್ಲಿ–ಅಮೇಲಿಷ್ಯತ, ಅಮೇಲಿಷ್ಯೇತಾವ್, ಅಮೇಲಿಷ್ಯನ್ತ। ಅಮೇಲಿಷ್ಯಥಾಃ, ಅಮೇಲಿಷ್ಯೇಥಾವ್, ಅಮೇಲಿಷ್ಯಧ್ವಮ್। ಅಮೇಲಿಷ್ಯೇ, ಅಮೇಲಿಷ್ಯಾವಹಿ, ಅಮೇಲಿಷ್ಯಾಮಹಿ।

6. ಮುಚ್ಲೃ– ಮೋಚನೇ(ಬಿಟ್ಟುಬಿಡುವದು)– ಸ್ವರಿತ 'ಲೃ' ಕಾರಕ್ಕೆ 'ಇತ್' ಸಂಜ್ಞೆ ಇರುವುದರಿಂದ 'ಮುಚ್' ಮಾತ್ರ ಉಳಿಯುತ್ತದೆ. ಸ್ವರಿತೇತ್ತಾಗಿ ಇರುವುದರಿಂದ ಉಭಯಪದಿಯಾಗಿರುತ್ತದೆ. 'ಅನಿಟ್' ಆಗಿದ್ದರೂ, 'ಲಿಟ್' ನಲ್ಲಿ 'ಇಟ್' ಬರುತ್ತದೆ. 'ಲೃದಿತ್' ಆಗಿರುವುದರಿಂದ, ಪುಷಾದಿ ಗಣದಲ್ಲಿ ಪಠಿತವಾಗಿ ಇರುವುದರಿಂದ, 'ಚ್ಲಿ'ಗೆ 'ಅಙ್' ಬರುತ್ತದೆ.

**(ನುಮ್ ಆಗಮವನ್ನು ವಿಧಿಸುವ ಸೂತ್ರ)**

**ಸೂತ್ರ- 655. ಶೇ ಮುಚಾದೀನಾಮ್ (7.1.59)**

ವೃತ್ತಿ – ಮುಚ-ಲಿಪ್-ವಿದ್-ಲುಪ್-ಸಿಚ್-ಕೃತ್-ಖಿದ್-ಪಿಶಾಂ ನುಮ್ ಸ್ಯಾತ್ ಶೇ ಪರೇ। ಮುಞ್ಚತಿ, ಮುಞ್ಚತೇ। ಮೋಕ್ತಾ। ಮುಚ್ಯಾತ್। ಮುಕ್ಷೀಷ್ಟ। ಅಮುಞ್ಚತ್, ಅಮುಕ್ತ। ಅಮುಕ್ಷಾತಾಮ್।

7. ಲುಪ್ಲೃ ಛೇದನೇ। ಲುಮ್ಪತಿ, ಲುಮ್ಪತೇ। ಲೋಪ್ತಾ। ಅಲುಪತ್, ಅಲುಪ್ತ।

8. ವಿದ್ಲೃ ಲಾಭೇ। ವಿನ್ದತಿ, ವಿನ್ದತೇ। ವಿವೇದ, ವಿವಿದೇ। ವ್ಯಾಘ್ರಭೂತಿಮತೇ ಸೇಟ್। ವೇದಿತಾ। ಭಾಷ್ಯಮತೇಽನಿಟ್। ಪರಿವೇತ್ತಾ।

9. ಷಿಚ ಕ್ಷರಣೇ। ಸಿಞ್ಚತಿ। ಸಿಞ್ಚತೇ।

ಅ.ವೃ. – "ಇದಿತೋ ನುಮ್ ಧಾತೋಃ" ಎಂಬ ಸೂತ್ರದಿಂದ 'ನುಮ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– 'ಶಪ್(ಅ)' ಪ್ರತ್ಯಯವು ಪರದಲ್ಲಿದ್ದಾಗ, ಮುಚ-ಲಿಪ್-ವಿದ್-ಲುಪ್-ಸಿಚ್-ಕೃತ್-ಖಿದ್ ಮತ್ತು ಪಿಶ್ ಧಾತುಗಳಿಗೆ 'ನುಮ್(ನ್)' ಆಗಮವು ಬರುತ್ತದೆ.

ಉದಾ– ಮುಞ್ಚತಿ – 'ಮುಚ್' ಧಾತುವಿನಮೇಲೆ 'ಲಟ್' 'ಲ್' ಕಾರಕ್ಕೆ 'ತಿಪ್' ಆದೇಶ ಬಂದಮೇಲೆ 'ಶ (ಅ)' ವಿಕರಣ ಪ್ರತ್ಯಯ ಬಂದಮೇಲೆ, ಮುಚ್+ಅ+ತಿ ಎಂದಿರುತ್ತದೆ. ಪಕೃತ ಸೂತ್ರದಿಂದ 'ನುಮ್(ನ್), ಆಗಮ ಬಂದಮೇಲೆ, "ಮಿದಚೋಽನ್ತ್ಯಾತ್ ಪರಃ" ಎಂಬ ಸೂತ್ರದಿಂದ 'ಮು' ವಿನಲ್ಲಿರುವ 'ಉ' ಕಾರದ ನಂತರ 'ನ್' ಕಾರವು ಬಂದು ಮುನ್ಚ್+ಅ+ತಿ ಎಂದಿರುತ್ತದೆ. "ನಶ್ಚಾಪದಾನ್ತಸ್ಯ ಝಲಿ" ಎಂಬ ಸೂತ್ರದಿಂದ 'ನ್' ಕಾರಕ್ಕೆ ಅನುಸ್ವಾರ ಬರುತ್ತದೆ ಮತ್ತೆ "ಅನುಸ್ವಾರಸ್ಯ ಯಯಿ ಪರಸವರ್ಣಃ" ಎಂಬ ಸೂತ್ರದಿಂದ ಪರಸವರ್ಣ ಬಂದು 'ನ್' ಕಾರಕ್ಕೆ 'ಞ್'ಕಾರ ಬರುತ್ತದೆ. ಆಗ ಮುಞ್ಚ್+ಅ+ತಿ=ಮುಞ್ಚತಿ ಎಂಬ ರೂಪವು ಸಿದ್ಧವಾಗುತ್ತದೆ.

ಲಟ್: ಪರಸ್ಮೈಪದದಲ್ಲಿ– ಮುಞ್ಚತಿ, ಮುಞ್ಚತಃ, ಮುಞ್ಚನ್ತಿ। ಮುಞ್ಚಸಿ, ಮುಞ್ಚಥಃ, ಮುಞ್ಚಥ। ಮುಞ್ಚಾಮಿ, ಮುಞ್ಚಾವಃ, ಮುಞ್ಚಾಮಃ।

ಆತ್ಮನೇ ಪದದಲ್ಲಿ– ಮುಞ್ಚತೇ, ಮುಞ್ಚೇತೇ, ಮುಞ್ಚನ್ತೇ। ಮುಞ್ಚಸೇ, ಮುಞ್ಚೇಥೇ, ಮುಞ್ಚಧ್ವೇ। ಮುಞ್ಚೇ, ಮುಞ್ಚಾವಹೇ, ಜುಞ್ಚಾಮಹೇ।

ಲಿಟ್: ಪರಸ್ಮೈಪದದಲ್ಲಿ– 'ಶ(ಅ)' ವಿಕರಣ ಪ್ರತ್ಯಯವು ಬಾರದೇ ಇರುವುದರಿಂದ (ಆರ್ಧಧಾತುಕ)ವಾಗಿರುವುದರಿಂದ 'ನುಮ್(ನ್)' ಆಗಮವು ಬರುವುದಿಲ್ಲ.

ರೂಪಗಳು: ಮುಮೋಚ, ಮುಮುಚತುಃ, ಮುಮುಚುಃ। ಮುಮೋಚಿಥ, ಮುಮುಚಥುಃ, ಮುಮುಚ। ಮುಮೋಚ, ಮುಮುಚಿವ, ಮುಮುಚಿಮ।

ಆತ್ಮನೇ ಪದದಲ್ಲಿ –ಮುಮುಚೇ, ಮುಮುಚಾತೇ, ಮುಮುಚಿರೇ। ಮುಮುಚಿಷೇ,

ಮುಮುಚಾಥೇ, ಮುಮುಚಿಧ್ವೇ। ಮುಮುಚೇ, ಮುಮುಚಿವಹೇ, ಮುಮುಚಿಮಹೇ।

ಲುಟ್: ಪರಸ್ಮೈಪದದಲ್ಲಿ– ಲಘೂಪಧ ಗುಣ, ಮತ್ತು 'ಚ' ಕಾರದ ಸ್ಥಾನದಲ್ಲಿ "ಚೋಃ ಕುಃ" ಎಂಬ ಸೂತ್ರದಿಂದ ಕುತ್ವ(ಕ್) ಬರುತ್ತದೆ. ರೂಪಗಳು : ಮೋಕ್ತಾ, ಮೋಕ್ತಾರೌ, ಮೋಕ್ತಾರಃ। ಮೋಕ್ತಾಸಿ, ಮೋಕ್ತಾಸ್ಥಃ, ಮೋಕ್ತಾಸ್ಥ। ಮೋಕ್ತಾಸ್ಮಿ, ಮೋಕ್ತಾಸ್ವಃ, ಮೋಕ್ತಾಸ್ಮಃ।

ಆತ್ಮನೇ ಪದದಲ್ಲಿ –ಮೋಕ್ತಾ, ಮೋಕ್ತಾರೌ, ಮೋಕ್ತಾರಃ। ಮೋಕ್ತಾಸೇ, ಮೋಕ್ತಾಸಾಥೇ, ಮೊಕ್ತಾಧ್ವೇ। ಮೋಕ್ತಾಹೇ, ಮೋಕ್ತಾಸ್ವಹೇ, ಮೋಕ್ತಾಸ್ಮಹೇ।

ಲೃಟ್: ಪರಸ್ಮೈಪದದಲ್ಲಿ– ಉದಾ– ಮೋಕ್ಷ್ಯತಿ – 'ಮುಚ್' ಧಾತುವಿನ ನಂತರ 'ಲೃಟ್' 'ಲ್' ಕಾರಕ್ಕೆ 'ತಿ' ಆದೇಶ ಬಂದು ನಂತರ 'ಸ್ಯ' ಪ್ರತ್ಯಯವನ್ನು ಸೇರಿಸಿದಾಗ ಮುಚ್+ಸ್ಯ+ತಿ ಎಂದಿರುತ್ತದೆ. "ಪುಗನ್ತಲಘೂಪಧಸ್ಯ ಚ" ಎಂಬ ಸೂತ್ರದಿಂದ ಗುಣ ಬಂದು ಮೋಚ್+ಸ್ಯ+ತಿ ಎಂದಿರುತ್ತದೆ. "ಚೋಃ ಕುಃ" ಎಂಬ ಸೂತ್ರದಿಂದ 'ಚ್' ಕಾರಕ್ಕೆ ಕುತ್ವ(ಕ್) ಬರುತ್ತದೆ. 'ಕ್' ಕಾರದ ನಂತರ 'ಸ್ಯ'ದಲ್ಲಿ 'ಸ್' ಕಾರವಿರುವುದರಿಂದ "ಅದೇಶ ಪ್ರತ್ಯಯಯೋಃ" ಎಂಬ ಸೂತ್ರದಿಂದ ಷತ್ವ ಬಂದು ಮೋಕ್+ಷ್ಯತಿ ಎಂದಿರುತ್ತದೆ. 'ಕ್' ಮತ್ತು 'ಷ್' ವರ್ಣಗಳು ಸೇರಿ 'ಕ್ಷ್' ಆಗುತ್ತದೆ. ಆಗ ಮೋಕ್ಷ್ಯತಿ ಎಂಬ ರೂಪವು ಸಿದ್ಧವಾಗುತ್ತದೆ.

ರೂಪಗಳು – ಮೋಕ್ಷ್ಯತಿ, ಮೋಕ್ಷ್ಯತಃ, ಮೋಕ್ಷ್ಯನ್ತಿ। ಮೋಕ್ಷ್ಯಸಿ, ಮೋಕ್ಷ್ಯಥಃ, ಮೋಕ್ಷ್ಯಥ। ಮೋಕ್ಷ್ಯಾಮಿ, ಮೋಕ್ಷ್ಯಾವಃ, ಮೋಕ್ಷ್ಯಾಮಃ।

ಆತ್ಮನೇ ಪದದಲ್ಲಿ – ಮೋಕ್ಷ್ಯತೇ, ಮೋಕ್ಷ್ಯೇತೇ, ಮೋಕ್ಷ್ಯನ್ತೇ। ಮೋಕ್ಷ್ಯಸೇ, ಮೋಕ್ಷ್ಯೇಥೆ, ಮೋಕ್ಷ್ಯಧ್ವೇ। ಮೋಕ್ಷ್ಯೇ, ಮೋಕ್ಷ್ಯಾವಹೇ, ಮೋಕ್ಷ್ಯಾಮಹೇ।

ಲೋಟ್: ಪರಸ್ಮೈಪದದಲ್ಲಿ– ಮುಞ್ಚತು/ಮುಞ್ಚತಾತ್, ಮುಞ್ಚನ್ತಾಮ್, ಮುಞ್ಚನ್ತು। ಮುಞ್ಚ/ಮುಞ್ಚತಾತ್, ಮುಞ್ಚತಮ್, ಮುಞ್ಚತ। ಮುಞ್ಚಾನಿ, ಮುಞ್ಚಾವ, ಮುಞ್ಚಾಮ।

ಆತ್ಮನೇ ಪದದಲ್ಲಿ – ಮುಞ್ಚತಾಮ್, ಮುಞ್ಚೇತಾಮ್, ಮುಞ್ಚನ್ತಾಮ್। ಮುಞ್ಚಸ್ವ, ಮುಞ್ಚೇಥಾಮ್, ಮುಞ್ಚಧ್ವಮ್। ಮುಞ್ಚೈ, ಮುಞ್ಚಾವಹೈ, ಮುಞ್ಚಾಮಹೈ।

ಲಙ್: ಪರಸ್ಮೈಪದದಲ್ಲಿ– ಅಮುಞ್ಚತ್, ಅಮುಞ್ಚತಾಮ್, ಅಮುಞ್ಚನ್।ಅಮುಞ್ಚಃ, ಅಮುಞ್ಚತಮ್, ಅಮುಞ್ಚತ। ಅಮುಞ್ಚಮ್, ಅಮುಞ್ಚಾವ, ಅಮುಞ್ಚಾಮ।

ಆತ್ಮನೇ ಪದದಲ್ಲಿ –ಅಮುಞ್ಚತ, ಅಮುಞ್ಚೇತಾಮ್, ಅಮುಞ್ಚನ್ತ। ಅಮುಞ್ಚಥಾಃ, ಅಮುಞ್ಚೇಥಾಮ್, ಅಮುಞ್ಚಧ್ವಮ್। ಅಮುಞ್ಚೇ, ಅಮುಞ್ಚಾವಹಿ, ಅಮುಞ್ಚಾಮಹಿ।

ವಿ. ಲಿಙ್: ಪರಸ್ಮೈಪದದಲ್ಲಿ– ಮುಞ್ಚೇತ್, ಮುಞ್ಚೇತಾಮ್, ಮುಞ್ಚೇಯುಃ। ಮುಞ್ಚೇಃ, ಮುಞ್ಚೇತಮ್, ಮುಞ್ಚೇತ। ಮುಞ್ಚೇಯಮ್, ಮುಞ್ಚೇವ, ಮುಞ್ಚೇಮ।

ಆತ್ಮನೇ ಪದದಲ್ಲಿ–ಮುಞ್ಚೇತ, ಮುಞ್ಚೇಯಾತಾಮ್, ಮುಞ್ಚೇರನ್। ಮುಞ್ಚೇಥಾಃ, ಮುಞ್ಚೇಯಾಥಾಮ್, ಮುಞ್ಚೇಧ್ವಮ್। ಮುಞ್ಚೇಯ, ಮುಞ್ಚೇವಹಿ, ಮುಞ್ಚೇಮಹಿ।

ಆ. ಲಿಙ್: ಪರಸ್ಮೈಪದದಲ್ಲಿ– ಮುಚ್ಯಾತ್, ಮುಚ್ಯಾಸ್ತಾಮ್. ಮುಚ್ಯಾಸುಃ। ಮುಚ್ಯಾಃ, ಮುಚ್ಯಾಸ್ತಮ್, ಮುಚ್ಯಾಸ್ತ। ಮುಚ್ಯಾಸಮ್, ಮುಚ್ಯಾಸ್ವ, ಮುಚ್ಯಾಸ್ಮ।

ಆತ್ಮನೇ ಪದದಲ್ಲಿ–'ಕುತ್ವ' ಮತ್ತು 'ಸಿಯುಟ್' ನಲ್ಲಿರುವ 'ಸ್' ಕಾರಕ್ಕೆ ಷತ್ವ ಬಂದು 'ಕ್' ಮತ್ತು 'ಷ್' ಗಳು ಸೇರಿದಾಗ 'ಕ್ಷ್' ಆಗುತ್ತದೆ.

ರೂಪಗಳು–ಮುಕ್ಷೀಷ್ಟ, ಮುಕ್ಷೀಯಾಸ್ತಾವ್, ಮುಕ್ಷೀರನ್। ಮುಕ್ಷೀಷ್ಠಾಃ, ಮುಕ್ಷೀಯಾಸ್ಥಾಮ್, ಮುಕ್ಷೀಧ್ವಮ್। ಮುಕ್ಷೀಯ, ಮುಕ್ಷೀವಹಿ, ಮುಕ್ಷೀಮಹಿ।

ಲುಙ್:ಪರಸ್ಮೈಪದದಲ್ಲಿ – ಧಾತುವಿನ ನಂತರ 'ತಿಪ್', 'ಅಟ್' ಆಗಮ ಮತ್ತು 'ಚ್ಲಿ' ಗೆ "ಪುಷಾದಿದ್ಯುತಾದ್ಯ ಲೃದಿತಃ ಪರಸ್ಮೈಪದೇಷು" ಎಂಬ ಸೂತ್ರದಿಂದ 'ಅಙ್' ಬಂದು ಅಮುಚ್+ಅ+ತ್=ಅಮುಚತ್ ಎಂದು ರೂಪವಾಗುತ್ತದೆ.

ರೂಪಗಳು–ಅಮುಚತ್, ಅಮುಚತಾಮ್, ಅಮುಚನ್। ಅಮುಚಃ, ಅಮುಚತಮ್, ಅಮುಚತ। ಅಮುಚಮ್, ಅಮುಚಾವ, ಅಮುಚಾಮ।

ಆತ್ಮನೇ ಪದದಲ್ಲಿ–ಇಲ್ಲಿ 'ಅಙ್' ಬರುವದಿಲ್ಲ, ಆದರೆ ಸಿಚ್ ಬರುತ್ತದೆ. ಯಾಕೆಂದರೆ "ಪುಷಾದಿದ್ಯುತಾದ್ಯಲೃದಿತಃ ಪರಸ್ಮೈಪದೇಷು" ಎಂಬ ಸೂತ್ರವು ಪರಸ್ಮೈ ಪದದಲ್ಲಿ ಮಾತ್ರ ಬರುತ್ತದೆ. ಆದ್ದರಿಂದ ಇಲ್ಲಿ 'ಅಙ್' ಬರುವುದಿಲ್ಲ. ಅಮುಚ್+ಸ್+ತ್ ಎಂದಿದ್ದಾಗ, "ಝಲೋ ಝಲಿ" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬರುತ್ತದೆ. ಮತ್ತು 'ಚ್' ಕಾರಕ್ಕೆ ಕುತ್ವ ಬಂದು ಅಮುಕ್ತ ಎಂದು ರೂಪವಾಗುತ್ತದೆ. ಎಲ್ಲಿ ಝಲ್ ಪರದಲ್ಲಿ ಇರುವದಿಲ್ಲವೋ ಅಲ್ಲಿ 'ಸ್' ಕಾರಕ್ಕೆ ಲೋಪವು ಬರುವುದಿಲ್ಲ. ಅಲ್ಲಿ ಕುತ್ವ ಬಂದು 'ಸ್' ಕಾರಕ್ಕೆ ಷತ್ವ ಬಂದು 'ಕ್ಷ' ಎಂದಾಗಿ ಅಮುಕ್ಷಾತಾಮ್ ಎಂದು ರೂಪವಾಗುತ್ತದೆ.

ರೂಪಗಳು: ಅಮುಕ್ತ, ಅಮುಕ್ಷಾತಾಮ್, ಅಮುಕ್ಷತ। ಅಮುಕ್ಥಾಃ, ಅಮುಕ್ಷಾಥಾಮ್, ಅಮುಗ್ಧ್ವಮ್। ಅಮುಕ್ಷಿ, ಅಮುಕ್ಷ್ವಹಿ, ಅಮುಕ್ಷ್ಮಹಿ।

ಲೃಙ್: ಪರಸ್ಮೈಪದದಲ್ಲಿ–ಅಮೋಕ್ಷ್ಯತ್, ಅಮೋಕ್ಷ್ಯತಾಮ್, ಅಮೋಕ್ಷ್ಯನ್। ಅಮೋಕ್ಷ್ಯಃ, ಅಮೋಕ್ಷ್ಯತಮ್, ಅಮೋಕ್ಷ್ಯತ। ಅಮೋಕ್ಷ್ಯಮ್, ಅಮೋಕ್ಷ್ಯಾವ, ಅಮೋಕ್ಷ್ಯಾಮ।

ಆತ್ಮನೇ ಪದದಲ್ಲಿ–ಅಮೋಕ್ಷ್ಯತ, ಅಮೋಕ್ಷ್ಯೇತಾಮ್, ಅಮೋಕ್ಷ್ಯನ್ತ। ಅಮೋಕ್ಷ್ಯಥಾಃ, ಅಮೋಕ್ಷ್ಯೇಥಾವ್, ಅಮೋಕ್ಷ್ಯಧ್ವಮ್। ಅಮೋಕ್ಷ್ಯೇ, ಅಮೋಕ್ಷ್ಯಾವಹಿ, ಅಮೋಕ್ಷ್ಯಾಮಹಿ।

ಧಾತು 7. ಲುಪ್ಲೃ–ಛೇದನೇ (ಕತ್ತರಿಸುವದು)–ಸ್ವರಿತ 'ಲೃ' ಕಾರಕ್ಕೆ 'ಇತ್' ಸಂಜ್ಞೆ ಇರುವುದರಿಂದ 'ಲುಪ್' ಮಾತ್ರ ಉಳಿಯುತ್ತದೆ. ಅನಿಟ್ ಆಗಿದ್ದರೂ, ಲಿಟ್‌ನಲ್ಲಿ ಕ್ರಾದಿ ನಿಯಮದಿಂದ ಇಟ್ ಬರುತ್ತದೆ. ನಂತರ ಪ್ರಕೃತ ಸೂತ್ರದಿಂದ 'ನುಮ್(ನ್)' ಆಗಮ ಬಂದು 'ನ್' ಕಾರಕ್ಕೆ ಅನುಸ್ವಾರ ಮತ್ತು ಪರಸವರ್ಣ ಬಂದು 'ಲುಮ್ಪ್' ಎಂದಾಗುತ್ತದೆ.

ಲಟ್: ಪರಸ್ಮೈಪದದಲ್ಲಿ- ಲುಂಪತಿ, ಲುಂಪತಃ, ಲುಂಪನ್ತಿ। ಲುಂಪಸಿ, ಲುಂಪಥಃ, ಲುಂಪಥ।ಲುಂಪಾಮಿ, ಲುಂಪಾವಃ, ಲುಂಪಾಮಃ।

ಆತ್ಮನೇ ಪದದಲ್ಲಿ-ಲುಂಪತೇ, ಲುಂಪೇತೇ, ಲುಂಪನ್ತೇ। ಲುಂಪಸೇ, ಲುಂಪೇಥೇ, ಲುಮ್ಪಧ್ವೇ। ಲುಂಪೇ, ಲುಂಪಾವಹೇ, ಲುಂಪಾಮಹೇ।

ಲಿಟ್: ಪರಸ್ಮೈಪದದಲ್ಲಿ – ಲುಲೋಪ, ಲುಲುಪತುಃ, ಲುಲುಪುಃ। ಲುಲೋಪಿಥ, ಲುಲುಪಥುಃ, ಲುಲುಪ। ಲುಲೋಪ, ಲುಲುಪಿವ, ಲುಲುಪಿಮ।

ಆತ್ಮನೇ ಪದದಲ್ಲಿ –ಲುಲುಪೇ, ಲುಲುಪಾತೇ, ಲುಲುಪಿರೆ। ಲುಲುಪಿಷೇ, ಲುಲುಪಾಥೇ, ಲುಲುಪಿಧ್ವೇ। ಲುಲುಪೇ, ಲುಲುಪಿವಹೆ, ಲುಲುಪಿಮಹೇ।

ಲುಟ್: ಪರಸ್ಮೈಪದದಲ್ಲಿ- ಲೋಪ್ತಾ, ಲೋಪತಾರೌ, ಲೋಪ್ತಾರಃ। ಲೋಪ್ತಾಸಿ, ಲೋಪ್ತಾಸ್ಥಃ, ಲೋಪ್ತಾಸ್ಥ। ಲೋಪ್ತಾಸ್ಮಿ, ಲೋಪ್ತಾಸ್ವಃ, ಲೋಪ್ತಾಸ್ಮಃ।

ಆತ್ಮನೇ ಪದದಲ್ಲಿ –ಲೋಪ್ತಾ, ಲೋಪ್ತಾರೌ, ಲೋಪ್ತಾರಃ। ಲೋಪ್ತಾಸೇ, ಲೋಪ್ತಾಸಾಥೇ, ಲೋಪ್ತಾಧ್ವೇ। ಲೋಪ್ತಾಹೇ, ಲೋಪ್ತಾಸ್ವಹೇ, ಲೋಪ್ತಾಸ್ಮಹೇ।

ಲೃಟ್:ಪರಸ್ಮೈಪದದಲ್ಲಿ–ಲೋಪ್ಸ್ಯತಿ, ಲೋಪ್ಸ್ಯತಃ, ಲೋಪ್ಸ್ಯನ್ತಿ। ಲೋಪ್ಸ್ಯಸಿ, ಲೋಪ್ಸ್ಯಥಃ, ಲೋಪ್ಸ್ಯಥ। ಲೋಪ್ಸ್ಯಾಮಿ, ಲೋಪ್ಸ್ಯಾವಃ, ಲೋಪ್ಸ್ಯಾಮಃ।

ಆತ್ಮನೇ ಪದದಲ್ಲಿ–ಲೋಪ್ಸ್ಯತೇ, ಲೋಪ್ಸ್ಯೇತೇ, ಲೋಪ್ಸ್ಯನ್ತೇ। ಲೋಪ್ಸ್ಯಸೇ, ಲೋಪ್ಸ್ಯೇಥೇ, ಲೋಪ್ಸ್ಯಧ್ವೇ। ಲೋಪ್ಸ್ಯೇ, ಲೋಪ್ಸ್ಯಾವಹೇ, ಲೋಪ್ಸ್ಯಾಮಹೇ।

ಲೋಟ್: ಪರಸ್ಮೈಪದದಲ್ಲಿ – ಲುಂಪತು/ಲುಂಪತಾತ್, ಲುಂಪತಾಮ್, ಲುಂಪನ್ತು। ಲುಂಪ/ಲುಂಪತಾತ್, ಲುಂಪತಮ್, ಲುಂಪತ। ಲುಂಪಾನಿ, ಲುಂಪಾವ, ಲುಂಪಾಮ।

ಆತ್ಮನೇ ಪದದಲ್ಲಿ –ಲುಂಪತಾಮ್ ಲುಂಪೇತಾಮ್, ಲುಂಪನ್ತಾಮ್। ಲುಂಪಸ್ವ ಲುಂಪೇಥಾಮ್, ಲುಂಪಧ್ವಮ್। ಲುಂಪೈ, ಲುಂಪಾವಹೈ, ಲುಂಪಾಮಹೈ।

ಲಙ್: ಪರಸ್ಮೈಪದದಲ್ಲಿ- ಅಲುಂಪತ್, ಅಲುಂಪತಾಮ್, ಅಲುಂಪನ್। ಅಲುಂಪಃ, ಅಲುಂಪತಮ್, ಅಲುಂಪತ। ಅಲುಂಪಮ್, ಅಲುಂಪಾವ, ಅಲುಂಪಾಮ।

ಆತ್ಮನೇ ಪದದಲ್ಲಿ-ಅಲುಂಪತ, ಅಲುಂಪೇತಾಮ್, ಅಲುಂಪನ್ತ। ಅಲುಂಪಥಾಃ, ಅಲುಂಪೇಥಾಮ್, ಅಲುಂಪಧ್ವಮ್। ಅಲುಂಪೇ, ಅಲುಂಪಾವಹಿ, ಅಲುಂಪಾಮಹಿ।

ವಿ. ಲಿಙ್: ಪರಸ್ಮೈಪದದಲ್ಲಿ- ಲುಂಪೇತ್, ಲುಂಪೇತಾಮ್, ಲುಂಪೇಯುಃ। ಲುಂಪೇಃ, ಲುಂಪೇತಮ್, ಲುಂಪೇತ। ಲುಂಪೇಯಮ್, ಲುಂಪೇವ, ಲುಂಪೇಮ।

ಆತ್ಮನೇ ಪದದಲ್ಲಿ – ಲುಂಪೇತ, ಲುಂಪೇಯಾತಾಮ್, ಲುಂಪೇರನ್। ಲುಂಪೇಥಾಃ, ಲುಂಪೇಯಾಥಾಮ್, ಲುಂಪೇಧ್ವಮ್। ಲುಂಪೇಯ, ಲುಂಪೇವಹಿ, ಲುಂಪೇಮಹಿ।

ಆ. ಲಿಙ್: ಪರಸ್ಮೈಪದದಲ್ಲಿ- ಲುಂಪ್ಯಾತ್, ಲುಂಪ್ಯಾಸ್ತಾಮ್, ಲುಂಪ್ಯಾಸುಃ। ಲುಂಪ್ಯಾಃ, ಲುಂಪ್ಯಾಸ್ತಮ್, ಲುಂಪ್ಯಾಸ್ತ। ಲುಂಪ್ಯಾಸಮ್, ಲುಂಪ್ಯಾಸ್ವ, ಲುಂಪ್ಯಾಸ್ಮ।

ಆತ್ಮನೇ ಪದದಲ್ಲಿ – ಲುಂಪೀಷ್ಟ ಲುಂಪೀಯಾಸ್ತಾಮ್, ಲುಂಪೀರನ್। ಲುಂಪೀಷ್ಠಾಃ,

ಲುಂಪೀಯಾಸ್ಥಾಮ್, ಲುಂಪೀಧ್ವಮ್। ಲುಂಪೀಯ, ಲುಂಪೀವಹಿ, ಲುಂಪೀಮಹಿ।

ಲುಙ್: ಪರಸ್ಮೈಪದದಲ್ಲಿ – ಅಲುಂಪತ್, ಅಲುಂಪತಾಮ್, ಅಲುಂಪನ್। ಅಲುಂಪಃ, ಅಲುಂಪತಮ್, ಅಲುಂಪತ। ಅಲುಂಪಮ್, ಅಲುಂಪಾವ, ಅಲುಂಪಾಮ।

ಆತ್ಮನೇ ಪದದಲ್ಲಿ–ಅಲುಪ್ತ, ಅಲುಪ್ಸಾತಾವ್, ಅಲುಪ್ಸತ। ಅಲುಪ್ಥಾಃ, ಅಲುಪ್ಸಾಥಾಮ್, ಅಲುಬ್ಧ್ವಮ್। ಅಲುಪ್ಸಿ, ಅಲುಪ್ಸ್ವಹಿ, ಅಲುಪ್ಸ್ಮಹಿ।

ಲೃಙ್: ಪರಸ್ಮೈಪದದಲ್ಲಿ – ಅಲೋಪ್ಸ್ಯತ್, ಅಲೋಪ್ಸ್ಯತಾಮ್, ಅಲೋಪ್ಸ್ಯನ್। ಅಲೋಪ್ಸ್ಯಃ, ಅಲೋಪ್ಸ್ಯತಮ್, ಅಲೋಪ್ಸ್ಯತ। ಅಲೋಪ್ಸ್ಯಮ್, ಅಲೋಪ್ಸ್ಯಾವ, ಅಲೋಪ್ಸ್ಯಾಮ।

ಆತ್ಮನೇ ಪದದಲ್ಲಿ–ಅಲೋಪ್ಸ್ಯತ, ಅಲೋಪ್ಸ್ಯೇತಾಮ್, ಅಲೋಪ್ಸ್ಯನ್ತ। ಅಲೋಪ್ಸ್ಯಥಾಃ, ಅಲೋಪ್ಸ್ಯೇಥಾವ್ ಅಲೋಪ್ಸ್ಯಧ್ವಮ್। ಅಲೋಪ್ಸ್ಯೇ, ಅಲೋಪ್ಸ್ಯಾವಹಿ, ಅಲೋಪ್ಸ್ಯಾಮಹಿ।

8. ವಿದಿಲೃ– ಲಾಭೇ ( ಪಡೆಯುವದು) ಇದರಲ್ಲಿ 'ವಿದ್' ಮಾತ್ರ ಉಳಿಯುತ್ತದೆ. ಇದು ಉಭಯಪದಿ. ಇದು ಅನಿಟ್ ಆಗಿರುವುದರಿಂದ ವ್ಯಾಘ್ರಭೂತಿ ಆಚಾರ್ಯರ ಪಕ್ಷದಲ್ಲಿ 'ಸೇಟ್' ಅಗಿರುತ್ತದೆ. ಭಾಷ್ಯಕಾರರ ಪಕ್ಷದಲ್ಲಿ 'ಅನಿಟ್' ಆಗಿರುತ್ತದೆ.

ಉದಾ: ವಿನ್ದತಿ–'ವಿದ್' ಧಾತುವಿನ ಮೇಲೆ 'ಲಟ್' 'ಲ' ಕಾರಕ್ಕೆ 'ತಿಪ್' ಆದೇಶ ಬಂದಮೇಲೆ 'ಶ(ಅ)' ವಿಕರಣ ಪ್ರತ್ಯಯ ಬಂದು ಪ್ರಕೃತ ಸೂತ್ರದಿಂದ 'ನುಮ್ (ನ್)'ಆಗಮ ಬಂದಾಗ ವಿನ್ದ್+ಅ+ತಿ=ವಿನ್ದತಿ ಎಂದಾಗುತ್ತದೆ.

ಲಟ್:ಪರಸ್ಮೈಪದದಲ್ಲಿ–ವಿನ್ದತಿ, ವಿಂನ್ದತಃ, ವಿನ್ದನ್ತಿ। ವಿನ್ದಸಿ, ವಿನ್ದಥಃ, ವಿನ್ದಥ। ವಿನ್ದಾಮಿ, ವಿನ್ದಾವಃ, ವಿನ್ದಾಮಃ।

ಆತ್ಮನೇ ಪದದಲ್ಲಿ– ವಿನ್ದತೇ, ವಿನ್ದೇತೇ, ವಿನ್ದನ್ತೇ। ವಿನ್ದಸೇ, ವಿನ್ದೇಥೇ, ವಿನ್ದಧ್ವೇ। ವಿನ್ದೇ, ವಿನ್ದಾವಹೇ, ವಿನ್ದಾಮಹೇ।

ಲಿಟ್: ಪರಸ್ಮೈಪದದಲ್ಲಿ – ವಿವೇದ, ವಿವಿದತುಃ, ವಿವಿದುಃ। ವಿವೇದಿಥ, ವಿವಿದಥುಃ, ವಿವಿದ। ವಿವೇದ, ವಿವಿದಿವ, ವಿವಿದಿಮ।

ಆತ್ಮನೇ ಪದದಲ್ಲಿ–ವಿವಿದೇ, ವಿವಿದಾತೇ, ವಿವಿದಿರೇ। ವಿವಿದಿಷೇ, ವಿವಿದಾಥೇ, ವಿವಿದಿಧ್ವೇ। ವಿವಿದೇ, ವಿವಿದಾವಹೇ, ವಿವಿದಾಮಹೇ।

ಲುಟ್: ಪರಸ್ಮೈಪದದಲ್ಲಿ – ಭಾಷ್ಯಕಾರ(ಅನಿಟ್) ಪಕ್ಷದಲ್ಲಿ – ವೇತ್ತಾ, ವೇತ್ತಾರೌ, ವೇತ್ತಾರಃ। ವೇತ್ತಾಸಿ, ವೇತ್ತಾಸ್ಥಃ, ವೇತ್ತಾಸ್ಥ। ವೇತಾಸ್ಮಿ, ವೇತ್ತಾಸ್ವಃ, ವೇತ್ತಾಸ್ಮಃ।

ವ್ಯಾಘ್ರಭೂತಿ ಆಚಾರ್ಯರ (ಸೇಟ್) ಪಕ್ಷದಲ್ಲಿ – ವೇದಿತಾ, ವೇದಿತಾರೌ, ವೇದಿತಾರಃ। ವೇದಿತಾಸಿ, ವೇದಿತಾಸ್ಥಃ, ವೇದಿತಾಸ್ಥ। ವೇದಿತಾಸ್ಮಿ, ವೇದಿತಾಸ್ವಃ, ವೇದಿತಾಸ್ಮಃ।

ಆತ್ಮನೇ ಪದದಲ್ಲಿ–ಭಾಷ್ಯಕಾರ(ಅನಿಟ್) ಪಕ್ಷದಲ್ಲಿ – ವೇತ್ತಾ, ವೇತ್ತಾರೌ, ವೇತ್ತಾರಃ।

ವೇತ್ತಾಸೇ, ವೇತ್ತಾಸಾಥೇ, ವೇತ್ತಾಧ್ವೇ। ವೇತ್ತಾಹೇ, ವೇತ್ತಾಸ್ವಹೇ, ವೇತ್ತಾಸ್ಮಹೇ।

ವ್ಯಾಘ್ರಭೂತಿ ಆಚಾರ್ಯರ (ಸೇಟ್) ಪಕ್ಷದಲ್ಲಿ – ವೇದಿತಾ, ವೇದಿತಾರೌ, ವೇದಿತಾರಃ। ವೇದಿತಾಸೇ, ವೇದಿತಾಸಾಥೇ, ವೇದಿತಾಧ್ವೇ। ವೇದಿತಾಹೇ, ವೇದಿತಾಸ್ವಹೇ, ವೇದಿತಾಸ್ಮಹೇ।

ಲೃಟ್: ಪರಸ್ಮೈಪದದಲ್ಲಿ–ಭಾಷ್ಯಕಾರ (ಅನಿಟ್) ಪಕ್ಷದಲ್ಲಿ – ವೇತ್ಸ್ಯತಿ, ವೇತ್ಸ್ಯತಃ, ವೇತ್ಸ್ಯನ್ತಿ। ವೇತ್ಸ್ಯಸಿ, ವೇತ್ಸ್ಯಥಃ, ವೇತ್ಸ್ಯಥ। ವೇತ್ಸ್ಯಾಮಿ, ವೇತ್ಸ್ಯಾವಃ, ವೇತ್ಸ್ಯಾಮಃ।

ವ್ಯಾಘ್ರಭೂತಿ ಆಚಾರ್ಯರ (ಸೇಟ್) ಪಕ್ಷದಲ್ಲಿ– ವೇದಿಷ್ಯತಿ, ವೇದಿಷ್ಯತಃ, ವೇದಿಷ್ಯನ್ತಿ। ವೇದಿಷ್ಯಸಿ, ವೇದಿಷ್ಯಥಃ, ವೇದಿಷ್ಯಥ। ವೇದಿಷ್ಯಾಮಿ, ವೇದಿಷ್ಯಾವಃ, ವೇದಿಷ್ಯಾಮಃ।

ಆತ್ಮನೇ ಪದದಲ್ಲಿ –ಭಾಷ್ಯಕಾರ(ಅನಿಟ್) ಪಕ್ಷದಲ್ಲಿ – ವೇತ್ಸ್ಯತೇ, ವೇತ್ಸ್ಯೇತೇ, ವೇತ್ಸ್ಯನ್ತೇ। ವೇತ್ಸ್ಯಸೇ, ವೇತ್ಸ್ಯೇಥೇ, ವೇತ್ಸ್ಯಧ್ವೇ। ವೇತ್ಸ್ಯೇ, ವೇತ್ಸಾವಹೇ, ವೇತ್ಸ್ಯಾಮಹೇ।

ವ್ಯಾಘ್ರಭೂತಿ ಆಚಾರ್ಯರ (ಸೇಟ್) ಪಕ್ಷದಲ್ಲಿ– ವೇದಿಷ್ಯತೇ, ವೇದಿಷ್ಯೇತೇ, ವೇದಿಷ್ಯನ್ತೇ। ವೇದಿಷ್ಯಸೇ, ವೇದಿಷ್ಯೇಥೇ, ವೇದಿಷ್ಯಧ್ವೇ। ವೇದಿಷ್ಯೇ, ವೇದಿಷ್ಯಾವಹೇ, ವೇದಿಷ್ಯಾಮಹೇ।

ಲೋಟ್: ಪರಸ್ಮೈಪದದಲ್ಲಿ– ವಿನ್ದತು/ವಿನ್ದತಾತ್, ವಿನ್ದತಾಮ್, ವಿನ್ದನ್ತು। ವಿನ್ದ/ವಿನ್ದತಾತ್, ವಿನ್ದತಮ್, ವಿನ್ದತ। ವಿನ್ದಾನಿ, ವಿನ್ದಾವ, ವಿನ್ದಾಮ।

ಆತ್ಮನೇ ಪದದಲ್ಲಿ – ವಿನ್ದತಾಮ್, ವಿನ್ದೇತಾಮ್, ವಿನ್ದನ್ತಾಮ್। ವಿನ್ದಸ್ವ, ವಿನ್ದೇಥಾಮ್, ವಿನ್ದಧ್ವಮ್। ವಿನ್ದೈ, ವಿನ್ದಾವಹೈ, ವಿನ್ದಾಮಹೈ।

ಲಙ್: ಪರಸ್ಮೈಪದದಲ್ಲಿ– ಅವಿನ್ದತ್, ಅವಿನ್ದತಾಮ್, ಅವಿನ್ದದನ್। ಅವಿನ್ದಃ, ಅವಿನ್ದತಮ್, ಅವಿನ್ದತ। ಅವಿನ್ದಮ್, ಅವಿನ್ದಾವ, ಅವಿನ್ದಾಮ।

ಆತ್ಮನೇ ಪದದಲ್ಲಿ–ಅವಿನ್ದತ, ಅವಿನ್ದೇತಾವ್, ಅವಿನ್ದನ್ತ। ಅವಿನ್ದಥಾಃ, ಅವಿನ್ದೇಥಾಮ್, ಅವಿನ್ದಧ್ವಮ್।ಅವಿನ್ದೇ, ಅವಿನ್ದಾವಹಿ, ಅವಿನ್ದಾಮಹಿ।

ವಿ. ಲಿಙ್: ಪರಸ್ಮೈಪದದಲ್ಲಿ – ವಿನ್ದೇತ್, ವಿನ್ದೇತಾಮ್, ವಿನ್ದೇಯುಃ। ವಿನ್ದೇಃ, ವಿನ್ದೇತಮ್, ವಿನ್ದೇತ। ವಿನ್ದೇಯಮ್, ವಿನ್ದೇವ, ವಿನ್ದೇಮ।

ಆತ್ಮನೇ ಪದದಲ್ಲಿ–ವಿನ್ದೇತ, ವಿನ್ದೇಯಾತಾಮ್, ವಿನ್ದೇರನ್। ವಿನ್ದೇಥಾಃ, ವಿನ್ದೇಯಾಥ್ಯಾಮ್, ವಿನ್ದೇಧ್ವಮ್। ವಿನ್ದೇಯ, ವಿನ್ದೇವಹಿ, ವಿನ್ದೇಮಹಿ।

ಆ. ಲಿಙ್: ಪರಸ್ಮೈಪದದಲ್ಲಿ – ವಿದ್ಯಾತ್, ವಿದ್ಯಾಸ್ತಾಮ್, ವಿದ್ಯಾಸುಃ। ವಿದ್ಯಾಃ, ವಿದ್ಯಾಸ್ತಮ್, ವಿದ್ಯಾಸ್ತ। ವಿದ್ಯಾಸಮ್, ವಿದ್ಯಾಸ್ವ, ವಿದ್ಯಾಸ್ಮ।

ಆತ್ಮನೇ ಪದದಲ್ಲಿ–ವಿತ್ಸೀಷ್ಟ, ವಿತ್ಸೀಯಾಸ್ತಾವ್, ವಿತ್ಸೀರನ್। ವಿತ್ಸೀಷ್ಠಾಃ, ವಿತ್ಸೀಯಾಥಾಮ್, ವಿತ್ಸೀಧ್ವಮ್। ವಿತ್ಸೀಯ, ವಿತ್ಸೀವಹಿ, ವಿತ್ಸೀಮಹೀ।

ಲುಙ್: ಪರಸ್ಮೈಪದದಲ್ಲಿ– ಅವಿದತ್, ಅವಿದತಾಮ್, ಅವಿದನ್। ಅವಿದಃ, ಅವಿದತಮ್, ಅವಿದತ। ಅವಿದಮ್, ಅವಿದಾವ, ಅವಿದಾಮ।

ಆತ್ಮನೇ ಪದದಲ್ಲಿ – ಅವಿತ್ತ, ಅವಿತ್ಸಾತಾಮ್, ಅವಿತ್ಸತ। ಅವಿತ್ಥಾಃ,ಅವಿತ್ಸಾಥಾಮ್, ಅವಿಧ್ವಮ್/ಅವಿದ್‌ಧ್ವಮ್, ಅವಿತ್ಸಿ,ಅವಿತ್ಸ್ವಹಿ, ಅವಿತ್ಸ್ಮಹಿ।

ಲೃಙ್: ಪರಸ್ಮೈಪದದಲ್ಲಿ– ಅವೇತ್ಸ್ಯತ, ಅವೇತ್ಸ್ಯೇತಾಮ್, ಅವೇತ್ಸ್ಯನ್। ಅವೇತ್ಸ್ಯಃ, ಅವೇತ್ಸ್ಯತಮ್, ಅವೇತ್ಸ್ಯತ। ಅವೇತ್ಸ್ಯಮ್, ಅವೇತ್ಸ್ಯಾವ, ಅವೇತ್ಸ್ಯಾಮ।

ಆತ್ಮನೇ ಪದದಲ್ಲಿ – ಅವೇತ್ಸ್ಯತ, ಅವೇತ್ಸ್ಯೇತಾಮ್, ಅವೇತ್ಸ್ಯನ್ತ। ಅವೇತ್ಸ್ಯಥಾಃ, ಅವೇತ್ಸ್ಯೇಥಾಮ್, ಅವೇತ್ಸ್ಯಧ್ವಮ್। ಅವೇತ್ಸ್ಯೇ, ಅವೇತ್ಸ್ಯಾವಹಿ, ಅವೇತ್ಸ್ಯಾಮಹಿ।

ಉದಾ–ಪರಿವೇತ್ತಾ ಪರಿ–ಪೂರ್ವಕ 'ವಿದ್' ಧಾತುವಿನಂತರ 'ತೃಚ್(ತೃ)' ಪ್ರತ್ಯಯವನ್ನು ಸೇರಿಸಿದಾಗ, 'ಅನಿಟ್' ಅವಸ್ಥೆಯಲ್ಲಿ (ಅಣ್ಣನ ಮದುವೆಯಾಗದೇ ಇರುವಾಗ ಮದುವೇ ಮಾಡಿಕೊಂಡಿರುವ ತಮ್ಮ) 'ಪರಿವೇತ್ತಾ' ಎಂದು ಅರ್ಥ.

9. ಷಿಚ – ಕ್ಷರಣೇ (ಸಿಂಪಡಿಸುವದು)–"ಧಾತ್ವಾದೇಃ ಷಃ ಸಃ" ಎಂಬ ಸೂತ್ರದಿಂದ 'ಷ್' ಕಾರಕ್ಕೆ 'ಸ್' ಕಾರವು ಆದೇಶವಾಗಿ ಬಂದು 'ಸಿಚ' ಎಂದಿರುತ್ತದೆ. ಕೊನೆಯ 'ಅ' ಕಾರವು ಸ್ವರಿತವಾಗಿರುವುದರಿಂದ ಅದು 'ಇತ್' ಸಂಜ್ಞೆಯುಳ್ಳದ್ದಾ ಗುತ್ತದೆ. ಆಗ 'ಸಿಚ್' ಮಾತ್ರ ಉಳಿಯುತ್ತದೆ. ಇದು ಉಭಯಪದಿಯಾಗಿದೆ. ಅನುದಾತ್ತವಾಗಿ ಸ್ವೀಕರಿಸಲ್ಪಟ್ಟದ್ದರಿಂದ 'ಅನಿಟ್' ಆಗಿರುತ್ತದೆ. ಆದರೆ 'ಲಿಟ್' ನಲ್ಲಿ ಕ್ರಾದಿ ನಿಯಮದಿಂದ 'ಇಟ್' ಆಗುತ್ತದೆ. ಇದು ಮುಚಾದಿಯಲ್ಲಿರುವುದರಿಂದ ಪ್ರಕೃತ ಸೂತ್ರದಿಂದ 'ಶ(ಅ)' ಕಾರದ ಪರದಲ್ಲಿ 'ನುಮ್(ನ್)' ಆಗಮವು ಬರುತ್ತದೆ.

ಲಟ್: ಪರಸ್ಮೈಪದದಲ್ಲಿ– ಸಿಞ್ಚತಿ, ಸಿಞ್ಚತಃ, ಸಿಞ್ಚನ್ತಿ। ಸಿಞ್ಚಸಿ, ಸಿಞ್ಚಥಃ, ಸಿಞ್ಚಥ। ಸಿಞ್ಚಾಮಿ, ಸಿಞ್ಚಾವಃ. ಸಿಞ್ಚಾಮಃ।

ಆತ್ಮನೇ ಪದದಲ್ಲಿ– ಸಿಞ್ಚತೇ, ಸಿಞ್ಚೇತೇ, ಸಿಞ್ಚನ್ತೇ।ಸಿಞ್ಚಸೇ, ಸಿಞ್ಚೇಥೇ, ಸಿಞ್ಚಧ್ವೇ। ಸಿಞ್ಚೇ, ಸಿಞ್ಚಾವಹೇ, ಸಿಞ್ಚಾಮಹೇ।

ಲಿಟ್: ಪರಸ್ಮೈಪದದಲ್ಲಿ– ಸಿಷೇಚ, ಸಿಷಿಚತುಃ, ಸಿಷಿಚುಃ। ಸಿಷೇಚಿಥ. ಸಿಷಿಚಥುಃ, ಸಿಷಿಚ। ಸಿಷೇಚ, ಸಿಷಿಚಿವ, ಸಿಷಿಚಿಮ।

ಆತ್ಮನೇ ಪದದಲ್ಲಿ–ಸಿಷಿಚೇ, ಸಿಷಿಚಾತೇ, ಸಿಷಿಚಿರೇ। ಸಿಷಿಚಿಷೇ, ಸಿಷಿಚಾಥೇ, ಸಿಷಿಚಿಧ್ವೇ। ಸಿಷಿಚೇ, ಸಿಷಿಚಿವಹೇ, ಸಿಷಿಚಿಮಹೇ।

ಲುಟ್: ಪರಸ್ಮೈಪದದಲ್ಲಿ– ಸೇಕ್ತಾ, ಸೇಕ್ತಾರೌ, ಸೇಕ್ತಾರಃ। ಸೇಕ್ತಾಸಿ, ಸೇಕ್ತಾಸ್ಥಃ, ಸೇಕ್ತಾಸ್ಥ। ಸೇಕ್ತಾಸ್ಮಿ, ಸೇಕ್ತಾಸ್ವಃ, ಸೇಕ್ತಾಸ್ಮಃ।

ಆತ್ಮನೇ ಪದದಲ್ಲಿ –ಸೇಕ್ತಾ, ಸೇಕ್ತಾರೌ, ಸೇಕ್ತಾರಃ। ಸೇಕ್ತಾಸೇ, ಸೇಕ್ತಾಸಾಥೇ, ಸೇಕ್ತಾಧ್ವೇ। ಸೇಕ್ತಾಹೇ, ಸೇಕ್ತಾಸ್ವಹೇ, ಸೆಕ್ತಾಸ್ಮಹೇ।

ಲೃಟ್: ಪರಸ್ಮೈಪದದಲ್ಲಿ – ಸೇಕ್ಷ್ಯತಿ, ಸೇಕ್ಷ್ಯತಃ, ಸೇಕ್ಷ್ಯನ್ತಿ। ಸೇಕ್ಷ್ಯಸಿ, ಸೇಕ್ಷ್ಯಥಃ, ಸೇಕ್ಷ್ಯಥ। ಸೇಕ್ಷ್ಯಾಮಿ, ಸೇಕ್ಷ್ಯಾವಃ, ಸೇಕ್ಷ್ಯಾಮಃ।

ಆತ್ಮನೇ ಪದದಲ್ಲಿ –ಸೇಕ್ಷ್ಯತೇ, ಸೇಕ್ಷ್ಯೇತೇ, ಸೇಕ್ಷ್ಯನ್ತೇ। ಸೇಕ್ಷ್ಯಸೇ, ಸೇಕ್ಷ್ಯೇಥೇ, ಸೇಕ್ಷ್ಯಧ್ವೇ। ಸೇಕ್ಷ್ಯೇ, ಸೇಕ್ಷ್ಯಾವಹೇ, ಸೇಕ್ಷ್ಯಾಮಹೇ।

ಲೋಟ್: ಪರಸ್ಮೈಪದದಲ್ಲಿ-ಸಿಞ್ಚತು/ ಸಿಞ್ಚತಾತ್, ಸಿಞ್ಚತಾಮ್, ಸಿಞ್ಚನ್ತು। ಸಿಞ್ಚ/ ಸಿಞ್ಚತಾತ್, ಸಿಞ್ಚತಮ್, ಸಿಞ್ಚತ। ಸಿಞ್ಚಾನಿ, ಸಿಞ್ಚಾವ, ಸಿಞ್ಚಾಮ ।

ಆತ್ಮನೇ ಪದದಲ್ಲಿ-ಸಿಞ್ಚತಾಮ್, ಸಿಞ್ಚೇತಾಮ್, ಸಿಞ್ಚನ್ತಾಮ್। ಸಿಞ್ಚಸ್ವ, ಸಿಞ್ಚೇಥಾಮ್, ಸಿಞ್ಚಧ್ವಮ್। ಸಿಞ್ಚೈ, ಸಿಞ್ಚಾವಹೈ, ಸಿಞ್ಚಾಮಹೈ।

ಲಙ್: ಪರಸ್ಮೈಪದದಲ್ಲಿ- ಅಸಿಞ್ಚತ್, ಅಸಿಞ್ಚತಾಮ್, ಅಸಿಞ್ಚನ್। ಅಸಿಞ್ಚಃ, ಅಸಿಞ್ಚತಮ್, ಅಸಿಞ್ಚತ। ಅಸಿಞ್ಚಮ್, ಅಸಿಞ್ಚಾವ, ಅಸಿಞ್ಚಾಮ।

ಆತ್ಮನೇ ಪದದಲ್ಲಿ -ಅಸಿಞ್ಚತ, ಅಸಿಞ್ಚೇತಾಮ್, ಅಸಿಞ್ಚನ್ತ। ಅಸಿಞ್ಚಥಾಃ, ಅಸಿಞ್ಚೇಥಾಮ್, ಅಸಿಞ್ಚಧ್ವಮ್। ಅಸಿಞ್ಚೇ, ಅಸಿಞ್ಚಾವಹಿ, ಅಸಿಞ್ಚಾಮಹಿ।

ವಿ. ಲಿಙ್: ಪರಸ್ಮೈಪದದಲ್ಲಿ – ಸಿಞ್ಚೇತ್, ಸಿಞ್ಚೇತಾಮ್,ಸಿಞ್ಚೇಯುಃ। ಸಿಞ್ಚೇಃ, ಸಿಞ್ಚೇತಮ್, ಸಿಞ್ಚೇತ। ಸಿಞ್ಚೇಯಮ್, ಸಿಞ್ಚೇವ, ಸಿಞ್ಚೇಮ।

ಆತ್ಮನೇ ಪದದಲ್ಲಿ- ಸಿಞ್ಚೇತ, ಸಿಞ್ಚೇಯಾತಾಮ್, ಸಿಞ್ಚೇರನ್। ಸಿಞ್ಚೇಥಾಃ, ಸಿಞ್ಚೇಯಾಥಾಮ್, ಸಿಞ್ಚೇಧ್ವಮ್। ಸಿಞ್ಚೇಯ, ಸಿಞ್ಚೇವಹಿ, ಸಿಞ್ಚೇಮಹಿ।

ಆ. ಲಿಙ್: ಪರಸ್ಮೈಪದದಲ್ಲಿ- ಸಿಚ್ಯಾತ್, ಸಿಚ್ಯಾಸ್ತಾಮ್, ಸಿಚ್ಯಾಸುಃ। ಸಿಚ್ಯಾಃ, ಸಿಚ್ಯಾಸ್ತಮ್, ಸಿಚ್ಯಾಸ್ತ। ಸಿಚ್ಯಾಸಮ್, ಸಿಚ್ಯಾಸ್ವ, ಸಿಚ್ಯಾಸ್ಮ।

ಆತ್ಮನೇ ಪದದಲ್ಲಿ – ಸಿಕ್ಷೀಷ್ಟ, ಸಿಕ್ಷೀಯಾಸ್ತಾಮ್, ಸಿಕ್ಷೀರನ್। ಸಿಕ್ಷೀಷ್ಠಾಃ, ಸಿಕ್ಷೀಯಾಸ್ಥಾಮ್, ಸಿಕ್ಷೀಧ್ವಮ್। ಸಿಕ್ಷೀಯ, ಸಿಕ್ಷೀವಹಿ, ಸಿಕ್ಷೀಮಹಿ।

**(ಅಙ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ- 656. ಲಿಪಿ-ಸಿಚಿ ಹ್ವಶ್ಚ (3.1.53)**

ವೃತ್ತಿ – ಏಭ್ಯಃ ಚ್ಲೇಃ ಅಙ್ ಸ್ಯಾತ್ । ಅಸಿಚತ್।

ಪ.ಛೇ.– ಲಿಪಿ-ಸಿಚಿ, ಹ್ವಃ, ಚ।

ಅ.ವೃ. – "ಚ್ಲೇಃ ಸಿಚ್" ಎಂಬ ಸೂತ್ರದಿಂದ 'ಚ್ಲೇಃ' ಎಂಬ ಪದವೂ, "ಅಸ್ಯತಿ-ವಕ್ತಿ-ಖ್ಯಾತಿಭ್ಯೋಽಙ್" ಎಂಬ ಸೂತ್ರದಿಂದ 'ಅಙ್' ಎಂಬ ಪದವೂ "ಣಿ-ಶ್ರಿ-ದ್ರು-ಸ್ರುಭ್ಯಃ ಕರ್ತರಿ ಚಙ್" ಎಂಬ ಸೂತ್ರದಿಂದ 'ಕರ್ತರಿ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ – 'ಲಿಪ್, ಸಿಚ್ ಮತ್ತು ಹ್ವೇ ಈ ಧಾತುಗಳ ಪರದಲ್ಲಿ ಇರುವ 'ಚ್ಲಿ' ಗೆ 'ಅಙ್' ಆದೇಶವು ಬರುತ್ತದೆ.

ವಿವರಣೆ: ಈ ಧಾತುಗಳ ಪರದಲ್ಲಿರುವ 'ಚ್ಲಿ' ಗೆ 'ಅಙ್' ಆದೇಶವು ಬರುತ್ತಿದ್ದಿಲ್ಲ. ಅದುದರಿಂದ ಔತ್ಸರ್ಗಿಕ 'ಸಿಚ್' ಆದೇಶವು ಪ್ರಾಪ್ತವಾಗುವುದಿತ್ತು. ಇದನ್ನು ಬಾಧಿಸಿ ಪ್ರಕೃತ ಸೂತ್ರದಿಂದ 'ಅಙ್' ಆದೇಶವು ಬಂದಿದೆ. ಈ ಆದೇಶವು ಪರಸ್ಮೈ ಪದದಲ್ಲಿ ಈ ಸೂತ್ರದಿಂದ ನಿತ್ಯವಾಗಿ ಬರುತ್ತದೆ. ಆತ್ಮನೇ ಪದದಲ್ಲಿ ಮುಂದಿನ ಸೂತ್ರದಿಂದ ವಿಕಲ್ಪವಾಗಿ ಬರುತ್ತದೆ.

ಉದಾ– ಅಸಿಚತ್ – 'ಸಿಚ್' ಧಾತುವಿನ ಪರದಲ್ಲಿ 'ಲುಙ್' ಬಂದು ಅದಕ್ಕೆ 'ತಿಪ್' ಆದೇಶ, ನಂತರ 'ಅಟ್' ಆಗಮ, ನಂತರ 'ಚ್ಲಿ' ಇದ್ದಾಗ ಪ್ರಕೃತ ಸೂತ್ರದಿಂದ 'ಅಙ್' ಆದೇಶ ಬಂದು ಅಸಿಚತ್ ಎಂದು ರೂಪವಾಗುತ್ತದೆ.

ಲುಙ್: ಪರಸ್ಮೈಪದದಲ್ಲಿ–ಅಸಿಚತ್, ಅಸಿಚತಾಮ್, ಅಸಿಚನ್। ಅಸಿಚಃ, ಅಸಿಚತಮ್, ಅಸಿಚತ। ಅಸಿಚಮ್, ಅಸಿಚಾವ, ಅಸಿಚಾಮ।

**(ವೈಕಲ್ಪಿಕ ಅಙ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ– 657. ಆತ್ಮನೇಪದೇಷ್ವನ್ಯತರಸ್ಯಾಮ್ ( 3.1.54)**

ವೃತ್ತಿ – ಲಿಪಿ–ಸಿಚಿ–ಹ್ವಃ ಪರಸ್ಯ ಚ್ಲೇಃ ಅಙ್ ವಾ ಸ್ಯಾತ್ ತಙಿ। ಅಸಿಚತ। ಅಸಿಕ್ತ।

10. ಲಿಪ ಉಪದೇಹೇ। ಉಪದೇಹೇ – ವೃದ್ಧಿಃ। ಲಿಮ್ಪತಿ, ಲಿಮ್ಪತೇ। ಲೇಪ್ತಾ। ಅಲಿಪತ್।, ಅಲಿಪತ, ಅಲಿಪ್ತ। ಇತಿ ಉಭಯಪದಿನಃ।

11. ಕೃತಿ ಛೇದನೇ। ಕೃನ್ತತಿ। ಚಕರ್ತ। ಕರ್ತಿತಾ। ಕರ್ತಿಷ್ಯತಿ। ಕರ್ತ್ಸ್ಯತಿ। ಅಕರ್ತೀತ್।

12. ಖಿದ ಪರಿಘಾತೇ। ಖಿನ್ದತಿ। ಚಿಖೇದ। ಖೇತ್ತಾ।

13. ಪಿಶ ಅವಯವೇ।ಪಿಂಶತಿ। ಪೇಶಿತಾ।

14. ಓವ್ರಶ್ಚೂ ಛೇದನೇ। ವೃಶ್ಚತಿ। ವವ್ರಶ್ಚ। ವವ್ರಶ್ಚಿಥ, ವವ್ರಷ್ಠ। ವ್ರಶ್ಚಿತಾ, ವ್ರಷ್ಟಾ। ವ್ರಶ್ಚಿಷ್ಯತಿ। ವ್ರಕ್ಷ್ಯತಿ। ವ್ರಶ್ಚ್ಯಾತ್। ಅವ್ರಶ್ಚೀತ್, ಅವ್ರಾಕ್ಷೀತ್।

15. ವ್ಯಚ ವ್ಯಾಜೀಕರಣೇ। ವಿಚತಿ। ವಿವ್ಯಾಚ। ವಿವಿಚತುಃ। ವ್ಯಚಿತಾ। ವ್ಯಚಿಷ್ಯತಿ। ವಿಚ್ಯಾತ್। ಅವ್ಯಾಚೀತ್, ಅವ್ಯಚೀತ್। ವ್ಯಚೇಃ ಕುಟಾದಿತ್ವಮನಸಿ ಇತಿ ತು ನೇಹ ಪ್ರವರ್ತತೇ, ಅನಸೀತಿ ಪರ್ಯುದಾಸೇನ ಕೃನ್ಮಾತ್ರವಿಷಯತ್ವಾತ್। ಉಛಿ।

16. ಉಞ್ಛೇ।ಉಞ್ಛತಿ। ಉಞ್ಛಃ ಕಣಶ ಆದಾನಂ ಕಣಿಶಾದ್ಯರ್ಜನಮ್ ಶೀಲಮ್ ಇತಿ ಯಾದವಃ।

17. ಋಚ್ಛ ಗತೀನ್ದ್ರಿಯಪ್ರಲಯಮೂರ್ತಿಭಾವೇಷು । ಋಚ್ಛತಿ।(614) ಋಚ್ಛತ್ಯೄತಾಮಿತಿ ಗುಣಃ। ದ್ವಿಹಲ್ ಗ್ರಹಣಸ್ಯ ಅನೇಕಹಲ್ ಉಪಲಕ್ಷಣತ್ವಾತ್ ನುಟ್। ಆನರ್ಚ್ಛ। ಆನರ್ಚ್ಛತುಃ। ಋಚ್ಛಿತಾ।

18. ಉಙ್ಝ ಉತ್ಸರ್ಗೇ। ಉಜ್ಝತಿ।

19. ಲುಭ ವಿಮೋಹನೇ। ಲುಭತಿ।

ಪ.ಛೇ.– ಆತ್ಮನೇಪದೇಷು, ಅನ್ಯತರಸ್ಯಾಮ್।

ಅ.ವೃ. – "ಚ್ಲೇಃ ಸಿಚ್" ಎಂಬ ಸೂತ್ರದಿಂದ 'ಚ್ಲೇಃ' ಎಂಬ ಪದವೂ, "ಅಸ್ಯತಿ–ವಕ್ತಿ–ಖ್ಯಾತಿಭ್ಯೋಽಙ್" ಎಂಬ ಸೂತ್ರದಿಂದ 'ಅಙ್' ಎಂಬ ಪದವೂ "ಣಿ–ಶ್ರಿ–ದ್ರು–ಸ್ರುಭ್ಯಃ ಕರ್ತರಿ ಚಙ್" ಎಂಬ ಸೂತ್ರದಿಂದ 'ಕರ್ತರಿ' ಎಂಬ ಪದವೂ, "ಲಿಪಿ–ಸಿಚಿ–ಹ್ವಶ್ಚ" ಎಂಬ ಸೂತ್ರದಿಂದ ಲಿಪಿ, ಸಿಚಿ, ಹ್ವಃ ಎಂಬ ಪದಗಳು ಅನುವೃತವಾಗುತ್ತವೆ.

ಅರ್ಥ- ಲಿಪ್, ಸಿಚ್, ಮತ್ತು ಹ್ವೇ ಧಾತುಗಳ ಪರದಲ್ಲಿ ಇರುವ 'ಚ್ಲಿ' ಗೆ ವಿಕಲ್ಪದಿಂದ 'ಅಙ್' ಆದೇಶವು ಬರುತ್ತದೆ- ಆತ್ಮನೇಪದದ ಪ್ರತ್ಯಯವು ಪರದಲ್ಲಿದ್ದಾಗ.

ಗಮನಕ್ಕೆ: ಆತ್ಮನೇ ಪದದ 'ಲುಙ್' 'ಲ್' ಕಾರದಲ್ಲಿ, 'ಚ್ಲಿ'ಗೆ "ಆತ್ಮನೇಪದೇ-ಷ್ವನ್ಯತರಸ್ಯಾಮ್" ಎಂಬ ಸೂತ್ರದಿಂದ 'ಅಙ್' ಬಂದ ಪಕ್ಷದಲ್ಲಿ 'ಅಸಿಚತ' ಎಂದು ರೂಪವಾಗುತ್ತದೆ. 'ಅಙ್' ಬಾರದ ಪಕ್ಷದಲ್ಲಿ "ಝಲೋಝಲಿ" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬಂದು , "ಚೋಃ ಕುಃ" ಎಂಬ ಸೂತ್ರದಿಂದ 'ಚ್' ಕಾರಕ್ಕೆ ಕುತ್ವ ಬಂದು 'ಅಸಿಕ್ತ' ಎಂದು ರೂಪವಾಗುತ್ತದೆ. ಎಲ್ಲಿ 'ಝಲ್' ಪರದಲ್ಲಿ ಇರುವದಿಲ್ಲವೋ ಅಲ್ಲಿ 'ಸ್' ಕಾರಕ್ಕೆ ಲೋಪವೂ ಬರುವದಿಲ್ಲ ಮತ್ತು ಕುತ್ವವೂ ಬರುವುದಿಲ್ಲ.

ಆತ್ಮನೇ ಪದದಲ್ಲಿ (ಅಙ್ ಬಂದ ಪಕ್ಷ)- ಅಸಿಚತ, ಅಸಿಚೇತಾಮ್, ಅಸಿಚನ್ತ। ಅಸಿಚಥಾಃ, ಅಸಿಚೇಥಾಮ್, ಅಸಿಚಧ್ವಮ್। ಅಸಿಚೇ, ಅಸಿಚಾವಹಿ, ಅಸಿಚಾಮಹಿ।

ಅಙ್ ಬಾರದ ಪಕ್ಷ - ಅಸಿಕ್ತ, ಅಸಿಕ್ಷಾತಾಮ್, ಅಸಿಕ್ಷತ। ಅಸಿಕ್ಥಾಃ, ಅಸಿಕ್ಷಾಥಾಮ್, ಅಸಿಗ್ಧ್ವಮ್। ಅಸಿಕ್ಷಿ, ಅಸಿಕ್ಷ್ವಹಿ, ಅಸಿಕ್ಷ್ಮಹಿ।

ಲೃಙ್: ಪರಸ್ಮೈಪದದಲ್ಲಿ- ಅಸೇಕ್ಷ್ಯತ್, ಅಸೇಕ್ಷ್ಯತಾಮ್, ಅಸೇಕ್ಷ್ಯನ್। ಅಸೇಕ್ಷ್ಯಃ, ಅಸೇಕ್ಷ್ಯತಮ್, ಅಸೇಕ್ಷ್ಯತ। ಅಸೇಕ್ಷ್ಯಮ್, ಅಸೇಕ್ಷ್ಯಾವ, ಅಸೇಕ್ಷ್ಯಾಮ।

ಆತ್ಮನೇ ಪದದಲ್ಲಿ -ಅಸೇಕ್ಷ್ಯತ, ಅಸೇಕ್ಷ್ಯೇತಾಮ್, ಅಸೇಕ್ಷ್ಯನ್ತ। ಅಸೇಕ್ಷ್ಯಥಾಃ, ಅಸೇಕ್ಷ್ಯೇಥಾಮ್, ಅಸೇಕ್ಷ್ಯಧ್ವಮ್। ಅಸೇಕ್ಷ್ಯೇ, ಅಸೇಕ್ಷ್ಯಾವಹಿ, ಅಸೇಕ್ಷ್ಯಾಮಹಿ।

10. ಲಿಪ ಉಪದೇಹೇ (ಲೇಪನಾದಿಗಳಿಂದ ದಪ್ಪವಾಗುವದು/ವೃದ್ಧಿ ಹೊಂದುವದು) -ಇದರಲ್ಲಿ 'ಲಿಪ್' ಮಾತ್ರ ಉಳಿಯುತ್ತದೆ. ಸ್ವರಿತೇತ್ತಾಗಿ ಇರುವುದರಿಂದ, ಉಭಯಪದಿಯಾಗಿರುತ್ತದೆ. ಇದು 'ಅನಿಟ್' ಆದರೂ, ಕ್ರಾದಿ ನಿಯಮದಿಂದ 'ಇಟ್' ಆಗುತ್ತದೆ. ಇದು ಮುಚಾದಿಯಲ್ಲಿರುವುದರಿಂದ 'ನುಮ್' ಆಗಮವು ಬರುತ್ತದೆ.

ಲಟ್: ಪರಸ್ಮೈಪದದಲ್ಲಿ- ಲಿಂಪತಿ, ಲಿಂಪತಃ, ಲಿಂಪನ್ತಿ। ಲಿಂಪಸಿ. ಲಿಂಪಥಃ, ಲಿಂಪಥ। ಲಿಂಪಾಮಿ, ಲಿಂಪಾವಃ, ಲಿಂಪಾಮಃ।

ಆತ್ಮನೇ ಪದದಲ್ಲಿ - ಲಿಂಪತೇ, ಲಿಂಪೇತೇ, ಲಿಂಪನ್ತೇ। ಲಿಂಪಸೇ, ಲಿಂಪೇಥೇ, ಲಿಂಪಧ್ವೇ। ಲಿಂಪೇ, ಲಿಂಪಾವಹೇ, ಲಿಂಪಾಮಹೇ।

ಲಿಟ್: ಪರಸ್ಮೈಪದದಲ್ಲಿ- ಲಿಲೇಪ, ಲಿಲಿಪತುಃ, ಲಿಲಿಲಿಪುಃ। ಲಿಲೇಪಿಥ, ಲಿಲಿಪಥುಃ, ಲಿಲಿಪ। ಲಿಲೇಪ, ಲಿಲಿಪಿವ, ಲಿಲಿಪಿಮ।

ಆತ್ಮನೇ ಪದದಲ್ಲಿ - ಲಿಲಿಪೇ, ಲಿಲಿಪಾತೇ, ಲಿಲಿಪಿರೇ। ಲಿಲಿಪಿಷೇ, ಲಿಲಿಪಾಥೇ, ಲಿಲಿಪಿಧ್ವೇ। ಲಿಲಿಪೇ, ಲಿಲಿಪಿವಹೇ, ಲಿಲಿಪಿಮಹೇ।

ಲುಟ್: ಪರಸ್ಮೈಪದದಲ್ಲಿ- ಲೇಪ್ತಾ, ಲೇಪ್ತಾರೌ, ಲೇಪ್ತಾರಃ। ಲೇಪ್ತಾಸಿ, ಲೇಪ್ತಾಸ್ಥಃ, ಲೇಪ್ತಾಸ್ಥ। ಲೇಪ್ತಾಸ್ಮಿ, ಲೇಪ್ತಾಸ್ವಃ, ಲೇಪ್ತಾಸ್ಮಃ।

ಆತ್ಮನೇ ಪದದಲ್ಲಿ – ಲೇಪ್ತಾ, ಲೇಪ್ತಾರೌ, ಲೇಪ್ತಾರಃ। ಲೇಪ್ತಾಸೇ, ಲೇಪ್ತಾಸಾಥೇ, ಲೇಪ್ತಾಧ್ವೇ। ಲೇಪ್ತಾಹೇ, ಲೇಪ್ತಾಸ್ವಹೇ, ಲೇಪ್ತಾಸ್ಮಹೇ।

ಲೃಟ್: ಪರಸ್ಮೈಪದದಲ್ಲಿ– ಲೇಪ್ಸ್ಯತಿ, ಲೇಪ್ಸ್ಯತಃ, ಲೇಪ್ಸ್ಯನ್ತಿ। ಲೇಪ್ಸ್ಯಸಿ, ಲೇಪ್ಸ್ಯಥಃ, ಲೇಪ್ಸ್ಯಥ। ಲೇಪ್ಸ್ಯಾಮಿ, ಲೇಪ್ಸ್ಯಾವಃ, ಲೇಪ್ಸ್ಯಾಮಃ।

ಆತ್ಮನೇ ಪದದಲ್ಲಿ – ಲೇಪ್ಸ್ಯತೇ, ಲೇಪ್ಸ್ಯೇತೇ, ಲೇಪ್ಸ್ಯನ್ತೇ। ಲೇಪ್ಸ್ಯಸೇ, ಲೇಪ್ಸ್ಯೇಥೇ, ಲೇಪ್ಸ್ಯಧ್ವೇ। ಲೇಪ್ಸ್ಯೇ, ಲೇಪ್ಸ್ಯಾವಹೇ, ಲೇಪ್ಸ್ಯಾಮಹೇ।

ಲೋಟ್: ಪರಸ್ಮೈಪದದಲ್ಲಿ – ಲಿಂಪತು/ಲಿಂಪತಾತ್, ಲಿಂಪತಾಮ್, ಲಿಂಪಂತು। ಲಿಂಪ/ಲಿಂಪತಾತ್ ಲಿಂಪತಮ್, ಲಿಂಪತ। ಲಿಂಪಾನಿ, ಲಿಂಪಾವ, ಲಿಂಪಾಮ।

ಆತ್ಮನೇ ಪದದಲ್ಲಿ –ಲಿಂಪತಾಮ್, ಲಿಂಪೇತಾಮ್, ಲಿಂಪಂತಾಮ್। ಲಿಂಪಸ್ವ, ಲಿಂಪೇಥಾಮ್, ಲಿಂಪಧ್ವಮ್। ಲಿಂಪೈ, ಲಿಂಪಾವಹೈ, ಲಿಂಪಾಮಹೈ।

ಲಙ್: ಪರಸ್ಮೈಪದದಲ್ಲಿ – ಅಲಿಂಪತ್, ಅಲಿಂಪತಾಮ್, ಅಲಿಂಪನ್। ಅಲಿಂಪಃ, ಅಲಿಂಪತಮ್, ಅಲಿಂಪತ। ಅಲಿಂಪಮ್, ಅಲಿಂಪಾವ, ಅಲಿಂಪಾಮ।

ಆತ್ಮನೇ ಪದದಲ್ಲಿ – ಅಲಿಂಪತ, ಅಲಿಂಪೇತಾಮ್, ಅಲಿಂಪಂತ। ಅಲಿಂಪಥಾಃ, ಅಲಿಂಪೇಥಾಮ್, ಅಲಿಂಪಧ್ವಮ್। ಅಲಿಂಪೇ, ಅಲಿಂಪಾವಹಿ, ಅಲಿಂಪಾಮಹಿ।

ವಿ. ಲಿಙ್: ಪರಸ್ಮೈಪದದಲ್ಲಿ – ಲಿಂಪೇತ್, ಲಿಂಪೇತಾಮ್, ಲಿಂಪೇಯುಃ। ಲಿಂಪೇಃ, ಲಿಂಪೇತಮ್, ಲಿಂಪೇತ। ಲಿಂಪೇಯಮ್, ಲಿಂಪೇವ, ಲಿಂಪೇಮ।

ಆತ್ಮನೇ ಪದದಲ್ಲಿ – ಲಿಂಪೇತ, ಲಿಂಪೇಯಾತಾಮ್, ಲಿಂಪೇರನ್। ಲಿಂಪೇಥಾಃ, ಲಿಂಪೇಯಾಥಾಮ್, ಲಿಂಪೇಧ್ವಮ್। ಲಿಂಪೇಯ, ಲಿಂಪೇವಹಿ, ಲಿಂಪೇಮಹಿ।

ಆ. ಲಿಙ್: ಪರಸ್ಮೈಪದದಲ್ಲಿ – ಲಿಪ್ಯಾತ್, ಲಿಪ್ಯಾಸ್ತಾಮ್, ಲಿಪ್ಯಾಸುಃ। ಲಿಪ್ಯಾಃ, ಲಿಪ್ಯಾಸ್ತಮ್, ಲಿಪ್ಯಾಸ್ತ। ಲಿಪ್ಯಾಸಮ್, ಲಿಪ್ಯಾಸ್ವ, ಲಿಪ್ಯಾಸ್ಮ।

ಆತ್ಮನೇ ಪದದಲ್ಲಿ – ಲಿಪ್ಸೀಷ್ಟ, ಲಿಪ್ಸೀಯಾಸ್ತಾಮ್, ಲಿಪ್ಸೀರನ್। ಲಿಪ್ಸೀಷ್ಠಾಃ, ಲಿಪ್ಸೀಯಾಸ್ಥಾಮ್, ಲಿಪ್ಸೀಧ್ವಮ್। ಲಿಪ್ಸೀಯ, ಲಿಪ್ಸೀವಹಿ, ಲಿಪ್ಸೀಮಹಿ।

ಲುಙ್: ಪರಸ್ಮೈಪದದಲ್ಲಿ– ಅಲಿಪತ್, ಅಲಿಪತಾಮ್, ಅಲಿಪನ್। ಅಲಿಪಃ, ಅಲಿಪತಮ್, ಅಲಿಪತ। ಅಲಿಪಮ್, ಅಲಿಪಾವ, ಅಲಿಪಾಮ।

ಆತ್ಮನೇ ಪದದಲ್ಲಿ : (ಅಙ್ ಬಂದ ಪಕ್ಷ)– ಅಲಿಪತ, ಅಲಿಪೇತಾಮ್, ಅಲಿಪನ್ತ। ಅಲಿಪಥಾಃ, ಅಲಿಪೇಥಾಮ್, ಅಲಿಪಧ್ವಮ್। ಅಲಿಪೇ, ಅಲಿಪಾವಹಿ, ಅಲಿಪಾಮಹಿ।

ಅಙ್ ಬಾರದ ಪಕ್ಷದಲ್ಲಿ– ಅಲಿಪ್ತ, ಅಲಿಪಾತಾಮ್, ಅಲಿಪತ। ಅಲಿಪ್ಥಾಃ, ಅಲಿಪಾಥಾಮ್, ಅಲಿಬ್ಧ್ವಮ್। ಅಲಿಪ್ಸಿ, ಅಲಿಪ್ಸ್ವಹಿ, ಅಲಿಪ್ಸ್ಮಹಿ।

ಲೃಙ್: ಪರಸ್ಮೈಪದದಲ್ಲಿ–ಅಲೇಪ್ಸ್ಯತ್, ಅಲೇಪ್ಸ್ಯತಾಮ್, ಅಲೇಪ್ಸ್ಯನ್। ಅಲೇಪ್ಸ್ಯಃ, ಅಲೇಪ್ಸ್ಯತಮ್, ಅಲೇಪ್ಸ್ಯತ। ಅಲೇಪ್ಸ್ಯಮ್, ಅಲೇಪ್ಸ್ಯಾವ, ಅಲೇಪ್ಸ್ಯಾಮ।

ಆತ್ಮನೇ ಪದದಲ್ಲಿ –ಅಲೇಪ್ಸ್ಯತ, ಅಲೇಪ್ಸ್ಯೇತಾಮ್, ಅಲೇಪ್ಸ್ಯನ್ತ। ಅಲೇಪ್ಸ್ಯಥಾಃ,

ಅಲೇಪ್ಸ್ಯೇಥಾಮ್, ಅಲೇಪ್ಸ್ಯಧ್ವಮ್। ಅಲೇಪ್ಸ್ಯೇ, ಅಲೇಪ್ಸ್ಯಾವಹಿ, ಅಲೇಪ್ಸ್ಯಾಮಹಿ।

**ಇಲ್ಲಿಗೆ ಉಭಯಪದಿ ಧಾತುಗಳ ರೂಪಗಳು ಮುಗಿದವು.**

**ಕೇವಲ ಪರಸ್ಮೈಪದಿ ಧಾತುಗಳು**

ಧಾತು 11. ಕೃತೀ ಛೇದನೇ( ಕತ್ತರಿಸುವದು ) – ಇದರಲ್ಲಿ 'ಕೃತ್' ಮಾತ್ರ ಉಳಿಯುತ್ತದೆ. ಇದು 'ಈತ್' ಇತ್ ಆಗಿರುವುದರಿಂದ ಕೃದನ್ತದಲ್ಲಿ "ಶ್ವೀದಿತೋ ನಿಷ್ಠಾಯಾಮ್" ಎಂಬ ಸೂತ್ರದಿಂದ 'ಇಟ್' ಗೆ ನಿಷೇಧ ಮೊದಲಾದವು ಬರುತ್ತವೆ. ಮುಚಾದಿಯಲ್ಲಿರುವುದರಿಂದ ಇದರಿಂದಲೂ ನುಮ್(ನ್) ಆಗಮ ಬರುತ್ತದೆ. ಅನುದಾತ್ತದಲ್ಲಿ ಪರಿಗಣಿತವಾಗಿಲ್ಲದಿರುವುದರಿಂದ ಇದು 'ಸೇಟ್' ಆಗಿರುತ್ತದೆ. ಈ ಧಾತುವಿನಲ್ಲಿ 'ಸಿಚ್' ಭಿನ್ನವಾದ 'ಸ್' ಕಾರಾದಿ ಆರ್ಧಧಾತುಕ 'ಸ್ಯ' ಪ್ರತ್ಯಯವು ಪರದಲ್ಲಿರುವುದರಿಂದ "ಸೋಽಸಿಚಿ-ಕೃತ-ಚೃತ-ಚ್ಛೃತ-ತೃದ-ನೃತಃ" ಎಂಬ ಸೂತ್ರದಿಂದ 'ಇಟ್' ವಿಕಲ್ಪವಾಗಿ ಬರುತ್ತದೆ.

**ಪರಸ್ಮೈಪದಿ ಧಾತುಗಳ ರೂಪಗಳು**

ಲಟ್: ಕೃನ್ತತಿ, ಕೃನ್ತತಃ, ಕೃನ್ತನ್ತಿ। ಕೃನ್ತಸಿ, ಕೃನ್ತಥಃ, ಕೃನ್ತಥ। ಕೃನ್ತಾಮಿ, ಕೃನ್ತಾವಃ, ಕೃನ್ತಾಮಃ।

ಲಿಟ್: ಚಕರ್ತ, ಚಕೃತತುಃ, ಚಕೃತುಃ। ಚಕರ್ತಿಥ, ಚಕೃತಥುಃ, ಚಕೃತ। ಚಕರ್ತ, ಚಕೃತಿವ, ಚಕೃತಿಮ।

ಲುಟ್: ಕರ್ತಿತಾ, ಕರ್ತಿತಾರೌ, ಕರ್ತಿತಾರಃ। ಕರ್ತಿತಾಸಿ, ಕರ್ತಿತಾಸ್ಥಃ, ಕರ್ತಿತಾಸ್ಥ। ಕರ್ತಿತಾಸ್ಮಿ, ಕರ್ತಿತಾಸ್ವಃ, ಕರ್ತಿತಾಸ್ಮಃ।

ಲೃಟ್: ಕರ್ತಿಷ್ಯತಿ, ಕರ್ತಿಷ್ಯತಃ, ಕರ್ತಿಷ್ಯನ್ತಿ। ಕರ್ತಿಷ್ಯಸಿ, ಕರ್ತಿಷ್ಯಥಃ, ಕರ್ತಿಷ್ಯಥ। ಕರ್ತಿಷ್ಯಾಮಿ, ಕರ್ತಿಷ್ಯಾವಃ, ಕರ್ತಿಷ್ಯಾಮಃ।

ವಿಕಲ್ಪ ಪಕ್ಷ– "ಸೋಽಸಿಚಿ-ಕೃತ-ಚೃತ-ಚ್ಛೃತ-ತೃದ-ನೃತಃ" ಎಂಬ ಸೂತ್ರದಿಂದ 'ಇಟ್' ವಿಕಲ್ಪವಾಗಿ ಬಂದು, ಕರ್ತ್ಸ್ಯತಿ, ಕರ್ತ್ಸ್ಯತಃ, ಕರ್ತ್ಸ್ಯನ್ತಿ। ಕರ್ತ್ಸ್ಯಸಿ, ಕರ್ತ್ಸ್ಯಥಃ, ಕರ್ತ್ಸ್ಯಥ। ಕರ್ತ್ಸ್ಯಾಮಿ, ಕರ್ತ್ಸ್ಯಾವಃ, ಕರ್ತ್ಸ್ಯಾಮಃ। ಎಂದು ರೂಪಗಳಾಗುತ್ತವೆ.

ಲೋಟ್: ಕೃನ್ತತು/ಕೃನ್ತತಾತ್, ಕೃನ್ತತಾಮ್, ಕೃನ್ತನ್ತು। ಕೃನ್ತ/ಕೃನ್ತತಾತ್, ಕೃನ್ತತಮ್, ಕೃನ್ತತ। ಕೃನ್ತಾನಿ, ಕೃನ್ತಾವ, ಕೃನ್ತಾಮ।

ಲಙ್: ಅಕೃನ್ತತ್, ಅಕೃನ್ತತಾಮ್, ಅಕೃನ್ತನ್। ಅಕೃನ್ತಃ, ಅಕೃನ್ತತಮ್, ಅಕೃನ್ತತ। ಅಕೃನ್ತಮ್, ಅಕೃನ್ತಾವ, ಅಕೃನ್ತಾಮ।

ವಿ. ಲಿಙ್: ಕೃನ್ತೇತ್, ಕೃನ್ತೇತಾಮ್, ಕೃನ್ತೇಯುಃ। ಕೃನ್ತೇಃ, ಕೃನ್ತೇತಮ್, ಕೃನ್ತೇತ। ಕೃನ್ತೇಯಮ್, ಕೃನ್ತೇವ, ಕೃನ್ತೇಮ।

ಆ. ಲಿಙ್: ಕೃತ್ಯಾತ್, ಕೃತ್ಯಾಸ್ತಾಮ್, ಕೃತ್ಯಾಸುಃ। ಕೃತ್ಯಾಃ, ಕೃತ್ಯಾಸ್ತಮ್, ಕೃತ್ಯಾಸ್ತ। ಕೃತ್ಯಾಸಮ್, ಕೃತ್ಯಾಸ್ವ, ಕೃತ್ಯಾಸ್ಮ।

ಲುಙ್: ಅಕರ್ತೀರ್ತ್, ಅಕರ್ತಿಷ್ಟಾಮ್, ಅಕರ್ತಿಷುಃ। ಅಕರ್ತೀಃ, ಅಕರ್ತಿಷ್ಟಮ್, ಅಕರ್ತಿಷ್ಟ। ಅಕರ್ತಿಷಮ್, ಅಕರ್ತಿಷ್ವ, ಅಕರ್ತಿಷ್ಮ।

ಲೃಙ್: ಅಕರ್ತಿಷ್ಯತ್,ಅಕರ್ತಿಷ್ಯತಾಮ್,ಅಕರ್ತಿಷ್ಯನ್। ಅಕರ್ತಿಷ್ಯಃ, ಅಕರ್ತಿಷ್ಯತಮ್, ಅಕರ್ತಿಷ್ಯತ। ಅಕರ್ತಿಷ್ಯಮ್, ಅಕರ್ತಿಷ್ಯಾವ, ಅಕರ್ತಿಷ್ಯಾಮ।

ವೈಕಲ್ಪಿಕ ಪಕ್ಷ: ಅಕರ್ತ್ಸ್ಯರ್ತ್, ಅಕರ್ತ್ಸ್ಯರ್ತಾಮ್, ಅಕರ್ತ್ಸ್ಯರ್ನ್। ಅಕರ್ತ್ಸ್ಯರ್ಃ, ಅಕರ್ತ್ಸ್ಯರ್ತಮ್, ಅಕರ್ತ್ಸ್ಯರ್ತ। ಅಕರ್ತ್ಸ್ಯರ್ಮ್, ಅಕರ್ತ್ಸ್ಯಾರ್ವ, ಅಕರ್ತ್ಸ್ಯಾರ್ಮ।

ಧಾತು 12. ಖಿದ –ಪರಿಘಾತೇ(ಹೊಡೆಯುವದು, ಕಷ್ಟಪಡಿಸುವದು)– ಇದರಲ್ಲಿ 'ಖಿದ್' ಮಾತ್ರ ಉಳಿಯುತ್ತದೆ. ಮುಚಾದಿಯಲ್ಲಿರುವುದರಿಂದ ಇದಕ್ಕೂ ನುಮ್(ನ್) ಆಗಮವು ಬರುತ್ತದೆ. ಅನುದಾತ್ತದಲ್ಲಿ ಪರಿಗಣಿತವಾಗಿರುವುದರಿಂದ 'ಅನಿಟ್' ಆಗಿರುತ್ತದೆ. "ಶೇ ಮುಚಾದೀನಾಮ್" ಎಂಬ ಸೂತ್ರದಿಂದ ಕೆಳಗಿನ ರೂಪಗಳು ಬಂದಿವೆ.

ಲಟ್: ರೂಪಗಳು: ಖಿನ್ದತಿ, ಖಿನ್ದತಃ, ಖಿನ್ದನ್ತಿ। ಖಿನ್ದಸಿ, ಖಿನ್ದಥಃ, ಖಿನ್ದಥ। ಖಿನ್ದಾಮಿ, ಖಿನ್ದಾವಃ, ಖಿನ್ದಾಮಃ।

ಲಿಟ್: ರೂಪಗಳು: ಚಿಖೇದ, ಚಿಖಿದತುಃ, ಚಿಖಿದುಃ। ಚಿಖೇದಿಥ, ಚಿಖಿದಥುಃ, ಚಿಖಿದ। ಚಿಖೇದ, ಚಿಖಿದಿವ, ಚಿಖಿದಿಮ।

ಲುಟ್: ರೂಪಗಳು: ಖೇತ್ತಾ, ಖೇತ್ತಾರೌ, ಖೇತ್ತಾರಃ। ಖೇತ್ತಾಸಿ, ಖೇತ್ತಾಸ್ಥಃ, ಖೇತ್ತಾಸ್ಥ। ಖೇತ್ತಾಸ್ಮಿ, ಖೇತ್ತಾಸ್ವಃ, ಖೇತ್ತಾಸ್ಮಃ।

ಲೃಟ್: ರೂಪಗಳು: ಖೇತ್ಸ್ಯತಿ, ಖೇತ್ಸ್ಯತಃ, ಖೇತ್ಸ್ಯನ್ತಿ। ಖೇತ್ಸ್ಯಸಿ, ಖೇತ್ಸ್ಯಥಃ, ಖೇತ್ಸ್ಯಥ। ಖೇತ್ಸ್ಯಾಮಿ, ಖೇತ್ಸ್ಯಾವಃ, ಖೇತ್ಸ್ಯಾಮಃ।

ಲೋಟ್: ರೂಪಗಳು: ಖಿನ್ದತು/ ಖಿನ್ದತಾತ್, ಖಿನ್ದತಾಮ್, ಖಿನ್ದನ್ತು। ಖಿನ್ದ/ ಖಿನ್ದತಾತ್, ಖಿನ್ದತಮ್, ಖಿನ್ದತ। ಖಿನ್ದಾನಿ, ಖಿನ್ದಾವ, ಖಿನ್ದಾಮ।

ಲಙ್: ರೂಪಗಳು: ಅಖಿನ್ದತ್, ಅಖಿನ್ದತಾಮ್, ಅಖಿನ್ದನ್। ಅಖಿನ್ದಃ, ಅಖಿನ್ದತಮ್, ಅಖಿನ್ದತ। ಅಖಿನ್ದಮ್, ಅಖಿನ್ದಾವ, ಅಖಿನ್ದಾಮ।

ವಿ. ಲಿಙ್: ರೂಪಗಳು: ಖಿನ್ದೇತ್, ಖಿನ್ದೇತಾಮ್, ಖಿನ್ದೇಯುಃ। ಖಿನ್ದೇಃ, ಖಿನ್ದೇತಮ್, ಖಿನ್ದೇತ। ಖಿನ್ದೇಯಮ್, ಖಿನ್ದೇವ, ಖಿನ್ದೇಮ।

ಆ. ಲಿಙ್: ರೂಪಗಳು: ಖಿದ್ಯಾತ್, ಖಿದ್ಯಾಸ್ತಾಮ್, ಖಿದ್ಯಾಸುಃ। ಖಿದ್ಯಾಃ, ಖಿದ್ಯಾಸ್ತಮ್, ಖಿದ್ಯಾಸ್ತ। ಖಿದ್ಯಾಸಮ್, ಖಿದ್ಯಾಸ್ವ, ಖಿದ್ಯಾಸ್ಮ।

ಲುಙ್: ರೂಪಗಳು: ಅಖೈತ್ಸೀತ್, ಅಖೈತ್ತಾಮ್, ಅಖೈತ್ಸುಃ। ಅಖೈತ್ಸೀಃ, ಅಖೈತ್ತಮ್, ಅಖೈತ್ತ। ಅಖೈತ್ಸಮ್, ಅಖೈತ್ಸ್ವ, ಅಖೈತ್ಸ್ಮ।

ಲೃಙ್:ರೂಪಗಳು: ಅಖೇತ್ಸ್ಯತ್, ಅಖೇತ್ಸ್ಯತಾಮ್, ಅಖೇತ್ಸ್ಯನ್। ಅಖೇತ್ಸ್ಯಃ, ಅಖೇತ್ಸ್ಯತಮ್, ಅಖೇತ್ಸ್ಯತ। ಅಖೇತ್ಸ್ಯಮ್, ಅಖೇತ್ಸ್ಯಾವ, ಅಖೇತ್ಸ್ಯಾಮ।

ಧಾತು 13. ಪಿಶ–ಅವಯವೇ( ವಿಭಾಗಿಸುವದು, ಪ್ರಕಾಶಗೊಳಿಸುವದು ಎಂಬ

ಅರ್ಥದಲ್ಲಿ ಪ್ರಯೋಗಗಳಿವೆ)- ಇದರಲ್ಲಿ 'ಪಿಶ್' ಮಾತ್ರ ಉಳಿಯುತ್ತದೆ. ಮುಚಾದಿಯಲ್ಲಿರುವುದರಿಂದ ಇದಕ್ಕೂ ನುಮ್(ನ್) ಆಗಮವು ಬಂದು 'ಪಿಂಶ್' ಎಂದಾಗುತ್ತದೆ. ಅನುದಾತ್ತದಲ್ಲಿ ಪರಿಗಣಿತವಾಗಿಲ್ಲದಿರುವುದರಿಂದ 'ಸೇಟ್' ಆಗಿದೆ.

ಲಟ್: ರೂಪಗಳು:ಪಿಂಶತಿ, ಪಿಂಶತಃ, ಪಿಂಶನ್ತಿ। ಪಿಂಶಸಿ, ಪಿಂಶಥಃ, ಪಿಂಶಥ। ಪಿಂಶಾಮಿ, ಪಿಂಶಾವಃ, ಪಿಂಶಾಮಃ।

ಲಿಟ್: ರೂಪಗಳು:ಪಿಪೇಶ, ಪಿಪಿಶತುಃ ಪಿಪಿಶುಃ। ಪಿಪೇಶಿಥ, ಪಿಪಿಶಥುಃ, ಪಿಪಿಶ। ಪಿಪೇಶ, ಪಿಪಿಶಿವ, ಪಿಪಿಶಿಮ।

ಲುಟ್: ರೂಪಗಳು:ಪೇಶಿತಾ, ಪೇಶಿತಾರೌ, ಪೇಶಿತಾರಃ। ಪೇಶಿತಾಸಿ, ಪೇಶಿತಾಸ್ಥಃ, ಪೇಶಿತಾಸ್ಥ। ಪೇಶಿತಾಸ್ಮಿ, ಪೇಶಿತಾಸ್ವಃ, ಪೇಶಿತಾಸ್ಮಃ।

ಲೃಟ್: ರೂಪಗಳು:ಪೇಶಿಷ್ಯತಿ, ಪೇಶಿಷ್ಯತಃ, ಪೇಶಿಷ್ಯನ್ತಿ। ಪೇಶಿಷ್ಯಸಿ, ಪೇಶಿಷ್ಯಥಃ, ಪೇಶಿಷ್ಯಥ। ಪೇಶಿಷ್ಯಾಮಿ, ಪೇಶಿಷ್ಯಾವಃ, ಪೇಶಿಷ್ಯಾಮಃ।

ಲೋಟ್: ರೂಪಗಳು:ಪಿಂಶತು/ಪಿಂಶತಾತ್, ಪಿಂಶತಾಮ್, ಪಿಂಶನ್ತು। ಪಿಂಶ/ ಪಿಂಶತಾತ್, ಪಿಂಶತಮ್, ಪಿಂಶತ। ಪಿಂಶಾನಿ, ಪಿಂಶಾವ, ಪಿಂಶಾಮ।

ಲಙ್: ರೂಪಗಳು:ಅಪಿಂಶತ್, ಅಪಿಂಶತಾಮ್, ಅಪಿಂಶನ್। ಅಪಿಂಶಃ, ಅಪಿಂಶತಮ್, ಅಪಿಂಶತ। ಅಪಿಂಶಮ್, ಅಪಿಂಶಾವ, ಅಪಿಂಶಾಮ।

ವಿ.ಲಿಙ್: ರೂಪಗಳು:ಪಿಂಶೇತ್, ಪಿಂಶೇತಾಮ್, ಪಿಂಶೇಯುಃ। ಪಿಂಶೇಃ, ಪಿಂಶೇತಮ್, ಪಿಂಶೇತ। ಪಿಂಶೇಯಮ್, ಪಿಂಶೇವ, ಪಿಂಶೇಮ।

ಆ. ಲಿಙ್: ರೂಪಗಳು:ಪಿಶ್ಯಾತ್, ಪಿಶ್ಯಾಸ್ತಾಮ್, ಪಿಶ್ಯಾಸುಃ। ಪಿಶ್ಯಾಃ, ಪಿಶ್ಯಾಸ್ತಮ್, ಪಿಶ್ಯಾಸ್ತ। ಪಿಶ್ಯಾಸಮ್, ಪಿಶ್ಯಾಸ್ವ, ಪಿಶ್ಯಾಸ್ಮ।

ಲುಙ್:ರೂಪಗಳು:ಅಪೇಶೀತ್, ಅಪೇಶಿಷ್ಟಾಮ್, ಅಪೇಶಿಷುಃ। ಅಪೇಶೀಃ, ಅಪೇಶಿಷ್ಟಮ್, ಅಪೇಶಿಷ್ಟ। ಅಪೇಶಿಷಮ್, ಅಪೇಶಿಷ್ವ, ಅಪೇಶಿಷ್ಮ।

ಲೃಙ್: ರೂಪಗಳು:ಅಪೇಶಿಷ್ಯತ್, ಅಪೇಶಿಷ್ಯತಾಮ್, ಅಪೇಶಿಷ್ಯನ್। ಅಪೇಶಿಷ್ಯಃ, ಅಪೇಶಿಷ್ಯತಮ್, ಅಪೇಶಿಷ್ಯತ। ಅಪೇಶಿಷ್ಯಮ್, ಅಪೇಶಿಷ್ಯಾವ, ಅಪೇಶಿಷ್ಯಾಮ।

ವಿಶೇಷ: ಇಲ್ಲಿಯವರೆಗೆ ಮುಚಾದಿಗಣಪಠಿದ ಧಾತುಗಳಾಗಿದ್ದರಿಂದ ನುಮಾಗಮವು ಬಂದಿತ್ತು. ಇನ್ನುಮುಂದೆ ಬರುವುದಿಲ್ಲ.

ಧಾತು 14. ಓವ್ರಶ್ಚೂ-ಛೇದನೆ(ಕತ್ತರಿಸುವದು) ಇದರಲ್ಲಿ 'ವ್ರಶ್ಚ್' ಮಾತ್ರ ಉಳಿಯುತ್ತದೆ. ಇದು (ಊತ್)ಊ ಇತ್ ಆಗಿರುವುದರಿಂದ "ಸ್ವರತಿ-ಸೂತಿ-ಸೂಯತಿ-ಧೂಞ್-ಊದಿತೋ ವಾ" ಎಂಬ ಸೂತ್ರದಿಂದ ಆರ್ಧಾಧಾತುಕಕ್ಕೆ ವಿಕಲ್ಪವಾಗಿರುವುದರಿಂದ 'ಇಟ್' ಆಗಮವು ಬರುತ್ತದೆ. ಉದಾ- ವೃಶ್ಚತಿ- 'ವ್ರಸ್ಚ್' ಧಾತುವಿನ ನಂತರ 'ಲಟ್', ಅದಕ್ಕೆ 'ತಿಪ್' ಆದೇಶ, ನಂತರ 'ಶ (ಅ)' ವಿಕರಣ ಪ್ರತ್ಯಯ ಬಂದಮೇಲೆ "ಸಾರ್ವಧಾತುಕಮಪಿತ್" ಎಂಬ ಸೂತ್ರದಿಂದ ವಿಕರಣ ಪ್ರತ್ಯಯದ 'ಅ' ಕಾರಕ್ಕೆ

ಜಿದ್ವದ್ಭಾವ ಬರುವುದರಿಂದ "ಗ್ರಹಿ–ಜ್ಯಾ–ವಯಿ–ವ್ಯಧಿ–ವಷ್ಟಿ–ವಿಚತಿ–ವೃಶ್ಚತಿ–ಪೃಚ್ಛತಿ–ಭೃಜ್ಜತೀನಾಮ್ ಜಿತಿಚ" ಎಂಬ ಸೂತ್ರದಿಂದ 'ವ್ರ' ದಲ್ಲಿರುವ ರೇಫಕ್ಕೆ ಸಂಪ್ರಸಾರಣ ಬಂದು 'ಋ' ಕಾರ ಬರುತ್ತದೆ. ಈಗ ವೃಸ್ಚ್+ಅ+ತಿ=ವೃಶ್ಚತಿ ಎಂದು ರೂಪವಾಗುತ್ತದೆ.

ಉದಾ–2. ವವ್ರಶ್ಚ– ಎಂಬಲ್ಲಿ 'ಲಿಟ್' 'ಲ್' ಕಾರದಲ್ಲಿ 'ತಿಪ್' ಆದೇಶ ಬಂದು ಅದಕ್ಕೆ ಅಭಿನವ ಆಖ್ಯಾತ ಪ್ರತ್ಯಯವಾದ 'ಣಲ್(ಅ)' ಆದೇಶ ಬಂದು 'ವ್ರಶ್ಚ್' ಗೆ ದ್ವಿತ್ವ ಬಂದು "ಲಿಟ್ಯಭ್ಯಾಸಸ್ಯೋಭಯೇಷಾಮ್" ಎಂಬ ಸೂತ್ರದಿಂದ ಸಂಪ್ರಸಾರಣ ಬಂದು 'ವೃಶ್ಚ' ಎಂದಾಗಿ, "ಹಲಾದಿಶೇಷ" ವಾದಮೇಲೆ "ಉರತ್" ಎಂಬ ಸೂತ್ರದಿಂದ 'ಅರ್' ಬಂದು ಮತ್ತೆ "ಹಲಾದಿ ಶೇಷದಿಂದ" ವವ್ರಶ್ಚ್+ಅ=ವವ್ರಶ್ಚ ಎಂದು ರೂಪವಾಗುತ್ತದೆ. ಥಲ್, ವಸ್, ಮತ್ತು ಮಸ್ ಗಳಿಗೆ 'ಇಟ್' ಆಗಮವು ವಿಕಲ್ಪವಾಗಿ ಬರುತ್ತದೆ. ಲಟ್: ರೂಪಗಳು: ವೃಶ್ಚತಿ, ವೃಶ್ಚತಃ, ವೃಶ್ಚನ್ತಿ। ವೃಶ್ಚಸಿ, ವೃಶ್ಚಥಃ, ವೃಶ್ಚಥ। ವೃಶ್ಚಾಮಿ, ವೃಶ್ಚಾವಃ, ವೃಶ್ಚಾಮಃ।

ಲಿಟ್: ವವ್ರಶ್ಚ, ವವ್ರಶ್ಚತುಃ, ವವ್ರಶ್ಚುಃ। ವವ್ರಶ್ಚಿಥ/ವವ್ರಷ್ಠ, ವವ್ರಶ್ಚಥುಃ, ವವ್ರಶ್ಚ। ವವ್ರಶ್ಚ, ವವ್ರಶ್ಚಿವ, ವರ್ವಶ್ಚಿಮ।

ಲುಟ್:

ಇಟ್ ಬಂದ ಪಕ್ಷದಲ್ಲಿ ರೂಪಗಳು: ವ್ರಶ್ಚಿತಾ, ವ್ರಶ್ಚಿತಾರೌ, ವ್ರಶ್ಚಿತಾರಃ।ವ್ರಶ್ಚಿತಾಸಿ, ವ್ರಶ್ಚಿತಾಸ್ಥಃ, ವ್ರಶ್ಚಿತಾಸ್ಥ। ವ್ರಶ್ಚಿತಾಸ್ಮಿ, ವ್ರಶ್ಚಿತಾಸ್ವಃ, ವ್ರಶ್ಚಿತಾಸ್ಮಃ। ಇಟ್ ಬಾರದ ಪಕ್ಷದಲ್ಲಿ ರೂಪಗಳು: – ವ್ರಷ್ಟಾ, ವ್ರಷ್ಟಾರೌ, ವ್ರಷ್ಟಾರಃ। ವ್ರಷ್ಟಾಸಿ, ವ್ರಷ್ಟಾಸ್ಥಃ, ವ್ರಷ್ಟಾಸ್ಥ। ವ್ರಷ್ಟಾಸ್ಮಿ, ವ್ರಷ್ಟಾಸ್ವಃ, ವ್ರಷ್ಟಾಸ್ಮಃ।

ಲೃಟ್: ಇಟ್ ಬಂದ ಪಕ್ಷದಲ್ಲಿ ರೂಪಗಳು: ವ್ರಶ್ಚಿಷ್ಯತಿ, ವ್ರಶ್ಚಿಷ್ಯತಃ, ವ್ರಶ್ಚಿಷ್ಯನ್ತಿ। ವ್ರಶ್ಚಿಷ್ಯಸಿ, ವ್ರಶ್ಚಿಷ್ಯಥಃ, ವ್ರಶ್ಚಿಷ್ಯಥ। ವ್ರಶ್ಚಿಷ್ಯಾಮಿ, ವ್ರಶ್ಚಿಷ್ಯಾವಃ, ವ್ರಶ್ಚಿಷ್ಯಾಮಃ।

ಇಟ್ ಬಾರದ ಪಕ್ಷದಲ್ಲಿ ರೂಪಗಳು: – ವ್ರಕ್ಷ್ಯತಿ, ವ್ರಕ್ಷ್ಯತಃ,ವ್ರಕ್ಷ್ಯನ್ತಿ।ವ್ರಕ್ಷ್ಯಸಿ, ವ್ರಕ್ಷ್ಯಥಃ, ವ್ರಕ್ಷ್ಯಥ। ವ್ರಕ್ಷ್ಯಾಮಿ, ವ್ರಕ್ಷ್ಯಾವಃ, ವ್ರಕ್ಷ್ಯಾಮಃ।

ಲೋಟ್:

ರೂಪಗಳು: ವೃಶ್ಚತು/ವೃಶ್ಚತಾತ್, ವೃಶ್ಚತಾಮ್, ವೃಶ್ಚನ್ತು। ವೃಶ್ಚ/ವೃಶ್ಚತಾತ್, ವೃಶ್ಚತಮ್, ವೃಶ್ಚತ। ವ್ರಶ್ಚಾನಿ, ವೃಶ್ಚಾವ, ವೃಶ್ಚಾಮ।

ಲಙ್: ರೂಪಗಳು: ಅವೃಶ್ಚತ್, ಅವೃಶ್ಚತಾಮ್, ಅವೃಶ್ಚನ್। ಅವೃಶ್ಚಃ, ಅವೃಶ್ಚತಮ್, ಅವೃಶ್ಚತ। ಅವೃಶ್ಚಮ್, ಅವೃಶ್ಚಾವ, ಅವೃಶ್ಚಾಮ।

ವಿ. ಲಿಙ್: ರೂಪಗಳು: ವೃಶ್ಚೇತ್, ವೃಶ್ಚೇತಾಮ್, ವೃಶ್ಚೇಯುಃ। ವೃಶ್ಚೇಃ, ವೃಶ್ಚೇತಮ್, ವೃಶ್ಚೇತ। ವೃಶ್ಚೇಯಮ್, ವೃಶ್ಚೇವ, ವೃಶ್ಚೇಮ।

ಆ. ಲಿಙ್: ರೂಪಗಳು: ವೃಶ್ಚ್ಯಾತ್, ವೃಶ್ಚ್ಯಾಸ್ತಾಮ್, ವೃಶ್ಚ್ಯಾಸುಃ। ವೃಶ್ಚ್ಯಾಃ, ವೃಶ್ಚ್ಯಾಸ್ತಮ್, ವೃಶ್ಚ್ಯಾಸ್ತ। ವೃಶ್ಚ್ಯಾಸಮ್, ವೃಶ್ಚ್ಯಾಸ್ವ, ವೃಶ್ಚ್ಯಾಸ್ಮ।

ಲುಙ್: ಇಟ್ ಬಂದ ಪಕ್ಷದಲ್ಲಿ "ನೇಟಿ" ಎಂಬ ಸೂತ್ರದಿಂದ, ವೃದ್ಧಿಗೆ ನಿಷೇಧ ಬಂದು ಕೆಳಗಿನ ರೂಪಗಳು ಬರುತ್ತವೆ.

ರೂಪಗಳು: ಅವ್ರಶ್ಚೀತ್, ಅವ್ರಸ್ಚಿಷ್ಟಾಮ್, ಅವ್ರಶ್ಚಿಷುಃ। ಅವ್ರಶ್ಚೀಃ, ಅವ್ರಶ್ಚಿಷ್ಟಮ್, ಅವ್ರಶ್ಚಿಷ್ಟ। ಅವ್ರಶ್ಚಿಷಮ್, ಅವ್ರಶ್ಚಿಷ್ವ, ಅವ್ರಶ್ಚಿಷ್ಮ।

ಇಟ್ ಬಾರದ ಪಕ್ಷದಲ್ಲಿ ವೃದ್ಧಿ ಬಂದು ಕೆಳಗಿನ ರೂಪಗಳು ಬರುತ್ತವೆ.

ರೂಪಗಳು: ಅವ್ರಾಕ್ಷೀತ್, ಅವ್ರಾಷ್ಟಾಮ್, ಅವ್ರಾಕ್ಷುಃ। ಅವ್ರಾಕ್ಷೀಃ, ಅವ್ರಾಷ್ಟಮ್, ಅವ್ರಾಷ್ಟ। ಅವ್ರಾಕ್ಷಮ್, ಅವ್ರಾಕ್ಷ್ವ, ಅವ್ರಾಕ್ಷ್ಮ।

ಲೃಙ್: ಇಟ್ ಬಂದ ಪಕ್ಷದಲ್ಲಿ- ರೂಪಗಳು: ಅವ್ರಶ್ಚಿಷ್ಯತ್, ಅವ್ರಶ್ಚಿಷ್ಯತಾಮ್, ಅವ್ರಶ್ಚಿಷ್ಯನ್। ಅವ್ರಶ್ಚಿಷ್ಯಃ, ಅವ್ರಶ್ಚಿಷ್ಯತಮ್, ಅವ್ರಶ್ಚಿಷ್ಯತ। ಅವ್ರಶ್ಚಿಷ್ಯಮ್, ಅವ್ರಶ್ಚಿಷ್ಯಾವ, ಅವ್ರಶ್ಚಿಷ್ಯಾಮ।

ಇಟ್ ಬಾರದ ಪಕ್ಷದಲ್ಲಿ – ರೂಪಗಳು: ಅವ್ರಕ್ಷ್ಯತ್, ಅವ್ರಕ್ಷ್ಯತಾಮ್, ಅವ್ರಕ್ಷ್ಯನ್। ಅವ್ರಕ್ಷ್ಯಃ, ಅವ್ರಕ್ಷ್ಯತಮ್, ಅವ್ರಕ್ಷ್ಯತ। ಅವ್ರಕ್ಷ್ಯಮ್, ಅವ್ರಕ್ಷ್ಯಾವ, ಅವ್ರಕ್ಷ್ಯಾಮ।

ಧಾತು 15. ವ್ಯಚ–ವ್ಯಾಜೀಕರಣೇ(ಮೋಸಮಾಡುವದು)– ಇದರಲ್ಲಿ 'ವ್ಯಚ್' ಮಾತ್ರ ಉಳಿಯುತ್ತದೆ. ಇದು ಪರಸ್ಮೈಪದಿ ಮತ್ತು 'ಸೇಟ್' ಆಗಿದೆ. ಈ ಧಾತುವಿಗೆ 'ಕಿತ್' ಮತ್ತು 'ಙಿತ್' ಪರದಲ್ಲಿದ್ದಾಗ, ಸಂಪ್ರಸಾರಣವು ಬರುತ್ತದೆ. 'ಶ(ಅ)' ಕಾರವು ಪರದಲ್ಲಿರುವುದರಿಂದ (ಸಾರ್ವಧಾತುಕವಾಗಿರುವುದರಿಂದ) "ಗ್ರಹಿ–ಜ್ಯಾ–ವಯಿ–ವ್ಯಧಿ–ವಷ್ಟಿ–ವಿಚತಿ–ವೃಶ್ಚತಿ–ಪೃಚ್ಛತಿ–ಭೃಜ್ಜತೀನಾಮ್ ಙಿತಿ ಚ" ಎಂಬ ಸೂತ್ರದಿಂದ ಸಂಪ್ರಸಾರಣ ಬರುತ್ತದೆ. ಹಾಗೆಯೇ 'ಲಿಟ್' ನಲ್ಲಿ "ಲಿಟ್ಯಭ್ಯಾಸಸ್ಯೋಭಯೇಷಾಮ್" ಎಂಬ ಸೂತ್ರದಿಂದ ಸಂಪ್ರಸಾರಣ ಆಗುತ್ತದೆ. ಸಂಪ್ರಸಾರಣದಲ್ಲಿ 'ವ್ಯಚ್' ನಲ್ಲಿರುವ 'ಯ' ಕಾರಕ್ಕೆ 'ಇ' ಕಾರವು ಬಂದು 'ವಿಚ್' ಎಂದಾಗುತ್ತದೆ.

ಲಟ್: ರೂಪಗಳು: ವಿಚತಿ, ವಿಚತಃ, ವಿಚನ್ತಿ। ವಿಚಸಿ, ವಿಚಥಃ, ವಿಚಥ। ವಿಚಾಮಿ, ವಿಚಾವಃ, ವಿಚಾಮಃ।

ಲಿಟ್: ರೂಪಗಳು: ವಿವ್ಯಾಚ, ವಿವಿಚತುಃ, ವಿವಿಚುಃ। ವಿವ್ಯಚಿಥ, ವಿವಿಚಥುಃ, ವಿವಿಚ। ವಿವ್ಯಾಚ/ವಿವ್ಯಚ, ವಿವಿಚಿವ, ವಿವಿಚಿಮ।

ಲುಟ್: ರೂಪಗಳು: ವ್ಯಚಿತಾ, ವ್ಯಚಿತಾರೌ, ವ್ಯಚಿತಾರಃ। ವ್ಯಚಿತಾಸಿ, ವ್ಯಚಿತಾಸ್ಥಃ, ವ್ಯಚಿತಾಸ್ಥ। ವ್ಯಚಿತಾಸ್ಮಿ, ವ್ಯಚಿತಾಸ್ವಃ, ವ್ಯಚಿತಾಸ್ಮಃ।

ಲೃಟ್: ರೂಪಗಳು: ವ್ಯಚಿಷ್ಯತಿ, ವ್ಯಚಿಷ್ಯತಃ, ವ್ಯಚಿಷ್ಯನ್ತಿ। ವ್ಯಚಿಷ್ಯಸಿ, ವ್ಯಚಿಷ್ಯಥಃ, ವ್ಯಚಿಷ್ಯಥ। ವ್ಯಚಿಷ್ಯಾಮಿ, ವ್ಯಚಿಷ್ಯಾವಃ, ವ್ಯಚಿಷ್ಯಾಮಃ।

ಲೋಟ್: ರೂಪಗಳು: ವಿಚತು/ವಿಚತಾತ್, ವಿಚತಾಮ್, ವಿಚನ್ತು। ವಿಚ/ವಿಚತಾತ್, ವಿಚತಮ್, ವಿಚತ। ವಿಚಾನಿ ವಿಚಾವ, ವಿಚಾಮ।

ಲಙ್: ರೂಪಗಳು: ಅವಿಚತ್, ಅವಿಚತಾಮ್, ಅವಿಚನ್। ಅವಿಚಃ, ಅವಿಚತಮ್, ಅವಿಚತ। ಅವಿಚಮ್, ಅವಿಚಾವ, ಅವಿಚಾಮ।

ವಿ. ಲಿಙ್: ರೂಪಗಳು: ವಿಚೇತ್, ವಿಚೇತಾಮ್, ವಿಚೇಯುಃ। ವಿಚೇಃ, ವಿಚೇತಮ್, ವಿಚೇತ। ವಿಚೇಯಮ್, ವಿಚೇವ, ವಿಚೇಮ।

ಆ. ಲಿಙ್: ರೂಪಗಳು: ವಿಚ್ಯಾತ್, ವಿಚ್ಯಾಸ್ತಾಮ್, ವಿಚ್ಯಾಸುಃ। ವಿಚ್ಯಾಃ, ವಿಚ್ಯಾಸ್ತಮ್, ವಿಚ್ಯಾಸ್ತ। ವಿಚ್ಯಾಸಮ್, ವಿಚ್ಯಾಸ್ವ, ವಿಚ್ಯಾಸ್ಮ।

ಲುಙ್:

ಲುಙ್‌ನಲ್ಲಿ "ಅತೋ ಹಲಾದೇರ್ಲಘೋಃ" ಎಂಬ ಸೂತ್ರದಿಂದ ವೈಕಲ್ಪಿಕವಾಗಿ ವೃದ್ಧಿ ಬಂದು ಅವ್ಯಾಚೀತ್/ಅವ್ಯಚೀತ್ ಎಂಬ ಎರಡು ರೂಪಗಳು ಆಗುತ್ತವೆ. ವೃದ್ಧಿ ಬಂದ ರೂಪಗಳು: ಅವ್ಯಾಚೀತ್, ಅವ್ಯಾಚಿಷ್ಟಾಮ್, ಅವ್ಯಾಚಿಷುಃ। ಅವ್ಯಾಚೀಃ, ಅವ್ಯಾಚಿಷ್ಟಮ್, ಅವ್ಯಾಚಿಷ್ಟ। ಅವ್ಯಾಚಿಷಮ್, ಅವ್ಯಾಚಿಷ್ವ, ಅವ್ಯಾಚಿಷ್ಮ"

ವೃದ್ಧಿ ಬಾರದ ರೂಪಗಳು: ಅವ್ಯಚೀತ್, ಅವ್ಯಚಿಷ್ಟಾಮ್, ಅವ್ಯಚಿಷುಃ। ಅವ್ಯಚೀಃ, ಅವ್ಯಚಿಷ್ಟಮ್, ಅವ್ಯಚಿಷ್ಟ। ಅವ್ಯಚಿಷಮ್, ಅವ್ಯಚಿಷ್ವ, ಅವ್ಯಚಿಷ್ಮ"

ಲೃಙ್: ರೂಪಗಳು: ಅವ್ಯಚಿಷ್ಯತ್, ಅವ್ಯಸ್ಚಿಷ್ಯತಾಮ್, ಅವ್ಯಚಿಷ್ಯನ್। ಅವ್ಯಚಿಷ್ಯಃ, ಅವ್ಯಚಿಷ್ಯತಮ್, ಅವ್ಯಚಿಷ್ಯತ। ಅವ್ಯಚಿಷ್ಯಮ್, ಅವ್ಯಚಿಷ್ಯಾವ, ಅವ್ಯಚಿಷ್ಯಾಮ।

ಧಾತು 16. ಉಭಿ– ಉಞ್ಛೇ (ಧಾನ್ಯದ ಒಂದೊಂದೇ ಕಾಳನ್ನು ಆರಿಸುವದು) – ಇದರಲ್ಲಿ 'ಉಛ್' ಮಾತ್ರ ಉಳಿಯುತ್ತದೆ. ಇದು 'ಇದಿತ್' ಆಗಿರುವುದರಿಂದ "ಇದಿತೋನುಮ್ ಧಾತೋಃ" ಎಂಬ ಸೂತ್ರದಿಂದ 'ನುಮ್'(ನ್) ಆಗಮ ಬರುತ್ತದೆ. ನಂತರ 'ನ್' ಕಾರಕ್ಕೆ ಅನುಸ್ವಾರ, ಮತ್ತು ಪರಸವರ್ಣಗಳು ಬಂದು, 'ಞ್' ಕಾರವು ಬಂದು 'ಉಞ್ಛ್' ಎಂದಾಗುತ್ತದೆ. ಇದು 'ಸೇಟ್' ಧಾತುವಾಗಿದೆ. (ಪ್ರಾಚೀನ ಕಾಲದಲ್ಲಿ ಮುನಿಗಳು ರೈತರು ಫಸಲನ್ನು ತೆಗೆದುಕೊಂಡು ಹೋದಮೇಲೆ, ಅಲ್ಲಲ್ಲಿ ಬಿದ್ದ ಕಾಳುಗಳನ್ನು ಆರಿಸಿಕೊಂಡು ಹೋಗಿ ಜೀವನ ಸಾಗಿಸುತ್ತಿದ್ದರು. ಇದಕ್ಕೆ 'ಶಿಲೋಞ್ಛ' ವೃತ್ತಿ ಎಂದು ಹೆಸರು).

ಲಟ್: ರೂಪಗಳು: ಉಞ್ಛತಿ, ಉಞ್ಛತಃ, ಉಞ್ಛನ್ತಿ। ಉಞ್ಛಸಿ, ಉಞ್ಛಥಃ, ಉಞ್ಛಥ। ಉಞ್ಛಾಮಿ, ಉಞ್ಛಾವಃ, ಉಞ್ಛಾಮಃ।

ಲಿಟ್: ಇದು ಅನುಪ್ರಯೋಗ ಲಿಟ್ ಆಗಿದೆ. ರೂಪಗಳು ಕೆಳಗಿನಂತೆ ಆಗುತ್ತವೆ.

ರೂಪಗಳು: ಉಞ್ಛಾಞ್ಚಕಾರ, ಉಞ್ಛಾಞ್ಚಕ್ರತುಃ, ಉಞ್ಛಾಞ್ಚಕ್ರುಃ। ಉಞ್ಛಾಞ್ಚಕರ್ಥ, ಉಞ್ಛಾಞ್ಚಕ್ರಥುಃ, ಉಞ್ಛಾಞ್ಚಕ್ರ। ಉಞ್ಛಾಞ್ಚಕಾರ/ಉಞ್ಛಾಞ್ಚಕರ, ಉಞ್ಛಾಞ್ಚಕೃವ, ಉಞ್ಛಾಞ್ಚಕೃಮ।

ಲುಟ್: ರೂಪಗಳು: ಉಞ್ಛಿತಾ, ಉಞ್ಛಿತಾರೌ, ಉಞ್ಛಿತಾರಃ। ಉಞ್ಛಿತಾಸಿ, ಉಞ್ಛಿತಾಸ್ಥಃ, ಉಞ್ಛಿತಾಸ್ಥ। ಉಞ್ಛಿತಾಸ್ಮಿ, ಉಞ್ಛಿತಾಸ್ವಃ, ಉಞ್ಛಿತಾಸ್ಮಃ।

ಲೃಟ್: ರೂಪಗಳು: ಉಞ್ಛಿಷ್ಯತಿ, ಉಞ್ಛಿಷ್ಯತಃ, ಉಞ್ಛಿಷ್ಯನ್ತಿ। ಉಞ್ಛಿಷ್ಯಸಿ, ಉಞ್ಛಿಷ್ಯಥಃ, ಉಞ್ಛಿಷ್ಯಥ। ಉಞ್ಛಿಷ್ಯಾಮಿ, ಉಞ್ಛಿಷ್ಯಾವಃ, ಉಞ್ಛಿಷ್ಯಾಮಃ।

ಲೋಟ್:

ರೂಪಗಳು: ಉಞ್ಛತು/ಉಞ್ಛತಾತ್, ಉಞ್ಛತಾಮ್, ಉಞ್ಛನ್ತು। ಉಞ್ಛ/ ಉಞ್ಛತಾತ್, ಉಞ್ಛತಮ್, ಉಞ್ಛತ। ಉಞ್ಛಾನಿ, ಉಞ್ಛಾವ, ಉಞ್ಛಾಮ।

ಲಙ್: ರೂಪಗಳು: ಔಞ್ಛತ್, ಔಞ್ಛತಾಮ್, ಔಞ್ಛನ್। ಔಞ್ಛಃ, ಔಞ್ಛತಮ್, ಔಞ್ಛತ। ಔಞ್ಛಮ್, ಔಞ್ಛಾವ, ಔಞ್ಛಾಮ।

ವಿ. ಲಿಙ್: ರೂಪಗಳು: ಉಞ್ಛೇತ್, ಉಞ್ಛೇತಾಮ್, ಉಞ್ಛೇಯುಃ। ಉಞ್ಛೇಃ, ಉಞ್ಛೇತಮ್, ಉಞ್ಛೇತ। ಉಞ್ಛೇಯಮ್, ಉಞ್ಛೇವ, ಉಞ್ಛೇಮ।

ಆ. ಲಿಙ್: ರೂಪಗಳು: ಉಞ್ಛ್ಯಾತ್, ಉಞ್ಛ್ಯಾಸ್ತಾಮ್, ಉ ಉಞ್ಛ್ಯಾಸುಃ। ಉಞ್ಛ್ಯಾಃ, ಉಞ್ಛ್ಯಾಸ್ತಮ್, ಉಞ್ಛ್ಯಾಸ್ತ। ಉಞ್ಛ್ಯಾಸಮ್, ಉಞ್ಛ್ಯಾಸ್ವ, ಉಞ್ಛ್ಯಾಸ್ಮ।

ಲುಙ್: ರೂಪಗಳು: ಔಞ್ಛೀತ್, ಔಞ್ಛಿಷ್ಟಾಮ್, ಔಞ್ಛಿಷುಃ। ಔಞ್ಛೀಃ, ಔಞ್ಛಿಷ್ಟಮ್, ಔಞ್ಛಿಷ್ಟ। ಔಞ್ಛಿಷಮ್, ಔಞ್ಛಿಷ್ವ, ಔಞ್ಛಿಷ್ಮ।

ಲೃಙ್: ರೂಪಗಳು: ಔಞ್ಛಿಷ್ಯತ್, ಔಞ್ಛಿಷ್ಯತಾಮ್, ಔಞ್ಛಿಷ್ಯನ್। ಔಞ್ಛಿಷ್ಯಃ, ಔಞ್ಛಿಷ್ಯತಮ್, ಔಞ್ಛಿಷ್ಯತ। ಔಞ್ಛಿಷ್ಯಮ್, ಔಞ್ಛಿಷ್ಯಾವ, ಔಞ್ಛಿಷ್ಯಾಮ।

ಧಾತು 17. ಋಚ್ಛ– ಗತಿ–ಇನ್ದ್ರಿಯಪ್ರಳಯ– ಮೂರ್ತಿಭಾವೇಷು (ಗತಿ, ಇಂದ್ರಿಯಗಳ ಬಲ ನಷ್ಟವಾಗುವದು, ಕಠಿಣವಾಗುವದು) – ಇದರಲ್ಲಿ 'ಋಚ್ಛ್' ಮಾತ್ರ ಉಳಿಯುತ್ತದೆ. ಇದು ಪರಸ್ಮೈಪದಿ ಮತ್ತು 'ಸೇಟ್' ಆಗಿರುತ್ತದೆ. ಇದರ ಮೂಲರೂಪವು 'ಋಛ' ಎಂದಿರುತ್ತದೆ. "ಛೇ ಚ" ಎಂಬ ಸೂತ್ರದಿಂದ ತುಗಾ(ತ್)ಗಮ ಬಂದು, 'ಛ್' ಕಾರದ ಸಂಬಂಧದಿಂದ ಶ್ಚುತ್ವ ಬಂದು, 'ಋಚ್ಛ್' ಎಂದು ರೂಪವಾಗುತ್ತದೆ.

ಲಟ್:

ರೂಪಗಳು: ಋಚ್ಛತಿ, ಋಚ್ಛತಃ, ಋಚ್ಛನ್ತಿ। ಋಚ್ಛಸಿ, ಋಚ್ಛಥಃ, ಋಚ್ಛಥ। ಋಚ್ಛಾಮಿ, ಋಚ್ಛಾವಃ, ಋಚ್ಛಾಮಃ।

ಲಿಟ್: ರೂಪಗಳು: ಆನರ್ಚ್ಛ, ಆನರ್ಚ್ಛತುಃ, ಆನರ್ಚ್ಛುಃ। ಆನರ್ಚ್ಛಿತ, ಆನರ್ಚ್ಛಥುಃ, ಆನರ್ಚ್ಛ। ಆನರ್ಚ್ಛ, ಆನರ್ಚ್ಛಿವ, ಆನರ್ಚ್ಛಿಮ।

ಲುಟ್: ರೂಪಗಳು: ಋಚ್ಛಿತಾ, ಋಚ್ಛಿತಾರೌ, ಋಚ್ಛಿತಾರಃ। ಋಚ್ಛಿತಾಸಿ, ಋಚ್ಛಿತಾಸ್ಥಃ, ಋಚ್ಛಿತಾಸ್ಥ। ಋಚ್ಛಿತಾಸ್ಮಿ, ಋಚ್ಛಿತಾಸ್ವಃ, ಋಚ್ಛಿತಾಸ್ಮಃ।

ಲೃಟ್: ರೂಪಗಳು: ಋಚ್ಛಿಷ್ಯತಿ, ಋಚ್ಛಿಷ್ಯತಃ, ಋಚ್ಛಿಷ್ಯನ್ತಿ। ಋಚ್ಛಿಷ್ಯಸಿ, ಋಚ್ಛಿಷ್ಯಥಃ, ಋಚ್ಛಿಷ್ಯಥ। ಋಚ್ಛಿಷ್ಯಾಮಿ, ಋಚ್ಛಿಷ್ಯಾವಃ, ಋಚ್ಛಿಷ್ಯಾಮಃ।

ಲೋಟ್: ರೂಪಗಳು: ಋಚ್ಛತು/ಋಚ್ಛತಾತ್. ಋಚ್ಛತಾಮ್, ಋಚ್ಛನ್ತು। ಋಚ್ಛ/ ಋಚ್ಛತಾತ್, ಋಚ್ಛತಮ್, ಋಚ್ಛತ। ಋಚ್ಛಾನಿ, ಋಚ್ಛಾವ, ಋಚ್ಛಾಮ।

ಲಙ್: ರೂಪಗಳು: ಆರ್ಚ್ಛತ್, ಆರ್ಚ್ಛತಾಮ್, ಆರ್ಚ್ಛನ್। ಆರ್ಚ್ಛಃ, ಆರ್ಚ್ಛತಮ್, ಆರ್ಚ್ಛತ। ಆರ್ಚ್ಛಮ್, ಅರ್ಚ್ಛಾವ, ಆರ್ಚ್ಛಾಮ।

ವಿ. ಲಿಙ್:ರೂಪಗಳು: ಋಚ್ಛೇತ್, ಋಚ್ಛೇತಾಮ್, ಋಚ್ಛೇಯುಃ। ಋಚ್ಛೇಃ, ಋಚ್ಛೇತಮ್, ಋಚ್ಛೇತ। ಋಚ್ಛೇಯಮ್, ಋಚ್ಛೇವ, ಋಚ್ಛೇಮ।

ಆ. ಲಿಙ್: ರೂಪಗಳು: ಋಚ್ಛ್ಯಾತ್, ಋಚ್ಛ್ಯಾಸ್ತಾಮ್, ಋಚ್ಛ್ಯಾಸುಃ। ಋಚ್ಛ್ಯಾಃ, ಋಚ್ಛ್ಯಾಸ್ತಮ್, ಋಚ್ಛ್ಯಾಸ್ತ।ಋಚ್ಛ್ಯಾಸಮ್, ಋಚ್ಛ್ಯಾಸ್ವ, ಋಚ್ಛ್ಯಾಸ್ಮ।

ಲುಙ್: ರೂಪಗಳು: ಆರ್ಚ್ಛೀತ್, ಆರ್ಚ್ಛಿಷ್ಟಾಮ್, ಆರ್ಚ್ಛಿಷುಃ। ಆರ್ಚ್ಛೀಃ, ಆರ್ಚ್ಛಿಷ್ಟಮ್, ಆರ್ಚ್ಛಿಷ್ಟ। ಆರ್ಚ್ಛಿಷಮ್, ಆರ್ಚ್ಛಿಷ್ವ, ಆರ್ಚ್ಛಿಷ್ಮ।

ಲೃಙ್: ರೂಪಗಳು: ಆರ್ಚ್ಛಿಷ್ಯತ್, ಆರ್ಚ್ಛಿಷ್ಯತಾಮ್, ಆರ್ಚ್ಛಿಷ್ಯನ್। ಆರ್ಚ್ಛಿಷ್ಯಃ, ಆರ್ಚ್ಛಿಷ್ಯತಮ್, ಆರ್ಚ್ಛಿಷ್ಯತ। ಆರ್ಚ್ಛಿಷ್ಯಮ್, ಆರ್ಚ್ಛಿಷ್ಯಾವ, ಆರ್ಚ್ಛಿಷ್ಯಾಮ।

ಧಾತು 18.ಉಜ್ಝ –ಉತ್ಸರ್ಗೇ (ತ್ಯಜಿಸುವದು):

ಲಟ್: ರೂಪಗಳು: ಉಜ್ಝತಿ, ಉಜ್ಝತಃ, ಉಜ್ಝನ್ತಿ। ಉಜ್ಝಸಿ, ಉಜ್ಝಥಃ, ಉಜ್ಝಥ। ಉಜ್ಝಾಮಿ, ಉಜ್ಝಾವಃ, ಉಜ್ಝಾಮಃ।

ಅನು ಪ್ರಯೋಗ ಲಿಟ್: ರೂಪಗಳು: ಉಜ್ಝಾಞ್ಚಕಾರ, ಉಜ್ಝಾಞ್ಚಕ್ರತುಃ, ಉಜ್ಝಾಞ್ಚಕ್ರುಃ। ಉಜ್ಝಾಞ್ಚಕರ್ಥ, ಉಜ್ಝಾಞ್ಚಕ್ರಥುಃ, ಉಜ್ಝಾಞ್ಚಕ್ರ।ಉಜ್ಝಾಞ್ಚಕಾರ, ಉಜ್ಝಾಞ್ಚಕೃವ, ಉಜ್ಝಾಞ್ಚಕೃಮ।

ಲುಟ್: ರೂಪಗಳು: ಉಜ್ಝಿತಾ, ಉಜ್ಝಿತಾರೌ, ಉಜ್ಝಿತಾರಃ। ಉಜ್ಝಿತಾಸಿ, ಉಜ್ಝಿತಾಸ್ಥಃ, ಉಜ್ಝಿತಾಸ್ಥ।ಉಜ್ಝಿತಾಸ್ಮಿ, ಉಜ್ಝಿತಾಸ್ವಃ, ಉಜ್ಝಿತಾಸ್ಮಃ।

ಲೃಟ್: ರೂಪಗಳು: ಉಜ್ಝಿಷ್ಯತಿ, ಉಜ್ಝಿಷ್ಯತಃ, ಉಜ್ಝಿಷ್ಯನ್ತಿ। ಉಜ್ಝಿಷ್ಯಸಿ, ಉಜ್ಝಿಷ್ಯಥಃ, ಉಜ್ಝಿಷ್ಯಥ। ಉಜ್ಝಿಷ್ಯಾಮಿ, ಉಜ್ಝಿಷ್ಯಾವಃ, ಉಜ್ಝಿಷ್ಯಾಮಃ

ಲೋಟ್: ರೂಪಗಳು: ಉಜ್ಝತು/ಉಜ್ಝತಾತ್, ಉಜ್ಝತಾಮ್, ಉಜ್ಝನ್ತು। ಉಜ್ಝ/ ಉಜ್ಝತಾತ್, ಉಜ್ಝತಮ್, ಉಜ್ಝತ। ಉಜ್ಝಾನಿ ಉಜ್ಝಾವ, ಉಜ್ಝಾಮ।

ಲಙ್: ರೂಪಗಳು: ಔಜ್ಝತ್, ಔಜ್ಝತಾಮ್, ಔಜ್ಝನ್। ಔಜ್ಝಃ, ಔಜ್ಝತಮ್, ಔಜ್ಝತ। ಔಜ್ಝಮ್, ಔಜ್ಝಾವ, ಔಜ್ಝಾಮ।

ವಿ. ಲಿಙ್: ರೂಪಗಳು: ಉಜ್ಝೇತ್, ಉಜ್ಝೇತಾಮ್, ಉಜ್ಝೇಯುಃ। ಉಜ್ಝೇಃ, ಉಜ್ಝೇತಮ್, ಉಜ್ಝೇತ। ಉಜ್ಝೆಯಮ್, ಉಜ್ಝೇವ, ಉಜ್ಝೇಮ।

ಆ. ಲಿಙ್: ರೂಪಗಳು: ಉಜ್ಝ್ಯಾತ್, ಉಜ್ಝ್ಯಾಸ್ತಾಮ್, ಉಜ್ಝ್ಯಾಸುಃ। ಉಜ್ಝ್ಯಾಃ, ಉಜ್ಝ್ಯಾಸ್ತಮ್, ಉಜ್ಝ್ಯಾಸ್ತ। ಉಜ್ಝ್ಯಾಸಮ್, ಉಜ್ಝ್ಯಾಸ್ವ, ಉಜ್ಝ್ಯಾಸ್ಮ।

ಲುಙ್: ರೂಪಗಳು: ಔಜ್ಝೀತ್, ಔಜ್ಝಿಷ್ಟಾಮ್, ಔಜ್ಝಿಷುಃ। ಔಜ್ಝೀಃ, ಔಜ್ಝಿಷ್ಟಮ್, ಔಜ್ಝಿಷ್ಟ। ಔಜ್ಝಿಷಮ್ ಔಜ್ಝಿಷ್ವ, ಔಜ್ಝಿಷ್ಮ।

ಲೃಙ್: ರೂಪಗಳು: ಔಜ್ಝಿಷ್ಯತ್, ಔಜ್ಝಿಷ್ಯತಾಮ್, ಔಜ್ಝಿಷ್ಯನ್। ಔಜ್ಝಿಷ್ಯಃ, ಔಜ್ಝಿಷ್ಯತಮ್,

ಔಜ್ಜಿಷ್ಯತ। ಔಜ್ಜಿಷ್ಯಮ್, ಔಜ್ಜಿಷ್ಯಾವ, ಔಜ್ಜಿಷ್ಯಾಮ।

ಧಾತು 19. ಲುಭ – ವಿಮೋಹನೇ (ಆಸೆಯಿಂದ ಮೋಹಗೊಳ್ಳುವದು)–ಇದರಲ್ಲಿ 'ಲುಭ್' ಮಾತ್ರ ಉಳಿಯುತ್ತದೆ.

ಲಟ್: ರೂಪಗಳು: ಲುಭತಿ, ಲುಭತಃ, ಲುಭನ್ತಿ। ಲುಭಸಿ, ಲುಭಥಃ, ಲುಭಥ। ಲುಭಾಮಿ, ಲುಭಾವಃ, ಲುಭಾಮಃ।

ಲಿಟ್: ರೂಪಗಳು: ಲುಲೋಭ, ಲುಲುಭತುಃ, ಲುಲುಭುಃ। ಲುಲೋಭಿಥ, ಲುಲುಭಥುಃ, ಲುಲುಭ। ಲುಲೋಭ, ಲುಲುಭಿವ, ಲುಲುಭಿಮ।

**(ಇಡಾಗಮಕ್ಕೆ ವಿಕಲ್ಪವನ್ನು ವಿಧಿಸುವ ಸೂತ್ರ)**

**ಸೂತ್ರ- 658. ತೀಷ-ಸಹ-ಲುಭ-ರುಷ-ರಿಷಃ (7.2.48)**

ವೃತ್ತಿ – ಇಚ್ಛತ್ಯಾದೇಃ ಪರಸ್ಯ ತಾದೇಃ ಆರ್ಧಧಾತುಕಸ್ಯ ಇಡ್ ವಾ ಸ್ಯಾತ್। ಲೋಭಿತಾ, ಲೋಬ್ಧಾ।ಲೋಭಿಷ್ಯತಿ। ಲುಭತು। ಅಲುಭತ್। ಲುಭೇತ್। ಲುಭ್ಯಾತ್। ಅಲೋಭೀತ್। ಅಲೊಭಿಷ್ಯತ್।

20,21. ತೃಪ ತೃಮ್ಫ ತೃಪ್ತೌ। ತೃಪತಿ। ತತರ್ಪ। ತರ್ಪಿತಾ। ಅತರ್ಪೀತ್। ತೃಮ್ಫತಿ। ವಾ। ಶೇ ತೃಮ್ಫಾದೀನಾಂ ನುಮ್ ವಾಚ್ಯಃ

ಆದಿಶಬ್ದಃ ಪ್ರಕಾರೇ, ತೇನ ಯೇಽತ್ರ ನಕಾರಾನುಷಕ್ತಾಃ ತೇ ತೃಮ್ಫಾದಯಃ। ತತೃಮ್ಫ। ತೃಫ್ಯಾತ್। 22,23.ಮೃಡ ಪೃಡ ಸುಖನೇ। ಮೃಡತಿ।ಪೃಡತಿ।

24. ಶುನ ಗತೌ। ಶುನತಿ।

25. ಇಷು ಇಚ್ಛಾಯಾಮ್। ಇಚ್ಛತಿ। ಏಷಿತಾ। ಏಷ್ಟಾ। ಏಷಿಷ್ಯತಿ। ಇಷ್ಯಾತ್। ಐಷೀತ್।

26. ಕುಟ ಕೌಟಿಲ್ಯೇ। (587) ಗಾಙ್ಕುಟಾದಿತಿ ಙಿತ್ವಮ್। ಚುಕುಟಿಥ ಚುಕೋಟ, ಚುಕುಟ। ಕುಟಿತಾ।

27. ಪುಟ ಸಂಶ್ಲೇಷಣೇ। ಪುಟತಿ। ಪುಟಿತಾ।

28. ಸ್ಫುಟ ವಿಕಸನೇ। ಸ್ಫುಟತಿ। ಸ್ಫುಟಿತಾ।

29. 30. ಸ್ಫುರ, ಸ್ಫುಲ ಸಂಚಲನೇ। ಸ್ಫುರತಿ। ಸ್ಫುಲತಿ।

ಪ.ಛೇ.– ತಿ, ಇಷ–ಸಹ–ಲುಭ–ರುಷ–ರಿಷಃ।

ಅ.ವೃ.– "ಆರ್ಧಧಾತುಕಸ್ಯೇಡ್ ವಲಾದೇಃ" ಎಂಬ ಸೂತ್ರದಿಂದ 'ಆರ್ಧಧಾತುಕಸ್ಯ' ಮತ್ತು 'ಇಟ್'ಎಂಬ ಪದಗಳು ಮತ್ತು "ಸ್ವರತಿ–ಸೂತಿ–ಸೂಯತಿ–ಧೂಞ್–ಊದಿತೋ ವಾ" ಎಂಬ ಸೂತ್ರದಿಂದ 'ವಾ' ಎಂಬ ಪದವೂ ಅನುವೃತವಾಗುತ್ತದೆ.

ಅರ್ಥ– ಇಷ್, ಸಹ್, ಲುಭ್, ಋಷ್, ಮತ್ತು ರಿಷ್ ಈ ಧಾತುಗಳ ನಂತರ 'ತ್' ಕಾರಾದಿ ಆರ್ಧಧಾತುಕಕ್ಕೆ ವಿಕಲ್ಪದಿಂದ ಇಡಾಗಮವು ಬರುತ್ತದೆ. ನಿತ್ಯವಾಗಿ

ಎಂದು ರೂಪವು ಸಿದ್ಧವಾಗುತ್ತದೆ. 'ತಸ್' ಪ್ರತ್ಯಯವು ಇದ್ದಾಗ, "ಝಲೋ ಝಲಿ" ಎಂಬ ಸೂತ್ರದಿಂದ 'ಸಿಚ್' ನ 'ಸ್' ಕಾರಕ್ಕೆ ಲೋಪ ಬರುತ್ತದೆ. ನಂತರ ಷತ್ವ ಟುತ್ವ ಗಳಿಂದ ಅಪ್ರಾಷ್ಟಾಮ್ ಎಂದು ರೂಪವಾಗುತ್ತದೆ.

ರೂಪಗಳು: ಅಪ್ರಾಕ್ಷೀತ್, ಅಪ್ರಾಷ್ಟಾಮ್, ಅಪ್ರಾಕ್ಷುಃ। ಅಪ್ರಾಕ್ಷೀಃ, ಅಪ್ರಾಷ್ಟಮ್, ಅಪ್ರಾಷ್ಟ। ಅಪ್ರಾಕ್ಷಮ್, ಅಪ್ರಾಕ್ಷ್ವ, ಅಪ್ರಾಕ್ಷ್ಮ।

ಲೃಙ್: ರೂಪಗಳು: ಅಪ್ರಕ್ಷ್ಯತ್,ಅಪ್ರಕ್ಷ್ಯತಾಮ್, ಅಪ್ರಕ್ಷ್ಯನ್। ಅಪ್ರಕ್ಷ್ಯಃ, ಅಪ್ರಕ್ಷ್ಯತಮ್, ಅಪ್ರಕ್ಷ್ಯತ। ಅಪ್ರಕ್ಷ್ಯಮ್, ಅಪ್ರಕ್ಷ್ಯಾವ, ಅಪ್ರಕ್ಷ್ಯಾಮ।

**ಇಲ್ಲಿಗೆ ಪರಸ್ಮೈಪದಿ ಧಾತುಗಳು ಮುಗಿದವು.**

**ಆತ್ಮನೇಪದಿ ಧಾತುಗಳು**

ಧಾತು 42. ಮೃಙ್ ಪ್ರಾಣತ್ಯಾಗೇ( ಮರಣಹೊಂದುವದು)- ಇದರಲ್ಲಿ 'ಮೃ' ಮಾತ್ರ ಉಳಿಯುತ್ತದೆ. "ಅನುದಾತ್ತ - ಙಿತಃ ಆತ್ಮನೇಪದಮ್" ಎಂಬ ಸೂತ್ರದಿಂದ ಆತ್ಮನೇಪದಿ ಆಗುತ್ತದೆ. ಅನುದಾತ್ತೇತ್ತಾಗಿರುವುದರಿಂದ 'ಅನಿಟ್' ಆಗಿರುತ್ತದೆ. 'ಶ(ಅ)' ವಿಕರಣ 'ಲುಙ್' ಮತ್ತು 'ಲಿಙ್' 'ಲ್' ಕಾರಗಳಲ್ಲೇ ಮುಂದಿನ ಸೂತ್ರದಿಂದ ಆತ್ಮನೇ ಪದಿ ಆಗುತ್ತದೆ. ಉಳಿದ 'ಲ್' ಕಾರಗಳಲ್ಲಿ ಪರಸ್ಮೈಪದಿಯಾಗಿರುತ್ತದೆ.

'ಲಟ್, ಲೋಟ್, ಲಙ್, ವಿಧಿಲಿಙ್ ಮತ್ತು ಆಶೀರ್ಲಿಙ್‌ಗಳಲ್ಲಿ ಮತ್ತು ಲುಙ್‌ನಲ್ಲಿ ಆತ್ಮನೇಪದಿಯಾಗಿ ಇರುತ್ತದೆ. ಉಳಿದ 'ಲ್' ಕಾರಗಳಲ್ಲಿ ಪರಸ್ಮಪದಿಯಾಗಿ ಇರುತ್ತದೆ.

**(ತಙ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ- 665. ಮ್ರಿಯತೇರ್ಲುಙ್-ಲಿಙೋಶ್ಚ (1.3.61)**

ವೃತ್ತಿ - ಲುಙ್-ಲಿಙೋಃ ಶಿತಶ್ಚ ಪ್ರಕೃತಿ ಭೂತಾತ್ ಮೃಙಃ ತಙ್ ನಾನ್ಯತ್ರ ರಿಙ್। ಇಯಙ್। ಮ್ರಿಯತೇ। ಮಮಾರ। ಮರ್ತಾ। ಮರಿಷ್ಯತಿ। ಮೃಷೀಷ್ಟ। ಅಮೃತ।

43. ಪೃಙ್ ವ್ಯಾಯಾಮೇ। ಪ್ರಾಯೇಣ ಅಯಂ ವ್ಯಾಙ್‌ಪೂರ್ವಃ। ವ್ಯಾಪ್ರಿಯತೇ। ವ್ಯಾಪಪ್ರೇ। ವ್ಯಾಪಪ್ರಾತೇ। ವ್ಯಾಪರಿಷ್ಯತೇ। ವ್ಯಾಪೃತ। ವ್ಯಾಪೃಷಾತಾಮ್।

44. ಜುಷೀ ಪ್ರೀತಿಸೇವನಯೋ। ಜುಷತೇ। ಜುಜುಷೇ।

45. ಓವೀಜೀ ಭಯಚಲನಯೋಃ। ಪ್ರಾಯೇಣ ಅಯಂ ಉತ್ಪೂರ್ವಃ। ಉದ್ವಿಜತೇ।

ಪ.ಛೇ.- ಮ್ರಿಯತೇಃ,ಲುಙ್-ಲಿಙೋಃ, ಚ।

ಅ.ವ್ಯ. - "ಶದೇಃ ಶಿತಃ" ಎಂಬ ಸೂತ್ರದಿಂದ 'ಶಿತಃ' ಎಂಬ ಪದವೂ "ಅನುದಾತ್ತ ಙಿತಃ ಆತ್ಮನೇಪದಮ್" ಎಂಬ ಸೂತ್ರದಿಂದ 'ಆತ್ಮನೇಪದಮ್' ಎಂಬ ಪದವೂ ಅನುವೃತ್ತವಾಗುತ್ತದೆ.

ಅರ್ಥ - ಮೃಙ್ ಧಾತುವಿನ ನಂತರ ಲುಙ್, ಲಿಙ್ ಮತ್ತು ಶಿತ್ ಪ್ರತ್ಯಯವುಳ್ಳ 'ಲ್' ಕಾರಕ್ಕೆ ಆತ್ಮನೇಪದವು ಬರುತ್ತದೆ. ಅನ್ಯ 'ಲ್' ಕಾರಗಳಲ್ಲಿ ಇರುವುದಿಲ್ಲ. ಈ

ಸೂತ್ರವು ನಿಯಮಾರ್ಥವಾಗಿದೆ. 'ಮೃಙ್' ಧಾತುವು 'ಙಿತ್' ಆಗಿರುವುದರಿಂದ ಎಲ್ಲ 'ಲ್' ಕಾರಗಳಲ್ಲಿ ಆತ್ಮನೇಪದ, ಇದ್ದೇ ಇರುತ್ತದೆ. ಮತ್ತೂ ಪ್ರಕೃತ ಸೂತ್ರದಿಂದ ತಙ್ ಅಂದರೆ ಆತ್ಮನೇ ಪದವನ್ನು ವಿಧಿಸಲಾಗಿದೆ. ಇದಕ್ಕೆ 'ಸಿದ್ಧೇ ಸತಿ ಆರಭ್ಯಮಾಣೋ ವಿಧಿಃ ನಿಯಮಾಯ ಭವತಿ' ಎಂಬ ನಿಯಮಾನುಸಾರ ಧಾತುವಿನ ಪರದಲ್ಲಿ ಆತ್ಮನೇ ಪದ ಇದ್ದರೆ ಕೇವಲ 'ಲುಙ್, ಲಿಙ್ ಮತ್ತು ಶಿತ್ ಪ್ರತ್ಯಯವುಳ್ಳ 'ಲ್' ಕಾರಗಳ ಸ್ಥಾನದಲ್ಲಿಯೇ ಆಗುತ್ತದೆ. ಬೇರೆ 'ಲ್' ಕಾರಗಳಲ್ಲಿ ಪರಸ್ಮೈಪದಿಯಾಗಿಯೇ ಇರುತ್ತದೆ.

42. ಉದಾ– ಮೃಙ್ ಪ್ರಾಣತ್ಯಾಗೇ (ಮರಣಹೊಂದುವದು) – 'ಮೃ' ಧಾತುವಿನ ನಂತರ 'ಲಟ್' 'ಲ್' ಕಾರಕ್ಕೆ ಮೂಲ ಆತ್ಮನೇಪದ ಆಖ್ಯಾತ ಪ್ರತ್ಯಯವಾದ 'ತ' ಬಂದಮೇಲೆ 'ಶ(ಅ)' ವಿಕರಣ ಪ್ರತ್ಯಯ ಬಂದು ಮೃ+ಅ+ತ ಎಂದಿರುತ್ತದೆ. "ರಿಙ್–ಕ್ಷಯ–ಗ್ಲಿಙ್ಕ್ಷು" ಎಂಬ ಸೂತ್ರದಿಂದ 'ಋ' ಕಾರಕ್ಕೆ 'ರಿಙ್(ರಿ)' ಆದೇಶ ಬಂದು ಮ್ರಿ+ಅ+ತ ಎಂದು ಇರುತ್ತದೆ "ಅಚಿ ಶ್ನು ಧಾತುಬ್ರುವಾಮ್ ಯ್ವೋರಿಯಙುವಙೌ" ಎಂಬ ಸೂತ್ರದಿಂದ 'ಇ' ಕಾರಕ್ಕೆ 'ಇಯಙ್' ಆದೇಶ ಬಂದು ಮ್ರಿಯ್+ಅ+ತ ಎಂದಿರುತ್ತದೆ. "ಟಿತ ಆತ್ಮನೇಪದಾನಾಂ ಟೇರೇ" ಎಂಬ ಸೂತ್ರದಿಂದ ಏತ್ವ ಬಂದು ಮ್ರಿಯತೇ ಎಂದಾಗುತ್ತದೆ.

ಲಟ್: ರೂಪಗಳು: ಮ್ರಿಯತೇ, ಮ್ರಿಯೇತೇ, ಮ್ರಿಯನ್ತೇ। ಮ್ರಿಯಸೇ, ಮ್ರಿಯೇಥೇ, ಮ್ರಿಯಧ್ವೇ। ಮ್ರಿಯೇ, ಮ್ರಿಯಾವಹೇ, ಮ್ರಿಯಾಮಹೇ।

ಲಿಟ್: ಇಲ್ಲಿ, ಹಿಂದಿನ ನಿಯಮದಂತೆ ಪರಸ್ಮೈಪದಿಯಾಗಿಯೇ ಉಳಿದಿದೆ.

ರೂಪಗಳು: ಮಮಾರ, ಮಮ್ರತುಃ, ಮಮ್ರುಃ। ಮಮರ್ಥ,ಮಮ್ರಥುಃ, ಮಮ್ರ। ಮಮಾರ/ಮಮರ, ಮಮ್ರಿವ, ಮಮ್ರಿಮ।

ಲುಟ್–

ರೂಪಗಳು: ಮರ್ತಾ, ಮರ್ತಾರೌ, ಮರ್ತಾರಃ। ಮರ್ತಾಸಿ, ಮರ್ತಾಸ್ಥಃ, ಮರ್ತಾಸ್ಥ। ಮರ್ತಾಸ್ಮಿ, ಮರ್ತಾಸ್ವಃ, ಮರ್ತಾಸ್ಮಃ।

ಲೃಟ್: ಈ 'ಲ್' ಕಾರದಲ್ಲಿ "ಋದ್ಧನೋಃ ಸ್ಯೇ" ಎಂಬ ಸೂತ್ರದಿಂದ ಇಡಾಗಮ ಬಂದು ಮರಿಷ್ಯತಿ ಎಂದು ಆಗುತ್ತದೆ.

ರೂಪಗಳು: ಮರಿಷ್ಯತಿ, ಮರಿಷ್ಯತಃ, ಮರಿಷ್ಯನ್ತಿ। ಮರಿಷ್ಯಸಿ, ಮರಿಷ್ಯಥಃ, ಮರಿಷ್ಯಥ। ಮರಿಷ್ಯಾಮಿ, ಮರಿಷ್ಯಾವಃ, ಮರಿಷ್ಯಾಮಃ।

ಲೋಟ್:

ರೂಪಗಳು: ಮ್ರಿಯತಾಮ್, ಮ್ರಿಯೇತಾಮ್, ಮ್ರಿಯನ್ತಾಮ್। ಮ್ರಿಯಸ್ವ, ಮ್ರಿಯೇಥಾಮ್, ಮ್ರಿಯಧ್ವಮ್। ಮ್ರಿಯೈ, ಮ್ರಿಯಾವಹೈ, ಮ್ರಿಯಾಮಹೈ।

ಲಙ್:

ರೂಪಗಳು: ಅಮ್ರಿಯತ, ಅಮ್ರಿಯೇತಾಮ್, ಅಮ್ರಿಯನ್ತ। ಅಮ್ರಿಯಥಾಃ,

ಅಮ್ರಿಯೇಥಾಮ್, ಅಮ್ರಿಯಧ್ವಮ್। ಅಮ್ರಿಯೇ, ಅಮ್ರಿಯಾವಹಿ, ಅಮ್ರಿಯಾಮಹಿ।

ವಿಧಿಲಿಙ್: ರೂಪಗಳು: ಮ್ರಿಯೇತ, ಮ್ರಿಯೇಯಾತಾಮ್, ಮ್ರಿಯೇರನ್। ಮ್ರಿಯೇಥಾಃ, ಮ್ರಿಯೇಯಾಥಾಮ್, ಮ್ರಿಯೇಧ್ವಮ್। ಮ್ರಿಯೇಯ, ಮ್ರಿಯೇವಹಿ, ಮ್ರಿಯೇಮಹಿ।

ಆಶೀರ್ಲಿಙ್: ರೂಪಗಳು: ಮ್ರಿಷೀಷ್ಟ, ಮ್ರಿಷೀಯಾಸ್ತಾಮ್,ಮ್ರಿಷೀರನ್। ಮ್ರಿಷೀಷ್ಠಾಃ, ಮ್ರಿಷೀಯಾಥಾಮ್, ಮೃಷೀಢ್ವಮ್। ಮ್ರಿಷೀಯ, ಮ್ರಿಷೀವಹಿ, ಮ್ರಿಷೀಮಹಿ।

ಲುಙ್: ರೂಪಗಳು: ಅಮೃಷತ, ಅಮೃಷಾತಾಮ್, ಅಮೃಷತ। ಅಮೃಷಥಾಃ, ಅಮೃಷಾಥಾಮ್, ಅಮೃಷಢ್ವಮ್। ಅಮೃಷೀ, ಅಮೃಷ್ವಹಿ, ಅಮೃಷ್ಮಹಿ।

ಲೃಙ್: ರೂಪಗಳು: ಅಮರಿಷ್ಯತ್, ಅಮರಿಷ್ಯತಾಮ್, ಅಮರಿಷ್ಯನ್। ಅಮರಿಷ್ಯಃ, ಅಮರಿಷ್ಯತಮ್, ಅಮರಿಷ್ಯತ। ಅಮರಿಷ್ಯಮ್, ಅಮರಿಷ್ಯಾವ, ಅಮರಿಷ್ಯಾಮ।

ಧಾತು-43. ಪೃಙ್ ವ್ಯಾಯಾಮೇ (ವ್ಯಾಯಾಮ ಮಾಡುವುದು) ಇದರಲ್ಲಿ 'ಪೃ' ಮಾತ್ರ ಉಳಿಯುತ್ತದೆ. ಈ ಧಾತುವು ವಿ, ಮತ್ತು ಆಙ್ ಉಪಸರ್ಗಗಳನ್ನು ಮುಂದುಮಾಡಿಕೊಂಡೇ ಬರುತ್ತದೆ. ಇದು ಙಿತ್ ಆಗಿರುವುದರಿಂದ "ಅನುದಾತ್ತ ಙಿತಃ ಆತ್ಮನೇಪದವ್" ಎಂಬ ಸೂತ್ರದಿಂದ ಆತ್ಮನೇಪದಿಯಾಗಿರುತ್ತದೆ. "ಊದ್ರೂದನ್ತ್ಯೈಃ" ಎಂಬ ಧಾತು ಸಂಗ್ರಹದಲ್ಲಿ ಬರುವದಿಲ್ಲವಾದ್ದರಿಂದ ಅಜನ್ತ ವಾಗಿಯೂ ಮತ್ತು ಏಕಾಚ್ ಆಗಿರುವುದರಿಂದ ಅನುದಾತ್ತವಾಗಿಯೂ ಇದೆ. ಆದುದರಿಂದ ಈ ಧಾತು ನಿತ್ಯವಾಗಿ ಅನಿಟ್ ಆಗಿದೆ. ಆದರೆ, ಕ್ರಾದಿ ನಿಯಮದಿಂದ ಲಿಟ್ ನಲ್ಲಿ ನಿತ್ಯವಾಗಿ ಇಟ್ ಆಗಿರುತ್ತದೆ.

ಲಟ್: ಈ 'ಲ್' ಕಾರದಲ್ಲಿ, 'ವ್ಯಾಪೃ' ನಂತರ 'ಲಟ್' ಬಂದು ಅದಕ್ಕೆ 'ತ (ಮೂಲ ಆತ್ಮನೇಪದ ಆಖ್ಯಾತ ಪ್ರತ್ಯಯ)' ಆದೇಶವಾಗಿ ಬಂದು ನಂತರ 'ಸ್'ಗೆ ಶ(ಅ)' ವಿಕರಣ ಪ್ರತ್ಯಯ ಬಂದಾಗ, ವ್ಯಾಪೃ+ಅ+ತ ಎಂದಾಗುತ್ತದೆ. "ರಿಙ್-ಕ್ಷಯ-ಗ್ಲಿಙ್ಕ್ಷು" ಎಂಬ ಸೂತ್ರದಿಂದ 'ಋ' ಕಾರಕ್ಕೆ 'ರಿಙ್(ರಿ)' ಆದೇಶ ಬಂದು ವ್ಯಾಪ್ರಿ+ಅ+ತ ಎಂದಾಗುತ್ತದೆ. "ಅಚಿ ಶ್ನು ಧಾತುಬ್ರುವಾಮ್ ಯ್ವೋರಿಯಙುವಙೌ" ಎಂಬ ಸೂತ್ರದಿಂದ 'ಇ' ಕಾರಕ್ಕೆ 'ಇಯಙ್' ಆದೇಶ ಬಂದು ವ್ಯಾಪ್ರಿಯ್+ಅ+ತ ಎಂದಿರುತ್ತದೆ. "ಟಿತ ಆತ್ಮನೇಪದಾನಾಂ ಟೇರೇ" ಎಂಬ ಸೂತ್ರದಿಂದ ಏತ್ವ ಬಂದು 'ವ್ಯಾಪ್ರಿಯತೇ' ಎಂದಾಗುತ್ತದೆ.

ಲಟ್: ರೂಪಗಳು: ವ್ಯಾಪ್ರಿಯತೇ, ವ್ಯಾಪ್ರಿಯೇತೇ, ವ್ಯಾಪ್ರಿಯನ್ತೇ। ವ್ಯಾಪ್ರಿಯಸೇ, ವ್ಯಾಪ್ರಿಯೇಥೇ, ವ್ಯಾಪ್ರಿಯಧ್ವೇ। ವ್ಯಾಪ್ರಿಯೇ, ವ್ಯಾಪ್ರಿಯಾವಹೇ, ವ್ಯಾಪ್ರಿಯಾಮಹೇ।

ಲಿಟ್: ವ್ಯಾಪೃ+ಲಿಟ್ ಎಂದಿದ್ದಾಗ, 'ತ' ಎಂಬ ಲಿಡಾದೇಶ ಬಂದಮೇಲೆ ಮತ್ತೆ ಅದಕ್ಕೆ 'ಏಶ್' ಆದೇಶ ಬಂದು, ಧಾತು ದ್ವಿತ್ವವಾದ ಮೇಲೆ ಉರತ್ವ(ಅ) ಮತ್ತು ಹಲಾದಿಶೇಷ ಮಾಡಿದಮೇಲೆ ವ್ಯಾಪಪೃ+ಏ ಎಂದಿರುತ್ತದೆ. 'ಯಣ್' ಸಂಧಿಯಾದಮೇಲೆ ವ್ಯಾಪಪ್ರೇ ಎಂದು ರೂಪವು ಸಿದ್ಧವಾಗುತ್ತದೆ

ರೂಪಗಳು: ವ್ಯಾಪಪ್ರೇ, ವ್ಯಾಪಪ್ರಾತೇ, ವ್ಯಾಪಪ್ರಿರೇ। ವ್ಯಾಪಪೃಷೇ, ವ್ಯಾಪಪ್ರಾಥೇ, ವ್ಯಾಪಪೃಢ್ವೇ/ವ್ಯಾಪಪೃಧ್ವೇ। ವ್ಯಾಪಪ್ರೇ, ವ್ಯಾಪಪೃವಹೇ, ವ್ಯಾಪಪೃಮಹೇ।

ಲುಟ್:ರೂಪಗಳು: ವ್ಯಾಪರ್ತಾ, ವ್ಯಾಪರ್ತಾರೌ, ವ್ಯಾಪರ್ತಾರಃ। ವ್ಯಾಪರ್ತಾಸೇ, ವ್ಯಪರ್ತಾಸಾಥೇ, ವ್ಯಾಪರ್ತಾಧ್ವೇ। ವ್ಯಾಪರ್ತಾಹೇ, ವ್ಯಾಪರ್ತಾಸ್ವಹೇ, ವ್ಯಾಪರ್ತಾಸ್ಮಹೇ।

ಲೃಟ್-ಈ 'ಲ್' ಕಾರದಲ್ಲಿ "ಋದ್ಧನೋಃ ಸ್ಯೇ" ಎಂಬ ಸೂತ್ರದಿಂದ ಇಡಾಗಮ ಬಂದು ವ್ಯಾಪರಿಷ್ಯತೇ ಎಂದು ರೂಪವಾಗುತ್ತದೆ.

ರೂಪಗಳು: ವ್ಯಾಪರಿಷ್ಯತೇ, ವ್ಯಾಪರಿಷ್ಯೇತೆ, ವ್ಯಾಪರಿಷ್ಯನ್ತೇ। ವ್ಯಾಪರಿಷ್ಯಸೇ, ವ್ಯಾಪರಿಷ್ಯೇಥೇ, ವ್ಯಾಪರಿಷ್ಯಧ್ವೇ। ವ್ಯಾಪರಿಷ್ಯೇ, ವ್ಯಾಪರಿಷ್ಯಾವಹೇ, ವ್ಯಾಪರಿಷ್ಯಾಮಹೇ।

ಲೋಟ್: ರೂಪಗಳು: ವ್ಯಾಪ್ರಿಯತಾಮ್, ವ್ಯಾಪ್ರಿಯೇತಾಮ್, ವ್ಯಾಪ್ರಿಯನ್ತಾಮ್। ವ್ಯಾಪ್ರಿಯಸ್ವ, ವ್ಯಾಪ್ರಿಯೇಥಾಮ್, ವ್ಯಾಪ್ರಿಯಧ್ವಮ್। ವ್ಯಾಪ್ರಿಯೈ, ವ್ಯಾಪ್ರಿಯಾವಹೈ, ವ್ಯಾಪ್ರಿಯಾಮಹೈ।

ಲಙ್: ಈ 'ಲ್' ಅಕಾರದಲ್ಲಿ ಎಲ್ಲಿ ಅಡಾಗಮ ಬರುತ್ತದೋ, ಆಗ ವ್ಯಾ+ಅ ಎಂದಿರುತ್ತದೆ. ಅಲ್ಲಿ 'ಆ' ಮತ್ತು 'ಅ' ಗಳಿಗೆ ಸವರ್ಣದೀರ್ಘವಾಗಿ 'ಆ' ಎಂದೇ ಆಗುತ್ತದೆ. ಆದುದರಿಂದ 'ಲಙ್' 'ಲ್' ಕಾರದಲ್ಲಿ ವ್ಯಾಪ್ರಿಯತ ಎಂದು ರೂಪವಾಗುತ್ತದೆ.

ರೂಪಗಳು: ವ್ಯಾಪ್ರಿಯತ, ವ್ಯಾಪ್ರಿಯೇತಾಮ್, ವ್ಯಾಪ್ರಿಯನ್ತ। ವ್ಯಾಪ್ರಿಯಥಾಃ, ವ್ಯಾಪ್ರಿಯೇಥಾಮ್, ವ್ಯಾಪ್ರಿಯಧ್ವಮ್। ವ್ಯಾಪ್ರಿಯೇ, ವ್ಯಾಪ್ರಿಯಾವಹಿ, ವ್ಯಾಪ್ರಿಯಾಮಹಿ।

ವಿಧಿಲಿಙ್-ರೂಪಗಳು: ವ್ಯಾಪ್ರಿಯೇತ, ವ್ಯಾಪ್ರಿಯೇಯಾತಾಮ್, ವ್ಯಾಪ್ರಿಯೇರನ್। ವ್ಯಾಪ್ರಿಯೇಥಾಃ, ವ್ಯಾಪ್ರಿಯೇಯಾಥಾಮ್, ವ್ಯಾಪ್ರಿಯೇಧ್ವಮ್। ವ್ಯಾಪ್ರಿಯೇಯ, ವ್ಯಾಪ್ರಿಯೇವಹಿ, ವ್ಯಾಪ್ರಿಯೇಮಹಿ।

ಆಶೀರ್ಲಿಙ್: ರೂಪಗಳು: ವ್ಯಾಪೃಷೀಷ್ಟ, ವ್ಯಾಪೃಷೀಯಾಸ್ತಾಮ್, ವ್ಯಾಪೃಷೀರನ್,। ವ್ಯಾಪೃಷೀಷ್ಠಾಃ, ವ್ಯಾಪ್ರಿಷೀಯಾಸ್ಥಾಮ್, ವ್ಯಾಪೃಷೀಢ್ವಮ್। ವ್ಯಾಪೃಷೀಂುು, ವ್ಯಾಪೃಷೀ ವಹಿ, ವ್ಯಾಪೃಷೀಮಹೀ।

ಲುಙ್: ರೂಪಗಳು: ವ್ಯಾಪೃಷತ, ವ್ಯಾಪೃಷಾತಾಮ್, ವ್ಯಾಪೃಷತ। ವ್ಯಾಪೃಷಥಾಃ, ವ್ಯಾಪೃಷಾಥಾಮ್, ವ್ಯಾಪೃಢ್ವಮ್। ವ್ಯಾಪೃಷಿ, ವ್ಯಾಪೃಷ್ವಹಿ, ವ್ಯಾಪೃಷ್ಮಹಿ।

ಲೃಙ್: ರೂಪಗಳು: ವ್ಯಾಪರಿಷ್ಯತ, ವ್ಯಾಪರಿಷ್ಯೇತಾವ್, ವ್ಯಾಪರಿಷ್ಯನ್ತ। ವ್ಯಾಪರಿಷ್ಯಥಾಃ, ವ್ಯಾಪರಿಷ್ಯೇಥಾಮ್, ವ್ಯಾಪರಿಷ್ಯಧ್ವಮ್। ವ್ಯಾಪರಿಷ್ಯೇ, ವ್ಯಾಪರಿಷ್ಯಾವಹಿ, ವ್ಯಾಪರಿಷ್ಯಾಮಹಿ।

ಧಾತು 44. ಜುಷೀ ಪ್ರೀತಿಸೇವನಯೋಃ (ಪ್ರೀತಿ ಮತ್ತು ಪ್ರಸನ್ನರಾಗುವದು ಹಾಗೂ ಸೇವಿಸುವದು ಎಂಬರ್ಥದಲ್ಲಿಯೂ ಇದೆ.)-ಇದರಲ್ಲಿ 'ಜುಷ್' ಮಾತ್ರ ಉಳಿಯುತ್ತದೆ. ಇತ್ ಆಗಿರುವ 'ಈ' ಕಾರವು ಅನುದಾತ್ತವಾಗಿದೆ. ಆದುದರಿಂದ ಅನುಬಂಧ ಲೋಪವಾದಮೇಲೆ ಇದು ಹಲನ್ತವಾಗುತ್ತದೆ. ಆಗ ಇದನ್ನು 'ಅನುದಾತ್ತೇತ್' ಎಂದು ಕರೆಯುತ್ತಾರೆ. "ಅನುದಾತ್ತ ಜಿತಃ ಆತ್ಮನೇಪದಮ್" ಎಂಬ ಸೂತ್ರದಿಂದ

ಇದು ಆತ್ಮನೇಪದಿಯಾಗಿರುತ್ತದೆ. ಈ ಧಾತುವು ಹಲನ್ತ ಅನುದಾತ್ತದಲ್ಲಿ ಪಠಿಸದಿರುವದರಿಂದ ಇದು ಉದಾತ್ತವಾಗಿದೆ. ಅದುದರಿಂದ ಇದು ಸೇಟ್ ಆಗಿದೆ.

ಲಟ್-ರೂಪಗಳು: ಜುಷತೇ, ಜುಷೇತೆ, ಜುಷನ್ತೇ। ಜುಷಸೇ, ಜುಷೇಥೆ, ಜುಷಧ್ವೇ। ಜುಷೇ, ಜುಷಾವಹೇ, ಜುಷಾಮಹೇ।

ಲಿಟ್: 'ಜುಷ್' ಧಾತುವಿನಮೇಲೆ ಲಿಡಾದೇಶ ಬಂದು, ಜುಷ್+ತ ಎಂದಿರುತ್ತದೆ. ನಂತರ ವಿಕರಣ ಪ್ರತ್ಯಯ ಬಂದು ಜುಷ್+(ಶ)ಅ+ತ ಎಂದಿದ್ದಾಗ, "ಲಿಟಸ್ತಝಯೋ ರೇಶಿರೇಚ್" ಎಂಬ ಸೂತ್ರದಿಂದ 'ಏಶ್' ಆದೇಶ ಬಂದು ಧಾತು ದ್ವಿತ್ವ ಮತ್ತು ಹಲಾದಿಶೇಷವಾದಮೇಲೆ ಜುಜುಷೇ ಎಂದು ರೂಪವಾಗುತ್ತದೆ.

ಲಿಟ್:ರೂಪಗಳು: ಜುಜುಷೇ, ಜುಜುಷಾತೇ, ಜುಜುಷಿರೇ। ಜುಜುಷಿಷೇ, ಜುಜುಷಾಥೇ, ಜುಜುಷಿಧ್ವೇ। ಜುಜುಷೇ, ಜುಜುಷಿವಹೇ, ಜುಜುಷಿಮಹೆ।

ಲುಟ್:ರೂಪಗಳು: ಜೋಷಿತಾ, ಜೋಷಿತಾರೌ, ಜೋಷಿತಾರಃ। ಜೋಷಿತಾಸೇ, ಜೋಷಿತಾಸಾಥೇ, ಜೋಷಿತಾಧ್ವೇ। ಜೋಷಿತಾಹೇ, ಜೋಷಿತಾಸ್ವಹೇ, ಜೋಷಿತಾಸ್ಮಹೇ।

ಲೃಟ್:ರೂಪಗಳು: ಜುಷಿಷ್ಯತೇ, ಜುಷಿಷ್ಯೇತೇ, ಜುಷಿಷ್ಯನ್ತೇ। ಜುಷಿಷ್ಯಸೇ, ಜುಷಿಷ್ಯೇಥೇ, ಜುಷಿಷ್ಯಧ್ವೇ। ಜುಷಿಷ್ಯೇ, ಜುಷಿಷ್ಯಾವಹೇ, ಜುಷಿಷ್ಯಾಮಹೇ।

ಲೋಟ್: ರೂಪಗಳು: ಜುಷತಾಮ್, ಜುಷೇತಾಮ್, ಜುಷನ್ತಾಮ್। ಜುಷಸ್ವ, ಜುಷೇಥಾಮ್, ಜುಷಧ್ವಮ್। ಜುಷೈ, ಜುಷಾವಹೈ, ಜುಷಾಮಹೈ।

ಲಙ್: ರೂಪಗಳು: ಅಜುಷತ, ಅಜುಷೇತಾಮ್, ಅಜುಷನ್ತ। ಅಜುಷಥಾಃ, ಅಜುಷೇಥಾಮ್, ಅಜುಷಧ್ವಮ್। ಅಜುಷೇ, ಅಜುಷಾವಹಿ, ಅಜುಷಾಮಹಿ।

ವಿಧಿಲಿಙ್: ರೂಪಗಳು: ಜುಷೇತ, ಜುಷೇಯಾತಾಮ್, ಜುಷೇರನ್। ಜುಷೇಥಾಃ, ಜುಷೇಯಾಥಾಮ್, ಜುಷೇಧ್ವಮ್। ಜುಷೇಯ, ಜುಷೇವಹಿ, ಜುಷೇಮಹಿ।

ಆಶೀರ್ಲಿಙ್: ರೂಪಗಳು: ಜುಷಿಷೀಷ್ಟ, ಜುಷಿಷೀಯಾಸ್ತಾಮ್, ಜುಷಿಷೀರನ್। ಜುಷಿಷೀಷ್ಠಾಃ, ಜುಷಿಷೀಯಾಸ್ಥಾಮ್, ಜುಷಿಷೀಧ್ವಮ್। ಜುಷಿಷೀಯ, ಜುಷಿಷೀವಹಿ, ಜುಷಿಷೀಮಹಿ।

ಲುಙ್: ರೂಪಗಳು: ಅಜೋಷಿಷ್ಟ, ಅಜೋಷಿಷಾತಾಮ್, ಅಜೋಷಿಷತ। ಅಜೋಷಿಷ್ಠಾಃ, ಅಜೋಷಿಷಾಥಾಮ್, ಅಜೋಷಿಢ್ವಮ್। ಅಜೋಷಿಷಿ, ಅಜೋಷಿಷ್ವಹಿ, ಅಜೋಷಿಷ್ಮಹಿ।

ಲೃಙ್: ರೂಪಗಳು:ಅಜೋಷಿಷ್ಯತ, ಅಜೋಷಿಷ್ಯೇತಾಮ್, ಅಜೋಷಿಷ್ಯನ್ತ। ಅಜೋಷಿಷ್ಯಥಾಃ। ಅಜೋಷಿಷ್ಯೇಥಾಮ್, ಅಜೋಷಿಷ್ಯಧ್ವಮ್। ಅಜೋಷಿಷ್ಯೇ, ಅಜೋಷಿಷ್ಯಾವಹಿ, ಅಜೋಷಿಷ್ಯಾಮಹಿ।

ಧಾತು- 45. ಓವಿಜೀ ಭಯಚಲನಯೋಃ-(ಹೆದರುವುದು ಮತ್ತು ಹೆದರುವಿಕೆಯಿಂದ ನಡುಗುವುದು)-ಈ ಧಾತುವು ಪ್ರಾಯಶಃ 'ಉತ್' ಎಂಬ

ಉಪಸರ್ಗವನ್ನು ಪೂರ್ವದಲ್ಲಿ ಉಳ್ಳದ್ದಾಗಿಯೇ ಇರುತ್ತದೆ. ಓವಿಜೀ ಯಲ್ಲಿ 'ಓ' ಕಾರ ಮತ್ತು 'ಈ' ಕಾರಗಳು 'ಇತ್' ಗಳಾಗಿರುವುದರಿಂದ 'ವಿಜ್' ಮಾತ್ರ ಉಳಿಯುತ್ತದೆ. ಇದು ಉತ್ಪೂರ್ವಕವಾಗಿ ಇರುವುದರಿಂದ ಉದ್ವಿಜ್ ಎಂಬ ಧಾತುವಾಗುತ್ತದೆ. ಓವಿಜೀ ಯಲ್ಲಿ 'ಈ' ಕಾರ ಅನುದಾತ್ತವಾಗಿ ಇರುವುದರಿಂದ 'ಇತ್' ಸಂಜ್ಞೆ ಬಂದಮೇಲೆ ಅನುದಾತ್ತೇತ್ತಾಗಿ ಆಗುತ್ತದೆ. ಆದುದರಿಂದ ಆತ್ಮನೇಪದಿಯಾಗಿರುತ್ತದೆ. ಅನುದಾತ್ತದಲ್ಲಿ ಪರಿಗಣಿತವಾಗಿ ಇಲ್ಲದಿರುವುದರಿಂದ ಇದು ಸೇಟ್ ಆಗಿರುತ್ತದೆ.

ಲಟ್: ರೂಪಗಳು: ಉದ್ವಿಜತೇ, ಉದ್ವಿಜೇತೇ, ಉದ್ವಿಜನ್ತೇ। ಉದ್ವಿಜಸೇ, ಉದ್ವಿಜೇಥೇ, ಉದ್ವಿಜಧ್ವೇ। ಉದ್ವಿಜೇ, ಉದ್ವಿಜಾವಹೇ, ಉದ್ವಿಜಾಮಹೇ।

ಲಿಟ್: ರೂಪಗಳು: ಉದ್ವಿವಿಜೇ, ಉದ್ವಿವಿಜಾತೇ, ಉದ್ವಿವಿಜಿರೇ। ಉದ್ವಿವಿಜಿಷೇ, ಉದ್ವಿವಿಜಾಥೇ, ಉದ್ವಿವಿಜಿಧ್ವೇ। ಉದ್ವಿವಿಜೇ, ಉದ್ವಿವಿಜಿವಹೇ, ಉದ್ವಿವಿಜಿಮಹೇ।

**(ಜಿದ್ವದ್ಭಾವವನ್ನು ವಿಧಿಸುವ ಅತಿದೇಶ ಸೂತ್ರ)**

**ಸೂತ್ರ– 666 ವಿಜ ಇಟ್ (1.2.2)**

ವೃತ್ತಿ – ವಿಜೇಃ ಪರ ಇಡಾದಿ ಪ್ರತ್ಯಯಃ ಜಿದ್ವತ್। ಉದ್ವಿಜಿತಾ।

॥ ಇತಿ ತುದಾದಿ (6) ಗಣಃ॥ ॥ಇತಿ ತುದಾದಿ (17) ಪ್ರಕರಣಮ್॥

ಪ.ಛೇ– ವಿಜಃ, ಇಟ್।

ಅ.ವೃ. – "ಗಾಙ್-ಕುಟಾದಿಭ್ಯೋಽಞ್-ಣಿನ್-ಜಿತ್" ಎಂಬ ಸೂತ್ರದಿಂದ 'ಜಿತ್' ಎಂಬ ಶಬ್ದವು ಅನುವೃತ್ತವಾಗಿದೆ.

ಅರ್ಥ – ವಿಜ್ ಧಾತುವಿನ ಪರದಲ್ಲಿ 'ಇಟ್' ಮೊದಲಾದವುಗಳಿಂದ ಕೂಡಿದ ಪ್ರತ್ಯಯವು ಜಿದ್ವದ್ಭಾವವನ್ನು ಹೊಂದುತ್ತದೆ.

ಲುಟ್: ಈ 'ಲ್' ಕಾರದಲ್ಲಿ ಉದ್ವಿಜ್+ಇತಾ ಎಂದಿದ್ದಾಗ, "ಪುಗನ್ತಲಘೂಪದಸ್ಯ ಚ" ಎಂಬ ಸೂತ್ರದಿಂದ ಗುಣವು ಬರಬೇಕಾಗಿತ್ತು, ಅದನ್ನು ಬಾಧಿಸಿ 'ಇಟ್' ಸಮೇತವಾದ 'ತಾ'ಪ್ರತ್ಯಯಕ್ಕೆ ಜಿದ್ವದ್ಭಾವ ಬಂದದ್ದರಿಂದ "ಕ್ಙಿತಿ ಚ" ಎಂಬ ಸೂತ್ರದಿಂದ ಗುಣಕ್ಕೆ ನಿಷೇಧ ಬಂದು, ಉದ್ವಿಜಿತಾ ಎಂದೇ ಉಳಿದಿದೆ.

ರೂಪಗಳು: ಉದ್ವಿಜಿತಾ, ಉದ್ವಿಜಿತಾರೌ, ಉದ್ವಿಜಿತಾರಃ। ಉದ್ವಿಜಿತಾಸೇ, ಉದ್ವಿಜಿತಾಸಾಥೇ, ಉದ್ವಿಜಿತಾಧ್ವೇ। ಉದ್ವಿಜಿತಾಹೇ, ಉದ್ವಿಜಿತಾಸ್ವಹೇ, ಉದ್ವಿಜಿತಾಸ್ಮಹೇ।

ಲೃಟ್: ರೂಪಗಳು: ಉದ್ವಿಜಿಷ್ಯತೇ, ಉದ್ವಿಜಿಷ್ಯೇತೇ, ಉದ್ವಿಜಿಷ್ಯನ್ತೇ। ಉದ್ವಿಜಿಷ್ಯಸೇ, ಉದ್ವಿಜಿಷ್ಯೇಥೇ, ಉದ್ವಿಜಿಷ್ಯಧ್ವೇ। ಉದ್ವಿಜಿಷ್ಯೇ, ಉದ್ವಿಜಿಷ್ಯಾವಹೇ, ಉದ್ವಿಜಿಷ್ಯಾಮಹೇ।

ಲೋಟ್: ರೂಪಗಳು: ಉದ್ವಿಜತಾಮ್, ಉದ್ವಿಜೇತಾಮ್, ಉದ್ವಿಜನ್ತಾಮ್। ಉದ್ವಿಜಸ್ವ, ಉದ್ವಿಜೇಥಾಮ್, ಉದ್ವಿಜಧ್ವಮ್। ಉದ್ವಿಜೈ, ಉದ್ವಿಜಾವಹೈ, ಉದ್ವಿಜಾಮಹೈ।

ಲಙ್: ರೂಪಗಳು: ಉದವಿಜತ, ಉದವಿಜೇತಾಮ್, ಉದವಿಜನ್ತ। ಉದವಿಜಥಾಃ, ಉದವಿಜೇಥಾಮ್, ಉದವಿಜಧ್ವಮ್। ಉದವಿಜೇ, ಉದವಿಜಾವಹಿ, ಉದವಿಜಾಮಹಿ।

ವಿಧಿಲಿಙ್: ರೂಪಗಳು: ಉದ್ವಿಜೇತ, ಉದ್ವಿಜೇಯಾತಾಮ್, ಉದ್ವಿಜೇರನ್। ಉದ್ವಿಜೇಥಾಃ, ಉದ್ವಿಜೇಯಾಥಾಮ್, ಉದ್ವಿಜೇಧ್ವಮ್। ಉದ್ವಿಜೇಯ, ಉದ್ವಿಜೇವಹಿ, ಉದ್ವಿಜೇಮಹಿ।

ಆಶೀರ್ಲಿಙ್: ರೂಪಗಳು: ಉದ್ವಿಜಿಷೀಷ್ಟ, ಉದ್ವಿಜೀಷೀಯಾಸ್ತಾವ್, ಉದ್ವಿಜೀಷೀರನ್। ಉದ್ವಿಜಿಷೀಷ್ಠಾಃ, ಉದ್ವಿಜೀಷೀಯಾಸ್ಥಾಮ್, ಉದ್ವಿಜಿಷೀಧ್ವಮ್। ಉದ್ವಿಜಿಷೀಯ, ಉದ್ವಿಜೀಷೀವಹಿ, ಉದ್ವಿಜೀಷೀಮಹಿ।

ಲುಙ್: ರೂಪಗಳು: ಉದವಿಜಿಷ್ಟ, ಉದವಿಜಿಷಾತಾಮ್, ಉದವಿಜಿಷತ। ಉದವಿಜಿಷ್ಠಾಃ, ಉದವಿಜಿಷಾಥಾಮ್, ಉದವಿಜಿಢ್ವಮ್। ಉದವಿಜಿಷಿ, ಉದವಿಜಿಷ್ವಹಿ, ಉದವಿಜಿಷ್ಮಹಿ।

ಲೃಙ್: ರೂಪಗಳು: ಉದವಿಜಿಷ್ಯತ, ಉದವಿಜಿಷ್ಯೇತಾಮ್, ಉದವಿಜಿಷ್ಯನ್ತ। ಉದವಿಜಿಷ್ಯಥಾಃ, ಉದವಿಜಿಷ್ಯೇಥಾಮ್, ಉದವಿಜಿಷ್ಯಧ್ವಮ್। ಉದವಿಜಿಷ್ಯೇ, ಉದವಿಜಿಷ್ಯಾವಹಿ, ಉದವಿಜಿಷ್ಯಾಮಹಿ।

**ಇಲ್ಲಿಗೆ ತುದಾದಿ ಪ್ರಕರಣ (17)ವು ಮುಗಿಯಿತು.**

# ಪ್ರಕರಣ-18: ಅಥ ರುಧಾದಯಃ (7ನೇ ಗಣ)

**(ಸೂತ್ರ ಸಂಖ್ಯೆ 667 ರಿಂದ 673 ವರೆಗೆ)**

ರುಧಾದಿ ಗಣದಲ್ಲಿ 25 ಧಾತುಗಳಿವೆ. ಇವುಗಳಲ್ಲಿ ವರದರಾಜರು 22 ಧಾತುಗಳನ್ನು ರೂಪಸಿದ್ಧಿಗಾಗಿ ಆರಿಸಿಕೊಂಡಿದ್ದಾರೆ.

**1. ಉಭಯಪದಿ ಧಾತುಗಳು (9):**

1. ರುಧಿರ್(ತಡೆಯುವುದು), 2. ಭಿದಿರ್ (ಮುರಿಯುವುದು/ಒಡೆಯುವುದು), 3. ಛಿದಿರ್(ಛೇದಿಸುವುದು), 4. ಯುಜಿರ್(ಜೋಡಿಸುವುದು), 5. ರಿಚಿರ್(ಖಾಲಿ ಮಾಡುವುದು), 6.ವಿಚಿರ್(ಬೇರೆಯಾಗುವುದು),7. ಕ್ಷುದಿರ್(ಹಿಟ್ಟುಮಾಡುವುದು), 8. ಉಚ್ಛೃದಿರ್(ಹೊಳೆಯುವುದು, ಆಟವಾಡುವುದು), 9. ಉತೃದಿರ್ (ಹಿಂಸಿಸುವುದು, ಅನಾದರಮಾಡುವುದು).

**2. ಪರಸ್ಮೈಪದಿ ಧಾತುಗಳು (11):**

1. ಕೃತಿ (ಸುತ್ತಿಕೊಳ್ಳುವುದು), 2. ತೃಹ (ಹಿಂಸಿಸುವುದು), 3. ಹಿಸಿ (ಹಿಂಸಿಸುವುದು), 4. ಉಂದೀ (ಮುದ್ದೆ ಅಥವಾ ಉಂಡೆ ಮಾಡುವುದು), 5. ಅಞ್ಜೂ (ಪ್ರಕಾಶಗೊಳಿಸುವುದು, ಲೇಪಿಸುವುದು, ಅಲಂಕೃತರಾಗುವುದು, ಹೋಗುವುದು), 6. ತಞ್ಚೂ (ಸಂಕೋಚಗೊಳಿಸುವುದು), 7. ಓವಿಜಿ (ಹೆದರುವುದು, ನಡುಗುವುದು), 8. ಶಿಷ್‌ಲೃ (ವಿಶೇಷಗೊಳಿಸುವುದು), 9. ಪಿಷ್‌ಲೃ (ಹಿಟ್ಟು ಮಾಡುವುದು), 10. ಭಞ್ಜೋ (ಮುರಿಯುವುದು, ಕಡಿಯುವುದು), 11. ಭುಜ್(ರಕ್ಷಿಸುವುದು).

**3. ಆತ್ಮನೇಪದಿ ಧಾತುಗಳು (5):**

1. ಞಿಇನ್ಧೀ(ಹೊಳೆಯುವುದು), 2. ವಿದ್(ವಿಚಾರ ಮಾಡುವುದು),

ಉಭಯಪದಿ ಧಾತುಗಳು

1. ಉದಾ- ರುಧಿರ್ ಆವರಣೇ।

**(ಶ್ನಮ್(ನ)- ವಿಕರಣ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ- 667. ರುಧಾದಿಭ್ಯಃ ಶ್ನಮ್ (3.1.78)**

ವೃತ್ತಿ- ಶಪೋಽಪವಾದಃ। ರುಣದ್ಧಿ (576) ಶ್ನಸೋರಲ್ಲೋಪಃ। ರುನ್ದ್ಧಃ। ರುನ್ಧನ್ತಿ। ರುಣತ್ಸಿ। ರುನ್ದ್ಧಃ। ರುನ್ದ್ಧ। ರುಣಧ್ಮಿ। ರುನ್ಧ್ವಃ। ರುನ್ಧ್ಮಃ। ರುನ್ದ್ಧೇ। ರುನ್ಧಾತೇ। ರುನ್ಧತೇ। ರುನ್ತ್ಸೇ। ರುನ್ಧಾಥೇ। ರುನ್ದ್ಧ್ವೇ। ರುನ್ಧೇ। ರುನ್ಧ್ವಹೇ। ರುನ್ಧ್ಮಹೇ। ರುರೋಧ, ರುರುಧೇ। ರೋದ್ಧಾಸಿ, ರೋದ್ಧಾಸೇ। ರೋತ್ಸ್ಯತಿ, ರೋತ್ಸ್ಯತೇ। ರುಣದ್ಧು, ರುನ್ದ್ಧಾತ್। ರುನ್ದ್ಧಾಮ್। ರುನ್ಧನ್ತು। ರುನ್ದ್ಧಿ। ರುಣಧಾನಿ। ರುಣಧಾವ। ರುಣಧಾಮ। ರುನ್ದ್ಧಾಮ್, ರುನ್ಧಾತಾಮ್, ರುನ್ಧತಾಮ್। ರುನ್ತ್ಸ್ವ। ರುಣಧೈ। ರುಣಧಾವಹೈ। ರುಣಧಾಮಹೈ। ಅರುಣತ್, ಅರುಣದ್। ಅರುನ್ದ್ಧಾಮ್। ಅರುನ್ಧನ್। ಅರುಣಃ। ಅರುಣತ್, ಅರುಣದ್। ಅರುನ್ದ್ಧ। ಅರುನ್ದ್ಧತಾಮ್।

ಅರುನ್ಧತ। ಅರುನ್ಧಾಃ। ರುನ್ಧ್ಯಾತ್। ರುನ್ಧೀತ। ರುಧ್ಯಾತ್। ರುತ್ಸೀಷ್ಟ। ಅರುಧತ್। ಅರೌತ್ಸೀತ್। ಅರುದ್ಧ। ಅರುತ್ಸಾತಾಮ್। ಅರುತ್ಸತ್। ಅರೋತ್ಸ್ಯತ್। ಅರೋತ್ಸ್ಯತ। 2. ಭಿದಿರ್ ವಿದಾರಣೇ। 3. ಛಿದಿರ್ ದ್ವೈಧೀಕರಣೇ। 4. ಯುಜಿರ್ ಯೋಗೇ। 5. ರಿಚಿರ್ ವಿರೇಚನೇ। ರಿಣಕ್ತಿ। ರಿಙ್ಕ್ತೇ। ರಿರೇಚ। ರೇಕ್ತಾ। ರೇಕ್ಷ್ಯತಿ। ಅರಿಣಕ್। ಅರಿಚತ್, ಅರೈಕ್ಷೀತ್, ಅರಿಕ್ತ। 6. ವಿಚಿರ್ ಪೃಥಗ್ಭಾವೇ ವಿನಕ್ತಿ, ವಿಙ್ಕ್ತೇ। 7. ಕ್ಷುದಿರ್ ಸಮ್ಪ್ರೇಷಣೇ। ಕ್ಷುಣತ್ತಿ, ಕ್ಷುನ್ತೇ। ಕ್ಷೋತ್ತಾ। ಅಕ್ಷುದತ್, ಅಕ್ಷೌತ್ಸೀತ್,ಅಕ್ಷುತ್ತ। 8. ಉಚ್ಛೃದಿರ್ ದೀಪ್ತಿದೇವನಯೋಃ ಛೃಣತ್ತಿ, ಛೃನ್ತೇ, ಚಚ್ಛರ್ದ।(630) ಸೋಽಸಿಚೀತಿ ವೇಟ್। ಚಚ್ಛೃದಿಷೇ। ಚಚ್ಛೃತ್ಸೇ, ಛರ್ದಿತಾ। ಛರ್ದಿಷ್ಯತಿ, ಛರ್ತ್ಸ್ಯತಿ। ಅಚ್ಛೃದತ್। ಅಚ್ಛರ್ದೀತ್। ಅಚ್ಛರ್ದಿಷ್ಟ। 9. ಉತೃದೀರ್ ಹಿಂಸಾಽನಾದರಯೋಃ ತೃಣತ್ತಿ ತೃನ್ತೇ। 10. ಕೃತೀ ವೇಷ್ಟನೇ। ಕೃಣತ್ತಿ। 11. ತೃಹ ಹಿಂಸಾಯಾಮ್। 12. ಹಿಸಿ ಹಿಂಸಾಯಾಮ್।

ಅ.ವೃ- "ಕರ್ತರಿ ಶಪ್" ಎಂಬ ಸೂತ್ರದಿಂದ 'ಕರ್ತರಿ' ಎಂಬ ಪದವು, "ಸಾರ್ವಧಾತುಕೇ ಯಕ್" ಎಂಬ ಸೂತ್ರದಿಂದ 'ಸಾರ್ವಧಾತುಕೇ' ಎಂಬ ಪದವೂ, ಅನುವೃತ್ತವಾಗುತ್ತವೆ.

ಅರ್ಥ- ಕರ್ತ್ರರ್ಥದಲ್ಲಿ ಇರುವ ಸಾರ್ವಧಾತುಕ ಸಂಜ್ಞೆಯುಳ್ಳ ಪ್ರತ್ಯಯದ ಪರದಲ್ಲಿ ಇರುವಾಗ ರುಧಾದಿ ಗಣಕ್ಕೆ ಸೇರಿದ ಧಾತುಗಳ ಪರದಲ್ಲಿ 'ಶಪ್(ಅ)' ಪ್ರತ್ಯಯವನ್ನು ಬಾಧಿಸಿ 'ಶ್ನಮ್(ನ) ಪ್ರತ್ಯಯವು ಬರುತ್ತದೆ.

ಗಮನಿಸಬೇಕಾದ ಅಂಶ :- 'ಶ್ನಮ್' ಪ್ರತ್ಯಯದ ವಿಶೇಷ :-ಉಳಿದ ಗಣಗಳಲ್ಲಿ ವಿಕರಣ ಪ್ರತ್ಯಯವು ಧಾತುವಿನ ನಂತರ ಬರುತ್ತದೆ. ಆದರೆ ಈ ರುಧಾದಿ ಗಣದಲ್ಲಿ ಮಾತ್ರ ವಿಕರಣ ಪ್ರತ್ಯಯವು ಧಾತುಗಳ ಮಧ್ಯದಲ್ಲಿ ಬರುತ್ತದೆ.

ಲಟ್: ಉದಾ- ರುಣದ್ಧಿ- 'ರುಧಿರ್' ಧಾತುವಿನಲ್ಲಿ 'ಇತ್' ಗಳು ಹೋಗಿ 'ರುಧ್' ಮಾತ್ರ ಉಳಿಯುತ್ತದೆ. ಪ್ರಥಮ ಪುರುಷ ಏಕವಚನದಲ್ಲಿ- 'ರುಧ್' ಧಾತುವಿನ ನಂತರ 'ಲಟ್' 'ಲ್' ಕಾರ ಬಂದು, ಅದಕ್ಕೆ 'ತಿಪ್' ಆದೇಶ ಬರುತ್ತದೆ. ಇದರಿಂದ 'ಸಾರ್ವಧಾತುಕ' ಸಂಜ್ಞೆ ಬಂದಂತಾಯಿತು. ಪ್ರಕೃತ ಸೂತ್ರದಿಂದ 'ಶಪ್(ಅ)' ಪ್ರತ್ಯಯವನ್ನು ಬಾಧಿಸಿ 'ಶ್ನಮ್(ನ)' ಪ್ರತ್ಯಯವು ಬರುತ್ತದೆ.

'ರುಧ್' ಧಾತುವಿನಲ್ಲಿರುವ ಅಂತ್ಯ 'ಅಚ್' ಆದ 'ಉ' ಕಾರದ ನಂತರ 'ನ' ವಿಕರಣ ಪ್ರತ್ಯಯವು ಬಂದು ಪ್ರಥಮಪುರುಷ ಏಕವಚನದಲ್ಲಿ ರು+ನ+ಧ್+ತಿ ಎಂದಿರುತ್ತದೆ. ರೇಫದ ನಂತರ 'ನ' ಕಾರ ಇರುವುದರಿಂದ, ಅದಕ್ಕೆ "ಅಟ್ಕುಪ್ವಾಙ್ ನುಮ್ ವ್ಯವಾಯೇಽಪಿ" ಎಂಬ ಸೂತ್ರದಿಂದ 'ಣತ್ವ (ಣ)' ಬರುತ್ತದೆ. ಆಗ ರು+ಣ+ಧ್+ತಿ ಎಂದಿರುತ್ತದೆ. "ಜಷಸ್ತಥೋರ್ಧೋಽಧಃ" ಎಂಬ ಸೂತ್ರದಿಂದ 'ರುಧ್' ನಲ್ಲಿರುವ 'ಧ್' ಕಾರವು 'ಝುಷ್' ವರ್ಣವಾಗಿದೆ. ಇದರ ಪರದಲ್ಲಿರುವ ಪ್ರತ್ಯಯವಾದ 'ತ್' ಕಾರಕ್ಕೆ 'ಧ್' ಕಾರವು ಆದೇಶವಾಗಿ ಬಂದು, ರುಣಧ್+ಧಿ ಎಂದಿರುತ್ತದೆ. "ಝುಲಾಂ ಜಶ್ ಝಶೀ" ಎಂಬ ಸೂತ್ರದಿಂದ ಪ್ರಥಮ 'ಧ್' ಕಾರಕ್ಕೆ 'ದ್' ಕಾರವು ಆದೇಶವಾಗಿ ಬಂದು ರುಣದ್+ಧಿ=ರುಣದ್ಧಿ ಎಂದು ರೂಪವಾಗುತ್ತದೆ.

ಉದಾ ರುನ್ಧಃ/ರುನ್ದ್ಧಃ– ಮೇಲಿನಂತೆಯೇ 'ರುಧ್' ಧಾತುವಿನಲ್ಲಿರುವ ಅಂತ್ಯ 'ಅಚ್' ಆದ 'ಉ' ಕಾರದ ನಂತರ 'ನ' ವಿಕರಣ ಪ್ರತ್ಯಯವು ಬಂದು ಪ್ರಥಮಪುರುಷ ದ್ವಿವಚನದಲ್ಲಿ ರು+ನ+ಧ್+ತಸ್ ಎಂದಿರುತ್ತದೆ. ಆಗ "ಸಾರ್ವಧಾತುಕಮಪಿತ್" ಎಂಬ ಸೂತ್ರದಿಂದ 'ತಸ್' ಪ್ರತ್ಯಯವು 'ಜಿದ್ವದ್ಭಾವ'ವನ್ನು ಹೊಂದುತ್ತದೆ. ಆದುದರಿಂದ "ಶ್ನಸೋರಲ್ಲೋಪಃ" ಎಂಬ ಸೂತ್ರದಿಂದ ವಿಕರಣ ಪ್ರತ್ಯಯವಾದ 'ನ'ಕಾರದಲ್ಲಿರುವ 'ಅ' ಕಾರಕ್ಕೆ ಲೋಪ ಬಂದು ರುನ್ಧ್+ತಸ್ ಎಂದಿರುತ್ತದೆ ಆಗ, "ಜಷಸ್ತಥೋರ್ಧೋಽಧಃ" ಎಂಬ ಸೂತ್ರದಿಂದ 'ತಸ್' ನಲ್ಲಿರುವ 'ತ್' ಕಾರಕ್ಕೆ 'ದ್' ಕಾರವು ಆದೇಶವಾಗಿ ಬಂದಾಗ, ಪ್ರಥಮ 'ಧ್' ಕಾರಕ್ಕೆ "ಝರೋಝರಿ ಸವರ್ಣೇ" ಎಂಬ ಸೂತ್ರದಿಂದ ವೈಕಲ್ಪಿಕ ಲೋಪವು ಬಂದು ರುನ್+ಧಸ್ ಎಂದಿರುತ್ತದೆ. ಆಗ 'ನ್' ಗೆ "ಅಟ್ಕುಪ್ವಾಙ್ ನುಮ್ ವ್ಯವಾಯೇಽಪಿ" ಎಂಬ ಸೂತ್ರದಿಂದ ಣತ್ವವು ಬರುತ್ತದೆ. "ನಶ್ಚಾಽಪದಾನ್ತಸ್ಯ ಝಲಿ" ಎಂಬ ಸೂತ್ರದಿಂದ ಅನುಸ್ವಾರವೂ, ಬರಬೇಕಾಗುತ್ತದೆ. ಈ ಎರಡೂ ಸೂತ್ರಗಳು ತ್ರಿಪಾದಿಯಲ್ಲಿರುತ್ತವೆ. ಆದರೆ 'ಣತ್ವ' ವಿಧಾಯಕ ಸೂತ್ರಕ್ಕೆ ಪರತ್ರಿಪಾದಿ ಆಗುವುದರಿಂದ ಪೂರ್ವ ತ್ರಿಪಾದಿಯು ಅನುಸ್ವಾರವಿಧಾಯಕ ಸೂತ್ರವನ್ನು ಕುರಿತು 'ನತ್ವ' ವನ್ನು ವಿಧಿಸುವದು ಅಸಿದ್ಧವಾಗಿರುವುದರಿಂದ ಅನುಸ್ವಾರವೇ ಬರುತ್ತದೆ. "ಅನುಸ್ವಾರಸ್ಯ ಯಯಿ ಪರಸವರ್ಣಃ" ಎಂಬ ಸೂತ್ರದಿಂದ ಅನುಸ್ವಾರಕ್ಕೆ ಪರಸವರ್ಣ ಬಂದು ಮತ್ತೆ 'ನ್' ಕಾರವೇ ಬಂದು ರುನ್ಧಸ್ ಎಂದಿದ್ದಾಗ, 'ಸ್' ಕಾರಕ್ಕೆ ರುತ್ವ–ವಿಸರ್ಗಗಳು ಬಂದು, ರುನ್ಧಃ ಎಂಬ ಮೊದಲನೆಯ ರೂಪವು ಸಿದ್ಧವಾಗುತ್ತದೆ. 'ಧ್' ಕಾರಕ್ಕೆ ಲೋಪ ಬಾರದ ಪಕ್ಷದಲ್ಲಿ, ಮೊದಲನೇ 'ಧ್' ಕಾರಕ್ಕೆ 'ಜಶ್ತ್ವ(ದ್)' ಬಂದು ರುನ್ದ್ಧಃ ಎಂಬ ಎರಡನೇ ರೂಪವು ಸಿದ್ಧವಾಗುತ್ತದೆ.

ಉದಾ– ರುನ್ಧನ್ತಿ – ಮೇಲಿನಂತೆಯೇ 'ರುಧ್' ಧಾತುವಿನಲ್ಲಿರುವ ಅಂತ್ಯ 'ಅಚ್' ಆದ 'ಉ' ಕಾರದ ನಂತರ 'ಶ್ನಮ್(ನ)' ವಿಕರಣ ಪ್ರತ್ಯಯವು ಬಂದು ಪ್ರಥಮ ಪುರುಷ ಬಹುವಚನದಲ್ಲಿ 'ರುಧ್' ಧಾತುವಿನ ನಂತರ ಇರುವ 'ಝಿ' ಪ್ರತ್ಯಯಕ್ಕೆ 'ಅನ್ತ್' ಆದೇಶ ಬಂದು, ರುನಧ್+ಅನ್ತಿ ಎಂದಿರುತ್ತದೆ. ಆಗ "ಸಾರ್ವಧಾತುಕಮಪಿತ್" ಎಂಬ ಸೂತ್ರದಿಂದ 'ಅನ್ತಿ' ಗೆ ಜಿದ್ವದ್ಭಾವ ಬರುತ್ತದೆ. "ಶ್ನಸೋರಲ್ಲೋಪಃ" ಎಂಬ ಸೂತ್ರದಿಂದ ವಿಕರಣ ಪ್ರತ್ಯಯವಾದ 'ನ'ಕಾರದಲ್ಲಿರುವ 'ಅ' ಕಾರಕ್ಕೆ ಲೋಪ ಬಂದು, ರುನ್ಧ್+ಅನ್ತಿ ಎಂದಿರುತ್ತದೆ. 'ನ್' ಕಾರದ ಸ್ಥಾನದಲ್ಲಿ "ನಶ್ಚಾಽಪದಾನ್ತಸ್ಯ ಝಲಿ" ಎಂಬ ಸೂತ್ರದಿಂದ ಅನುಸ್ವಾರವೂ, ಬರಬೇಕಾಗುತ್ತದೆ. ಈ ಎರಡೂ ಸೂತ್ರಗಳು ತ್ರಿಪಾದಿಯಲ್ಲಿರುತ್ತವೆ. ಆದರೆ 'ಣತ್ವ' ವಿಧಾಯಕ ಸೂತ್ರಕ್ಕೆ ಪರತ್ರಿಪಾದಿ(ತ್ರಿಪಾದಿಯಲ್ಲಿ ಪರಸೂತ್ರ)ಯಾಗಿದೆ. ಆದ್ದರಿಂದ ಪೂರ್ವ ತ್ರಿಪಾದಿಯು(ತ್ರಿಪಾದಿಯಲ್ಲಿ ಪೂರ್ವಸೂತ್ರ) ಅನುಸ್ವಾರವಿಧಾಯಕ ಸೂತ್ರವನ್ನು ಕುರಿತು 'ನತ್ವ'ವನ್ನು ವಿಧಿಸುವದು ಅಸಿದ್ಧವಾಗಿರುವುದರಿಂದ ಅನುಸ್ವಾರವೇ ಬರುತ್ತದೆ. "ಅನುಸ್ವಾರಸ್ಯ ಯಯಿ ಪರಸವರ್ಣಃ" ಎಂಬ ಸೂತ್ರದಿಂದ ಅನುಸ್ವಾರಕ್ಕೆ ಪರಸವರ್ಣ ಬಂದು ಮತ್ತೆ 'ನ್'

ಕಾರವೇ ಬರುತ್ತದೆ. ಆಗ ರುನ್ಧನ್ತಿ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ರುಣತ್ಸಿ: ರುಧ್ ಧಾತುವಿನ ನಂತರ ಮಧ್ಯಮಪುರುಷ ಏಕವಚನದಲ್ಲಿ 'ಸಿಪ್(ಸಿ) ಇದ್ದಾಗ, ಧಾತುವಿನ ಪರದಲ್ಲಿ 'ಶ್ನಮ್(ನ)' ಬಂದು ರುನಧ್+ಸಿ ಎಂದಿರುತ್ತದೆ. ಇದು 'ಪಿತ್' ಆಗಿ ಇರುವುದರಿಂದ "ಸಾರ್ವಧಾತುಕಮಪಿತ್" ಎಂಬ ಸೂತ್ರದಿಂದ 'ಸಿ' ಗೆ ಙಿದ್ವದ್ಭಾವ ಬರುವುದಿಲ್ಲ. ಆದುದರಿಂದ "ಶ್ನಸೋರಲ್ಲೋಪಃ" ಎಂಬ ಸೂತ್ರದಿಂದ ವಿಕರಣ ಪ್ರತ್ಯಯವಾದ 'ನ'ಕಾರದಲ್ಲಿರುವ 'ಅ' ಕಾರಕ್ಕೆ ಲೋಪ ಬರುವುದಿಲ್ಲ. ಆದ್ದರಿಂದ ರುನಧ್+ಸಿ ಎಂದಿರುತ್ತದೆ. 'ನ' ಕಾರಕ್ಕ 'ಣತ್ವ' ಮತ್ತು 'ಧ್' ಕಾರಕ್ಕೆ ಜಶ್ತ್ವ(ದ್) ಮಾಡಿದಾಗ ರುಣದ್+ಸಿ ಎಂದಿರುತ್ತದೆ. 'ಸ್' ಕಾರವು ಪರದಲ್ಲಿರುವುದರಿಂದ 'ದ್' ಕಾರಕ್ಕೆ "ಖರಿಚ" ಎಂಬ ಸೂತ್ರದಿಂದ ಚರ್ತ್ವ(ತ್) ಕಾರ ಬಂದು ರುಣತ್+ಸಿ=ರುಣತ್ಸಿ ಎಂದು ರೂಪವಾಗುತ್ತದೆ.

ಉದಾ– ರುನ್ಧಃ/ರುನ್‌ದ್ಧಃ : ರುಧ್ ಧಾತುವಿನ ನಂತರ ಮಧ್ಯಮ ಪುರುಷ ದ್ವಿ ವಚನದಲ್ಲಿ 'ಥಸ್' ಪ್ರತ್ಯಯವಿದ್ದಾಗ, 'ರು' ವಿನಲ್ಲಿರುವ 'ಉ' ಕಾರದ ನಂತರ 'ಶ್ನಮ್(ನ)' ಬಂದು ರುನಧ್+ಥಸ್ ಎಂದಿರುತ್ತದೆ. "ಸಾರ್ವಧಾತುಕಮಪಿತ್" ಎಂಬ ಸೂತ್ರದಿಂದ 'ಅನ್ತಿ' ಗೆ ಙಿದ್ವದ್ಭಾವ ಬರುತ್ತದೆ. "ಶ್ನಸೋರಲ್ಲೋಪಃ" ಎಂಬ ಸೂತ್ರದಿಂದ ವಿಕರಣ ಪ್ರತ್ಯಯವಾದ 'ನ'ಕಾರದಲ್ಲಿರುವ 'ಅ' ಕಾರಕ್ಕೆ ಲೋಪ ಬಂದು, ರುನ್‌ಧ್+ಥಸ್ ಎಂದಿರುತ್ತದೆ. "ಜಷಸ್ತಥೋರ್ಧೋಽಧಃ" ಎಂಬ ಸೂತ್ರದಿಂದ 'ಥಸ್' ನಲ್ಲಿರುವ 'ಥ್' ಕಾರಕ್ಕೆ 'ಧ್' ಕಾರವು ಬಂದು ಪ್ರಥಮ 'ಧ್' ಕಾರಕ್ಕೆ "ಝರೋಝರಿ ಸವರ್ಣೇ" ಎಂಬ ಸೂತ್ರದಿಂದ ವೈಕಲ್ಪಿಕ ಲೋಪವು ಬಂದು ರುನ್+ಧಸ್ ಎಂದಿರುತ್ತದೆ. 'ನ್' ಕಾರದ ಸ್ಥಾನದಲ್ಲಿ "ನಶ್ಚಾಪದಾನ್ತಸ್ಯ ಝಲಿ" ಎಂಬ ಸೂತ್ರದಿಂದ ಅನುಸ್ವಾರ ಬಂದು, "ಅನುಸ್ವಾರಸ್ಯ ಯಯಿ ಪರಸವರ್ಣಃ" ಎಂಬ ಸೂತ್ರದಿಂದ ಅನುಸ್ವಾರಕ್ಕೆ ಪರಸವರ್ಣ ಬಂದು ಮತ್ತೆ 'ನ್' ಕಾರವೇ ಬಂದು ರುನ್ಧಸ್ ಎಂದಿದ್ದಾಗ, ರುತ್ವ–ವಿಸರ್ಗಗಳಿಂದ ರುನ್ಧಃ ಎಂದು ರೂಪವು ಸಿದ್ಧವಾಗುತ್ತದೆ.

'ಧ್' ಕಾರಕ್ಕೆ ಲೋಪ ಬಾರದ ಪಕ್ಷದಲ್ಲಿ ಪ್ರಥಮ 'ಧ್' ಕಾರಕ್ಕೆ 'ಜಶ್ತ್ವ(ದ್)' ಬಂದು, ರುನ್‌ದ್‌ಧಃ ಎಂದು ರೂಪವಾಗುತ್ತದೆ.

ಉದಾ– ರುನ್ಧ/ರುನ್‌ದ್‌ಧ – ಮೇಲಿನಂತೆಯೇ ಪ್ರಕ್ರಿಯೆ ನಡೆದು ಮಧ್ಯಮಪುರುಷ ಬಹುವಚನದಲ್ಲಿ ರುನ್ಧ ಮತ್ತು ರುನ್‌ದ್‌ಧ ಎಂಬ ಎರಡು ರೂಪಗಳು ಸಿದ್ಧವಾಗುತ್ತವೆ.

ಉದಾ– ರುಣಧ್ಮಿ– 'ರುಧ್' ಧಾತುವಿನ ಮೇಲೆ ಉತ್ತಮಪುರುಷ ಏಕವಚನದಲ್ಲಿ 'ಮಿಪ್(ಮಿ)' ಬಂದಮೇಲೆ, ಧಾತುವಿನ ಪರದಲ್ಲಿ 'ಶ್ನಮ್(ನ)' ಬಂದು ರುನಧ್+ಮಿ ಎಂದಿರುತ್ತದೆ. ಇದು 'ಪಿತ್' ಆಗಿ ಇರೋಣದ್ದರಿಂದ "ಸಾರ್ವಧಾತುಕಮಪಿತ್" ಎಂಬ ಸೂತ್ರದಿಂದ 'ಮಿ' ಗೆ ಙಿದ್ವದ್ಭಾವ ಬರುವುದಿಲ್ಲ. ಹೀಗಾಗಿ "ಶ್ನಸೋರಲ್ಲೋಪಃ" ಎಂಬ ಸೂತ್ರದಿಂದ ವಿಕರಣ ಪ್ರತ್ಯಯವಾದ 'ನ'ಕಾರದಲ್ಲಿರುವ 'ಅ' ಕಾರಕ್ಕೆ ಲೋಪ ಬರುವುದಿಲ್ಲ. ಹೀಗಾಗಿ  ರುನಧ್+ಮಿ ಎಂದೇ ಇರುತ್ತದೆ. ನಂತರ 'ನ್' ಕಾರಕ್ಕೆ 'ಣತ್ವ' ಮತ್ತು 'ಧ್' ಕಾರಕ್ಕೆ ಜಶ್ತ್ವ(ದ್) ಬಂದು ರುಣದ್+ಮಿ=ರುಣದ್ಮಿ ಎಂದು

ರೂಪವು ಸಿದ್ಧವಾಗುತ್ತದೆ.

ಉದಾ– ರುನ್ಧ್ವಃ – 'ರುಧ್' ಧಾತುವಿನ ಮೇಲೆ ಉತ್ತಮಪುರುಷ ದ್ವಿವಚನದಲ್ಲಿ 'ವಸ್(ವಃ)' ಪ್ರತ್ಯಯ ಬಂದಮೇಲೆ, ಧಾತುವಿನ ಪರದಲ್ಲಿ 'ಶ್ನಮ್(ನ)' ಬಂದು ರುನಧ್+'ವಸ್' ಎಂದಿರುತ್ತದೆ. ಆಗ "ಸಾರ್ವಧಾತುಕಮಪಿತ್" ಎಂಬ ಸೂತ್ರದಿಂದ 'ವಸ್' ಗೆ ಙಿದ್ವದ್ಭಾವ ಬರುತ್ತದೆ. ಆದುದರಿಂದ "ಶ್ನಸೋರಲ್ಲೋಪಃ" ಎಂಬ ಸೂತ್ರದಿಂದ ವಿಕರಣ ಪ್ರತ್ಯಯವಾದ 'ನ'ಕಾರದಲ್ಲಿರುವ 'ಅ' ಕಾರಕ್ಕೆ ಲೋಪ ಬಂದು, ರುನ್‌ಧ್+ವಸ್ ಎಂದಿರುತ್ತದೆ. 'ನ್' ಕಾರಕ್ಕೆ "ನಶ್ಚಾಪದಾನ್ತಸ್ಯ ಝಲಿ" ಎಂಬ ಸೂತ್ರದಿಂದ ಅನುಸ್ವಾರ ಬಂದು ಅದಕ್ಕೆ "ಅನುಸ್ವಾರಸ್ಯ ಯಯಿ ಪರಸವರ್ಣಃ" ಎಂಬ ಸೂತ್ರದಿಂದ ಅನುಸ್ವಾರಕ್ಕೆ ಪರಸವರ್ಣ ಬಂದು ಮತ್ತೆ 'ನ್' ಕಾರವೇ ಬಂದು ರುನ್‌ಧ್+ವಸ್ ಎಂದಿದ್ದಾಗ 'ಸ್' ಕಾರಕ್ಕೆ ರುತ್ವ–ವಿಸರ್ಗಗಳಿಂದ ರುನ್ಧ್ವಃ ಎಂದು ರೂಪವಾಗುತ್ತದೆ.

ರುನ್ಧ್ಮಃ– ಮೇಲಿನಂತೆಯೇ ಪ್ರಕ್ರಿಯೆ ನಡೆದು ಉತ್ತಮಪುರುಷ ಬಹುವಚನದಲ್ಲಿ ರುನ್ಧ್ಮಃ ಎಂದು ರೂಪವಾಗುತ್ತದೆ.

ಲಟ್: ಪರಸ್ಮೈ ಪದದ ರೂಪಗಳು– ರುಣದ್ಧಿ, ರುನ್ಧಃ/ರುನ್‌ದ್‌ಧಃ, ರುನ್ಧನ್ತಿ। ರುಣತ್ಸಿ, ರುನ್ಧಃ, ರುದ್ಧಃ/ರುನ್‌ದ್‌ಧಃ, ರುನ್ಧ/ರುನ್‌ದ್‌ಧ। ರುಣಧ್ಮಿ, ರುನ್ಧ್ವಃ, ರುನ್ಧ್ಮಃ।

ಆತ್ಮನೇ ಪದದಲ್ಲಿ 'ಪಿತ್' ಆಗಿ ಇಲ್ಲದೇ ಇರೋಣದ್ದರಿಂದ ಎಲ್ಲ ಪ್ರತ್ಯಯಗಳೂ "ಸಾರ್ವಧಾತುಕಮಪಿತ್" ಎಂಬ ಸೂತ್ರದಿಂದ ಙಿದ್ವದ್ಭಾವ ಹೊಂದುತ್ತವೆ. ಆದುದರಿಂದ "ಶ್ನಸೋರಲ್ಲೋಪಃ" ಎಂಬ ಸೂತ್ರದಿಂದ ವಿಕರಣ ಪ್ರತ್ಯಯವಾದ 'ನ' ಕಾರದಲ್ಲಿರುವ 'ಅ' ಕಾರಕ್ಕೆ ಎಲ್ಲೆಡೆಯಲ್ಲೂ ಲೋಪ ಬರುತ್ತದೆ. ಹೀಗೆ ಕೆಳಗಿನಂತೆ ಆತ್ಮನೇ ಪದದ ರೂಪಗಳು ಸಿದ್ಧವಾಗುತ್ತವೆ.

ಆತ್ಮನೇ ಪದದ ರೂಪಗಳು–ರುನ್ಧೇ, ರುನ್ಧಾತೇ, ರುನ್ಧತೇ। ರುನ್ತ್ಸೇ, ರುನ್ಧಾಥೇ, ರುನ್ಧ್ವೇ। ರುನ್ಧೇ, ರುನ್ಧ್ವಹೇ, ರುನ್ಧ್ಮಹೇ।

ಲಿಟ್:ಪರಸ್ಮೈ ಪದದಲ್ಲಿ 'ಲಿಟ್' ಗೆ 'ತಿಪ್' ಬಂದು ಅದಕ್ಕೆ 'ಣಲ್(ಅ)' ಬಂದು ನಂತರ ಧಾತು ದ್ವಿತ್ವವಾದಮೇಲೆ ಕೆಳಗಿನಂತೆ ರೂಪಗಳು ಆಗುತ್ತವೆ.

ಪರಸ್ಮೈ ಪದದ ರೂಪಗಳು: ರುರೋಧ, ರುರುಧತುಃ, ರುರುಧುಃ। ರುರೋಧಿಥ, ರುರುಧಥುಃ, ರುರುಧ। ರುರೋಧ, ರುರುಧಿವ, ರುರುಧಿಮ।

ಆತ್ಮನೇ ಪದದಲ್ಲಿ ರೂಪಗಳು: ರುರುಧೇ, ರುರುಧಾತೇ, ರುರುಧಿರೇ। ರುರುಧಿಷೇ, ರುರುಧಾಥೇ, ರುರುಧಿಧ್ವೇ। ರುರುಧೇ, ರುರುಧಿವಹೇ, ರುರುಧಿಮಹೇ।

ಲುಟ್: ರುಧ್+ತಾ ಎಂದಿದ್ದಾಗ "ಜಷಸ್ತಥೋರ್ಧೋಽಧಃ" ಎಂಬ ಸೂತ್ರದಿಂದ 'ತ್' ಕಾರಕ್ಕೆ 'ಧ್' ಕಾರವು ಬಂದು, ಮೊದಲನೇ 'ಧ್' ಕಾರಕ್ಕೆ 'ಜಶ್ತ್ವ'ದಿಂದ 'ದ್' ಕಾರ ಬಂದು ಲಘೂಪಧಗುಣದಿಂದ 'ಉ' ಕಾರಕ್ಕೆ ಗುಣ ಬಂದು ರೋಧ್+ಧಾ=ರೋದ್ಧಾ ಎಂದಾಗುತ್ತದೆ. ಹೀಗೆ ಕೆಳಗಿನಂತೆ ಎಲ್ಲ ರೂಪಗಳು ಸಿದ್ಧವಾಗುತ್ತವೆ.

ಪರಸ್ಮೈ ಪದದ ರೂಪಗಳು: ರೋದ್ಧಾ, ರೋದ್ಧಾರೌ, ರೋದ್ಧಾರಃ। ರೋದ್ಧಾಸಿ, ರೋದ್ಧಾಸ್ಥಃ, ರೋದ್ಧಾಸ್ಥ। ರೋದ್ಧಾಸ್ಮಿ, ರೋದ್ಧಾಸ್ವಃ, ರೋದ್ಧಾಸ್ಮಃ।

ಆತ್ಮನೇ ಪದದಲ್ಲಿ ರೂಪಗಳು: ರೋದ್ಧಾ, ರೋದ್ಧಾರೌ, ರೋದ್ಧಾರಃ। ರೋದ್ಧಾಸೇ, ರೋದ್ಧಾಸಾಥೇ, ರೋದ್ಧಾಧ್ವೇ। ರೋದ್ಧಾಹೇ, ರೋದ್ಧಾಸ್ವಹೇ, ರೋದ್ಧಾಸ್ಮಹೇ।

ಲೃಟ್: ಪರಸ್ಮೈ ಪದದ ರೂಪಗಳು: ರೋತ್ಸ್ಯತಿ, ರೋತ್ಸ್ಯತಃ, ರೋತ್ಸ್ಯನ್ತಿ। ರೋತ್ಸ್ಯಸಿ, ರೋತ್ಸ್ಯಥಃ, ರೋತ್ಸ್ಯಥ। ರೋತ್ಸ್ಯಾಮಿ, ರೋತ್ಸ್ಯಾವಃ, ರೋತ್ಸ್ಯಾಮಃ।

ಆತ್ಮನೇ ಪದದಲ್ಲಿ ರೂಪಗಳು: ರೋತ್ಸ್ಯತೇ, ರೋತ್ಸ್ಯೇತೇ, ರೋತ್ಸ್ಯನ್ತೇ। ರೋತ್ಸ್ಯಸೇ, ರೋತ್ಸ್ಯೇಥೆ, ರೋತ್ಸ್ಯಧ್ವೇ।ರೋತ್ಸ್ಯೇ, ರೋತ್ಸ್ಯಾವಹೇ, ರೋತ್ಸ್ಯಾಮಹೇ।

ಲೋಟ್:ಪರಸ್ಮೈ ಪದದಲ್ಲಿ ಪ್ರಥಮಪುರುಷ ಏಕ ವಚನದಲ್ಲಿ ರುಣದ್ಧಿ ಎಂಬಲ್ಲಿಯ 'ಧ್' ಕಾರೋತ್ತರ 'ಇ' ಕಾರಕ್ಕೆ "ಏರುಃ" ಎಂಬ ಸೂತ್ರದಿಂದ 'ಉತ್ವ', "ಜಷಸ್ತಥೋರ್ಧೋಽಧಃ" ಎಂಬ ಸೂತ್ರದಿಂದ 'ಧ್' ಕಾರ, ನಂತರ ಪ್ರಥಮ 'ಧ್' ಕಾರಕ್ಕೆ 'ಜಶ್ತ್ವ'ಗಳಾದ ಮೇಲೆ ರುಣದ್ಧು/ರುನ್ಧಾತ್/ರುನ್‌ದ್‌ಧಾತ್, ರುನ್ಧಾಮ್/ ರುನ್‌ದ್‌ಧಾಮ್, ರುನ್ಧನ್ತು। ಎಂದು ರೂಪಗಳಾಗುತ್ತವೆ.

ಮಧ್ಯಮಪುರುಷ ಏಕವಚನದಲ್ಲಿ 'ಸಿಪ್(ಸಿ)' ಇದ್ದಾಗ, "ಸೇರ್ಹ್ಯಪಿಚ್ಚ" ಎಂಬ ಸೂತ್ರದಿಂದ 'ಹಿ' ಆದೇಶ ಬಂದು 'ಹಿ' ಗೆ "ಹುಝಲ್ಭ್ಯೋ ಹೇರ್ಧಿಃ" ಎಂಬ ಸೂತ್ರದಿಂದ 'ಧಿ' ಆದೇಶ ಬಂದು ರುನ್ಧಿ/ರುನ್‌ದ್‌ಧಿ, ಎಂದೂ 'ತಾತಙ್(ತಾತ್)' ಆದೇಶ ಬಂದ ವಿಕಲ್ಪ ಪಕ್ಷದಲ್ಲಿ ರುನ್ಧಾತ್/ರುನ್‌ದ್‌ಧಾತ್ ಎಂದು ರೂಪವಾಗುತ್ತದೆ. ನಂತರ ರುನ್ಧಮ್/ರುನ್‌ದ್‌ಧಮ್, ರುನ್ಧ/ರುನ್‌ದ್‌ಧ। "ಆಡುತ್ತಮಸ್ಯ ಪಿಚ್ಚ" ಎಂಬ ಸೂತ್ರದಿಂದ 'ಆಟ್(ಆ)' ಆಗಮ, ಅದು 'ಪಿತ್' ಆಗಿರುವುದರಿಂದ 'ಙಿದ್ವದ್ಭಾವವು' ಬಾರದೇ 'ನ' ಕಾರದಲ್ಲಿರುವ 'ಅ' ಕಾರಕ್ಕೆ ಲೋಪವು ಬರುವುದಿಲ್ಲ. ಹೀಗಾಗಿ ರುಣಧಾನಿ, ರುಣಧಾವ, ರುಣಧಾಮ ಎಂದು ರೂಪಗಳಾಗುತ್ತವೆ.

ಪರಸ್ಮೈಪದ – ಪ್ರ. ಪು ಏಕವಚನದಲ್ಲಿ – ರುಣದ್ಧು/ರುನ್ಧಾತ್/ರುನ್‌ದ್‌ಧಾತ್,

ದ್ವಿವಚನದಲ್ಲಿ –ರುನ್ಧಾಮ್/ರುನ್‌ದ್‌ಧಾಮ್,

ಬಹುವಚನದಲ್ಲಿ– ರುನ್ಧನ್ತು।

ಮ. ಪು ಏಕವಚನದಲ್ಲಿ– ರುನ್ಧಿ/ರುನ್‌ದ್‌ಧಿ, ಎಂದೂ,

ತಾತಙ್ ಆದೇಶ ಪಕ್ಷದಲ್ಲಿ ರುನ್ಧಾತ್/ರುನ್‌ದ್‌ಧಾತ್

ದ್ವಿ ವಚನದಲ್ಲಿ – ರುನ್ಧಮ್/ರುನ್‌ದ್‌ಧಮ್,

ಬ. ವಚನದಲ್ಲಿ –ರುನ್ಧ/ರುನ್‌ದ್‌ಧ।

ಉ. ಪುರುಷದಲ್ಲಿ – ರುಣಧಾನಿ, ರುಣಧಾವ, ರುಣಧಾಮ

ಆತ್ಮನೇ ಪದ

ಪ್ರ. ಪು – ರುನ್ಧಾಮ್/ರುನದ್‌ಧಾಮ್। ರುನ್ಧಾತಾಮ್/ರುನ್ಧತಾಮ್

ಮ. ಪು – ರುಣತ್ಸ್ವ, ರುನ್ಧಾಥಾಮ್, ರುನ್ಧ್ವಮ್/ರುನ್ ಧ್ ಧ್ವಮ್।

ಉ. ಪು – ರುಣಧ್ಯೆ, ರುಣಧಾವಹ್ಯೆ, ರುಣಧಾಮಹ್ಯೆ।

ಲಙ್: ಪರಸ್ಮೈಪದ ಪ್ರಥಮ ಪುರುಷ ಏಕವಚನದಲ್ಲಿ–ಅರುಣ್‌ಧ್+ತಿ ಎಂದಿದ್ದಾಗ, "ಹಲ್ಙ್ಯಾಭ್ಯೋದೀರ್ಘಾತ್ ಸುತಿಸ್ಯಪೃಕ್ತಂ ಹಲ್" ಎಂಬ ಸೂತ್ರದಿಂದ ಅಪೃಕ್ತವಾದ 'ತ್' ಕಾರಕ್ಕೆ ಲೋಪ ಬಂದು ಪದಾನ್ತದಲ್ಲಿರುವ 'ಧ್' ಕಾರಕ್ಕೆ "ಝಲಾಮ್ ಜಶೋಽನ್ತೇ" ಎಂಬ ಸೂತ್ರದಿಂದ 'ಜಶ್ತ್ವ(ದ್)' ಬಂದು, ಅದಕ್ಕೆ "ವಾಽವಸಾನೇ" ಎಂಬ ಸೂತ್ರದಿಂದ 'ಚರ್ತ್ವ(ತ್)' ಬಂದು, 'ನ್' ಕಾರಕ್ಕೆ ಣತ್ವ(ಣ್) ಬಂದು, ಅರುಣತ್, ಅರುಣದ್ ಎಂದು ರೂಪಗಳಾಗುತ್ತವೆ.

ಇದೇ ರೀತಿಯಲ್ಲಿ ಮಧ್ಯಮಪುರುಷ ಏಕವಚನದಲ್ಲಿ 'ಸಿಪ್(ಸ್)' ಬಂದಾಗ, "ದಶ್ಚ" ಎಂಬ ಸೂತ್ರದಿಂದ ರುತ್ವ–ವಿಸರ್ಗಗಳು ಬಂದು ಅರುಣಃ ಎಂದಾಗುತ್ತದೆ.

ಪರಸ್ಮೈ ಪದದ ರೂಪಗಳು–

ಪ್ರ. ಪು –ಅರುಣತ್/ಅರುಣದ್, ಅರುನ್ಧಾಮ್/ಅರುನ್‌ದ್‌ಧಾಮ್, ಅರುನ್ಧನ್।

ಮ. ಪು.– ಅರುಣಃ/ಅರುಣತ್/ಅರುಣದ್, ಅರುನ್ಧಮ್/ಅರುನ್‌ದ್‌ಧಮ್, ಅರುನ್ಧ/ಅರುನ್‌ದ್‌ಧ।

ಉ. ಪು. – ಅರುಣಧಮ್, ಅರುನ್ಧ್ವ, ಅರುನ್ಧ್ಮ।

ಆತ್ಮನೇ ಪದದ ರೂಪಗಳು–

ಪ್ರ.ಪು– ಅರುನ್ಧ/ಅರುನ್‌ದ್‌ಧ, ಅರುನ್ಧಾತಾಮ್, ಅರುನ್ಧತ।

ಮ.ಪು.–ಅರುನ್ಧಾಃ/ಅರುನ್‌ದ್‌ಧಾಃ,ಅರುನ್ಧಾಥಾಮ್, ಅರುನ್ಧ್ವಮ್/ಅರುನ್‌ದ್‌ಧ್ವಮ್।

ಉ.ಪು. ಅರುನ್ಧಿ, ಅರುನ್ಧ್ವಹಿ, ಅರುನ್ಧ್ಮಹಿ।

ವಿ.ಲಿಙ್:–ಪರಸ್ಮೈದದಲ್ಲಿ –ರುನ್ಧ್ಯಾತ್, ರುನ್ಧ್ಯಾತಾಮ್,ರುನ್ಧ್ಯುಃ। ರುನ್ಧ್ಯಾಃ, ರುನ್ಧ್ಯಾತಮ್, ರುನ್ಧ್ಯಾತ। ರುನ್ಧ್ಯಾಮ್, ರುನ್ಧ್ಯಾವ, ರುನ್ಧ್ಯಾಮ।

ಆತ್ಮನೇ ಪದದಲ್ಲಿ– ರುನ್ಧೀತ, ರುನ್ಧೀಯಾತಾಮ್, ರುನ್ಧೀರನ್। ರುನ್ಧೀಥಾಃ, ರುನ್ಧೀಯಾಥಾಮ್, ರುನ್ಧೀಧ್ವಮ್। ರುನ್ಧೀಯ, ರುನ್ಧೀವಹಿ, ರುನ್ಧೀಮಹಿ।

ಆ.ಲಿಙ್:–ಪರಸ್ಮೈ ಪದದಲ್ಲಿ– ರುಧ್ಯಾತ್, ರುಧ್ಯಾಸ್ತಾಮ್, ರುಧ್ಯಾಸುಃ। ರುಧ್ಯಾಃ, ರುಧ್ಯಾಸ್ತಮ್, ರುಧ್ಯಾಸ್ತ। ರುಧ್ಯಾಸಮ್, ರುಧ್ಯಾಸ್ವ, ರುಧ್ಯಾಸ್ಮ।

ಆತ್ಮನೇ ಪದದಲ್ಲಿ – ರುತ್ಸೀಷ್ಟ, ರುತ್ಸೀಯಾಸ್ತಾಮ್, ರುತ್ಸೀರನ್। ರುತ್ಸೀಷ್ಠಾಃ, ರುತ್ಸೀಯಾಸ್ಥಾಮ್, ರುತ್ಸೀಧ್ವಮ್। ರುತ್ಸೀಯ, ರುತ್ಸೀವಹಿ, ರುತ್ಸೀಮಹಿ।

ಲುಙ್:ಪರಸ್ಮೈ ಪದದಲ್ಲಿ– "ಇರಿತೋವಾ" ಎಂಬ ಸೂತ್ರದಿಂದ 'ಚ್ಲಿ' ಗೆ ವಿಕಲ್ಪದಿಂದ 'ಅಙ್' ಆದೇಶ ಬಂದು ಕೆಳಗಿನ ರೂಪಗಳು ಸಿದ್ಧವಾಗುತ್ತವೆ.'ಅಙ್' ಬಂದ ಪಕ್ಷದಲ್ಲಿ –ಅರುಧತ್, ಅರುಧತಾಮ್,ಅರುಧನ್। ಅರುಧಃ, ಅರುಧತಮ್, ಅರುಧತ। ಅರುಧಮ್,

ಅರುಧಾವ, ಅರುಧಾಮ।

'ಅಙ್' ಬಾರದ ಪಕ್ಷದಲ್ಲಿ – 'ಚ್ಲಿ' ಗೆ 'ಸಿಚ್' ಬಂದು "ವದವ್ರಹಲನ್ತಸ್ಯಾಚಃ' ಎಂಬ ಸೂತ್ರದಿಂದ ವೃದ್ಧಿ ಬಂದು 'ಧ್' ಕಾರಕ್ಕೆ ಚರ್ತ್ವ(ತ್) ಬಂದು, ಕೆಳಗಿನ ರೂಪಗಳು ಸಿದ್ಧವಾಗುತ್ತವೆ.

ರೂಪಗಳು: ಅರೌತ್ಸೀತ್, ಅರೌದ್ಧಾಮ್, ಅರೌತ್ಸುಃ। ಅರೌತ್ಸೀಃ, ಅರೌದ್ಧಮ್, ಅರೌದ್ಧ। ಅರೌತ್ಸಮ್, ಅರೌತ್ಸ್ವ, ಅರೌತ್ಸ್ಮ।

ಆತ್ಮನೇ ಪದದಲ್ಲಿ ರೂಪಗಳು: – ಅರುದ್ಧ, ಅರುತ್ಸಾತಾಮ್, ಅರುತ್ಸತ। ಅರುದ್ಧಾಃ, ಅರುತ್ಸಾಥಾಮ್, ಅರುದ್ಧ್ವಮ್/ಅರುದ್‌ಧ್ವಮ್। ಅರುತ್ಸಿ, ಅರುತ್ಸ್ವಹಿ, ಅರುತ್ಸ್ಮಹಿ।

ಲೃಙ್:ಪರಸ್ಮೈ ಪದದಲ್ಲಿ – ಅರೋತ್ಸ್ಯತ್, ಅರೋತ್ಸ್ಯತಾಮ್, ಅರೋತ್ಸ್ಯನ್। ಅರೋತ್ಸ್ಯಃ, ಅರೋತ್ಸ್ಯತಮ್, ಅರೋತ್ಸ್ಯತ। ಅರೋತ್ಸ್ಯಮ್, ಅರೋತ್ಸ್ಯಾವ, ಅರೋತ್ಸ್ಯಾಮ।

ಆತ್ಮನೇ ಪದದಲ್ಲಿ–ಅರೋತ್ಸ್ಯತ, ಅರೋತ್ಸ್ಯೇತಾವ್, ಅರೋತ್ಸ್ಯನ್ತ। ಅರೋತ್ಸ್ಯಥಾಃ, ಅರೋತ್ಸ್ಯೇಥಾವ್, ಅರೋತ್ಸ್ಯಧ್ವವ್। ಅರೋತ್ಸ್ಯೇ, ಅರೋತ್ಸ್ಯಾವಹಿ, ಅರೋತ್ಸ್ಯಾಮಹಿ।

ಧಾತು 2. ಭಿದಿರ್ ವಿದಾರಣೆ – (ಮುರಿಯುವುದು,ಹರಿಯುವುದು,ಸೀಳುವುದು) ಇದರಲ್ಲಿ 'ಭಿದ್' ಮಾತ್ರ ಉಳಿಯುತ್ತದೆ.

ವಿಶೇಷ: ಈ ಧಾತುವಿನ ರೂಪಗಳೂ 'ರುಧ್' ಧಾತುವಿನಂತೆಯೇ ಇರುತ್ತವೆ. "ಝರೋ ಝರಿ ಸವರ್ಣೇ" ಎಂಬ ಸೂತ್ರದಿಂದ ಎಲ್ಲೆಲ್ಲಿ 'ಝರ್' ನ ಲೋಪವು ಆಗುತ್ತದೋ ಅಂತಹ ಲೋಪ ಪಕ್ಷದ ರೂಪಗಳನ್ನು ಮಾತ್ರ ಕೊಡಲಾಗಿದೆ. ಲೋಪಾಭಾವ ಪಕ್ಷದ ರೂಪಗಳನ್ನು ತಾವಾಗಿಯೇ ಊಹಿಸಿಕೊಳ್ಳಬಹುದು.

ಲಟ್:ಪರಸ್ಮೈ ಪದದ ರೂಪಗಳು – ಭಿನತ್ತಿ, ಭಿನ್ತಃ, ಭಿನ್ದನ್ತಿ। ಭಿನತ್ಸಿ, ಭಿನ್ಥಃ, ಭಿನ್ಥ। ಭಿನದ್ಮಿ, ಭಿನ್ದ್ವಃ, ಭಿನ್ದ್ಮಃ।

ಆತ್ಮನೇ ಪದದ ರೂಪಗಳು– ಭಿನ್ತೇ, ಭಿನ್ದಾತೇ, ಬಿನ್ದತೇ। ಭಿನ್ತ್ಸೇ, ಭಿನ್ದಾಥೇ, ಭಿನ್ಧ್ವೇ। ಭಿನ್ದೇ, ಭಿನ್ದ್ವಹೇ, ಭಿನ್ದ್ಮಹೇ।

ಲಿಟ್:ಪರಸ್ಮೈ ಪದದ ರೂಪಗಳು – ಬಿಭೇದ, ಬಿಭೇದತುಃ, ಬಿಭಿದುಃ। ಬಿಭೇದಿತ, ಬಿಭಿದತುಃ, ಬಿಭಿದ। ಬಿಭೇದ, ಬಿಭಿದಿವ, ಬಿಭಿದಿಮ।

ಆತ್ಮನೇ ಪದದ ರೂಪಗಳು – ಬಿಭಿದೇ, ಬಿಭಿದಾತೇ, ಬಿಭಿದಿರೇ। ಬಿಭಿದಿಷೇ, ಬಿಭಿದಾತೇ, ಬಿಭಿದಿಧ್ವೇ। ಬಿಭಿದೇ, ಬಿಭಿದಿವಹೇ, ಬಿಭಿದಿಮಹೇ।

ಲುಟ್: ಪರಸ್ಮೈ ಪದದ ರೂಪಗಳು– ಭೇತ್ತಾ, ಭೇತ್ತಾರೌ, ಭೇತ್ತಾರಃ। ಭೇತ್ತಾಸಿ, ಭೇತ್ತಾಸ್ಥಃ, ಭೇತ್ತಾಸ್ಥ। ಭೇತ್ತಾಸ್ಮಿ, ಭೇತ್ತಾಸ್ವಃ, ಭೇತ್ತಾಸ್ಮಃ।

ಆತ್ಮನೇ ಪದದ ರೂಪಗಳು – ಭೇತ್ತಾ, ಭೇತ್ತಾರೌ, ಭೇತ್ತಾರಃ। ಭೇತ್ತಾಸೇ,

ಭೇತ್ತಾಸಾಥೇ, ಭೇತ್ತಾಧ್ವೇ। ಭೇತ್ತಾಹೇ, ಭೇತ್ತಾಸ್ವಹೇ, ಭೇತ್ತಾಸ್ಮಹೇ

ಲೃಟ್:ಪರಸ್ಮೈ ಪದದ ರೂಪಗಳು – ಭೇತ್ಸ್ಯತಿ, ಭೇತ್ಸ್ಯತಃ, ಭೇತ್ಸ್ಯನ್ತಿ। ಭೇತ್ಸ್ಯಸಿ, ಭೇತ್ಸ್ಯಥಃ, ಭೇತ್ಸ್ಯಥ। ಭೇತ್ಸ್ಯಾಮಿ, ಭೇತ್ಸ್ಯಾವಃ, ಭೇತ್ಸ್ಯಾಮಃ।

ಆತ್ಮನೇ ಪದದ ರೂಪಗಳು – ಭೇತ್ಸ್ಯತೇ, ಭೇಸ್ಯೇತೇ, ಭೇತ್ಸ್ಯನ್ತೇ। ಭೇತ್ಸ್ಯಸೇ, ಭೇತ್ಸ್ಯೇಥೇ, ಭೇತ್ಸ್ಯಧ್ವೇ। ಭೇತ್ಸ್ಯೇ, ಭೇತ್ಸ್ಯಾವಹೇ, ಭೇತ್ಸ್ಯಾಮಹೇ।

ಲೋಟ್: ಪರಸ್ಮೈ ಪದದ ರೂಪಗಳು– ಭಿನತ್ತು/ಭಿನ್ತಾತ್, ಭಿನ್ತಾಮ್, ಭಿನ್ದನ್ತು। "ಹೂಝುಲ್ಭ್ಯೋಹೇರ್ಧಿಃ" ಎಂಬ ಸೂತ್ರದಿಂದ ಭಿನ್ಧಿ ಎಂದು ರೂಪವಾಗುತ್ತದೆ 'ತಾತಙ್' ಬಂದಾಗ ಭಿನ್ತಾತ್, ಎಂದು ರೂಪವಾಗುತ್ತದೆ. ಭಿನ್ತಮ್, ಭಿನ್ತ। ಭಿನದಾನಿ, ಭೀದಾವ, ಭಿನದಾಮ।

ಆತ್ಮನೇ ಪದದ ರೂಪಗಳು – ಭಿನ್ತಾಮ್, ಭಿನ್ದಾತಾಮ್, ಭಿನ್ದತಾಮ್। ಭಿನ್ತ್ಸ್ವ ಭಿನ್ದಾಥಾಮ್, ಭಿನ್ಧ್ವಮ್। ಭಿನದೈ, ಭಿನದಾವಹೈ, ಭಿನದಾಮಹೈ।

ಲಙ್:–ಪರಸ್ಮೈ ಪದದ ರೂಪಗಳು – ಅಭಿನತ್/ಅಭಿನದ್, ಅಭಿನ್ತಾಮ್, ಅಭಿನ್ದನ್। ಅಭಿನಃ/ಅಭಿನತ್/ಅಭಿನದ್, ಅಭಿನ್ತಮ್, ಅಭಿನ್ತ। ಅಭಿನದಮ್, ಅಭಿನ್ದ್ವ, ಅಭಿನ್ದ್ಮ।

ಆತ್ಮನೇ ಪದದ ರೂಪಗಳು– ಅಭಿನ್ದ, ಅಭಿನ್ದಾತಾಮ್, ಅಭಿನ್ದತ। ಅಭಿನ್ಥಾಃ, ಅಭಿನ್ದಾಥಾಮ್, ಅಭಿನ್ಧ್ವಮ್।ಅಭಿನ್ದಿ, ಅಭಿನ್ದ್ವಹಿ, ಅಭಿನ್ದ್ಮಹಿ।

ವಿ.ಲಿಙ್:–ಪರಸ್ಮೈ ಪದದ ರೂಪಗಳು – ಭಿನ್ದ್ಯಾತ್, ಭಿನ್ದ್ಯಾತಾಮ್, ಭಿನ್ದ್ಯುಃ। ಭಿನ್ದ್ಯಾಃ, ಭಿನ್ದ್ಯಾತಮ್, ಭಿನ್ದ್ಯಾತ। ಬಿನ್ದ್ಯಾಮ್, ಭಿನ್ದ್ಯಾವ, ಭಿನ್ದ್ಯಾಮ।

ಆತ್ಮನೇ ಪದದ ರೂಪಗಳು – ಭಿನ್ದೀತ, ಭಿನ್ದೀಯಾತಾಮ್, ಭಿನ್ದೀರನ್। ಭಿನ್ದೀಥಾಃ, ಭಿನ್ದೀಯಾಥಾಮ್, ಭಿನ್ದೀಧ್ವಮ್। ಭಿನ್ದೀಯ, ಭಿನ್ದೀವಹಿ, ಭಿನ್ದೀಮಹಿ।

ಆ.ಲಿಙ್:–ಪರಸ್ಮೈ ಪದದ ರೂಪಗಳು – ಭಿದ್ಯಾತ್, ಭಿದ್ಯಾಸ್ತಾಮ್, ಭಿದ್ಯಾಸುಃ। ಭಿದ್ಯಾಃ, ಭಿದ್ಯಾಸ್ತಮ್, ಭಿದ್ಯಾಸ್ತ। ಭಿದ್ಯಾಸಮ್, ಭಿದ್ಯಾಸ್ವ, ಭಿದ್ಯಾಸ್ಮ।

ಆತ್ಮನೇ ಪದದರೂಪಗಳು – ಭಿತ್ಸೀಷ್ಟ, ಭಿತ್ಸೀಯಾಸ್ತಾಮ್, ಭಿತ್ಸೀರನ್। ಭಿತ್ಸೀಷ್ಠಾಃ, ಬಿತ್ಸೀಯಾಸ್ಥಾಮ್, ಭಿತ್ಸೀಧ್ವಮ್। ಭಿತ್ಸೀಯ, ಭಿತ್ಸೀವಹಿ, ಭಿತ್ಸೀಮಹಿ।

ಲುಙ್:ಪರಸ್ಮೈ ಪದದ ರೂಪಗಳು (ಅಙ್ ಬಂದ ಪಕ್ಷದಲ್ಲಿ) – ಅಭಿದತ್, ಅಭಿದತಾಮ್, ಅಭಿದನ್। ಅಭಿದಃ, ಅಭಿದತಮ್, ಅಭಿದತ। ಅಭಿದಮ್, ಅಭಿದಾವ, ಅಭಿದಾಮ।

ಸಿಚ್ ಬಂದ ಪಕ್ಷದಲ್ಲಿ–ಅಭೈತ್ಸೀತ್, ಅಭೈತ್ತಾಮ್, ಅಭೈತ್ಸುಃ। ಅಭೈತ್ಸೀಃ, ಅಭೈತ್ತಮ್, ಅಭೈತ್ತ। ಅಭೈತ್ಸಮ್, ಅಭೈತ್ಸ್ವ, ಅಭೈತ್ಸ್ಮ।

ಆತ್ಮನೇ ಪದದರೂಪಗಳು–ಅಭಿತ್ತ, ಅಭಿತ್ಸಾತಾಮ್, ಅಭಿತ್ಸತ। ಅಭಿತ್ಥಾಃ, ಅಭಿತ್ಸಾಥಾಮ್, ಅಭಿದ್ಧ್ವಮ್। ಅಭಿತ್ಸಿ, ಅಭಿತ್ಸ್ವಹಿ, ಅಭಿತ್ಸ್ಮಹಿ।

ಲೃಙ್: ಪರಸ್ಮೈ ಪದದ ರೂಪಗಳು – ಅಭೇತ್ಸ್ಯತ್, ಅಭೇತ್ಸ್ಯತಾಮ್, ಅಭೇತ್ಸ್ಯನ್।

ಅಭೇತ್ಸ್ಯಃ, ಅಭೇತ್ಸ್ಯತಮ್, ಅಭೇತ್ಸ್ಯತ। ಅಭೇತ್ಸ್ಯಮ್, ಅಭೇತ್ಸ್ಯಾವ, ಅಭೇತ್ಸ್ಯಾಮ।

ಆತ್ಮನೇ ಪದದರೂಪಗಳು-ಅಭೇತ್ಸ್ಯತ, ಅಭೇತ್ಸ್ಯೇತಾಮ್, ಅಭೇತ್ಸ್ಯನ್ತ। ಅಭೇತ್ಸ್ಯಥಾಃ, ಅಭೇತ್ಸ್ಯೇಥಾಮ್, ಅಭೇತ್ಸ್ಯಧ್ವಮ್। ಅಭೇತ್ಸ್ಯೇ, ಅಭೇತ್ಸ್ಯಾವಹಿ, ಅಭೇತ್ಸ್ಯಾಮಹಿ।

ಧಾತು 3. ಭಿದಿರ್ ದ್ವೈಧೀಕರಣೇ(ಎರಡಾಗಿ ಸೀಳುವದು)- ಇದರಲ್ಲಿ 'ಭಿದ್' ಮಾತ್ರ ಉಳಿಯುತ್ತದೆ. ಇದೂ ಕೂಡ 'ಭಿದ್' ಧಾತುವಿನಂತೆಯೇ ರೂಪ ತಾಳುತ್ತದೆ.

ಲಟ್:- ಪರಸ್ಮೈ ಪದದ ರೂಪಗಳು- ಭಿನತ್ತಿ, ಭಿನ್ತಃ, ಭಿನ್ದನ್ತಿ ಇತ್ಯಾದಿ ರೂಪಗಳಾಗುತ್ತವೆ.

ಆತ್ಮನೇ ಪದದರೂಪಗಳು - ಭಿನ್ತೇ, ಭಿನ್ದಾತೆ, ಭಿನ್ದತೆ ಇತ್ಯಾದಿ ರೂಪಗಳಾಗುತ್ತವೆ.

ಲಿಟ್:-ಈ 'ಲ್' ಕಾರದಲ್ಲಿ "ಛೇಚ" ಎಂಬ ಸೂತ್ರದಿಂದ 'ತುಕ್(ತ್)' ಆಗಮ ಅನ್ತಾವಯವಾಗಿ ಬರುತ್ತದೆ. ಈ 'ತ್' ಕಾರಕ್ಕೆ "ಸ್ತೋಃ ಶ್ಚುನಾ ಶ್ಚುಃ" ಎಂಬ ಸೂತ್ರದಿಂದ 'ಚುತ್ವ(ಚ್)' ಬಂದು ಕೆಳಗಿನಂತೆ ರೂಪಗಳಾಗುತ್ತವೆ.

ಪರಸ್ಮೈ ಪದದ ರೂಪಗಳು- ಚಿಚ್ಛೇದ, ಚಿಚ್ಛಿದತುಃ, ಚಿಚ್ಛಿದುಃ ಇತ್ಯಾದಿ ರೂಪಗಳಾಗುತ್ತವೆ.

ಆತ್ಮನೇ ಪದದರೂಪಗಳು - ಚಿಚ್ಛಿದೇ, ಚಿಚ್ಛಿದಾತೇ, ಚಿಚ್ಛಿದಿರೇ। ಇತ್ಯಾದಿ ರೂಪಗಳಾಗುತ್ತವೆ.

ಲುಟ್:ಪರಸ್ಮೈ ಪದದ ರೂಪಗಳು- ಭೇತ್ತಾ, ಭೇತ್ತಾರೌ, ಭೇತ್ತಾರಃ। ಭೇತ್ತಾಸಿ, ಭೇತ್ತಾಸ್ಥಃ, ಭೇತ್ತಾಸ್ಥ। ಭೇತ್ತಾಸ್ಮಿ, ಭೇತ್ತಾಸ್ವಃ, ಭೇತ್ತಾಸ್ಮಃ।

ಆತ್ಮನೇ ಪದದರೂಪಗಳು - ಭೇತ್ತಾ, ಭೇತ್ತಾರೌ, ಭೇತ್ತಾರಃ। ಭೇತ್ತಾಸೇ, ಭೇತ್ತಾಸಾಥೇ, ಭೇತ್ತಾಧ್ವೇ। ಭೇತ್ತಾಹೇ, ಭೇತ್ತಾಸ್ವಹೇ, ಭೇತ್ತಾಸ್ಮಹೇ।

ಲೃಟ್:ಪರಸ್ಮೈ ಪದದ ರೂಪಗಳು- ಭೇತ್ಸ್ಯತಿ, ಭೇತ್ಸ್ಯತಃ, ಭೇತ್ಸ್ಯನ್ತಿ। ಇತ್ಯಾದಿ ರೂಪಗಳಾಗುತ್ತವೆ.

ಆತ್ಮನೇ ಪದದರೂಪಗಳು - ಭೇತ್ಸ್ಯತೇ, ಭೇತ್ಸ್ಯೇತೇ, ಭೇತ್ಸ್ಯನ್ತೇ। ಇತ್ಯಾದಿ ರೂಪಗಳಾಗುತ್ತವೆ.

ಲೋಟ್: ಪರಸ್ಮೈ ಪದದ ರೂಪಗಳು- ಭಿನತ್ತು/ಭಿನ್ತಾತ್, ಭಿನ್ತಾಮ್, ಭಿನ್ದನ್ತು। ಭಿನ್ದಿ/ಭಿನ್ತಾತ್, ಭಿನ್ತಮ್, ಭಿನ್ತ। ಭಿನದಾನಿ, ಭಿನದಾವ, ಭಿನದಾಮ।

ಆತ್ಮನೇ ಪದದರೂಪಗಳು - ಭಿನ್ತಾಮ್, ಭಿನ್ದಾತಾಮ್, ಭಿನ್ದತಾಮ್। ಭಿನ್ತ್ಸ್ವ, ಭಿನ್ದಾಥಾಮ್, ಭಿನ್ಧ್ವಮ್। ಭಿನದೈ, ಭಿನದಾವಹೈ, ಭಿನದಾಮಹೈ।

ಲಙ್:ಪರಸ್ಮೈ ಪದದ ರೂಪಗಳು- ಅಭಿನತ್/ಅಭಿನದ್, ಅಭಿನ್ತಾಮ್, ಅಭಿನ್ದನ್। ಅಭಿನಃ/ಅಭಿನತ್/ಅಭಿನದ್, ಅಭಿನ್ತಮ್, ಅಭಿನ್ತ। ಅಭಿನದಮ್, ಅಭಿನ್ದ್ವ, ಅಭಿನ್ದ್ಮ।

ಆತ್ಮನೇ ಪದದರೂಪಗಳು-ಅಭಿನ್ದ, ಅಭಿನ್ದಾತಾಮ್,ಅಭಿನ್ದತ। ಅಭಿನ್ಥಾಃ,

ಅಚ್ಛಿನ್ನಾಥಾಮ್, ಅಚ್ಛಿನ್ಧ್ವಮ್। ಅಚ್ಛಿನ್ದಿ, ಅಚ್ಛಿನ್ದ್ವಹಿ, ಅಚ್ಛಿನ್ದ್ಮಹಿ।

ವಿ. ಲಿಙ್: ಪರಸ್ಮೈ ಪದದ ರೂಪಗಳು– ಛಿನ್ದ್ಯಾತ್, ಛಿನ್ದ್ಯಾತಾಮ್, ಛಿನ್ದ್ಯುಃ। ಛಿನ್ದ್ಯಾಃ, ಛಿನ್ದ್ಯಾತಮ್, ಛಿನ್ದ್ಯಾತ। ಛಿನ್ದ್ಯಾಮ್, ಛಿನ್ದ್ಯಾವ, ಛಿನ್ದ್ಯಾಮ।

ಆತ್ಮನೇ ಪದದರೂಪಗಳು – ಚಿನ್ದೀತ, ಛಿನ್ದೀಯಾತಾಮ್, ಛಿನ್ದೀರನ್। ಛಿನ್ದೀಥಾಃ, ಛಿನ್ದೀಯಾಥಾಮ್, ಛಿನ್ದೀಧ್ವಮ್। ಛಿನ್ದೀಯ, ಛಿನ್ದೀವಹಿ, ಛಿನ್ದೀಮಹಿ।

ಆ. ಲಿಙ್:ಪರಸ್ಮೈ ಪದದ ರೂಪಗಳು– ಛಿದ್ಯಾತ್, ಛಿದ್ಯಾಸ್ತಾಮ್, ಛಿದ್ಯಾಸುಃ। ಛಿದ್ಯಾಃ, ಛಿದ್ಯಾಸ್ತಮ್, ಛಿದ್ಯಾಸ್ತ। ಛಿದ್ಯಾಸಮ್, ಛಿದ್ಯಾಸ್ವ, ಛಿದ್ಯಾಸ್ಮ।

ಆತ್ಮನೇ ಪದದರೂಪಗಳು – ಛಿತ್ಸೀಷ್ಟ, ಛಿತ್ಸೀಯಾಸ್ತಾಮ್, ಛಿತ್ಸೀರನ್। ಛಿತ್ಸೀಷ್ಠಾಃ, ಛಿತ್ಸೀಯಾಸ್ಥಾಮ್, ಛಿತ್ಸೀಧ್ವಮ್। ಛಿತ್ಸೀಯ, ಛಿತ್ಸೀವಹಿ, ಛಿತ್ಸೀಮಹಿ।

ಲುಙ್: ಪರಸ್ಮೈ ಪದದ ರೂಪಗಳು (ಅಙ್ ಪಕ್ಷದಲ್ಲಿ)– ಅಚ್ಛಿದತ್ ಅಚ್ಛಿದತಾಮ್, ಅಚ್ಛಿದನ್। ಅಚ್ಛಿದಃ, ಅಚ್ಛಿದತಮ್, ಅಚ್ಛಿದತ। ಅಚ್ಛಿದಮ್, ಅಚ್ಛಿದಾವ, ಅಚ್ಛಿದಾಮ।

ಸಿಚ್ ಬಂದ ಪಕ್ಷದಲ್ಲಿ – ಅಚ್ಛೈತ್ಸೀತ್, ಅಚ್ಛೈತ್ತಾಮ್, ಅಚ್ಛೈತ್ಸುಃ। ಅಚ್ಛೈತ್ಸೀಃ, ಅಚ್ಛೈತ್ತಮ್. ಅಚ್ಛೈತ್ತ। ಅಚ್ಛೈತ್ಸಮ್, ಅಚ್ಛೈತ್ಸ್ವ, ಅಚ್ಛೈತ್ಸ್ಮ।

ಆತ್ಮನೇ ಪದದ ರೂಪಗಳು – ಅಚ್ಛಿತ್ತ, ಅಚ್ಛಿತ್ಸಾತಾಮ್, ಅಚ್ಛಿತ್ಸತ। ಅಚ್ಛಿತ್ಥಾಃ, ಅಚ್ಛಿತ್ಸಾಥಾಮ್, ಅಚ್ಛಿಧ್ವಮ್। ಅಚ್ಛಿತ್ಸಿ, ಅಚ್ಛಿತ್ಸ್ವಹಿ, ಅಚ್ಛಿತ್ಸ್ಮಹಿ।

ಲೃಙ್:–ಪರಸ್ಮೈ ಪದದ ರೂಪಗಳು–ಅಚ್ಛೇತ್ಸ್ಯತ್, ಅಚ್ಛೇತ್ಸ್ಯತಾಮ್, ಅಚ್ಛೇತ್ಸ್ಯನ್।ಅಚ್ಛೇತ್ಸ್ಯಃ, ಅಚ್ಛೇತ್ಸ್ಯತಮ್, ಅಚ್ಛೇತ್ಸ್ಯತ। ಅಚ್ಛೇತ್ಸ್ಯಮ್, ಅಚ್ಛೇತ್ಸ್ಯಾವ, ಅಚ್ಛೇತ್ಸ್ಯಾಮ।

ಆತ್ಮನೇ ಪದದ ರೂಪಗಳು–ಅಚ್ಛೇತ್ಸ್ಯತ, ಅಚ್ಛೇತ್ಸ್ಯೇತಾಮ್, ಅಚ್ಛೇತ್ಸ್ಯನ್ತ। ಅಚ್ಛೇತ್ಸ್ಯಥಾಃ, ಅಚ್ಛೇತ್ಸ್ಯೇಥಾಮ್, ಅಚ್ಛೇತ್ಸ್ಯಧ್ವಮ್। ಅಚ್ಛೇತ್ಸ್ಯೇ, ಅಚ್ಛೇತ್ಸ್ಯಾವಹಿ, ಅಚ್ಛೇತ್ಸ್ಯಾಮಹಿ।

ಧಾತು 4. ಯುಜಿರ್ ಯೋಗೇ – (ಕೂಡಿಸುವದು, ಭೇಟಿಯಾಗುವದು) ಇಲ್ಲಿಯೂ

'ಯುಜ್' ಮಾತ್ರ ಉಳಿಯುತ್ತದೆ. ಈ ಧಾತುವಿನ ರೂಪಗಳೂ 'ಭಿದ್' ಧಾತುವಿನಂತೆಯೇ ಇರುತ್ತವೆ. "ಚೋಃ ಕುಃ" ಎಂಬ ಸೂತ್ರದಿಂದ ಕುತ್ವ ಬಂದು ಯಾವಾಗ "ಅನುಸ್ವಾರಸ್ಯ ಯಯಿ ಪರಸವರ್ಣಃ" ಎಂಬ ಸೂತ್ರದಿಂದ 'ಪರಸವರ್ಣ' ಬರುತ್ತದೋ, ಆಗ 'ಕ್' ಕಾರಕ್ಕೆ ಪರದಲ್ಲಿರುವ ಅನುಸ್ವಾರಕ್ಕೆ 'ಙ್' ಕಾರವು ಆದೇಶವಾಗಿ ಬರುತ್ತದೆ. 'ಜ್' ಕಾರವು ಪರದಲ್ಲಿದ್ದಾಗ, 'ಞ್' ಕಾರವು ಆದೇಶವಾಗಿ ಬರುತ್ತದೆ.

ಲಟ್:ಪರಸ್ಮೈ ಪದದ ರೂಪಗಳು–ಯುನಕ್ತಿ, ಯುಙ್ಕ್ತಃ, ಯುಞ್ಜನ್ತಿ। ಇತ್ಯಾದಿ ರೂಪಗಳಾಗುತ್ತವೆ.

ಆತ್ಮನೇ ಪದದ ರೂಪಗಳು–ಯುಙ್ಕ್ತೇ, ಯುಞ್ಜಾತೇ, ಯುಞ್ಜತೇ। ಇತ್ಯಾದಿ ರೂಪಗಳಾಗುತ್ತವೆ.

ಲಿಟ್:ಪರಸ್ಮೈ ಪದದ ರೂಪಗಳು –ಯುಯೋಜ, ಯುಯುಜತುಃ, ಯುಯುಜುಃ।

ಆತ್ಮನೇ ಪದದ ರೂಪಗಳು –ಯುಯುಜೇ, ಯುಯುಜಾತೇ, ಯುಯುಜಿರೇ।

ಲುಟ್: ಪರಸ್ಮೈ ಪದದ ರೂಪಗಳು –ಯೋಕ್ತಾ, ಯೋಕ್ತಾರೌ, ಯೋಕ್ತಾರಃ। ಯೋಕ್ತಾಸಿ, ಯೋಕ್ತಾಸ್ಥಃ, ಯೋಕ್ತಾಸ್ಥ। ಯೋಕ್ತಾಸ್ಮಿ, ಯೋಕ್ತಾಸ್ವಃ, ಯೋಕ್ತಾಸ್ಮಃ।

ಆತ್ಮನೇ ಪದದ ರೂಪಗಳು– ಯೋಕ್ತಾ, ಯೋಕ್ತಾರೌ, ತೋಕ್ತಾರಃ। ಯೋಕ್ತಾಸೇ, ಯೋಕ್ತಾಸಾಥೇ, ಯೋಕ್ತಾಧ್ವೇ। ಯೋಕ್ತಾಹೇ, ಯೋಕ್ತಾಸ್ವಹೇ, ಯೋಕ್ತಾಸ್ಮಹೇ।

ಲೃಟ್:ಪರಸ್ಮೈ ಪದದ ರೂಪಗಳು – ಯೋಕ್ಷ್ಯತಿ, ಯೋಕ್ಷ್ಯತಃ, ಯೋಕ್ಷ್ಯನ್ತಿ। ಯೋಕ್ಷ್ಯಸಿ, ಯೋಕ್ಷ್ಯಥಃ, ಯೋಕ್ಷ್ಯಥ। ಯೋಕ್ಷ್ಯಾಮಿ, ಯೋಕ್ಷ್ಯಾವಃ, ಯೋಕ್ಷ್ಯಾಮಃ।

ಆತ್ಮನೇ ಪದದ ರೂಪಗಳು – ಯೋಕ್ಷ್ಯತೇ, ಯೋಕ್ಷ್ಯೇತೇ, ಯೋಕ್ಷ್ಯನ್ತೇ। ಯೋಕ್ಷ್ಯಸೇ, ಯೋಕ್ಷೇಥೆ, ಯೋಕ್ಷ್ಯಧ್ವೇ। ಯೋಕ್ಷ್ಯೇ, ಯೋಕ್ಷ್ಯಾವಹೇ, ಯೋಕ್ಷ್ಯಾಮಹೇ।

ಲೋಟ್:ಪರಸ್ಮೈ ಪದದ ರೂಪಗಳು – ಯುನಕ್ತು/ಯುಜ್ತಾತ್, ಯುಙ್ಕ್ತಾಮ್, ಯುಞ್ಜನ್ತು। "ಹೂಝುಲ್ಭ್ಯೋ ಹೇರ್ಧಿಃ" ಎಂಬ ಸೂತ್ರದಿಂದ ಯುಙ್ಧಿ/ಯುಙ್ಕ್ತಾತ್, ಯುಙ್ಕ್ತಮ್, ಯುಙ್ಕ್ತ। ಯುನದಾನಿ, ಯುನದಾವ, ಯುನದಾಮ।

ಆತ್ಮನೇ ಪದದ ರೂಪಗಳು – ಯುಙ್ಕ್ತಾಮ್, ಯುಞ್ಜಾತಾಮ್, ಯುಞ್ಜತಾಮ್। ಯುಙ್ಕ್ಷ್ವ, ಯುಞ್ಜಾಥಾಮ್, ಯುಙ್ಧ್ವಮ್। ಯುನಧೈ, ಯುನಧಾವಹೈ, ಯುನಧಾಮಹೈ।

ಲಙ್: ಪರಸ್ಮೈ ಪದದ ರೂಪಗಳು – ಅಯುನಕ್/ಅಯುನಗ್, ಅಯುಙ್ಕ್ತಾಮ್, ಅಯುಞ್ಜನ್। ಅಯುನಕ್/ಅಯುನಗ್, ಅಯುಙ್ಕ್ತಮ್, ಅಯುಙ್ಕ್ತ। ಅಯುಞ್ಜಮ್, ಅಯುಞ್ಜ್ವ, ಅಯುಞ್ಜ್ಮ।

ಆತ್ಮನೇ ಪದದ ರೂಪಗಳು – ಅಯುಙ್ಕ್ತ, ಅಯುಞ್ಜಾತಾಮ್, ಅಯುಞ್ಜತ। ಅಯುಙ್ಕ್ಥಾಃ, ಅಯುಞ್ಜಾಥಾಮ್, ಅಯುಙ್ಧ್ವಮ್। ಅಯುಞ್ಜಿ, ಅಯುಞ್ಜ್ವಹಿ, ಅಯುಞ್ಜ್ಮಹಿ।

ವಿ.ಲಿಙ್:–ಪರಸ್ಮೈ ಪದದ ರೂಪಗಳು –ಯುಞ್ಜ್ಯಾತ್, ಯುಞ್ಜ್ಯಾತಾಮ್, ಯುಞ್ಜ್ಯುಃ। ಯುಞ್ಜ್ಯಾಃ, ಯುಞ್ಜ್ಯಾತಮ್, ಯುಞ್ಜ್ಯಾತ। ಯುಞ್ಜ್ಯಾಮ್, ಯುಞ್ಜ್ಯಾವ, ಯುಞ್ಜ್ಯಾಮ।

ಆತ್ಮನೇ ಪದದ ರೂಪಗಳು – ಯುಞ್ಜೀತ, ಯುಞ್ಜೀಯಾತಾಮ್, ಯುಞ್ಜೀರನ್। ಯುಞ್ಜೀಥಾಃ, ಯುಞ್ಜೀಯಾಥಾಮ್, ಯುಞ್ಜೀಧ್ವಮ್। ಯುಞ್ಜೀಯ, ಯುಞ್ಜೀವಹಿ, ಯುಞ್ಜೀಮಹಿ।

ಆ.ಲಿಙ್:– ಪರಸ್ಮೈ ಪದದ ರೂಪಗಳು – ಯುಞ್ಜ್ಯಾತ್, ಯುಞ್ಜ್ಯಾಸ್ತಾಮ್, ಯುಞ್ಜ್ಯಾಸುಃ। ಯುಞ್ಜ್ಯಾಃ, ಯುಞ್ಜ್ಯಾಸ್ತಮ್, ಯುಞ್ಜ್ಯಾಸ್ತ। ಯುಞ್ಜ್ಯಾಸಮ್,

ಯುಞ್ಜ್ಯಾಸ್ವ, ಯುಞ್ಜ್ಯಾಸ್ಮ।

ಪರಸ್ಮೈ ಪದದ ರೂಪಗಳು – ಯುಕ್ಷೀಷ್ಟ, ಯುಕ್ಷೀಯಾಸ್ತಾಮ್, ಯುಕ್ಷೀರನ್। ಯುಕ್ಷೀಷ್ಠಾಃ, ಯುಕ್ಷೀಯಾಸ್ಥಾಮ್, ಯುಕ್ಷೀಧ್ವಮ್। ಯುಕ್ಷೀಯ, ಯುಕ್ಷೀವಹಿ, ಯುಕ್ಷೀಮಹಿ।

ಲುಙ್: ಪರಸ್ಮೈ ಪದದ ರೂಪಗಳು – ಅಯೌಕ್ಷೀತ್, ಅಯೌಕ್ತಾಮ್, ಅಯೌಕ್ಷುಃ। ಅಯೌಕ್ಷೀಃ, ಅಯೌಕ್ತಮ್, ಅಯೌಕ್ತ। ಅಯೌಕ್ಷಮ್. ಅಯೌಕ್ಷ್ವ, ಅಯೌಕ್ಷ್ಮ।

ಆತ್ಮನೇ ಪದದ ರೂಪಗಳು –ಅಯುಕ್ತ, ಅಯುಕ್ಷಾತಾಮ್, ಅಯುಕ್ಷತ। ಅಯುಕ್ಥಾಃ, ಅಯುಕ್ಷಾಥಾಮ್, ಅಯುಗ್ಧ್ವಮ್। ಅಯುಕ್ಷಿ, ಅಯುಕ್ಷ್ವಹಿ, ಅಯುಕ್ಷ್ಮಹಿ।

ಲೃಙ್:– ಪರಸ್ಮೈ ಪದದ ರೂಪಗಳು – ಅಯೋಕ್ಷ್ಯತ್, ಅಯೋಕ್ಷ್ಯತಾಮ್, ಅಯೋಕ್ಷ್ಯನ್। ಅಯೋಕ್ಷ್ಯಃ, ಅಯೋಕ್ಷ್ಯತಮ್, ಅಯೋಕ್ಷ್ಯತ। ಅಯೋಕ್ಷ್ಯಮ್, ಅಯೋಕ್ಷ್ಯಾವ, ಅಯೋಕ್ಷ್ಯಾಮ।

ಆತ್ಮನೇ ಪದದ ರೂಪಗಳು: ಅಯೋಕ್ಷ್ಯತ, ಅಯೋಕ್ಷ್ಯೇತಾಮ್, ಅಯೋಕ್ಷ್ಯನ್ತ। ಅಯೋಕ್ಷ್ಯಥಾಃ, ಅಯೋಕ್ಷ್ಯೇಥಾಮ್, ಅಯೋಕ್ಷ್ಯಧ್ವಮ್। ಅಯೋಕ್ಷ್ಯೇ, ಅಯೋಕ್ಷ್ಯಾವಹಿ, ಅಯೋಕ್ಷ್ಯಾಮಹಿ।

ಧಾತು 5. ರಿಚಿರ್ ವಿರೇಚನೇ( ವಿರೇಚನ/ಖಾಲಿ ಮಾಡುವದು) ಇದರಲ್ಲಿ 'ರಿಚ್' ಮಾತ್ರ ಉಳಿಯುತ್ತದೆ. ಇದು ಸ್ವರಿತೇತ್ ಆಗಿರುವದರಿಂದ ಉಭಯಪದಿಯಾಗಿದೆ. ಇದು 'ಚ್' ಕಾರಾನ್ತ ಅನುದಾತ್ತವಾಗಿರುವುದರಿಂದ 'ಅನಿಟ್' ಆಗಿರುತ್ತದೆ. ಆದ್ದರಿಂದ 'ಲಿಟ್' ನಲ್ಲಿ 'ಕ್ರ್ಯಾದಿ' ನಿಯಮದಿಂದ ನಿತ್ಯವಾಗಿ 'ಇಟ್' ಆಗುತ್ತದೆ. ಇದರ ಪ್ರಕ್ರಿಯೆಯೂ 'ಯುಜ್' ಧಾತುವಿನಂತೆಯೇ ಇರುತ್ತದೆ. 'ರಿಚ್' ನಲ್ಲಿ ರೇಫವಿರುವುದರಿಂದ 'ಶ್ನಮ್(ನ್)' ಗೆ ಣತ್ವವು ಬರುತ್ತದೆ.

ಲಟ್:ಪರಸ್ಮೈ ಪದದ ರೂಪಗಳು–ರಿಣಕ್ತಿ, ರಿಙ್ತಃ, ರಿಞ್ಚನ್ತಿ। ರಿಣಕ್ಷಿ, ರಿಙ್ಕ್ಥಃ, ರಿಙ್ಕ್ಥ। ರಿಣಚ್ಮಿ, ರಿಞ್ಚ್ವಃ, ರಿಞ್ಚ್ಮಃ।

ಆತ್ಮನೇ ಪದದ ರೂಪಗಳು–ರಿಙ್ಕ್ತೇ, ರಿಞ್ಚಾತೆ, ರಿಞ್ಚತೇ। ಇತ್ಯಾದಿ ರೂಪಗಳಾಗುತ್ತವೆ.

ಲಿಟ್:–ಪರಸ್ಮೈ ಪದದ ರೂಪಗಳು – ರಿರೇಚ, ರಿರಿಚತುಃ, ರಿರಿಚುಃ। ರಿರೇಚಿಥ, ರಿರಿಚಥುಃ, ರಿರಿಚ। ರಿರೇಚ, ರಿರಿಚಿವ, ರಿರಿಚಿಮ।

ಆತ್ಮನೇ ಪದದ ರೂಪಗಳು–ರಿರಿಚೇ, ರಿರಿಚಾತೆ, ರಿರಿಚಿರೇ। ರಿರಿಚಿಷೇ, ರಿರಿಚಾಥೇ, ರಿರಿಚಿಧ್ವೇ। ರಿರಿಚೇ, ರಿರಿಚಿವಹೇ, ರಿರಿಚಿಮಹೇ।

ಲುಟ್:–ಪರಸ್ಮೈ ಪದದ ರೂಪಗಳು – ರೇಕ್ತಾ, ರೇಕ್ತಾರೌ, ರೇಕ್ತಾರಃ। ರೇಕ್ತಾಸಿ, ರೇಕ್ತಾಸ್ಥಃ, ರೇಕ್ತಾಸ್ಥ। ರೇಕ್ತಾಸ್ಮಿ, ರೇಕ್ತಾಸ್ವಃ, ರೇಕ್ತಾಸ್ಮಃ।

ಆತ್ಮನೇ ಪದದ ರೂಪಗಳು–ರೇಕ್ತಾ, ರೇಕ್ತಾರೌ, ರೇಕ್ತಾರಃ। ರೇಕ್ತಾಸೇ, ರೇಕ್ತಾಸಾಥೇ,

ರೇಕ್ತಾದ್ವೇ। ರೇಕ್ತಾಹೇ, ರೇಕ್ತಾಸ್ವಹೇ, ರೇಕ್ತಾಸ್ಮಹೇ।

ಲೃಟ್‌ಪರಸ್ಮೈ ಪದದ ರೂಪಗಳು-ರೇಕ್ಷ್ಯತಿ, ರೇಕ್ಷ್ಯತಃ, ರೇಕ್ಷ್ಯನ್ತಿ।ರೇಕ್ಷ್ಯಸಿ, ರೇಕ್ಷ್ಯಥಃ, ರೇಕ್ಷ್ಯಥ। ರೇಕ್ಷ್ಯಾಮಿ, ರೇಕ್ಷ್ಯಾವಃ, ರೇಕ್ಷ್ಯಾಮಃ।

ಆತ್ಮನೇ ಪದದ ರೂಪಗಳು – ರೇಕ್ಷ್ಯತೇ, ರೇಕ್ಷ್ಯೇತೇ, ರೇಕ್ಷ್ಯನ್ತೇ। ರೇಕ್ಷ್ಯಸೇ, ರೇಕ್ಷ್ಯೇಥೇ, ರೇಕ್ಷ್ಯಧ್ವೇ। ರೇಕ್ಷ್ಯೇ, ರೇಕ್ಷ್ಯಾವಹೇ, ರೇಕ್ಷ್ಯಾಮಹೇ।

ಲೋಟ್:ಪರಸ್ಮೈ ಪದದ ರೂಪಗಳು – ರಿಣಕ್ತು/ರಿಙ್ಕ್ತಾತ್, ರಿಙ್ಕ್ತಾಮ್, ರಿಞ್ಚನ್ತು। ರಿಙ್ಗ್ಧಿ/ರಿಙ್ಕ್ತಾತ್, ರಿಙ್ಕ್ತಮ್, ರಿಙ್ಕ್ತ। ರಿಣಚಾನಿ, ರಿಣಚಾವ, ರಿಣಚಾಮ।

ಆತ್ಮನೇ ಪದದ ರೂಪಗಳು-ರಿಙ್ಕ್ತಾಮ್, ರಿಞ್ಚಾತಾಮ್, ರಿಞ್ಚತಾಮ್। ರಿಙ್ಕ್ಷ್ವ ರಿಞ್ಚಾಥಾಮ್, ರಿಙ್ಗ್ಧ್ವಮ್। ರಿಣಚೈ, ರಿಣಚಾವಹೈ, ರಿಣಚಾಮಹೈ।

ಲಙ್:- ಪರಸ್ಮೈ ಪದದ ರೂಪಗಳು-ಅರಿಣಕ್/ಅರಿಣಗ್, ಅರಿಙ್ಕ್ತಾಮ್, ಅರಿಞ್ಚನ್। ಅರಿಣಕ್/ಅರಿಣಗ್, ಅರಿಙ್ಕ್ತಮ್,ಅರಿಙ್ಕ್ತ। ಅರಿಣಚಮ್, ಅರಿಞ್ಚ್ವ ಅರಿಞ್ಚ್ಮ।

ಆತ್ಮನೇ ಪದದ ರೂಪಗಳು – ಅರಿಙ್ಕ್ತ, ಅರಿಞ್ಚಾತಾಮ್, ಅರಿಞ್ಚತ। ಅರಿಙ್ಕ್ಥಾಃ, ಅರಿಞ್ಚಾಥಾಮ್, ಅರಿಙ್ಧ್ವಮ್। ಅರಿಞ್ಚಿ, ಅರಿಞ್ಚ್ವಹಿ, ಅರಿಞ್ಚ್ಮಹಿ।

ವಿ.ಲಿಙ್:- ಪರಸ್ಮೈ ಪದದ ರೂಪಗಳು-ರಿಞ್ಚ್ಯಾತ್, ರಿಞ್ಚ್ಯಾತಾಮ್, ರಿಞ್ಚ್ಯುಃ। ರಿಞ್ಚ್ಯಾಃ, ರಿಞ್ಚ್ಯಾತಮ್, ರಿಞ್ಚ್ಯಾತ। ರಿಞ್ಚ್ಯಾಮ್, ರಿಞ್ಚ್ಯಾವ, ರಿಞ್ಚ್ಯಾಮ।

ಆತ್ಮನೇ ಪದದ ರೂಪಗಳು-ರಿಞ್ಚೀತ, ರಿಞ್ಚೀಯಾತಾಮ್, ರಿಞ್ಚೀರನ್। ರಿಞ್ಚೀಥಾಃ, ರಿಞ್ಚೀಯಾಥಾಮ್, ರಿಞ್ಚೀಧ್ವಮ್। ರಿಞ್ಚೀಯ, ರೀಞ್ಚೀವಹಿ, ರಿಞ್ಚೀಮಹಿ।

ಆ.ಲಿಙ್:-ಪರಸ್ಮೈ ಪದದ ರೂಪಗಳು – ರಿಚ್ಯಾತ್, ರಿಚ್ಯಾಸ್ತಾಮ್, ರಿಚ್ಯಾಸುಃ। ರಿಚ್ಯಾಃ, ರಿಚ್ಯಾಸ್ತಮ್, ರಿಚ್ಯಾಸ್ತ। ರಿಚ್ಯಾಸಮ್, ರಿಚ್ಯಾಸ್ವ, ರಿಚ್ಯಾಸ್ಮ।

ಆತ್ಮನೇ ಪದದ ರೂಪಗಳು – ರಿಕ್ಷೀಷ್ಟ, ರಿಕ್ಷೀಯಾಸ್ತಾಮ್, ರಿಕ್ಷೀರನ್। ರಿಕ್ಷೀಷ್ಠಾಃ, ರಿಕ್ಷೀಯಾಸ್ಥಾಮ್, ರಿಕ್ಷೀಧ್ವಮ್। ರಿಕ್ಷೀಯ, ರಿಕ್ಷೀವಹಿ, ರಿಕ್ಷೀಮಹಿ।

ಲುಙ್:- ಪರಸ್ಮೈ ಪದದ ರೂಪಗಳು – ಅರಿಚತ್, ಅರಿಚತಾಮ್, ಅರಿಚನ್। ಅರಿಚಃ, ಅರಿಚತಮ್, ಅರಿಚತ। ಅರಿಚಮ್, ಅರಿಚಾವ, ಅರಿಚಾಮ।

ಪ. ಪ. ವಿಕಲ್ಪದ ರೂಪಗಳು-ಅರೈಕ್ಷೀತ್, ಅರೈಕ್ತಾಮ್, ಅರೈಕ್ಷುಃ। ಅರೈಕ್ಷೀಃ, ಅರೈಕ್ತಮ್, ಅರೈಕ್ತ। ಅರೈಕ್ಷಮ್, ಅರೈಕ್ಷ್ವ, ಅರೈಕ್ಷ್ಮ।

ಆತ್ಮನೇ ಪದದ ರೂಪಗಳು-ಅರಿಕ್ತ, ಅರಿಕ್ಷಾತಾಮ್, ಅರಿಕ್ಷತ। ಅರಿಕ್ಥಾಃ, ಅರಿಕ್ಷಾಥಾಮ್, ಅರಿಗ್ಧ್ವಮ್। ಅರಿಕ್ಷಿ,ಅರಿಕ್ಷ್ವಹಿ, ಅರಿಕ್ಷ್ಮಹಿ।

ಲೃಙ್:-ಪರಸ್ಮೈ ಪದದ ರೂಪಗಳು – ಅರೇಕ್ಷ್ಯತ್, ಅರೇಕ್ಷ್ಯತಾಮ್, ಅರೇಕ್ಷ್ಯನ್। ಅರೇಕ್ಷ್ಯಃ, ಅರೇಕ್ಷ್ಯತಮ್, ಅರೇಕ್ಷ್ಯತ।, ಅರೇಕ್ಷ್ಯಮ್, ಅರೇಕ್ಷ್ಯಾವ, ಅರೇಕ್ಷ್ಯಾಮ।

ಆತ್ಮನೇ ಪದದ ರೂಪಗಳು-ಅರೇಕ್ಷ್ಯತ, ಅರೇಕ್ಷ್ಯೇತಾಮ್, ಅರೇಕ್ಷ್ಯನ್ತ।

ಅರೇಕ್ಷ್ಯಥಾಃ, ಅರೇಕ್ಷ್ಯೇಥಾಮ್, ಅರೇಕ್ಷ್ಯಧ್ವಮ್। ಅರೇಕ್ಷ್ಯೇ, ಅರೇಕ್ಷ್ಯಾವಹಿ, ಅರೇಕ್ಷ್ಯಾಮಹಿ।

ಧಾತು 6. ವಿಚಿರ್–ಪೃಥಗ್ಭಾವೇ (ಬೇರ್ಪಡಿಸುವದು)– ಇದರಲ್ಲಿ 'ವಿಚ್' ಮಾತ್ರ ಉಳಿಯುತ್ತದೆ. ಇದು ಸ್ವರಿತೇತ್ತಾಗಿರುವುದರಿಂದ 'ಉಭಯಪದಿ' ಆಗಿದೆ. 'ಚ್' ಕಾರಾನ್ತ ಅನುದಾತ್ತವಾಗಿರುವುದರಿಂದ 'ಅನಿಟ್' ಆಗಿದೆ. ಆದರೂ ಕೂಡ 'ಲಿಟ್' ನಲ್ಲಿ 'ಕ್ರ್ಯಾದಿ' ನಿಯಮದಿಂದ ನಿತ್ಯವಾಗಿ 'ಇಟ್' ಬರುತ್ತದೆ. ಇದು ಕೂಡ 'ರಿಚ್' ಧಾತುವಿನಂತೆ ರೂಪಗಳನ್ನು ತಾಳುತ್ತದೆ. ಈ ಧಾತುವಿನಲ್ಲಿ ರೇಫ(ರ್) ಇಲ್ಲದ್ದರಿಂದ 'ಶ್ನಮ್(ನ) ನಲ್ಲಿ ರುವ 'ನ್' ಕಾರಕ್ಕೆ ಣತ್ವ ಬರುವುದಿಲ್ಲ.

ಲಟ್:– ಪರಸ್ಮೈ ಪದದಲ್ಲಿ– ವಿನಕ್ತಿ, ವಿಙ್ಕ್ತಃ, ವಿಞ್ಚನ್ತಿ। ವಿನಕ್ಷಿ, ವಿಙ್ಕ್ಥಃ, ವಿಙ್ಕ್ಥ। ವಿನಚ್ಮಿ, ವಿಞ್ಚ್ವಃ, ವಿಞ್ಚ್ಮಃ।

ಆತ್ಮನೇ ಪದದಲ್ಲಿ– ವಿಙ್ಕ್ತೇ, ವಿಞ್ಚಾತೇ, ವಿಞ್ಚತೇ। ವಿಙ್ಕ್ಷೇ, ವಿಞ್ಚಾಥೇ, ವಿಙ್ಗ್ಧ್ವೇ। ವಿಞ್ಚೇ, ವಿಞ್ಚ್ವಹೇ, ವಿಞ್ಚ್ಮಹೇ।

ಲಿಟ್:– ಪರಸ್ಮೈ ಪದದಲ್ಲಿ– ವಿವೇಚ, ವಿವಿಚತುಃ, ವಿವಿಚುಃ। ವಿವೇಚಿಥ, ವಿವಿಚಥುಃ, ವಿವಿಚ। ವಿವೇಚ, ವಿವಿಚಿವ, ವಿವಿಚಿಮ।

ಆತ್ಮನೇ ಪದದಲ್ಲಿ– ವಿವಿಚೇ, ವಿವಿಚಾತೇ, ವಿವಿಚಿರೇ। ವಿವಿಚಿಷೇ, ವಿವಿಚಾಥೇ, ವಿವಿಚಿಧ್ವೇ।, ವಿವಿಚೇ, ವಿವಿಚಿವಹೇ, ವಿವಿಚಿಮಹೇ।

ಲುಟ್:– ಪರಸ್ಮೈ ಪದದಲ್ಲಿ– ವೇಕ್ತಾ, ವೇಕ್ತಾರೌ, ವೇಕ್ತಾರಃ। ವೇಕ್ತಾಸಿ, ವೆಕ್ತಾಸ್ಥಃ, ವೇಕ್ತಾಸ್ಥ। ವೇಕ್ತಾಸ್ಮಿ, ವೇಕ್ತಾಸ್ವಃ, ವೇಕ್ತಾಸ್ಮಃ।

ಆತ್ಮನೇ ಪದದಲ್ಲಿ– ವೇಕ್ತಾ, ವೇಕ್ತಾರೌ, ವೇಕ್ತಾರಃ। ವೇಕ್ತಾಸೇ, ವೇಕ್ತಾಸಾಥೇ, ವೇಕ್ತಾಧ್ವೇ। ವೇಕ್ತಾಹೇ, ವೇಕ್ತಾಸ್ವಹೇ, ವೇಕ್ತಾಸ್ಮಹೇ।

ಲೃಟ್:–ಪರಸ್ಮೈ ಪದದಲ್ಲಿ – ವೇಕ್ಷ್ಯತಿ ವೇಕ್ಷ್ಯತಃ, ವೇಕ್ಷ್ಯನ್ತಿ। ವೇಕ್ಷ್ಯಸಿ, ವೇಕ್ಷ್ಯಥಃ, ವೇಕ್ಷ್ಯಥ। ವೇಕ್ಷ್ಯಾಮಿ, ವೇಕ್ಷ್ಯಾವಃ, ವೇಕ್ಷ್ಯಾಮಃ।

ಆತ್ಮನೇ ಪದದಲ್ಲಿ– ವೇಕ್ಷ್ಯತೇ, ವೇಕ್ಷ್ಯೇತೇ, ವೇಕ್ಷ್ಯನ್ತೇ। ವೇಕ್ಷ್ಯಸೇ,

ವೇಕ್ಷ್ಯೇಥೇ, ವೇಕ್ಷ್ಯಧ್ವೇ। ವೇಕ್ಷ್ಯೇ, ವೇಕ್ಷ್ಯಾವಹೇ, ವೇಕ್ಷ್ಯಾಮಹೇ।

ಲೋಟ್:–ಪರಸ್ಮೈ ಪದದಲ್ಲಿ– ವಿನಕ್ತು/ವಿಙ್ಕ್ತಾತ್, ವಿಙ್ಕ್ತಾಮ್, ವಿಞ್ಚನ್ತು। ವಿಙ್ಗ್ಧಿ/ವಿಙ್ಕ್ತಾತ್, ವಿಙ್ ಕ್ತಮ್, ವಿಙ್ಕ್ತ। ವಿನಚಾನಿ, ವಿನಚಾವ, ವಿನಚಾಮ।

ಆತ್ಮನೇ ಪದದಲ್ಲಿ– ವಿಙ್ಕ್ತಾಮ್, ವಿಞ್ಚಾತಾಮ್, ವಿಞ್ಚತಾಮ್। ವಿಙ್ಕ್ಷ್ವ, ವಿಞ್ಚಾಥಾಮ್, ವಿಙ್ಧ್ವಮ್। ವಿನಚೈ, ವಿನಚಾವಹೈ, ವಿನಚಾಮಹೈ।

ಲಙ್:–ಪರಸ್ಮೈ ಪದದಲ್ಲಿ– ಅವಿನಕ್/ಅವಿನಗ್, ಅವಿಙ್ಕ್ತಾಮ್, ಅವಿಞ್ಚನ್। ಅವಿನಕ್/ಅವಿನಗ್, ಅವಿಙ್ತಮ್, ಅವಿಙ್ಕ್ತ। ಅವಿನಚಮ್, ಅವಿಞ್ಚ್ವ, ಅವಿಞ್ಚ್ಮ।

ಆತ್ಮನೇ ಪದದಲ್ಲಿ– ಅವಿಙ್ಕ್ತ, ಅವಿಞ್ಚಾತಾಮ್, ಅವಿಞ್ಚತ। ಅವಿಙ್ಕ್ಥಾಃ,

ಅವಿಕ್ಷಾಥಾಮ್, ಅವಿಗ್ಧ್ವಮ್। ಅವಿಕ್ಷಿ, ಅವಿಕ್ಷ್ವಹಿ, ಅವಿಕ್ಷ್ಮಹಿ।

ವಿ.ಲಿಙ್:- ಪರಸ್ಮೈ ಪದದಲ್ಲಿ - ವಿಚ್ಯಾತ್, ವಿಚ್ಯಾಸ್ತಾಮ್, ವಿಚ್ಯುಃ। ವಿಚ್ಯಾಃ, ವಿಚ್ಯಾತಮ್, ವಿಚ್ಯಾತ। ವಿಚ್ಯಾಮ್, ವಿಚ್ಯಾವ, ವಿಚ್ಯಾಮ।

ಆತ್ಮನೇ ಪದದಲ್ಲಿ- ವಿಕ್ಷೀಷ್ಟ, ವಿಕ್ಷೀಯಾತಾಮ್, ವಿಕ್ಷೀರನ್। ವಿಕ್ಷೀಥಾಃ, ವಿಕ್ಷೀಯಾಥಾಮ್, ವಿಕ್ಷೀಧ್ವಮ್। ವಿಕ್ಷೀಯ, ವಿಕ್ಷೀವಹಿ, ವಿಕ್ಷೀಮಹಿ।

ಆ.ಲಿಙ್:- ಪರಸ್ಮೈ ಪದದಲ್ಲಿ- ವಿಚ್ಯಾತ್, ವಿಚ್ಯಾಸ್ತಾಮ್, ವಿಚ್ಯಾಸುಃ । ವಿಚ್ಯಾಃ, ವಿಚ್ಯಾಸ್ತಮ್, ವಿಚ್ಯಾಸ್ತ। ವಿಚ್ಯಾಸಮ್, ವಿಚ್ಯಾಸ್ವ, ವಿಚ್ಯಾಸ್ಮ।

ಆತ್ಮನೇ ಪದದಲ್ಲಿ- ವಿಕ್ಷೀಷ್ಟ, ವಿಕ್ಷೀಯಾಸ್ತಾಮ್, ವಿಕ್ಷೀರನ್। ವಿಕ್ಷೀಷ್ಠಾಃ, ವಿಕ್ಷೀಯಾಸ್ಥಾಮ್, ವಿಕ್ಷೀಧ್ವಮ್। ವಿಕ್ಷೀಯ, ವಿಕ್ಷೀವಹಿ, ವಿಕ್ಷೀಮಹಿ।

ಲುಙ್:- ಪರಸ್ಮೈ ಪದದಲ್ಲಿ -ಅವಿಚತ್, ಅವಿಚತಾಮ್, ಅವಿಚನ್। ಅವಿಚಃ, ಅವಿಚತಮ್, ಅವಿಚತ। ಅವಿಚಮ್, ಅವಿಚಾವ, ಅವಿಚಾಮ।

ವೈಕಲ್ಪಿಕ ರೂಪಗಳು - ಅವೈಕ್ಷೀತ್, ಅವೈಕ್ತಾಮ್, ಅವೈಕ್ಷುಃ। ಅವೈಕ್ಷೀಃ, ಅವೈಕ್ತಮ್, ಅವೈಕ್ತ। ಅವೈಕ್ಷಮ್, ಅವೈಕ್ಷ್ವ, ಅವೈಕ್ಷ್ಮ।

ಆತ್ಮನೇ ಪದದಲ್ಲಿ- ಅವಿಕ್ತ, ಅವಿಕ್ಷಾತಾಮ್, ಅವಿಕ್ಷತ। ಅವಿಕ್ಥಾಃ, ಅವಿಕ್ಷಾಥಾಮ್, ಅವಿಗ್ಧ್ವಮ್। ಅವಿಕ್ಷಿ, ಅವಿಕ್ಷ್ವಹಿ, ಅವಿಕ್ಷ್ಮಹಿ।

ಲೃಙ್:- ಪರಸ್ಮೈ ಪದದಲ್ಲಿ - ಅವೇಕ್ಷ್ಯತ್, ಅವೇಕ್ಷ್ಯತಾಮ್, ಅವೇಕ್ಷ್ಯನ್। ಅವೇಕ್ಷ್ಯಃ, ಅವೇಕ್ಷ್ಯತಮ್, ಅವೇಕ್ಷ್ಯತ। ಅವೇಕ್ಷ್ಯಮ್, ಅವೇಕ್ಷ್ಯಾವ, ಅವೇಕ್ಷ್ಯಾಮ।

ಆತ್ಮನೇ ಪದದಲ್ಲಿ- ಅವೇಕ್ಷ್ಯತ, ಅವೇಕ್ಷ್ಯೇತಾಮ್,ಅವೇಕ್ಷ್ಯನ್ತ। ಅವೇಕ್ಷ್ಯಥಾಃ, ಅವೇಕ್ಷ್ಯೇಥಾಮ್, ಅವೇಕ್ಷ್ಯಧ್ವಮ್। ಅವೇಕ್ಷ್ಯೇ, ಅವೇಕ್ಷ್ಯಾವಹಿ, ಅವೇಕ್ಷ್ಯಾಮಹಿ।

ಧಾತು 7. ಕ್ಷುಧಿರ್ ಸಂಪೇಷಣೇ (ಪುಡಿಮಾಡುವದು) ಇದರಲ್ಲಿ 'ಕ್ಷುಧ್' ಮಾತ್ರ ಉಳಿಯುತ್ತದೆ. ಇದು ಸ್ವರಿತೇತ್ತಾಗಿರುವುದರಿಂದ 'ಉಭಯಪದಿ' ಆಗಿದೆ. ಅನುದಾತ್ತವಾಗಿರುವುದರಿಂದ 'ಅನಿಟ್' ಆಗಿದೆ. ಆದರೂ ಕೂಡ 'ಲಿಟ್' ನಲ್ಲಿ 'ಕ್ರ್ಯಾದಿ' ನಿಯಮದಿಂದ ನಿತ್ಯವಾಗಿ 'ಇಟ್' ಬರುತ್ತದೆ. ಇದು ಕೂಡ 'ಛಿದ್' ಧಾತುವಿನಂತೆ ರೂಪಗಳನ್ನು ತಾಳುತ್ತದೆ. ಈ ಧಾತುವಿನ ರೂಪದಲ್ಲಿ 'ಷ್' ಕಾರ ಇರೋಣದ್ದರಿಂದ 'ಶ್ನಮ್(ನ) ನಲ್ಲಿ ರುವ 'ನ್' ಕಾರಕ್ಕೆ ಣತ್ವ ಬರುತ್ತದೆ.

ಲಟ್:- ಪರಸ್ಮೈ ಪದದಲ್ಲಿ - ಕ್ಷುಣತ್ತಿ, ಕ್ಷುನ್ತಃ, ಕ್ಷುನ್ದನ್ತಿ।ಕ್ಷುಣತ್ಸಿ, ಕ್ಷುನ್ತ್ಥಃ, ಕ್ಷುನ್ತ್ಥ। ಕ್ಷುಣದ್ಮಿ, ಕ್ಷುನ್ಧ್ವಃ, ಕ್ಷುನ್ಧ್ಮಃ।

ಆತ್ಮನೇ ಪದದಲ್ಲಿ-ಕ್ಷುನ್ತೇ, ಕ್ಷುನ್ದಾತೇ, ಕ್ಷುನ್ದತೇ। ಕ್ಷುನ್ತ್ಸೇ, ಕ್ಷುನ್ದಾಥೇ, ಕ್ಷುನ್ಧ್ವೇ।ಕ್ಷುನ್ದೇ, ಕ್ಷುನ್ಧ್ವಹೇ, ಕ್ಷುನ್ದ್ಮಹೇ।

ಲಿಟ್: ಪರಸ್ಮೈ ಪದದಲ್ಲಿ - ಚುಕ್ಷೋದ, ಚುಕ್ಷುದತುಃ,ಚುಕ್ಷುದುಃ। ಚುಕ್ಷೋದಿಥ, ಚುಕ್ಷುದಥುಃ, ಚುಕ್ಷುದ। ಚುಕ್ಷೋದ, ಚುಕ್ಷುದಿವ, ಚುಕ್ಷುದಿಮ।

ಆತ್ಮನೇ ಪದದಲ್ಲಿ– ಚುಕ್ಷುದೇ, ಚುಕ್ಷುದಾತೇ, ಚುಕ್ಷುದಿರೆ। ಚುಕ್ಷುದಿಷೇ, ಚುಕ್ಷುದಾಥೇ, ಚುಕ್ಷುದಿಧ್ವೇ। ಚುಕ್ಷುದೇ, ಚುಕ್ಷುದಿವಹೇ, ಚುಕ್ಷುದಿಮಹೇ।

ಲುಟ್: ಪರಸ್ಮೈ ಪದದಲ್ಲಿ– ಕ್ಷೋತ್ತಾ, ಕ್ಷೋತ್ತಾರೌ, ಕ್ಷೋತ್ತಾರಃ। ಕ್ಷೋತ್ತಾಸಿ, ಕ್ಷೋತ್ತಾಸ್ಥಃ, ಕ್ಷೋತ್ತಾಸ್ಥ। ಕ್ಷೋತ್ತಾಸ್ಮಿ, ಕ್ಷೋತ್ತಾಸ್ವಃ, ಕ್ಷೋತ್ತಾಸ್ಮಃ।

ಆತ್ಮನೇ ಪದದಲ್ಲಿ– ಕ್ಷೋತ್ತಾ, ಕ್ಷೋತ್ತಾರೌ, ಕ್ಷೋತ್ತಾರಃ। ಕ್ಷೋತ್ತಾಸೇ, ಕ್ಷೋತ್ತಾಸಾಥೇ, ಕ್ಷೋತ್ತಾಧ್ವೇ।, ಕ್ಷೋತ್ತಾಹೇ, ಕ್ಷೊತ್ತಾಸ್ವಹೇ, ಕ್ಷೋತ್ತಾಸ್ಮಹೇ।

ಲೃಟ್:– ಪರಸ್ಮೈ ಪದದಲ್ಲಿ –ಕ್ಷೋತ್ಸ್ಯತಿ, ಕ್ಷೋತ್ಸ್ಯತಃ, ಕ್ಷೋತ್ಸ್ಯನ್ತಿ। ಕ್ಷೋತ್ಸ್ಯಸಿ, ಕ್ಷೋತ್ಸ್ಯಥಃ, ಕ್ಷೋತ್ಸ್ಯಥ। ಕ್ಷೋತ್ಸ್ಯಾಮಿ, ಕ್ಷೋತ್ಸ್ಯಾವಃ, ಕ್ಷೋತ್ಸ್ಯಾಮಃ।

ಆತ್ಮನೇ ಪದದಲ್ಲಿ–ಕ್ಷೋತ್ಸ್ಯತೇ, ಕ್ಷೋತ್ಸ್ಯೇತೇ, ಕ್ಷೋತ್ಸ್ಯನ್ತೇ। ಕ್ಷೋತ್ಸ್ಯಸೇ, ಕ್ಷೋತ್ಸ್ಯೇಥೇ, ಕ್ಷೋತ್ಸ್ಯಧ್ವೇ। ಕ್ಷೋತ್ಸ್ಯೇ, ಕ್ಷೋತ್ಸ್ಯಾವಹೇ, ಕ್ಷೋತ್ಸ್ಯಾಮಹೇ।

ಲೋಟ್:– ಪರಸ್ಮೈ ಪದದಲ್ಲಿ – ಕ್ಷುಣತ್ತು/ಕ್ಷುನ್ತಾತ್, ಕ್ಷುನ್ತಾಮ್, ಕ್ಷುನ್ದನ್ತು। ಕ್ಷುನ್ಧಿ/ ಕ್ಷುನ್ತಾತ್, ಕ್ಷುನ್ತಮ್, ಕ್ಷುನ್ತ। ಕ್ಷುಣದಾನಿ, ಕ್ಷುಣದಾವ, ಕ್ಷುಣದಾಮ।

ಆತ್ಮನೇ ಪದದಲ್ಲಿ– ಕ್ಷುನ್ತಾಮ್, ಕ್ಷುನ್ದಾತಾಮ್, ಕ್ಷುನ್ದತಾಮ್। ಕ್ಷುನ್ತ್ಸ್ವ, ಕ್ಷುನ್ದಾಥಾಮ್, ಕ್ಷುನ್ದ್‌ಧ್ವಮ್। ಕ್ಷುಣದೈ, ಕ್ಷುಣದಾವಹೈ, ಕ್ಷುಣದಾಮಹೈ।

ಲಙ್:–ಪರಸ್ಮೈ ಪದದಲ್ಲಿ –ಅಕ್ಷುಣತ್, ಅಕ್ಷುನ್ತಾಮ್, ಅಕ್ಷುನ್ದನ್। ಅಕ್ಷುಣಃ, ಅಕ್ಷುಣತ್(ದ್), ಅಕ್ಷುನ್ತಮ್ ಅಕ್ಷುನ್ತ। ಅಕ್ಷುಣದಮ್, ಅಕ್ಷುನ್ದ್ವ, ಅಕ್ಷುನ್ದ್ಮ।

ಆತ್ಮನೇ ಪದದಲ್ಲಿ– ಅಕ್ಷುನ್ತ, ಅಕ್ಷುನ್ದಾತಾಮ್, ಅಕ್ಷುನ್ದತ। ಅಕ್ಷುನ್ಥಾಃ, ಅಕ್ಷುನ್ದಾಥಾಮ್, ಅಕ್ಷುನ್‌ದ್‌ಧ್ವಮ್। ಅಕ್ಷುನ್ದಿ, ಅಕ್ಷುನ್ದ್ವಹಿ, ಅಕ್ಷು ನ್ದ್ಮಹಿ।

ವಿ. ಲಿಙ್:– ಪರಸ್ಮೈ ಪದದಲ್ಲಿ – ಕ್ಷುನ್ದ್ಯಾತ್, ಕ್ಷುನ್ದ್ಯಾತಾಮ್, ಕ್ಷುನ್ದ್ಯುಃ। ಕ್ಷುನ್ದ್ಯಾಃ, ಕ್ಷುನ್ದ್ಯಾತಮ್, ಕ್ಷುನ್ದ್ಯಾತ।ಕ್ಷುನ್ದ್ಯಾಮ್, ಕ್ಷುನ್ದ್ಯಾವ, ಕ್ಷುನ್ದ್ಯಾಮ।

ಆತ್ಮನೇ ಪದದಲ್ಲಿ– ಕ್ಷುನ್ದೀತ, ಕ್ಷುನ್ದೀಯಾತಾಮ್, ಕ್ಷುನ್ದೀರನ್। ಕ್ಷೂನ್ದೀಥಾಃ, ಕ್ಷುನ್ದೀಯಾಥಾಮ್, ಕ್ಷುನ್ದೀಧ್ವಮ್। ಕ್ಷುನ್ದೀಯ, ಕ್ಷುನ್ದೀವಹಿ, ಕ್ಷುನ್ದೀಮಹಿ।

ಆ. ಲಿಙ್:ಪರಸ್ಮೈ ಪದದಲ್ಲಿ – ಕ್ಷುದ್ಯಾತ್, ಕ್ಷುದ್ಯಾಸ್ತಾಮ್, ಕ್ಷುದ್ಯಾಸುಃ। ಕ್ಷುದ್ಯಾಃ, ಕ್ಷುದ್ಯಾಸ್ತಮ್, ಕ್ಷುದ್ಯಾಸ್ತ। ಕ್ಷುದ್ಯಾಸಮ್, ಕ್ಷುದ್ಯಾಸ್ವ, ಕ್ಷುದ್ಯಾಸ್ಮ।

ಆತ್ಮನೇ ಪದದಲ್ಲಿ– ಕ್ಷುತ್ಸೀಷ್ಟ, ಕ್ಷುತ್ಸೀಯಾಸ್ತಾಮ್, ಕ್ಷುತ್ಸೀರನ್। ಕ್ಷುತ್ಸೀಷ್ಠಾಃ, ಕ್ಷುತ್ಸೀಯಾಸ್ಥಾಮ್, ಕ್ಷುತ್ಸೀಧ್ವಮ್। ಕ್ಷುತ್ಸೀಯ, ಕ್ಷುತ್ಸೀವಹಿ, ಕ್ಷುತ್ಸೀಮಹೀ।

ಲುಙ್:ಪರಸ್ಮೈ ಪದದಲ್ಲಿ–ಅಕ್ಷುದತ್, ಅಕ್ಷುದತಾಮ್, ಅಕ್ಷುದನ್। ಅಕ್ಷುದಃ, ಅಕ್ಷುದತಮ್, ಅಕ್ಷುದತ। ಅಕ್ಷುದಮ್, ಅಕ್ಷುದಾವ, ಅಕ್ಷುದಾಮ।

ಆತ್ಮನೇ ಪದದಲ್ಲಿ–ಅಕ್ಷುತ್ತ, ಅಕ್ಷುತ್ಸಾತಾಮ್, ಅಕ್ಷುತ್ಸತ। ಅಕ್ಷುತ್ಥಾಃ, ಅಕ್ಷುತ್ಸಾಥಾಮ್, ಅಕ್ಷುದ್‌ಧ್ವಮ್। ಅಕ್ಷುತ್ಸಿ, ಅಕ್ಷುತ್ಸ್ವಹಿ, ಅಕ್ಷುತ್ಸ್ಮಹಿ।

ಲೃಙ್ಃ-ಪರಸ್ಮೈ ಪದದಲ್ಲಿ -ಅಕ್ಷೋತ್ಸ್ಯತ್, ಅಕ್ಷೋತ್ಸ್ಯತಾಮ್, ಅಕ್ಷೋತ್ಸ್ಯನ್। ಅಕ್ಷೋತ್ಸ್ಯಃ, ಅಕ್ಷೋತ್ಸ್ಯತಮ್, ಅಕ್ಷೋತ್ಸ್ಯತ। ಅಕ್ಷೋತ್ಸ್ಯಮ್, ಅಕ್ಷೋತ್ಸ್ಯಾವ, ಅಕ್ಷೋತ್ಸ್ಯಾಮ।

ಆತ್ಮನೇ ಪದದಲ್ಲಿ-ಅಕ್ಷೋತ್ಸ್ಯತ, ಅಕ್ಷೋತ್ಸ್ಯೇತಾಮ್, ಅಕ್ಷೋತ್ಸ್ಯನ್ತ। ಅಕ್ಷೋತ್ಸ್ಯಥಾಃ, ಅಕ್ಷೋತ್ಸ್ಯೇಥಾವ್, ಅಕ್ಷೋತ್ಸ್ಯಧ್ವಮ್। ಅಕ್ಷೋತ್ಸ್ಯೇ, ಅಕ್ಷೋತ್ಸ್ಯಾವಹಿ, ಅಕ್ಷೋತ್ಸ್ಯಾಮಹಿ।

ಧಾತು 8. ಉಚ್ಛೃದಿರ್-ದೀಪ್ತಿ-ದೇವನಯೋಃ-(ಹೊಳೆಯುವದು/ ಆಡುವದು) - ಇದರಲ್ಲಿ 'ಛೃದ್' ಮಾತ್ರ ಉಳಿಯುತ್ತದೆ. 'ಉದಿತ್' ನ ಫಲವೇನೆಂದರೆ "ಉದಿತೋ ವಾ" ಎಂಬ ಸೂತ್ರದಿಂದ 'ಕ್ತ್ವಾ' ಶಬ್ದ ಪರದಲ್ಲಿದ್ದಾಗ, ಅದಕ್ಕೆ ವಿಕಲ್ಪದಿಂದ ಇಡಾಗಮವು ಬರುತ್ತದೆ. ಇದು ಸ್ವರಿತೇತ್ತಾಗಿರುವದರಿಂದ ಉಭಯಪದಿಯಾಗಿಯೂ, ಮತ್ತು ಸೇಟ್ ಆಗಿಯೂ ಇದೆ. ಆದರೆ 'ಸಿಚ್' ಗಿಂತ ಭಿನ್ನವಾದ 'ಸ್' ಕಾರಾದಿ ಪ್ರತ್ಯಯಗಳು ಪರದಲ್ಲಿದ್ದಾಗ, "ಸೋಽಸಿಚಿ ಕೃತಚೃತಚ್ಛೃತಚೃದತೃದನೃತಃ" ಎಂಬ ಸೂತ್ರದಿಂದ ವಿಕಲ್ಪವಾಗಿ 'ಇಟ್' ಆಗುತ್ತದೆ. ಇಲ್ಲಿ 'ಋ' ಕಾರವಿರೋಣದ್ದರಿಂದ ವಿಕರಣ ಪ್ರತ್ಯಯಕ್ಕೆ 'ಣತ್ವ' ಬರುತ್ತದೆ.

ಲಟ್:ಪರಸ್ಮೈ ಪದದಲ್ಲಿ-ಛೃಣತ್ತಿ, ಛೃನ್ತಃ, ಛೃನ್ದನ್ತಿ। ಛೃಣತ್ಸಿ, ಛೃನ್ಥಃ, ಛೃನ್ಥ। ಛೃಣದ್ಮಿ, ಛೃನ್ದ್ವಃ, ಛೃನ್ದ್ಮಃ।

ಆತ್ಮನೇ ಪದದಲ್ಲಿ- ಛೃನ್ತೇ, ಛೃನ್ದಾತೇ, ಛೃನ್ದತೇ। ಛೃನ್ತ್ಸೇ, ಛೃನ್ದಾಥೇ, ಛೃನ್ದ್ಧ್ವೇ। ಛೃನ್ದೇ, ಛೃನ್ದ್ವಹೇ, ಛೃನ್ದ್ಮಹೇ।

ಲಿಟ್:- ಪರಸ್ಮೈ ಪದದಲ್ಲಿ - ಚಚ್ಛರ್ದ, ಚಚ್ಛೃದತುಃ, ಚಚ್ಛೃದುಃ। ಚಚ್ಛರ್ದಿಥ, ಚಚ್ಛೃದಥುಃ, ಚಚ್ಛೃದ। ಚಚ್ಛರ್ದ, ಚಚ್ಛೃದಿವ, ಚಚ್ಛೃದಿಮ।

ಆತ್ಮನೇ ಪದದಲ್ಲಿ- ಚಚ್ಛೃದೇ, ಚಚ್ಛೃದಾತೇ, ಚಚ್ಛೃದಿರೇ। ಚಚ್ಛೃದಿಷೇ/ಚಚ್ಛೃತ್ಸೇ, ಚಚ್ಛೃದಾಥೇ, ಚಚ್ಛೃದಿಢ್ವೇ। ಚಛೃದೇ, ಚಚ್ಛೃದಿವಹೇ, ಚಚ್ಛೃದಿಮಹೇ।

ಲುಟ್: ಪರಸ್ಮೈ ಪದದಲ್ಲಿ -ಛರ್ದಿತಾ, ಛರ್ದಿತಾರೌ, ಛರ್ದಿತಾರಃ। ಛರ್ದಿತಾಸಿ, ಛರ್ದಿತಾಸ್ಥಃ, ಛರ್ದಿತಾಸ್ಥ। ಛರ್ದಿತಾಸ್ಮಿ, ಛರ್ದಿತಾಸ್ವಃ, ಛರ್ದಿತಾಸ್ಮಃ।

ಆತ್ಮನೇ ಪದದಲ್ಲಿ- ಛರ್ದಿತಾ, ಛರ್ದಿತಾರೌ, ಛರ್ದಿತಾರಃ। ಛರ್ದಿತಾಸೇ, ಛರ್ದಿತಾಸಾಥೇ, ಛರ್ದಿತಾಧ್ವೇ। ಛರ್ದಿತಾಹೇ, ಛರ್ದಿತಾಸ್ವಹೇ, ಛರ್ದಿತಾಸ್ಮಹೇ।

ಲೃಟ್: ಪರಸ್ಮೈ ಪದದಲ್ಲಿ - ಛರ್ದಿಷ್ಯತಿ, ಛರ್ದಿಷ್ಯತಃ, ಛರ್ದಿಷ್ಯನ್ತಿ। ಛರ್ದಿಷ್ಯಸಿ, ಛರ್ದಿಷ್ಯಥಃ, ಚರ್ದಿಷ್ಯಥ। ಛರ್ದಿಷ್ಯಾಮಿ, ಛರ್ದಿಷ್ಯಾವಃ, ಛರ್ದಿಷ್ಯಾಮಃ।

ವೈಕಲ್ಪಿಕ ರೂಪ - ಛತ್ಸ್ರ್ಯತಿ, ಛತ್ಸ್ರ್ಯತಃ, ಛತ್ಸ್ರ್ಯನ್ತಿ। ಛತ್ಸ್ರ್ಯಸಿ, ಛತ್ಸ್ರ್ಯಥಃ, ಛತ್ಸ್ರ್ಯಥ। ಛತ್ಸ್ರ್ಯಾಮಿ, ಛತ್ಸ್ರ್ಯಾವಃ, ಛತ್ಸ್ರ್ಯಾಮಃ।

ಆತ್ಮನೇ ಪದದಲ್ಲಿ- ಛರ್ದಿಷ್ಯತೇ, ಛರ್ದಿಷ್ಯೇತೇ, ಛರ್ದಿಷ್ಯನ್ತೇ। ಛರ್ದಿಷ್ಯಸೇ, ಛರ್ದಿಷ್ಯೇಥೇ, ಛರ್ದಿಷ್ಯಧ್ವೇ। ಛರ್ದಿಷ್ಯೇ, ಛರ್ದಿಷ್ಯಾವಹೇ, ಛರ್ದಿಷ್ಯಾಮಹೇ।

ವೈಕಲ್ಪಿಕ ರೂಪ – ಛರ್ತ್ಸ್ಯತೇ, ಛರ್ತ್ಸ್ಯೇತೇ, ಛರ್ತ್ಸ್ಯನ್ತೇ। ಛರ್ತ್ಸ್ಯಸೇ, ಛರ್ತ್ಸ್ಯೇಥೇ, ಛರ್ತ್ಸ್ಯಧ್ವೇ। ಛರ್ತ್ಸ್ಯೇ, ಛರ್ತ್ಸ್ಯಾವಹೇ, ಛರ್ತ್ಸ್ಯಾಮಹೇ।

ಲೋಟ್:– ಪರಸ್ಮೈ ಪದದಲ್ಲಿ –ಛೃಣತ್ತು/ಛೃನ್ತಾತ್, ಛೃನ್ತಾಮ್, ಛೃನ್ದತು। ಛೃನ್ಧಿ/ ಛೃನ್ತಾತ್, ಛೃನ್ತಮ್, ಛೃನ್ತ। ಛೃಣದಾನಿ, ಛೃಣದಾವ, ಛೃಣದಾಮ।

ಆತ್ಮನೇ ಪದದಲ್ಲಿ– ಛೃನ್ತಾಮ್, ಛೃನ್ದಾತಾಮ್, ಛೃನ್ದತಾಮ್। ಛೃನ್ತ್ಸ್ವ, ಛೃನ್ದಾಥಾಮ್,ಛೃನ್ದ್ಧ್ವಮ್। ಛೃಣದೈ, ಛೃಣದಾವಹೈ, ಛೃಣದಾಮಹೈ।

ಲಙ್: ಪರಸ್ಮೈಪದದಲ್ಲಿ – ಅಚ್ಛೃಣತ್/ಅಚ್ಛೃಣದ್, ಅಚ್ಛೃನ್ತಾಮ್, ಅಚ್ಛೃನ್ದನ್। ಅಚ್ಛೃಣಃ/ ಅಚ್ಛೃಣತ್/ಅಚ್ಛೃಣದ್, ಅಚ್ಛೃನ್ತಮ್, ಅಚ್ಛೃನ್ತ। ಅಚ್ಛೃಣದಮ್, ಅಚ್ಛೃನ್ದ್ವ, ಅಚ್ಛೃದ್ಮ।

ಆತ್ಮನೇಪದದಲ್ಲಿ–ಅಚ್ಛೃನ್ತ, ಅಚ್ಛೃನ್ದಾತಾಮ್, ಅಚ್ಛೃನ್ದತ। ಅಚ್ಛೃನ್ಥಾಃ, ಅಚ್ಛೃನ್ದಾಥಾಮ್, ಅಚ್ಛೃನ್ದ್ಧ್ವಮ್। ಅಚ್ಛೃನ್ದಿ, ಅಚ್ಛೃನ್ದ್ವಹಿ, ಅಚ್ಛೃನ್ದ್ಮಹಿ।

ವಿ. ಲಿಙ್:– ಪರಸ್ಮೈ ಪದದಲ್ಲಿ– ಛೃನ್ದ್ಯಾತ್, ಛೃನ್ದ್ಯಾತಾಮ್, ಛೃನ್ದ್ಯುಃ। ಛೃನ್ದ್ಯಾಃ, ಛೃನ್ದ್ಯಾತಮ್, ಛೃನ್ದ್ಯಾತ। ಛೃನ್ದ್ಯಾಮ್, ಛೃನ್ದ್ಯಾವ, ಛೃನ್ದ್ಯಾಮ।

ಆತ್ಮನೇ ಪದದಲ್ಲಿ–ಛೃನ್ದೀತ, ಛೃನ್ದೀಯಾತಾಮ್, ಛೃನ್ದೀರನ್। ಛೃನ್ದೀಥಾಃ, ಛೃನ್ದೀಯಾಥಾಮ್, ಛೃನ್ದೀಧ್ವಮ್। ಛೃನ್ದೀಯ, ಛೃನ್ದೀವಹಿ, ಛೃನ್ದೀಮಹಿ।

ಆ. ಲಿಙ್:– ಪರಸ್ಮೈ ಪದದಲ್ಲಿ – ಛೃದ್ಯಾತ್/ಛೃದ್ಯಾಸ್ತಾಮ್, ಛೃದ್ಯಾಸುಃ। ಛೃದ್ಯಾಃ, ಛೃದ್ಯಾಸ್ತಮ್, ಛೃದ್ಯಾಸ್ತ। ಛೃದ್ಯಾಸಮ್, ಛೃದ್ಯಾಸ್ವ, ಛೃದ್ಯಾಸ್ಮ।

ಆತ್ಮನೇ ಪದದಲ್ಲಿ– ಛೃತ್ಸೀಷ್ಟ, ಛೃತ್ಸೀಯಾಸ್ತಾಮ್, ಛೃತ್ಸೀರನ್। ಛೃತ್ಸೀಷ್ಠಾಃ, ಛೃತ್ಸೀಯಾಸ್ಥಾಮ್, ಛೃತ್ಸೀಧ್ವಮ್। ಛೃತ್ಸೀಯ, ಛೃತ್ಸೀವಹಿ, ಛೃತ್ಸೀಮಹಿ।

ವೈಕಲ್ಪಿಕರೂಪ – ಛೃದಿಷೀಷ್ಟ, ಛೃದಿಷೀಯಾಸ್ತಾಮ್, ಛೃದಿಷೀರನ್। ಛೃದಿಷೀಷ್ಠಾಃ, ಛೃದಿಷೀಯಾಸ್ಥಾಮ್, ಛೃದಿಷೀಧ್ವಮ್। ಛೃದಿಷೀಯ, ಛೃದಿಷೀವಹಿ, ಛೃದಿಷೀಮಹಿ।

ಲುಙ್:– ಪರಸ್ಮೈ ಪದದಲ್ಲಿ – ಅಚ್ಛೃದತ್, ಅಚ್ಛೃದತಾಮ್, ಅಚ್ಛೃದನ್। ಅಚ್ಛೃದಃ, ಅಚ್ಛೃದತಮ್, ಅಚ್ಛೃದತ। ಅಚ್ಛೃದಮ್, ಅಚ್ಛೃದಾವ, ಅಚ್ಛೃದಾಮ।

ಆತ್ಮನೇ ಪದದಲ್ಲಿ– ಅಚ್ಛರ್ದಿಷ್ಟ ಅಚ್ಛರ್ದಿಷಾತಾಮ್, ಅಚ್ಛರ್ದಿಷತ। ಅಚ್ಛರ್ದಿಷ್ಠಾಃ, ಅಚ್ಛರ್ದಿಷಾಥಾಮ್, ಅಚ್ಛರ್ದಿಢ್ವಮ್। ಅಚ್ಛರ್ದಿಷಿ, ಅಚ್ಛರ್ದಿಷ್ವಹಿ, ಅಚ್ಛರ್ದಿಷ್ಮಹಿ।

ಲೃಙ್: ಪರಸ್ಮೈ ಪದದಲ್ಲಿ – ಅಚ್ಛರ್ದಿಷ್ಯತ್, ಅಚ್ಛರ್ದಿಷ್ಯತಾಮ್, ಅಚ್ಛರ್ದಿಷ್ಯನ್। ಅಚ್ಛರ್ದಿಷ್ಯಃ, ಅಚ್ಛರ್ದಿಷ್ಯತಮ್, ಅಚ್ಛರ್ದಿಷ್ಯತ। ಅಚ್ಛರ್ದಿಷ್ಯಮ್, ಅಚ್ಛರ್ದಿಷ್ಯಾವ, ಅಚ್ಛರ್ದಿಷ್ಯಾಮ।

ವೈಕಲ್ಪಿಕ ರೂಪಗಳು: ಅಚ್ಛರ್ತ್ಸ್ಯತ್, ಅಚ್ಛರ್ತ್ಸ್ಯತಾಮ್, ಅಚ್ಛರ್ತ್ಸ್ಯನ್। ಅಚ್ಛರ್ತ್ಸ್ಯಃ, ಅಚ್ಛರ್ತ್ಸ್ಯತಮ್, ಅಚ್ಛರ್ತ್ಸ್ಯತ। ಅಚ್ಛರ್ತ್ಸ್ಯಮ್, ಅಚ್ಛರ್ತ್ಸ್ಯಾವ, ಅಚ್ಛರ್ತ್ಸ್ಯಾಮ।

ಆತ್ಮನೇ ಪದದಲ್ಲಿ– ಅಚ್ಛರ್ದಿಷ್ಯತ, ಅಚ್ಛರ್ದಿಷ್ಯೇತಾಮ್, ಅಚ್ಛರ್ದಿಷ್ಯನ್ತ।

ಅಚ್ಛರ್ದಿಷ್ಯಥಾಃ, ಅಚ್ಛರ್ದಿಷ್ಯೇಥಾವ್, ಅಚ್ಛರ್ದಿಷ್ಯಧ್ವಮ್। ಅಚ್ಛರ್ದಿಷ್ಯೇ, ಅಚ್ಛರ್ದಿಷ್ಯಾವಹಿ, ಅಚ್ಛರ್ದಿಷ್ಯಾಮಹಿ।

ವೈಕಲ್ಪಿಕ ರೂಪಗಳು: ಅಚ್ಛತ್ಸ್ಯರ್ತ, ಅಚ್ಛತ್ಸ್ಯೇರ್ತಾಮ್, ಅಚ್ಛತ್ಸ್ಯರ್ನ್ತ। ಅಚ್ಛತ್ಸ್ಯರ್ಥಾಃ, ಅಚ್ಛತ್ಸ್ಯೇರ್ಥಾಮ್, ಅಚ್ಛತ್ಸ್ಯರ್ಧ್ವಮ್।ಅಚ್ಛತ್ಸ್ಯೇರ್, ಅಚ್ಛತ್ಸ್ಯಾರ್ವಹಿ, ಅಚ್ಛತ್ಸ್ಯಾರ್ಮಹಿ।

ಧಾತು 9. ಉತೃದಿರ್-ಹಿಂಸಾಽನಾದರಯೋಃ-(ಹಿಂಸಿಸುವುದು/ಅನಾದರ ಮಾಡುವುದು)-ಇದರಲ್ಲಿ 'ತೃದ್' ಮಾತ್ರ ಉಳಿಯುತ್ತದೆ. ಉದಿತ್ತಾಗಿರುವುದರಿಂದ "ಉದಿತೋ ವಾ" ಎಂಬ ಸೂತ್ರದಿಂದ 'ಕ್ತ್ವಾ' ಶಬ್ದ ಪರದಲ್ಲಿದ್ದಾಗ, ಅದಕ್ಕೆ ವಿಕಲ್ಪದಿಂದ ಇಡಾಗಮವು ಬರುತ್ತದೆ. ಇದು ಸ್ವರಿತೇತ್ತಾಗಿರುವದರಿಂದ ಉಭಯಪದಿಯಾಗಿಯೂ ಮತ್ತು ಸೇಟ್ ಆಗಿಯೂ ಇದೆ. ಆದರೆ 'ಸಿಚ್' ಗಿಂತ ಭಿನ್ನವಾದ 'ಸ್' ಕಾರಾದಿ ಪ್ರತ್ಯಯಗಳು ಪರದಲ್ಲಿದ್ದಾಗ, "ಸೋಽಸಿಚಿ ಕೃತಚೃತಚ್ಛೃತಚೃದತೃದನೃತಃ" ಎಂಬ ಸೂತ್ರದಿಂದ ವಿಕಲ್ಪವಾಗಿ 'ಇಟ್' ಆಗುತ್ತದೆ. ಇಲ್ಲಿ 'ಋ' ಕಾರವಿರೋಣದ್ದರಿಂದ ವಿಕರಣ ಪ್ರತ್ಯಯಕ್ಕೆ 'ಣತ್ವ' ಬರುತ್ತದೆ.

ಲಟ್:- ಪರಸ್ಮೈ ಪದದಲ್ಲಿ- ತೃಣತ್ತಿ, ತೃನ್ತಃ, ತೃನ್ದನ್ತಿ। ತೃಣತ್ಸಿ, ತೃನ್ಥಃ, ತೃನ್ಥ। ತೃಣದ್ಮಿ, ತೃನ್ದ್ವಃ, ತೃನ್ದ್ಮಃ।

ಆತ್ಮನೇ ಪದದಲ್ಲಿ – ತೃನ್ತೇ, ತೃನ್ದಾತೇ, ತೃನ್ದತೇ। ತೃನ್ತ್ಸೇ, ತೃನ್ದಾಥೇ, ತೃನ್ದ್ಧ್ವೇ। ತೃನ್ದೇ, ತೃನ್ದ್ವಹೇ, ತೃನ್ದ್ಮಹೇ।

ಲಿಟ್:ಪರಸ್ಮೈ ಪದದಲ್ಲಿ- ತತರ್ದ, ತತೃದತುಃ, ತತೃದುಃ। ತತರ್ದಿಥ, ತತೃದಥುಃ, ತತೃದ। ತತರ್ದ, ತತೃದಿವ, ತತೃದಿಮ।

ಆತ್ಮನೇ ಪದದಲ್ಲಿ- ತತೃದೇ, ತತೃದಾತೇ, ತತೃದಿರೇ। ತತೃದಿಷೇ/ತತೃತ್ಸೇ, ತತೃದಾಥೇ, ತತೃದಿಧ್ವೇ। ತತೃದೇ, ತತೃದಿವಹೇ, ತತೃದಿಮಹೇ।

ಲುಟ್:- ಪರಸ್ಮೈ ಪದದಲ್ಲಿ- ತರ್ದಿತಾ, ತರ್ದಿತಾರೌ, ತರ್ದಿತಾರಃ। ತರ್ದಿತಾಸಿ, ತರ್ದಿತಾಸ್ಥಃ, ತರ್ದಿತಾಸ್ಥ। ತರ್ದಿತಾಸ್ಮಿ, ತರ್ದಿತಾಸ್ವಃ, ತರ್ದಿತಾಸ್ಮಃ।

ಆತ್ಮನೇ ಪದದಲ್ಲಿ- ತರ್ದಿತಾ, ತರ್ದಿತಾರೌ, ತರ್ದಿತಾರಃ। ತರ್ದಿತಾಸೇ, ತರ್ದಿತಾಸಾಥೇ, ತರ್ದಿತಾಧ್ವೇ। ತರ್ದಿತಾಹೇ, ತರ್ದಿತಾಸ್ವಹೇ, ತರ್ದಿತಾಸ್ಮಹೇ।

ಲೃಟ್:- ಪರಸ್ಮೈ ಪದದಲ್ಲಿ- ತರ್ದಿಷ್ಯತಿ, ತರ್ದಿಷ್ಯತಃ, ತರ್ದಿಷ್ಯನ್ತಿ। ತರ್ದಿಷ್ಯಸಿ, ತರ್ದಿಷ್ಯಥಃ, ತರ್ದಿಷ್ಯಥ। ತರ್ದಿಷ್ಯಾಮಿ, ತರ್ದಿಷ್ಯಾವಃ, ತದ್ರಿಷ್ಯಾಮಃ।

ವೈಕಲ್ಪಿಕ ರೂಪಗಳು : ತತ್ಸ್ಯರ್ತಿ, ತತ್ಸ್ಯರ್ತಃ, ತತ್ಸ್ಯರ್ನ್ತಿ। ತತ್ಸ್ಯರ್ಸಿ, ತತ್ಸ್ಯರ್ಥಃ, ತತ್ಸ್ಯರ್ಥ। ತತ್ಸ್ಯಾರ್ಮಿ, ತತ್ಸ್ಯಾರ್ವಃ, ತತ್ಸ್ಯಾರ್ಮಃ।

ಆತ್ಮನೇ ಪದದಲ್ಲಿ-ತರ್ದಿಷ್ಯತೇ, ತರ್ದಿಷ್ಯೇತೇ, ತರ್ದಿಷ್ಯನ್ತೇ। ತರ್ದಿಷ್ಯಸೇ, ತರ್ದಿಷ್ಯೇಥೇ, ತರ್ದಿಷ್ಯಧ್ವೇ। ತರ್ದಿಷ್ಯೇ, ತರ್ದಿಷ್ಯಾವಹೇ, ತರ್ದಿಷ್ಯಾಮಹೇ।

ವೈಕಲ್ಪಿಕ ರೂಪಗಳು: ತರ್ತ್ಸ್ಯ್ತೇ, ತರ್ತ್ಸ್ಯೇತೇ, ತರ್ತ್ಸ್ಯನ್ತೇ। ತರ್ತ್ಸ್ಯಸೇ, ತರ್ತ್ಸ್ಯೇಥೇ, ತರ್ತ್ಸ್ಯಧ್ವೇ। ತರ್ತ್ಸ್ಯೇ, ತರ್ತ್ಸ್ಯಾವಹೇ, ತರ್ತ್ಸ್ಯಾಮಹೇ।

ಲೋಟ್:– ಪರಸ್ಮೈ ಪದದಲ್ಲಿ– ತೃಣತ್ತು/ತೃನ್ತಾತ್, ತೃನ್ತಾಮ್, ತೃನ್ದನ್ತು। ತೃನ್ಧಿ/ ತೃನ್ತಾತ್, ತೃನ್ತಮ್, ತೃನ್ತ।ತೃಣದಾನಿ, ತ್ರುಣದಾವ, ತೃಣದಾಮ।

ಆತ್ಮನೇ ಪದದಲ್ಲಿ – ತೃನ್ತಾಮ್, ತೃನ್ದಾತಾಮ್, ತೃನ್ದತಾಮ್। ತೃನ್ತ್ಸ್ವ, ತೃನ್ದಾಥಾಮ್, ತೃನ್ದ್ಧ್ವಮ್। ತೃಣದೈ, ತೃಣದಾವಹೈ, ತೃಣದಾಮಹೈ।

ಲಜ್:–ಪರಸ್ಮೈ ಪದದಲ್ಲಿ– ಅತೃಣತ್/ಅತೃಣದ್, ಅತೃನ್ತಾಮ್, ಅತೃನ್ದನ್। ಅತೃಣಃ/ ಅತೃಣತ್/ಅತೃಣದ್, ಅತೃನ್ತಮ್, ಅತೃನ್ತ। ಅತೃಣದಮ್, ಅತೃನ್ದ್ವಃ, ಅತೃನ್ದ್ಮಃ।

ಆತ್ಮನೇ ಪದದಲ್ಲಿ–ಅತೃನ್ತ, ಅತೃನ್ದಾತಾಮ್, ಅತೃನ್ದತ। ಅತೃನ್ತ್ಥಾಃ, ಅತೃನ್ದಾಥಾಮ್, ಅತೃನ್ದ್ಧ್ವಮ್। ಅತೃನ್ದಿ, ಅತೃನ್ದ್ವಹಿ, ಅತೃನ್ದ್ಮಹಿ।

ವಿ. ಲಿಜ್:ಪರಸ್ಮೈ ಪದದಲ್ಲಿ– ತೃನ್ದ್ಯಾತ್, ತೃನ್ದ್ಯಾತಾಮ್, ತೃನ್ದ್ಯುಃ। ತೃನ್ದ್ಯಾಃ, ತೃನ್ದ್ಯಾತಮ್, ತೃನ್ದ್ಯಾತ। ತೃನ್ದ್ಯಾಮ್, ತೃನ್ದ್ಯಾವ, ತೃನ್ದ್ಯಾಮ।

ಆತ್ಮನೇಪದದಲ್ಲಿ – ತೃನ್ದೀತ, ತೃನ್ದೀಯಾತಾಮ್, ತೃನ್ದೀರನ್। ತೃನ್ದೀಥಾಃ, ತೃನ್ದೀಯಾಥಾಮ್, ತೃನ್ದೀಧ್ವಮ್।ತೃನ್ದೀಯ, ತೃನ್ದೀವಹಿ, ತೃನ್ದೀಮಹಿ।

ಆ.ಲಿಜ್:– ಪರಸ್ಮೈ ಪದದಲ್ಲಿ– ತೃದ್ಯಾತ್, ತೃದ್ಯಾಸ್ತಾಮ್, ತೃದ್ಯಾಸುಃ। ತೃದ್ಯಾಃ, ತೃದ್ಯಾಸ್ತಮ್, ತೃದ್ಯಾಸ್ತ। ತೃದ್ಯಾಸಮ್, ತೃದ್ಯಾಸ್ವ, ತೃದ್ಯಾಸ್ಮ।

ಆತ್ಮನೇ ಪದದಲ್ಲಿ– ತರ್ದಿಷೀಷ್ಟ, ತರ್ದಿಷೀಯಾಸ್ತಾಮ್, ತರ್ದಿಷೀರನ್। ತರ್ದಿಷೀಷ್ಠಾಃ, ತರ್ದಿಷೀಯಾಸ್ಥಾಮ್, ತರ್ದಿಷೀಧ್ವಮ್। ತರ್ದಿಷೀಯ, ತರ್ದಿಷೀವಹಿ, ತರ್ದಿಷೀಮಹಿ।

ವೈಕಲ್ಪಿಕ ರೂಪಗಳು–ತೃತ್ಸೀಷ್ಟ, ತೃತ್ಸೀಯಾಸ್ತಾಮ್, ತೃತ್ಸೀರನ್। ತೃತ್ಸೀಷ್ಠಾಃ, ತೃತ್ಸೀಯಾಸ್ಥಾಮ್, ತೃತ್ಸೀಧ್ವಮ್। ತೃತ್ಸೀಯ, ತೃತ್ಸೀವಹಿ, ತೃತ್ಸೀಮಹಿ।

ಲುಜ್:–ಪರಸ್ಮೈ ಪದದಲ್ಲಿ– ಅತೃದತ್, ಅತೃದತಾಮ್, ಅತೃದನ್। ಅತೃದಃ, ಅತೃದತಮ್, ಅತೃದತ, ಅತೃದಮ್, ಅತೃದಾವ, ಅತೃದಾಮ।

ವೈಕಲ್ಪಿಕ ರೂಪಗಳು – ಅತರ್ದೀತ್, ಅತರ್ದಿಷ್ಟಾಮ್, ಅತರ್ದಿಷುಃ। ಅತರ್ದೀಃ, ಅತರ್ದಿಷ್ಟಮ್, ಅತ್ಸರ್ದಿಷ್ಟ। ಅತರ್ದಿಷಮ್, ಅತರ್ದಿಷ್ವ, ಅತರ್ದಿಷ್ಮ।

ಆತ್ಮನೇ ಪದದಲ್ಲಿ– ಅತರ್ದಿಷ್ಟ, ಅತರ್ದಿಷಾತಾಮ್, ಅತರ್ದಿಷತ।, ಅತರ್ದಿಷ್ಠಾಃ, ಅತರ್ದಿಷಾಥಾಮ್, ಅತರ್ದಿಢ್ವಮ್। ಅತರ್ದಿಷಿ, ಅತರ್ದಿಷ್ವಹಿ, ಅತರ್ದಿಷ್ಮಹಿ।

ಲೃಜ್:–ಪರಸ್ಮೈ ಪದದಲ್ಲಿ– ಅತರ್ದಿಷ್ಯತ್, ಅತರ್ದಿಷ್ಯತಾಮ್, ಅತರ್ದಿಷ್ಯನ್। ಅತರ್ದಿಷ್ಯಃ, ಅತರ್ದಿಷ್ಯತಮ್, ಅತರ್ದಿಷ್ಯತ। ಅತರ್ದಿಷ್ಯಮ್, ಅತರ್ದಿಷ್ಯಾವ, ಅತರ್ದಿಷ್ಯಾಮ।

ವೈಕಲ್ಪಿಕ ರೂಪಗಳು – ಅತರ್ತ್ಸ್ಯತ್, ಅತರ್ತ್ಸ್ಯತಾಮ್, ಅತರ್ತ್ಸ್ಯನ್। ಅತರ್ತ್ಸ್ಯಃ,

ಅತರ್ತ್ಸ್ಯತಮ್, ಅತರ್ತ್ಸ್ಯತ। ಅತರ್ತ್ಸ್ಯಮ್, ಅತರ್ತ್ಸ್ಯಾವ, ಅತರ್ತ್ಸ್ಯಾಮ।

ಆತ್ಮನೇ ಪದದಲ್ಲಿ - ಅತರ್ದಿಷ್ಯತ, ಅತರ್ದಿಷ್ಯೇತಾಮ್, ಅತರ್ದಿಷ್ಯನ್ತ। ಅತರ್ದಿಷ್ಯಥಾಃ, ಅತರ್ದಿಷ್ಯೇಥಾಮ್, ಅತರ್ದಿಷ್ಯಧ್ವಮ್। ಅತರ್ದಿಷ್ಯೇ, ಅತರ್ದಿಷ್ಯಾವಹಿ, ಅತರ್ದಿಷ್ಯಾಮಹಿ।

ವೈಕಲ್ಪಿಕ ರೂಪಗಳು-ಅತರ್ತ್ಸ್ಯತ, ಅತರ್ತ್ಸ್ಯೇತಾಮ್, ಅತರ್ತ್ಸ್ಯನ್ತ। ಅತರ್ತ್ಸ್ಯಥಾಃ, ಅತರ್ತ್ಸ್ಯೇಥಾಮ್, ಅತರ್ತ್ಸ್ಯಧ್ವಮ್। ಅತರ್ತ್ಸ್ಯೇ, ಅತರ್ತ್ಸ್ಯಾವಹಿ, ಅತರ್ತ್ಸ್ಯಾಮಹಿ।

**ಇಲ್ಲಿಗೆ ಉಭಯಪದಿ ಧಾತುಗಳು ಮುಗಿದವು.**

**2. ಪರಸ್ಮೈಪದಿ ಧಾತುಗಳು(11):**

ಧಾತು 1. ಕೃತಿ -ವೇಷ್ಟನೇ (ಸುತ್ತಿಕೊಳ್ಳುವದು) -ಇದರಲ್ಲಿ 'ಕೃತ್' ಮಾತ್ರ ಉಳಿಯುತ್ತದೆ. ಇದು 'ಉದಾತ್ತೇತ್' ಆಗಿರುವುದರಿಂದ ಪರಸ್ಮೈಪದಿ ಯಾಗಿರುತ್ತದೆ. ಮತ್ತು 'ಸೇಟ್' ಆಗಿರುತ್ತದೆ. ಕಾರಣ ಇದು ಅನುದಾತ್ತವಲ್ಲ. 'ಸಿಚ್' ಗಿಂತ ಭಿನ್ನಾವಾದ 'ಸ್' ಕಾರಾದಿ ಪ್ರತ್ಯಯಗಳು ಪರದಲ್ಲಿದ್ದಾಗ, "ಸೋऽಸಿಚಿ ಕೃತಚೃತಚ್ಛೃತಚೃದತೃದನೃತಃ" ಎಂಬ ಸೂತ್ರದಿಂದ ವಿಕಲ್ಪವಾಗಿ 'ಇಟ್' ಆಗುತ್ತದೆ. ಇಲ್ಲಿ 'ಕೃ' ನಲ್ಲಿ 'ಋ' ಕಾರವಿರೋಣದ್ದರಿಂದ ವಿಕರಣ ಪ್ರತ್ಯಯಕ್ಕೆ 'ಣತ್ವ' ಬರುತ್ತದೆ.

ಲಟ್:- ರೂಪಗಳು: ಕೃಣತ್ತಿ, ಕೃನ್ತಃ, ಕೃನ್ತನ್ತಿ। ಕೃಣತ್ಸಿ, ಕೃನ್ಥಃ, ಕೃನ್ಥ। ಕೃಣದ್ಮಿ, ಕೃನ್ತ್ವಃ, ಕೃನ್ತ್ಮಃ।

ಲಿಟ್: ರೂಪಗಳು; ಚಕರ್ತ, ಚಕೃತತುಃ, ಚಕೃತುಃ। ಚಕರ್ಥಿಥ, ಚಕೃತಥುಃ, ಚಕೃತ। ಚಕರ್ತ, ಚಕೃತಿವ, ಚಕೃತಿಮ।

ಲುಟ್:- ರೂಪಗಳು: ಕರ್ತಿತಾ, ಕರ್ತಿತಾರೌ, ಕರ್ತಿತಾರಃ। ಕರ್ತಿತಾಸಿ, ಕರ್ತಿತಾಸ್ಥಃ, ಕರ್ತಿತಾಸ್ಥ। ಕರ್ತಿತಾಸ್ಮಿ, ಕರ್ತಿತಾಸ್ವಃ, ಕರ್ತಿತಾಸ್ಮಃ।

ಲೃಟ್:- ರೂಪಗಳು: ಕರ್ತಿಷ್ಯತಿ, ಕತಿಷ್ಯತಃ, ಕರ್ತಿಷ್ಯನ್ತಿ। ಕರ್ತಿಷ್ಯಸಿ, ಕರ್ತಿಷ್ಯಥಃ, ಕರ್ತಿಷ್ಯಥ। ಕರ್ತಿಷ್ಯಾಮಿ, ಕರ್ತಿಷ್ಯಾವಃ, ಕರ್ತಿಷ್ಯಾಮಃ।

ವೈಕಲ್ಪಿಕ ರೂಪಗಳು - ಕರ್ತ್ಸ್ಯತಿ, ಕರ್ತ್ಸ್ಯತಃ, ಕರ್ತ್ಸ್ಯನ್ತಿ। ಕರ್ತ್ಸ್ಯಸಿ, ಕರ್ತ್ಸ್ಯಥಃ, ಕರ್ತ್ಸ್ಯಥ। ಕರ್ತ್ಸ್ಯಾಮಿ, ಕರ್ತ್ಸ್ಯಾವಃ, ಕರ್ತ್ಸ್ಯಾಮಃ।

ಲೋಟ್: ರೂಪಗಳು: ಕೃಣತ್ತು/ಕೃನ್ತಾತ್, ಕೃನ್ತಾಮ್, ಕೃನ್ತನ್ತು। ಕೃನ್ಧಿ/ಕೃನ್ತಾತ್, ಕೃನ್ತಮ್, ಕೃನ್ತ। ಕೃಣತಾನಿ, ಕೃಣತಾವ, ಕೃಣತಾಮ।

ಲಙ್:- ರೂಪಗಳು: ಅಕೃಣತ್/ಅಕೃಣದ್, ಅಕೃನ್ತಾಮ್, ಅಕೃನ್ತನ್। ಅಕೃಣಃ/ ಅಕೃಣತ್/ಅಕೃಣದ್, ಅಕೃನ್ತಮ್, ಅಕೃನ್ತ। ಅಕೃಣತಮ್, ಅಕೃನ್ತ್ವ, ಅಕೃನ್ತ್ಮ।

ವಿ. ಲಿಙ್:- ರೂಪಗಳು: ಕೃನ್ತ್ಯಾತ್, ಕೃನ್ತ್ಯಾತಾಮ್, ಕೃನ್ತ್ಯುಃ। ಕೃನ್ತ್ಯಾಃ, ಕೃನ್ತ್ಯಾತಮ್, ಕೃನ್ತ್ಯಾತ। ಕೃನ್ತ್ಯಾಮ್, ಕೃನ್ತ್ಯಾವ, ಕೃನ್ತ್ಯಾಮ।

ಆ.ಲಿಙ್: ರೂಪಗಳು: ಕೃತ್ಯಾತ್, ಕೃತ್ಯಾಸ್ತಾಮ್, ಕೃತ್ಯಾಸುಃ। ಕೃತ್ಯಾಃ, ಕೃತ್ಯಾಸ್ತಮ್,

ತರ್ಣಿತಾಸಿ,ತರ್ಣಿತಾಸ್ಥಃ, ತರ್ಣಿತಾಸ್ಥ।ತರ್ಣಿತಾಸ್ಮಿ, ತರ್ಣಿತಾಸ್ವಃ, ತರ್ಣಿತಾಸ್ಮಃ।

ಆತ್ಮನೇ ಪದಿ– ತರ್ಣಿತಾ, ತರ್ಣಿತಾರೌ, ತರ್ಣಿತಾರಃ। ತರ್ಣಿತಾಸೇ, ತರ್ಣಿತಾಸಾಥೇ, ತರ್ಣಿತಾಧ್ವೇ। ತರ್ಣಿತಾಹೇ, ತರ್ಣಿತಾಸ್ವಹೇ, ತರ್ಣಿತಾಸ್ಮಹೇ।

ಲೃಟ್:–ಪರಸ್ಮೈ ಪದಿ – ತರ್ಣಿಷ್ಯತಿ,ತರ್ಣಿಷ್ಯತಃ,ತರ್ಣಿಷ್ಯನ್ತಿ। ಇತ್ಯಾದಿ

ಆತ್ಮನೇ ಪದಿ– ತರ್ಣಿಷ್ಯತೇ, ತರ್ಣೀಷ್ಯೇತೇ,ತರ್ಣಿಷ್ಯನ್ತೇ। ಇತ್ಯಾದಿ

ಲೋಟ್:–ಪರಸ್ಮೈ ಪದಿ – ತರ್ಣೋತು,(ಗುಣ ಬಂದ ಪಕ್ಷ)

ತೃಣೋತು (ಗುಣ ಬಾರದ ಪಕ್ಷ)

ಆತ್ಮನೇ ಪದಿ– ತರ್ಣುತಾಮ್(ಗುಣ ಬಂದ ಪಕ್ಷ)

ತೃಣುತಾಮ್ (ಗುಣ ಬಾರದ ಪಕ್ಷ)

ಲಙ್:–ಪರಸ್ಮೈ ಪದಿ – ಅತರ್ಣೋತ್ (ಗುಣ ಬಂದ ಪಕ್ಷ)

ಅತೃಣೋತ್(ಗುಣ ಬಾರದ ಪಕ್ಷ)

ಆತ್ಮನೇ ಪದಿ– ಅತರ್ಣುತ (ಗುಣ ಬಂದ ಪಕ್ಷ)

ಅತೃಣುತ, (ಗುಣ ಬಾರದ ಪಕ್ಷ)

ವಿಧಿಲಿಙ್:–ಪರಸ್ಮೈ ಪದಿ – ತರ್ಣುಯಾತ್(ಗುಣ ಬಂದ ಪಕ್ಷ)

ತೃಣುಯಾತ್,(ಗುಣ ಬಾರದ ಪಕ್ಷ)

ಆತ್ಮನೇ ಪದಿ– ತರ್ಣ್ವೀತ (ಗುಣ ಬಂದ ಪಕ್ಷ)

ತೃಣ್ವೀತ (ಗುಣ ಬಾರದ ಪಕ್ಷ)

ಆಶೀರ್ಲಿಙ್:–ಪರಸ್ಮೈ ಪದಿ–ತೃಣ್ಯಾತ್,ತೃಣ್ಯಾಸ್ತಾಮ್,ತೃಣ್ಯಾಸುಃ।

ಆತ್ಮನೇ ಪದಿ– ತರ್ಣಿಷೀಷ್ಟ।

ಲುಙ್:–ಪರಸ್ಮೈ ಪದಿ–ಅತರ್ಣೀತ್, ಅತರ್ಣಿಷ್ಟಾಮ್, ಅತರ್ಣಿಷುಃ।

ಆತ್ಮನೇ ಪದಿ – ಅತೃಣತ/ಅತರ್ಣಿಷ್ಟ, ಅತರ್ಣಿಷಾತಾಮ್, ಅತರ್ಣಿಷತ।

ಲೃಙ್:–ಪರಸ್ಮೈ ಪದಿ–ಅತರ್ಣಿಷ್ಯತ್, ಅತರ್ಣಿಷ್ಯತಾಮ್, ಅತರ್ಣಿಷ್ಯನ್।

ಆತ್ಮನೇ ಪದಿ– ಅತರ್ಣಿಷ್ಯತ, ಅತರ್ಣಿಷ್ಯೇತಾಮ್, ಅತರ್ಣೀಷ್ಯನ್ತ।

ಧಾತು 6. ಡುಕೃಞ್ ಕರಣೇ(ಮಾಡುವದು): "ಆದಿರ್ಞಿಟುಡವಃ" ಎಂಬ ಸೂತ್ರದಲ್ಲಿ 'ಡು' ಮತ್ತು 'ಞ್'ಗಳು ಇತ್ ಸಂಜ್ಞಕಗಳಾಗಿವೆ. 'ಕೃ' ಮಾತ್ರ ಉಳಿಯುತ್ತದೆ. ಇದು 'ಡ್ವಿತ್' ಆಗಿರುವುದರಿಂದ "ಡ್ವಿತಃ ಕ್ತ್ರಿ" ಎಂಬ ಸೂತ್ರದಿಂದ 'ಕ್ತ್ರಿ' ಮೊದಲಾದ ಪ್ರತ್ಯಯಗಳು ವಿಧಿಸಲಾಗುತ್ತವೆ. ಇದರಿಂದ "ಕ್ತ್ರೇರ್ಮಮ್ ನಿತ್ಯಮ್" ಎಂಬ ಸೂತ್ರದಿಂದ 'ಮಮ್' ಪ್ರತ್ಯಯ ಬಂದು 'ಪಕ್ತ್ರಿಮಮ್' ಮೊದಲಾದ ರೂಪಗಳಾಗುತ್ತವೆ.

ಇದು 'ಞಿತ್' ಆಗಿರುವುದರಿಂದ "ಸ್ವರಿತ ಞಿತಃ ಕರ್ತ್ರಭಿಪ್ರಾಯೇ ಕ್ರಿಯಾಫಲೇ"

ಎಂಬ ಸೂತ್ರದಿಂದ ಉಭಯಪದಿಯಾಗಿರುತ್ತದೆ. ಮತ್ತು ಇದು ಅನಿಟ್ ಆಗಿಯೂ ಇದೆ.

ಉದಾ- ಕರೋತಿ - 'ಕೃ' ಧಾತುವಿನಮೇಲೆ 'ಲಟ್' 'ಲ್' ಕಾರದಲ್ಲಿ 'ತಿಪ್' ಬಂದಮೇಲೆ 'ಶಪ್' ಪ್ರತ್ಯಯವು ಬಂದಾಗ, ಅದನ್ನು ಬಾಧಿಸಿ 'ಉ' ಪ್ರತ್ಯಯವು ಬರುತ್ತದೆ.

ಆಗ ಕೃ+ಉ+ತಿ ಎಂದಿರುತ್ತದೆ. 'ಉ' ಇದು ಆರ್ಧಧಾತುಕವಾಗಿದೆ ಎಂದು ಈ ಮೊದಲೇ ಹೇಳಲಾಗಿದೆ. ಇದು ಪರದಲ್ಲಿದ್ದಾಗ, 'ಋ' ಕಾರದ ಸ್ಥಾನದಲ್ಲಿ "ಸಾರ್ವಧಾತುಕಾರ್ಧಧಾತುಕಯೋಃ" ಎಂಬ ಸೂತ್ರದಿಂದ (ರೇಫದಿಂದ ಕೂಡಿದ) 'ಅರ್' ಎಂಬ ಗುಣವು ಬಂದು ಕರ್+ಉ+ತಿ ಎಂದಿರುತ್ತದೆ. ಸಾರ್ವಧಾತುಕ ವಾದ 'ತಿ' ಪ್ರತ್ಯಯವು ಪರದಲ್ಲಿರುವಾಗ, ಇದೇ ಸೂತ್ರದಿಂದ 'ಉ' ಗೆ ಗುಣ ಬಂದು 'ಓ' ಎಂದಾಗಿ ಕರ್+ಓ+ತಿ=ಕರೋತಿ ಎಂದಾಗುತ್ತದೆ.

**(ಉ ಕಾರವನ್ನು ಆದೇಶವಾಗಿ ವಿಧಿಸುವ ಸೂತ್ರ)**

**ಸೂತ್ರ - 678. ಅತ ಉತ್ ಸಾರ್ವಧಾತುಕೇ (6.4.110)**

ವೃತ್ತಿ- ಉ-ಪ್ರತ್ಯಯಾನ್ತಸ್ಯ ಕೃಞಃ ಅಕಾರಸ್ಯ ಉತ್ ಸ್ಯಾತ್ ಸಾರ್ವಧಾತುಕೇ ಕ್ಙಿತಿ। ಕುರುತಃ।

ಪ. ಛೇ- ಅತಃ, ಉತ್, ಸಾರ್ವಧಾತುಕೇ।

ಅ.ವೃ- "ಉತಶ್ಚ ಪ್ರತ್ಯಯಾದಸಂಯೋಗಪೂರ್ವಾತ್" ಎಂಬ ಸೂತ್ರದಿಂದ ಪ್ರತ್ಯಯಾತ್ ಎಂಬ ಪದವೂ, "ನಿತ್ಯಂ ಕರೋತೇಃ" ಎಂಬ ಸೂತ್ರದಿಂದ ಕರೋತೇಃ ಎಂಬ ಪದವೂ ಹಾಗೆಯೇ "ಗಮ-ಹನ-ಜನ-ಖನ-ಘಸಾಮ್ ಲೋಪಃ ಕ್ಙಿತ್ಯನಜಿ" ಎಂಬ ಸೂತ್ರದಿಂದ ಕ್ಙಿತಿ ಎಂಬ ಪದವೂ ಅನುವೃತ್ತವಾಗುತ್ತದೆ.

ಅರ್ಥ- ಸಾರ್ವಧಾತುಕ 'ಕಿತ್' ಅಥವಾ 'ಙಿತ್' ಪರದಲ್ಲಿದ್ದಾಗ 'ಉ' ಪ್ರತ್ಯಯಾಂತ ಧಾತುವಿನ 'ಅ' ಕಾರಕ್ಕೆ ಹ್ರಸ್ವ 'ಉ' ಕಾರವು ಆದೇಶವಾಗಿ ಬರುತ್ತದೆ.

ವಿವರಣೆ: 'ತಿಪ್' 'ಸಿಪ್' ಮತ್ತು 'ಮಿಪ್' ಗಳನ್ನು ಬಿಟ್ಟು ಬೇರೆಕಡೆಗಳಲ್ಲಿ 'ಕೃ' ನಲ್ಲಿರುವ 'ಋ' ಕಾರಕ್ಕೆ ಗುಣ(ಅರ್) ಬಂದು 'ಕರ್' ಎಂದಾಗುತ್ತದೆ. ಈ ಸಂದರ್ಭದಲ್ಲಿ ಪ್ರಕೃತ ಸೂತ್ರವು ಪ್ರವೃತ್ತಿಸುತ್ತದೆ.

ಲಟ್:ಉದಾ- ಕುರುತಃ- 'ಕೃ' ಧಾತುವಿನಮೇಲೆ 'ಲಟ್' 'ಲ್' ಕಾರದ ಪ್ರಥಮಪುರುಷ ದ್ವಿ ವಚನದಲ್ಲಿ ಕೃ+ತಸ್ ಎಂದಿದ್ದಾಗ, ಪ್ರಾಪ್ತವಾಗಬೇಕಾದ 'ಶಪ್'ನ್ನು ಬಾಧಿಸಿ 'ಉ' ವಿಕರಣ ಪ್ರತ್ಯಯವು ಬಂದು ಕ+ಉ+ತಸ್ ಎಂದಿರುತ್ತದೆ. ಈ ವಿಕರಣ ಪ್ರತ್ಯಯವು ಆರ್ಧಧಾತುಕ ಆಗಿರುವುದರಿಂದ 'ಕೃ' ನಲ್ಲಿರುವ 'ಋ' ಕಾರಕ್ಕೆ "ಸಾರ್ವಧಾತುಕಾರ್ಧಧಾತುಕಯೋಃ" ಎಂಬ ಸೂತ್ರದಿಂದ ರೇಫದಿಂದ ಕೂಡಿದ 'ಅರ್' ಎಂಬ ಗುಣವು ಬಂದು, ಕರ್+ಉ+ತಸ್ ಎಂದಿರುತ್ತದೆ. ಈಗ ಪ್ರಕೃತ ಸೂತ್ರದಿಂದ 'ಕರ್' ನಲ್ಲಿರುವ 'ಕ' ಕಾರೋತ್ತರ 'ಅ' ಕಾರಕ್ಕೆ 'ಉ' ಕಾರವು ಆದೇಶವಾಗಿ

ಬಂದು ಕುರ್+ಉ+ತಸ್=ಕುರುತಸ್ ಎಂದಾಗಿ 'ಸ್' ಕಾರಕ್ಕೆ ರುತ್ವ-ವಿಸರ್ಗಗಳು ಬಂದು ಕುರುತಃ ಎಂಬ ರೂಪವು ಸಿದ್ಧವಾಗುತ್ತದೆ.

**(ಉಪಧಾ ದೀರ್ಘವನ್ನು ನಿಷೇಧಿಸುವ ಸೂತ್ರ)**

**ಸೂತ್ರ - 679. ನ ಭಕುರ್ಛುರಾಮ್ (8.2.79)**

ವೃತ್ತಿ- ಭಸ್ಯ ಕುರ್ಛುರೋಶ್ಚ ಉಪಧಾಯಾ ನ ದೀರ್ಘಃ। ಕುರ್ವನ್ತಿ।

ಅ.ವೃ- "ರ್ವೋರುಪಧಾಯಾಃ ದೀರ್ಘ ಇಕಃ" ಎಂಬ ಸೂತ್ರದಿಂದ ಉಪಧಾಯಾಃ ಮತ್ತು ದೀರ್ಘಃ ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ- 'ಭ್' ಸಂಜ್ಞಕ ಮತ್ತು 'ಕುರ್' ಹಾಗೂ 'ಛುರ್' ಗಳ ಉಪಧೆಗೆ ದೀರ್ಘವು ಆದೇಶವಾಗಿ ಬರುವುದಿಲ್ಲ ಈ ಸೂತ್ರವು "ಹಲಿ ಚ" ಎಂಬ ಸೂತ್ರದಿಂದ ಪ್ರಾಪ್ತವಾದ ದೀರ್ಘವನ್ನು ನಿಷೇಧಿಸುತ್ತದೆ.

ಉದಾ- ಕುರ್ವನ್ತಿ 'ಲಟ್' 'ಲ್' ಕಾರದ ಪ್ರಥಮಪುರುಷ ಬಹುವಚನದಲ್ಲಿ 'ಝಿ' ನಲ್ಲಿರುವ 'ಝ್' ಕಾರಕ್ಕೆ 'ಅನ್ತ್' ಆದೇಶ ಮತ್ತು ಗುಣ ಹಾಗೆಯೇ 'ಅ' ಕಾರಕ್ಕೆ 'ಉ' ಕಾರಾದೇಶ ಮತ್ತು ಪ್ರತ್ಯಯದಲ್ಲಿರುವ 'ಉ' ಕಾರಕ್ಕೆ "ಇಕೋಯಣಚಿ" ಎಂಬ ಸೂತ್ರದಿಂದ 'ವ್' ಕಾರ (ಯಣ್) ಬಂದು, ಕುರ್+ವ್+ಅನ್ತಿ = ಕುರ್ವನ್ತಿ ಎಂದು ರೂಪವು ಸಿದ್ಧವಾಗುತ್ತದೆ. ಇಲ್ಲಿ "ಹಲಿ ಚ" ಎಂಬ ಸೂತ್ರದಿಂದ ಉಪಧೆಗೆ ದೀರ್ಘವು ಪ್ರಾಪ್ತವಾಗಿತ್ತು. ಪ್ರಕೃತ ಸೂತ್ರದಿಂದ ಅದು ನಿಷೇಧವಾಗಿದೆ. ಇದೇ ರೀತಿ ಕರೋಮಿ ವರೆಗಿನ ರೂಪಗಳನ್ನು ಸುಲಭವಾಗಿ ಊಹಿಸಿಕೊಳ್ಳಬಹುದು.

**(ಉ-ಕಾರ ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ - 680. ನಿತ್ಯಂ ಕರೋತೇಃ (6.4.108)**

ವೃತ್ತಿ- ಕರೋತೇಃ ಪ್ರತ್ಯಯ-ಉಕಾರಸ್ಯ ನಿತ್ಯಂ ಲೋಪಃ ಮ್ವೋಃ ಪರಯೋಃ। ಕುರ್ವಃ। ಕುರ್ಮಃ। ಕುರುತೇ। ಚಕಾರ, ಚಕ್ರೇ। ಕರ್ತಾಸಿ, ಕರ್ತಾಸೇ। ಕರಿಷ್ಯತಿ, ಕರಿಷ್ಯತೇ। ಕರೋತು, ಕುರುತಾಮ್। ಅಕರೋತ್, ಅಕುರುತ।

ಅ.ವೃ-"ಉತಶ್ಚ ಪ್ರತ್ಯಯಾದಸಂಯೋಗಪೂರ್ವಾತ್" ಎಂಬ ಸೂತ್ರದಿಂದ 'ಪ್ರತ್ಯಯಸ್ಯ' ಮತ್ತು 'ಉತಃ' ಎಂಬ ಶಬ್ದಗಳನ್ನು ವಿಭಕ್ತಿ ವಿಪರಿಣಾಮ ಮಾಡಿ ಅನುವೃತ್ತಿ ಮಾಡಲಾಗಿದೆ. "ಲೋಪಶ್ಚಾಸ್ಯಾನ್ಯತರಸ್ಯಾಮ್ ಮ್ವೋಃ" ಎಂಬ ಸೂತ್ರದಿಂದ 'ಲೋಪಃ' ಮತ್ತು 'ಮ್ವೋಃ' ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ- 'ಮ್' ಕಾರ ಮತ್ತು 'ವ್' ಕಾರಗಳು ಪರದಲ್ಲಿದ್ದಾಗ, 'ಕೃ' ಧಾತುವಿನ ಪರದಲ್ಲಿರುವ ಪ್ರತ್ಯಯದ 'ಉ' ಕಾರಕ್ಕೆ ನಿತ್ಯವಾಗಿ ಲೋಪ ಬರುತ್ತದೆ.

"ಲೋಪಶ್ಚಾಸ್ಯಾನ್ಯತರಸ್ಯಾಮ್ ಮ್ವೋಃ" ಎಂಬ ಸೂತ್ರದಿಂದ ವಿಕಲ್ಪವಾಗಿ ಪ್ರಾಪ್ತವಾದ 'ಉ' ಕಾರ ಲೋಪವನ್ನು ಬಾಧಿಸುವದಕ್ಕಾಗಿ ನಿತ್ಯವಾಗಿ ಬರುತ್ತದೆ.

ಉದಾ-ಕುರ್ವಃ, ಕುರ್ಮಃ- ಉತ್ತಮ ಪುರುಷದ ದ್ವಿವಚನ ಮತ್ತು ಬಹುವಚನಗಳಲ್ಲಿ

ಕುರ್+ಉ+ವ ಮತ್ತು ಕುರ್+ಉ+ಮಸ್ ಎಂದಿದ್ದಾಗ, 'ವಸ್' ಮತ್ತು 'ಮಸ್' ಗಳಲ್ಲಿರುವ 'ವ್' ಕಾರ ಮತ್ತು 'ಮ್' ಕಾರಗಳನ್ನು ಆಧಾರವಾಗಿಟ್ಟುಕೊಂಡು ಪ್ರಕೃತ ಸೂತ್ರದಿಂದ 'ಉ' ಕಾರಕ್ಕೆ ಲೋಪ ಬಂದಿದೆ. ಆದ್ದರಿಂದ ಕುರ್+ವಸ್ ಮತ್ತು ಕುರ್+ಮಸ್ ಎಂದಿದ್ದಾಗ, 'ಸ್' ಕಾರಗಳಿಗೆ ರುತ್ವ-ವಿಸರ್ಗಗಳು ಬಂದು ಕುರ್ವಃ ಮತ್ತು ಕುರ್ಮಃ ಎಂಬ ರೂಪಗಳು ಸಿದ್ಧವಾಗುತ್ತವೆ.

'ಕೃ' ಧಾತುವಿನ ರೂಪಗಳು

ಲಟ್:-ಪರಸ್ಮೈ ಪದಿ-ಕರೋತಿ, ಕುರುತಃ, ಕುರ್ವನ್ತಿ।ಕರೋಷಿ, ಕುರುಥಃ, ಕುರುಥ। ಕರೋಮಿ,ಕುರ್ವಃ, ಕುರ್ಮಃ।ಆತ್ಮನೇ ಪದಿ – ಕುರುತೇ, ಕುರ್ವಾತೇ(ಕುರು+ಆತೇ), ಕುರ್ವತೇ(ಕುರು+ಅತೇ), ಕುರುಷೇ, ಕುರ್ವಾಥೇ, ಕುರುಧ್ವೇ। ಕುರ್ವೇ, ಕುರ್ವಹೇ, ಕುರ್ಮಹೇ।

ಲಿಟ್:-ಉದಾ- ಚಕಾರ-'ಕೃ' ಧಾತುವಿನ ನಂತರ 'ಲಿಟ್' ಲಕಾರಕ್ಕೆ 'ತಿಪ್' ಆದೇಶ ಬಂದು ಅದಕ್ಕೆ ಅಭಿನವ ಆಖ್ಯಾತ ಪ್ರತ್ಯಯವಾದ 'ಣಲ್(ಅ)' ಬಂದು ಕೃ+ಅ ಎಂದಿರುತ್ತದೆ. ಧಾತುವಿಗೆ ದ್ವಿತ್ವ ಬಂದು, ಕೃಕೃ+ಅ ಎಂದಾದಮೇಲೆ "ಉರತ್" ಎಂಬ ಸೂತ್ರದಿಂದ 'ಅರ್' ಬಂದು ಕರ್+ಕೃ+ಅ ಎಂದಿದ್ದಾಗ, "ಹಲಾದಿ ಶೇಷಃ" ಎಂಬ ಸೂತ್ರದಿಂದ ಕ+ಕೃ+ಅ ಎಂದಿದ್ದಾಗ, "ಕುಹೋಶ್ಚುಃ" ಎಂಬ ಸೂತ್ರದಿಂದ 'ಚುತ್ವ(ಚ್)' ಬಂದು ಚಕೃ+ಅ ಎಂದಿದ್ದಾಗ "ಅಚೋಞ್ಣಿತಿ" ಎಂಬ ಸೂತ್ರದಿಂದ 'ರ್' ಗೆ ವೃದ್ಧಿ(ಆರ್) ಬಂದು ಚಕಾರ್+ಅ=ಚಕಾರ ಎಂದು ರೂಪವು ಸಿದ್ಧವಾಗುತ್ತದೆ.

'ಕೃ' ಧಾತುವಿನ ರೂಪಗಳು:-ಪರಸ್ಮೈಪದಿ- ಚಕಾರ, ಚಕ್ರತುಃ, ಚಕ್ರುಃ। ಚಕರ್ಥ, ಚಕ್ರಥುಃ, ಚಕ್ರ। ಚಕಾರ/ಚಕರ, ಚಕ್ರಿವ, ಚಕ್ರಿಮ।

ಆತ್ಮನೇಪದಿಯಲ್ಲಿ-

ವಿಶೇಷ-ಆತ್ಮನೇ ಪದದಲ್ಲಿ 'ಞಿತ್' ಇಲ್ಲದಿರುವುದರಿಂದ ವೃದ್ಧಿಯು ಬರುವುದಿಲ್ಲ ಆಗ ಚಕೃ+ಏ ಎಂದಿದ್ದಾಗ, ಯಣ್ ಸಂಧಿಯಿಂದ 'ಋ' ಕಾರಕ್ಕೆ ರೇಫ(ರ್) ಬಂದು, ಚಕ್ರೇ ಎಂದು ರೂಪವು ಸಿದ್ಧವಾಗುತ್ತದೆ.

ಆತ್ಮನೇ ಪದದಲ್ಲಿ – ಚಕ್ರೇ, ಚಕ್ರಾತೇ, ಚಕ್ರಿರೇ। ಚಕೃಷೇ, ಚಕ್ರಾಥೇ, ಚಕೃಢ್ವೇ। ಚಕ್ರೇ, ಚಕೃವಹೇ, ಚಕೃಮಹೇ।

ಲುಟ್:-ಪರಸ್ಮೈಪದಿ- ಕರ್ತಾ, ಕರ್ತಾರೌ, ಕರ್ತಾರಃ। ಕರ್ತಾಸಿ, ಕರ್ತಾಸ್ಥಃ, ಕರ್ತಾಸ್ಥ। ಕರ್ತಾಸ್ಮಿ, ಕರ್ತಾಸ್ವಃ, ಕರ್ತಾಸ್ಮಃ।

ಆತ್ಮನೇಪದಿ- ಕರ್ತಾ, ಕರ್ತಾರೌ, ಕರ್ತಾರಃ। ಕರ್ತಾಸೇ, ಕರ್ತಾಸಾಥೇ, ಕರ್ತಾಧ್ವೇ। ಕರ್ತಾಹೇ, ಕರ್ತಾಸ್ವಹೇ, ಕರ್ತಾಸ್ಮಹೇ।

ಲೃಟ್ ವಿಶೇಷ:

ಉದಾ- ಕರಿಷ್ಯತಿ- ಪ್ರಥಮಪುರುಷ ಏಕವಚನದಲ್ಲಿ 'ಲೃಟ್' 'ಲ್' ಕಾರದಲ್ಲಿ'ಕೃ'

ಧಾತುವಿನ ನಂತರ 'ಲುಟ್(ಲ್)' ಬಂದು ಅದಕ್ಕೆ 'ತಿಪ್(ತಿ)' ಆದೇಶ ಬಂದಮೇಲೆ, ಧಾತುವಿನ ನಂತರ 'ಸ್ಯ' ಪ್ರತ್ಯಯ ಬಂದು "ಋದ್ಧನೋಃ ಸ್ಯೇ" ಎಂಬ ಸೂತ್ರದಿಂದ 'ಸ್ಯ' ಪ್ರತ್ಯಯಕ್ಕೆ ಆದ್ಯಯವಯವಾಗಿ ಇಡಾಗಮ ಬಂದು ಕೃ+ಇ+ಸ್ಯತಿ ಎಂದಿರುತ್ತದೆ. 'ಸ್ಯ'ಗೆ "ಆರ್ಧಧಾತುಕಂ ಶೇಷಃ" ಎಂಬ ಸೂತ್ರದಿಂದ ಆರ್ಧಧಾತುಕ ಸಂಜ್ಞೆ ಬಂದು, 'ಕೃ' ನಲ್ಲಿರುವ 'ಋ' ಕಾರಕ್ಕೆ "ಸಾರ್ವಧಾತುಕಾರ್ಧ-ಧಾತುಕಯೋಃ" ಎಂಬ ಸೂತ್ರದಿಂದ 'ಅರ್(ಗುಣ)' ಬಂದು, ಕರ್+ಇ+ಸ್ಯತಿ ಎಂದಿದ್ದಾಗ, "ಆದೇಶಪ್ರತ್ಯಯಯೋಃ" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಷತ್ವ ಬಂದು ಕರಿಷ್ಯತಿ ಎಂದು ರೂಪವು ಸಿದ್ಧವಾಗುತ್ತದೆ.

ಲೃಟ್ 'ಲ್' ಕಾರದಲ್ಲಿ 'ಕೃ' ಧಾತುವಿನ ರೂಪಗಳು ಪರಸ್ಮೈಪದ– ಕರಿಷ್ಯತಿ, ಕರಿಷ್ಯತಃ, ಕರಿಷ್ಯನ್ತಿ।ಕರಿಷ್ಯಸಿ, ಕರಿಷ್ಯಥಃ, ಕರಿಷ್ಯಥ । ಕರಿಷ್ಯಾಮಿ, ಕರಿಷ್ಯಾವಃ, ಕರಿಷ್ಯಾಮಃ।

ಆತ್ಮನೇಪದ– ಕರಿಷ್ಯತೇ, ಕರಿಷ್ಯೇತೇ, ಕರಿಷ್ಯನ್ತೇ। ಕರಿಷ್ಯಸೇ, ಕರಿಷ್ಯೇಥೆ, ಕರಿಷ್ಯಧ್ವೇ ।ಕರಿಷ್ಯೇ, ಕರಿಷ್ಯಾವಹೇ, ಕರಿಷ್ಯಾಮಹೇ।

ಲೋಟ್ 'ಲ್' ಕಾರದಲ್ಲಿ 'ಕೃ' ಧಾತುವಿನ ರೂಪಗಳು

ಪರಸ್ಮೈ ಪದ– ಕರೋತು/ಕುರುತಾತ್, ಕುರುತಾಮ್, ಕುರ್ವನ್ತು। ಕುರು/ಕುರುತಾತ್, ಕುರುತಮ್, ಕುರುತ। ಕರವಾಣಿ, ಕರವಾವ, ಕರವಾಮ।

ಆತ್ಮನೇ ಪದ– ಕುರುತಾಮ್, ಕುರ್ವಾತಾಮ್, ಕುರ್ವತಾಮ್। ಕುರುಷ್ವ, ಕುರ್ವಾಥಾಮ್, ಕುರುಧ್ವಮ್। ಕರವೈ, ಕರವಾವಹೈ, ಕರವಾಮಹೈ।

ಲಙ್ 'ಲ್' ಕಾರದಲ್ಲಿ 'ಕೃ' ಧಾತುವಿನ ರೂಪಗಳು

ಪರಸ್ಮೈಪದ– ಅಕರೋತ್,ಅಕುರುತಾಮ್, ಅಕುರ್ವನ್। ಅಕರೋಃ, ಅಕುರುತಮ್, ಅಕುರುತ। ಅಕರವಮ್, ಅಕುರ್ವ, ಅಕುರ್ಮ।

ಆತ್ಮನೇ ಪದ – ಅಕುರುತ, ಅಕುರ್ವಾತಾಮ್, ಅಕುರ್ವತ। ಅಕುರುಥಾಃ, ಅಕುರ್ವಾಥಾಮ್, ಅಕುರುಧ್ವಮ್। ಅಕುರ್ವಿ, ಅಕುರ್ವಹಿ, ಅಕುರ್ಮಹಿ।

**(ಉ–ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ – 682. ಯೇ ಚ (6.4.109)**

ವೃತ್ತಿ– ಕೃಞ್ ಉಲೋಪಃ ಸ್ಯಾತ್ ಯಾದೌ ಪ್ರತ್ಯಯೇ ಪರೇ। ಕುರ್ಯಾತ್, ಕುರ್ವೀತ। ಕ್ರಿಯಾತ್, ಕೃಷೀಷ್ಟ। ಅಕಾರ್ಷೀತ್, ಅಕೃತ। ಅಕರಿಷ್ಯತ್, ಅಕರಿಷ್ಯತ।

ಅ.ವ್ಯ–"ನಿತ್ಯಂ ಕರೋತೇಃ।" ಎಂಬ ಸೂತ್ರದಿಂದ 'ಕರೋತೇಃ' ಎಂಬ ಪದವೂ "ಉತಶ್ಚ ಪ್ರತ್ಯಯಾದಸಂಯೋಗಪೂರ್ವಾತ್" ಎಂಬ ಸೂತ್ರದಿಂದ 'ಪ್ರತ್ಯಯಸ್ಯ' ಮತ್ತು 'ಉತಃ' ಎಂಬ ಶಬ್ದಗಳನ್ನು ವಿಭಕ್ತಿ ವಿಪರಿಣಾಮ ಮಾಡಿ ಅನುವೃತ್ತಿ ಮಾಡಲಾಗಿದೆ.

"ಲೋಪಶ್ಚಾಸ್ಯಾನ್ಯತರಸ್ಯಾಮ್ ಮ್ವೋಃ" ಎಂಬ ಸೂತ್ರದಿಂದ 'ಲೋಪಃ' ಎಂಬ ಪದವೂ ಅನುವೃತ್ತವಾಗುತ್ತದೆ.

ಅರ್ಥ: ಯ್-ಕಾರಾದಿ ಪ್ರತ್ಯಯವು ಪರದಲ್ಲಿದ್ದಾಗ, 'ಕೃ' ಧಾತುವಿನಪರದಲ್ಲಿ ಇರುವ ಪ್ರತ್ಯಯದ 'ಉ' ಕಾರಕ್ಕೆ ಲೋಪವು ಬರುತ್ತದೆ.

ವಿಧಿಲಿಙ್-

ಉದಾ- ಕುರ್ಯಾತ್- ಪರಸ್ಮೈ ಪದ ಪ್ರಥಮಪುರುಷ ಏಕವಚನದಲ್ಲಿ 'ಕೃ' ಧಾತುವಿನ ನಂತರ 'ಲಿಙ್' 'ಲ್' ಕಾರವು ಬಂದು, ಅದಕ್ಕೆ 'ತಿಪ್' ಆದೇಶವು ಬಂದಾಗ, 'ಯಾಸುಟ್(ಯಾಸ್)' ಆಗಮ ಬರುತ್ತದೆ. ಅಲ್ಲಿ ಗುಣ, ಉ-ವಿಕರಣ ಪ್ರತ್ಯಯ ಮೊದಲಾದವುಗಳು ಆದೇಶವಾಗಿ ಬಂದಮೇಲೆ, ಕುರ್+ಉ+ಯಾಸ್+ತ್ ಎಂದಿರುತ್ತದೆ. ಧಾತುವಿಗಿಂತ ಪರದಲ್ಲಿರುವ 'ಉ' ಕಾರಕ್ಕೆ ಪ್ರಕೃತ ಸೂತ್ರದಿಂದ ಲೋಪ ಬರುತ್ತದೆ. 'ಯಾಸ್' ನಲ್ಲಿರುವ 'ಸ್' ಕಾರಕ್ಕೆ "ಲಿಙಃಸಲೋಪೋಽನನ್ತ್ಯಸ್ಯ" ಎಂಬ ಸೂತ್ರದಿಂದ ಲೋಪ ಬಂದಮೇಲೆ ಕುರ್+ಯಾ+ತ್ = ಕುರ್ಯಾತ್ ಎಂಬ ರೂಪವು ಸಿದ್ಧಿಸುತ್ತದೆ.

ಪರಸ್ಮೈಪದ -ಕುರ್ಯಾತ್, ಕುರ್ಯಾತಾಮ್, ಕುರ್ಯುಃ । ಕುರ್ಯಾಃ, ಕುರ್ಯಾತಮ್, ಕುರ್ಯಾತ। ಕುರ್ಯಾಮ್, ಕುರ್ಯಾವ, ಕುರ್ಯಾಮ।

ಆತ್ಮನೇಪದದಲ್ಲಿ- 'ಸೀಯುಟ್' ಆಗಮ ಬಂದು ಅದರ 'ಸ್' ಕಾರಕ್ಕೆ "ಲಿಙಃಸಲೋಪೋಽನನ್ತ್ಯಸ್ಯ" ಎಂಬ ಸೂತ್ರದಿಂದ ಲೋಪವು ಬರುತ್ತದೆ. 'ಯ್' ಕಾರಾದಿ ಪ್ರತ್ಯಯಗಳು ಪರದಲ್ಲಿ ಇಲ್ಲದೇ ಇರೋಣದ್ದರಿಂದ, ಪ್ರಕೃತ ಸೂತ್ರವು ಪ್ರವೃತ್ತವಾಗುವುದಿಲ್ಲ ಯಣ್ ಸಂಧಿಯಿಂದ ಕೆಳಗಿನ ರೂಪಗಳು ಸಿದ್ಧವಾಗುತ್ತವೆ.

ಆತ್ಮನೇಪದ - ಕುರ್ವೀತ, ಕುರ್ವೀಯಾತಾಮ್, ಕುರ್ವೀರನ್। ಕುರ್ವೀಥಾಃ, ಕುರ್ವೀಯಾಥಾಮ್, ಕುರ್ವೀಢ್ವಮ್। ಕುರ್ವೀಯ, ಕುರ್ವೀವಹಿ, ಕುರ್ವೀಮಹಿ।

ಆಶೀರ್ಲಿಙ್-ಉದಾ- ಕ್ರಿಯಾತ್- 'ಕೃ' ಧಾತುವಿನ ನಂತರ, ಆಶೀರ್ಲಿಙ್ 'ಲ್' ಕಾರವು ಬಂದು, ಅದಕ್ಕೆ 'ತಿಪ್' ಆದೇಶ ಬಂದಮೇಲೆ, 'ಯಾಸುಟ್(ಯಾಸ್)' ಆಗಮವು ಬಂದು, ಕೃ+ಯಾಸ್+ತ್ ಎಂದಿರುತ್ತದೆ. 'ಯಾಸ್' ಎಂಬುದು 'ಯ್'ಕಾರಾದಿ ಆರ್ಧಧಾತುಕ ಆಶೀರ್ಲಿಙ್ ಆಗಿದೆ. ಆದ್ದರಿಂದ "ರಿಙ್ ಶಯಗ್ಲಿಙ್ಷು" ಎಂಬ ಸೂತ್ರದಿಂದ 'ಕೃ' ಧಾತುವಿನಲ್ಲಿರುವ 'ಋ' ಕಾರಕ್ಕೆ 'ರಿಙ್(ರಿ)' ಆದೇಶ ಬಂದು, 'ಕ್+ರಿ+ಯಾಸ್+ತ್ ಎಂದಿರುತ್ತದೆ. 'ಯಾಸ್' ನಲ್ಲಿರುವ 'ಸ್' ಕಾರಕ್ಕೆ "ಸ್ಕೋಃ ಸಂಯೋಗಾದ್ಯೋರನ್ತೇ ಚ" ಎಂಬ ಸೂತ್ರದಿಂದ ಲೋಪ ಬರುತ್ತದೆ. ಆಗ ಕ್+ರಿ+ಯಾ+ತ್=ಕ್ರಿಯಾತ್ ಎಂದು ರೂಪವಾಗುತ್ತದೆ.

ಪರಸ್ಮೈ ಪದ- ಕ್ರಿಯಾತ್, ಕ್ರಿಯಾಸ್ತಾಮ್, ಕ್ರಿಯಾಸುಃ। ಕ್ರಿಯಾಃ, ಕ್ರಿಯಾಸ್ತಮ್, ಕ್ರಿಯಾಸ್ತ। ಕ್ರಿಯಾಸಂ, ಕ್ರಿಯಾಸ್ವ, ಕ್ರಿಯಾಸ್ಮ।

ಆತ್ಮನೇ ಪದ - ಕೃಷೀಷ್ಟ, ಕೃಷೀಯಾಸ್ತಾಮ್, ಕೃಷೀರನ್। ಕೃಷೀಷ್ಠಾಃ, ಕ್ರಿಷೀಯಾಸ್ಥಾಮ್, ಕೃಷೀಢ್ವಮ್। ಕೃಷೀಯ, ಕೃಷೀವಹಿ, ಕೃಷೀಮಹಿ।

ಲುಙ್- ಉದಾ- ಅಕಾರ್ಷೀತ್- 'ಲುಙ್' 'ಲ್' ಕಾರದ ಪ್ರಥಮಪುರುಷ

ಏಕವಚನದಲ್ಲಿ 'ಕೃ' ಧಾತುವಿನ ಪರದಲ್ಲಿ 'ತಿಪ್' ಆದೇಶ ಬಂದು, ಧಾತುವಿಗೆ ಅಡಾಗಮ ಬಂದಾಗ, ಅ+ಕೃ+ತಿ ಎಂದಿದ್ದಾಗ, 'ತಿ' ನಲ್ಲಿರುವ 'ಇ' ಕಾರ ಲೋಪವಾಗಿ, ಅ+ಕೃ+ತ್ ಎಂದಿರುತ್ತದೆ. 'ಚ್ಲಿ' ಗೆ 'ಸಿಚ್(ಸ್)' ಬಂದಮೇಲೆ, ಅಪೃಕ್ತ 'ಹಲ್' ಆದ 'ತ್' ಗೆ 'ಈಟ್(ಈ)' ಆಗಮವು ಬಂದು ಅಕೃ+ಸ್+ಈ+ತ್ ಎಂದಿರುತ್ತದೆ. ಆಗ, "ಸಿಚಿ ವೃದ್ಧಿಃ ಪರಸ್ಮೈಪದೇಷು" ಎಂಬ ಸೂತ್ರದಿಂದ 'ಕೃ' ನಲ್ಲಿರುವ 'ಋ' ಕಾರಕ್ಕೆ ವೃದ್ಧಿ(ಆರ್) ಬಂದು, ಅಕಾರ್+ಸ್+ಈತ್ ಎಂದಿರುತ್ತದೆ. "ಆದೇಶ ಪ್ರತ್ಯಯಯೋಃ" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಷತ್ವ ಬಂದು, ಅಕಾರ್+ಷ್+ಈತ್=ಅಕಾರ್ಷೀತ್ ಎಂಬ ರೂಪವು ಸಿದ್ಧವಾಗುತ್ತದೆ.

ಪರಸ್ಮೈಪದ– ಅಕಾರ್ಷೀತ್, ಅಕಾರ್ಷ್ಟಾಮ್, ಅಕಾರ್ಷುಃ। ಅಕಾರ್ಷೀಃ, ಅಕಾರ್ಷ್ಟಮ್, ಅಕಾರ್ಷ್ಟ। ಅಕಾರ್ಷಂ, ಅಕಾರ್ಷ್ವ, ಅಕಾರ್ಷ್ಮ।

ಉದಾ– ಅಕೃತ– ಆತ್ಮನೇ ಪದದ ಪ್ರಥಮಪುರುಷ ಏಕವಚನದಲ್ಲಿ 'ಕೃ' ಧಾತುವಿನ ನಂತರ 'ತ' ಪ್ರತ್ಯಯ ಬಂದಮೇಲೆ, ಧಾತುವಿಗೆ ಅಡಾಗಮ ಬಂದು ಅ+ಕೃ+ತ ಎಂದಿದ್ದಾಗ, 'ಚ್ಲಿ' ಬಂದು ಅದಕ್ಕೆ 'ಸಿಚ್(ಸ್)' ಆದೇಶ ಬಂದಮೇಲೆ ಅಕೃ+ಸ್+ತ ಎಂದಿರುತ್ತದೆ. 'ಝಲ್' ಪರದಲ್ಲಿರೋಣದ್ದರಿಂದ "ಹ್ರಸ್ವಾದಙ್ಗಾತ್" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪವು ಬಂದು, ಅಕೃ+ತ=ಅಕೃತ ಎಂದು ರೂಪವಾಗುತ್ತದೆ. 'ಝಲ್' ಪರದಲ್ಲಿ ಇಲ್ಲದೇ ಇದ್ದಾಗ, 'ಸ್' ಕಾರಕ್ಕೆ ಲೋಪವು ಬರುವದಿಲ್ಲವಾದ್ದರಿಂದ ಅಕೃಷಾತಾಮ್ ಎಂದು ರೂಪವಾಗುತ್ತದೆ.

ಆತ್ಮನೇ ಪದ– ಆಕೃತ, ಅಕೃಷಾತಾಮ್, ಅಕೃಷತ। ಅಕೃಷ್ಠಾಃ, ಅಕೃಷಾಥಾಮ್, ಅಕೃಢ್ವಮ್। ಅಕೃಷಿ, ಅಕೃಷ್ವಹಿ, ಅಕೃಷ್ಮಹಿ।

ಲೃಙ್:–ಪರಸ್ಮೈ ಪದ– ಅಕರಿಷ್ಯತ್, ಅಕರಿಷ್ಯತಾಮ್, ಅಕರಿಷ್ಯನ್। ಅಕರಿಷ್ಯಃ, ಅಕರಿಷ್ಯತಮ್, ಅಕರಿಷ್ಯತ। ಅಕರಿಷ್ಯಮ್, ಅಕರಿಷ್ಯಾವ, ಅಕರಿಷ್ಯಾಮ।

ಆತ್ಮನೇ ಪದ–ಅಕರಿಷ್ಯತ, ಅಕರಿಷ್ಯೇತಾಮ್, ಅಕರಿಷ್ಯನ್ತ। ಅಕರಿಷ್ಯಥಾಃ, ಅಕರಿಷ್ಯೇಥಾಮ್, ಅಕರಿಷ್ಯಧ್ವಮ್। ಅಕರಿಷ್ಯೇ, ಅಕರಿಷ್ಯಾವಹಿ, ಅಕರಿಷ್ಯಾಮಹಿ।

**(ಸುಟ್ ಆಗಮವನ್ನು ವಿಧಿಸುವ ಸೂತ್ರ)**

**ಸೂತ್ರ – 683. ಸಮ್ಪರಿಭ್ಯಾಂ ಕರೋತೌ ಭೂಷಣೇ (6.1.137)**

ಅರ್ಥ– ಮುಂದಿನ ಸೂತ್ರದಲ್ಲಿ ಹೇಳಲಾಗಿದೆ.

**ಸೂತ್ರ – 684. ಸಮವಾಯೇ ಚ (6.1.138)**

ವೃತ್ತಿ– ಸಮ್ಪರಿಪೂರ್ವಸ್ಯ ಕರೋತೇಃ ಸುಟ್ ಸ್ಯಾತ್ ಭೂಷಣೇ ಸಂಘಾತೇ ಚಾರ್ಥೇ। ಸಂಸ್ಕರೋತಿ= ಅಲಙ್ಕರೋತಿ ಇತ್ಯರ್ಥಃ। ಸಂಸ್ಕುರ್ವನ್ತಿ= ಸಙ್ಘೀಭವನ್ತಿ ಇತ್ಯರ್ಥಃ। ಸಮ್ಪೂರ್ವಸ್ಯ ಕ್ವಚಿದ್ ಆಭೂಷಣೇ ಅಪಿ ಸುಟ್। ಸಂಸ್ಕೃತಂ ಭಕ್ಷಾಃ ಇತಿ ಜ್ಞಾಪಕಾತ್।

ಅ.ವೃ-"ಸುಟ್ ಕಾತ್ಪೂರ್ವಃ" ಎಂಬ ಸೂತ್ರವು ಅಧಿಕಾರ ಸೂತ್ರವಾಗಿದೆ.

ಅರ್ಥ- ಅಲಙ್ಕರಿಸುವದು ಎಂಬ ಅರ್ಥದಲ್ಲಿ ಅಥವಾ ಸಮೂಹಾರ್ಥದಲ್ಲಿ, 'ಸಮ್' ಮತ್ತು 'ಪರಿ' ಎಂಬ ಉಪಸರ್ಗಗಳನಂತರ 'ಕೃಞ್' ಧಾತುವಿನ 'ಕ್' ಕರಾಕ್ಕೆ ಪೂರ್ವದಲ್ಲಿಯೇ 'ಸುಟ್(ಸ್)' ಆಗಮವು ಬರುತ್ತದೆ.

ಲಟ್: ಉದಾ- ಸಂಸ್ಕರೋತಿ-(ಸಂಸ್ಕಾರವನ್ನು ಮಾಡುತ್ತದೆ) 'ಸವನ್' ಉಪಸರ್ಗಪೂರ್ವಕ 'ಕೃ' ಧಾತುವಿನಿಂದ ಸಂಸ್ಕರೋತಿ ಎಂಬ ರೂಪವು ಬರುತ್ತದೆ. ಸಮ್ ಮತ್ತು ಕರೋತಿ ಗಳ ಮಧ್ಯದಲ್ಲಿ ಅಂದರೆ 'ಕ್' ಕಾರದ ಪೂರ್ವದಲ್ಲಿ ಪ್ರಕೃತ ಸೂತ್ರದಿಂದ 'ಸುಟ್(ಸ್)' ಆಗಮವು ಬಂದು ಸಮ್+ಸ್+ಕರೋತಿ ಎಂದಿರುತ್ತದೆ. 'ಮ್' ಕಾರದ ಸ್ಥಾನದಲ್ಲಿ ಅನುಸ್ವಾರವು ಬಂದು, ಸಂಸ್ಕರೋತಿ ಎಂದು ರೂಪವಾಗುತ್ತದೆ. ಹೀಗೆಯೇ 'ಪರಿ' ಉಪಸರ್ಗಪೂರ್ವಕ 'ಕೃ' ಧಾತುವಿನಿಂದ ಪರಿಷ್ಕರೋತಿ ಎಂಬ ರೂಪವು ಸಿದ್ಧವಾಗುತ್ತದೆ. ಇಲ್ಲಿ 'ಸ್' ಕಾರಕ್ಕೆ ಷತ್ವ ಬರುತ್ತದೆ.

ಉದಾ- ಸಂಸ್ಕುರ್ವನ್ತಿ- ಸಮ್ ಉಪಸರ್ಗಪೂರ್ವಕ 'ಕೃ' ಧಾತುವಿನ ನಂತರ 'ಲಟ್' ಪ್ರಥಮಪುರುಷ ಬಹುವಚನದಲ್ಲಿ ಹಿಂದಿನಂತೆ 'ಸುಟ್(ಸ್)' ಆಗಮ ಬಂದು, ನಂತರ 'ಮ್' ಕಾರಕ್ಕೆ ಅನುಸ್ವಾರ ಬಂದು, ಸಂಸ್ಕುರ್ವನ್ತಿ ಎಂದು ರೂಪವಾಗುತ್ತದೆ. ಇದೇ ಶಬ್ದಕ್ಕೆ ಸಙ್ಗೀಭೂಯ ಅಂದರೆ ಒಂದೇಕಡೆಗೆ ಸೇರುತ್ತವೆ ಎಂದು ಅರ್ಥ.

ಸಮ್ಪೂರ್ವಸ್ಯ ಕ್ವಚಿದ್ ಆಭೂಷಣೇ ಅಪಿ ಸುಟ್। ಸಂಸ್ಕೃತಂ ಭಕ್ಷಾಃ ಇತಿ ಜ್ಞಾಪಕಾತ್ - ಸಮ್- ಪೂರ್ವಕ 'ಕೃ' ಧಾತುವಿನ ಮೇಲೆ ಕೆಲವೊಮ್ಮೆ ಸಂಸ್ಕಾರ ಮತ್ತು ಭೂಷಣ ಎಂಬ ಎರಡು ಅರ್ಥಗಳನ್ನು ಬಿಟ್ಟು ಬೇರೆ ಅರ್ಥದಲ್ಲೂ 'ಸುಟ್(ಸ್)' ಆಗಮವು ಬರುತ್ತದೆ. ಸಂಸ್ಕೃತಂ ಭಕ್ಷಾಃ ಎಂಬ ಪಾಣಿನಿಯವರ ಪ್ರಯೋಗವೇ ಇದಕ್ಕೆ ಜ್ಞಾಪಕವಾಗಿದೆ.

**(ಸುಟ್ ಆಗಮವನ್ನು ವಿಧಿಸುವ ಸೂತ್ರ)**

**ಸೂತ್ರ - 684. ಉಪಾತ್ ಪ್ರತಿಯತ್ನ-ವೈಕೃತ-ವಾಕ್ಯಾಧ್ಯಾಹಾರೇಷು ಚ। (6.1.139)**

ವೃತ್ತಿ- ಉಪಾತ್ ಕೃಞಃ ಸುಟ್ ಸ್ಯಾತ್ ಏಷು ಅರ್ಥೇಷು ಚಾತ್ ಪ್ರಾಗುಕ್ತಯೋಃ ಅರ್ಥಯೋಃ। ಪ್ರತಿಯತ್ನೋ= ಗುಣಾಧಾನಮ್। ವಿಕೃತಮೇವ ವೈಕೃತಮ್ = ವಿಕಾರಃ। ವಾಕ್ಯಾಧ್ಯಾಹಾರಃ = ಆಕಾಙ್ಕ್ಷಿತೈಕದೇಶಪೂರಣಮ್। ಉಪಸ್ಕೃತಾ ಕನ್ಯಾ।ಉಪಸ್ಕೃತಾಃ ಬ್ರಾಹ್ಮಣಾಃ। ಏಧೋದಕಸ್ಯ ಉಪಸ್ಕುರುತೇ।ಉಪಸ್ಕೃತಂ ಭುಙ್ಕ್ತೇ। ಉಪಸ್ಕೃತಂ ಬ್ರೂತೇ।

7. ವನು ಯಾಚನೇ।ವನುತೇ। ವವನೇ।

8. ಮನು ಅವಬೋಧನೇ।ಮನುತೇ। ಮೇನೇ। ಮನಿತಾ। ಮನಿಷ್ಯತೆ। ಮನುತಾಮ್।ಅಮನುತ। ಮನ್ವೀತ। ಮನಿಷೀಷ್ಟ। ಅಮನಿಷ್ಟ। ಅಮತ। ಅಮನಿಷ್ಯತ।

**॥ಇತಿ ತನಾದಿ ಪ್ರಕರಣಮ್॥19॥**

ಪ.ಛೇ- "ಉಪಾತ್, ಪ್ರತಿಯತ್ನ-ವೈಕೃತ-ವಾಕ್ಯಾಧ್ಯಾಹಾರೇಷು, ಚ।" (6.1.139)

ಅ.ವೃ– "ಸಮ್ಪರಿಭ್ಯಾಂ ಕರೋತೌ ಭೂಷಣೇ" (6.1.137) ಎಂಬ ಸೂತ್ರದಿಂದ 'ಕರೋತೌ' ಮತ್ತು 'ಭೂಷಣೇ' ಎಂಬ ಪದಗಳು ಮತ್ತು, "ಸಮವಾಯೇ ಚ (6.1.138)" ಎಂಬ ಸೂತ್ರದಿಂದ 'ಸಮವಾಯೇ' ಎಂಬ ಪದವೂ ಅನುವೃತ್ತವಾಗುತ್ತದೆ. "ಸುಟ್ ಕಾತ್ಪೂರ್ವಃ" ಎಂಬುದು ಅಧಿಕಾರ ಸೂತ್ರವಾಗಿದೆ.

ಅರ್ಥ– ಉಪಸರ್ಗದ ನಂತರ 'ಕೃ' ಧಾತುವಿಗೆ 'ಸುಟ್' ಆಗಮವು ಬರುತ್ತದೆ. ಪ್ರತಿಯತ್ನ, ವೈಕೃತ, ಮತ್ತು ವಾಕ್ಯಾಧ್ಯಾಹಾರಗಳು ತೋರಿದಾಗ. 'ಚ' ಎಂದು ಹೇಳಿರೋಣದ್ದರಿಂದ ಮೇಲಿನ ಸೂತ್ರಗಳಲ್ಲಿ ಹೇಳಲಾಗಿರುವ ಭೂಷಣ ಮತ್ತು ಸಙ್ಘಾತಾರ್ಥಗಳಲ್ಲೂ ಸುಡಾಗಮವು ಬರುವದು ಎಂದು ಅರ್ಥ.

ಪ್ರತಿಯತ್ನವೆಂದರೆ ಹೊಸದಾದ ಗುಣವನ್ನು ಸಂಪಾದಿಸುವದು ಎಂದು ಅರ್ಥ.

ವೈಕೃತವೆಂದರೆ–ವಿಕಾರ ಎಂದು ಅರ್ಥ.

ವಾಕ್ಯಾಧ್ಯಾಹಾರವೆಂದರೆ ಆವಶ್ಯಕವಾದ ಒಂದು ಭಾಗವನ್ನು ಪೂರೈಸುವದು ಎಂದು ಅರ್ಥ.

ಉಪಸ್ಕೃತಾ ಬ್ರಾಹ್ಮಣಾಃ–ಸಙ್ಘೀಭಾವಾರ್ಥದಲ್ಲಿ ಇಲ್ಲಿ ಸುಡಾಗಮವು ಬಂದಿದೆ.

ಏಧೋದಕಸ್ಯ ಉಪಸ್ಕುರುತೇ ಎಂದರೆ ಉರಿಯುವ ಕಟ್ಟಿಗೆಯು ನೀರನ್ನು ಪರಿಷ್ಕರಿಸುತ್ತದೆ. (ಬಿಸಿಮಾಡುತ್ತದೆ).

ಉಪಸ್ಕೃತಂ ಭುಙ್ತ್ತೇ ಎಂದರೆ ವಿಕೃತವಾದ ವಸ್ತುವನ್ನು ತಿನ್ನುತ್ತಾನೆ ಎಂದರ್ಥ. ಇಲ್ಲಿ ಪ್ರತಿಯತ್ನಾರ್ಥದಲ್ಲಿ ಪ್ರಯುಕ್ತವಾದ 'ಕೃಞ್' ಧಾತುವಿಗೆ ಸುಡಾಗಮವು(ಸ್) ಬಂದಿರುವದು.

ಉಪಸ್ಕೃತಂ ಬ್ರೂತೇ ಎಂದರೆ ವಾಕ್ಯದಲ್ಲಿ ಅಧ್ಯಾಹರ ಮಾಡಿಕೊಂಡು ಮಾತನಾಡುತ್ತಿದ್ದಾನೆ ಎಂದು ಅರ್ಥ. ಇಲ್ಲಿಯೂ ಈ ಅರ್ಥದಲ್ಲಿ ಸುಡಾಗಮ(ಸ್)ವು ಬಂದಿದೆ.

ಉದಾ– 7. ವನು ಯಾಚನೇ– ವನು ಧಾತುವಿಗೆ ಯಾಚಿಸುವದು ಎಂದು ಅರ್ಥ. ಇದರಲ್ಲಿ 'ವನ್' ಮಾತ್ರ ಉಳಿಯುತ್ತದೆ. ಇದು ಉದಿತ್, ಸ್ವರಿತೇತ್,ಆತ್ಮನೇಪದಿ, ಮತ್ತು 'ಸೇಟ್' ಆಗಿಯೂ ಇದೆ.

ಆತ್ಮನೇಪದಿ ಧಾತುಗಳು

ವನು (ವನ್) ಧಾತುವಿನ ರೂಪಗಳು

ಲಟ್:– ಪ್ರಥಮಪುರುಷದಲ್ಲಿ–ವನುತೇ, ವನ್ವಾತೇ, ವನ್ವತೇ।

ಲಿಟ್:– ಇಲ್ಲಿ ಬರಬೇಕಾದ ಏತ್ವಾಭ್ಯಾಸ ಲೋಪಗಳು "ನ ಶಸದದವಾದಿ ಗುಣಾನಾಂ" ಎಂಬ ಸೂತ್ರದಿಂದ ನಿಷೇಧಿಸಲ್ಪಟ್ಟಿವೆ. ಇದೇ 'ತನು' ಧಾತುವಿನ ಆತ್ಮನೇಪದ ಲಿಟ್ ರೂಪಕ್ಕೂ, ಇದಕ್ಕೂ ಇರುವ ವ್ಯತ್ಯಾಸ.

ಪ್ರಥಮಪುರುಷದಲ್ಲಿ – ವವನೇ, ವವನಾತೇ, ವವನಿರೇ।

ಲುಟ್:-ವನಿತಾ, ವನಿತಾರೌ, ವನಿತಾರಃ। ವನಿತಾಸೇ, ವನಿತಾಸಾಥೇ, ವನಿತಾಧ್ವೇ। ವನಿತಾಹೇ, ವನಿತಾಸ್ವಹೇ, ವನಿತಾಸ್ಮಹೇ।

ಲೃಟ್:-ವನಿಷ್ಯತೇ, ವನಿಷ್ಯೇತೇ, ವನಿಷ್ಯನ್ತೇ।

ಲೋಟ್:ವನುತಾಮ್, ವನ್ವಾತಾಮ್, ವನ್ವತಾಮ್।

ಲಙ್:-ಅವನುತ, ಅವನ್ವಾತಾಮ್, ಅವನ್ವತ।

ವಿಧಿಲಿಙ್:- ವನ್ವೀತ, ವನ್ವೀಯಾತಾಮ್, ವನ್ವೀರನ್।

ಆಶೀರ್ಲಿಙ್:ವನಿಷಿಷ್ಟ, ವನಿಷೀಯಾಸ್ತಾಮ್, ವನಿಷೀರನ್।

ಲುಙ್:-ಅವನಿತ/ಅವನಿಷ್ಟ, ಅವನಿಷಾತಾಮ್, ಅವನಿಷತ। ಅವಥಾಃ/ಅವನಿಷ್ಠಾಃ, ಅವನಿಷಾಥಾಮ್, ಅವನಿಡ್ವಮ್। ಅವನಿಷಿ, ಅವನಿಷ್ವಹಿ, ಅವನಿಷ್ಮಹಿ।

ಲೃಙ್:-ಅವನಿಷ್ಯತ, ಅವನಿಷ್ಯೇತಾಮ್, ಅವನಿಷ್ಯನ್ತ।

8. ಮನು(ಮನ್)-ಅವಬೋಧನೇ-(ತಿಳಿದುಕೊಳ್ಳುವದು) - ಇದು 'ಉದಿತ್', ಸ್ವರಿತೇತ್ ಮತ್ತು ಸೇಟ್ ಆತ್ಮನೇಪದಿಯೂ ಆಗಿದೆ. ಇದರ ಪ್ರಕ್ರಿಯೆಯು 'ವನ್' ಧಾತುವಿನಂತೆಯೇ ಇರುತ್ತದೆ

ಸೂಚನೆ: 'ಲಿಟ್' 'ಲ್' ಕಾರದಲ್ಲಿ ಆಗುವ ವ್ಯತ್ಯಾಸವನ್ನು ಮುಂದೆ 'ಲಿಟ್' ಬಂದಾಗ ಹೇಳಲಾಗುವದು.

ಆತ್ಮನೇಪದಿ ಮನು (ಮನ್) ಧಾತುವಿನ ರೂಪಗಳು

ಲಟ್:- ಮನುತೇ, ಮನ್ವಾತೇ, ಮನ್ವತೇ।

ಲಿಟ್:- ಮೇನೇ, ಮೇನಾತೇ, ಮೇನಿರೇ।

ಲುಟ್:- ಮನಿತಾ, ಮನಿತಾರೌ, ಮನಿತಾರಃ।ಮನಿತಾಸೇ, ಮನಿತಾಸಾಥೇ, ಮನಿತಾಧ್ವೇ। ಮನಿತಾಹೇ, ಮನಿತಾಸ್ವಹೇ, ಮನಿತಾಸ್ಮಹೇ।

ಲೃಟ್:- ಮನಿಷ್ಯತೇ, ಮನಿಷ್ಯೇತೇ, ಮನಿಷ್ಯನ್ತೇ।

ಲೋಟ್:- ಮನುತಾ, ಮನ್ವಾತಾಮ್, ಮನ್ವತಾಮ್।

ಲಙ್:- ಅಮನುತ, ಅಮನ್ವಾತಾಮ್, ಅಮನ್ವತ।

ವಿಧಿಲಿಙ್:- ಮನ್ವೀತ, ಮನ್ವೀಯಾತಾಮ್, ಮನ್ವೀರನ್।

ಆಶೀರ್ಲಿಙ್: ಮನಿಷೀಷ್ಟ, ಮನಿಷೀಯಾಸ್ತಾಮ್, ಮನಿಷೀರನ್।

ಲುಙ್:- ಅಮತ/ಅಮನಿಷ್ಟ, ಅಮನಿಷಾತಾಮ್, ಅಮನಿಷತ। ಅಮತಾಃ/ ಅಮನಿಷ್ಠಾಃ, ಅಮನಿಷಾಥಾಮ್, ಅಮನಿಡ್ವಮ್। ಅಮನಿಷಿ, ಅಮನಿಷ್ವಹಿ, ಅಮನಿಷ್ಮಹಿ।

ಲೃಙ್:- ಅಮನಿಷ್ಯತ, ಅಮನಿಷ್ಯೇತಾಮ್,ಅಮನಿಷ್ಯನ್ತ।

**॥ಇತಿ ತನಾದಿ (8) ಗಣ ಸಮಾಪ್ತಃ॥**

**ಇಲ್ಲಿಗೆ ತನಾದಿ (19) ಪ್ರಕರಣವು ಮುಗಿಯಿತು॥**

# ಪ್ರಕರಣ-20: ಅಥ ಕ್ರ್ಯಾದಯ (9ನೇ ಗಣ)

**(ಸೂತ್ರಸಂಖ್ಯೆ 685 ರಿಂದ 694 ವರೆಗೆ)**

ಈ ಗಣದಲ್ಲಿ 61 ಧಾತುಗಳಿವೆ. ಇವುಗಳಲ್ಲಿ ವರದರಾಜರು, ಈ ಕೆಳಗಿನ 22 ಧಾತುಗಳನ್ನು ರೂಪನಿಷ್ಪತ್ತಿಗಾಗಿ ಆರಿಸಿಕೊಂಡಿದ್ದಾರೆ.

**ಉಭಯಪದಿ ಧಾತುಗಳು (17)**

1. ಡುಕ್ರೀಞ್ – ದ್ರವ್ಯವಿನಿಮಯರೂಪ ವ್ಯಾಪಾರ, 2. ಪ್ರೀಞ್-ತೃಪ್ತಿಗೊಳಿಸುವದು ಅಥವಾ ಇಚ್ಛಿಸುವದು, 3. ಶ್ರೀಞ್-ಬೇಯಿಸುವದು, 4. ನೀಞ್-ಹಿಂಸಿಸುವದು, 5. ಷಿಞ್-ಬಂಧಿಸುವದು, 6. ಸ್ಕುಞ್-ಎತ್ತುವದು, 7. ಯುಞ್-ಬಂಧಿಸುವದು, 8. ಕ್ನೂಞ್-ಸಪ್ಪಳಮಾಡುವದು, 9. ದೃಞ್-ಹೊಡೆಯುವದು, 10. ದ್ರೃಞ್-ಹೊಡೆಯುವದು, 11. ಪೂಞ್-ಪವಿತ್ರಗೊಳಿಸುವದು, 12. ಲೂಞ್-ಕತ್ತರಿಸುವದು,13. ಸ್ತೃಞ್-ಮುಚ್ಚುವದು. 14.ಕೃಞ್- ಹಿಂಸಿಸುವದು, 15. ವೃಞ್- ಸ್ವೀಕರಿಸುವದು, 16. ಧೂಞ್-ಅಲುಗಾಡಿಸುವದು, 17. ಗ್ರಹ್-ಗ್ರಹಿಸುವದು/ತೆಗೆದುಕೊಳ್ಳೂವದು.

**ಪರಸ್ಮೈಪದಿ ಧಾತುಗಳು (4)**

1. ಕುಷ-ತೆಗೆದುಹಾಕುವದು, 2. ಅಶ-ಊಟಮಾಡುವದು, 3. ಮುಷ-ಕದಿಯುವದು, 4. ಜ್ಞಾ- ತಿಳಿಯುವದು.

**ಆತ್ಮನೇಪದಿ ಧಾತುಗಳು (1)**

1. ವೃಙ್-ಸೇವಿಸುವದು.

**(ಶ್ನಾ (ನಾ)-ವಿಕರಣಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ – 685. ಕ್ರ್ಯಾದಿಭ್ಯಃ ಶ್ನಾ (3.1.81)**

ವೃತ್ತಿ– ಶಪೋಽಪವಾದಃ। ಕ್ರೀಣಾತಿ(618) "ಈ ಹಲ್ಯಘೋಃ"। ಕ್ರೀಣೀತಃ। "(619) ಶ್ನಾಭ್ಯಸ್ತಯೋರಾತಃ"। ಕ್ರೀಣನ್ತಿ। ಕ್ರೀಣಾಸಿ। ಕ್ರೀಣೀಥಃ। ಕ್ರೀಣೀಥ। ಕ್ರೀಣಾಮಿ। ಕ್ರೀಣೀವಃ। ಕ್ರೀಣೀಮಃ। ಕ್ರೀಣೀತೆ। ಕ್ರೀಣಾತೇ। ಕ್ರೀಣತೇ। ಕ್ರೀಣೀಷೇ। ಕ್ರೀಣಾಥೇ। ಕ್ರೀಣೀಧ್ವೇ। ಕ್ರೀಣೇ। ಕ್ರೀಣೀವಹೇ। ಕ್ರೀಣೀಮಹೇ। ಚಿಕ್ರಾಯ। ಚಿಕ್ರೀಯತುಃ। ಚಿಕ್ರೀಯುಃ।

ಚಿಕ್ರಯಿಥ, ಚಿಕ್ರೇಥ। ಚಿಕ್ರೀಯ, ಚಿಕ್ರೀಯೆ। ಕ್ರೇತಾ। ಕ್ರೇಷ್ಯತಿ, ಕ್ರೇಷ್ಯತೇ। ಕ್ರೀಣಾತು।, ಕ್ರೀಣೀತಾತ್। ಕ್ರೀಣೀತಾಮ್। ಅಕ್ರೀಣಾತ್, ಅಕ್ರೀಣೀತ।ಕ್ರೀಣೀಯಾತ್, ಕ್ರೀಣೀತ। ಕ್ರೀಯಾತ್, ಕ್ರೇಷೀಷ್ಟ। ಅಕ್ರೈಷೀತ್, ಅಕ್ರೇಷ್ಟ। ಅಕ್ರೇಷ್ಯತ್, ಅಕ್ರಷ್ಯತ।

ಪ್ರೀಞ್ ತರ್ಪಣೇ ಕಾನ್ತೌ ಚ।2। ಪ್ರೀಣಾತಿ, ಪ್ರೀಣೀತೆ। ಶ್ರೀಞ್ ಪಾಕೇ।3। ಶ್ರೀಣಾತಿ। ಶ್ರೀಣೀತೆ। ಮೀಞ್ ಹಿಂಸಾಯಾಮ್। 4।

ಅ.ವೃ– "ಕರ್ತರಿ ಶಪ್" ಎಂಬ ಸೂತ್ರದಿಂದ 'ಕರ್ತರಿ' ಎಂಬ ಪದವೂ "ಸಾರ್ವಧಾತುಕೇ ಯಕ್" ಎಂಬ ಸೂತ್ರದಿಂದ 'ಸಾರ್ವಧಾತುಕೇ' ಎಂಬ ಪದವೂ

ಅನುವೃತ್ತವಾಗುತ್ತವೆ. "ಪ್ರತ್ಯಯಃ" ಮತ್ತು "ಪರಶ್ಚ" ಎಂಬವು ಅಧಿಕಾರ ಸೂತ್ರಗಳು.

ಅರ್ಥ- 'ಡುಕ್ರೀಇಞ್ ದ್ರವ್ಯವಿನಿಮಯೇ' (ಒಂದು ದ್ರವ್ಯವನ್ನು ಕೊಟ್ಟು ಇನ್ನೊಂದನ್ನು ತೆಗೆದುಕೊಳ್ಳುವದು)-(ಡುಕ್ರೀಇಞ್) "ಆದಿರ್ಞಿ ಟುಡವಃ" ಎಂಬ ಸೂತ್ರದಿಂದ ಆದಿ ಇತ್ ಸಂಜ್ಞಕವಾದ 'ಡ್' ಕಾರ ಲೋಪ, 'ಉ' ಕಾರ ಉಚ್ಚಾರಣಾರ್ಥ. ಹಾಗೆಯೇ "ಹಲನ್ತ್ಯಮ್" ಸೂತ್ರದಿಂದ ಅಂತ್ಯ 'ಇಞ್' ಕಾರ ಲೋಪ. ಹೀಗೆ 'ಕ್ರೀ' ಮಾತ್ರ ಉಳಿಯುತ್ತದೆ. ಕರ್ತ್ರರ್ಥದಲ್ಲಿ ಸಾರ್ವಧಾತುಕ ಪ್ರತ್ಯಯ ಪರವಾದಾಗ, 'ಕ್ರ್ಯಾದಿ' ಧಾತುಗಳ ನಂತರ ಬರುವ 'ಶಪ್' ಪ್ರತ್ಯಯವನ್ನು ಬಾಧಿಸಿ 'ಶ್ನಾ(ನಾ)' ಪ್ರತ್ಯಯವು ಬರುತ್ತದೆ. ('ಶ್ನಾ' ದಲ್ಲಿ "ಲಶಕ್ವತದ್ಧಿತೇ" ಎಂಬ ಸೂತ್ರದಿಂದ 'ಶ್' ಕಾರ ಲೋಪ). ಇದು 'ಶಿತ್' ಆಗಿರುವುದರಿಂದಲೂ, ಸಾರ್ವಧಾತುಕ, ಮತ್ತು ಅಪಿತ್ ಆಗಿರುವುದರಿಂದಲೂ "ಸಾರ್ವಧಾತುಕಮಪಿತ್" ಎಂಬ ಸೂತ್ರದಿಂದ 'ಙಿತ್' ಆಗುತ್ತದೆ. ಅದು ಪರವಾದಾಗ, "ಕ್ಙಿತಿ ಚ" ಎಂಬ ಸೂತ್ರದಿಂದ ಗುಣ-ವೃದ್ಧಿಗಳು ಬರುವುದಿಲ್ಲ

ಪರಸ್ಮೈಪದಿ ಧಾತುಗಳು

ಉದಾ- ಕ್ರೀಣಾತಿ-ಪ್ರಥಮಪುರುಷ ಏಕ ವಚನದಲ್ಲಿ, ಕ್ರೀ+ನಾ+ತಿ ಎಂದಿದ್ದಾಗ, "ಅಟ್ಕುಪ್ವಾಙ್ನುಮ್ ವ್ಯವಾಯೇಪಿ" ಎಂಬ ಸೂತ್ರದಿಂದ 'ನ್' ಕಾರಕ್ಕೆ ಣತ್ವ(ಣ್) ಬಂದು ಕ್ರೀಣಾತಿ ಎಂದು ರೂಪವಾಗುತ್ತದೆ.

ಉದಾ- ಕ್ರೀಣೀತಃ - ದ್ವಿ ವಚನದಲ್ಲಿ- ಕ್ರೀ+ನಾ+ತಸ್ ಎಂದಿದ್ದಾಗ, 'ತಸ್' ಪ್ರತ್ಯಯವು (ಅತಿದೇಶದಿಂದ)'ಙಿತ್' ಆಗಿರುವುದರಿಂದ ಅದು ಪರದಲ್ಲಿರುವಾಗ,

ನ್-ಕಾರೋತ್ತರ 'ಆ' ಕಾರಕ್ಕೆ "ಈ ಹಲ್ಯಘೋಃ" ಎಂಬ ಸೂತ್ರದಿಂದ ಈ-ಕಾರವು ಆದೇಶವಾಗಿ ಬಂದು, ಕ್ರೀ+ನೀ+ತಸ್ ಎಂದಿದ್ದಾಗ, 'ನ್' ಕಾರಕ್ಕೆ 'ಣತ್ವ' ಬಂದು 'ಸ್' ಕಾರಕ್ಕೆ ರುತ್ವ-ವಿಸರ್ಗಗಳಿಂದ ಕ್ರೀಣೀತಃ ಎಂದು ರೂಪವಾಗುತ್ತದೆ. (ಇಲ್ಲಿ ವಿಭಕ್ತಿಸ್ಥವಾದ 'ತ್' ಕಾರವು "ನ ವಿಭಕ್ತೌ ತುಸ್ಮಾಃ" ಎಂಬ ಸೂತ್ರದಿಂದ ಲೋಪ ಹೊಂದುವದಿಲ್ಲ).

ಉದಾ- ಕ್ರೀಣನ್ತಿ- ಬಹುವಚನದಲ್ಲಿ-ಕ್ರೀ+ನಾ+ಅನ್ತಿ ಎಂದಿದ್ದಾಗ, "ಶ್ನಾಭ್ಯಸ್ತಯೋರಾತಃ" ಎಂಬ ಸೂತ್ರದಿಂದ, ನ್-ಕಾರೋತ್ತರ 'ಆ' ಕಾರಕ್ಕೆ ಲೋಪ ಬಂದು ಕ್ರೀ+ನ್+ಅನ್ತಿ ಎಂದಿದ್ದಾಗ 'ನ್' ಕಾರಕ್ಕೆ ಣತ್ವ(ಣ್) ಬಂದು ಕ್ರೀಣನ್ತಿ ಎಂದು ರೂಪವಾಗುತ್ತದೆ. ಹಲಾದಿ 'ಙಿತ್' ಆದ ಸಾರ್ವಧಾತುಕವು ಪರದಲ್ಲಿದ್ದಾಗ, ಈತ್ವವೂ(ಈ), ಅಜಾದಿ 'ಙಿತ್' ಆದ ಸಾರ್ವಧಾತುಕವು ಪರದಲ್ಲಿದ್ದಾಗ, 'ಆ' ಕಾರ ಲೋಪವಾಗಿ ಕೆಳಗಿನಂತೆ ರೂಪಗಳು ಸಿದ್ಧವಾಗುತ್ತವೆ.

ಲಟ್:-ಪರಸ್ಮೈ ಪದದಲ್ಲಿ ರೂಪಗಳು: ಕ್ರೀಣಾತಿ, ಕ್ರೀಣೀತಃ, ಕ್ರೀಣನ್ತಿ। ಕ್ರೀಣಾಸಿ, ಕ್ರೀಣೀಥಃ, ಕ್ರೀಣೀಥ। ಕ್ರೀಣಾಮಿ, ಕ್ರೀಣೀವಃ, ಕ್ರೀಣೀಮಃ।

ಆತ್ಮನೇ ಪದದಲ್ಲಿ ರೂಪಗಳು:- ಕ್ರೀಣೀತೆ, ಕ್ರೀಣಾತೇ, ಕ್ರೀಣತೆ। ಕ್ರೀಣೀಷೇ, ಕ್ರೀಣಾಥೇ, ಕ್ರೀಣೀಧ್ವೆ। ಕ್ರೀಣೇ, ಕ್ರೀಣೀವಹೇ, ಕ್ರೀಣೀಮಹೇ

ಲಿಟ್:–ಪರಸ್ಮೈ ಪದ. ಉದಾ– ಚಿಕ್ರಾಯ– ಪ್ರಥಮಪುರುಷ ಏಕವಚನದಲ್ಲಿ ಕ್ರೀ+ತಿಪ್ ಎಂದಿದ್ದಾಗ, ಮೂಲ ಆಖ್ಯಾತ ಪ್ರತ್ಯಯವಾದ ತಿಪ್ ಗೆ, ಅಭಿನವ ಆಖ್ಯಾತ ಪ್ರತ್ಯಯವಾದ ಣಲ್(ಅ) ಆದೇಶವಾಗಿ ಬಂದು, ಅನುಬಂಧಗಳಾದ 'ಣ್' ಮತ್ತು 'ಲ್'ಗಳು ಲೋಪವಾಗಿ ಕ್ರೀ+ಅ ಎಂದಿದ್ದಾಗ, ಧಾತುವಿಗೆ ದ್ವಿತ್ವ ಬಂದು ಕ್ರೀಕ್ರೀ+ಅ ಎಂದಿದ್ದಾಗ, "ಹಲಾದಿಃ ಶೇಷಃ" ಎಂಬ ಸೂತ್ರದಿಂದ ಕೀಕ್ರೀ+ಅ ಎಂದಿದ್ದಾಗ, "ಹ್ರಸ್ವಃ " ಎಂಬ ಸೂತ್ರದಿಂದ ಅಭ್ಯಾಸದಲ್ಲಿರುವ 'ಕೀ' ಯ 'ಈ' ಕಾರಕ್ಕೆ ಹ್ರಸ್ವ ಬಂದು ಕಿಕ್ರೀ+ಅ ಎಂದಿರುತ್ತದೆ. ಆಗ "ಕುಹೋಶ್ಚುಃ" ಎಂಬ ಸೂತ್ರದಿಂದ, ಮೊದಲನೇ 'ಕ್' ಗೆ 'ಚುತ್ವ(ಚ್)' ಬಂದು, ಚಿಕ್ರೀ+ಅ ಎಂದಿದ್ದಾಗ, "ಅಚೋಞ್ಣಿತಿ" ಸೂತ್ರದಿಂದ ವೃದ್ಧಿ ಬಂದು, ಚಿಕ್ರೈ+ಅ ಎಂದಾಗುತ್ತದೆ. ನಂತರ "ಏಚೋಽಯವಾಯಾವಃ" ಎಂಬ ಸೂತ್ರದಿಂದ 'ಐ' ಗೆ 'ಆಯ್' ಆದೇಶ ಬಂದು ಚಿಕ್ರಾಯ್+ಅ ಎಂದಾಗಿ ವರ್ಣ ಜೋಡಣೆಯಿಂದ ಚಿಕ್ರಾಯ ಎಂದು ರೂಪವಾಗುತ್ತದೆ.

ಉದಾ– ಚಿಕ್ರಿಯತುಃ –ಪ್ರಥಮಪುರುಷ ದ್ವಿವಚನದಲ್ಲಿ ಕ್ರೀ+ತಸ್ ಎಂದಿದ್ದಾಗ 'ತಸ್' ಗೆ ಹಿಂದಿನಂತೆ ಅಭಿನವಾಖ್ಯಾತ ಪ್ರತ್ಯಯವಾದ 'ಅತುಸ್' ಆದೇಶವಾಗಿ ಬಂದು, ಚಿಕ್ರೀ+ಅತುಸ್ ಎಂದಿದ್ದಾಗ, "ಅಸಂಯೋಗಾತ್ ಲಿಟ್ ಕಿತ್" ಎಂಬ ಸೂತ್ರದಿಂದ ಗುಣ ಬಾರದೇ ಚಿಕ್ರೀ+ಅತುಸ್ ಎಂದೇ ಇದ್ದಾಗ, "ಅಚಿ ಶ್ನುಧಾತುಭ್ರುವಾಂ...." ಎಂಬ ಸೂತ್ರದಿಂದ 'ಈ' ಕಾರಕ್ಕೆ 'ಇಯಙ್(ಇಯ್)' ಆದೇಶ ಬಂದು ಚಿಕ್ರ್+ಇಯ್+ಅತುಸ್=ಚಿಕ್ರಿಯತುಃ ಎಂದು ರೂಪವಾಗುತ್ತದೆ. ಈ ರೀತಿಯಾಗಿ ಪರಸ್ಮೈ ಪದದಲ್ಲಿ ಮತ್ತು ಆತ್ಮನೇ ಪದದಲ್ಲಿಯೂ 'ಅಜಾದಿ' ಪ್ರತ್ಯಯಗಳು ಪರದಲ್ಲಿದ್ದಾಗ, 'ಇಯಙ್' ಆದೇಶವು ಬರುವದು.

ಉದಾ– ಚಿಕ್ರೀಯುಃ–ಪ್ರಥಮಪುರುಷ ಬಹುವಚನದಲ್ಲಿ ಹಿಂದಿನಂತೆಯೇ ಪ್ರಕ್ರಿಯೆ ನಡೆದು ಚಿಕ್ರೀ ಎಂದಾದಮೇಲೆ 'ಈ' ಕಾರಕ್ಕೆ 'ಇಯಙ್' ಆದೇಶ ಬಂದು, ಚಿಕ್ರ್+ಇಯ್+ಉಸ್ ಎಂದಿದ್ದಾಗ, ಚಿಕ್ರಿಯುಃ ಎಂದು ರೂಪವಾಗುತ್ತದೆ.
'ಥಲ್' ನಲ್ಲಿ ಭಾರದ್ವಾಜ ನಿಯಮದಿಂದ ವಿಕಲ್ಪವಾಗಿ ಇಡಾಗಮ ಬಂದರೆ– 'ಅಯ್' ಆದೇಶ ಬರುತ್ತದೆ ತದಭಾವ ಪಕ್ಷದಲ್ಲಿ ಗುಣ ಮಾತ್ರ ಬಂದು ಚಿಕ್ರಯಿಥ/ಚಿಕ್ರೇಥ, ಎಂಬ ರೂಪಗಳಾಗುತ್ತವೆ. ನಂತರ ದ್ವಿವಚನ ಬಹುವಚನಗಳಲ್ಲಿ ಕ್ರಮವಾಗಿ ಚಿಕ್ರಯಿಥುಃ, ಚಿಕ್ರಿಯ। ಚಿಕ್ರಾಯ/ಚಿಕ್ರಯ, ಚಿಕ್ರಿಯಿವ, ಚಿಕ್ರಿಯಿಮ। ಎಂದು ರೂಪಗಳಾಗುತ್ತವೆ.

ಆತ್ಮನೇ ಪದದಲ್ಲಿ: ಚಿಕ್ರಿಯೇ, ಚಿಕ್ರಿಯಾತೆ, ಚಿಕ್ರಯಿರೇ। ಚಿಕ್ರಯಿಷೇ, ಚಿಕ್ರಿಯಾಥೆ, ಚಿಕ್ರಿಯಿಢ್ವೇ/ಚಿಕ್ರಿಯಿಧ್ವೇ। ಚಿಕ್ರಿಯೇ, ಚಿಕ್ರಿಯಿವಹೆ, ಚಿಕ್ರಿಯಿಮಹೆ। ಎಂದು ರೂಪಗಳಾಗುತ್ತವೆ.

ಸೂಚನೆ: ಮುಂದಿನ 'ಲ್' ಕಾರಗಳಲ್ಲಿ ಆಯಾ ಅಭಿನವ ಆಖ್ಯಾತ ಪ್ರತ್ಯಯಗಳನ್ನು ಹೊಂದಿ ರೂಪಗಳು ಸಿದ್ಧಿಸುತ್ತವೆ.

ಲುಟ್ -ಪರಸ್ಮೈಪದದಲ್ಲಿ: ಕ್ರೇತಾ, ಕ್ರೇತಾರೌ, ಕ್ರೇತಾರಃ। ಕ್ರೇತಾಸಿ, ಕ್ರೇತಾಸ್ಥಃ, ಕ್ರೇತಾಸ್ಥ। ಕ್ರೇತಾಸ್ಮಿ, ಕ್ರೇತಾಸ್ವಃ, ಕ್ರೇತಾಸ್ಮಃ।

ಆತ್ಮನೇ ಪದದಲ್ಲಿ: ಕ್ರೇತಾ, ಕ್ರೇತಾರೌ, ಕ್ರೇತಾರಃ। ಕ್ರೇತಾಸೆ, ಕ್ರೇತಾಸಾಥೆ,

ಕ್ರೇತಾಧ್ವೇ। ಕ್ರೇತಾಹೆ, ಕ್ರೇತಾಸ್ವಹೆ, ಕ್ರೇತಾಸ್ಮಹೆ।

ಲೃಟ್:ಪರಸ್ಮೈ ಪದದಲ್ಲಿ: ಕ್ರೇಷ್ಯತಿ, ಕ್ರೇಷ್ಯತಃ, ಕ್ರೇಷ್ಯನ್ತಿ। ಕ್ರೇಷ್ಯಸಿ, ಕ್ರೇಷ್ಯಥಃ, ಕ್ರೇಷ್ಯಥ। ಕ್ರೇಷ್ಯಾಮಿ, ಕ್ರೇಷ್ಯಾವಃ, ಕ್ರೇಷ್ಯಾಮಃ।

ಆತ್ಮನೇ ಪದದಲ್ಲಿ: ಕ್ರೇಷ್ಯತೇ, ಕ್ರೇಷ್ಯೇತೇ, ಕ್ರೇಷ್ಯನ್ತೇ। ಕ್ರೇಷ್ಯಸೇ, ಕ್ರೇಷ್ಯೇಥೇ, ಕ್ರೇಷ್ಯಧ್ವೇ। ಕ್ರೇಷ್ಯೇ। ಕ್ರೇಷ್ಯಾವಹೇ, ಕ್ರೇಷ್ಯಾಮಹೇ।

ಲೋಟ್: ಪರಸ್ಮೈ ಪದದಲ್ಲಿ: ಕ್ರೀಣಾತು/ಕ್ರೀಣೀತಾತ್, ಕ್ರೀಣೀತಾಮ್, ಕ್ರೀಣನ್ತು। ಕ್ರೀಣೀಹಿ/ ಕ್ರೀಣೀತಾತ್, ಕ್ರೀಣೀತಂ, ಕ್ರೀಣೀತ। ಎಂದು ರೂಪಗಳಾಗುತ್ತವೆ. ಉ.ಪು- ಏ.ವ ದಲ್ಲಿ ಕ್ರೀಣಾನಿ ಎಂದೂ, ದ್ವಿವ. ಮತ್ತು ಬ.ವ. ಗಳಲ್ಲಿ ವಸ್, ಮಸ್, ಪ್ರತ್ಯಯಗಳು ಪರವಾದಾಗ, "ಆಡುತ್ತಮಸ್ಯ ಪಿಚ್ಚ" ಎಂಬ ಸೂತ್ರದಿಂದ 'ಆಟ್' ಆಗಮ ಬಂದು, ಅದು 'ಪಿತ್' ಆಗಿರುವುದರಿಂದ, 'ಆ' ಕಾರಕ್ಕೆ ವ್ಯವಧಾನವಿರುತ್ತದೆ. ಅದುದರಿಂದ 'ಹಲ್' ಪರದಲ್ಲಿ ಇಲ್ಲದೇ ಇರೋಣದ್ದರಿಂದ ಈತ್ವ ಬರುವುದಿಲ್ಲ ಮತ್ತು 'ಆ' ಕಾರವು 'ಪಿತ್' ಆಗಿರುವುದರಿಂದ ಅದಕ್ಕೆ ಲೋಪವೂ ಬಾರದೇ ಕ್ರೀಣ+ಅ+ವಸ್, ಮತ್ತು ಕ್ರೀಣ+ಆ+ಮಸ್ ಎಂದಿದ್ದಾಗ, "ನಿತ್ಯಂ ಜಿತಃ" ಎಂಬ ಸೂತ್ರದಿಂದ 'ವಸ್' 'ಮಸ್' ಗಳಲ್ಲಿರುವ 'ಸ' ಕಾರಕ್ಕೆ ಲೋಪ ಬಂದು, ಸವರ್ಣದೀರ್ಘಸಂಧಿಯಾಗಿ ಕ್ರೀಣಾವ, ಕ್ರೀಣಾಮ ಎಂದು ರೂಪಗಳಾಗುತ್ತವೆ.

ಆತ್ಮನೇ ಪದದಲ್ಲಿ: ಕ್ರೀಣೀತಾಮ್, ಕ್ರೀಣಾತಾಮ್, ಕ್ರೀಣತಾಮ್। ಕ್ರೀಣೀಷ್ವ, ಕ್ರೀಣಾಥಾಮ್, ಕ್ರೀಣೀಧ್ವಮ್। ಕ್ರೀಣೈ, ಕ್ರೀಣಾವಹೈ, ಕ್ರೀಣಾಮಹೈ। ಎಂದು ರೂಪಗಳಾಗುತ್ತವೆ.

ಲಙ್:-ಪರಸ್ಮೈ ಪದದಲ್ಲಿ: ಅಕ್ರೀಣಾತ್, ಅಕ್ರೀಣೀತಾಮ್, ಅಕ್ರೀಣನ್। ಅಕ್ರೀಣಾಃ, ಅಕ್ರೀಣೀತಮ್, ಅಕ್ರೀಣತ। ಅಕ್ರೀಣಾಮ್, ಅಕ್ರೀಣೀವ, ಅಕ್ರೀಣೀಮ। ಎಂದು ರೂಪಗಳಾಗುತ್ತವೆ.

ಆತ್ಮನೇ ಪದದಲ್ಲಿ: ಅಕ್ರೀಣೀತ, ಅಕ್ರೀಣೀತಾಮ್, ಅಕ್ರೀಣತ। ಅಕ್ರೀಣೀಥಾಃ, ಅಕ್ರೀಣಾಥಾಮ್, ಅಕ್ರೀಣೀಧ್ವಮ್। ಅಕ್ರೀಣಿ, ಅಕ್ರೀಣೀವಹಿ, ಅಕ್ರೀಣೀಮಹಿ। ಎಂದು ರೂಪಗಳಾಗುತ್ತವೆ.

ವಿಧಿಲಿಙ್:ಪರಸ್ಮೈ ಪದದಲ್ಲಿ: ಕ್ರೀಣೀಯಾತ್, ಕ್ರೀಣೀಯಾತಾಮ್, ಕ್ರೀಣೀಯುಃ। ಕ್ರೀಣೀಯಾಃ, ಕ್ರೀಣೀಯಾತಮ್, ಕ್ರೀಣೀಯಾತ। ಕ್ರೀಣೀಯಾಮ್, ಕ್ರೀಣೀಯಾವ, ಕ್ರೀಣೀಯಾಮ। ಎಂದು ರೂಪಗಳಾಗುತ್ತವೆ.

ಆತ್ಮನೇ ಪದದಲ್ಲಿ: ಕ್ರೀಣೀತ, ಕ್ರೀಣೀಯಾತಾಮ್, ಕ್ರೀಣೀರನ್। ಕ್ರೀಣೀಥಾಃ, ಕ್ರೀಣೀಯಾಥಾಮ್, ಕ್ರೀಣೀಧ್ವಮ್। ಕ್ರೀಣೀಯ, ಕ್ರೀಣೀವಹಿ, ಕ್ರೀಣೀಮಹಿ। ಎಂದಾಗುತ್ತದೆ.

ಆಶೀರ್ಲಿಙ್:ಪರಸ್ಮೈ ಪದದಲ್ಲಿ: ಕ್ರೀಯಾತ್, ಕ್ರೀಯಾಸ್ತಾಮ್, ಕ್ರೀಯಾಸುಃ। ಕ್ರೀಯಾಃ, ಕ್ರೀಯಾಸ್ತಮ್, ಕ್ರೀಯಾಸ್ತ। ಕ್ರೀಯಾಸಮ್, ಕ್ರೀಯಾಸ್ವ, ಕ್ರೀಯಾಸ್ಮ। ಎಂದು ರೂಪಗಳಾಗುತ್ತವೆ.

ಆತ್ಮನೇ ಪದದಲ್ಲಿ: ಕ್ರೇಷೀಷ್ಟ, ಕ್ರೇಷೀಯಾಸ್ತಾಮ್, ಕ್ರೇಷೀರನ್। ಕ್ರೇಷೀಷ್ಠಾಃ, ಕ್ರೇಷೀಯಾಸ್ಥಾಮ್, ಕ್ರೇಷೀಢ್ವಮ್। ಕ್ರೇಷೀಯ, ಕ್ರೇಷೀವಹಿ, ಕ್ರೇಷೀಮಹಿ। ಎಂದು ರೂಪಗಳಾಗುತ್ತವೆ.

ಲುಙ್:ಪರಸ್ಮೈ ಪದದಲ್ಲಿ: "ಸಿಚಿ ವೃದ್ಧಿಃ ಪರಸ್ಮೈಪದೇಷು" ಎಂಬ ಸೂತ್ರದಿಂದ ವೃದ್ಧಿ ಬಂದು, ಅಕ್ರೈಷೀತ್, ಅಕ್ರೈಷ್ಟಾಮ್, ಅಕ್ರೈಷುಃ। ಅಕ್ರೈಷೀಃ, ಅಕ್ರೈಷ್ಟಮ್, ಅಕ್ರೈಷ್ಟ। ಅಕ್ರೈಷಮ್, ಅಕ್ರೈಷ್ವ, ಅಕ್ರೈಷ್ಮ। ಎಂದು ರೂಪಗಳಾಗುತ್ತವೆ.

ಆತ್ಮನೇ ಪದದಲ್ಲಿ: "ಸಾರ್ವಧಾತುಕಾರ್ಧಧಾತುಕಯೋಃ" ಎಂಬ ಸೂತ್ರದಿಂದ ಗುಣ ಬಂದು, ಅಕ್ರೇಷ್ಟ, ಅಕ್ರೇಷಾತಾಮ್, ಅಕ್ರೇಷತ। ಅಕ್ರೇಷ್ಠಾಃ, ಅಕ್ರೇಷಾಥಾಮ್, ಅಕ್ರೇಢ್ವಮ್। ಅಕ್ರೇಷಿ, ಅಕ್ರೇಷ್ವಹಿ, ಅಕ್ರೇಷ್ಮಹಿ। ಎಂದು ರೂಪಗಳಾಗುತ್ತವೆ.

ಲೃಙ್:ಪರಸ್ಮೈ ಪದದಲ್ಲಿ: ಅಕ್ರೇಷ್ಯತ್, ಅಕ್ರೇಷ್ಯತಾಮ್, ಅಕ್ರೇಷ್ಯನ್। ಅಕ್ರೇಷ್ಯಃ, ಅಕ್ರೇಷ್ಯತಮ್, ಅಕ್ರೇಷ್ಯತ। ಅಕ್ರೇಷ್ಯಮ್, ಅಕ್ರೇಷ್ಯಾವ, ಅಕ್ರೇಷ್ಯಾಮ। ಎಂದು ರೂಪಗಳಾಗುತ್ತವೆ.

ಆತ್ಮನೇ ಪದದಲ್ಲಿ: ಅಕ್ರೇಷ್ಯತ, ಅಕ್ರೇಷ್ಯಾತಾಮ್, ಅಕ್ರೇಷ್ಯನ್ತ। ಅಕ್ರೇಷ್ಯಥಾಃ, ಅಕ್ರೇಷ್ಯೇಥಾಮ್, ಅಕ್ರೇಷ್ಯಧ್ವಮ್। ಅಕ್ರೇಷ್ಯೇ, ಅಕ್ರೇಷ್ಯಾವಹಿ, ಅಕ್ರೇಷ್ಯಾಮಹಿ। ಎಂದು ರೂಪಗಳಾಗುತ್ತವೆ.

ಧಾತು 2. ಪ್ರೀಞ್ ತರ್ಪಣೇ ಕಾನ್ತೌ ಚ (ತೃಪ್ತಿಪಡಿಸುವದು, ತೃಪ್ತಿಹೊಂದುವದು, ಹೊಳೆಯುವದು) – ಇದೂ ಕೂಡ ಞಿತ್ತಾಗಿರುವುದರಿಂದ ಉಭಯಪದಿಯಾಗಿದೆ. ಇದರ ರೂಪಗಳು 'ಕ್ರೀಞ್' ಧಾತುವಿನಂತೆ ಇರುತ್ತವೆ. 'ಲಟ್' 'ಲ್' ಕಾರದ ಪೂರ್ಣರೂಪಗಳನ್ನೂ, ಮತ್ತು ಉಳಿದ 'ಲ್' ಕಾರಗಳ ಪ್ರಥಮಪುರುಷ ಏಕವಚನ ರೂಪಗಳನ್ನು ಮಾತ್ರ ಹೇಳಿದೆ. ಉಳಿದ ರೂಪಗಳನ್ನು ನೀವೇ ಊಹಿಸಿಕೊಳ್ಳಬೇಕು.

ಲಟ್:ಪರಸ್ಮೈ ಪದದಲ್ಲಿ: ಪ್ರೀಣಾತಿ, ಪ್ರೀಣೀತಃ, ಪ್ರೀಣನ್ತಿ। ಪ್ರೀಣಾಸಿ, ಪ್ರೀಣೀಥಃ, ಪ್ರೀಣೀಥ। ಪ್ರೀಣಾಮಿ, ಪ್ರೀಣೀವಃ, ಪ್ರೀಣೀಮಃ। ಎಂದು ರೂಪಗಳಾಗುತ್ತವೆ.

ಆತ್ಮನೇ ಪದದಲ್ಲಿ: ಪ್ರೀಣೀತೆ, ಪ್ರೀಣಾತೆ, ಪ್ರೀಣತೆ। ಪ್ರೀಣೀಷೆ, ಪ್ರೀಣಾಥೆ, ಪ್ರೀಣೀಧ್ವೆ। ಪ್ರೀಣೇ, ಪ್ರೀಣೀವಹೆ, ಪ್ರೀಣೀಮಹೆ। ಎಂದು ರೂಪಗಳಾಗುತ್ತವೆ.

ಲಿಟ್:ಪರಸ್ಮೈ ಪದದಲ್ಲಿ: ಪಿಪ್ರಾಯ, ಪಿಪ್ರಿಯತುಃ, ಪಿಪ್ರಿಯುಃ।

ಆತ್ಮನೇಪದದಲ್ಲಿ: ಪಿಪ್ರಿಯೇ, ಪಿಪ್ರಿಯಾತೆ, ಪಿಪ್ರಿಯಿರೆ।

ಲುಟ್: ಪರಸ್ಮೈ ಪದದಲ್ಲಿ : ಪ್ರೇತಾ, ಪ್ರೇತಾರೌ, ಪ್ರೇತಾರಃ।ಪ್ರೇತಾಸಿ ಇತ್ಯಾದಿ

ಆತ್ಮನೇಪದದಲ್ಲಿ: ಪ್ರೇತಾ, ಪ್ರೇತಾರೌ, ಪ್ರೇತಾರಃ। ಪ್ರೇತಾಸೆ ಇತ್ಯಾದಿ

ಲೃಟ್: ಪರಸ್ಮೈಪದದಲ್ಲಿ : ಪ್ರೇಷ್ಯತಿ, ಪ್ರೇಷ್ಯತಃ, ಪ್ರೇಷ್ಯನ್ತಿ।

ಆತ್ಮನೇಪದದಲ್ಲಿ : ಪ್ರೇಷ್ಯತೇ, ಪ್ರೇಷ್ಯೇತೇ, ಪ್ರೇಷ್ಯನ್ತೇ।

ಲೋಟ್: ಪರಸ್ಮೈಪದದಲ್ಲಿ: ಪ್ರೀಣಾತು/ಪ್ರೀಣೀತಾತ್, ಪ್ರೀಣೀತಮ್, ಪ್ರೀಣನ್ತು।

ಆತ್ಮನೇಪದದಲ್ಲಿ; ಪ್ರೀಣೀತಾಮ್, ಪ್ರೀಣಾತಾಮ್, ಪ್ರೀಣತಾಮ್।

ಲಙ್: ಪರಸ್ಮೈಪದದಲ್ಲಿ: ಅಪ್ರೀಣಾತ್, ಅಪ್ರೀಣೀತಾಮ್, ಅಪ್ರೀಣನ್।

ಆತ್ಮನೇಪದದಲ್ಲಿ: ಅಪ್ರೀಣೀತ, ಅಪ್ರೀಣಾತಾಮ್, ಅಪ್ರೀಣತ।

ವಿಧಿಲಿಙ್: ಪರಸ್ಮೈ ಪದದಲ್ಲಿ: ಪ್ರೀಣೀಯಾತ್, ಪ್ರೀಣೀಯಾತಾಮ್, ಪ್ರೀಣೀಯುಃ

ಆತ್ಮನೇಪದದಲ್ಲಿ: ಪ್ರೀಣೀತ, ಪ್ರೀಣೀಯಾತಾಮ್, ಪ್ರೀಣೀರನ್।

ಆಶೀರ್ಲಿಙ್: ಪರಸ್ಮೈಪದದಲ್ಲಿ: ಪ್ರೀಯಾತ್, ಪ್ರೀಯಾಸ್ತಾಮ್, ಪ್ರೀಯಾಸುಃ।

ಆತ್ಮನೇಪದದಲ್ಲಿ: ಪ್ರೇಷೀಷ್ಟ, ಪ್ರೇಷೀಯಾಸ್ತಾಮ್, ಪ್ರೇಷೀರನ್।

ಲುಙ್: ಪರಸ್ಮೈ ಪದದಲ್ಲಿ: ಅಪ್ರೈಷೀತ್, ಅಪ್ರೈಷ್ಟಾಮ್, ಅಪ್ರೈಷುಃ।

ಆತ್ಮನೇ ಪದದಲ್ಲಿ: ಅಪ್ರೇಷ್ಟ, ಅಪ್ರೇಷಾತಾಮ್, ಅಪ್ರೇಷತ।

ಲೃಙ್:ಪರಸ್ಮೈ ಪದದಲ್ಲಿ: ಅಪ್ರೇಷ್ಯತ್, ಆಅಪ್ರೇಷ್ಯತಾಮ್, ಅಪ್ರೇಷ್ಯನ್।

ಆತ್ಮನೇಪದದಲ್ಲಿ ಅಪ್ರೇಷ್ಯತ, ಅಪ್ರೇಷ್ಯೇತಾವ್, ಅಪ್ರೇಷ್ಯನ್ತ। ಎಂದು ರೂಪಗಳಾಗುತ್ತವೆ.

ಧಾತು 3. ಶ್ರೀಞ್ ಪಾಕೇ-(ಅಡಿಗೆ ಮಾಡುವದು) ಇದೂ ಕೂಡ 'ಞಿತ್' ಆಗಿರುವುದರಿಂದ, ಉಭಯಪದಿ ಆಗಿರುತ್ತದೆ. ಇದರ ರೂಪಗಳು ಕ್ರೀಞ್ ಧಾತುವಿನಂತೆಯೇ ಇರುತ್ತವೆ.

ಲಟ್: ಪರಸ್ಮೈ ಪದದಲ್ಲಿ: ಶ್ರೀಣಾತಿ, ಶ್ರೀಣೀತಃ, ಶ್ರೀಣನ್ತಿ। ಶ್ರೀಣಾಸಿ, ಶ್ರೀಣೀಥಃ, ಶ್ರೀಣೀಥ। ಶ್ರೀಣಾಮಿ, ಶ್ರೀಣೀವಃ, ಶ್ರೀಣೀಮಃ। ಎಂದು ರೂಪಗಳಾಗುತ್ತವೆ.

ಆತ್ಮನೇ ಪದದಲ್ಲಿ: ಶ್ರೀಣೀತೇ, ಶ್ರೀಣಾತೇ, ಶ್ರೀಣತೇ। ಶ್ರೀಣೀಷೇ, ಶ್ರೀಣಾಥೇ, ಶ್ರೀಣೀಧ್ವೇ। ಶ್ರೀಣೇ, ಶ್ರೀಣೀವಹೆ, ಶ್ರೀಣೀಮಹೇ। ಎಂದು ರೂಪಗಳಾಗುತ್ತವೆ.

ಲಿಟ್: ಪರಸ್ಮೈ ಪದದಲ್ಲಿ: ಶಿಶ್ರಾಯ,

ಆತ್ಮನೇಪದದಲ್ಲಿ: ಶಿಶ್ರಿಯೇ।

ಲುಟ್: ಪರಸ್ಮೈ ಪದದಲ್ಲಿ: ಶ್ರೇತಾ, ಶ್ರೇತಾಸಿ,

ಆತ್ಮನೇಪದದಲ್ಲಿ : ಶ್ರೇತಾಸೇ।

ಲೃಟ್: ಪರಸ್ಮೈ ಪದದಲ್ಲಿ: ಶ್ರೇಷ್ಯತಿ,

ಆತ್ಮನೇ ಪದದಲ್ಲಿ: ಶ್ರೇಷ್ಯತೇ।

ಲೋಟ್: ಪರಸ್ಮೈ ಪದದಲ್ಲಿ:ಶ್ರೀಣಾತು,

ಆತ್ಮನೇಪದದಲ್ಲಿ: ಶ್ರೀಣೀತಾಮ್।

ಲಜ್: ಪರಸ್ಮೈಪದದಲ್ಲಿ: ಅಶ್ರೀಣಾತ್,

ಆತ್ಮನೇಪದದಲ್ಲಿ: ಅಶ್ರೀಣೀತ।

ವಿಧಿಲಿಜ್:ಪರಸ್ಮೈ ಪದದಲ್ಲಿ: ಶ್ರೀಣೀಯಾತ್,

ಆತ್ಮನೇಪದದಲ್ಲಿ: ಶ್ರೀಣೀತ।

ಆಶೀರ್ಲಿಜ್:ಪರಸ್ಮೈಪದದಲ್ಲಿ:ಶ್ರೀಯಾತ್,

ಆತ್ಮನೇಪದದಲ್ಲಿ: ಶ್ರೇಷೀಷ್ಟ

ಲುಜ್: ಪರಸ್ಮೈ ಪದದಲ್ಲಿ: ಅಶ್ರೈಷೀತ್,

ಆತ್ಮನೇಪದದಲ್ಲಿ: ಅಶ್ರೇಷ್ಟ

ಲೃಜ್: ಪರಸ್ಮೈಪ್ದದಲ್ಲಿ: ಅಶ್ರೇಷ್ಯತ್,

ಆತ್ಮನೇಪದದಲ್ಲಿ: ಅಶ್ರೇಷ್ಯತ। ಎಂದು ರೂಪಗಳಾಗುತ್ತವೆ.

ಧಾತು 4.ಮೀಞ್ ಹಿಂಸಾಯಾಮ್: (ಹಿಂಸೆ ಮಾಡುವದು) ಇದರಲ್ಲಿ 'ಞ್' ಇತ್ ಆಗಿ 'ಮೀ' ಮಾತ್ರ ಉಳಿಯುತ್ತದೆ. 'ಞ್' ಇತ್ ಆದ ಕಾರಣ, ಇದು ಉಭಯಪದಿ. ಇದು ಅನುದಾತ್ತವಾಗಿಯೂ ಇದೆ. ಅದುದ್ದರಿಂದ 'ತಾಸಿ' ಮೊದಲಾದವು ಪರವಾದಾಗ, ಇದು ಅನಿಟ್ ಆಗಿರುತ್ತದೆ. ಕ್ರ್ಯಾದಿ ನಿಯಮದಿಂದ 'ಲಿಟ್' ನಲ್ಲಿ ಇಡಾಗಮ ಬರುತ್ತದೆ. 'ಥಲ್' ನಲ್ಲಿ ಭಾರದ್ವಾಜ ನಿಯಮದಿಂದ ಇಡಾಗಮ ವೈಕಲ್ಪಿಕವಾಗಿ ಬರುತ್ತದೆ.

ಲಟ್:ಉದಾ– ಮೀನಾತಿ ಲಟ್ ನಲ್ಲಿ "ಈ ಹಲ್ಯಘೋಃ" ಸೂತ್ರದಿಂದ ಈತ್ವ(ಈ) ಬಂದು ಮೀನೀತಃ ಎಂದು ರೂಪವಾಗುತ್ತದೆ. "ಶ್ನಾ್ಯಭ್ಯಸ್ತಯೋರಾತಃ" ಎಂಬ ಸೂತ್ರದಿಂದ 'ಆ' ಕಾರ ಲೋಪವಾಗಿ ಮಿನನ್ತಿ, ಮೀನೀತೇ, ಮೀನಾತೇ ಮೀನತೇ ಇತ್ಯಾದಿ ರೂಪಗಳಾಗುತ್ತವೆ.

ಲಿಟ್ ನಲ್ಲಿ "ಮೀನಾತಿ ಮಿನೋತಿದೀ ಔ ಲ್ಯಪಿಚ್" ಎಂಬ ಸೂತ್ರದಿಂದ 'ಮೀ' ನ 'ಈ' ಕಾರಕ್ಕೆ ಆತ್ವ ಬಂದು 'ಮಾ' ಎಂದಾಗುತ್ತದೆ. ಆಮೇಲೆ ಪಪೌ ಎಂಬ ರೂಪದಂತೆ "ಆತ ಔಣಲಃ" ಸೂತ್ರದಿಂದ 'ಣಲ್'ನ ಸ್ಥಾನದಲ್ಲಿ ಔಕಾರಾದೇಶ, ಮತ್ತು ವೃದ್ಧಿ ಮೊದಲಾದವು ಬಂದು, ಮಮೌ ಎಂದಾಗುತ್ತದೆ. ಅತುಸ್ ನಲ್ಲಿ ಕಿತ್ವ (ಕಿ) ಆಗುವುದರಿಂದ ಏಚ್ ನಿಮಿತ್ತ ಪರದಲ್ಲಿ ಇಲ್ಲದ ಕಾರಣ ಆತ್ವ ಬರುವುದಿಲ್ಲ ಆಗ ಮಿಮೀ+ಅತುಸ್ ಎಂದಾಗಿ, "ಏರನೇಕಾಚೋಽಸಂಯೋಗಪೂರ್ವಸ್ಯ" ಎಂಬ ಸೂತ್ರದಿಂದ ಯಣ್ ಬಂದು ಮಿಮ್ಯತುಃ ಎಂದು ರೂಪವಾಗುತ್ತದೆ.

ಲಿಟ್: ಪರಸ್ಮೈ ಪದದಲ್ಲಿ: ಮಮೌ, ಮಿಮ್ಯತುಃ, ಮಿಮ್ಯುಃ। ಮಮಿಥ, ಮಮಾಥ, ಮಿಮ್ಯಥುಃ। ಮಿಮ್ಯ, ಮಮೌ, ಮಿಮ್ಯಿವ, ಮಿಮ್ಯಿಮ।

ಆತ್ಮನೇ ಪದದಲ್ಲಿ: ಮಿಮ್ಯೇ, ಮಿಮ್ಯಾತೇ, ಮಿಮ್ಯಿರೇ। ಮಿಮ್ಯಿಷೇ, ಮಿಮ್ಯಾಥೇ,

ಮಿಮ್ಮಿಢ್ವೇ/ಮಿಮ್ಮಿಧ್ವೇ। ಮಿಮ್ಯೇ, ಮಿಮ್ಯಿವಹೇ, ಮಿಮ್ಯಿಮಹೇ।

ಲುಟ್: ಪರಸ್ಮೈ ಪದದಲ್ಲಿ ಏಚ್ ವರ್ಣಗಳ ನಿಮಿತ್ತದಿಂದ "ಮೀನಾತಿ-ಮಿನೋತಿದೀ ಙ ಲ್ಯಪಿಚ್" ಎಂಬ ಸೂತ್ರದಿಂದ ಆತ್ವ ಬಂದು ಮಾತಾ, ಮಾತಾರೌ, ಮಾತಾರಃ। ಮಾತಾಸಿ, ಮೊದಲಾದ ರೂಪಗಳೂ ಮತ್ತು ಆತ್ಮನೇ ಪದದಲ್ಲಿ ಮಾತಾಸೇ।ಮಾತಾಸಾಥೇ ಮೊದಲಾದ ರೂಪಗಳಾಗುತ್ತವೆ.

ಲೃಟ್: ಪರಸ್ಮೈ ಪದದಲ್ಲಿ ಮಾಸ್ಯತಿ, ಮಾಸ್ಯತಃ, ಮಾಸ್ಯನ್ತಿ- ಮೊದಲಾದ ರೂಪಗಳಾಗುತ್ತವೆ. ಆತ್ಮನೇ ಪದದಲ್ಲಿ ಮಾಸ್ಯತೇ, ಮಾಸ್ಯೇತೇ ಮಾಸ್ಯನ್ತೇ ಮೊದಲಾದ ರೂಪಗಳಾಗುತ್ತವೆ.

ಲೋಟ್: ಪರಸ್ಮೈ ಪದದಲ್ಲಿ: ಮೀನಾತು,/ಮೀನೀತಾತ್, ಮೀನೀತಾಮ್, ಮೀನನ್ತು। ಮೀನೀಹೀ, ಮೊದಲಾದ ರೂಪಗಳಾಗುತ್ತವೆ.

ಆತ್ಮನೇ ಪದದಲ್ಲಿ: ಮೀನೀತಾಮ್, ಮೀನಾತಾಮ್, ಮೀನತಾಮ್। ಮೊದಲಾದ ರೂಪಗಳಾಗುತ್ತವೆ.

ಲಙ್: ಪರಸ್ಮೈ ಪದದಲ್ಲಿ: ಅಮೀನಾತ್, ಅಮೀನೀತಾಮ್, ಅಮೀನನ್। ಮೊದಲಾದ ರೂಪಗಳಾಗುತ್ತವೆ.

ಆತ್ಮನೇ ಪದದಲ್ಲಿ: ಅಮೀನೀತ, ಅಮೀನೀತಾಮ್, ಅಮೀನತ। ಮೊದಲಾದ ರೂಪಗಳಾಗುತ್ತವೆ.

ವಿಧಿಲಿಙ್:ಪರಸ್ಮೈ ಪದದಲ್ಲಿ: ಮೀನೀಯಾತ್, ಮೀನೀಯಾತಾಮ್, ಮೀನೀಯುಃ। ಮೊದಲಾದ ರೂಪಗಳಾಗುತ್ತವೆ.

ಆತ್ಮನೇ ಪದದಲ್ಲಿ: ಮೀನೀತ, ಮೀನೀಯಾತಾಮ್, ಮೀನೀರನ್। ಮೊದಲಾದ ರೂಪಗಳಾಗುತ್ತವೆ.

ಆಶೀರ್ಲಿಙ್:ಪರಸ್ಮೈ ಪದದಲ್ಲಿ: ಮೀಯಾತ್, ಮೀಯಾಸ್ತಾಮ್, ಮೀಯಾಸುಃ। ಮೊದಲಾದ ರೂಪಗಳಾಗುತ್ತವೆ.

ಆತ್ಮನೇ ಪದದಲ್ಲಿ: ಮಾಸೀಷ್ಟ, ಮಾಸೀಯಾಸ್ತಾಮ್, ಮಾಸೀರನ್। ಮೊದಲಾದ ರೂಪಗಳಾಗುತ್ತವೆ.

ಲುಙ್:ಪರಸ್ಮೈ ಪದದಲ್ಲಿ: ಆತ್ವ ಬಂದಮೇಲೆ "ಯಮರಮನಮತಾಂ ಸಕ್ ಚ" ಎಂಬ ಸೂತ್ರದಿಂದ 'ಸಕ್' ಆಗಮ, 'ಇಟ್' ಬಂದು ಅಮಾಸೀತ್, ಅಮಾಸಿಷ್ಟಾಮ್, ಅಮಾಸಿಷುಃ। ಮೊದಲಾದ ರೂಪಗಳಾಗುತ್ತವೆ.

ಆತ್ಮನೇ ಪದದಲ್ಲಿ:ಅಮಾಸ್ತ, ಅಮಾಸಾತಾಮ್, ಅಮಾಸತ। ಮೊದಲಾದ ರೂಪಗಳಾಗುತ್ತವೆ.

ಲೃಙ್:ಪರಸ್ಮೈ ಪದದಲ್ಲಿ: ಅಮಾಸ್ಯತ್, ಅಮಾಸ್ಯತಾಮ್, ಅಮಾಸ್ಯನ್। ಮೊದಲಾದ ರೂಪಗಳು ಆಗುತ್ತವೆ.

ಆತ್ಮನೇ ಪದದಲ್ಲಿ: ಅಮಾಸ್ಯತ, ಅಮಾಸ್ಯೇತಾಮ್, ಅಮಾಸ್ಯನ್ತ। ಮೊದಲಾದ ರೂಪಗಳು ಆಗುತ್ತವೆ.

**(ಣತ್ವ ವಿಧಾಯಕ ಸೂತ್ರ)**

**ಸೂತ್ರ - 686. ಹಿನು-ಮೀನಾ (8.4.15)**

ವೃತ್ತಿ- ಉಪಸರ್ಗಸ್ಥಾತ್ ನಿಮಿತ್ತಾತ್ ಪರಸ್ಯ ಏತಯೋಃ ನಸ್ಯ ಣಃ ಸ್ಯಾತ್। ಪ್ರಮೀಣಾತಿ, ಪ್ರಮೀಣೀತೆ। (638) ಮಿನಾತಿ ಇತಿ ಆತ್ವಮ್। ಮಮೌ। ಮಿಮ್ಯತುಃ। ಮಮಿಥ। ಮಮಾಥ। ಮಿಮ್ಯೇ। ಮಾತಾ। ಮಾಸ್ಯತಿ। ಮೀಯಾತ್। ಮಾಸೀಷ್ಟ। ಅಮಾಸೀತ್। ಅಮಾಸಿಷ್ಟಾಮ್। ಅಮಾಸ್ತ।

5. ಷಿಞ್ ಬನ್ಧನೇ।5। ಸಿನಾತಿ, ಸಿನೀತೆ। ಸಿಷಾಯ। ಸಿಷ್ಯೇ। ಸೇತಾ।

6. ಸ್ಕುಞ್ ಆಪ್ಲವನೇ।6।

ಪ. ಛೇ-ಹಿನುಶ್ಚ ಮೀನಾಶ್ಚ ತಯೋಃ ಹಿನುಮಿನೌ (ಇತರೇತರ ದ್ವನ್ದ್ವ) ತಯೋಃ ಹಿನು ಮೀನಾ ಇತಿ ಲುಪ್ತ ಷಷ್ಠೀಕಂ ಪದಮ್।

ಅ.ವೃ- "ಉಪಸರ್ಗಾತ್ ಅಸಮಾಸೇಽಪಿ ಣೋಪದೇಶಸ್ಯ" ಎಂಬಸೂತ್ರದಿಂದ ಉಪಸರ್ಗಾತ್ ಎಂಬ ಪದವನ್ನೂ, "ರಷಾಭ್ಯಾಂ ನೋ ಣಸ್ಸಮಾನಪದೇ" ಎಂಬ ಸೂತ್ರವನ್ನೂ, ಅನುವೃತ್ತಿ ಮಾಡಲಾಗಿದೆ.

ಅರ್ಥ- ಉಪಸರ್ಗದಲ್ಲಿರುವ ನಿಮಿತ್ತಕ್ಕಿಂತ ಪರದಲ್ಲಿ ಇರುವ 'ಹಿನು' ಮತ್ತು 'ಮೀನಾ'ಗಳಲ್ಲಿರುವ 'ನ್' ಕಾರಕ್ಕೆ 'ಣ್'ಕಾರ ಆದೇಶವಾಗಿ ಬರುತ್ತದೆ.

(ಸ್ವಾದಿಗಣದಲ್ಲಿ ಪಠಿತವಾಗಿರುವ ಹಿ ಧಾತುವಿನ ನಂತರ ಬರುವ 'ಶ್ನು(ನು)' ವಿಕರಣ ಪ್ರತ್ಯಯ, ಹಾಗೂ ಕ್ರ್ಯಾದಿ ಗಣಕ್ಕೆ ಸೇರಿದ ಮೀ ಧಾತುವಿನ ನಂತರ, 'ಶ್ನಾ(ನಾ)' ವಿಕರಣ ಪ್ರತ್ಯಯಗಳನ್ನು ಸೇರಿಸಿದಾಗ, ಕ್ರಮವಾಗಿ ಹಿನು ಮತ್ತು ಮೀನಾ ಎಂದು ರೂಪಗಳಾದಮೇಲೆ, ಉಪಸರ್ಗದಲ್ಲಿ ರೇಫ ಮತ್ತು ಷ ಕಾರಗಳನ್ನು ಪ್ರತ್ಯಯವಾಗಿಯುಳ್ಳ, ಪ್ರಕೃತ ಸೂತ್ರದಿಂದ 'ನ್' ಕಾರಕ್ಕೆ 'ಣ್' ಕಾರವು ಆದೇಶವಾಗಿ ಬರುತ್ತದೆ. ವೃತ್ತಿಯಲ್ಲಿ ಉಪಸರ್ಗಸ್ಥಾತ್ ನಿಮಿತ್ತಾತ್ ಎಂದರೆ, ರೇಫ ಮತ್ತು 'ಷ್' ಕಾರಗಳೆಂದು ತಿಳಿಯಬೇಕು ಎಂಬುದನ್ನು ಲಕ್ಷ್ಯದಲ್ಲಿಡಬೇಕು).

ಪರಸ್ಮೈಪದದಲ್ಲಿ:

[ಉದಾ- ಪ್ರಹಿಣೋತಿ-ಸ್ವಾದಿ ಗಣದಲ್ಲಿ ಪ್ರ+ಹಿನೋತಿ ಎಂಬಲ್ಲಿ 'ಪ್ರ' ಎಂಬುದೇ ಉಪಸರ್ಗದಲ್ಲಿರುವ ನಿಮಿತ್ತ. ಇದರ ಪರದಲ್ಲಿ ಹಿನು ಇದೆ. ಅದರ 'ನ್' ಕಾರಕ್ಕೆ 'ಣತ್ವ' ಬಂದು ಪ್ರಹಿಣೋತಿ ಎಂದು ರೂಪವಾಗಿದೆ.]

ಪರಸ್ಮೈಪದದಲ್ಲಿ:

ಉದಾ- ಪ್ರಮೀಣಾತಿ ಪ್ರ+ಮೀನಾತಿ ಎಂಬಲ್ಲಿ ಪ್ರಕೃತ ಸೂತ್ರದಿಂದ ಣತ್ವ ಬಂದು ಪ್ರಮೀಣಾತಿ ಎಂದು ರೂಪವಾಗಿದೆ.

ಆತ್ಮನೇಪದದಲ್ಲಿ:

ಉದಾ- ಪ್ರಮೀಣೀತೆ- ಪ್ರ+ಮೀನೀತೇ ಎಂಬಲ್ಲಿಯೂ ಇದೇ ರೀತಿಯಲ್ಲಿ ಪ್ರಕೃತ ಸೂತ್ರದಿಂದ ಪ್ರಮೀಣೀತೆ ಎಂದು ರೂಪವಾಗುತ್ತದೆ.

ಧಾತು 5. ಷಿಞ್ ಬಂಧನೇ(ಕಟ್ಟುವದು)-(ಸೀನಾತಿ, ಸೀನೀತೆ, ಸಿಷಾಯ, ಸಿಷ್ಯೇ, ಸೇತಾ) ಷಿಞ್ ಧಾತುವಿಗೆ ಕಟ್ಟುವದು ಎಂದರ್ಥ. ಇದರಲ್ಲಿ 'ಞ್' ಕಾರವು ಇತ್/ಲೋಪವಾಗಿ 'ಷಿ' ಎಂದಿದ್ದಾಗ, "ಧಾತ್ವಾದೇಃ ಷಸ್ಯ ಸಃ" ಎಂಬ ಸೂತ್ರದಿಂದ ಷ ಕಾರಕ್ಕೆ 'ಸ' ಕಾರ ಬಂದು 'ಸಿ' ಎಂದಾಗುತ್ತದೆ.

ಲಟ್ - ಪರಸ್ಮೈಪದದಲ್ಲಿ ಸಿ+ನಾ+ತಿ=ಸಿನಾತಿ ಎಂದು ರೂಪವಾಗಿದೆ. ಇದರ 'ಲಟ್' ರೂಪಗಳು: ಪರಸ್ಮೈ ಪದದಲ್ಲಿ-ಸಿನಾತಿ, ಸಿನೀತಃ, ಸಿನಂತಿ। ಇತ್ಯಾದಿ ರೂಪಗಳಾಗುತ್ತವೆ.

ಆತ್ಮನೇ ಪದದಲ್ಲಿ - ಸಿನೀತೇ, ಸಿನಾತೇ, ಸಿನತೇ। ಇತ್ಯಾದಿ ರೂಪಗಳಾಗುತ್ತವೆ.

ಲಿಟ್ -ಪರಸ್ಮೈ ಪದದಲ್ಲಿ-ಸಿಷಾಯ-ಸಿಷ್ಯತುಃ-ಸಿಷ್ಯುಃ ಇತ್ಯಾದಿ ರೂಪಗಳಾಗುತ್ತವೆ.

['ಷ'ಕಾರ ಉಪದೇಶದಲ್ಲಿರೋಣದರಿಂದ ಸಿಷಾಯ ಎಂಬ ರೂಪದಲ್ಲಿ ಆದೇಶದ ಅವಯವವಾದ ಎರಡನೇ ಸ ಕಾರಕ್ಕೆ ಷತ್ವ ಬಂದಿದೆ. ಞಿತ್ (ಞ್ ಕಾರ ಇತ್) ಆಗಿರುವುದರಿಂದ, ಇದು ಉಭಯಪದಿ ಆಗಿದೆ. ಮತ್ತು ಇದು ಉದಾತ್ತದಲ್ಲಿ ಹೇಳದೇ ಇರುವುದರಿಂದ ಅನುದಾತ್ತವಾಗಿದೆ. ಆದ್ದರಿಂದ 'ತಾಸಿ' ಮೊದಲಾದ ಪ್ರತ್ಯಯಗಳು ಪರವಾದಾಗ, 'ಅನಿಟ್' ಆಗುತ್ತದೆ. ಆದರೆ ಕ್ರ್ಯಾದಿ ನಿಯಮದಂತೆ 'ಲಿಟ್' ರೂಪದಲ್ಲಿ ಇಡಾ(ಇಟ್)ಗಮವು ಬರುತ್ತದೆ. ಜೊತೆಗೆ 'ಥಲ್' ಬಂದಾಗ, ಭಾರದ್ವಾಜ ನಿಯಮದಂತೆ ವಿಕಲ್ಪದಿಂದ 'ಇಟ್' ಆಗುತ್ತದೆ. ಈ ಧಾತುವಿನಲ್ಲಿ ಆತ್ವ ಬರುವ ಪ್ರಸಂಗವಿಲ್ಲ. ಆದರೆ, "ಈ ಹಲ್ಯಘೋಃ" ಎಂಬ ಸೂತ್ರಕ್ಕೆ ಅವಕಾಶವಿದೆ].

ಆತ್ಮನೇ ಪದದಲ್ಲಿ - ಸಿಷ್ಯೇ-ಸಿಷ್ಯಾತೇ-ಸಿಷ್ಯಿರೇ ಇತ್ಯಾದಿ ರೂಪಗಳಾಗುತ್ತವೆ

ಲುಟ್: ಪರಸ್ಮೈ ಪದದಲ್ಲಿ: ಸ್ಯೆತಾ-ಸ್ಯೆತಾರೌ-ಸ್ಯೇತಾರಃ। ಸ್ಯೆತಾಸಿ-ಸ್ಯೆತಾಸ್ಥಃ-ಸ್ಯೆತಾಸ್ಥ ।ಸ್ಯೆತಾಸ್ಮಿ-ಸ್ಯೆತಾಸ್ವಃ-ಸ್ಯೆತಾಸ್ಮಃ। ಎಂದು ರೂಪಗಳಾಗುತ್ತವೆ.

ಆತ್ಮನೇಪದದಲ್ಲಿ- ಸ್ಯೆತಾ-ಸ್ಯೆತಾರೌ-ಸ್ಯೆತಾರಃ। ಸ್ಯೆತಾಸೇ-ಸ್ಯೆತಾಸಾಥೇ-ಸ್ಯೆತಾಧ್ವೇ। ಸ್ಯೆತಾಹೇ-ಸ್ಯೆತಾಸ್ವಹೇ-ಸ್ಯೆತಾಸ್ಮಹೇ। ಎಂದು ರೂಪಗಳಾಗುತ್ತವೆ.

ಲೃಟ್:ಪರಸ್ಮೈ ಪದದಲ್ಲಿ- ಸೇಷ್ಯತಿ-ಸ್ಯೆಷ್ಯತಃ ಸೇಷ್ಯನ್ತಿ। ಸೇಷ್ಯಸಿ-ಸೇಷ್ಯಧಃ-ಸೇಷ್ಯಥ। ಸೇಷ್ಯಾಮಿ-ಸೇಷ್ಯಾವಃ-ಸೇಷ್ಯಾಮಃ। ಎಂದು ರೂಪಗಳಾಗುತ್ತವೆ.

ಆತ್ಮನೇ ಪದದಲ್ಲಿ: ಸೇಷ್ಯತೇ-ಸೇಷ್ಯೇತೇ-ಸೇಷ್ಯನ್ತೇ। ಸೇಷ್ಯಸೇ-ಸೇಷ್ಯೇಥೆ-ಸೇಷ್ಯಧ್ವೇ। ಸೇಷ್ಯೇ-ಸೇಷ್ಯಾವಹೆ-ಸೇಷ್ಯಾಮಹೇ। ಎಂದು ರೂಪಗಳಾಗುತ್ತವೆ.

ಲೋಟ್:ಪರಸ್ಮೈ ಪದದಲ್ಲಿ: ಸಿನೋತು/ಸಿನುತಾತ್-ಸಿನುತಾಮ್, ಸಿನ್ವನ್ತು। ಇತ್ಯಾದಿ ರೂಪಗಳಾಗುತ್ತವೆ.

ಆತ್ಮನೇ ಪದದಲ್ಲಿ: ಸಿನುತಾಮ್-ಸಿನ್ವಾತಾಮ್-ಸಿನ್ವತಾಮ್। ಮೊದಲಾದ ರೂಪಗಳಾಗುತ್ತವೆ.

ಲಙ್:ಪರಸ್ಮೈ ಪದದಲ್ಲಿ: ಅಸಿನೋತ್- ಅಸಿನುತಾಮ್-ಅಸಿನ್ವನ್। ಮೊದಲಾದ ರೂಪಗಳಾಗುತ್ತವೆ.

ಆತ್ಮನೇ ಪದದಲ್ಲಿ: ಅಸಿನುತ-ಅಸಿನ್ವಾತಾವ್-ಅಸಿನ್ವತ। ಮೊದಲಾದ ರೂಪಗಳಾಗುತ್ತವೆ.

ವಿ.ಲಿಙ್:ಪರಸ್ಮೈ ಪದದಲ್ಲಿ: ಸಿನುಯಾತ್-ಸಿನುಯಾತಾಮ್-ಸಿನುಯಃ।

ಆತ್ಮನೇ ಪದದಲ್ಲಿ: ಸಿನ್ವೀತ-ಸಿನ್ವೀಯಾತಾವ್-ಸಿನ್ವೀರನ್। ಮೊದಲಾದ ರೂಪಗಳಾಗುತ್ತವೆ.

ಆ.ಲಿಙ್:ಪರಸ್ಮೈ ಪದದಲ್ಲಿ: ಸೀಯಾತ್-ಸೀಯಾಸ್ತಾಮ್-ಸೀಯಾಸುಃ।

ಆತ್ಮನೇ ಪದದಲ್ಲಿ: ಸೇಷೀಷ್ಟ-ಸೇಷೀಯಾಸ್ತಾಮ್-ಸೇಷೀರನ್। ಮೊದಲಾದ ರೂಪಗಳಾಗುತ್ತವೆ.

ಲುಙ್:"ಸಿಚಿ ವೃದ್ಧಿಃ ಪರಸ್ಮಪದೇಷು" ಎಂಬ ಸೂತ್ರದಿಂದ

ಪರಸ್ಮೈ ಪದದಲ್ಲಿ: ಅಸೈಷೀತ್-ಅಸೈಷ್ಟಾವ್-ಅಸೈಷುಃ। ಮೊದಲಾದ ರೂಪಗಳಾಗುತ್ತವೆ.

ಆತ್ಮನೇ ಪದದಲ್ಲಿ: ಅಸೇಷ್ಟ-ಅಸೇಷಾತಾವ್-ಅಸೇಷತ। ಮೊದಲಾದ ರೂಪಗಳಾಗುತ್ತವೆ.

ಲೃಙ್: ಪರಸ್ಮೈ ಪದದಲ್ಲಿ: ಅಸೇಷ್ಯತ್-ಅಸೇಷ್ಯತಾಮ್-ಅಸೇಷ್ಯನ್। ಎಂದು ರೂಪಗಳಾಗುತ್ತವೆ.

ಆತ್ಮನೇ ಪದದಲ್ಲಿ: ಅಸೇಷ್ಯತ-ಅಸೇಷ್ಯೇತಾವ್-ಅಸೇಷ್ಯನ್ತ। ಎಂದು ರೂಪಗಳಾಗುತ್ತವೆ.

ಧಾತು (6) ಸ್ಕುಞ್-ಆಪ್ಲವನೇ: (ಮೇಲಕ್ಕೆ ಎತ್ತುವದು ಮತ್ತು ಜಿಗಿದು ಹೋಗುವದು). ಇದರಲ್ಲಿ 'ಞ್' ಇತ್/ಲೋಪ, 'ಸ್ಕು' ಮಾತ್ರ ಉಳಿಯುತ್ತದೆ. ಇದು 'ಞಿತ್' ಆಗಿರುವುದರಿಂದ ಉಭಯಪದಿ. ಇದು ಅನುದಾತ್ತವಾಗಿದೆ. ಆದ್ದರಿಂದ ತಾಸಿ ಮೊದಲಾದ ಪ್ರತ್ಯಯಗಳು ಪರದಲ್ಲಿದ್ದಾಗ, ಅನಿಟ್ ಆಗುತ್ತದೆ. ಆದರೆ ಕ್ರ್ಯಾದಿ ನಿಯುಮದಿಂದ ನಿತ್ಯವಾಗಿ ಇಟ್ ಬರುತ್ತದೆ. ಥಲ್‌ನಲ್ಲಿ ಭಾರದ್ವಾಜ ನಿಯಮದಿಂದ ವಿಕಲ್ಪವಾಗಿ 'ಇಟ್' ಆಗಮ ಬರುತ್ತದೆ. ಈ ಧಾತುವಿನಿಂದ, ಮುಂಬರುವ ಸೂತ್ರದಿಂದ 'ಶ್ನಾ' ಮತ್ತು 'ಶ್ನು' (ವಿಕರಣ) ವಿಧಾನ ಮಾಡಲಾಗಿದೆ.

**(ಶ್ನು ವಿಧಾಯಕ ಸೂತ್ರ)**

**ಸೂತ್ರ - 687. ಸ್ತನ್ಭು-ಸ್ತುನ್ಭು-ಸ್ಕನ್ಭು-ಸ್ಕುನ್ಭು-ಸ್ಕುಭ್ಯಃ ಶ್ನುಶ್ಚ। (3.1.82)**

ವೃತ್ತಿ- ಏಭ್ಯಃ ಶ್ನು-ಪ್ರತ್ಯಯಃ ಸ್ಯಾತ್ ಚಾತ್ ಶ್ನಾ। ಸ್ಕುನೋತಿ, ಸ್ಕುನಾತಿ। ಸ್ಕುನುತೇ,

ಸ್ಕುನೀತೇ। ಚುಸ್ಕಾವ, ಚುಸ್ಕುವೇ। ಸ್ಕೋತಾ। ಅಸ್ಕೈಷೀತ್, ಅಸ್ಕೋಷ್ಟ ಸ್ತನ್ಭುವಾದಯಃ ಚತ್ವಾರಃ ಸೌತ್ರಾಃ ಸರ್ವೇ ರೋಧನಾರ್ಥಾಃ ಪರಸ್ಮೈಪದಿನಃ।

ಪ. ಛೇ-ಸ್ತನ್ಭು-ಸ್ತುನ್ಭು-ಸ್ಕನ್ಭು-ಸ್ಕುನ್ಭು-ಸ್ಕುಞ್ಭ್ಯಃ, ಶ್ನುಃ, ಚ।

ಅ.ವ್ಯ- "ಕ್ರ್ಯಾದಿಭ್ಯಃ ಶ್ನಾ" ಎಂಬ ಸೂತ್ರದಿಂದ 'ಶ್ನಾ' ಎಂಬ ಪದವೂ, "ಕರ್ತರಿ ಶಪ್" ಎಂಬ ಸೂತ್ರದಿಂದ 'ಕರ್ತರಿ' ಎಂಬ ಪದವೂ, ಮತ್ತು "ಸಾರ್ವಧಾತುಕೇ ಯಕ್" ಎಂಬ ಸೂತ್ರದಿಂದ 'ಸಾರ್ವಧಾರ್ತುಕೇ' ಎಂಬ ಪದವೂ ಅನುವೃತ್ತವಾಗುತ್ತವೆ. ಅರ್ಥ-ಸ್ತನ್ಭು-ಸ್ತುನ್ಭು-ಸ್ಕನ್ಭು-ಸ್ಕುನ್ಭು ಹಾಗೂ -ಸ್ಕುಞ ಧಾತುಗಳಮೇಲೆ 'ಶ್ನು' ಪ್ರತ್ಯಯ ಬರುತ್ತದೆ. ಮತ್ತು ವಿಕಲ್ಪದಿಂದ 'ಶ್ನಾ' ಪ್ರತ್ಯಯವೂ ಬರುತ್ತದೆ- ಕರ್ತ್ರರ್ಥಕ ಸಾರ್ವಧಾತುಕ ಪ್ರತ್ಯಯವು ಪರದಲ್ಲಿದ್ದಾಗ.

[ಸ್ತನ್ಭು ಮೊದಲಾದ ನಾಲ್ಕು ಧಾತುಗಳು ಧಾತುಪಾಠದಲ್ಲಿ ಪಠಿತವಾಗಿಲ್ಲ. ಆದರೆ ಪಾಣಿನಿಯವರು ಇವುಗಳನ್ನು ಸೂತ್ರದಲ್ಲಿ ಹೇಳಿರುವರು. ಆದ್ದರಿಂದ ಇವುಗಳು ಸೌತ್ರ-ಧಾತುಗಳಾಗಿವೆ. ಈ ಎಲ್ಲ ಧಾತುಗಳಿಗೆ, ತಡೆಯುವದು ಎಂದರ್ಥ. ಇವುಗಳ ನಂತರ 'ಸ್ಕುಞ್' ಧಾತುವನ್ನು ಸೇರಿಸಲಾಗಿದೆ. 'ಶ್ನಾ' ಪ್ರತ್ಯಯವು ಬಂದಾಗ ಸ್ಕುನಾತಿ ಎಂದು ರೂಪವಾಗುತ್ತದೆ. 'ಶ್ನು' ಬಂದ ಪಕ್ಷದಲ್ಲಿ ಸ್ಕುನೋತಿ, ಎಂದು ರೂಪವಾಗುತ್ತದೆ].

ಲಟ್: ಪರಸ್ಮೈ ಪದದಲ್ಲಿ ಸ್ಕುನ್ಭುಧಾತುವಿನ ರೂಪಗಳು-'ಶ್ನು(ಉ)' ಬಂದ ಪಕ್ಷದಲ್ಲಿ ಸ್ಕುನೋತಿ, ಸ್ಕುನುತಃ, ಸ್ಕುನ್ವನ್ತಿ। 'ಶ್ನಾ(ನಾ)' ಬಂದ ಪಕ್ಷದಲ್ಲಿ ಸ್ಕುನಾತಿ, ಸ್ಕುನೀತಃ, ಸ್ಕುನನ್ತಿ। ಎಂದು ಇತ್ಯಾದಿ ರೂಪಗಳಾಗುತ್ತವೆ.

ಆತ್ಮನೇ ಪದದಲ್ಲಿ: 'ಶ್ನು(ಉ)' ಬಂದ ಪಕ್ಷದಲ್ಲಿ ಸ್ಕುನುತೇ, ಸ್ಕುನ್ವಾತೇ, ಸ್ಕುನ್ವತೇ। ಎಂದೂ 'ಶ್ನಾ(ನಾ)' ಬಂದ ಪಕ್ಷದಲ್ಲಿ ಸ್ಕುನೀತೇ, ಸ್ಕುನಾತೇ, ಸ್ಕುನತೇ ಎಂದು ರೂಪಳಾಗುತ್ತವೆ.

ಲಿಟ್:ಪರಸ್ಮೈ ಪದದಲ್ಲಿ "ಶರ್ಪೂರ್ವಾಃ ಖಯಃ" ಎಂಬ ಸೂತ್ರದಿಂದ, ಚುಸ್ಕಾವ, ಚುಸ್ಕುವತುಃ, ಚುಸ್ಕುವುಃ। ಚುಸ್ಕವಿಥ, ಚುಸ್ಕೋಥ ।

ಆತ್ಮನೇ ಪದದಲ್ಲಿ - ಚುಸ್ಕುವೇ, ಚುಸ್ಕುವಾತೆ, ಚುಸ್ಕುವಿರೆ, ಎಂದು ಇತ್ಯಾದಿ ರೂಪಗಳಾಗುತ್ತವೆ.

ಲುಟ್: ಪರಸ್ಮೈ ಪದದಲ್ಲಿ - ಸ್ಕೋತಾ, ಸ್ಕೋತಾರೌ, ಸ್ಕೋತಾರಃ। ಸ್ಕೋತಾಸಿ, ಸ್ಕೋತಾಸ್ತಃ, ಸ್ಕೋತಾಸ್ಥ। ಸ್ಕೋತಾಸ್ಮಿ, ಸ್ಕೋತಾಸ್ವಃ, ಸ್ಕೋತಾಸ್ಮಃ। ಎಂದು ರೂಪಗಳಾಗುತ್ತವೆ.

ಆತ್ಮನೇ ಪದದಲ್ಲಿ- ಸ್ಕೋತಾ, ಸ್ಕೋತಾರೌ, ಸ್ಕೋತಾರಃ। ಸ್ಕೋತಾಸೇ। ಸ್ಕೋತಾಸಾಥೇ, ಸ್ಕೋತಾಧ್ವೇ। ಸ್ಕೋತಾಹೇ, ಸ್ಕೋತಾಸ್ವಹೇ, ಸ್ಕೋತಾಸ್ಮಹೇ। ಇತ್ಯಾದಿ ರೂಪಗಳಾಗುತ್ತವೆ.

ಲೃಟ್: ಪರಸ್ಮೈ ಪದದಲ್ಲಿ-ಸ್ಕೋಷ್ಯತಿ, ಸ್ಕೋಷ್ಯತಃ, ಸ್ಕೋಷ್ಯನ್ತಿ। ಇತ್ಯಾದಿ ರೂಪಗಳಾಗುತ್ತವೆ.

ಆತ್ಮನೇ ಪದದಲ್ಲಿ– ಸ್ಕೋಷ್ಯತೇ, ಸ್ಕೋಷ್ಯೇತೇ, ಸ್ಕೋಷ್ಯನ್ತೇ। ಇತ್ಯಾದಿ ರೂಪಗಳಾಗುತ್ತವೆ.

ಲೋಟ್: ಪರಸ್ಮೈ ಪದದಲ್ಲಿ– (ಶ್ನು)– ಬಂದ ಪಕ್ಷದಲ್ಲಿ, ಸ್ಕುನೋತು/ಸ್ಕುನುತಾತ್, ಸ್ಕುನುತಾಮ್, ಸ್ಕುನ್ವನ್ತು। ಇತ್ಯಾದಿ ರೂಪಗಳಾಗುತ್ತವೆ. (ಶ್ನಾ)–ಬಂದ ಪಕ್ಷದಲ್ಲಿ ಸ್ಕುನಾತು/ ಸ್ಕುನೀತಾತ್, ಸ್ಕುನೀತಾಮ್, ಸ್ಕುನನ್ತು। ಇತ್ಯಾದಿ ರೂಪಗಳಾಗುತ್ತವೆ.

ಆತ್ಮನೇಪದದಲ್ಲಿ–(ಶ್ನು)–ಬಂದ ಪಕ್ಷದಲ್ಲಿ – ಸ್ಕುನುತಾಮ್, ಸ್ಕುನ್ವಾತಾಮ್, ಸ್ಕುನ್ವತಾಮ್। ಎಂದೂ, (ಶ್ನಾ)–ಬಂದ ಪಕ್ಷದಲ್ಲಿ ಸ್ಕುನೀತಾಮ್, ಸ್ಕುನಾತಾಮ್, ಸ್ಕುನತಾಮ್। ಇತ್ಯಾದಿ ರೂಪಗಳಾಗುತ್ತವೆ.

ಲಜ್: ಪರಸ್ಮೈ ಪದದಲ್ಲಿ: (ಶ್ನು) ಬಂದ ಪಕ್ಷದಲ್ಲಿ–ಅಸ್ಕುನೋತ್, ಅಸ್ಕುನುತಾಮ್, ಅಸ್ಕುನ್ವನ್। ಎಂದೂ, (ಶ್ನಾ) ಬಂದ ಪಕ್ಷದಲ್ಲಿ– ಅಸ್ಕುನಾತ್, ಅಸ್ಕುನೀತಾಮ್, ಅಸ್ಕುನನ್। ಇತ್ಯಾದಿ ರೂಪಗಳಾಗುತ್ತವೆ.

ಆತ್ಮನೇಪದಿ: (ಶ್ನು) ಬಂದ ಪಕ್ಷದಲ್ಲಿ – ಅಸ್ಕುನುತ, ಅಸ್ಕುನ್ವಾತಾಮ್, ಅಸ್ಕುನ್ವತ। ಎಂದೂ, (ಶ್ನಾ) ಬಂದ ಪಕ್ಷದಲ್ಲಿ – ಅಸ್ಕುನೀತ, ಅಸ್ಕುನಾತಾಮ್, ಅಸ್ಕುನತ। ಇತ್ಯಾದಿ ರೂಪಗಳಾಗುತ್ತವೆ.

ವಿ.ಲಿಜ್: ಪರಸ್ಮೈ ಪದದಲ್ಲಿ: (ಶ್ನು) ಬಂದ ಪಕ್ಷದಲ್ಲಿ –ಸ್ಕುನುಯಾತ್, ಸ್ಕುನುಯಾತಾಮ್, ಸ್ಕುನುಯುಃ ಎಂದೂ, (ಶ್ನಾ) ಬಂದ ಪಕ್ಷದಲ್ಲಿ– ಸ್ಕುನೀಯಾತ್, ಸ್ಕುನೀಯಾತಾಮ್, ಸ್ಕುನೀಯುಃ। ಇತ್ಯಾದಿ ರೂಪಗಳಾಗುತ್ತವೆ.

ಆತ್ಮನೇಪದದಲ್ಲಿ: (ಶ್ನು) ಬಂದ ಪಕ್ಷದಲ್ಲಿ– ಸ್ಕುನೀತ, ಸ್ಕುನೀಯಾತಾಮ್, ಸ್ಕುನೀರನ್ ಎಂದೂ (ಶ್ನಾ) ಬಂದ ಪಕ್ಷದಲ್ಲಿ– ಸ್ಕುನ್ವೀತ, ಸ್ಕುನ್ವೀಯಾತಾಮ್, ಸ್ಕುನ್ವೀರನ್ ಇತ್ಯಾದಿ ರೂಪಗಳಾಗುತ್ತವೆ.

ಆ.ಲಿಜ್: 'ಪರಸ್ಮೈಪದದಲ್ಲಿ: ಅಶೀರ್ಲಿಜ್ ನಲ್ಲಿ ಆರ್ಧಧಾತುಕವಲ್ಲದ್ದರಿಂದ 'ಶ್ನಾ' ಮತ್ತು 'ಶ್ನು' ಎರಡೂ ಪ್ರತ್ಯಯಗಳು ಬಾರದೇ ವಿಕರಣ ಪ್ರತ್ಯಯವಿಲ್ಲದ ಸ್ಕೂಯಾತ್, ಸ್ಕೂಯಾಸ್ತಾಮ್, ಸ್ಕೂಯಾಸುಃ ಎಂಬ ರೂಪ ಮಾತ್ರ ಬರುತ್ತದೆ.

ಆತ್ಮನೇ ಪದದಲ್ಲಿ: ಇಲ್ಲಿಯೂ ಸಹ ವಿಕರಣ ಪ್ರತ್ಯಯವಿಲ್ಲದ ಸ್ಕೋಷೀಷ್ಟ, ಸ್ಕೋಷೀಯಾಸ್ತಾಮ್, ಸ್ಕೋಷೀರನ್ ಇತ್ಯಾದಿ ರೂಪಗಳು ಬರುತ್ತವೆ.

ಲುಜ್: ಪರಸ್ಮೈ ಪದದಲ್ಲಿ: "ಸಿಚಿ ವೃದ್ಧಿಃ ಪರಸ್ಮೈಪದೇಷು" ಎಂಬ ಸೂತ್ರದಿಂದ 'ವೃದ್ಧಿ' ಬಂದು ಅಸ್ಕೌಕ್ಷೀತ್, ಅಸ್ಕೌಷ್ಟಾಮ್, ಅಸ್ಕೌಷುಃ। ಇತ್ಯಾದಿ ರೂಪಗಳು ಬರುತ್ತವೆ.

ಆತ್ಮನೇಪದದಲ್ಲಿ: ಇಲ್ಲಿ, 'ಗುಣ' ಬಂದು, ಅಸ್ಕೋಷ್ಟ ಅಸ್ಕೋಷಾತಾಮ್, ಅಸ್ಕೋಷತ ಎಂದು ರೂಪಗಳು ಆಗುತ್ತವೆ.

ಲೃಜ್: ಪರಸ್ಮೈ ಪದದಲ್ಲಿ –ಅಸ್ಕೋಷ್ಯತ್, ಅಸ್ಕೋಷ್ಯತಾಮ್, ಅಸ್ಕೋಷ್ಯನ್ ಇತ್ಯಾದಿ ರೂಪಗಳು ಆಗುತ್ತವೆ.

ಆತ್ಮನೇ ಪದದಲ್ಲಿ- ಅಸ್ಕೋಷ್ಯತ, ಅಸ್ಕೋಷ್ಯೇತಾಮ್, ಅಸ್ಕೋಷ್ಯನ್ತ ಇತ್ಯಾದಿ ರೂಪಗಳಾಗುತ್ತವೆ.ಈ ಮೇಲೆ ಹೇಳಲಾದ 'ಸ್ತನ್ಭು' ಮೊದಲಾದ ನಾಲ್ಕು ಸೌತ್ರಧಾತುಗಳು 'ಉ' ಕಾರವನ್ನು 'ಇತ್' ಸಂಜ್ಞೆಯುಳ್ಳವುಗಳು. ಹೀಗಾಗಿ 'ಸ್ತನ್‌ಭ್' ಇತ್ಯಾದಿ ಧಾತುಗಳು 'ಸೇಟ್' ಧಾತುಗಳಾಗಿವೆ. ಅವು ಪರಸ್ಮೈ ಪದಗಳೂ ಆಗಿವೆ. ಪ್ರಕೃತ ಸೂತ್ರದಿಂದ ಇವುಗಳಿಗೆ 'ಶ್ನಾ(ನಾ) ಮತ್ತು 'ಶ್ನು(ನು) ವಿಕರಣ ಪ್ರತ್ಯಯಗಳು ಬರುತ್ತವೆ. ಇವುಗಳು ಅಪಿತ್ ಆಗಿಯೂ ಮತ್ತು 'ಶಿತ್' ಆಗಿಯೂ ಇರುವುದರಿಂದ "ಸಾರ್ವಧಾತುಕಮಪಿತ್" ಎಂಬ ಸೂತ್ರದಿಂದ ಈ ಧಾತುಗಳು 'ಙಿತ್' ಆಗಿರುವುದರಿಂದ ಅವು ಪರದಲ್ಲಿದ್ದಾಗ, "ಅನಿದಿತಾಂ ಹಲಿ ಉಪಧಾಯಾಃ ಕ್ಙಿತಿ" ಎಂಬ ಸೂತ್ರದಿಂದ ಉಪಧೆಯಾಗಿರುವ 'ನ್' ಕಾರಕ್ಕೆ ಲೋಪವು ಬರುವುದು. ಸಾರ್ವಧಾತುಕ 'ಲ್' ಕಾರಗಳಲ್ಲಿ 'ಸ್ವಾದಿ' (ಶ್ನು) ಮತ್ತು 'ಕ್ರ್ಯಾದಿ' (ಶ್ನಾ) ಧಾತುಗಳಿಗೆ ಹೇಗೋ ಹಾಗೆ ಸ್ತಭ್ನೋತಿ ಮತ್ತು ಸ್ತಭ್ನಾತಿ ಇತ್ಯಾದಿ ಎರಡು ರೂಪಗಳಾಗುವವು. ಆರ್ಧಧಾತುಕ ಪರದಲ್ಲಿದ್ದಾಗ ಙಿತ್ವಾಭಾವವಾಗುವುದರಿಂದ, 'ನ್' ಕಾರ ಲೋಪವು ಆಗದೇ ಇರುವುದರಿಂದ, ಆ 'ನ್' ಕಾರಕ್ಕೆ ಅನುಸ್ವಾರ ಮತ್ತು ಪರಸವರ್ಣ ಬಂದು ಸ್ತನ್‌ಭ್, ಸ್ತುನ್‌ಭ್, ಸ್ಕನ್‌ಭ್, ಸ್ಕುನ್ಭ್ ಎಂದು ರೂಪಗಳಾಗುತ್ತವೆ.

'ಸ್ತನ್ಭ್' ಧಾತುವಿನ ಪರಸ್ಮೈ ಪದದ ರೂಪಗಳು.

ಲಟ್:ಪರಸ್ಮೈ ಪದದಲ್ಲಿ 'ಶ್ನು(ನು)' ಪಕ್ಷದಲ್ಲಿ ಸ್ತಭ್ನೋತಿ, ಸ್ತಭ್ನುತಃ, ಸ್ತಭ್ನುವನ್ತಿ ಇತ್ಯಾದಿ ರೂಪಗಳಾಗುತ್ತವೆ.(ಇಲ್ಲಿ ಮೊದಲೇ ಸಂಯೋಗವಾಗಿರುವುದರಿಂದ "ಹು ಶ್ನುವೋಃ ಸಾರ್ವಧಾತುಕೇ" ಎಂಬ ಸೂತ್ರದಿಂದ 'ಯಣ್' ಸಂಧಿಯು ಆಗುವುದಿಲ್ಲ ಆದರೆ "ಅಚಿ ಶ್ನುಧಾತುಭ್ರುವಾಂ ಯ್ವೋರಿಯಙುವಙೌ" ಎಂಬ ಸೂತ್ತದಿಂದ 'ಉವಙ್' ಆದೇಶವು ಬರುತ್ತದೆ. ಶ್ನಾ(ನಾ) ಪಕ್ಷದಲ್ಲಿ ಸ್ತಭ್ನಾತಿ, ಸ್ತಭ್ನೀತಃ, ಸ್ತಭ್ನನ್ತಿ ಇತ್ಯಾದಿ ರೂಪಗಳಾಗುತ್ತವೆ.

ಲಿಟ್: 'ಲಿಟ್' 'ಲ್' ಕಾರದಲ್ಲಿ ಧಾತು ದ್ವಿತ್ವ ಆದಮೇಲೆ "ಶರ್ ಪೂರ್ವಾ ಖಯಃ" ಎಂಬ ಸೂತ್ರದಿಂದ ಮೊದಲ ಎರಡು ಧಾತುಗಳಲ್ಲಿ 'ತ್' ಕಾರ ಮತ್ತು ನಂತರದ ಎರಡು ಧಾತುಗಳಲ್ಲಿ 'ಕ್' ಕಾರ ಉಳಿಯುತ್ತವೆ. ತಸ್ತಮ್ಭ, ತಸ್ತಮ್ಭತುಃ, ತಸ್ತಮ್ಭುಃ, ಇತ್ಯಾದಿ ರೂಪಗಳಾಗುತ್ತವೆ.

ಲುಟ್: ಸ್ತಮ್ಭಿತಾ, ಸ್ತಮ್ಭಿತಾರೌ, ಸ್ತಮ್ಭಿತಾರಃ। ಸ್ತಮ್ಭಿತಾಸಿ, ಸ್ತಮ್ಭಿತಾಸ್ಥಃ, ಸ್ತಮ್ಭಿತಾಸ್ಥ। ಸ್ತಮ್ಭಿತಾಸ್ಮಿ, ಸ್ತಮ್ಭಿತಾಸ್ವಃ, ಸ್ತಮ್ಭಿತಾಸ್ಮಃ।

ಲೃಟ್: ಸ್ತಂಭಿಷ್ಯತಿ, ಸ್ತಮ್ಭಿಷ್ಯತಃ, ಸ್ತಮ್ಭಿಷ್ಯನ್ತಿ। ಎಂದು ರೂಪಗಳಾಗುತ್ತವೆ.

ಲೋಟ್:(ಶ್ನು)-ಪಕ್ಷದಲ್ಲಿ- ಸ್ತಭ್ನೋತು/ಸ್ತಭ್ನುತಾತ್, ಸ್ತಭ್ನುತಾಮ್, ಸ್ತಭ್ನುವನ್ತು। ಎಂದು ರೂಪಗಳಾಗುತ್ತವೆ.

(ಶ್ನಾ)-ಪಕ್ಷದಲ್ಲಿ-ಸ್ತಭ್ನಾತು, ಸ್ತಭ್ನೀತಾತ್, ಸ್ತಭ್ನೀತಾಮ್, ಸ್ತಭ್ನುವನ್ತು। ಎಂದು ರೂಪಗಳಾಗುತ್ತವೆ.

**(ಶಾನಚ್ ಪ್ರತ್ಯಯವನ್ನು ಆದೇಶವಾಗಿ ವಿಧಿಸುವ ಸೂತ್ರ)**

ಮಧ್ಯಮ ಪುರುಷ ಏಕವಚನದಲ್ಲಿ 'ಸಿಪ್' ಪ್ರತ್ಯಯವನ್ನು ಸೇರಿಸುವಾಗ, ಪ್ರಕೃತ ಸೂತ್ರವು ಪರ್ವೃತ್ತವಾಗುತ್ತದೆ.

**ಸೂತ್ರ – 688. ಹಲಃ ಶ್ನಃ ಶಾನಜ್ಝೌ (3.1.83)**

ವೃತ್ತಿ– ಹಲಃ ಪರಸ್ಯ ಶ್ನಃ ಶಾನಚ್ ಆದೇಶಃ ಸ್ಯಾತ್ ಹೌ ಪರೇ। ಸ್ತಭಾನ।

ಪ. ಛೇ– ಹಲಃ, ಶ್ನಃ, ಶಾನಚ್, ಹೌ।

ಅರ್ಥ– ಹಲ್ ಪರದಲ್ಲಿ ಇರುವ 'ಶ್ನಾ' ದ ಸ್ಥಾನದಲ್ಲಿ 'ಶಾನಚ್' ಆದೇಶವು ಬರುತ್ತದೆ. 'ಶಾನಚ್' ನಲ್ಲಿ 'ಆನ' ಮಾತ್ರ ಉಳಿಯುತ್ತದೆ. ಇದು ಅನೇಕಾಚ್ ಆಗಿರುವುದರಿಂದ, ಸರ್ವಾದೇಶ ವಾಗಿ ಬರುತ್ತದೆ.

ಲೋಟ್: ಉದಾ– ಸ್ತಭಾನ : 'ಸ್ತನ್‌ಭ್' ಧಾತುವಿನಮೇಲೆ ಲೋಟ್ 'ಲ್' ಕಾರದ ಮಧ್ಯಮಪುರುಷದ ಏಕವಚನದಲ್ಲಿ 'ಸಿಪ್' ಸ್ಥಾನದ ಮೇಲೆ 'ಹಿ' ಆದೇಶವು ಬಂದ ನಂತರ ಸ್ತಭ್+ನಾ +ಹಿ ಎಂದಾಗುತ್ತದೆ. 'ನಾ'ಗೆ ಪ್ರಕೃತ ಸೂತ್ರದಿಂದ 'ಶಾನಚ್(ಆನ)' ಆದೇಶವು ಬರುತ್ತದೆ. ಆಗ ಸ್ತಭ್+ಆನ+ಹಿ ಎಂದಿರುತ್ತದೆ. "ಅತೋ ಹೇಃ" ಎಂಬ ಸೂತ್ರದಿಂದ 'ಹಿ' ಗೆ ಲೋಪ ಬಂದು ಸ್ತಭಾನ ಎಂದು ರೂಪವಾಗುತ್ತದೆ.

ಲೋಟ್‌ನಲ್ಲಿ (ಶ್ನಾ) ಬಂದಾಗ,

ರೂಪಗಳು: ಸ್ತಭ್ನಾತು/ಸ್ತಭ್ನಿತಾತ್, ಸ್ತಭ್ನೀತಾಮ್, ಸ್ತಭ್ನನ್ತು। ಸ್ತಭಾನ/ಸ್ತಭ್ನೀತಾತ್, ಸ್ತಭ್ನೀತಮ್, ಸ್ತಭ್ನೀತ। ಸ್ತಭ್ನಾನಿ, ಸ್ತಭ್ನಾವ, ಸ್ತಭ್ನಾಮ।

ಲಙ್: (ಶ್ನು) ಪಕ್ಷದಲ್ಲಿ– ಅಸ್ತಭ್ನೋತ್, ಅಸ್ತಭ್ನುತಾಮ್, ಅಸ್ತಭ್ನುವನ್।

(ಶ್ನಾ) ಬಂದ ಪಕ್ಷದಲ್ಲಿ – ಅಸ್ತಭ್ನಾತ್, ಅಸ್ತಭ್ನೀತಾಮ್, ಅಸ್ತಭ್ನನ್।

ವಿ. ಲಿಙ್: (ಶ್ನು) ಪಕ್ಷದಲ್ಲಿ – ಸ್ತಭ್ನುಯಾತ್, ಸ್ತಭ್ನುಯಾತಾಮ್, ಸ್ತಭ್ನುಯುಃ।

(ಶ್ನಾ) ಪಕ್ಷದಲ್ಲಿ– ಸ್ತಭ್ನೀಯಾತ್, ಸ್ತಭ್ನೀಯಾತಾಮ್, ಸ್ತಭ್ನೀಯುಃ

ಆ. ಲಿಙ್: ಯಾಸುಟ್ 'ಕಿತ್' ಆಗುವುದರಿಂದ " ಅನಿದಿತಾಂ ಹಲ ಉಪಧಾಯಾಃ ಕಿಙಿತಿ" ಎಂಬ ಸೂತ್ರದಿಂದ 'ಮ್' ಕಾರ ರೂಪ 'ನ್' ಕಾರಕ್ಕೆ ಲೋಪ ಬರುವುದರಿಂದ ಸ್ತಭ್ಯಾತ್, ಸ್ತಭ್ಯಾಸ್ತಾಮ್, ಸ್ತಭ್ಯಾಸುಃ ಎಂದು ರೂಪಗಳಾಗುತ್ತವೆ.

**(ವೈಕಲ್ಪಿಕವಾಗಿ ಚ್ಲಿ ಗೆ ಅಙ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ – 689. ಜೄ–ಸ್ತನ್ಭು–ಮ್ರುಚು–ಮ್ಲುಚು–ಗ್ರುಚು–ಗ್ಲುಚು–ಗ್ಲುಞ್ಚು–ಶ್ವಿಭ್ಯಶ್ಚ। (3.1.58)**

ವೃತ್ತಿ– ಚ್ಲೇರಙ್ ವಾ ಸ್ಯಾತ್।

ಪ. ಛೇ– ಜೄ–ಸ್ತನ್ಭು–ಮ್ರುಚು–ಮ್ಲುಚು–ಗ್ರುಚು–ಗ್ಲುಚು–ಗ್ಲುಞ್ಚು–ಶ್ವಿಭ್ಯಃ, ಚ।

ಅ.ವೃ– "ಚ್ಲೇಃ ಸಿಚ್" ಎಂಬ ಸೂತ್ರದಿಂದ 'ಚ್ಲೇಃ' ಎಂಬ ಪದವೂ, "ಅಸ್ಯತಿ

ವಕ್ತಿ ಖ್ಯಾತಿಭ್ಯೋಽಙ್" ಎಂಬ ಸೂತ್ರದಿಂದ 'ಅಙ್' ಅನುವೃತ್ತವಾಗುತ್ತವೆ. ಮತ್ತು "ಇರಿತೋ ವಾ" ಎಂಬ ಸೂತ್ರದಿಂದ, 'ವಾ' ಎಂಬ ಪದವು ಅನುವೃತ್ತವಾಗುತ್ತವೆ.

ಅರ್ಥ- ಜೃ-ಶ್ವಿ ಧಾತುಗಳ ಪರದಲ್ಲಿರುವ 'ಚ್ಲಿ' ಗೆ 'ಅಙ್' ಆದೇಶವು ವೈಕಲ್ಪಿಕವಾಗಿ ಬರುತ್ತದೆ. 'ಅಙ್' ನಲ್ಲಿ 'ಅ' ಕಾರ ಮಾತ್ರ ಉಳಿಯುತ್ತದೆ.

ಲುಙ್: 1. ಸ್ತಮ್ಭ್ ಧಾತುವಿನ ಎಲ್ಲ 'ಲ್' ಕಾರಗಳ ರೂಪಗಳು.

ಉದಾ- ಅಸ್ತಭತ್, ಅಸ್ತಮ್ಭೀತ್-ಲುಙ್ 'ಲ್' ಕಾರದಲ್ಲಿ ಸ್ತಮ್ಭಿನ ನಂತರ 'ತಿಪ್' ಇದ್ದಾಗ, 'ಇ' ಕಾರ ಲೋಪವಾಗಿ 'ತ್' ಮಾತ್ರ ಉಳಿಯುತ್ತದೆ. "ಲಙ್-ಲುಙ್-ಲೃಙ್ಷು ಅಡುದಾತ್ತಃ" ಎಂಬ ಸೂತ್ರದಿಂದ 'ಅಟ್' ಆಗಮ ಬರುತ್ತದೆ. ಪ್ರಕೃತ ಸೂತ್ರದಿಂದ ಅ+ಸ್ತಮ್ಭ್+ಚ್ಲಿ+ತ್ ಎಂದಿದ್ದಾಗ, 'ಚ್ಲಿ' ಗೆ ಪ್ರಕೃತ ಸೂತ್ರದಿಂದ ವೈಕಲ್ಪಿಕವಾಗಿ 'ಅಙ್' ಆದೇಶ ಬಂದು ಅಸ್ತಮ್ಭ್+ಅ+ತ್ ಎಂದಿರುತ್ತದೆ. 'ಅಙ್' ಇದು 'ಙಿತ್' ಆಗಿರುವುದರಿಂದ ಉಪಧೆಯಾದ 'ಮ್' ಕಾರ ಸ್ಥಾನದಲ್ಲಿ 'ನ್' "ಅನಿದಿತಾಂ ಹಲ ಉಪಧಾಂಯಾಃ ಕಿಙಿತಿ" ಎಂಬ ಸೂತ್ರದಿಂದ, ಲೋಪ ಬಂದು ಅಸ್ತಭ್+ಅ+ತ್=ಅಸ್ತಭತ್ ಅಸ್ತಭತಾಂ, ಅಸ್ತಭನ್ ಎಂದು ರೂಪಗಳಾಗುತ್ತವೆ. 'ಅಙ್' ಬಾರದ ಪಕ್ಷದಲ್ಲಿ 'ಚ್ಲಿ' ಸ್ಥಾನದಲ್ಲಿ 'ಸಿಚ್(ಸ್)' ಬಂದು ಅಸ್ತಮ್ಭ್+ಸ್+ಇ+ಈ+ತ್ ಎಂದಿದ್ದಾಗ, 'ಇಟ್(ಇ)' ಮತ್ತು 'ಈಟ್(ಈ)' ಆಗಮಗಳು ಬಂದಮೇಲೆ,"ಇಟ ಈಟಿ" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬಂದು, ಅಸ್ತಮ್ಭ್+ಇ+ಈ+ತ್ ಎಂದಿದ್ದಾಗ, ಸವರ್ಣದೀರ್ಘದಿಂದ ಅಸ್ತಮ್ಭೀತ್, ಅಸ್ತಮ್ಭಿಷ್ಟಾಮ್, ಅಸ್ತಮ್ಭಿಷುಃ ಇತ್ಯಾದಿ ರೂಪಗಳಾಗುತ್ತವೆ.

ಲೃಙ್: ರೂಪಗಳು: ಅಸ್ತಮ್ಭಿಷ್ಯತ್, ಅಸ್ತಮ್ಭಿಷ್ಯತಾಮ್, ಅಸ್ತಮ್ಭಿಷ್ಯನ್ ಇತ್ಯಾದಿ ರೂಪಗಳಾಗುತ್ತವೆ.

**(ಸ್ತಮ್ಭ್ ನ 'ಸ್' ಕಾರಕ್ಕೆ ಷತ್ವ ಹೇಳುವ ಸೂತ್ರ)**

**ಸೂತ್ರ - 690. ಸ್ತನ್ಭೇಃ (8.3.67)**

ವೃತ್ತಿ- ಸ್ತನ್ಭೇಃ ಸೌತ್ರಸ್ಯ ಸಸ್ಯ ಷಃ ಸ್ಯಾತ್। ವ್ಯಷ್ಟಭತ್, ಅಸ್ತಮ್ಭೀತ್।

ಯುಞ್ ಬನ್ಧನೇ।7। ಯುನಾತಿ, ಯುನೀತೇ। ಯೋತಾ। ಕ್ನೂಞ್ ಶಬ್ದೇ।8। ಕ್ನೂನಾತಿ, ಕ್ನೂನೀತೇ।ಕ್ನವಿತಾ। ದ್ರೂಞ್ ಹಿಂಸಾಯಾಮ್।9। ದ್ರೂಣಾತಿ, ದ್ರೂಣೀತೇ। ದ್ರೂಞ್ ಹಿಂಸಾಯಾಮ್। 10। ದ್ರೂಣಾತಿ, ದ್ರೂಣೀತೇ। ಪೂಞ್ ಪವನೇ।11।

ಅ.ವ್ಯ-"ಉಪಸರ್ಗಾತ್ ಸುನೋತಿ" ಎಂಬ ಸೂತ್ರದಿಂದ, 'ಉಪಸರ್ಗಾತ್" ಎಂಬ ಪದವೂ "ಸಹೇಃ ಸಾಢಃ ಸಃ" ಎಂಬ ಸೂತ್ರದಿಂದ 'ಸಃ' ಎಂಬ ಪದವೂ, ಮತ್ತು "ಅಪದಾನ್ತಸ್ಯ ಮೂರ್ಧನ್ಯಃ" ಮತ್ತು "ಇಣ್ಕೋಃ" ಎಂಬ ಸೂತ್ರಗಳು ಅಧಿಕೃತವಾಗಿವೆ.

ಅರ್ಥ- ಉಪಸರ್ಗದ 'ಇಣ್' ನ ಪರದಲ್ಲಿರುವ ಸೌತ್ರಧಾತುವಾದ 'ಸ್ತನ್ಭ್' ಸೌತ್ರ ಧಾತುವಿನ 'ಸ್' ಕಾರದ ಸ್ಥಾನದಲ್ಲಿ 'ಷ್' ಕಾರವು ಆದೇಶವಾಗಿ ಬರುತ್ತದೆ.

ಉದಾ – ವ್ಯಷ್ಟಭತ್–ವಿ+ಅಸ್ತಭತ್ ಎಂಬಲ್ಲಿ, 'ವಿ' ಎಂಬುದು ಉಪಸರ್ಗವಾಗಿದೆ. ಇದರಲ್ಲಿರುವ 'ಇ' ಕಾರವು 'ಷತ್ವ' ಕ್ಕೆ ನಿಮಿತ್ತವಾಗಿದೆ. ಆದ್ದರಿಂದ ಅದರ ಪರದಲ್ಲಿರುವ ಧಾತುವಿನ 'ಸ್' ಕಾರಕ್ಕೆ 'ಅಟ್(ಅ)' ವ್ಯವಧಾನವಿದ್ದರೂ "ಪ್ರಾಕ್ ಸಿತಾದಡ್ ವ್ಯವಾಯೇಽಪಿ" ಸೂತ್ರದಿಂದ ಷತ್ವ ಬಂದು ವಿ+ಅಷ್+ತಭತ್ ಎಂದಾಗುತ್ತದೆ. ಅದನ್ನು ನಿಮಿತ್ತೀಕರಿಸಿ 'ಷ್' ಕಾರಕ್ಕೆ 'ತ್' ಕಾರ ಸಂಬಂಧವಿರುವುದರಿಂದ

"ಷ್ಟುನಾಷ್ಟುಃ" ಎಂಬ ಸೂತ್ರದಿಂದ 'ಷ್ಟುತ್ವ' ಬಂದು ವಿ+ಅಷ್ಟಭತ್ ಎಂದಿದ್ದಾಗ, 'ಯಣ್' ಸಂಧಿಯಿಂದ ವ್ಯಷ್ಟಭತ್ ಎಂದು ರೂಪವಾಗುತ್ತದೆ. ಆದರೆ ಅಸ್ತಮ್ಭೀತ್ ಎಂಬಲ್ಲಿ ಉಪಸರ್ಗವೇ ಇಲ್ಲದೇ ಇರುವುದರಿಂದ 'ಷ್ಟುತ್ವ' ಬಾರದೇ 'ಅಸ್ತಂಭೀತ್' ಎಂದೇ ಇದೆ.

ಸ್ತುನ್‌ಭ್ ಧಾತುವಿನ ರೂಪಗಳು.

ಲಟ್:– ಶ್ನು(ನು) ಪಕ್ಷದಲ್ಲಿ ಸ್ತುಭ್ನೋತಿ, ಶ್ನಾ(ನಾ) ಪಕ್ಷದಲ್ಲಿ ಸ್ತುಭ್ನಾತಿ ಇತ್ಯಾದಿ ರೂಪಗಳಾಗುತ್ತವೆ.

ಲಿಟ್:–ಇದು ಆರ್ಧಧಾತುಕವಾಗಿರುವುದರಿಂದ ವಿಕರಣ ಪ್ರತ್ಯಯವಿರುವುದಿಲ್ಲ ಹಾಗಾಗಿ 'ತುಸ್ತುಮ್ಭ' ಇತ್ಯಾದಿ ರೂಪಗಳಾಗುತ್ತವೆ.

ಲುಟ್:–ರೂಪಗಳು: ಸ್ತುಮ್ಭಿತಾ, 'ಸ್ತುಮ್ಭಿತಾರೌ, ಸ್ತುಮ್ಭಿತಾರಃ ಇತ್ಯಾದಿ ರೂಪಗಳಾಗುತ್ತವೆ.

ಲೃಟ್:– ರೂಪಗಳು: ಸ್ತುಮ್ಭಿಷ್ಯತಿ, ಸ್ತುಮ್ಭಿಷ್ಯತಃ, ಸ್ತುಮ್ಭಿಷ್ಯನ್ತಿ ಇತ್ಯಾದಿ ರೂಪಗಳಾಗುತ್ತವೆ.

ಲೋಟ್:–ಪ್ರಥಮ ಪುರುಷ ಏಕವಚನದಲ್ಲಿ – ಶ್ನು(ನು) ಪಕ್ಷದಲ್ಲಿ ಸ್ತುಭ್ನೋತು, ಶ್ನಾ(ನಾ) ಪಕ್ಷದಲ್ಲಿ ಸ್ತುಭ್ನಾತು ಎಂದು ರೂಪಗಳಾಗುತ್ತವೆ.

ಲಙ್:– ಪ್ರಥಮ ಪುರುಷ ಏಕವಚನದಲ್ಲಿ – ಶ್ನು(ನು) ಪಕ್ಷದಲ್ಲಿ ಅಸ್ತುಭ್ನೋತ್, ಎಂದೂ, ಶ್ನಾ(ನಾ) ಪಕ್ಷದಲ್ಲಿ ಅಸ್ತುಭ್ನಾತ್ ಎಂದು ರೂಪಗಳಾಗುತ್ತವೆ.

ವಿಧಿಲಿಙ್:–ಪ್ರಥಮ ಪುರುಷ ಏಕವಚನದಲ್ಲಿ – ಶ್ನು(ನು) ಪಕ್ಷದಲ್ಲಿ ಸ್ತುಭ್ನುಯಾತ್, ಎಂದೂ, ಶ್ನಾ(ನಾ) ಪಕ್ಷದಲ್ಲಿ ಸ್ತುಭ್ನೀಯಾತ್ ಎಂದು ರೂಪಗಳಾಗುತ್ತವೆ.

ಆಶೀರ್ಲಿಙ್:–ಪ್ರಥಮ ಪುರುಷ ಏಕವಚನದಲ್ಲಿ – ಸ್ತುಭ್ಯಾತ್ ಎಂದು ರೂಪವಾಗುಗುತ್ತದೆ

ಲುಙ್:–ಪ್ರಥಮ ಪುರುಷ ಏಕವಚನದಲ್ಲಿ–ಅಸ್ತುಮ್ಭೀತ್ ಎಂದು ರೂಪವಾಗುತ್ತದೆ.

ಲೃಙ್:–ಅಸ್ತುಮ್ಭಿಷ್ಯತ್,ಅಸ್ತುಮ್ಭಿಷ್ಯತಾಮ್,ಅಸ್ತುಮ್ಭಿಷ್ಯನ್‌ಎಂದು ರೂಪಗಳಾಗುತ್ತವೆ.

3. ಸ್ಕನ್‌ಭ್ ಧಾತುವಿನ ರೂಪಗಳು. ಲಟ್:–ಶ್ನು(ನು) ಪಕ್ಷದಲ್ಲಿ ಸ್ಕಭ್ನೋತಿ, ಶ್ನಾ(ನಾ) ಪಕ್ಷದಲ್ಲಿ ಸ್ಕಭ್ನಾತಿ ಇತ್ಯಾದಿ ರೂಪಗಳಾಗುತ್ತವೆ.

ಲಿಟ್:–ಇದು ಆರ್ಧಧಾತುಕವಾಗಿರುವುದರಿಂದ ವಿಕರಣ ಪ್ರತ್ಯಯವಿರುವುದಿಲ್ಲ

ಹಾಗಾಗಿ ಚಸ್ಕಮ್ಭ ಇತ್ಯಾದಿ ರೂಪಗಳಾಗುತ್ತವೆ.

ಲುಟ್:- ಸ್ಕಮ್ಭಿತಾ, ಸ್ಕಮ್ಭಿತಾರೌ, ಸ್ಕಮ್ಭಿತಾರಃ ಇತ್ಯಾದಿ ರೂಪಗಳಾಗುತ್ತವೆ.

ಲೃಟ್:-ಸ್ಕಮ್ಭಿಷ್ಯತಿ, ಸ್ಕಮ್ಭಿಷ್ಯತಃ, ಸ್ಕಮ್ಭಿಷ್ಯನ್ತಿ ಇತ್ಯಾದಿ ರೂಪಗಳಾಗುತ್ತವೆ.

ಲೋಟ್:- ಪ್ರಥಮ ಪುರುಷ ಏಕವಚನದಲ್ಲಿ – ಶ್ನು(ನು) ಪಕ್ಷದಲ್ಲಿ ಸ್ಕಭ್ನೋತು, ಶ್ನಾ(ನಾ) ಪಕ್ಷದಲ್ಲಿ ಸ್ಕಭ್ನಾತು ಎಂದು ರೂಪಗಳಾಗುತ್ತವೆ.

ಲಙ್:-ಪ್ರಥಮ ಪುರುಷ ಏಕವಚನದಲ್ಲಿ – ಶ್ನು(ನು) ಪಕ್ಷದಲ್ಲಿ ಅಸ್ಕಭ್ನೋತ್, ಎಂದೂ, ಶ್ನಾ(ನಾ) ಪಕ್ಷದಲ್ಲಿ ಅಸ್ಕಭ್ನಾತ್ ಎಂದು ರೂಪಗಳಾಗುತ್ತವೆ.

ವಿಧಿಲಿಙ್:-ಪ್ರಥಮ ಪುರುಷ ಏಕವಚನದಲ್ಲಿ – ಶ್ನು(ನು) ಪಕ್ಷದಲ್ಲಿ ಸ್ಕಭ್ನುಯಾತ್, ಎಂದೂ, ಶ್ನಾ(ನಾ) ಪಕ್ಷದಲ್ಲಿ ಸ್ಕಭ್ನೀಯಾತ್ ಎಂದು ರೂಪಗಳಾಗುತ್ತವೆ.

ಆಶೀರ್ಲಿಙ್:ಪ್ರಥಮ ಪುರುಷ ಏಕವಚನದಲ್ಲಿ–ಸ್ಕಭ್ಯಾತ್ ಎಂದು ರೂಪವಾಗುತ್ತದೆ.

ಲುಙ್:-ಪ್ರಥಮ ಪುರುಷ ಏಕವಚನದಲ್ಲಿ–ಅಸ್ಕಮ್ಭೀತ್ ಎಂದು ರೂಪವಾಗುಗುತ್ತದೆ.

ಲೃಙ್:-ಅಸ್ಕಮ್ಭಿಷ್ಯತ್,ಅಸ್ಕಮ್ಭಿಷ್ಯತಾಮ್,ಅಸ್ಕಮ್ಭಿಷ್ಯನ್ಎಂದು ರೂಪಗಳಾಗುತ್ತವೆ.

ಧಾತು 4. ಸ್ಕುನ್ಭ ಧಾತುವಿನ ರೂಪಗಳು

ಲಟ್:-ಶ್ನು(ನು) ಪಕ್ಷದಲ್ಲಿ ಸ್ಕುಭ್ನೋತಿ, ಶ್ನಾ(ನಾ) ಪಕ್ಷದಲ್ಲಿ ಸ್ಕುಭ್ನಾತಿ ಇತ್ಯಾದಿ ರೂಪಗಳಾಗುತ್ತವೆ.

ಲಿಟ್:-ಇದು ಆರ್ಧಧಾತುಕವಾಗಿರುವುದರಿಂದ ವಿಕರಣ ಪ್ರತ್ಯಯವಿರುವುದಿಲ್ಲ ಹಾಗಾಗಿ ಚುಸ್ಕುಮ್ಭ ಇತ್ಯಾದಿ ರೂಪಗಳಾಗುತ್ತವೆ.

ಲುಟ್:-ರೂಪಗಳು: ಸ್ಕುಮ್ಭಿತಾ, ಸ್ಕುಮ್ಭಿತಾರೌ, ಸ್ಕುಮ್ಭಿತಾರಃ। ಇತ್ಯಾದಿ ರೂಪಗಳಾಗುತ್ತವೆ.

ಲೃಟ್:- ರೂಪಗಳು: ಸ್ಕುಮ್ಭಿಷ್ಯತಿ, ಸ್ಕುಮ್ಭಿಷ್ಯತಃ, ಸ್ಕುಮ್ಭಿಷ್ಯನ್ತಿ। ಇತ್ಯಾದಿ ರೂಪಗಳಾಗುತ್ತವೆ.

ಲೋಟ್:-ಪ್ರಥಮ ಪುರುಷ ಏಕವಚನದಲ್ಲಿ – ಶ್ನು(ನು) ಪಕ್ಷದಲ್ಲಿ ಸ್ಕುಭ್ನೋತು, ಶ್ನಾ(ನಾ) ಪಕ್ಷದಲ್ಲಿ ಸ್ಕುಭ್ನಾತು ಎಂದು ರೂಪಗಳಾಗುತ್ತವೆ.

ಲಙ್:- ಪ್ರಥಮ ಪುರುಷ ಏಕವಚನದಲ್ಲಿ – ಶ್ನು(ನು) ಪಕ್ಷದಲ್ಲಿ ಅಸ್ಕುಭ್ನೋತ್, ಎಂದೂ, ಶ್ನಾ(ನಾ) ಪಕ್ಷದಲ್ಲಿ ಅಸ್ಕುಭ್ನಾತ್ ಎಂದು ರೂಪಗಳಾಗುತ್ತವೆ.

ವಿಧಿಲಿಙ್:-ಪ್ರಥಮ ಪುರುಷ ಏಕವಚನದಲ್ಲಿ – ಶ್ನು(ನು) ಪಕ್ಷದಲ್ಲಿ ಸ್ಕುಭ್ನುಯಾತ್, ಎಂದೂ, ಶ್ನಾ(ನಾ) ಪಕ್ಷದಲ್ಲಿ ಸ್ಕುಭ್ನೀಯಾತ್ ಎಂದು ರೂಪಗಳಾಗುತ್ತವೆ.

ಆಶೀರ್ಲಿಙ್:-ಪ್ರಥಮ ಪುರುಷ ಏಕವಚನದಲ್ಲಿ–ಸ್ಕುಭ್ಯಾತ್ ಎಂದು ರೂಪವಾಗುತ್ತದೆ.

ಲುಙ್:-ಪ್ರಥಮ ಪುರುಷ ಏಕವಚನದಲ್ಲಿ–ಅಸ್ಕುಮ್ಭೀತ್ ಎಂದು ರೂಪವಾಗುತ್ತದೆ.

ಲೃಙ್: ಅಸ್ಕುಮ್ಭಿಷ್ಯತ್, ಅಸ್ಕುಮ್ಭಿಷ್ಯತಾಮ್, ಅಸ್ಕುಮ್ಭಿಷ್ಯನ್ ಎಂದು

ರೂಪಗಳಾಗುತ್ತವೆ. ಗಮನಕ್ಕೆ: ಈ ಮೇಲೆ ಹೇಳಿದ ಧಾತುಗಳು ಸೌತ್ರ ಧಾತುಗಳು, ಇವೆಲ್ಲವುಗಳಿಗೂ 'ತಡೆಯುವದು' ಎಂದೇ ಅರ್ಥ.

ಧಾತು 7: ಯುಞ್– ಬಂಧನೇ: (ಕಟ್ಟುವದು ಅಥವಾ ಬಂಧಿಸುವದು ಎಂದು ಅರ್ಥ) ಇದರಲ್ಲಿ 'ಯು' ಮಾತ್ರ ಉಳಿಯುತ್ತದೆ. 'ಮಿತ್' ಆಗಿರುವುದರಿಂದ ಇದು ಉಭಯಪದಿಯಾಗಿದೆ. ಇದು 'ಅನಿಟ್' ಆಗಿರುವದು. ಆದರೆ 'ಲಿಟ್' 'ಲ್' ಕಾರದಲ್ಲಿ ಮಾತ್ರ 'ಕ್ರಾದಿ' ನಿಯಮದಿಂದ ನಿತ್ಯವಾಗಿ 'ಇಟ್' ಆಗಿರುತ್ತದೆ. ಮತ್ತು 'ಥಲ್' ಪ್ರತ್ಯಯವಿದ್ದಾಗ, ಭಾರದ್ವಾಜ ನಿಯಮದಿಂದ ವಿಕಲ್ಪದಿಂದ 'ಇಟ್' ಆಗುತ್ತದೆ.

'ಯುಞ್' ಧಾತುವಿನ ರೂಪಗಳು

ಲಟ್: ಪರಸ್ಮೈ ಪದಿ: ಯುನಾತಿ। ಆತ್ಮನೇಪದಿ: ಯುನೀತೇ।

ಲಿಟ್: ಪರಸ್ಮೈ ಪದಿ: ಯುಯಾವ, ಯುಯುವತುಃ ಯುಯುವುಃ। ಯುವಿಯುಥ, ಯುಯೋಥ।

ಆತ್ಮನೇ ಪದಿ: ಯುಯುವೇ, ಯುಯುವಾತೇ,ಯುಯುವಿರೇ।

ಲುಟ್:– ಪರಸ್ಮೈಪದಿ ಯೋತಾ, ಯೋತಾರೌ, ಯೋತಾರಃ। ಯೋತಾಸಿ, ಯೋತಾಸ್ಥಃ, ಯೋತಾಸ್ಥ। ಯೋತಾಸ್ಮಿ, ಯೋತಾಸ್ವಃ, ಯೋತಾಸ್ಮಃ।

ಆತ್ಮನೇ ಪದಿ:– ಯೋತಾ, ಯೋತಾರೌ, ಯೋತಾರಃ॥ ಯೋತಾಸೇ, ಯೋತಾಸಾಥೇ, ಯೋತಾಧ್ವೇ। ಯೋತಾಹೇ, ಯೋತಾಸ್ವಹೇ, ಯೋತಾಸ್ಮಹೇ।

ಲೃಟ್:–ಪರಸ್ಮೈಪದಿ: ಯೋಷ್ಯತಿ, ಯೋಷ್ಯತಃ, ಯೋಷ್ಯನ್ತಿ।

ಆತ್ಮನೇಪದಿ: ಯೋಷ್ಯತೇ, ಯೋಷ್ಯೇತೇ, ಯೋಷ್ಯನ್ತೇ।

ಲೋಟ್:–ಪರಸ್ಮೈಪದಿ: ಯುನಾತು/ ಯುನೀತಾತ್, ಯುನೀತಾಮ್, ಯುನನ್ತು।

ಆತ್ಮನೇಪದಿ: ಯುನೀತಾಮ್, ಯುನಾತಾಮ್, ಯುನತಾಮ್।

ಲಙ್:–ಪರಸ್ಮೈಪದಿ:– ಅಯುನಾತ್। ಆತ್ಮನೇ ಪದಿ: ಅಯುನೀತ।

ವಿ.ಲಿಙ್:– ಪರಸ್ಮೈಪದಿ:– ಯುನೀಯಾತ್, ಯುನೀಯಾತಾಮ್, ಯುನೀಯುಃ।

ಆತ್ಮನೇಪದಿ:– ಯುನೀತ, ಯುನೀಯಾತಾಮ್, ಯುನೀರನ್।

ಆ.ಲಿಙ್:– ಪರಸ್ಮೈ ಪದಿ: ಯುಯಾತ್, ಯೂಯಾಸ್ತಾಮ್, ಯೂಯಾಸುಃ।

ಆತ್ಮನೇ ಪದಿ: ಯೋಷೀಷ್ಟ, ಯೋಷೀಯಾಸ್ತಾಮ್, ಯೋಷೀರನ್।

ಲುಙ್:–ಪರಸ್ಮೈಪದಿ:– ಅಯೋಷೀತ್। ಆತ್ಮನೇ ಪದಿ: ಅಯೋಷ್ಟ।

ಲೃಙ್:– ಪರಸ್ಮೈಪದಿ:– ಅಯೋಷ್ಯತ್, ಅಯೋಷ್ಯತಾಮ್, ಅಯೋಷ್ಯನ್।

ಆತ್ಮನೇಪದಿ: ಅಯೋಷ್ಯತ, ಅಯೋಷ್ಯೇತಾಮ್, ಅಯೋಷ್ಯನ್ತ। ಇತ್ಯಾದಿ ರೂಪಗಳಾಗುತ್ತವೆ.

ಧಾತು 8: ಕ್ನೂಞ್ ಶಬ್ದೇ. (ಶಬ್ದ ಮಾಡುವದು ಎಂದರ್ಥ). ಇದರಲ್ಲಿ 'ಕ್ನೂ'

ಮಾತ್ರ ಉಳಿಯುತ್ತದೆ. 'ಞಿತ್' ಆಗಿರುವುದರಿಂದ ಇದು ಉಭಯಪದಿ. ಹಾಗೆಯೇ ಊದನ್ತವಾಗಿರುವುದರಿಂದ ಸೇಟ್.

'ಕ್ನೂಞ್' ಧಾತುವಿನ ರೂಪಗಳು

ಲಟ್: ಪರಸ್ಮೈ ಪದಿ: ಕ್ನೂನಾತಿ, ಕ್ನೂನೀತಃ, ಕ್ನೂನನ್ತಿ।

ಆತ್ಮನೇಪದಿ: ಕ್ನೂನೀತೇ, ಕ್ನೂನಾತೇ, ಕ್ನೂನತೇ।

ಲಿಟ್: ಪರಸ್ಮೈ ಪದಿ: ಚುಕ್ನಾವ, ಚುಕ್ನುವಥುಃ, ಚುಕ್ನುವುಃ।

ಆತ್ಮನೇ ಪದಿ: ಚುಕ್ನುವೇ, ಚುಕ್ನುವಾತೇ, ಚುಕ್ನುವಿರೇ।

ಲುಟ್: ಪರಸ್ಮೈ ಪದಿ: ಕ್ನವಿತಾ, ಕ್ನವಿತಾರೌ, ಕ್ನವಿತಾರಃ। ಕ್ನವಿತಾಸಿ, ಕ್ನವಿತಾಸ್ಥಃ, ಕ್ನವಿತಾಸ್ಥ। ಕ್ನವಿತಾಸ್ಮಿ, ಕ್ನವಿತಾಸ್ವಃ, ಕ್ನವಿತಾಸ್ಮಃ।

ಆತ್ಮನೇ ಪದಿ: ಕ್ನವಿತಾ, ಕ್ನವಿತಾರೌ, ಕ್ನವಿತಾರಃ। ಕ್ನವಿತಾಸೇ, ಕ್ನವಿಥಾಸಾಥೇ, ಕ್ನವಿತಾಧ್ವೇ। ಕ್ನವಿತಾಹೇ, ಕ್ನವಿತಾಸ್ವಹೇ, ಕ್ನವಿತಾಸ್ಮಹೇ।

ಲೃಟ್:ಪರಸ್ಮೈ ಪದಿ: ಕ್ನವಿಷ್ಯತಿ, ಕ್ನವಿಷ್ಯತಃ, ಕ್ನವಿಷ್ಯನ್ತಿ।

ಆತ್ಮನೇ ಪದಿ: ಕ್ನವಿಷ್ಯತೇ, ಕ್ನವಿಷ್ಯೇತೇ, ಕ್ನವಿಷ್ಯನ್ತೇ।

ಲೋಟ್:ಪರಸ್ಮೈ ಪದಿ: ಕ್ನೂನಾತು। ಆತ್ಮನೇ ಪದಿ: ಕ್ನೂನೀತಾಮ್।

ಲಙ್:ಪರಸ್ಮೈ ಪದಿ: ಅಕ್ನೂನಾತ್। ಆತ್ಮನೇ ಪದಿ: ಅಕ್ನೂನೀತ।

ವಿ. ಲಿಙ್: ಪರಸ್ಮೈ ಪದಿ: ಕ್ನೂನೀಯಾತ್, ಕ್ನೂನೀಯಾತಾಮ್, ಕ್ನೂನೀಯುಃ।

ಆತ್ಮನೇ ಪದಿ: ಕ್ನೂನೀತ, ಕ್ನೂನೀಯಾತಾಮ್, ಕ್ನೂನೀರನ್।

ಆ.ಲಿಙ್: ಪರಸ್ಮೈ ಪದಿ: ಕ್ನೂಯಾತ್, ಕ್ನೂಯಾಸ್ತಾಮ್, ಕ್ನೂಯಾಸುಃ।

ಆತ್ಮನೇ ಪದಿ: ಕ್ನವಿಷೀಷ್ಟ, ಕ್ನವಿಷೀಯಾಸ್ತಾಮ್, ಕ್ನವಿಷೀರನ್।

ಲುಙ್:–ಪರಸ್ಮೈಪದಿ: ಅಕ್ನಾವೀತ್। ಆತ್ಮನೇ ಪದಿ: ಅಕ್ನವಿಷ್ಟ।

ಲೃಙ್:– ಪರಸ್ಮೈಪದಿ: ಅಕ್ನವಿಷ್ಯತ್, ಅಕ್ನವಿಷ್ಯತಾಮ್, ಅಕ್ನವಿಷ್ಯನ್।

ಆತ್ಮನೇ ಪದಿ: ಅಕ್ನವಿಷ್ಯತ, ಅಕ್ನವಿಷ್ಯೇತಾಮ್, ಅಕ್ನವಿಷ್ಯನ್ತ। ರೂಪಗಳಾಗುತ್ತವೆ.

ಧಾತು 9: ದ್ರೂಞ್–ಹಿಂಸಾಯಾಮ್, (ಹಿಂಸೆ ಮಾಡುವದು ಎಂದರ್ಥ). ಇದರಲ್ಲಿ 'ದ್ರೂ' ಮಾತ್ರ ಉಳಿಯುತ್ತದೆ.ಇದು 'ಉಭಯಪದಿ' ಸೇಟ್. 'ಶ್ನಾ' ಪಕ್ಷದಲ್ಲಿ ರೇಫದ ನಂತರ ಬರುವ 'ನ್' ಕಾರಕ್ಕೆ ಣತ್ವ ಬರುತ್ತದೆ.

'ದ್ರೂಞ್' ಧಾತುವಿನ ರೂಪಗಳು

ಲಟ್: ಪರಸ್ಮೈ ಪದಿ: ದ್ರೂಣಾತಿ, ದ್ರೂಣೀತಃ, ದ್ರೂಣನ್ತಿ।

ಆತ್ಮನೇಪದಿ: ದ್ರೂಣೀತೇ, ದ್ರೂಣಾತೇ, ದ್ರೂಣತೆ।

ಲಿಟ್: ಪರಸ್ಮೈ ಪದಿ: ದುದ್ರಾವ, ದುದ್ರುವತುಃ ದುದ್ರುವುಃ।

ಆತ್ಮನೇ ಪದಿ: ದುದ್ರುವೇ, ದುದ್ರುವಾತೆ, ದುದ್ರುವಿರೆ।

ಲುಟ್: ಪರಸ್ಮೈ ಪದಿ: ದ್ರವಿತಾ, ದ್ರವಿತಾರೌ, ದ್ರವಿತಾರಃ। ದ್ರವಿತಾಸಿ, ದ್ರವಿತಾಸ್ಥಃ, ದ್ರವಿತಾಸ್ಥ। ದ್ರವಿತಾಸ್ಮಿ, ದ್ರವಿತಾಸ್ವಃ, ದ್ರವಿತಾಸ್ಮಃ।

ಆತ್ಮನೇ ಪದಿ: ದ್ರವಿತಾ, ದ್ರವಿತಾರೌ, ದ್ರವಿತಾರಃ। ದ್ರವಿತಾಸೇ, ದ್ರವಿತಾಸಾಥೇ, ದ್ರವಿತಾಧ್ವೇ। ದ್ರವಿತಾಹೇ, ದ್ರವಿತಾಸ್ವಹೇ, ದ್ರವಿತಾಸ್ಮಹೇ।

ಲೃಟ್:ಪರಸ್ಮೈ ಪದಿ: ದ್ರವಿಷ್ಯತಿ, ದ್ರವಿಷ್ಯತಃ, ದ್ರವಿಷ್ಯನ್ತಿ।

ಆತ್ಮನೇ ಪದಿ: ದ್ರವಿಷ್ಯತೇ, ದ್ರವಿಷ್ಯೇತೇ, ದ್ರವಿಷ್ಯನ್ತೇ।

ಲೋಟ್:ಪರಸ್ಮೈ ಪದಿ: ದ್ರುಣಾತು, ದ್ರುಣೀತಾಮ್, ದ್ರುಣನ್ತು।

ಆತ್ಮನೇ ಪದಿ: ದ್ರುಣೀತಾಮ್, ದ್ರುಣಾತಾಮ್, ದ್ರುಣತಾಮ್।

ಲಙ್:ಪರಸ್ಮೈ ಪದಿ: ಅದ್ರೂಣಾತ್। ಆತ್ಮನೇ ಪದಿ: ಅದ್ರೂಣೀತ।

ವಿ. ಲಿಙ್: ಪರಸ್ಮೈ ಪದಿ: ದ್ರೂಣೀಯಾತ್, ದ್ರೂಣೀಯಾತಾಮ್, ದ್ರೂಣೀಯುಃ।

ಆತ್ಮನೇ ಪದಿ: ದ್ರೂಣೀತ, ದ್ರೂಣೀಯಾತಾಮ್, ದ್ರೂಣೀರನ್।

ಆ.ಲಿಙ್: ಪರಸ್ಮೈ ಪದಿ: ದ್ರೂಯಾತ್, ದ್ರೂಯಾಸ್ತಾಮ್, ದ್ರೂಯಾಸುಃ।

ತಿಙನ್ತೇ ಕ್ರ್ಯಾದಯಃ (ಉಭಯಪದಿ ರೂಪಗಳು)

ಆತ್ಮನೇ ಪದಿ: ದ್ರವಿಷೀಷ್ಟ, ದ್ರವಿಷೀಯಾಸ್ತಾಮ್, ದ್ರವಿಷೀರನ್।

ಲುಙ್:ಪರಸ್ಮೈ ಪದಿ: ಅದ್ರಾವೀತ್। ಆತ್ಮನೇ ಪದಿ: ಅದ್ರವಿಷ್ಟ।

ಲೃಙ್: ಪರಸ್ಮೈ ಪದಿ: ಅದ್ರವಿಷ್ಯತ್, ಅದ್ರವಿಷ್ಯತಾಮ್, ಅದ್ರವಿಷ್ಯನ್।

ಆತ್ಮನೇ ಪದಿ: ಅದ್ರವಿಷ್ಯತ, ಅದ್ರವಿಷ್ಯೇತಾಮ್, ಅದ್ರವಿಷ್ಯನ್ತ। ರೂಪಗಳಾಗುತ್ತವೆ.

ಧಾತು (10) ಪೂಞ್ – ಪವನೇ: (ಪವಿತ್ರೀಕರಿಸುವದು)–'ಪೂಞ್'ನಲ್ಲಿ 'ಞ್' ಕಾರ ಇತ್/ಲೋಪವಾಗಿ 'ಪೂ' ಮಾತ್ರ ಉಳಿಯುತ್ತದೆ. ಇದು 'ಞಿತ್' ಆದುದರಿಂದ ಉಭಯಪದಿ. "ಆರ್ಧಧಾತುಕಸ್ಯೇಡ್ವಲಾದೇಃ" ಎಂಬ ಸೂತ್ರದಿಂದ ಇಡಾ(ಇಟ್)ಗಮ ಬರುತ್ತದೆ. 'ಶ್ನಾ(ಆ)' ಪರವಾದಾಗ. ಅದಕ್ಕೆ ಮುಂದಿನ ಸೂತ್ರದಿಂದ ಹ್ರಸ್ವವಾಗುತ್ತದೆ.(ಪು)

**(ಹ್ರಸ್ವ ವಿಧಾಯಕ ಸೂತ್ರ)**

**ಸೂತ್ರ – 691. ಪ್ವಾದೀನಾಂ ಹ್ರಸ್ವಃ (7.3.80)**

ವೃತ್ತಿ– ಪೂಞ್–ಲೂಞ್–ಸ್ತೄಞ್–ಕೄಞ್–ವೄಞ್–ಧೂಞ್–ಶೄ–ಪೄ–ವೄ–ಭೄ–ಮೄ– ದೄ–ಜೄ–ಝೄ–ಧೄ–ನೄ–ಕೄ–ಋ–ಗೄ–ಜ್ಯಾ–ರೀ–ಲೀ–ವ್ಲೀ–ಪ್ಲೀನಾಂ ಚತುರ್ವಿಂಶತೇಃ ಶಿತಿ ಹ್ರಸ್ವಃ। ಪುನಾತಿ, ಪುನೀತೇ। ಪವಿತಾ।

ಲೂಞ್ ಛೇದನೇ।11। ಲುನಾತಿ, ಲುನೀತೇ।

ಸ್ತೄಞ್ ಆಚ್ಛಾದನೇ।12। ಸ್ತೃಣಾತಿ।(648) ಶರ್ಪೂರ್ವಾಃ ಖಯಃ। ತಸ್ತಾರ। ತಸ್ತರತುಃ। ತಸ್ತರೇ। ಸ್ತರೀತಾ, ಸ್ತರಿತಾ। ಸ್ತೃಣೀಯಾತ್, ಸ್ತೃಣೀತ। ಸ್ತೀರ್ಯಾತ್।

"ಗಣಿ" ಎಂಬ ಸೂತ್ರದಿಂದ ಲುಙ್, ತಿಪ್, ಅಡಾಗಮಗಳು ಹಾಗೆಯೇ 'ಚ್ಲಿ'ಯ ಸ್ಥಾನದಲ್ಲಿ ಬರಬೇಕಾದ 'ಸಿಚ್'ನ್ನು ಬಾಧಿಸಿ, ಣ್ಯಂತವಾಗಿ ಭಾವಿಸಿದ್ದರಿಂದ, "ಣಿಶ್ರಿದ್ರುಶ್ರುಭ್ಯಃ ಕರ್ತರಿ ಚಙ್" ಎಂಬ ಸೂತ್ರದಿಂದ 'ಚಙ್', 'ಣಿ', ಲೋಪ ದ್ವಿತ್ವ ಹಾಗೂ ಅಭ್ಯಾಸಕ್ಕೆ ಚುತ್ವ ಮಾಡಿದಾಗ, ಪರಸ್ಮೈ ಪದದಲ್ಲಿ ಅಜೀಗಣ್+ಅತ್ = ಅಜೀಗಣತ್ ಎಂದು ರೂಪವಾಗುತ್ತದೆ. 'ಅ'ಕಾರ ಇರುವ ಪಕ್ಷದಲ್ಲಿ, ಅಜಗಣ್+ಅತ್ = ಅಜಗಣತ್ ಎಂದು ರೂಪವಾಗುತ್ತದೆ.

ಇದೇ ರೀತಿಯಲ್ಲಿ ಆತ್ಮನೇ ಪದದಲ್ಲಿಯೂ ಕೂಡ ಅಜೀಗಣತ ಮತ್ತು ಅಜಗಣತ ಎಂದು ರೂಪಗಳಾಗುತ್ತವೆ.

ಲಟ್: ಗಣಯತಿ/ಗಣಯತೇ।

ಲಿಟ್: ಗಣಯಾಞ್ಚಕಾರ, ಗಣಯಾಂಬಭೂವ, ಗಣಯಾಮಾಸ।

ಲುಟ್: ಗಣಯಿತಾ, ಗಣಯಿತಾರೌ, ಗಣಯಿತಾರಃ। ಗಣಯಿತಾಸಿ, ಇತ್ಯಾದಿ ಪರಸ್ಮೈಪದದಲ್ಲೂ, ಗಣಯಿತಾ, ಗಣಯಿತಾರೌ, ಗಣಯಿತಾರಃ। ಗಣಯಿತಾಸೇ, ಇತ್ಯಾದಿ ಅತ್ಮನೇ ಪದಲ್ಲಿಯೂ ರೂಪಗಳಾಗುತ್ತವೆ.

ಲೃಟ್: ಗಣಯಿಷ್ಯತಿ, ಗಣಯಿಷ್ಯತೇ

ಲೋಟ್: ಗಣಯತು/ಗಣಯತಾತ್, ಗಣಯತಾಮ್, ಗಣಯನ್ತು।

ಲಙ್: ಅಗಣಯತ್, ಅಗಣಯತ।

ವಿಧಿಲಿಙ್:ಗಣಯೇತ್, ಗಣಯೇತ।

ಆಶೀರ್ಲಿಙ್:ಪರಸ್ಮೈ ಪದದಲ್ಲಿ, "ಅತೋಲೋಪ" ಎಂಬ ಸೂತ್ರದಿಂದ 'ಅ' ಕಾರಕ್ಕೆ ಲೋಪ ಮತ್ತು "ಣೇರನಿಟಿ" ಎಂಬ ಸೂತ್ರದಿಂದ 'ಣಿ(ಇ)'ಗೆ ಲೋಪ ಬಂದು ಗಣ್ಯಾತ್ ಎಂದು ರೂಪವಾಗುತ್ತದೆ.

ಆತ್ಮನೇ ಪದದಲ್ಲಿ ಗಣಯಿಷೀಷ್ಟ ಎಂದು ರೂಪವಾಗುತ್ತದೆ.

ಲುಙ್: ಣಿತ್ವದಿಂದ 'ಅ' ಕಾರ ಲೋಪ "ಸನ್ವಲ್ಲಘುನಿ ಚಂಗ್ ಪರೇ ಅನಗ್ಲೋಪೇ" ಎಂಬ ಸೂತ್ರದಿಂದ, ಸನ್ವದ್ಭಾವ ಮತ್ತು ದೀರ್ಘಗಳು ಬರುವುದಿಲ್ಲ ಆದರೆ 'ಚಙ್' ಬರುತ್ತದೆ. ಆದ್ದರಿಂದ ಅಜಗಣತ್. ಅಜಗಣತ ಎಂಬ ರೂಪಗಳಾಗುತ್ತವೆ.

ಲೃಙ್: ಅಗಣಯಿಷ್ಯತ್, ಅಗಣಯಿಷ್ಯತ ಎಂದು ರೂಪಗಳು.

ಚುರಾದಿ ಗಣದಲ್ಲಿ ಕೆಲವು ಧಾತುಗಳಿಗೆ 'ಅ' ಕಾರ ಸ್ಥಾನದಲ್ಲಿ "ಸನ್ಯತಃ" ಎಂಬ ಸೂತ್ರದಿಂದ ಇತ್ವ ಬಂದು "ದೀರ್ಘೋ ಲಘೋಃ" ಎಂಬ ಸೂತ್ರದಿಂದ 'ಇ' ಕಾರಕ್ಕೆ ದೀರ್ಘ ಬರುತ್ತದೆ.

**॥ಇತಿ ಚುರಾದಿ (10) ಗಣಃ ॥**

**ಇಲ್ಲಿಗೆ ಚುರಾದಿಗಣ ಪ್ರಕರಣ (21) ಮುಗಿಯಿತು**

***

# ಪ್ರಕರಣ -22: ಣ್ಯತ್ತ ಪ್ರಕ್ರಿಯಾಃ

(ಸೂ. ಸಂ.699-705)

**(ಕರ್ತೃ ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ- 699. ಸ್ವತನ್ತ್ರಃ ಕರ್ತಾ(1-4-54)**

ವೃತ್ತಿ-ಕ್ರಿಯಾಯಾಂ ಸ್ವತನ್ತ್ರ್ಯೇಣ ವಿವಕ್ಷಿತೋಽರ್ಥಃ ಕರ್ತಾಸ್ಯಾತ್।

ಪ.ಛೇ-ಸ್ವತನ್ತ್ರಃ ಕರ್ತಾ.

ಅ.ವೃ-"ಕಾರಕೇ(1-4-23)" ಎಂಬುದು ಅಧಿಕಾರ ಸೂತ್ರ . ಈ ಅಧಿಕಾರದಲ್ಲಿ ಪ್ರಕೃತ ಸೂತ್ರದಿಂದ ಕರ್ತೃ-ಸಂಜ್ಞೆಯು ಹೇಳಲ್ಪಡುತ್ತದೆ.

ಅರ್ಥ- ಕ್ರಿಯೆಯಲ್ಲಿ ಸ್ವಾತಂತ್ರ್ಯದಿಂದ ವಿವಕ್ಷಿತವಾದುದಕ್ಕೆ(ಪ್ರಧಾನವಾದುದಕ್ಕೆ) 'ಕರ್ತೃ' ಎಂಬ ಸಂಜ್ಞೆಯು ಬರುತ್ತದೆ. ಕಾರಕವು ವಕ್ತೃ-ಇಚ್ಛಾ ಅಧೀನವಾಗಿದೆ. ಆದ್ದರಿಂದ 'ವಿವಕ್ಷಾತಃ ಕಾರಕಾಣಿ ಭವನ್ತಿ' ಎಂದು ಹೇಳಿದ್ದಾರೆ.

ಉದಾ: 'ದೇವದತ್ತಃ ಪಚತಿ' ಎಂಬಲ್ಲಿ ದೇವದತ್ತನು ಪಚನ ಕ್ರಿಯೆಯಲ್ಲಿ ಸ್ವತಂತ್ರವಾಗಿ ಭಾಗವಹಿಸುವುದರಿಂದ ಅವನಿಗೆ ಕರ್ತೃ-ಸಂಜ್ಞೆಯು ಬರುತ್ತದೆ. 'ವಿವಕ್ಷಾತಃ' ಎಂದು ಹೇಳಿರುವುದರಿಂದ 'ಸ್ಥಾಲೀ ಪಚತಿ' ಹಾಗೂ 'ಕಾಷ್ಠಾನಿ ಪಚನ್ತಿ' ಇತ್ಯಾದಿ ಸ್ಥಳಗಳಲ್ಲಿ ಸ್ಥಾಲೀಗತ- ಕ್ರಿಯೆಗೆ ಮತ್ತು ಕಾಷ್ಠಗತ ಕ್ರಿಯೆಗೆ ಪ್ರಾಧಾನ್ಯವನ್ನು ವಿವಕ್ಷೆ ಮಾಡಿದರೆ ಆಗ ಅವುಗಳಿಗೂ ಕರ್ತೃ ಸಂಜ್ಞೆಯು ಲೋಕದಲ್ಲಿ ದೃಷ್ಟವಾಗಿದೆ. ಈ ಕ್ರಿಯೆಗೆ ಆಶ್ರಯವಾದುದೇ ಕರ್ತೃ ಆಗುತ್ತದೆ.

**(ಹೇತು ಸಂಜ್ಞೆಯನ್ನು ಹೇಳುವ ಸೂತ್ರ)**

**ಸೂತ್ರ- 700. ತತ್ಪ್ರಯೋಜಕೋ ಹೇತುಶ್ಚ(1-4-55)**

ವೃತ್ತಿ-ಕರ್ತುಃ ಪ್ರಯೋಜಕೋ ಹೇತುಸಂಜ್ಞಃ ಕರ್ತೃಸಂಜ್ಞಶ್ಚ ಸ್ಯಾತ್।

ಪ.ಛೇ- ತತ್ಪ್ರಯೋಜಕಃ, ಹೇತುಃ, ಚ।

ಅ.ವೃ- "ಸ್ವತನ್ತ್ರಃ ಕರ್ತಾ (1-4-54)" ಸೂತ್ರದಿಂದ 'ಕರ್ತಾ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- 'ಕರ್ತೃ'ವಿಗೆ ಪ್ರೇರಕನಾದವನಿಗೆ 'ಹೇತು' ಮತ್ತು 'ಕರ್ತೃ' ಎಂಬ ಸಂಜ್ಞೆಗಳು ಬರುತ್ತವೆ.

ವಿವರಣೆ- 'ಪ್ರಯೋಜಕ' ಎಂದರೆ ಪ್ರೇರಿಸುವವನು ಎಂದರ್ಥ. (ಪ್ರೇರಣೆಯನ್ನು ಮಾಡಿ ಯಾರಿಂದ ಯಾವ ಕಾರ್ಯವನ್ನು ಮಾಡಿಸುವನೋ, ಅವನಿಗೆ ಪ್ರಯೋಜಕ ಕರ್ತಾ ಎಂತಲೂ ಪ್ರೇರಿತನಾಗಿ ಕಾರ್ಯವನ್ನು ಮಾಡುವವನಿಗೆ ಪ್ರಯೋಜ್ಯ ಕರ್ತಾ ಎಂದು ಕರೆಯುತ್ತಾರೆ).

ಉದಾ-'ಯಜ್ಞದತ್ತಃ ವಟುನಾ (ಅನ್ನಂ) ಖಾದಯತಿ'. ಯಜ್ಞದತ್ತನು, ವಟುವು(ಬ್ರಹ್ಮಚಾರಿಯು) ಅನ್ನವನ್ನು ತಿನ್ನುವಂತೆ ಮಾಡುತ್ತಾನೆ. (ತಿನ್ನಲು ವಟುವಿಗೆ

ಪ್ರೇರಕನಾಗುತ್ತಾನೆ). ಆಗ ಯಜ್ಞದತ್ತನು ಪ್ರಯೋಜಕನಾದುದರಿಂದ ಹೇತು ಹಾಗೂ ಕರ್ತೃ ಎಂಬ ಸಂಜ್ಞೆಯನ್ನು ಹೊಂದುತ್ತಾನೆ.

**(ಣಿಚ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ– 701. ಹೇತುಮತಿ ಚ(3–1–26)**

ವೃತ್ತಿ–ಪ್ರಯೋಜಕವ್ಯಾಪಾರೇ ಪ್ರೇಷಣಾದೌ ವಾಚ್ಯೇ ಧಾತೋರ್ಣಿಚ್ ಸ್ಯಾತ್। ಭವನ್ತಂ ಪ್ರೇರಯತಿ ಭಾವಯತಿ।

ಪ.ಛೇ–ಹೇತುಮತಿ ಚ.

ಅ.ವೃ– "ಧಾತೋರೇಕಾಚೋ ಹಲಾದೇ: ಕ್ರಿಯಾಸಮಭಿಹಾರೇ ಯಙ್(3–1–22)" ಸೂತ್ರದಿಂದ 'ಧಾತೋಃ' ಎಂಬ ಪದವು ಮತ್ತು "ಸತ್ಯಾಪ – ಪಾಶ – ರೂಪ – ವೀಣಾ – ತೂಲ – ಶ್ಲೋಕ – ಸೇನಾ –ಲೋಮ – ತ್ವಚ – ವರ್ಮ – ವರ್ಣ – ಚೂರ್ಣ – ಚುರಾದಿಭ್ಯೋ ಣಿಚ್(3–1–25)" ಸೂತ್ರದರಿಂದ 'ಣಿಚ್' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ– ಪ್ರಯೋಜಕ(ಪ್ರೇರಕ ಕರ್ತೃವಿನ) ಪ್ರೇರಣಾದಿ ವ್ಯಾಪಾರವು ತೋರುವಾಗ(ವಾಚ್ಯವಾಗುವಾಗ) ಧಾತುವಿಗೆ 'ಣಿಚ್' ಪ್ರತ್ಯಯವು ಬರುತ್ತದೆ.

ಉದಾ – 'ಭಾವಯತಿ' – ಇದು ಪ್ರೇರಣಾರ್ಥದಲ್ಲಿ 'ಭೂ' ಧಾತುವಿನ ಮುಂದೆ 'ಣಿಚ್' ಪ್ರತ್ಯಯವು ಬಂದ ರೂಪ.

('ಣಿಚ್' ಪ್ರತ್ಯಯ ಸೇರಿಸುವುದರಿಂದ ರೂಪವನ್ನು ಪಡೆದ ಧಾತುವಿನ ಅರ್ಥವನ್ನು ತಿಳಿಸುವಾಗ, ಅದೇ ಧಾತುವಿನ 'ಶತೃ' ಪ್ರತ್ಯಯಾಂತ ಶಬ್ದದ ದ್ವಿತೀಯಾ ವಿಭಕ್ತಿಯೊಂದಿಗೆ 'ಪ್ರೇರಯತಿ' ಎಂಬುದನ್ನು ಸೇರಿಸಿ ಉಚ್ಚರಿಸಬೇಕು. ಹೇಗೆಂದರೆ ಭಾವಯತಿ– ಭವನ್ತಂ

ಪ್ರೇರಯತಿ. ಗಮಯತಿ– ಗಚ್ಛನ್ತಮ್ ಪ್ರೇರಯತಿ ಎಂದು ಎಲ್ಲೆಡೆಯೂ ಈ ರೀತಿಯಾಗಿ ವಿಗ್ರಹವನ್ನು ಮಾಡಬೇಕು)

ವಿಗ್ರಹ ವಾಕ್ಯದಲ್ಲಿರುವ 'ಭವನ್ತಂ' ಎಂಬ ಪದಕ್ಕೆ ನಿಮ್ಮನ್ನು ಎಂದು ಅರ್ಥವಲ್ಲ. ಸ್ವತಃ ಇದ್ದವನನ್ನು ಇರುವಂತೆ ಪ್ರೇರಿಸುತ್ತಾನೆ ಎಂದರ್ಥ.

'ಭವನ್ತಂ ಪ್ರೇರಯತಿ' ಎಂಬ ಈ ವಿಗ್ರಹದಲ್ಲಿ 'ಭೂ' ಧಾತುವಿನ ಮುಂದೆ ಪ್ರೇರಣಾರ್ಥದಲ್ಲಿ ಪ್ರಕೃತ ಸೂತ್ರದಿಂದ 'ಣಿಚ್' ಪ್ರತ್ಯಯವು ಬಂದು ಭೂ+ಣಿಚ್ ಎಂದಿದ್ದಾಗ, 'ಣ್' ಮತ್ತು 'ಚ್'ಗಳಿಗೆ ಇತ್ ಸಂಜ್ಞೆಯು ಬಂದು ಲೋಪವಾಗಿ ಭೂ+ಇ ಎಂದಿರುವಾಗ, "ಅಚೋಞ್ಣಿತಿ(7–2–115)" ಸೂತ್ರದಿಂದ ವೃದ್ಧಿಯಾಗಿ ಭೌ+ಇ ಎಂದಿದ್ದಾಗ 'ಆವ್' ಆದೇಶವಾಗಿ ಭಾವ್+ಇ=ಭಾವಿ ಎಂದಿರುವಾಗ "ಸನಾದ್ಯನ್ತಾ ಧಾತವಃ(3–1–32)" ಸೂತ್ರದಿಂದ 'ಧಾತು' ಸಂಜ್ಞೆಯು ಬಂದ ನಂತರ 'ತಿಪ್' ಪ್ರತ್ಯಯವು ಬಂದು ಭಾವಿ+ತಿ ಎಂದಿರುವಾಗ 'ಶಪ್' ಪ್ರತ್ಯಯವು ಬಂದು ಭಾವಿ+ಅ+ತಿ ಎಂಬ ಅವಸ್ಥೆಯಲ್ಲಿದ್ದಾಗ ಗುಣವಾಗಿ ಭಾವೇ+ಅ+ತಿ ಎಂದಿದ್ದಾಗ 'ಅಯ್' ಆದೇಶವಾಗಿ ಭಾವಯ್+ಅ+ತಿ=ಭಾವಯತಿ ಎಂದು ರೂಪವಾಗುತ್ತದೆ.

"ಣಿಚಶ್ಚ(1-3-74)" ಸೂತ್ರದಿಂದ ಭಾವಯತೇ ಎಂದು ಆತ್ಮನೇ ಪದದ ರೂಪವನ್ನು ಪಡೆಯುತ್ತದೆ.

**(ಇತ್ವವನ್ನು ವಿಧಿಸುವ ಸೂತ್ರ)**

**ಸೂತ್ರ- 702. ಓಃ ಪುಯಣ್ಜ್ಯಪರೇ(7-4-80)**

ವೃತ್ತಿ-ಸನಿ ಪರೇ ಯದಙ್ಗಂ ತದವಯವಾಭ್ಯಾಸೋಕಾರಸ್ಯ ಇತ್ ಸ್ಯಾತ್ ಪವರ್ಗಯಣ್ಜಕಾರೋಷ್ಠವರ್ಣಪರೇಷು ಪರತಃ।ಅಬೀಭವತ್।ಷ್ಠಾ ಗತಿನಿವೃತ್ತೌ।1॥

ಪ.ಛೇ- ಓಃ, ಪುಯಣ್‌ಜಿ, ಅಪರೇ।

ಅ.ವೃ- "ಅತ್ರ ಲೋಪೋಽಭ್ಯಾಸಸ್ಯ(7-4-58)" ಸೂತ್ರದಿಂದ 'ಅಭ್ಯಾಸಸ್ಯ' ಎಂಬ ಪದವು, "ಭೃಞಾಮಿತ್(7-4-76)" ಸೂತ್ರದಿಂದ 'ಇತ್' ಎಂಬ ಪದವು "ಸನ್ಯತಃ(7-4-79)" ಎಂಬ ಸೂತ್ರದರಿಂದ 'ಸನಿ' ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ- ಸನ್ ಪ್ರತ್ಯಯವು ಪರದಲ್ಲಿರುವಾಗ ಯಾವ ಅಂಗವಿದೆಯೋ ಅದರ ಅವಯವವಾದ ಅಭ್ಯಾಸದ 'ಉ' ಕಾರಕ್ಕೆ 'ಅ'ಕಾರವನ್ನು ಪರದಲ್ಲಿ ಉಳ್ಳ ಪ-ವರ್ಗ, ಯಣ್, ಜ್ ಮತ್ತು ಉಪವರ್ಣಗಳು ಪರದಲ್ಲಿರುವಾಗ 'ಇ' ಕಾರವು ಆದೇಶವಾಗಿ ಬರುತ್ತದೆ.

ಉದಾ- ಅಬೀಭವತ್- 'ಭೂ' ಧಾತುವಿಗೆ ಪ್ರೇರಣಾರ್ಥದಲ್ಲಿ 'ಣಿಚ್' ಪ್ರತ್ಯಯವು ಬಂದ ನಂತರ 'ಣ್' ಕಾರ 'ಚ್' ಕಾರಗಳಿಗೆ 'ಇತ್' ಸಂಜ್ಞೆಯು ಬಂದು ಲೋಪವಾದ ನಂತರ ಭೂ+ಇ ಎಂದಿರುವಾಗ ಲುಙ್, ತಿಪ್, ಅಡಾಗಮಗಳನ್ನು ಮಾಡಿದ ನಂತರ ಅಭೂ+ಇ+ತ್ ಎಂದಿದ್ದಾಗ, 'ಚ್ಲಿ'ಗೆ 'ಚಙ್' ಆದೇಶವಾಗಿ 'ಚ್' ಕಾರ 'ಙ್' ಕಾರಗಳಿಗೆ 'ಇತ್' ಸಂಜ್ಞಾ ಮೂಲಕವಾಗಿ ಲೋಪವು ಬಂದ ನಂತರ ಅಭೂ+ಇ+ಅ+ತ್ ಎಂದಿರುವಾಗ, "ಣಿಚ್ಯಚ ಆದೇಶೋ ನ ದ್ವಿತ್ವೇ ಕರ್ತವ್ಯೇ" ಎಂಬ ಪರಿಭಾಷೆಯಿಂದ (ಣಿತ್ವ ನಿಮಿತ್ತಕವಾಗಿ ಅಜಂತಕ್ಕೆ ಬರುವ ವೃದ್ಧಿಯು ದ್ವಿತ್ವವನ್ನು ಮಾಡುವಾಗ ಬರುವುದಿಲ್ಲ ಎಂಬುದು ಪರಿಭಾಷೆಯ ಅರ್ಥ). ವೃದ್ಧಿಯೂ "ಅಚೋಃಞ್ಣಿತಿ(7-2-115)" ಸೂತ್ರದಿಂದ ಬಾರದೇ ದ್ವಿತ್ವವು ಬಂದು ಅಭೂ+ಭೂ+ಇ+ಅ+ತ್ ಎಂದಿರುವಾಗ, "ಹ್ರಸ್ವಃ(7-4-59)" ಸೂತ್ರದಿಂದ ಅಭ್ಯಾಸದ ದೀರ್ಘವರ್ಣಕ್ಕೆ ಹ್ರಸ್ವವು ಬಂದು ಅಭು+ಭೂ+ಇ+ಅ+ತ್ ಎಂದಿದ್ದಾಗ "ಅಭ್ಯಾಸೇ ಚರ್ಚ(8-4-54)" ಸೂತ್ರದಿಂದ 'ಜಶ್ತ್ವ'ವಾಗಿ ಅಬು+ಭೂ+ಇ+ಅ+ತ್ ಎಂದಿದ್ದಾಗ ದ್ವಿತ್ವಾದಿ ಕಾರ್ಯಗಳ ನಂತರ ಪೂರ್ವ ನಿಷಿದ್ಧ ವೃದ್ಧಿಯು "ಅಚೋಃಞ್ಣಿತಿ(7-2-115)" ಸೂತ್ರದಿಂದ ಬಂದು ಅಬು+ಭೌ+ಇ+ಅ+ತ್ ಎಂದಿದ್ದಾಗ 'ಆವ್' ಆದೇಶವಾಗಿ ಅಬು+ಭಾವ್+ಇ+ಅ+ತ್ ಎಂದಿರುವಾಗ "ಣೌಚಙ್ ಉಪಧಾಯಾಃ ಹ್ರಸ್ವಃ(7-4-1)" ಸೂತ್ರದಿಂದ ಉಪಾಧಾಭೂತವಾದ 'ಭಾವ್'ದ 'ಆ'ಕಾರಕ್ಕೆ ಹ್ರಸ್ವ ಬಂದು ಅಬು+ಭವ್+ಇ+ಅ+ತ್ ಎಂದಿದ್ದಾಗ "ಣೇರನಿಟಿ(6-4-51)" ಸೂತ್ರದಿಂದ 'ಣಿಚ್'ನ 'ಇ'ಕಾರಕ್ಕೆ ಲೋಪವಾಗಿ ಅಬು+ಭವ್+ಅ+ತ್ ಎಂದಿರುವಾಗ "ಸನ್ವಲ್ಲಘುನಿ

ಚಙ್ಪರೇಽನಗ್ಲೋಪೇ(7–4–93)" ಸೂತ್ರದಿಂದ ಅಭ್ಯಾಸದ 'ಬು'ಗೇ ಸನ್ವದ್ಭಾವ ಬಂದ ಮೇಲೆ 'ಬು'ದ 'ಉ'ಕಾರಕ್ಕೆ ಪ್ರಕೃತ ಸೂತ್ರದಿಂದ 'ಇ'ಕಾರವು ಆದೇಶವಾಗಿ ಬಂದು ಅಬಿ+ಭವ್+ಅ+ತ್ ಎಂದಿದ್ದಾಗ "ದೀರ್ಘೋ ಲಘೋಃ(7–4–94)" ಸೂತ್ರದಿಂದ 'ಬಿ'ದ 'ಇ'ಕಾರಕ್ಕೆ ದೀರ್ಘವಾಗಿ ಅಬೀ+ಭವ್+ಅ+ತ್=ಅಬೀಭವತ್ ಎಂದು ರೂಪವಾಗಿದೆ.

ಧಾತು– ಷ್ಠಾ ಗತಿನಿವೃತ್ತೌ– ಷ್ಠಾ – (ಸ್ಥಾ) ಎಂಬ ಧಾತುವಿಗೆ ನಿಲ್ಲುವುದು ಎಂದರ್ಥ. ಇದು ಭ್ವಾದಿ ಗಣದಲ್ಲಿ ಬರುವ ಪರಸ್ಮೈಪದೀ ಧಾತು. "ಧಾತ್ವಾದೇಃ ಷಃ ಸಃ(6–1–64)" ಸೂತ್ರದಿಂದ 'ಷ್' ಕಾರಕ್ಕೆ 'ಸ್'ಕಾರವು ಆದೇಶವಾಗಿ ಬಂದಿದೆ. 'ಷ್'ಕಾರದ ನಿಮಿತ್ತವಾಗಿ 'ಥ್' ಕಾರಕ್ಕೆ 'ಠ್'ಕಾರವು ಆಗಿತ್ತು. 'ಷ್'ಕಾರವು 'ಸ್'ಕಾರವಾವಾಗಿರುವುದರಿಂದ 'ಠ್' ಕಾರವು ಹೋಗಿ 'ಥ್'ಕಾರವಾಗುತ್ತದೆ.

"ನಿಮಿತ್ತಾಪಾಯೇ ನೈಮಿತ್ತಿಕಸ್ಯಾಪ್ಯಪಾಯಃ" ಅಂದರೆ (ನಿಮಿತ್ತ–ಅಪಾಯೇ) – ಕಾರಣವು ನಾಶವಾಗಲು(ನೈಮಿತ್ತಿಕಸ್ಯ) ಆ ಕಾರಣದಿಂದ ಉತ್ಪನ್ನವಾದ ಕಾರ್ಯವೂ (ಅಪಾಯಃ) ನಾಶವಾಗುತ್ತದೆ. ಇಲ್ಲಿ 'ಷ್'ಕಾರದ ನಿಮಿತ್ತದಿಂದ 'ಥ್'ಕಾರಕ್ಕೆ 'ಠ್'ಕಾರವಾಗಿತ್ತು. 'ಷ್'ಕಾರವು ನಾಶವಾಗುವುದರಿಂದ 'ಠ್' ಕಾರವೂ ನಾಶವಾಯಿತು. ನಾಶ ಎಂದರೆ ಲೋಪವೆಂದು ಅರ್ಥವಲ್ಲಾ ಪೂರ್ವಾವಸ್ಥೆಯನ್ನು ಪಡೆಯುವುದು ಎಂದರ್ಥ. ಆದ್ದರಿಂದ 'ಷ್ಠಾ' ಧಾತು 'ಸ್ಥಾ' ಎಂದು ಬದಲಾಯಿತು.

ಸಾರ್ವಧಾತುಕ ಲಕಾರಗಳು ಪರದಲ್ಲಿದ್ದಾಗ ಇದಕ್ಕೆ "ಪಾಘ್ರಾಧ್ಮಾಧೇಡ್ ದೃಶಃ ಶಃ(3–1–137)" ಸೂತ್ರದಿಂದ 'ತಿಷ್ಠ' ಎಂದು ಆದೇಶವಾಗಿ 'ತಿಷ್ಠತಿ' ಎಂದು ರೂಪವಾಗುತ್ತದೆ. ಣಿಜಂತ ಪ್ರಕರಣದಲ್ಲಿ ಪ್ರೇರಣಾರ್ಥಕದಲ್ಲಿ ಹಿಂದಿನಂತೆ 'ಣಿಚ್' ಬಂದು ಸ್ಥಾ+ಇ ಎಂದಿರುವಾಗ ಮುಂದಿನ ಸೂತ್ರವು ಪ್ರವೃತ್ತವಾಗುತ್ತದೆ.

**(ಪುಕ್ ಆಗಮವನ್ನು ವಿಧಿಸುವ ಸೂತ್ರ)**

**ಸೂತ್ರ– 703. ಅರ್ತಿ–ಹ್ರೀ–ವ್ಲೀ– ರೀ– ಕ್ನೂಯೀ– ಕ್ಷ್ಮಾಯ್ಯಾತಾಂ–ಪುಙ್ಣೌ (7–3–36)**

ವೃತ್ತಿ–ಸ್ಥಾಪಯತಿ।

ಪ.ಛೇ– ಅರ್ತಿ–ಹ್ರೀ–ವ್ಲಿ–ರೀ–ಕ್ನೂಯೀ–ಷ್ಮಾಯಿ–ಆತಾಂ–ಪುಜ್ಣೌ।

ಅ.ವೃ– ಈ ಸೂತ್ರದಿಂದ "ಅಂಗಸ್ಯ(6–4–1)" ಎಂಬ ಅಧಿಕಾರದಲ್ಲಿ 'ಪುಕ್' ಆಗಮವು ಹೇಳಲ್ಪಡುತ್ತದೆ.

ಅರ್ಥ– ಋ,ಹ್ರೀ,ಲ್ಲೀ,ಕ್ನೂಯೀ,ಕ್ಷಾಯೀ ಮತ್ತು 'ಆ'ಕಾರಾಂತ ಧಾತುಗಳಿಗೆ 'ಣಿಚ್' ಪರದಲ್ಲಿದ್ದಾಗ 'ಪುಕ್' ಆಗಮವು ಬರುತ್ತದೆ.

ಉದಾ– ಸ್ಥಾ+ಇ ಎಂದಿರುವಾಗ ಇಲ್ಲಿ 'ಆ'ಕಾರಾಂತ ಅಂಗಕ್ಕೆ ಪ್ರಕೃತ ಸೂತ್ರದಿಂದ 'ಪುಕ್' ಆಗಮವು ಬರುತ್ತದೆ. ಇದರಲ್ಲಿ 'ಕ್'ಕಾರವು ಇತ್ ಸಂಜ್ಞಕವಾಗಿದೆ ಮತ್ತು 'ಉ'ಕಾರವು ಉಚ್ಚಾರಣಾರ್ಥವಾಗಿದೆ.

ಸ್ಥಾ+ಪ್+ಇ=ಸ್ಥಾಪಿ ಎಂದಿರುವಾಗ "ಸನಾದ್ಯಂತಾಃ ಧಾತವಃ(3-1-32)" ಸೂತದ್ರಿಂದ ಧಾತು ಸಂಜ್ಞೆಯು ಬಂದು ಅನಂತರ 'ಲಟ್' ಬಂದು 'ತಿಪ್' ಆದೇಶವಾಗಿ ಸ್ಥಾ+ಪ್+ಇ+ತಿ ಎಂದಿದ್ದಾಗ 'ಶಪ್' ಪ್ರತ್ಯಯವು ಬಂದು ಸ್ಥಾ+ಪ್+ಅ+ಇ+ತಿ ಎಂದಿದ್ದಾಗ, ಗುಣ ಬಂದು ಸ್ಥಾ+ಪ್+ ಏ+ಅ+ತಿ 'ಅಯ್' ಆದೇಶವಾಗಿ ಸ್ಥಾ+ಪ್+ಅಯ್+ಅ+ತಿ=ಸ್ಥಾಪಯತಿ ಎಂದು ರೂಪವಾಗಿದೆ.

**(ಇತ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ- 704. ತಿಷ್ಠತೇರಿತ್(7-4-5)**

ವೃತ್ತಿ-ಉಪಧಾಯಾ ಇದಾದೇಶಃ ಸ್ಯಾಚ್ಚಙ್‌ಪರೇ ಣೌ। ಅತಿಷ್ಠಿಪತ್। ಘಟ ಚೇಷ್ಟಾಯಾಮ್॥2॥

ಪ.ಛೇ- ತಿಷ್ಠತೇಃ, ಇತ್।

ಅ.ವೃ- "ಣೌ ಚಙ್ ಉಪಧಾಯಾಃ ಹ್ರಸ್ವಃ(7-4-1)" ಸೂತ್ರದಿಂದ 'ಣೌ', 'ಚಙ್' ಮತ್ತು 'ಉಪಧಾ' ಎಂಬ ಪದಗಳು ಅನುವೃತ್ತವಾಗಿ ಬರುತ್ತವೆ.

ಅರ್ಥ-'ಚಙ್' ಪರವಾದ 'ಣಿ' ಪರದಲ್ಲಿದ್ದಾಗ 'ಸ್ಥಾ' ಧಾತುವಿನ ಉಪಧೆಗೆ ಹ್ರಸ್ವ 'ಇ' ಕಾರವು ಆದೇಶವಾಗಿ ಬರುತ್ತದೆ.

ಉದಾ- ಅತಿಷ್ಠಪತ್- 'ಲುಙ್' ಲಕಾರದ ಪ್ರಥಮ ಪುರುಷದ ಏಕವಚನದಲ್ಲಿ 'ಸ್ಥಾ' ಧಾತುವಿಗೆ 'ಣಿಚ್' ಪ್ರತ್ಯಯಯವು ಬಂದು ಸ್ಥಾ+ಇ ಎಂದಿರುವಾಗ 'ಪುಕ್' ಆಗಮವು ಬಂದು ಸ್ಥಾ+ಪ್+ಇ = ಸ್ಥಾಪಿ ಎಂದಿದ್ದಾಗ ಧಾತು ಸಂಜ್ಞಾ ಬಂದು

'ಲುಙ್'ನ ಮೇಲೆ 'ತಿಪ್' ಆದೇಶವಾಗಿ ಬಂದು ಸ್ಥಾಪಿ+ತ್ ಎಂದಿರುವಾಗ ಅಡಾಗಮವು ಬಂದು ಅ+ಸ್ಥಾಪಿ+ತ್ ಎಂದಿದ್ದಾಗ, 'ಚ್ಲಿ'ಗೆ 'ಚಙ್' ಆದೇಶ ಬಂದು, ಅ+ಸ್ಥಾಪಿ+ಅ+ತ ಎಂದಿದ್ದಾಗ, ಪ್ರಕೃತ ಸೂತ್ರದಿಂದ ಸ್ಥಾಪ್(ಸ್ಥಾ)ದ ಉಪಧಾಭೂತವಾದ 'ಆ'ಕಾರದ ಸ್ಥಾನದಲ್ಲಿ 'ಇ'ಕಾರದೇಶವಾಗಿ ಅ+ಸ್ಥ್+ಇ+ಪ್+ಇ+ಅ+ತ್=ಅ+ಸ್ಥಿಪ್+ಇ+ಅ+ತ್ ಎಂದಿರುವಾಗ "ಚಙಿ (6-1-11)" ಎಂಬ ಸೂತ್ರದಿಂದ 'ಸ್ಥಿಪ್'ಗೆ ದ್ವಿತ್ವವಾಗಿ ಅ+ಸ್ಥಿಪ್+ಸ್ಥಿಪ್+ಇ+ಅ+ತ್ ಎಂದಿರುವಾಗ, 'ಣಿಚ್' 'ಇ'ಕಾರಕ್ಕೆ ಲೋಪವಾಗಿ ಅ+ಸ್ಥಿಪ್+ಸ್ಥಿಪ್+ಅ+ತ್ ಎಂದಿದ್ದಾಗ "ಶರ್ಪೂರ್ವಾಃ ಖಯಃ (7-4-61)" ಎಂಬುದರಿಂದ 'ಸ್'ಕಾರ ಹಾಗೂ 'ಪ್' ಕಾರಗಳಿಗೆ ಲೋಪವಾಗಿ ಅ+ಥಿ+ಸ್ಥಿಪ್+ಅ+ತ್ ಎಂದಿರುವಾಗ, "ಅಭ್ಯಾಸೇ ಚರ್ಚ(8-4-54)" ಸೂತ್ರದಿಂದ ('ಚರ್ತ್ವ'ವಾಗಿ) 'ತಿ' ಎಂದಾಗಿ ಅತಿಸ್ಥಿಪ್+ಅತ್ ಎಂದಾಗಿರುವಾಗ 'ತಿ'ಯ 'ಇ'ಕಾರದ ಪರದಲ್ಲಿರುವ 'ಸ್' ಕಾರಕ್ಕೆ "ಆದೇಶಪ್ರತ್ಯಯಯೋಃ(8-4-59)" ಸೂತ್ರದಿಂದ 'ಷ್'ಕಾರಾದೇಶವಾಗಿ, 'ಷ್'ಕಾರದ ಪರದಲ್ಲಿರುವ 'ಥ್'ಕಾರಕ್ಕೆ "ಷ್ಟುನಾಷ್ಟುಃ (8-4-41)" ಸೂತ್ರದಿಂದ ಷ್ಟುತ್ವವಾಗಿ (ಠಕಾರಾದೇಶವಾಗಿ) ಅ+ತಿ+ಷ್+ಠ್+ಅ+ತ್= ಅತಿಷ್ಠಪತ್ ಎಂದು ರೂಪವಾಗಿದೆ.

'ಘಟ ಚೇಷ್ಟಾಯಾಂ' ಎಂಬ ಧಾತುವಿಗೆ ಯಾವುದಾದರೂ ಕ್ರಿಯೆಯನ್ನು

ಮಾಡುವುದು ಅಥವಾ ಪ್ರಯತ್ನವನ್ನು ಮಾಡುವುದು ಎಂದರ್ಥ. ಈ ಧಾತುವು 'ಅನುದಾತ್ತೇತ್' ಆದುದರಿಂದ 'ಭ್ವಾದಿ'ಗಣದಲ್ಲಿ 'ಆತ್ಮನೇ' ಪದವಾಗಿ ಪಠಿತವಾಗಿದೆ. ಈ ಧಾತುವಿಗೆ ಪ್ರೇರಣಾರ್ಥಕದಲ್ಲಿ 'ಣಿಚ್' ಪ್ರತ್ಯಯವು ಬಂದು 'ಘಟ್+ಇ' ಎಂದಿದ್ದಾಗ "ಅಥ ಉಪಧಾಯಾಃ(7–2–116)" ಸೂತ್ರದಿಂದ ವೃದ್ಧಿಯು ಬಂದು 'ಘಾಟ್+ಇ' ಎಂದಿದ್ದಾಗ 'ಹ್ರಸ್ವ'ವನ್ನು ಮಾಡುವದಕ್ಕೆ ಮುಂದಿನ ಸೂತ್ರವು ಪ್ರವೃತ್ತವಾಗುತ್ತದೆ.

**(ಹ್ರಸ್ವಾದೇಶವನ್ನು ವಿಧಿಸುವ ಸೂತ್ರ).**

**ಸೂತ್ರ– 705. ಮಿತಾಂ ಹ್ರಸ್ವಃ(6–4–92)**

ವೃತ್ತಿ–ಘಟಾದೀನಾಂ ಜ್ಞಪಾದೀನಾಂ ಚೋಪಧಾಯಾ ಹ್ರಸ್ವಃ ಸ್ಯಾಣ್ಣೌ। ಘಟಯತಿ।

ಪ.ಛೇ– ಮಿತಾಂ, ಹ್ರಸ್ವಃ।

ಅ.ವೃ–"ಊದುಪಧಾಯಾ ಗೋಹಃ(6–4–89)" ಸೂತ್ರದಿಂದ 'ಉಪಧಾಯಾಃ' ಎಂಬ ಪದವು ಹಾಗೂ "ದೋಷೋ ಣೌ(6–4–90)" ಸೂತ್ರದಿಂದ 'ಣೌ' ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ– 'ಣಿಚ್' ಪರದಲ್ಲಿದ್ದಾಗ 'ಮಿತ್' ಆದ 'ಘಟಾದಿ' ಹಾಗೂ 'ಜ್ಞಪಾದಿ' ಧಾತುಗಳ 'ಉಪಧೆ'ಗೆ ಹ್ರಸ್ವವು ಬರುತ್ತದೆ.

ಧಾತು ಪಾಠದಲ್ಲಿ ಸ್ವಾಭಾವಿಕವಾಗಿ 'ಅಮಿತ್' ಆದ ಧಾತುಗಳಿಗೆ 'ಮಿತ್'ನ ಅತಿದೇಶ(ಆರೋಪವು) ಮಾಡಲಾಗಿದೆ. 'ಘಟಾದಿ' ಧಾತು ಹಾಗೂ 'ಚುರಾದಿ' ಗಣ ಪಠಿತ 'ಜ್ಞಪ್' ಆದಿ ಧಾತುಗಳು ಸ್ವಾಭಾವಿಕವಾಗಿ 'ಮಿತ್' ಆಗಿಲ್ಲಾ. ಆದರೆ "ಮಿತಾಂ ಹ್ರಸ್ವಃ(6–4–92)" ಸೂತ್ರದ ಪ್ರವೃತ್ತಿಗಾಗಿ ಇವುಗಳಿಗೆ 'ಮಿದ್ಭಾವ'ವನ್ನು ವಿಧಿಸಲಾಗಿದೆ.

ಉದಾಹರಣೆ– 'ಘಟಯತಿ'–ಘಾಟ್+ಇ' ಎಂದಿರುವಾಗ ಪ್ರಕೃತ ಸೂತ್ರದಿಂದ ಹ್ರಸ್ವವು ಬಂದು 'ಘ್+ಅ+ಟ್+ಇ=ಘಟಿ ಎಂದಿದ್ದಾಗ ಧಾತು ಸಂಜ್ಞೆಯು ಬಂದು ಪ್ರಥಮ ಪುರುಷದ ಏಕವಚನದಲ್ಲಿ 'ಲಟ್' ಲಕಾರವು ಬಂದು 'ತಿಪ್' ಆದೇಶವಾಗಿ ಬಂದು 'ಘಟಿ+ತಿ' ಎಂದಿದ್ದಾಗ 'ಶಪ್' ಪ್ರತ್ಯಯವು ಬಂದು 'ಘಟ್+ಅ+ತಿ' ಎಂದಿರುವಾಗ ಗುಣವಾಗಿ 'ಘಟೇ+ಅ+ತಿ' ಎಂದಿದ್ದಾಗ 'ಅಯ್' ಆದೇಶವಾಗಿ 'ಘಟ್+ಅಯ್+ಅ+ತಿ=ಘಟಯತಿ' ಎಂದು ರೂಪವು ಸಿದ್ಧವಾಗುತ್ತದೆ.

ಘಟಿ+ತಿ ಎಂದಿದ್ದಾಗ 'ಶಿಪ್' ಪ್ರತ್ಯಯವು ಬಂದು ಘಟಿ+ಅ+ತಿ ಎಂದಿರುವಾಗ ಗುಣವಾಗಿ ಘಟೇ+ಅ+ತಿ ಎಂದಿದ್ದಾಗ 'ಅಯ್' ಆದೇಶವಾಗಿ ಘಟ್+ಅಯ್+ಅ+ತಿ ಘಟಯತಿ ಎಂದು ರೂಪವು ಸಿದ್ಧವಾಗುತ್ತದೆ.

'ಜ್ಞಪಯತಿ'– ಎಂಬಲ್ಲಿ 'ಜ್ಞಪ್' ಧಾತುವಿಗೆ (ಜ್ಞಾನೇ, ಜ್ಞಾಪನೇಚ) ತಿಳಿಯುವುದು, ತಿಳಿಸುವುದು ಎಂದರ್ಥ. ಹಿಂದೆ 'ಘಟಯತಿ' ಎಂಬ ರೂಪಕ್ಕೆ ಹೇಳಿದ ಪ್ರಕ್ರಿಯೆಯನ್ನೇ ಇಲ್ಲಿಯೂ ಅನುಸರಿಸಿ ರೂಪಸಿದ್ಧಿಯನ್ನು ತಿಳಿಯಬೇಕು.

ಅಜಿಜ್ಞಪತ್– ಇದು 'ಜ್ಞಪ್' ಧಾತುವಿನ ಪರಸ್ಮೈಪದದ ಲುಙನ್ತ ರೂಪ.

ಪ್ರೇರಣಾರ್ಥಕದಲ್ಲಿ ಈ ಧಾತುವಿಗೆ 'ಣಿಚ್' ಪ್ರತ್ಯಯವು ಬಂದು ಜ್ಞಪ್+ಇ=ಜ್ಞಪಿ ಎಂದಿದ್ದಾಗ "ಸನಾದ್ಯಂತಾಃ ಧಾತವಃ(3-1-32)" ಸೂತ್ರದಿಂದ ಧಾತು ಸಂಜ್ಞೆಯು ಬಂದ ನಂತರ ಲುಙ್ 'ಲ'ಕಾರವು ಪ್ರಾಪ್ತವಾಗಿ ಅದರ ಮೇಲೆ 'ತಿಪ್' ಪ್ರತ್ಯಯವು ಬಂದು ಜ್ಞಪಿ+ತ್ ಎಂದಿದ್ದಾಗ 'ಚ್ಲಿ'ಗೆ 'ಚಙ್' ಆದೇಶವಾಗಿ ಜ್ಞಪಿ+ತ್ ಎಂದಿರುವಾಗ ಅಡಾಗಮವು ಬಂದು ಅಜ್ಞಪಿ+ಅ+ತ್ ಎಂದಿದ್ದಾಗ "ಚಙಿ(6-1-11)" ಸೂತ್ರದಿಂದ ದ್ವಿತ್ವವಾಗಿ ಜ್ಞಪಿ+ಜ್ಞಪಿ+ಅ+ತ್ ಎಂದಿದ್ದಾಗ 'ಣಿಚ್'ಗೆ ಲೋಪ ಬಂದು ಜ್ಞಪ್+ ಜ್ಞ+ಅ+ತ್ ಎಂದಿರುವಾಗ "ಹಲಾದಿಃ ಶೇಷಃ(7-4-60)" ಸೂತ್ರದಿಂದ ಅಭ್ಯಾಸದ ಆದಿ 'ಹಲ್' ಬಿಟ್ಟು ಉಳಿದ 'ಹಲ್' ಗಳಿಗೆ ಲೋಪ ಬಂದು 'ಜಸ್ತ್ವ' ಬಂದು ಅಜ್+ ಜ್ಞಪ್+ಅ+ತ್ ಎಂದಿದ್ದಾಗ ಸನ್ವದ್ಭಾವವು ಬಂದು "ಸನ್ಯತಃ(7-4-79)" ಎಂಬುದರಿಂದ ಅಭ್ಯಾಸದ 'ಅ'ಕಾರಕ್ಕೆ 'ಇ'ಕಾರವು ಬಂದು 'ಅಜ್+ಇ+ಜ್ಞಪ್+ಅ+ತ್=ಅಜಿಜ್ಞಪತ್' ಎಂದು ರೂಪವು ಸಿದ್ಧವಾಗುತ್ತದೆ.

ಇಲ್ಲಿ ಅಭ್ಯಾಸ 'ಇ'ಕಾರಕ್ಕೆ ದೀರ್ಘವು ಬಂದಿಲ್ಲಾ. ಏಕೆಂದರೆ ಸಂಯೋಗವು ಪರದಲ್ಲಿರುವುದರಿಂದ ಲಘುವಾಗದೇ ಗುರುವೇ ಆಗಿದೆ. ಆದ್ದರಿಂದ "ದೀರ್ಘೋಲಘೋಃ(7-4-94)" ಸೂತ್ರದಿಂದ 'ದೀರ್ಘ'ವು ಬಂದಿಲ್ಲಾ.

**॥ ಇತಿ ಣ್ಯಂತಪ್ರಕ್ರಿಯಾ(22) ಪ್ರಕರಣಮ್॥**

**ಇಲ್ಲಿಗೆ ಣ್ಯಂತಪ್ರಕ್ರಿಯಾ ಪ್ರಕರಣ ಮುಗಿಯಿತು.**

# ಪ್ರಕರಣ-23: ಅಥ ಸನ್ನಂತ ಪ್ರಕ್ರಿಯಾ

**(ಸೂತ್ರ ಸಂಖ್ಯೆ 706 ರಿಂದ 711 ವರೆಗೆ)**

**(ವಿಕಲ್ಪವಾಗಿ ಸನ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ- 706 ಧಾತೋಃ ಕರ್ಮಣಃ ಸಮಾನಕರ್ತೃಕಾದಿಚ್ಛಾಯಾಂ ವಾ। (3.1.7)**

ವೃತ್ತಿ- ಇಷಿ ಕರ್ಮಣ ಇಷಿಣೈಕ ಕರ್ತೃಕಾದ್ಧಾತೋಃ ಸನ್ ಪ್ರತ್ಯಯಯೋ ವಾ ಸ್ಯಾದಿಚ್ಛಾಯಾಮ್। ಪಠ ವ್ಯಕ್ತಾಯಾಂ ವಾಚಿ।

ಪ.ಛೇ - ಧಾತೋಃ, ಕರ್ಮಣಃ, ಸಮಾನ-ಕರ್ತೃಕಾತ್, ಇಚ್ಛಾಯಾಂ, ವಾ ।

ಅ.ವೃ - "ಗುಪ್ ತಿಜ್ ಕಿದ್ಭ್ಯಃ ಸನ್" ಎಂಬ ಸೂತ್ರದಿಂದ ' ಸನ್ ' ಎಂಬ ಪದವು ಅನುವೃತ್ತವಾಗಿದೆ.

ಅರ್ಥ- 'ಇಷ್' ಧಾತುವಿನ ಕರ್ಮವನ್ನು ಬೋಧಿಸುವ ಮತ್ತು ಇಷ್ ಧಾತುವಿಗೆ (ಸಮಾನಕರ್ತೃಕ) ಯಾರು ಸಮಾನಕರ್ತೃಕವಾಗಿರುವನೋ ಅದೇ ಕರ್ತೃವನ್ನುವುಳ್ಳ ಧಾತುಗಳಗೆ ಇಚ್ಛಾರ್ಥದಲ್ಲಿ 'ಸನ್' ಪ್ರತ್ಯಯವು ವಿಕಲ್ಪವಾಗಿ ಬರುತ್ತದೆ.

ಉದಾ- 'ವಿಶಾಲಃ ಪಠಿತುಂ ಇಚ್ಛತಿ' ವಿಶಾಲನು ಪಠನವನ್ನು ಬಯಸುತ್ತಾನೆ ಎಂದರ್ಥ. ಇಲ್ಲಿ 'ಇಷ್' ಧಾತುವಿಗೆ ಕರ್ತೃವಾದ ವಿಶಾಲನು ಪಠ್ ಧಾತುವಿಗೂ (ಪಠಿತುಂ) ಕರ್ತೃವಾಗಿದ್ದಾನೆ. ಇಲ್ಲಿ 'ಇಷ್ ' ಧಾತುವಿಗೆ 'ಪಠ್' ಧಾತು ಕರ್ಮವಾಗಿಯೂ ಇದೆ.

**(ದ್ವಿತ್ವವನ್ನು ವಿಧಿಸುವ ಸೂತ್ರ)**

**ಸೂತ್ರ- 707 ಸನ್ಯಙೋಃ। (6-1-9)**

ವೃತ್ತಿ- ಸನ್ನನ್ತಸ್ಯ ಯಙನ್ತಸ್ಯ ಚ ಪ್ರಥಮಸ್ಯೈಕಾಚೋ ದ್ವೇ ಸ್ತೋಽಜಾದೇಸ್ತು ದ್ವಿತೀಯಸ್ಯ। (533) ಸನ್ಯತಃ। ಪಠಿತುಮಿಚ್ಛತಿ ಪಿಪಠಿಷತಿ। ಕರ್ಮಣಃ ಕಿಮ್ ಗಮನೇನೇಚ್ಛತಿ। "ಸಮಾನ ಕರ್ತೃಕಾತ್" ಕಿಮ್ - ಶಿಷ್ಯಾಃ ಪಠನ್ತ್ವಿತೀಚ್ಛತಿ ಗುರುಃ। ವಾ ಗ್ರಹಣಾದ್ವಾಕ್ಯಮಪಿ (558) ಲುಙ್‌ಸನೋರ್ಘಸ್ಲೃ।

ಅ.ವೃ - 'ಏಕಾಚೋದ್ವೇ ಪ್ರಥಮಸ್ಯ' , 'ಅಜಾದೇರ್ದ್ವಿತೀಯಸ್ಯ ' ಎಂಬ ಎರಡು ಸೂತ್ರಗಳ ಅಧಿಕಾರದಲ್ಲಿ ಈ ಸೂತ್ರವು ಬರುತ್ತದೆ.

ಅರ್ಥ- ಸನ್ನಂತ, ಮತ್ತು ಯಙಂತ, ಧಾತುವಿನ ಮೊದಲನೇಯ ಏಕಾಚಿಗೆ ದ್ವಿತ್ವವಾಗುತ್ತದೆ. ಒಂದು ವೇಳೆ ಧಾತುವು ಅಜಾದಿಯಾಗಿದ್ದರೆ ಅದರ ಎರಡನೇಯ ಏಕಾಚ್ ಗೆ ದ್ವಿತ್ವವು ಬರುತ್ತದೆ. ಧಾತುವು ಏಕಾಚ್ ಆಗಿದ್ದರೆ ಸಂಪೂರ್ಣಧಾತುವಿಗೆ ದ್ವಿತ್ವವು ಆಗುತ್ತದೆ.

'ಅನೇಕಾಚ್' ಆಗಿ ಹಲಾದಿ ಆಗಿದ್ದರೆ, ಆಗ ಆ ಅಚ್‌ಗಳಲ್ಲಿ ಮೊದಲನೆಯ ಏಕಾಚ್‌ಗೆ ದ್ವಿತ್ವವು ಬರುತ್ತದೆ.ಒಂದು ವೇಳೆ ಧಾತುವು ಅಜಾದಿಯಾಗಿದ್ದರೆ ಎರಡನೆಯ

ಏಕಾಚ್‌ಗೆ ದ್ವಿತ್ವವು ಬರುತ್ತದೆ.

ಉದಾ – ಪಠಿತುಮಿಚ್ಛತಿ – ಪಿಪಠಿಷತಿ– ಯಾವ ಧಾತುವಿನ ನಂತರ ಸನ್ ಪ್ರತ್ಯಯವು ಸೇರಿಸಲಾಗಿದೆಯೋ ಅದಕ್ಕೆ ತುಮುನ್ ರೂಪದ ಜೊತೆಗೆ ಇಚ್ಛತಿ ಎಂಬುದನ್ನು ಸೇರಿಸಿದಾಗ ಅರ್ಥವು ಪ್ರಕಟವಾಗುತ್ತದೆ.

'ಪಠಿತುಮಿಚ್ಛತಿ' ಎಂಬಲ್ಲಿ ಇಚ್ಛಾರ್ಥದಲ್ಲಿ ಪಠ್ ಧಾತುವಿಗೆ ಹಿಂದಿನ ಸೂತ್ರದಿಂದ ಸನ್ ಪ್ರತ್ಯಯವು ಬರುತ್ತದೆ. ಸನ್ ಗೆ ಆರ್ಧಧಾತುಕ ಸಂಜ್ಞೆಯು ಬಂದು, ವಲಾದಿಯಾಗಿದ್ದರಿಂದ ಇಡಾಗಮವು ಬರುತ್ತದೆ. ಆಗ ಪಠ್+ ಇ+ಸ ಎಂದಿದ್ದಾಗ ಪ್ರಕೃತ ಸೂತ್ರದಿಂದ ಪ್ರಥಮ ಏಕಾಚ್ ಆದ ಪಠ್ ಗೆ ದ್ವಿತ್ವವಾಗಿ ಪಠ್+ಪಠ್+ಇ+ಸ ಎಂದಾಗುತ್ತದೆ. ಅನಂತರ ಅಭ್ಯಾಸಕಾರ್ಯ, ಹಲಾದಿಶೇಷ ಮೊದಲಾದವು ಆದನಂತರ ಪ್+ಅ+ಪ್+ಅ+ಠ್+ಇ+ಸ ಎಂದಿದ್ದಾಗ 'ಸನ್ಯತಃ' ಎಂಬ ಸೂತ್ರದಿಂದ ಅಭ್ಯಾಸದ ಅ–ಕಾರಕ್ಕೆ ಇ–ಕಾರಾದೇಶವಾಗಿ ಪ್+ಇ+ಪ್+ಅ+ಠ್+ಇ+ಸ =ಪಿಪಠಿಸ ಎಂದಿದ್ದಾಗ 'ಸ್'ಕಾರಕ್ಕೆ ಷತ್ವವಾಗಿ ಪಿಪಠಿಷ ಎಂದಿದ್ದಾಗ, ಧಾತು ಸಂಜ್ಞೆಯು ಬಂದು ತಿಪ್, ಶಪ್ ಮೊದಲಾದವುಗಳು ಬಂದು ಪಿಪಠಿಷತಿ ಎಂದು ರೂಪವಾಗುತ್ತದೆ.

ಸೂತ್ರದಲ್ಲಿ ಕರ್ಮಣಃ ಎಂದು ಏಕೆ ಹೇಳಲಾಗಿದೆ? ಇದಕ್ಕೆ ಸಮಾಧಾನವು ಹೀಗಿದೆ. 'ಗಮನೇನ ಇಚ್ಛತಿ' ಹೋಗುವುದರಿಂದ ಇಚ್ಛಿಸುತ್ತಾನೆ ಎಂದರ್ಥ. ಇಲ್ಲಿ ಸನ್ ಪ್ರಯೋಗವಿಲ್ಲಾ. ಏಕೆಂದರೆ ಗಮನ ಕ್ರಿಯೆಯು ಇಷ್ ಧಾತುವಿಗೆ ಕರ್ಮವಾಗಿಲ್ಲ ಆದರೆ ಕರಣವಾಗಿದೆ.

ಸಮಾನಕತೃಕಾತ್ ಎಂದು ಸೂತ್ರದಲ್ಲಿ ಏಕೆ ಹೇಳಿರುವರು? ಎಂದರೆ ಇದಕ್ಕೆ ಸಮಾಧಾನವು ಹೀಗಿದೆ. 'ಶಿಷ್ಯಾಃ ಪಠಂತು ಇತಿ ಇಚ್ಛತಿ ಗುರು'. ಶಿಷ್ಯರು ಪಠಿಸಲಿ ಎಂದು ಗುರುವು ಇಚ್ಛಿಸುತ್ತಾನೆ ಎಂದರ್ಥ. ಇಲ್ಲಿ 'ಇಷ್ ' ಧಾತುವಿಗೆ ಗುರುವು ಕರ್ತೃವಾಗಿದ್ದಾನೆ. ಇಚ್ಛೆಯಲ್ಲಿ ಪಠನವು ಕರ್ಮವಾಗಿದೆ. ಆದರೆ ಶಿಷ್ಯರು ಕರ್ತೃಗಳಾಗಿದ್ದಾರೆ. ಆದ್ದರಿಂದ ಭಿನ್ನ ಕರ್ತೃಕತ್ವವಿರುವುದರಿಂದ ಪಠಿ ರೂಪದ ಮೇಲೆ ಸನ್ ಪ್ರತ್ಯಯವಿರುವುದಿಲ್ಲಾ. ಇಲ್ಲಿ ಸನ್ ಪ್ರತ್ಯಯವು ವೈಕಲ್ಪಿಕ ಕಾರಣ ಸೂತ್ರದಲ್ಲಿ 'ವಾ' ಶಬ್ದವನ್ನು ಪ್ರಯೋಗಿಸಲಾಗಿದೆ. ಸನ್ ಬಾರದೇ ಇದ್ದಾಗ ಪಠನ–ಮಿಚ್ಛತಿ, ಪಠತುಮಿಚ್ಛತಿ ಎಂದೇ ವಾಕ್ಯಗಳಿರುತ್ತವೆ.

**('ತ್' ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ – 708 ಸಸ್ಯಾರ್ಧಧಾತುಕೇ (7–4–49)**

ವೃತ್ತಿ– ಸಸ್ಯ ತಃ ಸ್ಯಾತ್ ಸಾದೌ ಆರ್ಧಧಾತುಕೇ। ಅತ್ತುಮಿಚ್ಛತಿ ಜಿಘತ್ಸತಿ। (475) ಏಕಾಚ ಇತಿ ನೇಟ್।

ಪ.ಛೇ – ಸಃ, ಸಿ, ಆರ್ಧಧಾತುಕೇ ।

ಅ.ವೃ – 'ಅಚ ಉಪಸರ್ಗಾತಃ' ಎಂಬುದರಿಂದ 'ತಃ' ಎಂಬುದು ಅನುವೃತ್ತವಾಗಿದೆ.

ಅರ್ಥ – ಸಕಾರಾದಿ ಆರ್ಧಧತುಕವು ಪರದಲ್ಲಿದ್ದಾಗ 'ಸ'ಕಾರಕ್ಕೆ 'ತ'ಕಾರವು

ಆದೇಶವಾಗಿ ಬರುತ್ತದೆ. ಉದಾ– ಜಿಘತ್ಸತಿ ಅತ್ತುಮಿಚ್ಛತಿ ಜಿಘತ್ಸತಿ (ತಿನ್ನಲು ಇಚ್ಛಿಸುತ್ತಾನೆ ಎಂದರ್ಥ). ಅದ್ ಧಾತುವಿಗೆ ಇಚ್ಛಾರ್ಥದಲ್ಲಿ ಸನ್ ಪ್ರತ್ಯಯವು ಬಂದು ಅದ್+ಸ್ ಎಂದಿದ್ದಾಗ, 'ಲುಙ್ ಸನೋರ್ಘಸ್‌ಲೃ' ಎಂಬ ಸೂತ್ರದಿಂದ 'ಘಸ್ಲೃ' ಆದೇಶವಾಗಿ ಘಸ್+ಸ ಎಂದಾಗಿ 'ಸ' ಎಂಬುದು ಆರ್ಧಧಾತುಕವಾಗಿ ಪರದಲ್ಲಿ ಇದೆ. ಆದರೂ ಅನುದಾತ್ತವಾಗಿ ಏಕಾಚ್ ಆಗಿರುವುದರಿಂದ ಇಡಾಗಮವು ಬಾರದೇ ದ್ವಿತ್ವವಾಗಿ 'ಘಸ್+ಘಸ್+ಸ' ಎಂದಿದ್ದಾಗ, 'ಹಲಾದಿ ಶೇಷಃ' ಎಂಬುದರಿಂದ ಘ+ಘಸ್+ಸ ಎಂದಿದ್ದಾಗ, 'ಕುಹೋಶ್ಚುಃ' ಎಂಬುದರಿಂದ 'ಘ್' ಕಾರಕ್ಕೆ ಝ–ಕಾರಾದೇಶವಾಗಿ ಝ+ಘಸ್+ಸ ಎಂದಿರುವಾಗ 'ಅಭ್ಯಾಸೇ ಚರ್ಚ' ಎಂಬುದರಿಂದ ಝಕಾರಕ್ಕೆ ಜಕಾರಾದೇಶವಾಗಿ ಜ+ಗಸ್+ಸ ಎಂದಿರುವಾಗ ಪ್ರಕೃತ ಸೂತ್ರದಿಂದ ಸ್ ಕಾರಕ್ಕೆ ತ್ ಕಾರಾದೇಶವಾಗಿ ಜ+ಘತ್+ಸ ಎಂದಿರುವಾಗ 'ಸನ್ಯತಃ' ಎಂಬುದರಿಂದ ಜ–ಕಾರೋತ್ತರ ಅ–ಕಾರಕ್ಕೆ 'ಇ–ಕಾರಾದೇಶವಾಗಿ ಜಿ+ಘತ್+ಸ ಎಂದಿರುವಾಗ, ಧಾತುಸಂಜ್ಞೆ ಬಂದು ಲಟ್, ತಿಪ್, ಶಪ್‌ಗಳು ಬಂದ ಮೇಲೇ ಜಿ+ಘತ್+ಸ್+ಅ+ತಿ= ಜಿಘತ್ಸತಿ ಎಂದು ರೂಪವು ಸಿದ್ಧವಾಗುತ್ತದೆ. 'ಏಕಾಚ್ ಇತಿ ನೇಟ್' ಎಂದರೆ 'ಏಕಾಚ್' ಆಗಿ ಅನುದಾತ್ತವಾಗಿರು ವುದರಿಂದ ಇಡಾಗಮವು ಬರುವುದಿಲ್ಲ ಎಂದರ್ಥ.

**(ದೀರ್ಘವನ್ನು ವಿಧಿಸುವ ಸೂತ್ರ)**

**ಸೂತ್ರ– 709 ಅಜ್ಝನ–ಗಮಾಂ ಸನಿ। (6–4–16)**

ವೃತ್ತಿ–ಅಜನ್ತಾನಾಂ ಹನ್ತೇಃ, ಅಜಾದೇಶಗಮೇಶ್ಚ ದೀರ್ಘೋ ಝಲಾದೌ ಸನಿ।

ಅ.ವೃ–'ಅನುನಾಸಿಕಸ್ಯ ಕ್ವಿಝಲೋಃ ಕಿಜಿತಿ' ಎಂಬ ಸೂತ್ರದಿಂದ 'ಝಲಿ' ಎಂಬ ಪದವು 'ಢ್ರಲೋಪೆ ಪೂರ್ವಸ್ಯ ದೀರ್ಘೋಽಣಃ' ಎಂಬುದರಿಂದ ದೀರ್ಘಃ ಎಂಬ ಪದವು ಅನುವೃತ್ತವಾಗುತ್ತದೆ. 'ಅಂಗಸ್ಯ' ಎಂಬುದು ಅಧಿಕಾರ ಸೂತ್ರ.

ಅರ್ಥ–ಅಜಂತವಾದ ಧಾತು, ಹನ್ ಧಾತು ಮತ್ತು ಅಜಾದಿ ಸ್ಥಾನದಲ್ಲಿ ಆದೇಶವಾಗಿರುವ 'ಗಮ್' ಧಾತು ಇವೆಲ್ಲ ಧಾತುಗಳ ಸ್ವರಕ್ಕೆ ಝಲಾದಿ 'ಸನ್' ಪ್ರತ್ಯಯವು ಪರದಲ್ಲಿದ್ದಾಗ ದೀರ್ಘವಾಗುತ್ತದೆ.

**(ಕಿತ್ವವನ್ನು ವಿಧಿಸುವ ಅತಿದೇಶ ಸೂತ್ರ)**

**ಸೂತ್ರ–710 ಇಕೋ ಝಲ್।(1–2–9)**

ವೃತ್ತಿ – ಇಗನ್ತಾತ್ ಝಲಾದಿಃ ಸನ್ ಕಿತ್ ಸ್ಯಾತ್। (660) ಋತ ಇದ್ಧಾತೋಃ। ಕರ್ತುಮಿಚ್ಛತಿ ಚಿಕೀರ್ಷತಿ।

ಅ.ವೃ – 'ಋದವಿದ ಮುಷಗ್ರಹಸ್ವಪಿ ಪ್ರಚ್ಛಃ ಸಂಶ್ಚ' ಎಂಬುದರಿಂದ 'ಸನ್' ಎಂಬ ಪದವು ಮತ್ತು 'ಅಸಂಯೋಗಾಲ್ಲಿಟ್ ಕಿತ್' ಎಂಬ ಸೂತ್ರದಿಂದ ಕಿತ್ ಎಂಬ ಪದಗಳು ಅನುವೃತ್ತವಾಗುತ್ತವೆ.'

ಅರ್ಥ – ಇಗಂತವಾದ ಅಂಗದ ಪರದಲ್ಲಿರುವ ಝಲಾದಿಯಾದ 'ಸನ್' ಪ್ರತ್ಯಯಕ್ಕೆ ಕಿದ್ವದ್ಭಾವವು ಬರುತ್ತದೆ.

ಉದಾ- ಕರ್ತುಮಿಚ್ಛತಿ ಚಿಕೀರ್ಷತಿ । ಮಾಡಲು ಇಚ್ಛಿಸುತ್ತಾನೆ ಎಂದರ್ಥ- ಈ ವಿಗ್ರಹದಲ್ಲಿ 'ಕೃ' ಧಾತುವಿಗೆ ಇಚ್ಛಾರ್ಥದಲ್ಲಿ(ಝಲಾದಿಯಾದ) 'ಸನ್' ಪ್ರತ್ಯಯವು ಕೃ+ಸ ಎಂದಿದ್ದಾಗ ಕಿತ್ತಾದ ಸನ್ ಪ್ರತ್ಯಯವು ಪರದಲ್ಲಿರೋಣದ್ದರಿಂದ 'ಕ್ಙಿತಿಚ' ಎಂಬುದರಿಂದ ಗುಣ ನಿಷೇಧವಾಗಿ 'ಇಟ್' ಗೆ ನಿಷೇಧವು ಬಂದು 'ಅಜ್ಝನ ಗಮಾಂ ಸನಿ' ಎಂಬುದರಿಂದ ದೀರ್ಘ ಬಂದು ಕೄ+ಸ ಎಂದಿರುವಾಗ 'ಋೂತ ಇದ್ಧಾತೋಃ' ಎಂಬುದರಿಂದ 'ಇರ್' ಆದೇಶವಾಗಿ ಕ್+ಇರ್+ಸ ಎಂದಿದ್ದಾಗ, 'ಹಲಿಚ' ಎಂಬುದರಿಂದ ಉಪಧೆಗೆ ದೀರ್ಘವಾಗಿ ಕ್+ಈರ್+ಸ ಎಂದಿದ್ದಾಗ ದ್ವಿತ್ವವಾಗಿ ಕೀರ್+ಕೀರ್+ಸ ಎಂದಿರುವಾಗ ಹಲಾದಿಶೇಷ, ಅಭ್ಯಾಸಕಾರ್ಯ ಮುಂತಾದವುಗಳಾಗಿ ಕೀ+ಕೀರ್+ಸ ಎಂದಿದ್ದಾಗ, 'ಕುಹೋಶ್ಚುಃ' ಎಂಬುದರಿಂದ 'ಕ್' ಕಾರಕ್ಕೆ 'ಚ್' ಕಾರ ಬಂದು, ಚ್+ಇ+ಕೀರ್+ಸ ಎಂದಿದ್ದಾಗ, ಸ-ಕಾರಕ್ಕೆ ಷ-ಕಾರಾದೇಶವಾಗಿ ಚ್+ಇ+ಕೀರ್+ಷ ಎಂದಿರುವಾಗ ಧಾತುಸಂಜ್ಞೆಯು ಬಂದು ಲಟ್, ತಿಪ್, ಶಪ್ ಗಳು ಬಂದು ಚ್+ಇ+ಕೀರ್+ಷ+ಅ+ತಿ=ಚಿಕೀರ್ಷತಿ ಎಂದು ರೂಪ ಸಿದ್ಧವಾಗುತ್ತದೆ.

**(ಇಡಾಗಮವನ್ನು ನಿಷೇಧಿಸುವ ಸೂತ್ರ)**

**ಸೂತ್ರ- 711. ಸನಿ ಗ್ರಹ - ಗುಹೋಶ್ಚ। (7-2-12)**

ವೃತ್ತಿ - ಗ್ರಹೇಃ, ಗುಹೇಃ, ಉಗನ್ತಾತ್ ಚ ಸನ ಇಣ್(ಟ್) ನ ಸ್ಯಾತ್।

ಅ.ವೃ- 'ನೇಡ್ ವಶಿಕೃತಿ' ಎಂಬ ಸೂತ್ರದಿಂದ ನ ಮತ್ತು ಇಟ್ ಎಂಬ ಪದಗಳು ಅನುವೃತ್ತವಾಗುತ್ತವೆ. ಸೂತ್ರದಲ್ಲಿ ಚ ಎಂಬ ಪ್ರಯೋಗವಿರುವುದರಿಂದ 'ಶ್ರ್ಯುಕಃ ಕಿತಿ' ಎಂಬುದರಿಂದ 'ಉಕಃ' ಎಂಬ ಪದವು ಅನುವೃತ್ತವಾಗುತ್ತದೆ. 'ಅಂಗಸ್ಯ' ಎಂಬ ಅಧಿಕಾರ ಸೂತ್ರಕ್ಕೆ ಉಕಃ ಎಂಬುದು ವಿಶೇಶಣವಾಗಿದ್ದರಿಂದ, ತದಂತ ವಿಧಿಯು ಇಲ್ಲಿ ಮಾಡಲಾಗಿದೆ.

ಅರ್ಥ- ಸನ್ ಪರದಲ್ಲಿದ್ದಾಗ ಗ್ರಹ, ಗುಹ ಮತ್ತು ಉಗಂತ ಅಂಗದ ಅವಯವಕ್ಕೆ 'ಇಟ್' ಬರುವುದಿಲ್ಲ.

ಉದಾ- ಬುಭೂಷತಿ - ಭೂ ಧಾತುವಿಗೆ ಇಚ್ಛಾರ್ಥದಲ್ಲಿ ಸನ್ ಪ್ರತ್ಯಯವು ಬಂದು ಭೂ+ಸ ಎಂದಿರುವಾಗ 'ಆರ್ಧಧಾತುಕಸ್ಯೇಡ್ ವಲಾದೇಃ' ಎಂಬುದರಿಂದ ಇಡಾಗಮವು ಬರಬೇಕಾಗಿತ್ತು. ಆದರೆ ಭೂ ಧಾತುವು ಉಗಂತವಾಗುರುವುದರಿಂದ ಸ(ಸನ್) ಪರದಲ್ಲಿರುವುದರಿಂದ ಪ್ರಕೃತ ಸೂತ್ರದಿಂದ ಇಟ್ ಗೆ ನಿಷೇಧ ಬರುತ್ತದೆ. ಸನ್ ಕಿತ್ತಾಗಿರುವುದರಿಂದ ಗುಣನಿಷೇಧ ಬಂದು ದ್ವಿತ್ವ, ಅಭ್ಯಾಸ ಮೊದಲಾದ ಕಾರ್ಯಗಳಾಗಿ ಬು+ಭೂ+ಸ ಎಂದಿದ್ದಾಗ ಸ ಕಾರಕ್ಕೆ ಷತ್ವ ಬಂದು ಬು+ಭೂ+ಷ ಎಂದಿರುವಾಗ ಧಾತು ಸಂಜ್ಞೆಯು ಬಂದು ಲಟ್,ತಿಪ್,ಶಪ್ ಮತ್ತು ಪರರೂಪಗಳಾಗಿ ಬು+ಭೂ+ಷ+ಅ+ತಿ=ಬುಭೂಷತಿ ಎಂದು ರೂಪವು ಸಿದ್ಧವಾಗುತ್ತದೆ.

**॥ ಇತಿ ಸನ್ನನ್ತ ಪ್ರಕ್ರಿಯಾ(23) ಪ್ರಕರಣಮ್॥**

**ಇಲ್ಲಿಗೆ ಸನ್ನಂತ ಪ್ರಕರಣವು ಮುಗಿಯಿತು.**

# ಪ್ರಕರಣ-24: ಅಥ ಯಙನ್ತ ಪ್ರಕ್ರಿಯಾ

(ಸೂತ್ರ ಸಂಖ್ಯೆ 712 ರಿಂದ 718 ವರೆಗೆ)

(ಯಙ್ ಪ್ರತ್ಯಯವನ್ನು ವಿಧಿಸುವ ಸೂತ್ರ)

**ಸೂತ್ರ- 712 ಧಾತೋರೇಕಾಚೋ ಹಲಾದೇಃ ಕ್ರಿಯಾಸಮಾಭಿಹಾರೆ ಯಙ್।** (3.1.22)

ವೃತ್ತಿ- ಪೌನಃಪುನ್ಯೇ ಭೃಶಾರ್ಥೇ ಚ ದ್ಯೋತ್ಯೇ ಧಾತೋರೇಕಾಚೋ ಹಲಾದೇಃ ಯಙ್ ಸ್ಯಾತ್।

ಪ.ಛೇ - ಧಾತೋಃ, ಏಕಾಚಃ, ಹಲಾದೇಃ, ಕ್ರಿಯಾಸಮಭಿಹಾರೆ ಯಙ್ ।

ಅ.ವೃ- "ಧಾತೋಃ ಕರ್ಮಣಃ ಸಮಾನ ಕತೃಕಾತ್ ಇಚ್ಛಾಯಾಂ ವಾ" ಎಂಬುದರಿಂದ 'ವಾ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ - ಕ್ರಿಯೆಯು ಮತ್ತೆ ಮತ್ತೆ ನಡೆಯುವುದು ಅಥವಾ ಹೆಚ್ಚಾಗಿ ನಡೆಯುವುದು ಎಂಬ ಅರ್ಥವು ತೋರುವಾಗ ಹಲಾದಿ ಮತ್ತು ಏಕಾಚ್ ಧಾತುಗಳ ನಂತರ 'ಯಙ್ ' ಪ್ರತ್ಯಯವು ಬರುತ್ತದೆ.

ವಿಶೇಷ- ಏಕಾಚ್ ಮತ್ತು ಹಲಾದಿ ಧಾತುಗಳ ನಂತರ 'ಯಙ್' ವಿಧಿಸಿರುವುದರಿಂದ ಅನೇಕಾಚ್ ಮತ್ತು ಅಜಾದಿ ಧಾತುಗಳ ನಂತರ 'ಯಙ್' ಪ್ರತ್ಯಯವು ಬರುವುದಿಲ್ಲ ಎಂಬುದು ಸ್ಪಷ್ಟವಾಗುತ್ತದೆ.

(ಅಭ್ಯಾಸಕ್ಕೆ ಗುಣವನ್ನು ವಿಧಿಸುವ ಸೂತ್ರ)

**ಸೂತ್ರ- 713 ಗುಣೋ ಯಙ್-ಲುಕೋಃ।** (7.4.82)

ವೃತ್ತಿ- ಅಭ್ಯಾಸಸ್ಯ ಗುಣೋ ಯಙಿ ಯಙ್-ಲುಕಿ ಚ। ಙಿದನ್ತತ್ವಾತ್ ಆತ್ಮನೇಪದಮ್। ಪುನಃ ಪುನರತಿಶಯೇನ ವಾ ಭವತಿ- ಬೋಭೂಯತೇ। ಬೋಭೂಯಾಞ್ಚಕ್ರೆ ಅಭೋಭೂಯಿಷ್ಟ

ಅ.ವೃ - 'ಅತ್ರ ಲೋಪೋ ಭ್ಯಾಸಸ್ಯ' ಎಂಬ ಸೂತ್ರದಿಂದ 'ಅಭ್ಯಾಸಸ್ಯ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- ಯಙ್ ಅಥವಾ ಯಙ್-ಲುಕ್ ಪರದಲ್ಲಿದ್ದಾಗ ಅಭ್ಯಾಸಕ್ಕೆ ಗುಣವು ಬರುತ್ತದೆ. 'ಯಙ್' ಙಿತ್ ಆಗಿರುವುದರಿಂದ 'ಅನುದಾತ್ತ ಙೌತ್ ಆತ್ಮನೇ ಪದಮ್' ಎಂಬ ಸೂತ್ರದ ನಿಯಮದಿಂದ ಆತ್ಮನೇ ಪದವಾಗುತ್ತದೆ.

ಉದಾ- ಬೋಭೂಯತೇ - ಪುನಃ ಪುನಃ ಅಥವಾ ಹೆಚ್ಚಾಗಿ(ಅತಿಶಯ) ಭವತಿ - ಆಗುತ್ತದೆ ಎಂಬ ಅರ್ಥದಲ್ಲಿ 'ಭೂ' ಧಾತುವಿನ ಮುಂದೆ 'ಯಙ್' ಪ್ರತ್ಯಯವು ಬರುತ್ತದೆ. ಭೂ+ಯ(ಯಙ್) ಎಂದಿದ್ದಾಗ 'ಸನ್ಯಙೋಃ' ಎಂಬುದರಿಂದ ದ್ವಿತ್ವವಾಗಿ ಭೂ+ಭೂ+ಯ ಎಂದಿರುವಾಗ ಅಭ್ಯಾಸ 'ಭೂ' ವಿನ 'ಊ' ಕಾರಕ್ಕೆ

ಹರಸ್ವವಾಗಿ ಭು+ಭೂ+ಯ ಎಂದಿರುವಾಗ ಪ್ರಕೃತ ಸೂತ್ರದಿಂದ 'ಉ' ಕಾರಕ್ಕೆ ಗುಣವಾಗಿ ಭೋ+ಭೂ+ಯ ಎಂದಿದ್ದಾಗ 'ಅಭ್ಯಾಸೇ ಚರ್ಚ' ಎಂಬುದರಿಂದ 'ಜಶ್ತ್ವ' ಬಂದು ಬೋ+ಭೂ+ಯ ಎಂದಿರುವಾಗ ಧಾತು,ಸಂಜ್ಞಾ,ಲಟ್, ತ, ಶಪ್ ಮೊದಲಾದವುಗಳು ಬಂದು ಬೋ+ಭೂ+ಯ+ಅ+ತ ಎಂದಿದ್ದಾಗ ಪರರೂಪವಾಗಿ 'ಟಿತ ಆತ್ಮನೇ ಪದಾನಾಂ ಟೇರೇ' ಎಂಬುದರಿಂದ 'ತ' ಕಾರದ 'ಅ' ಕಾರಕ್ಕೆ ಏತ್ವ ಬಂದು ಬೋಭೂಯತೇ ಎಂದು ರೂಪ ಸಿದ್ಧವಾಗುತ್ತದೆ.

ಉದಾ- ಬೋಭೂಯಾಞ್ಚಕ್ರೇ - ಏಧಾಞ್ಚಕ್ರೇ ರೂಪದಂತೆ ತಿಳಿಯಬೇಕು.

ಅಬೋಭೂಯಿಷ್ಟ - ಇದು ಲುಙ್ ಲಕಾರದ ಪ್ರಥಮ ಪುರುಷದ ಏಕವಚನ ರೂಪ.

### (ಯಙ್ ನ್ನು ವಿಧಿಸುವ ನಿಯಮ ಸೂತ್ರ)

**ಸೂತ್ರ- 714 ನಿತ್ಯಂ ಕೌಟಿಲ್ಯೇ ಗತೌ। (3.1.23)**

ವೃತ್ತಿ- ಗತ್ಯರ್ಥಾತ್ ಕೌಟಿಲ್ಯ ಏವ ಯಙ್ ಸ್ಯಾತ್, ನ ತು ಕ್ರಿಯಾಸಮಾಭಿಹಾರೇ।

ಅ.ವೃ - 'ಧಾತೋರೇಕಾಚೋ ಹಲಾದೇಃ ಕ್ರಿಯಾಸಮಭಿಹಾರೇ ಯಙ್' ಎಂಬ ಸೂತ್ರದಿಂದ ಧಾತೋಃ ಮತ್ತು ಯಙ್ ಎಂಬ ಪದಗಳು ಅನುವೃತ್ತವಾಗುತ್ತವೆ.

ಆರ್ಥ- ಗತ್ಯರ್ಥಕ ಧಾತುವು ಕಟಿಲಗಮನ ಎಂಬ ಆರ್ಥವನ್ನು ಕೊಡುವಾಗ ಮಾತ್ರ ಇದರ ಪರದಲ್ಲಿ 'ಯಙ್' ಪ್ರತ್ಯಯವು ಬರುತ್ತದೆ. ಆದರೆ ಕ್ರಿಯಾಸಮಭಿಹಾರ ಅರ್ಥದಲ್ಲಿ ಅಲ್ಲ.

### (ಅಕಿತ್ತಾದ ಅಭ್ಯಾಸಕ್ಕೆ ದೀರ್ಘವನ್ನು ವಿಧಿಸುವ ಸೂತ್ರ)

**ಸೂತ್ರ- 715 ದೀರ್ಘೋಽಕಿತಃ । (7.4.83)**

ವೃತ್ತಿ- ಅಕಿತೋಽಅಭ್ಯಾಸಸ್ಯ ದೀಘೋ೯ ಯಜಿ ಯಙ್ ಲುಕಿ ಚ। ಕುಟಿಲಂ ವ್ರಜತಿ-ವಾ ವ್ರಜ್ಯತೇ।

ಅ.ವೃ- 'ಅತ್ರ ಲೋಪೋಭ್ಯಾಸಸ್ಯ' ಎಂಬ ಸೂತ್ರದಿಂದ 'ಅಭ್ಯಾಸಸ್ಯ' ಎಂಬ ಪದವು ಮತ್ತು 'ಗಣೋ ಯಙ್ ಲುಕೋಃ' ಎಂಬ ಸೂತ್ರದಿಂದ ಯಙ್ ಲುಕೋಃ ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ- ಯಙ್ ಅಥವಾ ಯಙ್-ಲುಕ್ ಪರದಲ್ಲಿದ್ದಾಗ ಅಕಿತ್ತಾದ ಅಭ್ಯಾಸಕ್ಕೆ ದೀರ್ಘವು ಬರುತ್ತದೆ.

ಉದಾ- ಕುಟಿಲಂ ವ್ರಜತಿ ವಕ್ರವಾಗಿ ಚಲಿಸುವುದು ಎಂದರ್ಥ.- 'ವಾವ್ರಜ್ಯತೇ' ಎಂಬ ಅರ್ಥದಲ್ಲಿ 'ವ್ರಜ' ಧಾತುವಿನ ಮೇಲೆ 'ನಿತ್ಯಂ ಕೌಟಿಲ್ಯೇ ಗತೌ' ಎಂಬ ಸೂತ್ರದಿಂದ 'ಯಙ್' ಬಂದು, ವ್ರಜ+(ಯಙ್) ಎಂದಿದ್ದಾಗ 'ಸನ್ಯ ಙೋಃ' ಎಂಬ ಸೂತ್ರದಿಂದ ದ್ವಿತ್ವವಾಗಿ ವ್ರಜ+ವ್ರಜ+ಯ ಎಂದಿದ್ದಾಗ ಹಲಾದಿ ಶೇಷವಾದ ಮೇಲೆ ವ+ವ್ರಜ+ಯ ಎಂದಿದ್ದಾಗ ಪ್ರಕೃತ ಸೂತ್ರದಿಂದ ದೀರ್ಘ ಬಂದು ವಾ+ವ್ರಜ+ಯ

ಎಂದಿರುವಾಗ ಧಾತುಸಂಜ್ಞ, ಲಟ್,ತ,ಶಪ್, ಪರರೂಪ ಏತ್ವಗಳು ಬಂದು ವಾ+ವ್ರಜ+ಯ+ಅ+ತ್+ಏ = ವಾವ್ರಜ್ಯತೇ ಎಂದು ರೂಪವು ಸಿದ್ಧವಾಗುತ್ತದೆ.

**(ಯ-ಕಾರಕ್ಕೆ ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ- 716 ಯಸ್ಯ ಹಲಃ। (6.4.49)**

ವೃತ್ತಿ- ಯಸ್ಯ ಇತಿ ಸಙ್ಘಾತ ಗ್ರಹಣಮ್। ಹಲಃ ಪರಸ್ಯ ಯ-ಶಬ್ದಸ್ಯ ಲೋಪಃ ಆರ್ಧಧಾತುಕೇ। ಆದೇಃ ಪರಸ್ಯ(470) 'ಅತೋ ಲೋಪಃ' ವಾವ್ರಜಾಞ್ಚಕ್ರೇ। ವಾವ್ರಜಿತಾ।

ಅ.ವೃ- 'ಅತೋ ಲೋಪಃ' ಎಂಬ ಸೂತ್ರದಿಂದ ಲೋಪಃ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- ಈ ಸೂತ್ರದಲ್ಲಿ 'ಯಸ್ಯ' ಎಂದರೆ ಅ-ಕಾರ ಸಹಿತ ಯ-ಕಾರ ಎಂದರ್ಥ. 'ಹಲ್'ನ ಪರದಲ್ಲಿರುವ ಯ-ಕಾರಕ್ಕೆ ಲೋಪವು ಬರುತ್ತದೆ ಆರ್ಧಧಾತುಕವು ಪರದಲ್ಲಿದ್ದಾಗ.

ವಿವರಣೆ- 'ಆದೇಃ ಪರಸ್ಯ' ಎಂಬ ಸೂತ್ರದ ನಿಯಮದಿಂದ ಪರಕ್ಕೆ ವಿಹಿತವಾದುದರ 'ಯ್+ಅ' ರೂಪವಾದ ಸಮುದಾಯದ ಆದಿ ವರ್ಣವಾದ 'ಯ್' ಗೆ ಲೋಪವು ಬರುತ್ತದೆ. 'ಯ್'ಕಾರಕ್ಕೆ ಲೋಪವಾದ ಮೇಲೆ ಉಳಿದ ಅ-ಕಾರಕ್ಕೆ 'ಅತೋ ಲೋಪಃ' ಎಂಬುದರಿಂದ ಲೋಪವು ಬರುತ್ತದೆ.

ಉದಾ- ವಾವ್ರಜಾಞ್ಚಕ್ರೇ - 'ಯಙ್', ದ್ವಿತ್ವ ಮೊದಲಾದವು ಆದ ಮೇಲೆ 'ವಾವ್ರಜ್ಯ' ಎಂದು ಧಾತು ರೂಪ ಹೊಂದಿ ಅದರ 'ಲಿಟ್' 'ಲ'ಕಾರದಲ್ಲಿ 'ಆಮ್' ಬಂದು, ಈ ಪ್ರತ್ಯಯವು ಆರ್ಧಧಾತುಕವಾಗುವುದರಿಂದ ಪ್ರಕೃತ ಸೂತ್ರದಿಂದ 'ಆದೇಃ ಪರಸ್ಯ' ಎಂಬುದರ ಸಹಾಯದಿಂದ 'ಯ್' ಕಾರಕ್ಕೆ ಲೋಪವಾಗಿ 'ಅತೋ ಲೋಪಃ' ಎಂಬುದರಿಂದ 'ಅ'ಕಾರಕ್ಕೆ ಲೋಪವಾಗಿ ವಾವ್ರಜ್+ಆಮ್+ಲಿಟ್ ಎಂದಿದ್ದಾಗ 'ಆಮಃ' ಎಂಬುದರಿಂದ 'ಲಿಟ್' ಗೆ ಲೋಪವಾಗಿ ವಾವ್ರಜ್+ಆಮ್ ಎಂದಿರುವಾಗ 'ಕೃ' ಧಾತುವನ್ನು ಸೇರಿಸಿ ವಾವ್ರಜ್+ಆಮ್+ಕೃ ಎಂದಿರುವಾಗ 'ಲಿಟ್' 'ಲ'ಕಾರವನ್ನು ಸೇರಿಸಿ ದ್ವಿತ್ವಾದಿ ಕಾರ್ಯಗಳಾಗಿ 'ಚಕ್ರೇ' ಎಂದಾಗಿ ವಾವ್ರಜ್+ಆಮ್+ಚಕ್ರೇ= ವಾವ್ರಜಾಞ್ಚಕ್ರೇ ಎಂದು ರೂಪವು ಸಿದ್ಧವಾಗುತ್ತದೆ.

ಉದಾ- ವಾವ್ರಜಿತಾ-'ವ್ರಜ್' ಧಾತುವಿಗೆ 'ಕೌಟಿಲ್ಯಾರ್ಥದಲ್ಲಿ' 'ಯಙ್' ಪರದಲ್ಲಿರುವಾಗ ದ್ವಿತ್ವ, ಅಭ್ಯಾಸಕಾರ್ಯ ಮತ್ತು ದೀರ್ಘ ಮಾಡಿದ ಮೇಲೆ ವಾವ್ರಜ್ಯ ಎಂದಿರುವಾಗ ಧಾತುಸಂಜ್ಞೆ, ಲುಟ್, ತ, ತಾಸ್, ಇಟ್, ಮೊದಲಾದವುಗಳು ಬಂದು 'ಯ'ಕಾರ ಲೋಪವಾಗಿ 'ಡಾ' ದಲ್ಲಿ 'ಆ' ಉಳಿದು ವಾವ್ರಜಿತಾ ಎಂದು ರೂಪವಾಗುತ್ತದೆ.

**('ರೀಕ್' ಆಗಮವನ್ನು ವಿಧಿಸುವ ಸೂತ್ರ)**

**ಸೂತ್ರ- 717 ರೀಗೃದುಪಧಸ್ಯ ಚ। (7.4.90)**

ವೃತ್ತಿ- ಋದುಪಧಸ್ಯ ಧಾತೋಃ ಅಭ್ಯಾಸಸ್ಯ ರೀಕ್ ಆಗಮಃ ಯಙಿ ಯಙ್-

ಲುಕಿಚ। ವರೀವೃತ್ಯತೇ। ವರೀವೃತಾಞ್ಚಕ್ರೇ। ವರೀವೃತಿತಾ।

ಪ.ಛೇ- ರೀಕ್, ಋದುಪಧಸ್ಯ, ಚ ।

ಅ.ವೃ - 'ಅತ್ರ ಲೋಪೋಽಭ್ಯಾಸಸ್ಯ' ಎಂಬ ಸೂತ್ರದಿಂದ ಅಭ್ಯಾಸಸ್ಯ ಎಂಬ ಪದವು , 'ಗುಣೋಃ ಯಙ್ ಲುಕೋಃ' ಯಙ್ ಲುಕೋಃ ಎಂಬ ಪದಗಳು ಅನುವೃತ್ತವಾಗುತ್ತವೆ. 'ಅಂಗಸ್ಯ' ಎಂಬ ಅಧಿಕಾರದಲ್ಲಿ ಈ ಸೂತ್ರವು ಬರುತ್ತದೆ.

ಅರ್ಥ- ಉಪಧೆಯಲ್ಲಿ ಹ್ರಸ್ವ 'ಋ' ಕಾರವನ್ನು ಉಳ್ಳ ಧಾತುವಿನ ಅಭ್ಯಾಸಕ್ಕೆ 'ರೀಕ್' ಆಗಮವು 'ಯಙ್' ಅಥವಾ 'ಯಙ್ ಲುಕ್' ಪರದಲ್ಲಿದ್ದಾಗ ಬರುತ್ತದೆ.

ಉದಾ- ವರೀವೃತ್ಯತೇ - ಪುನಃ ಪುನಃ ಅತಿಶಯೇನ ವಾ ವರ್ತತೇ - 'ಮತ್ತೆ ಮತ್ತೆ ಅತಿಶಯವಾಗಿದೆ' ಎಂಬ ಅರ್ಥದಲ್ಲಿ 'ವೃತ್' ಧಾತುವಿಗೆ 'ಯಙ್' ಬರುತ್ತದೆ. ದ್ವಿತ್ವ ಮತ್ತು ಅಭ್ಯಾಸಕಾರ್ಯವಾದ ಮೇಲೆ ಪ್ರಕೃತ ಸೂತ್ರದಿಂದ ಅಭ್ಯಾಸಕ್ಕೆ 'ರೀಕ್' ಆಗಮವು ಬಂದು 'ವರೀವ್ರತ್ಯ' ಎಂದಾಗಿ ಧಾತು-ಸಂಜ್ಞೆಯನ್ನು ಹೊಂದಿ, ಲಟ್,ತ,ಶಪ್ ಏತ್ವಗಳಾಗಿ 'ವರೀವೃತ್ಯತೇ' ಎಂದು ರೂಪವಾಗುತ್ತದೆ.

ಉದಾ- ವರೀಋತಞ್ಚಕ್ರೇ - ಯಙನ್ತವಾದ ವರೀವೃತ್ಯ ಧಾತುವಿನ ಮೇಲೆ 'ಲಿಟ್' ನಲ್ಲಿ 'ಆಮ್' ಬಂದು ಅಲ್ಲಿ 'ಯ್' ಕಾರ 'ಅ' ಕಾರಗಳ ಲೋಪವಾಗಿ ಅದನ್ತ 'ಕೃ' ವಿನ ಮೇಲೆ ಅನುಪ್ರಯೋಗವಾಗಿ ವರೀಋತಞ್ಚಕ್ರೇ ಎಂದು ರೂಪವು ಸಿದ್ಧವಾಗುತ್ತದೆ.

ಉದಾ- ವರೀವೃತಿತಾ- ವರೀವೃತ್ಯ ಧಾತುವಿಗೆ ಲುಟ್ ನಲ್ಲಿ 'ತಾಸ್' ಗೆ 'ಇಟ್' ಬಂದ ಮೇಲೆ 'ಯ್' ಕಾರ 'ಅ' ಕಾರಗಳ ಲೋಪವಾಗಿ ವರೀವೃತಿತಾ ಎಂದು ರೂಪವು ಸಿದ್ಧವಾಗುತ್ತದೆ.

**(ಣತ್ವ ವನ್ನು ನಿಷೇಧಿಸುವ ಸೂತ್ರ)**

**ಸೂತ್ರ- 718 ಕ್ಷುಭ್ನಾದಿಷು ಚ। (8.4.39)**

ವೃತ್ತಿ- ಣತ್ವಂ ನ। ನರೀನೃತ್ಯತೇ, ಜರೀಗೃಹ್ಯತೇ। ಇತಿ ಯಙನ್ತ ಪ್ರಕ್ರಿಯಾ।

ಅ.ವೃ- 'ರಷಾಭ್ಯಾಂ ನೋಣಃ ಸಮಾನ ಪದೇ' ಎಂಬ ಸೂತ್ರದಿಂದ ನಃ ಮತ್ತು ಣಃ ಎಂಬ ಎರಡು ಪದಗಳು ಹಾಗೂ 'ನಭಾಭೂಪೂ...' ಎಂಬುದರಿಂದ 'ನ' ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ- ಕ್ಷುಭ್ನಾದಿಗಣ -ಪಠಿತವಾದ ಶಬ್ದಗಳಲ್ಲಿ 'ನ' ಕಾರಕ್ಕೆ 'ಣತ್ವವು' ಬರುವುದಿಲ್ಲ.

ಉದಾ - ನರೀನೃತ್ಯತೇ - 'ಪುನಃ ಪುನಃ ಅತಿಶಯೇನ ನೃತ್ಯತಿ' ಇತಿ-ಮತ್ತೆ ಮತ್ತೆ ಅಥವಾ ಅತಿಶಯವಾಗಿ ನೃತ್ಯ ಮಾಡುತ್ತಾನೆ ಎಂಬ ಅರ್ಥದಲ್ಲಿ 'ನೃತ್' ಧಾತುವಿಗೆ 'ಧಾತೋರೇಕಾಚೋ...' ಎಂಬ ಸೂತ್ರದಿಂದ 'ಯಙ್' ಬಂದು 'ಸನ್ಯ ಙೋಃ' ಎಂಬುದರಿಂದ ದ್ವಿತ್ವ ಬಂದು ಅಭ್ಯಾಸ ಮೊದಲಾದ ಕಾರ್ಯಗಳಾಗಿ, ರೀಕ್ ಆಗಮ ಬಂದು 'ನರೀನೃತ್ಯ' ಎಂದಿರುವಾಗ ಇದಕ್ಕೆ ಧಾತು-ಸಂಜ್ಞೆ ಬಂದು,

ಲಟ್,ತ,ಶಪ್,ಪರರೂಪ,ಏತ್ವಗಳು ಬಂದು ಪ್ರಕೃತ ಸೂತ್ರದಿಂದ ಣತ್ವ ನಿಷೇಧವಾಗಿ 'ನರೀನೃತ್ಯತೇ' ಎಂದು ರೂಪವು ಸಿದ್ಧಿಸುತ್ತದೆ.

ಉದಾ– ಜರೀಗೃಹ್ಯತೇ – 'ಪುನಃ ಪುನಃ ಅತಿಶಯೇನ ವಾ ಗೃಹ್ಣಾತಿ' ಎಂಬ ಅರ್ಥದಲ್ಲಿ 'ಗ್ರಹ' ಧಾತುವಿಗೆ 'ಯಙ್' ಬಂದು ಸಂಪ್ರಸಾರಣವಾಗಿ ಗೃಹ ಎಂದಾಗಿ ದ್ವಿತ್ವ, ಅಭ್ಯಾಸಕಾರ್ಯ, ಅಭ್ಯಾಸಕ್ಕೆ 'ರೀಕ್' ಆಗಮವಾದ ಮೇಲೆ 'ಜರೀಗೃಹ್ಯ' ಎಂದಿದ್ದಾಗ, ಧಾತು–ಸಂಜ್ಞೆ ಬಂದು ಲಟ್,ತ,ಶಪ್,ಪರರೂಪ,ಏತ್ವಗಳು ಬಂದು ಜರೀಗೃಹ್ಯತೇ ಎಂದು ರೂಪವಾಗುತ್ತದೆ.

**॥ ಇತಿ ಯಙಂತ ಪ್ರಕ್ರಿಯಾ(24) ಪ್ರಕರಣಮ್॥**

# ಪ್ರಕರಣ-25: ಯಙ್ ಲುಗನ್ತ ಪ್ರಕ್ರಿಯಾ

(ಸೂತ್ರ ಸಂಖ್ಯೆ 719 ರಿಂದ 720 ವರೆಗೆ)

(ಯಙ್‌ಗೆ ಲುಕ್ ಅನ್ನು ವಿಧಿಸುವ ಸೂತ್ರ)

**ಸೂತ್ರ- 719 ಯಙೋಽಚಿ ಚ। (2.4.74)**

ವೃತ್ತಿ- ಯಙಃ ಅಚಿ ಪ್ರತ್ಯಯೇ ಲುಕ್ ಸ್ಯಾತ್; ಚ ಕಾರಾತ್ ತಂ ವಿನಾಪಿ ಕ್ವಚಿತ್। ಅನೈಮಿತ್ತಿಕೋಽಯಮ್ ಅನ್ತರಙ್ಗತ್ವಾತ್ ಆದೌ ಭವತಿ। ತತಃ ಪ್ರತ್ಯಯಲಕ್ಷಣೇನ ಯಙನ್ತತ್ವಾದ್ ದ್ವಿತ್ವಮಭ್ಯಾಸಕಾರ್ಯಮ್। ಧಾತುತ್ವಾತ್ ಲಟ್-ಆದಯಃ। (380) 'ಶೇಷಾತ್ಕರ್ತರಿ' ಇತಿ ಪರಸ್ಮೈಪದಮ್। ಚರ್ಕರೀತಮ್ ಚ- ಇತಿ ಅದಾದೌ ಪಾಠಾತ್ ಶಪಃ ಲುಕ್.

ಅ.ವೃ- "ಣ್ಯಕ್ಷತ್ರಿಯಾರ್ಷ ಜಿತೋ ಲುಗಣಿಞೋಃ" ಎಂಬ ಸೂತ್ರದಿಂದ ಲುಕ್ ಎಂಬ ಪದವು "ಬಹುಲಂ ಛಂದಸಿ" ಎಂಬುದರಿಂದ ಬಹುಲಂ ಎಂಬ ಪದವು ಅನುವೃತ್ತವಾಗುತ್ತವೆ.

ಪ.ಛೇ.- ಯಙಃ, ಅಚಿ, ಚ।

ಅರ್ಥ- ಅಚ್ ಪ್ರತ್ಯಯವು ಪರದಲ್ಲಿದ್ದಾಗ ಯಙ್ ಗೆ ಲುಕ್ ಬರುತ್ತದೆ. ಸೂತ್ರಸ್ಥ 'ಚ'ಕಾರದಿಂದ ಅಚ್ ಪ್ರತ್ಯಯ ಪರದಲ್ಲಿ ಇಲ್ಲದಿದ್ದರೂ ಯಙ್ ಗೆ ಲೋಪವು ಬರುತ್ತದೆ.

ಯಙ್ ಲುಕ್ ಎಲ್ಲೆಡೆಯಲ್ಲೂ ಆಗುವುದಿಲ್ಲ. ಆದರೆ ಎಲ್ಲಿ ಶಿಷ್ಟ ಪ್ರಯೋಗವು ಇರುತ್ತದೋ ಅಲ್ಲಿ ಮಾತ್ರ ಲುಕ್ ಆಗುತ್ತದೆ.

'ಅನೈಮಿತ್ತಿಕೋಽಯಮ್ ಅಂತರಂಗತ್ವಾದಾದೌ ಭವತಿ' ಎಂಬ ಮಾತಿನಿಂದ ಯಙ್-ಲುಕ್ ನೈಮಿತ್ತಿಕ ಹಾಗೂ ಅನೈಮಿತ್ತಿಕ ಎಂದು ಎರಡು ವಿಧವಾಗಿದೆ.

ಪ್ರಕೃತ ಸ್ಥಳದಲ್ಲಿ ಯಙ್-ಲುಕ್ ಅನೈಮಿತ್ತಿಕವಾಗಿರುವುದರಿಂದ ಇದು ಅಂತರಂಗವಾಗಿದೆ. (ಅಲ್ಪಾಪೇಕ್ಷಮ್ ಅಂತರಂಗಮ್) ಅಲ್ಪ ಅಪೇಕ್ಷೆಯುಳ್ಳದ್ದು ಎಂದರ್ಥ (ಅಸಿದ್ಧಂ ಬಹಿರಂಗಮಂತರಂಗೇ)-ಬಹ್ವಾಪೇಕ್ಷಮ್ ಬಹಿರಂಗಮ್ = ಬಹಳ ಅಪೇಕ್ಷೆಯುಳ್ಳದ್ದು ಎಂದರ್ಥ. ಅಂತರಂಗದ ದೃಷ್ಟಿಯಲ್ಲಿ ಬಹಿರಂಗವು ಅಸಿದ್ಧವಾಗಿರುತ್ತದೆ. ಆದ್ದರಿಂದ ಯಙ್ ಗೆ ಲುಕ್ ಮೊದಲು ಬಂದು, ನಿಮಿತ್ತವನ್ನು ಅಪೇಕ್ಷಿಸುವ ಬಹಿರಂಗ ಕಾರ್ಯಗಳಾದ ದ್ವಿತ್ವಾದಿಗಳು ಅನಂತರ ಬರುತ್ತವೆ."ಪ್ರತ್ಯಯಲೋಪೇ ಪ್ರತ್ಯಯ ಲಕ್ಷಣಮ್" ಎಂಬ ಸೂತ್ರದಿಂದ ಯಙ್ ಲುಕ್ ಆದರೂ ಅದು ಇರುವಂತೆಯೇ ಭಾವಿಸಿ ದ್ವಿತ್ವಾದಿ ಕಾರ್ಯಗಳನ್ನು ಮಾಡಬೇಕು.

ಯಙ್ ಲುಕ್ ನಿಂದ "ಶೇಷಾತ್ ಕರ್ತರಿ ಪರಸ್ಮೈಪದಮ್" ಎಂಬ ಸೂತ್ರದಿಂದ ಪರಸ್ಮೈಪದ ಪ್ರತ್ಯಯಗಳು ಬರುತ್ತವೆ. ಇದರಿಂದ ಗಮನಿಸಬೇಕಾದ್ದೇನೆಂದರೆ, ಯಙ್ ಲುಕ್ ಪ್ರಯೋಗವು ಪರಸ್ಮೈಪದದಲ್ಲೇ ಇರುತ್ತದೆ. 'ಚರ್ಕರೀ ತಂಚ್' ಎಂದು

ಅದಾದಿಗಣದಲ್ಲಿ ಪಠಿಸಲಾಗಿದೆ. 'ಯಙ್ ಲುಕ್‌ಗೆ' ಪರ್ಯಾಯ ಪದವಾಗಿ ಈ ಪದ ಪ್ರಯೋಗವನ್ನು ಪ್ರಾಚೀನ ವೈಯ್ಯಾಕರಣರು ಮಾಡಿದ್ದಾರೆ. 'ಚರ್ಕರೀತ' ಎಂಬುದನ್ನು ಅದಾದಿ ಗಣದಲ್ಲಿ ಸ್ವೀಕರಿಸಿದ್ದರಿಂದ "ಅದಪ್ರಭೃತಿಭ್ಯಃಶಪಃ" ಎಂಬುವುದರಿಂದ ಆಗುವ ಕಾರ್ಯವು ಬೇರೆ ಗಣಕ್ಕೆ ಸೇರಿದ ಯಙ್ ಲುಗನ್ತ ಧಾತುಗಳಿಗೂ ಬರುತ್ತದೆ.

**(ಪಿತ್ ಆದ ಸಾರ್ವಧಾತುಕಕ್ಕೆ ವಿಕಲ್ಪವಾಗಿ ಇಡಾಗಮವನ್ನು ವಿಧಿಸುವ ಸೂತ್ರ)**

**ಸೂತ್ರ– 720ಯಙೋ ವಾ। (7.3.94)**

ವೃತ್ತಿ– ಯಙ್ಲುಗನ್ತಾತ್ ಪರಸ್ಯ ಹಲಾದೇಃ ಪಿತಃ ಸಾರ್ವಧಾತುಕಸ್ಯ ಇಟ್ ವಾ ಸ್ಯಾತ್। (440) "ಭೂ–ಸುವೋ"ರಿತಿ ಗುಣನಿಷೇಧಃ ಯಙ್‌ಲುಕಿ ಭಾಷಾಯಾಂ ನ, 'ಬೋಭೂತು'– ತೇತಿಕ್ತೇ ಇತಿ ಛಂದಸಿ ನಿಪಾತನಾತ್। ಬೋಭವೀತಿ, ಬೋಭೋತಿ। ಬೋಭೂತಃ(606) ಅದಭ್ಯಸ್ತಾತ್, ಬೋಭುವತಿ। ಬೋಭುವಾಞ್ಚಕಾರ, ಬೋಭವಾಮಾಸ। ಬೋಭವಿತಾ। ಬೋಭವಿಷ್ಯತಿ। ಬೋಭವೀತು, ಬೋಭೋತು। ಬೋಭೂತಾತ್। ಬೋಭೂತಾಮ್। ಬೋಭುವತು। ಬೋಭೂಹಿ। ಬೋಭವಾನಿ। ಅಬೋಭವೀತ್। ಅಬೋಭೋತ್। ಅಬೋಭೂತಾವ್। ಅಬೋಭುವುಃ। ಬೋಭೂಯಾತ್। ಬೋಭೂಯಾತಾಮ್। ಬೋಭೂಯುಃ। ಬೋಭೂಯಾತ್। ಬೋಭೂಯಾಸ್ತಾಮ್।ಬೋಭೂಯಾಸುಃ(439)। ಗಾತಿಸ್ಥೇತಿ ಸಿಚೋ ಲುಕ್। (719) ಯಙೋ ವೇತೀಟ್ ಪಕ್ಷೇ ಗುಣಂ ಬಾಧಿತ್ವಾ ನಿತ್ಯತ್ವಾದ್ ವುಕ್। ಅಬೋಭೂವೀತ್, ಅಬೋಭೋತ್, ಅಬೋಭೂತಾಮ್। ಅಬೋಭುವುಃ। ಅಬೋಭವಿಷ್ಯತ್।

ಅ. ವೃ.– "ಉತೋವೃದ್ಧಿರ್ಲುಕಿ ಹಲಿ" ಎಂಬ ಸೂತ್ರದಿಂದ 'ಹಲಿ'ಎಂಬ ಪದವು ಮತ್ತು "ನ ಅಭ್ಯಸ್ತಾಚಿ ಪಿತಿ ಸಾರ್ವಧಾತುಕೇ" ಎಂಬ ಸೂತ್ರದಿಂದ 'ಸಾರ್ವಧಾತುಕೇ' ಎಂಬ ಪದವು ಹಾಗು "ಭೂವ ಈಟ್" ಎಂಬುದರಿಂದ 'ಈಟ್' ಎಂಬ ಪದವೂ ಅನುವೃತ್ತವಾಗುತ್ತದೆ.

ಅರ್ಥ– ಯಙ್ ಲುಗನ್ತದ ಪರದಲ್ಲಿ ಹಲಾದಿಯಾದ, 'ಪಿತ್' ಆದ ಸಾರ್ವದಾತುಕ ಲಕಾರಕ್ಕೆ 'ಈಟ್' ಆಗಮವು ವಿಕಲ್ಪವಾಗಿ ಬರುತ್ತದೆ. "ಬೂಸುವೋಸ್ತಿಙ್" ಎಂಬ ಸೂತ್ರದಿಂದ ಆಗುವ ಗುಣ ನಿಷೇಧವು 'ಯಙ್ ಲುಗನ್ತದ' ಲೌಕಿಕ ಪ್ರಯೋಗದಲ್ಲಿ ಆಗುವುದಿಲ್ಲ ಯಾಕೆಂದರೆ "ದಾಧರ್ತಿ" ಎಂಬ ಸೂತ್ರದಲ್ಲಿ 'ಬೋಭೂತು–ತೇತಿಕ್ತೇ' ಇವೇ ಮೊದಲಾದ ಶಬ್ದಗಳಲ್ಲಿ ಗುಣ ಬರುವುದಿಲ್ಲವೆಂದು ನಿಪಾತ ಮಾಡಿದ್ದಾನೆ. ಇದರಿಂದ ವೇದದಲ್ಲಿ ಮಾತ್ರ ಗುಣ ನಿಷೇಧವಿರುತ್ತದೆ ಎಂದು ತಿಳಿದು ಬರುತ್ತದೆ. ಆದರೆ ಇಲ್ಲಿ ಗುಣಕ್ಕೆ ನಿಷೇಧ ಇಲ್ಲದಿರುವುದರಿಂದ ಗುಣಕ್ಕೆ ಅವಕಾಶವಿದೆ.

ಉದಾ–ಬೋಭವೀತಿ, ಬೋಭೋತಿ – 'ಪುನಃ ಪುನಃ ಅತಿಶಯೇನ ವಾ ಭವತಿ' –ಮತ್ತೆ ಮತ್ತೆ ಅಥವಾ ಅತ್ಯಧಿಕವಾಗಿ ಆಗುತ್ತದೆ ಎಂಬ ಅರ್ಥದಲ್ಲಿ 'ಭೂ' ಧಾತುವಿನ ಮುಂದೆ 'ಯಙ್' ಪ್ರತ್ಯಯವು ಬಂದು, ಭೂ+ಯ(ಯಙ್) ಎಂದಿದ್ದಾಗ,

"ಯಜೋಽಚಿಚ" ಎಂಬುದರಿಂದ ಲೋಪವಾಗಿ ಕೇವಲ 'ಭೂ' ಎಂದಿದ್ದಾಗ, ಪ್ರತ್ಯಯ ಲಕ್ಷಣದಿಂದ ಯಜನ್ತವಾಗುವುದರಿಂದ "ಸನ್ಯಜೋ" ಎಂಬುದರಿಂದ ದ್ವಿತ್ವವಾಗಿ ಭೂ+ಭೂ ಎಂದಿದ್ದಾಗ, ಅಭ್ಯಾಸ ಕಾರ್ಯವಾಗಿ ಬೂ+ಭೂ ಎಂದಿರುವಾಗ, "ಗುಣೋ ಯಙ್‌ಲುಕೋಃ" ಎಂಬುದರಿಂದ ಅಭ್ಯಾಸಕ್ಕೆ ಗುಣವಾಗಿ, ಬೋ+ಭೂ ಎಂದಿದ್ದಾಗ, ಧಾತು ಸಂಜ್ಞೆಯು ಬಂದು ಲಟ್ , ತಿಪ್, ಶಪ್ ಗಳಾಗಿ ಬೋ+ಭೂ+ಅ+ತಿ ಎಂದಿರುವಾಗ "ಚರ್ಕರೀತಂ ಚ" ಎಂಬುದರಿಂದ 'ಶಪ್' ಲೋಪವಾಗಿ ಬೋ+ಭೂ+ತಿ ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ಈಟ್ ಆಗಮವು ಬಂದು ಬೋ+ಭೂ+ಈ+ತಿ ಎಂದಿರುವಾಗ, ಗುಣವಾಗಿ ಬೋ+ಭೋ+ಈ+ತಿ ಎಂದಿದ್ದಾಗ 'ಅವ್' ಆದೇಶವಾಗಿ ಬೋ+ಭ್+ಅವ್+ಈ+ತಿ= ಬೋಭವೀತಿ ಎಂದು ರೂಪ ಸಿದ್ಧವಾಗುತ್ತದೆ.

ಈಟ್ ಆಗಮವು ಬಾರದೇ ಇದ್ದಾಗ ಬೋಭೋತಿ ಎಂದು ರೂಪವಾಗುತ್ತದೆ.

ಉದಾ- ಬೋಭೋತಃ -ಯಙ್-ಲುಗನ್ತ ಬೋಭೂ ಧಾತುವಿಗೆ 'ಲಟ್' ಪ್ರ.ಪು.ದ್ವಿವಚನದಲ್ಲಿ ಈ ರೂಪವು ಬಂದಿದೆ. ಅಪಿತ್ ಸಾರ್ವಧಾತುಕವಾಗಿರುವುದರಿಂದ 'ತಸ್' ಇದು ಜಿದ್ವದ್ಭಾವವನ್ನು ಹೊಂದುತ್ತದೆ. ಆದ್ದರಿಂದ ಗುಣವು ಬಾರದೇ ಬೋಭೂತಃ ಎಂದಾಗಿದೆ.

ಉದಾ- ಬೋಭೂವತಿ- ಯಙ್-ಲುಗನ್ತ ಬೋಭೂ ಧಾತುವಿಗೆ ಲಟ್,ಪ್ರ.ಬ.ಝಿ,ಶಪ್ ಗಳು ಬಂದು ಬೋಭೂ+ಅ+ಝಿ ಎಂದಿದ್ದಾಗ, "ಚರ್ಕರೀತಂ ಚ" ಎಂಬುದರಿಮ್ದ 'ಶಪ್' ಲೋಪವಾಗಿ ಬೋಭೂ+ಯಿ ಎಂದಿದ್ದಾಗ, "ಅದಭ್ಯಸ್ತಾತ್" ಎಂಬ ಸೂತ್ರದಿಂದ 'ಝ್' ಕಾರಕ್ಕೆ 'ಅತ್' ಆದೇಶವಾಗಿ ಬೋಭೂ+ಅತ್+ಇ ಎಂದಿದ್ದಾಗ' 'ಝಿ' ಅಪಿತ್ತಾದ ಸಾರ್ವಧಾತುಕವಾದ್ದರಿಂದ ಜಿದ್ವದ್ಭಾವ ಇರುವುದರಿಂದ ಗುಣವು ಬಾರದೇ ಅಚಿ "ಶ್ನುಧಾತುಭ್ರುವಾಂ ಯ್ವೋರಿಯಙುವಙೌ" ಎಂಬ ಸೂತ್ರದಿಂದ 'ಉವಙ್' ಆದೇಶವಾಗಿ ಬೋಭ್+ಉವ್+ಅತ್+ಇ=ಬೋಭುವತಿ ಎಂದು ರೂಪವು ಸಿದ್ಧವಾಗುತ್ತದೆ.

ಉದಾ- ಬೋಭವಾಞ್ಚಕಾರ, ಬೋಭವಾಮಾಸ- ಭೂ ಧಾತುವಿಗೆ ಯಙ್ ಸೇರಿಸಿ ಆ 'ಯಙ್' ಗೆ 'ಲುಕ್' ಬಂದು ಪ್ರತ್ಯಯ ಲಕ್ಷಣದಿಂದ ಮತ್ತೆ ಯಜನ್ತವಾಗಿ ದ್ವಿತ್ವ ಬಂದು, ನಂತರ ಅಭ್ಯಾಸಗಳಾಗಿ ಭೂ+ಯ(ಯಙ್) ಭೂ+ಭೂ ಎಂದಿದ್ದಾಗ, ಗುಣವಾಗಿ ಭೋ+ಭೂ ಎಂದಿದ್ದಾಗ, ಜಶ್ತ್ವ ಬಂದು, ಬೋ+ಭೋ ಎಂದಿರುವಾಗ, ಪುನಃ ಧಾತುತ್ವ ಬಂದು ಲಿಟ್ ಪರದಲ್ಲಿದ್ದಾಗ ಬೋ+ಭೋ+ಲಿಟ್ ಎಂದಿದ್ದಾಗ, 'ಆಮ್' ಬಂದು ಲಿಟ್ ಗೆ ಲುಕ್ ಆಗಿ ಬೋ+ಭೋ+ಆಮ್ ಎಂದಿದ್ದಾಗ, ಗುಣವಾಗಿ 'ಅವ್' ಆದೇಶ ಬಂದು ಬೋ+ಭವ್+ಆಮ್ ಎಂದಿದ್ದಾಗ, 'ಕೃಞ' ಧಾತುವಿನ ಅನುಪ್ರಯೋಗ ಮಾಡಿದಾಗ ತಿಪ್ ಬಂದು ನಂತರ ಣಲ್ ಬಂದು, ಬೋಭವಾಮ್+ಕೃ+ಅ(ಣಲ್) ಎಂದಿದ್ದಾಗ ದ್ವಿತ್ವ, ಅಭ್ಯಾಸ, ಅತ್ವ, ಹಲಾದಿಶೇಷ, ಶ್ಚುತ್ವ ಗಳು ಬಂದು "ಅಚೋಞ್ಣಿತಿ" ಎಂಬುದರಿಂದ ವೃದ್ಧಿ ಬಂದು 'ಮ್' ಕಾರಕ್ಕೆ 'ಅನುಸ್ವಾರ' ಪರಸವರ್ಣಗಳು ಬಂದು ಬೋಭವಾಞ್ಚಕಾರ ಎಂದು ರೂಪವು

ಸಿದ್ಧವಾಯಿತು.

ಉದಾ– ಬೋಭವಾಮಾಸ– 'ಕೃ' ಧಾತುವಿನ ಬದಲು 'ಅಸ್' ಧಾತುವನ್ನು ಅನುಪ್ರಯೋಗಿಸಿ ಹಿಂದಿನ ರೂಪದಂತೆ ಇದನ್ನೂ ತಿಳಿಯಬೇಕು.

ಉದಾ– ಬೋಭವಿತಾ– 'ಬೋಭೂ' ಧಾತುವಿನ ಲುಟ್ ಪ್ರ.ಪು.ಏ.ವಚನದಲ್ಲಿ ತಾಸ್ ಗೆ ಇಡಾಗಮ ಬಂದ ಮೇಲೆ ಧಾತುವಿನ 'ಊ' ಕಾರಕ್ಕೆ ಗುಣ ಮತ್ತು 'ಅವ್' ಆದೇಶವಾಗಿ ಬೋಭವಿತಾ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಬೋಭವಿಷ್ಯತಿ– ಬೋಭೂ ಎಂಬ ಯಙ್–ಲುಗನ್ತ ಧಾತುವಿನ ಲೃಟ್ ಪ್ರ.ಪು.ಏ.ವಚನದಲ್ಲಿ ತಿಪ್,ಸ್ಯ,ಇಟ್ ಗಳಾಗಿ ಬೋಭವಿಷ್ಯತಿ ರೂಪವು ಸಿದ್ಧವಾಗಿದೆ.

ಉದಾ– 1. ಬೋಭವೀತು – ಬೋಭೂ ಎಂಬ ಯಙ್–ಲುಗನ್ತ ಧಾತುವಿನ ಲೋಟ್ ಪ್ರ.ಪು.ಏ.ವಚನದಲ್ಲಿ ಹಲಾದಿ ಪಿತ್ ಸಾರ್ವಧಾತುಕ ತಿಪ್ ಗೆ ವಿಕಲ್ಪದಿಂದ 'ಈಟ್' ಆಗಮವು ಬಂದು ಬೋಭವೀತು ರೂಪವು ಸಿದ್ದವಾಗುತ್ತದೆ.

ಉದಾ– 2. ಬೋಭೋತು– ಇಲ್ಲಿ 'ಈಟ್' ಬಾರದೇ ಇರುವುದರಿಂದ 'ಅವ್' ಆದೇಶವು ಬಾರದೇ ಕೇವಲ ಗುಣವಾಗಿಯೇ ಬೋಭೋತು ರೂಪವು ಸಿದ್ದವಾಗುತ್ತದೆ.

ಉದಾ– 3. ಬೋಭೂತಾತ್– ತಾತಙ್ ಇದು ಙಿತ್ ಆಗಿರುವುದರಿಂದ "ಕ್ಙಿತಿಚ" ಎಂಬುದರಿಂದ ಗುಣವು ಬಾರದೇ ದೀರ್ಘ 'ಊ' ಕಾರವು ಹಾಗೆಯೇ ಉಳಿದಿದೆ ಹೀಗೆ ಬೋಭೂತಾತ್ ರೂಪವು ಸಿದ್ದವಾಗುತ್ತದೆ.

ಉದಾ– ಬೋಭೂತಾಮ್– ಬೋಭೂ ಧಾತುವಿನ ಲೋಟ್ ಪ್ರ.ಪು.ದ್ವಿವಚನವು ಅಪಿತ್ತಾದ ಸಾರ್ವಧಾತುಕವಾದ್ದರಿಂದ ಙಿದ್ವದ್ಭಾವವು ಬಂದು ಗುಣ ಬಾರದೇ ಬೋಭೂತಾಮ್ ರೂಪ ಸಿದ್ದವಾಗಿದೆ.

ಉದಾ– ಬೋಭುವತು– ಬೋಭೂ ಧಾತುವಿನ ಲೋಟ್ ಪ್ರ.ಪು.ಬ.ವಚನದಲ್ಲಿ 'ಝಿ' ಗೆ ಅಪಿತ್ ಸಾರ್ವಧಾತುಕವಾಗುವುದರಿಂದ ಙಿದ್ವದ್ಭಾವ ಬಂದು, ಗುಣದ ನಿಷೇಧವಾಗಿ 'ಉವಙ್' ಆದೇಶ ಬಂದು 'ಝ್' ಗೆ 'ಅತ್' ಆದೇಶವಾಗಿ "ಏರುಃ" ಎಂಬುದರಿಂದ 'ಉ' ಕಾರಾದೇಶವಾಗಿ ಬೋಭುವತು ರೂಪವು ಸಿದ್ಧವಾಗಿದೆ.

ಉದಾ– ಬೋಭೂಹಿ– ಬೋಭೂ ಧಾತುವಿನ ಲೋಟ್ , ಮ.ಪು.ಏ.ವಚನದಲ್ಲಿ 'ಸಿಪ್' ಗೆ ಹಿ ಆದೇಶ ಬಂದು 'ಹಿ' ಇದು ಅಪಿತ್ ಆಗಿರುವುದರಿಂದ 'ಊ' ಕಾರಕ್ಕೆ ಗುಣವು ಬಾರದೆ ಬೋಭೂಹಿ– ರೂಪ ಸಿದ್ಧವಾಗಿದೆ.

ಉದಾ– ಬೋಭವಾನಿ– ಬೋಭೂ ಧಾತುವಿನ ಲೋಟ್ ಉ.ಪು.ಏ.ವಚನದಲ್ಲಿ 'ಮಿಪ್' ಇದು ಪಿತ್ತಾಗಿರುವುದರಿಂದ ಗುಣವು ಬಂದು 'ಅವ್' ಆದೇಶವಾಗಿ 'ಆಟ್' ಆಗಮವು ಬಂದು 'ನಿ' ಆದೇಶವಾಗಿ ಬೋಭವಾನಿ– ರೂಪವು ಸಿದ್ಧವಾಗಿದೆ.

ಉದಾ– ಅಬೋಭವೀತ್ – ಬೋಭೂ ಧಾತುವಿನ ಲಙ್ ಪ್ರ.ಪು.ಏ.ವಚನದಲ್ಲಿ ಪಿತ್ ಹಲಾದಿ ಸಾರ್ವಧಾತುಕ 'ತಿಪ್' ಪರದಲ್ಲಿದ್ದಾಗ, 'ಊ' ಕಾರಕ್ಕೆ ಗುಣ ಬಂದು

'ಈಟ್' ಆಗಮವು ವಿಕಲ್ಪವಾಗಿ ಬಂದು ಅಬೋಭವೀತ್, ಅಬೋಭೂತ್ ಎಂದು ರೂಪಗಳು ಆಗುತ್ತವೆ. 'ಈಟ್' ಆಗಮವುಬಂದಾಗ ಮಾತ್ರ 'ಅವ್' ಆದೇಶವು ಬರುತ್ತದೆ. ಇಲ್ಲದೇ ಇದ್ದರೆ ಇಲ್ಲ.

ಉದಾ– ಅಬೋಭೂತಾಮ್– ಬೋಭೂ ಧಾತುವಿನ ಲಙ್ ಪ್ರ.ಪು.ದ್ವಿವಚನದಲ್ಲಿ ಅಪಿತ್ ಸಾರ್ವಧಾತುಕ 'ತಸ್' ಪರದಲ್ಲಿರೋಣದ್ದರಿಂದ ಗುಣವು ಬಾರದೇ ತಾಮ್ ಆದೇಶವಾಗಿ ಅಬೋಭೂತಾಮ್ ರೂಪವು ನಿಷ್ಪನ್ನವಾಗಿದೆ.

ಉದಾ– ಅಬೋಭುವುಃ– ಬೋಭೂ ಧಾತುವಿನ ಲಙ ಪ್ರ.ಪು.ಬ.ವಚನದಲ್ಲಿ ಅಪಿತ್ ಸಾರ್ವಧಾತುಕ 'ಝಿ' ಪರದಲ್ಲಿರೋಣದ್ದರಿಂದ 'ಊ' ಕಾರಕ್ಕೆ ಗುಣವು ಬಾರದೇ ಉವಙ್ ಆದೇಶವಾಗಿ 'ಝಿ' ಗೆ "ಸಿಜಭ್ಯಸ್ತ ವಿಧಿಭ್ಯಶ್ಚ" ಎಂಬ ಸೂತ್ರದಿಂದ 'ಜುಸ್' ಆದೇಶ ಬಂದು ಅಬೋಭುವುಃ ರೂಪ ಸಿದ್ದವಾಗಿದೆ.

ಉದಾ– ಬೋಭೂಯಾತ್– ಬೋಭೂ ಧಾತುವಿನ ವಿ.ಲಿ. ಪ್ರ.ಪು.ಏ. ವಚನದಲ್ಲಿ ಅದಾದಿಯಾಗೋಣದ್ದರಿಂದ ಶಪ್–ಲುಕ್ ಆಗಿ ಯಾಸುಟ್ ಆಗಮಕ್ಕೆ ಇಯ್ ಆದೇಶವು ಬಾರದೇ 'ಸ್' ಗೆ "ಲಿಙಸಲೋಪೋಽನನ್ತ್ಯಸ್ಯ" ಎಂಬುದರಿಂದ ಲೋಪವಾಗಿ 'ತಿ' ಎಂಬಲ್ಲಿರುವ 'ಇ' ಕಾರಕ್ಕೆ "ಇತಶ್ಚ" ಎಂಬುದರಿಂದ ಲೋಪವಾಗಿ ಬೋಭೂಯಾತ್ ರೂಪವು ಸಿದ್ಧವಾಗಿದೆ.

ಉದಾ– ಬೋಭೂಯಾತಾಮ್– ಬೋಭೂ ಧಾತುವಿನ ವಿ.ಲಿ.ಪ್ರ.ಪು.ದ್ವಿವಚನದಲ್ಲಿ ಶಪ್ ಲುಕ್ ಆಗಿ 'ಯಾಸುಟ್' ಆಗಮಕ್ಕೆ 'ಇಯ್' ಆದೇಶವು ಬಾರದೇ 'ಸ್' ಗೆ ಲೋಪವಾಗಿ 'ತಸ್' ಗೆ 'ತಾಮ್' ಆದೇಶವಾಗಿ ಬೋಭೂಯಾತಾಮ್ ರೂಪವು ಸಿದ್ಧವಾಗಿದೆ.

ಉದಾ– ಬೋಭೂಯುಃ– ವಿ.ಲಿ.ಪ್ರ.ಪು.ಬ.ವಚನದಲ್ಲಿ ಶಪ್ ಗೆ ಲುಕ್ ಬಂದು 'ಝಿ' ಗೆ 'ಜುಸ್' ಆದೇಶ ಬಂದು "ಉಸ್ಯಪದಾನ್ತಾತ್" ಎಂಬ ಸೂತ್ರದಿಂದ 'ಯ್' ಕಾರೋತ್ತರ 'ಆ' ಕಾರಕ್ಕೆ ಪರರೂಪವು ಏಕಾದೇಶವಾಗಿ ಬೋಭೂಯುಃ ರೂಪವು ಸಿದ್ಧವಾಗುತ್ತದೆ.

ಉದಾ– ಬೋಭೂಯಾತ್– ಆ.ಲಿ.ಪ್ರ.ಪು.ಏ.ವಚನದಲ್ಲಿ 'ಯಾಸುಟ್' ನಲ್ಲಿರುವ 'ಸ್' ಕಾರಕ್ಕೆ "ಸ್ಕೋಃ ಸಂಯೋಗಾದ್ಯೋರಂತೇ ಚ" ಎಂಬ ಸೂತ್ರದಿಂದ ಲೋಪವು ಬಂದು, ಇದು ಪಿತ್ತಾದರೂ ಸಾರ್ವಧಾತುಕವಲ್ಲವಾದ್ದರಿಂದ 'ಈಟ್' ಆಗಮವು ಬರುವುದಿಲ್ಲ. "ಇತಶ್ಚ" ಎಂಬುವುದರಿಂದ 'ತಿ' ಯಲ್ಲಿರುವ 'ಇ' ಕಾರಕ್ಕೆ ಲೋಪ ಬಂದು ಬೋಭೂಯಾತ್ ರೂಪವು ಸಿದ್ಧವಾಗಿದೆ.

ಉದಾ– ಬೋಭೂಯಾಸ್ತಾಮ್, ಬೋಭೂಯಾಸುಃ – ಆ.ಲಿ.ಪ್ರ.ಪು.ದ್ವಿವಚನದಲ್ಲಿ ಮತ್ತು ಬಹುವಚನಗಳಲ್ಲಿ ಆರ್ಧಧಾತುಕವಾಗಿರುವುದರಿಂದ "ಲಿಙಃ–ಸಲೋಪೋಽನನ್ತ್ಯಸ್ಯ" ಎಂಬುದರಿಂದ 'ಸ್' ಕಾರಕ್ಕೆ ಲೋಪವು ಬಾರದೇ ಬೋಭೂಯಾಸ್ತಾಮ್, ಬೋಭೂಯಾಸುಃ ಎಂಬ ಎರಡು ರೂಪಗಳು ಸಿದ್ಧವಾಗಿವೆ.

ಉದಾ- ಅಬೋಭೂವೀತ್ - ಭೂ ಧಾತುವಿಗೆ ಯಙ್ ಪ್ರತ್ಯತವು ಬಂದು ಭೂ+ಯ ಎಂದಿದ್ದಾಗ, ಅದು ಲುಕ್ ಆಗಿ ಭೂ ಎಂದಿರುವಾಗ, ಪ್ರತ್ಯಯ ಲಕ್ಷಣದಿಂದ ಯಙನ್ತ ವಾಗುವುದರಿಂದ ದ್ವಿತ್ವ ಮತ್ತು ಅಭ್ಯಾಸ ಕಾರ್ಯಗಳಾಗಿ ಬೊ+ಭೋ= ಎಂದಿದ್ದಾಗ, ಧಾತುಸಂಜ್ಞೆ ಮತ್ತು ಲುಙ್ 'ಲ್' ಕಾರಗಳು ಬಂದು, ಬೋ+ಭೋ+ಲ್= ಎಂದಿದ್ದಾಗ 'ತಿಪ್' ಆದೇಶ ಹಾಗೂ ಅಡಾಗಮಗಳು ಬಂದು ಅಬೋ+ಭೂ+ತಿ ಎಂದಿರುವಾಗ, 'ತಿಪ್' ನ 'ಇ'ಕಾರಕ್ಕೆ ಲೋಪವಾಗಿ ಚ್ಲಿ ಹಾಗು ಸಿಚ್ ಗಳು ಮಧ್ಯದಲ್ಲಿ ಬಂದು, ಅಬೋ+ಭೂ+ಸಿಚ್+ತ ಎಂಇದ್ದಾಗ, "ಗತಿಸ್ಥಾಘುಪಾಭೂಭ್ಯಃ ಸಿಚಃ ಪರಸ್ಮೈಪದೇಷು" ಎಂಬುದರಿಂದ 'ಸಿಚ್' ಗೆ ಲೋಪವಾಗಿ ಅಬೋ+ಭೂ+ತ್ ಎಂದಿದ್ದಾಗ, 'ಈಟ್' ಆಗಮವು ಬಂದು ಅಬೋ+ಭೂ+ಈ+ ತ್ ಎಂದಿರುವಾಗ 'ಈಟ್' ಆಗಮವು ಬಂದ ಪಕ್ಷದಲ್ಲಿ ಗುಣವನ್ನು ಬಾಧಿಸಿ "ಭುವೋ ವುಗ್ ಲುಙ್‌ಲಿಟೋಃ" ಎಂಬುದರಿಂದ ನಿತ್ಯವಾಗಿ 'ವುಕ್' ಆಗಮವು ಬಂದು ಅಬೊ+ಭೂ+ವ್+ಈ+ತ್=ಅಬೋಭೂವೀತ್ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ- ಅಬೋಭೋತ್-ಈಟ್ ಆಗಮವು ಬಾರದ ಪಕ್ಷದಲ್ಲಿ ಅಚ್ ಪರತ್ವವಿಲ್ಲದ್ದರಿಂದ ವುಕ್ ಆಗಮವು ಬಾರದೇ ಗುಣವಾಗಿ ಅಬೋಭೋತ್ ರೂಪವು ಸಿದ್ಧವಾಗಿದೆ.

ಉದಾ- ಅಬೋ ಭೂತಾಮ್- ಈ 'ಲುಙ್' 'ಲ' ಕಾರದ ರೂಪವು 'ಲಙ್' ಪ್ರ.ಪು.ದ್ವಿ ವಚನದಂತೆಯೇ ಅಗುತ್ತದೆ.

ಉದಾ- ಅಬೋಭೂವುಃ- ಲುಙ್ ಲಕಾರದ ಪ್ರ.ಪು.ಬ.ವಚನದಲ್ಲಿ 'ಝಿ'ಗೆ "ಸಿಜಭ್ಯಸ್ತ ವಿಧಿಭ್ಯಶ್ಚ" ಎಂಬುದರಿಂದ 'ಜುಸ್' ಆದೇಶವಾಗಿ ಬಂದು, ಅಜಾದಿ ಪ್ರತ್ಯಯವು ಪರದಲ್ಲಿರೋಣದ್ದರಿಂದ "ಭುವೋವುಗ್ ಲುಙ್ ಲಿಟೋಃ" ಎಂಬುದರಿಂದ ವುಕ್ ಆಗಮವು ಬಂದು ಅಬೋಭೂವುಃ ರೂಪವು ಸಿದ್ಧವಾಗಿದೆ.

ಉದಾ- ಅಬೋಭವಿಷ್ಯತ್- ಲೃಙ್ ಲಕಾರದ ಪ್ರ.ಪು.ಏ.ವಚನದಲ್ಲಿ 'ಸ್ಯ' ಪ್ರತ್ಯಯವು ಬಂದು 'ತಿ' ಯಲ್ಲಿರುವ 'ಇ' ಕಾರಕ್ಕೆ ಲೋಪ, ಅಡಾಗಮ, ಗುಣ, ಇಡಾಗಮ ಮತ್ತು ಅವ್ ಆದೇಶವಾಗಿ ಅಬೋಭವಿಷ್ಯತ್ ರೂಪವು ಸಿದ್ಧವಾಗುತ್ತದೆ.

**॥ ಇತಿ ಯಙ್-ಲುಙನ್ತ ಪ್ರಕ್ರಿಯಾ(25) ಪ್ರಕರಣಮ್॥**

**॥ಇಲ್ಲಿಗೆ ಯಙ್ ಲುಗನ್ತ ಪ್ರಕರಣ ಮುಗಿಯಿತು ॥**

***

# ಪ್ರಕರಣ-26: ನಾಮಧಾತು ಪ್ರಕ್ರಿಯಾ

**(ಸೂತ್ರ ಸಂಖ್ಯೆ 721 ರಿಂದ 730 ವರೆಗೆ)**

**('ಕ್ಯಚ್' ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ- 721 ಸುಪ ಆತ್ಮನಃ ಕ್ಯಚ್। (3.1.8)**

ವೃತ್ತಿ- ಇಷಿಕರ್ಮಣ ಏಷಿತುಃ ಸಂಬಧಿನಃ ಸುಬನ್ತಾದಿಚ್ಛಾಯಾಮರ್ಥೇ ಕ್ಯಚ್ ಪ್ರತ್ಯಯೋ ವಾ ಸ್ಯಾತ್।

ಅ.ವೃ - 'ಪ್ರತ್ಯಯಃ', 'ಪರಶ್ಚ' ಎಂಬ ಈ ಎರಡು ಸೂತ್ರಗಳು ಇಲ್ಲಿ ಅಧಿಕಾರ ಸೂತ್ರಗಳಾಗಿವೆ. 'ಧಾತೋಃ ಕರ್ಮಣಃ ಸಮಾನ ಕರ್ತೃಕಾತ್ ಇಚ್ಛಾಯಾಂ ವಾ' ಎಂಬ ಸೂತ್ರದಿಂದ ಕರ್ಮಣಃ, ಇಚ್ಛಾಯಾಂ, ವಾ ಎಂಬ ಮೂರು ಪದಗಳು ಅನುವೃತ್ತವಾಗುತ್ತವೆ. 'ಪ್ರತ್ಯಯ ಗ್ರಹಣೇ ತದಂತ ಗ್ರಹಣಮ್' ಎಂಬ ನಿಯಮದಿಂದ 'ಸುಪ್' ಶಬ್ದದಿಂದ ಸುಬಂತವು ಗೃಹೀತವಾಗುತ್ತದೆ.

ಅರ್ಥ- ಇಚ್ಛಾರ್ಥಕ ಧಾತುವಿನ ಕರ್ಮವಾಗಿಯೂ, ಹಾಗೆಯೇ ಇಚ್ಛಿಸುವವನ ಸಂಬಂಧವುಳ್ಳ ಸುಬಂತದ ಮೇಲೆ ಇಚ್ಛಾರ್ಥದಲ್ಲಿ ವಿಕಲ್ಪಿಕವಾಗಿ 'ಕ್ಯಚ್' ಪ್ರತ್ಯಯವು ಬರುತ್ತದೆ.

**('ಸುಪ್'ಗೆ ಲುಕ್ ವಿಧಾಯಕ ಸೂತ್ರ)**

**ಸೂತ್ರ- 722 - ಸುಪೋ ಧಾತು-ಪ್ರಾತಿಪದಿಕಯೋಃ। (2.4.71)**

ವೃತ್ತಿ- ಏತಯೋಃ ಅವಯವಸ್ಯ ಸುಪಃ ಲುಕ್।

ಅ.ವೃ-'ಣ್ಯಕ್ಷತಿಯಾರ್ಷಞಿತೋಯೂನಿಲುಗಣಿಞೋಃ' ಎಂಬ ಸೂತ್ರದಿಂದ 'ಲುಕ್' ಎಂಬ ಪದ ಅನುವೃತ್ತವಾಗುತ್ತದೆ.

ಅರ್ಥ-ಧಾತು ಮತ್ತು ಪ್ರಾತಿಪದಿಕಗಳ ಅವಯವದ 'ಸುಪ್'ಗೆ 'ಲುಕ್' ಬರುತ್ತದೆ.

**(ಈತ್ವವನ್ನು ವಿಧಿಸುವ ಸೂತ್ರ)**

**ಸೂತ್ರ- 723- ಕ್ಯಚಿ ಚ।(7.4.33)**

ವೃತ್ತಿ- ಅವರ್ಣಸ್ಯ ಈಃ।ಆತ್ಮನಃ ಪುತ್ರಮಿಚ್ಛತಿ ಪುತ್ರೀಯತಿ।

ಅ.ವೃ- 'ಅಸ್ಯಚ್ವೌ' ಎಂಬ ಸೂತ್ರದಿಂದ 'ಅಸ್ಯ' ಎಂಬ ಪದವು ಮತ್ತು 'ಈಘ್ರಾಧ್ಮೋಃ' ಎಂಬ ಸೂತ್ರದಿಂದ 'ಈ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ-'ಕ್ಯಚ್' ಪ್ರತ್ಯಯವು ಪರದಲ್ಲಿದ್ದಾಗ 'ಅ'ವರ್ಣದ ಸ್ಥಾನದಲ್ಲಿ 'ಈ' ಕಾರವು ಆದೇಶವಾಗಿ ಬರುತ್ತದೆ.

ಉದಾ - ಆತ್ಮನಃ ಪುತ್ರಮಿಚ್ಛತಿ - ಪುತ್ರೀಯತಿ = ತನಗೆ ಮಗನನ್ನು ಇಚ್ಛಿಸುತ್ತಾನೆ. ಎಂಬ ಈ ವಿಗ್ರಹದಲ್ಲಿ ಪುತ್ರ+ಅಮ್ ಎಂದಿದ್ದಾಗ 'ಸುಪ ಆತ್ಮನಃ ಕ್ಯಚ್' ಎಂಬುದರಿಂದ

'ಕ್ಯಚ್' ಪ್ರತ್ಯಯವು ಬಂದು ಪುತ್ರ+ಅಮ್+ಯ(ಕ್ಯಚ್) ಎಂದಿದ್ದಾಗ 'ಸನಾದ್ಯಂತಾಃ ಧಾತವಃ' ಎಂಬುದರಿಂದ ಧಾತು ಸಂಜ್ಞೆಯು ಬಂದು 'ಅಮ್' ಎಂಬುದು ಧಾತುವಿನ ಅವಯವವಾಗುತ್ತದೆ. 'ಸುಪೋಧಾತುಪ್ರಾತಿಪದಿಕಯೋಃ' ಎಂಬುದರಿಂದ 'ಅಮ್'ಗೆ ಲೋಪವಾಗಿ ಪುತ್ರ+ಯ್ ಎಂದಿದ್ದಾಗ 'ಕ್ಯಚಿಚ' ಎಂಬುದರಿಂದ 'ಅ'ಕಾರಕ್ಕೆ 'ಈ'ಕಾರವು ಬಂದು ಪುತ್ರೀಯ ಎಂದಿದ್ದಾಗ, ಲಟ್ ಪ್ರ.ಪು. ಏ.ವ. ದಲ್ಲಿ ತಿಪ್, ಶಪ್‌ಗಳು ಬಂದು, ಪುತ್ರೀಯ+ಅ+ತಿ ಎಂದಿದ್ದಾಗ 'ಕ್ಯಚ್'ನ 'ಅ'ಕಾರಕ್ಕೂ ಹಾಗು 'ಶಪ್'ನ 'ಅ'ಕಾರಕ್ಕೂ 'ಅತೋ ಗುಣೇ' ಎಂಬುದರಿಂದ ಪರರೂಪವಾಗಿ ಪುತ್ರೀಯತಿ ಎಂದು ರೂಪವು ಸಿದ್ಧವಾಗುತ್ತದೆ.

**(ಪದ ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ- 724 - ನಃ ಕ್ಯೇ।( 1.4.15)**

ವೃತ್ತಿ- ಕ್ಯಚಿ ಕ್ಯಙಿ ಚ ನಾತ್ಮಮೇವ ಪದಂ ನಾನ್ಯತ್। ನಲೋಪಃ। ರಾಜೀಯತಿ। ನಾನ್ತಮೇವೇತಿ ಕಿಮ್? ವಾಚ್ಯತಿ(612) ಹಲಿ ಚ। ಗೀರ್ಯತಿ। ಪೂರ್ಯತಿ। ಧಾತೋರಿತ್ಯೇವ। ನೇಹ- ದಿವಮಿಚ್ಛತಿ। ದಿವ್ಯತಿ।

ಅ.ವೃ -"ಸುಪ್ ತಿಙನ್ತಂ ಪದಮ್" ಎಂಬ ಸೂತ್ರದಿಂದ ಪದಮ್ ಎಂಬ ಶಬ್ದದ ಅನುವೃತ್ತಿಯಾಗಿದೆ.

ಅರ್ಥ -'ಕ್ಯಚ್', 'ಕ್ಯಙ್', 'ಕ್ಯಶ್' ಈ ಮೂರು ಪ್ರತ್ಯಯಗಳು ಪರದಲ್ಲಿದ್ದಾಗ 'ನ' ಕಾರಾಂತಕ್ಕೇನೆ ಪದ-ಸಂಜ್ಞೆಯು ಬರುತ್ತದೆ. ಬೇರೆಯದಕ್ಕೆ ಅಲ್ಲ.

ಉದಾ - ರಾಜೀಯತಿ - ರಾಜಾನಂ ಆತ್ಮನಃ ಇಚ್ಛತಿ = ತನಗೆ ರಾಜನನ್ನು ಬಯಸುತ್ತಾನೆ. ಎಂಬ ಈ ವಿಗ್ರಹದಲ್ಲಿ ರಾಜನ್+ಅಮ್+ಯ(ಕ್ಯಚ್) ಎಂದಿದ್ದಾಗ ಧಾತು-ಸಂಜ್ಞೆಯು ಬಂದು, "ಸುಪೊಧಾತುಪ್ರಾತಿಪದಿಕಯೋಃ" ಎಂಬುದರಿಂದ 'ಅಮ್' ಗೆ ಲೋಪವಾಗಿ ರಾಜನ್+ಯ ಎಂದಿರುವಾಗ, ಪ್ರಕೃತ ಸೂತ್ರದಿಂದ 'ರಾಜನ್' ಎಂಬುದಕ್ಕೆ ಪದ ಸಂಜ್ಞೆಯು ಬಂದು "ನಲೋಪಃ ಪ್ರಾತಿಪದಿಕಾನ್ತಸ್ಯ" ಎಂಬುದರಿಂದ 'ನ್' ಕಾರಕ್ಕೆ

ಲೋಪವಾಗಿ ರಾಜ+ಯ ಎಂದಿರುವಾಗ "ಕ್ಯಚಿಚ" ಎಂಬುದರಿಂದ 'ಅ' ಕಾರಕ್ಕೆ 'ಈ' ಕಾರಾದೇಶವಾಗಿ ರಾಜೀಯ ಎಂದಿರುವಾಗ, ಕ್ಯಜಂತ ಧಾತುವಿನ ಮುಂದೆ ಲಟ್, ತಿಪ್, ಶಪ್‌ಗಳು ಬಂದು ರಾಜೀಯ+ಅ+ತಿ ಎಂದಿದ್ದಾಗ, ಪರರೂಪ ಏಕಾದೇಶವಾಗಿ ರಾಜೀಯತಿ ಎಂದು ರೂಪವು ಸಿದ್ದವಾಗುತ್ತದೆ.

ನಾಂತಮೇವ ಇತಿ ಕಿಮ್? ನಾಂತವಾದುದ್ದಕ್ಕೇನೇ ಪದ-ಸಂಜ್ಞೆ ಬರುತ್ತದೆ ಎಂದು ಏಕೆ ಹೇಳಬೇಕು? ಎಂದರೆ ವಾಚ್ಯತಿ ಎಂಬುದರಿಂದ ಸಮಾಧಾನವನ್ನು ಹೇಳುತ್ತಾನೆ. ಆತ್ಮನಃ ವಾಚಂ ಇಚ್ಛತಿ ಎಂಬ ವಿಗ್ರಹದಲ್ಲಿ ವಾಚ್+ಅಮ್+ಯ(ಕ್ಯಚ) ಎಂದಿದ್ದಾಗ, 'ಸುಪ್' ಲೋಪವಾಗಿ ವಾಚ್+ಯ ಎಂದಿದ್ದಾಗ, ಇದು ನಾಂತವಾಗದಿರೋಣದ್ದರಿಂದ ಪದ ಸಂಜ್ಞೆ ಬಾರದೇ ಇರದ್ದರಿಂದ 'ಚ' ಕಾರಕ್ಕೆ ಕುತ್ವ ಹಾಗು ಜಶ್ತ್ವಗಳು ಬಾರದೇ

ಲಟ್, ತಿಪ್, ಶಪ್ ಗಳು ಬಂದು ಪರರೂಪವಾಗಿ 'ವಾಚ್ಯತಿ' ಎಂದ ರೂಪವು ಸಿದ್ಧವಾಗುತ್ತದೆ.

ಉದಾ- ಗೀರ್ಯತಿ, ಪೂರ್ಯತಿ - 'ಗಿರಂ ಆತ್ಮನಃ ಇಚ್ಛತಿ' ಅಥವಾ 'ಪುರಂ ಆತ್ಮನಃ ಇಚ್ಛತಿ' ಎಂಬ ವಿಗ್ರಹದಲ್ಲಿ ಗಿರ್+ಅಮ್, ಮತ್ತು ಪುರ್+ಅಮ್ ಎಂದಿದ್ದಾಗ ಈ ಸುಬಂತಗಳಿಗೆ 'ಕ್ಯಚ್' ಬಂದು ಗಿರ್+ಅಮ್+ಯ, ಪುರ್+ಅಮ್+ಯ ಎಂದಿದ್ದಾಗ, ಧಾತು-ಸಂಜ್ಞೆ ಬಂದು 'ಸುಪ್' ಗೆ ಲೋಪವಾಗಿ ಗಿರ್+ಯ, ಪೂರ್+ಯ ಎಂದಿದ್ದಾಗ, "ಹಲಿಚ" ಎಂಬುದರಿಂದ ಉಪಧಾ 'ಇ' ಕಾರ 'ಉ' ಕಾರಗಳಿಗೆ ಧೀರ್ಘವಾಗಿ ಗಿರ್+ಯ, ಪೂರ್+ಯ ಎಂದಿದ್ದಾಗ, ಲಟ್, ತಿಪ್, ಶಪ್‌ಗಳು ಬಂದು ಗೀರ್+ಯ್+ಅ+ತಿ, ಪೂರ್+ಯ+ಅ+ತಿ ಎಂದಿದ್ದಾಗ, ಪರರೂಪವು ಬಂದು ಗೀರ್ಯತಿ ಮತ್ತು ಪೂರ್ಯತಿ ಎಂದು ರೂಪಗಳು ಸಿದ್ಧವಾಗುತ್ತವೆ.

ಉದಾ- ದಿವ್ಯತಿ- ದಿವಂ ಇಚ್ಛತಿ ಇತಿ ದಿವ್ಯತಿ ಎಂಬ ವಿಗ್ರಹದಲ್ಲಿ 'ಹಲಿಚ' ಎಂಬ ಸೂತ್ರದಿಂದ ರೇಫ ಮತ್ತು 'ವ್' ಅಂತವಾಗಿರುವ ಶಬ್ದಗಳ ಉಪಧೆಗೆ ದೀರ್ಘವು ಬರುತ್ತದೆ. ಆದರೆ ಆ ರೇಫ ಮತ್ತು ವ್-ಕಾರಗಳು ಧಾತುವಿಗೆ ಸಂಬಂಧಿಸಿದ್ದಾಗಿರಬೇಕು. 'ಗೃ ನಿಗರಣೇ' ಧಾತುವಿನ ನಂತರ 'ಕ್ವಿಪ್' ಪ್ರತ್ಯಯವಾಗಿ "ಋತ ಇದ್ಧಾತೋಃ" ಎಂಬ ಸೂತ್ರದಿಂದ 'ಋ' ಕಾರಕ್ಕೆ ಇರ್ ಬಂದು ಗಿರ್ ಎಂದಾಗಿ ಮತ್ತು 'ಪೃ ಪಾಲನ ಪೂರಣಯೋಃ' ಎಂಬ ಧಾತುವಿನ ನಂತರ 'ಕ್ವಿಪ್' ಪ್ರತ್ಯಯ ಬಂದ ಮೇಲೆ "ಉದೋಷ್ಠಪೂರ್ವಸ್ಯ" ಎಂಬ ಸೂತ್ರದಿಂದ 'ಉತ್' ಆದೇಶವಾಗಿ "ಉರಣ್ ರಪರಃ" ಎಂಬುದರಿಂದ 'ಋ' ಕಾರಕ್ಕೆ 'ಉರ್' ಎಂಬುದಾಗಿ ಪುರ್ ಎಂದಾಗಿದೆ. ಆದರೆ "ಹಲಿಚ"ಎಂಬ ಸೂತ್ರದಿಂದ 'ದೀವ್ಯತಿ' ಎಂದಾಗುವುದಿಲ್ಲ. ಏಕೆಂದರೆ ದಿವ್ ಶಬ್ದವು ಅವ್ಯುತ್ಪನ್ನ ಪ್ರಾತಿಪದಿಕವಾಗಿದೆ.

**(ಕ್ಯಚ್ ಮತ್ತು ಕ್ಯಙ್ ಗಳಿಗೆ ವಿಕಲ್ಪವಾಗಿ ಲೋಪ ಹೇಳುವ ಸೂತ್ರ )**

**ಸೂತ್ರ- 725 ಕ್ಯಸ್ಯ ವಿಭಾಷಾ। (6.4.50)**

ವೃತ್ತಿ- ಹಲಃ ಪರಯೋಃ ಕ್ಯಚ್ಕ್ಯಙೋರ್ಲೋಪೋವಾರ್ಧಧಾತುಕೆ। ಆದೇಃ ಪರಸ್ಯ। ಅತೋ ಲೋಪಃ।ತಸ್ಯ ಸ್ಥಾನಿವತ್ವಾಲ್ಲಘೂಪಧಗುಣೋ ನ। ಸಮಿಧಿತಾ, ಸಮಿಧ್ಯಿತಾ।

ಅ. ವೃ - "ಯಸ್ಯ ಹಲಃ" ಎಂಬ ಸೂತ್ರದಿಂದ ಹಲಃ ಎಂಬ ಪದವು ಹಾಗೂ 'ಅತೋ ಲೋಪಃ' ಎಂಬುವುದರಿಂದ ಲೋಪಃ ಎಂಬ ಪದವು ಅನುವೃತ್ತ ವಾಗುತ್ತದೆ. 'ಆರ್ಧ ಧಾತುಕೇ' ಎಂಬುದು ಅಧಿಕಾರ ಸೂತ್ರವಾಗಿದೆ.

ಅರ್ಥ- 'ಹಲ್' ವರ್ಣದ ಪರದಲ್ಲಿರುವ ಕ್ಯಚ್ ಮತ್ತು ಕ್ಯಙ್ ಗಳಿಗೆ ಆರ್ಧಧಾತುಕವು ಪರದಲ್ಲಿದ್ದಾಗ ವಿಕಲ್ಪವಾಗಿ ಲೋಪವು ಬರುತ್ತದೆ.

ವಿವರಣೆ- "ಯಸ್ಯಹಲಃ" ಎಂಬ ಸೂತ್ರದಿಂದ ನಿತ್ಯವಾಗಿ 'ಯ' ಕಾರಕ್ಕೆ ಲೋಪವು ಬರಬೇಕಾಗಿತ್ತು, ಆದರೆ ಅದನ್ನು ಬಾಧಿಸಿ ವಿಕಲ್ಪವಾಗಿ ಪ್ರಕೃತ ಸೂತ್ರದಿಂದ ಲೋಪವು ಹೇಳಲಾಗಿದೆ.

'ಆದೇಃ ಪರಸ್ಯ' ಎಂಬುದರ ನಿಯಮದಿಂದ 'ಕ್ಯಚ್' ಮತ್ತು 'ಕ್ಯಜ್' ಗಳಲ್ಲಿ ಉಳಿಯುವ ಯ್+ಅ ಎಂಬಲ್ಲಿ ಆದಿವರ್ಣವಾದ 'ಯ್' ಕಾರವು ಲೋಪವಾಗುತ್ತದೆ. 'ಅತೋಲೋಪಃ' ಎಂಬುವುದರಿಂದ ಉಳಿದ 'ಅ' ಕಾರವು ಲೋಪವಾಗಿದೆ.

ಆ 'ಅ' ಕಾರ ಲೋಪಕ್ಕೆ ಸ್ಥಾನಿವದ್ಭಾವ ಮಾಡಿದ್ದರಿಂದ ಲಘೂಪದ ಗುಣ ಆಗುವುದಿಲ್ಲ. ಯಾಕೆಂದರೆ ಆಗ ಉಪಧೆಯಲ್ಲಿ ಲಘು ಅಕ್ಷರವು ಇರುವುದಿಲ್ಲ.

ಉದಾ–ಸಮಿಧಿತಾ–'ಸಮಿಧಂ ಆತ್ಮನಃ ಇಚ್ಛತಿ' ಎಂಬ ವಿಗ್ರಹದಲ್ಲಿ ಸಮಿಧ್+ಅಮ್ ಎಂಬ ಸುಬಂತದ ನಂತರ 'ಕ್ಯಚ್' ಪ್ರತ್ಯಯವು ಬಂದು ಸಮಿಧ್+ಅಮ್+ಯ ಎಂದಿದ್ದಾಗ, ಧಾತು ಸಂಜ್ಞೆಯನ್ನು ಪಡೆದನಂತರ 'ಸುಪ್' ಗೆ ಲೋಪವು ಬರುತ್ತದೆ. ಅನಂತರ ಸಮಿಧ್+ಯ ಎಂದಿದ್ದಾಗ, ಈ ಕ್ಯಜಂತ ಧಾತುವಿನ ಮೇಲೆ ಲುಟ್, ತಿಪ್, ಡಾ, ತಾಸ್, ಇಟ್ ಆಗಮ ಬಂದು ಪ್ರಕೃತ ಸೂತ್ರದಿಂದ ಮತ್ತು 'ಆದೇಃ ಪರಸ್ಯ' ಎಂಬ ಸೂತ್ರದ ಸಹಾಯದಿಂದ 'ಯ್' ದ ಲೋಪವು ಆಗುತ್ತದೆ. ಆಮೇಲೆ 'ಅತೋಲೋಪಃ' ಎಂಬ ಸೂತ್ರದಿಂದ 'ಅ' ಕಾರಕ್ಕೆ ಲೋಪವಾಗಿ ಸಮಿಧ್ +ಇ+ತ್+ಆ=ಸಮಿಧಿತಾ ಎಂಬ ರೂಪವು ಸಿದ್ಧವಾಗುತ್ತದೆ.

**('ಕಾಮ್ಯಚ್' ಪ್ರತ್ಯಯವನ್ನು ವಿಧಿಸುವ ಸೂತ್ರ )**

**ಸೂತ್ರ– 726 ಕಾಮ್ಯಚ್ಚ। (3.1.9)**

ವೃತ್ತಿ– ಉಕ್ತ ವಿಷಯೇ ಕಾಮ್ಯಚ್ ಸ್ಯಾತ್। ಪುತ್ರಮಾತ್ಮನ ಇಚ್ಛತಿ– ಪುತ್ರ ಕಾಮ್ಯತಿ। ಪುತ್ರ ಕಾಮ್ಯಿತಾ।

ಪ.ಛೇ – ಕಾಮ್ಯಚ್, ಚ।

ಅ.ವೃ – "ಸುಪ ಆತ್ಮನಃ ಕ್ಯಚ್" ಎಂಬ ಸೂತ್ರದಿಂದ 'ಸುಪಃ' ಮತ್ತು 'ಆತ್ಮನಃ' ಎಂಬ ಪದಗಳು ಮತ್ತು "ಧಾತೋಃ ಕರ್ಮಣಃ ಸಮಾನ ಕರ್ತೃಕಾತ್ ಇಚ್ಛಾಯಾಂ ವಾ" ಎಂಬ ಸೂತ್ರದಿಂದ ಕರ್ಮಣಃ, ಇಚ್ಛಾಯಾಂ, ವಾ, ಎಂಬ ಮೂರು ಪದಗಳು ಅನುವೃತ್ತವಾಗುತ್ತವೆ.

ಅರ್ಥ–'ಸುಪ ಆತ್ಮನಃ ಕ್ಯಚ್' ಎಂಬ ಸೂತ್ರದಿಂದ 'ಕ್ಯಚ್' ಪ್ರತ್ಯಯವು ಯಾವ ಅರ್ಥದಲ್ಲಿ ವಿಧಿಸಲಾಗಿದೆಯೋ ಅದೇ ಅರ್ಥದಲ್ಲಿ 'ಕಾಮ್ಯಚ್(ಕಾಮ್ಯ)' ಪ್ರತ್ಯಯವು ವಿಧಿಸಲಾಗಿದೆ.

ಉದಾ– ಪುತ್ರಕಾಮ್ಯತಿ – 'ಪುತ್ರಂ ಆತ್ಮನಃ ಇಚ್ಛತಿ' ಎಂಬ ಅರ್ಥದಲ್ಲಿ ಪ್ರಕೃತ ಸೂತ್ರದಿಂದ ಪುತ್ರ+ಅಮ್ ಎಂಬ ಸುಬಂತಕ್ಕೆ 'ಕಾಮ್ಯಚ್' ಪ್ರತ್ಯಯವು ಬಂದು ಪುತ್ರ+ಅಮ್+ಕಾಮ್ಯ ಎಂದಿದ್ದಾಗ 'ಅಮ್' ಪ್ರತ್ಯಯವು ಬಂದು 'ಸುಪೋಧಾತು ಪ್ರಾತಿಪದಕಯೋಃ' ಎಂಬ ಸೂತ್ರದಿಂದ ಲೋಪವಾಗಿ ಪ್ರತ್ರ+ಕಾಮ್ಯ ಎಂದಿದ್ದಾಗ ಲಟ್, ತಿಪ್, ಶಪ್, ಪರರೂಪಗಳು ಬಂದು ಪುತ್ರ+ಕಾಮ್ಯ+ಅ+ತಿ ಪುತ್ರಕಾಮ್ಯತಿ ಎಂದು ರೂಪವಾಗುತ್ತದೆ.

ಉದಾ- ಪುತ್ರಕಾಮ್ಯಿತಾ-'ಪುತ್ರಕಾಮ್ಯ' ಎಂಬ ನಾಮಧಾತುವಿಗೆ ಲುಟ್, ತಿಪ್, ಡಾ, ತಾಸ್ ಮತ್ತು ಇಟ್‌ಗಳು ಬಂದು ಪುತ್ರಕಾಮ್ಯ್+ಇ+ತ್+ಆ=ಪುತ್ರಕಾಮ್ಯಿತಾ ಎಂದು ರೂಪವು ಸಿದ್ಧವಾಗುತ್ತದೆ.

**(ಆಚಾರಾರ್ಥದಲ್ಲಿ 'ಕ್ಯಚ್' ಪ್ರತ್ಯಯವನ್ನು ವಿಧಿಸುವ ಸೂತ್ರ )**

**ಸೂತ್ರ- 727 ಉಪಮಾನಾದಾಚಾರೇ। (3.1.10)**

ವೃತ್ತಿ- ಉಪಮಾನಾತ್ ಕರ್ಮಣಃ ಸುಬನ್ತಾದಾಚಾರೇಽರ್ಥೇ ಕ್ಯಚ್। ಪುತ್ರಮಿವಾಚರತಿ- ಪುತ್ರೀಯತಿ ಛಾತ್ರವ್‌। ವಿಷ್ಣೂಯತಿ ದ್ವಿಜಮ್। (ಸರ್ವಪ್ರಾತಿಪದಿಕೇಭ್ಯಃ ಕ್ವಿಬ್ವಾ ವಕ್ತವ್ಯಃ)। (274) ಅತೋ ಗುಣೇ। ಕೃಷ್ಣ ಇವ ಆಚರತಿ ಕೃಷ್ಣತಿ। ಸ್ವ ಇವಾಚರತಿ ಸ್ವತಿ। ಸಸ್ವೌ

ಪ.ಛೇ - ಉಪಮಾನಾತ್, ಆಚಾರೇ ।

ಅ.ವೃ - 'ಸುಪ ಆತ್ಮನಃ ಕ್ಯಚ್' ಎಂಬ ಸೂತ್ರದಿಂದ 'ಸುಪಃ' ಮತ್ತು 'ಕ್ಯಚ್' ಎಂಬ ಪದಗಳು, ಮತ್ತು "ಧಾತೋಃ ಕರ್ಮಣಃ ಸಮಾನಕರ್ತೃಕಾತ್ ಇಚ್ಛಾಯಾಂ ವಾ" ಎಂಬ ಸೂತ್ರದಿಂದ ಕರ್ಮಣಃ ಮತ್ತು 'ವಾ' ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ - ಉಪಮಾನವಾಚಕ ಕರ್ಮಸಂಜ್ಞಕ ಸುಬಂತದ ಪರದಲ್ಲಿ ಆಚಾರಾರ್ಥದಲ್ಲಿ 'ಕ್ಯಚ್'(ಯ) ಪ್ರತ್ಯಯವು ಬರುತ್ತದೆ.

ಉದಾ- ಪುತ್ರೀಯತಿ-ಛಾತ್ರಂ ಪುತ್ರಮಿವ ಆಚರತಿ ಇತಿ ಪುತ್ರೀಯತಿ ಎಂಬ ವಿಗ್ರಹದಲ್ಲಿ ಪುತ್ರ ಶಬ್ದವು ಉಪಮಾನ ವಾಚಕವಾಗಿದೆ. ಪುತ್ರ+ಅಮ್ ಎಂದಿದ್ದಾಗ ಸುಬಂತದ ಪರದಲ್ಲಿ 'ಕ್ಯಚ್' (ಯ) ಪ್ರತ್ಯಯವು ಬಂದು ಪುತ್ರ+ಅಮ್+ಯ ಎಂದಿದ್ದಾಗ, ಧಾತು-ಸಂಜ್ಞೆ, 'ಸುಪ್' ಲೋಪವಾಗಿ ಪುತ್ರ+ಯ ಎಂದಿದ್ದಾಗ 'ಈ'ತ್ವ ಬಂದು ಪುತ್ರ+ಈ+ಯ ಎಂದಿದ್ದಾಗ ಲಟ್, ತಿಪ್, ಶಪ್, ಪರರೂಪಗಳಾಗಿ 'ಪುತ್ರೀಯತಿ' ಎಂದಾಗುತ್ತದೆ.

ಉದಾ- ವಿಷ್ಣೂಯತಿ ದ್ವಿಜಮ್ - ದ್ವಿಜಂ ವಿಷ್ಣುಮಿವ ಆಚರತಿ ಇತಿ ಎಂಬ ವಿಗ್ರಹದಲ್ಲಿ ವಿಷ್ಣು+ಅಮ್ ಎಂದಿದ್ದಾಗ, 'ಕ್ಯಚ್' ಪ್ರತ್ಯಯವು ಬಂದು ವಿಷ್ಣು+ಅಮ್+ಯ ಎಂದಿದ್ದಾಗ, ಧಾತು-ಸಂಜ್ಞೆ ಬಂದು, 'ಸುಪ್' ಲೋಪವಾಗಿ ವಿಷ್ಣು+ಯ ಎಂದಿರುವಾಗ, ಲಟ್, ತಿಪ್, ಶಪ್, ಪರರೂಪಗಳಾಗಿ ವಿಷ್ಣು+ಯ+ಅ+ತಿ ಎಂದಿರುವಾಗಿ 'ಅಕೃತ್ ಸಾರ್ವಧಾತುಕಯೋದೀರ್ಘಃ' ಎಂಬ ಸೂತ್ರದಿಂದ 'ಉ' ಕಾರಕ್ಕೆ ದೀರ್ಘವಾಗಿ 'ವಿಷ್ಣೂಯತಿ' ಎಂದು ರೂಪವಾಗುತ್ತದೆ.

**(ಕ್ವಿಪ್ ಪ್ರತ್ಯಯವನ್ನು ವಿಕಲ್ಪವಾಗಿ ವಿಧಿಸುವ ವಾರ್ತಿಕ)**

ವಾ॥ ಸರ್ವ ಪ್ರಾತಿಪದಿಕೇಭ್ಯಃ ಕ್ವಿಬ್ ವಾ ವಕ್ತವ್ಯಃ।

ವಾರ್ತಿಕಾರ್ಥ- ಆಚಾರಾರ್ಥದಲ್ಲಿ ಎಲ್ಲ ಪ್ರಾತಿಪದಿಕಗಳ ಮುಂದೆ 'ಕ್ವಿಪ್' ಪ್ರತ್ಯಯವು ವಿಕಲ್ಪವಾಗಿ ಬರುತ್ತದೆ. ಈ 'ಕ್ವಿಪ್' ಪ್ರತ್ಯಯವು 'ಸರ್ವಾಪಹಾರಿ' ಲೋಪವಾಗಿದೆ.

ಉದಾ– ಕೃಷ್ಣತಿ– ಕೃಷ್ಣ ಇವ ಆಚರತಿ ಇತಿ ಎಂಬ ವಿಗ್ರಹದಲ್ಲಿ ಕೃಷ್ಣ+ಸು ಎಂಬ ಸುಬಂತದ ಪರದಲ್ಲಿ 'ಕ್ವಿಪ್' ಪ್ರತ್ಯಯವು ಬಂದು, ಅದು ಲೋಪವಾದನಂತರ 'ಸುಪ್'ಗೆ ಲೋಪವಾಗಿ ಲಟ್, ತಿಪ್, ಶಪ್, ಪರರೂಪಗಳು ಬಂದು ಕೃಷ್ಣ್+ಅ+ತಿ= 'ಕೃಷ್ಣತಿ' ಎಂದು ರೂಪವಾಗುತ್ತದೆ.

ಉದಾ_ ಸ್ವತಿ– ಕೃಷ್ಣತಿ ರೂಪದಂತೆಯೇ ರೂಪವಾಗುತ್ತದೆ.

ಉದಾ– ಸಸ್ವೌ – 'ಕ್ವಿ'ಬಂತ 'ಸ್ವ' ನಾಮಧಾತುವಿಗೆ ಲಿಟ್, ಪ್ರ.ಪು ಏಕವಚನದಲ್ಲಿ ತಿಪ್ ಬಂದು, ಅದಕ್ಕೆ "ಣಲ್' ಆದೇಶವಾಗಿ 'ಶಪ್' ಬಂದು, ಸ್ವ+ಅ+ಅ ಎಂದಿದ್ದಾಗ ದ್ವಿತ್ವ, ಅಭ್ಯಾಸಕಾರ್ಯಗಳಾಗಿ ಸ+ಸ್ವ+ಅ+ಅ ಎಂದಿರುವಾಗ, 'ಅಚೋಽಞ್ಣಿತಿ' ಎಂಬ ಸೂತ್ರದಿಂದ ವೃದ್ಧಿ ಬಂದು ಸ+ಸ್ವ+ಆ+ಔ ಎಂದಿರುವಾಗ, "ಆತ ಔ ಣಲಃ" ಎಂಬುದರಿಂದ 'ವೃದ್ಧಿರೇಚಿ' ಎಂಬುದರಿಂದ ವೃದ್ಧಿ ಏಕಾಶದೇಶವಾಗಿ ಬಂದು ಸಸ್ವೌ ಎಂದು ರೂಪವು ಸಿದ್ಧವಾಗಿದೆ.

**(ಉಪಧೆಗೆ ದೀರ್ಘವನ್ನು ವಿಧಿಸುವ ಸೂತ್ರ)**

**ಸೂತ್ರ– 728 – ಅನುನಾಸಿಕಸ್ಯ ಕ್ವಿಝಲೋಃ ಕ್ಙಿತಿ । (6.4.15)**

ವೃತ್ತಿ– ಅನುನಾಸಿಕಾನ್ತಸ್ಯ ಉಪಧಾಯಾಃ ದೀರ್ಘಃ ಸ್ಯಾತ್ ಕ್ವೌ ಝಲಾದೌ ಚ ಕ್ಙಿತಿ। ಇದಮಿವಾಚರತಿ= ಇದಾಮತಿ।ರಾಜೇವ= ರಾಜಾನತಿ। ಪನ್ಥಾ ಇವ = ಪಥೀನತಿ।

ಅ.ವೃ– "ನೋಪಧಾಯಾಃ" ಎಂಬ ಸೂತ್ರದಿಂದ 'ಉಪಧಾಯಾಃ' ಎಂಬ ಪದವು ಮತ್ತು "ಢ್ರಲೋಪೇಪೂರ್ವಸ್ಯದೀರ್ಘೋಽಣಃ" ಎಂಬುದರಿಂದ ದೀರ್ಘಃ ಎಂಬ ಪದವು ಅನುವೃತ್ತವಾಗಿದೆ. ಇಲ್ಲಿ 'ಅಂಗಸ್ಯ' ಎಂಬುದು ಅಧಿಕಾರ ಸೂತ್ರವಾಗಿದೆ.

ಅರ್ಥ– ಕ್ವಿಪ್ ಹಾಗು ಝಲಾದಿಯಾದ, ಕಿತ್, ಙಿತ್ ಪ್ರತ್ಯಯಗಳು ಪರದಲ್ಲಿರುವಾಗ ಅನುನಾಸಿಕಾಂತವಾದ ಧಾತುವಿನ ಉಪಧೆಗೆ ದೀರ್ಘವು ಬರುತ್ತದೆ.

ಉದಾ– ಇದಾಮತಿ–ಇದಮಿವ ಆಚರತಿ ಇತಿ (ಇದರಂತೆ ಆಚರಣೆ ಮಾಡುತ್ತಾನೆ) ಎಂದರ್ಥ. ಈ ವಿಗ್ರಹದ 'ಇದಮ್' ಪ್ರಾದಿಪದಿಕದಿಂದ ಮುಂದೆ 'ಕ್ವಿಪ್' ಪ್ರತ್ಯಯವು ಬಂದು ಇದನ್ನು ನಿಮಿತ್ತ ಮಾಡಿಕೊಂಡು ಪ್ರಕೃತ ಸೂತ್ರದಿಂದ ಉಪಧೆಗೆ ದೀರ್ಘ ಬಂದು 'ಇದಾಮ್+ಕ್ವಿಪ್' ಎಂದಿರುವಾಗ ಕ್ವಿಪ್ ಸರ್ವಾಪಹಾರ ಲೋಪವಾಗಿ ಕೇವಲ ಇದಾಮ್ ಎಂದಿರುವಾಗ, ಧಾತು–ಸಂಜ್ಞೆ, ಲಟ್, ತಿಪ್, ಶಪ್‌ಗಳು ಬಂದು, ಇದಾಮ್+ಅ+ತಿ= ಇದಾಮತಿ ಎಂದು ರೂಪವು ಸಿದ್ಧವಾಗಿದೆ.

ಉದಾ– ರಾಜಾನತಿ–ರಾಜಾ ಇವ ಆಚರತಿ ಇತಿ= ರಾಜನಂತೆ ಆಚರಿಸುತ್ತಾನೆ ಎಂದರ್ಥ. ಈ ವಿಗ್ರಹದಲ್ಲಿ 'ರಾಜನ್' ಪ್ರಾತಿಪದಿಕ ಮುಂದೆ 'ಕ್ವಿಪ್' ಪ್ರತ್ಯಯವು ಬಂದು ಈ ಪ್ರತ್ಯಯವು ಪರದಲ್ಲಿದ್ದಾಗ, ಪ್ರಕೃತ ಸೂತ್ರದಿಂದ ಉಪಧೆಗೆ ದೀರ್ಘವಾಗಿ, ರಾಜಾನ್+ಕ್ವಿಪ್ ಎಂದಿರುವಾಗ, ಕ್ವಿಪ್ ಸರ್ವಾಪಹಾರ ಲೋಪವಾಗಿ ರಾಜಾನ್ ಎಂದಿರುವಾಗ ಲಟ್, ತಿಪ್, ಶಪ್‌ಗಳು ಬಂದು ರಾಜಾನ್+ಅ+ತಿ=ರಾಜಾನತಿ ಎಂದು ರೂಪವು ಸಿದ್ಧವಾಗದೆ.

ಉದಾ- ಪಥೀನತಿ-ಪಂಥಾ ಇವ ಆಚರತಿ-ಮಾರ್ಗದಂತೆ ಆಚರಿಸುತ್ತಾನೆ. ಅಂದರೆ ಮಾರ್ಗವು ಹೇಗೆ ಉಪಕಾರವನ್ನು ಮಾಡುತ್ತದೋ ಹಾಗೆಯೇ ಉಪಕಾರವನ್ನು ಮಾಡುತ್ತಾನೆ ಎಂದರ್ಥ.

**('ಕ್ಯಙ್' ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ- 729 - ಕಷ್ಟಾಯ ಕ್ರಮಣೇ। (3.1.14)**

ವೃತ್ತಿ- ಚತುರ್ಥ್ಯನ್ತಾತ್ ಕಷ್ಟ ಶಬ್ದಾತ್ ಉತ್ಸಾಹೇ ಅರ್ಥೇ ಕ್ಯಙ್ ಸ್ಯಾತ್। ಕಷ್ಟಾಯ ಕ್ರಮತೇ= ಕಷ್ಟಾಯತೆ। ಪಾಪಂ ಕರ್ತುಮುತ್ಸಹತೇ= ಇತ್ಯರ್ಥಃ॥

ಅ.ವೃ - 'ಕರ್ತುಃ ಕ್ಯಙ್ ಸಲೋಪಶ್ಚ' ಎಂಬ ಸೂತ್ರದಿಂದ 'ಕ್ಯಙ್' ಎಂಬ ಪದವು 'ಧಾತೋಃ ಕರ್ಮಣಃ ಸಮಾನಕರ್ತೃಕಾತ್ ಇಚ್ಛಾಯಾಂ ವಾ' ಎಂಬುದರಿಂದ 'ವಾ' ಎಂಬ ಪದವು ಅನುವೃತ್ತವಾಗಿವೆ.

ಅರ್ಥ - ಚತುರ್ಥ್ಯಂತ ಕಷ್ಟ ಶಬ್ದದ ಮುಂದೆ ಕ್ರಮೇಣ ಎಂದರೆ (ಉತ್ಸಾಹ) ಎಂಬರ್ಥದಲ್ಲಿ 'ಕ್ಯಙ್' ಪ್ರತ್ಯಯ ವೈಕಲ್ಪಿಕವಾಗಿ ಬರುತ್ತದೆ.

ಉದಾ- ಕಷ್ಟಾಯತೇ - ಕಷ್ಟಾಯ ಕ್ರಮತೇ - ಕಷ್ಟ್ ಶಬ್ದಕ್ಕೆ ಪಾಪ ಎಂದರ್ಥ. ಕ್ರಮಣ ಎಂದರೆ ಉತ್ಸಾಹ. (ಪಾಪವನ್ನು ಮಾಡುವುದಕ್ಕೆ ಉತ್ಸಾಹವನ್ನು ತೋರಿಸುತ್ತಾನೆ) ಎಂದರ್ಥ. ಈ ವಿಗ್ರಹದಲ್ಲಿ ಕಷ್ಟ+ಙೇ ಎಂದಿದ್ದಾಗ ಉತ್ಸಾಹಾರ್ಥದಲ್ಲಿ ಪ್ರಕೃತ ಸೂತ್ರದಿಂದ (ಕ್ಯಙ್) ಪ್ರತ್ಯಯವು ಬಂದು ಕಷ್ಟ+ಙೇ+ಯ ಎಂದಿದ್ದಾಗ, ಧಾತು ಸಂಜ್ಞೆ 'ಸುಪ್' ಲೋಪಗಳಾಗಿ ಕಷ್ಟ+ಯ ಎಂದಿರುವಾಗ 'ಅಕೃತ್ ಸಾರ್ವಧಾತು-ಕಯೋದೀರ್ಘಃ' ಎಂಬುದರಿಂದ ಉಪಧೆಗೆ ದೀರ್ಘವಾಗಿ ಕಷ್ಟಾ+ಯ ಎಂದಿರುವಾಗ ಇದು ಙಿದನ್ತ ಧಾತುವಾಗಿರುವುದರಿಂದ ಆತ್ಮನೇಪದವಾಗುತ್ತದೆ. ಲಟ್, ಪ್ರ.ಪು.ಏ.ತ, ಶಪ್, ಪರರೂಪಗಳು ಬಂದು, 'ಟಿ'ಗೆ ಏತ್ವವಾಗಿ ಕಷ್ಟಾ+ಯ+ಅ+ತ್+ಏ= ಕಷ್ಟಾಯತೇ ಎಂದು ರೂಪವು ಸಿದ್ಧವಾಗುತ್ತದೆ.

**('ಕ್ಯಙ್' ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ- 730- ಶಬ್ದ-ವೈರ-ಕಲಹಾಭ್ರ-ಕಣವ-ಮೇಘೇಭ್ಯಃ ಕರಣೋ। (3.1.17)**

ವೃತ್ತಿ-ಏಭ್ಯಃ ಕರ್ಮಭ್ಯಃ ಕರೋತ್ಯರ್ಥೇ ಕ್ಯಙ್ ಸ್ಯಾತ್। ಶಬ್ದಂ ಕರೋತಿ=ಶಬ್ದಾಯತೇ। ತತ್ಕರೋತಿ ತದಾಚಷ್ಟೇ ಇತಿ ಣಿಚ್। (ಪ್ರಾತಿಪದಿಕಾದ್ಧಾತ್ವರ್ಥೇ ಬಹುಲಮಿಷ್ಠವಚ್ಚ॥ = ಪ್ರಾತಿಪದಿಕಾದ್ಧಾತ್ವರ್ಥೇ ಣಿಚ್ ಸ್ಯಾತ್, ಇಷ್ಠೇ ಯಥಾ ಪ್ರಾತಿಪದಿಕಸ್ಯ ಪುಂವದ್ಭಾವ-ರಭಾವ-ಟಿಲೋಪ-ವಿನ್ಮತುಬ್ಲೋಪ-ಯಣಾದಿಲೋಪ-ಪ್ರ-ಸ್ಥ-ಸ್ಫಾದ್ಯಾದೇಶ-ಭಸಂಜ್ಞಾಃ ತದ್ವಾರಣೌ ಅಪಿ ಸ್ಯುಃ॥ ಇತ್ಯಲ್ಲೋಪಃ ಘಟಂ ಕರೋತ್ಯಾಚಷ್ಟೇ ವಾ ಘಟಯತಿ।

ಪ. ಛೇ- ಶಬ್ದ-ವೈರ-ಕಲಹಾಭ್ರ-ಕಣವ-ಮೇಘೇಭ್ಯಃ, ಕರಣೋ।

ಅ.ವೃ-'ಕರ್ಮಣೋರೋಮಂತ ತಪೋಭ್ಯಾಮ್ವರ್ತಿಚರೋಃ' ಎಂಬ ಸೂತ್ರದಿಂದ ಕರ್ಮಣಃ ಎಂಬ ಪದವನ್ನು ಅನುವೃತ್ತಿಮಾಡಿಕೊಂಡು ವಚನ ವಿಪರಿಣಾಮದಿಂದ ಕರ್ಮಭ್ಯಃ ಎಂದು ಮಾಡಲಾಗಿದೆ. 'ಕರ್ತುಃ ಕ್ಯಙ್ ಸಲೋಪಶ್ಚ' ಎಂಬುದರಿಂದ

ಕ್ಯಙ್ ಎಂಬ ಪದವು ಮತ್ತು 'ಧಾತೋಃ ಕರ್ಮಣಃ ಸಮಾನಕರ್ತೃಕಾತ್ ಇಚ್ಛಾಯಾಂ ವಾ' ಎಂಬುದರಿಂದ 'ವಾ' ಎಂಬ ಪದವು ಅನುವೃತ್ತವಾಗುತ್ತವೆ.

ಅರ್ಥ–ಕರ್ಮವಾಚಕಗಳಾದ ಶಬ್ದ, ವೈರ, ಕಲಹ, ಅಭ್ರ, ಕಣ್ವ, ಮೇಘ ಶಬ್ದಗಳ ಮೇಲೆ ಮಾಡುತ್ತಾನೆ ಎಂಬ ಅರ್ಥದಲ್ಲಿ 'ಕ್ಯಙ್' ಪ್ರತ್ಯಯವು ವೈಕಲ್ಪಿಕವಾಗಿ ಬರುತ್ತದೆ.

ಉದಾ – ಶಬ್ದಾಯತೇ – ಶಬ್ದಂ ಕರೋತಿ ಎಂಬ ವಿಗ್ರಹದಲ್ಲಿ ಶಬ್ದ+ಅಮ್ ಎಂದಿದ್ದಾಗ, 'ಮಾಡುತ್ತಾನೆ' ಎಂಬ ಅರ್ಥದಲ್ಲಿ ಪ್ರಕೃತ ಸೂತ್ರದಿಂದ 'ಕ್ಯಙ್' ಪ್ರತ್ಯಯವು ಬಂದು ಶಬ್ದ+ಅಮ್+ಯ ಎಂದಿದ್ದಾಗ, ಧಾತು–ಸಂಜ್ಞೆ ಬಂದು, ಸುಪ್–ಲೋಪವಾಗಿ ಶಬ್ದ+ಯ ಎಂದಿದ್ದಾಗ, 'ಅಕೃತ್ ಸಾರ್ವಧಾತುಕಯೋರ್ದೀರ್ಘಃ' ಎಂಬುದರಿಂದ ದೀರ್ಘವಾಗಿ ಶಬ್ದಾ+ಯ ಎಂದಿರುವಾಗ ಲಟ್, ತ, ಶಪ್, ಬಂದು, 'ಟಿ'ಗೆ ಏತ್ವವಾಗಿ ನಂತರ ಪರರೂಪವಾಗಿ ಶಬ್ದಾ+ಯ+ಅ+ತ್+ಏ= ಶಬ್ದಾಯತೇ ಎಂದು ರೂಪವು ಸಿದ್ಧವಾಗುತ್ತದೆ. ಇದರಂತೆ ವೈರಾಯತೇ, ಕಲಹಾಯತೇ, ಅಭ್ರಾಯತೇ, ಕಣ್ವಾಯತೇ, ಮೇಘಾಯತೇ ಎಂದಾಗುತ್ತದೆ.

ಗಣಸೂತ್ರಮ್–ತತ್ ಕರೋತಿ=ಅದನ್ನು ಮಾಡುತ್ತಾನೆ, ತದ್ ಆಚಷ್ಟೇ=ಅದನ್ನು ಹೇಳುತ್ತಾನೆ ಎಂಬ ವಿಗ್ರಹದಲ್ಲಿ ಪ್ರಾತಿಪದಿಕದ ಪರದಲ್ಲಿ 'ಣಿಚ್' ಪ್ರತ್ಯಯವು ಬರುತ್ತದೆ.

ಗಣಸೂತ್ರಮ್–ಪ್ರಾತಿಪದಿಕದ ಧಾತುವಿನ ಅರ್ಥದಲ್ಲಿ 'ಣಿಚ್' ಪ್ರತ್ಯಯವು ವೈಕಲ್ಪಿಕವಾಗಿ ಆಗುತ್ತದೆ. ಮತ್ತು 'ಇಷ್ಠನ್' ಪ್ರತ್ಯಯವು ಪರದಲ್ಲಿದ್ದಾಗ, ಯಾವ ಕಾರ್ಯಗಳಾಗುತ್ತವೆಯೋ ಅವೆಲ್ಲವೂ 'ಣಿಚ್' ಪ್ರತ್ಯಯವು ಪರದಲ್ಲಿದ್ದಾಗ ಆಗುತ್ತವೆ. 'ಇಷ್ಠನ್' ಪ್ರತ್ಯಯವು ಪರದಲ್ಲಿದ್ದಾಗ ಆಗುವ ಕಾರ್ಯಗಳೆಂದರೆ ಪ್ರಾತಿಪದಿಕಕ್ಕೆ ಪುಂವದ್ಭಾವ, ರಭಾವ, ಟಿಲೋಪ, ವಿನ್ ಮತ್ತು ಮತುಪ್ ಪ್ರತ್ಯಯ ಲೋಪ, ಯಣಾದಿಲೋಪ, ಪ್ರ–ಸ್ಥ–ಸ್ಫ–ಆದಿ ಆದೇಶ ಮತ್ತು ಭ ಸಂಜ್ಞಾಗಳು ಆಗುತ್ತವೆ.

ಉದಾ– ಘಟಯತಿ – ಘಟಂ ಕರೋತಿ ಅಥವಾ ಘಟಂ ಆಚಷ್ಟೇ (ಗಡಿಗೆಯನ್ನು ಮಾಡುತ್ತಾನೆ ಅಥವಾ ಗಡಿಗೆಯನ್ನು ಹೇಳುತ್ತಾನೆ) ಎಂದರ್ಥ.

ಪ್ರಕೃತ ಗಣ ಸೂತ್ರದಿಂದ ಣಿಚ್ ಪ್ರತ್ಯಯವು ಘಟ+ಅಮ್+ಇ ಎಂದಿದ್ದಾಗ' ಧಾತು–ಸಂಜ್ಞೆ, ಮತ್ತು ಸುಪ್ ಲೋಪಗಳಾಗಿ ಘಟ+ಇ ಎಂದಿರುವಾಗ, 'ಣಿಚ್'ಗೆ ಇಷ್ಠವದ್ಭಾವವನ್ನು ಮಾಡುವುದರಿಂದ 'ಣಿಚ್' ಪರದಲ್ಲಿದ್ದಾಗ 'ಭ' ಸಂಜ್ಞೆಯು ಬಂದು, 'ಯಸ್ಯೇತಿಚ' ಎಂಬುದರಿಂದ 'ಟ'ಕಾರೋತ್ತರವರ್ತಿ ಅಕಾರ ಲೋಪವಾಗಿ ಘ್ಟ್+ಇ ಎಂದಿರುವಾಗ, 'ಸನಾದ್ಯನ್ತಾಃ ಧಾತವಃ' ಎಂಬುದರಿಂದ ಧಾತು ಸಂಜ್ಞೆಯು ಬಂದು, ಲಟ್, ತಿಪ್, ಶಪ್, ಗುಣ, 'ಅಯ್' ಆದೇಶವು ಬಂದು, ಘಟ್+ಏ+ಅ+ತಿ ಎಂದಿರುವಾಗ, 'ಏ'ಕಾರಕ್ಕೆ 'ಅಯ್' ಆದೇಶವಾಗಿ ಘಟ್+ಅಯ್+ಅ+ತಿ= ಘಟಯತಿ ಎಂದು ರೂಪವಾಗುತ್ತದೆ.

**॥ಇತಿ ನಾಮಧಾತು ಪ್ರಕ್ರಿಯಾ ಪ್ರಕರಣಮ್॥**

**॥ಇಲ್ಲಿಗೆ ನಾಮಧಾತು ಪ್ರಕ್ರಿಯಾ ಪ್ರಕರಣ (26) ಮುಗಿಯಿತು॥**

# ಪ್ರಕರಣ 27: ಕಣ್ವಾದಯ

(ಸೂತ್ರ ಸಂಖ್ಯೆ 731)

(ಯಕ್ ಪ್ರತ್ಯಯವನ್ನು ವಿಧಿಸುವ ಸೂತ್ರ)

**ಸೂತ್ರ- 731- ಕಂಡ್ವಾದಿಭ್ಯೋ ಯಕ್। (3.1.27)**

ವೃತ್ತಿ- ಏಭ್ಯೋ ಧಾತುಭ್ಯೋ ನಿತ್ಯಂ ಯಕ್ ಸ್ಯಾತ್ ಸ್ವಾರ್ಥೇ। ಕಂಡೂದಞ್ಗಾತ್ರ ವಿಘರ್ಷಣೇ॥ ಕಂಡೂಯತಿ, ಕಂಡೂಯತೇ। ಇತ್ಯಾದಿ ಇತಿ ಕಂಡ್ವಾದಯಃ॥

ಅ.ವೃ- "ಧಾತೋಃ ಏಕಾಚಃ ಹಲಾದೇ ಃ ಕ್ರಿಯಾಸಮಭಿಹಾರೆ ಯಙ್" ಎಂಬ ಸೂತ್ರದಿಂದ ವಚನ ವಿಪರಿಣಾಮ ಮಾಡಿ 'ಧಾತುಭ್ಯಃ' ಎಂದು ಅನುವೃತ್ತಿ ಮಾಡಲಾಗಿದೆ. "ಪ್ರತ್ಯಯಃ" ಮತ್ತು "ಪರಶ್ಚ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ: 'ಕಣ್ಡೂಞ್' ಮೊದಲಾದ ಧಾತುಗಳ ನಂತರ ಸ್ವಾರ್ಥದಲ್ಲಿ 'ಯಕ್' ಪ್ರತ್ಯಯವು ಬರುತ್ತದೆ.

ಧಾತು - ಕಣ್ಡೂಞ್- ಗಾತ್ರ ವಿಘರ್ಷಣೇ-(ತುರಿಸುವುದು ಎಬ ಅರ್ಥದಲ್ಲಿ ಇದರ ಪ್ರಯೋಗವು ಮಾಡಲ್ಪಡುತ್ತದೆ.)

ಗಣ ಪಾಠದಲ್ಲಿ 'ಕಣ್ಡೂ' ಮೊದಲಾದ ಶಬ್ದಗಳ ಅರ್ಥ ನಿರ್ದೇಶವು ಮಾಡಲಾಗಿಲ್ಲ. ಸಾಹಿತ್ಯದ ಪ್ರಯೋಗಗಳನ್ನು ನೋಡುವಾಗ ಹಿಂದಿನ ವೈಯಾಕರಣಿಗಳು ಅರ್ಥ ನಿರ್ದೇಶ ಮಾಡಿದ್ದಾರೆ.

ಉದಾ- ಕಂಡೂಯತಿ/ಕಂಡೂಯತೇ- ಕಣ್ವಾದಿ ಗಣದಲ್ಲಿ ಧಾತು ಮತ್ತು ಪ್ರಾತಿಪದಿಕಗಳೆಂದು ಎರಡು ವಿಧ ಇದೆ. 'ಯಕ್' ಪ್ರತಯ್ಯವು 'ಕಿತ್' ಆಗುವುದರಿಂದ ಕಣ್ವಾದಿಗಳಿಗೆ ಧಾತು-ಸಂಜ್ಞೆಯಾಗುವುದು ಸಿದ್ಧವಾಗುತ್ತದೆ. ಹೇಗೆಂದರೆ 'ಕಿತ್'ಗೆ ಇರುವ ಗುಣ ನಿಷೇಧ ಮೊದಲಾದ ಫಲವು ಧಾತುಗಳಲ್ಲಿಯೇ ಆಗುತ್ತದೆ. 'ಕಣ್ಡೂಞ್' ನಲ್ಲಿ ದೀರ್ಘ 'ಊ'ಕಾರಾಂತವಾಗುವುದು. ಇದಕ್ಕೆ ಪ್ರಾತಿಪದಿಕತ್ವವನ್ನು ಸಿದ್ಧಪಡಿಸುತ್ತದೆ. ಹೇಗೆಂದರೆ ಇದು ಕೇವಲ ಧಾತುವಾಗಿಯೇ ಇರುವುದಾಗಿದ್ದರೆ, ಹ್ರಸ್ವಾಂತವಾಗಿ ಇದ್ದಾಗಲೂ 'ಯಕ್' ಪರದಲ್ಲಿ ಇರುವಾಗ, 'ಅಕೃತ್ ಸಾರ್ವಧಾತುಕಯೋರ್ದೀರ್ಘಃ' ಎಂಬ ಸೂತ್ರದಿಂದ ದೀರ್ಘವಾಗಿ ರೂಪವು ಸಿದ್ಧವಾಗುತ್ತದೆ.

ಧಾತುವು 'ಞಿತ್' ಆಗಿರುವುದರಿಂದ ಉಭಯಪದಿಯಾಗಿದೆ. 'ಯಕ್' ಪ್ರತ್ಯಯವು ಬಂದು ಧಾತು-ಸಂಜ್ಞೆಯನ್ನು ಪಡೆದು ಲಟ್, ತಿಪ್ ಅಥವಾ ತ, ಶಪ್ ಪರರೂಪಗಳಾಗಿ ಕಣ್ಡೂ+ಯ್+ಅ+ತಿ=ಕಣ್ಡೂಯತಿ ಅಥವಾ ಕಣ್ಡೂ+ ಯ್+ಅ+ತ್+ಏ=ಕಣ್ಡೂಯತೇ ಎಂದು ರೂಪಗಳಾಗುತ್ತದೆ.

ಪರಸ್ಮೈಪದದ ರೂಪಗಳು-

ಲಿಟ್- ಕಣ್ಡೂಯಾಞ್ಚಕಾರ, ಲುಟ್- ಕಣ್ಡೂಯಿತಾ, ಲೃಟ್- ಕಣ್ಡೂಯಿಷ್ಯತಿ, ಲೋಟ್- ಕಣ್ಡೂಯತು,ಲಙ್- ಅಕಣ್ಡೂಯತ್, ವಿ.ಲಿ- ಕಣ್ಡೂಯೇತ್, ಆ.ಲಿ-

ಕಣ್ಡೂಯ್ಯಾತ್, ಲುಜ್–ಅಕಣ್ಡೂಯೀತ್,ಲೃಜ್–ಅಕಣ್ಡೂಯಿಷ್ಯತ್

ಆತ್ಮನೇ ಪದದ ರೂಪಗಳು–

ಲಿಟ್–ಕಣ್ಡೂಯಾಞ್ಚಕ್ರೇ, ಲುಟ್–ಕಣ್ಡೂಯಿತಾ, ಲೃಟ್–ಕಣ್ಡೂಯಿಷ್ಯತೇ, ಲೋಟ್–ಕಣ್ಡೂಯತಾಮ್, ಲಜ್–ಅಕಣ್ಡೂಯತ, ವಿ.ಲಿ–ಕಣ್ಡೂಯೇತ, ಆ.ಲಿ– ಕಣ್ಡೂಯಿಷೀಷ್ಟ, ಲುಜ್–ಅಕಣ್ಡೂಯಿಷ್ಟ ಲೃಜ್– ಅಕಂಡೂಯೀಷತ।

**ಇಲ್ಲಿಗೆ ಕಣ್ಡ್ವಾದಿ ಪ್ರಕರಣವು 27ಮುಗಿಯಿತು.**

# ಪ್ರಕರಣ-28: ಆತ್ಮನೇಪದ ಪ್ರಕ್ರಿಯಾ

**(ಸೂತ್ರ ಸಂಖ್ಯೆ 732 ರಿಂದ 745 ವರೆಗೆ)**

**(ಆತ್ಮನೇಪದ ನಿಯಮವನ್ನು ವಿಧಿಸುವ ಸೂತ್ರ)**

**ಸೂತ್ರ- 732 ಕರ್ತರಿ ಕರ್ಮ-ವ್ಯತಿಹಾರೇ। (1.3.14)**

ವೃತ್ತಿ- ಕ್ರಿಯಾವಿನಿಮಯೇ ದ್ಯೋತ್ಯೇ ಕರ್ತರಿ ಆತ್ಮನೇಪದಮ್। ವ್ಯತಿಲುನೀತೇ= ಅನ್ಯಸ್ಯ ಯೋಗ್ಯಂ ಲವನಂ ಕರೋತಿ ಇತ್ಯರ್ಥಃ।

ಅ. ವೃ- "ಅನುದಾತ್ತ ಜಿತ ಆತ್ಮನೇಪದಮ್" ಎಂಬ ಸೂತ್ರದಿಂದ 'ಆತ್ಮನೇಪದಮ್' ಎಂಬ ಪದವು ಅನುವೃತ್ತವಾಗುತ್ತದೆ. 'ವಿ' ಮತ್ತು 'ಅತಿ' ಎಂಬ ಉಪಸರ್ಗಗಳಿಂದ ಕೂಡಿದ ಧಾತುವು ಕ್ರಿಯೆಯ ಅದಲು-ಬದಲಾವಣೆಯನ್ನು ಸೂಚಿಸುತ್ತದೆ.

ಅರ್ಥ- ಅದಲು-ಬದಲು ಎಂಬ ಅರ್ಥವನ್ನು ಕೊಡುವ (ಧಾತು)ವಿನ ಕ್ರಿಯೆಯ ನಂತರ ಕರ್ತ್ರರ್ಥದಲ್ಲಿ ಆತ್ಮನೇಪದದ ಪ್ರತ್ಯಯಗಳು ಬರುತ್ತವೆ.

ಧಾತು. 1. ಲೂಞ್-ಛೇದನೆ- ಇದರಲ್ಲಿ 'ಲು' ಮಾತ್ರ ಉಳಿಯುತ್ತದೆ.

ಉದಾ- ವ್ಯತಿಲುನೀತೆ- ಶೂದ್ರನು ಮಾಡುವ ಕತ್ತರಿಸುವ (ಕೊಯ್ಯುವ) ಕೆಲಸವನ್ನು ಬ್ರಾಹ್ಮಣನು ಮಾಡುತ್ತಾನೆಎಂದರ್ಥ. ಒಬ್ಬನು ಮಾಡುವ ಕೆಲಸವನ್ನುಇನ್ನೊಬ್ಬನು ಮಾಡುವುದೇ 'ಕ್ರಿಯಾ ವಿನಿಮಯ'. ವಿ+ಅತಿ ಎಂಬ ಉಪಸರ್ಗ ಪೂರ್ವಕ ಲೂಞ್- ಛೇದನೆ ಧಾತುವಿನ ಮುಂದೆ ಲಟ್ ,ತ, ಶ್ನಾ(ಅ) ಕಾರಕ್ಕೆ ಈತ್ವ ಬಂದು 'ಟೀ' ಗೆ ಏತ್ವ ಬಂದು, ವಿ+ಅತಿ+ಲೂ+ನ್+ಈ+ತ್+ಏ= ವ್ಯತಿಲುನೀತೇ ಎಂದಾಗುತ್ತದೆ. "ಪ್ವಾದೀನಾಮ್ ಹ್ರಸ್ವಃ" ಎಂಬ ಸೂತ್ರದಿಂದ 'ಲೂ' ಎಂಬುದಕ್ಕೆ ಹ್ರಸ್ವವಾಗಿ 'ಲು' ಎಂದಾಗಿದೆ.

**(ಆತ್ಮನೇಪದವನ್ನು ನಿಷೇಧಿಸುವ ಸೂತ್ರ)**

**ಸೂತ್ರ- 733- ನ ಗತಿ-ಹಿಂಸಾರ್ಥೇಭ್ಯಃ (1.3.15)**

ವೃತ್ತಿ- ವ್ಯತಿಗಚ್ಛನ್ತಿ। ವ್ಯತಿಘ್ನನ್ತಿ।

ಅ.ವೃ.- "ಕರ್ತರಿಕರ್ಮವ್ಯತಿಹಾರೇ" ಎಂಬ ಸೂತ್ರದಿಂದ ಕರ್ಮವ್ಯತಿಹಾರೇ ಎಂಬ ಪದವು "ಅನುದಾತ್ತ ಜಿತ ಆತ್ಮನೇಪದಮ್" ಎಂಬುದರಿಂದ ಆತ್ಮನೇ ಪದಮ್ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- ಕರ್ಮ-ವ್ಯತಿಹಾರ ಎಂಬ ಅರ್ಥವು ಗತಿ ಮತ್ತು ಹಿಂಸಾರ್ಥಕ ಧಾತುಗಳಿಂದ ತೋರಿದಾಗಲೂ ಆತ್ಮನೇ ಪದ ಪ್ರತ್ಯಯವು ಬರುವುದಿಲ್ಲಾ. ಇದು ಪೂರ್ವ ಸೂತ್ರಕ್ಕೆ ಅಪವಾದವಾಗಿದೆ.

ಉದಾ. 1. ವ್ಯತಿಗಚ್ಛಂತಿ- ಒಬ್ಬನ ಬದಲು ಮತ್ತೊಬ್ಬನು ಹೋಗುತ್ತಾನೆ ಎಂದರ್ಥ. ಇಲ್ಲಿ ಕರ್ಮವ್ಯತಿಹಾರವಿದೆ ಆದರೂ ಆತ್ಮನೇಪದವಾಗುವುದಿಲ್ಲ.

ಉದಾ– 2. ವ್ಯತಿಘ್ನಂತಿ– ಒಬ್ಬನು ಮಾಡಬೇಕಾಗಿರುವ ಹಿಂಸೆಯನ್ನು ಇನ್ನೊಬ್ಬನು ಮಾಡುತ್ತಾನೆ ಎಂದರ್ಥ. ಈ ಎರಡೂಉದಾಹರಣೆಯಲ್ಲಿ ಆತ್ಮನೇ ಪದವನ್ನು ನಿಷೇಧಿಸಿ ಪರಸ್ಮೈಪದವೇ ಬಂದಿದೆ.

**(ವಿಶ್ ಧಾತುವಿಗೆ ಆತ್ಮನೇ ಪದ ಹೇಳುವ ಸೂತ್ರ)**

**ಸೂತ್ರ– 734 ನೇರ್ವಿಶಃ। (1.3.17)**

ವೃತ್ತಿ– ನಿವಿಶತೇ।

ಅ. ವೃ.– "ಅನುದಾತ್ತ ಜಿತ ಆತ್ಮನೇ ಪದಮ್" ಎಂಬ ಸೂತ್ರದಿಂದ ಆತ್ಮನೇಪದಮ್ ಎಂಬ ಪದವು ಅನುವೃತ್ತವಾಗುತ್ತದೆ.

ಪ.ಛೇ.– ನೇಃ, ವಿಶಃ।

ಅರ್ಥ– 'ನಿ' ಉಪಸರ್ಗಪೂರ್ವಕ 'ವಿಶ್' ಧಾತುವಿನ ನಂತರ ಆತ್ಮನೇಪದ ಪ್ರತ್ಯಯವು ಬರುತ್ತದೆ. ವಿಶ್ ಧಾತು ತುದಾದಿಗಣದಲ್ಲಿ ಪರಸ್ಮೈಪದಿಯಾಗಿದೆ. 'ನಿ' ಉಪಸರ್ಗದಜೋಡಣೆಯಿಂದ ಈ ಸೂತ್ರದಿಂದ ಆತ್ಮನೇ ಪದವು ವಿಧಿಸಲಾಗಿದೆ.

ಉದಾ– ನಿವಿಶತೇ– ನಿ+ವಿಶ್+ಅ+ತ್+ಎ ಎಂದಿದ್ದಾಗ, ಲಟ್ ಪ್ರ.ಪು.ಏ.ವಚನದಲ್ಲಿ ನಿವಿಶತೇ ಎಂದು ರೂಪವು ಸಿದ್ಧವಾಗುತ್ತದೆ.

**(ಕ್ರೀಧಾತುವಿಗೆಆತ್ಮನೇಪದವನ್ನು ವಿಧಿಸುವ ಸೂತ್ರ.)**

**ಸೂತ್ರ– 735– ಪರಿ–ವ್ಯವೇಭ್ಯಃ ಕ್ರಿಯಃ। (1.3.18)**

ವೃತ್ತಿ– ಪರಿಕ್ರೀಣೀತೇ। ವಿಕ್ರೀಣೀತೇ। ಅವಕ್ರೀಣೀತೆ।

ಅ.ವೃ.– "ಅನುದಾತ್ತ ಜಿತಃ ಆತ್ಮನೇಪದಮ್" ಎಂಬ ಸೂತ್ರದಿಂದ 'ಆತ್ಮನೇಪದಮ್' ಎಂಬ ಪದವುಅನುವೃತ್ತವಾಗುತ್ತದೆ.

ಪ.ಛೇ.– ಪರಿ–ವಿ– ಅವೇಭ್ಯಃ, ಕ್ರಿಯಃ ।

ಅರ್ಥ– ಪರಿ, ವಿ ಮತ್ತು ಅವ – ಉಪಸರ್ಗಗಳಿಂದ ಕೂಡಿದ 'ಕ್ರೀ' ಧಾತುವಿಗೆ ಆತ್ಮನೇಪದವು ಬರುತ್ತದೆ.

ಧಾತು– ಡುಕ್ರೀಞ್ ದ್ರವ್ಯ ವಿನಿಮಯೇ–(ದ್ರವ್ಯಅಥವಾ ಹಣವನ್ನುಕೊಟ್ಟು ಕೊಂಡುಕೊಳ್ಳುವುದು ಎಂದರ್ಥ)– ಎಂಬ ಧಾತುವು ಞಿತ್ ಆಗಿರುವುದರಿಂದ ಉಭಯ–ಪದಿಯಾಗಿದೆ. ಧಾತುವಿನ ಫಲವು ಪರಗಾಮಿಯಾಗಿದ್ದರೂ ಪರಸ್ಮೈಪದವು ಬಾರದೇ ಆತ್ಮನೇಪದವೇ ಬರುತ್ತದೆ.

ಉದಾ. ಪರಿಕ್ರೀಣೀತೇ– ಪರಿ+ಕ್ರೀ+ನ್+ಈ+ತ್+ಎ= ಪರಿಕ್ರೀಣೀತೇ ಎಂದು ಲಟ್ ಪ್ರ.ಪು. ಏ.ವಚನದಲ್ಲಿ 'ನ್' ಕಾರಕ್ಕೆ 'ಣ್' ಕಾರವಾಗಿ ರೂಪವು ಸಿದ್ಧವಾಗುತ್ತದೆ. ವಿಕ್ರೀಣೀತೇ, ಅವಕ್ರೀಣೀತೇ ಇವುಗಳ ರೂಪಗಳನ್ನು ಹಿಂದಿನ ರೂಪದಂತೆ ತಿಳಿಯಬೇಕು

**(ಜಿ ಧಾತುವಿಗೆ ಆತ್ಮನೇಪದವನ್ನು ವಿಧಿಸುವ ಸೂತ್ರ)**

**ಸೂತ್ರ- 736 ವಿ-ಪರಾಭ್ಯಾಂ ಜೇಃ। (1.3.19)**

ವೃತ್ತಿ- ವಿಜಯತೇ। ಪರಾಜಯತೇ।

ಅ.ವ್ಯ.- "ಅನುದಾತ್ತಙಿತ ಆತ್ಮನೇ ಪದಮ್" ಎಂಬ ಸೂತ್ರದಿಂದ ಆತ್ಮನೇಪದಮ್ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- ವಿ ಮತ್ತು ಪರಾ ಎಂಬ ಈ ಉಪಸರ್ಗಗಳಲ್ಲಿ ಯಾವುದಾದರೊಂದು ಉಪಸರ್ಗದಜೊತೆಗೆ ಕೂಡಿದ 'ಜಿ' ಧಾತುವಿಗೆ ಆತ್ಮನೇಪದವು ಬರುತ್ತದೆ.

ಉದಾ-1. ವಿಜಯತೇ-( ವಿ+ಜ್+ಅಯ್+ಅ+ತ್+ಏ= ವಿಜಯತೇ ಎಂದು ರೂಪವಾಗುತ್ತದೆ. (ಜಯಿಸುತ್ತಾನೆಎಂದರ್ಥ).

ಉದಾ-2. ಪರಾಜಯತೇ- ಲಟ್, ಪ್ರ.ಪು.ಏ.ವಚನದಲ್ಲಿ ಇದರ ರೂಪವು ಹಿಂದಿನಂತೆ ಆಗುತ್ತದೆ(ಸೋಲುತ್ತಾನೆ).

"ಶೇಷಾತ್ ಕರ್ತರಿ ಪರಸ್ಮೈಪದಮ್" ಎಂಬ ಸೂತ್ರದ ನಿಯಮದ ಪ್ರಕಾರ 'ಜಿ' ಧಾತುವು ಪರಸ್ಮೈಪದವೇ ಆಗಿರಬೇಕಾಗಿದೆ. ಆದರೆ ಈ ಸೂತ್ರದ ನಿಯಮದ ನಿಮಿತ್ತದಿಂದ ಆತ್ಮನೇಪದತ್ವವನ್ನು ಪಡೆಯುತ್ತದೆ.

**(ಸ್ಥಾ ಧಾತುವಿ ಗೆಆತ್ಮನೇ ಪದವನ್ನು ವಿಧಿಸುವ ಸೂತ್ರ)**

**ಸೂತ್ರ- 737 ಸಮ್-ಅವ-ಪ್ರ-ವಿ-ಭ್ಯಃ ಸ್ಥಃ। (1.3.22)**

ವೃತ್ತಿ-ಸನ್ತಿಷ್ಠತೇ।ಅವತಿಷ್ಠತೇ।ಪ್ರತಿಷ್ಠತೇ।ವಿಥಿಷ್ಠತೇ।

ಅ.ವ್ಯ.-"ಅನುದಾತ್ತ ಙಿತ ಆತ್ಮನೇ ಪದಮ್" ಎಂಬ ಸೂತ್ರದಿಂದ ಆತ್ಮನೇಪದಮ್ ಎಂಬ ಪದವು ಅನುವೃತ್ತವಾಗುತ್ತದೆ.

ಪ.ಛೇ.- ಸಮ್-ಅವ-ಪ್ರ-ವಿ-ಭ್ಯಃ-ಸ್ಥಃ।

ಅರ್ಥ- ಸಮ್, ಅವ, ಪ್ರ ಮತ್ತು ವಿ ಉಪಸರ್ಗಗಳ ನಂತರ ಇರುವ 'ಸ್ಥಾ' ಧಾತುವಿಗೆ ಆತ್ಮನೇಪದ ಪ್ರತ್ಯಯವು ಬರುತ್ತದೆ.

ಉದಾ-1. ಸಂತಿಷ್ಠತೇ- (ವಾಸ ಮಾಡುತ್ತನೆ ಅಥವಾ ನಿಲ್ಲುತ್ತಾನೆಎಂದರ್ಥ). 'ಸಮ್' ಉಪಸರ್ಗಪೂರ್ವಕ ಸ್ಥಾ-ಗತಿ ನಿವೃತ್ತಾ ಎಂಬ ಧಾತುವಿನ ಲಟ್, ಪ್ರ.ಪು. ಏ.ವಚನದಲ್ಲಿ ಸಮ್+(ಸ್ಥಾ)ತಿಷ್ಟ್+ಅ+ತ್+ಏ= ಸಂತಿಷ್ಠತೇ ಎಂದುರೂಪವಾಗಿದೆ.

ಉದಾ-2. ಅವತಿಷ್ಠತೇ-(ನಿಲ್ಲುತ್ತಾನೆಅಥವಾ ಪ್ರತೀಕ್ಷ್ಯೇ ಮಾಡುತ್ತಾನೆ ಎಂದರ್ಥ)

ಉದಾ-3 ಪ್ರತಿಷ್ಠತೇ- (ಹೊರಡುತ್ತಾನೆ ಎಂದರ್ಥ)

ವಿತಿಷ್ಠತೇ-(ಸ್ಥಿರವಾಗಿ ಇರುತ್ತಾನೆಎಂದರ್ಥ) ಈ ಧಾತುಗಳ ರೂಪಗಳು ಮೇಲಿನಂತೆಯೇ ಆಗುತ್ತವೆ.

**(ಜ್ಞಾಧಾತುವಿಗೆ ಆತ್ಮನೇಪದವನ್ನು ಹೇಳುವ ಸೂತ್ರ)**

**ಸೂತ್ರ– 738 ಅಪಹ್ನವೇ ಜ್ಞಃ । (1.3.44)**

ವೃತ್ತಿ– ಶತಮಪಜಾನೀತೇ– ಅಪಲಪತೀತ್ಯರ್ಥಃ॥

ಅ.ವೃ.– " ಅನುದಾತ್ತ ಜಿತ ಆತ್ಮನೇ ಪದಮ್" ಎಂಬ ಸೂತ್ರದಿಂದ ಆತ್ಮನೇಪದಮ್ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– ಸತ್ಯಾಂಶವನ್ನು ಮುಚ್ಚಿ ಇಡುವುದು ಎಂಬ ಅರ್ಥವನ್ನು ಕೊಡುವ 'ಅಪ' ಉಪಸರ್ಗ ಪೂರ್ವಕ 'ಜ್ಞಾ' ಧಾತುವಿಗೆ ಆತ್ಮನೇಪದ ಬರುತ್ತದೆ.

'ಜ್ಞಾ' ಧಾತುವು ಉಭಯಪದಿಯಾಗಿದೆ. ಇದರ ಫಲವು ಪರಗಾಮಿಯಾದರೂ ಮರೆಮಾಡುವುದು ಎಂಬ ಅರ್ಥದಲ್ಲಿ 'ಅಪ' ಎಂಬ ಉಪಸರ್ಗದ ಜೊತೆಗೆ ಕೂಡಿದಾಗ ಆತ್ಮನೇಪದವೇ ಬರುತ್ತದೆ.

ಉದಾ– ಶತಮಪಜಾನೀತೇ– ಅಪಲಪತಿಇತ್ಯರ್ಥಃ (ಸಾಲ ತೆಗೆದುಕೊಂಡ ನೂರು ರೂಪಾಯಿಗಳನ್ನು ಸಾಲ ತೆಗೆದು ಕೊಳ್ಳಲಿಲ್ಲವೆಂದು ಮರೆ ಮಾಡುತ್ತಾನೆ).

**(ಅಕರ್ಮಕ 'ಜ್ಞಾ' ಧಾತುವಿಗೆ ಆತ್ಮನೇಪದವನ್ನು ವಿಧಿಸುವ ಸೂತ್ರ.)**

**ಸೂತ್ರ– 739 ಅಕರ್ಮಕಾಚ್ಚ॥ (1.3.45)**

ವೃತ್ತಿ– ಸರ್ಪಿಷೋ ಜಾನೀತೆ – ಸರ್ಪಿಷೋಪಾಯೇನ ಪ್ರವತತ ಇತ್ಯರ್ಥಃ॥

ಅ.ವೃ.– "ಅಪಹ್ನವೇ ಜ್ಞಃ" ಎಂಬ ಸೂತ್ರದಿಂದ 'ಜ್ಞಃ' ಮತ್ತು "ಅನುದಾತ್ತ ಜಿತ ಆತ್ಮನೇ ಪದಮ್" ಎಂಬ ಸೂತ್ರದಿಂದ 'ಆತ್ಮನೇಪದಮ್' ಎಂಬ ಪದವು ಅನುವೃತ್ತವಾಗುತ್ತದೆ.

ಪ.ಛೇ– ಅಕರ್ಮಕಾತ್, ಚ ।

ಅರ್ಥ– ಅಕರ್ಮಕ 'ಜ್ಞಾ' ಧಾತುವಿನ ನಂತರ ಆತ್ಮನೇಪದ ಪ್ರತ್ಯಯವು ಬರುತ್ತದೆ.

ಉದಾ–ಸರ್ಪಿಷೋ ಜಾನೀತೇ–ಸರ್ಪಿಷೋ ಉಪಾಯೇನ ಪ್ರವರ್ತತೇ ಇತ್ಯರ್ಥಃ (ತುಪ್ಪದ ವಾಸನೆಯ ಆಕರ್ಷಣದಿಂದ ಊಟದಲ್ಲಿ ಪ್ರವೃತ್ತನಾಗುತ್ತಾನೆ ಎಂದರ್ಥ.) ಈ ಪ್ರಸಂಗದಲ್ಲಿ 'ಜ್ಞಾ' ಧಾತುವಿಗೆ ಪ್ರವೃತ್ತಿ ಎಂಬ ಅರ್ಥವಿದೆ. ಆದು ಅಕರ್ಮಕ ವಾಗಿದ್ದರಿಂದ ಪ್ರಕೃತ ಸೂತ್ರದಿಂದ ಆತ್ಮನೇಪದತ್ವವನ್ನು ಪಡೆದಿದೆ.

ಸರ್ಪಿಷಃ ಎಂಬಲ್ಲಿ ಇರುವ ಈ ಷಷ್ಠೀ ವಿಭಕ್ತಿಯು "ಜ್ಞೋಽವಿದರ್ಥಸ್ಯಕರಣೇ" ಎಂಬ ಸೂತ್ರದಿಂದ ಕರಣಾರ್ಥದಲ್ಲಿ ಇದೆ. 'ಜ್ಞಾ' ಧಾತುವಿಗೆ ಯಾವಾಗ ಜ್ಞಾನಾರ್ಥ ವಿರುವುದಿಲ್ಲವೋ ಆವಾಗ ಈ ಧಾತುವಿಗೆ ಸಂಬಂಧಿಸಿದ ಕರಣವು ಷಷ್ಠ್ಯಂತವಾಗಿಇರುತ್ತದೆ. ಇದನ್ನೇ ವೃತ್ತಿಯಲ್ಲಿ ಸರ್ಪಿಷಾಉಪಾಯೇನ ಎಂದು ಹೇಳುವುದರ ಬದಲು ಸರ್ಪಿಷೋಜಾನೀತೇ ಎಂದು ಹೇಳಿರುವರು.

**(ಚರ್ ಧಾತುವಿಗೆ ಆತ್ಮನೇಪದವನ್ನು ವಿಧಿಸುವ ಸೂತ್ರ)**

**ಸೂತ್ರ- 740 ಉದಶ್ಚರಃ ಸಕರ್ಮಕಾತ್। (1.3.53)**

ವೃತ್ತಿ- ಧರ್ಮಮುಚ್ಚರತೇ - ಉಲ್ಲಙ್ಘ್ಯ ಗಚ್ಛತಿ ಇತ್ಯರ್ಥಃ।

ಅ.ವ್ಯ.-"ಅನುದಾತ್ತ ಙಿತ ಆತ್ಮನೇ ಪದಮ್" ಎಂಬ ಸೂತ್ರದಿಂದ 'ಆತ್ಮನೇಪದಮ್' ಎಂಬ ಪದವು ಅನುವೃತ್ತವಾಗುತ್ತದೆ.

ಪ.ಛೇ.-ಉದಃ, ಚರಃ, ಸಕರ್ಮಕಾತ್। ಎಂಬ ಮೂರು ಪದಗಳು ಪಂಚಮ್ಯಂತವಾಗಿವೆ.

ಅರ್ಥ- 'ಉತ್' ಉಪಸರ್ಗಪೂರ್ವಕ ಸಕರ್ಮಕವಾದ ಚರ್ ಧಾತುವಿನ ನಂತರ ಆತ್ಮನೇಪದವು ಬರುತ್ತದೆ.

ಉದಾ- ಧರ್ಮಮುಚ್ಚರತೇ- ಉಲ್ಲಂಘ್ಯಗಚ್ಛತಿ ಇತ್ಯರ್ಥಃ - (ಧರ್ಮವನ್ನು ಮೀರಿ ನಡೆಯುತ್ತಾನೆಎಂದರ್ಥ).

ಭ್ವಾದಿಗಣದಲ್ಲಿ ಚರಗತೌ-ಭಕ್ಷಣೇ ಚ ಎಂದು ಪರಸ್ಮೈಪದದಲ್ಲಿ ಹೇಳಲಾಗಿದೆ. ಇಲ್ಲಿ ಈ ಧಾತುವು ಆತ್ಮನೇಪದವಾಗುವುದಕ್ಕೆ ಅದು ಸಕರ್ಮಕವಾಗಿಯೂ 'ಉತ್' ಉಪಸರ್ಗದಿಂದ ಕೂಡಿರುವುದೇ ಕಾರಣವಾಗಿದೆ.

**(ಚರಧಾತುವಿಗೆ ಆತ್ಮನೇ ಪದವನ್ನು ವಿಧಿಸುವ ಸೂತ್ರ)**

**ಸೂತ್ರ- 741 ಸಮಸ್ತೃತೀಯಾಯುಕ್ತಾತ್। (1.3.54)**

ವೃತ್ತಿ- ರಥೇನ ಸಞ್ಚರತೇ।

ಅ.ವ್ಯ.-"ಉದಶ್ಚರಃ ಸಕರ್ಮಕಾತ್" ಎಂಬ ಸೂತ್ರದಿಂದ 'ಚರಃ' ಎಂಬ ಪದವು, "ಅನುದಾತ್ತ ಙಿತ ಆತ್ಮನೇ ಪದಮ್" ಎಂಬ ಸೂತ್ರದಿಂದ 'ಆತ್ಮನೇಪದಮ್' ಎಂಬ ಪದವು ಅನುವೃತ್ತವಾಗುತ್ತದೆ.

ಪ.ಛೇ.- ಸಮಃ, ತೃತೀಯಾಯುಕ್ತಾತ್।

ಅರ್ಥ- 'ಸಮ್' ಉಪಸರ್ಗದಿಂದ ಕೂಡಿದ ಚರ್ ಧಾತುವು ತೃತೀಯಾಂತ ಪದದಿಂದಕೂಡಿದ್ದರೆ ಆತ್ಮನೇ ಪದತ್ವವನ್ನು ಪಡೆಯುತ್ತದೆ.

ಉದಾ- ರಥೇನ ಸಂಚರತೇ- ರಥದಿಂದ ಸಂಚರಿಸುತ್ತಾನೆ ಎಂದರ್ಥ. ತೃತೀಯಾಂತ ಪದದಿಂದ ಕೂಡಿ ಇರದಿದ್ದರೆ ಪರಸ್ಮೈ ಪದ ಬರುತ್ತದೆ.

**(ದಾಣ್ ಧಾತುವಿಗೆ ಆತ್ಮನೇಪದವನ್ನು ವಿಧಿಸುವ ಸೂತ್ರ)**

**ಸೂತ್ರ- 742 ದಾಣಶ್ಚ ಸಾ ಚೇಚ್ಚತುರ್ಥ್ಯರ್ಥೇ। (1.3.55)**

ವೃತ್ತಿ- ಸಂಪೂರ್ವಾದ್ದಾಣಃ ತೃತೀಯಾನ್ತೇನ ಯುಕ್ತಾತ್ ಉಕ್ತಂ ಸ್ಯಾತ್, ತೃತೀಯಾ ಚೇತ್ ಚತುರ್ಥ್ಯರ್ಥೇ। ದಾಸ್ಯಾ ಸಂಯಚ್ಛತೇ ಕಾಮೀ।

ಅ.ವ್ಯ.- "ಸಮಸ್ತೃತೀಯಾಯುಕ್ತಾತ್" ಎಂಬ ಸೂತ್ರವು ಹಾಗೂ "ಅನುದಾತ್ತ

ಜಿತ ಆತ್ಮನೇ ಪದಮ್" ಎಂಬ ಸೂತ್ರದಿಂದ 'ಆತ್ಮನೇಪದಮ್' ಎಂಬ ಪದವು ಅನುವೃತ್ತವಾಗುತ್ತವೆ.

ಪ.ಛೇ.– ದಾಣಃ, ಚ, ಸಾ, ಚೇತ್, ಚತುರ್ಥ್ಯರ್ಥೇ।

ಅರ್ಥ– ಸಮ್ ಉಪಸರ್ಗಪೂರ್ವಕ ದಾಣ್ ಧಾತುವು ತೃತೀಯಾಂತ ಪದದಿಂದಕೂಡಿದ್ದರೆ ಆತ್ಮನೇಪದವಾಗುತ್ತದೆ. ಆದರೆ ಆ ತೃತೀಯಾಂತ ಪದವು ಚತುರ್ಥೀ ವಿಭಕ್ತಿಯ ಅರ್ಥವನ್ನುಕೊಡುವುದಾಗಿದ್ದರೆ ಮಾತ್ರ.

ಉದಾ–ದಾಸ್ಯಾ ಸಂಯಚ್ಛತೇ ಕಾಮೀ– (ಕಾಮುಕ ಪುರುಷನು ದಾಸಿಯಿಂದ (ದಾಸಿಗೆ) ಕೊಡುತ್ತನೆ.) ಎಂಬಲ್ಲಿ ದಾಸ್ಯಾ ಎಂಬ ಈ ತೃತೀಯಾಂತ ಪ್ರಯೋಗವು ದಾಣ್ ಧಾತುವಿನ ಜೊತೆಗೆ ಆಗಿದೆ.

ವಿವರಣೆ– ಅಶಿಷ್ಟವ್ಯವಹಾರೇ ದಾಣಃ ಪ್ರಯೋಗೇ 'ಚತುರ್ಥ್ಯರ್ಥೇ ತೃತೀಯಾ' ಎಂಬ ವಾರ್ತಿಕದ ಪ್ರಕಾರ ದಾಸ್ಯಾ ಎಂಬ ತೃತೀಯಾಂತ ಪದವು ಚತುರ್ಥ್ಯರ್ಥದಲ್ಲಿ ಇದೆ. ಕಾಮುಕನು ದಾಸಿಗೆ ಕೊಡುತ್ತಾನೆ ಎಂಬ ವ್ಯವಹಾರವು ಅಶಿಷ್ಟವ್ಯವಹಾರವಾಗಿದೆ. ಆದ್ದರಿಂದಲೇ ಚತುರ್ಥ್ಯರ್ಥದಲ್ಲಿ ತೃತೀಯಾ ಬಂದಿದೆ, ಮತ್ತು ಸಮ್ ಪೂರ್ವಕ 'ದಾಣ್' ಧಾತುವಿಗೆ ಆತ್ಮನೇಪದವು ಬಂದಿದೆ. ದಾಣ್ ಧಾತುವಿಗೆ 'ಯಚ್ಛ್' ಆದೇಶವಾಗಿ ಬಂದಿದೆ.

### (ಸನ್ನಂತ ಧಾತುವಿಗೆ ಆತ್ಮನೇಪದವನ್ನು ವಿಧಿಸುವ ಸೂತ್ರ)

**ಸೂತ್ರ– 743 ಪೂರ್ವವತ್ ಸನಃ। (1.3.62)**

ವೃತ್ತಿ– ಸನಃ ಪೂರ್ವೋ ಯೋ ಧಾತುಃ ತೇನ ತುಲ್ಯಂ ಸನ್ನಂತಾತ್ ಅಪಿ ಆತ್ಮನೇಪದಂ ಸ್ಯಾತ್। ಏದಿಧಿಷತೇ।

ಅ.ವ್ಯ.–"ಅನುದಾತ್ತ ಜಿತ ಆತ್ಮನೇ ಪದಮ್" ಎಂಬ ಸೂತ್ರದಿಂದ 'ಆತ್ಮನೇಪದಮ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– 'ಸನ್' ಪ್ರತ್ಯಯುವು ಬರುವುದಕ್ಕೆ ಪೂರ್ವದಲ್ಲಿ ಧಾತುವು ಆತ್ಮನೇಪದವಾಗಿದ್ದರೆ ಸನ್ ಪ್ರತ್ಯಯ ಬಂದ ಮೇಲೂ ಆತ್ಮನೇಪದವೇ ಬರುತ್ತದೆ.

ಉದಾ. ಏದಿಧಿಷತೇ– ಏಧಿತುಂ ಇಚ್ಛತಿ ಎಂಬ ವಿಗ್ರಹಕ್ಕೆ ಅಭಿವೃದ್ಧಿ ಪಡೆಯಲು ಇಚ್ಛಿಸುತ್ತಾನೆ ಎಂದರ್ಥ. ಏಧ್+ಸ ಎಂದಿದ್ದಾಗ, "ಆರ್ಧಧಾತುಕಸ್ಯೇಡ್ವಲಾದೇಃ" ಎಂಬ ಸೂತ್ರದಿಂದ ಸನ್ ಪ್ರತ್ಯಯಕ್ಕೆ ಇಡಾಗಮವು ಬಂದು ಏಧ್+ಇ+ಸ ಎಂದಿದ್ದಾಗ, "ಸನ್ಯಜೋೕ" ಎಂಬುದರಿಂದ ದ್ವಿತೀಯ ಏಕಾಚ್ 'ಧಿ' ಗೆ ದ್ವಿತ್ವವಾಗಿ ಏಧಿ+ಧಿ+ಸ ಎಂದಿದ್ದಾಗ, ಅಭ್ಯಾಸ ಕಾರ್ಯಗಳಾದ ಮೇಲೆ ಏದಿಧಿ+ಸ ಎಂದಿರುವಾಗ ಧಾತು–ಸಂಜ್ಞೆ, ಲಟ್. ತ, ಶಪ್,ಟಿ ಗೆ ಏತ್ವ, ಪರರೂಪಗಳಾಗಿ ಏದಿಧಿಸ+ಅ+ತ್+ಏ = ಏದಿಧಿಸತೇ ಎಂದಿರುವಾಗ 'ಸ' ಕಾರಕ್ಕೆ 'ಷ' ಕಾರಾದೇಶವಾಗಿ ಏದಿಧಿಷತೇ ಎಂದುರೂಪವು ಸಿದ್ಧವಾಗುತ್ತದೆ.

(ಕಿತ್ವವನ್ನು ವಿಧಿಸುವ ಅತಿದೇಶ ಸೂತ್ರ)

**ಸೂತ್ರ- 744 ಹಲನ್ತಾಚ್ಚ। (1.2.10)**

ವೃತ್ತಿ- ಇಕ್ ಸಮೀಪಾತ್ ಹಲಃ ಪರೋ ಝಲಾದಿಃ ಸನ್ ಕಿತ್। ನಿವಿವಿಕ್ಷತೇ।

ಅ.ವೃ.- "ಇಕೋ ಝಲ್" ಪೂರ್ಣ ಸೂತ್ರ ಮತ್ತು "ರುದವಿದ ಮುಷಗ್ರಹಿಸ್ವಪಿ ಪ್ರಚ್ಛಃ ಸಂಶ್ಚ" ಸೂತ್ರದಿಂದ ಸನ್ ಎಂಬ ಪದವು "ಅಸಂಯೋಗಾಲ್ಲಿಟ್‌ಕಿತ್" ಸೂತ್ರದಿಂದ ಕಿತ್ ಎಂಬ ಪದದ ಅನುವೃತ್ತಿಯಾಗುತ್ತದೆ.

ಪ. ಛೇ - ಹಲನ್ತಾತ್, ಚ।

ಅರ್ಥ- ಇಕ್ ಗೆ ಸಮೀಪದಲ್ಲಿರುವ ಹಲ್ ಗಿಂತ ಪರವಾದ ಝಲಾದಿಯಾದ 'ಸನ್' ಗೆ ಕಿದ್ವದ್ಭಾವವು ಬರುತ್ತದೆ.

ಉದಾ- ನಿವಿವಿಕ್ಷತೇ- ನಿವೇಷ್ಟುಮಿಚ್ಛತಿ= (ಪ್ರವೇಶಿಸಲು ಇಚ್ಛಿಸುತ್ತಾನೆಎಂದರ್ಥ) ಎಂಬ ವಿಗ್ರಹದಲ್ಲಿ 'ನಿ' ಪೂರ್ವಕ ವಿಶ್ ಧಾತುವಿಗೆ ಸನ್ ಪ್ರತ್ಯಯವು ಬಂದು ನಿ+ವಿಶ್+ಸ(ಸನ್) ಎಂದಿದ್ದಾಗ, ಪ್ರಕೃತ ಸೂತ್ರದಿಂದ ಕಿದ್ವದ್ಭಾವ ಬರುವುದರಿಂದ ಲಘುಪದಗುಣದ ನಿಷೇಧವಾಗಿ, "ಏಕಾಚ ಉಪದೇಶೇऽನುದಾತ್ತಾತ್" ಎಂಬುದರಿಂದ ಇಡಾಗಮದ ನಿಷೇಧವೂ ಬಂದು "ವ್ರಶ್ಚಭ್ರಸ್ಜ ........." ಎಂಬ ಸೂತ್ರದಿಂದ 'ಶ್' ಗೆ 'ಷ್' ಕಾರದ ಆದೇಶವಾಗಿ ನಿ+ವಿಶ್+ಸ ಎಂದಿದ್ದಾಗ "ಷಢೋಃ ಕಃ ಸಿ" ಎಂಬ ಸೂತ್ರದಿಂದ 'ಷ್' ಕಾರಕ್ಕೆ 'ಕ್' ಕಾರಾದೇಶವಾಗಿ ಸನ್ ನ 'ಸ' ಕಾರಕ್ಕೆ 'ಷ' ಕಾರಾದೇಶವಾಗಿ 'ಕ್' ಮತ್ತು 'ಷ್' ಗಳು 'ಕ್ಷ' ಎಂದಾಗಿ ನಿ+ವಿಕ್ಷ ಎಂದಿರುವಾಗ, ದ್ವಿತ್ವ ಬಂದು ನಿ+ವಿಕ್ಷ+ವಿಕ್ಷ ಎಂದಿದ್ದಾಗ ಅಭ್ಯಾಸಕಾರ್ಯವಾಗಿ ನಿ+ವಿ+ವಿಕ್ಷ= ಎಂದಿರುವಾಗ, ಲಟ್, ತ, ಶಪ್ ಟಿ ಗೆ ಏತ್ವಾದಿಗಳು ಬಂದು ನಿ+ವಿ+ವಿಕ್ಷ+ಅ+ತ್+ಏ= ನಿವಿವೀಕ್ಷತೇ ಎಂದುರೂಪವು ಸಿದ್ಧವಾಗುತ್ತದೆ.

(ಕೃ ಧಾತುವಿಗೆ ಆತ್ಮನೇಪದವನ್ನು ವಿಧಿಸುವ ಸೂತ್ರ)

**ಸೂತ್ರ-745 ಗನ್ಧನಾऽವಕ್ಷೇಪಣ-ಸೇದನ-ಸಾಹಸಿಕ್ಯ-ಪ್ರತಿಯತ್ನ ಪ್ರಕಥನೋಪಯೋಗೇಷು ಕೃಞಃ। (1.3.32)**

ವೃತ್ತಿ-ಗನ್ಧನಂ-ಸೂಚನಮ್। ಉತ್ಕುರುತೇ-ಸೂಚಯತೀತ್ಯರ್ಥ। 'ಅವಕ್ಷೇಪಣಮ್-ಭರ್ತ್ಸನಮ್।ಶ್ಯೇನೋ ವಾರ್ತಿಕಾಮ್ ಉದಾಕುರುತೇ-ಭರ್ತ್ಸಯತೀತ್ಯರ್ಥಃ। ಹರಿಮ್ ಉಪಕುರುತೇ-ಸೇವತ ಇತ್ಯರ್ಥಃ।ಪರದಾರಾನ್ ಪ್ರಕುರುತೇ- ತೇಷು ಸಹಸಾ ಪ್ರವರ್ತತೇ। ಏಧೋದಕಸ್ಯ ಉಪಸ್ಕುರುತೇ- ಗುಣಮಾಧತ್ತೇ। ಕಥಾಃ ಪ್ರಕುರುತೇ-ಕಥಯತೀತ್ಯರ್ಥಃ। ಶತಂ ಪ್ರಕುರುತೇ- ಧರ್ಮಾರ್ಥಂ ವಿನಿಯುಙ್ಕ್ತೇ। ಏಷುಕಿಮ್-ಕಟಂ ಕರೋತಿ। (672) ಭುಜೋऽನವನೇ। ಓದನಂ ಭುಙ್ಕ್ತೇ। ಅನವನೇ ಕಿಮ್-ಭುನಕ್ತಿ। ಇತಿ ಆತ್ಮನೇಪದ ಪ್ರಕ್ರಿಯಾ। ॥ಇತಿ ಆತ್ಮನೇಪದ ಪ್ರಕ್ರಿಯಾ(28) ಪ್ರಕರಣಮ್॥

ಪ.ಛೇ.-ಗಂಧನ-ಅವಕ್ಷೇಪಣ-ಸೇವನ-ಸಾಹಸಿಕ್ಯ-ಪ್ರತಿಯತ್ನ-ಕಥನ-

ಉಪಯೋಗೇಷು ಕೃಞಃ ।

ಅ.ವೃ.-"ಅನುದಾತ್ತ ಜಿತ ಆತ್ಮನೇ ಪದಮ್" ಎಂಬ ಸೂತ್ರದಿಂದ 'ಆತ್ಮನೇಪದಮ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- ಗಂಧನ(ಸೂಚನೆ- ಮತ್ತೊಬ್ಬರದೋಷವನ್ನುಎತ್ತಿತೋರಿಸುವುದು) ಅವಕ್ಷೇಪಣ (ಹೆದರಿಸುವುದು) ಸೇವನ (ಸೇವಿಸುವುದು)ಸಾಹಸಿಕ್ಯ(ಸಹಸಾ ಪ್ರವೃತ್ತವಾಗುವುದು) ಪ್ರತಿಯತ್ನ (ಇಲ್ಲದಿರುವಗುಣವನ್ನುಉಂಟುಮಾಡುವುದು) ಕಥನ(ಒಳ್ಳೆಯ ರೀತಿಯಲ್ಲಿ ಕಥೆಗಳನ್ನು ಹೇಳುವುದು) ಮತ್ತು ಉಪಯೋಗ ಎಂಬ ಅರ್ಥಗಳು 'ಕೃ' ಧಾತುವಿನಿಂದ ತೋರುವಾಗ ಈ ಧಾತುವಿಗೆ ಆತ್ಮನೇಪದ ಪ್ರತ್ಯಯವು ಬರುತ್ತದೆ.

ಉದಾ-1. ಉತ್ಕುರುತೇ- ಪರರದೋಷವನ್ನು ಹೇಳುತ್ತಾನೆ ಎಂದರ್ಥ. ಉತ್-ಪೂರ್ವಕ 'ಕೃ' ಧಾತುವಿಗೆ ಪ್ರಕೃತ ಸೂತ್ರದಿಂದ ಸೂಚಿಸುವುದು ಎಂಬ ಅರ್ಥವು ತೋರುವುದರಿಂದ ಆತ್ಮನೇಪದವು ಬರುತ್ತದೆ.

ಉದಾ- 2. ಶ್ಯೇನೋ ವಾರ್ತಿಕಾಮ್ ಉದಾಕುರುತೇ- (ಹದ್ದು ಪಾರಿವಾಳವನ್ನು ಹೆದರಿಸುತ್ತದೆ) ಇಲ್ಲಿ ಉತ್-'ಆ' ಉಪಸರ್ಗಪೂರ್ವಕ 'ಕ್ರೃ' ಧಾರುವಿನಿಂದ ಹೆದರಿಸುವುದು(ನಿಂದೆ ಮಾಡುವುದು,' ತಿರಸ್ಕರಿಸುವುದು) ಎಂಬ ಅರ್ಥಗಳೂ ತೋರುವುದರಿಂದ ಪ್ರಕೃತ ಸೂತ್ರದಿಂದ ಆತ್ಮನೇಪದವು ಬರುತ್ತದೆ.

ಉದಾ-3. ಹರಿಮುಪಕುರುತೇ- (ಹರಿಯ ಸೇವೆಯನ್ನು ಮಾಡುತ್ತಾನೆ) ಇಲ್ಲಿ ಉಪ ಉಪಸರ್ಗಪೂರ್ವಕ 'ಕೃ' ಧಾತುವಿನಿಂದ ಸೇವಾರ್ಥವು ತೋರುವುದರಿಂದ ಪ್ರಕೃತಸೂತ್ರದಿಂದ ಆತ್ಮನೇಪದವು ಬರುತ್ತದೆ.

ಉದಾ- 4. ಪರದಾರಾನ್ ಪ್ರಕುರುತೇ- (ವಿಚಾರ ಮಾಡದೆ ಬಲಾತ್ಕಾರದಿಂದ ಪರ ಪತ್ನಿಯರನ್ನು ಪೀಡಿಸುವುದು)ಎಂಬ ಅರ್ಥವು ಇಲ್ಲಿ 'ಪ್ರ' ಉಪಸರ್ಗಪೂರ್ವಕ 'ಕೃ' ಧಾತುವಿನಿಂದ ಲಭ್ಯವಾಗಿರುವುದರಿಂದ ಪ್ರಕೃತ ಸೂತ್ರದಿಂದ ಆತ್ಮನೇಪದವು ಬರುತ್ತದೆ.

ಉದಾ-5. ಏಧೋದಕಸ್ಯೋಪಸ್ಕುರುತೇ- ಉರಿಯುವ ಕಟ್ಟಿಗೆಯು ಸ್ವಾಭಾವಿಕವಾದ ತಣ್ಣೀರಿನಲ್ಲಿ ಉಷ್ಣತೆಯನ್ನು ಉಂಟು ಮಾಡುತ್ತದೆ. ಇಲ್ಲಿ ಸುಡಾಗಮ ಪೂರ್ವಕ 'ಉಪ' ಉಪಸರ್ಗ ಪೂರ್ವಕ 'ಕೃ' ಧಾತುವಿನಿಂದ ಬೇರೆ ಗುಣವನ್ನು ಉಂಟು ಮಾಡುವುದು ಎಂಬ ಅರ್ಥವುತೋರುವುದರಿಂದ ಪ್ರಕೃತ ಸೂತ್ರದಿಂದ ಆತ್ಮನೇಪದವು ಬಂದಿದೆ.

ಉದಾ-6. ಕಥಾಃ ಪ್ರಕುರುತೇ- ಕಥೆಯನ್ನು ಒಳ್ಳೆಯರೀತಿಯಲ್ಲಿ ಹೇಳುತ್ತಾನೆ ಎಂದರ್ಥ. ಇಲ್ಲಿ 'ಪ್ರ' ಪೂರ್ವಕ 'ಕೃ' ಧಾತುವಿನಿಂದ ಈ ಅರ್ಥವುತೋರುವುದರಿಂದ ಆತ್ಮನೇಪದವು ಬಂದಿದೆ.

ಉದಾ-7. ಶತಂ ಪ್ರಕುರುತೇ- ನೂರು ನಾಣ್ಯಗಳನ್ನು ಧರ್ಮಕ್ಕಾಗಿ ಉಪಯೋಗಿಸುತ್ತಾನೆ ಎಂದರ್ಥ. ಇಲ್ಲಿ 'ಪ್ರ' ಪೂರ್ವಕ 'ಕೃ' ಧಾತುವಿನಿಂದ ಈ ಅರ್ಥವು ಉಕ್ತವಾಗಿರುವುದರಿಂದ ಆತ್ಮನೇಪದವು ಬಂದಿದೆ.

ಮೇಲೆ ಹೇಳಿದ ಈ ಅರ್ಥಗಳಲ್ಲಿ 'ಕೃ' ಧಾತುವಿಗೆ ಆತ್ಮನೇಪದವು ಬರುತ್ತದೆಎಂದು ಏಕೆ ಹೇಳಿರುವರು? ಎಂಬ ಪ್ರಶ್ನೆಗೆ ಸಮಾಧಾನವನ್ನು ಕಟಂಕರೋತಿ ಎಂಬ ಉದಾಹರಣೆಯಿಂದ ತಿಳಿಸುತ್ತಾರೆ.

ಉದಾ- 8. ಕಟಂಕರೋತಿ (ಚಾಪೆಯನ್ನು ಮಾಡುತ್ತಾನೆ ಎಂದರ್ಥ) ಮೇಲೆ ಹೇಳಿದ ಏಳು ಅರ್ಥಗಳಿಂದ ಭಿನ್ನವಾದ ಅರ್ಥವು ಈ ಉದಾಹರಣೆಯಲ್ಲಿರುವುದರಿಂದ ಆತ್ಮನೇಪದವು ಬರುವುದಿಲ್ಲ

"ಭುಜೋಽನವನೇ" ಎಂಬ ಈ ಸೂತ್ರವು ರುಧಾದಿ ಗಣದಲ್ಲಿಇದೆ. 'ಭುಜ್' ಧಾತುವಿಗೆ ಪಾಲನಾರ್ಥಕ್ಕಿಂತ ಭಿನ್ನವಾದಅರ್ಥದಲ್ಲಿ ಈ ಧಾತುವಿಗೆ ಆತ್ಮನೇಪದವು ಬರುತ್ತದೆ. ಈ ಧಾತುವಿಗೆ ಭಕ್ಷಣ ಮತ್ತು ಪಾಲನೆ ಎಂದು ಎರಡು ಅರ್ಥಗಳಿವೆ. ಭಕ್ಷಣೆ ಮಾಡುವುದು ಎಂಬ ಅರ್ಥದಲ್ಲಿ ಈ ಸೂತ್ರದಿಂದ ಆತ್ಮನೇಪದವು ಬಂದು (ಓದನಂ) ಭುಂಕ್ತೇ ಎಂದುರೂಪವಾಗುತ್ತದೆ. ಪಾಲನೆ ಮಾಡುವುದು ಎಂಬ ಅರ್ಥದಲ್ಲಿ ಪರಸ್ಮೈಪದ ಪ್ರತ್ಯಯವುಬಂದು (ಮಹೀಂ) ಭುನಕ್ತಿ ಎಂದಾಗುತ್ತದೆ.

ಅನವನೇ ಎಂದು ಹೇಳದಿದ್ದರೆ ಮಹೀಂ ಭುನಕ್ತಿ ಎಂಬಲ್ಲಿಯೂ ಆತ್ಮನೇಪದವು ಬಂದು ಅನಿಷ್ಟರೂಪವು ಆಗುತ್ತಿತ್ತು.

**॥ ಇತಿ ಆತ್ಮನೇ ಪದ ಪ್ರಕ್ರಿಯಾ (28) ಪ್ರಕರಣಮ್॥**

**ಇಲ್ಲಿಗೆ ಆತ್ಮನೇ ಪದ ಪ್ರಕ್ರಿಯೆ (28)ಯು ಮುಗಿಯಿತು.**

***

# ಪ್ರಕರಣ-29: ಪರಸ್ಮೈಪದ ಪ್ರಕ್ರಿಯಾ

**(ಸೂತ್ರ ಸಂಖ್ಯೆ 746 ರಿಂದ 751 ವರೆಗೆ)**

**(ಕೃಞಾಧಾತುವಿಗೆ ಪರಸ್ಮೈಪದವನ್ನು ವಿಧಿಸುವ ನಿಯಮಸೂತ್ರ)**

**ಸೂತ್ರ - 746 ಅನು-ಪರಾಭ್ಯಾಂ ಕೃಞಃ(1.3.79)**

ವೃತ್ತಿ -ಕರ್ತೃಗೇ ಚ ಫಲೇ ಗನ್ಧನಾದೌ ಚ ಪರಸ್ಮೈಪದಂ ಸ್ಯಾತ್। ಅನುಕರೋತಿ। ಪರಾಕರೋತಿ।

ಅ.ವೃ -"ಶೇಷಾತ್‌ಕರ್ತರಿ ಪರಸ್ಮೈಪದಮ್" ಸೂತ್ರದಿಂದ 'ಕರ್ತರಿ' ಮತ್ತು 'ಪರಸ್ಮೈಪದಮ್' ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ- ಅನು ಅಥವಾ ಪರಾ ಎಂಬ ಉಪಸರ್ಗಗಳಿಂದ ಕೂಡಿದ 'ಕೃಞ್' ಧಾತುವಿನ ಕ್ರಿಯಾಫಲವು ಕರ್ತುಗಾಮಿಯಾದರೂ ಅಥವಾ ಗಂಧನ ಮೊದಲಾದ ಅರ್ಥ ಹೇಳುವಾಗ ಈ 'ಕೃಞ' ಧಾತುವಿನ ಪರದಲ್ಲಿ ಪರಸ್ಮೈಪದ ಪ್ರತ್ಯಯ ಬರುತ್ತದೆ.

ಉದಾ- ಅನುಕರೋತಿ= ಅನುಕರಣೆಯನ್ನು ಮಾಡುತ್ತಾನೆ

ಪರಾಕರೋತಿ= ದೂರ ಸರಿಸುತ್ತಾನೆ.

ಕ್ರಿಯಾಫಲವು ಕರ್ತೃಗಾಮಿ ಯಾಗಿದ್ದಾಗ "ಸ್ವರಿತಜಿತಃ ಕರ್ತ್ರಭಿಪ್ರಾಯೇಕ್ರಿಯಾಫಲೇ" ಎಂಬ ಸೂತ್ರದಿಂದ ಮತ್ತು ಗಂಧನಾದಿ ಅರ್ಥದಲ್ಲಿ "ಗಂಧನ ಅವಕ್ಷೇಪಣ" ... ಎಂಬ ಸೂತ್ರದಿಂದ ಆತ್ಮನೇಪದವು ಬರುತ್ತಿತ್ತು. ಆದರೆ ಪ್ರಕೃತ ಸೂತ್ರದ ನಿಯಮದಿಂದ ಪರಸ್ಮೈಪದವೇ ಬರುತ್ತದೆ.

ಅನು ಮತ್ತು ಪರಾ ಪೂರ್ವಕ 'ಕೃ' ಧಾತುವಿನ ಫಲವು ಕರ್ತೃಗಾಮಿಯಾದರೂ ಪರಸ್ಮೈಪದವೇ ಬಂದಿದೆ. ಆತ್ಮನೇಪದಕ್ಕೆ ಅವಕಾಶವಿರುವುದಿಲ್ಲ.

**(ಕ್ಷಿಪ್ ಧಾತುವಿಗೆ ಪರಸ್ಮೈಪದವನ್ನು ವಿಧಿಸುವ ನಿಯಮ ಸೂತ್ರ)**

**ಸೂತ್ರ- 747 - ಅಭಿ-ಪ್ರತ್ಯತಿಭ್ಯಃ ಕ್ಷಿಪಃ 1.3.80)**

ವೃತ್ತಿ- ಕ್ಷಿಪ ಪ್ರೇರಣೇ। ಸ್ವರಿತೇತ್। ಅಭಿಕ್ಷಿಪತಿ।

ಅ.ವೃ.- "ಶೇಷಾತ್‌ಕರ್ತರಿ ಪರಸ್ಮೈಪದಮ್" ಎಂಬ ಸೂತ್ರದಿಂದ ಕರ್ತರಿ ಮತ್ತು ಪರಸ್ಮೈಪದಮ್ ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ- ಅಭಿ, ಪ್ರತಿ ಮತ್ತು ಅತಿ ಉಪಸರ್ಗಗಳಿಂದ ಕೂಡಿದ 'ಕ್ಷಿಪ್' ಧಾತುವಿಗೆ ನಂತರ ಕರ್ತ್ರರ್ಥದಲ್ಲಿ ಪರಸ್ಮೈಪದ ಪ್ರತ್ಯಯವು ಬರುತ್ತದೆ.

ಧಾತು - ಕ್ಷಿಪ - ಪ್ರೇರಣೇ

ಉದಾ- 'ಕ್ಷಿಪ' ಇದು ತುದಾದಿ ಗಣದಲ್ಲಿ ಉಭಯಪದಿಯಾಗಿ ಪಠಿತವಾಗಿದೆ. ಇದರಕ್ರಿಯಾಫಲವು ಕರ್ತೃಗಾಮಿಯಾದರೂ ಈ ಉಪಸರ್ಗಗಳ ಯೋಗದಿಂದ ಪರಸ್ಮೈಪದವನ್ನು ಪಡೆಯುತ್ತದೆ.

ಉದಾ- ಅಭಿಕ್ಷಿಪತಿ- ಎಸೆಯುತ್ತಾನೆ ಎಂದರ್ಥ. ಇಲ್ಲಿ 'ಕ್ಷಿಪ್' ಧಾತುವು ಅಭಿ ಉಪಸರ್ಗಪೂರ್ವಕ ವಾಗಿರುವುದರಿಂದ ಕ್ಷಿಪ ಧಾತುವು ಪರಸ್ಮೈಪದವಾಗಿದೆ.

ಉದಾ- ಪ್ರತಿಕ್ಷಿಪತಿ- ದೂರಮಾಡುತ್ತಾನೆ ಎಂದರ್ಥ

ಉದಾ- ಅತಿಕ್ಷಿಪತಿ - ನಿವಾರಣೆಮಾಡುತ್ತಾನೆ ಎಂದರ್ಥ. ಇಲ್ಲಿಯೂ ಮೇಲಿನ ನಿಯಮದಿಂದ ಪರಸ್ಮೈಪದವೇ ಬರುತ್ತದೆ.

**(ವಹ್ ಧಾತುವಿಗೆ ಪರಸ್ಮೈಪದವನ್ನು ವಿಧಿಸುವ ಸೂತ್ರ)**

**ಸೂತ್ರ- 748 - ಪ್ರಾದ್ ವಹಃ । (1.3.81)**

ವೃತ್ತಿ- ಪ್ರವಹತಿ।

ಅ.ವ್ಯ.- "ಶೇಷಾತ್‌ಕರ್ತರಿ ಪರಸ್ಮೈಪದಮ್" ಎಂಬ ಸೂತ್ರದಿಂದ ಕರ್ತರಿ ಮತ್ತು ಪರಸ್ಮೈಪದಮ್ ಎಂಬ ಪದಗಳು ಅನುವೃತ್ತವಾಗುತ್ತವೆ

ಅರ್ಥ- ಪ್ರ ಉಪಸರ್ಗದಿಂದಕೂಡಿದ ವಹ್ ಧಾತುವಿನ ನಂತರ ಪರಸ್ಮೈಪದ ಪ್ರತ್ಯಯವು ಬರುತ್ತದೆ.

ಉದಾ- ವಹ್ ಪ್ರಾಪಣೇ (ಒಯ್ಯುವುದು ಎಂದರ್ಥ). ಈ ಧಾತುವು ಭ್ವಾದಿಗಣದಲ್ಲಿ ಉಭಯಪದಿಯಾಗಿ ಪಠಿತವಾಗಿದೆ. ಪ್ರ ಉಪಸರ್ಗವು ಪೂರ್ವದಲ್ಲಿ ಇದ್ದು ಕ್ರಿಯೆಯ ಫಲವು ಕರ್ತೃಗಾಮಿಯಾಗಿದ್ದರೂ ಸೂತ್ರದ ನಿಯಮದಿಂದ ಪರಸ್ಮೈಪದವೇ ಬರುತ್ತದೆ.

**(ಮೃಷ್ ಧಾತುವಿಗೆ ಪರಸ್ಮೈಪದವನ್ನು ವಿಧಿಸುವ ಸೂತ್ರ)**

**ಸೂತ್ರ- 749- ಪರೇರ್ಮೃಷಃ। 1.3.82)**

ವೃತ್ತಿ- ಪರಿಮೃಷ್ಯತಿ।

ಅ.ವ್ಯ.- "ಶೇಷಾತ್‌ಕರ್ತರಿ ಪರಸ್ಮೈಪದಮ್" ಎಂಬ ಸೂತ್ರದಿಂದ ಕರ್ತರಿ ಮತ್ತು ಪರಸ್ಮೈಪದಮ್ ಎಂಬ ಪದಗಳು ಅನುವೃತ್ತವಾಗುತ್ತವೆ.

ಪ.ಛೇ.- ಪರೇಃ, ಮೃಷಃ ।

ಅರ್ಥ- ಮೃಷ್ ತಿತಿಕ್ಷಾಯಾಂ ಎಂಬ ಧಾತುವಿಗೆ ಪರಿ ಉಪಸರ್ಗವನ್ನು ಸೇರಿಸಿದಾಗ ಅದಕ್ಕೆ ಪರಸ್ಮೈಪದ ಪ್ರತ್ಯಯವು ಬರುತ್ತದೆ. ದಿವಾದಿಗಣದಲ್ಲಿ ಸ್ವರಿತೇತ್ ಆಗಿರುವುದರಿಂದ ಈ ಧಾತುವು ಉಭಯಪದವಾಗಿ ಪಠಿತವಾದರೂ ಇದರ ಫಲವು ಕರ್ತೃಗಾಮಿಯಾದರೂ ಪ್ರಕೃತ ಸೂತ್ರದ ನಿಯಮದಿಂದ ಆತ್ಮನೇಪದವನ್ನು ಬಾಧಿಸಿ ಪರಸ್ಮೈಪದವೇ ಬರುತ್ತದೆ.

**(ರಮ್ ಧಾತುವಿಗೆ ಪರಸ್ಮೈಪದವನ್ನು ವಿಧಿಸುವ ಸೂತ್ರ)**

**ಸೂತ್ರ- 750 - ವ್ಯಾಙ್-ಪರಿಭ್ಯೋ ರಮಃ। 1.3.83)**

ವೃತ್ತಿ- ರಮು ಕ್ರೀಡಾಯಾಮ್। ವಿರಮತಿ।

ಅ.ವ್ಯ.- ಶೇಷಾತ್‌ಕರ್ತರಿ ಪರಸ್ಮೈಪದಮ್ ಎಂಬ ಸೂತ್ರದಿಂದ ಕರ್ತರಿ ಮತ್ತು

ಪರಸ್ಮೈಪದಮ್ ಎಂಬ ಪದಗಳು ಅನುವೃತ್ತವಾಗುತ್ತವೆ.

ಪ.ಛೇ.– ವಿ–ಆಙ್–ಪರಿಭ್ಯೋ, ರಮಃ ।

ಅರ್ಥ– ವಿ, ಆಙ್ ಮತ್ತು ಪರಿ ಈ ಉಪಸರ್ಗಗಳ ಜೊತೆಗೆಕೂಡಿದ ರಮು(ರಮ್) ಕ್ರೀಡಾಯಾಂ ಎಂಬ ಧಾತುವಿನ ನಂತರ ಪರಸ್ಮೈಪದ ಪ್ರತ್ಯಯವು ಬರುತ್ತದೆ.

ಉದಾ– ರಮ್ ಧಾತುವು ಅನುದಾತ್ತೇತ್ತಾಗಿರುವುದರಿಂದ ಆತ್ಮನೇ ಪದವಾಗಿದೆ. ಈ ಉಪಸರ್ಗಗಳ ಜೋಡಣೆಯಿಂದ ಸೂತ್ರ ನಿಯಮದಿಂದ ಪರಸ್ಮೈಪದವು ಬಂದಿದೆ.

ಜೋಡಣೆಯಿಂದ ಧಾತುವಿನ ಅರ್ಥವು ಬದಲಾಗುತ್ತದೆ.

ಉದಾ– ವಿರಮತಿ= ನಿಲ್ಲುತ್ತಾನೆ ಎಂದರ್ಥ

ಆರಮತಿ= ಎಲ್ಲೆಡೆಯಲ್ಲೂ ರಮಿಸುತ್ತಾನೆ ಎಂದರ್ಥ

ಪರಿರಮತಿ= ಪ್ರಸನ್ನನಾಗಿರುತ್ತಾನೆ ಎಂದರ್ಥ

**('ಉಪ' ಉಪಸರ್ಗ ಸೇರಿಸಿದಾಗ ರಮ್ ಧಾತುವಿಗೆ ಪರಸ್ಮೈಪದವನ್ನು ವಿಧಿಸುವ ಸೂತ್ರ)**

**ಸೂತ್ರ– 751 – ಉಪಾಚ್ಚ। (1.3.84)**

ವೃತ್ತಿ– ಯಜ್ಞದತ್ತ ಉಪರಮತಿ। ಉಪರಮಯತಿ ಇತ್ಯರ್ಥಃ। ಅನ್ತರ್ಭಾವಿತಣ್ಯರ್ಥೋಽಯಮ್।

ಅ.ವ್ಯ.– "ವ್ಯಾಙ್–ಪರಿಭ್ಯೋರಮಃ" ಎಂಬ ಸೂತ್ರದಿಂದ ರಮಃ ಎಂಬ ಪದವು ಮತ್ತು "ಶೇಷಾತ್‌ಕರ್ತರಿ ಪರಸ್ಮೈಪದಮ್" ಎಂಬ ಸೂತ್ರದಿಂದ ಕರ್ತರಿ ಮತ್ತು ಪರಸ್ಮೈಪದಮ್ ಎಂಬ ಪದಗಳು ಅನುವೃತ್ತವಾಗುತ್ತವೆ.

ಪ.ಛೇ.– ಉಪಾತ್, ಚ।

ಅರ್ಥ– 'ಉಪ' ಎಂಬ ಉಪಸರ್ಗದ ಪರದಲ್ಲಿರುವ ರಮ್ ಧಾತುವಿಗೂ ಪರಸ್ಮೈ ಪದ ಪ್ರತ್ಯಯವು ಬರುತ್ತದೆ.

ಉದಾ – ಯಜ್ಞದತ್ತಮುಪರಮತಿ(ಉಪರಮಯತಿ)– ಯಜ್ಞದತ್ತನನ್ನು ಪದಾರ್ಥವನ್ನು ನಾಶಗೊಳಿಸುವಂತೆ ಪ್ರೇರಿಸುತ್ತಾನೆಎಂದರ್ಥ. ಇಲ್ಲಿ ಉಪ ಉಪಸರ್ಗ ಪೂರ್ವಕವಾದ್ದರಿಂದ 'ರಮ್' ಧಾತುವಿಗೆ ಪರಸ್ಮೈಪದವು ಬಂದಿದೆ.

ಉಪರಮತಿ= ಎಂಬುದರ ಅರ್ಥವು ನಾಶವನ್ನು ಮಾಡಿಸುತ್ತಾನೆ ಎಂದು. ಈ ಅರ್ಥವು ಹೇಗೆ ಬರುತ್ತದೆ ಎಂದು ಕೇಳಿದರೆ ಅದಕ್ಕೆ ಸಮಾಧಾನವನ್ನು "ಅಚಿತರ್ಭಾವಿತ ಣ್ಯರ್ಥೋಽಯಮ್" ಎಂಬ ವಾಕ್ಯದಿಂದ ಹೇಳುತ್ತಾರೆ. ಇಲ್ಲಿ ರಮ್ ಧಾತುವು ಅಚಿತರ್ಭಾವಿತ ಣ್ಯರ್ಥವನ್ನು ಉಳ್ಳದ್ದಾಗಿದೆ ಅಚಿದರೆ ಣಿಚ್ ನ ಪ್ರೇರಣಾರ್ಥವು ಇದರೊಳಗಿದೆ. ಆದ್ದರಿಂದ ಇದು ಸಕರ್ಮಕವಾಗಿದೆ.

॥ **ಇಲ್ಲಿಗೆ ಪರಸ್ಮೈಪದ ಪ್ರಕ್ರಿಯೆಯು (29) ಮುಗಿಯಿತು** ॥

# ಪ್ರಕರಣ-30: ಭಾವಕರ್ಮ ಪ್ರಕ್ರಿಯಾ

**(ಸೂತ್ರ ಸಂಖ್ಯೆ 752 ರಿಂದ 760 ವರೆಗೆ)**

**(ಭಾವ ಮತ್ತು ಕರ್ಮಾರ್ಥಗಳಲ್ಲಿ ಇರುವ ಲ-ಕಾರಕ್ಕೆ ಆತ್ಮನೇ ಪದ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ- 752 - ಭಾವಕರ್ಮಣೋಃ। 1.3.13)**

ವೃತ್ತಿ- ಭಾವೇ ಕರ್ಮಣಿ ಚ ಧಾತೋಃ ಲಸ್ಯ ಆತ್ಮನೇಪದಮ್।

ಅ.ವೃ- 'ಅನುದಾತ್ತ ಜಿತ ಆತ್ಮನೇ ಪದಮ್' ಎಂಬ ಸೂತ್ರದಿಂದ ಆತ್ಮನೇಪದಮ್ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- ಭಾವ ಮತ್ತು ಕರ್ಮ ಅರ್ಥಗಳಲ್ಲಿ ಇರುವ ಲಕಾರದ ಸ್ಥಾನದಲ್ಲಿ ಆತ್ಮನೇಪದ ಪ್ರತ್ಯಯವು ಬರುತ್ತದೆ.

ವಿವರಣೆ- ಭಾವ ಮತ್ತು ಕರ್ಮಾರ್ಥಗಳಲ್ಲಿ ಧಾತುವು ಆತ್ಮನೇ ಪದದಲ್ಲೇ ಇರುತ್ತದೆ. ಪರಸ್ಮೈಪದದಲ್ಲಿ ಇರುವುದಿಲ್ಲ.

**(ಯಕ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ- 753- ಸಾರ್ವಧಾತುಕೇ ಯಕ್।(3.1.67)**

ವೃತ್ತಿ- ಧಾತೋರ್ಯಕ್ ಭಾವಕರಮವಾಚಿನಿ ಸಾರ್ವಧಾತುಕೇ। ಭಾವ-ಕ್ರಿಯಾ, ಸಾ. ಚ ಭಾವಾರ್ಥಕ-ಲ-ಕಾರೇಣ ಅನೂದ್ಯತೇ। ಯುಷ್ಮದಸ್ಮಭ್ಯಾಂ ಸಾಮಾನಾಧಿಕರಣ್ಯಾಭಾವಾತ್ ಪ್ರಥಮಃ ಪುರುಷಃ। ತಿಙ್ ವಾಚ್ಯಕ್ರಿಯಾಯಾಃ ಅದ್ರವ್ಯರೂಪತ್ವೇನ ದ್ವಿತ್ವಾದಿ ಅಪ್ರತೀತೇಃ ನ ದ್ವಿವಚನಾದಿ, ಕಿಂತು ಏಕವಚನಮೇವ ಉತ್ಸರ್ಗತಃ। ತ್ವಯಾ, ಮಯಾ ಅನ್ಯೈಶ್ಚ ಭೂಯತೇ। ಬಭೂವೇ।

ಅ.ವೃ- "ಚಿಣ್ ಭಾವ ಕರ್ಮಣೋಃ" ಎಂಬ ಸೂತ್ರದಿಂದ ಭಾವ-ಕರ್ಮಣೋಃ ಎಂಬ ಪದವು "ಧಾತೋಃ ಏಕಾಚೋ ಹಲಾದೇಃ ಕ್ರಿಯಾಸಮಭಿಹಾರೇ ಯಙ್" ಎಂಬ ಸೂತ್ರದಿಂದ ಧಾತೋಃ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- ಭಾವ ಮತ್ತು ಕರ್ಮವಾಚಕ ಸಾರ್ವಧಾತುಕ ಪ್ರತ್ಯಯಗಳು ಪರದಲ್ಲಿದ್ದಾಗ, ಪೂರ್ವದಲ್ಲಿರುವ ಧಾತುವಿನ ಮುಂದೆ 'ಯಕ್' ಪ್ರತ್ಯಯವು ಬರುತ್ತದೆ. 'ಯಕ್' ನಲ್ಲಿ 'ಕ್' ಕಾರವು ಇತ್ ಆಗುತ್ತದೆ. ಇಲ್ಲಿ 'ಕ್' ಕಾರವು ಇತ್ ಆಗಿರುವುದರ ಪ್ರಯೋಜನವೆಂದರೆ

ಗುಣ, ವೃದ್ಧಿಗಳ ನಿಷೇಧ ಹಾಗೂ ಸಂಪ್ರಸಾರಣ ಮಾಡುವುದಕ್ಕಾಗಿ.

ವಿವರಣೆ- ಧಾತುವಿನ ಅರ್ಥವಾದ ಕ್ರಿಯೆಗೆ ಭಾವ ಎಂದು ಕರೆಯುತ್ತಾರೆ. ಯಾವ ಧಾತುವಿನಿಂದ ಕ್ರಿಯೆಯು ಉಂಟಾಗುತ್ತದೆಯೋ ಅದನ್ನೇ 'ಲ್' ಕಾರವು ಹೇಳುವುದರಿಂದ 'ಪುನರುಕ್ತಿ' ಎಂಬ ದೋಷವು ಬರುವುದು ಎಂದು ಆಶಂಕಿಸಿದರೆ

ಅದಕ್ಕೆ ಸಮಾಧಾನವು ಹೀಗೆ ಹೇಳಲಾಗಿದೆ. 'ಲ್'ಕಾರವು ಬೇರೆ ಹೊಸಾದಾದ ಕ್ರಿಯೆನನ್ನು ಬೋಧಿಸದೇ ಧಾತುವಾಚ್ಯವಾದ ಕ್ರಿಯೆಯನ್ನು ಅನುವಾದ ಮಾಡುವುದರಿಂದ (ಸ್ಪಷ್ಟಪಡಿಸುವುದರಿಂದ) ಮೇಲೆ ಆಶಂಕಿಸಿದ ದೋಷಕ್ಕೆ ಅವಕಾಶವಿರಿವುದಿಲ್ಲ.

ಭಾವೇ ಪ್ರಯೋಗದಲ್ಲಿ 'ಲ್' ಕಾರವಾಚ್ಯವಾದದ್ದು ಧಾತುವಿನಿಂದ ಉಕ್ತವಾದ ಕ್ರಿಯೆಯೇ ಹೊರತು ಯುಷ್ಮದ್ ಅಸ್ಮದ್‌ಗಳಲ್ಲ. ಆದ್ದರಿಂದ ಈ ಪ್ರಯೋಗದಲ್ಲಿ ಯುಷ್ಮದ್ ಅಸ್ಮದ್ ಗಳ ಸಾಮಾನಾಧಿಕರಣ್ಯವು(ಏಕಾರ್ಥವು) ಇಲ್ಲದಿರುವುದರಿಂದ 'ಶೇಷೇ ಪ್ರಥಮಃ' ಎಂಬ ಸೂತ್ರದಿಂದ ಕೇವಲ ಪ್ರಥಮ-ಪುರುಷವೇ ಇರುತ್ತದೆ. ಅಂದರೆ ಎಲ್ಲಿ ಯುಷ್ಮದ್-ಅಸ್ಮದ್ ಗಳು 'ಲ್' ಕಾರದ ಜೊತೆಗೆ ಸಾಮಾನಾಧಿಕರಣ್ಯವನ್ನು ಹೊಂದಿವೆಯೋ ಅಲ್ಲಲ್ಲಿ ಮಾತ್ರ ಮಧ್ಯಮ ಹಾಗು ಉತ್ತಮ ಪುರುಷಗಳು ಬರುತ್ತವೆ.

ತಿಙ್ ವಾಚ್ಯವಾದ ಕ್ರಿಯೆಯು ದ್ರವ್ಯವಾಗದಿರುವುದರಿಂದ ಮೂರ್ತರೂಪವು ಅಲ್ಲದ್ದರಿಂದ ದ್ವಿತ್ವಾದಿಗಳಗೆ ಪ್ರತೀತಿ ಆಗುವುದಿಲ್ಲ. ಆದ್ದರಿಂದ ಭಾವವಾಚ್ಯದಲ್ಲಿ ದ್ವಿವಚನ ಮತ್ತು ಬಹುವಚನ ಇರುವುದಿಲ್ಲ. ಆದರೆ ಏಕ ವಚನವು ಸ್ವಾಭಾವಿಕವಾಗಿಯೇ ಬರುತ್ತದೆ. ಏಕೆಂದರೆ ಏಕವಚನವು ಸಂಖ್ಯೆಯ ಅಪೇಕ್ಷೆ ಮಾಡುವುದಿಲ್ಲ.

ಉದಾ- ತ್ವಯಾ, ಮಯಾ ಅನ್ಯೇಶ್ಚ ಭೂಯತೇ- ನಿನ್ನಿಂದ ನನ್ನಿಂದ ಬೇರೆಯವರಿಂದಲೂ ಇರೋಣವಾಗುತ್ತದೆ ಎಂದರ್ಥ.

ಉದಾ- ಭೂಯತೇ 'ಭೂ' ಸತ್ತಾಯಾಂ ಎಂಬ ಧಾತುವಿನ ಮುಂದೆ 'ಲಃ ಕರ್ಮಣಿ' ಎಂಬ ಸೂತ್ರದಿಂದ 'ಲ್'ಕಾರವು ಬಂದು ಅದರ ಮೇಲೆ ವರ್ತಮಾನಾರ್ಥದಲ್ಲಿ ಲಟ್ 'ಲ್'ಕಾರವು ಬಂದು "ಭಾವ ಕರ್ಮಣೋಃ" ಎಂಬ ಸೂತ್ರದಿಂದ ಆತ್ಮನೇಪದ ಪ್ರತ್ಯಯವು ಬಂದು ಭೂ+ತ ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ಯಕ್' ಪ್ರತ್ಯಯವು ಬಂದು ಭೂ+ಯ+ತ ಎಂದಿದ್ದಾಗ, 'ಟಿ'ಗೆ ಏತ್ವವಾಗಿ 'ಭೂಯತೇ' ಎಂದಾಗುತ್ತದೆ.

ಉದಾ- ಬಭೂವೇ ಇದು ಲಿಟ್ 'ಲ್'ಕಾರದ ಪ್ರಥಮ ಪುರುಷದ ಏಕವಚನದ ರೂಪ. 'ಭೂ' ಧಾತುವಿನ ಮುಂದೆ ಲಿಟ್, ತ, ಏಶ್, ಏ, ವುಕ್ ಆಗಮ, ಧಾತುವಿಗೆ ದ್ವಿತ್ವ, ಹಲಾದಿಶೇಷ, ಅಭ್ಯಾಸಕ್ಕೆ ಹ್ರಸ್ವ ಮತ್ತು 'ಉ' ಕಾರಕ್ಕೆ 'ಅ'ಕಾರಾದೇಶ, ಜಶ್ತ್ವವು ಬಂದು ಭೂ+ಲಿಟ್, ಭೂ+ತ, ಭೂ+ಏ, ಭೂ+ವ್+ಏ, ಬ+ಭೂ+ವ್+ಏ=ಬಭೂವೇ ಎಂದು ರೂಪವಾಗುತ್ತದೆ.

**(ಚಿಣ್ವದ್ಭಾವಾದಿಗಳನ್ನು ವಿಧಿಸುವ ಅತಿದೇಶ ಸೂತ್ರ)**

**ಸೂತ್ರ- 754- ಸ್ಯ-ಸಿಚ್-ಸೀಯುಟ್-ತಾಸಿಷು**
**ಭಾವಕರ್ಮಣೋರೂಪದೇಶೇऽಜ್ಝನ-ಗ್ರಹ-ದೃಶಾಂ ವಾ ಚಿಣ್ವದಿಟ್ ಚ। (6.4.62)**

ವೃತ್ತಿ-ಉಪದೇಶೇ ಯೋऽಚ್ ತದನ್ತಾನಾಂ ಹನಾದೀನಾಂ ಚ ಚಿಣೀ ವಾಙ್ಗಕಾರ್ಯಂ ವಾ ಸ್ಯಾತ್ ಸ್ಯಾದಿಷು ಭಾವಕರ್ಮಣೋರ್ಗಮ್ಯಮಾನಯೋಃ, ಸ್ಯಾದೀನಾಮ್ ಇಡಾಗಮಶ್ಚ। ಚಿಣ್ವದ್ಭಾವಪಕ್ಷೇऽಯಮಿಟ್, ಚಿಣ್ವದ್ಭಾವಾದ್ ವೃದ್ಧಿಃ-

ಭಾವಿತಾ, ಭವಿತಾ। ಭಾವಿಷ್ಯತೇ, ಭವಿಷ್ಯತೇ। ಭೂಯತಾಮ್। ಅಭೂಯತ। ಭೂಯೇತ। ಭಾವಿಶೀಷ್ಟ, ಭವಿಷೀಷ್ಟ।

ಪ.ಥೇ- ಸ್ಯ-ಸಿಚ್-ಸೀಯುಟ್-ತಾಸಿಷು-ಭಾವ ಕರ್ಮಣೋಃ ಉಪದೇಶೇ ಅಚ್-ಹನ್-ಗ್ರಹ-ದೃಶಾಂ ವಾ ಚಿಣ್ವತ್, ಇಟ್, ಚ।

ಅರ್ಥ- ಉಪದೇಶದಲ್ಲಿ ಅಚ್ ಅಂತವಾದ ಧಾತುಗಳಿಗೂ, ಹನ್, ಗ್ರಹ, ದೃಶ್ ಧಾತುಗಳಿಗೂ ಭಾವಕರ್ಮಾರ್ಥವು ತೋರುತ್ತಿರುವಾಗ ಸ್ಯ, ಸಿಚ್, ಸೀಯಟ್, ತಾಸ್ ಈ ನಾಲ್ಕು ಪ್ರತ್ಯಯಗಳು ಪರದಲ್ಲಿರುವಾಗ ಬರುವ ಅಂಗ ಕಾರ್ಯಗಳು ವಿಕಲ್ಪವಾಗಿ ಬರುತ್ತವೆ. ಸ್ಯಾದಿಗಳಿಗೆ ಇಡಾಗಮವು ಬರುತ್ತದೆ.

ವಿವರಣೆ- ಇಲ್ಲಿ ಚಿಣ್ವದ್ಭಾವ ಬರುವಾಗ ಮಾತ್ರ ಇಡಾಗಮವು ಬರುತ್ತದೆ. ಚಿಣ್ವದ್ಭಾವ ಬಾರದಿರುವಾಗ ಇಡಾಗಮವು ಬರುವುದಿಲ್ಲ.ಆದರೆ ಚಿಣ್ವದ್ಭಾವ ಅಭಾವ ಪಕ್ಷದಲ್ಲಿ ಧಾತುವು ಸೇಟ್ ಆಗಿದ್ದರೆ, ಆಗ ವಲಾದಿ ಲಕ್ಷಣ, ಇಟ್ ಬರುತ್ತದೆ.

ಉದಾ- ಭಾವಿತಾ-'ಭೂ' ಧಾತುವಿನ ಭಾವ ವಾಚ್ಯ ಲುಟ್, ಪ್ರಥಮ ಪುರುಷ ಏಕವಚನದಲ್ಲಿ ಭೂ+ಲುಟ್, ಭೂ+ತ, ಭೂ+ಡಾ, ಭೂ+ತ್+ಆ, ಭೂ+ಇ+ತ್+ಆ, ಭ್+ಇ+ತ್+ಆ, ಭ್+ವ್+ ಇ+ತ್+ಆ = ಭಾವಿತಾ ಎಂದು ರೂಪವಾಗುತ್ತದೆ.(ಇಲ್ಲಿ ಚಿಣ್ವದ್ಭಾವದ ನಿಮಿತ್ತವಿರುವುದರಿಂದ 'ಅಚೋಞ್ಣಿತಿ' ಎಂಬ ಸೂತ್ರದಿಂದ 'ಉ'ಕಾರಕ್ಕೆ ವೃದ್ಧಿಯು ಬರುತ್ತದೆ.)

ಉದಾ- ಭವಿತಾ - ಚಿಣ್ವದ್ಭಾವವು ಬಾರದಿದ್ದಾಗ 'ಆರ್ಧಧಾತುಕಸ್ಯೇಡ್ವಲಾದೇಃ' ಎಂಬ ಸೂತ್ರದಿಂದ 'ಇಟ್' ಆಗಮವು ಬರುತ್ತದೆ. ಇಲ್ಲಿ ಗುಣ, ಅವ್ ಆದೇಶಗಳಾಗಿ ರೂಪವು ಸಿದ್ಧವಾಗುತ್ತದೆ.

ಉದಾ- ಭಾವಿಷ್ಯತೇ - ಇವು ಲೃಟ್ 'ಲ್' ಕಾರದ ಪ್ರಥಮ ಪುರುಷ ಏಕವಚನದ ರೂಪಗಳು.

ಉದಾ- ಭವಿಷ್ಯತೇ - ಇವುಗಳ ರೂಪವನ್ನು ಹಿಂದಿನಂತೆ ತಿಳಿಯಬೇಕು. ಇಲ್ಲಿ 'ತಾಸ್' ನ ಸ್ಥಾನದಲ್ಲಿ 'ಸ್ಯ' ಪ್ರತ್ಯಯವು ಬರುತ್ತದೆ.

ಉದಾ- ಭೂಯತಾಮ್-ಇದು ಲೋಟ್ ಪ್ರಥಮ ಪುರುಷ ಏಕವಚನದ ರೂಪ. ಇಲ್ಲಿ ಸಾರ್ವಧಾತುಕವಾದ್ದರಿಂದ 'ಯಕ್' ಪ್ರತ್ಯಯವು ಬಂದು ಕಿತ್ ಆದ್ದರಿಂದ ಗುಣ, ವೃದ್ಧಿಗಳು ಬಾರದೇ ಭೂ+ತ, ಭೂ+ಯ+ತ, ಭೂ+ಯ+ತಾಮ್= ಭೂಯತಾಮ್ ಎಂದು ರೂಪವಾಗುತ್ತದೆ.

ಉದಾ- ಅಭೂಯತ-ಇದು ಲಙ್ ಪ್ರಥಮ ಪುರುಷ ಏಕವಚನದಲ್ಲಿ, ಭೂ+ತ, ಭೂ+ಯ+ತ, ಅ+ಭೂ+ಯ+ತ=ಅಭೂಯತ ಎಂದು ರೂಪ ಸಿದ್ಧವಾಗುತ್ತದೆ.

ಉದಾ- ಭೂಯೇತ - ಇದು ವಿಧಿಲಿಙ್ ಪ್ರಥಮ ಪುರುಷ ಏಕವಚನದಲ್ಲಿ, ಭೂ+ತ, ಭೂ+ಯ+ತ, ಭೂ+ತ, ಭೂ+ಯ+ಸೀಯುಟ್+ತ, ಭೂ+ಯ+ಈ+ತ ಎಂದಿದ್ದಾಗ, ಗುಣವಾಗಿ ಭೂಯೇತ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಭಾವಿಷೀಷ್ಟ, ಭವಿಷೀಷ್ಟ – ಆ.ಲಿಙ್ ಪ್ರಥಮ ಪುರುಷ ಏಕವಚನದಲ್ಲಿ – ಮೊದಲನೇಯ ರೂಪವು ಚಿಣ್ವದ್ಭಾವ ಮತ್ತು ಇಟ್ ಆಗಮ ಬಂದು ಆಗಿದೆ. ಎರಡನೇಯ ರೂಪವು ಚಿಣ್ವದ್ಭಾವ ಬಾರದ ರೂಪ. ಇಲ್ಲಿ ವಲಾದಿ ಆರ್ಧಧಾತುಕ ನಿಮಿತ್ತವಾಗಿ 'ಇಟ್' ಆಗಮವು ಬಂದಿದೆ.

ಅಕರ್ಮಕ ಧಾತುವು ಉಪಸರ್ಗದ ಸಂಬಂಧದಿಂದ ಸಕರ್ಮಕವಾಗುತ್ತದೆ. ಹೇಗೆಂದರೆ 'ಭೂ' ಧಾತುವು ಅಕರ್ಮಕವಾಗಿದೆ. 'ಅನು' ಎಂಬ ಉಪಸರ್ಗವನ್ನು ಸೇರಿಸಿದಾಗ ಸಕರ್ಮಕವಾಗುತ್ತದೆ.

ಉದಾ– 'ದೇವದತ್ತಃ ಆನಂದಮ್ ಅನುಭವತಿ' ಎಂದು ಸಕರ್ಮಕವಾದ ರೂಪವಾಗುತ್ತದೆ. ಇದರ ಕರ್ಮವು ವಾಚ್ಯವಾದಾಗ 'ದೇವದತ್ತೇನ ಆನಂದಃ ಅನುಭೂಯತೇ' ಎಂದಾಗುತ್ತದೆ. ಭಾವ ವಾಚ್ಯವಾದಾಗ ಅದು ಕೇವಲ ಪ್ರಥಮ ಪುರುಷ ಏಕವಚನದಲ್ಲೇ ಇರುತ್ತದೆ. ಆದರೆ ಧಾತುವು ಸಕರ್ಮಕವಾದಾಗ ಕರ್ಮವಾಚ್ಯದ ಪ್ರಯೋಗವಾದರೆ' ಎಲ್ಲಾ ಪುರುಷ ವಚನಗಳಲ್ಲೂ ರೂಪಗಳು ಇರುತ್ತವೆ. 'ಚೈತ್ರೇಣ ಆನಂದಃ ಅನುಭೂಯತೇ'. ಚೈತ್ರನಿಂದ ಆನಂದವು ಅನುಭವಿಸಲ್ಪಡುತ್ತದೆ. ಇಲ್ಲಿ ಅನುಭವಾರ್ಥದಲ್ಲಿ ಅನುಪೂರ್ವಕ ಭೂ ಧಾತುವಿನಿಂದ ಕರ್ಮಾರ್ಥದಲ್ಲಿ 'ಲ್'ಕಾರವು ಬಂದಿದೆ. ಅನುಭೂಯತೇ ಎಂಬುದರ ರೂಪ ಸಿದ್ಧಿಯನ್ನು ಹಿಂದಿನಂತೆ ತಿಳಿಯಬೇಕು.

ಕರ್ಮಾರ್ಥದಲ್ಲಿ 'ಲ್'ಕಾರವು ಇರುವುದರಿಂದ ಕರ್ಮವು ಹೇಳಲಾಗಿದೆ. ಆದ್ದರಿಂದ ಕರ್ಮವಾಚಕ ಪದಕ್ಕೆ ಪ್ರಥಮಾ ವಿಭಕ್ತಿಯು ಬಂದಿದೆ. ಆದರ ಕರ್ಮವು ಸಾಕ್ಷಾತ್ ಧಾತುವಿನಿಂದ ಅನುಕ್ತವಾಗಿರುವುದರಿಂದ ಚೈತ್ರೇಣ ಎಂದು ಕರ್ತೃವು ತೃತೀಯಾ ವಿಭಕ್ತಿಯಲ್ಲಿ ಹೇಳಲಾಗಿದೆ.

ಕರ್ಮವಾಚ್ಯದಲ್ಲಿ 'ಲ್' ಕಾರದ ಅರ್ಥವು ಕರ್ಮವಾಗಿರುತ್ತದೆ. ಇದಕ್ಕೆ ಯುಷ್ಮದ್ ಮತ್ತು ಅಸ್ಮದ್ ಗಳ ಜೊತೆಗೆ ಸಾಮಾನಾಧಿಕಣ್ಯವು ಇದೆ. ಆದ್ದರಿಂದ ಇಲ್ಲಿ ಮೂರು ಪುರುಷಗಳಲ್ಲೂ ಪ್ರಯೋಗ ಇದೆ.

**('ಚಿಣ್' ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ– 755– ಚಿಣ್ ಭಾವಕರ್ಮಣೋಃ। (3.1.66)**

ವೃತ್ತಿ– ಚ್ಲೇಃ ಚಿಣ್ ಸ್ಯಾದ್ ಭಾವಕರ್ಮವಾಚಿನಿ ತ ಶಬ್ದೇ ಪರೇ। ಅಭಾವಿ। ಅಭಾವಿಷ್ಯತ್, ಅಭವಿಷ್ಯತ। ಅಕರ್ಮಕೋಽಪ್ಯುಪಸರ್ಗವಶಾತ್ ಸಕರ್ಮಕಃ। ಅನುಭೂಯತೇ, ಆನಂದಶ್ಚೈತ್ರೇಣ ತ್ವಯಾ ಮಯಾ ಚ। ಅನುಭೂಯೇತೇ। ಅನುಭೂಯನ್ತೇ। ಅನುಭೂಯಸೇ। ಅಹಮನುಭೂಯೇ।ಅನ್ವಭಾವಿ, ಅನ್ವಭಾವಿಷಾತಾಮ್, ಅನ್ವಭವಿಷಾತಾಮ್। ಣಿಲೋಪಃ– ಭಾವ್ಯತೇ।ಭಾವಯಾಞ್ಚಕ್ರೇ।ಭಾವಯಾಮ್ಬಭೂವೇ। ಭಾವಯಾಮಾಸೇ। ಚಿಣ್ವದಿಟ್– ಭವಿತಾ, ಆಭೀಯತ್ವೇನ ಅಸಿದ್ಧತ್ವಾತ್ ಣಿಲೋಪ, ಭಾವಯಿತಾ। ಭಾವಯಿಷೀಷ್ಟ। ಅಭಾವಿ, ಅಭಾವಿಷಾತಾಮ್, ಅಭಾವಯಿಷಾತಾಮ್। ಬುಭೂಷ್ಯತೇ, ಬುಭುಷಾಞ್ಚಕ್ರೇ, ಬುಭೂಷಿತಾ, ಬುಭೂಷಿಷ್ಯತೇ। ಬೋಭೂಯ್ಯತೇ।

ಬೋಭೂಯತೇ। (483) ಅಕೃತ್ಸಾರ್ವಧಾತುಕಯೋರ್ದೀರ್ಘಃ- ಸ್ತೂಯತೇ ವಿಷ್ಣುಃ। ಸ್ತಾವಿತಾ, ಸ್ತೋತಾ। ಸ್ತಾವಿಷ್ಯತೇ, ಸ್ತೋಷ್ಯತೇ। ಅಸ್ತಾವಿ। ಅಸ್ತಾವಿಷಾತಾಮ್, ಅಸ್ತೋಷಾತಾಮ್। ಋ ಗತೌ। 495) 'ಗುಣೋರ್ತೀತಿ' ಇತಿ ಗುಣಃ- ಅರ್ಯತೇ। ಸ್ಮೃ ಸ್ಮರಣೊ- ಸ್ಮರ್ಯತೇ। ಸಸ್ಮರೇ। ಉಪದೇಶಗ್ರಹಣಾತ್ ಚಿಣ್ವದಿಟ್ದ್- ಆರಿತಾ, ಅರ್ತಾ। ಸ್ಮಾರಿತಾ, ಸ್ಮರ್ತಾ। (334) ಅನಿದಿತಾಮಿತಿ ನಲೋಪಃ- ಸ್ರಸ್ಯತೇ, ಇದಿತಸ್ತು ನನ್ದ್ಯತೇ। ಸಮ್ಪ್ರಸಾರಣಮ್। ಇಜ್ಯತೇ।

ಅ.ವೃ- 'ಚಿಣ್ ತೇ ಪದಃ' ಸೂತ್ರದಿಂದ 'ತೇ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ -ಭಾವ ಮತ್ತು ಕರ್ಮವಾಚಿ 'ತ' ಶಬ್ದವು ಪರದಲ್ಲಿದ್ದಾಗ 'ಚ್ಲಿ' ಸ್ಥಾನದಲ್ಲಿ 'ಚಿಣ್' ಆದೇಶವು ಬರುತ್ತದೆ. 'ಚಿಣ್' ನಲ್ಲಿ 'ಇ'ಕಾರವು ಮಾತ್ರ ಉಳಿಯುತ್ತದೆ. 'ಚ'ಕಾರ 'ಣ'ಕಾರಗಳು ಇತ್ ಗಳಾಗಿವೆ. ಣಿತ್ ಆದ್ದರಿಂದ ವೃದ್ಧಿಯು ಬರುತ್ತದೆ.

ಉದಾ- ಅಭಾವಿ – ಇದು 'ಲುಙ್' ಪ್ರಥಮ ಪುರುಷ ಏಕವಚನದಲ್ಲಿ, ಭೂ+ತ ಎಂದಿದ್ದಾಗ, 'ಚ್ಲಿ ಲುಙಿ' ಎಂಬ ಸೂತ್ರದಿಂದ 'ಚ್ಲಿ' ಪ್ರತ್ಯಯ ಬರುತ್ತದೆ. ಅದರ ಸ್ಥಾನದಲ್ಲಿ 'ಚಿಣ್' ಆದೇಶವು ಬರುತ್ತದೆ. ಅನಂತರ ಭೂ+ಇ+ತ ಎಂದಿದ್ದಾಗ, ಅಡಾಗಮವು ಬಂದು ಅ+ಭೂ+ಇ+ತ ಎಂದಿದ್ದಾಗ, ವೃದ್ಧಿ ಬಂದು ಅ+ಭೌ+ಇ+ತ ಎಂದಿದ್ದಾಗ, ಆವ್ ಆದೇಶವಾಗಿ ಅ+ಭ್+ಆವ್+ಇ+ತ ಎಂದಿದ್ದಾಗ, 'ಚಿಣೋ ಲುಕ್' ಸೂತ್ರದಿಂದ 'ತ' ಗೆ ಲೋಪ ಬಂದು ಅಭಾವಿ ಎಂದು ರೂಪವು ಸಿದ್ಧವಾಗಿದೆ.

ಉದಾ- ಅಭಾವಿಷ್ಯತ, ಅಭವಿಷ್ಯತ- ಇವೆರಡು 'ಲುಙ್' 'ಲ್' ಕಾರದ ಪ್ರಥಮ ಪುರುಷ ಏಕವಚನದ ರೂಪಗಳು. ಮೊದಲನೇಯ ರೂಪವು ಚಿಣ್ವದ್ಭಾವ ಮತ್ತು ಇಟ್ ಆಗಮ ಬಂದು ಆಗಿದೆ. ಎರಡನೇಯ ರೂಪವು ಚಿಣ್ವದ್ಭಾವ ಬಾರದ ರೂಪ. ಇಲ್ಲಿ ವಲಾದಿ ಆರ್ಧಧಾತುಕ ನಿಮಿತ್ತವಾಗಿ 'ಇಟ್' ಆಗಮವು ಬಂದಿದೆ. ಕರ್ಮವು ದ್ರವ್ಯವಾಗಿದೆ. ಇದರ ಜೊತೆಗೆ ಸಂಖ್ಯೆಯ ಅನ್ವಯವು ಆಗುತ್ತದೆ. ಆದ್ದರಿಂದ ಎಲ್ಲಾ ವಚನಗಳಲ್ಲೂ ರೂಪಗಳು ಇರುತ್ತವೆ. 'ತ್ವಯಾ ಮಯಾ ಚ' ಇವುಗಳ ಮುಖಾಂತರ ಹೇಳಲ್ಪಡುವುದು ಯಾವುದೆಂದರೆ ಪುರುಷ ಮತ್ತು ವಚನಗಳು ಕರ್ಮವಾಚ್ಯದಲ್ಲಿ ಕರ್ಮಕ್ಕೆ ಅನುಸಾರವಾಗಿರುತ್ತದೆ. ಕರ್ತೃವಿಗೆ ಅನುಸಾರವಾಗುವುದಿಲ್ಲ.

ಉದಾ- ಅನುಭೂಯತೇ- ಇದು ಕರ್ಮಣಿ ಪ್ರಯೋಗದ ಲಟ್ ಪ್ರಥಮ ಪುರುಷ ಏಕವಚನದ ರೂಪ.

ಉದಾ- ಅನುಭೂಯೇತೇ-ಇದು ಕರ್ಮಣಿ ಪ್ರಯೋಗದ ಲಟ್ ಪ್ರಥಮ ಪುರುಷ ದ್ವಿವಚನದ ರೂಪ.

ಉದಾ-ಅನುಭೂಯಂತೇ- ಇದು ಕರ್ಮಣಿ ಪ್ರಯೋಗದ ಲಟ್ ಪ್ರಥಮ ಪುರುಷ ಬಹುವಚನದ ರೂಪ.

ಉದಾ-ತ್ವಮನುಭೂಯಸೇ-ಇದು ಮಧ್ಯಮ ಪುರುಷ ಏಕವಚನದಲ್ಲಿ ಇದೆ. ಕರ್ಮವಾಚ್ಯವಾಗಿರುವುದರಿಂದ ಕರ್ಮವು ಮಧ್ಯಮ ಪುರುಷದಲ್ಲಿದೆ, ಮತ್ತು

ಉಕ್ತವಾಗಿರುವುದರಿಂದ ಪ್ರಥಮಾ ವಿಭಕ್ತಿಯು ಅದಕ್ಕೆ ಬಂದಿದೆ.

ಉದಾ–ಅಹಮನುಭೂಯೇ–ಉತ್ತಮ ಪುರುಷ ಏಕವಚನದಲ್ಲಿ ಕರ್ಮವು ಹೇಳಿರುವುದರಿಂದ ಅದಕ್ಕೆ ಪ್ರಥಮಾ ವಿಭಕ್ತಿಯು ಬಂದಿದೆ.

ಉದಾ–ಅನ್ವಭಾವಿ – ಲುಙ್ ಪ್ರಥಮ ಪುರುಷ ಏಕವಚನದ ರೂಪವಾಗಿದೆ.

ಉದಾ–1. ಅನ್ವಭಾವಿಷತಾಮ್ 2. ಅನ್ವಭವಿಷತಾಮ್–ಇವೆರಡು ರೂಪಗಳು ಪ್ರಥಮ ಪುರುಷ ದ್ವಿವಚನದ ರೂಪದಲ್ಲಿವೆ.

ಚಿಣ್ವದ್ಭಾವ ಪಕ್ಷದಲ್ಲಿ ಅನ್ವಭಾವಿ ಎದೂ ಮೊದಲನೇಯ ರೂಪವು. ಚಿಣ್ವದ್ಭಾವ ಅಭಾವ ಪಕ್ಷದಲ್ಲಿ ವಲಾದಿ ಲಕ್ಷಣ ಇಟ್‌ನಿಂದ ಅನ್ವಭಾವಿಷಾತಾಮ್ ಎಂಬ ಎರಡನೆಯ ರೂಪವು ಆಗಿದೆ.

ಈಗ ಣ್ಯಂತ 'ಭೂ' ಧಾತುವಿನ ಕರ್ಮವಾಚ್ಯದಲ್ಲಿರುವ ರೂಪಗಳನ್ನು ತೋರಿಸಲಾಗುತ್ತದೆ. 'ಣ್ಯಂತ' 'ಭೂ' ಧಾತುವಿನ ಮೇಲೆ ಕರ್ಮಣಿ ಪ್ರಯೋಗದಲ್ಲಿ 'ಯಕ್' ಬಂದ ಮೇಲೆ "ಣೇರನಿಟಿ" ಎಂಬ ಸೂತ್ರದಿಂದ 'ಣಿ'ಗೆ ಲೋಪವು ಬಂದಿದೆ.

ಉದಾ–ಬಾವ್ಯತೇ – ಣ್ಯಂತ ಭೂ ಧಾತುವಿನ ಮೇಲೆ ಕರ್ಮಣಿ ಪ್ರಯೋಗದಲ್ಲಿ ಲಟ್ ಪ್ರಥಮ ಪುರುಷ ಏಕವಚನದಲ್ಲಿ ಭೂ+ಇ ಎಂದಿದ್ದಾಗ, ವೃದ್ಧಿಯಿಂದ ಭೌ+ಇ ಎಂದಿರುವಾಗ, 'ಔ' ಗೆ 'ಆವ್' ಆದೇಶ ಬಂದು ಭ್+ಆವ್ ಎಂದಿದ್ದಾಗ ಯಕ್ ಮತ್ತು 'ತ' ಪ್ರತ್ಯಯಗಳು ಬಂದು 'ಣಿ' ಲೋಪವಾಗಿ ಭ್+ಆವ+ಯ+ತ ಎಂದಿದ್ದಾಗ, 'ಟಿ' ಗೆ ಏತ್ವ ಬಂದು ಭಾವ್ಯತೇ ಎಂದು ರೂಪವು ಸಿದ್ಧವಾಗುತ್ತದೆ.

ಉದಾ–ಭಾವಯಾಞ್ಚಕ್ರೇ – ಲಿಟ್ ನಲ್ಲಿ 'ಣ್ಯಂತ' 'ಭೂ' ಧಾತುವು ಅನೇಕಾಚ್ ಆಗಿರುವುದರಿಂದ 'ಕಾಸ್ಯನೇಕಾಚ ಆಮ್ ವಕ್ತವ್ಯೋ ಲಿಟಿ' ಎಂಬ ವಾರ್ತಿಕದಿಂದ ಆವ್ ಪ್ರತ್ಯಯವು ಹಾಗು ಣಿ ಲೋಪವನ್ನು ಬಾಧಿಸಿ 'ಅಯ್ ಆವ್ ಅನ್ತಾऽऽಲ್ವಾऽऽಯ್ಯೇತ್ನ್ವಿಷ್ಣುಷು' ಎಂಬ ಸೂತ್ರದಿಂದ ಣಿ ಯ 'ಇ'ಕಾರಕ್ಕೆ 'ಅಯ್' ಆದೇಶ ಬಂದು ಭಾವಯಾಮ್+ಲಿಟ್ ಎಂದಿದ್ದಾಗ, ಈಗ "ಆಮಃ" ಎಂಬ ಸೂತ್ರದಿಂದ ಲಿಟ್ ಗೆ ಲೋಪ ಬಂದು 'ಕೃಞ್ಚಾನುಪ್ರಯುಜ್ಯತೇ ಲಿಟಿ' ಎಂಬುದರಿಂದ ಲಿಟ್ ಪರಕ ಕೃ, ಭೂ, ಅಸ್ ಗಳ ಅನುಪ್ರಯೋಗವು ಆಗುತ್ತದೆ. 'ಭಾವಕರ್ಮಣೋಃ' ಎಂಬುದರಿಂದ ಇವೆಲ್ಲವುಗಳಿಗೆ ಆತ್ಮನೇ ಪದ ಪ್ರತ್ಯಯಗಳು ಬಂದು ಭಾವಯಾಞ್ಚಕ್ರೇ, ಭಾವಯಾಮ್‌ಬಭೂವೇ, ಭಾವಯಾಮಾಸೇ ಇತ್ಯಾದಿ ರೂಪಗಳು ಸಿದ್ಧವಾಗಿವೆ.

ಉದಾ–ಭಾವಿತಾ–ಣ್ಯಂತ 'ಭೂ' ಧಾತುವಿಗೆ ಲುಟ್ ಪ್ರಥಮ ಪುರುಷ ಏಕವಚನದಲ್ಲಿ ಭಾವಿ+ಲುಟ್, ಭಾವಿ+ತ+ತಾಸ್+ತ, ಭಾವಿ+ಇ+ತ್+ತ, ಭಾವಿ+ಇ+ತ್+ಡಾ, ಭಾವಿ+ಇ+ತ್+ಆ ಎಂದಿದ್ದಾಗ, ಇಲ್ಲಿ 'ಣಿ' ಲೋಪ ಬರಬೇಕಾಗಿತ್ತು. ಆದರೆ "ಣೇರನಿಟಿ" ಸೂತ್ರದಿಂದ ಅನಿಡಾದಿಪ್ರತ್ಯಯವು ಪರದಲ್ಲಿರಬೇಕೆಂದು ಹೇಳಿದೆ. ಇಲ್ಲಿ ಇಟ್ ಆದಿಯಲ್ಲಿದೆ. ಆದ್ದರಿಂದ 'ಆಭಿಯತ್ವೇನ ಅಸಿದ್ಧತ್ವಾತ್ ಣಿ ಲೋಪಃ' ಎಂದು ಹೇಳಿರುವುದರಿಂದ "ಣೇರನಿಟಿ" ಸೂತ್ರ ಕಾರ್ಯವು ಆಭೀಯ ಕಾರ್ಯ (ಭ ಸಂಜ್ಞೆಗೆ

ಒಳಪಟ್ಟಿದೆ). 'ಸ್ಯಸಿಚ್ ಸೀಯುಟ್...' ಎಂಬ ಸೂತ್ರದ ಕಾರ್ಯವು ಆಭೀಯವಾಗಿದೆ. ಆದ್ದರಿಂದ 'ಅಸಿದ್ಧವದತ್ರಾಭಾತ್' ಎಂಬ ಸೂತ್ರದಿಂದ "ಣೇರನಿಟಿ" ಎಂಬ ಸೂತ್ರದಿಂದ 'ಣಿ' ಲೋಪ ಮಾಡಿ 'ಸ್ಯಸಿಚ್ ಸೀಯುಟ್...' ಸೂತ್ರದಿಂದ ಬಂದ ಇಡಾಗಮವು ಅಸಿದ್ಧವಾಗುವುದರಿಂದ ಇಡಾದಿ ಪ್ರತ್ಯಯವಿಲ್ಲದಿರುವುದರಿಂದ ಣಿ ಲೋಪ ಬರುತ್ತದೆ. ಹೀಗೆ ಭಾವ್+ಇ+ತ್+ಆ=ಭಾವಿತಾ ಎಂದು ರೂಪವಾಗುತ್ತದೆ.

ಉದಾ-ಭಾವಯಿತಾ - 'ಸ್ಯಸಿಚ್ ಸೀಯುಟ್...' ಸೂತ್ರದಿಂದ ಚಿಣ್ವದ್ಭಾವ, ಇಡಾಗಮ ಬಾರದಿದ್ದರೆ, ಭಾವಿ+ತಾ ಎಂದಿರುವಾಗ 'ಆರ್ಧಧಾತುಕಸ್ಯ ಇಡ್ವಲಾದೇಃ' ಎಂಬುದರಿಂದ ತಾಸ್‌ಗೆ ಇಡಾಗಮವು ಬಂದು, ಇದು ಆಭೀಯ ಕಾರ್ಯ ಆಗದಿರುವುದರಿಂದ ಅಸಿದ್ಧವಾಗುವುದಿಲ್ಲ. ಆಗ ಇಡಾದಿ ಪ್ರತ್ಯಯ ಪರದಲ್ಲಿರುವುದರಿಂದ 'ಣಿ' ಲೋಪ ಬರುವುದಿಲ್ಲ. 'ಸಾರ್ವಧಾತುಕಾರ್ಧಧಾತುಕಯೋಃ' ಎಂಬ ಸೂತ್ರದಿಂದ ಣಿಚ್ ಗೆ ಗುಣ ಮತ್ತು ಅಯ್ ಆದೇಶವಾಗಿ ಭಾವಿ+ಇ+ತ ಎಂದಿದ್ದಾಗ ಭಾವೇ+ಇ+ತಾ=ಭಾವ್+ಅಯ್+ಇ+ತಾ=ಭಾವಯಿತಾ ಎಂದು ರೂಪವು ಸಿದ್ಧವಾಗುತ್ತದೆ.

ಉದಾ-ಭಾವಿಷ್ಯತೇ, ಭವಿಷ್ಯತೇ-ಇವೆರಡು ರೂಪಗಳು ಲೃಟ್ ಲಕಾರದ ಪ್ರಕ್ರಿಯೆಯಂತೆ. ಚಿಣ್ವದ್ಭಾವ ಪಕ್ಷದಲ್ಲಿ -ಭಾವಿಷ್ಯತೇ, ರೂಪವು. ತದಭಾವ ಪಕ್ಷದಲ್ಲಿ ಭವಿಷ್ಯತೇ ರೂಪವು ಸಿದ್ಧವಗುತ್ತದೆ.

ಉದಾ-ಅಭಾವ್ಯತ - ಲಙ್ ಲಕಾರದ ಪ್ರಥಮ ಪುರುಷ ಏಕವಚನದ ರೂಪ.

ಭೂ+ಇ+(ಣಿಚ್)ತ > ಭೌ+ಇ+ತ > ಭ್+ಆವ್+ಇ+ತ > ಭ್+ಆವ್+ಯ+ತ > ಅ+ಭ್+ಆವ್+ಯ+ತ= ಅಭಾವ್ಯತ ಎಂದು ರೂಪವಾಗುತ್ತದೆ.

ಉದಾ-ಭಾವ್ಯೇತ - ಇದು ವಿ.ಲಿ ಪ್ರಥಮ ಪುರುಷ ಏಕವಚನದ ರೂಪ.

ಉದಾ-ಭಾವಿಷೀಷ್ಟ, ಭಾವಯಿಷೀಷ್ಟ - ಆ.ಲಿ ಪ್ರಥಮ ಪುರುಷ ಏಕವಚನದ ರೂಪಗಳು. ಚಿಣ್ವದ್ಭಾವ ಪಕ್ಷದಲ್ಲಿ -ಭಾವಿಷೀಷ್ಟ, ರೂಪವು. ತದಭಾವ ಪಕ್ಷದಲ್ಲಿ ಭಾವಯಿಷೀಷ್ಟ ರೂಪವು.

ಉದಾ-ಅಭಾವಿ - ಲುಙ್ ಪ್ರಥಮ ಪುರುಷ ಏಕವಚನದ ರೂಪ.

ಉದಾ-ಅಭಾವಿಷಾತಾಮ್, ಅಭಾವಯಿಷಾತಾಮ್ - ಇವು ಲುಙ್ ಪ್ರಥಮ ದ್ವಿವಚನದ ರೂಪ.

ಚಿಣ್ವದಿಟ್ ಪಕ್ಷದಲ್ಲಿ ಅಭಾವಿಷಾತಾಮ್, ಎಂದು ರೂಪ. ಚಿಣ್ವದಿಡಭಾವ ಪಕ್ಷದಲ್ಲಿ ಅಭಾವಯಿಷಾತಾಮ್ ಎಂದು ರೂಪ.

ಉದಾ- ಬುಭೂಷ್ಯತೇ - 'ಭೂ' ಧಾತುವಿಗೆ ಇಚ್ಛಾರ್ಥದಲ್ಲಿ "ಧಾತೋಃ ಕರ್ಮಣಃ ಸಮಾನಕರ್ತೃಕಾತ್ ಇಚ್ಛಾಯಾಂ ವಾ" ಎಂಬ ಸೂತ್ರದಿಂದ 'ಸನ್' ಪ್ರತ್ಯಯವು ಬಂದು ಭೂ+ಸ ಎಮಿದ್ದಾಗ, "ಸನ್ಯಙೋಃ" ಎಂಬ ಸೂತ್ರದಿಂದ ದ್ವಿತ್ವವಾಗಿ ಭೂ+ಭೂ+ಸ ಎಂದಿದ್ದಾಗ, 'ಸ' ಕಾರಕ್ಕೆ 'ಷ' ಕಾರ ಬಂದು ಅಭ್ಯಾಸ ಕಾರ್ಯಗಳಾಗಿ

ಬೂ+ಭೂ +ಷ ಎಂದಿದ್ದಾಗ, ಅಭ್ಯಾಸದ 'ಊ' ಕಾರಕ್ಕೆ ಹ್ರಸ್ವವಾಗಿ ಬು+ಭೂ+ಷ ಎಂದಿದ್ದಾಗ, ಧಾತುಸಂಜ್ಞೆ, ಲಟ್, ತ , ಯಕ್‌ಗಳು ಬಂದು ಬು+ಭೂ+ಷ+ಯ+ತ ಎಂದಿದ್ದಾಗ, 'ಅತೋ ಲೋಪಃ' ಎಂಬುದರಿಂದ 'ಸನ್' ನಲ್ಲಿರುವ 'ಅ' ಕಾರಕ್ಕೆ ಲೋಪ ಬಂದು, 'ಟಿ(ತ)' ಗೆ ಏತ್ವ ಬಂದು ಬು+ಭೂ+ಷ್+ಯ+ತ+ಏ=ಬುಭೂಷ್ಯತೇ ಎಂದು ರೂಪವಾಗುತ್ತದೆ.

ಉದಾ– ಬುಭೂಷಾಞ್ಚಕ್ರೇ– ಇದು ಸನ್ನಂತ 'ಭೂ' ಧಾತುವಿನ ಲಿಟ್ ಪ್ರಥಮಪುರುಷ ಏಕವಚನದ ರೂಪ. 'ಲಿಟ್' ಲ–ಕಾರದಲ್ಲಿ ಧಾತು ಅನೇಕಾಚ್ ಆಗಿರುವುದರಿಂದ 'ಆಮ್' ಬಂದು "ಅತೋ ಲೋಪಃ" ಎಂಬುದರಿಂದ 'ಅ' ಕಾರಕ್ಕೆ ಲೋಪವಾಗಿ, "ಆಮಃ" ಎಂಬುದರಿಂದ 'ಲಿಟ್' ಗೆ 'ಲುಕ್' ಬಂದು ಹಾಗೆಯೇ

"ಕೃಞ್ಚಾನು ಪ್ರಯುಜ್ಯತೇ ಲಿಟಿ" ಎಂಬುದರಿಂದ ಅನುಪ್ರಯೋಗ ಬಂದು ಆತ್ಮನೇಪದವಾಗಿ ಬುಭೂಷಾಞ್ಚಕ್ರೇ ಎಂದು ರೂಪವಾಗುತ್ತದೆ.

ಉದಾ– ಬುಭೂಷಿತಾ (2)–ಇದು ಸನ್ನಂತ 'ಭೂ' ಧಾತುವಿನ ಲುಟ್ ಪ್ರಥಮಪುರುಷ ಏಕವಚನದ ರೂಪ. 'ಲುಟ್' 'ಲ್' ಕಾರದಲ್ಲಿ ಬು+ಭೂ+ಷ+ತಾಸ್+ಆ ಎಂದಿದ್ದಾಗ, ಧಾತುವು ಉಪದೇಶದಲ್ಲಿ ಅಜಂತವಾಗಿರುವುದರಿಂದ 'ಸ್ಯಸಿಚ್ ಸೀಯುಟ್...' ಸೂತ್ರದಿಂದ ವೈಕಲ್ಪಿಕವಾಗಿ ಚಿಣ್ವದಿಟ್. ಆಗಿ 'ಅತೋಲೋಪಃ' ದಿಂದ 'ಅ'ಕಾರಕ್ಕೆ ಲೋಪ ಬಂದು ಇಡಾಗಮವಾಗಿ ಬು+ಭೂ+ಷ್+ಇ+ತ್+ಆ=ಬುಭೂಷಿತಾ ಎಂದು ರೂಪವಾಗಿದೆ. ಚಿಣ್ವದಿಡಭಾವ ಪಕ್ಷದಲ್ಲಿ – ವಲಾದಿ ಲಕ್ಷಣ ಇಟ್ ಬಂದು 'ಬುಭೂಷಿತಾ' ಎಂದೇ ರೂಪವಾಗುತ್ತದೆ.'

ಉದಾ–ಬುಭೂಷಿಷ್ಯತೇ – ಇದು ಲೃಟ್ ಲಕಾರದ ಪ್ರಥಮ ಪುರುಷ ಏಕವಚನದ ರೂಪ. ಇಲ್ಲಿಯೂ ಸಹ ಹಿಂದಿನಂತೆ ಪ್ರಕ್ರಿಯೆ ನಡೆದು ಅ–ಕಾರ ಲೋಪವಾಗಿ 'ಬುಭೂಷಿಷ್ಯತೇ' ರೂಪವು ಸಿದ್ಧವಾಗುತ್ತದೆ.

ಉದಾ– ಬೋಭೂಯ್ಯತೇ –ಇದು ಯಙನ್ತ 'ಭೂ' ಧಾತುವಿನ ಭಾವಾರ್ಥದ ಲಟ್ 'ಲ'ಕಾರದ ಪ್ರಥಮ ಪುರುಷ ಏಕವಚನದ ರೂಪ.

'ಭೂ' ಧಾತುವಿಗೆ 'ಧಾತೋಃ ಏಕಾಚಃ ಹಲಾದೇಃ ಕ್ರಿಯಾಸಮಭಿಹಾರೇ ಯಙ್' ಎಂಬ ಸೂತ್ರದಿಂದ ಯಙ್ ಪ್ರತ್ಯಯವು ಬಂದು ಭೂ+ಯ ಎಂದಿದ್ದಾಗ, 'ಸನ್ಯಙೋಃ' ಎಂಬುದರಿಂದ ದ್ವಿತ್ವ ಬಂದು, ಭೂ+ಭೂ+ಯ ಎಂದಿರುವಾಗ, 'ಗುಣೋ ಯಙ್ ಲುಕೋಃ' ಎಂಬ ಸೂತ್ರದಿಂದ ಗುಣವಾಗಿ ಭೋ+ಭೂ+ಯ ಎಂದಿರುವಾಗ ಜಶ್ತ್ವ ಬಂದು 'ಬೋ' ಎಂದಾಗಿ ಬೋ+ಭೂ+ಯ= ಬೋಭೂಯ ಎಂದಾಗಿದೆ. ಇದು ಅಕರ್ಮಕವಾಗಿದೆ. ಆದ್ದರಿಂದ ಭಾವಾರ್ಥದಲ್ಲಿ ಲಟ್, ತ ಗಳು ಬಂದು ಬೋ+ಭೂ+ಯ+ತ ಎಂದಿದ್ದಾಗ, 'ಸಾರ್ವಧಾತುಕೇ ಯಕ್' ಎಂಬುದರಿಂದ 'ಯಕ್' ಬಂದು ಬೋ+ಭೂ+ಯ+ಯ+ತ ಎಂದಿದ್ದಾಗ ಪ್ರಥಮ 'ಯ' ಕಾರೋತ್ತರ್ವರ್ತಿ 'ಅ' ಕಾರಕ್ಕೆ ಲೋಪ ಬಂದು 'ಟಿ(ತ)'ಗೆ ಏತ್ವವಾಗಿ ಬೋ+ಭೂ+ಯ್+ಯ+ತ್+ಏ= ಬೋಭೂಯ್ಯತೇ ಎಂದು ರೂಪವು ಸಿದ್ಧವಾಗಿದೆ.

ಉದಾ- ಬೋಭೂಯತೇ - ಇದು 'ಭೂ' ಧಾತುವಿನ ಯಙ್-ಲುಗನ್ತದ ಲಟ್ ಪ್ರಥಮ ಮರುಷ ಏಕವಚನದ ರೂಪ. ಇದರ ರೂಪವೂ ಹಿಂದಿನಂತೆ ಆಗುತ್ತದೆ. ಆದರೆ ಇಲ್ಲಿ 'ಯಙ್' 'ಲುಕ್' ಆಗಿ ಕೇವಲ ಒಂದೇ ಯ (ಯಕ್) ಉಳಿದು ಬೋಭೂಯತೇ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ- ಸ್ತೂಯತೇ-ಅದಾದಿ ಗಣದಲ್ಲಿ "ಷ್ಟುಞ್ ಸ್ತುತೌ" ಎಂಬ ಈ ಸೂತ್ರವು ಪಠಿತವಾಗಿದೆ. ಕರ್ತರಿ ಪ್ರಯೋಗದಲ್ಲಿ ಇದರ ರೂಪವು ಸ್ತೌತಿ ಎಂದಾಗುತ್ತದೆ. ಆದರೆ ಆ ಧಾತುವು ಸಕರ್ಮವಾಗಿರುವುದರಿಂದ ಅದಕ್ಕೆ ಕರ್ಮಾರ್ಥದಲ್ಲಿ 'ಲ'ಕಾರವು ಬಂದು 'ಸ್ತೂಯತೇ' ಎಂದಾಗುತ್ತದೆ. ಸ್ತು+ಲಟ್, ಸ್ತು+ತ, ಸ್ತು+ಯ+ತ, ಸ್ತು+ಯ+ತ+ಏ ಎಂದಿದ್ದಾಗ, 'ಅಕೃತ್ ಸಾರ್ವಧಾತುಕಯೋರ್ದೀರ್ಘಃ' ಎಂಬ ಸೂತ್ರದಿಂದ ದೀರ್ಘವಾಗಿ ಸ್ತೂ+ಯ+ತ್+ಏ=ಸ್ತೂಯತೇ ಎಂದು ರೂಪವಾಗುತ್ತದೆ. ಇದರ ಕರ್ತೃವು ತೃತೀಯಾಂತವಾಗುತ್ತದೆ. ಉದಾ- ಸ್ತೂಯತೇ ವಿಷ್ಣುಃ ಭಕ್ತೇನ (ಭಕ್ತನಿಂದ ವಿಷ್ಣುವು ಸ್ತುತಿಸಲ್ಪಡುತ್ತಾನೆ ಎಂದರ್ಥ)

ಉದಾ- ಸ್ತಾವಿತಾ, ಸ್ತೋತಾ - ಇವೆರಡೂ 'ಸ್ತು' ಧಾತುವಿನ 'ಕರ್ಮಣಿ' ಪ್ರಯೋಗದ ಲುಟ್, ಪ್ರಥಮ ಪುರುಷ ಏಕವಚನದ ರೂಪಗಳು. ಸ್ತು+ತ, ಸ್ತು+ತ್+ಆ ಎಂದಿದ್ದಾಗ, 'ಸ್ಯಸಿಚ್ ಸೀಯುಟ್...' ಎಂಬ ಸೂತ್ರದಿಂದ ಉಪದೇಶದಲ್ಲಿ ಅಜಂತವಾಗಿರುವುದರಿಂದ ಚಿಣ್ವದ್ಭಾವ ಮತ್ತು ಇಟ್ ಆಗಿದೆ. ಆಗ ದೀರ್ಘ ವೃದ್ಧಿ ಮತ್ತು ಆವ್ ಆದೇಶವಾಗಿ ಸ್ತೂ+ಇ+ತ್+ಆ ಎಂದಿದ್ದಾಗ, ಸ್ತೌ+ಇ+ತ್+ಆ ಎಂದಿದ್ದಾಗ ಸ್ತ್+ಆವ್+ಇ+ತ್+ಆ=ಸ್ತಾವಿತಾ ಎಂದು ಮೊದಲನೇಯ ರೂಪವು ಸಿದ್ಧವಾಗಿದೆ.

ಚಿಣ್ವದಿಡಭಾವ ಪಕ್ಷದಲ್ಲಿ 'ಉ'ಕಾರಕ್ಕೆ ಗುಣ ಆದೇಶವಾಗಿ 'ಸ್ತೋತಾ' ಎರಡನೇಯ ರೂಪವು ಸಿದ್ಧವಾಗುತ್ತದೆ. ಆದರೆ ಇಲ್ಲಿ ಇಡಾಗಮವು ಬಾರದಿರುವುದರಿಂದ ಧಾತುವು 'ಅನಿಟ್' ಆಗಿದೆ.

ಉದಾ-ಸ್ತಾವಿಷ್ಯತೇ, ಸ್ತೋಷ್ಯತೇ-ಇವೆರಡೂ 'ಸ್ತು' ಧಾತುವಿನ 'ಲೃಟ್' ಲಕಾರದ ಪ್ರಥಮಪುರುಷ ಏಕವಚನದ ರೂಪಗಳು. ಮೊದಲನೆಯ ರೂಪದಲ್ಲಿ ಚಿಣ್ವದಿಟ್ ಬಂದಿದೆ. ಎರಡನೇಯ ರೂಪದಲ್ಲಿ ಚಿಣ್ವದಿಡಭಾವ ಇದೆ.

ಉದಾ- ಸ್ತಾವಿ-ಇದು ಸ್ತು ಧಾತುವಿನ ಕರ್ಮಣಿ ಪ್ರಯೋಗದ ಲುಙ್ ಆತ್ಮನೇಪದದ, ಪ್ರಥಮ ಪುರುಷ ಏಕವಚನದ ರೂಪ. ಸ್ತು+ತ ಎಂದಿದ್ದಾಗ ಅಡಾಗಮವು ಬಂದು ಅ+ಸ್ತು+ತ ಎಂದಿದ್ದಾಗ, ಚ್ಲಿ ಬಂದು ಚ್ಲಿಗೆ ಚಿಣ್ವದ್ಭಾವ, 'ಚಿಣೋಲುಕ್' ಎಂಬುದರಿಂದ 'ತ' ಲೋಪವಾಗಿ ಅ+ಸ್ತು+ಇ ಎಂದಿರುವಾಗ 'ಆವ್' ಆದೇಶವಾಗಿ ಅ+ಸ್ತ್+ಆವ್+ಇ= ಅಸ್ತಾವಿ ಎಂದು ರೂಪವು ಸಿದ್ಧವಾಗಿದೆ.

ಉದಾ- ಅಸ್ತಾವಿಷಾತಾಮ್, ಅಸ್ತೋಷಾತಾಮ್ - ಇವೆರಡೂ ರೂಪಗಳು ಸ್ತು ಧಾತುವಿನ ಕರ್ಮಣಿ ಲುಙ್ ಲಕಾರದಪ್ರಥಮ ಪುರುಷ ಏಕವಚನದ ರೂಪಗಳು. ಮೊದಲನೆಯ ರೂಪದಲ್ಲಿ ಚಿಣ್ವದಿಟ್, 'ವೃದ್ಧಿ' ಬಂದಿದೆ. ಎರಡನೆಯ ರೂಪದಲ್ಲಿ ಚಿಣ್ವದಿಡಭಾವ ಹಾಗು ಗುಣ ಬಂದಿದೆ.

ಉದಾ–ಅರ್ಯರ್ತೇ–ಋ–ಗತೌ ಎಂಬ ಧಾತುವು ಜುಹೋತ್ಯಾದಿ ಗಣದಲ್ಲಿ ಸಕರ್ಮಕ ರೂಪದಲ್ಲಿ ಪಠಿತವಾಗಿದೆ. ಇದಕ್ಕೆ ಕರ್ತರಿ ಪ್ರಯೋಗದಲ್ಲಿ ಇಯರ್ತಿ, ಇಯೃತಃ, ಇಯ್‌ರತಿ ಎಂದು ರೂಪವಾಗುತ್ತದೆ.

ಕರ್ಮಣಿ ಪ್ರಯೋಗದಲ್ಲಿ ಯಕ್ ಬಂದು ಋ+ಯ+ತ ಎಂದಿರುವಾಗ 'ಯಕ್' 'ಕಿತ್' ಆಗಿರುವುದರಿಂದ "ರಿಜ್ ಶಯಗ್ಲಿಙ್‌ಷು" ಎಂಬ ಸೂತ್ರದಿಂದ 'ಋ'ಗೆ 'ರಿಜ್' ಆದೇಶವು ಪ್ರಾಪ್ತವಾಗಿತ್ತು, ಅದನ್ನು ಬಾಧಿಸಿ 'ಗುಣೋರ್ತಿ ಸಂಯೋಗಾದೇರ್ಗುಣಃ' ಎಂಬುದರಿಂದ ಗುಣ ಮೊದಲಾದವುಗಳು ಬಂದು ಸ್ಮರ್ಯ+ತ್+ಏ=ಸ್ಮರ್ಯತೇ ಎಂದು ರೂಪವಾಗುತ್ತದೆ.

ಉದಾ– ಸಸ್ಮರೇ – ಇದು 'ಸ್ಮೃ' ಧಾತುವಿನ ಲಿಟ್ ಪ್ರಥಮ ಪುರುಷ ಏಕವಚನದ ರೂಪ.

ಉದಾ– ಆರಿತಾ, ಅರ್ತಾ–ಇವೆರಡೂ ರೂಪಗಳು, ಋ ಗತೌ ಧಾತುವಿನ ಲುಟ್‌ಲಕಾರದ ಪ್ರಥಮ ಪುರುಷ ಏಕವಚನದ ರೂಪಗಳು. ಮೊದಲನೇಯ ರೂಪ (ಅರಿತಾ) ದಲ್ಲಿ ಚಿಣ್ವದಿಟ್, ವೃದ್ಧಿ ಬಂದಿದೆ. ಎರಡನೇಯ ರೂಪ (ಅರ್ತಾ)ದಲ್ಲಿ ಚಿಣ್ವದಿಡಭಾವ ಹಾಗು ಗುಣ ಬಂದಿದೆ.

ಉದಾ– ಸ್ಮಾರಿತಾ, ಸ್ಮರ್ತಾ – ಇವೆರಡೂ 'ಸ್ಮೃ' ಧಾತುವಿನ 'ಲುಟ್' ಲಕಾರದ ಪ್ರಥಮ ಪುರುಷ ಏಕವಚನದ ರೂಪಗಳು. ಇವುಗಳ ಪ್ರಕ್ರಿಯೆಯನ್ನು ಹಿಂದಿನಂತೆಯೇ ತಿಳಿಯಬೇಕು.

ಉದಾ– ಸ್ರಸ್ಯತೇ – ಇದು ಸ್ರಂಸು ಧಾತುವಿನ ಲಟ್ ಪ್ರಥಮ ಪುರುಷ ಏಕವಚನದ ರೂಪ. ಈ ಧಾತುವು ಅಕರ್ಮಕವಾಗಿ ಭ್ವಾದಿಗಣದಲ್ಲಿ ಪಠಿತವಾಗಿದೆ. ಈ ಧಾತುವಿಗೆ ಕರ್ತಾ ಹಾಗು ಭಾವಾರ್ಥದಲ್ಲಿ ಲಕಾರವು ಬರುತ್ತದೆ. ಇಲ್ಲಿ ಭಾವಾರ್ಥದಲ್ಲಿ ಲಕಾರವು ಬಂದು ಸ್ರನಸ್+ಲಟ್ ಎಂದಿದ್ದಾಗ, 'ತ' ಆದೇಶ ಹಾಗು 'ಯಕ್' ಪ್ರತ್ಯಯ ಬಂದು, ಸ್ರನಸ್+ಯ+ತ ಎಂದಿರುವಾಗ "ಅನಿದಿತಾಂ ಹಲ್ ಉಪಧಾಯಾಃ ಕಿಙಿತಿ" ಎಂಬ ಸೂತ್ರದಿಂದ ಉಪಧಾ ಭೂತವಾದ 'ನ್' ಕಾರಕ್ಕೆ ಲೋಪವಾಗಿ 'ಟಿ'ಗೆ ಏತ್ವವಾಗಿ ಸ್ರಸ್+ಯ+ತ್+ಏ=ಸ್ರಸ್ಯತೇ ಎಂದು ರೂಪವಾಗುತ್ತದೆ.

ಉದಾ– ನನ್ದ್ಯತೇ – ಇದು ಟುನದಿ– ಸಮೃದ್ಧೌ ಧಾತುವಿನ ಲಟ್, ಪ್ರಥಮ ಪುರುಷ ಏಕವಚನದ ರೂಪ. ಇದು ಇದಿತ್ತಾದುದರಿಂದ "ಇದಿತೋನುಮ್ ಧಾತೋಃ" ಎಂಬ ಸೂತ್ರದಿಂದ ನುಮ್ ಅಗಮವು ಬಂದು ನ+ನ್‌ದ್ ಎಂದಿರುವಾಗ ಟಿ ಗೆ ಏತ್ವ ಬಂದು ನನ್‌ದ್+ಯ+ತ್+ಏ= ನನ್ದ್ಯತೇ ಎಂದು ರೂಪವಾಗುತ್ತದೆ.

ಉದಾ– ಇಜ್ಯತೇ – ಯಜ ದೇವಪೂಜಾಸಂಗತಿಕರಣದಾನೇಷು ಎಂಬ ಧಾತುವಿನ ಕರ್ಮಣಿ ಲಟ್ ಪ್ರಥಮ ಪುರುಷ ಏಕವಚನದ ರೂಪ. ಕರ್ಮಣಿಯಲ್ಲಿ ಈ ಧಾತುವಿಗೆ ಲಟ್ ಬಂದು ಯಜ್+ತ ಎಂದಿದ್ದಾಗ, ಯಕ್ ಪ್ರತ್ಯಯವು ಬಂದು ಯಜ್+ಯ+ತ ಎಂದಿರುವಾಗ ಯಕ್ ಕಿತ್ ಆಗಿರುವುದರಿಂದ "ವಚಿಸ್ವಪಿ ಯಜಾದೀನಾಂ ಕಿತಿ"

ಎಂಬ ಸೂತ್ರದಿಂದ ಸಂಪ್ರಸಾರಣವಾಗಿ ಇ+ಅ+ಜ್+ಯ+ತ ಎಂದಿದ್ದಾಗ, "ಸಂಪ್ರಸಾರಣಾಚ್ಚ" ಎಂಬ ಸೂತ್ರದಿಂದ ಪೂರ್ವರೂಪ ಬಂದು (ಇ+ಅ=ಇ) ಇ+ಜ್+ಯ+ತ ಎಂದಿರುವಾಗ, ಟಿ ಗೆ ಏತ್ವವಾಗಿ ಇ+ಜ್+ಯ+ತ್+ಏ=ಇಜ್ಯತೇ ಎಂದು ರೂಪವು ಸಿದ್ಧವಾಯಿತು.

**(ಆಕಾರಾದೇಶವನ್ನು ವಿಧಿಸುವ ಸೂತ್ರ)**

**ಸೂತ್ರ- 756 ತನೋತೇರ್ಯಕಿ।(6.4.44)**

ವೃತ್ತಿ-ಆಕಾರಾನ್ತಾದೇಶೋ ವಾ ಸ್ಯಾತ್। ತಾಯತೇ, ತನ್ಯತೇ।

ಪ.ಛೇ- ತನೋತೇಃ, ಯಕಿ ।

ಅ.ವೃ- 'ವಿಡ್ವನೋರನುನಾಸಿಕಸ್ಯಾತ್' ಎಂಬುದರಿಂದ 'ಆತ್' ಮತ್ತು 'ಯೋ ವಿಭಾಷಾ' ಎಂಬ ಸೂತ್ರದಿಂದ ವಿಭಾಷಾ ಎಂಬ ಪದಗಳು ಅನುವೃತ್ತವಾಗಿವೆ.

ಅರ್ಥ- 'ಯಕ್' ಪರದಲ್ಲಿದ್ದಾಗ 'ತನ್' ಧಾತುವಿನ ನ್-ಕಾರಕ್ಕೆ ವೈಕಲ್ಪಿಕವಾಗಿ 'ಆ'ಕಾರಾದೇಶವು ಬರುತ್ತದೆ.

ಉದಾ- ತಾಯತೇ - ಇದು ತನು-ವಿಸ್ತಾರೇ ಎಂಬ 'ಸಕರ್ಮಕ' ಧಾತುವಿನ ಕರ್ಮಣಿ ಲಟ್ ಪ್ರಥಮ ಪುರುಷ ಏಕವಚನದ ರೂಪ. ತನ್+ತ, ತನ್+ಯ+ತ, ತ+ಆ+ಯ+ತ, ತ+ಆ+ಯ+ತ್+ಏ, ತ+ಆ ಸವರ್ಣದೀರ್ಘಸಂಧಿಯಾಗಿ ತಾ+ಯ+ತ್+ಏ=ತಾಯತೇ ಎಂದು ರೂಪವಾಗುತ್ತದೆ.

ಉದಾ- ತನ್ಯತೇ - ಇದು ಆತ್ವ ಬಾರದೇ ಇರುವ ರೂಪ.

**(ಚ್ಲಿ ಗೆ ಚಿಣ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ- 757 ತಪೋऽನುತಾಪೇ ಚ। (6.1.65)**

ವೃತ್ತಿ-ತಪಃ ಚ್ಲೇಃ ಚಿಣ್ ನ ಸ್ಯಾತ್। ಕರ್ಮಕರ್ತರ್ಯನುತಾಪೇ ಚ। ಅನ್ವತಪ್ತ ಪಾಪೇನ (588) ಘುಮಾಸ್ಥೇತೀತ್ವಮ್-ದೀಯತೇ। ಧೀಯತೇ। ದದೇ।

ಪ.ಛೇ- ತಪಃ, ಅನುತಾಪೇ, ಚ ।

ಅ.ವೃ - 'ಚ್ಲೇಃ ಸಿಚ್' ಎಂಬ ಸೂತ್ರದಿಂದ 'ಚ್ಲೇಃ' ಎಂಬ ಪದವು 'ಚಿಣ್ ತೇ ಪದಃ' ಎಂಬುದರಿಂದ 'ಚಿಣ್' ಎಂಬ ಪದವು 'ನ ರುಧಃ' ಎಂಬ ಸೂತ್ರದಿಂದ 'ನ' ಎಂಬ ಪದವು 'ಅಚಃ ಕರ್ಮಕರ್ತರಿ' ಎಂಬುದರಿಂದ ಕರ್ಮಕರ್ತರಿ ಎಂಬ ಪದಗಳು ಅನುವೃತ್ತವಾಗಿವೆ.

ಅರ್ಥ- ಕರ್ಮ, ಕರ್ತಾ ಅಥವಾ ಪಶ್ಚಾತ್ತಾಪ ಎಂಬ ಅರ್ಥದಲ್ಲಿ 'ತಪ್' ಧಾತುವಿನ ಪರದಲ್ಲಿರುವ 'ಚ್ಲಿ'ಗೆ ಚಿಣ್ ಆದೇಶವು ಬರುವುದಿಲ್ಲಾ. (ಕರ್ಮ ಕರ್ತಾ ಎಂದರೆ ಕರ್ಮವೇ ಕರ್ತೃವಾಗಿ ಪ್ರಯೋಗಿಸಲ್ಪಡುತ್ತದೋ ಅದಕ್ಕೆ ಕರ್ಮಕರ್ತಾ ಎಂದು ಕರೆಯುತ್ತಾರೆ.)

ಉದಾ- ಅನ್ವತಪ್ತ ಪಾಪೇನ (ಪಾಪಿಯಿಂದ ಪಶ್ಚಾತ್ತಾಪವು ಮಾಡಲ್ಪಟ್ಟಿತು.)

'ತಪ್' ಧಾತು ಅನುತಾಪಾರ್ಥದಲ್ಲಿ ಅಕರ್ಮಕವಾಗಿದೆ. ಆದ್ದರಿಂದ ಇಲ್ಲಿ ಭಾವಾರ್ಥದಲ್ಲಿ ಲಕಾರವು ಬರುತ್ತದೆ. ಅನುಪೂರ್ವಕ ತಪ್ ಧಾತುವಿನ ನಂತರ ಭಾವಾರ್ಥದಲ್ಲಿ ಲುಙ್ ಲಕಾರವು ಬಂದು, 'ತ' ಆದೇಶವಾಗಿ ಅನು+ಅ+ತಪ್+ತ ಎಂದಿದ್ದಾಗ, 'ಚಿಣ್-ಭಾವ-ಕರ್ಮಣೋಃ' ಎಂಬ ಸೂತ್ರದಿಂದ ಪ್ರಾಪ್ತವಾದ 'ಚ್ಲಿ' ಗೆ ಆದೇಶವಾಗಿ ಬರುವ ಚಿಣ್ ಗೆ ಪ್ರಕೃತ ಸೂತ್ರದಿಂದ ನಿಷೇಧವಾಗಿ, ಚ್ಲಿಗೆ ಬರುವ ಸಿಚ್‌ಗೆ 'ಝುರೋ ಝುರಿ' ಎಂಬುದರಿಂದ ಲೋಪ ಬಂದು ಅನು+ಅ+ತಪ್+ತ= ಅನ್ವತಪ್ತ ಎಂದು ರೂಪವು ಸಿದ್ಧವಾಗುತ್ತದೆ.

ಉದಾ- ದೀಯತೇ – ದಾ- ದಾನೇ ಎಂಬ ಧಾತುವಿನ ಮುಂದೆ ಕರ್ಮಾರ್ಥದಲ್ಲಿ ಲಟ್ ಪ್ರಥಮ ಪುರುಷ ಏಕವಚನದಲ್ಲಿ 'ಯಕ್' ಪ್ರತ್ಯಯ ಬಂದು 'ಘುಮಾಸ್ಥಾಗಾಪಾಜಹಾತಿಸಾಂ ಹಲಿ' ಎಂಬ ಸೂತ್ರದಿಂದ 'ಆ'ಕಾರಕ್ಕೆ 'ಈ' ಕಾರವು ಬಂದು ದೀಯತೇ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ- ಧೀಯತೇ – ಧಾ ಧಾರಣಪೋಷಣಯೋಃ ಎಂಬ ಧಾತುವಿನ ಪರದಲ್ಲಿ ಕರ್ಮಣಿ ಲಟ್ ಪ್ರಥಮ ಪುರುಷ ಏಕವಚನದಲ್ಲಿ 'ಯಕ್' ಪ್ರತ್ಯಯ ಬಂದು 'ಘುಮಾಸ್ಥಾಗಾಪಾಜಹಾತಿಸಾಂ ಹಲಿ' ಎಂಬ ಸೂತ್ರದಿಂದ 'ಆ' ಕಾರಕ್ಕೆ 'ಈ' ಕಾರವು ಬಂದು ಧೀಯತೇ ಎಂಬ ಸಿದ್ಧವಾಗುತ್ತದೆ.

ಉದಾ- ದದೇ-ಡುದಾಞ್-ದಾನೇ ಎಂಬ ಧಾತುವಿನ ಮುಂದೆ ಬರುವ ಲಿಟ್ 'ಅಸಂಯೋಗಾಲ್ಲಿಟ್ ಕಿತ್' ಎಂಬ ಸೂತ್ರದಿಂದ ಕಿದ್ವದ್ಭಾವವನ್ನು ಹೊಂದುತ್ತದೆ. ಅನಂತರ ದಾ+ದಾ+ತ ಎಂದು ದಿತ್ವವಾಗಿ ಅಭ್ಯಾಸದ 'ದ'ಕಾರೋತ್ತರ 'ಆ'ಕಾರಕ್ಕೆ 'ಹ್ರಸ್ವಃ' ಎಂಬುದರಿಂದ ಹ್ರಸ್ವವಾಗಿ 'ಆತೋ ಲೋಪ ಇಟಿ ಚ' ಎಂಬ ಸೂತ್ರದಿಂದ ಅನಭ್ಯಾಸದ ಆಕಾರಕ್ಕೆ ಲೋಪವಾಗಿ ದ+ದ್+ತ ಎಂದಿದ್ದಾಗ, 'ಲಿಟಸ್ತಝಯೋರೇಶಿರೇಚ್' ಎಂಬುದರಿಂದ ಏಶ್ ಆದೇಶವಾಗಿ ದ+ದ್+ಏ=ದದೇ ಎಂದು ರೂಪವು ಸಿದ್ಧವಾಗುತ್ತದೆ.

**('ಯುಕ್' ಆಗಮವನ್ನು ವಿಧಿಸುವ ಸೂತ್ರ)**

**ಸೂತ್ರ- 758 ಆತೋ ಯುಕ್ ಚಿಣ್-ಕೃತೋಃ। (7.3.33)**

ವೃತ್ತಿ- ಆದನ್ತಾನಾಂ ಯುಗಾಗಮಃ ಸ್ಯಾತ್ ಚಿಣಿ ಞ್ಣಿತಿ ಕೃತಿ ಚ। ದಾಯಿತ್ನ್ಣ್, ದಾತಾ। ದಾಯಿಷೀಷ್ಟ, ದಾಸೀಷ್ಟ। ಅದಾಯಿ। ಅದಾಯಿಷಾತಾಮ್। ಭಜ್ಯತೇ।

ಅ.ವೃ- 'ಅಚೋ ಞ್ಣಿತಿ' ಎಂಬ ಸೂತ್ರದಿಂದ ಞ್ಣಿತಿ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- ಆದಂತ ಧಾತುಗಳಿಗೆ 'ಯುಕ್' ಆಗಮವು ಬರುತ್ತದೆ. ಞಿಣ್ ಮತ್ತು ಞಿತ್, ಣಿತ್, ಕೃತ್ ಪ್ರತ್ಯಯಗಳು ಪರದಲ್ಲಿದ್ದಾಗ-

ಉದಾ- ದಾಯಿತಾ, ದಾತಾ – 'ದಾ' ಧಾತುವಿನ ಭಾವ ಕರ್ಮಣಿ ಲುಟ್ ನಲ್ಲಿ ತ, ತಾಸ್ ಮೊದಲಾದವುಗಳನ್ನು ಮಾಡಿದ ನಂತರ, 'ಸ್ಯಸಿಚ್ ಸೀಯುಟ್' ಎಂಬ

ಸೂತ್ರದಿಂದ 'ಚಿಣ್ವದಿಟ್' ಬಂದ ನಂತರ ದಾ+ಇ+ತ್+ಆ ಎಂದಿದ್ದಾಗ, ಚಿಣ್ವದ್ಭಾವ ಪ್ರಯುಕ್ತ ಣಿತ್ವರತ್ವವು ದೊರಕುವುದರಿಂದ ಪ್ರಕೃತ ಸೂತ್ರದಿಂದ ಧಾತುವಿನ 'ಆ'ಕಾರಕ್ಕೆ 'ಯುಕ್' ಆಗಮವು ಬಂದು ದಾ+ಯ್+ಇ+ತ್+ಆ= ದಾಯಿತಾ ಎಂದು ಮೊದಲನೇಯ ರೂಪವು ಸಿದ್ಧವಾಗುತ್ತದೆ. ಚಿಣ್ವದಿಟ್ ಬಾರದ ಪಕ್ಷದಲ್ಲಿ ಇಡಾಗಮ ಹಾಗು ಯುಕ್ ಆಗಮಗಳು ಬಾರದೇ 'ದಾತಾ' ಎಂದು ರೂಪವಾಗುತ್ತದೆ.

ಉದಾ- ದಾಯಿಷೀಷ್ಟ, ದಾಸೀಷ್ಟ – ಇದೇ ರೀತಿಯಲ್ಲಿ ಆ.ಲಿ ನಲ್ಲಿ ಚಿಣ್ವದಿಟ್ ಆಗುವ ಪಕ್ಷದಲ್ಲಿ ಯುಕ್ ಬಂದು ದಾಯಿಷೀಷ್ಟ ಎಂಬ ಮೊದಲನೇಯ ರೂಪವು ಸಿದ್ಧವಾಯಿತು. ಚಿಣ್ವದಿಡಭಾವ ಪಕ್ಷದಲ್ಲಿ 'ಯುಕ್' ಆಗಮವು ಬಾರದೇ ದಾಸೀಷ್ಟ ಎಂಬ ಎರಡನೇಯ ರೂಪವು ಸಿದ್ಧವಾಗಿದೆ.

ಉದಾ- ಅದಾಯಿ – ಲುಙ್ ಪ್ರಥಮ ಪುರುಷ ಏಕವಚನದಲ್ಲಿ 'ಚಿಣ್ ಭಾವ ಕರ್ಮಣೋಃ' ಎಂಬ ಸೂತ್ರದಿಂದ 'ಚ್ಲಿ' ಗೆ ಚಿಣ್ ಆದೇಶವಾಗಿ ಪ್ರಕೃತ ಸೂತ್ರದಿಂದ 'ಯುಕ್' ಆಗಮವು ಬಂದು 'ಚಿಣೋ ಲುಕ್' ಎಂಬ ಸೂತ್ರದಿಂದ 'ತ' ಗೆ ಲೋಪವಾಗಿ ಅದಾಯಿ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ- ಅದಾಯಿಷಾತಾಮ್ – ಲುಙ್ ಪ್ರಥಮ ಪುರುಷ ದ್ವಿವಚನವು ಅಜಂತವಾಗಿರುವುದರಿಂದ 'ಸ್ಯಸಿಚ್ ಸೀಯುಟ್' ಎಂಬುದರಿಂದ ಚಿಣ್ವದಿಟ್ ಬಂದು 'ಯುಕ್' ಆಗಮವಾಗಿ ಅದಾಯಿಷಾತಾಮ್ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ- ಭಜ್ಯತೇ – ಭಞ್ಜ್ ಆಮರ್ಧನೇ (ಮುರಿಯುವುದು) ಎಂಬ ಧಾತುವು ರುಧಾದಿಗಣದಲ್ಲಿ ಸಕರ್ಮಕವಾಗಿ ಪಠಿತವಾಗಿದೆ. ಇದಕ್ಕೆ ಕರ್ಮಾರ್ಥದಲ್ಲಿ ಲಟ್ ರೂಪದಲ್ಲಿ 'ಯಕ್' ಬಂದು ಭನ್+ಜ+ಯ+ತ ಎಂದಿದ್ದಾಗ 'ಅನಿದಿತಾಂ ಹಲ ಉಪಧಾಯಾಃ ಕಿಙಿತಿ' ಎಂಬ ಸೂತ್ರದಿಂದ ಉಪಧಾ ಭೂತವಾದ 'ನ್' ಕಾರಕ್ಕೆ ಲೋಪವಾಗಿ ಭಜ+ಯ+ತ್+ಏ=ಭಜ್ಯತೇ ಎಂದು ರೂಪವು ಸಿದ್ಧವಾಗುತ್ತದೆ.

**(ವಿಕಲ್ಪವಾಗಿ ನ್ ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ- 759 ಭಞ್ಜೇಶ್ಚ ಚಿಣಿ ( 63.4.33)**

ವೃತ್ತಿ- ನ ಲೋಪೋ ವಾ ಸ್ಯಾತ್। ಅಭಾಜಿ, ಅಭಞ್ಜಿ। ಲಭ್ಯತೇ।

ಪ.ಛೇ- ಭಞ್ಜೇಃ ಚ ಚಿಣಿ ।

ಅ.ವೃ – 'ಜೌಂತನಶಾಂ ವಿಭಾಷಾ' ಎಂಬ ಸೂತ್ರದಿಂದ ವಿಭಾಷಾ ಎಂಬ ಪದವು ಮತ್ತು 'ಶ್ನಾನ್ನ ಲೋಪಃ' ಎಂಬುದರಿಂದ ನ ಲೋಪಃ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- ಚಿಣ್ ಪರದಲ್ಲಿದ್ದಾಗ 'ಭನ್ಜ' ಧಾತುವಿನ 'ನ್'ಕಾರಕ್ಕೆ ವಿಕಲ್ಪವಾಗಿ ಲೋಪವು ಬರುತ್ತದೆ.

ಉದಾ- ಅಭಾಜಿ – ಲುಙ್ ಪ್ರಥಮ ಪುರುಷ ಏಕವಚನದಲ್ಲಿ ಅಭನ್ಜ್+ಇ+ತ ಎಂದಿದ್ದಾಗ, ಪ್ರಕೃತ ಸೂತ್ರದಿಂದ ವಿಕಲ್ಪವಾಗಿ 'ನ್' ಕಾರಕ್ಕೆ ಲೋಪ ಬಂದು

ಅಭಜ್+ಇ(ಚಿಣ್)+ತ ಎಂದಿರುವಾಗ, 'ಅತ ಉಪಧಯಾಃ' ಎಂಬುದರಿಂದ 'ಉಪಧಾ' ವೃದ್ಧಿಯಾಗಿ ಅ+ಭಾಜ್+ಇ+ತ ಎಂದಿದ್ದಾಗ 'ಚಿಣೋ ಲುಕ್' ಎಂಬುದರಿಂದ 'ತ' ಕಾರಕ್ಕೆ ಲೋಪವಾಗಿ ಅ+ಭಾಜ್+ಇ=ಅಭಾಜಿ ಎಂದು ರೂಪವು ಸಿದ್ಧವಾಗಿದೆ.

ಉದಾ– ಲಭ್ಯತೇ – ಡುಲಭಷ್ (ಲಭ್) ಪ್ರಾಪ್ತೌ(ಪಡೆಯುವುದು) ಎಂಬ ಈ ಧಾತುವು ಭ್ವಾದಿಗಣದಲ್ಲಿ ಆತ್ಮನೇ ಪದ ಹಾಗು ಅನಿಟ್ ಆಗಿಯೂ ಸಕರ್ಮಕವಾಗಿಯೂ ಪಠಿತವಾಗಿದೆ. ಆದ್ದರಿಂದ ಕರ್ಮಣಿ ಲುಟ್ ಪ್ರಥಮ ಪುರುಷ ಏಕವಚನದಲ್ಲಿ ಯಕ್ ಆಗಮವು ಬಂದು ಟಿಗೆ ಏತ್ವವಾಗಿ ಲಭ್+ಯ+ತ್+ಏ=ಲಭ್ಯತೇ ಎಂದು ರೂಪವು ಸಿದ್ಧವಾಗುತ್ತದೆ.

**(ವೈಕಲ್ಪಿಕವಾಗಿ ನುಮ್ ಆಗಮವನ್ನು ವಿಧಿಸುವ ಸೂತ್ರ)**

**ಸೂತ್ರ– 760 ವಿಭಾಷಾ ಚಿಣ್ಣಮುಲೋಃ।** (7.1.69)

ವೃತ್ತಿ– ಲಭೇರ್ನುಮಾಗಮೋ ವಾ ಸ್ಯಾತ್। ಅಲಮ್ಭಿ, ಅಲಾಭಿ। ಇತಿ ಭಾವ–ಕರ್ಮ–ಪ್ರಕ್ರಿಯಾ।

**॥ಇತಿ ಭಾವಕರ್ಮ ಪ್ರಕ್ರಿಯಾ(30) ಪ್ರಕರಣಮ್॥**

ಅ.ವೃ – 'ಲಭೇಶ್ಚ' ಎಂಬ ಸೂತ್ರದಿಂದ 'ಲಭೇಃ' ಎಂಬ ಪದವು 'ಇದಿತೋ ನುಮ್ ಧಾತೋಃ' ಎಂಬುದರಿಂದ 'ನುಮ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– ಚಿಣ್ ಮತ್ತು ಣಮುಲ್ ಪ್ರತ್ಯಯಗಳು ಪರದಲ್ಲಿದ್ದಾಗ 'ಲಭ್' ಧಾತುವಿಗೆ ವಿಕಲ್ಪವಾಗಿ 'ನುಮ್' ಆಗಮವು ಬರುತ್ತದೆ.

ಉದಾ– ಅಲಮ್ಭಿ–ಲುಙ್ ಪ್ರಥಮ ಪುರುಷ ಏಕವಚನದಲ್ಲಿ 'ಚ್ಲಿ'ಗೆ ಚಿಣ್ ಆದೇಶವಾದ ಮೇಲೆ 'ತ' ಗೆ 'ಚಿಣೋ ಲುಕ್' ಎಂಬ ಸೂತ್ರದಿಂದ 'ಲುಕ್' ಆಗಿ ಪ್ರಕೃತ ಸೂತ್ರದಿಂದ 'ನುಮ್' ಆಗಮವಾಗಿ 'ನುಮ್' ನಲ್ಲಿರುವ 'ನ್' ಕಾರಕ್ಕೆ ಅನುಸ್ವಾರ ಮತ್ತು ಪರಸವರ್ಣವಾದ ಮೇಲೆ 'ಮ' ಕಾರವು ಆದೇಶವಾಗಿ ಅ+ಭ್+ಲ+ಇ+ತ, ಅ+ಭ್+ಲ+ಇ, ಅ+ಲ+ನ್+ಭ್+ಇ,ಅ+ಲ+ಂ+ಭ್+ಇ, ಅ+ಲ+ಮ್+ಭ್+ಇ= ಅಲಮ್ಭಿ ಎಂದು ರೂಪವು ಸಿದ್ಧವಾಗುತ್ತದೆ. ನುಮಾಗಮ ಬಾರದ ಪಕ್ಷದಲ್ಲಿ 'ಅಲಾಭಿ' ಎಂದು ರೂಪವು ಸಿದ್ಧವಾಗುತ್ತದೆ. ಅ+ಲ+ಭ್+ಇ+ತ, ಅ+ಲ+ಭ್+ಇ ಎಂದಿದ್ದಾಗ, 'ಅತ ಉಪಧಾಯಾಃ' ಎಂಬ ಸೂತ್ರದಿಂದ ಉಪಧಾ–ಭೂತವಾದ 'ಲ'ಕಾರೋತ್ತರ 'ಅ' ಕಾರಕ್ಕೆ ವೃದ್ಧಿಯಾಗಿ ಅ+ಲಾ+ಭ್+ಇ=ಅಲಾಭಿ ಎಂದು ರೂಪವು ಸಿದ್ಧವಾಗಿದೆ.

**॥ ಇಲ್ಲಿಗೆ ಭಾವಕರ್ಮ ಪ್ರಕ್ರಿಯಾ ಪ್ರಕರಣ(30) ವು ಮುಗಿಯಿತು ॥**

# ಪ್ರಕರಣ-31: ಕರ್ಮ ಕರ್ತೃ ಪ್ರಕ್ರಿಯಾ

## ಕರ್ಮ ಕರ್ತೃ ಪ್ರಕ್ರಿಯಾ (ಸೂ. ಸಂ.761)

ಯಾವಾಗ ಕರ್ಮಕ್ಕೆ ಕರ್ತೃತ್ವವು ವಿವಕ್ಷಿತವಾಗುತ್ತದೆಯೋ ಆಗ ಸಕರ್ಮಕ ಧಾತುವು ಅಕರ್ಮಕವಾಗುತ್ತದೆ. ಇಂತಹ ಧಾತುವಿನ ಪರದಲ್ಲಿ ಕತ್ರರ್ಥದಲ್ಲಿ ಅಥವಾ ಭಾವಾರ್ಥದಲ್ಲಿ ಲಕಾರವು ಬರುತ್ತದೆ.

**(ಕರ್ತೃವಿಗೆ ಕರ್ಮವದ್ಭಾವ ಹೇಳುವ ಸೂತ್ರ)**

**ಸೂತ್ರ- 761 ಕರ್ಮವತ್ ಕರ್ಮಣಾ ತುಲ್ಯಕ್ರಿಯಃ। (3.1.87)**

ವೃತ್ತಿ- ಕರ್ಮಸ್ಥಯಾ ಕ್ರಿಯಯಾ ತುಲ್ಯಕ್ರಿಯಃ ಕರ್ತಾ ಕರ್ಮವತ್ ಸ್ಯಾತ್। ಕಾರ್ಯಾತಿದೇಶೋಽಯಮ್। ತೇನ ಯಗಾತ್ಮನೇಪದಚಿಣ್ವದಿಟಃ ಸ್ಯುಃ। ಪಚ್ಯತೇ ಫಲಮ್। ಭಿದ್ಯತೇ ಕಾಷ್ಠಮ್। ಅಪಾಚಿ। ಅಭೇದಿ। ಭಾವೇ ತು ಭಿದ್ಯತೇ ಕಾಷ್ಠೇನ। ಇತಿ ಕರ್ಮಕರ್ತೃಪ್ರಕ್ರಿಯಾ।

**॥ ಇತಿ ಕರ್ಮಕರ್ತೃ ಪ್ರಕ್ರಿಯಾ (31) ಪ್ರಕರಣಮ್॥**

ಅ.ವೃ- 'ಕರ್ತರಿ ಶಪ್' ಎಂಬ ಸೂತ್ರದಿಂದ ವಿಭಕ್ತಿ ವಿಪರಿಣಾಮ ಮಾಡಿ ಕರ್ತಾ ಎಂದು ಅನುವೃತ್ತಿ ಮಾಡಲಾಗಿದೆ.

ಅರ್ಥ-ಕರ್ಮದಲ್ಲಿರುವ ಕ್ರಿಯೆಗೆ ಸಮಾನವಾದ ಕ್ರಿಯೆಯುಳ್ಳ ಕರ್ತೃವು ಕರ್ಮವದ್ಭಾವವನ್ನು (ಕರ್ಮದ ಆರೋಪವನ್ನು) ಹೊಂದುತ್ತಾನೆ.ಕ್ರಿಯೆಯ ಕರ್ಮವು ಕರ್ತೃವಿನಲ್ಲಿ ಆರೋಪಿತವಾದಾಗ ಅದನ್ನು ಕರ್ಮ-ಕರ್ತೃ ಎಂದು ಕರೆಯುತ್ತಾರೆ. ಈ ಕರ್ಮ-ಕರ್ತೃ ಪದವು ಪ್ರಥಮಾ ವಿಭಕ್ತಿಯಲ್ಲೇ ಇರುತ್ತದೆ, ಹಾಗೂ ಬೇರೆ ಪ್ರತ್ಯೇಕವಾದ ಕರ್ಮಪದವು ಇರುವುದಿಲ್ಲ.ಯಾವುದಾದರೊಂದಕ್ಕೆ ಮತ್ತೊಂದರ ಜೊತೆಗೆ ತುಲ್ಯತ್ವವನ್ನು ಕಲ್ಪಿಸಿದಾಗ ಅದಕ್ಕೆ ಅತಿದೇಶವೆಂದು ಹೆಸರು. ಅತಿದೇಶವು ಎರಡು ವಿಧವಾಗಿದೆ. ಶಾಸ್ತ್ರಾತಿದೇಶ ಮತ್ತು ಕಾರ್ಯಾತಿದೇಶ ಎಂದು.

ಶಾಸ್ತ್ರಾತಿದೇಶ – ಬೇರೆ ವಿಷಯದಲ್ಲಿ ಪ್ರವರ್ತಿಸುವ ಶಾಸ್ತ್ರವು (ಪ್ರಕೃತ) ಇಲ್ಲಿಯೂ ಪ್ರವರ್ತಿಸಿದರೆ ಅದನ್ನು ಶಾಸ್ತ್ರಾತಿದೇಶವೆಂದು ಕರೆಯುತ್ತಾರೆ.

ಕಾರ್ಯಾತಿದೇಶ-ಬೇರೆ ಕಡೆ ಬರುವ ಕಾರ್ಯವು ಪ್ರಕೃತದಲ್ಲೂ ಪ್ರವರ್ತಿಸಿದರೆ ಅದನ್ನು ಕಾರ್ಯಾತಿದೇಶವೆನ್ನುವರು. ಶಾಸ್ತ್ರಾತಿದೇಶ ಪ್ರಯೋಜನವೂ ಸಹ ಕಾರ್ಯವು ಬರವುದಕ್ಕೆ ಇರುವುದರಿಂದ ಇಲ್ಲಿ ಕಾರ್ಯಾತಿದೇಶವು ಅಂಗೀಕರಿಸಲಾಗಿದೆ. ಇದರಿಂದ 'ಯಕ್'ದ ಆತ್ಮನೇ ಪದ, ಚಿಣ್, ಚಿಣ್ವದ್ಭಾವ, ಇಟ್‌ಗಳು ಬರುತ್ತವೆ. 'ಸಾರ್ವಧಾತುಕೇ ಯಕ್' ಎಂಬುದರಿಂದ ಯಕ್, ಆಗಮವು 'ಭಾವಕರ್ಮಣೋಃ' ಎಂಬುದರಿಂದ ಆತ್ಮನೇಪದ, 'ಚಿಣ್ ಭಾವ ಕರ್ಮಣೋಃ' ಎಂಬುದರಿಂದ ಚಿಣ್ ಪ್ರತ್ಯಯ ಮತ್ತು 'ಸ್ಯಸಿಚ್ ಸೀಯುಟ್...' ಸೂತ್ರದಿಂದ ಚಿಣ್ವದ್ಭಾವ, ಇಟ್ ಆಗಮಗಳು ಬರುವವು.

ಕರ್ಮಣಿ ಪ್ರಯೋಗದಲ್ಲಿ ಧಾತುವು ಯಾವತರಹದ ರೂಪವನ್ನು ಪಡೆದಿದೆಯೋ

ಅದೇ ತರಹದ ರೂಪವನ್ನು ಕರ್ತೃವು ಕರ್ಮವದ್ಭಾವ ಹೊಂದಿದಾಗಲೂ ಪಡೆಯುತ್ತದೆ.

ಉದಾ– ಪಚ್ಯತೇ ಪಹಲಮ್– (ಹಣ್ಣು ತಾನೇ ಆಗುತ್ತದೆ)– 'ಕಾಲಃ ಫಲಮ್ ಪಚತಿ' ಎಂಬ ಉದಾಹರಣೆಯಲ್ಲಿ ಫಲವು ಕರ್ಮವಾಗಿತ್ತು, ಕಾಲವು ಕರ್ತೃವಾಗಿತ್ತು. ಆದರೆ ಇಲ್ಲಿ 'ಹಣ್ಣು ತಾನೇ ಪಕ್ವವಾಗುತ್ತದೆ' ಎಂಬಲ್ಲಿ, ಹಿಂದಿನ ಉದಾಹರಣೆಯಲ್ಲಿ ಕರ್ಮವಾದ ಫಲವು ಕರ್ತೃವಾಗಿದೆ. ಅಂದರೆ (ಕರ್ಮವದ್ಭಾವವನ್ನು ಪಡೆದಿದೆ). ಆಗ 'ಪಚ್' ಧಾತುವಿನ ಮುಂದೆ ಕರ್ಮಾರ್ಥದಲ್ಲಿ ಹಾಗೂ ಭಾವಾರ್ಥದಲ್ಲಿ 'ಲ್' ಕಾರವು ಬರುತ್ತದೆ. ಭಾವಾರ್ಥದಲ್ಲಿ 'ಲ್' ಕಾರವು ಧಾತುವಿನ ಪರದಲ್ಲಿ ಬಂದಾಗ, "ಫಲೇನ ಪಚ್ಯತೇ" ಎಂದು ರೂಪವಾಗುತ್ತದೆ. ಕರ್ತ್ರರ್ಥದಲ್ಲಿ 'ಲ್' ಕಾರವು ಬಂದಮೇಲೆ ಪಕೃತ ಸೂತ್ರದಿಂದ 'ಕರ್ಮವದ್ಭಾವ'ವಾವನ್ನು ಹೊಂದುತ್ತದೆ. ಯಾಕೆಂದರೆ 'ಪಚ್' ಧಾತುವಿನಲ್ಲಿ ಕ್ರಿಯೆಯು ಕರ್ಮಸ್ಥವಾಗಿರುತ್ತದೆ. ಮತ್ತು ಕರ್ತೃ ಫಲವು ಕರ್ಮದಲ್ಲಿರುವ ಕ್ರಿಯೆಗೆ ಸಮಾನವಾದ ಕ್ರಿಯೆಯನ್ನು ಹೊಂದಿದೆ. ಆದ್ದರಿಂದ 'ಕರ್ಮವದ್ಭಾವ' ವಿರುವುದರಿಂದ 'ಯಕ್' ಮತ್ತು 'ಆತ್ಮನೇಪದ' ಬರುವುದರಿಂದ 'ಪಚ್ಯತೇ' ಎಂಬ ರೂಪವು ಸಿದ್ಧವಾಗುತ್ತದೆ. ಕರ್ತ್ರುವಾಚ್ಯವಾಗುವುದರಿಂದ ಇಲ್ಲಿ ಕರ್ತೃವು ಹೇಳಲ್ಪಡುತ್ತಾನೆ. ಆದ್ದರಿಂದ ಕರ್ತೃವು ಪ್ರಥಮಾವಿಭಕ್ತಿಯನ್ನು ಹೊಂದಿದ್ದಾನೆ.

ಉದಾ– ಭಿದ್ಯತೇ ಕಾಷ್ಠಮ್–'ಯಜ್ಞದತ್ತಃ ಕಾಷ್ಠಮ್ ಭಿನತ್ತಿ' ಎಂಬಲ್ಲಿ 'ಕಾಷ್ಠ'ವು 'ಕರ್ಮ'ವಾಗಿದೆ. 'ಯಜ್ಞದತ್ತನು' ಕರ್ತೃವಾಗಿದ್ದಾನೆ. ಆದರೆ 'ಭಿದ್ಯತೇ ಕಾಷ್ಠಮ್' ಎಂಬಲ್ಲಿ (ಕಟ್ಟಿಗೆಯು ತಾನೇ ಸೀಳುತ್ತದೆ) ಕರ್ಮವಾದ ಕಟ್ಟಿಗೆಯೇ 'ಕರ್ತೃ'ವಾಗುತ್ತದೆ. ಅಂದರೆ ಪ್ರಕೃತ ಸೂತ್ರದಿಂದ ಕರ್ಮವದ್ಭಾವವನ್ನು ಹೊಂದಿದೆ. ಆದ್ದರಿಂದ 'ಯಕ್' ಮತ್ತು 'ಆತ್ಮನೇಪದ' ಪ್ರತ್ಯಯವು ಬಂದು ಭಿದ್ಯತೇ ಎಂದು ರೂಪವಾಗುತ್ತದೆ. ಸೌಕರ್ಯದ ಅತಿಶಯವನ್ನು ತೋರಿಸುವದಕ್ಕಾಗಿ ಈ ಸೂತ್ರದಿಂದ ಕರ್ಮವದ್ಭಾವವು ವಿಧಿಸಲಾಗಿದೆ ಎಂದು ತಿಳಿಯಬೇಕು.

ಉದಾ– ಅಪಾಚಿ–'ಪಚ್' ಧಾತುವಿನ 'ಲುಙ್' ಪ್ರಥಮಪುರುಷ ಏಕವಚನದಲ್ಲಿ 'ಕರ್ಮ ಕರ್ತರಿ ಪ್ರಯೋಗದಲ್ಲಿ' ಅ+ಪಚ್+ಇ+ತ ಎಂದಿದ್ದಾಗ, "ಚಿಣೋಲುಕ್" ಎಂಬುದರಿಂದ 'ತ' ಕಾರಕ್ಕೆ ಲೋಪವಾಗಿ "ಅತ ಉಪಧಾಯಾಃ" ಎಂಬುದರಿಂದ ವೃದ್ಧಿಯು ಬಂದು ಅ+ಪಾಚ್+ಇ=ಅಪಾಚಿ ಎಂಬ ರೂಪವು ಸಿದ್ಧವಾಗಿದೆ.

ಉದಾ– ಅಭೇದಿ–'ಭಿದ್' ಧಾತುವಿನ 'ಲುಙ್' ಪ್ರಥಮಪುರುಷ ಏಕವಚನದಲ್ಲಿ ಕರ್ಮ ಕರ್ತರಿ ಪ್ರಯೋಗದಲ್ಲಿ ಅ+ಭಿದ್+ಇ+ತ ಎಂದಿದ್ದಾಗ, 'ತ' ಕಾರ ಲೋಪವಾಗಿ "ಪುಗನ್ತಲಘೂಪದಸ್ಯಚ" ಎಂಬುದರಿಂದ ಗುಣ ಬಂದು ಅ+ಭ್+ಏ+ದ್+ಇ= ಅಭೇದಿ ಎಂದು ರೂಪವು ಸಿದ್ಧವಾಗುತ್ತದೆ. ಭಾವಾರ್ಥದಲ್ಲಿ 'ಲ್' ಕಾರವು ಬಂದಾಗ, ಕರ್ತೃವಾದ ಕಾಷ್ಠವು ಧಾತುವಿನಿಂದ ಅನಭಿಹಿತವಾಗುವುದರಿಂದ 'ಕರ್ತೃಕರ್ಣಯೋಃ ತೃತೀಯಾ" ಎಂಬುದರಿಂದ ಕರ್ತೃವಿಗೆ ತೃತೀಯಾ ವಿಭಕ್ತಿ ಏಕವಚನವು ಬಂದು 'ಭಿದ್ಯತೇ ಕಾಷ್ಠೇನ' ಎಂದು ರೂಪವಾಗಿದೆ.

**ಇಲ್ಲಿಗೆ ಕರ್ಮಕರ್ತೃ ಪ್ರಕ್ರಿಯಾ (31)ಪ್ರಕರಣವು ಮುಗಿಯಿತು.**

# ಪ್ರಕರಣ 32: ಲಕಾರಾರ್ಥ ಪ್ರಕ್ರಿಯಾ

(ಸೂತ್ರ ಸಂಖ್ಯೆ 762 ರಿಂದ 766 ವರೆಗೆ)

(ಲೃಟ್ ಲಕಾರವನ್ನು ವಿಧಿಸುವ ಸೂತ್ರ)

**ಸೂತ್ರ– 762– ಅಭಿಜ್ಞಾವಚನೇ ಲೃಟ್।(3.2.112)**

ವೃತ್ತಿ– ಸ್ಮೃತಿಬೋಧಿನ್ಯುಪಪದೇ ಭೂತಾನದ್ಯತನೇ ಧಾತೋರ್ಲೃಟ್। ಲಙೋಽಪವಾದಃ। ವಸ ನಿವಾಸೇ। ಸ್ಮರಸಿ ಕೃಷ್ಣ! ಗೋಕುಲೇ ವತ್ಸ್ಯಾಮಃ।ಏವಂ ಬುಧ್ಯಸೇ, ಚೇತಯಸೇ ಇತ್ಯಾದಿಪ್ರಯೋಗೇಽಪಿ।

ಅ.ವೃ – 'ಭೂತೇ' ಎಂಬುದು ಇಲ್ಲಿ ಅಧಿಕಾರವಾಗಿದೆ. 'ಅನದ್ಯತೇ ಲಙ್' ಎಂಬ ಸೂತ್ರದಿಂದ ಅನದ್ಯತನೇ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– ಸ್ಮರಣಾರ್ಥಕ ಪದವು ಉಪಪದವಾಗಿರುವಾಗ ಅನದ್ಯತನ ಭೂತಾರ್ಥದಲ್ಲಿ ಧಾತುವಿನ ಮುಂದೆ ಲೃಟ್ 'ಲ್' ಕಾರವು ಬರುತ್ತದೆ. ಇಲ್ಲಿ ವಿಧಿಸಿರುವ ಲೃಟ್ 'ಲ್' ಕಾರವು 'ಲಙ್' ಗೆ ಅಪವಾದವಾಗಿದೆ.

ಉದಾ– ಸ್ಮರಸಿ ಕೃಷ್ಣ ! ಗೋಕುಲೇ ವತ್ಸ್ಯಾಮಃ – (ಕೃಷ್ಣ ! ನೀನು ಸ್ಮರಿಸುತ್ತಿಯೇ ನಾವು ಗೋಕುಲದಲ್ಲಿ ವಾಸಮಾಡಿದ್ದೆವು ಎಂಬುದನ್ನು)

ಇಲ್ಲಿ ಸ್ಮರಸಿ ಎಂಬ ಸ್ಮರಣಾರ್ಥಕ ಉಪಪದವು ವಸ–ನಿವಾಸೇ ಎಂಬ ಧಾತುವಿನ ಸಮೀಪದಲ್ಲಿ ಇರುವುದರಿಂದ, ಪ್ರಕೃತ ಸೂತ್ರದ ನಿಯಮದಿಂದ 'ಲಙ್' 'ಲ್'ಕಾರದ ಪ್ರಯೋಗದ ಬದಲಾಗಿ ಲೃಟ್ 'ಲ್' ಕಾರವು ಬಂದು ವತ್ಸ್ಯಾಮಃ ಎಂಬ ಲೃಟ್ ಪ್ರಯೋಗವಾಗಿದೆ.ಇದೇ ತರಹ ಬುಧ್ಯಸೇ, ಚೇತಯಸೇ ಮೊದಲಾದ ಸ್ಮೃತಿಬೋಧಕ ಪದಗಳ ಯೋಗವಿದ್ದಾಗಲೂ ಭೂತ, ಅನದ್ಯತನ ಕಾಲಾರ್ಥದಲ್ಲೂ ಲೃಟ್ 'ಲ್' ಕಾರವು ಪ್ರಯೋಗಿಸಲಾಗುತ್ತದೆ.

('ಲೃಟ್' ಲಕಾರವನ್ನು ನಿಷೇಧಿಸುವ ಸೂತ್ರ)

**ಸೂತ್ರ– 763– ನ ಯದಿ (3.2.113)**

ವೃತ್ತಿ–ಯದ್ಯೋಗೇ ಉಕ್ತಂ ನ। ಅಭಿಜಾನಾಸಿ ಕೃಷ್ಣ! ಯದ್ವನೇ ಅಭುಞ್ಜ್ಮಹಿ।

ಅ.ವೃ– 'ಅಭಿಜ್ಞಾನ ವಚನೇ ಲೃಟ್' ಎಂಬ ಪೂರ್ಣ ಸೂತ್ರವು ಹಾಗು ಭೂತೇ, ಅನದ್ಯತನೇ, ಧಾತೋಃ ಇವುಗಳ ಅಧಿಕಾರವು ಈ ಸೂತ್ರಕ್ಕೆ ಇದೆ.

ಅರ್ಥ– 'ಯತ್' ಶಬ್ದದ ಯೋಗದಲ್ಲಿ ಸ್ಮೃತಿಬೋಧಕ ಪದವು ಉಪಪದ ವಾದಾಗಲೂ ಧಾತುವಿನ ಪರದಲ್ಲಿ ಅನದ್ಯತನ ಭೂತಾರ್ಥದಲ್ಲೂ 'ಲೃಟ್' 'ಲ್' ಕಾರವು ಬರುವುದಿಲ್ಲ. ಈ ಸೂತ್ರವು ಪೂರ್ವ ಸೂತ್ರಕ್ಕೆ ಅಪವಾದವಾಗಿದೆ.

ಉದಾ– ಅಭಿಜಾನಾಸಿ ಕೃಷ್ಣ (ಹೇ ಕೃಷ್ಣ ನಿನಗೆ ನೆನಪಿದೆಯೋ?) ಯದ್ವನೇ ಅಭುಞ್ಜ್ಮಹಿ (ನಾವು ವನದಲ್ಲಿ ತಿನ್ನುತ್ತಿದ್ದೆವು ಎಂದು)

ಇಲ್ಲಿ ಸ್ಮೃತಿಬೋಧಕ ಅಭಿಜಾನಾಸಿ ಎಂಬ ಪದವಿದೆ. ಇದರ ಯೋಗವಿದ್ದಾಗ 'ಭುಜ್' ಧಾತುವಿನ ಮೇಲೆ ಭೂತ ಅನದ್ಯತನ ಕಾಲಾರ್ಥದಲ್ಲಿ 'ಅಭಿಜ್ಞಾವಚನೇ ಲೃಟ್' ಎಂಬ ಸೂತ್ರದಿಂದ ಲೃಟ್ ಲಕಾರವು ಬರಬೇಕಾಗಿತ್ತು. ಅದು ಯತ್ ಶಬ್ದ ಸಂಬಂಧದಿಂದ ಪ್ರಕೃತ ಸೂತ್ರದಿಂದ ನಿಷೇಧಿಸಲ್ಪಟ್ಟಿದೆ. ಆದ್ದರಿಂದ 'ಲಜ್' 'ಲ್'ಕಾರವೇ ಪ್ರಾಪ್ತವಾಯಿತು.

**('ಲಟ್' ಲಕಾರವನ್ನು ವಿಧಿಸುವ ಅತಿದೇಶ ಸೂತ್ರ)**

**ಸೂತ್ರ– 764 ಲಟ್ ಸ್ಮೇ ।(3.2.118)**

ವೃತ್ತಿ– ಲಿಟೋಽಪವಾದಃ। ಯಜತಿ ಸ್ಮ ಯುಧಿಷ್ಠಿರಃ ।

ಅ.ವೃ – 'ಅನದ್ಯತೇ ಲಜ್' ಎಂಬ ಸೂತ್ರದಿಂದ ಅನದ್ಯತನೇ ಎಂಬ ಪದವು ಮತ್ತು 'ಪರೋಕ್ಷೇ ಲಿಟ್' ಸೂತ್ರದಿಂದ ಪರೋಕ್ಷೇ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ – 'ಸ್ಮ' ಶಬ್ದವು ಉಪಪದವಾಗಿರುವಾಗ ಅನದ್ಯತನ ಭೂತ ಪರೋಕ್ಷಾರ್ಥದಲ್ಲಿ ಧಾತುವಿನ ಪರದಲ್ಲಿ ಲಟ್ 'ಲ್'ಕಾರವು ಬರುತ್ತದೆ. 'ಪರೋಕ್ಷೇ ಲಿಟ್' ಎಂಬ ಸೂತ್ರದಿಂದ ಭೂತ ಮತ್ತು ಅನದ್ಯತನ ಹಾಗು ಪರೋಕ್ಷದಲ್ಲಿ 'ಲಟ್' 'ಲ್'ಕಾರವು ಪ್ರಾಪ್ತವಾಗಿತ್ತು. ಅದನ್ನು ಬಾಧಿಸಿ ಪ್ರಕೃತ ಸೂತ್ರವು ಲಟ್ 'ಲ್' ಕಾರವನ್ನು ವಿಧಿಸುತ್ತಿದೆ.

ಪ್ರಕೃತ ಸೂತ್ರದ ನಂತರ 'ಅಪರೋಕ್ಷೇಚ' ಎಂಬ ಸೂತ್ರವು ರಚಿಸಲಾಗಿದೆ. ಇದರ ಪ್ರಕಾರ ಅಪರೋಕ್ಷಭೂತ ಅನದ್ಯತನ ಕಾಲಾರ್ಥದಲ್ಲಿ ಧಾತುವಿನ ನಂತರ 'ಲಟ್' ಲಕಾರವು ವಿಧಿಸಲಾಗಿದೆ. 'ಸ್ಮ' ಶಬ್ದವನ್ನು ಉಪಪದವಾಗಿ ಬಳಸಿದ್ದರೆ ಮಾತ್ರ ಈ ಸೂತ್ರದ ನಿಯಮವು ಪ್ರವೃತ್ತವಾಗುತ್ತದೆ. ಇದರಿಂದ ತಿಳಿಯುವುದೇನೆಂದರೆ 'ಸ್ಮ' ಶಬ್ದ ಪ್ರಯೋಗವಿದ್ದಾಗ ಪರೋಕ್ಷ ಮತ್ತು ಅಪರೋಕ್ಷ ಎಂಬ ಈ ಎರಡು ಅರ್ಥಗಳಲ್ಲೂ ಲಟ್ 'ಲ್' ಕಾರವು ವಿಧಿಸಲಾಗಿದೆ.

ಉದಾ– ಯಜತಿ ಸ್ಮ ಯುಧಿಷ್ಠಿರಃ – ಯುಧಿಷ್ಠಿರನು ಯಾಗವನ್ನು ಮಾಡುತ್ತಿದ್ದನು ಎಂದರ್ಥ. ಇಲ್ಲಿ 'ಸ್ಮ' ಪದದ ಯೋಗವಿರುವುದರಿಂದ ಪರೋಕ್ಷ ಮತ್ತು ಅಪರೋಕ್ಷ ಅರ್ಥದಲ್ಲಿ ಮೇಲೆ ಹೇಳಿದ ಎರಡು ಸೂತ್ರಗಳಿಂದಲೂ 'ಯಜ' ಧಾತುವಿನ ಮುಂದೆ ಲಟ್ 'ಲ' ಕಾರವು ವಿಧಿಸಲಾಗುತ್ತದೆ.

**(ವರ್ತಮಾನವನ್ನು ಅತಿದೇಶವಾಗಿ ವಿಧಿಸುವ ಸೂತ್ರ)**

**ಸೂತ್ರ– 765 ವರ್ತಮಾನಸಾಮೀಪ್ಯೇ ವರ್ತಮಾನವದ್ ವಾ। 3.3.131)**

ವೃತ್ತಿ– ವರ್ತಮಾನೇ ಯೇ ಪ್ರತ್ಯಯಾ ಉಕ್ತಾಃ ತೇ ವರ್ತಮಾನಸಾಮೀಪ್ಯೇ ಭೂತೇ ಭವಿಷ್ಯತಿ ಚ ವಾ ಸ್ಯುಃ। ಕದಾऽऽಗತೋऽಸಿ? ಅಯಮಾಗಚ್ಛಾಮಿ; ಅಯಮಾಗಮಂ ವಾ। ಕದಾ ಗಮಿಷ್ಯಸಿ? ಏಷ ಗಚ್ಛಾಮಿ, ಗಮಿಷ್ಯಾಮಿ ವಾ।

ಅರ್ಥ – ವರ್ತಮಾನ ಕಾಲದಲ್ಲಿ ಯಾವ ಪ್ರತ್ಯಯಗಳು ವಿಧಿಸಲಾಗಿವೆಯೋ ಅವು ವರ್ತಮಾನದ ಸಮೀಪಕಾಲದಲ್ಲಿರುವ ಭೂತ ಮತ್ತು ಭವಿಷ್ಯದರ್ಥದಲ್ಲೂ

ವಿಕಲ್ಪಿಕವಾಗಿ ವಿಧಿಸಲಾಗುತ್ತದೆ.

ಉದಾ – ಕದಾ ಆಗತೋऽಸಿ? ಅಯಮಾಗಚ್ಛಾಮಿ, ಅಯಮಾಗಮಂ ವಾ? ಇದು ಪ್ರಶ್ನೆ (ಯಾವಾಗ ಬಂದಿರುವಿ?)

ಉತ್ತರ– 1. ಈಗ ಬಂದಿರುತ್ತೇನೆ. 2. ನಾನು ಬಂದಿದ್ದೆನು (ಸ್ವಲ್ಪ ಸಮಯದ ಹಿಂದೆ ಬಂದೆ) ಇದು ಲುಙ್ 'ಲ್' ಕಾರ. ಹೀಗೆ ವರ್ತಮಾನ ಮತ್ತು ಭೂತಾರ್ಥದಲ್ಲಿ ಲಟ್ ಉಪಯೋಗಿಸಲಾಗಿದೆ.

ಈಗ ಭವಿಷ್ಯತ್ ಕಾಲದ ಸಾಮೀಪ್ಯವನ್ನು ಸೂಚಿಸುವಾಗ ಲಟ್ 'ಲ್'ಕಾರವನ್ನು ಪ್ರಯೋಗಿಸುವುದಕ್ಕೆ ಉದಾಹರಣೆ.

ಉದಾ– ಪ್ರಶ್ನೆ – ಕದಾ ಗಮಿಷ್ಯಸಿ? ಯಾವಾಗ ಹೋಗುತ್ತಿ?

ಉತ್ತರ – 1. ಏಷ ಗಚ್ಛಾಮಿ, 2. ಗಮಿಷ್ಯಾಮಿ ವಾ. (1. ನಾನು ಹೋಗುತ್ತದ್ದೇನೆ. 2. ನಾನು ಈಗ ಹೋಗುವೆನು).

ಮೊದಲನೆಯ ಉದಾಹರಣೆಯಲ್ಲೂ ಭವಿಷ್ಯತ್ ಕಾಲದ ಸಾಮೀಪ್ಯವು ವರ್ತಮಾನ ಕಾಲಕ್ಕೆ ಇರುವುದರಿಂದ ಈ ಸೂತ್ರದ ಪ್ರಕಾರ 'ಲಟ್' 'ಲ್'ಕಾರವು ಪ್ರಯೋಗಿಸಲಾಗಿದೆ. ಇದು ವೈಕಲ್ಪಿಕವಾಗಿರುವುದರಿಂದ ಲೃಟ್ 'ಲ್' ಕಾರವೂ ಪ್ರಯೋಗಿಸಲಾಗಿದೆ.

**(ಹೇತು ಹೇತುಮದ್ಭಾವವನ್ನು ಸೂಚಿಸುವ, ಲಿಙ್ ಅನ್ನು ವಿಧಿಸುವ ಸೂತ್ರ)**

**ಸೂತ್ರ– 766 ಹೇತುಹೇತುಮತೋರ್ಲಿಙ್।** (3.3.156)

ವೃತ್ತಿ– ವಾ ಸ್ಯಾತ್। ಕೃಷ್ಣಂ ನಮೇಚ್ಚೇತ್ಸುಖಂ ಯಾಯಾತ್। ಕೃಷ್ಣಂ ನಮ್ಸ್ಯತಿ ಚೇತ್ಸುಖಂ ಯಾಸ್ಯತಿ। ಭವಿಷ್ಯತ್ಯೇವೇಷ್ಯತೇ। ನೇಹ–ಹನ್ತೀತಿ ಪಲಾಯತೇ। (425) ವಿಧಿನಿಮನ್ತ್ರಣೇತಿ ಲಿಙ್। ವಿಧಿಃ= ಪ್ರೇರಣಂ = ಭೃತ್ಯಾದೇಃ ನಿಕೃಷ್ಟಸ್ಯ ಪ್ರವರ್ತನಮ್, ಯಜೇತ। ನಿಮನ್ತ್ರಣಂ = ನಿಯೋಗಕರಣಂ ಆವಶ್ಯಕೇ ಶ್ರಾದ್ಧಭೋಜನಾದೌ ದೌಹಿತ್ರಾದೇಃ ಪ್ರವರ್ತನಮ್, ಇಹ ಭುಞ್ಜೀತ। ಆಮನ್ತ್ರಣಂ= ಕಾಮಾಚಾರಾऽನುಜ್ಞಾ, ಇಹಾಸೀತ। ಅಧೀಷ್ಟಃ= ಸತ್ಕಾರಪೂರ್ವಕೋ ವ್ಯಾಪಾರಃ, ಪುತ್ರಮಾಧ್ಯಾಪಯೇದ್ಭವಾನ್। ಸಮ್ಪ್ರಶ್ನಃ= ಸಮ್ಪ್ರಸಾರಣಮ್, ಕಿಮ್ ಭೋ ವೇದಮಧೀಯೀಯ ಉತ ತರ್ಕಮ್। ಪ್ರಾರ್ಥನಂ = ಯಾಚ್ಞಾ, ಭೋ ಭೋಜನಂ ಲಭೇಯ। ಏವಂ ಲೋಟ್।

**ಇತಿ ಲಕಾರಾರ್ಥಪ್ರಕ್ರಿಯಾ।**

**ಇತಿ ತಿಙನ್ತಮ್**

***

ಪ.ಛೇ – 'ಹೇತು ಹೇತು ಮತೋಃ, ಲಿಙ್' ।

ಅ.ವೃ– 'ವಿಭಾಷಾಧಾತಾಸಂಭಾವನ ವಚನೇ ಅಯದಿ' ಎಂಬ ಸೂತ್ರದಿಂದ ವಿಭಾಷಾ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ – ಹೇತು(ಕಾರಣ) ಹೇತುಮತ್(ಕಾರ್ಯ)ಗಳನ್ನು ಹೇಳುವ ಧಾತುಗಳಿಗೆ 'ಲಿಙ್' ವಿಕಲ್ಪವಾಗಿ ಬರುತ್ತದೆ.

ಉದಾ– ಕೃಷ್ಣಂ ನಮೇತ್ ಚೇತ್ ಸುಖಂ ಯಾಯಾತ್( ಕೃಷ್ಣನನ್ನು ನಮಸ್ಕರಿಸಿದರೆ ಸುಖವನ್ನು ಹೊಂದಿಯಾನು ಎಂದರ್ಥ)

ಇಲ್ಲಿ ಕೃಷ್ಣನ ನಮಸ್ಕಾರವು ಸುಖ ಪ್ರಾಪ್ತಿಗೆ ಕಾರಣ. ಸುಖ ಪ್ರಾಪ್ತಿಯು ಕಾರ್ಯ ಆದ್ದರಿಂದ ಲಿಙ್ ಬಂದಿದೆ. 'ಲಿಙ್' ಬಾರದಿದ್ದಾಗ ಲೃಟ್ ಬರುತ್ತದೆ. ಉದಾ – ಕೃಷ್ಣಂ ನಂಸ್ಯತಿ ಚೇತ್ ಸುಖಂ ಯಾಸ್ಯತಿ.ಇಲ್ಲಿ ವಾರ್ತಿಕಕಾರರು 'ಭವಿಷ್ಯತ್ಯೇವೇಷ್ಯತೇ' ಎಂದು ನಿಯಮವನ್ನು ಮಾಡಿರುವರು. ಭವಿಷ್ಯದರ್ಥ ತೋರುತ್ತಿರುವಾಗ, ಕಾರ್ಯ ಕಾರಣ ಭಾವವಿದ್ದಾಗ ಮಾತ್ರ 'ಲಿಙ್' ಲಕಾರ ವಿಕಲ್ಪಿಕವಾಗಿ ಬರುತ್ತದೆ. ಇದಕ್ಕೆ 'ಹಂತೀತಿ ಪಲಾಯತೇ' ಎಂದು ಪ್ರತ್ಯುದಾಹರಣೆಯನ್ನು ಕೊಟ್ಟಿದ್ದಾರೆ. ಇಲ್ಲಿ ಕೊಲ್ಲುತ್ತಾನೆ ಮತ್ತು ಓಡುತ್ತಾನೆ ಎಂಬಲ್ಲಿ ಕಾರ್ಯಕಾರಣ ಭಾವ ತೋರಿದರೂ ಭವಿಷ್ಯದರ್ಥವಿಲ್ಲ. ಆದ್ದರಿಂದ ಇಲ್ಲಿ ಲಿಙ್ ಬರದೇ ಲಟ್ ಬಂದಿದೆ. ಇದೇ ಕಾರಣದಿಂದ ಲೃಟ್ ಬಂದಿರುವುದಿಲ್ಲ. ವಿಧಿನಿಮಂತ್ರಣೇತಿಲಿಙ್–"ವಿಧಿನಿಮನ್ತ್ರಣಾಮನ್ತ್ರಣಾಧೀಷ್ಟ–ಸಂಪ್ರಶ್ನಪ್ರಾರ್ಥನೇಷು ಲಿಙ್" ಇದು ಹಿಂದೆ ಭ್ವಾದಿಗಣದಲ್ಲಿ 'ಭವೇತ್' ಎಂಬ ರೂಪ ಸಿದ್ಧಿಮಾಡುವಾಗ ಪಠಿಸಲಾಗಿದೆ. ವಿಧಿನಿಮನ್ತ್ರಣಾಮನ್ತ್ರಣಾಧೀಷ್ಟ–ಸಂಪ್ರಶ್ನಪ್ರಾರ್ಥನಾ ಎಂಬ ಈ ಅರ್ಥಗಳಲ್ಲೂ ಮತ್ತು ಆಶೀರ್ವಾದಾರ್ಥದಲ್ಲೂ ಧಾತುವಿನ ಪರದಲ್ಲಿ ಲಿಙ್ ಬರುತ್ತದೆ.

ಇಲ್ಲಿ ಇವುಗಳ ವಿವರಣೆಯು ವಿಶೇಷವಾಗಿ ಮಾಡಲಾಗಿದೆ. ವಿಧಿ–ಪ್ರೇರಣಂ ಭೃತ್ಯಾದೇಃ ನಿಕೃಷ್ಟಸ್ಯ ಪ್ರವರ್ತನಮ್ ಅಂದರೆ– ತನಗಿಂತ ಕಡಿಮೆಯಾದ ಭೃತ್ಯಾದಿಗಳಿಗೆ ಆಜ್ಞೆ ಮಾಡುವುದನ್ನೇ ವಿಧಿ ಎಂದು ಕರೆಯುತ್ತಾರೆ. ಹೇಗೆಂದರೆ 'ಪುತ್ರ ಕಾಮೋ ಯಜೇತ' ಪುತ್ರನನ್ನು ಪಡೆಯಲು ಬಯಸುವವನೇ ಯಜ್ಞವನ್ನು ಮಾಡು ಎಂದರ್ಥ. ಇಲ್ಲಿ ಪುತ್ರನನ್ನು ಬಯಸುವವನ್ನು ಶೃತಿಯು ಆಜ್ಞಾಪಿಸುತ್ತದೆ.

ನಿಮಂತ್ರಣ – ನಿಯೋಗ ಕರಣಂ ಆವಶ್ಯಕೇ ಶ್ರಾದ್ಧ ಭೋಜನಾದೌ ದೌಹಿತ್ರಾದೇಃ ಪ್ರವರ್ತನಮ್=ಅವಶ್ಯವಾಗಿ ಶ್ರಾದ್ಧದ ಊಟಕ್ಕೆ ಬರಬೇಕೆಂದು ಮಗಳ ಮಕ್ಕಳು ಮುಂತಾದವರನ್ನು ಬರಬೇಕೆಂದು ಪ್ರೇರೆಪಿಸುವುದನ್ನೇ ನಿಮಂತ್ರಣ ಎಂದು ಕರೆಯುತ್ತಾರೆ.

ಉದಾ– ಇಹ ಭುಞ್ಜೀತ – ಅವಶ್ಯವಾಗಿ ಶ್ರಾದ್ಧದ ಊಟ ಮಾಡಿ ಎಂದರ್ಥ. ಇದು ಭಜ್ ಧಾತುವಿನ ಲಿಙ್ ರೂಪ.

ಆಮಂತ್ರಣಂ–ಕಾಮಾಚಾರಾನುಜ್ಞಾ–ಇಷ್ಟ ಬಂದಂತೆ ಮಾಡುವುದು ಎಂಬ ರೀತಿ ಅನುಮೋದನೆಯನ್ನು ನೀಡುವುದು. ಉದಾ– ಇಹ ಆಸೀತ–ಇಲ್ಲಿ ಕೂಡಬಹುದು. ಕೂಡುವವನು ತನಗೆ ಇಚ್ಛೆ ಹಾಗು ಸಮಯವಿದ್ದರೆ ಕೂಡಬಹುದು ಇಲ್ಲದಿದ್ದರೆ ಯಾವ ನಿರ್ಬಂಧವೂ ಇಲ್ಲ. ಇದು 'ಆಸ' ಧಾತುವಿನ ಲಿಙ್ ರೂಪ.

ಅಧೀಷ್ಟಂ – ಸತ್ಕಾರ ಪೂರ್ವಕೋ ವ್ಯಾಪಾರಃ = 'ಪುತ್ರಮಧ್ಯಾಪಯೇದ್ಭವಾನ್' ಒಳ್ಳೆಯ ಗುರುಗಳ ಸಮೀಪಕ್ಕೆ ಮಗನ್ನು ಕರೆದು ಕೊಂಡು ಹೋಗಿ ನನ್ನ ಮಗನಿಗೆ ಅಧ್ಯಯನ ಮಾಡಿಸಿರಿ ಎಂದು ಗೌರವ ಪೂರ್ವಕವಾಗಿ ಗುರುವನ್ನು ಪ್ರೇರೇಪಿಸುವುದನ್ನೇ ಅಧೀಷ್ಟವೆಂದು ಕರೆಯುತ್ತಾರೆ. ಅಧ್ಯಾಪಯೇತ್ ಎಂಬುದು ಅಧಿ ಪೂರ್ವಕ 'ಇಜ್' ಧಾತುವಿನ ಲಿಜ್ ರೂಪ.

ಸಂಪ್ರಶ್ನಃ – ಸಂಪ್ರಸಾರಣಂ= ಹಿರಿಯರಲ್ಲಿ ನಿಶ್ಚಯಾರ್ಥಕವಾದ ಪ್ರಶ್ನೆಯನ್ನು ಮಾಡುವುದನ್ನೇ ಸಂಪ್ರಶ್ನ ಎಂದು ಕರೆಯುತ್ತಾರೆ. ಉದಾ– ಕಿಂ ಭೋ ವೇದಮಧಿಯೀಯ ಉತ ತರ್ಕಮ್? ಗುರುಗಳೇ ನಾನು ವೇದವನ್ನು ಕಲಿಯಲೇ ಅಥವಾ ತರ್ಕ ಶಾಸ್ತ್ರವನ್ನು ಕಲಿಯಲೇ? ಇಲ್ಲಿ 'ಅಧಿಯೀಯ' ಎಂಬುದು 'ಲಿಜ್' 'ಲ್' ಕಾರದ ರೂಪವಾಗಿದೆ.

ಪ್ರಾರ್ಥನಂ – ಯಾಞ್ಚಾ= ಬೇಡುವುದನ್ನೇ ಪ್ರಾರ್ಥನಾ ಎಂದು ಕರೆಯುತ್ತಾರೆ. ಹೇಗೆಂದರೆ ಉದಾ– ಭೋ ಭೋಜನಂ ಲಭೇಯ= ಸ್ವಾಮಿ ನನಗೆ ಭೋಜನ ಲಭಿಸುವುದೇ ಎಂದರ್ಥ. ಇಲ್ಲಿ ಪ್ರಾರ್ಥನಾ ತೋರುತ್ತಿದೆ. ಇದು ಲಿಜ್ ಲಕಾರದ ರೂಪವಾಗಿದೆ. ಹೀಗೆ 'ವಿಧಿ' ಆದಿ ಅರ್ಥಗಳಲ್ಲಿ ಲಿಜ್ ಬರುವುದಲ್ಲದೇ ಲೋಟ್ ಲಕಾರವೂ ಬರುತ್ತದೆ ಎಂದು ತಿಳಿಯಬೇಕು.

**॥ಇತಿ ಲಕಾರಾರ್ಥ ಪ್ರಕ್ರಿಯಾ (32) ಪ್ರಕರಣಮ್॥**

**ಇಲ್ಲಿಗೆ ಲಕಾರಾರ್ಥ ಪ್ರಕ್ರಿಯಾ ಪ್ರಕರಣ(32) ವು ಮುಗಿಯಿತು.**

**॥ಇತಿ ತಿಙನ್ತ ಪ್ರಕರಣಮ್॥**

**ಇಲ್ಲಿಗೆ ತಿಙನ್ತ ಪಕರಣವು ಸಮಾಪ್ತವಾಯಿತು.**

# ಪ್ರಕರಣ 33: ಅಥ ಕೃದಂತೇ

**(ಕೃತ್ಯಪ್ರಕ್ರಿಯಾ – ಸೂತ್ರ ಸಂಖ್ಯೆ 767 ರಿಂದ 784 ವರೆಗೆ)**

**(ಅಧಿಕಾರ ಸೂತ್ರ)**

**ಸೂತ್ರ– 767 ಧಾತೋಃ। (3.1.91)**

ವೃತ್ತಿ – ಆತೃತೀಯಾಧ್ಯಾಯಸಮಾಪ್ತಿ ಯೇ ಪ್ರತ್ಯಯಾಃ ತೇ ಧಾತೋಃ ಪರೇ ಸ್ಯುಃ। (302) ಕೃದತಿಜಿತಿ ಕೃತ್ಸಂಜ್ಞಾ।

ಅ.ವೃ–"ಪ್ರತ್ಯಯಃ" ಮತ್ತು "ಪರಶ್ಚ" ಎಂಬ ಸೂತ್ರಗಳು ಈ ಸೂತ್ರಕ್ಕೆ ಅಧಿಕಾರಗಳಾಗಿ ಬರುತ್ತವೆ.

ಅರ್ಥ: ಈ ಸೂತ್ರದಿಂದ ಪ್ರಾರಂಭಿಸಿ ತೃತೀಯಾಧ್ಯಾಯ ಮುಗಿಯುವ ವರೆಗೆ ಯಾವ ಪ್ರತ್ಯಯಗಳು ಹೇಳಲಾಗಿವೆಯೋ ಅವು ಧಾತುಗಳ ಪರದಲ್ಲಿ ಬರುತ್ತವೆ. "ಕೃದತಿಙ್" ಎಂಬ ಸೂತ್ರದಿಂದ ಧಾತುವಿನ ನಂತರ ಬರುವ ತಿಙ್–ಭಿನ್ನವಾದ ಪ್ರತ್ಯಯಗಳಿಗೆ ಕೃತ್ ಎಂಬ ಸಂಜ್ಞೆಯು ಬರುತ್ತದೆ.

**(ವಿಕಲ್ಪದಿಂದ ಪ್ರತ್ಯಯಗಳಿಗೆ ಬಾಧಕತ್ವವನ್ನು ಹೇಳುವ ಪರಿಭಾಷಾ ಸೂತ್ರ)**

**ಸೂತ್ರ– 768 ವಾಽಸರೂಪೋಽಸ್ತ್ರಿಯಾಮ್ (3.1.94)**

ವೃತ್ತಿ– ಅಸ್ಮಿನ್ ಧಾತ್ವಧಿಕಾರೇ ಅಸರೂಪಃ ಅಪವಾದಪ್ರತ್ಯಯಃ ಉತ್ಸರ್ಗಸ್ಯ ಬಾಧಕೋ ವಾ ಸ್ಯಾತ್ ಸ್ತ್ರ್ಯಧಿಕಾರೋಕ್ತಂ ವಿನಾ।

ಅ.ವೃ: "ತತ್ರೋಪದಂ ಸಪ್ತಮೀಸ್ಥಮ್" ಎಂಬ ಸೂತ್ರದಿಂದ ತತ್ರ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ: ಈ ಧಾತ್ವಧಿಕಾರದಲ್ಲಿ ಸ್ವರೂಪವಾಗಿಲ್ಲದ ಅಪವಾದ ಪ್ರತ್ಯಯವು ಸಾಮಾನ್ಯಶಾಸ್ತ್ರವಿಹಿತವಾದ ಪ್ರತ್ಯಯಕ್ಕೆ ವಿಕಲ್ಪವಾಗಿ ಬಾಧಕವಾಗುವುದು. ಸ್ತ್ರಿಯಾಂ ಎಂಬ ಅಧಿಕಾರದಲ್ಲಿ ಹೇಳಿರುವ ಪ್ರತ್ಯಯಗಳಿಗೆ ಈ ನಿಯಮವು ಸಂಬಂಧಪಡುವುದಿಲ್ಲ ಈ ಸೂತ್ರವು ಅಧಿಕಾರ ಸೂತ್ರವಲ್ಲ. ಪರಿಭಾಷಾ ಸೂತ್ರವಾಗಿದೆ. ಧಾತೋಃ ಎಂಬ ಅಧಿಕಾರದಲ್ಲಿ ಯಾವ ಅಸರೂಪ ಪ್ರತ್ಯಯಗಳು ಅಪವಾದವೆಂದು ಹೇಳಲಾಗಿವೆಯೋ ಅವು ಉತ್ಸರ್ಗ (ಸಾಮಾನ್ಯ) ಸೂತ್ರದಿಂದ ಹೇಳಿರುವ ಪ್ರತ್ಯಯಗಳಿಗೆ ವಿಕಲ್ಪದಿಂದ ಬಾಧಕವಾಗುತ್ತವೆ. "ಸ್ತ್ರಿಯಾಂ ಕ್ತಿನ್" ಎಂಬ ಅಧಿಕಾರ ಸೂತ್ರದಲ್ಲಿ ಹೇಳಲಾಗಿರುವ ಪ್ರತ್ಯಯಗಳಿಗೆ ಈ ನಿಯಮವು ಅನ್ವಯಿಸುವುದಿಲ್ಲ. ಅಸರೂಪ ಎಂದರೆ **ನ ಸಮಾನಂ ರೂಪಂ ಯಸ್ಯ ಸಃ ಅಸರೂಪಃ** (ಭಿನ್ನವಾದ ಸ್ವರೂಪವುಳ್ಳ ಪ್ರತ್ಯಯಗಳಿಗೆ ಅಸರೂಪ ಎಂದು ಹೇಳುತ್ತಾರೆ.) ತವ್ಯತ್ ಮೊದಲಾದ ಸಾಮಾನ್ಯ ಪ್ರತ್ಯಯಗಳಿಗೆ ಣ್ಯತ್ ಮೊದಲಾದವು ಅಪವಾದ ಅಸರೂಪಗಳಾಗಿವೆ. (ಅಂದರೆ ಭಿನ್ನ ರೂಪಗಳಾಗಿವೆ) ಆದ್ದರಿಂದ ಈ ಸೂತ್ರವು ಪ್ರವೃತ್ತವಾಗುತ್ತದೆ.

ಎಲ್ಲಿ ಅಪವಾದ ಪ್ರತ್ಯಯವು ಸಾಮಾನ್ಯ ಪ್ರತ್ಯಯಕ್ಕೆ ಸಮಾನ

ರೂಪವುಳ್ಳದ್ದಾಗಿರುತ್ತದೋ, ಅಲ್ಲಿ ಈ ಸೂತ್ರವು ಪ್ರವರ್ತಿಸುವುದಿಲ್ಲ. ಅಂದರೆ ನಿತ್ಯವಾಗಿ ಬಾಧಿಸುತ್ತದೆ. ಹೇಗೆಂದರೆ ಅಣ್ ಮತ್ತು ಕ– ಎಂಬ ಎರಡು ಪ್ರತ್ಯಯಗಳಲ್ಲಿ 'ಅ' ಮಾತ್ರ ಉಳಿಯುತ್ತದೆ. ಆದ್ದರಿಂದ ಇವು ಸರೂಪ ಪ್ರತ್ಯಯಗಳು. ಇವುಗಳಲ್ಲಿ ಅಪವಾದವಾದ 'ಕ' ಪ್ರತ್ಯಯದ್ವಾರಾ ಸಾಮಾನ್ಯವಾದ ಅಣ್ ಪ್ರತ್ಯಯಕ್ಕೆ ನಿತ್ಯವಾಗಿ ಬಾಧಕವಾಗುತ್ತದೆ.

"ಆತೋಽನುಪಸರ್ಗೇ ಕಃ" ಎಂಬ ಸೂತ್ರದಿಂದ 'ಕ' ಬಂದು 'ಗೋದಃ' ಎಂದಾಗುತ್ತದೆ. ಇಲ್ಲಿ "ಕರ್ಮಣ್ಯಣ್" ಎಂಬ ಸೂತ್ರದಿಂದ ಅಣ್ ಪತ್ಯಯವು ಮತ್ತೆ ಬರುವುದಿಲ್ಲ "ಸ್ತ್ರೀಯಾಂ ಕ್ತಿನ್" ಎಂಬ ಅಧಿಕಾರದಲ್ಲಿ ಈ ಪರಿಭಾಷೆಯು ಅನ್ವಯಿಸುವುದಿಲ್ಲ. ಯಾಕೆಂದರೆ "ಸ್ತ್ರಿಯಾಂ ಕ್ತಿನ್" ಇದು ಉತ್ಸರ್ಗ ಸೂತ್ರವಾಗಿದೆ ಮತ್ತು "ಅಪ್ರತ್ಯಯಾತ್" ಎಂಬುದು ಅಪವಾದ ಸೂತ್ರವಾಗಿದೆ. ಆದರೆ ಈ ಪ್ರತ್ಯಯವು ಅಸರೂಪವಾಗಿದ್ದರೂ "ಸ್ತ್ರಿಯಾಂ ಕ್ತಿನ್" ಎಂಬ ಅಧಿಕಾರದಲ್ಲಿ ಇರೋಣದರಿಂದ ವಿಕಲ್ಪವಾಗಿ ಬಾಧಿಸದೇ ನಿತ್ಯವಾಗಿ ಬಾಧಿಸುತ್ತದೆ. ಆದ್ದರಿಂದ ಚಿಕೀರ್ಷಾ ಎಂದು ಒಂದೇ ರೂಪವು ಇರುತ್ತದೆ ಕ್ತಿನ್ ಬರುವುದಿಲ್ಲ ಈ ಸೂತ್ರವನ್ನು 'ವಾಽಸರೂಪವಿಧಿ' ಎಂಬ ಶಬ್ದದಿಂದಲೂ ಕರೆಯುತ್ತಾರೆ.

**(ಕೃತ್ಯ ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ– 769 ಕೃತ್ಯಾಃ (7.1.95)**

ವೃತ್ತಿ– ಣ್ವುಲ್ ತೃಚೌ ಇತ್ಯತಃ ಪ್ರಾಕ್, ಕೃತ್ಯ ಸಂಜ್ಞಾಃ ಸ್ಯುಃ।

ಅರ್ಥ: "ಣ್ವುಲ್ ತೃಚೌ" ಎಂಬ ಸೂತ್ರದ ಪೂರ್ವದಲ್ಲಿ ಎಷ್ಟು ಪ್ರತ್ಯಯಗಳು ಹೇಳಲಾಗಿವೆಯೋ ಅವುಗಳಿಗೆ ಕೃತ್ಯ ಎಂಬ ಸಂಜ್ಞೆಯು ಬರುತ್ತದೆ.

**(ಕೃತ್ ಪ್ರತ್ಯಯದ ಅರ್ಥವನ್ನು ನಿರ್ಧರಿಸುವ ವಿಧಿಸೂತ್ರ)**

**ಸೂತ್ರ– 770 ಕರ್ತರಿ ಕೃತ್ (3.4.67)**

ವೃತ್ತಿ– ಕೃತ್ ಪ್ರತ್ಯಯಃ ಕರ್ತರಿ ಸ್ಯಾತ್ ಇತಿ ಪ್ರಾಪ್ತೇ।

ಅರ್ಥ: ಕೃತ್ ಪ್ರತ್ಯಯವು ಸಾಮಾನ್ಯವಾಗಿ ಕರ್ತ್ರರ್ಥದಲ್ಲೇ ಇರುತ್ತದೆ. ಇದು ಸಾಮಾನ್ಯವಾಗಿದೆ. ಇದಕ್ಕೆ ಅಪವಾದವು ಮುಂದಿನ ಸೂತ್ರದಲ್ಲಿ ಹೇಳಲಾಗಿದೆ.

**(ಕೃತ್ಯಾದಿ ಪ್ರತ್ಯಯಗಳನ್ನು ವಿಧಿಸುವ ಸೂತ್ರ)**

**ಸೂತ್ರ– 771– ತಯೋರೇವ ಕೃತ್ಯ-ಕ್ತ-ಖಲರ್ಥಾಃ। (3.4.70)**

ವೃತ್ತಿ– ಏತೇ ಭಾವಕರ್ಮಣೋರೇವ ಸ್ಯುಃ।

ಪ. ಛೇ: ತಯೋಃ, ಏವ, ಕೃತ್ಯ-ಕ್ತ ಖಲರ್ಥಾಃ।

ಅರ್ಥ: ಕೃತ್ಯ-ಕ್ತ-ಖಲರ್ಥಃ ಪ್ರತ್ಯಯಗಳು ಭಾವ ಮತ್ತು ಕರ್ಮಾರ್ಥದಲ್ಲೇ ಬರುತ್ತವೆ. ಕರ್ತ್ರರ್ಥದಲ್ಲಿ ಬರುವುದಿಲ್ಲ 'ಕ್ತ' ಪ್ರತ್ಯಯವು ಪೂರ್ವಕೃದಂತ ಪ್ರಕರಣದಲ್ಲೂ ಹಾಗೇಯೇ ಖಲರ್ಥ ಪ್ರತ್ಯಯಗಳು ಉತ್ತರ ಕೃದಂತದಲ್ಲಿ ಹೇಳಲ್ಪಟ್ಟಿವೆ. ಖಲ್

ಪ್ರತ್ಯಯವು ಯಾವ ಅರ್ಥದಲ್ಲಿ ಇರುತ್ತದೋ ಆ ಅರ್ಥದಲ್ಲಿರುವ ಪ್ರತ್ಯಯಗಳಿಗೆ ಖಲರ್ಥ ಪ್ರತ್ಯಯಗಳೆಂದು ಹೆಸರು.

**(ತವ್ಯತ್ ಮೊದಲಾದ ಪ್ರತ್ಯಯಗಳನ್ನು ವಿಧಿಸುವ ಸೂತ್ರ)**

**ಸೂತ್ರ– 772. ತವ್ಯತ್ತವ್ಯಾನೀಯರಃ (3.1.96)**

ವೃತ್ತಿ– ಧಾತೋಃ ಏತೇ ಪ್ರತ್ಯಯಾಃ ಸ್ಯುಃ। ಏಧಿತವ್ಯಮ್, ಏಧನೀಯಮ್ ತ್ವಯಾ, ಭಾವೇ–ಔತ್ಸರ್ಗಿಕಮೇಕವಚನಂ ಕ್ಲೀಬತ್ವಞ್ಚ। ಚೇತವ್ಯಃ, ಚಯನೀಯೋ ವಾ ಧರ್ಮಃ ತ್ವಯಾ।

**(ಕೇಲಿಮರ ಪ್ರತ್ಯಯವನ್ನು ವಿಧಿಸುವ ವಾರ್ತಿಕ)**

**ವಾ।। ಕೇಲಿಮರ ಉಪಸಂಖ್ಯಾನಮ್।**

ಪಚೇಲಿಮಾ ಮಾಷಾಃ, ಪಕ್ತವ್ಯಾಃ ಇತ್ಯರ್ಥಃ। ಭಿದೇಲಿಮಾಃ ಸರಲಾಃ, ಭೇತ್ತವ್ಯಾಃ ಇತ್ಯರ್ಥಃ। ಕರ್ಮಣಿ ಪ್ರತ್ಯಯಃ।

ಅವ್ಯ: "ಪ್ರತ್ಯಯಃ" "ಪರಶ್ಚ" ಮತ್ತು "ಧಾತೋಃ" ಎಂಬ ಈ ಮೂರು ಸೂತ್ರಗಳು ಈ ಸೂತ್ರಕ್ಕೆ ಅಧಿಕಾರಗಳಾಗಿವೆ.

ಅರ್ಥ: ಧಾತುವಿನ ನಂತರ ತವ್ಯತ್, ತವ್ಯ ಮತ್ತು ಅನೀಯರ್ ಪ್ರತ್ಯಯಗಳು ಬರುತ್ತವೆ. 'ತವ್ಯತ್' ಪ್ರತ್ಯಯದಲ್ಲಿ 'ತ್' ಕಾರವು ಇತ್ ಆಗಿದೆ. ಇದು ತಿತ್ ಆಗಿರುವುದರಿಂದ "ತಿತ್ ಸ್ವರಿತಂ" ಎಂಬ ಸೂತ್ರದಿಂದ ಸ್ವರಿತವಾಗುತ್ತದೆ. ತವ್ಯತ್ ಮತ್ತು 'ತವ್ಯ'ಗಳು ಒಂದಾಗಿ ಕಂಡರೂ ಅವುಗಳಲ್ಲಿ ಭೇದವಿದೆ ಅನೀಯರ್ ಪ್ರತ್ಯಯದಲ್ಲಿ ರೇಫವು ಇತ್ ಸಂಜ್ಞಕವಾಗಿದೆ.

ಉದಾ– ಏಧಿತವ್ಯಮ್–ಇದರಲ್ಲಿ ತವ್ಯ ಪ್ರತ್ಯಯವಿದೆ. ಇದು ಭಾವಾರ್ಥದಲ್ಲಿ ಏಧ್ ಧಾತುವಿನ ಪರದಲ್ಲಿ ಬಂದಿದೆ. "ಆರ್ಧಧಾತುಕಸ್ಯೇಡ್ವಲಾದೇಃ" ಎಂಬ ಸೂತ್ರದಿಂದ ತವ್ಯ ಪ್ರತ್ಯಯಕ್ಕೆ ಇಡಾಗಮ ಹಾಗೂ ಔತ್ಸರ್ಗಿಕ ನಪುಂಸಕ ಲಿಂಗವು ಬಂದು ಏಧ್+ತವ್ಯ > ಏಧ್+ಇ+ತವ್ಯ > ಏಧ್+ಇ+ತವ್ಯ+ಅಮ್ = ಏಧಿತವ್ಯಮ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ತ್ವಯಾ ಏಧನೀಯಮ್: ಏಧ್ ಧಾತುವಿನ ನಂತರ ಅನೀಯರ್ ಪ್ರತ್ಯಯವು ಹಾಗೂ ನಪುಂಸಕಲಿಂಗವು ಬಂದು ಏಧನೀಯಮ್ ಎಂದು ಆಗಿದೆ. ಈ ಪ್ರತ್ಯಯವು ಭಾವಾರ್ಥದಲ್ಲಿ ಬಂದಿರುವುದರಿಂದ ಏಧ್ ಧಾತುವು ಅಕರ್ಮಕವಾಗಿದೆ. ಇಲ್ಲಿ ಕರ್ತೃವು ಅನುಕ್ತವಾಗಿರುವುದರಿಂದ ತ್ವಯಾ ಎಂದು ಕರ್ತೃವು ತೃತೀಯಾ ವಿಭಕ್ತಿಯಲ್ಲಿ ಹೇಳಲಾಗಿದೆ. ಭಾವದಲ್ಲಿ ಸಾಮಾನ್ಯ ನಪುಂಸಕ ಮತ್ತು ಏಕವಚನದಲ್ಲಿದೆ. ಕರ್ಮಾರ್ಥದಲ್ಲಿ ಯಾವ ಪ್ರತ್ಯಯವು ಸಕರ್ಮಕ ಧಾತುವಿನ ನಂತರ ಬರುತ್ತದೋ ಆಗ 'ಲಿಂಗ ವಚನವು' ಕರ್ಮಕ್ಕೆ ಅನುಸಾರವಾಗಿ ಇರುತ್ತದೆ.

ಉದಾ– ಚೇತವ್ಯಃ – ಚಯನೀಯೋ ವಾ ಧರ್ಮಃ ತ್ವಯಾ। 'ಚಿ' ಧಾತುವು ಸಕರ್ಮಕವಾಗಿದೆ ಆದ್ದರಿಂದ ಇಲ್ಲಿ ಕರ್ಮಾರ್ಥದಲ್ಲಿ ತವ್ಯ ಮತ್ತು ಅನೀಯರ್

ಪ್ರತ್ಯಯಗಳು ಬಂದಿವೆ. ಚಯನದ ಕರ್ಮವು ಧರ್ಮವಾಗಿದೆ. ಇಲ್ಲಿ ಪುಲ್ಲಿಂಗ ಮತ್ತು ಏಕವಚನ ಇದೆ. ಕರ್ತೃವು ಅನುಕ್ತವಾಗಿರುವುದರಿಂದ ತೃತೀಯಾ ವಿಭಕ್ತಿಯು ಬಂದಿದೆ.

**ವಾರ್ತಿಕ- ಕೇಲಿಮರ ಉಪಸಂಖ್ಯಾನಮ್ ।**

'ಕೇಲಿಮರ' ಪ್ರತ್ಯಯವನ್ನು ವಿಧಿಸುವ ವಾರ್ತಿಕವಿದು. 'ಕೇಲಿಮರ' ಪ್ರತ್ಯಯವು ಇಲ್ಲಿ ಭಾವ ಮತ್ತು ಕರ್ಮಾರ್ಥದಲ್ಲಿ ಬರುತ್ತದೆಂದು ತಿಳಿಯಬೇಕು. ಕೇಲಿಮರದಲ್ಲಿ 'ಕ' ಕಾರ ಮತ್ತು ರೇಫಗಳು ಇತ್ ಸಂಜ್ಞಕವಾಗಿವೆ. 'ಏಲಿಮ' ಮಾತ್ರ ಉಳಿಯುತ್ತದೆ.

ಉದಾ- ಪಚೇಲಿಮಾ ಮಾಷಾಃ- ಪಕ್ತವ್ಯಾಃ ಇತ್ಯರ್ಥಃ- ಪಚ್ ಧಾತುವಿನ ನಂತರ ಈ ವಾರ್ತಿಕದ ಪ್ರಕಾರ 'ಕೇಲಿಮರ' ಪ್ರತ್ಯಯವನ್ನು ಸೇರಿಸಿದಾಗ ಪಚ್+ಏಲಿಮ+ಅಸ್(ಜಸ್)= ಪಚೇಲಿಮಾಃ ಎಂದು ರೂಪವು ಸಿದ್ಧವಾಗುತ್ತದೆ. (ಬೇಯಿಸಲು ಯೋಗ್ಯವಾದ ಉದ್ದು ಎಂದರ್ಥ)

ಭಿದೇಲಿಮಾಃ ಸರಲಾಃ ಭೇತ್ತವ್ಯಾಃ ಇತ್ಯರ್ಥಃ-ಸರಲ ವೃಕ್ಷಗಳು ಕಡಿಯಲು ಯೋಗ್ಯವಾಗಿವೆ ಎಂದರ್ಥ.

'ಪಚೇಲಿಮಾಃ' ಮತ್ತು 'ಭಿದೇಲಿಮಾಃ' ಎಂಬಲ್ಲಿರುವ 'ಕೇಲಿಮರ' ಪ್ರತ್ಯಯಗಳು ಕರ್ಮಾರ್ಥದಲ್ಲಿವೆ. ಯಾಕೆಂದರೆ ಧಾತುವು ಸಕರ್ಮಕವಾಗಿದೆ. ಕೆಲವು ಆಚಾರ್ಯರು ಇಲ್ಲಿ ಕರ್ಮಕರ್ತೃ ಅರ್ಥದಲ್ಲಿ ಈ ಪ್ರತ್ಯಯವು ಬಂದಿದೆ ಎಂದು ಹೇಳುತ್ತಾರೆ.

**(ಕೃತ್ಯ, ಮತ್ತು ಲ್ಯುಟ್ ಪ್ರತ್ಯಯಗಳನ್ನು ವಿಧಿಸುವ ಸೂತ್ರ)**

**ಸೂತ್ರ- 773 ಕೃತ್ಯ-ಲ್ಯುಟೋ ಬಹುಲಮ್। (3.3.113)**

ವೃತ್ತಿ- ಬಹುಲ ಪರಿಭಾಷಾ

ಕ್ವಚಿತ್ಪ್ರವೃತ್ತಿಃ ಕ್ವಚಿದಪ್ರವೃತ್ತಿಃ ಕ್ವಚಿದ್ವಿಭಾಷಾ ಕ್ವಚಿದನ್ಯದೇವ।
ವಿಧೇರ್ವಿಧಾನಂ ಬಹುಧಾ ಸಮೀಕ್ಷ್ಯ ಚತುರ್ವಿಧಂ ಬಾಹುಲಕಂ ವದನ್ತಿ ॥1॥

ಸ್ನಾನ್ತಿ ಅನೇನ ಇತಿ ಸ್ನಾನೀಯಂ ಚೂರ್ಣಮ್। ದೀಯತೇ ಅಸ್ಮೈ ದಾನೀಯೋ ವಿಪ್ರಃ।

ಅರ್ಥ: 'ಕೃತ್ಯ ಸಂಜ್ಞಕ' ಮತ್ತು 'ಲ್ಯುಟ್' ಪ್ರತ್ಯಯಗಳು 'ಬಹುಲ'ದಿಂದ ಬರುತ್ತವೆ. ಬಹುಲ ಎಂದರೆ ಅಧಿಕ ಎಂದು ಅರ್ಥವಲ್ಲ. ಇದು ಪಾರಿಭಾಷಿಕ ಶಬ್ದ ಇದರ ಪರಿಭಾಷೆಯನ್ನು ಹೇಳುವದಕ್ಕಾಗಿಯೇ ಈ ಮೇಲಿನ ಶ್ಲೋಕವು (ಕ್ವಚಿತ್ ಪ್ರವೃತ್ತಿಃ) ಪ್ರವೃತ್ತವಾಗಿದೆ.

ಕ್ವಚಿತ್ ಪ್ರವೃತ್ತಿ ಎನ್ನುವುದರ ಜೊತೆಗೆ ಅಪ್ರಾಪ್ತಸ್ಯಾಪಿ ಎಂದು ಸೇರಿಸಿಕೊಳ್ಳಬೇಕು. ಎಂದರೆ ಎಲ್ಲಿ ಸೂತ್ರವು ಪ್ರವೃತ್ತವಾಗಲು ಅವಕಾಶವಿರುವದಿಲ್ಲವೋ ಅಲ್ಲಿಯೂ ಪ್ರವೃತ್ತವಾಗುವುದು ಎಂದರ್ಥ.

ಉದಾ- ಸ್ನಾನೀಯಂ ಚೂರ್ಣಮ್ - ಸ್ನಾನ್ತಿ ಅನೇನ ಇತಿ ಸ್ನಾನೀಯಮ್ ಚೂರ್ಣಮ್-ಯಾವ ಚೂರ್ಣದಿಂದ ಸ್ನಾನವು ಮಾಡಲಾಗುತ್ತದೋ ಅದಕ್ಕೆ ಸ್ನಾನೀಯ ಎಂದು ಕರೆಯುತ್ತಾರೆ. ಇಲ್ಲಿ "ಕೃತ್ಯಲ್ಯುಟೋ ಬಹುಲಮ್" ಎಂಬ ಸೂತ್ರದಿಂದ 'ಸ್ನಾ' ಧಾತುವಿನ ಮುಂದೆ ಕರಣಾರ್ಥದಲ್ಲಿ ಅನೀಯರ್ ಎಂಬ ಕೃತ್ಯ ಪ್ರತ್ಯಯವು ಬಂದಿದೆ. ಆದರೆ ಇದಕ್ಕೆ ಇಲ್ಲಿ ಅವಕಾಶವಿಲ್ಲ. (ಬರಬಾರದಾಗಿತ್ತು) ಏಕೆಂದರೆ ಭಾವ-ಕರ್ಮದಲ್ಲಿಯೇ ಬರಬೇಕಾಗಿದ್ದ ಅನೀಯರ್ ಪ್ರತ್ಯಯವು ಬಹುಲಮ್ ಎಂಬುದರಿಂದ ಕರಣಾರ್ಥದಲ್ಲಿಯೂ ಬಂದಿದೆ.

'ಕ್ವಚಿದ್ ಪ್ರವೃತ್ತಿ' ಎನ್ನುವುದರ ಜೊತೆಗೆ ಪ್ರಾಪ್ತಸ್ಯಾಪಿ ಎಂದು ಸೇರಿಸಿಕೊಳ್ಳಬೇಕು. ಎಂದರೆ ಎಲ್ಲಿ ಸೂತ್ರವು ಪ್ರವರ್ತಿಸಲು ಅವಕಾಶವಿದೆಯೋ ಅಲ್ಲಿ ಪ್ರವರ್ತಿಸದೇ ಇರುವುದು ಎಂದರ್ಥ.

ಉದಾ:- ಅಗ್ರಸರಃ ಎಂಬುದು 'ಯೂಥಂ ತದಗ್ರಸರಗರ್ವಿತ-ಕೃಷ್ಣಸಾರಮ್' ಎಂಬಲ್ಲಿ "ಪುರೋಗ್ರತೋಽಗ್ರೇಷುಸರ್ತೇಃ" ಎಂಬ ಸೂತ್ರದಿಂದ ಅಗ್ರೇಸರಃ ಎಂದು ಪ್ರಯೋಗಿಸಬೇಕಾಗಿತ್ತು. ಆದರೆ ಸೂತ್ರವು ಪ್ರವರ್ತಿಸಲು ಅವಕಾಶವಿದ್ದರೂ ಪ್ರವರ್ತಿಸದೇ ಅಗ್ರಸರಃ ಎಂದು ಬಹುಲಗ್ರಹಣದಿಂದ ರೂಪವು ಸಿದ್ಧವಾಗಿದೆ.

ಕ್ವಚಿದ್ವಿಭಾಷಾ:- ವಿಕಲ್ಪ ಎಂದರ್ಥ. ಅಂದರೆ ಬರಬಹುದು ಬಾರದೇನೂ ಇರಬಹುದು. 'ಮಘವಾ ಬಹುಲಮ್' ಎಂಬಲ್ಲಿ ವಿಕಲ್ಪ ಬಂದಿರುವುದೇ ಇಲ್ಲಿ ಉದಾಹರಣೆ.

ಕ್ವಚಿದನ್ಯದೇವ- ನಾಲ್ಕನೇಯ ವಿಭಾಗವಾದ ಇದರ ವ್ಯಾಪ್ತಿಯು ವಿಶಾಲವಾಗಿದೆ. ಇದರಲ್ಲಿ ಕೆಲವು ಕಡೆ ಪ್ರಕೃತಿಯು ವಿಕಾರವಾಗುತ್ತದೆ. ಕೆಲವಡೆ ಪ್ರತ್ಯಯದ ವಿಕಾರವಾಗುತ್ತದೆ ಮತ್ತು 'ಗುಣ' 'ವೃದ್ಧಿ' ಮೊದಲಾದವುಗಳು ಪ್ರಾಪ್ತವಾದರೂ ಬಾರದೇ ಹೋಗುತ್ತವೆ. ಇನ್ನೂ ಕೆಲವಡೆ ಊಹಿಸಲು ಅಸಾಧ್ಯವಾದ ಬೇರೆ ಕಾರ್ಯವೇ ಆಗಿರುತ್ತದೆ. ಹೇಗೆಂದರೆ 'ಮಘವಾ' ಎಂಬುದರ ರೂಪಸಿದ್ಧಿಯಲ್ಲಿ ಉಪಧಾಕ್ಕೆ ದೀರ್ಘವನ್ನು ಮಾಡುವಾಗ 'ಸಂಯೋಗಾಂತ ಲೋಪಕ್ಕೆ' ಅಸಿದ್ಧಿಯನ್ನು ಅಂಗೀಕರಿಸದು. ಇದಕ್ಕೆ ಹೆಚ್ಚಿನ ಉದಾಹರಣೆಗಳು ಉಣಾದಿ ಪ್ರಕರಣದಲ್ಲಿ ಸಿಗುತ್ತವೆ.

ಹೀಗೆ ನಾನಾ ರೀತಿಯಿಂದ ಕಾರ್ಯಪ್ರವೃತ್ತಿಯನ್ನು ನೋಡಿ ಬಹುಲಮ್ ಎಂಬುದನ್ನು ನಾಲ್ಕು ರೀತಿಯಾಗಿ ಹೇಳುತ್ತಾರೆ.

ಉದಾ- ದಾನೀಯೋ ವಿಪ್ರಃ - 'ದೀಯತೇ ಅಸ್ಮೈ ಇತಿ ದಾನೀಯಃ ವಿಪ್ರಃ' ಎಂದು ವಿಗ್ರಹ. ಯಾವನಿಗೆ ದಾನವು ಕೊಡಲ್ಪಡುತ್ತದೋ ಆ ಬ್ರಾಹ್ಮಣನು ಎಂದರ್ಥ. ಇಲ್ಲಿಯೂ ಸಹ ಬಾಹುಲಕದಿಂದ ಚತುರ್ಥ್ಯರ್ಥದಲ್ಲಿ ಅನೀಯರ್ ಪ್ರತ್ಯಯವು ಬಂದಿದೆ.

**(ಯತ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ- 774. ಅಚೋ ಯತ್।(3.1.97)**

ವೃತ್ತಿ- ಅಜನ್ತಾತ್ ಧಾತೋಃ ಯತ್ ಸ್ಯತ್। ಚೇಯಮ್।

ಅವ್ಯ:- "ಧಾತೋಃ", "ಪ್ರತ್ಯಯಃ" "ಪರಶ್ಚ" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ: ಅಜನ್ತವಾದ ಧಾತುವಿನ ಮುಂದೆ ಯತ್ ಪ್ರತ್ಯಯವು ಬರುತ್ತದೆ.

ಉದಾ:- ಚೇಯಮ್: 'ಚಿಞ್' ಚಯನೇ (ಸಂಗ್ರಹ ಮಾಡಲು ಯೋಗ್ಯವಾದ ಎಂದರ್ಥ) ಧಾತು ಅಜನ್ತವಿರುವುದರಿಂದ ಪ್ರಕೃತ ಸೂತ್ರದಿಂದ ಯತ್ ಪ್ರತ್ಯಯವು ಬಂದು ಚಿ+ಯ (ಯತ್) ಎಂದಿದ್ದಾಗ, 'ಯತ್' ಪ್ರತ್ಯಯವು ಆರ್ಧಧಾತುಕ ವಾಗುವುದರಿಂದ "ಸಾರ್ವಧಾತುಕಾರ್ಧಧಾತುಕಯೋಃ" ಎಂಬ ಸೂತ್ರದಿಂದ ಗುಣವು ಬಂದು ಚೇ+ಯ ಎಂದಿರುವಾಗ "ಸಾಮಾನ್ಯೇ ನಪುಂಸಕಮ್" ಎಂಬ ವಾರ್ತಿಕದ ನಿಯಮದಿಂದ ನಪುಂಸಕಲಿಂಗವು ಬಂದು ಚೇಯಮ್ ಎಂದು ರೂಪವಾಗುತ್ತದೆ.

**(ಈ ಕಾರ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ- 775 - ಈದ್ಯತಿ (6.4.65)**

ವೃತ್ತಿ- ಯತಿ ಪರೇ ಆತಃ ಈತ್ ಸ್ಯಾತ್ । ದೇಯಮ್। ಗ್ಲೇಯಮ್।

ಅ.ವ್ಯ: "ಆತೋಲೋಪ ಇಟಿ ಚ" ಎಂಬ ಸೂತ್ರದಿಂದ 'ಆತಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ:- ಯತ್ ಪ್ರತ್ಯಯವು ಪರದಲ್ಲಿದ್ದಾಗ ಧಾತುವಿನ ಅಂತ್ಯದಲ್ಲಿರುವ 'ಆ' ಕಾರದ ಸ್ಥಾನದಲ್ಲಿ 'ಈ' ಕಾರವು ಆದೇಶವಾಗಿ ಬರುತ್ತದೆ.

ಉದಾ:- ದಾತುಮ್ ಯೋಗ್ಯಂ ದೇಯಮ್ : (ಕೊಡಲು ಯೋಗ್ಯವಾದದ್ದು ಎಂದರ್ಥ) ಕರ್ಮಾರ್ಥದಲ್ಲಿ ಈ ಯತ್ ಪ್ರತ್ಯಯವು 'ದಾ' ಧಾತುವಿನ ಮುಂದೆ ಬಂದು ದಾ+ಯ (ಯತ್) ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ಆ' ಕಾರಕ್ಕೆ 'ಈ' ಕಾರವು ಆದೇಶವಾಗಿ ಬಂದು ದೀ+ಯ ಎಂದಿದ್ದಾಗ, ಯತ್ ಪ್ರತ್ಯಯವು ಆರ್ಧಧಾತುಕವಾದ್ದರಿಂದ ಗುಣ ಬಂದು ದೇ+ಯ ಎಂದಿದ್ದಾಗ, "ಸಾಮಾನ್ಯೇ ನಪುಂಸಕಮ್" ಎಂಬುದರಿಂದ ನಪುಂಸಕ ಪ್ರತ್ಯಯವಾದ 'ಅಮ್' ಬಂದು ದೇ+ಯ+ಅಮ್ ಎಂದಿದ್ದಾಗ ಪೂರ್ವರೂಪವು ಬಂದು ದೇಯಮ್ ಎಂದಾಗಿದೆ.

ಉದಾ- ಗ್ಲೇಯಮ್- ಗ್ಲಾತುಂ ಯೋಗ್ಯಂ ಗ್ಲೇಯಮ್ (ಹರ್ಷಕ್ಷಯವಾಗಲು ಯೋಗ್ಯವಾದದ್ದು ಎಂದರ್ಥ) ಭಾವಾರ್ಥಲ್ಲಿ ಈ ಧಾತುವಿನ ಮುಂದೆ "ಅಚೋ ಯತ್" ಎಂಬ ಸೂತ್ರದಿಂದ ಯತ್ ಪ್ರತ್ಯಯವು ಬಂದು ಗ್ಲೈ+ಯ (ಯತ್) ಎಂದಿದ್ದಾಗ, "ಆದೇಚ ಉಪದೇಶೇ ಅಶಿತಿ" ಎಂಬ ಸೂತ್ರದಿಂದ 'ಐ' ಕಾರಕ್ಕೆ 'ಆ' ಕಾರವಾದೇಶವಾಗಿ ಗ್ಲೇ+ಯ ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ಆ'ಕಾರಕ್ಕೆ 'ಈ' ಕಾರಾದೇಶವಾಗಿ ಗ್ಲೀ+ಯ ಎಂದಿರುವಾಗ ಗುಣವಾಗಿ ಗ್ಲೇ+ಯ ಎಂದಿದ್ದಾಗ "ಸಾಮಾನ್ಯೇ ನಪುಂಸಕಮ್" ಎಂಬುದರಿಂದ ಅಮ್ ಪ್ರತ್ಯಯವು ಬಂದು ಗ್ಲೇಯಮ್ ಎಂದು ರೂಪವು ಸಿದ್ಧವಾಗುತ್ತದೆ.

**(ಯತ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ - 776 ಪೋರದುಪಧಾತ್ (3.1.98)**

ವೃತ್ತಿ- ಪವರ್ಗಾನ್ತಾತ್ ಅತ್-ಉಪಧಾತ್ ಯತ್ ಸ್ಯಾತ್। ಣ್ಯತೋಽಪವಾದಃ। ಶಪ್ಯಮ್। ಲಭ್ಯಮ್।

ಪ.ಚ್ಛೇ: ಪೋಃ, ಅತ್- ಉಪಧಾತ್ ।

ಅ.ವೃ: "ಧಾತೋಃ" "ಪ್ರತ್ಯಯಃ" "ಪರಶ್ಚ" ಎಂಬ ಈ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ. "ಅಚೋಯತ್" ಸೂತ್ರದಿಂದ 'ಯತ್' ಪದವು ಅನುವೃತ್ತವಾಗಿದೆ.

ಅರ್ಥ:- ಪವರ್ಗಾನ್ತವಾದ ಅಥವಾ ಹ್ರಸ್ವ 'ಅ' ಕಾರವನ್ನು ಉಪಧೆಯಾಗಿಯುಳ್ಳ ಧಾತುವಿನ ನಂತರ ಯತ್ ಪ್ರತ್ಯಯವು ಬರುತ್ತದೆ. ಇದು "ಋಹಲೋರ್ಣ್ಯತ್" ಎಂಬ ಸೂತ್ರಕ್ಕೆ ಅಪವಾದವಾಗಿದೆ.

ಉದಾ – ಶಪ್ಯಮ್- ಶಪ ಆಕ್ರೋಶೇ (ಶಪಿಸಲು ಯೋಗ್ಯವಾದ ಎಂದರ್ಥ) ಈ ಧಾತುವು ಪವರ್ಗಾಂತಾಗಿದೆ. ಹಾಗೂ ಹ್ರಸ್ವ 'ಅ' ಕಾರವನ್ನು ಉಪಧೆಯಾಗಿವುಳ್ಳಂತಹದ್ದಾಗಿದೆ. ಆದ್ದರಿಂದ ಇದು ಹಲನ್ತವಾಗುವುದರಿಂದ "ಋಹಲೋರ್ಣ್ಯತ್" ಎಂಬುದರಿಂದ 'ಣ್ಯತ್' ಪ್ರಾಪ್ತವಾಗಿತ್ತು. ಅದನ್ನು ಬಾಧಿಸಿ ಪ್ರಕೃತ ಸೂತ್ರದಿಂದ 'ಯತ್' ಪ್ರತ್ಯಯವು ಬಂದು ಶಪ+ಯ ಎಂದಿದ್ದಾಗ ಸು, ಅಮ್‌ಗಳು ಆದೇಶ ಬಂದು, ಪೂರ್ವರೂಪವಾಗಿ ಶಪ್ಯಮ್ ರೂಪವು ಸಿದ್ಧವಾಗುತ್ತದೆ.

ಉದಾ- ಲಭ್ಯಮ್-ಡುಲಭಷ್ ಪ್ರಾಪ್ತೌ (ಹೊಂದಲು ಯೋಗ್ಯವಾದದ್ದು ಎಂದರ್ಥ) ಇಲ್ಲಿಯೂ ಸಹ ಹಲನ್ತವಾದದ್ದರಿಂದ "ಋಹಲೋರ್ಣ್ಯತ್" ಎಂಬುದರಿಂದ 'ಣ್ಯತ್' ಪ್ರಾಪ್ತವಾಗಿತ್ತು. ಅದನ್ನು ಬಾಧಿಸಿ ಪ್ರಕೃತ ಸೂತ್ರದಿಂದ 'ಯತ್' ಪ್ರತ್ಯಯವು ಬಂದು ಹಿಂದಿನ ಉದಾಹರಣೆಯಂತೆ ರೂಪವು ಸಿದ್ಧವಾಗುತ್ತದೆ.

**(ಕ್ಯಪ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ- 777 ಏತಿ-ಸ್ತು-ಶಾಸ್-ವೃ-ದೃ-ಜುಷಃ ಕ್ಯಪ್ (3.1.109)**

ವೃತ್ತಿ- ಏಭ್ಯಃ ಕ್ಯಪ್ ಸ್ಯಾತ್।

ಅ.ವೃ- ಇಲ್ಲಿ "ಧಾತೋಃ" "ಪ್ರತ್ಯಯಃ" "ಪರಶ್ಚ" ಎಂಬ ಈ ಮೂರು ಸೂತ್ರಗಳು ಈ ಸೂತ್ರಕ್ಕೆ ಅಧಿಕಾರ ಸೂತ್ರಗಳಾಗಿವೆ.

ಅರ್ಥ: ಇಣ್, ಸ್ತು, ಶಾಸ್, ವೃ, ದೃ, ಮತ್ತು ಜುಷ್ ಈ ಧಾತುಗಳ ನಂತರ ಕ್ಯಪ್ ಪ್ರತ್ಯಯವು ಬರುತ್ತದೆ. ಕ್ಯಪ್ ನಲ್ಲಿ 'ಕ್' ಕಾರ ಮತ್ತು 'ಪ್' ಕಾರಗಳು ಇತ್ ಆಗಿ 'ಯ' ಮಾತ್ರ ಉಳಿಯುತ್ತದೆ. ಇಲ್ಲಿ ಪ್ರತ್ಯಯವು 'ಪಿತ್' ಆಗಿರುವುದರಿಂದ "ಹ್ರಸ್ವಸ್ಯ ಪಿತಿ ಕೃತಿ ತುಕ್" ಎಂಬುದರಿಂದ ತುಕ್ ಆಗಮವು ಬರುತ್ತದೆ. ಅದರ ಫಲವಾಗಿ "ಕ್ಙಿತಿಚ" ಎಂಬುದರಿಂದ ಗುಣ ನಿಷೇಧವಾಗುತ್ತದೆ.

**(ತುಕ್ ಆಗಮವನ್ನು ವಿಧಿಸುವ ಸೂತ್ರ)**

**ಸೂತ್ರ- 778 ಹ್ರಸ್ವಸ್ಯ ಪಿತಿ ಕೃತಿ ತುಕ್ (6.1.71)**

ವೃತ್ತಿ- ಇತ್ಯಃ। ಸ್ತುತ್ಯಃ। ಶಾಸು-ಅನುಶಿಷ್ಟೌ।

ಅರ್ಥ- ಪಿತ್ ಮತ್ತು ಕೃತ್ ಪ್ರತ್ಯಯಗಳು ಪರದಲ್ಲಿರುವಾಗ ಪೂರ್ವದಲ್ಲಿರುವ 'ಹ್ರಸ್ವ' ವರ್ಣಕ್ಕೆ 'ತುಕ್' ಆಗಮವು ಬಂದು 'ಕ್' ಕಾರ 'ಉ' ಕಾರಗಳು ಇತ್ ಆಗಿ 'ತ್' ಮಾತ್ರ ಉಳಿಯುತ್ತದೆ.

ಉದಾ:- ಇತ್ಯಃ – ಇಣ್-ಗತೌ ಎಂಬ ಈ ಧಾತುವಿನ ನಂತರ "ಅಚೋಯತ್" ಎಂಬುದರಿಂದ 'ಯತ್' ಪ್ರತ್ಯಯವು ಪ್ರಾಪ್ತವಾಗಿತ್ತು ಅದನ್ನು ಬಾಧಿಸಿ "ಏತಿ- ಸ್ತು-ಶಾಸ್-ವೃ-ದೃ-ಜುಷಃ ಕ್ಯಪ್" ಎಂಬುದರಿಂದ 'ಕ್ಯಪ್' ಬಂದು ಇ+ಯ (ಕ್ಯಪ್) ಎಂದಿರುವಾಗ, ಪ್ರಕೃತ ಸೂತ್ರದಿಂದ ತುಕ್ ಆಗಮವು ಬಂದು ಅದು ಕಿತ್ತಾಗಿರುವುದರಿಂದ ಹ್ರಸ್ವವರ್ಣವಾದ 'ಇ' ಕಾರದ ಅಂತ್ಯಾವಯವವಾಗಿ ಬಂದು ಇ+ತ್+ಯ+ಸ್ (ಸು) ಎಂದಿದ್ದಾಗ ರುತ್ವ-ವಿಸರ್ಗಗಳಾಗಿ ಇತ್ಯಃ ಎಂದು ರೂಪವಾಗುತ್ತದೆ.

ಉದಾ- ಸ್ತುತ್ಯಃ – ಷ್ಟುಞ ಎಂಬ 'ಸ್ತು' ಧಾತುವಿನ ನಂತರವೂ ಸಹ ಹಿಂದಿನ ರೀತಿಯಲ್ಲಿ ಕ್ಯಪ್, ತುಕ್, ಸು ಗಳು ಬಂದು ಸ್ತುತ್ಯಃ ಎಂದಾಗುತ್ತದೆ.

ಶಾಸು-ಅನುಶಿಷ್ಟೌ ಧಾತು. ಇದಕ್ಕೆ ಕ್ಯಪ್ ಪ್ರತ್ಯಯವು ಬಂದು ಶಾಸ್+ಯ ಎಂದಿರುವಾಗ ಧಾತುವಿನ ಉಪಧೆಗೆ ಮುಂದಿನ ಸೂತ್ರದಿಂದ ಇತ್ವವನ್ನು ಹೇಳುತಾನೆ.

**(ಇ ಕಾರಾದೇಶವನ್ನು ಹೇಳುವ ಸೂತ್ರ)**

**ಸೂತ್ರ- 779:- ಶಾಸ ಇದಙ್-ಹಲೋಃ (6.4.34)**

ವೃತ್ತಿ- ಶಾಸಃ ಉಪಧಾಯಾಃ ಇತ್ ಸ್ಯಾತ್ ಅಜಿ ಹಲಾದೌ ಕ್ಙಿತಿ। ಶಿಷ್ಯಃ। ವೃತ್ಯಃ। ಆದೃತ್ಯಃ। ಜುಷ್ಯಃ।

ಪ. ಛೇ- ಶಾಸಃ, ಇತ್, ಅಙ್, ಹಲೋಃ।

ಅ.ವೃ:- "ಅನಿದಿತಾಂ ಹಲ ಉಪಧಾಯಾಃ ಕಿಙಿತಿ" ಎಂಬ ಸೂತ್ರದಿಂದ ಉಪಧಾಯಾಃ ಮತ್ತು ಕಿಙಿತಿ ಎಂಬ ಎರಡು ಪದಗಳು ಅನುವೃತ್ತವಾಗುತ್ತವೆ. ಇಲ್ಲಿ "ಅಙ್ಗಸ್ಯ" ಎಂಬುದು ಅಧಿಕಾರ ಸೂತ್ರ.

ಅರ್ಥ:- ಅಜ್ ಅಥವಾ ಹಲಾದಿಯಾದ ಕಿತ್ ಮತ್ತು ಙಿತ್ ಆದ ಪ್ರತ್ಯಯಗಳು ಪರದಲ್ಲಿದ್ದಾಗ ಶಾಸ್ ಧಾತುವಿನ ಉಪಧೆಗೆ ಹ್ರಸ್ವ 'ಇ' ಕಾರವು ಆದೇಶವಾಗಿ ಬರುತ್ತದೆ.

ಉದಾ:- ಶಿಷ್ಯಃ – ಶಾಸ್ ಧಾತುವಿನ ನಂತರ "ಏತಿ-ಸು-ಶಾಸ್-ವೃ-ದೃ-ಜುಷಃ-ಕ್ಯಪ್" ಎಂಬ ಸೂತ್ರದಿಂದ 'ಕ್ಯಪ್' ಪ್ರತ್ಯಯವು ಬಂದು ಶಾಸ್+ಯ ಎಂದಿದ್ದಾಗ, ಪ್ರಕೃತ ಸೂತ್ರದಿಂದ ಉಪಧೆಯ 'ಆ'ಕಾರಕ್ಕೆ 'ಇ' ಕಾರ ಬಂದು, ಶಿಸ್+ಯ ಎಂದಿದ್ದಾಗ, ಪರದಲ್ಲಿರುವ 'ಸ್' ಕಾರಕ್ಕೆ "ಶಾಸಿವಸಿಘಸೀನಾಂ ಚ" ಎಂಬುದರಿಂದ ಷತ್ವ ಬಂದು ಶ್+ಇ+ಷ್+ಯ+ಸ್ (ಸು) ಎಂದಿದ್ದಾಗ, ರುತ್ವ ವಿಸರ್ಗಗಳಾಗಿ ಶಿಷ್ಯಃ ಎಂದು ರೂಪವು ಸಿದ್ಧವಾಗುತ್ತದೆ.

ವೃತ್ಯಃ – 'ವೃ' ಧಾತುವಿಗೆ 'ಕ್ಯಪ್' ಬಂದು ವೃ+ಯ ಎಂದಿರುವಾಗ 'ತುಕ್' ಆಗಮ ಬಂದು ವೃತ್ಯಃ ಎಂದಾಗಿದೆ.

ಆದೃತ್ಯಃ- 'ಆ' ಪೂರ್ವಕವಾದ 'ದೃ' ಧಾತುವಿನ ನಂತರ ಕ್ಯಪ್, ತುಕ್ ಗಳು

ಬಂದು, ಹಿಂದಿನಂತೆ ಆದೃತ್ಯಃ ರೂಪವು ಸಿದ್ಧವಾಗುತ್ತವೆ.

ಜುಷ್ಯಃ– ಜುಷ್ ಧಾತುವಿಗೆ ಕ್ಯಪ್ ಪ್ರತ್ಯಯವು ಬಂದು ಕ್ಯಪ್ ಕಿತ್ತಾಗಿರುವುದರಿಂದ ಗುಣವು ಬಾರದೇ ಜುಷ್ಯಃ ಎಂದು ರೂಪವಾಗಿದೆ.

**(ಕ್ಯಪ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ– 780 ಮೃಜೇರ್ವಿಭಾಷಾ (3.1.113)**

ವೃತ್ತಿ– ಮೃಜೇಃ ಕ್ಯಪ್ ವಾ । ಮೃಜ್ಯಃ।

ಪ.ಚ್ಛೇ:– ಮೃಜೇಃ, ವಿಭಾಷಾ।

ಅ.ವೃ:– "ಏತಿ–ಸು–ಶಾಸ್ –ವೃ–ದೃ–ಜುಷಃ–ಕ್ಯಪ್" ಎಂಬುದರಿಂದ 'ಕ್ಯಪ್' ಎಂಬ ಪದವು ಅನುವೃತ್ತವಾಗುತ್ತದೆ. "ಧಾತೋಃ" "ಪ್ರತ್ಯಯಃ" "ಪರಶ್ಚ" ಎಂಬ ಈ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ:– ಮೃಜ್ ಧಾತುವಿನ ನಂತರ ಕ್ಯಪ್ ಪ್ರತ್ಯಯವು ವಿಕಲ್ಪವಾಗಿ ಬರುತ್ತದೆ.

ಸೂಚನೆ: ಮೃಜ್ (ಸ್ವಚ್ಛ ಮಾಡುವುದು ಎಂದರ್ಥ) ಈ ಧಾತುವು ಹಲನ್ತವಾದ್ದರಿಂದ "ಋಹಲೋರ್ಣ್ಯತ್" ಎಂಬುದರಿಂದ 'ಣ್ಯತ್' ಪ್ರಾಪ್ತವಾಗಿತ್ತು. ಅದನ್ನು ಈ ಪ್ರಕೃತ ಸೂತ್ರವು ಬಾಧಿಸುತ್ತದೆ.

ಉದಾ– ಮೃಜ್ಯ:– ಮೃಜ್ ಧಾತುವಿಗೆ ಪ್ರಕೃತ ಸೂತ್ರದಿಂದ ಕ್ಯಪ್ ಪ್ರತ್ಯಯವು ಬಂದು 'ಲಘೂಪಧಗುಣ' ವಾಗದೇ ಮೃಜ್ಯಃ ಎಂದಾಗಿದೆ. ಕ್ಯಪ್ ಪ್ರತ್ಯಯವು ಬಾರದಿದ್ದಾಗ, "ಋಹಲೋರ್ಣ್ಯತ್" ಎಂಬುದರಿಂದ ಣ್ಯತ್ ಪ್ರತ್ಯಯ ಬಂದು ಮೃಜ್+ಯ ಎಂದಿದ್ದಾಗ "ಮೃಜೇರ್ವೃದ್ಧಿಃ" ಎಂಬುದರಿಂದ ವೃದ್ಧಿಯಾಗಿ ಮಾರ್ಜ್+ಯ ಎಂದಾಗಿ, "ಚಜೋಃ ಕುಘಿಣ್ಯತೋಃ" ಎಂಬ ಸೂತ್ರದಿಂದ 'ಜ್' ಕಾರಕ್ಕೆ ಗ ಕಾರವಾಗಿ ಮಾರ್ಗ್ಯಃ ಎಂದಾಗುತ್ತದೆ.

**(ಣ್ಯತ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ – 781 ಋಹಲೋರ್ಣ್ಯತ್ (3.1.124)**

ವೃತ್ತಿ– ಋವರ್ಣಾನ್ತಾತ್ ಹಲನ್ತಾತ್ ಚ ಧಾತೋಃ ಣ್ಯತ್। ಕಾರ್ಯಮ್। ಹಾರ್ಯಮ್। ಧಾರ್ಯಮ್।

ಪ.ಚ್ಛೇ– ಋಹಲೋಃ, ಣ್ಯತ್।

ಅ.ವೃ:– "ಧಾತೋಃ" "ಪ್ರತ್ಯಯಃ" "ಪರಶ್ಚ" ಎಂಬವು ಅಧಿಕಾರ ಸೂತ್ರಗಳು.

ಅರ್ಥ:– ಋವರ್ಣಾನ್ತ ಮತ್ತು ಹಲನ್ತ ಧಾತುಗಳ ನಂತರ 'ಣ್ಯತ್' ಪ್ರತ್ಯಯವು ಬರುತ್ತದೆ.

ಉದಾ:– ಕಾರ್ಯಮ್–ಡು ಕೃಞ್ ಕರಣೇ ಎಂಬ ಧಾತುವಿನ ನಂತರ ಪ್ರಕೃತ ಸೂತ್ರದಿಂದ 'ಣ್ಯತ್' ಪ್ರತ್ಯಯವು ಬಂದು ಕೃ+ಯ (ಣ್ಯತ್) ಎಂದಿದ್ದಾಗ, 'ಣಿತ್' ಆಗಿರುವುದರಿಂದ "ಅಚೋಞ್ಣಿತಿ" ಎಂಬ ಸೂತ್ರದಿಂದ ವೃದ್ಧಿಯಾಗಿ ಕ್+ಆರ್+ಯ

ಎಂದಿದ್ದಾಗ 'ಸು' ವಿಭಕ್ತಿ, 'ಅಮ್' ಆದೇಶ ಮತ್ತು ಪೂರ್ವರೂಪಗಳು ಆದನಂತರ ಕಾರ್ಯಮ್ ಎಂದು ರೂಪವು ಸಿದ್ಧವಾಗುತ್ತದೆ.

'ಹೃ' ಮತ್ತು 'ಧೃ' ಧಾತುಗಳ ರೂಪಗಳಾದ ಹಾರ್ಯಮ್ ಮತ್ತು ಧಾರ್ಯಮ್ ಎಂಬುವುಗಳೂ ಹಿಂದಿನಂತೆ ರೂಪಗಳನ್ನು ಪಡೆಯುತ್ತವೆ.

**(ಕುತ್ವ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ -782 ಚ-ಜೋಃ ಕು ಘಿಣ್-ಣ್ಯತೋಃ (7.3.52)**

ವೃತ್ತಿ- ಚ-ಜೋಃ ಕುತ್ವಮ್ ಸ್ಯಾತ್, ಘಿತಿ ಣ್ಯತಿ ಚ ಪರೇ।

ಅರ್ಥ:- 'ಘಿತ್' ಮತ್ತು 'ಣ್ಯತ್' ಪ್ರತ್ಯಯಗಳು ಪರದಲ್ಲಿದ್ದಾಗ 'ಚ' ಕಾರ ಮತ್ತು 'ಜ' ಕಾರಗಳ ಸ್ಥಾನದಲ್ಲಿ 'ಕ' ವರ್ಗವು ಆದೇಶವಾಗಿ ಬರುತ್ತದೆ.

**(ವೃದ್ಧಿ ವಿಧಾಯಕ ಸೂತ್ರ)**

**ಸೂತ್ರ- 783 ಮೃಜೇರ್ವೃದ್ಧಿಃ (7.2.114)**

ವೃತ್ತಿ- ಮೃಜೇಃ ಇಕಃ ವೃದ್ಧಿಃ ಸಾರ್ವಧಾತುಕ-ಆರ್ಧಧಾತುಕಯೋಃ। ಮಾರ್ಗ್ಯಃ।

ಪ.ಚ್ಛೇ:- ಮೃಜೇಃ, ವೃದ್ಧಿಃ।

ಅ.ವೃ:- "ಇಕೋ ಗುಣವೃದ್ಧೀ" ಎಂಬ ಸೂತ್ರದಿಂದ 'ಇಕಃ' ಎಂಬ ಷಷ್ಠ್ಯಂತ ಪದವು ಅನುವೃತ್ತವಾಗುತ್ತದೆ.

ಅರ್ಥ:- ಸಾರ್ವಧಾತುಕ 'ಮೃಜ್' ಧಾತುವಿನ 'ಇಕ್' ವರ್ಣಗಳಿಗೆ ವೃದ್ಧಿಯು ಬರುತ್ತದೆ.

ಉದಾ:- ಮಾರ್ಗ್ಯಃ-ಇದರ ರೂಪಸಿದ್ಧಿಯನ್ನು "ಮೃಜೇಃ ರ್ವಿಭಾಷಾ" ಎಂಬ ಸೂತ್ರದಲ್ಲಿ ಹೇಳಲಾಗಿದೆ.

**(ಕುತ್ವಾಭಾವ ನಿಪಾತನ ವಿಧಾಯಕ ಸೂತ್ರ)**

**ಸೂತ್ರ- 784 - ಭೋಜ್ಯಂ ಭಕ್ಷ್ಯೇ। (7.3.69)**

ವೃತ್ತಿ- ಭೋಗ್ಯಮ್ ಅನ್ಯತ್।

ಇತಿ ಕೃತ್ಯ ಪ್ರಕ್ರಿಯಾ।

ಅರ್ಥ:- ಭಕ್ಷ್ಯ ಅಥವಾ ಖಾದ್ಯ ಎಂಬ ಅರ್ಥದಲ್ಲಿರುವ ಭುಜ್ ಧಾತುವಿನ ನಂತರ 'ಭೋಜ್ಯ ರೂಪವು' ನಿಪಾತನ ಮಾಡಲಾಗಿದೆ. ಭಜ - ಪಾಲನ - ಅಭ್ಯವಹಾರಯೋಃ ಎಂಬುದು ಧಾತುವಿನ ಅರ್ಥ. ಹಲನ್ತವಾಗಿರುವುದರಿಂದ ಣ್ಯತ್ ಬಂದಾಗ ಕುತ್ವವು ಬಂದರೆ ಈ ಪ್ರಕೃತ ಸೂತ್ರದಿಂದ ಕುತ್ವ ಬಾರದೇ ಇರೋಣದರಿಂದ ನಿಪಾತ ಮಾಡಲಾಗಿದೆ ನಿಪಾತವೆಂದರೆ ಸಿದ್ಧ ರೂಪವನ್ನು ತೋರಿಸುವುದು ಎಂದರ್ಥ.

ಭಕ್ಷ್ಯ ಭಿನ್ನಾರ್ಥದಲ್ಲಿ ಭೋಗ್ಯಮ್ ಎಂದಾಗುತ್ತದೆ. 'ಲಘೂಪಧಗುಣವಾಗಿ' ಕುತ್ವವು ಬಂದು ಭೋಗ್ಯಮ್ ಎಂದು ರೂಪವು ಸಿದ್ಧವಾಗುತ್ತದೆ.

**ಇಲ್ಲಿಗೆ ಕೃದಂತ ಕೃತ್ಯ (33) ಪ್ರಕರಣವು ಮುಗಿಯಿತು**

# ಪ್ರಕರಣ-34: ಪೂರ್ವ ಕೃದನ್ತ

**(ಸೂತ್ರ ಸಂಖ್ಯೆ 785 ರಿಂದ 848 ವರೆಗೆ)**

**(ಣ್ವುಲ್-ತೃಚ್ ಪ್ರತ್ಯಯಗಳನ್ನು ವಿಧಿಸುವ ಸೂತ್ರ)**

**ಸೂತ್ರ- 785. ಣ್ವುಲ್-ತೃಚೌ।(3.1.133)**

ವೃತ್ತಿ- ಧಾತೋರೇತೌ ಸ್ತಃ। ಕರ್ತರಿ ಕೃದಿತಿ (769) ಕರ್ತ್ರರ್ಥೇ।

ಅ.ವೃ-'ಧಾತೋಃ', 'ಪ್ರತ್ಯಯಃ', 'ಪರಶ್ಚ' -ಈ ಮೂರು ಅಧಿಕಾರ ಸೂತ್ರಗಳಾಗಿವೆ.

ಅರ್ಥ- ಧಾತುವಿನ ನಂತರ 'ಣ್ವುಲ್' ಮತ್ತು 'ತೃಚ್' ಪ್ರತ್ಯಯಗಳು ಬರುತ್ತವೆ. ಈ ಪ್ರತ್ಯಯಗಳು 'ಕರ್ತರಿ ಕೃತ್' ಎಂಬ ಸೂತ್ರಕ್ಕನುಗುಣವಾಗಿ ಕರ್ತ್ರರ್ಥದಲ್ಲೇ ಬರುತ್ತವೆ. 'ಣ್ವುಲ್'ನಲ್ಲಿ 'ಣ್'ಕಾರವು 'ಚುಟೂ' ಸೂತ್ರದಿಂದ, 'ಲ್'ಕಾರವು 'ಹಲನ್ತ್ಯಮ್' ಸೂತ್ರದಿಂದ ಇತ್ತಾದ ನಂತರ 'ವು' ಮಾತ್ರ ಉಳಿಯುತ್ತದೆ. ಅದಕ್ಕೆ 'ಅಕ'-ಆದೇಶವನ್ನು ಮುಂದಿನ ಸೂತ್ರದಿಂದ ಹೇಳುತ್ತಾನೆ. 'ತೃಚ್' ಪ್ರತ್ಯಯದಲ್ಲಿ 'ಚ್'ಕಾರವು 'ಇತ್' ಸಂಜ್ಞೆಯನ್ನು ಹೊಂದುತ್ತವೆ.

**(ಯು, ವು ಗಳಿಗೆ ಕ್ರಮವಾಗಿ ಅನ, ಅಕ ಗಳನ್ನು ಆದೇಶವಾಗಿ ವಿಧಿಸುವ ಸೂತ್ರ)**

**ಸೂತ್ರ - 786. ಯುವೋರನಾಕೌ। (7.1.1)**

ವೃತ್ತಿ- ಯು ವು ಏತಯೋಃ ಅನಾಕೌ (ಅನ+ಅಕೌ) ಸ್ತಃ। ಕಾರಕಃ। ಕರ್ತಾ।

ಪ.ಛೇ - ಯುವೋ:, ಅನಾಕೌ ।

ಅರ್ಥ- 'ಯು' ಮತ್ತು 'ವು'ಗಳ ಸ್ಥಾನದಲ್ಲಿ ಕ್ರಮವಾಗಿ 'ಅನ' ಮತ್ತು 'ಅಕ' ಗಳು ಆದೇಶವಾಗಿ ಬರುತ್ತವೆ.

'ಅನ' ಮತ್ತು 'ಅಕ' ಆದೇಶಗಳು 'ಅನೇಕಾಲ್' ಆಗಿರುವುದರಿಂದ ಸರ್ವಾದೇಶಗಳಾಗಿ ಬರುತ್ತವೆ.

ಉದಾ- ಕಾರಕಃ - ಕೃ+ ವು(ಣ್ವುಲ್) ಎಂದಿದ್ದಾಗ ಪ್ರಕೃತ ಸೂತ್ರದಿಂದ 'ಅಕ' ಆದೇಶವಾಗಿ ಕೃ+ಅಕ ಎಂದಿರುವಾಗ 'ಅಚೋಞ್ಣಿತಿ' ಸೂತ್ರದಿಂದ ವೃದ್ಧಿ ಬಂದು ಕ್+ಆರ್+ಅಕ+ಸ್(ಸು) ಎಂದಿದ್ದಾಗ, 'ರುತ್ವ- ವಿಸರ್ಗಗಳಾಗಿ 'ಕಾರಕಃ' ಎಂದು ರೂಪವಾಗುತ್ತದೆ. (ಮಾಡುವವನು ಎಂದರ್ಥ.) 'ಕೃಞ್'ಗೆ 'ತೃಚ್' ಬಂದರೆ ಕೃ+ತೃ ಎಂದಿರುವಾಗ, ಆರ್ಧಧಾತುಕ ನಿಮಿತ್ತವಾಗಿ ಗುಣ ಬಂದು ಕ್+ಅರ್+ತೃ=ಕರ್ತೃ ಎಂದು ಶಬ್ದವು ನಿಷ್ಪನ್ನವಾಗುತ್ತದೆ. ಪ್ರಥಮಾ ವಿಭಕ್ತಿ 'ಸುಪ್' ಪರವಾದಾಗ 'ಋದಶಸ್ಪುರುದಂಸಸ:' ಎಂಬ ಸೂತ್ರದಿಂದ 'ಅನಜ್' ಆದೇಶ ಬಂದು 'ಅಪ್ ತೃನ್ ತೃಚ್...' ಸೂತ್ರದಿಂದ ಕರ್ತ್+ಅನ್+ಸ್ ಎಂದಿದ್ದಾಗ, ಉಪಧಾ ದೀರ್ಘ ಬಂದು, ಕರ್ತಾನ್+ಸ್ ಎಂದಿರುವಾಗ, 'ಹಲ್‌ಙ್ಯಾಭ್ಯೋ...' ಎಂಬ ಸೂತ್ರದಿಂದ 'ಸ್'ಕಾರಕ್ಕೆ ಲೋಪವಾಗಿ ಕರ್ತಾನ್ ಎಂದಿರುವಾಗ 'ನ ಲೋಪ ಪ್ರಾತಿಪದಿಕಾಂತಸ್ಯ'

ಎಂಬ ಸೂತ್ರದಿಂದ 'ನ್'ಕಾರಕ್ಕೆ ಲೋಪವಾಗಿ ಕರ್ತಾ ಎಂದು ರೂಪವು ಸಿದ್ಧವಾಗುತ್ತದೆ.

**(ಲ್ಯು, ಣಿನಿ ಮತ್ತು ಅಚ್ ಪ್ರತ್ಯಯಗಳನ್ನು ವಿಧಿಸುವ ಸೂತ್ರ)**

**ಸೂತ್ರ- 787. ನನ್ದಿ-ಗ್ರಹಿ-ಪಚಾದಿಭ್ಯೋ ಲ್ಯುಣಿನ್ಯಚಃ। ( 3.1.134)**

ವೃತ್ತಿ – ನನ್ದ್ಯಾದೇಃ ಲ್ಯುಃ, ಗ್ರಹ್ಯಾದೇಃ ಣಿನಿಃ, ಪಚಾದೇಃ ಅಚ್ ಸ್ಯಾತ್। ನಂದಯತಿ ಇತಿ ನಂದನಃ। ಜನಂ ಅರ್ದಯತಿ ಇತಿ ಜನಾರ್ದನಃ। ಲವಣಃ। ಗ್ರಾಹೀ। ಸ್ಥಾಯೀ। ಮನ್ತ್ರೀ। ಪಚಾದಿಃ ಆಕೃತಿ ಗಣಃ।

ಪ.ಛೇ – ನಂದಿ-ಗ್ರಹಿ-ಪಚಾದಿಭ್ಯಃ ಲ್ಯು-ಣಿನಿ-ಅಚಃ ।

ಅರ್ಥ – ನನ್ದ್ಯಾದಿ, ಗ್ರಹ್ಯಾದಿ ಮತ್ತು ಪಚಾದಿ ಗಣ ಪಠಿತ ಧಾತುಗಳ ನಂತರ ಕ್ರಮವಾಗಿ ಲ್ಯು, ಣಿನಿ ಮತ್ತು ಅಚ್ ಪ್ರತ್ಯಯಗಳು ಬರುತ್ತವೆ.

ಉದಾ- ನನ್ದನಃ- ನನ್ದಯತೀತಿ- (ಸಂತೋಷಪಡಿಸುವವನು) ಎಂದರ್ಥ.- 'ಲ್ಯು'ನಲ್ಲಿ'ಲಶಕ್ವತದ್ಧಿತೇ' ಸೂತ್ರದಿಂದ 'ಲ್' ಇತ್ತಾಗಿಯು 'ಯು' ಮಾತ್ರ ಉಳಿಯುತ್ತದೆ. 'ಯುವೋರನಾಕೌ' ಸೂತ್ರದಿಂದ ನನ್ದ್+ಯು(ಲ್ಯು) ಎಂದಿದ್ದಾಗ, 'ಅನ' ಅನಾದೇಶವಾಗಿ ನನ್ದ್+ ಅನ ಎಂದಿದ್ದಾಗ, ನನ್ದ್+ಅನ ಎಂದಿರುವಾಗ 'ಸು' ಸೇರಿಸಿದಾಗ, ರುತ್ವ-ವಿಸರ್ಗಗಳಾಗಿ ನನ್ದನಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ-ಜನಾರ್ದನಃ – ಜನಮ್ ಅರ್ದಯತಿ ಇತಿ ಜನಾರ್ದನ: (ಪಾಪಿಗಳನ್ನು ಶಿಕ್ಷಿಸುವವನು ಎಂದರ್ಥ). 'ಅರ್ದ' ಧಾತುವು ನನ್ದ್ಯಾದಿಯಲ್ಲಿ ಸೇರಿದೆ. ಇದಕ್ಕೂ 'ಲ್ಯು' ಬಂದರೆ ಹಿಂದಿನಂತೆ 'ಅನ' ಅದೇಶವಾಗಿ ಅರ್ದನಃ ಎಂದಾಗುತ್ತದೆ.

ಉದಾ- ಲವಣಃ – ಲೂಞ್= ಛೇದನೇ ಎಂಬುದು ಧಾತು. ಲೂ+ಯು = ಲೂ+ಅನ ಎಂದಿದ್ದಾಗ, ಆರ್ಧಧಾತುಕ ನಿಮಿತ್ತವಾಗಿ ಗುಣ ಬಂದು ಲೋ+ಅನ ಎಂದಿದ್ದಾಗ, 'ಅವ್' ಆದೇಶವಾಗಿ ಲ್+ಅವ್+ಅನ ಎಂದಿರುವಾಗ ನನ್ದ್ಯಾದಿಗಣದಲ್ಲಿ ನಿಪಾತ ಮಾಡಿರುವುದರಿಂದ ಣತ್ವವು ಬಂದು ಲವಣಃ ಎಂದಾಗಿದೆ. ಲುನಾತಿ ಇತಿ ಲವಣಃ (ಕತ್ತರಿಸುವವನು ಎಂದರ್ಥ.)

ಗ್ರಾಹೀ – ಗ್ರಹ ಉಪಾದಾನೇ ಎಂಬುದು ಧಾತು. ಗೃಹ್ಣಾತಿ ಇತಿ ಗ್ರಾಹೀ (ಗ್ರಹಣ ಮಾಡುವವನು ಎಂದರ್ಥ) ಪ್ರಕೃತ ಸೂತ್ರದಿಂದ 'ಣಿನಿ' ಪ್ರತ್ಯಯವು ಬಂದು ಇದು 'ಣಿತ್'ಆದ್ದರಿಂದ 'ಅತ ಉಪಧಾಯಾಃ' ಎಂಬುದರಿಂದ ಉಪಧಾಭೂತವಾದ 'ಅ'ಕಾರಕ್ಕೆ ವೃದ್ಧಿಯಾಗಿ ಗ್ರಹ್+ಇನ್ = ಗ್ರಾಹ್+ಇನ್ ಎಂದಿದ್ದಾಗ, 'ಇನ್‌ಹನ್‌ಪೂ....' ಎಂಬುದರಿಂದ 'ದೀರ್ಘ' ಬಂದು ಗ್ರಾಹೀನ್ ಎಂದಿರುವಾಗ 'ನ ಲೋಪ: ಪ್ರಾತಿಪದಿಕಾನ್ತಸ್ಯ' ಎಂಬುದರಿಂದ 'ನ್'ಕಾರವು ಲೋಪವಾಗಿ 'ಗ್ರಾಹೀ' ಎಂದು ರೂಪವು ಸಿದ್ಧವಾಗುತ್ತದೆ.

ಉದಾ- ಸ್ಥಾಯೀ – ಷ್ಠಾ- ಗತಿ ನಿವೃತ್ತೌ ಎಂಬುದು ಧಾತು. ಇದು ಗ್ರಹ್ಯಾದಿಗಣ ಪಠಿತವಾಗಿದೆ. ಪ್ರಕೃತ ಸೂತ್ರದಿಂದ 'ಣಿನಿ' ಪ್ರತ್ಯಯ ಬಂದು ಸ್ಥಾ+ಇನ್ ಎಂದಿರುವಾಗ

'ಣಿನಿ' ಪ್ರತ್ಯಯವು 'ಣಿತ್' ಆಗಿರುವುದರಿಂದ 'ಆತೋ ಯುಕ್ ಚಿಣ್ ಕೃತೋಃ' ಎಂಬ ಸೂತ್ರದಿಂದ ಧಾತುವಿಗೆ 'ಯುಕ್' ಆಗಮವು ಬಂದು ಸ್ಥಾಯ್+ಇನ್ ಎಂದಿರುವಾಗ, ಹಿಂದಿನಂತೆ ವಿಭಕ್ತಿ ಕಾರ್ಯವಾಗಿ 'ಸ್ಥಾಯೀ' ಎಂದು ರೂಪವಾಗುತ್ತದೆ.

ಉದಾ–ಮನ್ತ್ರೀ – ಮತ್ರಿ ಗುಪ್ತಭಾಷಣೇ ಎಂಬುದು ಧಾತು. ಇದು ಇದಿತ್ತಾದುದರಿಂದ 'ನುಮ್' ಆಗಮವು ಬಂದು 'ಮನ್ತ್ರ್' ಎಂದಿರುವಾಗ, ಪ್ರಕೃತ ಸೂತ್ರದಿಂದ 'ಣಿನಿ' ಪ್ರತ್ಯಯವು ಬಂದು ಮನ್ತ್ರ್+ ಣಿನಿ ಎಂದಿದ್ದಾಗ 'ಣೇರನಿಟಿ' ಎಂಬ ಸೂತ್ರದಿಂದ 'ಣಿ'ಗೆ ಲೋಪ ಬಂದು ಮನ್ತ್ರ್+ಇನ್ ಎಂದಿರುವಾಗ ವಿಭಕ್ತಿ ಕಾರ್ಯದಿಂದ 'ಮನ್ತ್ರೀ' ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಪಚಃ – ಡುಪಚಷ್ – ಪಾಕೇ ಧಾತುವಿಗೆ 'ಅಚ್' ಪ್ರತ್ಯಯವು ಬಂದು ಪಚ್+ಅ(ಅಚ್) ಎಂದಿದ್ದಾಗ ಸುಪ್, ರುತ್ವ–ವಿಸರ್ಗಗಳಾಗಿ ಪಚಃ ಎಂದು ರೂಪವಾಗುತ್ತದೆ. ಇದರಂತೆ ನದಃ ಚೋರಃ ಮೊದಲಾದ ಶಬ್ದಗಳನ್ನು ತಿಳಿಯಬೇಕು. ಇಲ್ಲಿ ಪಚಾದಿ ಎಂಬುದು ಆಕೃತಿಗಣ. ಅಂದರೆ ಪಚಾದಿ ಗಣದಲ್ಲಿ ಇರುವವುಗಳನ್ನು ನೋಡಿಇದರಂತೆ ಇರುವ ಪಚಾದಿ ಗಣದಲ್ಲಿ ಪಠಿಸದೇ ಇರುವವುಗಳು ಅದರಲ್ಲಿ ಸೇರಿವೆ ಎಂದು ತಿಳಿಯಬೇಕು.

**('ಕ' ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ– 788. ಇಗುಪಧ–ಜ್ಞಾ–ಪ್ರೀ–ಕಿರಃ ಕಃ॥ (3.1.135)**

ವೃತ್ತಿ– ಏಭ್ಯಃ ಕಃ ಸ್ಯಾತ್। ಬುಧಃ॥ ಕೃಶಃ॥ ಜ್ಞಃ॥ ಪ್ರಿಯಃ॥ ಕಿರಃ॥

ಅರ್ಥ–'ಇಕ್' ವರ್ಣಗಳನ್ನು ಉಪಧೆಯಲ್ಲಿವುಳ್ಳ ಹಾಗು ಜ್ಞಾ, ಪ್ರೀ, ಕೄ ಧಾತುಗಳ ನಂತರ 'ಕ' ಪ್ರತ್ಯಯವು ಬರುತ್ತದೆ.

ಉದಾಃ ಬುಧಃ॥–ಬುಧ ಅವಗಮನೇ ಎಂಬುದು ಧಾತು. ಬುಧ್ ಎಂಬಲ್ಲಿ 'ಇಕ್'(ಉ)–ಉಪಧಾ ಇದೆ. ಪ್ರಕೃತಸೂತ್ರದಿಂದ 'ಕ' ಪ್ರತ್ಯಯವು ಬಂದು ಬುಧ್+ಕ ಎಂದಿದ್ದಾಗ 'ಕ'ಕಾರವು 'ಲಶಕ್ವತದ್ಧಿತೇ' ಎಂಬ ಸೂತ್ರದಿಂದ ಇತ್ತಾಗಿ 'ಅ' ಮಾತ್ರ ಉಳಿದು ಬುಧ್+ಅ+ಸ್(ಸುಪ್) ಎಂದಿರುವಾಗ ರುತ್ವ–ವಿಸರ್ಗಗಳಾಗಿ ಬುಧಃ ಎಂದು ರೂಪವಾಗುತ್ತದೆ. (ಪಂಡಿತ ಎಂದರ್ಥ.) 'ಕ' ಪ್ರತ್ಯಯವು 'ಕಿತ್' ಆಗಿರುವುದರಿಂದ ಲಘೂಪಧಗುಣವಾಗಲೀ, ವೃದ್ಧಿಯಾಗಲೀ ಬರುವುದಿಲ್ಲ.

ಉದಾ–ಕೃಶಃ॥– ಕೃಶ– ತನೂಕರಣೇ ಎಂಬುದು ಧಾತು. ಕೃಶ್ಯತಿ ಇತಿ ಕೃಶಃ. (ತೆಳ್ಳಗಿರುವವನು ಎಂದರ್ಥ). ಇಲ್ಲಿಯೂ 'ಇಕ್' (ಋ) ಉಪಧೆಯಾಗಿದೆ. ಹಿಂದಿನಂತೆ ಕೃಶಃ ರೂಪವು ಸಿದ್ಧವಾಗುತ್ತದೆ.

ಉದಾ– ಜ್ಞಃ॥ – ಜ್ಞಾ– ಅವಬೋಧನೇ ಎಂಬುದು ಧಾತು. ಜ್ಞಾ+ಅ ಎಂದಿರುವಾಗ, 'ಆತೋಲೋಪ ಇಟಿ ಚ' ಸೂತ್ರದಿಂದ 'ಆ'ಕಾರಕ್ಕೆ ಲೋಪವಾಗಿ ಜ್ಞ್+ಅ+ಸ್(ಸು) ಎಂದಿದ್ದಾಗ, ರುತ್ವ–ವಿಸರ್ಗಗಳಾಗಿ 'ಜ್ಞಃ' ಎಂದು ರೂಪವು ಸಿದ್ಧವಾಗಿದೆ. (ವಿದ್ವಾಂಸನೆಂದರ್ಥ.)

ಪ್ರಿಯಃ - ಪ್ರೀಞ್- ತರ್ಪಣೇ ಎಂಬುದು ಧಾತು. ಪ್ರೀ+ಅ ಎಂದಿರುವಾಗ, 'ಅಚಿ ಶ್ನುಧಾತುಭ್ರುವಾಂ ಇಯಜ್...' ಎಂಬ ಸೂತ್ರದಿಂದ 'ಇಯಜ್' (ಇಯ್) ಆದೇಶವಾಗಿ ಪ್ರ್+ಇಯ್+ಅ+ಸ್= ಪ್ರಿಯಃ ಎಂದು ರೂಪವಾಗುತ್ತದೆ.

ಉದಾ- ಕಿರಃ - ಕೄ- ವಿಕ್ಷೇಪೇ ಎಂಬುದು ಧಾತು. ಕೄ+ಅ ಎಂದಿದ್ದಾಗ 'ಋತ ಇದ್ಧಾತೋಃ' ಎಂಬುದರಿಂದ 'ಇರ್' ಬಂದು ಕ್+ಇರ್+ಅ+ಸ್= ಕಿರಃ ಎಂದು ರೂಪವಾಗಿದೆ.

**('ಕ' ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ - 789. ಆತಶ್ಚೋಪಸರ್ಗೇ। (3.1.136)**

ವೃತ್ತಿ-ಪ್ರಜ್ಞಃ। ಸುಗ್ಲಃ।

ಪ.ಛೇ-ಆತಃ, ಚ, ಉಪಸರ್ಗೇ ।

ಅ.ವೃ- 'ಇಗುಪಧ-ಜ್ಞಾ-ಪ್ರೀ-ಕಿರಃ ಕಃ'ಎಂಬ ಸೂತ್ರದಿಂದ 'ಕಃ' ಎಂಬ ಪದವು ಅನುವೃತ್ತವಾಗುತ್ತದೆ. 'ಧಾತೋಃ', 'ಪ್ರತ್ಯಯಃ', 'ಪರಶ್ಚ' ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ - ಉಪಸರ್ಗಸಹಿತವಾದ ಆದಂತ ಧಾತುವಿನ ಪರದಲ್ಲಿ 'ಕ' ಪ್ರತ್ಯಯವು ಬರುತ್ತದೆ.

ಉದಾ- ಪ್ರಜ್ಞಃ। - ಪ್ರಕರ್ಷೇಣ ಜಾನಾತಿ ಇತಿ ಎಂದು ವಿಗ್ರಹ (ಚೆನ್ನಾಗಿ ತಿಳಿದಿರುವವನು ಎಂದರ್ಥ). 'ಪ್ರ' ಉಪಸರ್ಗಪೂರ್ವಕ ಜ್ಞಾ- ಅವಬೋಧನೇ ಎಂಬುದು ಧಾತು. ಇದರ ಪರದಲ್ಲಿ 'ಕ' ಪ್ರತ್ಯಯವನ್ನು ಸೇರಿಸಿದಾಗ ಪ್ರ+ಜ್ಞಾ+ಅ(ಕ) ಎಂದಿದ್ದಾಗ, 'ಆತೋ ಲೋಪ ಇಟಿ ಚ' ಎಂಬುದರಿಂದ 'ಆ'ಕಾರ ಲೋಪವಾಗಿ ಪ್ರ+ಜ್ಞ್+ಅ+ಸ್= ಪ್ರಜ್ಞಃ ಎಂದಾಗುತ್ತದೆ.

ಉದಾ-ಸುಗ್ಲಃ।-ಗ್ಲೈ-ಹರ್ಷಕ್ಷಯೇ ಎಂಬುದು ಧಾತು. (ಹೆಚ್ಚಾಗಿ ಆನಂದವನ್ನು ಕಳೆದುಕಂಡವನು ಎಂದರ್ಥ.). ಸು ಉಪಸರ್ಗ ಪೂರ್ವಕ ಗ್ಲೈ ಧಾತುವಿನ ಪರದಲ್ಲಿ 'ಕ' ಪ್ರತ್ಯಯ ಬಂದು ಸು+ಗ್ಲೈ+ಅ ಎಂದಿದ್ದಾಗ, 'ಆದೇಚ ಉಪದೇಶೇಽಶಿತಿ' ಎಂಬ ಸೂತ್ರದಿಂದ 'ಐ' ಕಾರಕ್ಕೆ ಆತ್ವವು ಬಂದು ಸು+ಗ್ಲಾ+ಅ ಎಂದಿರುವಾಗ, 'ಆತೋಲೋಪ ಇಟಿ ಚ' ಎಂಬುದರಿಂದ 'ಆ'ಕಾರಕ್ಕೆ ಲೋಪವಾಗಿ ಸು+ಗ್ಲ್+ಅ+ಸ್= ಸುಗ್ಲಃ ಎಂದು ರೂಪವು ಸಿದ್ಧವಾಗುತ್ತದೆ.

**('ಗ್ರಹ' ಧಾತುವಿಗೆ 'ಕ' ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ- 790. ಗೇಹೇ ಕಃ।(7.1.144)**

ವೃತ್ತಿ- ಗೇಹೇ ಕರ್ತರಿ ಗ್ರಹೇಃ ಕಃ ಸ್ಯಾತ್। ಗೃಹಮ್।

ಅ.ವೃ - 'ವಿಭಾಷಾ ಗ್ರಹಃ' ಎಂಬ ಸೂತ್ರದಿಂದ 'ಗ್ರಹಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– ಗ್ರಹ್ ಧಾತುವಿನ ನಂತರ 'ಕ' ಪ್ರತ್ಯಯವು ಬರುತ್ತದೆ 'ಮನೆ' ಎಂಬುದು ಕರ್ತೃವಾಗಿರುವಾಗ.

ಉದಾ– ಗೃಹವ್।-ಗೃಹ್ಣಾತಿ ಧಾನ್ಯಾದಿಕಂ ಇತಿ ಗೃಹವ್ (ಧಾನ್ಯ ಮೊದಲಾದವುಗಳನ್ನು ತನ್ನಲ್ಲಿ ಇರಿಸಿಕೊಳ್ಳುವುದರಿಂದ ಗೃಹವ್ ಎಂದು ಕರೆಸಿಕೊಳ್ಳುತ್ತದೆ.) 'ಗ್ರಹ್' ಧಾತುವಿನ ಮುಂದೆ ಪ್ರಕೃತ ಸೂತ್ರದಿಂದ 'ಕ' ಪ್ರತ್ಯಯ ಬಂದು ಗ್ರಹ್+ಅ(ಕ) ಎಂದಿರುವಾಗ 'ಕಿತ್' ಪ್ರತ್ಯಯ ಪರದಲ್ಲಿರುವುದರಿಂದ 'ಗ್ರಹಿ-ಜ್ಯಾ-ವಯಿ-ವ್ಯಧಿ- ವಷ್ಟಿ-ವಿಚತಿ- ವೃಶ್ಚತಿ-ಪೃಚ್ಛತಿ-ಭೃಜ್ಜತೀನಾಮ್ ಜಿತಿ ಚ' ಎಂಬುದರಿಂದ ಸಂಪ್ರಸಾರಣ ಬಂದು ರೇಫಕ್ಕೆ 'ಋ'ಕಾರಾದೇಶವಾಗಿ ಗ್+ಋ+ಹ್+ಅ+ಅಮ್ ಎಂದಿದ್ದಾಗ, ಪೂರ್ವರೂಪವಾಗಿ 'ಗೃಹಮ್' ರೂಪವು ಸಿದ್ಧವಾಗುತ್ತದೆ.

**('ಅಣ್' ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ– 791. ಕರ್ಮಣ್ಯಣ್।(3.2.1)**

ವೃತ್ತಿ– ಕರ್ಮಣ್ಯುಪಪದೇ ಧಾತೋರಣ್ ಪ್ರತ್ಯಯಃ ಸ್ಯಾತ್। ಕುಮ್ಭಂ ಕರೋತಿ ಇತಿ ಕುಮ್ಭಕಾರಃ।

ಪ.ಛೇ – 'ಕರ್ಮಣಿ, ಅಣ್' ।

ಅರ್ಥ – ಕರ್ಮವಾಚಕ ಪದವು ಉಪಪದವಾಗಿರುವಾಗ ಧಾತುವಿನ ಪರದಲ್ಲಿ 'ಅಣ್' ಪ್ರತ್ಯಯವು ಬರುತ್ತದೆ.

ಉದಾ– ಕುಂಭಕಾರಃ। – ಇಲ್ಲಿ 'ಕುಂಭ' ಎಂಬ ಕರ್ಮವಾಚಕಪದವು ಉಪಪದವಾಗಿರುವುದರಿಂದ 'ಕೃಞ್' ಧಾತುವಿಗೆ ಕುಂಭ+ಅಮ್+ಕೃ ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ಅಣ್' ಪ್ರತ್ಯಯವು ಬಂದು ಕುಂಭ+ಅಮ್+ಕೃ+ಅ ಎಂದಿರುವಾಗ, 'ಅಚೋಞ್ಣಿತಿ' ಎಂಬುದರಿಂದ ವೃದ್ಧಿಯಾಗಿ ಕುಂಭ+ಅಮ್+ಕ್+ಆರ್+ಅ ಎಂದಿದ್ದಾಗ 'ಸುಪೋಧಾತುಪ್ರಾತಿಪದಿಕಯೋಃ' ಎಂಬ ಸೂತ್ರದಿಂದ 'ಅಮ್'ಗೆ ಲೋಪವಾಗಿ ಕುಂಭ+ಕ್+ಆರ್+ಅ ಎಂದಿದ್ದಾಗ, ಇದು ಕೃದಂತವಾಗಿರುವುದರಿಂದ ಪ್ರಾತಿಪದಿಕ ಸಂಜ್ಞೆ ಹಾಗು ಸುಪ್ ಬಂದು ಕುಂಭ+ಕ್+ಆರ್+ಅ+ಸ್= ಕುಂಭಕಾರಃ ಎಂದು ರೂಪವಾಗುತ್ತದೆ.

**('ಕ' ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ– 792. ಆತೋಽನುಪಸರ್ಗೇ ಕಃ।(3.1.3)**

ವೃತ್ತಿ– ಆದನ್ತಾತ್ ಧಾತೋಃ ಅನುಪಸರ್ಗಾತ್ ಕರ್ಮಣ್ಯುಪಪದೇ ಕಃ ಸ್ಯಾತ್। ಅಣೋಽಪವಾದಃ। ಆತೋ ಲೋಪಃ। ಗೋದಃ। ಧನದಃ। ಕಮ್ಬಲದಃ। ಅನುಪಸರ್ಗೇ ಕಿಮ್ ಗೋಸನ್ದಾಯಃ। (ಮೂಲವಿಭುಜಾದಿಭ್ಯಃ ಕಃ) ಮೂಲಾನಿ ವಿಭುಜತಿ ಮೂಲವಿಭುಜೋ ರಥಃ। ಆಕೃತಿಗಣೋಽಯಮ್। ಮಹೀಧ್ರಃ। ಕುಧ್ರಃ।

ಪ.ಛೇ – 'ಆತಃ, ಅನುಪಸರ್ಗೆ, ಕಃ' ।

ಅ.ವೃ – 'ಕರ್ಮಣ್ಯಣ್' ಸೂತ್ರದಿಂದ 'ಕರ್ಮಣಿ' ಎಂಬ ಪದವು ಅನುವೃತ್ತವಾಗುತ್ತದೆ. 'ಧಾತೋಃ', 'ಪ್ರತ್ಯಯಃ', 'ಪರಶ್ಚ' ಎಂಬವುಗಳು ಅಧಿಕಾರಸೂತ್ರಗಳು.

ಅರ್ಥ – ಉಪಸರ್ಗರಹಿತ 'ಆ'ಕಾರಾಂತ ಧಾತುವಿನ ಮುಂದೆ 'ಕರ್ಮ' ಉಪಪದವಾಗಿರುವಾಗ ಕ(ಅ) ಪ್ರತ್ಯಯವು ಬರುತ್ತದೆ. 'ಕರ್ಮಣ್ಯಣ್' ಎಂಬ ಸೂತ್ರಕ್ಕೆ ಇದು ಅಪವಾದವಾಗಿದೆ.

ಉದಾ– ಗೋದಃ। – ಗಾಂ ದದಾತಿ ಇತಿ ಗೋದ: ಎಂಬ ಅರ್ಥದಲ್ಲಿ ಗೋ+ದಾ ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ಕ' ಪ್ರತ್ಯಯವು ಬಂದು ಗೋ+ದಾ+ಅ ಎಂದಿರುವಾಗ, 'ಆತೋಲೋಪ ಇಟಿಚಿ' ಎಂಬ ಸೂತ್ರದಿಂದ 'ಆ'ಕಾರಕ್ಕೆ ಲೋಪವಾಗಿ ಗೋ+ದ್+ಅ ಎಂದಿದ್ದಾಗ 'ಸು' ಮೊದಲಾದ ವಿಭಕ್ತಿಕಾರ್ಯಗಳಾಗಿ ಗೋ+ದ್+ಅ+ಸ್= ಗೋದ ಎಂದು ರೂಪವು ಸಿದ್ಧವಾಗುತ್ತದೆ.

ಧನದಃ = (ಧನವನ್ನು ಕೊಡುವವನು ಎಂದರ್ಥ) ಹಾಗು ಕಮ್ಬಲದ=(ಕಂಬಲವನ್ನು ಕೊಡುವವನು) ಇವುಗಳ ರೂಪಸಿದ್ಧಿಯೂ 'ಗೋದಃ' ಶಬ್ದದಂತೆ ಆಗುತ್ತದೆ.

'ಆ'ಕಾರಾಂತ ಧಾತುವಿನ ಜೊತೆಗೆ ಉಪಸರ್ಗವಿರಬಾರದೆಂದು ಏಕೆ ಹೇಳಿದ್ದಾರೆ? ಇದರ ಉತ್ತರವನ್ನು ಗೋಸನ್ದಾಯಃ ಎಂಬುದರಿಂದ ಹೇಳುತ್ತಾರೆ. ಗಾಂ+ಸಮ್+ದದಾತಿ ಎಂಬಲ್ಲಿ ಧಾತುವು 'ಸಮ್' ಉಪಸರ್ಗದಿಂದ ಕೂಡಿರುವುದರಿಂದ 'ಕ'ಪ್ರತ್ಯಯವು ಬಾರದೇ, ಹಿಂದಿನ ಸೂತ್ರದಿಂದ 'ಅಣ್' ಬಂದು ಗೋ+ಸಂ+ದಾ+ಅ ಎಂದಿರುವಾಗ, 'ಆತೋ ಯುಕ್ ಚಿಣ್ ಕೃತೋ:' ಎಂಬುದರಿಂದ 'ಯುಕ್' ಆಗಮವು ಬಂದು, ಗೋ+ಸಂ+ದಾ+ಯ್+ಅ+ಸ್= 'ಗೋಸಂದಾಯ:' ರೂಪವು ಸಿದ್ಧವಾಗುತ್ತದೆ.

('ಮೂಲವಿಭುಜಾದಿಭ್ಯಃ ಕಃ' ಇದು ವಾರ್ತಿಕ). ಮೂಲ, ವಿಭುಜ ಮುಂತಾದ ಶಬ್ದಗಳ ಸಿದ್ಧಿ ಮಾಡುವಾಗ, 'ಕ' ಪ್ರತ್ಯಯವು ಬರುತ್ತದೆ ಎಂದರ್ಥ. ಮೂಲವನ್ನು ಮರ್ದಿಸುತ್ತದೆ ಎಂದರ್ಥ. (ರಥದ ಚಕ್ರದಿಂದ ಭೂಮಿಯು ಮರ್ದನವಾಗುತ್ತದೆ.) ಮೂಲ ಪದವು ಉಪಪದವಾಗಿರುವುದಿಂದ 'ವಿ' ಉಪಸರ್ಗಪೂರ್ವಕ ಭುಜೋ= ಕೌಟಿಲ್ಯೇ ಧಾತುವಿಗೆ 'ಕ'ಪ್ರತ್ಯಯ ಬಂದಿದೆ. ಇದು ಆಕೃತಿಗಣ. ಮಹೀಂ ಧರತಿ ಇತಿ ಮಹೀಧ್ರ:=ಭೂಮಿಯನ್ನು ಧರಿಸಿರುವ ಪರ್ವತ ಎಂದರ್ಥ, ಕುಮ್ ಧರತಿ ಇತಿ ಕುಧ್ರ:. ಇಲ್ಲಿ 'ಕ'(ಅ) ಪ್ರತ್ಯಯ ಬಂದನಂತರ 'ಯಣ್' ಆದೇಶವಾಗಿದೆ. ಇದಕ್ಕೂ ಪರ್ವತವೆಂದೇ ಅರ್ಥ. ಯಾವ ಸೂತ್ರದಿಂದಲೂ ಶಬ್ದಕ್ಕೆ 'ಕ' ಪ್ರತ್ಯಯವು ವಿಧಿಸಲ್ಪಡದೇ ಕಪ್ರತ್ಯಯಾಂತ ರೂಪವನ್ನು ಪಡೆದಿದ್ದರೆ ಅದು ಮೂಲ ವಿಭುಜಾದಿಗಣದಲ್ಲಿ ಸೇರಿದಂತೆ ಭಾವಿಸಬೇಕು.

**('ಟ' ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ– 793. ಚರೇಷ್ಟಃ। (3.1.16)**

ವೃತ್ತಿ– ಅಧಿಕರಣೇ ಉಪಪದೇ। ಕುರುಚರಃ।

ಪ. ಛೇ – ಚರೇಃ, ಟಃ।

ಅ.ವೃ–'ಅಧಿಕರಣೇ ಶೇತೇಃ' ಸೂತ್ರದಿಂದ 'ಅಧಿಕರಣೇ' ಪದವು ಅನುವೃತ್ತವಾಗುತ್ತದೆ.

ಅರ್ಥ– ಸಪ್ತಮ್ಯಂತ ಪದವು ಉಪಪದವಾಗಿರುವಾಗ 'ಚರ್' ಧಾತುವಿನ ನಂತರ 'ಟ'(ಅ) ಪ್ರತ್ಯಯ ಬರುತ್ತದೆ. ಕುರುಷು ಚರತಿ ಅರ್ಥದಲ್ಲಿ ಕುರು+ಚರ್+ಅ ಎಂದಿದ್ದಾಗ, 'ಉಪಪದಮತಿಙ್'ನಿಂದ ಉಪಪದದ ಸಮಾಸವಾಗಿ 'ಕುರುಚರಃ' ಎಂದಾಗುತ್ತದೆ.

**('ಟ' ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ–794. ಭಿಕ್ಷಾ–ಸೇನಾಽಽದಾಯೇಷು ಚ।(3.2.17)**

ವೃತ್ತಿ– ಭಿಕ್ಷಾಚರಃ। ಸೇನಾಚರಃ। ಆದಾಯೇತಿ ಲ್ಯಬನ್ತಮ್। ಆದಾಯಚರಃ।

ಪ.ಛೇ– ಭಿಕ್ಷಾ, ಸೇನಾ, ಆದಾಯೇಷು, ಚ ।

ಅ.ವೃ– 'ಚರೇಷ್ಟಃ' ಎಂಬ ಸೂತ್ರದಿಂದ 'ಚರೇಃ' ಮತ್ತು 'ಟಃ' ಎಂಬ ಪದಗಳು ಹಾಗೂ 'ಸುಪಿಸ್ಥಃ' ಎಂಬುದರಿಂದ ವಚನ ವಿಪರಿಣಾಮ ಮಾಡಿದ ನಂತರ 'ಸುಪ್ಸು' ಎಂಬ ಪದವೂ ಅನುವೃತ್ತವಾಗುತ್ತದೆ. 'ಧಾತೋಃ', 'ಪ್ರತ್ಯಯಃ' ಮತ್ತು 'ಪರಶ್ಚ' ಎಂಬವುಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ–ಭಿಕ್ಷಾ, ಸೇನಾ ಮತ್ತು ಆದಾಯ ಎಂಬ ಈ ಸುಬಂತಗಳು ಉಪಪದವಾಗಿದ್ದಾಗ 'ಚರ್' ಧಾತುವಿನ ನಂತರ ಟ(ಅ) ಪ್ರತ್ಯಯವು ಬರುತ್ತದೆ.

ಉದಾ–1. ಭಿಕ್ಷಾಚರಃ–ಭಿಕ್ಷಾಂ ಚರತಿ ಇತಿ ಭಿಕ್ಷಾಚರ: ಎಂದು ವಿಗ್ರಹ. (ಭಿಕ್ಷೆಗಾಗಿ ಸಂಚರಿಸುವವನು). ಚರ–ಗತಿಭಕ್ಷಣಯೋಃ ಎಂಬುದು ಧಾತು. ಇಲ್ಲಿ ಭಿಕ್ಷಾ ಎಂಬ ಕರ್ಮಪದವನ್ನು ಉಪಪದವಾಗಿಯುಳ್ಳ 'ಚರ್' ಧಾತುವಿಗೆ ಪ್ರಕೃತ ಸೂತ್ರದಿಂದ 'ಟ' ಬಂದಿದೆ.

ಉದಾ–2. ಸೇನಾಚರಃ–ಸೇನಾಯಾಂ ಚರತಿ ಇತಿ ಸೇನಾಚರಃ ಎಂದು ವಿಗ್ರಹ. (ಸೈನ್ಯದಲ್ಲಿ ಸಂಚರಿಸುವವನು). ಸೇನಾರೂಪ ಉಪಪದಸಹಿತವಾದ 'ಚರ್' ಧಾತುವಿಗೆ ಟ (ಅ) ಪ್ರತ್ಯಯವು ಬಂದಿದೆ.

ಉದಾ–3.ಆದಾಯಚರಃ–ಆದಾಯ ಚರತಿ ಇತಿ ಆದಾಯಚರಃ (ತೆಗೆದು ಕೊಂಡು ಸಂಚರಿಸುವನು). ಇದು 'ಲ್ಯಪ್' ಪ್ರತ್ಯಯಾಂತ ಪದವಾಗಿದೆ. ಉಪಪದ ಸಮಾಸವಾದ ಮೇಲೆ ಇದು ಕೃದಂತವಾಗುವುದರಿಂದ,

ಆದಾಯಚರಃ ಎಂಬುದಕ್ಕೆ 'ಕೃತ್ತದ್ಧಿತಸಮಾಸಾಶ್ಚ' ಎಂಬುದರಿಂದ ಪ್ರಾತಿಪದಿಕ ಸಂಜ್ಞಾ ಹಾಗೂ 'ಸುಪ್' ಪ್ರತ್ಯಯ, ರುತ್ವ–ವಿಸರ್ಗಗಳಾಗಿ ಈ ಶಬ್ದವು ನಿಷ್ಪನ್ನವಾಗುತ್ತದೆ. ಈ ಉದಾಹರಣೆಗಳಲ್ಲಿ ಅಧಿಕರಣಾರ್ಥವಿರಬೇಕೆಂದು ನಿಯಮವಿಲ್ಲ.

**('ಕೃಞ್' ಧಾತುವಿಗೆ 'ಟ' ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ–795. ಕೃಞೋ ಹೇತು–ತಾಚ್ಛೀಲ್ಯಾನುಲೋಮ್ಯೇಷು।(3.2.20)**

ವೃತ್ತಿ– ಏಷು ದ್ಯೋತ್ಯೇಷು ಕರೋತೇಷ್ಟಃ ಸ್ಯಾತ್।

ಅ.ವೃ – 'ಚರೇಷ್ಟಃ' ಎಂಬ ಸೂತ್ರದಿಂಧ 'ಟಃ' ಎಂಬ ಪದವು ಅನುವೃತ್ತವಾಗುತ್ತದೆ.

ಅಧಿಕಾರ ಸೂತ್ರಗಳು ಹಿಂದಿನಂತಿವೆ.

ಅರ್ಥ-ಹೇತು (ಕಾರಣ), ತಾಚ್ಛೀಲ್ಯ, (ತತ್ಸ್ವಭಾವ) ಮತ್ತು ಆನುಲೋಮ್ಯ (ಅನುಕೂಲವಾಗಿ ನಡೆದುಕೊಳ್ಳುವದು) ಈ ಅರ್ಥಗಳು ತೋರುವಾಗ 'ಕೃ' ಧಾತುವಿನ ನಂತರ 'ಟ'(ಅ) ಪ್ರತ್ಯಯ ಬರುತ್ತದೆ.

**(ಸಮಾಸದಲ್ಲಿ ವಿಸರ್ಗಕ್ಕೆ 'ಸ್' ಕಾರವನ್ನು ಆದೇಶವಾಗಿ ವಿಧಿಸುವ ಸೂತ್ರ)**

**ಸೂತ್ರ-796. ಅತಃ ಕೃ-ಕಮಿ-ಕಂಸ-ಕುಂಭ-ಪಾತ್ರ-ಕುಶಾ-ಕರ್ಣೀಷ್ವನವ್ಯಯಸ್ಯ। (8.3.46)**

ವೃತ್ತಿ- ಆದುತ್ತರಸ್ಯ ಅನ್ವ್ಯಯಸ್ಯ ವಿಸರ್ಗಸ್ಯ ಸಮಾಸೇ ನಿತ್ಯಂ ಸಾದೇಶಃ ಕರೋತ್ಯಾದಿಷು ಪರೇಷು। ಯಶಸ್ಕರೀ ವಿದ್ಯಾ ಶ್ರಾದ್ಧಕರಃ। ವಚನಕರಃ।

ಪ. ಛೇ. – ಅತಃ, ಕೃ-ಕಮಿ-ಕಂಸ-ಕುಂಭ-ಪಾತ್ರ-ಕುಶಾ-ಕರ್ಣೀಷು, ಅನವ್ಯಯಸ್ಯ

ಅ.ವೃ – 'ವಿಸರ್ಜನೀಯಸ್ಯ ಸಃ' ಎಂಬುದರಿಂದ 'ವಿಸರ್ಜನೀಯಸ್ಯ' ಎಂಬ ಪದವು, 'ಸೋऽಪದಾದೌ" ಎಂಬ ಸೂತ್ರದಿಂದ 'ಸಃ' ಎಂಬ ಪದವು ಹಾಗೆಯೇ 'ನಿತ್ಯಂ ಸಮಾಸೇऽನುತ್ತರಪದಸ್ಥಸ್ಯ' ಎಂಬ ಪೂರ್ಣಸೂತ್ರವು ಅನುವೃತ್ತವಾಗುತ್ತದೆ.

ಅರ್ಥ – ಅವ್ಯಗಳನ್ನು ಬಿಟ್ಟು ಉಳಿದ ಶಬ್ದಗಳಲ್ಲಿ ಹ್ರಸ್ವ 'ಅ'ಕಾರದ ಪರದಲ್ಲಿರುವ ವಿಸರ್ಗಕ್ಕೆ ಕೃ, ಕಮಿ, ಕಂಸ,ಕುಂಭ, ಪಾತ್ರ, ಕುಶಾ ಮತ್ತು ಕರ್ಣಿ ಈ ಶಬ್ದಗಳು ಪರವಾದಾಗ ಸಮಾಸದಲ್ಲಿ ನಿತ್ಯವಾಗಿ 'ಸ'ಕಾರಾದೇಶ ಬರುತ್ತದೆ.

ವಿಸರ್ಗದ ಸ್ಥಾನದಲ್ಲಿ 'ಸ'ಕಾರಾದೇಶ ಬರುವಾಗ ಈ ಕೆಳಗಿನ ಅಂಶಗಳನ್ನು ಗಮನಿಸಬೇಕು.

1. ಅವ್ಯಯಭಿನ್ನವಾದ ವಿಸರ್ಗದ ಸ್ಥಾನದಲ್ಲೇ 'ಸ'ಕಾರಾದೇಶವಾಗುತ್ತದೆ.
2. ಸ್ಥಾನಿಯಾದ ವಿಸರ್ಗವು ಹ್ರಸ್ವ ಅಕಾರದ ಪರದಲ್ಲಿರಬೇಕು.
3. ವಿಸರ್ಗದ ನಂತರ ಸೂತ್ರದಲ್ಲಿ ಹೇಳಿರುವ ಕೃ,ಕಮಿ ಮೊದಲಾದವುಗಳಲ್ಲಿ ಯಾವುದಾದರೊಂದು ಶಬ್ದವು ಇರಬೇಕು.
4. ಇವೆಲ್ಲ ಕಾರ್ಯಗಳು ಸಮಾಸದಲ್ಲಿಯೇ ಆಗುತ್ತವೆ.

ಉದಾ – ಯಶಸ್ಕರೀ-(ಯಶಸ್ಸಿಗೆ ಕಾರಣವಾದ ವಿದ್ಯೆ) ಯಶಃ ಕರೋತಿ ಇತಿ ಎಂಬ ವಿಗ್ರಹದಲ್ಲಿ ಯಶಸ್+ಅಮ್+ಕೃ ಎಂದಿದ್ದಾಗ, ಹಿಂದಿನ ಸೂತ್ರ ಹಾಗು ಪ್ರಕೃತ ಸೂತ್ರದಿಂದ ಹೇತ್ವರ್ಥದಲ್ಲಿ 'ಟ' ಪ್ರತ್ಯಯವು ಬಂದು ಉಪಪದ ಸಮಾಸವಾದ ಮೇಲೆ 'ಅಮ್' ಶಬ್ದದ ಲೋಪವಾಗಿ 'ಋ'ಕಾರಕ್ಕೆ ಗುಣ ಬಂದು 'ಅರ್' ಆಗಿ ಯಶಸ್ಕರ್+ಅ ಎಂದಿರುವಾಗ, ಇದು 'ಟಿತ್' ಆಗಿರುವುದರಿಂದ, ಸ್ತ್ರೀಲಿಙ್ಗದಲ್ಲಿ 'ಙೀಪ್' (ಈ) ಬಂದು, 'ಅ'ಕಾರವು 'ಯಸ್ಯೇತಿ ಚ' ಎಂಬುದರಿಂದ ಲೋಪವಾಗಿ 'ಯಶಸ್ಕರೀ' ಎಂದು ರೂಪವಾಗುತ್ತದೆ. ಇಲ್ಲಿ ಜಿಹ್ವಾಮೂಲಿಯವನ್ನು ಬಾಧಿಸಿ 'ಸ'ಕಾರವೇ ಬಂದಿದೆ. ಶ್ರಾದ್ಧಕರಃ ಶ್ರಾದ್ಧಂ ಕರ್ತುಂ ಶಿಲಂ ಯಸ್ಯ (ಯಾರಿಗೆ ಶ್ರಾದ್ಧಮಾಡುವ ಸ್ವಭಾವವಿದೆಯೋ

ಅವನು) ಇಲ್ಲಿ ತಾಚ್ಛೀಲ್ಯಾರ್ಥದಲ್ಲಿ 'ಟ'ಪ್ರತ್ಯಯವು ಬಂದಿದೆ.

ವಚನಕರಃ – ವಚನಂ ಕರೋತಿ ಇತಿ ವಿಗ್ರಹಃ। (ಆಜ್ಞಾಪಾಲಕ) ಇಲ್ಲಿಯೂ ಹಿಂದಿನಂತೆ ವಚನ+ಅಮ್+ಕೃ+ಅ('ಟ') ಪ್ರತ್ಯಯವು ಬಂದಿದೆ.

**(ಖಶ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ**– 797. **ಏಜೇಃ ಖಶ್।( 3.2.28)**

ವೃತ್ತಿ–ಣ್ಯನ್ತಾತ್ ಏಜೇಃ ಖಶ್ ಸ್ಯಾತ್।

ಅ.ವೃ–'ಕರ್ಮಣ್ಯಣ್' ಎಂಬ ಸೂತ್ರದಿಂದ ಕರ್ಮಣಿ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ–ಣಿಜನ್ತವಾದ ಏಜೃ ಧಾತುವಿನ ಪರದಲ್ಲಿ ಕರ್ಮವು ಉಪಪದವಾಗಿರುವಾಗ 'ಖಶ್' ಪ್ರತ್ಯಯವು ಬರುತ್ತದೆ.

**('ಮುಮ್' ಆಗಮವನ್ನು ವಿಧಿಸುವ ಸೂತ್ರ)**

**ಸೂತ್ರ**– 798. **ಅರುರ್ದ್ವಿಷದಜನ್ತಸ್ಯ ಮುಮ್(6.3.67)**

ವೃತ್ತಿ– ಅರುಷೋ ದ್ವಿಷತೋಽಜನ್ತಸ್ಯ ಚ ಮುಮಾಗಮಃ ಸ್ಯಾತ್ ಖಿದನ್ತೇ ಪರೇ ನ ತು ಅವ್ಯಯಸ್ಯ। ಶಿತ್ವಾಚ್ಛಬಾದಿಃ। ಜನಮೇಜಯತೀತಿ ಜನಮೇಜಯಃ।

ಪ.ಛೇ – ಅರುಸ್, ದ್ವಿಷತ್, ಅಜನ್ತಸ್ಯ ಮುಮ್ ।

ಅ.ವೃ–'ಅಲುಗುತ್ತರಪದೇ' ಎಂಬ ಅಧಿಕಾರ ಸೂತ್ರದಿಂದ ಉತ್ತರಪದೇ ಎಂಬ ಪದವು ಹಾಗು 'ಖಿತ್ಯನವ್ಯಯಸ್ಯ' ಪೂರ್ಣಸೂತ್ರವೂ ಅನುವೃತ್ತವಾಗುತ್ತದೆ.

ಅರ್ಥ – ಅರುಸ್, ದವಿಷತ್ ಹಾಗೆಯೇ ಅಜಂತ ಶಬ್ದಗಳಿಗೆ ಮುಮ್ ಆಗಮವು, ಖಿದನ್ತಪದವು ಉತ್ತರಪದವಾದಾಗ ಬರುತ್ತದೆ. ಆದರೆ ಈ ಆಗಮವು ಅವ್ಯಯಕ್ಕೆ ಬರುವುದಿಲ್ಲ.

ಖಶ್ ಪ್ರತ್ಯಯವು 'ಶಿತ್' ಆಗಿರುವುದರಿಂದ ಇದು ಪರದಲ್ಲಿದ್ದಾಗ ಶಬಾದಿಗಳು ಬರುತ್ತವೆ.

'ತಿಙ್ ಶಿತ್ ಸಾರ್ವಧಾತುಕಮ್' ಎಂಬುದರಿಂದ 'ಖಶ್' ಪ್ರತ್ಯಯಕ್ಕೆ ಸಾರ್ವಧಾತುಕ ಸಂಜ್ಞೆಯು ಬಂದು ಇದು ಪರದಲ್ಲಿರುವಾಗ 'ಶಪ್' ಆದಿ ಪ್ರತ್ಯಯಗಳು ಬರುತ್ತವೆ.

ಉದಾ:– ಜನಮೇಜಯ: ಜನಂ ಏಜಯತಿ ಇತಿ ವಿಗ್ರಹಃ. (ಜನರನ್ನು ನಡುಗಿಸುವವನು). ಇದು ಪರೀಕ್ಷಿತನ ಮಗನ ಹೆಸರು. ಏಜೃ ಕಂಪನೇ ಎಂಬುದು ಧಾತು. ಇದರಲ್ಲಿ 'ಋ'ಕಾರವು ಇತ್ತಾಗಿದೆ. ಇದಕ್ಕೆ 'ಣಿಚ್' ಪ್ರತ್ಯಯವು ಬರುವುದರಿಂದ ಏಜ್+ಇ ಎಂದಿರುವಾಗ ಇದರ ಪೂರ್ವದಲ್ಲಿ 'ಜನಮ್' ಎಂದು ಕರ್ಮ ಪದವು ಉಪಪದವಾಗಿದೆ. ಜನ+ಅಮ್+ಏಜ್+ಇ ಎಂದಿರುವಾಗ ಪೂರ್ವ ಸೂತ್ರದಿಂದ ಖಶ್ (ಅ) ಪ್ರತ್ಯಯ ಬಂದು ಜನ+ಅಮ್+ಏಜ್+ಇ+ಅ ಎಂದಿರುವಾಗ 'ಶಪ್' ಪ್ರತ್ಯಯವು ಬಂದು ಜನ+ಅಮ್+ಏಜ್+ಇ+ಅ+ಅ ಎಂದಿದ್ದಾಗ, ಕೊನೆಯ ಎರಡು

ಅಕಾರಗಳಿಗೆ 'ಅತೋಗುಣೇ' ಎಂಬುದರಿಂದ ಪರರೂಪ ಬಂದು ಒಂದು ಅಕಾರವಾಗಿ, ಜನ+ಅಮ್+ಏಚ್+ಇ+ಅ ಎಂದಿದ್ದಾಗ, 'ಇ'ಕಾರಕ್ಕೆ ಗುಣವಾಗಿ ಜನ+ಅಮ್+ಏಚ್+ಏ+ಅ ಎಂದಿರುವಾಗ, 'ಏ' ಕಾರಕ್ಕೆ 'ಅಯ್' ಆದೇಶವಾಗಿ ಜನ+ಅಮ್+ಏಚ್+ಅಯ್+ಅ ಎಂದಿದ್ದಾಗ, 'ಅಮ್'ನ ಸ್ಥಾನದಲ್ಲಿ 'ಕರ್ತೃಕರ್ಮಣೋ: ಕೃತಿ' ಎಂಬುದರಿಂದ ಷಷ್ಠೀ ವಿಭಕ್ತಿಯು ಬಂದು, ಜನ+ಅಸ್ (ಙಸ್) +ಏಚ್+ಅಯ್+ಅ ಎಂದಿದ್ದಾಗ, 'ಉಪಪದಮತಿಙ್' ಎಂಬುದರಿಂದ ಉಪಪದ ಸಮಾಸವಾಗಿ 'ಸುಪೋಧಾತುಪ್ರಾತಿಪದಿಕಯೋ:' ಎಂಬುದರಿಂದ ಷಷ್ಠೀಗೆ ಲೋಪವಾಗಿ ಜನ+ಏಚ್+ಅಯ್+ಅ+ಸ್ ಎಂದಿರುವಾಗ, ಪ್ರಕೃತ ಸೂತ್ರದಿಂದ ಮುಮ್ (ಮ್) ಆಗಮವು 'ಮಿದಚೋಽನ್ತ್ಯಾತ್ ಪರ:' ಎಂಬುದರಿಂದ ಜನ ಎಂಬಲ್ಲಿರುವ ನಕಾರೋತ್ತರ ಅಕಾರಕ್ಕೆ ಅಂತ್ಯಾವಯವವಾಗಿ ಬಂದು, ಜನ+ಮ್+ಏಚ್+ಅಯ್+ಅ+ಸ್ ಎಂದಿದ್ದಾಗ, ರುತ್ವ ವಿಸರ್ಗಗಳಾಗಿ 'ಜನಮೇಜಯ:' ಎಂದು ರೂಪವು ಸಿದ್ಧವಾಗುತ್ತದೆ.

**('ಖಚ್' ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ- 799. ಪ್ರಿಯವಶೇ ವದಃ ಖಚ್। (3.2.38)**

ವೃತ್ತಿ- ಪ್ರಿಯಂವದಃ। ವಶಂವದಃ।

ಅ.ವೃ- 'ಕರ್ಮಣ್ಯಣ್' ಎಂಬ ಸೂತ್ರದಿಂದ ಕರ್ಮಣಿ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- ಪ್ರಿಯ ಮತ್ತು ವಶ ಎಂಬ ಕರ್ಮ ಪದಗಳು ಉಪಪದವಾಗಿರುವಾಗ 'ವದ್' ಧಾತುವಿನ ನಂತರ 'ಖಚ್' ಪ್ರತ್ಯಯವು ಬರುತ್ತದೆ. ಖಚ್‌ನಲ್ಲಿ 'ಖ'ಕಾರ ಹಾಗು 'ಚ'ಕಾರಗಳು ಇತ್ ಆಗಿದ್ದು 'ಅ'ಕಾರ ಮಾತ್ರ ಉಳಿಯುತ್ತದೆ.

ಉದಾ:- ಪ್ರಿಯಂ ವದ: - ಪ್ರಿಯಂ ವದತಿ ಇತಿ ವಿಗ್ರಹಃ। (ಮಧುರ ಭಾಷಿ). ಪ್ರಿಯ+ಅಮ್ ಎಂದು ಉಪಪದವಾಗಿರುವಾಗ ವದ್ ಧಾತುವಿನ ನಂತರ 'ಖಚ್' ಪ್ರತ್ಯಯ ಬಂದು ಪ್ರಿಯ+ಅಮ್+ವದ್+ಅ ಎಂದಿರುವಾಗ, ಉಪಪದ ಸಮಾಸವಾದ ನಂತರ 'ಅಮ್'ನ ಲೋಪವಾಗಿ ಪ್ರಿಯ+ವದ್+ಅ ಎಂದಿರುವಾಗ, 'ಅರುರ್ದ್ವಿಷದಜನ್ತಸ್ಯ ಮುಮ್' ಎಂಬುದರಿಂದ 'ಮುಮ್' ಆಗಮವು ಬಂದು ಪ್ರಿಯ+ಮ್+ವದ್+ಸ್ ಎಂದಿದ್ದಾಗ ರುತ್ವ ವಿಸರ್ಗಗಳಾಗಿ 'ಪ್ರಿಯಂವದ:' ಎಂದು ರೂಪವಾಗುತ್ತದೆ. ವಶಂವದ:-ವಶಂ ವದತಿ ಇತಿ ವಿಗ್ರಹಃ (ಅಧೀನನಾಗಿ ಮಾತನಾಡುವವನು). ವಶಂ ಎಂಬುದು ಉಪಪದವಾಗಿದೆ. ಉಳಿದ ಪ್ರಕ್ರಿಯೆಯನ್ನು 'ಪ್ರಿಯಂವದ:' ಎಂಬಂತೆ ತಿಳಿಯಬೇಕು.

**('ಮನಿನ್' ಮೊದಲಾದ ಪ್ರತ್ಯಯಗಳನ್ನು ವಿಧಿಸುವ ಸೂತ್ರ)**

**ಸೂತ್ರ-800. ಅನ್ಯೇಭ್ಯೋಽಪಿ ದೃಶ್ಯನ್ತೇ। (3.2.75)**

ವೃತ್ತಿ- ಮನಿನ್, ಕ್ವನಿಪ್, ವನಿಪ್, ವಿಚ್ ಏತೇ ಪ್ರತ್ಯಯಾ ಧಾತೋಃ ಸ್ಯುಃ।

ಅ.ವೃ - 'ಆತೋ-ಮನಿನ್-ಕ್ವನಿಪ್-ವನಿಪಶ್ಚ' ಎಂಬ ಸೂತ್ರದಿಂದ ಮನಿನ್,

ಕ್ವನಿಪ್, ವನಿಪ: ಎಂಬ ಪದಗಳೂ ಮತ್ತು 'ವಿಜುಪೇ ಛಂದಸಿ' ಎಂಬ ಸೂತ್ರದಿಂದ 'ವಿಚ್' ಎಂಬ ಪದವು ಅನುವೃತ್ತವಾಗಿವೆ.

ಅರ್ಥ– ಪ್ರಕೃತ ಸೂತ್ರಕ್ಕೆ ಪೂರ್ವಸೂತ್ರವಾದ 'ಆತೋ–ಮನಿನ್–ಕ್ವನಿಪ್ ವನಿಪಶ್ಚ' ಎಂಬುದರಿಂದ 'ಆ'ದಂತ ಧಾತುಗಳಿಗೆ ವೈದಿಕ ಪ್ರಯೋಗದಲ್ಲಿ ಮಾತ್ರ ಈ ಪ್ರತ್ಯಯಗಳು ವಿಧಿಸಲ್ಪಟ್ಟಿವೆ. ಈ ಪ್ರಕೃತ ಸೂತ್ರದಲ್ಲಿ 'ಅನ್ಯೇಭ್ಯ:' ಎಂದು ಹೇಳಿರುವುದರಿಂದ ಮನಿನ್, ಕ್ವನಿಪ್, ವನಿಪ್ ಮತ್ತು ವಿಚ್ ಪ್ರತ್ಯಯಗಳು ಲೌಕಿಕ ಪ್ರಯೋಗದಲ್ಲಿ ಇತರ ಧಾತುಗಳ ಮೇಲೂ ಬರುತ್ತವೆ.

**('ವಶ್' ಮೊದಲಾದ 'ಕೃತ್' ಗೆ ಇಣ್ ನಿಷೇಧ ಹೇಳುವ ಸೂತ್ರ)**

**ಸೂತ್ರ– 801. ನೇಡ್ ವಶಿ ಕೃತಿ (7.2.8)**

ವೃತ್ತಿ– ವಶಾದೇಃ ಕೃತಃ ಇಣ್ ನ ಸ್ಯಾತ್। ಶೃ–ಹಿಂಸಾಯಾಮ್। ಸುಶರ್ಮಾ। ಪ್ರಾತರಿತ್ವಾ।

ಪ.ಛೇ – ನ, ಇಟ್, ವಶಿ, ಕೃತಿ ।

ಅರ್ಥ – 'ವಶ್' ಪ್ರತ್ಯಾಹಾರದಲ್ಲಿ ಬರುವ ವರ್ಣಗಳನ್ನು ಆದಿಯಲ್ಲಿವುಳ್ಳ ಕೃತ್ ಪ್ರತ್ಯಯವು ಪರದಲ್ಲಿದ್ದಾಗ, 'ಇಟ್' ಆಗಮವು ಬರುವುದಿಲ್ಲ.

ಉದಾಃ– ಸುಶರ್ಮಾ – ಸುಷ್ಠು ಶೃಣಾತಿ–ಹಿನಸ್ತಿ ಪಾಪಾನ್ ಇತಿ ಎಂದು ವಿಗ್ರಹ. (ಚೆನ್ನಾಗಿ ಪಾಪಗಳನ್ನು ನಾಶಮಾಡುವವನು.) 'ಸು' ಪೂರ್ವಕ 'ಶ್ಲೃ' ಧಾತುವಿನ ನಂತರ ಪೂರ್ವಸೂತ್ರದಿಂದ ಮನಿನ್(ಮನ್) ಪ್ರತ್ಯಯ ಬಂದು ಸು+ಶ್ಲೃ+ಮನ್ ಎಂದಿದ್ದಾಗ, 'ಆರ್ಧಧಾತುಕಸ್ಯ ಇಡ್ ವಲಾದೇಃ' ಎಂಬುದರಿಂದ ಇಟ್ ಪ್ರಾಪ್ತವಾಗಲು, ಪ್ರಕೃತ ಸೂತ್ರದಿಂದ ಅದನ್ನು ನಿಷೇಧಿಸಿ 'ಋ' ಕಾರಕ್ಕೆ ಗುಣ ಬಂದು ಸುಶರ್+ಮನ್ ಎಂದಿದ್ದಾಗ 'ಸುಪ್' ಪ್ರತ್ಯಯವನ್ನು ಹಚ್ಚಿದ ಮೇಲೆ, ಸುಶರ್+ಮನ್+ಸ್ ಎಂದಿದ್ದಾಗ 'ಸ್'ಕಾರಕ್ಕೆ 'ಹಲ್‌ಙಾಭ್ಯೋ ದೀರ್ಘಾತ್ ಸುತಿಸಿ ಅಪೃಕ್ತಂ ಹಲ್' ಎಂಬುದರಿಂದ ಲೋಪ ಬಂದು ನಾಂತ ಉಪಧೆಗೆ 'ಸರ್ವನಾಮಸ್ಥಾನೇ' ಎಂಬುದರಿಂದ ದೀರ್ಘವಾಗಿ ಸುಶರ್+ಮಾನ್ ಎಂದಿದ್ದಾಗ 'ನಲೋಪಃ ಪ್ರಾತಿಪದಿಕಾನ್ತಸ್ಯ' ಎಂಬುದರಿಂದ 'ನ್'ಕಾರಕ್ಕೆ ಲೋಪವಾಗಿ 'ಸುಶರ್ಮಾ' ಎಂದು ರೂಪವು ಸಿದ್ಧವಾಗಿದೆ.

ಉದಾ–ಪ್ರಾತರಿತ್ವಾ – ಪ್ರಾತಃ ಏತಿ ಗಚ್ಛತಿ ಇತಿ ಎಂದು ವಿಗ್ರಹ= (ಪ್ರಾತಃ ಕಾಲವನ್ನು ತಿಳಿಯುವವನು). ಪ್ರಾತರ್ ಪೂರ್ವಕ ಇಣ್ ಗತೌ ಎಂಬುದು ಧಾತು. ಪ್ರಾತರ್+ಇ ಎಂದಿದ್ದಾಗ 'ಅನ್ಯೇಭ್ಯೋಽಪಿ ದೃಶ್ಯಂತೇ' ಎಂಬುದರಿಂದ ಕ್ವನಿಪ್(ವನ್) ಪ್ರತ್ಯಯ ಬಂದು ಪ್ರಾತರ್+ಇ+ವನ್ ಎಂದಿದ್ದಾಗ 'ವನ್'ಗೆ ಆರ್ಧಧಾತುಕ ಸಂಜ್ಞೆ ಬಂದು 'ಆರ್ಧಧಾತುಕಸ್ಯ ಇಡ್ವಲಾದೇಃ' ಎಂಬ ಸೂತ್ರದಿಂದ ಇಟ್ ಬರಲು 'ನೇಡ್–ವಶಿ–ಕೃತಿ' ಎಂಬ ಸೂತ್ರದಿಂದ ಅದು ನಿಷೇಧವಾಗಿ 'ಹ್ರಸ್ವಸ್ಯ ಪಿತಿ ಕೃತಿ ತುಕ್' ಎಂಬುದರಿಂದ 'ತುಕ್' ಆಗಮ ಬಂದು ಪ್ರಾತರ್+ಇ+ತ್+ವನ್+ಸ್ ಎಂದಿದ್ದಾಗ,

'ಸ್' ಗೆ ಲೋಪವಾಗಿ 'ಪ್ರಾತರಿತ್ವನ್' ಎಂದು ಪ್ರಾತಿಪದಿಕವು ಸಿದ್ಧವಾಗುತ್ತದೆ. ನಂತರ ಪ್ರಾತರಿತ್ವಾ ಎಂಬ ಸುಬನ್ತ ರೂಪವು ಸಿದ್ಧವಾಗುತ್ತದೆ.

**('ಆತ್' ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ- ೮೦೨. ವಿಡ್-ವನೋರನುನಾಸಿಕಸ್ಯಾऽऽತ್ (6.4.41)**

ವೃತ್ತಿ- ಅನುನಾಸಿಕಸ್ಯಾऽऽತ್ಸ್ಯಾತ್। ವಿಜಾಯತ ಇತಿ ವಿಜಾವಾ। ಓಣೃ ಅಪನಯನೇ। ಅವಾವಾ। ವಿಚ್-ರುಷ್-ರಿಷ್ ಹಿಂಸಾಯಾಮ್। ರೋಟ್, ರೇಟ್, ಸುಗಣ್।

ಪ.ಚೇ - ವಿಡ್ವನೋಃ, ಅನುನಾಸಿಕಸ್ಯ, ಆತ್ ।

ಅ.ವೃ - 'ಅಂಗಸ್ಯ' ಎಂಬುದು ಅಧಿಕಾರ ಸೂತ್ರ.

ಅರ್ಥ - ವಿಟ್ ಮತ್ತು ವನ್ ಪ್ರತ್ಯಯಗಳು ಪರದಲ್ಲಿರುವಾಗ, ಅನುನಾಸಿಕ ವರ್ಣಕ್ಕೆ 'ಆ'ಕಾರವು ಆದೇಶವಾಗಿ ಬರುತ್ತದೆ. ಸೂತ್ರದಲ್ಲಿರುವ 'ಅನುನಾಸಿಕಸ್ಯ' ಎಂಬ ಶಬ್ದವು ಅಂಗಸ್ಯ ಎಂಬುದಕ್ಕೆ ವಿಶೇಷಣವಾಗಿದೆ. ತದಂತ-ವಿಧಿಯಿಂದ ಅನುನಾಸಿಕಾಂತದ ಅಂಗಕ್ಕೆ 'ಅಲೋನ್ತ್ಯಸ್ಯ' ಎಂಬುದರಿಂದ ಅಂತ್ಯವರ್ಣಕ್ಕೆ ಎಂದು ತೆಗೆದುಕೊಳ್ಳಬೇಕು.ಇಲ್ಲಿ 'ವನ್' ಎಂಬುದರಿಂದ ಕ್ವನಿಪ್ ಮತ್ತು ವನಿಪ್ ಪ್ರತ್ಯಯಗಳನ್ನು ಸ್ವೀಕರಿಸಲಾಗುತ್ತದೆ. ಯಾಕೆಂದರೆ ಇವೆರಡೂ ಪ್ರತ್ಯಯಯಗಳಲ್ಲೂ ಕೊನೆಗೆ 'ವನ್' ಎಂದೇ ಉಳಿಯುತ್ತದೆ.

ಉದಾ-ವಿಜಾವಾ: ವಿಜಾಯತೇ ಇತಿ ವಿಜಾವಾ ಇತಿ ವಿಗ್ರಹಃ (ವಿಶೇಷ ರೂಪದಿಂದ ಹುಟ್ಟುವವನು). 'ವಿ' ಪೂರ್ವಕ 'ಜನ್' ಧಾತುವಿಗೆ 'ಅನ್ಯೇಭ್ಯೋऽಪಿ ದೃಶ್ಯನ್ತೇ' ಎಂಬುದರಿಂದ (ವನ್) 'ವನಿಪ್' ಪ್ರತ್ಯಯ ಬಂದು ವಿ+ಜನ +ವನ್ ಎಂದಿದ್ದಾಗ ಪ್ರಕೃತ ಸೂತ್ರದಿಂದ ಅನುನಾಸಿಕವಾದ 'ನ್'ಕಾರಕ್ಕೆ 'ಆ'ಕಾರಾದೇಶವಾಗಿ ವಿ+ಜ+ಆ+ವ+ನ್ ಎಂದಿದ್ದಾಗ, ಸವರ್ಣದೀರ್ಘವಾಗಿ 'ವಿಜಾವನ್' ಎಂದು ರೂಪವು ಸಿದ್ಧವಾಗುತ್ತದೆ. ಉಪಧಾದೀರ್ಘವಾಗಿ ವಿಜಾವಾನ್ ಎಂದಿರುವಾಗ 'ನ್'ಕಾರಕ್ಕೆ ಲೋಪ ಬಂದು 'ವಿಜಾವಾ' ಎಂದು ರೂಪವು ಸಿದ್ಧವಾಗುತ್ತದೆ. ಇದು ವೈದಿಕ ಪ್ರಯೋಗವಾಗಿದೆ.

ಗಮನಿಸಿ: 'ವಿಟ್' ಪ್ರತ್ಯಯದ ಪ್ರಯೋಗವೂ ವೇದದಲ್ಲಿ ಕಂಡುಬರುತ್ತದೆ. ಇದರ ಉದಾಹರಣೆಯನ್ನು ವೈದಿಕ ಪ್ರಕಿಯೆಯಲ್ಲಿ ಕಾಣಬಹುದು.

ಅವಾವಾ - ಅಪಹರಣ ಮಾಡುವವನು. ಓಣೃ ಅಪನಯನೇ ಎಂಬುದು ಧಾತು. ಇದರಲ್ಲಿ 'ಋ'ಕಾರವು ಇತ್. ಈ ಧಾತುವಿಗೆ 'ವನಿಪ್(ವನ್)' ಪ್ರತ್ಯಯ ಬಂದು ಓಣ್+ವನ್ ಎಂದಿದ್ದಾಗ ಪ್ರಕೃತ ಸೂತ್ರದಿಂದ 'ಣ್'ಕಾರಕ್ಕೆ 'ಆ'ಕಾರಾದೇಶವಾಗಿ ಓ+ಆ+ವನ್ ಎಂದಿರುವಾಗ 'ಓ'ಕಾರಕ್ಕೆ 'ಅವ್' ಆದೇಶವಾಗಿ ಅವ್+ಆ+ವನ್ ಎಂದಿರುವಾಗ ಉಪಧಾ ದೀರ್ಘ ಹಾಗು 'ನ್'ಕಾರಲೋಪಗಳಾಗಿ 'ಅವಾವಾ' ಎಂದು ರೂಪವು ಸಿದ್ಧವಾಗುತ್ತದೆ.

ವಿಚ್ ಪ್ರತ್ಯಯದ ಉದಾಹರಣೆಗಳು.

ಉದಾ - ರೋಟ್ - 'ರುಷ್' ಹಿಂಸಾಯಾಂ ಎಂಬ ಧಾತುವಿನ ನಂತರ ವಿಚ್

ಪ್ರತ್ಯಯ ಬಂದು ರುಷ್+ವಿಚ್ ಎಂದಿದ್ದಾಗ, ಪ್ರತ್ಯಯಕ್ಕೆ ಸರ್ವಾಪಹಾರ ಲೋಪವಾಗಿ ಪ್ರತ್ಯಯ ಲಕ್ಷಣದಿಂದ ಪ್ರತ್ಯಯವು ಪರದಲ್ಲಿ ಇದ್ದಂತೆ ಭಾವಿಸಿ, ಇದು ಆರ್ಧಧಾತುಕವಾಗುವುದರಿಂದ, ಲಘೂಪದ ಗುಣವಾಗಿ 'ರೋಷ್' ಎಂದಿದ್ದಾಗ, 'ಸುಪ್' ಪ್ರತ್ಯಯ ಬಂದು ರೋಷ್+ಸ್ ಎಂದಿರುವಾಗ, 'ಸ್'ಕಾರಕ್ಕೆ ಲೋಪವಾಗಿ 'ಷ್'ಕಾರಕ್ಕೆ 'ಟ್'ಕಾರಾದೇಶವಾಗಿ 'ರೋಟ್' ಎಂದು ರೂಪವು ಸಿದ್ಧವಾಗಿದೆ.

ರೇಟ್–ಇದರ ಪ್ರಕ್ರಿಯೆಯನ್ನು ಹಿಂದಿನಂತೆ ತಿಳಿಯಬೇಕು. ಇಲ್ಲಿ 'ರಿಷ್' ಎಂಬುದು ಧಾತು.

ಸುಗಣ್–ಸುಷ್ಠು ಗಣಯತಿ ಇತಿ ಎಂದು ವಿಗ್ರಹ (ಚೆನ್ನಾಗಿ ಎಣಿಸುವವನು ಎಂದರ್ಥ). ಗಣ–ಸಂಖ್ಯಾನೇ ಎಂಬ ಧಾತುವಿಗೆ ಸ್ವಾರ್ಥದಲ್ಲಿ 'ಣಿಚ್' ಪ್ರತ್ಯಯವು ಬಂದು 'ಗಣಿ' ಎಂದು ರೂಪವಾಗಿದೆ. ಸು–ಪೂರ್ವಕವಾದ 'ಗಣಿ'ಗೆ 'ಅನ್ಯೇಭ್ಯೋಽಪಿ ದೃಶ್ಯನ್ತೇ' ಎಂಬುದರಿಂದ 'ವಿಚ್' ಪ್ರತ್ಯಯವು ಬಂದು ಸರ್ವಾಪಹಾರ ಲೋಪವಾಗಿ 'ಣೇರನಿಟಿ' ಎಂಬ ಸೂತ್ರದಿಂದ 'ಇ'ಕಾರಕ್ಕೆ ಲೋಪವಾಗಿ ಹಾಗು ಉಪಪದ ಸಮಾಸಮಾಡುವುದರಿಂದ ಸು+ಗಣ್='ಸುಗಣ್' ಎಂದು ರೂಪವು ಸಿದ್ಧವಾಗುತ್ತದೆ.

**('ಕ್ವಿಪ್' ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ– 803. ಕ್ವಿಪ್ ಚ। (3.2.76)**

ವೃತ್ತಿ– ಅಯಮಪಿ ದೃಶ್ಯತೇ। ಉಖಾಸ್ರತ್। ಪರ್ಣಧ್ವತ್। ವಾಹಭ್ರಟ್।

ಅ.ವೃ – 'ಅನ್ಯೇಭ್ಯೋಽಪಿ ದೃಶ್ಯನ್ತೇ' ಎಂಬ ಸೂತ್ರದಿಂದ ವಚನ ವಿಪರಿಣಾಮ ಮಾಡಿ 'ದೃಶ್ಯತೇ' ಎಂಬ ಪದವು ಅನುವೃತ್ತವಗುತ್ತದೆ.

ಅರ್ಥ – ಕರ್ತ್ರರ್ಥದಲ್ಲಿ ಧಾತುಗಳ ಪರದಲ್ಲಿ 'ಕ್ವಿಪ್' ಪ್ರತ್ಯಯವೂ ಬರುತ್ತದೆ. 'ಕ್ವಿಪ್' ಸರ್ವಾಪಹಾರ ಲೋಪವನ್ನು ಹೊಂದುತ್ತದೆ. ಇದು 'ಕಿತ್' ಆಗಿರುವುದರಿಂದ ಗುಣ ಹಾಗು ವೃದ್ಧಿಗಳ ನಿಷೇಧವು ಬರುತ್ತದೆ. 'ಹ್ರಸ್ವಸ್ಯ ಪಿತಿ ಕೃತಿ ತುಕ್' ಎಂಬುದರಿಂದ 'ತುಕ್' ಆಗಮವು ಬರುವುದಕ್ಕಾಗಿ. 'ಕ್ವಿಪ್'ನಲ್ಲಿ 'ಪ್'ಕಾರದ ಲೋಪವಾಗಿದೆ. 'ಕಿತ್' ಆಗಿರುವುದರಿಂದ ಧಾತುವಿನ ಉಪಧೆಯಲ್ಲಿ 'ನ'ಕಾರವಿದ್ದರೆ ಅದರ ಲೋಪವೂ ಬರುತ್ತದೆ.

ಉದಾ–ಉಖಾಸ್ರತ್– ಉಖಾಯಾಃ ಸ್ರಂಸತೇ ಇತಿ ಉಖಾಸ್ರತ್–(ಯಜ್ಞಪಾತ್ರದಿಂದ ಸೋರುವುದು ಎಂದರ್ಥ). 'ಉಖಾ' ಎಂಬ ಶಬ್ದದಿಂದ ಪಂಚಮ್ಯಂತ ಉಖಾ ಪೂರ್ವಕ ಸ್ರಂಸ್–ಅವಸ್ರಂಸನೇ ಧಾತುವಿನ ಮುಂದೆ ಪ್ರಕೃತ ಸೂತ್ರದಿಂದ 'ಕ್ವಿಪ್' ಪ್ರತ್ಯಯವು ಬಂದು ಉಖಾ+ಸ್ರಂಸ್+ಕ್ವಿಪ್ ಎಂದಿದ್ದಾಗ 'ಕ್ವಿಪ್' ಪ್ರತ್ಯಯವು ಸರ್ವಾಪಹಾರ ಲೋಪವಾಗಿ ಉಖಾ+ಸ್ರಂಸ್=(ಸ್ರನ್‌ಸ್ ಎಂಬಲ್ಲಿ 'ನ್'ಕಾರಕ್ಕೆ ಅನುಸ್ವಾರ ಬಂದು ಸ್ರಂಸ್ ಎಂದಾಗಿದೆ.) ಎಂದಿರುವಾಗ, ಪ್ರಾತಿಪದಿಕ ಸಂಜ್ಞಾ ಹಾಗು ವಿಭಕ್ತಿ ಲೋಪಗಳಾದ ನಂತರ 'ಅನಿದಿತಾಂ ಹಲ ಉಪಧಾಯಾಃ ಕಿಙಿತಿ' ಎಂಬ ಸೂತ್ರದಿಂದ 'ಸ್ರಂಸ್' ಎಂಬಲ್ಲಿರುವ ಅನುಸ್ವಾರ ಸ್ಥಾನೀಯ 'ನ್'ಕಾರಕ್ಕೆ ಲೋಪವಾಗಿ

ಉಖಾ+ಸ್ರಸ್ ಎಂದಿರುವಾಗ ಸಮಾಸವಾಗಿರುವುದರಿಂದ ಪ್ರಾತಿಪದಿಕ ಸಂಜ್ಞಾ ಹಾಗು 'ಸುಪ್' ಪ್ರತ್ಯಯ ಬಂದು ಉಖಾ+ಸ್ರಸ್+ಸ್ ಎಂದಿರುವಾಗ 'ಹಲ್ಙ್ಯಾಭ್ಯೋ 'ದಿಂದ 'ಸ್'ಗೆ ಲೋಪವಾಗಿ 'ಸ್ರಸ್'ನ 'ಸ'ಕಾರಕ್ಕೆ 'ವಸು-ಸ್ರಂಸು-ಧ್ವಂಸ್ವನಡುಹಾಂ ದಃ' ಎಂಬುದರಿಂದ 'ದ'ಕಾರಾದೇಶವಾಗಿ ಉಖಾ+ಸ್ರದ್ ಎಂದಿರುವಾಗ 'ವಾಽವಸಾನೇ' ಎಂಬುದರಿಂದ ಚರ್ತ್ವವು ವೈಕಲ್ಪಿಕವಾಗಿ ಬಂದು, ಉಖಾ+ಸ್ರತ್=ಉಖಾಸ್ರತ್ ಎಂದೂ, ಚರ್ತ್ವ ಬಾರದ ಪಕ್ಷದಲ್ಲಿ ಉಖಾ+ಸ್ರದ್= ಉಖಾಸ್ರದ್ ಎಂದು ರೂಪಗಳು ಸಿದ್ಧವಾಗುತ್ತದೆ.

ಪರ್ಣಧ್ವತ್-ಪರ್ಣಾತ್ ಧ್ವಂಸತೇ ಇತಿ ಪರ್ಣಧ್ವತ್ ಎಂದು ವಿಗ್ರಹ. (ಎಲೆಯಿಂದ ಜಾರುವಂಥಾದ್ದು ಎಂದರ್ಥ). ಇದರ ರೂಪವನ್ನು ಹಿಂದಿನಂತೆ ತಿಳಿಯಬೇಕು.

ವಾಹಭ್ರಟ್-ವಾಹಾತ್ ಭ್ರಂಶತೇ ಇತಿ ವಾಹಭ್ರಟ್ ಎಂದು ವಿಗ್ರಹ (ಕುದುರೆ ಅಥವಾ ವಾಹನದಿಂದ ಕೆಳಗೆ ಬೀಳುವವನು). ಇಲ್ಲಿ ವಾಹಭ್ರಶ್ ಎಂದಿರುವಾಗ 'ವ್ರಶ್ಚ-ಭ್ರಶ್ಜ...' ಎಂಬ ಸೂತ್ರದಿಂದ 'ಶ್' ಕಾರಕ್ಕೆ 'ಷ್'ಕಾರಾದೇಶವಾಗಿ 'ಝಲಾಂ ಜಶೋಽನ್ತೇ' ಎಂಬುದರಿಂದ 'ಡ್'ಕಾರಾದೇಶವಾಗಿ ವಾಹಭ್ರಡ್ ಎಂದಿರುವಾಗ 'ವಾಽವಸಾನೇ' ಎಂಬುದರಿಂದ 'ಡ್' ಕಾರಕ್ಕೆ 'ಟ್'ಕಾರಾದೇಶವಾಗಿ 'ವಾಹಭ್ರಟ್' ಎಂದು ರೂಪವು ಸಿದ್ಧವಾಗುತ್ತದೆ.

### ('ಣಿನಿ' ಪ್ರತ್ಯಯವನ್ನು ವಿಧಿಸುವ ಸೂತ್ರ)

**ಸೂತ್ರ- 804. ಸುಪ್ಯಜಾತೌ ಣಿನಿಸ್ತಾಚ್ಛೀಲ್ಯೇ।(3.2.78)**

ವೃತ್ತಿ- ಅಜಾತ್ಯರ್ಥೇ ಸುಪಿ ಧಾತೋಃ ಣಿನಿಸ್ತಾಚ್ಛೀಲ್ಯೇ ದ್ಯೋತ್ಯೇ। ಉಷ್ಣಭೋಜೀ।

ಪ.ಛೇ - ಸುಪಿ, ಅಜಾತೌ, ಣಿನಿ:, ತಾಚ್ಛೀಲ್ಯೇ ।

ಅರ್ಥ - ಜಾತ್ಯರ್ಥಕ್ಕಿಂತ ಭಿನ್ನವಾದ ಸುಬಂತವು ಉಪಪದವಾಗಿರುವಾಗ ಧಾತುವಿನ ಪರದಲ್ಲಿ ಕರ್ತೃವಿನ ಸ್ವಭಾವವು ತೋರುವಾಗ 'ಣಿನಿ' ಪ್ರತ್ಯಯವು ಬರುತ್ತದೆ.

ಉದಾ - ಉಷ್ಣ-ಭೋಜೀ - ಉಷ್ಣಂ ಭುಂಕ್ತೇ ತಚ್ಛೀಲಂ (ತತ್ಸ್ವಭಾವ:) ಎಂದು ವಿಗ್ರಹ. (ಬಿಸಿ ಬಿಸಿಯಾದ ಊಟವನ್ನು ಮಾಡುವವನು). ಇಲ್ಲಿ 'ಉಷ್ಣಂ' ಎಂಬುದು ಕರ್ಮಾರ್ಥದಲ್ಲಿರುವ ಜಾತ್ಯರ್ಥಕ್ಕಿಂತ ಭಿನ್ನವಾದ ಸುಬಂತ ಉಪಪದವಾಗಿದೆ ಮತ್ತು ತಾಚ್ಛೀಲ್ಯಾರ್ಥವೂ (ಸ್ವಭಾವಾರ್ಥ) ಗಮ್ಯಮಾನವಾಗಿದೆ. ಆದ್ದರಿಂದ ಪ್ರಕೃತ ಸೂತ್ರದಿಂದ 'ಣಿನಿ' (ಇನಿ) ಪ್ರತ್ಯಯವು ಬಂದು ಉಷ್ಣ+ಅಮ್+ಭುಜ್+ಇನ್ ಎಂದಿದ್ದಾಗ. 'ಕರ್ತೃಕರ್ಮಣೋಃಕೃತಿ' ಎಂಬ ಸೂತ್ರದಿಂದ ಉಷ್ಣ ಶಬ್ದಕ್ಕೆ ಷಷ್ಠೀ ವಿಭಕ್ತಿಯು ಬಂದು, ಉಷ್ಣ+ಅಸ್(ಙಸ್)+ಭುಜ್+ಇನ್ ಎಂದಿರುವಾಗ, ಪುಗಂತ ಲಘೂಪದ ಗುಣವಾಗಿ ಉಷ್ಣ+ಅಸ್+ಭೋಜ್+ಇನ್+ಸ್ ಎಂದಿದ್ದಾಗ, ಉಪಪದಸಮಾಸವಾದ ಮೇಲೆ 'ಸುಪ್'ಗೆ ಲೋಪವಾಗಿ 'ಉಷ್ಣಭೋಜಿನ್' ಎಂದಿರುವಾಗ ಪ್ರಾತಿಪದಿಕ ಸಂಜ್ಞೆಯು ಬಂದು ಉಪಧಾದೀರ್ಘ ಹಾಗು 'ನ್'ಕಾರಕ್ಕೆ ಲೋಪವಾಗಿ 'ಉಷ್ಣಭೋಜೀ' ಎಂದು ರೂಪವು ಸಿದ್ಧವಾಗುತ್ತದೆ.

**('ಣಿನಿ' ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ– 805. ಮನಃ(3.2.82)**

ವೃತ್ತಿ– ಸುಪಿ ಮನ್ಯತೇಃ ಣಿನಿಃ ಸ್ಯಾತ್ । ದರ್ಶನೀಯಮಾನೀ।

ಅ.ವೃ – 'ಸುಪ್ಯಜಾತೌ ಣಿನಿಸ್ತಾಚ್ಛೀಲ್ಯೇ' ಎಂಬ ಸೂತ್ರದಿಂದ 'ಸುಪಿ' ಮತ್ತು 'ಣಿನಿ:' ಎಂಬ ಎರಡು ಪದಗಳು ಅನುವೃತ್ತವಾಗುತ್ತವೆ.

ಅರ್ಥ – 'ಮನ್' ಧಾತುವಿಗೆ ಸುಬಂತ ಪದವು ಉಪಪದವಾಗಿದ್ದಾಗ ಣಿನಿ(ಇನ್) ಪ್ರತ್ಯಯವು ಬರುತ್ತದೆ.

ಉದಾ 1.– ದರ್ಶನೀಯ ಮಾನೀ – (ಸುಂದರನನ್ನಾಗಿ ತಿಳಿಯುತ್ತಾನೆ). ದರ್ಶನೀಯಮ್ ಎಂಬ ಸುಬಂತ ಪದವು ಮನ್ ಧಾತುವಿಗೆ ಉಪಪದವಾಗಿ ಇರುವುದರಿಂದ ಣಿನಿ(ಇನ್) ಪ್ರತ್ಯಯವು ಬಂದು ದರ್ಶನೀಯಮ್+ಮನ್+ಇನ್ ಎಂದಿದ್ದಾಗ, ಉಪಪದಸಮಾಸವಾಗಿ'ಸುಪ್' ಗೆ ಲೋಪ ಬಂದು ಉಪಧಾ 'ಅ'ಕಾರಕ್ಕೆ ವೃದ್ಧಿಯಾಗಿ ದರ್ಶನೀಯ+ಮಾನ್+ಇನ್+ಸ್ ಎಂದಿದ್ದಾಗ ಉಪಧಾ(ಇ)ದೀರ್ಘವಾಗಿ 'ನ್' ಮತ್ತು 'ಸ್' ಗಳಿಗೆ ಲೋಪಬಂದು ದರ್ಶನೀಯಮಾನೀ ಎಂದು ರೂಪವು ಸಿದ್ಧವಾಗಿದೆ.

**('ಖಶ್' ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ– 806. ಆತ್ಮಮಾನೇ ಖಶ್ ಚ (3.2.83)**

ವೃತ್ತಿ– ಸಕರ್ಮಕೇ ಮನನೇ ವರ್ತಮಾನಾತ್ಮನ್ಯತೇಃ ಸುಪಿ ಖಶ್ ಸ್ಯಾತ್। ಚಾಣ್ಣಿನಿಃ। ಪಂಡಿತಮಾತ್ಮಾನಂ ಮನ್ಯತೇ ಪಂಡಿತಮ್ಮನ್ಯಃ। ಪಂಡಿತಮಾನೀ।

ಅ.ವೃ – 'ಸುಪ್ಯಜಾತೌ ಣಿನಿಸ್ತಾಚ್ಛೀಲ್ಯೇ' ಎಂಬ ಸೂತ್ರದಿಂದ 'ಸುಪಿ' ಮತ್ತು 'ಣಿನಿ:' ಎಂಬ ಪದಗಳು ಹಾಗು 'ಮನ:' ಎಂಬ ಸೂತ್ರದಿಂದ 'ಮನ:' ಪದವೂ ಅನುವೃತ್ತವಾಗುತ್ತವೆ.

ಅರ್ಥ – 'ಮನ್' ಧಾತುವಿಗೆ ಯಾರು ಕರ್ತೃವಾಗಿದ್ದಾನೋ ಅವನೇ ಕರ್ಮವಾಗಿ ತೋರುವಾಗ ಹಾಗೂ ಸುಬಂತವು ಉಪಪದವಾಗಿರುವಾಗ ಧಾತುವಿನ ಪರದಲ್ಲಿ 'ಖಶ್' ಮತ್ತು 'ಣಿನಿ:' ಪ್ರತ್ಯಯಗಳು ಬರುತ್ತವೆ.

ಸೂತ್ರದಲ್ಲಿ ಹೇಳಿರುವ 'ಚ' ಶಬ್ದದಿಂದ 'ಣಿನಿಃ' ಪ್ರತ್ಯಯವೂ ಗೃಹೀತವಾಗಿರುತ್ತದೆ.

ಉದಾ– ಪಂಡಿತಮ್ಮನ್ಯ:। ಆತ್ಮಾನಂ ಪಂಡಿತಂ ಮನ್ಯತೇ ಇತಿ ವಿಗ್ರಹಃ।(ತನ್ನನ್ನು ಪಂಡಿತನೆಂದು ಭಾವಿಸಿಕೊಳ್ಳುವವನು) (ತಾನು ಪಂಡಿತನಾಗಿಲ್ಲದಿದ್ದರೂ ಪಂಡಿತನೆಂದು ತಿಳಿದುಕೊಳ್ಳುವವನು ಎಂದು ಅರ್ಥ).

ಇಲ್ಲಿ 'ಮನ್' ಧಾತುವಿನ ಕರ್ತೃವಾದ ಪಂಡಿತ ಶಬ್ದವಾಚ್ಯನಾದವನು ತನ್ನನ್ನು ಪಂಡಿತನೆಂದು ಭಾವಿಸುತ್ತಾನೆ. ಆದ್ದರಿಂದ 'ಮನ್' ಧಾತುವು ಆತ್ಮಮಾನೇ ಅರ್ಥದಲ್ಲಿ ಪ್ರಯುಕ್ತವಾಗಿದೆ. 'ಪಂಡಿತ' ಶಬ್ದವು ಕರ್ತೃವೂ ಮತ್ತು ಕರ್ಮವಾಗಿಯೂ

ಉಪಪದವಾಗಿರುವಾಗ, 'ಮನ್' ಜ್ಞಾನೇ ಎಂಬ ನಾಲ್ಕನೇ ಗಣದ ಧಾತುವಿನ ಮೇಲೆ 'ಖಶ್'(ಅ) ಪ್ರತ್ಯಯವು ಬಂದು, ಕೃದ್ಯೋಗದಲ್ಲಿ ಷಷ್ಠೀ ಬರುತ್ತದೆ. ಆಗ ಪಂಡಿತ+ಅಸ್(ಜಸ್)+ಮನ್+ಅ(ಖಶ್) ಎಂದಿರುತ್ತದೆ. ಆಗ 'ಖಶ್' 'ಶಿತ್' ಆಗಿರುವುದರಿಂದ ಸಾರ್ವಧಾತುಕ ಸಂಜ್ಞೆ ಬಂದು "ಕರ್ತರಿ ಶಪ್" ಎಂಬ ಸೂತ್ರದಿಂದ 'ಶಪ್' ಬರಬೇಕಾಗಿತ್ತು. ಆದರೆ ದಿವಾದಿ ಗಣವಾಗಿರುವುದರಿಂದ "ದಿವಾದಿಭ್ಯಃ ಶ್ಯನ್" ಎಂಬ ಸೂತ್ರದಿಂದ 'ಶ್ಯನ್' (ಯ) ಪ್ರತ್ಯಯವು ಬರುತ್ತದೆ. ಆಗ ಮನ್+ಯ+ಅ ಎಂದಿದ್ದಾಗ, ಪರರೂಪ ಬಂದು 'ಮನ್ಯ' ಎಂದಾಗುತ್ತದೆ. "ಉಪಪದಮತಿಙ್" ಎಂಬ ಸೂತ್ರದಿಂದ ಉಪಪದಸಮಾಸವಾಗಿ ಪ್ರಾತಿಪದಿಕ ಸಂಜ್ಞೆ ಬಂದು, "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ 'ಸುಪ್'(ಜಸ್)-ಲೋಪವಾಗಿ ಪಂಡಿತ+ಮನ್ಯ ಎಂದಾಗುತ್ತದೆ. 'ಅರುರ್ದ್ವಿಷದಜನ್ತಸ್ಯ ಮುಮ್' ಎಂಬ ಸೂತ್ರದಿಂದ, 'ಖಿತ್' (ಖಶ್) ಪರದಲ್ಲಿ ಇರುವುದರಿಂದ, 'ಮುಮ್'(ಮ್) ಆಗಮವು ಬಂದು, ಅದಕ್ಕೆ ಅನುಸ್ವಾರ ಮತ್ತು ಪರಸವರ್ಣ ಬಂದಮೇಲೆ ಪಂಡಿತಮ್+ಮನ್ಯ ಎಂದು ರೂಪವಾಗುತ್ತದೆ. ವಿಭಕ್ತಿ ಕಾರ್ಯವಾದಮೇಲೆ, ಪಂಡಿತಮ್ಮನ್ಯಃ ಎಂದು ರೂಪವಾಗುತ್ತದೆ.ಪಂಡಿತಮಾನೀ – ಆತ್ಮಾನಂ ಪಂಡಿತಂ ಮನ್ಯತೇ ಇತಿ ಎಂದು ವಿಗ್ರಹ. (ತನ್ನನ್ನು ಪಂಡಿತನೆಂದು ಭಾವಿಸುವವ). (ತಾನು ಪಂಡಿತನಾಗಿದ್ದು, ತನ್ನನ್ನು ಪಂಡಿತನೆಂದು ತಿಳಿದುಕೊಳ್ಳುವವನು ಎಂದು ಅರ್ಥ).

'ಖಶ್' ಪ್ರತ್ಯಯವು ಬಾರದ ಪಕ್ಷದಲ್ಲಿ 'ಚ'ಕಾರದದ ಪ್ರಯೋಗದಿಂದ 'ಣಿನಿ' ಪ್ರತ್ಯಯವು ಬರುತ್ತದೆ. ಹಿಂದಿನಂತೆ ಉಪಪದ ಸಮಾಸ ಹಾಗು ಸುಪ್ ಲೋಪವಾಗಿ ಉಪಧಾ-ವೃದ್ಧಿಯಾಗಿ (ಇನ್) ಣಿನಿ ಇನ್ನಂತ ಪ್ರಾತಿಪದಿಕವಾದನಂತರ ಸು ಹಾಗು 'ನ'ಕಾರಗಳ ಲೋಪವಾಗಿ ಉಪಧಾ-ದೀರ್ಘವಾಗಿ 'ಪಂಡಿತಮಾನೀ' ಎಂದು ರೂಪವು ಸಿದ್ಧವಾಗುತ್ತದೆ.

**('ಹ್ರಸ್ವ' ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ-807. ಖಿತ್ಯನವ್ಯಯಸ್ಯ। (6.3.66)**

ವೃತ್ತಿ-ಖಿದನ್ತೇ ಪರೇ ಪೂರ್ವಪದಸ್ಯ ಹ್ರಸ್ವಃ ನ ತು ಅವ್ಯಯಸ್ಯ। ತತೋ ಮುಮ್। ಕಾಲಿಮ್ಮನ್ಯಾ।

ಪ.ಛೇ – ಖಿತಿ, ಅನವ್ಯಯಸ್ಯ ।

ಅ.ವೃ- 'ಅಲುಗುತ್ತರಪದೇ' ಎಂಬ ಸೂತ್ರದಲ್ಲಿಯ 'ಉತ್ತರಪದೇ' ಎಂಬುದರ ಅಧಿಕಾರವಿದೆ. 'ಇಕೋ ಹ್ರಸ್ವೋಽಙ್ಯೋಗಾಲವಸ್ಯ' ಎಂಬ ಸೂತ್ರದಿಂದ 'ಹ್ರಸ್ವಃ' ಎಂಬ ಪದವು ಅನುವೃತ್ತವಾಗುತ್ತವೆ.

ಅರ್ಥ – ಖಿದಂತ ಶಬ್ದವು ಉತ್ತರಪದವಾಗಿರುವಾಗ ಪೂರ್ವಪದದ ಅಂತ್ಯ ವರ್ಣಕ್ಕೆ 'ಹ್ರಸ್ವ'ವು ಬರುತ್ತದೆ. ಅವ್ಯಯವು ಪೂರ್ವಪದವಾಗಿ ಇರದೇ ಇದ್ದಾಗ.

ಉದಾ –ಕಾಲಿಮ್ಮನ್ಯಾ – ಆತ್ಮಾನಂ ಕಾಲೀಂ ಮನ್ಯತೇ ಇತಿ ಎಂದು ವಿಗ್ರಹ.

(ತನ್ನನ್ನು ಕಾಲಿ ಎಂದು ಭಾವಿಸುವವಳು).

'ಮನ್' ಧಾತುವಿಗೆ ಕರ್ತ್ರೀಯಾಗಿರುವಾಗ ಸ್ತ್ರೀಯೇ ಕರ್ಮವಾಗಿ ಉಪಪದವಾಗಿ ಇರುವುದರಿಂದ ಖಶ್(ಅ) ಪ್ರತ್ಯಯವು ಬಂದು ಉಪಪದಸಮಾಸವಾಗಿ ಸುಪ್ ಲೋಪವಾಗಿ 'ಶ್ಯನ್' ಬಂದು ಪೂರ್ವಪದವಾದ 'ಕಾಲೀ' ಶಬ್ದದ ಅಂತ್ಯ ವರ್ಣಕ್ಕೆ ಪ್ರಕೃತ ಸೂತ್ರದಿಂದ ಹ್ರಸ್ವ ಹಾಗು 'ಮುಮ್' ಆಗಮಗಳು ಬಂದು ಸ್ತ್ರೀತ್ವ ವಿವಕ್ಷೆಯಲ್ಲಿ 'ಟಾಪ್'(ಆ) ಬಂದು 'ಕಾಲಿಮ್ಮನ್ಯಾ' ಎಂದು ರೂಪವಾಗುತ್ತವೆ.

**('ಣಿನಿ' ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ- ೮೦೮. ಕರಣೇ ಯಜಃ।(3.2.85)**

ವೃತ್ತಿ- ಕರಣೇ ಉಪಪದೇ ಭೂತಾರ್ಥಯಜೇಃ ಣಿನಿಃ ಕರ್ತರಿ। ಸೋಮೇನೇಷ್ಟವಾನ್ ಸೋಮಯಾಜೀ। ಅಗ್ನಿಷ್ಟೋಮಯಾಜೀ।

ಅ.ವೃ – 'ಸುಪ್ಯಜಾತೌ ಣಿನಿಸ್ತಾಚ್ಛೀಲ್ಯೇ' ಎಂಬ ಸೂತ್ರದಿಂದ 'ಣಿನಿಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ – ಕರಣವು ಉಪಪದವಾಗಿರುವಾಗ ಭೂತಕಾಲ ಕ್ರಿಯಾವಾಚಕ 'ಯಜ್' ಧಾತುವಿನ ನಂತರ ಕರ್ತ್ರರ್ಥದಲ್ಲಿ 'ಣಿನಿ' ಪ್ರತ್ಯಯವು ಬರುತ್ತದೆ.

ಉದಾ – ಸೋಮಯಾಜೀ – ಸೋಮೇನ ಇಷ್ಟವಾನ್– (ಸೋಮಲತೆಯಿಂದ ಯಜ್ಞಮಾಡಿದವನು). ಇಲ್ಲಿ ಸೋಮಲತೆಯು ಯಾಗಕ್ಕೆ ಸಾಧನವಾಗಿದೆ. ಇದನ್ನು (ಸೋಮ) ಉಪಪದವಾಗಿವುಳ್ಳ ಭೂತಕಾಲಾರ್ಥಕ 'ಯಜ್' ಧಾತುವಿಗೆ ಪ್ರಕೃತ ಸೂತ್ರದಿಂದ 'ಣಿನಿ' ಪ್ರತ್ಯಯವು ಬಂದು ವಿಭಕ್ತಿಕಾರ್ಯವಾಗಿ 'ಸೋಮಯಾಜೀ' ಎಂದು ರೂಪವಾಗುತ್ತದೆ.

ಅಗ್ನಿಷ್ಟೋಮಯಾಜೀ – ಅಗ್ನಿಷ್ಟೋಮ ಯಾಗವನ್ನು ಮಾಡಿದವನು. ಇದರ ರೂಪವನ್ನು ಹಿಂದಿನಂತೆ ತಿಳಿಯಬೇಕು.

**('ಕ್ವನಿಪ್' ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ–೮೦೯. ದೃಶೇಃ ಕ್ವನಿಪ್। (3.2.94)**

ವೃತ್ತಿ- ಕರ್ಮಣಿ ಭೂತೇ। ಪಾರಂದೃಷ್ಟವಾನ್ ಪಾರದೃಶ್ವಾ।

ಅ.ವೃ – ಭೂತೇ, ಧಾತೋ:, ಪ್ರತ್ಯಯ:, ಪರಶ್ಚ ಇವು ಅಧಿಕಾರ ಸೂತ್ರಗಳಾಗಿವೆ. 'ಕರ್ಮಣಿ ಹನ:' ಎಂಬುದರಿಂದ 'ಕರ್ಮಣಿ' ಎಂಬುದು ಅನುವೃತ್ತವಾಗಿದೆ.

ಅರ್ಥ – ಕರ್ಮಪದವು ಉಪಪದವಾಗಿರುವಾಗ ಭೂತಕಾಲಕ್ರಿಯೆಯು 'ದೃಶ್' ಧಾತುವಿನಿಂದ ತೋರುವಾಗ ಕರ್ತ್ರರ್ಥದಲ್ಲಿ 'ಕ್ವನಿಪ್'(ವನ್) ಪ್ರತ್ಯಯವು ಬರುತ್ತದೆ.

ಉದಾ–ಪಾರದೃಶ್ವಾ। ಪಾರಂ ದೃಷ್ಟವಾನ್–ದಡವನ್ನು ನೋಡಿದವನು (ಪಾರಂಗತನು). ಪಾರ+ಅಮ್+ದೃಶ್+ವನ್ ಎಂದಿದ್ದಾಗ, ಉಪಪದ ಸಮಾಸವಾಗಿ 'ಅಮ್'ಗೆ ಲೋಪವಾಗಿ ಪಾರ+ದೃಶ್+ವನ್ ಎಂದಿರುವಾಗ, ಪ್ರಾತಿಪದಿಕ ಸಂಜ್ಞೆ

ಸುಪ್, ಸುಪ್-ಲೋಪ, ಉಪಧಾದೀರ್ಘವಾಗಿ, ಪಾರ+ದೃಶ್+ವಾನ್ ಎಂದಿರುವಾಗ, 'ನ್'ಕಾರ ಲೋಪವಾಗಿ 'ಪಾರದೃಶ್ವಾ' ಎಂದು ರೂಪವು ಸಿದ್ಧವಾಗಿದೆ.

**('ಕ್ವನಿಪ್' ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ- ೮೧೦. ರಾಜನಿ ಯುಧಿ ಕೃಞಃ॥( ೩.೨.೯೫)**

ವೃತ್ತಿ- ಕ್ವನಿಪ್ ಸ್ಯಾತ್। ಯುಧಿರನ್ತರ್ಭಾವಿತಣ್ಯರ್ಥಃ॥ ರಾಜಾನಮ್ ಯೋಧಿತವಾನ್ ರಾಜಯುಧ್ವಾ ರಾಜಕೃತ್ವಾ

ಅ.ವೃ -ಭೂತೇ, ಧಾತೋಃ, ಪ್ರತ್ಯಯಃ, ಪರಶ್ಚ ಇವು ಅಧಿಕಾರ ಸೂತ್ರಗಳಾಗಿವೆ. 'ಕರ್ಮಣಿ ಹನಃ' ಎಂಬುದರಿಂದ 'ಕರ್ಮಣಿ' ಎಂಬ ಪದವು, ಹಾಗೆಯೇ 'ದೃಶೇಃ ಕ್ವನಿಪ್' ಎಂಬ ಸೂತ್ರದಿಂದ 'ಕ್ವನಿಪ್' ಎಂಬ ಪದವೂ ಅನುವೃತ್ತವಾಗಿವೆ.

ಅರ್ಥ - 'ರಾಜನ್' ಎಂಬ ಕರ್ಮಪದವು ಉಪಪದವಾಗಿರುವಾಗ ಭೂತಕಾಲ ಕ್ರಿಯೆಯು 'ಯುಧ್' ಹಾಗು 'ಕೃಞ್' ಧಾತುಗಳಿಂದ ತೋರುವಾಗ ಧಾತುಗಳ ಪರದಲ್ಲಿ 'ಕ್ವನಿಪ್' (ವನ್) ಪ್ರತ್ಯಯವು ಬರುತ್ತದೆ.

ಇಲ್ಲಿ 'ಯುಧ್' ಧಾತುವು ಅಂತರ್ಭಾವಿತ 'ಣ್ಯ'ರ್ಥವಾಗಿದೆ. ಅಂದರೆ ಈ ಧಾತುವಿನಲ್ಲಿ 'ಣ್ಯ'ರ್ಥವು ಸೇರಿದೆ. (ಯುದ್ಧಮಾಡಲು ಪ್ರೇರೇಪಿಸುವವನು)

ಉದಾ - ರಾಜಯುಧ್ವಾ। ರಾಜಾನಂ ಯೋಧಿತವಾನ್-(ರಾಜನನ್ನು ಯುದ್ಧಮಾಡುವಂತೆ ಮಾಡುವವನು). ಇಲ್ಲಿ ರಾಜನ್+ಅಮ್+ಯುಧ್ ಎಂದಿರುವಾಗ, ಪ್ರಕೃತ ಸೂತ್ರದಿಂದ 'ಕ್ವನಿಪ್' ಪ್ರತ್ಯಯ ಬಂದು ರಾಜನ್+ಅಮ್+ಯುಧ್+ವನ್ ಎಂದಿದ್ದಾಗ, ಉಪಪದ ಸಮಾಸವಾಗಿ ಸುಪ್(ಅಮ್) ಗೆ ಲೋಪವಾಗಿ 'ನ್' ಕಾರಕ್ಕೆ ಲೋಪವಾಗಿ ರಾಜ+ಯುಧ್+ವನ್ ಎಂದಿರುವಾಗ 'ರಾಜಯುಧ್ವನ್' ಎಂದು ನಾಂತ ಪ್ರಾತಿಪದಿಕವು ಸಿದ್ಧವಾಗಿ ಪ್ರಥಮಾ ಏಕವಚನದಲ್ಲಿ ಉಪಧಾದೀರ್ಘ ಹಾಗು 'ನ್'ಕಾಗಳಿಗೆ ಲೋಪವಾಗಿ 'ರಾಜಯುಧ್ವಾ' ಎಂದು ರೂಪವಾಗುತ್ತದೆ.

ರಾಜಕೃತ್ವಾ-ರಾಜಾನಂ ಕೃತವಾನ್-ರಾಜನನ್ನಾಗಿ ಮಾಡಿದನು. ಹಿಂದಿನ 'ಯುಧ್' ಧಾತುವಿಗೆ 'ಕ್ವನಿಪ್'ಸೇರಿಸಿದಾಗ, ಯಾವ ಪ್ರಕ್ರಿಯೆ ಇದೆಯೋ ಅದನ್ನೇ ಇಲ್ಲಿಯೂ (ಕೃಞ್) ಧಾತುವಿಗೂ ಅನುಸರಿಸಬೇಕು. ಇಲ್ಲಿ ರಾಜನ್+ಅಮ್+ಕೃ+ವನ್ ಎಂದಿದ್ದಾಗ, ರಾಜನ್ ಶಬ್ದಲ್ಲಿಯ 'ನ್' ಕಾರ ಲೋಪವಾದ ಮೇಲೆ 'ಹ್ರಸ್ವಸ್ಯ ಪಿತಿ ಕೃತಿ ತುಕ್' ಎಂಬುದರಿಂದ 'ತುಕ್' ಆಗಮವು ಬಂದು, ರಾಜ+ಅಮ್+ಕೃ+ತ್+ವನ್ ವಿಭಕ್ತಿಕಾರ್ಯವಾದಮೇಲೆ, ವನ್ ನಲ್ಲಿಯ 'ನ್' ಕಾರಲೋಪ,ಉಪಧಾ ದೀರ್ಘವಾಗಿ ರಾಜ+ಕೃ+ತ್+ವಾ=ರಾಜಕೃತ್ವಾ ಎಂಬ ರೂಪ ಸಿದ್ಧವಾಗುತ್ತದೆ.

**('ಕ್ವನಿಪ್' ಪ್ರತ್ಯಯವನ್ನು ವಿಧಿಸುವ ಸೂತ್ರ)**

ಸೂತ್ರ-811. ಸಹೇ ಚ॥( 3.2.96)

ವೃತ್ತಿ-ಕರ್ಮಣಿ ಇತಿ ನಿವೃತ್ತಮ್। ಸಹ-ಯೋಧಿತವಾನ್ = ಸಹಯುಧ್ವಾ ಸಹಕೃತ್ವಾ

ಅ.ವೃ–'ದೃಶೇಃ ಕ್ವನಿಪ್' ಎಂಬ ಸೂತ್ರದಿಂದ 'ಕ್ವನಿಪ್' ಎಂಬ ಪದವು ಮತ್ತು 'ರಾಜನಿ ಯುಧಿ ಕೃಞಃ' ಎಂಬುದರಿಂದ 'ಯುಧಿ' ಮತ್ತು 'ಕೃಞಃ'ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ–ಸಹ ಎಂಬ ಪದವು ಉಪಪದವಾಗಿರುವಾಗ ಭೂತಕಾಲಿಕ ಕ್ರಿಯಾರ್ಥವಿರುವಾಗ 'ಯುಧ್' ಮತ್ತು 'ಕೃಞ್' ಧಾತುಗಳ ನಂತರ 'ಕ್ವನಿಪ್' ಪ್ರತ್ಯಯವು ಬರುತ್ತದೆ. 'ಕರ್ಮಣಿ' ಎಂಬ ಪದವು ಇಲ್ಲಿ ಅನುವೃತ್ತವಾಗುವುದಿಲ್ಲ.

ಉದಾ–1. ಸಹ–ಯುಧ್ವಾ =ಸಹ ಯೋಧಿತವಾನ್–ಯಾರದೋ ಜೊತೆಗೆ ಯುದ್ಧ ಮಾಡಿದ.

2. ಸಹ– ಕೃತ್ವಾ= ಸಹ ಕೃತವಾನ್ – ಜೊತೆಗೆ ಮಾಡಿದವನು. ಇವುಗಳ ರೂಪಗಳು ರಾಜಯುಧ್ವಾ, ರಾಜಕೃತ್ವಾ ಗಳಂತೆ ಆಗುತ್ತವೆ.

**('ಡ' ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ–812. ಸಪ್ತಮ್ಯಾಂ ಜನೇರ್ಡಃ।(3.2.97)**

ವೃತ್ತಿ– ಇಲ್ಲ.

ಪ.ಛೇ – ಸಪ್ತಮ್ಯಾಂ, ಜನೇಃ, ಡಃ ।

ಅರ್ಥ – ಸಪ್ತಮ್ಯಂತ ಪದವು ಉಪಪದವಾಗಿರುವಾಗ 'ಜನ್' ಧಾತುವಿಗೆ 'ಡ' ಪ್ರತ್ಯಯವು ಬರುತ್ತದೆ. ('ಡ'ದಲಿ 'ಅ'ಕಾರವು ಮಾತ್ರ ಉಳಿಯುತ್ತದೆ.)

'ಭ'ಸಂಜ್ಞೆ ಇಲ್ಲದಿದ್ದರೂ 'ಡಿತ್' ಆಗಿರುವುದರಿಂದ 'ಟಿ'ಗೆ ಲೋಪ ಬರುತ್ತದೆ.

**('ಜಿ' ಗೆ ಅಲುಕ್ ವಿಧಿಸುವ ಸೂತ್ರ)**

**ಸೂತ್ರ–813. ತತ್ಪುರುಷೇ ಕೃತಿ ಬಹುಲಮ್। (6.3.14)**

ವೃತ್ತಿ– ಙೇಃ ಅಲುಜ್। ಸರಸಿಜಮ್। ಸರೋಜಮ್।

ಅ.ವೃ–'ಹಲದಂತಾತ್ ಸಪ್ತಮ್ಯಾ: ಸಂಜ್ಞಾಯಾಂ' ಎಂಬ ಸೂತ್ರದಿಂದ ಸಪ್ತಮ್ಯಾ: ಎಂಬ ಪದವು ಮತ್ತು 'ಅಲುಗುತ್ತರಪದೇ' ಎಂಬ ಸಂಪೂರ್ಣ ಸೂತ್ರ ಅನುವೃತ್ತವಾಗುತ್ತವೆ.

ಅರ್ಥ–ತತ್ಪುರುಷ ಸಮಾಸದಲ್ಲಿ 'ಕೃತ್' ಪ್ರತ್ಯಯವು ಪರದಲ್ಲಿರುವಾಗ (ಉತ್ತರ ಪದವಾಗಿರುವಾಗ) ಬಹುಲಗ್ರಹಣದಿಂದ(ವಿಕಲ್ಪದಿಂದ) ಸಪ್ತಮಿಗೆ ಅಲುಕ್ ಬರುತ್ತದೆ.

ಉದಾ–ಸರಸಿಜಮ್। (ಸರೋವರದಲ್ಲಿ ಬೆಳೆದ ಕಮಲ)–ಸರಸ್+ಜಿ+ಜನ್ ಎಂದಿದ್ದಾಗ, 'ಅ' (ಡ) ಪ್ರತ್ಯಯವು ಬಂದು ಸರಸ್+ಇ+ಜನ್+ಅ ಎಂದಿದ್ದಾಗ, 'ಡಿ'ತ್ ಆದ ಪ್ರತ್ಯಯವು ಪರದಲ್ಲಿರುವುದರಿಂದ 'ಭ' ಸಂಜ್ಞೆ ಇಲ್ಲದಿದ್ದರೂ 'ಅನ್' ಎಂಬ 'ಟಿ'ಗೆ ಲೋಪವಾಗಿ ಸರಸ್+ಇ+ಜ್+ಅ ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ಇ' (ಜಿ)ಗೆ ವಿಕಲ್ಪವಾಗಿ 'ಅಲುಕ್' ಬಂದು 'ಸರಸಿಜ' ಎಂದಿರುವಾಗ, ಪ್ರಾತಿಪದಿಕ ಸಂಜ್ಞಾ ಹಾಗು ನಪುಂಸಕಲಿಂಗದ 'ಅಮ್' ಆದೇಶವಾಗಿ 'ಸರಸಿಜಮ್'

ಸುಪ್, ಸುಪ್–ಲೋಪ, ಉಪಧಾದೀರ್ಘವಾಗಿ, ಪಾರ+ದೃಶ್+ವಾನ್ ಎಂದಿರುವಾಗ, 'ನ್'ಕಾರ ಲೋಪವಾಗಿ 'ಪಾರದೃಶ್ವಾ' ಎಂದು ರೂಪವು ಸಿದ್ಧವಾಗಿದೆ.

**('ಕ್ವನಿಪ್' ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ- ೮೧೦. ರಾಜನಿ ಯುಧಿ ಕೃಞಃ॥( 3.2.95)**

ವೃತ್ತಿ– ಕ್ವನಿಪ್ ಸ್ಯಾತ್। ಯುಧಿರನ್ತರ್ಭಾವಿತಣ್ಯರ್ಥಃ॥ ರಾಜಾನಮ್ ಯೋಧಿತವಾನ್ ರಾಜಯುಧ್ವಾ ರಾಜಕೃತ್ವಾ॥

ಅ.ವೃ –ಭೂತೇ, ಧಾತೋಃ, ಪ್ರತ್ಯಯಃ, ಪರಶ್ಚ ಇವು ಅಧಿಕಾರ ಸೂತ್ರಗಳಾಗಿವೆ. 'ಕರ್ಮಣಿ ಹನಃ' ಎಂಬುದರಿಂದ 'ಕರ್ಮಣಿ' ಎಂಬ ಪದವು, ಹಾಗೆಯೇ 'ದೃಶೇಃ ಕ್ವನಿಪ್' ಎಂಬ ಸೂತ್ರದಿಂದ 'ಕ್ವನಿಪ್' ಎಂಬ ಪದವೂ ಅನುವೃತ್ತವಾಗಿವೆ.

ಅರ್ಥ – 'ರಾಜನ್' ಎಂಬ ಕರ್ಮಪದವು ಉಪಪದವಾಗಿರುವಾಗ ಭೂತಕಾಲ ಕ್ರಿಯೆಯು 'ಯುಧ್' ಹಾಗು 'ಕೃಞ್' ಧಾತುಗಳಿಂದ ತೋರುವಾಗ ಧಾತುಗಳ ಪರದಲ್ಲಿ 'ಕ್ವನಿಪ್' (ವನ್) ಪ್ರತ್ಯಯವು ಬರುತ್ತದೆ.

ಇಲ್ಲಿ 'ಯುಧ್' ಧಾತುವು ಅಂತರ್ಭಾವಿತ 'ಣ್ಯ'ರ್ಥವಾಗಿದೆ. ಅಂದರೆ ಈ ಧಾತುವಿನಲ್ಲಿ 'ಣ್ಯ'ರ್ಥವು ಸೇರಿದೆ. (ಯುದ್ಧಮಾಡಲು ಪ್ರೇರೇಪಿಸುವವನು)

ಉದಾ – ರಾಜಯುಧ್ವಾ। ರಾಜಾನಂ ಯೋಧಿತವಾನ್–(ರಾಜನನ್ನು ಯುದ್ಧಮಾಡುವಂತೆ ಮಾಡುವವನು). ಇಲ್ಲಿ ರಾಜನ್+ಅಮ್+ಯುಧ್ ಎಂದಿರುವಾಗ, ಪ್ರಕೃತ ಸೂತ್ರದಿಂದ 'ಕ್ವನಿಪ್' ಪ್ರತ್ಯಯ ಬಂದು ರಾಜನ್+ಅಮ್+ಯುಧ್+ವನ್ ಎಂದಿದ್ದಾಗ, ಉಪಪದ ಸಮಾಸವಾಗಿ ಸುಪ್(ಅಮ್) ಗೆ ಲೋಪವಾಗಿ 'ನ್' ಕಾರಕ್ಕೆ ಲೋಪವಾಗಿ ರಾಜ+ಯುಧ್+ವನ್ ಎಂದಿರುವಾಗ 'ರಾಜಯುಧ್ವನ್' ಎಂದು ನಾಂತ ಪ್ರಾತಿಪದಿಕವು ಸಿದ್ಧವಾಗಿ ಪ್ರಥಮಾ ಏಕವಚನದಲ್ಲಿ ಉಪಧಾದೀರ್ಘ ಹಾಗು 'ನ್'ಕಾಗಳಿಗೆ ಲೋಪವಾಗಿ 'ರಾಜಯುಧ್ವಾ' ಎಂದು ರೂಪವಾಗುತ್ತದೆ.

ರಾಜಕೃತ್ವಾ–ರಾಜಾನಂ ಕೃತವಾನ್–ರಾಜನನ್ನಾಗಿ ಮಾಡಿದನು. ಹಿಂದಿನ 'ಯುಧ್' ಧಾತುವಿಗೆ 'ಕ್ವನಿಪ್'ಸೇರಿಸಿದಾಗ, ಯಾವ ಪ್ರಕ್ರಿಯೆ ಇದೆಯೋ ಅದನ್ನೇ ಇಲ್ಲಿಯೂ (ಕೃಞ್) ಧಾತುವಿಗೂ ಅನುಸರಿಸಬೇಕು. ಇಲ್ಲಿ ರಾಜನ್+ಅಮ್+ಕೃ+ವನ್ ಎಂದಿದ್ದಾಗ, ರಾಜನ್ ಶಬ್ದಲ್ಲಿಯ 'ನ್' ಕಾರ ಲೋಪವಾದ ಮೇಲೆ 'ಹ್ರಸ್ವಸ್ಯ ಪಿತಿ ಕೃತಿ ತುಕ್' ಎಂಬುದರಿಂದ 'ತುಕ್' ಆಗಮವು ಬಂದು, ರಾಜ+ಅಮ್+ಕೃ+ತ್+ವನ್ ವಿಭಕ್ತಿಕಾರ್ಯವಾದಮೇಲೆ, ವನ್ ನಲ್ಲಿಯ 'ನ್' ಕಾರಲೋಪ,ಉಪಧಾ ದೀರ್ಘವಾಗಿ ರಾಜ+ಕೃ+ತ್+ವಾ=ರಾಜಕೃತ್ವಾ ಎಂಬ ರೂಪ ಸಿದ್ಧವಾಗುತ್ತದೆ.

**('ಕ್ವನಿಪ್' ಪ್ರತ್ಯಯವನ್ನು ವಿಧಿಸುವ ಸೂತ್ರ)**

ಸೂತ್ರ–811. ಸಹೇ ಚ॥( 3.2.96)

ವೃತ್ತಿ–ಕರ್ಮಣಿ ಇತಿ ನಿವೃತ್ತಮ್। ಸಹ–ಯೋಧಿತವಾನ್ = ಸಹಯುಧ್ವಾ ಸಹಕೃತ್ವಾ

ಅ.ವೃ–'ದೃಶೇ: ಕ್ವನಿಪ್' ಎಂಬ ಸೂತ್ರದಿಂದ 'ಕ್ವನಿಪ್' ಎಂಬ ಪದವು ಮತ್ತು 'ರಾಜನಿ ಯುಧಿ ಕೃಞಃ' ಎಂಬುದರಿಂದ 'ಯುಧಿ' ಮತ್ತು 'ಕೃಞಃ'ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ–ಸಹ ಎಂಬ ಪದವು ಉಪಪದವಾಗಿರುವಾಗ ಭೂತಕಾಲಿಕ ಕ್ರಿಯಾರ್ಥವಿರುವಾಗ 'ಯುಧ್' ಮತ್ತು 'ಕೃಞ್' ಧಾತುಗಳ ನಂತರ 'ಕ್ವನಿಪ್' ಪ್ರತ್ಯಯವು ಬರುತ್ತದೆ. 'ಕರ್ಮಣಿ' ಎಂಬ ಪದವು ಇಲ್ಲಿ ಅನುವೃತ್ತವಾಗುವುದಿಲ್ಲ.

ಉದಾ–1. ಸಹ–ಯುಧ್ವಾ =ಸಹ ಯೋಧಿತವಾನ್–ಯಾರದೋ ಜೊತೆಗೆ ಯುದ್ಧ ಮಾಡಿದ.

2. ಸಹ– ಕೃತ್ವಾ= ಸಹ ಕೃತವಾನ್ – ಜೊತೆಗೆ ಮಾಡಿದವನು. ಇವುಗಳ ರೂಪಗಳು ರಾಜಯುಧ್ವಾ, ರಾಜಕೃತ್ವಾ ಗಳಂತೆ ಆಗುತ್ತವೆ.

**('ಡ' ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ–812. ಸಪ್ತಮ್ಯಾಂ ಜನೇರ್ಡಃ।(3.2.97)**

ವೃತ್ತಿ– ಇಲ್ಲ.

ಪ.ಛೇ – ಸಪ್ತಮ್ಯಾಂ, ಜನೇಃ, ಡಃ ।

ಅರ್ಥ – ಸಪ್ತಮ್ಯಂತ ಪದವು ಉಪಪದವಾಗಿರುವಾಗ 'ಜನ್' ಧಾತುವಿಗೆ 'ಡ' ಪ್ರತ್ಯಯವು ಬರುತ್ತದೆ. ('ಡ'ದಲಿ 'ಅ'ಕಾರವು ಮಾತ್ರ ಉಳಿಯುತ್ತದೆ.)

'ಭ'ಸಂಜ್ಞೆ ಇಲ್ಲದಿದ್ದರೂ 'ಡಿತ್' ಆಗಿರುವುದರಿಂದ 'ಟಿ'ಗೆ ಲೋಪ ಬರುತ್ತದೆ.

**('ಜಿ' ಗೆ ಅಲುಕ್ ವಿಧಿಸುವ ಸೂತ್ರ)**

**ಸೂತ್ರ–813. ತತ್ಪುರುಷೇ ಕೃತಿ ಬಹುಲಮ್। (6.3.14)**

ವೃತ್ತಿ– ಜೇಃ ಅಲುಜ್। ಸರಸಿಜಮ್। ಸರೋಜಮ್।

ಅ.ವೃ–'ಹಲದಂತಾತ್ ಸಪ್ತಮ್ಯಾ: ಸಂಜ್ಞಾಯಾಂ' ಎಂಬ ಸೂತ್ರದಿಂದ ಸಪ್ತಮ್ಯಾ: ಎಂಬ ಪದವು ಮತ್ತು 'ಅಲುಗುತ್ತರಪದೇ' ಎಂಬ ಸಂಪೂರ್ಣ ಸೂತ್ರ ಅನುವೃತ್ತವಾಗುತ್ತವೆ.

ಅರ್ಥ–ತತ್ಪುರುಷ ಸಮಾಸದಲ್ಲಿ 'ಕೃತ್' ಪ್ರತ್ಯಯವು ಪರದಲ್ಲಿರುವಾಗ (ಉತ್ತರ ಪದವಾಗಿರುವಾಗ) ಬಹುಲಗ್ರಹಣದಿಂದ(ವಿಕಲ್ಪದಿಂದ) ಸಪ್ತಮಿಗೆ ಅಲುಕ್ ಬರುತ್ತದೆ.

ಉದಾ–ಸರಸಿಜಮ್। (ಸರೋವರದಲ್ಲಿ ಬೆಳೆದ ಕಮಲ)–ಸರಸ್+ಜಿ+ಜನ್ ಎಂದಿದ್ದಾಗ, 'ಅ' (ಡ) ಪ್ರತ್ಯಯವು ಬಂದು ಸರಸ್+ಇ+ಜನ್+ಅ ಎಂದಿದ್ದಾಗ, 'ಡಿ'ತ್ ಆದ ಪ್ರತ್ಯಯವು ಪರದಲ್ಲಿರುವುದರಿಂದ 'ಭ' ಸಂಜ್ಞೆ ಇಲ್ಲದಿದ್ದರೂ 'ಅನ್' ಎಂಬ 'ಟಿ'ಗೆ ಲೋಪವಾಗಿ ಸರಸ್+ಇ+ಜ್+ಅ ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ಇ' (ಜಿ)ಗೆ ವಿಕಲ್ಪವಾಗಿ 'ಅಲುಕ್' ಬಂದು 'ಸರಸಿಜ' ಎಂದಿರುವಾಗ, ಪ್ರಾತಿಪದಿಕ ಸಂಜ್ಞಾ ಹಾಗು ನಪುಂಸಕಲಿಂಗದ 'ಅಮ್' ಆದೇಶವಾಗಿ 'ಸರಸಿಜಮ್'

ಎಂದು ರೂಪವು ಸಿದ್ಧವಾಗುತ್ತದೆ.

ಉದಾ:-ಸರೋಜಮ್।-ಇಲ್ಲಿ 'ಜಿ' ಪ್ರತ್ಯಯವು 'ಲುಕ್' ಆಗಿರುವಾಗ ಸರಸ್+ಜ+ಅಮ್ ಎಂದಿದ್ದಾಗ, 'ಸ್'ಕಾರಕ್ಕೆ ರುತ್ವವಾಗಿ ಸರರು+ಜ+ಅಮ್ ಎಂದಿರುವಾಗ, 'ಹಶಿ ಚ' ಎಂಬ ಸೂತ್ರದಿಂದ 'ರುತ್ವ' ಕ್ಕೆ 'ಉ'ಕಾರಾದೇಶವಾಗಿ ಸರ+ಉ+ಜ+ಅ ಎಂದಿದ್ದಾಗ, 'ಅ' ಕಾರ 'ಉ'ಕಾರಗಳಿಗೆ ಗುಣವಾಗಿ ಸರ್+ಓ+ಜ+ಅಮ್= ಸರೋಜಮ್ ಎಂದು ರೂಪಸಿದ್ಧವಾಗಿದೆ.

**('ಡ' ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ- 814. ಉಪಸರ್ಗೇ ಚ ಸಂಜ್ಞಾಯಾಮ್। (3.2.99)**

ವೃತ್ತಿ- ಪ್ರಜಾ ಸ್ಯಾತ್ ಸಂತತೌ ಜನೇ।

ಅ.ವೃ – 'ಸಪ್ತಮ್ಯಾಂ ಜನೇರ್ಡ:' ಎಂಬ ಸೂತ್ರದಿಂದ ಜನೇ: ಮತ್ತು ಡ: ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ – ಉಪಸರ್ಗವು ಉಪಪದವಾಗಿರುವಾಗ ಭೂತಕಾಲದಲ್ಲಿ 'ಜನ್' ಧಾತುವಿಗೆ 'ಡ' ಪ್ರತ್ಯಯವು ಸಂಜ್ಞೆಯು ತೋರುವಾಗ ಬರುತ್ತದೆ.

ಉದಾ – ಪ್ರಜಾ=(ಸಂತತಿ)। ಇಲ್ಲಿ 'ಪ್ರ' ಉಪಸರ್ಗ ಪೂರ್ವಕ 'ಜನ್' ಧಾತುವಿಗೆ ಸಂಜ್ಞಾರ್ಥವು ಬಂದು 'ಡ' ಪ್ರತ್ಯಯವೂ ಬಂದಿದೆ. ಆಗ ಪ್ರ+ಜನ್+ಅ(ಡ)

ಎಂದಿದ್ದಾಗ, 'ಡಿತ್ವ' ಸಾಮರ್ಥ್ಯದಿಂದ 'ಡ್'(ಅನ್)ಗೆ ಲೋಪವಾಗಿ ಪ್ರ+ಜ್+ಅ ಎಂದಿದ್ದಾಗ 'ಕುಗತಿ ಪ್ರಾದಯ:' ಎಂಬುದರಿಂದ 'ಗತಿ' ಸಮಾಸವಾಗಿ ಸ್ತ್ರೀತ್ವ ವಿವಕ್ಷೆಯಲ್ಲಿ 'ಟಾಪ್'(ಆ) ಬಂದು 'ಪ್ರಜಾ' ಎಂದು ರೂಪ ಸಿದ್ಧವಾಗುತ್ತದೆ.

**(ನಿಷ್ಠಾ ಸಂಜ್ಞೆಯನ್ನು ಹೇಳುವ ಸೂತ್ರ)**

**ಸೂತ್ರ-815. ಕ್ತ-ಕ್ತವತು ನಿಷ್ಠಾ।(1.1.26)**

ವೃತ್ತಿ-ಏತೌ ನಿಷ್ಠಾಸಂಜ್ಞೌ ಸ್ತಃ।

ಅರ್ಥ-ಕ್ತ ಮತ್ತು 'ಕ್ತವತು' ಪ್ರತ್ಯಯಗಳಿಗೆ 'ನಿಷ್ಠಾ' ಎಂಬ ಸಂಜ್ಞೆಯು ಬರುತ್ತದೆ.

**('ನಿಷ್ಠಾ' ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ- 816. ನಿಷ್ಠಾ।(3.1.102)**

ವೃತ್ತಿ- ಭೂತಾರ್ಥವೃತ್ತೇಃ ಧಾತೋಃ ನಿಷ್ಠಾ ಸ್ಯಾತ್।ತತ್ರ(770) ತಯೋರೇವೇತಿ ಭಾವಕರ್ಮಣೋಃ ಕ್ತಃ। (769) ಕರ್ತರಿ ಕೃದಿತಿ ಕರ್ತರಿ ಕ್ತವತುಃ। ಉಕಾವಿತೌ। ಸ್ನಾತಂ ಮಯಾ। ಸ್ತುತಸ್ತ್ವಯಾ ವಿಷ್ಣುಃ। ವಿಶ್ವಂ ಕೃತವಾನ್ ವಿಷ್ಣುಃ।

ಅ.ವೃ-ಭೂತೇ, ಧಾತೋಃ, ಪ್ರತ್ಯಯಃ, ಪರಶ್ಚ ಇವು ಅಧಿಕಾರ ಸೂತ್ರಗಳು.

ಅರ್ಥ-ನಿಷ್ಠಾ ಸಂಜ್ಞೆಯುಳ್ಳ 'ಕ್ತ' ಮತ್ತು 'ಕ್ತವತು' ಪ್ರತ್ಯಯಗಳು ಭೂತಕಾಲಾರ್ಥದಲ್ಲಿ ಎಲ್ಲ ಧಾತುಗಳಿಗೂ ಬರುತ್ತದೆ. ಇವೆರಡೂ ಪ್ರತ್ಯಯಗಳಲ್ಲಿ 'ತಯೋರೇವ ಕೃತ್ಯ-ಕ್ತ-

ಖಲರ್ಥಾಃ' ಎಂಬ ಸೂತ್ರದಿಂದ 'ಕ್ತ' ಪ್ರತ್ಯಯವು ಭಾವ ಮತ್ತು ಕರ್ಮಾರ್ಥದಲ್ಲೂ ಹಾಗೆಯೇ 'ಕರ್ತರಿ ಕೃತ್' ಎಂಬ ಸೂತ್ರಕ್ಕನುಗುಣವಾಗಿ 'ಕ್ತವತು' ಪ್ರತ್ಯಯವು ಕರ್ತ್ರರ್ಥದಲ್ಲಿ ಬರುತ್ತದೆ. ಭಾವ ಮತ್ತು ಕರ್ಮಾರ್ಥದಲ್ಲಿ 'ಕ್ತ' ಪ್ರತ್ಯಯವು ಬರುವುದರಿಂದ ಕರ್ತೃವು ತೃತೀಯಾಂತವಾಗಿರುತ್ತದೆ. ಆದರೆ 'ಕ್ತವತು' ಪ್ರತ್ಯಯವು ಕರ್ತ್ರರ್ಥದಲ್ಲಿ ಇರುವುದರಿಂದ ಕರ್ತೃವು ಪ್ರಥಮಾಂತವಾಗಿರುತ್ತದೆ.

'ಕ್ತವತು' ಪ್ರತ್ಯಯದಲ್ಲಿ 'ಉ'ಕಾರ 'ಕ'ಕಾರಗಳು ಇತ್ ಆಗಿರುತ್ತವೆ.

ಉದಾ–ಸ್ನಾತಂ ಮಯಾ–ನನ್ನಿಂದ ಸ್ನಾನವು ಮಾಡಲ್ಪಟ್ಟಿತು. ಇಲ್ಲಿ 'ಸ್ನಾ' ಧಾತುವು ಅಕರ್ಮಕವಾಗಿರುವುದರಿಂದ ಭಾವಾರ್ಥದಲ್ಲಿ 'ಕ್ತ' ಪ್ರತ್ಯಯ ಬಂದು 'ಕ'ಕಾರವು ಲೋಪವಾಗಿ ಸ್ನಾ+ತ(ಕ್ತ) ಎಂದಿದ್ದಾಗ ಪ್ರಾತಿಪದಿಕ ಸಂಜ್ಞಾ ಹಾಗು–'ಸು'ಗೆ, 'ಅಮಾದೇಶ'ವಾಗಿ ಸ್ನಾ+ತ+ಅಮ್ ಎಂದಿರುವಾಗ, ಪೂರ್ವರೂಪ ಅದೇಶವಾಗಿ 'ಸ್ನಾತಮ್' ಎಂದು ರೂಪವಾಗಿದೆ.

ಮಯಾ–ಎಂಬ 'ಅಸ್ಮದ್' ಶಬ್ದವು ಕರ್ತೃವಾಚಕವಾಗಿದೆ. ಆದ್ದರಿಂದ ತೃತೀಯಾ ವಿಭಕ್ತಿಯನ್ನು. 'ಕರ್ತೃಕರಣಯೋಃ ತೃತೀಯಾ' ಎಂಬುದರಿಂದ ಪಡೆದಿದೆ.

ಸ್ತುತಸ್ತ್ವಯಾ ವಿಷ್ಣುಃ–ನಿನ್ನಿಂದ ವಿಷ್ಣುವು ಸ್ತುತಿಸಲ್ಪಟ್ಟನು. ಇಲ್ಲಿ 'ಷ್ಟುಞ್' ಸ್ತುತೌ ಎಂಬುದು ಧಾತು. 'ಧಾತ್ವಾದೇಃ ಷಃ ಸಃ' ಎಂಬ ಸೂತ್ರದಿಂದ 'ಷ್'ಕಾರಕ್ಕೆ 'ಸ'ಕಾರವು ಬರುವುದರಿಂದ 'ಟ'ಕಾರಕ್ಕೆ 'ತ'ಕಾರವು ಬಂದು 'ಸ್ತು' ಎಂದಾಯಿತು. ಇದರ ಪರದಲ್ಲಿ ಕರ್ಮ ಹಾಗು ಭೂತಕಾಲಾರ್ಥದಲ್ಲಿ ತ('ಕ್ತ') ಪ್ರತ್ಯಯ ಬಂದು ಸ್ತು+ತ ಎಂದಿರುವಾಗ, ಪ್ರತ್ಯಯವು ಕಿತ್ ಆಗಿರುವುದರಿಂದ ಧಾತುವಿನ 'ಉ'ಕಾರಕ್ಕೆ ಗುಣವು, ಹಾಗು ಧಾತುವು ಅನಿಟ್ ಆಗಿರುವುದರಿಂದ, ಇಡಾಗಮವು ಇವೆರಡೂ ಬಾರದೇ ಪ್ರಾತಿಪದಿಕ ಸಂಜ್ಞೆಯು ಬಂದು ಸುಪ್ ಸೇರಿಸಿದಾಗ ರುತ್ವ ವಿಸರ್ಗಗಳಿಂದ ಸ್ತು+ತ+ಸ್, ಸ್ತು+ತ+ರು, ಸ್ತು+ತಃ=ಸ್ತುತಃ ಎಂದು ರೂಪವಾಗುತ್ತದೆ.

'ಸ್ತು' ಧಾತುವು ಸಕರ್ಮಕವಾಗಿರುವುದರಿಂದ ಕರ್ಮಾರ್ಥದಲ್ಲಿ ನಿಷ್ಠಾ(ಕ್ತ) ಪ್ರತ್ಯಯವು ಬಂದಿದೆ. ಕರ್ಮಾರ್ಥದಲ್ಲಿ ಪ್ರತ್ಯಯವು ಬಂದಿರುವುದರಿಂದ ಕರ್ತೃವು ಅನುಕ್ತವಾಗಿದ್ದಾನೆ. ಆದ್ದರಿಂದ 'ತ್ವಯಾ' ಎಂದು ಕರ್ತೃವಾಚಕಪದವು ತೃತೀಯಾ ವಿಭಕ್ತಿಯನ್ನು ಪಡೆದಿದೆ.

ವಿಶ್ವಂ ಕೃತವಾನ್ ವಿಷ್ಣುಃ–ವಿಷ್ಣುವು ವಿಶ್ವವನ್ನು ಸೃಷ್ಟಿಸಿದನು. ಇಲ್ಲಿ 'ಕೃ' ಧಾತುವಿಗೆ ಕರ್ತ್ರರ್ಥದಲ್ಲಿ 'ಕ್ತವತು' ಪ್ರತ್ಯಯವು ಬಂದು ಕೃ+ತವತ್ ಎಂದಿದ್ದಾಗ, ಪ್ರಾತಿಪದಿಕ ಸಂಜ್ಞೆಯು ಬಂದು 'ಕ್ತವತು' ಉಗಿತ್ತಾಗಿರುವುದರಿಂದ, 'ಉಗಿದಚಾಂ ಸರ್ವನಾಮಸ್ಥಾನೇಽಧಾತೋಃ' ಎಂಬುದರಿಂದ 'ನುಮ್' ಆಗಮವು ಬಂದು, ಕೃತವ+ನ್+ತ್+ಸ್ ಎಂದಿದ್ದಾಗ, 'ಅತ್ವಸಂತಸ್ಯ ಚಾಧಾತೋಃ' ಎಂಬುದರಿಂದ,'ವ್' ಕಾರದ ನಂತರ ಇರುವ 'ಅ' ಕಾರಕ್ಕೆ ದೀರ್ಘ ಬಂದು, ಕೃತವಾ+ನ್+ತ್+ಸ್ ಎಂದಿದ್ದಾಗ, 'ಸ್'ಕಾರಕ್ಕೆ 'ಹಲ್ ಙ್ಯಾಬ್ಭ್ಯೋದೀರ್ಘಾತ್ ಸುತಿಸಿ ಅಪೃಕ್ತಂ ಹಲ್' ಎಂಬುದರಿಂದ ಲೋಪವಾಗಿ 'ತ್'ಕಾರಕ್ಕೆ 'ಸಂಯೋಗಾಂತಸ್ಯ ಲೋಪಃ' ಎಂಬುದರಿಂದ ಲೋಪವಾಗಿ, ಕೃ+ತವಾ+ನ್=ಕೃತವಾನ್ ಎಂದು ರೂಪವು ಸಿದ್ಧವಾಗಿದೆ. ಇಲ್ಲಿ

ಕರ್ತ್ರರ್ಥದಲ್ಲಿ 'ಕ್ತವತು' ಪ್ರತ್ಯಯವು ಬಂದಿದೆ. ಆದರೆ ಕರ್ತೃವು ಉಕ್ತವಾಗಿರುವುದರಿಂದ, ಕರ್ತೃವಾಚಕವಾದ ವಿಷು ಶಬ್ದಕ್ಕೆ ಪ್ರಥಮಾ ವಿಭಕ್ತಿಯು ಬಂದಿದೆ. ಕರ್ಮವಾದ ವಿಶ್ವವು ಧಾತುವಿನಿಂದ ಅನುಕ್ತವಾದ್ದರಿಂದ, ದ್ವಿತೀಯಾ ವಿಬಕ್ತಿಯು ಬಂದಿದೆ.

**('ನತ್ವ' ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ- 817. ರದಾಭ್ಯಾಂ ನಿಷ್ಠಾತೋಃ ನಃ ಪೂರ್ವಸ್ಯ ಚ ದಃ॥( 8.1.42)**

ವೃತ್ತಿ- ರದಾಭ್ಯಾಂ ಪರಸ್ಯ ನಿಷ್ಠಾತಸ್ಯ ನಃ ಸ್ಯಾತ್। ನಿಷ್ಠಾಪೇಕ್ಷಯಾ ಪೂರ್ವಸ್ಯ ಧಾತೋಃ ದಸ್ಯ ಚ॥ ಶೄ-ಹಿಂಸಾಯಾಮ್। (660) ಋತ ಇತ್। ರಪರಃ॥ ಣತ್ವಮ್। ಶೀರ್ಣಃ॥ ಭಿನ್ನಃ॥ ಛಿನ್ನಃ॥

ಅರ್ಥ-'ರೇಫ' ಅಥವಾ 'ದ'ಕಾರಗಳ ಪರದಲ್ಲಿರುವ 'ನಿಷ್ಠಾ' ಸಂಜ್ಞಕ ಪ್ರತ್ಯಯದ 'ತ್' ಕಾರಕ್ಕೆ 'ನ್'ಕಾರವು ಆದೇಶವಾಗಿ ಬರುತ್ತದೆ. ಹಾಗು 'ನಿಷ್ಠಾ' ಪ್ರತ್ಯಯದ ದೃಷ್ಟಿಯಲ್ಲಿ ಪೂರ್ವದಲ್ಲಿರುವ ಧಾತುವಿನ 'ದ'ಕಾರಕ್ಕೂ 'ನ್'ಕಾರವು ಆದೇಶವಾಗಿ ಬರುತ್ತದೆ.

ಉದಾ – ಶೀರ್ಣಃ॥ – 'ಶೄ' ಹಿಂಸಾಯಾಂ ಎಂಬುದು ಧಾತು (ಧ್ವಂಸಗೊಳಿಸಲ್ಪಟ್ಟ). ಇದಕ್ಕೆ ಕರ್ಮಾರ್ಥದಲ್ಲಿ 'ನಿಷ್ಠಾ' ಪ್ರತ್ಯಯವು ಬಂದು ಶೄ+ತ(ಕ್ತ) ಎಂದಿದ್ದಾಗ, 'ಋತ ಇದ್ಧಾತೋ:' ಎಂಬ ಸೂತ್ರದಿಂದ 'ಇರ್' ಆದೇಶವಾಗಿ ಶಿರ್+ತ ಎಂದಿದ್ದಾಗ 'ಹಲಿಚ' ಎಂಬುದರಿಂದ ದೀರ್ಘವಾಗಿ ಶೀರ್+ತ ಎಂದಿರುವಾಗ ಪ್ರಕೃತ ಸೂತ್ರದಿಂದ 'ತ್' ಕಾರಕ್ಕೆ 'ನ'ಕಾರಾದೇಶವಾಗಿ ಶೀರ್+ನ ಎಂದಿರುವಾಗ 'ರಷಾಭ್ಯಾಂ ನೋಣ: ಸಮಾನ ಪದೇ' ಎಂಬುದರಿಂದ 'ನ'ಕಾರಕ್ಕೆ 'ಣ'ಕಾರಾದೇಶವಾಗಿ ಶೀರ್+ಣ ಎಂದಿದ್ದಾಗ ಪ್ರಾತಿಪದಿಕಸಂಜ್ಞಾ ಹಾಗು 'ಸುಪ್' ಪ್ರತ್ಯಯವು ಬಂದು ಶೀರ್+ಣ+ಸ್ ಎಂದಿರುವಾಗ ರುತ್ವ ವಿಸರ್ಗಗಳಾಗಿ 'ಶೀರ್ಣ:' ಎಂದು ರೂಪವಾಗುತ್ತದೆ.

ಭಿನ್ನ-ಭಿದಿರ್ (ಭಿದ್) ವಿದಾರಣೇ ಎಂಬುದು ಧಾತು (ಸೀಳುವುದು) ಎಂದರ್ಥ. ಕರ್ಮಾರ್ಥದಲ್ಲಿ 'ನಿಷ್ಠಾ' ಪ್ರತ್ಯಯವು ಬಂದು ಭಿದ್+ತ ಎಂದಿದ್ದಾಗ ಪ್ರಕೃತ ಸೂತ್ರದಿಂದ 'ದ್'ಕಾರ 'ತ'ಕಾರಗಳಿಗೆ 'ನ'ಕಾರಾದೇಶವಾಗಿ ಭಿನ್+ನ+ಸ್(ಸುಪ್) ಎಂದಿರುವಾಗ ರುತ್ವ ವಿಸರ್ಗಗಳಾಗಿ 'ಭಿನ್ನ:' ಎಂದು ರೂಪವಾಗುತ್ತದೆ.

ಛಿನ್ನಃ॥ – ಛಿದಿರ್- ದ್ವೈಧೀಕರಣೇ ಎಂಬುದು ಧಾತು (ಕತ್ತರಿಸುವುದು) ಎಂದರ್ಥ. ಇದರ ರೂಪವು ಮೇಲಿನಂತೆಯೇ ಆಗುತ್ತದೆ.

**('ನ್'ಕಾರಾದೇಶವನ್ನು ವಿಧಿಸುವ ಸೂತ್ರ)**

**ಸೂತ್ರ-818. 'ಸಂಯೋಗಾದೇರಾತೋಧಾತೋರ್ಯಣ್ವತಃ ।**

ವೃತ್ತಿ – ನಿಷ್ಠಾತಸ್ಯ ನಃ ಸ್ಯಾತ್।ದ್ರಾಣಃ॥ ಗ್ಲಾನಃ॥

ಪ.ಛೇ – 'ಸಂಯೋಗಾದೇಃ, ಆತಃ, ಧಾತೋಃ, ಯಣ್ವತಃ ।'

ಅ.ವೃ – ಪೂರ್ವ ಸೂತ್ರದಿಂದ 'ನಿಷ್ಠಾತ:' ಮತ್ತು 'ನ:' ಎಂಬ ಪದಗಳ

ಅನುವೃತ್ತವಾಗುತ್ತದೆ.

ಅರ್ಥ– ಸಂಯೋಗಾದಿಯಾದ (ಸಂಯುಕ್ತ ವರ್ಣವನ್ನು ಆದಿಯಲ್ಲಿ ವುಳ್ಳ) 'ಆ'ಕಾರಾನ್ತವಾದ ಹಾಗೂ 'ಯಣ್' ವರ್ಣಗಳಿಂದ ಕೂಡಿದ ಧಾತುವಿನ ಪರದಲ್ಲಿರುವ 'ನಿಷ್ಠಾ' ದ 'ತ'(ಕ್ತ) ಕಾರಕ್ಕೆ 'ನ್' ಕಾರವು ಆದೇಶವಾಗಿ ಬರುತ್ತದೆ.

ಉದಾ –ದ್ರಾಣಃ। – ದ್ರಾ ಕುತ್ಸಾಯಾಂ ಗತೌ ಎಂಬುದು ಧಾತು (ಕುತ್ಸಿತವಾದ ಗತಿಯುಳ್ಳವನು) ಎಂದರ್ಥ. ಇದರ ಪರದಲ್ಲಿ 'ನಿಷ್ಠಾ' ದ 'ತ'(ಕ್ತ) ಪ್ರತ್ಯಯವು ಬಂದು ದ್ರಾ+ತ ಎಂದಿರುವಾಗ, ಈ ಧಾತುವು ಸಂಯೋಗಾದಿಯಾಗಿಯೂ ಮತ್ತು 'ಆ' ಕಾರಾನ್ತವಾಗಿಯೂ ಹಾಗೂ 'ಯಣ್' ಉಳ್ಳದ್ದಾಗಿಯೂ ಇರುವುದರಿಂದ, 'ತ' ಪ್ರತ್ಯಯಕ್ಕೆ 'ನ' ಕಾರಾದೇಶವು ಬಂದು ದ್ರಾ+ನ ಎಂದಿದ್ದಾಗ, 'ಅಟ್ಕುಪ್ವಾಙ್ನುಮ್ ವ್ಯವಾಯೇಽಪಿ' ಎಂಬುದರಿಂದ 'ನ' ಕಾರಕ್ಕೆ 'ಣತ್ವ' ಬಂದು ದ್ರಾ+ಣ ಎಂದಾದಾಗ, ಪ್ರಾತಿಪದಿಕ ಸಂಜ್ಞೆ ಬಂದು ವಿಭಕ್ತಿ ಕಾರ್ಯ ಮಾಡಿದಮೇಲೆ ದಾ+ಣ+ಸ್=ದ್ರಾಣಃ ಎಂಬ ರೂಪವು ಸಿದ್ಧವಾಗುತ್ತದೆ.

'ಕ್ತವತು' ಪ್ರತ್ಯಯವು ಬಂದಾಗಲೂ ಸಹ ಇದೇ ರೀತಿಯ ಪ್ರಕ್ರಿಯೆಯಿಂದ ದ್ರಾಣವಾನ್ ಎಂದು ರೂಪವಾಗುತ್ತದೆ. (ದುರ್ಗತಿಯನ್ನು ಹೊಂದಿದವನು) ಎಂದರ್ಥ.

ಗ್ಲಾನಃ। ಗ್ಲೈ ಹರ್ಷಕ್ಷಯೇ ಎಂದು ಧಾತು. (ಸಂತೋಷವನ್ನು ಕುಗ್ಗಿಸುವದು ಎಂದರ್ಥ). ಈ ಧಾತುವಿನ ಪರದಲ್ಲಿ 'ನಿಷ್ಠಾ' ಪ್ರತ್ಯಯದು (ತ) ಬಂದು ಗ್ಲೈ+ತ ಎಂದಿದ್ದಾಗ, 'ಆದೇಚ ಉಪದೇಶೇಽಶಿತಿ' ಎಂಬ ಸೂತ್ರದಿಂದ 'ಐ' ಕಾರಕ್ಕೆ 'ಆ' ಕಾರ ಆದೇಶವಾಗಿ ಗ್ಲಾ+ತ ಎಂದಿದ್ದಾಗ, ಇದು 'ಆ' ಕಾರಾನ್ತವಾಗಿಯೂ, ಸಂಯೋಗಾದಿಯಾಗಿಯೂ ಹಾಗೂ 'ಲ' ಕಾರರೂಪವಾದ 'ಯಣ್' ಉಳ್ಳದ್ದಾಗಿಯೂ ಇರುವುದರಿಂದ, ಪ್ರಕೃತ ಸೂತ್ರದಿಂದ 'ತ' ಕಾರಕ್ಕೆ 'ನ' ಕಾರಾದೇಶವಾಗಿ ಗ್ಲಾ+ನ ಎಂದಿರುವಾಗ, ಪ್ರಾತಿಪದಿಕ ಸಂಜ್ಞೆ ಬಂದು, ವಿಭಕ್ತಿ ಕಾರ್ಯ ಮಾಡಿದ ಮೇಲೆ ಗ್ಲಾ+ನ+ಸ್=ಗ್ಲಾನಃ ಎಂದು ರೂಪವು ಸಿದ್ಧವಾಗುತ್ತದೆ. ದುಃಖಿತನು ಎಂದು ಇದರರ್ಥ.

**(ನ– ಕಾರಾದೇಶವನ್ನು ವಿಧಿಸುವ ಸೂತ್ರ)**

**ಸೂತ್ರ–819. ಲ್ವಾದಿಭ್ಯಃ।(8.2.44)**

ವೃತ್ತಿ– ಏಕವಿಂಶತೇಃ ಲೂಞಾದಿಭ್ಯಃ ಪ್ರಾಗ್ವತ್। ಲೂನಃ। ಜ್ಯಾ ಧಾತುಃ। ಗ್ರಹಿಜ್ಯೇತಿ ಸಂಪ್ರಸಾರಣಮ್।

ಅ. ವೃ – "ರದಾಭ್ಯಾಂ ನಿಷ್ಠಾತೋ ನಃ ಪೂರ್ವಸ್ಯ ಚ ದಃ" ಎಂಬುದರಿಂದ 'ನಿಷ್ಠಾತಃ' ಮತ್ತು 'ನಃ' ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ – 'ಲೂಞ್' ಮೊದಲಾದ 21 ಧಾತುಗಳನಂತರ ಬರುವ 'ನಿಷ್ಠಾ'ದ 'ತ್' (ಕ್ತ) ಕಾರಕ್ಕೆ 'ನ' ಕಾರವು ಆದೇಶವಾಗಿ ಬರುತ್ತದೆ.

ಉದಾ – ಲೂನಃ। ಲೂಞ್–ಛೇದನೇ (ಕತ್ತರಿಸುವದು) ಎಂಬ ಧಾತುವಿನ ಪರದಲ್ಲಿ, 'ನಿಷ್ಠಾ' ದ 'ತ' (ಕ್ತ) ಪ್ರತ್ಯಯವು ಬಂದು ಲೂ+ತ ಎಂದಿದ್ದಾಗ, ಪ್ರಕೃತ

ಸೂತ್ರದಿಂದ 'ತ' ಕಾರಕ್ಕೆ 'ನ' ಕಾರಾದೇಶವಾಗಿ ಲೂ+ನ ಎಂದಿರುವಾಗ, ಪ್ರಾತಿಪದಿಕ ಸಂಜ್ಞೆ ಬಂದು, 'ಸುಪ್' ಸೇರಿಸಿ ರುತ್ವ-ವಿಸರ್ಗ ಮಾಡಿದಾಗ, ಲೂ+ನ+ಸ್=ಲೂನಃ ಎಂದು ರೂಪವಾಗುತ್ತದೆ.

'ಕ್ತವತು' ಪ್ರತ್ಯಯವನ್ನು ಸೇರಿಸಿದಾಗ, 'ಲೂನವಾನ್' ಎಂದಾಗುತ್ತದೆ.

'ಜೀನಃ' ಎಂಬುದರ ರೂಪಸಿದ್ಧಿಯನ್ನು 'ಜ್ಯಾ ಧಾತುಃ' ಎಂಬ ವಾಕ್ಯದಿಂದ ತಿಳಿಸುತ್ತಾನೆ.

**(ದೀರ್ಘವನ್ನು ವಿಧಿಸುವ ಸೂತ್ರ)**

**ಸೂತ್ರ- 820. ಹಲಃ। (6.4.2)**

ವೃತ್ತಿ-ಅಙ್ಗಾವಯವಾತ್ ಹಲಃ ಪರಂ ಯತ್ ಸಂಪ್ರಸಾರಣಂ ತದನ್ತಸ್ಯ ದೀರ್ಘಃ। ಜೀನಃ।

ಅ.ವೃ.- "ಸಂಪ್ರಸಾರಣಸ್ಯ" ಎಂಬ ಸೂತ್ರದಿಂದ 'ಸಂಪ್ರಸಾರಣಸ್ಯ' ಎಂಬ ಪದವೂ "ಢ್ರಲೋಪೇ ಪೂರ್ವಸ್ಯ ದೀರ್ಘೋಽಣಃ" ಎಂಬ ಸೂತ್ರದಿಂದ 'ದೀರ್ಘಃ' ಎಂಬ ಪದವೂ ಅನುವೃತ್ತವಾಗುತ್ತವೆ. "ಅಙ್ಗಸ್ಯ" ಎಂಬುದು ಅಧಿಕಾರ ಸೂತ್ರ.

ಅರ್ಥ-ಅಙ್ಗದ ಅವಯವವಾದ 'ಹಲ್' ವರ್ಣದ ಪರದಲ್ಲಿ ಯಾವ ಸಂಪ್ರಸಾರಣವು ಇದೆಯೋ ಅದರ ಅಙ್ಗಕ್ಕೆ ದೀರ್ಘವು ಬರುತ್ತದೆ.

ಉದಾ – ಜೀನಃ। 'ಜ್ಯಾ' ಧಾತುವಿನ ಪರದಲ್ಲಿ, 'ನಿಷ್ಠಾ' ದ 'ತ್' (ಕ್ತ) ಪ್ರತ್ಯಯವು ಬಂದು ಜ್ಯಾ+ತ ಎಂದಿದ್ದಾಗ, "ಲ್ವಾದಿಭ್ಯಃ" ಎಂಬುದರಿಂದ 'ತ' ಕಾರಕ್ಕೆ 'ನ' ಕಾರವಾಗಿ ಜ್ಯಾ+ನ ಎಂದಿದ್ದಾಗ, "ಗ್ರಹಿಜ್ಯಾ-ವೈ-ವ್ಯಧಿ-ವಷ್ಟಿ-ವಿಚತಿ-ವೃಶ್ಚತಿ-ಪೃಚ್ಛತಿ-ಭೃಜ್ಜತೀನಾಂ ಙಿತಿ ಚ" ಎಂಬ ಸೂತ್ರದಿಂದ 'ಯ್' ಕಾರಕ್ಕೆ ಸಂಪ್ರಾಸರಣ (ಇ) ಕಾರ ಬಂದು ಜ್+ಇ+ಆ+ನ ಎಂದಿದ್ದಾಗ, "ಸಂಪ್ರಸಾರಣಾಚ್ಚ" ಎಂಬ ಸೂತ್ರದಿಂದ ಪೂರ್ವರೂಪವು ಬಂದು ಜ್+ಇ+ನ ಎಂದಿದ್ದಾಗ, ಪ್ರಕೃತ ಸೂತ್ರದಿಂದ, ದೀರ್ಘವು ಬಂದು ಜ್+ಈ+ನ ಎಂದಿದ್ದಾಗ, ಪ್ರಾತಿಪದಿಕ ಸಂಜ್ಞೆ ಬಂದು 'ಸುಪ್' ಮೊದಲಾದ ವಿಭಕ್ತಿ ಕಾರ್ಯಗಳಾಗಿ, ಜೀನಃ ಎಂದು ರೂಪವಾಗುತ್ತದೆ. 'ಕ್ತವತು' ಪ್ರತ್ಯಯ ಬಂದರೆ 'ಜೀನವಾನ್' ಎಂದು ರೂಪವಾಗುತ್ತದೆ.

**('ನ' ಕಾರಾದೇಶವನ್ನು ವಿಧಿಸುವ ಸೂತ್ರ)**

**ಸೂತ್ರ-821. ಓದಿತಶ್ಚ।( 8.2.45)**

ವೃತ್ತಿ-ಭುಜೋ-ಭುಗ್ನಃ। ಟುಓಸ್ವಿ-ಉಚ್ಛೂನಃ।

ಪ.ಛೇ.-ಓದಿತಃ, ಚ।

ಅ.ವೃ.-"ರಧಾಭ್ಯಾಂ ನಿಷ್ಠಾತೋ ನಃ ಪೂರ್ವಸ್ಯ ಚ ದಃ" ಎಂಬುದರಿಂದ 'ನಿಷ್ಠಾತಃ' ಮತ್ತು 'ನಃ' ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ-'ಓ' ಕಾರವನ್ನು 'ಇತ್' ಆಗಿ ಉಳ್ಳ ಧಾತುವಿನ ನಂತರ ಬರುವ ನಿಷ್ಠಾದ

'ತ' ಕಾರಕ್ಕೆ 'ನ' ಕಾರವು ಆದೇಶವಾಗಿ ಬರುತ್ತದೆ.

ಉದಾ–1 ಭುಗ್ನಃ। ಭುಜೋ ಕೌಟಿಲ್ಯೇ (ಮುರಿಯುವದು) ಎಂಬುದು ಧಾತುವು. ಇದರ ಪರದಲ್ಲಿ 'ತ' ಪ್ರತ್ಯಯವು ಬಂದು, 'ಓದಿತ್ (ಓತ್ ಇತ್)' ಆಗಿರುವುದರಿಂದ ಭುಜ್+ತ ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ತ' ಕಾರಕ್ಕೆ 'ನ' ಕಾರವು ಬಂದು, ಭುಜ್+ನ ಎಂದಿರುವಾಗ, "ಚೋಃ ಕುಃ" ಎಂಬ ಸೂತ್ರದಿಂದ, 'ಜ್'ಗೆ 'ಗ್' ಆದೇಶವಾಗಿ ಬಂದು ಭುಗ್+ನ ಎಂದಿದ್ದಾಗ, ಪ್ರಾತಿಪದಿಕಸಂಜ್ಞೆ ಬಂದು 'ಸು'(ಸುಪ್) ಪ್ರತ್ಯಯವನ್ನು ಸೇರಿಸಿದಾಗ, ಭುಗ್+ನ+ಸ್ ಎಂದಿರುವಾಗ ರುತ್ವ–ವಿಸರ್ಗಗಳಾಗಿ ಭುಗ್ನಃ ಎಂದು ರೂಪವಾಗುತ್ತದೆ.

ಉದಾ–2. ಉಚ್ಛೂನಃ। 'ಉತ್' ಉಪಸರ್ಗಪೂರ್ವಕ ಟು–ಓ–ಶ್ವಿ–ಗತಿ ವೃಧ್ಯೋಃ ಎಂಬುದು ಧಾತು. ಇದಕ್ಕೆ ಗತಿ ಮತ್ತು ವೃದ್ಧಿ ಗಳೆಂದು ಅರ್ಥ. ಇದರ ಪರದಲ್ಲಿ, ನಿಷ್ಠಾ (ತ) ಪ್ರತ್ಯಯವು ಬಂದು ಉತ್+ಶ್ವಿ+ತ ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ತ'ಕಾರಕ್ಕೆ 'ನ' ಕಾರವು ಬಂದು, ಉತ್+ಶ್ವಿ+ನ ಎಂದಿರುವಾಗ, "ವಚಿಸ್ವಪಿ ಯಜಾದೀನಾಂ ಕಿತಿ" ಎಂಬ ಸೂತ್ರದಿಂದ, 'ವ್' ಕಾರಕ್ಕೆ ಸಂಪ್ರಸಾರಣವಾಗಿ, ಉತ್+ಶ್+ಉ+ಇ+ನ ಎಂದಿದ್ದಾಗ, "ಸಂಪ್ರಸರಣಾಚ್ಚ" ಎಂಬ ಸೂತ್ರದಿಂದ, 'ಉ' ಕಾರ 'ಇ' ಕಾರಗಳಿಗೆ ಪೂರ್ವರೂಪ ಏಕಾದೇಶವಾಗಿ ಬಂದು, ಉತ್+ಶು+ನ ಎಂದಿದ್ದಾಗ, "ಹಲಃ" ಎಂಬ ಸೂತ್ರದಿಂದ 'ಶ್' ಕಾರೋತ್ತರವರ್ತಿ 'ಉ' ಕಾರಕ್ಕೆ ದೀರ್ಘವು ಬಂದು, ಉತ್+ಶೂ+ನ ಎಂದಿದ್ದಾಗ, "ಸ್ತೋಃ ಶ್ಚುನಾಶ್ಚುಃ" ಎಂಬ ಸೂತ್ರದಿಂದ, 'ಶ್ಚುತ್ವ' ಬಂದು, ಉಚ್+ಶೂ+ನ ಎಂದಿದ್ದಾಗ, "ಶಶ್ಛೋಽಟಿ" ಎಂಬ ಸೂತ್ರದಿಂದ, 'ಛತ್ವ" ಬಂದು ಉಚ್+ಛೂ+ನ ಎಂದಾಗಿ ಪ್ರಾತಿಪದಿಕ ಸಂಜ್ಞಾ, ಹಾಗೂ 'ಸುಪ್'ಗಳು ಬಂದು, ರುತ್ವ–ವಿಸರ್ಗಗಳಿಂದ, 'ಉಚ್ಛೂನಃ' ಎಂದು ರೂಪವಾಗುತ್ತದೆ.

**(ಕ – ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ – 822. ಶುಷಃ ಕಃ। (8/.2.51)**

ವೃತ್ತಿ– ನಿಷ್ಠಾತಸ್ಯ ಕಃ। ಶುಷ್ಕಃ।

ಅ. ವ್ಯ.–"ರಧಾಭ್ಯಾಂ ನಿಷ್ಠಾತೋ ನಃ ಪೂರ್ವಸ್ಯ ಚ ದಃ" ಎಂಬುದರಿಂದ ನಿಷ್ಠಾತಃ' ಮತ್ತು 'ನಃ' ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ–'ಶುಷ್' ಧಾತುವಿನ ಪರದಲ್ಲಿರುವ 'ನಿಷ್ಠಾ'ದ 'ತ' ಕಾರಕ್ಕೆ 'ಕ'ಕಾರವು ಆದೇಶವಾಗಿ ಬರುತ್ತದೆ.

ಉದಾ– ಶುಷ್ಕಃ (ಒಣಗಿದ)। ಇಲ್ಲಿ 'ಶುಷ್' ಧಾತುವಿನ ಪರದಲ್ಲಿ ನಿಷ್ಠಾದ ತ (ಕ್ತ) ಪ್ರತ್ಯಯವು ಬಂದು, ಶುಷ್+ತ ಎಂದಿದ್ದಾಗ, ಪ್ರಕೃತ ಸೂತ್ರದಿಂದ, 'ತ'ಕಾರಕ್ಕೆ 'ಕ' ಕಾರ ಆದೇಶವಾಗಿ ಬಂದು, ಪ್ರಾತಿಪದಿಕ ಸಂಜ್ಞಾ, 'ಸುಪ್' ಮೊದಲಾದ ವಿಭಕ್ತಿ ಕಾರ್ಯಗಳಾಗಿ, ಶುಷ್+ಕ+ಸ್ ಎಂದಿದ್ದಾಗ, ರುತ್ವ–ವಿಸರ್ಗಗಳಿಂದ ಶುಷ್ಕಃ ಎಂದು

ರೂಪವು ಸಿದ್ಧಿಸುತ್ತದೆ. 'ಕ್ತವತು' ಪ್ರತ್ಯಯವನ್ನು ಸೇರಿಸಿದರೆ, 'ಶುಷ್ಕವಾನ್' ಎಂದಾಗುತ್ತದೆ.

**(ವ-ಕಾರ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ- 823. ಪಚೋವಃ॥(8.2.52)**

ವೃತ್ತಿ- ಪಕ್ವಃ। ಕ್ಷೈ-ಹರ್ಷಕ್ಷಯೇ।

ಅ. ವೃ. - "ರಧಾಭ್ಯಾಂ ನಿಷ್ಠಾತೋ ನಃ ಪೂರ್ವಸ್ಯ ಚ ದಃ" ಎಂಬುದರಿಂದ 'ನಿಷ್ಠಾತಃ' ಮತ್ತು 'ನಃ' ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ-'ಪಚ್' ಧಾತುವಿನ ನಂತರ ಇರುವ 'ನಿಷ್ಠಾ' ದ 'ತ' (ಕ್ತ) ಕಾರಕ್ಕೆ, 'ವ' ಕಾರವು ಆದೇಶವಾಗಿ ಬರುತ್ತದೆ.

ಉದಾ- ಪಚ್+ತ್ ಎಂದಿದ್ದಾಗ, ಪ್ರಕೃತ ಸೂತ್ರದಿಂದ, 'ತ' ಕಾರಕ್ಕೆ 'ವ' ಕಾರ ಆದೇಶವಾಗಿ ಬಂದು, ಪಚ್+ವ ಎಂದಿರುವಾಗ, "ಚೋಃ ಕುಃ" ಎಂಬ ಸೂತ್ರದಿಂದ, 'ಚ್' ಕಾರಕ್ಕೆ 'ಕ್' ಕಾರ ಆದೇಶವಾಗಿ ಬಂದು, ಪಕ್+ವ ಎಂದಿದ್ದಾಗ, ಪ್ರಾತಿಪದಿಕ ಸಂಜ್ಞಾ ಬಂದು, 'ಸುಪ್' ಸೇರಿಸಿದಾಗ, ಪಕ್+ವ+ಸ್=ಪಕ್ವಸ್ ಎಂದಾಗಿ, 'ಸ್' ಕಾರಕ್ಕೆ ರುತ್ವ-ವಿಸರ್ಗಗಳಾಗಿ 'ಪಕ್ವಃ' ಎಂದು ರೂಪವಾಗುತ್ತದೆ. 'ಕ್ತವತು' ಪ್ರತ್ಯಯಸೇರಿಸಿದಾಗ, 'ಪಕ್ವವಾನ್' ಎಂದು ರೂಪವಾಗುತ್ತದೆ.

**(ಮ- ಕಾರಾದೇಶವನ್ನು ವಿಧಿಸುವ ಸೂತ್ರ)**

**ಸೂತ್ರ- 824. ಕ್ಷಾಯೋ ಮಃ॥(8.2.53)**

ವೃತ್ತಿ - ಕ್ಷಾಮಃ।

ಅ. ವೃ.-"ರಧಾಭ್ಯಾಂ ನಿಷ್ಠಾತೋ ನಃ ಪೂರ್ವಸ್ಯ ಚ ದಃ" ಎಂಬುದರಿಂದ 'ನಿಷ್ಠಾತಃ' ಮತ್ತು 'ನಃ' ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ-ಕ್ಷೈ ಧಾತುವಿನ ನಂತರ ಇರುವ ನಿಷ್ಠಾ ದ 'ತ' ಕಾರಕ್ಕೆ 'ಮ' ಕಾರ ಆದೇಶವಾಗಿ ಬರುತ್ತದೆ.

ಉದಾ- ಕ್ಷಾಮಃ (ಕ್ಷೀಣವಾದ)। ಕ್ಷೈ-ಕ್ಷಯೇ ಎಂಬ ಧಾತುವಿಗೆ 'ತ' ಪ್ರತ್ಯಯವು ಬಂದು ಕ್ಷೈ+ತ ಎಂದಿರುವಾಗ, "ಆದೇಚ ಉಪದೇಶೇಽಶಿ" ಎಂಬ ಸೂತ್ರದಿಂದ, 'ಐ' ಕಾರಕ್ಕೆ 'ಆ' ಆದೇಶವಾಗಿ ಬಂದು, ಕ್ಷಾ+ತ ಎಂದಿದ್ದಾಗ, ಪ್ರಕೃತ ಸೂತ್ರದಿಂದ, 'ತ' ಕಾರಕ್ಕೆ 'ಮ' ಕಾರವು ಆದೇಶವಾಗಿ ಬಂದು, ಕ್ಷಾ+ಮ ಎಂದಿದ್ದಾಗ, ಪ್ರಾತಿಪದಿಕ ಸಂಜ್ಞಾ ಬಂದು, 'ಸುಪ್' ಮೊದಲಾದ ವಿಭಕ್ತಿ ಕಾರ್ಯಗಳಾಗಿ, ಕ್ಷಾ+ಮ+ಸ್ = ಕ್ಷಾಮಸ್ ಎಂದಿದ್ದಾಗ, ರುತ್ವ-ವಿಸರ್ಗಗಳಿಂದ, ಕ್ಷಾಮಃ ಎಂದು ರೂಪವಾಗುತ್ತದೆ.

'ಕ್ತವತು' ಪ್ರತ್ಯಯ ಬಂದಾಗ ಕ್ಷಾಮವಾನ್ ಎಂದು ರೂಪವಾಗುತ್ತದೆ.

**(ಣಿ - ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ - 825. ನಿಷ್ಠಾಯಾಂ ಸೇಟಿ॥(6.4.52)**

ವೃತ್ತಿ- ಣೇರ್ಲೋಪಃ। ಭಾವಿತಃ। ಭಾವಿತವಾನ್। ದೃಹ್-ಹಿಂಸಾಯಾಮ್।

ಅ. ವೃ. – "ಣೇರನಿಟಿ" ಎಂಬ ಸೂತ್ರ್ರದಿಂದ 'ಣೇಃ' ಎಂಬ ಪದವು ಮತ್ತು "ಅತೋಲೋಪಃ" ಸೂತ್ರದಿಂದ, 'ಲೋಪಃ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ–ಇಡಾಗಮ (ಇಟ್ ಆಗಮ)ದಿಂದ ಕೂಡಿದ ನಿಷ್ಠಾ ಪ್ರತ್ಯಯವು ಪರದಲ್ಲಿದ್ದಾಗ, 'ಣೀ' ಗೆ ಲೋಪವು ಬರುತ್ತದೆ.

ಉದಾ– ಭಾವಿತಃ (ಆಗುವಂತೆ ಮಾಡಿದ)। ಎಂಬಲ್ಲಿ, ಭೂ+ಇ(ಣಿಚ್) ಎಂದಿದ್ದಾಗ, "ಅಚೋಞ್ಣಿತಿ" ಎಂಬುದರಿಂದ, 'ಊ' ಕಾರಕ್ಕೆ ವೃದ್ಧಿ ಬಂದು ಭೌ+ಇ ಎಂದಿರುವಾಗ, "ಏಚೋಽಯವಾಯಾವಃ" ಎಂಬ ಸೂತ್ರದಿಂದ 'ಆವ್' ಆದೇಶವಾಗಿ ಬಂದು, ಭ್+ಆವ್+ಇ ಎಂದಿರುವಾಗ, ಣಿಜನ್ತ ಭೂ ಧಾತುವಿನ ಮುಂದೆ ನಿಷ್ಠಾದ 'ತ' ಪ್ರತ್ಯಯುವು ಬಂದು ಭ್+ಆವ್+ಇ+ತ ಎಂದಿರುವಾಗ, ಈ ಧಾತುವು ಆರ್ಧಧಾತುಕವಾಗಿರುವುದರಿಂದ, ಇಡಾಗಮವು ಬಂದು, ಭ್+ಆವ್+ಇ+ಇ+ ತ ಎಂದಿದ್ದಾಗ, ಪ್ರಕೃತ ಸೂತ್ರದಿಂದ, 'ಣಿ' ಗೆ ಲೋಪವು ಬಂದು ಭ್+ಆವ್+ಇ+ತ ಎಂದಿರುವಾಗ, ಪ್ರಾತಿಪದಿಕಸಂಜ್ಞೆ ಬಂದು, 'ಸುಪ್' ಮೊದಲಾದ ವಿಭಕ್ತಿ ಕಾರ್ಯಗಳಾಗಿ, ಭ್+ಆವ್+ಇ+ತ+ಸ್=ಭಾವಿತಸ್ ಎಂದಾಗಿ ರುತ್ವ–ವಿಸರ್ಗಗಳಿಂದ ಭಾವಿತಃ ರೂಪವಾಗುತ್ತದೆ. 'ಕ್ತವತು' ಪ್ರತ್ಯಯವನ್ನು ಸೇರಿಸಿದಾಗ, ಭಾವಿತವಾನ್ ಎಂದು ರೂಪವಾಗುತ್ತದೆ.

**(ಢತ್ವ ನಿಪಾತನ ಸೂತ್ರ)**

**ಸೂತ್ರ– 826. ದೃಢಃ ಸ್ಥೂಲ–ಬಲಯೋಃ।(7.2.20)**

ವೃತ್ತಿ– ಸ್ಥೂಲೇ ಬಲವತಿ ಚ ನಿಪಾತ್ಯತೇ।

ಅರ್ಥ–ಸ್ಥೂಲ ಮತ್ತು ಬಲವಾನ್ ಎಂಬ ಅರ್ಥದಲ್ಲಿ 'ದೃಢ' ಶಬ್ದದ ನಿಪಾತನವು ಮಾಡಲಾಗಿದೆ.

ಉದಾ–ದೃಹ್ (ಹಿಂಸಾಯಾಮ್) ಧಾತುವಿನ ನಂತರ ನಿಷ್ಠಾ ದ 'ತ' ಪ್ರತ್ಯಯ ಸೇರಿಸಿದಾಗ, "ಹೋ ಢಃ" ಎಂಬ ಸೂತ್ರದಿಂದ 'ಹ್' ಕಾರಕ್ಕೆ 'ಢ್' ಕಾರವು ಬಂದು, ದೃಢ್+ತ ಎಂದಿರುವಾಗ, "ಝಷಸ್ತಥೋರ್ಧೋಽಧಃ" ಎಂಬುದರಿಂದ, 'ತ' ಕಾರಕ್ಕೆ 'ಧ' ಕಾರ ಬಂದು ದೃಢ್+ಧ ಎಂದಿದ್ದಾಗ, "ಷ್ಟುನಾಷ್ಟುಃ" ಎಂಬ ಸೂತ್ರದಿಂದ 'ಧ' ಕಾರಕ್ಕೆ 'ಢ' ಕಾರವಾಗಿ ದೃಢ್+ ಢ ಎಂದಿದ್ದಾಗ, "ಢೋಢೇಲೋಪಃ" ಎಂಬ ಸೂತ್ರದಿಂದ, ಪೂರ್ವ 'ಢ' ಕಾರಕ್ಕೆ ಲೋಪ ಬಂದು, ದೃ+ಢ ಎಂದಿದ್ದಾಗ, ಪ್ರಾತಿಪದಿಕ ಸಂಜ್ಞಾ ಬಂದು, 'ಸುಪ್' ಸೇರಿ ದೃ+ಢ+ಸ್=ದೃಢಸ್ ಎಂದಿದ್ದಾಗ, ರುತ್ವ–ವಿಸರ್ಗಗಳು ಬಂದು, ದೃಢಃ ರೂಪ ಸಿದ್ಧಿಸುತ್ತದೆ. ಸೂತ್ರದಿಂದ ಸ್ಥೂಲ ಮತ್ತು ಬಲವಾನ್ (ಬಲವುಳ್ಳ) ಎಂಬ ವಿಶೇಷಾರ್ಥದಲ್ಲಿ ಇದರ ನಿಪಾತನವು ಮಾಡಲಾಗಿದೆ.

**(ಹಿ –ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ– 827. ದಧಾತೇರ್ಹಿಃ।(7.4.42)**

ವೃತ್ತಿ– ತಾದೌ ಕಿತಿ। ಹಿತಮ್।

ಪ.ಛೇ. – ದಧಾತೇಃ, ಹಿಃ।

ಅ. ವೃ. – "ದ್ಯತಿಸ್ಯತಿಮಾಸ್ಥಾಮಿತ್ತಿಕಿತಿ" ಎಂಬುದರಿಂದ, 'ತಿ' ಮತ್ತು 'ಕಿತಿ' ಎಂಬ ಪದಗಳು ಅನುವೃತ್ತವಾಗುತ್ತವೆ. "ಅಙ್ಗಸ್ಯ" ಎಂಬುದು ಅಧಿಕಾರ ಸೂತ್ರ.

ಅರ್ಥ–'ಧಾ' ಧಾತುವಿಗೆ 'ತ'ಕಾರಾದಿ 'ಕಿತ್' ಪ್ರತ್ಯಯ ಪರದಲ್ಲಿದ್ದಾಗ 'ಹಿ' ಆದೇಶವು ಬರುತ್ತದೆ.

ಉದಾ– ಹಿತಮ್। ಡು ಧಾಞ್ – ಧಾರಣ–ಪೋಷಣಯೋಃ ಎಂಬ ಧಾತುವಿನ ನಂತರ ನಿಷ್ಠಾದ 'ತ' ಪ್ರತ್ಯಯವು ಬಂದು ಧಾ+ತ ಎಂದಿದ್ದಾಗ, ಪ್ರಕೃತ ಸೂತ್ರದಿಂದ, 'ಧಾ' ಎಂಬುದಕ್ಕೆ 'ಹಿ' ಆದೇಶವಾಗಿ ಹಿ+ತ ಎಂದಿದ್ದಾಗ, ಪ್ರಾತಿಪದಿಕ ಸಂಜ್ಞೆ ಬಂದು, 'ಸುಪ್' ಸೇರಿ ಹಿ+ತ+ಸ್ ಎಂದಿರುವಾಗ, 'ಸ್' ಕಾರಕ್ಕೆ "ಸ್ವಮೋರ್ ನಪುಂಸಕಾಚ್ಚ" ಎಂಬ ಸೂತ್ರದಿಂದ ನಪುಂಸಕಲಿಙ್ಗದ 'ಅಮ್' ಪ್ರತ್ಯಯ ಬಂದು ಹಿ+ತ+ಅಮ್ ಎಂದಿದ್ದಾಗ, "ಅಮಿಪೂರ್ವಃ" ಎಂಬ ಸೂತ್ರದಿಂದ ಪೂರ್ವರೂಪ ಬಂದು, ಹಿತಮ್ ಎಂದು ರೂಪವಾಗುತ್ತದೆ.

**(ದದ್– ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ–828. ದೋ ದದ್ಘೋಃ।(7.4.46)**

ವೃತ್ತಿ– ಘು ಸಂಜ್ಞಕಸ್ಯ ದಾ ಇತ್ಯಸ್ಯ ದದ್ ಸ್ಯಾತ್ ತಾದೌ ಕಿತಿ। ಚರ್ತ್ವಮ್। ದತ್ತಃ।

ಪ.ಛೇ. – ದಃ, ದದ್, ಘೋಃ।

ಅ. ವೃ. – ಹಿಂದಿನಂತೆ 'ತಿ' ಮತ್ತು 'ಕಿತಿ' ಗಳು ಅನುವೃತ್ತವಾಗುತ್ತವೆ.

ಅರ್ಥ. – 'ತ' ಕಾರಾದಿ 'ಕಿತ್' ಪ್ರತ್ಯಯವು ಪರದಲ್ಲಿದ್ದಾಗ, 'ಘು' ಸಂಜ್ಞೆಯುಳ್ಳ 'ದಾ' ಧಾತುವಿನ ಮೇಲೆ 'ದದ್' ಆದೇಶವು ಬರುತ್ತದೆ.

ಉದಾ– ದತ್ತಃ (ಕೊಡಲ್ಪಟ್ಟ)।–ಡು ದಾಞ್ ದಾನೇ ಧಾತುವಿನ ಪರದಲ್ಲಿ ನಿಷ್ಠಾದ (ತ) ಪ್ರತ್ಯಯವು ಬಂದು, ದಾ+ತ ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ದಾ'ಗೆ 'ದದ್' ಆದೇಶವಾಗಿ ಬಂದು, ದದ್+ತ ಎಂದಿರುವಾಗ, 'ದ್' ಕಾರಕ್ಕೆ "ಖರಿಚ" ಎಂಬ ಸೂತ್ರದಿಂದ, ಚರ್ತ್ವ (ತ್) ಬಂದು, ದತ್+ತ ಎಂದಿದ್ದಾಗ, ಪ್ರಾತಿಪದಿಕ ಸಂಜ್ಞೆ ಬಂದು 'ಸುಪ್' ಸೇರಿಸಿ ವಿಭಕ್ತಿ ಕಾರ್ಯ ಮಾಡಿದಾಗ, ದತ್+ತ+ಸ್=ದತ್ತಸ್ ಎಂದಾಗಿ ರುತ್ವ–ವಿಸರ್ಗಗಳಿಂದ ದತ್ತಃ ಎಂಬ ರೂಪವು ಸಿದ್ಧವಾಗುತ್ತದೆ. ಕ್ತವತು ಪ್ರತ್ಯಯ ಬಂದಾಗ ದತ್ತವಾನ್ ಎಂದು ರೂಪವಾಗುತ್ತದೆ.

**(ಕಾನಚ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ– 829. ಲಿಟಃ ಕಾನಜ್ ವಾ।(3.2.206)**

ಅರ್ಥ–'ಲಿಟ್' ನ ಸ್ಥಾನದಲ್ಲಿ 'ಕಾನಚ್' ಆದೇಶವು ವಿಕಲ್ಪವಾಗಿ ಬರುತ್ತದೆ.

**(ಕ್ವಸು ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ–830. ಕ್ವಸುಶ್ಚ ।(3.2.107)**

ವೃತ್ತಿ–ಲಿಟಃ ಕಾನಚ್ ಕ್ವಸುಶ್ಚ ವಾ ಸ್ತಃತಙಾನಾವಾತ್ಮನೇಪದಮ್। ಚಕ್ರಾಣಃ।

ಅ. ವೃ. – "ಲಿಟಃ ಕಾನಜ್ವಾ" ಎಂಬ ಸೂತ್ರದಿಂದ 'ಲಿಟಃ' ಮತ್ತು 'ವಾ' ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ–'ಲಿಟ್' ನ ಸ್ಥಾನದಲ್ಲಿ 'ಕ್ವಸು' ಆದೇಶವು ವಿಕಲ್ಪವಾಗಿ ಬರುತ್ತದೆ. ಈ ಪ್ರತ್ಯಯದಲ್ಲಿ 'ಕ್' ಕಾರ ಹಾಗೂ 'ಉ' ಕಾರಗಳು ಇತ್ ಸಂಜ್ಞೆಯನ್ನು ಹೊಂದುತ್ತವೆ. ಕೊನೆಯಲ್ಲಿ 'ವಸ್' ಮಾತ್ರ ಉಳಿಯುತ್ತದೆ. 'ಕಾನಚ್' ಪ್ರತ್ಯಯಕ್ಕೆ "ತಙಾನಾವಾತ್ಮನೇಪದಮ್" ಎಂಬ ಸೂತ್ರದಿಂದ ಆತ್ಮನೇಪದ ಸಂಜ್ಞೆಯು ಬರುತ್ತದೆ. 'ಕಾನಚ್' ಪ್ರತ್ಯಯದಲ್ಲಿ 'ಕ್' ಮತ್ತು 'ಚ್' ಗಳು ಇತ್ ಸಂಜ್ಞೆಯನ್ನು ಹೊಂದಿ 'ಆನ' ಮಾತ್ರ ಉಳಿಯುತ್ತದೆ.

ಉದಾ– ಚಕ್ರಾಣಃ। 'ಕೃ' ಧಾತುವಿನ ನಂತರ ಇರುವ 'ಲಿಟ್' ಗೆ ಪ್ರಕೃತ ಸೂತ್ರದಿಂದ 'ಕಾನಚ್' ಬಂದು ಕೃ+ಆನ ಎಂದಿದ್ದಾಗ, ಸ್ಥಾನಿವದ್ಭಾವದಿಂದ 'ಆನ' ಪ್ರತ್ಯಯವನ್ನು 'ಲಿಟ್' ಎಂದು ಭಾವಿಸಿ 'ಲಿಟಿ ಧಾತೋರನಭ್ಯಾಸಸ್ಯ" ಎಂಬ ಸೂತ್ರದಿಂದ, 'ಕೃ' ಧಾತುವಿಗೆ ದ್ವಿತ್ವ ಬಂದು ಕೃ+ಕೃ+ಆನ ಎಂದಿರುವಾಗ, "ಉರತ್" ಎಂಬುದರಿಂದ ಅಭ್ಯಾಸದ 'ಋ' ಕಾರಕ್ಕೆ 'ಅತ್' ಆದೇಶವಾಗಿ ಬಂದು ಕ್+ಅತ್+ಕೃ+ಆನ ಎಂದಿದ್ದಾಗ, "ಹಲಾದಿಃ ಶೇಷಃ" ಎಂಬ ಸೂತ್ರದಿಂದ 'ತ್' ಕಾರಕ್ಕೆ ಲೋಪ ಬಂದು, ಕ್+ಅ+ಕೃ+ಆನ ಎಂದಿದ್ದಾಗ, "ಅಭ್ಯಾಸೇ ಚರ್ಚ" ಎಂಬ ಸೂತ್ರದಿಂದ, 'ಕ್' ಕಾರಕ್ಕೆ ಚುತ್ವ ಬಂದು ಚ್+ಅ+ಕೃ+ಆನ ಎಂದಿರುವಾಗ, "ಯಣ್' ಸಂಧಿಯಾಗಿ ಚ್+ಅ+ಕ್+ಅರ್+ಆನ ಎಂದಿರುವಾಗ, 'ನ್' ಕಾರಕ್ಕೆ ಣತ್ವ ಬಂದು, ಚ್+ಅ+ಕ+ರ್+ಆಣ ಎಂದಿರುವಾಗ, ಪ್ರಾತಿಪದಿಕ ಸಂಜ್ಞಾ ಬಂದು 'ಸುಪ್' ಸೇರಿಸಿ ಚ್+ಅ+ಕ+ರ್+ಆಣ+ಸ್ ಎಂದಿದ್ದಾಗ, ರುತ್ವ–ವಿಸರ್ಗಗಳಿಂದ ಚಕ್ರಾಣಃ ಎಂದು ರೂಪವಾಗುತ್ತದೆ.

**(ನ–ಕಾರಾದೇಶವನ್ನು ಹೇಳುವ ಸೂತ್ರ)**

**ಸೂತ್ರ– 831. ಮ್ವೋಶ್ಚ।(8.2.65)**

ವೃತ್ತಿ– ಮಾನ್ತಸ್ಯ ಧಾತೋರ್ನತ್ವಂ ಮ್ವೋಃ ಪರತಃ। ಜಗನ್ವಾನ್।

ಪ. ಛೇ – ಮ್ವೋಃ, ಚ।

ಅ. ವೃ – "ಮೋನೋ ಧಾತೋಃ" ಎಂಬ ಸೂತ್ರವು ಸಂಪೂರ್ಣವಾಗಿ ಅನುವೃತ್ತವಾಗುತ್ತದೆ.

ಅರ್ಥ – ಮ–ಕಾರಾನ್ತ ಧಾತುವಿನ 'ಮ' ಕಾರದ ಸ್ಥಾನದಲ್ಲಿ 'ಮ್'ಕಾರ ಅಥವಾ 'ವ್'ಕಾರವು ಪರದಲ್ಲಿದ್ದಾಗ, 'ನ್' ಕಾರವು ಆದೇಶವಾಗಿ ಬರುತ್ತದೆ.

ಉದಾ– ಜಗನ್ವಾನ್। ಗಮ್ ಧಾತುವಿನ ಪರದಲ್ಲಿರುವ 'ಲಿಟ್' ನ ಸ್ಥಾನದಲ್ಲಿ "ಕ್ವಸುಶ್ಚ" ಎಂಬ ಸೂತ್ರದಿಂದ ಕ್ವಸು(ವಸ್) ಆದೇಶ ಬಂದು ಗಮ್+ವಸ್ ಎಂದಿದ್ದಾಗ, ಸ್ಥಾನಿವದ್ಭಾವದಿಂದ, 'ವಸ್' ಗೆ ಲಿಡ್ವದ್ಭಾವ ಮಾಡಿ, 'ಗಮ್' ಗೆ ದ್ವಿತ್ವ ಮಾಡಿ ಗಮ್+ಗಮ್+ವಸ್ ಎಂದಿರುವಾಗ, "ಹಲಾದಿಃ ಶೇಷಃ" ಎಂಬ ಸೂತ್ರದಿಂದ ಆದಿ

ಹಲ್ (ಗ್) ಮಾತ್ರ ಉಳಿದು ಮತ್ತು 'ಚುತ್ವ'ವಾಗಿ ಜ+ಗಮ್+ವಸ್ ಎಂದಿದ್ದಾಗ, ಪ್ರಕೃತ ಸೂತ್ರದಿಂದ, 'ಮ್' ಕಾರಕ್ಕೆ 'ನ್' ಕಾರಾದೇಶ ಬಂದು, ಜ+ಗ+ನ+ವಸ್ ಎಂದಿರುವಾಗ, ಪ್ರಾತಿಪದಿಕ ಸಂಜ್ಞೆ ಬಂದು, 'ಕ್ವಸು' ಎಂಬುದು 'ಉಗಿತ್' ಆಗಿರುವ ಕಾರಣದಿಂದ "ಉಗಿದಚಾಂ ಸರ್ವನಾಮಸ್ಥಾನೇಽಧಾತೋಃ" ಎಂಬ ಸೂತ್ರದಿಂದ, ನುಮಾ (ನ್) ಗಮವು ಬಂದು ಜ+ಗ+ನ್+ವ್+ಅ+ನ್+ಸ್ ಎಂದಿದ್ದಾಗ, "ಸಾನ್ತಮಹತಃ ಸಂಯೋಗಸ್ಯ" ಎಂಬ ಸೂತ್ರದಿಂದ, 'ವ' ಕಾರ ದೀರ್ಘವಾಗಿ, ಜ+ಗ+ನ್+ವಾ+ನ್+ಸ್ ಎಂದಿದ್ದಾಗ, 'ಸುಪ್' ಪ್ರತ್ಯಯು ಬಂದು ಜ+ಗ+ನ್+ವ್+ಅ+ನ್+ಸ್+ಸ್ ಎಂದಿರುವಾಗ, 'ಸುಪ್'ನ 'ಸ್' ಕಾರಕ್ಕೆ "ಹಲ್‌ಙ್ಯಾಭ್ಯೋದೀರ್ಘಾತ್ ಸುತಿಸಿ ಅಪೃಕ್ತಂ ಹಲ್" ಎಂಬುದರಿಂದ ಲೋಪ ಬಂದು, ಜ+ಗ+ನ್+ವಾ+ ನ್+ಸ್ ಎಂದಿದ್ದಾಗ, 'ಕ್ವಸ್' ನ 'ಸ್' ಕಾರಕ್ಕೆ "ಸಂಯೋಗಾನ್ತಸ್ಯ ಲೋಪಃ" ಎಂಬ ಸೂತ್ರದಿಂದ, ಲೋಪ ಬಂದು, ಜ+ಗ +ನ್+ವಾ+ನ್=ಜಗನ್ವಾನ್ ಎಂದು ರೂಪವು ಸಿದ್ಧವಾಗುತ್ತದೆ.

**(ಶತೃ - ಶಾನಚ್ ಪ್ರತ್ಯಯಗಳನ್ನು ವಿಧಿಸುವ ಸೂತ್ರ)**

**ಸೂತ್ರ-832. ಲಟಃ ಶತೃ-ಶಾನಚಾವಪ್ರಥಮಾಸಮಾನಧಿಕರಣೇ। (3.2.124)**

ವೃತ್ತಿ- ಅಪ್ರಥಮಾನ್ತೇನ ಸಮಾನಾಧಿಕರಣೇ ಲಟ ಏತೌ ವಾ ಸ್ತಃ ಶಬಾದಿ। ಪಚನ್ತಂ ಚೈತ್ರಂ ಪಶ್ಯ।

ಪ. ಛೇ. - ಲಟಃ, ಶತೃ-ಶಾನಚೌ, ಅಪ್ರಥಮಾ, ಸಮಾನಾಧಿಕರಣೇ।

ಅರ್ಥ - ಪ್ರಥಮಾನ್ತವಲ್ಲದ ದ್ವಿತೀಯಾನ್ತ ಮೊದಲಾದವುಗಳ ಜೊತೆಗೆ, ಸಮಾನಾಧಿಕರಣವಿರುವಾಗ, 'ಲಟ್' ನ ಸ್ಥಾನದಲ್ಲಿ 'ಶತೃ' ಮತ್ತು 'ಶಾನಚ್' ಪ್ರತ್ಯಯಗಳು ವಿಕಲ್ಪವಾಗಿ ಆದೇಶವಾಗಿ ಬರುತ್ತವೆ.

'ಅಪ್ರಥಮಾ ಸಮಾನಾಧಿಕರಣೇ' ಎಂದರೆ, 'ಶತೃ' ಮತ್ತು 'ಶಾನಚ್' ಪ್ರತ್ಯಯಗಳನ್ನು ಸೇರಿಸುವುದರಿಂದ, ಉಂಟಾದ ಪದವು ಸಾಮಾನಾಧಿಕರಣ್ಯದಿಂದ ಪ್ರಥಮಾ ವಿಭಕ್ತಿಯ ಜೊತೆಗೆ ಇರಬಾರದು ಎಂದು ತಾತ್ಪರ್ಯ. 'ಸಮಾನಾಧಿಕರಣ' ಎಂದರೆ "ಸಮಾನಂ ಅಧಿಕರಣಂ ವಾಚ್ಯಮ್ ಯಸ್ಯ ಸಃ ಸಮಾನಾಧಿಕರಣಃ". ಅಭಿನ್ನವಾದ ವಾಚ್ಯವು (ಅರ್ಥವು) ಯಾವದಕ್ಕೆ (ಯಾವ 'ಲ್' ಕಾರಕ್ಕೆ) ಇದೆಯೋ ಅದು ಸಮಾನಾಧಿಕರಣವೆಂದು ಕರೆಯಿಸಿಕೊಳ್ಳುತ್ತದೆ. ದ್ವಿತೀಯಾನ್ತಾದಿ ಪದವು ಯಾವ ಕರ್ತೃ ಅಥವಾ ಕರ್ಮವನ್ನು ಹೇಳುತ್ತದೆಯೋ, ಅದನ್ನೇ 'ಲಟ್' 'ಲ್' ಕಾರವು ಹೇಳಿದರೆ, 'ಲಟ್' ನ ಸ್ಥಾನದಲ್ಲಿ ಶತೃ ಮತ್ತು ಶಾನಚ್ ಪ್ರತ್ಯಯಗಳು ಆದೇಶವಾಗಿ ಬರುತ್ತವೆ.

ಶತೃ ಪ್ರತ್ಯಯಗಳು ಹಾಗೂ ಶಾನಚ್ ಪ್ರತ್ಯಯಗಳು ಸಾರ್ವಧಾತುಕಗಳಾಗಿವೆ. ಆದ್ದರಿಂದ ಇವುಗಳು ಪರದಲ್ಲಿರುವಾಗ ಶಬಾದಿ (ಶಪ್ ಆದಿ ಶಬಾದಿ) ವಿಕರಣ ಪ್ರತ್ಯಯಗಳು ಬರುತ್ತವೆ. 'ಶತೃ' ಪ್ರತ್ಯಯವು ಪರಸ್ಮೈಪದಿ ಧಾತುಗಳಿಗೂ 'ಶಾನಚ್'

ಪ್ರತ್ಯಯವು ಆತ್ಮನೇಪದಿ ಧಾತುಗಳಿಗೂ ಬರುತ್ತದೆ.

'ಶತೃ' ಪ್ರತ್ಯಯದಲ್ಲಿ 'ಶ್' ಕಾರ ಮತ್ತು 'ಋ' ಕಾರಗಳ ಇತ್/ಲೋಪವಾಗಿ 'ಅತ್' ಮಾತ್ರ ಉಳಿಯುತ್ತದೆ. ಹಾಗೆಯೇ 'ಶಾನಚ್' ಪ್ರತ್ಯಯದಲ್ಲಿ 'ಶ್' ಕಾರ ಮತ್ತು 'ಚ್' ಕಾರಗಳ ಇತ್/ಲೋಪವಾಗಿ 'ಆನ' ಮಾತ್ರ ಉಳಿಯುತ್ತದೆ.

ಶತೃ (ಅತ್) ಪ್ರತ್ಯಯದಲ್ಲಿ 'ಋ' ಕಾರವು ಇತ್ ಆಗಿರುವುದರಿಂದ 'ಉಗಿತ್' (ಉ–ಕಾರ ಇತ್ತಾಗಿರುವ) ಆಗಿದೆ. ಹಾಗೂ ಇದು ಸ್ತ್ರೀಲಿಙ್ಗದಲ್ಲಿ 'ಙೀಪ್' (ಈ) ಪ್ರತ್ಯಯವನ್ನು ಹೊಂದಿ ದೀರ್ಘ (ಈ) ಕಾರಾನ್ತ ಶಬ್ದವಾಗುತ್ತದೆ.

'ಶಾನಚ್' (ಆನ) ಪ್ರತ್ಯಯವು ಅ–ಕಾರಾನ್ತವಾಗಿರುವುದರಿಂದ, ಸ್ತ್ರೀಲಿಙ್ಗದಲ್ಲಿ 'ಟಾಪ್' (ಆ) ಪ್ರತ್ಯಯವು ಬಂದು ಆಕಾರಾನ್ತ ಶಬ್ದವಾಗುತ್ತದೆ.

ಉದಾ– ಪಚನ್ತಂ ಚೈತ್ರಂ ಪಶ್ಯ (ಬೇಯಿಸುತ್ತಿರುವ ಚೈತ್ರನನ್ನು ನೋಡು) ಎಂಬಲ್ಲಿ, 'ಪಚ್' ಧಾತುವಿನ ಪರದಲ್ಲಿರುವ 'ಲಟ್' ಲ್–ಕಾರದ ಸ್ಥಾನದಲ್ಲಿ 'ಶತೃ' (ಉಗಿತ್) ಪ್ರತ್ಯಯವು ಬಂದು, ಪಚ್+ಅತ್ ಎಂದಿದ್ದಾಗ, 'ಶಪ್'(ಅ) ವಿಕರಣಪ್ರತ್ಯಯ ಬಂದು ಪಚ್+ಅ+ಅತ್ ಎಂದಿದ್ದಾಗ, "ಅತೋಗುಣೇ" ಎಂಬ ಸೂತ್ರದಿಂದ, ಪರರೂಪ ಬಂದು ಪಚ್+ಅತ್ ಎಂದು ರೂಪವಾದಮೇಲೆ, ಪ್ರಾತಿಪದಿಕ ಸಂಜ್ಞಾ ಬಂದು 'ಪಚತ್' ಎಂಬುದಕ್ಕೆ ದ್ವಿತೀಯ ಏಕವಚನದ 'ಅಮ್' ಪ್ರತ್ಯಯವು ಬಂದು, ಪಚ್+ತ್+ಅಮ್ ಎಂದಿದ್ದಾಗ, (ಉಗಿತ್ತಾದುದರಿಂದ) 'ನುಮ್' (ನ್) ಆಗಮವು ಬಂದು, ಪಚ್+ನ್+ತ್+ಅಮ್ ಎಂದಾಗಿ 'ಪಚನ್ತಮ್' ಎಂದು ರೂಪವಾಗುತ್ತದೆ.

**(ಮುಕ್ ಆಗಮವನ್ನು ವಿಧಿಸುವ ಸೂತ್ರ)**

**ಸೂತ್ರ–833. ಆನೇ ಮುಕ್।(7.2.82)**

ವೃತ್ತಿ– ಅದನ್ತಾಙ್ಗಸ್ಯ ಮುಗಾಗಮಃ ಸ್ಯಾತ್ ಆನೇ ಪರೇ। ಪಚಮಾನಂ ಚೈತ್ರಂ ಪಶ್ಯ। ಲಡಿತಿ ಅನುವರ್ತಮಾನೇ ಪುನರ್ಲಡ್‌ಗ್ರಹಣಾತ್ ಪ್ರಥಮಾ ಸಾಮಾನಾಧಿಕರಣ್ಯೇऽಪಿ ಕ್ವಚಿತ್। ಸನ್ದ್ವಿಜಃ॥

ಅ.ವೃ.– "ಅತೋಯೇಯಃ" ಎಂಬ ಸೂತ್ರದಿಂದ, 'ಅತಃ' ಎಂಬ ಪದವನ್ನು ಷಷ್ಠೀ ವಿಭಕ್ತಿಯಲ್ಲಿ ವಿಪರಿಣಾಮಗಳಿಸಿ ಅನುವೃತ್ತಿ ಮಾಡಲಾಗಿದೆ. ಮತ್ತು 'ಅಙ್ಗಸ್ಯ' ಎಂಬುದು ಅಧಿಕಾರ ಸೂತ್ರವಾಗಿದೆ.

ಅರ್ಥ– ಶಾನಚ್ (ಆನ) ಪ್ರತ್ಯಯವು ಪರದಲ್ಲಿದ್ದಾಗ ಅದನ್ತವಾದ ಅಙ್ಗಕ್ಕೆ 'ಮುಕ್' ಆಗಮವು ಬರುತ್ತದೆ. 'ಮುಕ್' ನಲ್ಲಿ 'ಉ'ಕಾರ ಮತ್ತು 'ಕ್'ಕಾರಗಳು 'ಇತ್' ಸಂಜ್ಞೆಯನ್ನು ಹೊಂದಿವೆ. ಹೀಗಾಗಿ ಅವು ಲೋಪವಾದಮೇಲೆ 'ಮ್' ಮಾತ್ರ ಉಳಿಯುತ್ತದೆ. ಇದು 'ಕಿತ್'(ಕ್ ಕಾರ ಇತ್) ಆಗಿರುವುದರಿಂದ ಅದನ್ತಕ್ಕೆ ಅಂತಾವಯಯವಾಗಿ ಬಂದಿದೆ.

ಉದಾ– 'ಪಚಮಾನಂ ಚೈತ್ರಂ ಪಶ್ಯ' ( ಬೇಯಿಸುತ್ತಿರುವ ಚೈತ್ರನನ್ನು ನೋಡು) ಎಂಬಲ್ಲಿ, 'ಪಚ್' ಧಾತುವು ಉಭಯಪದಿ ಆಗಿರೋಣದರಿದ, ಇದಕ್ಕೆ ಶತೃ ಮತ್ತು

ಶಾನಚ್ ಎರಡೂ ಪ್ರತ್ಯಯಗಳು ಬರುತ್ತವೆ. ಪ್ರಕೃತ 'ಶಾನಚ್' ಪ್ರತಯದ ಬಗ್ಗೆ ಹೇಳುತ್ತಾನೆ.

'ಪಚ್' ಧಾತುವಿನ ಪರದಲ್ಲಿರುವ 'ಲಟ್' ನ ಸ್ಥಾನದಲ್ಲಿ 'ಶಾನಚ್' ಪ್ರತ್ಯಯವು ಬಂದು, ಪಚ್+ಆನ ಎಂದಿರುವಾಗ, ಸಾರ್ವಧಾತುಕ ಸಂಜ್ಞಾ ಬಂದು, ನಂತರ 'ಶಪ್' (ಅ) ವಿಕರಣ ಪ್ರತ್ಯಯ ಸೇರಿಸಿದಾಗ ಪಚ್+ಅ+ಆನ ಎಂದಿರುವಾಗ, ಇದು ಅದನ್ತವಾದ ಅಙ್ಗವಾಗಿರುವುದರಿಂದ, ಪ್ರಕೃತ ಸೂತ್ರದಿಂದ 'ಮುಕ್' (ಮ್) ಆಗಮವು ಅನ್ತಾವಯವವಾಗಿ ಬಂದು, ಪಚ್+ಅ+ಮ್+ಆನ=ಪಚಮಾನ ಎಂದಿರುವಾಗ, ಪ್ರಾತಿಪದಿಕ ಸಂಜ್ಞಾ ಬಂದು, ದ್ವಿತೀಯಾ ವಿಭಕ್ತಿಯ 'ಅಮ್' ಸೇರಿಸಿದಾಗ, ಪಚಮಾನ+ಅಮ್ ಎಂದಿರುವಾಗ, "ಅಮಿಪೂರ್ವಃ" ಎಂಬ ಸೂತ್ರದಿಂದ ಪೂರ್ವರೂಪ ಬಂದು ಪಚಮಾನಂ ಎಂಬ ರೂಪವು ಸಿದ್ಧಿಸುತ್ತದೆ.

["ಲಟಃ ಶತೃ ಶಾನಚಾವಪ್ರಥಮಾಸಮಾನಾಧಿಕರಣೇ" ಎಂಬ ಸೂತ್ರದಲ್ಲಿ, 'ಲಟಃ' ಎಂಬ ಪದವನ್ನು ಹಾಕದೇ "ವರ್ತಮಾನೇ ಲಟ್" ಎಂಬ ಸೂತ್ರದಿಂದ 'ಲಟ್' ಎಂಬ ಪದವನ್ನು ಅನುವೃತ್ತಿ ಮಾಡಲು ಬರುತ್ತಿರುವಾಗ, ಪುನಃ 'ಲಟಃ' ಎಂದು ಗ್ರಹಣ ಮಾಡಿರುವುದರಿಂದ, ಪ್ರಥಮಾ ಸಮಾನಾಧಿಕರಣದಲ್ಲೂ ಕೆಲವೆಡೆ 'ಶತೃ' 'ಶಾನಚ್' ಪ್ರತ್ಯಯಗಳು ಬರುತ್ತವೆ ಎಂಬುದನ್ನು ಸೂಚಿಸುತ್ತದೆ. ಇದಕ್ಕೆ ಉದಾಹರಣೆಯು ಕೆಳಗಿನಂತಿದೆ].

ಉದಾ– 'ಸನ್ದ್ವಿಜಃ' (ಒಳ್ಳೆಯ ಬ್ರಾಹ್ಮಣ)–'ಅಸ ಭುವಿ' ಎಂಬ ಧಾತುವಿನ ಪರದಲ್ಲಿರುವ 'ಲಟ್' ಸ್ಥಾನದಲ್ಲಿ ಪ್ರಥಮಾ ಸಮಾನಾಧಿಕರಣದಲ್ಲಿ, 'ಶತೃ'(ಅತ್) ಪ್ರತ್ಯಯವು ಬಂದು, ಅಸ್+ಅತ್ ಎಂದಿರುವಾಗ, "ಶ್ನಸೋರಲ್ಲೋಪಃ" ಎಂಬ ಎಂಬ ಸೂತ್ರದಿಂದ, 'ಅ' ಕಾರಕ್ಕೆ ಲೋಪ ಬಂದು ಸ್+ಅತ್ ಎಂದಿರುವಾಗ, ಪ್ರಾತಿಪದಿಕ ಸಂಜ್ಞಾ ಬಂದು ಅದಕ್ಕೆ 'ಸುಪ್' ಸೇರಿಸಿದಾಗ, ಸ್+ಅತ್+ಸ್ ಎಂದಿರುವಾಗ, ಸ್ (ಸುಪ್) ಇದು ಉಗಿತ್ತಾಗಿರುವುದರಿಂದ,"ಉಗಿದಚಾಂ ಸರ್ವನಾಮಸ್ಥಾನೇಽಧಾತೋಃ" ಎಂಬ ಸೂತ್ರದಿಂದ, ನುಮ್(ನ್) ಆಗಮವು ಬಂದು, ಸ್+ಅ+ನ್+ತ್+ಸ್ ಎಂದಿರುವಾಗ, "ಹಲ್ಙ್ಯಾಭ್ಯೋದೀರ್ಘಾತ್ ಸುತಿಸಿ ಅಪೃಕ್ತಂ ಹಲ್" ಎಂಬುದರಿಂದ 'ಸುಪ್' ಗೆ ಲೋಪ ಬಂದು, ಸ್+ಅ+ನ್+ತ್ ಎಂದಿರುವಾಗ, 'ತ್' ಕಾರಕ್ಕೆ "ಸಂಯೋಗಾನ್ತಸ್ಯ ಲೋಪಃ" ಎಂಬ ಸೂತ್ರದಿಂದ ಲೋಪ ಬಂದು, ಸ್+ಅ+ನ್ ಎಂದಿರುವಾಗ, ಸನ್ ಎಂಬ ಪ್ರಥಮಾವಿಭಕ್ತಿ ಏಕವಚನದ ರೂಪವು ಸಿದ್ಧಿಸುತ್ತದೆ.

**(ವಸು ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ– 834. ವಿದೇಃ ಶತುರ್ವಸುಃ। (7.1.36)**

ವೃತ್ತಿ– ವೇತ್ತೇಃ ಪರಸ್ಯ ಶತುರ್ವಸುರಾದೇಶೋ ವಾ। ವಿದನ್। ವಿದ್ವಾನ್।

ಪ. ಛೇ – ವಿದೇಃ, ಶತುಃ, ವಸುಃ।

ಅ. ವೃ. – "ತುಹ್ಯೋಸ್ತಾತಙ್ ಆಶಿಷೀ ಅನ್ಯತರಸ್ಯಾಮ್" ಎಂಬ ಸೂತ್ರದಿಂದ, 'ಅನ್ಯತರಸ್ಯಾಮ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– 'ವಿದ್' ಧಾತುವಿನ ನಂತರ ಇರುವ 'ಶತೃ' ಪ್ರತ್ಯಯದ ಸ್ಥಾನದಲ್ಲಿ ವಿಕಲ್ಪವಾಗಿ 'ವಸು' ಆದೇಶವು ಬರುತ್ತದೆ. 'ವಸು'ವಿನಲ್ಲಿ 'ಉ' ಕಾರ ಇತ್/ಲೋಪ ಹೊಂದಿ 'ವಸ್' ಮಾತ್ರ ಉಳಿಯುತ್ತದೆ.

ಉದಾ–1. ವಿದನ್। 'ವಿದ್' ಧಾತುವಿನ ಪರದಲ್ಲಿರುವ 'ಲಟ್' ಲಕಾರದ ಸ್ಥಾನದಲ್ಲಿ, 'ಶತೃ' (ಅತ್) ಪ್ರತ್ಯಯವು ಬಂದು ವಿದ್+ಅತ್ ಎಂದಿರುವಾಗ, 'ಶತೃ' ಪ್ರತ್ಯಯಕ್ಕೆ ಸಾರ್ವಧಾತುಕ ಸಂಜ್ಞೆ ಬಂದು, ತನ್ನಿಮಿತ್ತಕವಾಗಿ, 'ಶಪ್'(ಅ) ಬಂದು, ವಿದ್+ಅ+ಅತ್ ಎಂದಿದ್ದಾಗ, ಇದು ಎರಡನೇ ಗಣದ ಧಾತುವಾದ್ದರಿಂದ, 'ಶಪ್'ಗೆ 'ಲುಕ್' ಬಂದು, ಪುನಃ ವಿದ್+ಅತ್ ಎಂದಿರುವಾಗ, ಪ್ರಾತಿಪದಿಕ ಸಂಜ್ಞಾ ಮತ್ತು ವಿಭಕ್ತಿ ಕಾರ್ಯ ಮಾಡಿದಮೇಲೆ ವಿದ್+ಅತ್+ಸ್ ಎಂದಿರುವಾಗ, "ಉಗಿದಚಾಂ ಸರ್ವನಾಮ ಸ್ಥಾನೇऽಧಾತೋಃ" ಎಂಬ ಸೂತ್ರದಿಂದ, ನುಮ್(ನ್) ಆಗಮವು ಬಂದು, ವಿದ್+ಅ+ನ್+ತ್+ಸ್ ಎಂದಿರುವಾಗ, "ಹಲ್‌ಙ್ಯಾಭ್ಯೋದೀರ್ಘಾತ್ ಸುತಿಸಿ ಅಪೃಕ್ತಂ ಹಲ್" ಎಂಬುದರಿಂದ 'ಸುಪ್'(ಸ್)ಗೆ ಲೋಪ ಬಂದು, 'ತ್' ಕಾರಕ್ಕೆ "ಸಂಯೋಗಾನ್ತಸ್ಯ ಲೋಪಃ" ಎಂಬ ಸೂತ್ರದಿಂದ ಲೋಪ ಬಂದು, ವಿದ್+ಅ+ನ್ = ವಿದನ್ ಎಂದು ರೂಪವಾಗುತ್ತದೆ.

ಉದಾ–2 – ವಿದ್ವಾನ್ (ತಿಳಿದವನು)। – ವಿದ್ ಜ್ಞಾನೇ ಎಂಬ ಧಾತುವಿನ ನಂತರ ಇರುವ 'ಲಟ್' ಲಕಾರದ ಸ್ಥಾನದಲ್ಲಿ, ಪ್ರಥಮಾ ಸಾಮಾನಾಧಿಕರಣ್ಯದಲ್ಲಿ, 'ಶತೃ' ಪ್ರತ್ಯಯವು ಬಂದು ವಿದ್+ಅತ್ ಎಂದಿರುವಾಗ, 'ಶಪ್' (ವಿಕರಣ) ಬಂದು ನಂತರ ಅದು ಲುಕ್(ಲೋಪ)ವಾಗಿ, ಪ್ರಕೃತ ಸೂತ್ತದಿಂದ 'ವಸ್' ಆದೇಶ ಬಂದು ವಿದ್+ವಸ್ ಎಂದಿದ್ದಾಗ, ಪ್ರಾತಿಪದಿಕ ಸಂಜ್ಞಾ ಬಂದು, 'ಸು'(ಸ್) ಸೇರಿಸಿ ವಿದ್+ ವಸ್+ಸ್ ಎಂದಿರುವಾಗ, ನುಮಾಗಮ ಬಂದು ವಿದ್+ವ+ನ್+ಸ್+ಸ್ ಎಂದಿರುವಾಗ, "ಸಾನ್ತಮಹತಃ ಸಂಯೋಗಸ್ಯ" ಎಂಬ ಸೂತ್ರದಿಂದ, ಉಪದಾ 'ವ' ಕಾರ ದೀರ್ಘವಾಗಿ, ವಿದ್+ವಾ+ನ್+ಸ್+ಸ್ ಎಂದಿರುವಾಗ, 'ಸುಪ್' 'ಸ್' ಕಾರಕ್ಕೆ "ಹಲ್ಙ್ಯಾಭ್ಯೋ ದೀರ್ಘಾತ್ ಸುತಿಸಿ ಅಪೃಕ್ತಂ ಹಲ್" ಎಂಬುದರಿಂದ ಲೋಪ ಬಂದು, ಮತ್ತು 'ನ್' ಕಾರದ ಪರದಲ್ಲಿರುವ 'ಸ್' ಕಾರಾಕ್ಕೆ "ಸಂಯೋಗಾನ್ತಸ್ಯ ಲೋಪಃ" ಎಂಬ ಸೂತ್ರದಿಂದ ಲೋಪ ಬಂದು, ವಿದ್+ವಾ+ನ್=ವಿದ್ವಾನ್ ಎಂಬ ರೂಪವು ಸಿದ್ಧವಾಗುತ್ತದೆ.

**('ಸತ್' ಸಂಜ್ಞೆಯನ್ನು ವಿಧಿಸುವ ಸೂತ್ರ )**

**ಸೂತ್ರ– 835. ತೌ ಸತ್।(3.2.127)**

ವೃತ್ತಿ– ತೌ ಶತೃ–ಶಾನಚೌ ಸತ್ಸಂಜ್ಞೌ ಸ್ತಃ।

ಅರ್ಥ–'ಶತೃ' ಮತ್ತು 'ಶಾನಚ್' ಪ್ರತ್ಯಯಗಳಿಗೆ 'ಸತ್' ಎಂಬ ಸಂಜ್ಞೆಯು ಬರುತ್ತದೆ.

(ವೈಕಲ್ಪಿಕವಾಗಿ 'ಸತ್' ಪ್ರತ್ಯಯವನ್ನು ವಿಧಿಸುವ ಸೂತ್ರ)

**ಸೂತ್ರ-836. ಲೃಟಃ ಸದ್ವಾ।(3.3.14)**

ವೃತ್ತಿ- ವ್ಯವಸ್ಥಿತವಿಭಾಷೇಯಮ್। ತೇನ ಅಪ್ರಥಮಾಸಾಮಾನಾಧಿಕರಣ್ಯೇ ಪ್ರತ್ಯಯೋತ್ತರಪದಯೋಃ ಸಮ್ಬೋಧನೇ ಲಕ್ಷಣಹೇತ್ವೋಶ್ಚ ನಿತ್ಯಮ್। ಕರಿಷ್ಯನ್ತಂ ಕರಿಷ್ಯಮಾಣಂ ಪಶ್ಯ।

ಅರ್ಥ-'ಲೃಟ್'ನ ಸ್ಥಾನದಲ್ಲಿ 'ಸತ್' ಸಂಜ್ಞೆಯುಳ್ಳ 'ಶತೃ' ಮತ್ತು 'ಶಾನಚ್' ಪ್ರತ್ಯಯಗಳು ವಿಕಲ್ಪವಾಗಿ ಆದೇಶವಾಗಿ ಬರುತ್ತವೆ. ಈ ವಿಕಲ್ಪಕ್ಕೆ ವ್ಯವಸ್ಥಿತ ವಿಭಾಷಾ ಎಂದು ಕರೆಯುತ್ತಾರೆ. 'ವ್ಯವಸ್ಥಿತ ವಿಭಾಷಾ' ಎಂದರೆ, 'ವ್ಯವಸ್ಥಾ ಸಞ್ಜಾತಾ ಅಸ್ಯಾಃ ಇತಿ ವ್ಯವಸ್ಥಿತಾ' ವ್ಯವಸ್ಥಿತಾಚಾಸೌ ವಿಭಾಷಾ ಚ ವ್ಯವಸ್ಥಿತ-ವಿಭಾಷಾ ಎಂದು ಕರ್ಮಧಾರಯ ಸಮಾಸ. ಅಂದರೆ ಇದರಿಂದ ವಿಧಿಸಲಾಗುವ ಕಾರ್ಯವು ಕೆಲವು ಉದಾಹರಣೆಗಳಲ್ಲಿ ಕಂಡುಬರುವದು, ಕೆಲವು ಉದಾಹರಣೆಗಳಲ್ಲಿ ಕಂಡುಬರುವದೇ ಇಲ್ಲ. ಈ ರೀತಿಯಾಗಿ ವ್ಯವಸ್ಥಿತ ವಿಭಾಷಾ ಇರೋಣದ್ದರಿಂದ ಪ್ರಥಮಾನ್ತದ ಜೊತೆಗೆ ಸಮಾನಾಧಿಕರಣವಿಲ್ಲದೇ ಇದ್ದಾಗ, ಪ್ರತ್ಯಯ ಅಥವಾ ಉತ್ತರಪದವು ಪರವಾದಾಗ, ಸಂಬೋಧನದಲ್ಲೂ ಮತ್ತು ಲಕ್ಷಣ, ಹೇತ್ವರ್ಥಗಳಲ್ಲೂ, ಧಾತುವಿನ ಪರದಲ್ಲಿರುವ 'ಲೃಟ್'ಗೆ ಈ ಪ್ರತ್ಯಯಗಳು ನಿತ್ಯವಾಗಿ ಆದೇಶವಾಗಿ ಬರುತ್ತವೆ.

ಉದಾ- 'ಕರಿಷ್ಯನ್ತಮ್ ಪಶ್ಯ' (ಮುಂದೆ ಕೆಲಸ ಮಾಡಲಿರುವವನನ್ನು ನೋಡು) ಎಂಬಲ್ಲಿ, 'ಕೃ' ಧಾತುವಿನ ಪರದಲ್ಲಿರುವ 'ಲೃಟ್' ನ ಸ್ಥಾನದಲ್ಲಿ 'ಶತೃ' ಕೃದಂತೇ ಪೂರ್ವಕೃದನ್ತ ಪ್ರತ್ಯಯವು ಆದೇಶವಾಗಿ ಬಂದು, ಕೃ+ಅತ್ ಎಂದಿರುವಾಗ, "ಸ್ಯತಾಸೀ ಲೃ ಲೃಟೋಃ" ಎಂಬ ಸೂತ್ರದಿಂದ 'ಸ್ಯ' ಪ್ರತ್ಯಯವು ಬಂದು ಕೃ+ಸ್ಯ+ಅತ್ ಎಂದಿದ್ದಾಗ, "ಋದ್ಧನೋಃ ಸ್ಯೇತಿ" ಸೂತ್ರದಿಂದ, ಇಡಾಗಮ (ಇ) ಬಂದು ಕೃ+ಇ+ಸ್ಯ+ಅತ್ ಎಂದಿರುವಾಗ, 'ಸ' ಕಾರಕ್ಕೆ "ಆದೇಶ ಪ್ರತ್ಯಯಯೋಃ" ಎಂಬುದರಿಂದ, 'ಷ' ಕಾರವು ಆದೇಶವಾಗಿ ಬಂದು, ಕೃ+ಇ+ಷ್ಯ+ಅತ್ ಎಂದಿರುವಾಗ, 'ಅತೋ ಗುಣೇ" ಎಂಬ ಸೂತ್ರದಿಂದ, ಪರರೂಪ ಬಂದು, ಕರಿಷ್ಯತ್ ಎಂದು ರೂಪವಾಗಿ ನಂತರ ಅದಕ್ಕೆ ಪ್ರಾತಿಪದಿಕ ಸಂಜ್ಞಾ ಬಂದು, ಅಪ್ರಥಮಾ ಸಮಾನಾಧಿಕರಣ್ಯದಲ್ಲಿ ನಿತ್ಯವಾಗಿ ಬರುತ್ತದೆ ಎಂದು ಹೇಳಿದ್ದರಿಂದ, ದ್ವಿತೀಯಾ ವಿಭಕ್ತಿಯ 'ಅಮ್' ಪ್ರತ್ಯಯ ಬಂದು ಕರಿಷ್ಯತ್+ಅಮ್ ಎಂದಿದ್ದಾಗ, ಉಗಿತ್ತಾದ್ದರಿಂದ, ನುಮಾಗಮ ಬಂದು ಕರಿಷ್ಯ +ನ್+ತ್+ಅಮ್ ಎಂದಿದ್ದಾಗ, 'ನ್' ಕಾರಕ್ಕೆ "ನಶ್ಚಾಪದಾನ್ತಸ್ಯ ಝಲಿ" ಎಂಬುದರಿಂದ ಅನುಸ್ವಾರವಾಗಿ, ಕರಿಷ್ಯ+೦+ತ್+ಅಮ್ ಎಂದಿದ್ದಾಗ, ಪರಸವರ್ಣವಾಗಿ ಕರಿಷ್ಯ+ನ್+ತ್+ಅಮ್=ಕರಿಷ್ಯನ್ತಮ್ ಎಂದು ರೂಪವಾಗುತ್ತದೆ.

ಉದಾ. 2-ಕರಿಷ್ಯಮಾಣಮ್ (ಮುಂದೆ ಮಾಡಲಿರುವ)-ಕರಿಷ್ಯ+ ಆನ(ಶಾನಚ್)+ಅಮ್ ಎಂದಿದ್ದಾಗ, "ಆನೇ ಮುಕ್" ಎಂಬ ಸೂತ್ರದಿಂದ 'ಮುಕ್' ಆಗಮವು ಬಂದು ಕರಿಷ್ಯ+ಮ್+ಆನ+ಅಮ್ ಎಂದಿರುವಾಗ, "ರಷಾಭ್ಯಾಮ್ ನೋಣಃ ಸಮಾನಪದೇ" ಸೂತ್ರದಿಂದ 'ನ' ಕಾರಕ್ಕೆ 'ಣತ್ವ' ಬಂದು ಕರಿಷ್ಯ+ಮ್+ಆಣ+ಅಮ್

ಎಂದಿರುವಾಗ "ಅಮಿಪೂರ್ವಃ" ಎಂಬ ಸೂತ್ರದಿಂದ ಪೂರ್ವರೂಪ ಬಂದು ಕರಿಷ್ಯಮಾಣಮ್ ಎಂದು ರೂಪವಾಗುತ್ತದೆ.

**('ತಚ್ಛೀಲಾದಿ' ಅಧಿಕಾರ ಸೂತ್ರ)**

**ಸೂತ್ರ-837 – ಆ ಕ್ವೇಸ್ತಚ್ಛೀಲ-ತದ್ಧರ್ಮ-ತತ್ಸಾಧುಕಾರಿಷು।(3.2.134)**

ವೃತ್ತಿ – ಕ್ವಿಪಮಭಿವ್ಯಾಪ್ಯ ವಕ್ಷ್ಯಮಾಣಾಃ ಪ್ರತ್ಯಯಾಃ ತಚ್ಛೀಲಾದಿಷು ಕರ್ತೃಷು ಬೋಧ್ಯಾಃ।

ಪ.ಛೇ.-ಆ, ಕ್ವೇಃ, ತಚ್ಛೀಲ-ತದ್ಧರ್ಮ-ತತ್ಸಾಧುಕಾರಿಷು।

ಅ.ವೃ.-"ಧಾತೋಃ" ಎಂಬುದು ಅಧಿಕಾರಸೂತ್ರ, ಸೂತ್ರದಲ್ಲಿರುವ 'ತತ್' ಶಬ್ದದಿಂದ ಧಾತುವಿನ ಜ್ಞಾನವಾಗುತ್ತದೆ.

ಅರ್ಥ – ಪ್ರಕೃತ ಸೂತ್ರದಿಂದ ಆರಂಭಿಸಿ "ಭ್ರಾಜ-ಭಾಸ-ಧುರ್ವಿ-ದ್ಯುತೋರ್ಜಿ-ಪೄ-ಜು-ಗ್ರಾವಸ್ತುವಃ ಕ್ವಿಪ್" ಇಲ್ಲಿಯವರೆಗೆ ಹೇಳಿರುವ 'ಕ್ವಿಪ್' ಪ್ರತ್ಯಯಾನ್ತ ಪರ್ಯನ್ತ ಹೇಳಲಾಗಿರುವ ಪ್ರತ್ಯಯಗಳು 'ತಚ್ಛೀಲ' 'ತದ್ಧರ್ಮ' 'ತತ್ಸಾಧುಕಾರಿ' ಈ ಮೂರು ಅರ್ಥಗಳು ತೋರುವಾಗ, ಕರ್ತ್ರರ್ಥದಲ್ಲಿ ಬರುತ್ತವೆ.

ಇಲ್ಲಿ ಹೇಳಲಾಗಿರುವ 'ಆಙ್' ಉಪಸರ್ಗವು 'ಅಭಿವಿಧಿ' ಎಂಬ ಅರ್ಥವನ್ನು ಹೇಳೋಣದ್ದರಿಂದ 'ಕ್ವಿಪ್' ಪ್ರತ್ಯಯವನ್ನೂ ಗಣನೆಗೆ ತೆಗೆದುಕೊಳ್ಳಲಾಗಿದೆ.

**(ತೃನ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ- 838 ತೃನ್।(3.2.135)**

ವೃತ್ತಿ- ಕರ್ತಾ ಕಟಾನ್।

ಅ. ವೃ. – 'ಧಾತೋಃ' 'ಪ್ರತ್ಯಯಃ' 'ಪರಶ್ಚ' ಎಂಬವು ಅಧಿಕಾರ ಸೂತ್ರಗಳಾಗಿವೆ. ಮತ್ತು "ತಚ್ಛೀಲ ತದ್ಧರ್ಮ ತತ್ಸಾಧುಕಾರಿಷು" ಎಂಬ ಪದಗಳು ಅನುವೃತ್ತವಾಗುತ್ತವೆ.

ಉದಾ-ಕರ್ತಾ ಕಟಾನ್-(ಚಾಪೆಯನ್ನು ಮಾಡುವ ಸ್ವಭಾವವುಳ್ಳವನು, ಧರ್ಮವುಳ್ಳವನು. ಚೆನ್ನಾಗಿ ತಯಾರಿಸುವವನು) ಎಂಬಲ್ಲಿ-'ಕೃಞ್' ಧಾತುವಿಗೆ ತಚ್ಛೀಲಾರ್ಥದಲ್ಲಿ, 'ತೃನ್' (ತೃ) ಪ್ರತ್ಯಯ ಬಂದು, ಕೃ+ತೃ ಎಂದಿದ್ದಾಗ, 'ತೃನ್' (ತೃ) ಪ್ರತ್ಯಯವು ಆರ್ಧಧಾತುಕವಾಗಿರುವುದರಿಂದ "ಸಾರ್ವಧಾತುಕಾರ್ಧಧಾತುಕಯೋಃ" ಎಂಬುದರಿಂದ ಗುಣ ಬಂದು ಕ+ಅರ್+ತೃ=ಕರ್ತೃ ಎಂದಿರುವಾಗ, ಪ್ರಾತಿಪದಿಕ ಸಂಜ್ಞೆ ಬಂದು 'ಸುಪ್' ಪ್ರತ್ಯಯ ಸೇರಿಸಿದಾಗ, ಕರ್ತೃ+ಸ್(ಸುಪ್) ಎಂದಿರುವಾಗ, "ಋದುಶನಸ್ ಪುರುದಂಸೋಽನೇಹಸಾಂಚ" ಎಂಬ ಸೂತ್ರದಿಂದ 'ಋ' ಕಾರಕ್ಕೆ "ಅನಙ್" (ಅನ್) ಆದೇಶ ಬಂದು, ಕರ್ತ್+ಅನ್+ಸ್ ಎಂದಿದ್ದಾಗ, "ಅಪ್-ತೃನ್-ತೃಚ್-ಸ್ವಸೃ-ನಪ್ತೃ-ನೇಷ್ಟೃ-ಕ್ಷತ್ತೃ-ಹೋತೃ- ಪೋತೃ-ಪ್ರಶಾಸ್ತ್ರೂಣಾಮ್" ಎಂಬುದರಿಂದ ಉಪಧಾಭೂತವಾದ 'ಅ' ಕಾರಕ್ಕೆ ಕೃದಂತೇ ಪೂರ್ವಕೃದನ್ತ ದೀರ್ಘ ಬಂದು

ಕರ್ತ್+ಆನ್+ಸ್ ಎಂದಿರುವಾಗ, "ಹಲ್ಙ್ಯಾಬ್ಭ್ಯೋದೀರ್ಘಾತ್ ಸುತಿಸಿ ಅಪೃಕ್ತಂ ಹಲ್" ಎಂಬುದರಿಂದ 'ಸ್' ಕಾರಕ್ಕೆ ಲೋಪ ಬಂದು ಕರ್ತ್+ಆನ್ ಎಂದಿರುವಾಗ, "ನಲೋಪಃ ಪ್ರಾತಿಪದಿಕಾನ್ತಸ್ಯ" ಎಂಬ ಸೂತ್ರದಿಂದ 'ನ್' ಕಾರಕ್ಕೆ ಲೋಪ ಬಂದು ಕರ್ತಾ ಎಂದು ರೂಪವು ಸಿದ್ಧವಾಗುತ್ತದೆ.'ಕಟಾನ್' ಎಂಬುದು ಕರ್ಮವಾಚಕ ಪದವಾಗಿದೆ. ಇದಕ್ಕೆ ತೃನ್ನನ್ತ-ಕೃದನ್ತ ಶಬ್ದದ ಪ್ರಯೋಗವಿದ್ದಾಗ, "ಕರ್ತೃ-ಕರ್ಮಣೋಃ ಕೃತಿ" ಎಂಬುದರಿಂದ 'ಕಟ' ಶಬ್ದಕ್ಕೆ 'ಷಷ್ಠೀ' ಪ್ರಾಪ್ತವಾಗಲು "ನಲೋಕಾವ್ಯಯನಿಷ್ಠಾಖಲರ್ಥತೃನಾಮ್" ಎಂಬುದರಿಂದ ನಿಷೇಧವು ಬಂದು, "ಕರ್ಮಣೀ ದ್ವಿತೀಯಾ" ಎಂಬುದರಿಂದ 'ಕಟ' ಶಬ್ದಕ್ಕೆ ದ್ವಿತೀಯಾ ಬಂದು 'ಕರ್ತಾ ಕಟಾನ್' ಎಂಬ ರೂಪವು ಸಿದ್ಧಿಸುತ್ತದೆ.

**('ಷಾಕನ್' ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-839. ಜಲ್ಪ-ಭಿಕ್ಷ-ಕುಟ್ಟ-ಲುಣ್ಟ-ವೃಙಃ ಷಾಕನ್।(3.2.155)**

ಅ. ವ್ಯ. – 'ಧಾತೋಃ' 'ಪ್ರತ್ಯಯಃ' 'ಪರಶ್ಚ' ಎಂಬವು ಅಧಿಕಾರ ಸೂತ್ರಗಳಾಗಿವೆ. ಮತ್ತು "ತಚ್ಛೀಲ ತದ್ಧರ್ಮ ತತ್ಸಾಧುಕಾರಿಷು" ಎಂಬ ಸೂತ್ರವು ಅನುವೃತ್ತವಾಗುತ್ತದೆ.

ಅರ್ಥ–'ಷಾಕನ್' ಪ್ರತ್ಯಯವು ಮತ್ತು 'ತಚ್ಛೀಲ' 'ತದ್ಧರ್ಮ' 'ತತ್ಸಾಧುಕಾರಿ' ಎಂಬ ಅರ್ಥಗಳು ಜಲ್ಪ, ಭಿಕ್ಷ, ಕುಟ್ಟ, ಲುಣ್ಟ, ವೃಙ್ ಎಂಬ ಈ ಧಾತುವಳಿಂದ ತೋರುವಾಗ ಕರ್ತ್ರರ್ಥದಲ್ಲಿ ಬರುತ್ತವೆ. ಷಾಕನ್ ಎಂಬಲ್ಲಿರುವ 'ಷ್' ಕಾರಕ್ಕೆ ಮುಂದಿನ ಸೂತ್ರದಿಂದ ಲೋಪ ಬಂದು 'ಆಕ' ಮಾತ್ರ ಉಳಿಯುತ್ತದೆ.

**('ಷ್' ಕಾರಕ್ಕೆ 'ಇತ್' ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ- 840. ಷಃ ಪ್ರತ್ಯಯಸ್ಯ।(1.3.6)**

ವೃತ್ತಿ– ಪ್ರತ್ಯಯಸ್ಯಾದಿಃ ಷ ಇತ್ ಸಂಜ್ಞಃ ಸ್ಯಾತ್। ಜಲ್ಪಾಕಃ। ಭಿಕ್ಷಾಕಃ। ಕುಟ್ಟಾಕಃ। ಲುಣ್ಟಾಕಃ। ವರಾಕಃ। ವರಾಕೀ।

ಅ.ವ್ಯ. – "ಆದಿರ್ಞಿ ಟುಡವಃ" ಎಂಬ ಸೂತ್ರದಿಂದ, 'ಆದಿಃ' ಎಂಬ ಪದವೂ ಮತ್ತು "ಉಪದೇಶೇಽಜನುನಾಸಿಕ ಇತ್" ಎಂಬ ಸೂತ್ರದಿಂದ 'ಇತ್' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ– ಪ್ರತ್ಯಯದ ಆದಿಯಲ್ಲಿರುವ 'ಕ್ಷಷ್' ಕಾರವು 'ಇತ್' ಸಂಜ್ಞೆಯನ್ನು ಹೊಂದುತ್ತದೆ.

ಉದಾ– 'ಜಲ್ಪಾಕಃ'– (ಬಹಳ ಮಾತಾಡುವ ಸ್ವಭಾವವುಳ್ಳವನು)–ಈ ಅರ್ಥದ ಜೊತೆಗೆ ಮಾತನಾಡುವ ತನ್ನ ಧರ್ಮವನ್ನು ತಿಳಿದವನು ಮತ್ತು ಒಳ್ಳೆಯ ರೀತಿಯಲ್ಲಿ ಮಾತನಾಡುವ ಸಾಮರ್ಥ್ಯವುಳ್ಳವನು ಎಂಬ ಈ ಎರಡು ಅರ್ಥಗಳೂ ಸಹ "ಆಕ್ವೇಃ ತಚ್ಛೀಲ-ತದ್ಧರ್ಮ-ತತ್ಸಾಧುಕಾರಿಷು" ಎಂಬ ಸೂತ್ರದಲ್ಲಿ, ಹೇಳಿರುವ ಈ ಅರ್ಥಗಳೂ ಇಲ್ಲಿ ಅಡಕವಾಗಿವೆ.

ಮೇಲೆ ಹೇಳಿದ ಮೂರು ಅರ್ಥಗಳಿಂದ ಕೂಡಿದ ಜಲ್ಪ ವ್ಯಕ್ತಾಯಾಂ ವಾಚಿ ಎಂಬ ಧಾತುವಿನ ಪರದಲ್ಲಿ ಕರ್ತ್ರರ್ಥದಲ್ಲಿ "ಜಲ್ಪ ಭಿಕ್ಷ" ಎಂಬ ಸೂತ್ರದಿಂದ, 'ಷಾಕನ್' ಪ್ರತ್ಯಯವು ಜಲ್ಪ್+ಷಾಕನ್ ಎಂದಿದ್ದಾಗ, 'ಷ್' ಕಾರಕ್ಕೆ ಪ್ರಕೃತ ಸೂತ್ರದಿಂದ 'ಇತ್' ಸಂಜ್ಞೆ ಬಂದು ಅದು ಲೋಪವಾಗಿ ಜಲ್ಪ್+ಆಕನ್ ಎಂದಿದ್ದಾಗ, 'ನ್' ಕಾರಕ್ಕೆ "ಹಲನ್ತ್ಯಮ್" ಸೂತ್ರದಿಂದ 'ಇತ್' ಸಂಜ್ಞೆ ಬಂದು ಲೋಪವಾಗಿ, ಜಲ್ಪ್+ ಆಕ=ಜಲ್ಪಾಕ ಎಂದಿದ್ದಾಗ, ಪ್ರಾತಿಪದಿಕ ಸಂಜ್ಞಾ ಬಂದು, ಪ್ರಥಮಾ ವಿಭಕ್ತಿ ಏಕವಚನದಲ್ಲಿ 'ಸುಪ್' (ಸ್) ಪ್ರತ್ಯಯ ಸೇರಿಸಿ ಜಲ್ಪ್+ಆಕ+ಸ್ ಎಂದಿದ್ದಾಗ 'ಸ್' ಕಾರಕ್ಕೆ ರುತ್ವ-ವಿಸರ್ಗಗಳಿಂದ ಜಲ್ಪಾಕಃ ಎಂಬ ರೂಪವು ಸಿದ್ಧಿಸುತ್ತದೆ.

ಇದೇರೀತಿಯಾಗಿ, "ಭಿಕ್ಷಾಕಃ' (ಭಿಕ್ಷೆ ಬೇಡುವ ಸ್ವಭಾವ ಅಥವಾ ಧರ್ಮ ಸಾಮರ್ಥ್ಯವುಳ್ಳವನು), ಕುಟ್ಟಾಕಃ-(ಛೇದನ ಅಥವಾ ಹೆದರಿಸುವ ಸ್ವಭಾವವುಳ್ಳವನು), ಲುಂಟಾಕಃ- (ಲೂಟಿ ಮಾಡುವ ಸ್ವಭಾವವುಳ್ಳವನು), ವರಾಕಃ-(ವರಿಸುವ ಸ್ವಭಾವವುಳ್ಳವನು) ಎಂಬ ಅರ್ಥದ ಜೊತೆಗೆ ಎಲ್ಲ ಶಬ್ದಗಳಿಗೂ ಧರ್ಮ ಹಾಗೂ ಸಾಮರ್ಥ್ಯ ಎಂಬ ಅರ್ಥಗಳನ್ನು ಸೇರಿಸಿಕೊಳ್ಳಬೇಕು. ಇವುಗಳ ರೂಪ ಸಿದ್ಧಿಯನ್ನು ಜಲ್ಪಾಕಃ ಶಬ್ದದಂತೆಯೇ ಎಂದು ತಿಳಿಯಬೇಕು.

**('ಉ' ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ- 841. ಸನಾಶಂಸ-ಭಿಕ್ಷ ಉಃ।( 3.2.168)**

ವೃತ್ತಿ-ಚಿಕೀರ್ಷುಃ। ಆಶಂಸುಃ। ಭಿಕ್ಷುಃ।

ಪ.ಛೇ.-ಸನ್, ಆಶಂಸ, ಭಿಕ್ಷ, ಉಃ।

ಅ. ವೃ.-"ಧಾತೋಃ", "ಪ್ರತ್ಯಯಃ", "ಪರಶ್ಚ" ಎಂಬ ಮೂರು ಅಧಿಕಾರ ಸೂತ್ರಗಳು ಅನುವೃತ್ತವಾಗುತ್ತವೆ.

ಕೃದಂತೇ ಪೂರ್ವಕೃದನ್ತ

ಅರ್ಥ-ಸನ್ನನ್ತ ಧಾತುಗಳಿಗೆ ಆಙ್-ಪೂರ್ವಕ 'ಶಂಸ್' ಧಾತು ಹಾಗೂ 'ಭಿಕ್ಷ್' ಧಾತುಗಳಿಗೆ ತಚ್ಛೀಲಾದ್ಯರ್ಥಗಳಲ್ಲಿ 'ಉ' ಪ್ರತ್ಯಯವು ಬರುತ್ತದೆ. "ಪ್ರತ್ಯಯಗ್ರಹಣೇ ತದನ್ತ ಗ್ರಹಣಮ್" ಎಂಬ ನಿಯಮದಿಂದ 'ಸನ್' ಶಬ್ದದಿಂದ ಸನ್ನನ್ತ ಗ್ರಹಣವು ಮಾಡಲಾಗಿದೆ.

ಉದಾ- ' ಚಿಕೀರ್ಷುಃ' (ಮಾಡಲು ಇಚ್ಛಿಸುವ ಸ್ವಭಾವವುಳ್ಳವನು) ಎಂಬಲ್ಲಿ, 'ಡು' ಕೃಞ್ ಕರಣೇ ಎಂಬ ಧಾತುವಿಗೆ 'ಸನ್' ಪ್ರತ್ಯಯವನ್ನು ಸೇರಿಸಿ 'ಚಿಕೀರ್ಷ' ಎಂಬ ರೂಪವು ಸಿದ್ಧವಾಗುತ್ತದೆ. ಇದು ಸನ್ನನ್ತ ರೂಪವಾಗಿದೆ. ಪ್ರಕೃತ ಸೂತ್ರದಿಂದ ಇದಕ್ಕೆ 'ಉ' ಪ್ರತ್ಯಯವು ಬಂದು ಚಿಕೀರ್ಷ+ಉ ಎಂದಿದ್ದಾಗ 'ಉ' ಪ್ರತ್ಯಯವು ಆರ್ಧಧಾತುಕವಾದ್ದರಿಂದ, "ಅತೋ ಲೋಪಃ" ಎಂಬುದರಿಂದ 'ಷ' ಕಾರೋತ್ತರವರ್ತಿ 'ಅ' ಕಾರಕ್ಕೆ ಲೋಪ ಬಂದು ಚಿಕೀರ್ಷ್+ಉ ಎಂದಿದ್ದಾಗ, ಹಿಂದಿನಂತೆ ಪ್ರಾತಿಪದಿಕ ಸಂಜ್ಞಾ ವಿಭಕ್ತಿ, ರುತ್ವ-ವಿಸರ್ಗ ಮೊದಲಾದ ಕಾರ್ಯಗಳಾಗಿ ಚಿಕೀರ್ಷುಃ ಎಂದು

ರೂಪವಾಗುತ್ತದೆ. ಉದಾ-2 ಆಶಂಸುಃ (ಆಶೆಪಡುವ ಸ್ವಭಾವವುಳ್ಳವನು) ಎಂಬಲ್ಲಿ, ಆಙ್ ಪೂರ್ವಕ 'ಶಂಸ್' ಧಾತುವಿಗೆ ಪ್ರಕೃತ ಸೂತ್ರದಿಂದ, 'ಉ' ಪ್ರತ್ಯಯವು ಬಂದು ಹಿಂದಿನಂತೆಯೇ ಪಕ್ರಿಯೆ ನಡೆದು 'ಆಶಂಸುಃ' ಎಂಬ ರೂಪವು ಸಿದ್ಧಿಸುತ್ತದೆ. ಭಿಕ್ಷುಃ – (ಭಿಕ್ಷೆ ಬೇಡುವವನು) ಭಿಕ್ಷ ಭಿಕ್ಷಾಯಾಂ ಎಂಬ ಧಾತುವಿಗೆ, ಪ್ರಕೃತ ಸೂತ್ರದಿಂದ 'ಉ' ಪ್ರತ್ಯಯವು ಬಂದು ಹಿಂದಿನಂತೆಯೇ ಪಕ್ರಿಯೆ ನಡೆದು 'ಭಿಕ್ಷುಃ' ಎಂಬ ರೂಪವು ಸಿದ್ಧಿಸುತ್ತದೆ.

**(ಕ್ವಿಪ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-842. ಭ್ರಾಜ-ಭಾಸ-ಧುರ್ವಿ-ದ್ಯುತೋರ್ಜಿ-ಪೄ-ಜು-ಗ್ರಾವಸ್ತುವಃ ಕ್ವಿಪ್।(3.3.177)**

ವೃತ್ತಿ– ವಿಭ್ರಾಟ್। ಭಾಃ।

ಪ. ಛೇ. – ಭ್ರಾಜ, ಭಾಸ, ಧುರ್ವೀ, ದ್ಯುತ್, ಊರ್ಜಿ, ಪೄ, ಜು, ಗ್ರಾವಸ್ತುವಃ ಕ್ವಿಪ್।

ಅ. ವೃ.–"ಧಾತೋಃ", "ಪ್ರತ್ಯಯಃ", "ಪರಶ್ಚ" ಎಂಬ ಮೂರು ಅಧಿಕಾರ ಸೂತ್ರಗಳು ಅನುವೃತ್ತವಾಗುತ್ತವೆ. ಇದರ ಜೊತೆಗೆ " ಆಕ್ವೇಃ-ತಚ್ಛೀಲ-ತದ್ಧರ್ಮ-ತತ್ಸಾಧಿಕಾರಿಷು" ಎಂಬ ಸೂತ್ರದಿಂದ, ತಚ್ಛೀಲ, ತದ್ಧರ್ಮ, ತತ್ಸಾಧಿಕಾರಿಷು ಎಂಬ ಸೂತ್ರದ ಭಾಗವು ಅಧಿಕೃತವಾಗಿದೆ.

ಅರ್ಥ – ಭ್ರಾಜ, ಭಾಸ, ಧುರ್ವಿ, ದ್ಯುತ್, ಊರ್ಜ್, ಪೄ, ಜು, ಮತ್ತು ಗ್ರಾವ ಪೂರ್ವಕ 'ಸ್ತು' ಧಾತುಗಳ ಪರದಲ್ಲಿ ತಚ್ಛೀಲ, ತದ್ಧರ್ಮ, ತತ್ಸಾಧಿಕಾರಿ ಎಂಬ ಕರ್ತ್ರರ್ಥದಲ್ಲಿ, 'ಕ್ವಿಪ್' ಪ್ರತ್ಯಯವು ಬರುತ್ತದೆ.

'ಕ್ವಿಪ್' ಪ್ರತ್ಯಯವು ಸರ್ವಾಪಹಾರಿಯಾಗಿದ್ದು, ಲೋಪವಾಗುತ್ತದೆ. ಹಾಗಾದರೆ ಏನು ಲಾಭವೆಂದರೆ, ಪ್ರತ್ಯಯಲಕ್ಷಣದಿಂದ ಧಾತುವು ಕೃದನ್ತವಾಗಿ, ಪ್ರಾತಿಪದಿಕ ಸಂಜ್ಞೆಯು ಬರುತ್ತದೆ. ಈ ಪ್ರತ್ಯಯವು 'ಕಿತ್' ಆಗಿರುವುದರಿಂದ "ಕ್ಙಿತಿ ಚ" ಎಂಬ ಸೂತ್ರದಿಂದ, 'ಗುಣ' 'ವೃದ್ಧಿ' ನಿಷೇಧವು ಬರುತ್ತದೆ. ಮತ್ತು 'ಪಿತ್' ಆಗಿರುವುದರಿಂದ "ಹ್ರಸ್ವಸ್ಯ ಪಿತಿ-ಕೃತಿ-ತುಕ್" ಎಂಬುದರಿಂದ 'ತುಕ್' ಆಗಮ ಇವೇ ಮೊದಲಾದ ಫಲಗಳು ಇದರಿಂದ ಸಿಗುತ್ತವೆ.

ಉದಾ-1 ವಿಭ್ರಾಟ್। (ವಿಶೇಷವಾಗಿ ಹೊಳೆಯುವ ಸ್ವಭಾವದವನು)-ಎಂಬಲ್ಲಿ, 'ವಿ' ಉಪಸರ್ಗಪೂರ್ವಕ 'ಭ್ರಾಜ್' ಧಾತುವಿಗೆ ಪ್ರಕೃತ ಸೂತ್ರದಿಂದ, 'ಕ್ವಿಪ್' ಪ್ರತ್ಯಯ ಬಂದು ಸರ್ವಾಪಹಾರ ಲೋಪವಾಗಿ, ವಿ+ಭ್ರಾಜ್=ವಿಭ್ರಾಜ್ ಎಂದು 'ಜ್' ಕಾರಾನ್ತ ಪ್ರಾತಿಪದಿಕವು ಸಿದ್ಧವಾಗುತ್ತದೆ. ಇದರ ಪ್ರಥಮೈಕವಚನದಲ್ಲಿ "ವ್ರಶ್ಚ-ಭ್ರಸ್ಜ-ಸೃಜ-ಮೃಜ-ಯಜ-ರಾಜ-ಭ್ರಾಜಚ್ಛಶಾಮ್ ಷಃ" ಎಂಬ ಸೂತ್ರದಿಂದ, 'ಜ್' ಕಾರಕ್ಕೆ 'ಷ್' ಕಾರಾದೇಶ ಬಂದು 'ಷ್' ಕಾರಕ್ಕೆ "ಝಲಾಮ್ ಜಶೋಽನ್ತೇ" ಎಂಬ ಸೂತ್ರದಿಂದ 'ಜಶ್ತ್ವ' (ಡ್) ಬಂದು "ವಾಽವಸಾನೇ" ಎಂಬ ಸೂತ್ರದಿಂದ ಚರ್ತ್ವವು ವೈಕಲ್ಪಿಕವಾಗಿ

ಬಂದು, 'ವಿಭ್ರಾಟ್' ಮತ್ತು 'ವಿಭ್ರಾಡ್' ಎಂದು ಎರಡು ರೂಪಗಳಾಗುತ್ತವೆ.

ಉದಾ-2.-ಭಾಃ (ಹೊಳೆಯುವ ಸ್ವಭಾವವುಳ್ಳವನು)-ಎಂಬಲ್ಲಿ, 'ಭಾಸೃ' ದೀಪ್ತೌ ಎಂಬ ಧಾತುವಿಗೆ ಪ್ರಕೃತ ಸೂತ್ರದಿಂದ, 'ಕ್ವಿಪ್' ಪ್ರತ್ಯಯ ಬಂದು ಸರ್ವಾಪಹಾರ ಲೋಪವಾಗಿ 'ಭಾಸ್' ಎಂದು ಪ್ರಾತಿಪದಿಕವು ಸಿದ್ಧವಾಗುತ್ತದೆ. 'ಸ್' ಕಾರಕ್ಕೆ ರುತ್ವ-ವಿಸರ್ಗಗಳು ಬಂದು, 'ಭಾಃ' ಎಂದು ರೂಪವಾಗುತ್ತದೆ.

**('ಶ್(ಛ್)' ಕಾರ ಮತ್ತು 'ವ್' ಕಾರಗಳಿಗೆ ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ- 843. ರಾಲ್ಲೋಪಃ।(6.4.21)**

ವೃತ್ತಿ- ರೇಫಾಚ್ಛ್ವೋರ್ಲೋಪಃ ಕ್ವೌ ಝಲಾದೌ ಕ್ಙಿತಿ। ಧೂಃ। ವಿದ್ಯುತ್। ಊರ್ಕ್। ಪೂಃ। ದೃಶಿಗ್ರಹಣಸ್ಯಅಪಕರ್ಷಾತ್ ಚ ವತೇರ್ದೀರ್ಘಃ। ಗ್ರಾವಸ್ತುತ್। (ಕ್ವಿಬ್ವಚಿ-ಪ್ರಚ್ಛಚಾಯತಸ್ತು-ಕಟಪ್ರು-ಜು-ಶ್ರೀಣಾಮ್ ದೀರ್ಘೋऽಸಮ್ಪ್ರಸಾರಣಂ ಚ। ವಕ್ತೀತಿ ವಾಕ್।

ಪ. ಛೇ. - ರಾತ್, ಲೋಪಃ।

ಅ. ವೃ.-"ಛ್ವೋಃ ಶೂಡ್ ಅನುನಾಸಿಕೇ ಚ" ಸೂತ್ರದಿಂದ 'ಛ್ವೋಃ' ಎಂಬ ಪದವು ಮತ್ತು "ಅನುನಾಸಿಕಸ್ಯ ಕ್ವಿಝಲೋಃ ಕಿಙತಿ" ಎಂಬ ಸೂತ್ರದಿಂದ, 'ಕ್ವಿಝಲೋಃ' ಮತ್ತು 'ಕಿಙತಿ' ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ - 'ಕ್ವಿಪ್' ಪ್ರತ್ಯಯ ಅಥವಾ ಝಲಾದಿ 'ಕಿತ್' ಮತ್ತು 'ಙಿತ್' ಪರದಲ್ಲಿದ್ದಾಗ, ರೇಫದ ಪರದಲ್ಲಿರುವ 'ಛ್' ಕಾರ ಮತ್ತು 'ವ್' ಕಾರಗಳಿಗೆ ಲೋಪವು ಬರುತ್ತದೆ.

ಉದಾ 1-ಧೂಃ। (ಚಕ್ರದ ಕೀಲು ಅಥವಾ ನೊಗ)-ಧುರ್ವಿ ಹಿಂಸಾಯಾಂ ಎಂಬ ಧಾತು ಪಾಠದಲ್ಲಿ, 'ಧುರ್ವ್' ಧಾತುವಿನ ಪರದಲ್ಲಿ, "ಭ್ರಾಜ,-ಭಾಸ-ಧುರ್ವ್-ದ್ಯುತ್-ಊರ್ಜಿ-ಪೃ-ಜು- ಗ್ರಾವಸ್ತುವಃ" ಸೂತ್ರದಿಂದ, 'ಕ್ವಿಪ್' ಪ್ರತ್ಯಯವು ಬಂದು, ಅದು ಸರ್ವಾಪಹಾರ ಲೋಪವಾಗಿ ಪ್ರಕೃತ ಸೂತ್ರದಿಂದ 'ಧುರ್ವ' ಎಂಬಲ್ಲಿರುವ 'ವ' ಕಾರವು ರೇಫದ ಪರದಲ್ಲಿರುವುದರಿಂದ, ಅದು ಲೋಪವಾಗಿ, 'ಧುರ್' ಎಂಬ ಪ್ರಾತಿಪದಿಕವು ಸಿದ್ಧವಾಗಿ, ಧುರ್+ಸ್(ಸುಪ್) ಎಂದಿರುವಾಗ, 'ಸ್(ಸುಪ್)'ಗೆ "ಹಲ್ಙ್ಯಾಭ್ಯೋ ದೀರ್ಘಾತ್ ಸುತಿಸ್ಯಪೃಕ್ತಂ ಹಲ್" ಎಂಬುದರಿಂದ ಲೋಪ ಬಂದು, "ರ್ವೋರುಪಧಾಯಾಃ" ಎಂಬ ಸೂತ್ರದಿಂದ ಉಪಧಾ 'ಉ' ಕಾರಕ್ಕೆ ದೀರ್ಘವಾಗಿ ಧೂರ್ ಎಂದಿರುವಾಗ ರೇಫಕ್ಕೆ "ಖರವಸಾನಯೋರ್ವಿಸರ್ಜನೀಯಃ" ಎಂಬ ಸೂತ್ರದಿಂದ ವಿಸರ್ಗವಾಗಿ ಧೂಃ ಎಂಬ ರೂಪವು ಸಿದ್ಧಿಸುತ್ತದೆ.

ಉದಾ-2-ವಿದ್ಯುತ್। (ಮಿಂಚುವ ಸ್ವಭಾವವುಳ್ಳದ್ದು) ಎಂಬಲ್ಲಿ, 'ವಿ' ಉಪಸರ್ಗ ಪೂರ್ವಕ ದ್ಯುತ ದೀಪ್ತೌ ಎಂಬ ಧಾತುವಿನ ಪರದಲ್ಲಿ 'ಕ್ವಿಪ್' ಪ್ರತ್ಯಯ ಬಂದು ಅದು ಸರ್ವಾಪಹಾರ ಲೋಪವಾಗಿ ನಂತರ ವಿದ್ಯುತ್ ಎಂದು ಪ್ರಾತಿಪದಿಕವಾಗಿ, ಅದಕ್ಕೆ 'ಸ್'(ಸುಪ್) ಸೇರಿಸಿ, ವಿದ್ಯುತ್+ಸ್(ಸುಪ್) ಎಂದಿರುವಾಗ, 'ಸುಪ್'ನ 'ಸ್' ಕಾರಕ್ಕೆ "ಹಲ್ಙ್ಯಾಭ್ಯೋದೀರ್ಘಾತ್ ಸುತಿಸ್ಯಪೃಕ್ತಂ ಹಲ್" ಎಂಬುದರಿಂದ ಲೋಪ

ಬಂದು, ವಿದ್ಯುತ್ ಎಂಬ ರೂಪವು ಸಿದ್ಧಿಸುತ್ತದೆ.

ಉದಾ-3- ಊರ್ಕ್। (ಬಲವಂತ) ಎಂಬಲ್ಲಿ, 'ಊರ್ಜ್' ಧಾತುವಿನ ಪರದಲ್ಲಿ 'ಕ್ವಿಪ್' ಪ್ರತ್ಯಯ ಬಂದು, ಅದು ಸರ್ವಾಪಹಾರ ಲೋಪವಾಗಿ 'ಊರ್ಜ್' ಎಂಬ ಪ್ರಾತಿಪದಿಕವಾಗಿ ಅದಕ್ಕೆ ಹಿಂದಿನಂತೆ 'ಸುಪ್' ನ 'ಸ್' ಕಾರಕ್ಕೆ ಲೋಪವಾಗಿ, 'ಊರ್ಜ್' ಎಂದಿರುವಾಗ, "ಚೋಃ ಕುಃ" ಎಂಬ ಸೂತ್ರದಿಂದ, 'ಚ್' ವರ್ಗವಾದ 'ಜ್' ಕಾರಕ್ಕೆ ಕುತ್ವ(ಗ್) ಆದೇಶವಾಗಿ ಬಂದು. 'ಊರ್ಗ್' ಎಂದಾಗುತ್ತದೆ. "ವಾಽವಸಾನೇ" ಎಂಬ ಸೂತ್ರದಿಂದ 'ಗ್' ಕಾರಕ್ಕೆ ವೈಕಲ್ಪಿಕವಾಗಿ ಚರ್ತ್ವ (ಕ್) ಬಂದು 'ಊರ್ಕ್' ಮತ್ತು 'ಊರ್ಗ್' ಎಂಬ ರೂಪಗಳು ಸಿದ್ಧಿಸುತ್ತವೆ. "ರಾತ್‌ಸಸ್ಯ" ಎಂಬ ಸೂತ್ರಕ್ಕೆ ಇಲ್ಲಿ ಅವಕಾಶವಿಲ್ಲ.

ಉದಾ- 4. ಪೂಃ। (ಪಟ್ಟಣ) - ಪ್ಲೃ ಪಾಲನ-ಪೋಷಣಯೋಃ" ಎಂಬಲ್ಲಿ 'ಪೃ' ಎಂಬ ಧಾತುವಿಗೆ 'ಕ್ವಿಪ್' ಪ್ರತ್ಯಯ ಬಂದು ಅದು ಸರ್ವಾಪಹಾರ ಲೋಪವಾಗಿ 'ಪೃ' ಎಂದಿದ್ದಾಗ, 'ಕ್ವಿಪ್' ಪ್ರತ್ಯಯವು ಪ್ರತ್ಯಯಲಕ್ಷಣದಿಂದ 'ಕಿತ್' ಆಗಿರುವುದರಿಂದ, ಗುಣ ನಿಷೇಧವಾಗಿ "ಋತಇದ್ಧಾತೋಃ" ಎಂಬ ಸೂತ್ರದಿಂದ ಬರಬೇಕಾಗಿದ್ದ 'ಇತ್ವ' ವನ್ನು ಬಾಧಿಸಿ, "ಉದೋಷ್ಠ್ಯಪೂರ್ವಸ್ಯ" ಎಂಬ ಸೂತ್ರದಿಂದ 'ಉತ್ವ' ಹಾಗೂ 'ರ್'ಪರಗಳಾಗಿ 'ಪುರ್' ಎಂದಾಗಿ, ಪ್ರಾತಿಪದಿಕ ಸಂಜ್ಞಾ ಬಂದು, 'ಸುಪ್' ನ 'ಸ್' ಕಾರಕ್ಕೆ "ಹಲ್‌ಙ್ಯಾಭ್ಯೋದೀರ್ಘಾತ್ ಸುತಿಸ್ಯಪೃಕ್ತಂ ಹಲ್" ಎಂಬುದರಿಂದ ಲೋಪ ಬಂದು, ಪುರ್ ಎಂದೇ ಇರುತ್ತದೆ. ಆಗ "ರ್ವೋರುಪಧಾಯಾಃ" ಎಂಬ ಸೂತ್ರದಿಂದ ಉಪಧಾ 'ಉ' ಕಾರಕ್ಕೆ ದೀರ್ಘ ಬಂದು, ಹಾಗೆಯೇ ರೇಫಕ್ಕೆ ವಿಸರ್ಗ ಬಂದು ಪೂಃ ಎಂಬ ರೂಪವು ಸಿದ್ಧವಾಗುತ್ತದೆ."ಅನ್ಯೇಭ್ಯೋಽಪಿ ದೃಶ್ಯತೇ" ಎಂಬ ಸೂತ್ರದಲ್ಲಿ, 'ದೃಶ್ಯತೇ' ಎಂಬ ಪದವಿದೆ. ಈ 'ದೃಶ್ಯ' ಪದವನ್ನು ಗ್ರಹಣ ಮಾಡಿದ ಫಲವೇನೆಂದರೆ, ಇದರಿಂದ ಅನ್ಯ ಕಾರ್ಯವೂ ಆಗುತ್ತದೆ. ಈ ಸೂತ್ರದಲ್ಲಿ ಆ ಪದವನ್ನು ಅಪಕರ್ಷ ಮಾಡುವುದರಿಂದ, 'ಜು' ಧಾತುವಿಗೆ 'ಕ್ವಿಪ್' ಪ್ರತ್ಯಯ ಸೇರಿಸಿದಾಗ, ದೀರ್ಘವು ಆಗುತ್ತದೆ. ಅಂದರೆ 'ಊ' ಕಾರಾನ್ತವಾಗಿ 'ಜೂ' ಎಂದಾಗುತ್ತದೆ. ಇದರ ಅರ್ಥ ರೋಗಿ ಎಂದು. 'ಭೂ' ಶಬ್ದದಂತೆ ಜೂಃ, ಜುವೌ, ಜುವಃ ಎಂದು ನಡೆಯುತ್ತದೆ.

ಉದಾ-4. ಗ್ರಾವಸ್ತುತ್। (ಮೂರ್ತಿಪೂಜಕನು ಅಥವಾ ಶಿಲೆಯ ಗುಣವನ್ನು ಸ್ತುತಿಸುವವನು) - ಗ್ರಾವ ಪೂರ್ವಕ 'ಸ್ತು' ಧಾತುವಿಗೆ 'ಕ್ವಿಪ್' ಸೇರಿಸಿ 'ಸರ್ವಾಪಹಾರ ಲೋಪ" ವಾದಮೇಲೆ "ಹ್ರಸ್ವಸ್ಯ ಪಿತಿ ಕೃತಿ ತುಕ್" ಎಂಬ ಸೂತ್ರದಿಂದ 'ತುಕ್' ಆಗಮ ಬಂದಮೇಲೆ ತುಕ್ ನಲ್ಲಿ 'ತ್' ಮಾತ್ರ ಉಳಿದು ಗ್ರಾವ+ಸ್ತು+ತ್=ಗ್ರಾವಸ್ತುತ್ ಎಂದು ಪ್ರಥಮೈಕವಚನದ ರೂಪವು ಸಿದ್ಧವಾಗುತ್ತದೆ.

**(ಕ್ವಿಪ್ ಪ್ರತ್ಯಯವನ್ನು ವಿಧಿಸುವ ವಾರ್ತಿಕ)**

**ವಾರ್ತಿಕ - ಕ್ವಿಬ್ವಚಿ-ಪ್ರಚ್ಛ್ಯಾಯತಸ್ತು-ಕಟಪ್ರೂ-ಜು-ಶ್ರೀಣಾಮ್ ದೀರ್ಘೋಽಸಂಪ್ರಸಾರಣಂ ಚ।**

ಅರ್ಥ- ವಚ್, ಪೃಚ್ಛ, ಆಯತ ಪೂರ್ವಸ್ತು, ಕಟಪೂರ್ವಕ 'ಪೃ' ಮತ್ತು 'ಜು'

ಹಾಗೂ 'ಶ್ರೀ' ಧಾತುವಿನ ನಂತರ 'ಕ್ವಿಪ್' ಪ್ರತ್ಯಯ ಬಂದು, ದೀರ್ಘವಾಗಿ ಸಂಪ್ರಸಾರಣದ ಅಭಾವವಿರಬೇಕು.

ಉದಾ- ವಾಕ್। ವಕ್ತೀತಿ ವಾಕ್ ಎಂದು ವಿಗ್ರಹ (ಮಾತು) ಎಂದು ಅರ್ಥ. - ವಚ ಪರಿಭಾಷಣೇ ಎಂಬ ಧಾತುವಿಗೆ 'ಕ್ವಿಪ್' ಪ್ರತ್ಯಯ ಸೇರಿಸಿ 'ಸರ್ವಾಪಹಾರ ಲೋಪ" ವಾದಮೇಲೆ, ದೀರ್ಘವಾಗಿ 'ವಾಚ್' ಎಂದು ಪ್ರಾತಿಪದಿಕವು ಸಿದ್ಧವಾಗುತ್ತದೆ. ತದನಂತರ ಪ್ರಥಮೈಕವಚನದಲ್ಲಿ, "ಚೋಃ ಕುಃ" ಎಂಬ ಸೂತ್ರದಿಂದ 'ಚ್' ಕಾರಕ್ಕೆ 'ಕುತ್ವ' ಬಂದು 'ವಾಕ್' ಎಂದು ರೂಪವು ಸಿದ್ಧವಾಗುತ್ತದೆ.

### ('ಶ್' ಮತ್ತು 'ಊಠ್' ಆದೇಶಗಳನ್ನು ವಿಧಿಸುವ ಸೂತ್ರ)

**ಸೂತ್ರ- 844. ಚ್ಛ್ವೋಃ ಶೂಡನುನಾಸಿಕೇ ಚ।( 6.4.19)**

ವೃತ್ತಿ- ಸತುಕ್ಕಸ್ಯ ಛಸ್ಯ ವಸ್ಯ ಚ ಕ್ರಮಾತ್ ಶ ಊಠ್ ಇತಿ ಅದೇಶೌ ಸ್ತಃ ಅನುನಾಸಿಕೇ ಕ್ವೌ ಝಲಾದೌ ಚ ಕಿಜಿತಿ। ಪೃಚ್ಛತೀತಿ- ಪ್ರಾಟ್। ಆಯತಂ ಸ್ತೌತಿ- ಆಯತಸ್ತೂಃ। ಕಟಂ ಪ್ರವತೇ ಕಟಪ್ರೂಃ। ಜೂರುಕ್ತಃ। ಶ್ರಯತಿ ಹರಿಂ- ಶ್ರೀಃ।

ಪ. ಛೇ - ಚ್ಛ್ವೋಃ, ಶೂಡ್, ಅನುನಾಸಿಕೇ, ಚ।

ಅ. ವ್ಯ. - " ಅನುನಾಸಿಕಸ್ಯ ಕ್ವಿಝಲೋಃ ಕಿಜಿತಿ" ಎಂಬ ಸೂತ್ರದಿಂದ ಕ್ವಿಝಲೋಃ ಮತ್ತು ಕಿಜಿತಿ ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ-'ತುಕ್' ಆಗಮಸಹಿತ 'ಛ್'ಕಾರಕ್ಕೆ 'ಶ್'ಕಾರಾದೇಶ ಮತ್ತು 'ವ್' ಕಾರಕ್ಕೆ 'ಊಠ್' ಆದೇಶವು ಕ್ರಮವಾಗಿ ಬರುತ್ತವೆ-ಅನುನಾಸಿಕ 'ಕ್ವಿ' ಮತ್ತು ಝಲಾದಿಯಾದ 'ಕಿತ್' 'ಜಿತ್' ಗಳು ಪರದಲ್ಲಿದ್ದಾಗ.

ಉದಾ. 1-ಪ್ರಾಟ್। ಪೃಚ್ಛತಿ ಇತಿ ಎಂದು ವಿಗ್ರಹ. ಪ್ರಶ್ನೆಮಾಡುವವನು ಎಂದರ್ಥ. 'ಪೃಚ್ಛ' ಧಾತುವಿನ ಪರದಲ್ಲಿ, ಪೂರ್ವ ವಾರ್ತಿಕದಿಂದ 'ಕ್ವಿಪ್', ದೀರ್ಘ ಮತ್ತು ಸಂಪ್ರಸಾರಣದ ನಿಷೇಧಗಳಾಗಿ, ಪ್ರಕೃತ ಸೂತ್ರದಿಂದ 'ಚ್ಛ' ಗೆ 'ಶ್' ಕಾರಾದೇಶವಾಗಿ, "ವ್ರಶ್ಚ-ಭ್ರಸ್ಜ-ಸೃಜ-ಮೃಜ-ಯಜ-ರಾಜ-ಭಾಜಚ್ಛಶಾಮ್ ಷಃ" ಎಂಬ ಸೂತ್ರದಿಂದ, 'ಶ್' ಕಾರಕ್ಕೆ ಮೂರ್ಧನ್ಯ 'ಷ್' ಕಾರಾದೇಶವಾಗಿ, 'ಜಶ್ತ್ವ' ದಿಂದ 'ಡ್' ಕಾರ ಬಂದು, 'ಚರ್ತ್ವ' ದಿಂದ 'ಡ್' ಕಾರಕ್ಕೆ 'ಟ್' ಕಾರ ಆದೇಶವಾಗಿ ಪ್ರಾಟ್ ಎಂಬ ರೂಪವು ಸಿದ್ಧಿಸುತ್ತದೆ.

ಪ್ರಕ್ರಿಯೆ- ಪ್ರಚ್ಛ+ಕ್ವಿಪ್ ಎಂದಿದ್ದಾಗ, 'ಕ್ವಿಪ್' ಪ್ರತ್ಯಯ ಸರ್ವಾಪಹಾರ ಲೋಪವಾಗಿ 'ಪ್ರಚ್ಛ' ಎಂದಿದ್ದಾಗ, "ಗ್ರಹಿಜ್ಯಾವಯಿೀ... ಎಂಬ ಸೂತ್ರದಿಂದ ಪ್ರಾಪ್ತವಾದ ಸಂಪ್ರಸಾರಣದ ನಿಷೇಧ, "ರ್ವೋರ್ವೋರುಪಧಾಯಾಃ"ಎಂಬ ಸೂತ್ರದಿಂದ ಉಪಧಾ ದೀರ್ಘವಾಗಿ , 'ಪ್ರಾಚ್ಛ' ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ಚ್ಛ' ಗೆ 'ಶ್' ಕಾರ ಬಂದು 'ಪ್ರಾಶ್' ಎಂದಿರುವಾಗ, "ವ್ರಶ್ಚ-ಭ್ರಸ್ಜ-ಸೃಜ-ಮೃಜ-ಯಜ-ರಾಜ-ಭಾಜಚ್ಛಶಾಮ್ ಷಃ" ಎಂಬ ಸೂತ್ರದಿಂದ, 'ಶ್' ಕಾರಕ್ಕೆ ಮೂರ್ಧನ್ಯ 'ಷ್' ಕಾರಾದೇಶವಾಗಿ, 'ಪ್ರಾಷ್' ಎಂದಿದ್ದಾಗ, (ಜಶ್ತ್ವ) 'ಷ್' ಕಾರಕ್ಕೆ 'ಡ್' ಕಾರ ಬಂದು ಪ್ರಾಡ್ ಎಂದು ರೂಪವಾಗುತ್ತದೆ. ಇದೇ

ಮುಂದೆ "ವಾಽವಸಾನೇ" ಎಂಬ ಸೂತ್ರದಿಂದ ವೈಕಲ್ಪಿಕವಾಗಿ ಚರ್ತ್ವ(ಟ್) ಬಂದು ಪ್ರಾಟ್ ಎಂದಾಗುತ್ತದೆ. ಹೀಗೆ 'ಪ್ರಾಟ್' ಮತ್ತು 'ಪ್ರಾಡ್' ಎಂದು ಎರಡು ರೂಪಗಳಾಗುತ್ತವೆ.

ಉದಾ-2-ಆಯತಸ್ತೂಃ। ಆಯತಂ ಸ್ತೌತೀತಿ ವಿಗ್ರಹಃ (ವಿಸ್ತಾರವಾಗಿ ಸ್ತೋತ್ರ ಮಾಡುವ ಸ್ವಭಾವವುಳ್ಳವನು)-ಆಯತಪೂರ್ವಕ 'ಸ್ತು' ಧಾತುವಿಗೆ ಪೂರ್ವೋಕ್ತ ವಾರ್ತಿಕದಿಂದ 'ಕ್ವಿಪ್' ಪ್ರತ್ಯಯ ಬಂದು ಸರ್ವಾಪಹಾರಲೋಪವಾಗಿ, ಪ್ರತ್ಯಯ ಲಕ್ಷಣದಿಂದ ದೀರ್ಘ ಬಂದು 'ಆಯತಸ್ತೂ' ಎಂದಾಗಿ ಪ್ರಾತಿಪದಿಕ ಸಂಜ್ಞಾ ಬಂದು, ಅದರ ಪರದಲ್ಲಿ ಇರುವ ಪ್ರತ್ಯಯದ 'ಸ್' ಕಾರಕ್ಕೆ ರುತ್ವ-ವಿಸರ್ಗಗಳು ಬಂದು ಆಯತಸ್ತೂಃ ಎಂಬ ರೂಪವು ಸಿದ್ಧವಾಗುತ್ತದೆ. ಅಜಾದಿ 'ಸುಪ್' ಪ್ರತ್ಯಯಗಳು ಪರದಲ್ಲಿ ಬಂದಾಗ, 'ಉವಙ್' ಆದೇಶ ಬಂದು ಆಯತಸ್ತುವೌ, ಆಯತಸ್ತುವಃ ಎಂದು ರೂಪಗಳಾಗುತ್ತವೆ.

ಉದಾ-3-ಕಟಪ್ರ್ಯೂಃ। ಕಟಂ ಪ್ರವತೇ ಇತಿ ವಿಗ್ರಹಃ (ಚಾಪೆಯನ್ನು ಹೆಣೆಯುವವನು). ಕಟ ಪೂರ್ವಕ 'ಪ್ರುಙ್' ಧಾತುವಿಗೆ ಹಿಂದಿನ ವಾರ್ತಿಕದಿಂದ 'ಕ್ವಿಪ್' ಪ್ರತ್ಯಯ ಬಂದು ಸರ್ವಾಪಹಾರಲೋಪವಾಗಿ, ದೀರ್ಘವು ಬಂದು ಕಟ+ಪ್ರ್ಯೂ= ಕಟಪ್ರ್ಯೂ ಎಂದು ಪ್ರಾತಿಪದಿಕ ಸಿದ್ಧವಾಗಿ 'ಸುಪ್'(ಸ್) ಪ್ರತ್ಯಯ ಸೇರಿಸಿ ಕಟಪ್ರ್ಯೂ+ಸ್ ಎಂದಿದ್ದಾಗ, 'ಸ್' ಕಾರಕ್ಕೆ ರುತ್ವ-ವಿಸರ್ಗಗಳು ಬಂದು ಕಟಪ್ರ್ಯೂಃ ಎಂಬ ರೂಪವಾಗುತ್ತದೆ.

ಉದಾ- 4 – ಜೂರುಕ್ತಃ ಇದರ ರೂಪವನ್ನು "ರಾಲ್ಲೋಪಃ" ಎಂಬ ಸೂತ್ರದಲ್ಲಿ ಹೇಳಲಾಗಿದೆ.

ಉದಾ- 5 – ಶ್ರೀಃ। – ಶ್ರಯತಿ ಹರಿಂ ಇತಿ ಶ್ರೀಃ ಎಂದು ವಿಗ್ರಹ (ಹರಿಯನ್ನು ಆಶ್ರಯಿಸುವ ಸ್ವಭಾವುಳ್ಳ ಲಕ್ಷ್ಮೀ). ಶ್ರಿಞ್ ಸೇವಾಯಾಮ್ ಎಂಬ ಧಾತುವಿಗೆ ಹಿಂದಿನ ವಾರ್ತಿಕದಿಂದ 'ಕ್ವಿಪ್' ಪ್ರತ್ಯಯ ಬಂದು ಸರ್ವಾಪಹಾರಲೋಪವಾಗಿ, ದೀರ್ಘ ಬಂದು ಶ್ರೀ ಎಂದು 'ಈ' ಕಾರಾನ್ತ ಪ್ರಾತಿಪದಿಕವು ಸಿದ್ಧವಾಗಿ, ಅದಕ್ಕೆ 'ಸುಪ್' (ಸ್) ಸೇರಿಸಿ, ಮುಂದೆ 'ಸ್' ಗೆ ರುತ್ವ-ವಿಸರ್ಗಗಳಾಗಿ ಶ್ರೀಃ ಎಂದು ರೂಪವಾಗುತ್ತದೆ. ಮುಂದೆ ಅಜಾದಿ (ಔ, ಅಸ್(ಜಸ್)) ಪ್ರತ್ಯಯಗಳು ಪರದಲ್ಲಿದ್ದಾಗ, 'ಇಯಙ್' ಆದೇಶ ಬಂದು ಶ್ರಿಯೌ, ಶ್ರಿಯಃ ಎಂದು ರೂಪಗಳಾಗುತ್ತವೆ.

**(ಷ್ಟನ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ- 845. ದಾಮ್-ನೀ-ಶಸ-ಯು-ಯುಜ-ಸ್ತು-ತುದ-ಸಿ-ಸಿಚ-ಮಿಹ-ಪತ-ದಶ-ನಃ ಕರಣೇ। (3.2.182)**

ವೃತ್ತಿ- ದಾಬಾದೇಃ ಷ್ಟ್ರನ್ ಸ್ಯಾತ್ ಕರಣೇಽರ್ಥೇ। ದಾತ್ಯನೇನ-ದಾತ್ರಮ್। ನೇತ್ರಮ್।

ಅ. ವ್ಯ. – "ಧಃ ಕರ್ಮಣಿ ಷ್ಟ್ರನ್" ಎಂಬ ಸೂತ್ರದಿಂದ 'ಷ್ಟ್ರನ್' ಎಂಬ ಪದವು ಅನುವೃತ್ತವಾಗುತ್ತದೆ. "ಧಾತೋಃ", "ಪ್ರತ್ಯಯಃ", "ಪರಶ್ಚ" ಎಂಬ ಮೂರು ಅಧಿಕಾರ

ಸೂತ್ರಗಳು.

ಅರ್ಥ – ದಾಪ್, ನೀ, ಶಸ್, ಯು, ಯುಜ್, ಸ್ತು, ತುದ್, ಸಿ, ಸಿಚ್, ಮಿಹ್, ಪತ್, ದಂಶ್ ಮತ್ತು ನಹ್ ಈ ಧಾತುಗಳಿಗೆ ಕರಣಾರ್ಥದಲ್ಲಿ 'ಸ್ಟ್ರನ್' ಪ್ರತ್ಯಯ ಬರುತ್ತದೆ.

ಉದಾ– 1. ಷ್ಟ್ರನ್ ಪ್ರತ್ಯಯದಲ್ಲಿ 'ಷ್' ಕಾರಕ್ಕೆ "ಷಃ ಪ್ರತ್ಯಯಸ್ಯ" ಎಂಬ ಸೂತ್ರದಿಂದ ಲೋಪವು ಬರುತ್ತದೆ. 'ನ್' ಕಾರಕ್ಕೆ "ಹಲನ್ತ್ಯಮ್" ಎಂಬ ಸೂತ್ರದಿಂದ ಲೋಪವು ಬಂದು 'ಷ್' ಕಾರದ ಲೋಪವನ್ನು ನಿಮಿತ್ತೀಕರಿಸಿ ಬಂದ 'ಟ್' ಕಾರವು ಹೋಗಿ 'ತ್ರ' ಎಂಬುದು ಮಾತ್ರ ಉಳಿಯುತ್ತದೆ. 'ನಿಮಿತ್ತಾಪಾಯೇ ನೈಮಿತ್ತಿಕಸ್ಯಾಪ್ಯಪಾಯಃ' ಎಂಬ ನಿಯಮಕ್ಕನುಸಾರವಾಗಿ 'ಷತ್ರನ್' ಎಂದಿದ್ದಾಗ, 'ಷ್' ಕಾರದ ನಿಮಿತ್ತಕವಾಗಿ, 'ತ್' ಕಾರಕ್ಕೆ 'ಟ್' ಕಾರವು ಆದೇಶವಾಗಿತ್ತು. (ಈಗ ನಿಮಿತ್ತವಾದ 'ಷ್' ಕಾರದ ಲೋಪದಿಂದ ನೈಮಿತ್ತಿಕವಾದ 'ಟ್' ಕಾರವು ಲೋಪವಾಗಿ 'ತ್' ಕಾರವೇ ಉಳಿಯಿತು). ಹೀಗೆ ಕೊನೆಯಲ್ಲಿ ಉಳಿಯುವದು 'ತ್ರ' ಎಂಬುದು ಮಾತ್ರ.

ಉದಾ– 2. ದಾತ್ರಮ್। ದಾತಿ ಅನೇನ ಇತಿ ಎಂದು ವಿಗ್ರಹ. (ಯಾವುದರಿಂದ ಕತ್ತರಿಸಲ್ಪಡುತ್ತದೋ ಅದು–ಕುಡುಗೋಲು) ದಾಪ್–ಲವನೇ ಎಂಬ 'ದಾ' ಧಾತುವಿನ ನಂತರ ಪ್ರಕೃತ ಸೂತ್ರದಿಂದ 'ಷ್ಟ್ರನ್' ಪ್ರತ್ಯಯ ಬಂದು, ಅನುಬಂಧ ಲೋಪವಾದನಂತರ ದಾ+ತ್ರ=ದಾತ್ರ ಎಂದಿದ್ದಾಗ, ಪ್ರಾತಿಪದಿಕ ಸಂಜ್ಞಾ ಬಂದು, "ಅತೋಽಮ್" ಎಂಬ ಸೂತ್ರದಿಂದ, ನಪುಂಸಕಲಿಙ್ಗದ 'ಅಮ್' ಪ್ರತ್ಯಯವು ಆದೇಶವಾಗಿ ಬಂದು, ದಾತ್ರ+ಅಮ್ ಎಂದಿದ್ದಾಗ ಪೂರ್ವರೂಪ ಬಂದು ದಾತ್ರಮ್ ಎಂದು ರೂಪವಾಗುತ್ತದೆ.

ಉದಾ–3.–ನೇತ್ರಮ್। ನೀಯತಿ ಅನೇನ ಇತಿ (ಕಣ್ಣು) ಎಂದು ವಿಗ್ರಹ–'ಣೀಞ್' ಪ್ರಾಪಣೇ ಎಂಬ ಧಾತುವಿಗೆ ಪ್ರಕೃತ ಸೂತ್ರದಿಂದ 'ಷ್ಟ್ರನ್' ಪ್ರತ್ಯಯ ಬಂದು, "ಣೋ ನಃ" ಎಂಬುದರಿಂದ ಧಾತುವಿನ 'ಣ್' ಕಾರಕ್ಕೆ 'ನ್' ಕಾರಾದೇಶರ ಬಂದು, ನೀ+ತ್ರ ಎಂದಿದ್ದಾಗ, 'ಈ' ಕಾರಕ್ಕೆ ಸಾರ್ವಧಾತುಕ ಗುಣ ಬಂದು ನ್+ ಏ+ತ್ರ ಎಂದಿದ್ದಾಗ, 'ನ್'ಗೆ ನಪುಂಸಕ ಲಿಙ್ಗದಲ್ಲಿ 'ಅಮ್' ಆದೇಶ ಬಂದು ನೇ+ತ್ರ+ಅಮ್ ಎಂದಿದ್ದಾಗ ಪೂರ್ವರೂಪ ಬಂದು ನೇತ್ರಮ್ ಎಂಬ ರೂಪವು ಸಿದ್ಧಿಸುತ್ತದೆ.

**(ಇಡಾಗಮವನ್ನು ನಿಷೇಧಿಸುವ ಸೂತ್ರ)**

**ಸೂತ್ರ–846. ತಿ–ತು–ತ್ರ–ತ–ಥ–ಸಿ–ಸು–ಸರ–ಕ–ಸೇಷು ಚ।(7.2.9)**

ವೃತ್ತಿ– ಏಷಾಂ ದಶಾನಾಂ ಕೃತ್ಪ್ರತ್ಯಯಾನಾಮಿಣ್ ನ। ಶಸ್ತ್ರಮ್। ಯೋತ್ರಮ್। ಸ್ತೋತ್ರಮ್। ತೋತ್ರಮ್। ಸೇತ್ರಮ್। ಸೇಕ್ತ್ರಮ್।ಮೇಢ್ರಮ್। ಪತ್ತ್ರಮ್। ದಂಷ್ಟ್ರಾ। ನಧ್ರೀ।

ಅ. ವ್ಯ.–"ನೇಡ್ ವಶಿಕೃತಿ" ಎಂಬ ಸೂತ್ರದಿಂದ 'ನ', 'ಇಟ್' ಮತ್ತು 'ಕೃತಿ' ಎಂಬ ಮೂರು ಪದಗಳು ಅನುವೃತ್ತವಾಗುತ್ತವೆ.

ಅರ್ಥ–'ತಿ' ಮೊದಲಾದ ಹತ್ತು (10) 'ಕೃತ್' ಪ್ರತ್ಯಯಗಳಿಗೆ ಇಡಾ(ಇಟ್)ಗಮ ಬರುವುದಿಲ್ಲ

1. ಮೊದಲನೆಯದಾದ 'ತಿ' ಪ್ರತ್ಯಯದಿಂದ "ಸ್ತ್ರಿಯಾಂ ಕ್ತಿನ್" ಎಂದು ಮುಂದೆ ಹೇಳಲಾಗುವ ಸೂತ್ರದಲ್ಲಿರುವ 'ಕ್ತಿನ್' ನಲ್ಲಿ ಉಳಿಯುವ 'ತಿ' ಹಾಗೂ 'ಕ್ತಿಚ್' ಪ್ರತ್ಯಯದಲ್ಲಿ ಉಳಿಯುವ 'ತಿ'ಗಳು ಗೃಹೀತವಾಗುತ್ತವೆ.

ಉದಾ-1 ದೀಪ್ತಿಃ = ದೀಪ್+ತಿ+ಸ್ ಎಂಬಲ್ಲಿ 'ಇಡಾಗಮ' ನಿಷೇಧವಾಗಿದೆ.

2. ತು – "ಸಿತನಿಗಮಿಮಸಿಸಚ್ಯವಿಧಾಞ್ ಕ್ರುಶಿಭ್ಯಸ್ತುನ್"... ಎಂಬ ಉಣಾದಿ ಸೂತ್ರದಿಂದ ಹೇಳಲಾಗಿರುವ 'ತುನ್' ಪ್ರತ್ಯಯದಲ್ಲಿ ಉಳಿಯುವದು 'ತು' ಎಂದು ತಿಳಿಯಬೇಕು.

ಉದಾ: 1. ತುನ್(ತು)– ಸಿನೋತಿ ಇತಿ ಸೇತುಃ । ಇಡಾಗಮವು ಬಾರದೇ 'ತು' ಪ್ರತ್ಯಯವು ಬಂದಿದೆ.

2. ತುನ್(ತು)–ಸಚ್ಯತೇ ಇತಿ ಸಕ್ತುಃ । ಸಚ್+ತು(ತುನ್)+ಸ್ ಎಂದಿದ್ದಾಗ, 'ಚ್' ಕಾರಕ್ಕೆ "ಚೋಃ ಕುಃ" ಎಂಬ ಸೂತ್ರದಿಂದ ಕುತ್ವ ಬಂದು ಸಕ್+ತು+ಸ್ ಎಂದಾಗಿ ಪ್ರತ್ಯಯದ 'ಸ್' ಕಾರಕ್ಕೆ ರುತ್ವ– ವಿಸರ್ಗಗಳಿಂದ ಸಕ್ತುಃ ಎಂಬ ರೂಪವು ಸಿದ್ಧವಾಗಿದೆ.

3. ತ್ರ–"ದಾಮ್ನೀ–ಶಸ–ಯು" ಎಂಬ ಸೂತ್ರದಿಂದ 'ಷ್ಟ್ರನ್ (ತ್ರ)' ಪ್ರತ್ಯಯ ಬಂದು ದಾತ್ರಮ್, ಪಾತ್ರಮ್, ಶಸ್ತ್ರಮ್ ಇತ್ಯಾದಿ ಶಬ್ದಗಳು ನಿಷ್ಪನ್ನವಾಗಿವೆ.

4. ತ–ಹಸ್ತಃ, ಲೋತಃ, ಪೋತಃ, ಮೊದಲಾದವುಗಳಲ್ಲಿ, 'ಹಸ್', 'ಲು', ಮತ್ತು 'ಪು' ಧಾತುಗಳ ನಂತರ "ಹಸಿ–ಮೃ–ಗ್ರಿಣ್–ವಾ.... ತನ್" ಎಂಬ ಉಣಾದಿಸೂತ್ರದಿಂದ 'ತನ್' ಪ್ರತ್ಯಯವು ಬಂದು, ಈ ಧಾತುಗಳಿಗೆ ಆರ್ಧತಾತುಕ ನಿಮಿತ್ತಕ ಗುಣ ಬಂದು 'ಸ್' ಗೆ ರುತ್ವ–ವಿಸರ್ಗಗಳು ಬಂದು ಹಸ್ತಃ, ಲೋತಃ, ಪೋತಃ, ಎಂದು ರೂಪಗಳು ಸಿದ್ಧವಾಗಿವೆ.

5. ಥ – "ಹನಿ–ಕುಶಿ–ನೀ–ರಮಿ–ಕಾಶಿಭ್ಯಃ ಕ್ಥನ್" ಎಂಬ ಉಣಾದಿ ಸೂತ್ರದಿಂದ 'ಕ್ಥನ್' (ಥ) (ಕ್, ನ್ ಕಾರಗಳು ಇತ್/ಲೋಪಗಳಾಗಿ 'ಥ' ಮಾತ್ರ ಉಳಿಯುತ್ತದೆ). ಪ್ರತ್ಯಯವು ಬರುತ್ತದೆ.

ಉದಾ– ಕಾಷ್ಠಮ್। ಕಾಶ್+ಥ ಎಂದಿದ್ದಾಗ, "ವ್ರಶ್ಚ–ಭ್ರಸ್ಜ–ಸೃಜ–ಮೃಜ–ಯಜ–ರಾಜ–ಭ್ರಾಜಚ್ಛಶಾಮ್ ಷಃ" ಎಂಬ ಸೂತ್ರದಿಂದ, 'ಶ್' ಕಾರಕ್ಕೆ ಮೂರ್ಧನ್ಯ 'ಷ್' ಕಾರಾದೇಶವಾಗಿ, ಕಾಷ್+ಥ ಎಂದಿದ್ದಾಗ, 'ಥ' ಗೆ "ಷ್ಟುನಾಷ್ಟುಃ" ಎಂಬ ಸೂತ್ರದಿಂದ ಷ್ಟುತ್ವ (ಠ್) ಬಂದು ಕಾಷ್+ಠ ಎಂದಿದ್ದಾಗ, ಪ್ರಾತಿಪದಿಕ ಸಂಜ್ಞಾ ಬಂದು ನಪುಂಸಕ ಲಿಙ್ಗದ 'ಅಮ್' ಪ್ರತ್ಯಯ ಸೇರಿಸಿ ಕಾಷ್+ಠ್+ಅಮ್ ಎಂದಿದ್ದಾಗ, ಕಾಷ್ಠಮ್ ಎಂದು ರೂಪವಾಗಿದೆ.

ಇದರಂತೆಯೇ ಕುಶ್+ಥ ಎಂದಿದ್ದಾಗ, ಮೇಲಿನಂತೆಯೇ ಪ್ರಕ್ರಿಯೆ ನಡೆದು ಕುಷ್ಠಮ್ ಎಂಬ ರೂಪವು ಸಿದ್ಧಿಸುತ್ತದೆ.

6. ಸಿ–ಕುಷ್ ಧಾತುವಿನ ಮೇಲೆ "ಪ್ಲುಷಿ–ಕುಷಿ–ಶುಷಿಭ್ಯಃ ಕ್ಸಿಃ" ಎಂಬ ಉಣಾದಿ ಸೂತ್ರದಿಂದ 'ಕ್ಸಿ(ಸಿ)' ಪ್ರತ್ಯಯವು ಬಂದಿದೆ. ಇದು 'ಕಿತ್' ಆಗಿರುವುದರಿಂದ ಲಘೂಪಧ

ಗುಣ ಬರಲಿಲ್ಲ.

ಉದಾ– ಕುಷ್+ಸಿ ಎಂಬಲ್ಲಿ "ಷಢೋಃ ಕಃ ಸೀ" ಎಂಬ ಸೂತ್ರದಿಂದ 'ಷ್' ಕಾರಕ್ಕೆ 'ಕುತ್ವ(ಕ್) ಬಂದು ಕುಕ್+ಸಿ ಎಂದಿದ್ದಾಗ, 'ಸ್' ಕಾರಕ್ಕೆ ಷತ್ವ ಬಂದು, ಕುಕ್ +ಷ್+ಇ ಎಂದಿದ್ದಾಗ, "ಕಷಯೋಃ ಕ್ಷಃ" ಸೂತ್ರದಿಂದ ಕುಕ್ಷಿ ಎಂದಾಗಿ ರುತ್ವ–ವಿಸರ್ಗಗಳಿಂದ ಕುಕ್ಷಿಃ ಎಂದು ರೂಪವಾಗುತ್ತದೆ. (ಕಷಯೋಃ ಕ್ಷಃ ಎಂದರೆ 'ಕ್'ಕಾರ ಮತ್ತು'ಷ್' ಕಾರ ಕೂಡಿ ಆದ ಸಂಯುಕ್ತಾರವೇ ಕ್ಷ ಎಂಬುದು.

7. ಸು – 'ಇಷ್' ಧಾತುವಿನನಂತರ "ಇಷೇಃಕ್ಸುಃ" ಎಂಬ ಉಣಾದಿ ಸೂತ್ರದಿಂದ ಕ್ಸು (ಸು) ಪ್ರತ್ಯಯ ಬಂದು, ಇಷ್+ಸು ಎಂದಿದ್ದಾಗ, 'ಷ್'ಗೆ ಹಿಂದಿನಂತೆಯೇ ಕುತ್ವ(ಕ್) ಬಂದು, ಇಕ್+ಸು=ಇಕ್ಸು ಎಂದಿರುವಾಗ, 'ಸು' ನ 'ಸ್'ಕಾರಕ್ಕೆ ಷತ್ವ (ಷ್) ಬಂದು ಇ+ಕ್+ಷ್+ಉ ಎಂದಿದ್ದಾಗ, ಕತ್ವ–ಷತ್ವಗಳು ಸೇರಿ ಇಕ್ಷು ಎಂದು ಪ್ರಾತಿಪದಿಕವಾಗಿ, 'ಸುಪ್'(ಸ್) ಪ್ರತ್ಯಯ ಸೇರಿಸಿ, ರುತ್ವ–ವಿಸರ್ಗಗಳಿಂದ ಇಕ್ಷುಃ ಎಂಬ ರೂಪವು ಸಿದ್ಧಿಸುತ್ತದೆ.

8. ಸರ–'ಅಶ್' ಧಾತುವಿನ ಪರದಲ್ಲಿ "ಅಶೇಃ ಸರನ್" ಎಂಬ ಉಣಾದಿ ಸೂತ್ರದಿಂದ 'ಸರನ್' (ಸರ) ಪ್ರತ್ಯಯವು ಬಂದು, ಮೊದಲಿನಂತೆ ಷತ್ವ ನಂತರ ಕತ್ವ, ತದನಂತರ ಷತ್ವ ಬಂದು ಅಶ್+ಸರ, ಅಷ್+ಸರ, ಮತ್ತು ಅಕ್+ಸರ, ಅಕ್+ಷರ=ಅಕ್ಷರ ಎಂಬ ಪ್ರಾತಿಪದಿಕವಾಗಿ, ನಪುಂಸಕಲಿಙ್ಗದ 'ಅಮ್' ಪ್ರತ್ಯಯ ಬಂದು ಅಕ್ಷರಮ್ ಎಂದು ರೂಪವಾಗುತ್ತದೆ.

9. ಶಲ್ಕಃ – 'ಶಲ್' ಧಾತುವಿನ ನಂತರ "ಇಣ್–ಭಿ–ಕಾ–ಪಾ–ಶಲ್ಯತಿ–ಮರ್ಚಿಭ್ಯಃ ಕನ್" ಎಂಬ ಉಣಾದಿ ಸೂತ್ರದಿಂದ 'ಕನ್' (ಕ) ಪ್ರತ್ಯಯವು ಬಂದು, ಶಲ್+ಕ+ಸ್=ಶಲ್ಕಃ ಎಂದು ರೂಪವಾಗುತ್ತದೆ. ಶಲ್ಕಃ ಎಂದರೆ ಹೊಟ್ಟು ಎಂದರ್ಥ.

10. ವತ್ಸಃ–'ವದ್' ಧಾತುವಿನ ನಂತರ "ವೃ–ತೃ–ವದಿ–ಹನಿ–ಕಮಿ–ಕಷಿಭ್ಯಃ ಸಃ" ಎಂಬ ಉಣಾದಿ ಸೂತ್ರದಿಂದ 'ಸ' ಪ್ರತ್ಯಯವು ಬಂದು, ವದ್+ಸ ಎಂದಿದ್ದಾಗ, 'ದ್' ಕಾರಕ್ಕೆ ಚರ್ತ್ವ (ತ್) ಬಂದು ವತ್+ಸ+ಸ್+ವತ್ಸಃ ಎಂದು ರೂಪವಾಗುತ್ತದೆ.

'ಕೃತ್' ಸಂಜ್ಞೆ ಇರುವ 'ತಿ' ಮೊದಲಾದ ಹತ್ತು ಪ್ರತ್ಯಯಗಳಿಗೆ ಇಡಾಗಮವು ನಿಷೇಧಿಸಲಾಗಿದೆ.'ಷ್ಟ್ರನ್' ಪ್ರತ್ಯಯ ಬಂದಾಗ ಇಡಾಗಮವನ್ನು ನಿಷೇಧಿಸಲಿಕ್ಕಾಗಿಯೇ ಈ ಸೂತ್ರವು ಪ್ರವೃತವಾಗಿದೆ.

ಉದಾ–

1. ಶಸ್ತ್ರಮ್ – 'ಶಸ್' ಧಾತುವಿಗೆ 'ಷ್ಟ್ರನ್' ಪ್ರತ್ಯಯ ಬಂದು ಪ್ರಕೃತ ಸೂತ್ರದಿಂದ ಇಡಾಗಮ ನಿಷೇಧವಾಗಿ ಶಸ್ತ್ರ ಎಂದಿದ್ದಾಗ, ನಪುಂಸಕಲಿಙ್ಗದ 'ಅಮ್' ಪ್ರತ್ಯಯ ಬಂದು ಶಸ್ತ್ರಮ್ ಎಂದು ರೂಪವಾಗುತ್ತದೆ.

2. ಯೋತ್ರಮ್–ಯು ಮಿಶ್ರಣಾಮಿಶ್ರಣಯೋಃ ಎಂಬ ಧಾತುವಿಗೆ ಷ್ಟ್ರನ್ ಪ್ರತ್ಯಯ ಬಂದು, ಯು+ತ್ರ ಎಂದಿದ್ದಾಗ, ಆರ್ಧಧಾತುಕ ಗುಣ ಬಂದು ಯೋ+ತ್ರ+ ಅಮ್=

ಯೋತ್ರಮ್ ಎಂದು ರೂಪವಾಗುತ್ತದೆ.

3. ಯೋಕ್ತ್ರಮ್=ಯುಜಿರ್-ಯೋಗೇ ಎಂಬ ಧಾತುವಿಗೆ ಷ್ಟ್ರನ್ ಪ್ರತ್ಯಯ ಬಂದು, ಯುಜ್+ತ್ರ ಎಂದಿದ್ದಾಗ, ಲಘೂಪದ ಗುಣವಾಗಿ ಯ್+ಓ+ಜ್+ತ್ರ ಎಂದಿದ್ದಾಗ, "ಚೋಃ ಕುಃ" ಎಂಬ ಸೂತ್ರದಿಂದ 'ಜ್' ಕಾರಕ್ಕೆ ಕುತ್ವ (ಕ್) ಬಂದು, ಯ್+ಓ+ಕ್+ತ್ರ+ಅಮ್=ಯೋಕ್ತ್ರಮ್ ಎಂಬ ರೂಪವು ಸಿದ್ಧಿಸುತ್ತದೆ. ಯೋಕ್ತ್ರಮ್ ಎಂದರೆ ನೊಗ ಎಂದರ್ಥ.

4. ಸ್ತೋತ್ರಮ್। ಷ್ಟುಞ್ ಸ್ತುತೌ ಎಂಬ ಧಾತುವಿಗೆ 'ಷ್ಟ್ರನ್' ಪ್ರತ್ಯಯ ಬಂದು, ಷ್ಟು+ತ್ರ ಎಂದಿದ್ದಾಗ, "ಧಾತ್ವಾದೇಃ ಷಃ ಸಃ" ಎಂಬ ಸೂತ್ರದಿಂದ 'ಷ' ಕಾರಕ್ಕೆ 'ಸ್' ಕಾರ, ಬಂದಿರುವುದರಿಂದ 'ನಿಮಿತ್ತಾಪಾಯೇ ನೈಮಿತ್ತಿಕಸ್ಯಾಽಪ್ಯಪಾಯಃ' ಎಂಬ ನ್ಯಾಯದಿಂದ 'ಟ್' ಕಾರಕ್ಕೆ 'ತ್' ಕಾರ ಬಂದು ಸ್ತು+ತ್ರ ಎಂದಿದ್ದಾಗ, 'ಉ' ಕಾರಕ್ಕೆ ಆರ್ಧಧಾತುಕ ಗುಣ ಬಂದು ಸ್ತ್+ಓ+ತ್ರ ಎಂದಿದ್ದಾಗ, ಸ್ತೋತ್ರ ಎಂದಾಗಿ, ನಪುಂಸಕಲಿಙ್ಗದ 'ಅಮ್' ಪ್ರತ್ಯಯ ಬಂದು, ಸ್ತೋತ್ರಮ್ ಎಂಬ ರೂಪವು ಸಿದ್ಧಿಸುತ್ತದೆ.

5. ತೋತ್ರಮ್। ತುದ್ ವ್ಯಥನೇ ಎಂಬ ಧಾತುವಿನ ಪರದಲ್ಲಿ 'ಷ್ಟ್ರನ್' ಪ್ರತ್ಯಯ ಬಂದು ತುದ್+ತ್ರ ಎಂದಿದ್ದಾಗ, 'ಉ' ಕಾರಕ್ಕೆ ಲಘೂಪದಗುಣ ಬಂದು ತ್+ಓ+ದ್+ತ್ರ ಎಂದಿರುವಾಗ "ಖರಿ ಚ" ಎಂಬ ಸೂತ್ರದಿಂದ ಚರ್ತ್ವ ಬಂದು ತ್+ಓ+ತ್+ತ್ರ+ಅಮ್=ತೋತ್ರಮ್ ಎಂದು ರೂಪವಾಗಿದೆ. ಚಾವಟಿ ಎಂದು ಅರ್ಥ.

6. ಸೇತ್ರಮ್ – ಷಿಞ್ ಬಂಧನೇ ಎಂಬ ಧಾತುವಿಗೆ 'ಷ್ಟ್ರನ್' ಪ್ರತ್ಯಯ ಬಂದು ಷಿ+ತ್ರ ಎಂದಿದ್ದಾಗ, ಹಿಂದಿನಂತೆಯೇ "ಧಾತ್ವಾದೇಃ ಷಃ ಸಃ" ಎಂಬ ಸೂತ್ರದಿಂದ 'ಷ್' ಕಾರಕ್ಕೆ 'ಸ್' ಕಾರ, ಬಂದು ಸಿ+ತ್ರ ಎಂದಿದ್ದಾಗ, ಲಘೂಪದಗುಣದಿಂದ ಸ್+ಏ+ತ್ರ ಎಂದಿದ್ದಾಗ, ನಪುಂಸಕ ಲಿಙ್ಗದ 'ಅಮ್' ಪ್ರತ್ಯಯ ಸೇರಿಸಿದಾಗ ಸೇತ್ರಮ್ ಎಂಬ ರೂಪವಾಗಿದೆ. ಬಂಧನ ಎಂದು ಅರ್ಥ.

7. ಸೇಕ್ತ್ರಮ್-ಷಿಚಿರ್ ಕ್ಷರಣೇ ಎಂಬ ಧಾತುವಿನ ನಂತರ ಷ್ಟ್ರನ್ ಪ್ರತ್ಯಯ ಬಂದು ಸಿಚ್+ತ್ರ ಎಂದಿದ್ದಾಗ, ಲಘೂಪದ ಗುಣವಾಗಿ ಸ್+ಏ+ಚ್+ತ್ರ ಎಂದಿದ್ದಾಗ, "ಚೋಃ ಕುಃ" ಎಂಬ ಸೂತ್ರದಿಂದ 'ಚ್' ಕಾರಕ್ಕೆ ಕುತ್ವ (ಕ್) ಬಂದು ನಂತರ 'ಅಮ್' ಪ್ರತ್ಯಯ ಸೇರಿಸಿದಾಗ, ಸ್+ಏ+ಕ್+ತ್ರ+ಅಮ್ ಎಂದಾಗಿ ಸೇಕ್ತ್ರಮ್ ಎಂಬ ರೂಪವಾಗಿದೆ. ನೀರು ಸಿಂಪಡಿಸುವ ಪಾತ್ರೆ ಎಂದು ಅರ್ಥ.

8. ಮೇಢ್ರಮ್-ಮಿಹ-ಸೇಚನೇ (ಮೂತ್ರ ತ್ಯಾಗೇ)-ಮಿಹ ಧಾತುವಿಗೆ ಷ್ಟ್ರನ್ ಪ್ರತ್ಯಯವನ್ನು ಸೇರಿಸಿ ಮಿಹ+ತ್ರ ಎಂದಿರುವಾಗ ಲಘೂಪದಗುಣವಾಗಿ ಮ್+ಏ+ಹ+ತ್ರ ಎಂದಿದ್ದಾಗ, "ಹೋಢಃ" ಎಂಬ ಸೂತ್ರದಿಂದ ಮ್+ಏ+ಢ್+ತ್ರ ಎಂದಿದ್ದಾಗ, "ಝಷಸ್ತಥೋರ್ಧೋಽಧಃ" ಎಂಬುದರಿಂದ 'ತ್' ಕಾರಕ್ಕೆ ಧತ್ವ (ಧ್) ಕಾರ ಬಂದು, ಮ್+ಏ+ಢ್+ಧ್ರ ಎಂದಿರುವಾಗ, "ಷ್ಟುನಾಷ್ಟುಃ" ಎಂಬ ಸೂತ್ರದಿಂದ, ಮ್+ಏ+ಢ್+ಢ್ರ ಎಂದಿರುವಾಗ, "ಢೋಢೇಲೋಪಃ" ಎಂಬ ಸೂತ್ರದಿಂದ ಪೂರ್ವ 'ಢ್' ಕಾರಕ್ಕೆ ಲೋಪ ಬಂದು ಮ್+ಏ+ಢ್ರ+ಅಮ್=ಮೇಢ್ರಮ್ ಎಂದು ರೂಪವಾಗುತ್ತದೆ

(ಜನನೇಂದ್ರಿಯ) ಎಂದರ್ಥ.

9. ಪತ್ತ್ರಮ್–ಪತ್‌ಲೃ ಪತನೇ–ಎಂಬ ಧಾತುವಿಗೆ ಷ್ಟ್ರನ್ ಪ್ರತ್ಯಯ ಸೇರಿಸಿದಾಗ, ಪತ್+ತ್ರ+ಅಮ್=ಪತ್ತ್ರಮ್ ಎಂದು ರೂಪವಾಗಿದೆ. (ವಾಹನ, ಎಲೆ, ರೆಕ್ಕೆ, ಬಾಣ, ಪಕ್ಷಿ) ಎಂದು ಅರ್ಥಗಳು.

10. ದಂಷ್ಟ್ರಾ। ದಂಶ–ದಂಶನೇ ಎಂಬ ಧಾತುವಿಗೆ ಷ್ಟ್ರನ್ ಪ್ರತ್ಯಯ ಸೇರಿಸಿದಾಗ ದಂಶ್+ತ್ರ ಎಂದಿದ್ದಾಗ, "ವ್ರಶ್ಚ–ಭ್ರಸ್ಜ–ಸೃಜ–ಮೃಜ–ಯಜ–ರಾಜ–ಭ್ರಾಜಚ್ಛಶಾಮ್ ಷಃ" ಎಂಬ ಸೂತ್ರದಿಂದ, 'ಶ್' ಕಾರಕ್ಕೆ 'ಷ್' ಕಾರಾದೇಶ ಬಂದು, ದಂಷ್+ತ್ರ ಎಂದಿದ್ದಾಗ, "ಷ್ಟುನಾಷ್ಟುಃ" ಎಂಬ ಸೂತ್ರದಿಂದ, ಷ್ಟುತ್ವ 'ಟ್' ಬಂದು ದಂಷ್+ಟ್ರ ಎಂದಿರುವಾಗ, ಈ ಪ್ರಾತಿಪದಿಕಕ್ಕೆ ಸ್ತ್ರೀಲಿಙ್ಗ ಪ್ರತ್ಯಯವಾದ ಆ(ಟಾಪ್) ಬಂದು, ದಂಷ್ಟ್ರಾ ಎಂದು ರೂಪವಾಗಿದೆ.

11. ನದ್ಧ್ರೀ– ಣಹ –ಬಂಧನೇ ಎಂಬ ಧಾತುವಿಗೆ "ಣೋ ನಃ" ಎಂಬಸೂತ್ರದಿಂದ ಆದಿ 'ಣ್' ಕಾರಕ್ಕೆ 'ನ್' ಕಾರ ಬಂದು ನಹ್ ಎಂದಾಗಿ ಇದಕ್ಕೆ 'ಷ್ಟ್ರನ್' ಪ್ರತ್ಯಯ ಸೇರಿಸಿ ನಹ್+ತ್ರ ಎಂದಿದ್ದಾಗ, "ನಹೋ ಧಃ" ಎಂಬ ಸೂತ್ರದಿಂದ 'ಹ್' ಕಾರಕ್ಕೆ 'ಧ್' ಕಾರ ಬಂದು ನಧ್+ತ್ರ ಎಂದಾಗಿ, "ಝಷಸ್ತಥೋರ್ಧೋಽಧಃ" ಎಂಬುದರಿಂದ 'ತ್' ಕಾರಕ್ಕೆ ಧತ್ವ (ಧ್) ಕಾರ ಬಂದು, ನಧ್+ಧ್ರ ಎಂದಿರುವಾಗ, "ಝಲಾಂ ಜಶ್ ಝಶಿ" ಎಂಬ ಸೂತ್ರದಿಂದ ಪೂರ್ವ 'ಧ್' ಕಾರಕ್ಕೆ ದತ್ವ (ದ್) ಬಂದು ನದ್+ಧ್ರ ಎಂದಿದ್ದಾಗ, ಸ್ತ್ರೀಲಿಙ್ಗ ಪ್ರತ್ಯಯ 'ಈ' (ಙೀಷ್) ಬಂದು ನದ್+ಧ್ರ+ಈ ಎಂದಿದ್ದಾಗ, "ಯಸ್ಯೇತಿ ಚ" ಎಂಬ ಸೂತ್ರದಿಂದ 'ಧ್ರ'ದಲ್ಲಿರುವ 'ಅ' ಕಾರಕ್ಕೆ ಲೋಪ ಬಂದು ನದ್+ಧ್ರ್+ಈ=ನದ್ಧ್ರೀ ಎಂದು ರೂಪವಾಗಿದೆ.

**(ಇತ್ರ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ– 847. ಅರ್ತಿ–ಲೂ–ಧೂ–ಸೂ–ಖನ–ಸಹ–ಚರ–ಇತ್ರಃ। (3.2.184)**

ವೃತ್ತಿ– ಅರಿತ್ರಮ್। ಲವಿತ್ರಮ್। ಧವಿತ್ರಮ್। ಸವಿತ್ರಮ್। ಖನಿತ್ರಮ್। ಸಹಿತ್ರಮ್। ಚರಿತ್ರಮ್।

ಅ. ವೃ – "ದಾಮ್–ನೀ–ಶಸ... ಕರಣೇ" ಎಂಬ ಸೂತ್ರದಿಂದ, 'ಕರಣೇ' ಎಂಬ ಪದವು ಅನುವೃತ್ತವಾಗುತ್ತದೆ. "ಧಾತೋಃ", "ಪ್ರತ್ಯಯಃ" ಮತ್ತು "ಪರಶ್ಚ" ಎಂಬವು ಅಧಿಕಾರ ಸೂತ್ರಗಳು.

ಅರ್ಥ – ಋ, ಲೂ, ಧೂ, ಸೂ, ಖನ್, ಸಹ್ ಮತ್ತು ಚರ್ ಧಾತುಗಳ ನಂತರ ಕರಣಾರ್ಥದಲ್ಲಿ 'ಇತ್ರ' ಪ್ರತ್ಯಯ ಬರುತ್ತದೆ.

ಉದಾ1.–ಅರಿತ್ರಮ್–(ದೋಣಿ ಚಲಿಸುವಂತೆ ಮಾಡುವ ಕೋಲು)–ಇಲ್ಲಿರು– ಗತಿ ಪ್ರಾಪಣಯೋಃ ಎಂಬ ಧಾತುವಿನ ನಂತರ, ಕರಣಾ(ಸಾಧನ)ರ್ಥದಲ್ಲಿ ಪ್ರಕೃತ ಸೂತ್ರದಿಂದ 'ಇತ್ರ' ಪ್ರತ್ಯಯವು ಬಂದು, ರು+ಇತ್ರ ಎಂದಿದ್ದಾಗ, ಆರ್ಧಧಾತುಕ ಗುಣ ಬಂದು, ಅರ್+ಇತ್ರ+ಅಮ್ ಎಂದಿದ್ದಾಗ, ಪೂರ್ವರೂಪ ಬಂದು ಅರಿತ್ರಮ್

ಎಂದು ರೂಪವಾಗಿದೆ.

ಉದಾ-2. ಲವಿತ್ರಮ್- (ಕೊಯ್ಯುವದಕ್ಕೆ ಸಾಧನವಾಗಿರುವದು ಕೊಯ್ತು). ಇಲ್ಲಿ 'ಲುನನ್ತಿ ಅನೇನ ಇತಿ ಲವಿತ್ರಮ್' ಎಂದು ವಿಗ್ರಹ. ಲೂಞ್-ಛೇದನೇ ಎಂಬ ಧಾತುವಿನ ನಂತರ ಕರಣಾರ್ಥದಲ್ಲಿ ಪ್ರಕೃತ ಸೂತ್ರದಿಂದ 'ಇತ್ರ' ಪ್ರತ್ಯಯವು ಬಂದು, ಲೂ+ಇತ್ರ ಎಂದಿದ್ದಾಗ, ಆರ್ಧಧಾತುಕ ಗುಣ ಬಂದು ಲೋ+ಇತ್ರ ಎಂದಿರುವಾಗ, "ಏಚೋಽಯವಾಯಾವಃ" ಎಂಬ ಸೂತ್ರದಿಂದ 'ಓ' ಕಾರಕ್ಕೆ 'ಅವ್' ಆದೇಶ ಬಂದು, ಲ್+ಅವ್+ಇತ್ರ+ಅಮ್ ಎಂದಿದ್ದಾಗ, ಪೂರ್ವರೂಪದಿಂದ ಲವಿತ್ರಮ್ ಎಂದು ರೂಪವಾಗಿದೆ.

ಉದಾ-3. ಧುವಿತ್ರಮ್-(ಬೀಸಣಿಕೆ)-'ಧುವನ್ತಿ ಅನೇನ ಧುವಿತ್ರಮ್' ಎಂದು ವಿಗ್ರಹ. ಧೂ-ವಿಧೂವನೇ ಎಂಬ ಧಾತುವಿನ ಮುಂದೆ ಕರಣಾರ್ಥದಲ್ಲಿ ಪ್ರಕೃತ ಸೂತ್ರದಿಂದ, 'ಇತ್ರ' ಪ್ರತ್ಯಯ ಬಂದು ಧೂ+ಇತ್ರ ಎಂದಿರುವಾಗ, ಆರ್ಧಧಾತುಕ ಗುಣ ಪ್ರಾಪ್ತವಾಗಲು, 'ಕುಟಾದಿ' ಗಣ ಪಠಿತವಾದದ್ದರಿಂದ "ಗಾಙ್ ಕುಟಾದಿಭ್ಯೋಽಞ್ಣಿನ್ಙಿತ್" ಎಂಬ ಸೂತ್ರದಿಂದ ಙಿದ್ವದ್ಭಾವ ಬಂದು, "ಕ್ಙಿತಿ ಚ" ಎಂಬ ಸೂತ್ರದಿಂದ, ಗುಣದ ನಿಷೇಧವಾಗಿದೆ. ಆದ್ದರಿಂದ "ಅಚಿ ಶ್ನುಧಾತುಭ್ರುವಾಮ್..." ಎಂಬ ಸೂತ್ರದಿಂದ, 'ಉವಙ್' ಆದೇಶ ಬಂದು ಧ್+ಉವ್+ಇತ್ರ+ಅಮ್ ಎಂದಿದ್ದಾಗ, ಪೂರ್ವರೂಪ ಬಂದು ಧುವಿತ್ರಮ್ ಎಂದು ರೂಪವಾಗುತ್ತದೆ.

ಉದಾ-4. ಸವಿತ್ರಮ್ - ಸುವನ್ತಿ ಅನೇನ ಸವಿತ್ರಮ್ ಎಂದು ವಿಗ್ರಹ (ಚೋದನೆಗೆ ಸಾಧನವಾಗಿರುವದು) ಷೂ-ಪ್ರೇರಣೆ ಎಂಬ ಧಾತುವಿನ ಮುಂದೆ ಪ್ರಕೃತ ಸೂತ್ರದಿಂದ ಕರಣಾರ್ಥದಲ್ಲಿ 'ಇತ್ರ' ಪ್ರತ್ಯಯ ಬಂದು ಷೂ+ಇತ್ರ ಎಂದಿರುವಾಗ, ಆರ್ಧಧಾತುಕ ಗುಣ ಬಂದು 'ಅವ್' ಆದೇಶವಾಗಿ ಸ್+ಅವ್+ಇತ್ರ+ಅಮ್ ಎಂದಿದ್ದಾಗ, ಪೂರ್ವರೂಪವಾಗಿ ಸವಿತ್ರಮ್ ಎಂಬ ರೂಪ ಸಿದ್ಧಿಸುತ್ತದೆ.

ಉದಾ- 5. ಖನಿತ್ರಮ್-ಖನನ್ತಿ ಅನೇನ ಇತಿ ಖನಿತ್ರಮ್( ಗುದ್ದಲಿ)-ಖನು ಅವಧಾರಣೇ ಎಂಬ ಧಾತುವಿನ ನಂತರ ಪ್ರಕೃತ ಸೂತ್ರದಿಂದ ಕರಣಾರ್ಥದಲ್ಲಿ 'ಇತ್ರ' ಪ್ರತ್ಯಯ ಬಂದು, ಖನ್+ಇತ್ರ+ಅಮ್ಎಂದಿದ್ದಾಗ, ಪೂರ್ವರೂಪ ಬಂದು ಖನಿತ್ರಮ್ ಎಂದು ರೂಪವಾಗಿದೆ.

ಉದಾ-6. ಸಹಿತ್ರಮ್-ಸಹನ್ತೇ ಅನೇನ ಇತಿ ಸಹಿತ್ರಮ್ ಎಂದು ವಿಗ್ರಹ. (ಸಹನೆಗೆ ಸಾಧನವಾಗಿರುವದು). ಷಹ - ಮರ್ಷಣೇ ಎಂಬ ಧಾತುವಿನ ನಂತರ ಪ್ರಕೃತ ಸೂತ್ರದಿಂದ ಕರಣಾರ್ಥದಲ್ಲಿ 'ಇತ್ರ' ಪ್ರತ್ಯಯ ಬಂದು, ಸಹ್+ಇತ್ರ+ಅಮ್ ಎಂದಿರುವಾಗ, ಪೂರ್ವರೂಪ ಬಂದು ಸಹಿತ್ರಮ್ ಎಂಬ ರೂಪವು ಸಿದ್ಧಿಸುತ್ತದೆ.

ಉದಾ- 6. ಚರಿತ್ರಮ್ - 'ಚರನ್ತಿ ಅನೇನ ಇತಿ' ಎಂದು ವಿಗ್ರಹ. (ಯಾವುದರಿಂದ ಮನುಷ್ಯನು ಸಮಾಜದಲ್ಲಿ ಜೀವನವನ್ನು ಸಾಗಿಸುವನೋ ಅದಕ್ಕೆ ಸಾಧನವಾಗಿರುವ ಆಚರಣೆ ಅಥವಾ ಸ್ವಭಾವ, ವ್ಯವಹಾರ ಮೊದಲಾದವು). ಚರ - ಗತಿ ಭಕ್ಷಣಯೋಃ ಧಾತುವಿನ ನಂತರ ಪ್ರಕೃತ ಸೂತ್ರದಿಂದ ಕರಣಾರ್ಥದಲ್ಲಿ 'ಇತ್ರ' ಪ್ರತ್ಯಯ ಬಂದು,

ಚರ್+ಇತ್ರ+ಅಮ್ ಎಂದಿದ್ದಾಗ ಪೂರ್ವರೂಪದಿಂದ ಚರಿತ್ರಮ್ ರೂಪವಾಗುತ್ತದೆ.

**(ಇತ್ರ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ– 848. ಪುವಃ ಸಂಜ್ಞಾಯಾಮ್।(3.2.185)**

ವೃತ್ತಿ – ಪವಿತ್ರಮ್।

ಅ.ವ್ಯ. – "ಅರ್ತಿ–ಲೂ – ಧೂ..." ಎಂಬ ಸೂತ್ರದಿಂದ 'ಇತ್ರ' ಎಂಬ ಪದವೂ ಮತ್ತು "ದಾಮ್–ನೀ–ಶಸ.... ಕರಣೇ" ಎಂಬ ಸೂತ್ರದಿಂದ, 'ಕರಣೇ' ಎಂಬ ಪದವೂ ಅನುವೃತ್ತವಾಗುತ್ತವೆ. "ಧಾತೋಃ", "ಪ್ರತ್ಯಯಃ" ಮತ್ತು "ಪರಶ್ಚ" ಅಧಿಕಾರ ಸೂತ್ರಗಳು.

ಅರ್ಥ – ಪೂಞ್ ಧಾತುವಿಗೆ ಸಂಜ್ಞಾ ತೋರುವಾಗ 'ಇತ್ರ' ಪ್ರತ್ಯಯವು ಬರುತ್ತದೆ.

ಉದಾ– 1. ಪವಿತ್ರಮ್ – ಪೂಯತೇ ಅನೇನ ಇತಿ ಪವಿತ್ರಮ್ ಎಂದು ವಿಗ್ರಹ. (ಪವಿತ್ರಗೊಳಿಸಲು ಸಾಧನವಾಗಿರುವ ದರ್ಭೆ, ಜಲ, ವಾಯು, ಅಗ್ನಿ ಮೊದಲಾದವು). ಪೂಙ್/ಪೂಞ್ ಪವನೇ ಎಂಬ ಸಮಾನಾರ್ಥಕ ಧಾತುಗಳು ಇಲ್ಲಿ ಗೃಹೀತವಾಗುತ್ತವೆ. 'ಪೂ' ಧಾತುವಿಗೆ ಪ್ರಕೃತ ಸೂತ್ರದಿಂದ 'ಇತ್ರ' ಪ್ರತ್ಯಯ ಬಂದು ಪೂ+ಇತ್ರ ಎಂದಿರುವಾಗ, ಆರ್ಧಧಾತುಕ ಗುಣವು ಬಂದು ಪೋ+ಇತ್ರ ಎಂದಿರುವಾಗ, 'ಓ' ಕಾರಕ್ಕೆ 'ಅವ್' ಆದೇಶವಾಗಿ ಪ್+ಅವ್+ಇತ್ರ+ಅಮ್ ಎಂದಾಗಿ ಪೂರ್ವರೂಪ ಬಂದು ಪವಿತ್ರಮ್ ಎಂದು ರೂಪವಾಗುತ್ತದೆ.

**॥ ಇಲ್ಲಿಗೆ ಪೂರ್ವಕೃದನ್ತ (34) ಪ್ರಕರಣವು ಮುಗಿದುದು॥**

# ಪ್ರಕರಣ-35: ಉಣಾದಯ

**(ಸೂತ್ರ ಸಂಖ್ಯೆ 849 ರಿಂದ 850 ವರೆಗೆ)**

**('ಉಣ್' ಪ್ರತ್ಯಯವನ್ನು ವಿಧಿಸುವ ಶಾಕಟಾಯನ ಸೂತ್ರ)**

ಪೂರ್ವ ಕೃದಂತ ಪ್ರಕರಣವನ್ನು ಮುಗಿಸಿದ ಮೇಲೆ ಪಂಡಿತ ವರದರಾಜರು ಉಣಾದಿ ಪ್ರಕರಣವನ್ನು ಪ್ರಾರಂಭಿಸುತ್ತಾರೆ. ಉಣಾದಿ ಪ್ರತ್ಯಯಾಂತ ಶಬ್ದಗಳನ್ನು ಕೆಲವು ವೈಯಾಕರಣಿಗಳು ವ್ಯುತ್ಪನ್ನ ಶಬ್ದಗಳೆಂದು ಪರಿಗಣಿಸುತ್ತಾರೆ. ಇನ್ನು ಕೆಲವರು ಅವ್ಯುತ್ಪನ್ನವೆಂದು ವರ್ಣಿಸುತ್ತಾರೆ. ಪಾಣಿನಿಯವರು "ಉಣಾದಯೋ ಬಹುಲಮ್" ಎಂಬ ಸೂತ್ರದಿಂದ ಇವುಗಳನ್ನು ವ್ಯುತ್ಪನ್ನಗಳೆಂದು ಭಾವಿಸುತ್ತಾರೆ. ಈ ಉಣಾದಿ ಪ್ರತ್ಯಯಗಳನ್ನು ಶಾಕಟಾಯನರಿಂದ ರಚಿತವಾದ ಪಂಚಪಾದೀ ಉಣಾದಿ ಸೂತ್ರಗಳಿಂದ ಆಯ್ದು ಕೊಂಡು ಪಾಣಿನಿಯವರು ತಮ್ಮ ಅಷ್ಟಾಧ್ಯಾಯಿಯಲ್ಲಿ ಬಳಸಿಕೊಂಡಿದ್ದಾರೆ. ಉದಾಹರಣೆಗಾಗಿ ವರದರಾಜರು ಪ್ರಕೃತವನ್ನು ತೆಗೆದುಕೊಂಡಿದ್ದಾರೆ.

**('ಉಣ್' ಪ್ರತ್ಯಯವನ್ನು ವಿಧಿಸುವ ಶಾಕಟಾಯನ ಸೂತ್ರ)**

**ಸೂತ್ರ-849 - ಕೃ-ವಾ-ಪಾ-ಜಿ-ಮಿ-ಸ್ವದಿ-ಸಾಧ್ಯಶ್ಯೂಭ್ಯ ಉಣ್।**

ಅರ್ಥ-ಕೃ-ವಾ-ಪಾ...ಉಣ್ ಸೂತ್ರದಲ್ಲಿ ಕೃ, ವಾ, ಪಾ, ಜಿ, ಮಿ, ಸಾಧ್ ಮತ್ತು ಅಶ್ ಈ ಧಾತುಗಳ ಮುಂದೆ 'ಉಣ್' ಪ್ರತ್ಯಯ ಬರುತ್ತದೆ ಎಂದು ಇದರ ಅರ್ಥ.

ಉದಾ- ಕಾರುಃ - ಕರೋತಿ ಇತಿ ಎಂದು ವಿಗ್ರಹ (ಮಾಡುವವನು). ಆದರೆ ರೂಢಿಯಲ್ಲಿ ಶಿಲ್ಪಿ ಎಂದರ್ಥ. ಕೃ- ಧಾತುವಿನ ನಂತರ ಪ್ರಕೃತ ಸೂತ್ರದಿಂದ ಕರ್ತ್ರರ್ಥದಲ್ಲಿ ಉಣ್(ಉ) ಪ್ರತ್ಯಯವು ಬಂದು ಕೃ+ಉ ಎಂದಿದ್ದಾಗ 'ಕೃ'ಗೆ 'ಅಚೋಞ್ಣಿತಿ' ಎಂಬುದರಿಂದ ವೃದ್ಧಿ ಬಂದು ಕ್+ಆರ್+ಉ ಎಂದಿರುವಾಗ ಸುಪ್ ಪ್ರತ್ಯಯ ಸೇರಿಸಿ ಕ್+ಆರ್+ಉ+ಸ್ ಎಂದಿದ್ದಾಗ ರುತ್ವ ವಿಸರ್ಗಗಳಾಗಿ 'ಕಾರುಃ' ಎಂದು ರೂಪವಾಗುತ್ತದೆ.

ಉದಾ- ವಾಯುಃ - ವಾತೀತಿ ಎಂದು ವಿಗ್ರಹ. (ಹೊರುವವನು). 'ವಾ- ಗತಿ ಗಂಧನಯೋಃ' ಎಂಬ ಧಾತುವಿನ ಮುಂದೆ 'ಉಣ್' ಪ್ರತ್ಯಯವು ಬಂದು ವಾ+ಉ ಎಂದಿದ್ದಾಗ 'ಆತೋ ಯುಕ್ ಚಿಣ್ ಕೃತೋಃ' ಎಂಬ ಸೂತ್ರದಿಂದ ಯುಕ್(ಯ್) ಆಗಮ ಬಂದು ವಾ+ಯ್+ಉ= ವಾಯು ಎಂದಾಗಿ ವಿಭಕ್ತಿ ಕಾರ್ಯವಾಗಿ ವಾಯುಃ ಎಂದು ರೂಪವಾಗುತ್ತದೆ.

ಉದಾ- ಪಾಯುಃ - ಪಾತಿ ರಕ್ಷತಿ ಅಪಾನಾದಿ ನಿಸ್ಸರಣದ್ವಾರಾ ಶರೀರಮಿತಿ ಪಾಯುಃ (ಗುದ). ಪಾ (ರಕ್ಷಣೆ) ಎಂಬ ಧಾತುವಿನ ಮುಂದೆ 'ಉಣ್' ಬಂದು,ಯುಗಾಗಮ ಬಂದ ಮೇಲೆ ಪಾ+ಯ್+ಉ= ಪಾಯು ಎಂದಾಗಿ ವಿಭಕ್ತಿ ಕಾರ್ಯ ರುತ್ವ ವಿಸರ್ಗಗಳಿಂದ 'ಪಾಯುಃ' ಎಂದು ರೂಪವಾಗಿದೆ.

ಉದಾ- ಜಾಯುಃ (ಔಷಧ) ಜಯತಿ ಅಭಿಭವತಿ ರೋಗಾನ್ ಎಂದು ವಿಗ್ರಹ.

ಜಿ –ಜಯೆ ಎಂಬ ಧಾತುವಿನ ಮುಂದೆ 'ಉಣ್' ಪ್ರತ್ಯಯವು ಬಂದು ಹಿಂದಿನಂತೆ ವೃದ್ಧಿ ಕಾರ್ಯವಾಗಿ ಜೈ+ಉ ಎಂದಿದ್ದಾಗ 'ಆಯ್' ಆದೇಶವಾಗಿ ಜ್+ಆಯ್+ಉ ಎಂದಿದ್ದಾಗ ಜಾಯು ಎಂದಾಗಿ ವಿಭಕ್ತಿ ಕಾರ್ಯವಾಗಿ ರುತ್ವ ವಿಸರ್ಗಗಳಿಂದ 'ಜಾಯುಃ' ಎಂದು ರೂಪವಾಗುತ್ತದೆ.

ಮಾಯುಃ – (ಪಿತ್ತ) ಮಿನೋತಿ ಪ್ರಕ್ಷಿಪತಿ ದೇಹೇ ಊಷ್ಮಾಣಮ್ ಎಂದು ವಿಗ್ರಹ. (ಯಾವುದು ಶರೀರದಲ್ಲಿರುವ ಉಷ್ಣವನ್ನು ಹೊರಗೆ ಹಾಕುತ್ತದೋ ಅದು ಎಂದರ್ಥ.) ಮಿ– ಪ್ರಕ್ಷೇಪಣೇ ಎಂಬ ಧಾತುವಿನ ಮುಂದೆ 'ಉಣ್' ಪ್ರತ್ಯಯವು ಬಂದು ಮಿ+ಉ ಎಂದಿದ್ದಾಗ ಹಿಂದಿನಂತೆ ವೃದ್ಧಿ, 'ಆಯ್' ಆದೇಶ ಮತ್ತು ವಿಭಕ್ತಿ ಕಾರ್ಯಗಳು ಬಂದು ಮಾಯುಃ ರೂಪವಾಗುತ್ತದೆ.

ಉದಾ– ಸ್ವಾದುಃ – (ಯಾವುದು ರುಚಿಕರವಾಗಿದೆಯೋ ಅದು) ಸ್ವದ– ಆಸ್ವಾದನೇ ಎಂಬ ಧಾತುವಿನ ನಂತರ 'ಉಣ್' ಸೇರಿಸಿ ಸ್ವದ್+ಉ ಎಂದಿದ್ದಾಗ 'ಅತ ಉಪಧಾಯಾಃ' ಎಂಬುದರಿಂದ ಉಪಧಾ ವೃದ್ಧಿ ಬಂದು ಸ್ವಾದ್+ಉ ಎಂದಿರುವಾಗ ವಿಭಕ್ತಿ ಕಾರ್ಯವಾಗಿ ರುತ್ವ ವಿಸರ್ಗಗಳಿಂದ 'ಸ್ವಾದುಃ' ಎಂದು ರೂಪವಾಗುತ್ತದೆ.

ಉದಾ–ಸಾಧು–(ಯಾರು ಬೇರೆಯವರಿಗೆ ಉಪಕಾರವನ್ನು ಮಾಡುತ್ತಾನೋ ಅವನು=ಸಜ್ಜನ ಎಂದರ್ಥ). 'ಸಾಧ್ನೋತಿ ಪರಕಾರ್ಯಂ ಇತಿ' ಎಂದು ವಿಗ್ರಹ. ಸಾಧ್ (ಸಂಸಿದ್ಧೌ) ಎಂಬ ಧಾತುವಿನ ಮುಂದೆ 'ಉಣ್' ಪ್ರತ್ಯಯ ಬಂದು ಸಾಧ್+ಉ ಎಂದಿರುವಾಗ ವಿಭಕ್ತಿ ಕಾರ್ಯವಾಗಿ ರುತ್ವ ವಿಸರ್ಗಗಳಾಗಿ 'ಸಾಧುಃ' ಎಂದು ರೂಪವಾಗುತ್ತದೆ.

ಉದಾ– ಆಶು– (ಶೀಘ್ರ) ಎಂದರ್ಥ. 'ಅಶ್ನುತೇ ವ್ಯಾಪ್ನೋತಿ ಇತಿ' ಎಂದು ವಿಗ್ರಹ. (ಯಾವುದು ಶೀಘ್ರವಾಗಿ ಎಲ್ಲೆಡೆಯಲ್ಲಿ ವ್ಯಾಪಿಸಿದೆಯೋ ಅದು ಎಂದರ್ಥ.) ಅಶೂಙ್ (ವ್ಯಾಪ್ತೌ) ಎಂಬ ಧಾತುವಿನ ಮುಂದೆ ಉಣ್ ಪ್ರತ್ಯಯವು ಬಂದು ಅಶ್+ಉ ಎಂದಿದ್ದಾಗ ಉಪಧಾ ವೃದ್ಧಿಯಾಗಿ ಆಶ್+ಉ ಎಂದಿರುವಾಗ ಸ್ವಾದಿ ಕಾರ್ಯಗಳಾಗಿ ಆಶು ಎಂದು ರೂಪವು ಸಿದ್ಧವಾಗುತ್ತದೆ. ಇದರ ರೂಪವು ನಪುಂಸಕ ಲಿಂಗದ 'ಮಧು' ಶಬ್ದದಂತೆ ಆಗುತ್ತದೆ. ಶೀಘ್ರ–ಎಂಬರ್ಥದಲ್ಲಿ ಇದು ಅವ್ಯಯ ವಾಗುತ್ತದೆ. ಇದು ದ್ರವ್ಯವಾಚಿಯಾದಾಗ ಮೂರೂ ಲಿಂಗದಲ್ಲಿಯೂ ನಡೆಯುತ್ತದೆ.

**('ಉಣಾದಿ' ಪ್ರತ್ಯಯಗಳನ್ನು ವಿಧಿಸುವ ಸೂತ್ರ)**

**ಸೂತ್ರ– ೮೫೦– ಉಣಾದಯೋ ಬಹುಲಮ್।(೩.೩.೧)**

ವೃತ್ತಿ– ಏತೇ ವರ್ತಮಾನೇ ಸಂಜ್ಞಾಯಾಂ ಚ ಬಹುಲಮ್ ಸ್ಯುಃ। ಕೇಚಿದ್ ಅವಿಹಿತಾ ಅಪ್ಯೂಹ್ಯಾಃ।

ಅ.ವೃ– 'ವರ್ತಮಾನೇ ಲಟ್' ಎಂಬ ಸೂತ್ರದಿಂದ ವರ್ತಮಾನೇ ಎಂಬ ಪದವು 'ಪುವಃ ಸಂಜ್ಞಾಯಾಂ' ಎಂಬ ಸೂತ್ರದಿಂದ ಸಂಜ್ಞಾಯಾಂ ಎಂಬ ಪದವು ಅನುವೃತ್ತವಾಗುತ್ತದೆ. 'ಧಾತೋಃ' ಎಂಬುದು ಅಧಿಕಾರ ಸೂತ್ರ.

ಅರ್ಥ- ವರ್ತಮಾನ ಕಾಲಾರ್ಥದಲ್ಲಿ ಈ ಉಣಾದಿ ಪ್ರತ್ಯಯಗಳ ಸಂಜ್ಞೆಯು ತೋರುವಾಗ ವಿಕಲ್ಪವಾಗಿ (ಬಾಹುಲಕವಾಗಿ) ಬರುತ್ತವೆ. ಪಾಣಿನಿಯವರು ತಮ್ಮ ಸೂತ್ರಗಳಿಂದ ಶಬ್ದ ನಿಷ್ಪತ್ತಿಯನ್ನು ಮಾಡುವಾಗ ಶಾಕಟಾಯನರ ಉಣಾದಿ ಪ್ರತ್ಯಯಗಳ ಸಹಾಯವನ್ನು ಪಡೆದಿದ್ದಾರೆ. ಆದ್ದರಿಂದ ಬಹುಲ ಪದವನ್ನು ಹೇಳಿರುವರು. ಬಹುಲ ಶಬ್ದಕ್ಕೆ ಅನೇಕಾರ್ಥವುಳ್ಳದ್ದೆಂದು ಹೇಳಿರುವುದರಿಂದ ಸೂತ್ರದಿಂದ ವಿಹಿತವಾಗದಿರುವ ಕೆಲವು ಪ್ರತ್ಯಯಗಳನ್ನು ಊಹೆಯಿಂದ ಕಲ್ಪಿಸಿಕೊಳ್ಳಬೇಕು. ಈ ಊಹೆಯ ಬಗ್ಗೆ ಮಹಾಭಾಷ್ಯದ ಒಂದು ಶ್ಲೋಕ ಕಾರಿಕೆಯು ಪ್ರಸಿದ್ಧವಾಗಿದೆ.

**ಕಾರಿಕಾ- ಸಂಜ್ಞಾಸು ಧಾತುರೂಪಾಣಿ ಪ್ರತ್ಯಯಾಶ್ಚ ತತಃ ಪರೇ।**
**ಕಾರ್ಯಾದ್ ವಿದ್ಯಾದ್ ಅನುಬಂಧಮ್ ಏತಚ್ಛಾಸ್ತ್ರಮ್ ಉಣಾದಿಷು॥ ॥**
**ಇತ್ಯುಣಾದಯಃ॥**

ಸಂಜ್ಞಾ ಶಬ್ದಗಳಲ್ಲಿ ಆಯಾ ಧಾತುಗಳನ್ನು ತಿಳಿದು ಅವುಗಳ ಮೇಲೆ ಬರುವ ಪ್ರತ್ಯಯಗಳನ್ನು ಊಹಿಸಿ ನಿಶ್ಚಯಿಸಬೇಕು. ಅವುಗಳಲ್ಲಿಯೂ (ಆ ಪ್ರತ್ಯಯಗಳಲ್ಲಿಯೂ) ಗುಣ, ವೃದ್ಧಿ ಕಾರ್ಯಗಳು ಬರುವ ಪಕ್ಷ ಮತ್ತು ಅವುಗಳು ಬಾರದಿರುವ ಪಕ್ಷ ಸಂಪ್ರಸಾರಣಾದಿ ಕಾರ್ಯಗಳು, ಜಿತ್ವ, ಣಿತ್ವ, ಕಿತ್ವ ಮೊದಲಾದ ಅನುಬಂಧ, ಇವುಗಳನ್ನು ಉಣಾದಿ ಸೂತ್ರಗಳಲ್ಲಿ ತಿಳಿಯಬೇಕು. ಇದೇ ಇಲ್ಲಿಯ ಶಾಸ್ತ್ರದ ನಿಯಮ.ಇದರ ತಾತ್ಪರ್ಯವೇನೆಂದರೆ ಯಾವ ಸಂಜ್ಞಾ ಶಬ್ದವನ್ನು ಸಿದ್ಧ ಪಡಿಸಬೇಕೋ ಆ ಶಬ್ದದ ಪೂರ್ವ ಭಾಗವನ್ನು ಧಾತುವೆಂದು ಭಾವಿಸಬೇಕು. ಉಳಿದ ಭಾಗವನ್ನು ಪ್ರತ್ಯಯವೆಂದು ತಿಳಿಸಿ ಅದರ ಜೊತೆಗೆ ಆಗುವ ಕಾರ್ಯ, ಗುಣ ನಿಷೇಧ ಮೊದಲಾದವುಗಳಿಗೆ ಅನುಸಾರವಾಗಿ ಅನುಬಂಧದ ಕಲ್ಪನೆಯನ್ನು ಮಾಡಬೇಕು. ಇದೇ ಉಣಾದಿ ಪ್ರತ್ಯಯಗಳ ಸ್ವಭಾವವಾಗಿದೆ.

ಹೇಗೆಂದರೆ – 'ದುಕ್ಷೇರುಲಚ್' ಎಂಬ ಉಣಾದಿ ಸೂತ್ರದಿಂದ 'ಉಲಚ್' ಪ್ರತ್ಯಯವು ಬರುತ್ತದೆ. ಶಜಕುಲಾ ಶಬ್ದದಲ್ಲಿ ಪೂರ್ವಭಾಗವು ಶಜ್ಕ್ ಧಾತುವೆಂದು ಉತ್ತರ ಭಾಗವು 'ಉಲಚ್' ಪ್ರತ್ಯಯವೆಂದು ಭಾವಿಸಿ ಅದರ ವ್ಯುತ್ಪತ್ತಿಯನ್ನು ಮಾಡಬೇಕು. ಇದೇ ರೀತಿಯಲ್ಲಿ 'ಋಫಿಡ' ಶಬ್ದದಲ್ಲೂ ಪೂರ್ವಭಾಗದ 'ಋ'ವನ್ನು ಧಾತುವೆಂದು ಭಾವಿಸಿ ನಂತರ ಉತ್ತರ ಭಾಗವನ್ನು 'ಫಿಡ' ಪ್ರತ್ಯಯವೆಂದು ಕಲ್ಪಿಸಿದಾಗ ಇಲ್ಲಿ ಗುಣದ ಪ್ರತಿಷೇಧ ಆಗಿದೆ. ಎಂದು ತಿಳಿಯಬೇಕು. ಇದಕ್ಕಾಗಿ ಪ್ರತ್ಯಯದ ಜೊತೆಗೆ ಗುಣ ನಿಷೇಧ ಮೊದಲಾದ ಕಾರ್ಯಗಳಿಗೆ ನಿಮಿತ್ತವಾದ 'ಕ್' ಮೊದಲಾದ ಅನುಬಂಧಗಳನ್ನು ಅಲ್ಲಿ ಹುಡುಕಿ ತಿಳಿಯಬೇಕು.

ಇದೇ ರೀತಿ ಬೇರೆ ಸಂಜ್ಞಾ ಶಬ್ದಗಳಲ್ಲೂ ಉಣಾದಿ ಪ್ರತ್ಯಯಗಳ ಜೊತೆಗೆ ಪ್ರಕೃತಿ ಮತ್ತು ಅನುಬಂಧಗಳ ಕಲ್ಪನೆಯನ್ನು ಮಾಡಲೇಬೇಕು. ಉಣಾದಿ ಪ್ರತ್ಯಯವು ಪಾಣಿನಿಯ ಅಷ್ಟಾಧ್ಯಾಯಿಗೆ ಸಂಬಂಧಿಸಿದ್ದಲ್ಲವಾದರೂ 'ಉಣಾದಯೋ ಬಹುಲಮ್' ಎಂಬ ಪಾಣಿನಿಯ ಸೂತ್ರದಿಂದ ಇದು ಪಾಣಿನಿಯವರಿಗೆ ಸಮ್ಮತವಾದ್ದೆಂದು ತಿಳಿದುಬರುತ್ತದೆ.

**ಇಲ್ಲಿಗೆ ಉಣಾದಿ (೩೮) ಪ್ರಕರಣವು ಮುಗಿಯಿತು**

# ಪ್ರಕರಣ 36: ಉತ್ತರ ಕೃದನ್ತ

**(ಸೂತ್ರ ಸಂಖ್ಯೆ ೮೫೧ ರಿಂದ ೮೮೯ ವರೆಗೆ)**

**(ತುಮುನ್ ಮತ್ತು ಣ್ವುಲ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ- ೮೫೧ - ತುಮುನ್ಣ್ವುಲೌ ಕ್ರಿಯಾಯಾಂ ಕ್ರಿಯಾರ್ಥಾಯಾಮ್ । (೩-೩-೧೦)**

ವೃತ್ತಿ-ಕ್ರಿಯಾರ್ಥಾಯಾಂ ಕ್ರಿಯಾಯಾಮ್ ಉಪಪದೇ ಭವಿಷ್ಯತಿ ಅರ್ಥೇ ಧಾತೋ: ಏತೌ ಸ್ತ: । ಮಾನ್ತತ್ವಾತ್ ಅವ್ಯಯತ್ವಮ್ ಕೃಷ್ಣಂ ದ್ರಷ್ಟುಂ ಯಾತಿ । ಕೃಷ್ಣಂ ದರ್ಶಕೋ ಯಾತಿ ।

ಅ.ವೃ.: ಭವಿಷ್ಯತಿ ಗಮ್ಯಾದಯಃಎಂಬ ಸೂತ್ರದಿಂದ "ಭವಿಷ್ಯತಿ" ಎಂಬ ಪದವು ಅನುವೃತ್ತವಾಗುತ್ತದೆ. ಧಾತೋ: ಪ್ರತ್ಯಯ: ಮತ್ತು ಪರಶ್ಚ ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ:- ಒಂದು ಕ್ರಿಯೆಯನ್ನು ಪ್ರಯೋಜನಕವಾಗಿಉಳ್ಳ ಮತ್ತೊಂದು ಕ್ರಿಯೆಯನ್ನು ಬೋಧಿಸುವ ಉಪಪದವಿರುವಾಗ ಪ್ರಯೋಜನಭೂತ ಕ್ರಿಯಾವಾಚಿಯಾದ ಧಾತುವಿನ ನಂತರ ಭವಿಷ್ಯದರ್ಥದಲ್ಲಿ ತುಮುನ್ ಮತ್ತು ಣ್ವುಲ್ ಪ್ರತ್ಯಯಗಳು ಬರುತ್ತವೆ. ತುಮುನ್‌ನಲ್ಲಿ ತುಮ್ ಮಾತ್ರ ಉಳಿಯುತ್ತದೆ. ಣ್ವುಲ್‌ನಲ್ಲಿ ವ ಕಾರ ಮಾತ್ರ ಉಳಿಯುತ್ತದೆ.

ಉದಾ.1.:- ಕೃಷ್ಣಂ ದ್ರಷ್ಟುಂ ಯಾತಿ. (ಕೃಷ್ಣನನ್ನು ನೋಡುವುದಕ್ಕಾಗಿ ಹೋಗುತ್ತಾನೆ). ಇಲ್ಲಿ ಹೋಗುವುದು ಎಂಬ ಕ್ರಿಯೆಗೆ ಕೃಷ್ಣನನ್ನು ನೋಡುವ ಕ್ರಿಯೆಯೇ ಪ್ರಯೋಜನ. ಯಾತಿ ಎಂಬುದು ಉಪಪದವಾಗಿದೆ. ಆದ್ದರಿಂದ ಪ್ರಯೋಜನ ರೂಪವಾಗಿರುವ ಗಮನವು ಮುಂದೆ ಆಗುವ ದರ್ಶನ ಕ್ರಿಯೆಯನ್ನು ಬೋಧಿಸುತ್ತದೆ. ಅಂತಹ ದೃಶ್ ಧಾತುವಿಗೆ ತುಮುನ್ ಪ್ರತ್ಯಯವು ಬಂದಿದೆ. ದೃಶ್+ತುಮ್ ಎಂದಿದ್ದಾಗ "ಸೃಜಿ ದೃಶೋರ್ಝಲ್ಯಮಕಿತಿ" ಎಂಬ ಸೂತ್ರದಿಂದ ಅಮ್ ಆಗಮವು ಬರುತ್ತದೆ. ಇದು ಮಿತ್ತಾಗಿ ಇರುವುದರಿಂದ ಅಂತ್ಯ ಋ ಕಾರದ ನಂತರ ಬರುತ್ತದೆ. ದೃ+ಅಶ್+ತುಮ್ ಎಂದಿದ್ದಾಗ ಯಣ್ ಸಂಧಿಯಿಂದ ಋ ಕಾರಕ್ಕೆ ರೇಫ ಬಂದು ದ್ರಶ್+ತುಮ್ ಎಂದಾಗುತ್ತದೆ. "ವ್ರಶ್ಚಭ್ರಶ್ಚ..." ಎಂಬ ಸೂತ್ರದಿಂದ 'ಶ್' ಕಾರಕ್ಕೆ 'ಷ್' ಕಾರವು ಬರುತ್ತದೆ. ದ್ರಶ್+ತುಮ್ ಎಂದಿದ್ದಾಗ ಪರದಲ್ಲಿರುವ ತ್ ಕಾರಕ್ಕೆ ಷ್ಟುತ್ವ ಸಂಧಿಯಿಂದ ಟ್ ಕಾರವು ಬರುತ್ತದೆ. ದ್ರಷ್ಟುಂ ಎಂದು ರೂಪವಾಗುತ್ತದೆ.

ಉದಾ:.2: ಕೃಷ್ಣಂ ದರ್ಶಕೋ ಯಾತಿ ಎಂಬ ಉದಾಹರಣೆಯಲ್ಲೂ ದೃಶ್+ಣ್ವುಲ್ ಎಂದಿದ್ದಾಗ "ಯುವೋರನಾಕೌ" ಸೂತ್ರದಿಂದ ಅಕ ಆದೇಶ ಬಂದು ದರ್ಶ್+ಅಕ ಎಂದಾಗಿ ಋ ಕಾರಕ್ಕೆ ಗುಣ(ಅರ್) ಬಂದು ದರ್‌ಶ್+ಅಕ=ದರ್ಶಕ ಎಂದು ರೂಪವಾಗುತ್ತದೆ. ಸುಬಂತ ಮಾಡಿದಾಗ ದರ್ಶಕಃ ಎಂದಾಗುತ್ತದೆ.

**(ಕಾಲ, ಸಮಯ ಮತ್ತು ವೇಳಾ ಇವುಗಳನ್ನು ಉಪಯೋಗಿಸುವಾಗ ತುಮನ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ- 852 - ಕಾಲಸಮಯವೇಲಾಸು ತುಮನ್ (3-3-167)**

ವೃತ್ತಿ:- ಕಾಲಾರ್ಥೇಷು ಉಪಪದೇಷು ತುಮನ್। ಕಾಲಃ ಸಮಯಃ ವೇಲಾ ವಾ ಭೋಕ್ತುಮ್.

ಅನುವೃತ್ತಿ:- ಧಾತೋಃ, ಪ್ರತ್ಯಯಃ ಮತ್ತು ಪರಶ್ಚ ಎಂಬುವು ಅಧಿಕಾರ ಸೂತ್ರಗಳು.

ಅರ್ಥ:- ಪರ್ಯಾಯ ಪದಗಳಾದ ಕಾಲ, ಸಮಯ ಮತ್ತು ವೇಳಾ ಎಂಬವು ಕಾಲವಾಚಕ ಶಬ್ದಗಳು. ಇವು ಉಪಪದಗಳಾಗಿದ್ದಾಗ ಧಾತುವಿಗೆ ತುಮನ್ ಪ್ರತ್ಯಯವು ಬರುತ್ತದೆ.

ಉದಾ:- ಭೋಕ್ತುಮ್:- ಭುಜ್+ತುಮ್ ಎಂದಿದ್ದಾಗ ಲಘೂಪದ ಗುಣದಿಂದ ಉಕಾರಕ್ಕೆ ಓಕಾರವು ಮತ್ತು ಕುತ್ವದಿಂದ ಜಕಾರಕ್ಕೆ ಗ ಕಾರವು ಮತ್ತು ಚರ್ತ್ವ ಮಾಡಿದಾಗ ಭೋಕ್ತುಂ ಎಂದು ರೂಪ ಸಿದ್ಧವಾಗುತ್ತದೆ.

**(ಘಞ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ- 853 - ಭಾವೇ। (3-3-18)**

ವೃತ್ತಿ:- ಸಿದ್ಧಾವಸ್ಥಾಪನ್ನೇ ಧಾತ್ವರ್ಥೇ ಧಾತೋಃ ಘಞ್ । ಪಾಕಃ

ಅನುವೃತ್ತಿ:- "ಪದರುಜವಿಶಸ್ಪೃಶೋ ಘಞ್" ಸೂತ್ರದಿಂದ "ಘಞ್" ಪದವು ಅನುವೃತ್ತವಾಗುತ್ತದೆ. ಧಾತೋಃ, ಪ್ರತ್ಯಯಃ, ಪರಶ್ಚ ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ:- ಸಿದ್ಧಾವಸ್ಥೆಯನ್ನು ಹೊಂದಿರುವ ಧಾತ್ವರ್ಥ ಅಂದರೆ ವ್ಯಾಪಾರವು ವಾಚ್ಯವಾದಾಗ ಧಾತುವಿನ ಪರದಲ್ಲಿ ಘಞ್ ಪ್ರತ್ಯಯವು ಬರುತ್ತದೆ.

ಸಾಧಾರಣವಾಗಿ ಧಾತುಗಳು ಕ್ರಿಯೆಯನ್ನು ಬೋಧಿಸುವವು. ವಿಶೇಷರೂಪವಾಗಿ ಪಾಕಾದಿ ಕ್ರಿಯೆಗಳನ್ನು ಹೇಳುವುದು. ಉದಾಹರಣೆಗೆ ಪಚ್ ಧಾತುವು ವ್ಯಾಪಾರವನ್ನು ಸೂಚಿಸುತ್ತದೆ. ವಿಶೇಷರೂಪವಾಗಿ ವಿಕ್ಲಿತ್ತ್ಯನುಕೂಲ ವ್ಯಾಪಾರವನ್ನು ಹೇಳುವುದು. ಸಾಧಾರಣ ಕ್ರಿಯೆಗೆ ಭಾವವೆಂದು ಹೆಸರು. ಈ ಭಾವವು ಎರಡು ವಿಧವಾಗಿರುತ್ತದೆ. ಸಾಧ್ಯಾವಸ್ಥಾಪನ್ನ ಮತ್ತು ಸಿದ್ಧಾವಸ್ಥಾಪನ್ನ ಎಂದು. ಪಚತಿ ಇತ್ಯಾದಿ ತಿಙ್ ವಾಚ್ಯಗಳಿಂದ ಭಾವವು ಸಾಧ್ಯಾವಸ್ಥಾಪನ್ನವಾಗಿರುತ್ತದೆ. ಇವುಗಳಿಗೆ ಅಲಿಂಗ ಸಂಖ್ಯಾದಿಗಳ ಜೊತೆಗೆ ಅನ್ವಯ ಯೋಗ್ಯತಾ ಇರುವುದಿಲ್ಲ. ಕೃತ್ ಪ್ರತ್ಯಯಗಳಿಂದ ವಾಚ್ಯವಾಗಿರುವ ಭಾವವು ಸಿದ್ಧಾವಸ್ಥಾಪನ್ನವಾಗಿರುತ್ತದೆ. ಇವುಗಳಿಗೆ ಲಿಂಗ ಸಂಖ್ಯಾನ್ವಯ ಯೋಗ್ಯತೆ ಇರುತ್ತದೆ. ಅಂತಹ ಅವಸ್ಥೆಯಲ್ಲಿ ಪಚ್ ಧಾತುವು ವಾಚ್ಯವಾಗುವಾಗ ಘಞ್ ಪ್ರತ್ಯಯವು ಕೂಡಿಕೊಳ್ಳುತ್ತದೆ. ಈ ಪ್ರತ್ಯಯದಲ್ಲಿ ಅ ಮಾತ್ರ ಉಳಿಯುತ್ತದೆ.

ಉದಾ:-ಪಾಕಃ-ಪಚ್+ಅ ಎಂದಿದ್ದಾಗ "ಅತ ಉಪಧಾಯಾಃ" ಎಂಬುದರಿಂದ ಉಪಧಾರೂಪವಾದ ಅಕಾರಕ್ಕೆ (ವೃದ್ಧಿ ಬಂದು (ಆ) ಚ್ ಕಾರಕ್ಕೆ ಕುತ್ವ ಬಂದು)

ಪಾಕಃ ಎಂದಾಗುತ್ತದೆ. ಪಾಚ್+ಅ=ಪಾಕ್+ಅ ಎಂಬುದು ಸುಬಂತವಾದಾಗ ಪಾಕಃ ಎಂದು ರೂಪವು ಸಿದ್ಧವಾಗುತ್ತದೆ.

**(ಕಾರಕಾರ್ಥದಲ್ಲಿ ಘಞ್ ವಿಧಾನ ಮಾಡುವ ಸೂತ್ರ)**

**ಸೂತ್ರ– 854 – ಅಕರ್ತರಿ ಚ ಕಾರಕೇ ಸಂಜ್ಞಾಯಾಮ್** । (3–3–19)

ವೃತ್ತಿ:– ಕರ್ತೃಭಿನ್ನೇ ಕಾರಕೇ ಘಞ್ ಸ್ಯಾತ್।

ಅ.ವೃ:– "ಪದರುಜ..." ಸೂತ್ರದಿಂದ ಘಞ್ ಎಂಬ ಪದವು ಅನುವೃತ್ತ ವಾಗುತ್ತದೆ. ಧಾತೋಃ, ಪ್ರತ್ಯಯಃ ಮತ್ತು ಪರಶ್ಚ ಎಂಬ ಅಧಿಕಾರ ಸೂತ್ರಗಳು ಅನುವೃತ್ತವಾಗುತ್ತವೆ.

ಅರ್ಥ:– ಕರ್ತೃಭಿನ್ನ ಕಾರಕಾರ್ಥದಲ್ಲಿ (ರೂಢ್ಯರ್ಥವಿರುವಾಗ) ಧಾತುವಿನ ಪರದಲ್ಲಿ ಘಞ್ ಪ್ರತ್ಯಯವು ಸಂಜ್ಞಾರ್ಥದಲ್ಲಿ ಬರುತ್ತದೆ.

ಉದಾ:– ರಞ್ಜ–ರಾಗೇ ಎಂಬ ಧಾತುವು ರಜ್ಯತೇ ಅನೇನ ಎಂದು ಕರಣಾರ್ಥವಿವಕ್ಷೆ ಮಾಡಿದಾಗ ಅದಕ್ಕೆ ಘಞ್ ಪ್ರತ್ಯಯವು ಸಂಜ್ಞಾರ್ಥದಲ್ಲಿ ಬಂದು ರಞ್ಜ್+ಅ ಎಂದಿರುವಾಗ ನ–ಲೋಪವನ್ನು ಮುಂದಿನ ಸೂತ್ರದಲ್ಲಿ ಹೇಳುತ್ತಾನೆ.

**(ರಞ್ಜ್‌ನಲ್ಲಿರುವ ಞ್ ಕಾರಕ್ಕೆ ಮೂಲವಾದ ನ್ ಕಾರಕ್ಕೆ ಲೋಪವನ್ನು ಹೇಳುವ ಸೂತ್ರ)**

**ಸೂತ್ರ– 855 – ಘಞಿ ಚ ಭಾವಕರಣಯೋಃ** । (6–4–27)

ವೃತ್ತಿ:–ರಞ್ಜೇಃ ನ–ಲೋಪಃ ಸ್ಯಾತ್।ರಾಗಃ। ಅನಯೋಃ ಕಿಮ್ ರಜ್ಯತ್ಯಸ್ಮಿನ್ನಿತಿ ರಙ್ಗಃ ॥

ಅ.ವೃ:– ರಞ್ಜೇಶ್ಚ ಎಂಬ ಸೂತ್ರದಿಂದ ರಞ್ಜೇಃ ಎಂಬ ಪದವು ಅನುವೃತ್ತವಾಗುತ್ತದೆ. "ಶ್ನಾನ್ನಲೋಪಃ" ಎಂಬ ಸೂತ್ರದಿಂದ ನ–ಲೋಪಃ ಎಂಬವುಗಳು ಅನುವೃತ್ತವಾಗುತ್ತವೆ.

ಅರ್ಥ:–ಭಾವಾರ್ಥ ಅಥವಾ ಕರಣಾರ್ಥದಲ್ಲಿಯೂ ಬಂದ ಘಞ್ ಪ್ರತ್ಯಯಪರದಲ್ಲಿರುವಾಗ ರನ್ಜ್ ಧಾತುವಿನ ನ್ ಕಾರಕ್ಕೆ ಲೋಪಬರುತ್ತದೆ. ಜ್ ಕಾರ ಸಂಬಂಧದಿಂದ ನ್ ಕಾರಕ್ಕೆ ಞ್ ಕಾರ ಬಂದಿದೆ, ಆದರೆ ವಾಸ್ತವವಾಗಿರುವುದು ನ್–ಕಾರ. ಈಗ ಕರಣಾರ್ಥದಲ್ಲಿ ಘಞ್ ಬಂದಿರುವುದರಿಂದ ನ್ ಲೋಪ ಬಂದು ರಞ್ಜ+ಅ ಎಂದಾಗುತ್ತದೆ.

ಉದಾ:–ರಾಗಃ/ಅತಉಪಧಾಯಾಃ ಎಂಬ ಸೂತ್ರದಿಂದ ಉಪಧಾವೃದ್ಧಿ ಬಂದು "ಚಜೋಃಕು– ಘಿಣ್ಯತೋಃ" ಎಂಬ ಸೂತ್ರದಿಂದ ಜ್ ಕಾರಕ್ಕೆ ಕುತ್ವ ಬಂದು ರಾಗ ಎಂದಾಗುತ್ತದೆ. ಇದನ್ನು ಸುಬಂತ ಮಾಡಿದಾಗ ರಾಗಃ ಎಂದಾಗುತ್ತದೆ. ಭಾವಾರ್ಥದಲ್ಲಿಯೂ ರಾಗಃ ಎಂದೇ ಇರುತ್ತದೆ. ಭಾವ ಕರಣಾರ್ಥದಲ್ಲಿ ಘಞ್ ಪ್ರತ್ಯಯ ಬಂದಾಗ ಮಾತ್ರ ನ–ಕಾರಕ್ಕೆ ಲೋಪ ಬರುತ್ತದೆ. ಆದರೆ ಇತರಾರ್ಥದಲ್ಲಿ ಅಂದರೆ ಅಧಿಕರಣಾದ್ಯರ್ಥದಲ್ಲಿ ಘಞ್ ಬಂದಾಗ ನ–ಕಾರ ಲೋಪವಾಗುವುದಿಲ್ಲ. ಉದಾಹರಣೆಗೆ ರಜ್ಯತ್ಯಸ್ಮಿನ್ ಎಂಬಲ್ಲಿ "ಇದರಲ್ಲಿ ರಂಜಿಸುವುದು" ಎಂಬ

ಅಧಿಕರಣಾರ್ಥದಲ್ಲಿ ರಜ್ ಧಾತುವಿನ ಪರದಲ್ಲಿ ಘಞ್ ಪ್ರತ್ಯಯ ಬಂದು ರಂಜ್+ಅ ಎಂದಿದ್ದಾಗ ನ ಕಾರ ಲೋಪವು ಬರುವುದಿಲ್ಲ. ಚಜೋಃ ಕುಘಿಣ್ಯತೋಃ ಎಂಬ ಸೂತ್ರದಿಂದ ಜ್-ಕಾರಕ್ಕೆ ಗ್ ಕಾರ ಬಂದು ಅನುಸ್ವಾರ ಪರಸವರ್ಣಗಳಿಂದ ರಂಗಃ ಎಂದು ರೂಪವಾಗುತ್ತದೆ. ರಂಗವೆಂದರೆ ನಾಟ್ಯಶಾಲೆ.

**(ಘಞ್ ಪ್ರತ್ಯಯವನ್ನು ಮತ್ತು ಕಕಾರದೇಶವನ್ನು ವಿಧಿಸುವ ಸೂತ್ರ)**

**ಸೂತ್ರ- 856- ನಿವಾಸ-ಚಿತಿ-ಶರೀರೋಪಸಮಾಧಾನೇಷ್ವಾದೇಶ್ಚ ಕಃ । (3.3.41)**

ವೃತ್ತಿ:- ಏಷು ಚಿನೋತೇಃರ್ಘಞ್, ಆದೇಶ್ಚ ಕಕಾರಃ। ಉಪಸಮಾಧಾನಂ ರಾಶೀಕರಣಂ । ನಿಕಾಯಃ। ಕಾಯಃ। ಗೋಮಯನಿಕಾಯಃ।

ಪ.ಚ್ಛೇ:- ನಿವಾಸ-ಚಿತಿ-ಶರೀರೋಪಸಮಾಧಾನೇಷು, ಆದೇಃ, ಚ, ಕಃ।

ಅ.ವೃ:- "ಹಸ್ತಾದಾನೇ ಚೇರಸ್ತೇಯೇ" ಸೂತ್ರದಿಂದ ಚೇಃ "ಪದ-ರುಜ... ಘಞ್" ಸೂತ್ರದಿಂದ ಘಞ್ ಎಂಬ ಪದವು ಅನುವೃತ್ತವಾಗುತ್ತವೆ. ಹಾಗೆಯೇ "ಅಕರ್ತರಿ ಚ ಕಾರಕೇ ಸಂಜ್ಞಾಯಾಂ" ಸೂತ್ರವು ಅನುವೃತ್ತವಾಗುತ್ತದೆ. ಧಾತೋಃ, ಪ್ರತ್ಯಯಃ, ಪರಶ್ಚ ಎಂಬವು ಅಧಿಕಾರ ಸೂತ್ರಗಳು.

ಅರ್ಥ:- ನಿವಾಸ, ಚಿತಿ (ಚಯನ) ಶರೀರ ಮತ್ತು ಉಪಸಮಾಧಾನ (ರಾಶೀಕರಣ) ಎಂಬ ಅರ್ಥಗಳಲ್ಲಿ ಧಾತುವಿನ ಪರದಲ್ಲಿ ಘಞ್ ಪ್ರತ್ಯಯವು ಬರುತ್ತದೆ. ಮತ್ತು ಧಾತುವಿನ ಆದಿ ವರ್ಣಕ್ಕೆ ಕ್ ಕಾರವು ಆದೇಶವಾಗಿಯೂ ಬರುತ್ತದೆ.

ಉದಾ: ನಿಕಾಯಃ (ಮನೆ) ನಿಚೀಯತೇ ಧನಾದಿಕಮ್ (ಧನಾದಿಗಳು ಇಲ್ಲಿ ರಕ್ಷಿಸಲ್ಪಡುತ್ತವೆ) ಎಂಬ ಅರ್ಥದಲ್ಲಿ ಈ ಸೂತ್ರದಿಂದ ನಿಪೂರ್ವಕ ಚಿ ಧಾತುವಿನ ನಂತರ ಘಞ್ ಎಂಬ ಪ್ರತ್ಯಯವು ಬಂದು ಚ್ ಕಾರಕ್ಕೆ ಕ್ ಕಾರವು ಬಂದು ನಿ+ಚಿ+ಅ ಎಂದಿದ್ದಾಗ ಇ ಕಾರಕ್ಕೆ ವೃದ್ಧಿಯಿಂದ ಐ ಕಾರವು ಅನಂತರ ಏಚೋಽಯವಾಯಾವಃ ಎಂಬ ಸೂತ್ರದಿಂದ ಆಯ್ ಆದೇಶ ಬಂದು ನಿಕಾಯಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ: ಕಾಯಃ (ದೇಹ) ಚೀಯತೇ ಅಸ್ಥ್ಯಾಧಿಕಂ ಅಸ್ಮಿನ್ ಎಂಬುದು ವಿಗ್ರಹ ವಾಕ್ಯ. (ಇದರಲ್ಲಿ ಎಲುಬು ಮೊದಲಾದವು ಸಂಗ್ರಹಿಸಲ್ಪಡುತ್ತವೆ.) ಎಂಬ ಅರ್ಥದಲ್ಲಿ ಚಿ ಧಾತುವಿನ ನಂತರ ಪ್ರಕೃತ ಸೂತ್ರದಿಂದ ಘಞ್ ಪ್ರತ್ಯಯ ಮತ್ತು ಕಕಾರಗಳು ಬಂದು ಕಾಯಃ ಎಂದು ಆಗುತ್ತದೆ.

ಉದಾ: ಗೋಮಯ ನಿಕಾಯಃ-ನಿಚೀಯತೇ-ರಾಶೀಕ್ರಿಯತೇ ಅಂದರೆ ರಾಶಿಯಾಗಿ ಮಾಡಲ್ಪಡುತ್ತದೆ ಎಂಬ ಭಾವಾರ್ಥದಲ್ಲಿ ನಿ-ಪೂರ್ವಕ ಚಿಞ್ ಧಾತುವಿನ ನಂತರ ಘಞ್ ಎಂಬ ಪ್ರತ್ಯಯ ಬಂದಾಗ ಪ್ರಕೃತ ರೂಪವು ಸಿದ್ಧವಾಗುತ್ತದೆ. (ಗೋಮಯದ ರಾಶಿ ಎಂದರ್ಥ)

(ಅಚ್ ಪ್ರತ್ಯಯವನ್ನು ವಿಧಿಸುವ ಸೂತ್ರ)

**ಸೂತ್ರ- 857- ಏರಚ್ (3-3-56)**

ವೃತ್ತಿ :- ಇವರ್ಣನ್ತಾತ್ ಅಚ್ । ಚಯಃ । ಜಯಃ

ಪ.ಛೇ:- ಏಃ, ಅಚ್ ।

ಅ.ವ್ಯ:- ಭಾವೇ ಅಕರ್ತರಿ ಕಾರಕೇ ಎಂಬ ಪದಗಳು ಅನುವೃತ್ತವಾಗುತ್ತವೆ. ಧಾತೋಃ, ಪ್ರತ್ಯಯಃ, ಪರಶ್ಚ ಎಂಬವು ಅಧಿಕಾರ ಸೂತ್ರಗಳು.

ಅರ್ಥ:- ಇವರ್ಣಾಂತವಾದ ಧಾತುವಿನ ಪರದಲ್ಲಿ ಭಾವಾರ್ಥದಲ್ಲೂ ಕರ್ತೃಭಿನ್ನವಾದ ಕಾರಕಾರ್ಥದಲ್ಲೂ ಅಚ್ ಪ್ರತ್ಯಯವು ಬರುತ್ತದೆ.

ಉದಾ:- ಚಯಃ- ಚಿ ಧಾತುವಿನ ನಂತರ ಪ್ರಕೃತ ಸೂತ್ರದಿಂದ ಭಾವಾರ್ಥದಲ್ಲಿ ಅಚ್ (ಅ)ಪ್ರತ್ಯಯವು ಬಂದು ಧಾತುವಿನ ಇ ಕಾರಕ್ಕೆ ಗುಣ ಬಂದು ಅದಕ್ಕೆ "ಏಚೋಽಯವಾಯಾವಃ" ಎಂಬುದರಿಂದ ಅಯ್ ಆದೇಶ ಬಂದು ಚಯ್+ಅ=ಚಯ ಎಂದಾಗಿ ಸುಬಂತ ಮಾಡಿದ ಮೇಲೆ ಚಯಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ:- ಜಯಃ-ಜಿ ಎಂಬ ಧಾತುವಿನ ಇ-ಕಾರಕ್ಕೆ ಗುಣ ಬಂದು ಭಾವಾರ್ಥದಲ್ಲಿ ಪ್ರಕೃತ ಸೂತ್ರದಿಂದ ಅಚ್ (ಅ) ಪ್ರತ್ಯಯ ಬಂದು ಹಿಂದಿನಂತೆಯೇ ಗುಣ (ಎ) ಮತ್ತು ಅಯಾದೇಶಗಳು ಬಂದು ಜಯ್+ಅ=ಜಯ ಎಂದಾಗಿ ಸುಬಂತ ಮಾಡಿದ ಮೇಲೆ ಜಯಃ ಎಂಬ ರೂಪವು ಸಿದ್ದಿಸುತ್ತದೆ.

(ಅಪ್ ಪ್ರತ್ಯಯವನ್ನು ವಿಧಿಸುವ ಸೂತ್ರ)

**ಸೂತ್ರ- 858 - ಋದೋರಪ್ । (3-3-57)**

ವಾರ್ತಿಕ-ಘಞರ್ಥೇ ಕ ವಿಧಾನಮ್। ಪ್ರಸ್ಥಃ ವಿಘ್ನಃ

ವೃತ್ತಿ:-ಋದಂತಾತ್ ಉವರ್ಣನ್ತಾತ್ ಅಪ್ । ಕರಃ। ಗರಃ । ಲವಃ ಸ್ತವಃ। ಪವಃ।

ಪ.ಛೇ:-ಋದೋಃ, ಅಪ್।

ಅ.ವ್ಯ:- ಭಾವೇ ಎಂಬ ಸೂತ್ರ, "ಅಕರ್ತರಿ ಚ ಕಾರಕೇ ಸಂಜ್ಞಾಯಾಮ್" ಎಂಬಲ್ಲಿ ಸಂಜ್ಞಾಯಾಮ್ ಎಂಬ ಪದವನ್ನು ಬಿಟ್ಟು ಉಳಿದ ಪದಗಳು ಅನುವೃತ್ತವಾಗುತ್ತವೆ. ಧಾತೋಃ, ಪ್ರತ್ಯಯಃ, ಪರಶ್ಚ ಎಂಬ ಅಧಿಕಾರ ಸೂತ್ರಗಳು.

ಅರ್ಥ:- ಭಾವ ಅಥವಾ ಕರ್ತ್ರರ್ಥಕ್ಕಿಂತ ಭಿನ್ನವಾದ ಕಾರಕಾರ್ಥದಲ್ಲಿ ದೀರ್ಘವಾದ ಋ ವರ್ಣಾಂತ ಮತ್ತು ಉವರ್ಣಾನ್ತ ಧಾತುಗಳ ಮೇಲೆ ಅಪ್ ಪ್ರತ್ಯಯವು ಬರುತ್ತದೆ.

ಕೃ, ಗೃ ಧಾತುಗಳ ಮುಂದೆ ಪ್ರಕೃತ ಸೂತ್ರದಿಂದ ಅಪ್ ಪ್ರತ್ಯಯ ಸೇರಿಸುವುದರಿಂದ ಋ ಕಾರಕ್ಕೆ ಸಾರ್ವಧಾತುಕಾರ್ಧಧಾತುಕಯೋಃ ಎಂಬ ಸೂತ್ರದಿಂದ ಗುಣ ಬಂದು ಕರ್+ಅ, ಗರ್+ಅ ಎಂದಾಗಿ ಸುಬಂತವಾದ ಮೇಲೆ ಕರಃ, ಗರಃ ಎಂಬ

ರೂಪಗಳಾಗುತ್ತವೆ. ಹ್ರಸ್ವ, ದೀರ್ಘ ಉ ಕಾರಾಂತಗಳಾದ ಯೂ, ಲೂ, ಸ್ತೂ, ಪೂ ಧಾತುಗಳಿಗೆ ಪ್ರಕೃತ ಸೂತ್ರದಿಂದ ಅಪ್ ಪ್ರತ್ಯಯವನ್ನು ಸೇರಿಸುವುದರಿಂದ ಗುಣ ಅವಾದೇಶಗಳು ಬಂದು ಸುಬಂತವಾದಾಗ ಯುವಃ, ಲವಃ, ಸ್ತವಃ ಮತ್ತು ಪವಃ ಎಂಬ ರೂಪಗಳಾಗುತ್ತವೆ.

**(ಘಞರ್ಥದಲ್ಲಿ ಕ-ವನ್ನು ವಿಧಿಸುವ ವಾರ್ತಿಕ)**

**ವಾರ್ತಿಕ-ಘಞರ್ಥೇ ಕ ವಿಧಾನಮ್। ಪ್ರಸ್ಥಃ ವಿಘ್ನಃ**

ಅರ್ಥ:-ಯಾವ ಅರ್ಥದಲ್ಲಿ ಘಞ್ ಪ್ರತ್ಯಯವು ವಿಧಿಸಲಾಗಿದೆಯೋ, ಆ ಅರ್ಥದಲ್ಲಿ ಕ ಪ್ರತ್ಯಯವು ವಿಧಿಸಲ್ಪಡಬೇಕು ಎಂದು ಹೇಳಬೇಕು. ಘಞ್ ಅರ್ಥದಲ್ಲಿ ಸ್ಥಾ, ಸ್ನಾ, ಪಾ,ವ್ಯಧ್, ಹನ್ ಮತ್ತು ಯುಧ್ ಧಾತುಗಳ ನಂತರ ಕ ಪ್ರತ್ಯಯವನ್ನು ವಿಧಿಸಬೇಕು. ಆದ್ದರಿಂದ ಪ್ರಸ್ಥಃ ವಿಘ್ನಃ ಎಂಬಲ್ಲಿ ಘಞ್ ಅರ್ಥವು ಇರುತ್ತದೆ. ಅಲ್ಲಿ ಕ ಪ್ರತ್ಯಯವು ವಿಧಿಸಲ್ಪಟಿದೆ.

ಉದಾ: – ಪ್ರಸ್ಥಃ ಪ್ರತಿಷ್ಠತೇ ಅಸ್ಮಿನ್ ಧಾನ್ಯಾನಿ ಎಂದು ವಿಗ್ರಹ ವಾಕ್ಯ (ಯಾವುದಲ್ಲಿ ಧಾನ್ಯ ಮೊದಲಾದವು ಅಳೆಯಲ್ಪಡುತ್ತದೋ ಆ ಮಾಪಕಕ್ಕೆ ಪ್ರಸ್ಥಃ ಎಂದು ಹೇಳುತ್ತಾರೆ. ಪ್ರ -ಪೂರ್ವಕ ಸ್ಥಾ ಧಾತುವಿನ ನಂತರ ಘಞ್) ಅರ್ಥದಲ್ಲಿ, ಅಂದರೆ ಭಾವ ಮತ್ತು ಸಂಜ್ಞಾ ವಿಷಯಕವಾದ ಕರ್ತೃಭಿನ್ನ ಕಾರಕಾರ್ಥದಲ್ಲಿ ಘಞ್ ಪ್ರತ್ಯಯವನ್ನು ವಿಧಿಸಬೇಕೆಂಬ ವಾರ್ತಿಕದಿಂದ ಕ(ಅ) ಪ್ರತ್ಯಯವು ವಿಧಿಸಲಾಗಿದೆ. ಆಗ ಪ್ರ+ಸ್ಥಾ+ಅ ಎಂದಾಗುತ್ತದೆ. "ಆತೋಲೋಪ ಇಟಿಚ" ಎಂಬ ಸೂತ್ರದಿಂದ ಆ ಕಾರಕ್ಕೆ ಲೋಪ ಬಂದು ಪ್ರಸ್ಥ ಎಂದಿರುತ್ತದೆ. ಸುಬಂತ ಮಾಡಿದ ಮೇಲೆ ಪ್ರಸ್ಥಃ ಎಂದು ರೂಪವು ಸಿದ್ದಿಸುತ್ತದೆ.

ಉದಾ: – ವಿಘ್ನಃ-"ವಿಹನ್ಯಂತೇ ಅಸ್ಮಿನ್ ಇತಿ ವಿಘ್ನಃ" ಎಂದು ಅರ್ಥ. ವಿ-ಪೂರ್ವಕ ಹನ್ ಧಾತುವಿನ ಮೇಲೆ ಘಞ್-ಅರ್ಥದಲ್ಲಿ ಹಿಂದಿನಂತೆ ಕ ಪ್ರತ್ಯಯವು ಪ್ರಕೃತ ವಾರ್ತಿಕದಿಂದ ವಿಧಿಸಲಾಗಿದೆ. ವಿ+ಹಿನ್+ಅ ಎಂದಿದ್ದಾಗ ಅಜಾದಿ ಕೃತ್ ಪ್ರತ್ಯಯವು ಪರದಲ್ಲಿದ್ದಾಗ "ಗಮ-ಹನ ಕ್ಷಿತ್ಯನಜಿ" ಎಂಬ ಸೂತ್ರದಿಂದ ಧಾತುವಿನ ಉಪಧೆಯಾದ ಅಕಾರಕ್ಕೆ ಲೋಪ ಬಂದು ವಿ+ಹನ್+ಅ ಎಂದಿರುತ್ತದೆ. ಹ-ಕಾರಕ್ಕೆ "ಹೋಹಂತೇಃ ಞ್ಣಿರ್ನೇಷು" ಎಂಬ ಸೂತ್ರದಿಂದ ಕುತ್ವ ಮಾಡಿದಾಗ ವಿಘ್ನ ಎಂದು ರೂಪವಾಗುತ್ತದೆ. ಸುಬಂತ ಮಾಡಿದ ಮೇಲೆ ವಿಘ್ನಃ ಎಂದು ರೂಪವಾಗುತ್ತದೆ.

**(ಕ್ತ್ರಿ-ಪ್ರತ್ಯಯ ವಿಧಾಯಕ ಸೂತ್ರ)**

**ಸೂತ್ರ- 859 – ಡ್ವಿತಃ ಕ್ತ್ರಿಃ । (3-3-88)**

ಅ.ವೃ:-"ಭಾವೇ" ಮತ್ತು "ಅಕರ್ತರಿ ಚ ಕಾರಕೇ" ಎಂಬ ಸೂತ್ರಗಳು ಅನುವೃತ್ತವಾಗುತ್ತವೆ. ಧಾತೋಃ,ಪ್ರತ್ಯಯಃ ಮತ್ತು ಪರಶ್ಚ ಎಂಬವು ಅಧಿಕಾರ ಸೂತ್ರಗಳು.

ಅರ್ಥ: 'ಡು'ವನ್ನು ಇತ್ ಸಂಜ್ಞೆಯಾಗುಳ್ಳ ಧಾತುವಿನ ನಂತರ ಭಾವ ಮತ್ತು ಕರ್ತೃಭಿನ್ನ ಕಾರಕಾರ್ಥದಲ್ಲಿ ಕ್ತ್ರಿ-ಪ್ರತ್ಯಯವು ಬರುತ್ತದೆ. ಇದರಲ್ಲಿ ತ್ರಿ ಮಾತ್ರ ಉಳಿಯುತ್ತದೆ.

ಡುಪಚಷ್ಪಾಕೇ ಮೊದಲಾದ ಧಾತುಗಳಲ್ಲಿ ಡು ಎಂಬುದು ಇತ್ ಆಗಿರುತ್ತದೆ. ಇದರ ಜೊತೆಗೆ ಮುಂಬರುವ ಸೂತ್ರದಿಂದ "ಮಪ್" ಪ್ರತ್ಯಯವನ್ನು ಸೇರಿಸಲಾಗುತ್ತದೆ. ಕ್ತ್ರಿ ಎಂಬುದು ಕೃತ್ ಪ್ರತ್ಯಯವಾಗಿದೆ. ಮಪ್ ಎಂಬುದು ತದ್ಧಿತ ಪ್ರತ್ಯಯವಾಗಿದೆ.

**(ಮಪ್ ಪ್ರತ್ಯಯ ವಿಧಾಯಕ ಸೂತ್ರ)**

**ಸೂತ್ರ- ೮೬೦ - ಕ್ತ್ರೇರ್ಮಮ್ ನಿತ್ಯಮ್ (4-4-೨೦)**

ವೃತ್ತಿ:- ಕ್ತ್ರಿಪ್ರತ್ಯಯಾನ್ತಾತ್ ಮಪ್ ನಿರ್ವೃತ್ತೇ ಅರ್ಥೇ. ಪಾಕೇನ ನಿರ್ವೃತ್ತಮ್ ಪಕ್ತ್ರಿಮಮ್ ಡುವಪ್ ಉಪ್ತ್ರಿಮಮ್

ಪ.ಛೇ:- ಕ್ತ್ರೇಃ, ಮಪ್, ನಿತ್ಯಮ್ ।

ಅ.ವೃ:- "ನಿವೃತ್ತೇಕ್ಷದ್ಯೂತಾದಿಭ್ಯಃ" ಎಂಬ ಸೂತ್ರದಿಂದ ನಿರ್ವೃತ್ತೇ ಎಂಬ ಪದವು ಅನುವೃತ್ತವಾಗುತ್ತದೆ. ಪ್ರತ್ಯಯ, ಪರಶ್ಚ ಮತ್ತು ತದ್ಧಿತಾಃ ಎಂಬವು ಅಧಿಕಾರ ಸೂತ್ರಗಳು.

ಅರ್ಥ:- ಕ್ತ್ರಿ ಪ್ರತ್ಯಯಾಂತ ಶಬ್ದದ ಮೇಲೆ ನಿರ್ವೃತ್ತ ಎಂಬ ಅರ್ಥದಲ್ಲಿ ಮಪ್ ಪ್ರತ್ಯಯವು ಬರುತ್ತದೆ. ನಿರ್ವೃತ್ತ ಎಂದರೆ 1) ಉತ್ಪನ್ನವಾದದ್ದು 2) ಸಿದ್ಧವಾದದ್ದು ಇತ್ಯಾದಿ ಅರ್ಥಗಳು.

ಪಾಕೇನ ನಿರ್ವೃತ್ತಂ ಪಕ್ತ್ರಿಮಮ್ (ಪಾಕದಿಂದ ಉಂಟಾದ ಎಂದರ್ಥ) ಡುಪಚಷ್ ಪಾಕೇ ಎಂಬಲ್ಲಿ ಪಚ್ ಧಾತುವು ಡ್ವಿತ್ತಾಗಿರುವುದರಿಂದ "ಡ್ವಿತಃ ಕ್ತ್ರಿಃ" ಎಂಬ ಸೂತ್ರದಿಂದ ಕ್ತ್ರಿಪ್ರತ್ಯಯ ಬರುತ್ತದೆ. ತ್ರಿ ಮಾತ್ರ ಉಳಿಯುತ್ತದೆ. ಪಚ್+ತ್ರಿ ಎಂದಿದ್ದಾಗ "ಚೋಃಕುಃ" ಎಂಬ ಸೂತ್ರದಿಂದ ಪಕ್ತ್ರಿ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ಮಪ್ (ಮ) ಪ್ರತ್ಯಯವು ಬಂದು ಪಕ್ತ್ರಿಮ ಎಂದಾಗುತ್ತದೆ. ಇದಕ್ಕೆ ಸುಪ್ರತ್ಯಯ ಸೇರಿದಾಗ ನಪುಂಸಕ ಲಿಂಗದಲ್ಲಿ ಅಮ್ ಆದೇಶ ಬಂದು ಪಕ್ತ್ರಿಮಮ್ ಎಂದು ರೂಪಸಿದ್ಧವಾಗುತ್ತದೆ.

ಇದೇ ರೀತಿಯಿಲ್ಲಿ ಡುವಪ್ ಬೀಜಸಂತಾನೇ ಎಂಬಲ್ಲಿ ವಪ್ ಧಾತುವು ಡ್ವಿತ್ತಾಗಿದೆ. ಈ ಧಾತುವಿನ ಮೇಲೆ ಕ್ತ್ರಿ (ತ್ರಿ) ಪ್ರತ್ಯಯ ಸೇರಿದಾಗ ವಪ್+ತ್ರಿ ಎಂದಾಗುತ್ತದೆ. ವಚಿಸ್ವಪಿ ಯಜಾದೀನಾಮಕಿತಿ ಎಂಬ ಸೂತ್ರದಿಂದ ಸಂಪ್ರಸಾರಣ ಬಂದು (ಇಗ್‌ಯಣಃ ಸಂಪ್ರಸಾರಣಮ್) ನಂತರ ಪೂರ್ವರೂಪ ಬಂದು ಮಪ್ ಪ್ರತ್ಯಯವನ್ನು ಸೇರಿಸುವುದರಿಂದ ಉಪ್‌ತ್ರಿಮ ಎಂದಾಗುತ್ತದೆ. ಇದನ್ನು ಸುಬಂತ ಮಾಡಿದಾಗ ನಪುಂಸಕದಲ್ಲಿ ಉಪ್ ತ್ರಿಮಮ್ ಎಂದು ರೂಪವಾಗುತ್ತದೆ.

**(ಅಥುಚ್ ಪ್ರತ್ಯಯ ವಿಧಿಸುವ ಸೂತ್ರ)**

**ಸೂತ್ರ- ೮೬1 - ಟ್ವಿತೋಽಥುಚ್ । (೩-೩-೮೯)**

ವೃತ್ತಿ:- ಟು ವೇಪೃ ಕಂಪನೇ. ವೇಪಥುಃ

ಪ.ಚ್ಛೇ:- ಟ್ವಿತಃ, ಅಥುಚ್ ।

ಅ.ವೃ:- ಭಾವೇ ಮತ್ತು ಅಕರ್ತರಿ ಚ ಕಾರಕೇ ಎಂಬ ಸೂತ್ರಗಳು ಅನುವೃತ್ತವಾಗುತ್ತವೆ. ಧಾತೋಃ, ಪ್ರತ್ಯಯಃ, ಪರಶ್ಚ ಎಂಬುವು ಅಧಿಕಾರ ಸೂತ್ರಗಳು.

ಅರ್ಥ:- ಟ್ವಿತ್ ಎಂದರೆ ಟುವನ್ನು ಇತ್ತಾಗಿಉಳ್ಳ ಧಾತು ಎಂದರ್ಥ. ಟ್ವಿತ್ತಾದ ಧಾತುವಿನ ನಂತರ ಭಾವಾರ್ಥದಲ್ಲಿ ಅಥುಚ್ ಪ್ರತ್ಯಯವು ಬರುತ್ತದೆ. (ಅಥು ಮಾತ್ರ ಉಳಿಯುತ್ತದೆ.)

ಉದಾ:- ವೇಪಥುಃ (ಕಂಪನ) ಟು ವೇಪೃಕಂಪನೇ ಎಂಬಲ್ಲಿ ವೇಪ ಧಾತುವಿನ ನಂತರ ಪ್ರಕೃತ ಸೂತ್ರದಿಂದ ಅಥುಚ್ (ಅಥು) ಪ್ರತ್ಯಯ ಬಂದು ವೇಪ್+ಅಥು ಎಂದಿರುತ್ತದೆ. ಇದನ್ನು ಸುಬಂತ ಮಾಡಿದಾಗ ವೇಪಥುಃ ಎಂದು ರೂಪವಾಗುತ್ತದೆ.

**(ನಙ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ- 862 - ಯಜ-ಯಾಚ್- ಯತ-ವಿಚ್ಛ-**
**ಪ್ರಚ್ಛ-ರಕ್ಷೋಃ ನಙ್ (3-3-90)**

ವೃತ್ತಿ:- ಯಜ್ಞಃ, ಯಾಚ್ಞಾ, ಯತ್, ವಿಶ್ನಃ, ಪ್ರಶ್ನಃ, ರಕ್ಷ್ಣಃ।

ಪ.ಚ್ಛೇ.:- ಯಜ-ಯಾಚ-ಯತ-ವಿಚ್ಛ-ಪ್ರಚ್ಛ-ರಕ್ಷಃ,ನಙ್।

ಅ.ವೃ:- ಭಾವೇ ಎಂಬ ಸೂತ್ರ ಹಾಗೂ ಅಕರ್ತರಿಚ ಕಾರಕೇ ಸಂಜ್ಞಾಯಾಮ್ (ಸಂಜ್ಞಾಯಾಮ್ ಎಂಬ ಪದವನ್ನು ಬಿಟ್ಟು ಉಳಿದ ಪದಗಳು) ಎಂಬವು ಅನುತ್ತವಾಗುತ್ತವೆ, ಧಾತೋಃ, ಪ್ರತ್ಯಯ, ಪರಶ್ಚ ಎಂಬವು ಅಧಿಕಾರ ಸೂತ್ರಗಳು.

ಅರ್ಥ:- ಭಾವಾರ್ಥದಲ್ಲಿ ಹಾಗೂ ಕರ್ತೃಭಿನ್ನ ಕಾರಕಾರ್ಥದಲ್ಲೂ ಯಜ್ ಯಾಚ್, ಯತ್, ವಿಚ್ಛ್, ಪ್ರಚ್ಛ್ ಮತ್ತು ರಕ್ಷ ಧಾತುಗಳ ಮೇಲೆ ನಙ್ ಪ್ರತ್ಯಯವು ಬರುತ್ತದೆ. ನಙ್‌ನಲ್ಲಿ ನ್ ಕಾರ ಮಾತ್ರ ಉಳಿಯುತ್ತದೆ. (ಈ ಪ್ರತ್ಯಯಾಂತ ಶಬ್ದಗಳು ಪುಲ್ಲಿಂಗಳಾಗುತ್ತವೆ).

ಉದಾ:- ಯಜ್ಞಃ -ಯಜ್ಞ ಮಾಡುವುದು ಯಜ ದೇವಪೂಜಾ ಸಂಗತಿಕರಣ ದಾನೇಷು ಎಂಬ ಅರ್ಥಗಳಲ್ಲಿ ಈ ಧಾತುವು ಇರುತ್ತದೆ. ಯಜ್ ಧಾತುವಿನ ನಂತರ ಪ್ರಕೃತ ಸೂತ್ರದಿಂದ ನಙ್ (ನ) ಪ್ರತ್ಯಯವು ಬಂದು ಯಜ್+ನ ಎಂದಿರುತ್ತದೆ. ಶ್ಚುತ್ವ ಸಂಧಿಯಿಂದ ಚುತ್ವ ಬಂದು ಯಜ್+ಞ್ ಎಂದಿರುತ್ತದೆ. ಈ ಎರಡು ಅಕ್ಷರಗಳು ಸೇರಿ ಜ್ಞ ಎಂದಾಗುತ್ತದೆ. ಇದನ್ನು ಸುಬಂತ ಮಾಡಿದಾಗ ಯಜ್ಞಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ: - ಯಾಚ್ಞಾ- ಟುಯಾಚೃ ಯಾಚ್ಞಾಯಾಮ್ (ಯಾಚಿಸುವುದು)ಯಾಚ್ ಧಾತುವಿನ ನಂತರ ಭಾವಾರ್ಥದಲ್ಲಿ ನಙ್ ಪ್ರತ್ಯಯವು ಬಂದು ಚುತ್ವ ಮಾಡಿದಾಗ ಯಾಚ್+ಞ್ ಎಂದಿರುತ್ತದೆ. ಸ್ತ್ರೀತ್ವ ವಿವಕ್ಷೆಯಲ್ಲಿ "ಅಜಾದ್ಯತಷ್ಟಾಪ್" ಎಂಬ ಸೂತ್ರದಿಂದ ಯಾಚ್ ಞ್ ಎಂದಿರುತ್ತದೆ. ಆದ್ದರಿಂದ ಇದಕ್ಕೆ ಸುಪ್ ಪ್ರತ್ಯಯವನ್ನು ಸೇರಿಸಿದಾಗ ಯಾಚ್ಞಾ ಎಂದು ರೂಪವು ಸಿದ್ದಿಸುತ್ತದೆ.

ಉದಾ: ಯತ್ನಃ:- (ಪ್ರಯತ್ನ) (ಯತಿ-ಪ್ರಯತ್ನೇ) ಯತ್ ಧಾತುವಿನ ನಂತರ ಪ್ರಕೃತ ಸೂತ್ರದಿಂದ ನಙ್ (ನ) ಪ್ರತ್ಯಯ ಬಂದು ಯತ್+ನ=ಯತ್ನ ಎಂದಾಗಿ ಅದನ್ನು ಸುಬಂತ ಮಾಡಿದಾಗ ಯತ್ನಃ ಎಂದು ರೂಪವಾಗುತ್ತದೆ.

ಉದಾ: – ವಿಶ್ನಃ–ವಿಚ್ಛ್ ಧಾತುವಿನ ನಂತರ ಪ್ರಕೃತ ಸೂತ್ರದಿಂದ ನಙ್(ನ) ಪ್ರತ್ಯಯವನ್ನು ಸೇರಿಸಿದಾಗ ವಿಚ್ಛ್+ನ ಎಂದಿರುತ್ತದೆ. "ಚ್ಛ್ವೋಃಶೂಡನುನಾಸಿಕೇ ಚ" ಎಂಬ ಸೂತ್ರದಿಂದ ಶ ಕಾರಾದೇಶ ಬಂದು ವಿಶ್+ನ ಎಂದಾಗಿ ಇಲ್ಲಿ ಶಾತ್ ಎಂಬ ಸೂತ್ರದಿಂದ ಶ್ಚುತ್ವ ಬಾರದೇ ವಿಶ್ನ ಎಂದಿರುತ್ತದೆ. ಸುಬಂತ ಮಾಡಿದಾಗ ವಿಶ್ನಃ ಎಂದು ರೂಪಸಿದ್ದವಾಗುತ್ತದೆ.

ಉದಾ: ಪ್ರಶ್ನಃ– ಪ್ರಚ್ಛ್–ಜ್ಞೀಪ್ಸಾಯಾಮ್ (ಪ್ರಶ್ನೆಮಾಡುವದು) ಪ್ರಚ್ಛ್ ಧಾತುವಿನ ನಂತರ ಪ್ರಕೃತ ಸೂತ್ರದಿಂದ ನಙ್ (ನ) ಪ್ರತ್ಯಯವು ಬಂದು ಪ್ರಚ್ಛ್+ನ ಎಂದಾಗಿರುತ್ತದೆ. "ಚ್ಛ್ವೋಃಶೂಡನುನಾಸಿಕೇ ಚ" ಎಂಬ ಸೂತ್ರದಿಂದ ಶ–ಕಾರ ಆದೇಶ ಬಂದು ಪ್ರಶ್+ನ= ಪ್ರಶ್ನ ಎಂದಾಗಿ ಸುಬಂತ ಮಾಡಿದಾಗ ಪ್ರಶ್ನಃ ಎಂದು ರೂಪವು ಸಿದ್ಧಿಸುತ್ತದೆ.

ಉದಾ: – ರಕ್ಷ್ಣಃ–ರಕ್ಷ ಪಾಲನೇ (ರಕ್ಷಿಸುವದು ಎಂದರ್ಥ) ರಕ್ಷ ಧಾತುವಿನ ನಂತರ ಪ್ರಕೃತ ಸೂತ್ರದಿಂದ ನಙ್ (ನ) ಪ್ರತ್ಯಯ ಬಂದ ನಂತರ ರಕ್ಷ್+ನ "ರಷಾಭ್ಯಾಂ ನೋಣಃ ಸಮಾನಪದೇ" ಎಂಬ ಸೂತ್ರದಿಂದ ನ ಕಾರಕ್ಕೆ ಣತ್ವ ಬಂದು ರಕ್ಷ್ಣ ಎಂದಾಗಿ ಸುಬಂತ ಮಾಡಿದ ಮೇಲೆ ರಕ್ಷ್ಣಃ ಎಂದು ರೂಪವು ಸಿದ್ಧವಾಗುತ್ತದೆ.

**(ನನ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ– 863– ಸ್ವಪೋನನ್** ।(3–3–91)

ವೃತ್ತಿ:– ಸ್ವಪ್ನಃ।

ಪ.ಚ್ಛೇ:– ಸ್ವಪಃ, ನನ್।

ಅ.ವ್ಯ:– "ಭಾವೇ" ಎಂಬ ಸೂತ್ರ ಮತ್ತು "ಅಕರ್ತರಿ ಚ ಕಾರಕೇ ಸಂಜ್ಞಾಯಾಮ್" ಸೂತ್ರದಲ್ಲಿ (ಸಂಜ್ಞಾಯಾಮ್ ಎಂಬ ಪದ ಬಿಟ್ಟು) ಉಳಿದ ಪದಗಳು ಅನುವೃತ್ತವಾಗಿರುತ್ತವೆ. ಧಾತೋಃ, ಪ್ರತ್ಯಯಃ, ಪರಶ್ಚ ಎಂಬವು ಅಧಿಕಾರ ಸೂತ್ರಗಳು.

ಅರ್ಥ:– ಭಾವ ಮತ್ತು ಕರ್ತೃಭಿನ್ನ ಕಾರಕಾರ್ಥದಲ್ಲಿ ಸ್ವಪ್ ಧಾತುವಿನ ಮೇಲೆ ಪುಲ್ಲಿಂಗದಲ್ಲೇ ನನ್ ಪ್ರತ್ಯಯವು ಬರುತ್ತದೆ.

ಉದಾ:–ಸ್ವಪ್ನಃ:– (ಞಿ– ಸ್ವಪ್ ಶಯೇ ಮಲಗುವುದು ಎಂದು ಅರ್ಥ) ಸ್ವಪ್ ಧಾತುವಿನ ನಂತರ ಪ್ರಕೃತ ಸೂತ್ರದಿಂದ ನನ್ (ನ) ಪ್ರತ್ಯಯ ಬಂದು ಸ್ವಪ್ನ ಎಂದಾಗಿ ಸುಬಂತ ಮಾಡಿದ ಮೇಲೆ ಸ್ವಪ್ನಃ ಎಂದು ರೂಪ ಸಿದ್ಧವಾಗುತ್ತದೆ.

**(ಕಿ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ– 864 – ಉಪಸರ್ಗೇ ಘೋಃ ಕಿಃ (3–3–02)**

ವೃತ್ತಿ:– ಪ್ರಧಿಃ, ಉಪಧಿಃ ।

ಅ.ವ್ಯ:– ಭಾವೇ ಮತ್ತು ಅಕರ್ತರಿ ಚ ಕಾರಕೇ ಎಂಬವು ಅನುವೃತ್ತವಾಗುತ್ತವೆ.

ಅರ್ಥ:– ಉಪಸರ್ಗವು ಉಪಪದವಾಗಿದ್ದಾಗ ದಾ ಮತ್ತು ಧಾ ಧಾತುಗಳ ಮೇಲೆ ಭಾವಾರ್ಥದಲ್ಲಿ ಮತ್ತು ಕರ್ತೃಭಿನ್ನ ಕಾರಕಾರ್ಥದಲ್ಲಿ ಕಿ (ಇ) ಪ್ರತ್ಯಯವು

ಬರುತ್ತದೆ. "ದಾಧಾಘ್ವದಾಪ್" ಎಂಬ ಸೂತ್ರದಿಂದ ಎರಡು ಧಾತುಗಳಿಗೆ ಘು-ಸಂಜ್ಞೆ ಬರುತ್ತದೆ. ಕಿ ಪ್ರತ್ಯಯದಲ್ಲಿ ಇ ಮಾತ್ರ ಉಳಿಯುತ್ತದೆ. ಇದು ಕಿತ್ತಾದ ಪ್ರತ್ಯಯವಾದ್ದರಿಂದ "ಆತೋಲೋಪಇಟಿ ಚ" ಎಂಬ ಸೂತ್ರದಿಂದ ಧಾತುವಿನ ಆಕಾರಕ್ಕೆ ಲೋಪಬರುತ್ತದೆ.

ಉದಾ: - ಪ್ರಧಿಃ ಮತ್ತು ಉಪಧಿಃ (ಡಾಂಭಿಕ):-ಪ್ರಧಿಃ- ಪ್ರಧೀಯನ್ತೇ ಕಾಷ್ಠಾನಿ ಅಸ್ಮಿನ್ ಇತಿ ಎಂಬುದು ಲೌಕಿಕ ವಿಗ್ರಹ ವಾಕ್ಯ. ಉಪಾಧೀಯನ್ತೇ ಅಸ್ಮಿನ್ ಇತಿ ಉಪಧಿಃ ಎಂಬುದು ಲೌಕಿಕ ವಿಗ್ರಹ ವಾಕ್ಯ. ಪ್ರ ಮತ್ತು ಉಪಸರ್ಗಗಳನ್ನು ಸೇರಿಸಿದ ಮೇಲೆ ಪ್ರಕೃತ ಸೂತ್ರದಿಂದ ಕಿ (ಇ) ಪ್ರತ್ಯಯವು ಬರುತ್ತದೆ. ಪ್ರಧಾ+ಇ ಮತ್ತು ಉಪಧಾ+ಇ ಎಂದಿದ್ದಾಗ ಈ ಕಿತ್ತಾಗಿರುವುದರಿಂದ "ಆತೋಲೋಪಇಟಿ ಚ" ಎಂಬ ಸೂತ್ರದಿಂದ ಆಕಾರಕ್ಕೆ ಲೋಪವು ಬರುತ್ತದೆ. ಪ್ರ+ಧ್+ಇ ಮತ್ತು ಉಪ+ಧ್+ಇ ಎಂದಿದ್ದಾಗ ಅದನ್ನು ಸುಬಂತ ಮಾಡಿದಾಗ ಪ್ರಧಿಃ ಮತ್ತು ಉಪಧಿಃ ಎಂದು ಪುಲ್ಲಿಂಗಳಾಗುತ್ತವೆ. ಕಿ ಪ್ರತ್ಯಯಾಂತ ಶಬ್ದಗಳೆಲ್ಲ ಪುಲ್ಲಿಂಗಗಳಾಗಿಯೇ ಇರುತ್ತವೆ.

**(ಕ್ತಿನ್ ಪ್ರತ್ಯಯ ವಿಧಿಸುವ ಸೂತ್ರ)**

**ಸೂತ್ರ- 865 - ಸ್ತ್ರಿಯಾಮ್ ಕ್ತಿನ್ ।(3-3-94)**

ವೃತ್ತಿ:- ಸ್ತ್ರೀಲಿಂಗೇ ಭಾವೇ ಕ್ತಿನ್ ಸ್ಯಾತ್ । ಕೃತಿಃ ಸ್ತುತಿಃ ।

ಅ.ವೃ:- ಭಾವೆ ಎಂಬ ಸೂತ್ರ ಮತ್ತು "ಅಕರ್ತರಿ ಚ ಕಾರಕೇ" ಎಂಬ ಪದಗಳು ಅನುವೃತ್ತವಾಗುತ್ತವೆ. ಧಾತೋಃ, ಪರಸ್ಯ, ಪ್ರತ್ಯಯಃ ಎಂಬವು ಅಧಿಕಾರ ಸೂತ್ರಗಳು.

ಅರ್ಥ:- ಸ್ತ್ರೀತ್ವ ವಿವಕ್ಷೆಯಲ್ಲಿ ಭಾವಾರ್ಥದಲ್ಲಿ ಧಾತುವಿನ ಪರದಲ್ಲಿ ಕ್ತಿನ್ ಪ್ರತ್ಯಯ ಬರುತ್ತದೆ. ಇದರಲ್ಲಿ ತಿ ಮಾತ್ರ ಉಳಿಯುತ್ತದೆ.

ಉದಾ: - ಕೃತಿಃ (ಮಾಡುವುದು) ಕೃ-ಧಾತುವಿನ ಮೆಲೆ ಭಾವಾರ್ಥದಲ್ಲಿ ಪ್ರಕೃತ ಸೂತ್ರದಿಂದ ಕ್ತಿನ್ (ತಿ) ಪ್ರತ್ಯಯ ಬಂದು ಕೃತಿ ಎಂದಿದ್ದಾಗ ಸ್ತ್ರೀಲಿಂಗದಲ್ಲಿ ಈ ಪ್ರಾತಿಪದಿಕಕ್ಕೆ ಸುಪ್ ಪ್ರತ್ಯಯ ಸೇರಿದಾಗ ಕೃತಿಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ: - ಸ್ತುತಿಃ ಷ್ಟುಞ್ (ಸೋತ್ರ ಮಾಡುವುದು) (ಸ್ತುತೌ) ಎಂಬರ್ಥದಲ್ಲಿ "ಧಾತ್ವಾದೇಃಷಸ್ಸಃ" ಎಂಬುದರಿಂದ ಸ ಕಾರ ಬಂದು ಸ್ತು ಎಂದಾಗುತ್ತದೆ. ಇದಕ್ಕೆ ಕ್ತಿನ್ (ತಿ) ಸೇರಿಸಿ ಸುಬಂತ ಮಾಡಿದಾಗ ಸ್ತುತಿಃ ಎಂದು ರೂಪವು ಸಿದ್ಧವಾಗುತ್ತದೆ.

1ನೇ ವಾರ್ತಿಕ: ೠಲ್ವಾದಿಭ್ಯಃ ಕ್ತಿನ್ ನಿಷ್ಠಾವದ್ ವಾಚ್ಯಃ

ೠ-ವರ್ಣಾಂತ ಧಾತು ಮತ್ತು ಲೂದನ್ನು ಆದಿಯಲ್ಲಿ ಪಠಿತ ಗಣಕ್ಕೆ ಸೇರಿದ ಧಾತುವಿನ ಮೇಲೆ ಕ್ತಿನ್ ಪ್ರತ್ಯಯ ಸೇರಿಸಿದಾಗ ನಿಷ್ಠಾ ಸಂಜ್ಞೆಯಂತೆ ವ್ಯವಹರಿಸಲಾಗುವುದು. ಹೇಗೆ ನಿಷ್ಠಾ ಪ್ರತ್ಯಯದಲ್ಲಿ ತ ಕ್ಕೆ ಬದಲಾಗಿ ನ ಕಾರ ಸೇರಿಸಲಾಗುವದೋ ಹಾಗೆಯೇ ಕ್ತಿನ್‌ನಲ್ಲಿರುವ ತ ಕಾರಕ್ಕೆ ನ ಕಾರವನ್ನು ಸೇರಿಸಲಾಗುವುದು. ಲ್ವಾದಿ ಧಾತುಗಳು ಕೆಳಗಿನಂತಿವೆ.

ಲೂಞ್, ಸ್ತೃಞ್, ಕೃಞ್, ವೃಞ್, ಧೃಞ್, ಶೄ, ಪೄ, ವೄ, ಭೄ, ಮೄ, ದೄ, ಜೄ, ಝೄ, ಧೄ, ನೄ, ಕೄ, ೠ, ಗೄ, ಜ್ಯಾ, ರೀ, ಬ್ಲೀ ಮತ್ತು ಪ್ಲೀ

ಉದಾ: ಕೀರ್ಣಿಃ, ಕೃ–ವಿಕ್ಷೇಪೇ (ಎರಚುವದು) "ಋತ ಇದ್ಧಾತೋಃ" ಎಂಬ ಸೂತ್ರದಿಂದ ಇ ಕಾರವು ಪರವಾಗಿ ಬಂದು (ಇರ್) ಕಿರ್+ತಿ ಎಂದಿರುತ್ತದೆ. "ಹಲಿ ಚ" ಎಂಬ ಸೂತ್ರದಿಂದ ದೀರ್ಘ ಬಂದು ಕೀರ್+ತಿ ಎಂದಿರುತ್ತದೆ. ಪ್ರಕೃತ ವಾರ್ತಿಕದಿಂದ ತ್ ಕಾರಕ್ಕೆ ನ್–ಕಾರ ಬಂದು ಅದಕ್ಕೆ "ಅಟ್ ಕುಪ್ವಾಙ್ ನುಮ್ ವ್ಯವಾಯೇಽಪಿ" ಎಂಬ ಸೂತ್ರದಿಂದ ನ್ ಕಾರಕ್ಕೆ ಣ್ ಕಾರ ಬಂದು ಕೀರ್ಣಿಃ ಎಂದು ಸುಬಂತ ರೂಪ ಸಿದ್ಧವಾಗುತ್ತದೆ.

ಉದಾ: ಲೂನಿಃ :–(ಕತ್ತರಿಸುವದು) ಲೂಞ್ ಛೇದನೆ ಎಂದು ಧಾತು. ಲು ಧಾತುವಿನ ನಂತರ ಕ್ತಿನ್ ಪ್ರತ್ಯಯ ಸೇರಿಸಿದಾಗ (ತಿ) ಲೂತಿ ಎಂದಿರುತ್ತದೆ. ಪ್ರಕೃತ ವಾರ್ತಿಕದಿಂದ ನಿಷ್ಠಾವದ್ಭಾವ ಮಾಡಿದಾಗ ಲ್ವಾದಿಭ್ಯಃ ಎಂಬುದರಿಂದ ತ ಕಾರಕ್ಕೆ ನತ್ವ ಮಾಡಿದಾಗ ಲೂನಿ ಎಂದಾಗಿ ಸುಬಂತ ಮಾಡಿದಾಗ ಲೂನಿಃ ಎಂದಾಗುತ್ತದೆ.

ಉದಾ:–ಧೂನಿಃ :– ಧೂಞ್–ಕಂಪನೇ (ಕಂಪಿಸುವದು). ಧೂ ಧಾತುವಿನ ಮೇಲೆ ಕ್ತಿನ್ ಪ್ರತ್ಯಯ ಸೇರಿಸಿದಾಗ ಧೂತಿ ಎಂದಾಗುತ್ತದೆ. ಪ್ರಕೃತ ವಾರ್ತಿಕದಿಂದ ತ ಕಾರಕ್ಕೆ ನತ್ವ ಬಂದು ಧೂನಿ ಎಂದಿದ್ದಾಗ ಸುಬಂತ ಮಾಡಿದ ಮೇಲೆ ಧೂನಿಃ ಎಂದು ರೂಪ ಸಿದ್ಧವಾಗುತ್ತದೆ.

2ನೇ ವಾರ್ತಿಕ: ಸಂಪದಾದಿಭ್ಯ ಕ್ವಿಪ್ ।

3ನೇ ವಾರ್ತಿಕ: ಕ್ತಿನ್ ಅಪಿ ಇಷ್ಯತೇ।

ಸಂಪತ್ ಮೊದಲಾದ ಶಬ್ದಗಳ ಮೇಲೆ ಕ್ವಿಪ್ ಅಥವಾ ಕ್ತಿನ್ ಪ್ರತ್ಯಯಗಳು ಬರುತ್ತದೆ. ಕ್ವಿಪ್ ಬಂದರೆ ಸರ್ವಾಪಹಾರ ಲೋಪ ಬರುತ್ತದೆ. ಆಗ ಸಂಪತ್ ಎಂದು ರೂಪವು ಸಿದ್ಧವಾಗುತ್ತದೆ. ಸುಬಂತ ಮಾಡಿದ ಮೇಲೂ ಸಂಪತ್ ಎಂದೇ ಉಳಿಯುತ್ತದೆ. "ವಾವಸಾನೇ" ಎಂಬ ಸೂತ್ರದಿಂದ ವೈಕಲ್ಪಿಕ ಚರ್ತ್ವ ಬಂದು ಸಂಪತ್, ಸಂಪದ್ ಎಂದು ಎರಡು ರೂಪಗಳು ಸಿದ್ಧವಾಗುತ್ತವೆ. ಕ್ತಿನ್ ಪ್ರತ್ಯಯವನ್ನು ಸೇರಿಸಿದಾಗ ಸಂಪದ್+ತಿ ಎಂದಾದಾಗ ದ್ ಕಾರಕ್ಕೆ "ಖರಿ ಚ" ಎಂಬ ಸೂತ್ರದಿಂದ ತ್ ಕಾರ ಬಂದು ಸಂಪತ್ತಿ ಎಂದಾಗುತ್ತದೆ. ಸುಬಂತ ಮಾಡಿದ ಮೇಲೆ ಸಂಪತ್ತಿಃ ಎಂದಾಗುತ್ತದೆ. ಇಲ್ಲಿ ಸಂ ಉಪಸರ್ಗಪೂರ್ವಕ ಪದ್ ಧಾತು ಇದೆ ಎಂದು ತಿಳಿಯಬೇಕು.

ಉದಾ: – ವಿಪತ್ತಿಃ ಇಲ್ಲಿ ವಿ–ಉಪಸರ್ಗವಾಗಿದೆ. ಉಳಿದ ಪ್ರಕ್ರಿಯೆ ಹಿಂದಿನಂತೆ ಇರುವುದರಿಂದ ವಿಪತ್ತಿಃ ಎಂದು ರೂಪಸಿದ್ಧವಾಗುತ್ತದೆ.

ಉದಾ: – ಆಪತ್ತಿಃ ಇಲ್ಲಿ ಆ ಎಂಬುದು ಉಪಸರ್ಗವಾಗಿದೆ ಉಳಿದ ಪಕ್ರಿಯೆ ಹಿಂದಿನಂತೆ ಇದ್ದು ಆಪತ್ತಿಃ ಎಂದು ರೂಪಸಿದ್ಧವಾಗುತ್ತದೆ.

**(ಊತಿ ಮೊದಲಾದವುಗಳನ್ನು ನಿಪಾತಗಳಾಗಿ ವಿಧಿಸುವ ಸೂತ್ರ)**

**ಸೂತ್ರ– 866 – ಊತಿ–ಯೂತಿ–ಜೂತಿ–ಸಾತಿ–ಹೇತಿ ಕೀರ್ತಯಶ್ಚ ।(3–3–97)**

ವೃತ್ತಿ:–ಏತೇ ನಿಪಾತ್ಯನ್ತೇ.

ಪ.ಚ್ಛೇ.:– ಊತಿ–ಯೂತಿ–ಜ್ಯೋತಿ–ಸಾತಿ–ಹೇತಿ–ಕೀರ್ತಯಃ, ಚ।

ಅ.ವೃ:- ಮಂತ್ರೇ ವೃಷೇಷ-ಪಚ-ಮನ-ವಿದ-ಭೂ-ವೀರಾ ಉದಾತ್ತಃ ಎಂಬ ಸೂತ್ರದಿಂದ ಉದಾತ್ತಃ ಎಂಬ ಪದವು ಮತ್ತು "ಭಾವೇ" ಹಾಗೂ "ಅಕರ್ತರಿ ಕಾರಕೇ" ಎಂಬ ಪದಗಳು ಅನುವೃತ್ತವಾಗುತ್ತವೆ. ಸ್ತ್ರಿಯಾಂ ಕ್ತಿನ್, ಧಾತೋಃ, ಪ್ರತ್ಯಯಃ ಮತ್ತು ಪರಶ್ಚ ಎಂಬವು ಅಧಿಕಾರ ಸೂತ್ರಗಳು.

ಅರ್ಥ:- ಸ್ತ್ರೀತ್ವ ವಿವಕ್ಷೆಯಿಂದ ಕೂಡಿದ ಭಾವ ಮತ್ತು ಕರ್ತೃಭಿನ್ನ ಕಾರಕಾರ್ಥದಲ್ಲಿ ಊತಿ, ಯೂತಿ, ಜೂತಿ, ಸಾತಿ, ಹೇತಿ ಮತ್ತು ಕೀರ್ತಿ ಇವು ಕ್ತಿನ್ ಪ್ರತ್ಯಯಾಂತ ಶಬ್ದಗಳಾಗಿ ನಿಪಾತಗಳಾಗುತ್ತವೆ. ಮತ್ತು ಇವು ಉದಾತ್ತವಾಗಿವೆ.

ಉದಾ: - ಊತಿಃ ರಕ್ಷಣೇ, ಕ್ರೀಡಾ, ಲಿಲಾ ಇತ್ಯಾದಿ ಅರ್ಥಗಳಿರುತ್ತವೆ. ಅವ ರಕ್ಷಣೇ ಎಂಬುದು ಧಾತು. ಅವ-ಶಬ್ದದ ಮೇಲೆ ಸ್ತ್ರೀತ್ವವಿವಕ್ಷೆಯಲ್ಲಿ ಭಾವ ಅಥವಾ ಕರ್ತೃಭಿನ್ನ ಕಾರಕಾರ್ಥದಲ್ಲಿ ಕ್ತಿನ್ ಪ್ರತ್ಯಯವು ಬರುತ್ತದೆ. ಆಗ "ಜ್ವರ-ತ್ವರ-ಉಪಧಾಯಾಶ್ಚ" ಎಂಬ ಸೂತ್ರದಿಂದ ಉಪಧಾಸಹಿತ ವಕಾರಕ್ಕೆ (ಅವ ಎಂಬುದಕ್ಕೆ) ಊಠ್ ಆದೇಶವು ಬಂದು, ಊತಿ ಎಂದಾಗುತ್ತದೆ. ನಿಪಾತನ ಆಗಿರುವುದರಿಂದ ಊತಿ ಶಬ್ದವನ್ನು ಸುಬಂತ ಮಾಡಿದಾಗ ಊತಿಃ ಎಂದು ರೂಪ ಸಿದ್ಧವಾಗುತ್ತದೆ. ಇದು ಸ್ತ್ರೀಲಿಂಗದಲ್ಲಿಯೇ ಇರುತ್ತದೆ.

ಉದಾ: - ಯೂತಿಃ (ಕೂಡಿಸುವದು) ಮತ್ತು ಜೂತಿ (ವೇಗವಾಗಿ ಹೊಗುವುದು) ಇವು ನಿಪಾತನಗಳಾಗಿವೆ. ಮತ್ತು ಅಂತೋದಾತ್ತಗಳಾಗಿವೆ. ಈ ಪ್ರಾತಿಪದಿಕಗಳನ್ನು ಸುಬಂತ ಮಾಡಿದಾಗ ಯೂತಿಃ ಜೂತಿಃ ಎಂಬ ರೂಪಗಳು ಸ್ತ್ರೀಲಿಂಗ ಶಬ್ದಗಳಾಗಿವೆ.

ಉದಾ:-ಸಾತಿಃ:-ಷೋ-ಅಂತ ಕರ್ಮಣಿ ಎಂಬುದು ಧಾತು "ಧಾತ್ವಾದೇಃ ಷಃಸಃ" ಎಂಬ ಸೂತ್ರದಿಂದ ಷ ಕಾರಕ್ಕೆ ಸ ಕಾರ ಬಂದು "ಆದೇಚ ಉಪದೇಶೇಶಿತಿ" ಎಂಬ ಸೂತ್ರದಿಂದ ಆತ್ವ ಬಂದು ಸಾ ಎಂದಿರುತ್ತದೆ. ಹಿಂದಿನಂತೆ ಕ್ತಿನ್ ಪ್ರತ್ಯಯವನ್ನು (ತಿ) ಸೇರಿಸಿದಾಗ ಸಾತಿ ಎಂದು ನಿಪಾತನವಾಗುತ್ತದೆ. ಸುಬಂತವಾದಾಗ ಸಾತಿಃ ಎಂದು ರೂಪವಾಗುತ್ತದೆ.

ಉದಾ:-ಹೇತಿಃ:-(ಅಸ್ತ್ರ, ಅಗ್ನಿಜ್ವಾಲ ಮತ್ತು ಸೂರ್ಯಕಿರಣ ಎಂದು ಅರ್ಥಗಳು), ಹನ ಹಿಂಸಾಗತ್ಯೋಃ ಎಂಬುದು ಧಾತು. ಹನ ಧಾತುವಿಗೆ ಹಿಂದಿನಂತೆ ಕ್ತಿನ್ ಪ್ರತ್ಯಯವನ್ನು ಸೇರಿಸಿದಾಗ ನ ಕಾರ ಲೋಪವಾಗಿ ಹತಿ ಎಂದಾಗಬೇಕಿತ್ತು ಆದರೆ ನಿಪಾತನದಿಂದ ಹ ಕಾರ ಹೇಕಾರವಾಗಿ ಹೇತಿ ಎಂದು ರೂಪವಾಗುತ್ತದೆ.ಇದನ್ನು ಸುಬಂತ ಮಾಡಿದಾಗ ಹೇತಿಃ ಎಂದು ರೂಪವಾಗುತ್ತದೆ.

ಉದಾ:-ಕೀರ್ತಿಃ:-(ಯಶಸ್ಸು) ಕೃತ ಸಂಶಬ್ದನೇ ಎಂದು ಚುರಾದಿಗಣ ಪಠಿತ ಧಾತು. ಕೃತ್ ಧಾತುವಿನ ಮೇಲೆ ಣಿಚ್ ಪ್ರತ್ಯಯ ಸೆರಿಸಿದಾಗ "ಣ್ಯಾಸ-ಸನ್ಥೋಯುಚ್" ಎಂಬ ಸೂತ್ರದಿಂದ ಯುಚ್ ಎಂದಾಗಬೇಕಾಗಿತ್ತು ಆದರೆ ಪ್ರಕೃತ ಸೂತ್ರದ ನಿಪಾತನದಿಂದ ಕ್ತಿನ್ ಪ್ರತ್ಯಯವೇ ಬಂದು "ಣೇರನಿಟಿ" ಎಂಬುದರಿಂದ ಣಿಗೆ ಲೋಪಬಂದು ಉಪಧೆಯಾದ ಋ ಕಾರಕ್ಕೆ ಇತ್ವ ರಪರವಾಗಿ ಬಂದು "ಹಲಿಚ" ಎಂಬ ಸೂತ್ರದಿಂದ ಇ ಕಾರಕ್ಕೆ ದೀರ್ಘ ಬಂದು ಕೀರ್ತಿ ಎಂದಾಗಿ ಸುಬಂತ

ಮಾಡಿದಾಗ ಕೀರ್ತಿಃ ಎಂದು ರೂಪ ಸಿದ್ಧವಾಗುತ್ತದೆ.

**(ಊಠ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ- 867 - ಜ್ವರ-ತ್ವರ-ಸ್ರಿವ್ಯ-ವಿಮ-ವಾಮುಪಧಾಯಾಶ್ಚ (6-4-20)**

ವೃತ್ತಿ:- ಏಷಾಂ ಉಪಧಾ-ವಕಾರಯೋಃ ಊಠ್ ಅನುನಾಸಿಕೇ ಕ್ವೌ ಝಲಾದೌ ಕಿಜಿತಿ। ಅತಃ ಕ್ವಿಪ್।ಜೂಃ।ತೂಃ। ಸ್ರೂಃ।ಊಃ।ಮೂಃ।

ಪ.ಚ್ಛೇ. :- ಜ್ವರ-ತ್ವರ-ಸ್ರಿವ್ಯ-ವಿಮ-ವಾಮ್, ಉಪಧಾಯಾಃ ಚ।

ಅ.ವೃ:-"ಚ್ಛ್ವೋಃಶೂಡನುನಾಸಿಕೇ ಚ"ಎಂಬ ಸೂತ್ರದಿಂದ ಶ್ ಎಂಬುದನ್ನು ಬಿಟ್ಟು ಉಳಿದ ಪದಗಳು ಅನುವೃತ್ತವಾಗುತ್ತವೆ. "ಅನುನಾಸಿಕಸ್ಯ ಕ್ವಿಝಲೋಃ ಕಿಜಿತಿ" ಎಂಬ ಸೂತ್ರದಿಂದ ಕ್ವಿಝಲೋಃ ಮತ್ತು ಕಿಜಿತಿ ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ:- ಜ್ವರ್, ತ್ವರ್, ಸ್ರಿವ್, ಅವ್ ಹಾಗೂ ಮವ್-ಈ ಧಾತುಗಳ ಉಪಧಾ ಮತ್ತು ವಕಾರಗಳ ಸ್ಥಾನದಲ್ಲಿ ಊಠ್ ಆದೇಶವು ಬರುತ್ತದೆ.- ಅನುನಾಸಿಕವು ಅಥವಾ ಕ್ವಿಪ್ ಪ್ರತ್ಯಯವು ಝಲಾದಿಗಳಾದ ಕಿತ್ ಜಿತ್ ಪ್ರತ್ಯಯಗಳು ಪರವಾದಾಗ, ಮೇಲೆ ಹೇಳಿದ ಧಾತುಗಳಿಗೆ ಯಾವ ಸೂತ್ರದಿಂದಲೂ ಕ್ವಿಪ್ ಪ್ರತ್ಯಯವು ವಿಧಿಸಲಾಗಿಲ್ಲ. ಆದರೆ ಕ್ವಿಪ್ ಪ್ರತ್ಯಯವು ಪರದಲ್ಲಿದ್ದಾಗ ಊಠ್ ಬರುತ್ತದೆಂದು ಈ ಸೂತ್ರವು ಹೇಳುತ್ತದೆ. ಆದ್ದರಿಂದ ಪ್ರಕೃತ ಸೂತ್ರದ ಪ್ರಭಾವದಿಂದ ಮೇಲೆ ಹೇಳಿದ ಧಾತುಗಳ ನಂತರ ಕ್ವಿಪ್ ಬರುತ್ತದೆಂದು ತಿಳಿಯುತ್ತದೆ.

ಉದಾ: - ಜೂಃ (ರೋಗ ಅಥವಾ ವ್ಯಾಧಿ) ಜ್ವರ್ ಧಾತುವಿನ ನಂತರ ಕ್ವಿಪ್ ಬಂದು ಅದರ ಸರ್ವಲೋಪವಾಗಿದೆ, ಪ್ರಕೃತ ಸೂತ್ರದಿಂದ ಉಪಧಾ ರೂಪವಾದ ಅ ಕಾರಕ್ಕೂ ಮತ್ತು ವ ಕಾರಕ್ಕೂ ಊಠ್ (ಊ)ಅದಕ್ಕೆ (ವ್+ಅ) ಆದೇಶವು ಬಂದು ಜ್+ಉ=ಜೂ ಎಂದಾಗಿ ನಂತರ ಜೂರ್ ಎಂಬ ರೇಫಾಂತ ಪ್ರಾತಿಪದಿಕವು ಉಂಟಾಗುತ್ತದೆ. ಅದಕ್ಕೆ ಸು ಸೇರಿಸಿದ ಮೇಲೆ ಹಲ್ಙ್ಯಾಭ್ಯೋ ಸೂತ್ರದಿಂದ ಲೋಪಬಂದು ರೇಫಕ್ಕೆ ವಿಸರ್ಗವು ಬಂದು ಜೂಃ ಎಂದಾಗುತ್ತದೆ. ಅನಂತರ ಇದನ್ನು ಜೂಃ, ಜುರೌ, ಜುರಃ ಎಂದು ನುಡಿಸಬೇಕು.

ಉದಾ :- ತೂಃ (ಶೀಘ್ರವಾಗಿ ಕೆಲಸಮಾಡುವವನು) ತ್ವರ್ ಧಾತುವಿನ ನಂತರ ಕ್ವಿಪ್ ಪ್ರತ್ಯಯ ಬಂದ ಮೇಲೆ ಉಪಧೆಯಾದ ಅ ಕಾರ ಸಹಿತ ವ್ ಕಾರಕ್ಕೂ (ವ್+ಅ) ಊಠ್ ಆದೇಶವು ಬಂದು ತೂರ್ ಎಂಬ ರೇಫಾಂತ ಪ್ರಾತಿಪ್ರದಿಕವು ಸಿದ್ಧವಾಗುತ್ತದೆ. ಹಿಂದಿನಂತೆ ಪ್ರಕ್ರಿಯೆಯು ನಡೆದು ಇದನ್ನು ತೂಃ, ತುರೌ, ತುರಃ ಎಂದು ನುಡಿಸಬೇಕು.

ಉದಾ: - ಸ್ರೂಃ (ಚಲಿಸುವವನು) ಸ್ರಿವ್ ಧಾತುವಿನ ನಂತರ ಕ್ವಿಪ್ ಪ್ರತ್ಯಯ ಬಂದು ಇ ಕಾರಕ್ಕೂ ವ್ ಕಾರಕ್ಕೂ ಊಠ್ ಆದೇಶವು ಬಂದು ಹಿಂದಿನಂತೆ ಪ್ರಕ್ರಿಯೆಯು ನಡೆದು ಸ್ರೂಃ ಎಂದಾಗಿ ಅಜಾದಿ ಪ್ರತ್ಯಯಗಳು ಪರದಲ್ಲಿದ್ದಾಗ ಉವಙ್ ಆದೇಶವು ಬಂದು ಕ್ರಮವಾಗಿ ಸ್ರೂಃ, ಸ್ರುವೌ, ಸ್ರುವಃ ಎಂಬ ರೂಪಗಳನ್ನು ಹೊಂದುತ್ತವೆ.

ಉದಾ:-ಊಃ: - ರಕ್ಷಕನು ಅವ್ ಧತುವಿನ ನಂತರ ಕ್ವಿಪ್ ಬಂದು ಇಡೀ ಧಾತುವಿಗೆ ಊಠ್ ಆದೇಶ ಬಂಧು ಸುಬಂತವಾದ ಮೇಲೆ ಊಃ, ಉವೌ, ಉವಃ ಇತ್ಯಾದಿ ರೂಪಗಳಾಗುತ್ತವೆ.

ಉದಾ:- ಮೂಃ:- (ಬಂಧಿಸುವವನು) ಮವ್ ಧಾತುವಿನ ನಂತರ ಕ್ವಿಪ್ ಪ್ರತ್ಯಯ ಬಂದ ಮೇಲೆ ಆಕಾರ ವ್ ಕಾರಗಳಿಗೆ ಊಠ್ ಆದೇಶಬಂದು ಸುಬಂತಮಾಡಿದ ಮೇಲೆ ಮೂಃ, ಮುವೌ, ಮುವಃ ಎಂದು ರೂಪಗಳಾಗುತ್ತವೆ.

**(ಇಚ್ಛಾ ಶಬ್ದವನ್ನು ನಿಪಾತವಾಗಿ ವಿಧಿಸುವ ಸೂತ್ರ)**

**ಸೂತ್ರ- 868 - ಇಚ್ಛಾ ।(3-3-101)**

ವೃತ್ತಿ:- ಇಷೇಃ ನಿಪಾತೋಽಯಮ್।

ಅ.ವೃ:- ಸ್ತ್ರಿಯಾಮ್ ಕ್ತಿನ್ ಎಂಬ ಸೂತ್ರದಿಂದ ಸ್ತ್ರಿಯಾಮ್ ಎಂಬ ಪದವು ಅನುವೃತ್ತವಾಗುತ್ತದೆ. ಭಾವೇ ಎಂಬ ಸೂತ್ರವು ಅನುವೃತ್ತವಾಗುತ್ತದೆ.

ಅರ್ಥ:- ಇಷ್ (ಇಚ್ಛಾ) ಧಾತುವಿನ ನಂತರ ಭಾವಾರ್ಥದಲ್ಲಿ ಸ್ತ್ರೀವಿವಕ್ಷೆಯಲ್ಲಿ ಇಚ್ಛಾ ಶಬ್ದವನ್ನು ನಿಪಾತವಾಗಿ ವಿಧಿಸಲಾಗಿದೆ. ಧಾತುವಿನ ನಂತರ ಶ್ ಪ್ರತ್ಯಯವು ಬಂದು ಶ ಕಾರದ ಸ್ಥಾನದಲ್ಲಿ ಇಷುಗಮಿಯಮಾಮ್ಛಃ ಎಂಬ ಸೂತ್ರದಿಂದ ಛ್ ಕಾರವು ಆದೇಶವಾಗಿ ಬಂದು ತುಗಾಗಮ ಬಂದು ಅದರ ಕಾರ್ಯವಾದ ಮೇಲೆ ಇದು ನಿಪಾತವಾಗಿ ರೂಪವು ಸಿದ್ಧವಾಗಿದೆ. ಇಲ್ಲಿ ಈ ನಿಪಾತವು ಸ್ತ್ರೀಲಿಂಗದಲ್ಲಿ ಮಾಡಲಾಗಿದೆ. ಇದರಿಂದ ಇಚ್ಛಾ ಎಂಬ ಶಬ್ದವು ಸಿದ್ಧವಾಗಿದೆ. ಇದಕ್ಕೆ ಪ್ರಾತಿಪದಿಕ ಸಂಜ್ಞೆ ಬಂದ ಮೇಲೆ ಸುಬಂತ ಮಾಡಿದಾಗ ಹಲ್ಙ್ಯಾಭ್ಯೋ ಇಂದ ಸುಲೋಪವಾಗಿ ಇಚ್ಛಾ ಎಂಬ ಸ್ತ್ರೀಲಿಂಗ ಶಬ್ದವು ಸಿದ್ಧವಾಗಿದೆ.

**(ಅ-ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ- 869 - ಅ ಪ್ರತ್ಯಯಾತ್ । (3-3-102)**

ವೃತ್ತಿ:- ಪ್ರತ್ಯಯಾಂತೇಭ್ಯಃ ಧಾತುಭ್ಯಃ ಸ್ತ್ರಿಯಾಂ ಅಕಾರಃ ಪ್ರತ್ಯಯಃ ಸ್ಯಾತ್ ಚಿಕೀರ್ಷಾ ಪುತ್ರಕಾಮ್ಯಾ

ಪ.ಚ್ಛೇ. :- ಅಃ, ಪ್ರತ್ಯಯಾತ್।

ಅ.ನು:- ಸ್ತ್ರಿಯಾಮ್ ಕ್ತಿನ್ ಎಂಬ ಸೂತ್ರದಿಂದ ಸ್ತ್ರಿಯಾಮ್ ಎಂಬ ಪದವೂ ಭಾವೇ ಎಂಬ ಸೂತ್ರವು. ಅಕರ್ತರಿ ಚ ಕಾರಕೆ ಎಂಬ ಪದಗಳು ಅನುವೃತ್ತವಾಗುತ್ತವೆ. ಧಾತೋಃ, ಪ್ರತ್ಯಯಃ ಮತ್ತು ಪರಶ್ಚ ಎಂಬವು ಅಧಿಕಾರ ಸೂತ್ರಗಳು.

ಅರ್ಥ:- ಪ್ರತ್ಯಯಾಂತಗಳಾದ ಧಾತುವಿನ ನಂತರ ಸ್ತ್ರೀಲಿಂಗದಲ್ಲಿ ಭಾವಾರ್ಥದಲ್ಲಿ ಮತ್ತು ಕರ್ತೃಭಿನ್ನ ಕಾರಕಾರ್ಥದಲ್ಲಿ "ಅ"ಎಂಬ ಪ್ರತ್ಯಯ ಬರುತ್ತದೆ.

ಉದಾ:-ಚಿಕೀರ್ಷಾ:- (ಕರ್ತುಂ ಇಚ್ಛಾ- ಮಾಡುವ ಇಚ್ಛೆ) ಕೃ-ಧಾತುವಿನ ನಂತರ ಸನ್ ಪ್ರತ್ಯಯವನ್ನು ಸೇರಿಸಿದಾಗ ಚಿಕೀರ್ಷ ಎಂದಿರುತ್ತದೆ. ಪ್ರಕೃತ ಸೂತ್ರದಿಂದ

ಅ ಪ್ರತ್ಯಯ ಬಂದು ಚಿಕೀರ್ಷ+ಅ ಎಂದಿರುತ್ತದೆ. "ಅತೋಲೋಪಃ" ಎಂಬ ಸೂತ್ರದಿಂದ ಆರ್ಧಧಾತುಕ ಸಂಜ್ಞೆ ಬಂದಿರುವ ಚಿಕೀರ್ಷ ಎಂಬ ಷಕಾರೋತ್ತರ ಅಕಾರ ಲೋಪವಾಗಿ ಚಿಕೀರ್ಷ್+ಅ ಎಂದಿರುತ್ತದೆ. ಸ್ತ್ರೀತ್ವ ವಿವಕ್ಷೆಯಲ್ಲಿ "ಅಜಾದ್ಯಜಷ್ಟಾಪ್" ಸೂತ್ರದಿಂದ ಟಾಪ್(ಆ)ಬಂದು ಚಿಕೀರ್ಷಾ ಎಂದಾದ ಮೇಲೆ ಸುಬಂತ ಮಾಡಿದ ಮೇಲೆ ಚಿಕೀರ್ಷ+ಸು ಎಂದಿರುತ್ತದೆ. ಆಮೇಲೆ "ಹಲ್ಙ್ಯಾಭ್ಯೋ ದೀರ್ಘಾತ್ ಸುತಿಸ್ಯಪೃಕ್ತಂ ಹಲ್" ಸೂತ್ರದಿಂದ ಸ್ ಲೋಪವಾಗಿ ಚಿಕೀರ್ಷಾ ಎಂದು ರೂಪವಾಗುತ್ತದೆ.

ಉದಾ:-ಪುತ್ರಕಾಮ್ಯಾ (ಮಗನನ್ನು ಇಚ್ಛಿಸುವದು) ಪುತ್ರ ಶಬ್ದದ ಮೇಲೆ ಕಾಮ್ಯಚ್ ಪ್ರತ್ಯಯ ಸೇರಿದ ಮೇಲೆ "ಸನಾದ್ಯನ್ತಾಃ ಧಾತವಃ" ಎಂಬ ಸೂತ್ರದಿಂದ ಧಾತು ಸಂಜ್ಞೆ ಬಂದು ಪುತ್ರಕಾಮ್ಯ ಎಂಬುದು ಧಾತುವಾಗುತ್ತದೆ. ಈ ಪ್ರತ್ಯಯಾಂತ ಶಬ್ದದ ಮೇಲೆ ಪ್ರಕೃತ ಸೂತ್ರದಿಂದ "ಅ" ಪ್ರತ್ಯಯ ಬಂದು ಪುತ್ರಕಾಮ್ಯ+ಅ ಎಂದಿರುತ್ತದೆ. ಆರ್ಧಧಾತುಕ ಸಂಜ್ಞೆಯುಳ್ಳ ಅಕಾರಕ್ಕೆ "ಅತೋಲೋಪಃ" ಎಂಬ ಸೂತ್ರದಿಂದ ಪುತ್ರಕಾಮ್ಯದ ಕೊನೆಯ ಅಕಾರಕ್ಕೆ ಲೋಪಬಂದು ಪುತ್ರಕಾಮ್ಯ್+ಅ=ಪುತ್ರಕಾಮ್ಯ ಎಂದಗುತ್ತದೆ. ಸ್ತ್ರೀತ್ವವಿವಕ್ಷೆಯಲ್ಲಿ ಟಾಪ್ (ಆ) ಪ್ರತ್ಯಯ ಬಂದು ಅದನ್ನು ಸುಬಂತಮಾಡಿದ ಮೇಲೆ ಅಪೃಕ್ತವಾದ ಸ್‌ಗೆ ಲೋಪಬಂದು ಪುತ್ರಕಾಮ್ಯಾ ಎಂದು ರೂಪವು ಸಿದ್ಧವಾಗುತ್ತದೆ.

**(ಅ ಕಾರ ಪ್ರತ್ಯಯ ವಿಧಿಸುವ ಸೂತ್ರ)**

**ಸೂತ್ರ- 870- ಗುರೋಶ್ಚ ಹಲಃ।(3-3-103)**

ವೃತ್ತಿ:- ಗುರುಮತಃ ಹಲಂತಾತ್ ಸ್ತ್ರಿಯಾಮ್ "ಅ" ಪ್ರತ್ಯಯಃ ಸ್ಯಾತ್. ಈಹಾ।

ಪ.ಚ್ಛೇ. :-ಗುರೋಃ, ಚ್, ಹಲಃ।

ಅ.ವೃ:- ಅಃ ಪ್ರತ್ಯಯಾತ್ ಎಂಬ ಸೂತ್ರದಿಂದ ಅಃ ಎಂಬ ಪದವು, ಭಾವೇ ಎಂಬ ಸೂತ್ರವು ಅಕರ್ತರಿ ಚ ಕಾರಕೇ ಎಂಬ ಸೂತ್ರವು ಅನುವೃತ್ತವಾಗುತ್ತವೆ. ಧಾತೋಃ, ಪ್ರತ್ಯಯಃ ಮತ್ತು ಪರಶ್ಚ ಎಂಬವು ಅಧಿಕಾರ ಸೂತ್ರಗಳು

ಅರ್ಥ:- ಗುರು ಸಂಜ್ಞೆಯುಳ್ಳ ಅಕ್ಷರಗಳ ನಂತರ ಹಲಂತ ಧಾತುಗಳ ನಂತರ ಸ್ತ್ರೀಲಿಂಗದಲ್ಲಿ ಭಾವಾರ್ಥದಲ್ಲಿ ಕರ್ತೃಭಿನ್ನ ಕಾರಕಾರ್ಥದಲ್ಲೂ "ಅ" ಪ್ರತ್ಯಯ ಬರುತ್ತದೆ.

ಉದಾ:- ಈಹಾ ಈಹ್ ಧಾತುವಿನಲ್ಲಿ ಈ ಕಾರವು ಗುರು ಸಂಜ್ಞೆ ಉಳ್ಳದ್ದಾಗಿದೆ. ಮತ್ತು ಹಲಂತವಾಗಿದೆ. ಆದ್ದರಿಂದ ಪ್ರಕೃತ ಸೂತ್ರದಿಂದ "ಅ" ಪ್ರತ್ಯಯವು ಬಂದು ಈಹ್+ಅ ಎಂದಾಗಿ ಸ್ತ್ರೀತ್ವ ವಿವಕ್ಷೆಯಲ್ಲಿ ಟಾಪ್ ಬಂದು ಸುಬಂತ ಮಾಡಿದ ಮೇಲೆ ಈಹಾ ಎಂದು ಆಗುತ್ತದೆ.

**(ಯುಚ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ- 871 - ಣ್ಯಾಸ-ಶ್ರಂಥೋ ಯುಚ್ ।(3-3-107)**

ವೃತ್ತಿ:- ಅಕಾರಸ್ಯ ಅಪವಾದಃ ಕಾರಣಾ ಹಾರಣಾ।

ಪ.ಚ್ಛೇ.:- ಣ್ಯಾಸ, ಶ್ರಂಥಃ, ಯುಚ್।

ಅ.ವೃ:- ಸ್ತ್ರಿಯಾಂ ಭಾವೇ ಎಂಬ ಸೂತ್ರಗಳು ಮತ್ತು ಅಕರ್ತರಿ ಚ ಕಾರಕೇ ಎಂಬ ಪದಗಳು ಅನುವೃತ್ತವಾಗುತ್ತವೆ. ಧಾತೋಃ, ಪ್ರತ್ಯಯಃ ಮತ್ತು ಪರಶ್ಚ ಎಂಬವು ಅಧಿಕಾರ ಸೂತ್ರಗಳು.

ಅರ್ಥ:- ಸ್ತ್ರೀತ್ವ ವಿವಕ್ಷೆಯಲ್ಲಿ ಮತ್ತು ಭಾವಾರ್ಥದಲ್ಲಿ ಮತ್ತು ಕರ್ತೃಭಿನ್ನ ಕಾರಕಾರ್ಥದಲ್ಲೂ ಣ್ಯಂತ ಧಾತುಗಳು, ಆಸ್ ಧಾತು ಮತ್ತು ಶ್ರಂಥ್ ಧಾತುಗಳ ನಂತರ ಯುಚ್ ಪ್ರತ್ಯಯ ಬರುತ್ತದೆ. ಇದು "ಅ" ಪ್ರತ್ಯಯಗಳನ್ನು ವಿಧಿಸುವ ಸೂತ್ರಗಳಿಗೆ ಅಪವಾದವಾಗಿದೆ.

ಉದಾ: - ಕಾರಣಾ-ಹಾರಣಾ: - (ಮಾಡುವುದು, ಅಪಹರಿಸವುದು) ಎಂಬವು ಣ್ಯಂತ ಕೃ ಮತ್ತು ಹೃ ಧಾತುಗಳ ನಂತರ ಪ್ರಕೃತ ಸೂತ್ರದಿಂದ ಯುಚ್ (ಯು) ಪ್ರತ್ಯಯವು ಬರುತ್ತದೆ. ಈ ಯು ಪ್ರತ್ಯಯಕ್ಕೆ "ಯುವೋರನಾಕೌ" ಎಂಬ ಸೂತ್ರದಿಂದ "ಅನ" ಆದೇಶವು ಬರುತ್ತದೆ. "ಣೇರನಿಟಿ" ಎಂಬ ಸೂತ್ರದಿಂದ ಣಿ ಗೆ ಲೋಪಬಂದು ಆದಿ ವೃದ್ಧಿಯಿಂದ ಕಾರ್+ಅನ ಎಂದಾಗಿ ಕಾರನ ಎಂದಾಗಿ "ಅಟ್‌ಕುಪ್ವಾಙ್‌ನುಮ್ ವ್ಯವಾಯೇಽಪಿ" ಸೂತ್ರದಿಂದ ನ್ ಕಾರಕ್ಕೆ ಣತ್ವ ಬಂದು ಕಾರಣ ಎಂದಾಗಿ, ಸ್ತ್ರೀತ್ವ ವಿವಕ್ಷೆಯಲ್ಲಿ ಟಾಪ್ (ಆ) ಬಂದು ಕಾರಣಾ ಎಂದು ರೂಪವಾಗುತ್ತದೆ. ಹಾರಿ ಎಂಬ ಶಬ್ದವು ಇದೇ ರೀತಿಯಲ್ಲಿ ಹಾರಣಾ ಎಂದಾಗುತ್ತದೆ. ಆಸ್ ಎಂಬುದು ಆಸನಾ ಎಂದೂ ಶ್ರಂಥ್= ಶ್ರಾಂಥನಾ ಎಂದು ರೂಪವಾಗುತ್ತದೆ.

**(ಕ್ತ-ಪ್ರತ್ಯಯ ವಿಧಿಸುವ ಸೂತ್ರ)**

**ಸೂತ್ರ- 872 - ನಪುಂಸಕೇ ಭಾವೇ ಕ್ತಃ ।(3-3-114)**

ಅ.ವೃ:- ನಪುಂಸಕೇ ಭಾವೇ ಕ್ತಃ ಎಂಬ ಸೂತ್ರದಿಂದ ನಪುಂಸಕೇ ಮತ್ತು ಭಾವೇ ಎಂಬ ಪದವು ಅನುವೃತ್ತವಾಗುತ್ತವೆ. ಧಾತೋಃ, ಪ್ರತ್ಯಯಃ ಮತ್ತು ಪರಶ್ಚ ಎಂಬವು ಅಧಿಕಾರ ಸೂತ್ರಗಳು.

**(ಲ್ಯುಟ್ -ಪ್ರತ್ಯಯ ವಿಧಿಸುವ ಸೂತ್ರ)**

**ಸೂತ್ರ- 873- ಲ್ಯುಟ್ ಚ ।(3-3-115)**

ವೃತ್ತಿ:- ಹಸಿತಮ್, ಹಸನಮ್।

ಪ.ಚ್ಛೇ. :- ಲ್ಯುಟ್, ಚ।

ಎರಡು ಸೂತ್ರಗಳಿಗೆ ಸೇರಿ ಅರ್ಥ:- ನಪುಂಸಕತ್ವ ವಿವಕ್ಷೆಯಲ್ಲಿ ಭಾವಾರ್ಥದಲ್ಲಿ ಕ್ತ-ಪ್ರತ್ಯಯವು ಬರುತ್ತದೆ. ಮತ್ತು ಲ್ಯುಟ್-ಪ್ರತ್ಯಯವು ಬರುತ್ತದೆ ಎಂಬುದು ಎರಡು ಸೂತ್ರಗಳ ಅರ್ಥವಾಗಿದೆ. ಲ್ಯುಟ್‌ನಲ್ಲಿ ಯು ಮಾತ್ರ ಉಳಿಯುತ್ತದೆ. ಯುವೋರನಾಕೌ ಎಂಬ ಸೂತ್ರದಿಂದ 'ಯು'ಗೆ ಅನ ಆದೇಶ ಬರುತ್ತದೆ.

ಉದಾ: - ಹಸಿತಮ್, ಹಸನಮ್ (ನಗುವುದು) ಹಸ ಹಸನೇ ಎಂಬ ಧಾತುವಿನಲ್ಲಿ

ಹಸ್ ಮಾತ್ರ ಉಳಿಯುತ್ತದೆ. ನಪುಂಸಕೇ ಭಾವೇ ಎಂಬ ಸೂತ್ರದಿಂದ ಕ್ತ (ತ) ಪ್ರತ್ಯಯ ಬಂದ ಮೇಲೆ ಹಸ್+ತ ಎಂದಿರುತ್ತದೆ. ಆರ್ಧಧಾತುಕ ಸಂಜ್ಞೆ ಪ್ರತ್ಯಯಕ್ಕೆ ಬಂದಾಗ ಆರ್ಧಧಾತುಕಸ್ಯೇಡ್‌ವಲಾದೇಃ ಎಂಬ ಸೂತ್ರದಿಂದ ಇಡಾಗಮವು ಬಂದು ಹಸಿತ ಎಂದಿರುತ್ತದೆ. ಪ್ರಾತಿಪದಿಕ ಸಂಜ್ಞೆ ಬಂದ ಮೇಲೆ ಅದನ್ನು ಸುಬಂತ ಮಾಡಿದಾಗ ಅಮ್ ಆದೇಶ ಬಂದು ಹಸಿತಮ್ ಎಂದು ರೂಪವು ಸಿದ್ಧವಾಗುತ್ತದೆ. ಲ್ಯುಟ್ಚ ಎಂಬ ಸೂತ್ರದಿಂದ ಯು ಬಂದು ಅದಕ್ಕೆ ಅನ ಆದೇಶಬಂದಾಗ ಹಸ್+ಅನ=ಹಸನ ಎಂದಾಗುತ್ತದೆ. ವಲಾದಿ ಪ್ರತ್ಯಯಪರವಾಗಿಲ್ಲದಿರುವುದರಿಂದ ಇಡಾಗಮವು ಬರುವುದಿಲ್ಲ. ಅದಕ್ಕೆ ಪ್ರಾತಿಪದಿಕ ಸಂಜ್ಞೆ ಬಂದ ಮೇಲೆ ಸುಬಂತ ಮಾಡಿದಾಗ ಅಮ್ ಆದೇಶ ಬಂದು ಹಸನಮ್ ಎಂದು ರೂಪವಾಗುತ್ತದೆ.

ಸೂಚನೆ:– ಣಿಜಂತ ಧಾತುಗಳ ನಂತರ ಲ್ಯುಟ್ ಬಂದಾಗ ಣೇರನಿಟಿ ಎಂಬ ಸೂತ್ರದಿಂದ ಣಿ ಗೆ ಲೋಪ ಬರುತ್ತದೆ.

### (ಘ-ಪ್ರತ್ಯಯವನ್ನು ವಿಧಿಸುವ ಸೂತ್ರ)

**ಸೂತ್ರ– 874– ಪುಂಸಿ ಸಂಜ್ಞಾಯಾಮ್ ಘಃ ಪ್ರಾಯೇಣ। (3-3-118)**

ಅ.ವೃ:– ಕರಣಾಧಿಕರಣಯೋಶ್ಚ ಎಂಬ ಸೂತ್ರದಿಂದ ಕರಣಾಧಿಕರಣಯೋಃ ಎಂಬ ಪದವು ಅನುವೃತ್ತವಾಗುತ್ತದೆ. ಧಾತೋಃ, ಪ್ರತ್ಯಯಃ ಮತ್ತು ಪರಶ್ಚ ಎಂಬವು ಅಧಿಕಾರ ಸೂತ್ರಗಳು.

ಅರ್ಥ:– ಪುಲ್ಲಿಂಗದಲ್ಲಿ ಸಂಜ್ಞಾರ್ಥವಾಗುವಾಗ ಕರಣ ಮತ್ತು ಅಧಿಕರಣಾರ್ಥದಲ್ಲಿ ಪ್ರಾಯಃ ಘ-ಪ್ರತ್ಯಯ ಬರುತ್ತದೆ. ಈ ಪ್ರತ್ಯಯದಲ್ಲಿ ಅ ಮಾತ್ರ ಉಳಿಯುತ್ತದೆ. (ಘ) ಘಿತ್ ಪ್ರತ್ಯಯ ಬರುವುದರಿಂದ ಹಲವು ಪ್ರಯೋಜನಗಳಿವೆ. ಘ ಪ್ರತ್ಯಯಾಂತ ಶಬ್ದಗಳು ಪುಲ್ಲಿಂಗದಲ್ಲಿ ಇರುತ್ತವೆ.

### (ಹ್ರಸ್ವವನ್ನು ವಿಧಿಸುವ ಸೂತ್ರ)

**ಸೂತ್ರ– 875 – ಛಾದೇರ್ಘೇಽದ್ವ್ಯುಪಸರ್ಗಸ್ಯ. (6-4-96)**

ವೃತ್ತಿ:– ದ್ವಿಪ್ರಭೃತ್ಯುಪಸರ್ಗಹೀನಸ್ಯ ಛಾದೇರ್ಹ್ರಸ್ವಃ ಘೇ ಪರೇ। ದನ್ತಾಃ ಛಾದ್ಯನ್ತೇ ಅನೇನ ಇತಿ ದನ್ತಚ್ಛದಃ। ಆಕುರ್ವನ್ತಿ ಅಸ್ಮಿನ್ ಇತಿ ಆಕರಃ ।

ಪ.ಚ್ಛೇ:– ಛಾದೇಃ, ಘೇ, ಅದ್ವ್ಯುಪಸರ್ಗಸ್ಯ।

ಅ.ವೃ:– ಖಚಿ ಹ್ರಸ್ವಃ ಎಂಬ ಸೂತ್ರದಿಂದ ಹ್ರಸ್ವಃ ಎಂಬ ಪದವು ಮತ್ತು ಊದುಪಧಾಯಾ ಗೋಹಃ ಎಂಬ ಸೂತ್ರದಿಂದ ಉಪಧಾಯಾಃ ಎಂಬ ಪದವು ಅನುವೃತ್ತವಾಗುತ್ತದೆ. ಅಂಗಸ್ಯ ಎಂಬುದು ಅಧಿಕಾರ ಸೂತ್ರ.

ಅರ್ಥ:–ಎರಡು ಅಥವಾ ಎರಡಕ್ಕಿಂತ ಹೆಚ್ಚಾದ ಉಪಸರ್ಗಗಳಿಂದ ಕೂಡಿಲ್ಲದಿರುವ ಛಾದ್ ಅಂಗದ ಉಪಧೆಗೆ ಹ್ರಸ್ವವು ಬರುತ್ತದೆ– ಘ ಪ್ರತ್ಯಯವು ಪರದಲ್ಲಿದ್ದಾಗ.

ಉದಾ:– ದಂತಚ್ಛದಃ:– ದನ್ತಾಃ ಛಾದ್ಯನ್ತೇ ಅನೇನ ಎಂಬುದು ವಿಗ್ರಹ ವಾಕ್ಯ

(ಹಲ್ಲುಗಳು ಯಾವುದರಿಂದ ಮುಚ್ಚಲ್ಪಡುತ್ತವೊ ಅದು ಅಂದರೆ ತುಟಿ) ಛದ ಆವರಣೇ ಎಂಬುದು ಧಾತು. ಛದ್ ಧಾತುವಿನ ನಂತರ ಣಿಚ್ ಪ್ರತ್ಯಯವನ್ನು ಸೇರಿಸಿದಾಗ ಛಾದಿ ಎಂದಾಗುತ್ತದೆ. ಇದು ಣ್ಯಂತವಾಗಿರುವುದರಿಂದ ಸನಾದ್ಯನ್ತಾ ಧಾತವಃ ಎಂಬ ಸೂತ್ರದಿಂದ ಧಾತು ಸಂಜ್ಞೆ ಬರುತ್ತದೆ. ಪುಂಸಿ ಸಂಜ್ಞಾಯಾಮ್ ಘಃ ಪ್ರಾಯೇಣ ಎಂಬ ಸೂತ್ರದಿಂದ ಘ (ಅ) ಪ್ರತ್ಯಯವು ಬಂದು ಛಾದಿ+ಅ ಎಂದಿರುತ್ತದೆ. ಣೇರನಿಟಿ ಎಂಬ ಸೂತ್ರದಿಂದ ಣಿ(ಇ) ಗೆ ಲೋಪ ಬರುತ್ತದೆ ಆಗ ಛಾದ ಎಂದಿರುತ್ತದೆ. ಈ ಶಬ್ದಕ್ಕೆ ಪೂರ್ವದಲ್ಲಿ ದಂತ ಎಂಬುದು ಇರುತ್ತದೆ. ಕರ್ತೃಕರ್ಮಣೋಃ ಕೃತಿ ಎಂಬ ಸೂತ್ರದಿಂದ ಷಷ್ಠೀ ವಿಭಕ್ತಿಯು ಬರುವುದರಿಂದ ಷಷ್ಠೀ ಸಮಾಸ ಮಾಡಿದಾಗ ಲುಕ್ ಬರುತ್ತದೆ. ಆಗ ದಂತ+ಛಾದ ಎಂದಿದ್ದಾಗ 'ಛೇ ಚ' ಎಂಬುದರಿಂದ ತುಕ್ ಆಗಮ ಬಂದು ದಂತ+ತ್+ಛ್ಾದ ಎಂದಿದ್ದಾಗ ತ್‌ಕಾರಕ್ಕೆ ಚುತ್ವ ಬಂದು ದಂತಚ್ಛಾದ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ಛಾದ್+ಅ ಎಂಬಲ್ಲಿ ಛ್ ಕಾರದ ಪರದಲ್ಲಿರುವ ಆಕಾರಕ್ಕೆ ಹ್ರಸ್ವ ಬಂದು ದಂತಚ್ಛದ ಎಂದು ಪ್ರಾತಿಪದಿಕವಾಗುತ್ತದೆ. ಇದನ್ನು ಸುಬಂತಮಾಡಿದಾಗ ದಂತಚ್ಛದಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ: – ಆಕರಃ (ಖನಿಜ) ಆಕುರ್ವನ್ತಿ ಅಸ್ಮಿನ್ ಇತಿ ಎಂಬುದು ವಿಗ್ರಹ ವಾಕ್ಯ. ಜನರನ್ನು ಸೇರಿಸಿ ಇದರೊಳಗೆ ಕೆಲಸವನ್ನು ಮಾಡಿಸುತ್ತಾರೆ ಎಂಬ ಅಧಿಕರಣಾರ್ಥದಲ್ಲಿ ಆಙ್-ಪೂರ್ವಕ ಕೃಞ್ ಧಾತುವಿನ ನಂತರ ಘ-ಪ್ರತ್ಯಯವು ಬರುತ್ತದೆ. ಆಕೃ+ಅ(ಘ) ಎಂದಿದ್ದಾಗ ಋಕಾರಕ್ಕೆ ಗುಣ (ಅರ್) ಬಂದು ಆಕರ ಎಂಬ ಶಬ್ದವು ಸಿದ್ಧವಾಗುತ್ತದೆ. ಇದನ್ನು ಸುಬಂತ ಮಾಡಿದಾಗ ಆಕರಃ ಎಂದು ರೂಪವಾಗುತ್ತದೆ. ಮೇಲಿನ ಎರಡು ಉದಾಹರಣೆಗಳು ಪುಲ್ಲಿಂಗದಲ್ಲಿ ಇರುತ್ತವೆ.

**(ಘಞ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ- 876 – ಅವೇ ತೃಸ್ತ್ರೋರ್ಘಞ್** ।(3-3-120)

ವೃತ್ತಿ:- ಅವತಾರಃ ಕೂಪಾದೇಃ । ಅವಸ್ತಾರೋ ಜವನಿಕಾ ।

ಪ.ಚ್ಛೇ. :- ಅವೇ, ತೃಸ್ತ್ರೋಃ, ಘಞ್।

ಅ.ವೃ:- ಕರಣಾಧಿಕರಣಯೋಶ್ಚ ಎಂಬ ಸೂತ್ರದಿಂದ ಕರಣಾಧಿಕರಣಯೋಃ ಎಂಬ ಪದವು ಮತ್ತು ಪುಂಸಿ ಸಂಜ್ಞಾಯಾಂ ಘಃ ಪ್ರಾಯೇಣ ಎಂಬ ಸೂತ್ರದಿಂದ ಸಂಜ್ಞಾಯಾಂ ಮತ್ತು ಪ್ರಾಯೇಣ ಎಂಬ ಪದಗಳು ಅನುವೃತ್ತವಾಗುತ್ತವೆ. ಧಾತೋಃ, ಪ್ರತ್ಯಯಃ, ಮತ್ತು ಪರಶ್ಚ ಎಂಬವು ಅಧಿಕಾರ ಸೂತ್ರಗಳು.

ಅರ್ಥ:- ಅವ ಎಂಬ ಉಪಸರ್ಗವು ಉಪಪದವಾಗಿರುವಾಗ ತೄ ಧಾತು ಮತ್ತು ಸ್ತೄ ಧಾತುಗಳ ನಂತರ ಕರಣ ಮತ್ತು ಅಧಿಕರಣಾರ್ಥಗಳಲ್ಲಿ ಪ್ರಾಯಃ ಘಞ್ ಪ್ರತ್ಯಯವು ಪುಲ್ಲಿಂಗದಲ್ಲಿ ಬರುತ್ತದೆ. ಈ ಪ್ರತ್ಯಯದಲ್ಲಿ ಅ ಮಾತ್ರ ಉಳಿಯುತ್ತದೆ. ಇದು ಞಿತ್ತಾಗಿ ಇರುವುದರಿಂದ ವೃದ್ಧಿಯು ಬರುತ್ತದೆ.

ಉದಾ: – ಅವತಾರಃ:- ಬಾವಿಗಳಲ್ಲಿ ಇಳಿಯಲು ಇರುವ ಮೆಟ್ಟಿಲು.

ಉದಾ: – ಅವಸ್ತಾರಃ:– ಅವ ಸ್ತೃಣನ್ತಿ ಅನಯಾ ಎಂಬುದು ವಿಗ್ರಹ ವಾಕ್ಯ ಇದರಿಂದ ಆಚ್ಛಾದಿಸುವದೆಂಬ ಅನುಕರಣಾರ್ಥದಲ್ಲಿ ಅವ ಪೂರ್ವಕ ಸ್ತೃ ಧಾತು ವಿಗಿಂತ ಪರದಲ್ಲಿ ಘಞ್ ಪ್ರತ್ಯಯ ಬಂದು ಹಿಂದಿನಂತೆಯೇ ರೂಪವು ಸಿದ್ಧಿಸುತ್ತದೆ.

**(ಘಞ್ ಪ್ರತ್ಯಯವನ್ನು ವಿಧಿಸುವ ಮತ್ತೊಂದು ಸೂತ್ರ)**

**ಸೂತ್ರ– 877 – ಹಲಶ್ಚ** ।(3–3–121)

ವೃತ್ತಿ:– ಹಲನ್ತಾತ್ ಘಞ್ । ಘಾಪವಾದಃ। ರಮನ್ತೇ ಯೋಗಿನಃಅಸ್ಮಿನ್ ಇತಿ ರಾಮಃ। ಅಪಮೃಜ್ಯತೇ ಅನೇನ ವ್ಯಾಧ್ಯಾದಿಃ ಇತಿ ಅಪಾಮಾರ್ಗಃ।

ಪ.ಚ್ಛೇ.:– ಹಲಃ, ಚ ।

ಅ.ವೃ:– ಕರಣಾಧಿಕರಣಯೋಶ್ಚ ಎಂಬ ಸೂತ್ರದಿಂದ ಕರಣಾಧಿಕರಣಯೋಃ ಎಂಬ ಪದವು ಮತ್ತು ಪುಂಸಿ ಸಂಜ್ಞಾಯಾಂ ಘಃ ಪ್ರಾಯೇಣ ಎಂಬ ಸೂತ್ರದಿಂದ ಸಂಜ್ಞಾಯಾಂ, ಪುಂಸಿ ಮತ್ತು ಪ್ರಾಯೇಣ ಎಂಬ ಪದಗಳು ಮತ್ತು ಅವೇ ತೃಸ್ತ್ರೋರ್ಘಞ್ ಎಂಬ ಸೂತ್ರದಿಂದ ಘಞ್ ಎಂಬ ಪದವು ಅನುವೃತ್ತವಾಗುತ್ತವೆ. ಧಾತೋಃ, ಪ್ರತ್ಯಯಃ, ಮತ್ತು ಪರಶ್ಚ ಎಂಬವು ಅಧಿಕಾರ ಸೂತ್ರಗಳು.

ಅರ್ಥ: – ಹಲನ್ತ ಧಾತುಗಳ ನಂತರ ಕರಣ ಮತ್ತು ಅಧಿಕಾರಣಾರ್ಥಗಳಲ್ಲಿ ಘಞ್ ಪ್ರತ್ಯಯವು ಪುಲ್ಲಿಂಗದಲ್ಲಿ ಬರುತ್ತದೆ. ಇದು ಪುಂಸಿ ಸಂಜ್ಞಾಯಾಂ ಘಃ ಪ್ರಾಯೇಣ ಎಂಬ ಸೂತ್ರಕ್ಕೆ ಅಪವಾದವಾಗಿದೆ. ಇದು ಸಾಧಾರಣವಾಗಿ ಅಜಂತ ಧಾತುಗಳಿಂಗಿತ ಪರದಲ್ಲಿ ಮಾತ್ರ ಬರುತ್ತದೆ.

ಉದಾ: – ರಾಮಃ:– ರಮನ್ತೇ ಯೋಗಿನಃಅಸ್ಮಿನ್ ಎಂಬುದು ವಿಗ್ರಹ ವಾಕ್ಯ (ಇವನಲ್ಲಿ ಯೋಗಿಗಳು ರಮಿಸುತ್ತಾರೆ) ಎಂಬ ಅಧಿಕರಣಾರ್ಥದಲ್ಲಿ ಈ ಸೂತ್ರದಿಂದ ಘಞ್ ಪ್ರತ್ಯಯವು ಬರುತ್ತದೆ. ಉಪಧಾ ವೃದ್ಧಿಯಾದ ಮೇಲೆ ರಾಮಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ: – ಅಪಾಮಾರ್ಗಃ:– ಅಪಮೃಜ್ಯತೇ ಅನೇನ ವ್ಯಾಧ್ಯಾದಿಃ ಇತಿ (ವ್ಯಾಧಿ ಮೊದಲಾದವು ಯಾವುದರಿಂದ ಹೊಗಲಾಡಿಸ್ಪಡುತ್ತದೆಯೊ ಅದು.) ಎಂಬ ಅರ್ಥದಲ್ಲಿ ಅಪ–ಪೂರ್ವಕ ಮೃಜ್ ಧಾತುವಿನ ನಂತರ ಪ್ರಕೃತ ಸೂತ್ರದಿಂದ ಘಞ್ ಪ್ರತ್ಯಯವು ಬಂದು ಅಪಮೃಜ್+ಅ ಎಂದಿರುತ್ತದೆ. ಚಜೋಃಕುಘಿಣ್ಯತೋಃ ಎಂಬ ಸೂತ್ರದಿಂದ ಜ ಕಾರಕ್ಕೆ ಕುತ್ವ (ಗ್) ಬಂದು ಮೃಜೇರ್ವೃದ್ಧಿಃ ಎಂಬ ಸೂತ್ರದಿಂದ ಋ ಕಾರಕ್ಕೆ ವೃದ್ಧಿ (ಆರ್) ಬಂದು ಅಪಾಮಾರ್ಗ+ಅ ಎಂದಿದ್ದಾಗ ಉಪಸರ್ಗಸ್ಯ ಘಞ್ಯಮನುಷ್ಯೇ ಬಹುಳಮ್ ಎಂಬ ಸೂತ್ರದಿಂದ ಉಪಸರ್ಗವಾದ ಅಪ ಎಂಬಲ್ಲಿ ಅಂತ್ಯ ಅಕಾರಕ್ಕೆ ದೀರ್ಘವು ಬಂದು ಅಪಾಮಾರ್ಗಃ ಎಂದು ಸುಬಂತ ರೂಪವು ಸಿದ್ಧವಾಗುತ್ತದೆ.

**(ಖಲ್– ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ– 878 – ಈಷದ್ದುಸ್ಸುಷು ಕೃಚ್ಛ್ರಾಕೃಚ್ಛ್ರಾರ್ಥೇಷು ಖಲ್**। (3–3–126)

ವೃತ್ತಿ: ಕರಣಾಧಿಕರಣಯೋರಿತಿ ನಿವೃತ್ತಮ್. ಏಷು ದುಃಖ–ಸುಖಾರ್ಥೇಷು

ಉಪಪದೇಷು ಖಲ್. ತಯೋರೇವ ಇತಿ ಭಾವೇ ಕರ್ಮಣಿಚ. ಕೃಚ್ಛ್ರೇ- ದುಷ್ಕರಃ ಕಟಃ ಭವತಾ। ಅಕೃಚ್ಛ್ರೇ-ಈಷತ್ಕರಃ । ಸುಕರಃ।

ಅ.ವೃ:- ಧಾತೋಃ, ಪ್ರತ್ಯಯಃ, ಮತ್ತು ಪರಶ್ಚ ಎಂಬವು ಅಧಿಕಾರ ಸೂತ್ರಗಳು.

ಅರ್ಥ: - 'ದುಃಖ ಮತ್ತು ಸುಖ ಅರ್ಥವುಳ್ಳ ಈಷತ್, ದುಸ್ ಮತ್ತು ಸು ಎಂಬ ಉಪಪದಗಳು ಇದ್ದಾಗ ಧಾತುವಿನ ನಂತರ ಖಲ್ ಪ್ರತ್ಯಯವು ಬರುತ್ತವೆ.

ವಿವರಣೆ:- ಇಷ್ಟುವರೆಗೆ ಅಧಿಕಾರವಾಗಿ ಬಂದ ಕರಣಾಧಿಕರಣಯೋಶ್ಚ ಎಂಬುದು ಅದರ ಹಿಂದಿನ ಸೂತ್ರದ ಜೊತೆಗೆ ನಿವೃತ್ತವಾಗುವದು. ಆದುದರಿಂದ ಇವು ಮೊದಲು ವಿಧಿಸಲಾಗುವ ಪ್ರತ್ಯಯಗಳು ತಯೋರೇವ ಕೃತ್ಯಕ್ತಖಲರ್ಥಾಃ ಎಂಬ ಸಾಮಾನ್ಯ ಶಾಸ್ತ್ರವನ್ನು ಅನುಸರಿಸಿ ಭಾವಕರ್ಮಾರ್ಥಗಳಲ್ಲಿ ಮಾತ್ರ ಪ್ರವೃತ್ತಿಸುವುದು. ಸುಖವು ಮತ್ತು ದುಃಖವು ಎಂಬ ಅರ್ಥವುಳ್ಳ ಈಷತ್, ದುಸ್ ಮತ್ತ ಸು ಎಂಬವು ಉಪಪದಗಳಾಗಿದ್ದಾಗ ಧಾತುವಿನ ಪರದಲ್ಲಿ ಖಲ್ ಪ್ರತ್ಯಯವು ಬರುವುದು. ಇದರಲ್ಲಿ ಅ-ಕಾರ ಮಾತ್ರ ಉಳಿಯುವುದು.

ಉದಾ:-ದುಷ್ಕರಃ ಕಟಃ ಭವತಾ:- (ನಿಮ್ಮಿಂದ ಚಾಪೆ ಮಾಡುವುದು ಕಷ್ಟವಾದುದ್ದು.) ಇಲ್ಲಿ ಕಷ್ಟಾರ್ಥಕವಾದ ದುಸ್ ಎಂಬುದನ್ನು ಉಪಪದವಾಗಿವುಳ್ಳ ಕೃ(ಇ್) ಧಾತುವಿನ ನಂತರ ಖಲ್ ಪ್ರತ್ಯಯವು ಬಂದು ದುಸ್+ಕೃ(ಇ್)+ಅ ಎಂದಿರುತ್ತದೆ ಋ-ಕಾರಕ್ಕೆ ಗುಣವು (ಅರ್) ಬಂದು ಸಕಾರಕ್ಕೆ ಇದುದುಪಧಸ್ಯ ಚಾಪ್ರತ್ಯಯಸ್ಯ ಎಂಬ ಸೂತ್ರದಿಂದ ಷತ್ವವು ಬಂದು ದುಷ್ಕರಃ ಎಂದು ರೂಪವು ಸಿದ್ಧವಾಗುತ್ತದೆ.

ಇದು ಸುಲಭವಾಗಿ ಮಾಡಲು ಸಾಧ್ಯ ಎಂಬ ಅರ್ಥದಲ್ಲಿ ಈಷತ್ ಮತ್ತ ಸು ಎಂಬ ಉಪಪದಗಳು ಇದ್ದಾಗ ಕೃ(ಇ್) ಧಾತುವಿನ ನಂತರ ಖಲ್ ಪ್ರತ್ಯಯವು ಬಂದು ಈಷತ್ಕರಃ ಮತ್ತು ಸುಕರಃ ಎಂಬ ರೂಪಗಳು ಸಿದ್ಧವಾಗುತ್ತವೆ.

**(ಯುಚ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ- 879- ಆತೋ ಯುಚ್** ।(3-3-128)

ವೃತ್ತಿ:- ಖಲೋಪವಾದಃ । ಈಷತ್ಪಾನಃ ಸೋಮೋ ಭವತಾ ।ದುಷ್ಪಾನಃ । ಸುಪಾನಃ।

ಪ.ಚ್ಛೇ. :- ಆತಃ, ಯುಚ್।

ಅ.ವೃ:- ಈಷದ್ದುಸ್ಸುಷು ಕೃಚ್ಛ್ರಾಕೃಚ್ಛ್ರಾರ್ಥೇಷು ಖಲ್ ಎಂಬ ಸೂತ್ರದಿಂದ ಈಷದ್ದುಸ್ಸುಷು ಮತ್ತು ಕೃಚ್ಛ್ರಾಕೃಚ್ಛ್ರಾರ್ಥೇಷು ಎಂಬ ಪದಗಳು ಅನುವೃತ್ತವಾಗುತ್ತವೆ. ಮತ್ತು ಧಾತೋಃ, ಪ್ರತ್ಯಯಃ, ಮತ್ತು ಪರಶ್ಚ ಎಂಬವು ಅಧಿಕಾರ ಸೂತ್ರಗಳು.

ಅರ್ಥ: - ದುಃಖ ಮತ್ತು ಸುಖ ಎಂಬ ಅರ್ಥವುಳ್ಳ ಈಷತ್, ದುಸ್ ಮತ್ತು ಸು ಎಂಬ ಉಪಪದಗಳು ಇರುವಾಗ, ಆಕಾರಾಂತ ಧಾತುವಿನ ನಂತರ ಯುಚ್ ಪ್ರತ್ಯಯವು ಬರುತ್ತದೆ.

ಪ್ರಕೃತ ಸೂತ್ರವು ಈಷದ್ದುಸ್ಸುಷು ಕೃಚ್ಛ್ರಾಕೃಚ್ಛ್ರಾರ್ಥೇಷು ಖಲ್ ಎಂಬ ಸೂತ್ರಕ್ಕೆ ಅಪವಾದವಾಗಿದೆ. ಯುಚ್ ನಲ್ಲಿ ಯು ಮಾತ್ರ ಉಳಿಯುತ್ತದೆ. ಯುವೋರನಾಕೌ ಎಂಬ ಸೂತ್ರದಿಂದ ಅನ ಎಂಬ ಆದೇಶವು ಬರುತ್ತದೆ. ಇಲ್ಲಿಯೂ ಸಹ ಖಲರ್ಥ ಪ್ರತ್ಯಯವು ಬರುತ್ತದೆ. ಆದುದರಿಂದ ತಯೋರೇವ ಕೃತ್ಯಕ್ತಖಲರ್ಥಾಃ ಎಂಬ ಸೂತ್ರಕ್ಕೆ ಅನುಗುಣವಾಗಿ ಭಾವ ಮತ್ತು ಕರ್ಮ ಅರ್ಥಗಳಲ್ಲಿಯೇ ಬರುತ್ತವೆ.

ಉದಾ:– ಈಷತ್‌ಪಾನಃ ಸೋಮೊ ಭವತಾ।ದುಷ್ಪಾನಃ। ಸುಪಾನಃ। ಕೃಚ್ಛ್ರ (ಕಷ್ಟಕರ) ಎಂಬ ಅರ್ಥದಲ್ಲಿ ದುಸ್ ಎಂಬ ಉಪಸರ್ಗವು ಪಾ–ಧಾತುವಿನ ಪೂರ್ವದಲ್ಲಿ ಬರುತ್ತದೆ. ಹಾಗೇಯೇ ಅಕೃಚ್ಛ್ರ ಅಂದರೆ ಸುಖ ಎಂಬ ಅರ್ಥದಲ್ಲಿ ಸು ಅಥವಾ ಈಷತ್ ಎಂಬ ಉಪಸರ್ಗಗಳು ಪಾ ಧಾತುವಿನ ಪರದಲ್ಲಿ ಬರುತ್ತವೆ. ದುಃಖೇನ ಪೀಯತೇ ಇತಿ ದುಷ್ಪಾನಃ ಶ್ರಮದಿಂದ ಕುಡಿಯಲು ಸಾಧ್ಯ ಎಂದರ್ಥ. ಸುಖಾರ್ಥದಲ್ಲಿಯೂ ಈಷತ್ ಎಂಬ ಪದದ ಪ್ರಯೊಗವು ಇದೆ– ಈಷತ್‌ಪಾನಃ ಇಲ್ಲಿ ದುಸ್, ಈಷತ್ ಮತ್ತು ಸು ಉಪಪದಗಳು ಇವೆ. ಪಾ(ಪಾನೆ)ಧಾತುವು ಪರದಲ್ಲಿ ಇದೆ. ಸುಖೇನ ಇತಿ ಸುಪಾನಃ । ಈಷತ್ ಪಾನಃ ಎಂದೂ ಪ್ರಯೋಗವಿದೆ.

**(ಕ್ತ್ವಾ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ– ೮೮೦ – ಅಲಙ್ಖಲ್ವೋಃ ಪ್ರತಿಷೇಧಯೋಃ ಪ್ರಾಚಾಂ ಕ್ತ್ವಾ। (೩–೪–೧೮)**

ವೃತ್ತಿ:– ಪ್ರತಿಷೇಧಾರ್ಥಯೋಃ ಅಲಙ್ಖಲ್ವೋಃ ಉಪಪದಯೋಃ ಕ್ತ್ವಾ ಸ್ಯಾತ್। ಪ್ರಾಚಾಂ ಗ್ರಹಣಂ ಪೂಜಾರ್ಥಮ್। ಅಮೈವಾವ್ಯಯೇನ ಇತಿ ನಿಯಮಾತ್ ನ ಉಪಪದಸಮಾಸಃ। ದೋ ದದ್ ಘೋಃ। ಅಲಂ ದತ್ತ್ವಾ। ಘುಮಾಸ್ಥೇತೀತ್ತ್ವಮ್। ಪೀತ್ವಾಖಲು।ಸೂತ್ರ– ಅಲಂಖಲ್ವೋಃ ಕಿಮ್? ಮಾ ಕಾರ್ಷೀತ್। ಪ್ರತಿಷೇಧಯೋಃ ಕಿಮ್? ಅಲಂಕಾರಃ ।

ಅ.ವೃ:– ಧಾತೋಃ, ಪ್ರತ್ಯಯಃ, ಮತ್ತು ಪರಶ್ಚ ಎಂಬವು ಅಧಿಕಾರ ಸೂತ್ರಗಳು.

ಅರ್ಥ: – ನಿಷೇಧಾರ್ಥದಲ್ಲಿರುವ ಅಲಂ ಮತ್ತು ಖಲು ಶಬ್ದಗಳು ಉಪಪದವಾದಾಗ ಧಾತುವಿನ ನಂತರ ಕ್ತ್ವಾ ಪ್ರತ್ಯಯವು ಬರುತ್ತದೆ.

ಕ್ತ್ವಾದಲ್ಲಿ ತ್ವಾ ಮಾತ್ರ ಉಳಿಯುತ್ತದೆ. ಅಲಂಖಲ್ವೋಃ ಎಂಬುದು ಸಪ್ತಮೀ ವಿಭಕ್ತಿಯಲ್ಲಿದೆ ಇವು ಉಪಪದಗಳಾಗಿವೆ. ಆದುದರಿಂದ ಅಲಂ ದತ್ತ್ವಾ ಮತ್ತು ಪೀತ್ವಾ ಖಲು ಎಂದು ಪ್ರಯೋಗಗಳಾಗಿವೆ. ಕ್ತ್ವಾ ಪ್ರತ್ಯಯವು ಭಾವಾರ್ಥಕವೆಂದು ಭಾಷ್ಯಕಾರರು ಹೇಳಿರುವರು.

ಇಲ್ಲಿ ಪ್ರಾಚಾಮ್ ಎಂದು ಹೇಳಿರುವುದರಿಂದ ಕ್ತ್ವಾ ಪ್ರತ್ಯಯವು ವೈಕಲ್ಪಿಕವೆಂದು ಭಾವಿಸಬಾರದು. ಪ್ರಾಚಾಮ್ ಎಂಬುದು ಕೇವಲ ಪ್ರಾಚೀನ ಆಚಾರ್ಯರರ ವಿಷಯದಲ್ಲಿ ಗೌರವವನ್ನು ಸೂಚಿಸುದಕ್ಕಾಗಿ ಮಾತ್ರ ಇರುವುದು. ಆದುದರಿಂದ ಇದು ವೈಕಲ್ಪಿಕವಲ್ಲವೆಂದು ತಿಳಿಯಬೇಕು. ಅಲಂ ರೋದನೇನ ಮೊದಲಾದವು ಬಹುಳ ಗ್ರಹಣದಿಂದ ಸಾಧಿಸಬೇಕು ಎಂಬುದು ಬಾಲಮನೋರಮಾ ಕಾರರ ಅಭಿಪ್ರಾಯ.

ಉದಾ: – ಅಲಂ ದತ್ತ್ವಾ (ಕೂಡಬಾರದು) ನಿಷೇಧಾರ್ಥಕವಾದ ಅಲಂ ಎಂಬುದು ಉಪಪದವಾಗಿರುವುದರಿಂದ ಪ್ರಕೃತ ಸೂತ್ರದಿಂದ ದಾ-ಧಾತುವಿನ ನಂತರ ಕ್ತ್ವಾ ಬಂದಿದೆ. ದಾತ್ತ್ವಾ ಎಂದಿದ್ದಾಗ ದೋ ದದ್ ಘೋಃ ಎಂಬ ಸೂತ್ರದಿಂದ ದಾ ಎಂಬುದಕ್ಕೆ ದದ್ ಆದೇಶವು ಬಂದಿರುವದು. ದ್ ಕಾರಕ್ಕೆ ಚರ್ತ್ವ ಬಂದು ದತ್ತ್ವಾ ಎಂದಾಗುತ್ತದೆ. ಕ್ತ್ವಾತೋಸುನ್‌ಕಸುನಃ ಎಂಬ ಸೂತ್ರದಿಂದ ಅದಕ್ಕೆ ಅವ್ಯಯ ಸಂಜ್ಞೆಯು ಬರುತ್ತದೆ. ಈಗ ಅಲಂ ಎಂಬುದಕ್ಕೆ ದತ್ತ್ವಾ ಎಂಬುದರ ಜೊತೆಗೆ ಉಪಪದಮತಿಙ್ ಎಂಬ ಸೂತ್ರದಿಂದ ಸಮಾಸ ಬರಬೇಕಾಗಿತ್ತು. ಆದರೆ ಅಮೈವಾವ್ಯಯೇನ ಎಂಬ ಸೂತ್ರದಿಂದ ಅವ್ಯಯದ ಜೊತೆಗೆ ಉಪಪದ ಸಮಾಸವು ಮಾಡಬೇಕಾದಾಗ ಅಮಂತಾವ್ಯಯದ ಜೊತೆಗೆ ಮಾತ್ರ ಮಾಡಬೇಕು ಎಂಬ ನಿಯಮವು ಇರುವುದರಿಂದ ಇಲ್ಲಿ ಸಮಾಸವು ಬರುವುದಿಲ್ಲ.

ಉದಾ:-ಪೀತ್ವಾ ಖಲು:-ನಿಷೇಧಾರ್ಥಕವಾದ ಖಲು ಎಂಬುದು ಉಪಪದ ವಾಗಿದ್ದಾಗ ಈ ಸೂತ್ರದಿಂದ ಪಾ-ಧಾತುವಿನ ನಂತರ ಕ್ತ್ವಾ ಪ್ರತ್ಯಯವು ಬಂದಿರುವುದು. ಪಾತ್ವಾ ಎಂದಿದ್ದಾಗ ಘುಮಾಸ್ಥಾಗಾಪಾಜಹಾತಿಸಾಮ್ ಹಲಿ ಎಂಬ ಸೂತ್ರದಿಂದ ಆಕಾರಕ್ಕೆ ಈಕಾರವು ಬಂದು ಪೀತ್ವಾ ಎಂದಾಗಿದೆ.

ಮಾ ಎಂಬುದು ಕೂಡಾ ಅಲಂ ಖಲು ಎಂಬ ಎರಡು ಅವ್ಯಯಗಳಿಗೆ ಮಾತ್ರವೇ ನಿಷೇದಾರ್ಥಕವಾಗಿದ್ದರೂ ಗ್ರಹಿಸಲ್ಪಡುತ್ತವೆ. ಆದುದರಿಂದ ಮಾಕಾರ್ಷೀತ್ ಎಂಬಲ್ಲಿ ಕ್ತ್ವಾ ಪ್ರತ್ಯಯವು ಬರಲಿಲ್ಲ. ಪ್ರತಿಷೇಧಾರ್ಥದಲ್ಲಿ ಮಾತ್ರ ಈ ಸೂತ್ರವು ಪ್ರವೃತ್ತವಾಗುತ್ತದೆ ಆದುದರಿಂದಲೇ ಅಲಙ್ಕಾರಃ ಎಂಬಲ್ಲಿ ಅಲಂ ಎಂಬುದು ಪ್ರಯುಕ್ತವಾದರೂ ಇದು ಭೂಷಣಾರ್ಥಕವಾಗಿರುವುದರಿಂದ ಕ್ತ್ವಾ ಪ್ರತ್ಯಯವು ಬರಲಿಲ್ಲ.

### (ಕ್ತ್ವಾ ಪ್ರತ್ಯಯವನ್ನು ವಿಧಿಸುವ ಮತ್ತೊಂದು ಸೂತ್ರ)

**ಸೂತ್ರ- 881 – ಸಮಾನಕರ್ತೃಕಯೋಃ ಪೂರ್ವಕಾಲೇ । (3-4-21)**

ವೃತ್ತಿ:-ಸಮಾನಕರ್ತೃಕಯೋಃ ಧಾತ್ವರ್ಥಯೋಃ ಪೂರ್ವಕಾಲೇ ವಿದ್ಯಮಾನಾ ದ್ಧಾತೋಃ ಕ್ತ್ವಾ ಸ್ಯಾತ್। ಭುಕ್ತ್ವಾ ವ್ರಜತಿ। ದ್ವಿತ್ವಮತನ್ತ್ರಮ್। ಭುಕ್ತ್ವಾ ಪೀತ್ವಾ ವ್ರಜತಿ।

ಅ.ವ್ಯ:- ಅಲಙ್ಖಲ್ವೋಃ ಪ್ರತಿಷೇಧಯೋಃ ಪ್ರಾಚಾಂ ಕ್ತ್ವಾ ಎಂಬ ಸೂತ್ರದಿಂದ ಕ್ತ್ವಾ ಎಂಬ ಪದವು ಅನುವೃತ್ತವಾಗುತ್ತದೆ. ಧಾತೋಃ, ಪ್ರತ್ಯಯಃ, ಮತ್ತು ಪರಶ್ಚ ಎಂಬವು ಅಧಿಕಾರ ಸೂತ್ರಗಳು.

ಅರ್ಥ: – ಸಮಾನ ಕರ್ತೃಕಗಳಾದ ಎರಡು ಕ್ರಿಯೆಗಳಲ್ಲಿ ಪೂರ್ವಕಾಲಕ್ಕೆ ಸಂಬದ್ಧವಾದ ಕ್ರಿಯೆಯನ್ನು ಬೋಧಿಸುವ ಧಾತುವಿನ ನಂತರ ಕ್ತ್ವಾ ಪ್ರತ್ಯಯವು ಬರುತ್ತದೆ.

ಉದಾ: – ಭುಕ್ತ್ವಾ ವ್ರಜತಿ. (ಊಟಮಾಡಿ ಹೊಗುತ್ತಿದ್ದಾನೆ) ಎಂಬಲ್ಲಿ ಭೋಜನ ಕ್ರಿಯೆಯನ್ನು ಬೋಧಿಸುವ ಭುಜ್ ಧಾತುವು ಗಮನ ಕ್ರಿಯೆಯನ್ನು ಬೋಧಿಸುವ ವ್ರಜ್ ಧಾತುವು ಪ್ರಯೋಗಿಸಲಾಗಿವೆ ಇವು ಏಕಕರ್ತೃಕವಾಗಿವೆ. ಇದರಲ್ಲಿ ಭೋಜನ

ಕ್ರಿಯೆಯು ಗಮನ ಕ್ರಿಯೆಗಿಂತ ಪೂರ್ವದಲ್ಲಿ ಜರುಗಿದೆ. ಆದುದರಿಂದ ಧಾತುವಿನ ಮೇಲೆ ಕ್ತ್ವಾ ಪ್ರತ್ಯಯವು ಸೇರಿಸಿದಾಗ ಜ ಕಾರಕ್ಕೆ ಚರ್ತ್ವವು ಬಂದು ಭುಕ್ತ್ವಾ ಎಂದು ರೂಪವು ಸಿದ್ಧವಾಗಿದೆ.

ಸಮಾನಕರ್ತೃಕಯೋಃ ಎಂದು ದ್ವಿವಚನದಲ್ಲಿ ಪ್ರಯೋಗಿಸಿರೋಣದರಿಂದ ಕ್ತ್ವಾ ಪ್ರತ್ಯಯವು ಎರಡು ಧಾತುಗಳನ್ನು ಪ್ರಯೋಗಿಸಿದಾಗ ಮಾತ್ರ ಬರುವುದು ಎಂದು ಸಂಶಯ ಬರುವುದು. ಅದಕ್ಕಾಗಿ ದ್ವಿವಚನಮತಂತ್ರಮ್ ಅಂದರೆ ದ್ವಿವಚನವು ವಿವಕ್ಷಿತವಾಗಿಲ್ಲ ಎಂದು ಹೇಳಲಾಗಿದೆ. ಎರಡು ಧಾತುಗಳಿಗಿಂತ ಹೆಚ್ಚು ಧಾತುಗಳು ಇರಬಹುದು ಎಂದು ಅರ್ಥವಾಗುತ್ತದೆ. ಆದುದರಿಂದಲೇ ಭುಕ್ತ್ವಾ, ಪೀತ್ವಾ ವ್ರಜತಿ ಮೊದಲಾದ ಉದಾಹರಣೆಗಳಲ್ಲಿ ಮೂರು ಧಾತುಗಳು ಇದ್ದರೂ ಪೂರ್ವಕಾಲವನ್ನು ಸೂಚಿಸುವ ಭುಜ್ ಮತ್ತು ಪಾ ಧಾತುಗಳಿಗೆ ಕ್ತ್ವಾ ಪ್ರತ್ಯಯವನ್ನು ಸೇರಿಸಲಾಗಿದೆ.

**(ಸೇಟ್ ಆದ ಕ್ತ್ವಾ ಪ್ರತ್ಯಯಕ್ಕೆ ಕಿತ್ವ ನಿಷೇಧ ಹೇಳುವ ಸೂತ್ರ)**

**ಸೂತ್ರ- 882 – ನ ಕ್ತ್ವಾ ಸೇಟ್ ।(1-2-18)**

ವೃತ್ತಿ:-ಸೇಟ್ ಕ್ತ್ವಾ ಕಿನ್ನ ಸ್ಯಾತ್।ಶಯಿತ್ವಾ। ಸೇಟ್ ಕಿಮ್? ಕೃತ್ವಾ।

ಅ.ವೃ:- ಅಸಂಯೋಗಾಲ್ಲಿಟ್ ಕಿತ್ ಎಂಬ ಸೂತ್ರದಿಂದ ಕಿತ್ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ:- ಇಟ್‌ನಿಂದ ಕೂಡಿದ ಕ್ತ್ವಾ ಪ್ರತ್ಯಯಕ್ಕೆ ಕಿದ್ವದ್ಭಾವವು ಬರುವುದಿಲ್ಲ.

ಸೂಚನೆ:-ಕ್ತ್ವಾದಲ್ಲಿ ಕ್-ಕಾರವು ಇತ್ ಆಗಿರುವುದರಿಂದ ಅದು ಕಿತ್ ಆಗಿಯೇ ಇದೆ. ಕಿತ್ ಆಗಿರುವ ಕ್ತ್ವಾವನ್ನು ಅಕಿತ್ ಆಗಿ ಭಾವಿಸುವುದರಿಂದ ಕಿದ್ವದ್ಭಾವವು ನಿಷೇಧಿಸಲಾಗಿದೆ. ಆದುದರಿಂದ ಗುಣದ ನಿಷೇಧವು ಆಗಲಿಲ್ಲ.

ಉದಾ:- ಶಯಿತ್ವಾ (ಮಲಗಿ) ಶೀಙ್ ಸ್ವಪ್ನೇ ಎಂಬುದು ಧಾತು. ಪೂರ್ವ ಸೂತ್ರದಿಂದ ಶೀ-ಧಾತುವಿನ ನಂತರ ಕ್ತ್ವಾ ಪ್ರತ್ಯಯವು ಬರುತ್ತದೆ. ಈ ಧಾತುವು ಸೇಟ್ ಆಗಿರುವುದರಿಂದ ಆರ್ಧಧಾತುಕಸ್ಯೇಡ್ವಲಾದೇಃ ಎಂಬ ಸೂತ್ರದಿಂದ ಕ್ತ್ವಾಗೆ ಇಡಾಗಮವು ಬಂದು ಶೀ+ಇ+ಕ್ತ್ವಾ ಎಂದಿರುತ್ತದೆ. ಆಗ ಈ ಕಾರಕ್ಕೆ ಗುಣವು ಬರಬೇಕಾಗಿತ್ತು ಆದರೆ ಕ್ಙಿತಿಚ ಎಂಬ ಸೂತ್ರದಿಂದ ಗುಣವು ನಿಷೇಧಿಸಲಾಗಿದೆ. ಆದ್ದರಿಂದ ಪ್ರಕೃತ ಸೂತ್ರವು ಕಿತ್ವ ಅಭಾವವನ್ನು ವಿಧಿಸುತ್ತದೆ. ಪ್ರಕೃತ ಸೂತ್ರದಿಂದ ಸೇಟ್ ಆಗಿರುವ ಕ್ತ್ವಾ ಪ್ರತ್ಯಯಕ್ಕೆ ಕಿತ್ವ ಇಲ್ಲದಿರುವುದರಿಂದ ಗುಣ ಬಂದು ಅಯ್ ಆದೇಶ ಬಂದು ಶಯಿತ್ವಾ ಎಂದು ರೂಪವು ಸಿದ್ಧಿಸುತ್ತದೆ.

ಈ ಕಿತ್ವ ನಿಷೇಧವು ಸೇಟ್ ಆದ ಕ್ತ್ವಾ ಪ್ರತ್ಯಯಕ್ಕೆ ಮಾತ್ರ ಬರುತ್ತದೆ ಆದ್ದರಿಂದ ಕೃತ್ವಾ ಎಂಬುದಕ್ಕೆ ಅನಿಟ್ ಆದ ಕ್ತ್ವಾ ಪ್ರತ್ಯಯವು ಕಿತ್ ಆಗಿರುವುದರಿಂದ ಗುಣವು ಬರುವುದಿಲ್ಲ.

**(ಕ್ತ್ವಾ, ಸನ್ ಪ್ರತ್ಯಯಗಳಿಗೆ ವಿಕಲ್ಪದಿಂದ ಕಿತ್ವ ಹೇಳುವ ಸೂತ್ರ)**

**ಸೂತ್ರ- 883- ರಲೋ ವ್ಯುಪಧಾದ್ಧಲಾದೇಃ ಸಂಶ್ಚ । (1-2-26)**

ವೃತ್ತಿ:- ಇವರ್ಣ-ಉವರ್ಣೋಪಧಾತ್ ಹಲಾದೇಃ ರಲನ್ತಾತ್ ಪರೌ ಕ್ತ್ವಾಸನೌ ಸೇಟೌ ವಾ ಕಿತೌ ಸ್ತಃ। ದ್ಯುತಿತ್ವಾ, ದ್ಯೋತಿತ್ವಾಲಿಖಿತ್ವಾ, ಲೇಖಿತ್ವಾವ್ಯುಪಧಾತ್ ಕಿಮ್? ವರ್ತಿತ್ವಾರಲಃ ಕಿಮ್? ಸೇವಿತ್ವಾಹಲಾದೇ ಕಿಮ್? ಏಷಿತ್ವಾ ಸೇಟ್ ಕಿಮ್? ಭುಕ್ತ್ವಾ।

ಪ.ಚ್ಛೇ. : - ರಲಃ, ವ್ಯುಪಧಾತ್, ಹಲಾದೇಃ, ಸನ್, ಚ ।

ಅ.ವೃ:- ಪೂಙಃ ಕ್ತ್ವಾ ಚ ಎಂಬ ಸೂತ್ರದಿಂದ ಕ್ತ್ವಾ ಎಂಬ ಪದವು ನ ಕ್ತ್ವಾ ಸೇಟ್ ಸೂತ್ರದಿಂದ ಸೇಟ್ ಎಂಬ ಪದವು ನೋಪಧಾತ್ ಥಫಾನ್ತಾದ್ವಾ ಎಂಬ ಸೂತ್ರದಿಂದ ನ ಎಂಬ ಪದವು ಅಸಂಯೋಗಾಲ್ಲಿಟ್ ಕಿತ್ ಎಂಬ ಸೂತ್ರದಿಂದ ಕಿತ್ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ: ಇ-ವರ್ಣ ಮತ್ತು ಉ-ವರ್ಣಗಳನ್ನು ಉಪಧೇಯಾಗಿವುಳ್ಳ, ಹಲಾದಿಯು, ರಲ್-ನ್ನು ಅಂತವಾಗಿವುಳ್ಳ ಧಾತುವಿಗಿಂತ ಪರವಾದ ಸೇಟ್‌ಗಳಾದ ಕ್ತ್ವಾ ಮತ್ತು ಸನ್ ಪ್ರತ್ಯಯಗಳು ವಿಕಲ್ಪದಿಂದ ಕಿತ್‌ಗಳಾಗುತ್ತವೆ. ರಲ್ ಎಂಬುದು ಪ್ರತ್ಯಾಹಾರವಾಗಿದೆ.

ಉದಾ:-ದ್ಯುತಿತ್ವಾ, ದ್ಯೋತಿತ್ವಾ: - (ಹೊಳೆದು) ದ್ಯುತ್ ಧಾತುವಿನ ನಂತರ ಕ್ತ್ವಾ ಪ್ರತ್ಯಯ ಬಂದ ಮೇಲೆ ಇಡಾಗಮವು ಬಂದು ದ್ಯುತ್+ಇ+ತ್ವಾ ಎಂದಿದ್ದಾಗ, ದ್ಯುತ್ ಧಾತುವು ಹಲಾದಿ ಮತ್ತು ಇದರ ಉಕಾರವು ಉಪಧೆಯಾಗಿದೆ. ತ-ಕಾರ ರೂಪವಾದ ರಲ್ ಅಂತದಲ್ಲಿದೆ ಆದುದರಿಂದ ಅದಕ್ಕಿಂತ ಪರದಲ್ಲಿರುವ ಕ್ತ್ವಾ ಪ್ರತ್ಯಯಕ್ಕೆ ಪ್ರಕೃತ ಸೂತ್ರದಿಂದ ಕಿತ್ವವು ವಿಕಲ್ಪವಾಗಿ ಬರುತ್ತದೆ. ಕಿತ್ವವು ಇಲ್ಲದ ಪಕ್ಷದಲ್ಲಿ ಗುಣವು ಬಂದು ದ್ಯೋತಿತ್ವಾ ಎಂದೂ ಕಿತ್ವ ಬಂದ ಪಕ್ಷದಲ್ಲಿ ಗುಣವು ಬಾರದೇ ದ್ಯುತಿತ್ವಾ ಎಂದೂ ವೈಕಲ್ಪಿಕ ರೂಪಗಳಾಗುತ್ತವೆ.

ಉದಾ:- ಲಿಖಿತ್ವಾ, ಲೇಖಿತ್ವಾ:- ಮೇಲೆ ಹೇಳಿದ ರಿತಿಯಲ್ಲಿಯೇ ಹಲಾದಿಯಾಗಿಯೂ ಇ-ಕಾರವನ್ನು ಉಪಧೆಯಾಗಿಯೂ ರಲನ್ತವಾಗಿಯೂ ಇರುವ ಲಿಖ್ ಧಾತುವಿನ ಪರದಲ್ಲಿ ಸೇಟ್ ಆದ ಕ್ತ್ವಾ ಪ್ರತ್ಯಯಕ್ಕೆ ಕಿತ್ವವು ವಿಕಲ್ಪವಾಗಿ ಬರುವುದರಿಂದ ಲಿಖಿತ್ವಾ, ಲೇಖಿತ್ವಾ ಎಂಬ ವೈಕಲ್ಪಿಕ ರೂಪಗಳು ಸಿದ್ಧವಾಗುತ್ತವೆ.

ಉದಾ: - ವ್ಯುಪಧಾತ್ ಕಿಮ್ ವರ್ತಿತ್ವಾ:- ಧಾತುವಿಗೆ ಇ-ಕಾರ ಅಥವಾ ಉ-ಕಾರ ಉಪಧೆಯಾಗಿ ಇರಬೇಕು ಎಂದು ಹೇಳಿರುವುದರಿಂದ ಋ-ಕಾರವನ್ನು ಉಪಧೆಯಾಗಿವುಳ್ಳ ವೃತ್ ಧಾತುವಿಗಿಂತ ಪರದಲ್ಲಿರುವ ಕ್ತ್ವಾಗೆ ಕಿತ್ವವು ವಿಕಲ್ಪವಾಗಿ ಇರುವುದಿಲ್ಲ. ಮೇಲಿನ ಸೂತ್ರದಿಂದ ಕಿತ್ವವು ನಿತ್ಯವಾಗಿ ನಿಷೇಧಿಸಲಾಗಿರುವುದರಿಂದ ಲಘೂಪಧ ಗುಣವು ಬಂದು ವರ್ತಿತ್ವಾ ಎಂಬ ಒಂದೇ ರೂಪವು ಸಿದ್ಧವಾಗುತ್ತದೆ.

ಉದಾ:- ರಲಃ ಕಿಮ್? ಸೇವಿತ್ವಾ:- (ಸೇವಿಸಿ) ಸಿವ್ ಧಾತುವು ಹಲಾದಿಯಾಗಿಯೂ ಇಕಾರವನ್ನು ಉಪಧೆಯಾಗಿಯುಳ್ಳದಾಗಿದ್ದರೂ, ರಲನ್ತವಾಗಿ ಇಲ್ಲದ್ದರಿಂದ ಅದಕ್ಕಿಂತ ಪರದಲ್ಲಿರುವ ಕ್ತ್ವಾ ಪ್ರತ್ಯಯಕ್ಕೆ ಕಿತ್ವವು ವಿಕಲ್ಪವಾಗಿ ಬರುವುದಿಲ್ಲ.ಪೂರ್ವ ಸೂತ್ರದಿಂದ ಕಿತ್ವವು ನಿತ್ಯವಾಗಿ ನಿಷೇಧಿಸಲ್ಪಟ್ಟು ಗುಣವು ಬಂದು ಸೇವಿತ್ವಾ ಎಂಬ ರೂಪವು

ಸಿದ್ಧಸುತ್ತದೆ.

ಉದಾ: ಹಲಾದೇಃ ಕಿಮ್? ಏಷಿತ್ವಾ:- ಇಷ್ ಧಾತುವು ಇ-ಕಾರವನ್ನು ಉಪಧೆಯಾಗಿವುಳ್ಳದ್ದು ರಲನ್ತವಾಗಿದ್ದರೂ ಹಲಾದಿಯಾಗಿ ಇಲ್ಲದ್ದರಿಂದ ಈ ಸೂತ್ರವು ಪ್ರವರ್ತಿಸುವುದಿಲ್ಲ. ಪೂರ್ವಸೂತ್ರದಿಂದ ಕಿತ್ವವು ನಿಷೇಧಿಸಲ್ಪಟ್ಟು ಗುಣವು ಬರುವುದರಿಂದ ಏಷಿತ್ವಾ ಎಂಬ ರೂಪವು ಸಿದ್ಧವಾಗಿದೆ.

ಉದಾ: – ಸೇಟ್ ಕಿಮ್? ಭುಕ್ತ್ವಾ:- (ಊಟಮಾಡಿ) "ಸೇಟ್ ಆದ ಕ್ತ್ವಾ ಸನ್ ಪ್ರತ್ಯಯಗಳಿಗೆ" ಎಂದು ಹೇಳಿರುವುದರಿಂದ ಅನಿಟ್ ಆದ ಭುಜ್ ಧಾತುವಿಗಿಂತ ಪರವಾದ ಕ್ತ್ವಾ ಪ್ರತ್ಯಯಕ್ಕೆ ಇಡಾಗಮವು ಬರುವುದಿಲ್ಲವಾದ್ದರಿಂದ ಇದರ ವಿಷಯದಲ್ಲಿ ಈ ಸೂತ್ರವು ಪ್ರವರ್ತಿಸುವುದಿಲ್ಲ. ಪೂರ್ವ ಸೂತ್ರವು ಪ್ರವರ್ತಿಸುವುದಿಲ್ಲ. ಭುಜ್+ಕ್ತ್ವಾ ಎಂದಿದ್ದಾಗ ಜ್ ಕಾರಕ್ಕೆ ಕುತ್ವದಿಂದ ಕ್-ಕಾರವು ಬಂದು ಭುಕ್ತ್ವಾ ಎಂಬ ಗುಣಬಾರದ ರೂಪವು ಮಾತ್ರ ಸಿದ್ಧಿಸುತ್ತದೆ.

**(ವೈಕಲ್ಪಿಕವಾಗಿ ಇಟ್- ಆಗಮವನ್ನು ವಿಧಿಸುವ ಸೂತ್ರ)**

**ಸೂತ್ರ- 884- ಉದಿತೋವಾ (7-2-56)**

ವೃತ್ತಿ:-ಉದಿತಃ ಪರಸ್ಯ ಕ್ತ್ವ ಇಟ್ ವಾ। ಶಮಿತ್ವಾ, ಶಾನ್ತ್ವಾ। ದೇವಿತ್ವಾ, ದ್ಯೂತ್ವಾ ದಧಾತೇರ್ಹಿಃ, ಹಿತ್ವಾ

ಪ.ಚ್ಛೇ.:- ಉದಿತಃ, ವಾ।

ಅ.ವೃ:- ಜೃವ್ರಶ್ಚ್ಯೋಃ ಕ್ತ್ವಿ ಎಂಬ ಸೂತ್ರದಿಂದ ವಿಭಕ್ತಿ ಪರಿಣಾಮಮಾಡಿದ ಮೇಲೆ ಕ್ತ್ವಃ ಮತ್ತು ವಸತಿ ಕ್ಷುಧೋರಿಟ್ ಎಂಬ ಸೂತ್ರದಿಂದ ಇಟ್ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ:- ಉದಿತ್ (ಉದಿತ್ ಎಂದರೆ ಹ್ರಸ್ವ ಉ ಕಾರವನ್ನು ಇತ್ತಾಗಿವುಳ್ಳದ್ದು)ಆದ ಧಾತುವಿಗಿಂತ ಪರದಲ್ಲಿ ಇರುವ ಕ್ತ್ವಾ ಪ್ರತ್ಯಯಕ್ಕೆ ಇಡಾಗಮವು ವೈಕಲ್ಪಿಕವಾಗಿ ಬರುವುದು.

ಉದಾ:- ಶಮಿತ್ವಾ, ಶಾನ್ತ್ವಾ (ಶಾಂತವಾಗಿ) ಶಮು ಉಪಶಮೇ ಎಂಬ ಸೇಟ್ ಧಾತುವು ಉದಿತ್ ಆಗಿರುವುದರಿಂದ ಅದರ ಪರದಲ್ಲಿ ಇರುವ ಕ್ತ್ವಾ ಪ್ರತ್ಯಯಕ್ಕೆ ಪ್ರಕೃತ ಸೂತ್ರದಿಂದ ಇಡಾಗಮವು ವಿಕಲ್ಪವಾಗಿ ಬರುತ್ತದೆ. ಇಡಾಗಮ ಬಂದಾಗ ಶಮಿತ್ವಾ ಎಂದು ರೂಪವಾಗುತ್ತದೆ. ಇಡಾಗಮ ಬಾರದ ಪಕ್ಷದಲ್ಲಿ ಅನುನಾಸಿಕಸ್ಯ ಕ್ವಿಝಲೋಃ ಎಂಬ ಸೂತ್ರದಿಂದ ಉಪಧೆಯಾದ ಅ-ಕಾರಕ್ಕೆ ದೀರ್ಘಬಂದು ಶಾಮ್+ತ್ವಾ ಎಂದಿದ್ದಾಗ ಮ್ ಕಾರಕ್ಕೆ ಅನುಸ್ವಾರ ಪರಸರ್ಣಗಳು ಬಂದು ಶಾನ್ತ್ವಾ ಎಂದು ರೂಪವು ಸಿದ್ಧವಾಗುತ್ತದೆ.

ಉದಾ:- ದೇವಿತ್ವಾ, ದ್ಯೂತ್ವಾ:-(ಜೂಜಾಡಿ) ಉದಿತ್ ಆದ ಮತ್ತು ಸೇಟ್ ಆದ ದಿವು ಧಾತುವಿಗಿಂತ ಪರದಲ್ಲಿರುವ ಕ್ತ್ವಾ ಪ್ರತ್ಯಯಕ್ಕೆ ಪ್ರಕೃತ ಸೂತ್ರದಿಂದ ಇಟ್ ವಿಕಲ್ಪವಾಗಿ ಬರುತ್ತದೆ. ಇಡಾಗಮ ಬಂದ ಪಕ್ಷದಲ್ಲಿ ದಿವ್+ಇ+ಕ್ತ್ವಾ ಎಂದಿದ್ದಾಗ ನ

ಕ್ತ್ವಾ ಸೇಟ್ ಎಂಬ ಸೂತ್ರದಿಂದ ಕಿತ್ವವು ನಿಷೇಧಿಸಲಾಗಿರುವುದರಿಂದ ಲಘೂಪಧಗುಣ ಬಂದು ದೇವಿತ್ವಾ ಎಂದು ರೂಪವಾಗುತ್ತದೆ. ಇಡಾಗಮ ಬಾರದ ಪಕ್ಷದಲ್ಲಿ ಚ್ಛ್ವೋಃಶೂಡನುನಾಸಿಕೇ ಚ ಎಂಬ ಸೂತ್ರದಿಂದ ವಕಾರಕ್ಕೆ ಊಠ್ ಆದೇಶವು ಬಂದು ದಿ+ಊ+ಕ್ತ್ವಾ ಎಂದಿದ್ದಾಗ ಯಣಾದೇಶ ಬಂದು ದ್ಯೂತ್ವಾ ಎಂದು ರೂಪವು ಸಿದ್ಧಿಸುತ್ತದೆ.

ಉದಾ:- ಹಿತ್ವಾ:- (ಧರಿಸಿ) ಧಾ ಧಾತುವಿನ ಪರದಲ್ಲಿ ಕ್ತ್ವಾ ಪ್ರತ್ಯಯವು ಇರುತ್ತದೆ. ತ್ವಾ ಎಂಬುದು ತ-ಕಾರಾದಿಯಾದ ಕಿತ್- ಪ್ರತ್ಯಯವಾಗಿರುವುದರಿಂದ ದಧಾತೇರ್ಹಿಃ ಎಂಬ ಸೂತ್ರದಿಂದ ಧಾ ಎಂಬುದಕ್ಕೆ ಹಿ ಆದೇಶವು ಬಂದು ಹಿತ್ವಾ ಎಂಬ ರೂಪವು ಸಿದ್ಧಿಸುತ್ತದೆ.

**(ಹಿ-ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ- 885 - ಜಹಾತೇಶ್ಚ ಕ್ತ್ವಿ। (7-4-43)**

ವೃತ್ತಿ:- ಹಿತ್ವಾ ಹಾಜಸ್ತು-ಹಾತ್ವಾ

ಪ.ಚ್ಛೇ.:- ಜಹಾತೇಃ, ಚ, ಕ್ತ್ವಿ

ಅ.ವೃ:- 'ದಧಾತೇರ್ಹಿಃ' ಸೂತ್ರದಿಂದ ಹಿಃ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ:- ಓಹಾಕ್ ತ್ಯಾಗೇ ಎಂಬ ಧಾತುವಿಗೂ ಕ್ತ್ವಾ ಪ್ರತ್ಯಯವು ಪರದಲ್ಲಿದ್ದಾಗ ಹಿ ಎಂಬ ಆದೇಶವು ಬರುವುದು.

ಉದಾ:- ಹಿತ್ವಾ:- (ತ್ಯಜಿಸಿ) ಓಹಾಕ್ ತ್ಯಾಗೇ ಎಂಬ ಧಾತುವಿಗಿಂತ ಪರದಲ್ಲಿ ಕ್ತ್ವಾ ಪ್ರತ್ಯಯವು ಇರುವುದರಿಂದ ಹಾತ್ವಾ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ಹಿ ಆದೇಶವು ಬರುವುದರಿಂದ ಹಿತ್ವಾ ಎಂಬ ರೂಪವು ಸಿದ್ಧಿಸುತ್ತದೆ.

ವಿವರಣೆ:- ಪ್ರಕೃತ ಸೂತ್ರದಿಂದ ಓಹಾಕ್ ತ್ಯಾಗೇ ಎಂಬ ಧಾತುವಿಗೆ ಮಾತ್ರ ಹಿ ಆದೇಶವು ವಿಧಿಸಲಾಗಿರುವುದರಿಂದ ಓಹಾಙ್ ಗತೌ ಎಂಬ ಧಾತುವಿಗೆ ಈ ಆದೇಶವು ಬರುವುದಿಲ್ಲ. ಅದರ ಪರದಲ್ಲಿ ಕ್ತ್ವಾ ಪ್ರತ್ಯಯವನ್ನು ಸೇರಿಸಿದಾಗ ಹಾತ್ವಾ ಎಂಬ ರೂಪವು ಸಿದ್ಧಿಸುತ್ತದೆ.

**(ಲ್ಯಪ್ -ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ- 886- ಸಮಾಸೇನಞ್ಪೂರ್ವೇ ಕ್ತ್ವೋ ಲ್ಯಪ್। (7-1-37)**

ವೃತ್ತಿ:- ಅವ್ಯಯ ಪೂರ್ವಪದೇ ಅನಞ್-ಸಮಾಸೇ ಕ್ತ್ವೋ ಲ್ಯಪ್-ಆದೇಶಃ ಸ್ಯಾತ್। ತುಕ್।ಪ್ರಕೃತ್ಯ। ಅನಞ್ ಕಿಮ್? ಅಕೃತ್ವಾ।

ಪ.ಚ್ಛೇ:- ಸಮಾಸೇ, ಅನಞ್-ಪೂರ್ವೇ, ಕ್ತ್ವಃ, ಲ್ಯಪ್।

ಅರ್ಥ:- ನಞ್ ಭಿನ್ನವಾದ, ಅವ್ಯಯವನ್ನು ಪೂರ್ವಪದವಾಗಿವುಳ್ಳ ಸಮಾಸದಲ್ಲಿ ಕ್ತ್ವಾ ಪ್ರತ್ಯಯಕ್ಕೆ ಲ್ಯಪ್ ಆದೇಶವು ಬರುತ್ತದೆ. ಲ್ಯಪ್‌ನಲ್ಲಿ ಯ ಮಾತ್ರ ಉಳಿಯುತ್ತದೆ.

ಉದಾ:- ಪ್ರಕೃತ್ಯ (ವಿಶೇಷವಾಗಿ ಮಾಡಿ) ಕ್ತ್ವಾ ಪ್ರತ್ಯಯಾಂತವಾದ ಕೃತ್ವಾ ಎಂಬ

ಕೃದಂತ ಅವ್ಯಯದ ಜೊತೆಗೆ ಪ್ರ ಎಂಬ ಉಪಸರ್ಗಕ್ಕೆ ಕುಗತಿಪ್ರಾದಯಃ ಎಂಬ ಸೂತ್ರದಿಂದ ಸಮಾಸವಾಗುತ್ತದೆ. ಅನಂತರ ಪ್ರಕೃತ ಸೂತ್ರದಿಂದ ಕ್ತ್ವಾಗೆ ಲ್ಯಪ್ ಆದೇಶವು ಬಂದು ಪ್ರ+ಕೃ+ಯ ಎಂದಿದ್ದಾಗ ಲ್ಯಪ್ ಪ್ರತ್ಯಯವು ಪಿತ್ ಆಗಿರುವುದರಿಂದ ಹ್ರಸ್ವಸ್ಯ ಪಿತಿ ಕೃತಿ ತುಕ್ ಎಂಬ ಸೂತ್ರದಿಂದ ತುಕ್ ಆಗಮವು ಬಂದು ಪ್ರಕೃತ್ಯ ಎಂಬ ರೂಪವು ಸಿದ್ಧಿಸುತ್ತದೆ.

ನಞ್‌ಗಿಂತ ಭಿನ್ನವಾದ ಅವ್ಯಯವು ಪೂರ್ವಪದವಾಗಿ ಇರಬೇಕು ಎಂಬ ನಿಯಮದಿಂದ ಕೃತ್ವಾ ಎಂಬ ಕೃದಂತದ ಜೊತೆಗೆ ನಞ್ ಎಂಬ ಸೂತ್ರದ ಜೊತೆಗೆ ಸಮಾಸ ಮಾಡಿದ ಮೇಲೆ ನಞ್+ಕೃತ್ವಾ= ನ+ಕೃತ್ವಾ ಎಂದಿದ್ದಾಗ ನಕಾರದಲ್ಲಿರುವ ನ್-ಕಾರವು ನಲೋಪೋ ನಯಃ ಎಂಬ ಸೂತ್ರದಿಂದ ನ್-ಕಾರಕ್ಕೆ ಲೋಪಬಂದು ಅ+ಕೃತ್ವಾ= ಅಕೃತ್ವಾ ಎಂದು ರೂಪವಾಗುತ್ತದೆ ಇಲ್ಲಿ ಕ್ತ್ವಾಗೆ ಲ್ಯಪ್ ಬರಲಿಲ್ಲ.

**(ಣಮುಲ್- ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ- 887 - ಆಭೀಕ್ಷ್ಣ್ಯೇ ಣಮುಲ್ ಚ। (3-4-22)**

ವೃತ್ತಿ:- ಆಭೀಕ್ಷ್ಣ್ಯೇ ದ್ಯೋತ್ಯೇ ಪೂರ್ವವಿಷಯೇ ಣಮುಲ್ ಸ್ಯಾತ್ ಕ್ತ್ವಾ ಚ।

ಅ.ವೃ:- ಸಮಾನಕರ್ತೃಕಯೋಃ ಪೂರ್ವಕಾಲೇ ಎಂಬ ಸೂತ್ರದಿಂದ ಪೂರ್ವಕಾಲೇ ಎಂಬ ಪದವು ಅಲಂ ಖಲ್ವೋಃ ಪ್ರತಿಷೇಧಯೋಃ ಪ್ರಾಚಾಮ್ ಕ್ತ್ವಾ ಎಂಬ ಸೂತ್ರದಿಂದ ಕ್ತ್ವಾ ಎಂಬ ಪದವು ಅನುವೃತ್ತವಾಗುತ್ತದೆ. ಧಾತೋಃ, ಪ್ರತ್ಯಯಃ ಮತ್ತು ಪರಶ್ಚ ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ:- ನೈರಂತರ್ಯವು ಎಂಬ ಅರ್ಥವು ವ್ಯಕ್ತವಾಗುವಾಗ ಕ್ತ್ವಾ ಪ್ರತ್ಯಯವು ಬರಬೇಕಾದ ಸ್ಥಳದಲ್ಲಿ ಣಮುಲ್ ಪ್ರತ್ಯಯವೂ ಸಹ ಬರುತ್ತದೆ ಚ ಎಂಬುದರಿಂದ ಕ್ತ್ವಾ ಪ್ರತ್ಯಯವು ಬರುತ್ತದೆ. ಣಮುಲ್‌ನಲ್ಲಿ ಅಂ ಮಾತ್ರ ಉಳಿಯುತ್ತದೆ. ಈ ಪ್ರತ್ಯಯವನ್ನು ಸೇರಿಸಿದಾಗ ಕೃನ್ಮೇಜನ್ತಃ ಎಂಬ ಸೂತ್ರದಿಂದ ಅವ್ಯಯಗಳಾಗುತ್ತವೆ.

**(ದ್ವಿತ್ವವನ್ನು ವಿಧಿಸುವ ಸೂತ್ರ)**

**ಸೂತ್ರ- 888 - ನಿತ್ಯವೀಪ್ಸಯೋಃ (8-1-4)**

ವೃತ್ತಿ:- ಆಭೀಕ್ಷ್ಣ್ಯೇ ವೀಪ್ಸಾಯಾಮ್ ಚ ದ್ಯೋತ್ಯೇ ಪದಸ್ಯ ದ್ವಿತ್ವಮ್ ಸ್ಯಾತ್। ಆಭೀಕ್ಷ್ಣ್ಯಮ್ ತಿಙನ್ತೇಷು ಅವ್ಯಯಸಂಜ್ಞಕೇಷು ಚ ಕೃದನ್ತೇಷು ಚ । ಸ್ಮಾರಂ ಸ್ಮಾರಂ ನಮತಿ ಶಿವಮ್। ಸ್ಮೃತ್ವಾ ಸ್ಮೃತ್ವಾ ವಾ। ಪಾಯಮ್ ಪಾಯಮ್। ಭೋಜಮ್ ಭೋಜಮ್। ಶ್ರಾವಂ ಶಾವಮ್।

ಅ.ವೃ:- ಪದಸ್ಯ ಎಂಬ ಸೂತ್ರವು ಅನುವೃತ್ತವಾಗುತ್ತದೆ. ಸರ್ವಸ್ಯ ದ್ವೇ ಎಂಬುದು ಅಧಿಕಾರ ಸೂತ್ರ.

ಅರ್ಥ: - ಆಭೀಕ್ಷ್ಣ್ಯಾರ್ಥ ಮತ್ತು ವೀಪ್ಸಾರ್ಥ ವ್ಯಕ್ತವಾಗುವಾಗ ಪದಕ್ಕೆ ದಿತ್ವವು ಬರುತ್ತದೆ. ನಿತ್ಯವೆಂಬುದಕ್ಕೆ ಪೌನಃ ಪುನ್ಯ ಅಂದರೆ ಆಭೀಕ್ಷ್ಣ್ಯ ಎಂದರ್ಥ ವೀಪ್ಸ

ಎಂದರೆ ಸರ್ವವ್ಯಾಪ್ತಿ ಎಂದರ್ಥ (ಎಲ್ಲದಕ್ಕೂ ಸಂಬಂಧಿಸಿರುವುದು) ಈ ನೈರಂತರ್ಯವೆಂಬುದು ತಿಙನ್ತವಾಚ್ಯ ಕ್ರಿಯೆಗಳ ವಿಷಯದಲ್ಲೂ ಅವ್ಯಯ ಸಂಜ್ಞಕಗಳಾದ ಕೃದಂತಗಳಿಂದ ಬೋಧ್ಯಗಳಾದ ಕ್ರಿಯೆಗಳ ವಿಷಯದಲ್ಲಿ ಪ್ರಯೋಗಿಸಲಾಗುತ್ತದೆ.

ಉದಾ: ಸ್ಮಾರಂ ಸ್ಮಾರಂ ನಮತಿ ಶಿವಮ್. (ಶಿವನನ್ನು ಸ್ಮರಿಸಿ ಸ್ಮರಿಸಿ ನಮಸ್ಕರಿಸುತ್ತಾನೆ) ಇಲ್ಲಿ ಸ್ಮರಣ ಕ್ರಿಯೆಯು ಸತತವಾಗಿ ಆಗುತ್ತಿರುವುದನ್ನು ಸೂಚಿಸುವುದಕ್ಕಾಗಿ ಸ್ಮ-ಧಾತುವಿನ ನಂತರ ಪೂರ್ವಸೂತ್ರದಿಂದ ಣಮುಲ್ ಪ್ರತ್ಯಯವು ಬಂದಿದೆ. ಣಮುಲ್ ಣಿತ್‌ಆಗಿರುವುದರಿಂದ ವೃದ್ಧಿಬಂದು ಸ್ಮಾರಂ ಎಂದು ರೂಪವು ಸಿದ್ಧವಾಗಿದೆ. ಪ್ರಕೃತ ಸೂತ್ರದಿಂದ ಅದಕ್ಕೆ ದಿತ್ವವು ಬಂದು ಸ್ಮಾರಂ ಸ್ಮಾರಂ ಎಂದು ರೂಪವಾಗಿದೆ. ಣಮುಲ್ ಪ್ರತ್ಯಯವು ಬಾರದ ಪಕ್ಷದಲ್ಲಿ ಕ್ತ್ವಾ ಪ್ರತ್ಯಯವು ಬಂದು ಪ್ರಕೃತ ಸೂತ್ರದಿಂದ ಆ ಕ್ತ್ವಾ ಪ್ರತ್ಯಯಾಂತಕ್ಕೆ ದ್ವಿತ್ವವು ಬಂದು ಸ್ಮೃತ್ವಾ ಸ್ಮೃತ್ವಾ ಎಂದು ರೂಪವಾಗಿದೆ.

ಉದಾ: – ಪಾಯಮ್‌ಪಾಯಮ್ । ಪಾ-ಪಾನೇ ಅಥವಾ ಪಾರಕ್ಷಣೇ ಎಂಬ ಧಾತುವಿನ ನಂತರ ಆಭೀಕ್ಷ್ಣ್ಯಾರ್ಥದಲ್ಲಿ ಣಮುಲ್ ಪ್ರತ್ಯಯವು ಬರುತ್ತದೆ. ಆತೋಯುಕ್ ಚಿಣ್‌ಕೃತೋಃ ಎಂಬ ಸೂತ್ರದಿಂದ ಯುಕ್ ಆಗಮವು ಬರುತ್ತದೆ ನಿತ್ಯವೀಪ್ಸಯೋಃ ಎಂಬ ಸೂತ್ರದಿಂದ ದ್ವಿತ್ವವು ಬಂದು ಪಾಯಮ್ ಪಾಯಮ್ ಎಂಬ ರೂಪವು ಸಿದ್ಧಸುತ್ತದೆ. (ಕುಡಿದು ಕುಡಿದು ಅಥವಾ ರಕ್ಷಿಸಿ ರಕ್ಷಿಸಿ) ಎಂಬ ಅರ್ಥವನ್ನು ಕೂಡುತ್ತದೆ.

ಉದಾ: – ಭೋಜಮ್‌ಭೋಜಮ್ (ಮಾತು ಮಾತಿಗೆ ಊಟಮಾಡಿ) ಬುಜ್ ಧಾತುವಿನ ನಂತರ ಣಮುಲ್ ಪ್ರತ್ಯಯವು ಬಂದು ನಂತರ ಲಘೂಪದ ಗುಣವು ಬರುತ್ತದೆ. ಪ್ರಕೃತ ಸೂತ್ರದಿಂದ ದ್ವಿತ್ವವು ಬರುತ್ತದೆ.

ಉದಾ: ಶ್ರಾವಂಶಾವಮ್ (ಕೇಳಿ ಕೇಳಿ) ಶ್ರು-ಧಾತುವಿನ ನಂತರ ಆಭೀಕ್ಷ್ಣ್ಯಾರ್ಥದಲ್ಲಿ ಣಮುಲ್ ಪ್ರತ್ಯಯವು ಬರುತ್ತದೆ.ಉಕಾರಕ್ಕೆ ವೃದ್ಧಿ ನಂತರ ಅವಾದೇಶ ಬರುತ್ತದೆ. ಪ್ರಕೃತ ಸೂತ್ರದಿಂದ ದ್ವಿತ್ವವು ಬರುತ್ತದೆ.

**(ಣಮುಲ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-889-ಅನ್ಯಥೈವಂ-ಕಥಮಿತ್ಥಮ್‌ಸು ಸಿದ್ಧಾಪ್ರಯೋಗಶ್ಚೇತ್** । (3-4-27)

ವೃತ್ತಿ:- ಏಷು ಕೃಞಃ ಣಮುಲ್ ಸ್ಯಾತ್, ಸಿದ್ಧಃ ಅಪ್ರಯೋಗಃ ಅಸ್ಯ ಏವಂ ಭೂತಶ್ಚೇತ್ ಕೃಞ್। ವ್ಯರ್ಥತ್ವಾತ್ ಪ್ರಯೋಗಾನರ್ಹ ಇತ್ಯರ್ಥಃ 1. ಅನ್ಯಥಾಕಾರಮ್ (ಭುಙ್ಕ್ತೇ)। 2. ಏವಙ್ಕಾರಮ್ (ಭುಙ್ಕ್ತೇ)। (ಕಥಙ್ಕಾರಮ್)। 3. ಇತ್ಥಙ್ಕಾರಮ್ ಭುಙ್ಕ್ತೇ। ಸಿದ್ಧೇತಿ ಕಿಮ್? ಶಿರೋಽನ್ಯಥಾ ಕೃತ್ವಾ ಭುಙ್ಕ್ತೇ।

**ಇತಿ ಉತ್ತರ ಕೃದನ್ತ ಪ್ರಕರಣಮ್** ॥36॥

ಪ.ಚ್ಛೇ. :- ಅನ್ಯಥೈವಮ್ ಕಥಮಿತ್ಥಮ್‌ಸು, ಸಿದ್ಧಾಪ್ರಯೋಗಃ, ಚೇತ್

ಅ.ವೃ:- ಕರ್ಮಣ್ಯಾಕ್ರೋಶೇ ಕೃಞಃ ಖಮುಞ್ ಎಂಬ ಸೂತ್ರದಿಂದ ಕೃಞ್ ಎಂಬ ಪದವು ಸ್ವಾದುಮಿ ಣಮುಲ್ ಎಂಬ ಸೂತ್ರದಿಂದ ಣಮುಲ್ ಎಂಬ ಪದವು ಅನುವೃತ್ತಿಯಾಗುತ್ತದೆ. ಧಾತೋಃ, ಪ್ರತ್ಯಯಃ ಮತ್ತು ಪರಶ್ಚ ಎಂಬವು ಅಧಿಕಾರ

ಸೂತ್ರಗಳು.

ಅರ್ಥ: – ಅನ್ಯಥಾ, ಏವಂ, (ಕಥಮ್) ಮತ್ತು ಇತ್ಥಮ್ ಎಂಬ ಅವ್ಯಯಗಳು ಉಪಪದಗಳಾಗಿದ್ದಾಗ ಸಿದ್ಧಾಪ್ರಯೋಗವಾಗಿರುವ ಕೃಞ್ ಧಾತುವಿಗೆ ಣಮುಲ್ ಪ್ರತ್ಯಯವು ಬರುತ್ತದೆ. ಸಿದ್ಧಾಪ್ರಯೋಗವೆಂದರೆ ಯಾವುದೊಂದರ ಅಪ್ರಯೋಗವು ಸಿದ್ಧವಾಗಿರುವದೋ ಅದು, ಅಂದರೆ ಈ ಕೃಞ್ ಧಾತುವನ್ನು ಪ್ರಯೊಗಿಸದಿದ್ದರೂ ಅರ್ಥದಲ್ಲಿ ಯಾವ ವಿಶೇಷವು ಇಲ್ಲದಿರುವುದರಿಂದ ಇದರ ಪ್ರಯೋಗವು ವ್ಯರ್ಥವೆಂದು ಅರ್ಥ.

ಉದಾ1.–ಅನ್ಯಥಾಕಾರವಮ್ (ಭುಙ್ಕ್ತೇ)। 2. ಏವಙ್ಕಾರಮ್ (ಭುಙ್ಕ್ತೇ) (ಕಥಙ್ಕಾರಮ್)। 3. ಇತ್ಥಙ್ಕಾರಮ್ (ಭುಙ್ಕ್ತೇ) [1. ಬೇರೆ ರೀತಿಯಿಂದ ತಿನ್ನುತ್ತಾನೆ. 2. ಈ ರೀತಿಯಾಗಿ ತಿನ್ನುತ್ತಾನೆ. (ಹೀಗೆ ತಿನ್ನುತ್ತಾನೆ) 3. ಈ ರೀತಿಯೇ ತಿನ್ನುತಾನೆ.] ಈ ನಾಲ್ಕು ಪ್ರಯೋಗಗಳಲ್ಲಿ ಕೃ–ಧಾತುವು ಇದೆ. ಕ್ರಮವಾಗಿ ಅನ್ಯಥಾ ಏವಂ, (ಕಥಮ್) ಮತ್ತು ಇತ್ಥಮ್ ಎಂಬವು ಉಪಪದಗಳಾಗಿವೆ. ಅನ್ಯಥಾ ಭುಙ್ಕ್ತೇ ಎಂಬುದಕ್ಕೆ ಯಾವ ಅರ್ಥವಿದೆಯೋ ಅದೇ ಅರ್ಥ ಅನ್ಯಥಾ ಕಾರಮ್ ಎಂಬುದಕ್ಕೂ ಇದೆ. ಕೃ–ಧಾತುವಿನ ಪ್ರಯೋಗದಿಂದ ವಿಶೇಷಾರ್ಥವು ಯಾವುದೂ ಇರುವದಿಲ್ಲಾ ಆದ್ದರಿಂದ ಪ್ರಕೃತ ಸೂತ್ರದಿಂದ ಕೃಞ್ ಧಾತುವಿನ ನಂತರ ಣಮುಲ್ ಪ್ರತ್ಯಯವು ಬಂದು ನಂತರ ಅಚೋಞ್ಣಿತಿ ಎಂಬ ಸೂತ್ರದಿಂದ ವೃದ್ಧಿ ಮಾಡಿದಾಗ ಅನ್ಯಥಾಕಾರಮ್ ಇತ್ಯಾದಿ ರೂಪಗಳು ಆಗಿವೆ.

ಸಿದ್ಧಾಪ್ರಯೋಗಃ ಎಂದು ಹೇಳಿರುವುದರಿಂದ ಕೃಞ್ ಧಾತುವಿನ ಪ್ರಯೋಗದಿಂದ ವಿಶೇಷವಾದ ಅರ್ಥವಿದ್ದಾಗ ಪ್ರಕೃತ ಸೂತ್ರವು ಉಪಯುಕ್ತವಾಗುತ್ತದೆ. ಆದುದರಿಂದ ಶಿರೋನ್ಯಥಾ ಕೃತ್ವಾ ಮೊದಲಾದ ಪ್ರಯೋಗಗಳಲ್ಲಿ ಶಿರಸ್ಸನ್ನು ಬೇರೆ ರೀತಿಯಲ್ಲಿ ಇಟ್ಟುಕೊಂಡು ಎಂದು ಕೃಞ್ ಧಾತುವಿನ ಅರ್ಥವನ್ನು ಬೋಧಿಸೋಣದರಿಂದ ಅನ್ಯಥಾ ಎಂಬುದು ಉಪಪದವಾಗಿದ್ದರೂ ಣಮುಲ್ ಪ್ರತ್ಯಯವು ಬರುವುದಿಲ್ಲ. ಕ್ತ್ವಾ ಪ್ರತ್ಯಯ ಮಾತ್ರ ಬರುತ್ತದೆ.

**(ಉತ್ತರ ಕೃದನ್ತ (36)ಪ್ರಕರಣವು ಸಮಾಸ್ತವು)**

# ಪ್ರಕರಣ 37: ವಿಭಕ್ತ್ಯರ್ಥ (ಕಾರಕ)

**(ಸೂತ್ರ ಸಂಖ್ಯೆ 890 ರಿಂದ 905 ವರೆಗೆ)**

ಗ್ರಂಥಕರ್ತೃವಾದ ವರದರಾಜರು ಉತ್ತರಕೃದನ್ತವನ್ನು ಮುಗಿಸಿದ ನಂತರ "ವಿಭಕ್ತ್ಯರ್ಥ" ಪ್ರಕರಣವನ್ನು ಆರಂಭಿಸುತ್ತಾರೆ. "ವಿಭಕ್ತಿಶ್ಚ(1-4-104)" ಸೂತ್ರದಿಂದ 'ಸುಪ್' ಮತ್ತು 'ತಿಜ್' ಪ್ರತ್ಯಯಗಳನ್ನು ಗುರುತಿಸಿದರೂ 'ತಿಜ್' ಪ್ರತ್ಯಯಗಳ ಬಗ್ಗೆ "ದಶವಿಕರಣಿ" ಮೊದಲಾದ ಪ್ರಕರಣದಲ್ಲಿ ಅವುಗಳ ಉಪಯೋಗವನ್ನು ವಿಸ್ತಾರವಾಗಿ ಹೇಳಿರುವುದರಿಂದ ಈಗ ಈ ಪ್ರಕರಣದಲ್ಲಿ "ಸುಬರ್ಥ" ಪ್ರಯೋಗಗಳ ಬಗ್ಗೆ ವಿಚಾರಣೆ ಮಾಡಿರುವುದರಿಂದ ಇದಕ್ಕೆ "ಸುಬರ್ಥ"(ವಿಭಕ್ತಿ) ಪ್ರಕರಣವೆಂದು ಹೇಳುತ್ತಾರೆ. 'ಕ್ರಿಯಾಂ ಕರೋತಿ ನಿವರ್ತಯತಿ ಇತಿ'- "ಕಾರಕಂ" ಎಂಬ ಲಕ್ಷಣದಿಂದ ಇವು ಕರ್ತೃ, ಕರ್ಮ, ಕರಣ, ಸಂಪ್ರದಾನ, ಅಪಾದಾನ ಮತ್ತು ಅಧಿಕರಣವೆಂಬ ಆರು ಕಾರಕಗಳಾಗಿರುತ್ತವೆ. 'ಸಂಬಂಧ' ಸೂಚಕವಾದ 'ಷಷ್ಠೀ' ವಿಭಕ್ತಿಯನ್ನು ಸಾಮಾನ್ಯವಾಗಿ ಕಾರಕವಾಗಿ ಪರಿಗಣಿಸಲಿಲ್ಲ. ಹೀಗಾಗಿ 'ಷಷ್ಠೀ' ವಿಭಕ್ತಿಯು ಯಾವಾಗಲೂ ಕಾರಕವಿಭಕ್ತಿಯಾಗಿರುವುದಿಲ್ಲವೆಂದು ಹೇಳಬಾರದು. ಕೆಲವೊಮ್ಮೆ ಅವು ಕಾರಕಗಳಾಗುತ್ತವೆ. ಇದನ್ನು 'ಷಷ್ಠೀ' ವಿಭಕ್ತಿಯನ್ನು ಚರ್ಚಿಸುವಾಗ ವಿವರಿಸಲಾಗುವುದು. ಆದರೆ ಸಾಧಾರಾಣವಾಗಿ 'ಷಷ್ಠೀ' ವಿಭಕ್ತಿಯು 'ಸಂಬಂಧ-ಸೂಚಕ'ವಾಗಿ ಕಾಣಿಸಿಕೊಳ್ಳುತ್ತದೆ. 'ಏಳು' ವಿಭಕ್ತಿಗಳಿದ್ದರೂ 'ಕಾರಕ'ಗಳು 'ಆರು', 'ಷಷ್ಠೀ' ವಿಭಕ್ತಿಯು 'ಕಾರಕ'ವಾಗಿರುವಾಗ ಅದು ಈ ಆರು ಕಾರಕಗಳಲ್ಲಿ ಸೇರಿದ ಕಾರಕವಾಗಿರುತ್ತದೆ. ಅದಕ್ಕೆ ಹೊಸ 'ಕಾರಕತ್ವ'ವಿಲ್ಲ. ಈ ಆರು ಕಾರಕಗಳನ್ನು ಕೆಳಗಿನ ಶ್ಲೋಕದಲ್ಲಿ ಸಂಗ್ರಹಿಸಲಾಗಿವೆ.

"ಕರ್ತಾ ಕರ್ಮ ಚ ಕರಣಂ ಸಂಪ್ರದಾನಂ ತಥೈವ ಚ।
ಅಪಾದಾನಾಧಿಕರಣೇ ಚೇತ್ಯಾಹುಃ ಕಾರಾಕಾಣಿ ಷಟ್"

'ಕಾರಕ' ಪ್ರಕರಣವನ್ನು ಅಭ್ಯಾಸ ಮಾಡುವುದರಿಂದ 'ವಾಕ್ಯ' ರಚನೆಯ ನೈಪುಣ್ಯವು ಹೆಚ್ಚಾಗುತ್ತದೆ. 'ವೈಯಾಕರಣಸಿದ್ಧಾನ್ತಕೌಮುದೀ'ಯಲ್ಲಿ 'ಭಟ್ಟೋಜಿ ದೀಕ್ಷಿತ'ರು(115) ಸೂತ್ರಗಳಲ್ಲಿ ವಿವರಿಸಿದ್ದಾರೆ, ಆದರೆ 'ಲಘುಸಿದ್ಧಾನ್ತಕೌಮುದೀ'ಯಲ್ಲಿ 'ವರದರಾಜರು' ಅತಿ ಸಂಕ್ಷೇಪವಾಗಿ ಕೇವಲ 16 ಸೂತ್ರಗಳಲ್ಲಿ ವಿವರಿಸಿದ್ದಾರೆ. ಮೊಟ್ಟ ಮೊದಲಾಗಿ 'ಪ್ರಥಮಾ'(ಕಾರಕ)ವು ಚರ್ಚಿಸಲಾಗಿದೆ.

**(ಪ್ರಥಮಾ ವಿಭಕ್ತಿಯನ್ನು ವಿಧಿಸುವ ಸೂತ್ರ)**

**ಸೂತ್ರ 890- ಪ್ರಾತಿಪದಿಕಾರ್ಥ-ಲಿಙ್ಗ-ಪರಿಮಾಣ-ವಚನ-ಮಾತ್ರೇ ಪ್ರಥಮಾ। (2.3.346)**

ವೃತ್ತಿ- ನಿಯತೋಪಸ್ಥಿತಿಕಃ ಪ್ರಾತಿಪದಿಕಾರ್ಥಃ। ಮಾತ್ರ ಶಬ್ದಸ್ಯ ಪ್ರತ್ಯೇಕಂ ಯೋಗಃ। ಪ್ರಾತಿಪದಿಕಾರ್ಥಮಾತ್ರೇ ಲಿಙ್ಗಮಾತ್ರಾದ್ಯಾಧಿಕ್ಯೇ ಪರಿಮಾಣಮಾತ್ರೇ ಸಂಖ್ಯಾಮಾತ್ರೇ ಚ ಪ್ರಥಮಾ ಸ್ಯಾತ್। ಪ್ರಾತಿಪದಿಕಾರ್ಥಮಾತ್ರೇ-ಉಚ್ಚೈಃ। ನೀಚೈಃ। ಕೃಷ್ಣಃ। ಶ್ರೀಃ। ಜ್ಞಾನಮ್। ಲಿಙ್ಗಮಾತ್ರೇ-ತಟಃ। ತಟೀ। ತಟಮ್। ಪರಿಮಾಣಮಾತ್ರೇ-ದ್ರೋಣೋ ವ್ರೀಹಿಃ। ವಚನಂ-

ಸಂಖ್ಯಾ ಏಕಃ। ದ್ವೌ ಬಹವಃ।

ಪ. ಛೇ– ಪ್ರಾತಿಪದಿಕಾರ್ಥ–ಲಿಙ್ಗ–ಪರಿಮಾಣ–ವಚನ–ಮಾತ್ರೇ, ಪ್ರಥಮಾ।

ಅರ್ಥ– ಕೃದನ್ತ ಪ್ರಕರಣವನ್ನು ಮುಗಿಸಿದನಂತರ, ಪಂಡಿತ ವರದರಾಜರು ಅತಿ ಮುಖ್ಯವಾದ ಕಾರಕ ಪ್ರಕರಣವನ್ನು ಆರಂಭಿಸುತ್ತಾರೆ, ಈ ಪ್ರಕರಣದಲ್ಲಿ ಪ್ರಾತಿಪದಿಕ ಶಬ್ದದ ವಿಚಾರವನ್ನು ಮಾಡುತ್ತಾರೆ. "ಅರ್ಥವತ್–ಅಧಾತು–ರಪ್ರತ್ಯಯಃ ಪ್ರಾತಿಪದಿಕಮ್(1.2.45)" ಎಂಬುದು ಪಾಣಿನಿ ಸೂತ್ರ, ಪ್ರಾತಿಪದಿಕಕ್ಕೆ ಅರ್ಥವಿದೆ. ಆದರೆ ಆ ಶಬ್ದವನ್ನು ಹಾಗೆಯೇ ಉಪಯೋಗಿಸುವುದಿಲ್ಲ. ಅದಕ್ಕೆ 'ಸುಪ್' ಪ್ರತ್ಯಯವನ್ನು ಸೇರಿಸಿದಾಗ, ಸುಬಂತವಾಗುತ್ತದೆ. ಆಗ ಅದು ಪ್ರಯೋಗಾರ್ಹವಾಗುತ್ತದೆ. ಕಾರಣ, "ಕೇವಲಾ ಪ್ರಕೃತಿಃ ನ ಪ್ರಯೋಕ್ತವ್ಯಾ ನಾಽಪಿ ಪ್ರತ್ಯಯಃ" ಎಂದು ಮಹಾಭಾಷ್ಯಕಾರರು ಹೇಳಿರುವರು. ಉದಾ– 'ಘಟ' ಎಂಬ ಶಬ್ದವು ಧಾತುವೂ ಅಲ್ಲ, ಪ್ರತ್ಯಯವೂ ಅಲ್ಲ, ಪ್ರತ್ಯಯಾನ್ತವೂ ಅಲ್ಲ. ಆದರೆ 'ಅರ್ಥ'ವುಳ್ಳದ್ದಾಗಿದೆ. ಘಟ+ಸ್(ಸು)=ಘಟಃ ಎಂದಾದ ಮೇಲೆ ಪ್ರಯೋಗಾರ್ಹವಾಗುತ್ತದೆ. "ಯಸ್ಮಿನ್ ಪ್ರಾತಿಪದಿಕೇ ಯಸ್ಯ ಅರ್ಥಸ್ಯ ನಿಯಮೇನ ಉಪಸ್ಥಿತಿಃ ಸಃ ಪ್ರಾತಿಪದಿಕಾರ್ಥಃ (ತತ್ವಬೋಧಿನಿ)". ಪಾಣಿನಿಯವರು, ಸೂತ್ರದಲ್ಲಿ 'ಮಾತ್ರ' ಎಂಬ ಶಬ್ದವನ್ನು ಅವಧಾರಣಾರ್ಥದಲ್ಲಿ ಹೇಳಿರುವರು. ಅದರ ಪ್ರಯೋಗವನ್ನು ಸಮಾಸದಲ್ಲಿ ಒಂದೊಂದು ಶಬ್ದದ ಜೊತೆಗೂ ಸೇರಿಸಲಾಗುತ್ತದೆ. 'ದ್ವಂದ್ವಾನ್ತೇ ಶ್ರೂಯಮಾಣಂ ಪದಂ ಪ್ರತ್ಯೇಕಂ ಸಂಬಧ್ಯತೇ' ಎಂಬುದು ಪರಿಭಾಷಾ.

ಪ್ರಾತಿಪದಿಕಾರ್ಥ– ಲಿಙ್ಗ–ಪರಿಮಾಣ– ವಚನಾನಿ ಏವ ಪ್ರಾತಿಪದಿಕಾರ್ಥ–ಲಿಙ್ಗ–ಪರಿಮಾಣ–ವಚನ ಮಾತ್ರಮ್' ಎಂದು ಏವಕಾರಾರ್ಥದಲ್ಲಿ, ಅಸ್ವಪದ ವಿಗ್ರಹ ಸಮಾಸವನ್ನು ಮಾಡಬೇಕು. ಮಯೂರವ್ಯಂಸಕಾದಿಗಣದಲ್ಲಿ, ಈ ಸಮಾಸವು ಅಂತರ್ಭಾವವನ್ನು ಹೊಂದುತ್ತದೆ.

ಈ ಮೇಲಿನ ಸೂತ್ರವನ್ನು ಈ ರೀತಿ ಅರ್ಥ ಮಾಡಬಹುದು. ಕೇವಲ ಪ್ರಾತಿಪದಿಕಾರ್ಥವನ್ನೇ ಹೇಳಬೇಕಾಗಿದ್ದಾಗ, ಪ್ರಥಮಾ ವಿಭಕ್ತಿಯು ಬರುತ್ತದೆ. ಲಿಙ್ಗದ ಅರ್ಥವನ್ನೇ ಹೆಚ್ಚಾಗಿ ಹೇಳಬೇಕಾದಾಗಲೂ ಪ್ರಥಮಾ ವಿಭಕ್ತಿಯೇ ಬರುತ್ತದೆ. ಪರಿಮಾಣವನ್ನು ಹೇಳುವ ಶಬ್ದದಮೇಲೂ ಪ್ರಥಮಾ ವಿಭಕ್ತಿಯು ಇರುತ್ತದೆ. ಹಾಗೆಯೇ ಸಂಖ್ಯಾವಾಚಕ ಪದಗಳಿದ್ದಾಗಲೂ ಪ್ರಥಮಾ ಬರುತ್ತದೆ. ಅಂದರೆ ಸಂಖ್ಯಾ ಅರ್ಥವು ಹೆಚ್ಚಾಗಿ ತೋರುವಾಗ ಎಂದರ್ಥ. 'ಹೆಚ್ಚಾಗಿ' ಎಂದರೆ, ಪ್ರಾತಿಪದಿಕಾರ್ಥವನ್ನು ಬಿಟ್ಟು ಎಂದು ತಿಳಿಯಬೇಕು, 'ಉಚ್ಚೈಃ, ನೀಚೈಃ' ಎಂಬ ಅವ್ಯಯಗಳು ಪ್ರಾತಿಪದಿಕಾರ್ಥವನ್ನು ಮಾತ್ರ ಹೇಳುವದಕ್ಕೆ ಉದಾಹರಣೆಗಳಾಗಿವೆ. ಈ ಶಬ್ದಗಳಿಂದ ನಿಶ್ಚಿತವಾದ ಸ್ವರೂಪದಲ್ಲಿ ಯಾವ ಅರ್ಥವು (ಮನಸ್ಸಿನಲ್ಲಿ) ತೋರುತ್ತದೋ ಅಷ್ಟನ್ನೇ ಅದು ತಿಳಿಸುತ್ತದೆ. ಆ ಪ್ರಾತಿಪದಿಕಾರ್ಥಕ್ಕಿಂತ ಹೆಚ್ಚಾದ ಲಿಙ್ಗ, ಸಂಖ್ಯಾ, ಕಾರಕ ಇವುಗಳಲ್ಲಿ ಯಾವ ಅರ್ಥವನ್ನು ಹೆಚ್ಚಾಗಿ ತೋರಿಸುವುದಿಲ್ಲ. ಉಚ್ಚೈಃ ಮತ್ತು ನೀಚೈಃ ಎಂಬುವು ಅವ್ಯಯಗಳಾಗಿರುವುದರಿಂದ "ಅವ್ಯಯದಾಪ್ಸುಪಃ" ಸೂತ್ರದಿಂದ 'ಸುಪ್'

ಪ್ರತ್ಯಯಗಳ ಲೋಪವು ಆಗುತ್ತದೆ. ಉಚ್ಚೈಸ್+ಸ್ ಎಂದಿದ್ದಾಗ, "ಹಲ್ಙ್ಯಾಭ್ಯೋ..." ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬಂದು ಉಚ್ಚೈಃ ಎಂದಾಗಿದೆ. ಇದರಂತೆ ನೀಚೈಃ ಎಂಬ ರೂಪವು ಸಿದ್ಧವಾಗುತ್ತದೆ.ಕೃಷ್ಣಃ, ಶ್ರೀಃ, ಜ್ಞಾನಮ್, ತಟಃ, ತಟೀ, ತಟಮ್ ಇವುಗಳಲ್ಲಿ ಮೊದಲ ಮೂರು ಶಬ್ದಗಳು ನಿಯತ ಲಿಙ್ಗಗಳಾಗಿ ಇರುವುದರಿಂದ, ಪ್ರಾತಿಪದಿಕಾರ್ಥವನ್ನೇ ಹೇಳಬೇಕಾಗುತ್ತದೆ. ಆದರೆ ಆನಂತರ ಮೂರು ಶಬ್ದಗಳು (ತಟಃ, ತಟೀ, ತಟಮ್) ಅನಿಯತ ಲಿಙ್ಗಗಳಾಗಿರುವುದರಿಂದ ಪ್ರಾತಿಪದಿಕಾರ್ಥ ಅಪೇಕ್ಷೆಗಿಂತ ಹೆಚ್ಚಾಗಿ ಲಿಙ್ಗದ ವಿಶೇಷ ವಿವಕ್ಷೆ ಇರುತ್ತದೆ. ಆದ್ದರಿಂದ 'ಲಿಂಗಮಾತ್ರಾಧಿಕ್ಯೇ' ಎಂಬುದಕ್ಕೆ ಉದಾಹರಣೆಗಳಾಗಿವೆ. (ಅನಿಯತ ಲಿಙಾಸ್ತು ಲಿಙ್ಗಮಾತ್ರಾಧಿಕ್ಯಸ್ಯ ಉದಾಹರಣಮ್-ಸಿದ್ಧಾನ್ತ ಕೌಮುದೀ).

'ದ್ರೋಣೋ ವ್ರೀಹಿಃ'- ಇದು ಕೇವಲ ಪರಿಮಾಣ ಆಧಿಕ್ಯದ ಉದಾಹರಣೆಯಾಗಿದೆ. 'ದ್ರೋಣ' ಎಂಬ ಶಬ್ದವು ಪರಿಮಾಣ ಎಂಬ ಅರ್ಥದಲ್ಲಿ ಉಪಯೋಗಿಸಲ್ಪಟ್ಟಾಗ, ಅದು ಲಿಙ್ಗ ಮಾತ್ರದ ಉದಾಹರಣೆಯಾಗಿಯೇ ಇರುತ್ತದೆ. ಆದರೆ ಅದು (ದ್ರೋಣ ಶಬ್ದವು) ಯಾವಾಗ ಪರಿಮಾಣದಿಂದ 'ಅಳೆಯಲ್ಪಟ್ಟ' ಎಂಬ ಅರ್ಥದಲ್ಲಿ ವ್ರೀಹಿಃ ಮೊದಲಾದವುಗಳಿಗೆ ವಿಶೇಷಣವಾಗುತ್ತದೆಯೋ, ಆಗ ಆ ಅರ್ಥವು (ವ್ರೀಹಿಃ ಎಂಬ ಅರ್ಥವು) ವಿವಕ್ಷಿತವಾಗಿರುವರಿಂದ, ಲಿಙ್ಗಮಾತ್ರದ ಉದಾಹರಣೆಯಾಗುವುದಿಲ್ಲ. ಆದ್ದರಿಂದ ಇಲ್ಲಿ ಪರಿಮಾಣವನ್ನು ಹೆಚ್ಚಾಗಿ ಗ್ರಹಿಸಿದೆ. ('ಹೆಚ್ಚಾಗಿ' ಎಂದರೆ 'ಪ್ರಾತಿಪದಿಕಾರ್ಥವನ್ನು ಬಿಟ್ಟು' ಎಂದು ಎಲ್ಲ ಕಡೆಯೂ ತಿಳಿದುಕೊಳ್ಳಬೇಕು).

ಏಕಃ, ದ್ವೌ, ಬಹವಃ ಇವು 'ವಚನಮಾತ್ರೇ' ಎಂಬುದಕ್ಕೆ ಉದಾಹರಣೆಗಳಾಗಿವೆ. ಇವುಗಳಲ್ಲಿ ಸಂಖ್ಯಾರ್ಥವು ಹೆಚ್ಚಾಗಿ ಹೇಳಲಾಗಿದೆ ಎಂಬುದು ಪಾಣಿನಿಯ ಮತ. ಇಲ್ಲಿ ಒಂದು ಆಕ್ಷೇಪ ಬರುತ್ತದೆ. ಏಕ, ದ್ವಿ, ಬಹು ಎಂಬ ಪ್ರಾತಿಪದಿಕಗಳಿಂದಲೇ ಸಂಖ್ಯಾರ್ಥವು ಸಿಗುತ್ತಿರುವಾಗ, 'ಏಕಃ' ಎಂದು 'ಸುಪ್' ಪ್ರತ್ಯಯವನ್ನು ಸೇರಿಸಿ ಮತ್ತೆ ಅದೇ ಅರ್ಥವನ್ನು ಏಕೆ ಹೇಳಬೇಕು? ಎಂದು. (ಉಕ್ತಾರ್ಥಾನಾಂ ಅಪ್ರಯೋಗಃ) ಎಂಬುದು ಇದಕ್ಕೆ ಪ್ರಮಾಣ. ಅದುದರಿಂದಲೇ ಆ ವಿಭಕ್ತಿಪ್ರತ್ಯಯಗಳನ್ನು ಸೇರಿಸುವದಕ್ಕಾಗಿಯೇ 'ವಚನ' ಎಂಬ ಶಬ್ದವನ್ನು ಪಾಣಿನಿಯವರು ಸೇರಿಸಿರುವರು. ಆದರೆ (ಅಪದಂ ನ ಪ್ರಯೋಕ್ತವ್ಯಂ) ಎಂಬ ಹಿಂದೆ ಹೇಳಿದ ನಿಯಮವನ್ನೇ ಅನುಸರಿಸಿ ಇಲ್ಲಿ 'ಸುಪ್' ಪ್ರತ್ಯಯವು ಸೇರಿಸಲಾಗಿದೆ.[ಪಞ್ಚಕಂ ಪ್ರಾತಿಪದಿಕಾರ್ಥಃ ಎಂದು ಪ್ರಾತಿಪದಿಕದ ಅರ್ಥಗಳು 'ಐದು' ಎಂದು ಹೇಳಲಾಗಿದೆ. ಅವು ಸ್ವಾರ್ಥ, ದ್ರವ್ಯ, ಲಿಙ್ಗ, 'ಸಂಖ್ಯಾ' ಮತ್ತು 'ಕಾರಕ' ಎಂದು. ಕೈಯಟ (ವಯ್ಯಾಕರಣಿಗಳು)ರ ಪ್ರಕಾರ ಮೊದಲ 'ನಾಲ್ಕು' ಅರ್ಥಗಳು ಮಾತ್ರ ಪ್ರಾತಿಪದಿಕಾರ್ಥಗಳು ಎಂದು. ವೃತ್ತಿಕಾರರ ಪ್ರಕಾರ ಮೊದಲ 'ಮೂರು' ಅರ್ಥಗಳು ಮಾತ್ರವೆಂದು. ಇದಕ್ಕೆ ಕಾರಣ ಸಂಖ್ಯಾ ಮತ್ತು ಕಾರಕ ಇವೆರಡೂ ಅನ್ವಯ-ವ್ಯತಿರೇಕಗಳಿಂದ ಗೊತ್ತಾಗುತ್ತದೆ ಎಂದು ಮ.ಮ. ವಾಸುದೇವಶಾಸ್ತ್ರಿ ಅಭ್ಯಂಕರ ಇವರ ಅನುವಾದದಲ್ಲಿ ಹೇಳಿರುವರು].

(ಸಂಬೋಧನದಲ್ಲಿ ಪ್ರಥಮಾವಿಭಕ್ತಿವಿಧಾಯಕ ಸೂತ್ರ)

**ಸೂತ್ರ – 891– ಸಮ್ಬೋಧನೇ ಚ।(2.3.47)**

ವೃತ್ತಿ– ಪ್ರಥಮಾ ಸ್ಯಾತ್। ಹೇ ರಾಮ!

ಅ. ವೃ– ಪ್ರಾತಿಪದಿಕಾರ್ಥ–ಲಿಙ್ಗ–ಪರಿಮಾಣ–ವಚನ–ಮಾತ್ರೇ ಪ್ರಥಮಾ।(2.3.346) ಎಂಬ ಸೂತ್ರದಿಂದ 'ಪ್ರಥಮಾ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– ಯಾವದೇ ವ್ಯಕ್ತಿಯನ್ನು ಸಂಬೋಧಿಸುವಾಗ, ಈ ಸಂಬೋಧನಾರ್ಥದಲ್ಲಿ ಪ್ರಥಮಾ ವಿಭಕ್ತಿಯು ಬರುತ್ತದೆ. ಆದರೆ ಪ್ರಾತಿಪದಿಕಾರ್ಥಕ್ಕಿಂತ ಸಂಬೋಧನಾರ್ಥವು ಹೆಚ್ಚಾಗಿರೋಣದ್ದರಿಂದ ಈ ಪ್ರಕೃತ ಸೂತ್ರವು ಪ್ರವೃತ್ತವಾಗಿದೆ. (ಕಾಶಿಕಾ– ಆಭಿಮುಖ್ಯಕರಣಂ ಸಂಬೋಧನಮ್. ತದಧಿಕೇ ಪ್ರಾತಿಪದಿಕಾರ್ಥೇ ಪ್ರಥಮಾ ನ ಪ್ರಾಪ್ನೋತಿ ಇತಿ ವಚನಮಾರಭ್ಯತೇ). ಆದ್ದರಿಂದಲೇ ಇದನ್ನು ಸಂಬೋಧನ ಪ್ರಥಮಾ ಎಂದು ಕರೆಯುತ್ತಾರೆ.

ಉದಾ– ಹೇ ರಾಮ+ಸ್ ಎಂದಿದ್ದಾಗ, "ಏಙ್ ಹ್ರಸ್ವಾತ್ ಸಂಬುದ್ಧೇಃ" ಎಂಬ ಸೂತ್ರದಿಂದ 'ಸುಪ್' ಪ್ರತ್ಯಯ (ಸ್) ಲೋಪವಾಗುತ್ತದೆ.

(ಕರ್ಮಸಂಜ್ಞೆಯನ್ನು ವಿಧಿಸುವ ಸೂತ್ರ)

**ಸೂತ್ರ –892 – ಕರ್ತುರೀಪ್ಸಿತತಮಂ ಕರ್ಮ।(1.4.49)**

ವೃತ್ತಿ– ಕರ್ತುಃ ಕ್ರಿಯಯಾ ಆಪ್ತುಂ ಇಷ್ಟತಮಮ್ ಕಾರಕಮ್ ಕರ್ಮ ಸಂಜ್ಞಂ ಸ್ಯಾತ್।

ಪ. ಛೇ– ಕರ್ತುಃ ಈಪ್ಸಿತತಮಂ ಕರ್ಮ।

ಅರ್ಥ – ಧಾತುವಿನಿಂದ ಹೇಳಲ್ಪಡುವ ಕ್ರಿಯೆಗೆ ಆಶ್ರಯವಾಗಿರುವವನು ಕರ್ತಾ. ಆಪ್ತುಂ ಇಷ್ಟಂ ಈಪ್ಸಿತಮ್. ಅತ್ಯನ್ತಂ ಈಪ್ಸಿತಂ ಈಪ್ಸಿತತಮಮ್. ಹೊಂದುವದಕ್ಕೆ ಹೆಚ್ಚಾಗಿ ಇಚ್ಛಿಸಲ್ಪಡುವಂಥಾದ್ದು ಎಂದರ್ಥ. ಯಾವದರ ಮುಖಾನ್ತರ ಹೊಂದುವದು ಎಂಬ ಆಕಾಂಕ್ಷೆ ಇದ್ದಾಗ, ಕರ್ತೃವಿನಲ್ಲಿ ಯಾವದೋ ಒಂದು ವ್ಯಾಪಾರದಿಂದ ಎಂದು ಅರ್ಥವು ಸಿಗುವದು. ಕರ್ತೃವಿನಲ್ಲಿರುವ ವ್ಯಾಪಾರದಿಂದ ಹೊಂದಲ್ಪಡುವ ಫಲದ ಜೊತೆಗೆ ಯಾವದಕ್ಕೆ ಸಂಬಂಧವು ಹೊಂದುವದಕ್ಕೆ ಯತ್ನಿಸುವನೋ ಅದು ಕರ್ಮ ಎಂದು ತಿಳಿಯಬೇಕು.

ಉದಾ– 'ತಂಡುಲಾನ್ ಪಚತಿ' ಎಂದು ಹೇಳುವಾಗ 'ಪಚ್' ಧಾತುವಿಗೆ ವಿಕ್ಲೃತ್ಯನುಕೂಲ ವ್ಯಾಪರವೇ ಅರ್ಥ. ಇಲ್ಲಿ ವಿಕ್ಲೃತ್ತಿ ಎಂದರೆ' ಅಕ್ಕಿಕಾಳುಗಳು ಚೆನ್ನಾಗಿ ಬೆಂದು ಮೆತ್ತಗಾಗುವದು ಎಂದರ್ಥ. ಪಾತ್ರೆಯನ್ನು ಒಲೆಯಮೇಲೆ ಇಡುವದು, ಅದರಲ್ಲಿ ನೀರು ಹಾಕುವದು, ಒಲೆಯನ್ನು ಹೊತ್ತಿಸುವದು, ಮೊದಲಾದವುಗಳು ವಿಕ್ಲಿತ್ತಿಗೆ ಅನುಕೂಲವಾದ ವ್ಯಾಪಾರವು. ಇದರಿಂದ ವಿಕ್ಲಿತ್ತಿ ರೂಪ ಫಲವು ಅಕ್ಕಿಕಾಳುಗಳಲ್ಲಿ ಇರೋಣದ್ದರಿಂದ ಅವುಗಳಿಗೆ ಕರ್ಮವೆಂದು ಹೆಸರು.

ಕ್ರಿಯಾನ್ವಯಿ ಕಾರಕಮ್-ಕ್ರಿಯೆಗೆ ಸಂಬಂಧಿಸಿದಂಥಾದ್ದು ಅಥವಾ ಕ್ರಿಯೆಯನ್ನು ಉಂಟುಮಾಡಿಸುವದು ಕಾರಕ. ಅದು ಪ್ರತ್ಯಕ್ಷವಾಗಿಯೋ ಅಥವಾ ಅಪ್ರತ್ಯಕ್ಷವಾಗಿಯೋ ಸಂಬಂಧಿಸಿರುವದು. ವ್ಯಾಕರಣ ಶಾಸ್ತ್ರದಲ್ಲಿ ಕಾರಕಗಳು 7 ಎಂದು ಪರಿಗಣಿಸಲಾಗಿವೆ. 1. ಕರ್ತೃಕಾರಕ, 2. ಕರ್ಮಕಾರಕ, 3. ಕರಣಕಾರಕ, 4. ಸಂಪ್ರದಾನ ಕಾರಕ, 5. ಹೇತುಕಾರಕ, 6. ಅಪಾದಾನಕಾರಕ, 7. ಅಧಿಕರಣ ಕಾರಕ. ಇವುಗಳಲ್ಲಿ ಕರ್ತೃ, ಕರ್ಮ, ಕರಣಕಾರಕಗಳು ಕ್ರಿಯೆಯ ಜೊತೆಗೆ ಪ್ರತ್ಯಕ್ಷವಾಗಿ ಸಂಬಂಧ ಹೊಂದುತ್ತವೆ. ಉಳಿದ ಕಾರಕಗಳಾದರೋ ಕರ್ತೃ, ಕರ್ಮ ಮೊದಲಾದವುಗಳ ಮುಖಾಂತರ ಸಂಬಂಧವನ್ನು ಹೊಂದುತ್ತವೆ.

**(ದ್ವಿತೀಯಾವಿಭಕ್ತಿಯನ್ನು ವಿಧಿಸುವ ಸೂತ್ರ)**

**ಸೂತ್ರ – 893– ಕರ್ಮಣಿ ದ್ವಿತೀಯಾ।(2.3.2)**

ವೃತ್ತಿ– ಅನುಕ್ತೇ ಕರ್ಮಣಿ ದ್ವಿತೀಯಾ ಸ್ಯಾತ್। ಹರಿಂ ಭಜತಿ। ಅಭಿಹಿತೇ ತು ಕರ್ಮಾದೌ ಪ್ರಥಮಾ। ಹರಿಃ ಸೇವ್ಯತೇ। ಲಕ್ಷ್ಮ್ಯಾ ಸೇವಿತಃ।

ಅ. ವ್ಯ– ಇಲ್ಲಿ "ಅನಭಿಹಿತೇ" ಎಂಬುದು ಅಧಿಕಾರ ಸೂತ್ರವಾಗಿದೆ.

ಅರ್ಥ – 'ಅನಭಿಹಿತ' ವೆಂದರೆ ಹೇಳಲ್ಪಡದೇ ಇರುವದು ಎಂದರ್ಥ. ಕರ್ಮವು 'ತಿಜ್' ಮೊದಲಾದವುಗಳಿಂದ ಹೇಳಲ್ಪಡದೆ ಇರುವಾಗ, ಪ್ರಾತಿಪದಿಕದಮೇಲೆ ದ್ವಿತೀಯಾ ವಿಭಕ್ತಿಯು ಬರುವದು. ಉದಾ–ಭಕ್ತಃ ಹರಿಂ ಭಜತಿ (ಹರಿಯನ್ನು ಭಜಿಸುತ್ತಾನೆ) ಎಂಬಲ್ಲಿ 'ಭಜ್' ಧಾತುವಿಗೆ ಸಂತುಷ್ಟ್ಯನುಕೂಲ ಪೂಜನಾದಿ ವ್ಯಾಪಾರವೆಂದರ್ಥ. ಅಂದರೆ ಪೂಜನಾದಿಗಳಿಂದ ಹರಿಯನ್ನು ಮೆಚ್ಚಿಸುತ್ತಾನೆ. ಇಲ್ಲಿ ಮೆಚ್ಚಿಸುವದೇ ಫಲ. ಅದಕ್ಕೆ ಆಶ್ರಯವಾಗಿರುವವನು ಹರಿ. ಅವನೇ ಇಲ್ಲಿ ಕರ್ಮ. ಹರಿಂ ಭಜತಿ ಎಂಬಲ್ಲಿ 'ತಿಜ್' ಪ್ರತ್ಯಯವು ಪೂಜಿಸುವ ಭಕ್ತನನ್ನು ಹೇಳುತ್ತದೆ. ಅವನು ಅಭಿಹಿತವಾಗಿರುವುದರಿಂದ, ಅವನಿಗೆ ಪ್ರಥಮಾ ವಿಭಕ್ತಿ ಬಂದಿದೆ. ಆದ್ದರಿಂದ ಅವನು ಕರ್ತೃವಾಗಿದ್ದಾನೆ. ಇಲ್ಲಿ 'ಹರಿ' ಶಬ್ದವು 'ತಿಜ್' ಪ್ರತ್ಯಯದಿಂದ ಹೇಳಲ್ಪಡದೇ ಇರುವುದರಿಂದ ಆ ಕರ್ಮವಾಚಕ ಹರಿ ಶಬ್ದಕ್ಕೆ ದ್ವಿತೀಯಾ ವಿಭಕ್ತಿಯು ಬಂದಿದೆ.

ಕರ್ಮ ಪದವು ಸಾಧಾರಣವಾಗಿ ತಿಜ್. ಕೃತ್, ತದ್ಧಿತ ಸಮಾಸಗಳಿಂದ ಹೇಳಲ್ಪಡುತ್ತದೆ. 'ಹರಿಃ ಸೇವ್ಯತೇ' (ಹರಿಯು ಸೇವಿಸಲ್ಪಡುತ್ತಾನೆ) ಎಂಬಲ್ಲಿ, ಕರ್ಮವನ್ನು 'ತಿಜ್' ಪ್ರತ್ಯಯವು ಬೋಧಿಸುತ್ತದೆ. ಹೀಗಾಗಿ ಹರಿ ಶಬ್ದಕ್ಕೆ ಪ್ರಥಮಾ ವಿಭಕ್ತಿ ಬಂದಿದೆ.

ಲಕ್ಷ್ಮ್ಯಾ ಸೇವಿತಃ (ಲಕ್ಷ್ಮಿಯಿಂದ ಸೇವಿಸಲ್ಪಡುತ್ತಾನೆ). ಎಂಬಲ್ಲಿ 'ಸೇವಿತಃ' ಎಂಬ 'ಕೃತ್' ಪ್ರತ್ಯಯಾಂತದಿಂದ ಹರಿಯು ಹೇಳಲ್ಪಟ್ಟಿದ್ದಾನೆ. ಲಕ್ಷ್ಮಿಯು ಹೇಳಲ್ಪಡಲಿಲ್ಲ. ಆದ್ದರಿಂದ 'ಲಕ್ಷ್ಮೀ' ಶಬ್ದಕ್ಕೆ ತೃತೀಯಾವಿಭಕ್ತಿಯು ಬಂದಿದೆ.

**(ಕರ್ಮಸಂಜ್ಞೆಯನ್ನು ವಿಧಿಸುವಸೂತ್ರ)**

**ಸೂತ್ರ – 894– ಅಕಥಿತಂ ಚ ।(1.4.51)**

ವೃತ್ತಿ– ಅಪಾದಾನಾದಿ ವಿಶೇಷೈಃ ಅವಿವಕ್ಷಿತಂ ಕಾರಕಂ ಕರ್ಮಸಂಜ್ಞಂ ಸ್ಯಾತ್।

ದುಹ್-ಯಾಚ್-ಪಚ್-ದಂಡ್-ರುಧಿ-ಪ್ರಚ್ಛ್-ಚಿ-ಬ್ರೂ-ಶಾಸು-ಜಿ-ಮಥ್-ಮುಷಾಮ್।ಕರ್ಮಯುಕ್ ಸ್ಯಾತ್ ಅಕಥಿತಂ ತಥಾ ಸ್ಯಾತ್ ನೀ-ಹೃ-ಕೃಷ್-ವಹಾಮ್॥

1. (ಗೋಪಾಲಕಃ)ಗಾಂ ದೋಗ್ಧಿ ಪಯಃ। 2. (ವಾಮನಃ) ಬಲಿಂ ಯಾಚತೇ ವಸುಧಾಮ್। 3. (ಪಾಚಕಃ) ತಂಡುಲಾನ್ ಓದನಂ ಪಚತಿ। 4. (ಯಜಮಾನಃ) ಗರ್ಗಾನ್ ಶತಂ ದಂಡಯತಿ। 5. (ಗೋಪಃ) ವ್ರಜಂ ಅವರುಣದ್ಧಿ ಗಾಮ್। 6. (ಪಥಿಕಃ) ಮಾಣವಕಂ ಪಂಥಾನಂ ಪೃಚ್ಛತಿ। 7.(ಉದ್ಯಾನಪಾಲಕಃ) ವೃಕ್ಷಂ ಅವಚಿನೋತಿ ಫಲಾನಿ। 8, (ಗುರುಃ) ಮಾಣವಕಂ ಧರ್ಮಂ ಬ್ರೂತೇ ಶಾಸ್ತಿ ವಾ। 9. (ಯಜ್ಞದತ್ತಃ) ಶತಂ ಜಯತಿ ದೇವದತ್ತಮ್। 10. (ಹರಿಃ) ಸುಧಾಂ ಕ್ಷೀರನಿಧಿಂ ಮಥ್ನಾತಿ। 11.(ಯಜ್ಞದತ್ತಃ) ದೇವದತ್ತಮ್ ಶತಂ ಮುಷ್ಣಾತಿ। 12. (ಪುರುಷಃ) ಗ್ರಾಮಂ ಅಜಾಂ ನಯತಿ। 13. ಹರತಿ। 14. ಕರ್ಷತಿ। 15. -ವಹತಿ ವಾ। ಅರ್ಥನಿಬನ್ಧನಾ ಇಯಂ ಸಂಜ್ಞಾ। ಬಲಿಂ ಭಿಕ್ಷತೇ ವಸುಧಾಮ್ (ವಾಮನಃ)। ಮಾಣವಕಂ ಧರ್ಮಂ ಭಾಷತೇ (ಗುರುಃ), ಅಭಿದತ್ತೇ, ವಕ್ತಿ ಇತ್ಯಾದಿ।

ಅ.ವೃ- ಕರ್ತುರೀಪ್ಸಿತತಮಂ ಕರ್ಮ। (1.4.49) ಎಂಬ ಸೂತ್ರದಿಂದ 'ಕರ್ಮ' ಎಂಬ ಪದವು ಅನುವೃತ್ತವಾಗುತ್ತದೆ. "ಕಾರಕೇ" ಎಂಬುದು ಅಧಿಕಾರ ಸೂತ್ರವಾಗಿದೆ.

ಅರ್ಥ- ಒಂದು ವಾಕ್ಯವನ್ನು ಉಚ್ಚರಿಸುವಾಗ ಕಾರಕಾರ್ಥಗಳಿಗನುಗುಣವಾಗಿ ಪದಗಳನ್ನು ಪ್ರಯೋಗಿಸಲಾಗುತ್ತದೆ. ಆದರೆ ಪ್ರಯೋಗಿಸಬೇಕಾದ ಅಪಾದಾನಾದಿ ಕಾರಕಾರ್ಥವು ವಿವಕ್ಷಿತವಾಗಿಲ್ಲದಿದ್ದಾಗ, ಕೇವಲ ಸಂಬಂಧವನ್ನು ಮಾತ್ರ ಸೂಚಿಸಬೇಕಾಗಿದ್ದಾಗ, ಅಪಾದಾನ ಮೊದಲಾದವು ಕರ್ಮ ಸಂಜ್ಞೆಯನ್ನು ಹೊಂದುತ್ತದೆ. ಆಗ ಕಾರಕ ವಿವಕ್ಷೆ ಇದ್ದರೆ, "ಚತುರ್ಥೀ ಸಂಪ್ರದಾನೇ" ಇತ್ಯಾದಿ ರೀತಿಯಲ್ಲಿ ಆಯಾ ವಿಭಕ್ತಿಗಳ ಪ್ರಯೋಗವು ಇದ್ದೇ ಇರುತ್ತದೆ. ಪ್ರಕೃತ ಸೂತ್ರದಲ್ಲಿ ಅಕಥಿತಂ ಎಂದು ಹೇಳಿರುವುದರಿಂದ, ಯಾರಿಂದ 'ಅಕಥಿತ' ಎಂಬ ಆಕಾಂಕ್ಷೆ ಉಂಟಾಗುತ್ತದೆ. ಅದಕ್ಕೆ ಅಪಾದಾನಾದಿ ವಿಶೇಷಗಳಿಂದ ಎಂದು ಉತ್ತರವು ಸಿಗುತ್ತದೆ.

ಉದಾ-(ಗೋಪಾಲಕಃ) ಗಾಂ ದೋಗ್ಧಿ ಪಯಃ ಎಂಬ ವಾಕ್ಯದಲ್ಲಿ, ಗೋಪಾಲಕನು (ಗೋ(ಹಸು)ವಿನಿಂದ ಗೋಃ) ಹಾಲನ್ನು ಕರೆಯುತ್ತಾನೆ. ಎಂದು ಹೇಳಬೇಕಾಗಿತ್ತು. ಆದರೆ ಈ ವಾಕ್ಯವನ್ನು ಹೇಳುವವನಿಗೆ ಹಸುವಿನಿಂದ (ಗೋಃ) ಎಂಬ ಅಪಾದಾನ ಕಾರಕವು ಅವಿವಕ್ಷಿತವಾಗಿ ಇರುವುದರಿಂದ ಗೋ ಶಬ್ದಕ್ಕೆ ಕರ್ಮ ಸಂಜ್ಞೆ ಬಂದು ಗಾಂ ಎಂದು ಪ್ರಯೋಗಿಸಲ್ಪಟ್ಟಿದೆ.

ಮೇಲೆ ಹೇಳಿರುವ ಶ್ಲೋಕದಲ್ಲಿ ಇರುವ ಹದಿನಾರು(16) ಧಾತುಗಳು ದ್ವಿಕರ್ಮಕಗಳಾಗಿವೆ. ಇವುಗಳಲ್ಲಿ ಒಂದು ಪ್ರಧಾನ ಕರ್ಮ ಮತ್ತೊಂದು ಅಪ್ರಧಾನಕರ್ಮ ಎಂದು ತಿಳಿಯಬೇಕು. ಗಾಂ ದೋಗ್ಧಿ ಪಯಃ ಎಂಬಲ್ಲಿ ಪಯಃ ಎಂಬುದು ಪ್ರಧಾನ ಕರ್ಮ, ಅದು ದ್ವಿತಿಯಾ ವಿಭಕ್ತಿಯಲ್ಲಿಯೇ ವಿವಕ್ಷಿತವಾಗಿರುತ್ತದೆ. ಅಪಾದಾನಾದಿ ಕಾರಕಗಳು ಯಾವಾಗ ಅವಿವಕ್ಷಿತ್ವಾಗಿರುತ್ತದೋ ಆಗ ದ್ವಿತೀಯಾ ವಿಭಕ್ತಿ (ಕರ್ಮಸಂಜ್ಞೆ ಬಂದು) ಬಂದು ಅಪ್ರಧಾನ ಕರ್ಮವಾಗುತ್ತದೆ. ಹೀಗೆಯೇ ಮೇಲೆ ಹೇಳಿದ

ಉದಾಹರಣೆಗಳಲ್ಲಿ, ಪ್ರಧಾನ ಕರ್ಮವು ದ್ವಿತೀಯಾ ವಿಭಕ್ತಿಯಲ್ಲಿಯೇ ಇರುತ್ತದೆ. ಅಪ್ರಧಾನ ಕರ್ಮವು ಕರ್ಮಸಂಜ್ಞೆಯನ್ನು ಪಡೆದಿದ್ದಕ್ಕೆ ಕಾರಣ, ಅಪಾದಾನಾದಿ ಕಾರಕಗಳು ಅವಿವಕ್ಷಿತವಗಿದ್ದದ್ದೇ. ಈ ದೃಷ್ಟಿಯಿಂದ ಮೇಲಿನ ಉದಾಹರಣೆಗಳನ್ನು ನೋಡಿದಾಗ, ಯಾವದು ಅಪ್ರಧಾನ ಕರ್ಮ ಮತ್ತು ಯಾವದು ಪ್ರಧಾನಕರ್ಮ ಎಂದು ನಿರ್ಧರಿಸಬಹುದು. ಅಪ್ರಧಾನ ಕರ್ಮ ಸಂಜ್ಞೆಯನ್ನು ಹೊಂದಿದ ಪದಾರ್ಥವು ಬೇರೆ ಕಾರಕಗಳಲ್ಲಿ ವಿವಕ್ಷಿತವಾಗಿದ್ದಿದ್ದರೆ ಆಯಾ ಕಾರಕಗಳಿಗನುಗುಣವಾದ ವಿಭಕ್ತಿಗಳಲ್ಲಿ ಪ್ರಯೋಗಿಸಲ್ಪಡುತ್ತಿದ್ದವು. ಈ ದೃಷ್ಟಿಯಲ್ಲಿ ಎಲ್ಲ ಉದಾಹರಣೆಗಳನ್ನು ಪರೀಕ್ಷಿಸಿದಾಗ, ಯಾವ ಕಾರಕವು ಅವಿವಕ್ಷಿತವಾಗಿತ್ತು ಎಂಬುದು ಗೊತ್ತಾಗುವದು. ಅವಿವಕ್ಷಿತವಾದ ಕಾರಕಗಳು ಯಾವವು ಎಂಬುದನ್ನು ಆಯಾ ಉದಾಹರಣೆಗಳಲ್ಲಿ ನಾವು ತೋರಿಸುತ್ತೇವೆ.

ಉದಾಹರಣೆಗಳು:- ಅವಿವಕ್ಷಿತವಾದ ಕಾರಕ

1. (ಗೋಪಾಲಕಃ)ಗಾಂ ದೋಗ್ಧಿ ಪಯಃ। 'ಗೋಃ' – ಪಞ್ಚಮೀ

2. (ವಾಮನಃ) ಬಲಿಂ ಯಾಚತೇ ವಸುಧಾಮ್। 'ಬಲೇಃ'–ಪಞ್ಚಮೀ

3. (ಪಾಚಕಃ) ತಂಡುಲಾನ್ ಓದನಂ ಪಚತಿ। ತಂಡುಲೈಃ–ತೃತೀಯಾ

4. (ಯಜಮಾನಃ) ಗರ್ಗಾನ್ ಶತಂ ದಂಡಯತಿ। ಗರ್ಗೇಭ್ಯಃ – ಚತುರ್ಥೀ

5. (ಗೋಪಃ) ವ್ರಜಂ ಅವರುಣದ್ಧಿ ಗಾಮ್। ವ್ರಜೇ – ಸಪ್ತಮೀ

6. (ಪಥಿಕಃ) ಮಾಣವಕಂ ಪಂಥಾನಂ ಪೃಚ್ಛತಿ। ಮಾಣವಕಾಯ–ಚತುರ್ಥೀ

7.(ಉದ್ಯಾನಪಾಲಕಃ) ವೃಕ್ಷಂ ಅವಚಿನೋತಿ ಫಲಾನಿ। ವೃಕ್ಷಾತ್–ಪಞ್ಚಮೀ

8–9. (ಗುರುಃ) ಮಾಣವಕಂ ಧರ್ಮಂ ಬ್ರೂತೇ ಶಾಸ್ತಿ ವಾ। ಮಾಣವಕಾಯ – ಚತುರ್ಥೀ

10. (ಯಜ್ಞದತ್ತಃ) ಶತಂ ಜಯತಿ ದೇವದತ್ತಮ್। ದೇವದತ್ತಾತ್– ಪಂಞ್ಚಮೀ

11. (ಹರಿಃ) ಸುಧಾಂ ಕ್ಷೀರನಿಧಿಂ ಮಥ್ನಾತಿ। ಕ್ಷೀರನಿಧೇಃ–ಪಂಞ್ಚಮೀ

12.(ಯಜ್ಞದತ್ತಃ) ದೇವದತ್ತಮ್ ಶತಂ ಮುಷ್ಣಾತಿ।ದೇವದತ್ತಾತ್– ಪಂಞ್ಚಮೀ

13. (ಪುರುಷಃ) ಗ್ರಾಮಂ ಅಜಾಂ ನಯತಿ । ಗ್ರಾಮಾಯ – ಚತುರ್ಥೀ

14. –ಹರತಿ। – " –

15. –ಕರ್ಷತಿ। – " –

16.–ವಹತಿ ವಾ। – " –

ಅರ್ಥನಿಬನ್ಧನಾ ಇಯಂ ಸಂಜ್ಞಾ ಬಲಿಂ ಭಿಕ್ಷತೇ ವಸುಧಾಮ್ (ವಾಮನಃ)। ಮಾಣವಕಂ ಧರ್ಮಂ ಭಾಷತೇ (ಗುರುಃ), ಅಭಿದತ್ತೇ, ವಕ್ತಿ ಇತ್ಯಾದಿ।

'ಅರ್ಥನಿಬಂಧನೇಽಯಮ್ ಸಂಜ್ಞಾ' ಎಂದರೆ, ಮೇಲೆ ಹೇಳಿದ ಧಾತುಗಳಿಗೆ

ಮಾತ್ರ ಅನ್ವಯಿಸುತ್ತದೆ ಎಂದಿಲ್ಲ ಪರಂತು ಮೇಲೆ ಹೇಳಿದ ಧಾತುಗಲ ಅರ್ಥವುಳ್ಳ ಬೇರೆ ಧಾತುಗಳಿಗೂ ದ್ವಿಕರ್ಮತ್ವ ಬರುತ್ತದೆ.

**(ಕರ್ತೃ ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ – 895– ಸ್ವತನ್ತ್ರಃ ಕರ್ತಾ।(1.4.54)**

ವೃತ್ತಿ– ಕ್ರಿಯಾಯಾಂ ಸ್ವಾತನ್ತ್ರ್ಯೇಣ ವಿವಕ್ಷಿತೋಽರ್ಥಃ ಕರ್ತಾ ಸ್ಯಾತ್।

ಅರ್ಥ – ವೃತ್ತಿಯಲ್ಲಿ 'ಸ್ವಾತನ್ತ್ರ್ಯೇಣ' ಮತ್ತು 'ವಿವಕ್ಷಿತ' ಎಂಬ ಎರಡು ಶಬ್ದಗಳ ಅರ್ಥವನ್ನು ಅವಶ್ಯವಾಗಿ ಗಮನಿಸಬೇಕು. ಕಾಶಿಕೆಯಲ್ಲಿ 'ಸ್ವತನ್ತ್ರಃ' ಇತಿ 'ಪ್ರಧಾನಭೂತಃ' ಉಚ್ಯತೇ ಎಂದು ಹೇಳಲಾಗಿದೆ. ತತ್ವಬೋಧಿನಿಯಲ್ಲಿ 'ಪ್ರಧಾನೀಭೂತ ಧಾತ್ವರ್ಥಾಶ್ರಯತ್ವಂ ಸ್ವಾತನ್ತ್ರ್ಯಮ್' ಎಂದು ಹೇಳಲಾಗಿದೆ. ಕೈಯಟನು ತನ್ನ ವ್ಯಾಖ್ಯಾನದಲ್ಲಿ – ಸ್ವ ಶಬ್ದಃ ಆತ್ಮವಾಚೀ। 'ಸ್ವಃ ಆತ್ಮಾ ಸ್ವತನ್ತ್ರಂ ಪ್ರಧಾನಂ ಯಸ್ಯ ಸಃ ಸ್ವತನ್ತ್ರಃ' ಎಂದು ಹೇಳಿರುವನು. ಕ್ರಿಯೆಯು ಜರುಗುವದಕ್ಕೆ ಯಾರು ಮುಖ್ಯನಾಗಿರುವನೋ ಅಂತಹವನನ್ನು ಸೂಚಿಸುವ ಕಾರಕಕ್ಕೆ ಕರ್ತಾ ಎಂದು ಹೇಳುತ್ತಾರೆ. 'ರಾಮಃ ಪಚತಿ' ಎಂಬಲ್ಲಿ ಬೇಯಿಸುವ (ಪಚನ) ಕ್ರಿಯೆಗೆ ಮುಖ್ಯನಾದವನು ರಾಮನು. ಅದುದರಿಂದ ಅವನು ಸ್ವತನ್ತ್ರನಾದ ಕರ್ತೃವಾಗಿರುತ್ತಾನೆ. ಇವನ ಸಂಬಂಧದಿಂದ ಬೇರೆ ಕಾರಕಗಳು ಕ್ರಿಯಾನ್ವಿತವಾಗುತ್ತವೆ. ಕರ್ತೃಕಾರಕವಿಲ್ಲದೇ ಯಾವ ವಾಕ್ಯವೂ ಸಿದ್ಧವಾಗುವುದಿಲ್ಲ. ಕರ್ತೃಕಾರಕವನ್ನು ಬಿಟ್ಟು ಇತರ ಕಾರಕಗಳಿಲ್ಲದಿದ್ದರೂ ವಾಕ್ಯ ರಚನೆಯಾಗುತ್ತದೆ. ಮೇಲಿನ ವೃತ್ತಿಯಲ್ಲಿ 'ವಿವಕ್ಷಿತ' ಎಂಬ ಶಬ್ದಪ್ರಯೋಗ ಮಾಡಿರುವುದರಿಂದ ಕರಣ (ಕಾಷ್ಠ), ಅಧಿಕರಣ (ಸ್ಥಾಲೀ), ಇವುಗಳನ್ನು ಕರ್ತೃವಾಗಿ ವಿವಕ್ಷೆ ಮಾಡುವುದುಂಟು.

ಉದಾ– 1. ಕಾಷ್ಠಾನಿ ಪಚನ್ತಿ 2. ಸ್ಥಾಲೀ ಪಚತಿ.ತತ್ವಬೋಧಿಯಲ್ಲಿಯೂ ಇದೇ ಅಭಿಪ್ರಾಯವನ್ನು ಹೀಗೆ ಹೇಳಲಾಗಿದೆ. "ಸ್ಥಾಲ್ಯಾದೀನಾಂ ವಸ್ತುತಃ ಸ್ವಾತನ್ತ್ರ್ಯಾಭಾವೇಽಪಿ ಸ್ಥಾಲೀ ಪಚತಿ ಇತ್ಯಾದಿ ಪ್ರಯೋಗಃ ಸಾಧುರೇವೇತಿ "ವಿವಕ್ಷಿತೋಽರ್ಥಃ" ಇತಿ।

**(ಕರಣಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ – 896. ಸಾಧಕತಮಮ್ ಕರಣಮ್।(1.4.42)**

ವೃತ್ತಿ– ಕ್ರಿಯಾಸಿದ್ಧೌ ಪ್ರಕೃಷ್ಟೋಪಕಾರಕಂ ಕರಣ ಸಂಜ್ಞಂ ಸ್ಯಾತ್।

ಅ. ವೃ.– "ಕಾರಕೇ" ಎಂಬುದು ಅಧಿಕಾರಸೂತ್ರವಾಗಿದೆ.

ಅರ್ಥ– ಯಾವದಾದರೂ ಒಂದು ಕ್ರಿಯೆಯು ಜರುಗುವದಕ್ಕೆ, ಅತ್ಯಂತ ಆವಶ್ಯಕವಾದ ಅಂದರೆ 'ಸಾಧನ'ವಾಗಿರುತ್ತದೋ ಅಂತಹ 'ಕಾರಕ'ಕ್ಕೆ, 'ಕರಣ' ಎಂಬ ಸಂಜ್ಞೆಯನ್ನು ಕೊಡಲಾಗಿದೆ. ಪ್ರಕೃಷ್ಟ ಶಬ್ದಕ್ಕೆ ಒಂದು ಪ್ರಮಾಣ ಹೀಗಿದೆ:–

"ಯದ್ವ್ಯಾಪಾರಾನಂತರಂ ಫಲನಿಷ್ಪತ್ತಿಃ ತತ್ ಪ್ರಕೃಷ್ಟಮ್।"ಉಕ್ತಂ ಚ–

"ಕ್ರಿಯಾಯಾಃ ಫಲನಿಷ್ಪತ್ತಿಃ ಯದ್ವಾಪಾರಾದನಂತರಂ।

**ವಿವಕ್ಷ್ಯತೇ ಯದಾ ತತ್ರ ಕರಣಂ ತತ್ ತದಾ ಸ್ಮೃತಮ್॥"**

ಒಂದು ಕ್ರಿಯೆಯ ಸಿದ್ಧಿಗಾಗಿ ಹಲವು ಸಾಧನಗಳಿದ್ದರೂ ಯಾವದು ಅತ್ಯಂತ ಮುಖ್ಯವೋ ಅಥವಾ ಯಾವುದಿಲ್ಲದಿದ್ದರೆ ಆ ಕಾರ್ಯವು ಜರುಗುವುದಿಲ್ಲವೋ ಅಂತಹ ಪ್ರಕೃಷ್ಟ ಉಪಕಾರಕವಾದ ಸಾಧನಕ್ಕೆ ಸಾಧಕತಮ ಎಂದು ಹೇಳುತ್ತಾರೆ. ಅದೇ ಕರಣವೆಂದು ಗುರುತಿಸಲ್ಪಡುತ್ತದೆ.

**(ತೃತೀಯಾ ವಿಭಕ್ತಿಯನ್ನು ವಿಧಿಸುವ ಸೂತ್ರ)**

**ಸೂತ್ರ - 897 - ಕರ್ತೃಕರಣಯೋಸ್ತೃತೀಯಾ।(2.3.18)**

ವೃತ್ತಿ-ಅನಭಿಹಿತೇ ಕರ್ತರಿ ಕರಣೇ ಚ ತೃತೀಯಾ ಸ್ಯಾತ್। ರಾಮೇಣ ಬಾಣೇನ ಹತೋ ವಾಲೀ।

ಪ. ಛೇ-ಕರ್ತೃ-ಕರಣಯೋಃ, ತೃತೀಯಾ।

ಅ.ವೃ - ಇಲ್ಲಿ 'ಅನಭಿಹಿತೇ" ಎಂಬುದು ಅಧಿಕಾರ ಸೂತ್ರವಾಗಿದೆ.

ಅರ್ಥ -ಒಂದು ವಾಕ್ಯದಲ್ಲಿ 'ಕರ್ತೃ' ಮತ್ತು ಕರಣವು 'ತಿಙ್' ಮೊದಲಾದ ಪ್ರತ್ಯಯಗಳಿಂದ ಹೇಳಲ್ಪಡದೇ ಇದ್ದಾಗ ಅವುಗಳಿಗೆ ತೃತೀಯಾ ವಿಭಕ್ತಿಯು ಬರುತ್ತದೆ.

ಉದಾ- ರಾಮೇಣ ಬಾಣೇನ ಹತೋ ವಾಲೀ -(ರಾಮನಿಂದ ಬಾಣದಿಂದ ವಾಲಿಯು ಕೊಲ್ಲಲ್ಪಟ್ಟನು).ಈ ವಾಕ್ಯದಲ್ಲಿ ಕೃದಂತ ಶಬ್ದವಾದ 'ಹತಃ' ಎಂಬ ಶಬ್ದದಿಂದ 'ಕರ್ಮ'ವಾದ ವಾಲಿಯು ಹೇಳಲ್ಪಟ್ಟಿರೋಣದ್ದರಿಂದ, ಅದಕ್ಕೆ ಪ್ರಥಮಾ ವಿಭಕ್ತಿಯು ಬಂದಿದೆ. ಕರ್ತೃವಾದ ರಾಮ ಕರಣವಾದ ಬಾಣ ಇವೆರಡೂ 'ತಿಙಾ'ದಿಗಳಿಂದ ಹೇಳಲ್ಪಡದೇ ಇರೋಣದ್ದರಿಂದ ಅವುಗಳಿಗೆ ಪ್ರಕೃತ ಸೂತ್ರದಿಂದ ತೃತೀಯಾ ವಿಭಕ್ತಿಯು ಬಂದಿದೆ.

**(ಸಂಪ್ರದಾನ ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ - 898 - ಕರ್ಮಣಾ ಯಮಭಿಪ್ರೈತಿ ಸ ಸಂಪ್ರದಾನಂ।(1.4.32)**

ವೃತ್ತಿ- ದಾನಸ್ಯ ಕರ್ಮಣಾ ಯಮಭಿಪ್ರೈತಿ ಸ ಸಂಪ್ರದಾನಸಂಜ್ಞಃ ಸ್ಯಾತ್।

ಪ. ಛೇ - ಕರ್ಮಣಾ, ಯಮ್, ಅಭಿಪ್ರೈತಿ, ಸಃ, ಸಂಪ್ರದಾನಮ್।

ಅ. ವೃ.- "ಕಾರಕೇ" ಎಂಬುದು ಅಧಿಕಾರ ಸೂತ್ರವಾಗಿದೆ.

ಅರ್ಥ- 'ದಾನ'ವೆಂದರೆ ಒಂದು ವಸ್ತುವನ್ನು ಮತ್ತೆ ತಿರುಗಿ ಪಡೆಯದೇ ಅದರಮೇಲೆ ಇರುವ ತನ್ನ ಸ್ವಾಮಿತ್ವವನ್ನು ಕಳೆದುಕೊಂಡು ಮತ್ತೊಬ್ಬರಿಗೆ ಅದರ ಸ್ವಾಮಿತ್ವವನ್ನು ಕೊಡುವುದು-

ದಾನಂ ಚ ಅಪುನರ್ಗ್ರಹಣಾಯ ಸ್ವಸ್ವತ್ವ-ನಿವೃತ್ತಿಪೂರ್ವಕಂ ಪರಸ್ವತ್ವ-ಉಪಾದನಮ್। (ತತ್ವಬೋಧಿನಿ).

ಪ್ರತ್ಯುದಾಹರಣೆ-"ರಜಕಸ್ಯ ವಸ್ತ್ರಂ ದದಾತಿ" ಎಂಬಲ್ಲಿ ಚತುರ್ಥೀ ಬರಲಿಲ್ಲ.

ಯಾಕೆಂದರೆ ವಸ್ತ್ರದ ಸ್ವಾಮಿತ್ವ ಕೊಡುವವನಲ್ಲಿಯೇ ಇದೆ. ದಾನಕ್ರಿಯೆಯ ಕರ್ಮಕ್ಕೆ ಯಾರು ಉದ್ದಿಷ್ಟನಾಗಿರುತ್ತಾನೋ ಅಂತಹ ಕಾರಕಾಕ್ಕೆ ಸಂಪ್ರದಾನ ಸಂಜ್ಞೆಯು ಬರುತ್ತದೆ.

"ಸಂಪ್ರದಾನದ ಅರ್ಥ – ಸಮ್ಯಕ್ ಪ್ರದೀಯತೇ ಅಸ್ಮೈ ತತ್ ಸಂಪ್ರದಾನಮ್।" ಎಂದು ತತ್ವಬೋಧಿನಿಯಲ್ಲಿ ಹೇಳಲಾಗಿದೆ. ಮಹಾಭಾಷ್ಯಕಾರರು ಕೊಟ್ಟಿರುವ ಉದಾಹರಣೆಯಲ್ಲಿ– ಖಂಡಿಕೋಪಾಧ್ಯಾಯಃ ತಸ್ಮೈ (ಶಿಷ್ಯಾಯ) ಚಪೇಟಾಂ ದದಾತಿ। (ಖಂಡಿಕೋಪಾಧ್ಯಾಯನು ಕೆನ್ನೆಯ ಮೇಲೆ ಹೊಡೆತವನ್ನು ಕೊಡುತ್ತಾನೆ).

**(ಚತುರ್ಥೀ ವಿಭಕ್ತಿಯನ್ನು ವಿಧಿಸುವ ಸೂತ್ರ)**

**ಸೂತ್ರ – 899– ಚತುರ್ಥೀ ಸಂಪ್ರದಾನೇ।(2.3.13)**

ವೃತ್ತಿ– ವಿಪ್ರಾಯ ಗಾಂ ದದಾತಿ।

ಅ. ವೃ– ಇಲ್ಲಿ "ಅನಭಿಹಿತೇ" ಎಂಬುದು ಅಧಿಕಾರ ಸೂತ್ರವಾಗಿದೆ.

ಅರ್ಥ– ಸಂಪ್ರದಾನ ಸಂಜ್ಞೆಯುಳ್ಳ ಕಾರಕಕ್ಕೆ 'ಚತುರ್ಥೀ' ವಿಭಕ್ತಿಯು ಬರುತ್ತದೆ. ಉದಾ– ವಿಪ್ರಾಯ ಗಾಂ ದದಾತಿ। (ಬ್ರಾಹ್ಮಣನಿಗೆ ಹಸುವನ್ನು (ದಾನವಾಗಿ) ಕೊಡುತ್ತಾನೆ. ಎಂಬ ಈ ವಾಕ್ಯದಲ್ಲಿ ವಿಪ್ರನು ಸಂಪ್ರದಾನ ಕಾರಕನಾಗಿರುವುದರಿಂದ 'ವಿಪ್ರ' ಶಬ್ದಕ್ಕೆ ಚತುರ್ಥೀ ವಿಭಕ್ತಿಯು ಬಂದಿದೆ. ಇಲ್ಲಿ 'ತಿಙಾ'ದಿ ಪ್ರತ್ಯಯಗಳಿಂದ 'ವಿಪ್ರ' ಶಬ್ದವು ಹೇಳಲ್ಪಡಲಿಲ್ಲ ಆದ್ದರಿಂದ 'ಪ್ರಥಮಾ' ವಿಭಕ್ತಿಯು ಬರಲಿಲ್ಲ. ಆದರೆ "ದಾನೀಯೋ ವಿಪ್ರಃ" ಎಂಬಲ್ಲಿ. 'ವಿಪ್ರನು' 'ಕೃತ್' ಪ್ರತ್ಯಯದಿಂದ ಹೇಳಲ್ಪಟಿರುವುದರಿಂದ 'ವಿಪ್ರ' ಶಬ್ದವು ಚತುರ್ಥೀ ವಿಭಕ್ತಿಯಲ್ಲಿ ಹೇಳಲ್ಪಡಲಿಲ್ಲ.

**(ಚತುರ್ಥೀ ವಿಭಕ್ತಿಯನ್ನು ವಿಧಿಸುವ ಸೂತ್ರ)**

**ಸೂತ್ರ – 900 – ನಮಃ ಸ್ವಸ್ತಿ–ಸ್ವಾಹಾ–ಸ್ವಧಾ–ಽಲಂ–ವಷಡ್ಯೋಗಾಚ್ಚ।(2.3.16)**

ವೃತ್ತಿ– ಏಭಿರ್ಯೋಗೇ ಚತುರ್ಥೀ। ಹರಯೇ ನಮಃ। ಪ್ರಜಾಭ್ಯಃ ಸ್ವಸ್ತಿ। ಅಗ್ನಯೇ ಸ್ವಾಹಾ। ಪಿತೃಭ್ಯಃ ಸ್ವಧಾ। ಅಲಮಿತಿ ಪರ್ಯಾಪ್ತ್ಯರ್ಥಗ್ರಹಣಮ್। ತೇನ ದೈತ್ಯೇಭ್ಯೋ ಹರಿರಲಂ ಪ್ರಭುಃ, ಸಮರ್ಥಃ, ಶಕ್ತಇತ್ಯಾದಿ। ಪ. ಛೇ– ನಮಃ ಸ್ವಸ್ತಿ–ಸ್ವಾಹಾ–ಸ್ವಧಾ–ಽಲಂ–ವಷಡ್ಯೋಗಾತ್ ಚ। ಅ. ವೃ.– "ಚತುರ್ಥೀ ಸಂಪ್ರದಾನೇ" ಎಂಬ ಸೂತ್ರದಿಂದ 'ಚತುರ್ಥೀ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ: ನಮಃ, ಸ್ವಸ್ತಿ, ಸ್ವಾಹಾ, ಸ್ವಧಾ, ಽಲಂ, ಮತ್ತು ವಷಟ್ ಇವುಗಳ ಸಂಬಂಧವಿದ್ದಾಗ, ಆ ಪದಗಳಿಗೆ ಚತುರ್ಥೀ ಬರುತ್ತದೆ.

ಉದಾ 1: ಹರಯೇ ನಮಃ। (ಹರಿಗೆ ನಮಸ್ಕಾರ ಇರಲಿ). 2. ಪ್ರಜಾಭ್ಯಃ ಸ್ವಸ್ತಿ। (ಪ್ರಜೆಗಳಿಗೆ ಮಂಗಲವಿರಲಿ), 3. ಅಗ್ನಯೇ ಸ್ವಾಹಾ। (ಅಗ್ನಿಗೆ ಅರ್ಪಿತವಾಗಲಿ). 4.ಪಿತೃಭ್ಯಃ ಸ್ವಧಾ।(ಪಿತೃಗಳಿಗೆ ಅರ್ಪಿತವಾಗಲಿ). 5. ಇಲ್ಲಿ 'ಅಲಮ್' ಎಂಬುದು ಸಮರ್ಥ ಎಂಬ ಅರ್ಥವನ್ನು ಕೊಡುತ್ತದೆ. ದೈತ್ಯೇಭ್ಯೋ ಹರಿರಲಮ್।(ದೈತ್ಯರಿಗೆ ಹರಿಯು (ಎದುರಿಸಲು) ಸಮರ್ಥನು). ಇದೇ ಅರ್ಥವನ್ನು ಕೊಡುವ ಪ್ರಭುಃ,

ಸಮರ್ಥಃ, ಶಕ್ತಃ ಮೊದಲಾದ ಪದಗಳ ಯೋಗವಿರುವಾಗಲೂ ಚತುರ್ಥೀ ವಿಭಕ್ತಿ ಬರುತ್ತದೆ.

**(ಅಪಾದಾನ ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ - 901- ಧ್ರುವಮಪಾಯೇಽಪಾದಾನಮ್।(1.4.24)**

ವೃತ್ತಿ- ಅಪಾಯಃ= ವಿಶ್ಲೇಷಃ, ತಸ್ಮಿನ್ ಸಾಧ್ಯೇ ಯದ್ ಧ್ರುವಂ ಅವಧಿಭೂತಂ ಕಾರಕಂ ತದಪಾದಾನಮ್ ಸ್ಯಾತ್।

ಪ. ಛೇ- ಧ್ರುವಮ್, ಅಪಾಯೇ, ಅಪಾದಾನಮ್।

ಅ. ವ್ಯ. - ಅಪಾದಾನ ಸಂಜ್ಞೆಯ ಫಲವು "ಅಪಾದಾನೇ ಪಞ್ಚಮೀ" ಎಂಬ ಸೂತ್ರದಿಂದ ಪಞ್ಚಮೀ ವಿಭಕ್ತಿಯು ಬರುತ್ತದೆ.

ಅರ್ಥ- ಸೂತ್ರದಲ್ಲಿರುವ ಅಪಾಯ ಶಬ್ದಕ್ಕೆ ವಿಯೋಗ ಅಥವಾ ವಿಶ್ಲೇಷ ಎಂದರ್ಥ. ಎರಡು ಪದಾರ್ಥಗಳಲ್ಲಿ ವಿಯೋಗ ಉಂಟಾದಾಗ, ಯಾವ ಒಂದು ಪದಾರ್ಥ ಸ್ಥಿರವಾಗಿರುತ್ತದೋ ಅದಕ್ಕೆ ಅಪಾದಾನ ಸಂಜ್ಞೆ ಬರುತ್ತದೆ.

**(ಪಞ್ಚಮೀ ವಿಭಕ್ತಿಯನ್ನು ವಿಧಿಸುವ ಸೂತ್ರ)**

**ಸೂತ್ರ - 902-ಅಪಾದಾನೇ ಪಞ್ಚಮೀ।( 2.3.28)**

ವೃತ್ತಿ-ಗ್ರಾಮಾತ್ ಆಯಾತಿ। ಧಾವತೋಽಶ್ವಾತ್ ಪತತಿ। ಇತ್ಯಾದಿ।

ಅರ್ಥ - ಅಪಾದಾನ ಸಂಜ್ಞೆಯನ್ನು ಹೊಂದಿರುವ ಕಾರಕಕ್ಕೆ ಪಞ್ಚಮೀ ವಿಭಕ್ತಿಯು ಬರುತ್ತದೆ.

ಉದಾ-1. ಗ್ರಾಮಾತ್ ಆಯಾತಿ (ಗ್ರಾಮದಿಂದ ಬರುತ್ತಾನೆ). ಇಲ್ಲಿ ಗ್ರಾಮವು ಸ್ಥಿರವಾಗಿದ್ದು ಪುರುಷನು ಗ್ರಾಮದಿಂದ ಹೊರಗೆ ಬರೋಣದ್ದರಿಂದ, ಸ್ಥಿರವಾಗಿರುವ ಗ್ರಾಮವು ಅಪಾದಾನ ಸಂಜ್ಞೆಯನ್ನು ಹೊಂದಿ ಪ್ರಕೃತ ಸೂತ್ರದಿಂದ ಪಞ್ಚಮೀ ವಿಭಕ್ತಿಯನ್ನು ಪಡೆಯುತ್ತದೆ.

ಉದಾ-2. ಧಾವತಃ ಅಶ್ವಾತ್ ಪತತಿ (ಓಡುತ್ತಿರುವ ಕುದುರೆಯ ಮೇಲಿಂದ ಬೀಳುತ್ತಾನೆ). ಇಲ್ಲಿ ಓಡುತ್ತಿರುವ ಅಶ್ವವು ಸ್ಥಿರವಲ್ಲ ಎಂದು ಸಂಶಯ ಬರುತ್ತದೆ. ಅದಕ್ಕೆ ಭರ್ತೃಹರಿಯು ಒಂದು ಕಾರಿಕೆಯಿಂದ ಸಮಾಧಾನವನ್ನು ಹೇಳಿರುವನು.

**ಕಾರಿಕೆ: ಅಪಾಯೇ ಯದುದಾಸೀನಂ ಚಲಂ ವಾ ಯದಿವಾಽಚಲಮ್।**
**ಧ್ರುವಮೇವ ತದಾವೇಶಾತ್ ತದಪದಾನಮುಚ್ಯತೇ॥**

ಈ ಶ್ಲೋಕದ ಪ್ರಕಾರ, ಗ್ರಾಮಾದಾಯಾತಿ ಎಂಬುದು ಸ್ಥಿರವಾಗಿದ್ದು, ಅಪಾದಾನ ಸಂಜ್ಞೆಯನ್ನು ಹೊಂದಿದೆ. ಆದರೆ ಧಾವತಃ ಅಶ್ವಾತ್ ಪತತಿ ಎಂಬಲ್ಲಿ ಅಸ್ಥಿರವಾಗಿರುವ ಕುದುರೆಗೂ ಅಪಾದಾನ ಸಂಜ್ಞೆ ಬಂದಿದೆ.

**(ಷಷ್ಠೀ ವಿಭಕ್ತಿಯನ್ನು ವಿಧಿಸುವ ಸೂತ್ರ)**

**ಸೂತ್ರ – 903– ಷಷ್ಠೀ ಶೇಷೇ।(2.3.50)**

ವೃತ್ತಿ– ಕಾರಕ–ಪ್ರಾತಿಪದಿಕಾರ್ಥ–ವ್ಯತಿರಿಕ್ತಃ ಸ್ವ– ಸ್ವಾಮಿಭಾವಾದಿ–ಸಂಬಂಧಃ ಶೇಷಃ, ತತ್ರ ಷಷ್ಠೀ ಸ್ಯಾತ್। ರಾಜ್ಞಃ ಪುರುಷಃ। ಕರ್ಮಾದೀನಾಮಪಿ ಸಂಬಂಧಮಾತ್ರ–ವಿವಕ್ಷಾಯಾಂ ಷಷ್ಠ್ಯೇವ। ಸತಾಂ ಗತಂ। ಸರ್ಪಿಷೋ ಜಾನೀತೇ। ಮಾತುಃ ಸ್ಮರತಿ। ಏಧೋಧಕಸ್ಯ ಉಪಸ್ಕುರುತೇ। ಭಜೇ ಶಂಭೋಃ ಚರಣಯೋಃ।

ಅರ್ಥ–ಅಪಾದಾನಾದಿ ಕಾರಕಗಳಿಂದ ಭಿನ್ನವಾಗಿರುವ ಸ್ವಾಮಿ–ಸೇವಕ ಮೊದಲಾದ ಸಂಬಂಧವನ್ನು ಹೇಳುವ ಅರ್ಥವನ್ನು 'ಶೇಷ' ಶಬ್ದದಿಂದ ಹೇಳಲಾಗಿದೆ.

ಉದಾ– ರಾಜ್ಞಃ ಪುರುಷಃ (ರಾಜನ ಸೇವಕ) – ಎಂಬಲ್ಲಿ, ರಾಜನು ಸ್ವಾಮಿ, ಮತ್ತು ಪುರುಷನು ಅವನ ಸೇವಕ. ಇದರಿಂದ ಅವರಲ್ಲಿ ಸ್ವ–ಸ್ವಾಮಿ ಭಾವ ಸಂಬಂಧ ಇರುತ್ತದೆ ಎಂದು ಗೊತ್ತಾಗುತ್ತದೆ. ಇಲ್ಲಿ. 'ರಾಜನ್' ಶಬ್ದಕ್ಕೆ ಕ್ರಿಯಾನ್ವಯಿತ್ವವಿಲ್ಲ. ಆದ್ದರಿಂದ 'ಷಷ್ಠೀ' ವಿಭಕ್ತಿಯು ಬಂದಿದೆ. ಇಲ್ಲಿ 'ರಾಜನ್' ಶಬ್ದದ ಕೇವಲ ಪ್ರಾತಿಪದಿಕಾರ್ಥವು ವಿವಕ್ಷಿತವಾಗಿಲ್ಲ. ಪುರುಷ ಶಬ್ದಕ್ಕೆ ಮಾತ್ರ ಪ್ರಾತಿಪದಿಕಾರ್ಥವಿದ್ದು ಪ್ರಥಮಾ ವಿಭಕ್ತಿಯು ಬಂದಿದೆ. ಕರ್ಮ ಮೊದಲಾದ ಕಾರಕಗಳ ಅರ್ಥ ಬರುವ ಸಮಯದಲ್ಲಿ, ಕೇವಲ ಸಂಬಂಧದ ವಿವಕ್ಷೆ ಮಾಡಿದಾಗ, (ಬೇರೆ ಯಾವ ವಿವಕ್ಷೇ ಇಲ್ಲದಿದ್ದಾಗ) 'ಕರ್ಮ' ಮೊದಲಾದವುಗಳಿಗೆ 'ಷಷ್ಠೀ' ವಿಭಕ್ತಿಯು ಬರುತ್ತದೆ.

ಉದಾ–2. ಸತಾಂ ಗತಮ್ (ಸತ್ಪುರುಷ ಸಂಬಂಧಿಯಾದ ಗಮನ) – ಇಲ್ಲಿ 'ಸತಾಂ' ಎಂಬ ಕರ್ಮಕಾರಕವು 'ಷಷ್ಠೀ' ವಿಭಕ್ತಿಯಲ್ಲಿದೆ.

ಉದಾ– 3. ಸರ್ಪಿಷೋ ಜಾನೀತೇ (ತುಪ್ಪದ ಉಪಾಯದಿಂದ ತಿಳಿದುಕೊಳ್ಳುತ್ತಾನೆ). ಈ ಉದಾಹರಣೆಯಲ್ಲಿ'ಕರಣ ಕಾರಕದ' ಸಂಬಂಧವನ್ನು ಹೇಳುವ ವಿವಕ್ಷೆ ಇರೋಣದ್ದರಿಂದ, 'ಸರ್ಪಿಸ್' ಶಬ್ದವು ಷಷ್ಠೀ ವಿಭಕ್ತಿಯಲ್ಲಿದೆ.

ಉದಾ– 4. ಮಾತುಃ ಸ್ಮರತಿ (ತಾಯಿಯ ಸ್ಮರಣೆ ಮಾಡುತ್ತಾನೆ) – ಈ ವಾಕ್ಯದಲ್ಲಿ, ಕರ್ಮಕಾರಕವಾದ ತಾಯಿಯನ್ನು ಹೇಳುವ ಮಾತೃ ಶಬ್ದಕ್ಕೆ 'ಷಷ್ಠೀ' ವಿಭಕ್ತಿ ಬಂದಿದೆ.

ಉದಾ– 5. ಏಧೋದಕಸ್ಯ ಉಪಸ್ಕುರುತೇ (ಉರಿಯುವ ಕಟ್ಟಿಗೆಯು ನೀರಿನ ಗುಣವನ್ನು ಬದಲಾಯಿಸುತ್ತದೆ). ಇಲ್ಲಿ ಉರಿಯುವ ಕಟ್ಟಿಗೆಯು ನೀರಿನಲ್ಲಿರುವ ಶೈತ್ಯವನ್ನು ಹೋಗಲಾಡಿಸಿ ಉಷ್ಣತೆಯನ್ನು ಉಂಟುಮಾಡುತ್ತದೆ. 'ಉಪಸ್ಕುರುತೇ' ಎಂಬ ಶಬ್ದಕ್ಕೆ 'ಗುಣಾಂತರಾಧಾನಂ ಕರೋತಿ' ಎಂದು ಅರ್ಥ ಮಾಡಿದ್ದಾರೆ. ಕಾಶಿಕಾಕಾರರು ಈ ಸೂತ್ರದ ಬಗ್ಗೆ ವಿವರಣೆಯನ್ನು ಹೀಗೆ ನೀಡಿದ್ದಾರೆ–

'ಕರೋತೇಃ ಕರ್ಮಣಿ ಕಾರಕೇ ಶೇಷತ್ವೇನ ವಿವಕ್ಷಿತೇ ಪ್ರತಿಯತ್ನೇ ಗಮ್ಯಮಾನೇ ಷಷ್ಠೀ ವಿಭಕ್ತಿರ್ಭವತಿ। ಸತೋ‌ಽ ಗುಣಾನ್ತರಾಧಾನಂ ಪ್ರತಿಯತ್ನಃ।'

ಉದಾ– 6. ಭಜೇ ಶಂಭೋಃ ಚರಣಯೋಃ ( ಶಂಕರನ ಚರಣಗಳ ಸೇವೆಯನ್ನು

ಮಾಡುತ್ತೇನೆ) – ಇಲ್ಲಿ ಕರ್ಮಕಾರಕವಾದ ಚರಣಗಳಿಗೆ ಷಷ್ಠೀ ವಿಭಕ್ತಿಯು ಬಂದಿದೆ.

ಗಮನಿಸಬೇಕಾದ ಅಂಶ: 'ಷಷ್ಠೀ' ವಿಭಕ್ತಿಯು ಕಾರಕವಲ್ಲ ಎಂದು ಸಾಮಾನ್ಯವಾಗಿ ಹೇಳುತ್ತಾರೆ. ಆದರೆ, ಮೇಲಿನ

ಉದಾಹರಣೆಗಳಿಂದ 'ಷಷ್ಠೀ' ವಿಭಕ್ತಿಯು 'ಕಾರಕಾರ್ಥ'ವನ್ನು ಕೆಲವೊಮ್ಮೆ ಕೊಡುತ್ತದೆ.

ಬೇರೆ ಉದಾ– 1. ವ್ಯಾಸಸ್ಯ ಕೃತಿಃ (ವ್ಯಾಸನ ಗ್ರಂಥ) – ಇಲ್ಲಿ ವ್ಯಾಸನು ಕರ್ತೃಕಾರಕನಾಗಿದ್ದಾನೆ. 2. ಜಗತಃ ಕರ್ತಾ (ಜಗತ್ತನ್ನು ಸೃಷ್ಟಿಸಿದವನು) – ಇಲ್ಲಿ ಸೃಜನ ಕ್ರಿಯೆಗೆ ಕರ್ಮವಾಗಿರುವ ಜಗತ್ತು 'ಷಷ್ಠೀ' ವಿಭಕ್ತಿಯಲ್ಲಿದೆ

**(ಅಧಿಕರಣ ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ – 904– ಆಧಾರೋऽಧಿಕರಣಮ್।(1.4.45)**

ವೃತ್ತಿ– ಕರ್ತೃ-ಕರ್ಮದ್ವಾರಾ ತನ್ನಿಷ್ಠ ಕ್ರಿಯಾಯಾಃ ಆಧಾರಃ ಕಾರಕಂ ಅಧಿಕರಣಂ ಸ್ಯಾತ್।

ಪ. ಛೇ– ಆಧಾರಃ, ಅಧಿಕರಣಮ್।

ಅರ್ಥ– 'ತತ್ವಬೋಧಿನೀ'ಯಲ್ಲಿ, "ಆಧ್ರಿಯತೇ ಅಸ್ಮಿನ್ ಇತಿ ಆಧಾರಃ। ಸ ಕಸ್ಯ ಇತ್ಯಾಕಾಂಕ್ಷಾಯಾಮ್, ಕಾರಕಾಧಿಕಾರಾತ್ ಕ್ರಿಯಾಯಾ ಇತಿ ಲಭ್ಯತೇ"।

ಕರ್ತೃ ಮತ್ತು ಕರ್ಮ ಇವುಗಳ ಮುಖಾಂತರ ಅವುಗಳ ಸ್ಥಾನದಲ್ಲಿರುವ ಕ್ರಿಯೆಯ ಯಾವ ಆಧಾರವಿದೆಯೋ ಅಂತಹ ಆಧಾರವಾಗಿರುವ ಕಾರಕಕ್ಕೆ 'ಅಧಿಕರಣ'ವೆಂಬ ಸಂಜ್ಞೆಯು ಬರುತ್ತದೆ. ಅಂದರೆ ಕ್ರಿಯೆಯ ಕರ್ತೃವಿಗೆ ಅಥವಾ ಕರ್ಮಕ್ಕೆ ಯಾವದು ಆಧಾರವಾಗಿದೆಯೋ ಆ ಕಾರಕಕ್ಕೆ ಅಧಿಕರಣ ಸಂಜ್ಞೆ ಬರುತ್ತದೆ ಎಂದು ಅರ್ಥ.

**(ಸಪ್ತಮೀ ವಿಭಕ್ತಿಯನ್ನು ವಿಧಿಸುವ ಸೂತ್ರ)**

**ಸೂತ್ರ – 905–ಸಪ್ತಮ್ಯಧಿಕರಣೇ ಚ।(2.3.36)**

ವೃತ್ತಿ– ಅಧಿಕರಣೇ ಸಪ್ತಮೀ ಸ್ಯಾತ್, 'ಚ'ಕಾರಾದ್ ದೂರಾನ್ತಿಕಾರ್ಥೇಭ್ಯಃ। ಔಪಶ್ಲೇಷಿಕಃ, ವೈಷಯಿಕಃ, ಅಭಿವ್ಯಾಪಕಶ್ಚ ಇತ್ಯಾಧಾರಃ ತ್ರಿಧಾ। ಕಟೇ ಆಸ್ತೇ। ಸ್ಥಾಲ್ಯಾಂ ಪಚತಿ। ಮೋಕ್ಷೇ ಇಚ್ಛಾऽಸ್ತಿ। ಸರ್ವಸ್ಮಿನ್ನ್ ಆತ್ಮಾऽಸ್ತಿ। ವನಸ್ಯ ದೂರೇ ಅನ್ತಿಕೇ ವಾ।

ಪ. ಛೇ–ಸಪ್ತಮೀ, ಅಧಿಕರಣೇ, ಚ।

ಅರ್ಥ – 'ಅಧಿಕರಣ' ಕಾರಕದಿಂದ ಸಪ್ತಮಿಯು ಬರುತ್ತದೆ. 'ಚ' ಕಾರದಿಂದ ಹಾಗೆಯೇ ದೂರ ಅಥವಾ ಸಮೀಪ ಈ ಅರ್ಥವುಳ್ಳ ಶಬ್ದಗಳನ್ನು ಪ್ರಯೋಗ ಮಾಡಿದಾಗಲೂ, ಅವುಗಳಿಗೆ ಸಪ್ತಮೀ ಬರುತ್ತದೆ. ಈ ಸೂತ್ರದಲ್ಲಿ ಸಮುಚ್ಚಯಾರ್ಥಕವಾದ 'ಚ' ಕಾರದಿಂದ "ದೂರಾನ್ತಿಕಾರ್ಥೇಭ್ಯಃ ದ್ವಿತೀಯಾ ಚ (2.3.35) ಎಂಬ ಹಿಂದಿನ ಸೂತ್ರದಿಂದ "ದೂರಾನ್ತಿಕಾರ್ಥೇಭ್ಯಃ" ಎಂಬ ಸಾಮಾಸಿಕ ಪದದ ಅನುವೃತ್ತಿಯೂ ಆಗಿದೆ.ಆಧಾರವು ಮೂರು ವಿಧವಾಗಿದೆ. 1. ಔಪಶ್ಲೇಶಿಕ

ಆಧಾರ, 2. ವೈಷಯಿಕ ಆಧಾರ, ಮತ್ತು 3.ಅಭಿವ್ಯಾಪಕ ಆಧಾರ ಎಂದು.

1. ಔಪಶ್ಲೇಷಿಕ – 'ಶ್ಲೇಷಃ' ಎಂದರೆ ಸಂಯೋಗ. ಉಪ-ಸಮೀಪೆ-ಶ್ಲೇಷಃ=ಉಪಶ್ಲೇಷಃ ಈ ರೀತಿಯ ಉಪಶ್ಲೇಷದಿಂದ ಬಂದದ್ದು ಔಪಶ್ಲೇಷಿಕ ಆಧಾರ.

ಉದಾ– 'ಕಟೇ ಆಸ್ತೇ' ಎಂಬಲ್ಲಿ, ಚಾಪೆ(ಕಟ)ಯು ಆಧಾರವಾಗಿರುವುದರಿಂದ 'ಕಟ' ಶಬ್ದಕ್ಕೆ ಸಪ್ತಮೀ ಬಂದಿದೆ. ಕಾರಣ 'ಆಸ್ತೇ' ಎಂಬ ಕ್ರಿಯೆಗೆ ಔಪಶ್ಲೇಷಿಕವಾದ ಆಧಾರವು ಚಾಪೆ(ಕಟ)ಯಾಗಿದೆ. ಕಟಕ್ಕೆ ಕರ್ತೃವಿನ ಸಂಬಂಧವು ಉಪಶ್ಲೇಷವಾಗಿದೆ.

2. ವೈಷಯಿಕ – ವಿಷಯಕ್ಕೆ ಸಂಬಂಧಿಸಿದ್ದು ಎಂದರ್ಥ. ಅಂದರೆ 'ಕರ್ಮ' ಎಂದರ್ಥ.

ಉದಾ– 'ಸ್ಥಾಲ್ಯಾಂ ಪಚತಿ' ಎಂಬಲ್ಲಿ ಪಚನ ಕ್ರಿಯೆಗೆ ಕರ್ಮವಾದ 'ತಂಡುಲ'ವು ಅಧ್ಯಾಹೃತವಾಗಿದೆ. ಆ ಕರ್ಮದ ಮುಖಾಂತರ ಸ್ಥಾಲೀ(ಪಾತ್ರೆ)ಯು ಪಚ(ಬೇಯಿಸುವ ಕ್ರಿಯೆಗೆ)ನ ಕ್ರಿಯೆಗೆ 'ಆಧಾರ'ವಾಗಿದೆ. 'ಮೋಕ್ಷೇ ಇಚ್ಛಾ ಅಸ್ತಿ' ಎಂಬುದು 'ವೈಷಯಿಕ' ಆಧಾರಕ್ಕೆ ಉದಾಹರಣೆಯಾಗಿದೆ.

3.ಅಭಿವ್ಯಾಪಕ – ಸರ್ವಸ್ಮಿನ್ನ್ ಆತ್ಮಾಽಸ್ತಿ (ಆತ್ಮನು ಎಲ್ಲ ಸ್ಥಳದಲ್ಲಿಯೂ ಇದ್ದಾನೆ) ಎಂಬಲ್ಲಿ, 'ಆತ್ಮನು' 'ಆಧೇಯ'ವಾಗಿದ್ದುಕೊಂಡು ತನ್ನ ಅಸ್ತಿತ್ವದಿಂದ ಎಲ್ಲಕ್ಕೂ ಆಧಾರವಾಗಿ ವ್ಯಾಪಿಸಿಕೊಂಡಿದ್ದಾನೆ. ಇದಕ್ಕೇನೇ ಮತ್ತೊಂದು ಉದಾಹರಣೆ ಎಂದರೆ, 'ತಿಲೇಷು ತೈಲಮ್' ( ಎಳ್ಳಿನಲ್ಲಿ ಎಣ್ಣೆ) ಎಂಬುದು.

ಪ್ರಸ್ತುತ ಸೂತ್ರದಲ್ಲಿ 'ದೂರಾನ್ತಿಕಾರ್ಥೇಭ್ಯಃ' ಎಂಬುದು ಅನುವೃತ್ತವಾಗಿರುವುದರಿಂದ 'ವನಸ್ಯ ದೂರೇ ಅನ್ತಿಕೇ ವಾ' ಎಂಬಲ್ಲಿ 'ದೂರ' ಮತ್ತು 'ಅನ್ತಿಕ' ಶಬ್ದಗಳಿಗೂ 'ಸಪ್ತಮೀ' ಬಂದಿದೆ.

**॥ಇತಿ ಕಾರಕ-ಪ್ರಕರಣಮ್ (37) (ವಿಭಕ್ತ್ಯರ್ಥಾಃ)॥**

# ಪ್ರಕರಣ-38: ಸಮಾಸ

**(ಕೇವಲ ಸಮಾಸ : ಸೂತ್ರ ಸಂಖ್ಯೆ ೯೦೬ ರಿಂದ ೯೦೮ ವರೆಗೆ)**

**ಸಮಾಸಃ ಪಞ್ಚಧಾ। ತತ್ರ ಸಮಸನಂ ಸಮಾಸಃ॥**
**ಸ ಚ ವಿಶೇಷಸಂಜ್ಞಾವಿನಿರ್ಮುಕ್ತಃ ಕೇವಲಸಮಾಸಃ ಪ್ರಥಮಃ॥**
**ಪ್ರಾಯೇಣ ಪೂರ್ವಪದಾರ್ಥಪ್ರಧಾನಃ ಅವ್ಯಯೀಭಾವಃ ದ್ವಿತೀಯಃ॥**
**ಪ್ರಾಯೇಣ ಉತ್ತರಪದಾರ್ಥಪ್ರಧಾನಃ ತತ್ಪುರುಷಃ ತೃತೀಯಃ॥**
**ತತ್ಪುರುಷ ಭೇದಃ ಕರ್ಮಧಾರಯಃ॥ ಕರ್ಮಧಾರಯಭೇದೋ ದ್ವಿಗುಃ॥**
**ಪ್ರಾಯೇಣ ಅನ್ಯಪದಾರ್ಥಪ್ರಧಾನಃ ಬಹುವ್ರೀಹಿಃ ಚತುರ್ಥಃ॥**
**ಪ್ರಾಯೇಣ ಉಭಯಪದಾರ್ಥಪ್ರಧಾನಃ ದ್ವನ್ದ್ವಃ ಪಞ್ಚಮಃ॥**

ಅರ್ಥ: ಸಮಾಸ ಐದು ವಿಧವಾಗಿದೆ. ಸಮಾಸವೆಂದರೆ ಅರ್ಥ ದೃಷ್ಟಿಯಿಂದ ಒಂದೇ ಕಡೆ ಬರುವ ಯೋಗ್ಯವಾದ ಅನೇಕ ಪದಗಳನ್ನು ಒಂದು ಪದವನ್ನಾಗಿ ಮಾಡುವುದು. ಅರ್ಥದ ದೃಷ್ಟಿಯಿಂದ ಸಂಬಂಧ ಹೊಂದುವ ಪದಗಳು ಒಂದೆಕಡೆಗೆ ಸೇರಿದಾಗ ಸಮಾಸವಾಗುತ್ತದೆ.ಇದನ್ನೇ **ಸಮಸನಂ ಸಮಾಸಃ** ಎಂದು ಹೇಳಿರುವರು.

1. ಕೇವಲ ಸಮಾಸ: ಸಮಾಸದಲ್ಲಿ ಮೇಲೆ ಹೇಳಿದ ಐದು ಪ್ರಕಾರಗಳಿದ್ದರೂ ಅದರಲ್ಲಿ ಕೇವಲ ಸಮಾಸವು ಪ್ರಥಮ ಸ್ಥಾನವನ್ನು ಪಡೆದಿದೆ. ಬೇರೆ ಸಮಾಸಗಳೆಲ್ಲ ಅವುಗಳಲ್ಲಿರುವ ಘಟಕ ಪದಗಳ ಸಂಬಂಧದಿಂದ ಬೇರೆ ಬೇರೆ ಸಂಜ್ಞೆಗಳನ್ನು ಹೊಂದಿ ಬೇರೆ-ಬೇರೆ ಪ್ರಕಾರಗಳಿಗೆ ಸೇರಿದವುಗಳಾಗುತ್ತವೆ. ಈ ರೀತಿ ವಿಶೇಷ ಸಂಜ್ಞೆ ಇಲ್ಲದಿರುವ ಸಮಾಸಕ್ಕೆ ಕೇವಲ ಸಮಾಸವೆಂದು ಹೇಳುತ್ತಾರೆ. ಇದನ್ನೇ ಸುಪ್-ಸುಪ್ ಸಮಾಸವೆಂದು ಕರೆಯುತ್ತಾರೆ ಒಂದು ಸುಬಂತವು ಮತ್ತೊಂದು ಸುಬಂತದ ಜೊತೆಗೆ ಸೇರಿ ಸಮಾಸವಾಗುತ್ತದೆ.

ಉದಾ- ಪೂರ್ವಂ ಭೂತಃ=ಭೂತಪೂರ್ವಃ. (ಇಲ್ಲಿ ವಿಶೇಷ ಸಂಜ್ಞೆ ಇರುವುದಿಲ್ಲ).

2. ಅವ್ಯಯೀಭಾವಃ ಸಮಾಸಃ (ಪೂರ್ವಪದಾರ್ಥಪ್ರಧಾನಃ ಅವ್ಯಯೀಭಾವಃ): ಇದು ಎರಡನೇಯ ಪ್ರಕಾರಕ್ಕೆ ಸೇರಿದೆ. ಇದರಲ್ಲಿ ಪೂರ್ವ ಪದದ ಅರ್ಥಕ್ಕೆ ಪ್ರಾಧಾನ್ಯವಿರುತ್ತದೆ.

ಉದಾ- ಕೃಷ್ಣಸ್ಯ ಸಮೀಪೇ - ಉಪಕೃಷ್ಣಮ್। (ಕೃಷ್ಣನ ಸಮೀಪದಲ್ಲಿ) ಇಲ್ಲಿ

2. ಸಮೀಪವೆಂಬ ಅವ್ಯಯಾರ್ಥದಲ್ಲಿ ಇರುವ ಉಪ ಶಬ್ದವು ಪೂರ್ವಪದವಾಗಿದೆ. ಆದ್ದರಿಂದ ಪೂರ್ವಪದಾರ್ಥಕ್ಕೆ ಇಲ್ಲಿ ಪ್ರಾಧಾನ್ಯವಿರುತ್ತದೆ.

3. ತತ್ಪುರುಷಃ ಸಮಾಸಃ (ಉತ್ತರಪದಾರ್ಥಪ್ರಧಾನಃ): ಈ ಸಮಾಸದಲ್ಲಿ ಎರಡನೇಯ ಪದಾರ್ಥಕ್ಕೆ ಅಂದರೆ ಉತ್ತರ ಪದಾರ್ಥಕ್ಕೆ ಪ್ರಾಧಾನ್ಯವಿರುತ್ತದೆ.

ಉದಾ- ರಾಜ್ಞಃ ಪುರುಷಃ=ರಾಜಪುರುಷಃ (ರಾಜನ ಸೇವಕನು). ಇಲ್ಲಿ ಎರಡನೇಯ ಪದವಾದ ಪುರುಷ ಶಬ್ದಕ್ಕೆ ಪ್ರಾಧಾನ್ಯವಿರುತ್ತದೆ.

3. ಅ. ಕರ್ಮಧಾರಯ ಸಮಾಸ : ಇದು ತತ್ಪುರುಷದ ಒಂದು ಪ್ರಭೇದವಾಗಿದೆ. ಕರ್ಮಧಾರಯವೆಂದರೆ ಎರಡು ಪದಗಳು ಒಂದೇ ವಿಭಕ್ತಿಯಲ್ಲಿರುತ್ತವೆ. ಅವುಗಳಿಗೆ ಸಾಮಾನಾಧಿಕರಣ್ಯವಿರುತ್ತದೆ (ಅಂದರೆ ಸಮಾನಲಿಂಗ ವಿಭಕ್ತಿ ವಚನಗಳಲ್ಲಿರುತ್ತವೆ) ಅವುಗಳಲ್ಲಿ ಅನೇಕ ಪ್ರಕಾರಗಳಿವೆ ಅವುಗಳನ್ನು ಮುಂದೆ ವಿವರಿಸಲಾಗುವುದು.

ಉದಾ: ಕೃಷ್ಣ ಸರ್ಪಃ – ಕೃಷ್ಣಶ್ಚ ಅಸೌ ಸರ್ಪಶ್ಚ ಎಂಬುದು ವಿಗ್ರಹವಾಕ್ಯ. ಕೃಷ್ಣ ಎಂಬುದು ವಿಶೇಷಣವಾಗಿಯೂ ಸರ್ಪಃ ಎಂಬುದು ವಿಶೇಷ್ಯವಾಗಿಯೂ ಇದೆ.

3. ಬ. ದ್ವಿಗು ಸಮಾಸಃ :– ಇದು ಕರ್ಮಧಾರಯದ ಒಂದು ಪ್ರಭೇದವಾಗಿದೆ. ಕರ್ಮಧಾರಯ ಮತ್ತು ದ್ವಿಗು ಈ ಎರಡು ಸಮಾಸಗಳು ತತ್ಪುರುಷದ ಪ್ರಭೇದಗಳಾಗಿವೆ. ದ್ವಿಗು ಸಮಾಸದಲ್ಲಿ ಪೂರ್ವ ಪದವು ಸಂಖ್ಯಾವಾಚಕವಾಗಿರುತ್ತದೆ.

ಉದಾ:–ಪಂಚಗವಮ್ – ಪಂಚಾನಾಮ್ ಗವಾಮ್ ಸಮಾಹಾರಃ ಎಂಬುದು ವಿಗ್ರಹವಾಕ್ಯ.

4. ಬಹುವ್ರೀಹಿಃ (ಅನ್ಯಪದಾರ್ಥಪ್ರಧಾನಃ): ಯಾವ ಸಮಾಸದಲ್ಲಿ ಎರಡು ಪದಾರ್ಥಗಳ ಅರ್ಥವು ಅಪ್ರಧಾನವಾಗಿದ್ದು ಮೂರನೇಯ ಪದದ (ಅಂದರೆ ಆಸಮಾಸದಲ್ಲಿ ಘಟಕವಾಗಿ ಇಲ್ಲದ ಪದದ) ಅರ್ಥಕ್ಕೆ ಪ್ರಾಧಾನ್ಯವಿರುವುದೋ ಅದು ಬಹುವ್ರೀಹಿಃ ಸಮಾಸವು.

ಉದಾ– ಪೀತಾಮ್ಬರಃ =ಪೀತಂ ಅಮ್ಬರಂ ಯಸ್ಯ ಸಃ (ಮಹಾವಿಷ್ಣುಃ) ಎಂಬುದು ವಿಗ್ರಹವಾಕ್ಯ. ಪೀತಾಮ್ಬರಃ ಎಂಬ ಸಮಾಸದಲ್ಲಿ ಪೀತ ಎಂಬ ಶಬ್ದದ ಅರ್ಥಕ್ಕೂ ಅಂಬರ ಎಂಬ ಶಬ್ದದ ಅರ್ಥಕ್ಕೂ ಪ್ರಾಧಾನ್ಯವಿಲ್ಲದೇ ಮಹಾವಿಷ್ಣುಃ ಎಂಬ ಮೂರನೆಯ ಪದಾರ್ಥಕ್ಕೆ ಪ್ರಾಧಾನ್ಯವಿರುತ್ತದೆ. ಹೀಗಾಗಿ ಇದು ಅನ್ಯಪದಾರ್ಥಪ್ರದಾನವಾಗಿದೆ.

5. ದ್ವನ್ದ್ವ ಸಮಾಸಃ (ಉಭಯಪದಾರ್ಥಪ್ರಧಾನಃ): ಈ ದ್ವನ್ದ್ವ ಸಮಾಸದಲ್ಲಿ ಎರಡು ಪದಗಳಿಗೂ ಪ್ರಾಧಾನ್ಯವಿರುತ್ತದೆ. ಸಾಧಾರಣವಾಗಿ ಮೇಲೆ ಹೇಳಿದ ಸಮಾಸಗಳು ಎರಡು–ಎರಡು ಪದಗಳು ಸೇರಿ ಸಮಸ್ತಪದಗಳಾಗುತ್ತವೆ. ಈ ದ್ವನ್ದ್ವ ಸಮಾಸದಲ್ಲಿ ಹಲವು ಪದಗಳು ಸೇರಿಯೂ ಒಂದು ಸಮಸ್ತಪದವಾಗುವುದುಂಟು. ಇದಕ್ಕೆ ಇತರೇತರ ದ್ವನ್ದ್ವವೆಂದು ಹೇಳುತ್ತಾರೆ. ಇದೇ ದ್ವನ್ದ್ವ ಸಮಾಸದಲ್ಲಿ ಮತ್ತೊಂದು ಪ್ರಕಾರವೆಂದರೆ ಸಮಾಹಾರ ದ್ವನ್ದ್ವ. ಇವುಗಳ ಬಗ್ಗೆ ವಿಶೇಷವಾಗಿ ಆಯಾ ಪ್ರಕರಣಗಳಲ್ಲಿ ತಿಳಿದುಕೊಳ್ಳಬಹುದು. ಇದೇರೀತಿಯಲ್ಲಿ ಬಹುವ್ರೀಹಿಃ ಸಮಾಸದಲ್ಲೂ ಹಲವು ಪದಗಳು ಸೇರಿಯೂ ಒಂದು ಸಮಸ್ತಪದವಾಗುವುದುಂಟು. ಬೇರೆ ಸಮಾಸಗಳಲ್ಲಿ ಎರಡು ಎರಡು ಪದಗಳು ಸೇರಿ ಸಮಾಸವಾಗುತ್ತದೆ.

ಉದಾ 1. ರಾಮಲಕ್ಷ್ಮಣೌ: ರಾಮಶ್ಚ ಲಕ್ಷ್ಮಣಶ್ಚ ಎಂಬುದು ವಿಗ್ರಹವಾಕ್ಯ. ಇದು ಎರಡು ಪದಗಳುಳ್ಳ ಇತರೇತರ ದ್ವನ್ದ್ವ. ಇಲ್ಲಿ ಇಬ್ಬರು ವ್ಯಕ್ತಿಗಳಿರುವುದರಿಂದ ಕೊನೆಯ ಪದವಾದ ಲಕ್ಷ್ಮಣ ಶಬ್ದಕ್ಕೆ ಅನುಗುಣವಾಗಿ ಪುಲ್ಲಿಂಗದಲ್ಲಿ ದ್ವಿವಚನವು ಹೇಳಲಾಗಿದೆ. ಕೊನೆಯ ಪದದ ಲಿಂಗವನ್ನು ಅನುಸರಿಸಿ ವಿಭಕ್ತಿಯ ರೂಪಗಳು ಸಿದ್ಧವಾಗುತ್ತವೆ.

ಉದಾ.2 ರಾಮಲಕ್ಷ್ಮಣಭರತಶತ್ರುಘ್ನಾಃ - ರಾಮಶ್ಚ ಲಕ್ಷ್ಮಣಶ್ಚ ಭರತಶ್ಚ ಶತುಘ್ನಶ್ಚ ಎಂದು ವಿಗ್ರಹ ವಾಕ್ಯ ಇಲ್ಲಿ ನಾಲ್ಕು ವ್ಯಕ್ತಿಗಳು ಇರುವುದರಿಂದ ಮತ್ತು ಕೊನೆಯ ಶಬ್ದವು ಪುಲ್ಲಿಂಗದಲ್ಲಿ ಇರುವುದರಿಂದ ಅದಕ್ಕೆ ಅನುಗುಣವಾಗಿ ಪ್ರಥಮಾ ವಿಭಕ್ತಿಯ ಬಹುವಚನದ ರೂಪವನ್ನು ತಾಳಿದೆ. ಇಲ್ಲಿ ಎಲ್ಲ ಪದಗಳಿಗೂ ಪ್ರಾಧಾನ್ಯವಿರುತ್ತದೆ. ಇದು ಇತರೇತರ ದ್ವನ್ದ್ವದ ಮತ್ತೊಂದು ಪ್ರಕಾರವಾಗಿದೆ.

ಇವುಗಳನ್ನು ಹೊರತು ನಞ್ ಸಮಾಸ, ಕರ್ಮಧಾರಯ ಸಮಾಸ, ದ್ವಿಗು ಸಮಾಸ ಮತ್ತು ಉಪಪದ ಸಮಾಸವೆಂದು ಸಮಾಸದ ಬೇರೆ-ಬೇರೆ ಪ್ರಕಾರಗಳಿವೆ. ಇವುಗಳಲ್ಲಿ ಕರ್ಮಧಾರಯ ಮತ್ತು ದ್ವಿಗು ಸಮಾಸಗಳ ಬಗ್ಗೆ ಹಿಂದೆ ಹೇಳಲಾಗಿದೆ.

ವಿಗ್ರಹವಾಕ್ಯದಲ್ಲಿ ಎರಡು ಪ್ರಕಾರಗಳಿವೆ ಒಂದು ಲೌಕಿಕವಿಗ್ರಹ ವಾಕ್ಯ. ಮತ್ತೋಂದು ಅಲೌಕಿಕವಿಗ್ರಹ ವಾಕ್ಯ. ರಾಜ್ಞಃ ಪುರುಷಃ (ರಾಜಪುರುಷ) ಎಂಬುದು ಲೌಕಿಕ ವಿಗ್ರಹವಾಕ್ಯ. ರಾಜನ್+ಜಸ್ ಮತ್ತು ಪುರುಷ+ಸು ಎಂಬುದು ಅಲೌಕಿಕವಿಗ್ರಹವಾಕ್ಯ. ಅಲೌಕಿಕವಿಗ್ರಹವಾಕ್ಯವು ವ್ಯಾಕರಣದ ಪ್ರಕ್ರಿಯೆಯನ್ನು ಸೂಚಿಸುತ್ತದೆ.

**(ಪರಿಭಾಷಾ ಸೂತ್ರ)**

**ಸೂತ್ರ - 906. ಸಮರ್ಥಃ ಪದವಿಧಿಃ।(2.1.1)**

ವೃತ್ತಿ - ಪದಸಮ್ಬನ್ಧೀ ಯೋ ವಿಧಿಃ ಸಃ ಸಮರ್ಥಾಶ್ರಿತೋ ಬೋಧ್ಯಃ।

ಅರ್ಥ:- ವ್ಯಾಕರಣ ಶಾಸ್ತ್ರದಲ್ಲಿ ಪದಗಳಿಗೆ ಸಂಬಂಧವಾದ ಕಾರ್ಯವಾಗಬೇಕಾದರೆ ಅಲ್ಲಿ ಸಮರ್ಥವಾದ ಪದಗಳಿಗೇನೆ ಸಂಬಂಧವಾಗುತ್ತದೆ.

ಆಕಾಙ್ಕ್ಷಾ ಮೊದಲಾದವುಗಳಿಂದ ಪದಾರ್ಥಗಳಿಗೆ ಪರಸ್ಪರ ಸಂಬಂಧವಾಗುವದಕ್ಕೆ ಇರುವ ಯೋಗ್ಯತೆಗೇನೆ ಸಾಮರ್ಥ್ಯವೆಂದು ಹೇಳುತ್ತೇವೆ. ಸಾಮರ್ಥ್ಯವು ಎರಡು ವಿಧಗಳಿವೆ. ಅವು ಏಕಾರ್ಥೀ ಭಾವ ಸಾಮರ್ಥ್ಯ ಮತ್ತು ವ್ಯೇಪೇಕ್ಷಾರೂಪ ಸಾಮಾರ್ಥ್ಯವೆಂದು ಹೆಸರು.

**(ಸಮಾಸ ಸಂಜ್ಞೆಯನ್ನು ವಿಧಿಸುವ ಅಧಿಕಾರ ಸೂತ್ರ)**

**ಸೂತ್ರ - 907. ಪ್ರಾಕ್ಕಡಾರಾತ್ ಸಮಾಸಃ(2.1.3)**

ವೃತ್ತಿ - 'ಕಡಾರಾಃ ಕರ್ಮಧಾರಯೇ' ಇತ್ಯತಃ ಪ್ರಾಕ್ಸಮಾಸ ಇತ್ಯಧಿಕ್ರಿಯತೇ।

ಪ. ಛೇ- ಪ್ರಾಕ್‌ಕಡಾರಾತ್, ಸಮಾಸಃ।

ಅರ್ಥ-ದ್ವಿತೀಯಾ ಅಧ್ಯಾಯದ ದ್ವಿತೀಯ ಪಾದದಲ್ಲಿ ಕೊನೆಯ ಸೂತ್ರವಾದ ಕಡಾರಾಃ ಕರ್ಮಧಾರಯೇ ಎಂಬ ಸೂತ್ರದವರೆಗೆ ಸಮಾಸಃ ಎಂಬುದು ಅಧಿಕಾರದಲ್ಲಿರುವುದು.

**(ಸಮಾಸವನ್ನು ವಿಧಿಸುವ ಸೂತ್ರ)**

**ಸೂತ್ರ - 908. ಸಹ ಸುಪಾ (2.1.4)**

ವೃತ್ತಿ - ಸುಪ್ ಸುಪಾ ಸಹ ವಾ ಸಮಸ್ಯತೇ। ಸಮಾಸತ್ವಾತ್ ಪ್ರಾತಿಪದಿಕತ್ವೇನ

10 ಸುಪೋ ಲುಕ್। ಪರಾರ್ಥಾಭಿಧಾನಂ ವೃತ್ತಿಃ। ಕೃತ್ತದ್ಧಿತ-ಸಮಾಸೈಕಶೇಷ-ಸನಾದ್ಯನ್ತಧಾತುರೂಪಾಃ ಪಞ್ಚವೃತ್ತಯಃ। ವೃತ್ತ್ಯರ್ಥಾವಬೋಧಕಂ ವಾಕ್ಯಂ ವಿಗ್ರಹಃ। ಸ ಚ ಲೌಕಿಕೋऽಲೌಕಿಕಶ್ಚೇತಿ ದ್ವಿಧಾ। ತತ್ರ ಪೂರ್ವಂ ಭೂತಃ-ಇತಿ ಲೌಕಿಕಃ। 'ಪೂರ್ವ+ಅಮ್+ಭೂತ-ಸು'ಇತ್ಯಲೌಕಿಕಃ। ಭೂತಪೂರ್ವಃ। ಭೂತಪೂರ್ವೇ ಚರಡಿತಿ ನಿರ್ದೇಶಾತ್ ಪೂರ್ವನಿಪಾತಃ।

**(ಇವ ಪದ ಸಮಾಸವನ್ನು ವಿಧಿಸುವ ವಾರ್ತಿಕ)**

ವಾ॥ ಇವೇನ ಸಮಾಸೋ ವಿಭಕ್ತ್ಯಲೋಪಶ್ಚ ।

ವಾಗರ್ಥೌ ಇವ ವಾಗರ್ಥಾವಿವ।

**೨೮. ಇತಿ ಕೇವಲ ಸಮಾಸಃ**

ಅ. ವ್ಯ.-'ಸುಬಾಮನ್ತ್ರಿತೇ ಪರಾಙ್ಗವತ್ ಸ್ವರೇ' ಎಂಬ ಸೂತ್ರದಿಂದ'ಸುಪ್' ಎಂಬ ಪದವೂ ಮತ್ತು'ಪ್ರಾಕ್ಕಡಾರಾತ್ ಸಮಾಸಃ'ಎಂಬ ಸೂತ್ರದಿಂದ'ಸಮಾಸಃ' ಎಂಬ ಪದವೂ ಅನುವೃತ್ತವಾಗುತ್ತದೆ.

ಅರ್ಥ – ಸುಬಂತ ಶಬ್ದವು ಸುಬಂತ ಶಬ್ದದ ಜೊತೆಗೆ ವಿಕಲ್ಪದಿಂದ ಸಮಾಸವಾಗುತ್ತದೆ.

ಆಗ ಈ ಶಬ್ದಕ್ಕೆ ಕೃತ್ತದ್ಧಿತ ಸಮಾಸಾಶ್ಚ ಎಂಬ ಸೂತ್ರದಿಂದ ಪ್ರಾತಿಪದಿಕ ಸಂಜ್ಞೆಯು ಬರುತ್ತದೆ. ಆಗ ಸುಪೋಧಾತುಪ್ರಾತಿಪದಿಕಯೋಃ ಎಂಬ ಸೂತ್ರದಿಂದ ಸುಪ್ ಪ್ರತ್ಯಯಗಳಿಗೆ ಲೋಪವು ಬರುತ್ತದೆ. ಅಂದರೆ ಅಲೌಕಿಕ ವಿಗ್ರಹವಾಕ್ಯದಲ್ಲಿ ಇರುವ ಸುಪ್ ಪ್ರತ್ಯಯಗಳಿಗೆ ಲೋಪ ಬರುತ್ತದೆ.

ಎರಡು ಅಥವಾ ಎರಡಕ್ಕಿಂತ ಹೆಚ್ಚಾದ ಶಬ್ದಗಳು ಸಾಮರ್ಥ್ಯದಿಂದ ಸಂಬಂದ ಹೊಂದಿದಾಗ ತಮ್ಮ ಮೂಲ ಅರ್ಥಕ್ಕಿಂತ ಹೆಚ್ಚಾದ ಅರ್ಥವನ್ನು ಹೇಳಿದರೆ ಅದಕ್ಕೆ ವೃತ್ತಿ ಎಂದು ಹೇಳುತ್ತಾರೆ. ಈ ರೀತಿ ವೃತ್ತಿಗಳು ಐದು ವಿಧವಾಗಿವೆ. 1. ಕೃದನ್ತ ವೃತ್ತಿಃ, 2. ತದ್ಧಿತ ವೃತ್ತಿಃ, 3. ಸಮಾಸವೃತ್ತಿಃ, 4. ಏಕಶೇಷವೃತ್ತಿಃ ಮತ್ತು 5. ಸನಾದ್ಯನ್ತಧಾತುವೃತ್ತಿಃ. ವೃತ್ತಿಯ ಅರ್ಥವನ್ನು ಸ್ಪಷ್ಟಪಡಿಸುವ ವಾಕ್ಯಕ್ಕೆ ವಿಗ್ರಹವಾಕ್ಯವೆಂದು ಹೇಳುತ್ತಾರೆ. ಇದು ಎರಡು ಪ್ರಕಾರವಾಗಿರುವುದನ್ನು ಹಿಂದೆ ಹೇಳಲಾಗಿದೆ.

ಪ್ರಕೃತ ಸೂತ್ರವು ಸಮಾಸವನ್ನು ವಿಧಿಸುವ ಸೂತ್ರವಾಗಿದ್ದು **ಸುಬಂತಮ್ ಸುಬಂತೇನ ಸಮಸ್ಯತೇ** ಎಂದು ಸಮಾಸ ವಿಧಿಯನ್ನು ಹೇಳಿದೆ. ಸಮಾಸ ಶಾಸ್ತ್ರದಲ್ಲಿ (ಸೂತ್ರಗಳಲ್ಲಿ)ಯಾವ ಪದವು ಪ್ರಥಮಾ ವಿಭಕ್ತಿಯಲ್ಲಿ ಇರುವುದೋ ಅದಕ್ಕೆ ಉಪಸರ್ಜನವೆಂದು ಸಂಜ್ಞೆಯನ್ನು ಪಡೆಯುತ್ತದೆ. ಅದರ ಪ್ರಕಾರ ಪ್ರಸ್ತುತ ಸೂತ್ರದಲ್ಲಿ ಎರಡು ಪದಗಳಿಗೆ ಉಪಸರ್ಜನ ಸಂಜ್ಞೆಯು ಬರುತ್ತದೆ. ಲೌಕಿಕ ದೃಷ್ಟಿಯಿಂದ ಪೂರ್ವಂ ಎಂಬುದೇ ಉಪಸರ್ಜನವಾಗಿರುತ್ತದೆ (ಅಪ್ರಧಾನ ವಿಶೇಷಣವಾಗಿರುತ್ತದೆ.) ಆದುದರಿಂದ ಉಪಸರ್ಜನಮ್ ಪೂರ್ವಂ ಎಂಬ ಸೂತ್ರದ ಪ್ರಕಾರ ಪೂರ್ವ ಶಬ್ದವನ್ನೇ ಸಮಾಸದಲ್ಲಿ ಮೊದಲನೆಯ ಪದವಾಗಿ ಉಪಯೋಗಿಸಬೇಕು ಎಂದು ಹೇಳಿದಂತಾಗುತ್ತದೆ ಆದರೆ

ಉದಾ.2 ರಾಮಲಕ್ಷ್ಮಣಭರತಶತ್ರುಘ್ನಾಃ – ರಾಮಶ್ಚ ಲಕ್ಷ್ಮಣಶ್ಚ ಭರತಶ್ಚ ಶತ್ರುಘ್ನಶ್ಚ ಎಂದು ವಿಗ್ರಹ ವಾಕ್ಯ ಇಲ್ಲಿ ನಾಲ್ಕು ವ್ಯಕ್ತಿಗಳು ಇರುವುದರಿಂದ ಮತ್ತು ಕೊನೆಯ ಶಬ್ದವು ಪುಲ್ಲಿಂಗದಲ್ಲಿ ಇರುವುದರಿಂದ ಅದಕ್ಕೆ ಅನುಗುಣವಾಗಿ ಪ್ರಥಮಾ ವಿಭಕ್ತಿಯ ಬಹುವಚನದ ರೂಪವನ್ನು ತಾಳಿದೆ. ಇಲ್ಲಿ ಎಲ್ಲ ಪದಗಳಿಗೂ ಪ್ರಾಧಾನ್ಯವಿರುತ್ತದೆ. ಇದು ಇತರೇತರ ದ್ವನ್ದ್ವದ ಮತ್ತೊಂದು ಪ್ರಕಾರವಾಗಿದೆ.

ಇವುಗಳನ್ನು ಹೊರತು ನಞ್ ಸಮಾಸ, ಕರ್ಮಧಾರಯ ಸಮಾಸ, ದ್ವಿಗು ಸಮಾಸ ಮತ್ತು ಉಪಪದ ಸಮಾಸವೆಂದು ಸಮಾಸದ ಬೇರೆ-ಬೇರೆ ಪ್ರಕಾರಗಳಿವೆ. ಇವುಗಳಲ್ಲಿ ಕರ್ಮಧಾರಯ ಮತ್ತು ದ್ವಿಗು ಸಮಾಸಗಳ ಬಗ್ಗೆ ಹಿಂದೆ ಹೇಳಲಾಗಿದೆ.

ವಿಗ್ರಹವಾಕ್ಯದಲ್ಲಿ ಎರಡು ಪ್ರಕಾರಗಳಿವೆ ಒಂದು ಲೌಕಿಕವಿಗ್ರಹ ವಾಕ್ಯ. ಮತ್ತೋಂದು ಅಲೌಕಿಕವಿಗ್ರಹ ವಾಕ್ಯ. ರಾಜ್ಞಃ ಪುರುಷಃ (ರಾಜಪುರುಷ) ಎಂಬುದು ಲೌಕಿಕ ವಿಗ್ರಹವಾಕ್ಯ. ರಾಜನ್+ಙಸ್ ಮತ್ತು ಪುರುಷ+ಸು ಎಂಬುದು ಅಲೌಕಿಕವಿಗ್ರಹವಾಕ್ಯ. ಅಲೌಕಿಕವಿಗ್ರಹವಾಕ್ಯವು ವ್ಯಾಕರಣದ ಪ್ರಕ್ರಿಯೆಯನ್ನು ಸೂಚಿಸುತ್ತದೆ.

**(ಪರಿಭಾಷಾ ಸೂತ್ರ)**

**ಸೂತ್ರ – 906. ಸಮರ್ಥಃ ಪದವಿಧಿಃ।(2.1.1)**

ವೃತ್ತಿ – ಪದಸಮ್ಬನ್ಧೀ ಯೋ ವಿಧಿಃ ಸಃ ಸಮರ್ಥಾಶ್ರಿತೋ ಬೋಧ್ಯಃ।

ಅರ್ಥ:– ವ್ಯಾಕರಣ ಶಾಸ್ತ್ರದಲ್ಲಿ ಪದಗಳಿಗೆ ಸಂಬಂಧವಾದ ಕಾರ್ಯವಾಗಬೇಕಾದರೆ ಅಲ್ಲಿ ಸಮರ್ಥವಾದ ಪದಗಳಿಗೇನೆ ಸಂಬಂಧವಾಗುತ್ತದೆ.

ಆಕಾಙ್ಷಾ ಮೊದಲಾದವುಗಳಿಂದ ಪದಾರ್ಥಗಳಿಗೆ ಪರಸ್ಪರ ಸಂಬಂಧವಾಗುವದಕ್ಕೆ ಇರುವ ಯೋಗ್ಯತೆಗೇನೆ ಸಾಮರ್ಥ್ಯವೆಂದು ಹೇಳುತ್ತೇವೆ. ಸಾಮರ್ಥ್ಯವು ಎರಡು ವಿಧಗಳಿವೆ. ಅವು ಏಕಾರ್ಥೀ ಭಾವ ಸಾಮರ್ಥ್ಯ ಮತ್ತು ವ್ಯೆಪೇಕ್ಷಾರೂಪ ಸಾಮಾರ್ಥ್ಯವೆಂದು ಹೆಸರು.

**(ಸಮಾಸ ಸಂಜ್ಞೆಯನ್ನು ವಿಧಿಸುವ ಅಧಿಕಾರ ಸೂತ್ರ)**

**ಸೂತ್ರ – 907. ಪ್ರಾಕ್ಕಡಾರಾತ್ ಸಮಾಸಃ(2.1.3)**

ವೃತ್ತಿ – 'ಕಡಾರಾಃ ಕರ್ಮಧಾರಯೇ' ಇತ್ಯತಃ ಪ್ರಾಕ್ಸಮಾಸ ಇತ್ಯಧಿಕ್ರಿಯತೇ।

ಪ. ಛೇ– ಪ್ರಾಕ್ ಕಡಾರಾತ್, ಸಮಾಸಃ।

ಅರ್ಥ–ದ್ವಿತೀಯಾ ಅಧ್ಯಾಯದ ದ್ವಿತೀಯ ಪಾದದಲ್ಲಿ ಕೊನೆಯ ಸೂತ್ರವಾದ ಕಡಾರಾಃ ಕರ್ಮಧಾರಯೇ ಎಂಬ ಸೂತ್ರದವರೆಗೆ ಸಮಾಸಃ ಎಂಬುದು ಅಧಿಕಾರದಲ್ಲಿರುವುದು.

**(ಸಮಾಸವನ್ನು ವಿಧಿಸುವ ಸೂತ್ರ)**

**ಸೂತ್ರ – 908. ಸಹ ಸುಪಾ (2.1.4)**

ವೃತ್ತಿ – ಸುಪ್ ಸುಪಾ ಸಹ ವಾ ಸಮಸ್ಯತೇ। ಸಮಾಸತ್ವಾತ್ ಪ್ರಾತಿಪದಿಕತ್ವೇನ

10 ಸುಪೋ ಲುಕ್। ಪರಾರ್ಥಾಭಿಧಾನಂ ವೃತ್ತಿಃ। ಕೃತ್ತದ್ಧಿತ-ಸಮಾಸೈಕಶೇಷ-ಸನಾದ್ಯನ್ತಧಾತುರೂಪಾಃ ಪಞ್ಚವೃತ್ತಯಃ। ವೃತ್ಯರ್ಥಾವಬೋಧಕಂ ವಾಕ್ಯಂ ವಿಗ್ರಹಃ। ಸ ಚ ಲೌಕಿಕೋऽಲೌಕಿಕಶ್ಚೇತಿ ದ್ವಿಧಾ। ತತ್ರ ಪೂರ್ವಂ ಭೂತಃ-ಇತಿ ಲೌಕಿಕಃ। 'ಪೂರ್ವ+ಅಮ್+ಭೂತ-ಸು'ಇತ್ಯಲೌಕಿಕಃ। ಭೂತಪೂರ್ವಃ। ಭೂತಪೂರ್ವೇ ಚರಡಿತಿ ನಿರ್ದೇಶಾತ್ ಪೂರ್ವನಿಪಾತಃ।

**(ಇವ ಪದ ಸಮಾಸವನ್ನು ವಿಧಿಸುವ ವಾರ್ತಿಕ)**

ವಾ॥ ಇವೇನ ಸಮಾಸೋ ವಿಭಕ್ತ್ಯಲೋಪಶ್ಚ ।

ವಾಗರ್ಥೌ ಇವ ವಾಗರ್ಥಾವಿವ।

**೩೮. ಇತಿ ಕೇವಲ ಸಮಾಸಃ**

ಅ. ವೃ.-'ಸುಬಾಮನ್ತ್ರಿತೇ ಪರಾಙ್ಗವತ್ ಸ್ವರೇ' ಎಂಬ ಸೂತ್ರದಿಂದ'ಸುಪ್' ಎಂಬ ಪದವೂ ಮತ್ತು'ಪ್ರಾಕ್ಕಡಾರಾತ್ ಸಮಾಸಃ'ಎಂಬ ಸೂತ್ರದಿಂದ'ಸಮಾಸಃ' ಎಂಬ ಪದವೂ ಅನುವೃತ್ತವಾಗುತ್ತದೆ.

ಅರ್ಥ - ಸುಬಂತ ಶಬ್ದವು ಸುಬಂತ ಶಬ್ದದ ಜೊತೆಗೆ ವಿಕಲ್ಪದಿಂದ ಸಮಾಸವಾಗುತ್ತದೆ.

ಆಗ ಈ ಶಬ್ದಕ್ಕೆ ಕೃತ್ತದ್ಧಿತ ಸಮಾಸಾಶ್ಚ ಎಂಬ ಸೂತ್ರದಿಂದ ಪ್ರಾತಿಪದಿಕ ಸಂಜ್ಞೆಯು ಬರುತ್ತದೆ. ಆಗ ಸುಪೋಧಾತುಪ್ರಾತಿಪದಿಕಯೋಃ ಎಂಬ ಸೂತ್ರದಿಂದ ಸುಪ್ ಪ್ರತ್ಯಯಗಳಿಗೆ ಲೋಪವು ಬರುತ್ತದೆ. ಅಂದರೆ ಅಲೌಕಿಕ ವಿಗ್ರಹವಾಕ್ಯದಲ್ಲಿ ಇರುವ ಸುಪ್ ಪ್ರತ್ಯಯಗಳಿಗೆ ಲೋಪ ಬರುತ್ತದೆ.

ಎರಡು ಅಥವಾ ಎರಡಕ್ಕಿಂತ ಹೆಚ್ಚಾದ ಶಬ್ದಗಳು ಸಾಮರ್ಥ್ಯದಿಂದ ಸಂಬಂಧ ಹೊಂದಿದಾಗ ತಮ್ಮ ಮೂಲ ಅರ್ಥಕ್ಕಿಂತ ಹೆಚ್ಚಾದ ಅರ್ಥವನ್ನು ಹೇಳಿದರೆ ಅದಕ್ಕೆ ವೃತ್ತಿ ಎಂದು ಹೇಳುತ್ತಾರೆ. ಈ ರೀತಿ ವೃತ್ತಿಗಳು ಐದು ವಿಧವಾಗಿವೆ. 1. ಕೃದನ್ತ ವೃತ್ತಿಃ, 2. ತದ್ಧಿತ ವೃತ್ತಿಃ, 3. ಸಮಾಸವೃತ್ತಿಃ, 4. ಏಕಶೇಷವೃತ್ತಿಃ ಮತ್ತು 5. ಸನಾದ್ಯನ್ತಧಾತುವೃತ್ತಿಃ. ವೃತ್ತಿಯ ಅರ್ಥವನ್ನು ಸ್ಪಷ್ಟಪಡಿಸುವ ವಾಕ್ಯಕ್ಕೆ ವಿಗ್ರಹವಾಕ್ಯವೆಂದು ಹೇಳುತ್ತಾರೆ. ಇದು ಎರಡು ಪ್ರಕಾರವಾಗಿರುವುದನ್ನು ಹಿಂದೆ ಹೇಳಲಾಗಿದೆ.

ಪ್ರಕೃತ ಸೂತ್ರವು ಸಮಾಸವನ್ನು ವಿಧಿಸುವ ಸೂತ್ರವಾಗಿದ್ದು **ಸುಬಂತಮ್ ಸುಬಂತೇನ ಸಮಸ್ಯತೇ** ಎಂದು ಸಮಾಸ ವಿಧಿಯನ್ನು ಹೇಳಿದೆ. ಸಮಾಸ ಶಾಸ್ತ್ರದಲ್ಲಿ (ಸೂತ್ರಗಳಲ್ಲಿ)ಯಾವ ಪದವು ಪ್ರಥಮಾ ವಿಭಕ್ತಿಯಲ್ಲಿ ಇರುವುದೋ ಅದಕ್ಕೆ ಉಪಸರ್ಜನವೆಂದು ಸಂಜ್ಞೆಯನ್ನು ಪಡೆಯುತ್ತದೆ. ಅದರ ಪ್ರಕಾರ ಪ್ರಸ್ತುತ ಸೂತ್ರದಲ್ಲಿ ಎರಡು ಪದಗಳಿಗೆ ಉಪಸರ್ಜನ ಸಂಜ್ಞೆಯು ಬರುತ್ತದೆ. ಲೌಕಿಕ ದೃಷ್ಟಿಯಿಂದ ಪೂರ್ವಂ ಎಂಬುದೇ ಉಪಸರ್ಜನವಾಗಿರುತ್ತದೆ (ಅಪ್ರಧಾನ ವಿಶೇಷಣವಾಗಿರುತ್ತದೆ.) ಆದುದರಿಂದ ಉಪಸರ್ಜನಮ್ ಪೂರ್ವಂ ಎಂಬ ಸೂತ್ರದ ಪ್ರಕಾರ ಪೂರ್ವ ಶಬ್ದವನ್ನೇ ಸಮಾಸದಲ್ಲಿ ಮೊದಲನೆಯ ಪದವಾಗಿ ಉಪಯೋಗಿಸಬೇಕು ಎಂದು ಹೇಳಿದಂತಾಗುತ್ತದೆ ಆದರೆ

ಪಾಣಿನಿಯವರೇ ಭೂತಪೂರ್ವೇಚರಟ್ ಎಂಬ ಸೂತ್ರದಲ್ಲಿ ಹೇಳಿದ ಪ್ರಕಾರ ಭೂತ ಶಬ್ದಕ್ಕೆ ಪೂರ್ವ ನಿಪಾತವನ್ನು ಸೂಚಿಸಿರುವುದರಿಂದ ಭೂತಪೂರ್ವಃ ಎಂಬ ರೂಪವು ಸಿದ್ಧವಾಗಿದೆ.

ವಾ॥ ಇವೇನ ಸಹ ಸಮಾಸೋ ವಿಭಕ್ತ್ಯಲೋಪಶ್ಚ। – ಇವ ಶಬ್ದದ ಜೊತೆಗೆ ಸುಬನ್ತದ ಸಮಾಸವು ಆಗುತ್ತದೆ. ಮತ್ತು ವಿಭಕ್ತಿಯ ಲೋಪವಾಗುವುದಿಲ್ಲ. ಸಾಧಾರಣವಾಗಿ ಸಮಾಸವಾಗುವಾಗ ಸುಬನ್ತ ಪದಗಳಲ್ಲಿರುವ 'ಸುಪ್' ಪ್ರತ್ಯಯಗಳು ಲೋಪವಾಗಬೇಕು. ಇದಕ್ಕೆ ಪ್ರಮಾಣ 'ಸುಪೋಧಾತುಪ್ರಾತಿಪದಿಕಯೋಃ' ಎಂಬುದು ಪಾಣಿನೀಯ ಸೂತ್ರ, ಉದಾ– 'ರಾಮಸ್ಯ ಪುಸ್ತಕಮ್'ಎಂಬಲ್ಲಿ ಷಷ್ಠೀ ವಿಭಕ್ತಿಯ'ಙಸ್' ಪ್ರತ್ಯಯವು ಲೋಪವಾಗುತ್ತದೆ.ಹಾಗೆಯೇ'ಪುಸ್ತಕಮ್' ಎಂಬಲ್ಲಿ 'ಸು' ಪ್ರತ್ಯಯವು ಲೋಪವಾಗಿ 'ರಾಮಪುಸ್ತಕ'ಎಂದು ಪ್ರಾತಿಪದಿಕವಾಗುತ್ತದೆ. ಮತ್ತೆ'ಸು' ಸೇರಿಸಿದಾಗ, 'ರಾಮಪುಸ್ತಕಮ್'ಎಂದು ಸುಬಂತ ಸಮಸ್ತ ಶಬ್ದವಾಗುತ್ತದೆ. ಆದರೆ ಈ ವಾರ್ತಿಕದ ಪ್ರಕಾರ ವಾಗರ್ಥೌ+ಇವಎಂಬುದುಲೌಕಿಕ ವಿಗ್ರಹ. ಅಲೌಕಿಕ ವಿಗ್ರಹವು ವಾಗರ್ಥ+ಔ+ಇವ ಎಂದಿರುತ್ತದೆ. ಇಲ್ಲಿ'ಔ' ಎಂಬ 'ಸುಪ್' ಪ್ರತ್ಯಯವು ಲೋಪವಾಗಬೇಕಾಗಿತ್ತು, ಆದರೆಈ ವಾರ್ತಿಕದ ಪ್ರಕಾರ ಪ್ರತ್ಯಯದ ಲೋಪವಾಗದೇ (ಸನ್ಧಿಯಿಂದ) 'ವಾಗರ್ಥಾವಿವ'ಎಂದೇಇರುತ್ತದೆ.

ಯಾವ ಸಮಾಸಕ್ಕೆ ಯಾವ ಸಂಜ್ಞೆಯು ಇರುವುದಿಲ್ಲವೋ ಆ ಸಮಾಸಕ್ಕೆ ಕೇವಲ ಸಮಾಸವೆನ್ನುತ್ತಾರೆ. ಎಂದು ಹಿಂದೆ ಹೇಳಿದ್ದೇವೆ ಇಲ್ಲಿ ಪತಂಜಲಿ ಮುನಿಗಳು. ಈ ಸಂದರ್ಭದಲ್ಲಿ ಹೀಗೆ ಹೇಳಿರುವರು "ಯಸ್ಯ ಸಮಾಸಸ್ಯ ಅನ್ಯತ್ ಲಕ್ಷಣಮ್ ನಾಸ್ತಿ ಇದಮ್ ತಸ್ಯ ಲಕ್ಷಣಮ್ ಭವಿಷ್ಯತಿ"

**ಕೇವಲ ಸಮಾಸ (೩೮) ಪ್ರಕರಣವು ಮುಗಿಯಿತು**

# ಪ್ರಕರಣ-39: ಅವ್ಯಯೀಭಾವ

**(ಸೂತ್ರ ಸಂಖ್ಯೆ: 909 ರಿಂದ 923 ವರೆಗೆ)**

**(ಅಧಿಕಾರ ಸೂತ್ರ)**

**ಸೂತ್ರ - 909. ಅವ್ಯಯೀಭಾವಃ। (2-1-5)**

ವೃತ್ತಿ.-ಅಧಿಕಾರೋಽಯಂ ಪ್ರಾಕ್ತತ್ಪುರುಷಾತ್ ।

ಅರ್ಥ.-ತತ್ಪುರುಷಃ ಎಂಬ ಪಾಣಿನಿಯ ಅಷ್ಟಾಧ್ಯಾಯಿ ಸೂತ್ರದ ಪೂರ್ವಸೂತ್ರದ ವರೆಗೆ ಅವ್ಯಯೀಭಾವಃ ಎಂಬ ಪ್ರಕೃತ ಸೂತ್ರವು ಅಧಿಕಾರ ಸೂತ್ರವಾಗಿದೆ.

**(ಸಮಾಸವನ್ನು ವಿಧಿಸುವ ಸೂತ್ರ)**

**ಸೂತ್ರ- 910. ಅವ್ಯಯಂ ವಿಭಕ್ತಿ-ಸಮೀಪ-ಸಮೃದ್ಧಿ-ವ್ಯೃದ್ಧ್ಯರ್ಥಾ ಭಾವಾತ್ಯಯಾಸಮ್ಪ್ರತಿ-ಶಬ್ದಪ್ರಾದುರ್ಭಾವ-ಪಶ್ಚಾದ್ಯಥಾನುಪೂರ್ವ್ಯ-ಯೌಗಪದ್ಯ-ಸಾದೃಶ್ಯ-ಸಮ್ಪತ್ತಿ-ಸಾಕಲ್ಯಾನ್ತವಚನೇಷು।(2-1-6)**

ವೃತ್ತಿ.-ವಿಭಕ್ತ್ಯರ್ಥಾದಿಷು ವರ್ತಮಾನಂ ಅವ್ಯಯಂ ಸುಬಂತೇನ ಸಹ ನಿತ್ಯಂ ಸಮಸ್ಯತೇ ಸಃ ಅವ್ಯಯೀಭಾವಃ।ಪ್ರಾಯೇಣ ಅವಿಗ್ರಹಃ ನಿತ್ಯಸಮಾಸಃ, ಪ್ರಾಯೇಣ ಅಸ್ವಪದವಿಗ್ರಹಃ ವಾ ।ವಿಭಕ್ತೌ-ಹರಿ+ಙಿ+ಅಧಿ- ಇತಿ ಸ್ಥಿತೇ-

ಪ.ಚ್ಛೇ.-ಅವ್ಯಯಂ,ವಿಭಕ್ತಿ-ಸಮೀಪ-ಸಮೃದ್ಧಿ-ವ್ಯೃದ್ಧಿ-ಅರ್ಥಾಭಾವ-ಅತ್ಯಯ-ಅಸಂಪ್ರತಿ-ಶಬ್ದಪ್ರಾದುರ್ಭಾವ-ಪಶ್ಚಾತ್-ಯಥಾ-ಆನುಪೂರ್ವ್ಯ-ಯೌಗಪದ್ಯ-ಸಾದೃಶ್ಯ-ಸಮ್ಪತ್ತಿ-ಸಾಕಲ್ಯ-ಅನ್ತವಚನೇಷು ।

ಅ.ವ್ಯ.-ಸುಬಾಮನ್ತ್ರಿತೇ ಪರಾಙ್ಗವತ್ಸ್ವರೇ ಎಂಬ ಸೂತ್ರದಿಂದ ಸುಪ್ ಎಂಬ ಪದವು, ಹಾಗೆಯೇ ಸಹ ಸುಪಾ ಎಂಬ ಸೂತ್ರದಿಂದ ಸಹ ಎಂಬ ಪದವೂ ಅನುವೃತ್ತವಾಗುತ್ತವೆ. ಸಮರ್ಥಃ ಪದವಿಧಿಃ ಎಂಬ ಸೂತ್ರವನ್ನು ಅರ್ಥವನ್ನು ಅನ್ವಯಿಸಿಕೊಳ್ಳಬೇಕು.

ಅರ್ಥ:-ವಿಭಕ್ತಿ,ಸಮೀಪ,ಸಮೃದ್ಧಿ,ವ್ಯೃದ್ಧಿ(ವಿಗತಾಋದ್ಧಿಃ-ಸಮೃದ್ಧಿಯ ಅಭಾವ),ಅರ್ಥಾಭಾವ, ಅತ್ಯಯ (ನಾಶಹೊಂದುವುದು), ಅಸಮ್ಪ್ರತಿ (ಯುಕ್ತವಾದದ್ದಲ್ಲ), ಶಬ್ದಪ್ರಾದುರ್ಭಾವ (ಶಬ್ದದ ಪ್ರಕಾಶಅಥವಾ ಪ್ರಸಿದ್ಧಿ), ಪಶ್ಚಾತ್ (ಅನಂತರ), ಯಥಾ (ಯೋಗ್ಯತೆ, ದ್ವಿರುಕ್ತಿ, ಪದಾರ್ಥವನ್ನು ಮೀರದೇ ಇರುವ ಮತ್ತು ಸಾದೃಶ್ಯ), ಆನುಪೂರ್ವ್ಯ (ಕ್ರಮದಿಂದ ಕೂಡಿದ), ಯೌಗಪದ್ಯ (ಒಮ್ಮೆಲೇ), ಸಾದೃಶ್ಯ(ಸದೃಶ), ಸಮ್ಪತ್ತಿ (ಐಶ್ವರ್ಯ), ಸಾಕಲ್ಯ (ಪೂರ್ಣತೆ) ಮತ್ತು ಅನ್ತ (ಪರಿಸಮಾಪ್ತಿ ವರೆಗೆ)-ಈ ಹದಿನಾರು ಅರ್ಥಗಳಲ್ಲಿರುವ ಅವ್ಯಯಗಳಿಗೆ ಸಮರ್ಥವಾದ ಸುಬಂತ ಪದದ ಜೊತೆಗೆ ನಿತ್ಯವಾಗಿ ಸಮಾಸವಾಗುತ್ತದೆ. (ಇಲ್ಲಿ ವೈಕಲ್ಪಿಕವೆಂದು ಹೇಳಿಲ್ಲ ಆದ್ದರಿಂದ ಇಲ್ಲಿ ನಿತ್ಯಸಮಾಸವೆಂದು ತಿಳಿಯತಕ್ಕದ್ದು) ನಿತ್ಯ ಸಮಾಸಕ್ಕೆ ಪ್ರಾಯಶಃ ಲೌಕಿಕ ವಿಗ್ರಹವಾಕ್ಯವು ಇರುವುದಿಲ್ಲ.

ಲೌಕಿಕ ವಿಗ್ರಹ ವಾಕ್ಯವನ್ನು ಹೇಳಬೇಕಾದರೆ ಅಸ್ವಪದ ವಿಗ್ರಹವಾಕ್ಯವನ್ನು ಹೇಳಬೇಕು ಅಂದರೆ ಸಮಾಸದಲ್ಲಿ ಘಟಿತವಾದ ಪದಗಳಿಗಿಂತ ಭಿನ್ನವಾದ ಪದಗಳನ್ನು ಉಪಯೋಗಿಸಿ ಹೇಳುವ ವಿಗ್ರಹ ವಾಕ್ಯಕ್ಕೇನೆ ಅಸ್ವಪದ ವಿಗ್ರಹವಾಕ್ಯವೆಂದು ಹೇಳುತ್ತೇವೆ. ಕೆಲವು ಸಂದರ್ಭದಲ್ಲಿ ಸಮಾಸ ಘಟಿತವಾದ ಎರಡು ಪದಗಳಲ್ಲಿ ಒಂದೇ ಪದದಿಂದ ವಿಗ್ರಹವಾಕ್ಯವನ್ನು ಹೇಳಿದರು ಅದು ಅಸ್ವಪದ ವಿಗ್ರಹವಾಕ್ಯವಾಗುತ್ತದೆ. ಅವ್ಯಯಿಭಾವ ಸಮಾಸವೂ ಕೂಡಾ ಇದೇ ರೀತಿಯಲ್ಲಿ ಮೇಲೆ ಹೇಳಿದಂತೆ ನಿತ್ಯಸಮಾಸವಾಗಿರುತ್ತದೆ.

ಉದಾ:-ಅಧಿಹರಿ (ಹರಿಯಲ್ಲಿ) ಅಧಿ ಎಂಬ ಅವ್ಯಯಕ್ಕೆ ಹರಿ ಶಬ್ದದ ಜೊತೆಗೆ ಸಪ್ತಮ್ಯರ್ಥದಲ್ಲಿ ಪ್ರಕೃತ ಸೂತ್ರದಿಂದ ಸಮಾಸವಾಗಿದೆ. ಹರೌ ಎಂಬುದು ಲೌಕಿಕ ವಿಗ್ರಹವಾಕ್ಯ. ಹರಿ+ಙಿ+ಅಧಿ ಎಂಬುದು ಅಲೌಕಿಕ ವಿಗ್ರಹವಾಕ್ಯ. 'ಅಧಿ' ಎಂಬ ಅವ್ಯಯಕ್ಕೆ "ಸಪ್ತಮ್ಯಧೀಕರಣೇ ಚ" ಎಂಬ ಸೂತ್ರದಿಂದ ಅಧಿಕರಣಾರ್ಥವನ್ನು ಹೇಳುತ್ತದೆ. ಈ ರೀತಿಯಲ್ಲಿ ಸಮಾಸವಾದ ಮೇಲೆ ಸಮಾಸ ಘಟಿತವಾದ ಎರಡು ಪದಗಳಲ್ಲಿ ಯಾವ ಪದವನ್ನು ಮೊದಲು ಪ್ರಯೋಗಿಸಬೇಕು ಎಂಬುದನ್ನು ಮುಂದಿನ ಸೂತ್ರವು ಹೇಳುತ್ತದೆ.

**(ಉಪಸರ್ಜನ ಸಂಜ್ಞೆಯನ್ನು ವಿಧಿಸುವಸೂತ್ರ)**

**ಸೂತ್ರ - 911. ಪ್ರಥಮಾನಿರ್ದಿಷ್ಟಂ ಸಮಾಸಉಪಸರ್ಜನಮ್ (1-2-43)**

ವೃತ್ತಿ: ಸಮಾಸಶಾಸ್ತ್ರೇ ಪ್ರಥಮಾನಿರ್ದಿಷ್ಟಂ ಉಪಸರ್ಜನಸಂಜ್ಞಂ ಸ್ಯಾತ್ ।

ಪದಚ್ಛೇದ: ಪ್ರಥಮಾನಿರ್ದಿಷ್ಟಂ, ಸಮಾಸೇ, ಉಪಸರ್ಜನಮ್ ।

ಅರ್ಥ:ಸಮಾಸವಿಧಾಯಕಸೂತ್ರದಲ್ಲಿ ಪ್ರಥಮಾಂತಪದದಿಂದ ನಿರ್ದಿಷ್ಟವಾದ ಶಬ್ದಕ್ಕೆ ಉಪಸರ್ಜನಸಂಜ್ಞೆಯು ಬರುತ್ತದೆ.ಇಲ್ಲಿ ಅವ್ಯಯಂ ಎಂಬುದು ಪ್ರಥಮಾಂತ ಶಬ್ದವಾಗಿದೆ. ಈ ಪದದಿಂದ ನಿರ್ದಿಷ್ಟವಾದ ಪದಕ್ಕೆ ಉಪಸರ್ಜನ ಸಂಜ್ಞೆಯು ಬರುತ್ತದೆ.

ವೃತ್ತಿ-ಸಮಾಸೇ ಉಪಸರ್ಜನಂ ಪ್ರಾಕ್ಪ್ರಯೋಜ್ಯಮ್ । ಇತಿಅಧೇಃ ಪ್ರಾಕ್ ಪ್ರಯೋಗಃ ।ಸುಪೋ ಲುಕ್, ಏಕದೇಶವಿಕೃತನ್ಯಾಯಸ್ಯ ಅನನ್ಯತ್ವಾತ್ ಪ್ರಾತಿಪದಿಕಸಞ್ಜ್ಞಾಯಾಮ್ ಸ್ವಾದ್ಯುತ್ಪತ್ತಿಃ । ಅವ್ಯಯೀಭಾವಶ್ಚಇತಿಅವ್ಯಯತ್ವಾತ್ ಸುಪೋ ಲುಕ್-ಅಧಿಹರಿ.

ಅರ್ಥ- ಉಪಸರ್ಜನಸಂಜ್ಞೆಯುಳ್ಳ ಶಬ್ದವನ್ನು ಪೂರ್ವದಲ್ಲಿ ಪ್ರಯೋಗಿಸಬೇಕು. (ಪೂರ್ವನಿಪಾತಮಾಡಬೇಕು).

ಉದಾ: ಅಧಿಹರಿ (ಹರಿಯಲ್ಲಿ): ಇಲ್ಲಿ 'ಅಧಿ' ಎಂಬುದು ಉಪಸರ್ಜನ ಸಂಜ್ಞೆಯನ್ನು ಹೊಂದಿರುವುದರಿಂದ ಅದು ಪೂರ್ವಪದವಾಗಿ ಅಧಿಹರಿ+ಙಿ ಎಂದಿದ್ದಾಗ "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ ಙಿ ಗೆ ಲೋಪವು ಬರುತ್ತದೆ. ಆಗ ಅಧಿಹರಿ ಎಂದಿರುತ್ತದೆ. ಅದರ ನಂತರ ಸುಪ್ ಪ್ರತ್ಯಯವನ್ನು ಸೇರಿಸಬಹುದು. ಅಧಿಹರಿಙಿ ಎಂಬುದೇ ಸಮಾಸವಾಗಿರುವುದರಿಂದ "ಕೃತ್ ತದ್ಧಿತ. ಸಮಾಸಾಶ್ಚ" ಎಂಬ ಸೂತ್ರದಿಂದ ಅಧಿಹರಿ+ಙಿ ಎಂಬುದಕ್ಕೇನೆ ಪ್ರಾತಿಪದಿಕ ಸಂಜ್ಞೆ ಇರುವುದರಿಂದ 'ಙಿ' ಲೋಪವಾಗುವುದರಿಂದ ಅಧಿಹರಿ ಎಂಬುದಕ್ಕೆ ಪ್ರಾತಿಪದಿಕ ಸಂಜ್ಞೆ ಬಾರದೇ

ಹೋಗುವದು. ಅದಕ್ಕೆ 'ಏಕದೇಶವಿಕೃತಮ್ ಅನನ್ಯವತ್' ಎಂಬ ನ್ಯಾಯದಿಂದ ಅಧಿಹರಿಙಿ ಎಂಬ ಪ್ರಾತಿಪದಿಕದಲ್ಲಿ ಙಿ ಲೋಪವಾದರೂ ಅದು ಪ್ರಾತಿಪದಿಕವಾಗಿಯೇ ಇರುತ್ತದೆ. ಆದುದರಿಂದ ಸುಪ್ ಪ್ರತ್ಯಯವನ್ನು ಸೇರಿಸಬಹುದು ಅವ್ಯಯೀಭಾವಶ್ಚ ಎಂಬ ಸೂತ್ರದಿಂದ ಅವ್ಯಯಿಭಾವಕ್ಕೆ ಅವ್ಯಯ ಸಂಜ್ಞೆಯು ಬರುತ್ತದೆ. "ಅವ್ಯಯಾದಾಪ್ ಸುಪಃ" ಎಂಬ ಸೂತ್ರದಿಂದ ಇದಕ್ಕೆ ಸೇರಿಸಿದ ಸುಪ್ ಪ್ರತ್ಯಯಗಳು ಲೋಪವಾದ ಮೇಲೆ ಅಧಿಹರಿ ಎಂಬ ರೂಪವು ಸಿದ್ಧವಾಗುತ್ತದೆ.

**(ಪೂರ್ವನಿಪಾತವನ್ನು ವಿಧಿಸುವ ಸೂತ್ರ)**

**ಸೂತ್ರ– 912. ಉಪಸರ್ಜನಂ ಪೂರ್ವಮ್ (2.2.30)**

ವೃತ್ತಿ– ಸಮಾಸೇ ಉಪಸರ್ಜನಂ ಪ್ರಾಕ್ ಪ್ರಯೋಜ್ಯಮ್। ಇತ್ಯಧೇಃ ಪ್ರಾಕ್ ಪ್ರಯೋಗಃ। ಸುಪೋ ಲುಕ್, ಏಕದೇಶವಿಕೃತನ್ಯಾಯಸ್ಯ ಅನನ್ಯತ್ವಾತ್ ಪ್ರಾತಿಪದಿಕ ಸಂಜ್ಞಾಯಾಂ ಸ್ವಾದ್ಯುತ್ಪತ್ತಿಃ। ಅವ್ಯಯಈ ಭಾವಸ್ಯ ಇತಿ ಅವ್ಯಯತ್ವಾತ್ ಸುಪೋ ಲುಕ್। ಅಧಿಹರಿ।

ಅರ್ಥ– ಉಪಸರ್ಜನ ಸಂಜ್ಞೆಯುಳ್ಳ ಶಬ್ದವು ಸಮಾಸದಲ್ಲಿ ಪೂರ್ವನಿಪಾತವನ್ನು ಹೊಂದುತ್ತದೆ. (ಪೂರ್ವಪ್ರಯೋಗ ಮಾಡಬೇಕೆಂದು ಅರ್ಥ)

ಉದಾ– ಅಧಿಹರಿ (ಹರಿಯಲ್ಲಿ) – ಇದು ಸಪ್ತಮಿ ವಿಭಕ್ತ್ಯರ್ಥದಲ್ಲಿ ಸಮಾಸಕ್ಕೆ ಉದಾಹರಣೆಯಾಗಿದೆ. ಈ ಪ್ರಯೋಗದಲ್ಲಿ 'ಅಧಿ' ಎಂಬ ಶಬ್ದವು ಸಪ್ತಮೀ ವಿಭಕ್ತಿ ಅರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ. ಹರೌ+ಇತಿ ಎಂಬುದು ಲೌಕಿಕ ವಿಗ್ರಹ. ಹರಿ+ಙಿ+ಅಧಿ ಎಂಬ ಅಲೌಕಿಕ ವಿಗ್ರಹವಾಕ್ಯವಿರುವಾಗ, "ಅವ್ಯಯಂ ವಿಭಕ್ತಿ–ಸಮೀಪ–ಸಮೃದ್ಧಿ–ವ್ಯೃದ್ಧ್ಯರ್ಥಾಭಾವಾತ್ಯಯಾಸಮ್ಪ್ರತಿ–ಶಬ್ದಪ್ರಾದುರ್ಭಾವ–ಪಶ್ಚಾದ್ಯಥಾನುಪೂರ್ವ್ಯ–ಯೌಗಪದ್ಯ–ಸಾದೃಶ್ಯ–ಸಮ್ಪತ್ತಿ–ಸಾಕಲ್ಯಾನ್ತವಚನೇಷು।" ಸೂತ್ರದಿಂದ ಅವ್ಯಯೀಭಾವ ಸಮಾಸ ಬಂದು, "ಪ್ರಥಮಾ ನಿರ್ದಿಷ್ಟಮ್ ಸಮಾಸ ಉಪಸರ್ಜನಮ್" ಎಂಬ ಸೂತ್ರದಿಂದ 'ಅಧಿ' ಎಂಬ ಅವ್ಯಯಕ್ಕೆ 'ಉಪಸರ್ಜನ ಸಂಜ್ಞೆ ಬಂದು, ಪ್ರಕೃತ ಸೂತ್ರದಿಂದ ಅದಕ್ಕೆ ಪೂರ್ವನಿಪಾತವು ಬಂದು ಅಧಿ+ಹರಿ+ಙಿ ಎಂದಿರುವಾಗ "ಕೃತ್ ತದ್ಧಿತ ಸಮಾಸಾಶ್ಚ" ಎಂಬ ಸೂತ್ರದಿಂದ ಪ್ರಾತಿಪದಿಕ ಸಂಜ್ಞೆಯು ಬಂದು "ಸುಪೋಧಾತುಪ್ರಾತಿಪದಿಕಯೋಃ" ಎಂಬ ಸೂತ್ರದಿಂದ ಅದರ ಅವಯವವಾದ 'ಸುಪ್'ಗೆ 'ಲುಕ್' ಬಂದು ಅಧಿಹರಿ ಎಂದು ರೂಪವಾಗುತ್ತದೆ. ವ್ಯಾತ್ಯಸ್ತವಾದರೂ 'ಏಕದೇಶವಿಕೃತಮ್ ಅನನ್ಯವತ್ (ಒಂದುಕಡೆ ವಿಕಾರ ಬಂದರೂ ಅದು ಬೇರೆ ಆಗುವುದಿಲ್ಲ) ಎಂಬ ನ್ಯಾಯದಿಂದ ಅದಕ್ಕೆ ಪ್ರಾತಿಪದಿಕ ಸಂಜ್ಞೆ ಇರುವುದರಿಂದ ಅದರ ಮೇಲೆ 'ಸು' ಮುಂತಾದ ವಿಭಕ್ತಿ ಪ್ರತ್ಯಯಗಳು ಬಂದು ಅಧಿಹರಿ+ಸು ಎಂದಿರುವಾಗ "ಅವ್ಯಯೀಭಾವಶ್ಚ" ಎಂಬ ಸೂತ್ರದಿಂದ ಇದಕ್ಕೆ ಅವ್ಯಯ ಸಂಜ್ಞೆ ಬಂದು "ಅವ್ಯಯಾದಾಪ್ ಸುಪಃ" ಎಂಬ ಸೂತ್ರದಿಂದ 'ಸುಪ್'ಗೆ ಲುಕ್ ಬಂದು ಎಲ್ಲ ವಿಭಕ್ತಿಗಳಲ್ಲಿ ಅಧಿಹರಿ ಎಂದು ರೂಪವಾಗುತ್ತದೆ.

**(ನಪುಂಸಕಲಿಙ್ಗವನ್ನು ವಿಧಿಸುವ ಸಂಜ್ಞಾಸೂತ್ರ)**

**ಸೂತ್ರ- 913. ಅವ್ಯಯೀಭಾವಶ್ಚ।(2-4-18)**

ವೃತ್ತಿ : ಅಯಂ ನಪುಂಸಕಂ ಸ್ಯಾತ್ ।ಗಾಃ ಪಾತಿತಿ ಗೋಪಾಃ ತಸ್ಮಿನ್ ಇತಿ ಅಧಿಗೋಪಮ್।

ಪದಚ್ಛೇದ: ಅವ್ಯಯೀಭಾವಃ, ಚ ।

ಅನುವೃತ್ತಿ: ಸ ನಪುಂಸಕಮ್ ಎಂಬ ಸೂತ್ರದಿಂದ ನಪುಂಸಕಂ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ : ಅವ್ಯಯೀಭಾವ ಸಮಾಸವಾದ ಮೇಲೆ ಅದಕ್ಕೆ ನಪುಂಸಕಲಿಂಗವಾಗುವುದು.

ಉದಾ: ಅಧಿಗೋಪಮ್: ಗೋಪಾಃ (ಗೋವುಗಳನ್ನು ರಕ್ಷಿಸುವವನು ಎಂದರ್ಥ) ಎಂಬುದು ಆಕಾರಾಂತ ಗೋಪಾ ಶಬ್ದದ ಪ್ರಥಮಾವಿಭಕ್ತಿ ಏಕವಚನದ ರೂಪವು ಅಧಿಕರಣಾರ್ಥವಾದ ಸಪ್ತಮಿಯಲ್ಲಿ ಅಧಿ ಎಂಬ ಅವ್ಯಯವು "ಅವ್ಯಯಮ್... ವಚನೇಷು" ಎಂಬ ಸೂತ್ರದಿಂದ ಗೋಪಾ+ಙಿ ಎಂಬ ಸುಬಂತದ ಜೊತೆಗೆ ಸಮಾಸವಾಗುದು ಹಿಂದೆ ಹೇಳಿದಂತೆ ಅಧಿ ಎಂಬ ಉಪಸರ್ಜನಕ್ಕೆ ಪೂರ್ವನಿಪಾತವೂ ಬರುತ್ತದೆ. ಆಗ ಅಧಿಗೋಪಾ ಎಂದಾಗಿ ಪ್ರಕೃತ ಸೂತ್ರದಿಂದ ಅವ್ಯಯಭಾವವು ನಪುಂಸಕ ಲಿಂಗದಲ್ಲಿ ಇರಬೇಕಾಗಿದ್ದರಿಂದ "ಹ್ರಸ್ವೋ ನಪುಂಸಕೇ ಪ್ರಾತಿಪದಿಕಸ್ಯ" ಎಂಬ ಸೂತ್ರದಿಂದ ಅಂತ್ಯ 'ಆ' ಕಾರಕ್ಕೆ 'ಹ್ರಸ್ವ' ಬಂದು 'ಸು' ಪ್ರತ್ಯವನ್ನು ಸೇರಿಸಿದಾಗ 'ಅಂ' ಆದೇಶವು ಬಂದು 'ಅಮಿ ಪೂರ್ವಃ' ಎಂಬ ಸೂತ್ರದಿಂದ 'ಪೂರ್ವರೂಪವು' ಬಂದು ಅಧಿಗೋಪಮ್ ಎಂಬ ರೂಪವು ಸಿದ್ಧವಾಗುತ್ತದೆ.

**(ಸುಪ್‌ಗೆ ಲುಕ್-ನಿಷೇಧವನ್ನು ಮತ್ತು ಅಮ್-ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ- 914. ನಾವ್ಯಯೀಭಾವಾದತೋಽಮ್ತ್ವಪಞ್ಚಮ್ಯಾಃ। (2-4-83)**

ವೃತ್ತಿ: ಅದನ್ತಾತ್ಅವ್ಯಯೀಭಾವಾತ್ ಸುಪಃ ನ ಲುಕ್, ತಸ್ಯ ಪಞ್ಚಮೀಂ ವಿನಾ ಅಮ್-ಆದೇಶಃ ಚ ಸ್ಯಾತ್।ಗಾಃ ಪಾತೀತಿ ಗೋಪಾಃ ತಸ್ಮಿನ್ನಿತಿ ಅಧಿಗೋಪಮ್।

ಪದಚ್ಛೇದ: ನ, ಅವ್ಯಯೀಭಾವಾತ್,ಅತಃ,ಅಮ್,ತು,ಅಪಞ್ಚಮ್ಯಾಃ ।

ಅನುವೃತ್ತಿ:ಅವ್ಯಯೀಭಾವಾದುಪ್ಸುಸಃ ಎಂಬ ಸೂತ್ರದಿಂದ ಸುಪಃ ಎಂಬ ಪದವು ಮತ್ತು ಣ್ಯಕ್ಷ್ತ್ರಿಯಾರ್ಷಞಿತೋಯೂನಿ ಲುಗಣಿಞೋಃ ಎಂಬ ಸೂತ್ರದಿಂದ ಲುಕ್ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ: ಅದನ್ತವಾದ ಅವ್ಯಯೀಭಾವದ ನಂತರ ಇರುವ ಸುಪ್‌ಗೆ ಲುಕ್ ಬರುವುದಿಲ್ಲ. ಮತ್ತು ಪಂಚಮೀವಿಭಕ್ತಿಯನ್ನು ಬಿಟ್ಟು ಬೇರೆ ವಿಭಕ್ತಿಗಳ ಸ್ಥಾನದಲ್ಲಿ ಅಮ್ ಆದೇಶವು ಬರುತ್ತದೆ. ಪಂಚಮೀವಿಭಕ್ತಿ ಪ್ರತ್ಯಯವನ್ನು ಸೇರಿಸಿದಾಗ ಆತ್, ಭ್ಯಾಮ್ ಮತ್ತು ಭಸ್ಯ ಪ್ರತ್ಯಯಗಳು ಸೇರಿಸಲಾಗಿ ಅಧಿಗೋಪಾತ್, ಅಧಿಗೋಪಾಭ್ಯಾಮ್, ಅಧಿಗೋಪ್ಯಭ್ಯಃ ಎಂಬ ರೂಪಗಳು ಸಿದ್ಧವಾಗುವವು.

**(ಬಹುಳ ಪ್ರಯೋಗದಿಂದ ಅಮ್ ಭಾವವನ್ನು ವೈಕಲ್ಪಿಕವಾಗಿ ವಿಧಿಸುವ ಸೂತ್ರ)**

**ಸೂತ್ರ -915. ತೃತೀಯಾಸಪ್ತಮ್ಯೋರ್ಬಹುಳಮ್ (2-4-84)**

ವೃತ್ತಿ: ಅದನ್ತಾತ್ ಅವ್ಯಯಿಭಾವಾತ್ ತೃತೀಯಾ-ಸಪ್ತಮ್ಯೋಃ ಬಹುಳಮ್ ಅಮ್ ಭಾವಃ ಸ್ಯಾತ್ । ಅಧಿಗೋಪಮ್, ಅಧಿಗೋಪೇನ,ಅಧಿಗೋಪೇ ವಾ । ಕೃಷ್ಣಸ್ಯ ಸಮೀಪಮ್

ಉಪಕೃಷ್ಣಮ್ । ಮದ್ರಾಣಾಂ ಸಮೃವೃದ್ಧೀಃ-ಸುಮದ್ರಮ್। ಯವನಾನಾಮ್ ವ್ಯೃದ್ಧಿಃ ದುರ್ಯವನಮ್। ಮಕ್ಷಿಕಾಣಾಂ ಅಭಾವಃ ನಿರ್ಮಕ್ಷಿಕಮ್ । ಹಿಮಸ್ಯ ಅತ್ಯಯಃ ಅತಿಹಿಮಮ್ । ನಿದ್ರಾಸಂಪ್ರತಿ ನ ಯುಜ್ಯತೇ ಇತಿ ಅತಿನಿದ್ರಮ್ । ಹರಿ ಶಬ್ದಸ್ಯ ಪ್ರಕಾಶಃ ಇತಿಹರಿ । ವಿಷ್ಣೋಃಪಶ್ಚಾತ್-ಅನುವಿಷ್ಣು । ಯೋಗ್ಯತಾ-ವೀಪ್ಸಾ-ಪದಾರ್ಥ-ಅನತಿವೃತ್ತಿ-ಸಾದೃಶಾನಿ ಯಥಾರ್ಥಃ ರೂಪಸ್ಯ ಯೋಗ್ಯಮ್ ಅನುರೂಪಮ್। ಅರ್ಥಮ್ ಅರ್ಥಮ್ ಪ್ರತಿ-ಪ್ರತ್ಯರ್ಥಮ್। ಶಕಿಮ್ ಅನತಿ ಕ್ರಮ್ಯ-ಯಥಾ ಶಕ್ತಿ ।

ಪ.ಚ್ಛೇ- ತೃತೀಯಾ, ಸಪ್ತಮೋಃ, ಬಹುಳಮ್।

ಅ.ವೃ-ನಾವ್ಯಯೀಭಾವಾದತೋಽಮ್ತ್ವಪಞ್ಚಮ್ಯಾಃ ಎಂಬ ಸೂತ್ರದಿಂದ ಅವ್ಯಯಿಭಾವಾತ್, ಅತಃ ಮತ್ತು ಅಮ್ ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ: ಅದನ್ತವಾದ (ಹ್ರಸ್ವ ಅಕಾರಾತ್ತವಾದ) ಅವ್ಯಯಿಭಾವದ ನಂತರ ತೃತೀಯಾ, ಸಪ್ತಮೀ ಪ್ರತ್ಯಯಗಳ ಸ್ಥಾನದಲ್ಲಿ ಬಹುಳ ಪ್ರಯೋಗದಿಂದ ಅಮ್ ಆದೇಶ ಬರುತ್ತದೆ.

**(ಸಹ ಎಂಬ ಅರ್ಥದಲ್ಲಿ ಸ-ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ- 916. ಅವ್ಯಯೀಭಾವೇ ಚಾಕಾಲೇ। (6-3-81)**

ವೃತ್ತಿ: ಸಹಸ್ಯ ಸ ಸ್ಯಾತ್ಅವ್ಯಯೀಭಾವೇ ನ ತು ಕಾಲೇ ।ಹರೇಃ ಸಾದೃಶ್ಯಂ ಸಹರಿ। ಜ್ಯೇಷ್ಠಸ್ಯಆನುಪೂರ್ವ್ಯೇಣಇತಿಅನುಜ್ಯೇಷ್ಠಮ್ । ಚಕ್ರೇಣಯುಗಪತ್ ಸಚಕ್ರಮ್। ಸದೃಶಃ ಸಖ್ಯಾ ಸಸಖಿ । ಕ್ಷತ್ರಾಣಾಂ ಸಮ್ಪತ್ತಿಃ ಸಕ್ಷತ್ರಮ್ ।ತೃಣಮಪಿ ಅಪರಿತ್ಯಜ್ಯ ಸತೃಣಮತ್ತಿ । ಅಗ್ನಿಗ್ರನ್ಥಪರ್ಯನ್ತಮಧೀತೇ ಸಾಗ್ನಿ ।

ಪದಚ್ಛೇದ :ಅವ್ಯಯೀಭಾವೇ ಚ ಅಕಾಲೇ ।

ಅ.ವೃ:ಸಹಸ್ಯ ಸ ಸಂಜ್ಞಾಯಾಮ್ ಎಂಬ ಸೂತ್ರದಿಂದ ಸಹಸ್ಯ ಸ ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ : ಕಾಲವಾಚಕ ಶಬ್ದವು ಉತ್ತರಪದವಾಗಿ ಇಲ್ಲದಿದ್ದರೆ ಅವ್ಯಯೀಭಾವ ಸಮಾಸದಲ್ಲಿ ಸಹ ಎಂಬುದಕ್ಕೆ ಸ ಆದೇಶವು ಬರುತ್ತದೆ.

**(ಸಮಾಸವನ್ನು ವಿಧಿಸುವ ವಿಧಿ ಸೂತ್ರ)**

**ಸೂತ್ರ- 917. ನದೀಭಿಶ್ಚ।(2-1-20)**

ವೃತ್ತಿ : ನದೀಭಿಃ ಸಹ ಸಂಖ್ಯಾ ಸಮಸ್ಯತೇ

ವಾರ್ತಿಕ : ಸಮಾಹಾರೇಚಾಯಮಿಷ್ಯತೇ । ಪಞ್ಚಗಙ್ಗಮ್ । ದ್ವಿಯಮುನಮ್।

ಪ.ಚ್ಛೇ : ನದೀಭಿಃ, ಚ ।

ಅನುವೃತ್ತಿ : ಸಂಖ್ಯಾ ವಂಶ್ಯೇನ ಎಂಬ ಸೂತ್ರದಿಂದ ಸಂಖ್ಯಾ ಎಂಬ ಪದವು ಅನುವೃತ್ತವಾಗುತ್ತದೆ. ಸುಪ್, ಸಹಸುಪಾ, ಪ್ರಾಕ್ಕಡಾರಾತ್ಸಮಾಸಃ ಮತ್ತುಅವ್ಯಯೀಭಾವಃ ಎಂಬ ಸೂತ್ರಗಳು ಅಧಿಕಾರಸೂತ್ರಗಳಾಗಿರುತ್ತವೆ.

ಅರ್ಥ :ಸಂಖ್ಯಾವಾಚಕ ಸುಬಂತ ಶಬ್ದಗಳ ಜೊತೆಗೆ ನದೀವಾಚಕ ಸುಬಂತಶಬ್ದಗಳ ಜೊತೆಗೆ ಸಮಾಸವಾಗುತ್ತವೆ. ಮತ್ತು ಅದು ಅವ್ಯಯೀಭಾವಸಮಾಸವೆನಿಸಿಕೊಳ್ಳುತ್ತವೆ.

**(ತದ್ಧಿತಸಂಜ್ಞೆಯನ್ನು ವಿಧಿಸುವ ಅಧಿಕಾರಸೂತ್ರ)**

**ಸೂತ್ರ- 918. ತದ್ಧಿತಾಃ।(4-1-76)**

ವೃತ್ತಿ : ಆಪಞ್ಚಮಸಮಾಪ್ತೇಃಅಧಿಕಾರೋಽಯಮ್ ।

ಅರ್ಥ : ಪಂಚಮಾಧ್ಯಾಯದ ಸಮಾಪ್ತಿಯವರೆಗೆ ತದ್ಧಿತಸಂಜ್ಞೆಗೆ ಸಂಬಂಧಿಸಿದ ಅಧಿಕಾರಸೂತ್ರವಾಗಿದೆ.

**(ಸಮಾಸಾಂತದಲ್ಲಿ ಟಚ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ- 919. ಅವ್ಯಯೀಭಾವೇ ಶರತ್ಪ್ರಭೃತಿಭ್ಯಃ। (5-4-107)**

ವೃತ್ತಿ : ಶರದಾದಿಭ್ಯಃಟಚ್ ಸ್ಯಾತ್ ಸಮಾಸಾನ್ತಃಅವ್ಯಯೀಭಾವೇ।ಶರದಃ ಸಮೀಪಮ್ಉಪಶರದಮ್ । ಪ್ರತಿ ವಿಪಾಶಮ್ ।

ಗಣಸೂತ್ರಮ್ : ಜರಾಯಾಃ ಜರಶ್ಚ । ಉಪಜರಸಮ್ಇತ್ಯಾದಿ

ಅನುವೃತ್ತಿ : ರಾಜಾಹಸ್ಸಖಿಭ್ಯಷ್ಟಚ್ ಎಂಬ ಸೂತ್ರದಿಂದ ಟಚ್ ಎಂಬ ಪದವು ಅನುವೃತ್ತವಾಗುತ್ತದೆ. ತದ್ಧಿತಾಃ, ಸಮಾಸಾನ್ತಾಃ, ಪ್ರತ್ಯಯಾಃ , ಪರಶ್ಚ, ಙ್ಯಾಪ್ಪ್ರಾತಿಪದಿಕಾತ್ ಎಂಬುವು ಅಧಿಕಾರಸೂತ್ರಗಳಾಗಿವೆ.

ಅರ್ಥ-ಅವ್ಯಯೀಭಾವದಲ್ಲಿ ಶರತ್ ಮೊದಲಾದ ಶಬ್ದಗಳ ನಂತರ ಸಮಾಸದ ಕೊನೆಯಲ್ಲಿ 'ಟಚ್' ಪ್ರತ್ಯಯವು ಬರುತ್ತದೆ.

ಉದಾ : ಉಪಶರದಮ್ । (ಶರದ್ಋತುವನ್ನು ಸಮೀಪದಲ್ಲಿ ಉಳ್ಳ ಋತು)

**(ಸಮಾಸಾಂತದಲ್ಲಿ ಟಚ್ ಪ್ರತ್ಯವನ್ನು ವಿಧಿಸುವ ಸೂತ್ರ )**

**ಸೂತ್ರ- 920. ಅನಶ್ಚ।(5-4-108)**

ವೃತ್ತಿ: ಅನ್ನನ್ತಾತ್ಅವ್ಯಯೀಭಾವಾತ್ ಟಚ್ ಸ್ಯಾತ್ ।

ಪದಚ್ಛೇದ : ಅನಃ, ಚ ।

ಅನುವೃತ್ತಿ : "ರಾಜಾಹಸ್ಸಖಿಭ್ಯಶ್ಚಚ್" ಎಂಬ ಸೂತ್ರದಿಂದ 'ಟಚ್' ಎಂಬ ಪದವು ಮತ್ತು "ಅವ್ಯಯೀಭಾವೇ ಶರತ್ಪ್ರಭೃತಿಭ್ಯಃ" ಎಂಬ ಸೂತ್ರದಿಂದ ವಿಭಕ್ತಿಪರಿಣಾಮ ಮಾಡಿದ ಮೇಲೆ 'ಅವ್ಯಯೀಭಾವಾತ್' ಎಂಬ ಪದವು ಅನುವೃತ್ತವಾಗುತ್ತದೆ. ತದ್ಧಿತಾಃ, ಸಮಾಸಾನ್ತಾಃ, ವೃತ್ತಯಃ, ಪರಶ್ಚ, ಙ್ಯಾಪ್ ಪ್ರಾತಿಪದಿಕಾತ್ ಎಂಬುವು ಅಧಿಕಾರಸೂತ್ರಗಳಾಗಿವೆ.

ಅರ್ಥ– ಅನ್ನನ್ತವಾದ ಅವ್ಯಯೀಭಾವದ ನಂತರ ಸಮಾಸಾಂತದಲ್ಲಿ ತದ್ಧಿತಸಂಜ್ಞೆಯುಳ್ಳ ಟಚ್ ಪ್ರತ್ಯಯವು ಬರುತ್ತದೆ.

**(ಭ ಸಂಜ್ಞೆಯುಳ್ಳ ಶಬ್ದದ ಟಿ ಗೆ ಲೋಪವನ್ನು ಹೇಳುವ ಸೂತ್ರ)**

**ಸೂತ್ರ– 921. ನಸ್ತದ್ಧಿತೇ।(6–4–144)**

ವೃತ್ತಿ :ನಾನ್ತಸ್ಯ ಭಸ್ಯ ಟೇಃ ಲೋಪಃ ತದ್ಧಿತೇ । ಉಪರಾಜಮ್, ಅಧ್ಯಾತ್ಮಮ್ ।

ಪದಚ್ಛೇದ :ನಃ ತದ್ಧಿತೇ ।

ಅನುವೃತ್ತಿ: "ಟೇಃ" ಎಂಬ ಸೂತ್ರ ಮತ್ತು "ಅಲ್ಲೋಪೋ ಅನಃ" ಎಂಬ ಸೂತ್ರದಿಂದ ಲೋಪಃ ಎಂಬ ಪದವುಅನುವೃತ್ತವಾಗುತ್ತದೆ. ಭಸ್ಯ ಎಂಬುದು ಅಧಿಕಾರ ಸೂತ್ರವಾಗಿದೆ.

ಅರ್ಥ : ತದ್ಧಿತವು ಪರದಲ್ಲಿದ್ದಾಗ ನಕಾರಾನ್ತ ಶಬ್ದದ 'ಭ' ಸಂಜ್ಞೆಯುಳ್ಳ 'ಟಿ' ಗೆ ಲೋಪವು ಬರುತ್ತದೆ.

ಉದಾ : ಉಪರಾಜಮ್ ।

**(ವೈಕಲ್ಪಿಕವಾಗಿ ಟಚ್ ಪ್ರತ್ಯಯವನ್ನು ವಿಧಿಸುವ ಸೂತ್ರ )**

**ಸೂತ್ರ– 922. ನಪುಂಸಕಾದನ್ಯತರಸ್ಯಾಮ್।(5–4–109)**

ವೃತ್ತಿ : ಅನ್ನನ್ತಮ್‌ಯತ್‌ಕ್ಲೀಬಂತದನ್ತಾತ್‌ಅವ್ಯಯೀಭಾವಾತ್‌ಟಚ್ ವಾ ಸ್ಯಾತ್। ಉಪಚರ್ಮಮ್। ಉಪಚರ್ಮ ।

ಪದಚ್ಛೇದ : ನಪುಂಸಕಾತ್, ಅನ್ಯತರಸ್ಯಾಮ್ ।

ಅನುವೃತ್ತಿ : ಅನಶ್ಚ ಎಂಬ ಸೂತ್ರದಿಂದ ಅನಃ ಎಂಬ ಪದವು ,ಅವ್ಯಯೀಭಾವೇ ಶರತ್ಪ್ರಭೃತಿಭ್ಯಃ ಎಂಬ ಸೂತ್ರದಿಂದ ವಿಭಕ್ತಿ ಪರಿಣಾಮಮಾಡಿ ಅವ್ಯಯೀಭಾವಾತ್ ಎಂಬ ಪದವನ್ನು ಮತ್ತು ರಾಜಾಹಸ್ಸಖಿಭ್ಯಶ್ಟಚ್ ಎಂಬ ಸೂತ್ರದಿಂದ ಟಚ್ ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳಲಾಗಿದೆ. ಪ್ರತ್ಯಯಃ, ಪರಶ್ಚ, ತದ್ಧಿತಾಃ, ಸಮಾಸಾನ್ತಾಃ ಇವು ಅಧಿಕಾರಸೂತ್ರಗಳಾಗಿವೆ. ಅನ್ನನ್ತವಾದ ನಪುಂಸಕಲಿಂಗಾಂತ ಅವ್ಯಯೀಭಾವದ ನಂತರ ವೈಕಲ್ಪಿಕವಾಗಿ ತದ್ಧಿತಸಂಜ್ಞೆಯುಳ್ಳ ಟಚ್ ಪ್ರತ್ಯಯವು ಬರುತ್ತದೆ.

ಉದಾ : ಉಪಚರ್ಮಮ್ । ಉಪಚರ್ಮ ।

**(ವೈಕಲ್ಪಿಕವಾಗಿಟಚ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ– 923. ಝಯಃ। (5–4–111)**

ವೃತ್ತಿ: ಝಯನ್ತಾತ್‌ಅವ್ಯಯೀಭಾವಾತ್ ಟಚ್ ವಾ ಸ್ಯಾತ್ । ಉಪಸಮಿಧಮ್ । ಉಪಸಮಿತ್।

ಅನುವೃತ್ತಿ : "ಅವ್ಯಯೀಭಾವೇ ಶರತ್ಪ್ರಭೃತಿಭ್ಯಃ" ಎಂಬ ಸೂತ್ರದಿಂದ ವಿಭಕ್ತಿಪರಿಣಾಮ ಮಾಡಿದ ಮೇಲೆ 'ಅವ್ಯಯೀಭಾವಾತ್' ಎಂಬ ಪದವು ಮತ್ತು "ರಾಜಾಹಸ್ಸಖಿಭ್ಯಷ್ಟಚ್" ಎಂಬ ಸೂತ್ರದಿಂದ 'ಟಚ್' ಎಂಬ ಪದವು ಅನುವೃತ್ತವಾಗುತ್ತವೆ. ಪ್ರತ್ಯಯಃ, ಪರಶ್ಚ,

ತದ್ಧಿತಾಃ, ಸಮಾಸಾನ್ತಾಃ ಇವು ಅಧಿಕಾರಸೂತ್ರಗಳಾಗಿವೆ.

ಅರ್ಥ : ಝಯ್ ಪ್ರತ್ಯಾಹಾರ ವರ್ಣವನ್ನು ಅಂತದಲ್ಲಿ ಉಳ್ಳ ಅವ್ಯಯೀಭಾವದ ನಂತರ ವೈಕಲ್ಪಿಕವಾಗಿ ತದ್ಧಿತ 'ಟಚ್' ಪ್ರತ್ಯಯವು ಬರುತ್ತದೆ.

ಉದಾ : ಉಪಸಮಿಧಮ್ ।ಉಪಸಮಿತ್ ।

**ಅವ್ಯಯೀಭಾವ ಸಮಾಸ (39) ಪ್ರಕರಣವು ಮುಗಿಯಿತು**

# ಪ್ರಕರಣ-40: ತತ್ಪುರುಷಃ

**(ಸೂತ್ರ ಸಂಖ್ಯೆ 924-966 ವರೆಗೆ)**

**(ತತ್ಪುರುಷ ಸಂಜ್ಞೆಯನ್ನು ವಿಧಿಸುವ ಅಧಿಕಾರ ಸೂತ್ರ)**

**ಸೂತ್ರ- 924- ತತ್ಪುರುಷಃ (2-1-22)**

ವೃತ್ತಿ:- ಅಧಿಕಾರೋಽಯಂ ಪ್ರಾಕ್ ಬಹುವ್ರೀಹೇಃ.

ಅರ್ಥ:- ಈ ಸೂತ್ರವು 'ಶೇಷೋ ಬಹುವ್ರೀಹಿಃ' ಎಂಬ ಸೂತ್ರದ ವರೆಗೆ, ತನ್ನ ಅಧಿಕಾರವನ್ನು ಚಲಾಯಿಸುತ್ತದೆ.

**(ತತ್ಪುರುಷ ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ-925 ದ್ವಿಗುಶ್ಚ (2-1-23)**

ವೃತ್ತಿ:- ದ್ವಿಗುರಪಿ ತತ್ಪುರುಷ-ಸಂಜ್ಞಕಃ ಸ್ಯಾತ್।

ಪ.ಚ್ಛೇ:- ದ್ವಿಗುಃ, ಚ ।

ಅ.ವೃ:- ತತ್ಪುರುಷ ಎಂಬುದು ಅಧಿಕಾರ ಸೂತ್ರವಾಗಿದೆ.

ಅರ್ಥ:- ದ್ವಿಗುವೂ ಸಹ ತತ್ಪುರುಷ ಸಂಜ್ಞೆಯನ್ನು ಹೊಂದಿದೆ. 'ಸಂಖ್ಯಾಪೂರ್ವೋ ದ್ವಿಗುಃ' ಎಂಬ ಸೂತ್ರದಿಂದ ಇದಕ್ಕೆ ದ್ವಿಗು ಸಮಾಸಕ್ಕೆ ದ್ವಿಗು ಸಂಜ್ಞೆಯು ಬಂದಿದೆ.

ಉದಾ:- ಪಂಚವಟೀ, ದ್ವ್ಯಂಗುಲಮ್ ಮೊದಲಾದ ದ್ವಿಗು ಸಮಾಸಗಳು ತತ್ಪುರುಷವೇ.

**(ದ್ವಿತೀಯಾ ತತ್ಪುರುಷ ಸಮಾಸವನ್ನು ವಿಧಿಸುವ ಸೂತ್ರ)**

**ಸೂತ್ರ-926. ದ್ವಿತೀಯಾ ಶ್ರಿತಾತೀತಪತಿತಗತಾತ್ಯಸ್ತಪ್ರಾಪ್ತಾನ್ನೈಃ (2-1-24)**

ವೃತ್ತಿ:- ದ್ವಿತೀಯಾಂತಂ ಶ್ರಿತಾದಿಪ್ರಕೃತಿಕೈಃ ಸುಬಂತೈ ಸಹ ವಾಸಮಸ್ಯತೇ । ಸ ಚ ತತ್ಪುರುಷಃ ।ಕೃಷ್ಣಂಶ್ರಿತಃ ಕೃಷ್ಣಶ್ರಿತಃ ಇತ್ಯಾದಿ.

ಪ.ಚ್ಛೇ:-ದ್ವಿತೀಯಾ, ಶ್ರಿತಾತೀತ-ಪತಿತ-ಗತ-ಅತ್ಯಸ್ತ-ಪ್ರಾಪ್ತಾನ್ನೈಃ।

ಅ.ವೃ:- **'ಸುಬಾಮಂತ್ರಿತೇ ಪರಾಂಗವತ್ ಸ್ವರೇ'** ಎಂಬ ಸೂತ್ರದಿಂದ ಸುಪ್ ಎಂಬ ಪದವು ಮತ್ತು ಸಹ ಸುಪಾ ಎಂಬ ಸೂತ್ರದಿಂದ ಸುಪಾ ಎಂಬ ಪದವು ಅನುವೃತ್ತವಾಗುತ್ತದೆ. ಸಮಾಸಃ ಮತ್ತು ತತ್ಪುರುಷಃ ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ:-ದ್ವಿತೀಯಾ ವಿಭಕ್ತಿಯಲ್ಲಿರುವ ಸಮರ್ಥವಾದ ಸುಬಂತ ಶಬ್ದಗಳು ಶ್ರಿತ, ಅತೀತ, ಪತಿತ, ಗತ, ಅತ್ಯಸ್ತ, ಪ್ರಾಪ್ತ, ಆಪನ್ನ ಇವುಗಳನ್ನು ಪ್ರಾತಿಪದಿಕಗಳಾಗಿಉಳ್ಳ ಸುಬಂತ ಶಬ್ದದ ಜೊತೆಗೆ ವೈಕಲ್ಪಿಕವಾಗಿ ಸಮಾಸ ಹೊಂದುತ್ತವೆ. ಇಂತಹ ಸಮಾಸವು ತತ್ಪುರುಷ ಸಂಜ್ಞೆಯನ್ನು ಹೊಂದುತ್ತವೆ.

ಉದಾ:- ಕೃಷ್ಣಶ್ರಿತ (ಕೃಷ್ಣನನ್ನು ಆಶ್ರಯಿಸಿದ ವ್ಯಕ್ತಿ): ಕೃಷ್ಣಂ ಶ್ರಿತಃ ಎಂಬುದು

ಲೌಕಿಕ ವಿಗ್ರಹವಾಕ್ಯ ಕೃಷ್ಣ+ಅಮ್+ಶ್ರಿತ+ಸು ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ಇದು ದ್ವಿತೀಯಾ ತತ್ಪುರುಷ ಸಮಾಸವಾಗಿದೆ. ದ್ವಿತೀಯಾಂತ ಪದವಾದ ಕೃಷ್ಣ+ಅಮ್ ಮತ್ತು ಶ್ರಿತ ಮೊದಲಾದ ಪದಗಳನ್ನು ಪ್ರಾತಿಪದಿಕವಾಗಿಉಳ್ಳ ಶಬ್ದವು ಸೇರಿ ಸಮರ್ಥ ಸುಬಂತವಾಗುತ್ತದೆ. (ಶ್ರಿತ+ಸು) ಸಮಾಸವಾಗುವಾಗ ಕೃಷ್ಣ+ಅವ್+ಶ್ರಿತ+ಸು ಎಂದಿದ್ದಾಗ ಇದು ಪ್ರಾತಿಪದಿಕವೆನಿಸಿಕೊಳ್ಳುತ್ತದೆ. ಸುಪೋಧಾತುಪ್ರಾತಿಪದಿಕಯೋಃ ಎಂಬ ಸೂತ್ರದಿಂದ ಸುಪ್‌ಗಳಿಗೆ ಲುಕ್ (ಲೋಪ) ಬಂದು ಕೃಷ್ಣ+ಶ್ರಿತ ಎಂದಿರುತ್ತದೆ. ಪ್ರಕೃತ ಸೂತ್ರದಲ್ಲಿ ದ್ವಿತೀಯಾ ಎಂಬ ಶಬ್ದವು ಪ್ರಥಮಾಂತ ಶಬ್ದವಾಗಿದೆ. ಅದರಿಂದ ನಿದಿಷ್ಟವಾದ ಶಬ್ದವು ಕೃಷ್ಣ ಎಂದಿದೆ ಪ್ರಥಮಾ ನಿರ್ದಿಷ್ಟಂ ಸಮಾಸ ಉಪಸರ್ಜನಮ್ ಎಂಬ ಸೂತ್ರದಿಂದ ಉಪಸರ್ಜನ ಸಂಜ್ಞೆಯನ್ನು ಹೊಂದುತ್ತದೆ. ಉಪಸರ್ಜನಂ ಪೂರ್ವಮ್ ಎಂಬ ಸೂತ್ರದಿಂದ ಕೃಷ್ಣ ಶಬ್ದಕ್ಕೆ ಪೂರ್ವನಿಪಾತವು ಬಂದು **ಕೃಷ್ಣಶ್ರಿತ** ಎಂದಿರುತ್ತದೆ. ಸುಬಂತವಾದ ಮೇಲೆ ರುತ್ವ ವಿಸರ್ಗಗಳಿಂದ ಕೃಷ್ಣಶ್ರಿತಃ ಎಂಬ ರೂಪವು ಸಿದ್ಧಿಸುತ್ತದೆ. ಇದೇ ರೀತಿಯಲ್ಲಿ ಉಳಿದ ಶಬ್ದಗಳ ಜೊತೆಗೆ ಸಮಾಸವಾಗುತ್ತದೆ.

ಉದಾ:- ಅತೀತ-ದುಃಖಾತೀತಃ ವಿಗ್ರಹ-ದುಃಖಂ ಅತೀತಃ ದುಃಖಾತೀತಃ

ಗ್ರಾಮಮ್ ಗತಃ ಗ್ರಾಮಗತಃ

ಅತ್ಯಸ್ತ :- ಗ್ರಾಮಂ ಅತ್ಯಸ್ತಃ ಗ್ರಾಮಾತ್ಯಸ್ತಃ

ಪ್ರಾಪ್ರ ಗ್ರಾಮಂ ಪ್ರಾಪ್ರಃ ಗ್ರಾಮಪ್ರಾಪ್ತಃ।

ಅಪನ್ನ-ಸಂಶಯಂ ಆಪನ್ನಃ ಸಂಶಯಾಪನ್ನಃ ಇವೇ ಮೊದಲಾದ ಉದಾಹರಣೆಗಳು.

**(ತೃತಿಯಾ ತತ್ಪುರುಷ ಸಮಾಸವನ್ನು ವಿಧಿಸುವ ಸೂತ್ರ)**

**ಸೂತ್ರ-927 ತೃತೀಯಾ ತತ್ಕೃತಾರ್ಥೇನ ಗುಣವಚನೇನ (2-1-30)**

ವೃತ್ತಿ:- ತೃತೀಯಾಂತಂ ತೃತೀಯಾಂತಾರ್ಥಕೃತಗುಣವಚನೇನ ಅರ್ಥೇನ ಚ ಸಹ ವಾ ಪ್ರಾಗ್ವತ್ । ಶಂಕುಲಯಾ ಖಂಡಃ-ಶಂಕುಲಾಖಂಡಃ । ಧಾನ್ಯೇನಾರ್ಥೋ ಧಾನ್ಯಾರ್ಥಃ । ತತ್ಕೃತೇತಿ ಕಿಮ್? ಅಕ್ಷ್ಣಾ ಕಾಣಃ ॥

ಅ.ವ್ಯ:- ಸಮಾಸಃ, ಸುಪ್, ಸಹ ಸುಪಾ, ವಿಭಾಷಾ ತತ್ಪುರುಷಃ ಎಂಬವು ಅಧಿಕಾರ ಸೂತ್ರಗಳು.

ಅರ್ಥ:- ತೃತೀಯಾಂತ ಶಬ್ದವು ತ್ರತೀಯಾಂತವಾದ ಪದದ ಅರ್ಥದಿಂದ ಮಾಡಲ್ಪಟ್ಟ ಗುಣವನ್ನು ಬೋಧಿಸುವ ಶಬ್ದದ ಜೊತೆಗೂ ಮತ್ತು ಅರ್ಥ ಶಬ್ದದ ಜೊತೆಗೂ ಸಮಾಸವಾಗುವುದು. ಅದನ್ನು ತೃತೀಯಾ ತತ್ಪುರುಷವೆನ್ನುತ್ತಾರೆ.

ಉದಾ:- ಶಂಕುಲಾಖಂಡಃ (ಕತ್ತರಿಯಿಂದ ಮಾಡಲ್ಪಟ್ಟ ತುಂಡು): ಶಂಕುಲಯಾ ಖಂಡಃ ಎಂಬುದು ಲೌಕಿಕ ವಿಗ್ರಹ ವಾಕ್ಯ. ಶಂಕುಲಯಾ ಎಂಬ ತೃತೀಯಾಂಕ

ಪದದಲ್ಲಿ ಅರ್ಥವಾಗುವ ಶಂಕುಲೆಯಿಂದ ಮಾಡಲ್ಪಟ್ಟ ಎಂಬ ಅರ್ಥದಲ್ಲಿ ಇಲ್ಲಿ ಸಮಾಸವಾಗಿದೆ. ಸಮಾಸವಿಧಾಯಕವಾದ ಈ ಸೂತ್ರದಲ್ಲಿ ತೃತೀಯಾ ಎಂಬುದು ಪ್ರಥಮಾವಿಭಕ್ತಿಯಲ್ಲಿ ಹೇಳಲ್ಪಟ್ಟಿರುವುದರಿಂದ ಪ್ರಥಮಾ ನಿರ್ದಿಷ್ಟವಾದ ಶಂಕುಲಾ+ಟಾಪ್ ಎಂಬುದಕ್ಕೆ ಉಪಸರ್ಜನ ಸಂಜ್ಞೆಯು ಬಂದು ಪೂರ್ವ ನಿಪಾತವಾದ ಮೇಲೆ ಪ್ರಾತಿಪದಿಕ ಸಂಜ್ಞೆಯು ಬಂದು ಸುಪೋಧಾತುಪ್ರಾತಿಪದಿಕಯೋಃ ಎಂಬ ಸೂತ್ರದಿಂದ ಸುಪ್ ಲೋಪವಾಗಿ ಮತ್ತೆ ಸುಬಂತ ಮಾಡಿದಾಗ ಶಂಕಲಾಖಂಡ ಎಂದಾಗುತ್ತದೆ.

ಉದಾ:– ಧಾನ್ಯೇನಾರ್ಥೋ ಧಾನ್ಯಾರ್ಥ (ಧಾನ್ಯದಿಂದ ಪ್ರಯೋಜನ):– ಧಾನ್ಯೇನ ಅರ್ಥಃ ಎಂಬುದು ಲೌಕಿಕ ವಿಗ್ರಹ ವಾಕ್ಯ. ಧಾನ್ಯ+ಟಾ+ಅರ್ಥ+ಸು ಎಂಬುದು ಅಲೌಕಿಕ ವಿಗ್ರಹವಾಕ್ಯ. ಪ್ರಕೃತ ಸೂತ್ರದಿಂದ ಸಮಾಸವಾಗಿದೆ. ಇಲ್ಲಿ ತೃತೀಯಾಂತವಾದ ಧಾನ್ಯೇನ (ಧಾನ್ಯ+ಟಾ) ಎಂಬ ಪದವು ಸುಬಂತವಾದ ಅರ್ಥ ಶಬ್ದದ ಜೊತೆಗೆ ಸಮಾಸವಾದ ಮೇಲೆ ಧಾನ್ಯ+ಟಾ+ಅರ್ಥ+ಸು ಎಂಬುದು ಪ್ರಾತಿಪದಿಕವಾದ ಮೇಲೆ ಸುಪೋಧಾತುಪ್ರಾತಿಪದಿಕಯೋಃ ಎಂಬ ಸೂತ್ರದಿಂದ 'ಸುಪ್'ಗೆ ಲುಕ್ ಧಾನ್ಯ+ಅರ್ಥ ಎಂದು ಉಳಿಯುತ್ತದೆ.

ಪ್ರಥಮಾ ನಿರ್ದಿಷ್ಟವಾದ ಧಾನ್ಯ ಶಬ್ದಕ್ಕೆ ಉಪಸರ್ಜನ ಸಂಜ್ಞೆ ಮತ್ತು ಪೂರ್ವನಿಪಾತವಾದ ಮೇಲೆ ಧಾನ್ಯಾರ್ಥ ಎಂದಿರುತ್ತದೆ. ಇದನ್ನು ಸುಬಂತ ಮಾಡಿದಾಗ ಧಾನ್ಯಾರ್ಥಃ ಎಂದು ರೂಪವು ಸಿದ್ಧವಾಗುತ್ತದೆ.

ತತ್ಕೃತೇನ ಕಿಮ್? ಅಕ್ಷ್ಣಾಕಾಣಃ :– ತತ್ಕೃತ ಎಂದು ಏಕೆ ಹೇಳಲಾಗಿದೆ ಎಂದರೆ ಅಕ್ಷ್ಣಾಕಾಣಃ ಎಂಬುದು ಉತ್ತರ ಇಲ್ಲಿ ತತ್ಕೃತಾರ್ಥ (ಅದರಿಂದ ಮಾಡಲ್ಪಟ್ಟಿದ್ದು) ಎಂಬ ಅರ್ಥವಿಲ್ಲದ ಕಾರಣ ಅಕ್ಷ್ಣಾಕಾಣಃ ಎಂದೇ ಉಳಿದಿದೆ. ಸಮಾಸವಾಗಲಿಲ್ಲ (ಅಕ್ಷ್ಣಾಕಾಣಃ ಎಂದಾಗಿಲ್ಲ) (ಕುರುಡನಕ್ಕೆ ರೋಗಗಳು ಕಾರಣ; ಕಣ್ಣು ಕಾರಣವಲ್ಲ).

**(ತೃತೀಯಾ ತತ್ಪುರುಷ ಸಮಾಸವನ್ನು ವಿಧಿಸುವ ಸೂತ್ರ.)**

**ಸೂತ್ರ– 928 ಕರ್ತೃ ಕರಣೇ ಕೃತಾ ಬಹುಲಮ್ (2–1–32)**

ವೃತ್ತಿ:– ಕರ್ತರಿ ಕರಣೇ ಚ ತೃತೀಯಾ ಕೃದನ್ತೇನ ಬಹುಳಮ್ ಪ್ರಾಗ್ವತ್ ।ಹರಿಣಾ ತ್ರಾತಃ ಹರಿತ್ರಾತಃ । ನಖೈಃ ಭಿನ್ನಃ ನಖಭಿನ್ನಃ।

ಪರಿಭಾಷಾ:– **ಕೃದ್ ಗ್ರಹಣೇ ಗತಿ–ಕಾರಕ ಪೂರ್ವಸ್ಯಾಪಿ ಗ್ರಹಣಂ।** ನಖೈರ್ಭಿನ್ನಃ।

ಅ.ವೃ:– ತೃತೀಯಾ ತತ್ಕೃತಾರ್ಥೇನ ಗುಣವಚನೇನ ಎಂಬ ಸೂತ್ರದಿಂದ ತೃತೀಯಾ ಎಂಬ ಪದವು ಅನುವೃತ್ತವಾಗುತ್ತದೆ. ಸಮಾಸಃ ಸುಪ್ ಸಹ ಸುಪಾ ವಿಭಾಷಾ ಮತ್ತು ತತ್ಪುರುಷಃ ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ:– ಕರ್ತೃ ಮತ್ತು ಕರಣಾರ್ಥಗಳಲ್ಲಿ ಆಗುವ ತೃತೀಯಾಂತ ಸಮರ್ಥ ಶಬ್ದವು ಕೃದಂತ ಪ್ರಕೃತಿಕ ಸುಬಂತ ಶಬ್ದದ ಜೊತೆಗೆ ಬಹುಲಭಾವದಿಂದ ಸಮಾಸವಾಗುತ್ತದೆ. ಆ ಸಮಾಸವು ತತ್ತಪುರುಷವಾಗಿರುತ್ತದೆ.

ಉದಾ:– ಹರಿಣಾ ತ್ರಾತಃ ಹರಿತ್ರಾತಃ(ಹರಿಯಿಂದ ರಕ್ಷಿತನಾದವನು) ಹರಿಣಾ ತಾತಃ ಎಂಬುದು ಲೌಕಿಕ ವಿಗ್ರಹ ವಾಕ್ಯ. ಹರಿ+ಟಾ+ತ್ರಾತ+ಸು ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಅಲೌಕಿಕ ವಿಗ್ರಹ ವಾಕ್ಯದಲ್ಲಿ ಪ್ರಕೃತ ಸೂತ್ರದಿಂದ ಸಮಾಸವಾಗಿದೆ. ಇಲ್ಲಿ ಕರ್ತ್ರರ್ಥದಲ್ಲಿ ತೃತೀಯಾ ವಿಭಕ್ತಿಯಲ್ಲಿರುವ ಹರಿ+ಟಾ ಎಂಬ ಪದವು ತ್ರಾತ+ಸು ಎಂಬ ಸಮರ್ಥ ಪದದ ಜೊತೆಗೆ ಸಮಾಸವಾಗಿದೆ. ಈಗ ಹರಿ+ಟಾ+ತ್ರಾತ+ಸು ಎಂಬುದು ಪ್ರಾತಿಪದಿಕವಾಗಿದೆ. ಸುಪೋಧಾತುಪ್ರಾತಿಪದಿಕಯೋಃ ಎಂಬ ಸೂತ್ರದಿಂದ ಎರಡು ಸುಪ್ ಪ್ರತ್ಯಯಗಳಿಗೂ ಲುಕ್ ಬಂದು ಹರಿ+ತ್ರಾತ ಎಂದಿರುತ್ತದೆ. ಸೂತ್ರಾರ್ಥ ಮಾಡುವ ಸಂದರ್ಭದಲ್ಲಿ ವೃತ್ತಿಯಲ್ಲಿ ಪ್ರಥಮಾಂತದಲ್ಲಿ ತೃತೀಯ ಶಬ್ದವಿದೆ (ತೃತೀಯಾ ಎಂಬ ಶಬ್ದವು ಪ್ರಥಮಾವಿಭಕ್ತ್ಯಂತವಾಗಿದೆ) ಅದರಿಂದ ಸೂಚಿತವಾದ ಹರಿ ಶಬ್ದವು ಉಪಸರ್ಜನವಾಗಿದೆ. ಇದು ಪೂರ್ವನಿಪಾತದಲ್ಲಿದ್ದು ಹರಿತ್ರಾತ ಎಂದಿರುತ್ತದೆ. ಇದು ಸುಬಂತವಾದಾಗ ಹರಿತ್ರಾತಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ:– ನಖೈಃಭಿನ್ನಃ ನಖಭಿನ್ನಃ (ಉಗುರುಗಳಿಂದ ಭೇದಿಸಲ್ಪಟ್ಟ) : ನಖೈಃ ಭಿನ್ನಃ ಎಂಬುದು ಲೌಕಿಕ ವಿಗ್ರಹವಾಕ್ಯ. ನಖ+ಭಿಸ್+ಭಿನ್ನ+ಸು ಎಂಬುದು ಅಲೌಕಿಕ ವಿಗ್ರಹವಾಕ್ಯ. ಇದು ಪ್ರಕೃತ ಸೂತ್ರದಿಂದ ಸಮಾಸವಾಗಿದೆ. ಈ ಸಮರ್ಥ ಪದವು ಭಿನ್ನ+ಸು ಜೊತೆಗೆ ಸಮಾಸವಾದ ಮೇಲೆ ನಖ+ಭಿಸ್+ಭಿನ್ನ+ಸು ಎಂದಿದ್ದಾಗ ಸುಪೋಧಾತುಪ್ರಾತಿಪದಿಕಯೋಃ ಎಂಬ ಸೂತ್ರದಿಂದ ಸುಪ್ ಪ್ರತ್ಯಯಗಳಿಗೂ ಲುಕ್ ಬಂದು ನಖ+ಭಿನ್ನ ಎಂದಿರುತ್ತದೆ. ಪ್ರಥಮಾ ನಿದಿಷ್ಟವಾದ ತೃತೀಯಾ ಶಬ್ದದಿಂದ

ನಿರ್ದಿಷ್ಟವಾದ ನಖ+ಭಿಸ್ ಎಂಬುದು ಸಮರ್ಥ ಶಬ್ದವಾಗಿದೆ. ಸಮಾಸ ಮಾಡಿದ ಮೇಲೆ ನಖ+ಭಿಸ್+ಭಿನ್ನ ಎಂದಾದ ಮೇಲೆ ಪ್ರಾತಿಪದಿಕವಾಗುತ್ತದೆ. ಆಗ ಸುಪೋಧಾತುಪ್ರಾತಿಪದಿಕಯೋಃ ಎಂಬ ಸೂತ್ರದಿಂದ ಎರಡು ಸುಪ್ ಪ್ರತ್ಯಯಗಳಿಗೆ ಲುಕ್ ಬಂದು ನಖ+ಭಿನ್ನ ಎಂದಿರುತ್ತದೆ. ತೃತೀಯಾ ಎಂಬ ಪ್ರಥಮಾ ನಿದಿಷ್ಟವಾದ ನಖಭಿನ್ನ ಶಬ್ದಕ್ಕೆ ಉಪಸರ್ಜನವಾಗಿ ಪೂರ್ವನಿಪಾತವನ್ನು ಹೊಂದುತ್ತದೆ ಮತ್ತು ನಖಭಿನ್ನ ಎಂದು ರೂಪವಾಗಿದೆ. ಇದನ್ನು ಸುಬಂತ ಮಾಡಿದಾಗ ನಖಭಿನ್ನ ಎಂದು ರೂಪವು ಸಿದ್ಧವಾಗುತ್ತದೆ.

ಪರಿಭಾಷಾ: ಕೃದ್ ಗ್ರಹಣೇ ಗತಿಕಾರಕ ಪೂರ್ವಸ್ಯಾಪಿ ಗ್ರಹಣಮ್ । ನಖನಿರ್ಭಿನ್ನಃ

ಅರ್ಥ:– ಕೃದಂತ ಪ್ರಯೋಗವಿದ್ದಾಗ ಗತಿ ಮತ್ತು ಕಾರಕಗಳನ್ನು ಪೂರ್ವದಲ್ಲಿರುವ ಕೃದಂತವನ್ನು ಇಲ್ಲಿ ಗ್ರಹಿಸಬೇಕು. ಈ ಪರಿಭಾಷೆಯಿಂದ ಗತಿ ಮತ್ತು ಕಾರಕ ಪದಗಳ ಜೊತೆಗೂ ಸಮಾಸ ಮಾಡಬಹುದು ಎಂದು ಗೊತ್ತಾಗುತ್ತದೆ.

ಉದಾ:– ನಖೈಃ ನಿರ್ಭಿನ್ನಃ ನಖನಿರ್ಭಿನ್ನಃ ಇಲ್ಲಿಯೂ ಪ್ರಕೃತ ಸೂತ್ರದಿಂದ (ಕರ್ತೃ ಕರಣೇ ಕೃತಾ ಬಹುಲಮ್) ಸಮಾಸವಾಗುತ್ತದೆ. ಇಲ್ಲಿ ಭಿನ್ನ ಎಂಬುದು ಕೃದಂತವಾಗಿದೆ. ಈ ಶಬ್ದದ ಪೂರ್ವದಲ್ಲಿ ನಿರ್ ಎಂಬ ಗತಿ ಸಂಜ್ಞೆಯುಳ್ಳ ಶಬ್ದವನ್ನು ಸೇರಿಸಿದಾಗ ಸಮಾಸವಾಗುತ್ತದೆ. ಆದ್ದರಿಂದಲೇ ನಖೈಃ ನಿರ್ಭಿನ್ನಃ ಎಂಬ ಲೌಕಿಕ ವಿಗ್ರಹವಾಕ್ಯವು ನಖ+ಭಿಸ್+ನಿರ್ಭಿನ್ನ+ಸು ಎಂಬ ಅಲೌಕಿಕ ವಿಗ್ರಹವಾಕ್ಯದಲ್ಲಿ ಪ್ರಕೃತ

ಪರಿಭಾಷೆಯಿಂದ ಸುಬಂತವಾದ ಮೇಲೆ ನಖನಿರ್ಭಿನ್ನಃ ಎಂಬ ರೂಪವು ಸಿದ್ಧವಾಗುತ್ತದೆ. (ಕಾರಕಕ್ಕೆ ಉದಾಹರಣೆಯನ್ನು ಕೊಡಬೇಕಾಗಿತ್ತು ಲ. ಕೌಮುದಿಯಲ್ಲಿ ಕೊಟ್ಟಿಲ್ಲ)

**(ಚತುರ್ಥೀ ತತ್ಪರುಷ ಸಮಾಸವನ್ನು ವಿಧಿಸುವ ಸೂತ್ರ)**

**ಸೂತ್ರ–929 ಚತುರ್ಥೀ ತದರ್ಥಾರ್ಥ ಬಲಿಹಿತ ಸುಖರಕ್ಷಿತೈಃ (2-1-36)**

ವೃತ್ತಿ: ಚತುರ್ಥ್ಯಂತಾರ್ಥಾಯ ಯತ್ ತದ್ವಾಚಿನಾ ಅರ್ಥಾದಿಭಿಶ್ಚ ಚತುರ್ಥ್ಯಂತಂ ವಾ ಪ್ರಾಗ್ವತ್ । ಯೂಪಾಯ ದಾರು ಯೂಪದಾರು। (ತದರ್ಥೇನ ಪ್ರಕೃತಿ ವಿಕೃತಿಭಾವ ಏವೇಷ್ಟಃ)।ತೇನೇಹ ನ–ರಂಧನಾಯ ಸ್ಥಾಲೀ ।

ವಾರ್ತಿಕ: (ಅರ್ಥೇನ ನಿತ್ಯಸಮಾಸೋ ವಿಶೇಷ್ಯಲಿಂಗತಾ ಚೇತಿ ವಕ್ತವ್ಯಮ್) ದ್ವಿಜಾರ್ಥಃ ಸೂಪಃ । ದ್ವಿಜಾರ್ಥಾ ಯವಾಗೂಃ । ದ್ವಿಜಾರ್ಥಂ ಪಯಃ।ಭೂತ–ಬಲಿಃ। ಗೋಹಿತಮ್।ಗೋಸುಖಮ್। ಗೋರಕ್ಷಿತಮ್॥

ಪ.ಚ್ಛೇ:– ಚತುರ್ಥೀ, ತರ್ಥಾರ್ಥ ಬಲಿ–ಹಿತ–ಸುಖ–ರಕ್ಷಿತೈಃ।

ಅ.ವೃ:– ಸಮಾಸಃ, ತತ್ಪುರುಷಃ, ಸುಪ್, ಸಹ, ಸುಪಾ, ವಿಭಾಷಾ ಇವುಗಳು ಅನುವೃತ್ತವಾಗಿವೆ ಮತ್ತು ಅಧಿಕಾರ ಸೂತ್ರಗಳೂ ಆಗಿವೆ.

ಅರ್ಥ:– ಪ್ರತ್ಯಯ ಗ್ರಹಣೇ ತದಂತಾಃ ಗ್ರಾಹ್ಯಾಃ ಎಂಬ ಪರಿಭಾಷೆಯಿಂದ ಚತುರ್ಥೀ ಎಂಬುದಕ್ಕೆ ಚತುರ್ಥ್ಯಂತವೆಂದು ಅರ್ಥಮಾಡಬೇಕು. ತದರ್ಥ ಎಂಬ ಪದದಲ್ಲಿ ತಚ್ಛಬ್ದದಿಂದ ಚತುರ್ಥ್ಯಂತ ಪದವು ಸ್ವೀಕರಿಸಲ್ಪಟ್ಟಿವೆ. ಚತುರ್ಥ್ಯಂತ ಪದದಿಂದ ಹೇಳಲ್ಪಡುವುದು ಪ್ರಯೋಜನವಾಗಿ ನಿಮಿತ್ತವಾಗಿಯೂ ಇರುವುದನ್ನು ಬೋಧಿಸುವ ಪದವೆಂದು ಅರ್ಥವು ಬರುತ್ತದೆ. ಚತುರ್ಥ್ಯಂತವು ಮತ್ತು ಚತುರ್ಥ್ಯಂತಾರ್ಥದ (ಚತುರ್ಥೀ ವಿಭಕ್ತಿಯನ್ನು ಕೊನೆಯಲ್ಲಿ ಉಳ್ಳ ಪದದ) ಜೊತೆಗೂ ಅರ್ಥ ಬಲಿ–ಹಿತ–ಸುಖ–ರಕ್ಷಿತ ಎಂಬ ಶಬ್ದಗಳ ಜೊತೆಗೂ ಸಮಾಸವಾಗುದು. ಇಂತಹ ಸಮಾಸಕ್ಕೆ ತತ್ಪುರುಷ ಸಮಾಸವೆಂದು ಕರೆಯಲಾಗುತ್ತದೆ.

ಉದಾ: ಯೂಪದಾರು (ಯೂಪಸ್ತಂಭಕ್ಕಾಗಿರುವ ಕಟ್ಟಿಗೆ): ಯೂಪಾಯ ದಾರು ಎಂಬುದು ಲೌಕಿಕ ವಿಗ್ರಹ ವಾಕ್ಯ. ಯುಪ+ಜೇ+ದಾರು+ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ಸಮಾಸವಾಗಿದೆ. ಯುಪ+ಜೇ ಇದು ಚತುರ್ಥ್ಯಂತ ಪದವಾಗಿದೆ. ದಾರು+ಸು ಎಂಬುದು ಸಮರ್ಥವಾಗಿದೆ. ಸುಪೋಧಾತುಪ್ರಾತಿಪದಿಕಯೋಃ ಎಂಬುದರಿಂದ ಪ್ರಾತಿಪದಿಕ ಸಂಜ್ಞೆಬಂದ ಮೇಲೆ ಸುಪ್ ಪ್ರತ್ಯಯಗಳು ಲೋಪವಾಗಿ ಯುಪ+ದಾರು ಎಂದಿರುತ್ತದೆ. ಯೂಪ ಶಬ್ದಕ್ಕೆ ಉಪಸರ್ಜನ ಸಂಜ್ಞೆಯು ಬಂದು ಪೂರ್ವನಿಪಾತವಾದ ಮೇಲೆ ಯೂಪದಾರು ಎಂದಾಗುತ್ತದೆ. ಇದನ್ನು ಸುಬಂತ ಮಾಡಿದಾಗ ಸ್ವಮೋರ್ನಪುಂಸಕಾತ್ ಎಂಬ ಸೂತ್ರದಿಂದ ಲುಕ್ ಬಂದು ಯೂಪದಾರು ಎಂದು ರೂಪವು ಸಿದ್ಧವಾಗುತ್ತದೆ.

ತದರ್ಥೇನ ಪ್ರಕೃತಿ ವಿಕೃತಿಭಾವ ಏವೇಷ್ಟಃ, ತೇನೇಹ ನ–ರಂಧನಾಯ ಸ್ಥಾಲೀ:–

ಇಲ್ಲಿ ದಾರು ಎಂಬುದು ಪ್ರಕೃತಿ, ಯೂಪ ಎಂಬುದು ವಿಕೃತಿ (ಕಾರ್ಯ) ಆದುದರಿಂದ ಇಲ್ಲಿ ಸಮಾಸವಾಗಿದೆ. ರಂಧನಾಯ ಸ್ಥಾಲೀ ಎಂಬಲ್ಲಿ ಅಡುಗೆಗಾಗಿ ಪಾತ್ರೆ ಇಲ್ಲಿ ಪ್ರಕೃತಿ ವಿಕೃತಿ ಭಾವಗಳು ಇಲ್ಲ ಆದುದರಿಂದ ಇಲ್ಲಿ ಸಮಾಸವಾಗುವುದಿಲ್ಲ.

ಅರ್ಥೇನ ನಿತ್ಯಸಮಾಸೋ ವಿಶೇಷ್ಯ ಲಿಂಗತಾ ಚೇತಿ ವಕ್ತವ್ಯಮ್:- ಅರ್ಥ ಶಬ್ದದ ಜೊತೆಗೆ ನಿತ್ಯ ಸಮಾಸವಾಗುತ್ತದೆ. ಮತ್ತು ವಿಶೇಷಕ್ಕೆ ಅನುಗುಣವಾಗಿ ಲಿಂಗವು ಪರಿವರ್ತನೆಯಾಗುತ್ತದೆ.

ಉದಾ:- ದ್ವಿಜಾರ್ಥಃ ಸೂಪಃ (ಬ್ರಾಹ್ಮಣರಿಗಾಗಿ ಸೊಪ್ಪಿನ ಪಲ್ಲೆ) ಪ್ರಕೃತ ಸೂತ್ರದಿಂದ ಇಲ್ಲಿ ಸಮಾಸವಾಗಿದೆ. ಆದರೆ ಇಲ್ಲಿ ವಿಕಲ್ಪವಾಗಿ ಸಮಾಸವಾಗುತ್ತದೆ.

ಆದುದರಿಂದ ನಿತ್ಯ ಸಮಾಸವೇ ಆಗಬೇಕೆಂಬ ಕಾರಣದಿಂದ ಈ ವಾರ್ತಿಕವು ಹೊರಟಿದೆ. ಪರವತ್‌ಲಿಂಗಮ್ ದ್ವಂದ ತತ್ಪುರುಷಯೋ ಎಂಬ ಸೂತ್ರದಿಂದ ಪರದಲ್ಲಿರುವ ಶಬ್ದದ ಲಿಂಗವೇ ತತ್ಪುರುಷ ಸಮಾಸದ ನಂತರ ಇರುತ್ತದೆ. ಆದರೆ ಇಲ್ಲಿ ಆ ನಿಯಮವು ಅರ್ಥ ಶಬ್ದದ ಜೊತೆಗೆ ಸಮಾಸವಾಗುವಾವುದಿಲ್ಲ.ಆದರೆ ವಿಶೇಷ್ಯದ ಲಿಂಗದಂತೆ ಲಿಂಗವು ಬರುತ್ತದೆ. ದ್ವಿಜಾಯ ಅಯಮ್ ಎಂಬುದು ಲೌಕಿಕ ವಿಗ್ರಹ ವಾಕ್ಯ. ದ್ವಿಜ+ಜೇ+ಅರ್ಥ+ಸು ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ಮತ್ತು ವಾರ್ತಿಕದಿಂದ ನಿತ್ಯ ಸಮಾಸವಾಗಿ ವಿಶೇಷದ ಲಿಂಗವೇ ಹೊಂದುತ್ತದೆ. ಪ್ರಾತಿಪದಿಕ ಸಂಜ್ಞೆ ಬಂದ ಮೇಲೆ ಸುಪ್ ಲೋಪವಾಗಿ ದ್ವಿಜ+ಅರ್ಥ ಎಂದಿರುತ್ತದೆ. ಚುತುರ್ಥೀ ಎಂಬ ಪ್ರಥಮಾ ನಿರ್ದಿಷ್ಟವಾದ ದ್ವಿಜ ಶಬ್ದಕ್ಕೆ ಉಪಸರ್ಜನ ಸಂಜ್ಞೆಯು ಬಂದು ಪೂರ್ವ ನಿಪಾತವಾದ ಮೇಲೆ ಸವರ್ಣದೀರ್ಘದಿಂದ ದ್ವಿಜಾರ್ಥ ಎಂದಾಗುತ್ತದೆ. ಸೂಪಃ ಎಂಬುದು ಪುಲ್ಲಿಂಗವಾಗಿರುವುದರಿಂದ ವಿಶೇಷ್ಯಕ್ಕೆ ಅನುಗುಣವಾಗಿ ದ್ವಿಜಾರ್ಥಃ ಸೂಪಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ:- ದ್ವಿಜಾರ್ಥಾ ಯವಾಗೂಃ ದ್ವಿಜಾರ್ಥಂ ಪಯಃ:- (ಬ್ರಾಹ್ಮಣರಿಗಾಗಿ ಗಂಜಿ, ಬ್ರಾಹ್ಮಣರಿಗಾಗಿ ಹಾಲು):- ಇಲ್ಲಿ ವಿಶೇಷ್ಯವಾಚಕವಾದ ಯವಾಗೂಃ ಶಬ್ದವು ಸ್ತ್ರೀಲಿಂಗದಲ್ಲಿ ಇರುವುದರಿಂದ ಅರ್ಥ ಶಬ್ದದ ಜೊತೆಗೆ ಸಮಾಸಹೊಂದಿರುವ ದ್ವಿಜಾರ್ಥ ಶಬ್ದವು ದ್ವಿಜಾರ್ಥಾ ಎಂದು ಸ್ತ್ರೀಲಿಂಗದಲ್ಲಿ ಪ್ರಯೋಗಿಸಲಾಗಿದೆ. ಪ್ರಕ್ರಿಯೆಯು ಹಿಂದಿನಂತೆ ನಡೆದಿದೆ. ದ್ವಿಜಾರ್ಥಂ ಪಯಃ ಎಂಬುದು ಇದೇ ರೀತಿಯಲ್ಲಿ ಸಿದ್ಧವಾಗಿದೆ.

ಉದಾ:- ಭೂತಬಲಿಃ (ಪ್ರಾಣಿಗಳಿಗಾಗಿ ಆಹಾರ) ಭೂತೇಭ್ಯಃ ಬಲಿಃ ಎಂಬುದು ಲೌಕಿಕವಿಗ್ರಹವಾಕ್ಯ. ಭೂತ ಭ್ಯ+ಬಲಿ+ಸು ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ಸಮಾಸವಾಗಿದೆ. ಚತುರ್ಥ್ಯಂತವಾದ ಭೂತೇಭ್ಯಃ ಎಂಬುದು ಸಮರ್ಥ ಶಬ್ದವಾದ ಬಲಿ+ಸು ಎಂಬುದರದ ಜೊತೆಗೆ ಸಮಾಸವಾದ ಮೇಲೆ ಪ್ರಾತಿಪದಿಕ ಸಂಜ್ಞೆಯು ಬಂದು ಸುಪ್ ಪ್ರತ್ಯಯಗಳ ಲೋಪವಾದ ಮೇಲೆ ಭೂತ+ಬಲಿ ಎಂದಿರುತ್ತದೆ. (ಚತುರ್ಥಿ) ಪ್ರಥಮಾ ನಿದಿಷ್ಟವಾದ ಭೂತ ಶಬ್ದಕ್ಕೆ ಉಪಸರ್ಜನ ಸಂಜ್ಞೆಯು ಬಂದು ಪೂರ್ವನಿಪಾತವಾದ ಮೇಲೆ ಭೂತಬಲಿ ಎಂದಿರುತ್ತದೆ. ಇದನ್ನು ಸುಬಂತ ಮಾಡಿದಾಗ ಭೂತಬಲಿಃ ಎಂದು ರೂಪವು ಸಿದ್ಧವಾಗುತ್ತದೆ. ಇದೇ ರೀತಿಯಲ್ಲಿ

**ಗೋಹಿತಮ್‌। ಗೋಸುಖಮ್‌। ಗೋರಕ್ಷಿತಮ್** ಎಂದು ರೂಪಗಳು ಸಿದ್ಧವಾಗುತ್ತವೆ.

**(ಪಂಚಮೀ ತತ್ಪುರುಷ ಸಮಾಸವನ್ನು ವಿಧಿಸುವ ಸೂತ್ರ)**

**ಸೂತ್ರ–930 ಪಞ್ಚಮೀ ಭಯೇನ (2–2–37)**

ವೃತ್ತಿ:–ಚೋರಾದ್ ಭಯಂ ಚೋರಭಯಮ್ ।

ಅ.ವೃ:– ಸಮಾಸಃ, ತತ್ಪುರುಷಃ, ಸುಪ್, ಸಹಸುಪಾ, ವಿಭಾಷಾ ಇವುಗಳು ಅನುವೃತ್ತವಾಗಿವೆ ಮತ್ತು ಅಧಿಕಾರ ಸೂತ್ರಗಳೂ ಆಗಿವೆ.

ಅರ್ಥ:– ಪಂಚಮ್ಯಂತ ಶಬ್ದವು ಸಮರ್ಥವಾದ ಸುಬಂತದ ಭಯವಾಚಕ ಶಬ್ದದ ಜೊತೆಗೆ ವಿಕಲ್ಪದಿಂದ ಸಮಾಸವಾಗುತ್ತದೆ. ಇಲ್ಲಿ ಪಂಚಮೀ ಶಬ್ದವು ಪ್ರಥಮಾಂತವಾಗಿದೆ. ಇದರಿಂದ ನಿರ್ದಿಷ್ಟವಾದ (ಪಂಚಮೀ ವಿಭಕ್ತಿಯಿಂದ ನಿರ್ದಿಷ್ಟವಾದ) ಶಬ್ದವು ಉಪಸರ್ಜನ ಸಂಜ್ಞೆಯನ್ನು ಹೊಂದುತ್ತದೆ.

ಉದಾ:– ಚೋರಭಯಮ್(ಕಳ್ಳನಿಂದ ಅಂಜಿಕೆ):– ಚೋರಾತ್ ಭಯಮ್ ಎಂಬುದು ಲೌಕಿಕ ವಿಗ್ರಹ ವಾಕ್ಯ. ಚೋರ ಙಸಿ+ಭಯ+ಸು ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ಸಮಾಸವಾಗಿದೆ. ಚೋರ+ಙಸಿ ಎಂಬುದು ಪಂಞ್ಚಮ್ಯಂತ ಶಬ್ದವಾಗಿದೆ. ಇದು ಸಮರ್ಥವಾದ ಭಯವಾಚಕ ಶಬ್ದದ ಜೊತೆಗೆ ಸಮಾಸವಾಗಿ ಸುಪ್ ಲೋಪವಾದ ಮೇಲೆ **ಚೋರಭಯ** ಎಂದಿದ್ದಾಗ ಅದನ್ನು ಸುಬಂತ ಮಾಡಿದಾಗ ನಪುಂಸಕ ಲಿಂಗದಲ್ಲಿ 'ಸು'ಗೆ ಅಮ್ ಆದೇಶ ಬಂದು ಪೂರ್ವರೂಪವಾದ ಮೇಲೆ ಚೋರಭಯಮ್ ಎಂಬ ರೂಪವು ಸಿದ್ಧವಾಗಿದೆ.

ವಿಶೇಷ:– ಪ್ರಕೃತ ಸೂತ್ರವನ್ನು ಪಂತಜಲಿ ಋಷಿಗಳು ಯೋಗ ವಿಭಾಗ ಮಾಡಿ ಪಞ್ಚಮ್ಯಂತ ಶಬ್ದವು ಯಾವ ಸುಬಂತದ ಜೊತೆಗೂ ಸಮಾಸವಾಗಬಹುದು ಎಂದು ಹೇಳಿರುವುದರಿಂದ ವ್ಯಾಘ್ರಾತ್ ಭೀತಿಃ ವ್ಯಾಘ್ರ ಭೀತಿಃ ಮೊದಲಾದ ಸಮಾಸವಾಗಲು ಅವಕಾಶವಾಗಿದೆ.

**(ಪಂಚಮೀ ತತ್ಪುರುಷ ಸಮಾಸವನ್ನು ವಿಧಿಸುವ ಸೂತ್ರ)**

**ಸೂತ್ರ–931 ಸ್ತೋಕಾಂತಿಕ ದೂರಾರ್ಥ ಕೃಚ್ಛ್ರಾಣಿ ಕ್ತೇನ (2–1–39)**

ಅ.ವೃ:– ಪಞ್ಚಮೀ ಭಯೇನ ಎಂಬ ಸೂತ್ರದಿಂದ ಪಞ್ಚಮೀ ಎಂಬ ಪದವು ಅನುವೃತ್ತವಾಗುತ್ತದೆ. ಸಮಾಸಃ ತತ್ಪುರುಷಃ ಸುಪ್ ಸಹ ಸುಪಾ ವಿಭಾಷಾ ಇವು ಅಧಿಕಾರಸೂತ್ರಗಳಾಗಿವೆ.

ಅರ್ಥ:– ಸ್ತೋಕಾರ್ಥಕ (ಅಲ್ಪಾರ್ಥಕ) ಸಮೀಪಾರ್ಥಕ (ಅಂತಿಕಾರ್ಥಕ), ದೂರಾರ್ಥಕ (ದೂರ) ಮತ್ತು ಕೃಚ್ಛ್ರ ಶಬ್ದಗಳು ಪಞ್ಚಮೀ ವಿಭಕ್ತ್ಯಂತವಾದಾಗ ಅವುಗಳಿಗೆ ಕ್ತ–ಪ್ರತ್ಯಯಾಂತ ಶಬ್ದಗಳ ಜೊತೆಗೆ ವಿಕಲ್ಪದಿಂದ ಸಮಾಸವಾಗುತ್ತದೆ. ಅದು ತತ್ಪುರುಷ ಸಮಾಸ.

**(ಪಞ್ಚಮ್ಯಂತ ಶಬ್ದಕ್ಕೆ ಅಲುಕ್‌ನ್ನು ವಿಧಿಸುವ ಸೂತ್ರ:**
**ಪ್ರತ್ಯಯಕ್ಕೆ ಲೋಪವನ್ನು ನಿಷೇಧಿಸುವ ಸೂತ್ರ)**

**ಸೂತ್ರ-932. ಪಞ್ಚಮ್ಯಾಃ ಸ್ತೋಕಾದಿಭ್ಯಃ (6-3-2)**

ವೃತ್ತಿ:- ಅಲುಕ್ ಉತ್ತರಪದೇ ।ಸ್ತೋಕಾನ್ಮುಕ್ತಃ । ಅನ್ತಿಕಾದಾಗತಃ। ಅಭ್ಯಾಶಾದಾಗತಃ। ದೂರಾದಾಗತಃ । ಕೃಚ್ಛ್ರಾದಾಗತಃ।

ಅ.ವ್ಯ:- ಅಲುಗುತ್ತರಪದೇ ಎಂಬ ಸೂತ್ರವು ಅನುವೃತ್ತವಾಗುತ್ತದೆ.

ಅರ್ಥ:- ಸ್ತೋಕ ಮೊದಲಾದ ಶಬ್ದಗಳ ನಂತರ ಪಞ್ಚಮೀ-ವಿಭಕ್ತಿ ಪ್ರತ್ಯಯಗಳಿಗೆ ಉತ್ತರಪದವು ಪರದಲ್ಲಿದ್ದಾಗ ಆ ಪೂರ್ವ ಪದದ ಪ್ರತ್ಯಯಗಳಿಗೆ ಲೋಪವಾಗುವುದಿಲ್ಲ. (ಅಲುಕ್ ಬರುವುದು).

ಉದಾ:- ಸ್ತೋಕಾನ್ಮುಕ್ತಃ (ಸ್ವಲ್ಪದರಿಂದ ಬಿಡುಗಡೆಯಾದವನು)ಸ್ತೋಕಾತ್ ಮುಕ್ತಃ ಎಂಬುದು ಲೌಕಿಕ ವಿಗ್ರಹ ವಾಕ್ಯ. ಸ್ತೋಕ+ಙಸಿ+ಮುಕ+ಸು ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಸ್ತೋಕಾಂತಿಕ ದೂರಾರ್ಥ ಕೃಚ್ಛ್ರಾಣಿ ಕ್ತೇನ ಎಂಬ ಸೂತ್ರದಿಂದ ಸ್ತೋಕಾರ್ಥಕ (ಸ್ವಲ್ಪವೆಂಬ ಅರ್ಥವುಳ್ಳ) ಶಬ್ದದ ಜೊತೆಗೆ ಕ್ತತ್ ಶಬ್ದದ ಜೊತೆಗೆ ಸಮಾಸವಾಗುತ್ತದೆ. ಪಂಞ್ಚಮೀ ಎಂಬ ಪ್ರಥಮಾಂತ ನಿರ್ದಿಷ್ಟ ಶಬ್ದ ಸ್ತೋಕ+ಙಸಿ ಎಂಬುದು. ಇದಕ್ಕೆ ಉಪಸರ್ಜನ ಸಂಜ್ಞೆಯು ಬಂದು ಪೂರ್ವನಿಪಾತವು ಬರುತ್ತದೆ. ಆಗ ಸ್ತೋಕ+ಙಸಿ ಮುಕ್ತ+ಸು ಎಂದಿರುತ್ತದೆ. ಕೃತ್‌ತದ್ಧಿತ ಸಮಾಸಾಶ್ಚ ಎಂಬುದರಿಂದ ಪ್ರಾತಿಪದಿಕ ಸಂಜ್ಞೆಯು ಬಂದು ಸುಪೋಧಾತುಪ್ರಾತಿಪದಿಕಯೋ ಎಂಬುದರಿಂದ ಸುಪ್ ಲೋಪವಾಗಬೇಕಾದಾಗ ಙಸಿ ಪ್ರತ್ಯಯವು ಪ್ರಕೃತ ಸೂತ್ರದಿಂದ ಲೋಪವಾಗುವುದಿಲ್ಲ. ಸು ಮಾತ್ರ ಲೋಪವಾಗುತ್ತದೆ. ಆಗ **ಸ್ತೋಕಾತ್ ಮುಕ್ತ** ಎಂದಿರುತ್ತದೆ. ಯರೋಽನುನಾಸಿಕೇಽನುನಾಸಿಕೇವಾ ಎಂಬುದರಿಂದ ತ್ ಕಾರಕ್ಕೆ ಅನುನಾಸಿಕ ಆದೇಶ ಬಂದು **ಸ್ತೋಕಾನ್ಮುಕ್ತ** ಎಂದಾಗುತ್ತದೆ. ಅದನ್ನು ಸುಬಂತ ಮಾಡಿದಾಗ ಸ್ತೋಕಾನ್ಮುಕ್ತಃ ಎಂದು ರೂಪವು ಸಿದ್ಧವಾಗುತ್ತದೆ.

ಇದೇ ರೀತಿಯಲ್ಲಿ ಅನ್ತಿಕಾದಾಗತಃ। ಅಭ್ಯಾಶಾದಾಗತಃ । ದೂರಾದಾಗತಃ । ಕೃಚ್ಛ್ರಾದಾಗತಃ ಎಂಬ ರೂಪಗಳು ಸಿದ್ಧವಾಗಿವೆ. ಹೀಗೇ ಅಲುಕ್ ಸಮಾಸಗಳು ಸಿದ್ಧವಾಗಿವೆ.

**(ಷಷ್ಠೀ ತತ್ಪುರುಷ ಸಮಾಸವನ್ನು ವಿಧಿಸುವ ಸೂತ್ರ)**

**ಸೂತ್ರ-933. ಷಷ್ಠೀ (2-2-8)ವೃತ್ತಿ:- ಸುಬನ್ತೇನ ಪ್ರಾಗ್ವತ್ । ರಾಜಪುರಷಃ**

ಅ.ವ್ಯ:- ಸಮಾಸಃ, ತತ್ಪುರುಷಃ, ಸುಪ್, ಸಹಸುಪಾ, ವಿಭಾಷಾ ಎಂಬ ಪದಗಳು ಅನುವೃತ್ತವಾಗಿವೆ ಮತ್ತು ಅಧಿಕಾರಸೂತ್ರಗಳೂ ಆಗಿವೆ.

ಅರ್ಥ:- ಷಷ್ಠ್ಯನ್ತ ಸುಬನ್ತವು ಸಮರ್ಥ ಸುಬಂತದ ಜೊತೆಗೆ ವಿಕಲ್ಪದಿಂದ ಸಮಾಸವಾಗುತ್ತದೆ. ಅದು ತತ್ಪುರುಷ.

ಉದಾ:- ರಾಜ ಪುರಷಃ (ರಾಜನ ಸೇವಕ): ರಾಜ್ಞಃ ಪುರುಷಃ ಎಂಬುದು

ಲೌಕಿಕವಿಗ್ರಹ ವಾಕ್ಯ. ರಾಜನ್+ಜಸ್+ಪುರುಷ+ಸು ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ಸಮಾಸವಾಗುತ್ತದೆ. ಸುಪೋಧಾತುಪ್ರಾತಿಪದಿಕಯೋ ಎಂಬುದರಿಂದ ವಿಭಕ್ತಿ ಪ್ರತ್ಯಯಗಳ ಲೋಪ ಮತ್ತು ನಲೋಪಃ ಪ್ರಾತಿಪದಿಕಾನ್ತಸ್ಯ ಎಂಬುದರಿಂದ 'ರಾಜನ್'ನಲ್ಲಿರುವ ನ್ ಕಾರಕ್ಕೆ ಲೋಪ ಬಂದು ರಾಜಪುರಷ ಎಂದಾಗಿ ಪ್ರಥಮಾ ನಿರ್ದಿಷ್ಟ ರಾಜ ಶಬ್ದಕ್ಕೆ ಉಪಸರ್ಜನ ಸಂಜ್ಞೆಯು ಬಂದು ಪೂರ್ವನಿಪಾತವಾಗಿ ಅದನ್ನು ಸುಬಂತ ಮಾಡಿದ ಮೇಲೆ ರಾಜಪುರಷಃ ಎಂದು ರೂಪವು ಸಿದ್ಧವಾಗಿದೆ.

**(ಷಷ್ಠೀ ತತ್ಪುರುಷ ಸಮಾಸವನ್ನು ವಿಧಿಸುವ ಸೂತ್ರ)**

**ಸೂತ್ರ-934. ಪೂರ್ವಾಪರಾಧರೋತ್ತರಮೇಕದೇಶಿನೈಕಾಧಿಕರಣೇ (2-2-1)**

ವೃತ್ತಿ:- ಅವಯವಿನಾಂ ಸಹ ಪೂರ್ವಾದಯಃ ಸಮಸ್ಯನ್ತೇ ಏಕತ್ವಸಂಖ್ಯಾವಿಶಿಷ್ಟಶ್ಚೇದ್ವಯವೀ । ಷಷ್ಠೀ ಸಮಾಸಾಪವಾದಃ। ಪೂರ್ವಂ ಕಾಯಸ್ಯ ಪೂರ್ವಕಾಯಃ।ಅಪರಕಾಯಃ। ಏಕಾಧಿಕರಣೇ ಕಿಮ್? ಪೂರ್ವಾಶ್ಛಾತ್ರಾಣಾಮ್ ।

ಪ.ಚ್ಛೇ:- ಪೂರ್ವಾಪರಾಧರೋತ್ತರಮ್, ಏಕದೇಶಿನಾ, ಏಕಾಧಿಕರಣೇ।

ಅ.ವೃ:- ಸಮಾಸಃ, ಸುಪ್, ಸಹಸುಪಾ, ವಿಭಾಷಾ, ತತ್ಪುರುಷಃ ಇವೆಲ್ಲವೂ ಅಧಿಕಾರ ಸೂತ್ರಗಳಾಗಿವೆ.

ಅರ್ಥ:- ಏಕದೇಶವೆಂದರೆ ಅವಯವ-ಏಕದೇಶಿ ಎಂದರೆ ಅವಯವಿ. ಅಧಿಕರಣವೆಂದರೆ ದ್ರವ್ಯ ಎಂದರ್ಥ. ಪೂರ್ವ, ಅಪರ, ಅಧರ ಮತ್ತು ಉತ್ತರ ಎಂಬ ಪದಗಳು ಏಕದ್ರವ್ಯರೂಪವಾದ ಅವಯವಿಯನ್ನು ಬೋಧಿಸುವ ಸುಬಂತದ ಜೊತೆಗೆ ಸಮಾಸವಾಗುವುದು.

ಉದಾ:- ಪೂರ್ವಕಾಯಃ (ಶರಿರದ ಪೂರ್ವ (ಕೆಳಗಿನ ಭಾಗ)): ಪೂರ್ವಮ್ ಕಾಯಸ್ಯ ಎಂಬುದು ಲೌಕಿಕ ವಿಗ್ರಹ ವಾಕ್ಯ. ಪೂರ್ವ+ಸು ಕಾಯ+ಜಸ್ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಕಾಯ ಎಂಬುದು ಏಕತ್ವ ಸಂಖ್ಯಾವಿಶಿಷ್ಟವಾದ ಅವಯವಿಯಾಗಿ ಇರುವುದರಿಂದ, ಪ್ರಕೃತ ಸೂತ್ರದಿಂದ ಪೂರ್ವ+ಸು ಎಂಬುದಕ್ಕೆ ಕಾಯ+ಜಸ್ ಎಂಬ ಷಷ್ಠ್ಯಂತ ಪದದ ಜೊತೆಗೆ ಸಮಾಸವಾಗುತ್ತದೆ. ಸಮಾಸ ವಿಧಾಯಕವಾದ ಪ್ರಕೃತ ಸೂತ್ರದಲ್ಲಿ ಪೂರ್ವ, ಅಪರ, ಅಧರ , ಉತ್ತರಮ್ ಎಂಬವು ಪ್ರಥಮಾ ನಿದಿಷ್ಟಗಳಾಗಿರುವುದರಿಂದ ಅವುಗಳಿಗೆ ಉಪಸರ್ಜನ ಸಂಜ್ಞೆಯು ಬಂದು ಪೂರ್ವನಿಪಾತಗಳಾಗಿವೆ. ಇವುಗಳಿಗೆ ಪ್ರಾತಿಪದಿಕತ್ವ ಸಂಜ್ಞೆಯು ಬಂದು ಸುಪ್ ಲೋಪವಾದ ಮೇಲೆ ಮತ್ತೆ ಸುಬಂತ ಮಾಡಿದಾಗ ಪೂರ್ವಕಾಯಃ ಎಂದು ರೂಪವು ಸಿದ್ಧವಾಗಿದೆ.

ವಿಶೇಷ: ಪ್ರಕೃತ ಸೂತ್ರವು ಷಷ್ಠೀ ಎಂಬ ಷಷ್ಠೀ ತತ್ಪುರುಷ ವಿಧಾಯಕವಾದ ಸೂತ್ರಕ್ಕೆ ಅಪವಾದವಾಗಿದೆ.

ಉಳಿದ ಉದಾಹರಣೆಗಳು ಅಪರಕಾಯಃ ಇತ್ಯಾದಿ ಹಿಂದಿನಂತೆ ಪ್ರಕ್ರಿಯೆ ನಡೆದು

ಪ್ರಕೃತ ರೂಪಗಳು ಸಿದ್ಧವಾಗುತ್ತವೆ.

ಏಕಾಧಿಕರಣೇ ಕಿಮ್? ಪೂರ್ವಾಶ್ಛಾತ್ರಾಣಾಮ್: ಅವಯವಿವಾಚಕವು ಏಕತ್ವ ಸಂಖ್ಯಾವಿಶಿಷ್ಟವಾಗಿ ಇರಬೇಕೆಂದು ಹೇಳಿರುವುದರಿಂದ ಪೂರ್ವಃ ಛಾತ್ರಾಣಾಮ್ ಎಂಬಲ್ಲಿ ಛಾತ್ರಾಣಾಮ್ ಎಂಬ ಅವಯವಿವಾಚಕವು ಏಕತ್ವ-ಸಂಖ್ಯಾ-ವಿಶಿಷ್ಟವಾಗಿ ಇಲ್ಲದೆ ಇರುವುದರಿಂದ ಪೂರ್ವಶಬ್ದಕ್ಕೆ ಅದರ ಜೊತೆಗೆ ಸಮಾಸವಾಗುವುದಿಲ್ಲ. ವ್ಯಸ್ತವಾಗಿಯೇ ಪ್ರಯೋಗಿಸಬೇಕು. ಇಲ್ಲದಿದ್ದರೆ ಶ್ಛಾತ್ರಾಣಾಮ್ ಪೂರ್ವಃ ಶ್ಛಾತ್ರಪೂರ್ವಃ ಎಂಬ ಷಷ್ಠೀ ತತ್ಪುರುಷ ಸಮಾಸವನ್ನು ಮಾಡಬಹುದು.

**ಸೂತ್ರ-935. ಅರ್ಧಂ ನಪುಂಸಕಮ್ (2-2-2)**

**ವೃತ್ತಿ:- ಸಮಾಂಶವಾಚೀ ಅರ್ಧಶಬ್ದಃ । ನಿತ್ಯಂ ಕ್ಲೀಬೇ, ಸ ಪ್ರಾಗ್ವತ್।**
**ಅರ್ಧಂ ಪಿಪ್ಪಲ್ಯಾಃ-ಅರ್ಧಪಿಪ್ಪಲೀ॥**

ಅ.ವೃ:- ಪೂರ್ವಾಪರಾಧರೋತ್ತರಮೇಕದೇಶಿನೈಕಾಧಿಕರಣೇ ಎಂಬ ಸೂತ್ರದಿಂದ ಏಕಾಧಿಕರಣೇ ಮತ್ತು ಏಕದೇಶಿನಾ ಎಂಬ ಪದಗಳು ಅನುವೃತ್ತವಾಗುತ್ತವೆ. ಸಮಾಸಃ, ಸುಪ್, ಸಹಸುಪಾ, ವಿಭಾಷಾ, ತತ್ಪುರುಷಃ ಇವೆಲ್ಲವೂ ಅಧಿಕಾರಸೂತ್ರಗಳಾಗಿವೆ.

ಅರ್ಥ:- ಅರ್ಧ ಶಬ್ದಕ್ಕೆ ಅಂಶವೆಂದೂ ಅರ್ಧಭಾಗವೆಂದೂ ಎರಡು ಅರ್ಥದಲ್ಲಿ ನಪುಂಸಕಲಿಂಗವಾಗಿದೆ. **ವಾ ಪುಂಸ್ಯರ್ಧೋಽರ್ಧಂ ನಪುಂಸಕೇ** ಎಂಬುದು ಅಮರಕೋಶ ನಪುಂಸಕಲಿಂಗದಲ್ಲಿರುವ ಅಂದರೆ ಸಮಾಂಶ-ವಾಚಿಯಾದ ಅರ್ಧ ಶಬ್ದವು ಏಕತ್ವಸಂಖ್ಯಾವಿಶಿಷ್ಟವಾದ ಅವಯವಿಯನ್ನು ಬೋಧಿಸುವ ಸುಬನ್ತದ ಜೊತೆಗೆ ಸಮಾಸವಾಗುವುದು.

ಉದಾ:- ಅರ್ಧಪಿಪ್ಪಲೀ (ಪಿಪ್ಪಲೀಯ ಅರ್ಧಭಾಗ): ಅರ್ಧಂ ಪಿಪ್ಪಲ್ಯಾಃ ಎಂಬುದು ಲೌಕಿಕವಿಗ್ರಹವಾಕ್ಯ. ಅರ್ಧ+ಸು ಪಿಪ್ಪಲೀ+ಙಸ್ ಎಂಬುದು ಅಲೌಕಿಕವಿಗ್ರಹ.

ವಾಕ್ಯ.ಪ್ರಕೃತ ಸೂತ್ರದಿಂದ ಸಮಾಸವಾಗುತ್ತದೆ. ಪ್ರಾತಿಪದಿಕಸಂಜ್ಞೆ ಬಂದ ಮೇಲೆ ಸುಪ್ ಲೋಪವಾಗಿ ಅರ್ಧಪಿಪ್ಪಲೀ ಎಂದು ರೂಪವು ಸಿದ್ಧವಾಗುತ್ತದೆ. ಈ ಪ್ರಕೃತ ಸೂತ್ರವು ಷಷ್ಠೀ ಎಂಬ ಸೂತ್ರಕ್ಕೆ ಅಪವಾದವಾಗಿದೆ. ಅರ್ಧ ಶಬ್ದಕ್ಕೆ ಪೂರ್ವನಿಪಾತ ಬರುವುದೇ ಈ ಸೂತ್ರದ ಪ್ರಯೋಜನವಾಗಿದೆ.

**(ಸಪ್ತಮೀ ತತ್ಪುರುಷ ಸಮಾಸವನ್ನು ವಿಧಿಸುವ ಸೂತ್ರ)**

**ಸೂತ್ರ-936. ಸಪ್ತಮೀ ಶೌಂಡೈಃ (2-1-40)**

ವೃತ್ತಿ:- ಸಪ್ತಮ್ಯನ್ತಮ್ ಶೌಣ್ಡಾದಿಭಿಃ ಪ್ರಾಗ್ವತ್ । ಅಕ್ಷೇಷು ಶೌಣ್ಡಃ ಅಕ್ಷಶೌಣ್ಡ ಇತ್ಯಾದಿ। ದ್ವಿತೀಯಾತೃತೀಯೇತ್ಯಾದಿಯೇಗವಿಭಾಗಾದನ್ಯತ್ರಾಪಿ ತೃತೀಯಾದಿವಿಭಕ್ತೀನಾಂ ಪ್ರಯೋಗವಶಾತ್ಸಮಾಸೋ ಜ್ಞೇಯಃ॥

ಅ.ವೃ:- ಸಮಾಸಃ, ತತ್ಪುರುಷಃ, ಸುಪ್, ಸಹ, ಸುಪಾ, ವಿಭಾಷಾ ಮೊದಲಾದ ಪದಗಳು ಅನುವೃತ್ತವಾಗುತ್ತವೆ. ಇವೆಲ್ಲವೂ ಅಧಿಕಾರ ಸೂತ್ರಗಳಾಗಿವೆ.

ಅರ್ಥ:- ಸಪ್ತಮ್ಯಂತವಾದ ಶೌಣ್ಡ ಮೊದಲಾದವು ಸಮರ್ಥ ಶಬ್ದಗಳ ಜೊತೆಗೆ ಸಮಾಸವಾಗುತ್ತದೆ. ಈ ಸೂತ್ರದಲ್ಲಿ ಸಪ್ತಮೀ ಎಂಬ ಶಬ್ದವು ಪ್ರಥಮಾಂತ ಶಬ್ದವಾಗಿದೆ. ಆದ್ದರಿಂದ ಇದರಿಂದ ನಿರ್ದಿಷ್ಟವಾದ ಪದವು ಉಪಸರ್ಜನ ಸಂಜ್ಞೆಯನ್ನು ಹೊಂದುತ್ತದೆ.

ಉದಾ:- ಅಕ್ಷಶೌಣ್ಡಃ (ಪಗಡೆಯಾಡುವುದರಲ್ಲಿ ನಿಪುಣ/ಪಗಡೆಗಳಿಂದ ಆಡುವುದರಲ್ಲಿ (ದಾಳ ಉರುಳಿಸುವುದರಲ್ಲಿ) ನಿಪುಣವು): ಅಕ್ಷೇಷು ಶೌಣ್ಡಿಃ ಎಂಬುದು ಲೌಕಿಕ ವಿಗ್ರಹವಾಕ್ಯ. ಅಕ್ಷ+ಸುಪ್+ಶೌಣ್ಡ+ಸು ಎಂಬುದು ಅಲೌಕಿಕ ವಿಗ್ರಹವಾಕ್ಯ. ಪ್ರಕೃತ ಸೂತ್ರದಿಂದ ಇಲ್ಲಿ ಸಮಾಸವಾಗುತ್ತದೆ. ಸಪ್ತಮ್ಯಂತ ಶಬ್ದವಾದ ಅಕ್ಷ+ಸುಪ್ ಎಂಬುದು ಶೌಣ್ಡ+ಸು ಎಂಬ ಸಮರ್ಥ ಶಬ್ದದ ಜೊತೆಗೆ ಸಮಾಸವಾಗುತ್ತದೆ. ಸಮಾಸವಾದ ಮೇಲೆ ಅಕ್ಷ+ಸುಪ್+ಶೌಣ್ಡಿ+ಸು ಎಂಬುದು ಪ್ರಾತಿಪದಿಕ ಸಂಜ್ಞೆಯನ್ನು ಹೊಂದಿದೆ. ಸುಪೋಧಾತುಪ್ರಾತಿಪದಿಕಯೋಃ ಎಂಬ ಸೂತ್ರದಿಂದ ಸುಪ್ ಪ್ರತ್ಯಯಗಳಿಗೆ ಲುಕ್ ಬಂದು ಅಕ್ಷ+ಶೌಣ್ಡ ಎಂದಿರುತ್ತದೆ. ಪ್ರಥಮಾ ವಿಭಕ್ತಿಯಲ್ಲಿ ಹೇಳಲಾಗಿರುವ ಅಕ್ಷ ಶಬ್ದಕ್ಕೆ ಉಪಸರ್ಜನ ಸಂಜ್ಞೆಯು ಬಂದು ಪೂರ್ವನಿಪಾತವಾದ ಮೇಲೆ ಅಕ್ಷಶೌಣ್ಡ ಎಂದಾಗುತ್ತದೆ. ಇದನ್ನು ಸುಬಂತ ಮಾಡಿದಾಗ ಅಕ್ಷಶೌಣ್ಡಃ ಎಂದಾಗುತ್ತದೆ.

ಉದಾ:- ದ್ವಿತೀಯಾತೃತೀಯೇತ್ಯಾದಿಯೋಗವಿಭಾಗಾದನ್ಯತ್ರಾಪಿ ತೃತೀಯಾದಿ ವಿಭಕ್ತೀನಾಂ ಪ್ರಯೋಗವಶಾತ್ಸಮಾಸೋ ಜ್ಞೇಯಃ:- **ದ್ವಿತೀಯಾಶ್ರೀತಾತಿತ** ಮತ್ತು **ತೃತೀಯಾ ತತ್‌ಕೃತ** ಇತ್ಯಾದಿ ಸಮಾಸವಿಧಾಯಕ ಸೂತ್ರಗಳನ್ನು ಕುರಿತು ವಿಚಾರಮಾಡಿದಾಗ ದ್ವಿತೀಯಾಂತ ತೃತೀಯಾಂತ ಮೊದಲಾದವುಗಳಿಗೆ ಶ್ರಿತಾದಿ ಪದಗಳ ಜೊತೆಗೆ ಮಾತ್ರ ಸಮಾಸವು ಬರುವುದೆಂದು ಗೊತ್ತಾಗುತ್ತದೆ. ಆದರೆ ತೃತೀಯಾಂತಾದಿಗಳಿಗೆ ಶ್ರಿತಾದಿಗಳಿಗಿಂತ ಭಿನ್ನವಾದ ಪದಗಳ ಜೊತೆಗೂ ಸಮಾಸಗಳಾಗಿರುವುದೂ ಕಂಡುಬರುತ್ತವೆ. ಅವುಗಳ ರೂಪಸಾಧುತ್ವಕ್ಕಾಗಿ ಆ ಸೂತ್ರಗಳಲ್ಲಿರುವ "ದ್ವಿತಿಯಾ" "ತೃತೀಯಾ" "ಚತುರ್ಥಿ" "ಪಞ್ಚಮೀ" ಮತ್ತು "ಸಪ್ತಮೀ" ಎಂಬ ಪದಗಳನ್ನು ಯೋಗವಿಭಾಗದಿಂದ ಬೇರೆ ಮಾಡಿದರೆ ದ್ವಿತಿಯಾ ಇತ್ಯಾದಿಗಳನ್ನು ಪ್ರತ್ಯೇಕ ಸೂತ್ರಗಳಂತೆ ಭಾವಿಸಿ ಅನುವೃತ್ತಿ ಮಾಡಿ ಸುಪಾ ಎಂಬುದರ ಜೊತೆಗೆ ಅನ್ವಯಿಸಿ ವ್ಯಾಖ್ಯಾನ ಮಾಡಿದರೆ " ದ್ವಿತಿಯಾಂತಮ್ ಸುಬಂತೇನೆ ಸಮಸ್ಯತೇ" ತೃತೀಯಾಂತಮ್ ಚುತುರ್ಥ್ಯಂತಮ್ ಪಞ್ಚಮ್ಯಂತಮ್ ಸಪ್ತಮ್ಯಂತಮ್ ಸುಬಂತೇನ ಸಹ ಸಮಸ್ಯತೇ ಎಂಬ ಅರ್ಥಗಳು ಸಾಮಾನ್ಯವಾಗಿ ಸಿದ್ಧಿಸುವವು. ಈ ರೀತಿಯಾಗಿ ದ್ವಿತಿಯಾದಿಗಳಿಗೆ ಶ್ರಿತಾದಿಗಳ ಜೊತೆಗೆ ಮಾತ್ರವಲ್ಲದೇ ಪ್ರಯೋಗಾನುಸಾರವಾಗಿ ಯಾವ ಸುಬಂತದ ಜೊತೆಗೂ ಸಮಾಸವಾಗಬಹುದು.

**(ದಿಕ್ ಸಂಖ್ಯಾ ಶಬ್ದಗಳಗೆ ಸಮಾಸವನ್ನು ವಿಧಿಸುವ ನಿಯಮ ಸೂತ್ರ)**

**ಸೂತ್ರ-937 ದಿಕ್‌ಸಂಖ್ಯೇ ಸಂಜ್ಞಾಯಾಮ್ (2-1-50)**

ವೃತ್ತಿ: ಸಂಜ್ಞಾಯಾಮ್ ಏವ ಇತಿ ನಿಯಮಾರ್ಥಂ ಸೂತ್ರಮ್, ಪೂರ್ವೇಷು ಕಾಮಶಮೀ । ಸಪ್ತರ್ಷಯಃ। ತೇನೇಹ ನ-ಉತ್ತರಾ ವೃಕ್ಷಾಃ ಪಂಚ ಬ್ರಾಹ್ಮಣಾಃ ।

ಅ.ವೃ:- ಪೂರ್ವಕಾಲೈಕ ಸರ್ವಜರತ್ ಪುರಾಣ ನವ ಕೇವಲಾಃ ಸಮಾನಾಧಿಕರಣೇನ ಎಂಬ ಸೂತ್ರದಿಂದ ಸಮಾನಾಧಿಕರಣೇನ ಎಂಬ ಪದವು ಅನುವೃತ್ತವಾಗುತ್ತದೆ. ಸಮಾಸಃ, ಸುಪ್ ಸಹ ಸುಪಾ ಮತ್ತು ತತ್ಪುರುಷಃ ಎಂಬ ಪದಗಳು ಅನುವೃತ್ತವಾಗುತ್ತವೆ. ಮತ್ತು ಅಧಿಕಾರಸೂತ್ರಗಳಾಗಿವೆ.

ಅರ್ಥ:- ದಿಗ್ ವಾಚಕ ಮತ್ತು ಸಂಖ್ಯಾವಾಚಕ ಸುಬನ್ತ ಶಬ್ದಗಳಿಗೆ ಸಮಾನಾಧಿಕರಣ ಸುಬನ್ತಗಳ ಜೊತೆಗೆ ಸಮಾಸವಾಗುತ್ತದೆ. ಸಂಜ್ಞಾರ್ಥವು ಗಮ್ಯಮಾನವಾಗಿದ್ದಾಗ ಅದು ತತ್ಪುರುಷ ಸಮಾಸವಾಗುತ್ತದೆ. ವಿಶೇಷ್ಯೇಣ ವಿಶೇಷಣಮ್ ಬಹುಳಮ್ ಎಂಬ ಮುಂಬರುವ ಸೂತ್ರದಿಂದಲ್ಲೇ ಸವಾಸವು ಸಿದ್ಧವಾಗುತ್ತಿರುವಾಗ "ದಿಕ್ ಸಂಖ್ಯಾರ್ಥಕಗಳಾದ ವಿಶೇಷಣಗಳು ಸಂಜ್ಞಾರ್ಥದಲ್ಲಿ ಮಾತ್ರ ಸಮಾಸವಾಗುವುದು" ಎಂಬ ನಿಯಮವನ್ನು ಹೇಳುವುದಕ್ಕಾಗಿ ಪ್ರಕೃತ ಸೂತ್ರವು ಹೊರಟಿದೆ.

ಉದಾ:- ಪೂರ್ವೇಷು ಕಾಮಶಮೀ (ಪೂರ್ವೇಷು ಕಾಮಶಮೀ ಎಂಬ ಹೆಸರುಳ್ಳ ಒಂದು ಊರು): ಪೂರ್ವಶ್ಚಾಸೌ ಇಷುಕಾಮೀಚ ಎಂಬದು ಲೌಕಿಕ ವಿಗ್ರಹ ವಾಕ್ಯ. ಪೂರ್ವ+ಸು ಇಷುಕಾಮಶಮಿ+ಸು ಎಂಬ ಅಲೌಕಿಕ ವಿಗ್ರಹವಾಕ್ಯದಲ್ಲಿ ಪ್ರಕೃತ ಸೂತ್ರದಿಂದ ದಿಕ್ ವಾಚಕವಾದ ಪೂರ್ವ ಶಬ್ದದ ಜೊತೆಗೆ ಸಮಾಸವಾಗುತ್ತದೆ. ಪ್ರಾತಿಪದಿಕ ಸಂಜ್ಞೆ ಮತ್ತು ಸುಪ್ ಲೋಪಗಳಾದ ಮೇಲೆ ಪೂವೇಷು ಕಾಮಶಮೀ ಎಂಬ ಸುಬಂತವು ಸಿದ್ಧವಾಗುತ್ತದೆ.

ಉದಾ:-ಸಪ್ತರ್ಷಯಃ (ಏಳು ಋಷಿಗಳುಉಳ್ಳ ನಕ್ಷತ್ರ ಮಂಡಲದ ಹೆಸರು): ಸಂಖ್ಯಾವಾಚಕವಾದ ಸಪ್ತನ್ ಶಬ್ದಕ್ಕೆ ಋಷಿ ಶಬ್ದದ ಜೊತೆಗೆ ಸಮಾಸವಾಗುತ್ತದೆ ಪ್ರಾತಿಪದಿಕ ಸಂಜ್ಞೆ ಸುಪ್ ಲೋಪವಾದ ಮೇಲೆ ಸಪ್ತನ್+ಋಷಿ ಎಂದಿದ್ದಾಗ ಸಪ್ತನ್ ಶಬ್ದದಲ್ಲಿರುವ ನ್ ಕಾರಕ್ಕೆ **ನಲೋಪಃಪ್ರಾತಿಪದಿಕಾನ್ತಸ್ಯ** ಎಂಬ ಸೂತ್ರದಿಂದ ಲೋಪಬಂದು ಗುಣವಾದ ಮೇಲೆ ಸಪ್ತರ್ಷಯಃ ಎಂದು ರೂಪವು ಸಿದ್ಧವಾಗಿದೆ.

ಸಂಜ್ಞಾಯಾಮೇವ ಎಂಬ ನಿಯಮವನ್ನು ಹೇಳಿರುವುದರಿಂದ ಉತ್ತರಾ ವೃಕ್ಷಾಃ ಪಂಚ ಬ್ರಾಹ್ಮಣಾಃ ಮೊದಲಾದವುಗಳಲ್ಲಿ ಸಮಾಸವು ಸಂಜ್ಞಾವಾಚಕವಾಗಿ ಇಲ್ಲದೇ ಇರುವುದರಿಂದ ದಿಕ್-ವಾಚಕ ಸಂಖ್ಯಾವಾಚಕಗಳಾದ ಉತ್ತರ, ಪಂಚನ್ ಶಬ್ದಗಳು ಸಮಾಸವಾಗಲಿಲ್ಲ.

**(ತದ್ಧಿತಾರ್ಥ ಉತ್ತರಪದ ಸಮಾಹಾರ ಸಮಾಸಗಳನ್ನು ವಿಧಿಸುವ ಸೂತ್ರ)**

**ಸೂತ್ರ-938- ತದ್ಧಿತಾರ್ಥೋತ್ತರಪದ ಸಮಾಹಾರೇ ಚ (2-1-51)**

ವೃತ್ತಿ:- ತದ್ಧಿತಾರ್ಥೇ ವಿಷಯೆ ಉತ್ತರಪದೇ ಚ ಪರತಃ ಸಮಾಹಾರೇ ಚ ವಾಚ್ಯೇ ದಿಕ್ ಸಂಖ್ಯೇ ಪ್ರಾಗ್ವತ್ । ಪೂರ್ವಸ್ಯಾಂ ಲಾಯಾಂ ಭವಃ- ಪೂರ್ವಾ ಶಾಲಾ ಇತಿ ಸಮಾಸೇ ಜಾತೇ

ವಾರ್ತಿಕ:- **ಸರ್ವನಾಮ್ನೋ ವೃತ್ತಿದೂತ್ರೇ ಪುಂವದ್ಭಾವಃ ॥**

ಅ.ವೃ:- ದಿಕ್ ಸಂಖ್ಯೇ ಸಂಜ್ಞಾಯಾಮ್ ಸೂತ್ರದಿಂದ ದಿಕ್ ಸಂಖ್ಯೇ ಎಂಬ

ಪದವು ಪೂರ್ವಕಾಲೈಕ–ಸರ್ವಜರತ್‌ಪುರಾಣ ನವಕೇವಲಾಃ ಸಮಾನಾಧಿಕರಣೇನ ಎಂಬ ಸೂತ್ರದಿಂದ ಸಮಾನಾಧಿಕರಣೇನ ಎಂಬ ಪದವು ಅನುವೃತ್ತವಾಗುತ್ತದೆ. ಸಮಾಸಃ, ತತ್ಪುರುಷಃ, ಸುಪ್, ಸಹಸುಪಾ, ವಿಭಾಷಾ ಮೊದಲಾದ ಪದಗಳು ಅನುವೃತ್ತವಾಗುತ್ತವೆ. ಇವೆಲ್ಲವೂ ಅಧಿಕಾರಸೂತ್ರಗಳಾಗಿವೆ.

ಅರ್ಥ:– ತದ್ಧಿತಾರ್ಥ ಪ್ರತ್ಯಯದ ಅರ್ಥಕ್ಕೆ ವಿಷಯವಾಗುವ ಅಥವಾ ಉತ್ತರಪದವಾಗಿರುವ ಅಥವಾ ಸಮಾಹಾರ ಅಂದರೆ ಸಮೂಹಾರ್ಥವಾಗಿರುವ ದಿಶಾ ಮತ್ತು ಸಂಖ್ಯಾವಾಚಕ ಸಮರ್ಥ ಸುಬಂತ ಶಬ್ದಗಳು ಸಮಾನ ವಿಭಕ್ತಿಯುಳ್ಳ ಸುಬನ್ತದ ಜೊತೆಗೆ ಸಮಾಸವಾಗುತ್ತದೆ. ಅದು ತತ್ಪುರುಷ ಸಮಾಸವೆನಿಸಿಕೊಳ್ಳುತ್ತದೆ.

ಉದಾ:– ಪೂರ್ವಸ್ಯಾಂ ಶಾಲಾಯಾಂ ಭವಃ (ಪೂರ್ವದಿಕ್ಕಿನಲ್ಲಿರುವ ಶಾಲೆಯಲ್ಲಿ ಇರುವ) ಪೂವ್ರಸ್ಯಾಂ ಶಾಲಾಯಾಂ ಭವಃ ಎಂಬುದು ಲೌಕಿಕ ವಿಗ್ರಹ ವಾಕ್ಯ. ಪೂರ್ವಾ ಮತ್ತು ಶಾಲಾ ಈ ಎರಡು ಸ್ತ್ರೀಲಿಂಗ ಶಬ್ದಗಳಿಗೆ ಸಮಾಸವಾದ ಮೇಲೆ ಪುಮ್‌ವದ್‌ಭಾವ ಮಾಡುವುದಕ್ಕಾಗಿ ಪ್ರಕೃತ ವಾರ್ತಿಕವು ಹೊರಟಿದೆ.

ವಾರ್ತಿಕ:– ಸರ್ವನಾಮ್ನೋ ವೃತ್ತಿದಮಾತ್ರೇ ಪುಂವದ್ಭಾವಃ:– ಸರ್ವನಾಮ ಸಂಜ್ಞೆಯುಳ್ಳ ಶಬ್ದಗಳಲ್ಲಿ ವೃತ್ತಿ ಮಾತ್ರ ಎಂದರೆ ಸಮಾಸ, ತದ್ಧಿತ ಮೊದಲಾದ ಎಲ್ಲ ವೃತ್ತಿಗಳೂ ಪುಂವದ್ಭಾವವನ್ನು ಹೊಂದುತ್ತದೆ. ಸ್ತ್ರೀಲಿಂಗ ಶಬ್ದವಾದ ಪೂರ್ವಾ ಎಂಬುದು ಪುಲ್ಲಿಂಗವಾದ ಪೂರ್ವ ಶಬ್ದವಾಗಿ ಬದಲಾಗುತ್ತದೆ ಎಂದರ್ಥ ಪೂರ್ವಶಾಲಾ ಎಂದಿದ್ದಾಗ–

**(ಞಃ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ–939 – ದಿಕ್ಪೂರ್ವಪದಾದಸಂಜ್ಞಾಯಾಂ ಞಃ॥(4–2–107)**

ವೃತ್ತಿ: ಅಸ್ಮಾದ್ಭಾವಾದರ್ಥೇ ಞಃ ಸ್ಯಾತ್ ಅಸಂಜ್ಞಾಯಾಮ್ ।

ಪ.ಚ್ಛೇ:– ದಿಕ್ಪೂರ್ವಪದಾತ್, ಅಸಂಜ್ಞಾಯಾಮ್,ಞಃ।

ಅ.ವೃ:– ಶೇಷೇ ಎಂಬ ಸೂತ್ರದಿಂದ ಶೇಷೇ ಎಂಬ ಪದವು ಅನುವೃತ್ತವಾಗುತ್ತದೆ. ಪ್ರತ್ಯಯಃ, ಪರಶ್ಚ, ಪ್ರಾತಿಪದಿಕಾತ್ ಎಂಬವು ತದ್ಧಿತಾಃ ಎಂಬುದರ ಪೂರ್ವ ಭಾಗದವರೆಗೆ ಅಧಿಕಾರ ಸೂತ್ರಗಳಾಗಿವೆ.

ಅರ್ಥ:– ದಿಗ್ವಾಚಕವು ಪೂರ್ವಪದವಾಗುಳ್ಳ ಸಮಾಸದ ನಂತರ ಸಂಜ್ಞಾವಾಚಕ ಇಲ್ಲದೇ ಇರುವ ಅಲ್ಲಿ ಇದೆ ಎಂಬರ್ಥದಲ್ಲಿ ಞ(ಅ) ಪ್ರತ್ಯಯವು ಬರುತ್ತದೆ. ಞ ಪ್ರತ್ಯಯದಲ್ಲಿ ಅಕಾರ ಮಾತ್ರ ಉಳಿಯುತ್ತದೆ. ತದ್ಧಿತೇಷ್ವಚಾಮಾದೇಃ ಎಂಬ ಸೂತ್ರದಿಂದ ವೃದ್ಧಿಯಾಗುವುದೇ ಞಿತ್ ಪ್ರತ್ಯಯದ ಪ್ರಯೋಜನ. ಆದರೆ ಈ ಪ್ರತ್ಯಯವು ಸಂಜ್ಞೆಯಲ್ಲಿ ಬರುವುದಿಲ್ಲ.

**(ವೃದ್ಧಿಯನ್ನು ವಿಧಿಸುವ ಸೂತ್ರ)**

**ಸೂತ್ರ–940:– ತದ್ಧಿತೇಷ್ವಚಾಮಾದೇಃ (7–2–117)**

ವೃತ್ತಿ:–ಞಿತಿ ಣಿತಿ ಚ ತದ್ಧಿತೇಷ್ವಚಾಮಾದೇಃ ಅಚೋ ವೃದ್ಧಿಃ ಸ್ಯಾತ್। ಯಸ್ಯೇ ತಿ ಚ।

ಪೂರ್ವಶಾಲಃ, ಪಂಚ ಗಾವಃ ಧನಂ ಯಸ್ಯ ಇತಿ ತ್ರಿಪದೇ ಬಹುವ್ರೀಹೌ।

ವಾರ್ತಿಕ:- ದ್ವಂದ್ವತತ್ಪುರುಷಯೋರುತ್ತರಪದೇ ನಿತ್ಯಸಮಾಸವಚನಮ್।

ಪ.ಚ್ಛೇ:- ತದ್ಧಿತೇಷು, ಅಚಾಮ್, ಆದೇಃ।

ಅ.ವೃ:- ಅಚೋ ಞ್ಣಿತಿ ಎಂಬ ಸೂತ್ರದಿಂದ ಅಚಃ ಎಂಬ ಪದವು ಞ್ಣಿತಿ ಎಂಬ ಪದವು ಹಾಗೂ ಮೃಜೇರ್ವೃದ್ಧಿಃ ಎಂಬ ಸೂತ್ರದಿಂದ ವೃದ್ಧಿಃ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ:- ಞಿತ್ ಅಥವಾ ಣಿತ್ ತದ್ಧಿತ ಪ್ರತ್ಯಯಗಳು ಪರದಲ್ಲಿದ್ದಾಗ ಅಚ್‌ಗಳಲ್ಲಿ ಆದಿಯಾದ ಅಚ್ ವರ್ಣಕ್ಕೆ ವೃದ್ಧಿಯು ಬರುತ್ತದೆ.

ಉದಾ:- ಪೌರ್ವಶಾಲಃ (ಪೂರ್ವದಿಕ್ಕಿನಲ್ಲಿರುವ ಶಾಲೆಯಲ್ಲಿರುವ): ಪೂರ್ವಸ್ಯಾಮ್ ಶಾಲಾಯಾಮ್ ಭವಃ ಎಂಬುದು ಲೌಕಿಕ ವಿಗ್ರಹ ವಾಕ್ಯ. ಪೂರ್ವಾ+ಙಿ ಶಾಲಾ+ಙಿ ಎಂಬುದು ಅಲೌಕಿಕವಿಗ್ರಹ ವಾಕ್ಯ. ತದ್ಧಿತಾರ್ಥೋತ್ತರಪದ ಸಮಾಹಾರೇ ಚ ಎಂಬ ಸೂತ್ರದಿಂದ ತದ್ಧಿತಾರ್ಥದಲ್ಲಿ ಸುಪೋಧಾತುಪ್ರಾತಿಪದಿಕಯೋ ಎಂಬ ಸೂತ್ರದಿಂದ ಪ್ರಾತಿಪದಿಕ ಸಂಜ್ಞೆ ಬಂದ ಮೇಲೆ ಸುಪ್ ಲೋಪಗಳಾಗಿ ಪೂರ್ವಾ+ಶಾಲಾ ಎಂದಿರುತ್ತದೆ. ಪೂರ್ವಾ ಶಬ್ದಕ್ಕೆ ಉಪಸರ್ಜನ ಸಂಜ್ಞೆಯು ಬಂದು ಪೂರ್ವನಿಪಾತವಾದ ಮೇಲೆ ಪೂರ್ವಾಶಾಲಾ ಎಂದಿರುತ್ತದೆ. ಸರ್ವನಾಮ್ನೋ ವೃತ್ತಿಮಾತ್ರೇ ಪುಂವದ್ಭಾವಃ ಎಂಬ ವಾರ್ತಿಕದಿಂದ ಸರ್ವಾದಿಯಾದ ಪೂರ್ವಾಶಬ್ದಕ್ಕೆ ಪುಮ್‌ವದ್‌ಭಾವು ಬಂದು ಪೂರ್ವಶಾಲಾ ಎಂದಾಗುತ್ತದೆ.ತದ್ಧಿತ ಪ್ರತ್ಯಯವು ಬರುವಾಗ **ದಿಕ್ಪೂರ್ವಪದಾದಸಂಜ್ಞಾಯಾಮ್ ಞಃ** ಎಂಬ ಸೂತ್ರವು ಬಂದು ಪೂರ್ವಶಾಲಾ+ಅ ಎಂದಿರುತ್ತದೆ. ಇದರಲ್ಲಿ ಆದಿ ಅಚ್ ವರ್ಣಕ್ಕೆ ಅಂದರೆ ಊಕಾರಕ್ಕೆ ವೃದ್ಧಿ ಬಂದು ಪೌರ್ವಶಾಲ+ಅ ಎಂದಿದ್ದಾಗ ಯಸ್ಯೇತಿಚ ಎಂಬುದರಿಂದ ಅಕಾರಕ್ಕೆ ಲೋಪವು ಬಂದು ಪೌರ್ವಶಾಲ ಎಂದಾಗುತ್ತದೆ. ಏಕದೇಶವಿಕೃತಮ್‌ಅನನ್ಯವತ್ ಎಂಬ ನ್ಯಾಯದಿಂದ ಪ್ರಾತಿಪದಿಕ ಸಂಜ್ಞೆಯು ಬಂದು ಸುಬಂತ ಮಾಡಿದಾಗ ಪೌರ್ವಶಾಲ ಎಂಬ ರೂಪವು ಸಿದ್ಧವಾಗುತ್ತದೆ.

ವಾರ್ತಿಕ:- ದ್ವಂದ್ವತತ್ಪುರುಷಯೋರುತ್ತರಪದೇ ನಿತ್ಯಸಮಾಸವಚನಮ್:- ಉತ್ತರಪದವು ಪರದಲ್ಲಿದಾಗ ದ್ವಂದ್ವ ಮತ್ತು ತತ್ಪುರುಷ ಸಮಾಸಗಳಿಗೆ ನಿತ್ಯ ಸಮಾಸವು ಬರಬೇಕು ಎಂದು ಹೇಳಬೇಕು. ಅಂದರೆ ಉತ್ತರಪದವು ಪರದಲ್ಲಿದ್ದಾಗ ಬರುವ ದ್ವಂದ್ವ ಸಮಾಸವಾಗಲಿ ತತ್ಪುರುಷ ಸಮಾಸವಾಗಲಿ ನಿತ್ಯ ಸಮಾಸವಾಗಿರುವುದು ಎಂದರ್ಥ. ಈ ಪ್ರಕೃತ ವಾರ್ತಿಕವನ್ನು ಅನುಸರಿಸಿ ಪಂಚನ್ ಮತ್ತು ಗೋ ಶಬ್ದಗಳಿಗೆ (ತದ್ಧಿತಾರ್ಥೋತ್ತರಪದ ಸಮಾಹಾರೇ ಚ) ಎಂಬ ಸೂತ್ರದಿಂದ ಬರುವ ತತ್ಪುರುಷ ಸಮಾಸವು ನಿತ್ಯ ಸಮಾಸವಾಗಿರುವುದು. ಪ್ರಾತಿಪದಿಕ ಸಂಜ್ಞೆ ಮತ್ತು ಸುಪ್ ಲೋಪಗಳು ಬಂದಮೇಲೆ ಪಂಚಗೋ ಎಂದಿದ್ದಾಗ-

**(ಸಮಾಸಾಂತದಲ್ಲಿ ಟಚ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-941:-ಗೋರತದ್ಧಿತಲುಕಿ (5-4-92)**

ವೃತ್ತಿ:- ಗೋನ್ತಾತ್ತತ್ಪುರುಷಾಟ್ಟಚ್ ಸ್ಯಾತ್ ಸಮಾಸಾನ್ತೋ ನ ತು ತದ್ಧಿತಲುಕಿ॥ ಪಞ್ಚಗವಧನಃ॥

ಪ.ಚ್ಛೇ:- ಗೋಃ, ಅತದ್ಧಿತಲುಕಿ।

ಅ.ವೃ:- ರಾಜಾಹಸ್ಸಖಿಭ್ಯಷ್ಟಚ್ ಎಂಬ ಸೂತ್ರದಿಂದ ಟಚ್ ಎಂಬ ಪದವು ಮತ್ತು ತತ್ಪುರುಷಸ್ಯಾಂಗುಲೇಃ ಸಂಖ್ಯಾವ್ಯಯಾದೇಃ ಎಂಬ ಸೂತ್ರದಿಂದ ವಚನ ವಿಪರಿಣಾಮಮಾಡಿ ತತ್ಪುರುಷಸ್ಯ ಎಂಬ ಪದವು ಅನುವೃತ್ತವಾಗುತ್ತದೆ. ಪ್ರತ್ಯಯಃ ಪರಶ್ಚ, ತದ್ಧಿತಾಃ ಮತ್ತು ಸಮಾಸಾನ್ತಾಃ ಎಂಬವು ಅಧಿಕಾರ ಸೂತ್ರಗಳು.

ಅರ್ಥ:- ಗೋ ಶಬ್ದವನ್ನು ಅನ್ತದಲ್ಲಿ ಉಳ್ಳ ತತ್ಪುರುಷ ಸಮಾಸದ ನಂತರ ಸಮಾಸಾನ್ತ ಟಚ್ ಪ್ರತ್ಯಯವು ಬರುತ್ತದೆ ತದ್ಧಿತ ಪ್ರತ್ಯಯವು ಲುಕ್ (ಲೋಪ) ಆಗದೆ ಇದ್ದರೆ.

ಉದಾ:- ಪಞ್ಚಗವಧನಃ (ಐದು ಆಕಳುಗಳನ್ನು ಧನವಾಗಿವುಳ್ಳವನು):- ಪಞ್ಚಗಾವೋ ಧನಮ್ ಯಸ್ಯ ಎಂಬುದು ಲೌಕಿಕವಿಗ್ರಹ ವಾಕ್ಯ. ಪಞ್ಚನ್+ಜಸ್ ಗೋ+ಜಸ್ ಧನ+ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ಅನೇಕಮನ್ಯಪದಾರ್ಥೇ ಎಂಬ ಸೂತ್ರದಿಂದ ಬಹುವ್ರೀಹಿ ಸಮಾಸವಾದ ಮೇಲೆ ಪಞ್ಚನ್ ಮತ್ತು ಗೋ ಇವುಗಳಲ್ಲಿ ತದ್ಧಿತಾರ್ಥೋತ್ತರಪದಸಮಾಹಾರೇ ಚ ಎಂಬ ಸೂತ್ರದಿಂದ ಮಹಾವಿಭಾಷೆಯಿಂದ ವೈಕಲ್ಪಿಕವಾಗಿ ಸಮಾಸವಾಗಬೇಕಾಗಿತ್ತು. ಆದರೆ ದ್ವಂದ್ವತತ್ಪುರುಷಯೋರುತ್ತರಪದೇ ನಿತ್ಯಸಮಾಸವಚನಮ್ ಎಂಬ ವಾರ್ತಿಕದಿಂದ ಧನ+ಸು ಎಂಬ ಉತ್ತರ ಪದವು ಪರದಲ್ಲಿದ್ದಾಗ ನಿತ್ಯ ಸಮಾಸವಾಗಿದೆ. ಇದಕ್ಕೆ ಪ್ರಾತಿಪದಿಕ ಸಂಜ್ಞೆಯು ಬಂದು ಸುಪ್ ಲೋಪವಾದ ಮೇಲೆ ಪಞ್ಚನ್+ಗೋ+ಧನ ಎಂದಿರುತ್ತದೆ. ಪಞ್ಚನ್ ಎಂಬಲ್ಲಿರುವ ನ್ ಕಾರಕ್ಕೆ ನಲೋಪಃ ಪ್ರಾತಿಪದಿಕಾನ್ತಸ್ಯ ಎಂಬ ಸೂತ್ರದಿಂದ ಲೋಪಬಂದು ಪಞ್ಚಗೋ+ಧನ ಎಂದಿರುತ್ತದೆ ಪ್ರಕೃತ ಸೂತ್ರದಿಂದ ಉತ್ತರಪದವಾದ ಧನ ಪದವು ಪರದಲ್ಲಿ ಇರುವುದರಿಂದ ಟಚ್ (ಅ) ಪ್ರತ್ಯಯವು ಬಂದು ಪಞ್ಚಗೋ+ಅ+ಧನ ಎಂದಿರುತ್ತದೆ ಓಕಾರ ಅಕಾರಗಳಿಗೆ ಅವಾದೇಶ ಬಂದು ಪಞ್ಚಗವಧನ ಎಂದಾಗುತ್ತದೆ. ಧನ ನಪುಂಸಕಲಿಂಗವಾಗಿದ್ದರೂ ಬಹುವ್ರೀಹಿ ಸಮಾಸವಾಗಿರುವುದರಿಂದ ಅನ್ಯಪದಾರ್ಥವಾದ ವ್ಯಕ್ತಿಗೆ ವಿಶೇಷಣವಾಗಿರುವುದರಿಂದ ಧನ ಶಬ್ದವು ಪುಂಲಿಂಗದಲ್ಲಿರುತ್ತದೆ. ಏಕದೇಶವಿಕೃತಮ್‌ಅನನ್ಯವತ್ ಎಂಬ ನ್ಯಾಯದಿಂದ ಪ್ರಾತಿಪದಿಕ ಸಂಜ್ಞೆಯು ಬಂದು ಸುಬಂತ ಮಾಡಿದಾಗ ಪಞ್ಚಗವಧನಃ ಎಂಬ ರೂಪವು ಸಿದ್ಧವಾಗುತ್ತದೆ.

**(ಕರ್ಮಧಾರಯ ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ-942. ತತ್ಪುರುಷಃ ಸಮಾನಾಧಿಕರಣಃ ಕರ್ಮಧಾರಯಃ (1-2-42)**

ಅರ್ಥ:- ಯಾವ ಸಮಾಸದಲ್ಲಿ ಪೂರ್ವಪದ ಮತ್ತು ಉತ್ತರಪದಗಳು ಒಂದೇ ವಿಭಕ್ತಿಯಲ್ಲಿರುವುದೋ ಆ ಸಮಾಸಕ್ಕೆ ಕರ್ಮಧಾರಯ ಎಂಬ ಸಂಜ್ಞೆಯು ಬರತ್ತದೆ.

**(ದ್ವಿಗು ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ-943 : ಸಂಖ್ಯಾಪೂರ್ವೋದ್ವಿಗುಃ (2-1-52)**

ಅರ್ಥ:- ತದ್ಧಿತಾರ್ಥೋತ್ತರ ಪದ ಸಮಾಹಾರೇ ಚ ಎಂಬ ಸೂತ್ರದಲ್ಲಿ ಹೇಳಲಾಗಿರುವ ಮೂರು ವಿಧ ಸಮಾಸಗಳಲ್ಲಿ ಸಂಖ್ಯಾವಾಚಕ ಶಬ್ದವು ಪೂರ್ವಪದವಾಗಿದ್ದರೆ ಆ ಸಮಾಸಕ್ಕೆ ದ್ವಿಗು ಎಂಬ ಸಂಜ್ಞೆಯು ಬರುತ್ತದೆ.

**(ಏಕತ್ವವನ್ನು ಪ್ರತಿಪಾದಿಸುವ ಸೂತ್ರ)**

**ಸೂತ್ರ-944 ದ್ವಿಗುರೇಕವಚನಮ್ (2-4-1)**

ವೃತ್ತಿ:- ದಿಗ್ವರ್ಥಃ ಸಮಾಹಾರೇ ಏಕತ್ವವತ್ ಸ್ಯಾತ್।

ಪ.ಚ್ಛೇ:- ದ್ವಿಗುಃ, ಏಕವಚನಮ್।

ಅರ್ಥ:- ದ್ವಿಗು ಸಮಾಸಕ್ಕೆ ಅರ್ಥ ಸಮಾಹಾರವಾದರೆ ಅದು ಏಕವಚನದಲ್ಲಿ ಇರುತ್ತದೆ.

**(ನಪುಂಸಕ ಲಿಂಗವನ್ನು ವಿಧಿಸುವ ಸೂತ್ರ)**

**ಸೂತ್ರ-945: ಸ ನಪುಂಸಕಮ್ (2-4-17)**

ವೃತ್ತಿ:- ಸಮಾಹಾರೇ ದ್ವಿಗುಃ ದ್ವಂದ್ವಃ ಚ ನಪುಂಸಕಂ ಸ್ಯಾತ್। ಪಞ್ಚಾನಾಂ ಗವಾಂ ಸಮಾಹಾರಃ ಪಞ್ಚಗವಮ್॥

ಅರ್ಥ:- ಸಮಾಹಾರದಲ್ಲಿ ದ್ವಿಗು ಸಮಾಸ ಮತ್ತು ದ್ವಂದ್ವಸಮಾಸಗಳು ನಪುಂಸಕಲಿಂಗದಲ್ಲಿ ಇರುತ್ತವೆ.

ಉದಾ:- ಪಞ್ಚಗವಮ್ (ಐದು ಆಕಳುಗಳ ಸಮೂಹ): ಪಞ್ಚಾನಾಮ್ ಗವಾಮ್ ಸಮಾಹಾರಃ ಎಂಬುದು ಲೌಕಿಕ ವಿಗ್ರಹ ವಾಕ್ಯ. ಪಞ್ಚನ್+ಆಮ್ ಗೋ+ಆಮ್ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಸಂಖ್ಯಾವಾಚಕವಾದ ಪಞ್ಚನ್+ಆಮ್ ಎಂಬುದಕ್ಕೆ ತದ್ಧಿತಾರ್ಥೋತ್ತರಪದಸಮಾಹಾರೇ ಚ ಎಂಬ ಸೂತ್ರದಿಂದ ಸಮಾಹಾರಾರ್ಥದಲ್ಲಿ ಗೋ ಆಮ್ ಎಂಬ ಸುಬಂತದ ಜೊತೆಗೆ ಸಮಾಸವಾಗುತ್ತದೆ. ಪ್ರಾತಿಪದಿಕ ಸಂಜ್ಞೆ ಬಂದಮೇಲೆ ಸುಪ್ ಲೋಪವಾಗಿ ಪಞ್ಚಗೋ ಎಂದಿದ್ದಾಗ ಗೋರತದ್ಧಿತಲುಕಿ ಎಂಬ ಸೂತ್ರದಿಂದ ಟಚ್)

ಅ) ಪ್ರತ್ಯಯವು ಬಂದು ಅವಾದೇಶವಾಗಿ ಪ್ರಕೃತ ಸೂತ್ರಗಳಿಂದ ನಪುಂಸಕಲಿಂಗ ಮತ್ತು ಏಕವಚನಗಳು ಬಂದು ಪ್ರಥಮೈಕ ವಚನದಲ್ಲಿ ಪಞ್ಚಗವಮ್ ಎಂದು ಇರುತ್ತದೆ.

ಇಲ್ಲಿಗೆ ತದ್ಧಿತಾರ್ಥೋತ್ತರ ಪದ ಸಮಾಹಾರೇ ಚ ಎಂಬ ಸೂತ್ರದ ವ್ಯಾಖ್ಯಾನವು ಮುಗಿಯುತ್ತದೆ.

ಸೂಚನೆ:– ದಿಕ್ ವಾಚಕಕ್ಕೆ ಉತ್ತರಪದವು ಪರದಲ್ಲಿದ್ದಾಗ, ಸಂಖ್ಯಾವಾಚಕಕ್ಕೆ ತದ್ಧಿತಾರ್ಥವು ವಿಷಯವಾಗುವಾಗ ಪೂರ್ವಶಾಲಾಪ್ರಿಯಃ, ಷಾಣ್ಮಾತುರಃ ಮೊದಲಾದ ಉದಾಹರಣೆಗಳು ಸಿದ್ಧಾಂತ ಕೌಮುದಿಯಲ್ಲಿ ಕಾಣಬಹುದು.

**(ಸಮಾಸ ವಿಧಾಯಕ ಸೂತ್ರ)**

**ಸೂತ್ರ–946: ವಿಶೇಷಣಂ ವಿಶೇಷ್ಯೇಣ ಬಹುಲಮ್ (2–1–57)**

ವೃತ್ತಿ:– ಭೇದಕಂ ಭೇದ್ಯೇನ ಸಮಾನಾಧಿಕರಣೇನ ಬಹುಲಂ ಪ್ರಾಗ್ವತ್ । ನಿಲಮ್ ಉತ್ಪಲಮ್ ನಿಲೋತ್ಪಲಮ್। ಬಹುಲಗ್ರಹಣಾತ್ ಕ್ವಚಿನ್ನಿತ್ಯಮ್, ಕೃಷ್ಣಸರ್ಪಃ । ಕ್ವಚಿನ್ನ ರಾಮ ಜಾಮದಗ್ನ್ಯಃ॥

ಅ.ವೃ:– ಪೂರ್ವಕಾಲೈಕ ಸರ್ವಜರತ್ ಪುರಾಣನವಕೇವಲಾಃ ಸಮಾನಾಧಿಕರಣೇನ ಎಂಬ ಸೂತ್ರದಿಂದ ಸಮಾನಾಧಿಕರಣೇನ ಎಂಬ ಪದವು ಅನುವೃತ್ತವಾಗುತ್ತದೆ. ಸಮಾಸಃ ತತ್ಪುರುಷಃ. ಸುಪ್, ಸಹ, ಸುಪಾ ಮತ್ತು ವಿಭಾಷಾ ಈ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ:– ವಿಶೇಷಣ ವಾಚಕ ಸುಬನ್ತವು ವಿಶೇಷ್ಯ ವಾಚಕ ಸುಬನ್ತದೊಡನೆ ಬಹುಲವಾಗಿ ಸಮಾಸವಾಗುತ್ತದೆ. ಸಮಾನಾಧಿಕರಣವಾಗಿರುವುದರಿಂದ ಇದು ಕರ್ಮದಾರಯವೆನುಸಿಕೊಳ್ಳುತ್ತದೆ. ವಿಶೇಷಣವು ಭೇದಕವಾಗಿದೆ. ವಿಶೇಷ್ಯವು ಭೇದ್ಯವಾಗಿದೆ.

ವಿವರಣೆ:– ವಿಶಿಷ್ಯತೆ ಅನೇನ ಇತಿ ವಿಶೇಷಣಮ್ ನಿಲಮ್ ಉತ್ಪಲಮ್ ಎಂಬಲ್ಲಿ ನಿಲಮ್ ಎಂಬು ವಿಶೇಷಣ ಪದವು ವಿಶೇಷ್ಯವಾಗಿರುವ ಉತ್ಪಲವನ್ನು ಇತರ ಶುಕ್ಲ ರಕ್ತಾದಿ ಉತ್ಪಲಗಳಿಗಿಂತ ಬೇರ್ಪಡಿಸುತ್ತದೆ. ಆದ್ದರಿಂದ ಇದಕ್ಕೆ ಭೇದಕವೆಂದು ವಿಶೇಷವನ್ನು (ಉತ್ಪಲವನ್ನು) ಭೇದ್ಯವೆಂದು ಹೇಳುತ್ತಾರೆ. ಭೇದಕವು (ವಿಶೇಷಣವು) ಸಮಾನಾಧಿಕರಣವಾದ ಭೇದ್ಯದ ಜೊತೆಗೆ (ವಿಶೇಷದ ಜೊತೆಗೆ) ಬಹುಳದಿಂದ ಸಮಾಸವಾಗುವುದು.

ಉದಾ:– ನಿಲೋತ್ಪಲಮ್(ನೀಲ ಬಣ್ಣದ ಉತ್ಪಲ ಪುಷ್ಪವು):– ನೀಲಮ್ ಚ ತತ್ ಉತ್ಪಲಮ್ ಚ ಎಂಬುದು ಲೌಕಿಕ ವಿಗ್ರಹ ವಾಕ್ಯ. ನಿಲ+ಸು ಉತ್ಪಲ+ಸು ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ಸಮಾಸವಾಗಿದೆ. ಪ್ರಾತಿಪದಿಕ ಸಂಜ್ಞೆಬಂದ ಮೇಲೆ ಸುಪ್ ಲೋಪವಾಗಿ ಸುಬಂತಮಾಡಿದಾಗ ನಿಲೋತ್ಪಲಮ್ ಎಂಬ ರೂಪವು ಸಿದ್ಧವಾಗುತ್ತದೆ. ಇದು ತತ್ಪುರುಷ ಸಮಾಸ. ಆದರೆ ಸಮಾನಾಧಿಕರಣ ಪದಗಳಿಗೆ ಸಮಾಸವಾಗಿರುವುದರಿಂದ ಇದಕ್ಕೆ ಕರ್ಮಧಾರಯ ಸಮಾಸವೆಂದು ಹೆಸರು.

ಬಹುಳ ಶಬ್ದವನ್ನು ಉಪಯೋಗಿಸಿರುವುದರಿಂದ ಕೆಲವು ಕಡೆ ಪ್ರಕೃತ ಸೂತ್ರವು ನಿತ್ಯವಾಗಿ ಇರುತ್ತದೆ. ಕೆಲವು ಕಡೆ ಪ್ರವೃತ್ತಿಸುವುದೇ ಇಲ್ಲ. ಆದುದರಿಂದ ಕೃಷ್ಣಃ

ಸರ್ಪಃ ಎಂಬ ವ್ಯಸ್ತ ಪ್ರಯೋಗವು ಸಾಧುವಲ್ಲ. ರಾಮಃ ಜಾಮದಗ್ನಃ ಎಂಬಲ್ಲಿ ಜಾಮದಗ್ನಃ ಎಂಬುದು ವಿಶೇಷಣವಾದರೂ ಸಮಾಸವು ಆಗುವುದಿಲ್ಲ.

**(ಉಪಮಾನದಿಂದ ಕೂಡಿದ ಕರ್ಮಧಾರಯ ಸೂತ್ರವನ್ನು ವಿಧಿಸುವ ಸೂತ್ರ)**

**ಸೂತ್ರ-947: ಉಪಮಾನಾನಿ ಸಾಮಾನ್ಯವಚನೈಃ (2-1-55)**

ವೃತ್ತಿ:- ಘನ ಇವ ಶ್ಯಾಮೋ ಘನಶ್ಯಾಮಃ

ವಾ॥ ಶಾಕಪಾರ್ಥಿವಾದೀನಾಂ ಸಿದ್ಧಯೇ ಉತ್ತರಪದಲೋಪಸ್ಯ ಉಪಸಂಖ್ಯಾನಮ್।

ಶಾಕಪ್ರಿಯಂ ಪಾರ್ಥಿವಃ ಶಾಕಪಾರ್ಥಿವಃ । ದೇವಪೂಜಕೋ ಬ್ರಾಹ್ಮಣಃ ದೇವ ಬ್ರಾಹ್ಮಣಃ॥

ಅ.ವ್ಯ:- ಪೂರ್ವಕಾಲೈಕ ಸರ್ವಜರತ್ ಪುರಾಣ ನವಕೇವಲಾಃ ಸಮಾನಾಧಿಕರಣೇನ ಎಂಬ ಸೂತ್ರದಿಂದ ಸಮಾನಾಧಿಕರಣೇನ ಎಂಬ ಪದವು ಅನುವೃತ್ತವಾಗುತ್ತದೆ. ಸಮಾಸಃ, ತತ್ಪುರುಷಃ, ಸುಪ್, ಸಹಸುಪಾ, ವಿಭಾಷಾ ಈ ಸೂತ್ರಗಳು ಅಧಿಕಾರಸೂತ್ರಗಳಾಗಿವೆ.

ಅರ್ಥ:- ಉಪಮಾನವಾಚಕ ಶಬ್ದಗಳು ಸಾಧಾರಣಧರ್ಮ ವಾಚಕವಾದ ಸಮಾನಾಧಿಕರಣಗಳಾದ ಸುಬಂತ ಶಬ್ದಗಳ ಜೊತೆಗೆ ಸಮಾಸವಾಗುತ್ತದೆ.

ಉದಾ:- ಘನಶ್ಯಾಮಃ (ಮೋಡದಂತೆ ಶ್ಯಾಮ ಬಣ್ಣವುಳ್ಳವನು):- ಘನಇವ ಶ್ಯಾಮಃ ಎಂಬುದು ಲೌಕಿಕವಿಗ್ರಹವಾಕ್ಯ. ಘನ+ಸು+ಶಾಮ+ಸು ಎಂಬುದು ಅಲೌಕಿಕ ವಿಗ್ರಹವಾಕ್ಯ. ಪ್ರಕೃತ ಸೂತ್ರದಿಂದ ಸಮಾಸವಾಗುತ್ತದೆ. ಇಲ್ಲಿ ಘನಸು ಎಂಬುದು ಉಪಮಾನ ಸಮಾನಧರ್ಮವು ಶ್ಯಾಮಗುಣವಾಗಿದೆ (ಶ್ಯಾಮ+ಸು) ಎರಡು ಪ್ರಥಮಾ ವಿಭಕ್ತಿ ಏಕವಚನದಲ್ಲಿವೆ ಆದ್ದರಿಂದ ಸಮಾನಾಧಿಕರಣವಿದೆ. ಪ್ರಾತಿಪದಿಕ ಸಂಜ್ಞೆ ಬಂದ ಮೇಲೆ ಸುಪೋಧಾತುಪ್ರಾತಿಪದಿಕಯೋಃ ಎಂಬ ಸೂತ್ರದಿಂದ ಸುಪ್ ಪ್ರತ್ಯಯಗಳ ಲೋಪವಾದ ಮೇಲೆ ಘನ+ಶ್ಯಾಮ ಎಂದಿರುತ್ತದೆ. ಉಪಮಾನಾನಿ ಎಂಬ ಪ್ರಥಮಾ ವಿಭಕ್ತಿಯಿಂದ ನಿರ್ದಿಷ್ಟವಾದ ಘನ ಶಬ್ದಕ್ಕೆ ಉಪಸರ್ಜನ ಸಂಜ್ಞೆಯು ಬಂದು ಪೂರ್ವನಿಪಾತವು ಬರುತ್ತದೆ. ಆಗ ಘನಶ್ಯಾಮ ಎಂದಾದ ಮೇಲೆ ಸುಬಂತ ಮಾಡಿದಾಗ ಘನಶ್ಯಾಮಃ ಎಂದು ರೂಪವು ಸಿದ್ಧವಾಗುತ್ತದೆ.

**ವಾರ್ತಿಕ। ಶಾಕಪಾರ್ಥಿವಾದೀನಾಂ ಸಿದ್ಧಯೇ ।**
**ಉತ್ತರಪದಲೋಪಸ್ಯ ಉಪಸಂಖ್ಯಾನಮ್॥**
**ಶಾಕಪ್ರಿಯಃ ಪಾರ್ಥಿವಃ ಶಾಕಪಾರ್ಥಿವಃ ।**
**ದೇವಪೂಜಕೋ ಬ್ರಾಹ್ಮಣೋ ದೇವ ಬ್ರಾಹ್ಮಣಃ ॥**

ಅರ್ಥ:- ಶಾಕಪಾರ್ಥಿವ ಮೊದಲಾದ ಶಬ್ದಗಳ ಸಿದ್ಧಿಗಾಗಿ ಉತ್ತರಪದ ಲೋಪವನ್ನು ಮಾಡಬೇಕು (ಮಧ್ಯಮ ಪದದ ಲೋಪ)

ಉದಾ:- ಶಾಕಪಾರ್ಥಿವಃ (ತರಕಾರಿಯಲ್ಲಿ ಪ್ರಿತಿಯುಳ್ಳ ರಾಜನು): ಶಾಕಃ ಪ್ರಿಯಃ

ಯಸ್ಯ ಸಃ –ಶಾಕಪ್ರಿಯಃ। ಶಾಕಪ್ರಿಯಶ್ಚ ಅಸೌ ಪ್ಪಾರ್ಥಿವಶ್ಚ– ಶಾಕಪ್ರಿಯಪಾರ್ಥಿವಃ ಈ ಶಬ್ದ ಸ್ವರೂಪದಲ್ಲಿ ಶಾಕಪ್ರಿಯಃ ಎಂಬುದು ಬಹುವ್ರೀಹಿ ಸಮಾಸದಲ್ಲಿದೆ ಶಾಕಪ್ರಿಯ ಪಾರ್ಥಿವಃ ಎಂಬುದು ಬಹುವ್ರೀಹಿದಿಂದ ಕೂಡಿದ ವಿಶೇಷಣ ಸಮಾಸವಾಗಿದೆ. ಪ್ರಕೃತ ವಾರ್ತಿಕದಿಂದ ಶಾಕಪ್ರಿಯ ಎಂಬ ಬಹ್ರುವಿಹಿ ಸಮಾಸದಲ್ಲಿ ಉತ್ತರ ಪದವಾದ ಪ್ರಿಯ ಶಬ್ದವು ಲೋಪವಾಗುವುದರಿಂದ ಶಾಕಪಾರ್ಥಿವಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ:– ದೇವಬ್ರಾಹ್ಮಣಃ (ದೇವರನ್ನು ಪೂಜಿಸುವ ಬ್ರಾಹ್ಮಣ): ದೇವಾನಾಮ್ ಪೂಜಕಃ ದೇವಪೂಜಕಃ. ದೇವಪೂಜಕಃ ಬ್ರಾಹ್ಮಣಃ ದೇವಬ್ರಾಹ್ಮಣಃ ಇಲ್ಲಿ ದೇವ ಪೂಜಕಃ ಎಂಬುದು ಷಷ್ಠೀ ತತ್ಪುರುಷ ಸಮಾಸವಾಗಿದೆ. ದೇವ ಪೂಜಕಃ ಬ್ರಾಹ್ಮಣಃ ಎಂಬುದು ಷಷ್ಠೀ ತತ್ಪುರುಷದಿಂದ ಕೂಡಿದ ವಿಶೇಷಣ ಸಮಾಸವಾಗಿದೆ. ಈ ವಾರ್ತಿಕದಿಂದ ಷಷ್ಠೀ ತತ್ಪುರುಷ ಸಮಾಸದಲ್ಲಿ ಉತ್ತರಪದಾದ ಪೂಜಕ ಶಬ್ದವು ಲೋಪಹೊಂದಿ ದೇವ ಬ್ರಾಹ್ಮಣಃ ಪದವು ಸಿದ್ಧವಾಗುತ್ತದೆ.

**(ನಞ ಸಮಾಸವನ್ನು ವಿಧಿಸುವ ಸೂತ್ರ)**

**ಸೂತ್ರ–948: ನಞ್(2–2–6)**

ವೃತಿ:– ನಞ್ ಸುಪಾ ಸಹ ಸಮಸ್ಯತೇ

ಅ.ವೃ:– ಸಹಸುಪಾ ಎಂಬ ಸೂತ್ರದಿಂದ ಸುಪಾ ಎಂಬ ಪದವು ಅನುವೃತ್ತವಾಗುತ್ತದೆ. ಹಾಗೂ ತತ್ಪುರುಷಃ ಮತ್ತು ಸಮಾಸಃ ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ:– ನಞ್ ಎಂಬ ಅವ್ಯಯವು ಸಮರ್ಥವಾದ ಸುಬನ್ತದ ಜೊತೆಗೆ ಸಮಾಸವಾಗುತ್ತದೆ. ಇದು ಸಹ ತತ್ಪುರುಷ ಸಮಾಸವಾಗಿದೆ. ಇದು ನಞ್ ಪ್ರಥಮಾಂತವಾಗಿರುವುದರಿಂದ ಇದರಿಂದ ನಿರ್ದಿಷ್ಟವಾದ ನ ಶಬ್ದವು ಉಪಸರ್ಜನ ವಾಗಿದೆ.

**(ನಕಾರ ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ–949: ನಲೋಪೋ ನಞಃ (6–3–73)**

ವೃತ್ತಿ:– ನಞಃ ನಸ್ಯಲೋಪಃ ಉತ್ತರಪದೇ । ನ ಬ್ರಾಹ್ಮಣಃ ಅಬ್ರಾಹ್ಮಣಃ।

ಪ.ಚ್ಛೇ:– ನಲೋಪಃ, ನಞಃ।

ಅ.ವೃ:– ಅಲುಗುತ್ತರಪದೇ ಎಂಬ ಸೂತ್ರದಿಂದ ಉತ್ತರಪದೇ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ:– ಉತ್ತರಪದವು ಪರದಲ್ಲಿದ್ದಾಗ ನಞ್ ಶಬ್ದದ ನ್‌ಕಾರಕ್ಕೆ ಲೋಪವು ಬರುತ್ತದೆ.

ಉದಾ:– ಅಬ್ರಾಹ್ಮಣಃ (ಬ್ರಾಹ್ಮಣನಿಗಿಂತ ಭಿನ್ನನಾದನು):– ನ ಬ್ರಾಹ್ಮಣಃ ಎಂಬುದು

ಲೌಕಿಕವಿಗ್ರಹ ವಾಕ್ಯ. ನ+ಬ್ರಾಹ್ಮಣ+ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ನಞ್ ಎಂಬ ಸೂತ್ರದಿಂದ ಸಮಾಸವಾಗಿದೆ. ಪ್ರಾತಿಪದಿಕ ಸಂಜ್ಞೆಯು ಬಂದು ಸುಪ್ ಲೋಪವಾದ ಮೇಲೆ ನ+ಬ್ರಾಹ್ಮಣ ಎಂದಿರುತ್ತದೆ. ನ ಎಂಬ ಶಬ್ದಕ್ಕೆ ಉಪಸರ್ಜನ ಸಂಜ್ಞೆಯು ಬಂದು ಅದಕ್ಕೆ ಪೂರ್ವನಿಪಾತವು ಬರುತ್ತದೆ. ಪ್ರಕೃತ ಸೂತ್ರದಿಂದ ಬ್ರಾಹ್ಮಣ ಎಂಬ ಪದವು (ವ್ಯಂಜನಾದಿಯಾದ ಪದವು) ಉತ್ತರಪದದಲ್ಲಿ ಇರುವುದರಿಂದ ನಕಾರದಲ್ಲಿರುವ ನ್‌ಕಾರಕ್ಕೆ ಲೋಪಬಂದು ಅ ಮಾತ್ರ ಉಳಿದು ಅ+ಬ್ರಾಹ್ಮಣ= ಅಬ್ರಾಹ್ಮಣ ಎಂದಾಗಿ ಸುಬಂತ ಮಾಡಿದಾಗ ಅಬ್ರಾಹ್ಮಣಃ ಎಂದು ರೂಪವು ಸಿದ್ಧವಾಗುತ್ತದೆ.

**(ನುಟ್ ಆಗಮವನ್ನು ವಿಧಿಸುವ ಸೂತ್ರ)**

**ಸೂತ್ರ-950: ತಸ್ಮಾನ್ನುಡಚಿ (6-3-74)**

ವೃತ್ತಿ:- ಲುಪ್ತನಕಾರಾತ್ ನಞಃ ಉತ್ತರ ಪದಸ್ಯ ಅಜಾದೇಃ ನುಟ್-ಆಗಮಃ ಸ್ಯಾತ್ । ಅನಶ್ವಃ। ನೈಕಧಾ ಇತ್ಯಾದೌ ತು ನ ಶಬ್ದೇನ ಸಹ ಸುಪ್ಸುಪೇತಿ ಸಮಾಸಃ॥

ಪ.ಚ್ಛೇ:- ತಸ್ಮಾತ್, ನುಟ್, ಅಚಿ।

ಅ.ವೃ:- ನಲೋಪೋ ನಞಃ ಎಂಬ ಸೂತ್ರದಿಂದ ನಞಃ ಎಂಬ ಪದವು ಹಾಗೂ ಅಲುಗುತ್ತರಪದೇ ಎಂಬ ಸೂತ್ರದಿಂದ ಉತ್ತರಪದೇ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ:- ನಕಾರ ಲೋಪವಾದ ನಞ್ ಶಬ್ದದ ಪರದಲ್ಲಿ ಅಜಾದಿಯಾದ ಉತ್ತರಪದವಿದ್ದರೆ ನುಟ್ (ನ್) ಆಗಮವು ಬರುತ್ತದೆ ಇದು ಟಿತ್ ಆದುದರಿಂದ ಉತ್ತರಪದದ ಆದ್ಯವಯವಾಗಿ ಬರುತ್ತದೆ.

ಉದಾ:- ಅನಶ್ವಃ (ಅಶ್ವಕ್ಕಿಂತ ಭಿನ್ನವಾದ ಪ್ರಾಣಿ): ನ ಅಶ್ವ ಎಂಬುದು ಲೌಕಿಕವಿಗ್ರಹ ವಾಕ್ಯ. ನ+ಅಶ್ವ+ಸು ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಇದರಲ್ಲಿ ನಞ್ ಸೂತ್ರದಿಂದ ಸಮಾಸವಾಗಿದೆ. ಪ್ರಾತಿಪದಿಕ ಸಂಜ್ಞೆಬಂದ ಮೇಲೆ ಸುಪ್ ಲೋಪಬಂದು ನ ಅಶ್ವ ಎಂದಿರುತ್ತದೆ. ನ ಶಬ್ದಕ್ಕೆ ಉಪಸರ್ಜನ ಸಂಜ್ಞೆಯು ಬಂದು ಪೂರ್ವನಿಪಾತವಾಗಿರುತ್ತದೆ. ನಲೋಪೋ ನಯಃ ಎಂಬ ಸೂತ್ರದಿಂದ ಆಶ್ವ ಎಂಬ ಉತ್ತರಪದವು ಪರದಲ್ಲಿಯಿರೋಣದರಿಂದ ನಕಾರದ ನ್‌ಕಾರಕ್ಕೆ ಲೋಪಬಂದು ಅ+ಅಶ್ವ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ನುಟ್ (ನ್)ಆಗಮವು ಬಂದು ಅ+ನ್+ಅಶ್ವ= ಅನಶ್ವ ಎಂದಿದ್ದಾಗ ಸುಬಂತ ಮಾಡಿದ ಮೇಲೆ ಅನಶ್ವಃ ಎಂದು ರೂಪವು ಸಿದ್ಧವಾಗಿತ್ತದೆ.

ನೈಕಧಾ ಇತ್ಯಾದೌ ತು ನ ಶಬ್ದೇನ ಸಹ ಸುಪ್ಸುಪೇತಿ ಸಮಾಸಃ :- ನ ಏಕದಾ ಎಂಬಲ್ಲಿ ನುಟ್ ಬಂದು ಅನೇಕಧಾ ಎಂದಾಗಬೇಕಾಗಿತ್ತು. ಆದರೆ ನೈಕದಾ ಎಂದು ಪ್ರಯೋಗವು ಮಾಡಲಾಗಿದೆ. ಅದಕ್ಕೆ ಕಾರಣ ನ ಮತ್ತು ನೈ ಇವು ಭಿನ್ನಭಿನ್ನ ನಿಷೇದಾರ್ಥಕ ಅವ್ಯಯಗಳಾಗಿವೆ. ನಞ್ ಎಂಬುದು ಸಮಾಸವಿಧಾಯಕ ಸೂತ್ರ ನೈ ಜೊತೆಗೆ ಸಮಾಸವಾಗಿರುತ್ತದೆ. ನ ಶಬ್ದದ ಜೊತೆಗೆ ಆಗಿರುವುದಿಲ್ಲ. ನಲೋಪೋ

ನಯಃ ಎಂಬುದು ಸಹ ನೈಯಲ್ಲಿರುವ ನಕಾರಕ್ಕೆ ಲೋಪವು ಹೇಳುತ್ತದೆ(ಅ)ಮಾತ್ರ ಉಳಿಯುತ್ತದೆ. ನಕಾರದ ನ್‌ಕಾರಕ್ಕೆ ಲೋಪವು ಹೇಳಲಿಲ್ಲ. ಪ್ರಕೃತ ಸೂತ್ರವು ಸಹ ನಞ್‌ಗಿಂತ ಪರದಲ್ಲಿ ಅಜಾದಿ ಶಬ್ದವು ಪರದಲ್ಲಿದ್ದಾಗ ನುಡಾಗಮವು ಬರುತ್ತದೆ ಎಂದು ಹೇಳಲಾಗಿದೆ. ನ್‌ಕಾರದ ಪರದಲ್ಲಿ ಎಂದು ಹೇಳಲಾಗಿಲ್ಲ. ನೈಕಥಾ ಎಂಬಲ್ಲಿ ನ ಏಕಥಾ ಎಂಬಲ್ಲಿ ನ್‌ಕಾರವಿದೆ ಆದರೆ ನ್ ಪ್ರತ್ಯಯದ ನ್ ಕಾರವಲ್ಲ. ಆದರೆ ಅದು ಬೇರೆಯೇ ಶಬ್ದವಾಗಿದೆ. ಆದುದರಿಂದ ನಞ್ ಜೊತೆಗೆ ಸಮಾಸವಾಗುವುದಿಲ್ಲ.ಜೊತೆಗೆ ನ ಕಾರದ ಲೋಪ ಮತ್ತು ನುಡಾಗಮ ಇವೆರಡು ಒಮ್ಮೆಲೆ ಆಗುವುದಿಲ್ಲ.ಆದ್ದರಿಂದ ಸಹಸುಪಾ ಸೂತ್ರದಿಂದ ಸಮಾಸ ಮಾಡಿದಾಗ ನೈಕದಾ ಎಂದಾಗುತ್ತದೆ.

**(ಗತಿ ಸಮಾಸವನ್ನು ವಿಧಿಸುವ ಸೂತ್ರ)**

**ಸೂತ್ರ-951: ಕುಗತಿ ಪ್ರಾದಯಃ (2-2-18)**

ವೃತ್ತಿ:-ಏತೇ ಸಮರ್ಥೇನ ನಿತ್ಯಂ ಸಮಸ್ಯನ್ತೇ। ಕುತ್ಸಿತಃ ಪುರುಷಃ ಕುಪುರುಷಃ

ಅ.ವೃ:- ನಿತ್ಯಂ ಕ್ರೀಡಾ ಜೀವಿಕಯೋಃ ಎಂಬ ಸೂತ್ರದಿಂದ ನಿತ್ಯಂ ಎಂಬ ಪದವು ಅನುವೃತ್ತವಾಗುತ್ತದೆ. ಸಮಾಸಃ, ತತ್ಪುರುಷಃ, ಸುಪ್, ಸಹ, ಸುಪಾ ಮತ್ತು ವಿಭಾಷಾ ಇವು ಅನುವೃತ್ತವಾಗುತ್ತವೆ. ಮತ್ತು ಅಧಿಕಾರ ಸೂತ್ರವಾಗಿವೆ.

ಅರ್ಥ:- ಸಮರ್ಥವಾದ ಸುಬನ್ತ ಶಬ್ದಗಳ ಜೊತೆಗೆ ಕು-ಶಬ್ದ, ಗತಿ ಸಂಜ್ಞೆಯುಳ್ಳ ಶಬ್ದ ಮತ್ತು ಪ್ರ ಮೊದಲಾದವುಗಳ ಸಮಾಸವು ಆಗುತ್ತದೆ. ಈ ಸೂತ್ರದಿಂದ ಉಂಟಾಗುವ ಕಾರ್ಯಕ್ಕೆ ಗತಿ-ಸಮಾಸ ಅಥವಾ ಪ್ರಾದಿ-ಸಮಾಸವೆಂದು ಹೇಳಲಾಗುತ್ತದೆ. ಪ್ರಕೃತ ಸೂತ್ರದಿಂದ ಇದು ನಿತ್ಯ ಸಮಾಸವಾಗಿರುತ್ತದೆ.

ಉದಾ:- ಕುಪುರುಷಃ (ಕೆಟ್ಟ ಪುರುಷನು): ಕುತ್ಸಿತಃ ಪುರುಷಃ ಎಂಬುದು ಲೌಕಿಕ ವಿಗ್ರಹ ವಾಕ್ಯ. ಕು+ಪುರುಷ+ಸು ಎಂಬುದು ಅಲೌಕಿ ವಿಗ್ರಹವಾಕ್ಯ. ಕುತ್ಸಿತಾರ್ಥದಲ್ಲಿ ಕು ಶಬ್ದವು ಬಂದಿದೆ. ಪ್ರಕೃತ ಸೂತ್ರದಿಂದ ಸಮಾಸವಾಗಿದೆ. ಪ್ರಾತಿಪದಿಕ ಸಂಜ್ಞೆ ಬಂದ ಮೇಲೆ ವಿಭಕ್ತಿ ಲೋಪವಾದ ಮೇಲೆ ಕು+ಪುರುಷ ಎಂದಿರುತ್ತದೆ. ಇಡೀ ಸೂತ್ರವೇ ಪ್ರಥಮಾಂತದಲ್ಲಿ ಇರುವುದರಿಂದ ಇದರಿಂದ ನಿರ್ದಿಷ್ಟವಾದ ಕು ಶಬ್ದಕ್ಕೆ ಉಪಸರ್ಜನ ಸಂಜ್ಞೆಯು ಬಂದು ಪೂರ್ವನಿಪಾತವಾದ ಮೇಲೆ ಏಕದೇಶವಿಕೃತ-ನ್ಯಾಯದಿಂದ ಪ್ರಾತಿಪದಿಕವನ್ನಾಗಿ ಭಾವಿಸಿ ಸುಬಂತ ಮಾಡಿದಾಗ ಕುಪುರುಷಃ ಎಂದು ರೂಪವು ಸಿದ್ಧವಾಗುತ್ತದೆ. ಕ್ರಿಯೆಯ ಸಂಬಂಧವಿದ್ದಾಗ ಪ್ರ-ಮೊದಲಾದವುಗಳಿಗೆ ಉಪಸರ್ಗಾಃ ಕ್ರಿಯಾಯೋಗೇ ಎಂಬ ಸೂತ್ರದಿಂದ ಉಪಸರ್ಗ ಸಂಜ್ಞೆಯು ಬಂದು ಅದು ಗತಿಶ್ಚ ಎಂಬ ಸೂತ್ರದಿಂದ ಗತಿ ಸಂಜ್ಞೆಯನ್ನು ಹೊಂದುತ್ತದೆ. ಈ ಸಂಜ್ಞಾಸಲುವಾಗಿ ಬೇರೆ ಸೂತ್ರಗಳು ಪಠಿತವಾಗಿವೆ.

**(ಗತಿ ಸಂಜ್ಞೆಯನ್ನು ವಿಧಿಸುವ ಸಂಜ್ಞಾ ಸೂತ್ರ)**

**ಸೂತ್ರ-952 : ಊರ್ಯಾದಿ ಚ್ವಿಡಾಚಶ್ಚ (1-4-61)**

ವೃತ್ತಿ:- ಊರ್ಯಾದ ಯಃ ಚ ಚ್ವ್ಯಂನ್ತಾಃ ಡಾಜನ್ತಾಃ ಚ ಕ್ರಿಯಾಯೋಗೇ ಗತಿ ಸಂಜ್ಞಾಃ ಸ್ಯುಃ । ಊರೀಕೃತ್ಯ। ಶುಕ್ಲೀಕೃತ್ಯ। ಪಟಪಟಾಕೃತ್ಯ। ಸುಪುರುಷಃ ।

ವಾರ್ತಿಕ:- ಪ್ರಾದಯೋ ಗತಾದ್ಯರ್ಥೇ ಪ್ರಥಮಯಾ ।

ಪ್ರಗತಃ ಆಚಾರ್ಯಃ ಪ್ರಾಚಾರ್ಯಃ

ವಾರ್ತಿಕ ಅತ್ಯಾದಯಃ ಕ್ರಾನ್ತಾದ್ಯರ್ಥೇ ದ್ವಿತೀಯಯಾ ಅತಿಕ್ರಾನ್ತಃ ಮಾಲಾಮ್ ಇತಿ ವಿಗ್ರಹೇ

ಪ.ಚ್ಛೇ:-ಊರ್ಯಾದಿಚ್ವಿಡಾಚಃ, ಚ।

ಅ.ವೃ:- ಉಪಸರ್ಗಾಃ ಕ್ರಿಯಾಯೋಗೇ ಎಂಬ ಸೂತ್ರದಿಂದ ಕ್ರಿಯಾಯೋಗೇ ಎಂಬ ಪದವು ಗತಿಶ್ಚ ಎಂಬ ಸೂತ್ರದಿಂದ ವಚನವಿಪರಿಣಾಮ ಮಾಡಿ ಗತಯಃ ಎಂಬ ಪದವು ಅನುವೃತ್ತವಾಗಿವೆ.

ಅರ್ಥ:- ಊರ್ಯಾದಿ (ಊರಿ ಮೊದಲಾದ) ಗಣಪಠಿತ ಶಬ್ದಗಳು ಚ್ವಿ ಪ್ರತ್ಯಯಾಂತ ಶಬ್ದಗಳು ಡಾಚ್-ಪ್ರತ್ಯಯಾಂತ ಶಬ್ದಗಳು ಕ್ರಿಯಾಯೋಗವಿದ್ದಾಗ ಗತಿ-ಸಂಜ್ಞೆಯನ್ನು ಹೊಂದುತ್ತವೆ.

ಉದಾ:- ಊರೀಕೃತ್ಯ (ಸ್ವೀಕಾರ ಮಾಡಿ): ಊರೀ ಎಂಬುದು ಅವ್ಯಯವು ಕ್ತ್ವಾ ಪ್ರತ್ಯಯಾಂತವಾದ ಕೃ ಧಾತುವಿನ ಜೊತೆಗೆ ಸಂಬಂಧಹೊಂದಿರುವುದರಿಂದ ಪ್ರಕೃತ ಸೂತ್ರದಿಂದ ಇದಕ್ಕೆ ಗತಿ-ಸಂಜ್ಞೆಯು ಬರುತ್ತದೆ. ಕುಗತಿ ಪ್ರಾದಯಃ ಎಂಬ ಸೂತ್ರದಿಂದ ಇದಕ್ಕೆ ಕೃತ್ವಾ ಎಂಬ ಸಮರ್ಥ-ಪದದ ಜೊತೆಗೆ ಸಮಾಸವಾಗುತ್ತದೆ. ಸಮಾಸೇ ನಞಪೂರ್ವೆಕ್ತ್ವೋಲ್ಯಪ್ ಎಂಬ ಸೂತ್ರದಿಂದ ಕ್ತ್ವಾ-ಗೆ ಲ್ಯಪ್ ಆದೇಶವು ಬಂದು ಊರೀಕೃತ್ಯ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ:- ಶುಕ್ಲೀಕೃತ್ಯ (ಬಿಳುಪಾಗಿ ಇಲ್ಲದ್ದನ್ನು ಬಿಳಪಾಗಿ ಮಾಡಿ) ಅಶುಕ್ಲಮ್ ಶುಕ್ಮಮ್ ಕೃತ್ವಾ ಶುಕ್ಲೀಕೃತ್ಯ ಎಂಬುದು ಲೌಕಿಕ ವಿಗ್ರಹವಾಕ್ಯ ಶುಕ್ಲಮ್ ಕೃತ್ವಾ ಎಂದಿದ್ದಾಗ ಕೃಭ್ವಸ್ತಿಯೋಗೇ ಸಮ್ಪದ್ಯಕರ್ತರಿ ಚ್ವಿಃ ಎಂಬ ಸೂತ್ರದಿಂದ ಶುಕ್ಲ ಶಬ್ದಕ್ಕೆ ಚ್ವಿ ಪ್ರತ್ಯಯವು ಬಂದಿದೆ. ಅಭೂತತದ್‌ಭಾವೇ ಚ್ವಿಃ ಇತಿ ಅವ್ಯಕ್ತಾಯಾಮ್ ಎಂಬ ವಾರ್ತಿಕದಿಂದ ಈ ಪ್ರತ್ಯಯವು ಅಭೂತ ತದ್‌ಭಾವಾರ್ಥದಲ್ಲಿ ಬಂದಿದೆ. ಚ್ವಿನಲ್ಲಿ ಚ್‌ಕಾರವು ಚುಟೂ ಎಂಬ ಸೂತ್ರದಿಂದ ಇತ್ ಸಂಜ್ಞೆಯನ್ನುಹೊಂದಿ ಲೋಪವಾಗುತ್ತದೆ. ವೇರಪೃಕ್ತಸ್ಯ ಎಂಬ ಸೂತ್ರದಿಂದ ವ ಕಾರವು ಲೋಪವಾಗುತ್ತದೆ. ಅಸ್ಯಚ್ವೌ ಎಂಬ ಸೂತ್ರದಿಂದ ಅಕಾರಕ್ಕೆ ಇಕಾರವು ಬರುತ್ತದೆ. ಆಗ ಶುಕ್ಲೀ ಎಂಬ ಶಬ್ದವು ಸಿದ್ಧಿಸುತ್ತದೆ. ಇದಕ್ಕೆ ಪ್ರಕೃತ ಸೂತ್ರದಿಂದ ಗತಿ ಸಂಜ್ಞೆಯು ಬರುತ್ತದೆ. ಪೂರ್ವಸೂತ್ರದಿಂದ ಕೃತ್ವಾ ಶಬ್ದದ ಜೊತೆಗೆ ಸಮಾಸವಾಗುತ್ತದೆ. ಸಮಾಸೇ ನಞಪೂರ್ವೇಕ್ತ್ವೋಲ್ಯಪ್ ಎಂಬ ಸೂತ್ರದಿಂದ ಕ್ತ್ವಾಗೆ ಲ್ಯಪ್ ಆದೇಶವು ಬರುತ್ತದೆ. ಇದರಿಂದ ಶುಕ್ಲೀಕೃತ್ಯ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ:- ಪಟಪಟಾಕೃತ್ಯ (ಪಟತ್ ಎಂಬ ರೀತಿಯಲ್ಲಿ ಶಬ್ದವನ್ನು ಮಾಡಿ):

ಪಟತ್ ಪಟತ್ ಇತಿ ಕೃತ್ವಾ ಎಂಬುದು ಲೌಕಿಕವಿಗ್ರಹ ವಾಕ್ಯ. ಪಟತ್ ಕೃತ್ವಾ ಎಂದಿದ್ದಾಗ ಅವ್ಯಕ್ತಧ್ವನಿಯನ್ನು ಅನುಕರಣ ಮಾಡುವ ಪಟತ್ ಎಂಬುದಕ್ಕೆ ಕೃ ಧಾತುವಿನ ಜೊತೆಗೆ ಸಂಬಂಧವಾಗೋಣದರಿಂದ ಅವ್ಯಕ್ತಾನುಕರಣಾತ್ ದ್ವಚ್-ದ್ವಜಪರಾ ರ್ಧಾತ್

ಅನಿತೋ ಡಾಚ್ ಎಂಬ ಸೂತ್ರದಿಂದ ಡಾಚ್ (ಆ) ಪ್ರತ್ಯಯವು ಬರುತ್ತದೆ. ಡಾಚಿ ಚ ದ್ವೇಬಹುಳಮ್ ಎಂಬ ವಾರ್ತಿಕದಿಂದ ಪಟತ್ ಎಂಬುದಕ್ಕೆ ದ್ವಿತ್ವವು ಬಂದು ಪಟತ್ ಪಟತ್ ಎಂದಾಗುತ್ತದೆ. ಪಟತ್ ಪಟತ್ ಆ+ಕೃತ್ವಾ ಎಂದಿದ್ದಾಗ ಟೇಃ ಎಂಬ ಸೂತ್ರದಿಂದ ಟಿ ಲೋಪವು ಬಂದು ಪಟತ್ ಪಟಾ ಕೃತ್ವಾ ಎಂದಾಗಿ ನಿತ್ಯಃ ಆಮ್ರೇಡಿತೇಡಾಚಿ ಎಂಬ ಸೂತ್ರದಿಂದ 'ತ'ಕಾರ 'ಪ'ಕಾರಗಳಿಗೆ ಏಕಾದೇಶವು ಬಂದು ಪಟ ಪಟಾ ಎಂದಿರುತ್ತದೆ. ಡಾದ್ಯಂತವಾದ ಈ ಶಬ್ದಕ್ಕೆ ಪ್ರಕೃತ ಸೂತ್ರದಿಂದ ಗತಿ ಸಂಜ್ಞೆಯು ಬರುವುದರಿಂದ ಪೂರ್ವ ಸೂತ್ರದಿಂದ ಇದಕ್ಕೆ ಕೃತ್ವಾ ಶಬ್ದದ ಜೊತೆಗೆ ಸಮಾಸವಾಗುತ್ತದೆ. ಅನಂತರ ಲ್ಯಬಾದೇಶವು ಬಂದು ಪಟಪಟಾಕೃತ್ಯ ಎಂದು ರೂಪವು ಸಿದ್ಧವಾಗುತ್ತದೆ.

ಉದಾ:- ಸುಪುರುಷಃ (ಒಳ್ಳೆಯ ಮನುಷ್ಯನು)ಶೋಭನಃ ಪುರುಷಃ ಎಂಬುದು ಲೌಕಿಕವಿಗ್ರಹ ವಾಕ್ಯ. ಸು ಎಂಬುದು ಪ್ರಾದಿಗಣಕ್ಕೆ ಸೇರಿದ್ದು ಕುಗತಿ ಪ್ರಾದಯಃ ಎಂಬ ಸೂತ್ರದಿಂದ ಪುರುಷ+ಸು ಎಂಬುದರ ಜೊತೆಗೆ ಸಮಾಸವಾಗುತ್ತದೆ.

ಪ್ರಾದಿಗಳು ಕೂಡ ಗತಿ ಸಂಜ್ಞೆಯುಳ್ಳದ್ದರಿಂದ ಮತ್ತೆ ಕುಗತಿ ಪ್ರಾದಯಃ ಎಂಬ ಸೂತ್ರದಲ್ಲಿ ಪ್ರಾದಿಗಳನ್ನು ಹೇಳುವುದು ಅನಾವಶ್ಯಕವೆಂದು ಭಾವಿಸಬಾರದು. ಏಕೆಂದರೆ ಸುಪುರುಷಃ ಇತ್ಯಾದಿ ಉದಾಹರಣೆಗಳಲ್ಲಿ ಸು ಮೊದಲಾದವುಗಳಿಗೆ ಧಾತುವಾಚಕ ಕ್ರಿಯಾಯೋಗವು ಇಲ್ಲದಿರುವುದರಿಂದ ಗತಿ ಸಂಜ್ಞೆಯು ಇಲ್ಲವಾದ್ದರಿಂದ ಆಗಲೂ ಸಹ ಸಮಾಸವು ಆಗುವುದಕ್ಕೆ ಅವಕಾಶವಿರೋಣದರಿಂದ ಪ್ರಾದಿಗಳು ಗ್ರಹಿಸಲಾಗಿವೆ. ಸೂತ್ರದಲ್ಲಿ ಸಾಮಾನ್ಯರೂಪದಲ್ಲಿ ಸುಬಂತದ ಜೊತೆಗೆ ಸಮಾಸಹೊಂದುವವು ಎಂದು ಹೇಳಲಾದ ಈ ಪ್ರಾದಿಗಳು ಯಾವಯಾವ ಅರ್ಥಗಳಲ್ಲಿ ಸಮಾಸವನ್ನು ಹೊಂದವವೋ ಎಂಬುವ ವಾರ್ತಿಕಗಳನ್ನು ಕೆಳಗೆ ಕೊಡಲಾಗಿದೆ.

ವಾರ್ತಿಕ:- ಪ್ರಾದಯೋ ಗತಾದ್ಯರ್ಥೇ ಪ್ರಥಮಯಾ ।

ಪ್ರಗತಃ ಆಚಾರ್ಯಃ ಪ್ರಾಚಾರ್ಯಃ

1ನೇ ವಾರ್ತಿಕ : ಗತ ಮೊದಲಾದ ಅರ್ಥದಲ್ಲಿ ವರ್ತಮಾನ ಪ್ರ ಮೊದಲಾದವು ಪ್ರಥಮಾಂತ ಸುಬಂತದ ಜೊತೆಗೆ ನಿತ್ಯ ಸಮಾಸವಾಗುತ್ತದೆ. ಅದು ತತ್ಪುರುಷ.

ಉದಾ:- ಪ್ರಾಚಾರ್ಯಃ (ದೂರಹೋಗಿರುವ ಆಚಾರ್ಯ):- ಗತಃ ಆಚಾರ್ಯಃ ಎಂಬುದು ಲೌಕಿಕ ಅಸ್ವಪದ ವಿಗ್ರಹ ವಾಕ್ಯ. ಪ್ರಗತಃ ಎಂಬುದರಲ್ಲಿ ಗತಃ ಎಂಬುದು ಪ್ರ ಎಂಬುದಕ್ಕೆ ವ್ಯಾಖ್ಯಾನ ರೂಪವಾಗಿದೆ. ಪ್ರ ಎಂಬುದಕ್ಕೆ ಗತ ಎಂಬುದರ ಜೊತೆಗೆ ಕುಗತಿ ಪ್ರಾದಯಃ ಸೂತ್ರದಿಂದ ಸಮಾಸವಾಗಿ ಪ್ರಾಚಾರ್ಯಃ ರೂಪವು ಸಿದ್ಧವಾಗುತ್ತದೆ.

ವಾರ್ತಿಕ ಅತ್ಯಾದಯಃ ಕ್ರಾನ್ತಾದ್ಯರ್ಥೇ ದ್ವಿತೀಯಯಾ ।

ಅತಿಕ್ರಾನ್ತಃ ಮಾಲಾಮ್ ಇತಿ ವಿಗ್ರಹೇ।

2ನೇ ವಾರ್ತಿಕ: ಕ್ರಾನ್ತ (ದಾಟಿದ) ಈ ಮೊದಲಾದ ಅರ್ಥದಲ್ಲಿ ವರ್ತಮಾನ ಅತಿ ಮೊದಲಾದ ನಿಪಾತಗಳು ದ್ವಿತೀಯಾಂತ ಸಮರ್ಥವಾದ ಸುಬನ್ತಗಳ ಜೊತೆಗೆ ಸಮಾಸವಾಗುತ್ತದೆ. ಅದು ತತ್ಪುರುಷ.

ಉದಾ:- ಅತಿಮಾಲಃ:- (ಮಾಲ ಎಂಬ ಪ್ರದೇಶವನ್ನು ದಾಟಿದವನು):- ಕ್ರಾನ್ತಃ ಮಾಲಾಮ್ ಎಂಬದು ಅಸ್ವಪದ ವಿಗ್ರಹವಾಕ್ಯ. ಅತಿ ಮಾಲಾ+ಅಮ್ ಎಂದಿದ್ದಾಗ ಕುಗತಿ ಪ್ರಾದಯಃ ಎಂಬ ಸೂತ್ರದಿಂದ ಸಮಾಸವಾಗುತ್ತದೆ. ಪ್ರಾತಿಪದಿಕ ಸಂಜ್ಞೆಬಂದ ಮೇಲೆ ಸುಪ್ ಲೋಪವಾದ ಮೇಲೆ ಅತಿ ಮಾಲಾ ಎಂದಿದ್ದಾಗ-

**(ಉಪಸರ್ಜನ ಸಂಜ್ಞಾ ವಿಧಾಯಕ ಸೂತ್ರ)**

**ಸೂತ್ರ-953: ಏಕವಿಭಕ್ತಿ ಚಾಪೂರ್ವ ನಿಪಾತೇ (1-2-44)**

ವೃತ್ತಿ:- ವಿಗ್ರಹೇ ಯತ್ ನಿಯತವಿಭಕ್ತಿಕಂ ತದುಪಸರ್ಜನಸಂಜ್ಞಂ ಸ್ಯಾತ್ । ನ ತು ತಸ್ಯ ಪೂರ್ವನಿಪಾತಃ ।

ಪ.ಚ್ಛೇ:- ಏಕವಿಭಕ್ತಿ, ಚ , ಅಪೂರ್ವನಿಪಾತೇ।

ಅ.ವೃ:- ಪ್ರಥಮಾ ನಿರ್ದಿಷ್ಟಮ್ ಸಮಾಸ ಉಪಸರ್ಜನಮ್ ಎಂಬ ಸೂತ್ರದಿಂದ ಸಮಾಸೇ ಮತ್ತು ಉಪಸರ್ಜನಂ ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ:- ವಿಗ್ರಹದಲ್ಲಿ ಯಾವುದು ನಿಯತ ವಿಭಕ್ತಿವುಳ್ಳದಾಗಿರುತ್ತದೇಯೋ ಅದಕ್ಕೆ ಉಪಸರ್ಜನ ಸಂಜ್ಞೆಯು ಬರುತ್ತದೆ. ಆದರೆ ಅದಕ್ಕೆ ಪೂರ್ವನಿಪಾತವು ಬರುವುದಿಲ್ಲ. ಕ್ರಾನ್ತಃ ಮಾಲಾಮ್ ಮೊದಲಾದವುಗಳಲ್ಲಿ ಮಾಲಾಮ್ ಎಂಬುದರ ವಿಭಕ್ತಿಯು ಯಾವಾಗಲೂ ದ್ವಿತಿಯಾದಲ್ಲಿಯೇ ಇರುತ್ತದೆ. ಬದಲಾವಣೆಯಾಗುವುದಿಲ್ಲ. ಆದ್ದುದ್ದರಿಂದ ಪ್ರಕೃತ ಸೂತ್ರದಿಂದ ಉಪಸರ್ಜನ ಸಂಜ್ಞೆಯು ಬರುವುದು.

**(ಹ್ರಸ್ವವನ್ನು ವಿಧಿಸುವ ಸೂತ್ರ)**

**ಸೂತ್ರ-954: ಗೋಸ್ತ್ರಿಯೋರುಪರ್ಜನಸ್ಯ (1-2-48)**

ವೃತ್ತಿ:- ಉಪಸರ್ಜನಂ ಯೋ ಗೋಶಬ್ದಃ ಸ್ತ್ರಿ ಪ್ರತ್ಯಯಾನ್ತಂ ಚ ತದನ್ತಸ್ಯ ಪ್ರಾತಿಪದಿಕಸ್ಯ ಹ್ರಸ್ವಃ ಸ್ಯಾತ್ । ಅತಿಮಾಲಃ (ಅವಾದಯಃ ಕ್ರುಷ್ಟಾದ್ಯರ್ಥೇ ತೃತೀಯಯಾ) ಅವಕ್ರುಷ್ಟಃ ಕೋಕಿಲಯಾ-ಅವಕೋಕಿಲಃ।(ಪರ್ಯಾದಯೋಗ್ಲನಾದ್ಯರ್ಥೆ ಚತುರ್ಥ್ಯಾ) ಪರಿಗ್ಲಾನೋऽಧ್ಯಯನಾಯ ಪರ್ಯಧ್ಯಯನಃ।

ವಾರ್ತಿಕ: (ನಿರಾದಯಃ ಕ್ರಾನ್ತಾದ್ಯರ್ಥೇ ಪಞ್ಚಮ್ಯಾ) ನಿಷ್ಕ್ರಾನ್ತಃ ಕೌಶಾಮ್ಬ್ಯಾಃ ನಿಷ್ಕೌಶಾಮ್ಬಿಃ॥

ಪ.ಚ್ಛೇ:- ಗೋಸ್ತ್ರಿಯೋಃ, ಉಪಸರ್ಜನಸ್ಯ।

ಅ.ವೃ:- ಹ್ರಸ್ವೋ ನಪುಂಸಕೇ ಪ್ರಾತಿಪದಿಕಸ್ಯ ಎಂಬ ಸೂತ್ರದಿಂದ ಪ್ರಾತಿಪದಿಕಸ್ಯ ಮತ್ತು ಹ್ರಸ್ವಃ ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ:–ಉಪಸರ್ಜನ ಸಂಜ್ಞೆಯುಳ್ಳ ಗೋ ಶಬ್ದ ಮತ್ತು ಉಪಸರ್ಜನ ಸಂಜ್ಞಯುಳ್ಳ ಸ್ತ್ರೀಲಿಂಗ ಪ್ರಾತಿಪದಿಕಗಳಿಗೆ ಹ್ರಸ್ವವು ಬರುತ್ತದೆ.

ಉದಾ:– ಅತಿಮಾಲಃ (ಮಾಲಾ ಎಂಬ ದೇಶವನ್ನು ಅತಿಕ್ರಮಣ ಮಾಡಿದವನು): ಮಾಲಾಮ್ ಅತಿಕ್ರಾನ್ತಃ ಎಂಬುದು ಲೌಕಿಕ ವಿಗ್ರಹ ವಾಕ್ಯ. ಮಾಲಾ+ಅಮ್+ಅತಿ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಅತಿ ಎಂಬುದು ಪ್ರಾದಿನಿಪಾತದ ಮಾಲಾ+ಅಮ್ ಎಂಬ ಸುಬಂತದ ಜೊತೆಗೆ ಅತ್ಯಾದಯಃ ಕ್ಲಾನ್ತಾದ್ಯರ್ಥೇ ದ್ವಿತೀಯಾ ಎಂಬ ವಾರ್ತಿಕದಿಂದ ಸಮಾಸವಾಗುತ್ತದೆ. ಪ್ರಾತಿಪದಿಕ ಸಂಜ್ಞೆ ಬಂದ ಮೇಲೆ ಸುಪ್ ಲೋಪವಾದ ಮೇಲೆ ಮಾಲಾಅತಿ ಎಂದಿದ್ದಾಗ ಪ್ರಥಮಾನಿದಿಷ್ಟಮ್ ಉಪಸರ್ಜನಮ್ ಎಂಬ ಸೂತ್ರದಿಂದ ಅತಿ ಎಂಬುದಕ್ಕೆ ಉಪಸರ್ಜನ ಸಂಜ್ಞೆ ಬಂದು ಪೂರ್ವ ಪ್ರಯೋಗವಾಗಿದೆ. ನಂತರ ಏಕವಿಭಕ್ತಿಚ ಪೂರ್ವನಿಪಾತೇ ಎಂಬುದರಿಂದ ಮಾಲಾ ಎಂಬುದಕ್ಕೂ ಉಪಸರ್ಜನ ಸಂಜ್ಞೆಯು ಬಂದು ಪ್ರಕೃತ ಸೂತ್ರದಿಂದ ಉಪಸರ್ಜನವಾದ ಮಾಲಾ ಶಬ್ದಕ್ಕೆ ಹ್ರಸ್ವವು ಬಂದು ಅತಿಮಾಲ ಎಂದಾಗುತ್ತದೆ. ಇದನ್ನು ಸುಬಂತ ಮಾಡಿದಾಗ ಅತಿಮಾಲಃ ಎಂದು ರೂಪವು ಸಿದ್ಧವಾಗುತ್ತದೆ.

ವಾರ್ತಿಕ :1 ಅವಾದಯಃ ಕ್ರುಷ್ಟಾದ್ಯರ್ಥೇ ತೃತೀಯಯಾ:–

ಕ್ರುಷ್ಟ (ಕೂಜಿತ, ಆಹೂತ) ಮೊದಲಾದ ಅರ್ಥದಲ್ಲಿ ಇರುವ ಅವ ಮೊದಲಾದ ನಿಪಾತಗಳಿಗೆ ತೃತೀಯಾಂತ ಸುಬನ್ತದ ಜೊತೆಗೆ ನಿತ್ಯ ಸಮಾಸವಾಗುತ್ತದೆ. ಅದು ತತ್ಪುರುಷ ಸಮಾಸ.

ಉದಾ:– ಅವಕೋಕಿಲಃ (ಕೊಗಿಲೆಯಿಂದ ಶಬ್ದಮಾಡಲ್ಪಟ್ಟ ಪ್ರದೇಶ): ಅವಕ್ರುಷ್ಟಃ ಕೋಕಿಲಯಾ ಎಂಬುದು ಲೌಕಿಕ ವಿಗ್ರಹ ವಾಕ್ಯ. ಕೊಕಿಲಾ+ಟಾ+ಅವ ಎಂಬುದು ಅಲೌಕಿ ವಿಗ್ರಹ ವಾಕ್ಯ ಅವ ಎಂಬ ನಿಪಾತವು ಕುಷ್ಟ ಎಂಬ ಅರ್ಥದಲ್ಲಿದೆ ಆದುದರಿಂದ ಕೊಕಿಲಾ+ಟಾ ಎಂಬ ತೃತೀಯಾಂತ ಶಬ್ದದ ಜೊತೆಗೆ ಪ್ರಕೃತ ವಾರ್ತಿಕದಿಂದ ಸಮಾಸವಾಗಿದೆ. ಅವ+ಕೊಕಿಲಾ+ಟಾ ಎಂಬುದು ಪ್ರಾತಿಪದಿಕ ಸಂಜ್ಞೆ ಬಂದ ಮೇಲೆ ಸುಪ್ ಲೋಪವಾಗಿ ಅವ+ಕೊಕಿಲಾ ಎಂದಿರುತ್ತದೆ ಪ್ರಥಮಾನಿದಿಷ್ಟಮ್ ಸಮಾಸ ಉಪಸರ್ಜನಮ್ ಸೂತ್ರದಿಂದ ಅವ ಎಂಬುದಕ್ಕೆ ಉಪಸರ್ಜನ ಸಂಜ್ಞೆಯು ಬಂದು

ಪೂರ್ವನಿಪಾತವಾಗಿರುತ್ತದೆ ಮತ್ತೆ ಏಕವಿಭಕ್ತಿಚಾಪೂರ್ವನಿಪಾತೇ ಎಂಬ ಸೂತ್ರದಿಂದ ಕೊಕಿಲಾ ಶಬ್ದಕ್ಕೆ ಉಪಸರ್ಜನ ಸಂಜ್ಞೆಯು ಬಂದು ಪೂರ್ವನಿಪಾತವು ಬರುವುದಿಲ್ಲ.ಪ್ರಕೃತ ಸೂತ್ರದಿಂದ ಉಪಸರ್ಜನವಾದ ಕೊಕಿಲಾ ಶಬ್ದಕ್ಕೆ ಹ್ರಸ್ವವು ಬಂದು ಅವಕೋಕಿಲ ಎಂದಿರುತ್ತದೆ. ಇದನ್ನು ಸುಬಂತ ಮಾಡಿದಾಗ ಅವಕೋಕಿಲಃ ಎಂದು ರೂಪವು ಸಿದ್ಧವಾಗುತ್ತದೆ.

ವಾರ್ತಿಕ:2 ಪರ್ಯಾದಯೋ ಗ್ಲಾನಾದ್ಯರ್ಥೇ ಚತುರ್ಥ್ಯಾ :–ಗ್ಲಾನ (ದುಃಖಿತವಾದ)ಮೊದಲಾದ ಅರ್ಥದಲ್ಲಿರುವ ಪರಿ ಮೊದಲಾದ ನಿಪಾತಗಳಿಗೆ ಚತುರ್ಥ್ಯಂತ ಸುಬನ್ತದ ಜೊತೆಗೆ ನಿತ್ಯ ಸಮಾಸವಾಗುತ್ತದೆ ಅದು ತತ್ಪುರುಷ ಸಮಾಸ.

ಉದಾ:- ಪರ್ಯಧ್ಯಯನಃ (ಅಧ್ಯಯನಕ್ಕಾಗಿ ಖೇದಹೊಂದಿದವನು): ಗ್ಲಾನ ಅಧ್ಯಯನಾಯ ಪರ್ಯಧ್ಯಯನಃ ಎಂಬುದು ಲೌಕಿಕ ಅಸ್ವಪದ ವಿಗ್ರಹ ವಾಕ್ಯ. ಅಧ್ಯಯನ ಙೇ ಪರಿ ಎಂಬುದು ಅಲೌಕಿ ವಿಗ್ರಹ ವಾಕ್ಯ. ಇಲ್ಲಿ ಪರಿ ಎಂಬ ನಿಪಾತವು ಗ್ಲಾನ (ದುಖಿತ ಎಂಬರ್ಥದಲ್ಲಿದೆ) ಅಧ್ಯಯನ+ಟಾ ಎಂಬ ಸುಬಂತದ ಜೊತೆಗೆ ಪ್ರಕೃತ 2ನೇ ವಾರ್ತಿಕದಿಂದ ಸಮಾಸವಾಗಿದೆ. ಪ್ರಥಮಾನಿರ್ದಿಷ್ಟಮ್ ಸಮಾಸ ಉಪಸರ್ಜನಮ್ ಎಂಬ ಸೂತ್ರದಿಂದ ಪರಿ ಎಂಬುದಕ್ಕೆ ಉಪಸರ್ಜನ ಸಂಜ್ಞೆಯು ಬಂದು ಪೂರ್ವನಿಪಾತವಾಗಿ ಪರಿ+ಅಧ್ಯಯಯನ+ಟಾ ಎಂಬುದಕ್ಕೆ ಪ್ರಾತಿಪದಿಕ ಸಂಜ್ಞೆಯು ಬಂದು ಸುಪ್ ಲೋಪವಾದ ಮೇಲೆ ಪರ್ಯಧ್ಯಯನ ಎಂದಾಗಿ ಸುಬಂತ ಮಾಡಿದಾಗ ಪರ್ಯಧ್ಯಯನಃ ಎಂದು ರೂಪವು ಸಿದ್ಧವಾಗುತ್ತದೆ.

ವಾರ್ತಿಕ: 3 ನಿರಾದಯಃ ಕ್ರಾನ್ತಾದ್ಯರ್ಥೇ ಪಞ್ಚಮ್ಯಾ

ಕ್ರಾನ್ತ:- (ಹೊರಬಿದ್ದ, ಗಡಿಪಾರಾದ) ಮೊದಲಾದ ಅರ್ಥದಲ್ಲಿ ಇರುವ ನಿರ್ ಮೊದಲಾದ ನಿಪಾತಗಳಿಗೆ ಪಞ್ಚಮ್ಯಂತ ಸುಬನ್ತದ ಜೊತೆಗೆ ನಿತ್ಯವಾಗಿ ತತ್ಪುರುಷ ಸಮಾಸವಾಗುತ್ತದೆ.

ಉದಾ:- ನಿಷ್ಕೌಶಾಮ್ಬಿಃ (ಕೌಶಾಂಬಿ ನಗರದಿಂದ ಹೊರಬಿದ್ದವನು):-

ನಿಷ್ಕ್ರಾನ್ತಃ ಕೌಶಾಮ್ಬ್ಯಾಃ ಎಂಬುದು ಲೌಕಿಕ ವಿಗ್ರಹ ವಾಕ್ಯ. ಕೌಶಾಂಬಿ+ಙಸಿ+ನಿರ್ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ನಿರ್ ಎಂಬ ನಿಪಾತವು ಕ್ರಾಂತ ಎಂಬರ್ಥದಲ್ಲಿ ಕೌಶಾಂಬೀ+ಙಸಿ ಎಂಬ ಸುಬಂತದ ಜೊತೆಗೆ ಪ್ರಕೃತ 3ನೇ ವಾರ್ತಿಕದಿಂದ ಸಮಾಸವಾಗಿದೆ. ಪ್ರಥಮಾನಿರ್ದಿಷ್ಟಮ್ ಸಮಾಸ ಉಪಸರ್ಜನಮ್ ಎಂಬ ಸೂತ್ರದಿಂದ ನಿರ್ ಎಂಬುದಕ್ಕೆ ಉಪಸರ್ಜನ ಸಂಜ್ಞೆಯು ಬಂದು ಪೂರ್ವನಿಪಾತವಾಗಿ ನಿರ್+ಕೌಶಾಂಬಿ+ಙಸಿ ಎಂದಿದ್ದಾಗ ಇದಕ್ಕೆ ಪ್ರಾತಿಪದಿಕ ಸಂಜ್ಞೆಯು ಬಂದು ಸುಪ್ ಲೋಪವಾದ ಮೇಲೆ ನಿರ್+ಕೌಶಾಂಬಿ ಎಂದಿರುತ್ತದೆ. ಕೌಶಾಂಬಿ ಎಂಬುದಕ್ಕೆ ಏಕವಿಭಕ್ತೌ ಪೂರ್ವನಿಪಾತೇ ಎಂಬ ಸೂತ್ರದಿಂದ ಉಪಸರ್ಜನ ಸಂಜ್ಞೆಯು ಬಂದು ಪ್ರಕೃತ ಸೂತ್ರದಿಂದ ಕೌಶಾಂಬೀ ಶಬ್ದಕ್ಕೆ ಹ್ರಸ್ವವು ಬಂದು ನಿರ್+ಕೌಶಾಂಬಿ ಎಂದಿರುತ್ತದೆ. ನಿರ್ ಎಂಬಲ್ಲಿರುವ ರೇಫಕ್ಕೆ ಖರವಸಾನಯೋರ್ವಿಸರ್ಜನೀಯಃ ಎಂಬ ಸೂತ್ರದಿಂದ ವಿಸರ್ಗ ಬಂದು ಅದಕ್ಕೆ ಇದುದುಪಸ್ಯ ಚಾಪ್ರತ್ಯಯಃ ಎಂಬ ಸೂತ್ರದಿಂದ ಷ್ ಕಾರವು ಆದೇಶವಾಗಿ ಬಂದು ನಿಷ್ಕೌಶಾಮ್ಬಿ ಎಂದಿರುತ್ತದೆ. ಇದನ್ನು ಸುಬಂತ ಮಾಡಿದಾಗ ನಿಷ್ಕೌಶಾಮ್ಬಿಃ ಎಂದು ರೂಪವು ಸಿದ್ಧವಾಗುತ್ತದೆ.

**(ಉಪಪದ ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ-೯೮೮: ತತ್ರೋಪಪದಂ ಸಪ್ತಮೀಸ್ಥಮ್ (೩-೧-೯೨)**

ವೃತ್ತಿ:- ಸಪ್ತಮ್ಯನ್ತೇ ಪದೇ ಕರ್ಮಣೀತ್ಯಾದೌ ವಾಚ್ಯತ್ವೇನ ಸ್ಥಿತಂ ಯತ್ ಕುಮ್ಭಾದಿ, ತದ್ವಾಚಕಂ ಪದಮ್ ಉಪಪದ ಸಂಜ್ಞಂ ಸ್ಯಾತ್ ।

ಪ.ಚ್ಛೇ:- ತತ್ರ, ಉಪಪದಂ, ಸಪ್ತಮೀಸ್ಥಮ್।

ಅ.ವ್ಯ:– ಈ ಸೂತ್ರವು ಧಾತೋಃ ಎಂಬ ಅಧಿಕಾರ ಸೂತ್ರದ ಅಡಿಯಲ್ಲಿ ಬಂದಿರುತ್ತದೆ.

ಅರ್ಥ:– ಧಾತೋಃ ಎಂಬ ಅಧಿಕಾರ ಸೂತ್ರಕ್ಕೆ ಸಂಬಂಧಿಸಿದ ಕರ್ಮಣ್ಯನ್ ಮೊದಲಾದ ಸೂತ್ರಗಳಲ್ಲಿ ಸಪ್ತಮೀ ವಿಭಕ್ತಿಯಿಂದ ಹೇಳಲಾದ ಕುಂಭ ಮೊದಲಾದ ಪದಗಳಿಗೆ ಉಪಪದ ಸಂಜ್ಞೆಯು ಬರುತ್ತದೆ.

ಕರ್ಮಣ್ಯಣ್ ಮೊದಲಾದ ಸೂತ್ರಗಳಲ್ಲಿ ಕರ್ಮಣಿ ಮೊದಲಾದ ಸಪ್ತಮ್ಯಂತ ಪದಗಳು ಪ್ರಯೋಗಿಸಲಾಗಿವೆ. ಈ ಕರ್ಮಣಿ ಮೊದಲಾದ ಪದಗಳಿಗೆ ಕುಂಭ ಮೊದಲಾದವು ಕರ್ಮವೆಂದು ಅರ್ಥವಾಗಿರುವುದರಿಂದ ಸಪ್ತಮೀಸ್ಥ ಎಂದರೆ ಅಂತಹಃ ಕುಂಭಾದುರ್ಥಮ್‌ವೆಂದರ್ಥ ಆದರೆ ವ್ಯಾಕರಣದಲ್ಲಿ ಉಪಪದ ಸಂಜ್ಞೆಯು ಪದಕ್ಕೆ ಹೊಂದಿಕೊಳ್ಳುವುದೇ ಹೊರತು ಅರ್ಥಕ್ಕೆ ಅಲ್ಲ ಎಂದು ಸಿದ್ಧವಾಗುತ್ತದೆ. ಆದುದರಿಂದ ಕುಂಭರೂಪರ್ಥವನ್ನು ಬೊಧಿಸುವ ಕುಂಭಾದಿ ಶಬ್ದಗಳಿಗೆ ಉಪಪದ ಸಂಜ್ಞೆ ಎಂದು ಅರ್ಥವು ಸಿದ್ಧಿಸತ್ತದೆ. ಕುಂಭಮ್ ಕರೋತಿ ಇತಿ ಕುಂಭಕಾರಃ ಮೊದಲಾದ ಉದಾಹರಣೆಗಳಲ್ಲಿ ಕರ್ಮಣ್ಯನ್ ಸೂತ್ರದಿಂದ ಕುಂಭ ರೂಪವಾದ ಕರ್ಮವಾಚಕ ಪದವು ಸಮೀಪದಲ್ಲಿಇರುವುದರಿಂದ ಕೃಞ್ ಧಾತುವಿಗೆ ಅಣ್ ಪ್ರತ್ಯಯವನ್ನು ವಿಧಿಸಲಾಗಿದೆ. ಆದುದರಿಂದ ಕುಂಭ ಪದಕ್ಕೆ ಉಪಪದವೆಂದು ಹೆಸರು ಪ್ರಕೃತ ಸೂತ್ರದಲ್ಲಿ ಉಪಪದಮ್ ಸಪ್ತಮೀಸ್ಥಮ್ ಎಂಬ ಭಾಗಕ್ಕೆ ಪೂರ್ವೋಕ್ತ ಅರ್ಥವನ್ನು ಹೇಳಿದ ಮೇಲೆ ತತ್ರ ಎಂಬುದಕ್ಕೆ ಅಂತಹ ಉಪಪದವು ಸಮೀಪದಲ್ಲಿದ್ದಾಗ ಮಾತ್ರ ಆಯಾ ಪ್ರತ್ಯಯಗಳು ಬರುವವು ಎಂದರ್ಥವಾಗುತ್ತದೆ.

**(ಉಪಪದ ಸಮಾಸವನ್ನು ವಿಧಿಸುವ ಸೂತ್ರ)**

**ಸೂತ್ರ–956: ಉಪಪದಮತಿಙ್ (2–2–19)**

ವೃತ್ತಿ:– ಉಪಪದಂ ಸುಬನ್ತಂ ಸಮರ್ಥೇನ ನಿತ್ಯಂ ಸಮಸ್ಯತೇ। ಅತಿಙನ್ತಶ್ಚಾಯಂ ಸಮಾಸಃ। ಕುಮ್ಭಂ ಕರೋತೀತಿ ಕುಮ್ಭಕಾರಃ। ಅತಿಙ್ ಕಿಮ್? ಮಾ ಭವಾನ್ ಭೂತ್ । ಮಾಙಿಲುಙಿತಿ ಸಪ್ತಮೀ ನಿರ್ದೇಶಾತ್–ಮಾಙ್–ಉಪಪದಮ್। ಪರಿಭಾಷೆ– ಗತಿಕಾರಕೋಪಪದಾನಾಂ ಕೃದ್ಭಿಃ ಸಹ ಸಮಾಸವಚನಂ ಪ್ರಾಕ್ ಸುಬುತ್ಪತ್ತೇಃ। ವ್ಯಾಘ್ರೀ, ಅಶ್ವಕ್ರೀತೀ । ಕಚ್ಛಪೀತ್ಯಾದಿ ।

ಪ.ಚ್ಛೇ:– ಉಪಪದಮ್, ಅತಿಙ್ ।

ಅ.ವ್ಯ:– ಸುಬಾಮನ್ತ್ರಿತೇ ಪರಾಙ್ಗವತ್‌ಸ್ವರೇ ಎಂಬ ಸೂತ್ರದಿಂದ ಸುಪ್ ಎಂಬ ಪದವು ಮತ್ತು ನಿತ್ಯಂ ಕ್ರೀಡಾಜೀವಿಕಯೋಃ ಎಂಬ ಸೂತ್ರದಿಂದ ನಿತ್ಯಮ್ ಎಂಬ ಪದವು ಅನುವೃತ್ತವಾಗುತ್ತದೆ. ಸಮರ್ಥಃ, ತತ್ಪುರುಷಃ ಮತ್ತು ಸಮಾಸಃ ಎಂಬುವು ಅಧಿಕಾರ ಸೂತ್ರಗಳಾಗಿವೆ.

ಸೂಚನೆ: ಅತಿಙ್ ಎಂಬ ಸೂತ್ರಸ್ಥಪದವು ತಿಙನ್ತದ ಜೊತೆಗೆ ಸಮಾಸವಾಗುವುದಿಲ್ಲ ಎಂದು ತಿಳಿಸುತ್ತದೆ.

ಅರ್ಥ:- ಉಪಪದ ಸಂಜ್ಞೆಯುಳ್ಳ ಸುಬನ್ತಗಳು ಸಮರ್ಥವಾದ ಸುಬನ್ತಗಳ ಜೊತೆಗೆ ನಿತ್ಯವಾಗಿ ಸಮಾಸವಾಗುತ್ತವೆ.

ಉದಾ:- ಕುಮ್ಭಕಾರಃ (ಕುಂಬವನ್ನು ಮಾಡುವವನು):- ಕುಮ್ಭಂ ಕರೋತೀತಿ ಎಂಬುದು ಲೌಕಿಕ ವಿಗ್ರಹ ವಾಕ್ಯ. ಕುಂಭ+ಅಮ್+ಕ್ರ ಎಂಬ ಅಲೌಕಿ ವಿಗ್ರಹ ವಾಕ್ಯದಲ್ಲಿ ಕುಂಭ ಎಂಬುದಕ್ಕೆ ಪ್ರಕೃತ ಸೂತ್ರದಿಂದ ಉಪಪದ ಸಂಜ್ಞೆಯು ಬಂದು ಕರ್ಮಣ್ಯಣ್ ಎಂಬ ಸೂತ್ರದಿಂದ ಅಣ್ (ಅ) ಪ್ರತ್ಯಯ ಬಂದ ಮೇಲೆ ವೃದ್ಧಿ ಬಂದು ಕಾರ ಎಂದಾಗುತ್ತದೆ. ಸಮಾಸದ ಲೌಕಿಕ ವಿಗ್ರಹ ದಲ್ಲಿ ಕುಂಬಸ್ಯ ಕಾರಃ ಎಂದು ಅಲೌಕಿಕ ವಿಗ್ರಹದಲ್ಲಿ ಕುಂಬ+ಙಸ್+ಕಾರ ಎಂಬಲ್ಲಿ ಪ್ರಕೃತ ಸೂತ್ರದಿಂದ ಸಮಾಸವಾಗಿ ಪ್ರಾತಿಪದಿಕ ಸಂಜ್ಞಯು ಬಂದ ಮೇಲೆ ಸುಪ್ ಲೋಪವಾಗಿ ಕುಮ್ಭಕಾರ ಎಂದಿರುತ್ತದೆ ಇದನ್ನು ಸುಬಂತ ಮಾಡಿದಾಗ ಕುಮ್ಭಕಾರಃ ಎಂದು ರೂಪವು ಸಿದ್ಧವಾಗುತ್ತದೆ.

ಇಲ್ಲಿ ಕಾರ ಎಂಬುದಕ್ಕೆ ಸುಪ್ ಪ್ರತ್ಯಯವನ್ನು ಸೇರಿಸುದಕ್ಕೆ ಮುಂಚಿತವಾಗಿ ಸಮಾಸವನ್ನು ಮಾಡಬೇಕು ಗತಿಕಾರಕೋಪಪದಾನಾಂ ಕೃದ್ಭಿಃ ಸಹ ಸಮಾಸವಚನಂ ಪ್ರಾಕ್ ಸುಬುತ್ಪತ್ತೇಃ ಎಂಬ ಪರಿಭಾಷೆಯ ಪ್ರಕಾರ ಗತಿ ಸಂಜ್ಞೆಕ ಶಬ್ದಗಳಿಗೆ ಕಾರಕಗಳಿಗೆ ಮತ್ತು ಉಪಪದಗಳಿಗೆ ಕೃದ್ದಂತಗಳ ಜೊತೆಗೆ ಸುಪ್ ಪ್ರತ್ಯಯಗಳನ್ನು ಸೇರಿಸುವುದಕ್ಕೆ ಪೂರ್ವದಲ್ಲಿ ಸಮಾಸವನ್ನು ಮಾಡಬೇಕು ಎಂದಿರುತ್ತದೆ ಇದರ ಪ್ರಯೋಜನವು ಮುಂದೆ ಸ್ಪಷ್ಟವಾಗುವುದು. ಆದುದರಿಂದಲೇ ಸೂತ್ರದ ವ್ಯಾಖ್ಯಾನದ ಸಂದಂರ್ಭದಲ್ಲಿ ಸುಬನ್ತೇನ ಸಮಸ್ಯತೇ ಎಂದು ಹೇಳದೆ ಸಮರ್ಥೇನ ಸಮಸ್ಯತೇ ಎಂದು ಹೇಳಲಾಗಿದೆ.

ಅತಿಙ್ ಕಿಮ್? ಮಾ ಭವಾನ್ ಭೂತ್ । ಮಾಙಿ ಲುಙಿತಿ ಸಪ್ತಮೀ ನಿರ್ದೇಶಾತ್-ಮಾಙ್-ಉಪಪದಮ್:- ಈ ಸಮಾಸವು ತಿಗಂತದ ಜೊತೆಗೆ ಬರುವುದಿಲ್ಲ.ಎಂದು ಹೇಳಿರುವುದರಿಂದ "ಮಾ ಭವಾನ್ ಭೂತ್" ಎಂದು ಹೇಳುವಾಗ ಮಾ ಎಂಬುದಕ್ಕೆ ಭೂತ್ ಎಂಬ ತಿಗಂತದ ಜೊತೆಗೆ ಸಮಾಸವು ಆಗುವುದಿಲ್ಲ.ಮಾಙಿಲುಙಿತಿ ಎಂಬ ಸೂತ್ರದಲ್ಲಿ ಮಾಙಿ ಎಂಬುದು ಸಪ್ತಮ್ಯಂತವಾಗಿದೆ. ಅದರಿಂದ ನಿರ್ದೇಶಿಸಲ್ಪಟ್ಟಿರು ವುದರಿಂದ ಮಾಙ್‌ಗೆ ತತ್ರೋಪದದಮ್ ಸಪ್ತಮಿಸ್ಥಂ ಎಂಬ ಸೂತ್ರದಿಂದ ಉಪಪದ ಸಂಜ್ಞೆಯು ಬರುತ್ತದೆ. ಉಪಪದವು ಸಮರ್ಥದ ಜೊತೆಗೆ ಸಮಾಸವಾಗುವುದು ಎಂದು ಇಷ್ಟೇ ಹೇಳಿದರೆ ಮಾ ಎಂಬುದು ಕೂಡಾ ಉಪಪದವೇ ಆಗಿರುವುದರಿಂದ ಭೂತ್ ಎಂಬುದರ ಜೊತೆಗೆ ಸಮಾಸವಾಗುತ್ತಿತ್ತು ಅದನ್ನು ನಿವಾರಿಸುವುದಕ್ಕಾಗಿ ಅತಿಙ್ ಎಂಬ ಪದವು ಸೇರಿಸಲಾಗಿದೆ. ಭೂತ್ ಎಂಬುದು ತಿಙನ್ತವಾಗಿರುವುದರಿಂದ ಸಮಾಸವು ಬರುವುದಿಲ್ಲ. ಇಲ್ಲಿ ಸಮಾಸವು ಇಲ್ಲ ಎಂಬುದು ಸ್ಪಷ್ಟಪಡಿಸುವುದಕ್ಕಾಗಿ ಭವಾನ್ ಎಂಬ ಶಬ್ದವನ್ನು ಮಾ ಮತ್ತು ಭೂತ್ ಶಬ್ದಗಳ ಮಧ್ಯದಲ್ಲಿ ಸೇರಿಸಲಾಗಿದೆ. (ಮಾ ಭವಾನ್ ಭೂತ್).

ಪರಿಭಾಷೆ:- ಗತಿಕಾರಕೋಪಪದಾನಾಂ ಕೃದ್ಭಿಃ ಸಹ ಸಮಾಸವಚನಂ ಪ್ರಾಕ್ ಸುಬುತ್ಪತ್ತೇಃ:-ಗತಿ, ಕಾರಕ ಮತ್ತು ಉಪಪದ ಇವುಗಳಿಗೆ ಕೃದನ್ತದ ಜೊತೆಗೆ ಸಮಾಸವು ಆ ಕೃದನ್ತಗಳಿಗೆ ಸುಪ್ ಪ್ರತ್ಯಯಗಳನ್ನು ಸೇರಿಸುವುದಕ್ಕೆ ಪೂರ್ವದಲ್ಲಿ ಸಮಾಸ

ಮಾಡಬೇಕು.

ಉದಾ:– ವ್ಯಾಘ್ರೀ (ಹೆಣ್ಣು ಹುಲಿ):– ಇದು ಗತಿ–ಸಮಾಸಕ್ಕೆ ಉದಾಹರಣೆಯಾಗಿದೆ. ವ್ಯಾಜಿಘ್ರತೀ ಇತಿ ವ್ಯಾಘ್ರಃ ಎಂಬುದು ಲೌಕಿಕ ವಿಗ್ರಹ ವಾಕ್ಯ. ವ್ಯಾ ಪೂರ್ವಕವಾದ ಘ್ರಾ ಧಾತುವಿನ ನಂತರ ಆತಶ್ಚಪೋಸರ್ಗೇ ಎಂಬ ಸೂತ್ರದಿಂದ ಕ ಪ್ರತ್ಯಯವು ಬರುತ್ತದೆ. ಆತೋಲೋಪ ಇಟಿಚ ಎಂಬ ಸೂತ್ರದಿಂದ ಆ ಕಾರಕ್ಕೆ ಲೋಪವು ಬರುತ್ತದೆ. ಈ ರೀತಿಯಾಗಿ ಘ್ರ ಶಬ್ದದ ಜೊತೆಗೆ ಆ ಎಂಬುದಕ್ಕೆ ಗತಿ ಸಮಾಸವು ಬಂದು ಮತ್ತೇ ವಿ ಎಂಬುದಕ್ಕೆ ಆಘ್ರ ಏಂಬುದರ ಜೊತೆಗೆ ಗತಿ ಸಮಾಸವಾಗಿರುತ್ತದೆ. ವ್ಯಾಘ್ರ ಶಬ್ದವು ಜಾತಿ ವಾಚಕವಾಗಿರುವುದರಿಂದ ಜಾತೇರಸ್ತ್ರೀವಿಷಯಾ ದಯೋಪಧಾತ್ ಎಂಬ ಸೂತ್ರದಿಂದ ಜೀಷ್ ಪ್ರತ್ಯಯವು ಬಂದು ವ್ಯಾಘ್ರೀ ಎಂಬ ರೂಪವು ಸಿದ್ಧವಾಗುತ್ತದೆ. ಕೃದಂತ್ತವಾದ ಘ್ರ ಶಬ್ದಕ್ಕೆ ಸುಪ್ ಪ್ರತ್ಯಯವನ್ನು ಸೇರಿಸಿದ ಮೇಲೇನೆ ಸಮಾಸವನ್ನು ಮಾಡಬೇಕು ಎಂದು ಹೇಳಿರುವುದರಿಂದ ಪ್ರಕೃತ ರೂಪವು ಸಿದ್ಧವಾಗಿದೆ.

ಉದಾ:– ಅಶ್ವಕ್ರೀತೀ (ಕುದುರೆಯನ್ನು ಕೊಟ್ಟು ಕೊಂಡುಕೊಂಡದ್ದು):– ಅಶ್ವೇನ ಕ್ರೀತಾ ಎಂಬುದು ಲೌಕಿಕ ವಿಗ್ರಹ ವಾಕ್ಯ. ಕರಣ ವಾಚಕವಾದ ಅಶ್ವ+ಟಾ ಎಂಬ ತೃತೀಯಾಂತ ಶಬ್ದಕ್ಕೆ ಕ್ರೀತ್ ಎಂಬ ಕ್ತ ಪ್ರತ್ಯಯಾಂತದ ಜೊತೆಗೆ ಸುಪ್ ಪ್ರತ್ಯಯವನ್ನು ಸೇರಿಸುವುದಕ್ಕೆ ಪೂರ್ವದಲ್ಲೇ ಸಮಾಸವು ಆಗಿದೆ. ಅಶ್ವಕ್ರೀತ ಎಂಬ ಪ್ರಾತಿಪದಿಕವು ಸಿದ್ಧವಾದ ಮೇಲೆ ಕ್ರೀತಾತ್ ಕರಣಪೂರ್ವಾತ್ ಎಂಬ ಸೂತ್ರದಿಂದ ಜೀಷ್(ಇ) ಪ್ರತ್ಯಯವು ಬಂದು ಅಶ್ವಕ್ರೀತಿ ಎಂಬ ರೂಪವು ಸಿದ್ಧವಾಗುತ್ತದೆ.

ಸುಪ್–ಉತ್ಪತ್ತಿಯಾದ ಮೇಲೆನೆ ಸಮಾಸವು ಆಗುವುದಾದರೆ ಪೂರ್ವ ಉದಾಹರಣೆಯಲ್ಲಿ ಇರುವ ರೀತಿಯಲ್ಲಿ ಸ್ತ್ರೀ ಪ್ರತ್ಯಯವಾದ ಟಾಪ್ ಸೇರಿಸಿದ ನಂತರ ಸುಪ್ ಪ್ರತ್ಯಯವನ್ನು ಸೇರಿಸಿ ಸಮಾಸವನ್ನು ಮಾಡಿದಾಗ ಅಶ್ವಕ್ರೀತಾ ಎಂಬ ರೂಪವೇ ಆಗುವುದು ಹೊರತು ಅಶ್ವಕ್ರೀತಿ ಎಂಬ ರೂಪವು ಸಿದ್ಧಿಸುವುದಿಲ್ಲ. ಕ್ರೀತ ಶಬ್ದವು ಸ್ವತ್ರಂತವಾಗಿರುವಾಗ ಕ್ರೀತಾತ್ಕರ್ಣಪೂರ್ವಾತ್ ಎಂಬ ಸೂತ್ರವು ಬರುವುದಕ್ಕೆ ಅವಕಾಶವಿರುವುದಿಲ್ಲ.ಆದುದರಿಂದ ಕಾರಕ ಸಮಾಸವು ಕೃದಂತ್ತದ ಜೊತೆಗೆ ಸುಪ್–ಉತ್ಪತ್ತಿಗಿಂತ ಮೊದಲೇ ಆಗುವುದೆಂದು ಅರ್ಥವಾಗುತ್ತದೆ.

ಉದಾ:– ಕಚ್ಛಪೀ (ಹೆಣ್ಣು ಆಮೆ) : ಕಚ್ಛೇನ ಕಚ್ಛೇವಾಪಿಬತಿ ಇತಿ ಕಚ್ಛಪೀ ಎಂಬುದು ಲೌಕಿಕವಿಗ್ರಹ ವಾಕ್ಯ. ಕಚ್ಛವೆಂದರೆ ದಡವೆಂದು ಅರ್ಥ ಸುಪಿಸ್ಥಃ ಎಂಬ ಸೂತ್ರವನ್ನು ಯೋಗವಿಭಾಗಮಾಡಿದಾಗ ಸಿದ್ಧವಾದ ಸುಪಿ ಎಂಬುದರ ಜೊತೆಗೆ ಸುಬಂತವಾದ ಕಚ್ಛ ಶಬ್ದವು ಉಪಪದವಾಗಿದ್ದಾಗ ಸ್ಥಾ ಧಾತುವಿಗೆ ಕ ಪ್ರತ್ಯಯವು ಬರುವುದು. ಆಕಾರ ಲೋಪವಾದ ಮೇಲೆ ಪ ಎಂಬ ಅಕಾರಾನ್ತ ಶಬ್ದವು ಸಿದ್ಧಿಸುತ್ತದೆ. ಸುಪ್–ಉಪ್ಪತ್ತಿಗಿಂತ ಪೂರ್ವದಲ್ಲೇ ಕಚ್ಛ+ಟಾ ಎಂಬುದಕ್ಕೆ ಪ ಶಬ್ದದ ಜೊತೆಗೆ ಸಮಾಸವು ಆಗಿದೆ ಕಚ್ಛಪ್ ಶಬ್ದವು ಜಾತಿವಾಚಕವಾಗಿರುವುದರಿಂದ ಜಾತೇರಸ್ತ್ರೀವಿಷಯಾದಯೋಪಧಾತ್ ಎಂಬ ಸೂತ್ರದಿಂದ ಜೀಷ್ ಬಂದು ಕಚ್ಛಪೀ ಎಂಬ ರೂಪವು ಸಿದ್ಧಿಸುತ್ತದೆ.

ಸೂಚನೆ: ಸಮಾಸವಾಗುವುದಕ್ಕೆ ಪೂರ್ವದಲ್ಲೇ ಸುಪ್ ಪ್ರತ್ಯಯವನ್ನು ಸೇರಿಸುವುದ್ದಕ್ಕಾಗಿ ಸ್ತ್ರೀ ಪ್ರತ್ಯಯವನ್ನು ಸೇರಿಸಬೇಕಾದರೆ ಪ ಶಬ್ದವು ಜಾತಿವಾಚಕವಾಗಿ ಇಲ್ಲದಿದ್ದರಿಂದ ಜೀಷ್ ಬರುವುದಿಲ್ಲ. ಟಾಪ್ ಮಾತ್ರವೇ ಬಂದು ನಂತರ ಸಮಾಸ ಮಾಡಿದಾಗ ಕಚ್ಛಪಾ ಎಂಬ ಅನಿಷ್ಟ ರೂಪವೇ ಸಿದ್ಧಿಸಬೇಕಾಗಿತ್ತು.

**(ಸಮಾಸಾನ್ತದಲ್ಲಿ ಅಚ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-957. ತತ್ಪುರುಷಸ್ಯಾಙ್ಗುಲೇಃ ಸಂಖ್ಯಾವ್ಯಯಾದೇಃ (5-4-86)**

ವೃತ್ತಿ:- ಸಂಖ್ಯಾವ್ಯಯಾದೇಃ ಅಙುಲ್ಯನ್ತಸ್ಯ ಸಮಾಸಾನ್ತಃ ಅಚ್ ಸ್ಯಾತ್ । ದ್ವೇ ಅಙ್ಗುಲೀ ಪ್ರಮಾಣಮ್ ಅಸ್ಯ –ದ್ವ್ಯಙ್ಗುಲಮ್। ನಿರ್ಗತಮ್ ಅಙ್ಗುಲಿಭ್ಯಃ ನಿರಙ್ಗುಲಮ್॥

ಪ.ಚ್ಛೇ:- ತತ್ಪುರುಷಸ್ಯ, ಅಙುಲೇಃ, ಸಂಖ್ಯಾವ್ಯಯಾದೇಃ।

ಅ.ವ್ಯ:- ಅಚ್ ಪತ್ಯಙ್ಗಪೂರ್ವಾತ್ ಸಾಮರೋಮ್ನಃ ಎಂಬ ಸೂತ್ರದಿಂದ ಅಚ್ ಎಂಬ ಪದವು ಅನುವೃತ್ತವಾಗುತ್ತದೆ. ಸಮಾಸಾನ್ತಾಃ ಪ್ರತ್ಯಯಃ, ಪರಶ್ಚ ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ:- ಸಂಖ್ಯಾವಾಚಕ ಶಬ್ದ ಅಥವಾ ಅವ್ಯಯಗಳನ್ನು ಆದಿಯಲ್ಲಿಉಳ್ಳ, ಅಙುಲಿ ಶಬ್ದವನ್ನು ಅಂತ್ಯದಲ್ಲಿಉಳ್ಳ ತತ್ಪುರುಷ ಸಮಾಸಕ್ಕೆ ಸಮಾಸಾಂತ ಪ್ರತ್ಯಯವಾದ ಅಚ್ (ಅ) ಬರುವುದು.

ಉದಾ:-ದ್ವ್ಯಙ್ಗುಲಮ್ (ಎರಡು ಅಂಗುಲದಷ್ಟು ಪ್ರಮಾಣವುಳ್ಳದ್ದು(ಕಟ್ಟಿಗೆ))ದ್ವೇ ಅಙ್ಗುಲೀ ಪ್ರಮಾಣಮ್ ಅಸ್ಯ ಎಂಬುದು ಲೌಕಿಕವಿಗ್ರಹ ವಾಕ್ಯ. ದ್ವಿ+ಔ ಅಂಗುಲಿ+ಔ ಎಂದಿದ್ದಾಗ ಮಾತ್ರಚ್ ಎಂಬ ತದ್ಧಿತ ಪ್ರತ್ಯಯಕ್ಕೆ ವಾಚ್ಯವಾದ ಪ್ರಮಾಣಾರ್ಥದಲ್ಲಿ ತದ್ಧೀತೋತ್ತರಪದಸಮಾಹಾರೇ ಚ ಎಂಬ ಸೂತ್ರದಿಂದ ಸಮಾಸವಾಗುತ್ತದೆ. ಪ್ರಮಣೇ ದ್ವಯಸಚ್ ದಘ್ನಚ್‌ಮಾತ್ರಚ್ಃ ಎಂಬ ಸೂತ್ರದಿಂದ ಪ್ರಮಾಣಾರ್ಥದಲ್ಲಿ ಬರುವ ಮಾತ್ರಚ್ ಪ್ರತ್ಯಯಕ್ಕೆ ಪ್ರಮಾಣೇಲಃ ಮತ್ತು ದ್ವಿಗೋನಿತ್ಯಮ್ ಎಂಬ ವಾರ್ತಿಕಗಳಿಂದ ಲೋಪವು ಬರುತ್ತದೆ. ಪ್ರಾತಿಪದಿಕ ಸಂಜ್ಞೆ ಬಂದ ಮೇಲೇ ಸುಪ್ ಲೋಪವಾದ ಮೇಲೆ ದ್ವ್ಯಙ್ಗುಲಿ ಎಂಬ ಪ್ರಾತಿಪದಿಕವು ಆಗುತ್ತದೆ ಇದು ಸಂಖ್ಯಾವಾಚಕವನ್ನು ಆದಿಯಲ್ಲಿ ಉಳ್ಳದಾಗಿಯೂ ಅಂಗುಲ್ಯಂತವಾಗಿಯೂ ಇರುವ ತತ್ಪುರುಷವಾಗಿರುವುದರಿಂದ ಪ್ರಕೃತ ಸೂತ್ರದಿಂದ ಅಚ್ (ಅ) ಪ್ರತ್ಯಯವು ಬರುತ್ತದೆ. ಯಸ್ಯೇತಿಚ ಎಂಬುದರಿಂದ ಇ ಕಾರಕ್ಕೆ ಲೋಪ ಬರುತ್ತದೆ. ಇದನ್ನು ಸುಬಂತ ಮಾಡಿದಾಗ ದ್ವ್ಯಙ್ಗುಲಮ್ ಎಂಬ ರೂಪವು ನಪುಂಸಕ ಲಿಂಗದಲ್ಲಿ ಸಿದ್ಧವಾಗುತ್ತದೆ.

ಉದಾ:- ನಿರಙ್ಗುಲಮ್ (ಬೆಟ್ಟನಿಂದ ಜಾರಿಬಿದ್ದ):-ನಿರ್ಗತಮ್ ಅಙ್ಗುಲಿಭ್ಯಃ ಎಂಬುದು ಅಸ್ವಪದ ವಿಗ್ರಹ ವಾಕ್ಯ. ನಿರಾದಯಃ ಕ್ರಾನ್ತಾದ್ಯರ್ಥೇ ಪಞ್ಚಮ್ಯಾ ಎಂಬ ವಾರ್ತಿಕದಿಂದ ಕೂಡಿದ ಕುಗತಿ ಪ್ರಾದಯಃ ಎಂಬ ಸೂತ್ರದಿಂದ ಸಮಾಸವಾಗುತ್ತದೆ ಪ್ರಾತಿಪದಿಕ ಸಂಜ್ಞೆ ಮತ್ತು ಸುಪ್ ಲೋಪವಾದ ಮೇಲೆ ನಿರಙ್ಗುಲಿ ಎಂಬ ಪ್ರಾತಿಪದಿಕಕ್ಕೆ ಅಚ್ (ಅ) ಎಂಬ ಪ್ರತ್ಯಯವನ್ನು ಸೇರಿಸಿದಾಗ ಯಸ್ಯೇತಿಚ ಎಂಬುದರಿಂದ ಇ

ಕಾರವು ಲೋಪವಾಗಿ ನಿರಙ್ಗುಲಮ್ ಎಂಬ ರೂಪವು ಸಿದ್ಧವಾಗುತ್ತದೆ.

**(ಸಮಾಸಾನ್ತ ಅಚ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-958: ಅಹಃ ಸರ್ವೈಕ ದೇಶ ಸಂಖ್ಯಾತ ಪುಣ್ಯಾಚ್ಚ ರಾತ್ರೇಃ (5-4-87)**

ವೃತ್ತಿ:- ಏಭ್ಯಃ ರಾತ್ರೇಃ ಅಚ್ ಸ್ಯಾತ್, ಚಾತ್ ಸಂಖ್ಯಾವ್ಯಯಾದೇಃ ಅಹರ್ ಗ್ರಹಣಂ ದ್ವನ್ದ್ವಾರ್ಥಮ್॥

ಪ.ಚೇ:- ಅಹಃ, ಸರ್ವೈಕ ದೇಶ ಸಂಖ್ಯಾತ ಪುಣ್ಯಾತ್, ಚ, ರಾತ್ರೇಃ।

ಅ.ವೃ:- ತತ್ಪುರುಷಸ್ಯಾಙ್ಗುಲೇಃ ಸಂಖ್ಯಾವ್ಯಯಾದೇಃ ಎಂಬ ಸೂತ್ರದಿಂದ ತತ್ಪುರಷಸ್ಯ ಎಂಬ ಪದವು ಮತ್ತು ಅಚ್ ಪ್ರತ್ಯಙ್ಗವ ಪೂರ್ವಾತ್ ಸಾಮಲೋಮ್ನಃ ಎಂಬ ಸೂತ್ರದಿಂದ ಅಚ್ ಎಂಬ ಪದವು ಅನುವೃತ್ತವಾಗುತ್ತದೆ. ಪ್ರತ್ಯಯಃ, ಪರಶ್ಚ ಮತ್ತು ಸಮಾಸಾನ್ತಾಃ ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ:- ಅಹನ್, ಸರ್ವ, ಏಕದೇಶ ವಾಚಕ, ಸಂಖ್ಯಾತ ಮತ್ತು ಪುಣ್ಯ ಇವುಗಳ ಪರದಲ್ಲಿ ಇರುವ ಹಾಗೂ ಚಕಾರ ಶಬ್ದದಿಂದ ಸಂಖ್ಯಾವಾಚಕ ಮತ್ತು ಅವ್ಯಯ ಶಬ್ದಗಳ ನಂತರವೂ ಇರುವ ರಾತ್ರಿ ಶಬ್ದಕ್ಕೆ ಅಚ್ (ಅ) ಪ್ರತ್ಯಯವು ಸಮಾಸಾನ್ತವಾಗುತ್ತದೆ.

ಸೂಚನೆ:- ಅಹನ್ ಶಬ್ದದ ಉದಾಹರಣೆಯನ್ನು ದ್ವಂದ್ವ ಸಮಾಸದಲ್ಲಿ ನೋಡಿರಿ.

**(ಪುಲ್ಲಿಂಗವನ್ನು ವಿಧಿಸುವ ನಿಯಮ ಸೂತ್ರ)**

**ಸೂತ್ರ-959: ರಾತ್ರಾಹ್ನಾಹಾಃ ಪುಂಸಿ (2-4-29)**

ವೃತ್ತಿ:- ಏತದನ್ತೌ ದ್ವನ್ದ್ವತತ್ಪುರುಷೌ ಪುಂಸ್ಯೇವ ಅಹಶ್ಚ ರಾತ್ರಿಶ್ಚ ಅಹೋರಾತ್ರಃ। ಸರ್ವರಾತ್ರಃ, ಸಂಖ್ಯಾತ ರಾತ್ರಃ ।

ವಾರ್ತಿಕ:- ಸಂಖ್ಯಾಪೂರ್ವರಾತ್ರಂ ಕ್ಲೀಬಮ್॥ ದ್ವಿರಾತ್ರಮ್॥ ತ್ರಿರಾತ್ರಮ್

ಪ.ಚ್ಛೇ:- ರಾತ್ರಾಹ್ನಾಹಾಃ, ಪುಂಸಿ।

ಅ.ವೃ:- ಪರವಲ್ಲಿಙ್ಗಮ್ ದ್ವನ್ದ್ವತತ್ಪುರುಷಯೋಃ ಎಂಬ ಸೂತ್ರದಿಂದ ವಿಭಕ್ತಿ ವಿಪರಿಣಾಮ ಮಾಡಿ ದ್ವನ್ದ್ವತತ್ಪುರುಷೌ ಎಂಬ ಶಬ್ದವು ಅನುವೃತ್ತವಾಗುತ್ತದೆ.

ಅರ್ಥ:- ರಾತ್ರ, ಅಹ್ನ ಮತ್ತು ಅಹನ್ ಇವುಗಳನ್ನು ಅನ್ತವಾಗುಳ್ಳ ದ್ವಂದ್ವ ಮತ್ತು ತತ್ಪುರುಷ ಸಮಾಸಗಳು ಪುಲ್ಲಿಂಗದಲ್ಲಿಯೇ ಇರುತ್ತವೆ.

ಉದಾ:- ಅಹೋರಾತ್ರಃ (ಹಗಲಿರುಳು):- ಅಹನ್ ಚ ರಾತ್ರಿಶ್ಚ ಅನಯೋಃ ಸಮಾಹಾರಃ ಎಂಬುದು ಲೌಕಿಕ ವಿಗ್ರಹ ವಾಕ್ಯ. ಅಹನ್+ಸು+ರಾತ್ರಿ+ಸು ಎಂಬುದು ಅಲೌಕಿಕವಿಗ್ರಹ ವಾಕ್ಯ ಚಾರ್ಥೇ ದ್ವಂದಃ ಎಂಬ ಸೂತ್ರದಿಂದ ಸಮಾಸವಾಗಿದೆ. ಇಲ್ಲಿ ಪುಲ್ಲಿಂಗ ವಿಧಾನ ಮಾಡಿದೆ ಎಂಬುದನ್ನು ಸೂಚಿಸುತ್ತದೆ. ಪ್ರಾತಿಪದಿಕ ಸಂಜ್ಞೆ ಬಂದ ಮೇಲೆ ಸುಪ್ ಲೋಪವಾದ ಮೇಲೆ ಅಹನ್+ರಾತ್ರಿ ಎಂದಿರುತ್ತದೆ. ರೂಪರಾತ್ರಿನ್ತರೇಷು ರುತ್ವಮ್ ವಾಚ್ಯಮ್ ಎಂಬ ವಾರ್ತಿಕದಿಂದ ಅಹನ್ ಶಬ್ದದ ನ್ ಕಾರಕ್ಕೆ ರುತ್ವವು ಬಂದು ಮತ್ತು ರೇಫಕ್ಕೆ ಹಶಿ ಚ ಎಂಬ ಸೂತ್ರದಿಂದ ಉತ್ವ ಬಂದು ಅಹ+ಉ+ರಾತ್ರಿ

ಎಂದಿರುತ್ತದೆ. ಅಕಾರ ಉಕಾರಗಳಿಗೆ ಗುಣವಾದ ಮೇಲೆ ಅಹೋರಾತ್ರಿ ಎಂದಿರುತ್ತದೆ. ಅಹಃ ಸರ್ವೈಕ ದೇಶ ಸಂಖ್ಯಾತ ಪುಣ್ಯಾಚ್ಚ ರಾತ್ರೇಃ ಎಂಬ ಸೂತ್ರದಿಂದ ಅಚ್ (ಅ) ಪ್ರತ್ಯಯವು ಬಂದು ಯಸ್ಯೇತಿಚ ಎಂಬ ಸೂತ್ರದಿಂದ ರಾತ್ರಿ ಶಬ್ದದ ಇಕಾರಕ್ಕೆ ಲೋಪವು ಬಂದು ಅಹೋರಾತ್ರ ಎಂದಿರುತ್ತದೆ. ಮುಂಬರುವ ಪರವಲ್ಲಿಙ್ಗಂ ದ್ವನ್ದ್ವತತ್ಪುರುಷಯೋಃ ಎಂಬ ಸೂತ್ರದಿಂದ ಉತ್ತರ ಪದಕ್ಕೆನೇ ಲಿಂಗವು ವಿಧಿಸಿರೋಣದರಿಂದ ಸ ನಪುಂಸಕಮ್ ಎಂಬ ಸೂತ್ರದಿಂದ ನಪುಂಸಕ ಲಿಂಗವು ಬರಬೇಕಾಗಿತ್ತು. ಅದನ್ನು ಬಾಧಿಸಿ ಪ್ರಕೃತ ಸೂತ್ರದಿಂದ ಪುಲ್ಲಿಂಗವು ಬಂದಿರುತ್ತದೆ. ಇದನ್ನು ಸುಬಂತ ಮಾಡಿದಾಗ ಅಹೋರಾತ್ರಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ:- ಸರ್ವರಾತ್ರಃ (ಇಡೀ ರಾತ್ರಿ): ಸರ್ವಾಚ ಅಸೌ ರಾತ್ರಿಃ ಚ ಎಂಬುದು ಲೌಕಿಕವಿಗ್ರಹ ವಾಕ್ಯ. ಸರ್ವಾ+ಸು+ರಾತ್ರಿ ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ವಿಶೇಷಣಂ ವಿಶೇಷ್ಯೇಣ ಬಹುಳಮ್ ಎಂಬ ಸೂತ್ರದಿಂದ ಸಮಾಸವಾಗಿದೆ. ಇದಕ್ಕೆ ಪ್ರಾತಿಪದಿಕಸಂಜ್ಞೆಯು ಬಂದು ಸುಪ್ ಲೋಪವಾದ ಮೇಲೆ ಸರ್ವಾ+ರಾತ್ರಿ ಎಂದಿರುತ್ತದೆ. ಸರ್ವನಾಮ್ನೋವೃತ್ತಿಮಾತ್ರೇಪುಂವದ್‌ಭಾವಃ ಎಂಬ ಸೂತ್ರದಿಂದ ಸರ್ವಾ ಶಬ್ದಕ್ಕೆ ಪುಂವದ್‌ಭಾವವು ಬಂದು ಸರ್ವರಾತ್ರಿ ಎಂದಾಗುತ್ತದೆ. ಅಹಃ ಸರ್ವೈಕ ದೇಶ ಸಂಖ್ಯಾತ ಪುಣ್ಯಾಚ್ಚ ರಾತ್ರೇಃ ಎಂಬ ಸೂತ್ರದಿಂದ ಅಚ್ (ಅ) ಪ್ರತ್ಯಯವು ಬಂದು ಯಸ್ಯೇತಿಚ ಎಂಬ ಸೂತ್ರದಿಂದ ರಾತ್ರಿ ಶಬ್ದದ ಇಕಾರಕ್ಕೆ ಲೋಪವು ಬಂದು ಸರ್ವರಾತ್ರ ಎಂದಿರುತ್ತದೆ. ಮುಂಬರುವ ಪರವಲ್ಲಿಙ್ಗಂ ದ್ವನ್ದ್ವತತ್ಪುರುಷಯೋಃ ಎಂಬ ಸೂತ್ರದಿಂದ ಉತ್ತರ ಪದಕ್ಕೆನೇ ಲಿಂಗವು ವಿಧಿಸಿರೋಣದರಿಂದ ಸ ನಪುಂಸಕಮ್ ಎಂಬ ಸೂತ್ರದಿಂದ ನಪುಂಸಕ ಲಿಂಗವು ಬರಬೇಕಾಗಿತ್ತು ಅದನ್ನು ಬಾಧಿಸಿ ಪ್ರಕೃತ ಸೂತ್ರದಿಂದ ಪುಲ್ಲಿಂಗವು ಬಂದಿರುತ್ತದೆ. ಇದನ್ನು ಸುಬಂತ ಮಾಡಿದಾಗ ಸರ್ವರಾತ್ರಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ:- ಸಂಖ್ಯಾತ ರಾತ್ರಃ (ಎಣಿಸಲ್ಪಟ್ಟ ರಾತ್ರಿ):- ಸಂಖ್ಯಾತಾ ಚ ಅಸೌ ರಾತ್ರಿಃ ಚ ಎಂಬುದು ಲೌಕಿಕವಿಗ್ರಹ ವಾಕ್ಯ. ಸಂಖ್ಯಾತಾ+ಸು+ರಾತ್ರಿ ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ಪೂರ್ವಕಾಲೈಕ ಸರ್ವ ಜರತ್‌ಪುರಾಣ ನವಕೇವಲಾಃ ಸಮಾನಾಧಿಕರಣೇನ ಎಂಬ ಸೂತ್ರದಿಂದ ಸಮಾಸವಾಗಿದೆ. ಇದಕ್ಕೆ ಉಪಸರ್ಜನ ಸಂಜ್ಞೆ ಬಂದು ಪೂರ್ವ ನಿಪಾತವಾಗಿ ಪ್ರಾತಿಪದಿಕಸಂಜ್ಞೆಯು ಬಂದು ಸುಪ್ ಲೋಪವಾದ ಮೇಲೆ ಸಂಖ್ಯಾತಾ+ರಾತ್ರಿ ಎಂದಿರುತ್ತದೆ. ಪುಂವತ್ ಕರ್ಮಧಾರಯ ಜಾತಿಯ ದೇಶೀಯೇಷು ಎಂಬ ಸೂತ್ರದಿಂದ ಪೂರ್ವಪದದಲ್ಲಿ ಪುಂವದ್‌ಭಾವವು ಬಂದು(ಹ್ರಸ್ವ ಅಕಾರಾಂತವಾಗಿ) ಸಂಖ್ಯಾತರಾತ್ರಿ ಎಂದಾಗುತ್ತದೆ. ಅಹಃ ಸರ್ವೈಕ ದೇಶ ಸಂಖ್ಯಾತ ಪುಣ್ಯಾಚ್ಚ ರಾತ್ರೇಃ ಎಂಬ ಸೂತ್ರದಿಂದ ಅಚ್ (ಅ) ಪ್ರತ್ಯಯವು ಬಂದು ಯಸ್ಯೇತಿಚ ಎಂಬ ಸೂತ್ರದಿಂದ ರಾತ್ರಿ ಶಬ್ದದ ಇಕಾರಕ್ಕೆ ಲೋಪವು ಬಂದು ಸಂಖ್ಯಾತರಾತ್ರ ಎಂದಿರುತ್ತದೆ. ಮುಂಬರುವ ಪರವಲ್ಲಿಙ್ಗಂ ದ್ವನ್ದ್ವತತ್ಪುರುಷಯೋಃ ಎಂಬ ಸೂತ್ರದಿಂದ ಉತ್ತರ ಪದಕ್ಕೆ ಲಿಂಗವು ವಿಧಿಸಿರೋಣದರಿಂದ ಸ ನಪುಂಸಕಮ್

ಎಂಬ ಸೂತ್ರದಿಂದ ನಪುಂಸಕ ಲಿಂಗವು ಬರಬೇಕಾಗಿತ್ತು. ಅದನ್ನು ಬಾಧಿಸಿ ಪ್ರಕೃತ ಸೂತ್ರದಿಂದ ಪುಲ್ಲಿಂಗವು ಬಂದಿರುತ್ತದೆ. ಇದನ್ನು ಸುಬಂತ ಮಾಡಿದಾಗ ಸಂಖ್ಯಾತ ರಾತ್ರಃ ಎಂಬ ರೂಪವು ಸಿದ್ಧವಾಗುತ್ತದೆ.

ವಾರ್ತಿಕ:- ಸಂಖ್ಯಾಪೂರ್ವ ರಾತ್ರಂ ಕ್ಲೀಬಮ್:- ಸಂಖ್ಯಾವಾಚಕ ನಂತರಪದವು ಪೂರ್ವಪದವಾಗಿದ್ದಾಗ ರಾತ್ರಾನ್ತವಾದ ತತ್ಪುರುಷಸಮಾಸವು (ಪುಲ್ಲಿಂಗವಾಗದೇ) ನಪುಂಸಕಲಿಂಗದಲ್ಲಿರುತ್ತದೆ.

ಉದಾ:- ದ್ವಿರಾತ್ರಮ್ (ಎರಡು ರಾತ್ರಿಗಳ ಸಮೂಹ) ದ್ವಯೋರಾತ್ರಯೋಃ ಸಮಾಹಾರಃ ಎಂಬುದು ಲೌಕಿಕವಿಗ್ರಹ ವಾಕ್ಯ. ದ್ವಿ+ಓಸ್+ರಾತ್ರಿ ಓಸ್ ಎಂಬುದು ಅಲೌಕಿಕವಿಗ್ರಹ ವಾಕ್ಯ. ತದ್ಧಿತಾರ್ಥೋತ್ತರಪದ ಸಮಾಹಾರೇಚ ಎಂಬ ಸೂತ್ರದಿಂದ ಸಂಖ್ಯಾವಾಚಕವಾದ ದ್ವಿ ಓಸ್ ಎಂಬುದಕ್ಕೆ ರಾತ್ರಿ ಓಸ್ ಎಂಬ ಸುಂಬತದ ಜೊತೆಗೆ ಸಮಾಹಾರಾರ್ಥದಲ್ಲಿ ಸಮಾಸವಾಗುತ್ತದೆ. ಪ್ರಾತಿಪದಿಕ ಸಂಜ್ಞೆ ಬಂದ ಮೇಲೆ ಸುಪ್ ಲೋಪವಾಗಿ ದ್ವಿರಾತ್ರಿ ಎಂದಿದ್ದಾಗ ಪ್ರಕೃತ ಸಂಖ್ಯಾವಾಚಕವಾದ ತತ್ಪುರುಷವಾಗಿರುವುದರಿಂದ ತತ್ಪುರುಷಸ್ಯಾಙ್ಗುಲೇಃ ಸಂಖ್ಯಾವ್ಯಯಾದೇಃ ಎಂಬ ಸೂತ್ರದಿಂದ ಅಚ್ (ಅ) ಪ್ರತ್ಯಯವು ಬರುತ್ತದೆ. ದ್ವಿರಾತ್ರಿ ಎಂಬಲ್ಲಿರುವ ಇ ಕಾರಕ್ಕೆ ಯಸ್ಯೇತಿಚ ಎಂಬುದರಿಂದ ಲೋಪವು ಬಂದು ಪ್ರಕೃತ ಸೂತ್ರದಿಂದ ಪುಲ್ಲಿಂಗವು ಬರಬೇಕಾಗಿದ್ದಾಗ ಅದನ್ನು ಬಾಧಿಸಿ ಪ್ರಕೃತ ವಾರ್ತಿಕದಿಂದ ದ್ವಿರಾತ್ರಮ್ ಎಂದು ನಪುಂಸಕ ಲಿಂಗದಲ್ಲಿ ರೂಪವು ಸಿದ್ಧವಾಗಿದೆ.

ಉದಾ:- ತ್ರಿರಾತ್ರಾಮ್ (ಮೂರು ರಾತ್ರಿಗಳ ಸಮೂಹ): ತೀಸ್ರಣಾಮ್ ರಾತ್ರೀಣಾಮ್ ಸಮಾಹಾರಃ ಎಂಬುದು ಲೌಕಿಕ ವಿಗ್ರಹ ವಾಕ್ಯ. ಇದರ ರೂಪಸಿದ್ಧಿಯು ಹಿಂದಿನ ಪ್ರಕ್ರಿಯೆಯನ್ನು ಅನುಸರಿಸಿ ತ್ರಿರಾತ್ರಾಮ್ ಎಂಬ ರೂಪವು ಸಿದ್ಧವಾಗುತ್ತದೆ.

**(ಟಚ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-960: ರಾಜಾಹಸ್ಸಖಭ್ಯಷ್ಟಚ್ (5-4-91)**

ವೃತ್ತಿ:- ಏತದನ್ತಾತ್ತತ್ಪುರುಷಾತ್ ಟಚ್ ಸ್ಯಾತ್। ಪರಮರಾಜಃ

ಪ.ಚ್ಛೇ:- ರಾಜಾಹಃಸಖಿಭ್ಯಃ, ಟಚ್।

ಅ.ವೃ:-ತತ್ಪುರುಷಸ್ಯಾಙ್ಗುಲೇಃ ಸಂಖ್ಯಾವ್ಯಯಾದೇಃ ಎಂಬ ಸೂತ್ರದಿಂದ ವಿಭಕ್ತಿವಿಪರಿಣಾಮಮಾಡಿ ತತ್ಪುರಷಾತ್ ಎಂಬ ಪದವು ಅನುವೃತ್ತವಾಗುತ್ತದೆ. ಪ್ರತ್ಯಯಃ, ಪರಶ್ಚ ಮತ್ತು ಸಮಾಸಾನ್ತಾಃ ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ:- ರಾಜನ್, ಅಹನ್ ಮತ್ತು ಸಖಿ ಈ ಶಬ್ದಗಳನ್ನು ಅಂತ್ಯದಲ್ಲಿ ಉಳ್ಳ ಸಮಾಸಗಳಿಗೆ ಸಮಾಸಾನ್ತವಾದ ಟಚ್ (ಅ)ಪ್ರತ್ಯಯವು ಬರುತ್ತದೆ.

ಉದಾ:- ಪರಮರಾಜಃ (ಶ್ರೇಷ್ಠ ರಾಜನು): ಪರಮಶ್ಚ ಅಸೌ ರಾಜಾ ಚ ಎಂಬುದು ಲೌಕಿಕ ವಿಗ್ರಹ ವಾಕ್ಯ ಪರಮ+ಸುರಾಜನ್+ಸು ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಇದಕ್ಕೆ ಪ್ರಾತಿಪದಿಕ ಸಂಜ್ಞೆ ಬಂದಮೇಲೆ ಸುಪ್ ಲೋಪವಾದ ಮೇಲೆ ಪರಮ

ಶಬ್ದಕ್ಕೆ ಉಪಸರ್ಜನ ಸಂಜ್ಞೆಯು ಬಂದು ಪೂರ್ವ ನಿಪಾತವಾಗಿ ಪರಮ ರಾಜನ್ ಎಂದಿರುತ್ತದೆ. ಇಲ್ಲಿ ರಾಜನ್ ಶಬ್ದವನ್ನು ಕೊನೆಯಲ್ಲಿ ಉಳ್ಳಂತ ಶಬ್ದವಾಗಿರುವುದರಿಂದ ಪ್ರಕೃತ ಸೂತ್ರದಿಂದ ಸಮಾಸಾಂತವಾದ ಟಚ್ (ಅ) ಪ್ರತ್ಯಯವು ಬಂದು ಪರಮ ರಾಜನ್+ಅ ಎಂದಿರುತ್ತದೆ. ಇದರಲ್ಲಿರುವ 'ಅನ್'ಗೆ ಟಿ ಸಂಜ್ಞೆಯು ಬಂದು ನಸ್ತದ್ಧಿತೇ ಎಂಬುದರಿಂದ ಲೋಪವು ಬಂದು ಪರಮರಾಜ್+ಅ=ಪರಮರಾಜ ಎಂದಾಗುತ್ತದೆ. ಇದನ್ನು ಸುಬಂತ ಮಾಡಿದಾಗ ಪರಮರಾಜಃ ಎಂದು ರೂಪ ಸಿದ್ಧವಾಗುತ್ತದೆ.

**(ಆಕಾರಾನ್ತ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ-961: ಆನ್ಮಹತಃ ಸಮಾನಾಧಿಕರಣ-ಜಾತೀಯಯೋಃ( 6-3-46)**

ವೃತ್ತಿ:- ಮಹತ ಆಕಾರಃ ಅನ್ತಾದೇಶಃ ಸ್ಯಾತ್ ಸಮಾನಾಧಿಕರಣೇ ಉತ್ತರಪದೇ ಜಾತೀಯೇ ಚ ಪರೇ। ಮಹಾರಾಜಃ।

ವಾ॥ ಪ್ರಕಾರವಚನೇ ಜಾತೀಯರ್। ಮಹಾಪ್ರಕಾರಃ ಮಹಾಜಾತೀಯಃ॥

ಪ.ಚ್ಛೇ:- ಆತ್, ಮಹತಃ, ಸಮಾನಾಧಿಕರಣ ಜಾತೀಯಯೋಃ।

ಅ.ವೃ:- ಅಲುಗುತ್ತರಪದೇ ಎಂಬ ಸೂತ್ರದಿಂದ ಉತ್ತರಪದೇ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ:- ಮಹತ್ ಶಬ್ದಕ್ಕೆ ಸಮಾನಾಧಿಕರಣವಾದ ಉತ್ತರಪದವು ಪರದಲ್ಲಿದ್ದಾಗ ಅಂತ್ಯ ತ್ ಕಾರಕ್ಕೆ ಆ ಕಾರವು ಅನ್ತಾದೇಶವಾಗಿ ಬರುತ್ತದೆ. ಪ್ರಕಾರವಚನೇ ಜಾತೀಯರ್ ಎಂಬ ಸೂತ್ರದಿಂದ ಸದೃಶಾರ್ಥದಲ್ಲಿ ಜಾತೀಯರ್ ಪ್ರತ್ಯಯವು ಬರುತ್ತದೆ.

ಉದಾ:- ಮಹಾರಾಜಃ (ಶ್ರೇಷ್ಠ ರಾಜನು): ಮಹಾನ್ ಚ ಅಸೌ ರಾಜಾ ಚ ಎಂಬುದು ಲೌಕಿಕ ವಿಗ್ರಹ ವಾಕ್ಯ.ಮಹತ್+ಸು ರಾಜನ್+ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ವಿಶೇಷಣಮ್ ವಿಶೇಷ್ಯೇಣ ಬಹುಳಮ್ ಎಂಬ ಸೂತ್ರದಿಂದ ಸಮಾಸವಾಗುತ್ತದೆ. ಪ್ರಾತಿಪದಿಕ ಸಂಜ್ಞೆ ಬಂದು ಸುಪ್ ಲೋಪವಾದ ಮೇಲೆ ಮಹತ್ ರಾಜನ್ ಎಂದಿದ್ದಾಗ ಮಹತ್ ಎಂಬುದಕ್ಕೆ ಆ ಕಾರವು ಅನ್ತಾದೇಶವಾಗಿ ಬಂದು ಸವರ್ಣದೀರ್ಘ ಮಾಡಿದಾಗ ಮಹಾರಾಜನ್ ಎಂದಿರುತ್ತದೆ. ಹಿಂದಿನ ಸೂತ್ರದಿಂದ ರಾಜನ್ ಪ್ರತ್ಯಯಕ್ಕೆ ಟಚ್ (ಅ) ಪ್ರತ್ಯಯವು ಬಂದು ಟಿ ಲೋಪವಾದ ಮೇಲೆ ಸುಬಂತ ಮಾಡಿದಾಗ ಮಹಾರಾಜಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ:- ಮಹಾಜಾತೀಯಃ (ಮಹತ್ವದಿಂದ ಯುಕ್ತನಾದ):- ಇದು ಸಮಾಸದ ಉದಾಹರಣೆಯಲ್ಲ. ಆದರೆ ಜಾತಿಯರ್ ಪ್ರತ್ಯಯವು ಪರದಲ್ಲಿದ್ದಾಗ ಆತ್ವವವು ಬರುವುದಕ್ಕೆ ಇದು ಉದಾಹರಣೆಯಾಗಿದೆ. ಇದು ಪ್ರಕಾರವಚನೇ ಜಾತಿಯರ್ ಎಂಬುದು ಈ ಸೂತ್ರಕ್ಕೆ ಸಂಬಂಧಿಸಿದ ವಾರ್ತಿಕವಾಗಿದೆ. ಜಾತಿಯರ್ ಪ್ರತ್ಯಯವು ಪರದಲ್ಲಿದ್ದಾಗ ಮಹತ್+ಜಾತಿಯ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ತ್ ಕಾರದ ಸ್ಥಾನದಲ್ಲಿ ಆ ಕಾರವು ಆದೇಶವಾಗಿ ಬಂದು ಸವರ್ಣದೀರ್ಘವಾದ ಮೇಲೆ ಮಹಾಜಾತಿಯ

ಎಂದಿರುತ್ತದೆ. ಇದನ್ನು ಸುಬಂತವಾದಾಗ ಮಹಾಜಾತಿಯಃ ಎಂದಾಗುತ್ತದೆ.

**(ಆಕಾರಾಂತ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ-962. ದ್ವ್ಯಷ್ಟನಃ ಸಂಖ್ಯಾಯಾಮಬಹುವ್ರೀಹ್ಯಶೀತ್ಯೋಃ (6-3-47)**

ವೃತ್ತಿ:- ಆತ್ ಸ್ಯಾತ್ । ದ್ವೌ ಚ ದಶ ಚ ದ್ವಾದಶ। ಅಷ್ಟಾವಿಂಶತಿಃ

ಪ.ಚ್ಛೇ:- ದ್ವ್ಯಷ್ಟನಃ, ಸಂಖ್ಯಾಯಾಮ್, ಅಬಹುವ್ರೀಹ್ಯಶೀತ್ಯೋಃ।

ಅ.ವೃ:- ಅನ್ ಮಹತಃ ಸಮಾನಾಧಿಕರಣ ಜಾತೀಯಯೋಃ ಎಂಬ ಸೂತ್ರದಿಂದ ಅತ್ ಎಂಬ ಪದವು ಮತ್ತು ಅಲುಗುತ್ತರಪದೇ ಎಂಬ ಸೂತ್ರದಿಂದ ಉತ್ತರಪದೇ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ:- ದ್ವಿ ಮತ್ತು ಅಷ್ಟನ್ ಶಬ್ದಗಳಿಗೆ ಆಕಾರವು ಅಂತಾದೇಶವಾಗಿ ಬರುತ್ತದೆ.- ಸಂಖ್ಯಾವಾಚಕ ಪದವು ಉತ್ತರಪದವಾಗಿದ್ದಾಗ, ಆದರೆ ಬಹುವ್ರಿಹಿ ಸಮಾಸ ಮತ್ತು ಉತ್ತರಪದ ಪರದಲ್ಲಿದ್ದಾಗ ಈ ಕಾರ್ಯವು ಜರುಗುವುದಿಲ್ಲ.

ಉದಾ:- ದ್ವಾದಶ (ಹನ್ನೆರಡು):- ದ್ವೌ ಚ ದಶ ಚ ಎಂಬುದು ಲೌಕಿಕವಿಗ್ರಹವಾಕ್ಯ ದ್ವಿ ಔ ದಶನ್+ಜಸ್ ಎಂಬುದು ಅಲೌಕಿಕವಿಗ್ರಹ ವಾಕ್ಯ. ಚಾರ್ಥೇ ದ್ವಂದಃ ಎಂಬ ಸೂತ್ರದಿಂದ ದ್ವಂದ ಸಮಾಸವಾಗಿ ಪ್ರಾತಿಪದಿಕ ಸಂಜ್ಞೆ ಬಂದ ಮೇಲೆ ಸುಪ್ ಲೋಪವಾಗಿ ಅಲ್ಪ ಅಚ್ (ಅ) ವರ್ಣಗಳುಳ್ಳ ದ್ವಿ ಗೆ ಪೂರ್ವನಿಪಾತವು ಬಂದು ದ್ವಿ+ದಶನ್ ಎಂದಿದ್ದಾಗ ಪ್ರಕೃತ ಸೂತ್ರದಿಂದ ದ್ವಿ ಶಬ್ದದಲ್ಲಿರುವ ಇ ಕಾರಕ್ಕೆ ಆಕಾರವು ಆದೇಶವಾಗಿ ಬಂದು ದ್ವಾದಶನ್ ಎಂದಿರುತ್ತದೆ. ಷ್ಣಾಂತಾ ಷಟ್ ಎಂಬ ಸೂತ್ರದಿಂದ ದ್ವಾದಶನ್ ಶಬ್ದಕ್ಕೆ ಷಟ್ ಸಂಜ್ಞೆಯು ಬಂದು ಷಡ್‌ಭ್ಯೋಲುಕ್ ಎಂಬ ಸೂತ್ರದಿಂದ ಜಸ್ ಗೆ ಲೋಪವು ಬಂದು ದ್ವಾಶನ್ ಎಂದಿರುತ್ತದೆ ನಲೋಪಃ ಪ್ರಾತಿಪದಿಕಾಂತಸ್ಯ ಎಂಬ ಸೂತ್ರದಿಂದ ನಕಾರಕ್ಕೆ ಲೋಪವು ಬಂದು ದ್ವಾದಶ ಎಂದು ರೂಪವು ಸಿದ್ಧವಾಗುತ್ತದೆ.

ಉದಾ:- ಅಷ್ಟಾವಿಂಶತಿಃ (ಇಪ್ಪತ್ತೆಂಟು): ಅಷ್ಟ ಚ ವಿಶಂತಿಃ ಚ ಎಂಬುದು ಲೌಕಿಕ ವಿಗ್ರಹ ವಾಕ್ಯ. ದ್ವಿ ಔ ವಿಂಶತಿ+ಸು ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಚಾರ್ಥೇ ದ್ವಂದಃ ಎಂಬ ಸೂತ್ರದಿಂದ ದ್ವಂದ ಸಮಾಸವಾಗಿ ಪ್ರಾತಿಪದಿಕ ಸಂಜ್ಞೆ ಬಂದ ಮೇಲೆ ಸುಪ್ ಲೋಪವಾಗಿ ಅಲ್ಪ ಅಚ್ (ಅ) ವರ್ಣಗಳುಳ್ಳ ಅಷ್ಟನ್ ಶಬ್ದಕ್ಕೆ ಪೂರ್ವನಿಪಾತವು ಬಂದು ಅಷ್ಟನ್+ವಿಂಶತಿ ಎಂದಿದ್ದಾಗ ಪ್ರಕೃತ ಸೂತ್ರದಿಂದ ಅಷ್ಟನ್ ಶಬ್ದದಲ್ಲಿರುವ ನ್ ಕಾರಕ್ಕೆ ಆಕಾರವು ಆದೇಶವಾಗಿ ಬಂದು ಸವರ್ಣದೀರ್ಘವಾದ ಮೇಲೆ ಅಷ್ಟಾವಿಂಶತಿ ಎಂದಿರುತ್ತದೆ. ಇದು ಏಕವಚನ್ತಾವಾಗಿಯೇ ಇರುವುದರಿಂದ ಸುಬಂತ ಮಾಡಿದಾಗ ಅಷ್ಟಾವಿಂಶತಿಃ ಎಂದು ರೂಪವು ಸಿದ್ಧವಾಗುತ್ತದೆ.

**(ತ್ರಯಸ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ-963. ತ್ರೇಸ್ತ್ರಯಃ (6-3-48)**

ವೃತ್ತಿ:-ತ್ರಯೋದಶ, ತ್ರಯೋವಿಂಶತಿಃ, ತ್ರಯಸ್ತ್ರಿಂಶತ್।

ಪ.ಚ್ಛೇ:–ತ್ರೇಃ, ತ್ರಯಃ।

ಅ.ವೃ:– ದ್ವ್ಯಷ್ಟನಃ, ಸಂಖ್ಯಾಯಾಮ್ ಅಬಹುವ್ರೀಹ್ಯಶೀತ್ಯೋಃ ಎಂಬ ಸೂತ್ರದಿಂದ ಸಂಖ್ಯಾಯಾಮ್ ಮತ್ತು ಅಬಹುವ್ರೀಹ್ಯಶೀತ್ಯೋಃ ಎಂಬ ಪದಗಳು ಹಾಗೂ ಅಲುಗುತ್ತರಪದೇ ಎಂಬ ಸೂತ್ರದಿಂದ ಉತ್ತರಪದೇ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ:–ಸಂಖ್ಯಾವಾಚಕ ಶಬ್ದವು ಉತ್ತರಪದವಾಗಿದ್ದಾಗ ತ್ರಿ ಶಬ್ದಕ್ಕೆ ತ್ರಯಸ್ ಆದೇಶವು ಬರುತ್ತದೆ. ಆದರೆ ಬಹುವ್ರೀಹಿ ಸಮಾಸವು ಮತ್ತು ಅಶೀತಿ ಎಂಬ ಶಬ್ದವು ಪರದಲ್ಲಿದ್ದಾಗ ಈ ಕಾರ್ಯವು ಆಗುವುದಿಲ್ಲ.

ಉದಾ:– ತ್ರಯೋದಶ (ಹದಿಮೂರು):– ತ್ರಯಶ್ಚ ದಶ ಚ ಎಂಬುದು ಲೌಕಿಕವಿಗ್ರಹ ವಾಕ್ಯ. ತ್ರಿ ಜಸ್+ದಶನ್+ಜಸ್ ಎಂಬುದು ಅಲೌಕಿಕವಿಗ್ರಹ ವಾಕ್ಯ. ಚಾರ್ಥೇ ದ್ವಂದಃ ಎಂಬ ಸೂತ್ರದಿಂದ ದ್ವಂದ ಸಮಾಸವಾಗಿ ಪ್ರಾತಿಪದಿಕ ಸಂಜ್ಞೆ ಬಂದ ಮೇಲೆ ಸುಪ್ ಲೋಪವಾಗಿ ಅಲ್ಪ ಅಚ್ (ಅ) ವರ್ಣಗಳುಳ್ಳ ತ್ರಿ ಶಬ್ದದಕ್ಕೆ ಪೂರ್ವನಿಪಾತವಾಗುತ್ತದೆ. ಸಂಖ್ಯಾವಾಚಕ ಶಬ್ದಕ್ಕೆ ಉತ್ತರಪದವು ಪರದಲ್ಲಿದ್ದಾಗ ತ್ರಿ ಶಬ್ದಕ್ಕೆ ತ್ರಯಸ್ ಆದೇಶವಾಗಿ ಬಂದು ತ್ರಯಸ್+ಜಸ್ ಎಂದಿರುತ್ತದೆ ಸ ಕಾರಕ್ಕೆ ರುತ್ವ ಮತ್ತು ಉತ್ವಗಳು ಬಂದು ಗುಣ ಸಂಧಿಯಾದ ಮೇಲೆ ತ್ರಯೋದಶನ್ ಎಂದಿರುತ್ತದೆ. ಇದಕ್ಕೆ ಬಹುವಚನ ಸುಬಂತ ಮಾಡಿ ಷಢ್‌ಭ್ಯೋಲುಕ್ ಎಂಬ ಸೂತ್ರದಿಂದ ಜಸ್ ಗೆ ಲೋಪವು ಬಂದು ಅಂತ್ಯ ವರ್ಣವಾದ ನಕಾರಕ್ಕೆ ನಲೋಪಃ ಪ್ರಾತಿಪದಿಕಾಂತಸ್ಯ ಎಂಬುದರಿಂದ ಲೋಪವು ಬಂದು ತ್ರಯೋದಶ ಎಂದು ರೂಪವು ಸಿದ್ಧವಾಗುತ್ತದೆ.

ಉದಾ:– ತ್ರಯೋವಿಂಶತಿಃ (ಇಪ್ಪತ್ತಮೂರು) ತ್ರಯಶ್ಚ ವಿಶಂತಿಶ್ಚ ಎಂಬುದು ಲೌಕಿಕವಿಗ್ರಹ ವಾಕ್ಯ. ತ್ರಿ+ಜಸ್+ವಿಶಂತಿ+ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ಹಿಂದಿನಂತೆ ಪ್ರಕ್ರಿಯೆಯು ನಡೆದು ಪ್ರಕೃತ ಸೂತ್ರದಿಂದ ತ್ರಯಸ್ ಆದೇಶ ಬಂದು ತ್ರಯೋವಿಂಶತಿ ಎಂದಿರುತ್ತದೆ. ವಿಂಶತ್ಯಾದ್ಯಾ ಸದೇಕತ್ವೇ ಎಂಬ ವಚನದಂತೆ ವಿಂಶತಿ ಮೊದಲಾದವುಗಳಿಗೆ ಏಕವಚನದಲ್ಲೇ ಪ್ರಯೋಗ ಇರಬೆಕೆಂಬ ನಿಯಮದಿಂದ ಸು ಪ್ರತ್ಯಯವನ್ನು ಸೇರಿಸಿದಾಗ ತ್ರಯೋವಿಂಶತಿಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ:– ತ್ರಯಸ್ತ್ರಿಂಶತ್(ಮೂವತ್ತ ಮೂರು): ತ್ರಯಶ್ಚ ತ್ರಿಂಶತ್‌ಚ್ ಎಂಬುದು ಲೌಕಿಕವಿಗ್ರಹ ವಾಕ್ಯ. ತ್ರಿ+ಜಸ್ ತ್ರಿಂಶತ್+ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ಹಿಂದಿನಂತೆ ಪ್ರಕ್ರಿಯೆಯು ನಡೆದು ಪ್ರಕೃತ ಸೂತ್ರದಿಂದ ತ್ರಯಸ್ ಆದೇಶ ಬಂದು ತ್ರಯಸ್+ತ್ರಿವ್‌ಶತ್ ಎಂದಿರುತ್ತದೆ. ಸ ಕಾರಕ್ಕೆ ರುತ್ವ ವಿಸರ್ಗವಾದಾಗ ವಿಸರ್ಜನೀಯಸ್ಯಸಃ ಎಂಬ ಸೂತ್ರದಿಂದ ವಿಸರ್ಗಕ್ಕೆ ಸ್ ಕಾರವು ಆದೇಶವಾಗಿ ಬಂದು ತ್ರಯಸ್ ತ್ರಿಶತ್ ಎಂದಿರುತ್ತದೆ. ವಿಂಶತ್ಯಾದ್ಯಾಃ ಸದೇಕತ್ವೇ ಎಂಬ ವಚನದಂತೆ ವಿಂಶತಿ ಮೊದಲಾದವು ಗಳಿಗೆ ಏಕವಚನದಲ್ಲೇ ಪ್ರಯೋಗ ಇರಬೇಕೆಂಬ ನಿಯಮದಿಂದ ಸು ಪ್ರತ್ಯಯವನ್ನು ಸೇರಿಸಿದಾಗ ಹಲ್ ಙ್ಯಾಭ್ಯೋ... ಎಂಬ ಸೂತ್ರದಿಂದ ತ್ರಯಸ್ತ್ರಿಂಶತ್ ಎಂಬ ರೂಪವು ಸಿದ್ಧವಾಗುತ್ತದೆ.

## (ಪರವಲ್ಲಿಂಗವನ್ನು ವಿಧಿಸುವ ಸೂತ್ರ)

**ಸೂತ್ರ-964. ಪರವಲ್ಲಿಙ್ಗಂ ದ್ವನ್ದ್ವತತ್ಪುರುಷಯೋಃ( 2-4-26)**

ವೃತ್ತಿಃ-ಏತಯೋಃ ಪರಪದಸ್ಯ ಇವ ಲಿಙ್ಗಂ ಸ್ಯಾತ್। ಕುಕ್ಕುಟಮಯೂರ್ಯಾವಿಮೇ। ಮಯೂರೀಕುಕ್ಕುಟಾವಿಮೌ । ಅರ್ಧಪಿಪ್ಪಲೀ ।

ವಾರ್ತಿಕ:- ದ್ವಿಗು ಪ್ರಾಪ್ತಾಪನ್ನಾಲಮ್ಪೂರ್ವಗತಿ ಸಮಾಸೇಷು ಪ್ರತಿಷೇಧೋ ವಾಚ್ಯಃ ಪಞ್ಚಸು ಕಪಾಲೇಷು ಸಂಸ್ಕೃತ । ಪಞ್ಚಕಪಾಲಃ ಪುರೋಡಾಶಃ।

ಅರ್ಥ:-ದ್ವನ್ದ್ವ ಮತ್ತು ತತ್ಪುರುಷ ಸಮಾಸಗಳಲ್ಲಿ ಪರಪದದ ಲಿಂಗವೇ ಬರುತ್ತದೆ.

ಉದಾ:- ಕುಕ್ಕುಟಮಯೂರ್ಯಾವಿಮೇ (ಹುಂಜ ಮತ್ತು ಹೆಣ್ಣು ನವಿಲು):- ಕುಕ್ಕುಟಶ್ಚ ಮಯೂರೀಚ ಎಂಬುದು ಲೌಕಿಕವಿಗ್ರಹ ವಾಕ್ಯ. ಕುಕ್ಕುಟ ಸು+ಮಯೂರೀ+ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ಚಾರ್ಥೇ ದ್ವನ್ದ್ವಃ ಎಂಬ ಸೂತ್ರದಿಂದ ಸಮಾಸವಾಗಿದೆ. ಇದಕ್ಕೆ ಪ್ರಾತಿಪದಿಕ ಸಂಜ್ಞೆಯು ಬಂದು ಸುಪ್ ಲೋಪವಾದ ಮೇಲೆ ಪ್ರಕೃತ ಸೂತ್ರದಿಂದ ಪರವಲ್ಲಿಙ್ಗವೆಂದರೆ ಪರಶಬ್ದವಾದ ಮಯೂರೀ ಶಬ್ದದ ಸ್ತ್ರೀಲಿಂಗವೇ ಬಂದು ಕುಕ್ಕುಟಮಯೂರ್ಯೌ(ಇಮೇ) ಎಂದು ರೂಪವಾಗುತ್ತದೆ.

ಉದಾ:- ಮಯೂರೀಕುಕ್ಕುಟಾವಿಮೌ (ಹೆಣ್ಣು ನವಿಲು ಮತ್ತು ಹುಂಜ) ಈ ಶಬ್ದಗಳನ್ನೇ ಬದಲಾಯಿಸಿದರೆ ಮಯೂರೀ ಚ ಕುಕ್ಕುಟಶ್ಚ ಎಂದಿದ್ದಾಗ ಕುಕ್ಕುಟ ಶಬ್ದವು ಪುಲ್ಲಿಂಗವಾಗಿರುವುದರಿಂದ ಅದರ ದ್ವಿವಚನವೇ ಬಂದು ಮಯೂರೀಕುಕ್ಕುಟೌ (ಇಮೌ) ಎಂದಾಗುತ್ತದೆ.

ಉದಾ:- ಅರ್ಧಪಿಪ್ಪಲೀ (ಪಿಪ್ಪಲೀಯ ಅರ್ಧಭಾಗ):- ಅರ್ಧಂ ಪಿಪ್ಪಲ್ಯಾಃ ಎಂದಿದ್ದಾಗ ಪ್ರಕೃತ ಸೂತ್ರದಿಂದ ಪರಪದವಾದ ಪಿಪ್ಪಲೀ ಶಬ್ದವು ಸ್ತ್ರೀಲಿಂಗದಲ್ಲಿ ಇರುವುದರಿಂದ ಅರ್ಧಪಿಪ್ಪಲೀ ಎಂದು ಸಮಾಸವಾಗಿದೆ.

ವಾರ್ತಿಕ:- ದ್ವಿಗು ಪ್ರಾಪ್ರಾಪನ್ನಾಲಮ್ಪೂರ್ವಗತಿ ಸಮಾಸೇಷು ಪ್ರತಿಷೇಧೋ ವಾಚ್ಯಃ

ಪಞ್ಚಸು ಕಪಾಲೇಷು ಸಂಸ್ಕೃತ ಪಞ್ಚಕ ಪಾಲಃ ಪುರೋಡಾಶಃ :- ದ್ವಿಗು ಸಮಾಸ ಹಾಗೂ ಪ್ರಾಪ್ತ, ಆಪನ್ನ ಮತ್ತು ಅಲಮ್ ಈ ಶಬ್ದಗಳನ್ನು ಪೂರ್ವಪದವಾಗಿ ಉಳ್ಳ ತತ್ಪುರುಷ ಸಮಾಸ ಮತ್ತು ಗತಿ ಸಮಾಸಗಳಲ್ಲಿ ಪರ ಶಬ್ದದ ಲಿಂಗ ಬರುತ್ತದೆ ಎಂಬ ನಿಯಮಕ್ಕೆ ನಿಷೇಧವಿರುತ್ತದೆ.

ಉದಾ:- ಪಞ್ಚಕಪಾಲಃ ಪುರೋಡಾಶಃ (ಐದು ಕಪಾಳಗಳಲ್ಲಿ ಸಂಗ್ರಹಿಸಿರುವ ಪುರುಡಾಶ (ಹೋಮದ್ರವ್ಯ)):- ಪಞ್ಚಸು ಕಪಾಲೇಷು ಸಂಸ್ಕೃತಃ ಎಂಬುದು ಲೌಕಿಕವಿಗ್ರಹ ವಾಕ್ಯ, ಪಞ್ಚನ್+ಸುಪ್ ಕಪಾಲ+ಸುಪ್ ಎಂಬುದು ಅಲೌಕಿಕವಿಗ್ರಹ ವಾಕ್ಯ. ಈ ವಿಗ್ರಹ ವಾಕ್ಯದಲ್ಲಿ ಸಂಸ್ಕೃತಮ್ ಭಕ್ಷಾಃ ಎಂಬ ಸೂತ್ರದಿಂದ ತದ್ಧಿತ ಪ್ರತ್ಯಯವನ್ನು ಸೇರಿಸಿದಾಗ ತದ್ಧಿತಾರ್ಥೋತ್ತರಪದಸಮಾಹಾರೇಚ ಎಂಬ ಸೂತ್ರದಿಂದ ಸಮಾಸವಾಗಿ ಉಪಸರ್ಜನ ಸಂಜ್ಞೆಯು ಬಂದು ಪೂರ್ವನಿಪಾತವಾದ ಮೇಲೆ ಪ್ರಾತಿಪದಿಕ ಸಂಜ್ಞೆ ಬಂದು ಸುಪ್ ಲೋಪವಾದ ಮೇಲೆ ಪಞ್ಚನ್+ಕಪಾಲ ಎಂದಿರುತ್ತದೆ.

ನಲೋಪಃ ಪ್ರಾತಿಪದಿಕಾಂತಸ್ಯ ಎಂಬುದರಿಂದ ನ್‌ಕಾರವು ಲೋಪವಾದ ಮೇಲೆ ಪಞ್ಚ ಕಪಾಲ ಎಂದಿರುತ್ತದೆ. ಈಗ ಸಂಸ್ಕೃತಂ ಭಕ್ಷಾಃ ಎಂಬ ಸೂತ್ರದಿಂದ ಅಣ್ ಪ್ರತ್ಯಯವು ಬಂದು ದ್ವಿಗೋರ್ಲುಗನಪತ್ಯೇ ಎಂಬ ಸೂತ್ರದಿಂದ ಲೋಪವಾಗಿ ಪಞ್ಚಕಪಾಲ ಎಂದೇ ಆಗುತ್ತದೆ. ಇದರಲ್ಲಿ ಉತ್ತರಪದವಾದ ಕಪಾಲ ಶಬ್ದವು ನಪುಂಸಕ ಲಿಂಗವಾದರೂ ಸಮಾಸವು ಪ್ರಕೃತ ವಾರ್ತಿಕದಿಂದ ಪುಲ್ಲಿಂಗದಲ್ಲೇ ಇರುತ್ತದೆ.

**(ಸಮಾಸವನ್ನು ವಿಧಿಸುವ ಸೂತ್ರ)**

**ಸೂತ್ರ-೯೬೮. ಪ್ರಾಪ್ತಾಪನ್ನೇ ಚ ದ್ವಿತೀಯಯಾ (2-2-4)**

ವೃತ್ತಿ:-ಸಮಸ್ಯೇತೇ। ಅಕಾರಶ್ಚಾನಯೋರನ್ತಾದೇಶಃ। ಪ್ರಾಪ್ತೋ ಜೀವಿಕಾಂ ಪ್ರಾಪ್ತಜೀವಿಕಃ । ಆಪನ್ನಜೀವಿಕಃ । ಅಲಂ ಕುಮಾರ್ಯೈ ಅಲಂಕುಮಾರಿಃ ಅತ ಏವ ಜ್ಞಾಪಕಾತ್ಸಮಾಸಃ ನಿಷ್ಕೌಶಾಂಭಿಃ।

ಅ.ವ್ಯ:- ಸಮಾಸಃ, ಸುಪ್, ಸಹಸುಪಾ ಮತ್ತು ತತ್ಪುರುಷಃ ಇವು ಅಧಿಕಾರ ಸೂತ್ರಗಳಾಗಿವೆ.

ಅರ್ಥ:-ಪ್ರಾಪ್ತ ಮತ್ತು ಆಪನ್ನ ಸುಬಂತ ಶಬ್ದಗಳ ದ್ವಿತೀಯಾಂತವಾದ ಸಮರ್ಥ ಸುಬನ್ತ ಶಬ್ದಗಳ ಜೊತೆಗೆ ವಿಕಲ್ಪದಿಂದ ತತ್ಪುರುಷ ಸಮಾಸವಾಗುತ್ತದೆ. ಮತ್ತು ಸಮಾಸದ ಕೊನೆಯ ಪದಕ್ಕೆ ಅಕಾರವು ಆದೇಶವಾಗಿಯೂ ಬರುತ್ತದೆ.

ಉದಾ:- ಪ್ರಾಪ್ತಜೀವಿಕಃ (ಜೀವನದ ಸಾಧನವನ್ನು ಹೊಂದಿದವನು):-ಪ್ರಾಪ್ತಃ ಜೀವಿಕಾಂ ಎಂಬುದು ಲೌಕಿಕವಿಗ್ರಹ ವಾಕ್ಯ. ಪ್ರಾಪ್ತ+ಸುಜೀವಿಕಾ+ಅಮ್ ಎಂಬುದು ಅಲೌಕಿಕವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ಸಮಾಸವಾಗಿದೆ. ಸಮಾಸದಲ್ಲಿ ಪ್ರಥಮಾಂತ ಪದವು ಪ್ರಾಪ್ತಾಪನ್ನೇ ಎಂದಿದೆ ಇದರಿಂದ ನಿರ್ದಿಷ್ಟವಾದ ಪ್ರಾಪ್ತ+ಸು ಗೆ ಉಪಸರ್ಜನ ಸಂಜ್ಞೆಯು ಬಂದು ಪೂರ್ವನಿಪಾತವಾದ ಮೇಲೆ ನಿಯತವಿಭಕ್ತಿಕವಾಗುವುದರಿಂದ ಏಕವಿಭಕ್ತಿಚಾಪೂರ್ವನಿಪಾತೇ ಎಂಬ ಸೂತ್ರದಿಂದ ಜೀವಿಕಾ+ಅಮ್ ಎಂಬುದಕ್ಕೆ ಉಪಸರ್ಜನ ಸಂಜ್ಞೆಯು ಬಂದು ಪೂರ್ವನಿಪಾತವಾಗದೇ ಪ್ರಾತಿಪದಿಕ ಸಂಜ್ಞೆಯು ಬಂದು ಸುಪ್ ಲೋಪವಾದ ಮೇಲೆ ಪ್ರಾಪ್ತಜೀವಿಕಾ ಎಂದಿರುತ್ತದೆ. ಸಮಾಸಾಂತವಾದ ಆಕಾರಕ್ಕೆ ಅಕಾರವು ಆದೇಶವಾಗಿ ಬಂದು ಪ್ರಾಪ್ತಜೀವಿಕ ಎಂದಿರುತ್ತದೆ. ಪರವಲ್ಲಿಙ್ಗಂ ದ್ವನ್ದ್ವತತ್ಪುರುಷಯೋಃ ಎಂಬ ಸೂತ್ರದಿಂದ ಪ್ರಾಪ್ತಜೀವಿಕಾ ಎಂದಿರಬೇಕಾಗಿತ್ತು. ಆದರೆ ದ್ವಿಗು ಪ್ರಾಪ್ತಾಪನ್ನಾಲಮ್ಪೂರ್ವಗತಿಸಮಾಸೇಷು ಪ್ರತಿಷೇಧೋ ವಾಚ್ಯಃ ಎಂಬ ವಾರ್ತಿಕದಿಂದ ನಿಷೇಧವಾಗಿ ವಿಶೇಷ ಪದಕ್ಕೆ ಅನುಗುಣವಾಗಿ ಪುಲ್ಲಿಂಗವೇ ಬಂದಿರುತ್ತದೆ. ಇದನ್ನು ಸುಬಂತ ಮಾಡಿದಾಗ ಪ್ರಾಪ್ತಜೀವಿಕಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ:- ಆಪನ್ನ ಜೀವಿಕಃ (ಜವನದ ಸಾಧನವನ್ನು ಹೊಂದಿದವನು):- ಹಿಂದಿನ ಪ್ರಕ್ರಿಯೆಯಂತೆ ಪ್ರಕ್ರಿಯೆಯು ನಡೆದು ಈ ಮೇಲಿನ ರೂಪವು ಸಿದ್ಧವಾಗಿದೆ.

ಉದಾ:- ಅಲಂ ಕುಮಾರಿಃ (ಕುಮಾರಿಗೆ ಯೊಗ್ಯವಾದವನು): ಅಲಂ ಕುಮಾರ್ಯೈ

ಎಂಬುದು ಲೌಕಿಕವಿಗ್ರಹ ವಾಕ್ಯ. ಅಲಂ ಕುಮಾರಿ+ಜೇ ಎಂಬುದು ಅಲೌಕಿಕವಿಗ್ರಹ ವಾಕ್ಯ. ಇದು ತತ್ಪುರುಷ ಸಮಾಸದಲ್ಲಿದೆ. ಇಲ್ಲಿ ಉತ್ತರ ಪದವಾದ ಕುಮಾರಿ ಶಬ್ದವು ಸ್ತ್ರೀಲಿಂಗದಲ್ಲಿದ್ದರೂ ಪ್ರಕೃತ ವಾರ್ತಿಕದಿಂದ ಪರವಲ್ಲಂಗತ್ವವು ನಿಷೇಧಿಸಲಾಗಿದೆ. ಆದುದರಿಂದ ಸಮಾಸವು ಪುಲ್ಲಿಂಗದಲ್ಲಿದೆ. ಅಲಂ ಶಬ್ದಕ್ಕೆ ಕುಮಾರಿ ಶಬ್ದದ ಜೊತೆಗೆ ಸಮಾಸವನ್ನು ವಿಧಿಸುವ ಸೂತ್ರವು ಯಾವುದು ಇಲ್ಲ. ಆದರೆ "ಅಲಂ ಪೂರ್ವಕ ಸಮಾಸಗಳಲ್ಲಿ ಪರವಲ್ಲಿಂಗತ್ವವು ಬರುವುದಿಲ್ಲ" ಎಂಬ ಈ ವಾರ್ತಿಕದಲ್ಲಿ ಹೇಳಿರುವುದರಿಂದ ಅಲಂ ಎಂಬುದಕ್ಕೆ ಸುಬಂತಗಳ ಜೊತೆಗೆ ಸಮಾಸವು ಬರುವುದೆಂದು ಹೇಳಿದಂತಾಯಿತು. ಆದ್ದರಿಂದ ಇಲ್ಲಿ ಸಮಾಸವು ಆಗಿದೆ.

ಉದಾ:- ನಿಷ್ಕಾಶಾಂಬ್ಬಿಃ (ಕೌಶಾಂಬಿಯಿಂದ ಹೊರಬಿದ್ದವನು):- ನಿಗರ್ತಾ ಕೌಶಾಂಬ್ಯಾಃ ಎಂಬುದು ಲೌಕಿಕವಿಗ್ರಹ ವಾಕ್ಯ. ನಿರಾದಯಃ ಕ್ರಾಂತಾದ್ಯರ್ಥೇ ಪಞ್ಚಮ್ಯಾಃ ಎಂಬ ವಾರ್ತಿಕದಿಂದ ಕೂಡಿದ ಕುಗತಿ ಪ್ರಾದರ್ಯಃ ಎಂಬ ಸೂತ್ರದಿಂದ ಸಮಾಸವಾಗಿದೆ. ಉತ್ತರ ಪದವಾದ ಕೌಶಾಂಬಿ ಎಂಬುದು ಸ್ತ್ರೀಲಿಂಗದಲ್ಲಿದ್ದರೂ ಪ್ರಕೃತ ವಾರ್ತಿಕದಿಂದ ಪರವಲ್ಲಿಂಗ ನಿಷೇಧವಾಗಿರುವುದರಿಂದ ಪುಲ್ಲಿಂಗದಲ್ಲೇ ಸಮಾಸವಾಗಿದೆ. ಇದು ಗತಿ ಸಮಾಸವೆಂದು ವಾರ್ತಿಕದಲ್ಲಿ ಹೇಳಲ್ಪಟಿದ್ದರೂ ಇದು ಪ್ರಾದಿ ಸಮಾಸವಾಗಿದೆ.

**(ಸಮಾಸಾಂತದಲ್ಲಿ ಉಭಯಲಿಂಗವನ್ನು ವಿಧಿಸುವ ಸೂತ್ರ)**

**ಸೂತ್ರ- 966. ಅರ್ಧರ್ಚಾದಯಃ ಪುಂಸಿ ಚ (2-4-31)**

ವೃತ್ತಿ:-ಅರ್ಧರ್ಚಾದಯಃ ಶಬ್ದಾಃ ಪುಂಸಿ ಕ್ಲೀಬೇ ಚ ಸ್ಯುಃ । ಅರ್ಧರ್ಚಃ। ಅರ್ಧರ್ಚಮ್ । ಏವಂ ಧ್ವಜ-ತೀರ್ಥ-ಶರೀರ ಮಣ್ಡ ಪಯೂಪದೇಹಾಙ್ಕುಶ ಪಾತ್ರಸೂತ್ರಾದಯಃ।

ವಾ॥ ಸಾಮಾನ್ಯೇ ನಪುಂಸಕಂ। ಮೃದು ಪಚತಿ। ಪ್ರಾತಃ ಕಮನೀಯಮ್ ॥

**ಇತಿ ತತ್ಪುರುಷ ಪ್ರಕರಣಮ್**

ಅ.ವೃ:- ಅರ್ಧಂ ನಪುಂಸಕಮ್ ಎಂಬ ಸೂತ್ರದಿಂದ ನಪುಂಸಕಮ್ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ:- ಅರ್ಧರ್ಚ ಗಣದಲ್ಲಿ ಪಠಿತವಾದ ಎಲ್ಲ ಶಬ್ದಗಳಿಗೆ ಪುಲ್ಲಿಙ್ಗ ಮತ್ತು ನಪುಂಸಕಗಳಲ್ಲಿ ಪ್ರಯೋಗಗಳು ಇರುತ್ತವೆ.

ಉದಾ:- ಅರ್ಧರ್ಚಃ (ರಿಕ್‌ನ ಅರ್ಧಭಾಗ) :-ರಿಚಃ ಅರ್ಧಮ್ ಎಂಬ ಅರ್ಥದಲ್ಲಿ ಅರ್ಧಂ ನಪುಂಸಕಮ್ ಎಂಬ ಸೂತ್ರದಿಂದ ಸಮಾಸವಾಗಿ ಪರವಲ್ಲಿಂಗಮ್ ಎಂಬ ಸೂತ್ರದಿಂದ ಸ್ತ್ರೀಲಿಂಗವು ಬರಬೇಕಾಗಿದ್ದಾಗ ಅದನ್ನು ಬಾಧಿಸಿ ಪ್ರಕೃತ ಸೂತ್ರದಿಂದ ಪುಲ್ಲಿಙ್ಗ ಮತ್ತು ನಪುಂಸಕ ಲ್ಲಿಂಗಗಳು ಬರುತ್ತವೆ. ಆದುದರಿಂದ ಅರ್ಧರ್ಚಃ ಎಂದು ಪುಲ್ಲಿಂಗದಲ್ಲೂ ಅರ್ಧರ್ಚಮ್ ಎಂದು ನಪುಂಸಕಲಿಂಗದಲ್ಲಿಯೂ ರೂಪಗಳು ಸಿದ್ಧವಾಗುತ್ತವೆ.

ವಿಶೇಷ:- ಈ ಅರ್ಧರ್ಚಾದಿ ಗಣದಲ್ಲಿ ಧ್ವಜ, ತೀರ್ಥ ಮೊದಲಾದ ಕೆಲವು ಅಸಮಸ್ತ ಪದಗಳು ಕೂಡಾ ಇರುತ್ತವೆ. ಅವು ಪ್ರಕೃತ ಸೂತ್ರದಿಂದ ಪುಲ್ಲಿಂಗದಲ್ಲೂ ನಪುಂಸಕ ಲ್ಲಿಂಗದಲ್ಲಿಯೂ ಇರುವವು.

ವಾರ್ತಿಕ:- ಸಾಮಾನ್ಯೇ ನಪುಂಸಕಮ್।

ಮೃದು ಪಚತಿ। ಪ್ರಾತಃ

ವಿಶೇಷ್ಯ ವಿಶೇಷಣಗಳು ಸಮೀಪದಲ್ಲಿದ್ದಾಗ ಯಾವ ಲಿಂಗದ ವಿಧಾನ ಅಥವಾ ವಿವಕ್ಷೆ ಇಲ್ಲದೇ ಇದ್ದಾಗ ಸಾಮಾನ್ಯ ರೂಪದಿಂದ ಆ ಶಬ್ದಗಳು ನಪುಂಸಕಲಿಂಗದಲ್ಲಿರುತ್ತವೆ.

ಉದಾ:- ಮೃದು ಪಚತಿ (ಮೆತ್ತಗೆ ಬೇಯಿಸುತ್ತಾನೆ):- ಮೃದು ಎಂಬುದು ಕ್ರಿಯಾ ವಿಶೇಷಣ ಪಚ್ ಧಾತುವಿಗೆ ವಿಕ್ಲಿತ್ಯನುಕೂಲ ವ್ಯಾಪಾರವು ಅರ್ಥ. ಇದರಲ್ಲಿ ವಿಕ್ಲಿತ್ಯ ಅಂಶದ ಜೊತೆಗೆ ಮೃದು ಎಂಬುದು ಅನ್ವಯಿಸುತ್ತದೆ. ಮೃದುವಾದ ಪಾಕವನ್ನು ಮಾಡುತ್ತಾನೆ ಎಂಬುದು ತಾತ್ಪರ್ಯ. ಆದುದರಿಂದ ಮೃದು ಶಬ್ದವು ದ್ವಿತಿಯಾ ವಿಭಕ್ತಿಯಲ್ಲಿದೆ. ಇದರ ಲಿಂಗವನ್ನು ನಿರ್ಣಯಿಸುವುದಕ್ಕೆ ಯಾವ ಪ್ರಮಾಣವು ಇಲ್ಲದೇ ಇರುವುದರಿಂದ ನಪುಂಸಕ ಲ್ಲಿಂಗದಲ್ಲಿ ಪ್ರಯೋಗಿಸಲಾಗಿದೆ.

ಉದಾ:- ಪ್ರಾತಃ ಕಮನೀಯಮ್ (ಪ್ರಾತಃ ಕಾಲವು ರಮಣೀಯವಾಗಿದೆ):- ಇಲ್ಲಿ ಕಮನೀಯಮ್ ಎಂಬುದು ಪ್ರಾತಃ ಎಂಬ ಅವ್ಯಯದ ಜೊತೆಗೆ ವಿಶೇಷಣವಾಗಿ ಉಪಯೋಗಿಸಲಾಗಿದೆ ಆದರೆ ಪ್ರಾತಃ ಎಂಬುದಕ್ಕೆ ಯಾವ ಲಿಂಗ ನಿರ್ಣಯವು ಇಲ್ಲದೇ ಇರುವುದರಿಂದ ಕಮನೀಯಮ್ ಎಂಬುದು ನಪುಂಸಕ ಲ್ಲಿಂಗದಲ್ಲಿ ಪ್ರಯೋಗಿಸಲಾಗಿದೆ.

**(ಇಲ್ಲಿಗೆ (40) ತತ್ಪುರುಷ ಸಮಾಸವು ಮುಗಿಯಿತು.)**

# ಪ್ರಕರಣ-41: ಬಹುವ್ರೀಹಿಃ

**(ಸೂತ್ರ ಸಂಖ್ಯೆ 967 ರಿಂದ 986 ವರೆಗೆ)**

**(ಬಹುವ್ರೀಹಿ ಸಮಾಸವನ್ನು ವಿಧಿಸುವ ಅಧಿಕಾರ ಸೂತ್ರ)**

**ಸೂತ್ರ-967. ಶೇಷೋ ಬಹುವ್ರೀಹಿಃ (2-2-23)**

ವೃತ್ತಿ:- ಅಧಿಕಾರೋಽಯಂ ಪ್ರಾಗ್ದ್ವಂದ್ವಾತ್॥

ಪ.ಚ್ಛೇ:- ಶೇಷಃ, ಬಹುವ್ರೀಹಿಃ।

ಅ.ವೃ:-ಪ್ರಾಕ್ಕಡಾರಾತ್ಸಮಾಸಃ ಎಂಬ ಸೂತ್ರದಿಂದ 'ಸಮಾಸಃ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ:-ದ್ವಂದ್ವ ಸಮಾಸಕ್ಕೆ ಪೂರ್ವದಲ್ಲಿ (ಚಾರ್ಥೇ ದ್ವಂದ್ವಃ ಎಂಬ ಸೂತ್ರದ ಪೂರ್ವದವರೆಗೆ) ಇರುವ ಸಮಾಸವು ಬಹುವ್ರೀಹಿ ಸಂಜ್ಞೆಯನ್ನು ಪಡೆಯುತ್ತದೆ. ಇದು ಅಧಿಕಾರ ಸೂತ್ರವಾಗಿದೆ. ಉಕ್ತಾದನ್ಯಃ ಶ್ಶೇಷಃ ಎಂದರೆ ಪೂರ್ವದಲ್ಲಿ ಹೇಳಿದ ನಂತರ ಉಳಿದಿರುವುದು ಎಂದರ್ಥ. ಈಗ ಹೇಳಿರುವ ಸಮಾಸಗಳೆಂದರೆ ಅವ್ಯಯೀಭಾವ ಮತ್ತು ತತ್ಪುರುಷ ಇವುಗಳನ್ನು ಬಿಟ್ಟು ಬೇರೆಯದು ಎಂದರ್ಥ. ಆದರೆ ದ್ವಂದ್ವ ಸಮಾಸಕ್ಕೆ ಪೂರ್ವದಲ್ಲಿ ಎಂದು ಹೇಳಿರುವುದರಿಂದ ದ್ವಂದ್ವವು ಇದರಲ್ಲಿ ಅಂತಗತವಾಗಿಲ್ಲ.

**(ಬಹುವ್ರೀಹಿ ಸಮಾಸವನ್ನು ವಿಧಿಸುವ ಸೂತ್ರ)**

**ಸೂತ್ರ-968. ಅನೇಕಮನ್ಯಪದಾರ್ಥೇ (2-2-24)**

ವೃತ್ತಿ:- ಅನೇಕಂ ಪ್ರಥಮಾನ್ತಮನ್ಯಸ್ಯ ಪದಸ್ಯಾರ್ಥೇ ವರ್ತಮಾನಂ ವಾ ಸಮಸ್ಯತೇ ಸ ಬಹುವ್ರೀಹಿಃ।

ಪ.ಚ್ಛೇ:- ಅನೇಕಮ್, ಅನ್ಯಪದಾರ್ಥೇ।

ಅ.ವೃ:-ಸಮಾಸಃ, ವಿಭಾಷಾ ಮತ್ತು ಬಹುವ್ರೀಹಿಃ ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ:-ಅನ್ಯ ಪದದ ಅರ್ಥವನ್ನು ಬೋಧಿಸುವ (ಒಂದಕ್ಕಿಂತ ಹೆಚ್ಚಾದ) ಅನೇಕ ಪ್ರಥಮಾಂತ ಶಬ್ದಗಳು ವಿಕಲ್ಪದಿಂದ ಸಮಾಸವಾಗುವುವು. ಇದಕ್ಕೆ ಬಹುವ್ರೀಹಿಃ ಸಮಾಸವೆಂದು ಹೆಸರು.

ಸೂಚನೆ:- ಕೃತ್ತದ್ಧಿತ ಸಮಾಸಾಶ್ಚ ಎಂಬ ಸೂತ್ರದಿಂದ ಈ ಸಮಾಸಗಳಿಗೆ ಪ್ರಾತಿಪದಿಕ ಸಂಜ್ಞೆಯು ಬರುತ್ತದೆ. ಸುಪೋಧಾತುಪ್ರಾತಿಪದಿಕಯೋಃ ಎಂಬುದರಿಂದ ಸುಪ್ ಲೋಪವಾಗುತ್ತದೆ. ಸಮಾಸವಾದ ಮೇಲೆ ಸುಪ್ ಪ್ರತ್ಯಯವನ್ನು ಸೇರಿಸಿದಾಗ ಸುಬಂತವಾಗುತ್ತದೆ.

**(ಪೂರ್ವ ಪ್ರಯೋಗವನ್ನು ವಿಧಿಸುವ ಸೂತ್ರ)**

ಸೂತ್ರ-969. ಸಪ್ತಮೀವಿಶೇಷಣೇ ಬಹುವ್ರೀಹೌ (2-2-35)

ವೃತ್ತಿ:-ಸಪ್ತಮ್ಯಂತಂ ವಿಶೇಷಣೇ ಚ ಬಹುವ್ರೀಹೌ ಪೂರ್ವಂ ಸ್ಯಾತ್। ಅತ ಏವ ಜ್ಞಾಪಕಾದ್ವ್ಯಧಿಕರಣಪದೋ ಬಹುವ್ರೀಹಿಃ॥

ಅ.ವೃ:- ಉಪಸರ್ಜನಂ ಪೂರ್ವಮ್ ಎಂಬ ಸೂತ್ರದಿಂದ ಪೂರ್ವಮ್ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ:-ಬಹುವ್ರೀಹಿ ಸಮಾಸದಲ್ಲಿ ಸಪ್ತಮ್ಯಂತ ಶಬ್ದ ಮತ್ತು ವಿಶೇಷಣ ಶಬ್ದವು ಪೂರ್ವದಲ್ಲಿ ಪ್ರಯುಕ್ತವಾಗುವುದು.

**(ಅಲುಕ್ ಸಮಾಸವನ್ನು ವಿಧಿಸುವ ಸೂತ್ರ)**

**ಸೂತ್ರ-970. ಹಲದನ್ತಾತ್ಸಪ್ತಮ್ಯಾಃ ಸಂಜ್ಞಾಯಾಮ್ (6-3-9)**

ವೃತ್ತಿ:-ಹಲದನ್ತಾತ್ ಚ ಸಪ್ತಮ್ಯಾಃ ಅಲುಕ್। ಕಣ್ಠೇಕಾಲಃ। ಪ್ರಾಪ್ತಮುದಕಂ ಯಂ ಸ ಪ್ರಾಪ್ತೋದಕೋ ಗ್ರಾಮಃ। ಊಢರಥಃ(ಅನಡ್ವಾನ್)। ಉಪಹೃತ ಪಶೂ (ರುದ್ರಃ) ಉದ್ಧೃತೋದನಾ ಸ್ಥಾಲೀ। ಪೀತಾಮ್ಬರೋ ಹರಿಃ । ವೀರಪುರುಷೋ ಗ್ರಾಮಃ ।

1. ವಾರ್ತಿಕ:- ಪ್ರಾದಿಭ್ಯೋ ಧಾತುಜಸ್ಯ ವಾಚ್ಯೋ ವಾ ಚೋತ್ತರ ಪದಲೋಪಃ ಪ್ರಪತಿತಪರ್ಣಃ, ಪ್ರಪರ್ಣಃ।

2. ವಾರ್ತಿಕ:- ನಞೋಽಸ್ತ್ಯರ್ಥಾನಾಂ ವಾಚ್ಯೋ, ವಾ ಚೋತ್ತರಪದಲೋಪಃ। ಅವಿದ್ಯಮಾನ ಪುತ್ರಃ ಅಪುತ್ರಃ॥

ಅ.ವೃ:- 'ಅಲುಗುತ್ತರಪದೇ' ಎಂಬ ಸೂತ್ರವು ಅನುವೃತ್ತವಾಗುತ್ತದೆ.

ಅರ್ಥ:- ಸಂಜ್ಞಾವಾಚಕವಾದಾಗ ಉತ್ತರಪದದಲ್ಲಿರುವ ಹಲನ್ತಕ್ಕಿಂತ ಮತ್ತು ಹ್ರಸ್ವ ಅಕಾರಕ್ಕಿಂತ ಪರದಲ್ಲಿರುವ ಸಪ್ತಮ್ಯಂತ ವಿಭಕ್ತಿಗೆ ಲುಕ್ ಬರುವುದಿಲ್ಲ.

ಉದಾ:- ಕಣ್ಠೇಕಾಲಃ(ಕಣ್ಠದಲ್ಲಿ ಕಾಳಕೂಟ ವಿಷವನ್ನು ಉಳ್ಳವನು):- ಕಣ್ಠೇ ಕಾಲಃ ಯಸ್ಯ ಸಃ ಎಂಬುದು ಲೌಕಿಕವಿಗ್ರಹ ವಾಕ್ಯ. ಕಣ್ಠ+ಙಿ+ಕಾಲ ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ಸಪ್ತಮೀವಿಶೇಷಣೇ ಬಹುವ್ರೀಹೌ ಎಂಬ ಸೂತ್ರದಲ್ಲಿ ಸಪ್ತಮೀ ಎಂಬ ಶಬ್ದವನ್ನು ಗ್ರಹಿಸೋಣದರಿಂದ ಸಪ್ತಮ್ಯಂತಕ್ಕೆ ಪ್ರಥಮಾಂತದ ಜೊತೆಗೆ ವ್ಯಧಿಕರಣ ಸಮಾಸವಾಗುತ್ತದೆ. ಸಪ್ತಮ್ಯಂತಕ್ಕೆ ಪ್ರಕೃತ ಸೂತ್ರದಿಂದ ಪೂರ್ವ ಪ್ರಯೋಗವಾಗಿದೆ. ಸುಪೋಧಾತುಪ್ರಾತಿಪದಿಕಯೋಃ ಎಂಬ ಸೂತ್ರದಿಂದ ಸುಪ್ ಲೋಪವಾಗಬೇಕಾದಾಗ ಇದು ಸಂಜ್ಞಾವಾಚಕವಾಗಿರುವುದರಿಂದ ಪ್ರಕೃತ ಸೂತ್ರದಿಂದ ಸಪ್ತಮೀಗೆ ಲುಕ್ ಬರುವುದಿಲ್ಲ. ಆದ್ದರಿಂದ ಕಣ್ಠೇಕಾಲಃ ಎಂದು ರೂಪವು ಸಿದ್ಧವಾಗಿದೆ.

ಸೂಚನೆ:- ಬಹುವ್ರೀಹಿ ಸಮಾಸವು ಅನ್ಯ ಪದಾರ್ಥವನ್ನು ಬೋಧಿಸುತ್ತದೆ. ಈ ಅನ್ಯ ಪದಾರ್ಥವು ಪ್ರಥಮಾ ವಿಭಕ್ತಿಯನ್ನು ಬಿಟ್ಟು ಉಳಿದ ವಿಭಕ್ತ್ಯಂತಗಳಾಗಿರುತ್ತವೆ.

ಉದಾ:- ಪ್ರಾಪ್ತೋದಕೋ (ಗ್ರಾಮಃ) (ಯಾವ ಗ್ರಾಮಕ್ಕೆ ನೀರು ಬಂದಿರುವುದೋ

ಆ ಗ್ರಾಮ):– ಇದು ದ್ವಿತಿಯಾಂತ ಅನ್ಯ ಪದಾರ್ಥಕ್ಕೆ ಉದಾಹರಣೆಯಾಗಿದೆ. ಪ್ರಾಪ್ತಂ ಉದಕಮ್ ಯಂ ಸಃ ಎಂಬುದು ಲೌಕಿಕವಿಗ್ರಹ ವಾಕ್ಯ. ಪ್ರಾಪ್ತ+ಸು+ಉದಕ ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ಅನೇಕಮನ್ಯಪದಾರ್ಥೇ ಎಂಬ ಸೂತ್ರದಿಂದ ಪ್ರಥಮಾಂತಗಳಾದ ಈ ಎರಡು ಶಬ್ದಗಳು ಸೇರಿ ಸಮಾಸವಾಗುತ್ತವೆ. ಇವುಗಳಲ್ಲಿ ಪ್ರಾಪ್ತಃ ಎಂಬುದು ವಿಶೇಷಣವಾಗಿರುವುದರಿಂದ ಸಪ್ತಮೀವಿಶೇಷಣೇ ಬಹುವ್ರೀಹೌ ಎಂಬ ಸೂತ್ರದಿಂದ ಪೂರ್ವನಿಪಾತವಾಗುತ್ತದೆ. ಇದಕ್ಕೆ ಪ್ರಾತಿಪದಿಕ ಸಂಜ್ಞೆಯು ಬಂದು ಸುಪ್ ಲೋಪವಾದ ಮೇಲೆ ಇದನ್ನು ಸುಬಂತ ಮಾಡಿದಾಗ ಪ್ರಾಪ್ತೋದಕೋ ಎಂದು ರೂಪವು ಸಿದ್ಧವಾಗುತ್ತದೆ.

ಉದಾ:– ಊಢರಥಃ (ಯಾವುದರ ಜೊತೆಗೆ (ಎತ್ತಿನ)ಜೊಡಿಸ್ಪಟ್ಟಿದೆಯೋ ಅಂತಹ ರಥ):–ಅನ್ಯ ಪದಾರ್ಥವಾದ ಎತ್ತಿನ ಅರ್ಥದಲ್ಲಿ ಊಢಃ ರಥಃ ಏನ (ಅನಡ್ವಾಃ) ಎಂಬುದು ಲೌಕಿಕವಿಗ್ರಹ ವಾಕ್ಯ. ಊಢ+ಸು+ರಥ+ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ಅನೇಕಮನ್ಯಪದಾರ್ಥೇ ಎಂಬ ಸೂತ್ರದಿಂದ ಸಮಾಸವಾಗಿದೆ. ಪ್ರಾತಿಪದಿಕ ಸಂಜ್ಞೆಯು ಬಂದು ಸುಪ್ ಲೋಪವಾದ ಮೇಲೆ ಊಢ+ರಥ ಎಂದಿರುತ್ತದೆ. ಇದರ ಅನ್ಯ ಪದಾರ್ಥವೆಂದರೆ ವೃಷಭ. ಆದ್ದರಿಂದ ಅದಕ್ಕೆ ಅನುಗುಣವಾದ ಪುಲ್ಲಿಂಗವು ಇರುತ್ತದೆ. ಏಕದೇಶವಿಕೃತನ್ಯಾಯದಿಂದ ಪ್ರಾತಿಪದಿಕವೆಂದು ಭಾವಿಸಿ ಸುಬಂತ ಮಾಡಿದಾಗ ಊಢ ರಥಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ:– ಉಪಹೃತಪಶುಃ (ಯಾರಿಗಾಗಿ ಪಶೂ ಸಮೀಪದಲ್ಲಿ ತರಲ್ಪಟ್ಟಿದೆಯೋ ಅವನು (ಶಿವನು)):– ಅನ್ಯ ಪದಾರ್ಥವಾದ ರುದ್ರ ಎಂಬ ಅರ್ಥದಲ್ಲಿ ಉಪಹೃತಃ ಪಶುಃ ಯಸ್ಮೈ (ರುದ್ರಾಯ) ಎಂಬುದು ಲೌಕಿಕವಿಗ್ರಹ ವಾಕ್ಯ. ಉಪಹೃತ ಸು+ಪಶು ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ಅನೇಕಮನ್ಯಪದಾರ್ಥೇ ಎಂಬ ಸೂತ್ರದಿಂದ ಸಮಾಸವಾಗಿದೆ. ಪ್ರಾತಿಪದಿಕ ಸಂಜ್ಞೆಯು ಬಂದು ಸುಪ್ ಲೋಪವಾದ ಮೇಲೆ ಉಪಹೃತ+ಪಶು ಎಂದಿರುತ್ತದೆ. ಇದರ ಅನ್ಯ ಪದಾರ್ಥವೆಂದರೆ ರುದ್ರ ಆದ್ದರಿಂದ ಅದಕ್ಕೆ ಅನುಗುಣವಾದ ಪುಲ್ಲಿಂಗವು ಇರುತ್ತದೆ. ಏಕದೇಶವಿಕೃತನ್ಯಾಯದಿಂದ ಪ್ರಾತಿಪದಿಕವೆಂದು ಭಾವಿಸಿ ಸುಬಂತ ಮಾಡಿದಾಗ ಉಪಹೃತಪಶುಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ:– ಉದ್ಧೃತೋದನಾ ಸ್ಥಾಲೀ (ಯಾವುದರಿಂದ ಅನ್ನವು ತೆಗೆಯಲ್ಪಟ್ಟಿದಯೋ ಆ ಪಾತ್ರೆ):– ಅನ್ಯ ಪದಾರ್ಥವಾದ ಸ್ಥಾಲೀ ಎಂಬ ಅರ್ಥದಲ್ಲಿ ಉದ್‌ಧೃತಃ ಓದನಃ ಯಸ್ಯಾಃ (ಸ್ಥಾಲ್ಯಾಃ) ಎಂಬುದು ಲೌಕಿಕವಿಗ್ರಹ ವಾಕ್ಯ. ಉಧೃತ ಸು+ಓಧನ ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ಅನೇಕಮನ್ಯಪದಾರ್ಥೇ ಎಂಬ ಸೂತ್ರದಿಂದ ಸಮಾಸವಾಗಿದೆ. ಪ್ರಾತಿಪದಿಕ ಸಂಜ್ಞೆಯು ಬಂದು ಸುಪ್ ಲೋಪವಾದ ಮೇಲೆ ಉದ್‌ಧೃತ+ಓದನ ಎಂದಿದ್ದಾಗ ವೃದ್ಧಿಯಾಗಿ ಉದ್ಧೃತೋ ದನ ಎಂದಿರುತ್ತದೆ. ಅನ್ಯ ಪದಾರ್ಥವು ಸ್ಥಾಲೀಯಾಗಿರುವುದರಿಂದ ಅದಕ್ಕೆ ಅನುಗುಣವಾದ ಸ್ತ್ರೀಲ್ಲಿಂಗವು ಇರುತ್ತದೆ. ಅಜಾದ್ಯತಷ್ಟಾಪ್ ಎಂಬ ಸೂತ್ರದಿಂದ ಉದ್ಧೃತೋ ಧನಾ ಎಂದಾಗಿ ಈ ಪ್ರಾತಿಪದಿಕಕ್ಕೆ

ಸು ಸೇರಿಸಿದಾಗ ಸುಬಂತ ಮಾಡಿದಾಗ ಅಮ್ ಆದೇಶ ಬಂದು ಪೂರ್ವರೂಪವಾದ ಮೇಲೆ ಉದ್ಧೃತೋದನಾ ಸ್ಥಾಲೀ ಎಂದು ರೂಪವು ಸಿದ್ಧವಾಗುತ್ತದೆ.

ಉದಾ:- ಪೀತಾಮ್ಬರೋ ಹರಿಃ (ಹಳದಿ ವಸ್ತ್ರವನ್ನು ಯಾರು ಧಾರಣೆ ಮಾಡಿರುವನು ಅವನು (ವಿಷ್ಣು)):- ವಿಷ್ಣು ಎಂಬರ್ಥದಲ್ಲಿ ಪೀತಂ ಅಂಬರಮ್ ಯಸ್ಯ ಎಂಬುದು ಲೌಕಿಕವಿಗ್ರಹ ವಾಕ್ಯ. ಪೀತ+ಸು+ಅಂಬರ+ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ಅನೇಕಮನ್ಯಪದಾರ್ಥೇ ಎಂಬ ಸೂತ್ರದಿಂದ ಸಮಾಸವಾಗಿದೆ. ಪ್ರಾತಿಪತಿದಿಕ ಸಂಜ್ಞೆ ಬಂದಮೇಲೆ ಸುಪ್ ಲೋಪವಾಗಿ ಪೀತ+ಅಂಬರ ಎಂದಿರುತ್ತದೆ. ಅಕಸ್ಸವರ್ಣೇ ದೀರ್ಘಃ ಎಂಬ ಸೂತ್ರದಿಂದ ಪಿತಾಂಬರ ಎಂದಾಗಿ ಅನ್ಯ ಪದಾರ್ಥವು ವಿಷ್ಣುವಾಗಿರುವುದರಿಂದ ಅದಕ್ಕೆ ಅನುಗುಣವಾದ ಪುಲ್ಲಿಂಗವು ಬಂದು ಈ ಪ್ರಾತಿಪದಿಕಕ್ಕೆ ಸುಬಂತ ಮಾಡಿದಾಗ ಪೀತಾಮ್ಬರಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ:- ವೀರಪುರುಷೋ ಗ್ರಾಮಃ (ವೀರ ಪುರುಷರು ಯಾವ ಗ್ರಾಮದಲ್ಲಿ ಇರುವರೋ ಆ ಗ್ರಾಮ):- ವೀರಾಃ ಪುರುಷಾಃ ಸಂತಿ ಯಸ್ಮೇನ್ (ಗ್ರಾಮೇ) ಎಂಬುದು ಲೌಕಿಕವಿಗ್ರಹ ವಾಕ್ಯ ವೀರ ಜಸ್+ಪುರುಷ ಜಸ್ ಎಂಬುದು ಅಲೌಕಿಕವಿಗ್ರಹ ವಾಕ್ಯ ಇದರಿಂದ ಬಹುವ್ರೀಹಿ ಸಮಾಸವಾಗಿದೆ. ಪ್ರಾತಿಪದಿಕ ಸಂಜ್ಞೆಬಂದ ಮೇಲೆ ಸುಪ್ ಲೋಪವಾದ ಮೇಲೆ ವೀರಪುರುಷ ಎಂದಿರುತ್ತದೆ. ಅನ್ಯ ಪದಾರ್ಥವು ಗ್ರಾಮವಾಗಿರುವುದರಿಂದ ಅದಕ್ಕೆ ಸದೃಶವಾದ ಪುಲ್ಲಿಂಗವು ಬಂದಿರುವುದು. ಈ ಪ್ರಾತಿಪದಿಕಕ್ಕೆ ಸು ಸೇರಿಸಿದಾಗ ವೀರಪುರುಷಃ (ಗ್ರಾಮಃ) ಎಂದು ರೂಪವು ಸಿದ್ಧವಾಗುತ್ತದೆ.

1. ವಾರ್ತಿಕ:- ಪ್ರಾದಿಭ್ಯೋ ಧಾತುಜಸ್ಯ ವಾಚ್ಯೋ ವಾಚೋತ್ತರ ಪದಲೋಪಃ ಪ್ರಪತಿತಪರ್ಣಃ, ಪ್ರಪರ್ಣಃ:- ಪ್ರ ಮೊದಲಾದಗಳ ನಂತರ ಇರುವ ಧಾತುಜ(ಕೃದಂತ ಶಬ್ದ) ಮತ್ತು ತದ್ಧಿತಾಂತ ಸಮರ್ಥ ಸುಬಂತಗಳ ಜೊತೆಗೆ ಅನ್ಯ ಪದಾರ್ಥದಲ್ಲಿ ಬಹುವ್ರೀಹಿ ಸಮಾಸವಾಗುತ್ತದೆ ಮತ್ತು ಉತ್ತರ ಪದದ ಲೋಪವು ವಿಕಲ್ಪದಿಂದಲೂ ಆಗುತ್ತದೆ.

ಉದಾ:- (ಪ್ರಪತಿತಃ ತಪರ್ಣಃ ಯಸ್ಮಾತ್‌ಸಃ) ಪ್ರಪತಿ ತಪರ್ಣಃ, ಪ್ರಪರ್ಣಃ :- ಪ್ರಪತಿತ ಎಂಬುದು ಪ್ರಕೃಷ್ಣಮ್ ಪತಿತಮ್ ಎಂಬ ಅರ್ಥದಲ್ಲಿ ಪ್ರಾದಯೋ ಗತಾದ್ಯರ್ಥೇ ಪ್ರಥಮಯಾ ಎಂಬ ವಾರ್ತಿಕದಿಂದ ಸಮಾಸವು ಆಗಿದೆ ಈ ಪ್ರಪತಿತ ಶಬ್ದಕ್ಕೆ ಪ್ರಕೃತ ವಾರ್ತಿಕದಿಂದ ಪರ್ಣ ಶಬ್ದದ ಜೊತೆಗೆ ಸಮಾಸವಾಗಿದೆ. ಪತಿತ ಶಬ್ದವು ಪತ್ ಧಾತುವಿನಿಂದ ಉಂಟಾದ ಕ್ತ ಪ್ರತ್ಯಯಾಂತ ಶಬ್ದವು ಪ್ರಪತಿತ ಎಂಬಲ್ಲಿ ಪತಿತ ಎಂಬ ಉತ್ತರ ಪದಕ್ಕೆ ಲೋಪವು ಬಂದ ಪಕ್ಷದಲ್ಲಿ ಪ್ರಪರ್ಣ ಎಂಬ ರೂಪವುಸಿದ್ಧಿಸುತ್ತದೆ. ಲೋಪ ಬಾರದ ಪಕ್ಷದಲ್ಲಿ ಪ್ರಪತಿತಪರ್ಣ ಎಂದೂ ರೂಪವು ಸಿದ್ಧವಾಗುತ್ತದೆ.

2. ವಾರ್ತಿಕ:- ನಞೋಽಸ್ತ್ಯರ್ಥಾನಾಂ ವಾಚ್ಯೋ ವಾ ಚೋತ್ತರಪದಲೋಪಃ । ಅವಿದ್ಯಮಾನಃ ಪುತ್ರಃ ಅಪುತ್ರಃ:-ನಞ್‌ಗಿಂತ ಪರದಲ್ಲಿರುವ ಅಸ್ತಿ (ಇದೆ) ಎಂಬ ಅರ್ಥವುಳ್ಳ ಸುಬಂತಗಳಿಗೆ ಮತ್ತೊಂದು ಪ್ರಥಮಾಂತ ಶಬ್ದದೊಂದಿಗೆ ಸಮಾಸವಾಗುತ್ತದೆ

ಎಂದು ಹೇಳಬೇಕು. ಅಸ್ತ್ಯರ್ಥಕವಾದ ಉತ್ತರಪದಕ್ಕೆ ಲೋಪವನ್ನು ಸಹ ವೈಕಲ್ಪಿಕವಾಗಿ ಹೇಳಬೇಕು.

ಉದಾ:– ಅವಿದ್ಯಮಾನ ಪುತ್ರಃ – ಅಪುತ್ರಃ :– ನವಿದ್ಯಮಾನಃ ಅವಿದ್ಯಮಾನಃ ಇದು ನಞ್ ತತ್ಪುರುಷ ಸಮಾಸವಾಗಿದೆ.ಇಲ್ಲಿ ನಞ್‌ಗಿಂತ ಪರದಲ್ಲಿರುವ ವಿದ್ಯಮಾನರ್ಥಕವಾದ ವಿದ್ಯಮಾನ ಎಂಬ ಶಬ್ದವು ಪುತ್ರ ಶಬ್ದದ ಜೊತೆಗೆ ಸಮಾಸವಾಗಿ ಉತ್ತರ ಪದ ಲೋಪಪಕ್ಷದಲ್ಲಿ ಅಪುತ್ರಃ ಎಂದು ಲೋಪವಿಲ್ಲದ ಪಕ್ಷದಲ್ಲಿ ಅವಿದ್ಯಮಾನ ಪುತ್ರಃ ಎಂದು ರೂಪವು ಸಿದ್ಧವಾಗುತ್ತದೆ.

**(ಪುಂವದ್ಭಾವವನ್ನು ವಿಧಿಸುವ ಸೂತ್ರ)**

**ಸೂತ್ರ–971. ಸ್ತ್ರಿಯಾಃ ಪುಂವದ್ಭಾಷಿತ ಪುಂಸ್ಕಾದನೂಙ್ ಸಮಾನಾಧಿಕರಣೇ ಸ್ತ್ರಿಯಾಮಪೂರಣೀ ಪ್ರಿಯಾದಿಷು (6–3–34)**

ವೃತ್ತಿ:–ಉಕ್ತಪುಂಸ್ಕಾದನೂಙ್ ಊಙೋಭಾವೋಸ್ಯಾಮಿತಿ ಬಹುವ್ರೀಹಿಃ। ನಿಪಾತನಾತ್ಪಞ್ಚಮ್ಯಾ ಅಲುಕ್ ಷಷ್ಠ್ಯಾಶ್ಚ ಲುಕ್ ತುಲ್ಯೇ ಪ್ರವೃತ್ತಿ ನಿಮಿತ್ತೇ ಯದುಕ್ತ ಪುಂಸ್ಕಂ ತಸ್ಮಾತ್ಪರ ಊಙೋಽಭಾವೋ ಯತ್ರ ತಥಾ ಭೂತಸ್ಯ ಸ್ತ್ರೀವಾಚಕ ಶಬ್ದಸ್ಯ ಪುಂವಾಚಕಸ್ಯೇವ ರೂಪಂ ಸ್ಯಾತ್ ಸಮಾನಾಧಿಕರಣೇ ಸ್ತ್ರೀಲಿಙೇ ಉತ್ತರಪದೇ, ನತು ಪೂರಣ್ಯಾಂ ಪ್ರಿಯಾದೌ ಚ ಪರತಃ। ಗೋಸ್ತ್ರಿಯೋರಿ ಹ್ರಸ್ವಃ । ಚಿತ್ರಗುಃ। ರೂಪವದ್ಭಾರ್ಯಃ । ಅನೂಙ್ ಕಿಮ್? ವಾಮೋರುಭಾರ್ಯಃ ಪೂರಣ್ಯಾಂತು।

ಪ.ಚ್ಛೇ:–ಸ್ತ್ರಿಯಾಃ, ಪುಂವತ್, ಭಾಷಿತಪುಂಸ್ಕಾತ್, ಅನೂಙ್, ಸಮಾನಾಧಿಕರಣೇ, ಸ್ತ್ರೀಯಾಮ್,ಅಪೂರಣೀ, ಪ್ರಿಯಾದಿಷು।

ಅ.ವೃ:–ಅಲುಗುತ್ತರಪದೇ ಎಂಬ ಸೂತ್ರದಿಂದ 'ಉತ್ತರಪದೇ' ಎಂಬ ಸೂತ್ರವು ಅನುವೃತ್ತವಾಗುತ್ತದೆ.ಸ್ತ್ರೀಪ್ರತ್ಯಯಾಂತ ಶಬ್ದಗಳಿಗೆ ಪುಲ್ಲಿಂಗಗೊಳೊಸುವುದಕ್ಕಾಗಿ ಈ ಸೂತ್ರವು ಸಹಕಾರಿಯಾಗಿದೆ.

ಅರ್ಥ:–ಭಾಷಿತಪುಂಸ್ಕಕ್ಕಿಂತ ಪರದಲ್ಲಿರುವ ಊಙ್ ಪ್ರತ್ಯಯವಿಲ್ಲದ (ಅಂದರೆ ಭಾಷಿತಪುಂಸ್ಕವಾಗಿದ್ದು ಊಙ್ ಎಂಬ ಸ್ತ್ರೀಪ್ರತ್ಯಯವನ್ನು ಸೇರಿಸದ) ಸ್ತ್ರೀವಾಚಕ ಶಬ್ದಕ್ಕೆ ಸಮಾನಾಧಿಕರಣವಾದ ಸ್ತ್ರೀಲಿಂಗ ಶಬ್ದವು ಉತ್ತರಪದವಾಗಿದ್ದಾಗ ಪುಂವಾಚಕದಂತೆ ರೂಪವು ಆಗುವುದು. ಸ್ತ್ರೀಲಿಂಗವಾದ ಪೂರ್ಣ ಪ್ರತ್ಯಯಾಂತ ಪದವಾಗಲೀ ಪ್ರಿಯಾದಿ ಶಬ್ದಗಳಾಗಲೀ ಪರದಲ್ಲಿದ್ದಾಗ ಮಾತ್ರ ಈ ರೀತಿಯ ಕಾರ್ಯವು ಜರುಗುವುದಿಲ್ಲ.

ಉದಾ:– ಚಿತ್ರಗುಃ (ಚಿತ್ರ ವರ್ಣಗಳ ಗೊವುಗಳನ್ನುಉಳ್ಳವನು):– ಚಿತ್ರಾಃ ಗಾವಃ ಯಸ್ಯಃ ಎಂಬುದು ಲೌಕಿಕವಿಗ್ರಹ ವಾಕ್ಯ. ಚಿತ್ರ ಜಸ್+ಗೋ ಜಸ್ ಎಂಬ ಪದಗಳಿಗೆ ಅನೇಕಮನ್ಯಪದಾರ್ಥೇ ಎಂಬ ಸೂತ್ರದಿಂದ ಸಮಾಸವಾಗಿ ಪ್ರಾತಿಪದಿಕ ಸಂಜ್ಞೆಯು ಬಂದು ಸುಪ್ ಲೋಪವಾದ ಮೇಲೆ ಚಿತ್ರಾ ಗೋ ಎಂದು ಇರುತ್ತದೆ. ಇದು ಪ್ರಾತಿಪದಿಕವಾಗಿದೆ. ಇಲ್ಲಿ ಚಿತ್ರಾ ಶಬ್ದವು ಭಾಷಿತ ಪುಂಸ್ಕವಾಗಿದೆ. ಇದರ ಪರದಲ್ಲಿ

ಊಙ್ಗ್ ಪ್ರತ್ಯಯವು ಸೇರಿಸಲ್ಪಡಲಿಲ್ಲ. ಸಮಾನಾಧಿಕರಣ ಸ್ತ್ರೀಲಿಂಗ ಶಬ್ದವಾದ ಗೋ ಶಬ್ದವು ಪರದಲ್ಲಿದೆ ಪೂರ್ಣಣ್ಯಂತ ಪದವಾಗಲಿ ಪ್ರಿಯಾದಿ ಪದಗಳಾಗಲಿ ಪರದಲ್ಲಿ ಇಲ್ಲ. ಆದ್ದರಿಂದ ಪ್ರಕೃತ ಸೂತ್ರದಿಂದ ಪುಂವದ್‌ಭಾವವು ಬಂದು ಚಿತ್ರ ಎಂಬ ಅಕಾರಾನ್ತ ರೂಪವು ಬಂದಿದೆ. ಚಿತ್ರ ಗೋ ಎಂದಿದ್ದಾಗ ಗೋ ಶಬ್ದವು ಏಕವಿಭಕ್ತಿಚಾಪೂರ್ವನಿಪಾತೇ ಎಂಬ ಸೂತ್ರದಿಂದ ಉಪಸರ್ಜನ ಸಂಜ್ಞೆಯು ಬರುವುದರಿಂದ ಗೋಸ್ತ್ರಿಯೋಉಪಸರ್ಜನಸ್ಯ ಎಂಬ ಸೂತ್ರದಿಂದ ಓಕಾರಕ್ಕೆ ಉಕಾರವು (ಹ್ರಸ್ವವು) ಬಂದು ಸುಬಂತವಾದಾಗ ಚಿತ್ರಗುಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ:- ರೂಪವದ್ಭಾರ್ಯಃ (ರೂಪವತಿಯಾದ ಭಾರ್ಯೆಯನ್ನು ಉಳ್ಳವನು) ರೂಪವತೀ ಭಾರ್ಯಾ (ಅಸ್ತಿ) ಯಸ್ಯ ಎಂಬುದು ಲೌಕಿಕವಿಗ್ರಹ ವಾಕ್ಯ. ರೂಪವತೀ+ಸು ಭಾರ್ಯಾ+ಸು ಎಂಬುದು ಅಲೌಕಿಕವಿಗ್ರಹವಾಕ್ಯ. ಅನೇಕಮನ್ಯಪದಾರ್ಥೇ ಎಂಬ ಸೂತ್ರದಿಂದ ಸಮಾಸವಾಗಿದೆ ರೂಪವತೀ ಮತ್ತು ಭಾರ್ಯಾ ಎಂಬ ಎರಡು ಶಬ್ದಗಳು ಸಮಾನಲಿಂಗ ವಿಭಕ್ತಿಯಲ್ಲಿವೆ. ಊಙ್ ಪ್ರತ್ಯಯವು ಮತ್ತು ಪೂರಣೀ ಮತ್ತು ಪ್ರಿಯಾದಿ ಶಬ್ದಗಳು ಪರದಲ್ಲಿ ಇಲ್ಲ. ರೂಪವತೀ ಶಬ್ದವು ಪುಲ್ಲಿಂಗದಲ್ಲಿ ರೂಪವಾನ್ ಎಂದಾಗುತ್ತದೆ ಆದ್ದರಿಂದ ಭಾಷಿತ ಪುಂಸ್ಕವಾಗಿಯೂ ಇದೆ. ಆದುದರಿಂದ ಪ್ರಕೃತ ಸೂತ್ರದಿಂದ ಭಾರ್ಯಾ ಶಬ್ದವು ಪರದಲ್ಲಿದ್ದಾಗ ರೂಪವತೀ ಶಬ್ದಕ್ಕೆ ಪೂರ್ವದ್‌ಭಾವವು ಬಂದು ರೂಪವತ್ ಎಂದಾಗಿ ರೂಪವತ್+ಭಾರ್ಯಾ ಎಂದಾಗುತ್ತದೆ. ಭಾರ್ಯಾದಲ್ಲಿರುವ ಭ ಕಾರವು ಪರದಲ್ಲಿ ಇರುವುದರಿಂದ ಝಲಾಂಜಶೋಽಂತೇ ಎಂಬ ಸೂತ್ರದಿಂದ ಜಸ್ತ್ವವು ಬಂದು ರೂಪವದ್+ಭಾರ್ಯಾ ಎಂದಾಗಿ ರೂಪವದ್ಭಾರ್ಯ ಎಂಬ ರೂಪವು ಸಿದ್ಧವಾಗುತ್ತದೆ. ನಂತರ ಗೋಸ್ತ್ರಿಯೋಉಪಸರ್ಜನಸ್ಯ ಎಂಬ ಸೂತ್ರದಿಂದ ಭಾರ್ಯಾ ಶಬ್ದದಲ್ಲಿ ಸ್ತ್ರೀ ಪ್ರತ್ಯಯವಾದ ಟಾಪ್ (ಆಕಾರವು) ಇರುತ್ತದೆ. ಅದಕ್ಕೆ ಹ್ರಸ್ವವು ಬಂದು ರೂಪವದ್ಭಾರ್ಯ ಎಂದಾಗುತ್ತದೆ. ಇದನ್ನು ಸುಬಂತವಾದಾಗ ರೂಪವದ್ಭಾರ್ಯಃ ಎಂಬ ರೂಪವು ಸಿದ್ಧವಾಗುತ್ತದೆ.

ಅನೂಙ್ ಕಿಮ್? ವಾಮೋರುಭಾರ್ಯಃ:- ಊಙ್ ಪ್ರತ್ಯಯವು ಪರದಲ್ಲಿ ಇರಬಾರದು ಎಂದು ಹೇಳಿರುವುದರಿಂದ ವಾಮೋರುಭಾರ್ಯಃ ಎಂಬ ಸಮಾಸದಲ್ಲಿ ವಾಮೋರು ಶಬ್ದಕ್ಕೆ ಪುಂವದ್‌ಭಾವವು ಬರಲಿಲ್ಲ. ವಾಮೋರುಃ ಎಂದು ಹೇಳುವಾಗ **ಸಂಹಿತ ಶಫ್ ಲಕ್ಷ್ಮಣ ವಾಮಾದೇಶ್ಚ** ಎಂಬ ಸೂತ್ರದಿಂದ ಊಙ್ ಎಂಬ ಸ್ತ್ರೀ ಪ್ರತ್ಯಯವು ಬಂದಿರುವುದು ವಾಮೇ ಊರೂ ಯಸ್ಯಾಃ ಸಾ ವಾಮೋರುಃ (ಸುಂದರವಾದ ತೊಡೆಗಳುಳ್ಳವಳು) ವಾಮೋರುಭಾರ್ಯಾಃ ಯಸ್ಯ ಸಃ ವಾಮೋರು ಭಾರ್ಯಃ ಎಂದು ರೂಪವು ಸಿದ್ಧವಾಗಿರುತ್ತದೆ.

### (ಅಪ್ ಪ್ರತ್ಯಯವನ್ನು ವಿಧಿಸುವ ಸೂತ್ರ)

**ಸೂತ್ರ-972. ಅಪ್ ಪೂರಣೀ ಪ್ರಮಾಣ್ಯೋಃ (5-4-116)**

ವೃತ್ತಿ:- ಪೂರಣಾರ್ಥ ಪ್ರತ್ಯಯಾನ್ತಂ ಯತ್ ಸ್ತ್ರೀಲಿಙ್ಗಂ ತದನ್ತಾತ್ ಪ್ರಮಾಣ್ಯನ್ತಾತ್ ಚ ಬಹುವ್ರೀಹೇಃ ಕಲ್ಯಾಣೀ ಪಞ್ಚಮೀ ಯಾಸಾಮ್ ರಾತ್ರೀಣಾಮ್ ತಾಃ ಕಲ್ಯಾಣಿ

ಪಞ್ಚಮಾ ರಾತ್ರಯಃ । ಸ್ತ್ರೀ ಪ್ರಮಾಣೀ ಯಸ್ಯ ಸಃ ಸ್ತ್ರೀಪ್ರಮಾಣಃ। ಅಪ್ರಿಯಾದಿಷು ಕಿಮ್? ಕಲ್ಯಾಣಿಪ್ರಿಯ ಇತ್ಯಾದಿ।

ಪ.ಚ್ಛೇ:–ಅಪ್, ಪೂರಣೀ, ಪ್ರಮಾಣ್ಯೋಃ।

ಅ.ವೃ:–ಬಹುವ್ರೀಹೌ ಸಕ್ಥ್ಯಕ್ಷ್ಣೋಃ ಸ್ವಾಙ್ಗಾತ್ ಷಚ್ ಎಂಬ ಸೂತ್ರದಿಂದ ಬಹುವ್ರೀಹಿ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ:– ಪೂರಾಣರ್ಥಕ ಪ್ರತ್ಯಯಾಂತವಾದ ಸ್ತ್ರೀಲಿಂಗ ಶಬ್ದ, ತದ್ದತ ಬಹುವ್ರಿಹಿ ಶಬ್ದದ ನಂತರ ಹಾಗೂ ಪ್ರಮಾಣಿ ಶಬ್ದಾನ್ತ ಬಹುವ್ರೀಹಿ ನಂತರ ಸಮಾಸಾಂತವಾದ ಅಪ್ ಪ್ರತ್ಯಯವು ಬರುವುದು.

ಉದಾ:– ಕಲ್ಯಾಣೀ ಪಞ್ಚಮೀ ಯಾಸಾಮ್ ರಾತ್ರೀಣಾಮ್ ತಾಃ ಕಲ್ಯಾಣಿ ಪಞ್ಚಮಾ ರಾತ್ರಯಃ:– (ಕಲ್ಯಾಣಿಯಾದ ಐದನೇಯ ರಾತ್ರಿಉಳ್ಳ ರಾತ್ರಿಗಳು) ಪಞ್ಚಮೀ ಎಂದರೆ ಪಞ್ಚನಾಮ್ ಪೂರಣೀ ಎಂದರ್ಥ ಪಂಞ್ಚನ್ ಶಬ್ದಕ್ಕೆ ತಸ್ಯಪೂರಣೇಡಟ ಎಂಬ ಸೂತ್ರದಿಂದ ಪೂಣಾರ್ಥದಲ್ಲಿ ಡಟ್ ಪ್ರತ್ಯಯವು ಬರುತ್ತದೆ. ಅದಕ್ಕೆ ನ್ನಾದಲಸಂಖ್ಯಾದೇರ್ಮಟ್ ಸೂತ್ರದಿಂದ ಮಟ್ ಆಗಮವು ಬರುತ್ತದೆ. ಟಿತ್ವ ಇರುವುದರಿಂದ ಟಿಟ್‌ಡಾಣ... ಕ್ವರಪಃ ಎಂಬ ಸೂತ್ರದಿಂದ ಙೀಪ್ (ಇ) ಬರುತ್ತದೆ. ಈ ವಿಧವಾಗಿ ಪಞ್ಚಮೀ ಎಂಬುದು ಪೂರ್ಣಪ್ರತ್ಯಯಾಂತವಾದ ಸ್ತ್ರೀಲಿಂಗಶಬ್ದವಾಗಿದೆ. ಕಲ್ಯಾಣೀ ಶಬ್ದಕ್ಕೆ ಈ ಪಞ್ಚಮೀ ಶಬ್ದದ ಜೊತೆಗೆ ಬಹಿವ್ರೀಹಿ ಸಮಾಸ ಮಾಡಿದ ಮೇಲೆ ಕಲ್ಯಾಣಿ ಪಞ್ಚಮೀ ಎಂದಿದ್ದಾಗ ಪ್ರಕೃತ ಸೂತ್ರದಿಂದ ಅಪ್ ಪ್ರತ್ಯಯವು ಬರುತ್ತದೆ. ಯಸ್ಯೇತಿಚ ಎಂಬ ಸೂತ್ರದಿಂದ ಈಕಾರಕ್ಕೆ ಲೋಪವು ಬರುತ್ತದೆ. ಕಲ್ಯಾಣೀ ಪಞ್ಚಮ ಎಂದಿದ್ದಾಗ ಅಜಾದ್ಯಷ್ಟಾಪ್ ಎಂಬ ಸೂತ್ರದಿಂದ ಟಾಪ್ ಪ್ರತ್ಯಯವು ಬಂದು ಕಲ್ಯಾಣಿ ಪಞ್ಚಮಾ ಎಂಬ ಪ್ರಾತಿಪದಿಕವು ಸಿದ್ಧವಾಗುತ್ತದೆ. ಇಲ್ಲಿ ಪಞ್ಚಮೀ ಎಂಬ ಪೂರ್ಣ ಪ್ರತ್ಯಯಾಂತ ಪದವಾಗಿರುವುದರಿಂದ ಕಲ್ಯಾಣಿ ಶಬ್ದವು ಭಾಷಿತ ಪುಂಸಕವಾಗಿದ್ದರೂ ಪುಂವವದ್ ಭಾವವು ಬರುವುದಿಲ್ಲ.

ಉದಾ:– ಸ್ತ್ರೀ ಪ್ರಮಾಣೀ ಯಸ್ಯ ಸಃ ಸ್ತ್ರೀಪ್ರಮಾಣಃ :– ಸ್ತ್ರೀ ಪ್ರಮಾಣೀ ಯಸ್ಯ ಸಃ ಎಂಬುದು ಲೌಕಿಕವಿಗ್ರಹ ವಾಕ್ಯ. ಸ್ತ್ರೀ ಸು+ಪ್ರಮಾಣೀ ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ಅನೇಕಮನ್ಯಪದಾರ್ಥೇ ಎಂಬ ಸೂತ್ರದಿಂದ ಸಮಾಸವಾಗಿದೆ ಪ್ರಾತಿಪದಿಕ ಸಂಜ್ಞೆಯು ಬಂದು ಸುಪ್ ಲೋಪವಾದ ಮೇಲೆ ಸ್ತ್ರೀ ಪ್ರಮಾಣೀ ಎಂದಿರುತ್ತದೆ. ಸ್ತ್ರೀ ಶಬ್ದವು ಭಾಷಿತ ಪುಂಸ್ಕವಾಗಿ ಇಲ್ಲದಿರುವುದರಿಂದ ಪುಂವದ್‌ಭಾವವು ಬರುವುದಿಲ್ಲ. ಪ್ರಕೃತ ಸೂತ್ರದಿಂದ ಪ್ರಮಾಣೀ ಶಬ್ದದ ನಂತರವೂ ಅಪ್ ಪ್ರತ್ಯಯವು ವಿಧಿಸಲಾಗಿದೆ. ಆದುದರಿಂದ ಪ್ರಕೃತ ಸೂತ್ರದಿಂದ ಸಮಾಸಾತ್ತ ಅಚ್ (ಅ) ಪ್ರತ್ಯಯವು ಬಂದು ಸ್ತ್ರೀಪ್ರಮಾಣಿ+ಅ ಎಂದಿರುತ್ತದೆ. ಭ ಸಂಜ್ಞಕ ಶಬ್ದದ ಈಕಾರಕ್ಕೆ ಯಸ್ಯೇತಿಚ ಎಂಬುದರಿಂದ ಲೋಪವು ಬಂದು ಸ್ತ್ರೀ ಪ್ರಮಾಣ್+ಅ=ಸ್ತ್ರೀಪ್ರಮಾಣ ಎಂದಿದ್ದಾಗ ಇದನ್ನು ಸುಬಂತ ಮಾಡಿದಾಗ ಸ್ತ್ರೀ ಪ್ರಮಾಣಃ ಎಂದು ರೂಪವು ಸಿದ್ಧವಾಗುತ್ತದೆ.

ಅಪ್ರಿಯಾದಿಷು ಕಿಮ್? ಕಲ್ಯಾಣಿಪ್ರಿಯಃ :– ಪ್ರಿಯಾದಿ ಶಬ್ದಗಳು ಪರದಲ್ಲಿದ್ದಾಗ

ಮಾತ್ರ ಪುಂವದ್‌ಭಾವವು ಬರುವುದಿಲ್ಲ ಎಂಬುದರಿಂದ ಕಲ್ಯಾಣೀ ಪ್ರಿಯಾ ಯಸ್ಯ ಸಃ ಕಲ್ಯಾಣಿ ಪ್ರಿಯಃ (ಕಲ್ಯಾಣಿಯಾದ ಪ್ರಿಯತಮೆಯನ್ನು ಉಳ್ಳವನು) ಎಂದಿದ್ದಾಗ ಕಲ್ಯಾಣಿ ಶಬ್ದವು ಭಾಷಿತ ಪುಂಸ್ಕವಾಗಿದ್ದರೂ ಪ್ರಿಯಾ ಶಬ್ದವು ಪರದಲ್ಲಿ ಇರುವುದರಿಂದ ಪುಂವದ್‌ಭಾವವು ಬರುವುದಿಲ್ಲ. ಉತ್ತರ ಪದಕ್ಕೆ ಗೋಸ್ತ್ರಿಯೋರುಪಸರ್ಜನಸ್ಯ ಎಂಬ ಸೂತ್ರದಿಂದ ಹ್ರಸ್ವವು ಬರುತ್ತದೆ.

**(ಷಚ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-973. ಬಹುವ್ರೀಹೌ ಸಕ್ಥ್ಯಕ್ಷ್ಣೋಃ ಸ್ವಾಙ್ಗಾತ್ಷಚ್ (5-4-113)**

ವೃತ್ತಿ:-ಸ್ವಾಙ್ಗವಾಚಿಸಕ್ಥ್ಯಕ್ಷ್ಯನ್ತಾತ್ ಬಹುವ್ರೀಹೇಃ ಷಚ್ ಸ್ಯಾತ್। ದೀರ್ಘಸಕ್ಥಃ। ಜಲಜಾಕ್ಷೀ। ಸ್ವಾಙ್ಗಾತ್ಕಿಮ್? ದೀರ್ಘಸಕ್ಥಿ ಶಕಟಮ್। ಸ್ಥೂಲಾಕ್ಷಾ ವೇಣುಯಷ್ಟಿಃ। ಅಕ್ಷ್ಣೋದರ್ಶನಾದಿತಿ ವಕ್ಷ್ಯಮಾಣೋಚ್ ॥

ಅ.ವ್ಯ:- ಪ್ರತ್ಯಯಃ , ಪರಶ್ಚ, ತದ್ಧಿತಾಃ, ಸಮಾಸಾನ್ತಾಃ ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ:-ಸ್ವಾಙ್ಗವಾಚಕವಾದ ಸಕ್ಥಿ ಮತ್ತು ಅಕ್ಷ ಶಬ್ದಗಳನ್ನು ಅಂತ್ಯದಲ್ಲಿ ಉಳ್ಳ ಬಹುವ್ರೀಹಿ ಸಮಾಸಕ್ಕೆ ಷಚ್ (ಅ) ಎಂಬ ಸಮಾಸಾಂತ ಪ್ರತ್ಯಯವು ಬರುವುದು.

ಉದಾ:- ದೀರ್ಘಸಕ್ಥಃ (ದೀರ್ಘವಾದ ತೊಡೆಗಳುಳ್ಳವನು):- ದೀರ್ಘೇ ಸಕ್ಥನೀ ಯಸ್ಯ ಸಃ ಎಂಬುದು ಲೌಕಿಕವಿಗ್ರಹ ವಾಕ್ಯ. ದೀರ್ಘ ಔ+ಸಕ್ಥಿ+ಔ ಎಂಬುದು ಅಲೌಕಿಕವಿಗ್ರಹ ವಾಕ್ಯ. ದೀರ್ಘ ಶಬ್ದಕ್ಕೂ ಸ್ವಾಙ್ಗ ವಾಚಿಯಾದ ಸಕ್ಥಿ ಶಬ್ದಕ್ಕೂ ಸಮಾಸವಾಗಿ ದೀರ್ಘಸಕ್ಥಿ ಎಂದಿದ್ದಾಗ ಪ್ರಕೃತ ಸೂತ್ರದಿಂದ ಷಚ್ (ಅ) ಪ್ರತ್ಯಯವು ಬಂದು ಸಕ್ಥಿ ಎಂಬಲ್ಲಿರುವ ಇಕಾರಕ್ಕೆ ಯಸ್ಯೇತಿಚ ಎಂಬುದರಿಂದ ಲೋಪವು ಬಂದು ದೀರ್ಘ ಸಕ್ಥ ಎಂದಾದ ಮೇಲೆ ಸುಬಂತ ಮಾಡಿದಾಗ ದೀರ್ಘಸಕ್ಥಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ:- ಜಲಜಾಕ್ಷೀ (ಎರಡು ಪದ್ಮಗಳಂತೆ ಕಣ್ಣುಗಳುಳ್ಳವಳು):- ಜಲಜೇ ಇವ ಅಕ್ಷಿಣೀ ಯಸ್ಯಾಃ ಸಾ ಎಂಬುದು ಲೌಕಿಕವಿಗ್ರಹ ವಾಕ್ಯ. ಜಲಜಾ ಔ+ಅಕ್ಷೀ ಔ ಎಂಬುದು ಅಲೌಕಿಕವಿಗ್ರಹ ವಾಕ್ಯ ಹಿಂದಿನಂತೆ ಅನೇಕಮನ್ಯಪದಾರ್ಥೇ ಎಂಬ ಸೂತ್ರದಿಂದ ಸಮಾಸವಾಗಿದೆ. ಬಹುವ್ರೀಹಿ ಸಮಾಸವಾದ ಮೇಲೆ ಜಲಜಾಕ್ಷಿ ಎಂದಿದ್ದಾಗ ಪ್ರಕೃತ ಸೂತ್ರದಿಂದ ಷಚ್ (ಅ) ಪ್ರತ್ಯಯವು ಬಂದು ಜಲಜಾಕ್ಷ ಎಂಬ ಪ್ರಾತಿಪದಿಕವು ಸಿದ್ಧವಾಗಿದೆ. ಷಚ್ (ಅ) ಪ್ರತ್ಯಯವು ಶಿತ್ತಾಗಿರುವುದರಿಂದ ಸ್ತ್ರೀಲಿಂಗದಲ್ಲಿ ಷಿದ್ಗೌರಾದಿಭ್ಯಶ್ಚ ಎಂಬ ಸೂತ್ರದಿಂದ ಜೀಷ್ (ಈ) ಬಂದು ಜಲಜಾಕ್ಷೀ ಎಂದಿದ್ದಾಗ ಇದನ್ನು ಸುಬಂತ ಮಾಡಿದಾಗ ಜಲಜಾಕ್ಷೀ ಎಂಬ ರೂಪವು ಸಿದ್ಧವಾಗುತ್ತದೆ.

ಸ್ವಾಙ್ಗಾತ್ಕಿಮ್? ದೀರ್ಘ ಸಕ್ಥಿ ಶಕಟಮ್। ಸ್ಥೂಲಾಕ್ಷಾ ವೇಣುಯಷ್ಟಿಃ। ಅಕ್ಷ್ಣೋದರ್ಶನಾದಿತಿ ವಕ್ಷ್ಯಮಾಣೋಚ್

ಉದಾ:- ದೀರ್ಘ ಸಕ್ಥಿ ಶಕಟಮ್ :- ಸ್ವಾಙ್ಗವಾಚಕಗಳಾದ ಸಕ್ಥಿ ಮತ್ತು ಅಕ್ಷಿ

ಶಬ್ದಗಳಿಗೆ ಮಾತ್ರ ಷಚ್ (ಅ) ಪ್ರತ್ಯಯವು ಎಂದು ಹೇಳಿರುವುದರಿಂದ ದೀರ್ಘೇ ಸಕ್ಥೀನಿ ಯಸ್ಯ ತತ್ ದೀರ್ಘಸಕ್ಥಿ ಶಕಟಮ್ ಎಂದಿರುವಾಗ ಸಕ್ಥಿ ಶಬ್ದವು ಶರೀರಾವಯವಾಗಿ ಇಲ್ಲದೇ ಇರುವುದರಿಂದ ಷಚ್ (ಅ) ಪ್ರತ್ಯಯವು ಬರುವುದಿಲ್ಲ. ಇಲ್ಲಿ ಸಕ್ಥಿ ಶಬ್ದಕ್ಕೆ ಗಾಡಿಗೆ ಆಧಾರವಾಗಿರುವ ಕಟ್ಟಿಗೆ ಎಂದರ್ಥ. ಆದುದರಿಂದ ಸ್ವಾಙ್ಗವಾಚಕವಲ್ಲ.

ಉದಾ:– ಸ್ಥೂಲಾಕ್ಷಾ ವೇಣುಯಷ್ಟಿಃ :– ಇದೇ ರೀತಿಯಲ್ಲಿ ಸ್ಥೂಲಾನಿ ಅಕ್ಷೀಣಿ ಯಸ್ಯಾ ಸಃ ಎಂಬುದು ಲೌಕಿಕವಿಗ್ರಹ ವಾಕ್ಯ. ಇಲ್ಲಿಯೂ ಸಹ ಅಕ್ಷಿ ಶಬ್ದವು ಸ್ವಾಙ್ಗವಾಚಕವಲ್ಲ (ದೊಡ್ಡ ರಂಧ್ರ ಎಂದರ್ಥ) ಆದುದರಿಂದ ಪ್ರಕೃತ ಸೂತ್ರದಿಂದ ಷಚ್ ಪ್ರತ್ಯಯವು ಬರಲಿಲ್ಲ. ಅಕ್ಣೋರ್ದರ್ಶನಾತ್ ಎಂಬ ಸೂತ್ರದಿಂದ ಅಚ್ ಪ್ರತ್ಯಯವು ಬಂದು ಯಸ್ಯೇತಿಚ ಎಂಬುದರಿಂದ ಇ ಕಾರವು ಲೋಪವಾದ ಮೇಲೆ ಟಾಪ್ ಪ್ರತ್ಯಯವನ್ನು ಸೇರಿಸಿದಾಗ ಸ್ಥೂಲಾ+ಅ ಎಂದಿರುತ್ತದೆ. ಷಚ್ (ಅ) ಪ್ರತ್ಯಯವು ಬಂದಿದ್ದರೆ ಅದು ಶಿತ್ತಾಗಿರುವುದರಿಂದ ಜೀಷ್ ಬಂದು ಸ್ಥೂಲಾಕ್ಷೀ ಎಂಬ ಅನಿಷ್ಟ ರೂಪವು ಸಿದ್ಧವಾಗಿರುವುದು ಆದರೆ ಷಚ್ (ಅ) ಇಲ್ಲದ್ದರಿಂದ ಸ್ಥೂಲಾಕ್ಷಾ ಎಂಬ ಸುಬಂತ ಶಬ್ದವು ಸಿದ್ಧವಾಗಿದೆ.

**(ಷ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ–974. ದ್ವಿತ್ರಿಭ್ಯಾಂ ಷ ಮೂರ್ಧ್ನಃ (5–4–115)**

ವೃತ್ತಿ:–ಆಭ್ಯಾಂ ಮೂರ್ಧ್ನಃ ಷಃ ಸ್ಯಾದ್ಬಹುವ್ರೀಹೌ। ದ್ವಿಮೂರ್ಧಃ ತ್ರಿಮೂರ್ಧಃ॥

ಪ.ಚ್ಛೇ:– ದ್ವಿತ್ರಿಭ್ಯಾಂ, ಷಃ, ಮೂರ್ಧ್ನಃ॥

ಅ.ವೃ:– ಬಹುವ್ರೀಹೌ ಸಕ್ಥ್ಯಕ್ಷ್ಣೋಃ ಸ್ವಾಙ್ಗಾತ್ಷಚ್ ಎಂಬ ಸೂತ್ರದಿಂದ ಬಹುವ್ರೀಹೌ ಎಂಬ ಪದವು ಅನುವೃತ್ತವಾಗುತ್ತದೆ. ಪ್ರತ್ಯಯಃ, ಪರಶ್ಚ, ತದ್ಧಿತಾಃ, ಸಮಾಸಾನ್ತಾಃ ಎಂಬವು ಅಧಿಕಾರಸೂತ್ರಗಳಾಗಿವೆ.

ಅರ್ಥ:–ಬಹುವ್ರೀಹಿ ಸಮಾಸದಲ್ಲಿ ದ್ವಿ ಮತ್ತು ತ್ರಿ ಶಬ್ದಗಳ ಪರದಲ್ಲಿ ಮೂರ್ಧನ್ ಶಬ್ದವಿದ್ದರೆ ಅದರ ಮೇಲೆ ನಂತರ ಸಮಾಸಾನ್ತ ಷ ಪ್ರತ್ಯಯವು ಬರುತ್ತದೆ. (ಷ ನಲ್ಲಿ 'ಅ'ಕಾರ ಮಾತ್ರ ಉಳಿಯುತ್ತದೆ.)

ಉದಾ:– ದ್ವಿಮೂರ್ಧಃ (ಎರಡು ತಲೆಉಳ್ಳವನು):– ದ್ವೌ ಮೂರ್ಧಾನೌ ಯಸ್ಯ ಸಃ ಎಂಬುದು ಲೌಕಿಕವಿಗ್ರಹ ವಾಕ್ಯ. ದ್ವಿ ಔ+ಮೂರ್ಧನ್ ಔ ಎಂಬುದು ಅಲೌಕಿಕವಿಗ್ರಹ ವಾಕ್ಯ. ಅನೇಕಮನ್ಯಪದಾರ್ಥೇ ಎಂಬ ಸೂತ್ರದಿಂದ ಸಮಾಸವಾದ ಮೇಲೆ ಹಿಂದಿನಂತೆ ಪ್ರಕ್ರಿಯೆಯಯು ನಡೆದು ದ್ವಿ ಮೂಧನ್ ಎಂದಿರುತ್ತದೆ. ನಸ್ ತದ್ಧಿತೇ ಎಂಬ ಸೂತ್ರದಿಂದ ಟೀ (ಅನ್) ಗೆ ಲೋಪ ಬಂದು ದ್ವಿಮೂಧ+ಅ =ದ್ವಿಮೂರ್ಧ ಎಂದಿರುತ್ತದೆ ಪ್ರಕೃತ ಸೂತ್ರದಿಂದ ಷ ಪ್ರತ್ಯಯವು ಬಂದು ದ್ವಿಮೂಧನ್+ಅ=ದ್ವಿಮೂಧ ಎಂದಾದ ಮೇಲೆ ಪ್ರಾತಿಪದಿಕ ಸಂಜ್ಞೆಯು ಬಂದು ಸುಬಂತ ಮಾಡಿದಾಗ ದ್ವಿಮೂರ್ಧಃ ಎಂದು ರೂಪವು ಸಿದ್ಧವಾಗುತ್ತದೆ. ಸ್ತ್ರೀವಿವಕ್ಷೆಯಲ್ಲಿ ಷಿದ್‌ಗೋರಾದಿಭ್ಯಶ್ಚ ಎಂಬ ಸೂತ್ರದಿಂದ ಜೀಷ (ಇ)ಬಂದು ಇದನ್ನು ಸುಬಂತ ಮಾಡಿದಾಗ ದ್ವಿಮೂರ್ಧಿ ಎಂದು

ರೂಪವು ಸಿದ್ಧವಾಗುತ್ತದೆ.

ಉದಾ:- ತ್ರಿಮೂರ್ಧಃ (ಮೂರು ತಲೆಉಳ್ಳವನು):- ತ್ರಿ ಮೂರ್ಧಾನೌ ಯಸ್ಯ ಸಃ ಎಂಬುದು ಲೌಕಿಕವಿಗ್ರಹ ವಾಕ್ಯ. ತ್ರಿ ಜಸ್+ಮೂರ್ಧನ್ ಜಸ್ ಎಂಬುದು ಅಲೌಕಿಕವಿಗ್ರಹ ವಾಕ್ಯ. ಅನೇಕಮನ್ಯಪದಾರ್ಥೇ ಎಂಬ ಸೂತ್ರದಿಂದ ಸಮಾಸವಾದ ಮೇಲೆ ಹಿಂದಿನಂತೆ ಪ್ರಕ್ರಿಯೆಯು ನಡೆದು ತ್ರಿ ಮೂಧನ್ ಎಂದಿರುತ್ತದೆ. ನಸ್ ತದ್ಧಿತೇ ಎಂಬ ಸೂತ್ರದಿಂದ ಟೀ (ಅನ್) ಗೆ ಲೋಪ ಬಂದು ತ್ರಿಮೂಧ್+ಅ =ತ್ರಿಮೂರ್ಧ ಎಂದಿರುತ್ತದೆ ಪ್ರಕೃತ ಸೂತ್ರದಿಂದ ಷ ಪ್ರತ್ಯಯವು ಬಂದು ತ್ರಿಮೂರ್ಧನ್+ಅ=ತ್ರಿ ಮೂರ್ಧ ಎಂದಾದ ಮೇಲೆ ಪ್ರಾತಿಪದಿಕ ಸಂಜ್ಞೆಯು ಬಂದು ಸುಬಂತ ಮಾಡಿದಾಗ ತ್ರಿಮೂರ್ಧಃ ಎಂದು ರೂಪವು ಸಿದ್ಧವಾಗುತ್ತದೆ. ಸ್ತ್ರೀವಿವಕ್ಷೆಯಲ್ಲಿ ಷಿದ್‌ಗೋರಾದಿಭ್ಯಶ್ಚ ಎಂಬ ಸೂತ್ರದಿಂದ ಜೀಷ (ಈ)ಬಂದು ಇದನ್ನು ಸುಬಂತ ಮಾಡಿದಾಗ ತ್ರಿಮೂರ್ಧಃ ಎಂದು ರೂಪವು ಸಿದ್ಧವಾಗುತ್ತದೆ.

**(ಅಪ್ ಪ್ರತ್ಯಯ ವಿಧಾಯಕ ಸೂತ್ರ)**

**ಸೂತ್ರ-975. ಅನ್ತರ್ಬಹಿರ್ಭ್ಯಾಂ ಚ ಲೋಮ್ನಃ (5-4-117)**

ವೃತ್ತಿ:-ಆಭ್ಯಾಂ ಲೋಮ್ನೋಽಪ್ಸ್ಯಾದ್ಬಹುವ್ರೀಹೌ। ಅನ್ತರ್ಲೋಮಃ । ಬಹಿರ್ಲೋಮಃ॥

ಅ.ವೃ:-ಅಪ್ ಪೂರಣೀ ಪ್ರಮಾಣ್ಯೋಃ ಎಂಬ ಸೂತ್ರದಿಂದ ಅಪ್ ಎಂಬ ಪದವು ಬಹುವ್ರೀಹೌ ಸಕ್ಥ್ಯಕ್ಷ್ಣೋಃ ಸ್ವಾಙ್ಗಾತ್ ಷಚ್ ಎಂಬ ಸೂತ್ರದಿಂದ ಬಹುವ್ರೀಹೌ ಎಂಬ ಪದವು ಅನುವೃತ್ತವಾಗುತ್ತವೆ. ಪ್ರತ್ಯಯಃ, ಪರಶ್ಚ, ತದ್ಧಿತಾಃ, ಸಮಾಸಾನ್ತಾಃ ಎಂಬವು ಅನುವೃತ್ತವಾಗುತ್ತವೆ. ಅಧಿಕಾರ ಸೂತ್ರಗಳಾಗಿವೆ.

ಅರ್ಥ:- ಬಹುವ್ರೀಹಿ ಸಮಾಸದಲ್ಲಿ ಅನ್ತರ್ ಮತ್ತು ಬಹಿಸ್ ಎಂಬ ಈ ಅವ್ಯಯ ಪದಗಳ ಮುಂದೆ ಲೋಮನ್ ಶಬ್ದದ ಮೇಲೆ ಸಮಾಸಾನ್ತ ಅಪ್ ಪ್ರತ್ಯವು ಬರುತ್ತದೆ. ಈ ಅಪ್ ಪ್ರತ್ಯಯದಲ್ಲಿ ಅ ಮಾತ್ರ ಉಳಿಯುತ್ತದೆ.

ಉದಾ:- ಅನ್ತರ್ಲೋಮ (ಒಳಗೆ ಲೊಮವುಳ್ಳ ಪುರುಷನು):- ಅನ್ತಃ ಲೋಮಾನಿ ಯಸ್ಯ ಸಃ ಎಂಬುದು ಲೌಕಿಕ ವಿಗ್ರಹ ವಾಕ್ಯ. ಅನ್ತರ್ ಲೊಮನ್+ಜಸ್ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಅನೇಕಮನ್ಯಪದಾರ್ಥೇ ಎಂಬ ಸೂತ್ರದಿಂದ ಸಮಾಸವಾಗಿದೆ. ಪ್ರಾತಿಪದಿಕ ಸಂಜ್ಞೆ ಸುಪ್ ಲೋಪಗಳಾದ ಮೇಲೆ ಅನ್ತರ್ ಲೊಮನ್ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ಅಪ್ (ಅ) ಪ್ರತ್ಯಯವು ಬಂದು ಅನ್ತರ್ ಲೊಮನ್+ಅ ಎಂದಿರುತ್ತದೆ. ನಸ್ ತದ್ಧಿತೇ ಎಂಬ ಸೂತ್ರದಿಂದ ಟಿ ಗೆ (ಅನ್)ಗೆ ಲೋಪವು ಬಂದು ಅನ್ತರ್+ಲೊಮ+ಅ= ಅನ್ತರ್ ಲೊಮ ಎಂದಿರುತ್ತದೆ. ಇದನ್ನು ಸುಬಂತ ಮಾಡಿದಾಗ ಅನ್ತಲೋಮಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ:- ಬಹಿರ್ಲೋಮಃ (ಹೊರಗೆ ಲೊಮವುಳ್ಳ ಪುರುಷನು):- ಬಹಿಃ ಲೋಮಾನಿ ಯಸ್ಯ ಸಃ ಎಂಬುದು ಲೌಕಿಕ ವಿಗ್ರಹ ವಾಕ್ಯ. ಬಹಿಸ್ ಲೊಮನ್ ಜಸ್ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಸ್ ಕಾರಕ್ಕೆ ರುತ್ವವವು ಬಂದಿದೆ. ಬಹಿರ್

ಲೋಮನ್ ಎಂದಾಗಿದೆ. ಅನೇಕಮನ್ಯಪದಾರ್ಥೇ ಎಂಬ ಸೂತ್ರದಿಂದ ಸಮಾಸವಾಗಿದೆ. ಪ್ರಾತಿಪದಿಕ ಸಂಜ್ಞೆ ಸುಪ್ ಲೋಪಗಳಾದ ಮೇಲೆ ಬಹಿರ್ ಲೊಮನ್+ಅ ಎಂದಿರುತ್ತದೆ. ನಸ್ ತದ್ಧಿತೇ ಎಂಬ ಸೂತ್ರದಿಂದ ಟಿ ಗೆ (ಅನ್)ಗೆ ಲೋಪವು ಬಂದು ಬಹಿರ್+ಲೊಮ+ಅ= ಬಹಿರ್ ಲೊಮ ಎಂದಿರುತ್ತದೆ. ಇದನ್ನು ಸುಬಂತ ಮಾಡಿದಾಗ ಬಹಿಲೋರ್ಮಃ ಎಂದು ರೂಪವು ಸಿದ್ಧವಾಗುತ್ತದೆ.

**(ಪಾದ ಶಬ್ದದ ಅಂತ್ಯ ವರ್ಣಕ್ಕೆ ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ-976. ಪಾದಸ್ಯ ಲೋಪೋಽಹಸ್ತ್ಯಾದಿಭ್ಯಃ। (5-4-138)**

ವೃತ್ತಿ:-ಹಸ್ತ್ಯಾದಿ ವರ್ಜಿತಾತ್ ಉಪಮಾನಾತ್ ಪರಸ್ಯ ಪಾದಶಬ್ದಸ್ಯ ಲೋಪಃ ಸ್ಯಾತ್ ಬಹುವ್ರೀಹೌ। ವ್ಯಾಘ್ರಸ್ಯ ಇವ ಪಾದೌ ಅಸ್ಯ ವ್ಯಾಘ್ರಪಾತ್। ಅಹಸ್ತ್ಯಾದಿಭ್ಯಃ ಕಿಮ್? ಹಸ್ತಿಪಾದಃ। ಕುಸೂಲಪಾದಃ।

ಪ.ಚ್ಛೇ:-ಪಾದಸ್ಯ, ಲೋಪಃ, ಅಹಸ್ತ್ಯಾದಿಭ್ಯಃ।

ಅ.ವೃ:- ಉಪಮಾನಾಚ್ಚ ಎಂಬ ಸೂತ್ರದಿಂದ ಉಪಮಾನಾತ್ ಎಂಬ ಪದವು 'ಬಹುವ್ರೀಹೌ ಸಕ್ಥ್ಯಕ್ಷ್ಣೋ ಸ್ವಾಙ್ಗಾತ್ ಷಚ್' ಎಂಬ ಸೂತ್ರದಿಂದ ಬಹುವ್ರೀಹೌ ಎಂಬ ಪದವು ಅನುವೃತ್ತವಾಗುತ್ತವೆ.

ಅರ್ಥ:-ಬಹುವ್ರೀಹಿ ಸಮಾಸದಲ್ಲಿ ಹಸ್ತೀ ಮೊದಲಾದ ಶಬ್ದಗಳಿಗಿಂತ ಭಿನ್ನ ಉಪಮಾನವಾಚಕ ಶಬ್ದದ ಮುಂದೆ ಇರುವ ಪಾದಶಬ್ದಕ್ಕೆ ಸಮಾಸಾನ್ತ ಲೋಪವಾಗುತ್ತದೆ. ಎಂದರೆ ಪಾದ ಶಬ್ದದ ಕೊನೆಯಲ್ಲಿರುವ ವರ್ಣಕ್ಕೆ (ಎಂದರೆ ಅಕಾರಕ್ಕೆ) ಅಲೋಽನ್ತ್ಯಸ್ಯ ಎಂಬ ಸೂತ್ರದಿಂದ ಲೋಪವು ಬಂದು ಪಾದ್ ಇದ್ದು ಪಾತ್ ಎಂದಾಗುತ್ತದೆ. ಅನಂತರ ಝಲಾಂ ಜಶೋನ್ತೇ ಎಂಬ ಸೂತ್ರದಿಂದ ಪಾದ್ ಎಂಬ ರೂಪವು ವೈಕಲ್ಪಿಕವಾಗಿ ಬರುತ್ತದೆ.

ಉದಾ: ವ್ಯಾಘ್ರಪಾತ್ (ಹುಲಿ ಕಾಲಿನಂತೆ ಪಾದವುಳ್ಳವನು) :- ವ್ಯಾಘ್ರಸ್ಯ ಪಾದೌ ಇವ ಪಾದೌ ಯಸ್ಯ ಸಃ ಎಂಬುದು ಲೌಕಿಕವಿಗ್ರಹ ವಾಕ್ಯ. ವ್ಯಾಘ್ರ ಪಾದ ಔ+ಪಾದ ಔ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಅನೇಕಮನ್ಯಪದಾರ್ಥೇ ಎಂಬ ಸೂತ್ರಕ್ಕೆ ಸಂಬಂಧಿಸಿದ ಸಪ್ತಮ್ಯುಯಪಮಾ ಪೂರ್ವಪದಸ್ಯೋತ್ತರ ಪದಲೋಪಸ್ಯ ಎಂಬ ವಾರ್ತಿಕದಿಂದ ಸಮಾಸವಾಗಿ ಮತ್ತು ಪೂರ್ವ ಪದದ ಉತ್ತರಪದವಾದ ಪಾದ ಶಬ್ದಕ್ಕೆ ಲೋಪವು ಬಂದು ಪ್ರಾತಿಪದಿಕ ಸಂಜ್ಞೆಯು ಬಂದ ಮೇಲೆ ಸುಪ್ ಲೋಪವಾದ ಮೇಲೆ ವ್ಯಾಘ್ರ ಪಾದ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ಅಲೋಽನ್ತ್ಯಸ್ಯ ಎಂಬ ಸೂತ್ರ ನಿಯಮದಿಂದ ಪಾದ ಶಬ್ದದ ಅ ಕಾರಕ್ಕೆ ಲೋಪ ಬಂದು ವ್ಯಾಘ್ರ ಪಾದ್ ಎಂದಿರುತ್ತದೆ. ಇದನ್ನು ಸುಬಂತ ಮಾಡಿದಾಗ ವೈಕಲ್ಪಿಕ ಚರ್ತ್ವವು ಬಂದು, ವ್ಯಾಘ್ರ ಪಾತ್ ಮತ್ತು ವ್ಯಾಘ್ರ ಪಾದ್ ಎಂದು ರೂಪಗಳು ಸಿದ್ಧವಾಗುತ್ತವೆ.

ಅಹಸ್ತ್ಯಾದಿಭ್ಯಃ ಕಿಮ್? ಹಸ್ತಿಪಾದಃ। ಕುಸೂಲಪಾದಃ :- ಉಪಮಾನವು ಹಸ್ತೀ ಮೊದಲಾದವುಗಳಿಗಿಂತ ಭಿನ್ನವಾಗಿರಬೇಕು ಎಂದು ಹೇಳಿರುವುದರಿಂದ ಹಸ್ತಿಪಾದಃ,

ಕುಸೂಲಪಾದಃ ಎಂದೇ ರೂಪಗಳು ಇರುತ್ತವೆ. ಆದ್ದರಿಂದ ಇಲ್ಲಿ ಪ್ರಕೃತ ಸೂತ್ರವು ಅನ್ವಯಿಸುವುದಿಲ್ಲ.

**(ಪಾದ ಶಬ್ದದ ಅಂತ್ಯವರ್ಣಕ್ಕೆ ಲೋಪವನ್ನು ಹೇಳುವ ಮತ್ತೊಂದು ಸೂತ್ರ)**

**ಸೂತ್ರ-977. ಸಂಖ್ಯಾಸುಪೂರ್ವಸ್ಯ (5-4-140)**

**ವೃತ್ತಿ:- ಪಾದಸ್ಯ ಲೋಪಃ ಸ್ಯಾತ್ ಸಮಾಸಾನ್ತಃ ಬಹುವ್ರೀಹೌ ದ್ವಿಪಾತ್ । ಸುಪಾತ್॥**

ಅ.ವೃ:-ಪಾದಸ್ಯ ಲೋಪೋಽಹಸ್ತ್ಯಾದಿಭ್ಯಃ ಎಂಬ ಸೂತ್ರದಿಂದ ಲೋಪಃ ಎಂಬ ಪದವು ಅನುವೃತ್ತವಾಗುತ್ತದೆ. ಮತ್ತು 'ಬಹುವ್ರೀಹೌ ಸಕ್ಥ್ಯಕ್ಷ್ಣೋ ಸ್ವಾಙ್ಗಾತ್ ಷಚ್' ಎಂಬ ಸೂತ್ರದಿಂದ ಬಹುವ್ರೀಹೌ ಎಂಬ ಪದವು ಅನುವೃತ್ತವಾಗುತ್ತವೆ.

ಅರ್ಥ:- ಬಹುವ್ರೀಹಿ ಸಮಾಸದಲ್ಲಿ ಸಂಖ್ಯಾವಾಚಕಪದವನ್ನು ಪೂರ್ವದಲ್ಲಿ ಉಳ್ಳ ಮತ್ತು ಸು ಎಂಬ ಅವ್ಯಯವನ್ನು ಪೂರ್ವದಲ್ಲಿ ಉಳ್ಳ ಪಾದ ಶಬ್ದಕ್ಕೆ ಸಮಾಸಾನ್ತವಾದ ಅ ಕಾರಕ್ಕೆ ಲೋಪವು ಆಗುತ್ತದೆ. ಅಲೋಽನ್ತ್ಯಸ್ಯ ಎಂಬ ಸೂತ್ರದಿಂದ ಪಾದಶಬ್ದವಾದ ಅಂತ್ಯ ಅಕಾರಕ್ಕೆ ಲೋಪವು ಬಂದಿದೆ.

ಉದಾ:- ದ್ವಿಪಾತ್ (ಎರಡು ಕಾಲುಗಳುಳ್ಳವನು):- ದ್ವೌ ಪಾದೌ ಯಸ್ಯ ಸಃ ಎಂಬುದು ಲೌಕಿಕ ವಿಗ್ರಹ ವಾಕ್ಯ. ದ್ವಿ ಔ+ಪಾದ ಔ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಅನೇಕಮನ್ಯಪದಾರ್ಥೇ ಎಂಬ ಸೂತ್ರದಿಂದ ಸಮಾಸವಾಗಿದೆ. ಪ್ರಾತಿಪದಿಕ ಸಂಜ್ಞೆ ಸುಪ್ ಲೋಪಗಳಾದ ಮೇಲೆ ದ್ವಿ ಪಾದ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ಅಲೋಽನ್ತ್ಯಸ್ಯ ಎಂಬ ಸೂತ್ರ ನಿಯಮದಿಂದ ಪಾದ ಶಬ್ದದ ಅ ಕಾರಕ್ಕೆ ಲೋಪವು ಬಂದು ದ್ವಿ ಪಾದ ಎಂದಿದ್ದಾಗ ಇದನ್ನು ಸುಬಂತ ಮಾಡಿದಾಗ ವೈಕಲ್ಪಿಕ ಚತ್ವವು ಬಂದು ದ್ವಿಪಾತ್ ಮತ್ತು ದ್ವಿಪಾದ್ ಎಂದು ರೂಪಗಳು ಸಿದ್ಧವಾಗುತ್ತವೆ.

ಉದಾ:- ಸುಪಾತ್ (ಸುಂದರವಾದ ಕಾಲುಗಳ್ಳವನು):- ಸು ಶೋಭನೌ ಪಾದೌ ಯಸ್ಯ ಸಃ ಎಂಬುದು ಲೌಕಿಕ ವಿಗ್ರಹ ವಾಕ್ಯ. ಸು+ಪಾದ ಔ ಎಂಬುದು ಅಲೌಕಿಕ ವಿಗ್ರಹ ವಾಕ್ಯ ಅನೇಕಮನ್ಯಪದಾರ್ಥೇ ಎಂಬ ಸೂತ್ರದಿಂದ ಸಮಾಸವಾಗಿದೆ. ಪ್ರಾತಿಪದಿಕ ಸಂಜ್ಞೆ ಸುಪ್ ಲೋಪಗಳಾದ ಮೇಲೆ ಸು ಪಾದ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ಅಲೋಽನ್ತ್ಯಸ್ಯ ಎಂಬ ಸೂತ್ರ ನಿಯಮದಿಂದ ಪಾದ ಶಬ್ದದ ಅ ಕಾರಕ್ಕೆ ಲೋಪವು ಬಂದು ಸು ಪಾದ ಎಂದಿದ್ದಾಗ ಇದನ್ನು ಸುಬಂತ ಮಾಡಿದಾಗ ವೈಕಲ್ಪಿಕ ಚತ್ವವು ಬಂದು ಸುಪಾತ್ ಮತ್ತು ಸುಪಾದ್ ಎಂದು ರೂಪಗಳು ಸಿದ್ಧವಾಗುತ್ತವೆ.

**(ಸಮಾಸಾನ್ತ ಲೋಪವನ್ನು ಹೇಳುವ ಸೂತ್ರ)**

**ಸೂತ್ರ-978. ಉದ್ವಿಭ್ಯಾಂ ಕಾಕುದಸ್ಯ (5-4-148)**

ವೃತ್ತಿ:- ಉದ್ವಿಭ್ಯಾಂ ಸ್ಯಾತ್ ।ಉತ್ಕಾಕುತ್। ವಿಕಾಕುತ್।

ಅ.ವೃ:- ಕಕುದಸ್ಯಾವಸ್ಥಾಯಾಂ ಲೋಪ ಎಂಬ ಸೂತ್ರದಿಂದ ಲೋಪಃ ಎಂಬ

ಪದವು ಮತ್ತು 'ಬಹುವ್ರೀಹೌ ಸಕ್ಥ್ಯಕ್ಷ್ಣೋಃ ಸ್ವಾಙ್ಗಾತ್ ಷಚ್' ಎಂಬ ಸೂತ್ರದಿಂದ ಬಹುವ್ರೀಹೌ ಎಂಬ ಪದವು ಅನುವೃತ್ತವಾಗುತ್ತವೆ. ಸಮಾಸಾನ್ತಾಃ ಎಂಬುದು ಅಧಿಕಾರ ಸೂತ್ರ.

ಅರ್ಥ:-ಬಹುವ್ರೀಹಿ ಸಮಾಸದಲ್ಲಿ ಉದ್ ಮತ್ತು ವಿ ಈ ಉಪಸರ್ಗಗಳ ನಂತರ ಕಾಕುದ ಶಬ್ದಕ್ಕೆ ಸಮಾಸಾನ್ತ ಲೋಪವಾಗುತ್ತದೆ.

ಉದಾ:- ಉತ್ಕಾಕುತ್ (ಉಬ್ಬಿದ ನೆತ್ತಿ ಉಳ್ಳವನು):- ಉದ್ಗತಮ್ ಕಾಕುದಮ್ ಯಸ್ಯ ಸಃ ಎಂಬುದು ಲೌಕಿಕ ವಿಗ್ರಹ ವಾಕ್ಯ. ಉತ್+ಕಾಕುದ್+ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ಅನೇಕಮನ್ಯಪದಾರ್ಥೇ ಎಂಬ ಸೂತ್ರದಿಂದ ಸಮಾಸವಾಗಿದೆ. ಪ್ರಾತಿಪದಿಕ ಸಂಜ್ಞೆ ಸುಪ್ ಲೋಪಗಳಾದ ಮೇಲೆ ಉತ್‌ಕಾಕುದ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ಅಲೋಽನ್ತ್ಯಸ್ಯ ಎಂಬ ಸೂತ್ರ ನಿಯಮದಿಂದ ಕಾಕುದ ಎಂಬುದರ ಅಂತ್ಯ ಅಕಾರಕ್ಕೆ ಲೋಪವು ಬಂದು ಉತ್ ಕಾಕುದ್ ಎಂದಿರುತ್ತದೆ. ಇದನ್ನು ಸುಬಂತ ಮಾಡಿದಾಗ ವೈಕಲ್ಪಿಕವಾಗಿ ಚರ್ತ್ವವು ಬಂದು ಉತ್ ಕಾಕುತ್ ಮತ್ತು ಉತ್ ಕಾಕುದ್ ಎಂಬ ರೂಪಗಳು ಸಿದ್ಧಿಸುತ್ತವೆ.

ಉದಾ:- ವಿಕಾಕುತ್ (ವಿಕಾರ ಹೊಂದಿದ ನೆತ್ತಿ ಉಳ್ಳವನು):- ವಿಕೃತಮ್ ಕಾಕುದಮ್ ಯಸ್ಯ ಸಃ ಎಂಬುದು ಲೌಕಿಕ ವಿಗ್ರಹ ವಾಕ್ಯ. ವಿ+ಕಾಕುದ್ ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ಅನೇಕಮನ್ಯಪದಾರ್ಥೇ ಎಂಬ ಸೂತ್ರದಿಂದ ಸಮಾಸವಾಗಿದೆ. ಪ್ರಾತಿಪದಿಕ ಸಂಜ್ಞೆ ಸುಪ್ ಲೋಪಗಳಾದ ಮೇಲೆ ವಿಕಾಕುದ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ಅಲೋನ್ತ್ಯಸ್ಯ ಎಂಬ ಸೂತ್ರ ನಿಯಮದಿಂದ ಕಾಕುದ ಎಂಬುದರ ಅಂತ್ಯ ಅಕಾರಕ್ಕೆ ಲೋಪವು ಬಂದು ವಿಕಾಕುದ್ ಎಂದಿರುತ್ತದೆ. ಇದನ್ನು ಸುಬಂತ ಮಾಡಿದಾಗ ವೈಕಲ್ಪಿಕವಾಗಿ ಚರ್ತ್ವವು ಬಂದು ವಿಕಾಕುತ್ ಮತ್ತು ವಿಕಾಕುದ್ ಎಂಬ ರೂಪಗಳು ಸಿದ್ಧಿಸುತ್ತವೆ.

**(ವೈಕಲ್ಪಿಕವಾಗಿ ಸಮಾಸಾನ್ತ ಲೋಪವನ್ನು ಹೇಳುವ ಸೂತ್ರ)**

**ಸೂತ್ರ-979. ಪೂರ್ಣಾದ್ವಿಭಾಷಾ (5-4-149)**

ವೃತ್ತಿ:- ಪೂರ್ಣಕಾಕುತ್ । ಪೂರ್ಣಕಾಕುದಃ

ಪ.ಚ್ಛೇ:-ಪೂರ್ಣಾತ್, ವಿಭಾಷಾ।

ಅ.ವೃ:-ಉದ್ವಿಭ್ಯಾಂ ಕಾಕುದಸ್ಯ ಎಂಬ ಸೂತ್ರದಿಂದ ಕಾಕುದಸ್ಯ ಎಂಬ ಪದವು ಕಕುದಸ್ಯಾವಸ್ಥಾಯಾಂ ಲೋಪಃ ಎಂಬ ಸೂತ್ರದಿಂದ ಲೋಪಃ ಎಂಬ ಪದವು ಮತ್ತು 'ಬಹುವ್ರೀಹೌ ಸಕ್ಥ್ಯಕ್ಷ್ಣೋಃ ಸ್ವಾಙ್ಗಾತ್ ಷಚ್' ಎಂಬ ಸೂತ್ರದಿಂದ ಬಹುವ್ರೀಹೌ ಎಂಬ ಪದವು ಅನುವೃತ್ತವಾಗುತ್ತವೆ. ಸಮಾಸಾನ್ತಾಃ ಎಂಬುದು ಅಧಿಕಾರ ಸೂತ್ರ.

ಅರ್ಥ:-ಬಹುವ್ರೀಹಿ ಸಮಾಸದಲ್ಲಿ ಪೂರ್ಣ ಶಬ್ದದ ನಂತರ ಇರುವ ಕಾಕುದ ಶಬ್ದಕ್ಕೆ ವೈಕಲ್ಪಿಕವಾಗಿ ಸಮಾಸಾನ್ತ ಲೋಪವಾಗುತ್ತದೆ.

ಉದಾ:- ಪೂರ್ಣಕಾಕುತ್, ಪೂರ್ಣಕಾಕುದ್ (ಪೂರ್ಣವಾದ ನೆತ್ತಿ ಉಳ್ಳವನು):-

ಪೂರ್ಣಮ್ ಕಾಕುದಮ್ ಯಸ್ಯ ಸಃ ಎಂಬುದು ಲೌಕಿಕವಿಗ್ರಹ ವಾಕ್ಯ. ಪೂರ್ಣ ಸು+ಕಾಕುದ ಸು ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಅನೇಕಮನ್ಯಪದಾರ್ಥೇ ಎಂಬ ಸೂತ್ರದಿಂದ ಸಮಾಸವಾಗಿದೆ. ಪ್ರಾತಿಪದಿಕ-ಸಂಜ್ಞೆ-ಸುಪ್ ಲೋಪಗಳಾದ ಮೇಲೆ ಪೂರ್ಣ ಕಾಕುದ್ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ಅಲೋನ್ತ್ಯಸ್ಯ ಎಂಬ ಸೂತ್ರ ನಿಯಮದಿಂದ ಕಾಕುದ ಎಂಬುದರ ಅಂತ್ಯ ಅ ಕಾರಕ್ಕೆ ವಿಕಲ್ಪದಿಂದ ಲೋಪವು ಬಂದು ಪೂರ್ಣ ಕಾಕುದ್ ಎಂದಿರುತ್ತದೆ. ಇದನ್ನು ಸುಬಂತ ಮಾಡಿದಾಗ ವೈಕಲ್ಪಿಕವಾಗಿ ಚರ್ತ್ವವು ಬಂದು ಪೂರ್ಣ ಕಾಕುತ್ ಮತ್ತು ಪೂರ್ಣ ಕಾಕುದ್ ಎಂಬ ರೂಪಗಳು ಸಿದ್ಧಿಸುತ್ತವೆ. ಮತ್ತು ಲೋಪವು ಬಾರದ ಪಕ್ಷದಲ್ಲಿ ಪೂರ್ಣಕಾಕುದ ಎಂಬ ರೂಪವು ಸಿದ್ಧಿಸುತ್ತವೆ.

**(ನಿಪಾತವನ್ನು ಹೇಳುವ ಸೂತ್ರ)**

**ಸೂತ್ರ-980. ಸುಹೃದ್‌ದುರ್‌ಹೃದೌ ಮಿತ್ರಾಮಿತ್ರಯೋಃ (5-4-150)**

ವೃತ್ತಿ:-ಸುದುರ್ಭ್ಯಾಂ ಹೃದಯಸ್ಯ ಹೃದ್ಭಾವೋ ನಿಪಾತ್ಯತೇ ಸುಹೃನ್ಮಿತ್ರಮ್ । ದುರ್‌ಹೃದಮಿತ್ರಃ ।

ಅ.ವ್ಯ:- ಬಹುವ್ರೀಹೌ ಸಕ್ಥ್ಯಕ್ಷ್ಣೋಃ ಸ್ವಾಙ್ಗಾತ್ ಷಚ್ ಎಂಬ ಸೂತ್ರದಿಂದ ಬಹುವ್ರೀಹೌ ಪದವು ಅನುವೃತ್ತವಾಗುತ್ತದೆ. ಸಮಾಸಾನ್ತಾಃ ಎಂಬುದು ಅಧಿಕಾರ ಸೂತ್ರ.

ಅರ್ಥ:- ಮಿತ್ರ ಮತ್ತು ಶತ್ರು ಅರ್ಥದಲ್ಲಿ ಕ್ರಮವಾಗಿ ಬಹುವ್ರೀಹಿ ಸಮಾಸದಲ್ಲಿ ಸು ಮತ್ತು ದುರ್ ಈ ಉಪಸರ್ಗಗಳ ನಂತರ ಇರುವ ಹೃದಯ ಶಬ್ದಕ್ಕೆ ಹೃದ್ ಆದೇಶವು ನಿಪಾತಮಾಡಲಾಗಿದೆ.

ಉದಾ:- ಸುಹೃನ್ಮಿತ್ರಮ್ (ಒಳ್ಳೆಯ ಹೃದಯವುಳ್ಳವನು (ಮಿತ್ರನು)):- ಸು ಶೋಭನಮ್ ಹೃದಯಮ್ ಯಸ್ಯ ಎಂಬುದು ಲೌಕಿಕವಿಗ್ರಹ ವಾಕ್ಯ. ಸು+ಹೃದಯ ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ಅನೇಕಮನ್ಯಪದಾರ್ಥೇ ಎಂಬ ಸೂತ್ರದಿಂದ ಸಮಾಸವಾಗಿದೆ. ಪ್ರಾತಿಪದಿಕ ಸಂಜ್ಞೆ ಸುಪ್ ಲೋಪಗಳಾದ ಮೇಲೆ ಸು ಹೃದಯ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ಹೃದಯ ಎಂಬುದಕ್ಕೆ ಹೃದ್ ಆದೇಶವು ನಿಪಾತವಾಗಿ ಸು ಹೃದ್ ಎಂದಿರುತ್ತದೆ. ಇದನ್ನು ಸುಬಂತ ಮಾಡಿದಾಗ ಹಲ್‌ಙ್ಯಾಭ್ಯೋ... ಎಂಬ ಸೂತ್ರದಿಂದ ಸ್ ಗೆ ಲೋಪವು ಬಂದು ವಿಕಲ್ಪದಿಂದ ದ್ ಕಾರಕ್ಕೆ ಚತ್ವವು ಬಂದು ಸುಹೃತ್ ಮತ್ತು ಸುಹೃದ್ ಎಂಬ ರೂಪಗಳು ಸಿದ್ಧಿಸುತ್ತವೆ.

ಉದಾ:- ದುರ್‌ಹೃತ್ (ದುರ್‌ಹೃತ್-ಅಮಿತ್ರಃ) ದುರ್‌ಹೃದಮಿತ್ರಃ (ದುಷ್ಟ ಹೃದಯವುಳ್ಳವನು (ಶತ್ರು)):- ದುರ್-ದುಷ್ಟಮ್ ಹೃದಯಮ್ ಯಸ್ಯ ಎಂಬುದು ಲೌಕಿಕವಿಗ್ರಹ ವಾಕ್ಯ. ದುರ್+ಹೃದಯ ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ಅನೇಕಮನ್ಯಪದಾರ್ಥೇ ಎಂಬ ಸೂತ್ರದಿಂದ ಸಮಾಸವಾಗಿದೆ. ಪ್ರಾತಿಪದಿಕ ಸಂಜ್ಞೆ ಸುಪ್ ಲೋಪಗಳಾದ ಮೇಲೆ ದುರ್ ಹೃದಯ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ಹೃದಯ ಎಂಬುದಕ್ಕೆ ಹೃದ್ ಆದೇಶವು ನಿಪಾತವಾಗಿ ಬಂದ ಮೇಲೆ ದುರ್ ಹೃದ್

ಎಂದಿರುತ್ತದೆ. ಇದನ್ನು ಸುಬಂತ ಮಾಡಿದಾಗ ಹಲ್‌ಙ್ಯಾಭ್ಯೋ... ಎಂಬ ಸೂತ್ರದಿಂದ ಸ್ ಗೆ ಲೋಪವು ಬಂದು ವಿಕಲ್ಪದಿಂದ ದ್ ಕಾರಕ್ಕೆ ಚತ್ವವು ಬಂದು ದುರ್‌ಹೃತ್ ಮತ್ತು ದುರ್‌ಹೃದ್ ಎಂಬ ರೂಪಗಳು ಸಿದ್ಧಿಸುತ್ತವೆ.

**(ಕಪ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-981. ಉರಃ ಪ್ರಭೃತಿಭ್ಯಃ ಕಪ್ (5-4-151)**

ವೃತ್ತಿ:- ಉರಃ ಪ್ರಭೃತ್ಯನ್ತಾತ್ ಬಹುವ್ರೀಹೇಃ ಕಪ್ ಸ್ಯಾತ್ ಸಮಾಸಾನ್ತಃ।

ಅ.ವೃ:- ಬಹುವ್ರೀಹೌ ಸಕ್ಥ್ಯಕ್ಷ್ಣೋಃ ಸ್ವಾಙ್ಗಾತ್ ಷಚ್ ಎಂಬ ಸೂತ್ರದಿಂದ ವಿಭಕ್ತಿ ವಿಪರಿಣಾಮ ಮಾಡಲ್ಪಡುವ ಬಹುವ್ರೀಹೇಃ ಎಂಬ ಪದವು ಅನುವೃತ್ತವಾಗಿದೆ. ಪ್ರತ್ಯಯಃ, ಪರಶ್ಚ, ತದ್ಧಿತಾಃ ಸಮಾಸಾನ್ತಾಃ ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ:- ಬಹುವ್ರೀಹಿಯಲ್ಲಿ ಉರಸ್ ಮೊದಲಾದ ಶಬ್ದಗಳ ನಂತರ ಸಮಾಸಾನ್ತವಾದ ಕಪ್(ಕ) ಪ್ರತ್ಯಯವು ಬರುವುದು. ಉರಪ್ರಭೃತಿಯಲ್ಲಿ ಉರಸ್, ಸರ್ಪಿಸ್, ಉಪಾನಹ್, ಪುಮಾನ್ ,ಅನಡ್ವಾನ್ ಪಯಃ, ನೌ, ಲಕ್ಷ್ಮೀಃ, ದಧಿ, ಮಧು ಮತ್ತು ಶಾಲಿ ಮೊದಲಾದ ಶಬ್ದಗಳು ಇವೆ.

**(ಸಕಾರವನ್ನು ಆದೇಶವಾಗಿ ವಿಧಿಸುವ ಸೂತ್ರ)**

**ಸೂತ್ರ-982. ಸೋಽಪದಾದೌ (8-3-38)**

ವೃತ್ತಿ:-ಪಾಶ-ಕಲ್ಪ-ಕ-ಕಾಮ್ಯೇಷು ವಿಸರ್ಗಸ್ಯ ಸಃ।

ಪ.ಚ್ಛೇ:- ಸಃ, ಅಪದಾದೌ।

ಅ.ವೃ:- ವಿಸರ್ಜನೀಯಸ್ಯ ಸಃ ಎಂಬ ಸೂತ್ರದಿಂದ ವಿಸರ್ಜನೀಯಸ್ಯ ಎಂಬ ಪದವು ಕುಪ್ವೋಃ ಕಪೌ ಚ ಎಂಬ ಸೂತ್ರದಿಂದ ಕುಪ್ವೋಃ ಎಂಬ ಪದವು, ತಯೋರ್ಯ್‌ವಾವಚಿ ಸಂಹಿತಾಯಾಮ್ ಎಂಬ ಸೂತ್ರದಿಂದ ಸಂಹಿತಾಯಾಮ್ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ:-ಪಾಶ, ಕಲ್ಪ, ಕ, ಕಾಮ್ಯ ಈ ನಾಲ್ಕು ಪ್ರತ್ಯಯಗಳ ನಂತರ ಇರುವ ವಿಸರ್ಗಕ್ಕೆ ಸ ಆದೇಶವು ಬರುತ್ತದೆ.

**(ಷ್ ಮತ್ತು ಸ್ ಕಾರಾದೇಶಗಳನ್ನು ವಿಧಿಸುವ ಸೂತ್ರ)**

**ಸೂತ್ರ-983. ಕಸ್ಕಾದಿಷು ಚ (8-3-48)**

ವೃತ್ತಿ:-ಏಷು ಇಣಃ ಉತ್ತರಸ್ಯ ವಿಸರ್ಗಸ್ಯ ಷಃ ಅನ್ಯಸ್ಯತು ಸಃ। ಇತಿ ಸಃ । ವ್ಯೂಢೋರಸ್ಕಃ॥

ಅ.ವೃ:- 'ಇಣಃ ಷಃ' ಎಂಬ ಸೂತ್ರವು ಮತ್ತು ವಿಸರ್ಜನೀಯಸ್ಯ ಸಃ ಎಂಬ ಸೂತ್ರದಿಂದ ವಿಸರ್ಜನೀಯಸ್ಯ ಎಂಬ ಪದವು ಸೋಽಪದಾದೌ ಎಂಬ ಸೂತ್ರದಿಂದ ಸಃ ಎಂಬ ಪದವು, ಕುಪ್ವೋಃಕಪೌ ಚ ಎಂಬ ಸೂತ್ರದಿಂದ ಕುಪ್ವೋಃ ಎಂಬ ಸೂತ್ರದಿಂದ ಕುಪ್ವೋಃ ಎಂಬ ಪದವು ತಯೋರ್ಯ್ವಾವಚಿ ಸಂಹಿತಾಯಾಮ್

ಎಂಬ ಸೂತ್ರದಿಂದ ಸಂಹಿತಾಯಾಮ್ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ:-ಕಸ್ಕಾದಿ ಗಣದಲ್ಲಿ ಹೇಳಿರುವ ಶಬ್ದಗಳಲ್ಲಿ ಇಣ್ ಪ್ರತ್ಯಾಹಾರದ ಪರದಲ್ಲಿರುವ ವಿಸರ್ಗಕ್ಕೆ ಷ್ ಕಾರವು ಆದೇಶವಾಗಿ ಬರುತ್ತದೆ. ಬೇರೆ ಕಡೆಗಳಲ್ಲಿ ಸ್ ಕಾರವು ಆದೇಶವಾಗಿ ಬರುತ್ತದೆ.

ಉದಾ:- ವ್ಯೂಢೋರಸ್ಕಃ (ವಿಶಾಲವಾದ ಎದೆಯುಳ್ಳವನು):- ವ್ಯೂಢಮ್ ಉರಃ ಯಸ್ಯ ಎಂಬುದು ಲೌಕಿಕವಿಗ್ರಹ ವಾಕ್ಯ. ವ್ಯೂಢ ಸು ಉರಸ್ ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ಅನೇಕಮನ್ಯಪದಾರ್ಥೇ ಎಂಬ ಸೂತ್ರದಿಂದ ಸಮಾಸವಾಗಿದೆ. ಪ್ರಾತಿಪದಿಕ ಸಂಜ್ಞೆ ಸುಪ್ ಲೋಪಗಳಾದ ಮೇಲೆ ವ್ಯೂಢ+ಉರಸ್ ಎಂದಿರುತ್ತದೆ. ಅಕಾರ ಉಕಾರಗಳಿಗೆ ಗುಣ ಸನ್ಧಿಯಾಗಿ ವ್ಯೂಢೋರಸ್ ಎಂದಿರುತ್ತದೆ. ಉರಃ ಪ್ರಭೃತಿಭ್ಯಃ ಕಪ್ ಎಂಬ ಸೂತ್ರದಿಂದ ಕಪ್ (ಕ) ಪ್ರತ್ಯಯವು ಬಂದು ವ್ಯೂಢೋರಸ್+ಕ ಎಂದಿರುತ್ತದೆ. ವ್ಯೂಢೋರಸ್ ಎಂಬಲ್ಲಿರುವ ಸ್ ಕಾರಕ್ಕೆ ರುತ್ವವಿಸರ್ಗಗಳು ಬಂದು ವ್ಯೂಢೋರಃಕ ಎಂದಿದ್ದಾಗ ಕುಪ್ವೋಃ≍ಕ≍ಪೌ ಚ ಎಂಬ ಸೂತ್ರದಿಂದ ಜಿಹ್ವಾಮೂಲಿಯ ವಿಸರ್ಗಗಳು ಪ್ರಾಪ್ತವಾಗಿತ್ತು ಅದನ್ನು ಭಾದಿಸಿ ಪ್ರಕೃತ ಸೂತ್ರದಿಂದ ಸೋಪದಾದೌ ನಿಯಮದಿಂದ ಸ್ ಕಾರವು ಆದೇಶವಾಗಿ ಬಂದು ವ್ಯೂಢೋರಸ್+ಕ=ವ್ಯೂಢೋರಸ್ಕ ಎಂದಿದ್ದಾಗ ಈ ಪ್ರಾತಿಪದಿಕವನ್ನು ಸುಬಂತ ಮಾಡಿದಾಗ ವ್ಯೂಢೋರಸ್ಕಃ ಎಂಬ ರೂಪವು ಸಿದ್ಧವಾಗುತ್ತದೆ.

**(ಷ್ ಕಾರವನ್ನು ವಿಧಿಸುವ ಸೂತ್ರ)**

**ಸೂತ್ರ-984. ಇಣಃ ಷಃ (8-3-39)**

ವೃತ್ತಿ:-ಇಣಃ ಉತ್ತರಸ್ಯ ವಿಸರ್ಗಸ್ಯ ಷಃ ಪಾಶ-ಕಲ್ಪ-ಕ-ಕಾಮ್ಯೇಷು ಪರೇಷು । ಪ್ರಿಯಸರ್ಪಿಷ್ಕಃ

ಅ.ವೃ:- ವಿಸರ್ಜನೀಯಸ್ಯ ಸಃ ಎಂಬ ಸೂತ್ರದಿಂದ ವಿಸರ್ಜನೀಯಸ್ಯ ಎಂಬ ಪದವು ಸೋಽಪದಾದೌ ಎಂಬ ಸೂತ್ರದಿಂದ ಸಃ ಎಂಬ ಪದವು, ಕುಪ್ವೋಃ≍ಕ≍ಪೌ ಚ ಎಂಬ ಸೂತ್ರದಿಂದ ಕುಪ್ವೋಃ≍ಕ≍ಪೌ ಚ ಎಂಬ ಸೂತ್ರದಿಂದ ಕುಪ್ವೋ ಎಂಬ ಪದವು ತಯೋರ್ಯ್ವಾವಚಿ ಸಂಹಿತಾಯಾಮ್ ಎಂಬ ಸೂತ್ರದಿಂದ ಸಂಹಿತಾಯಾಮ್ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ:- ಇಣ್ ವರ್ಣಗಳ ನಂತರ ಇರುವ ವಿಸರ್ಗಕ್ಕೆ ಷ್ ಕಾರವು ಆದೇಶವಾಗಿ ಬರುತ್ತದೆ. ಪಾಶ, ಕಲ್ಪ, ಕ, ಕಾಮ್ಯ ಶಬ್ದಗಳು ಪರದಲ್ಲಿದ್ದಾಗ ಪೂರ್ವನಿಪಾತವನ್ನು ಮಾಡುವ ಸೂತ್ರ.

ಉದಾ:- ಪ್ರಿಯಸರ್ಪಿಷ್ಕಃ(ಯಾರಿಗೆ ತುಪ್ಪವು ಬಹಳ ಪ್ರಿಯವೋ ಅವನು):- ಪ್ರಿಯಮ್ ಸರ್ಪಿಃ ಯಸ್ಯ ಸಃ ಎಂಬುದು ಲೌಕಿಕವಿಗ್ರಹ ವಾಕ್ಯ. ಪ್ರಿಯ+ಸು ಸರ್ಪಿ+ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ಅನೇಕಮನ್ಯಪದಾರ್ಥೇ ಎಂಬ ಸೂತ್ರದಿಂದ ಸಮಾಸವಾಗಿದೆ. ಪ್ರಾತಿಪದಿಕ ಸಂಜ್ಞೆ ಸುಪ್ ಲೋಪಗಳಾದ ಮೇಲೆ ಪ್ರಿಯ+ಸರ್ಪಿಸ್

ಎಂದಿರುತ್ತದೆ. ಸರ್ಪಿಸ್ ಶಬ್ದವು ಉರಃ ಪ್ರಭೃತಿಯಲ್ಲಿ ಪಠಿತವಾಗಿರುವುದರಿಂದ ಉರಃ ಪ್ರಭೃತಿಭ್ಯಃ ಕಪ್ ಎಂಬ ಸೂತ್ರದಿಂದ ಕಪ್ (ಕ) ಪ್ರತ್ಯಯವು ಬಂದು ಪ್ರಿಯ ಸರ್ಪಿಸ್+ಕ ಎಂದಿರುತ್ತದೆ. ಸ್ ಕಾರಕ್ಕೆ ರುತ್ವ ವಿಸರ್ಗಗಳು ಬಂದು, ವಿಸರ್ಗದ ಸ್ಥಾನದಲ್ಲಿ ಪ್ರಕೃತ ಸೂತ್ರದಿಂದ ಷ್ ಕಾರವು ಆದೇಶವಾಗಿ ಬಂದು ಪ್ರಿಯಸರ್ಪಿಷ್ಕ ಎಂದಿರುತ್ತದೆ. ಈ ಪ್ರಾತಿಪದಿಕವನ್ನು ಸುಬಂತ ಮಾಡಿದಾಗ ಪ್ರಿಯಸರ್ಪಿಷ್ಕಃ ಎಂದು ರೂಪವು ಸಿದ್ಧವಾಗುತ್ತದೆ.

**(ಪೂರ್ವನಿಪಾತವನ್ನು ಹೇಳುವ ಸೂತ್ರ)**

**ಸೂತ್ರ-985. ನಿಷ್ಠಾ (2-2-36)**

ವೃತ್ತಿ:-ನಿಷ್ಠಾಂತಮ್ ಬಹುವ್ರಿಹೌ ಪೂರ್ವಮ್ ಸ್ಯಾತ್ ಯುಕ್ತಯೋಗಃ ।

ಅ.ವೃ:-ಸಪ್ತಮೀ ವಿಶೇಷಣೇ ಬಹುವ್ರೀಹೌ ಎಂಬ ಸೂತ್ರದಿಂದ ಬಹುವ್ರೀಹೌ ಎಂಬ ಪದವು ಉಪಸರ್ಜನಸ್ಯ ಪೂರ್ವಮ್ ಎಂಬ ಸೂತ್ರದಿಂದ ಪೂರ್ವಮ್ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ:- ಬಹುವ್ರೀಹಿ ಸಮಾಸದಲ್ಲಿ ನಿಷ್ಠಾ ಪ್ರತ್ಯಯಾಂತ ಶಬ್ದಕ್ಕೆ ಪೂರ್ವನಿಪಾತವನ್ನು ಮಾಡಲಾಗಿದೆ.

ಉದಾ:- ಯುಕ್ತಯೋಗಃ (ಸಫಲವಾದ ಯೋಗವುಳ್ಳವನು):- ಯುಕ್ತಃ ಯೋಗಃ ಯಸ್ಯ ಸಃ ಎಂಬುದು ಲೌಕಿಕವಿಗ್ರಹವಾಕ್ಯ. ಯುಕ್ತ+ಸು ಯೋಗ+ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ಯುಜ್ ಧಾತುವಿನ ನಂತರ ಕ್ತ ಪ್ರತ್ಯಯವು ಸೇರಿಸಿದ ಮೇಲೆ ಯುಕ್ತ ಎಂದಾಗಿದೆ. ಅನೇಕಮನ್ಯಪದಾರ್ಥೇ ಎಂಬ ಸೂತ್ರದಿಂದ ಸಮಾಸವಾಗಿದೆ. ಮತ್ತು ಪ್ರಕೃತ ಸೂತ್ರದಿಂದ ಕ್ತ ಪ್ರತ್ಯಯಾಂತವಾದ ಯುಕ್ತ ಶಬ್ದಕ್ಕೆ ಪೂರ್ವನಿಪಾತವು ಬಂದು ಪ್ರಾತಿಪದಿಕ ಸಂಜ್ಞೆ ಸುಪ್ ಲೋಪಗಳಾದ ಮೇಲೆ ಅದನ್ನು ಸುಬಂತ ಮಾಡಿದಾಗ ಯುಕ್ತಯೋಗಃ ಎಂದು ರೂಪವು ಸಿದ್ಧವಾಗುತ್ತದೆ.

**(ವೈಕಲ್ಪಿಕವಾಗಿ ಕಪ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-986. ಶೇಷಾದ್ವಿಭಾಷಾ (5-4-154)**

ವೃತ್ತಿ:- ಅನುಕ್ತ ಸಮಾಸಾನ್ತಾತ್ ಬಹುವ್ರೀಹೇಃ ಕಪ್-ವಾ ಮಾಹಾ ಯಶಸ್ಕಃ, ಮಹಾಯಶಾಃ

**(41) ಇತಿ ಬಹುವ್ರೀಹಿಃ)**

ಪ.ಚ್ಛೇ:- ಶೇಷಾತ್, ವಿಭಾಷಾ।

ಅ.ವೃ:- ಬಹುವ್ರೀಹೌ ಸಕ್ಥ್ಯಕ್ಷ್ಣೋಃ ಸ್ವಾಙ್ಗಾತ್ ಷಚ್ ಎಂಬ ಸೂತ್ರದಿಂದ ವಿಭಕ್ತಿ ವಿಪರಿಣಾಮ ಮಾಡಲ್ಪಡುವ ಬಹುವ್ರೀಹೇಃ ಎಂಬ ಪದವು ಅನುವೃತ್ತವಾಗಿದೆ. ಉರಪ್ರಭೃತಿಭ್ಯಃ ಕಪ್ ಎಂಬ ಸೂತ್ರದಿಂದ ಕಪ್ ಎಂಬ ಪದವು ಅನುವೃತ್ತವಾಗಿವೆ. ಪ್ರತ್ಯಯಃ, ಪರಶ್ಚ, ತದ್ಧಿತಾಃ ಸಮಾಸಾನ್ತಾಃ ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ:-ಯಾವ ಬಹುವ್ರೀಹಿ ಸಮಾಸದಲ್ಲಿ ಯಾವ ಸಮಾಸಾನ್ತವು ಹೇಳಲಾಗಿಲ್ಲವೋ ಅದರ ಮೇಲೆ (ಸಮಾಸದ ನಂತರ ಕಪ್ ಪ್ರತ್ಯಯವು ವೈಕಲ್ಪಿಕವಾಗಿ ಬರುತ್ತದೆ.)

ಉದಾ:- ಮಹಾಯಶಸ್ಕಃ, ಮಯಶಾಃ (ಹೆಚ್ಚಾದ ಯಶಸ್ಸನ್ನು ಪಡೆದವನು):- ಮಹತ್ ಯಶಃ ಯಸ್ಯ ಸಃ ಎಂಬುದು ಲೌಕಿಕ ವಿಗ್ರಹ ವಾಕ್ಯ. ಮಹತ್ ಸು+ಯಶಸ್ ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ಅನೇಕಮನ್ಯಪದಾರ್ಥೇ ಎಂಬ ಸೂತ್ರದಿಂದ ಸಮಾಸವಾಗಿದೆ. ಪ್ರಾತಿಪದಿಕ ಸಂಜ್ಞೆ ಸುಪ್ ಲೋಪಗಳಾದ ಮೇಲೆ ಮಹತ್+ಯಶಸ್ ಎಂದಿರುತ್ತದೆ. ಆನ್ಮಹತಃ ಸಮಾನಾಧಿಕರಣಜಾತೀಯಯೋಃ ಎಂಬ ಸೂತ್ರದಿಂದ ಮಹತ್ ಶಬ್ದದ ತ್ ಕಾರಕ್ಕೆ ಆಕಾರವು ಆದೇಶವಾಗಿ ಬಂದು ಮಹ+ಆ ಎಂದಿದ್ದಾಗ ಸವರ್ಣದೀರ್ಘವಾಗಿ ಮಹಾ ಯಶಸ್ ಎಂದಿರುತ್ತದೆ. ಈ ಬಹುವ್ರೀಹಿ ಸಮಾಸದ ಕೊನೆಯಲ್ಲಿ

ಯಾವ ಪ್ರತ್ಯಯವನ್ನು ವಿಧಿಸಲಾಗಿಲ್ಲ ಆದುದರಿಂದ ಉಕ್ತಾದ್ಯನಃ ಶೇಷಃ ಎಂಬ ನ್ಯಾಯದಿಂದ ಪ್ರಕೃತ ಸೂತ್ರದಿಂದ ವೈಕಲ್ಪಿಕವಾಗಿ ಕಪ್ (ಕ) ಪ್ರತ್ಯಯವು ವಿಧಿಸಲಾಗಿ ಮಾಯಶಸ್+ಕ ಎಂದಿದ್ದಾಗ ಈ ಪ್ರಾತಿಪದಿಕಕ್ಕೆ ಸು ಸೇರಿಸಿದಾಗ ಮಹಾ ಯಶಸ್ಕಃ ಎಂದು ರೂಪವು ಸಿದ್ಧವಾಗತ್ತದೆ. ಕಪ್ (ಕ) ಪ್ರತ್ಯಯವು ಬಾರದ ಪಕ್ಷದಲ್ಲಿ ಮಹಾಯಶಸ್+ಸ್ ಎಂದಿರುತ್ತದೆ. ಹಲ್‌ಙ್ಯಾಭ್ಯೋ.... ಸೂತ್ರದಿಂದ ಸ್ ಗೆ ಲೋಪವು ಬಂದು ಅತ್ವ ಸಂತಸ್ಯಚಾಧಾತೋಃ ಎಂಬ ಸೂತ್ರದಿಂದ ಉಪಧಾ ದೀರ್ಘ ಬಂದು ಮಹಾಯಶಾಸ್ ಎಂದಾಗಿ ರುತ್ವ ವಿಸರ್ಗಗಳಿಂದ ಮಹಾಯಶಾಃ ಎಂಬ ರೂಪವು ಸಿದ್ಧವಾಗುತ್ತದೆ.

**ಬಹುವ್ರೀಹಿ ಸಮಾಸ (41) ಪ್ರಕರಣವು ಮುಗಿಯಿತು**

# ಪ್ರಕರಣ-42: ಅಥ ದ್ವನ್ದ್ವಃ

(ಸೂ. ಸಂ. 987-994)

(ದ್ವನ್ದ್ವ ಸಮಾಸವನ್ನು ವಿಧಿಸುವ ಸೂತ್ರ)

**ಸೂತ್ರ - 987. ಚಾರ್ಥೇ ದ್ವನ್ದ್ವಃ (2.2.29)**

ವೃತ್ತಿ- ಅನೇಕಂ ಸುಬನ್ತಂ ಚಾರ್ಥೇ ವರ್ತಮಾನಂ ವಾ ಸಮಸ್ಯತೇ; ಸ ದ್ವನ್ದ್ವಃ। ಸಮುಚ್ಚಯ-ಅನ್ವಾಚಯ ಇತರೇತರಯೋಗ-ಸಮಾಹಾರಾಃ ಚಾರ್ಥಾಃ। ತತ್ರ "ಈಶ್ವರಂ ಗುರುಂ ಚ ಭಜಸ್ವ" ಇತಿ ಪರಸ್ಪರ ನಿರಪೇಕ್ಷಸ್ಯ ಅನೇಕಸ್ಯೈಕಸ್ಮಿನ್ನನ್ವಯಃ=ಸಮುಚ್ಚಯಃ। 'ಭಿಕ್ಷಾಮಟ ಗಾಂ ಚಾನಯ' ಇತಿ ಅನ್ಯತರಸ್ಯ ಆನುಷಙ್ಗಿಕತ್ವೇನ ಅನ್ವಯೋಽನ್ವಾಚಯಃ। ಅನಯೋಃ ಅಸಾಮರ್ಥ್ಯಾತ್ ಸಮಾಸೋ ನ। ಧವಖದಿರೌಛಿಂಧಿ ಇತಿ ಮಿಲಿತಾನಾಮನ್ವಯಃ=ಇತರೇತರಯೋಗಃ। ಸಂಜ್ಞಾಪರಿಭಾಷಂ (ಇತಿ) ಸಮೂಹಃ - ಸಮಾಹಾರಃ।

ಅ. ವೃ.:- ಅನೇಕಮನ್ಯಪದಾರ್ಥೇ ಎಂಬ ಸೂತ್ರದಿಂದ ಅನೇಕಮ್ ಎಂಬ ಪದವು ಹಾಗೂ ಸುಬಾಮಂತ್ರೀತೇ ಪರಾಗವತ್ ಸ್ವರೇ ಎಂಬ ಸೂತ್ರದಿಂದ ಸುಪ್ ಎಂಬ ಶಬ್ದವು ಅನುವೃತ್ತವಾಗುತ್ತದೆ. ಸಮಾಸಃ ಮತ್ತು ವಿಭಾಷಾ ಇವು ಅಧಿಕಾರ ಸೂತ್ರಗಳಾಗಿವೆ.

ಅರ್ಥ:- ಚ ಅರ್ಥದಲ್ಲಿ ಇರುವ ಅನೇಕ ಸುಬಂತಗಳು ವಿಕಲ್ಪದಿಂದ ಸಮಾಸವಾಗುವವು ಅದನ್ನು ದ್ವನ್ದ್ವ ಸಮಾಸವೆಂದು ಹೇಳುತ್ತಾರೆ.

ಚ ವೆಂಬ ಅವ್ಯಯಕ್ಕೆ ಸಮುಚ್ಚಯಾ-ಅನ್ವಾಚಯ ಇತರೇರಯೋಗ ಮತ್ತು ಸಮಾಹಾರಾಃ ಎಂಬ ನಾಲ್ಕು ಅರ್ಥಗಳಿರುತ್ತವೆ. ಪರಸ್ಪರ ನಿರಪೇಕ್ಷಗಳಾದ ಅನೇಕ ಪದಾರ್ಥಗಳಿಗೆ ಒಂದೇ ಕ್ರಿಯಾ ಪದದಲ್ಲಿ ಅನ್ವವಯವಿದ್ದರೆ ಅದು ಸಮುಚ್ಚಯ. ಆವೃತ್ತವಾಗುವ ಒಂದು ಕ್ರಿಯಾ ಪದದಲ್ಲಿ ಆ ಸಮಸ್ತವಾದ ಒಂದು ಪದವು ಮೊದಲು ಅನ್ವಯಿಸುವುದು ಅನಂತರ ಮತ್ತೋಂದು ಪದವು ಅನ್ವಯಿಸುವುದು ಅಂತಹ ಸ್ಥಳಗಳಲ್ಲಿ ಚ ಕಾರಕ್ಕೆ ಸಮುಚ್ಚಯಾರ್ಥವಾಗಿರುತ್ತದೆ.

"ಈಶ್ವರಂ ಗುರುಂ ಚ ಭಜಸ್ವ" :- ಎಂದು ಹೇಳುವಾಗ ಚ ಕಾರವು ಗುರುಂ ಎಂಬ ಪದದ ನಂತರ ಇರುವುದರಿಂದ ಗುರು ಪದವು ಈಶ್ವರ ಪದ ಸಾಪೇಕ್ಷವಾಗಿರುತ್ತದೆ. ಅಂದರೆ ಗುರುವನ್ನು ಕೂಡಾ ಎಂದು ಹೇಳಿದಾಗ ಇನ್ನೂ ಯಾರನ್ನು ಎಂಬ ಆಕಾಂಕ್ಷೆಯ ಉಂಟಾಗಿ ಈಶ್ವರನನ್ನು ಎಂಬುದು ಅನ್ವಯಿಸುತ್ತದೆ. ಆದುದರಿಂದ ಗುರು ಪದವು ಈಶ್ವರ ಪದ ಸಾಪೇಕ್ಷವು. ಆದರೆ ಈಶ್ವರಮ್ ಎಂಬ ಪದವು ಗುರು ಪದ ಸಾಪೇಕ್ಷವಾಗಿರುವುದಿಲ್ಲ

ಅದು ಸ್ವತಂತ್ರ್ಯವಾಗಿಯೇ ಭಜಸ್ವ ಎಂಬ ತಿಜಂಗದ ಜೊತೆಗೆ ಸಂಬಂಧಹೊಂದುತ್ತದೆ. ಆದುದರಿಂದ ಈಶ್ವರಮ್ ಎಂಬ ಪದದ ಜೊತೆಗೆ ಚ ಕಾರವು ಸೇರಿಸಲ್ಪಡಲಿಲ್ಲ. ಈ

ಅರ್ಥ:-ಯಾವ ಬಹುವ್ರೀಹಿ ಸಮಾಸದಲ್ಲಿ ಯಾವ ಸಮಾಸಾನ್ತವು ಹೇಳಲಾಗಿಲ್ಲವೋ ಅದರ ಮೇಲೆ (ಸಮಾಸದ ನಂತರ ಕಪ್ ಪ್ರತ್ಯಯವು ವೈಕಲ್ಪಿಕವಾಗಿ ಬರುತ್ತದೆ.)

ಉದಾ:- ಮಹಾಯಶಸ್ಕಃ, ಮಯಶಾಃ (ಹೆಚ್ಚಾದ ಯಶಸ್ಸನ್ನು ಪಡೆದವನು):- ಮಹತ್ ಯಶಃ ಯಸ್ಯ ಸಃ ಎಂಬುದು ಲೌಕಿಕ ವಿಗ್ರಹ ವಾಕ್ಯ. ಮಹತ್ ಸು+ಯಶಸ್ ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ಅನೇಕಮನ್ಯಪದಾರ್ಥೇ ಎಂಬ ಸೂತ್ರದಿಂದ ಸಮಾಸವಾಗಿದೆ. ಪ್ರಾತಿಪದಿಕ ಸಂಜ್ಞೆ ಸುಪ್ ಲೋಪಗಳಾದ ಮೇಲೆ ಮಹತ್+ಯಶಸ್ ಎಂದಿರುತ್ತದೆ. ಆನ್ಮಹತಃ ಸಮಾನಾಧಿಕರಣಜಾತೀಯಯೋಃ ಎಂಬ ಸೂತ್ರದಿಂದ ಮಹತ್ ಶಬ್ದದ ತ್ ಕಾರಕ್ಕೆ ಆಕಾರವು ಆದೇಶವಾಗಿ ಬಂದು ಮಹ+ಆ ಎಂದಿದ್ದಾಗ ಸವರ್ಣದೀರ್ಘವಾಗಿ ಮಹಾ ಯಶಸ್ ಎಂದಿರುತ್ತದೆ. ಈ ಬಹುವ್ರೀಹಿ ಸಮಾಸದ ಕೊನೆಯಲ್ಲಿ

ಯಾವ ಪ್ರತ್ಯಯವನ್ನು ವಿಧಿಸಲಾಗಿಲ್ಲ ಆದುದರಿಂದ ಉಕ್ತಾದ್ಯನಃ ಶೇಷಃ ಎಂಬ ನ್ಯಾಯದಿಂದ ಪ್ರಕೃತ ಸೂತ್ರದಿಂದ ವೈಕಲ್ಪಿಕವಾಗಿ ಕಪ್ (ಕ) ಪ್ರತ್ಯಯವು ವಿಧಿಸಲಾಗಿ ಮಾಾಯಶಸ್+ಕ ಎಂದಿದ್ದಾಗ ಈ ಪ್ರಾತಿಪದಿಕಕ್ಕೆ ಸು ಸೇರಿಸಿದಾಗ ಮಹಾ ಯಶಸ್ಕಃ ಎಂದು ರೂಪವು ಸಿದ್ಧವಾಗತ್ತದೆ. ಕಪ್ (ಕ) ಪ್ರತ್ಯಯವು ಬಾರದ ಪಕ್ಷದಲ್ಲಿ ಮಹಾಯಶಸ್+ಸ್ ಎಂದಿರುತ್ತದೆ. ಹಲ್ಙ್ಯಾಭ್ಯೋ.... ಸೂತ್ರದಿಂದ ಸ್ ಗೆ ಲೋಪವು ಬಂದು ಅತ್ವ ಸಂತಸ್ಯಚಾಧಾತೋಃ ಎಂಬ ಸೂತ್ರದಿಂದ ಉಪಧಾ ದೀರ್ಘ ಬಂದು ಮಹಾಯಶಾಸ್ ಎಂದಾಗಿ ರುತ್ವ ವಿಸರ್ಗಗಳಿಂದ ಮಹಾಯಶಾಃ ಎಂಬ ರೂಪವು ಸಿದ್ಧವಾಗುತ್ತದೆ.

**ಬಹುವ್ರೀಹಿ ಸಮಾಸ (41) ಪ್ರಕರಣವು ಮುಗಿಯಿತು**

# ಪ್ರಕರಣ-42: ಅಥ ದ್ವನ್ದ್ವಃ

**(ಸೂ. ಸಂ. 987-994)**

**(ದ್ವನ್ದ್ವ ಸಮಾಸವನ್ನು ವಿಧಿಸುವ ಸೂತ್ರ)**

**ಸೂತ್ರ - 987. ಚಾರ್ಥೇ ದ್ವನ್ದ್ವಃ (2.2.29)**

ವೃತ್ತಿ- ಅನೇಕಂ ಸುಬನ್ತಂ ಚಾರ್ಥೇ ವರ್ತಮಾನಂ ವಾ ಸಮಸ್ಯತೇ; ಸ ದ್ವನ್ದ್ವಃ। ಸಮುಚ್ಚಯ-ಅನ್ವಾಚಯ ಇತರೇತರಯೋಗ-ಸಮಾಹಾರಾಃ ಚಾರ್ಥಾಃ। ತತ್ರ "ಈಶ್ವರಂ ಗುರುಂ ಚ ಭಜಸ್ವ" ಇತಿ ಪರಸ್ಪರ ನಿರಪೇಕ್ಷಸ್ಯ ಅನೇಕಸ್ಯೈಕಸ್ಮಿನ್ನನ್ವಯಃ=ಸಮುಚ್ಚಯಃ। 'ಭಿಕ್ಷಾಮಟ ಗಾಂ ಚಾನಯ' ಇತಿ ಅನ್ಯತರಸ್ಯ ಆನುಷಙ್ಗಿಕತ್ವೇನ ಅನ್ವಯೋಽನ್ವಾಚಯಃ। ಅನಯೋಃ ಅಸಾಮರ್ಥ್ಯಾತ್ ಸಮಾಸೋ ನ। ಧವಖದಿರೌಛಿಂಧಿ ಇತಿ ಮಿಲಿತಾನಾಮನ್ವಯಃ=ಇತರೇತರಯೋಗಃ। ಸಂಜ್ಞಾಪರಿಭಾಷಂ (ಇತಿ) ಸಮೂಹಃ - ಸಮಾಹಾರಃ।

ಅ. ವ್ಯ.:- ಅನೇಕಮನ್ಯಪದಾರ್ಥೇ ಎಂಬ ಸೂತ್ರದಿಂದ ಅನೇಕಮ್ ಎಂಬ ಪದವು ಹಾಗೂ ಸುಬಾಮಂತ್ರೀತೇ ಪರಾಗವತ್ ಸ್ವರೇ ಎಂಬ ಸೂತ್ರದಿಂದ ಸುಪ್ ಎಂಬ ಶಬ್ದವು ಅನುವೃತ್ತವಾಗುತ್ತದೆ. ಸಮಾಸಃ ಮತ್ತು ವಿಭಾಷಾ ಇವು ಅಧಿಕಾರ ಸೂತ್ರಗಳಾಗಿವೆ.

ಅರ್ಥ:- ಚ ಅರ್ಥದಲ್ಲಿ ಇರುವ ಅನೇಕ ಸುಬಂತಗಳು ವಿಕಲ್ಪದಿಂದ ಸಮಾಸವಾಗುವವು ಅದನ್ನು ದ್ವನ್ದ್ವ ಸಮಾಸವೆಂದು ಹೇಳುತ್ತಾರೆ.

ಚ ವೆಂಬ ಅವ್ಯಯಕ್ಕೆ ಸಮುಚ್ಚಯಾ-ಅನ್ವಾಚಯ ಇತರೇರಯೋಗ ಮತ್ತು ಸಮಾಹಾರಾಃ ಎಂಬ ನಾಲ್ಕು ಅರ್ಥಗಳಿರುತ್ತವೆ. ಪರಸ್ಪರ ನಿರಪೇಕ್ಷೆಗಳಾದ ಅನೇಕ ಪದಾರ್ಥಗಳಿಗೆ ಒಂದೇ ಕ್ರಿಯಾ ಪದದಲ್ಲಿ ಅನ್ವವಯವಿದ್ದರೆ ಅದು ಸಮುಚ್ಚಯ. ಆವೃತ್ತವಾಗುವ ಒಂದು ಕ್ರಿಯಾ ಪದದಲ್ಲಿ ಆ ಸಮಸ್ತವಾದ ಒಂದು ಪದವು ಮೊದಲು ಅನ್ವಯಿಸುವುದು ಅನಂತರ ಮತ್ತೋಂದು ಪದವು ಅನ್ವಯಿಸುವುದು ಅಂತಹ ಸ್ಥಳಗಳಲ್ಲಿ ಚ ಕಾರಕ್ಕೆ ಸಮುಚ್ಚಯಾರ್ಥವಾಗಿರುತ್ತದೆ.

"ಈಶ್ವರಂ ಗುರುಂ ಚ ಭಜಸ್ವ" :- ಎಂದು ಹೇಳುವಾಗ ಚ ಕಾರವು ಗುರುಂ ಎಂಬ ಪದದ ನಂತರ ಇರುವುದರಿಂದ ಗುರು ಪದವು ಈಶ್ವರ ಪದ ಸಾಪೇಕ್ಷವಾಗಿರುತ್ತದೆ. ಅಂದರೆ ಗುರುವನ್ನು ಕೂಡಾ ಎಂದು ಹೇಳಿದಾಗ ಇನ್ನೂ ಯಾರನ್ನು ಎಂಬ ಆಕಾಂಕ್ಷೆಯ ಉಂಟಾಗಿ ಈಶ್ವರನನ್ನು ಎಂಬುದು ಅನ್ವಯಿಸುತ್ತದೆ. ಆದುದರಿಂದ ಗುರು ಪದವು ಈಶ್ವರ ಪದ ಸಾಪೇಕ್ಷವು. ಆದರೆ ಈಶ್ವರಮ್ ಎಂಬ ಪದವು ಗುರು ಪದ ಸಾಪೇಕ್ಷವಾಗಿರುವುದಿಲ್ಲ

ಅದು ಸ್ವತಂತ್ರ್ಯವಾಗಿಯೇ ಭಜಸ್ವ ಎಂಬ ತಿಙಂಗದ ಜೊತೆಗೆ ಸಂಬಂಧಹೊಂದುತ್ತದೆ. ಆದುದರಿಂದ ಈಶ್ವರಮ್ ಎಂಬ ಪದದ ಜೊತೆಗೆ ಚ ಕಾರವು ಸೇರಿಸಲ್ಪಡಲಿಲ್ಲ. ಈ

ರೀತಿಯಾಗಿ ಒಟ್ಟು ಭಜಸ್ವ ಎಂಬ ಪದವು ಆವೃತ್ತವಾಗಿ ಈಶ್ವರಮ್ ಗುರುಂ ಭಜಸ್ವ ಎಂದು ಎರಡು ವಾಕ್ಯಗಳನ್ನು ಹೇಳಿದಂತಾಗುತ್ತದೆ.

ಎರಡರಲ್ಲಿ ಒಂದು ಆನುಷಂಗಿಕವಾದರೆ ಅನ್ವಾಚಯವು ಎಂದರ್ಥ ಅಂದರೆ ಎರಡು ಪದಗಳಲ್ಲಿ ಒಂದು ಪದವು ಕ್ರಿಯಾಪದದ ಜೊತೆಗೆ ಉದ್ದೇಶವಾಗಿ ಅನ್ವಯಿಸುತ್ತದೆ. ಅಂದರೆ ಪ್ರಧಾನ ಪ್ರವೃತ್ತಿ ವಿಷಯವಾಗಿ ಅನ್ವಯಿಸುತ್ತದೆ ಎಂದರ್ಥ. ಎರಡನೆಯದು ಮತ್ತೊಂದು ಕ್ರಿಯಾಪದದ ಜೊತೆಗೆ ಆನುಷಂಗಿಕವಾಗಿ (ಸಾಧ್ಯವಾದರೆ ಮಾಡಬಹುದಾಗಿ) ಅನ್ವಯಿಸುತ್ತದೆ. ಇಂತಹ ಆನುಷಂಗಿಕತ್ವವನ್ನು ಚ ಕಾರವು ಬೋಧಿಸುತ್ತದೆ. ಇದಕ್ಕೆ ಅನ್ವಾಚಯವೆಂದು ಹೆಸರು. 'ಭಿಕ್ಷಾಮಟ ಗಾಂ ಚಾನಯ' ಎಂದು ಹೇಳಿದಾಗ ಭಿಕ್ಷೆಯನ್ನು ಸಂಪಾದಿಸು ಹಾದಿಯಲ್ಲಿ ಆಕಳು ಸಿಕ್ಕರೆ ಅದನ್ನು ತೆಗೆದುಕೊಂಡು ಬಾ ಇಲ್ಲಿ ಭಿಕ್ಷಾಟನವೇ ಪ್ರಧಾನ ಕಾರ್ಯ. ಆಕಳನ್ನು ತೆಗೆದುಕೊಂಡು ಬರುವುದು ಎಂಬುದು ಅಷ್ಟು ಪ್ರಧಾನವಲ್ಲ. ಈ ಆನುಷಂಗಿಕತ್ವವು ಚ ಕಾರವು ಬೋಧಿಸುತ್ತದೆ. ಈ ಸಮುಚ್ಚಯ-ಅನ್ವಾಚಯಗಳಲ್ಲಿ ಪದಗಳೀಗೆ ಪರಸ್ಪರ-ಅಪೇಕ್ಷಾ ರೂಪವಾದ ಸಾಮರ್ಥ್ಯವಿಲ್ಲದ್ದರಿಂದ ಸಮಾಸವಾಗುವುದಿಲ್ಲ.

ಧವಖದಿರೌ ಛಿಂಧಿ (ಧವ ವೃಕ್ಷ ಮತ್ತು ಖದಿರ ವೃಕ್ಷಗಳನ್ನು [ಎರಡನ್ನು] ಛೇದಿಸು) ಮೋದಲಾದವುಗಳಲ್ಲಿ ಧವ ಮತ್ತು ಖದಿರ ಎಂಬ ಎರಡನ್ನು ಸೇರಿಸಿ ಛೇದನ ಕ್ರಿಯೆಯಲ್ಲಿ ಅನ್ವಯಿಸುವುದರಿಂದ ಇದಕ್ಕೆ ಇತರೇತರಯೋಗವೆಂದು ಹೆಸರು ಈ ಇತರೇತರಯೋಗಾರ್ಥವು ಧವಮ್ ಚ ಖದಿರಮ್ ಚ ಎಂದು ಹೇಳುವಾಗ ಚ ಕಾರದಿಂದ ಬೋಧಿಸಲಾಗುತ್ತದೆ.

ಸಂಜ್ಞಾ ಚ ಪರಿಭಾಷಾ ಚ ತಯೋಃ ಸಮಾಹಾರಃ ಇತ್ಯಾದಿ ಸ್ಥಳಗಳಲ್ಲಿ ಚ ಕಾರವು ಸಮಾಹಾರವನ್ನು ಬೊಧಿಸುತ್ತದೆ. ಈ ಎರಡು ಅರ್ಥಗಳಲ್ಲಿ ಸಾಮರ್ಥ್ಯವು ಇರುವುದರಿಂದ ಸಮಾಸವಾಗಿದೆ. ಈ ರೀತಿಯಲ್ಲಿ ಚಕಾರಾರ್ಥಗಳಾದ ನಾಲ್ಕರಲ್ಲಿ ಕೊನೆಯ ಎರಡು ಅರ್ಥಗಳಲ್ಲಿ ದ್ವನ್ದ್ವ ಸಮಾಸವು ಬರುವುದೆಂದು ತಿಳಿಯಬೇಕು.

ಈ ವಿಧವಾಗಿ ಇತರೇತರ ಯೋಗ ಸಮಾಹಾರಾರ್ಥಗಳಲ್ಲಿ ಸಮಾಸವು ಬರುವುದಾದ್ದರಿಂದ ಆ ಅರ್ಥಗಳು ಸಮಾಸ ವೃತ್ತಿಯಿಂದ ಬೋಧಿಸಲಾಗುವವು. ಧವಶ್ಚ ಖದಿರಶ್ಚ ಧವಖದಿರೌ, ಸಂಜ್ಞಾ ಚ ಪರಿಭಾಷಾ ಚ ತಯೋಃ ಸಮಾಹಾರಃ ಸಂಜ್ಞಾಪರಿಭಾಷಂ ಮೊದಲಾದ ಲೌಕಿಕವಿಗ್ರಹಗಳಲ್ಲಿ ಚ ಕಾರವು ಪ್ರಯೋಗಿಸಲ್ಪಟ್ಟರೂ ಸಮಾಸದಲ್ಲಿ ಪ್ರಯೋಗಿಸಲ್ಪಡುವುದಿಲ್ಲ.

ಪ್ರಕೃತ ಸೂತ್ರದಲ್ಲಿ ಅನೇಕಮನ್ಯಪದಾರ್ಥೇ ಎಂಬ ಸೂತ್ರದಿಂದ ಅನೇಕಮ್ ಎಂಬ ಪ್ರಥಮಾಂತ ಪದವನ್ನು ಅನುವೃತ್ತಿ ಮಾಡಿ ಅನೇಕ ಸುಬಂತಮ್ ಸಮಸ್ಯತೇ ಎಂಬ ಅರ್ಥವು ಹೇಳಲಾಗಿದೆ. ಅನೇಕಮ್ ಎಂಬುದು ಪ್ರಥಮಾ ವಿಭಕ್ತಿಯಲ್ಲಿ ಇರುವುದರಿಂದ ದ್ವನ್ದ್ವದಲ್ಲಿ ಸಮಾಸವಾಗುವ ಎಲ್ಲ ಪದಗಳಿಗೂ ಉಪಸರ್ಜನ ಸಂಜ್ಞೆಯು ಇರುವುದರಿಂದ ಯಾವ ಪದಕ್ಕಾಗಲಿ ಪೂರ್ವನಿಪಾತವೂ ಮಾಡಬಹುದು.

ಆದರೆ ಕೆಲವು ನಿಯಮಗಳು ಮುಂಬುರುವ ಸೂತ್ರಗಳಲ್ಲಿ ಹೇಳಲಾಗಿವೆ. ತದ್ ಭಿನ್ನ ಸ್ಥಳಗಳಲ್ಲಿ ನಿಯಮವು ಯಾವುದು ಇರುವುದಿಲ್ಲವೆಂದು ತಿಳಿಯಬೇಕು.

**(ಪರಪ್ರಯೋಗವನ್ನು ವಿಧಿಸುವ ಸೂತ್ರ)**

**ಸೂತ್ರ – ೯೮೮. ರಾಜದನ್ತಾದಿಷು ಪರಮ್। (2.2.31)**

ವೃತ್ತಿ– ಏಷು ಪೂರ್ವಪ್ರಯೋಗಾರ್ಹಂ ಪರಂ ಸ್ಯಾತ್। ದನ್ತಾನಾಮ್ ರಾಜಾ ರಾಜದನ್ತಃ ।

ವಾರ್ತಿಕ: ಧರ್ಮಾದಿಷ್ವನಿಯಮಃ । ಅರ್ಥಧರ್ಮೌ ಧರ್ಮಾರ್ಥ್ವ ಇತ್ಯಾದಿ।

ಅ. ವ್ಯ.– ಉಪಸರ್ಜನಂ ಪೂರ್ವಮ್ ಎಂಬ ಸೂತ್ರದಿಂದ ಪೂರ್ವಮ್ ಎಂಬ ಪದವು ಮತ್ತು ಪ್ರಯುಜ್ಯತೇ ಎಂಬ ಕ್ರಿಯಾಪದವು ಅಧ್ಯಾಹೃತವಾಗಿದೆ.

ಅರ್ಥ. – ರಾಜದಂತಾದಿ ಗಣದಲ್ಲಿ ಪಠಿತವಾದ ಶಬ್ದಗಳಿಗೆ ಪೂರ್ವನಿಪಾತವಾಗ ಬೇಕಾದ ಸ್ಥಳದಲ್ಲಿ ಪರ ನಿಪಾತವಾಗುತ್ತದೆ.

ಉದಾ:– ರಾಜದನ್ತಃ (ದನ್ತಗಳ ರಾಜ ಅಥವಾ ದನ್ತದ ಮೇಲೆ ಬೆಳೆದಿರುವ ದನ್ತ):– ದನ್ತಾಮ್ ರಾಜಾ ಎಂಬುದು ಲೌಕಿಕ ವಿಗ್ರಹ ವಾಕ್ಯ. ದನ್ತ ಆಮ್+ರಾಜನ್ ಸು ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಷಷ್ಠೀ ಸೂತ್ರದಿಂದ ತತ್ಪುರುಷ ಸಮಾಸವಾಗಿ ಪ್ರಾತಿಪದಿಕ ಸಂಜ್ಞೆಯು ಬಂದ ಮೇಲೆ ಸುಪ್ ಲೋಪವಾದ ಮೇಲೆ ಪ್ರಥಮಾಂತವಾದ ಷಷ್ಠೀ ಶಬ್ದದಿಂದ ನಿರ್ದಿಷ್ಟ ದನ್ತ ಶಬ್ದಕ್ಕೆ ಉಪಸರ್ಜನ ಸಂಜ್ಞೆಯು ಬಂದು ಉಪಸರ್ಜನಂ ಪೂರ್ವಮ್ ಎಂಬ ಸೂತ್ರದಿಂದ ಪೂರ್ವನಿಪಾತವು ಬರಬೇಕಾಗಿತ್ತು. ಅದನ್ನು ಭಾದಿಸಿ ಪ್ರಕೃತ ಸೂತ್ರದಿಂದ ಪರನಿಪಾತವಾಗಿ ರಾಜನ್+ದನ್ತ ಎಂದಿರುತ್ತದೆ. ರಾಜನ್ ಶಬ್ದದಲ್ಲಿರುವ ನ್ ಕಾರಕ್ಕೆ **ನಲೋಪಃ ಪ್ರಾತಿಪದಿಕಾಂ ತಸ್ಯ** ಎಂಬ ಸೂತ್ರದಿಂದ ಲೋಪವು ಬಂದು ಪ್ರಾತಿಪದಿಕ ಸಂಜ್ಞೆಯು ಬಂದ ಮೇಲೆ ಸು ಸೇರಿಸಿ ದೀರ್ಘ ಬಂದು ಸ್ ಕಾರಕ್ಕೆ ರುತ್ವ ವಿಸರ್ಗಗಳಿಂದ ಸುಬಂತ ಮಾಡಿದಾಗ ರಾಜದನ್ತಃ ಎಂದು ರೂಪವು ಸಿದ್ಧವಾಗುತ್ತದೆ.

ವಾರ್ತಿಕ: ಧರ್ಮಾದಿಷ್ವನಿಯಮಃ । ಅರ್ಥಧರ್ಮೌ ಧರ್ಮಾಥೌ ಇತ್ಯಾದಿ।

ಅರ್ಥ:– ಧರ್ಮಾದಿ ಗಣ ಪಠಿತ ಶಬ್ದಗಳ ವಿಷಯದಲ್ಲಿ ಪೂರ್ವ ಮತ್ತು ಪರನಿಪಾತಗಳ ನಿಯಮವಿರುವುದಿಲ್ಲ.

ಉದಾ:– ಧರ್ಮಾರ್ಥೌ ಅಥವಾ ಅರ್ಥಧರ್ಮೌ (ಧರ್ಮ ಮತ್ತು ಅರ್ಥ) ಧರ್ಮಶ್ಚ ಅರ್ಥಶ್ಚ ಎಂಬುದು ಲೌಕಿಕವಿಗ್ರಹ ವಾಕ್ಯ. ಸಮಾಸದಲ್ಲಿ ಪೂರ್ವಪರ ನಿಪಾತಗಳ ನಿಯಮವಿರುವುದಿಲ್ಲ. ಆದ್ದರಿಂದ ಪ್ರಕೃತ ರೂಪಗಳು ಸಿದ್ಧವಾಗುತ್ತವೆ.

**(ಪೂರ್ವ ಪ್ರಯೋಗವನ್ನು ವಿಧಿಸುವ ಸೂತ್ರ)**

**ಸೂತ್ರ – ೯೮೯. ದ್ವನ್ದ್ವೇ ಘಿ। (2.2.32)**

ವೃತ್ತಿ– ದ್ವನ್ದ್ವೇ ಘಿ ಸಂಜ್ಞಂ ಪೂರ್ವಂ ಸ್ಯಾತ್। ಹರಿಶ್ಚ ಹರಶ್ಚ–ಹರಿಹರೌ।

ಅ. ವ್ಯ.- ಉಪಸರ್ಜನಂ ಪೂರ್ವಮ್ ಎಂಬ ಸೂತ್ರದಿಂದ ಪೂರ್ವಮ್ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ-ದ್ವನ್ದ್ವ ಸಮಾಸದಲ್ಲಿ ಘಿ ಸಂಜ್ಞೆಯುಳ್ಳ ಶಬ್ದಕ್ಕೆ ಪೂರ್ವನಿಪಾತವು ಬರುತ್ತದೆ. ಶೇಷೋಘ್ಯಸಖೀ ಎಂಬ ಸೂತ್ರದಿಂದ ಹ್ರಸ್ವ ಇಕಾರಾನ್ತ ಮತ್ತು ಹ್ರಸ್ವ ಉಕಾರಾನ್ತ ಶಬ್ದಕ್ಕೆ ಘಿ ಸಂಜ್ಞೆಯು ಬರುತ್ತದೆ.

ಉದಾ:- ಹರಿಹರೌ (ಹರಿ ಮತ್ತು ಹರ) :- ಹರಿಶ್ಚ ಹರಶ್ಚ ಎಂಬುದು ಲೌಕಿಕವಿಗ್ರಹ ವಾಕ್ಯ. ಹರಿ+ಸು ಹರ+ಸು ಎಂಬುದು ಅಲೌಕಿಕವಿಗ್ರಹವಾಕ್ಯ. ಚಾರ್ಥೇ ದ್ವನ್ದ್ವಃ ಎಂಬ ಸೂತ್ರದಿಂದ ಸಮಾಸವಾಗಿ ಪ್ರಾತಿಪದಿಕ ಸಂಜ್ಞೆಯು ಬಂದು ಸು ಲೋಪವಾದ ಮೇಲೆ ಹರಿ+ಹರ ಎಂದಿರುತ್ತದೆ. ಇಲ್ಲಿ ಪ್ರಕೃತ ಸೂತ್ರದಿಂದ ಘಿ ಸಂಜ್ಞಕ ಹರಿ ಶಬ್ದಕ್ಕೆ ಪೂರ್ವ ಪ್ರಯೋಗ ಮಾಡಲಾಗಿದೆ. ಆದ್ದರಿಂದ ಲೌಕಿಕವಿಗ್ರಹದಲ್ಲಿ ಹರಿ ಶಬ್ದವು ಪರದಲ್ಲಿ ಇದ್ದರೂ ಘಿ ಸಂಜ್ಞೆಯ ಕಾರಣದಿಂದ ಪೂರ್ವನಿಪಾತವಾಗಿ ಹರಿಹರ ಎಂದೇ ಇರುತ್ತದೆ. ಇದು ದ್ವಿವಚನದಲ್ಲಿ ಇರುವುದರಿಂದ ಔ ಪ್ರತ್ಯಯವನ್ನು ಸೇರಿಸಿದಾಗ ಹರಿಹರೌ ಎಂದು ರೂಪವು ಸಿದ್ಧವಾಗುತ್ತದೆ.

**(ಪೂರ್ವ ಪ್ರಯೋಗವನ್ನು ವಿಧಿಸುವ ಮತ್ತೊಂದು ಸೂತ್ರ)**

ಸೂತ್ರ-990 . ಅಜಾದ್ಯನ್ತಮ್। (2.2.33)

ವೃತ್ತಿ- ಇದಂ ದ್ವನ್ದ್ವೇ ಪೂರ್ವಂ ಸ್ಯಾತ್ ಈಶಕೃಷ್ಣೌ।

ಅ. ವ್ಯ.- ದ್ವನ್ದ್ವೇ ಘಿ ಎಂಬ ಸೂತ್ರದಿಂದ ದ್ವನ್ದ್ವೇ ಎಂಬ ಪದವು ಮತ್ತು ಉಪಸರ್ಜನ ಪೂರ್ವಮ್ ಎಂಬ ಸೂತ್ರದಿಂದ ಪೂರ್ವಮ್ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- ದ್ವನ್ದ್ವ ಸಮಾಸದಲ್ಲಿ ಅಜಾದಿಯಾಗಿಯೂ ಅದನ್ತವಾಗಿಯೂ ಇರುವ ಶಬ್ದಕ್ಕೆ ಪೂರ್ವಪ್ರಯೋಗವು ಮಾಡಬೇಕು.

ಉದಾ:- ಈಶಕೃಷ್ಣೌ (ಈಶ್ವರ ಕೃಷ್ಣ):- ಈಶ್ವರಶ್ಚ ಕೃಷ್ಣಶ್ಚ ಎಂಬುದು ಲೌಕಿಕವಿಗ್ರಹ ವಾಕ್ಯ. ಈಶ್ವರ ಸು+ಕೃಷ್ಣ ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ಚಾರ್ಥೇ ದ್ವನ್ದ್ವಃ ಎಂಬ ಸೂತ್ರದಿಂದ ಸಮಾಸವಾಗಿ ಪ್ರಾತಿಪದಿಕ ಸಂಜ್ಞೆಯು ಬಂದು ಸು ಲೋಪವಾದ ಮೇಲೆ ಈಶ+ಕೃಷ್ಣ ಎಂದಿರುತ್ತದೆ. ಇಲ್ಲಿ ಪ್ರಕೃತ ಸೂತ್ರದಿಂದ್ನ ಅಜಾದಿಯಾಗಿಯೂ ಅದನ್ತವಾಗಿಯೂ ಇರುವ ಈಶ ಶಬ್ದಕ್ಕೆ ಪೂರ್ವ ಪ್ರಯೋಗ ಮಾಡಲಾಗಿದೆ ಆದ್ದರಿಂದ ಈಶ+ಕೃಷ್ಣ ಎಂದಿರುತ್ತದೆ. ಇದು ದ್ವಿವಚನದಲ್ಲಿ ಇರುವುದರಿಂದ ಔ ಪ್ರತ್ಯಯವನ್ನು ಸೇರಿಸಿದಾಗ ಈಶಕೃಷ್ಣೌ ಎಂದು ರೂಪವು ಸಿದ್ಧವಾಗುತ್ತದೆ.

**(ಪೂರ್ವ ಪ್ರಯೋಗವನ್ನು ವಿಧಿಸುವ ಮತ್ತೊಂದು ಸೂತ್ರ)**

**ಸೂತ್ರ - 991 . ಅಲ್ಪಾಚ್‌ತರಮ್(2.2.34)**

ವೃತ್ತಿ-ಶಿವಕೇಶವೌ।

ಅ. ವ್ಯ.– ದ್ವನ್ದ್ವೇ ಘಿ ಎಂಬ ಸೂತ್ರದಿಂದ ದ್ವನ್ದ್ವೇ ಎಂಬ ಪದವು ಮತ್ತು ಉಪಸರ್ಜನಂ ಪೂರ್ವಮ್ ಎಂಬ ಸೂತ್ರದಿಂದ ಪೂರ್ವಮ್ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– ದ್ವನ್ದ್ವ ಸಮಾಸದಲ್ಲಿ ಇರುವ ಎಲ್ಲ ಶಬ್ದಗಳಲ್ಲೂ ಯಾವ ಶಬ್ದದಲ್ಲಿ ಕಡಿಮೆಯಾದ ಅಚ್ ವರ್ಣಗಳು ಇರುವವೋ ಆ ಶಬ್ದಕ್ಕೇನೆ ಪೂರ್ವ ಪ್ರಯೋಗವು ಬರುತ್ತದೆ.

ಉದಾ:– ಶಿವಕೇಶವೌ (ಶಿವ ಮತ್ತು ಕೇಶವ) :– ಶಿವಶ್ಚ ಕೇಶವಶ್ಚ ಎಂಬುದು ಲೌಕಿಕವಿಗ್ರಹ ವಾಕ್ಯ. ಶಿವ ಸು+ಕೇಶವ ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ಚಾರ್ಥೇ ದ್ವನ್ದ್ವಃ ಎಂಬ ಸೂತ್ರದಿಂದ ಸಮಾಸವಾಗಿ ಪ್ರಾತಿಪದಿಕ ಸಂಜ್ಞೆಯು ಬಂದು ಸು ಲೋಪವಾದ ಮೇಲೆ ಶಿವ+ಕೇಶವ ಎಂದಿರುತ್ತದೆ. ಇಲ್ಲಿ ಪ್ರಕೃತ ಸೂತ್ರದಿಂದ ಕಡಿಮೆಯಾದ ಅಚ್ ವರ್ಣಗಳು ಇರುವ ಶಿವ ಶಬ್ದಕ್ಕೆ ಪೂರ್ವ ಪ್ರಯೋಗ ಮಾಡಲಾಗಿದೆ ಆದ್ದರಿಂದ ಶಿವ+ಕೇಶವ ಎಂದಿರುತ್ತದೆ. ಇದು ದ್ವಿವಚನದಲ್ಲಿ ಇರುವುದರಿಂದ ಔ ಪ್ರತ್ಯಯವನ್ನು ಸೇರಿಸಿದಾಗ ಶಿವಕೇಶವೌ ಎಂದು ರೂಪವು ಸಿದ್ಧವಾಗುತ್ತದೆ.

**(ಪೂರ್ವ ಪ್ರಯೋಗವನ್ನು ವಿಧಿಸುವ ಮತ್ತೊಂದು ಸೂತ್ರ)**

**ಸೂತ್ರ – 992 . ಪಿತಾ ಮಾತ್ರಾ।(1.2.70)**

ವೃತ್ತಿ– ಮಾತ್ರಾಸಹೋಕ್ತೌ ಪಿತಾ ವಾ ಶಿಷ್ಯತೇ। ಮಾತಾ ಚ ಪಿತಾ ಚ ಪಿತರೌ, ಮಾತಾಪಿತರೌ ವಾ।

ಅ. ವ್ಯ.– ಸ್ವರೂಪಾಣಾಮೇಕಶೇಷ ಏಕವಿಭಕ್ತೌ ಎಂಬ ಸೂತ್ರದಿಂದ ಶೇಷಃ ಎಂಬ ಪದವು ಮತ್ತು ನಪುಂಸಕಮನಪುಂಸಕೇ ನೈಕವಚ್ಚಾನ್ಯತರಸ್ಯಾಮ್ ಎಂಬ ಸೂತ್ರದಿಂದ ಅನ್ಯತರಸ್ಯಾಮ್ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ– ಮಾತೃ ಶಬ್ದದ ಜೊತೆಗೆ ಉಚ್ಚರಿಸಲ್ಪಟ್ಟ ಪಿತೃ ಶಬ್ದಕ್ಕೆ ವಿಕಲ್ಪದಿಂದ ಶೇಷವಾಗುತ್ತದೆ. ಅಂದರೆ ಪಿತೃ ಶಬ್ದವು ವಿಕಲ್ಪದಿಂದ ಉಳಿಯುತ್ತದೆ. ಇದು ಏಕ ಶೇಷ ಸಮಾಸವಾಗಿದೆ. ಮಾತೃ ಮತ್ತು ಪಿತೃ ಶಬ್ದಗಳಿಗೆ ಸಮಾಸವಾದಾಗ ಪಿತೃ ಶಬ್ದ ಮಾತ್ರ ವಿಕಲ್ಪದಿಂದ ಉಳಿಯುತ್ತದೆ.

ಉದಾ:– ಪಿತರೌ ಮಾತಾಪಿತರೌ ವಾ (ತಾಯಿ ಮತ್ತು ತಂದೆ) ಮಾತಾ ಚ ಪಿತಾ ಚ ಎಂಬುದು ಲೌಕಿಕವಿಗ್ರಹ ವಾಕ್ಯ. ಮಾತೃ+ಸು ಪಿತೃ+ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ಚಾರ್ಥೇ ದ್ವನ್ದ್ವಃ ಎಂಬ ಸೂತ್ರದಿಂದ ಸಮಾಸವಾಗಿ ಪ್ರಾತಿಪದಿಕ ಸಂಜ್ಞೆಯು ಬಂದು ಸು ಲೋಪವಾದ ಮೇಲೆ ಪ್ರಕೃತ ಸೂತ್ರದಿಂದ ಪಿತೃ ಶಬ್ದ ಮಾತ್ರ ಉಳಿದು ಏಕಶೇಷದಿಂದ ಪಿತರೌ ಎಂದಾಗುತ್ತದೆ. ಇಲ್ಲದ ಪಕ್ಷದಲ್ಲಿ ದ್ವನ್ದ್ವ ಸಮಾಸದಿಂದ (ವೈಕಲ್ಪಕವಾಗಿ) ಮಾತಾಪಿತರೌ ಎಂದು ರೂಪವು ಸಿದ್ಧವಾಗುತ್ತದೆ.

**(ಏಕವಚನವನ್ನು ವಿಧಿಸುವ ಸೂತ್ರ)**

**ಸೂತ್ರ -993 . ದ್ವನ್ದ್ವಶ್ಚ ಪ್ರಾಣಿ-ತೂರ್ಯ-ಸೇನಾಙ್ಗಾನಾಮ್। (2.4.2)**

ವೃತ್ತಿ- ಏಷಾಂ ದ್ವನ್ದ್ವಃ ಏಕವತ್। ಪಾಣಿಪಾದಮ್। ಮಾರ್ದಙ್ಗಿ ಕವೈಣವಿಕಮ್। ರಥಿಕಾಶ್ವಾರೋಹಮ್।

ಪ. ಛೇ- ದ್ವನ್ದ್ವಃ, ಚ, ಪ್ರಾಣಿ, ತೂರ್ಯ, ಸೇನಾಙ್ಗಾನಾಮ್।

ಅ. ವೃ.- ದ್ವಿಗುರೇಕ ವಚನಮ್ ಎಂಬ ಸೂತ್ರದಿಂದ ಏಕವಚನಮ್ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ – ಪ್ರಾಣಿಯ ಅಂಗ, ವ್ಯಾದ್ಯದ ಅಂಗ ಮತ್ತು ಸೇನೆಯ ಅಂಗ ಇವುಗಳಲ್ಲಿ ದ್ವನ್ದ್ವ ಸಮಾಸವಾದರೆ ಅದು ಸಮಾಹಾರ ಏಕವಚನದಲ್ಲೇ ಇರುತ್ತದೆ.

ಉದಾ:- ಪಾಣಿಪಾದಮ್ (ಕೈ ಮತ್ತು ಕಾಲುಗಳ ಸಮೂಹ):- ಪಾಣಿಃ ಚ ಪಾದೌ ಚ ತೇಷಾಂ ಸಮಾಹಾರಃ ಎಂಬುದು ಲೌಕಿಕವಿಗ್ರಹ ವಾಕ್ಯ. ಚಾರ್ಥೇ ದ್ವನ್ದ್ವಃ ಎಂಬ ಸೂತ್ರದಿಂದ ಸಮಾಸವಾಗಿ ಪ್ರಕೃತ ಸೂತ್ರದಿಂದ ಏಕವಚನವಾಗಿದೆ. ಇದಕ್ಕೆ ಸು ವಿಭಕ್ತಿ ಸೇರಿಸಿ ಸಮಾಹಾರವಾದಾಗ ಸನಪುಂಸಕಮ್ ಎಂಬ ಸೂತ್ರದಿಂದ ನಪುಂಸಕ ಲಿಂಗವಾದಾಗ ಅಮ್ ಆದೇಶ ಬಂದು ಪೂರ್ವ ರೂಪ ಮಾಡಿದಾಗ ಪಾಣಿಪಾದಮ್ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ:- ಮಾರ್ದಙ್ಗಿಕವೈಣವಿಕಮ್ (ಮೃದಂಗ ಬಾರಿಸುವವರ ಮತ್ತು ಕೊಳಲು ಬಾರಿಸುವವರ ಸಮೂಹ ):- ಮಾರ್ದಙ್ಗಿಕಾಶ್ಚ ವೈಣವಿಕಾಶ್ಚ ತೇಷಾಂ ಸಮಾಹಾರ ದ್ವನ್ದ್ವಃ ಎಂಬುದು ಲೌಕಿಕವಿಗ್ರಹ ವಾಕ್ಯ. ಚಾರ್ಥೇ ದ್ವನ್ದ್ವಃ ಎಂಬ ಸೂತ್ರದಿಂದ ಸಮಾಸವಾಗಿ ಪ್ರಕೃತ ಸೂತ್ರದಿಂದ ವಾದ್ಯಂಗಗಳ ಸಮೂಹವಾಗಿರುವುದರಿಂದ ಏಕವಚನವಾಗಿದೆ. ಪ್ರಾತಿಪದಿಕ ಸಂಜ್ಞೆಯು ಬಂದು ಸುಪ್ ಲೋಪವಾದ ಮೇಲೆ ಮತ್ತೆ ಸುಬಂತ ಮಾಡಿ ಸಮಾಹಾರವಾಗಿರುವುದರಿಂದ ನಪುಂಸಕ ಲಿಂಗವಾಗಿದೆ ಆದ್ದರಿಂದ ಅಮ್ ಆದೇಶ ಮತ್ತು ಪೂರ್ವ ರೂಪವಾಡಿದ ಮೇಲೆ ಮಾರ್ದಙ್ಗಿಕವೈಣವಿಕಮ್ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ:- ರಥಿಕಾಶ್ವಾರೋಹಮ್ (ಸಾರಥಿ ಮತ್ತು ಕುದುರೆ ಸವಾರರ ಸಮೂಹ):- ರಥಿಕಾಶ್ಚ ಅಶ್ವಾರೋಹಾಶ್ಚ ತೇಷಾಂ ಸಮಾಹಾರಃ ಎಂಬುದು ಲೌಕಿಕವಿಗ್ರಹ ವಾಕ್ಯ. ಚಾರ್ಥೇ ದ್ವನ್ದ್ವಃ ಎಂಬ ಸೂತ್ರದಿಂದ ಸಮಾಸವಾಗಿ ಪ್ರಕೃತ ಸೂತ್ರದಿಂದ ಸೇನಾಂಗಗಳ ಸಮೂಹವಾಗಿರುವುದರಿಂದ ಏಕವಚನವಾಗಿದೆ. ಪ್ರಾತಿಪದಿಕ ಸಂಜ್ಞೆಯು ಬಂದು ಸುಪ್ ಲೋಪವಾದ ಮೇಲೆ ಮತ್ತೆ ಸುಬಂತ ಮಾಡಿ ಸಮಾಹಾರವಾಗಿರುವುದರಿಂದ ನಪುಂಸಕ ಲಿಂಗವಾಗಿದೆ ಆದ್ದರಿಂದ ಅಮ್ ಆದೇಶ ಮತ್ತು ಪೂರ್ವ ರೂಪಮಾಡಿದ ಮೇಲೆ ರಥಿಕಾಶ್ವಾರೋಹಮ್ ಎಂಬ ರೂಪವು ಸಿದ್ಧವಾಗುತ್ತದೆ.

**(ಸಮಾಸಾನ್ತ ಟಚ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ - 994 . ದ್ವನ್ದ್ವಾಚ್ಚುದಷಹಾನ್ತಾತ್ ಸಮಾಹಾರೇ।(5.4.106)**

ವೃತ್ತಿ– ಚವರ್ಗಾನ್ತಾದದಪಹಾನ್ತಾಚ್ಚ ದ್ವನ್ದ್ವಾಟ್ಟಚ್ ಸ್ಯಾತ್ ಸಮಾಹಾರೇ । ವಾಕ್ ಚ ತ್ವಕ್ ಚ ವಾಕ್ತ್ವಚಮ್। ತ್ವಕ್ಸ್ರಜಮ್। ಶಮೀದೃಷದಮ್। ವಾಕ್ತ್ವಿಷಮ್। ಛತ್ರೋಪಾನಹಮ್। ಸಮಾಹಾರೇ ಕಿಮ್? ಪ್ರಾವೃಟ್‌ಶರದೌ।

**ಇತಿ ದ್ವನ್ದ್ವಃ (42)**

ಪ. ಛೇ– ದ್ವನ್ದ್ವಾತ್,ಚ್ಚು, ದಷಹಾನ್ತಾತ್, ಸಮಾಹಾರೇ।

ಅ. ವೃ.– ರಾಜಾಹಃಸಖಿಭ್ಯಷ್ಟಚ್ ಎಂಬ ಸೂತ್ರದಿಂದ ಟಚ್ ಎಂಬ ಪದವು ಅನುವೃತ್ತವಾಗುತ್ತದೆ. ಪ್ರತ್ಯಯ, ಪರಶ್ಚ, ತದ್ಧಿತಾಃ ಮತ್ತು ಸಮಾಸಾನ್ತಾಃ ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ:– ಚವರ್ಗಾತ್, ದ್‌ಕಾರಾತ್, ಷ್‌ಕಾರಾತ್ ಮತ್ತು ಹ್ ಕಾರಾತ್ ದ್ವನ್ದ್ವ ಸಮಾಸದ ನಂತರ ಸಮಾಹಾರಾರ್ಥದಲ್ಲಿ ಸಮಾಸಾತ್ತ ಟಚ್ ಪ್ರತ್ಯಯವು ಬರುತ್ತದೆ.

ಉದಾ:– ವಾಕ್ತ್ವಚಮ್ (ಮಾತು ಮತ್ತು ಧರ್ಮ ಇವುಗಳ ಸಮೂಹ):– ವಾಕ್ ಚ ತ್ವಕ್ ಚ ತಯೋಃ ಸಮಾಹಾರಃ ಎಂಬುದು ಲೌಕಿಕವಿಗ್ರಹ ವಾಕ್ಯ. ವಾಚ್+ಸು ತ್ವಚ್+ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ಚಾರ್ಥೇ ದ್ವನ್ದ್ವಃ ಎಂಬ ಸೂತ್ರದಿಂದ ಸಮಾಸವಾಗಿದೆ. ಪ್ರಾತಿಪದಿಕ ಸಂಜ್ಞೆಯು ಬಂದು ಸುಪ್ ಲೋಪವಾದ ಮೇಲೆ ವಾಚ್+ತ್ವಚ್ ಎಂದಿರುತ್ತದೆ. ವಾಚ್ ನಲ್ಲಿರುವ ಚ್ ಕಾರಕ್ಕೆ ಚೋಕುಃ ಎಂಬ ಸೂತ್ರದಿಂದ ಕುತ್ವವು ಬಂದು ಕ್ ಕಾರವು ಬರುತ್ತದೆ. ಪ್ರಕೃತ ಸೂತ್ರದಿಂದ ಚ ವರ್ಗಾನ್ತವಾಗಿ ಇರುವುದರಿಂದ ಸಮಾಸಾನ್ತ ಟಚ್ (ಅ) ಬಂದು ವಾಕ್+ತ್ವಚ್+ಅ=ವಾಕ್ ತ್ವಚ ಎಂದಾಗಿ ಪ್ರಾತಿಪದಿಕ ಸಂಜ್ಞೆಯು ಬಂದ ಮೇಲೆ ಸು ಸೇರಿಸಿ ಸಮಾಹಾರಾರ್ಥದಲ್ಲಿ ನಪುಂಸಕ ಮತ್ತು ಏಕವಚನವಾಗಿ ವಾಕ್ತ್ವಚಮ್ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ:– ತ್ವಕ್ಸ್ರಜಮ್ (ಚರ್ಮ ಮತ್ತು ಹಾರ ಇವುಗಳ ಸಮೂಹ):– ತ್ವಕ್ ಚ ಸೃಕ್ ಚ ತಯೋಃ ಸಮಾಹಾರಃ ಎಂಬುದು ಲೌಕಿಕವಿಗ್ರಹ ವಾಕ್ಯ. ತ್ವಚ್ ಸು+ಸ್ರಜ್+ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ಚಾರ್ಥೇ ದ್ವನ್ದ್ವಃ ಎಂಬ ಸೂತ್ರದಿಂದ ಸಮಾಸವಾಗಿದೆ. ಪ್ರಾತಿಪದಿಕ ಸಂಜ್ಞೆಯು ಬಂದು ಸುಪ್ ಲೋಪವಾದ ಮೇಲೆ ತ್ವಚ್+ಸ್ರಜ್ ಎಂದಿರುತ್ತದೆ. ತ್ವಚ್ ನಲ್ಲಿರುವ ಚ್ ಕಾರಕ್ಕೆ ಚೋಃಕುಃ ಎಂಬ ಸೂತ್ರದಿಂದ ಕುತ್ವವು ಬಂದು ಕ್ ಕಾರವು ಬರುತ್ತದೆ. ಪ್ರಕೃತ ಸೂತ್ರದಿಂದ ಚ್ ವರ್ಗಾಂತವಾಗಿ ಇರುವುದರಿಂದ ಸಮಾಸಾನ್ತ ಟಚ್ (ಅ) ಬಂದು ತ್ವಕ್‌ಸೃಜ್+ಅ=ತ್ವಕ್ಸ್ರಜ ಎಂದಾಗಿ ಪ್ರಾತಿಪದಿಕ ಸಂಜ್ಞೆಯು ಬಂದ ಮೇಲೆ ಸು ಸೇರಿಸಿ ಸಮಾಹಾರಾರ್ಥದಲ್ಲಿ ನಪುಂಸಕ ಮತ್ತು ಏಕವಚನವಾಗಿ ತ್ವಕ್ಸ್ರಜಮ್ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ:– ಶಮೀದೃಷದಮ್ (ಶಮಿ ಮತ್ತು ಕಲ್ಲು ಇವುಗಳ ಸಮೂಹ):– ಶಮೀ ಚ ದೃಷತ್ ಚ ತಯೋಃ ಸಮಾಹಾರಃ ಎಂಬುದು ಲೌಕಿಕವಿಗ್ರಹ ವಾಕ್ಯ. ಶಮೀ ಸು+ದೃಷದ್ ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ಚಾರ್ಥೇ ದ್ವನ್ದ್ವಃ ಸೂತ್ರದಿಂದ ಸಮಾಸವಾಗಿದೆ. ಪ್ರಾತಿಪದಿಕ ಸಂಜ್ಞೆಯು ಬಂದು ಸುಪ್ ಲೋಪವಾದ ಮೇಲೆ

ಶಮೀ+ದೃಷದ್ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ದ್ ವರ್ಗಾನ್ತವಾಗಿ ಇರುವುದರಿಂದ ಸಮಾಸಾನ್ತ ಟಚ್ (ಅ) ಬಂದು ಶಮಿ ದೃಷದ್+ಅ=ಶಮೀದೃಷದ ಎಂದಾಗಿ ಪ್ರಾತಿಪದಿಕ ಸಂಜ್ಞೆಯು ಬಂದ ಮೇಲೆ ಸು ಸೇರಿಸಿ ಸಮಾಹಾರಾರ್ಥದಲ್ಲಿ ನಪುಂಸಕ ಮತ್ತು ಏಕವಚನವಾಗಿ ಶಮೀದೃಷದಮ್ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ:- ವಾಕ್ತ್ವಿಷಮ್ (ಮಾತು ಮತ್ತು ಪ್ರಕಾಶ ಇವುಗಳ ಸಮೂಹ):- ವಾಚ್+ಚ ತ್ವಿಟ್+ಚ ತಯೋಃ ಸಮಾಹಾರಃ ಎಂಬುದು ಲೌಕಿಕವಿಗ್ರಹ ವಾಕ್ಯ. ವಾಚ್+ಸು+ತ್ವಿಷ್ ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ಚಾರ್ಥೇ ದ್ವನ್ದ್ವಃ ಎಂಬ ಸೂತ್ರದಿಂದ ಸಮಾಸವಾಗಿದೆ. ಪ್ರಾತಿಪದಿಕ ಸಂಜ್ಞೆಯು ಬಂದು ಸುಪ್ ಲೋಪವಾದ ಮೇಲೆ ವಾಚ್+ತ್ವಿಷ್ ಎಂದಿರುತ್ತದೆ. ವಾಚ್ ನಲ್ಲಿರುವ ಚ್ ಕಾರಕ್ಕೆ ಚೋಕುಃ ಎಂಬ ಸೂತ್ರದಿಂದ ಕುತ್ವವು ಬಂದು ಕ್ ಕಾರವು ಬರುತ್ತದೆ. ಪ್ರಕೃತ ಸೂತ್ರದಿಂದ ಷ್ ವರ್ಗಾನ್ತವಾಗಿ ಇರುವುದರಿಂದ ಸಮಾಸಾತ್ತ ಟಚ್ (ಅ) ಬಂದು ವಾಕ್ ತ್ವಿಷ್+ಅ =ವಾಕ್ ತ್ವಿಷ ಎಂದಾಗಿ ಪ್ರಾತಿಪದಿಕ ಸಂಜ್ಞೆಯು ಬಂದ ಮೇಲೆ ಸು ಸೇರಿಸಿ ಸಮಾಹಾರಾರ್ಥದಲ್ಲಿ ನಪುಂಸಕ ಮತ್ತು ಏಕವಚನವಾಗಿ ವಾಕ್ತ್ವಿಷಮ್ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ:- ಛತ್ರೋಪಾನಹಮ್ (ಛತ್ರಿ ಮತ್ತು ಪಾದುಕೆ ಇವುಗಳ ಸಮೂಹ):- ಛತ್ರಮ್ ಚ ಉಪಾನಹೌ ಚ ತೇಷಾಂ ಸಮಾಹಾರಃ ಎಂಬುದು ಲೌಕಿಕವಿಗ್ರಹ ವಾಕ್ಯ. ಛತ್ರ ಸು+ಉಪಾನಹ್ ಔ ಎಂಬುದು ಅಲೌಕಿಕವಿಗ್ರಹ ವಾಕ್ಯ. ಚಾರ್ಥೇ ದ್ವನ್ದ್ವಃ ಎಂಬ ಸೂತ್ರದಿಂದ ಸಮಾಸವಾಗಿದೆ. ಪ್ರಾತಿಪದಿಕ ಸಂಜ್ಞೆಯು ಬಂದು, ಸುಪ್ ಲೋಪವಾದ ಮೇಲೆ ಛತ್ರ+ಉಪಾನಹ್ ಎಂದಿರುತ್ತದೆ. ಇದಕ್ಕೆ ಗುಣಸಂಧಿಯಿಂದ ಛತ್ರೋಪಾನಹ್ ಎಂದಾಗಿ ಪ್ರಕೃತ ಸೂತ್ರದಿಂದ ಹ್ ಕಾರಾನ್ತವಾಗಿ ಇರುವುದರಿಂದ ಸಮಾಸಾನ್ತ ಟಚ್ (ಅ) ಬಂದು ಛತ್ರೋಪಾನಹ್+ಅ=ಛತ್ರೋಪಾನಹ ಎಂದಾಗಿ ಪ್ರಾತಿಪದಿಕ ಸಂಜ್ಞೆಯು ಬಂದ ಮೇಲೆ ಸು ಸೇರಿಸಿ ಸಮಾಹಾರಾರ್ಥದಲ್ಲಿ ನಪುಂಸಕ ಮತ್ತು ಏಕವಚನವಾಗಿ ಛತ್ರೋಪಾನಹಮ್ ಎಂಬ ರೂಪವು ಸಿದ್ಧವಾಗುತ್ತದೆ.

ಸಮಾಹಾರೇ ಕಿಮ್? ಪ್ರಾವೃಟ್ಶರದೌ :-ಸಮಾಹಾರಾರ್ಥಾದಲ್ಲಿ ಎಂದು ಏಕೆ ಹೇಳಲಾಗಿದೆ ಎಂಬ ಪ್ರಶ್ನೆಗೆ ಇತರೇತರ ಯೋಗ ದ್ವನ್ದ್ವದಲ್ಲೂ ಟಚ್ (ಅ) ಬಂದು ಅನಿಷ್ಟ ರೂಪವು ಸಿದ್ಧವಾಗುವದು. ಪ್ರಾವೃಟ್ಶರದೌ ಎಂಬ ಪ್ರತ್ಯುಯುದಾಹರಣೆಯಲ್ಲಿ ಪ್ರಾವೃಟ್ ಚ ಶರತ್ ಚ ಅನೋಯೋ ಇತರೇತರಯೋಗ ದ್ವನ್ದ್ವಃ ಪ್ರಾವೃಟ್ಶರದೌ ಎಂದೇ ರೂಪವಾಗುತ್ತದೆ. ಹೊರತು ಪ್ರಾವೃಟ್ಶರದಮ್ ಎಂಬ ರೂಪವು ಸಿದ್ಧವಾಗುವುದಿಲ್ಲ.

॥ **ದ್ವನ್ದ್ವ ಸಮಾಸವು (42) ಮುಗಿಯಿತು** ॥

# ಪ್ರಕರಣ 43 – ಅಥ ಸಮಾಸಾನ್ತಾಃ

(ಸೂ.ಸಂ. 995-998)

(ಸಮಾಸಾನ್ತ ಅ ಪ್ರತ್ಯಯವನ್ನು ವಿಧಿಸುವ ಸೂತ್ರ)

**ಸೂತ್ರ – 995 . ಋಕ್ಪೂರಬ್ಧೂಃ ಪಥಾಮಾನಕ್ಷೇ।( 5.4.74)**

ವೃತ್ತಿ– ಅ ಅನಕ್ಷೇ ಇತಿ ಚ್ಛೇದಃ । ಋಗಾದ್ಯನ್ತಸ್ಯ ಸಮಾಸಸ್ಯ 'ಅ' ಪ್ರತ್ಯಯೋಽನ್ತಾವಯವಃ ಸ್ಯಾತ್, ಅಕ್ಷೇ ಯಾ ಧೂಃ ತದನ್ತಸ್ಯ ತು ನ। ಅರ್ಧರ್ಚಃ। ವಿಷ್ಣುಪುರಮ್। ವಿಮಲಾಪಂ–ಸರಃ। ರಾಜಧುರಾ। ಅಕ್ಷೇ ತು ಅಕ್ಷಧೂಃ। ದೃಡಧೂ–ರಕ್ಷಃ । ಸಖಿಪಥಃ। ರಮ್ಯಪಥೋ ದೇಶಃ।

ಪ. ಛೇ– ಋಕ್ಪೂರಬ್ಧೂಃ ಪಥಾಮ್, ಅ ಅನಕ್ಷೇ।

ಅ. ವೃ.–ಪ್ರತ್ಯಯಃ, ಪರಶ್ಚ, ಸಮಾಸಾನ್ತಾಃ ಇವು ಅಧಿಕಾರ ಸೂತ್ರಗಳಾಗಿವೆ.

ಅರ್ಥ. – ಋಚ್, ಪುರ್, ಅಪ್, ಧುರ್ ಮತ್ತು ಪಥಿನ್ ಈ ಶಬ್ದಗಳನ್ನು ಅಂತ್ಯದಲ್ಲಿವುಳ್ಳ ಸಮಾಸಗಳ ನಂತರ ಸಮಾಸಾನ್ತ ಅ ಪ್ರತ್ಯಯವು ಬರುತ್ತದೆ. ಆದರೆ ಅಕ್ಷ (ರಥದ ಚಕ್ರದ ಮಧ್ಯ ಭಾಗ) ಎಂಬರ್ಥದಲ್ಲಿ ಇರುವ ಧುರ್ ಎಂಬರ್ಥದಲ್ಲಿ ಧುರ್ ಶಬ್ದವು ಅಂತಿಮದಲ್ಲಿ ಇದ್ದರೆ ಸಮಾಸಾನ್ತ ಅ ಪ್ರತ್ಯಯವು ಬರುವುದಿಲ್ಲ.

ಉದಾ:– ಅರ್ಧರ್ಚ (ಋಕ್ ನ ಅರ್ಧಭಾಗ):– ಋಚಃ ಅರ್ಧಮ್ ಎಂಬುದು ಲೌಕಿಕವಿಗ್ರಹ ವಾಕ್ಯ. ಋಚ+ಙಸ್ ಅರ್ಧ+ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ಅರ್ಧಮ್ ನಪುಂಸಕಮ್ ಎಂಬ ಸೂತ್ರದಿಂದ ಸಮಾಸಮಾಡಿದಾಗ ಪ್ರಾತಿಪದಿಕ ಸಂಜ್ಞೆಯು ಬಂದು ಸುಪ್ ಲೋಪವಾಗಿ ಋಚ+ಅರ್ಧ ಎಂದಿರುತ್ತದೆ. ಪ್ರಥಮಾನಿರ್ದಿಷ್ಟವಾದ ಅರ್ಧ ಶಬ್ದಕ್ಕೆ ಉಪಸರ್ಜನ ಸಂಜ್ಞೆಯು ಬಂದು ಅದಕ್ಕೆ ಪೂರ್ವನಿಪಾತವಾದಾಗ ಅರ್ಧ+ಋಚ್ ಎಂದಿರುತ್ತದೆ. ಗುಣಸಂಧಿಯಾಗಿ ಅರ್ಧರ್ಚ್ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ಸಮಾಸಾನ್ತ ಅ ಪ್ರತ್ಯಯವು ಬಂದು ಅರ್ಧರ್ಚ್+ಅ=ಅರ್ಧರ್ಚ ಎಂದಿರುತ್ತದೆ ಪ್ರಾತಿಪದಿಕ ಸಂಜ್ಞೆಯು ಬಂದು ಸುಬಂತ ಮಾಡಿದಾಗ ಅರ್ಧರ್ಚಃ ಎಂದು ರೂಪವು ಸಿದ್ಧವಾಗುತ್ತದೆ. ಅರ್ಧರ್ಚಾದಿ ಗಣದಲ್ಲಿ ಪಠಿತವಾಗಿರುವುದರಿಂದ ಅರ್ಧರ್ಚಾಃ ಪುಸಿ ಚ ಎಂಬ ಸೂತ್ರದಿಂದ ನಪುಂಸಕ ಲಿಂಗವು ಬಂದು ಅರ್ಧರ್ಚಮ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ:– ವಿಷ್ಣುಪುರಮ್ (ವಿಷ್ಣುವಿನ ಪಟ್ಟಣ):– ವಿಷ್ಣೋಃ ಪೂಃ ಎಂಬುದು ಲೌಕಿಕವಿಗ್ರಹ ವಾಕ್ಯ. ವಿಷ್ಣು+ಙಸ್ ಪುರ್+ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ಷಷ್ಠೀ ಎಂಬ ಸೂತ್ರದಿಂದ ತತ್ಪುರುಷ ಸಮಾಸಮಾಡಿದಾಗ ಪ್ರಾತಿಪದಿಕ ಸಂಜ್ಞೆಯು ಬಂದು ಸುಪ್ ಲೋಪವಾಗಿ ವಿಷ್ಣು ಪುರ್ ಎಂದಿರುತ್ತದೆ ಪ್ರಥಮಾನಿದಿಷ್ಟವಾದ ವಿಷ್ಣು ಶಬ್ದಕ್ಕೆ ಉಪಸರ್ಜನ ಸಂಜ್ಞೆಯು ಬಂದು ಅದಕ್ಕೆ ಪೂರ್ವನಿಪಾತವಾದಾಗ ಪ್ರಕೃತ ಸೂತ್ರದಿಂದ ಸಮಾಸಾನ್ತ ಅ ಪ್ರತ್ಯಯವು ಬಂದು ವಿಷ್ಣು ಪುರ್+ಅ ಎಂದಿರುತ್ತದೆ.

ಪ್ರಾತಿಪದಿಕ ಸಂಜ್ಞೆಯು ಬಂದು ಸು ಪ್ರತ್ಯಯವನ್ನು ಸೇರಿಸಿದಾಗ ನಪುಂಸಕ ಲಿಂಗವಾಗಿ ಸು ಗೆ ಅಮ್ ಆದೇಶವು ಬಂದು ಪೂರ್ವರೂಪ ಮಾಡಿದಾಗ ವಿಷ್ಣುಪುರಮ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ:- ವಿಮಲಾಪಂ-ಸರಃ (ನಿರ್ಮಲವಾದ ನೀರುವುಳ್ಳ ಸರೋವರ):- ವಿಮಲಾಃ ಆಪಃ ಯಸ್ಯ ಎಂಬುದು ಲೌಕಿಕವಿಗ್ರಹ ವಾಕ್ಯ. ವಿಮಲಾ+ಜಸ್ ಅಪ್+ಜಸ್ ಎಂಬುದು ಅಲೌಕಿಕವಿಗ್ರಹ ವಾಕ್ಯ. ಅನೇಕಮ್ ಅನ್ಯ ಪದಾರ್ಥೇ ಎಂಬ ಸೂತ್ರದಿಂದ ಬಹುವ್ರಿಹಿ ಸಮಾಸಮಾಡಿದಾಗ ಪ್ರಾತಿಪದಿಕ ಸಂಜ್ಞೆಯು ಬಂದು ಸುಪ್ ಲೋಪವಾಗಿ ವಿಮಲಾ+ಅಪ್ ಎಂದಿರುತ್ತದೆ. ಸವರ್ಣದೀರ್ಘವಾದ ಮೇಲೆ ವಿಮಲಾಪ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ಸಮಾಸಾನ್ತ ಅ ಪ್ರತ್ಯಯವು ಬಂದು ವಿಮಲಾಪ್+ಅ ಎಂದಿರುತ್ತದೆ. ಪ್ರಾತಿಪದಿಕ ಸಂಜ್ಞೆಯು ಬಂದು ಸು ಪ್ರತ್ಯಯವನ್ನು ಸೇರಿಸಿದಾಗ ನಪುಂಸಕ ಲಿಂಗವಾಗಿ ಸು ಗೆ ಅಮ್ ಆದೇಶವು ಬಂದು ಪೂರ್ವರೂಪ ಮಾಡಿದಾಗ ವಿಮಲಾಪಂ-ಸರಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ:- ರಾಜಧುರಾ (ರಾಜನ ಕಾರ್ಯಭಾರ):- ರಾಜ್ಞಃ ಧೂಃ ಎಂಬುದು ಲೌಕಿಕವಿಗ್ರಹ ವಾಕ್ಯ. ರಾಜನ್+ಜಸ್ ಧುರ್+ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ಷಷ್ಠೀ ಎಂಬ ಸೂತ್ರದಿಂದ ತತ್ಪುರುಷ ಸಮಾಸಮಾಡಿದಾಗ ಪ್ರಾತಿಪದಿಕ ಸಂಜ್ಞೆಯು ಬಂದು ಸುಪ್ ಲೋಪವಾಗಿ ನಲೋಪಃ ಪ್ರಾತಿಪದಕಾನ್ತಸ್ಯ ಎಂಬ ಸೂತ್ರದಿಂದ ನ್ ಲೋಪವಾಗಿ ರಾಜ+ಧುರ್ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ಸಮಾಸಾನ್ತ ಅ ಪ್ರತ್ಯಯವು ಬಂದು ರಾಜ+ಧುರ್+ಅ=ರಾಜಧುರ ಎಂದಿರುತ್ತದೆ. ಧುರ್ ಶಬ್ದವು ಸ್ತ್ರೀಲಿಂಗವಾಗಿರುವುದರಿಂದ ಅಜಾದ್ಯತ್‌ಷ್ಟಾಪ್ ಎಂಬ ಸೂತ್ರದಿಂದ ಟಾಪ್ (ಆ) ಬಂದು ಸವರ್ಣದೀರ್ಘವಾಗಿ ರಾಜಧುರಾ ಎಂದಿರುತ್ತದೆ. ಅದನ್ನು ಸುಬಂತ ಮಾಡಿದಾಗ ಸ್ತ್ರೀಲಿಂಗವಾಗಿರುವುದರಿಂದ ಹಲ್‌ಜ್ಯಾಭ್ಯೋ... ಹಲ್ ಎಂಬ ಸೂತ್ರದಿಂದ ಸ್ ಲೋಪವಾಗಿ ರಾಜಧುರಾ ಎಂದು ರೂಪವು ಸಿದ್ಧವಾಗುತ್ತದೆ.

ಉದಾ:- ಅಕ್ಷೇ ತು ಅಕ್ಷಧೂಃ (ಇರುಸುಗೆ ಸಂಬಂಧಿಸಿದ ವಸ್ತು):- ಸೂತ್ರದಲ್ಲಿ ಅನಕ್ಷೇ ಎಂದು ಹೇಳಿರುವುದರಿಂದ ಅಕ್ಷ ಶಬ್ದಕ್ಕೆ ಸಂಬಂಧಿಸಿದ ಧೂರ್ ಶಬ್ದದ

ಕೊನೆಯಲ್ಲಿ ಅ ಪ್ರತ್ಯಯವು ನಿಷೇಧಿಸಲಾಗಿದೆ ಆದುದರಿಂದ ಅಕ್ಷಸ್ಯ ಧೂಃ ಅಕ್ಷ ಧೂಃ ಎಂಬ ಷಷ್ಠೀ ತತ್ಪುರುಷ ಸಮಾಸದಲ್ಲೂ ಮತ್ತು ದೃಢಾಧೂಃ ಯಸ್ಯಸಃ ಎಂಬ ಬಹುವ್ರಿಹಿ ಸಮಾಸದಲ್ಲೂ ಅಂತ್ಯದಲ್ಲಿರುವ ಧೂ ಶಬ್ದಕ್ಕೆ ಅ ಪ್ರತ್ಯಯವು ಬಾರದೆ ಅಕ್ಷ ಧೂಃ ದೃಢ ಧೂಃ ಎಂಬ ರೂಪಗಳು ಸಿದ್ಧವಾಗಿವೆ.

ಉದಾ:- ಸಖಿಪಥಃ (ಮಿತ್ರನ ಮಾರ್ಗ):- ಸಖ್ಯೋಃ ಪಂಥಾಃ ಎಂಬುದು ಲೌಕಿಕವಿಗ್ರಹ ವಾಕ್ಯ. ಸಖಿ+ಜಸ್+ಪಥಿನ್+ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ಷಷ್ಠೀ ಸಮಾಸದಲ್ಲಿ ಇರುವ ಪಥಿನ್ ಶಬ್ದಕ್ಕೆ ಪ್ರಕೃತ ಸೂತ್ರದಿಂದ ಅ ಪ್ರತ್ಯಯವು ಬರುತ್ತದೆ. ಪ್ರಾತಿಪದಿಕ ಸಂಜ್ಞೆಯು ಬಂದು ಸುಪ್ ಲೋಪವಾದ ಮೇಲೆ ಸಖಿ+ಪಥಿನ್+ಅ ಎಂದಿದ್ದಾಗ ಭಸ್ಯಟೇರ್ಲೋಪಃ ಎಂಬ ಸೂತ್ರದಿಂದ ಸಖಿಪಥಿನ್

ಎಂಬಲ್ಲಿರುವ ಟಿ ಗೆ ಲೋಪವು ಬಂದು ಸಖಿಪಥ್+ಅ= ಸಖಿಪಥ ಎಂದಿದ್ದಾಗ ಪ್ರಾತಿಪದಿಕ ಸಂಜ್ಞೆಯು ಬಂದು ಸುಬಂತವಾದ ಮೇಲೆ ಸಖಿಪಥಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ:– ರಮ್ಯಪಥಃ (ದೇಶಃ):– (ಸುಂದರವಾದ ಬೀದಿಗಳುಳ್ಳ ದೇಶ):– ರಮ್ಯಾಃ ಪಂಥಾನಃ ಯಸ್ಯ ಸಃ ಎಂಬುದು ಲೌಕಿಕವಿಗ್ರಹ ವಾಕ್ಯ. ರಮ್ಯ+ಸು ಪಥಿನ್+ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ಬಹುವ್ರೀಹಿ ಸಮಾಸಾನ್ತದಲ್ಲಿ ಇರುವ ಪಥಿನ್ ಶಬ್ದಕ್ಕೆ ಪ್ರಕೃತ ಸೂತ್ರದಿಂದ ಅ ಪ್ರತ್ಯಯವು ಬರುತ್ತದೆ. ಪ್ರಾತಿಪದಿಕ ಸಂಜ್ಞೆಯು ಬಂದು ಸುಪ್ ಲೋಪವಾದ ಮೇಲೆ ರಮ್ಯ+ಪಥಿನ್+ಅ ಎಂದಿದ್ದಾಗ ಭಸ್ಯಟೇರ್ಲೋಪಃ ಎಂಬ ಸೂತ್ರದಿಂದ ರಮ್ಯಪಥಿನ್ ಎಂಬಲ್ಲಿರುವ ಟಿ (ಇನ್)ಗೆ ಲೋಪವು ಬಂದು ರಮ್ಯಪಥ್+ಅ= ರಮ್ಯಪಥ ಎಂದಿದ್ದಾಗ ಪ್ರಾತಿಪದಿಕ ಸಂಜ್ಞೆಯು ಬಂದು ಸುಬಂತವಾದ ಮೇಲೆ ರಮ್ಯಪಥಃ ಎಂಬ ಪುಲ್ಲಿಂಗ ರೂಪವು ಸಿದ್ಧವಾಗುತ್ತದೆ.

**(ಅಚ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ – 996 .ಅಕ್ಷ್ಣೋऽದರ್ಶನಾತ್।(5.4.76)**

ವೃತ್ತಿ– ಅಚಕ್ಷುಃ ಪರ್ಯಾಯಾತ್ ಅಕ್ಷ್ಣೋಃ ಅಚ್ ಸ್ಯಾತ್ ಸಮಾಸಾನ್ತಃ। ಗವಾಮ್ ಅಕ್ಷೀವ–ಗವಾಕ್ಷಃ।

ಪ. ಛೇ– ಅಕ್ಷ್ಣಃ, ಅದರ್ಶನಾತ್ ।

ಅ. ವ್ಯ.–ಅಚ್ ಪ್ರತ್ಯನ್ವ ವ ಪೂರ್ವಾತ್ ಸಾಮಲೋಮ್ನಃ ಎಂಬ ಸೂತ್ರದಿಂದ ಅಚ್ ಎಂಬ ಶಬ್ದವು ಅನುವೃತ್ತವಾಗುತ್ತದೆ. ಪ್ರತ್ಯಯಃ, ಪರಶ್ಚ, ಸಮಾಸಾನ್ತಾಃ ಮತ್ತು ತದ್ಧಿತಾಃ ಎಂಬವು ಅಧೀಕಾರ ಸೂತ್ರಗಳಾಗಿವೆ.

ಅರ್ಥ. – ಅಕ್ಷಿ ಶಬ್ದವು ಚಕ್ಷುಃ (ಕಣ್ಣು)ಎಂಬರ್ಥವನ್ನು ಹೇಳದಿದ್ದರೆ ಅಂತಹ ಅಕ್ಷ ಶಬ್ದದ ಕೊನೆಯಲ್ಲಿ ಸಮಾಸಾನ್ತ ಅಚ್ ಪ್ರತ್ಯಯವು ಬರುತ್ತದೆ.

ಉದಾ:– ಗವಾಕ್ಷಃ (ಆಕಳ ಕಣ್ಣಿನಂತೆ ಇರುವ ಕಿಟಕಿ):– ಗವಾಮ್ ಅಕ್ಷೀವ ಎಂಬುದು ಲೌಕಿಕವಿಗ್ರಹ ವಾಕ್ಯ. ಗೋ+ಆಮ್ ಅಕ್ಷಿ+ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ಇಲ್ಲಿ ಅಕ್ಷಿ ಶಬ್ದವು ನೇತ್ರ ವಾಚಕವಲ್ಲ. ಕಣ್ಣನಂತೆ ಇರುವ ಕಿಟಕಿಯನ್ನು ಸೂಚಿಸುತ್ತದೆ. ಷಷ್ಠೀ ಎಂಬ ಸೂತ್ರದಿಂದ ಷಷ್ಠೀ ತತ್ಪುರುಷ ಸಮಾಸವಾದ ಮೇಲೆ ಪ್ರಾತಿಪದಿಕ ಸಂಜ್ಞೆಯು

ಬಂದು ಸುಪ್ ಲೋಪವಾದ ಮೇಲೆ ಗೋ+ಅಕ್ಷಿ ಎಂದಿರುತ್ತದೆ. ಅವಜ್ ಸ್ಫೋಟಾಯನಸ್ಯ ಎಂಬ ಸೂತ್ರದಿಂದ ಅವಜ್ ಆದೇಶವು ಬಂದು ಸವರ್ಣದೀರ್ಘವಾಗಿ ಗವಾಕ್ಷಿ+ಅ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ಸಮಾಸಾನ್ತ ಅಚ್ ಪ್ರತ್ಯಯವು ಬಂದು ಭ ಸಂಜ್ಞೆಯುಳ್ಳ ಅಕ್ಷಿ ಶಬ್ದದ ಇ ಕಾರಕ್ಕೆ ಯಸ್ಯೇತಿಚ ಎಂಬುದರಿಂದ ಲೋಪವು ಬಂದು ಗವಾಕ್ಷ ಎಂದಿರುತ್ತದೆ. ಪ್ರಾತಿಪದಿಕ ಸಂಜ್ಞೆಯು ಬಂದು ಸುಬಂತ ಮಾಡಿದಾಗ ಗವಾಕ್ಷಃ ಎಂದು ರೂಪವು ಸಿದ್ಧವಾಗುತ್ತದೆ.

(ಅಚ್ ಪ್ರತ್ಯಯವನ್ನು ವಿಧಿಸುವ ಮತ್ತೊಂದು ಸೂತ್ರ)

**ಸೂತ್ರ - 997. ಉಪಸರ್ಗಾದಧ್ವನಃ। (5.4.85)**

ವೃತ್ತಿ- ಪ್ರಗತಃ ಅಧ್ವಾನಂ ಪ್ರಾಧ್ವ ರಥಃ।

ಪ. ಛೇ- ಉಪಸರ್ಗಾತ್, ಅಧ್ವನಃ।

ಅ. ವೃ.- ಅಚ್ ಪ್ರತ್ಯನ್ವ ವ ಪೂರ್ವಾತ್ ಸಾಮಲೋಮ್ನನಃ ಎಂಬ ಸೂತ್ರದಿಂದ ಅಚ್ ಎಂಬ ಶಬ್ದವು ಅನುವೃತ್ತವಾಗುತ್ತದೆ. ಪ್ರತ್ಯಯಃ, ಪರಶ್ಚ, ಸಮಾಸಾನ್ತಾಃ ಮತ್ತು ತದ್ಧಿತಾಃ ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ. - ಉಪಸರ್ಗಗಳ (ಪ್ರಾದಿಗಳ) ಪರದಲ್ಲಿ ಇರುವ ಅಧ್ವನ್ ಶಬ್ದದ ನಂತರ ಸಮಾಸಾನ್ತವಾದ ಅಚ್ ಪ್ರತ್ಯಯವು ಬರುತ್ತದೆ.

ಉದಾ:- ಪ್ರಾಧ್ವಃ (ರಥಃ):- (ಮಾರ್ಗದಲ್ಲಿ ಹೊಗುವ ರಥ) ಪ್ರಗತಃ ಅಧ್ವಾನಂ ಎಂಬುದು ಲೌಕಿಕವಿಗ್ರಹ ವಾಕ್ಯ. ಪ್ರ+ಅಧ್ವನ್+ಅಮ್ ಎಂಬುದು ಅಲೌಕಿಕವಿಗ್ರಹ ವಾಕ್ಯ. ಅತ್ಯಾದಯಃ ಕ್ರಾಂತಾದ್ಯರ್ಥೇ ದ್ವಿತೀಯಯಾ ಎಂಬ ವಾರ್ತಿಕದಿಂದ ಸಮಾಸವಾಗಿ ಪ್ರಾತಿಪದಿಕ ಸಂಜ್ಞೆಯು ಬಂದು ಸುಪ್ ಲೋಪವಾದ ಮೇಲೆ ಪ್ರ+ಅಧ್ವನ್ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ಸಮಾಸಾನ್ತ ಅಚ್ ಪ್ರತ್ಯಯವು ಬಂದು ನಸ್ ತದ್ಧಿತೇ ಎಂಬುದರಿಂದ ಅನ್ ಎಂಬ ಟಿ ಗೆ ಲೋಪವು ಬಂದು ಪ್ರ+ಅಧ್ವ್+ಅ ಎಂದಿರುತ್ತದೆ. ಸವರ್ಣದೀರ್ಘವಾದ ಮೇಲೆ ಪಾಧ್ವ ಎಂದಾಗುತ್ತದೆ. ಪ್ರಾತಿಪದಿಕ ಸಂಜ್ಞೆಯು ಬಂದು ಸುಬಂತ ಮಾಡಿದಾಗ ಪ್ರಾಧ್ವಃಎಂದು ರೂಪವು ಸಿದ್ಧವಾಗುತ್ತದೆ.

(ಸಮಾಸಾನ್ತ ಪ್ರತ್ಯಯವನ್ನು ನಿಷೇಧಿಸುವ ಸೂತ್ರ)

**ಸೂತ್ರ -998 . ನ ಪೂಜನಾತ್।(5.4.69)**

ವೃತ್ತಿ- ಪೂಜನಾರ್ಥಾತ್ ಪರೇಭ್ಯಃ ಸಮಾಸಾನ್ತಾಃ ನ ಸ್ಯುಃ। (ಸ್ವತಿಭ್ಯಾಮೇವ) ಸುರಾಜಾ। ಅತಿರಾಜಾ।

ಇತಿ (43)ಸಮಾಸಾನ್ತಾಃ

ಅ. ವೃ:- ಪ್ರತ್ಯಯಃ, ಪರಶ್ಚ, ಸಮಾಸಾನ್ತಾಃ ಮತ್ತು ತದ್ಧಿತಾಃ ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ :- ಸು ಮತ್ತು ಅತಿ ಎಂಬ ಪೂಜಾರ್ಥಕ (ಪ್ರಶಂಸಾರ್ಥಕ) ಶಬ್ದದ ಪರದಲ್ಲಿ ಇರುವ ಶಬ್ದಗಳ ನಂತರ ಸಮಾಸಾನ್ತ ಪ್ರತ್ಯಯವು ಬರುವುದಿಲ್ಲ.

ಸೂಚನೆ:- ಸ್ವತಿಭ್ಯಾಮ್ ಏವ ಎಂದು ಇದಕ್ಕೆ ಕೆಲವು ಗಂಥ್ರಗಳಲ್ಲಿ ವಾರ್ತಿಕವು ಕಂಡು ಬರುತ್ತದೆ. ಈ ಅರ್ಥವನ್ನು ಸೂತಾರ್ಥದಲ್ಲಿಯೇ ತಿಳಿಸಲಾಗಿದೆ.

ಉದಾ:- ಸುರಾಜಾ (ಒಳ್ಳೆಯ ರಾಜನು):- ಶೋಭನಃ ರಾಜಾ ಎಂಬುದು ಲೌಕಿಕವಿಗ್ರಹ ವಾಕ್ಯ. ಸು+ರಾಜನ್ ರಾಜನ್+ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ಕುಗತಿಪ್ರಾದಯಃ ಎಂಬ ಸೂತ್ರದಿಂದ ತತ್ಪುರುಷ ಸಮಾಸವಾಗಿ ಪ್ರಾತಿಪದಿಕ ಸಂಜ್ಞೆಯು

ಬಂದು ಸುಪ್ ಲೋಪವಾದ ಮೇಲೆ ಸುರಾಜನ್ ಎಂದಿರುತ್ತದೆ. ರಾಜಾಹಃಸಖಿಭ್ಯಷ್ಟಚ್ ಎಂಬ ಸೂತ್ರದಿಂದ ಸಮಾಸಾನ್ತ–ಟಚ್ (ಅ) ಪ್ರತ್ಯಯವು ಬರಬೇಕಾಗಿತ್ತು ಪ್ರಕೃತ ಸೂತ್ರದಿಂದ ಅದನ್ನು ಬಾಧಿಸಲಾಗಿದೆ. ಆದುದರಿಂದ ಸುರಾಜನ್ ಎಂಬುದೇ ಪ್ರಾತಿಪದಿಕವಾಗಿ ಅದನ್ನು ಸುಬಂತ ಮಾಡಿದಾಗ ಸುರಾಜಾ ಎಂದು ರೂಪವು ಸಿದ್ಧವಾಗುತ್ತದೆ.

ಉದಾ:– ಅತಿರಾಜಾ (ಒಳ್ಳೆಯ ರಾಜನು):– ಅತಿಶಯಿತಃ ರಾಜಾ ಎಂಬುದು ಲೌಕಿಕವಿಗ್ರಹ ವಾಕ್ಯ. ಅತಿ+ರಾಜನ್+ಸು ಎಂಬುದು ಅಲೌಕಿಕವಿಗ್ರಹ ವಾಕ್ಯ. ಕುಗತಿಪ್ರಾದಯಃ ಎಂಬ ಸೂತ್ರದಿಂದ ತತ್ಪುರುಷ ಸಮಾಸವಾಗಿ ಪ್ರಾತಿಪದಿಕ ಸಂಜ್ಞೆಯು ಬಂದು ಸುಪ್ ಲೋಪವಾದ ಮೇಲೆ ಅತಿರಾಜನ್ ಎಂದಿರುತ್ತದೆ. ರಾಜಾಹಃಸಖಿಭ್ಯಷ್ಟಚ್ ಎಂಬ ಸೂತ್ರದಿಂದ ಸಮಾಸಾತ್ತ ಟಚ್ (ಅ) ಪ್ರತ್ಯಯವು ಬರಬೇಕಾಗಿತ್ತು ಪ್ರಕೃತ ಸೂತ್ರದಿಂದ ಅದನ್ನು ಬಾಧಿಸಲಾಗಿದೆ. ಆದುದರಿಂದ ಅತಿರಾಜನ್ ಎಂಬುದೇ ಪ್ರಾತಿಪದಿಕವಾಗಿ, ಅದನ್ನು ಸುಬಂತ ಮಾಡಿದಾಗ ಅತಿರಾಜಾ ಎಂದು ರೂಪವು ಸಿದ್ಧವಾಗುತ್ತದೆ.

**॥ ಸಮಾಸಾನ್ತ (43) ಪ್ರಕರಣವು ಮುಗಿಯಿತು ॥**

**॥ ಸಮಾಸ ಪ್ರಕರಣವು ಮುಗಿಯಿತು ॥**

# ಪ್ರಕರಣ-44: ಸಾಧಾರಣ ತದ್ಧಿತ ಪ್ರತ್ಯಯಾಃ

**(ಸೂ.ಸಂ. 998-1004)**

ಶ್ರೀ ವರದರಾಜರು ಸಮಾಸ ಪ್ರಕರಣವನ್ನು ಮುಗಿಸಿದ ನಂತರ ತದ್ಧಿತ ಪ್ರಕರಣವನ್ನು ಆರಂಭಿಸುತ್ತಾರೆ. ಮೊಟ್ಟಮೊದಲಾಗಿ ತದ್ಧಿತಾರ್ಥದಲ್ಲಿ ಬರುವ ಸಾಧಾರಣ ಪ್ರತ್ಯಯಗಳನ್ನು ಹೇಳುತ್ತಾರೆ.

**(ಅಧಿಕಾರ ಸೂತ್ರ)**

**ಸೂತ್ರ. 999 - ಸಮರ್ಥಾನಾಂ ಪ್ರಥಮಾದ್ವಾ। (4.1.82)**

ವೃತ್ತಿ- ಇದಂ ಪದತ್ರಯಮಧಿಕ್ರಿಯತೆ ಪ್ರಾಗ್ದಿಶ ಇತಿ ಯಾವತ್।

ಪ. ಛೇ-ಸಮರ್ಥಾನಾಂ, ಪ್ರಥಮಾತ್, ವಾ।

ಅ. ವೃ.- "ಪ್ರಾಗ್ದಿಶೋ ವಿಭಕ್ತಿ: (5. 3. 1)" ಎಂಬ ಸೂತ್ರದವರೆಗೆ, ಸಮರ್ಥಾನಾಂ ಪ್ರಥಮಾತ್, ವಾ ಈ ಮೂರು ಪದಗಳು ಅಧಿಕಾರ ಸೂತ್ರಗಳಾಗಿರುತ್ತವೆ.

ಅರ್ಥ. - ಕೃದಂತ ಮತ್ತು ತದ್ಧಿತ ಪ್ರತ್ಯಯಗಳು ಪ್ರಸಿದ್ಧವಾದವು. ಕೃತ್-ಪ್ರತ್ಯಯಗಳನ್ನು ಧಾತುವಿನ ಜೊತೆಗೆ ಸೇರಿಸಿದಾಗ ಕೃದಂತಗಳಾಗುತ್ತವೆ.

ತದ್ಧಿತ ಪ್ರತ್ಯಯಗಳನ್ನು ಪ್ರಾತಿಪದಿಕಗಳ ನಂತರ ಸೇರಿಸಿದರೆ ತದ್ಧಿತಾಂತಗಳಾಗುತ್ತವೆ. "ಕೃತ್‌ತದ್ಧಿತ ಸಮಾಸಾಶ್ಚ" ಎಂಬ ಸೂತ್ರದಿಂದ ಇವುಗಳಿಗೆ ಪ್ರಾತಿಪದಿಕ ಸಂಜ್ಞೆ ಬರುತ್ತದೆ. ತದನಂತರ ಸುಪ್-ಪ್ರತ್ಯಯಗಳನ್ನು ಸೇರಿಸಿದರೆ ಸುಬಂತಗಳಾಗುತ್ತವೆ.

ಪ್ರಕೃತ ಸಾಧಾರಣ ತದ್ಧಿತ ಪ್ರತ್ಯಯಗಳನ್ನು ಹೇಳಿ ನಂತರ ವಿಶೇಷಾರ್ಥಗಳನ್ನು ಕೊಡುವ ಬೇರೆ ಬೇರೆ ಪ್ರತ್ಯಯಗಳನ್ನು ಬೇರೆ ಬೇರೆಯಾಗಿ ನಿರೂಪಿಸುತ್ತಾರೆ.

ಪ್ರಕೃತ ಸೂತ್ರವು "ಸಮರ್ಥಃ ಪದವಿಧಿಃ" ಎಂಬ ಸೂತ್ರದಿಂದ ಪ್ರಭಾವಿತವಾಗಿದೆ. ಈ ತದ್ಧಿತ ಪ್ರತ್ಯಯವು ಏಕಾರ್ಥೀಭಾವವುಳ್ಳ ಶಬ್ದದ ಮೇಲೆ ಸೇರಿಸಲಾಗುತ್ತದೆ. ಅಂದರೆ ಆ ಶಬ್ದವು ಪರಿನಿಷ್ಠಿತವಾಗಬೇಕಾದರೆ ಸಂಧಿಕಾರ್ಯಗಳಿಂದ ಕೂಡಿ ಸರಿಯಾದ ಅರ್ಥ ಕೊಡುವಂತಹದ್ದಾಗಿರಬೇಕು. ತದ್ಧಿತ ಪ್ರತ್ಯಯಗಳನ್ನು ಸೂತ್ರಗಳಲ್ಲಿ ಪ್ರಥಮೋಚ್ಚರಿತವಾದ ಷಷ್ಠ್ಯಂತ ಶಬ್ದಗಳ ಮೇಲೆ ಸೇರಿಸಬೇಕು.

**(ಅಣ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**(ಅಶ್ವಪತ್ಯಾದಿಗಳಿಗೆ ಅಣ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

ಸೂತ್ರ - 1000. ಅಶ್ವಪತ್ಯಾದಿಭ್ಯಶ್ಚ। (4.1.84)

ವೃತ್ತಿ- ಏಭ್ಯೋಽಣ್ ಸ್ಯಾತ್ ಪ್ರಾಗ್ದೀವ್ಯತೀಯೇಷ್ವರ್ಥೇಷು । ಅಶ್ವಪತೇರಪತ್ಯಾದಿ ಆಶ್ವಪತಂ। ಗಾಣಪತಂ।

ಪ. ಛೇ- ಅಶ್ವಪತ್ಯಾದಿಭ್ಯಃ, ಚ।

ಅ. ವೃ.- "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಪ್ರತ್ಯಯಃ", "ಪರಶ್ಚ",

"ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಮತ್ತು "ಪ್ರಾಗ್‌ದೀವ್ಯತೋಽಣ್" ಈ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ. –ಪ್ರಾಗ್‌ದೀವ್ಯತೀಯ ಅರ್ಥದಲ್ಲಿ ಅಶ್ವಪತಿ ಮೊದಲಾದ ಗಣಪಠಿತ ಶಬ್ದಗಳ ನಂತರ ಅಣ್ ಪ್ರತ್ಯಯವು ಬರುತ್ತದೆ.

ಉದಾ– ಆಶ್ವಪತಂ (ಅಶ್ವಪತಿಯ ಸಂತಾನ ಮೊದಲಾದವು) – ಇದರ ಲೌಕಿಕ ವಿಗ್ರಹವು ಅಶ್ವಪತೇಃ ಅಪತ್ಯಾದಿ=ಆಶ್ವಪತಂ. ಅಲೌಕಿಕ ವಿಗ್ರಹವು ಹೀಗಿದೆ – ಅಶ್ವಪತಿ+ಜಸ್ ಎಂದಿದ್ದಾಗ "ಅಶ್ವಪತ್ಯಾದಿಭ್ಯಶ್ಚ" ಎಂಬ ಸೂತ್ರದಿಂದ ಅಣ್ ಪ್ರತ್ಯಯವು ಬರುತ್ತದೆ. ಆಗ ಅಶ್ವಪತಿ+ಜಸ್+ಅಣ್ ಎಂದಿರುತ್ತದೆ.ಅಶ್ವಪತಿ+ಜಸ್+ಅಣ್(ಅ) ಎಂದಿದ್ದಾಗ ಇದು ತದ್ಧಿತಾಂತ ಶಬ್ದವಾಗುತ್ತದೆ. "ಕೃತ್‌ತದ್ಧಿತ ಸಮಾಸಾಶ್ಚ" ಎಂಬ ಸೂತ್ರದಿಂದ ಇದಕ್ಕೆ ಪ್ರಾತಿಪದಿಕ–ಸಂಜ್ಞೆ ಬರುತ್ತದೆ. ಇದರಲ್ಲಿರುವ 'ಜಸ್' ಎಂಬ ಸುಪ್ ಪ್ರತ್ಯಯಕ್ಕೆ "ಸುಪೋಧಾತು ಪ್ರಾತಿಪದಿಕಯೋಃ" ಎಂಬ ಸೂತ್ರದಿಂದ 'ಲುಕ್' (ಲೋಪ) ಬರುತ್ತದೆ. ಆಗ ಅಶ್ವಪತಿ+ಅ ಎಂದಿರುತ್ತದೆ. ಈ 'ಅ' ಪ್ರತ್ಯಯವು 'ಣಿತ್' ಆಗಿರೋದರಿಂದ ಆದಿ–ವೃದ್ಧಿ ಬರಬೇಕಾಗಿದೆ. ಅಶ್ವಪತಿ ಶಬ್ದದಲ್ಲಿ ಮೊದಲನೇ 'ಅಚ್' ವರ್ಣವು 'ಅ' ಕಾರವಾಗಿದೆ. "ತದ್ಧಿತೇಷ್ವಚಾಮಾದೇಃ" ಎಂಬ ಸೂತ್ರದಿಂದ ಆ 'ಅ' ಕಾರಕ್ಕೆ ವೃದ್ಧಿ ಬಂದು ಆಶ್ವಪತಿ+ಅ ಎಂದಿರುತ್ತದೆ. ಈಗ ತದ್ಧಿತ ಪ್ರತ್ಯಯವಾದ 'ಅ' ಪರದಲ್ಲಿರುವುದರಿಂದ 'ಯಣ್' ಸಂಧಿ ಬಂದು ಆಶ್ವಪತ್ಯ ಎಂಬ ಅನಿಷ್ಟರೂಪವು ಸಿದ್ಧವಾಗುತ್ತಿತ್ತು. ಅದನ್ನು ಪರಿಹರಿಸುವುದಕ್ಕಾಗಿ "ಯಸ್ಯೇತಿಚ" ಎಂಬ ಸೂತ್ರದಿಂದ 'ಇ' ಕಾರಕ್ಕೆ ಲೋಪ ಬಂದು ಆಶ್ವಪತ್+ಅ ಎಂದಿರುತ್ತದೆ. ಎರಡು ಶಬ್ದಗಳನ್ನು ಸೇರಿಸಿದಾಗ 'ಆಶ್ವಪತ' ಎಂದಾಗುತ್ತದೆ. ಇದು ತದ್ಧಿತಾಂತವಾಗಿರುವುದರಿಂದ ಪ್ರಾತಿಪದಿಕ–ಸಂಜ್ಞೆಯನ್ನು ಹೊಂದುತ್ತದೆ. ಇದಕ್ಕೆ ನಪುಂಸಕ ಲಿಂಗದಲ್ಲಿ 'ಸು'ಪ್ರತ್ಯಯವನ್ನು ಸೇರಿಸಿದರೆ ಆಶ್ವಪತ+ಸು ಎಂದಿರುತ್ತದೆ. "ಅತೋಽಮ್" ಎಂಬ ಸೂತ್ರದಿಂದ 'ಅಂ' ಆದೇಶ ಬರುತ್ತದೆ. ತದನಂತರ "ಅಮಿಪೂರ್ವಃ" ಎಂಬ ಸೂತ್ರದಿಂದ ಆಶ್ವಪತ+ಅಂ ಎಂದಿದ್ದು ಇದಕ್ಕೆ "ಅತೋಗುಣೇ" ಎಂಬ ಸೂತ್ರದಿಂದ ಪೂರ್ವರೂಪ ಬಂದು ಆಶ್ವಪತಂ ಎಂಬ ರೂಪವು ಸಿದ್ಧವಾಗುತ್ತದೆ.

**(ಣ್ಯ – ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ. 1001 – ದಿತ್ಯದಿತ್ಯಾದಿತ್ಯ–ಪತ್ಯುತ್ತರಪದಾಣ್ಣ್ಯಃ॥(4.1.85)**

ವೃತ್ತಿ– ದಿತ್ಯಾದಿಭ್ಯಃ ಪತ್ಯುತ್ತರಪದಾಚ್ಚ ಪ್ರಾಗ್ದೀವ್ಯತೀಯೇಷ್ವರ್ಥೇಷು ಣ್ಯಃ ಸ್ಯಾತ್। ಅಣೋಽಪವಾದಃ॥ ದಿತೇರಪತ್ಯಂ ದೈತ್ಯಃ॥ ಅದಿತೇರಾದಿತ್ಯಸ್ಯ ವಾ (ಅಪತ್ಯಮ್)

ಪ. ಛೇ– ದಿತಿ,ಅದಿತಿ, ಆದಿತ್ಯ–ಪತಿ–ಉತ್ತರಪದಾತ್, ಣ್ಯಃ॥

ಅ. ವೃ.– "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಮತ್ತು "ಪ್ರಾಗ್ ದೀವ್ಯತ್ಯೋಽಣ್"ಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ. -ಪ್ರಾಗ್ದೀವ್ಯತೀಯ ಅರ್ಥದಲ್ಲಿ ದಿತಿ, ಅದಿತಿ, ಆದಿತ್ಯ ಮತ್ತು ಪತಿ ಶಬ್ದವನ್ನು ಉತ್ತರಪದವಾಗುಳ್ಳ ಶಬ್ದಗಳ ನಂತರ 'ಣ್ಯ' ಪ್ರತ್ಯಯವು ಬರುತ್ತದೆ. ಣ್ಯ ಪ್ರತ್ಯಯದಲ್ಲಿ 'ಯ' ಮಾತ್ರ ಉಳಿಯುತ್ತದೆ.

ಉದಾ:- ದೈತ್ಯಃ (ದಿತಿಯ ಮಗ) ಇದರ ಲೌಕಿಕ ವಿಗ್ರಹ 'ದಿತೇಃ ಅಪತ್ಯಂ' ಎಂದು ಆಗುತ್ತದೆ. ದಿತಿ+ಜಸ್+ಅಪತ್ಯಂ ಎಂಬುದು ಅಲೌಕಿಕ ವಿಗ್ರಹ. "ದಿತ್ಯ-ದಿತ್ಯಾ-ದಿತ್ಯ-ಪತ್ಯುತ್ತರ-ಪದಾಣ್ಯಃ" ಎಂಬ ಸೂತ್ರದಿಂದ ಅಪತ್ಯಾರ್ಥದಲ್ಲಿ ಣ್ಯ(ಯ) ಪ್ರತ್ಯಯವು ಬಂದು ದಿತಿ+ಜಸ್+ಯ ಎಂದಿರುತ್ತದೆ. "ಕೃತ್‌ತದ್ಧಿತ ಸಮಾಸಾಶ್ಚ"ಎಂಬ ಸೂತ್ರದಿಂದ ತದ್ಧಿತಾಂತವಾದ ಈ ಪದಕ್ಕೆ ಪ್ರಾತಿಪದಿಕ-ಸಂಜ್ಞೆ ಬರುವುದರಿಂದ "ಸುಪೋಧಾತು ಪ್ರಾತಿಪದಿಕಯೋಃ"ಎಂಬ ಸೂತ್ರದಿಂದ ಸುಪ್-ಪ್ರತ್ಯಯವಾದ ಜಸ್‌ಗೆ ಲೋಪ ಬಂದು (ಲುಕ್ ಬಂದು) ದಿತಿ+ಯ ಎಂದಿರುತ್ತದೆ. ಈ 'ಯ' ಪ್ರತ್ಯಯವು ಣಿತ್ ಆಗಿರೋದರಿಂದ "ತದ್ಧಿತೇಷ್ವಚಾಮಾದೇಃ" ಎಂಬ ಸೂತ್ರದಿಂದ ದಿತಿ+ಯ ಎಂಬ ರೂಪದಲ್ಲಿ ಆದಿ ಅಚ್ ವರ್ಣವು 'ಇ' ಅಕ್ಷರವಾಗಿರುವುದರಿಂದ ಅದಕ್ಕೆ ವೃದ್ಧಿ ಬಂದು ದೈತಿ+ಯ ಎಂದಿರುತ್ತದೆ. 'ಯ' ಕಾರಾದಿ ಪ್ರತ್ಯಯವು ಪರದಲ್ಲಿದ್ದಾಗ ಪೂರ್ವ ಶಬ್ದಕ್ಕೆ "ಯಚಿ ಭಂ" ಎಂಬ ಸೂತ್ರದಿಂದ 'ಭ' ಸಂಜ್ಞೆ ಬರುತ್ತದೆ. 'ಭ' ಸಂಜ್ಞಕವಾದ 'ದೈತಿ' ಶಬ್ದದ ಕೊನೆಯಲ್ಲಿರುವ ಸ್ವರಕ್ಕೆ ('ಇ' ಕಾರಕ್ಕೆ) "ಯಸ್ಯೇತಿ ಚ" ಎಂಬ ಸೂತ್ರದಿಂದ ಲೋಪ ಬಂದು ದೈತ್+ಯ=ದೈತ್ಯ ಎಂದಿರುತ್ತದೆ. ಈ ತದ್ಧಿತಾಂತ ಶಬ್ದಕ್ಕೆ "ಕೃತ್ ತದ್ಧಿತ ಸಮಾಸಾಶ್ಚ"ಎಂಬ ಸೂತ್ರದಿಂದ ಪ್ರಾತಿಪದಿಕ-ಸಂಜ್ಞೆ ಬರುತ್ತದೆ. ಇದಕ್ಕೆ 'ಸು' ಪ್ರತ್ಯಯವನ್ನು ಸೇರಿಸಿದಾಗ 'ಸ್' ಕಾರಕ್ಕೆ 'ರುತ್ವ' ವಿಸರ್ಗಗಳು ಬಂದು ದೈತ್ಯಃ ಎಂಬ ರೂಪ ಸಿದ್ಧವಾಗುತ್ತದೆ.

('ಯಮ್' ಪ್ರತ್ಯಾಹಾರಾಂತರ್ಗತ ವರ್ಣಗಳಿಗೆ ಲೋಪವನ್ನು ವಿಧಿಸುವ ಸೂತ್ರ)

ಸೂತ್ರ 1002 – ಹಲೋ ಯಮಾಂ ಯಮಿ ಲೋಪಃ।(8–4–64)

ವೃತ್ತಿ- ಹಲಃ ಪರಸ್ಯ ಯಮೋ ಲೋಪಃ ಸ್ಯಾದ್ ವಾ ಯಮಿ। ಇತಿ ಯಲೋಪಃ। ಆದಿತ್ಯಃ। ಪ್ರಾಜಾಪತ್ಯಃ (ದೇವಾದ್ಯಞಞೌ) ದೈವ್ಯಂ। ದೈವಂ। (ಬಹಿಷ್ಷಷ್ಟಿಲೋಪೋ ಯಞ್ ಚ) ಬಾಹ್ಯಃ। (ಈಕಕ್ ಚ) ಬಾಹೀಕಃ।

ಉದಾ:- ಆದಿತ್ಯಃ – (ಅದಿತಿಯ ಮಗ)- 'ಅದಿತೇಃ ಅಪತ್ಯಂ' ಎಂಬುದು ಲೌಕಿಕ ವಿಗ್ರಹ. ಅದಿತಿ+ಜಸ್+ಣ್ಯ ಎಂಬುದು ತದ್ಧಿತಾಂತ ಅಲೌಕಿಕ ವಿಗ್ರಹ. "ಸುಪೋಧಾತು ಪ್ರಾತಿಪದಿಕಯೋಃ" ಎಂಬುದರಿಂದ ಜಸ್(ಅ) ಲೋಪವಾಗಿ ಅದಿತಿ+ಯ ಎಂದಿರುತ್ತದೆ. ಈ ತದ್ಧಿತ ಪ್ರತ್ಯಯವು ಣಿತ್ ಆಗಿರುವುದರಿಂದ ಆದಿ ವೃದ್ಧಿ ಬಂದು ಆದಿತಿ+ಯ ಎಂದಿರುತ್ತದೆ. ಯ-ಕಾರಾದಿ ಪ್ರತ್ಯಯ ಪರದಲ್ಲಿದ್ದಾಗ ಪೂರ್ವ ಶಬ್ದ ಸ್ವರೂಪಕ್ಕೆ 'ಭ'ಸಂಜ್ಞೆ ಬರುತ್ತದೆ, ಈ 'ಭ' ಸಂಜ್ಞಕ ಶಬ್ದದಲ್ಲಿರುವ 'ಇ' ಕಾರಕ್ಕೆ "ಯಸ್ಯೇತಿ ಚ" ಎಂಬ ಸೂತ್ರದಿಂದ ಲೋಪ ಬಂದು ಆದಿತ್+ಯ=ಆದಿತ್ಯ ಎಂದಿರುತ್ತದೆ. ಇದಕ್ಕೆ 'ಸು' ಎಂಬ ಸುಪ್ ಪ್ರತ್ಯಯವನ್ನು ಸೇರಿಸಿದಾಗ ರುತ್ವ ವಿಸರ್ಗದಿಂದ 'ಆದಿತ್ಯಃ' ಎಂಬ ರೂಪವು ಸಿದ್ಧವಾಗುತ್ತದೆ.

ಉದಾ:– ಆದಿತ್ಯಃ – (ಆದಿತ್ಯನ ಸಂತಾನ/ಮಗ)– 'ಆದಿತ್ಯಸ್ಯ ಅಪತ್ಯಮ್ ಪುಮಾನ್' ಎಂಬುದು ಲೌಕಿಕ ವಿಗ್ರಹ. ಆದಿತ್ಯ+ಜಸ್+ಣ್ಯಃ ಎಂಬುದು ಅಲೌಕಿಕ ವಿಗ್ರಹ. ಹಿಂದಿನಂತೆ 'ಜಸ್' ಗೆ ಲೋಪ ಬಂದು ಆದಿತ್ಯ+ಯ ಎಂದಿರುತ್ತದೆ. "ಯಸ್ಯೇತಿಚ" ಎಂಬುದರಿಂದ 'ಅ' ಕಾರಕ್ಕೆ ಲೋಪ ಬಂದು ಆದಿತ್ಯ್+ಯ ಎಂದಿದ್ದಾಗ ಪ್ರಕೃತ ಸೂತ್ರದಿಂದ ಪೂರ್ವ 'ಯ್' ಕಾರವಾದ 'ಯಮ್' ಪ್ರತ್ಯಾಹಾರಾಂತರ್ಗತವಾದ (ಯ್) ವರ್ಣವು ಲೋಪವಾಗಿ 'ಆದಿತ್ಯ' ಎಂಬ ಪ್ರಾತಿಪದಿಕವಾಗಿದೆ. ಅದು ಸುಬಂತವಾಗಿ ಆದಿತ್ಯಃ ಎಂದಾಗಿದೆ.

ಉದಾ:– ಪ್ರಾಜಾಪತ್ಯಃ (ಪ್ರಜಾಪತಿಯ ಮಗ)– 'ಪ್ರಜಾಪತೇಃ ಅಪತ್ಯಮ್' ಎಂಬುದು ಲೌಕಿಕ ವಿಗ್ರಹ ವಾಕ್ಯ. ಪ್ರಜಾಪತಿ+ಜಸ್ ಎಂಬುದು ಅಲೌಕಿಕ ವಿಗ್ರಹ. ಇಲ್ಲಿ'ಪತಿ' ಶಬ್ದವು ಉತ್ತರಪದವಾಗಿದೆ. ಆದುದರಿಂದ ಇದಕ್ಕೆ 'ಣ್ಯ' ಪತ್ಯಯವು ಬಂದು ಪ್ರಜಾಪತಿ+ಜಸ್+ಣ್ಯ ಎಂದಿರುತ್ತದೆ. ಇದಕ್ಕೆ ಪ್ರಾತಿಪದಿಕ–ಸಂಜ್ಞೆ ಬಂದ ಮೇಲೆ "ಸುಪೋಧಾತು ಪ್ರಾತಿಪದಿಕಯೋಃ" ಎಂಬ ಸೂತ್ರದಿಂದ 'ಜಸ್(ಅ)' ಗೆ ಲೋಪ ಬಂದು ಪ್ರಜಾಪತಿ+ಯ ಎಂದಿರುತ್ತದೆ. "ತದ್ಧಿತೇಷ್ವಚಾಮಾದೇಃ" ಎಂಬ ಸೂತ್ರದಿಂದ ಆದಿ 'ಅಚ್' ವರ್ಣವಾದ 'ಅ' ಕಾರಕ್ಕೆ 'ವೃದ್ಧಿ' ಬಂದು ಪ್ರಾಜಾಪತಿ+ಯ ಎಂದಿರುತ್ತದೆ. ಈ ಶಬ್ದವು 'ಭ' ಸಂಜ್ಞಕವಾಗಿರುವುದರಿಂದ ಇದರ ಕೊನೆಯಲ್ಲಿ ಇರುವ 'ಇ' ಕಾರಕ್ಕೆ "ಯಸ್ಯೇತಿಚ" ಎಂಬ ಸೂತ್ರದಿಂದ ಲೋಪ ಬಂದು ಪ್ರಾಜಾಪತ್+ಯ=ಪ್ರಾಜಾಪತ್ಯ ಎಂದಾಗಿ ಇದಕ್ಕೆ 'ಸು' ಸೇರಿಸಿದಾಗ ರುತ್ವ ವಿಸರ್ಗಗಳಿಂದ 'ಪ್ರಾಜಾಪತ್ಯಃ' ಎಂಬ ರೂಪವು ಸಿದ್ಧವಾಗುತ್ತದೆ.

**(ಯಞ್ ಮತ್ತು ಅಞ್ ಪ್ರತ್ಯಯವನ್ನು ವಿಧಿಸುವ ವಾರ್ತಿಕ)**

**ಮೊದಲನೇ ವಾರ್ತಿಕ:– ದೇವಾದ್ಯಞಞ್। ದೈವ್ಯಮ್। ದೈವಮ್।**

'ದೇವ' ಶಬ್ದದ ನಂತರ ಪ್ರಾಗ್ದೀವ್ಯತೀಯ ಅರ್ಥದಲ್ಲಿ 'ಯಞ್' ಮತ್ತು 'ಅಞ್' ಪ್ರತ್ಯಯಗಳು ಬರುತ್ತವೆ. ಇವುಗಳಲ್ಲಿ 'ಯ' ಮತ್ತು 'ಅ' ಗಳು ಉಳಿಯುತ್ತವೆ. ಈ ವಾರ್ತಿಕವು "ಪ್ರಾಗ್ದೀವ್ಯತೋಽಣ್" ಎಂಬ ಸೂತ್ರದಿಂದ ಬರಬೇಕಾದ ಸಾಮಾನ್ಯವಾದ 'ಅಣ್' ನ್ನು ಬಾಧಿಸಿದೆ.

ಉದಾ:– ದೈವ್ಯಮ್। ದೈವಮ್। (ದೇವರ ಸಂತಾನ) – 'ದೇವಸ್ಯ ಅಪತ್ಯಮ್' ಎಂಬುದು ಲೌಕಿಕ ವಿಗ್ರಹ ವಾಕ್ಯ. ದೇವ+ಜಸ್+ಯ ಎಂದಿದ್ದಾಗ 'ಸುಪ್' ಪ್ರತ್ಯಯವು ಹಿಂದಿನಂತೆ ಲೋಪವಾಗಿ ದೇವ+ಯ ಎಂದಿರುತ್ತದೆ. ಹಿಂದಿನಂತೆ ಆದಿ 'ಅಚ್' ವರ್ಣಕ್ಕೆ 'ವೃದ್ಧಿ' ಬಂದು ('ಏ' ಕಾರಕ್ಕೆ 'ಐ' ಕಾರ ಬಂದು) ದೈವ+ಯ ಎಂದಿರುತ್ತದೆ. "ಯಸ್ಯೇತಿಚ" ಎಂಬುದರಿಂದ 'ದೈವ'ದಲ್ಲಿರುವ 'ಅ' ಕಾರಕ್ಕೆ ಲೋಪ ಬಂದು 'ದೈವ್ಯ' ಎಂದಾಗುತ್ತದೆ, ಅದಕ್ಕೆ 'ಸು' ಪ್ರತ್ಯಯವನ್ನು ಸೇರಿಸಿದಾಗ ನಪುಂಸಕಲಿಂಗದಲ್ಲಿ 'ದೈವ್ಯಮ್' ಎಂದಾಗುತ್ತದೆ.

ಉದಾ– ದೈವಮ್ ಎಂಬಲ್ಲಿಯೂ ಇದೇ ರೀತಿಯಲ್ಲಿ 'ಅಞ್' (ಅ) ಎಂಬ ತದ್ಧಿತ ಪ್ರತ್ಯಯವನ್ನು ಸೇರಿಸಿದಾಗ 'ದೈವಮ್' ಎಂಬ ರೂಪವು ಸಿದ್ಧವಾಗುತ್ತದೆ.

**(ಯಞ್ ಪ್ರತ್ಯಯವನ್ನು ವಿಧಿಸುವ ವಾರ್ತಿಕ)**

ವಾರ್ತಿಕ 2- ಬಹಿಷ್ಷಟಿಲೋಪೋ ಯಞ್ಚ। ಬಾಹ್ಯಃ।

'ಬಹಿಸ್' ಶಬ್ದದ ನಂತರ 'ಯಞ್' ಪ್ರತ್ಯಯವನ್ನು ಸೇರಿಸಿದಾಗ ಬಹಿಸ್ ಶಬ್ದದ 'ಟಿ' ಗೆ ಲೋಪವು ಬರುತ್ತದೆ.

ಉದಾ- ಬಾಹ್ಯಃ (ಹೊರಗೆ ಇರುವವನು) 'ಬಹಿಃ ಭವ:' ಎಂಬುದು ವಿಗ್ರಹ ವಾಕ್ಯ. 'ಬಹಿಸ್' ಶಬ್ದದ ನಂತರ ಪ್ರಕೃತ ವಾರ್ತಿಕದಿಂದ 'ಯಞ್' ಪ್ರತ್ಯಯವು ಬಂದು ಬಹಿಸ್+ಯ ಎಂದಿದ್ದಾಗ, ಬಹಿಸ್ ಶಬ್ದದಲ್ಲಿರುವ 'ಟಿ' (ಇಸ್)ಗೆ ಲೋಪ ಬಂದು, ಬಹ್+ಯ ಎಂದಿರುತ್ತದೆ. ಈ ತದ್ಧಿತ ಪ್ರತ್ಯಯವು 'ಞಿತ್' ಆಗಿರೋದರಿಂದ 'ಬಹ್' ಎಂಬಲ್ಲಿರುವ ಆದಿ 'ಅ' ಕಾರಕ್ಕೆ ('ಅಚ್' ವರ್ಣಕ್ಕೆ) ವೃದ್ಧಿ ಬಂದು, ಬಾಹ್+ಯ=ಬಾಹ್ಯ ಎಂದಾಗಿ 'ಸು' ಸೇರಿಸಿದಾಗ ರುತ್ವ ವಿಸರ್ಗಗಳಿಂದ 'ಬಾಹ್ಯಃ' ಎಂಬ ರೂಪವು ಸಿದ್ಧವಾಗುತ್ತದೆ.

**(ಈಕಕ್ ಪ್ರತ್ಯಯವನ್ನು ವಿಧಿಸುವ ವಾರ್ತಿಕ)**

ವಾರ್ತಿಕ 3-ಈಕಕ್ ಚ।

'ಬಹಿಸ್' ಶಬ್ದದ ನಂತರ 'ಈಕಕ್' ಪ್ರತ್ಯಯವು ಬರುತ್ತದೆ. ಅದರ ಪೂರ್ವದಲ್ಲಿರುವ ಶಬ್ದದ 'ಟಿ' (ಇಸ್) ಗೆ ಲೋಪವು ಬರುತ್ತದೆ. 'ಈಕಕ್' ನಲ್ಲಿ'ಈಕ' ಮಾತ್ರ ಉಳಿಯುತ್ತದೆ.

**(ವೃದ್ಧಿಯನ್ನು ವಿಧಿಸುವ ಸೂತ್ರ)**

**ಸೂತ್ರ - 1003. ಕಿತಿ ಚ। (7-2-118)**

ವೃತ್ತಿ- ಕಿತಿ ತದ್ಧಿತೇ ಚ। ಅಚಾಂ ಆದೇಃ ಅಚಃ ವೃದ್ಧಿಃ ಸ್ಯಾತ್।ಬಾಹೀಕಃ।

ವಾರ್ತಿಕಂ - ಗೋರಜಾದಿ ಪ್ರಸಂಗೇ - ಯತ್ ಗೋರಪತ್ಯಾದಿ ಗವ್ಯಮ್।

ತದ್ಧೀತೇಷ್ವಚಾಮಾದೇ: ಎಂಬ ಸೂತ್ರವು "ಅಚೋಞ್ಣಿತಿ" ಎಂಬ ಸೂತ್ರದಿಂದ ಅಚಃ ಎಂಬ ಪದವು ಮತ್ತು "ಮೃಜೇರ್ವೃದ್ಧಿಃ" ಎಂಬ ಸೂತ್ರದಿಂದ ವೃದ್ಧಿಃ ಎಂಬ ಪದವು ಅನುವೃತ್ತವಾಗಿದೆ.

ಕಿತ್ ಪ್ರತ್ಯಯ ಮತ್ತು ತದ್ಧಿತ ಪ್ರತ್ಯಯಗಳು ಪರದಲ್ಲಿದ್ದಾಗ ಅಚ್ ವರ್ಣಗಳಲ್ಲಿ ಆದಿ ಅಚ್ ವರ್ಣಕ್ಕೆ ವೃದ್ಧಿಯು ಬರುತ್ತದೆ.

ವಿಶೇಷ:- "ತದ್ಧಿತೇಷ್ವಚಾಮಾದೇಃ" ಮತ್ತು "ಕಿತಿ ಚ" ಎಂಬ ಸೂತ್ರಗಳಿರುವುದರಿಂದ ಞಿತ್, ಣಿತ್, ಕಿತ್ ಪ್ರತ್ಯಯಗಳು ಪರದಲ್ಲಿದ್ದಾಗ ಇಡೀ ತದ್ಧಿತ ಪ್ರಕರಣದಲ್ಲಿ ಇವುಗಳ ಉಪಯೋಗವಿರುತ್ತದೆ. ಇದರಿಂದ ಆದಿ ವೃದ್ಧಿಯು ಬರುತ್ತದೆ (ಎಲ್ಲ ರೂಪಗಳಲ್ಲಿಯೂ).

ಉದಾ:- ಬಾಹೀಕಃ। (ಹೊರಗಿರುವವನು/ಹೊರಗಿರುವ) :ಇದರ ಲೌಕಿಕ ವಿಗ್ರಹ ಬಹಿರ್ಭವ: ಎಂದಾಗಿದೆ. ಬಹಿಸ್ ಶಬ್ದದ ನಂತರ ಈಕ್ಕ ಚ ಎಂಬ ವಾರ್ತಿಕದಿಂದ ಈಕಕ್ ಪ್ರತ್ಯಯ ಬಂದು 'ಬಹಿಸ್' ಶಬ್ದದಲ್ಲಿರುವ 'ಟಿ' (ಇಸ್) ಗೆ ಲೋಪವು ಬರುತ್ತದೆ. ಆಗ ಬಹ್+ಈಕ ಎಂದಾಗುತ್ತದೆ. 'ಈಕಕ್'"ಕಿತ್' ಆಗಿರುವುದರಿಂದ "ಕಿತಿ

ಚ" ಎಂಬ ಸೂತ್ರದಿಂದ ಆದಿ 'ಅಚ್' ವರ್ಣವಾದ 'ಅ' ಕಾರಕ್ಕೆ ವೃದ್ಧಿ ಬಂದು ಬಾಹ್+ಈಕ=ಬಾಹೀಕ ಎಂಬ ತದ್ಧಿತಾಂತ ಶಬ್ದವಾಗಿರುತ್ತದೆ. ಅದಕ್ಕೆ 'ಸು' ಪ್ರತ್ಯಯವನ್ನು ಸೇರಿಸಿದಾಗ ರುತ್ವ ವಿಸರ್ಗಗಳಿಂದ 'ಬಾಹೀಕಃ' ಎಂಬ ರೂಪವು ಸಿದ್ಧವಾಗುತ್ತದೆ.

ವಾರ್ತಿಕ– ಗೋರಜಾದಿ ಪ್ರಸಂಗೇ ಯತ್। ಗೋರಪತ್ಯಾದಿ ಗವ್ಯಂ।

ಅರ್ಥ:– ಅಜಾದಿ ಪ್ರತ್ಯಯವು ಬರಬೇಕಾದ ಸಂದರ್ಭದಲ್ಲಿ 'ಗೋ' ಶಬ್ದದ ನಂತರ 'ಯತ್' (ಯ) ಪ್ರತ್ಯಯವು ಬರುತ್ತದೆ. ಪ್ರಾಗ್ದೀವ್ಯತೀಯ ಅರ್ಥದಲ್ಲಿ.

ವಿಶೇಷ– ಪ್ರಾಗ್ದೀವ್ಯತೀಯ ಅರ್ಥಗಳಲ್ಲಿ ಹಲವು ಪ್ರತ್ಯಯಗಳು ಇರುತ್ತವೆ. ಅವುಗಳಲ್ಲಿ ಅಜಾದಿ ಪ್ರತ್ಯಯವು 'ಗೋ' ಶಬ್ದದ ನಂತರ ಬರುವ ಸಂದರ್ಭಗಳಿರುತ್ತವೆ. ಆಗ ಅದನ್ನು ಬಾಧಿಸಿ 'ಯತ್' ಪ್ರತ್ಯಯವು ಬರುತ್ತದೆ. ಅಜಾದಿ ಭಿನ್ನವಾದ ಪ್ರತ್ಯಯಗಳು ಪ್ರಾಗ್ದೀವ್ಯತೀಯ ಅರ್ಥದಲ್ಲಿ ಇದ್ದರೂ 'ಗೋ' ಶಬ್ದದ ನಂತರ ಅವುಗಳನ್ನು ಬಾಧಿಸಿ 'ಯತ್' ಪ್ರತ್ಯಯವು ಬರುವುದಿಲ್ಲ. (ಪ್ರಾಗ್ದೀವ್ಯತೀಯ ಎಂಬ ಶಬ್ದಕ್ಕೆ 'ಪ್ರಾಗ್ದಿಶ:' ಎಂಬ ಸೂತ್ರದವರೆಗೆ ಇರುವ ಅರ್ಥದಲ್ಲಿ ಬರುವ ತದ್ಧಿತ ಪ್ರತ್ಯಯಗಳೆಂದು ಅರ್ಥ).

ಉದಾ– ಗವ್ಯಂ। (ಗೋವಿನ ಸಂತಾನ/ಸಂತತಿ) ಮೊದಲಾದವು (ಗೋರಪತ್ಯಾದಿ). ಗೋ+ಙಸ್ ನಂತರ 'ಪ್ರಾಗ್ದೀವ್ಯತೋಽಣ್' ಎಂಬ ಸೂತ್ರದಿಂದ ಅಪತ್ಯಾರ್ಥದಲ್ಲಿ 'ಅಣ್' ಪ್ರತ್ಯಯವು ಬಂದಿದೆ. ಪ್ರಕೃತ ವಾರ್ತಿಕದಿಂದ 'ಅಣ್' ಪ್ರತ್ಯಯ ಬಾರದೇ, ಆ ಸ್ಥಾನದಲ್ಲಿ 'ಯತ್' (ಯ) ಬರುತ್ತದೆ. ಆಗ ಗೋ+ಯ ಎಂದಿರುತ್ತದೆ.

"ವಾಂತೋಯಿ ಪ್ರತ್ಯಯೇ" ಎಂಬ ಸೂತ್ರದಿಂದ 'ಯ' ಕಾರಾದಿ (ಯತ್) ಪರದಲ್ಲಿರುವುದರಿಂದ 'ಓ' ಕಾರಕ್ಕೆ ಅವಾದೇಶ ಬಂದು ಗ್+ಅವ್+ಯ=ಗವ್ಯ ಎಂದಿರುತ್ತದೆ. 'ಸು' ಪ್ರತ್ಯಯವನ್ನು ಸೇರಿಸಿದಾಗ ನಪುಂಸಕ ಲಿಂಗದಲ್ಲಿ 'ಅಮ್' ಆದೇಶ ಬಂದು 'ಗವ್ಯಂ' ಎಂದು ರೂಪವಾಗುತ್ತದೆ.

**(ಅಞ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ. 1004 – ಉತ್ಸಾದಿಭ್ಯೋಽಞ್ (4–1–86)**

ವೃತ್ತಿ– ಔತ್ಸಃ।

ಇತಿ ಅಪತ್ಯಾದಿವಿಕಾರಾನ್ತಾರ್ಥಾಃ (44) ಸಾಧಾರಣ ಪ್ರತ್ಯಯಾಃ।

ಪ. ಛೇ– ಉತ್ಸಾದಿಭ್ಯ, ಅಞ್।

ಅ. ವೃ.– "ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಮೊದಲಾದ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

"ಪ್ರಾಗ್ದೀವ್ಯತೋಽಣ್" ಎಂಬ ಸೂತ್ರದಿಂದ 'ಪ್ರಾಕ್' ಮತ್ತು 'ದೀವ್ಯತಃ' ಎಂಬ ಪದಗಳು ಅನುವೃತ್ತವಾಗುತ್ತವೆ. 'ಅಣ್'ನ್ನು ಬಾಧಿಸಿ 'ಅಞ್' ಬರುತ್ತದೆ. ಉತ್ಸಾದಿಭ್ಯಃ ಅಞ್ ಸ್ಯಾತ್, (ಪ್ರಾಗ್ದೀವ್ಯತೀಯೇಷು ಅರ್ಥೇಷು).

ಅರ್ಥ – 'ಪ್ರಾಗ್ದೀವ್ಯತೀಯ' ಅರ್ಥದಲ್ಲಿ 'ಉತ್ಸ'ವನ್ನು ಆದಿಯಲ್ಲಿ ಪಠಿತವಾದ

ಗಣಗಳಲ್ಲಿರುವ ಶಬ್ದಗಳ ನಂತರ 'ಅಞ್' ಪ್ರತ್ಯಯವು ಬರುತ್ತದೆ. ಇದರಲ್ಲಿ 'ಅ' ಮಾತ್ರ ಉಳಿಯುತ್ತದೆ. ಇದು 'ಞಿತ್' ಆಗಿರುವುದರಿಂದ ಆದಿವೃದ್ಧಿ ಬರುತ್ತದೆ.

ಸೂಚನೆ– 'ಉತ್ಸಾದಿ' ಗಣದಲ್ಲಿ ಪಠಿತವಾದ ಶಬ್ದಗಳು ಉತ್ಸ, ಉದಪಾನ, ವಿಕರ, ವಿನದ, ಮಹಾನದ, ಮಹಾನಸ, ಮಹಾಪ್ರಾಣ, ತರುಣ, ತಲುನ, ಪೃಥ್ವೀ ಮೊದಲಾದ ಶಬ್ದಗಳು ಇರುತ್ತವೆ.

ಉದಾ– ಔತ್ಸಃ। (ಝರಿಯಲ್ಲಿ ಉಂಟಾಗುವ ಕಪ್ಪೆ ಮೊದಲಾದವು)– 'ಉತ್ಸೇ ಭವಃ ಔತ್ಸಃ'ಎಂದು ವಿಗ್ರಹ ವಾಕ್ಯ. ಅಲೌಕಿಕ ವಿಗ್ರಹದಲ್ಲಿ ಉತ್ಸ+ಙಿ+ಅಞ್(ಅ) ಎಂದಿರುತ್ತದೆ. "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ 'ಙಿ' ಗೆ ಲೋಪ ಬಂದು ಉತ್ಸ+ಅ ಎಂದಿರುತ್ತದೆ. "ತದ್ಧಿತೇಷ್ವಚಾಮಾದೇಃ" ಎಂಬ ಸೂತ್ರದಿಂದ ಆದಿವೃದ್ಧಿ ಬರುತ್ತದೆ. 'ಉ' ಕಾರವು ಆದಿಯಲ್ಲಿರುವುದರಿಂದ ಅದಕ್ಕೆ 'ಔ' ಕಾರವು ಬರುತ್ತದೆ. ಆಗ ಔತ್ಸ+ಅ ಎಂದಿರುತ್ತದೆ. "ಯಸ್ಯೇತಿಚ" ಎಂಬ ಸೂತ್ರದಿಂದ ಉತ್ಸದಲ್ಲಿರುವ 'ಅ' ಕಾರಕ್ಕೆ ಲೋಪ ಬಂದು ಔತ್ಸ್+ಅ=ಔತ್ಸ ಎಂದಾಗುತ್ತದೆ. ಇದಕ್ಕೆ 'ಸು' ಪ್ರತ್ಯಯವನ್ನು ಸೇರಿಸಿದಾಗ ರುತ್ವ–ವಿಸರ್ಗಗಳಿಂದ ಔತ್ಸಃ ಎಂಬ ರೂಪವು ಸಿದ್ಧವಾಗುತ್ತದೆ.

**ಇತಿ ಸಾಧಾರಣ ತದ್ಧಿತ ಪ್ರತ್ಯಯಾಃ**

**ಸಾಧಾರಣ ತದ್ಧಿತ ಪ್ರತ್ಯಯ (44) ಪ್ರಕರಣವು ಮುಗಿಯಿತು.**

# ಪ್ರಕರಣ-45: ಅಪತ್ಯಾಧಿಕಾರಃ

(ಸೂ. ಸಂ 1005-1034)

**ಸೂತ್ರ. 1005 - ಸ್ತ್ರೀಪುಂಸಾಭ್ಯಾಂ ನಞ್ಸ್ನಞೌ ಭವನಾತ್।(4.1.87)**

ವೃತ್ತಿ- ಧಾನ್ಯಾನಾಂ ಭವನೇ ಇತ್ಯತಃ ಪ್ರಾಗ್ ಅರ್ಥೇಷು ಸ್ತ್ರೀಪುಂಸಾಭ್ಯಾಂ ಕ್ರಮಾತ್ ನಞ್-ಸ್ನಞೌ ಸ್ತಃ। ಸ್ತ್ರೈಣಃ। ಪೌಂಸ್ನಃ।

ಪ. ಛೇ- ಸ್ತ್ರೀ-ಪುಂಸಾಭ್ಯಾಂ, ನಞ್-ಸ್ನಞೌ, ಭವನಾತ್।

ಅ. ವೃ.- "ಪ್ರಾಗ್ದೀವ್ಯತೋಽಣ್" ಎಂಬ ಸೂತ್ರದಿಂದ 'ಪ್ರಾಕ್' ಎಂಬ ಶಬ್ದವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಇವುಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ. - "ಧಾನ್ಯಾನಾಂ ಭವನೇ ಕ್ಷೇತ್ರೇ ಖಞ್" (ಹುಟ್ಟುವಂತಹ ಸ್ಥಳದಲ್ಲಿ) ಎಂಬ ಸೂತ್ರದಿಂದ ಮೊದಲನೆ ಶಬ್ದದ ಅರ್ಥದಲ್ಲಿ ಸ್ತ್ರೀ ಅಥವಾ ಪುಲ್ಲಿಂಗ ಪ್ರಾತಿಪದಿಕದ ನಂತರ ತದ್ಧಿತ ಸಂಜ್ಞೆಯುಳ್ಳ ನಞ್(ನ)ಸ್ನಞ್(ಸ್ನ) ಪ್ರತ್ಯಯಗಳು ಕ್ರಮವಾಗಿ ಬರುತ್ತವೆ.

ಉದಾ- ಸ್ತ್ರೈಣಃ। (ಸ್ತ್ರೀಯ ಸಂತಾನ - ಇತ್ಯಾದಿ)- 'ಸ್ತ್ರಿಯಃ ಅಪತ್ಯಮ್' ಎಂಬುದು ಲೌಕಿಕ ವಿಗ್ರಹ, ಪ್ರಕೃತ ಸೂತ್ರದಿಂದ ಸ್ತ್ರೀ+ಜಸ್+ನಞ್ ಎಂದಿದ್ದಾಗ, "ಸುಪೋಧಾತುಪ್ರಾತಿಪದಿಕಯೋಃ " ಎಂಬ ಸೂತ್ರದಿಂದ 'ಜಸ್' ಗೆ ಲೋಪ ಬಂದು ಸ್ತ್ರಿ+ನ(ನಞ್) ಎಂದಾಗುತ್ತದೆ. ಇದು ತದ್ಧಿತ ಪ್ರಕರಣವಾದ್ದರಿಂದ ಹಿಂದೆ ಹೇಳಿದಂತೆ ಆದಿವೃದ್ಧಿ ಬರುತ್ತದೆ. ಆಗ ಸ್ತ್ರೈ+ನ ಎಂದಾಗುತ್ತದೆ. "ರಷಾಭ್ಯಾಂ ನೋಣ: ಸಮಾನಪದೇ", "ಅಟ್‌ಕುಪ್‌ವಾಂಙ್‌ನುಮ್‌ವ್ಯವಾಯೇಽಪಿ" ಎಂಬ ಸೂತ್ರದಿಂದ 'ಣತ್ವ' ಬಂದು 'ಸ್ತ್ರೈಣ' ಎಂಬ ರೂಪವಾಗುತ್ತದೆ. ಇದನ್ನು ಸುಬಂತ ಮಾಡಿದಾಗ 'ಸ್ತ್ರೈಣಃ' ಎಂಬ ರೂಪವು ಸಿದ್ಧವಾಗುತ್ತದೆ.

ಉದಾ- ಪೌಂಸ್ನಃ । (ಪುರುಷನ ಸಂತಾನ ಮೊದಲಾದ). 'ಪುಂಸ: ಅಪತ್ಯಮ್ ಪುಮಾನ್' ಎಂಬುದು ಲೌಕಿಕ ವಿಗ್ರಹ. ಪ್ರಕೃತ ಸೂತ್ರದಿಂದ 'ಸ್ನಞ್' (ಸ್ನ) ಪ್ರತ್ಯಯವನ್ನು ಸೇರಿಸಿದರೆ, ಪುಂಸ್+ಜಸ್+ಸ್ನಞ್(ಸ್ನ) ಎಂದಾಗುತ್ತದೆ. 'ಸುಪ್' ಗೆ ಲೋಪ ಬಂದು ಪುಂಸ್+ಸ್ನ ಎಂದಾಗುತ್ತದೆ. ತದ್ಧಿತ ಪ್ರತ್ಯಯವು 'ಞಿತ್' ಆಗಿರುವುದರಿಂದ, ಆದಿ ವೃದ್ಧಿ ಯಿಂದ 'ಉ' ಕಾರಕ್ಕೆ 'ಔ' ಕಾರ ಬಂದು, ಪೌಂಸ್+ಸ್ನ ಎಂದಿದ್ದಾಗ, ಹಲಾದಿ ಪ್ರತ್ಯಯದ 'ಸ್ನಞ್' ಬರುವುದಕ್ಕೆ ಮೊದಲು "ಸ್ವಾದಿಷ್ವಸರ್ವನಾಮಸ್ಥಾನೇ" ಎಂಬ ಸೂತ್ರದಿಂದ ಪದ ಸಂಜ್ಞೆ ಬಂದು "ಸಂಯೋಗಾಂತಸ್ಯ ಲೋಪಃ" ಎಂಬ ಸೂತ್ರದಿಂದ ಪುಂಸ ಎಂಬಲ್ಲಿರುವ 'ಸ' ಕಾರಕ್ಕೆ ಲೋಪ ಬಂದು ಪುಂ+ಸ್ನ ಎಂದಾಗಿ ತದ್ಧಿತ ಪ್ರತ್ಯಯವು 'ಞಿತ್' ಆಗಿರುವುದರಿಂದ ಆದಿ ವೃದ್ಧಿ ಬಂದು 'ಉ' ಕಾರಕ್ಕೆ 'ಔ' ಕಾರ ಬಂದು ಪೌಂಸ್ನ ಎಂದಾಗಿ, ಸುಬಂತವಾದಾಗ ರುತ್ವ ವಿಸರ್ಗಗಳಿಂದ ಪೌಂಸ್ನಃ ಎಂದಾಗುತ್ತದೆ.

**(ಅಪತ್ಯಾರ್ಥದಲ್ಲಿ ತದ್ಧಿತ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ. 1006– ತಸ್ಯಾಪತ್ಯಮ್।(4.1.92)**

ವೃತ್ತಿ– ಷಷ್ಠ್ಯಂತಾತ್ ಕೃತಸಂಧೇಃ ಸಮರ್ಥಾತ್ ಅಪತ್ಯೇಽರ್ಥೇ ಉಕ್ತಾಃ ವಕ್ಷ್ಯಮಾಣಾಶ್ಚ ಪ್ರತ್ಯಯಾಃ ವಾ ಸ್ಯುಃ।

ಪ. ಛೇ– ತಸ್ಯ, ಅಪತ್ಯಮ್।

ಅ. ವೃ.– "ಸಮರ್ಥಃ ಪದವಿಧಿಃ" ಎಂಬ ಸೂತ್ರದಿಂದ 'ಸಮರ್ಥಃ' ಎಂಬ ಪದವು ಸ್ವೀಕೃತವಾಗಿದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್ ಪ್ರಾತಿಪಾದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಇವುಗಳು ಅಧಿಕಾರ ಸೂತ್ರಗಳಾಗಿವೆ. "ಪ್ರಾಗ್ದೀವ್ಯತೋಽಣ್" ನಿಂದ 'ಅಣ್' ಎಂಬುದು ಅನುವೃತ್ತಿಯಾಗಿದೆ.

ಅರ್ಥ. – ಸಂಧಿಕಾರ್ಯಾದಿಗಳನ್ನು ಮಾಡಿದ ನಂತರ ಷಷ್ಠ್ಯಂತ ಸಾಮರ್ಥ್ಯವುಳ್ಳ ಪ್ರಾತಿಪದಿಕದ ಮೇಲೆ ಅಪತ್ಯಾರ್ಥದಲ್ಲಿ ಪ್ರಕೃತ ಸೂತ್ರದಲ್ಲಿ ಹೇಳಲಾಗಿರುವ ಪ್ರತ್ಯಯಗಳು, ಇನ್ನುಮುಂದೆ ಹೇಳಲ್ಪಡುವ ಪ್ರತ್ಯಯಗಳು ವೈಕಲ್ಪಿಕವಾಗಿ ಬರುತ್ತವೆ.

ಈ ಸೂತ್ರವು ಕೇವಲ ಷಷ್ಠ್ಯಂತ ಸಮರ್ಥ ಪ್ರಕೃತಿ ಮತ್ತು ಅಪತ್ಯಾರ್ಥವನ್ನು ಸೂಚಿಸುತ್ತದೆ. ಈ ಸೂತ್ರದಡಿಯಲ್ಲಿ ಕೆಲವು ಪ್ರತ್ಯಯಗಳನ್ನು ಹೇಳಲಾಗಿದೆ ಮತ್ತು ಇನ್ನು ಮುಂದೆ ಕೆಲವು ಪ್ರತ್ಯಯಗಳನ್ನು ಹೇಳಲಾಗುವುದು. ಇದು ಅಧಿಕಾರ ಸೂತ್ರ ಹಾಗೂ ವಿಧಿ ಸೂತ್ರವಾಗಿಯೂ ಇದೆ.

**(ಗುಣವನ್ನು ವಿಧಿಸುವ ಸೂತ್ರ)**

**ಸೂತ್ರ – 1007 . ಓರ್ಗುಣಃ (6.4.146)**

ವೃತ್ತಿ– ಉವರ್ಣಾಂತಸ್ಯ ಭಸ್ಯ ಗುಣಃ ತದ್ಧಿತೇ। ಉಪಗೋರಪತ್ಯಂ ಔಪಗವಃ।ಆಶ್ವಪತಃ। ದೈತ್ಯಃ। ಔತ್ಸಃ।ಸ್ತ್ರೈಣಃ।ಪೌಂಸ್ನಃ।

ಪ. ಛೇ– ಓಃ, ಗುಣಃ।

ಅ. ವೃ.–"ನಸ್ತದ್ಧಿತೇ" ಎಂಬ ಸೂತ್ರದಿಂದ 'ತದ್ಧಿತೇ' ಎಂಬ ಪದವು ಅನುವೃತ್ತವಾಗಿದೆ.

ಅರ್ಥ. – ತದ್ಧಿತ ಪ್ರತ್ಯಯವು ಪರದಲ್ಲಿದ್ದಾಗ ಪೂರ್ವದಲ್ಲಿರುವ 'ಭ' ಸಂಜ್ಞೆಯುಳ್ಳ 'ಓ' ವರ್ಣಾಂತ ಶಬ್ದ ಸ್ವರೂಪಕ್ಕೆ ಗುಣವು ಬರುತ್ತದೆ.

ಉದಾ– ಔಪಗವಃ– (ಉಪಗು ಎಂಬ ಹೆಸರುಳ್ಳವನ ಮಗ)– 'ಉಪಗೋಃ ಅಪತ್ಯಮ್ ಪುಮಾನ್' ಎಂಬುದು ಲೌಕಿಕ ವಿಗ್ರಹ ವಾಕ್ಯ. ಇಲ್ಲಿ 'ಉಪಗು' ಎಂಬುದು ಪ್ರಾತಿಪದಿಕ. 'ತಸ್ಯಾಽಪತ್ಯಂ' ಎಂಬ ಸೂತ್ರದಿಂದ 'ಅಣ್' ಪ್ರತ್ಯಯ ಬಂದು ಉಪಗು+ಜಸ್+ಅಣ್ ಎಂದಾಗಿ, 'ಸುಪ್' ಪ್ರತ್ಯಯಕ್ಕೆ ಲೋಪ ಬಂದು ಉಪಗು+ಅ(ಅಣ್) ಎಂದಾಗುತ್ತದೆ. "ತದ್ಧಿತೇಷ್ವಚಾಮಾದೇಃ" ಎಂಬ ಸೂತ್ರದಿಂದ ಆದಿ 'ಉ' ಕಾರಕ್ಕೆ ವೃದ್ಧಿ ಬಂದು 'ಔ' ಆಗುತ್ತದೆ. ಆಗ ಔಪಗು+ಅ ಎಂದಾಗುತ್ತದೆ.

ಪ್ರಕೃತ ಸೂತ್ರದಿಂದ 'ಉ' ಕಾರಕ್ಕೆ ಗುಣ ಬಂದು, ಔಪಗೋ+ಅ ಎಂದಾಗುತ್ತದೆ. "ಏಚೋಽಯವಾಯಾವಃ" ಎಂಬ ಸೂತ್ರದಿಂದ 'ಓ' ಕಾರಕ್ಕೆ 'ಅವ್' ಆದೇಶ ಬಂದು, ಔಪಗ್+ಅವ್+ಅ=ಔಪಗವ ಎಂದಾಗುತ್ತದೆ. ಇದು ಸುಬಂತವಾದಾಗ, ರುತ್ವ ವಿಸರ್ಗಗಳಿಂದ ಔಪಗವಃ ಎಂಬ ರೂಪ ಸಿದ್ಧಿಯಾಗುತ್ತದೆ.

ಉದಾ– ಆಶ್ವಪತಃ (ಅಶ್ವಪತಿಯ ಮಗ)–'ಅಶ್ವಪತೇಃ ಅಪತ್ಯಂ ಪುಮಾನ್' ಎಂಬುದು ಲೌಕಿಕ ವಿಗ್ರಹ ವಾಕ್ಯ. ಅಶ್ವಪತಿ+ಙಸ್+ಅಣ್ ಎಂಬುದು ಅಲೌಕಿಕ ವಿಗ್ರಹ ವಾಕ್ಯ. "ತಸ್ಯಾಽಪತ್ಯಂ" ಎಂಬ ಸೂತ್ರದಿಂದ ಅಪತ್ಯಾರ್ಥದಲ್ಲಿ ಬರಬೇಕಾದ 'ಅಣ್' ನ್ನು ಬಾಧಿಸಿ 'ಅಶ್ವಪತ್ಯಾದಿಭ್ಯಶ್ಚ' ಎಂಬ ಸೂತ್ರದಿಂದ ಅಣ್ ಪ್ರತ್ಯಯವು ಬಂದು ಅಶ್ವಪತಿ+ಙಸ್+ಅಣ್(ಅ) ಎಂದಾಗಿದೆ. ಸುಪ್ ಪ್ರತ್ಯಯವಾದ 'ಙಸ್' ಗೆ ಹಿಂದಿನಂತೆ ಲೋಪ ಬಂದು ಅಶ್ವಪತಿ+ಅ ಎಂದಾಗುತ್ತದೆ. ಈ ಪ್ರತ್ಯಯವು 'ಣಿತ್' ಆಗಿರುವುದರಿಂದ ಆದಿವೃದ್ಧಿ ಬಂದು, ಆಶ್ವಪತಿ+ಅ ಎಂದಾಗುತ್ತದೆ. 'ಅ' ಕಾರಾದಿ ಪ್ರತ್ಯಯವು ಪರದಲ್ಲಿರುವುದರಿಂದ, "ಯಚಿ ಭಂ" ಎಂಬ ಸೂತ್ರದಿಂದ 'ಭ' ಸಂಜ್ಞೆ ಬಂದು, "ಯಸ್ಯೇತಿಚ" ಎಂಬುದರಿಂದ 'ಇ' ಕಾರಕ್ಕೆ ಲೋಪ ಬಂದು ಅಶ್ವಪತ ಎಂದಾಗುತ್ತದೆ. ಈ ಪ್ರಾತಿಪದಿಕಕ್ಕೆ 'ಸು' ಸೇರಿಸಿದಾಗ ರುತ್ವ ವಿಸರ್ಗಗಳಿಂದ ಆಶ್ವಪತಃ ಎಂದಾಗುತ್ತದೆ.

ಉದಾ– ದೈತ್ಯಃ (ದಿತಿಯ ಮಗ) – 'ದಿತೇಃ ಅಪತ್ಯಮ್ ಪುಮಾನ್' ಎಂಬುದು ಲೌಕಿಕ ವಿಗ್ರಹ. ದಿತಿ+ಙಸ್ ಎಂಬುದು ದಿತೇಃ ಎಂಬುದಕ್ಕೆ ಅಲೌಕಿಕ ವಿಗ್ರಹ ವಾಕ್ಯ. "ತಸ್ಯಾಽಪತ್ಯಂ" ಎಂಬ ಸೂತ್ರದಿಂದ ಬರಬೇಕಾದ 'ಅಣ್'ನ್ನು ಬಾಧಿಸಿ "ದಿತ್ಯದಿತ್ಯಾದಿತ್ಯಪತ್ಯುತ್ತರಪದಾಣ್ಯಃ" ಎಂಬ ಸೂತ್ರದಿಂದ 'ಣ್ಯ' ಪ್ರತ್ಯಯವು ಬಂದು, ದಿತಿ+ಙಸ್+ಣ್ಯ(ಯ) ಎಂದಾಗಿ, 'ಸುಪ್' ಗೆ ಲೋಪ ಬಂದು, ದಿತಿ+ಯ(ಣ್ಯ) ಎಂದಾಗಿ, ಇದು ತದ್ಧಿತ 'ಣಿತ್' ಪ್ರತ್ಯಯವಾಗಿರುವುದರಿಂದ, ಆದಿ ವೃದ್ಧಿ ಬಂದು ದೈತಿ+ಯ ಎಂದಿರುತ್ತದೆ. "ಯಸ್ಯೇತಿಚ" ಎಂಬುದರಿಂದ 'ಭ' ಸಂಜ್ಞಕ 'ದೈತಿ' ಶಬ್ದದ 'ಇ'ಕಾರಕ್ಕೆ ಲೋಪ ಬಂದು ದೈತ್+ಯ ಎಂದಾಗುತ್ತದೆ. ಇದನ್ನು ಸುಬಂತ ಮಾಡಿದಾಗ ದೈತ್ಯಃ ಎಂದಾಗುತ್ತದೆ.

ಉದಾ–ಔತ್ಸಃ– ಇದನ್ನು "ಉತ್ಸಾದಿಭ್ಯೋಽಞ್" ಎಂಬ ಸೂತ್ರದಿಂದ ಸಾಧಾರಣ ತದ್ಧಿತ ಪ್ರತ್ಯಯ ಪ್ರಕರಣದಲ್ಲಿ ವಿವರಿಸಲಾಗಿದೆ.

ಉದಾ– ಸ್ತ್ರೈಣಃ (ಸ್ತ್ರೀಯ ಸಂತತಿ)–'ಸ್ತ್ರಿಯಃ ಅಪತ್ಯಮ್' ಎಂಬುದು ಲೌಕಿಕ ವಿಗ್ರಹ. ಸ್ತ್ರಿಯಃ+ಙಸ್ ಎಂಬುದು ಇದರ ಅಲೌಕಿಕ ವಿಗ್ರಹ. "ಸ್ತ್ರೀಪುಂಸಾಭ್ಯಾಂ ನಞ್ಸ್ನಞೌ ಭವನಾತ್" ಎಂಬ ಸೂತ್ರದಿಂದ 'ತಸ್ಯಾಪತ್ಯಂ' ಎಂಬ ಅರ್ಥದಲ್ಲಿ 'ನಞ್' ಪ್ರತ್ಯಯವು ಬಂದು, ನಂತರ ಪ್ರಾತಿಪದಿಕಸಂಜ್ಞೆ ಬಂದು, 'ಸುಪ್' ಲೋಪವಾಗಿ, ಸ್ತ್ರೀ+ನ ಎಂದಿರುತ್ತದೆ. ಇದಕ್ಕೆ ಆದಿವೃದ್ಧಿ ಬಂದು, 'ಸ್ತ್ರೈನ' ಎಂದಿರುತ್ತದೆ. ರೇಫದ ನಂತರ ಇರುವ 'ನ' ಕಾರಕ್ಕೆ 'ಣತ್ವ' ಬಂದು, 'ಸ್ತ್ರೈಣ' ಎಂದಾದ ಮೇಲೆ, ಸುಬಂತ ಮಾಡಿದಾಗ ರುತ್ವ ವಿಸರ್ಗಗಳಿಂದ 'ಸ್ತ್ರೈಣಃ' ಎಂಬ ರೂಪ ಸಿದ್ಧಿಯಾಗುತ್ತದೆ.

ಉದಾ- ಪೌಂಸ್ನಃ (ಪುರುಷನ ಸಂತಾನ) -ಪುಂಸಃ ಅಪತ್ಯಮ್ ಪುಮಾನ್ ಎಂಬುದು ಲೌಕಿಕ ವಿಗ್ರಹ ವಾಕ್ಯ. ಪುಂಸ್+ಜಸ್ ಎಂಬುದು ಪುಂಸಃ ಇದರ ಅಲೌಕಿಕ ವಿಗ್ರಹ. "ತಸ್ಯಾಪತ್ಯಂ" ಎಂಬ ಸೂತ್ರದಿಂದ ಅಪತ್ಯಾರ್ಥದಲ್ಲಿ'ಅಣ್' ಪ್ರತ್ಯಯವನ್ನು ಬಾಧಿಸಿ "ಸ್ತ್ರೀಪುಂಸಾಭ್ಯಾಂ ನಞ್‌ಸ್ನಞೌ ಭವನಾತ್" ಎಂಬ ಸೂತ್ರದ ಪ್ರಕಾರ 'ಸ್ನಞ್' ಪ್ರತ್ಯಯವು ಬಂದಿದೆ. 'ಪುಂಸ್' ನಂತರ ಇರುವ 'ಜಸ್' ಹಿಂದಿನಂತೆಯೇ ಲೋಪವಾಗಿ 'ಸ್ನಞ್' ಪ್ರತ್ಯಯವನ್ನು ಸೇರಿಸಿದಾಗ ಪುಂಸ್+ಸ್ನ ಎಂದಿರುತ್ತದೆ. ಇದು 'ಞಿತ್' ಆಗಿರುವುದರಿಂದ ಆದಿವೃದ್ಧಿ ಬಂದು, ಪೌಂಸ್+ಸ್ನ ಎಂದಾಗುತ್ತದೆ. ಪೌಂಸ್ ಎಂಬ ಶಬ್ದವು ಪ್ರಾತಿಪದಿಕವೂ ಆಗಿದ್ದು 'ಜಸ್' ಪ್ರತ್ಯಯವನ್ನು ಕಳೆದುಕೊಂಡರೂ ಪದತ್ವವನ್ನು ಕಳೆದುಕೊಂಡಿಲ್ಲ. ಇದರಿಂದ ಪೌಂಸ್+ಸ್ನ ಎಂಬುದರಲ್ಲಿ ಪೌಂಸ್ ನಲ್ಲಿರುವ ಸ್ ಕಾರವು ಲೋಪವಾಗಿ 'ಪೌಂಸ್ನ' ಎಂದಾಗುತ್ತದೆ. ಇದನ್ನು ಸುಂಬಂತ ಮಾಡಿದಾಗ 'ಪೌಂಸ್ನಃ' ಎಂಬ ರೂಪ ಸಿದ್ಧಿಯಾಗುತ್ತದೆ.

**(ಗೋತ್ರ ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ. 1008 - ಅಪತ್ಯಂ ಪೌತ್ರಪ್ರಭೃತಿ ಗೋತ್ರಂ (4.1.162)**

ವೃತ್ತಿ- ಅಪತ್ಯತ್ವೇನ ವಿವಕ್ಷಿತಂ ಪೌತ್ರಾದಿ ಗೋತ್ರಸಂಜ್ಞಂ ಸ್ಯಾತ್।

ಅರ್ಥ. - ಮಗನ ಮಗ ಮೊದಲಾದ ಅರ್ಥದಲ್ಲಿ, ಸಂತಾನ ಅರ್ಥದಲ್ಲಿ ಹೇಳಲು ವಿವಕ್ಷೆ ಇದ್ದಾಗ, ಅದಕ್ಕೆ ಗೋತ್ರ ಸಂಜ್ಞೆಯು ಬರುತ್ತದೆ.

ಗೋತ್ರವೆಂದರೆ ಮೊಮ್ಮಗ, ಮರಿಮಗ ಮತ್ತು ಅವರ ಸಂತಾನ ಇವುಗಳನ್ನು ಗುರುತಿಸುತ್ತದೆ. ಆದರೆ ಪುತ್ರನನ್ನು ಗುರುತಿಸುವುದಿಲ್ಲ. ಇದು ಸಂಜ್ಞಾ ಸೂತ್ರವಾಗಿದೆ.

**(ಒಂದೇ ಪ್ರತ್ಯಯವನ್ನು ವಿಧಿಸುವ ನಿಯಮ ಸೂತ್ರ)**

**ಸೂತ್ರ - 1009 . ಏಕೋ ಗೋತ್ರೇ। (4.1.93)**

ವೃತ್ತಿ- ಗೋತ್ರೇ ಏಕ ಏವ ಅಪತ್ಯಪ್ರತ್ಯಯಃ ಸ್ಯಾತ್। ಉಪಗೋಃ ಗೋತ್ರಾಪತ್ಯಮ್ ಔಪಗವಃ।

ಪ. ಛೇ- ಏಕಃ, ಗೋತ್ರೇ।

ಅರ್ಥ. -'ಗೋತ್ರ' ಎಂಬ ಅರ್ಥದಲ್ಲಿ (ಮೊಮ್ಮಗ ಮತ್ತು ಅವನ ಸಂತಾನ) ಒಂದೇ 'ಅಪತ್ಯ' ಪ್ರತ್ಯಯವು ಬರುತ್ತದೆ.

ವಿಶೇಷ- ಈ ಸೂತ್ರದ ಅರ್ಥವು ಹೀಗಿದೆ- ಉಪಗೋಃ ಗೋತ್ರಾಪತ್ಯಂ ಎಂದರೂ ಔಪಗವಃ ಮತ್ತು ತಸ್ಯ ಔಪಗವಸ್ಯ ಅಪತ್ಯಂ ಎಂದರೂ ಔಪಗವಃ ಎಂಬುದೇ ಅರ್ಥವಾಗುತ್ತದೆ. ತಸ್ಯಾಪತ್ಯಂ ಎಂದರೂ ಔಪಗವಃ ಎಂದೇ ಆಗುತ್ತದೆ. ಈ ಎಲ್ಲಾ ರೂಪಗಳಲ್ಲೂ 'ತಸ್ಯ ಗೋತ್ರಾಪತ್ಯಂ' ಎಂಬ ಅರ್ಥದಲ್ಲಿ 'ಅಣ್' ಪ್ರತ್ಯಯ ಒಂದೇ ಬರುತ್ತದೆ. ಮೊಮ್ಮಗನಿಂದ ಆರಂಭಿಸಿ ಎಷ್ಟನೇ ಸಂತಾನವಾಗಿದ್ದರೂ ಸಹ 'ಅಣ್' ಪ್ರತ್ಯಯದಿಂದ ಸಿದ್ಧವಾದ 'ಔಪಗವ' ಎಂಬ ಶಬ್ದದಿಂದಲೇ ಸೂಚಿಸಲ್ಪಡುತ್ತಾನೆ. ಪ್ರತ್ಯಯ ಒಂದೇ ಆಗಿದ್ದರೂ, ಆ ಪ್ರತ್ಯಯದಿಂದ ಸಿದ್ಧವಾದ ಶಬ್ದವು ಮೊಮ್ಮಗನಿಂದ

ಆರಂಭವಾಗಿ ಎಷ್ಟನೇ ಪೀಳಿಗೆಯವನಾಗಿದ್ದರೂ ಅವನು ಈ 'ಔಪಗವ' ಶಬ್ದದಿಂದಲೇ ಸೂಚಿಸಲ್ಪಡುತ್ತಾನೆ. ಬೇರೆ ಪ್ರತ್ಯಯದ ಅವಶ್ಯಕತೆ ಬರುವುದಿಲ್ಲ. ಇದನ್ನೇ ಪ್ರಕೃತ ಸೂತ್ರವು ಹೇಳುತ್ತದೆ. ಇದು 'ವಂಶದಲ್ಲಿ ಹುಟ್ಟಿದವನು' ಎಂಬುದನ್ನು ಹೇಳಲು ಬಂದಿರುವುದೇ ಹೊರತು ಅವರ ಹೆಸರು ಪ್ರತ್ಯೇಕವಾಗಿ ಇರುತ್ತದೆ. ವಿಗ್ರಹವಾಕ್ಯ ಹೇಳುವಾಗ 'ತಸ್ಯ ಗೋತ್ರಾಪತ್ಯಂ' ಎಂದು ಹೇಳಬೇಕು.

ಉದಾ– ಔಪಗವಃ। (ಉಪಗು ಎಂಬುವವನ ಮೊಮ್ಮಗ)–'ಉಪಗೋಃ ಗೋತ್ರಾಪತ್ಯಂ ಪುಮಾನ್' ಎಂಬುದು ಇದರ ಲೌಕಿಕ ವಿಗ್ರಹ ವಾಕ್ಯ. ಉಪಗೋಃ ಎಂಬುದಕ್ಕೆ ಉಪಗು+ಙಸ್ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಥಮ ಶಬ್ದವಾದ ಉಪಗೋಃ ಎಂಬುದು ಸಾಮರ್ಥ್ಯವುಳ್ಳ ಪದವಾಗಿದೆ. ಇದರ ಮೇಲೆ ತದ್ಧಿತ ಪ್ರತ್ಯಯವು ಬರುತ್ತದೆ. "ಏಕೋಗೋತ್ರೇ" ಎಂಬ ಸೂತ್ರದ ಪ್ರಕಾರ "ತಸ್ಯಾಪತ್ಯಂ" ಎಂಬ ಸೂತ್ರದಿಂದಲೇ 'ಗೋತ್ರಾಪತ್ಯಂ' ಎಂಬ ಅರ್ಥದಲ್ಲಿ 'ಅಣ್' ಪ್ರತ್ಯಯವು ಬಂದು ಉಪಗು+ಙಸ್+ಅಣ್ (ಅ) ಎಂದಾಗುತ್ತದೆ. ಇದು ತದ್ಧಿತ ಪ್ರತ್ಯಯಾಂತ ಶಬ್ದವಾಗಿರುವುದರಿಂದ ಪ್ರಾತಿಪದಿಕ ಸಂಜ್ಞೆಯನ್ನು ಹೊಂದುತ್ತದೆ. ಆದ್ದರಿಂದ 'ಙಸ್' ಪ್ರತ್ಯಯವು ಲೋಪವಾಗುತ್ತದೆ (ಹಿಂದೆ ಹೇಳಿದಂತೆ). ಆಗ ಉಪಗು+ಅ ಎಂದಿರುತ್ತದೆ. ಇದು 'ಣಿತ್' ಆಗಿರುವುದರಿಂದ ಆದಿವೃದ್ಧಿ ಬಂದು ಔಪಗು+ಅ ಎಂದಾಗುತ್ತದೆ. "ಓರ್ಗುಣಃ" ಎಂಬ ಸೂತ್ರದಿಂದ ಅಂತ್ಯ 'ಅಚ್' ವರ್ಣವಾದ 'ಉ' ಕಾರಕ್ಕೆ ಗುಣ ಬಂದು ಔಪಗೋ+ಅ ಎಂದಾಗುತ್ತದೆ. "ಏಚೋಽಯವಾಯಾವಃ" ಎಂಬುದರಿಂದ 'ಅವ್' ಆದೇಶ ಬಂದು, ಔಪಗ್+ಅವ್+ಅ=ಔಪಗವ ಎಂದಾಗುತ್ತದೆ. ಇದು ಸುಬಂತ ಮಾಡಿದಾಗ ಔಪಗವಃ ಎಂಬ ರೂಪ ಸಿದ್ಧಿಯಾಗುತ್ತದೆ.

**(ಯಞ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ – 1010. ಗರ್ಗಾದಿಭ್ಯೋ ಯಞ್।(4.1.105)**

ವೃತ್ತಿ– ಗೋತ್ರಾಪತ್ಯೇ। ಗರ್ಗಸ್ಯ ಗೋತ್ರಾಪತ್ಯಂ ಗಾರ್ಗ್ಯಃ। ವಾತ್ಸ್ಯಃ।

ಪ. ಛೇ– ಗರ್ಗಾದಿಭ್ಯಃ, ಯಞ್।

ಅ. ವೃ.– "ಸಮರ್ಥ ಪದವಿಧಿಃ" ಎಂಬ ಸೂತ್ರದಿಂದ 'ಸಮರ್ಥ' ಎಂಬ ಪದವು ಅನುವೃತ್ತಿಯಾಗಿದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ" ಮತ್ತು "ಸಮರ್ಥಾನಾಂ ಪ್ರಥಮಾದ್ವಾ" ಎಂಬ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ. – ಗರ್ಗಾದಿ ಗಣಪಠಿತ ಶಬ್ದಗಳ ನಂತರ ಗೋತ್ರಾಪತ್ಯಂ ಎಂಬ ಅರ್ಥದಲ್ಲಿ 'ಯಞ್(ಯ)ಪ್ರತ್ಯಯವು ಬರುತ್ತದೆ.

ಉದಾ– ಗಾರ್ಗ್ಯಃ – ಗರ್ಗ ಗೋತ್ರಾಪತ್ಯನು (ಮೊಮ್ಮಗನು) ಎಂಬ ಅರ್ಥದಲ್ಲಿ 'ಗರ್ಗಸ್ಯ ಗೋತ್ರಾಪತ್ಯಂ ಪುಮಾನ್' ಎಂಬುದು ಲೌಕಿಕ ವಿಗ್ರಹ ವಾಕ್ಯ. ಗರ್ಗಸ್ಯ ಎಂಬುದಕ್ಕೆ ಗರ್ಗ+ಙಸ್ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಇದಕ್ಕೆ ಗೋತ್ರಾಪತ್ಯ

ಅರ್ಥದಲ್ಲಿ 'ಯಞ್' ಪ್ರತ್ಯಯ ಬಂದು ಗರ್ಗ+ಙಸ್+ಯ ಎಂದಾಗಿ, ಇದು ತದ್ಧಿತಾಂತ ಪ್ರತ್ಯಯವಾಗಿರುವುದರಿಂದ ಪ್ರಾತಿಪದಿಕಸಂಜ್ಞೆ ಬರುತ್ತದೆ. 'ಙಸ್' ಸುಪ್ ಪ್ರತ್ಯಯವಾಗಿರುವುದರಿಂದ ಅದಕ್ಕೆ ಲೋಪ ಬರುತ್ತದೆ. ಆಗ ಗರ್ಗ+ಯ್ ಎಂದಾಗುತ್ತದೆ. ಇದು ತದ್ಧಿತಾಂತ 'ಯಞ್' ಪ್ರತ್ಯಯವಾಗಿರುವುದರಿಂದ ಆದಿ ವೃದ್ಧಿ ಬಂದು, 'ಗಾರ್ಗ+ಯ' ಎಂದಾಗುತ್ತದೆ. "ಯಸ್ಯೇತಿಚ" ಎಂಬುದರಿಂದ 'ಭ' ಸಂಜ್ಞೆಯುಳ್ಳ 'ಗಾರ್ಗ' ಶಬ್ದದ ಅಂತ್ಯ 'ಅ'ಕಾರಕ್ಕೆ ಲೋಪ ಬಂದು, ಗಾರ್ಗ್+ಯ=ಗಾರ್ಗ್ಯ ಎಂದಾಗುತ್ತದೆ. ಇದನ್ನು ಸುಬಂತ ಮಾಡಿದಾಗ ಗಾರ್ಗ್ಯಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ- ವಾತ್ಸ್ಯಃ। (ವತ್ಸನ ಗೋತ್ರಾಪತ್ಯ ಅಂದರೆ ಮೊಮ್ಮಗ)-'ವತ್ಸಸ್ಯ ಗೋತ್ರಾಪತ್ಯಂ ಪುಮಾನ್' ಎಂಬುದು ಲೌಕಿಕ ವಿಗ್ರಹ ವಾಕ್ಯ. 'ವತ್ಸಸ್ಯ' ಎಂಬುದಕ್ಕೆ ವತ್ಸ+ಙಸ್ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಇದಕ್ಕೆ ಪ್ರಕೃತ ಸೂತ್ರದಿಂದ ಯಞ್ ಪ್ರತ್ಯಯವನ್ನು ಸೇರಿಸಿದರೆ ತದ್ಧಿತಾಂತ ಶಬ್ದವಾಗುತ್ತದೆ. ಆದ್ದರಿಂದ ಆದಿವೃದ್ಧಿ ಬರುತ್ತದೆ. ಪ್ರಾತಿಪದಿಕದ ಪದಲ್ಲಿರುವ ಙಸ್ ಗೆ ಲೋಪ ಬರುತ್ತದೆ. ಆಗ ವಾತ್ಸ+ಯ ಎಂದಾಗುತ್ತದೆ. "ಯಸ್ಯೇತಿ ಚ" ಎಂಬುದರಿಂದ 'ಅ' ಕಾರ ಲೋಪವಾಗಿ ವಾತ್ಸ್+ಯ=ವಾತ್ಸ್ಯ ಎಂದಾಗುತ್ತದೆ. ಇದನ್ನು ಸುಬಂತ ಮಾಡಿದಾಗ ವಾತ್ಸ್ಯಃ ಎಂಬ ರೂಪವು ಸಿದ್ಧವಾಗುತ್ತದೆ.

### (ತದ್ಧಿತ-ಲುಕ್ ನ್ನು ವಿಧಿಸುವ ಸೂತ್ರ)

**ಸೂತ್ರ. 1011 - ಯಞಞೋಶ್ಚ। (2.4.64)**

ವೃತ್ತಿ- ಗೋತ್ರೇ ಯತ್ ಯಞನ್ತಂ ಇಞಂತಂಚ ಸ್ಯಾತ್ ತತ್ಕೃತೇ ಬಹುತ್ವೇ; ನತು ಸ್ತ್ರಿಯಾಂ। ಗರ್ಗಾಃ।ವತ್ಸಾಃ।

ಪ. ಛೇ- ಯಞಞೋಃ, ಚ।

ಅ. ವೃ.- "ಣ್ಯಕ್ಷತ್ರಿಯಾರ್ಷಞಿತೋ ಯೂನಿ ಲುಗಣಿಞೋಃ" ಎಂಬ ಸೂತ್ರದಿಂದ 'ಲುಕ್' ಎಂಬ ಶಬ್ದವು ಮತ್ತು "ಯಸ್ಕಾದಿಭ್ಯೋಗೋತ್ರೇ" ಎಂಬ ಸೂತ್ರದಿಂದ 'ಗೋತ್ರೇ' ಎಂಬ ಶಬ್ದವು ಮತ್ತು "ತದ್ರಾಜಸ್ಯ ಬಹುಷು ತೇನೈವಾಸ್ತ್ರಿಯಾಂ" ಎಂಬ ಸೂತ್ರದಿಂದ ಬಹುಷು, ತೇನ, ಏವ, ಅಸ್ತ್ರಿಯಾಂ ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ. - ಗೋತ್ರಾರ್ಥದಲ್ಲಿ ಬಂದಿರುವ ಯಞಂತ ಮತ್ತು ಅಞಂತ ಶಬ್ದಗಳ ಅವಯವಗಳಾದ ಯಞ್ ಮತ್ತು ಅಞ್ ಪ್ರತ್ಯಯಗಳಿಗೆ 'ಲುಕ್' ಬರುತ್ತದೆ. - ಆ ಪ್ರತ್ಯಯಗಳ ಅರ್ಥವು ಬಹುವಚನ ಹೇಳಬೇಕೆಂದಿದ್ದಾಗ, ಆದರೆ ಸ್ತ್ರೀ ಲಿಂಗದಲ್ಲಿ ಈ 'ಲುಕ್' (ಲೋಪ) ಬರುವುದಿಲ್ಲ.

ವಿಶೇಷ- ಗೋತ್ರಾಪತ್ಯ ಅರ್ಥದಲ್ಲಿ ಬಹುವಚನವನ್ನು ಹೇಳುವಾಗ ಮಾತ್ರ ಯಞ್ ಮತ್ತು ಅಞ್ ಪ್ರತ್ಯಯಗಳು ಲೋಪವಾಗುತ್ತವೆ. ಸ್ತ್ರೀ ಲಿಂಗದಲ್ಲಿ ಇವು ಲೋಪವಾಗುವುದಿಲ್ಲ.

ಉದಾ- ಗರ್ಗಾಃ। [ಗರ್ಗದ ಗೋತ್ರಾಪತ್ಯದವರು (ಗರ್ಗನ ಮೊಮ್ಮಗನ

ಸಂತಾನದವರು)]– 'ಗರ್ಗ' ಶಬ್ದದ ಮೇಲೆ ಗೋತ್ರಾಪತ್ಯದವರು ಎಂಬ ಬಹುವಚನಾರ್ಥದಲ್ಲಿ "ಗರ್ಗಸ್ಯ ಗೋತ್ರಾಪತ್ಯಾನಿ" ಎಂಬುದು ಲೌಕಿಕ ವಿಗ್ರಹ 'ಗರ್ಗಸ್ಯ+ಜಸ್' ಎಂಬುದು ಅಲೌಕಿಕ ವಿಗ್ರಹ. ಇದರಲ್ಲಿ ಮೊದಲನೇ ಪದವು ಸಾಮರ್ಥ್ಯವುಳ್ಳ ಷಷ್ಠ್ಯಂತ ಪ್ರಾತಿಪದಿಕವಾಗಿದೆ.

"ಗರ್ಗಾದಿಭ್ಯೋ ಯಞ್" ಎಂಬ ಸೂತ್ರದಿಂದ ಯಞ್ ಪ್ರತ್ಯಯವು ಬಂದಾಗ, 'ಗಾರ್ಗ್ಯ' ಎಂಬ ರೂಪ ಸಿದ್ಧಿಯಾಗುತ್ತದೆ. ಈ ಯಞಂತವಾದ ತದ್ಧಿತಾಂತ ಪ್ರಥಮಾ ಬಹು ವಚನದ ವಿವಕ್ಷೆಯಿದ್ದಾಗ 'ಜಸ್' (ಅಸ್) ಪ್ರತ್ಯಯವನ್ನು ಸೇರಿಸಿದರೆ "ಯಞಿಞೋಶ್ಚ" ಎಂಬ ಸೂತ್ರದಿಂದ 'ಯಞ್' ಪ್ರತ್ಯಯಕ್ಕೆ ಲೋಪ ಬರುತ್ತದೆ. "ನಿಮಿತ್ತಾಪಾಯೇ ನೈಮಿತ್ತಿಕಸ್ಯಾಪ್ಯಪಾಯ:" ಎಂಬ ನ್ಯಾಯದಂತೆ ಇದಕ್ಕೆ ಆದಿವೃದ್ಧಿ ಮೊದಲಾದ ಕಾರ್ಯಗಳು ಬಾರದಿರುವುದರಿಂದ ಶುದ್ಧ 'ಗರ್ಗ' ಶಬ್ದವು ಉಳಿಯುತ್ತದೆ. ಇದೇ ರೀತಿಯಲ್ಲಿ ಗರ್ಗ+ಅಸ್ ಇದ್ದು ಪೂರ್ವಸವರ್ಣದೀರ್ಘವಾಗಿ 'ಗರ್ಗಾಸ್' ಎಂದಾಗಿ ರುತ್ವ ವಿಸರ್ಗಗಳಿಂದ 'ಗರ್ಗಾಃ' ಎಂಬ ರೂಪವು ಸಿದ್ಧವಾಗುತ್ತದೆ. ಈ ರೂಪವು ಬಹುವಚನದಲ್ಲಿ ಮಾತ್ರ ಆಗುತ್ತದೆ. ಈ ಶಬ್ದವನ್ನು ನುಡಿಸುವಾಗ ಗಾರ್ಗ್ಯಃ, ಗಾರ್ಗ್ಯೌ, ಗರ್ಗಾಃ (ಪ್ರ.ವಿ.)। ಗಾರ್ಗ್ಯಂ, ಗಾರ್ಗ್ಯೌ, ಗರ್ಗಾನ್। (ದ್ವಿ.ವಿ.), ಗಾರ್ಗ್ಯೇಣ, ಗಾರ್ಗ್ಯಾಭ್ಯಾಂ, ಗರ್ಗೈಃ (ತೃ.ವಿ.) ಮೊದಲಾದ ರೂಪವು ಸಿದ್ಧವಾಗುತ್ತವೆ.

ಉದಾ– ವತ್ಸಾಃ – (ವತ್ಸನ ಗೋತ್ರಾಪತ್ಯದವರು ಮೊಮ್ಮಕ್ಕಳು ಅಥವಾ ಮೊಮ್ಮಕ್ಕಳ ಸಂತಾನ)– 'ವತ್ಸಸ್ಯ ಗೋತ್ರಾಪತ್ಯಂ' ಎಂಬುದು ಲೌಕಿಕ ವಿಗ್ರಹ. ವತ್ಸಸ್ಯ ಎಂಬುದರ ಅಲೌಕಿಕ ವಿಗ್ರಹವು ವತ್ಸ+ಜಸ್ ಎಂದಿರುತ್ತದೆ. ಈ ಸಾಮರ್ಥ್ಯವುಳ್ಳ ಪ್ರಾತಿಪದಿಕಕ್ಕೆ "ಗರ್ಗಾದಿಭ್ಯೋ ಯಞ್" ಎಂಬ ಸೂತ್ರದಿಂದ 'ಯಞ್' ಪ್ರತ್ಯಯವನ್ನು ಸೇರಿಸಿದರೆ 'ವಾತ್ಸ್ಯ' ಎಂದಾಗುತ್ತದೆ. ಇದಕ್ಕೆ ಪ್ರಥಮಾ ಬಹುವಚನಾರ್ಥದಲ್ಲಿ 'ಜಸ್' ಪ್ರತ್ಯಯವನ್ನು ಸೇರಿಸಿದಾಗ "ಯಞಿಞೋಶ್ಚ" ಎಂಬ ಸೂತ್ರದಿಂದ ಬಂದ ನಿಮಿತ್ತವಾದ ಯಞ್ ಪ್ರತ್ಯಯವು ಲೋಪವಾಗುವುದರಿಂದ ನೈಮಿತ್ತಿಕವಾದ ಆದಿವೃದ್ಧಿ ಮೊದಲಾದ ಕಾರ್ಯಗಳು ಬರುವುದಿಲ್ಲ. ಆದ್ದರಿಂದ ಮತ್ತೆ 'ವತ್ಸ' ಎಂದೇ ಇರುತ್ತದೆ. ವತ್ಸ+ಅಸ್ ಎಂದಿದ್ದಾಗ ಪೂರ್ವಸವರ್ಣದೀರ್ಘದಿಂದ 'ವತ್ಸಾಸ್' ಎಂದಾಗಿ (ವತ್ಸ+ಅಸ್) ರುತ್ವ ವಿಸರ್ಗಗಳಿಂದ 'ವತ್ಸಾಃ' ಎಂಬ ರೂಪ ಸಿದ್ಧಿಯಾಗುತ್ತದೆ. ವತ್ಸಾಃ ಮೊದಲಾದ ಬಹುವಚನಗಳನ್ನು ಹೇಳುವಾಗ 'ರಾಮ' ಶಬ್ದದಂತೆ ನುಡಿಸಬೇಕು. ಪ್ರಥಮ ಮತ್ತು ದ್ವಿವಚನಗಳು ಮಾತ್ರ ವಾತ್ಸಃ ವಾತ್ಸೌ ಎಂದು ರಾಮ ಶಬ್ದದ ಪ್ರಥಮ ದ್ವಿತೀಯ ವಿಭಕ್ತಿ ಶಬ್ದಗಳಂತೆಯೇ ಇರುತ್ತದೆ.

ಉದಾ– ವಾತ್ಸಃ,ವಾತ್ಸೌ, ವತ್ಸಾಃ। ವಾತ್ಸಂ ವಾತ್ಸೌ ವತ್ಸಾನ್। ವಾತ್ಸೇನ ವಾತ್ಸಾಭ್ಯಾಂ ವತ್ಸೈಃ।

**('ಯುವ' ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ. 1012 – ಜೀವತಿ ತು ವಂಶ್ಯೇ ಯುವಾ (4.1.163)**

ವೃತ್ತಿ– ವಂಶ್ಯೇ ಪಿತ್ರಾದೌ ಜೀವತಿ ಪೌತ್ರಾದೇಃ ಯತ್ ಅಪತ್ಯಂ ಚತುರ್ಥಾದಿ

ತದ್ ಯುವಸಂಜ್ಞಮೇವ ಸ್ಯಾತ್।

ಅ. ವ್ಯ.- "ಅಪತ್ಯಮ್ ಪೌತ್ರ ಪ್ರಭೃತಿ ಗೋತ್ರಂ" ಎಂಬ ಸೂತ್ರದಿಂದ 'ಪೌತ್ರ ಪ್ರಭೃತಿ' ಎಂಬ ಶಬ್ದವನ್ನು ವಿಭಕ್ತಿ ವಿಪರಿಣಾಮ ಮಾಡಿ 'ಪೌತ್ರ ಪ್ರಭೃತೇಃ' ಎಂಬ ಪದವು ಮತ್ತು "ತಸ್ಯಾಪತ್ಯಂ" ಎಂಬ ಸೂತ್ರದಿಂದ 'ಅಪತ್ಯಂ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ. - ವಂಶದಲ್ಲಿ ಹುಟ್ಟಿದ ತಂದೆ ಅಜ್ಜ ಮೊದಲಾದವರು ಜೀವಿಸಿರುವಾಗ ಪೌತ್ರ ಮೊದಲಾದವರ ನಾಲ್ಕನೇ ಪೀಳಿಗೆಗೆ ಸೇರಿದ ಮಗ (ಅಪತ್ಯ) ಮೊದಲಾದವರಿಗೆ 'ಯುವನ್' (ಯುವಾ) ಸಂಜ್ಞೆಯು ಬರುತ್ತದೆ.

ಉದಾ- 'ಲವ'ನೆಂಬುವವನಿಗೆ ರಾಮ ನೆಂಬುವವನು ತಂದೆ, ಅವನ ತಂದೆ ದಶರಥನು. ಮೊಮ್ಮಗ ಮೊದಲಾದವರಿಗೆ (ನಾಲ್ಕನೇ ಪೀಳಿಗೆಯಿಂದ (ಲವನ ಮಗನಿಂದ ಆರಂಭಿಸಿ) 'ಯುವ' ಸಂಜ್ಞೆಯು ಬರುತ್ತದೆ. ಇಲ್ಲಿ ವಿಗ್ರಹವಾಕ್ಯವನ್ನು ಬರೆಯುವಾಗ 'ಯುವಾಪತ್ಯಂ' ಎಂದು ಬರೆಯಬೇಕು. ಈ ನಾಲ್ಕನೇ ಪೀಳಿಗೆಯವನಿಗೆ ಮುತ್ತಜ್ಜನು ಬದುಕಿರಬೇಕು. ಆ ಮೂಲ ಪುರುಷನು ಬದುಕಿರುವಾಗಲೇ ನಾಲ್ಕನೇ ಅಥವಾ ಐದನೇ ಪೀಳಿಗೆಯವನು ಮೊದಲಾದವರಿಗೆ 'ಯುವ' ಸಂಜ್ಞೆಯು ಬರುತ್ತದೆ ಎಂಬುದನ್ನು ಗಮನದಲ್ಲಿಡಬೇಕು.

**(ನಿಯಮ ಸೂತ್ರ)**

**ಸೂತ್ರ. 1013- ಗೋತ್ರಾದ್ಯೂನ್ಯಸ್ತ್ರಿಯಾಮ್।(4.1.94)**

ವೃತ್ತಿ- ಯೂನ್ಯಪತ್ಯೇ ಗೋತ್ರ-ಪ್ರತ್ಯಯಾನ್ತಾದೇವ ಪ್ರತ್ಯಯಃ ಸ್ಯಾತ್। ಸ್ತ್ರಿಯಾಂ ತು ನ ಯುವಸಂಜ್ಞಾ।

ಪ. ಛೇ- ಗೋತ್ರಾತ್, ಯೂನಿ, ಅಸ್ತ್ರಿಯಾಮ್।

ಅರ್ಥ. - ಯುವಾಪತ್ಯದ ಅರ್ಥವು ವಿವಕ್ಷಿತವಾದಾಗ ಗೋತ್ರಪ್ರತ್ಯಯಾಂತ ಶಬ್ದದ ಮೇಲೆಯೇ ಪ್ರತ್ಯಯವು (ಯುವ ಪ್ರತ್ಯಯವು) ಬರುತ್ತದೆ. ಆದರೆ ಸ್ತ್ರೀ ಲಿಂಗದಲ್ಲಿ ಯುವ ಸಂಜ್ಞೆಯು ಬರುವುದಿಲ್ಲ.

ಇದು ನಿಯಮ ಸೂತ್ರವಾಗಿರುವುದರಿಂದ 'ಯುವಾಪತ್ಯ' ಅರ್ಥದಲ್ಲಿ ಪ್ರತ್ಯಯವನ್ನು ಸೇರಿಸುವಾಗ ಮೂಲ ಪ್ರಕೃತಿಯ ಮೇಲೆ ಸೇರಿಸಬಾರದು. ಅಂದರೆ ಗೋತ್ರ ಪ್ರತ್ಯಯಾಂತದ ನಂತರವೇ ಸೇರಿಸಬೇಕು ಎಂಬುದು ನಿಯಮವಾಗಿದೆ.

**(ಫಕ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ. 1014 - ಯಞಿಞೋಶ್ಚ।(4.1.101)**

ವೃತ್ತಿ- ಗೋತ್ರೇ ಯೌ ಯಞಿಞೌ ತದಂತಾತ್ ಫಕ್ ಸ್ಯಾತ್।

ಪ. ಛೇ- ಯಞಿಞೋಃ, ಚ।

ಅ. ವ್ಯ.- "ಗೋತ್ರೇ ಕುಂಜಾದಿಭ್ಯಶ್ಚಫಞ್"ಎಂಬ ಸೂತ್ರದಿಂದ 'ಗೋತ್ರೇ' ಎಂಬ

ಪದವು ಹಾಗೂ 'ನಡಾದಿಭ್ಯಃ ಫಕ್' ಸೂತ್ರದಿಂದ 'ಫಕ್' ಎಂಬ ಪದವು ಅನುವೃತ್ತವಾಗಿದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ. – ಗೋತ್ರಾರ್ಥದಲ್ಲಿ ಯಾವ ಯಞ್, ಅಞ್ ಪ್ರತ್ಯಯಗಳಿರುವುವೋ ಅದರ ಅಂತದ ನಂತರವೇ 'ಯುವಾಪತ್ಯ' ಅರ್ಥದಲ್ಲಿ ತದ್ಧಿತಸಂಜ್ಞೆಯುಳ್ಳ 'ಫಕ್' ಪ್ರತ್ಯಯವು ಬರುತ್ತದೆ. 'ಫಕ್' ನಲ್ಲಿ 'ಫ' ಮಾತ್ರ ಉಳಿಯುತ್ತದೆ. ಇಲ್ಲಿಯೂ ಕೇವಲ 'ಫ' ಮೇಲೆಯೇ 'ಆಯುನ್' ಪ್ರತ್ಯಯವು ಬರುತ್ತದೆ.

**(ಫ ಗೆ ಆಯನ್ ಪ್ರತ್ಯಯ್ವನ್ನು ವಿಧಿಸುವ ಸೂತ್ರ)**

**ಸೂತ್ರ 1015– ಆಯನೇಯೀನೀಯಿಯಃ ಫ_ಢ–ಖ–ಛ–ಘಾಂ ಪ್ರತ್ಯಯಾದೀನಾಮ್।** (7.1.2)

ವೃತ್ತಿ– ಪ್ರತ್ಯಯಾದೇಃ ಫಸ್ಯ–ಆಯನ್, ಢಸ್ಯ–ಏಯ್, ಖಸ್ಯ–ಈನ್, ಛಸ್ಯ–ಈಯ್, ಘಸ್ಯ–ಇಯ್, ಏತೇ ಸ್ಯುಃ। ಗರ್ಗಸ್ಯ ಯುವಾಪತ್ಯಂ ಗಾರ್ಗ್ಯಾಯಣಃ। ದಾಕ್ಷಾಯಣಃ।

ಪ. ಛೇ– ಆಯನ್, ಏಯ್, ಈನ್, ಈಯ್, ಇಯಃ, ಫ–ಢ–ಖ–ಛ–ಘಾಂ, ಪ್ರತ್ಯಯಾದೀನಾಮ್।

ಅರ್ಥ. – ಪ್ರತ್ಯಯದ ಆದಿಯಲ್ಲಿರುವ 'ಫ'ಗೆ ಆಯನ್, 'ಡ' ಗೆ ಏಯ್, 'ಖ' ಗೆ ಈನ್, 'ಛ' ಗೆ ಈಯ್, 'ಘ' ಗೆ ಇಯ್ ಆದೇಶಗಳು ಬರುತ್ತವೆ.

ಉದಾ– ಗಾರ್ಗ್ಯಾಯಣಃ (ಗರ್ಗನ ಗೋತ್ರಾಪತ್ಯನು/ಗರ್ಗನ ಮಗ) ಗರ್ಗ+ಙಸ್ ಎಂದಿದ್ದಾಗ, "ಗರ್ಗಾದಿಭ್ಯೋ ಯಞ್" ಎಂಬ ಸೂತ್ರದಿಂದ ತದ್ಧಿತ ಪ್ರತ್ಯಯವಾದ 'ಯಞ್' ಸೇರಿಸಿದಾಗ 'ಗಾರ್ಗ್ಯ' ಎಂದಿರುತ್ತದೆ. ನಂತರ "ಗೋತ್ರಾದ್ಯೂನ್ಯಸ್ತ್ರಿಯಾಮ್" ಎಂಬ ಸೂತ್ರದ ನಿಯಮದಿಂದ "ಯಞಿಞೋಶ್ಚ" ಎಂಬ ಸೂತ್ರದಿಂದ 'ಫಕ್' (ಫ್) ಪ್ರತ್ಯಯವು ಬಂದು ಪ್ರಾತಿಪದಿಕ ಸಂಜ್ಞೆ ಬಂದ ಮೇಲೆ ನಂತರ ಇರುವ 'ಸುಪ್' ಗೆ ಲೋಪ ಬಂದು ಪ್ರಕೃತ ಸೂತ್ರದಿಂದ 'ಫ್' ಗೆ ಆಯನ್ ಆದೇಶವು ಬಂದು ಗಾರ್ಗ್ಯ+ಆಯನ್+ಅ ಎಂದಿರುತ್ತದೆ. 'ಗಾರ್ಗ್ಯ' ಶಬ್ದದಲ್ಲಿರುವ ಕೊನೆಯ'ಅ' ಕಾರಕ್ಕೆ "ಯಸ್ಯೇತಿ ಚ" ಎಂಬ ಸೂತ್ರದಿಂದ ಲೋಪ ಬಂದು ಗಾರ್ಗ್ಯ್+ಆಯನ್+ಅ ಎಂದಿರುತ್ತದೆ. ಇದನ್ನು ಸೇರಿಸಿ ಓದುವಾಗ 'ಗಾರ್ಗ್ಯಾಯನ' ಎಂದಾಗುತ್ತದೆ. ರೇಫದ ನಂತರ ಇರುವ 'ನ್' ಕಾರಕ್ಕೆ "ಅಟ್‌ಕುಪ್‌ವಾಙ್‌ನುಮ್‌ವ್ಯವಾಯೇಪಿ" ಎಂಬ ಸೂತ್ರದಿಂದ ಣತ್ವ ಬಂದು ಗಾರ್ಗ್ಯಾಯಣ ಎಂಬ ರೂಪವಾಗುತ್ತದೆ. ಇದಕ್ಕೆ 'ಸು' ಪ್ರತ್ಯಯವನ್ನು ಸೇರಿಸಿದಾಗ ರುತ್ವ ವಿಸರ್ಗಗಳಿಂದ 'ಗಾರ್ಗ್ಯಾಯಣಃ' ಎಂಬ ರೂಪವು ಸಿದ್ಧಿಯಾಗುತ್ತದೆ.

ಉದಾ– ವಾತ್ಸ್ಯಾಯನಃ (ವತ್ಸನ ಮಗ)– 'ವತ್ಸಸ್ಯ ಗೋತ್ರಾಪತ್ಯಂ' ಎಂದು ವಿಗ್ರಹವಾಕ್ಯ ವತ್ಸ+ಙಸ್ ಎಂದಿದ್ದಾಗ, "ಗರ್ಗಾದಿಭ್ಯೋಯಞ್" ಎಂಬ ಸೂತ್ರದಿಂದ

ಯಞ್ (ಯ) ಪ್ರತ್ಯಯವನ್ನು ಸೇರಿಸಿದಾಗ ವಾತ್ಸ್ಯ ಎಂದಿರುತ್ತದೆ. ಹಿಂದಿನಂತೆ ಇದಕ್ಕೆ 'ಫಕ್' (ಫ್) ಪ್ರತ್ಯಯವು ಬಂದು ಪ್ರಾತಿಪದಿಕ ಸಂಜ್ಞೆ ಬಂದು ನಂತರ ಸುಪ್ ಪ್ರತ್ಯಯಕ್ಕೆ ಲೋಪ ಬಂದ ಮೇಲೆ, ಪ್ರಕೃತ ಸೂತ್ರದಿಂದ 'ಫ್' ಗೆ 'ಆಯನ್' ಆದೇಶ ಬಂದು ವಾತ್ಸ್ಯ+ಆಯನ್+ಅ ಎಂದಿರುತ್ತದೆ. "ಯಸ್ಯೇತಿಚ" ಎಂಬುದರಿಂದ ವಾತ್ಸ್ಯ ಎಂಬಲ್ಲಿರುವ ಕೊನೆಯ 'ಅ'ಕಾರಕ್ಕೆ ಲೋಪ ಬಂದು, ವಾತ್ಸ್ಯ್+ಆಯನ್+ಅ=ವಾತ್ಸ್ಯಾಯನ ಎಂದಿರುತ್ತದೆ. ಈ ಶಬ್ದ ಪ್ರಯೋಗದಲ್ಲಿ ಸುಪ್ ಪ್ರತ್ಯಯ ಲುಪ್ತವಾದರೂ ಏಕದೇಶವಿಕೃತನ್ಯಾಯದಿಂದ ಪ್ರಾತಿಪದಿಕತ್ವ ಇರುವುದರಿಂದ ಅದಕ್ಕೆ 'ಸು' ಪ್ರತ್ಯಯವನ್ನು ಹಚ್ಚಿದಾಗ ರುತ್ವ ವಿಸರ್ಗಗಳಿಂದ 'ವಾತ್ಸ್ಯಾಯನಃ' ಎಂಬ ರೂಪವು ಸಿದ್ಧವಾಗುತ್ತದೆ.

ಉದಾ-ದಾಕ್ಷ್ಯಾಯಣಃ ಇದರ ರೂಪವು ಈ ಮೇಲಿನಂತೆಯೇ ಸಿದ್ಧವಾಗುತ್ತದೆ.

**(ಇಞ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ. 1016 – ಅತ ಇಞ್।** (4.1.95)

ವೃತ್ತಿ– ಅಪತ್ಯೇऽರ್ಥೇ। ದಾಕ್ಷಿಃ

ಪ. ಛೇ– ಅತಃ, ಇಞ್।

ಅ. ವ್ಯ.– "ತಸ್ಯಾಪತ್ಯಂ" ಎಂಬ ಸೂತ್ರವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್ ಪ್ರಾತಿಪಾದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಇವುಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ–ಅಪತ್ಯಾರ್ಥದಲ್ಲಿ 'ಭ' ಸಂಜ್ಞಕ 'ಅ' ಕಾರಕ್ಕೆ 'ಇಞ್' ಆದೇಶ ಬರುತ್ತದೆ.

ಉದಾ– ದಾಕ್ಷಿಃ (ದಕ್ಷನ ಸಂತಾನ) – 'ದಕ್ಷಸ್ಯ ಅಪತ್ಯಂ ಪುಮಾನ್' ಎಂಬುದು ವಿಗ್ರಹ ವಾಕ್ಯ. ದಕ್ಷಸ್ಯ ಎಂಬುದಕ್ಕೆ ದಕ್ಷ+ಙಸ್ ಎಂಬುದು ಅಲೌಕಿಕ ವಿಗ್ರಹವಾಕ್ಯ. ಪ್ರಕೃತ ಸೂತ್ರದಿಂದ ಇಞ್ ಪ್ರತ್ಯಯವು ಬಂದು ದಕ್ಷ+ಙಸ್+ಇಞ್ (ಇ), ಎಂದಾಗಿ 'ಙಸ್' ಎಂಬ 'ಸುಪ್' ಪ್ರತ್ಯಯಕ್ಕೆ "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ ಙಸ್ ಗೆ ಲೋಪ ಬಂದು ದಕ್ಷ+ಇ ಎಂದಿರುತ್ತದೆ. ಇಲ್ಲಿ ತದ್ಧಿತ ಪ್ರತ್ಯಯವು ಞಿತ್ ಆಗಿರುವುದರಿಂದ "ತದ್ಧಿತೇಷ್ವಚಾಮಾದೇಃ" ಎಂಬ ಸೂತ್ರದಿಂದ ಆದಿವೃದ್ಧಿ ಬಂದು ದಾಕ್ಷ+ಇ ಎಂದಾಗುತ್ತದೆ. 'ಅ' ಕಾರಾಂತವಾದ ದಾಕ್ಷ ಶಬ್ದದ ಕೊನೆಯಲ್ಲಿರುವ 'ಭ' ಸಂಜ್ಞೆ ಹೊಂದಿದ 'ಅ' ಕಾರಕ್ಕೆ ಲೋಪ ಬಂದು ದಾಕ್ಷ್+ಇ ಎಂದಾಗುತ್ತದೆ. ಇದಕ್ಕೆ 'ಸು' ಸೇರಿಸಿದಾಗ 'ದಾಕ್ಷಿಃ' ಎಂಬ ಪದವು ಸಿದ್ಧವಾಗುತ್ತದೆ.

**(ಇಞ್ ಪ್ರತ್ಯಯವನ್ನು ಬಹ್ವಾದಿ ಗಣಗಳಿಗೆ ವಿಧಿಸುವ ಸೂತ್ರ)**

**ಸೂತ್ರ – 1017. ಬಾಹ್ವಾದಿಭ್ಯಶ್ಚ।** (4.1.96)

ವೃತ್ತಿ– ಬಾಹವಿಃ। ಔಡುಲೋಮಿಃ।

ವಾ॥ ಲೋಮ್ನೋऽಪತ್ಯೇಷು ಬಹುಷ್ವಕಾರೋ ವಕ್ತವ್ಯಃ। ಉಡುಲೋಮಾಃ।

ಆಕೃತಿಗಣೋಽಯಮ್।

ಪ. ಛೇ– ಬಾಹ್ವಾದಿಭ್ಯಃ, ಚ।

ಅ. ವೃ.– "ತಸ್ಯಾಪತ್ಯಂ" ಎಂಬ ಸೂತ್ರವು ಮತ್ತು "ಅತ ಇಞ್" ಎಂಬ ಸೂತ್ರದಿಂದ 'ಇಞ್' ಎಂಬ ಪದವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಎಂಬ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ. – ಬಾಹು ಮೊದಲಾದ ಗಣದಲ್ಲಿ ಪಠಿತವಾದ ಶಬ್ದಗಳ ನಂತರ ಅಪತ್ಯಾರ್ಥದಲ್ಲಿ ಇಞ್ ಪ್ರತ್ಯಯವು ಬರುತ್ತದೆ.

ಉದಾ – ಬಾಹವಿಃ (ಬಹು ಎಂಬ ಹೆಸರುಳ್ಳಂತಹ ಮನುಷ್ಯನ ಮಗ) – 'ಬಾಹೋಃ ಅಪತ್ಯಂ ಪುಮಾನ್' ಎಂಬುದು ಲೌಕಿಕ ವಿಗ್ರಹವಾಕ್ಯ. 'ಬಾಹೋಃ' ಎಂಬುದಕ್ಕೆ ಬಾಹು+ಙಸ್ ಎಂಬುದು ಅಲೌಕಿಕ ವಿಗ್ರಹವಾಕ್ಯ. 'ಬಾಹು' ಎಂಬುದು ಸಾಮರ್ಥ್ಯದಿಂದ ಕೂಡಿದೆ. "ಬಾಹ್ವಾದಿಭ್ಯಶ್ಚ" ಎಂಬ ಸೂತ್ರದಿಂದ 'ಇಞ್' ಎಂಬ ತದ್ಧಿತ–ಪ್ರತ್ಯಯವು ಬರುತ್ತದೆ. ಆಗ ಬಾಹು+ಙಸ್+ಇಞ್ (ಇ) ಎಂದಿರುತ್ತದೆ. "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ 'ಙಸ್' ಗೆ ಲೋಪ ಬರುತ್ತದೆ. ಆಗ ಬಾಹು+ಇ ಎಂದಿರುತ್ತದೆ. "ತದ್ಧಿತೇಷ್ವಚಾಮಾದೇಃ" ಎಂಬ ಸೂತ್ರದಿಂದ ಆದಿವೃದ್ಧಿಯು ಬರುವಾಗ 'ಬ್' ಕಾರದ ನಂತರ ಇರುವ 'ಆ' ಕಾರಕ್ಕೆ 'ಆ' ಕಾರವೇ ಆದೇಶವಾಗಿ ಬರುತ್ತದೆ. "ಓರ್ಗುಣಃ" ಎಂಬ ಸೂತ್ರದಿಂದ 'ಬಾಹು' ಶಬ್ದದದಲ್ಲಿರುವ

'ಉ' ಕಾರಕ್ಕೆ ಗುಣ ಬಂದು ಬಾಹೋ+ಇ ಎಂದಾಗಿ "ಏಚೋಽಯವಾಯಾವಃ" ಎಂಬ ಸೂತ್ರದಿಂದ ಅವಾದೇಶ ಬಂದು ಬಾಹವಿ ಎಂಬ ರೂಪವು ಸಿದ್ಧವಾಗುತ್ತದೆ. ಇದಕ್ಕೆ 'ಸು' ಸೇರಿಸಿದಾಗ ರುತ್ವ ವಿಸರ್ಗಗಳಿಂದ ಬಾಹವಿಃ ಎಂಬ ರೂಪವು ಸಿದ್ಧವಾಗುತ್ತದೆ.

ವಾರ್ತಿಕ– ಲೋಮ್ನೋಪತ್ಯೇಷು ಬಹುಷ್ವಕಾರೋ ವಕ್ತವ್ಯಃ।

ಈ ವಾರ್ತಿಕದ ಪ್ರಕಾರ ಅಪತ್ಯಾರ್ಥದಲ್ಲಿ ಲೋಮನ್ ಶಬ್ದದ ಬಹುವಚನದಲ್ಲಿ 'ಅ' ಕಾರ ಪ್ರತ್ಯಯವು ಬರುತ್ತದೆ. ಇದು ಪ್ರಕೃತ ಸೂತ್ರಕ್ಕೆ ಅಪವಾದವಾಗಿದೆ.

ಉದಾಃ– ಔಡುಲೋಮಿಃ (ಉಡುಲೋಮಿ ಎಂಬುವವನ ಮಗ)–'ಉಡುಲೋಮ್ನಃ ಅಪತ್ಯಂ ಪುಮಾನ್' ಎಂಬುದು ಲೌಕಿಕ ವಿಗ್ರಹವಾಕ್ಯ. ಉಡುಲೋಮ್ನಃ ಎಂಬುದಕ್ಕೆ ಉಡುಲೋಮನ್+ಙಸ್ ಎಂಬುದು ಅಲೌಕಿಕ ವಿಗ್ರಹವಾಕ್ಯ. ಪ್ರಕೃತ ಸೂತ್ರದಿಂದ ಇದಕ್ಕೆ ಇಞ್ (ಇ) ಪ್ರತ್ಯಯವು ಬರುತ್ತದೆ. ಉಡುಲೋಮನ್+ಙಸ್+ಇ ಎಂದಾಗಿ "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ 'ಙಸ್'ಗೆ ಲೋಪ ಬಂದು ಉಡುಲೋಮನ್+ಇ ಎಂದಿರುತ್ತದೆ. "ತದ್ಧಿತೇಷ್ವಚಾಮಾದೇಃ" ಎಂಬುದರಿಂದ ಆದಿಯಲ್ಲಿರುವ 'ಉ' ಕಾರಕ್ಕೆ ವೃದ್ಧಿ ಬಂದು ಔಡುಲೋಮನ್+ಇ ಎಂದಾಗುತ್ತದೆ. "ನಸ್ತದ್ಧಿತೇ" ಎಂಬ ಸೂತ್ರದಿಂದ 'ಅನ್' ಎಂಬ 'ಟಿ'ಗೆ ಲೋಪ ಬಂದು

ಔಡುಲೋಮ್+ಇ=ಔಡುಲೋಮಿ ಎಂದಾಗುತ್ತದೆ. ಈ ಪ್ರಾತಿಪದಿಕಕ್ಕೆ 'ಸು' ಸೇರಿಸಿದಾಗ ರುತ್ವ ವಿಸರ್ಗಗಳಿಂದ 'ಔಡುಲೋಮಿಃ' ಎಂಬ ರೂಪವು ಸಿದ್ಧವಾಗುತ್ತದೆ. ಪ್ರಕೃತ ಸೂತ್ರವನ್ನು ಬಾಧಿಸಿ, ಪ್ರಕೃತ ವಾರ್ತಿಕದಿಂದ 'ಅ' ಪ್ರತ್ಯಯವು ಬಂದು 'ಅ' ಕಾರಾಂತ ಶಬ್ದವಾದ ಮೇಲೆ ಬಹುವಚನದಲ್ಲಿ ಉಡುಲೋಮಾಃ ಎಂದಾಗುತ್ತದೆ.

ವಿಶೇಷ- ಇತ್ ಆದ ಇಞ್ ಪ್ರತ್ಯಯವು ಇದ್ದಾಗ ಆದಿ-ವೃದ್ಧಿ ಬಂದು ಔಡುಲೋಮಿಃ ಎಂದಿತ್ತು, ದ್ವಿವಚನದಲ್ಲೂ ಇದೇ ರೀತಿ ಔಡುಲೋಮೀ ಎಂದಿರುತ್ತದೆ. ಬಹುವಚನದಲ್ಲಿ ಮಾತ್ರ ಮೇಲಿನ ವಾರ್ತಿಕದಿಂದ 'ಅ' ಪ್ರತ್ಯಯವು ಮಾತ್ರ ಬಂದಿರುವುದರಿಂದ 'ರಾಮ'-ಶಬ್ದದ ಬಹುವಚನದಂತೆ ಉಡುಲೋಮಾಃ ಎಂದಾಗಿದೆ. ಇಲ್ಲಿ ಇತ್ ಪ್ರತ್ಯಯವೆಂಬ ನಿಮಿತ್ತವಿಲ್ಲದ್ದರಿಂದ ನೈಮಿತ್ತಿಕ ಕಾರ್ಯವು ಬರುವುದಿಲ್ಲ. 'ನಿಮಿತ್ತಾಪಾಯೇ ನೈಮಿತ್ತಕಸ್ಯಾಪ್ಯಪಾಯಃ' ಇದರ ರೂಪಗಳು ಕೆಳಗಿನಂತೆ ಇರುತ್ತವೆ.

| ಏಕವಚನ | ದ್ವಿವಚನ | ಬಹುವಚನ |
|---|---|---|
| ಔಡುಲೋಮಿಃ | ಔಡುಲೋಮೀ | ಉಡುಲೋಮಾಃ |
| ಔಡುಲೋಮಿಂ | ಔಡುಲೋಮೀ | ಉಡುಲೋಮಾನ್ |
| ಔಡುಲೋಮಿನಾ | ಔಡುಲೋಮಿಭ್ಯಾಂ | ಉಡುಲೋಮೈಃ |

ಈ ರೀತಿ ಉಳಿದ ರೂಪಗಳು ಬಹುವಚನದಲ್ಲಿ ಮಾತ್ರ ಇರುತ್ತವೆ.

**(ಅಞ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ. 1018 - ಅನೃಷ್ಯಾನಂತರ್ಯೇ ಬಿದಾದಿಭ್ಯೋಽಞ್। (4.1.104)**

ವೃತ್ತಿ-ಯೇ ತು ಅತ್ರ ಅನೃಷಯಃ ತೇಭ್ಯಃ ಅಪತ್ಯೇ ಅನ್ಯತ್ರ ತು ಗೋತ್ರೇ ಬಿದಸ್ಯಗೋತ್ರಂ- ಬೈದಃ। ಬೈದೋ, ಬಿದಾಃ। ಪುತ್ರಸ್ಯಾಪತ್ಯಂ-ಪೌತ್ರಃ।ಪೌತ್ರೌ ಪೌತ್ರಾಃ। ಏವಂ ದೌಹಿತ್ರಾದಯಃ।

ಪ. ಛೇ- ಅನೃಷೀ, ಆನಂತರ್ಯೇ, ಬಿದಾದಿಭ್ಯಃ, ಅಞ್।

ಅ. ವೃ.- "ಗೋತ್ರೇ ಕುಂಜಾದಿಭ್ಯಶ್ಚಫಞ್" ಎಂಬ ಸೂತ್ರದಿಂದ 'ಗೋತ್ರೇ' ಎಂಬ ಶಬ್ದವು ಮತ್ತು "ತಸ್ಯಾಪತ್ಯಂ" ಎಂಬ ಸೂತ್ರವು ಅನುವೃತ್ತವಾಗಿದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್‌ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಎಂಬ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ. - ಬಿದಾದಿ ಗಣದಲ್ಲಿ ಹೇಳಿರುವ ಶಬ್ದಗಳ ನಂತರ ಗೋತ್ರಾಪತ್ಯ ಅರ್ಥದಲ್ಲಿ ತದ್ಧಿತ ಸಂಜ್ಞೆಯುಳ್ಳ ಅಞ್ ಪ್ರತ್ಯಯವು ಬರುತ್ತದೆ. ಆದರೆ ಯಾವ ಶಬ್ದವು ಋಷಿವಾಚಕವಾಗಿರುವುದಿಲ್ಲವೋ ಅವುಗಳಿಗೆ ಅನಂತರಾಪತ್ಯ ಅರ್ಥದಲ್ಲೇ ಅಞ್ ಪ್ರತ್ಯಯವು ಬರುತ್ತದೆ.

ಅನಂತರಾಪತ್ಯವೆಂದರೆ ಎರಡನೆ ತಲೆಮಾರು (Second Generation) ಎಂದರ್ಥ. ಬಿದಾದಿ ಎಂಬುದು ಒಂದು ಗಣ. ಇದರಲ್ಲಿ ಕೆಲವು ಋಷಿಗಳ ಹೆಸರಿದೆ.

(ಮಗ, ಮಗಳು ಮೊದಲಾದ ಪ್ರಾತಿಪದಿಕಗಳನ್ನು ಹೇಳಲಾಗಿದೆ. ಆದರೆ ಇವು ಋಷಿವಾಚಕಗಳಾಗಿರುವುದಿಲ್ಲ). ಆದ್ದರಿಂದ ಪ್ರಕೃತ ಸೂತ್ರದಿಂದ ಬಿದಾದಿ-ಗಣಪಠಿತವಾದ ಋಷಿವಾಚಕ ಶಬ್ದಗಳ ಮೇಲೆ ಗೋತ್ರಾಪತ್ಯ ಅರ್ಥದಲ್ಲಿ ಪ್ರಕೃತ ಪ್ರತ್ಯಯವು ಬರುತ್ತದೆ. ಋಷಿವಾಚಕವಲ್ಲದ ಶಬ್ದದ ಮೇಲೆ ಅನಂತರಾಪತ್ಯ ಅರ್ಥದಲ್ಲಿ ಪ್ರಕೃತ ಪ್ರತ್ಯಯವನ್ನು ವಿಧಿಸಲಾಗಿದೆ. ಹೀಗೆ ವ್ಯತ್ಯಾಸವನ್ನು ತಿಳಿಯಬೇಕು.

ಉದಾ- ಬೈದಃ (ಬಿದ ಎಂಬ ಋಷಿಯ ಮಗ) – 'ಬಿದಸ್ಯ ಗೋತ್ರಾಪತ್ಯಂ ಪುಮಾನ್' ಎಂಬುದು ಲೌಕಿಕ ವಿಗ್ರಹವಾಕ್ಯ. ಬಿದಸ್ಯ ಎಂಬುದಕ್ಕೆ ಬಿದ+ಙಸ್ ಎಂಬುದು ಅಲೌಕಿಕ ವಿಗ್ರಹವಾಕ್ಯ. "ಅನೃಷ್ಯಾನಂತರ್ಯೇ ಬಿದಾದಿಭ್ಯೋಽಞ್" ಎಂಬ ಸೂತ್ರದಿಂದ ಅನಂತರಾಪತ್ಯ ಅರ್ಥದಲ್ಲಿ ಅಞ್ ಪ್ರತ್ಯಯವು ಬರುತ್ತದೆ. ಆಗ ಪುತ್ರ+ಙಸ್+ಅಞ್(ಅ) ಎಂದಿರುತ್ತದೆ. "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ 'ಙಸ್' ಗೆ ಲೋಪ ಬಂದು ಪುತ್ರ+ಅ ಎಂದಾಗುತ್ತದೆ. "ತದ್ಧಿತೇಷ್ವಚಾಮಾದೇಃ" ಎಂಬ ಸೂತ್ರದಿಂದ 'ಪ್' ಕಾರದ ನಂತರ ಇರುವ 'ಉ' ಕಾರಕ್ಕೆ 'ಔ' ಕಾರವು ಆದೇಶವಾಗಿ ಬರುತ್ತದೆ. ಆಗ ಪೌತ್ರ+ಅ ಎಂದಿರುತ್ತದೆ. 'ಪೌತ್ರ' ಶಬ್ದವು 'ಭ' ಸಂಜ್ಞಕವಾಗಿರುವುದರಿಂದ ಕೊನೆಯ 'ಅ' ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು ಪೌತ್ರ್+ಅ ಎಂದಾಗಿ ನಂತರ 'ಪೌತ್ರ' ಎಂದಾಗುತ್ತದೆ. ಈ ಪ್ರಾತಿಪದಿಕಕ್ಕೆ 'ಸು' ಸೇರಿಸಿದಾಗ ಪೌತ್ರಃ ಎಂಬ ರೂಪವು ಸಿದ್ಧವಾಗುತ್ತದೆ. ಇದರಿಂದ ಪೌತ್ರಃ, ಪೌತ್ರೌ, ಪೌತ್ರಾಃ ಎಂಬ ರೂಪಗಳಾಗುತ್ತವೆ.

ಮಗಳ ಮಗ ಎಂದು ಹೇಳುವಾಗ (ದುಹಿತು: ಅನಂತರಾಪತ್ಯಂ ಪುಮಾನ್) ದೌಹಿತ್ರಃ ಎಂಬ ರೂಪವು ಇದೇ ರೀತಿ ಸಿದ್ಧವಾಗುತ್ತದೆ.

### (ಅಣ್ ಪ್ರತ್ಯಯವನ್ನು ವಿಧಿಸುವ ಸೂತ್ರ)

**ಸೂತ್ರ. 1019 – ಶಿವಾದಿಭ್ಯೋಽಣ್।** (4.1.112)

ವೃತ್ತಿ- ಅಪತ್ಯೇ।ಶೈವಃ। ಗಾಂಙ್ಗಃ।

ಪ. ಛೇ- ಶಿವಾದಿಭ್ಯಃ, ಅಣ್।

ಅ. ವ್ಯ.- "ತಸ್ಯಾಪತ್ಯಂ" ಎಂಬ ಸೂತ್ರವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್ ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಎಂಬ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ- ಅಪತ್ಯಾರ್ಥದಲ್ಲಿ ಶಿವಾದಿಗಣದಲ್ಲಿ ಹೇಳಿರುವ ಶಬ್ದಗಳ ನಂತರ ತದ್ಧಿತ ಪ್ರತ್ಯಯವಾದ 'ಅಣ್' ಪ್ರತ್ಯಯವು ಬರುತ್ತದೆ.

ಉದಾಃ- ಶೈವಃ (ಶಿವನ ಮಗ) – 'ಶಿವಸ್ಯ ಅಪತ್ಯಂ ಪುಮಾನ್' ಎಂಬುದು ಲೌಕಿಕ ವಿಗ್ರಹ ವಾಕ್ಯ. ಶಿವಸ್ಯ ಎಂಬ ಪದಕ್ಕೆ ಶಿವ+ಙಸ್ ಎಂಬುದು ಅಲೌಕಿಕ ವಿಗ್ರಹವಾಕ್ಯವಾಗಿದೆ. ಪ್ರಕೃತ ಸೂತ್ರದಿಂದ ಅಣ್ ಬಂದು ಶಿವ+ಙಸ್+ಅಣ್ (ಅ) ಎಂದಾಗಿ, ಶಿವ+ಙಸ್+ಅ ಎಂದಾಗುತ್ತದೆ. "ಸುಪೋಧಾತುಪ್ರಾತಿಪದಿಕಯೋಃ" ಎಂಬ

ಸೂತ್ರದಿಂದ ಜಸ್ ಗೆ ಲೋಪ ಬಂದು ಶಿವ+ಅ ಎಂದಾಗಿ "ತದ್ಧಿತೇಷ್ವಚಾಮಾದೇಃ" ಎಂಬುದರಿಂದ 'ಶಿ' ಎಂಬಲ್ಲಿರುವ 'ಇ' ಕಾರಕ್ಕೆ ಆದಿವೃದ್ಧಿ ಅಯ್ ಆದೇಶವು ಬಂದು, 'ಭ' ಸಂಜ್ಞೆಯುಳ್ಳ 'ಅ' ಕಾರಕ್ಕೆ "ಯಸ್ಯೇತಿ ಚ" ಎಂಬುದರಿಂದ ಲೋಪ ಬಂದು ಶೈವ್+ಅ=ಶೈವ ಎಂದಾಗಿ, ಈ ಪ್ರಾತಿಪದಿಕಕ್ಕೆ 'ಸು' ಸೇರಿಸಿದರೆ ರುತ್ವ ವಿಸರ್ಗಗಳಿಂದ ಶೈವಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ- ಗಾಙ್ಗಃ – [ಗಂಗೆಯ ಮಗ (ಬೀಷ್ಮಃ)] – 'ಗಂಗಾಯಾಃ ಅಪತ್ಯಂ ಪುಮಾನ್' ಎಂಬುದು ಲೌಕಿಕ ವಿಗ್ರಹವಾಕ್ಯ. ಗಂಗಾಯಾಃ ಎಂಬ ಶಬ್ದಕ್ಕೆ ಗಂಗಾ+ಙಸ್ ಎಂಬುದು ಅಲೌಕಿಕ ವಿಗ್ರಹವಾಕ್ಯ. ಗಂಗಾಯಾಃ ಎಂಬುದು ಷಷ್ಠ್ಯನ್ತ ಸಮರ್ಥ ಪ್ರಾತಿಪದಿಕವಾಗಿರುತ್ತದೆ. "ಶಿವಾದಿಭ್ಯೋಽಣ್" ಎಂಬ ಸೂತ್ರದಿಂದ ಅಪತ್ಯಾರ್ಥದಲ್ಲಿ ಅಣ್ ಪ್ರತ್ಯಯವು ಬರುತ್ತದೆ. ಆಗ ಗಂಗಾ+ಙಸ್+ಅಣ್ (ಅ) ಎಂದಿರುತ್ತದೆ. "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ ಙಸ್ ಗೆ ಲೋಪ ಬಂದು ಙಾ+ಅ ಎಂದಿರುತ್ತದೆ. "ತದ್ಧಿತೇಷ್ವಚಾಮಾದೇಃ" ಎಂಬ ಸೂತ್ರದಿಂದ ಆದಿವೃದ್ಧಿ ಬಂದು ಙಾ+ಅ ಎಂದಿದ್ದಾಗ "ಯಸ್ಯೇತಿಚ" ಎಂಬುದರಿಂದ ದೀರ್ಘ 'ಆ' ಕಾರಕ್ಕೆ ಲೋಪ ಬಂದು ಗಾಙ್+ಅ=ಗಾಙ್ಗ ಎಂದಾಗುತ್ತದೆ. ಸುಪ್ ಪ್ರತ್ಯಯವನ್ನು ಸೇರಿಸಿದಾಗ ರುತ್ವ ವಿಸರ್ಗಗಳಿಂದ ಗಾಙ್ಗಃ ಎಂದಾಗುತ್ತದೆ.

**(ಅಣ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ. 1020 – ಋಷ್ಯಂಧಕವೃಷ್ಣಿಕುರುಭ್ಯಶ್ಚ॥(4.1.114)**

ವೃತ್ತಿ- ಋಷಿಭ್ಯಃ-ವಾಸಿಷ್ಠಃ, ವೈಶ್ವಾಮಿತ್ರಃ। ಅಂಧಕೇಭ್ಯಃ – ಶ್ವಾಫಲ್ಕಃ। ವೃಷ್ಣಿಭ್ಯಃ- ವಾಸುದೇವಃ। ಕುರುಭ್ಯಃ- ನಾಕುಲಃ, ಸಾಹದೇವಃ।

ಪ. ಛೇ- ಋಷ್ಯಂಧಕವೃಷ್ಣಿಕುರುಭ್ಯಃ, ಚ।

ಅ. ವೃ.- "ಶಿವಾದಿಭ್ಯೋಽಣ್" ಎಂಬ ಸೂತ್ರದಿಂದ 'ಅಣ್' ಎಂಬ ಪದವು "ತಸ್ಯಾಪತ್ಯಂ" ಎಂಬ ಸೂತ್ರವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ. – ಋಷಿವಾಚಕ ಶಬ್ದಗಳು ಹಾಗೂ ಅಂಧಕ, ವೃಷ್ಣಿ ಮತ್ತು ಕುರು ಈ ಮೂರು ವಂಶಗಳಲ್ಲಿ ಹುಟ್ಟಿದವರನ್ನು ಸೂಚಿಸುವ ಶಬ್ದಗಳ ಮೇಲೆ ಅಪತ್ಯಾರ್ಥದಲ್ಲಿ ತದ್ಧಿತ ಪ್ರತ್ಯಯವಾದ 'ಅಣ್' ಬರುತ್ತದೆ.

ಉದಾ- ವಾಸಿಷ್ಠಃ (ವಸಿಷ್ಠನ ಮಗ)- 'ವಸಿಷ್ಠಸ್ಯ ಅಪತ್ಯಂ ಪುಮಾನ್' ಎಂಬುದು ಲೌಕಿಕ ವಿಗ್ರಹ. ವಸಿಷ್ಠಸ್ಯ ಎಂಬುದಕ್ಕೆ ವಸಿಷ್ಠ+ಙಸ್ ಎಂಬುದು ಅಲೌಕಿಕ ವಿಗ್ರಹವಾಕ್ಯ. "ಅತ ಇಞ್" ಎಂಬ ಸೂತ್ರದಿಂದ ಬರಬೇಕಾದ 'ಇಞ್' ಪ್ರತ್ಯಯವನ್ನು ಬಾಧಿಸಿ ಪ್ರಕೃತ ಸೂತ್ರದಿಂದ 'ಅಣ್' ಪ್ರತ್ಯಯವು ಬಂದು ವಸಿಷ್ಠ+ಙಸ್+ಅಣ್ (ಅ) ಎಂದಾಗಿ, "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ ಙಸ್‌ಗೆ ಲೋಪ ಬಂದು ವಸಿಷ್ಠ+ಅ

ಎಂದಿರುತ್ತದೆ. "ತದ್ಧಿತೇಷ್ವಚಾಮಾದೇಃ" ಎಂಬುದರಿಂದ ಆದಿ ಅಚ್ ವರ್ಣಕ್ಕೆ (ಅ ಕಾರಕ್ಕೆ) 'ಆ' ಕಾರವು ಆದೇಶವಾಗಿ ಬಂದು ವಸಿಷ್ಠ ಎಂಬಲ್ಲಿರುವ ಅಂತ್ಯ 'ಅ' ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು, ವಾಸಿಷ್ಠ್+ಅ=ವಾಸಿಷ್ಠ ಎಂದಾಗುತ್ತದೆ. ಈ ಪ್ರಾತಿಪದಿಕಕ್ಕೆ 'ಸು' ಪ್ರತ್ಯಯವನ್ನು ಸೇರಿಸಿದಾಗ ರುತ್ವ ವಿಸರ್ಗಗಳಿಂದ ವಾಸಿಷ್ಠಃ ಎಂದಾಗುತ್ತದೆ.

ಉದಾ– ಇದೇ ರೀತಿ ವಿಶ್ವಾಮಿತ್ರ+ಅಣ್ ಎಂದಿದ್ದಾಗ, ಹಿಂದಿನಂತೆಯೇ ಪ್ರಕ್ರಿಯೆ ನಡೆದು ವೈಶ್ವಾಮಿತ್ರಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಅಂಧಕೇಭ್ಯಃ ('ಅಂಧಕ' ವಂಶಕ್ಕೆ ಸೇರಿದವರ ಉದಾಹರಣೆ)– ಶ್ವಾಫಲ್ಕಃ (ಶ್ವಫಲ್ಕನ ಮಗ) ಶ್ವಫಲ್ಕನು ಅಂಧಕ ವಂಶಕ್ಕೆ ಸೇರಿದವನು.

'ಶ್ವಫಲ್ಕಸ್ಯ ಅಪತ್ಯಂ ಪುಮಾನ್' ಎಂಬುದು ಲೌಕಿಕ ವಿಗ್ರಹವಾಕ್ಯ. ಶ್ವಫಲ್ಕಸ್ಯ ಎಂಬುದಕ್ಕೆ ಶ್ವಫಲ್ಕ+ಙಸ್ ಎಂಬುದು ಅಲೌಕಿಕ ವಿಗ್ರಹವಾಕ್ಯ. ಹಿಂದಿನಂತೆ ಇಞ್ ಪ್ರತ್ಯಯವನ್ನು ಬಾಧಿಸಿ ಪ್ರಕೃತ ಸೂತ್ರದಿಂದ ಅಣ್ (ಅ) ಪ್ರತ್ಯಯ ಬಂದು ಶ್ವಫಲ್ಕ+ಅ ಎಂದಿರುತ್ತದೆ. ಹಿಂದಿನಂತೆ ಇದಕ್ಕೆ ಆದಿವೃದ್ಧಿ (ಆ) ಬಂದು, ಕೊನೆಯ 'ಅ' ಕಾರಕ್ಕೆ "ಯಸ್ಯೇತಿ ಚ" ಎಂಬುದರಿಂದ ಲೋಪ ಬಂದು ಶ್ವಾಫಲ್ಕ್+ಅ ಎಂದಿರುತ್ತದೆ. ಇದಕ್ಕೆ 'ಸುಪ್' ಪ್ರತ್ಯಯವನ್ನು ಸೇರಿಸಿದಾಗ ರುತ್ವ ವಿಸರ್ಗಗಳಿಂದ ಶ್ವಾಫಲ್ಕಃ ಎಂಬ ರೂಪವು ಸಿದ್ಧವಾಗುತ್ತದೆ. ವೃಷ್ಣಿ ವಂಶಕ್ಕೆ ಸೇರಿದವರ ಉದಾಹರಣೆ–

ಉದಾ– ವಾಸುದೇವಃ – 'ವಸುದೇವಸ್ಯ ಅಪತ್ಯಂ ಪುಮಾನ್'ಎಂಬುದು ಲೌಕಿಕ ವಿಗ್ರಹ, ವಸುದೇವಸ್ಯ ಎಂಬುದಕ್ಕೆ ವಸುದೇವ+ಙಸ್ ಎಂದು ಅಲೌಕಿಕ ವಿಗ್ರಹ (ವಸುದೇವಸ್ಯ ಎಂಬುದಕ್ಕೆ) ಹಿಂದಿನಂತೆಯೇ ಪ್ರಕೃತ ಸೂತ್ರದಿಂದ 'ಅಣ್(ಅ)' ಪ್ರತ್ಯಯ ಬಂದು ಹಿಂದಿನಂತೆ ಪ್ರಕ್ರಿಯೆ ನಡೆದು ವಾಸುದೇವಃ ಎಂಬ ರೂಪವು ಸಿದ್ಧವಾಗುತ್ತದೆ.

ಕುರು ವಂಶಕ್ಕೆ ಸೇರಿದವರ ಉದಾಹರಣೆ–

ಉದಾ– ನಾಕುಲಃ ಮತ್ತು ಸಾಹದೇವಃ (ನಕುಲನ ಮಗ)– 'ನಕುಲಸ್ಯ ಅಪತ್ಯಂ ಪುಮಾನ್' ಎಂಬುದು ಲೌಕಿಕ ವಿಗ್ರಹವಾಕ್ಯ. ನಕುಲಸ್ಯ ಎಂಬುದಕ್ಕೆ ನಕುಲ+ಙಸ್ ಎಂಬುದು ಅಲೌಕಿಕ ವಿಗ್ರಹವಾಕ್ಯ. ಹಿಂದಿನಂತೆಯೇ ಙಸ್ ಲೋಪವಾಗಿ ನಕುಲ+ಅ ಎಂದಿರುತ್ತದೆ. ಹಿಂದಿನಂತೆಯೇ ಆದಿವೃದ್ಧಿ ಮೊದಲಾದ ಕಾರ್ಯಗಳಾಗಿ ಪ್ರಾತಿಪದಿಕಕ್ಕೆ ಸುಪ್ ಪ್ರತ್ಯಯವನ್ನು ಸೇರಿಸಿದ ಮೇಲೆ ನಾಕುಲಃ ಎಂಬ ರೂಪವು ಸಿದ್ಧಿಯಾಗುತ್ತದೆ. ಸಾಹದೇವಃ ಎಂಬ ರೂಪವು ಇದೇ ರೀತಿ ಸಿದ್ಧವಾಗುತ್ತದೆ.

**('ಅಣ್' ಪ್ರತ್ಯಯ ಆದೇಶವನ್ನು ವಿಧಿಸುವ ಮತ್ತೊಂದು ಸೂತ್ರ)**

**ಸೂತ್ರ 1021– ಮಾತುರುತ್ ಸಂಖ್ಯಾ-ಸಂ-ಭದ್ರ-ಪೂರ್ವಾಯಾಃ। (4.1.115)**

ವೃತ್ತಿ– ಸಂಖ್ಯಾದಿಪೂರ್ವಸ್ಯ ಮಾತೃ ಶಬ್ದಸ್ಯ ಉತ್-ಆದೇಶಃ ಸ್ಯಾತ್ ಅಣ್ ಪ್ರತ್ಯಯಶ್ಚ। ದ್ವೈಮಾತುರಃ।ಷಾಣ್ಮಾತುರಃ। ಸಾಂಮಾತುರಃ। ಭಾದ್ರಮಾತುರಃ।

ಪ. ಛೇ-ಮಾತುಃ, ಉತ್, ಸಂಖ್ಯಾ, ಸಂಭದ್ರಪೂರ್ವಾಯಾಃ।

ಅ. ವೃ :- "ಶಿವಾದಿಭ್ಯೋಣ್" ಎಂಬ ಸೂತ್ರದಿಂದ 'ಅಣ್' ಎಂಬ ಪ್ರತ್ಯಯವು, "ತಸ್ಯಾಪತ್ಯಂ" ಎಂಬ ಸೂತ್ರದ ಅನುವೃತ್ತಿಯು ಆಗುತ್ತದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಎಂಬ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ :- ಸಂಖ್ಯಾಪೂರ್ವಾ, ಸಮ್‌ಪೂರ್ವಾ ಹಾಗೂ ಭದ್ರಪೂರ್ವಾ ಮತ್ತು ಮಾತೃ ಶಬ್ದಗಳಿಗೆ ಅಪತ್ಯಾರ್ಥದಲ್ಲಿ ಹ್ರಸ್ವ 'ಉ' ಕಾರವು ಅಂತಾದೇಶವಾಗಿ ಬರುತ್ತದೆ ಮತ್ತು ಇದರ ಪರದಲ್ಲಿ ತದ್ಧಿತಾರ್ಥ ಅಣ್ ಪ್ರತ್ಯಯವು ಬರುತ್ತದೆ.

ವಿಶೇಷ- ಮಾತೃ ಶಬ್ದದ 'ಋ' ಕಾರಕ್ಕೆ 'ಉ' ಕಾರವು ಆದೇಶವಾಗಿ ಬರುವುದರಿಂದ "ಉರಣ್‌ರಪರಃ" ಎಂಬ ಸೂತ್ರದಿಂದ 'ರ'ಪರವಾಗಿ ಅಂದರೆ 'ಉರ್' ಎಂದಾಗುತ್ತದೆ.

ಉದಾ- ದ್ವೈಮಾತುರಃ (ಇಬ್ಬರು ತಾಯಂದಿರ ಮಗ): 'ದ್ವಯೋಃ ಮಾತ್ರೋಃ ಅಪತ್ಯಂ ಪುಮಾನ್' ಎಂಬುದು ಲೌಕಿಕ ವಿಗ್ರಹ. ದ್ವಿ+ಓಸ್+ಮಾತೃ+ಓಸ್ ಎಂಬುದು ಅಲೌಕಿಕ ವಿಗ್ರಹವಾಕ್ಯ. "ತದ್ಧಿತಾರ್ಥೋತ್ತರಪದಸಮಾಹಾರೇ ಚ" ಎಂಬ ಸೂತ್ರದಿಂದ ಸಮಾಸವಾದ ಮೇಲೆ "ಕೃತ್‌ತದ್ಧಿತಸಮಾಸಾಶ್ಚ" ಎಂಬ ಸೂತ್ರದಿಂದ ಇದಕ್ಕೆ ಪ್ರಾತಿಪದಿಕ ಸಂಜ್ಞೆ ಬರುತ್ತದೆ. "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ 'ಸುಪ್' ಲೋಪವಾಗಿ ದ್ವಿ ಮಾತೃ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ತದ್ಧಿತಾರ್ಥ ಪ್ರತ್ಯಯವಾದ 'ಅಣ್' ಬಂದು, ನಂತರ ಮಾತೃ ನಲ್ಲಿರುವ ಅಂತ 'ಋ' ಕಾರಕ್ಕೆ 'ಉರ್' 'ರೇಫ' ಪರಕವಾಗಿ ಬಂದು, ತದ್ಧಿತ ಪ್ರತ್ಯಯವು ಪರದಲ್ಲಿದ್ದಾಗ ಆದಿವೃದ್ಧಿ ಬಂದು, 'ಇ' ಕಾರಕ್ಕೆ 'ಐ' ಕಾರವು ಬಂದು, ದ್ವೈಮಾತುರ್+ಅ=ದ್ವೈಮಾತುರ ಇದನ್ನು ಸುಬಂತಮಾಡಿದಾಗ ದ್ವೈಮಾತುರಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ- ಷಾಣ್ಮಾತುರಃ (ಆರು ತಾಯಂದಿರ ಮಗ): 'ಷಣ್ಣಾಂ ಮಾತೄಣಾಂ ಅಪತ್ಯಂ ಪುಮಾನ್' ಎಂಬುದು ಲೌಕಿಕ ವಿಗ್ರಹ, ಷಟ್+ಆಮ್ ಮಾತೃ+ಆಮ್ ಎಂಬುದು ಇದರ ಅಲೌಕಿಕ ವಿಗ್ರಹವಾಕ್ಯ. ಹಿಂದಿನಂತೆಯೇ "ತದ್ಧಿತಾರ್ಥೋತ್ತರಪದ ಸಮಾಹಾರೇ ಚ" ಎಂಬ ಸೂತ್ರದಿಂದ ಸಮಾಸವಾದ ಮೇಲೆ ಪ್ರಾತಿಪದಿಕ ಸಂಜ್ಞೆ ಬರುತ್ತದೆ. "ಸುಪೋಧಾತುಪ್ರಾದಿಪದಿಕಯೋಃ" ಎಂಬುದರಿಂದ 'ಸುಪ್'ಗಳಿಗೆ ಲೋಪ ಬಂದು ಷಷ್+ಮಾತೃ ಎಂದಿರುತ್ತದೆ. 'ಷಷ್' ಗೆ ಪದತ್ವವಿರುವುದರಿಂದ, ಷ್ ಕಾರಕ್ಕೆ) "ಝಲಾಂ ಜಶೋಽಂತೇ" ಎಂಬ ಸೂತ್ರದಿಂದ ಜಶ್ತ್ವ(ಡ್) ಬಂದು, "ಯರೋನುನಾಸಿಕೇನುನಾಸಿಕೋ ವಾ" ಸೂತ್ರದಿಂದ 'ಡ್' ಕಾರಕ್ಕೆ ಅನುನಾಸಿಕ (ಣ್) ಆದೇಶವು ಬಂದು ಷಷ್+ಮಾತೃ=ಷಣ್ಮಾತೃ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ಅಪತ್ಯಾರ್ಥದಲ್ಲಿ 'ಅಣ್' ಪ್ರತ್ಯಯವು ಬಂದು ಷಣ್+ಮಾತೃ+ಅ ಎಂದಿದ್ದಾಗ, ಹಿಂದಿನಂತೆ 'ಋ'ಕಾರಕ್ಕೆ 'ಉರ್' ಆದೇಶ ಬಂದು, ಇದು ತದ್ಧಿತವಾದ್ದರಿಂದ ಆದಿವೃದ್ಧಿ ಬಂದು 'ಷಟ್'ನಲ್ಲಿರುವ ಪ್ರಥಮ 'ಅ' ಕಾರಕ್ಕೆ ದೀರ್ಘಬಂದು ಷಾಣ್ಮಾತುರ್+ಅ=ಷಾಣ್ಮಾತುರ ಎಂದಾಗಿ ಸುಬಂತಮಾಡಿದಾಗ ಷಾಣ್ಮಾತುರಃ

ಎಂದಾಗುತ್ತದೆ.

ಉದಾ– ಸಾಂಮಾತುರಃ (ಒಳ್ಳೆಯ ತಾಯಿಯ ಮಗ): 'ಸಮ್‌ಮಾತುಃ ಅಪತ್ಯಂ ಪುಮಾನ್' ಎಂಬುದು ಲೌಕಿಕ ವಿಗ್ರಹವಾಕ್ಯ. ಸಮ್‌ಮಾತೃ+ಸು ಎಂಬುದು ಅಲೌಕಿಕ ವಿಗ್ರಹವಾಕ್ಯ. "ಕುಗತಿಪ್ರಾದಯಃ" ಎಂಬ ಸೂತ್ರದಿಂದ ಸಮಾಸವಾಗಿ ಪ್ರಾತಿಪದಿಕ ಸಂಜ್ಞೆಯನ್ನು ಹೊಂದುತ್ತದೆ. "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ 'ಸುಪ್' ಲೋಪವಾಗಿ ಸಮ್+ಮಾತೃ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ತದ್ಧಿತವಾದ 'ಅಣ್' ಪ್ರತ್ಯಯವು ಬಂದು 'ಮಾತೃ' ನಲ್ಲಿರುವ 'ಋ' ಕಾರಕ್ಕೆ 'ಉರ್' ಆದೇಶವಾಗಿ ಬಂದು ಆದಿವೃದ್ಧಿಯಿಂದ ಸಾಮ್‌ಮಾತುರ್+ಅ=ಸಾಂಮಾತುರ ಎಂದಾದಮೇಲೆ ಸುಬಂತಮಾಡಿದಾಗ ಸಾಂಮಾತುರಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ–ಭಾದ್ರಮಾತುರಃ – (ಒಳ್ಳೆಯ ತಾಯಿಯ ಮಗ):'ಭದ್ರಮಾತುಃ ಅಪತ್ಯಂ ಪುಮಾನ್' ಎಂಬುದು ಲೌಕಿಕ ವಿಗ್ರಹವಾಕ್ಯ. ಭದ್ರಾ+ಸು ಮಾತೃ+ಸು ಎಂಬುದು ಅಲೌಕಿಕ ವಿಗ್ರಹವಾಕ್ಯ. "ವಿಶೇಷಣಂ ವಿಶೇಷ್ಯೇಣ ಬಹುಳಂ" ಎಂಬುದರಿಂದ ಸಮಾಸ ಮಾಡಿದಾಗ ಪ್ರಾತಿಪದಿಕ–ಸಂಜ್ಞೆಯು ಬರುತ್ತದೆ. "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ ಸುಪ್ ಗಳಿಗೆ ಲೋಪ ಬಂದು ಭದ್ರಾ+ಮಾತೃ ಎಂದಿರುತ್ತದೆ. "ಪುಂವತ್ ಕರ್ಮಧಾರಯ ಜಾತಿಯ ದೇಶೀಯೇಷು" ಎಂಬ ಸೂತ್ರದಿಂದ ಭದ್ರಾ ಶಬ್ದಕ್ಕೆ ಪುಂವದ್‌ಭಾವ ಬಂದು ಭದ್ರಮಾತೃ ಎಂದಾಗುತ್ತದೆ. ಪ್ರಕೃತ ಸೂತ್ರದಿಂದ ತದ್ಧಿತ 'ಅಣ್' ಪ್ರತ್ಯಯವು ಬಂದು 'ಮಾತೃ' ವಿನಲ್ಲಿರುವ 'ಋ' ಕಾರಕ್ಕೆ 'ಉರ್' ಆದೇಶವು ಬಂದು, ಭದ್ರ ಎಂಬುದರಲ್ಲಿರುವ ಆದಿ 'ಅ' ಕಾರಕ್ಕೆ ವೃದ್ಧಿ

(ಆ) ಬಂದು, ಭಾದ್ರಮಾತುರ್+ಅ=ಭಾದ್ರಮಾತುರ ಎಂದಿದ್ದಾಗ, ಸುಬಂತ ಮಾಡಿದ ಮೇಲೆ ಭಾದ್ರಮಾತುರಃ ಎಂಬ ರೂಪವು ಸಿದ್ಧವಾಗುತ್ತದೆ.

**('ಢಕ್' ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ 1022– ಸ್ತ್ರೀಭ್ಯೋ ಢಕ್ । (4.1.120)**

ವೃತ್ತಿ– ಸ್ತ್ರೀಪ್ರತ್ಯಯಾಂತೇಭ್ಯಃ ಢಕ್। ವೈನತೇಯಃ।

ಪ. ಛೇ– ಸ್ತ್ರೀಭ್ಯಃ, ಢಕ್।

ಅ.ವೃ.– "ತಸ್ಯಾಪತ್ಯಂ" ಎಂಬ ಸೂತ್ರವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್‌ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಎಂಬ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ. – ಅಪತ್ಯಾರ್ಥದಲ್ಲಿ ಸ್ತ್ರೀ ಪ್ರತ್ಯಯಾಂತ ಶಬ್ದಗಳ ಮೇಲೆ 'ಢಕ್' ಪ್ರತ್ಯಯವು ಬರುತ್ತದೆ. ಢಕ್ ನಲ್ಲಿ 'ಢ್' ಮಾತ್ರ ಉಳಿಯುತ್ತದೆ. ಅದಕ್ಕೆ "ಆಯನ್–ಏಯ್–ಈನ್–ಈಯ್–ಇಯ್–ಫಢಖಛಘಾಂ ಪ್ರತ್ಯಯಾದೀನಾಂ" ಎಂಬ ಸೂತ್ರದಿಂದ ಏಯ್ ಆದೇಶ ಬರುತ್ತದೆ.

ಉದಾ– ವೈನತೇಯಃ – (ವಿನತೆಯ ಮಗ):'ವಿನತಾಯಾಃ ಅಪತ್ಯಂ ಪುಮಾನ್'

ಎಂಬುದು ಲೌಕಿಕ ವಿಗ್ರಹವಾಕ್ಯ. ವಿನತಾ+ಙಸ್ ಎಂಬುದು ಅಲೌಕಿಕ ವಿಗ್ರಹವಾಕ್ಯ. "ಸ್ತ್ರೀಭ್ಯೋಢಕ್" ಎಂಬುದರಿಂದ 'ಢಕ್'(ಢ್+ಅ) ಪ್ರತ್ಯಯವು ಬಂದು, ಅದಕ್ಕೆ(ಢ್) "ಆಯನ್-ಎಯ್-ಈನ್-ಈಯ್-ಇಯ್-ಫಢಖಛಘಾಂ ಪ್ರತ್ಯಯಾದೀನಾಂ" ಎಂಬ ಸೂತ್ರದಿಂದ 'ಏಯ್' ಆದೇಶ ಬಂದು ಏಯ್+ಅ=ಏಯ ಎಂಬ ಆದೇಶವು ಬಂದು ವಿನತಾ+ಙಸ್+ಏಯ ಎಂದಿದ್ದಾಗ, ಪ್ರಾತಿಪದಿಕ ಸಂಜ್ಞೆ ಬಂದು "ಸುಪೋಧಾತುಪ್ರಾತಿಪದಿಕಯೋಃ" ಎಂಬ ಸೂತ್ರದಿಂದ 'ಸುಪ್(ಙಸ್)' ಗೆ ಲೋಪ ಬಂದು ವಿನತಾ+ಏಯ ಎಂದಿರುತ್ತದೆ. ಈ ತದ್ಧಿತ ಪ್ರತ್ಯಯ(ಢಕ್) 'ಕಿತ್' ಅಗಿರುವುದರಿಂದ "ಕ್ಞಿತಿಚ" ಂಬ ಸೂತ್ರದಿಂದ ಆದಿವೃದ್ಧಿ ಬಂದು 'ವಿ' ನಲ್ಲಿರುವ 'ಇ'ಕಾರಕ್ಕೆ 'ಐ' ಕಾರವು ಬಂದು, 'ವೈ' ಎಂದಾಗುತ್ತದೆ. ವೈನತಾ+ಏಯ ಎಂದಿದ್ದಾಗ,

ವೈನತಾ ಎಂಬಲ್ಲಿರುವ 'ಆ' ಕಾರಕ್ಕೆ "ಯಸ್ಯೇತಿ ಚ" ಎಂಬುದರಿಂದ ಲೋಪ ಬಂದು ವೈನತ್+ಏಯ=ವೈನತೇಯ ಎಂದಾಗುತ್ತದೆ. 'ಏಕದೇಶವಿಕೃತ ನ್ಯಾಯದಿಂದ' ಪ್ರಾತಿಪದಿಕಕ್ಕೆ 'ಸುಪ್' ಪ್ರತ್ಯಯವನ್ನು ಸೇರಿಸಿದಾಗ ವೈನತೇಯಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ:-ಕೌಂತೇಯ:- (ಕುಂತಿಯ ಮಗ):'ಕುಂತ್ಯಾಃ ಅಪತ್ಯಂ ಪುಮಾನ್' ಎಂಬುದು ಲೌಕಿಕ ವಿಗ್ರಹವಾಕ್ಯ. ಕುಂತ್ಯಾಃ ಎಂಬುದಕ್ಕೆ ಕುಂತಿ+ಙಸ್ ಎಂಬುದು ಅಲೌಕಿಕ ವಿಗ್ರಹವಾಕ್ಯ. "ಸ್ತ್ರೀಭ್ಯೋಢಕ್" ಎಂಬುದರಿಂದ 'ಢಕ್' ಪ್ರತ್ಯಯ ಬರುತ್ತದೆ. "ಆಯನ್-ಏಯ್-ಈನ್-ಈಯ್-ಇಯ್-ಫಢಖಛಘಾಂ ಪ್ರತ್ಯಯಾದೀನಾಂ" ಎಂಬ ಸೂತ್ರದಿಂದ ಢಕ್(ಢ್) ಗೆ ಏಯ್ ಆದೇಶ ಬರುತ್ತದೆ. ಇದು ತದ್ಧಿತಾಂತವಾಗಿರು ವುದರಿಂದ ಪ್ರಾತಿಪದಿಕ ಸಂಜ್ಞೆ ಬಂದು, "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ ಸುಪ್ ಲೋಪವಾಗಿ ಕುಂತಿ+ಏಯ ಎಂದಿರುತ್ತದೆ. ಇದು "ಕ್ಞಿತಿಚ" ಎಂಬ ಸೂತ್ರದಿಂದ ಆದಿವೃದ್ಧಿ ಯಿಂದ 'ಕ' ಕಾರದ ನಂತರ ಇರುವ 'ಉ' ಕಾರಕ್ಕೆ 'ಔ' ಕಾರವು ಆದೇಶವಾಗಿ ಬಂದು ಕೌಂತಿ+ಏಯ್ ಎಂದಿರುತ್ತದೆ. ಕೌಂತಿ ಎಂಬಲ್ಲಿರುವ 'ಭ' ಸಂಜ್ಞಕ 'ಇ' ಕಾರಕ್ಕೆ "ಯಸ್ಯೇತಿ ಚ" ಎಂಬುದರಿಂದ ಲೋಪ ಬಂದು ಕೌಂತ್+ಏಯ+ಅ=ಕೌಂತೇಯ ಎಂದಾಗುತ್ತದೆ. ಇದು ಏಕದೇಶವಿಕೃತ ನ್ಯಾಯದಿಂದ ಇದನ್ನು ಪ್ರಾತಿಪದಿಕವಾಗಿ ಭಾವಿಸಿ ಸುಬಂತ ಮಾಡಿದಾಗ ರುತ್ವ ವಿಸರ್ಗಗಳಿಂದ ಕೌಂತೇಯಃ ಎಂದಾಗುತ್ತದೆ.

ಉದಾ:-ರಾಧೇಯಃ - ರಾಧೆಯ ಮಗ:'ರಾಧಾಯಾಃ ಅಪತ್ಯಂ ಪುಮಾನ್' ಎಂಬುದು ಲೌಕಿಕ ವಿಗ್ರಹವಾಕ್ಯ. ರಾಧಾಯಾಃ ಎಂಬುದಕ್ಕೆ ರಾಧಾ+ಙಸ್ ಎಂಬುದು ಅಲೌಕಿಕ ವಿಗ್ರಹವಾಕ್ಯ "ಸ್ತ್ರೀಭ್ಯೋಢಕ್" ಎಂಬುದರಿಂದ ಢ (ಡ್+ಅ) "ಆಯನ್-ಏಯ್-ಈನ್-ಈಯ್-ಇಯ್-ಫಢಖಛಘಾಂ ಪ್ರತ್ಯಯಾದೀನಾಂ" ಢ್ ಗೆ ಏಯ್ ಆದೇಶ ಬಂದು ರಾಧಾ+ಏಯ್+ಅ ಎಂದಾಗುತ್ತದೆ. ಹಿಂದಿನಂತೆ "ಯಸ್ಯೇತಿ ಚ" ಎಂಬುದರಿಂದ ರಾಧಾ ಎಂಬಲ್ಲಿರುವ 'ಆ' ಕಾರಕ್ಕೆ ಲೋಪ ಬಂದು ರಾಧ್+ಏಯ=ರಾಧೇಯ ಎಂದಾಗುತ್ತದೆ. ಈ ಪ್ರಾತಿಪದಿಕಕ್ಕೆ 'ಸುಪ್' ಸೇರಿಸಿದಾಗ

ರಾಧೇಯಃ ಎಂಬ ರೂಪವು ಸಿದ್ಧವಾಗುತ್ತದೆ.

**(ಕನೀನ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ. 1023 – ಕನ್ಯಾಯಾಃ ಕನೀನ ಚ। (4.1.116)**

ವೃತ್ತಿ– ಚಾತ್ ಅಣ್। ಕಾನೀನಃ ವ್ಯಾಸ್ಯಃ। ಕರ್ಣಶ್ಚ।

ಅ. ವ್ಯ.– "ಶಿವಾದಿಭ್ಯೋಽಣ್" ಎಂಬ ಸೂತ್ರದಿಂದ 'ಅಣ್' ಎಂಬ ಪದವು ಮತ್ತು "ತಸ್ಯಾಪತ್ಯಂ" ಎಂಬ ಸೂತ್ರವು ಅನುವೃತ್ತವಾಗುತ್ತವೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್‌ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಎಂಬ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ. – ಅಪತ್ಯಾರ್ಥದಲ್ಲಿ ಕನ್ಯಾ ಶಬ್ದಕ್ಕೆ ಕನೀನ ಎಂಬ ಆದೇಶವು ಬರುತ್ತದೆ ಮತ್ತು ಇದರ ಪರದಲ್ಲಿ 'ಅಣ್' ಪ್ರತ್ಯಯವು ಬರುತ್ತದೆ. ಇದು "ಸ್ತ್ರೀಭ್ಯೋಢಕ್" ಎಂಬ ಸೂತ್ರಕ್ಕೆ ಅಪವಾದವಾಗಿದೆ.

ಉದಾ– ಕಾನೀನೋ ವ್ಯಾಸಃ, ಕರ್ಣಶ್ಚ (ಕನ್ಯೆಯ, ಅಂದರೆ ಮದುವೆಯಾಗದವಳ) ಮಗ 'ಕನ್ಯಾಯಾಃ ಅಪತ್ಯಂ ಪುಮಾನ್' ಎಂಬುದು ಲೌಕಿಕ ವಿಗ್ರಹವಾಕ್ಯ. ಕನ್ಯಾಯಾಃ ಎಂಬುದಕ್ಕೆ ಕನ್ಯಾ+ಙಸ್ ಎಂಬುದು ಅಲೌಕಿಕ ವಿಗ್ರಹವಾಕ್ಯ. ಪ್ರಕೃತ ಸೂತ್ರದಿಂದ ಕನ್ಯಾ ಶಬ್ದಕ್ಕೆ ಕನೀನ ಎಂಬುದು ಆದೇಶವಾಗಿ ಬಂದು ಅದಕ್ಕೆ 'ಅಣ್' (ಅ) ಪ್ರತ್ಯಯವನ್ನು ಸೇರಿಸಿದಾಗ ಕನೀನ+ಅ ಎಂದಿರುತ್ತದೆ. ಈ ತದ್ಧಿತಾಂತ ಶಬ್ದವು ಪ್ರಾತಿಪದಿಕವಾಗಿರುವುದರಿಂದ, ಹಿಂದಿನಂತೆಯೇ ಆದಿವೃದ್ಧಿ ಮೊದಲಾದ ಕಾರ್ಯಗಳಾಗಿ ಪ್ರಾತಪದಿಕಕ್ಕೆ ಸುಪ್ ಪ್ರತ್ಯಯವನ್ನು ಸೇರಿಸಿದ ಮೇಲೆ ರುತ್ವ ವಿಸರ್ಗಗಳಿಂದ ಕಾನೀನಃ ಎಂದಾಗುತ್ತದೆ.

**(ಯತ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ 1024 – ರಾಜಶ್ವಶುರಾದ್ಯತ್।(4.1.137)**

ವಾರ್ತಿಕ – ರಾಜ್ಞಃ ಜಾತೌ ಏವ ಇತಿ ವಾಚ್ಯಂ।

ಪ. ಛೇ– ರಾಜಶ್ವಶುರಾತ್, ಯತ್ ।

ಅ. ವ್ಯ.– "ತಸ್ಯಾಪತ್ಯಂ" ಎಂಬ ಸೂತ್ರ ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್‌ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಎಂಬ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ. – ರಾಜನ್ ಮತ್ತು ಶ್ವಶುರ ಶಬ್ದಗಳ ನಂತರ ಅಪತ್ಯಾರ್ಥದಲ್ಲಿ ತದ್ಧಿತ ಪ್ರತ್ಯಯವಾದ 'ಯತ್' ಬರುತ್ತದೆ. ಇದರಲ್ಲಿ 'ಯ' ಕಾರ ಮಾತ್ರ ಉಳಿಯುತ್ತದೆ.

ವಾರ್ತಿಕ॥ ರಾಜ್ಞಃ ಜಾತೌ ಏವ ಇತಿ ವಾಚ್ಯಂ।

ಅರ್ಥ:– ರಾಜನ್ ಶಬ್ದದ ನಂತರ ಜಾತಿ ವಾಚ್ಯವು (ಜಾತ್ಯರ್ಥಕವಾದ ಅರ್ಥವು) ಪರದಲ್ಲಿದ್ದಾಗ ಮಾತ್ರ 'ಯತ್' ಪ್ರತ್ಯಯವು ಬರುತ್ತದೆ ಎಂದು ಹೇಳಬೇಕು.

ವಿಶೇಷ:- ಯತ್ ಪ್ರತ್ಯಯವು ಅಪತ್ಯಾರ್ಥವನ್ನೂ ಹೇಳುತ್ತದೆ ಮತ್ತು ರಾಜನ್ ಶಬ್ದ ಪ್ರಯೋಗ ಮಾಡಿದಾಗ ಜಾತ್ಯರ್ಥದಲ್ಲೇ ಬರುತ್ತದೆ ಎಂಬುದೇ ವಿಶೇಷ.

**('ಅನ್' ಗೆ ಪ್ರಕೃತಿಭಾವ ವಿಧಿಸುವ ಸೂತ್ರ)**

**ಸೂತ್ರ. 1025-ಯೇಚಾಭಾವಕರ್ಮಣೋಃ। (6.4.168)**

ವೃತ್ತಿ- ಯಾದೌ ತದ್ಧಿತೇ ಪರೇ ಅನ್ ಪ್ರಕೃತ್ಯಾ ಸ್ಯಾತ್ ನತು ಭಾವಕರ್ಮೋಣೋಃ। ರಾಜನ್ಯಃ। ಜಾತಾವೇವೇತಿ ಕಿಂ?

ಪ. ಛೇ- ಯೇ,ಚ, ಅಭಾವಕರ್ಮಣೋಃ।

ಅ. ವೃ.-"ಅನ್" ಎಂಬ ಸೂತ್ರದಿಂದ 'ಅನ್' ಪದವು ಅನುವೃತ್ತವಾಗುತ್ತದೆ. "ಆಪತ್ಯಸ್ಯ ಚ ತದ್ಧಿತೇಽನಾತಿ" ಎಂಬ ಸೂತ್ರದಿಂದ ತದ್ಧಿತೇ ಎಂಬ ಪದವು ಮತ್ತು "ಪ್ರಕೃತ್ಯೈಕಾಚ್" ಎಂಬ ಸೂತ್ರದಿಂದ ಪ್ರಕೃತ್ಯಾ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ. - 'ಯ'-ಕಾರಾದಿಯಾದ ತದ್ಧಿತ ಪ್ರತ್ಯಯದ ಪರದಲ್ಲಿ ಇರುವ 'ಅನ್' ಗೆ ಪ್ರಕೃತಿಭಾವವು ಬರುತ್ತದೆ. ಆ ತದ್ಧಿತ ಪ್ರತ್ಯಯಕ್ಕೆ ಭಾವ ಮತ್ತು ಕರ್ಮಗಳ ಅರ್ಥವಿಲ್ಲದಿದ್ದಾಗ.

ಉದಾ- ರಾಜನ್ಯಃ (ರಾಜನ ಸಂತಾನ):'ರಾಜ್ಞಃ ಅಪತ್ಯಂ ಜಾತಿಃ' ಎಂಬುದು ಲೌಕಿಕ ವಿಗ್ರಹವಾಕ್ಯ ರಾಜ್ಞಃ ಎಂಬುದಕ್ಕೆ ರಾಜನ್+ಙಸ್ ಎಂಬುದು ಅಲೌಕಿಕ ವಿಗ್ರಹವಾಕ್ಯ. ಹಿಂದಿನ 'ರಾಜ್ಞಃ ಜಾತೌ ಏವ ಇತಿ ವಾಚ್ಯಂ' ಎಂಬ ವಾರ್ತಿಕದಿಂದ "ಜಾತಿಯ ಜೊತೆಗೆ" ಎಂದು ಸೂಚಿಸುವ ಅರ್ಥದಲ್ಲಿ "ರಾಜ-ಶ್ವಶುರಾದ್ಯತ್" ಎಂಬ ಸೂತ್ರದಿಂದ ಯತ್ (ಯ) ಪ್ರತ್ಯಯವು ಬರುತ್ತದೆ. ಇದು "ತಸ್ಯಾಪತ್ಯಂ" ಎಂಬ ಸೂತ್ರಕ್ಕೆ ಬಾಧಕವಾಗಿದೆ. ತದ್ಧಿತಾಂತವಾದ ಈ ಶಬ್ದವು ಪ್ರಾತಿಪದಿಕ ಸಂಜ್ಞೆಯನ್ನು ಹೊಂದಿದ ಮೇಲೆ ಪರದಲ್ಲಿ ಸೇರಿಸುವ 'ಸುಪ್' ಪ್ರತ್ಯಯಕ್ಕೆ ಲೋಪ ಬಂದು ರಾಜನ್+ಯ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ಪ್ರಕೃತಿಭಾವವು ಬಂದು "ನಸ್ತದ್ಧಿತೇ" ಎಂಬ ಸೂತ್ರದಿಂದ ಬರಬೇಕಾದ 'ಅನ್' ಲೋಪವು ಬರುವುದಿಲ್ಲ. ಆಗ ರಾಜನ್ಯ ಎಂಬ ರೂಪವು ಹಾಗೆಯೆ ಇರುತ್ತದೆ. ಸುಬಂತಮಾಡಿದಾಗ ರೆಉಇತ್ವ-ವಿಸರ್ಗಗಳಿಂದ ರಾಜನ್ಯಃ ಎಂಬ ರೂಪವು ಸಿದ್ಧಿಸುತ್ತದೆ. ಇಲ್ಲಿ ಕ್ಷತ್ರಿಯ ಜಾತಿಯು ಸೂಚಿತವಾಗಿದೆ.

**(ಪ್ರಕೃತಿ ಭಾವದ ಅರ್ಥವನ್ನು ವಿಧಿಸುವ ಸೂತ್ರ)**

**ಸೂತ್ರ. 1026 - ಅನ್ (6.4.167)**

ವೃತ್ತಿ- ಅನ್ ಪ್ರಕೃತ್ಯಾಸ್ಯಾತ್ ಅಣಿ ಪರೆ। ರಾಜನಃ। ಶ್ವಶುರ್ಯಃ।

ಅ. ವೃ.- "ಇನಣ್ಯನಪತ್ಯೇ" ಎಂಬ ಸೂತ್ರದಿಂದ ಅಣಿ ಎಂಬ ಪದವು, "ಪ್ರಕೃತ್ಯೈಕಾಚ್" ಎಂಬ ಸೂತ್ರದಿಂದ ಪ್ರಕೃತ್ಯಾ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ. - ಅಣ್ ಪ್ರತ್ಯಯವು ಪರದಲ್ಲಿದ್ದಾಗ "ನಸ್ತದ್ಧಿತೇ" ಎಂಬ ಸೂತ್ರವನ್ನು ಬಾಧಿಸಿ 'ಅನ್' ಗೆ ಪ್ರಕೃತಿಭಾವವು ಬರುತ್ತದೆ.

ಉದಾ– ರಾಜನಃ–(ರಾಜನ ಸಂತಾನ ಆದರೆ ಅವನು ಕ್ಷತ್ರಿಯ ಜಾತಿಗೆ ಸೇರಿದವನಲ್ಲ): "ತಸ್ಯಾಪತ್ಯಂ" ಎಂಬ ಸೂತ್ರದಿಂದ ಸಾಧಾರಣವಾಗಿ ಬರುವ ಅಣ್ ಪ್ರತ್ಯಯವು ಬಂದಿದೆ. ತದ್ಧಿತಾಂತವಾದ ಈ ಶಬ್ದಕ್ಕೆ ಪ್ರಾತಿಪದಿಕ ಸಂಜ್ಞೆ ಬಂದು ಪರದಲ್ಲಿರುವ ಸುಪ್ ಗೆ ಲೋಪ ಬರುತ್ತದೆ. ರಾಜನ್ ಎಂಬಲ್ಲಿರುವ ಆದಿ ಆ ಕಾರಕ್ಕೆ ಆ ಕಾರವೇ ಆದೇಶವಾಗಿ ಬರುತ್ತದೆ. ಆಗ ರಾಜನ್+ಅ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ಅನ್‌ಗೆ ಬರಬೇಕಾದ ಲೋಪವನ್ನು ಬಾಧಿಸಿ ಅನ್ ಶಬ್ದವೇ ಪ್ರಕೃತಿಭಾವದಿಂದ ಇರುತ್ತದೆ. ಆಗ ರಾಜನ್+ಅ=ರಾಜನ ಎಂದಾಗಿ ಸುಬಂತವಾದಾಗ ರಾಜನಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ– ಶ್ವಶುರ್ಯಃ – (ಮಾವನ ಮಗ):'ಶ್ವಶುರಸ್ಯ ಅಪತ್ಯಂ ಪುಮಾನ್' ಎಂಬುದು ಲೌಕಿಕ ವಿಗ್ರಹವಾಕ್ಯ. ಶ್ವಶುರಸ್ಯ ಎಂಬುದಕ್ಕೆ ಶ್ವಶುರ+ಙಸ್ ಎಂಬುದು ಅಲೌಕಿಕ ವಿಗ್ರಹವಾಕ್ಯ. ಇಲ್ಲಿ ಅಪತ್ಯಾರ್ಥದಲ್ಲಿ ಬರಬೇಕಾದ 'ಅಣ್'ನ್ನು ಬಾಧಿಸಿ "ರಾಜ–ಶ್ವಶುರಾದ್ಯತ್" ಎಂಬ ಸೂತ್ರದಿಂದ 'ಯತ್(ಯ)' ಬಂದು, ತದ್ಧಿತಾಂತ ಪ್ರಾತಿಪದಿಕವಾಗಿ 'ಸುಪ್' ಲೋಪವಾದಮೇಲೆ ಶ್ವಶುರ+ಯ ಎಂದಿರುತ್ತದೆ. 'ಭ' ಸಂಜ್ಞಕವಾದ ಶ್ವಶುರ ಶಬ್ದದ ಅಂತ್ಯ 'ಅ' ಕಾರಕ್ಕೆ ಲೋಪಬಂದು ಶ್ವಶುರ್+ಯ=ಶ್ವಶುರ್ಯ ಎಂದಾದ ಮೇಲೆ ಸುಬಂತವಾದಾಗ ರುತ್ವ–ವಿಸರ್ಗಗಳಿಂದ ಶ್ವಶುರ್ಯಃ ಎಂಬ ರೂಪವು ಸಿದ್ಧವಾಗುತ್ತದೆ.

### ('ಘ' ಪ್ರತ್ಯಯವನ್ನು ವಿಧಿಸುವ ಸೂತ್ರ)

**ಸೂತ್ರ 1027– ಕ್ಷತ್ರಾದ್ ಘಃ।(4.1.138)**

ವೃತ್ತಿ– ಕ್ಷತ್ರಿಯಃ। ಜಾತೌ ಇತ್ಯೇವ। ಕ್ಷಾತ್ರಿಃ ಅನ್ಯತ್ರ।

ಅ. ವೃ.– "ತಸ್ಯಾಪತ್ಯಂ" ಎಂಬ ಸೂತ್ರವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್ ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಎಂಬ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ– ಪ್ರಾತಿಪದಿಕವಾದ ಕ್ಷತ್ರ ಶಬ್ದದ ಮೇಲೆ ಜಾತ್ಯರ್ಥದಿಂದ ಕೂಡಿದ ಅಪತ್ಯಾರ್ಥದಲ್ಲಿ 'ಘ' ಪ್ರತ್ಯಯವು ಬರುತ್ತದೆ. 'ಘ' ನಲ್ಲಿ ಎರಡು ಅಕ್ಷರಗಳಿವೆ ಘ್+ಅ. "ಆಯನ್–ಏಯ್–ಈನ್–ಈಯ್–ಇಯ್–ಫಢಖಛಘಾಂ ಪ್ರತ್ಯಯಾದೀನಾಂ" ಎಂಬ ಸೂತ್ರದಿಂದ 'ಘ್' ಗೆ 'ಇಯ್' ಪ್ರತ್ಯಯವು ಬಂದು ಇಯ್+ಅ=ಇಯ ಆಗುತ್ತದೆ.

ಉದಾ– ಕ್ಷತ್ರಿಯಃ (ಕ್ಷತ್ರ ಜಾತಿಗೆ ಸೇರಿದವನ ಮಗ):'ಕ್ಷತ್ರಸ್ಯ ಅಪತ್ಯಂ ಪುಮಾನ್' ಎಂಬುದು ಲೌಕಿಕ ವಿಗ್ರಹ ವಾಕ್ಯ. ಕ್ಷತ್ರಸ್ಯ ಎಂಬುದಕ್ಕೆ ಕ್ಷತ್ರ+ಙಸ್ ಎಂಬುದು ಅಲೌಕಿಕ ವಿಗ್ರಹವಾಕ್ಯ. ಇದಕ್ಕೆ ಅಪತ್ಯಾರ್ಥದಲ್ಲಿ 'ಇಞ್(ಇ)' ಪ್ರತ್ಯಯವು ಬರಬೇಕಾಗಿತ್ತು. ಅದನ್ನು ಬಾಧಿಸಿ ಪ್ರಕೃತ ಸೂತ್ರದಿಂದ 'ಘ್' ಪ್ರತ್ಯಯವು ಬರುತ್ತದೆ. ಆ ಘ(ಘ್+ಅ) ಗೆ "ಆಯನ್–ಏಯ್–ಈನ್–ಈಯ್–ಇಯ್–ಫಢಖಛಘಾಂ ಪ್ರತ್ಯಯಾದೀನಾಂ" ಎಂಬ ಸೂತ್ರದಿಂದ 'ಘ್' ಗೆ 'ಇಯ್' ಪ್ರತ್ಯಯವು ಬಂದು ಇಯ್+ಅ=ಇಯ

ಎಂದಾಗುತ್ತದೆ. ತದ್ಧಿತಾಂತ ಶಬ್ದವಾದ ಈ ಪ್ರಾತಿಪದಿಕಕ್ಕೆ ಪರದಲ್ಲಿರುವ ಸುಪ್ ಗೆ ಲೋಪ ಬಂದು ಕ್ಷತ್ರ+ಇಯ ಎಂದಿರುತ್ತದೆ. ಇದಕ್ಕೆ ಆದಿವೃದ್ಧಿ ನಿಮಿತ್ತಗಳು ಯಾವುದು ಇಲ್ಲದಿದ್ದರಿಂದ 'ಕ್ಷತ್ರ' ಎಂದೇ ಇರುತ್ತದೆ. "ಯಸ್ಯೇತಿ ಚ" ಎಂಬ ಸೂತ್ರದಿಂದ ಅಂತ್ಯ 'ಅ' ಕಾರಕ್ಕೆ ಲೋಪ ಬಂದು ಕ್ಷತ್ರ್+ಇಯ=ಕ್ಷತ್ರಿಯ ಎಂದಾಗಿ, ಸುಬಂತವಾದಾಗ ಕ್ಷತ್ರಿಯಃ ಎಂದಾಗುತ್ತದೆ.

ಉದಾ- ಕ್ಷಾತ್ರಿಃ-(ಕ್ಷತ್ರಿಯನ ಮಗ): ಕ್ಷತ್ರ+ಇಞ್ ಎಂಬಲ್ಲಿ ಈ ತದ್ಧಿತ ಪ್ರತ್ಯಯವು ಅಪತ್ಯಾರ್ಥದಲ್ಲಿ ಮಾತ್ರ ಬಂದಿದೆಯೇ ಹೊರತು ಜಾತ್ಯರ್ಥದಲ್ಲಿ ಇಲ್ಲ ಈ 'ಇಞ್' ಪ್ರತ್ಯಯವು ಞಿತ್ ಆಗಿರುವುದರಿಂದ ಆದಿವೃದ್ಧಿಯು ಬಂದು ಕ್ಷಾತ್ರ+ಇ ಎಂದಿದ್ದಾಗ "ಯಸ್ಯೇತಿ ಚ" ಎಂಬುದರಿಂದ ಅಂತ್ಯ 'ಅ' ಕಾರಕ್ಕೆ ಲೋಪ ಬಂದು ಕ್ಷಾತ್ರ್+ಇಯ=ಕ್ಷಾತಿಯ ಎಂದಾಗಿ ಸುಬಂತವಾದ ಮೇಲೆ ಕ್ಷಾತ್ರಿಯಃ ಎಂದಾಗುತ್ತದೆ.

**(ಢಕ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ. 1028 – ರೇವತ್ಯಾದಿಭ್ಯಷ್ಠಕ್। (4.1.146)**

ಪ. ಛೇ- ರೇವತ್ಯಾದಿಭ್ಯಃ, ಠಕ್ ।

ಅರ್ಥ. – 'ರೇವತಿ' ಗಣದಲ್ಲಿ ಪಠಿತವಾದ ಪ್ರಾತಿಪದಿಕದ ನಂತರ ಅಪತ್ಯಾರ್ಥದಲ್ಲಿ 'ಠಕ್' ಎಂಬ ತದ್ಧಿತ ಪ್ರತ್ಯಯವು ಬರುತ್ತದೆ. ('ಠ' ಎಂದರೆ ಠ್+ಅ). ಅಪತ್ಯಾರ್ಥದಲ್ಲಿ ಬರಬೇಕಾದ ಅಣ್ ಪ್ರತ್ಯಯಕ್ಕೆ ಇದು ಅಪವಾದವಾಗಿದೆ.

**(ಅಂಗದ ಪರದ 'ಠ್' ಕಾರಕ್ಕೆ 'ಇಕ್' ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ. 1029- ಠಸ್ಯೇಕಃ।(7.3.50)**

ವೃತ್ತಿ- ಅಂಗಾತ್ ಪರಸ್ಯ ಠಸ್ಯ 'ಇಕ್' ಆದೇಶಃ ಸ್ಯಾತ್। ರೈವತಿಕಃ।

ಪ. ಛೇ- ಠಸ್ಯ, ಇಕಃ।

ಅ. ವೃ- "ಅಂಗಸ್ಯ" ಎಂಬುದು ಅಧಿಕಾರ ಸೂತ್ರವಾಗಿದೆ.

ಅರ್ಥ. – ಅಂಗದ ಪರದಲ್ಲಿರುವ 'ಠ್' ಗೆ ಇಕ್ ಆದೇಶವಾಗಿ ಬರುತ್ತದೆ.

ಉದಾ- ರೈವತಿಕಃ-(ರೇವತಿಯ ಮಗ): 'ರೇವತ್ಯಾಃ ಅಪತ್ಯಂ ಪುಮಾನ್' ಎಂಬುದು ಲೌಕಿಕ ವಿಗ್ರಹವಾಕ್ಯ. ರೇವತ್ಯಾಃ ಎಂಬುದಕ್ಕೆ ರೇವತೀ+ಙಸ್ ಎಂಬುದು ಅಲೌಕಿಕ ವಿಗ್ರಹವಾಕ್ಯವಾಗಿದೆ. ಅಪತ್ಯಾರ್ಥದಲ್ಲಿ ಬರಬೇಕಾದ ಅಣ್ ಪ್ರತ್ಯಯವನ್ನು ಬಾಧಿಸಿ "ರೇವತ್ಯಾದಿಭ್ಯಷ್ಠಕ್" ಎಂಬ ಸೂತ್ರದಿಂದ ಠಕ್ ಪ್ರತ್ಯಯವು ಬರುತ್ತದೆ. ಠಕ್ ನಲ್ಲಿ 'ಠ' ಮಾತ್ರ ಉಳಿಯುತ್ತದೆ. ಪ್ರಕೃತ ಸೂತ್ರದಿಂದ ಆ 'ಠ್ ಗೆ 'ಇಕ್' ಆದೇಶ ಬಂದು ರೇವತಿ+ಇಕ್+ಅ ಎಂದಿರುತ್ತದೆ. ಈ ಪ್ರಾತಿಪದಿಕದ ಪರದಲ್ಲಿರುವ 'ಸುಪ್' ಗೆ ಲೋಪ ಬಂದು "ಕ್ಞಿತಿಚ" ಎಂಬ ಸೂತ್ರದಿಂದ ಆದಿವೃದ್ಧಿ ಬಂದು ರೈವತೀ+ಇಕ ಎಂದಿರುತ್ತದೆ. "ಯಸ್ಯೇತಿ ಚ" ಎಂಬುದರಿಂದ 'ಈ' ಕಾರಕ್ಕೆ ಲೋಪ ಬಂದು ರೈವತ್+ಇಕ=ರೈವತಿಕ ಎಂದಾಗಿ, ಸುಬಂತ ಮಾಡಿದಾಗ ರುತ್ವ-ವಿಸರ್ಗಗಳಿಂದ

ರೈವತಿಕಃ ಎಂಬ ರೂಪವು ಸಿದ್ಧವಾಗುತ್ತದೆ.

**(ಅಞ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ. 1030 – ಜನಪದಶಬ್ದಾತ್ ಕ್ಷತ್ರಿಯಾದಞ್। (4.1.168)**

ವೃತ್ತಿ– ಜನಪದ–ಕ್ಷತ್ರಿಯ–ವಾಚಕಾತ್, ಶಬ್ದಾತ್ ಅಞ್ ಸ್ಯಾತ್ ಅಪತ್ಯೇ। ಪಾಞ್ಚಾಲಃ।

ವಾರ್ತಿಕ – 1) ಕ್ಷತ್ರಿಯಸಮಾನ ಶಬ್ದಾತ್ ಜನಪದಾತ್ ತಸ್ಯ ರಾಜನ್ಯಪತ್ಯವತ್। ಪಞ್ಚಾಲಾನಾಂ ರಾಜಾ ಪಾಞ್ಚಾಲಃ।

ವಾರ್ತಿಕ – 2) ಪುರೋರಣ್ ವಕ್ತವ್ಯಃ। ಪೌರವಃ।

ವಾರ್ತಿಕ – 3) ಪಾಂಡೋರ್ಡ್ಯಣ್।) ಪಾಂಡ್ಯಃ।

ಪ. ಛೇ– ಜನಪದಶಬ್ದಾತ್, ಕ್ಷತ್ರಿಯಾತ್, ಅಞ್।

ಅ. ವೃ.– "ತಸ್ಯಾಪತ್ಯಂ" ಎಂಬ ಸೂತ್ರವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್ ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಎಂಬ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ. – ದೇಶ ವಿಶೇಷದ ವಾಚಕವಾಗಿರುವ ಶಬ್ದವು ಕ್ಷತ್ರಿಯ ಜಾತಿಯನ್ನು ಹೇಳುವಂತಹದ್ದಾಗಿದ್ದರೆ, ಆ ಶಬ್ದದ ಮೇಲೆ ಅಪತ್ಯಾರ್ಥದಲ್ಲಿ ತದ್ಧಿತ ಪ್ರತ್ಯಯವಾದ 'ಅಞ್' ಪ್ರತ್ಯಯವು ಬರುತ್ತದೆ.

ಉದಾ– ಪಾಞ್ಚಾಚಾಲಃ (ಪಞ್ಚಾಲ ರಾಜನ ಮಗ):ಇದು ದೇಶವಾಚಕವಾಗಿಯೂ ಇದೆ ಮತ್ತು ರಾಜನನ್ನೂ ಸೂಚಿಸುತ್ತದೆ. 'ಪಞ್ಚಾಲಸ್ಯ ಅಪತ್ಯಂ ಪುಮಾನ್' ಎಂಬುದು ಲೌಕಿಕ ವಿಗ್ರಹವಾಕ್ಯ. ಪಞ್ಚಾಲಸ್ಯ ಎಂಬುದಕ್ಕೆ ಪಞ್ಚಾಲ+ಙಸ್ ಎಂಬುದು ಅಲೌಕಿಕ ವಿಗ್ರಹವಾಕ್ಯವಾಗಿದೆ. ಅಪತ್ಯಾರ್ಥದಲ್ಲಿ ಬರಬೇಕಾದ ಅಣ್ ನ್ನು ಬಾಧಿಸಿ ಪ್ರಕೃತ ಸೂತ್ರದಿಂದ 'ಅಞ್(ಅ)' ಪ್ರತ್ಯಯವು ಬರುತ್ತದೆ. ಪ್ರಾತಿಪದಿಕದ ನಂತರ ಬರುವ ಸುಪ್ ಲೋಪವಾದ ಮೇಲೆ ಈ ಪ್ರತ್ಯಯವು 'ಞಿತ್' ಆಗಿರೋದರಿಂದ ಆದಿವೃದ್ಧಿ ಬಂದು, ಪಾಞ್ಚಾಲ ಶಬ್ದದ ಕೊನೆಯ 'ಅ' ಕಾರಕ್ಕೆ ಲೋಪ ಬಂದು ಪಾಞ್ಚಾಲ್+ಅ (ಅಞ್)=ಪಾಞ್ಚಾಲ ಎಂದಾಗಿ ಸುಬಂತವಾದ ಮೇಲೆ ಪಾಞ್ಚಾಲಃ ಎಂಬ ರೂಪವು ಸಿದ್ಧವಾಗುತ್ತದೆ.

ವಾರ್ತಿಕ – 1) ಕ್ಷತ್ರಿಯ ಸಮಾನಶಬ್ದಾತ್ ಜನಪದಾತ್ ತಸ್ಯ ರಾಜನ್ಯಪತ್ಯವತ್.

ಕ್ಷತ್ರಿಯವಾಚಕ ಶಬ್ದಕ್ಕೆ ಸಮಾನವಾದ ಯಾವ ಜನಪದವಾಚಕ ಶಬ್ದವಿದೆಯೋ ಅದಕ್ಕೆ ಅಪತ್ಯಾರ್ಥಕ್ಕೆ ಸಮಾನವಾಗಿರುವ ಅರ್ಥದಲ್ಲಿ ತದ್ಧಿತ ಪ್ರತ್ಯಯವು ಬರುತ್ತದೆ.

ಉದಾ– ಪಞ್ಚಾಲಾನಾಂ ರಾಜಾ ಪಾಞ್ಚಾಲಃ :–ಅಪತ್ಯಾರ್ಥದಲ್ಲಿ ಹೇಗೆ ಈ ಶಬ್ದವು ಬಂದಿದೆಯೋ ಹಾಗೆಯೇ ಪಞ್ಚಾಲದೇಶದ ರಾಜ ಎಂಬರ್ಥದಲ್ಲೂ ಬಂದಿದೆ.

ವಾರ್ತಿಕ – 2) ಪುರೋರಣ್ ವಕ್ತವ್ಯಃ।

ಪುರು ಶಬ್ದದ ಮೇಲೆ ಅಪತ್ಯಾರ್ಥದಲ್ಲಿ ಅಣ್ ಪ್ರತ್ಯಯವು ಬರುತ್ತದೆ ಎಂದು ಹೇಳಬೇಕು.

ಉದಾ- ಪೌರವಃ (ಪುರುವಿನ ಮಗ):'ಪುರೋಃ ಅಪತ್ಯಂ ಪುಮಾನ್' ಎಂಬುದು ಲೌಕಿಕ ವಿಗ್ರಹವಾಕ್ಯ. ಪುರು+ಙಸ್ ಎಂಬುದು ಅಲೌಕಿಕ ವಿಗ್ರಹವಾಕ್ಯ. ಪ್ರಕೃತ ವಾರ್ತಿಕದಿಂದ ಅಣ್ (ಅ) ಪ್ರತ್ಯಯ ಬಂದು ಪ್ರಾತಿಪದಿಕದ ನಂತರವಿರುವ 'ಸುಪ್'ಗೆ ಲೋಪ ಬಂದು 'ಣಿತ್' ಆಗಿರುವುದರಿಂದ ಆದಿವೃದ್ಧಿ ಬಂದು ಪೌರು+ಅ ಎಂದಿರುತ್ತದೆ. "ಓರ್ಗುಣಃ" ಎಂಬ ಸೂತ್ರದಿಂದ ಗುಣ ಬಂದು ಪೌರೋ+ಅ ಎಂದಾಗುತ್ತದೆ. "ಏಚೋಽಯವಾಯವಃ" ಎಂಬ ಸೂತ್ರದಿಂದ ಅವಾದೇಶ ಬಂದು ಪೌರವ ಎಂದಾದ ಮೇಲೆ, ಸುಬಂತಮಾಡಿದಾಗ ಪೌರವಃ ಎಂಬ ರೂಪವು ಸಿದ್ಧವಾಗುತ್ತದೆ.

ವಾರ್ತಿಕ – 3) ಪಾಂಡೋರ್ಡ್ಯಣ್।

ಪಾಂಡು ಶಬ್ದದ ಮೇಲೆ ಅಪತ್ಯಾರ್ಥದಲ್ಲಿ 'ಡ್ಯಣ್(ಡ್ಯ)' ಪ್ರತ್ಯಯವು ಬರುತ್ತದೆ. ಇದು 'ಡಿತ್' ಆಗಿರುವುದರಿಂದ "ಟೇಃ" ಎಂಬ ಸೂತ್ರದಿಂದ 'ಟಿ' ಗೆ ಲೋಪ ಬರುತ್ತದೆ.

ಉದಾ- ಪಾಂಡ್ಯಃ (ಪಾಂಡುವಿನ ಮಗ):'ಪಾಂಡೋಃ ಅಪತ್ಯಂ ಪುಮಾನ್' ಎಂಬುದು ಲೌಕಿಕ ವಿಗ್ರಹವಾಕ್ಯ. 'ಪಾಂಡೋಃ' ಎಂಬುದಕ್ಕೆ ಪಾಂಡು+ಙಸ್ ಎಂಬುದು ಅಲೌಕಿಕ ವಿಗ್ರಹವಾಕ್ಯ. ಪ್ರಕೃತ ವಾರ್ತಿಕದಿಂದ 'ಡ್ಯಣ್(ಯ)' ಪ್ರತ್ಯಯ ಬಂದು ಆದಿವೃದ್ಧಿ ಬಂದು ('ಆ' ಕಾರಕ್ಕೆ 'ಆ' ಕಾರವೇ ಆದೇಶವಾಗಿ ಬಂದು) 'ಟಿ' ಗೆ (ಉಕಾರಕ್ಕೆ) ಲೋಪ ಬಂದಮೇಲೆ ಪಾಂಡ್ಯ ಎಂದಾಗಿ, ಸುಬಂತಮಾಡಿದಾಗ ಪಾಂಡ್ಯಃ ಎಂದಾಗುತ್ತದೆ.

**(ಣ್ಯ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ. 1031 – ಕುರುನಾದಿಭ್ಯೋಃ ಣ್ಯಃ।(4.1.172)**

ವೃತ್ತಿ– ಕುರುನಾದಿಭ್ಯಃ ಣ್ಯಃ । ಕೌರವ್ಯಃ। ನೈಷಧ್ಯಃ।

ಅ. ವ್ಯ.- "ಜನಪದ ಶಬ್ದಾತ್ ಕ್ಷತ್ರಿಯಾತ್ ಅಞ್" ಎಂಬ ಸೂತ್ರದಿಂದ ವಚನವಿಪರಿಣಾಮ ಮಾಡಿ ಜನಪದೇಭ್ಯಃ ಮತ್ತು ಕ್ಷತ್ರಿಯೇಭ್ಯಃ ಎಂಬ ಪದಗಳು ಅನುವೃತ್ತವಾಗುತ್ತವೆ. "ತಸ್ಯಾಪತ್ಯಂ" ಎಂಬ ಸೂತ್ರವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್ ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಎಂಬ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ. – ಕುರು ಶಬ್ದ ಅಥವಾ 'ನ' ಕಾರಾದಿ ಶಬ್ದ ಇವೆರಡು, ಜನಪದ ಮತ್ತು ಕ್ಷತ್ರಿಯವಾಚಕಗಳಾಗಿದ್ದರೆ ಅವುಗಳ ನಂತರ ಅಪತ್ಯಾರ್ಥದಲ್ಲಿ 'ಣ್ಯ' ಎಂಬ ತದ್ಧಿತ ಪ್ರತ್ಯಯವು ಬರುತ್ತದೆ. 'ಣ್ಯ' ದಲ್ಲಿ 'ಯ' ಮಾತ್ರ ಉಳಿಯುತ್ತದೆ.

ಉದಾ- 1) ಕೌರವ್ಯಃ- (ಕುರುದೇಶದ ರಾಜ, ಕ್ಷತ್ರಿಯ ವಿಶೇಷದ ರಾಜ):'ಕುರು ಶಬ್ದದ ಮೇಲೆ ಪ್ರಕೃತ ಸೂತ್ರದಿಂದ 'ಣ್ಯ' ಪ್ರತ್ಯಯವು ಬಂದು ಆದಿವೃದ್ಧಿ ಮತ್ತು

ಅಂತ್ಯ 'ಉ' ಕಾರಕ್ಕೆ "ಓರ್ಗುಣಃ" ಎಂಬ ಸೂತ್ರದಿಂದ 'ಓ' ಕಾರವು ಬಂದು ಅನಂತರ ಅವಾದೇಶವಾದ ಮೇಲೆ ಕೌರವ್ಯ ಎಂದಾಗಿ ನಂತರ ಸುಬಂತವಾದಾಗ ಕೌರವ್ಯಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ನೈಷಧ್ಯಃ – (ನಿಷಧ ದೇಶದ ರಾಜ ಅರ್ಥಾತ್ ನಳ):ಇಲ್ಲಿ ನಿಷಧ ಶಬ್ದವು ಜನಪದವಾಚಿಯಾಗಿಯೂ 'ನ' ಕಾರಾದಿಯಾಗಿಯೂ ಇದೆ. ಆದುದರಿಂದ ಆದಿವೃದ್ಧಿ ಮತ್ತು "ಯಸ್ಯೇತಿಚ" ಎಂಬುದರಿಂದ ಅಂತ್ಯ 'ಅ' ಕಾರಲೋಪವಾಗಿ, ರುತ್ವ–ವಿಸರ್ಗಗಳಿಂದ ನೈಷಧ್ಯಃ ರೂಪವು ಸಿದ್ಧವಾಗಿದೆ

**(ತದ್ರಾಜ ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ. 1032 – ತೇ ತದ್ರಾಜಾಃ।( 4.1.174)**

ವೃತ್ತಿ– ಅಞಾದಯಃ ತದ್ರಾಜಸಂಜ್ಞಾಃ ಸ್ಯುಃ।

ಅರ್ಥ. – ಪೂರ್ವೋಕ್ತ ಅಞ್ ಆದಿ ಪ್ರತ್ಯಯಗಳು ತದ್ರಾಜ–ಸಂಜ್ಞೆಯನ್ನು ಹೊಂದುತ್ತವೆ. ಅಞ್ ಆದಿ ಎಂದರೆ ಅಞ್, ಅಣ್, ಡ್ಯಣ್ ಮತ್ತು ಣ್ಯ ಪ್ರತ್ಯಯಗಳೆಂದು ಅರ್ಥ. ಇವೆಲ್ಲವುಗಳಿಗೂ ತದ್ರಾಜ ಸಂಜ್ಞೆಯು ಬರುತ್ತದೆ. ಈ ಪ್ರತ್ಯಯಗಳು ಆ ದೇಶದ ರಾಜನನ್ನೂ ಸೂಚಿಸುತ್ತವೆ.

**(ತದ್ರಾಜ ಸಂಜ್ಞೆಯುಳ್ಳ ಪ್ರತ್ಯಯಕ್ಕೆ ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ. 1033 – ತದ್ ರಾಜಸ್ಯ ಬಹುಷು ತೇನೈವಾಽಸ್ತ್ರಿಯಾಮ್। (2.4.62)**

ವೃತ್ತಿ– ಬಹುಷು ಅರ್ಥೇಷು ತದ್ರಾಜಸ್ಯ ಲುಕ್; ತದರ್ಥಕೃತೇ ಬಹುತ್ವೇ ನ ತು ಸ್ತ್ರಿಯಾಮ್। ಇಕ್ಷ್ವಾಕವಃ। ಪಂಚಾಲಾಃ। ಇತ್ಯಾದಿ।

ಪ. ಛೇ– ತದ್ರಾಜಸ್ಯ, ಬಹುಷು, ತೇನ, ಏವ, ಅಸ್ತ್ರಿಯಾಮ್।

ಅ. ವೃ.– "ಣ್ಯಕ್ಷತ್ರಿಯಾರ್ಷಞಿತೋ 'ಲುಗಞೋಃ"ಎಂಬ ಸೂತ್ರದಿಂದ 'ಲುಕ್' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ. – ಬಹುವಚನದಲ್ಲಿ ತದ್ರಾಜ ಸಂಜ್ಞೆಯುಳ್ಳ ಪ್ರತ್ಯಯದ ಲೋಪವು ಆಗುತ್ತದೆ – ಬಹುವಚನದಲ್ಲಿ ತದ್ರಾಜ ಪ್ರತ್ಯಯದ ಅರ್ಥದಲ್ಲಿ ಮಾಡಿದಾಗ – ಆದರೆ ಸ್ತ್ರೀ ಲಿಂಗದಲ್ಲಿ ಆ ಪ್ರತ್ಯಯಕ್ಕೆ ಲುಕ್ ಬರುವುದಿಲ್ಲ.

ಉದಾ– ಇಕ್ಷ್ವಾಕವಃ (ಇಕ್ಷ್ವಾಕುಗಳ ಸಂತಾನಗಳು)– ಇಕ್ಷ್ವಾಕು ಶಬ್ದವು ದೇಶ ಮತ್ತು ಕ್ಷತ್ರಿಯ–ಜಾತಿ ಈ ಎರಡು ಅರ್ಥಗಳನ್ನು ಕೊಡುತ್ತದೆ.'ಇಕ್ಷ್ವಾಕೋಃ ಅಪತ್ಯಂ' ಎಂಬುದು ಲೌಕಿಕ ವಿಗ್ರಹವಾಕ್ಯ. ಇಕ್ಷ್ವಾಕು+ಜಸ್ ಎಂಬುದು ಅಲೌಕಿಕ ವಿಗ್ರಹವಾಕ್ಯವಾಗಿದೆ. "ಜನಪದಶಬ್ದಾತ್ ಕ್ಷತ್ರಿಯಾದಞ್" ಎಂಬ ಸೂತ್ರದಿಂದ ಅಞ್ (ಅ) ಪ್ರತ್ಯಯವು ಬಂದು, ತದ್ಧಿತಾಂತ ಪ್ರಾತಿಪದಿಕವಾಗುತ್ತದೆ. "ಸುಪೋಧಾತು ಪ್ರಾತಿಪದಿಕಯೋಃ" ಎಂಬುದರಿಂದ ಸುಪ್ ಗೆ ಲುಕ್ ಬಂದು, ಆದಿವೃದ್ಧಿ ಮಾಡಿದಾಗ ಐಕ್ಷ್ವಾಕು+ಅ ಎಂದಿರುತ್ತದೆ. "ಓರ್ಗುಣಃ" ಎಂಬುದರಿಂದ ಗುಣ ಬರಬೇಕಾಗಿತ್ತು.

ಆದರೆ "ದಾಂಡಿನಾಯನ–ಹಾಸ್ತಿನಾಯನ–ಆಥರ್ವಣಿಕ ......." ಎಂಬ ಸೂತ್ರದಿಂದ 'ಟಿ' ಲೋಪ ಮತ್ತು ನಿಪಾತಗಳಾದ ಮೇಲೆ ಐಕ್ಷ್ವಾಕ ಎಂದಾಗಿ ನಂತರ ಸುಬಂತವಾದಮೇಲೆ ಐಕ್ಷ್ವಾಕಃ ಎಂಬ ರೂಪವಾಗುತ್ತದೆ. ಇದಕ್ಕೆ ಬಹುವಚನವಾದ 'ಜಸ್' ಪ್ರತ್ಯಯವು ಬಂದಾಗ 'ತದ್ರಾಜ' ಸಂಜ್ಞೆಯುಳ್ಳ ಅಞ್ ಪ್ರತ್ಯಯಕ್ಕೆ "ತದ್ರಾಜಸ್ಯ ತೇನ್ನೈವಾಽಸ್ತ್ರಿಯಾಮ್" ಎಂಬ ಸೂತ್ರದಿಂದ ಲುಕ್ (ಲೋಪ) ಬರುತ್ತದೆ. 'ನಿಮಿತ್ತಾಪಾಯೇ ನೈಮಿತ್ತಕಸ್ಯಾಪ್ಯಪಾಯಃ' ಎಂಬ ನಿಯಮದಿಂದ ಅಞ್ ಪ್ರತ್ಯಯಕ್ಕೆ ನಿಮಿತ್ತವಾದ ಆದಿವೃದ್ಧಿ ಮತ್ತು ಟಿ ಲೋಪಕ್ಕೆ ನಿಪಾತನ ಮೊದಲಾದವು ನಿವೃತ್ತವಾಗುತ್ತದೆ. ಆದುದರಿಂದ ಮೂಲಶಬ್ದವಾದ ಇಕ್ಷ್ವಾಕು ಎಂಬ ರೂಪವೇ ಇರುತ್ತದೆ. ಇದರಿಂದ ಇಕ್ಷ್ವಾಕುಃ, ಇಕ್ಷ್ವಾಕೂ, ಇಕ್ಷ್ವಾಕವಃ। ಎಂಬ ರೂಪಗಳೇ ಉಳಿಯುತ್ತದೆ. ಶಬ್ದಗಳನ್ನು ನುಡಿಸುವಾಗ ಐಕ್ಷ್ವಾಕಃ, ಐಕ್ಷ್ವಾಕೌ, ಇಕ್ಷ್ವಾಕವಃ। ಐಕ್ಷ್ವಾಕಂ, ಐಕ್ಷ್ವಾಕೌ, ಇಕ್ಷ್ವಾಕೂನ್। ಇತ್ಯಾದಿಯಾದಿಗಿ ನಡೆಸಬೇಕು

ಉದಾ– ಪಂಚಾಲಾಃ (ಪಂಚಾಲರ ಸಂತಾನಗಳು) – ಪಂಚಾಲ ಶಬ್ದವು ಜನಪದವಾಚಕವಾಗಿಯೂ ಮತ್ತು ಕ್ಷತ್ರಿಯವಾಚಕವಾಗಿಯೂ ಇದೆ.'ಪಂಚಾಲಸ್ಯ ಅಪತ್ಯಾನಿ' ಎಂಬುದು ಲೌಕಿಕ ವಿಗ್ರಹವಾಕ್ಯ. ಪಂಚಾಲ+ಜಸ್ ಎಂಬುದು ಪಂಚಾಲಸ್ಯ ಎಂಬುದರ ಅಲೌಕಿಕ ವಿಗ್ರಹವಾಕ್ಯವಾಗಿದೆ. "ಜನಪದಶಬ್ದಾತ್ ಕ್ಷತ್ರಿಯಾತ್ ಅಞ್" ಎಂಬ ಸೂತ್ರದಿಂದ ಅಞ್ (ಅ) ಪ್ರತ್ಯಯವು ಬಂದು, ತದ್ಧಿತಾಂತ ಪ್ರಾತಿಪದಿಕವಾಗುತ್ತದೆ. ಸುಪ್ ಸೇರಿಸಿದ ಮೇಲೆ "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ ಲೋಪ ಬಂದು ಞಿತ್ ಆಗಿರುವುದರಿಂದ ಆದಿವೃದ್ಧಿ ಬಂದು "ಯಸ್ಯೇತಿ ಚ" ಎಂಬುದರಿಂದ 'ಅ' ಕಾರ ಲೋಪವಾಗಿ ಪಾಂಚಾಲ್+ಅ=ಪಾಂಚಾಲ ಎಂದಾಗಿ, ಇದಕ್ಕೆ ಬಹುವಚನದ 'ಜಸ್' ಪ್ರತ್ಯಯ ಸೇರಿಸಿದಾಗ ತದ್ರಾಜ ಸಂಜ್ಞೆಯನ್ನು ಹೊಂದುವ ಅಞ್ ಪ್ರತ್ಯಯಕ್ಕೆ "ತದ್ರಾಜಸ್ಯಬಹ್ರಷು ತೇನ್ನೈವಾಸ್ತ್ರಿಯಾಮ್" ಎಂಬುದರಿಂದ ಲುಕ್ ಬರುತ್ತದೆ. 'ನಿಮಿತ್ತಾಪಾಯೇ ನೈಮಿಕಾಸ್ಯಪ್ಯಪಾಯಃ' ಎಂಬುದರಿಂದ ಅಞ್ ಪ್ರತ್ಯಯವನ್ನು ನಿಮಿತ್ತವಾಗಿಟ್ಟುಕೊಂಡು ಬಂದ ಆದಿವೃದ್ಧಿ 'ಭ' ಸಂಜ್ಞೆಯುಳ್ಳ ಅಂತ್ಯವಾದ 'ಅ' ಕಾರದ ಲೋಪ ಇವೆಲ್ಲವೂ ನಿಷಿದ್ಧವಾಗುತ್ತವೆ. ಆದುದರಿಂದ ಪಂಚಾಲಾಃ ಎಂಬ ರೂಪ ಸಿದ್ಧವಾಗುತ್ತದೆ.ಪಾಂಚಾಲಃ ಪಾಂಚಾಲೌ ಪಂಚಾಲಾಃ। ಪಾಂಚಾಲಂ ಪಾಂಚಾಲೌ ಪಂಚಾಲಾನ್ ಎಂಬಂತೆ ಇತ್ಯಾದಿ

**(ತದ್ರಾಜ ಸಂಜ್ಞೆಗೆ ಲುಕ್ (ಲೋಪ)ನ್ನು ವಿಧಿಸುವ ಸೂತ್ರ)**

**ಸೂತ್ರ. 1034. – ಕಂಬೋಜಾಲ್ಲುಕ್। (4.1.174)**

ವೃತ್ತಿ– ಅಸ್ಮಾತ್ ತದ್ರಾಜಸ್ಯ ಲುಕ್। ಕಂಬೋಜಃ। ಕಂಬೋಜೌ।

ವಾರ್ತಿಕ –ಕಂಬೋಜಾದಿಭ್ಯಃ ಇತಿ ವಕ್ತವ್ಯಂ ।

ಚೋಲಃ। ಶಕಃ। ಕೇರಳಃ। ಯವನಃ।

ಇತಿ ಅಪತ್ಯಾಧಿಕಾರಃ (45)

ಪ. ಭೇ– ಕಂಬೋಜಾತ್, ಲುಕ್।

ಅ. ವೃ.– "ತೇ ತದ್ರಾಜಾಃ" ಎಂಬ ಸೂತ್ರದಿಂದ ತದ್ರಾಜಸ್ಯ ಎಂದು ವಿಭಕ್ತಿವಿಪರಿಣಾಮಮಾಡಿ ಪದದ ಅನುವೃತ್ತಿ ಮಾಡಲಾಗಿದೆ.

ಅರ್ಥ. – ಕಂಬೋಜ ಶಬ್ದದ ಪರದಲ್ಲಿರುವ 'ತದ್ರಾಜ' ಸಂಜ್ಞೆಯುಳ್ಳ ಪ್ರತ್ಯಯಕ್ಕೆ ಲುಕ್ ಬರುತ್ತದೆ.

ವಿಶೇಷ– ತದ್ಧಿತ ಪ್ರತ್ಯಯವೆಂದು ಅಂಗೀಕರಿಸಲಾದ ಪ್ರತ್ಯಯಗಳು ಪರದಲ್ಲಿದ್ದಾಗ ಆಗಬೇಕಾದ ಆದಿವೃದ್ಧಿ 'ಭ' ಸಂಜ್ಞಕ ವರ್ಣದ (ಅಂತ್ಯ ವರ್ಣದ) ಲೋಪ ಇತ್ಯಾದಿಗಳು ಆಗಬೇಕಾಗಿದ್ದರೂ, ಪ್ರಕೃತ ಸೂತ್ರದಿಂದ ಆಗುವುದಿಲ್ಲ. ಕಾರಣ ತದ್ರಾಜ ಪ್ರತ್ಯಯಕ್ಕೆ ಲೋಪ ಬಂದಿದೆ.

ಉದಾ– ಕಂಬೋಜಃ। ಕಂಬೋಜೌ। (ಕಂಬೋಜ ದೇಶದವರ ಸಂತಾನ ಅಥವಾ ಕಂಬೋಜದ ರಾಜ)–ಕಂಬೋಜ ಶಬ್ದವು ದೇಶವಾಚಕವಾಗಿಯೂ, ಕ್ಷತ್ರಿಯವಾಚಕವಾಗಿಯೂ ಇದೆ. (ರಾಜನನ್ನು ಗುರುತಿಸುವುದರಿಂದ ಕ್ಷತ್ರಿಯವಾಚಕ) 'ಕಂಬೋಜಸ್ಯ ಅಪತ್ಯಂ' ಅಥವಾ 'ಕಂಬೋಜಸ್ಯ ರಾಜಾ' ಎಂಬುದು ಲೌಕಿಕ ವಿಗ್ರಹವಾಕ್ಯ. ಕಂಬೋಜಸ್ಯ ಎಂಬುದಕ್ಕೆ ಕಂಬೋಜ+ಙಸ್ ಎಂಬುದು ಅಲೌಕಿಕ ವಿಗ್ರಹವಾಕ್ಯವಾಗಿದೆ. "ಜನಪದಶಬ್ದಾತ್ ಕ್ಷತ್ರಿಯಾತ್ ಅಞ್" ಎಂಬ ಸೂತ್ರದಿಂದ ಅಞ್ ಪ್ರತ್ಯಯ ಮತ್ತು ಪ್ರಾತಿಪದಿಕ ಸಂಜ್ಞೆ, ಸುಪ್ ಗೆ ಲುಕ್, ಇದೆಲ್ಲ ಆದಮೇಲೆ ಆದಿವೃದ್ಧಿಯು ಬರಬೇಕಾಗಿತ್ತು. ಪ್ರಕೃತ ಸೂತ್ರದಿಂದ ತದ್ರಾಜ ಸಂಜ್ಞೆಯುಳ್ಳ ಅಞ್ ಗೆ ಲುಕ್ ಬಂದಿರುವುದರಿಂದ ಮೇಲೆ ಹೇಳಿದ ಕಾರ್ಯಗಳು ಬರುವುದಿಲ್ಲ. ಕಂಬೋಜ ಶಬ್ದಕ್ಕೆ 'ಸುಪ್' ಮೊದಲಾದ ಪ್ರತ್ಯಯವನ್ನು ಸೇರಿಸಿದಾಗ ಕಂಬೋಜಃ, ಕಂಬೋಜೌ, ಕಂಬೋಜಾಃ ಎಂದಾಗುತ್ತದೆ.

ವಾ॥ ಕಂಬೋಜಾದಿಭ್ಯಃ ಇತಿ ವಕ್ತವ್ಯಂ।

ಪ್ರಕೃತ ವಾರ್ತಿಕದಿಂದ ಬಹುವಚನವನ್ನು ಸೇರಿಸಬೇಕೆಂದು ತಿಳಿಸಲಾಗಿದೆ. ಕಂಬೋಜಾದಿ ಗಣವು ಆಕೃತಿಗಣವಾಗುವುದಕ್ಕೆ ಅವಕಾಶವಿರುವುದರಿಂದ ಬಹುವಚನವನ್ನು ಹೇಳಬೇಕೆಂದು ಹೇಳಿದ್ದಾರೆ. ಇದರಿಂದ ಹಲವು ಶಬ್ದಗಳಿಗೆ ತದ್ರಾಜ ಸಂಜ್ಞೆಯುಳ್ಳ ಪ್ರತ್ಯಯಗಳ ಲೋಪವನ್ನು ಮಾಡಿದರೆ, ಚೋಲಃ, ಯವನಃ ಎಂಬ ಶಬ್ದಗಳನ್ನು ಪ್ರಯೋಗಿಸಬಹುದಾಗಿದೆ.

ಉದಾ– ಚೋಲಸ್ಯ ಅಪತ್ಯಂ ಚೋಲಃ। ಶಕಸ್ಯ ಅಪತ್ಯಂ ಶಕಃ। ಕೇರಳಸ್ಯ ಅಪತ್ಯಂ ಕೇರಳಃ। ಯವನಸ್ಯ ಅಪತ್ಯಂ ಯವನಃ। ಇದರಿಂದ ಅಪತ್ಯಾರ್ಥವುಳ್ಳ ಅರ್ಥವೂ ಸಿಗುತ್ತದೆ ಹಾಗೂ ಆ ದೇಶದ ರಾಜ ಎಂಬ ಸಂಜ್ಞೆಯೂ ಸಿಗುತ್ತದೆ ಮತ್ತು ಪ್ರತ್ಯಯದ ಲೋಪವೂ ಆಗಿರುತ್ತದೆ. ಇದೇ ಈ ವಾರ್ತಿಕದ ಪ್ರಯೋಜನವಾಗಿದೆ.

**ಇಲ್ಲಿಗೆ ಅಪತ್ಯಾಧಿಕಾರ(45) ಪ್ರಕರಣವು ಮುಗಿಯಿತು**

# ಪ್ರಕರಣ-46: ರಕ್ತಾದ್ಯರ್ಥ

(ಸೂತ್ರ- 1035-1057)

('ಅಣ್ ' ಪ್ರತ್ಯಯವನ್ನು ವಿಧಿಸುವ ಸೂತ್ರ)

**ಸೂತ್ರ- 1035- ತೇನ ರಕ್ತಂ ರಾಗಾತ್ ( 4-2-1 )**

ವೃತ್ತಿ- ಅಣ್ ಸ್ಯಾತ್/ರಜ್ಯತೇ ಅನೇನ ಇತಿ ರಾಗ:/ಕಷಾಯೇಣ ರಕ್ತಂ ವಸ್ತ್ರಂ, ಕಾಷಾಯಂ.

ಅ.ವೃ - "ಪ್ರಾಗ್‌ದೀವ್ಯತೋಽಣ್" ಎಂಬ ಸೂತ್ರದಿಂದ ಅಣ್ ಎಂಬ ಪದವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್‌ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಎಂಬ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ: ಯಾವುದರಿಂದ ಒಂದು ವಸ್ತು ವರ್ಣಾಂತರವನ್ನು ಹೊಂದುತ್ತದೋ, ಅದು ರಾಗ. 'ರಜ್ಯತೇ ಅನೇನ ಇತಿ ರಾಗಃ' / ರಂಜ್ ಧಾತುವಿನ ನಂತರ ಕರಣಾರ್ಥದಲ್ಲಿ "ಅಕರ್ತರಿ ಚ ಕಾರಕೇ ಸಂಜ್ಞಾಯಾಂ" ಎಂಬುದರಿಂದ ಘಞ್ ಪ್ರತ್ಯಯ ಬಂದು ನಂತರ "ಘಞಿ ಭಾವಕರಣಯೋಃ" ಎಂಬುದರಿಂದ 'ನ' ಲೋಪವಾದ ಮೇಲೆ "ಚಜೋಃ ಕುಗಿಣ್ಯತೋಃ" ಎಂಬ ಸೂತ್ರದಿಂದ 'ಜ' ಕಾರಕ್ಕೆ 'ಕುತ್ವ' (ಗ್) ಬಂದು ಉಪಧಾವೃದ್ಧಿ ಆದ ಮೇಲೆ ರಾಗಃ ಎಂಬ ಕೃದಂತ ಶಬ್ದವು ಸಿದ್ಧವಾಗುತ್ತದೆ.

ಉದಾ- ಕಾಷಾಯಂ (ಕೆಂಪು ಬಣ್ಣದಿಂದ ಕೆಂಪಾದ ವಸ್ತ್ರ) - 'ಕಷಾಯೇಣ ರಕ್ತಂ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಕಷಾಯೇಣ ಎಂಬುದಕ್ಕೆ ಕಷಾಯ+ಟಾ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ಅಣ್ ಪ್ರತ್ಯಯ ಬಂದ ಮೇಲೆ ಪ್ರಾತಿಪದಿಕ ಸಂಜ್ಞೆ ಬರುತ್ತದೆ. ಅದಕ್ಕೆ ಸುಪ್ ಸೇರಿದಾಗ "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ ಲುಕ್ ಬಂದು ಆದಿ ವೃದ್ಧಿ ಬಂದು ಕಾಷಾಯ+ಅ ಎಂದಿದ್ದಾಗ, 'ಭ' ಸಂಜ್ಞೆಯುಳ್ಳ ಕಾಷಾಯ ಶಬ್ದದ ಅಂತ್ಯ 'ಅ' ಕಾರಕ್ಕೆ ಲೋಪ ಬಂದು ಕಾಷಾಯ್+ಅ ಎಂದಾಗಿ ಅದಕ್ಕೆ ಸುಬಂತ ಮಾಡಿದಾಗ ನಪುಂಸಕ ಲಿಂಗದಲ್ಲಿ ' ಅಮ್ ' ಆದೇಶ ಬಂದು ಪೂರ್ವರೂಪವಾಗಿ ಕಾಷಾಯಂ ಎಂಬ ರೂಪವು ಸಿದ್ಧವಾಗುತ್ತದೆ.

(ಅಣ್ ಪ್ರತ್ಯಯವನ್ನು ವಿಧಿಸುವ ಸೂತ್ರ)

**ಸೂತ್ರ. 1036- ನಕ್ಷತ್ರೇಣ ಯುಕ್ತಃ ಕಾಲಃ ।(4-2-3)**

ವೃತ್ತಿ- ಅಣ್ ಸ್ಯಾತ್ ।

ವಾರ್ತಿಕ- ತಿಷ್ಯಪುಷ್ಯಯೋರ್ ನಕ್ಷತ್ರಾಣಿ ಯ-ಲೋಪ ಇತಿವಾಚ್ಯಂ ।

ಪುಷ್ಯೇಣ ಯುಕ್ತಂ ಪೌಷಂ ಆಹಃ ।

ಅ.ವೃ– "ತೇನ ರಕ್ತಂ ರಾಗಾತ್" ಎಂಬ ಸೂತ್ರದಿಂದ ತೇನ ಎಂಬ ಪದವು, "ಪ್ರಾಗ್‌ದೀವ್ಯತೋಽಣ್" ಎಂಬ ಸೂತ್ರದಿಂದ 'ಅಣ್' ಎಂಬ ಪದವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್‌ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಎಂಬ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ– ನಕ್ಷತ್ರ ವಾಚಕವಾದ ತೃತೀಯಾಂತ ಪ್ರಾತಿಪದಿಕದ ಜೊತೆಗೆ 'ಅದರಿಂದ ಕೂಡಿದ' ಎಂಬ ಅರ್ಥದಲ್ಲಿ ತದ್ಧಿತ ಪ್ರತ್ಯಯವಾದ ಅಣ್ ಬರುತ್ತದೆ–ಅದು ಯೋಗ್ಯವಾದ ಸಮಯವಾಗಿದ್ದಲ್ಲಿ ಮಾತ್ರ.

ಉದಾಃ ಚೈತ್ರಮಹಃ (ಚಿತ್ರಾ ನಕ್ಷತ್ರದಿಂದ ಕೂಡಿದ ದಿನ) – 'ದಿನ' ಶಬ್ದವು ಕಾಲವಾಚಕವಾಗಿದೆ. 'ಚಿತ್ರಯಾ ಯುಕ್ತಂ ಅಹಃ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಚಿತ್ರಾ+ಟಾ ಎಂಬುದು ಅಲೌಕಿಕ ವಿಗ್ರಹವಾಕ್ಯ. ಪ್ರಕೃತ ಸೂತ್ರದಿಂದ ಅಣ್ ಪ್ರತ್ಯಯ ಬಂದು ಪ್ರಾತಿಪದಿಕ–ಸಂಜ್ಞೆ ಬಂದ ಮೇಲೆ "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ ಸುಪ್ ಗೆ ಲುಕ್ ಬಂದು ಆದಿ–ವೃದ್ಧಿಯಾದ ಮೇಲೆ, 'ಭ' ಸಂಜ್ಞೆಯುಳ್ಳ ಶಬ್ದದ 'ಆ'ಕಾರಕ್ಕೆ ಲೋಪ ಬಂದು 'ಚೈತ್ರ' ಎಂದಾಗುತ್ತದೆ. 'ಅಹಃ' ಎಂಬುದು 'ನಪುಂಸಕಲಿಂಗ' ವಾಗಿರುವುದರಿಂದ ವಿಶೇಷಣವಾದ 'ಚೈತ್ರಂ' ಎಂದಾಗುತ್ತದೆ.

ವಾರ್ತಿಕ: ತಿಷ್ಯಪುಷ್ಯಯೋರ್ ನಕ್ಷತ್ರಾಣಿ ಯ– ಲೋಪ ಇತಿ ವಾಚ್ಯಮ್ ।

ಈ ವಾರ್ತಿಕದ ಅರ್ಥವು ಹೀಗಿದೆ. ನಕ್ಷತ್ರದಿಂದ ಕೂಡಿದ ಕಾಲ ಎಂಬರ್ಥದಲ್ಲಿ ನಕ್ಷತ್ರವಾಚಕ ಶಬ್ದದ ಮೇಲೆ ' ಅಣ್ ' ಪ್ರತ್ಯಯವು ಪರದಲ್ಲಿದ್ದಾಗ ತಿಷ್ಯ ಮತ್ತು ಪುಷ್ಯ ಶಬ್ದಗಳ 'ಯ' ಕಾರವು ಲೋಪವಾಗುತ್ತದೆ.

ಉದಾಃ ಪೌಷಂ ಅಹಃ–( ಪುಷ್ಯ ನಕ್ಷತ್ರದಿಂದ ಕೂಡಿದ ದಿನ)–ಪುಷ್ಯೇಣ 'ಯುಕ್ತಂ ಪೌಷಂ ಅಹಃ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಪುಷ್ಯ+ಟಾ ಎಂಬುದು ಅಲೌಕಿಕ ವಿಗ್ರಹ ವಾಕ್ಯವಾಗಿದೆ. ಪ್ರಕೃತ ಸೂತ್ರದಿಂದ ಅಣ್ (ಅ) ಪ್ರತ್ಯಯ ಬಂದ ಮೇಲೆ ಪ್ರಾತಿಪದಿಕ ಸಂಜ್ಞೆ ಬಂದು ಸುಪ್‌ಗೆ ಲುಕ್ ಬರುತ್ತದೆ. ಪ್ರತ್ಯಯವು ಣಿತ್ ಆಗಿರುವುದರಿಂದ ಆದಿವೃದ್ಧಿ, "ಯಸ್ಯೇತಿ ಚ" ಎಂಬುದರಿಂದ 'ಭ' ಸಂಜ್ಞಕ ಪೌಷ್ಯ ಶಬ್ದದ 'ಅ'ಕಾರಕ್ಕೆ ಲೋಪ ಬಂದು ಪೌಷ್ಯ್+ಅ ಎಂದಿರುತ್ತದೆ. ಪ್ರಕೃತ ಸೂತ್ರದಿಂದ 'ಯ' ಕಾರಕ್ಕೆ ಲೋಪ ಬಂದು ಪೌಷ್ ಎಂದಾಗುತ್ತದೆ. ಈ ವಿಶೇಷಣವು ನಪುಂಸಕವಾಗಿರಬೇಕಾಗಿದ್ದರಿಂದ ಪೌಷಂ ಎಂದಾಗುತ್ತದೆ. ಹೀಗಾಗಿ ಪೌಷಂ ಅಹಃ ಎಂಬ ರೂಪವು ಸಿದ್ಧವಾಗುತ್ತದೆ.

**('ಲುಪ್' ವಿಧಿಸುವ ಸೂತ್ರ)**

**ಸೂತ್ರ–1037– ಲುಬ್ ಅವಿಶೇಷೇ (4–2–4)**

ವೃತ್ತಿ– ಪೂರ್ವೇಣ ವಿಹಿತಸ್ಯ ಲುಪ್ ಸ್ಯಾತ್, ಷಷ್ಟೀ ದಂಡಾತ್ಮಕಸ್ಯ ಕಾಲಸ್ಯ ಅವಾಂತರ ವಿಶೇಷ: ಚೇತ್ ನ ಗಮ್ಯತೇ/ ಅದ್ಯ ಪುಷ್ಯಃ.

ಪ.ಛೇ– ಲುಪ್, ಅವಿಶೇಷೇ।

ಅ.ವೃ-"ಪ್ರಾಗ್‌ದೀವ್ಯತೋಽಣ್" ಎಂಬ ಸೂತ್ರದಿಂದ ವಿಭಕ್ತಿ ಪರಿಣಾಮ ಮಾಡಿ 'ಅಣಃ' ಎಂಬ ಪದವನ್ನು ಅನುವೃತ್ತಿ ಮಾಡಲಾಗಿದೆ.

ಅರ್ಥ- ಅವಿಶೇಷ ಎಂದರೆ 60 ಘಳಿಗೆಯುಳ್ಳ ಕಾಲದಲ್ಲಿ ಹಗಲು ರಾತ್ರಿ ಎಂಬ ವಿಶೇಷ ಬೇಧವಿಲ್ಲದೆ ಎಂದು ಅರ್ಥ ಮಾಡಬೇಕು. ಅವಾಂತರ ವಿಶೇಷದ ವಿವಕ್ಷೆ ಇರುವುದಿಲ್ಲ. ಆಗ ಪೂರ್ವ ಸೂತ್ರದಲ್ಲಿ ವಿಹಿತವಾದ 'ಅಣ್'ಗೆ ಲೋಪ ಬರುತ್ತದೆ.

ಉದಾ- ಅದ್ಯ ಪುಷ್ಯಃ - (ಅರವತ್ತು ಘಳಿಗೆಗಳಲ್ಲಿ ಹಗಲೋ ಅಥವಾ ರಾತ್ರಿಯೋ ಎಂಬ ವಿಶೇಷ ವಿವಕ್ಷೆಯಿಲ್ಲದೇ ಅದ್ಯ ಎಂಬ ಶಬ್ದದಿಂದ ಕಾಲವು ಸೂಚಿತವಾಗಿದೆ) 'ಅದ್ಯ ಪುಷ್ಯಃ' ಎಂಬುದರಿಂದ ಹಗಲಿರುಳಿನಲ್ಲಿ ಪುಷ್ಯ ನಕ್ಷತ್ರದಿಂದ ಚಂದ್ರನು ಕೂಡಿರುವನು ಎಂದು ಅರ್ಥ ಮಾಡಬೇಕು. ಇಲ್ಲಿ ಅಣ್ ಪ್ರತ್ಯಯದ ಲೋಪವು ಬಂದಿದೆ.

### (ಅಣ್ ಪ್ರತ್ಯಯವನ್ನು ವಿಧಿಸುವ ಸೂತ್ರ)

**ಸೂತ್ರ. 1038- ದೃಷ್ಟಂ ಸಾಮ। (4-2-7)**

ವೃತ್ತಿ- ತೇನೇತ್ಯೇವ। ವಸಿಷ್ಠೇನ ದೃಷ್ಟಂ ವಾಸಿಷ್ಠಂ ಸಾಮ।

ಅ.ವೃ- "ತೇನ ರಕ್ತಂ ರಾಗಾತ್" ಎಂಬ ಸೂತ್ರದಿಂದ ತೇನ ಎಂಬ ಪದವು ಮತ್ತು "ಪ್ರಾಕ್‌ದೀವ್ಯತೋಽಣ್" ಎಂಬುದರಿಂದ ಅಣ್ ಎಂಬ ಪದವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್ ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಎಂಬ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ- 'ನೋಡಲ್ಪಟ್ಟ' (ಸಾಕ್ಷಾತ್ಕರಿಸಲ್ಪಟ್ಟ / ಕೇಳಲ್ಪಟ್ಟ) ಎಂಬ ಅರ್ಥದಲ್ಲಿ ತೃತೀಯಾರ್ಥದಲ್ಲಿ ಸಾಮರ್ಥ್ಯವುಳ್ಳ ಪ್ರಾತಿಪದಿಕದ ನಂತರ 'ಅಣ್' ಪ್ರತ್ಯಯವು ಬರುತ್ತದೆ. ಋಷಿಗಳು ತಮ್ಮ ಯೋಗಶಕ್ತಿಯಿಂದ ವೇದ ಮಂತ್ರಗಳನ್ನು ಗ್ರಹಿಸುವುದರಿಂದ ಅವರಿಗೆ ಮಂತ್ರದ್ರಷ್ಟಾರರು ಎಂದು ಹೇಳುತ್ತಾರೆ. ಇಲ್ಲಿ 'ವಸಿಷ್ಠರು 'ಸಾಮ ಮಂತ್ರವನ್ನು' ಗ್ರಹಿಸಿರುವರು' ಎಂಬ ಅರ್ಥದಲ್ಲಿ ವಸಿಷ್ಠ ಸಾಮ ಎಂಬ ಪ್ರಯೋಗವು ಬಂದಿದೆ.

ಉದಾ-ವಾಸಿಷ್ಠಂ ಸಾಮ-'ವಸಿಷ್ಠೇನ ದೃಷ್ಟಂ' ಎಂಬುದು ಲೌಕಿಕ ವಿಗ್ರಹ ವಾಕ್ಯ. ವಸಿಷ್ಠೇನ ಎಂಬುದಕ್ಕೆ ವಸಿಷ್ಠ+ಟಾ ಎಂಬುದು ಅಲೌಕಿಕ ವಿಗ್ರಹ ವಾಕ್ಯವಾಗಿದೆ. ಪ್ರಕೃತ ಸೂತ್ರದಿಂದ 'ಅಣ್' ಪ್ರತ್ಯಯ ಬಂದು ಪ್ರಾತಿಪದಿಕ ಸಂಜ್ಞೆ ಬಂದ ಮೇಲೆ 'ಸುಪ್'ಗೆ 'ಲುಕ್' ಬಂದು ತದ್ಧಿತ ಪ್ರತ್ಯಯವಾದ್ದರಿಂದ ಆದಿ ವೃದ್ಧಿ ಬಂದು 'ಭ' ಸಂಜ್ಞೆಯುಳ್ಳ ವಾಸಿಷ್ಠ ಶಬ್ದದ ಅಂತ್ಯ 'ಅ' ಕಾರಕ್ಕೆ ಲೋಪ ಬಂದು ವಾಸಿಷ್ಠ್+ಅ=ವಾಸಿಷ್ಠ ಎಂದಾದ ಮೇಲೆ ಸುಬಂತ ಮಾಡಿದಾಗ ವಾಸಿಷ್ಠಂ ಎಂಬ ರೂಪವು ಸಿದ್ಧವಾಗುತ್ತದೆ. ಇದು ನಪುಂಸಕಲಿಂಗವಾಗುವುದಕ್ಕೆ ಕಾರಣ ಸಾಮ ಶಬ್ದವು ವಿಶೇಷ್ಯ ಆಗಿದೆ ಹಾಗೂ ನಪುಂಸಕ ಲಿಂಗದಲ್ಲಿದೆ.

**(ಡ್ಯ ಮತ್ತು ಡ್ಯಣ್ ಎಂಬ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ. 1039– ವಾಮದೇವಾಡ್ ಡ್ಯಡ್ ಡ್ಯೌ (4–2–9)**

ವೃತ್ತಿ– ವಾಮದೇವೇನ ದೃಷ್ಟಂ ಸಾಮ, ವಾಮದೇವ್ಯಂ।

ಪ.ಛೇ– ವಾಮದೇವಾತ್, ಡ್ಯಡ್ಯೌ।

ಅ.ವೃ– "ತೇನ ರಕ್ತಂ ರಾಗಾತ್" ಎಂಬ ಸೂತ್ರದಿಂದ 'ತೇನ' ಎಂಬ ಪದವು "ದೃಷ್ಟಂ ಸಾಮ" ಎಂಬ ಪೂರ್ಣ ಸೂತ್ರವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್ ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಎಂಬ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ– ಸಾಕ್ಷಾತ್ಕರಿಸಲ್ಪಟ್ಟ ಸಾಮ (ಮಂತ್ರ) ಎಂಬ ಅರ್ಥದಲ್ಲಿ ತೃತೀಯಾಂತ ಸಾಮರ್ಥ್ಯವುಳ್ಳ ವಾಸುದೇವ ಎಂಬ ಪ್ರಾತಿಪದಿಕದ ನಂತರ ತದ್ಧಿತ ಪ್ರತ್ಯಯವಾದ ಡ್ಯತ್ ಮತ್ತು ಡ್ಯ ಎಂಬ ಪ್ರತ್ಯಯಗಳು ಬರುತ್ತವೆ. ಇದರಲ್ಲಿ 'ಯ' ಮಾತ್ರ ಉಳಿಯುತ್ತದೆ. ಈ ಎರಡು ಪ್ರತ್ಯಯಗಳಲ್ಲಿ ಒಂದು ತಿತ್ ಆಗಿಯೂ, ಮತ್ತೊಂದು ತಿತ್ ಅಲ್ಲದ್ದಾಗಿಯೂ ಇದೆ. ಆದರೆ ಈ ಸೂತ್ರವು ಹಿಂದಿನ ಸೂತ್ರಕ್ಕೆ ಅಪವಾದವಾಗಿದೆ.

ಉದಾ: ವಾಮದೇವ್ಯಂ – (ವಾಮದೇವೇನ ದೃಷ್ಟಂ ಸಾಮ ಎಂದು ಇದರ ಅರ್ಥ)– ತೃತೀಯಾಂತವಾದ ವಾಮದೇವ ಶಬ್ದಕ್ಕಿಂತ ಪರದಲ್ಲಿ ಡ್ಯತ್ ಮತ್ತು ಡ್ಯ ಪ್ರತ್ಯಯಗಳನ್ನು ಮಾಡಿದಾಗ ವಾಮದೇವ+ಯ ಎಂದಿರುತ್ತದೆ. ಹಿಂದಿನಂತೆ "ಯಸ್ಯೇತಿ ಚ" ಎಂಬುದರಿಂದ ವಾಸುದೇವ ಎಂಬಲ್ಲಿರುವ ಅಂತ್ಯ 'ಅ' ಕಾರಕ್ಕೆ 'ಟಿ' ಲೋಪವು ಬಂದು ವಾಮದೇವ್ಯಂ ಎಂದಾಗುತ್ತದೆ.

**(ಅಣ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ– 1040 – ಪರಿವೃತೋ ರಥಃ। ( 4–2–10)**

ವೃತ್ತಿ– ಅಸ್ಮಿನ್ ಅರ್ಥೇ ಅಣ್ ಪ್ರತ್ಯಯಃ ಭವತಿ। ವಸ್ತ್ರೇಣ ಪರಿವೃತಃ। ವಾಸ್ತ್ರಃ ರಥಃ।

ಪ.ಛೇ– ಪರಿವೃತಃ, ರಥ: ।

ಅ.ವೃ– "ತೇನ ರಕ್ತಂ ರಾಗಾತ್" ಎಂಬ ಸೂತ್ರದಿಂದ ತೇನ ಎಂಬ ಪದವು ಮತ್ತು "ಪ್ರಾಗ್‌ದೀವ್ಯತೋಽಣ್" ಎಂಬುದರಿಂದ ಅಣ್ ಎಂಬ ಪದವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್‌ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಎಂಬ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ– **"ಇದರಿಂದ ಆವೃತವಾದ ಅಥವಾ ಸುತ್ತುವರಿಯಲ್ಪಟ್ಟ ರಥ"** ಎಂಬ ಅರ್ಥದಲ್ಲಿ ತೃತೀಯಾಂತ ಶಬ್ದದ ನಂತರ 'ಅಣ್' ಪ್ರತ್ಯಯವು ಬರುತ್ತದೆ. ಇದರಲ್ಲೂ ಆದಿವೃದ್ಧಿ ಹಾಗೆಯೇ 'ಭ' ಸಂಜ್ಞಕ ಶಬ್ದದ 'ಅ' ಕಾರವು ಲೋಪವಾಗುತ್ತದೆ.

ಉದಾ–ವಾಸ್ತ್ರಃ ರಥಃ–(ವಸ್ತ್ರಗಳಿಂದ ಸುತ್ತಲ್ಪಟ್ಟ ರಥ) ವಸ್ತ್ರೇಣ ಪರಿವೃತಃ ಎಂಬ

ಅರ್ಥದಲ್ಲಿ ತೃತೀಯಾಂತವಾದ ವಸ್ತ್ರ ಶಬ್ದದ ನಂತರ ಪ್ರಕೃತ ಸೂತ್ರದಿಂದ 'ಅಣ್' ಪ್ರತ್ಯಯವು ಬಂದು ವಾಸ್ತ್ರಃ ಎಂದು ಸುಬಂತವಾಗುತ್ತದೆ. ರಥಃ ಎಂಬುದು ಪುಲ್ಲಿಂಗವಾದ್ದರಿಂದ ಈ ವಿಶೇಷಣವು ಪುಲ್ಲಿಂಗವಾಗಿದೆ.

**(ಅಣ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1041-ತತ್ರೋದ್ಧೃತಮಮತ್ರೇಭ್ಯಃ॥ (4-2-14)**

ವೃತ್ತಿ- ಶರಾವೇ ಉದ್ಧೃತಃ - ಶಾರಾವ ಓದನಃ॥

ಪ.ಛೇ- ತತ್ರ, ಉದ್ಧೃತಂ, ಅಮತ್ರೇಭ್ಯಃ॥

ಅ.ವೃ- "ಪ್ರಾಗ್‌ದೀವ್ಯತೋಽಣ್" ಎಂಬ ಸೂತ್ರದಿಂದ ಅಣ್ ಎಂಬ ಪದವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್‌ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಎಂಬ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ- "ತೆಗೆದುಕೊಂಡ ಮೇಲೆ ಆ ಪಾತ್ರೆಯಲ್ಲಿ ಉಳಿದಿರುವ" ಎಂಬ ಅರ್ಥದಲ್ಲಿ ಸಪ್ತಮ್ಯಂತವಾದ ಪಾತ್ರವಾಚಕ ಶಬ್ದ ನಂತರ ಅಣ್ (ಅ) ಪ್ರತ್ಯಯವು ಬರುತ್ತದೆ.

ಉದಾ- ಶಾರಾವಃ ಓದನಃ - ಶರಾವೇ ಉದ್ಧೃತಃ ಶಾರಾವಃ ಓದನಃ - ಅನ್ನವನ್ನು ಬಡಿಸಿದ ನಂತರ 'ಪಾತ್ರೆಯಲ್ಲಿ ಉಳಿದಿರುವ' ಅನ್ನವೆಂದು ಅರ್ಥ. ಇಲ್ಲಿ ಪಾತ್ರೆಯು ಸಪ್ತಮ್ಯರ್ಥದಲ್ಲಿ ಇದೆ. ತದನಂತರ ಅಣ್ ಪ್ರತ್ಯಯವು ಬಂದಿದೆ. ಆದ್ದರಿಂದ ಆದಿ ವೃದ್ಧಿ ಬಂದಿದೆ. ಶಾರಾವ ಎಂಬಲ್ಲಿರುವ ಅಂತ್ಯ 'ಅ' ಕಾರಕ್ಕೆ "ಯಸ್ಯೇತಿ ಚ" ಎಂಬುದರಿಂದ ಲೋಪ ಬಂದು ಶಾರಾವ್+ಅ=ಶಾರಾವ ಎಂದಾಗಿ ಸುಬಂತವಾದಾಗ ಶಾರಾವ: ಎಂದಾಗುತ್ತದೆ.

**ಅಣ್ ಪ್ರತ್ಯಯವನ್ನು ವಿಧಿಸುವ ಸೂತ್ರ:**

**ಸೂತ್ರ- 1042- ಸಂಸ್ಕೃತಂ ಭಕ್ಷ್ಯಾಃ॥ (4-2-15)**

ವೃತ್ತಿ- ಸಪ್ತಮ್ಯಂತಾತ್ ಅಣ್ ಸ್ಯಾತ್ ಸಂಸ್ಕೃತೇಽರ್ಥೇ ಯತ್ ಸಂಸ್ಕೃತಂ ಭಕ್ಷಾ ಶ್ಚೇತ್ ತೇ ಸ್ಯುಃ/ಭ್ರಾಷ್ಟ್ರೇಷು ಸಂಸ್ಕೃತಾಃ - ಭ್ರಾಷ್ಟ್ರಾಃ॥ ಯವಾಃ॥

ಅ.ವೃ- "ತತ್ರೋದ್ಧೃತಮಮತ್ರೇಭ್ಯಃ" ಎಂಬ ಸೂತ್ರದಿಂದ ತತ್ರ ಎಂಬ ಪದವು, "ಪ್ರಾಗ್ದೀವ್ಯತೋಽಣ್" ಎಂಬ ಸೂತ್ರದಿಂದ ಅಣ್ ಎಂಬ ಪದವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್‌ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಎಂಬ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ-'ಅದರಲ್ಲಿ ಸಂಸ್ಕರಿಸಲ್ಪಟ್ಟ' ಎಂಬರ್ಥದಲ್ಲಿ ಸಂಸ್ಕೃತವಾದ ಪದಾರ್ಥವು ಭಕ್ಷ್ಯವಾಗಿದ್ದರೆ, ಆ ಸಪ್ತಮ್ಯಂತ ಪದದ ನಂತರ 'ಅಣ್' ಪ್ರತ್ಯಯವು ಬರುತ್ತದೆ.

ಉದಾ- ಭ್ರಾಷ್ಟ್ರಾಃ ಯವಾಃ- 'ಭಟ್ಟಿಗಳಲ್ಲಿ ಸಂಸ್ಕೃತವಾದ (ಹುರಿಯಲ್ಪಟ್ಟ)' ಎಂಬ ಅರ್ಥದಲ್ಲಿ ಸಪ್ತಮ್ಯಂತವಾದ ಭ್ರಾಷ್ಟ್ರ ಶಬ್ದದ ನಂತರ 'ಅಣ್' ಪ್ರತ್ಯಯವು ಬರುತ್ತದೆ. ಭಟ್ಟಿಯಲ್ಲಿ ಹುರಿಯಲ್ಪಟ್ಟ ಕಾರಣದಿಂದ ಸುಸಂಸ್ಕೃತವಾದ ಯವ ಧಾನ್ಯ. ಇಲ್ಲಿ

ಆದಿಯಲ್ಲಿ ಆದಿವೃದ್ಧಿ ಮೊದಲೇ ಇದೆ. ಈ ಕಾರಣದಿಂದ ಮತ್ತೇ ಆದಿವೃದ್ಧಿ ಮಾಡಬೇಕಾದ ಆವಶ್ಯಕತೆ ಇರುವುದಿಲ್ಲ. ( ಎಲ್ಲಿ ವೃದ್ಧಿ ಇಲ್ಲವೋ ಅಲ್ಲಿ ಆದಿವೃದ್ಧಿ ಬರಬೇಕು ) ಇದನ್ನು 'ಪರ್ಜನ್ಯವತ್ ಲಕ್ಷಣಪ್ರವೃತ್ತಿಃ' ಎಂದು ಹೇಳುತ್ತಾರೆ. ಆದ್ದರಿಂದ ಈ ಪ್ರತ್ಯಯ ವ್ಯರ್ಥವೆಂದು ಭಾವಿಸಬಾರದು.

**(ಅಣ್ ಪ್ರತ್ಯಯವನ್ನು ವಿಧಿಸುವ ಸೂತ್ರ )**

ಸೂತ್ರ, 1043 – ಸಾಽಸ್ಯ ದೇವತಾ ( 4-2-24)

ವೃತ್ತಿ– ಇಂದ್ರೋ ದೇವತಾ ಅಸ್ಯ ಇತಿ ಐಂದ್ರಂ ಹವಿಃ। ಪಾಶುಪತಂ। ಬ್ರಾರ್ಹಸ್ಪತ್ಯಂ।

ಪ.ಛೇ_ ಸಾ, ಅಸ್ಯ, ದೇವತಾ।

ಅ.ವೃ– "ಪ್ರಾಗ್ದೀವ್ಯತೋಽಣ್" ಎಂಬ ಸೂತ್ರದಿಂದ ಅಣ್ ಎಂಬ ಪದವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", ಙ್ಯಾಪ್‌ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಎಂಬ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ– ದೇವತೆಯನ್ನು ಹೇಳುವ ಪ್ರಥಮಾಂತ ಸಮರ್ಥ ಪ್ರಾತಿಪದಿಕದ ನಂತರ ಇದು ಅದರ ದೇವತೆ ಎಂಬರ್ಥದಲ್ಲಿ ಅಣ್ ಪ್ರತ್ಯಯವು ಬರುತ್ತದೆ.

ಉದಾ– ಐಂದ್ರಂ ಹವಿಃ– 'ಇಂದ್ರಃ ದೇವಾತಾ ಅಸ್ಯ ( ಇದಕ್ಕೆ ಇಂದ್ರನು ದೇವತೆ)' ಎಂಬ ಅರ್ಥದಲ್ಲಿ ಪ್ರಥಮಾ ವಿಭಕ್ತಿಯಲ್ಲಿರುವ 'ಇಂದ್ರ' ಶಬ್ದದ ನಂತರ ಆದಿವೃದ್ಧಿ ಬಂದು ಐಂದ್ರ ಎಂಬಲ್ಲಿರುವ ಅಂತ್ಯ 'ಅ' ಕಾರಕ್ಕೆ "ಯಸ್ಯೇತಿ ಚ" ಎಂಬುದರಿಂದ ಲೋಪ ಬಂದು ಐಂದ್ರ್+ಅ=ಐಂದ್ರ ಎಂದಾದ ಮೇಲೆ ಸುಬಂತ ಮಾಡಿದಾಗ ನಪುಂಸಕ ಲಿಂಗದಲ್ಲಿ ಐಂದ್ರಂ ಎಂದಾಗುತ್ತದೆ. ಕಾರಣ ಹವಿಃ ಎಂಬುದು ನಪುಂಸಕ ಲಿಂಗವಾಗಿದೆ.

ಇದೇ ರೀತಿಯಲ್ಲಿ 'ಪಶುಪತಿಃ ದೇವತಾ ಅಸ್ಯ' ಎಂಬ ಅರ್ಥದಲ್ಲಿ 'ಅಣ್' ಪ್ರತ್ಯಯ ಬಂದು 'ಪಾಶುಪತಂ' ಎಂದಾಗುತ್ತದೆ. 'ಬಾರ್ಹಸ್ಪತ್ಯಂ' ಎಂಬ ಶಬ್ದವು 'ಬೃಹಸ್ಪತಿಃ ದೇವತಾ ಅಸ್ಯ' ಎಂಬರ್ಥದಲ್ಲಿ ಮೇಲಿನ ಪ್ರಕ್ರಿಯೆಯಂತೆ ಬ್ರಾರ್ಹಸ್ಪತ್ಯಂ ಎಂದಾಗುತ್ತದೆ. ಕೊನೆಯ ಎರಡು ಉದಾಹರಣೆಗಳಲ್ಲಿ 'ಇ' ಕಾರವು "ಯಸ್ಯೇತಿ ಚ" ದಿಂದ ಲೋಪವಾಗುತ್ತದೆ.

**('ಘನ್' ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ– 1044– ಶುಕ್ರಾದ್ ಘನ್ (4–2–26)**

ಪ.ಛೇ–ಶುಕ್ರಾತ್, ಘನ್।

ಅ.ವೃ– ಸಾಽಸ್ಯ ದೇವತಾ ಎಂಬ ಸೂತ್ರವು ಇಲ್ಲಿ ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", ಙ್ಯಾಪ್ ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಎಂಬ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ– 'ಸಾಽಸ್ಯ ದೇವತಾ' ಎಂಬ ಅರ್ಥದಲ್ಲಿ ಶುಕ್ರ ಶಬ್ದದ ನಂತರ ಅಪವಾದವಾಗಿ

'ಘನ್(ಘ್)' ಪ್ರತ್ಯಯವು ಬರುತ್ತದೆ. ಅದಕ್ಕೆ "ಅಯನ್ಏಯ್ ಈನ್ ಇಯ..." ಎಂಬ ಸೂತ್ರದಿಂದ 'ಘ್' ಕಾರಕ್ಕೆ 'ಇಯ್' ಆದೇಶವು ಬಂದು ಶುಕ್ರ+ಘನ್ ಎಂದಿದ್ದಾಗ, ಶುಕ್ರ+ಘ್ ಎಂದಾಗಿ 'ಘ್' ಕಾರಕ್ಕೆ 'ಇಯ್' ಆದೇಶ ಬಂದು ಶುಕ್ರ+ಇಯ್ ಎಂದಾದಾಗ, ಅಜಾದಿ ಪ್ರತ್ಯಯವು ಪರದಲ್ಲಿರುವ ಶುಕ್ರದ ಅಂತ್ಯ 'ಅ' ಕಾರಕ್ಕೆ ಲೋಪ ಬಂದು, ಶುಕ್+ಇಯ್+ಅ=ಶುಕ್ರಿಯ ಎಂದಾದ ಮೇಲೆ 'ಶುಕ್ರಿಯಂ' ಎಂಬ ಸುಬಂತ ರೂಪವು ಸಿದ್ಧವಾಗುತ್ತದೆ.

**(ಟ್ಯಣ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ- 1045- ಸೋಮಾಟ್ ಟ್ಯಣ್ (4-2-30)**

ವೃತ್ತಿ - ಸೌಮ್ಯಂ।

ಪ.ಛೇ- ಸೋಮಾತ್, ಟ್ಯಣ್।

ಅ.ವೃ- "ಸಾಽಸ್ಯ ದೇವತಾ" ಎಂಬ ಸೂತ್ರವು ಇಲ್ಲಿ ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", ಙ್ಯಾಪ್ ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಎಂಬ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ: 'ಸಾಽಸ್ಯ ದೇವತಾ' ಎಂಬ ಅರ್ಥದಲ್ಲಿ ಪ್ರಥಮಾಂತ ಸೋಮ ಶಬ್ದದ ನಂತರ ಟ್ಯಣ್ ಎಂಬ ಪ್ರತ್ಯಯವು ಬರುತ್ತದೆ. ಇದರಲ್ಲಿ 'ಯ' ಮಾತ್ರ ಉಳಿಯುತ್ತದೆ. 'ಸೋಮಃ ದೇವತಾ ಅಸ್ಯ ಹವಿಷಃ' ಎಂಬ ಅರ್ಥದಲ್ಲಿ 'ಸೋಮ' ಶಬ್ದದ ನಂತರ ಪ್ರಕೃತ ಸೂತ್ರದಿಂದ 'ಟ್ಯಣ್(ಯ್)' ಪ್ರತ್ಯಯವು ಬರುವುದು. ತದ್ಧಿತ ಪ್ರತ್ಯಯವಾದ್ದರಿಂದ ಆದಿವೃದ್ಧಿ ಬಂದು "ಯಸ್ಯೇತಿ ಚ" ಎಂಬುದರಿಂದ ಸೋಮ ಶಬ್ದದ 'ಅ' ಕಾರ ಲೋಪವಾಗಿ, ಸುಬಂತ ಮಾಡಿದಾಗ 'ಅಂ' ಬಂದು 'ಸೌಮ್ಯಂ' ಎಂಬ ರೂಪವು ಸಿದ್ಧವಾಗುತ್ತದೆ.

**(ಯತ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ- 1046- ವಾಯ್ವೃತು ಪಿತ್ರುಷಸೋ ಯತ್।** (4-2-32)

ವೃತ್ತಿ- ವಾಯವ್ಯಂ। ಋತವ್ಯಂ।

ಪ.ಛೇ- ವಾಯು, ಋತು, ಪಿತೃ ಮತ್ತು ಉಷಸ್

ಅರ್ಥ- ವಾಯು, ಋತು, ಪಿತೃ ಮತ್ತು ಉಷಸ್ ಎಂಬ ಶಬ್ದಗಳ ನಂತರ 'ಸಾಽಸ್ಯ ದೇವತಾ' ಎಂಬ ಅರ್ಥದಲ್ಲಿ 'ಯತ್(ಯ)' ಪ್ರತ್ಯಯವು ಬರುತ್ತದೆ.

ಉದಾ- ವಾಯವ್ಯಂ- 'ವಾಯುಃ ದೇವತಾ ಅಸ್ಯ' ಎಂಬ ಅರ್ಥದಲ್ಲಿ ಪ್ರಥಮಾಂತವಾದ 'ವಾಯು' ಶಬ್ದದ ನಂತರ ಪ್ರಕೃತ ಸೂತ್ರದಿಂದ 'ಯತ್(ಯ)' ಪ್ರತ್ಯಯವು ಬರುತ್ತದೆ. ವಾಯು+ಯ ಎಂದಿದ್ದಾಗ "ಓರ್ಗುಣಃ" ಎಂಬ ಸೂತ್ರದಿಂದ ಗುಣ (ಓ) ಬಂದು "ವಾಂತೋಯಿ ಪ್ರತ್ಯಯೇ" ಎಂಬ ಸೂತ್ರದಿಂದ ಅವಾದೇಶ ಬಂದು, 'ವಾಯವ್ಯಂ' ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಋತವ್ಯಂ – ಋತು ಶಬ್ದದ ನಂತರ 'ಸಾऽಸ್ಯ ದೇವತಾ' ಎಂಬ ಅರ್ಥದಲ್ಲಿ 'ಯತ್(ಯ)' ಪ್ರತ್ಯಯವು ಬಂದಾಗ ಋತವ್ಯಂ ಎಂಬ ರೂಪವು ಸಿದ್ಧಿಸುತ್ತದೆ.

ಉದಾ– 'ಪಿತರಃ ದೇವತಾ ಅಸ್ಯ' ಎಂಬರ್ಥದಲ್ಲಿ 'ಪಿತೃ' ಶಬ್ದದ ನಂತರ ಪ್ರಕೃತ ಸೂತ್ರದಿಂದ 'ಯತ್(ಯ)' ಪ್ರತ್ಯಯವು ಬಂದು ಪಿತೃ+ಯ ಎಂದಿದ್ದಾಗ–

**(ರೀಙ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ – 1047 –ರೀಙೃತಃ।(7–4–27)**

ವೃತ್ತಿ– ಅಕೃತ್ 'ಯ' ಕಾರೇ ಅಸಾರ್ವಧಾತುಕೇ ಯ ಕಾರೇ ಚ್ವೌ ಚ ಪರೇ ಋದಂತಾಂಗಸ್ಯ ರೀಙ್ ಆದೇಶಃ। 'ಯಸ್ಯೇತಿ ಚ' ಪಿತ್ರ್ಯಂ। ಉಷಸ್ಯಂ।

ಅ.ವೃ– "ಅಕೃತ್ ಸಾರ್ವಧಾತುಕೆಯೋಃ ದೀರ್ಘಃ" ಎಂಬ ಸೂತ್ರದಿಂದ 'ಅಕೃತ್ ಸಾರ್ವಧಾತುಕಯೋಃ' ಎಂಬ ಪದವು ಮತ್ತು "ಅಯಙ್‌ಯಿತಿ ಇಗಿತಿ" ಎಂಬ ಸೂತ್ರದಿಂದ 'ಯಿ' ಎಂಬ ಪದವು "ಚ್ವೌಚ" ಎಂಬುದರಿಂದ 'ಚ್ವೌ' ಎಂಬ ಪದವು ಅನುವೃತ್ತವಾಗುತ್ತದೆ. "ಅಂಗಸ್ಯ" ಎಂಬುದು ಅಧಿಕಾರ ಸೂತ್ರವಾಗಿದೆ.

ಅರ್ಥ– ಕೃತ್ ಭಿನ್ನವಾದ 'ಯ' ಕಾರವಾಗಲೀ ಸಾರ್ವಧಾತುಕ ಭಿನ್ನವಾದ 'ಯ' ಕಾರವಾಗಲೀ 'ಚ್ವಿ' ಪ್ರತ್ಯಯವಾಗಲಿ ಪರವಾದಾಗ ಋದಂತವಾದ ಅಂಗಕ್ಕೆ 'ರೀಙ್ (ರೀ)' ಎಂಬ ಆದೇಶವು ಬರುತ್ತದೆ.

ಉದಾ– ಪಿತ್ರ್ಯಂ – ಪ್ರಕೃತ ಸೂತ್ರದಿಂದ ಪಿತೃ ಶಬ್ದಕ್ಕೆ ರೀಙ್ ಆದೇಶವು ಬರುತ್ತದೆ. ಇದು 'ಙಿತ್' ಆಗಿರುವುದರಿಂದ ಅಂತಾವಯವಾಗಿ ಬರುತ್ತದೆ. ಪಿತ್ರೀ+ಯ್ ಎಂದಿದ್ದಾಗ "ಯಸ್ಯೇತಿ ಚ" ಎಂಬುದರಿಂದ ದೀರ್ಘ ಈ ಕಾರಕ್ಕೆ ಲೋಪ ಬಂದು ಪಿತ್ರ್ಯಂ ಎಂದು ರೂಪ ಸಿದ್ಧವಾಗುತ್ತದೆ.

ಉದಾ– ಪಿತ್ರ್ಯಂ – 'ಪಿತರಃ ದೇವತಾ ಅಸ್ಯ ಹವಿಷಃ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಪಿತೃ+ಜಸ್ ಎಂಬುದು ಅಲೌಕಿಕ ವಿಗ್ರಹ ವಾಕ್ಯವಾಗಿದೆ. 'ಸಾऽಸ್ಯ ದೇವತಾ' ಎಂಬ ಸೂತ್ರದಿಂದ ಬರಬೇಕಾದ 'ಅಣ್' ಪ್ರತ್ಯಯವನ್ನು ಬಾಧಿಸಿ "ವಾಯ್ ವೃ ತ್ರು ಪಿತ್ರಷಸೋ ಯತ್" ಎಂಬ ಸೂತ್ರದಿಂದ ಯತ್ (ಯ್) ಪ್ರತ್ಯಯವು ಬಂದು, ಪ್ರಾತಿಪದಿಕ ಸಂಜ್ಞೆ ಬಂದ ಮೇಲೆ, ಅನಂತರ ಬರುವ ಸುಪ್–ಗೆ ಲೋಪ ಬಂದು, ಪಿತೃ+ಯ ಎಂದಿರುತ್ತದೆ. ಪ್ರಕೃತ ಸೂತ್ರದಿಂದ 'ಙಿತ್' ಆಗಿರುವುದರಿಂದ ಅಂತ್ಯ ಅಲ್ ಆದ 'ಋ' ಕಾರಕ್ಕೆ 'ರಿ' ಆದೇಶವು ಬಂದು ಪಿತ್+ರೀ+ಯ ಎಂದಿದ್ದಾಗ 'ಈ' ಕಾರಕ್ಕೆ "ಯಸ್ಯೇತಿ ಚ" ಎಂಬುದರಿಂದ ಲೋಪ ಬಂದು ಪಿತ್+ರ್+ಯ=ಪಿತ್ರ್ಯ ಎಂದಾದ ಮೇಲೆ 'ಸು' ಸೇರಿಸಿದಾಗ ನಪುಂಸಕ ಲಿಂಗದಲ್ಲಿ 'ಅಮ್' ಆದೇಶ ಬಂದು ಪೂರ್ವರೂಪವಾಗಿ ಪಿತ್ರ್ಯಂ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ– ಉಷಸ್ಯಂ– 'ಉಷಾ ದೇವತಾ ಅಸ್ಯ ಹವಿಷಃ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಉಷಸ್+ಸು ಎಂಬುದು ಅಲೌಕಿಕ ವಿಗ್ರಹ ವಾಕ್ಯವಾಗಿದೆ.

"ಸಾऽಸ್ಯ ದೇವತಾ" ಎಂಬ ಸೂತ್ರದಿಂದ ಬರಬೇಕಾದ 'ಅಣ್' ನ್ನು ಬಾಧಿಸಿ "ವಾಯ್ವ್ ಋತು ಪಿತ್ರುಷಸೋ ಯತ್" ಎಂಬ ಸೂತ್ರದಿಂದ ಯತ್ (ಯ್) ಪ್ರತ್ಯಯ ಬಂದು, ಪ್ರಾತಿಪದಿಕ ಸಂಜ್ಞೆ ಬಂದ ಮೇಲೆ, "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ 'ಸುಪ್' ಗೆ ಲುಕ್ (ಲೋಪ) ಬಂದು, ಉಷಸ್+ಯ ಎಂದಿದ್ದಾಗ, ಸುಬಂತ ಮಾಡಿದಾಗ ನಪುಂಸಕ ಲಿಂಗದಲ್ಲಿ ಅಮ್ ಆದೇಶ ಬಂದು ಪೂರ್ವರೂಪದಿಂದ ಉಷಸ್ಯಂ ಎಂಬ ರೂಪವು ಸಿದ್ಧವಾಗುತ್ತದೆ.

**(ನಿಪಾತವನ್ನು ವಿಧಿಸುವ ಸೂತ್ರ)**

**ಸೂತ್ರ- 1048 - ಪಿತೃವ್ಯ-ಮಾತುಲ-ಮಾತಾಮಹ ಪಿತಾಮಹಾಃ ( 4-2-36)**

ವೃತ್ತಿ- ಏತೇ ನಿಪಾತ್ಯಂತೇ। ಪಿತುಃ ಭ್ರಾತಾ ಪಿತೃವ್ಯಃ। ಮಾತುಃ ಭ್ರಾತಾಃ ಮಾತುಲಃ। ಮಾತುಃ - ಪಿತಾ ಮಾತಾಮಹಃ। ಪಿತುಃ ಪಿತಾ - ಪಿತಾಮಹಃ।

ಅರ್ಥ-'ತಂದೆಯ ಸಹೋದರ' ಎಂಬ ಅರ್ಥದಲ್ಲಿ 'ಪಿತೃವ್ಯ' ಎಂದೂ, 'ತಾಯಿಯ ಸಹೋದರ' ಎಂಬರ್ಥದಲ್ಲಿ 'ಮಾತುಲ' ಎಂದೂ, 'ತಾಯಿಯ ತಂದೆ' ಎಂಬರ್ಥದಲ್ಲಿ 'ಮಾತಾಮಹ' ಎಂದೂ, 'ತಂದೆಯ ತಂದೆ' ಎಂಬರ್ಥದಲ್ಲಿ 'ಪಿತಾಮಹ' ಎಂದೂ ನಿಪಾತಗಳನ್ನು ಮಾಡಲಾಗಿದೆ.

ಉದಾ: ಪಿತೃವ್ಯಃ - (ಪಿತುಃ ಭ್ರಾತಾ - ತಂದೆಯ ಸಹೋದರ ) - 'ತಂದೆಯ ಸಹೋದರ' ಎಂಬರ್ಥದಲ್ಲಿ 'ವ್ಯತ್(ವ್ಯ)' ಎಂಬ ಪ್ರತ್ಯಯವನ್ನು ಕಲ್ಪಿಸಿ ಪಿತೃವ್ಯ ಎಂಬ ಪ್ರಾತಿಪದಿಕವು ಸಿದ್ಧವಾಗುತ್ತದೆ. ಇದನ್ನು ಸುಬಂತ ಮಾಡಿದಾಗ 'ಪಿತೃವ್ಯಃ' ಎಂಬ ರೂಪವು ಸಿದ್ಧವಾಗುತ್ತದೆ.

ಉದಾ- ಮಾತುಲಃ (ಮಾತುಃ ಭ್ರಾತಾ-ತಾಯಿಯ ಸಹೋದರ)- 'ಮಾತೃ' ಶಬ್ದದ ಮೇಲೆ 'ತಾಯಿಯಸಹೋದರ' ಎಂಬರ್ಥದಲ್ಲಿ 'ದುಲಚ್' (ಉಲ) ಪ್ರತ್ಯಯವನ್ನು ಕಲ್ಪಿಸಿ ಮಾತೃ+ಉಲ ಎಂದಿದ್ದಾಗ 'ಋ' ಕಾರವು 'ಟಿ' ಆಗಿರುವುದರಿಂದ 'ಟೇಃ' ಎಂಬ ಸೂತ್ರದಿಂದ 'ಋ' ಕಾರಕ್ಕೆ ಲೋಪ ಬಂದು ಮಾತ್+ಉಲ=ಮಾತುಲ ಎಂಬ ಪ್ರಾತಿಪದಿಕವು ಸಿದ್ಧವಾಗಿ ಸುಬಂತ ಮಾಡಿದಾಗ ಮಾತುಲಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ- ಮಾತಾಮಹಃ (ಮಾತುಃ ಪಿತಾ- ತಾಯಿಯ ತಂದೆ)-ತಾಯಿಯ ತಂದೆ ಎಂಬರ್ಥದಲ್ಲಿ ಮಾತೃ ಶಬ್ದದ ಮೇಲೆ 'ಡಾಮಹಚ್' (ಆಮಹ) ಪ್ರತ್ಯಯವನ್ನು ಕಲ್ಪಿಸಿ ಮಾತೃ+ಆಮಹ ಎಂದಿದ್ದಾಗ, 'ಟೇಃ' ಎಂಬ ಸೂತ್ರದಿಂದ 'ಟಿ' ಸಂಜ್ಞೆಯುಳ್ಳ 'ಋ' ಕಾರಕ್ಕೆ ಲೋಪ ಬಂದು ಮಾತ್+ಆಮಹ=ಮಾತಾಮಹ ಎಂಬ ಪ್ರಾತಿಪದಿಕವು ಸಿದ್ಧವಾಗುತ್ತದೆ. ಇದನ್ನು ಸುಬಂತ ಮಾಡಿದಾಗ 'ಮಾತಾಮಹಃ' ಎಂಬ ರೂಪವು ಸಿದ್ಧವಾಗುತ್ತದೆ.

ಉದಾ- ಪಿತಾಮಹಃ (ಪಿತುಃ ಪಿತಾ-ತಂದೆಯ ತಂದೆ) -'ತಂದೆಯ ತಂದೆ' ಎಂಬರ್ಥದಲ್ಲಿ 'ಪಿತೃ' ಶಬ್ದದ ಮೇಲೆ 'ಡಾಮಹಚ್' (ಆಮಹ) ಪ್ರತ್ಯಯವನ್ನು

ಕಲ್ಪಿಸಿದ ನಂತರ ಪಿತೃ+ಆಮಹ ಎಂದಿದ್ದಾಗ, ಇದು 'ಡಿತ್' ಆಗಿರುವುದರಿಂದ 'ಟೇಃ' ಎಂಬ ಸೂತ್ರದಿಂದ 'ಋ' ಕಾರವಾದ 'ಟಿ'ಗೆ ಲೋಪ ಬಂದು ಪಿತ್+ಆಮಹ=ಪಿತಾಮಹ ಎಂಬ ಪ್ರಾತಿಪದಿಕವು ಸಿದ್ಧವಾಗುತ್ತದೆ. ಇದನ್ನು ಸುಬಂತ ಮಾಡಿದಾಗ ಪಿತಾಮಹಃ ಎಂಬ ರೂಪವು ಸಿದ್ಧವಾಗುತ್ತದೆ.

**('ಅಣ್' ಪ್ರತ್ಯಯವನ್ನು ವಿಧಿಸುವ ಸೂತಃ)**

**ಸೂತ್ರ–1049– ತಸ್ಯ ಸಮೂಹಃ॥ (4–2–37)**

ವೃತ್ತಿ– ಕಾಕಾನಾಂ ಸಮೂಹಃ – ಕಾಕಮ್।

ಅ.ವೃ– "ಪ್ರಾಗ್ದೀವ್ಯತೋಽಣ್" ಎಂಬ ಸೂತ್ರದಿಂದ 'ಅಣ್' ಎಂಬ ಪದವು ಅನುವೃತ್ತವಾಗುತ್ತದೆ "ಪ್ರತ್ಯಯಃ", "ಪರಶ್ಚ", ಜ್ಯಾಪ್‌ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಎಂಬ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ– ಷಷ್ಠ್ಯಂತ ಸಾಮರ್ಥ್ಯವುಳ್ಳ ಪ್ರಾತಿಪದಿಕದ ನಂತರ ಅದರ ಸಮೂಹ ಎಂಬರ್ಥದಲ್ಲಿ 'ಅಣ್' ಎಂಬ ತದ್ಧಿತ ಪ್ರತ್ಯಯವು ಬರುತ್ತದೆ.

ಉದಾ– ಕಾಕಮ್ ( ಕಾಗೆಗಳ ಸಮೂಹ(ಕಾಕಾನಾಂ ಸಮೂಹಃ ) – 'ಕಾಗೆಗಳ ಸಮೂಹ' ಎಂಬರ್ಥದಲ್ಲಿ ಕಾಕ+ಆಮ್ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಅದರ ಮೇಲೆ 'ತಸ್ಯ ಸಮೂಹಃ' ಎಂಬರ್ಥದಲ್ಲಿ ಅಣ್ (ಅ) ಪ್ರತ್ಯಯವು ಬಂದು ಪ್ರಾತಿಪದಿಕ ಸಂಜ್ಞೆಯನ್ನು ಪಡೆದ ಮೇಲೆ, ಸುಪ್(ಆಮ್) ಗೆ "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ ಲುಕ್ ಬಂದು, ಅಣ್ ಪ್ರತ್ಯಯವು ಣಿತ್ ಆಗಿರುವುದರಿಂದ 'ಕಾಕ' ನಲ್ಲಿರುವ ಅಂತ್ಯ 'ಅ' ಕಾರಕ್ಕೆ 'ಅ' ಕಾರವೇ ಆದೇಶವಾಗಿ ಬಂದು, ಆದಿವೃದ್ಧಿಯಾಗಿ 'ಭ' ಸಂಜ್ಞೆಯುಳ್ಳ 'ಅ' ಕಾರಕ್ಕೆ "ಯಸ್ಯೇತಿ ಚ" ಎಂಬುದರಿಂದ, ಲೋಪ ಬಂದು ಕಾಕ್+ಅ=ಕಾಕ ಎಂದಿರುತ್ತದೆ. 'ಸಮೂಹಾರ್ಥದಲ್ಲಿ' ಏಕವಚನವಾದ 'ಸು' ಪ್ರತ್ಯಯ ವನ್ನು ಸೇರಿಸಿದಾಗ ಕಾಕ+ಸು (ಸ್) ಎಂದಾಗಿ 'ಸು' ಗೆ 'ಅಮ್' ಆದೇಶ ಬಂದು ಕಾಕ+ಅಮ್ ಎಂದಿದ್ದಾಗ ಪೂರ್ವರೂಪ ಬಂದು ಕಾಕಮ್ ಎಂಬ ರೂಪವು ಸಿದ್ಧವಾಗುತ್ತದೆ.

**('ಅಣ್' ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ– 1050– ಭಿಕ್ಷಾದಿಭ್ಯೋಽಣ್ ( 4–2–38)**

ವೃತ್ತಿ– ಭಿಕ್ಷಾಣಾಂ ಸಮೂಹಃ॥ ಭೈಕ್ಷಂ।

ಗರ್ಭಿಣೀನಾಂ ಸಮೂಹಃ॥ ಗಾರ್ಭಿಣಮ್। ಇಹ – ವಾರ್ತಿಕಂ "ಭಸ್ಯಾ ಢೇ ತದ್ಧಿತೇ" ಇತಿ ಪೂರ್ವವದ್ಭಾವೇ ಕೃತೇ

ಪ.ಛೇ– ಭಿಕ್ಷಾದಿಭ್ಯಃ, ಅಣ್।

ಅ.ವೃ– "ತಸ್ಯ ಸಮೂಹಃ' ಎಂಬ ಸೂತ್ರವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", ಜ್ಯಾಪ್ ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ"

ಎಂಬ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ- ಷಷ್ಠ್ಯಂತವಾದ ಸಾಮರ್ಥ್ಯವುಳ್ಳ ಭಿಕ್ಷಾದಿ ಗಣದಲ್ಲಿ ಪಠಿತವಾದ ಪ್ರಾತಿಪದಿಕಗಳ ಮೇಲೆ 'ಅದರ ಸಮೂಹ' ಎಂಬ ಅರ್ಥದಲ್ಲಿ 'ಅಣ್' ಎಂಬ ತದ್ಧಿತ ಪ್ರತ್ಯಯವು ಬರುತ್ತದೆ.

ವಿಶೇಷ - ಇನ್ನು ಮುಂದೆ ಬರುವ "ಅಚಿತ್ತ-ಹಸ್ತಿ-ಧೇನೋಷ್ಠಕ್" ಎಂಬ ಸೂತ್ರದಿಂದ ಬರಬೇಕಾದ ಟಕ್ ಪ್ರತ್ಯಯವನ್ನು ಬಾಧಿಸಿ ಪ್ರಕೃತ ಸೂತ್ರದಿಂದ 'ಅಣ್' ಪ್ರತ್ಯಯವು ವಿಧಿಸಲಾಗಿದೆ.

ಉದಾಃ 1) ಭೈಕ್ಷಂ - (ಭಿಕ್ಷೆಗಳ ಸಮೂಹಃ/ಸಾಧು-ಸಂತರ ಭಿಕ್ಷೆಗಳ ಸಮೂಹ) -'ಭಿಕ್ಷಾಣಾಂ ಸಮೂಹಃ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಭಿಕ್ಷಾ+ಆಮ್ ಎಂಬುದು ಅಲೌಕಿಕ ವಿಗ್ರಹ ವಾಕ್ಯ. "ಅಚಿತ್ತ-ಹಸ್ತಿ-ಧೇನೋಷ್ಠಕ್" ಎಂಬ ಸೂತ್ರದಿಂದ 'ಟಕ್' ಪ್ರತ್ಯಯವು ಬರಬೇಕಾಗಿತ್ತು. ಅದನ್ನು ಬಾಧಿಸಿ ಪ್ರಕೃತ ಸೂತ್ರದಿಂದ 'ಅಣ್' ಪ್ರತ್ಯಯವು ಬಂದು ಭಿಕ್ಷಾ+ಅ ಎಂದಿದ್ದಾಗ, ಈ ತದ್ಧಿತಾಂತ ಪ್ರತ್ಯಯಕ್ಕೆ ಪ್ರಾತಿಪದಿಕ ಸಂಜ್ಞೆ ಬಂದು 'ಸುಪ್' ಸೇರಿಸಿ ಭಿಕ್ಷಾ+ಅ+ಸು ಎಂದಿದ್ದಾಗ, "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ ಸುಪ್ ಗೆ ಲೋಪ ಬಂದು ಭಿಕ್ಷಾ+ಅ ಎಂದಿರುತ್ತದೆ. ಇದು ಣಿತ್ ಆಗಿರುವುದರಿಂದ 'ಭಿ' ನಲ್ಲಿರುವ 'ಇ' ಕಾರಕ್ಕೆ ವೃದ್ಧಿ ಬಂದು ಭೈಕ್ಷಾ+ಅ ಎಂದಿದ್ದಾಗ 'ಭೈಕ್ಷಾ' ಎಂಬಲ್ಲಿರುವ 'ಆ' ಕಾರಕ್ಕೆ "ಯಸ್ಯೇತಿ ಚ" ಎಂಬುದರಿಂದ ಲೋಪ ಬಂದು, ಭೈಕ್ಷ್+ಅ ಎಂದಿದ್ದಾಗ, ಇದಕ್ಕೆ ಸುಪ್ ಸೇರಿಸಿದಾಗ 'ಭೈಕ್ಷಂ' ಎಂದಾಗುತ್ತದೆ.

**(ಪ್ರಕೃತಿಭಾವ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ- 1051- ಇನಣ್ಯನಪತ್ಯೇ ( 6-4-164)**

ವೃತ್ತಿ-ಅನಪತ್ಯೇ ಅಣೀ ಪರೇ ಇನ್ ಪ್ರಕೃತ್ಯಾ ಸ್ಯಾತ್। ತೇನ (919) "ನಸ್ತದ್ಧಿತೇ" ಇತಿ ಟಿಲೋಪಃ ನ, ಯುವತೀನಾಂ ಸಮೂಹೋ -ಯೌವನಮ್।

ಪ.ಛೇ- ಇನ್, ಅಣಿ, ಅನಪತ್ಯೇ।

ಅ.ವೃ- 'ಪ್ರಕೃತ್ಯೈಕಾಚ್' ಎಂಬ ಸೂತ್ರದಿಂದ 'ಪ್ರಕೃತ್ಯಾ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ- ಅಪತ್ಯಾರ್ಥಕ್ಕಿಂತ ಭಿನ್ನವಾದ ಅರ್ಥದಲ್ಲಿ ವಿಧಿಸಲಾದ 'ಅಣ್' ಪ್ರತ್ಯಯವು ಪರದಲ್ಲಿದ್ದಾಗ 'ಇನ್' ಗೆ ಪ್ರಕೃತಿ ಭಾವ ಬರುತ್ತದೆ.

ಉದಾ- ಗಾರ್ಭಿಣಂ - (ಗರ್ಭಿಣಿ ಸ್ತ್ರೀಯರ ಸಮೂಹ-ಗರ್ಭಿಣೀನಾಂ ಸಮೂಹಃ) - ಗರ್ಭಿಣೀ+ಆಮ್ ಎಂಬುದು ಅಲೌಕಿಕ ವಿಗ್ರಹ. 'ಗರ್ಭಿಣೀನಾಂ ಸಮೂಹಃ' ಎಂಬುದು ಅಲೌಕಿಕ ವಿಗ್ರಹ ವಾಕ್ಯ "ಅನುದಾತ್ತೇರಞ್" ಎಂಬ ಸೂತ್ರದಿಂದ 'ಅಞ್'ಪ್ರತ್ಯಯವು ಬರಬೇಕಾಗಿತ್ತು. ಅದನ್ನು ಭಾಧಿಸಿ "ಭಿಕ್ಷಾದಿಭ್ಯೋಽಣ್" ಎಂಬ ಸೂತ್ರದಿಂದ ಅಣ್ (ಅ) ಪ್ರತ್ಯಯವು ಬಂದು, ಗರ್ಭಿಣೀ+ಆಮ್+ಅ ಎಂದಾಗಿ ಅದು ಪ್ರಾತಿಪದಿಕಸಂಜ್ಞೆಯನ್ನು ಪಡೆದ ಮೇಲೆ, "ಸುಪೋಧಾತು ಪ್ರಾತಿಪದಿಕಯೋಃ"

ಎಂಬುದರಿಂದ ಆಮ್ ಎಂಬ ಪ್ರತ್ಯಯಕ್ಕೆ ಲೋಪ ಬಂದು ಗರ್ಭಿಣೀ+ಅ ಎಂದಿದ್ದಾಗ, "ಯಸ್ಯೇತಿ ಚ" ಎಂಬುದರಿಂದ 'ಈ' ಕಾರಕ್ಕೆ ಲೋಪ ಬರಬೇಕಾಗಿತ್ತು. ಆದರೆ "ಭಸ್ಯ ಢೇ ತದ್ಧಿತೇ" ಎಂಬ ವಾರ್ತಿಕದಿಂದ 'ಭ' ಸಂಜ್ಞಕ ಅಂಗಕ್ಕೆ ಪುಂವದ್ಭಾವ ಬರುವುದರಿಂದ ಸ್ತ್ರೀ ವಿವಕ್ಷೆಯಲ್ಲಿ "ನಸ್ ತದ್ಧಿತೇ" ಎಂಬ ಸೂತ್ರದಿಂದ 'ಟಿ(ಇಣ್‌ಗೆ)' ಗೆ ಲೋಪವು ಬರಬೇಕಾಗಿತ್ತು. ಆದರೆ ಪ್ರಕೃತ ಸೂತ್ರದಿಂದ ಪ್ರಕೃತಿ ಭಾವ ಬಂದು 'ಟಿ' ಗೆ ಲೋಪವಾಗದೇ, ಆದಿವೃದ್ಧಿ ಬಂದು ಗಾರ್ಭಿಣ್+ಅ=ಗಾರ್ಭಿಣ ಎಂದಿರುತ್ತದೆ. ಇದಕ್ಕೆ 'ಸುಪ್' ಪ್ರತ್ಯಯವನ್ನು ಸೇರಿಸಿದಾಗ ನಪುಂಸಕ ಲಿಂಗದಲ್ಲಿ ಗಾರ್ಭಿಣಮ್ ಎಂದಾಗುತ್ತದೆ.

ಉದಾ– ಯೌವನಮ್– ( ಯುವತಿಯರ ಸಮೂಹ )–ಯುವತಿಯರ ಸಮೂಹ' ಎಂಬ ಅರ್ಥದಲ್ಲಿ ಹಿಂದಿನ ಸೂತ್ರದಿಂದ ಷಷ್ಠ್ಯಂತ 'ಯುವತಿ' ಶಬ್ದದ ನಂತರ ಅಣ್ ಪ್ರತ್ಯಯವು ಬರುತ್ತದೆ. ಯುವತಿ ಶಬ್ದವು 'ಯುವನ್' ಶಬ್ದಕ್ಕೆ "ಯೂನಸ್ತಿಃ" ಎಂಬ ಸೂತ್ರದಿಂದ 'ತಿ' ಎಂಬ ಸ್ತ್ರೀ ಪ್ರತ್ಯಯವನ್ನು ಸೇರಿಸುವುದರಿಂದ 'ಯುವತಿ' ಎಂಬ ರೂಪ ಬರುತ್ತದೆ. ಯುವತಿ+ಅ ಎಂದಿದ್ದಾಗ 'ಭಸ್ಯ ಡೇ ತದ್ಧಿತೇ' ಎಂಬ ವಾರ್ತಿಕದಿಂದ ಪುಂವದ್ಭಾವ ಬಂದು ಯುವನ್+ಅ ಎಂದಾಗುತ್ತದೆ."ನಸ್ತದ್ಧಿತೇ" ಎಂಬ ಸೂತ್ರದಿಂದ ಅನ್ (ಟಿ) ಗೆ ಲೋಪ ಬರಬೇಕಾಗಿತ್ತು. ಆದರೆ "ಅನ್" ಎಂಬ ಸೂತ್ರದಿಂದ 'ಅನ್' ಗೆ ಪ್ರಕೃತಿ ಭಾವ ಬರುತ್ತದೆ. ಆದಿ ವೃದ್ಧಿಯಿಂದ ಪ್ರಥಮೈಕ ವಚನ ನಪುಂಸಕಲಿಂಗದಲ್ಲಿ ಯೌವನಮ್ ಎಂಬ ರೂಪವು ಸಿದ್ಧಿಸುತ್ತದೆ.

**(ತಲ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ– 1052– ಗ್ರಾಮ – ಜನ – ಬಂಧುಭ್ಯಸ್ತಲ್ ( 4–2–43)**

ವೃತ್ತಿ– ತಲಂತಂ ಸ್ತ್ರಿಯಾಮ್। ಗ್ರಾಮತಾ, ಜನತಾ, ಬಂಧುತಾ। ( ತಲಂತಂ ಸ್ತ್ರಿಯಾವ್ ಎಂಬುದು ಲಿಂಗಾನುಶಾಸನ ತಲ್ ಪ್ರತ್ಯಯಾಂತ ಶಬ್ದವು ಸ್ತ್ರೀಲಿಂಗದಲ್ಲಿರುತ್ತದೆ.

ಪ.ಛೇ– ಗ್ರಾಮ–ಜನ–ಬಂಧುಭ್ಯಃ , ತಲ್।

ಅ.ವೃ– "ತಸ್ಯ ಸಮೂಹಃ" ಎಂಬ ಸೂತ್ರವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", ಙ್ಯಾಪ್ ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಎಂಬ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ– ಗ್ರಾಮ, ಜನ ಮತ್ತು ಬಂಧು ಈ ಷಷ್ಠ್ಯಂತ ಪ್ರಾತಿಪದಿಕಗಳ ಮೇಲೆ ಸಮೂಹಾರ್ಥದಲ್ಲಿ 'ತಲ್' ಎಂಬ ಪ್ರತ್ಯಯವು ಬರುತ್ತದೆ. ಇದರಲ್ಲಿ 'ತ' ಮಾತ್ರ ಉಳಿಯುತ್ತದೆ. ಇದು ಲಿಂಗಾನುಶಾಸನ ಸೂತ್ರವಾಗಿದೆ.

ಉದಾ– ಗ್ರಾಮತಾ – 'ಗ್ರಾಮಾಣಾಂ ಸಮೂಹಃ' ಎಂಬ ಅರ್ಥದಲ್ಲಿ ಪ್ರಕೃತ ಸೂತ್ರದಿಂದ ತಲ್ ಪ್ರತ್ಯಯವನ್ನು ಸೇರಿಸಿ ಲಿಂಗಾನುಶಾಸನದ ಪ್ರಕಾರ 'ಗ್ರಾಮತಾ' ಎಂಬ ರೂಪವು ಸಿದ್ಧಿಯಾಗುತ್ತದೆ. ಇದೇ ರೀತಿಯಲ್ಲಿ 'ಜನಾನಾಂ ಸಮೂಹಃ'

ಜನತಾ, 'ಬಂಧೂನಾಂ ಸಮೂಹಃ' ಬಂಧುತಾ ಎಂಬ ರೂಪಗಳು ಸಿದ್ಧಿಸುತ್ತವೆ. ತಲ್ ಪ್ರತ್ಯವನ್ನು ವಿಧಿಸುವ ವಾರ್ತಿಕ

1) ವಾ॥ ಗಜಸಹಾಯಾಭ್ಯಾಂ ಚೇತಿ ವಕ್ತವ್ಯಂ।

ಉದಾ- 'ಗಜತಾ' 'ಸಹಾಯತಾ' -'ತಸ್ಯ ಸಮೂಹಃ' ಎಂಬರ್ಥದಲ್ಲಿ ಗಜ ಮತ್ತು ಸಹಾಯ ಶಬ್ದಗಳ ನಂತರವೂ ಸಮೂಹಾರ್ಥದಲ್ಲಿ ತಲ್ ಪ್ರತ್ಯಯವು ಬರುವುದು ಎಂದು ಹೇಳಬೇಕು. ಉದಾ- 'ಗಜಾನಾಂ ಸಮೂಹಃ'=ಗಜತಾ। 'ಸಹಾಯಾನಾಂ ಸಮೂಹಃ'=ಸಹಾಯತಾ।

ಉದಾ- ಗಜತಾ - ಗಜ+ಆಮ್ ಎಂಬಲ್ಲಿ ತಲ್ ಪ್ರತ್ಯಯವನ್ನು ಸೇರಿಸಿದಾಗ ಪ್ರಾತಿಪದಿಕಸಂಜ್ಞೆ ಬಂದು "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ 'ಸುಪ್' ಗೆ ಲೋಪ ಬಂದ ಮೇಲೆ 'ಸ್ತ್ರೀತ್ವ ವಿವಕ್ಷೆಯಲ್ಲಿ' ಟಾಪ್ (ಆ) ಪ್ರತ್ಯಯ ಬಂದು ಸವರ್ಣದೀರ್ಘವಾಗಿ ಸುಬಂತ ಮಾಡಿದ ಮೇಲೆ ಗನತಾ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ- 'ಸಹಾಯತಾ-ಸಹಾಯಾನಾಂ ಸಮೂಹಃ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಸಹಾಯ+ಆಮ್ ಎಂದಿದ್ದಾಗ, ಪ್ರಕೃತ ವಾರ್ತಿಕದಿಂದ 'ತಲ್' ಪ್ರತ್ಯಯವನ್ನು ಸೇರಿಸಿದ ಮೇಲೆ, ಹಿಂದಿನಂತೆ ಪ್ರಕ್ರಿಯೆ ನಡೆದು ಸಹಾಯತಾ ಎಂದು ರೂಪವು ಸಿದ್ಧವಾಗುತ್ತದೆ.

2) ವಾ॥ ಅಹ್ನಃ ಖಃ ಕ್ರತೌ। ಅಹೀನಃ।

ಯಜ್ಞ ವಿಷಯದಲ್ಲಿರುವ ಷಷ್ಟ್ಯಂತವಾದ ಅಹನ್ ಪ್ರಾತಿಪದಿಕದ ನಂತರ ಸಮೂಹಾರ್ಥದಲ್ಲಿ 'ಖ' ಪ್ರತ್ಯಯವು ಬರುತ್ತದೆ. 'ಖ'ದಲ್ಲಿ ಖ್+ಅ ಎಂದು ಎರಡಕ್ಷರಗಳಿವೆ. ಅದರಲ್ಲಿ 'ಖ್'ಗೆ "ಆಯನ್ ಏಯ್... ಪ್ರತ್ಯಯಾದೀನಾಂ" ಎಂಬ ಸೂತ್ರದಿಂದ 'ಈನ್' ಎಂಬ ಆದೇಶ ಬಂದು, ಈನ್+ಅ=ಈನ ಎಂದಾಗುತ್ತದೆ.

ಉದಾ- ಅಹೀನಃ -(ಯಜ್ಞದ ಕಾರ್ಯಗಳ ಸಮೂಹ) -ಅಹನ್+ಆಮ್ ಎಂಬಲ್ಲಿ ಪ್ರಕೃತ ವಾರ್ತಿಕದಿಂದ 'ಖ' ಪ್ರತ್ಯಯವು ಬಂದು ಅಹನ್+ಖ್+ಅ ಎಂದಿದ್ದಾಗ, 'ಖ್' ಕಾರಕ್ಕೆ 'ಈನ್' ಆದೇಶ ಬಂದು ಅಹನ್+ಈನ್+ಅ ಎಂದಾಗಿ ಪ್ರಾತಿಪದಿಕ ಸಂಜ್ಞೆ ಬಂದ ಮೇಲೆ ಸುಪ್‌ಗೆ ಲುಕ್ ಬಂದು ಅಹನ್+ಈನ ಎಂದಿರುತ್ತದೆ. "ಓಸ್ ತದ್ಧಿತೇ" ಎಂಬ ಸೂತ್ರದಿಂದ 'ಭ' ಸಂಜ್ಞೆಯುಳ್ಳ 'ಟಿ'ಗೆ ಲೋಪ ಬಂದು, ಅಹ್+ಈನ=ಅಹೀನ ಎಂದಾಗುತ್ತದೆ. ಸುಬಂತ ಮಾಡಿದ ಮೇಲೆ ಅಹೀನಃ ಎಂಬ ರೂಪವು ಸಿದ್ಧವಾಗುತ್ತದೆ.

**(ಠಕ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ- 1053 - ಅಚಿತ್ತ - ಹಸ್ತಿ - ಧೇನೋಷ್ಠಕ್ ( 4-2-47)**

ಪ.ಛೇ- ಅಚಿತ್ತ-ಹಸ್ತಿ-ಧೇನೋಃ, ಠಕ್ ।

ಅ.ವೃ- "ತಸ್ಯ ಸಮೂಹಃ" ಎಂಬ ಸೂತ್ರವು ಅನುವೃತ್ತವಾಗುತ್ತದೆ. "ಪ್ರತ್ಯಯಃ",

"ಪರಶ್ಚ", ಙ್ಯಾಪ್ ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಎಂಬ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ– ಚಿತ್ತವಿಲ್ಲದ ಅಂದರೆ ಪ್ರಾಣಿ–ವಾಚಕವಲ್ಲದ ಷಷ್ಠ್ಯಂತ ಪ್ರಾತಿಪದಿಕದ ಜೊತೆಗೆ ಹಾಗೂ ಹಸ್ತಿನ್ ಮತ್ತು ಧೇನು ಈ ಪ್ರಾತಿಪದಿಕಗಳ ನಂತರ, 'ಅದರ ಸಮೂಹ' ಎಂಬರ್ಥದಲ್ಲಿ ಠಕ್ ಪ್ರತ್ಯಯವು ಬರುತ್ತದೆ. ಠಕ್ ನಲ್ಲಿ 'ಠ' ಕಾರ ಮಾತ್ರ ಉಳಿಯುತ್ತದೆ. "ಠಸ್ಯೇಕಃ" ಎಂಬ ಸೂತ್ರದಿಂದ 'ಇಕ' ಆದೇಶವು ಬರುತ್ತದೆ. ಕೆಲವು ಸ್ಥಳಗಳಲ್ಲಿ ಮುಂಬರುವ 'ಕ' ಆದೇಶವು ಬರುತ್ತದೆ.

**(ಕ– ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ – 1054– ಇಸುಸುಕ್ತಾನ್ತಾತ್ ಕಃ। (7–3–51)**

ವೃತ್ತಿ–ಇಸ್–ಉಸ್–ಉಕ್–ತಾನ್ತಾತ್ ಪರಸ್ಯ ಠಸ್ಯ ಕಃ। ಸಾಕ್ತುಕಮ್। ಹಸ್ತಿಕಮ್। ಧೈನುಕಮ್।

ಪ. ಛೇ– ಇಸ್–ಉಸ್–ಉಕ್–ತಾನ್ತಾತ್–ಪರಸ್ಯ, ಠಸ್ಯ, ಕಃ।

ಅ.ವೃ– 'ಅಂಗಸ್ಯ' ಎಂಬುದು ಅಧಿಕಾರ ಸೂತ್ರವಾಗಿದೆ. "ಠಸ್ಯೇಕಃ" ಎಂಬ ಸೂತ್ರದಿಂದ ಠಸ್ಯ ಎಂಬುದು ಅನುವೃತ್ತವಾಗುತ್ತದೆ.

ಅರ್ಥ– ಇಸ್, ಉಸ್, ಉಕ್ ಮತ್ತು ತ ಅಂತವಾಗುಳ್ಳ ಅಂಗಗಳ ನಂತರ 'ಠ' ದ ಸ್ಥಾನದಲ್ಲಿ 'ಕ' ಆದೇಶವು ಬರುತ್ತದೆ.

ಉದಾ–1. ಸಾಕ್ತುಕಮ್– 'ಸಕ್ತೂನಾಂ ಸಮೂಹಃ' ಎಂಬರ್ಥದಲ್ಲಿ ಸಕ್ತು ಶಬ್ದವು ಅಚೇತನವಾಗಿರುವುದರಿಂದ ಪೂರ್ವ ಸೂತ್ರದಿಂದ 'ಠಕ್' (ಠ) ಪ್ರತ್ಯಯವು ಬರುತ್ತದೆ. 'ಠ' ಪ್ರತ್ಯಯಕ್ಕೆ "ಠಸ್ಯೇಕಃ" ಎಂಬುದರಿಂದ 'ಇಕ' ಎಂಬ ಆದೇಶವು ಬರುತ್ತದೆ. "ನಸ್ತದ್ಧಿತೇ" ಎಂಬ ಸೂತ್ರದಿಂದ 'ಇನ್'ಗೆ ಲೋಪ ಬರುತ್ತದೆ. ಆದಿ ವೃದ್ಧಿ ಬಂದು ಸಾಕ್ತುಕಮ್ ರೂಪವು ಸಿದ್ಧವಾಗುತ್ತದೆ.

ಉದಾ– 2– ಧೈನುಕಮ್– 'ಧೇನೂನಾಂ ಸಮೂಹಃ' ಎಂಬ ಅರ್ಥದಲ್ಲಿ ಹಿಂದಿನ ಪ್ರಕ್ರಿಯೆಯಂತೆ ಆದಿ ವೃಧ್ಯಾದಿಗಳಾಗಿ ಧೈನುಕಮ್ ಎಂಬ ರೂಪವು ಸಿದ್ಧವಾಗುತ್ತದೆ.

**(ಅಣ್ ಮೊದಲಾದ ಪ್ರತ್ಯಯಗಳನ್ನು ವಿಧಿಸುವ ಸೂತ್ರ)**

**ಸೂತ್ರ– 1055– ತದಧೀತೇ ತದ್‌ವೇದ।( 4–2–59)**

ಪ.ಛೇ– ತತ್, ಅಧೀತೇ, ತತ್, ವೇದ।

ಅ.ವೃ– "ಪ್ರಾಗ್ದೀವ್ಯತೋಽಣ್" ಎಂಬ ಸೂತ್ರದಿಂದ 'ಅಣ್' ಎಂಬ ಪದವು ಅನುವೃತ್ತವಾಗಿದೆ."ತದ್ಧಿತಾಃ" ಮೊದಲಾದವುಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ– 'ಅದನ್ನು ಅಧ್ಯಯನ ಮಾಡುತ್ತಿದ್ದಾನೆ' ಅಥವಾ 'ಅದನ್ನು ತಿಳಿದುಕೊಂಡಿದ್ದಾನೆ' ಎಂಬ ಅರ್ಥಗಳಲ್ಲಿ ಸಮರ್ಥವಾದ ದ್ವಿತೀಯಾಂತ ಪದಗಳ

ಜೊತೆಗೆ ಅನ್ ಮೊದಲಾದ ಪ್ರತ್ಯಯಗಳು ಬರುತ್ತವೆ. ಗುರುಮುಖವಾಗಿ ಪುಸ್ತಕ ಹಿಡಿದು ಅರ್ಥಗ್ರಹಣ ಮಾಡುವುದಕ್ಕೆ ಅಧ್ಯಯನ ಎಂದು ಹೆಸರು. ಬರಿಯ ಅರ್ಥವನ್ನು ತಿಳಿದುಕೊಳ್ಳುವುದಕ್ಕೆ 'ವೇದನ' ಎಂದು ಹೆಸರು. 'ವ್ಯಾಕರಣಂ ಅಧೀತೇ ವೇದ ವಾ' ಎಂಬರ್ಥದಲ್ಲಿ ದ್ವಿತೀಯಾಂತ ವ್ಯಾಕರಣ ಶಬ್ದದ ನಂತರ ಪ್ರಕೃತ ಸೂತ್ರದಿಂದ 'ಅಣ್' ಪ್ರತ್ಯಯವು ಬರುತ್ತದೆ. ವ್ಯಾಕರಣ+ಅ ಎಂದಿದ್ದಾಗ ಆದಿವೃದ್ಧಿ ಬರಬೇಕಾಗಿದ್ದಾಗ-

**('ಐಚ್' ವಿಧಾಯಕ ಮತ್ತು ವೃದ್ಧಿ ನಿಷೇಧಕ ಸೂತ್ರ)**

**ಸೂತ್ರ- 1056- ನ ಯ್ವಾಭ್ಯಾಂ ಪದಾಂತಾಭ್ಯಾಂ ಪೂರ್ವೌ ತು ತಾಭ್ಯಾಮೈಚ್ (7-3-3 )**

ವೃತ್ತಿ- ಪದಾಂತಾಭ್ಯಾಂ 'ಯ' ಕಾರ 'ವ' ಕಾರಾಭ್ಯಾಂ ಪರಸ್ಯ ನ ವೃದ್ಧಿಃ ತುತಾಭ್ಯಾಂ ಪೂರ್ವೌ ಕ್ರಮಾತ್ ಐಚೌ ಆಗಮೌ ಸ್ತಃ। ವ್ಯಾಕರಣಮ್ ಅಧೀತೇ ವೇದ ವಾ ವೈಯಾಕರಣಃ।

ಪ.ಛೇ- ನ, ಯ್ - ವಾಭ್ಯಾಂ, ಪದಾಂತಾಭ್ಯಾಂ, ಪೂರ್ವೌ, ತು ತಾಭ್ಯಾಂ ಐಚ್।

ಅರ್ಥ- ಪದಾಂತದಲ್ಲಿರುವ 'ಯ್' ಅಥವಾ 'ವ್' ಕಾರಗಳ ನಂತರ ಪರದಲ್ಲಿರುವ ವರ್ಣಕ್ಕೆ ವೃದ್ಧಿ ಬರುವುದಿಲ್ಲ. ಆದರೆ ಆ 'ಯ್' ಕಾರ ಮತ್ತು 'ವ್' ಕಾರಗಳಿಗೆ ಪೂರ್ವದಲ್ಲಿ ಕ್ರಮವಾಗಿ 'ಐ' ಕಾರ (ಯ್ ಕಾರಕ್ಕೆ ಪೂರ್ವದಲ್ಲಿ) ಮತ್ತು 'ಔ' ಕಾರಗಳು (ವ್ ಕಾರಕ್ಕೆ ಪೂರ್ವದಲ್ಲಿ) ಆಗಮಗಳಾಗಿ ಬರುತ್ತವೆ.

'ವ್ಯಾಕರಣ' ಎಂಬ ಶಬ್ದದಲ್ಲಿ ವಿ+ಆಕರಣ ಎಂದಿದ್ದಾಗ (ವ್+ಯ್+ಆಕರಣ) 'ವಿ' ಎಂಬ ಉಪಸರ್ಗದಲ್ಲಿ ಇರುವ 'ಇ' ಕಾರಕ್ಕೆ "ಇಕೋಯಣಚಿ" ಎಂಬ ಸೂತ್ರದಿಂದ ಯಣಾದೇಶದಿಂದ (ಯ್) ಕಾರವು ಬರುತ್ತದೆ. 'ಇ' ಕಾರವು ಪದಾಂತ್ಯವಾಗಿರುವುದರಿಂದ ಅದರ ಸ್ಥಾನದಲ್ಲಿ ಬರುವ 'ಯ್' ಕಾರವು ಪದಾಂತ್ಯವೇ ಆಗಿರುತ್ತದೆ. ಆದುದರಿಂದ ಪ್ರಕೃತ ಸೂತ್ರದಿಂದ ಆಕರಣ ಎಂಬಲ್ಲಿರುವ ಆದಿ ಆಕಾರಕ್ಕೆ ಕಾರಕ್ಕೆ ವೃದ್ಧಿ ನಿಷೇಧವಾಗಿದೆ. 'ಯ್' ಕಾರದ ಪೂರ್ವದಲ್ಲಿ, ಐಕಾರ ಆಗಮಬಂದು, ವೈಯಾಕರಣ+ಅ ಎಂದಿದ್ದಾಗ ಅಂತ್ಯ 'ಅ' ಕಾರ ಲೋಪದಿಂದ ವೈಯಾಕರಣ ಎಂದಾಗಿ ರುತ್ವ-ವಿಸರ್ಗಗಳಿಂದ ವೈಯಾಕರಣಃ ಎಂಬ ರೂಪವು ಸಿದ್ಧವಾಗುತ್ತದೆ.

ವಿಶೇಷ:- ಇಲ್ಲಿ ವ್‌ಕಾರದ ಪೂರ್ವದಲ್ಲಿ ಔಕಾರ ಬರುವ ಉದಾಹರಣೆ ಕೊಡಲಿಲ್ಲ.

**(ವುನ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ- 1057- ಕ್ರಮಾದಿಭ್ಯೋ ವುನ್ ( 4-2-61)**

ಕ್ರಮಕಃ। ಪದಕಃ। ಶಿಕ್ಷಕಃ। ಮೀಮಾಂಸಕಃ।

**॥ಇತಿ (46) ರಕ್ತಾದ್ಯರ್ಥಕಾಃ॥**

ಪ. ಛೇ- ಕ್ರಮಾದಿಭ್ಯಃ ಉನ್।

ಅರ್ಥ– ತದಧೀತೇ, ತದ್ವೇದ ಎಂಬರ್ಥದಲ್ಲಿ ಕ್ರಮಾದಿಗಳ ನಂತರ 'ಉನ್' ಪ್ರತ್ಯಯವು ಬಲರುತ್ತದೆ.

ಉದಾ– ಕ್ರಮಕಃ ( ಕ್ರಮಂ ಅಧೀತೇ ವೇದ ವಾ) –ಪ್ರಕೃತ ಸೂತ್ರದಿಂದ ದ್ವಿತೀಯಾಂತ 'ಕ್ರಮ' ಶಬ್ದದ ನಂತರ 'ಉನ್(ಉ)' ಪ್ರತ್ಯಯವು ಬರುತ್ತದೆ. "ಯುವೋರನಾಕೌ" ಎಂಬ ಸೂತ್ರದಿಂದ 'ವು' ಎಂಬುದಕ್ಕೆ 'ಅಕ' ಎಂಬ ಆದೇಶವು ಬರುತ್ತದೆ. "ಯಸ್ಯೇತಿ ಚ" ಎಂಬುದರಿಂದ 'ಅ' ಕಾರಕ್ಕೆ ಲೋಪವು ಬಂದು ಕ್ರಮಕಃ ಎಂಬ ಸುಬಂತ ರೂಪವು ಸಿದ್ಧವಾಗುತ್ತದೆ.

ಇದೇ ರೀತಿಯಲ್ಲಿ ಪದಕಃ ( ಪದಂ ಅಧೀತೇ ವೇತ್ತಿ ವಾ ) ಎಂಬ ಪದವು ಸಿದ್ಧಿಸುತ್ತದೆ.

'ಶಿಕ್ಷಾಂ ಅಧೀತೇ ವೇತ್ತಿ ವಾ' ಎಂಬರ್ಥದಲ್ಲಿ ಶಿಕ್ಷಕಃ ಎಂಬ ಶಬ್ದವು 'ಮೀಮಾಂಸಾಂ ಅಧೀತೇ ವೇತ್ತಿ ವಾ' ಎಂಬ ಅರ್ಥದಲ್ಲಿ ಮೀಮಾಂಸಕಃ ಎಂಬುವುಗಳು ಸಿದ್ಧವಾಗುತ್ತವೆ.

**ರಕ್ತಾದ್ಯರ್ಥಕ–ಪ್ರಕರಣವು (46) ಮುಗಿಯಿತು.**

# ಪ್ರಕರಣ-47: ಚಾತುರರ್ಥಿಕಾಃ

(ಸೂ. ಸಂ. 1058-1069)

(ಅದರಲ್ಲಿದೆ ಎಂಬ ಅರ್ಥದಲ್ಲಿ ಅಣ್ ಹೇಳುವ ಸೂತ್ರ)

**ಸೂತ್ರ-1057-ತದಸ್ಮಿನ್ನಸ್ತೀತಿ ದೇಶೇ ತನ್ನಾಮ್ನಿ । 4-2-67।**

ವೃತ್ತಿ-ಉದುಮ್ಬರಾಃ ಸಂತ್ಯಸ್ಮಿನ್ದೇಶೇ ಔದುಂಬರೋ ದೇಶಃ ॥

ಪ.ಚ್ಛೇ-ತತ್,ಅಸ್ಮಿನ್, ಅಸ್ತಿ, ಇತಿ, ದೇಶೇ, ತನ್ನಾಮ್ನಿ।

ಅ.ವೃ-"ಪ್ರಾಗ್ದೀವ್ಯತೋಽಣ್" ಎಂಬ ಸೂತ್ರದಿಂದ ಅಣ್ ಎಂಬ ಪದವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್ ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಎಂಬ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ-'ಅದು ಅದರಲ್ಲಿ ಇದೆ' ಎಂಬ ಅರ್ಥದಲ್ಲಿ ಪ್ರತ್ಯಯಗಳನ್ನು ಸೇರಿಸಿದಾಗ ಬರುವ ಪದವು 'ದೇಶದ ಹೆಸರಾದಾಗ' ಸಮರ್ಥವಾದ ಪ್ರಥಮಾಂತ ಪದದ ನಂತರ ಅಣ್ ಮೊದಲಾದ ಪ್ರತ್ಯಯಗಳು ಬರುವವು.

ವಿಶೇಷ-ಈ ಪ್ರಕರಣಕ್ಕೆ ಚಾತುರರ್ಥಿಕಾಃ ಎಂದು ಹೆಸರು ಕಾರಣ. ಈ ಪ್ರಕರಣದಲ್ಲಿ ನಾಲ್ಕು ಅರ್ಥಗಳಲ್ಲಿ ಬರುವ ಪ್ರತ್ಯಯಗಳನ್ನು ವಿವರಿಸಲಾಗಿದೆ. 1. ಅದು ಅದರಲ್ಲಿ ಇದೆ. 2. ಅದರಿಂದ ತಯಾರಿಸಲಾಗಿವೆ. 3. ಅವುಗಳಿಗೆ ವಾಸವಾಗಿದೆ. 4. ಅದಕ್ಕಿಂತ ದೂರವಲ್ಲ. ಈ ನಾಲ್ಕು ಅರ್ಥಗಳಲ್ಲಿ ಪ್ರತ್ಯಯಗಳು ಇಲ್ಲಿ ವಿಧಿಸಲಾಗಿವೆ. ಈ ರೀತಿ ವಿಧಿಸಲಾದ ಪ್ರತ್ಯಯಗಳನ್ನು ಸೇರಿಸುವುದರಿಂದ ಉಂಟಾಗುವ ಪದಗಳು ದೇಶವಾಚಕಗಳಾಗಿರುತ್ತವೆ.

ಉದಾ:-ಔದುಂಬರಃ (ಈ ದೇಶದಲ್ಲಿ ಔದುಂಬರ ವೃಕ್ಷಗಳು ಇವೆ)-'ಉದುಂಬರಾಃ ಸನ್ತಿ ಅಸ್ಮಿನ್ ದೇಶೇ' ಎಂಬ ಅರ್ಥದಲ್ಲಿ ಪ್ರಥಮಾಂತವಾದ ಉದುಂಬರ ಶಬ್ದಕ್ಕಿಂತ ಪರದಲ್ಲಿ ಅಣ್ ಪ್ರತ್ಯಯವು ಬಂದು, ಉದುಂಬರ+ಜಸ್ ಎಂದಿದ್ದಾಗ, ಅದಕ್ಕೆ ಪ್ರಾಥಿಪದಿಕತ್ವ ಬಂದು ನಂತರ ಸುಪ್-ಪ್ರತ್ಯಯವು ಲೋಪವಾಗಿ ಆದಿ ವೃದ್ಧಿ ಬಂದು ಅಂತ್ಯ 'ಅ'ಕಾರ ಲೋಪದಿಂದ ಔದುಂಬರಃ (ದೇಶಃ) ಎಂದು ರೂಪವು ಸಿದ್ಧವಾಗುತ್ತದೆ.

(ನಿವೃತ್ತಾರ್ಥದಲ್ಲಿ ಅಣ್ ಪ್ರತ್ಯಯವನ್ನು ವಿಧಿಸುವ ಸೂತ್ರ)

**ಸೂತ್ರ-1059 ತೇನ ನಿರ್ವೃತ್ತಮ್ ।4-2-68।**

ವೃತ್ತಿ-ಕುಶಾಂಬೇನ ನಿರ್ವೃತ್ತಾ ನಗರೀ ಕೌಶಾಂಬೀ।

ಅ.ವೃ-"ಪ್ರಾಗ್ದೀವ್ಯತೋಽಣ್" ಎಂಬ ಸೂತ್ರದಿಂದ ಅಣ್ ಎಂಬ ಪದವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್ ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಎಂಬ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ-'ಅದರಿಂದ ನಿರ್ಮಿತವಾದದ್ದು' ಎಂಬ ಅರ್ಥದಲ್ಲಿ ಉಂಟಾಗುವ ಶಬ್ದವು

ದೇಶವಾಚಕವಾಗಿದ್ದರೆ, ಸಮರ್ಥವಾದ ತೃತೀಯಾಂತ ಶಬ್ದದ ನಂತರ ಅಣಾದಿ ಪ್ರತ್ಯಯಗಳು ಬರುವವು.

ಉದಾ–ಕೌಶಾಂಬೀ:–(ಕುಶಾಂಬ ಎಂಬ ರಾಜನಿಂದ ನಿರ್ಮಿತವಾದ ನಗರ) ಎಂಬ ಅರ್ಥದಲ್ಲಿ ತೃತೀಯಾಂತವಾದ ಕುಶಾಂಬ ಶಬ್ದದ ನಂತರ ಅಣ್ ಪ್ರತ್ಯಯವು ಬರುತ್ತದೆ. ಆದಿವೃದ್ಧಿ ಮೊದಲಾದವುಗಳಿಂದ ಕೌಶಾಂಬ ಎಂಬ ಪ್ರಾಥಿಪದಿಕವು ಸಿದ್ಧವಾಗುತ್ತದೆ. ಸ್ತ್ರೀಲಿಂಗದಲ್ಲಿ ಣಿತ್ವದ ಕಾರಣದಿಂದ 'ಙೀಪ್' ಪ್ರತ್ಯಯವು ಬಂದು ಕೌಶಾಂಬೀ ಎಂಬ ರೂಪವು ಸಿದ್ಧವಾಗುತ್ತದೆ.

**(ನಿವಾಸಾರ್ಥದಲ್ಲಿ ಅಣ್ ಪ್ರತ್ಯಯವನ್ನು ವಿಧಿಸುವ ಸೂತ್ರ.)**

**ಸೂತ್ರ–1060 ತಸ್ಯ ನಿವಾಸಃ।4–2–69।**

ವೃತ್ತಿ–ಶಿಬೀನಾಂ ನಿವಾಸೋ ದೇಶೇ ಶೈಬಃ।

ಅ.ವೃ–"{ಪ್ರಾಗ್ದೀವ್ಯತೋಽಣ್" ಎಂಬ ಸೂತ್ರದಿಂದ ಅಣ್ ಎಂಬ ಪದವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್ ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಎಂಬ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ–'ಅವನ ವಾಸ ಸ್ಥಳ" ಎಂಬ ಅರ್ಥದಲ್ಲಿ ಸಮರ್ಥಗಳಾದ ಷಷ್ಠ್ಯಂತ ಶಬ್ದದ ನಂತರ ಅಣಾದಿ ಪ್ರತ್ಯಯಗಳು ಬರುತ್ತವೆ.

ಉದಾ–ಶೈಬಃ–(ಶಿಬಿ ಕ್ಷತ್ರಿಯರ ವಾಸಸ್ಥಾನವಾದ ದೇಶವು) ಎಂಬ ಅರ್ಥದಲ್ಲಿ ಷಷ್ಠ್ಯಂತ ಶಬ್ದದ ನಂತರ ಅಣ್ ಪ್ರತ್ಯಯವು ಬಂದು ಆದಿವೃದ್ಧಿ ಮೊದಲಾದವುಗಳು ಆದ ಮೇಲೆ ಶೈಬಃ ಎಂಬ ರೂಪವು ಸಿದ್ಧವಾಗುತ್ತದೆ.

**(ಸಮೀಪದಲ್ಲಿರುವ ಎಂಬ ಅರ್ಥದಲ್ಲಿ ಅಣ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ–1061. ಅದೂರಭವಶ್ಚ ।4–2–70।**

ವೃತ್ತಿ–ವಿದಿಶಾಯಾ ಅದೂರಭವಂ ನಗರಂ ವೈದಿಶಮ್।

ಪ.ಚ್ಛೇ–ಅದೂರಭವಃ, ಚ।

ಅ.ವೃ–"ಪ್ರತ್ಯಯಃ", "ಪರಶ್ಚ", "ಙ್ಯಾಪ್ ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಎಂಬ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ–'ಅದರ ಸಮೀಪದಲ್ಲಿ' ಇರುವ ಎಂಬ ಅರ್ಥದಲ್ಲಿ ಸಮರ್ಥವಾದ ಷಷ್ಠ್ಯಂತ ಪದದ ನಂತರ ಅಣಾದಿ ಪ್ರತ್ಯಯಗಳು ಬರುವವು.

ಉದಾ–ವೈದಿಶಮ್:–(ವಿಧಿಶಾ ನಗರದ ಸಮೀಪದಲ್ಲಿರುವ)–'ವಿದಿಶಾಯಾ ಅದೂರಭವಂ ನಗರಂ' ಎಂಬ ಅರ್ಥದಲ್ಲಿ ಅಣ್ ಪ್ರತ್ಯಯವು ಬಂದು ಆದಿವೃದ್ಧ್ಯಾದಿಗಳಿಂದ ವೈದಿಶಮ್ ಎಂಬ ರೂಪವು ಸಿದ್ಧಿಸುತ್ತದೆ.

(ಜನಪದಾರ್ಥದಲ್ಲಿ ಲುಪ್ ವಿಧಿಸುವ ಸೂತ್ರ)

**ಸೂತ್ರ–1062. ಜನಪದೇ ಲುಪ್।4–2–81॥**

ವೃತ್ತಿ–ಜನಪದೇ ವಾಚ್ಯೇ ಚಾತುರರ್ಥಿಕಸ್ಯ ಲುಪ್।

ಅರ್ಥ–ಜನಪದ ಎಂಬ ಅರ್ಥವನ್ನು ಹೇಳುವಾಗ ಚಾತುರರ್ಥಿಕ ಪ್ರತ್ಯಯಕ್ಕೆ ಲುಪ್ ಬರುತ್ತದೆ.

(ಲುಪ್ ಇದ್ದಾಗ ಲಿಂಗವಚನ ನಿಯಾಮಕ ಸೂತ್ರ.)

**ಸೂತ್ರ–1063. ಲುಪಿ ಯುಕ್ತವದ್ವ್ಯಕ್ತಿವಚನೇ।1–2–51॥**

ವೃತ್ತಿ–ಲುಪಿ ಸತಿ ಪ್ರಕೃತಿವಲ್ಲಿಂಗವಚನೇ ಸ್ತಃ। ಪಂಚಾಲಾನಾಂ ನಿವಾಸೋ ಜನಪದಃ ಪಂಚಾಲಾಃ।ಕುರವಃ।ಅಂಗಾಃ। ವಂಗಾಃ । ಕಲಿಂಗಾಃ॥

ಅರ್ಥ–ಪ್ರತ್ಯಯವು ಲೋಪವಾದ ಮೇಲೆ ಲಿಂಗ ವಚನಗಳು ಪ್ರಕೃತಿ ಭೂತ ಪದಲಿಂಗ ವಚನಗಳಂತೆ ಇರುವುದು.

ಉದಾ–ಪಂಚಾಲಾಃ–(ಪಂಚಾಲವೆಂಬ ಕ್ಷತ್ರಿಯರಿಗೆ ವಾಸ ಸ್ಥಾನವಾಗಿರುವ ದೇಶವು)–'ಪಂಚಾಲಾನಾಮ್ ನಿವಾಸಃ' ಜನಪದಃ ಎಂಬ ಅರ್ಥದಲ್ಲಿ "ತಸ್ಯ ನಿವಾಸಃ" ಎಂಬ ಸೂತ್ರದಿಂದ ಬರುವ ಅಣ್ ಗೆ "ಜನಪದೇ ಲುಪ್" ಎಂಬ ಸೂತ್ರದಿಂದ ಲೊಪವು ಬರುತ್ತದೆ. ಈ ರಿತಿಯಾಗಿ ಉಂಟಾಗುವ ಪಂಚಾಲ ಶಬ್ದಕ್ಕೆ 'ಪಂಚಾಲ ಜನಪದ'ವೆಂದು ಅರ್ಥ. ಈ ಜನಪದ ರೂಪಾರ್ಥವು ಏಕವಚನದಲ್ಲಿ ಇದ್ದರೂ ಪ್ರಕೃತಿ ಭೂತವಾದ ಪಂಚಾಲ ಶಬ್ದವು (ಪಂಚಾಲಾನಾಮ್ ಎಂಬುದು) ಬಹುವಚನದಲ್ಲಿ ಇರುವುದರಿಂದ ಈ ಜನಪದವಾಚಕ ಶಬ್ದವು ಕೂಡಾ ಪ್ರಕೃತ ಸೂತ್ರವನ್ನು ಅನುಸರಿಸಿ ಪುಲ್ಲಿಂಗ ಬಹುವಚನಗಳಲ್ಲಿ ಪ್ರಯೋಗಿಸಲಾಗುವುದು ಹೀಗೆ 'ಕುರೂಣಾಂ ನಿವಾಸಃ ಜನಪದಃ' 'ಅಂಗಾನಾಮ್ ಜನಪದಃ ನಿವಾಸಃ' 'ವಂಗಾನಾಮ್ ಜನಪದಃ ನಿವಾಸಃ' 'ಕಲಿಂಗಾನಾಮ್ ನಿವಾಸಃ ಜನಪದಃ' ಇತ್ಯಾದಿ ಅರ್ಥಗಳಲ್ಲಿ ಕುರವಃ, ಅಙ್ಗಾಃ, ವಙ್ಗಾಃ, ಕಲಿಙ್ಗಾಃ ಎಂಬ ಶಬ್ದಗಳು ಸಿದ್ಧವಾಗುತ್ತವೆ.

(ವರಣಾದಿಗಳ ಪ್ರತ್ಯಯಕ್ಕೆ ಲುಪ್ ವಿಧಿಸುವ ಸೂತ್ರ)

**ಸೂತ್ರ–1064. ವರಣಾದಿಭ್ಯಶ್ಚ ।4–2–82।**

ವೃತಿ–ಅಜನಪದಾರ್ಥಃ ಆರಂಭಃ । ವರಣಾನಾಮದೂರಭವಂ ನಗರಂ ವರಣಾಃ।

ಪ.ಚ್ಛೇ–ವರಣಾದಿಭ್ಯಃ, ಚ।

ಅ.ವೃ–"ಜನಪದೇ ಲುಪ್" ಎಂಬ ಸೂತ್ರದಿಂದ ಲುಪ್ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ–ವರಣಾ ಮೊದಲಾದ ಶಬ್ದಗಳ ಪರದಲ್ಲಿ ಚಾತುರರ್ಥಿಕ ಪ್ರತ್ಯಯಗಳಿಗೆ ಲುಪ್ ಬರುತ್ತದೆ. ಜನಪದಕ್ಕಿಂತ ಭಿನ್ನವಾದ ಅರ್ಥದಲ್ಲಿ ಪ್ರತ್ಯಯದ

ಲೋಪಮಾಡುವದಕ್ಕಾಗಿ ಈ ಸೂತ್ರವು ರಚಿಸಲಾಗಿದೆ.

ಉದಾ–ವರಣಾಃ–(ವರಣಾ ನದಿಯ ಸಮೀಪದಲ್ಲಿರುವ ಪುರಾತನ ನಗರ) 'ವರಣಾನಾಮ್ ಅದೂರಭವಂ ನಗರಂ' ಎಂದು ವಿಗ್ರಹ ವಾಕ್ಯ. ವರಣಾ+ಆಮ್ ಎಂಬಲ್ಲಿ "ಅದೂರಭವಶ್ಚ" ಎಂಬ ಸೂತ್ರದಿಂದ ಅಣ್(ಅ) ಪ್ರತ್ಯಯವು ಬಂದು, ಪ್ರಾತಿಪದಿಕ ಸಂಜ್ಞೆಯನ್ನು ಹೊಂದಿದ ಮೇಲೆ "ಸುಪೋಧಾತು–ಪ್ರಾತಿಪದಕಯೋಃ" ಎಂಬ ಸೂತ್ರದಿಂದ ಸುಪ್ ಗೆ ಲುಕ್ ಬಂದು ಪ್ರಕೃತ ಸೂತ್ರದಿಂದ ಪ್ರತ್ಯಯಕ್ಕೆ ಲುಕ್ ಬಂದು "ಲುಪಿಯುಕ್ತವದ್ ವ್ಯಕ್ತಿವಚನೇ" ಎಂಬ ಸೂತ್ರದಿಂದ 'ಯುಕ್ತವದ್' ಭಾವಬಂದು ಪ್ರಕೃತಿಗೆ ಅನುಸಾರವಾಗಿಯೇ ಸ್ತ್ರೀಲಿಂಗ ಮತ್ತು ಬಹುವಚನ ಬಂದು ವರಣಾಃ ಎಂಬ ರೂಪವು ಸಿದ್ಧವಾಗುತ್ತದೆ.

**(ಚತುರರ್ಥದಲ್ಲಿ ಡ್ಮತುಪ್ ಪ್ರತ್ಯಯವನ್ನು ವಿಧಿಸುವ ಸೂತ್ರ.)**

**ಸೂತ್ರ–1065 ಕುಮುದ–ನಡ–ವೇತಸೇಭ್ಯೋ ಡ್ಮತುಪ್** ।4–2–87।

ಪ.ಚ್ಛೇ–ಕುಮುದನಡವೇತಸೇಭ್ಯಃ, ಡ್ಮತುಪ್।

ಅ.ವೃ–"ಪ್ರತ್ಯಯಃ", "ಪರಶ್ಚ", "ಙ್ಯಾಪ್ ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಎಂಬ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ–ಕುಮುದ, ನಡ ಮತ್ತು ವೇತಸ ಈ ಮೂರೂ ಸಮರ್ಥವಾದ ಸುಬಂತ–ಪ್ರಾತಿಪದಿಕಗಳ ನಂತರ ಚಾತುರರ್ಥಿಕ ಡ್ಮತುಪ್ ಪ್ರತ್ಯಯವು ಬರುತ್ತದೆ. ಇದರಲ್ಲಿ ಮತ್ ಮಾತ್ರ ಉಳಿಯುತ್ತದೆ. "ಟೇಃ" ಎಂಬ ಸೂತ್ರದಿಂದ 'ಟಿ'ಗೆ ಲೋಪ ಮಾಡುವದಕ್ಕಾಗಿ ಡಿತ್ಕರಣ ಮಾಡಲಾಗಿದೆ.

**(ಮತುಪಿನ ಮಕಾರಕ್ಕೆ ವತ್ವ ವಿಧಿಸುವ ಸೂತ್ರ.)**

**ಸೂತ್ರ–1066. ಝಯಃ** ।8–2–10।

ವೃತ್ತಿ–ಝಯಂತಾತ್ ಮತೋರ್ಮಸ್ಯ ವಃ । ಕುಮುದ್ವಾನ್ । ನಡ್ವಾನ್ ।

ಅ.ವ–ಮಾದುಪಧಾಯಾಶ್ಚ ಮತೋರ್ವೋ಼ಯವಾದಿಭ್ಯಃ ಎಂಬ ಸೂತ್ರದಿಂದ ಮತೋಃ ಮತ್ತು ವಃ ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ–ಝಯ್ ಪ್ರತ್ಯಾಹಾರ ವರ್ಣಕ್ಕಿಂತ ಪರದಲ್ಲಿರುವ ಮತುಪ್–ಪ್ರತ್ಯಯದ ಮಕಾರಕ್ಕೆ ವ್–ಕಾರವು ಆದೇಶವಾಗಿ ಬರುತ್ತದೆ.

ಉದಾ–ಕುಮುದ್ವಾನ್ (ಬಿಳಿಕಮಲಗಳಿರುವ ದೇಶ)–'ಕುಮುದಾಃ ಸನ್ತಿ ಅಸ್ಮಿನ್ ದೇಶೇ' ಎಂಬುದು ವಿಗ್ರಹ ವಾಕ್ಯ. "ಕುಮುದನಡವೇತಸೇಭ್ಯೋ ಡ್ಮತುಪ್" ಎಂಬ ಸೂತ್ರದಿಂದ ಡ್ಮತುಪ್ (ಮತ್) ಪ್ರತ್ಯಯವು ಬಂದು ಪ್ರಾತಿಪದಿಕವಾದ ಮೇಲೆ "ಸುಪೋಧಾತುಪ್ರಾತಿಪದಕಯೋಃ" ಎಂಬ ಸೂತ್ರದಿಂದ ಸುಪ್ ಗೆ ಲುಕ್ ಬಂದು ಕುಮುದ್+ಮತ್ ಎಂದಿರುತ್ತದೆ. ಡಿತ್ವ ಸಾಮರ್ಥ್ಯದಿಂದ ಭ–ಸಂಜ್ಞೆ ಬಾರದೇ ಇದ್ದರೂ "ಟೇಃ" ಎಂಬ ಸೂತ್ರದಿಂದ 'ಟಿ' ಸಂಜ್ಞೆಯುಳ್ಳ ದ್–ಕಾರದ ಪರದಲ್ಲಿರುವ 'ಅ'ಕಾರಕ್ಕೆ

ಲೋಪಬಂದು ಕುಮುದ್+ಮತ್ ಎಂದಿರುತ್ತದೆ. "ಝಯಃ" ಎಂಬ ಪ್ರಕೃತ ಸೂತ್ರದಿಂದ ದ್-ಕಾರದ ಪರದಲ್ಲಿರುವ ಮ್-ಕಾರಕ್ಕೆ ವ್-ಕಾರವು ಆದೇಶವಾಗಿ ಬಂದು ಕುಮುದ್+ವತ್=ಕುಮುದ್ವತ್ ಎಂದಿರುತ್ತದೆ. 'ಸು' ಪ್ರತ್ಯಯವನ್ನು ಸೇರಿಸಿದ ಮೇಲೆ ಉಪಧೆಗೆ ದೀರ್ಘ ಬಂದು ನುಮ್ ಆಗಮ ಬಂದು 'ಹಲ್‌ಙ್ಯಾದಿ' ಲೋಪ ಮಾಡಿ ತ್-ಕಾರಕ್ಕೆ "ಸಂಯೋಗಾನ್ತಸ್ಯ ಲೋಪಃ" ಎಂಬ ಸೂತ್ರದಿಂದ ಲೋಪ ಬಂದು ಕುಮುದ್ವಾನ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ-ನಡ್ವಾನ್ (ಶರವೆಂಬ ದರ್ಭಗಳು ಬೆಳೆದಿರುವ ದೇಶ)-'ನಡಾಃ ಸನ್ತಿ ಅಸ್ಮಿನ್ ದೇಶೇ' ಎಂಬುದು ಲೌಕಿಕ ವಿಗ್ರಹ ವಾಕ್ಯ ನಡ+ಜಸ್ ಎಂದಿದ್ದಾಗ, (ಅಲೌಕಿಕ ವಿಗ್ರಹ ವಾಕ್ಯ) "ಕುಮುದನಡವೇತಸೇಭ್ಯೋ ಡ್ಮತುಪ್" ಎಂಬ ಸೂತ್ರದಿಂದ ಡ್ಮತುಪ್ (ಮತ್) ಪ್ರತ್ಯಯು ಬಂದು, ಪ್ರಾತಿಪದಿಕವಾದ ಮೇಲೆ "ಸುಪೋಧಾತುಪ್ರಾತಿಪದಿಕಯೋಃ" ಎಂಬ ಸೂತ್ರದಿಂದ ಸುಪ್ ಗೆ ಲುಕ್ ಬಂದು, ನಡ+ಮತ್ ಎಂದಿರುತ್ತದೆ. ಡಿತ್ವಸಾಮರ್ಥ್ಯದಿಂದ ಭಸಂಜ್ಞೆ ಬಾರದಿದ್ದರೂ 'ಟೇಃ' ಎಂಬ ಸೂತ್ರದಿಂದ 'ಟಿ' ಸಂಜ್ಞೆಯುಳ್ಳ ಡ್-ಕಾರದ ನಂತರವಿರುವ 'ಅ'ಕ+ಣಾರಕ್ಕೆ ಲೋಪಬರುತ್ತದೆ. ಆಗ ನಡ್+ಮತ್ ಎಂದಿರುತ್ತದೆ. ಪ್ರಕೃತ ಸೂತ್ರದಿಂದ 'ದ'ಕಾರದ ಪರದಲ್ಲಿರುವ 'ಮತ್'ನಲ್ಲಿರುವ ಮ್-ಕಾರಕ್ಕೆ ವ್-ಕಾರವು ಆದೇಶವಾಗಿ ಬಂದು ನಡ್+ವ್+ಅ+ತ್=ನಡ್ವತ್ ಎಂದಿರುತ್ತದೆ. ಸುಬಂತ ಮಾಡಿದಮೇಲೆ, ಉಪಧೆಗೆ ದೀರ್ಘ ಬಂದು, ನುಮ್ ಆಗಮ ಬಂದು, ಹಲ್‌ಙ್ಯಾದಿ ಲೋಪವಾದ ಮೇಲೆ ತ್-ಕಾರಕ್ಕೆ "ಸಂಯೋಗಾನ್ತಸ್ಯ ಲೋಪಃ" ಎಂಬ ಸೂತ್ರದಿಂದ ಲೋಪಬಂದು ನಡ್ವಾನ್ ಎಂಬ ರೂಪವು ಸಿದ್ಧವಾಗುತ್ತದೆ.

**(ಮತುಪಿನ ಮಕಾರಕ್ಕೆ ವತ್ವ ವಿಧಿಸುವ ಸೂತ್ರ.)**

**ಸೂತ್ರ-1067. ಮಾದುಪಧಾಯಾಶ್ಚ ಮತೋರ್ವೋಽಯವಾದಿಭ್ಯಃ ।8-2-9।**

ವೃತ್ತಿ-ಮವರ್ಣ-ಅವರ್ಣಾನ್ತಾತ್-ಮವರ್ಣ-ಅವರ್ಣೋಪಧಾಚ್ಚ ಯವಾದಿ-ವರ್ಜಿತಾತ್ಪರಸ್ಯ ಮತಃ ಮಸ್ಯ ವಃ । ವೇತಸ್ವಾನ್॥

ಪ.ಚ್ಛೇ-ಮಾತ್, ಉಪಧಾಯಾಃ, ಚ, ಮತೋಃ, ಅಯವಾದಿಭ್ಯಃ।

ಅರ್ಥ-ಮಕಾರಂತ, ಅಕಾರಂತ ಹಾಗೂ ಮ್-ಕಾರವನ್ನು ಉಪಧೆಯಾಗಿವುಳ್ಳ ಮತ್ತು ಅಕಾರವನ್ನು ಉಪಧೆಯಾಗಿವುಳ್ಳ ಈ ನಾಲ್ಕು ಪ್ರಾತಿಪದಿಕಗಳ ನಂತರ ಇರುವ ಮ್-ಕಾರಕ್ಕೆ ವ್-ಕಾರವು ಆದೇಶವಾಗಿ ಬರುತ್ತದೆ-ಆದರೆ ಯವಾದಿಗಣಕ್ಕೆ ಸೇರಿದ ಶಬ್ದಗಳಲ್ಲಿ ಈ ಪ್ರಕ್ರಿಯೆಯು ಬರುವುದಿಲ್ಲ.

ಉದಾ-ವೇತಸ್ವಾನ್ (ಬಿದಿರುಗಳು ಬೆಳೆದಿರುವ ದೇಶ) 'ವೇತಸಾಃ ಸನ್ತಿ ಅಸ್ಮಿನ್ ದೇಶೇ' ಎಂದು ವಿಗ್ರಹ ವಾಕ್ಯ ವೇತಸ+ಜಸ್ ಎಂದಿದ್ದಾಗ ಕುಮುದನಡವೇತಸೇಭ್ಯೋ ಡ್ಮತುಪ್ ಎಂಬ ಸೂತ್ರದಿಂದ ಡ್ಮತುಪ್ (ಮತ್) ಪ್ರತ್ಯಯವು ಬಂದು, ಪ್ರಾತಿಪದಿಕವಾದ ಮೇಲೆ "ಸುಪೋಧಾತುಪ್ರಾತಿಪದಿಕಯೋಃ" ಎಂಬ ಸೂತ್ರದಿಂದ

ಸುಪ್ ಗೆ ಲುಕ್ ಬಂದು ವೇತಸ್+ಮತ್ ಎಂದಿರುತ್ತದೆ. ಡಿತ್ವ ಸಾಮರ್ಥ್ಯದಿಂದ ಭಸಂಜ್ಞೆ ಬಾರದಿದ್ದರೂ 'ಟೇಃ' ಸೂತ್ರದಿಂದ 'ಟಿ' ಸಂಜ್ಞೆಯುಳ್ಳ 'ಸ'ಕಾರೋತ್ತರವರ್ತಿ ಅ-ಕಾರಕ್ಕೆ ಲೋಪ ಬಂದು ವೇತಸ+ಮತ್ ಎಂದಿರುತ್ತದೆ. ಪ್ರಕೃತ ಸೂತ್ರದಿಂದ 'ಸ್'ಕಾರದ ಪರದಲ್ಲಿರುವ ಮತ್ ನ 'ಮ'ಕಾರಕ್ಕೆ ವ್-ಕಾರವು ಆದೇಶವಾಗಿ ಬರುತ್ತದೆ. ಆಗ ವೇತಸ್+ವತ್ ಎಂದಿರುತ್ತದೆ. ಸುಬಂತಮಾಡಿದ ಮೇಲೆ ಉಪಧೆಗೆ ದೀರ್ಘ ಬಂದು ನುಮ್ ಪ್ರತ್ಯಯ ಬಂದು ಹಲ್ಙ್ಯಾದಿ ಲೋಪವಾದ ಮೇಲೆ, ತ್-ಕಾರಕ್ಕೆ "ಸಂಯೋಗಾನ್ತಸ್ಯಲೋಪಃ" ಸೂತ್ರದಿಂದ ಲೋಪ ಬಂದು ವೇತಸ್ವಾನ್ ರೂಪವು ಸಿದ್ಧವಾಗುತ್ತದೆ.

**(ಚಾತುರರ್ಥಿಕದಲ್ಲಿ ಡ್ವಲಚ್ ಪ್ರತ್ಯಯವನ್ನು ವಿಧಿಸುವ ಸೂತ್ರ.)**

**ಸೂತ್ರ-1068. ನಡಶಾದಾಡ್ಡ್ವಲಚ್** ।4-2-88।

ವೃತ್ತಿ-ನಡ್ವಲಃ । ಶಾದ್ವಲಃ॥

ಪ.ಚ್ಛೇ-ನಡಶಾದಾತ್, ಡ್ವಲಚ್।

ಅ.ವೃ:-"ಪ್ರತ್ಯಯಃ", "ಪರಶ್ಚ", "ಙ್ಯಾಪ್ ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಎಂಬ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ:-ನಡ ಮತ್ತು ಶಾದ ಈ ಸಮರ್ಥ ಸುಬಂತ ಪ್ರಾತಿಪದಿಕಗಳ ನಂತರ ಚಾತುರರ್ಥಿಕ ಡ್ವಲಚ್ ಪ್ರತ್ಯಯವು ಬರುತ್ತದೆ. ಇದರಲ್ಲಿ ವಲ ಮಾತ್ರ ಉಳಿಯುತ್ತದೆ. ಇದು ಡಿತ್-ಆಗಿರುವುದರಿಂದ 'ಭ' ಸಂಜ್ಞೆಯುಳ್ಳ 'ಟಿ'ಗೆ ಲೋಪವು ಬರುತ್ತದೆ.

ಉದಾ-ನಡ್ವಲಃ (ಶರವೆಂಬ ದರ್ಭಗಳು ಬೆಳೆದಿರುವ ದೇಶ) 'ನಡಾಃ ಸನ್ತಿ ಅಸ್ಮಿನ್ ದೇಶೇ' ಎಂಬುದು ಲೌಕಿಕ ವಿಗ್ರಹ ವಾಕ್ಯ. ನಡ+ಜಸ್ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಡ್ವಲಚ್(ವಲ) ಪ್ರತ್ಯಯ ಬಂದು ಪ್ರಾತಿಪದಿಕವಾದಮೇಲೆ "ಸುಪೋಧಾತುಪ್ರಾಪದಿಕಯೋಃ" ಎಂಬ ಸೂತ್ರದಿಂದ ಸುಪ್-ಗೆ ಲುಕ್ ಬಂದು, ನಡ+ವಲ ಎಂದಿರುತ್ತದೆ. 'ಡಿತ್ವ'ವಾಗಿರುವುದರಿಂದ 'ಭ' ಸಂಜ್ಞೆ ಬರುವುದಿಲ್ಲ ಆದರೂ 'ಟೇಃ' ಎಂಬ ಸೂತ್ರದಿಂದ 'ಟಿ' ಸಂಜ್ಞೆಯುಳ್ಳ ಡ್-ಕಾರದ ನಂತರ ಇರುವ 'ಅ'ಕಾರಕ್ಕೆ 'ಲೋಪ'ಬರುತ್ತದೆ. ಆಗ ನಡ್+ವಲ ಎಂದಿರುತ್ತದೆ. ಸುಬಂತಮಾಡಿದ ಮೇಲೆ ನಡ್ವಲಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ-ಶಾದ್ವಲಃ (ಹುಲ್ಲುಗಾವಲು): 'ಶಾದಾಃ ಸನ್ತಿ ಅಸ್ಮಿನ್ ದೇಶೇ' ಎಂಬುದು ಲೌಖಿಕ ವಿಗ್ರಹವಾಕ್ಯ ಶಾದ+ಜಸ್ ಎಂಬ ಅಲೌಖಿಕ ವಿಗ್ರಹ ವಾಕ್ಯದಲ್ಲಿ ಪ್ರಕೃತ ಸೂತ್ರದಿಂದ ಡ್ವಲಚ್(ವಲ) ಪ್ರತ್ಯಯ ಬಂದು, ಪ್ರಾತಿಪದಿಕವಾದ ಮೇಲೆ "ಸುಪೋಧಾತುಪ್ರಾತಿಪದಿಕಯೋಃ" ಎಂಬ ಸೂತ್ರದಿಂದ ಸುಪ್-ಗೆ ಲುಕ್ ಬಂದು ಶದ+ವಲ ಎಂದಿರುತ್ತದೆ. ಡಿತ್ವವಿದ್ದರೂ 'ಭ' ಸಂಜ್ಞೆ ಬಾರದಿದ್ದರೂ 'ಟೇಃ' ಎಂಬ ಸೂತ್ರದಿಂದ 'ಟಿ' ಸಂಜ್ಞೆಯುಳ್ಳ 'ಡ' ಕಾರದ ನಂತರವಿರುವ 'ಅ'ಕಾರಕ್ಕೆ ಲೋಪ ಬಂದು, ಶಾದ್+ವಲ ಎಂದಿದ್ದಾಗ, ಸುಬಂತಮಾಡಿದ ಮೇಲೆ ಶಾದ್ವಲಃ ಎಂದು

ರೂಪವು ಸಿದ್ಧವಾಗುತ್ತದೆ.

**(ಚತುರರ್ಥದಲ್ಲಿ ವಲಚ್ ವಿಧಿಸುವ ಸೂತ್ರ.)**

**ಸೂತ್ರ-1069. ಶಿಖಾಯಾ ವಲಚ್ ।4-2-89। ಶಿಖಾವಲಃ॥**

ವೃತ್ತಿ-ಶಿಖಾವಲಃ॥

**ಇತಿ ಚಾತುರರ್ಥಿಕಾಃ ॥ 47 ॥**

ಪ.ಚ್ಛೇ:-ಶಿಖಾಯಾಃ, ವಲಚ್।

ಅ.ವೃ-"ಪ್ರತ್ಯಯಃ", "ಪರಶ್ಚ", "ಙ್ಯಾಪ್ ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಎಂಬ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ -'ಶಿಖಾ' ಎಂಬ ಸಮರ್ಥ ಪ್ರಾತಿಪದಿಕದ ನಂತರ ಚಾತುರರ್ಥಿಕ ವಲಚ್ (ವಲ) ಪ್ರತ್ಯಯವು ಬರುತ್ತದೆ.

ಉದಾ-ಶಿಖಾವಲಃ (ನವಿಲು) 'ಶಿಖಾಃ ಸನ್ತಿ ಅಸ್ಮಿನ್ ಸಃ' ಎಂಬುದು ಲೌಖಿಕ ವಿಗ್ರಹವಾಕ್ಯ ಶಿಖಾ+ಜಸ್ ಎಂಬ ಅಲೌಖಿಕ ವಿಗ್ರಹವಾಕ್ಯದಲ್ಲಿ ವಲಚ್(ವಲ) ಪ್ರತ್ಯಯವು ಬಂದು, ಪ್ರಾತಿಪದಿಕವಾದ ಮೇಲೆ "ಸುಪೋಧಾತುಪ್ರಾತಿಪದಿಕಯೋಃ" ಎಂಬ ಸೂತ್ರದಿಂದ ಸುಪ್-ಗೆ ಲುಕ್ ಬಂದು, ಶಿಖಾವಲ ಎಂದಾಗಿ ಸುಬಂತಮಾಡಿದಾಗ ಶಿಖಾವಲಃ ಎಂದು ರೂಪವು ಸಿದ್ಧವಾಗುತ್ತದೆ.

**ಚಾತುರರ್ಥಿಕ (47) ಪ್ರಕರಣವು ಮುಗಿಯಿತು.**

# ಪ್ರಕರಣ 48–ಶೈಷಿಕಾಃ

(ಸೂತ್ರ 1070–1111)

(ಶೇಷಾರ್ಥದಲ್ಲಿ ಅಣಾದಿಗಳನ್ನು ವಿಧಿಸುವ ಅಧಿಕಾರ ಸೂತ್ರ)

**ಸೂತ್ರ–1070. ಶೇಷೇ।4–2–92।**

ವೃತ್ತಿ–ಅಪತ್ಯಾದಿ ಚತುರರ್ಥ್ಯನ್ತಾತ್ ಅನ್ಯೋಽರ್ಥಃ ಶೇಷಃ, ತತ್ರ ಅಣಾದಯಃ ಸ್ಯುಃ। ಚಕ್ಷುಷಾ ಗೃಹ್ಯತೇ ಚಾಕ್ಷುಷಂ ರೂಪಮ್। ಶ್ರಾವಣಃ ಶಬ್ದಃ। ಔಪನಿಷದಃ ಪುರುಷಃ । ದೃಷದಿ ಪಿಷ್ಟಾಃ ದಾರ್ಷದಾಃ ಸಕ್ತವಃ। ಚತುರ್ಭಿಃಉಹ್ಯಂ ಚಾತುರಂ ಶಕಟಮ್ । ಚತುರ್ದಶ್ಯಾಂ ದೃಶ್ಯತೇ ಚಾತುರ್ದಶಂ ರಕ್ಷಃ । 'ತಸ್ಯ ವಿಕಾರಃ' ಇತ್ಯತಃ ಪ್ರಾಕ್ ಶೇಷಾಧಿಕಾರಃ ।

ಅ.ವೃ–"ಪ್ರತ್ಯಯಃ", "ಪರಶ್ಚ", "ಙ್ಯಾಪ್ ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಎಂಬ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ. ಪ್ರಾಗ್ದೀವ್ಯತೋಽಣ್ ಎಂಬ ಸೂತ್ರದಿಂದ ಅಣ್ ಎಂಬ ಪದವು ಅನುವೃತ್ತವಾಗುತ್ತದೆ.

ಸೂಚನೆ–ಶೇಷ ಶಬ್ದಕ್ಕೆ ಅಪತ್ಯಾರ್ಥದಿಂದ ಆರಂಭಿಸಿ ಚಾತುರರ್ಥಿಕ ವರೆಗಿನ ಅರ್ಥವನ್ನು ಬಿಟ್ಟು ಉಳಿದವು ಎಂದು ಅರ್ಥ.

ಅರ್ಥ–ಶೇಷ ಅರ್ಥದಲ್ಲಿ ಸಮರ್ಥವಾದ ಪ್ರಾತಿಪದಿಕದ ನಂತರ ಅಣ್ ಮೊದಲಾದ ಪ್ರತ್ಯಯಗಳು ಬರುತ್ತವೆ.

ಉದಾ–ಚಾಕ್ಷುಷಂ (ಕಣ್ಣಿನಿಂದ ಗ್ರಹಿಸಲ್ಪಡುವ (ರೂಪ)–'ಚಕ್ಷುಷಾ ಗೃಹ್ಯತೇ' ಎಂಬುದು ಲೌಖಿಕ ವಿಗ್ರಹವಾಕ್ಯ. ಚಕ್ಷುಷ್+ಟಾ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ಅಣ್ ಪ್ರತ್ಯಯ ಬರುತ್ತದೆ. ಪ್ರಾತಿಪದಿಕವಾದ ಮೇಲೆ "ಸುಪೋಧಾತುಪ್ರಾತಿಪದಿಕಯೋಃ" ಎಂಬ ಸೂತ್ರದಿಂದ 'ಸುಪ್' ಗೆ 'ಲುಕ್' ಬಂದ ಮೇಲೆ ಚಕ್ಷುಷ್+ಅ ಎಂದಿರುತ್ತದೆ. ಇದನ್ನು ಸುಬಂತ ಮಾಡಿದಾಗ ಸು ಗೆ ಅಮ್ ಆದೇಶ ಬಂದು "ಅಮಿಪೂರ್ವಃ" ಎಂಬ ಸೂತ್ರದಿಂದ ಪೂರ್ವ ರೂಪ ಬಂದು ಚಾಕ್ಷುಷಮ್ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ–ಶ್ರಾವಣಃ (ಕಿವಿಯಿಂದ ಗ್ರಹಿಸಲ್ಪಡುವಂತಹದು(ಶಬ್ದ)–'ಶ್ರವಣೇನ ಗೃಹ್ಯತೇ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಶ್ರವಣ+ಟಾ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ಅಣ್ ಪ್ರತ್ಯಯ ಬಂದಮೇಲೆ ಪ್ರಾತಿಪದಿಕವಾದ ಮೇಲೆ "ಸುಪೋಧಾತುಪ್ರಾತಿಪದಿಕಯೋಃ" ಎಂಬ ಸೂತ್ರದಿಂದ ಸುಪ್ ಗೆ ಲುಕ್ ಬಂದ ಮೇಲೆ ಶ್ರವಣ್+ಅ ಎಂದಿರುತ್ತದೆ. ಇದು ಣಿತ್ ಆಗಿರುವುದರಿಂದ ಆದಿ ವೃದ್ಧಿ ಬಂದು ಶ್ರವಣ ಎಂಬಲ್ಲಿರುವ ಭ ಸಂಜ್ಞೆಯುಳ್ಳ 'ಅ'ಕಾರಕ್ಕೆ ಲೋಪ ಬಂದು, ಶ್ರಾವಣ್ +ಅ= ಶ್ರಾವಣ ಎಂದಿದ್ದಾಗ, ಅದನ್ನು ಸುಬಂತ ಮಾಡಿದಾಗ ಶ್ರಾವಣಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ-ಔಪನಿಷದಃ (ಉಪನಿಷತ್ತಿನಿಂದ ತಿಳಿಯಲ್ಪಡುವ ಪುರುಷನು)-'ಉಪನಿಷದಿ ಜ್ಞಾತಃ' ಎಂಬುದು ಲೌಕಿಕ ವಿಗ್ರಹ ವಾಕ್ಯ ಉಪನಿಷದ್+ಙಿ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ಅಣ್ ಪ್ರತ್ಯಯ ಬಂದ ಮೇಲೆ ಪ್ರಾತಿಪದಿಕವಾದ ಮೇಲೆ "ಸುಪೋಧಾತುಪ್ರಾತಿಪದಿಕಯೋಃ" ಎಂಬ ಸೂತ್ರದಿಂದ ಸುಪ್ ಗೆ ಲುಕ್ ಬಂದ ಮೇಲೆ ಉಪನಿಷದ್+ಅ ಎಂದಿರುತ್ತದೆ. ಇದು ಣಿತ್ ಆಗಿರುವುದರಿಂದ "ತದ್ಧಿತೇಷ್ವಚಾಮಾದೇಃ" ಎಂಬ ಸೂತ್ರದಿಂದ ಆದಿವೃದ್ಧಿ ಬಂದು 'ಉ' ಕಾರದ ಸ್ಥಾನದಲ್ಲಿ 'ಔ'ಕಾರ ಬಂದು ಔಪನಿಷದ್+ಅ= ಔಪನಿಷದ ಎಂದು ಇರುತ್ತದೆ. ಇದನ್ನು ಸುಬಂತ ಮಾಡಿದಾಗ ಔಪನಿಷದಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ-ದಾರ್ಷದಾಃ (ಕಲ್ಲಿನ ಬಂಡೆಯ ಮೇಲೆ ಪುಡಿಮಾಡಲ್ಪಟ್ಟ)-'ದೃಷದಿ ಪಿಷ್ಟಾಃ' ಎಂಬುದು ಲೌಕಿಕ ವಿಗ್ರಹ ವಾಕ್ಯ. ದೃಷದಿ+ಙಿ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ದೃಷದ್ ಶಬ್ದದ ಮೇಲೆ ಅಣ್ ಪ್ರತ್ಯಯ ಬಂದ ಮೇಲೆ ಆದಿವೃದ್ಧಿಯಾಗಿ ದಾರ್ಷದ ಎಂದಿದ್ದಾಗ, ಪ್ರಥಮ ಪುರುಷ ಬಹುವಚನಾರ್ಥದಲ್ಲಿ ಜಸ್ ಸೇರಿಸಿದಾಗ, ದಾರ್ಷದಾಃ (ಸಕ್ತವಃ) ಎಂದು ರೂಪವು ಸಿದ್ಧವಾಗುತ್ತದೆ.

ಉದಾ:-ಚಾತುರಂ (ನಾಲ್ಕು ಪ್ರಾಣಿಗಳಿಂದ ಅಥವಾ ಕುದುರೆಗಳಿಂದ ಅಥವಾ ವ್ಯಕ್ತಿಗಳಿಂದ ಒಯ್ಯಲ್ಪಡುವ ಪಲ್ಲಕ್ಕಿ)-'ಚತುರ್ಭಿಃ ಉಹ್ಯತೇ' ಎಂಬುದು ಲೌಕಿಕ ವಿಗ್ರಹ ವಾಕ್ಯ ಚತುರ್+ಭಿಸ್ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ಅಣ್ ಪ್ರತ್ಯಂಎುವು ಬರುತ್ತದೆ. ಪ್ರಾತಿಪದಿಕವಾದ ಮೇಲೆ "ಸುಪೋಧಾತುಪ್ರಾತಿಪದಿಕಯೋಃ" ಎಂಬ ಸೂತ್ರದಿಂದ ಸುಪ್ ಗೆ ಲುಕ್ ಬಂದ ಮೇಲೆ ಚತುರ್+ಅ ಎಂದಿರುತ್ತದೆ. ಇದು ಣಿತ್ ಆಗಿರುವುದರಿಂದ ಆದಿವೃದ್ಧಿ ಬಂದು ಚಾತುರ್+ಅ=ಚಾತುರ ಎಂದಾಗುತ್ತದೆ. ಇದಕ್ಕೆ ಸು ಪ್ರತ್ಯಯವನ್ನು ಸೇರಿಸಿದರೆ ಅದಕ್ಕೆ ಅಮ್ ಆದೇಶ ಬಂದು ಚಾತುರಂ ಎಂದಾಗುತ್ತದೆ. (ಚಾತುರಮ್ ಶಕಟಮ್).

ಉದಾ-ಚಾತುರ್ದಶಂ (ಚತುರ್ದಶಿದಿವಸದಲ್ಲಿ ಕಾಣಿಸಿಕೊಳ್ಳುವ (ರಾಕ್ಷಸನು))- 'ಚತುರ್ದಶ್ಯಾಮ್ ದೃಶ್ಯತೇ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಚತುರ್ದಶೀ+ಙಿ ಎಂಬುದು ಅಲೌಕಿಕ ವಿಗ್ರಹವಾಕ್ಯ. ಪ್ರಕೃತ ಸೂತ್ರದಿಂದ ಅಣ್ ಪ್ರತ್ಯಯವು ಬಂದು ಪ್ರಾತಿಪದಿಕವಾದ ಮೇಲೆ "ಸುಪೋಧಾತುಪ್ರಾತಿಪದಿಕಯೋಃ" ಎಂಬ ಸೂತ್ರದಿಂದ ಸುಪ್ ಗೆ ಲುಕ್ ಬಂದ ಮೇಲೆ ಚತುರ್ದಶೀ+ಅ ಎಂದಿರುತ್ತದೆ. ಇದು ಣಿತ್ ಆಗಿರುವುದರಿಂದ ಆದಿವೃದ್ಧಿ ಬಂದು ಚಾತುರ್ದಶೀ ಎಂದಾಗುತ್ತದೆ. ಭ-ಸಂಜ್ಞೆಯುಳ್ಳ ಅಂತ್ಯ 'ಈ' ಕಾರಕ್ಕೆ "ಯಸ್ಯೇತಿ ಚ" ಎಂಬ ಸೂತ್ರದಿಂದ ಲೋಪ ಬಂದು ಚಾತುರ್ದಶ್+ಅ= ಚಾತುರ್ದಶ ಎಂದಾದ ಮೇಲೆ ಸು ಪ್ರತ್ಯಯವನ್ನು ಸೇರಿಸಿದಾಗ ಅದಕ್ಕೆ ಅಮ್ ಅದೇಶ ಬಂದು ಚಾತುರ್ದಶಮ್ ಎಂದು ರೂಪವಾಗುತ್ತದೆ.

**ಸೂಚನೆ:**

**ಶೈಷಿಕಾತ್ ಮತುಬರ್ಥೀಯಾತ್ ಶೈಷಿಕೋ ಮತುಬರ್ಥಿಕಃ।**
**ಸ್ವರೂಪಃ ಪ್ರತ್ಯಯೋನೇಷ್ಟಃ ಸನ್ನನ್ತಾತ್ ನ ಸನ್ ಇಷ್ಯತೇ. ॥**

ಶೈಷಿಕ ಪ್ರತ್ಯಯದ ನಂತರ ಅದೇ ರೂಪವುಳ್ಳ ಶೈಷಿಕ ಪ್ರತ್ಯಯವು ಸೇರಿಸುವುದಿಲ್ಲ ಇಂತಹ ಮತುಪ್-ಅರ್ಥೀಯ ಪ್ರತ್ಯಯದ ನಂತರ ಮತ್ತೆ ಅದೇ ರೂಪವುಳ್ಳ ಮತುಬರ್ಥೀಯ ರೂಪವು ಬರುವುದಿಲ್ಲ ಇದೇ ರೀತಿಯಲ್ಲಿ ಇಚ್ಛಾರ್ಥದಲ್ಲಿ ಬರುವ ಸನ್ ಪ್ರತ್ಯಯದ ನಂತರ ಸನ್ ಪ್ರತ್ಯಯವು ಬರುವುದಿಲ್ಲ

**(ಶೇಷಾರ್ಥದಲ್ಲಿ ಘ-ಖ ಪ್ರತ್ಯಯಗಳನ್ನು ವಿಧಿಸುವ ಸೂತ್ರ)**

**ಸೂತ್ರ-1071. ರಾಷ್ಟ್ರಾವಾರಪಾರಾದ್ ಘಖೌ ।4-2-93।**

ವೃತ್ತಿ-ಆಭ್ಯಾಂ ಕ್ರಮಾತ್ ಘಖೌ ಸ್ತಃ ಶೇಷೇ। ರಾಷ್ಟ್ರೇ ಜಾತಾದಿಃ । ರಾಷ್ಟ್ರೀಯಃ। ಅವಾರಪಾರೀಣಃ।

ವಾರ್ತಿಕಮ್-ಅವಾರಪಾರಾತ್ ವಿಗೃಹೀತಾದಪಿ ವಿಪರೀತಾಚ್ಚೇತಿ ವಕ್ತವ್ಯಂ। ಅವಾರಪಾರೀಣಃ। ಪಾರಾವಾರೀಣಃ ।

ಇಹ ಪ್ರಕೃತಿ ವಿಶೇಷಾತ್ ಘಾದಯಃ ಟ್ಯು-ಟ್ಯುಲನ್ತಾಃ ಪ್ರತ್ಯಯಾಃ ಉಚ್ಯನ್ತೇ, ತೇಷಾಂ ಜಾತಾದಯಃ ಅರ್ಥ ವಿಶೇಷಾಃ ಸಮರ್ಥವಿಭಕ್ತಯಶ್ಚ ವಕ್ಷ್ಯನ್ತೇ.

ಅ.ವೃ-"ಪ್ರತ್ಯಯಃ", "ಪರಶ್ಚ", "ಙ್ಯಾಪ್ ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಮತ್ತು "ಶೇಷೇ" ಎಂಬ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ:-ಶೇಷ ಅರ್ಥದಲ್ಲಿ ರಾಷ್ಟ್ರ ಮತ್ತು ಅವಾರಪಾರ ಶಬ್ದಗಳ ನಂತರ ಕ್ರಮವಾಗಿ 'ಘ' ಮತ್ತು 'ಖ' ಪ್ರತ್ಯಯಗಳು ಬರುತ್ತವೆ.

ರಾಷ್ಟ್ರ ಶಬ್ದದ ಮೇಲೆ 'ಘ' ಪ್ರತ್ಯಯವು ಮತ್ತು ಅವಾರಪಾರ ಶಬ್ದದ ಮೇಲೆ 'ಖ' ಪ್ರತ್ಯಯವು ಬರುತ್ತವೆ. ಈ ಪ್ರತ್ಯಯಗಳಿಗೆ ಅನುಬಂಧಗಳು ಇಲ್ಲ. ಈ 'ಘ' ಮತ್ತು 'ಖ' ಪ್ರತ್ಯಯಗಳ ಮೇಲೆ "ಆಯನೇಯೀನೀಯಿಯಃ ಫಢಖಛಘಾಮ್ ಪ್ರತ್ಯಯಾದಿನಾಮ್" ಎಂಬ ಸೂತ್ರದಿಂದ 'ಘ' ಮತ್ತು 'ಖ' ಪ್ರತ್ಯಯಗಳಿಗೆ ಕ್ರಮವಾಗಿ 'ಇಯ್' ಮತ್ತು 'ಈನ್' ಆದೇಶಗಳು ಬಂದು ಇಯ್+ಅ=ಇಯ ಮತ್ತು ಈನ್+ಅ=ಈನ ಎಂಬ ರೂಪಗಳು ಆಗುತ್ತವೆ. ರಾಷ್ಟ್ರ ಶಬ್ದದ ಮೇಲೆ 'ಘ' ಪ್ರತ್ಯಯ ಬಂದು ರಾಷ್ಟ್ರ+ಇಯ ಎಂದಿದ್ದಾಗ, ರಾಷ್ಟ್ರ ಎಂಬಲ್ಲಿರುವ ಅ-ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು ರಾಷ್ಟ್+ಇಯ= ರಾಷ್ಟ್ರಿಯ ಎಂಬ ರೂಪವು ಸಿದ್ಧವಾಗುತ್ತದೆ.

ವಾರ್ತಿಕ:-ಅವಾರಪರಾತ್ ವಿಗೃಹೀತಾದಪಿ ವಿಪರೀತಾಚ್ಚೇತಿ ವಕ್ತವ್ಯಮ್। ಅವಾರಪಾರೀಣಃ। ಪಾರಾವಾರೀಣಃ।

ಅರ್ಥ:-ಅವಾರಪಾರ ಶಬ್ದವು ಪ್ರತ್ಯೇಕವಾದಾಗ (ಅವಾರ ಮತ್ತು ಪಾರ ಎಂದಾದಾಗ) ಮತ್ತು ಪಾರ ಶಬ್ದ ಮೊದಲು ಬಂದು ಅವಾರ ಶಬ್ದವು ಅದರ ಹಿಂದಿದ್ದಾಗಲೂ (ಅವಾರಪಾರ) 'ಖ' ಪ್ರತ್ಯಯವು ಬರುತ್ತದೆ ಎಂದು ಹೇಳಬೇಕು. ಇದರಿಂದ "ರಾಷ್ಟ್ರಾವಾರ ಪಾರಾತ್ ಘಖೌ" ಎಂಬ ಸೂತ್ರಕ್ಕೆ ಅನುಕೂಲವಾಗುತ್ತದೆ.

ಉದಾ-ರಾಷ್ಟ್ರಿಯಃ-(ರಾಷ್ಟ್ರದಲ್ಲಿ ಉಂಟಾಗುವ) 'ರಾಷ್ಟ್ರೇ ಜಾತಾದಿ' ಎಂಬುದು ಲೌಕಿಕ ವಿಗ್ರಹ ವಾಕ್ಯ. ರಾಷ್ಟ್ರ+ಙಿ ಎಂಬುದು ಅಲೌಕಿಕ ವಿಗ್ರಹವಾಕ್ಯ. "ರಾಷ್ಟ್ರಾವಾರ ಪಾರಾತ್ ಘಖೌ"ಎಂಬ ಪ್ರಕೃತ ಸೂತ್ರದಿಂದ 'ಘ' ಪ್ರತ್ಯಯವು ಬಂದು, ಪ್ರಾತಿಪದಿಕವಾದ ಮೇಲೆ "ಸುಪೋಧಾತುಪ್ರಾತಿಪದಿಕಯೋಃ" ಎಂಬ ಸೂತ್ರದಿಂದ ಸುಪ್ ಗೆ ಲುಕ್ ಬಂದು, ರಾಷ್ಟ್ರ+ಘ ಎಂದಿರುತ್ತದೆ. ಇದಕ್ಕೆ "ಆಯನೇಯೀನೀಯಿಯಃ ಫಢಖಛಘಾಮ್ ಪ್ರತ್ಯಯಾದಿನಾಮ್" ಎಂಬ ಸೂತ್ರದಿಂದ ಘ್-ಗೆ ಇಯ್ ಆದೇಶವಾಗಿ ಬಂದು ರಾಷ್ಟ್ರ ಎಂಬಲ್ಲಿರುವ ಅಂತ್ಯ 'ಅ'ಕಾರಕ್ಕೆ 'ಭ' ಸಂಜ್ಞೆ ಇರುವುದರಿಂದ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು ರಾಷ್ಟ್‌ರ್+ಇಯ= ರಾಷ್ಟ್ರಿಯ ಎಂದು ರೂಪವು ಸಿದ್ಧವಾಗುತ್ತದೆ. ಇದನ್ನು ಸುಬಂತ ಮಾಡಿದಾಗ ರಾಷ್ಟ್ರಿಯಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ-ಅವಾರಪಾರೀಣಃ-(ಅವಾರಪಾರಂಗತಃ ಅಥವಾ ಅವಾರಪಾರೇ ಭವಃ)- 'ಅವಾರಪಾರ' ಶಬ್ದದ ನಂತರ ಪ್ರಕೃತ ಸೂತ್ರದಿಂದ 'ಖ' ಪ್ರತ್ಯಯವು ಬಂದು, ಅದಕ್ಕೆ ಈನ್ ಆದೇಶವು ಬಂದು, 'ನ್'ಕಾರಕ್ಕೆ ಣತ್ವವು ಬಂದು ಅವಾರಪಾರೀಣಃ ಎಂದು ರೂಪವು ಸಿದ್ಧವಾಗುತ್ತದೆ.

ವಾರ್ತಿಕ-

**ಅವಾರಪರಾತ್ ವಿಗೃಹೀತಾದಪಿ ವಿಪರೀತಾಚ್ಚೇತಿ ವಕ್ತವ್ಯಮ್।**

**ಅವಾರೀಣಃ । ಪಾರೀಣಃ। ಪಾರಾವಾರೀಣಃ।**

ಸೂತ್ರದಲ್ಲಿ ಅವಾರಪಾರ ಶಬ್ದವು ಅವಾರ ಮತ್ತು ಪಾರ ಶಬ್ದಗಳಿಗೆ ದ್ವಂದ್ವಸಮಾಸವು ಮಾಡಲಾಗಿದೆ. ಸಮಾಸವನ್ನು ವಿಭಾಗ ಮಾಡಿದಾಗ ಬರುವ ಅವಾರ ಮತ್ತು ಪಾರ ಶಬ್ದಗಳ ನಂತರ ಈ ಶಬ್ದಗಳನ್ನು ಹಿಂದೆ-ಮುಂದೆ ಮಾಡಿದಾಗ ಉಂಟಾದ ಪಾರಾವಾರ ಶಬ್ದದ ನಂತರವು ಈ ಪ್ರತ್ಯಯವು ಬರುತ್ತದೆ ಎಂದು ಹೇಳಬೇಕು. ಹೀಗೆ ಈ ಪ್ರಕೃತ ವಾರ್ತಿಕದಿಂದ 'ಖ' ಪ್ರತ್ಯಯವು ಬಂದಾಗ, ಅವಾರೀಣಃ (ಈಕಡೆ ದಂಡೆಗೆ ಸೇರಿದವನು), ಪಾರೀಣಃ (ಆಕಡೆ ದಂಡೆಗೆ ಸೇರಿದವನು), ಪಾರಾವಾರೀಣಃ (ಸಮುದ್ರಕ್ಕೆ ಸೇರಿದವನು) ಎಂಬ ಪದಗಳು ಸಿದ್ಧಿಸುತ್ತವೆ.

ಪ್ರಕೃತ ಸೂತ್ರವು ಮೊದಲು "ವಿಭಾಷಾಪೂರ್ವಾಹ್ಣಾಪರಾಹ್ಣಾಭ್ಯಾಮ್" ಎಂಬ ಸೂತ್ರದವರೆಗೆ ಇರುವ ಸೂತ್ರಗಳಿಂದ ರಾಷ್ಟ್ರಾದಿ ಪ್ರಾತಿಪದಿಕಗಳ ನಂತರ ಶೇಷಾರ್ಥದಲ್ಲಿ ಪ್ರತ್ಯಯಗಳು ವಿಧಿಸಲಾಗುತ್ತವೆ. ಇವು ಯಾವ ಅರ್ಥದಲ್ಲಿ ಬರುತ್ತವೆ, ಪ್ರಕೃತಿಗೆ ಯಾವ ವಿಭಕ್ತಿ ಬರಬೇಕು ಎಂಬ ಸಂದೇಹವು ಉಂಟಾಗುವುದು. ಈ ಸಂದೇಹವನ್ನು ಪರಿಹರಿಸುವುದಕ್ಕಾಗಿ ವರದರಾಜರು ಹೀಗೆ ವಿವರಿಸುತ್ತಾರೆ.

ವಿವರಣೆ-ಇಹ ಪ್ರಕೃತಿ ವಿಶೇಷಾತ್ ಘಾದಯಃ ಟ್ಯು-ಟ್ಯುಲನ್ತಾಃ ಪ್ರತ್ಯಯಾಃ ಉಚ್ಚನ್ತೇ, ತೇಷಾಂ ಜಾತಾದಯಃ ಅರ್ಥವಿಶೇಷಾಃ ಸಮರ್ಥವಿಭಕ್ತಯಶ್ಚ ವಕ್ಷ್ಯನ್ತೇ. ಮೇಲೆ ಸೂಚಿಸಿದ ರೀತಿಯಲ್ಲಿ ಮೇಲಿನ ಸೂತ್ರಗಳು ಅರ್ಥ ವಿಶೇಷ ಮತ್ತು ವಿಭಕ್ತಿ

ವಿಶೇಷ ಸಾಕಾಙ್ಕ್ಷಗಳಾಗಿವೆ. ಹಾಗೇಯೆ "ತತ್ರ ಜಾತಃ" ಮೊದಲಾದ ಮುಂಬರುವ ಸೂತ್ರಗಳಲ್ಲಿ ಜಾತತತ್ವಾದಿ-ಅರ್ಥವಿಶೇಷಗಳನ್ನು ಮತ್ತು 'ಸಪ್ತಮ್ಯಾದಿ' ವಿಭಕ್ತಿವಿಶೇಷಗಳನ್ನು ಹೇಳಲಾಗುತ್ತದೆ. ಆ ಸೂತ್ರಗಳಲ್ಲಿ ವಿಹಿತವಾದ ಪ್ರತ್ಯಯವು ಯಾವುದು ಪ್ರಾತಿಪದಿಕವು ಯಾವುದು ಎಂಬ ಸಂಶಯವು ಬರುವುದು. ಈ ರೀತಿಯಲ್ಲಿ ಅರ್ಥ ವಿಭಕ್ತಿ ಸಾಪೇಕ್ಷಗಳಾದ ಪ್ರಕೃತ ಸೂತ್ರ ಮೊದಲಾದವುಗಳಿಗೆ ಪ್ರತ್ಯಾಯಾದಿ ಸಾಪೇಕ್ಷಗಳಾದ 'ತತ್ರಜಾತ' ಮೊದಲಾದ ಉತ್ತರ ಸೂತ್ರಗಳ ಜೊತೆಗೆ ಏಕವಾಕ್ಯತ್ವವನ್ನು ಸಿದ್ಧಗೊಳಿಸಿ ಸಪ್ತಮ್ಯಾದಂತ್ಯ ರಾಷ್ಟ್ರಾದಿ ಶಬ್ದಗಳ ನಂತರ ಇತ್ಯಾದಿ ಅರ್ಥಗಳಲ್ಲಿ ಘಾದಿ-ಪ್ರತ್ಯಯಗಳು ಬರುವವು'. ರಾಷ್ಟ್ರಾದಿ ಭಿನ್ನಗಳಾದ ಪ್ರಕೃತಿ ಶಬ್ದಗಳ ನಂತರ ಜಾತಾದ್ಯರ್ಥದಲ್ಲಿ ಅಣ್ ಮೊದಲಾದ ಸಾಧಾರಣ ಪ್ರತ್ಯಯಗಳು ಬರುವವು.

**(ಶೇಷಾರ್ಥದಲ್ಲಿ ಯ-ಖಞ್ ಪ್ರತ್ಯಯಗಳನ್ನು ವಿಧಿಸುವ ಸೂತ್ರ.)**

**ಸೂತ್ರ-1072 ಗ್ರಾಮಾದ್ಯಖಞೌ** ॥4-2-94॥

ವೃತ್ತಿ-ಗ್ರಾಮ್ಯ ಗ್ರಾಮೀಣ ॥

ಪ.ಚ್ಛೆ:-ಗ್ರಾಮಾತ್, ಯ-ಖಞೌ ।

ಅ.ವೃ-"ಪ್ರತ್ಯಯಃ", "ಪರಶ್ಚ", "ಙ್ಯಾಪ್ ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ" ಮತ್ತು "ಶೇಷೇ" ಎಂಬ ಸೂತ್ರಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ಗ್ರಾಮ ಶಬ್ದದ ನಂತರ ಶೇಷಾರ್ಥದಲ್ಲಿ 'ಯ' ಮತ್ತು 'ಖಞ್' ಪ್ರತ್ಯಯಗಳು ಬರುತ್ತವೆ. ಖಞ್-ನಲ್ಲಿ 'ಖ' ಮಾತ್ರ ಉಳಿಯುತ್ತದೆ.

ಉದಾ-ಗ್ರಾಮ್ಯಃ-(ಗ್ರಾಮದಲ್ಲಿ ಉಂಟಾಗುವ ಅಥವಾ ಜನಿಸಿದ)-'ಗ್ರಾಮ್ಯೇಜಾತಃ ಭವಃ ವಾ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಗ್ರಾಮ+ಙಿ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ 'ಯ' ಪ್ರತ್ಯಯವು ಬಂದು' ಪ್ರಾತಿಪದಿಕವಾದ ಮೇಲೆ ಬರುವ ಸುಪ್-ಗೆ ಲುಕ್ ಬಂದು ಗ್ರಾಮ+ಯ ಎಂದಿರುತ್ತದೆ. 'ಗ್ರಾಮ'ದಲ್ಲಿರುವ 'ಭ' ಸಂಜ್ಞೆಯುಳ್ಳ 'ಅ'ಕಾರಕ್ಕೆ ಲೋಪ ಬಂದು ಗ್ರಾಮ್+ಯ=ಗ್ರಾಮ್ಯ ಎಂಬುದು ಸುಬಂತವಾದಾಗ ಗ್ರಾಮ್ಯಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ-ಗ್ರಾಮೀಣಃ (ಗ್ರಾಮದಲ್ಲಿ ಉಂಟಾಗುವ ಅಥವಾ ಜನಿಸಿದ)- 'ಗ್ರಾಮೇಜಾತಾದಿ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಗ್ರಾಮ +ಙಿ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ಖಞ್ (ಖ) ಪ್ರತ್ಯಯ ಬಂದು ಪ್ರಾತಿಪದಿಕ ಸಂಜ್ಞೆ ಬಂದ ಮೇಲೆ ಸುಪ್-ಗೆ ಲುಕ್ ಬಂದು, ಗ್ರಾಮ +ಖ ಎಂದಿರುತ್ತದೆ. "ಆಯನೇಯೀನೀಯಿಯಃ ಫಢಖಛಘಾಮ್ ಪ್ರತ್ಯಯಾದಿನಾಮ್" ಎಂಬ ಸೂತ್ರದಿಂದ 'ಖ್' ಗೆ 'ಈನ್' ಆದೇಶ ಬಂದು 'ಭ' ಸಂಜ್ಞೆಯುಳ್ಳ 'ಅ'ಕಾರಕ್ಕೆ ಲೋಪ ಬಂದು ಗ್ರಾಮ್+ಈನ್= ಗ್ರಾಮೀನ ಎಂದಿದ್ದಾಗ ನ್-ಕಾರಕ್ಕೆ ಣತ್ವ ಬಂದು ಸುಬಂತ ಮಾಡಿದ ಮೇಲೆ ಗ್ರಾಮೀಣಃ ಎಂಬ ರೂಪವು ಸಿದ್ಧವಾಗುತ್ತದೆ.

**(ಶೇಷಾರ್ಥದಲ್ಲಿ ಢಕ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1073 ನದ್ಯಾದಿಭ್ಯೋ ಢಕ್** ॥4-2-97॥

ವೃತ್ತಿ-ನಾದೇಯಮ್ । ಮಾಹೇಯಮ್। ವಾರಾಣಸೇಯಮ್॥

ಪ.ಚ್ಚೇ-ನದ್ಯಾದಿಭ್ಯಃ, ಢಕ್

ಅ.ವೃ-ಪ್ರತ್ಯಯಃ, ಪರಶ್ಚ, ಙ್ಯಾಪ್ಪ್ರಾತಿಪದಿಕಾತ್, ತದ್ಧಿತಾಃ, ಸಮರ್ಥಾನಾಂ ಪ್ರಥಮಾದ್ವಾ ಮತ್ತು ಶೇಷೇ ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ನದಿ ಮೊದಲಾದ ಗಣದಲ್ಲಿ ಹೇಳಿರುವ ಸಮರ್ಥವಾದ ಸುಬಂತ ಪ್ರಾತಿಪದಿಕದ ಜೊತೆಗೆ ಶೇಷಾರ್ಥದಲ್ಲಿ ಢಕ್ (ಢ) ಪ್ರತ್ಯಯವು ಬರುತ್ತದೆ.

ಉದಾ-ನಾದೇಯಮ್ (ನದಿಯಲ್ಲಿ ಉಂಟಾಗುವ ಅಥವಾ ಜನಿಸುವ)-'ನದ್ಯಾಂ ಜಾತಾದಿ' ಎಂದು ಲೌಕಿಕ ವಿಗ್ರಹ. ನದಿ+ಙಿ ಎಂಬುದು ಅಲೌಕಿಕ ವಿಗ್ರಹ ವಾಕ್ಯ. "ನದ್ಯಾದಿಭ್ಯೋ ಢಕ್" ಎಂಬುದರಿಂದ 'ಢ' ಆದೇಶ ಬಂದು ನದಿ+ಢ ಎಂದಿದ್ದಾಗ, "ಆಯನೇಯೀನೀಯಿಯಃ ಫಢಖಛಘಾಮ್ ಪ್ರತ್ಯಯಾದಿನಾಮ್" ಎಂಬ ಸೂತ್ರದಿಂದ ಢ-ಗೆ ಏಯ್ ಆದೇಶ ಬಂದು, ನದೀ+ಏಯ್ ಎಂದಿರುತ್ತದೆ. "ಕಿತಿಚ" ಎಂಬ ಸೂತ್ರದಿಂದ ಆದಿ ವೃದ್ಧಿ ಬಂದು, 'ಭ' ಸಂಜ್ಞೆಯುಳ್ಳ 'ಈ' ಕಾರಕ್ಕೆ ಲೋಪ ಬಂದು ನಾದ್+ಏಯ್= ನಾದೇಯ ಎಂದಾಗಿ ಸುಬಂತ ಮಾಡಿದಾಗ ಸು ಗೆ 'ಅಮ್' ಆದೇಶಬಂದು ಪೂರ್ವರೂಪ ಮಾಡಿದಾಗ ನಾದೇಯಮ್ ಎಂಬ ರೂಪವು ಸಿದ್ಧಿಸುತ್ತದೆ.

ಉದಾ-ಮಾಹೇಯಮ್ (ಪೃಥ್ವಿಯಲ್ಲಿ ಉಂಟಾಗುವ ಅಥವಾ ಪೃಥ್ವಿಯಲ್ಲಿ ಜನಿಸುವ)-'ಮಹ್ಯಾಂ ಜಾತಾದಿ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಮಹೀ+ಙಿ ಎಂಬುದು ಅಲೌಕಿಕ ವಿಗ್ರಹ ವಾಕ್ಯ. "ನದ್ಯಾದಿಭ್ಯೋ ಢಕ್" ಎಂಬ ಸೂತ್ರದಿಂದ ಢಕ್ (ಢ) ಪ್ರತ್ಯಯ ಬಂದು ಪ್ರಾತಿಪದಿಕವಾದ ಮೇಲೆ "ಸುಪೋಧಾತು ಪ್ರಾತಿಪದಿಕಯೋಃ" ಎಂಬುದರಿಂದ ಸುಪ್ ಲೋಪವಾದ ಮೇಲೆ ಮಹೀ+ಢ ಎಂದಿರುತ್ತದೆ. "ಆಯನೇಯೀನೀಯಿಯಃ ಫಢಖಛಘಾಮ್ ಪ್ರತ್ಯಯಾದಿನಾಮ್" ಎಂಬ ಸೂತ್ರದಿಂದ 'ಢ' ಪ್ರತ್ಯಯ ಬಂದು ಅದರಲ್ಲಿರುವ 'ಢ್' ಗೆ ಏಯ್ ಆದೇಶ ಬಂದು, ಮಹೀ+ಏಯ್+ಅ ಎಂದಿರುತ್ತದೆ. "ಕಿತಿಚ" ಎಂಬುದರಿಂದ ಆದಿವೃದ್ಧಿ ಬಂದು, 'ಭ' ಸಂಜ್ಞೆಯುಳ್ಳ 'ಈ' ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು ಮಾಹ್+ಏಯ= ಮಾಹೇಯ ಎಂದಿದ್ದಾಗ, ಇದಕ್ಕೆ ಸು ಪ್ರತ್ಯಯವನ್ನು ಸೇರಿಸಿದಾಗ ಸು-ಗೆ ಅಮ್ ಆದೇಶಬಂದು ಮಾಹೇಯಮ್ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ-ವಾರಾಣಸೇಯಮ್ (ವಾರಣಾಸಿಯಲ್ಲಿ ಉಂಟಾಗುವ ಅಥವಾ ಜನಿಸಿದ)-ವಾರಣಾಸ್ಯಾಮ್ ಜಾತಾದಿ ಎಂಬುದು ಲೌಕಿಕ ವಿಗ್ರಹ ವಾಕ್ಯ. ವಾರಾಣಸೀ+ಙಿ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ನದ್ಯಾದಿಭ್ಯೋ ಢಕ್ ಎಂಬ ಸೂತ್ರದಿಂದ ಢಕ್ (ಢ) ಪ್ರತ್ಯಯ ಬಂದು ಪ್ರಾತಿಪದಿಕವಾದ ಮೇಲೆ "ಸುಪೋಧಾತುಪ್ರಾತಿಪದಿಕಯೋಃ"

ಎಂಬುದರಿಂದ ಸುಪ್ ಲೋಪ ವಾದಮೇಲೆ ವಾರಾಣಸೀ+ಢ ಎಂದಿರುತ್ತದೆ. "ಆಯನೇಯೀನೀಯಿಯಃ ಫಢಖಛಘಾಮ್ ಪ್ರತ್ಯಯಾದಿನಾಮ್" ಎಂಬ ಸೂತ್ರದಿಂದ ಢ ಪ್ರತ್ಯಯ ಬಂದು ಅದರಲ್ಲಿರುವ ಢ್ ಗೆ ಏಯ್ ಆದೇಶ ಬಂದು, ವಾರಾಣಸೀ+ಏಯ್+ಅ=ವಾರಾಣಸೀ+ಏಯ ಎಂದಿರುತ್ತದೆ. 'ಭ' ಸಂಜ್ಞೆಯುಳ್ಳ 'ಈ' ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು ವಾರಾಣಸ್+ಏಯ= ವಾರಾಣಸೇಯ ಎಂದಿರುತ್ತದೆ. 'ಸು' ಪ್ರತ್ಯಯವನ್ನು ಸೇರಿಸಿದಾಗ ಸು-ಗೆ ಅಮ್ ಆದೇಶಬಂದು ವಾರಾಣಸೇಯಮ್ ಎಂಬ ರೂಪವು ಸಿದ್ಧವಾಗುತ್ತದೆ.

**(ಶೇಷಾರ್ಥದಲ್ಲಿ ತ್ಯಕ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1074. ದಕ್ಷಿಣಾಪಶ್ಚಾತ್ ಪುರಸಸ್ತ್ಯಕ್** ॥4-2-98॥

ವೃತ್ತಿ-ದಾಕ್ಷಿಣಾತ್ಯಃ ।ಪಾಶ್ಚಾತ್ತ್ಯಃ। ಪೌರಸ್ತ್ಯಃ॥

ಪ.ಚ್ಛೇ.-ದಕ್ಷಿಣಾಪಶ್ಚಾತ್, ಪುರಸಃ, ತ್ಯಕ್ ॥

ಅ.ವೃ-"ಪ್ರತ್ಯಯಃ," "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ" ಮತ್ತು "ಸಮರ್ಥಾನಾಂ ಪ್ರಥಮಾದ್ವಾ" ಮತ್ತು "ಶೇಷೇ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ದಕ್ಷಿಣಾ, ಪಶ್ಚಾತ್ ಮತ್ತು ಪುರಸ್ ಈ ಮೂರು ಅವ್ಯಯಗಳ ನಂತರ ಶೇಷಿಕ ಅರ್ಥದಲ್ಲಿ 'ತ್ಯಕ್' ಪ್ರತ್ಯಯವು ಬರುತ್ತದೆ. 'ತ್ಯಕ್' ನಲ್ಲಿ 'ತ್ಯ' ಮಾತ್ರ ಉಳಿಯುತ್ತದೆ. ಇದು 'ಕಿತ್' ಆಗಿರುವುದರಿಂದ "ಕಿತಿಚ" ಎಂಬ ಸೂತ್ರದಿಂದ ಆದಿವೃದ್ಧಿ ಬರುತ್ತದೆ.

ಉದಾ-ದಾಕ್ಷಿಣಾತ್ಯಃ (ದಕ್ಷಿಣ ದಿಕ್ಕಿನಲ್ಲಿಉಂಟಾಗುವ ಅಥವಾ ಜನಿಸಿದ) 'ದಕ್ಷಿಣಾ ಭವಃ' ಎಂಬುದು ಲೌಕಿಕ ವಿಗ್ರಹ ವಾಕ್ಯ. ದಕ್ಷಿಣಾ ಎಂಬ ಅವ್ಯಯದ ನಂತರ ಪ್ರಕೃತ ಸೂತ್ರದಿಂದ 'ತ್ಯಕ್' ಪ್ರತ್ಯಯ ಬಂದು ಪ್ರಾತಿಪದಿಕವಾದ ಮೇಲೆ "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ ಸುಪ್ ಲೋಪವಾದ ಮೇಲೆ ದಕ್ಷಿಣಾತ್ಯ ಎಂದಿರುತ್ತದೆ. ಇದಕ್ಕೆ ಆದಿವೃದ್ಧಿ ಬಂದು ಸುಬಂತ ಮಾಡಿದಾಗ ದಾಕ್ಷಿಣಾತ್ಯಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ-ಪಾಶ್ಚಾತ್ತ್ಯಃ (ಪಶ್ಚಿಮ ದಿಕ್ಕಿನಲ್ಲಿಉಂಟಾಗುವ ಅಥವಾ ಜನಿಸಿದ)-'ಪಶ್ಚಾತ್ ಭವಃ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಪಶ್ಚಾತ್ ಎಂಬ ಅವ್ಯಯದ ನಂತರ ಪ್ರಕೃತ ಸೂತ್ರದಿಂದ 'ತ್ಯಕ್' ಪ್ರತ್ಯಯ ಬಂದು, ಪ್ರಾತಿಪದಿಕವಾದ ಮೇಲೆ "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ 'ಸುಪ್' ಲೋಪವಾದ ಮೇಲೆ ಪಶ್ಚಾತ್+ತ್ಯ ಎಂದಿರುತ್ತದೆ. ಇದಕ್ಕೆ ಹಿಂದಿನಂತೆ ಆದಿವೃದ್ಧಿ ಬಂದು ಸುಬಂತ ಮಾಡಿದಾಗ ಪಾಶ್ಚಾತ್ತ್ಯಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ-ಪೌರಸ್ತ್ಯಃ (ಮೊದಲು ಅಥವಾ ಪೂರ್ವದಲ್ಲಿ ಉತ್ಪನ್ನವಾದ ಅಥವಾ ಜನಿಸಿದ)-'ಪುರೋ ಭವಃ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಪುರಸ್ ಎಂಬ ಅವ್ಯಯದ ನಂತರ ಪ್ರಕೃತ ಸೂತ್ರದಿಂದ 'ತ್ಯಕ್(ತ್ಯ)' ಪ್ರತ್ಯಯ ಬಂದು ಪ್ರಾತಿಪದಿಕವಾದ ಮೇಲೆ "ಸುಪೋದಾತುಪ್ರಾತಿಪದಿಕಯೋಃ" ಎಂಬುದರಿಂದ ಸುಪ್ ಲೋಪವಾದ

ಮೇಲೆ ಪುರಸ್+ತ್ಯ ಎಂದಿರುತ್ತದೆ. ಇದಕ್ಕೆ ಹಿಂದಿನಂತೆ ಆದಿವೃದ್ಧಿ ಬಂದು ಸುಬಂತ ಮಾಡಿದಾಗ ಪೌರಸ್ತ್ಯಃ ಎಂಬ ರೂಪವು ಸಿದ್ಧವಾಗುತ್ತದೆ

**(ಶೇಷಾರ್ಥದಲ್ಲಿ ಯತ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1075. ದ್ಯುಪ್ರಾಗಪಾಗುದಕ್ಪ್ರತೀಚೋ ಯತ್॥ 4-2-101॥**

ವೃತ್ತಿ-ದಿವ್ಯಮ್ ।ಪ್ರಾಚ್ಯಮ್ ।ಅಪಾಚ್ಯಮ್ ।ಉದೀಚ್ಯಮ್ । ಪ್ರತೀಚ್ಯಮ್॥

ಪ.ಚ್ಛೇ-ದ್ಯುಪ್ರಾಗಪಾಗುದಕ್ಪ್ರತೀಚಃ, ಯತ್ ।

ಅ.ವೃ-"ಪ್ರತ್ಯಯಃ," "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ" ಮತ್ತು "ಸಮರ್ಥಾನಾಂ ಪ್ರಥಮಾದ್ವಾ" ಮತ್ತು "ಶೇಷೇ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ದಿವ್, ಪ್ರಾಞ್ಚ್, ಅಪಾಞ್ಚ್,ಉದಞ್ಚ್ ಮತ್ತು ಪ್ರತ್ಯಞ್ಚ್ ಶಬ್ದಗಳ ನಂತರ ಶೈಷಿಕಾರ್ಥದಲ್ಲಿ 'ಯತ್ (ಯ)' ಪ್ರತ್ಯಯವು ಬರುತ್ತದೆ. ದಿವ್ ಶಬ್ದವನ್ನು ಬಿಟ್ಟು ಉಳಿದ ಶಬ್ದಗಳು ಕ್ರಮವಾಗಿ ಪ್ರ,ಅಪ,ಉತ್ ಮತ್ತು ಪ್ರತಿ ಈ ಉಪಸರ್ಗಗಳನ್ನು ಪೂರ್ವದಲ್ಲಿಉಳ್ಳ ಅಞ್ಚು-ಧಾತುವಿನಿಂದ ಕೂಡಿವೆ. ಇವುಗಳಿಗೆ ಯತ್ ಪ್ರತ್ಯಯವು ಬರುತ್ತದೆ.

ಉದಾ-ದಿವ್ಯಮ್ (ಸ್ವರ್ಗದಲ್ಲಿ ಉಂಟಾಗುವ ಅಥವಾ ಜನಿಸಿದ) 'ದಿವಿ ಜಾತಾದಿ' ಎಂಬುದು ಲೌಕಿಕ ವಿಗ್ರಹ ವಾಕ್ಯ. ದಿವ್+ಙಿ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ 'ಯತ್(ಯ)' ಬಂದು ಪ್ರಾತಿಪದಿಕವಾದ ಮೇಲೆ, "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ ಸುಪ್ ಲೋಪವಾದ ಮೇಲೆ ದಿವ್+ಯ ಎಂದಿರುತ್ತದೆ. ಞಿತ್,ಣಿತ್ ಮತ್ತು ಕಿತ್‌ಗಳಾಗಿ ಇಲ್ಲದೇ ಇರುವುದರಿಂದ ಆದಿವೃದ್ಧಿಯು ಬರುವುದಿಲ್ಲ. ಹಲಾದಿಯಾಗಿರುವುದರಿಂದ "ಯಸ್ಯೇತಿಚ" ಎಂಬುದರಿಂದ 'ಭ' ಸಂಜ್ಞಕ ಇ-ಕಾರ ಅ-ಕಾರಗಳಿಗೆ ಲೋಪವು ಬರುವುದಿಲ್ಲ. ಹೀಗಾಗಿ 'ದಿವ್ಯ' ಎಂದು ರೂಪವು ಬಂದ ಮೇಲೆ ಸು-ಪ್ರತ್ಯಯವನ್ನು ಸೇರಿಸಿದಾಗ ಅದಕ್ಕೆ ಅಮ್ ಆದೇಶ ಬಂದು ಪೂರ್ವರೂಪವಾದ ಮೇಲೆ ದಿವ್ಯಮ್ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ-ಪ್ರಾಚ್ಯಮ್ (ಪೂರ್ವ ದಿಕ್ಕು ಅಥವಾ ಪೂರ್ವದಿಕ್ಕಿನಲ್ಲಿ ಉಂಟಾಗುವ ಅಥವಾ ಜನಿಸಿದ)-'ಪ್ರಾಚಿ ಜಾತಾದಿ, ದಿವಿ ಜಾತಾದಿ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಪ್ರಾಚ್+ಙಿ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ಯತ್ (ಯ) ಬಂದು ಪ್ರಾತಿಪದಿಕವಾದ ಮೇಲೆ "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ ಸುಪ್ ಲೋಪವಾದ ಮೇಲೆ ಪ್ರಾಚ್+ಯ=ಪ್ರಾಚ್ಯ ಎಂದಿರುತ್ತದೆ. ಮೇಲೆ ಹೇಳಿದಂತೆ ಆದಿವೃದ್ಧಿಯು ಬರುವುದಿಲ್ಲ. ಮತ್ತು 'ಭ' ಸಂಜ್ಞಕ ವರ್ಣಗಳಿಗೆ ಲೋಪವೂ ಬರುವುದಿಲ್ಲ. ಹೀಗಾಗಿ ಪ್ರಾಚ್ಯ ಎಂದು ರೂಪವು ಬಂದ ಮೇಲೆ ಸು-ಪ್ರತ್ಯಯವನ್ನು ಸೇರಿಸಿದಾಗ ಅದಕ್ಕೆ ಅಮ್ ಆದೇಶ ಬಂದು ಪೂರ್ವರೂಪವಾದ ಮೇಲೆ ಪ್ರಾಚ್ಯಮ್ ಎಂಬ ರೂಪವು ಸಿದ್ಧವಾಗುತ್ತದೆ. ಇದೇ ರೀತಿಯಲ್ಲಿ ಅಪಾಚ್ಯಮ್,

ಉದೀಚ್ಯಮ್ ಮತ್ತು ಪ್ರತೀಚ್ಯಮ್ ಎಂಬ ರೂಪಗಳು ಸಿದ್ಧವಾಗುತ್ತವೆ.

**(ಶೇಷಾರ್ಥದಲ್ಲಿ ತ್ಯಪ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1076 ಅವ್ಯಯಾತ್ತ್ಯಪ್ ॥4-2-104॥**

ವಾ.1 ॥ ಅಮೇಹ-ಕ್ವ-ತಸಿ-ತ್ರೇಭ್ಯ ಏವ ಅಮಾತ್ಯಃ। ಇಹತ್ಯಃ। ಕ್ವತ್ಯಃ । ತತಸ್ತ್ಯಃ । ತತ್ರತ್ಯಃ॥

ವಾ.2 ॥ ತ್ಯಬ್ನೇರ್ಧ್ರುವ ಇತಿ ವಕ್ತವ್ಯಮ್। ನಿತ್ಯಃ ।

ಪ.ಚ್ಛೇ-ಅವ್ಯಯಾತ್, ತ್ಯಪ್ ।

ಅ.ವೃ-"ಪ್ರತ್ಯಯಃ," "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ" ಮತ್ತು "ಸಮರ್ಥಾನಾಂ ಪ್ರಥಮಾದ್ವಾ" ಮತ್ತು "ಶೇಷೇ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ಅವ್ಯಯಗಳ ಪರದಲ್ಲಿ ತ್ಯಪ್(ತ್ಯ) ಪ್ರತ್ಯಯವು ಬರುತ್ತದೆ. ಎಲ್ಲಾ ಅವ್ಯಯಗಳ ನಂತರ ತ್ಯಪ್(ತ್ಯ) ಬರಬೇಕಾಗಿತ್ತು, ಆದರೆ ಅದನ್ನು ಈ ಕೆಳಗಿನ ಮೊದಲನೇಯ ವಾರ್ತಿಕವು ಸೀಮಿತಗೊಳಿಸಿದೆ.

ವಾ.1 ॥ ಅಮೇಹ-ಕ್ವ-ತಸಿ-ತ್ರೇಭ್ಯ ಏವ ಅಮಾತ್ಯಃ। ಇಹತ್ಯಃ। ಕ್ವತ್ಯಃ । ತತಸ್ತ್ಯಃ । ತತ್ರತ್ಯಃ॥

ಈ ವಾರ್ತಿಕದಲ್ಲಿ ಎಲ್ಲ ಅವ್ಯಯಗಳಿಗೂ ತ್ಯಪ್(ತ್ಯ) ಪ್ರತ್ಯಯವು ಬಾರದೇ ಕೆವಲ ಅಮಾ, ಇಹ, ಕ್ವ, ತಸಿಲ್-ಪ್ರತ್ಯಯಾಂತ ಮತ್ತು ತ್ರಲ್ ಪ್ರತ್ಯಯಾಂತ ಅವ್ಯಯಗಳ ನಂತರ ಮಾತ್ರವೇ ತ್ಯಪ್(ತ್ಯ) ಪ್ರತ್ಯಯವು ಬರುತ್ತದೆ. ಬೇರೆಕಡೆ ಬರುವುದಿಲ್ಲ.

ಉದಾ-ಅಮಾತ್ಯಃ (ಅಮಾ ಎಂಬುದಕ್ಕೆ ಜೊತೆಗೆ ಎಂಬ ಅರ್ಥವನ್ನು ಹೇಳಲಾಗಿದೆ-ಸಮೀಪದಲ್ಲಿ ಇರುವ ಮಂತ್ರಿ ಮೊದಲಾದವರು ಎಂದರ್ಥ) 'ಅಮಾ (ಸಹ) ವರ್ತತೇ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಇಲ್ಲಿ ಅಮಾ ಎಂಬುದು ಅವ್ಯಯ ಮತ್ತು ಅದೇ ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ತ್ಯಪ್(ತ್ಯ)ಪ್ರತ್ಯಯ ಬಂದು ಪ್ರಾತಿಪದಿಕವಾದ ಮೇಲೆ (ಆದಿ ವೃದ್ಧಿಯು ಬರುವುದಿಲ್ಲ ಮತ್ತು ಭ ಸಂಜ್ಞಕ ವರ್ಣಗಳಿಗೆ ಲೋಪ ಬರುವುದಿಲ್ಲ). ಸು-ಪ್ರತ್ಯಯವನ್ನು ಸೇರಿಸಿದಾಗ ರುತ್ವ ವಿಸರ್ಗಗಳಿಂದ ಅಮಾತ್ಯಃ ಎಂದು ರೂಪವು ಸಿದ್ಧವಾಗುತ್ತದೆ.

ವಾ.2 ॥ ತ್ಯಬ್ನೇರ್ಧ್ರುವ ಇತಿ ವಕ್ತವ್ಯಮ್। ನಿತ್ಯಃ ।

'ನಿ' ಎಂಬ ಅವ್ಯಯದ ಮೇಲೆ ತ್ಯಪ್(ತ್ಯ)ಪ್ರತ್ಯಯ ಬರುತ್ತದೆ ಎಂದು ಹೇಳಬೇಕು. ನಿ+ತ್ಯ= ನಿತ್ಯ ಎಂದಾದಮೇಲೆ ಸು-ಪ್ರತ್ಯಯವನ್ನು ಸೇರಿಸಿದಾಗ ನಿತ್ಯಃ ಎಂದು ರೂಪವು ಸಿದ್ಧವಾಗುತ್ತದೆ. (ಯಾವಾಗಲೂ ಅಥವಾ ನಿತ್ಯವಾಗಿ ಎಂದು ಅರ್ಥ).

**(ವೃದ್ಧಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ-1077. ವೃದ್ಧಿರ್ಯಸ್ಯಾಚಾಮಾದಿಸ್ತದ್ವೃದ್ಧಮ್ ॥1-1-73॥**

ವೃತ್ತಿ-ಯಸ್ಯ ಸಮುದಾಯಸ್ಯಾಚಾಂ ಮಧ್ಯೇ ಆದಿರ್ವೃದ್ಧಿಸ್ತದ್ವೃದ್ಧಸಂಜ್ಞಂ ಸ್ಯಾತ್॥

ಪ.ಚ್ಛೇ.-ವೃದ್ಧಿಃ, ಯಸ್ಯ, ಅಚಾಂ, ಆದಿಃ, ತತ್ ಮತ್ತು ವೃದ್ಧಂ ।

ಅರ್ಥ-ಯಾವ ಶಬ್ದ ಸ್ವರೂಪದಲ್ಲಿ ಅಚ್‌ಗಳಲ್ಲಿ ಆದಿ ಅಚ್ ಇರುವುದೊ ಅದು ವೃದ್ಧಸಂಜ್ಞೆ ಯನ್ನು ಅಂದರೆ ಆ, ಐ ಅಥವಾ ಔ ಗಳಾಗುವವೋ ಆಶಬ್ದಕ್ಕೆ ವೃದ್ಧಸಂಜ್ಞೆಯು ಬರುತ್ತದೆ. ವೃದ್ಧಸಂಜ್ಞೆ ಬಂದಮೇಲೆ ಪಾಣಿನಿಯವರು ಆ ವೃದ್ಧ ಸಂಜ್ಞೆಯುಳ್ಳ ಅಕ್ಷರಗಳಿಗೆ ತಮ್ಮ ಸೂತ್ರಗಳಲ್ಲಿ ಬೇರೆ-ಬೇರೆ ಕಾರ್ಯಗಳನ್ನು ಹೇಳಿರುವರು. ಇದೇ ಅದರ ಪ್ರಯೋಜನ.

**(ತ್ಯದಾದಿಗಳಿಗೆ ವೃದ್ಧಸಂಜ್ಞೆ ವಿಧಿಸುವ ಸೂತ್ರ)**

**ಸೂತ್ರ-1078. ತ್ಯದಾದೀನಿ ಚ** ॥1-1-74॥

ವೃತ್ತಿ-ವೃದ್ಧ ಸಂಜ್ಞಾನಿ ಸ್ಯುಃ॥

ಅರ್ಥ-ಸರ್ವಾದಿ ಗಣಕ್ಕೆ ಸೇರಿದ ತ್ಯದಾದಿ ಗಣದಲ್ಲಿ ಪಠಿತವಾದ ಶಬ್ದಗಳಿಗೂ ವೃದ್ಧಸಂಜ್ಞೆಯು ಬರುತ್ತದೆ.

**(ಶೇಷಾರ್ಥದಲ್ಲಿ ಛ ಪ್ರತ್ಯಯವನ್ನು ವಿಧಿಸುವ ಸೂತ್ರ.)**

**ಸೂತ್ರ-1079-ವೃದ್ಧಾಚ್ಛಃ** ॥ 4-2-114॥

ವೃತ್ತಿ-ಶಾಲೀಯಃ । ಮಾಲೀಯಃ। ತದೀಯಃ॥

ವಾ ॥ ವಾ ನಾಮಧೇಯಸ್ಯ ವೃದ್ಧಸಂಜ್ಞಾ ವಕ್ತವ್ಯಾ। ದೇವದತ್ತೀಯಃ , ದೈವದತ್ತಃ॥

ಪ.ಚ್ಛೇ-ವೃದ್ಧಾತ್, ಛಃ।

ಅ.ವೃ-"ಪ್ರತ್ಯಯಃ," "ಪರಶ್ಚ", "ಙ್ಯಾಪ್‌ಪ್ರಾತಿಪದಿಕಾತ್", "ತದ್ಧಿತಾಃ" ಮತ್ತು "ಸಮರ್ಥಾನಾಂ ಪ್ರಥಮಾದ್ವಾ" ಮತ್ತು "ಶೇಷೇ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ವೃದ್ಧಸಂಜ್ಞೆಯುಳ್ಳ ಸುಬಂತ ಪ್ರಾತಿಪದಿಕಗಳ ಮೇಲೆ ಶೈಷಿಕಾರ್ಥಾದಲ್ಲಿ 'ಛ' ಪ್ರತ್ಯಯವು ಬರುತ್ತದೆ. 'ಛ' ಪ್ರತ್ಯಯದಲ್ಲಿ ಛ್-ಗೆ "ಆಯನೇಯೀನೀಯಿಯಃ ಫಢಖಛಘಾಮ್ ಪ್ರತ್ಯಯಾದಿನಾಮ್" ಎಂಬ ಸೂತ್ರದಿಂದ 'ಈಯ್' ಆದೇಶ ಬಂದು ಈಯ್+ಅ=ಈಯ ಎಂದಿರುತ್ತದೆ.

ಉದಾ-ಶಾಲೀಯಃ (ಮನೆಯಲ್ಲಿ ಉಂಟಾದ ಅಥವಾ ಜನಿಸಿದ): 'ಶಾಲಾಯಾಂ ಜಾತಾದಿ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಶಾಲಾ+ಙಿ ಎಂಬುದು ಅಲೌಕಿಕ ವಿಗ್ರಹವಾಕ್ಯ. ಶಾಲಾ ಎಂಬಲ್ಲಿ ಮೊದಲನೇ ಅಚ್ ಆದ ಆಕಾರವು ವೃದ್ಧಿಸಂಜ್ಞೆಯನ್ನು ಪಡೆದಿದೆ. ಆದುದ್ದರಿಂದ ಇದಕ್ಕೆ "ವೃದ್ಧಿರ್ಯಸ್ಯಾಚಾಮಾದಿಸ್ತದ್‌ವೃದ್ಧಮ್" ಎಂಬುದರಿಂದ ವೃದ್ಧಸಂಜ್ಞೆಯು ಬರುತ್ತದೆ. ಪ್ರಕೃತ ಸೂತ್ರದಿಂದ 'ಛ' ಪ್ರತ್ಯಯವು ಬಂದು ಪ್ರಾತಿಪದಿಕವಾದ ಮೇಲೆ "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ ಸುಪ್-ಗೆ ಲುಕ್ ಬಂದು, ಶಾಲಾ+ಛ ಎಂದಿರುತ್ತದೆ. ಛ-ನಲ್ಲಿರುವ ಛ್-ಗೆ "ಆಯನೇಯೀನೀಯಿಯಃ ಫಢಖಛಘಾಮ್ ಪ್ರತ್ಯಯಾದಿನಾಮ್" ಎಂಬ ಸೂತ್ರದಿಂದ 'ಈಯ್' ಆದೇಶ ಬಂದು ಶಾಲಾ+ಈಯ್+ಅ=ಶಾಲಾ+ಈಯ ಎಂದಿರುತ್ತದೆ. 'ಛ'

ಸಂಜ್ಞೆಯುಳ್ಳ ಅಂತ್ಯ 'ಆ'ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು ಶಾಲ್+ಈಯ=ಶಾಲೀಯ ಎಂದಿದ್ದಾಗ ಸು ಸೇರಿಸಿದರೆ ರುತ್ವ ವಿಸರ್ಗಗಳಿಂದ ಶಾಲೀಯಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ–ಮಾಲೀಯಃ (ಮಾಲೆಯಲ್ಲಿರುವ ನೂಲು ಮೊದಲಾದ)–ಈ ಶಬ್ದವು ಮೇಲಿನ ಪ್ರಕ್ರಿಯೆಯನ್ನೇ ಅನುಸರಿಸಿರುವುದರಿಂದ ಪ್ರತ್ಯೇಕವಾಗಿ ವ್ಯಾಖ್ಯಾನ ಮಾಡಲಾಗಿಲ್ಲ.

ಉದಾ–ತದೀಯಃ (ಅವನದ್ದು) 'ತಸ್ಯ ಅಯಂ' ಎಂಬುದು ಲೌಕಿಕ ವಿಗ್ರಹ ವಾಕ್ಯ. ತದ್+ಙಸ್ ಎಂಬುದು ಅಲೌಕಿಕ ವಿಗ್ರಹವಾಕ್ಯ. ಈ ಶಬ್ದವು ತ್ಯದಾದಿ ಗಣಕ್ಕೆ ಸೇರಿರುವುದರಿಂದ "ತ್ಯದಾದೀನಿ ಚ" ಎಂಬ ಸೂತ್ರದಿಂದ ವೃದ್ಧಸಂಜ್ಞೆಯನ್ನು ಪಡೆಯುತ್ತದೆ. ಉಳಿದ ಪ್ರಕ್ರಿಯೆಯು ಹಿಂದಿನಂತೆಯೇ ನಡೆಯುತ್ತದೆ. ತದ್+ಈಯ್+ಅ= ತದೀಯ ಎಂಬ ಪ್ರಾತಿಪದಿಕವು ಸುಬಂತವಾದಾಗ ತದೀಯಃ ಎಂದು ರೂಪವು ಸಿದ್ಧವಾಗುತ್ತದೆ.

ವಾ ॥ ವಾ ನಾಮಧೇಯಸ್ಯ ವೃದ್ಧಸಂಜ್ಞಾ ವಕ್ತವ್ಯಾ।

ಉದಾ–ದೇವದತ್ತೀಯಃ, ದೈವದತ್ತಃ॥

ಅರ್ಥ–ನಾಮವಾಚಕ ಶಬ್ದಗಳಿಗೆ ವಿಕಲ್ಪದಿಂದ ವೃದ್ಧಸಂಜ್ಞೆಯು ಬರುತ್ತದೆ. ಈ ವಾರ್ತಿಕದಿಂದ ದೇವದತ್ತ ಎಂಬ ನಾಮವಾಚಕ ಶಬ್ದಕ್ಕೆ ಈ ವಾರ್ತಿಕದಿಂದ ವೃದ್ಧಸಂಜ್ಞೆ ವಿಕಲ್ಪದಿಂದ ಬರುತ್ತದೆ. "ವೃದ್ಧಾಚ್ಛಃ" ಎಂಬ ಸೂತ್ರದಿಂದ 'ಛ' ಆದೇಶ, ನಂತರ "ಆಯನೇಯೀನೀಯಿಯಃ ಫಢಖಛಘಾಮ್ ಪ್ರತ್ಯಯಾದಿನಾಮ್" ಎಂಬುದರಿಂದ 'ಈಯ್' ಆದೇಶ ಬಂದು ದೇವದತ್ತ+ಈಯ್+ಅ ಎಂದಿದ್ದಾಗ, ದೇವದತ್ತ ಶಬ್ದದ ಕೊನೆಯ 'ಅ'ಕಾರಕ್ಕೆ ಭ–ಸಂಜ್ಞೆ ಇರುವುದರಿಂದ ಅದಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು ದೇವದತ್+ಈಯ= ದೇವದತ್ತೀಯ ಎಂದಾಗಿ ಸುಬಂತವಾದಾಗ ದೇವದತ್ತೀಯಃ ಎಂದು ರೂಪವು ಸಿದ್ಧವಾಗುತ್ತದೆ.

ವೃದ್ಧ ಸಂಜ್ಞೆ ಬಾರದ ಪಕ್ಷದಲ್ಲಿ–"ಶೇಷೇ" ಎಂಬ ಸೂತ್ರದಿಂದ ಅಣ್(ಅ) ಪ್ರತ್ಯಯ ಮತ್ತು ಆದಿವೃದ್ಧಿ, "ಯಸ್ಯೇತಿಚ" ಎಂಬುದರಿಂದ ಭ–ಸಂಜ್ಞೆಕ 'ಅ'ಕಾರಕ್ಕೆ ಲೋಪ ಬಂದು ದೈವದತ್+ಅ= ದೈವದತ್ತ ಎಂದಾದ ಮೇಲೆ ಸುಬಂತ ಮಾಡಿದಾಗ ದೈವದತ್ತಃ ಎಂಬ ನಾಮವಾಚಕ ಶಬ್ದವು ಸಿದ್ಧವಾಗುತ್ತದೆ.

**(ಗಹಾದಿಗಳಿಗೆ ಛ ಪ್ರತ್ಯಯವನ್ನು ವಿಧಿಸುವ ಸೂತ್ರ.)**

**ಸೂತ್ರ–1080. ಗಹಾದಿಭ್ಯಶ್ಚ ॥4–2–138॥**

ವೃತ್ತಿ–ಗಹೀಯಃ॥

ಪ.ಚ್ಛೇ–ಗಹಾದಿಭ್ಯಃ, ಚ।

ಅ.ವೃ–"ವೃದ್ಧಾಚ್ಛಃ" ಎಂಬ ಸೂತ್ರದಿಂದ 'ಛಃ' ಎಂಬ ಪದವು ಅನುವೃತ್ತವಾಗಿದೆ.

"ಪ್ರತ್ಯಯಃ," "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ" ಮತ್ತು "ಸಮರ್ಥಾನಾಂ ಪ್ರಥಮಾದ್ವಾ" ಮತ್ತು "ಶೇಷೇ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-'ಗಹ' ಮೊದಲಾದ ಗಣಗಳಲ್ಲಿ ಹೇಳಿರುವ ಪ್ರಾತಿಪದಿಕಗಳ ನಂತರ ಶೈಷಿಕಾರ್ಥದಲ್ಲಿ 'ಛ' ಪ್ರತ್ಯಯವು ಬರುತ್ತದೆ. ಗಹಾದಿ ಗಣದಲ್ಲಿ ಈ ಕೆಳಗಿನ ಶಬ್ದಗಳು ಕಂಡುಬರುತ್ತವೆ.-ಗಹ, ಅನ್ತಃಸ್ಥ, ಸಮ, ವಿಷಮ, ಮಧ್ಯ,ಮಧ್ಯಂದಿನ ಚರಣೇ,ಉತ್ತಮ, ಅಂಗ, ವಂಗ, ಮಗಧ, ಪೂರ್ವಪಕ್ಷ, ಅಪರಪಕ್ಷ ಇತ್ಯಾದಿ ಶಬ್ದಗಳಿವೆ.

ಉದಾ-ಗಹೀಯಃ (ಗಹ ಎಂಬ ದೇಶದಲ್ಲಿ ಹುಟ್ಟಿದವನು ಎಂದು ಅರ್ಥ)- 'ಗಹೇ ಭವಃ' ಎಂಬುದು ಲೌಕಿಕ ವಿಗ್ರಹವಾಕ್ಯ. ಗಹೇ+ಙಿ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ 'ಛ' ಪ್ರತ್ಯಯವು ಬಂದು ಪ್ರಾತಿಪದಿಕವಾದ ಮೇಲೆ, "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ ಸುಪ್-ಗೆ ಲುಕ್ ಬಂದು, ಗಹಃ+ಛ ಎಂದಿರುತ್ತದೆ. "ಆಯನೇಯೀನೀಯಿಯಃ ಫಢಖಛಘಾಮ್ ಪ್ರತ್ಯಯಾದಿನಾಮ್" ಎಂಬ ಸೂತ್ರದಿಂದ ಛ-ನಲ್ಲಿರುವ ಛ್-ಗೆ 'ಈಯ್' ಆದೇಶ ಬಂದು, ಗಹ್+ಈಯ್+ಅ=ಗಹೀಯ ಎಂದಿದ್ದಾಗ, ಸು-ಪ್ರತ್ಯಯವನ್ನು ಸೇರಿಸಿದ ಮೇಲೆ ರುತ್ವ ವಿಸರ್ಗಗಳಿಂದ ಗಹೀಯಃ ಎಂದು ರೂಪವು ಸಿದ್ಧವಾಗುತ್ತದೆ.

**(ಯುಷ್ಮದಸ್ಮಗಳಿಗೆ ಖಞ್, ಛ ಪ್ರತ್ಯಯವನ್ನು ವಿಧಿಸುವ ಸೂತ್ರ.)**

**ಸೂತ್ರ-1081-ಯುಷ್ಮದಸ್ಮದೋರನ್ಯತರಸ್ಯಾಂ ಖಞ್ ಚ ॥ 4-3-1॥**

ವೃತ್ತಿ-ಚಾಚ್ಛಃ । ಪಕ್ಷೇಣ್ । ಯುವಯೋರ್ಯುಷ್ಮಾಕಂ ವಾ ಅಯಂ ಯುಷ್ಮದೀಯಃ, ಅಸ್ಮದೀಯಃ॥

ಪ.ಚ್ಛೇ-ಯುಷ್ಮದಸ್ಮದೋಃ, ಅನ್ಯತರಸ್ಯಾಂ, ಖಞ್, ಚ।

ಅ.ವೃ-"ಪ್ರತ್ಯಯಃ," "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ" ಮತ್ತು "ಸಮರ್ಥಾನಾಂ ಪ್ರಥಮಾದ್ವಾ" ಮತ್ತು "ಶೇಷೇ" ಎಂಬುವು ಅಧಿಕಾರ ಸೂತ್ರಗಳಾಗಿವೆ. ಸೂತ್ರದಲ್ಲಿ ಹೇಳಿರುವ ಚ ಶಬ್ದದಿಂದ "ಗರ್ತೋತ್ತರಪದಾಚ್ಛಃ" ಎಂಬ ಸೂತ್ರದಿಂದ 'ಛ' ಎಂಬುದು ಅನುವೃತ್ತವಾಗುತ್ತದೆ.

ಅರ್ಥ-ಯುಷ್ಮದ್ ಮತ್ತು ಅಸ್ಮದ್ ಶಬ್ದದ ನಂತರ ವಿಕಲ್ಪದಿಂದ ಖಞ್ ಮತ್ತು ಛ ಪ್ರತ್ಯಯಗಳು ಬರುತ್ತವೆ. ವೈಕಲ್ಪಿಕವಾಗಿ ಬಾರದ ಪಕ್ಷದಲ್ಲಿ ಶೇಷೇ ಎಂಬ ಸೂತ್ರದಿಂದ ಅಣ್ ಪ್ರತ್ಯಯವು ಬರುತ್ತದೆ.

ಉದಾ-ಯುಷ್ಮದೀಯಃ-ಯುಷ್ಮದ್+ಛ= ಯುಷ್ಮದ್+ಈಯ್+ಅ= ಯುಷ್ಮದೀಯ.

ಉದಾ-ಅಸ್ಮದೀಯಃ-ಅಸ್ಮದ್+ಛ= ಅಸ್ಮದ್+ಈಯ್+ಅ= ಅಸ್ಮದೀಯ.

**(ಖಞ್ ಮತ್ತು ಅಣ್ ಪರವಾದಾಗ ಆದೇಶವನ್ನು ವಿಧಿಸುವ ಸೂತ್ರ.)**

**ಸೂತ್ರ-1082. ತಸ್ಮಿನ್ನಣಿ ಚ ಯುಷ್ಮಾಕಾಸ್ಮಾಕೌ ॥ 4-3-2॥**

ವೃತ್ತಿ-ಯುಷ್ಮದಸ್ಮದೋಃ ಏತೌಆದೇಶೌ ಸ್ತಃ ಖಞಿ ಅಣಿ ಚ । ಯೌಷ್ಮಾಕೀಣಃ॥

ಆಸ್ಮಾಕೀನಃ। ಯೌಷ್ಮಾಕಃ। ಆಸ್ಮಾಕಃ ॥

ಪ.ಚ್ಛೇ.-ತಸ್ಮಿನ್, ಅಣಿ ಚ ಯುಷ್ಮಾಕಾಸ್ಮಾಕೌ ।

ಅ.ವೃ-ತಸ್ಮಿನ್ ಎಂಬುದರಿಂದ ಯುಷ್ಮದಸ್ಮದೋರನ್ಯತರಸ್ಯಾಂ "ಖಞ್ ಚ" ಎಂಬ ಹಿಂದಿನ ಸೂತ್ರದಿಂದ ಖಞ್ ಎಂಬ ಪದವು ಅನುವೃತ್ತವಾಗಿದೆ. ಮತ್ತು "ಯುಷ್ಮದಸ್ಮದೋಃ" ಎಂಬ ಪದವು ಅನುವೃತ್ತವಾಗಿದೆ.

ಅರ್ಥ-'ಖಞ್' ಮತ್ತು ಅಣ್ ಪರದಲ್ಲಿದ್ದಾಗ ಯುಷ್ಮದ್ ಮತ್ತು ಅಸ್ಮದ್ ಶಬ್ದಗಳಿಗೆ ಕ್ರಮವಾಗಿ ಯುಷ್ಮಾಕ ಮತ್ತು ಅಸ್ಮಾಕ ಎಂಬ ಶಬ್ದಗಳು ಆದೇಶವಾಗಿ ಬರುತ್ತವೆ.

ಉದಾ-ಯೌಷ್ಮಾಕೀಣಃ । ಆಸ್ಮಾಕೀನಃ-ಈ ಉದಾಹರಣೆಗಳಲ್ಲಿ ಆದಿವೃದ್ಧಿ ಮತ್ತು ಖಞ್ (ಖ-ಈನ್+ಅ) ಪ್ರತ್ಯಯಗಳು ಬರುತ್ತವೆ.

ಉದಾ-ಯೌಷ್ಮಾಕಃ। ಆಸ್ಮಾಕಃ-ಈ ಉದಾಹರಣೆಗಳಲ್ಲಿ ಆದಿವೃದ್ಧಿ ಮತ್ತು ಅಣ್ ಪ್ರತ್ಯಯಗಳು ಬಂದಿವೆ.

**(ಖಞ್-ಅಣ್‌ಗಳನ್ನು ಯುಷ್ಮದಸ್ಮದ್‌ಗಳಿಗೆ ಆದೇಶವನ್ನು ವಿಧಿಸುವ ಸೂತ್ರ.)**

**ಸೂತ್ರ-1083. ತವಕಮಮಕಾವೇಕವಚನೇ ॥ 4-3-3॥**

ವೃತ್ತಿ-ಏಕಾರ್ಥವಾಚಿನೋಃ ಯುಷ್ಮದಸ್ಮದೋಃ ತವಕಮಮಕೌಸ್ತಃ, ಖಞಿ ಅಣಿ ಚ । ತಾವಕೀನಃ। ತಾವಕಃ। ಮಾಮಕೀನಃ । ಮಾಮಕಃ । ಛೇ ತು।

ಪ.ಚ್ಛೇ-ತವಕಮಮಕೌ, ಏಕವಚನೇ।

ಅರ್ಥ-ಕೇವಲ ಏಕವಚನ ಪ್ರಯೋಗವಿದ್ದಾಗ ಖಞ್ ಮತ್ತು ಅಣ್ ಪ್ರತ್ಯಯಗಳು ಪರದಲ್ಲಿದ್ದಾಗ ಯುಷ್ಮದ್ ಮತ್ತು ಅಸ್ಮದ್ ಶಬ್ದಗಳಿಗೆ ಕ್ರಮವಾಗಿ ತವಕ ಮತ್ತು ಮಮಕ ಶಬ್ದಗಳು ಆದೇಶವಾಗಿ ಬರುತ್ತವೆ. ಇಲ್ಲಿ ಆದೇಶಗಳು ಕ್ರಮವಾಗಿ ಬರುವುದಕ್ಕೆ 'ಯಥಾಸಂಖ್ಯಮನುದೇಶಃ ಸಮಾನಾಮ್' ಎಂಬ ನಿಯಮವೇ ಕಾರಣ ಎಂದು ತಿಳಿಯಬೇಕು. ಇಲ್ಲಿ ಆದಿವೃದ್ಧಿ ಮತ್ತು ಖ್ ಪ್ರತ್ಯಯಕ್ಕೆ ಈನ್ ಮತ್ತು ಅಣ್ ಪ್ರತ್ಯಯದಲ್ಲಿ ಅ-ಪ್ರತ್ಯಯವು ಬಂದು ರೂಪಗಳು ಸಿದ್ಧವಾಗಿವೆ.

**(ಛ ಪ್ರತ್ಯಯ ಪರವಾದಾಗ ಯುಷ್ಮದ್ ಅಸ್ಮದ್‌ಗಳಿಗೆ 'ತ್ವ' ಮತ್ತು 'ಮ'ಗಳನ್ನು ಕ್ರಮವಾಗಿ ಆದೇಶವಾಗಿ ವಿಧಿಸುವ ಸೂತ್ರ)**

**ಸೂತ್ರ-1084 ಪ್ರತ್ಯಯೋತ್ತರಪದಯೋಶ್ಚ ॥7-2-98॥**

ವೃತ್ತಿ-ಮಪರ್ಯಂತಯೋಃ ಏತಯೋಃ ಏಕಾರ್ಥವಾಚಿನೋಃ ತ್ವಮೌ ಸ್ತಃ ಪ್ರತ್ಯಯೇ ಉತ್ತರಪದೇ ಚ ಪರತಃ । ತ್ವದೀಯಃ । ಮದೀಯಃ। ತ್ವತ್ಪುತ್ರಃ । ಮತ್ಪುತ್ರಃ॥

ಪ.ಚ್ಛೇ-ಪ್ರತ್ಯಯೋತ್ತರಪದಯೋಃ, ಚ।

ಅ.ವೃ-"ತ್ವಮಾವೇಕವಚನೇ" ಎಂಬ ಸೂತ್ರದಿಂದ ತ್ವಮೌ ಮತ್ತು ಏಕವಚನೇ ಎಂಬ ಪದಗಳು ಅನುವೃತ್ತವಾಗುತ್ತವೆ. "ಯುಷ್ಮದಸ್ಮದೋರನಾದೇಶೇ" ಎಂಬ ಸೂತ್ರದಿಂದ 'ಯುಷ್ಮದಸ್ಮದೋಃ' ಎಂಬ ಪದವು ಮತ್ತು "ಪಮರ್ಯನ್ತಸ್ಯ" ಎಂಬ

ಸೂತ್ರವು ಅನುವೃತ್ತವಾಗುತ್ತದೆ.

ಅರ್ಥ-'ಛ' ಪ್ರತ್ಯಯ ಅಥವಾ ಉತ್ತರ ಪದವು ಪರವಾದಾಗ ಏಕಾರ್ಥಗಳಾದ ಅಂದರೆ(ಏಕವಚನದಲ್ಲಿರುವ) ಯುಷ್ಮದ್-ಅಸ್ಮತ್ ಶಬ್ದಗಳ ಪಮರ್ಯನ್ತ ಭಾಗಕ್ಕೆ ತ್ವ ಮತ್ತು ಮ ಆದೇಶಗಳು ಬರುತ್ತವೆ. ಛ ಪ್ರತ್ಯಯವಿದ್ದಾಗ 'ಈಯ್' ಆದೇಶವು ಬರುತ್ತದೆ.

ಉದಾ-ತ್ವದೀಯಃ ।ಮದೀಯಃ। ತ್ವತ್ಪುತ್ರಃ । ಮತ್ಪುತ್ರಃ-ಪ್ರಕೃತ ಸೂತ್ರದಿಂದ 'ತ್ವ' 'ಮ' ಆದೇಶಗಳು ಯುಷ್ಮದ್ ಅಸ್ಮದ್ ಗಳಲ್ಲಿರುವ ಮ-ಪರ್ಯಂತವಾದ ಯುಷ್ಮ ಮತ್ತು ಅಸ್ಮ ಗಳಿಗೆ 'ತ್ವ' ಮತ್ತು 'ಮ' ಆದೇಶಗಳು ಕ್ರಮವಾಗಿ ಬಂದು 'ತ್ವತ್ಪುತ್ರಃ' ಮತ್ತು 'ಮತ್ಪುತ್ರಃ' ಎಂದಾಗುತ್ತದೆ. ಅದು ಮಾತ್ರವಲ್ಲದೇ ಈ ರೂಪಗಳು ಬಂದ ಮೇಲೆ 'ಛ'ಕಾರಕ್ಕೆ 'ಈಯ್' ಆದೇಶಬಂದು ತ್ವದೀಯಃ ಮತ್ತು ಮದೀಯಃ ಉತ್ತರಪದಪರವಾಗಿದ್ದಾಗ 'ತ್ವ' ಮತ್ತು 'ಮ' ಗಳು ಬರುವುದಕ್ಕೆ ಉದಾಹರಣೆಗಳಾಗಿವೆ. ಛ ಪ್ರತ್ಯಯವಿದ್ದಾಗ ಈಯ್ ಆದೇಶವು ಬರುವುದಕ್ಕೂ ಉದಾಹರಣೆಗಳಾಗಿವೆ.

**(ಶೇಷಾರ್ಥದಲ್ಲಿ ಮ-ಪ್ರತ್ಯಯ ವಿಧಿಸುವ ಸೂತ್ರ)**

**ಸೂತ್ರ-1085. ಮಧ್ಯಾನ್ಮಃ** ॥ 4-2-8॥

ವೃತ್ತಿ-ಮಧ್ಯಮಃ॥

ಪ.ಚ್ಛೇ-ಮಧ್ಯಾತ್, ಮಃ॥

ಅ.ವೃ-"ಪ್ರತ್ಯಯಃ," "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ" ಮತ್ತು "ಸಮರ್ಥಾನಾಂ ಪ್ರಥಮಾದ್ವಾ" ಮತ್ತು "ಶೇಷೇ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ಮಧ್ಯ ಶಬ್ದದಮೇಲೆ ಶೈಷಿಕಾರ್ಥದ ಜಾತಾದ್ಯರ್ಥದಲ್ಲಿ ಮ-ಪ್ರತ್ಯಯ ಬರುತ್ತದೆ.

ಉದಾ-'ಮಧ್ಯೇ ಭವಃ'। (ಮಧ್ಯದಲ್ಲಿ ಇರುವವನು).-'ಮಧ್ಯೇ ಜಾತಃ' ಎಂಬುದು ಲೌಕಿಕ ವಿಗ್ರಹವಾಕ್ಯ. ಮಧ್ಯ+ಜಿ ಎಂಬುದು ಅಲೌಕಿಕ ವಿಗ್ರಹವಾಕ್ಯ. ಇದಕ್ಕೆ ಪ್ರಾತಿಪದಿಕ ಸಂಜ್ಞೆಬಂದು ಸುಪೋಧಾತುಪ್ರಾತಿಪದಿಕಯೋಃ ಎಂಬುದರಿಂದ ಸುಪ್ ಗೆ ಲುಕ್ ಬಂದು ಮಧ್ಯಮ ಎಂದಿರುತ್ತದೆ. ಸುಬಂತವಾದ ಮೇಲೆ ಮಧ್ಯಮಃ ಎಂದಾಗುತ್ತದೆ.

**(ಶೇಷಾರ್ಥದಲ್ಲಿ ಠಞ್ ವಿಧಿಸುವ ಸೂತ್ರ)**

**ಸೂತ್ರ-1086 ಕಾಲಾಟ್ಠಞ್** ॥ 4-3-11॥

ವೃತ್ತಿ-ಕಾಲವಾಚಿಭ್ಯಃ ಠಞ್ ಸ್ಯಾತ್ । ಕಾಲಿಕಮ್ । ಮಾಸಿಕಮ್। ಸಾಂವತ್ಸರಿಕಮ್।

ವಾ॥ ಅವ್ಯಯಾನಾಂ ಭಮಾತ್ರೇ ಟಿಲೋಪಃ ಸಾಯಮ್ಪ್ರಾತಿಕಃ । ಪೌನಃಪುನಿಕಃ॥

ಪ.ಚ್ಛೇ-ಕಾಲಾತ್, ಠಞ್ ।

ಅ.ವೃ-"ಪ್ರತ್ಯಯಃ," "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ" ಮತ್ತು "ಸಮರ್ಥಾನಾಂ ಪ್ರಥಮಾದ್ವಾ" ಮತ್ತು "ಶೇಷೇ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ಕಾಲವಾಚಕವಾದ ಎಲ್ಲ ಶಬ್ದಗಳ ನಂತರ ಠಞ್ ಪ್ರತ್ಯಯವೇ ಬರುತ್ತದೆ.- ಶೈಷಿಕಾರ್ಥದಲ್ಲಿ ಠಞ್ ನಲ್ಲಿ 'ಠ'ಮಾತ್ರ ಉಳಿಯುತ್ತದೆ. "ಠಸ್ಯೇಕಃ" ಎಂಬ ಸೂತ್ರದಿಂದ ಠ-ಗೆ ಇಕ ಎಂಬ ಆದೇಶವು ಬರುತ್ತದೆ.

ಉದಾ-ಕಾಲಿಕಮ್-(ಸಮಯದಲ್ಲಿ ಉಂಟಾಗುವ)-ಕಾಲ ಶಬ್ದದ ನಂತರ ಕಾಲೇಭವಂ ಎಂಬ ಅರ್ಥದಲ್ಲಿ ಪ್ರಕೃತ ಸೂತ್ರದಿಂದ ಠಞ್ ಪ್ರತ್ಯಯವು ಬರುತ್ತದೆ. "ಠಸ್ಯೇಕಃ" ಎಂಬ ಸೂತ್ರದಿಂದ 'ಇಕ' ಆದೇಶವು ಬರುತ್ತದೆ. ತದ್ಧಿತ ವಾದುದರಿಂದ ಆದಿವೃದ್ಧಿ ಬಂದು ಕಾಲಿಕಮ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ-ಮಾಸಿಕಮ್ ಮತ್ತು ಸಾಂವತ್ಸರಿಕಮ್-(ಕ್ರಮವಾಗಿ ಮಾಸದಲ್ಲಿ ಉಂಟಾಗುವ, ವರ್ಷದಲ್ಲಿ ಉಂಟಾಗುವ)-ಈ ರೂಪಗಳೂ ಸಹ ಹಿಂದಿನಂತೆ ಪ್ರಕ್ರಿಯೆಯನ್ನು ಅನುಸರಿಸಿವೆ.

ವಾ॥ ಅವ್ಯಯಾನಾಂ ಭಮಾತ್ರೇ ಟಿಲೋಪಃ ಸಾಯಮ್ಪ್ರಾತಿಕಃ । ಪೌನಃಪುನಿಕಃ॥

ಅರ್ಥ-ಅವ್ಯಯಗಳಿಗೆ 'ಭ'ಸಂಜ್ಞೆಯನ್ನು ಹೊಂದಿದ ಕೂಡಲೇ ಟಿಲೋಪವು ಬರುತ್ತದೆ. ಪರವಾದ ಪ್ರತ್ಯಯವು ಡಿತ್ ಆಗಬೇಕೆಂಬ ನಿಯಮವನ್ನು ಅನುಸರಿಸುವುದಿಲ್ಲವೆಂದು ತಿಳಿಯಬೇಕು.

ಉದಾ-ಸಾಯಮ್ಪ್ರಾತಿಕಃ । ಪೌನಃಪುನಿಕಃ । (ಕ್ರಮವಾಗಿ ಸಾಯಂಕಾಲ ಮತ್ತು ಪ್ರಾತಃಕಾಲದಲ್ಲಿ ಉಂಟಾಗುವ, ಮತ್ತೆಮತ್ತೆ ಉಂಟಾಗುವ)-ಸಾಯಂಪ್ರಾತರ್ ಮತ್ತು ಪುನಃಪುನರ್ ಎಂಬ ಅವ್ಯಯಗಳು ಕಾಲವಾಚಕ ಶಬ್ದಗಳು. ಆದ್ದರಿಂದ ಪ್ರಕೃತ ಸೂತ್ರದಿಂದ ಠಞ್(ಠ) ಪ್ರತ್ಯಯವು ಸೇರಿ ಪ್ರಕೃತ ವಾರ್ತಿಕದಿಂದ 'ಟಿ' ಲೋಪ ಉಂಟಾಗಿ ಈ ಮೇಲಿನ ರೂಪಗಳು ಸಿದ್ಧವಾಗಿವೆ.

**(ಜಾತಾದ್ಯರ್ಥದಲ್ಲಿ ಏಣ್ಯ ಪ್ರತ್ಯಯ ವಿಧಿಸುವ ಸೂತ್ರ.)**

**ಸೂತ್ರ-1087. ಪ್ರಾವೃಷ ಏಣ್ಯಃ ॥ 4-3-17॥**

ವೃತ್ತಿ-ಪ್ರಾವೃಷೇಣ್ಯಃ ॥

ಪ.ಛೇ-ಪ್ರಾವೃಷಃ, ಏಣ್ಯಃ।

ಅ.ವೃ-ಕಾಲಾಟ್ಠಞ್ ಎಂಬ ಸೂತ್ರದಿಂದ ಕಾಲಾತ್ ಎಂಬ ಪದವು ಅನುವೃತ್ತವಾಗುತ್ತದೆ, "ಪ್ರತ್ಯಯಃ," "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ" ಮತ್ತು "ಸಮರ್ಥಾನಾಂ ಪ್ರಥಮಾದ್ವಾ" ಮತ್ತು "ಶೇಷೇ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ಪ್ರಾವೃಟ್-ಶಬ್ದದ ನಂತರ 'ತತ್ರಭವಃ' ಎಂಬ ಅರ್ಥದಲ್ಲಿ ಏಣ್ಯ ಎಂಬ ಪ್ರತ್ಯಯವು ಬರುತ್ತದೆ.

ಉದಾ-ಪ್ರಾವೃಷೇಣ್ಯಃ-(ಮಳೆಗಾಲದಲ್ಲಿ ಇರುವ ನದಿ ಮೊದಲಾದವು-ಪ್ರಾವೃಷಿ ಭವಃ)-ಪ್ರಾವೃಷಿ+ಏಣ್ಯಃ ಎಂಬಲ್ಲಿ 'ಭ'ಸಂಜ್ಞಕ 'ಇ'ಕಾರವು ಲೋಪವಾಗಿ

ಪ್ರಾವೃಷ್+ಏಣ್ಯಃ= ಪ್ರಾವೃಷೇಣ್ಯಃ ಎಂದು ರೂಪವು ಸಿದ್ಧವಾಗುತ್ತದೆ.

**(ಶೇಷಾರ್ಥದಲ್ಲಿ ಟ್ಯು, ಟ್ಯುಲ್ ಮತ್ತು ತುಟ್ ಪ್ರತ್ಯಯ ವಿಧಿಸುವ ಸೂತ್ರ.)**

**ಸೂತ್ರ-1088 ಸಾಯಂಚಿರಂಪ್ರಾಹ್ಣೇಪ್ರಗೇಽವ್ಯಯೇಭ್ಯಷ್ಟ್ಯುಟ್ಯುಲೌ ತುಟ್ ಚ (4-3-23)**

ವೃತ್ತಿ-ಸಾಯಮಿತ್ಯಾದಿಭ್ಯಃ ಚತುರ್ಭ್ಯಃ ಅವ್ಯಯೇಭ್ಯಶ್ಚ ಕಾಲವಾಚಿಭ್ಯಃ ಟ್ಯುಟ್ಯುಲೌ ಸ್ತಃ ತಯೋಃತುಟ್ಚ । ಸಾಯನ್ತನಮ್ ।ಚಿರನ್ತನಮ್। ಪ್ರಾಹ್ಣೇಪ್ರಗೇ ಅನಯೋಃ ಏದಂತತ್ವಂ ನಿಪಾತ್ಯತೇ । ಪ್ರಾಹ್ಣೇತನಮ್ । ಪ್ರಗೇತನಮ್ । ದೋಷಾಯತನಮ್॥

ಪ.ಚ್ಛೇ-ಸಾಯಂಚಿರಂಪ್ರಾಹ್ಣೇಪ್ರಗೇ, ಅವ್ಯಯೇಭ್ಯಃ, ಟ್ಯುಟ್ಯುಲೌ, ತುಟ್, ಚ।

ಅ.ವೃ-"ಕಾಲಾಠಞ್" ಎಂಬ ಸೂತ್ರದಿಂದ ವಚನವಿಪರಿಣಾಮಮಾಡಿ ಕಾಲೇಭ್ಯಃ ಎಂಬ ಪದವು ಅನುವೃತ್ತವಾಗುತ್ತದೆ. "ಪ್ರತ್ಯಯಃ," "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ" ಮತ್ತು "ಸಮರ್ಥಾನಾಂ ಪ್ರಥಮಾದ್ವಾ" ಮತ್ತು "ಶೇಷೇ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ಕಾಲವಾಚಕಗಳಾದ ಸಾಯಂ, ಚಿರಂ, ಪ್ರಾಹ್ಣೇ, ಪ್ರಗೇಷ ಶಬ್ದಗಳ ನಂತರ ಮತ್ತು ಅವ್ಯಯಗಳ ನಂತರವು 'ಟ್ಯು' ಮತ್ತು 'ಟ್ಯುಲ್(ಟ್ಯು)' ಪ್ರತ್ಯಯಗಳು ಬರುವವು. ಆಪ್ರತ್ಯಯಗಳಿಗೆ ತುಟ್ ಆಗಮವು ಬರುವುದು.

ಉದಾ-ಸಾಯನ್ತನಮ್-(ಸಾಯಂಕಾಲದಲ್ಲಿ ಉಂಟಾಗುವ-ಸಾಯೇ ಭವಂ)- 'ಸಾಯೇ ಭವಂ' ಎಂಬುದು ಲೌಕಿಕ ವಿಗ್ರಹವಾಕ್ಯ ಸಾಯ+ಜಿ ಎಂಬುದು ಅಲೌಕಿಕ ವಿಗ್ರಹವಾಕ್ಯ "ಕಾಲಾಟ್ಠಞ್" ಎಂಬ ಸೂತ್ರದಿಂದ ಠಞ್ ಪ್ರತ್ಯಯವು ಬರಬೇಕಾಗಿತ್ತು. ಅದನ್ನು ಬಾಧಿಸಿ ಪ್ರಕೃತ ಸೂತ್ರದಿಂದ ಸಾಯ ಶಬ್ದಕ್ಕೆ ಮಕಾರಂತನಿಪಾತನದ ಜೊತೆಗೆ 'ಟ್ಯು' ಪ್ರತ್ಯಯವನ್ನು ಸೇರಿಸಿದಮೇಲೆ "ಯವೋರನಾಕೌ" ಎಂಬ ಸೂತ್ರದಿಂದ 'ಯು'-ಗೆ 'ಅನ' ಆದೇಶ ಬಂದು ಅದಕ್ಕೆ ತುಟ್(ತ್) ಆಗಮವು ಬಂದು ಸಾಯಮ್+ತ್+ಅನ ಎಂದಿರುತ್ತದೆ. ಇದಕ್ಕೆ ಪ್ರಾತಿಪದಿಕ ಸಂಜ್ಞೆಬಂದ ಮೇಲೆ "ಸುಪೋಧಾತು ಪ್ರಾತಿಪದಿಕಯೋಃ" ಎಂಬ ಸೂತ್ರದಿಂದ ಸುಪ್ ಗೆ ಲುಕ್ ಬಂದು 'ಮ್' ಕಾರಕ್ಕೆ ಅನುಸ್ವಾರ ಮತ್ತು ಪರಸವರ್ಣಮಾಡಿದ ಮೇಲೆ ಸಾಯನ್ತನ ಎಂದಾಗುತ್ತದೆ. ಇದನ್ನು ಸುಬಂತ ಮಾಡಿದಾಗ ಸಾಯನ್ತನಮ್ ಎಂದು ರೂಪವು ಸಿದ್ಧಾವಾಗುತ್ತದೆ.

ಉದಾ-ಚಿರನ್ತನಮ್-(ಹೆಚ್ಚಿನ ಸಮಯದವರೆಗೆ ಉಂಟಾಗುವ) 'ಚಿರೇಭವಮ್' ಎಂಬುದು ಲೌಕಿಕ ವಿಗ್ರಹವಾಕ್ಯ. ಚಿರ+ಜಿ ಎಂಬ ಅಲೌಕಿಕ ವಿಗ್ರಹವಾಕ್ಯದಲ್ಲಿ "ಕಾಲಾಟ್ಠಞ್" ಎಂಬ ಸೂತ್ರದಿಂದ ಠಞ್(ಠ) ಪ್ರತ್ಯಯವು ಬರಬೇಕಾಗಿತ್ತು. ಅದನ್ನು ಬಾಧಿಸಿ ಪ್ರಕೃತ ಸೂತ್ರದಿಂದ 'ಸಾಯ' ಶಬ್ದಕ್ಕೆ ಮಕಾರಾಂತದ ಜೊತೆಗೆ 'ಟ್ಯು' ಪ್ರತ್ಯಯವು ಬಂದು "ಯುವೋರನಾಕೌ" ಎಂಬ ಸೂತ್ರದಿಂದ 'ಯು'ವಿನ ಸ್ಥಾನದಲ್ಲಿ ಅನ ಆದೇಶವು ಬಂದು, ಅದಕ್ಕೆ ತುಟ್ ಆಗಮವು ಬರುತ್ತದೆ. ಚಿರಮ್+ತ್+ಅನ ಎಂದಿದ್ದಾಗ, 'ಮ್'ಕಾರಕ್ಕೆ ಅನುಸ್ವಾರ ಮತ್ತು ಪರಸವರ್ಣಗಳು

ಬಂದು, ಚಿರನ್ತನಮ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ–1. ಪ್ರಗೇತನಮ್(ಪ್ರಾತಃಕಾಲದಲ್ಲಿ ಆಗುವ)–'ಪ್ರಗೇ ಭವಮ್' ಎಂಬುದು ಲೌಕಿಕ ವಿಗ್ರಹವಾಕ್ಯ. ಪ್ರಗ+ಜಿ ಎಂಬ ಅಲೌಕಿಕ ವಿಗ್ರಹವಾಕ್ಯದಲ್ಲಿ 'ಕಾಲಾಟ್‌ಠಞ್' ಎಂಬ ಸೂತ್ರದಿಂದ ಠಞ್(ಠ) ಪ್ರತ್ಯಯವು ಬರಬೇಕಾಗಿತ್ತು. ಅದನ್ನು ಬಾಧಿಸಿ ಪ್ರಕೃತ ಸೂತ್ರದಿಂದ ಪ್ರಗೇ ಎಂಬ ಶಬ್ದಕ್ಕೆ ಏದಂತತ್ವ ನಿಪಾತನದ ಜೊತೆಗೆ 'ಟ್ಯು' ಪ್ರತ್ಯಯ ಬಂದು "ಯುವೋರನಾಕೌ" ಎಂಬ ಸೂತ್ರದಿಂದ 'ಯು' ವಿನ ಸ್ಥಾನದಲ್ಲಿ ಅನ ಆದೇಶವು ಬಂದು ಅದಕ್ಕೆ ತುಟ್ ಆಗಮವು ಬರುತ್ತದೆ. ಪ್ರಗೇ+ತ್+ಅನ ಎಂಬುದು ಪ್ರಗೇತನಮ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ–2. ಪ್ರಾಹ್ಣೇತನಮ್–ಈ ರೂಪಸಿದ್ಧಿಯು ಮೇಲಿನ ಪ್ರಕ್ರಿಯೆಯನ್ನು ಅನುಸರಿಸಿದೆ.

ಉದಾ–ದೋಷಾಯತನಮ್ (ರಾತ್ರಿಯಲ್ಲಿ ಉಂಟಾಗುವ) 'ದೋಷಾ ಭವಮ್' ಎಂಬುದು ಲೌಕಿಕ ವಿಗ್ರಹವಾಕ್ಯ. ಈ ಅವ್ಯಯದ ನಂತರ ಪ್ರಕೃತ ಸೂತ್ರದಿಂದ ಟ್ಯು ಪ್ರತ್ಯಯವು ಬಂದು, "ಯುವೋರನಾಕೌ" ಎಂಬುದರಿಂದ 'ಯು' ಗೆ ಅನ ಆದೇಶ ಮತ್ತು ತುಟ್(ತ್) ಆಗಮವು ಬಂದು ದೋಷಾತನಮ್ ಎಂಬ ರೂಪವು ಸಿದ್ಧವಾಗುತ್ತದೆ.

**(ಜಾತಾರ್ಥದಲ್ಲಿ ಅಣ್ ಮೊದಲಾದ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ–1089. ತತ್ರ ಜಾತಃ॥ 4–3–25॥**

ವೃತ್ತಿ–ಸಪ್ತಮೀಸಮರ್ಥಾತ್‌ಜಾತಃ ಇತ್ಯರ್ಥೇ ಅಣಾದಯಃ ಘಾದಯಶ್ಚ ಸ್ಯುಃ। ಸ್ರುಘ್ನೇ ಜಾತಃ ಸ್ರೌಘ್ನಃ । ಉತ್ಸೇ ಜಾತಃ ಔತ್ಸಃ । ರಾಷ್ಟ್ರೇ ಜಾತೋ ರಾಷ್ಟ್ರಿಯಃ । ಅವಾರಪಾರೇ ಜಾತಃ–ಅವಾರಪಾರೀಣಃ; ಇತ್ಯಾದಿ ॥

ಅ.ವೃ–ಪ್ರತ್ಯಯಃ, ಪರಶ್ಚ, ಙ್ಯಾಪ್‌ಪ್ರಾತಿಪದಿಕಾತ್, ತದ್ಧಿತಾಃ ಪ್ರಾಗ್‌ದೀವ್ಯತೋಽಣ್, ಸಮರ್ಥಾನಾಂ ಪ್ರಥಮಾದ್ವಾ ಮತ್ತು ಶೇಷೇ ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ–ಸಮರ್ಥವಾದ (ಕೃತ ಸಂಧಿಕಾರ್ಯವಾದ) ಸಪ್ತಮ್ಯಂತದ ನಂತರ ಜಾತಃ ಎಂಬ ಅರ್ಥದಲ್ಲಿ ಅಣ್ ಮೊದಲಾದ ಪ್ರತ್ಯಯಗಳು ಮತ್ತು 'ಘ' ಮೊದಲಾದ ಪ್ರತ್ಯಯಗಳು ಆಯಾ ಯೊಗ್ಯ ಸ್ಥಳಗಳಲ್ಲಿ ಬರುವುವು.

ಉದಾ–ಸ್ರೌಘ್ನಃ–(ಸ್ರುಘ್ನ ಎಂಬ ಹೆಸರುಳ್ಳ ದೇಶದಲ್ಲಿ ಉಂಟಾಗುವ ಪದಾರ್ಥ) 'ಸ್ರುಘ್ನೇ ಜಾತಃ' ಎಂಬುದು ಲೌಕಿಕ ವಿಗ್ರವಾಕ್ಯ. ಸ್ರುಘ್ನ+ಜಿ ಎಂಬುದು ಅಲೌಕಿಕ ವಿಗ್ರಹವಾಕ್ಯ. "ಪ್ರಾಯ ಭವಃ" ಎಂಬ ಸೂತ್ರದಿಂದ ಅಣ್(ಅ) ಪ್ರತ್ಯಯವು ಬಂದು, ಅದಕ್ಕೆ ಪ್ರಾತಿಪದಿಕಸಂಜ್ಞೆ ಬಂದು, ಸುಪ್ ಗೆ ಲುಕ್ ಬಂದಮೇಲೆ ಸ್ರುಘ್ನ+ಅ ಎಂದಿರುತ್ತದೆ. ಪ್ರತ್ಯಯವು 'ಣಿತ್' ಆಗಿರುವುದರಿಂದ 'ಆದಿವೃದ್ಧಿ' ಬಂದು 'ಉ' ಕಾರಕ್ಕೆ 'ಔ'ಕಾರವು ಆದೇಶವಾಗಿ ಬಂದು, "ಯಸ್ಯೇತಿಚ" ಎಂಬ ಸೂತ್ರದಿಂದ ಭ–ಸಂಜ್ಞಕ 'ಅ' ಕಾರಕ್ಕೆ ಲೋಪ ಬಂದು ಸ್ರೌಘ್ನ್+ಅ=ಸ್ರೌಘ್ನ ಎಂದಾದ ಮೇಲೆ,

ಸುಬಂತ ಮಾಡಿದಾಗ ಸ್ರೌಘ್ನಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ-ಔತ್ಸಃ-(ಝರಿಯಲ್ಲಿ ಉತ್ಪನ್ನವಾಗುವ ಪದಾರ್ಥ -ಕಪ್ಪೆ ಮೊದಲಾದವು) 'ಉತ್ಸೇ ಜಾತಃ' ಎಂಬುದು ಲೌಕಿಕ ವಿಗ್ರಹವಾಕ್ಯ. ಉಸ್+ಜಿ ಎಂಬುದು ಅಲೌಕಿಕ ವಿಗ್ರಹವಾಕ್ಯ. 'ತತ್ರಜಾತಃ' ಎಂಬ ಅರ್ಥದಲ್ಲಿ "ಉತ್ಸಾದಿಭ್ಯೋಽಞ್" ಎಂಬ ಸೂತ್ರದಿಂದ ಅಞ್(ಅ) ಪ್ರತ್ಯಯವು ಬಂದಿದೆ. ಇದಕ್ಕೆ ಪ್ರಾತಿಪದಿಕ ಸಂಜ್ಞೆ ಬಂದ ಮೇಲೆ, "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ ಸುಪ್-ಗೆ ಲುಕ್ ಬಂದು ಉತ್ಸ+ಅ ಎಂದಿರುತ್ತದೆ. ಇದು 'ಞಿತ್' ಆಗಿರುವುದರಿಂದ ಆದಿವೃದ್ಧಿ ಬಂದು 'ಉ' ಕಾರಕ್ಕೆ 'ಔ' ಕಾರ ಆದೇಶವಾಗಿ ಬಂದ ಮೇಲೆ 'ಭ'-ಸಂಜ್ಞಕ 'ಅ' ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು, ಔತ್ಸ್+ಅ= ಔತ್ಸ ಎಂದಾದ ಮೇಲೆ ಸುಬಂತ ಮಾಡಿದಾಗ ಔತ್ಸಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ:-ರಾಷ್ಟ್ರಿಯಃ:-(ರಾಷ್ಟ್ರದಲ್ಲಿ ಉತ್ಪನ್ನವಾದ ಎಂದು ಅರ್ಥ)-'ರಾಷ್ಟ್ರೇಜಾತಃ' ಎಂಬುದು ಲೌಕಿಕ ವಿಗ್ರಹವಾಕ್ಯ. ರಾಷ್ಟ್ರ+ಜಿ ಎಂಬುದು ಅಲೌಕಿಕ ವಿಗ್ರಹವಾಕ್ಯ. ಪ್ರಕೃತ ಸೂತ್ರದಿಂದ 'ಘ್' ಪ್ರತ್ಯಯ ಬಂದಿದೆ. "ಆಯನೇಯೀನೀಯಿಯಃ ಫಢಖಛಘಾಮ್ ಪ್ರತ್ಯಯಾದಿನಾಮ್" ಎಂಬುದರಂದ 'ಘ್' ಗೆ 'ಇಯ್' ಆದೇಶ ಬಂದು ರಾಷ್ಟ್ರ+ಇಯ್+ಅ ಎಂದಾಗಿ, ರಾಷ್ಟ್ರ+ಇಯ ಎಂದಿದ್ದಾಗ 'ರಾಷ್ಟ್ರ' ದಲ್ಲಿರುವ 'ಅ' ಕಾರಕ್ಕೆ ಭ-ಸಂಜ್ಞೆ ಇರುವುದರಿಂದ ಅದಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು ರಾಷ್ಟ್+ಇಯ=ರಾಷ್ಟ್ರಿಯ ಎಂದಾದ ಮೇಲೆ ಸುಬಂತ ಮಾಡಿದಾಗ ರಾಷ್ಟ್ರಿಯಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ-ಅವಾರಪಾರೀಣಃ-(ಈ ದಡೆ ಆದಡೆಯಲ್ಲಿಉಂಟಾದ)-'ಅವಾರಪಾರೇ ಜಾತಃ' ಎಂಬುದು ಲೌಕಿಕ ವಿಗ್ರಹವಾಕ್ಯ. ಅವಾರಪಾರ+ಜಿ ಎಂಬುದು ಅಲೌಕಿಕ ವಿಗ್ರಹವಾಕ್ಯ. ಪ್ರಕೃತ ಸೂತ್ರದಿಂದ 'ಖ' ಪ್ರತ್ಯಯ ಬಂದು ಅದಕ್ಕೆ "ಆಯನೇಯೀ-ನೀಯಿಯಃ ಫಢಖಛಘಾಮ್ ಪ್ರತ್ಯಯಾದಿನಾಮ್" ಎಂಬ ಸೂತ್ರದಿಂದ 'ಖ' (ಖ್+ಅ)-ಗೆ ಈನ್ ಆದೇಶಬಂದು ಅವಾರಪಾರ+ಈನ ಎಂದಿದ್ದಾಗ 'ರ' ನಲ್ಲಿರುವ 'ಅ'ಕಾರಕ್ಕೆ ಭ-ಸಂಜ್ಞೆ ಇರುವುದರಿಂದ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು 'ನ' ಕಾರಕ್ಕೆ ಣತ್ವ ಬಂದು ಸುಬಂತ ಮಾಡಿದ ಮೇಲೆ ಅವಾರಪಾರೀಣಃ ಎಂಬ ರೂಪವು ಸಿದ್ಧವಾಗುತ್ತದೆ.

**(ಜಾತಾರ್ಥದಲ್ಲ ಠಪ್ ಪ್ರತ್ಯಯ ವಿಧಿಸುವ ಸೂತ್ರ)**

**ಸೂತ್ರ-1090. ಪ್ರಾವೃಷಷ್ಠಪ್** ॥ **4-3-26**॥

ವೃತ್ತಿ-ಏಣ್ಯಾಪವಾದಃ ॥ಪ್ರಾವೃಷಿಕಃ॥

ಪ.ಚ್ಛೇ-ಪ್ರಾವೃಷಃ, ಠಪ್।

ಅ.ವೃ-ತತ್ರ ಜಾತಃ ಎಂಬ ಸೂತ್ರವು ಅನುವೃತ್ತವಾಗುತ್ತದೆ. "ಪ್ರತ್ಯಯಃ," "ಪರಶ್ಚ", "ಙ್ಯಾಪ್‌ಪ್ರಾತಿಪದಿಕಾತ್", "ತದ್ಧಿತಾಃ" ಮತ್ತು "ಸಮರ್ಥಾನಾಂ ಪ್ರಥಮಾದ್ವಾ" ಮತ್ತು

"ಶೇಷೇ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ–ಪ್ರಾವೃಟ್ ಎಂಬ ಶಬ್ದದ ನಂತರ 'ತತ್ರ ಜಾತಃ' ಎಂಬ ಅರ್ಥದಲ್ಲಿ ಠಪ್ ಪ್ರತ್ಯಯವು ಮಾತ್ರವೇ ಬರುತ್ತದೆ.

"ಪ್ರಾವೃಷ ಏಣ್ಯಃ" ಎಂಬ ಸೂತ್ರಕ್ಕೆ ಇದು ಅಪವಾದವಾಗಿದೆ. ಏಣ್ಯ ಎಂಬ ಪ್ರತ್ಯಯವು ಭವಃ ಮೊದಲಾದ ಅರ್ಥಗಳಲ್ಲಿ ಬರುವುದು. ಜಾತಾರ್ಥದಲ್ಲಿ 'ಠಪ್' ಪ್ರತ್ಯಯವು ಮಾತ್ರ ಬರುವುದು ಎಂದರ್ಥ.

ಉದಾ–ಪ್ರಾವೃಷಿಕಃ–(ಮಳೆಗಾಲದಲ್ಲಿ ಉಂಟಾಗುವ ನದಿ ಮೊದಲಾದವು–ಪ್ರಾವೃಷಿ ಜಾತಃ ಎಂಬ ಅರ್ಥದಲ್ಲಿ)–ಸಪ್ತಮ್ಯಂತವಾದ 'ಪ್ರಾವೃಟ್' ಶಬ್ದದ ನಂತರ ಪ್ರಕೃತ ಸೂತ್ರದಿಂದ ಠಪ್ (ಠ್+ಅಪ್) ಪ್ರತ್ಯಯವು ಬರುತ್ತದೆ. 'ಠ್' ಪ್ರತ್ಯಯಕ್ಕೆ "ಠಸ್ಯೇಕಃ" ಎಂಬುದರಿಂದ ಪ್ರಾವೃಷಿ ಎಂಬಲ್ಲಿರುವ ಸುಪ್–ಗೆ ಲೋಪ ಬಂದು, ಪ್ರಾವೃಷ್+ ಠಪ್ (ಇಕ+ಅ) ಎಂದಿದ್ದಾಗ, ಠ್–ಗೆ ಇಕ ಬಂದು ಪ್ರಾವೃಷ್+ಇಕ+ಅ ಎಂದಿದ್ದಾಗ 'ಅ' ಕಾರಕ್ಕೆ ಭ–ಸಂಜ್ಞೆಯಿಂದ ಲೋಪ ಬಂದು, ಪ್ರಾವೃಷ್+ಇಕ ಎಂದಾಗಿ ಸುಬಂತವಾದ ಮೇಲೆ ಪ್ರಾವೃಷಿಕಃ ಎಂದು ರೂಪವು ಸಿದ್ಧವಾಗುತ್ತದೆ.

**(ಪ್ರಾಯ ಭವ ಅರ್ಥದಲ್ಲಿ ಅಣಾದಿ ಪ್ರತ್ಯಯಗಳನ್ನು ವಿಧಿಸುವ ಸೂತ್ರ)**

**ಸಊತ್ರ–1091. ಪ್ರಾಯ ಭವಃ (4–3–39)**

ವೃತ್ತಿ–ತತ್ರ ಇತ್ಯೇವ । ಸ್ರುಘ್ನೇ ಪ್ರಾಯೇಣ ಬಾಹುಲ್ಯೇಣ ಭವತಿ ಸ್ರೌಘ್ನಃ।

ಅ.ವೃ–"ತತ್ರಜಾತಃ" ಎಂಬ ಸೂತ್ರದಿಂದ ತತ್ರ ಎಂಬ ಪದವು ಅನುವೃತ್ತವಾಗುತ್ತದೆ. "ಪ್ರತ್ಯಯಃ," "ಪರಶ್ಚ", "ಙ್ಯಾಪ್‌ಪ್ರಾತಿಪದಿಕಾತ್", "ತದ್ಧಿತಾಃ" ಮತ್ತು "ಸಮರ್ಥಾನಾಂ ಪ್ರಥಮಾದ್ವಾ" ಮತ್ತು "ಶೇಷೇ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ–ತತ್ರ ಪ್ರಾಯ ಭವಃ (ಅಲ್ಲಿ ಪ್ರಾಯಶಃ ಇರುವವನು)ಎಂಬ ಅರ್ಥದಲ್ಲಿ ಸಪ್ತಮ್ಯಂತ ಸಮರ್ಥ ಶಬ್ದಕ್ಕಿಂತ ಯಥಾ ಸಂಭವವಾಗಿ ಅಣ್ ಮೊದಲಾದ ಪ್ರತ್ಯಯಗಳು ಮತ್ತು ಘಾದಿ ಪ್ರತ್ಯಯಗಳು ಬರುವವು.

ಉದಾ–ಸ್ರೌಘ್ನಃ–(ಪ್ರಾಯಶಃ ಸ್ರುಘ್ನ ಎಂಬ ದೇಶದಲ್ಲಿ ಇರುವವನು) 'ಸ್ರುಘ್ನೇಪ್ರಾಯಭವಃ' ಎಂಬುದು ಲೌಕಿಕ ವಿಗ್ರಹವಾಕ್ಯ. ಈ ಅರ್ಥದಲ್ಲಿ ಸಾಮಾನ್ಯವಾಗಿ ಸಿದ್ಧವಾಗುವ ಅಣ್ ಪ್ರತ್ಯಯವು ಬರುತ್ತದೆ.

**(ಸಂಭೂತಾರ್ಥದಲ್ಲಿಅಣಾದಿ ಪ್ರತ್ಯಯಗಳನ್ನು ವಿಧಿಸುವ ಸೂತ್ರ)**

**ಸೂತ್ರ–1092. ಸಮ್ಭೂತೇ ॥ 4–3–41॥**

ವೃತ್ತಿ–ಸ್ರುಘ್ನೇ ಸಂಭವತಿ ಸ್ರೌಘ್ನಃ ॥

ಅ.ವೃ–'ತತ್ರಜಾತಃ' ಎಂಬ ಸೂತ್ರದಿಂದ ತತ್ರ ಎಂಬ ಪದವು ಅನುವೃತ್ತವಾಗುತ್ತದೆ. "ಪ್ರತ್ಯಯಃ","ಪರಶ್ಚ","ಙ್ಯಾಪ್‌ಪ್ರಾತಿಪದಿಕಾತ್","ತದ್ಧಿತಾಃ" "ಪ್ರಾಗ್‌ದೀವ್ಯತೋಽಣ್", "ಸಮರ್ಥಾನಾಂ ಪ್ರಥಮಾದ್ವಾ" ಮತ್ತು "ಶೇಷೇ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ಸಪ್ತಮ್ಯನ್ತವಾದ ಸಮರ್ಥ ಪದಗಳ ನಂತರ ಸಂಭೂತ ಅಂದರೆ ಸಂಭಾವ್ಯ ಎಂಬ ಅರ್ಥದಲ್ಲಿ ಅಣಾದಿ ಪ್ರತ್ಯಯಗಳು ಯಥಾವಕಾಶವಾಗಿ ಬರುತ್ತವೆ.

ಉದಾ-ಸ್ರೌಘ್ನಃ-(ಸ್ರುಘ್ನ ದೇಶದಲ್ಲಿ ಇರಬಹುದು ಎಂದು ಸಂಭಾವ್ಯ). 'ಸ್ರುಘ್ನೇ ಸಂಭವತಿ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಹಿಂದಿನಂತೆ ಪ್ರಕ್ರಿಯೆ ನಡೆದು ಶೈಷಿಕ-ಅಣ್ ಪ್ರತ್ಯಯವು ಬಂದು ಸ್ರೌಘ್ನಃ ಎಂದು ರೂಪವು ಸಿದ್ಧವಾಗುತ್ತದೆ.

**(ಸಂಭೂತಾರ್ಥದಲ್ಲಿ ಢಞ್ ಪ್ರತ್ಯಯ ವಿಧಿಸುವ ಸೂತ್ರ)**

**ಸೂತ್ರ-1093. ಕೋಶಾಡ್ಢಞ್** ॥ 4-3-42॥

ವೃತ್ತಿ-ಕೌಶೇಯಂ ವಸ್ತ್ರಮ್ ॥

ಪ.ಚ್ಛೇ-ಕೋಶಾತ್, ಡಞ್।

ಅ.ವೃ-"ತತ್ರಜಾತಃ" ಎಂಬ ಸೂತ್ರದಿಂದ 'ತತ್ರ' ಎಂಬ ಪದವು ಅನುವೃತ್ತವಾಗುತ್ತದೆ. "ಸಂಭೂತೇ" ಎಂಬ ಸೂತ್ರದಿಂದ 'ಸಂಭೂತೆ' ಎಂಬ ಪದವು ಅನುವೃತ್ತವಾಗುತ್ತದೆ.

ವಾ॥ "ವಿಕಾರೇ ಕೋಶಾತ್ ಢಞ್"

ಅರ್ಥ-ಸಪ್ತಮ್ಯನ್ತವಾದ ಸಮರ್ಥ ಪ್ರಾತಿಪದಿಕವಾದ ಕೋಶ ಶಬ್ದದ ನಂತರ ವಿಕಾರಾರ್ಥದಲ್ಲಿ ಢಞ್ ಪ್ರತ್ಯಯವು ಬರುತ್ತದೆ.

ಉದಾ-ಕೌಶೇಯಂ ವಸ್ತ್ರಮ್-(ಕ್ರಿಮಿಕೋಶದ ವಿಕಾರದಿಂದ ಉಂಟಾದ ರೇಷ್ಮೆ ವಸ್ತ್ರ) 'ಕೋಶಸ್ಯ ವಿಕಾರಃ' ಎಂಬುದು ಲೌಕಿಕ ವಿಗ್ರಹವಾಕ್ಯ. ಕೋಶ+ಢಞ್ ಎಂದಿದ್ದಾಗ 'ಆದಿ ವೃದ್ಧಿ' ಬಂದು ಢ್-ಕಾರಕ್ಕೆ ಏಯ್ ಆದೇಶವು ಬಂದು ಕೌಶೇಯಂ ಎಂಬ ರೂಪವು ಸಿದ್ಧವಾಗುತ್ತದೆ. "ವಿಕಾರೇ ಕೋಶಾ ಡ್ಢಞ್" ಎಂಬ ವಾರ್ತಿಕದಿಂದ ವಿಕಾರಾರ್ಥವು ಹೇಳಲಾಗಿದೆ.

**(ಭವಾರ್ಥದಲ್ಲಿ ಅಣಾದಿಗಳನ್ನು ವಿಧಿಸುವ ಸೂತ್ರ)**

**ಸೂತ್ರ-1094. ತತ್ರ ಭವಃ**॥4-3-53॥

ವೃತ್ತಿ-ಸ್ರುಘ್ನೇ ಭವಃ ಸ್ರೌಘ್ನಃ ।ಔತ್ಸಃ ।ರಾಷ್ಟ್ರೀಯಃ ॥

ಅ.ವೃ-"ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ" "ಪ್ರಾಗ್ದೀವ್ಯತೋಽಣ್", "ಸಮರ್ಥಾನಾಂ ಪ್ರಥಮಾದ್ವಾ' ಮತ್ತು "ಶೇಷೇ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ಸಪ್ತಮ್ಯನ್ತವಾದ ಸಮರ್ಥ ಪದಗಳ ನಂತರ ಅಲ್ಲಿ ಇದೆ ಎಂಬ ಅರ್ಥದಲ್ಲಿ ಯಥಾವಕಾಶವಾಗಿ ಅಣಾದಿ ಪ್ರತ್ಯಯಗಳು ಬರುತ್ತವೆ.

ಉದಾ-ಸ್ರೌಘ್ನಃ-ಸ್ರುಘ್ನೇಭವಃ ಎಂಬ ಅರ್ಥದಲ್ಲಿ ಸಪ್ತಮ್ಯನ್ತ 'ಸ್ರುಘ್ನ' ಶಬ್ದದ ನಂತರ ಸಾಧಾರಣವಾಗಿ ವಿಧಿಸಲಾಗುವ ಅಣ್ ಪ್ರತ್ಯಯವು ಬರುತ್ತದೆ.

ಉದಾ-ಔತ್ಸಃ, ರಾಷ್ಟ್ರೀಯಃ-'ಉತ್ಸೇ ಭವಃ' ಮತ್ತು 'ರಾಷ್ಟ್ರೇ ಭವಃ' ಎಂಬ

ಅರ್ಥದಲ್ಲಿ "ಉತ್ಸಾದಿಭ್ಯೋಽಞ್" ಮತ್ತು "ರಾಷ್ಟ್ರಾವಾರಪಾರಾದ್ಘಖೌ" ಎಂಬ ಸೂತ್ರದಿಂದ ಅಣ್(ಅ) ಮತ್ತು 'ಘಞ್(ಘ)' ಗೆ (ಇಯ್) ಪ್ರತ್ಯಯಗಳು ಬರುತ್ತವೆ.

**(ಭವಾರ್ಥದಲ್ಲಿ ಯತ್ ಪ್ರತ್ಯಯ ವಿಧಿಸುವ ಸೂತ್ರ.)**

**ಸೂತ್ರ-1095. ದಿಗಾದಿಭ್ಯೋ ಯತ್ ॥4-3-54॥**

ವೃತ್ತಿ-ದಿಶ್ಯಮ್ । ವರ್ಗ್ಯಮ್॥

ಪ.ಚ್ಛೇ-ದಿಗಾದಿಭ್ಯಃ, ಯತ್।

ಅ.ವೃ-"ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ" "ಪ್ರಾಗ್ದೀವ್ಯತೋಽಣ್", "ಸಮರ್ಥಾನಾಂ ಪ್ರಥಮಾದ್ವಾ' ಮತ್ತು "ಶೇಷೇ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ಸಪ್ತಮ್ಯಂತವಾದ ಸಮರ್ಥವಾದ 'ದಿಕ್' ಮೊದಲಾದ ಶಬ್ದಗಳ ನಂತರ 'ಅಲ್ಲಿ ಇರುವವನು (ತತ್ರ ಭವಃ)' ಎಂಬ ಅರ್ಥದಲ್ಲಿ ಯತ್ ಪ್ರತ್ಯಯವು ಬರುತ್ತದೆ.

ಉದಾ-ದಿಶ್ಯಮ್ (ದಿಕ್ಕಿನಲ್ಲಿ ಇರುವ)-'ದಿಶಿ ಭವಮ್' ಎಂಬ ಅರ್ಥದಲ್ಲಿ ಸಪ್ತಮ್ಯಂತವಾದ 'ದಿಶ್' ಪದದ ನಂತರ 'ಯತ್(ಯ್)' ಪ್ರತ್ಯಯವು ಬಂದು ದಿಶ್ಯಮ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ-ವರ್ಗ್ಯಮ್ (ವರ್ಗದಲ್ಲಿ ಇರುವ)-'ವರ್ಗೇ ಭವಮ್' ಎಂಬ ಅರ್ಥದಲ್ಲಿ 'ಯತ್' ಪ್ರತ್ಯಯ ಬಂದು ವರ್ಗ+ಯತ್ ಎಂದಿದ್ದಾಗ, ವರ್ಗದಲ್ಲಿರುವ ಅಂತ್ಯ 'ಅ'ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ 'ಲೋಪ' ಬಂದು ವರ್ಗ್+ಯ= ವರ್ಗ್ಯ ಎಂದಾದ ಮೇಲೆ ಸುಬಂತ ಮಾಡಿದಾಗ ವರ್ಗ್ಯಮ್ ಎಂದು ರೂಪವು ಸಿದ್ಧವಾಗುತ್ತದೆ.

**(ಶರೀರಾವಯವದ ಪದದ ಮೇಲೆ ಯತ್ ಪ್ರತ್ಯಯ ವಿಧಿಸುವ ಸೂತ್ರ.)**

**ಸೂತ್ರ-1096. ಶರೀರಾವಯವಾಚ್ಚ (4-3-55)**

ವೃತ್ತಿ-ದನ್ತ್ಯಮ್ । ಕಣ್ಠ್ಯಮ್।

ವಾ॥ ಅಧ್ಯಾತ್ಮಾದೇಃ ಠಞ್ ಇಷ್ಯತೇ।

ಅಧ್ಯಾತ್ಮಂ ಭವಂ ಆಧ್ಯಾತ್ಮಿಕಮ್ ।

ಪ.ಚ್ಛೇ-ಶರೀರಾವಯವಾತ್, ಚ।

ಅ.ವೃ-"ತತ್ರ ಭವಃ" ಎಂಬ ಸೂತ್ರವು ಅನುವೃತ್ತವಾಗುತ್ತದೆ. ಹಾಗೇಯೆ "ದಿಗಾದಿಭ್ಯೋ ಯತ್" ಸೂತ್ರದಿಂದ 'ಯತ್' ಎಂಬ ಪದವು ಅನುವೃತ್ತವಾಗುತ್ತದೆ "ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ" "ಪ್ರಾಗ್ದೀವ್ಯತೋಽಣ್", "ಸಮರ್ಥಾನಾಂ ಪ್ರಥಮಾದ್ವಾ' ಮತ್ತು "ಶೇಷೇ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ಶರೀರ-ಅವಯವ ವಾಚಕಗಳ ನಂತರವೂ ಸಹ 'ತತ್ರ ಭವಃ' ಎಂಬ ಅರ್ಥದಲ್ಲಿ 'ಯತ್' ಪ್ರತ್ಯಯವು ಬರುತ್ತದೆ.

ಉದಾ-ದನ್ತ್ಯಮ್ । ಕಣ್ಠ್ಯಮ್-(ದಂತ ಸ್ಥಾನದಲ್ಲಿ ಉಂಟಾಗುವ, ಕಂಠದಲ್ಲಿ ಉಂಟಾಗುವ) ಎಂಬ ಅರ್ಥಗಳಲ್ಲಿ ದಂತ ಕಂಠಗಳ 'ನಂತರ ಯತ್' ಪ್ರತ್ಯಯವು ಬಂದು, ದಂತ+ಯ, ಕಂಠ+ಯ ಎಂದಿದ್ದಾಗ "ಯಸ್ಯೇತಿಚ" ಎಂಬುದರಿಂದ ಅಂತ್ಯ ಅ-ಕಾರಗಳಿಗೆ ಲೋಪ ಬಂದು ಸುಬಂತ ಮಾಡಿದ ಮೇಲೆ ದನ್ತ್ಯಮ್ ಮತ್ತು ಕಣ್ಠ್ಯಮ್ ಎಂಬ ರೂಪಗಳು ಸಿದ್ಧವಾಗುತ್ತವೆ.

ವಾ॥ ಅಧ್ಯಾತ್ಮಾದೇಃ ಠಞ್ ಇಷ್ಯತೇ। ಅಧ್ಯಾತ್ಮಂ ಭವಂ ಆಧ್ಯಾತ್ಮಿಕಮ್ ।

'ತತ್ರ ಭವಃ' ಎಂಬ ಅರ್ಥದಲ್ಲಿ ಅಧ್ಯಾತ್ಮ ಮೊದಲಾದ ಶಬ್ದಗಳ ನಂತರ ಠಞ್ ಪ್ರತ್ಯಯವನ್ನು ಸೇರಿಸಬೇಕು.

ಉದಾ-ಆಧ್ಯಾತ್ಮಿಕಮ್-'ಅಧ್ಯಾತ್ಮಂ ಭವಂ' ಎಂಬ ಅರ್ಥದಲ್ಲಿ ಅವ್ಯಯಿಭಾವ ಸಮಾಸವಾಗುವದರಿಂದ ಅವ್ಯಯ ಸಂಜ್ಞೆಯುಳ್ಳ ಅಧ್ಯಾತ್ಮ ಶಬ್ದದ ನಂತರ ಠಞ್ ಪ್ರತ್ಯಯವು ಬಂದು "ಠಸ್ಯೇಕಃ" ಎಂಬ ಸೂತ್ರದಿಂದ ಇಕ ಆದೇಶ ಬಂದು ಅಧ್ಯಾತ್ಮ+ಇಕ ಎಂದಿದ್ದಾಗ ಅಂತ್ಯ ಅ-ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು ಅಧ್ಯಾತ್ಮ್+ಇಕ=ಆಧ್ಯಾತ್ಮಿಕ ಎಂದಿದ್ದಾಗ, ಸುಬಂತ ಮಾಡಿದ ಮೇಲೆ ಆಧ್ಯಾತ್ಮಿಕಮ್ ಎಂಬ ರೂಪವು ಸಿದ್ಧವಾಗುತ್ತವೆ.

**(ಉಭಯಪದಗಳಿಗೂ ವೃದ್ಧಿ ಪ್ರತ್ಯಯನ್ನು ವಿಧಿಸುವ ಸೂತ್ರ.)**

**ಸೂತ್ರ-1097. ಅನುಶತಿಕಾದೀನಾಂ ಚ॥7-3-20॥**

ವೃತ್ತಿ-ಏಷಾಂ ಉಭಯಪದವೃದ್ಧಿಃ ಞಿತಿ, ಣಿತಿ, ಕಿತಿ ಚ । ಆಧಿದೈವಿಕಮ್। ಆಧಿಭೌತಿಕಮ್। ಐಹಲೌಕಿಕಮ್। ಪಾರಲೌಕಿಕಮ್। ಆಕೃತಿಗಣೋಽಯಮ್॥

ಪ.ಚ್ಛೇ-ಅನುಶತಿಕಾದೀನಾಂ, ಚ ।

ಅ.ವೃ-"ಹೃದ್ಭಗಹಸಿನ್ಧನ್ತೇ ಪೂರ್ವಪದಸ್ಯ ಚ" ಎಂಬ ಸೂತ್ರದಿಂದ ಪೂರ್ವಪದಸ್ಯ ಎಂಬವು, "ತದ್ಧಿತೇಷ್ವಚಾಮಾದೇಃ" ಎಂಬ ಸೂತ್ರದಿಂದ ಅಚಾಮ್, ಆದೇಃ ಮತ್ತು ತದ್ಧಿತೇ ಎಂಬ ಪದಗಳು ಮತ್ತು "ಮೃಜೇರ್ವೃದ್ಧಿಃ" ಎಂಬ ಸೂತ್ರದಿಂದ ವೃದ್ಧಿಃ ಎಂಬ ಪದವು "ಅಚೋಽಞ್ಣಿತಿ" ಎಂಬ ಸೂತ್ರದಿಂದ ಞ್ಣಿತಿ ಎಮಬ ಪದವು ಮತ್ತು "ಕಿತಿಚ" ಎಂಬ ಸೂತ್ರದಿಂದ ಕಿತಿ ಎಂಬ ಪದವು ಅನುವೃತ್ತವಾಗುತ್ತವೆ. "ಉತ್ತರಪದಸ್ಯ" ಎಂಬುದು ಅಧಿಕಾರ ಸೂತ್ರವಾಗಿದೆ.

ಅರ್ಥ-ಅನುಶತಿಕಾದಿ ಪದಗಳಿಗೆ ಞಿತ್, ಣಿತ್ ಮತ್ತು ಕಿತ್‌ಗಳಾದ ಪದಗಳು ಪರದಲ್ಲಿ ಇದ್ದಾಗ ಪೂರ್ವ ಮತ್ತು ಉತ್ತರ ಪದಗಳಿಗೆ ವೃದ್ಧಿ ಬರುವುದು.

ಉದಾ-ಆಧಿದೈವಿಕಮ್-(ದೇವತೆಗಳಿಂದ ಉಂಟಾಗುವ)-'ಅದೀದೇವಂ' ಎಂಬ ಶಬ್ದವು ಅವ್ಯಯಿಭಾವ ಸಮಾಸವಾಗಿರುವುದರಿಂದ ಇದು ಅವ್ಯಯವಾಗಿದೆ. 'ಅದಿದೇವಂ ಭವಮ್' ಎಂಬುದು ಲೌಕಿಕ ವಿಗ್ರಹವಾಕ್ಯ. ಹಿಂದಿನ "ವಾರ್ತಿಕದಿಂದ"

'ಠಞ್' ಪ್ರತ್ಯಯವು ಬರುತ್ತದೆ. "ತದ್ಧಿತೇಷ್ವಚಾಮಾದೇಃ" ಎಂಬ ಸೂತ್ರದಿಂದ ಆದಿವೃದ್ಧಿ ಮಾತ್ರ ಬರಬೇಕಾಗಿತ್ತು. ಪ್ರಕೃತ ಸೂತ್ರದಿಂದ ಪೂರ್ವೋತ್ತರ ಪದಗಳಿಗೆ

ವೃದ್ಧಿ ಬಂದು ಆಧಿದೈವಿಕಮ್ ಎಂದಾಗಿದೆ. ಠಞ ನಲ್ಲಿ ಠ್-ಗೆ ಇಕ ಆದೇಶ ಬಂದಿದೆ.

ಇದೇ ರೀತಿಯಲ್ಲಿ 'ಅದಿಭೂತಮ್ ಭವಂ' ಎಂಬ ಅರ್ಥದಲ್ಲಿ ಉಭಯ ಪದ ವೃದ್ಧಿ ಮತ್ತು ಠಞ ಪ್ರತ್ಯಯಗಳು ಬಂದು ಆದಿಭೌತಿಕಮ್ ಎಂದಾಗಿದೆ.

ಇದೇ ರೀತಿಯಲ್ಲಿ ಐಹಲೌಕಿಕಮ್ ಮತ್ತು ಪಾರಲೌಕಿಕಮ್ ಎಂಬ ಪದಗಳಿಗೆ ಹಿಂದಿನ ಪ್ರಕ್ರಿಯೆಯನ್ನು ಅನುಸರಿಸಿ ರೂಪಗಳು ಸಿದ್ಧವಾಗಿವೆ.

ಆಕೃತಿಗಣೋಯಮ್-ಈ ಅನುಶತಿಕಾದಿ ಗಣವು ಆಕೃತಿಗಣವಾಗಿದೆ. ಈ ಗಣದಲ್ಲಿ ಪಠಿತವಾಗದಿರುವ ಶಬ್ದಗಳಿಗೆ ಉಭಯಪದ ವೃದ್ಧಿ ಬಂದರೆ ಆ ಪದಗಳನ್ನು ಈ ಗಣಕ್ಕೆ ಸಂಬಂಧಿಸಿದವು ಎಂದು ಪರಿಗಣಿಸಬೇಕು.

**(ಭವಾರ್ಥದಲ್ಲಿ ಛ-ಪ್ರತ್ಯಯ ವಿಧಿಸುವ ಸೂತ್ರ.)**

**ಸೂತ್ರ-1098 ಜಿಹ್ವಾಮೂಲಾಙ್ಗುಲೇಶ್ಛಃ ॥4-3-62॥**

ವೃತ್ತಿ-ಜಿಹ್ವಾಮೂಲೀಯಮ್। ಅಂಗುಲಿಯಮ್॥

ಪ.ಚ್ಛೇ-ಜಿಹ್ವಾಮೂಲಾಙ್ಗುಲೇಃ, ಛಃ।

ಅ.ವೃ-"ತತ್ರ ಭವಃ" ಎಂಬ ಸೂತ್ರವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ" "ಪ್ರಾಗ್ದೀವ್ಯತೋಽಣ್", "ಸಮರ್ಥಾನಾಂ ಪ್ರಥಮಾದ್ವಾ' ಮತ್ತು "ಶೇಷೇ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ಜಿಹ್ವಾಮೂಲ ಮತ್ತು ಅಂಗುಲಿ ಶಬ್ದಗಳ ನಂತರ 'ತತ್ರಭವಃ' ಎಂಬ ಅರ್ಥದಲ್ಲಿ 'ಛ' ಪ್ರತ್ಯಯವು ಬರುತ್ತದೆ. ಈ ಸೂತ್ರವು "ಶರೀರಾವಯವಾದ್ಯತ್" ಎಂಬ ಸೂತ್ರಕ್ಕೆ ಅಪವಾದವಾಗಿದೆ.

ಉದಾ-ಜಿಹ್ವಾಮೂಲೀಯಮ್-(ನಾಲಿಗೆಯ ತುದಿಯಲ್ಲಿರುವ)-'ಜಿಹ್ವಾಮೂಲೇ ಭವಂ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಈ ಅರ್ಥದಲ್ಲಿ ಜಿಹ್ವಾಮೂಲ ಶಬ್ದದ ನಂತರ ಪ್ರಕೃತ ಸೂತ್ರದಿಂದ ಛ ಪ್ರತ್ಯಯವು ಬಂದು ಅದಕ್ಕೆ ಈಯ್ ಆದೇಶ ಬಂದು ಜಿಹ್ವಾಮೂಲ+ಈಯ್(ಛ್+ಅ) ಎಂದಿದ್ದಾಗ, ಪೂರ್ವ ಪದದ ಅಂತ್ಯ ಅ-ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು ಜಿಹ್ವಾಮೂಲೀಯ ಎಂದಾಗಿ ಇದನ್ನು ಸುಬಂತ ಮಾಡಿದಾಗ ಜಿಹ್ವಾಮೂಲೀಯಮ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ-ಅಂಗುಲೀಯಮ್-(ಬೆರಳಿನಲ್ಲಿ ಇರುವ) 'ಅಂಗುಲ್ಯಾಂ ಭವಂ' ಎಂಬ ಅರ್ಥದಲ್ಲಿ ಹಿಂದಿನಂತೆ ಪ್ರಕ್ರಿಯೆ ನಡೆದು ಅಂಗುಲಿ+ಛ್ ಎಂದಿದ್ದಾಗ, "ಯಸ್ಯೇತಿಚ" ಎಂಬುದರಿಂದ ಪೂರ್ವ ಪದದ ಕೊನೆಯಲ್ಲಿರುವ 'ಇ' ಕಾರಕ್ಕೆ ಲೋಪ ಬಂದು ಅಂಗುಲೀಯ ಎಂದಾಗಿ ಇದನ್ನು ಸುಬಂತ ಮಾಡಿದಾಗ ಅಂಗುಲೀಯಮ್ ಎಂದು ರೂಪವು ಸಿದ್ಧವಾಗುತ್ತದೆ.

**(ವರ್ಗಾಂತಕ್ಕೆ ಛ-ಪ್ರತ್ಯಯ ವಿಧಿಸುವ ಸೂತ್ರ.)**

**ಸೂತ್ರ-1099. ವರ್ಗಾನ್ತಾಚ್ಚ ॥4-3-63॥**

ವೃತ್ತಿ-ಕವರ್ಗೀಯಮ್॥

ಪಚ್ಛೇ -ವಗಾನ್ತಾತ್,ಚ ।

ಅ.ವೃ-"ತತ್ರ ಭವಃ" ಎಂಬ ಸೂತ್ರವು ಅನುವೃತ್ತವಾಗುತ್ತದೆ. "ಜಿಹ್ವಾಮೂಲಾಙ್ಗುಲೇಶ್ಛ" ಎಂಬ ಸೂತ್ರದಿಂದ ಛ ಎಂಬ ಶಬ್ದವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್‌ಪ್ರಾತಿಪದಿಕಾತ್", "ತದ್ಧಿತಾಃ" "ಪ್ರಾಗ್‌ದೀವ್ಯತೋಽಣ್", "ಸಮರ್ಥಾನಾಂ ಪ್ರಥಮಾದ್ವಾ' ಮತ್ತು "ಶೇಷೇ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ವರ್ಗ ಶಬ್ದವನ್ನು ಅಂತದಲ್ಲಿ ಉಳ್ಳ ಶಬ್ದದ ನಂತರವು ಛ ಪ್ರತ್ಯಯವು ಬರುತ್ತದೆ.

ಸೂಚನೆ-"ತತ್ರಭವಃ" ಎಂಬ ಸೂತ್ರದಿಂದ ಅಣ್ ಪ್ರತ್ಯಯವು ಬರಬೇಕಾಗಿತ್ತು ಆದರೆ ಪ್ರಕೃತ ಸೂತ್ರದಿಂದ ವರ್ಗಾನ್ತ ಶಬ್ದದ ನಂತರ ಭಾವರ್ಥದಲ್ಲಿ ಛ ಪ್ರತ್ಯಯವನ್ನು ವಿಧಿಸಲಾಗಿ ಅದಕ್ಕೆ ಈಯ್ ಆದೇಶವು ಬಂದಿದೆ.

ಉದಾ-ಕವರ್ಗೀಯಮ್-(ಕವರ್ಗದಲ್ಲಿ ಇರುವ)-'ಕವರ್ಗೇ ಭವಂ' ಎಂಬುದು ಲೌಕಿಕ ವಿಗ್ರಹವಾಕ್ಯ. ಕವರ್ಗ+ಙಿ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಕವರ್ಗ+ಛ ಎಂದಿದ್ದಾಗ ಛ್-ಗೆ ಈಯ್ ಆದೇಶ ಬಂದು ಕವರ್ಗ+ಈಯ್+ಅ ಎಂದಿರುತ್ತದೆ. ಕವರ್ಗಶಬ್ದದ ಕೊನೆಯ 'ಅ' ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು ಕವರ್ಗ್+ಈಯ್+ಅ=ಕವರ್ಗೀಯ ಎಂದಿದ್ದಾಗ ಸುಬಂತ ಮಾಡಿದಾಗ ಕವರ್ಗೀಯಮ್ ಎಂದು ರೂಪವು ಸಿದ್ಧವಾಗುತ್ತದೆ.

**(ಆಗತಾರ್ಥದಲ್ಲ ಅಣ್ ವಿಧಿಸುವ ಸೂತ್ರ)**

**ಸೂತ್ರ-1100. ತತ ಆಗತಃ ॥4-3-74॥**

ವೃತ್ತಿ-ಸ್ರುಘ್ನಾತ್ ಆಗತಃ ಸ್ರೌಘ್ನಃ॥

ಪಚ್ಛೇ-ತತಃ, ಆಗತಃ॥

ಅ.ವೃ-"ಪ್ರತ್ಯಯಃ", "ಪರಶ್ಚ", "ಙ್ಯಾಪ್‌ಪ್ರಾತಿಪದಿಕಾತ್", "ತದ್ಧಿತಾಃ" "ಪ್ರಾಗ್‌ದೀವ್ಯತೋಽಣ್", "ಸಮರ್ಥಾನಾಂ ಪ್ರಥಮಾದ್ವಾ' ಮತ್ತು "ಶೇಷೇ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ಪಂಚಮ್ಯನ್ತ ಸ್ರುಘ್ನ ಶಬ್ದದ ನಂತರ "ಅಲ್ಲಿಂದ ಬಂದವನು" ಎಂಬ ಅರ್ಥದಲ್ಲಿ ಸಾಮಾನ್ಯವಾಗಿ ವಿಧಿಸಲಾಗುವ ಅಣ್ ಮೊದಲಾದ ಅಥವಾ ಯಥಾಯೋಗ್ಯ ಫ ಮೊದಲಾದ ಪ್ರತ್ಯಯಗಳು ಬರುತ್ತವೆ.

ಉದಾ-ಸ್ರೌಘ್ನಃ-(ಸುಘ್ನ ದೇಶದಿಂದ ಬಂದವನು)-'ಸ್ರುಘ್ನಾತ್ ಆಗತಃ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಸ್ರುಘ್ನ+ಙಸಿ ಎಂಬುದು ಅಲೌಕಿಕ ವಿಗ್ರಹವಾಕ್ಯ. ಪ್ರಕೃತ

ಸೂತ್ರದಿಂದ ಅಣ್ (ಅ) ಪ್ರತ್ಯಯ ಬಂದು ಅದಕ್ಕೆ ಪ್ರಾತಿಪದಿಕ ಸಂಜ್ಞೆ ಬಂದ ಮೇಲೆ ಸುಪ್ ಲೋಪವಾಗಿ ಸ್ರುಘ್ನ+ಅ ಎಂದಿರುತ್ತದೆ. ಆದಿವೃದ್ಧಿ ಬಂದ ಮೇಲೆ ಕೊನೆಯ 'ಅ' ಕಾರಕ್ಕೆ "ಯಸ್ಯೇತಿ ಚ" ಎಂಬುದರಿಂದ ಲೋಪ ಬಂದು ಸ್ರೌಘ್ನ್+ಅ=ಸ್ರೌಘ್ನ ಎಂದಿದ್ದಾಗ, ಅದನ್ನು ಸುಬಂತ ಮಾಡಿದಾಗ ಸ್ರೌಘ್ನಃ ಎಂದು ರೂಪವು ಸಿದ್ಧವಾಗುತ್ತದೆ.

**(ಆಗತಾರ್ಥದಲ್ಲಿ ಠಕ್ ವಿಧಿಸುವ ಸೂತ್ರ.)**

**ಸೂತ್ರ-1101. ಠಗಾಯಸ್ಥಾನೇಭ್ಯಃ** ॥ 4-3-75॥

ವೃತ್ತಿ-ಶುಲ್ಕಶಾಲಾಯಾಃ ಆಗತಃ ಶೌಲ್ಕಶಾಲಿಕಃ ॥

ಪ.ಛೇ-ಠಕ್, ಆಯಸ್ಥಾನೇಭ್ಯಃ॥

ಅ.ವೃ-"ಪ್ರತ್ಯಯಃ","ಪರಶ್ಚ","ಙ್ಯಾಪ್ಪ್ರಾತಿಪದಿಕಾತ್","ತದ್ಧಿತಾಃ" "ಪ್ರಾಗ್ ದೀವ್ಯತೋऽಣ್", "ಸಮರ್ಥಾನಾಂ ಪ್ರಥಮಾದ್ವಾ' ಮತ್ತು "ಶೇಷೇ" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ಆಯಸ್ಥಾನ ವಾಚಕವಾದ ಪಂಚಮ್ಯಂತ ಸಮರ್ಥ ಶಬ್ದದ ನಂತರ ಆಗತಾರ್ಥದಲ್ಲಿ ಠಕ್ (ಠ್) ಪ್ರತ್ಯಯವು ಬರುತ್ತದೆ.

**(ಸೂಚನೆ ಕರ ಬರುವ ಸ್ಥಾನಕ್ಕೆ ಆಯಸ್ಥಾನವೆಂದು ಹೆಸರು)**

ಉದಾ-ಶೌಲ್ಕಶಾಲಿಕಃ-(ಶುಲ್ಕ ಶಾಲಾ ಎಂದರೆ ಕರ ವಸೂಲಿ ಮಾಡುವ ಸ್ಥಳವೆಂದು ಹೆಸರು)-'ಶುಲ್ಕಶಾಲಾಯಾಃ ಆಗತಃ' ಎಂಬ ಅರ್ಥದಲ್ಲಿ ಪಂಚಮ್ಯಂತವಾದ ಶುಲ್ಕಶಾಲಾ ಶಬ್ದದ ನಂತರ 'ಠಕ್' ಪ್ರತ್ಯಯವು ಬಂದು, ಶಾಲಾ ಶಬ್ದದ ಅಂತ್ಯ 'ಆ'ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು ಠಕ್ ಪ್ರತ್ಯಯವನ್ನು ಸೇರಿಸಿದಾಗ ಕಿತ್ ಆದ್ದರಿಂದ ಆದಿವೃದ್ಧಿಯಾಗಿ ಶೌಲ್ಕಶಾಲ್+ಇಕ(ಠಕ್)= ಶೌಲ್ಕಶಾಲಿಕ ಎಂದಿದ್ದಾಗ, ಸುಬಂತ ಮಾಡಿದ ನಂತರ ಶೌಲ್ಕಶಾಲಿಕಃ ಎಂದು ರೂಪವು ಸಿದ್ಧವಾಗುತ್ತದೆ.

**(ಆಗತಾರ್ಥದಲ್ಲಿ ವುಞ್ ವಿಧಿಸುವ ಸೂತ್ರ)**

**ಸೂತ್ರ-1102. ವಿದ್ಯಾಯೋನಿಸಂಬಧೇಭ್ಯೋ ವುಞ್** ॥4-3-77॥

ವೃತ್ತಿ-ಔಪಾಧ್ಯಾಯಕಃ । ಪೈತಾಮಹಕಃ ॥

ಪ.ಛೇ-ವಿದ್ಯಾಯೋನಿಸಂಬಧೇಭ್ಯಃ, ವುಞ್॥

ಅ.ವೃ-"ತತ ಆಗತಃ" ಎಂಬ ಸೂತ್ರವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ" "ಪ್ರಾಗ್‌ದೀವ್ಯತೋऽಣ್", "ಸಮರ್ಥಾನಾಂ ಪ್ರಥಮಾದ್ವಾ' ಮತ್ತು "ಶೇಷೇ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-'ತತ ಆಗತಃ' ಎಂಬ ಅರ್ಥದಲ್ಲಿ ಪಂಚಮ್ಯಂತಗಳಾದ ವಿದ್ಯಾ ಸಂಬಂಧ ವಾಚಕಗಳಾದ ಪದಗಳ ನಂತರ ಮತ್ತು ಜನ್ಮ ಸಂಬಂಧ ವಾಚಕ ಪದಗಳ ನಂತರವೂ ವುಞ್ ಪ್ರತ್ಯಯವು ಬರುತ್ತದೆ.

ಉದಾ-ಔಪಾಧ್ಯಾಯಕಃ (ಉಪಾಧ್ಯಾಯರಿಂದ ಬಂದ ವಿಚಾರ, ಮತ ಮೊದಲಾದವು) -'ಉಪಾಧ್ಯಾಯಾತ್ ಆಗತಃ' ಎಂಬ ಅರ್ಥದಲ್ಲಿ ವಿದ್ಯಾ ಸಂಬಂಧ ವಾಚಿಯಾದ ಪಂಚಮ್ಯಂತ ಉಪಾಧ್ಯಾಯ ಶಬ್ದದ ನಂತರ ವುಞ್ ಪ್ರತ್ಯಯವು ಬರುತ್ತದೆ. "ಯುವೋರನಾಕೌ" ಎಂಬ ಸೂತ್ರದಿಂದ ವು-ಗೆ ಅಕ ಆದೇಶವು ಬಂದು ಆದಿ ವೃದ್ಧಿಯಾಗಿ ಔಪಾಧ್ಯಾಯಕಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ-ಪೈತಾಮಹಕಃ (ಅಜ್ಜನಿಂದ ಬಂದಿದ್ದು)-'ಪಿತಾಮಹಾದಾಗತಃ' ಎಂಬ ಅರ್ಥದಲ್ಲಿ ಪಿತಾಮಹ ಶಬ್ದಕ್ಕೆ ವುಞ್ ಪ್ರತ್ಯಯವನ್ನು ಸೇರಿಸಿದಾಗ ಪೈತಾಮಹಕಃ ಎಂಬ ರೂಪವು ಹಿಂದಿನ ಪ್ರಕ್ರಿಯೆಯಂತೆ ಸಿದ್ಧವಾಗುತ್ತದೆ.

**(ಆಗತಾರ್ಥದಲ್ಲಿ ರೂಪ್ಯ ಪ್ರತ್ಯಯ ವಿಧಿಸುವ ಸೂತ್ರ)**

**ಸೂತ್ರ-1103. ಹೇತುಮನುಷ್ಯೇಭ್ಯೋಽನ್ಯತರಸ್ಯಾಂ ರೂಪ್ಯಃ ।।4-3-81।।**

ವೃತ್ತಿ-ಸಮಾದಾಗತಂ ಸಮರೂಪ್ಯಮ್ । ಪಕ್ಷೇ-ಗಹಾದಿತ್ವಾಚ್ಛಃ । ಸಮೀಯಮ್। ವಿಷಯಮ್ । ದೇವದತ್ತರೂಪ್ಯಮ್। ದೈವದತ್ತಮ್॥

ಪ.ಛೇ-ಹೇತುಮನುಷ್ಯೇಭ್ಯಃ, ಅನ್ಯತರಸ್ಯಾಂ, ರೂಪ್ಯಃ

ಅ.ವೃ-"ತತ ಆಗತಃ" ಎಂಬ ಸೂತ್ರವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್‌ಪ್ರಾತಿಪದಿಕಾತ್", "ತದ್ಧಿತಾಃ" "ಪ್ರಾಗ್‌ದೀವ್ಯತೋಽಣ್", "ಸಮರ್ಥಾನಾಂ ಪ್ರಥಮಾದ್ವಾ' ಮತ್ತು "ಶೇಷೇ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ತತ ಆಗತಃ ಎಂಬ ಅರ್ಥದಲ್ಲಿ ಪಂಚಮ್ಯಂತಗಳಾದ ಹೇತು ವಾಚುಕ ಶಬ್ದಗಳ ನಂತರ ಹಾಗೂ ಮನುಷ್ಯ ವಾಚಕ ಶಬ್ದಗಳ ನಂತರವು ವಿಕಲ್ಪದಿಂದ 'ರೂಪ್ಯ' ಪ್ರತ್ಯಯವು ಬರುತ್ತದೆ.

ಉದಾ-ಸಮರೂಪ್ಯಮ್ (ಯೋಗ್ಯವಾದ ಹೇತುವಿನಿಂದ ಬಂದ)-'ಸಮಾತ್ ಆಗತಮ್' ಎಂಬ ಅರ್ಥದಲ್ಲಿ ಹೇತುವಾಚಕವಾದ ಪಂಚಮ್ಯಂತ ಸಮ ಶಬ್ದದ ನಂತರ ಪ್ರಕೃತ ಸೂತ್ರದಿಂದ ರೂಪ್ಯ ಪ್ರತ್ಯಯವು ವೈಕಲ್ಪಿಕವಾಗಿ ಬರುತ್ತದೆ. ಅನ್ಯತರಸ್ಯಾಮ್ ಎಂದರೆ ಅನ್ಯತರಸ್ಯ ಆಮ್ ಎಂದು ಅರ್ಥ (ಎರಡರಲ್ಲಿ ಯಾವುದಾದರೂ ಒಂದನ್ನು ಸ್ವಿಕರಿಸಬಹುದೆಂದು ಅರ್ಥ)

ಈ ಸಮ ಶಬ್ದವು ಗಹಾದಿ ಗಣ ಪಠಿತವಾಗಿರುವುದರಿಂದ "ಗಹಾದೀಶ್ಚ" ಎಂಬ ಸೂತ್ರದಿಂದ ಛ ಪ್ರತ್ಯಯವು ಬಂದು ರೂಪ್ಯ ಪ್ರತ್ಯಯವು ಬಾರದ ಪಕ್ಷದಲ್ಲಿ ಸಮೀಯಮ್ ಎಂಬ ವೈಕಲ್ಪಿಕ ರೂಪವು ಸಿದ್ಧಿಸುತ್ತದೆ.

ಉದಾ-ವಿಷಮ ರೂಪಂ, ವಿಷಮೀಯಂ-ಮೇಲಿನ ಪ್ರಕ್ರಿಯೆಯಂತೆ ಹೇತು ವಾಚಕವಾದ ವಿಷಮ ಶಬ್ದಕ್ಕೆ ವೈಕಲ್ಪಿಕವಾಗಿ ರೂಪ್ಯ ಮತ್ತು ಛ ಪ್ರತ್ಯಯಗಳನ್ನು ಸೇರಿಸುವುದರಿಂದ ವಿಷಮ ರೂಪಂ, ವಿಷಮಿಯಂ ಎಂಬ ರೂಪಗಳು ಸಿದ್ಧಿಸುತ್ತವೆ.

ಉದಾ-(ದೇವದತ್ತರೂಪ್ಯಮ್ ದೇವದತ್ತನೆಂಬ ಮನುಷ್ಯನಿಂದ ಬಂದಿದ್ದು)-

ದೇವದತ್ತಾಗತಾಮ್ ಎಂಬ ಅರ್ಥದಲ್ಲಿ ಮನುಷ್ಯವಾಚಕವಾದ ಪಂಚಮ್ಯಂತ 'ದೇವದತ್ತ' ಶಬ್ದದ ನಂತರ ರೂಪ್ಯ ಪ್ರತ್ಯಯವು ಬಂದು ದೇವದತ್ತರೂಪ್ಯಮ್ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ-ದೈವದತ್ತಮ್-(ದೇವದತ್ತನೆಂಬ ಮನುಷ್ಯನಿಂದ ಬಂದಿದ್ದು) 'ರೂಪ್ಯ' ಪ್ರತ್ಯಯವು ಬಾರದ ಪಕ್ಷದಲ್ಲಿ ದೇವದತ್ತ ಶಬ್ದವು ನಾಮವಾಚಕವಾಗಿರುವುದರಿಂದ "ವಾ ನಾಮಧೇಯಸ್ಯ ವೃದ್ಧ ಸಂಜ್ಞಾವಾಚಾ" ಎಂಬ ವಾರ್ತಿಕದಿಂದ ವೈಕಲ್ಪಿಕ 'ವೃದ್ಧಸಂಜ್ಞಾ' ಬಂದು "ವೃದ್ಧಾಚ್ಛಃ" ಎಂಬ ಸೂತ್ರದಿಂದ 'ಛ' (ಈಯ್+ಅ) ಪ್ರತ್ಯಯವು ಬಂದು ದೈವದತ್ತಮ್, ಎಂಬ ರೂಪವು ಸಿದ್ಧವಾಗುತ್ತದೆ. ವೃದ್ಧ ಸಂಜ್ಞಾಬಾರದ ಪಕ್ಷದಲ್ಲಿ ಸಾಧಾರಣವಾಗಿ ಬರುವ ಅಣ್ ಪ್ರತ್ಯಯವು ಬಂದು ಆದಿವೃದ್ಧಿ ಮೊದಲಾವುಗಳಾಗಿ ದೈವದತ್ತಮ್ ಎಂಬ ರೂಪವು ಸಿದ್ಧಿಸುತ್ತದೆ.

**(ಆಗತಾರ್ಥದಲ್ಲಿ ಮಯಟ್ ವಿಧಿಸುವ ಸೂತ್ರ.)**

**ಸೂತ್ರ-1104. ಮಯಟ್ ಚ ॥ 4-3-82॥**

ವೃತ್ತಿ-ಸಮಮಯಮ್। ದೇವದತ್ತಮಯಮ್॥

ಅ.ವೃ-"ತತ ಆಗತಃ" ಎಂಬ ಸೂತ್ರವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ" "ಪ್ರಾಗ್ದೀವ್ಯತೋಽಣ್", "ಸಮರ್ಥಾನಾಂ ಪ್ರಥಮಾದ್ವಾ' ಮತ್ತು "ಶೇಷೇ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ಹೇತು ವಾಚಕ ಮತ್ತು ಮನುಷ್ಯ ವಾಚಕ ಪಂಚಮ್ಯಂತ ಸಮರ್ಥವಾದ ಪದಗಳ ನಂತರ ತತ ಆಗತಃ ಎಂಬ ಅರ್ಥದಲ್ಲಿ ಮಯಟ್ ಪ್ರತ್ಯಯವೂ (ಚ) ಬರುತ್ತದೆ. ಮಯಟ್ ಪ್ರತ್ಯಯದಲ್ಲಿ ಮಯ ಮಾತ್ರ ಉಳಿಯುತ್ತದೆ.

ಉದಾ-ಸಮಮಯಮ್ (ಯೋಗ್ಯವಾದ ಹೇತುವಿನಿಂದ ಬಂದಿದ್ದು)-'ಸಮಾತ್ ಆಗತಮ್' ಎಂಬ ಅರ್ಥದಲ್ಲಿ ಪಂಚಮ್ಯಂತ ಸಮರ್ಥ ಸಮ ಶಬ್ದದ ನಂತರ ಪ್ರಕೃತ ಸೂತ್ರದಿಂದ ಮಯಟ್ ಪ್ರತ್ಯಯವು ಬಂದು ಮೇಲಿನ ರೂಪವು ಸಿದ್ಧವಾಗಿದೆ.

ಉದಾ-ದೇವದತ್ತಮಯಮ್ (ದೇವದತ್ತನೆಂಬ ಮನುಷ್ಯನಿಂದ ಬಂದಿದ್ದು)- 'ದೇವದತ್ತಾತ್ ಆಗತಮ್' ಎಂಬ ಅರ್ಥದಲ್ಲಿ ಪಂಚಮ್ಯಂತ ಸಮರ್ಥ ದೇವದತ್ತ ಶಬ್ದದ ನಂತರ ಪ್ರಕೃತ ಸೂತ್ರದಿಂದ ಮಯಟ್ ಪ್ರತ್ಯಯವು ಬಂದು ಮೇಲಿನ ರೂಪವು ಸಿದ್ಧವಾಗಿದೆ.

**(ಪ್ರಭವತ್ಯರ್ಥದಲ್ಲಿ ಅಣಾದಿಪ್ರತ್ಯಯಗಳನ್ನು ವಿಧಿಸುವ ಸೂತ್ರ.)**

**ಸೂತ್ರ-1105. ಪ್ರಭವತಿ ॥4-3-83॥**

ವೃತ್ತಿ-ಹಿಮವತಃ ಪ್ರಭವತಿ ಹೈಮವತೀ ಗಂಗಾ॥

ಅ.ವೃ-"ತತ ಆಗತಃ" ಎಂಬ ಸೂತ್ರದಿಂದ ತತಃ ಎಂಬ ಪದವು ಮತ್ತು "ಪ್ರಾಗ್ದೀವ್ಯತೋಽಣ್" ಎಂಬ ಸೂತ್ರದಿಂದ ಅಣ್ ಎಂಬ ಪದವು

ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ" "ಪ್ರಾಗ್ದೀವ್ಯತೋಽಣ್", "ಸಮರ್ಥಾನಾಂ ಪ್ರಥಮಾದ್ವಾ' ಮತ್ತು "ಶೇಷೇ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ಪಂಚಮ್ಯಂತ ಸಮರ್ಥ ಪದದ ನಂತರ ಪ್ರಭವತಿ ಎಂಬ ಅರ್ಥದಲ್ಲಿ (ಮೊಟ್ಟಮೊದಲಾಗಿ ಕಾಣಿಸಿಕೊಳ್ಳುತ್ತದೆ ಎಂಬ ಅರ್ಥದಲ್ಲಿ) ಅಣ್ ಮೊದಲಾದ ಪ್ರತ್ಯಯಗಳು ಬರುತ್ತವೆ.

ಉದಾ-(ಹಿಮವತಃ ಪ್ರಭವತಿ) 'ಹೈಮವತೀ ಗಂಗಾ'-ಹಿಮಾಲಯ ಪರ್ವತದಿಂದ ಹುಟ್ಟಿದ ಅಥವಾ ಮೊಟ್ಟಮೊದಲಾಗಿ ಕಾಣಿಸಿಕೊಳ್ಳುವ ಗಂಗೆ. ಪಂಚಮ್ಯಂತವಾದ ಹಿಮವತಃ ಶಬ್ದದ ನಂತರ ಅಣ್ ಪ್ರತ್ಯಯವು ಬರುತ್ತದೆ. ಣಿತ್ವದ ಕಾರಣದಿಂದ ಆದಿವೃದ್ಧಿ ಮತ್ತು "ಯಸ್ಯೇತಿಚ" ಎಂಬ ಸೂತ್ರದಿಂದ ಹಿಮ ಶಬ್ದದ ಅಂತ್ಯ 'ಅ' ಕಾರಕ್ಕೆ (ಅಸ್-ಗೆ) ಲೋಪವಾಗಿ ಹೈಮವತ್+ಅ ಎಂದಾಗುತ್ತದೆ. "ಟಿಡ್ಢಾಣಞ್ದ್ವಯಸಚ್ಮಾತ್ರಚ್" ಎಂಬ ಸೂತ್ರದಿಂದ ಸ್ತ್ರೀತ್ವ ವಿವಕ್ಷೆಯಲ್ಲಿ 'ಙೀಪ್(ಈ)' ಪ್ರತ್ಯಯವು ಬಂದ ನಂತರ "ಯಸ್ಯೇತಿಚ" ಎಂಬುದರಿಂದ ಅಂತ್ಯ 'ಅ' ಕಾರಕ್ಕೆ ಲೋಪ ಬಂದು, ಹೈಮವತೀ (ಗಂಗಾ) ಎಂಬ ಸುಬಂತ ರೂಪವು ಸಿದ್ಧವಾಗುತ್ತದೆ.

**(ಗಚ್ಛತಿ ಅರ್ಥದಲ್ಲಿ ಅಣ್ ಪ್ರತ್ಯಯವನ್ನು ವಿಧಿಸುವ ಸೂತ್ರ.)**

**ಸೂತ್ರ-1106. ತದ್ಗಚ್ಛತಿ ಪಥಿದೂತಯೋಃ ॥4-3-85॥**

ವೃತ್ತಿ-ಸ್ರುಘ್ನಂ ಗಚ್ಛತಿ ಸ್ರೌಘ್ನಃ ಪನ್ಥಾಃ ದೂತೋವಾ॥

ಪ.ಛೇ-ತತ್, ಗಚ್ಛತಿ, ಪಥಿದೂತಯೋಃ।

ಅ.ವೃ-"ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ" "ಪ್ರಾಗ್ದೀವ್ಯತೋಽಣ್", "ಸಮರ್ಥಾನಾಂ ಪ್ರಥಮಾದ್ವಾ' ಮತ್ತು "ಶೇಷೇ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ದ್ವಿತೀಯಾಂತ ಸಮರ್ಥ ಶಬ್ದದ ನಂತರ ಗಚ್ಛತಿ(ಆ ಸ್ಥಳವನ್ನು ಕುರಿತು ಹೋಗುತ್ತಾನೆ) ಎಂಬ ಅರ್ಥದಲ್ಲಿ ಅಣ್ ಮೊದಲಾದ ಪ್ರತ್ಯಯಗಳು ಬರುತ್ತವೆ. ಆದರೆ ಹೊಗುವಂತದ್ದು ಎಂಬುದು ಮಾರ್ಗವಾಗಿಯೂ ದೂತನಾಗಿಯೋ ಇರಬೇಕು.

ಉದಾ-ಸ್ರುಘ್ನಂ ಗಚ್ಛತಿ ಸ್ರೌಘ್ನಃ, ಪನ್ಥಾಃ ದೂತೋವಾ -'ಸ್ರುಘ್ನವನ್ನು ಕುರಿತು' ಎಂಬ ಅರ್ಥದಲ್ಲಿ ದ್ವಿತೀಯಾಂತ ಶಬ್ದದ ನಂತರ ಪ್ರಕೃತ ಸೂತ್ರದಿಂದ ಅಣ್ ಪ್ರತ್ಯಯವು ಬಂದು ಸ್ರೌಘ್ನಃ ಎಂಬ ರೂಪವು ಸಿದ್ಧವಾಗುತ್ತದೆ. ಸ್ರುಘ್ನ ದೇಶಕ್ಕೆ ಹೋಗುವ ಮಾರ್ಗ ಅಥವಾ ದೂತನೆಂದು ಅರ್ಥ.

**(ಅಭಿನಿಷ್ಕ್ರಾಮತ್ಯರ್ಥದಲ್ಲಿ ಅಣ್ ಪ್ರತ್ಯಯವನ್ನು ವಿಧಿಸುವ ಸೂತ್ರ.)**

**ಸೂತ್ರ-1107. ಅಭಿನಿಷ್ಕ್ರಾಮತಿ ದ್ವಾರಮ್ ॥ 4-3-86॥**

ವೃತ್ತಿ-ಸ್ರುಘ್ನಮಭಿನಿಷ್ಕ್ರಾಮತಿ ಸ್ರೌಘ್ನಂ, ಕಾನ್ಯಕುಬ್ಜದ್ವಾರಮ್॥

ಅ.ವೃ–"ತದ್ಗಚ್ಛತಿ ಪಥಿದೂತಯೋಃ" ಎಂಬ ಸೂತ್ರದಿಂದ ತತ್ ಎಂಬ ಪದವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ" "ಪ್ರಾಗ್ದೀವ್ಯತೋಽಣ್", "ಸಮರ್ಥಾನಾಂ ಪ್ರಥಮಾದ್ವಾ' ಮತ್ತು "ಶೇಷೇ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ–ಅದಕ್ಕೆ ಅಭಿಮುಖವಾಗಿ (ಎದುರಾಗಿ)ಹೊರಹೊಗುತ್ತಾನೆ ಎಂಬ ಅರ್ಥದಲ್ಲಿ ಹೊರಹೊಗುವಂತಹ ದ್ವಾರವಾಗಿದ್ದರೆ, ದ್ವಿತೀಯಾಂತ ಸಮರ್ಥ ಶಬ್ದದ ನಂತರ ಅಣಾದಿ ಪ್ರತ್ಯಯಗಳು ಬರುತ್ತವೆ.

ಉದಾ–ಸ್ರುಘ್ನಮಭಿನಿಷ್ಕ್ರಾಮತಿ ಸ್ರೌಘ್ನಂ, ಕಾನ್ಯಕುಬ್ಜದ್ವಾರಮ್–ಸ್ರುಘ್ನವೆಂಬ ದೇಶದ ಕೋಟೆಯಿಂದ ಹೊರಬೀಳುವುದಕ್ಕಾಗಿ (ಕಾನ್ಯಕುಬ್ಜವನ್ನು ಕುರಿತು ಹೊಗುವ) ದ್ವಾರ. ಸ್ರುಘ್ನ+ಅಂ ಎಂಬುದು ಅಲೌಕಿಕ ವಿಗ್ರಹವಾಕ್ಯ. 'ಅಭಿನಿಷ್ಕ್ರಾಮತಿ ದ್ವಾರಮ್' ಎಂಬರ್ಥದಲ್ಲಿ ಅಣ್(ಅ) ಪ್ರತ್ಯಯವು ಬಂದಿದೆ. "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ ಸುಪ್(ಅಮ್)–ಗೆ ಲೋಪ ಬಂದು, ಸ್ರುಘ್ನ+ಅ ಎಂದಿರುತ್ತದೆ. 'ಉ' ಕಾರಕ್ಕೆ ಆದಿವೃದ್ಧಿ ಬಂದು ಔ ಎಂದಾಗಿ 'ಭ'ಸಂಜ್ಞಕ 'ಅ'ಕಾರಕ್ಕೆ ಲೋಪ ಬಂದು ಸ್ರೌಘ್ನ್+ಅ= ಸ್ರೌಘ್ನ ಎಂದಿದ್ದಾಗ ಸುಬಂತ ಮಾಡಿದಾಗ ಸ್ರೌಘ್ನಂ ಎಂದು ರೂಪವು ಸಿದ್ಧವಾಗುತ್ತದೆ.

**(ಅಧಿಕರಿಸಿ ಮಾಡಿದ ಗ್ರಂಥಾರ್ಥದಲ್ಲ ಅಣಾದಿ ಪ್ರತ್ಯಯಗಳು ಯಥಾವಕಾಶವಾಗಿ ವಿಧಿಸುವ ಸೂತ್ರ.)**

**ಸೂತ್ರ–1108. ಅಧಿಕೃತ್ಯ ಕೃತೇ ಗ್ರನ್ಥೇ॥4–3–87॥**

ವೃತ್ತಿ–ಶಾರೀರಕಮಧಿಕೃತ್ಯ ಕೃತೋ ಗ್ರಂಥಃ ಶಾರೀರಕೀಯಃ॥

ಅ.ವೃ–"ತದ್ಗಚ್ಛತಿ ಪಥಿದೂತಯೋಃ" ಎಂಬ ಸೂತ್ರದಿಂದ ತತ್ ಎಂಬ ಪದವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ" "ಪ್ರಾಗ್ದೀವ್ಯತೋಽಣ್", "ಸಮರ್ಥಾನಾಂ ಪ್ರಥಮಾದ್ವಾ' ಮತ್ತು "ಶೇಷೇ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ–'ಅದನ್ನು ಕುರಿತು ರಚಿಸಲಾದ ಗ್ರಂಥ' ಎಂಬ ಅರ್ಥದಲ್ಲಿ ಸಮರ್ಥವಾದ ದ್ವಿತೀಯಾಂತ ಪದದ ನಂತರ ಯಥಾವಕಾಶವಾಗಿ ಅಣಾದಿ ತದ್ಧಿತ ಪ್ರತ್ಯಯಗಳು ಬರುತ್ತವೆ.

ಉದಾ–ಶಾರೀರಕಮಧಿಕೃತ್ಯ ಕೃತೋ ಗ್ರಂಥಃ ಶಾರೀರಕೀಯಃ–(ಆತ್ಮವನ್ನು ಕುರಿತು ರಚಿಸಿದ ಗ್ರಂಥ) ಶರೀರವುಳ್ಳಂತಹ ಜೀವಾತ್ಮನೇ ಶಾರೀರಕನು. ಇದು ಲೌಕಿಕ ವಿಗ್ರಹವಾಕ್ಯ ಶಾರೀರಕ+ಅಂ ಎಂಬುದು ಅಲೌಕಿಕ ವಿಗ್ರಹವಾಕ್ಯ. ಮೊದಲೇ ಅಣ್ ಪ್ರತ್ಯಯ ಬಂದಿರುವುದರಿಂದ ಆದಿವೃದ್ಧಿ ಬಂದಿದೆ. "ವೃದ್ಧಾಚ್ಛಃ" ಎಂಬುದರಿಂದ ಛ (ಛ್+ಅ) ಪ್ರತ್ಯಯವು ಪ್ರಕೃತ ಸೂತ್ರದಿಂದ ಬಂದಿದೆ. ಛ ಪ್ರತ್ಯಯದಲ್ಲಿರುವ ಛ್–ಗೆ ಈಯ್ ಆದೇಶ ಬಂದು ಶಾರೀರಕ+ಈಯ್+ಅ ಎಂದಿದ್ದಾಗ, ಶಾರೀರಕ ಎಂಬಲ್ಲಿರುವ ಅಂತ್ಯ 'ಅ' ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು

ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ" "ಪ್ರಾಗ್ದೀವ್ಯತೋಽಣ್", "ಸಮರ್ಥಾನಾಂ ಪ್ರಥಮಾದ್ವಾ' ಮತ್ತು "ಶೇಷೇ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ಪಂಚಮ್ಯನ್ತ ಸಮರ್ಥ ಪದದ ನಂತರ ಪ್ರಭವತಿ ಎಂಬ ಅರ್ಥದಲ್ಲಿ (ಮೊಟ್ಟಮೊದಲಾಗಿ ಕಾಣಿಸಿಕೊಳ್ಳುತ್ತದೆ ಎಂಬ ಅರ್ಥದಲ್ಲಿ) ಅಣ್ ಮೊದಲಾದ ಪ್ರತ್ಯಯಗಳು ಬರುತ್ತವೆ.

ಉದಾ-(ಹಿಮವತಃ ಪ್ರಭವತಿ) 'ಹೈಮವತೀ ಗಂಗಾ'-ಹಿಮಾಲಯ ಪರ್ವತದಿಂದ ಹುಟ್ಟಿದ ಅಥವಾ ಮೊಟ್ಟಮೊದಲಾಗಿ ಕಾಣಿಸಿಕೊಳ್ಳುವ ಗಂಗೆ. ಪಂಚಮ್ಯನ್ತವಾದ ಹಿಮವತಃ ಶಬ್ದದ ನಂತರ ಅಣ್ ಪ್ರತ್ಯಯವು ಬರುತ್ತದೆ. ಣಿತ್ವದ ಕಾರಣದಿಂದ ಆದಿವೃದ್ಧಿ ಮತ್ತು "ಯಸ್ಯೇತಿಚ" ಎಂಬ ಸೂತ್ರದಿಂದ ಹಿಮ ಶಬ್ದದ ಅಂತ್ಯ 'ಅ' ಕಾರಕ್ಕೆ (ಅಸ್-ಗೆ) ಲೋಪವಾಗಿ ಹೈಮವತ್+ಅ ಎಂದಾಗುತ್ತದೆ. "ಟಿಡ್ಢಾಣಞ್ದ್ವಯಸಚ್ಮಾತ್ರಚ್" ಎಂಬ ಸೂತ್ರದಿಂದ ಸ್ತ್ರೀತ್ವ ವಿವಕ್ಷೆಯಲ್ಲಿ 'ಙೀಪ್(ಈ)' ಪ್ರತ್ಯಯವು ಬಂದ ನಂತರ "ಯಸ್ಯೇತಿಚ" ಎಂಬುದರಿಂದ ಅಂತ್ಯ 'ಅ' ಕಾರಕ್ಕೆ ಲೋಪ ಬಂದು, ಹೈಮವತೀ (ಗಂಗಾ) ಎಂಬ ಸುಬಂತ ರೂಪವು ಸಿದ್ಧವಾಗುತ್ತದೆ.

**(ಗಚ್ಛತಿ ಅರ್ಥದಲ್ಲಿ ಅಣ್ ಪ್ರತ್ಯಯವನ್ನು ವಿಧಿಸುವ ಸೂತ್ರ.)**

**ಸೂತ್ರ-1106. ತದ್ಗಚ್ಛತಿ ಪಥಿದೂತಯೋಃ ॥4-3-85॥**

ವೃತ್ತಿ-ಸ್ರುಘ್ನಂ ಗಚ್ಛತಿ ಸ್ರೌಘ್ನಃ ಪನ್ಥಾಃ ದೂತೋವಾ॥

ಪ.ಛೇ-ತತ್, ಗಚ್ಛತಿ, ಪಥಿದೂತಯೋಃ।

ಅ.ವೃ-"ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ" "ಪ್ರಾಗ್ದೀವ್ಯತೋಽಣ್", "ಸಮರ್ಥಾನಾಂ ಪ್ರಥಮಾದ್ವಾ' ಮತ್ತು "ಶೇಷೇ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ದ್ವಿತೀಯಾಂತ ಸಮರ್ಥ ಶಬ್ದದ ನಂತರ ಗಚ್ಛತಿ(ಆ ಸ್ಥಳವನ್ನು ಕುರಿತು ಹೋಗುತ್ತಾನೆ) ಎಂಬ ಅರ್ಥದಲ್ಲಿ ಅಣ್ ಮೊದಲಾದ ಪ್ರತ್ಯಯಗಳು ಬರುತ್ತವೆ. ಆದರೆ ಹೊಗುವಂತದ್ದು ಎಂಬುದು ಮಾರ್ಗವಾಗಿಯೂ ದೂತನಾಗಿಯೋ ಇರಬೇಕು.

ಉದಾ-ಸ್ರುಘ್ನಂ ಗಚ್ಛತಿ ಸ್ರೌಘ್ನಃ, ಪನ್ಥಾಃ ದೂತೋವಾ -'ಸ್ರುಘ್ನವನ್ನು ಕುರಿತು' ಎಂಬ ಅರ್ಥದಲ್ಲಿ ದ್ವಿತೀಯಾಂತ ಶಬ್ದದ ನಂತರ ಪ್ರಕೃತ ಸೂತ್ರದಿಂದ ಅಣ್ ಪ್ರತ್ಯಯವು ಬಂದು ಸ್ರೌಘ್ನಃ ಎಂಬ ರೂಪವು ಸಿದ್ಧವಾಗುತ್ತದೆ. ಸ್ರುಘ್ನ ದೇಶಕ್ಕೆ ಹೋಗುವ ಮಾರ್ಗ ಅಥವಾ ದೂತನೆಂದು ಅರ್ಥ.

**(ಅಭಿನಿಷ್ಕ್ರಾಮತ್ಯರ್ಥದಲ್ಲಿ ಅಣ್ ಪ್ರತ್ಯಯವನ್ನು ವಿಧಿಸುವ ಸೂತ್ರ.)**

**ಸೂತ್ರ-1107. ಅಭಿನಿಷ್ಕ್ರಾಮತಿ ದ್ವಾರಮ್ ॥ 4-3-86॥**

ವೃತ್ತಿ-ಸ್ರುಘ್ನಮಭಿನಿಷ್ಕ್ರಾಮತಿ ಸ್ರೌಘ್ನಂ, ಕಾನ್ಯಕುಬ್ಜದ್ವಾರಮ್॥

ಅ.ವೃ-"ತದ್ಗಚ್ಛತಿ ಪಥಿದೂತಯೋಃ" ಎಂಬ ಸೂತ್ರದಿಂದ ತತ್ ಎಂಬ ಪದವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ" "ಪ್ರಾಗ್‌ದೀವ್ಯತೋಽಣ್", "ಸಮರ್ಥಾನಾಂ ಪ್ರಥಮಾದ್ವಾ' ಮತ್ತು "ಶೇಷೇ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ಅದಕ್ಕೆ ಅಭಿಮುಖವಾಗಿ (ಎದುರಾಗಿ)ಹೊರಹೊಗುತ್ತಾನೆ ಎಂಬ ಅರ್ಥದಲ್ಲಿ ಹೊರಹೊಗುವಂತಹ ದ್ವಾರವಾಗಿದ್ದರೆ, ದ್ವಿತೀಯಾಂತ ಸಮರ್ಥ ಶಬ್ದದ ನಂತರ ಅಣಾದಿ ಪ್ರತ್ಯಯಗಳು ಬರುತ್ತವೆ.

ಉದಾ-ಸ್ರುಘ್ನಮಭಿನಿಷ್ಕ್ರಾಮತಿ ಸ್ರೌಘ್ನಂ, ಕಾನ್ಯಕುಬ್ಜದ್ವಾರಮ್-ಸ್ರುಘ್ನವೆಂಬ ದೇಶದ ಕೋಟೆಯಿಂದ ಹೊರಬೀಳುವುದಕ್ಕಾಗಿ (ಕಾನ್ಯಕುಬ್ಜವನ್ನು ಕುರಿತು ಹೊಗುವ) ದ್ವಾರ. ಸ್ರುಘ್ನ+ಅಂ ಎಂಬುದು ಅಲೌಕಿಕ ವಿಗ್ರಹವಾಕ್ಯ. 'ಅಭಿನಿಷ್ಕ್ರಾಮತಿ ದ್ವಾರಮ್' ಎಂಬರ್ಥದಲ್ಲಿ ಅಣ್(ಅ) ಪ್ರತ್ಯಯವು ಬಂದಿದೆ. "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ ಸುಪ್(ಅಮ್)-ಗೆ ಲೋಪ ಬಂದು, ಸ್ರುಘ್ನ+ಅ ಎಂದಿರುತ್ತದೆ. 'ಉ' ಕಾರಕ್ಕೆ ಆದಿವೃದ್ಧಿ ಬಂದು ಔ ಎಂದಾಗಿ 'ಭ'ಸಂಜ್ಞಕ 'ಅ'ಕಾರಕ್ಕೆ ಲೋಪ ಬಂದು ಸ್ರೌಘ್ನ್+ಅ= ಸ್ರೌಘ್ನ ಎಂದಿದ್ದಾಗ ಸುಬಂತ ಮಾಡಿದಾಗ ಸ್ರೌಘ್ನಂ ಎಂದು ರೂಪವು ಸಿದ್ಧವಾಗುತ್ತದೆ.

**(ಅಧಿಕರಿಸಿ ಮಾಡಿದ ಗ್ರಂಥಾರ್ಥದಲ್ಲಿ ಅಣಾದಿ ಪ್ರತ್ಯಯಗಳು ಯಥಾವಕಾಶವಾಗಿ ವಿಧಿಸುವ ಸೂತ್ರ.)**

**ಸೂತ್ರ-1108. ಅಧಿಕೃತ್ಯ ಕೃತೇ ಗ್ರನ್ಥೇ॥4-3-87॥**

ವೃತ್ತಿ-ಶಾರೀರಕಮಧಿಕೃತ್ಯ ಕೃತೋ ಗ್ರಂಥಃ ಶಾರೀರಕೀಯಃ॥

ಅ.ವೃ-"ತದ್ಗಚ್ಛತಿ ಪಥಿದೂತಯೋಃ" ಎಂಬ ಸೂತ್ರದಿಂದ ತತ್ ಎಂಬ ಪದವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ" "ಪ್ರಾಗ್‌ದೀವ್ಯತೋಽಣ್", "ಸಮರ್ಥಾನಾಂ ಪ್ರಥಮಾದ್ವಾ' ಮತ್ತು "ಶೇಷೇ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-'ಅದನ್ನು ಕುರಿತು ರಚಿಸಲಾದ ಗ್ರಂಥ' ಎಂಬ ಅರ್ಥದಲ್ಲಿ ಸಮರ್ಥವಾದ ದ್ವಿತೀಯಾಂತ ಪದದ ನಂತರ ಯಥಾವಕಾಶವಾಗಿ ಅಣಾದಿ ತದ್ಧಿತ ಪ್ರತ್ಯಯಗಳು ಬರುತ್ತವೆ.

ಉದಾ-ಶಾರೀರಕಮಧಿಕೃತ್ಯ ಕೃತೋ ಗ್ರಂಥಃ ಶಾರೀರಕೀಯಃ-(ಆತ್ಮವನ್ನು ಕುರಿತು ರಚಿಸಿದ ಗ್ರಂಥ) ಶರೀರವುಳ್ಳಂತಹ ಜೀವಾತ್ಮನೇ ಶಾರೀರಕನು. ಇದು ಲೌಕಿಕ ವಿಗ್ರಹವಾಕ್ಯ ಶಾರೀರಕ+ಅಂ ಎಂಬುದು ಅಲೌಕಿಕ ವಿಗ್ರಹವಾಕ್ಯ. ಮೊದಲೇ ಅಣ್ ಪ್ರತ್ಯಯ ಬಂದಿರುವುದರಿಂದ ಆದಿವೃದ್ಧಿ ಬಂದಿದೆ. "ವೃದ್ಧಾಚ್ಛಃ" ಎಂಬುದರಿಂದ ಛ (ಛ್+ಅ) ಪ್ರತ್ಯಯವು ಪ್ರಕೃತ ಸೂತ್ರದಿಂದ ಬಂದಿದೆ. ಛ ಪ್ರತ್ಯಯದಲ್ಲಿರುವ ಛ್-ಗೆ ಈಯ್ ಆದೇಶ ಬಂದು ಶಾರೀರಕ+ಈಯ್+ಅ ಎಂದಿದ್ದಾಗ, ಶಾರೀರಕ ಎಂಬಲ್ಲಿರುವ ಅಂತ್ಯ 'ಅ' ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು

ಶಾರೀರಕ್+ಈಯ=ಶಾರೀರಕೀಯ ಎಂದಾದ ಮೇಲೆ ಸುಬಂತ ಮಾಡಿದ ಮೇಲೆ ಶಾರೀರಕೀಯಃ ಎಂದು ರೂಪವು ಸಿದ್ಧವಾಗುತ್ತದೆ.

**(ನಿವಾಸಾರ್ಥದಲ್ಲಿ ಅಣಾದಿಗಳನ್ನು ವಿಧಿಸುವ ಸೂತ್ರ.)**

**ಸೂತ್ರ-1109. ಸೋಽಸ್ಯ ನಿವಾಸಃ ॥4-3-89॥**

ವೃತ್ತಿ-ಸ್ರುಘ್ನಃ ನಿವಾಸಃ ಅಸ್ಯ ಸ್ರೌಘ್ನಃ ॥

ಪ.ಛೇ-ಸಃ, ಅಸ್ಯ, ನಿವಾಸಃ।

ಅ.ವೃ-"ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ" "ಪ್ರಾಗ್ದೀವ್ಯತೋಽಣ್", "ಸಮರ್ಥಾನಾಂ ಪ್ರಥಮಾದ್ವಾ' ಮತ್ತು "ಶೇಷೇ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ಪ್ರಥಮಾನ್ತ ಸಮರ್ಥ ಪ್ರಾತಿಪದಿಕ ನಂತರ 'ಅದು ಇವನ ವಾಸ ಸ್ಥಾನ' ಎಂಬ ಅರ್ಥದಲ್ಲಿ ಅಣ್ ಮೊದಲಾದ ಪ್ರತ್ಯಯಗಳು ಬರುತ್ತವೆ.

ಉದಾ-ಸ್ರೌಘ್ನಃ ಸ್ರುಘ್ನವೆಂಬ ದೇಶವನ್ನು ವಾಸಸ್ಥಾನವಾಗಿ ಉಳ್ಳವನು-'ಸ್ರುಘ್ನಃ ನಿವಾಸಃ ಅಸ್ಯ' ಎಂಬುದು ಲೌಕಿಕ ವಿಗ್ರಹವಾಕ್ಯ. ಸ್ರುಘ್ನ+ಸು ಎಂಬುದು ಅಲೌಕಿಕ ವಿಗ್ರಹವಾಕ್ಯ. ಪ್ರಕೃತ ಸೂತ್ರದಿಂದ ಅಣ್ ಪ್ರತ್ಯಯವು ಬಂದು ಆದಿವೃದ್ಧಿಯಾಗಿ ಸ್ರೌಘ್ನ+ಸು+ಅ ಎಂದಿದ್ದಾಗ, ಸುಪ್ ಲೋಪವಾಗಿ, ಸ್ರೌಘ್ನ ಎಂಬಲ್ಲಿರುವ ಅಂತ್ಯ 'ಅ'ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಅಂತ್ಯ 'ಅ'ಕಾರ ಲೋಪವಾಗಿ ಸ್ರೌಘ್ನ್+ಅ= ಸ್ರೌಘ್ನ ಎಂದಾದ ಮೇಲೆ ಸುಬಂತ ಮಾಡಿದಾಗ ಸ್ರೌಘ್ನಃ ಎಂಬ ರೂಪವು ಸಿದ್ಧವಾಗುತ್ತದೆ.

**(ಪ್ರೋಕ್ತಾರ್ಥದಲ್ಲಿ ಅಣಾದಿ ಪ್ರತ್ಯಯಗಳನ್ನು ವಿಧಿಸುವ ಸೂತ್ರ)**

**ಸೂತ್ರ-1110. ತೇನ ಪ್ರೋಕ್ತಮ್ ॥ 4-3-101॥**

ವೃತ್ತಿ-ಪಾಣಿನಿನಾ ಪ್ರೋಕ್ತಮ್ ಪಾಣಿನೀಯಮ್॥

ಅ.ವೃ-"ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ" "ಪ್ರಾಗ್ದೀವ್ಯತೋಽಣ್", "ಸಮರ್ಥಾನಾಂ ಪ್ರಥಮಾದ್ವಾ' ಮತ್ತು "ಶೇಷೇ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-'ಅವನಿಂದ ಹೇಳಲ್ಪಟ್ಟಿತು' ಎಂಬ ಅರ್ಥದಲ್ಲಿ ತೃತೀಯಾಂತ ಸಮರ್ಥ ಶಬ್ದಗಳ ನಂತರ ಅಣ್ ಮೊದಲಾದ ಪ್ರತ್ಯಯಗಳು ಬರುತ್ತವೆ.

ಉದಾ-ಪಾಣಿನೀಯಮ್-(ಪಾಣಿನಿಯವರಿಂದ ಹೇಳಲ್ಪಟ್ಟ ಶಾಸ್ತ್ರ)-'ಪಾಣಿನಿನಾ ಪ್ರೋಕ್ತಮ್' ಎಂಬುದು ಲೌಕಿಕ ವಿಗ್ರಹವಾಕ್ಯ. ಪಾಣಿನಿ+ಟಾ ಎಂಬುದು ಅಲೌಕಿಕ ವಿಗ್ರಹ ವಾಕ್ಯ ಪ್ರಕೃತ ಸೂತ್ರದಿಂದ ಛ ಪ್ರತ್ಯಯವು ಬರುತ್ತದೆ. ಇದರಲ್ಲಿ ಆದಿ ಅಚ್ ವರ್ಣವು ವೃದ್ಧಿ-ಅಕ್ಷರವಾಗಿದೆ. ಆದ್ದರಿಂದ "ವೃದ್ಧಿರ್ಯಯಸ್ಯಾಚಾಮಾದಿಸ್ತದ್ ವೃದ್ಧಂ" ಎಂಬ ಸೂತ್ರದಿಂದ ವೃದ್ಧ ಸಂಜ್ಞೆಯನ್ನು ಹೊಂದಿದೆ. ಆದ್ದರಿಂದ "ವೃದ್ಧಾಚ್ಛಃ"

ಎಂಬ ಸೂತ್ರದಿಂದ ಛ ಪ್ರತ್ಯಯ ಬಂದು "ಆಯನೇಯ್ ಪ್ರತ್ಯಯಾದೀನಾಮ್" ಎಂಬ ಸೂತ್ರದಿಂದ ಛ (ಛ್+ಅ)ಪ್ರತ್ಯಯ ಬಂದು, ಛ್-ಗೆ ಈಯ್ ಬಂದು ಪಾಣಿನಿ+ಈಯ ಎಂದಿದ್ದಾಗ ನಿ-ಯಲ್ಲಿರುವ 'ಭ'ಸಂಜ್ಞೆಯುಳ್ಳ 'ಇ'ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು, ಪಾಣಿನ್+ಈಯ್+ಅ=ಪಾಣಿನಿಯ ಎಂದಿದ್ದಾಗ, ಸುಬಂತ ಮಾಡಿದ ಮೇಲೆ ನಪುಂಸಕ ಲಿಂಗದಲ್ಲಿ ಪೂರ್ವ ರೂಪದಿಂದ ಪಾಣಿನೀಯ+ಅಂ=ಪಾಣಿನೀಯಮ್ ರೂಪವು ಸಿದ್ಧವಾಗಿದೆ.

**(ಇದಮ್ (ಅವನಿಗೆ ಸಂಬಂಧಿಸಿದ್ದು) ಎಂಬ ಅರ್ಥದಲ್ಲಿ ಅಣಾದಿ ಪ್ರತ್ಯಯಗಳನ್ನು ವಿಧಿಸುವ ಸೂತ್ರ)**

**ಸೂತ್ರ-1111. ತಸ್ಯೇದಮ್ ॥4-3-120॥**

ವೃತ್ತಿ-ಉಪಗೋರಿದಮ್ ಔಪಗವಮ್ ॥

**ಇತಿ ಶೈಷಿಕ ಪ್ರಕರಣಂ ॥5॥**

ಪ.ಛೇ.-ತಸ್ಯ, ಇದಮ್ ।

ಅ.ವೃ-"ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ" "ಪ್ರಾಗ್ದೀವ್ಯತೋಽಣ್", "ಸಮರ್ಥಾನಾಂ ಪ್ರಥಮಾದ್ವಾ' ಮತ್ತು "ಶೇಷೇ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-'ಇದು ಅವನದ್ದು' ಎಂಬ ಅರ್ಥದಲ್ಲಿ ಸಮರ್ಥವಾದ ಷಷ್ಠ್ಯಂತ ಶಬ್ದದ ನಂತರ ಅಣ್ ಮೊದಲಾದ ಪ್ರತ್ಯಯಗಳು ಬರುತ್ತವೆ.

ಉದಾ-ಔಪಗವಮ್-(ಉಪಗುವಿಗೆ ಸಂಬಂಧಿಸಿದ್ದು) ಎಂಬ ಅರ್ಥದಲ್ಲಿ ಶೈಷಿಕ ಅಣ್ ಪ್ರತ್ಯಯವು ಉಪಗು ಶಬ್ದದ ನಂತರ ಬರುತ್ತದೆ. ಉಪಗೋಃ ಇದಮ್ ಎಂಬುದು ಲೌಕಿಕ ವಿಗ್ರಹ ವಾಕ್ಯ. ಉಪಗು+ಙಸ್+ಅಣ್ ಎಂದಿದ್ದಾಗ, "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ ಙಸ್-ಗೆ ಲೋಪ ಬಂದು ಉಪಗು+ಅಣ್ ಎಂದಿದ್ದಾಗ, "ಓರ್ಗುಣಃ" ಸೂತ್ರದಿಂದ ಗುಣ ಬಂದು ನಂತರ ಅವಾದೇಶ ಬಂದು ಆದಿವೃದ್ಧಿಯಿಂದ ಔಪಗವಮ್ ರೂಪವು ಸಿದ್ಧವಾಗುತ್ತದೆ.

**ಇಲ್ಲಿಗೆ ಶೈಷಿಕ (48) ಪ್ರಕರಣವು ಮುಗಿಯಿತು**

# ಪ್ರಕರಣ-49: ವಿಕಾರಾರ್ಥಕಾಃ

**(ಸೂತ್ರ ಸಂಖ್ಯೆ 1111 ರಿಂದ 1116 ವರೆಗೆ) (ಪ್ರಾಗ್ದೀವ್ಯತೀಯ ಪ್ರಕರಣ)**

**('ಅಣ್' ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ. 1112-ತಸ್ಯ ವಿಕಾರಃ। (4-3-134)**

ವೃತ್ತಿ-(ವಾ॥ ಅಶ್ಮನೋ ವಿಕಾರೇ ಟಿಲೋಪೋ ವಕ್ತವ್ಯಃ)-

ಅಶ್ಮನೋ ವಿಕಾರಃ ಆಶ್ಮಃ / ಬಾಸ್ಮನಃ / ಮಾರ್ತಿಕಃ

ಅ.ವೃ-"ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ" "ಪ್ರಾಗ್ದೀವ್ಯತೋಽಣ್", "ಸಮರ್ಥಾನಾಂ ಪ್ರಥಮಾದ್ವಾ' ಅಧಿಕಾರ ಸೂತ್ರಗಳಾಗಿವೆ.

ಅರ್ಥ-"ಅದರ ವಿಕಾರ" ಅರ್ಥದಲ್ಲಿ 'ಅಣ್' ಮೊದಲಾದ ಪ್ರತ್ಯಯಗಳು ಬರುತ್ತವೆ.

"ತಸ್ಯೇದಂ" ಎಂಬ ಸೂತ್ರದಿಂದ 'ತಸ್ಯ' ಎಂಬ ಪದದ ಅನುವೃತ್ತಿಯು ಆಗುತ್ತಿತ್ತು. ಮತ್ತು ಇಲ್ಲಿ ಅದನ್ನು ಹೇಳಬೇಕಾದ ಅವಶ್ಯಕತೆಯು ಇರಲಿಲ್ಲ. ಆದರೂ ಇಲ್ಲಿ ಹೇಳಿರುವ ಉದ್ದೇಶವೇನೆಂದರೆ, ಶೇಷಾಧಿಕಾರವು ಇಲ್ಲಿ ನಿವೃತ್ತವಾಗಿದೆ.

ವಾರ್ತಿಕ-ಅಶ್ಮನೋ ವಿಕಾರೇ ಟಿಲೋಪೋ ವಕ್ತವ್ಯಃ।

ಅರ್ಥ-ವಿಕಾರಾರ್ಥದಲ್ಲಿ ಪ್ರತ್ಯಯವು ಬಂದ ಮೇಲೆ 'ಅಶ್ಮನ್' ಶಬ್ದಕ್ಕೆ ಟಿ ಲೋಪವು ಬರುತ್ತದೆ. ಅಶ್ಮನ್ ನಲ್ಲಿ ಅಂತ್ಯ 'ಅಚ್' ಎಂದರೆ 'ಮ' ಕಾರದ ನಂತರ ಇರುವ 'ಅ' ಕಾರ ಮತ್ತು ಅದರ ಜೊತೆಗೆ ಕೂಡಿರುವ 'ನ್' ಕಾರ. ಈ 'ಅನ್' ಎಂಬುದಕ್ಕೆ 'ಟಿ' ಎಂದು ಸಂಜ್ಞೆ ಬರುತ್ತದೆ. ಪ್ರತ್ಯಯ ಬಂದ ಮೇಲೆ ಅಶ್ಮನ್+ಅ ಎಂದಿದ್ದಾಗ, ಮೊದಲು "ನಸ್ತದ್ಧಿತೇ" ಎಂಬ ಸೂತ್ರದಿಂದ ಟಿ ಲೋಪವು ಪ್ರಾಪ್ತವಾಗುತ್ತದೆ. ಇದಕ್ಕೆ ಪ್ರಕೃತಿ ಭಾವವನ್ನು ವಿಧಿಸುವಂತಹ 'ಅನ್' ಎಂಬುದನ್ನು ಪ್ರಕೃತ ಸೂತ್ರವು ಬಾಧಿಸುತ್ತದೆ. ಅದನ್ನು ಬಾಧಿಸುವುದಕ್ಕಾಗಿ ಪ್ರಕೃತ ವಾರ್ತಿಕವು ಹೊರಟಿದೆ.

ಉದಾ-1) ಆಶ್ಮಃ (ಕಲ್ಲಿನ ವಿಕಾರ)-'ಅಶ್ಮನಃ ವಿಕಾರಃ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಅಶ್ಮನ್+ಙಸ್ ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ಅಣ್ ಪ್ರತ್ಯಯ ಬಂದ ಮೇಲೆ, ಪ್ರಾತಿಪದಿಕ ಸಂಜ್ಞೆಯು ಬರುತ್ತದೆ. ಇದಕ್ಕೆ 'ಸುಪ್' ಸೇರಿಸಿದಾಗ "ಸುಪೋಧಾತುಪ್ರಾತಿಪದಿಕಯೋಃ" ಸೂತ್ರದಿಂದ 'ಸುಪ್'ಗೆ 'ಲುಕ್' ಬಂದು ಅಶ್ಮನ್+ಅ ಎಂದಿರುತ್ತದೆ. ಇದು ಣಿತ್ ಆಗಿರುವುದರಿಂದ 'ಆದಿವೃದ್ಧಿ'ಯು ಬರುತ್ತದೆ. 'ಟಿ' ಸಂಜ್ಞೆಯನ್ನು ಹೊಂದಿರುವ 'ಅನ್'ಗೆ ಪ್ರಕೃತ ವಾರ್ತಿಕದಿಂದ ಲೋಪ ಬರುತ್ತದೆ. ಆಶ್ಮ್+ಅ=ಆಶ್ಮ ಎಂದಿದ್ದಾಗ ಇದನ್ನು ಸುಬಂತ ಮಾಡಿದರೆ ಅಶ್ಮಃ ರೂಪ ಸಿದ್ಧವಾಗುತ್ತದೆ.

**(ಅಣ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1113. ಅವಯವೇ ಚ ಪ್ರಾಣ್ಯೋಷಧಿ-ವೃಕ್ಷೇಭ್ಯಃ। (4-3-135)**

ವೃತ್ತಿ-ಚಾತ್ ವಿಕಾರೇ। ಮಯೂರಸ್ಯ ಅವಯವಃ ವಾ ಮಯೂರಃ॥

ಮೌರ್ವಂ=ಕಾಂಡಂ ಭಸ್ಮವಾ। ಪೈಪ್ಪಲಂ

ಅ.ವೃ–"ತಸ್ಯ ವಿಕಾರ" ಎಂಬ ಸೂತ್ರವು ಅನುವೃತ್ತವಾಗುತ್ತದೆ "ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ" "ಪ್ರಾಗ್ದೀವ್ಯತೋಽಣ್", "ಸಮರ್ಥಾನಾಂ ಪ್ರಥಮಾದ್ವಾ' ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ–ಪ್ರಾಣಿ, ಔಷಧಿ ಮತ್ತು ವೃಕ್ಷ ಶಬ್ದಗಳ ನಂತರ ವಿಕಾರ ಮತ್ತು ಅವಯವ ಎಂಬ ಅರ್ಥದಲ್ಲಿ 'ಅಣ್' ಮೊದಲಾದ ಪ್ರತ್ಯಯಗಳು ಬರುತ್ತವೆ.

ಉದಾ–1 ಪ್ರಾಣಿವಾಚಕಕ್ಕೆ ಉದಾ–ಮಾಯೂರಃ (ನವಿಲಿನ ಅವಯವ/ಅದರ ವಿಕಾರ)–'ಮಯೂರಸ್ಯ ವಿಕಾರಃ' ಅಥವಾ ಅವಯವಃ ಎಂಬುದು ಲೌಕಿಕ ವಿಗ್ರಹ ವಾಕ್ಯ. ಮಯೂರ+ಜಸ್ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ಅಣ್ ಪ್ರತ್ಯಯುವು ಬಂದು ಪ್ರಾತಿಪದಿಕವಾದ ಮೇಲೆ "ಸುಪೋಧಾತು ಪ್ರಾತಿಪದಿಕಯೋಃ" ಎಂಬುದರಿಂದ ಸುಪ್ ಗೆ ಲುಕ್ ಬಂದು, ಮಯೂರ+ಅ ಎಂದಿರುತ್ತದೆ. ಇದು ಣಿತ್ ಆಗಿರುವುದರಿಂದ ಆದಿವೃದ್ಧಿ ಬಂದು 'ಭ' ಸಂಜ್ಞೆಯುಳ್ಳ ರೇಫೋತ್ತರ 'ಅ' ಕಾರಕ್ಕೆ ಲೋಪ ಬಂದು ಮಾಯೂರ್+ಅ=ಮಾಯೂರ ಎಂದಿರುತ್ತದೆ. ಇದನ್ನು ಸುಬಂತ ಮಾಡಿದ ಮೇಲೆ ಮಾಯೂರಃ ಎಂದಾಗುತ್ತದೆ.

ಉದಾ–2) ಮೌರ್ವಂ (ಔಷಧಿ ವಿಶೇಷ)–ಮೂರ್ವ ಎಂಬ ಔಷಧಿ ವಿಶೇಷವಾದ ಬಳ್ಳಿ ಅಥವಾ ಅದರ ಅವಯವ ಅಥವಾ ಅದರ ವಿಕಾರ (ಭಸ್ಮ)– ಮೂರ್ವಾಯಾಃ ವಿಕಾರಃ ಎಂಬುದು ಲೌಕಿಕ ವಿಗ್ರಹ ವಾಕ್ಯ.ಮೂರ್ವಾ+ಜಸ್ ಎಂಬುದು ಅಲೌಕಿಕ ವಿಗ್ರಹ ವಾಕ್ಯ. "ತಸ್ಯ ವಿಕಾರಃ" ಎಂಬ ಸೂತ್ರದಿಂದ 'ಅಣ್' ಪ್ರತ್ಯಯವು ಬಂದು, ಪ್ರಾತಿಪದಿಕವಾದ ಮೇಲೆ "ಸುಪೋಧಾತುಪ್ರಾತಿಪದಿಕಯೋಃ" ಸೂತ್ರದಿಂದ ಸುಪ್ ಗೆ ಲುಕ್ ಬಂದು ಮೂರ್ವ+ಅ ಎಂದಾಗಿ, ಇದು ತದ್ಧಿತವಾಗಿರು ವುದರಿಂದ ಆದಿವೃದ್ಧಿ ಬಂದು 'ಭ್' ಸಂಜ್ಞಕ 'ಆ' ಕಾರಕ್ಕೆ ಲೋಪ ಬಂದು, ಮೌರ್ವ +ಅ+ಮೌರ್ವ ಎಂದಾಗುತ್ತದೆ. ಸುಬಂತ ಮಾಡಿದ ಮೇಲೆ ಮೌರ್ವಂ ಎಂದಾಗುತ್ತದೆ.

ಉದಾ–3) (ವೃಕ್ಷ ವಾಚಕಕ್ಕೆ)–ಪೈಪ್ಪಲಂ (ಪಿಪ್ಪಲ ಎಂಬ ವೃಕ್ಷದ ಅವಯವ ಅಥವಾ ಅದರ ಭಸ್ಮ)–ಪಿಪ್ಪಲಸ್ಯ ವಿಕಾರಃ ಅಥವಾ ಅವಯವ ಎಂಬುದು ಲೌಕಿಕ ವಿಗ್ರಹ ವಾಕ್ಯ. ಪಿಪ್ಪಲ+ಜಸ್ ಎಂಬುದು ಅಲೌಕಿಕ ವಿಗ್ರಹ ವಾಕ್ಯ . ಪ್ರಕೃತ ಸೂತ್ರದಿಂದ ಅಣ್ ಪ್ರತ್ಯಯ ಬಂದು ಪ್ರಾತಿಪದಿಕವಾದಮೇಲೆ "ಸುಪೋಧಾತುಪ್ರಾತಿಪದಿಕಯೋಃ" ಎಂಬ ಸೂತ್ರದಿಂದ 'ಸುಪ್' ಗೆ ಲುಕ್ ಬಂದು ಪಿಪ್ಪಲ+ಅ ಎಂದಿರುತ್ತದೆ. ಇದು ತದ್ಧಿತವಾಗಿರುವುದರಿಂದ ಣಿತ್ ನಿಂದ ಆದಿವೃದ್ಧಿ ಬಂದು 'ಭ' ಸಂಜ್ಞೆಯುಳ್ಳ 'ಅ' ಕಾರಕ್ಕೆ ಲೋಪ ಬಂದು ಪೈಪ್ಪಲ್+ಅ=ಪೈಪ್ಪಲ ಎಂದಾಗುತ್ತದೆ. ಸುಬಂತ ಮಾಡಿದ ಮೇಲೆ ಪೈಪ್ಪಲಂ ಎಂಬ ರೂಪವು ಸಿದ್ಧವಾಗುತ್ತದೆ.

**(ಮಯಟ್ ಪ್ರತ್ಯಯವನ್ನು ವೈಕಲ್ಪಿಕವಾಗಿ ವಿಧಿಸುವ ಸೂತ್ರ)**

**ಸೂತ್ರ-1114.ಮಯಡ್ ವೈತಯೋರ್ಭಾಷಾಯಾಮಭಕ್ಷ್ಯಾಚ್ಛಾದನಯೋಃ(4-3-143)**

ವೃತ್ತಿ-ಪ್ರಕೃತಿ ಮಾತ್ರಾತ್ ಮಯಟ್ ವಾ ಸ್ಯಾತ್। ವಿಕಾರಾಯವಯೋಃ ಆಶ್ಮಮಯಂ, ಆಶ್ಮನಂ, ಅಭಕ್ಷ್ಯೇ ಇತ್ಯಾದಿ ಕಿಂ? ಮೌದ್ಗಃ ಸೂಪಃ। ಕಾರ್ಪಾಸಂ ಆಚ್ಛಾದನಂ।

ಪ.ಛೇ-ಮಯಟ್ ವಾ ಏತಯೋಃ, ಭಾಷಾಯಾಂ, ಅಭಕ್ಷ್ಯ, ಆಚ್ಛಾದನಯೋಃ।

ಅ.ವೃ-"ತಸ್ಯ ವಿಕಾರಃ" ಎಂಬ ಸೂತ್ರದಿಂದ ತಸ್ಯ ಪದವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ" "ಪ್ರಾಗ್ದೀವ್ಯತೋಽಣ್", "ಸಮರ್ಥಾನಾಂ ಪ್ರಥಮಾದ್ವಾ' ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ಅವಯವ ಮತ್ತು ವಿಕಾರಾರ್ಥಗಳಲ್ಲಿ ಎಲ್ಲ ಪ್ರಕೃತಿವಾಚಕ ಶಬ್ದಗಳ ನಂತರ ಲೌಕಿಕ ಭಾಷೆಯಲ್ಲಿ ಭಕ್ಷ್ಯ ಮತ್ತು ಆಚ್ಛಾದನಗಳಿಗಿಂತ ಭಿನ್ನವಾದ ಅರ್ಥದಲ್ಲಿ ಮಯಟ್ ಪ್ರತ್ಯಯವು ವಿಕಲ್ಪವಾಗಿ ಬರುತ್ತದೆ.

ಉದಾ-ಆಶ್ಮಮಯಂ-ಆಶ್ಮನಃ-"ಅವಯವಃ ವಿಕಾರೋವಾ" ಎಂಬ ಸೂತ್ರದಿಂದ ಮಯಟ್ ಪ್ರತ್ಯಯವು ಬರುತ್ತದೆ. ಅಂತರ್ಗತವಾದ ವಿಭಕ್ತಿಯನ್ನಾಶ್ರಯಿಸಿ ಪದತ್ವವು ಇರುವುದರಿಂದ "ನಲೋಪಃ ಪ್ರಾತಿಪದಿಕಾಂತಸ್ಯ" ಎಂಬ ಸೂತ್ರದಿಂದ 'ನ್' ಕಾರ ಲೋಪವಾಗಿ ಆಶ್ಮಮಯಂ ಎಂಬ ರೂಪವು ಸಿದ್ಧಿಸುತ್ತದೆ.

'ಮಯಟ್' ಬಾರದ ಪಕ್ಷದಲ್ಲಿ ಅಣ್ ಪ್ರತ್ಯಯವು ಬರುತ್ತದೆ. ಅವಯವಾರ್ಥವಾಗಿದ್ದಾಗ 'ಅನ್' ಎಂಬ ಸೂತ್ರದಿಂದ 'ಟಿ' ಲೋಪವು ನಿಷೇಧಿಸಲ್ಪಡುವುದರಿಂದ ಆಶ್ಮನಂ ಎಂಬ ರೂಪವು ಸಿದ್ಧವಾಗುತ್ತದೆ.

ವಿಕಾರಾರ್ಥದಲ್ಲಿ "ಅಶ್ಮನೋ ವಿಕಾರೇ ಟಿ ಲೋಪೋ ವಕ್ತವ್ಯಃ" ಎಂಬ ವಾರ್ತಿಕದಿಂದ 'ಟಿ' ಲೋಪವು ಬಂದು 'ಆಶ್ಮಂ' ಎಂಬ ರೂಪವು ಸಿದ್ಧವಾಗುತ್ತದೆ.

ಅಭಕ್ಷ್ಯ-ಅಚ್ಛಾದನಯೋಃ ಎಂದು ಹೇಳಿರುವುದರಿಂದ ಭಕ್ಷ್ಯ ಮತ್ತು ಆಚ್ಛಾದನ ವಾಚಕಗಳಾದ ಮೌದ್ಗಃ, ಕಾರ್ಪಾಸಂ ಎಂಬ ಪದಗಳಲ್ಲಿ ಮಯಟ್ ಬರುವುದಿಲ್ಲ. 'ಮುದ್ಗಾನಾಂ ಅವಯವಃ ವಿಕಾರೋವಾ', 'ಕರ್ಪಾಸಸ್ಯ ಅವಯವಃ ವಿಕಾರೋವಾ" ಎಂಬ ಅರ್ಥದಲ್ಲಿ ಮುದ್ಗ ಮತ್ತು ಕರ್ಪಾಸೀ ಶಬ್ದಗಳಿಗಿಂತ ಪರದಲ್ಲಿ "ಬಿಲ್ವಾದಿಭ್ಯೋಽಣ್" ಎಂಬ ಸೂತ್ರದಿಂದ 'ಅಣ್' ಪ್ರತ್ಯಯವು ಬಂದು 'ಣಿತ್' ಆದ್ದರಿಂದ ಆದಿವೃದ್ಧಿ ಮತ್ತು 'ಭ' ಸಂಜ್ಞಕ ಅಂತ್ಯ 'ಅ' ಕಾರ 'ಈ' ಕಾರಗಳ ಲೋಪವಾಗಿ ಮೌದ್ಗಃ, ಕಾರ್ಪಾಸಂ ಎಂಬ ರೂಪಗಳು ಸಿದ್ಧವಾಗುತ್ತದೆ.

**(ಮಯಟ್ ಪ್ರತ್ಯಯವನ್ನು ವಿಧಿಸುವ ಮತ್ತೊಂದು ಸೂತ್ರ)**

**ಸೂತ್ರ-1115. ನಿತ್ಯಂ ವೃದ್ಧ-ಶರಾದಿಭ್ಯಃ । (4.3.144)**

ವೃತ್ತಿ-ಆಮ್ರಮಯಂ। ಶರಮಯಂ।

ಅ.ವೃ-"ತಸ್ಯ ವಿಕಾರಃ" ಎಂಬ ಸೂತ್ರದಿಂದ ತಸ್ಯ ಎಂಬ ಪದವು "ಮಯಡ್ವೈತಯೋರ್ಭಾಷಾಯಾಮಭಕ್ಷ್ಯಾಚ್ಛಾದನಯೋಃ" ಎಂಬ ಸೂತ್ರದಿಂದ 'ವಾ'

ಎಂಬ ಪದವನ್ನು ಬಿಟ್ಟು ಉಳಿದೆಲ್ಲ ಪದಗಳು ಅನುವೃತ್ತವಾಗುತ್ತವೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ" "ಪ್ರಾಗ್ದೀವ್ಯತೋಽಣ್", "ಸಮರ್ಥಾನಾಂ ಪ್ರಥಮಾದ್ವಾ' ಎಂಬುವು ಅಧಿಕಾರ ಸೂತ್ರಗಳಾಗಿವೆ.

ಷಷ್ಠ್ಯಂತವಾದ ವೃದ್ಧ ಸಂಜ್ಞೆಯನ್ನು ಹೊಂದಿರುವ ಪ್ರಾತಿಪದಿಕಗಳ ಮತ್ತು ಶರಾದಿಗಣದಲ್ಲಿ ಹೇಳಿರುವ ಪ್ರಾತಿಪದಿಕಗಳ ನಂತರ ವಿಕಾರ ಮತ್ತು ಅವಯವ ಅರ್ಥದಲ್ಲಿ ನಿತ್ಯವಾಗಿ ಮಯಟ್ ಪ್ರತ್ಯಯವು ಬರುತ್ತದೆ. ಆದರೆ ವಿಕಾರ ಅಥವಾ ಅವಯವ, ಭಕ್ಷ್ಯ ಮತ್ತು ಅಚ್ಛಾದನಾರ್ಥದಲ್ಲಿ ಇರಬಾರದು.

ಉದಾ-ಆಮ್ರಮಯಂ (ಮಾವಿನಗಿಡದ ವಿಕಾರ/ಅವಯವ) -'ಆಮ್ರಸ್ಯ ವಿಕಾರಃ ಅವಯವೋ ವಾ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಆಮ್ರ+ಜಸ್ ಎಂಬ ಅಲೌಕಿಕ ವಿಗ್ರಹದಲ್ಲಿ "ತಸ್ಯ ವಿಕಾರಃ" ಎಂಬ ಅಧಿಕಾರದಲ್ಲಿ "ನಿತ್ಯವೃದ್ಧಶರಾದಿಭ್ಯಃ" ಎಂಬ ಸೂತ್ರದಿಂದ ನಿತ್ಯವಾಗಿ ಮಯಟ್ (ಮಯ) ಪ್ರತ್ಯಯವು ಬರುತ್ತದೆ. ನಂತರ ಪ್ರಾತಿಪದಿಕವಾದ ಮೇಲೆ "ಸುಪೋಧಾತುಪ್ರಾತಿಪದಿಕಯೋಃ" ಎಂಬ ಸೂತ್ರದಿಂದ ಸುಪ್ ಗೆ ಕ್ ಬಂದು ಆಮ್ರಮಯ ಎಂದಿರುತ್ತದೆ. ಪ್ರತ್ಯಯವು ಣಿತ್ ಆಗಿ ಇಲ್ಲದಿರುವುದರಿಂದ ಆದಿವೃದ್ಧಿಯು ಬರಲಿಲ್ಲ. ಇದನ್ನು ಸುಬಂತಮಾಡಿದಾಗ ಆಮ್ರಮಯಂ ಎಂಬ ರೂಪವು ಸಿದ್ಧವಾಗುತ್ತದೆ. ಇದೇ ರೀತಿಯಲ್ಲಿ

ಉದಾ-ಶರಮಯಂ-ಮೇಲೆ ಹೇಳಿದ ರೀತಿಯಲ್ಲಿಯೇ 'ಶರಾಣಾಂ ವಿಕಾರಃ' ಅಥವಾ 'ಅವಯವಯೋ ವಾ' ಎಂಬರ್ಥದಲ್ಲಿ ಶರ+ಆಮ್ ಎಂದಿದ್ದಾಗ ಮೇಲೆ ಹೇಳಿದ ರೀತಿಯಲ್ಲಿ 'ಮಯಟ್' ಪ್ರತ್ಯಯವು ಬಂದು ಶರಮಯಂ ಎಂದು ಸುಬಂತವಾಗುತ್ತದೆ. (ಇಲ್ಲಿ ಶರ+ಆಮ್ ನಲ್ಲಿ ಆಮ್ ಎಂಬುದು ಷಷ್ಠೀ ಬಹುವಚನ ರೂಪವಾಗಿದೆ. ಅದು "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ ಲೋಪವಾಗುತ್ತದೆ.)

**(ಮಯಟ್ ಪ್ರತ್ಯಯವನ್ನು ವಿಧಿಸುವ ಮತ್ತೊಂದು ಸೂತ್ರ)**

**ಸೂತ್ರ-1116-ಗೋಶ್ಚಪುರೀಷೇ (4-3-145)**

ವೃತ್ತಿ-ಗೋಃ ಪುರೀಷಂ ಗೋಮಯಂ।

ಪ.ಛೇ-ಗೋಃ, ಚ, ಪುರೀಷೇ।

ಅ.ವೃ-"ತಸ್ಯ ವಿಕಾರಃ" ಎಂಬ ಪೂರ್ಣ ಸೂತ್ರವು ಅನುವೃತ್ತವಾಗುತ್ತದೆ.

"ಮಯಡ್... ಆಚ್ಛಾದನಯೋಃ" ಎಂಬ ಸೂತ್ರದಿಂದ ಮಯಟ್ ಎಂಬ ಪದವು ಅನುವೃತ್ತವಾಗುತ್ತದೆ "ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ" "ಪ್ರಾಗ್ದೀವ್ಯತೋಽಣ್", "ಸಮರ್ಥಾನಾಂ ಪ್ರಥಮಾದ್ವಾ' ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-'ಸಗಣಿ' ಎಂಬ ಅರ್ಥದಲ್ಲಿ ಗೋ ಶಬ್ದದ ನಂತರ 'ಮಯಟ್' ಪ್ರತ್ಯಯವು ಬರುತ್ತದೆ. ಈ ಸೂತ್ರವು "ಗೋಪಯಸೋರ್ಯತ್" ಎಂಬ ಸೂತ್ರದಿಂದ ಬರಬೇಕಾದ

'ಯತ್' ಪ್ರತ್ಯಯಕ್ಕೆ ಅಪವಾದವಾಗಿದೆ.

ಉದಾ-ಗೋಮಯಂ (ಆಕಳಿಂದ ಬಂದ ವಿಕಾರ)-'ಗೋಃ ವಿಕಾರಃ' ಎಂಬುದು ಲೌಕಿಕ ವಿಗ್ರಹವಾಕ್ಯ. ಗೋ+ಜಸ್ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ಮಯಟ್(ಮಯ) ಪ್ರತ್ಯಯವು ಬಂದು ಗೋ+ಮಯ ಎಂದಿದ್ದಾಗ, ಸುಬಂತ ಮಾಡಿದಾಗ 'ಸು'ಗೆ ಅಮ್ ಬಂದು ಗೋಮಯಂ ಎಂದು ನಪುಂಸಕಲಿಂಗವಾಗಿದೆ.

**('ಯತ್' ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ -1117. ಗೋಪಯಸೋರ್ಯತ್। (4-3-160)**

ವೃತ್ತಿ-ಗವ್ಯಂ। ಪಯಸ್ಯಂ। ಗೋಃ ಪಯಸೋಃ ಯತ್।

**ಇತಿ ವಿಕಾರಾರ್ಥಃ (49) ಅಥವಾ ಪ್ರಾಗ್ದೀವ್ಯತೀಯಾಃ**

ಅ.ವೃ: "ತಸ್ಯ ವಿಕಾರಃ" ಎಂಬ ಪೂರ್ಣ ಸೂತ್ರವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ" "ಪ್ರಾಗ್‌ದೀವ್ಯತೋಽಣ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ವಿಕಾರ ಮತ್ತು ಅವಯವ ಎಂಬ ಅರ್ಥದಲ್ಲಿ ಷಷ್ಠ್ಯಂತವಾದ ಗೋ ಮತ್ತು ಪಯಸ್ ಶಬ್ದಗಳ ನಂತರ ಯತ್ (ಯ್) ಪ್ರತ್ಯಯವು ಬರುತ್ತದೆ.

ಉದಾಃ ಗವ್ಯಂ (ಆಕಳ ವಿಕಾರ ಅಂದರೆ ಹಾಲು ಮೊಸರು, ತುಪ್ಪ ಮತ್ತು ಸಗಣಿ ಮೂತ್ರ)-'ಗೋಃ ವಿಕಾರಃ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಗೋ+ಜಸ್ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ 'ಯತ್' ಪ್ರತ್ಯಯವು ಬಂದು ಗೋ+ಯ ಎಂದಿರುತ್ತದೆ. "ವಾಂತೋ ಯಿ ಪ್ರತ್ಯಯೇ" ಎಂಬ ಸೂತ್ರದಿಂದ 'ಅವ್' ಆದೇಶ ಬಂದು 'ಗವ್ಯ' ಎಂದಿರುತ್ತದೆ. ಸುಬಂತ ಮಾಡಿದಾಗ 'ಸು'ಗೆ ಅಮ್ ಆದೇಶ ಬಂದು 'ಗವ್ಯಂ' ಎಂದು ನಪುಂಸಕಲಿಂಗವಾಗುತ್ತದೆ.

ಉದಾ-ಪಯಸ್ಯಂ (ಹಾಲಿನ ವಿಕಾರ (ಮೊಸರು ಮೊದಲಾದವು)-ಪಯಸಃ ವಿಕಾರಃ ಎಂಬುದು ಲೌಕಿಕ ವಿಗ್ರಹ ವಾಕ್ಯ. ಪಯಸ್+ಜಸ್ ಎಂಬುದು ಅಲೌಕಿಕ ವಿಗ್ರಹ ವಾಕ್ಯ. **"ಗೋಪಯಸೋರ್ಯತ್"** ಎಂಬ ಸೂತ್ರದಿಂದ ಜಸ್ ಲೋಪವಾದ ಮೇಲೆ ಪಯಸ್+ಯ್ ಎಂದಿರುತ್ತದೆ. ಆಗ ಪಯಸ್ಯ ಎಂದಾದ ಮೇಲೆ ಸುಬಂತಮಾಡಿದಾಗ 'ಪಯಸ್ಯಂ' ಎಂದಾಗುತ್ತದೆ.

**ಪ್ರಕರಣ 49 (ಪ್ರಾಗ್ದೀವ್ಯತೀಯಾರ್ಥ)**

**ಅಥವಾ ವಿಕಾರಾರ್ಥಕ ಪ್ರಕರಣವು ಮುಗಿಯಿತು.**

# ಪ್ರಕರಣ-50: ಠಗಧಿಕಾರಃ

**(ಸೂ. ಸಂ.1118-1131)**

**(ಠಕ್-ಅಧಿಕಾರಃ)**

**(ಠಕ್ ಪ್ರತ್ಯಯಕ್ಕೆ ಅಧಿಕಾರವನ್ನು ಹೇಳುವ ಸೂತ್ರ)**

**ಸೂತ್ರ-1118.-ಪ್ರಾಗ್ವಹತೇಷ್ಠಕ್ (4-4-1)**

ವೃತ್ತಿ-ತದ್ವಹತಿ ಇತ್ಯತಃ ಪ್ರಾಕ್, ಠಕ್ ಅಧಿಕ್ರೀಯತೇ।

ಪ.ಛೇ-ಪ್ರಾಕ್, ವಹತೇಃ, ಠಕ್।

ಅರ್ಥ-ಈ ಸೂತ್ರದಿಂದ "ತದ್-ವಹತಿ-ರಥ-ಯುಗ ಪ್ರಾಸಂಗಂ" ಎಂಬ ಸೂತ್ರದ ಪೂರ್ವ ಸೂತ್ರದವರೆಗೆ ಠಕ್ ಪ್ರತ್ಯಯದ ಅಧಿಕಾರವು ಇರುತ್ತದೆ.

ಠಕ್ ಪ್ರತ್ಯಯವನ್ನು ವಿಧಿಸುವ ಸೂತ್ರ

ಸೂತ್ರ-1119. ತೇನ ದೀವ್ಯತಿ ಖನತಿ ಜಯತಿ ಜಿತಮ್ (4-4-2)

ವೃತ್ತಿ-ಅಕ್ಷೈಃ, ದೀವ್ಯತಿ, ಖನತಿ, ಜಯತಿ ಜಿತಂ ವಾ-ಆಕ್ಷಿಕಃ।

ಅ.ವೃ-"ಠಕ್", "ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ" ಮತ್ತು "ಸಮರ್ಥಾನಾಂ ಪ್ರಥಮಾದ್ವಾ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ: ಜೂಜಾಡುತ್ತಾನೆ, ಅಗೆಯುತ್ತಾನೆ, ಜಯಿಸುತ್ತಾನೆ, ಜಯಸಲ್ಪಟ್ಟಿತು ಈ ಅರ್ಥಗಳಲ್ಲಿ ತೃತೀಯಾಂತ ಸಮರ್ಥ ಪದದ ನಂತರ ಠಕ್ ಪ್ರತ್ಯಯವು ಬರುತ್ತದೆ.

ಉದಾ-ಆಕ್ಷಿಕಃ-ಪಗಡೆಗಳಿಂದ ಆಡುವವನು, ಪಗಡೆಯಿಂದ ಅಗೆಯುವವನು, ಪಗಡೆಯಿಂದ ಜಯಿಸುತ್ತಾನೆ, ಪಗಡೆಯಿಂದ ಗೆಲ್ಲಲ್ಪಡುತ್ತಾನೆ.-'ಅಕ್ಷೈಃ ದೀವ್ಯತಿ, ಖನತಿ, ಜಯತಿ, ಜಿತಂ ವಾ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಅಕ್ಷ+ಭಿಸ್ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಇದರಲ್ಲಿ ಪ್ರಕೃತ ಸೂತ್ರದಿಂದ ಠಕ್ (ಠ) ಪ್ರತ್ಯಯವು ಬರುತ್ತದೆ. "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ 'ಭಿಸ್' ಗೆ ಲೋಪ ಬಂದು ಅಕ್ಷ+ಠ ಎಂದಿರುತ್ತದೆ. "ಠಸ್ಯೇಕಃ" ಎಂಬ ಸೂತ್ರದಿಂದ ಠ-ಗೆ 'ಇಕ' ಆದೇಶವು ಬಂದು, ಅಕ್ಷ+ಇಕ ಎಂದಿರುತ್ತದೆ. ಇದು ಕಿತ್ ಆಗಿರುವುದರಿಂದ "ಕಿತಿಚ" ಎಂಬ ಸೂತ್ರದಿಂದ ಆದಿವೃದ್ಧಿಯಾಗಿ ಆಕ್ಷ +ಇಕ ಎಂದಿದ್ದಾಗ "ಯಸ್ಯೇತಿಚ" ಎಂಬ ಸೂತ್ರದಿಂದ 'ಭ' ಸಂಜ್ಞಕ 'ಅ' (ಅಂದರೆ ಆಕ್ಷ ಎಂಬಲ್ಲಿರುವ ' ಅ' ಕಾರಕ್ಕೆ) ಲೋಪ ಬಂದು ಆಕ್ಷ್+ಇಕ=ಆಕ್ಷಿಕ ಎಂದಾದ ಮೇಲೆ ಸುಬಂತ ಮಾಡಿದಾಗ ಆಕ್ಷಿಕಃ ಎಂಬ ರೂಪವು ಸಿದ್ಧವಾಗುತ್ತದೆ.

**(ಠಕ್ ಪ್ರತ್ಯಯವನ್ನು ವಿಧಿಸುವ ಮತ್ತೊಂದು ಸೂತ್ರ)**

**ಸೂತ್ರ-1120-ಸಂಸ್ಕೃತಮ್। (4.4.3)**

ವೃತ್ತಿ-ದಧ್ನಾ ಸಂಸ್ಕೃತಂ-ದಾಧಿಕಂ। ಮಾರೀಚಿಕಂ।

ಅ.ವೃ-"ತೇನ ದೀವ್ಯತಿ... ಜಿತಂ" ಎಂಬ ಸೂತ್ರದಿಂದ 'ತೇನ' ಎಂಬ ಪದವು ಅನುವೃತ್ತವಾಗುತ್ತದೆ. "ಠಕ್", "ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ' ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-' ಇದರಿಂದ ಸಂಸ್ಕಾರ ಹೊಂದಿದ' ಅರ್ಥದಲ್ಲಿ ತೃತೀಯಾಂತ ಪ್ರಾತಿಪದಿಕದ ನಂತರ 'ಠಕ್' ಪ್ರತ್ಯಯವು ಬರುತ್ತದೆ.

ಉದಾ-ದಾಧಿಕಮ್ (ಮೊಸರಿನಿಂದ ಸಂಸ್ಕರಿಸಲ್ಪಟ್ಟ ಪದಾರ್ಥ)-'ದಧ್ನಾ ಸಂಸ್ಕೃತಮ್' ಎಂಬುದು ಲೌಕಿಕ ವಿಗ್ರಹ ವಾಕ್ಯ.ದಧಿ+ಟಾ ಎಂಬುದು ಅಲೌಕಿಕ ವಿಗ್ರಹ ವಾಕ್ಯ. "ಸಂಸ್ಕೃತಮ್" ಎಂಬ ಸೂತ್ರದಿಂದ 'ಠಕ್' ಪ್ರತ್ಯಯ ಬಂದು "ಠಸ್ಯೇಕಃ" ಎಂಬ ಸೂತ್ರದಿಂದ 'ಠ್' ಗೆ 'ಇಕ್' ಆದೇಶ ಬಂದು ದಧಿ+ಠ (ಇಕ್+ಅ) ಎಂದಿರುತ್ತದೆ. ಇದು ಕಿತ್ ಆಗಿರುವುದರಿಂದ "ಕಿತಿಚ" ಎಂಬ ಸೂತ್ರದಿಂದ ಆದಿವೃದ್ಧಿ ಬಂದು 'ಭ' ಸಂಜ್ಞಕ 'ಇ' ಕಾರಕ್ಕೆ ಲೋಪ ಬಂದು ದಾಧ್+ಇಕ ಎಂದಾಗಿ, ಸುಬಂತ ಮಾಡಿದ ಮೇಲೆ ದಾಧಿಕಮ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ-2) ಮಾರೀಚಿಕಮ್ (ಮೆಣಸಿನಕಾಳಿನಿಂದ ಸಂಸ್ಕರಿಸಲ್ಪಟ್ಟ ಪದಾರ್ಥ)- 'ಮರೀಚೇನ ಸಂಸ್ಕೃತಂ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಮರೀಚ+ಠ ಎಂಬುದು ಅಲೌಕಿಕ ವಿಗ್ರಹ ವಾಕ್ಯವಾಗಿದೆ. ಪ್ರಕೃತ ಸೂತ್ರದಿಂದ ಠಕ್ ಪ್ರತ್ಯಯವು ಬಂದು "ಠಸ್ಯೇಕಃ" ಎಂಬ ಸೂತ್ರದಿಂದ 'ಠ' ಗೆ 'ಇಕ್' ಆದೇಶ ಬಂದು ಮರೀಚ+ಠ (ಇಕ್+ಅ ಎಂದಾಗಿ ಇದು ಕಿತ್ ಆಗಿರುವುದರಿಂದ 'ಕಿತಿಚ' ಎಂಬ ಸೂತ್ರದಿಂದ ಆದಿವೃದ್ಧಿ ಬಂದು 'ಭ' ಸಂಜ್ಞಕ 'ಅ' ಕಾರಕ್ಕೆ 'ಯಸ್ಯೇತಿಚ' ಎಂಬ ಸೂತ್ರದಿಂದ ಲೋಪ ಬಂದು ಮಾರೀಚ್+ಇಕ=ಮಾರೀಚಿಕ ಎಂದಾಗಿ ಸುಬಂತ ಮಾಡಿದಾಗ 'ಮಾರೀಚಿಕಮ್' ಎಂಬ ರೂಪವು ಸಿದ್ಧವಾಗುತ್ತದೆ.

**(ಠಕ್ ಪ್ರತ್ಯಯವನ್ನು ವಿಧಿಸುವ ಮತ್ತೊಂದು ಸೂತ್ರ)**

**ಸೂತ್ರ-1121. ತರತಿ (4-4-5)**

ವೃತ್ತಿ-ತೇನ ಇತ್ಯೇವ। ಉಡುಪೇನ ತರತಿ-ಔಡುಪಿಕಃ।

ಅ. ವೃ-"ತೇನ ದೀವ್ಯತಿ... ಜಿತಂ" ಎಂಬ ಸೂತ್ರದಿಂದ 'ತೇನ' ಎಂಬ ಪದವು ಅನುವೃತ್ತವಾಗುತ್ತದೆ. "ಠಕ್", "ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ","ಸಮರ್ಥಾನಾಂ ಪ್ರಥಮಾದ್ವಾ' ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ -' ಇದರಿಂದ ದಾಟುತ್ತಾನೆ' ಎಂಬ ಅರ್ಥದಲ್ಲಿ ತೃತೀಯಾಂತ ಪ್ರಾತಿಪದಿಕದ ನಂತರ ಠಕ್(ಠ)' ಪ್ರತ್ಯಯವು ಬರುತ್ತದೆ.

ಉದಾ-ಔಡುಪಿಕಃ-(ಸಣ್ಣ ನೌಕೆಯಿಂದ ದಾಟುತ್ತಾನೆ)-ಉಡುಪೇನ ತರತಿ ಎಂಬುದು ಲೌಕಿಕ ವಿಗ್ರಹ ವಾಕ್ಯ. ಉಡುಪ+ಟಾ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ 'ಠಕ್' ಪ್ರತ್ಯಯ ಬಂದು "ಠಸ್ಯೇಕಃ" ಎಂಬ ಸೂತ್ರದಿಂದ ಠ್ ಗೆ ಇಕ್ ಆದೇಶ ಬಂದು ಸುಪ್ ಲೋಪವಾದ ನಂತರ ಉಡುಪ+ಟ (ಇಕ್+ಅ)

ಎಂದಿರುತ್ತದೆ. ಕಿತ್ ಆಗಿರುವುದರಿಂದ "ಕಿತಿಚ" ಎಂಬ ಸೂತ್ರದಿಂದ ಆದಿವೃದ್ಧಿ ಬಂದು 'ಭ' ಸಂಜ್ಞಕ 'ಅ' ಕಾರಕ್ಕೆ ಲೋಪ ಬಂದು, ಔಡುಪ್+ಇಕ=ಔಡುಪಿಕ ಎಂದಾಗುತ್ತದೆ. ಸುಬಂತ ಮಾಡಿದಾಗ ಔಡುಪಿಕಃ ಎಂಬ ರೂಪವು ಸಿದ್ಧವಾಗುತ್ತದೆ.

**(ಠಕ್ ಪ್ರತ್ಯಯವನ್ನು ವಿಧಿಸುವ ಮತ್ತೊಂದು ಸೂತ್ರ)**

**ಸೂತ್ರ-1122.-ಚರತಿ (4-4-8)**

ತೃತೀಯಾಂತಾತ್ ಗಚ್ಛತಿ-ಭಕ್ಷಯತಿ ಇತ್ಯರ್ಥಯೋಃ। ಠಕ್ ಸ್ಯಾತ್। ಹಸ್ತಿನಾ ಚರತಿ-ಹಾಸ್ತಿಕಃ। ದಧ್ನಾ ಚರತಿ-ದಾಧಿಕಃ।

ಅ.ವೃ-"ತೇನ ದೀವ್ಯತಿ-ಖನತಿ,-ಜಯತಿ-ಜಿತಮ್" ಎಂಬ ಸೂತ್ರದಿಂದ ತೇನ ಎಂಬ ಪದವು ಅನುವೃತ್ತವಾಗುತ್ತದೆ "ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ" "ಸಮರ್ಥಾನಾಂ ಪ್ರಥಮಾದ್ವಾ' ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ಇದರಿಂದ ಹೋಗುತ್ತದೆ, ಮತ್ತು ಇದರಿಂದ ತಿನ್ನಲ್ಪಡುತ್ತದೆ ಎಂಬ ಅರ್ಥದಲ್ಲಿ ತೃತೀಯಾಂತ ಪ್ರಾತಿಪದಿಕದ ಮೇಲೆ ಠಕ್(ಠ್+ಅ+ಕ್) ಪ್ರತ್ಯಯವು ಬರುತ್ತದೆ. 'ಚರ್' ಧಾತುವಿಗೆ 'ಗತಿ' ಮತ್ತು 'ಭಕ್ಷಣ' ಎಂಬ ಎರಡು ಅರ್ಥಗಳಿವೆ.

ಉದಾ-1) ಹಾಸ್ತಿಕಃ (ಆನೆಯಿಂದ ಹೋಗುತ್ತಿದ್ದಾನೆ)-'ಹಸ್ತಿನಾ ಚರತಿ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಹಸ್ತಿನ್+ಟಾ ಎಂಬುದು ಅಲೌಕಿಕ ವಿಗ್ರಹ ವಾಕ್ಯ. 'ಚರತಿ' ಶಬ್ದದ ಮೇಲೆ ಠಕ್ ಪ್ರತ್ಯಯ ಬಂದು "ಠಸ್ಯೇಕಃ"ಎಂಬುದರಿಂದ 'ಠ' ಗೆ 'ಇಕ' ಪ್ರತ್ಯಯವು ಆದೇಶವಾಗಿ ಬಂದು, "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ 'ಸುಪ್' ಗೆ ಲುಕ್ ಆದ ಮೇಲೆ "ಚರತಿ" ಎಂಬುದರಿಂದ ಠಕ್ ಗೆ ಇಕ್ ಆದೇಶ ಬಂದು ಹಸ್ತಿನ್+ಠ (ಇಕ್+ಅ) ಎಂದಿರುತ್ತದೆ. ಇದು ಕಿತ್ ಆಗಿರುವುದರಿಂದ ಆದಿವೃದ್ಧಿ ಬಂದು,'ಟಿ' ಸಂಜ್ಞೆಯುಳ್ಳ ಇನ್ ಗೆ "ನಸ್ತದ್ಧಿತೇ" ಎಂಬುದರಿಂದ ಲೋಪ ಬಂದು, ಹಾಸ್ತ+ಇಕ ಎಂದಿದ್ದಾಗ "ಯಸ್ಯೇತಿಚ" ಎಂಬುದರಿಂದ 'ಅ' ಕಾರ ಲೋಪವಾಗಿ ಹಾಸ್ತ್+ಇಕ ಎಂದಾಗಿ=ಹಾಸ್ತಿಕ ಎಂದಾಗಿ, ಸುಬಂತ ಮಾಡಿದ ಮೇಲೆ ಹಾಸ್ತಿಕಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ-2) ದಾಧಿಕಃ (ಮೊಸರಿನಿಂದ ಊಟ ಮಾಡುತ್ತಾನೆ)-ದಧ್ನಾ ಚರತಿ ಎಂಬುದು ಲೌಕಿಕ ವಿಗ್ರಹ ವಾಕ್ಯ. ದಧಿ+ಟಾ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ದಧಿ ಶಬ್ದದಮೇಲೆ "ಚರತಿ" ಎಂಬುದರಿಂದ ಠಕ್ ಪ್ರತ್ಯಯ ಬಂದು, 'ಠ' ಗೆ 'ಇಕ್' ಆದೇಶ ಬಂದ ಮೇಲೆ ಸುಪ್ ಲೋಪವಾದ ನಂತರ ದಧಿ+ಠ(ಇಕ್+ಅ) ಎಂದಾಗುತ್ತದೆ. ಇದು ಕಿತ್ ಆಗಿರುವುದರಿಂದ 'ಕಿತಿಚ' ಎಂಬುದರಿಂದ ಆದಿವೃದ್ಧಿ ಬಂದು ದಾಧಿ+ಇಕ ಎಂದಿದ್ದಾಗ, ದಾಧಿ ಯಲ್ಲಿರುವ 'ಇ' ಕಾರವು 'ಭ' ಸಂಜ್ಞೆಯುಳ್ಳದ್ದಾದ್ದರಿಂದ 'ಯಸ್ಯೇತಿಚ' ಎಂಬುದರಿಂದ ಲೋಪ ಬಂದು ದಾಧ್+ಇಕ=ದಾಧಿಕ ಎಂದಾಗಿ, ಸುಬಂತ ಮಾಡಿದಾಗ ದಾಧಿಕಃ ಎಂಬ ರೂಪವು ಸಿದ್ಧವಾಗುತ್ತದೆ.

(ಠಕ್ ಪ್ರತ್ಯಯವನ್ನು ವಿಧಿಸುವ ಮತ್ತೊಂದು ಸೂತ್ರ)

**ಸೂತ್ರ-1123.-ಸಂಸೃಷ್ಟೇ। (4.4.22)**

ವೃತ್ತಿ-ದಧ್ನಾ ಸಂಸೃಷ್ಟಂ ದಾಧಿಕಮ್।

ಅ.ವೃ-"ತೇನ ದೀವ್ಯತಿ ಖನತಿ ಜಯತಿ ಜಿತಂ" ಎಂಬ ಸೂತ್ರದಿಂದ ತೇನ ಎಂಬ ಪದವು ಅನುವೃತ್ತವಾಗುತ್ತದೆ. "ಠಕ್", "ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ' ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-'ಇದರಿಂದ ಮಿಶ್ರಿತವಾಗಿದೆ' ಎಂಬರ್ಥದಲ್ಲಿ ತೃತೀಯಾಂತ ಪ್ರಾತಿಪದಿಕದ ನಂತರ 'ಠಕ್' ಪ್ರತ್ಯಯವು ಬರುತ್ತದೆ.

ಉದಾ-ದಾಧಿಕಮ್-(ಮೊಸರಿನಿಂದ ಕೂಡಿದೆ)-'ದಧ್ನಾ ಸಂಸೃಷ್ಟಂ' ಎಂಬುದು ಲೌಕಿಕ ವಿಗ್ರಹ ವಾಕ್ಯ. ದಧಿ+ಟಾ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ 'ಠಕ್' ಪ್ರತ್ಯಯ ಬಂದು ಅದಕ್ಕೆ "ಠಸ್ಯೇಕಃ" ಎಂಬುದರಿಂದ 'ಠ' ಗೆ ಇಕ್ ಎಂಬ ಆದೇಶ ಬಂದು ದಧಿ+ ಇಕ್+ಅ ಎಂದಿದ್ದಾಗ, ಇದು ಕಿತ್ ಆಗಿರುವುದರಿಂದ ಆದಿವೃದ್ಧಿ ಬಂದು ಸುಪ್ ಲೋಪವಾದ ನನ್ತರ ದಧಿ ಯಲ್ಲಿರುವ 'ಇ' ಕಾರಕ್ಕೆ 'ಭ' ಸಂಜ್ಞೆ ಇರುವುದರಿಂದ 'ಯಸ್ಯೇತಿಚ' ಎಂಬುದರಿಂದ ಅದಕ್ಕೆ ಲೋಪ ಬಂದು ದಾಧ್+ಇಕ=ದಾಧಿಕ ಎಂದಾಗಿ ಸುಬಂತ ಮಾಡಿದಾಗ ದಾಧಿಕಮ್ ಎಂಬ ರೂಪವು ಸಿದ್ಧವಾಗುತ್ತದೆ.

(ಠಕ್ ಪ್ರತ್ಯಯವನ್ನು ವಿಧಿಸುವ ಮತ್ತೊಂದು ಸೂತ್ರ)

**ಸೂತ್ರ-1124-ಉಞ್ಛತಿ । (4-4-32)**

ವೃತ್ತಿ-ಬದರಾಣಿ ಉಞ್ಛತಿ ಬಾದರಿಕಃ।

ಅ.ವೃ-"ತತ್ಪ್ರತ್ಯಯನುಪೂರ್ವ ಮೀಪಲೋಮಕೂಲಂ" ಎಂಬ ಸೂತ್ರದಿಂದ 'ತತ್' ಎಂಬ ದ್ವಿತೀಯಾಂತ ಪದವು ಅನುವೃತ್ತವಾಗುತ್ತದೆ. "ಠಕ್", "ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ' ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ಆರಿಸಿ ಆರಿಸಿ ಸಂಗ್ರಹಿಸುವವನು ಎಂಬರ್ಥದಲ್ಲಿ ದ್ವಿತೀಯಾಂತ ಪ್ರಾತಿಪದಿಕದ ನಂತರ ಠಕ್ (ಠ್+ಅ+ಕ್) ಪ್ರತ್ಯಯವು ಬರುತ್ತದೆ.

ಉದಾ-ಬಾದರಿಕಃ (ಬದರಾಣಿ ಉಞ್ಛತಿ)-ಬೋರೆ ಹಣ್ಣುಗಳನ್ನು ಆರಿಸಿಕೊಳ್ಳುತ್ತಾನೆ. ದ್ವಿತೀಯಾಂತ ಬದರ ಶಬ್ದದ ನಂತರ ಠಕ್ ಪ್ರತ್ಯಯವು ಬಂದಿದೆ. ಬದರಾಣಿ ಉಞ್ಛತಿ ಎಂಬುದು ಲೌಕಿಕ ವಿಗ್ರಹ ವಾಕ್ಯ. ಬದರ+ಶಸ್ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ಠಕ್ ಪ್ರತ್ಯಯ ಬಂದು, 'ಠ (ಠ್+ಅ)' ಗೆ 'ಇಕ್' ಆದೇಶ ಬಂದು ಬದರ+ಇಕ (ಇಕ್+ಅ) ಎಂದಿರುತ್ತದೆ. ಇದು ಕಿತ್ ಗಿರುವುದರಿಂದ ಆದಿವೃದ್ಧಿ ಬಂದು, 'ಬಾದರ' ಎಂಬಲ್ಲಿರುವ ಅಂತ್ಯ 'ಅ' ಕಾರವು 'ಭ' ಸಂಜ್ಞಕವಾದ್ದರಿಂದ

'ಯಸ್ಯೇತಿಚ' ಎಂಬುದರಿಂದ ಅದಕ್ಕೆ ಲೋಪ ಬಂದು ಬಾದರ್+ಇಕ=ಬಾದರಿಕ ಎಂದಿದ್ದಾಗ, ಅದನ್ನು ಸುಬಂತ ಮಾಡಿದಾಗ ಬಾದರಿಕಃ ಎಂಬ ರೂಪವು ಸಿದ್ಧವಾಗುತ್ತದೆ.

**(ಠಕ್ ಪ್ರತ್ಯಯವನ್ನು ವಿಧಿಸುವ ಮತ್ತೊಂದು ಸೂತ್ರ)**

**ಸೂತ್ರ-1125-ರಕ್ಷತಿ। (4-4-33)**

ವೃತ್ತಿ- ಸಮಾಜಂ ರಕ್ಷತಿ ಸಾಮಾಜಿಕಃ॥

ಅ.ವೃ-"ತತ್ ಪ್ರತ್ಯಯನುಪೂರ್ವ ಮೀಪಲೋಮಕ್ಷಲಂ" ಎಂಬ ಸೂತ್ರದಿಂದ 'ತತ್' ಎಂಬುದು ಅನುವೃತ್ತವಾಗುತ್ತದೆ. "ಠಕ್", "ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ' ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-'ಇದರ ರಕ್ಷಣೆಯನ್ನು ಮಾಡುತ್ತಾನೆ' ಎಂಬ ಅರ್ಥದಲ್ಲಿ ದ್ವಿತೀಯಾಂತ ಪ್ರಾತಿಪದಿಕದ ನಂತರ 'ಠಕ್' ಪ್ರತ್ಯಯವು ಬರುತ್ತದೆ.

ಉದಾ-ಸಾಮಾಜಿಕಃ (ಸಮಾಜ ರಕ್ಷಣೆ ಮಾಡುವವನು)-ಸಮಾಜಂ ರಕ್ಷತಿ ಎಂಬುದು ಲೌಕಿಕ ವಿಗ್ರಹ. ಸಮಾಜ+ಅಮ್ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ 'ಠಕ್' ಬಂದು, ಅದಕ್ಕೆ 'ಇಕ(ಇಕ್+ಅ)' ಎಂಬ ಆದೇಶ ಬಂದು ಸಮಾಜ+ಇಕ ಎಂದಿದ್ದಾಗ, ಇದು ಕಿತ್ ಆಗಿರುವುದರಿಂದ 'ಕಿತಿಚ' ಎಂಬ ಸೂತ್ರದಿಂದ ಆದಿವೃದ್ಧಿ ಬಂದು ಸಮಾಜ ಎಂಬಲ್ಲಿರುವ ಅಂತ್ಯ 'ಅ' ಕಾರಕ್ಕೆ 'ಭ' ಸಂಜ್ಞೆ ಬರುವದರಿಂದ 'ಯಸ್ಯೇತಿಚ' ಎಂಬುದರಿಂದ ಅದಕ್ಕೆ ಲೋಪ ಬಂದು ಸಾಮಾಜ್+ಇಕ =ಸಾಮಾಜಿಕ ಎಂದಾದ ಮೇಲೆ ಸುಬಂತ ಮಾಡಿದಾಗ ಸಾಮಾಜಿಕಃ ಎಂಬ ರೂಪವು ಸಿದ್ಧವಾಗುತ್ತದೆ.

**(ಠಕ್ ಪ್ರತ್ಯಯವನ್ನು ವಿಧಿಸುವ ಮತ್ತೊಂದು ಸೂತ್ರ)**

**ಸೂತ್ರ-1126-ಶಬ್ದ ದುರ್ದುರಂ ಕರೋತಿ। (4-4-34)**

ವೃತ್ತಿ-ಶಬ್ದಂ ಕರೋತಿ ಶಾಬ್ದಿಕಃ॥ ದರ್ದುರಂ ಕರೋತಿ ದಾರ್ದುರಿಕಃ॥

ಅ.ವೃ-"ಠಕ್", "ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ' ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ದ್ವಿತೀಯಾಂತ 'ಶಬ್ದ' 'ದರ್ದುರ' ಪ್ರಾತಿಪದಿಕದ ನಂತರ 'ಮಾಡುವವನು' ಎಂಬ ಅರ್ಥದಲ್ಲಿ ಠಕ್ ಪ್ರತ್ಯಯವು ಬರುತ್ತದೆ.

ಉದಾ-ಶಾಬ್ದಿಕಃ-(ಶಬ್ದವನ್ನು ಮಾಡುವವನು) (ಶಬ್ದ ಸಂಬಂಧವಾದ ಪ್ರಕೃತಿ (ಪ್ರಾತಿಪದಿಕ) ಪ್ರತ್ಯಯಗಳ ವಿಭಾಗವನ್ನು ಮಾಡುವವನು)-'ಶಬ್ದಂ ಕರೋತಿ', 'ಪ್ರಕೃತಿ-ಪ್ರತ್ಯಯ ವಿಭಾಗಂ ಕರೋತಿ'-ಶಬ್ದ+ಅಮ್ ಮತ್ತು ಎಂಬಲ್ಲಿ, ಪ್ರಕೃತ ಸೂತ್ರದಿಂದ ಠಕ್(ಠ) ಪ್ರತ್ಯಯ ಬಂದು 'ಠಸ್ಯೇಕಃ' ಎಂಬ ಸೂತ್ರದಿಂದ 'ಠ್' ಗೆ

'ಇಕ' ಆದೇಶ ಬಂದು ಶಬ್ದ+ಇಕ್+ಅ ಎಂದಿರುತ್ತದೆ. ಠಕ್ ಇದು ಕಿತ್ ಆಗಿರುವುದರಿಂದ 'ಕಿತಿಚ' ಎಂಬ ಸೂತ್ರದಿಂದ ಆದಿವೃದ್ಧಿ ಬಂದು, 'ಶಬ್ದ' ಎಂಬಲ್ಲಿರುವ 'ಭ' ಸಂಜ್ಞೆಯುಳ್ಳ ಅಂತ್ಯ 'ಅ' ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು ಶಾಬ್ದ್+ಇಕ=ಶಾಬ್ದಿಕ ಎಂದಾಗಿ, ಸುಬಂತ ಮಾಡಿದ ಮೇಲೆ ಶಾಬ್ದಿಕಃ ಎಂಬ ರೂಪವು ಸಿದ್ಧವಾಗುತ್ತದೆ.

### ('ಠಕ್' ಪ್ರತ್ಯಯವನ್ನು ವಿಧಿಸುವ ಮತ್ತೊಂದು ಸೂತ್ರ)

**ಸೂತ್ರ-1127-ಧರ್ಮಂ ಚರತಿ (4-4-41)**

ವೃತ್ತಿ-ಧಾರ್ಮಿಕಃ। ವಾರ್ತಿಕಂ-ಅಧರ್ಮಾಚ್ಚೇತಿ ವಕ್ತವ್ಯಂ।ಅಧಾರ್ಮಿಕಃ।

ಅ.ವೃ-"ಠಕ್", "ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ' ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-"ಧರ್ಮವನ್ನು ಆಚರಿಸುತ್ತಾನೆ" ಎಂಬ ಅರ್ಥದಲ್ಲಿ ದ್ವಿತೀಯಾಂತ ಪ್ರಾತಿಪದಿಕ 'ಧರ್ಮ' ಶಬ್ದದ ಮೇಲೆ ಠಕ್ ಪ್ರತ್ಯಯವು ಬರುತ್ತದೆ.

ಉದಾ-ಧಾರ್ಮಿಕಃ-(ಧರ್ಮವನ್ನು ಆಚರಿಸುತ್ತಾನೆ) 'ಧರ್ಮಂ ಚರತಿ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಧರ್ಮ+ಅಮ್ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ 'ಠಕ್' ಪ್ರತ್ಯಯ ಬಂದು 'ಠ್' ಗೆ ಇಕ ಆದೇಶ ಬಂದಮೇಲೆ ಧರ್ಮ+ಇಕ ಎಂದಿರುತ್ತದೆ. 'ಠಕ್' ಪ್ರತ್ಯಯವು 'ಕಿತ್' ಆಗಿರುವುದರಿಂದ 'ಕಿತಿಚ' ಎಂಬ ಸೂತ್ರದಿಂದ ಆದಿವೃದ್ಧಿ ಬಂದು , ಧರ್ಮ ಎಂಬ ಶಬ್ದದ ಅಂತ್ಯ 'ಅ' ಕಾರವು 'ಭ' ಸಂಜ್ಞಕವಾಗಿರುವುದರಿಂದ 'ಯಸ್ಯೇತಿಚ' ಎಂಬುದರಿಂದ ಅದಕ್ಕೆ ಲೋಪ ಬಂದು, ಧಾರ್ಮ್+ಇಕ=ಧಾರ್ಮಿಕ ಎಂದಾಗಿ ಸುಬಂತ ಮಾಡಿದ ಮೇಲೆ ಧಾರ್ಮಿಕಃ ಎಂಬ ರೂಪವು ಸಿದ್ಧವಾಗುತ್ತದೆ.

ವಾರ್ತಿಕಂ: ಅಧರ್ಮಾಚ್ಚೇತಿ ವಕ್ತವ್ಯಂ ।

ವಿಶೇಷ-ಧರ್ಮ ಶಬ್ದದ ಮೇಲೆ 'ಠಕ್' ಪ್ರತ್ಯಯವು ಹೇಗೆ ಬರುತ್ತದೆಯೋ, ಅದೇ ರೀತಿಯಲ್ಲಿ ಅಧರ್ಮ ಶಬ್ದದ ಮೇಲೆಯೂ ಬರುತ್ತದೆ.

ಉದಾ-ಅಧಾರ್ಮಿಕಃ-ಈ ರೂಪವೂ ಧಾರ್ಮಿಕ ಶಬ್ದದ ಪ್ರಕ್ರಿಯೆಯಂತೆಯೇ ನಡೆಯುತ್ತದೆ.

### (ಠಕ್ ಪ್ರತ್ಯಯವನ್ನು ವಿಧಿಸುವ ಮತ್ತೊಂದು ಸೂತ್ರ)

**ಸೂತ್ರ-1128-ಶಿಲ್ಪಂ।(4-4-55)**

ವೃತ್ತಿ-ಮೃದಂಗ ವಾದನಂ ಶಿಲ್ಪಂ ಅಸ್ಯ ಮಾರ್ದಂಗಿಕಃ।

ಅ.ವೃ-"ತದಸ್ಯ ಪಣ್ಯಂ" ಎಂಬ ಸೂತ್ರದಿಂದ ತದಸ್ಯ ಎಂಬ ಪದವು ಅನುವೃತ್ತಾಗುತ್ತದೆ-"ಠಕ್", "ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ' ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-' ಅದು ಅವನ ಶಿಲ್ಪ ' (ತತ್ ಅಸ್ಯ ಶಿಲ್ಪಂ) ಎಂಬ ಅರ್ಥದಲ್ಲಿ ಪ್ರಥಮಾಂತ

'ಸಮರ್ಥ' ಶಬ್ದದ ನಂತರ 'ಠಕ್' ಪ್ರತ್ಯಯವು ಬರುತ್ತದೆ.

ಉದಾ–ಮಾರ್ದಂಗಿಕಃ/(ಮೃದಂಗ ವಾದಕ)–'ಮೃದಂಗಂ ಶಿಲ್ಪಂ ಅಸ್ಯ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಮೃದಂಗಂ+ಸು ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಮೃದಂಗ ಶಬ್ದದ ನಂತರ ಠಕ್ ಪ್ರತ್ಯಯ ಬಂದು ಅದು ಪ್ರಾತಿಪದಿಕ ಸಂಜ್ಞೆ ಹೊಂದಿದ ಮೇಲೆ ಸುಪ್ ಲೋಪವಾದ ಮೇಲೆ 'ಠ್' ಕಾರಕ್ಕೆ 'ಇಕ' ಆದೇಶ ಬಂದು ಆದಿ ವೃದ್ಧಿಯಾದ ಮೇಲೆ 'ಮಾರ್ದಂಗ' ಎಂಬಲ್ಲಿರುವ 'ಭ' ಸಂಜ್ಞಕ 'ಅ' ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು ಮಾರ್ದಂಗಿಕ ಎಂದಾಗಿ ಸುಬಂತ ಮಾಡಿದ ಮೇಲೆ ಮಾರ್ದಂಗಿಕಃ ಎಂಬ ರೂಪವು ಸಿದ್ಧವಾಗುತ್ತದೆ. 'ಮೃದಂಗ' ಶಬ್ದಕ್ಕೆ 'ಮೃದಂಗ ವಾದನ' ಎಂದು ಅರ್ಥ ಮಾಡಬೇಕು 'ಶಿಲ್ಪ' ಎಂದರೆ 'ಕರ್ಮಕೌಶಲ' ಎಂದು ಅರ್ಥ ಮಾಡಬೇಕು.

**(ಠಕ್ ಪ್ರತ್ಯಯವನ್ನು ವಿಧಿಸುವ ಮತ್ತೊಂದು ಸೂತ್ರ)**

**ಸೂತ್ರ–1129–ಪ್ರಹರಣಂ। (4–4–57)**

ವೃತ್ತಿ–ತದಸ್ಯ ಇತ್ಯೇವ। ಅಸಿಃ ಪ್ರಹರಣಂ ಅಸ್ಯ ಆಸಿಕಃ, ಧಾನುಷ್ಕಃ।

ಅ.ವೃ–"ತದಸ್ಯ ಪಣ್ಯಂ" ಎಂಬ ಸೂತ್ರದಿಂದ ತದಸ್ಯ ಎಂಬ ಪದವು ಅನುವೃತ್ತವಾಗುತ್ತದೆ–"ಠಕ್", "ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ' ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ–"ತತ್ ಅಸ್ಯ ಪ್ರಹರಣಂ" (ಅದು ಇವನ ಆಯುಧ) ಎಂಬ ಅರ್ಥದಲ್ಲಿ ಆಯುಧವಾಚಕವಾದ ಪ್ರಥಮಾಂತ ಶಬ್ದದ ನಂತರ 'ಠಕ್' ಪ್ರತ್ಯಯವು ಬರುತ್ತದೆ.

ಉದಾ–ಆಸಿಕಃ। ಧಾನುಷ್ಕಃ।–ಅಸಿಃ ಪ್ರಹರಣಂ ಅಸ್ಯ=ಆಸಿಕಃ ಮತ್ತು ಧನುಃ ಪ್ರಹರಣಂ ಅಸ್ಯ "ಧಾನುಷ್ಕಃ" ಎಂಬ ಅರ್ಥದಲ್ಲಿ ಆಯುಧವಾಚಕವಾದ ಪ್ರಥಮಾಂತ ಶಬ್ದದ ನಂತರ 'ಠಕ್' ಪ್ರತ್ಯಯವು ಬರುತ್ತದೆ. ಹಿಂದಿನಂತೆ ಪ್ರಕ್ರಿಯೆ ನಡೆದು ಆಸಿಕಃ, ಧಾನುಷ್ಕಃ ಎಂಬ ರೂಪವು ಸಿದ್ಧವಾಗುತ್ತದೆ.

ವಿಶೇಷ–ಧಾನಿಷ್ಕ ಎಂಬಲ್ಲಿ "ಠಸ್ಯೇಕಃ" ಎಂಬ ಸೂತ್ರವನ್ನು ಬಾಧಿಸಿ "ಇಸುಸುಕ್ತಾಂತಾತ್ ಕಃ" ಎಂಬ ಸೂತ್ರದಿಂದ 'ಠ' ಕಾರಕ್ಕೆ 'ಕ' ಆದೇಶ ಬರುತ್ತದೆ. 'ಸ' ಕಾರಕ್ಕೆ ರುತ್ವ–ವಿಸರ್ಗಗಳು ಬಂದು "ಇಣಃ ಷಃ" ಎಂಬ ಸೂತ್ರದಿಂದ ವಿಸರ್ಗಕ್ಕೆ 'ಷತ್ವ' ವು ಬಂದಿದೆ.

**(ಠಕ್ ಪ್ರತ್ಯಯವನ್ನು ವಿಧಿಸುವ ಮತ್ತೊಂದು ಸೂತ್ರ)**

**ಸೂತ್ರ–1130–ಶೀಲಂ। (4–4–61)**

ವೃತ್ತಿ–ಅಪೂಪ ಭಕ್ಷಣಂ ಇವ ಶೀಲಂ ಅಸ್ಯ ಆಪೂಪಿಕಃ।

ಅ.ವೃ–"ತದಸ್ಯ ಪಣ್ಯಂ" ಎಂಬ ಸೂತ್ರದಿಂದ ತತ್ ಮತ್ತು ಅಸ್ಯ ಎಂಬ ಪದಗಳು ಅನುವೃತ್ತವಾಗುತ್ತದೆ–"ಠಕ್", "ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್",

"ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ' ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-'ಇದು ಇವರ ಸ್ವಭಾವ ' ಎಂಬ ಅರ್ಥದಲ್ಲಿ ಪ್ರಥಮಾಂತ ಪ್ರಾತಿಪದಿಕದ ನಂತರ 'ಠಕ್' ಪ್ರತ್ಯಯವು ಬರುತ್ತದೆ.

ಉದಾ-ಆಪೂಪಿಕಃ-(ಅನಾರಸ ಎಂಬ ಭಕ್ಷ್ಯ ವನ್ನು ತಿನ್ನುವ ಸ್ವಭಾವವುಳ್ಳವನು)- 'ಅಪೂಪ ಭಕ್ಷಣಂ ಶೀಲ ಅಸ್ಯ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಅಪೂಪ+ಸು ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ಠಕ್ ಪ್ರತ್ಯಯದ 'ಠ್' ಗೆ 'ಇಕ್' ಆದೇಶ ಬಂದು ಅಪೂಪ+ಇಕ(ಇಕ್+ ಅ) ಎಂದಿರುತ್ತದೆ. ಇದು ಕಿತ್ ಆಗಿರುವುದರಿಂದ 'ಕಿತಿಚ' ದಿಂದ ಆದಿವೃದ್ಧಿ ಬಂದು, ಆಪೂಪ+ಇಕ ಎಂದಾಗುತ್ತದೆ. ಆಪೂಪ ಎಂಬಲ್ಲಿರುವ 'ಭ' ಸಂಜ್ಞಕ ಅಂತ್ಯ 'ಅ' ಕಾರಕ್ಕೆ ಲೋಪ ಬಂದು ಆಪೂಪ್+ಇಕ=ಆಪೂಪಿಕ ಎಂದಾಗಿ ಸುಬಂತ ಮಾಡಿದಾಗ ಆಪೂಪಿಕಃ ಎಂಬ ರೂಪವು ಸಿದ್ಧವಾಗುತ್ತದೆ.

**(ಠಕ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1131-ನಿಕಟೇ ವಸತಿ (4-4-73)**

ವೃತ್ತಿ-ನೈಕಟಿಕೋ ಭಿಕ್ಷುಕಃ।

**ಇತಿ ಠಗಧಿಕಾರ (೫೦) ಪ್ರಕರಣಮ್**

ಅ.ವೃ-"ಠಕ್", "ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್", "ತದ್ಧಿತಾಃ", "ಸಮರ್ಥಾನಾಂ ಪ್ರಥಮಾದ್ವಾ' ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ಸಪ್ತಮ್ಯಂತ 'ನಿಕಟೇ' ಎಂಬಲ್ಲಿ 'ನಿಕಟ' ಪ್ರಾತಿಪದಿಕದ ನಂತರ "ವಾಸ ಮಾಡುವವನು" ಎಂಬ ಸಪ್ತಮ್ಯರ್ಥದಲ್ಲಿ ಠಕ್ ಪ್ರತ್ಯಯವು ಬರುತ್ತದೆ.

ಉದಾ-ನೈಕಟಿಕಃ। (ಸಮೀಪದಲ್ಲಿ ವಾಸಿಸುವವನು)-'ನಿಕಟೇ ವಸತಿ' ಎಂಬದು ಲೌಕಿಕ ವಿಗ್ರಹ ವಾಕ್ಯ. ನಿಕಟ+ ಙಿ ಎಂಬುದು ಅಲೌಕಿ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ಠಕ್ ಪ್ರತ್ಯಯದ 'ಠ್' ಗೆ 'ಇಕ್' ಆದೇಶ ಬಂದು ಠ=ಇಕ್+ಅ ಎಂದಾದ ಮೇಲೆ ಪ್ರಾತಿಪದಿಕ ಸಂಜ್ಞೆಯನ್ನು ಹೊಂದಿ "ಸುಪೋಧಾತು ಪ್ರಾತಿಪದಿಕಯೋಃ" ಎಂಬುದರಿಂದ ಸುಪ್ ಗೆ 'ಲುಕ್' ಬಂದು ನಿಕಟ+ಇಕ ಎಂದಿರುತ್ತದೆ. ಇದು ಕಿತ್ ಆಗಿರುವುದರಿಂದ 'ಕಿತಿಚ' ಎಂಬುದರಿಂದ ಆದಿವೃದ್ಧಿ (ಐ) ಬರುತ್ತದೆ. 'ನೈಕಟ' ಎಂಬಲ್ಲಿನ 'ಭ' ಸಂಜ್ಞಕ ಅಂತ್ಯ 'ಅ' ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು ನೈಕಟ್+ಇಕ=ನೈಕಟಿಕ ಎಂದಾಗಿ, ಸುಬಂತ ಮಾಡಿದಾಗ ನೈಕಟಿಕಃ ಎಂಬ ರೂಪವು ಸಿದ್ಧವಾಗುತ್ತದೆ.

**ಠಗಧಿಕಾರ (ಪ್ರಾಗ್ವಹತೀಯಾಃ) (೫೦)ಪ್ರಕರಣವು ಮುಗಿಯಿತು.**

# ಪ್ರಕರಣ-51: ಯದಧಿಕಾರಃ

(ಸೂ. ಸಂ. 1132-1138)

ಯತ್-ಅಧಿಕಾರಃ (ಪ್ರಾಗ್ಘಿತೀಯಾಃ)

**(ಯತ್ ಪ್ರತ್ಯಯವನ್ನು ಅಧಿಕಾರವಾಗಿ ವಿಧಿಸುವ ಸೂತ್ರ)**

**ಸೂತ್ರ-1132. ಪ್ರಾಗ್ಘಿತಾದ್ಯತ್ (4-4-75)**

ವೃತ್ತಿ-ತಸ್ಮೈ ಹಿತಾಮ್ ಇತ್ಯತಃ ಪ್ರಾಕ್ ಯತ್ ಅಧಿಕ್ರಿಯತೇ।

ಅರ್ಥ-'ತಸ್ಮೈ ಹಿತಮ್' ಎಂಬ ಸೂತ್ರದ ಪೂರ್ವ ಸೂತ್ರದ ವರೆಗೆ 'ಯತ್' ಪ್ರತ್ಯಯದ ಅಧಿಕಾರವು ಇರುತ್ತದೆ.

ಪ.ಛೇ-ಪ್ರಾಕ್, ಹಿತಾತ್, ಯತ್।

**(ಯತ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1133. ತದ್ವಹತಿ ರಥ-ಯುಗ-ಪ್ರಾಸಙ್ಗಮ್। (4-4-76)**

ವೃತ್ತಿ-ರಥಂ ವಹತಿ ರಥ್ಯಃ, ಯುಗ್ಯಃ ಪ್ರಾಸಙ್ಗ್ಯಃ।

ಪ.ಛೇ-ತತ್, ವಹತಿ, ರಥ -ಯುಗ-ಪ್ರಾಸಙ್ಗಮ್।

ಅ.ವೃ-"ಪ್ರಾಗ್ಘಿತಾದ್ಯತ್" ಎಂಬ ಸೂತ್ರದಿಂದ 'ಯತ್' ಎಂಬ ಪದವು ಅನುವೃತ್ತವಾಗುತದೆ. "ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ_ 'ರಥವನ್ನು , ನೊಗವನ್ನು, ಪ್ರಾಸಙ್ಗ್ಯವನ್ನು ಹೊರುತ್ತದೆ' ಎಂಬ ಅರ್ಥದಲ್ಲಿ ದ್ವಿತೀಯಾಂತ ಶಬ್ದಗಳಾದ ರಥ, ಯುಗ, ಪ್ರಾಸಙ್ಗಗಳ ಪ್ರಾತಿಪದಿಕಗಳ ನಂತರ 'ಯತ್' ಪ್ರತ್ಯಯವು ಬರುತ್ತದೆ.

ಉದಾ 1.-ರಥ್ಯಃ-'ರಥಂ ವಹತಿ' ಎಂಬ ದ್ವಿತೀಯಾಂತ ರಥ ಶಬ್ದದ ನಂತರ 'ಯತ್' ಪ್ರತ್ಯಯವು ಬರುತ್ತದೆ. ಆಗ ರಥ+ಯತ್(ಯ) ಎಂದಿರುತ್ತದೆ. 'ಭ' ಸಂಜ್ಞಕ 'ಅ' ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು, ರಥ್+ಯ=ರಥ್ಯ ಎಂದಾದಮೇಲೆ ಪ್ರಾತಿಪದಿಕ ಸಂಜ್ಞೆ ಬಂದು, ಅದನ್ನು ಸುಬಂತ ಮಾಡಿದಾಗ ರಥ್ಯಃ ಎಂದಾಗುತ್ತದೆ.

ಉದಾ-2-ಯುಗ್ಯಃ-(ರಥದ ಚಲನೆಗಾಗಿ ಪ್ರಾಣಿಗಳ ಹೆಗಲಮೇಲೆ ಇಡುವ ಕಟ್ಟಿಗೆಯ ಸಾಧನ (ನೊಗ) 'ಅದನ್ನು ವಹಿಸುತ್ತದೆ ' ಎಂಬರ್ಥದಲ್ಲಿ ಯುಗ+ಯ ಎಂದಾಗಿ 'ಭ' ಸಂಜ್ಞಕ ಯುಗ ಶಬ್ದದ 'ಅ' ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು, ಯುಗ್+ಯ=ಯುಗ್ಯ ಎಂದಾಗಿ ಅದನ್ನು ಸುಬಂತ ಮಾಡಿದಾಗ ಯುಗ್ಯಃ ಎಂದಾಗುತ್ತದೆ.

ಉದಾ-3. ಪ್ರಾಸಙ್ಗ್ಯಃ -ಪ್ರಾಸಙ್ಗ ಎಂದರೆ ಕುದುರೆ ಅಥವಾ ಎತ್ತಿಗೆ ತರಬೇತಿ

ಕೊಡುವುದಕ್ಕಾಗಿ ಕುತ್ತಿಗೆ ಮೇಲೆ ಭಾರವಾದ ಕಟ್ಟಿಗೆಯನ್ನು ಕಟ್ಟುವ ಕಟ್ಟಿಗೆಗೆ ಪ್ರಾಸಙ್ಗ ಎಂದು ಹೆಸರು.

'ಪ್ರಾಸಙ್ಗಮ್ ವಹತಿ' ಎಂಬರ್ಥದಲ್ಲಿ ಪ್ರಾಸಙ್ಗ ಶಬ್ದದ ಮೇಲೆ ಯತ್ ಪ್ರತ್ಯಯ ಬಂದು ಪ್ರಾಸಂಗ+ಯತ್ ಎಂದಿದ್ದಾಗ ಪ್ರಾಸಙ್ಗ ಶಬ್ದದ ಕೊನೆಯ 'ಅ' ಕಾರಕ್ಕೆ 'ಭ' ಸಂಜ್ಞೆ ಇರುವುದರಿಂದ "ಯಸ್ಯೇತಿಚ" ಎಂಬುದರಿಂದ ಅದಕ್ಕೆ ಲೋಪ ಬಂದು ಪ್ರಾಸಙ್ಗ್+ಯ=ಪ್ರಾಸಙ್ಗ್ಯ ಎಂದಾಗಿ, ಅದು ಪ್ರಾತಿಪದಿಕವಾದ ಮೇಲೆ ಸುಬಂತ ಮಾಡಿದಾಗ ಪ್ರಾಸಙ್ಗ್ಯಃ ಎಂದಾಗುತ್ತದೆ.

(ರಥ, ಯುಗ, ಪ್ರಾಸಙ್ಗ ಎಂಬ ಶಬ್ದಗಳ ಮೇಲಿರುವ ದ್ವಿತಿಯಾ ವಿಭಕ್ತಿ 'ಅಮ್' ಪ್ರತ್ಯಯವು ಲೋಪವಾಗಿ 'ಯತ್' ಪ್ರತ್ಯಯದ ಜೊತೆಗೆ ಸೇರಿ ರಥ್ಯಃ ಯುಗ್ಯಃ, ಪ್ರಾಸಙ್ಗ್ಯಃ ಎಂಬ ರೂಪವಾಗುತ್ತದೆ)

ಸೂಚನೆ-ಪ್ರಾಸಙ್ಗ್ಯ, ರಥ್ಯ, ಯುಗ್ಯ ಈ ಮೂರೂ ಶಬ್ದಗಳಿಗೂ ನೊಗ ಎಂದೇ ಅರ್ಥ.

**(ಯತ್ ಮತ್ತು ಢಕ್ ಪ್ರತ್ಯಯಗಳನ್ನು ವಿಧಿಸುವ ಸೂತ್ರ)**

**ಸೂತ್ರ-1134. ಧುರೋ ಯಡ್ಢಕೌ (4-4-77)**

ವೃತ್ತಿ-ಹಲಿ ಚ ಇತಿ ದೀರ್ಘೇ ಪ್ರಾಪ್ತೇ-

ಪ.ಛೇ-ಧುರಃ, ಯಡ್-ಢಕೌ।

ಅ.ವೃ-"ತದ್ ವಹತಿ ರಥಯುಗ ಪ್ರಾಸಙ್ಗಮ್" ಎಂಬ ಸೂತ್ರದಿಂದ, ತದ್ ಎಂಬ ಪದವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ದ್ವಿತೀಯಾಂತ ಪ್ರಾತಿಪದಿಕವಾದ 'ಧುರ್' ಶಬ್ದದ ನಂತರ 'ವಹಿಸುತ್ತಾನೆ' ಎಂಬ ಅರ್ಥದಲ್ಲಿ 'ಯತ್' ಮತ್ತು 'ಢಕ್' ಪ್ರತ್ಯಯಗಳು ಬರುತ್ತವೆ. ಢಕ್ ನಲ್ಲಿ 'ಢ' ಮಾತ್ರ ಉಳಿಯುತ್ತದೆ. ಆ 'ಢ' ಗೆ ಆಯನ್ "ಆಯನೇಯ್ ಪ್ರತ್ಯಯಾದೀನಾಮ್" ಎಂಬ ಸೂತ್ರದಿಂದ ಏಯ್ ಆದೇಶ ಬರುತ್ತದೆ.

ಉದಾ-ಧುರ್ಯಃ-'ಧುರಂ ವಹತಿ' ಎಂಬರ್ಥದಲ್ಲಿ 'ಧುರ್' ಶಬ್ದದ ನಂತರ ಧುರ್+ಅಮ್+ಯ ಎಂದಿದ್ದಾಗ ಸುಪ್ ಗೆ ಲೋಪ ಬಂದು ಧುರ್+ಯ=ಧುರ್ಯ ಎಂದಾಗುತ್ತದೆ. ಇದನ್ನು ಸುಬಂತ ಮಾಡಿದಾಗ ಧುರ್ಯಃ ಎಂದಾಗುತ್ತದೆ. (ನೊಗವನ್ನು ಹೊರುವಂತಹ ಪ್ರಾಣಿ-ಎತ್ತು ಅಥವಾ ಕುದುರೆ ಎಂದರ್ಥ)

ಉದಾ-ಧೌರೇಯಃ (ನೊಗವನ್ನು ವಹಿಸುವಂತಹವನು)-'ಧುರಂ ವಹತಿ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಧುರ್+ಅಮ್ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಧುರ್+ಅಮ್+ ಢಕ್(ಢ) ಎಂದಿದ್ದಾಗ, 'ಢ' ನಲ್ಲಿ 'ಢ್' ಗೆ "ಆಯನ್ ಏಯ್... ಪ್ರತ್ಯಯಾದೀನಾಂ" ಎಂಬ ಸೂತ್ರದಿಂದ ಏಯ್ ಆದೇಶ ಬಂದು ಧುರ್+ಏಯ (ಏಯ್+ಅ) ಎಂದಿದ್ದಾಗ, ಆದಿವೃದ್ಧಿ ಬಂದು ಧೌರೇಯ ಎಂದು

ಪ್ರಾತಿಪದಿಕವಾಗುತ್ತದೆ. ಇದನ್ನು ಸುಬಂತ ಮಾಡಿದಾಗ ಧೌರೇಯಃ ಎಂದಾಗುತ್ತದೆ.

(ಸೂಚನೆ: ಪ್ರಕೃತ ಸೂತ್ರದಿಂದ 'ಧುರ್' ಶಬ್ದಕ್ಕೆ ದೀರ್ಘ ಬಂದು 'ಧೂರ್' ಎಂದಾಗಬೇಕಾಗಿತ್ತು. ಆದರೆ ಮುಂಬರುವ ಸೂತ್ರದಿಂದ 'ಭ' ಸಂಜ್ಞೆಯುಳ್ಳ ಉಪಧೆಯಾದ 'ಇಗ್' ವರ್ಣಕ್ಕೆ ದೀರ್ಘವು ಬರುವುದಿಲ್ಲ ಎಂದು ನಿಷೇಧಿಸಲಾಗಿದೆ. ಢಕ್ ಪ್ರತ್ಯಯವು ಕಿತ್ ಆಗಿರುವುದರಿಂದ 'ಉ' ಕಾರಕ್ಕೆ 'ಔ' ಕಾರ ಬಂದು ಧೌರೇಯಃ ಎಂದಾಗಿದೆ ಎಂದು ತಿಳಿಯಬೇಕು)

**(ದೀರ್ಘವನ್ನು ನಿಷೇಧಿಸುವ ಸೂತ್ರ)**

**ಸೂತ್ರ-1135. ನ ಭಕುರ್ಛುರಾಮ್ (8-2-79)**

ವೃತ್ತಿ-ಭಸ್ಯ ಕುರ್ಛುರೋಃ ಚ ಉಪಧಾಯಾಃ ಇಕಃ ದೀರ್ಘಃ ನ ಸ್ಯಾತ್। ಧುರ್ಯಃ। ಧೌರೇಯಃ।

ಪ.ಛೇ-ನ, ಭ, ಕುರ್ಛುರಾಮ್।

ಅ.ವೃ-"ರ್ವೋರುಪಧಾಯಾಃ-ದೀರ್ಘ ಇಕಃ" ಎಂಬ ಸೂತ್ರದಿಂದ ಉಪಧಾಯಾಃ ಮತ್ತು ದೀರ್ಘಃ ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ-'ಭ' ಸಂಜ್ಞೆಯುಳ್ಳ ಶಬ್ದದ ಉಪಧಾ, ಕುರ್, ಮತ್ತು ಛುರ್ ಗಳ ಉಪಧೆಗೆ ದೀರ್ಘ ಬರುವುದಿಲ್ಲ.

ಉದಾ-ಧುರ್ಯಃ, ಧೌರೇಯಃ ಈ ಶಬ್ದಗಳ ರೂಪಸಿದ್ಧಿಯನ್ನು ಹಿಂದಿನ ಸೂತ್ರದಲ್ಲಿ ಹೇಳಲಾಗಿದೆ. ಈ ಸೂತ್ರದಿಂದ ದೀರ್ಘ ನಿಷೇಧವಾದದ್ದನ್ನು ಅಲ್ಲಿಯೇ ಹೇಳಲಾಗಿದೆ.

**(ಯತ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1136.-ನೌ-ವಯೋ-ಧರ್ಮ-ವಿಷ-ಮೂಲ-ಸೀತಾ-ತುಲಾಭ್ಯಸ್ತಾರ್ಯ-ತುಲ್ಯ-ಪ್ರಾಪ್ಯ-ವಧ್ಯಾऽऽನಾಮ್ಯ-ಸಮ-ಸಮಿತಸಮ್ಮಿತೇಷು। (4-4-91)**

ವೃತ್ತಿ-ನಾವಾ ತಾರ್ಯಂ ನಾವ್ಯಂ ಜಲಂ। ವಯಸಾ ತುಲ್ಯಃ ವಯಸ್ಯಃ। ಧರ್ಮೇಣ ಪ್ರಾಪ್ಯಂ ಧರ್ಮ್ಯಂ। ವಿಷೇಣ ವಧ್ಯಃ ವಿಷ್ಯಃ।ಮೂಲೇನ ಅನಾಮ್ಯಂ ಮೂಲ್ಯಂ। ಮೂಲೇನ ಸಮಃ ಮೂಲ್ಯಃ। ಸೀತಯಾ ಸಮ್ಮಿತಂ ಸೀತ್ಯಂ ಕ್ಷೇತ್ರಂ। ತುಲಯಾ ಸಂಮಿತಂ ತುಲ್ಯಂ।

ಅ.ವೃ-. "ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ನೌ, ವಯಸ್ಸು, ಧರ್ಮ, ವಿಷಯ, ಮೂಲ, ಸೀತಾ ಮತ್ತು ತುಲಾ ಶಬ್ದಗಳನ್ನೇ ಪ್ರಾತಿಪದಿಕವಾಗಿಯುಳ್ಳ ತೃತೀಯಾಂತ ಶಬ್ದಗಳಿಗೆ ಕ್ರಮವಾಗಿ ದಾಟುವುದಕ್ಕೆ ಯೋಗ್ಯವಾದ, ಸಮಾನ, ಹೊಂದಲು ಯೋಗ್ಯವಾದ, ಕೊಲ್ಲಲು ಯೋಗ್ಯವಾದ, ಕೊಳ್ಳಲು ಯೋಗ್ಯವಾದ, ಸಮಾನವಾದ, ಸಮಗೊಳಿಸಿದ, ತೂಕಮಾಡಲ್ಪಟ್ಟ-ಎಂಬ ಅರ್ಥದಲ್ಲಿ ಯತ್ ಪ್ರತ್ಯಯವು ಬರುತ್ತದೆ.

ಉದಾ–ನಾವ್ಯಂ (ಹಡಗಿನಿಂದ ದಾಟಲು ಯೋಗ್ಯವಾದ ನದಿ ಮೊದಲಾದ ಜಲಾಶಯಗಳು)–'ನಾವಾ ತಾರ್ಯಂ' ಎಂಬುದು ಲೌಕಿಕ ವಿಗ್ರಹ ವಾಕ್ಯ. ನೌ+ಟಾ(ಆ) ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ದಾಟಲು ಯೋಗ್ಯವಾದ ಎಂಬ ಅರ್ಥದಲ್ಲಿ ಯತ್ ಪ್ರತ್ಯಯವು ಬರುತ್ತದೆ. ಪ್ರಾತಿಪದಿಕ ಸಂಜ್ಞೆ ಬಂದ ಮೇಲೆ "ಸುಪೋ ಧಾತು ಪ್ರಾತಿಪದಿಕಯೋಃ" ಎಂಬುದರಿಂದ ಸುಪ್ ಗೆ ಲುಕ್ ಬಂದ ಮೇಲೆ ನೌ+ಯ ಎಂದಿರುತ್ತದೆ. "ವಾಂತೋಯಿ ಪ್ರತ್ಯಯೇ" ಎಂಬ ಸೂತ್ರದಿಂದ ಆವ್ ಆದೇಶ ಬಂದು ನಾವ್ಯ ಎಂದಾಗುತ್ತದೆ. ಇದನ್ನು ಸುಬಂತ ಮಾಡಿದಾಗ ನಾವ್ಯಂ ಎಂದು ರೂಪವು ಸಿದ್ಧವಾಗುತ್ತದೆ.

ಉದಾ–2) ವಯಸ್ಯಃ–(ವಯಸ್ಸಿನಿಂದ ಸಮಾನನಾದವನು, ಮಿತ್ರ)–'ವಯಸಾ ತುಲ್ಯಂ' ಎಂಬುದು ಲೌಕಿಕ ವಿಗ್ರಹ ವಾಕ್ಯ. ವಯಸಾ+ಟಾ(ಆ) ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ತುಲ್ಯಾರ್ಥದಲ್ಲಿ 'ಯತ್' ಪ್ರತ್ಯಯ ಬಂದು ಪ್ರಾತಿಪದಿಕವಾದ ಮೇಲೆ "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ ಸುಪ್ ಗೆ ಲುಕ್ ಬಂದು, ವಯಸ್+ಯ=ವಯಸ್ಯ ಎಂದಿರುತ್ತದೆ. ಸುಪ್ ಪ್ರತ್ಯಯವನ್ನು ಸೇರಿಸಿದಾಗ ವಯಸ್ಯಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ–3. ಧರ್ಮ್ಯಂ–(ಧರ್ಮದ ಮೂಲಕ ಹೊಂದುವ ಸ್ವರ್ಗ,ಸುಖ ಧನ) – 'ಧರ್ಮೇಣ ಪ್ರಾಪ್ಯಂ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಧರ್ಮ+ಟಾ(ಆ) ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ಪ್ರಾಪ್ಯ ಎಂಬ ಅರ್ಥದಲ್ಲಿ ಯತ್ ಪ್ರತ್ಯಯವು ಬರುತ್ತದೆ. ನಂತರ ಪ್ರಾತಿಪದಿಕವಾಗುತ್ತದೆ. "ಸುಪೋಧಾತು ಪ್ರಾತಿಪದಿಕಯೋಃ" ಎಂಬುದರಿಂದ 'ಸುಪ್' ಗೆ ಲುಕ್ ಬಂದು 'ಭ' ಸಂಜ್ಞೆಯುಳ್ಳ 'ಅ' ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು ಧರ್ಮ್+ಯ=ಧರ್ಮ್ಯ ಎಂದಾಗಿ ಸುಬಂತ ಮಾಡಿದಾಗ ಧರ್ಮ್ಯಂ ಎಂದಾಗುತ್ತದೆ.

ಉದಾ–4–ವಿಷ್ಯಃ (ವಿಷದಿಂದ ಕೊಲ್ಲಲು ಯೋಗ್ಯನಾದ ಶತ್ರು)–'ವಿಷೇಣ ವಧ್ಯಃ'ಎಂಬುದು ಲೌಕಿಕ ವಿಗ್ರಹ ವಾಕ್ಯ. ವಿಷ+ಟಾ(ಆ) ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ವಧ್ಯಾರ್ಥದಲ್ಲಿ 'ಯತ್' ಪ್ರತ್ಯಯವನ್ನು ಸೇರಿಸಿದಾಗ ಅದು ಪ್ರಾತಿಪದಿಕವಾದ ಮೇಲೆ ಸುಪೋಧಾತು ಪ್ರಾತಿಪದಿಕಯೋ: ಎಂಬುದರಿಂದ ಸುಪ್ ಗೆ ಲುಕ್ ಬಂದು 'ಭ' ಸಂಜ್ಞೆಯುಳ್ಳ ಅಂತ್ಯ 'ಅ' ಕಾರಕ್ಕೆ ಲೋಪ ಬಂದು ವಿಷ್+ಯ=ವಿಷ್ಯ ಎಂದಾಗಿ ಇದಕ್ಕೆ ಸುಪ್ ಪ್ರತ್ಯಯವನ್ನು ಸೇರಿಸಿದಾಗ ವಿಷ್ಯಃ ಎಂದಾಗುತ್ತದೆ. ಮೂಲಂ, ಮೂಲ್ಯಃ, ತುಲ್ಯಂ–ತುಲ್ಯಃ ಎಂಬ ಪದಗಳೂ ಇದೇ ರೀತಿಯಲ್ಲಿ ಸಿದ್ಧವಾಗುತ್ತವೆ.

**(ಯತ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ–1137. ತತ್ರ ಸಾಧುಃ (4–4–98)**

ವೃತ್ತಿ–ಅಗ್ರೇ ಸಾಧುಃ ಅಗ್ರ್ಯಃ। ಸಾಮಸು ಸಾಧುಃ ಸಾಮನ್ಯಃ।

ಅ.ವೃ–"ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್",

"ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ–ಸಪ್ತಮ್ಯಂತ ಪ್ರಾತಿಪದಿಕದ ನಂತರ ಸಾಧು, ಕುಶಲ ಮತ್ತು ಪ್ರವೀಣ ಅಥವಾ ಯೋಗ್ಯ ಎಂಬರ್ಥದಲ್ಲಿ 'ಯತ್' ಪ್ರತ್ಯಯವು ಬರುತ್ತದೆ.

ಉದಾ–ಅಗ್ರ್ಯಃ (ಮುಂದಾಳು, ಜಾಣ ಪ್ರವೀಣ) –'ಅಗ್ರೇ ಸಾಧುಃ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಅಗ್ರ+ಙಿ ಎಂಬುದು ಅಲೌಕಿಕ ವಿಗ್ರಹ ವಾಕ್ಯ. "ತತ್ರ ಸಾಧುಃ" ಎಂಬ ಪ್ರಕೃತ ಸೂತ್ರದಿಂದ ಯತ್(ಯ) ಪ್ರತ್ಯಯವು ಬಂದು ಪ್ರಾತಿಪದಿಕ ಸಂಜ್ಞೆ ಬಂದು, "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ ಅಗ್ರ್+ಯ=ಅಗ್ರ್ಯ ಎಂದಾಗಿ ಸುಬಂತ ಮಾಡಿದಾಗ ಅಗ್ರ್ಯಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ–2) ಸಾಮನ್ಯಃ–ಈ ಪದವು ಈ ಮೇಲಿನ ಪ್ರಕ್ರಿಯೆಯಂತೆ ರೂಪಸಿದ್ಧಿಯನ್ನು ಪಡೆಯುತ್ತದೆ.

ಉದಾ–3) ಕರ್ಮಣ್ಯಃ–"ಯೇಚಾಭಾವಕರ್ಮಣೋಃ" ಎಂಬುದರಿಂದ ಪ್ರಕೃತಿ–ಭಾವ ಬಂದು 'ಟಿ' ಲೋಪವಾಗಿದೆ. ಕರ್ಮನ್+ಯ ಎಂದಿದ್ದಾಗ ಪೂರ್ವದಲ್ಲಿ ರೇಫ ಇರುವುದರಿಂದ ಪರದಲ್ಲಿರುವ 'ನ' ಕಾರಕ್ಕೆ ಣತ್ವ ಬಂದಿದೆ. "ನಸ್ತದ್ಧಿತೇ" ಎಂಬ ಸೂತ್ರಕ್ಕೆ ಮೇಲೆ ಹೇಳಿದ ಸೂತ್ರವು ಅಪವಾದವಾಗಿದೆ. ಆದ್ದರಿಂದ 'ಟಿ' ಲೋಪವಾಗಲಿಲ್ಲ.

ಉದಾ–ಶರಣ್ಯಃ–'ಶರಣೇ ಸಾಧುಃ' ಶರಣ್ಯಃ–(ರಕ್ಷಣೆ ಮಾಡುವುದರಲ್ಲಿ ಶೂರನಾದವನು) ಈ ರೂಪವು ಹಿಂದಿನಂತೆಯೇ ಪ್ರಕ್ರಿಯೆ ನಡೆದು ಸಿದ್ಧವಾಗುತ್ತದೆ.

**(ಯ–ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ–1138. ಸಭಾಯಾ ಯಃ। (4–4–105)**

ವೃತ್ತಿ–ಸಭ್ಯಃ।

ಅ.ವೃ–'ತತ್ರ ಸಾಧುಃ' ಎಂಬ ಸೂತ್ರವು ಅನುವೃತ್ತವಾಗಿದೆ "ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ–ಸಪ್ತಮ್ಯಂತ ಸಭಾ ಶಬ್ದದ ನಂತರ ಸಾಧು, ಒಳ್ಳೆಯ, ಜಾಣ, ಕುಶಲ, ಮೊದಲಾದ ಅರ್ಥದಲ್ಲಿ 'ಯ' ಪ್ರತ್ಯಯವು ಬರುತ್ತದೆ.

ಉದಾ–ಸಭ್ಯಃ –(ಸಭೆಯಲ್ಲಿ ಪ್ರವೀಣನು) 'ಸಭಾಯಾಂ ಸಾಧುಃ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಸಭಾ+ಙಿ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ 'ಯ' ಪ್ರತ್ಯಯವು ಬಂದ ಮೇಲೆ ಪ್ರಾತಿಪದಿಕವಾಗಿ "ಸುಪೋಧಾತು ಪ್ರಾತಿಪದಿಕಯೋಃ" ಎಂಬುದರಿಂದ ಸುಪ್ ಗೆ ಲುಕ್ ಬಂದು ಸಭಾ+ಯ ಎಂದಾಗಿ "ಯಸ್ಯೇತಿ ಚ" ಎಂಬುದರಿಂದ ಸಭಾ ದಲ್ಲಿನ 'ಆ' ಕಾರಕ್ಕೆ ಲೋಪ ಬಂದು ಸಭ್+ಯ=ಸಭ್ಯ ಎಂದಾಗಿ ಸುಬಂತ ಮಾಡಿದಾಗ ಸಭ್ಯಃ ಎಂದಾಗುತ್ತದೆ.

**ಇತಿ ಯತೋಽವಧಿಃ (51) (ಪ್ರಾಗ್ಘಿತೀಯಃ)**

# ಪ್ರಕರಣ-52: ಭಯತೋರಧಿಕಾರಃ

**(ಸೂತ್ರ ಸಂಖ್ಯೆ 1139 ರಿಂದ 1144 ವರೆಗೆ)**

**(ಛಾಧಿಕಾರ ವಿಧಿಸುವ ಸೂತ್ರ).**

**ಸೂತ್ರ-1139. ಪ್ರಾಕ್ ಕ್ರೀತಾಚ್ಛಃ ॥5-1-1॥**

ವೃತ್ತಿ-ತೇನ ಕ್ರೀತಮಿತ್ಯತಃ ಪ್ರಾಕ್ ಛೋಧಿಕ್ರೀಯತೇ ॥

ಪ.ಛೇ-ಪ್ರಾಕ್, ಕ್ರೀತಾತ್, ಛಃ (ತ್ರಿಪದ ಸೂತ್ರ) ।

ಅ.ವೃ-"ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-"ತೇನ ಕ್ರಿತಂ" ಎಂಬ ಸೂತ್ರಕ್ಕೆ ಪೂರ್ವ ಸೂತ್ರದವರೆಗೆ 'ಛ' ಪ್ರತ್ಯಯದ ಅಧಿಕಾರವು ಇರುತ್ತದೆ. 'ಛ್' ಕಾರಕ್ಕೆ "ಆಯನೇಯಿನೀ ಇಯಃ ಫಢಖಛಘಾಂ ಪ್ರತ್ಯಯಾದೀನಾಂ" ಎಂಬ ಸೂತ್ರದಿಂದ ಈಯ್ ಆದೇಶ ಬಂದು ಈಯ (ಛ್+ಅ=ಈಯ್+ಅ) ಎಂದಾಗುತ್ತದೆ-

**(ಛ-ಕ್ಕೆ ಅಪವಾದವಾಗಿ ಯತ್ ವಿಧಿಸುವ ಸೂತ್ರ).**

**ಸೂತ್ರ-1140. ಉ-ಗವಾದಿಭ್ಯೋ ಯತ್ ॥ 5-1-2॥**

ವೃತ್ತಿ-ಪ್ರಾಕ್ ಕ್ರೀತಾದಿತ್ಯೇವ । ಉವರ್ಣಾಂತಾದ್ಗವಾದಿಭ್ಯಶ್ಚ ಯತ್ ಸ್ಯಾತ್। ಛಸ್ಯಾಪವಾದಃ । ಶಙ್ಕವೇ ಹಿತಮ್ ಶಙ್ಕವ್ಯಂ ದಾರು । ಗವ್ಯಮ್ ।

ವಾ ॥ ನಾಭಿ ನಭಂ ಚ । ನಭ್ಯೋಕ್ಷಃ । ನಭ್ಯಮಞ್ಜನಮ್ ।

ಅ.ವೃ"ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-'ಉ' ವರ್ಣಾನ್ತ ಪ್ರಾತಿಪದಿಕದ ನಂತರ ಹಾಗೂ 'ಗವಾದಿ' ಗಣಪಠಿತ ಪ್ರಾತಿಪದಿಕದ ನಂತರ ಪ್ರಾಕ್ಕ್ರೀತೀಯ ಅರ್ಥದಲ್ಲಿ ತದ್ಧಿತ ಸಂಜ್ಞೆಯುಳ್ಳ 'ಯತ್' ಪ್ರತ್ಯಯ ಬರುತ್ತದೆ. 'ಯತ್' ನಲ್ಲಿ 'ಯ' ಮಾತ್ರ ಉಳಿಯುತ್ತದೆ 'ಛ' ಎಂದರೆ ಛ್+ಅ ಎಂದು ತಿಳಿಯಬೇಕು, ಆದೇಶ ಬರುವುದು 'ಛ್'ಗೆ ಮಾತ್ರ ಪೂರ್ಣ 'ಛ'ಕಾರಕ್ಕೆ ಅಲ್ಲ. 'ಛ' ಪ್ರತ್ಯಯವನ್ನು ಬಾಧಿಸಿ ಯತ್ ಪ್ರತ್ಯಯವು ಬಂದಿದೆ.

ಉದಾ:-ಶಂಙ್ಕವ್ಯಂ=ದಾರು (ಚಕ್ರ ತಿರುಗಲು ಆಧಾರವಾಗಿರುವ ಕಟ್ಟಿಗೆ ತುಂಡು)- 'ಶಂಙ್ಕವೇ ಹಿತಮ್' ಎಂಬುದು ಲೌಕಿಕ ವಿಗ್ರಹ ವಾಕ್ಯ. ಶಂಕು+ಙೇ ಎಂಬುದು ಅಲೌಕಿಕ ವಿಗ್ರಹ ವಾಕ್ಯ "ತಸ್ಮೈ ಹಿತಮ್" ಎಂಬ ಸೂತ್ರದಿಂದ 'ಛ' ಪ್ರತ್ಯಯವು ಬರಬೇಕಾಗಿತ್ತು, ಅದನ್ನು ಬಾಧಿಸಿ ಪ್ರಕೃತ ಸೂತ್ರದಿಂದ ಯತ್(ಯ) ಪ್ರತ್ಯಯವು ಬಂದು ಪ್ರಾತಿಪದಿಕವಾದ ಮೇಲೆ ಸುಪ್ ಗೆ ಲುಕ್ ಬಂದು ಶಂಕು+ಯ ಎಂದಿರುತ್ತದೆ. (ವೃದ್ಧಿ ಬರುವುದಕ್ಕೆ ಕಾರಣವಾದ ಞಿತ್, ಣಿತ್ ಮೊದಲಾದ ಪ್ರತ್ಯಯಗಳಿಲ್ಲದಿರು

ವುದರಿಂದ ವೃದ್ಧಿಯು ಬರುವುದಿಲ್ಲ. ಮತ್ತು 'ಇ'ಕಾರ ಅಥವಾ 'ಅ'ಕಾರ ಕೊನೆಯಲ್ಲಿ ಇಲ್ಲದಿರುವುದರಿಂದ 'ಭ' ಸಂಜ್ಞೆಯುಳ್ಳ ಟಿ-ಗೆ ಲೋಪವು ಬರುವ ಸಂಭವವವಿರುವುದಿಲ್ಲ.) "ಓರ್ಗುಣ" ಎಂಬ ಸೂತ್ರದಿಂದ 'ಉ' ಕಾರಕ್ಕೆ ಗುಣ ಬಂದು ಓ ಕಾರವಾಗುತ್ತದೆ. ಆದ್ದರಿಂದ ಶಙ್ಕೊ+ಯ ಎಂದಾಗುತ್ತದೆ. "ವಾಂತೋಯಿ ಪ್ರತ್ಯಯೇ" ಎಂಬ ಸೂತ್ರದಿಂದ ಅವ್ ಆದೇಶ ಬಂದು ಶಙ್ಕ್+ಅವ್+ಯ=ಶಙ್ಕವ್ಯ ಎಂದಾಗುತ್ತದೆ. ಸುಬಂತ ಮಾಡಿದಾಗ ಶಙ್ಕವ್ಯಮ್ ಎಂದಾಗುತ್ತದೆ.

ಉದಾ:-ಗವ್ಯಂ (ಆಕಳಿಗೆ ಆಹಾರವಾಗಿರುವ ಮೇವು)-'ಗೋಭ್ಯೋ ಹಿತಮ್' ಎಂಬುದು ಲೌಕಿಕ ವಿಗ್ರಹ ವಾಕ್ಯ. ಗೋ+ಭ್ಯಸ್ ಎಂಬುದು ಅಲೌಕಿಕ ವಿಗ್ರಹ ವಾಕ್ಯ "ತಸ್ಮೈಹಿತಮ್" ಎಂಬ ಸೂತ್ರದಿಂದ 'ಛ' ಪ್ರತ್ಯಯವು ಬರಬೇಕಾಗಿತ್ತು, ಅದನ್ನು ಬಾಧಿಸಿ ಪ್ರಕೃತ ಸೂತ್ರದಿಂದ ಯತ್(ಯ) ಪ್ರತ್ಯಯವು ಬಂದು ಗೋ+ಯತ್ ಎಂದಿದ್ದಾಗ ಇದು ಪ್ರಾತಿಪದಿಕ ಸಂಜ್ಞೆಯನ್ನು ಹೊಂದಿದ ಮೇಲೆ "ಸುಪೋಧಾತು ಪ್ರಾತಿಪದಿಕಯೋಃ" ಎಂಬುದರಿಂದ ಸುಪ್ ಲೋಪವಾಗಿ ಹಿಂದಿನಂತೆ "ವಾಂತೋಯಿ ಪ್ರತ್ಯಯೇ" ಎಂಬ ಸೂತ್ರದಿಂದ 'ಓ' ಕಾರಕ್ಕೆ ಅವ್ ಆದೇಶ ಬಂದು ಗ್+ಅವ್+ಯ= ಗವ್ಯ ಎಂದಾಗುತ್ತದೆ. ಸುಬಂತವಾದ ಮೇಲೆ ಗವ್ಯಂ ಎಂದಾಗುತ್ತದೆ.

"ನಾಭಿ ನಭಂತ" ಇದು ಗಣ ಸೂತ್ರ -ಯತ್ ಪ್ರತ್ಯಯವನ್ನು ಸೇರಿಸುವಾಗ

ವಾ ॥ ನಾಭಿ ನಭಂ ಚ ।

ನಭೋಽಕ್ಷಃ । ನಭ್ಯಮಞ್ಜನಮ್ । :-'ನಾಭಿ' ಶಬ್ದಕ್ಕೆ 'ನಭ' ಎಂಬ ಆದೇಶವನ್ನು ಮಾಡಬೇಕು.

ಉದಾ-ನಭ್ಯೋಽಕ್ಷ (ರಥ ಚಕ್ರದ ಮಧ್ಯದಲ್ಲಿರುವ ರಂಧ್ರಕ್ಕೆ ಹಾಕುವ ಕೀಲಿ)- 'ನಭಯೇ ಹಿತಮ್' ಎಂಬುದು ಲೌಕಿಕ ವಿಗ್ರಹ ವಾಕ್ಯ. ನಾಭಿ+ಙೇ ಎಂಬುದು ಅಲೌಕಿಕ ವಿಗ್ರಹ ವಾಕ್ಯ. 'ಛ' ಪ್ರತ್ಯಯವನ್ನು ಬಾಧಿಸಿ ಪ್ರಕೃತ ಸೂತ್ರದಿಂದ ಯತ್(ಯ) ಪ್ರತ್ಯಯ ಬಂದು ಪ್ರಕೃತ ಗಣಸೂತ್ರದಿಂದ 'ನಾಭಿ' ಶಬ್ದಕ್ಕೆ ನಭ ಆದೇಶ ಬಂದು ನಭ+ಙೇ+ಯ ಎಂದಾಗಿ ಇದಕ್ಕೆ ಪ್ರಾತಿಪದಿಕ ಸಂಜ್ಞೆ ಬಂದು "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ ಸುಪ್ ಲೋಪವಾದ ನಂತರ 'ಭ' ಸಂಜ್ಞಕ ಅ-ಕಾರ ಲೋಪವಾದ ಮೇಲೆ ನಭ್+ಯ=ನಭ್ಯ ಎಂದಾಗಿ ಸುಬಂತವಾದ ಮೇಲೆ ನಭ್ಯಃ ಎಂದಾಗುತ್ತದೆ. ಅಂಜನಂ ಮೊದಲಾದ ನಪುಂಸಕ ಶಬ್ದಗಳು ವಿಶೇಷ್ಯವಾದಾಗ ನಭ್ಯಂ ಎಂದು ವಿಶೇಷಣವಾಗುತ್ತದೆ.

ಉದಾ-'ನಭ್ಯಂ ಅಂಜನಂ'-'ಅಂಜನ' ವೆಂದರೆ ಚಕ್ರಕ್ಕೆ ಸುಲಭವಾಗಿ ತಿರುಗಲು ಕೀಲಿಗೆ ಹಾಕುವ ಅಂಟಾದ ಪದಾರ್ಥ.

**(ಛಪ್ (ಛ) ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1141. ತಸ್ಮೈಹಿತಮ್ ೫-೧-೫।**

ವೃತ್ತಿ-ವತ್ಸೇಭ್ಯೋ ಹಿತೋ-ವತ್ಸೀಯೋ-ಗೋಧುಕ್ ।

ಅ.ವೃ-"ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-"ಅದಕ್ಕೆ ಹಿತವಾದದ್ದು" ಎಂಬ ಅರ್ಥದಲ್ಲಿ ಚತುರ್ಥ್ಯಂತ ಸಮರ್ಥ ಶಬ್ದದ ನಂತರ ಪ್ರಾತಿಪದಿಕದ ನಂತರ 'ಛಪ್(ಛ)' ಪ್ರತ್ಯಯವು ಬರುತ್ತದೆ.

ಉದಾ-ವತ್ಸೀಯಃ -ವತ್ಸೇಭ್ಯಃ ಹಿತಃ (ಸಣ್ಣ ಕರುಗಳಿಗೆ ಹಿತವಾದವನು (ಹಾಲು ಹಿಂಡುವವನು))-ಎಂಬ ಅರ್ಥದಲ್ಲಿ ಚತುರ್ಥೀ ವಿಭಕ್ತ್ಯಂತ ವತ್ಸ ಶಬ್ದದ ನಂತರ 'ಛ' ಪ್ರತ್ಯಯವು ಬರುತ್ತದೆ. 'ಛ' ಗೆ 'ಈಯ್' ಆದೇಶ ಬರುತ್ತದೆ. ವತ್ಸ+ಈಯ್+ಅ ಎಂದಿರುತ್ತದೆ. ಛ= ಛ್+ ಅ=ಈಯ್+ಅ. ವತ್ಸ ಎಂಬಲ್ಲಿರುವ ಅಂತ್ಯ 'ಅ' ಕಾರವು 'ಭ' ಸಂಜ್ಞಕವಾಗಿರುವುದರಿಂದ "ಯಸ್ಯೇತಿ ಚ" ಎಂಬುದರಿಂದ ಲೋಪ ಬಂದು ವತ್ಸ್+ಈಯ= ವತ್ಸೀಯ ಎಂದಾಗಿ ಸುಬಂತವಾದ ಮೇಲೆ ವತ್ಸೀಯಃ ಎಂದಾಗುತ್ತದೆ.

**(ಯತ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1142. ಶರೀರಾವಯಾವಾದ್ ಯತ್। (5.1.6)**

ವೃತ್ತಿ-ದಂತ್ಯಂ ।ಕಂಠ್ಯಂ । ನಸ್ಯಂ

ಪ.ಚ್ಛೇ-ಶರೀರಾವಯದಾತ್, ಯತ್ ।

ಅ.ವೃ-"ತಸ್ಮೈಹಿತಮ್" ಎಂಬ ಸೂತ್ರವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ತಸ್ಮೈಹಿತಮ್ [ಅವನಿಗೆ/ಅದೆ ಹಿತಕರವಾದದ್ದು] ಎಂಬ ಅರ್ಥದಲ್ಲಿ ಶರೀರಾವಯವ ವಾಚಕವಾದ ಚತುರ್ಥ್ಯಂತ ಸಮರ್ಥ ಪದದ ನಂತರ ಯತ್ ಪ್ರತ್ಯಯವು ಬರುತ್ತದೆ.

ಉದಾ-ದಂತ್ಯಂ-'ದಂತೇಭ್ಯೋ ಹಿತಮ್' ಎಂಬುದು ಲೌಕಿಕ ವಿಗ್ರಹ ವಾಕ್ಯ [ದಂತಗಳಿಗೆ ಹಿತಕರವಾದದ್ದು] ದಂತ+ಭ್ಯಸ್+ಯತ್ (ಹಿತಮ್) ಎಂಬುದು ಅಲೌಕಿಕ ವಿಗ್ರಹ ವಾಕ್ಯವಾಗಿದೆ. ಇಲ್ಲಿ ಸುಪ್ ಲೋಪವಾಗಿ ದಂತ+ಯತ್(ಯ) ಎಂದಿದ್ದಾಗ "ಯಸ್ಯೇತಿಚ" ಎಂಬುದರಿಂದ ದಂತ ಶಬ್ದದ ಅಂತ್ಯ 'ಅ' ಕಾರಕ್ಕೆ ಲೋಪ ಬಂದು ದಂತ್ಯ ಎಂದಾಗಿ ಸುಬಂತವಾದಾಗ ದಂತ್ಯಂ ಎಂದು ನಪುಂಸಕ ಶಬ್ದವಾಗುತ್ತದೆ.

ಉದಾ-ಕಂಠ್ಯಮ್-ಕಂಠಾಯ ಹಿತಮ್ ಅರ್ಥದಲ್ಲಿ ಯತ್ ಪ್ರತ್ಯಯವು ಬಂದು ಕಂಠ್ಯಂ ಎಂದಾಗಿದೆ.

ಉದಾ-ನಸ್ಯಂ ನಾಸಿಕಾಯೈ ಹಿತಮ್ (ಮೂಗಿಗೆ ಹಿತವಾದದ್ದು)-ಎಂಬಲ್ಲಿ ಯತ್ ಪ್ರತ್ಯಯವು ಬಂದಿದೆ. "ಪದ್ದನ್ನೋ ಮಾಸ್" ಎಂಬ ಸೂತ್ರದಿಂದ ನಾಸಿಕಾ ಶಬ್ದಕ್ಕೆ ನಸ್ ಎಂಬ ಆದೇಶವು ಬಂದು ನಸ್+ಯ=ನಸ್ಯ ಎಂದಾಗಿ ನಸ್ಯಂ ಎಂದು ಸುಬಂತವಾಗುತ್ತದೆ.

ಸೂಚನೆ-'ತತ್ರ ಭವಃ' ಎಂಬ ಅರ್ಥದಲ್ಲಿಯೂ ಕೂಡ "ಶರೀರಾವಯಾಚ್ಚ" ಎಂಬ ಸೂತ್ರದಿಂದ ಯತ್ ಪ್ರತ್ಯಯವನ್ನು ವಿಧಿಸಲಾಗಿದೆ. ಆಗಲೂ ದಂತ್ಯಂ ಮೊದಲಾದ ರೂಪಗಳು ಸಿದ್ಧಿಸುತ್ತವೆ. ಆದರೆ ಅರ್ಥದಲ್ಲಿ ವ್ಯತ್ಯಾಸವಿರುತ್ತದೆ.

**(ಖ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1143. ಆತ್ಮನ್-ವಿಶ್ವಜನ-ಭೋಗೋತ್ತರಪದಾತ್ ಖಃ। (5-1-9)**

ವೃತ್ತಿ-ಇಲ್ಲ.

ಅ. ವೃ-"ತಸ್ಮೈಹಿತಮ್" ಎಂಬ ಸೂತ್ರವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ತಸ್ಮೈಹಿತಮ್ ಎಂಬರ್ಥದಲ್ಲಿ ಚತುರ್ಥ್ಯಂತಗಳಾದ ಆತ್ಮ, ವಿಶ್ವಜನ, ಭೋಗ, ಶಬ್ದವನ್ನು ಉತ್ತರಪದವಾಗುಳ್ಳ ಶಬ್ದಗಳ ನಂತರ 'ಖ' ಪ್ರತ್ಯಯವು ಬರುತ್ತದೆ. 'ಖ' ಕಾರಕ್ಕೆ 'ಈನ್(ಈ)' ಪ್ರತ್ಯಯವು ಬರುತ್ತದೆ. (ಖ=ಈನ್+ಅ) ಆತ್ಮನ್+ಈನ ಎಂದಿದ್ದಾಗ, "ನಸ್ತದ್ಧಿತೇ" ಎಂಬ ಸೂತ್ರದಿಂದ ಟಿ(ಅನ್) ಲೋಪವು ಆಗಬೇಕಾಗಿದ್ದಾಗ-

**(ಪ್ರಕೃತಿಭಾವವನ್ನು ಹೇಳುವ ಸೂತ್ರ)**

**ಸೂತ್ರ-1144. ಆತ್ಮಾದ್ವಾನೌ ಖೇ। (6.4.169)**

ವೃತ್ತಿ-ಏತೌ ಖೇ ಪ್ರಕೃತ್ಯಾಸ್ತಃ । ಆತ್ಮನೇ ಹಿತಮ್-ಆತ್ಮನೀನಂ । ವಿಶ್ವಜನೀನಂ । ಮಾತೃಭೋಗೀಣಃ ।

**॥ ಇತಿ ಭಯತೋರಧಿಕಾರಃ [52] ಸಮಾಪ್ತಃ ॥**

ಅ.ವೃ-"ಪ್ರಕೃತ್ಯೈಕಾಚ್" ಸೂತ್ರದಿಂದ ಪ್ರಕೃತ್ಯಾ ಎಂಬ ಶಬ್ದವು ಅನುವೃತ್ತವಾಗುತ್ತದೆ.

ಅರ್ಥ-'ಖ" ಪ್ರತ್ಯಯವು ಪರದಲ್ಲಿದ್ದಾಗ ಆತ್ಮನ್ ಮತ್ತು ಅದ್ವನ್ ಶಬ್ದಗಳು ಪ್ರಕೃತಿಭಾವವನ್ನು ಹೊಂದುತ್ತವೆ.

ವಿಶೇಷ-ಪ್ರಕೃತ ಸೂತ್ರದಿಂದ ಟಿ ಲೋಪವು ನಿಷೇಧಿಸಲಾಗಿರುವುದರಿಂದ ಆತ್ಮನ್+ಈನಮ್= ಆತ್ಮನೀನಂ ಎಂದೇ ಆಗಿದೆ. ಇಲ್ಲಿ ಆತ್ಮನ್ ಎಂಬಲ್ಲಿರುವ ಅನ್ ಎಂಬುದಕ್ಕೆ ಟಿ-ಲೋಪ ಬಂದಿಲ್ಲ. ಇದೇ ರೀತಿಯಲ್ಲಿ 'ವಿಶ್ವಜನಾಯ ಹಿತಮ್' ಎಂಬರ್ಥದಲ್ಲಿ ವಿಶ್ವಜನೀನಂ ಎಂದಾಗಿದೆ.

ಉದಾ-ಮಾತೃಭೋಗೀಣಃ-'ಮಾತೃಭೋಗಾಯ ಹಿತಃ' ಎಂಬರ್ಥದಲ್ಲಿ ಭೋಗೋತ್ತರಪದವಾದ 'ಮಾತೃಭೋಗ' ಶಬ್ದದ ನಂತರ ಖ ಪ್ರತ್ಯಯವು ಬಂದು ಮಾತೃಭೋಗೀನಃ ಎಂದಾಗಿ "ಕುಮತಿ ಚ" ಎಂಬುದರಿಂದ ಭೋಗ ಶಬ್ದದಲ್ಲಿ 'ಕ' ವರ್ಗವಿರುವುದರಿಂದ ಣತ್ವ ಬಂದು ಮಾತೃಭೋಗೀಣಃ ಎಂದಾಗಿದೆ.

**(ಭಯತೋರಧಿಕಾರ (ಪ್ರಾಕ್ ಕ್ರೀತೀಯಾಃ) (52) ಪ್ರಕರಣವು ಮುಗಿಯಿತು)**

# ಪ್ರಕರಣ-53: ಠಞಾಧಿಕಾರಃ

**(ಸೂತ್ರ ಸಂಖ್ಯೆ 1145 ರಿಂದ 1152 ವರೆಗೆ)**

**ಸೂತ್ರ-1145. ಪ್ರಾಗ್ವತೇಷ್ಠಞ್।(5.1.18)**

ವೃತ್ತಿ -ತೇನ ತುಲ್ಯಮಿತಿ ವತಿಂ ವಕ್ಷ್ಯತಿ, ತತಃ ಪ್ರಾಕ್ ಠಞ್ ಅಧಿಕ್ರಿಯತೇ।

ಪ. ಛೇ -ಪ್ರಾಕ್, ವತೇಃ, ಠಞ್।

ಅರ್ಥ -ವತಿಂ ಎಂಬ ಪ್ರತ್ಯಯವನ್ನು "ತೇನ ತುಲ್ಯಮ್ ಕ್ರಿಯಾ ಚೇದ್ವತಿಃ" ಎಂಬ ಸೂತ್ರವು ವಿಧಿಸುತ್ತದೆ. ಆ ಸೂತ್ರದ ಪೂರ್ವ ಸೂತ್ರದವರೆಗೆ ಠಞ್ ಪ್ರತ್ಯಯದ ಅಧಿಕಾರವಿರುತ್ತದೆ. ಠಞ್ ನಲ್ಲಿ 'ಠ' ಮಾತ್ರ ಉಳಿಯುತ್ತದೆ. ಆ 'ಠ' ಪ್ರತ್ಯಯಕ್ಕೆ ಇಕ ಎಂಬ ಆದೇಶವು ಬರುತ್ತದೆ.

**(ಠಞ್ ಪ್ರತ್ಯವನ್ನು ವಿಧಿಸುವ ಸೂತ್ರ)**

**ಸೂತ್ರ-1146. -ತೇನ ಕ್ರೀತಮ್।(4.1.37)**

ವೃತ್ತಿ-ಸಪ್ತತ್ಯಾಕ್ರೀತಂ -ಸಾಪ್ತತಿಕಮ್। ಪ್ರಾಸ್ಥಿಕಮ್।

ಅ.ವೃ-"ಪ್ರಾಗ್ವತೇಷ್ಠಞ್" ಎಂಬ ಸೂತ್ರದಿಂದ ಠಞ್ ಎಂಬ ಪ್ರತ್ಯಯವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಜ್ಯಾಪ್ ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-'ಅದರಿಂದ ಕೊಂಡುಕೊಳ್ಳಲ್ಪಟ್ಟಿತು' ಎಂಬ ಅರ್ಥದಲ್ಲಿ ತೃತೀಯಾನ್ತ ಸಮರ್ಥವಾದ ಶಬ್ದದ ನಂತರ ಠಞ್ ಪ್ರತ್ಯಯವು ಬರುತ್ತದೆ.

ಉದಾ-ಸಾಪ್ತತಿಕಮ್-(ಎಪ್ಪತ್ತು ನಾಣ್ಯಗಳಿಂದ ಕೊಂಡುಕೊಳ್ಳಲ್ಪಟ್ಟ ಪದಾರ್ಥ)- 'ಸಪ್ತತ್ಯಾ ಕ್ರೀತಮ್' ಎಂಬುದು ಲೌಕಿಕ ವಿಗ್ರಹ ವಾಕ್ಯ. ಸಪ್ತತಿ+ಟಾ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ಇದಕ್ಕೆ ಠಞ್ (ಠ) ಪ್ರತ್ಯಯವು ಬರುತ್ತದೆ. "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ ಸುಪ್ ಲೋಪವಾಗಿ ಆದಿವೃದ್ಧಿ ಬಂದು, 'ಠ' ಪ್ರತ್ಯಯಕ್ಕೆ ಇಕ ಆದೇಶ ಬಂದು ಸಾಪ್ತತ್+ಇಕ=ಸಾಪ್ತತಿಕ ಎಂದಾಗುತ್ತದೆ. ಇದನ್ನು ಸುಬಂತ ಮಾಡಿದಾಗ ನಪುಂಸಕ ಲಿಂಗದಲ್ಲಿ ಸಾಪ್ತತಿಕಮ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ-ಪ್ರಾಸ್ಥಿಕಮ್-(ಅಳೆಯುವ ಪದಾರ್ಥದಿಂದ ಕೊಂಡುಕೊಳ್ಳಲ್ಪಟ್ಟ ಪದಾರ್ಥ)- 'ಪ್ರಸ್ಥೇನ ಕ್ರೀತಮ್' ಎಂಬುದು ಲೌಕಿಕ ವಿಗ್ರಹವಾಕ್ಯ. ಪ್ರಸ್ಥ+ಟಾ ಎಂಬುದು ಅಲೌಕಿಕ ವಿಗ್ರಹವಾಕ್ಯ. ಪ್ರಕೃತ ಸೂತ್ರದಿಂದ ಠಞ್(ಠ) ಪ್ರತ್ಯಯವು ಬಂದು "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ ಸುಪ್ ಲೋಪವಾಗಿ ಆದಿವೃದ್ಧಿ ಬಂದು 'ಠ' ಪ್ರತ್ಯಯಕ್ಕೆ 'ಇಕ' ಆದೇಶ ಬಂದು ಪ್ರಾಸ್ಥ+ಇಕ ಎಂದಾಗುತ್ತದೆ. ಪ್ರಾಸ್ಥ ಎಂಬಲ್ಲಿರುವ ಅಂತ್ಯ 'ಅ'ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು

ಪ್ರಾಸ್ಥ+ಇಕ= ಪ್ರಾಸ್ಥಿಕ ಎಂದಾಗುತ್ತದೆ. ಇದನ್ನು ಸುಬಂತ ಮಾಡಿದಾಗ ನಪುಂಸಕ ಲಿಂಗದಲ್ಲಿ ಪ್ರಾಸ್ಥಿಕಮ್ ಎಂದು ರೂಪವು ಸಿದ್ಧವಾಗುತ್ತದೆ.

**(ಅಣ್ ಮತ್ತು ಅಞ್~ ಪ್ರತ್ಯಯಗಳನ್ನು ವಿಧಿಸುವ ಸೂತ್ರ)**

**ಸೂತ್ರ-1147-ಸರ್ವಭೂಮಿ-ಪೃಥಿವೀಭ್ಯಾಂ ಅಣಞೌ (5.1.41)**

ಅರ್ಥ-ಸರ್ವಭೂಮಿ ಮತ್ತು ಪೃಥಿವೀ ಶಬ್ದಗಳನಂತರ 'ಪ್ರಾಕ್ ಕ್ರೀತೀಯ ಅರ್ಥದಲ್ಲಿ ಕ್ರಮವಾಗಿ 'ಅಣ್(ಅ)' ಮತ್ತು 'ಅಞ್(ಅ)' ಪ್ರತ್ಯಯಗಳು ಬರುತ್ತವೆ.

**(ಅಣ್ ಮತ್ತು ಅಞ್~ ಪ್ರತ್ಯಯಗಳನ್ನು ವಿಧಿಸುವ ಸೂತ್ರ)**

**ಸೂತ್ರ-1148. ತಸ್ಯೇಶ್ವರಃ।(5-1-42)**

ವೃತ್ತಿ-ಸರ್ವಭೂಮಿ-ಪೃಥಿವೀಭ್ಯಾಂ ಅಣಞೌ ಸ್ತಃ।

ವಾರ್ತಿಕ-ಅನುಶತಿಕಾದೀನಾಞ್ಚ । ಸರ್ವಭೂಮೇಃ ಈಶ್ವರಃ-ಸಾರ್ವಭೌಮಃ। ಪಾರ್ಥಿವಃ ।

ಪ.ಚ್ಛೇ-ತಸ್ಯ, ಈಶ್ವರಃ।

ಅ.ವೃ.-"ಸರ್ವಭೂಮಿ-ಪೃಥಿವೀಭ್ಯಾಂ ಅಣಞೌ" ಎಂಬ ಸೂತ್ರವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ಸರ್ವಭೂಮಿ ಮತ್ತು ಪೃಥಿವೀ ಈ ಷಷ್ಠ್ಯನ್ತ ಸಮರ್ಥ ಶಬ್ದಗಳ ನಂತರ ಈಶ್ವರ (ಒಡೆಯ) ಎಂಬ ಅರ್ಥದಲ್ಲಿ ಅಣ್ ಮತ್ತು ಅಞ್ ಪ್ರತ್ಯಯವು ಬರುತ್ತದೆ.

ಉದಾ-ಸಾರ್ವಭೌಮಃ-(ಇಡೀ ಭೂಮಿಗೆ ಒಡೆಯ)-'ಸರ್ವಭೂಮೇಃ ಈಶ್ವರ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಸರ್ವಭೂಮಿ+ಙಸ್ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ಅಣ್ ಪ್ರತ್ಯಯು ಬಂದ ಮೇಲೆ, "ಸುಪೋಧಾತುಪ್ರಾತಿಪದಿಕಯೋಃ"ಎಂಬುದರಿಂದ ಸುಪ್-ಗೆ ಲುಕ್ ಬಂದು ಬರಬೇಕಾದ ಆದಿವೃದ್ಧಿಯನ್ನು ಬಾಧಿಸಿ "ಅನುಶತಿಕಾದೀನಾಞ್ಚ" ಎಂಬುದರಿಂದ ಸರ್ವ ಮತ್ತು ಭೂಮಿ ಎಂಬ ಎರಡು ಪದಗಳ ಆದಿ ಸ್ವರ ವರ್ಣಕ್ಕೆ (ಅಕಾರ, ಊಕಾರಗಳಿಗೆ) ವೃದ್ಧಿ ಬಂದು ಕ್ರಮವಾಗಿ ಸಾರ್ವಭೌಮ+ಅ ಎಂದಿರುತ್ತದೆ. ಸಾರ್ವಭೌಮ ಎಂಬಲ್ಲಿರುವ ಅಂತ್ಯ 'ಅ'ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು ಸಾರ್ವಭೌಮ್+ಅ= ಸಾರ್ವಭೌಮ ಎಂಬುದನ್ನು ಸುಬಂತ ಮಾಡಿದಾಗ ಸಾರ್ವಭೌಮಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ-ಪಾರ್ಥಿವಃ (ಪೃಥಿವಿಯ ಈಶ್ವರ ಅಂದರೆ ಒಡೆಯ)-'ಪೃಥಿವ್ಯಾಃ ಈಶ್ವರಃ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಪೃಥಿವೀ+ಙಸ್ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ಅಞ್ ಪ್ರತ್ಯಯ ಬಂದು ಪೃಥಿವಿ+ಙಸ್+ಅಞ್(ಅ) ಎಂದಿದ್ದಾಗ, ಪ್ರಾತಿಪದಿಕವಾದ ಮೇಲೆ "ಸುಪೋಧಾತುಪ್ರಾತಿಪದಿಕಯೋಃ" ಎಂಬ

ಸೂತ್ರದಿಂದ ಸುಪ್ ಲೋಪವಾಗಿ ಪೃಥಿವಿ+ಅ ಎಂದಿದ್ದಾಗ, ಆದಿ ಸ್ವರಕ್ಕೆ ವೃದ್ಧಿ ಬಂದು ಋ-ಕಾರದ ಸ್ಥಾನದಲ್ಲಿ ಆರ್ ಬಂದು ಪಾರ್ಥಿವೀ+ಅ ಎಂದಿದ್ದಾಗ, 'ಪಾರ್ಥಿವೀ' ಎಂಬಲ್ಲಿರುವ ಅಂತ್ಯ ಈ-ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು ಪಾರ್ಥಿವ್+ಅ= ಪಾರ್ಥಿವ ಎಂದಿದ್ದಾಗ, ಸುಬಂತ ಮಾಡಿದ ಮೇಲೆ ಪಾರ್ಥಿವಃ ಎಂದು ರೂಪವು ಸಿದ್ಧವಾಗುತ್ತದೆ.

**(ನಿಪಾತವನ್ನು ವಿಧಿಸುವ ಸೂತ್ರ)**

**ಸೂತ್ರ-1149. -ಪಙ್ಕ್ತಿ-ವಿಂಶತಿ-ತ್ರಿಂಶಚ್ಚತ್ವಾರಿಂಶತ್-ಪಞ್ಚಾಶತ್-ಷಷ್ಟಿ-ಸಪ್ತತ್ಯ-ಶೀತಿ-ನವತಿ-ಶತಮ್-(5.1.59)**

ವೃತ್ತಿ -ಏತೇ ರೂಢಶಬ್ದಾ ನಿಪಾತ್ಯಂತೇ।

ಪ. ಛೇ -ಪಙ್ಕ್ತಿ-ವಿಂಶತಿ-ತ್ರಿಂಶತ್-ಚತ್ವಾರಿಂಶತ್-ಪಞ್ಚಾಶತ್-ಷಷ್ಟಿ-ಸಪ್ತತಿ-ಅಶೀತಿ-ನವತಿ-ಶತಮ್।

ಅರ್ಥ:--ಪಙ್ಕ್ತಿ, ವಿಂಶತಿ, ತ್ರಿಂಶತ್, ಚತ್ವಾರಿವಿಂಶತ್, ಪಞ್ಚಾಶತ್, ಷಷ್ಟಿ, ಸಪ್ತತಿ, ಅಶೀತಿ, ನವತಿ,ಶತಮ್-ಈ ಹತ್ತು ರೂಢ ಶಬ್ದಗಳು ನಿಪಾತವಾಗಿ ಹೇಳಲಾಗಿದೆ. ಇವುಗಳನ್ನು ಹೀಗೆ ತದ್ಧಿತ ಶಬ್ದಗಳನ್ನಾಗಿ ಬಳಸಬೇಕು. ಇವುಗಳಿಗೆ ಯಾವ ಪ್ರಕ್ರಿಯ ಅಪಕ್ಷೆ ಇರುವುದಿಲ್ಲ.

**(ಠಞ್ ಮೊದಲಾದ ಪ್ರತ್ಯಯಗಳನ್ನು ವಿಧಿಸುವ ಸೂತ್ರ)**

**ಸೂತ್ರ-1150. ತದರ್ಹತಿ।(5.1.63)**

ವೃತ್ತಿ -ಲಬ್ಧುಂ ಯೋಗ್ಯೋ ಭವತಿ ಇತ್ಯರ್ಥೇ ದ್ವಿತೀಯಾನ್ತಾತ್ ಠಞಾದಯಃ ಸ್ಯುಃ।ಶ್ವೇತಚ್ಛತ್ರಮರ್ಹತಿ-ಶ್ವೈತಚ್ಛತ್ರಿಕಃ।

ಪ. ಛೇ-ತತ್,ಅರ್ಹತಿ।

ಅ. ವೃ-"ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-'ಈ ಮನುಷ್ಯನು ಈ ಪದಾರ್ಥವನ್ನು ಹೊಂದಲು ಯೋಗ್ಯನಾಗಿದ್ದಾನೆ' ಎಂಬ ಅರ್ಥದಲ್ಲಿ ದ್ವಿತಿಯಾಂತ ಸಮರ್ಥ ಶಬ್ದದ ನಂತರ ಠಞ್(ಠ) ಮೊದಲಾದ ಪ್ರತ್ಯಯಗಳು ಬರುತ್ತವೆ.

ಉದಾ-ಶ್ವೈತಚ್ಛತ್ರಿಕಃ-(ಬಿಳಿ ಛತ್ರಿಯನ್ನು ಪಡೆಯಲು ಯೋಗ್ಯನಾದವನು)-ಶ್ವೇತಚ್ಛತ್ರಮ್ ಅರ್ಹತಿ ಎಂಬುದು ಲೌಕಿಕ ವಿಗ್ರಹವಾಕ್ಯ. ಶ್ವೇತಚ್ಛತ್ರ+ಅಮ್ ಎಂಬುದು ಅಲೌಕಿಕ ವಿಗ್ರಹವಾಕ್ಯ ಪ್ರಕೃತ ಸೂತ್ರದಿಂದ ಠಞ್ ಪ್ರತ್ಯಯ ಬಂದು, ಶ್ವೇತಚ್ಛತ್ರ+ಅಮ್+ಠ ಎಂದಿದ್ದಾಗ, 'ಠ' ಗೆ (ಇಕ) ಬಂದು, ಸುಪ್ ಲೊಪವಾದ ಮೇಲೆ, ಶ್ವೇತಚ್ಛತ್ರ+ಇಕ ಎಂದಿದ್ದಾಗ, ಆದಿವೃದ್ಧಿ ಬಂದು ಶ್ವೈತಚ್ಛತ್ರ+ಇಕ ಎಂದಾಗಿ ಪೂರ್ವ ಪದದ ಅಂತ್ಯ 'ಅ' ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು ಶ್ವೈತಚ್ಛತ್ರ್+ಇಕ=

ಶ್ವೈತಚ್ಛತ್ರಿಕ ಎಂದಿದ್ದಾಗ, ಸುಬಂತ ಮಾಡಿದ ಮೇಲೆ ಶ್ವೈತಚ್ಛತ್ರಿಕಃ ಎಂದಾಗುತ್ತದೆ.

**(ಯತ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1151. ದಣ್ಡಾದೀಭ್ಯೋ ಯತ್ ।(5.1.66)**

ವೃತ್ತಿ-ಏಭ್ಯೋ ಯತ್ ಸ್ಯಾತ್। ದಣ್ಡಮರ್ಹತಿ-ದಣ್ಡ್ಯಃ। ಅರ್ಘ್ಯಃ। ವಧ್ಯಃ।

ಪ.ಚ್ಛೇ-ದಣ್ಡಾದಿಭ್ಯಃ, ಯತ್।

ಅ. ವೃ-"ತದರ್ಹತಿ" ಎಂಬ ಸೂತ್ರವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ದಂಡ ಮೊದಲಾದ ಗಣಪಠಿತ ದ್ವಿತೀಯಾಂತ ಸಮರ್ಥ ಶಬ್ದಗಳ ನಂತರ 'ಅವನು ಅದನ್ನು ಪಡೆಯಲು ಯೊಗ್ಯನಾಗುತ್ತಾನೆ' ಎಂಬ ಅರ್ಥದಲ್ಲಿ ಯತ್ ಪ್ರತ್ಯಯವು ವಿಧಿಸಲಾಗಿದೆ.

ಉದಾ-ದಣ್ಡ್ಯಃ-(ದಂಡಿಸಲ್ಪಡಲು ಯೋಗ್ಯನು)-'ದಣ್ಡಮ್ ಅರ್ಹತಿ' ಎಂಬುದು ಲೌಕಿಕ ವಿಗ್ರಹ ವಾಕ್ಯ. ದಣ್ಡ+ಅಮ್ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ಯತ್(ಯ) ಪ್ರತ್ಯಯವು ಬಂದು, "ಸುಪೋಧಾತುಪ್ರಾತಿಪದಿಯೋಃ" ಎಂಬ ಸೂತ್ರದಿಂದ ಸುಪ್-ಲೋಪವಾದ ಮೇಲೆ ದಣ್ಡ+ಯ ಎಂದಿದ್ದಾಗ ದಣ್ಡ ಶಬ್ದದ ಅಂತ್ಯ 'ಅ' ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು, ದಣ್ಡ್+ಯ ಎಂದಿದ್ದಾಗ ಸುಬಂತವಾದ ಮೇಲೆ ದಣ್ಡ್ಯಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ-ಅರ್ಘ್ಯಃ-(ಪೂಜೆಯನ್ನು ಪಡೆಯಲು ಯೊಗ್ಯನು)-'ಅರ್ಘಮ್ ಅರ್ಹತಿ' ಎಂಬುದು ಲೌಕಿಕ ವಿಗ್ರಹವಾಕ್ಯ. ಅರ್ಘ+ಅಮ್ ಎಂಬುದು ಅಲೌಕಿಕ ವಿಗ್ರಹವಾಕ್ಯ. ಪ್ರಕೃತ ಸೂತ್ರದಿಂದ ಯತ್(ಯ) ಪ್ರತ್ಯಯವು ಬಂದು ಪ್ರಾತಿಪದಿಕವಾದ ಮೇಲೆ ಸುಪ್ ಲೋಪವಾಗಿ ಅರ್ಘ ಶಬ್ದದ ಅಂತ್ಯ 'ಅ'ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪಬಂದು ಅರ್ಘ್+ಯ ಎಂದಿದ್ದಾಗ, ಸುಬಂತವಾದ ಮೇಲೆ ಅರ್ಘ್ಯಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ-ವಧ್ಯಃ (ಕೊಲ್ಲಲ್ಪಡಲು ಯೋಗ್ಯನು)-ಹಿಂದಿನಂತೆ 'ವಧಮ್ ಅರ್ಹತಿ' ಎಂಬ ಅರ್ಥದಲ್ಲಿ ಯತ್(ಯ) ಪ್ರತ್ಯಯ ಬಂದು ವಧ+ಯ ಎಂದಿದ್ದಾಗ, "ಯಸ್ಯೇತಿಚ" ಎಂಬುದರಿಂದ ವಧ ಶಬ್ದದ ಅಂತ್ಯ 'ಅ' ಕಾರಕ್ಕೆ ಲೋಪ ಬಂದು ಸುಬಂತವಾದ ಮೇಲೆ ವಧ್ಯಃ ಎಂದು ರೂಪವು ಸಿದ್ಧವಾಗುತ್ತದೆ.

**(ಠಞ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1152. -ತೇನ ನಿರ್ವೃತ್ತಮ್।(5.1.79)**

ವೃತ್ತಿ-ಅಹ್ನಾ ನಿರ್ವೃತ್ತಮ್ ಆಹ್ನಿಕಮ್।

**॥ ಇತಿ ಠಞ್ (ಪ್ರಾಗ್ವತೀಯಾಃ) ॥ ॥ ಪ್ರಕರಣಮ್ ಸಮಾಪ್ತಮ್ (53)॥**

ಅ.ವೃ-"ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ:-'ಅದರಿಂದ ಸಿದ್ಧವಾದುದ್ದು' ಎಂಬ ಅರ್ಥದಲ್ಲಿ ಕರಣಾರ್ಥ ತೃತೀಯಾನ್ತ ಕಾಲವಾಚಕ ಶಬ್ದದ ನಂತರ ಠಞ್(ಠ್) ಪ್ರತ್ಯಯವು ಬರುತ್ತದೆ.

ಉದಾ-ಆಹ್ನಿಕಮ್-(ಒಂದು ದಿನದಲ್ಲಿ ಜರುಗಿದ)-ಎಂಬ ಅರ್ಥದಲ್ಲಿ ತೃತೀಯಾನ್ತ ಅಹನ್ ಶಬ್ದದ ನಂತರ ಠಞ್(ಠ) ಪ್ರತ್ಯಯವು ಬರುತ್ತದೆ. "ಠಸ್ಯೇಕಃ" ಎಂಬ ಸೂತ್ರದಿಂದ ಇಕ ಆದೇಶವಾಗಿ ಬಂದು, ಅಹನ್+ಟಾ+ಇಕ ಎಂದಿದ್ದಾಗ, ಪ್ರಾತಿಪದಿಕದ ನಂತರವಿರುವ ಸುಪ್-ಗೆ ಲೋಪ ಬಂದು, ಅಹನ್+ಇಕ ಎಂದಿದ್ದಾಗ ಆದಿವೃದ್ಧಿ ಬಂದು ಆಹನ್+ಇಕ ಎಂದಿದ್ದಾಗ, "ಅಲ್ಲೋಪೋನಃ" ಎಂಬ ಸೂತ್ರದಿಂದ 'ಭ' ಸಂಜ್ಞೆಯುಳ್ಳ ಅನ್-ನಲ್ಲಿರುವ 'ಅ'ಕಾರಕ್ಕೆ ಲೋಪ ಬಂದು ಆಹನ್+ಇಕ=ಆಹ್ನಿಕ ಎಂದಾದ ಮೇಲೆ, ಸುಬಂತ ಮಾಡಿದಾಗ ನಪುಂಸಕ ಲಿಂಗದಲ್ಲಿ ಆಹ್ನಿಕಮ್ ಎಂಬ ರೂಪವು ಸಿದ್ಧವಾಗುತ್ತದೆ.

**ಠಞ್ ಪ್ರಕರಣವು (೬೩) ಮುಗಿಯಿತು.**

# ಪ್ರಕರಣ-54: ತ್ವತಲೋರಧಿಕಾರಃ

**(ಭಾವಕರ್ಮಾರ್ಥಾಧಿಕಾರ) (ಸೂತ್ರ ಸಂಖ್ಯೆ 1153 ರಿಂದ 1165)**

**(ವತಿ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1153. ತೇನ ತುಲ್ಯಂ ಕ್ರಿಯಾ ಚೇದ್ವತಿಃ।(5.1.115)**

ವೃತ್ತಿ-ಬ್ರಾಹ್ಮಣೇನ ತುಲ್ಯಂ ಬ್ರಾಹ್ಮಣವತ್ ಅಧೀತೇ। ಕ್ರಿಯಾ ಚೇದಿತಿ ಕಿಮ್? ಗುಣತುಲ್ಯೇ ಮಾ ಭೂತ್, ಪುತ್ರೇಣ ತುಲ್ಯಃ ಸ್ಥೂಲಃ।

ಅ. ವೃ-"ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-'ಅದರಿಂದ ಸಮಾನವಾದುದ್ದು ಅಥವಾ ಸದೃಶವಾದುದ್ದು' ಎಂಬ ಅರ್ಥದಲ್ಲಿ ತೃತೀಯಾಂತ ಸಮರ್ಥ ಪ್ರಾತಿಪದಿಕದ ನಂತರ ವತಿ ಪ್ರತ್ಯಯವು ಬರುತ್ತದೆ. 'ವತಿ'ನಲ್ಲಿ ವತ್ ಮಾತ್ರ ಉಳಿಯುತ್ತದೆ. ಇಲ್ಲಿ ಸಮವಾದುದ್ದು ಎಂಬುದು ಕ್ರಿಯೇಯಾಗಿರಬೇಕು.

ಉದಾ-ಬ್ರಾಹ್ಮಣವತ್ (ಅಧೀತೇ)-(ಬ್ರಾಹ್ಮಣೇತರನು ಬ್ರಾಹ್ಮಣನಂತೆ ಅಧ್ಯಯನ ಮಾಡುತ್ತಿದ್ದಾನೆ)-'ಬ್ರಾಹ್ಮಣೇನ ತುಲ್ಯಮ್' ಎಂಬುದು ಲೌಕಿಕ ವಿಗ್ರಹ ವಾಕ್ಯ. ಬ್ರಾಹ್ಮಣ+ಟಾ (ಆ) ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ವತಿ (ವತ್) ಪ್ರತ್ಯಯವು ಬಂದು ಪ್ರಾತಿಪದಿಕ ಸಂಜ್ಞೆ ಬಂದ ಮೇಲೆ, ಸುಪ್ ಲೋಪವಾಗಿ ಬ್ರಾಹ್ಮಣವತ್ ಎಂದು ರೂಪವು ಸಿದ್ಧವಾಗುತ್ತದೆ. ಇಲ್ಲಿ ಅಧ್ಯಯನ ಕ್ರಿಯೆಯಲ್ಲಿ ಸಾಮ್ಯವಿದೆ. ಇದು ಅವ್ಯಯವಾಗಿದೆ.

ಉದಾ-'ಗುಣತುಲ್ಯೇ ಮಾ ಭೂತ್, ಪುತ್ರೇಣ ತುಲ್ಯಃ' ಸ್ಥೂಲಃ-ಕ್ರಿಯೆಯಲ್ಲಿ ಮಾತ್ರ ಸಾಮ್ಯವಿರಬೇಕು ಎಂದು ಹೇಳಿರುವುದರಿಂದ ಸ್ಥೂಲತ್ವವು ಗುಣವಾಗಿರುವುದರಿಂದ ವತಿ (ವತ್) ಪ್ರತ್ಯಯವು ಬರದೇ ಸ್ಥೂಲಃ ಎಂದು ರೂಪವಾಗಿದೆ.

**(ವತಿ ಪ್ರತ್ಯಯವನ್ನು ವಿಧಿಸುವ ಮತ್ತೊಂದು ಸೂತ್ರ)**

**ಸೂತ್ರ-1154. ತತ್ರ ತಸ್ಯೇವ। (5.1.116)**

ವೃತ್ತಿ-ಮಥುರಾಯಾಮಿವ-ಮಥುರಾವತ್ ಸ್ರುಘ್ನೇ ಪ್ರಾಕಾರಃ। ಚೈತ್ರಸ್ಯೇವ ಚೈತ್ರವತ್ ಮೈತ್ರಸ್ಯ ಗಾವಃ।

ಪ. ಛೇ-ತತ್ರ, ತಸ್ಯ, ಇವ।

ಅ. ವೃ-"ತೇನ ತುಲ್ಯಂ ಕ್ರಿಯಾ ಚೇದ್ವತಿಃ" ಎಂಬ ಸೂತ್ರದಿಂದ ವತಿ(ವತ್) ಎಂಬ ಪದವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-'ಅಲ್ಲಿಯಿರುವಂತೆ (ತತ್ರ ಇವ)ಮತ್ತು ಅವನದ್ದರಂತೆ (ತಸ್ಯ ಇವ)' ಎಂಬ ಅರ್ಥಗಳಲ್ಲಿ ಸಪ್ತಮ್ಯಂತ ಮತ್ತು ಷಷ್ಠ್ಯನ್ತ ಸಮರ್ಥ ಶಬ್ದಗಳ ನಂತರ ವತಿ (ವತ್) ಪ್ರತ್ಯಯವು ಬರುತ್ತದೆ. ಈ ಪ್ರತ್ಯಯಕ್ಕೆ ಸಾದೃಶ್ಯವು ಅರ್ಥವಾಗಿದೆ.

ಉದಾ-ಮಥುರಾವತ್ -(ಮಥುರಾಯಾಮ್ ಇವ) 'ಮಥುರೆಯಲ್ಲಿರುವಂತೆ' ಸಪ್ತಮ್ಯಂತ ಮಥುರಾ ಶಬ್ದದ ನಂತರ ವತಿ (ವತ್) ಪ್ರತ್ಯಯವು ಬಂದು ಹಿಂದಿನಂತೆ ಪ್ರಕ್ರಿಯೆಯು ನಡೆದು ಮಥುರಾವತ್ ಎಂದು ರೂಪವು ಸಿದ್ಧವಾಗಿದೆ.

ಉದಾ-ಚೈತ್ರವತ್-(ಚೈತ್ರಸ್ಯ ಇವ)-'ಚೈತ್ರನದ್ದಂತೆ' ಎಂಬ ಅರ್ಥದಲ್ಲಿ ಷಷ್ಠ್ಯಂತ ಚೈತ್ರ ಶಬ್ದದ ನಂತರ ವತಿ (ವತ್) ಪ್ರತ್ಯಯವು ಬಂದು, ಸುಪ್ ಲೋಪವಾದ ಮೇಲೆ ಚೈತ್ರ+ವತ್= ಚೈತ್ರವತ್ ಎಂದು ರೂಪವು ಸಿದ್ಧವಾಗಿದೆ. (ಚೈತ್ರವತ್ ಮೈತ್ರಸ್ಯ ಗಾವಃ) ಚೈತ್ರನ ಆಕಳಗಳಂತೆ ಮೈತ್ರನ ಆಕಳುಗಳು ಇವೆ.

**(ತ್ವ ಮತ್ತು ತಲ್ ಪ್ರತ್ಯಯಗಳನ್ನು ವಿಧಿಸುವ ಸೂತ್ರ)**

**ಸೂತ್ರ-1155. ತಸ್ಯ ಭಾವಸ್ತ್ವ-ತಲೌ।(5.1.119)**

ವೃತ್ತಿ-ಪ್ರಕೃತಿಜನ್ಯಬೋಧೇ ಪ್ರಕಾರೋ ಭಾವಃ ಗೋರ್ಭಾವೋ-ಗೋತ್ವಮ್, ಗೋತಾ। ತ್ವಾನ್ತಂ ಕ್ಲೀಬಮ್।

ಪ. ಛೇ-ತಸ್ಯ, ಭಾವಃ, ತ್ವ-ತಲೌ।

ಅ. ವೃ-"ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-'ತಸ್ಯ ಭಾವಃ (ಅವನ ಭಾವ ಅಥವಾ ಧರ್ಮ)' ಎಂಬ ಅರ್ಥದಲ್ಲಿ ತ್ವ ಮತ್ತು ತಲ್ ಪ್ರತ್ಯಯಗಳು ಬರುತ್ತವೆ.

ಉದಾ-ಗೋತ್ವಮ್-'ಗೋಃ ಭಾವಃ' ಎಂಬ ಅರ್ಥದಲ್ಲಿ ತ್ವ ಪ್ರತ್ಯಯ ಬಂದು ಗೋ+ಙಸ್+ತ್ವ ಎಂದಾಗಿ ಹಿಂದಿನಂತೆ ಪ್ರಕ್ರಿಯೆ ನಡೆದು ಭಾವಾರ್ಥದಲ್ಲಿ ಗೋತ್ವಮ್ ಎಂದು ರೂಪವು ಸಿದ್ಧವಾಗಿದೆ.

ಉದಾ-ಗೋತಾ-(ಭಾವಾರ್ಥದಲ್ಲಿ) ಗೋ+ತಲ್(ತ) ಎಂದಿದ್ದಾಗ, ಸ್ತ್ರೀವಿವಕ್ಷೆಯಲ್ಲಿ ತಲ್(ತ) ಪ್ರತ್ಯಯವಿರುವುದರಿಂದ ಗೋತ+ಆ ಎಂದಿದ್ದಾಗ "ಯಸ್ಯೇತಿಚ" ಎಂಬುದರಿಂದ ಗೋತ ಎಂಬಲ್ಲಿರುವ ಅಂತ್ಯ 'ಅ' ಕಾರಕ್ಕೆ ಲೋಪ ಬಂದು ಗೋತ್+ಆ= ಗೋತಾ ಎಂದು ರೂಪವು ಸಿದ್ಧವಾಗಿದೆ.

**(ತ್ವ ಮತ್ತು ತಲ್ ಪ್ರತ್ಯಯಗಳನ್ನು ವಿಧಿಸುವ ಅಧಿಕಾರ ಸೂತ್ರ)**

**ಸೂತ್ರ-1156. ಆ ಚ ತ್ವಾತ್।(5.1.120)**

ವೃತ್ತಿ -'ಬ್ರಹ್ಮಣಸ್ತ್ವಃ' ಇತ್ಯತಃ ಪ್ರಾಕ್ ತ್ವತಲಾವಧಿಕ್ರಿಯೇತೇ । ಅಪವಾದೈಃ ಸಹ ಸಮಾವೇಶಾರ್ಥಮಿದಮ್। ಚಕಾರಃ ನಞ್-ಸ್ನಞ್‌ಭ್ಯಾಮ್ ಅಪಿ ಸಮಾವೇಶಾರ್ಥಃ ಸ್ತ್ರಿಯಾಃ ಭಾವಃ-ಸ್ತ್ರೈಣಮ್।ಸ್ತ್ರೀತ್ವಮ್ । ಸ್ತ್ರೀತಾ। ಪೌಂಸ್ನಮ್, ಪುಂಸ್ತ್ವಮ್, ಪುಂಸ್ತಾ।

ಅ. ವೃ.-"ತಸ್ಯ ಭಾವಸ್ತ್ವ-ತಲೌ" ಎಂಬ ಸೂತ್ರವು ಅನುವೃತ್ತವಾಗುತ್ತದೆ. ಆ ಎಂಬುದು ವರೆಗೆ (ಮರ್ಯಾದಾ)ಎಂಬ ಅರ್ಥವನ್ನು ಕೊಡುತ್ತದೆ.

ಅರ್ಥ-"ಬ್ರಹ್ಮಣಸ್ತ್ವಃ(5-1-136)" ಎಂಬ ಸೂತ್ರಕ್ಕಿಂತ ಪೂರ್ವ ಸೂತ್ರದವರೆಗೆ ತ್ವ ಮತ್ತು ತಲ್ ಪ್ರತ್ಯಯಗಳು ಅನುವೃತ್ತವಾಗುತ್ತವೆ.

ಹಿಂದಿನ ಸೂತ್ರದಿಂದಲ್ಲೇ ಈ ಎರಡು ಪ್ರತ್ಯಯಗಳು ಮುಂಬರುವ ಸೂತ್ರದಲ್ಲಿ ಅನುವೃತ್ತವಾಗುತ್ತವೆ. ಹಾಗಿದ್ದರೂ "ಪೃಥಿವ್ಯಾದಿಭ್ಯ", "ಇಮನಿಜ್ವಾ" ಮೊದಲಾದ ಅಪವಾದ ಸೂತ್ರಗಳಿಂದ ಹೇಳಲಾದ ಪ್ರತ್ಯಯಗಳ ಜೊತೆಗೆ ಈ ಪ್ರತ್ಯಯಗಳು ಕೂಡಾ ಬರುವುದಕ್ಕಾಗಿ ಪ್ರಕೃತ ಸೂತ್ರವು ರಚಿಸಲಾಗಿದೆ. ಅಂದರೆ ಅಪವಾದ ಪ್ರತ್ಯಯಗಳು ಮತ್ತು ಈ ತ್ವ ಮತ್ತು ತಲ್ ಪ್ರತ್ಯಯಗಳು ಕೂಡಾ ಭಾವಾರ್ಥದಲ್ಲಿ ಬರುವವು ಎಂದು ತಿಳಿಯಬೇಕು. ಸೂತ್ರದಲ್ಲಿ ಮಾಡಿರುವ ಚ-ಕಾರ ಪ್ರಯೋಗದಿಂದ ಸ್ತ್ರೀ ಮತ್ತು ಪುಂಸ್ ಶಬ್ದಗಳ ನಂತರ "ಸ್ತ್ರೀಪುಂಸಾಭ್ಯಾಂ ನಞ್ಸ್ನಞೌ ಭವನಾತ್" ಎಂಬ ಸೂತ್ರದಿಂದ ಹೇಳಲಾಗಿರುವ ನಞ್ ಮತ್ತು ಸ್ನಞೌ ಗಳು ಭಾವಾರ್ಥದಲ್ಲೂ ಸಹ ಬರುತ್ತವೆ ಎಂದು ಹೇಳಿದಂತಾಗಿದೆ. ಸ್ತ್ರೀ ಶಬ್ದದ ನಂತರ ಭಾವಾರ್ಥದಲ್ಲಿ ನಞ್, ತ್ವ ಮತು ತಲ್ ಈ ಮೂರು ಪ್ರತ್ಯಯಗಳು ಬಂದು -ಸ್ತ್ರೈಣಮ್,ಸ್ತ್ರೀತ್ವಮ್ ಮತ್ತು ಸ್ತ್ರೀತಾ ಎಂಬ ಮೂರು ರೂಪಗಳನ್ನು ಸಿದ್ಧಗೊಳಿಸಿವೆ. ಇದೇ ರೀತಿಯಲ್ಲಿ ಪುಂಸ್ ಶಬ್ದದ ನಂತರ ಭಾವಾರ್ಥದಲ್ಲಿ ಮೇಲೆ ಹೇಳಿದ ಮೂರು ಪ್ರತ್ಯಯಗಳು ಬಂದು ಪೌಂಸ್ನಮ್, ಪುಂಸ್ತ್ವಮ್ ಮತ್ತು ಪುಂಸ್ತಾ ಎಂಬ ಮೂರು ರೂಪಗಳನ್ನು ಸಿದ್ಧಗೊಳಿಸಿವೆ.

**(ಇಮನಿಚ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1157. ಪೃಥ್ವಾದಿಭ್ಯ ಇಮನೀಜ್ವಾ ।(5.1.122)**

ವೃತ್ತಿ -ವಾ-ವಚನಮ್ ಅಣಾದಿ-ಸಮಾವೇಶಾರ್ಥಮ್।

ಪ. ಛೇ-ಪೃಥ್ವಾದಿಭ್ಯಃ, ಇಮನಿಚ್, ವಾ।

ಅ. ವೃ-"ತಸ್ಯ ಭಾವಸ್ತ್ವ-ತಲೌ" ಎಂಬ ಸೂತ್ರದಿಂದ ತಸ್ಯ ಮತ್ತು ಭಾವಃ ಎಂಬ ಎರಡು ಪದಗಳು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ಷಷ್ಠ್ಯಂತ ಸಮರ್ಥವಾದ ಪೃಥು ಮೊದಲಾದ ಶಬ್ದಗಳ ನಂತರ ಭಾವಾರ್ಥದಲ್ಲಿ 'ಇಮನಿಚ್' ಪ್ರತ್ಯಯವು ಬರುತ್ತದೆ.

ಇಲ್ಲಿ ವಾ ಎಂದು ಸೂತ್ರದಲ್ಲಿ ಹೇಳಿರುವುದರಿಂದ ವೈಕಲ್ಪಿಕವಾಗಿ ಅಣ್ ಮೊದಲಾದ ಪ್ರತ್ಯಯಗಳು ಬರುತ್ತವೆ. ಇಮನಿಚ್-ನಲ್ಲಿ ಇಮನ್ ಮಾತ್ರ ಉಳಿಯುತ್ತದೆ.

**(ರೇಫಾದೇಶವನ್ನು ವಿಧಿಸುವ ಸೂತ್ರ)**

**ಸೂತ್ರ-1158. ರ ಋತೋ ಹಲಾದೇರ್ಲಘೋಃ।(6.4.161)**

ವೃತ್ತಿ -ಹಲಾದೇರ್ಲಘೋರೃಕಾರಸ್ಯ ರಃ ಸ್ಯಾತ್। ಇಷ್ಠೇಯಸ್ಸು ಪರತಃ। ಪೃಥು-ಮೃದು-ಭೃಷ-ಕೃಷ-ದೃಢ-ಪರಿವೃಢಾನಾಮೇವ ರತ್ವಮ್।

ಪ. ಛೇ-ರಃ, ಋತಃ, ಹಲಾದೇಃ, ಲಘೋಃ।

ಅ. ವೃ.-"ತುರಿಷ್ಠೇಮೇಯಸ್ಸು" ಎಂಬ ಸೂತ್ರದಿಂದ ಇಷ್ಠೇಮೇಯಸ್ಸು ಎಂಬ ಪದವು ಅನುವೃತ್ತವಾಗುತ್ತದೆ. "ಅಂಗಸ್ಯ" ಎಂಬುದು ಅಧಿಕಾರ ಸೂತ್ರವಾಗಿದೆ.

ಅರ್ಥ-ಹಲಾದಿ ಅಂಗದ ಲಘು 'ಋ'ಕಾರಕ್ಕೆ 'ರ' ವರ್ಣವು ಆದೇಶವಾಗಿ ಬರುತ್ತದೆ-ಇಷ್ಠನ್, ಇಮನಿಚ್ ಮತ್ತು ಈಯಸುನ್ ಪ್ರತ್ಯಯಗಳು ಪರದಲ್ಲಿದ್ದಾಗ. (ಇಷ್ಠೇಮೇಯಸ್ಸು ಎಂದರೆ ಇಷ್ಠ+ಇಮ+ಈಯಸ್ಸು ಎಂದು ತಿಳಿಯಬೇಕು.)

ಪೃಥ್ವಾದಿ ಗಣದಲ್ಲಿ ಇರುವ ಎಲ್ಲ ಶಬ್ದಗಳಲ್ಲೂ 'ಋ'ಕಾರಕ್ಕೆ ರ ಆದೇಶವು ಬರುವುದಿಲ್ಲ. ವೃತ್ತಿಯಲ್ಲಿ ಹೇಳಿರುವ ಶಬ್ದಗಳಿಗೆ ಮಾತ್ರವೆಂದು ತಿಳಿಯಬೇಕು.

**(ಟಿ ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ-1159. ಟೇಃ।(6.4.155)**

ವೃತ್ತಿ -ಭಸ್ಯ ಟೇರ್ಲೋಪ ಇಷ್ಠೇಮೇಯಸ್ಸು। । ಪೃಥೋರ್ಭಾವ ಪ್ರಥಿಮಾ।

ಅ. ವೃ.-"ಭಸ್ಯ" ಎಂಬುದು ಅಧಿಕಾರ ಸೂತ್ರವಾಗಿದೆ. "ಅಲ್ಲೋಪೋನಃ" ಎಂಬ ಸೂತ್ರದಿಂದ ಲೋಪ ಎಂಬ ಪದವು ಮತ್ತು "ತುರಿಷ್ಠೇಮೇಯಸ್ಸು" ಎಂಬ ಸೂತ್ರದಿಂದ ಇಷ್ಠೇಮೇಯಸ್ಸು ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ-ಇಷ್ಠನ್, ಇಮನಿಚ್ ಮತ್ತು ಈಯಸುನ್ ಪ್ರತ್ಯಯಗಳು ಪರದಲ್ಲಿದ್ದಾಗ ಭ-ಸಂಜ್ಞೆಯುಳ್ಳ ಟಿ ಗೆ ಲೋಪವು ಬರುತ್ತದೆ.

**(ಅಣ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1160. ಇಗನ್ತಾಚ್ಚ ಲಘುಪೂರ್ವಾತ್ (5-1-131)**

ವೃತ್ತಿ-ಇಗನ್ತಾತ್ ಲಘುಪೂರ್ವಾತ್ ಪ್ರಾತಿಪದಿಕಾತ್ ಭಾವೇ ಅಣ್ ಪ್ರತ್ಯಯಃ। ಪಾರ್ಥಿವಮ್। ಮ್ರದಿಮಾ, ಮಾರ್ದವಮ್।

ಪ.ಚ್ಛೇ-ಇಗನ್ತಾತ್, ಚ , ಲಘುಪೂರ್ವಾತ್।

ಅ.ವೃ-"ತಸ್ಯ ಭಾವಸ್ತ್ವ-ತಲೌ" ಎಂಬ ಸೂತ್ರದಿಂದ ತಸ್ಯ ಮತ್ತು ಭಾವಃ ಎಂಬ ಎರಡು ಪದಗಳು ಅನುವೃತ್ತವಾಗುತ್ತದೆ. ಮತ್ತು "ಗುಣವಚನ ಬ್ರಾಹ್ಮಣಾದಿಭ್ಯಃ ಕರ್ಮಣಿಚ" ಎಂಬ ಸೂತ್ರದಿಂದ ಕರ್ಮಣಿ ಎಂಬ ಪದವು ಮತ್ತು "ಹಾಯನಾನ್ತ ಇವಾದಿಭ್ಯೋಣ್" ಎಂಬ ಸೂತ್ರದಿಂದ ಅಣ್ ಎಂಬ ಪದವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ–ಯಾವುದಕ್ಕೆ ಲಘು–ಅಕ್ಷರವು ಪೂರ್ವದಲ್ಲಿ ಇರುವುದೊ, ಮತ್ತು ಇಕ್ ಎಂಬುದು ಯಾವುದಕ್ಕೆ ಅಂತ್ಯವಾಗಿರುವುದೊ ಅಂತಹ ಷಷ್ಠ್ಯಂತ ಸಮರ್ಥ ಶಬ್ದದ ನಂತರ ಭಾವ ಮತ್ತು ಕರ್ಮಾರ್ಥಗಳಲ್ಲಿ ಅಣ್ ಪ್ರತ್ಯಯವು ಬರುತ್ತದೆ.

ಉದಾ–ಪ್ರಥಿಮಾ,ಪಾರ್ಥಿವಮ್, ಪೃಥುತ್ವಮ್ ಮತ್ತು ಪೃಥುತಾ–(ವಿಸ್ತಾರವಾಗಿರುವ ಭಾವ)–'ಪೃಥೋಃಭಾವಃ' ಎಂಬುದು ಲೌಕಿಕ ವಿಗ್ರಹವಾಕ್ಯ. ಪೃಥು+ಙಸ್ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಇಲ್ಲಿ "ಪೃಥ್ವಾದಿಭ್ಯ ಇಮನಿಜ್ವಾ" ಎಂಬ ಸೂತ್ರದಿಂದ ವೈಕಲ್ಪಿಕವಾಗಿ ಇಮನಿಚ್(ಇಮನ್) ಪ್ರತ್ಯಯವು ಬಂದು, ಪ್ರಾತಿಪದಿಕಸಂಜ್ಞೆ ಬಂದಮೇಲೆ "ಸುಪೋಧಾತುಪ್ರಾತಿಪದಿಕಯೋಃ" ಎಂಬ ಸೂತ್ರದಿಂದ ಸುಪ್–ಗೆ ಲುಕ್ ಬಂದು ಪೃಥು+ಇಮನ್ ಎಂದಿರುತ್ತದೆ. "ರ ಋತೋ ಹಲಾದೇರ್ಲಘೋಃ" ಎಂಬ ಸೂತ್ರದಿಂದ ಪೃಥು ಶಬ್ದದಲ್ಲಿರುವ 'ಋ' ಕಾರಕ್ಕೆ 'ರ' ಆದೇಶವು ಬಂದು ಪ್+ರ= ಪ್ರ ಎಂದಿದ್ದು ಪ್ರಥು+ಇಮನ್ ಎಂದಿರುತ್ತದೆ. "ಟೇಃ" ಎಂಬ ಸೂತ್ರದಿಂದ 'ಪ್ರಥು'ನಲ್ಲಿರುವ 'ಉ'ಕಾರಕ್ಕೆ (ಟಿ)ಗೆ ಲೋಪ ಬಂದು, ಪ್ರಥ್+ಇಮನ್= ಪ್ರಥಿಮನ್ ಎಂದಿರುತ್ತದೆ. 'ನ್'ಕಾರಕ್ಕೆ ಲೋಪಬಂದು ಉಪಧಾ ದೀರ್ಘವಾಗಿ ಪ್ರಥಿಮಾ ಎಂದು ರೂಪವು ಸಿದ್ಧವಾಗುತ್ತದೆ. ಇದು 'ನ್'ಕಾರಾನ್ತ ಪುಲ್ಲಿಂಗ ಶಬ್ದವಾಗಿದೆ. ಇಮನಿಚ್ ಪ್ರತ್ಯಯವು ವೈಕಲ್ಪಿಕವಾಗಿ ಇರುವುದರಿಂದ ಈ ಪ್ರತ್ಯಯಬಾರದ ಪಕ್ಷದಲ್ಲಿ "ಇಗನ್ತಾಚ್ಚ ಲಘುಪೂರ್ವಾತ್" ಎಂಬ ಸೂತ್ರದಿಂದ ಅಣ್ ಪ್ರತ್ಯಯವು ಬಂದು ಪ್ರಥು+ಅ ಎಂದಿರುತ್ತದೆ. ಇದಕ್ಕೆ ಆದಿವೃದ್ಧಿ ಬಂದು ಪಾರ್ಥು+ಅ ಎಂದಿರುತ್ತದೆ. "ಓರ್ಗುಣಃ" ಎಂಬ ಸೂತ್ರದಿಂದ ಉಕಾರಕ್ಕೆ 'ಓ'ಕಾರ ಬಂದು, ಪಾರ್ಥೋ+ಅ ಎಂದಿದ್ದಾಗ 'ಓ'ಕಾರಕ್ಕೆ ಅವಾದೇಶ ಬಂದು ಪಾರ್ಥವ ಎಂದಿದ್ದಾಗ, ಇದನ್ನು ಸುಬಂತ ಮಾಡಿದಾಗ ಪಾರ್ಥವಮ್ ಎಂದು ರೂಪವು ಸಿದ್ಧವಾಗುತ್ತದೆ. "ಆ ಚ ತ್ವಾತ್" ಎಂಬ ಸೂತ್ರದಿಂದ 'ತ್ವ' ಮತ್ತು 'ತಲ್' ಪ್ರತ್ಯಯಗಳು ಬರುವುದರಿಂದ, 'ತ್ವ' ಬಂದ ಪಕ್ಷದಲ್ಲಿ ಪೃಥುತ್ವಮ್ ಎಂದು ತಲ್ ಪ್ರತ್ಯಯ ಬಂದ ಪಕ್ಷದಲ್ಲಿ ಪೃಥುತಾ ಎಂದು ರೂಪವು ಸಿದ್ಧವಾಗುತ್ತವೆ.

**(ಷ್ಯಞ್–ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ–1161. ವರ್ಣದೃಢಾದಿಭ್ಯಃ ಷ್ಯಞ್ ಚ।(5.1.123)**

ವೃತ್ತಿ –ಚಾತ್ ಇಮನಿಚ್। ಶೌಕ್ಲ್ಯಮ್, ಶುಕ್ಲಿಮಾ। ದಾರ್ಢ್ಯಮ್, ದ್ರಢಿಮಾ।

ಪ. ಛೇ–ವರ್ಣದೃಢಾದಿಭ್ಯಃ, ಷ್ಯಞ್, ಚ।

ಅ. ವೃ–"ತಸ್ಯ ಭಾವಸ್ತ್ವ–ತಲೌ" ಎಂಬ ಸೂತ್ರದಿಂದ ತಸ್ಯ ಮತ್ತು ಭಾವಃ ಎಂಬ ಎರಡು ಪದಗಳು ಅನುವೃತ್ತವಾಗುತ್ತದೆ. ಸೂತ್ರದ ಚ–ಕಾರದಿಂದ ಹಿಂದಿನ ಸೂತ್ರವಾದ "ಪೃಥ್ವಾದಿಭ್ಯ ಇಮನಿಜ್ವಾ" ಎಂಬ ಸೂತ್ರದಲ್ಲಿರುವ ಇಮನಿಚ್ ಶಬ್ದವು ಗೃಹಿತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ –ಷಷ್ಠ್ಯನ್ತವಾದ ಬಣ್ಣವನ್ನು ಸೂಚಿಸುವ ಶಬ್ದಗಳ ನಂತರ ದೃಢಾದಿ

ಗಣಕ್ಕೆ ಸೇರಿದ ಸಮರ್ಥ ಶಬ್ದಗಳ ನಂತರ ಷ್ಯಙ್ ಪ್ರತ್ಯಯವೂ ಬರುವುದು. ಚ ಎಂದು ಸೂತ್ರದಲ್ಲಿ ಹೇಳಿರುವುದರಿಂದ ಇಮನಿಚ್ ಪ್ರತ್ಯಯವು ಬರುವುದು.

ಉದಾ-ಶೌಕ್ಲ್ಯಮ್, ಶುಕ್ಲಿಮಾ-(ಬಿಳಿತನ)-'ಶುಕ್ಲಸ್ಯ ಭಾವಃ' ಎಂಬುದು ಲೌಕಿಕ ವಿಗ್ರಹವಾಕ್ಯ. ಇಲ್ಲಿ ಭಾವಾರ್ಥದಲ್ಲಿ ಷ್ಯಙ್(ಯ) ಪ್ರತ್ಯಯವು ಬರುವುದರಿಂದ ಆದಿವೃದ್ಧಿ ಬಂದು ಶೌಕ್ಲ+ಜಸ್+ಯ ಎಂದಿದ್ದಾಗ ಸುಪ್ ಲೋಪವಾದ ಮೇಲೆ ಶೌಕ್ಲ ಎಂಬಲ್ಲಿರುವ ಅಂತ್ಯ 'ಅ'ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು ಶೌಕ್ಲ್+ಯ=ಶೌಕ್ಲ್ಯ ಎಂದಾಗಿ ಸುಬಂತವಾದ ಮೇಲೆ ಶೌಕ್ಲ್ಯಮ್ ಎಂದಾಗುತ್ತದೆ.

ಈ ಷ್ಯಙ್ ಪ್ರತ್ಯಯವು ಬಾರದ ಪಕ್ಷದಲ್ಲಿ ಇಮನೀಚ್(ಇಮನ್) ಪ್ರತ್ಯಯವು ಬಂದು ಶುಕ್ಲಿಮಾ ಎಂದು ರೂಪವು ಸಿದ್ಧವಾಗುತ್ತದೆ.

ಉದಾ-ದಾರ್ಢ್ಯಮ್, ದ್ರಢಿಮಾ-(ದೃಢತನ)-'ದೃಢಸ್ಯಭಾವಃ' ಎಂಬುದು ಲೌಕಿಕ ವಿಗ್ರಹವಾಕ್ಯ. ದೃಢ+ಜಸ್+ಷ್ಯಙ್ ಎಂಬುದು ಅಲೌಕಿಕ ವಿಗ್ರಹವಾಕ್ಯ. ಸುಪ್ ಲೋಪವಾದ ಮೇಲೆ ಆದಿವೃದ್ಧಿ ಬಂದು ಸುಬಂತ ವಾದಾಗ ದಾರ್ಢ್ಯಮ್ ಎಂದು ರೂಪವು ಸಿದ್ಧವಾಗುತ್ತದೆ. ಈ ಪ್ರತ್ಯಯವು ಬಾರದಿದ್ದಾಗ ಇಮನಿಚ್(ಇಮನ್) ಪ್ರತ್ಯಯ ಬಂದು 'ಋ' ಕಾರಕ್ಕೆ ರತ್ವ ಬಂದು ದ್ರಢಿಮಾ ಎಂದು ರೂಪವು ಸಿದ್ಧವಾಗುತ್ತದೆ.

**(ಷ್ಯಙ್ ಪ್ರತ್ಯಯವನ್ನು ವಿಧಿಸುವ ಮತ್ತೊಂದು ಸೂತ್ರ)**

**ಸೂತ್ರ-1162. ಗುಣವಚನ-ಬ್ರಾಹ್ಮಣಾದಿಭ್ಯಃ ಕರ್ಮಣಿ ಚ।(೫.1.124)**

ವೃತ್ತಿ-ಚಾತ್ ಭಾವೇ। ಜಡಸ್ಯ ಭಾವಃ ಕರ್ಮ ವಾ ಜಾಡ್ಯಮ್। ಮೂಢಸ್ಯ ಭಾವಃ ಕರ್ಮ ವಾ ಮೌಢ್ಯಮ್। ಬ್ರಾಹ್ಮಣ್ಯಮ್।ಆಕೃತಿಗಣೋಽಯಮ್।

ಅ.ವ್ಯ.-"ತಸ್ಯ ಭಾವಸ್ತ್ವ-ತಲೌ" ಎಂಬ ಸೂತ್ರದಿಂದ ತಸ್ಯ ಮತ್ತು ಭಾವಃ ಎಂಬ ಎರಡು ಪದಗಳು ಅನುವೃತ್ತವಾಗುತ್ತದೆ. "ವರ್ಣದೃಢಾದಿಭ್ಯಃ ಷ್ಯಙ್ ಚ" ಎಂಬ ಸೂತ್ರದಿಂದ ಷ್ಯಙ್ ಎಂಬ ಶಬ್ದವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ಷಷ್ಠ್ಯಂತ ಗುಣವಾಚಕ ಸಮರ್ಥ ಶಬ್ದಗಳು ಅಥವಾ ಬ್ರಾಹ್ಮಣಾದಿ ಗಣದಲ್ಲಿ ಹೇಳಿರುವ ಶಬ್ದಗಳ ನಂತರ ಭಾವ ಮತ್ತು ಕರ್ಮಾರ್ಥಗಳಲ್ಲಿ ಷ್ಯಙ್ ಪ್ರತ್ಯಯವು ಬರುತ್ತದೆ.

ಉದಾ-ಜಾಡ್ಯಮ್-(ಜಡ ಸ್ವಭಾವ)-'ಜಡಸ್ಯ ಭಾವಃ ಕರ್ಮ ವಾ' ಎಂಬುದು ಲೌಕಿಕ ವಿಗ್ರಹ ವಾಕ್ಯ ಜಡ+ಜಸ್ ಎಂಬುದು ಅಲೌಕಿಕ ವಿಗ್ರಹವಾಕ್ಯ ಪ್ರಕೃತ ಸೂತ್ರದಿಂದ ಷ್ಯಙ್(ಯ) ಪ್ರತ್ಯಯವನ್ನು ಸೇರಿಸಿದ ಮೇಲೆ, ಪ್ರಾತಿಪದಿಕವಾದಮೇಲೆ ಸುಪ್-ಗೆ ಲುಕ್ ಬಂದು ಜಡ+ಯ ಎಂದಿರುತ್ತದೆ. "ತದ್ಧಿತೇಷ್ವಚಾಮಾದೇಃ" ಎಂಬುದರಿಂದ ಆದಿವೃದ್ಧಿ ಬಂದು, ನಂತರ ಜಡ ಎಂಬುದರಲ್ಲಿರುವ ಅಂತ್ಯ 'ಅ' ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು, ಜಾಡ್+ಯ=ಜಾಡ್ಯ ಎಂದಾಗಿ ಸುಬಂತವಾದ

ಮೇಲೆ ಜಾಡ್ಯಮ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ–ಮೌಢ್ಯಮ್, ಜಾಡ್ಯಮ್ (ಮೂಢನ ಸ್ವಭಾವ ಅಥವಾ ಕರ್ಮ)–'ಮೂಢಸ್ಯ ಭಾವಃ ಕರ್ಮ ವಾ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಮೂಢ+ಙಸ್ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಹಿಂದಿನಂತೆ ಪ್ರಕ್ರಿಯೆ ನಡೆದು ಮೌಢ್+ಯ ಎಂದಿದ್ದಾಗ ಸುಬಂತವಾದ ಮೇಲೆ ನಪುಂಸಕ ಲಿಂಗದಲ್ಲಿ ಮೌಢ್ಯಮ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ–ಬ್ರಾಹ್ಮಣ್ಯಮ್(ಬ್ರಾಹ್ಮಣನ ಭಾವ ಅಥವಾ ಕರ್ಮ)–'ಬ್ರಾಹ್ಮಣಸ್ಯ ಭಾವಃ ಕರ್ಮ ವಾ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಬ್ರಾಹ್ಮಣ+ಙಸ್ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಹಿಂದಿನಂತೆ ಪ್ರಕ್ರಿಯೆ ನಡೆದು ಬ್ರಾಹ್ಮಣ್+ಯ ಎಂದಿದ್ದಾಗ ಸುಬಂತವಾದ ಮೇಲೆ ನಪುಂಸಕ ಲಿಂಗದಲ್ಲಿ ಬ್ರಾಹ್ಮಣ್ಯಮ್ ಎಂದು ರೂಪವು ಸಿದ್ಧವಾಗುತ್ತದೆ.

ಆಕೃತಿಗಣೋಽಯಮ್–ಅಂದರೆ ಪಾಣಿನಿಯವರಿಂದ ಪಠಿತವಾದ ಗಣಪಾಠದಲ್ಲಿ ಇಲ್ಲದಿರುವ ಶಬ್ದಗಳು ಪಠಿತವಾದ ಶಬ್ದಗಳ ಪ್ರಕ್ರಿಯೆಯನ್ನು ಅನುಸರಿಸಿ ರೂಪ ಸಿದ್ಧಿಯನ್ನು ಹೊಂದಿದ್ದರೆ ಅನುಕರಣೆಗೆ ಮೂಲವಾದ ಪಾಣಿನಿಯವರ ಗಣಪಾಠದ ಗಣವನ್ನು ಆಕೃತಿಗಣವೆಂದು ಹೇಳುತ್ತೇವೆ. ಇದನ್ನು ಶಕನ್ಧುಃ ಮೊದಲಾದ ಉದಾಹರಣೆಗಳಲ್ಲಿ ಮಾರ್ತಣ್ಡಃ ಎಂಬುದನ್ನು ಹೇಳುವಾಗ ಆಕೃತಿಗಣದ ಬಗ್ಗೆ ಸ್ಪಷ್ಟಪಡಿಸಲಾಗಿದೆ.

**(ಯ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ–1163. ಸಖ್ಯುರ್ಯಃ।(5.1.126)**

ವೃತ್ತಿ –ಸಖ್ಯುರ್ಭಾವಃ ಕರ್ಮ ವಾ ಸಖ್ಯಮ್।

ಪ. ಛೇ–ಸಖ್ಯುಃ, ಯಃ।

ಅ. ವೃ.–"ತಸ್ಯ ಭಾವಸ್ತ್ವ–ತಲೌ" ಎಂಬ ಸೂತ್ರದಿಂದ ತಸ್ಯ ಮತ್ತು ಭಾವಃ ಎಂಬ ಎರಡು ಪದಗಳು ಅನುವೃತ್ತವಾಗುತ್ತವೆ. ಹಾಗೂ "ಗುಣವಚನ–ಬ್ರಾಹ್ಮಣಾದಿಭ್ಯಃ ಕರ್ಮಣಿ ಚ" ಎಂಬ ಸೂತ್ರದಿಂದ ಕರ್ಮಣಿ ಎಂಬ ಪದವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ–ಷಷ್ಠ್ಯನ್ತವಾದ ಸಮರ್ಥ ಸಖಿ ಶಬ್ದದ ನಂತರ ಭಾವ ಅಥವಾ ಕರ್ಮ ಎಂಬ ಅರ್ಥದಲ್ಲಿ 'ಯ' ಪ್ರತ್ಯಯವು ಬರುತ್ತದೆ.

ಉದಾ–ಸಖ್ಯಮ್ (ಗೆಳೆತನ ಅಥವಾ ಗೆಳೆಯನ ಕರ್ಮ)–ಸಖಿ ಶಬ್ದದ ನಂತರ 'ಯ' ಪ್ರತ್ಯಯವು ಬಂದು ಸಖಿ ಶಬ್ದದಲ್ಲಿರುವ 'ಇ' ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು ನಪುಂಸಕ ಲಿಂಗದಲ್ಲಿ ಸಖ್ಯಮ್ ಎಂಬ ರೂಪವು ಸಿದ್ಧವಾಗುತ್ತದೆ.

**(ಢಕ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1164. ಕಪಿ-ಜ್ಞಾತ್ಯೋರ್ಢಕ್।(5.1.127)**

ವೃತ್ತಿ -ಕಾಪೇಯಮ್।ಜ್ಞಾತೇಯಮ್।

ಪ. ಛೇ-ಕಪಿಜ್ಞಾತ್ಯೋಃ, ಢಕ್।

ಅ. ವೃ.-"ತಸ್ಯ ಭಾವಸ್ತ್ವ-ತಲೌ" ಎಂಬ ಸೂತ್ರದಿಂದ ತಸ್ಯ ಮತ್ತು ಭಾವಃ ಎಂಬ ಎರಡು ಪದಗಳು ಅನುವೃತ್ತವಾಗುತ್ತವೆ. ಹಾಗೂ "ಗುಣವಚನ-ಬ್ರಾಹ್ಮಣಾದಿಭ್ಯಃ ಕರ್ಮಣಿ ಚ" ಎಂಬ ಸೂತ್ರದಿಂದ ಕರ್ಮಣಿ ಎಂಬ ಪದವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ಷಷ್ಠ್ಯನ್ತವಾದ ಕಪಿ ಮತ್ತು ಜ್ಞಾತಿ ಶಬ್ದಗಳ ನಂತರ ಭಾವ ಮತ್ತು ಕರ್ಮಾರ್ಥಗಳಲ್ಲಿ ಢಕ್ (ಢ್+ಅ) ಪ್ರತ್ಯಯವು ಬರುತ್ತದೆ. ಢ್-ಕಾರಕ್ಕೆ 'ಏಯ್' ಆದೇಶ ಬಂದು ಢ್+ಅ=ಎಯ್+ಅ ಎಂದಿರುತ್ತದೆ. 'ಏಯ್' ಆದೇಶವು "ಆಯನೇಯ... ಪ್ರತ್ಯಾಯಾದಿನಾಮ್" ಎಂಬ ಸೂತ್ರದಿಂದ ಬರುತ್ತದೆ.

ಉದಾ-ಕಾಪೇಯಮ್ (ಕಪಿಯ ಭಾವ ಅಥವಾ ಕರ್ಮ)-'ಕಪೇಃ ಭಾವಃ ಕರ್ಮವಾ' ಎಂಬುದು ಲೌಕಿಕ ವಿಗ್ರಹವಾಕ್ಯ. ಕಪಿ+ಙಸ್ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ಢಕ್(ಢ) (ಏಯ್+ಅ) ಪ್ರತ್ಯಯವು ಬಂದು, ಪ್ರಾತಿಪದಿಕವಾದ ಮೇಲೆ "ಸುಪೋಧಾತುಪ್ರಾತಿದಿಕಯೋಃ" ಎಂಬುದರಿಂದ ಸುಪ್ ಲೋಪವಾದ ಮೇಲೆ, ಕಪಿ+ಢ= ಕಪಿ+ಏಯ್+ಅ ಎಂದಿದ್ದಾಗ, ಆದಿವೃದ್ಧಿ ಬಂದು ಕಾಪಿ+ಏಯ್ ಎಂದಿದ್ದಾಗ, "ಯಸ್ಯೇತಿಚ" ಎಂಬುದರಿಂದ ಇ-ಕಾರ ಲೋಪವಾಗಿ ಕಾಪ್+ಏಯ ಎಂದಿದ್ದಾಗ ಸುಬಂತವಾದ ಮೇಲೆ ಕಾಪೇಯಮ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ-ಜ್ಞಾತೇಯಮ್ (ಬಂಧುತ್ವ ಅಥವಾ ಬಂದುವಿನ ಕರ್ಮ)-'ಜ್ಞಾತೇಃ ಭಾವಃ ಕರ್ಮವಾ' ಎಂಬುದು ಲೌಕಿಕ ವಿಗ್ರಹವಾಕ್ಯ. ಜ್ಞಾತಿ+ಙಸ್ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ಢಕ್(ಢ) (ಏಯ್+ಅ) ಪ್ರತ್ಯಯವು ಬಂದು, ಪ್ರಾತಿಪದಿಕವಾದ ಮೇಲೆ "ಸುಪೋಧಾತುಪ್ರಾತಿದಿಕಯೋಃ" ಎಂಬುದರಿಂದ 'ಸುಪ್' ಲೋಪವಾದ ಮೇಲೆ, ಜ್ಞಾತಿ+ಏಯ ಎಂದಿದ್ದಾಗ, 'ಜ್ಞಾ' ಎಂಬಲ್ಲಿ ಆದಿವೃದ್ಧಿ ಇದ್ದರೂ "ಕಿತಿಚ" ಎಂಬುದರಿಂದ ಮತ್ತೆ 'ಆ' ಕಾರಕ್ಕೆ 'ಆ' ಕಾರವೇ ಬಂದು ಜ್ಞಾತಿ+ಏಯ ಎಂದಿದ್ದಾಗ, "ಯಸ್ಯೇತಿಚ" ಎಂಬುದರಿಂದ ಇ-ಕಾರ ಲೋಪವಾಗಿ ಜ್ಞಾತ್+ಏಯ ಎಂದಿದ್ದಾಗ, ಸುಬಂತವಾದ ಮೇಲೆ ಜ್ಞಾತೇಯಮ್ ಎಂದು ರೂಪವು ಸಿದ್ಧವಾಗುತ್ತದೆ.

**(ಯಕ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1165. ಪತ್ಯನ್ತ-ಪುರೋಹಿತಾದಿಭ್ಯೋ ಯಕ್।(5.1.128)**

ವೃತ್ತಿ-ಸೈನಾಪತ್ಯಮ್। ಪೌರೋಹಿತ್ಯಮ್।

**(೮೪) ಇತಿ ತ್ವತಲೋರಧಿಕಾರಃ॥**

ಪ. ಥೇ-ಪತ್ಯನ್ತ-ಪುರೋಹಿತಾದಿಭ್ಯಃ,ಯಕ್

ಅ. ವೃ.-ತಸ್ಯ ಭಾವಸ್ತ್ವ-ತಲೌ ಎಂಬ ಸೂತ್ರದಿಂದ ತಸ್ಯ ಮತ್ತು ಭಾವಃ ಎಂಬ ಎರಡು ಪದಗಳು ಅನುವೃತ್ತವಾಗುತ್ತವೆ. ಹಾಗೂ "ಗುಣವಚನ-ಬ್ರಾಹ್ಮಣಾದಿಭ್ಯಃ ಕರ್ಮಣಿ ಚ" ಎಂಬ ಸೂತ್ರದಿಂದ ಕರ್ಮಣಿ ಎಂಬ ಪದವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ಪತಿ ಶಬ್ದವನು ್ನಅಂತ್ಯವಾಗಿಉಳ್ಳ ಅಥವಾ ಪುರೋಹಿತಾದಿ ಗಣಪಠಿತ ಷಷ್ಠ್ಯನ್ತ ಸಮರ್ಥ ಶಬ್ದಗಳ ನಂತರ ಯಕ್ (ಯ)ಪ್ರತ್ಯಯವು ಬರುತ್ತದೆ.

ಉದಾ-ಸೈನಾಪತ್ಯಮ್-(ಸೇನಾಪತಿಯ ಭಾವ ಅಥವಾ ಕರ್ಮ)-'ಸೈನಾಪತೇಃ ಭಾವಃ ಕರ್ಮವಾ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಸೈನಾಪತೇ+ಙಸ್ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಹಿಂದಿನ ಸೂತ್ರಗಳಲ್ಲಿ ನಡೆದ ಪ್ರಕ್ರಿಯೆಯಂತೆ ನಡೆದು ಸೇನಾಪತಿ+ಯ ಎಂದಿದ್ದಾಗ ಸೇ-ನಲ್ಲಿರುವ 'ಏ' ಕಾರಕ್ಕೆ ಆದಿವೃದ್ಧಿ ಬಂದು 'ಸೈ' ಎಂದಾದ ಮೇಲೆ ಅಂತ್ಯ 'ಇ' ಕಾರವು ಹಿಂದಿನಂತೆ ಲೋಪವಾಗಿ ಸೈನಾಪತ್+ಯ =ಸೈನಾಪತ್ಯ ಎಂದಾಗಿ ಸುಬಂತ ಮಾಡಿದಾಗ ನಪುಂಸಕ ಲಿಂಗದಲ್ಲಿ ಸೈನಾಪತ್ಯಮ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ-ಪೌರೋಹಿತ್ಯಮ್ (ಪುರೋಹಿತನ ಭಾವ ಅಥವಾ ಕರ್ಮ)-ಹಿಂದಿನಂತೆ ಪ್ರಕಿಯೆ ನಡೆದು ಪುರೋಹಿತ+ಯ ಎಂದಿದ್ದಾಗ ಆದಿವೃದ್ಧಿ ಬಂದು ಪೌರೋಹಿತ+ಯ ಎಂದಿದ್ದಾಗ ಪೌರೋಹಿತ ದಲ್ಲಿರುವ ಅಂತ್ಯ 'ಅ' ಕಾರವು "ಯಸ್ಯೇತಿಚ" ಎಂಬುದರಿಂದ ಲೋಪವಾಗಿ ಪೌರೋಹಿತ್+ಯ ಎಂದಿದ್ದಾಗ ಸುಬಂತವಾಗಿ ನಪುಂಸಕ ಲಿಂಗದಲ್ಲಿ ಪೌರೋಹಿತ್ಯಮ್ ಎಂದು ರೂಪವು ಸಿದ್ಧವಾಗುತ್ತದೆ.

**ಇತಿ ತ್ವತಲೋರಧಿಕಾರಃ (೮೪) ಪ್ರಕರಣವು ಮುಗಿಯಿತು**

# ಪ್ರಕರಣ-55: ಭವನಾದ್ಯರ್ಥಕಾಃ

**(ಸೂತ್ರ ಸಂಖ್ಯೆ 1166 ರಿಂದ 1186 ವರೆಗೆ)**

**(ಖಞ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1166. ಧಾನ್ಯಾನಾಂ ಭವನೇ ಕ್ಷೇತ್ರೇ ಖಞ್।(5.2.1)**

ವೃತ್ತಿ-ಭವತಿ ಅಸ್ಮಿನ್ ಇತಿ ಭವನಮ್। ಮುದ್ಗಾನಾಂ ಭವನಮ್ ಕ್ಷೇತ್ರಂ ಮೌದ್ಗೀನಮ್।

ಅ. ವೃ.-"ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ -'ಭವತಿ ಅಸ್ಮಿನ್ ಇತಿ' (ಇದರಲ್ಲಿ ಹುಟ್ಟುವುದು) ಎಂಬ ಅರ್ಥದಲ್ಲಿ 'ಭೂ' ಧಾತುವಿಗೆ ಲ್ಯುಟ್ ಪ್ರತ್ಯಯವನ್ನು ಸೇರಿಸಿದಾಗ ಭವನಮ್ ಎಂಬ ರೂಪವು ಸಿದ್ಧಿಸುತ್ತದೆ. ಇದಕ್ಕೆ ಉತ್ಪತ್ತಿಸ್ಥಾನವೆಂದು ಹೆಸರು. ಧಾನ್ಯವಾಚಕಗಳಾದ ಷಷ್ಠ್ಯಂತ ಶಬ್ದಗಳ ನಂತರ 'ಉತ್ಪತ್ತಿ ಸ್ಥಾನವೆಂಬ' ಅರ್ಥದಲ್ಲಿ ಖಞ್(ಖ) ಪ್ರತ್ಯಯವು ಬರುತ್ತದೆ. ಆ ಪ್ರತ್ಯಯಕ್ಕೆ ಈನ್ ಪ್ರತ್ಯಯವು ಆದೇಶವಾಗಿ ಬರುತ್ತದೆ.

ಉದಾ-ಮೌದ್ಗೀನಮ್-'ಮುದ್ಗಾನಾಂ ಭವನಮ್ ಕ್ಷೇತ್ರಂ' (ಹೆಸರುಕಾಳು ಉತ್ಪತ್ತಿಯಾಗುವ ಸ್ಥಳ) -ಷಷ್ಠ್ಯಂತವಾದ ಮುದ್ಗ ಶಬ್ದದ ನಂತರ ಪ್ರಕೃತ ಸೂತ್ರದಿಂದ ಖಞ್(ಖ) ಪ್ರತ್ಯಯವು ಬಂದು, ಆದಿವೃದ್ಧಿಯಾದ ಮೇಲೆ ಖ್-ಗೆ ಈನ್ ಆದೇಶವು ಬಂದು "ಯಸ್ಯೇತಿಚ" ಎಂಬುದರಿಂದ 'ಅ' ಕಾರಕ್ಕೆ ಲೋಪ ಬಂದ ಮೇಲೆ ಮೌದ್ಗೀನಮ್ ಎಂದು ರೂಪವು ಸಿದ್ಧವಾಗುತ್ತದೆ. (ಮುದ್ಗ+ಆಮ್+ಖಞ್=ಮುದ್ಗ +ಖಞ್=ಮುದ್ಗ+ಖ್+ಅ=ಮುದ್ಗ್+ಅ+ಈನ್= ಮೌದ್ಗ್+ಈನ+ ಸು=ಮೌದ್ಗೀನಮ್)

**(ಢಕ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1167. -ವ್ರೀಹಿಶಾಲ್ಯೋರ್ಢಕ್।(5.2.2)**

ವೃತ್ತಿ -ವ್ರೈಹೇಯಮ್।ಶಾಲೇಯಮ್।

ಪ. ಛೇ -ವ್ರೀಹಿಶಾಲ್ಯೋಃ, ಢಕ್।

ಅ.ವೃ. "ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ -ಷಷ್ಠ್ಯಂತವಾದ ವ್ರೀಹಿ ಮತ್ತು ಶಾಲಿ ಈ ಎರಡು ಸಮರ್ಥ ಶಬ್ದಗಳ ನಂತರ 'ಅದರ ಉತ್ಪತ್ತಿಸ್ಥಾನ' ವೆಂಬ ಅರ್ಥದಲ್ಲಿ ಢಕ್(ಢ) ಪ್ರತ್ಯಯವು ಬರುತ್ತದೆ. ಈ ಸೂತ್ರವು ಹಿಂದಿನ ಸೂತ್ರಕ್ಕೆ ಅಪವಾದವಾಗಿದೆ.

ಉದಾ-ವ್ರೈಹೇಯಮ್, ಶಾಲೇಯಮ್-'ಉತ್ಪತ್ತಿಸ್ಥಾನ'ವೆಂಬ ಅರ್ಥದಲ್ಲಿ ವ್ರೀಹಿ ಮತ್ತು ಶಾಲಿ ಶಬ್ದದ ನಂತರ ಢಕ್(ಢ) ಪ್ರತ್ಯಯವು ಬಂದು, ಆ 'ಢ್'-ಕಾರಕ್ಕೆ

ಏಯ್ ಪ್ರತ್ಯಯವು ಆದೇಶವಾಗಿ ಬಂದು ವ್ರೀಹಿ+ಏಯ್, ಶಾಲಿ+ಏಯ್ ಎಂದಿದ್ದಾಗ, "ಯಸ್ಯೇತಿಚ" ಎಂಬುದರಿಂದ ಇ-ಕಾರಗಳಿಗೆ ಲೋಪ ಬಂದು ವ್ರೀಹ್+ಏಯ್+ಅ, ಶಾಲ್+ಏಯ್+ಅ ಆದಿವೃದ್ಧಿ ಬಂದು ವ್ರೈಹೇಯ ಮತ್ತು ಶಾಲೇಯ ಎಂಬ ಪ್ರಾತಿಪದಿಕಗಳಾದ ಮೇಲೆ ಸುಬಂತ ಮಾಡಿದಾಗ ವ್ರೈಹೇಯಮ್, ಶಾಲೇಯಮ್ ಎಂಬ ರೂಪಗಳು ಸಿದ್ಧವಾಗುತ್ತವೆ.

**(ನಿಪಾತನವನ್ನು ಮಾಡುವ ಸೂತ್ರ)**

**ಸೂತ್ರ-1168. -ಹೈಯಙ್ಗವೀನಂ ಸಂಜ್ಞಾಯಾಮ್।(5.2.23)**

ವೃತ್ತಿ-ಹ್ಯೋಗೋದೋಹಶಬ್ದಸ್ಯ ಹಿಯಙ್ಗುರಾದೇಶಃ, ವಿಕಾರಾಽರ್ಥೇ ಖಞ್ ಚ ನಿಪಾತ್ಯತೇ। ದುಹ್ಯತ್ ಇತಿ ದೋಹಃ ಕ್ಷೀರಮ್।ಹ್ಯೋಗೋದೋಹಸ್ಯ ವಿಕಾರಃ-ಹೈಯಙ್ಗವೀನಂ ನವನೀತಮ್।

ಅರ್ಥ -ವಿಕಾರಾರ್ಥದಲ್ಲಿ ಷಷ್ಠ್ಯಂತವಾದ ಹ್ಯೋಗೋದೋಹ ಶಬ್ದಕ್ಕೆ 'ಹಿಯಙ್ಗು' ಎಂಬ ಶಬ್ದವು ಆದೇಶವಾಗಿ ಬರುತ್ತದೆ. ಮತ್ತು ಖಞ್ ಪ್ರತ್ಯಯವು ಬರುತ್ತದೆ.

ಉದಾ-ಹೈಯಙ್ಗವೀನಂ-ಇಲ್ಲಿ ಸಂಜ್ಞೆಯಾರ್ಥದಲ್ಲಿ ನಿಪಾತನ ಮಾಡಲಾಗಿದೆ. ದೋಹವೆಂದರೆ ಹಾಲು ಎಂದರ್ಥ ಗೋದೋಹಃ ಎಂದರೆ ಆಕಳಹಾಲು, ಹ್ಯೋಗೋದೋಹಃ ಎಂದರೆ ನಿನ್ನೆಯ ಆಕಳ ಹಾಲು 'ಹ್ಯೋಗೋದೋಹಸ್ಯ ವಿಕಾರಃ' ಎಂಬ ಅರ್ಥದಲ್ಲಿ ಪ್ರಕೃತ ಸೂತ್ರದಿಂದ ಖಞ್ ಪ್ರತ್ಯಯವು ಬಂದಿದೆ. ಹಿಯಙ್ಗು ಆದೇಶವು ಸಂಜ್ಞೆಯಾರ್ಥದಲ್ಲಿ ನಿಪಾತಮಾಡಲಾಗಿದೆ ಖ್ -ಕಾರಕ್ಕೆ ಈನ್ ಆದೇಶವು ಬಂದಿದೆ. ಇದರಲ್ಲಿ ಆದಿವೃದ್ಧಿ ಬಂದು 'ಭ'ಸಂಜ್ಞೆಯುಳ್ಳ 'ಉ'ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪಬಂದು ಹೈಯಙ್ಗವೀನಂ ಎಂಬ ಸುಬಂತ ಶಬ್ದವು ಸಿದ್ಧವಾಗಿದೆ. (ನಿನ್ನೆಯ ಹಾಲನ್ನು ಕಡೆದ ನಂತರ ತೆಗೆದುಕೊಂಡ ಬೆಣ್ಣೆ ಎಂದರ್ಥ.)

**(ಇತಚ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1169. -ತದಸ್ಯ ಸಞ್ಜಾತಂ ತಾರಕಾದಿಭ್ಯ ಇತಚ್।(5.2.36)**

ವೃತ್ತಿ -ತಾರಕಾಃ ಸಞ್ಜಾತಾ ಅಸ್ಯ ತಾರಕಿತಂ-ನಭಃ।ಪಣ್ಡಿತಃ।ಆಕೃತಿಗಣೋಽಯಮ್।

ಪ. ಛೇ-ತದಸ್ಯ, ಸಞ್ಜಾತಂ, ತಾರಕಾದಿಭ್ಯಃ, ಇತಚ್।

ಅ. ವ್ಯ. "ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-'ತತ್ ಅಸ್ಯ ಸಞ್ಜಾತಂ' (ಅದು ಇದಕ್ಕೆ ಸಂಬಂಧಿಸಿದ್ದು) ಎಂಬ ಅರ್ಥದಲ್ಲಿ ಪ್ರಥಮಾಂತಗಳಾದ ತಾರಕಾದಿ ಶಬ್ದಗಳ ನಂತರ ಇತಚ್(ಇತ) ಪ್ರತ್ಯಯವು ಬರುತ್ತದೆ. ತಾರಕಾದಿಗಳು ಎಂಬುದು ಪಾಣಿನಿಯವರ ಗಣಪಾಠಗಳಲ್ಲಿ ಒಂದಾಗಿದೆ. ಇದರಲ್ಲಿ ಕೆಲವು ಈ ಗಣದಲ್ಲಿ ಪಠಿತವಾದ ಶಬ್ದಗಳಾಗಿವೆ ಉಳಿದವು ಆಕೃತಿಗಣಗಳಾಗಿವೆ. ಇಲ್ಲಿಯೂ ಭ-ಸಂಜ್ಞೆಯುಳ್ಳ ಅಕ್ಷರಗಳಿಗೆ ಲೋಪವು ಬರುತ್ತದೆ. ಮತ್ತು ಆದಿವೃದ್ಧಿಗೆ

ಬೇಕಾದ ನಿಮಿತ್ತಗಳು ಇಲ್ಲದೇ ಇರುವುದರಿಂದ ಆದಿವೃದ್ಧಿಯು ಬರುವುದಿಲ್ಲ.

ಉದಾ-ತಾರಕಿತಂ-ನಭಃ (ಇದರಲ್ಲಿ ನಕ್ಷತ್ರಗಳು ಬಂದಿವೆ) 'ತಾರಕಾಃ ಅಸ್ಯ ಸಞ್ಜಾತಃ' ಎಂಬ ಅರ್ಥದಲ್ಲಿ ಪ್ರಥಮಾಂತ ತಾರಕಾ ಶಬ್ದದ ನಂತರ ಪ್ರಕೃತ ಸೂತ್ರದಿಂದ ಇತಚ್(ಇತ)ಪ್ರತ್ಯಯವು ಬರುತ್ತದೆ.

ಉದಾ-ಪಣ್ಡಿತಃ-(ಜ್ಞಾನವು ಇವನಿಗೆ ಬಂದಿದೆ) 'ಪಣ್ಡಾಃ ಅಸ್ಯ ಸಞ್ಜಾತಃ' ಎಂಬರ್ಥದಲ್ಲಿ ಪ್ರಥಮಾಂತ ಪಣ್ಡಾ ಶಬ್ದದ ನಂತರ ಪ್ರಕೃತ ಸೂತ್ರದಿಂದ ಇತಚ್(ಇತ)ಪ್ರತ್ಯಯವು ಬಂದಿದೆ. ತಾರಕಾದಿ ಗಣವು ಆಕೃತಿಗಣವಾಗಿದೆ.

**(ದ್ವಯಸಚ್ ಮೊದಲಾದ ಪ್ರತ್ಯಯಗಳನ್ನು ವಿಧಿಸುವ ಸೂತ್ರ)**

**ಸೂತ್ರ 1170. -ಪ್ರಮಾಣೇ ದ್ವಯಸಚ್-ದಘ್ನಞ್-ಮಾತ್ರಚಃ।(5.2.37)**

ವೃತ್ತಿ-ತದಸ್ಯ ಇತಿ ಅನುವರ್ತತೇ। ಊರು ಪ್ರಮಾಣಂ ಅಸ್ಯ -ಊರುದ್ವಯಸಮ್। ಊರುದಘ್ನಮ್।ಊರುಮಾತ್ರಮ್।

ಅ. ವೃ.-"ತದಸ್ಯ ಸಞ್ಜಾತಂ ತಾರಕಾದಿಭ್ಯ ಇತಚ್" ಎಂಬ ಸೂತ್ರದಿಂದ ತದ್ ಮತ್ತು ಅಸ್ಯ ಎಂಬ ಶಬ್ದಗಳು ಅನುವೃತ್ತವಾಗುತ್ತವೆ. "ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ :-ಅದು ಅದಕ್ಕೆ ಪ್ರಮಾಣ (ತತ್ ಅಸ್ಯ ಪ್ರಮಾಣಮ್) ಎಂಬರ್ಥದಲ್ಲಿ ಪ್ರಮಾಣವಾಚಕವಾದ ಪ್ರಥಮಾಂತ ಶಬ್ದದ ನಂತರ ದ್ವಯಸಚ್, ದಘ್ನಚ್ ಮತ್ತು ಮಾತ್ರಚ್ ಎಂಬ ಪ್ರತ್ಯಯಗಳು ಬರುತ್ತವೆ. ಇವುಗಳಲ್ಲಿ ಕೊನೆಯ 'ಚ್' ಕಾರವು ಇತ್ ಸಂಜ್ಞೆಯನ್ನು ಹೊಂದಿ ಲೋಪವಾಗಿ ದ್ವಯಸ, ದಘ್ನ ಮತ್ತು ಮಾತ್ರ ಎಂಬವು ಮಾತ್ರ ಉಳಿಯುತ್ತವೆ.

ಉದಾ-ಊರುದ್ವಯಸಮ್। ಊರುದಘ್ನಮ್। ಊರುಮಾತ್ರಮ್-(ತೊಡೆಯವರೆಗೆ ನೀರು ಎಂಬ ಅರ್ಥವನ್ನು ಹೇಳುತ್ತದೆ.)-'ಊರೂ ಪ್ರಮಾಣಮ್ ಅಸ್ಯ' ಎಂಬರ್ಥದಲ್ಲಿ ಪ್ರಥಮಾಂತವಾದ ಊರು ಶಬ್ದದ ನಂತರ ಮೇಲೆ ಹೇಳಿದ ಪ್ರತ್ಯಯಗಳು ಬಂದು ಊರುದ್ವಯಸಮ್। ಊರುದಘ್ನಮ್।ಊರುಮಾತ್ರಮ್ ಎಂಬ ರೂಪಗಳು ಸಿದ್ಧಿಸುತ್ತವೆ.

**(ವತುಪ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1171. -ಯತ್ತದೇತೇಭ್ಯಃ ಪರಿಮಾಣೇ ವತುಪ್।(5.2.39)**

ವೃತ್ತಿ -ಯತ್ ಪರಿಮಾಣಂ ಅಸ್ಯ -ಯಾವಾನ್। ತಾವಾನ್।ಎತಾವಾನ್।

ಅ. ವೃ.-"ತದಸ್ಯ ಸಞ್ಜಾತಂ ತಾರಕಾದಿಭ್ಯ ಇತಚ್" ಎಂಬ ಸೂತ್ರದಿಂದ ತದ್ ಮತ್ತು ಅಸ್ಯ ಎಂಬ ಶಬ್ದಗಳು ಅನುವೃತ್ತವಾಗುತ್ತವೆ "ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ -ಪರಿಮಾಣಾರ್ಥದಲ್ಲಿರುವ ಯದ್, ತದ್ ಮತ್ತು ಏತದ್ ಈ ಪ್ರಥಮಾಂತ ಪ್ರಾತಿಪದಿಕಗಳ ನಂತರ ಇದರ 'ಪರಿಮಾಣ ಇಷ್ಟು' ಎಂಬರ್ಥದಲ್ಲಿ ವತುಪ್(ವತ್) ಪ್ರತ್ಯಯವು ಬರುತ್ತದೆ.

ಸೂಚನೆ-ವತಿ ಪ್ರತ್ಯಯಾಂತವು ಅವ್ಯಯವಾಗಿರುತ್ತದೆ. ವತುಪ್ ಪ್ರತ್ಯಯಾಂತವು ಮೂರು ಲಿಂಗಗಳಲ್ಲೂ ರೂಪಗಳನ್ನು ಪಡೆಯುತ್ತವೆ.

ಉದಾ-ಯಾವಾನ್। ತಾವಾನ್। ಏತಾವಾನ್-'ಯತ್ ಪ್ರಮಾಣಮ್ ಅಸ್ಯ' ಎಂಬರ್ಥದಲ್ಲಿ ಯತ್ ಶಬ್ದಕ್ಕಿಂತ ಪರದಲ್ಲಿ ಪ್ರಕೃತ ಸೂತ್ರದಿಂದ ವತುಪ್(ವತ್) ಪ್ರತ್ಯಯವು ಬರುತ್ತದೆ. ಯತ್ ತತ್ ಎಂದಿರುವುದರಿಂದ "ಆ ಸರ್ವನಾಮಃ" ಎಂಬ ಸೂತ್ರದಿಂದ ಯತ್ ಶಬ್ದಕ್ಕೆ 'ಆ'ಕಾರವು ಅಂತಾದೇಶವಾಗಿ ಬರುವುದರಿಂದ ಯಾವತ್ ಪ್ರಾತಿಪದಿಕವು ಸಿದ್ಧಿಸುತ್ತದೆ. "ಉಗಿದಚಾಮ್ ಸರ್ವನಾಮಸ್ಥಾನೇಽಧಾತೋಃ" ಎಂಬ ಸೂತ್ರದಿಂದ ಪುಲ್ಲಿಂಗ ಪ್ರಥಮಾ ವಿಭಕ್ತಿ ಏಕವಚನದಲ್ಲಿ ನುಮ್ ಆಗಮವು ಬಂದು "ಅತ್ವಸಂತಸ್ಯ ಚಾಧಾತೋಃ" ಎಂಬ ಸೂತ್ರದಿಂದ ಉಪಧೆಗೆ ದೀರ್ಘಬಂದು ಯಾವಾನ್ ಎಂಬ ರೂಪವು ಸಿದ್ಧಿಸುತ್ತದೆ. ಇದೇ ರೀತಿಯಲ್ಲಿ ತತ್ ಮತ್ತು ಏತತ್ ಶಬ್ದಗಳ ನಂತರ ವತುಪ್(ವತ್) ಪ್ರತ್ಯಯವು ಬಂದು ತಾವಾನ್, ಏತಾವಾನ್ ಎಂದು ಸುಬಂತ ರೂಪಗಳಾಗುತ್ತವೆ.

**(ಕಿಮ್ ಮತ್ತು ಇದಮ್-ಗೆ ವತುಪ್ ಮತ್ತು ಘತ್ವವನ್ನು ವಿಧಿಸುವ ಸೂತ್ರ)**

**ಸೂತ್ರ-1172. -ಕಿಮಿದಂಭ್ಯಾಂ ವೋ ಘಃ।(5.2.40)**

ವೃತ್ತಿ -ಆಭ್ಯಾಂ ವತುಪ್, ವಕಾರಸ್ಯ ಘಶ್ಚ।

ಪ. ಛೇ-ಕಿಮಿದಂಭ್ಯಾಂ, ವಃ(ಷಷ್ಠಿ), ಘಃ।

ಅ. ವ್ಯ. -"ಯತ್ತದೇಭ್ಯಃ ಪರಿಮಾಣೇ ವತುಪ್" ಎಂಬ ಸೂತ್ರದಿಂದ ಪರಿಮಾಣೇ, **ವತುಪ್** ಎಂಬ ಶಬ್ದಗಳೂ ಹಾಗೇಯೇ "ತದಸ್ಯ ಸಞ್ಜಾತಂ ತಾರಕಾದಿಭ್ಯ ಇತಚ್" ಎಂಬ ಸೂತ್ರದಿಂದ ತದಸ್ಯ ಎಂಬ ಶಬ್ದವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ ಅರ್ಥ -'ಅದು ಇದರ ಪರಿಮಾಣ' ಎಂಬ ಅರ್ಥದಲ್ಲಿ ಕಿಮ್, ಇದಮ್ ಗಳನ್ನೇ ಪ್ರಾತಿಪದಿಕವಾಗಿರುವ ಪ್ರಥಮಾಂತ ಶಬ್ದಗಳ ಮೇಲೆ ವತುಪ್ ಪ್ರತ್ಯಯವು ಬರುತ್ತದೆ. ಮತ್ತು **ವತುಪ್** ಪ್ರತ್ಯಯದ ವ-ಕಾರಕ್ಕೆ 'ಘ' ಆದೇಶವು ಬರುತ್ತದೆ.

'ಕಿಮ್ ಪರಿಮಾಣಂ ಅಸ್ಯ' ಎಂಬರ್ಥದಲ್ಲಿ ವತುಪ್(ವತ್) ಬಂದು, 'ವ'ಕಾರಕ್ಕೆ 'ಘ'ಕಾರವು ಆದೇಶವಾಗಿ ಬಂದಾಗ ಆ ಘ-ಕಾರಕ್ಕೆ "ಆಯನ್-ಏಯ್-ಈನ್-ಈಯ್-ಇಯಃ" ಸೂತ್ರದಿಂದ ಇಯ್-ಆದೇಶ ಬಂದು ಕಿಮ್+ಈಯ್+ಅತ್= ಕಿಯತ್ ಎಂದು ಇದ್ದಾಗ, ಈ ಪ್ರಾತಿಪದಿಕಕ್ಕೆ ಮುಂದಿನ ಸೂತ್ರದಲ್ಲಿ ಆದೇಶವು ಹೇಳಲಾಗುತ್ತದೆ.

**(ಇದಮ್ ಮತ್ತು ಕಿಮ್ ಈಶ್ ಮತ್ತು ಕೀ ಆದೇಶಗಳನ್ನು ವಿಧಿಸುವ ಸೂತ್ರ)**

**ಸೂತ್ರ:-1173. -ಇದಂಕಿಮೋರೀಶ್-ಕೀ।(6.3.90)**

ವೃತ್ತಿ :-ದೃಗ್-ದೃಶ್-ವತುಷು ಇದಮಃ ಈಶ್, ಕಿಮಃ ಕೀ ಸ್ಯಾತ್। ಇಯಾನ್।ಕೀಯಾನ್।

ಪ. ಛೇ :-ಇದಂ-ಕಿಮೋಃ, ಈಶ್-ಕೀ।

ಅ.ವೃ :-"ದೃಗ್-ದೃಶ್-ವತುಷು" ಎಂಬ ಸೂತ್ರದಿಂದ ದೃಗ್-ದೃಶ್-ವತುಷು ಪದವು ಅನುವೃತ್ತವಾಗಿದೆ.

ಅರ್ಥ -ದೃಗ್-ದೃಶ್ ಶಬ್ದಗಳು ಮತ್ತು ವತುಪ್ ಪ್ರತ್ಯಯವು ಪರದಲ್ಲಿದ್ದಾಗ ಇದಮ್ ಶಬ್ದಕ್ಕೆ ಈಶ್ ಎಂಬ ಆದೇಶವು, ಕಿಮ್ ಶಬ್ದಕ್ಕೆ 'ಕಿ' ಆದೇಶವು ಬರುವುದು ವತುಪ್ ಪರದಲ್ಲಿದ್ದಾಗ ಕಿಮ್ ಶಬ್ದಕ್ಕೆ 'ಕೀ' ಆದೇಶ ಬಂದಾಗ ಕೀಯತ್ ಎಂದು ರೂಪವಾಗುತ್ತದೆ. ಇದಕ್ಕೆ ಸು-ಪ್ರತ್ಯಯವನ್ನು ಸೇರಿಸಿದಾಗ "ಹಲ್ಙ್ಯಾಭ್ಯೋ ಸುತಿಸ್ಯಪೃಕ್ತಂ ಹಲ್" ಎಂಬುದರಿಂದ ಲೋಪ ಬಂದು "ಸಂಯೋಗಾನ್ತಸ್ಯ ಲೋಪಃ" ಎಂಬುದರಿಂದ ಸಂಯೋಗಾಂತ ಲೋಪ ಬಂದು ಕೀಯಾನ್ ಎಂದು ರೂಪವು ಸಿದ್ಧವಾಗುತ್ತದೆ. ಇದೇ ರೀತಿಯಲ್ಲಿ 'ಇದಮ್ ಪ್ರಮಾಣಂ ಅಸ್ಯ' ಎಂಬ ಅರ್ಥದಲ್ಲಿ ಇದಮ್+ವತುಪ್ ಎಂದಾಗಿ, ಘ-ಗೆ ಈಯ್ ಆದೇಶ ಬಂದು, ಇದಮ್+ಈಯತ್ ಎಂದಾದ ಮೇಲೆ ಇದಮ್-ಗೆ ಈಶ್ ಆದೇಶವು ಬರುತ್ತದೆ ಇದು 'ಶಿತ್' ಆಗಿರುವುದರಿಂದ ಸರ್ವಾದೇಶವಾಗಿ ಈ+ಇಯತ್ ಎಂದಾದ ಮೇಲೆ "ಯಸ್ಯೇತಿಚ" ಎಂಬುದರಿಂದ ಈ-ಕಾರಕ್ಕೆ ಲೋಪಬಂದು ಇಯತ್ ಎಂದು ಪ್ರಾತಿಪದಿಕವಾಗುತ್ತದೆ. ಮೇಲಿನ ಪ್ರಕ್ರಿಯೆಯಂತೆ ಇದಕ್ಕೆ ಸು ಪ್ರತ್ಯಯವನ್ನು ಸೇರಿಸಿದಾಗ ಈಯಾನ್ ಎಂದು ರೂಪವು ಸಿದ್ಧವಾಗುತ್ತದೆ.

**(ತಯಪ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ 1174. ಸಂಖ್ಯಾಯಾ ಅವಯವೇ ತಯಪ್।(5.2.42)**

ವೃತ್ತಿ -ಪಞ್ಚ ಅವಯವಾ ಅಸ್ಯ -ಪಞ್ಚತಯಮ್।

ಅ. ವೃ.-"ತದಸ್ಯ ಸಞ್ಜಾತಂ ತಾರಕಾದಿಭ್ಯ ಇತಚ್" ಎಂಬ ಸೂತ್ರದಿಂದ ತದಸ್ಯ ಎಂಬ ಶಬ್ದವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ

ಅರ್ಥ-ಅವಯವಾರ್ಥದಲ್ಲಿ ಇರುವ ಸಂಖ್ಯಾವಾಚಕ ಪ್ರಾತಿಪದಿಕದ ನಂತರ ಅದು ಇದರ ಅವಯವ ಎಂಬರ್ಥದಲ್ಲಿ ತಯಪ್ (ತಯ) ಪ್ರತ್ಯಯವು ಬರುತ್ತದೆ.

ಉದಾ-ಪಞ್ಚತಯಮ್-'ಐದು ಅವಯವಗಳು ಇದಕ್ಕೆ ಇರುವವು' ಎಂಬ ಅರ್ಥದಲ್ಲಿ ತಯಪ್ ಪ್ರತ್ಯಯವು ಬಂದು, ಪಞ್ಚನ್+ತಯಪ್ ಎಂದಿದ್ದಾಗ, "ನಲೋಪಃ ಪ್ರಾತಿಪದಿಕಾಂತಸ್ಯ" ಎಂಬ ಸೂತ್ರದಿಂದ ಪದಸಂಜ್ಞೆ ಹೊಂದಿರುವ ಪಞ್ಚನ್ ಶಬ್ದದ 'ನ್' ಕಾರಕ್ಕೆ ಲೋಪ ಬಂದು, ಅದನ್ನು ಸುಬಂತ ಮಾಡಿದಾಗ ಪಞ್ಚತಯಮ್

ಎಂದು ರೂಪವು ಸಿದ್ಧವಾಗುತ್ತದೆ.

**(ತಯಪ್-ಗೆ ಅಯಚ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ 1175. –ದ್ವಿತ್ರಿಭ್ಯಾಂ ತಯಸ್ಯಾಯಚ್ ವಾ।(5.2.43)**

ವೃತ್ತಿ –ದ್ವಯಮ್, ದ್ವಿತಯಮ್। ತ್ರಯಂ, ತ್ರಿತಯಮ್।

ಪ. ಛೇ –ದ್ವಿತ್ರಿಭ್ಯಾಂ, ತಯಸ್ಯ, ಅಯಚ್, ವಾ।

ಅರ್ಥ–ದ್ವಿ ಮತ್ತು ತ್ರಿ ಎಂಬ ಪ್ರಾತಿಪದಿಕಗಳ ನಂತರ ಇರುವ ತಯಪ್-ಗೆ ವೈಕಲ್ಪಿಕವಾಗಿ ಅಯಚ್(ಅಯ)ಆದೇಶವು ಬರುತ್ತದೆ.

ಉದಾ–ದ್ವಯಮ್–ದ್ವಿತಯಮ್, ತ್ರಯಂ, ತ್ರಿತಯಮ್–'ದ್ವೌ ಅವಯವೌ ಅಸ್ಯ' ಎಂಬ ಅರ್ಥದಲ್ಲಿ ದ್ವಿ+ತಯ ಎಂದಿದ್ದಾಗ, ತಯಪ್(ತಯ)ಗೆ ಅಯಚ್(ಅಯ) ಆದೇಶ ಬಂದು ದ್ವಿ+ಅಯ ಎಂದಿದ್ದಾಗ, "ಯಸ್ಯೇತಿಚ" ಎಂಬುದರಿಂದ ಭ-ಸಂಜ್ಞೆಯಕ 'ಈ' ಕಾರಕ್ಕೆ ಲೋಪ ಬಂದು ದ್ವಯಮ್ ಎಂದು ರೂಪವಾಗುತ್ತದೆ. ವೈಕಲ್ಪಿಕವಾಗಿ ಅಯಚ್(ಅಯ) ಬಾರದಿದ್ದಾಗ, ದ್ವಿತಯಮ್ ರೂಪವು ಸಿದ್ಧವಾಗುತ್ತದೆ.

'ತ್ರಯಃ ಅವಯವಾಃ ಅಸ್ಯ' ಎಂಬ ಅರ್ಥದಲ್ಲಿ ಹಿಂದಿನಂತೆ ಪ್ರಕ್ರಿಯೆ ನಡೆದು ತ್ರಯಂ, ತ್ರಿತಯಮ್ ಎಂದು ರೂಪಗಳು ಸಿದ್ಧವಾಗುತ್ತದೆ.

**(ಅಯಚ್ ಆದೇಶವನ್ನು ನಿತ್ಯವಾಗಿ ವಿಧಿಸುವ ಸೂತ್ರ)**

**ಸೂತ್ರ–1176. –ಉಭಾದುದಾತ್ತೋ ನಿತ್ಯಮ್।(5.2.44)**

ವೃತ್ತಿ –ಉಭ ಶಬ್ದಾತ್ ತಯಪಃ ಅಯಚ್ ಸ್ಯಾತ್ ಸಚ ಆದ್ಯುದಾತ್ತಃ।ಉಭಯಮ್।

ಪ. ಛೇ–ಉಭಾತ್, ಉದಾತ್ತಃ, ನಿತ್ಯಮ್।

ಅ. ವೃ. –"ದ್ವಿತ್ರಿಭ್ಯಾಂ ತಯಸ್ಯಾಯಚ್ ವಾ" ಎಂಬ ಸೂತ್ರದಿಂದ ತಯಸ್ಯ ಮತ್ತು ಅಯಚ್ ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ –'ಉಭ' ಎಂಬ ಪ್ರಾತಿಪದಿಕದ ನಂತರ ಇರುವ ತಯಪ್-ಗೆ ನಿತ್ಯವಾಗಿ ಅಯಚ್(ಅಯ) ಆದೇಶವು ಬರುತ್ತದೆ. ಮತ್ತು ಅದು ಆದ್ಯುದಾತ್ತವಾಗಿರುತ್ತದೆ.

ಉದಾ–ಉಭಯಮ್–'ಉಭೌ ಅವಯವೌ ಅಸ್ಯ' (ಇದಕ್ಕೆ ಎರಡು ಅವಯವಗಳು ಇವೆ) ಎಂಬುದು ಲೌಕಿಕ ವಿಗ್ರಹ ವಾಕ್ಯ. ಉಭ+ಔ ಎಂಬುದು ಅಲೌಕಿಕ ವಿಗ್ರಹ ವಾಕ್ಯ. "ಸಂಖ್ಯಾಯಾ ಅವಯವೇ ತಯಪ್" ಎಂಬ ಸೂತ್ರದಿಂದ ತಯಪ್(ತಯ) ಪ್ರತ್ಯಯವು ಬಂದು ಪ್ರಕೃತ ಸೂತ್ರದಿಂದ ತಯ ಶಬ್ದಕ್ಕೆ ಅಯಚ್(ಅಯ) ಆದೇಶವು ಬಂದು ಪ್ರಾತಿಪದಿಕ ಸಂಜ್ಞೆ ಬಂದ ಮೇಲೆ ಸುಪ್-ಗೆ ಲೋಪ ಬಂದು, ಉಭ+ಅಯ ಎಂದಿರುತ್ತದೆ. ಉಭ ಎಂಬಲ್ಲಿರುವ 'ಅ' ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು, ಉಭ+ಅಯ=ಉಭಯ ಎಂದಾದ ಮೇಲೆ 'ಸು' ಪ್ರತ್ಯಯವನ್ನು ಸೇರಿಸಿದಾಗ ನಪುಂಸಕ ಲಿಂಗದಲ್ಲಿ ಉಭಯಮ್ ಎಂದು ರೂಪವು ಸಿದ್ಧವಾಗುತ್ತದೆ.

**(ಇದಮ್ ಮತ್ತು ಕಿಮ್ ಈಶ್ ಮತ್ತು ಕೀ ಆದೇಶಗಳನ್ನು ವಿಧಿಸುವ ಸೂತ್ರ)**

**ಸೂತ್ರ:-1173. -ಇದಂಕಿಮೋರೀಶ್-ಕೀ।(6.3.90)**

ವೃತ್ತಿ :-ದೃಗ್-ದೃಶ್-ವತುಷು ಇದಮಃ ಈಶ್, ಕಿಮಃ ಕೀ ಸ್ಯಾತ್। ಇಯಾನ್।ಕೀಯಾನ್।

ಪ. ಛೇ :-ಇದಂ-ಕಿಮೋಃ, ಈಶ್-ಕೀ।

ಅ.ವೃ :-"ದೃಗ್-ದೃಶ್-ವತುಷು" ಎಂಬ ಸೂತ್ರದಿಂದ ದೃಗ್-ದೃಶ್-ವತುಷು ಪದವು ಅನುವೃತ್ತವಾಗಿದೆ.

ಅರ್ಥ -ದೃಗ್-ದೃಶ್ ಶಬ್ದಗಳು ಮತ್ತು ವತುಪ್ ಪ್ರತ್ಯಯವು ಪರದಲ್ಲಿದ್ದಾಗ ಇದಮ್ ಶಬ್ದಕ್ಕೆ ಈಶ್ ಎಂಬ ಆದೇಶವು, ಕಿಮ್ ಶಬ್ದಕ್ಕೆ 'ಕಿ' ಆದೇಶವು ಬರುವುದು ವತುಪ್ ಪರದಲ್ಲಿದ್ದಾಗ ಕಿಮ್ ಶಬ್ದಕ್ಕೆ 'ಕೀ' ಆದೇಶ ಬಂದಾಗ ಕೀಯತ್ ಎಂದು ರೂಪವಾಗುತ್ತದೆ. ಇದಕ್ಕೆ ಸು-ಪ್ರತ್ಯಯವನ್ನು ಸೇರಿಸಿದಾಗ "ಹಲ್ಙ್ಯಾಭ್ಯೋ ಸುತಿಸ್ಯಪೃಕ್ತಂ ಹಲ್" ಎಂಬುದರಿಂದ ಲೋಪ ಬಂದು "ಸಂಯೋಗಾನ್ತಸ್ಯ ಲೋಪಃ" ಎಂಬುದರಿಂದ ಸಂಯೋಗಾಂತ ಲೋಪ ಬಂದು ಕೀಯಾನ್ ಎಂದು ರೂಪವು ಸಿದ್ಧವಾಗುತ್ತದೆ. ಇದೇ ರೀತಿಯಲ್ಲಿ 'ಇದಮ್ ಪ್ರಮಾಣಂ ಅಸ್ಯ' ಎಂಬ ಅರ್ಥದಲ್ಲಿ ಇದಮ್+ವತುಪ್ ಎಂದಾಗಿ, ಘ-ಗೆ ಈಯ್ ಆದೇಶ ಬಂದು, ಇದಮ್+ಈಯತ್ ಎಂದಾದ ಮೇಲೆ ಇದಮ್-ಗೆ ಈಶ್ ಆದೇಶವು ಬರುತ್ತದೆ ಇದು 'ಶಿತ್' ಆಗಿರುವುದರಿಂದ ಸರ್ವಾದೇಶವಾಗಿ ಈ+ಇಯತ್ ಎಂದಾದ ಮೇಲೆ "ಯಸ್ಯೇತಿಚ" ಎಂಬುದರಿಂದ ಈ-ಕಾರಕ್ಕೆ ಲೋಪಬಂದು ಇಯತ್ ಎಂದು ಪ್ರಾತಿಪದಿಕವಾಗುತ್ತದೆ. ಮೇಲಿನ ಪ್ರಕ್ರಿಯೆಯಂತೆ ಇದಕ್ಕೆ ಸು ಪ್ರತ್ಯಯವನ್ನು ಸೇರಿಸಿದಾಗ ಈಯಾನ್ ಎಂದು ರೂಪವು ಸಿದ್ಧವಾಗುತ್ತದೆ.

**(ತಯಪ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ 1174. ಸಂಖ್ಯಾಯಾ ಅವಯವೇ ತಯಪ್।(5.2.42)**

ವೃತ್ತಿ -ಪಞ್ಚ ಅವಯವಾ ಅಸ್ಯ -ಪಞ್ಚತಯಮ್।

ಅ. ವೃ.-"ತದಸ್ಯ ಸಞ್ಜಾತಂ ತಾರಕಾದಿಭ್ಯ ಇತಚ್" ಎಂಬ ಸೂತ್ರದಿಂದ ತದಸ್ಯ ಎಂಬ ಶಬ್ದವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ

ಅರ್ಥ-ಅವಯವಾರ್ಥದಲ್ಲಿ ಇರುವ ಸಂಖ್ಯಾವಾಚಕ ಪ್ರಾತಿಪದಿಕದ ನಂತರ ಅದು ಇದರ ಅವಯವ ಎಂಬರ್ಥದಲ್ಲಿ ತಯಪ್ (ತಯ) ಪ್ರತ್ಯಯವು ಬರುತ್ತದೆ.

ಉದಾ-ಪಞ್ಚತಯಮ್-'ಐದು ಅವಯವಗಳು ಇದಕ್ಕೆ ಇರುವವು' ಎಂಬ ಅರ್ಥದಲ್ಲಿ ತಯಪ್ ಪ್ರತ್ಯಯವು ಬಂದು, ಪಞ್ಚನ್+ತಯಪ್ ಎಂದಿದ್ದಾಗ, "ನಲೋಪಃ ಪ್ರಾತಿಪದಿಕಾಂತಸ್ಯ" ಎಂಬ ಸೂತ್ರದಿಂದ ಪದಸಂಜ್ಞೆ ಹೊಂದಿರುವ ಪಞ್ಚನ್ ಶಬ್ದದ 'ನ್' ಕಾರಕ್ಕೆ ಲೋಪ ಬಂದು, ಅದನ್ನು ಸುಬಂತ ಮಾಡಿದಾಗ ಪಞ್ಚತಯಮ್

ಎಂದು ರೂಪವು ಸಿದ್ಧವಾಗುತ್ತದೆ.

**(ತಯಪ್-ಗೆ ಅಯಚ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ 1175. -ದ್ವಿತ್ರಿಭ್ಯಾಂ ತಯಸ್ಯಾಯಚ್ ವಾ।(5.2.43)**

ವೃತ್ತಿ -ದ್ವಯಮ್, ದ್ವಿತಯಮ್। ತ್ರಯಂ, ತ್ರಿತಯಮ್।

ಪ. ಛೇ -ದ್ವಿತ್ರಿಭ್ಯಾಂ, ತಯಸ್ಯ, ಅಯಚ್, ವಾ।

ಅರ್ಥ-ದ್ವಿ ಮತ್ತು ತ್ರಿ ಎಂಬ ಪ್ರಾತಿಪದಿಕಗಳ ನಂತರ ಇರುವ ತಯಪ್-ಗೆ ವೈಕಲ್ಪಿಕವಾಗಿ ಅಯಚ್(ಅಯ)ಆದೇಶವು ಬರುತ್ತದೆ.

ಉದಾ-ದ್ವಯಮ್-ದ್ವಿತಯಮ್, ತ್ರಯಂ, ತ್ರಿತಯಮ್-'ದ್ವೌ ಅವಯವೌ ಅಸ್ಯ' ಎಂಬ ಅರ್ಥದಲ್ಲಿ ದ್ವಿ+ತಯ ಎಂದಿದ್ದಾಗ, ತಯಪ್(ತಯ)ಗೆ ಅಯಚ್(ಅಯ) ಆದೇಶ ಬಂದು ದ್ವಿ+ಅಯ ಎಂದಿದ್ದಾಗ, "ಯಸ್ಯೇತಿಚ" ಎಂಬುದರಿಂದ ಭ-ಸಂಜ್ಞೆಯಕ 'ಈ' ಕಾರಕ್ಕೆ ಲೋಪ ಬಂದು ದ್ವಯಮ್ ಎಂದು ರೂಪವಾಗುತ್ತದೆ. ವೈಕಲ್ಪಿಕವಾಗಿ ಅಯಚ್(ಅಯ) ಬಾರದಿದ್ದಾಗ, ದ್ವಿತಯಮ್ ರೂಪವು ಸಿದ್ಧವಾಗುತ್ತದೆ.

'ತ್ರಯಃ ಅವಯವಾಃ ಅಸ್ಯ' ಎಂಬ ಅರ್ಥದಲ್ಲಿ ಹಿಂದಿನಂತೆ ಪ್ರಕ್ರಿಯೆ ನಡೆದು ತ್ರಯಂ, ತ್ರಿತಯಮ್ ಎಂದು ರೂಪಗಳು ಸಿದ್ಧವಾಗುತ್ತದೆ.

**(ಅಯಚ್ ಆದೇಶವನ್ನು ನಿತ್ಯವಾಗಿ ವಿಧಿಸುವ ಸೂತ್ರ)**

**ಸೂತ್ರ-1176. -ಉಭಾದುದಾತ್ತೋ ನಿತ್ಯಮ್।(5.2.44)**

ವೃತ್ತಿ -ಉಭ ಶಬ್ದಾತ್ ತಯಪಃ ಅಯಚ್ ಸ್ಯಾತ್ ಸಚ ಆದ್ಯುದಾತ್ತಃ।ಉಭಯಮ್।

ಪ. ಛೇ-ಉಭಾತ್, ಉದಾತ್ತಃ, ನಿತ್ಯಮ್।

ಅ. ವೃ. -"ದ್ವಿತ್ರಿಭ್ಯಾಂ ತಯಸ್ಯಾಯಜ್ ವಾ" ಎಂಬ ಸೂತ್ರದಿಂದ ತಯಸ್ಯ ಮತ್ತು ಅಯಚ್ ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ -'ಉಭ' ಎಂಬ ಪ್ರಾತಿಪದಿಕದ ನಂತರ ಇರುವ ತಯಪ್-ಗೆ ನಿತ್ಯವಾಗಿ ಅಯಚ್(ಅಯ) ಆದೇಶವು ಬರುತ್ತದೆ. ಮತ್ತು ಅದು ಆದ್ಯುದಾತ್ತವಾಗಿರುತ್ತದೆ.

ಉದಾ-ಉಭಯಮ್-'ಉಭೌ ಅವಯವೌ ಅಸ್ಯ' (ಇದಕ್ಕೆ ಎರಡು ಅವಯವಗಳು ಇವೆ) ಎಂಬುದು ಲೌಕಿಕ ವಿಗ್ರಹ ವಾಕ್ಯ. ಉಭ+ಔ ಎಂಬುದು ಅಲೌಕಿಕ ವಿಗ್ರಹ ವಾಕ್ಯ. "ಸಂಖ್ಯಾಯಾ ಅವಯವೇ ತಯಪ್" ಎಂಬ ಸೂತ್ರದಿಂದ ತಯಪ್(ತಯ) ಪ್ರತ್ಯಯವು ಬಂದು ಪ್ರಕೃತ ಸೂತ್ರದಿಂದ ತಯ ಶಬ್ದಕ್ಕೆ ಅಯಚ್(ಅಯ) ಆದೇಶವು ಬಂದು ಪ್ರಾತಿಪದಿಕ ಸಂಜ್ಞೆ ಬಂದ ಮೇಲೆ ಸುಪ್-ಗೆ ಲೋಪ ಬಂದು, ಉಭ+ಅಯ ಎಂದಿರುತ್ತದೆ. ಉಭ ಎಂಬಲ್ಲಿರುವ 'ಅ' ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು, ಉಭ+ಅಯ=ಉಭಯ ಎಂದಾದ ಮೇಲೆ 'ಸು' ಪ್ರತ್ಯಯವನ್ನು ಸೇರಿಸಿದಾಗ ನಪುಂಸಕ ಲಿಂಗದಲ್ಲಿ ಉಭಯಮ್ ಎಂದು ರೂಪವು ಸಿದ್ಧವಾಗುತ್ತದೆ.

(ಪೂರಣಾರ್ಥದಲ್ಲಿ ಡಟ್ ಪ್ರತ್ಯಯವನ್ನು ವಿಧಿಸುವ ಸೂತ್ರ)

**ಸೂತ್ರ-1177. -ತಸ್ಯ ಪೂರಣೇ ಡಟ್।(5.2.48)**

ವೃತ್ತಿ -ಏಕಾದಶಾನಾಂ ಪೂರಣಃ -ಏಕಾದಶಃ।

ಅ. ವೃ.-"ಸಂಖ್ಯಾಯಾ ಗುಣಸ್ಯ ನಿಮಾನೆ ಮಯಟ್" ಎಂಬ ಸೂತ್ರದಿಂದ ಸಂಖ್ಯಾಯಾಃ ಎಂಬ ಪದವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ -ಸಂಖ್ಯಾವಾಚಕ ಷಷ್ಠ್ಯಂತ ಪ್ರಾತಿಪದಿಕದ ನಂತರ ಪೂಣಾರ್ಥದಲ್ಲಿ ಡಟ್(ಅ) ಪ್ರತ್ಯಯವು ಬರುತ್ತದೆ.

ಉದಾ-ಏಕಾದಶಃ-ಹನ್ನೊಂದನೆಯ ಸಂಖ್ಯೆಯನ್ನು ಪೂರ್ಣ ಮಾಡುವವನು (ಹನ್ನೊಂದನೆಯವನು) 'ಏಕಾದಶಾನಾಮ್ ಪೂರಣಃ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಏಕಾದಶನ್+ಆಮ್ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ಡಟ್(ಅ) ಬಂದು ಪ್ರಾತಿಪದಿಕವಾದ ಮೇಲೆ, 'ಸುಪ್'-ಗೆ ಲೋಪ ಬಂದು ಏಕಾದಶನ್+ಅ ಎಂದಿರುತ್ತದೆ. ಇದರಲ್ಲಿ ಅನ್ ಎಂಬ 'ಟಿ' ಗೆ ಲೋಪ ಬಂದು ಏಕಾದಶ್+ಅ= ಏಕಾದಶ ಎಂದಾದ ಮೇಲೆ 'ಸು' ಪ್ರತ್ಯಯವನ್ನು ಸೇರಿಸಿದಾಗ ರುತ್ವ ವಿಸರ್ಗಗಳಾಗಿ ಏಕಾದಶಃ ಎಂಬ ರೂಪವು ಸಿದ್ಧವಾಗುತ್ತದೆ.

(ಮಟ್-ಆಗಮವನ್ನು ವಿಧಿಸುವ ಸೂತ್ರ)

**ಸೂತ್ರ-1178. -ನಾನ್ತಾದಸಂಖ್ಯಾದೇರ್ಮಟ್।(5.2.49)**

ವೃತ್ತಿ -ಡಟಃ ಮಟ್-ಆಗಮಃ। ಪಞ್ಚಾನಾಂ ಪೂರಣಃ ಪಞ್ಚಮಃ।ನಾನ್ತಾತ್ ಕಿಮ್?ವಿಂಶಃ

ಪ. ಛೇ -ನಾನ್ತಾತ್, ಅಸಂಖ್ಯಾದೇಃ, ಮಟ್।

ಅ.ವೃ.-"ತಸ್ಯ ಪೂರಣೇ ಡಟ್" ಎಂಬ ಸೂತ್ರದಿಂದ ಷಷ್ಠಿವಿಭಕ್ತಿಗೆ ವಿಪರಿಣಾಮಗೊಳಿಸಿದ ನಂತರ ಡಟಃ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ -ಯಾವುದರ ಆದಿಯಲ್ಲಿ ಸಂಖ್ಯಾ ಶಬ್ದವು ಇರುವುದಿಲ್ಲವೋ ಅಂತಹ ನ್-ಕಾರಾನ್ತ ಸಂಖ್ಯಾವಾಚಕ ಪ್ರಾತಿಪದಿಕದ ನಂತರ ಇರುವ ಡಟ್(ಅ)-ಗೆ ಮಟ್(ಮ) ಆಗಮವು ಬರುತ್ತದೆ.

ಉದಾ-ಪಞ್ಚಮಃ-'ಪಞ್ಚಾನಾಂ ಪೂರಣಃ' ಎಂಬರ್ಥದಲ್ಲಿ ಪೂರ್ವಸೂತ್ರದಿಂದ ಷಷ್ಠ್ಯಂತವಾದ ಪಞ್ಚನ್ ಶಬ್ದದ ನಂತರ ಡಟ್(ಅ) ಪ್ರತ್ಯಯವು ಬರುತ್ತದೆ. ಡಟ್(ಅ) ಗೆ ಪ್ರಕೃತ ಸೂತ್ರದಿಂದ ಮಟ್(ಮ) ಆಗಮವು ಬಂದು ಪಞ್ಚಮಃ ಎಂದು ರೂಪವು ಸಿದ್ಧವಾಗುತ್ತದೆ.

ವಿವರಣೆ-ಪಞ್ಚನ್ ಶಬ್ದವು ನಕಾರಾನ್ತವಾಗಿದೆ. ಇದರ ಪೂರ್ವದಲ್ಲಿ ಸಂಖ್ಯಾವಾಚಕ

ಶಬ್ದವು ಇಲ್ಲ. ಇದನ್ನೇ ಅಸಂಖ್ಯಾದೇಃ ಎಂಬುದರಿಂದ ಹೇಳಿದ್ದಾರೆ.

**(ತಿ-ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ-1179. -ತಿ ವಿಂಶತೇರ್ಡಿತಿ।(6.4.142)**

ವೃತ್ತಿ -ವಿಂಶತೇಃ ಭಸ್ಯ ತಿ ಶಬ್ದಸ್ಯ ಲೋಪೋ ಡಿತಿ ಪರೇ। ವಿಂಶಃ। ಅಸಂಖ್ಯಾದೇಃ ಕಿಮ್? ಏಕಾದಶಃ।

ಪ. ಛೇ-ತಿ(ಲುಪ್ತ ಷಷ್ಠೀಕ), ವಿಂಶತೇಃ, ಡಿತಿ।

ಅ. ವೃ. -"ಅಲ್ಲೋಪೋನಃ" ಎಂಬ ಸೂತ್ರದಿಂದ ಲೋಪಃ ಎಂಬ ಪದವು ಅನುವೃತ್ತವಾಗುತ್ತದೆ. "ಭಸ್ಯ" ಎಂಬುದು ಅಧಿಕಾರ ಸೂತ್ರವಾಗಿದೆ.

ಅರ್ಥ -ಡಿತ್ ಪರದಲ್ಲಿದ್ದಾಗ ವಿಂಶತಿ ಶಬ್ದದ ಅವಯವವಾದ ಭ-ಸಂಜ್ಞೆಯುಳ್ಳ ತಿ-ಗೆ ಲೋಪವು ಬರುತ್ತದೆ.

ಉದಾ-ವಿಂಶಃ-'ವಿಂಶತೇಃ' ಪೂರಣಃ ಎಂಬರ್ಥದಲ್ಲಿ ಷಷ್ಠ್ಯಂತವಾದ ವಿಂಶತಿ ಶಬ್ದದ ನಂತರ "ತಸ್ಯ ಪೂರಣೇ ಡಟ್" ಎಂಬ ಸೂತ್ರದಿಂದ ಡಟ್(ಅ) ಪ್ರತ್ಯಯವು ಬಂದು ಪ್ರಕೃತ ಸೂತ್ರದಿಂದ ತಿ-ಲೋಪವಾಗುತ್ತದೆ. ಆಗ ವಿಂಶ+ಅ ಎಂದಿದ್ದಾಗ "ಅತೋಗುಣೇ" ಎಂಬ ಸೂತ್ರದಿಂದ ಪರರೂಪವು ಬಂದು, ರುತ್ವ-ವಿಸರ್ಗಗಳಿಂದ ವಿಂಶಃ ಎಂದು ಸುಬಂತ ರೂಪವು ಸಿದ್ಧವಾಗುತ್ತದೆ.

ಉದಾ-'ಅಸಂಖ್ಯಾದೇಃ ಕಿಮ್' ಎಂಬ ಪ್ರಶ್ನೆಗೆ ಉತ್ತರ ಹಿಂದಿನ ಸೂತ್ರದಲ್ಲಿ ಸಂಖ್ಯಾವಾಚಕ ಶಬ್ದವು ಪೂರ್ವದಲ್ಲಿ ಇಲ್ಲದೆ ಇರುವ ನಕಾರಾಂತ ಸಂಖ್ಯಾವಾಚಕ ಶಬ್ದದ ನಂತರ ಡಟ್(ಅ) ಗೆ ಮಡಾಗಮ ಬರುವದೆಂದು ಹೇಳಿದ್ದರಿಂದ, ಏಕಾದಶಃ ಎಂಬಲ್ಲಿ ಏಕಾದಶನ್ ಎಂಬುದು 'ನ್'ಕಾರಾಂತ ಸಂಖ್ಯಾವಾಚಕವಾಗಿದ್ದರೂ ಅದರ ಆದಿಯಲ್ಲಿ ಏಕ ಎಂಬ ಸಂಖ್ಯಾವಾಚಕ ಶಬ್ದವು ಇರುವುದರಿಂದ ಮಡಾಗಮವು ಬರುವುದಿಲ್ಲ. ಏಕಾದಶಃ ಎಂದೇ ರೂಪವು ಇರುತ್ತದೆ.

**(ಥುಕ್ ಆಗಮವನ್ನು ವಿಧಿಸುವ ಸೂತ್ರ)**

**ಸೂತ್ರ-1180. -ಷಟ್-ಕತಿ-ಕತಿಪಯ ಚತುರಾಂ ಥುಕ್।(5.2.51)**

ವೃತ್ತಿ -ಏಷಾಂ ಥುಕ್-ಆಗಮಃ ಸ್ಯಾತ್ ಡಟಿ। ಷಣ್ಣಾಮ್ ಪೂರಣಃ -ಷಷ್ಠಃ। ಕತಿಥಃ। ಕತಿಪಯ ಶಬ್ದಸ್ಯ ಅಸಂಖ್ಯಾತ್ವೇ ಅಪಿ ಯತ ಏವ ಜ್ಞಾಪಕಾತ್ ಡಟ್। ಕತಿಪಯಥಃ। ಚತುರ್ಥಃ।

ಅ. ವೃ.-"ತಸ್ಯ ಪೂರಣೇ ಡಟ್" ಎಂಬ ಸೂತ್ರದಿಂದ ವಿಭಕ್ತಿ ವಿಪರಿಣಾಮ ಮಾಡಿದ ಮೇಲೆ ಡಟಿ ಎಂಬ ಪದವು ಅನುವೃತ್ತವಾಗಿದೆ.

ಅರ್ಥ-ಷಷ್, ಕತಿ, ಕತಿಪಯ ಮತ್ತು ಚತುರ್ ಶಬ್ದಗಳ ನಂತರ ಡಟ್(ಅ) ಪ್ರತ್ಯಯವು ಬಂದಾಗ, ಥುಕ್(ಥ್) ಆಗಮವು ಬರುತ್ತದೆ. ಇದು 'ಕಿತ್' ಆಗಿರುವುದರಿಂದ ಅಂತ್ಯಾವಯವವಾಗಿ ಬರುತ್ತದೆ.

ಉದಾ–ಷಷ್ಠಃ–'ಷಣ್ಣಾಮ್ ಪೂರಣಃ' ಎಂಬರ್ಥದಲ್ಲಿ ಷಷ್ಠ್ಯಂತವಾದ ಷಷ್ಪ ಶಬ್ದದ ನಂತರ ಡಟ್(ಅ) ಪ್ರತ್ಯಯವು ಬರುತ್ತದೆ. ಷಷ್ಪ+ಅ ಎಂದಿರುತ್ತದೆ ಪ್ರಕೃತ ಸೂತ್ರದಿಂದ ಡಟ್(ಅ) ಗೆ ಥುಕ್(ಥ್) ಆಗಮವು ಬಂದು ಷಷ್ಪ+ಥ್+ಅ ಎಂದಿದ್ದಾಗ, ಥ್–ಕಾರಕ್ಕೆ ಷ್ಟುತ್ವ ಸಂಧಿಯಿಂದ ಠ್ ಕಾರವು ಬಂದು ಷಷ್ಠಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ–ಕತಿಥಃ–'ಕತಿನಾಮ್ ಪೂರಣಃ' ಎಂಬರ್ಥದಲ್ಲಿ ಷಷ್ಠ್ಯಂತವಾದ ಕತಿ ಶಬ್ದದ ನಂತರ ಡಟ್(ಅ) ಬಂದು ಕತಿ ಶಬ್ದಕ್ಕೆ ಪ್ರಕೃತ ಸೂತ್ರದಿಂದ ಥುಕ್(ಥ್)ಆಗಮವು ಬಂದು ಕತಿಥಃ ಎಂದು ಸುಬಂತ ರೂಪವು ಸಿದ್ಧವಾಗುತ್ತದೆ.

ಉದಾ–'ಕತಿಪಯಥಃ ಕತಿಪಯನಾಮ್ ಪೂರಣಃ' ಎಂಬರ್ಥದಲ್ಲಿ ಡಟ್(ಅ) ಪ್ರತ್ಯಯವು ಬರುತ್ತದೆ. ಕತಿಪಯ ಶಬ್ದವು ಸಂಖ್ಯಾವಾಚಕವಲ್ಲದ್ದರಿಂದ ಡಟ್(ಅ) ಪ್ರತ್ಯಯವು ಬರುವ ಅವಕಾಶವಿಲ್ಲ; ಆದರೂ ಡಟ್(ಅ) ಪರವಾದಾಗ ಕತಿಪಯ ಶಬ್ದಕ್ಕೆ ಥುಕ್(ಥ್) ಆಗಮವು ಬರುತ್ತದೆ ಎಂದು ಪ್ರಕೃತ ಸೂತ್ರವು ಹೇಳಿರುವುದರಿಂದ ಬಂದಿದೆ ಎಂದು ತಿಳಿಯಬೇಕು. ಹೀಗೆ ಡಟ್(ಅ) ಪ್ರತ್ಯಯ ಬಂದ ಮೇಲೆ ಪ್ರಕೃತ ಸೂತ್ರದಿಂದ ಥುಕ್(ಥ್) ಆಗಮವು ಬಂದು ಕತಿಪಯಥಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ–'ಚತುರ್ಥಃ :ಚತುರ್ಣಾಮ್ ಪೂರಣಃ' ಎಂಬರ್ಥದಲ್ಲಿ ಷಷ್ಠ್ಯಂತ ಚತುರ್ ಶಬ್ದದ ನಂತರ ಡಟ್(ಅ) ಪ್ರತ್ಯಯವು ಬಂದು ಪ್ರಕೃತ ಸೂತ್ರದಿಂದ ಥುಕ್(ಥ್) ಆಗಮವು ಬಂದು ಚತುರ್ಥಃ ಎಂದು ರೂಪವು ಸಿದ್ಧವಾಗಿದೆ.

**(ತೀಯ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ–1181.–ದ್ವೇಸ್ತೀಯಃ॥ (5.2.54)**

ವೃತ್ತಿ –ಡಟಃ ಅಪವಾದಃ॥ ದ್ವಯೋಃ ಪೂರಣಃ–ದ್ವಿತೀಯಃ॥

ಪ. ಛೇ–ದ್ವೇಃ, ತೀಯಃ॥

ಅ.ವ್ಯ.–'ಸಂಖ್ಯಾಯಾಗುಣಸ್ಯನಿಮಾನೇ ಮಯಟ್' ಎಂಬ ಸೂತ್ರದಿಂದ ಸಂಖ್ಯಾಯಾಃ ಎಂಬ ಪದವು ಮತ್ತು "ತಸ್ಯ ಪೂರಣೇ ಡಟ್" ಎಂಬ ಸೂತ್ರದಿಂದ ತಸ್ಯ ಮತ್ತು ಪೂರಣೇ ಎಂಬ ಶಬ್ದಗಳು ಅನುವೃತ್ತವಾಗುತ್ತವೆ. "ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ –ಪೂರಣಾರ್ಥದಲ್ಲಿ ಷಷ್ಠ್ಯಂತ ದ್ವಿ ಶಬ್ದದ ನಂತರ ತೀಯ ಪ್ರತ್ಯಯವು ಬರುತ್ತದೆ.

ಉದಾ–'ದ್ವಿತೀಯಃ ದ್ವಯೋಃ ಪೂರಣಃ' ಎಂಬರ್ಥದಲ್ಲಿ ಷಷ್ಠ್ಯಂತವಾದ ದ್ವಿ ಶಬ್ದದ ನಂತರ "ತಸ್ಯ ಪೂರಣೇ ಡಟ್" ಎಂಬ ಸೂತ್ರದಿಂದ ಬರಬೇಕಾದ ಡಟ್(ಅ) ಪ್ರತ್ಯಯವನ್ನು ಬಾಧಿಸಿ ಪ್ರಕೃತ ಸೂತ್ರದಿಂದ ತೀಯ–ಪ್ರತ್ಯಯವು ಬಂದು ಸುಬಂತವಾದ ಮೇಲೆ ದ್ವಿತೀಯಃ ಎಂದು ರೂಪವು ಸಿದ್ಧವಾಗುತ್ತದೆ.

**(ತೀಯ ಪ್ರತ್ಯಯವನ್ನು ಮತ್ತು ಸಂಪ್ರಸಾರಣವನ್ನು ವಿಧಿಸುವ ಸೂತ್ರ)**

**ಸೂತ್ರ 1182 –ತ್ರೇಃ ಸಂಪ್ರಸಾರಣಂ ಚ।(5.2.55)**

ವೃತ್ತಿ –ತೃತೀಯಃ।

ಪ. ಛೇ–ತ್ರೇಃ, ಸಂಪ್ರಸಾರಣಮ್, ಚ।

ಅ. ವೃ.–"ದ್ವೇಸ್ತೀಯಃ" ಎಂಬ ಸೂತ್ರದಿಂದ ತೀಯಃ ಎಂಬ ಪದವು "ಸಂಖ್ಯಾಯಾಗುಣಸ್ಯನಿಮಾನೇ ಮಯಟ್" ಎಂಬ ಸೂತ್ರದಿಂದ ಸಂಖ್ಯಾಯಾಃ ಎಂಬ ಪದವು ಮತ್ತು "ತಸ್ಯಪೂರಣೇ ಡಟ್" ಎಂಬ ಸೂತ್ರದಿಂದ ತಸ್ಯ ಮತ್ತು ಪೂರಣೇ ಎಂಬ ಶಬ್ದಗಳು ಅನುವೃತ್ತವಾಗುತ್ತವೆ. ಇಲ್ಲಿ ತ್ರೀ ಶಬ್ದವು ಒಮ್ಮೆ ಷಷ್ಠ್ಯಂತವಾಗಿಯೂ ಮತ್ತೊಮ್ಮೆ ಪ್ರಥಮಾಂತವಾಗಿಯೂ ಆವೃತ್ತಿಮಾಡಿಕೊಳ್ಳಲಾಗಿದೆ.

ಅರ್ಥ –ತ್ರೀ ಶಬ್ದದ ನಂತರ ಪೂಣಾರ್ಥದಲ್ಲಿ ತೀಯ ಪ್ರತ್ಯಯವು ಬರುತ್ತದೆ. ಜೊತೆಗೇನೆ ತ್ರೀ ಗೆ ಸಂಪ್ರಸಾರಣವೂ ಬರುತ್ತದೆ.

ಉದಾ–ತೃತೀಯಃ (ಮೂರನೇಯವನು)–'ತ್ರಯಣಾಂಪೂರಣಃ' ಎಂಬುದು ಲೌಕಿಕ ವಿಗ್ರಹವಾಕ್ಯ ತ್ರಿ+ಆಮ್ ಎಂಬುದು ಅಲೌಕಿಕ ವಿಗ್ರಹವಾಕ್ಯ ಪ್ರಕೃತ ಸೂತ್ರದಿಂದ ತೀಯ ಪ್ರತ್ಯಯ ಮತ್ತು ತ್+ರ್+ಇ=ತ್ರಿ ಎಂಬಲ್ಲಿ ರೇಫದ ಸ್ಥಾನದಲ್ಲಿ ಸಂಪ್ರಸಾರಣವಾದ ಋ–ಕಾರವು ಬಂದು ತ್+ಋ=ತೃತೀಯ ಎಂದಾದ ಮೇಲೆ ಆ ಪ್ರಾತಿಪದಿಕಕ್ಕೆ ಸುಪ್ ಲೋಪ ಬಂದ ಮೇಲೆ ತೃತೀಯ ಎಂದಾಗಿ ಅದನ್ನು ಸುಬಂತಮಾಡಿದಾಗ ತೃತೀಯಃ ಎಂದು ರೂಪವು ಸಿದ್ಧವಾಗುತ್ತದೆ.

**(ನಿಪಾತನವನ್ನು ವಿಧಿಸುವ ಸೂತ್ರ)**

**ಸೂತ್ರ –1183. –ಶ್ರೋತ್ರಿಯಶ್ಛನ್ದೋऽಧೀತೇ।(5.2.84)**

ವೃತ್ತಿ –ಶ್ರೋತ್ರಿಯಃ। ವೇತಿ ಅನುವೃತ್ತೇಃ ಛಾನ್ದಸಃ।

ಪ. ಛೇ –ಶ್ರೋತ್ರಿಯನ್, ಛನ್ದಃ, ಅಧೀತೇ।

ಅರ್ಥ –'ತತ್ಅಧೀತೇ' (ಅದನ್ನು ಅಧ್ಯಯನ ಮಾಡುತ್ತಾನೆ) ಎಂಬ ಅರ್ಥದಲ್ಲಿ ಛಂದಸ್ ಶಬ್ದಕ್ಕೆ ಶ್ರೋತ್ರ ಆದೇಶವು ಮತ್ತು ಘನ್ (ಘ) ಪ್ರತ್ಯಯವು ನಿಪಾತನ ಮಾಡಲಾಗಿದೆ.

ಉದಾ–'ಶ್ರೋತ್ರಿಯಃ' (ವೇದವನ್ನು ಅಧ್ಯಯನ ಮಾಡುವವನು) ಎಂಬ ಅರ್ಥದಲ್ಲಿ ಛಂದಸ್+ಅಂ ನಂತರ "ತದಧೀತೇ ತದ್‌ವೇದ" ಎಂಬ ಸೂತ್ರದಿಂದ ಅಣ್ ಬರಬೇಕಾಗಿತ್ತು; ಅದನ್ನು ಭಾದಿಸಿ ಪ್ರಕೃತ ಸೂತ್ರದಿಂದ ಛಂದಸ್–ಗೆ ಶ್ರೋತ್ರ ಆದೇಶ ಬಂದು ಮತ್ತು ಘನ್(ಘ) ಪ್ರತ್ಯಯವನ್ನು ನಿಪಾತನ ಮಾಡಲಾಗಿದೆ. ಆಗ ಘ್–ಗೆ "ಆಯನೇಯೀನೀಯಿಯಃ ಫಢಖಛಘಾಮ್ ಪ್ರತ್ಯಯಾದಿನಾಮ್" ಎಂಬ ಸೂತ್ರದಿಂದ ಇಯ್ ಆದೇಶ ಬಂದು ಶ್ರೋತ್ರ+ಇಯ್+ಅ ಎಂದಿದ್ದಾಗ ಶ್ರೋತ್ರ ಶಬ್ದದಲ್ಲಿರುವ ಭ–ಸಂಜ್ಞೆಯುಳ್ಳ 'ಅ' ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು

ಶ್ರೋತ್‌ರ್+ಇಯ ಎಂದಿದ್ದಾಗ ಅದನ್ನು ಸುಬಂತ ಮಾಡಿದಾಗ ಶ್ರೋತ್ರಿಯಃ ಎಂಬ ರೂಪವು ಸಿದ್ಧವಾಗುತ್ತದೆ. ನಿಪಾತನವಾಗದ ಪಕ್ಷದಲ್ಲಿ "ತದಧೀತೇ ತದ್‌ವೇದ" ಎಂಬ ಸೂತ್ರದಿಂದ ಅಣ್ ಪ್ರತ್ಯಯವು ಬಂದು ಛಾನ್ದಸಃ ಎಂಬ ರೂಪವು ಸಿದ್ಧವಾಗುತ್ತದೆ

**(ಇನಿ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1184. -ಪೂರ್ವಾದಿನಿಃ।(5.2.86)**

ವೃತ್ತಿ -ಪೂರ್ವಂ ಕೃತಮ್ ಅನೇನ ಪೂರ್ವೀ।

ಪ. ಛೇ-ಪೂವಾತ್, ಇನಿಃ।

ಅ. ವೃ.-"ಶ್ರಾದ್ಧಮನೇನಭುಕ್ತಮಿನಿಠನೌ" ಎಂಬ ಸೂತ್ರದಿಂದ ಅನೇನ ಎಂಬ ಪದವು ಅನುವೃತ್ತವಾಗಿದೆ. "ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ

ಅರ್ಥ -ಕ್ರಿಯಾವಿಶೇಷಣವಾಗಿರುವ ಪೂರ್ವ ಶಬ್ದದ ನಂತರ ಅನೇನ ಅಥವಾ ಕೃತಾರ್ಥದಲ್ಲಿ ಇನಿ (ಇನ್) ಪ್ರತ್ಯಯವು ಬರುತ್ತದೆ.

ಉದಾ-ಪೂರ್ವೀ (ಮೊದಲು ಮಾಡಿದವನು)-'ಪೂರ್ವಂಕೃತಂ ಅನೇನ ಪೂರ್ವೀ' ಎಂಬುದು ವಿಗ್ರಹ ವಾಕ್ಯ. ಪೂರ್ವ+ಅಂ ಎಂದಿದ್ದಾಗ, ಪ್ರಕೃತ ಸೂತ್ರದಿಂದ ಇನಿ (ಇನ್) ಪ್ರತ್ಯಯವು ಬಂದು, ಪ್ರಾತಿಪದಿಕವಾದ ಮೇಲೆ ಸುಪ್-ಲೋಪ ವಾದ ಮೇಲೆ, ಪೂರ್ವ+ಇನ್ ಎಂದಿರುತ್ತದೆ. "ಯಸ್ಯೇತಿಚ" ಎಂಬುದರಿಂದ ಪೂರ್ವ ಶಬ್ದದ 'ಅ' ಕಾರಕ್ಕೆ ಲೋಪ ಬಂದು ಪೂರ್ವ+ಇನ್ ಎಂದಾಗುತ್ತದೆ. "ಶೌ ಚ" ಎಂಬ ಸೂತ್ರದಿಂದ ದೀರ್ಘವಾಗಿ 'ನ್'ಕಾರ ಲೋಪವಾಗಿ ಪೂರ್ವೀ ಎಂದು ರೂಪವು ಸಿದ್ಧವಾಗುತ್ತದೆ.

**(ಇನಿ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1185. -ಸಪೂರ್ವಾಚ್ಚ।(5.2.87)**

ವೃತ್ತಿ-ಕೃತಪೂರ್ವೀ।

ಪ. ಛೇ-ಸಪೂರ್ವಾತ್,ಚ ।

ಅ. ವೃ.-"ಪೂರ್ವಾದಿನಿಃ" ಎಂಬ ಸೂತ್ರವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ

ಅರ್ಥ-ಸಪೂರ್ವವೆಂದರೆ ಅಂದರೆ 'ಪೂರ್ವದಲ್ಲಿ ಯಾವುದಾದರೂ ಒಂದು ಪದದಿಂದ ಕೂಡಿದ್ದು' ಎಂದರ್ಥ. ಅಂತಹ ಪೂರ್ವ ಶಬ್ದದ ನಂತರವೂ ಕೂಡಾ "ಇವನಿಂದ ಪೂರ್ವದಲ್ಲಿ ಮಾಡಲ್ಪಟ್ಟಿತು" ಎಂಬರ್ಥದಲ್ಲಿ ಇನಿ ಪ್ರತ್ಯಯವು ಬರುತ್ತದೆ.

ಉದಾ-ಕೃತಪೂರ್ವೀ (ಕಟಃ)(ಮೊದಲು ಚಾಪೆಯನ್ನು ಮಾಡಿದವನು ಎಂದರ್ಥ)-

'ಕೃತಃ ಪೂರ್ವಮ್ ಅನೇನ' ಎಂಬರ್ಥದಲ್ಲಿ ಕೃತ ಶಬ್ದವನ್ನು ಪೂರ್ವದಲ್ಲಿಉಳ್ಳ 'ಪೂರ್ವ' ಶಬ್ದದನಂತರ ಪ್ರಕೃತ ಸೂತ್ರದಿಂದ ಇನಿ ಪ್ರತ್ಯಯವು ಬಂದು, ಕೃತಪೂರ್ವ+ಇನಿ ಎಂದಿದ್ದಾಗ "ಯಸ್ಯೇತಿಚ" ಎಂಬುದರಿಂದ ಅಂತ್ಯ 'ಅ' ಕಾರಕ್ಕೆ ಲೋಪ ಬಂದು, ಕೃತಪೂರ್ವ್+ಇನಿ ಎಂದಾಗಿ, "ಶೌ ಚ" ಎಂಬ ಸೂತ್ರದಿಂದ ದೀರ್ಘವಾಗಿ, 'ನ್'ಕಾರಾನ್ತವಾಗಿ ಸುಬಂತ ಮಾಡಿದಾಗ ಕೃತಪೂರ್ವೀ (ಕಟಃ) ಎಂಬ ರೂಪವು ಸಿದ್ಧವಾಗುತ್ತದೆ.

**(ಇನಿ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1186. -ಇಷ್ಟಾದಿಭ್ಯಶ್ಚ।(5.2.88)**

ವೃತ್ತಿ -ಇಷ್ಟಮ್ ಅನೇನ ಇಷ್ಟೀ। ಅಧೀತೀ।

**॥ (೮೮) ಇತಿ ಭವನಾರ್ಥಕಾಃ॥**

***

ಪ. ಛೇ-ಇಷ್ಟಾದಿಭ್ಯಃ, ಚ ।

ಅ.ವೃ.-"ಪೂರ್ವಾದಿನಿಃ" ಎಂಬ ಸೂತ್ರದಿಂದ ಇನಿಃ ಎಂಬ ಪ್ರತ್ಯಯವು ಅನುವೃತ್ತವಾಗುತ್ತದೆ. ಮತ್ತು "ಶ್ರಾದ್ಧಮನೇನಭುಕ್ತಮನಿಠನೌ" ಎಂಬ ಸೂತ್ರದಿಂದ ಅನೇನ ಎಂಬ ಪದವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ

ಅರ್ಥ-ಪ್ರಥಮಾಂತಗಳಾದ ಇಷ್ಟ ಮೊದಲಾದ ಶಬ್ದಗಳ ನಂತರ "ಅನೇನ" ಅಂದರೆ 'ಇಷ್ಟಾದಿಗಳಿಗೆ ಇವನು ಕರ್ತೃ' ಎಂಬರ್ಥದಲ್ಲಿ ಇನಿ ಪ್ರತ್ಯಯವು ಬರುತ್ತದೆ.

ಉದಾ-ಇಷ್ಟೀ-'ಇಷ್ಟಮ್ ಅನೇನ (ಅಂದರೆ ಇವನಿಂದ ಯಾಗವು ಮಾಡಲ್ಪಟ್ಟಿತು)' ಎಂಬರ್ಥದಲ್ಲಿ ಇನಿ ಪ್ರತ್ಯಯವು ಬರುತ್ತದೆ. ಇಷ್ಟ+ಇನಿ ಎಂದಿದ್ದಾಗ "ಯಸ್ಯೇತಿ ಚ" ಎಂಬುದರಿಂದ 'ಅ'ಕಾರಕ್ಕೆ ಲೋಪ ಬಂದು ಇಷ್ಟ್+ಇನಿ ಎಂದಾಗಿ ಸುಬಂತ ಮಾಡಿದಾಗ ಇಷ್ಟೀ ಎಂದು ರೂಪವು ಸಿದ್ಧವಾಗುತ್ತದೆ.

ಉದಾ-ಅಧೀತೀ-'ಅಧೀತಮ್ ಅನೇನ (ಇವನಿಂದ ಅಧ್ಯಯನವು ಮಾಡಲ್ಪಟ್ಟಿತು)' ಎಂಬರ್ಥದಲ್ಲಿ ಪ್ರಕೃತ ಸೂತ್ರದಿಂದ ಇನಿ ಪ್ರತ್ಯಯವು ಬಂದು, ಅಧೀತ+ಇನಿ ಎಂದಾಗಿ, "ಯಸ್ಯೇತಿಚ" ಎಂಬುದರಿಂದ 'ಅ'ಕಾರಕ್ಕೆ ಲೋಪ ಬಂದು ಸುಬಂತ ಮಾಡಿದಾಗ ಅಧೀತೀ ಎಂದು ರೂಪವು ಸಿದ್ಧವಾಗುತ್ತದೆ.

**(ಭವನಾದ್ಯರ್ಥ ಪ್ರತ್ಯಯ ಪ್ರಕರಣವು(೮೮) ಮುಗಿಯಿತು)**

# ಪ್ರಕರಣ-56: ಮತ್ವರ್ಥೀಯಾಃ

(ಸೂ. ಸಂ. 1187-1198)

(ಮತುಪ್ ಪ್ರತ್ಯಯವನ್ನು ವಿಧಿಸುವ ಸೂತ್ರ)

**ಸೂತ್ರ-1187. -ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್।(5.2.94)**

ವೃತ್ತಿ -ಗಾವೋಽಸ್ಯಾಸ್ಮಿನ್ ವಾ ಸನ್ತಿ -ಗೋಮಾನ್।

ಪ. ಛೇ -ತತ್, ಅಸ್ಯ, ಅಸ್ತಿ, ಅಸ್ಮಿನ್, ಇತಿ, ಮತುಪ್।

ಅ. ವ್ಯ. "ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ

ಅರ್ಥ -'ತತ್ ಅಸ್ಯ ಅಸ್ತಿ ಇತಿ' ಅಥವಾ 'ತತ್ ಅಸ್ಮಿನ್ ಅಸ್ತಿ' ಎಂಬ ವಿಗ್ರಹದಲ್ಲಿ 'ಅಸ್ತಿ' ಸಮಾನಧಿಕರಣವಾದ ಪ್ರಥಮಾ ವಿಭಕ್ತಿಯ ಶಬ್ದದ ನಂತರ ಅಸ್ಯ ಅಥವಾ ಅಸ್ಮಿನ್ ಅರ್ಥದಲ್ಲಿ ಮತುಪ್ ಪ್ರತ್ಯಯವು ಬರುತ್ತದೆ. ಮತುಪ್ ಪ್ರತ್ಯಯದಲ್ಲಿ ಮತ್ ಮಾತ್ರ ಉಳಿಯುತ್ತದೆ. ಸೂತ್ರದಲ್ಲಿರುವ 'ಇತಿ' ಶಬ್ದವು 'ಅಸ್ತಿ' ಎಂಬ ಅರ್ಥ ವಿವಕ್ಷೆಯಲ್ಲಿ ಬರುವ ಮತುಪ್ ಮೊದಲಾದವು ವಿಶೇಷ ವಿಷಯಗಳಲ್ಲಿ ಬರುವುವು ಎಂದು ತಿಳಿಸುತ್ತದೆ. ಇದನ್ನು ಕೆಳಗಿನ ಶ್ಲೋಕದಿಂದ ತಿಳಿದುಕೊಳ್ಳಬಹುದು-

ಭೂಮ-ನಿಂದಾ -ಪ್ರಶಂಸಾಸು ನಿತ್ಯಯೋಗೇಽತಿಶಾಯನೇ।
ಸಮ್ಬಂಧೇಽಸ್ತಿವಿವಕ್ಷಾಯಾಂ ಭವನ್ತಿ ಮತುಬಾದಯಃ॥

ಭೂಮ ಎಂದರೆ ಹೆಚ್ಚು ಎಂದರ್ಥ. (ಗೋಮಾನ್-ಹೆಚ್ಚು ಆಕಳುಗಳುಳ್ಳವನು), ನಿಂದಾ ಇದಕ್ಕೆ ಉದಾಹರಣೆ 'ಕಕುದಾವರ್ತಿನಿ ಕನ್ಯಾ'-(ಕಂಠ ಮೂಲದ ಹಿಂಬಾಗದಲ್ಲಿ ಸುಳಿ ಇರುವವಳು). ಇದೊಂದು ನಿಂದ್ಯವಾದ ಲಕ್ಷಣ. ಪ್ರಶಂಸಾ-ಸುಂದರ ರೂಪ ಉಳ್ಳವನು, ನಿತ್ಯಯೋಗ-ಕ್ಷೀರಿಣೋ ವೃಕ್ಷಾಃ-ಯಾವಾಗಲು ಹಾಲು ಉಳ್ಳ ವೃಕ್ಷಗಳು, ಅತಿಶಾಯನ(ಅತಿಶಯವಾದ) -ಉದರಿಣೀ ಕನ್ಯಾ(ಅತಿಶಯವಾದ ಹೊಟ್ಟೆವುಳ್ಳ ಕನ್ಯೆ) ಮತ್ತು ಸಂಸರ್ಗ-ಸಂಬಂಧವುಳ್ಳ, ದಣ್ಡೀ-ದಣ್ಡವುಳ್ಳವನು).

ಉದಾ-ಗೋಮಾನ್-'ಗಾವಃ ಅಸ್ಯ ಸನ್ತಿ ಎಂಬ ಅರ್ಥದಲ್ಲಿ' ಸನ್ತಿ ಎಂಬ ಶಬ್ದಕ್ಕೆ ಸಮಾನಾಧಿಕರಣವಾದ ಪ್ರಥಮಾನ್ತ 'ಗೋ' ಶಬ್ದದ ನಂತರ 'ಅಸ್ಯ' ಎಂಬ ಅರ್ಥದಲ್ಲಿ ಪ್ರಸ್ತುತ ಸೂತ್ರದಿಂದ ಮತುಪ್(ಮತ್) ಪ್ರತ್ಯಯವನ್ನು ಸೇರಿಸಿದಾಗ ಗೋಮಾನ್ ಎಂಬ ಸುಬನ್ತ ಶಬ್ದವು ಸಿದ್ಧವಾಗುತ್ತದೆ.ಗೋಮತ್+ಸ್ ಎಂದಿದ್ದಾಗ "ಉಗಿದಚಾಂ ಸರ್ವನಾಮಸ್ಥಾನೇಽಧಾತೋಃ" ಎಂಬ ಸೂತ್ರದಿಂದ ನುಮಾಗಮ ಬಂದು "ಅತ್ವಸನ್ತಸ್ಯ ಚಾಧಾತೋಃ" ಸೂತ್ರದಿಂದ ಉಪಧಾ ದೀರ್ಘ ಬಂದು, ಗೋಮಾನ್ತ್+ಸ್ ಎಂದಿರುತ್ತದೆ. "ಹಲ್‌ಙ್ಯಾಭ್ಯೋ ದೀರ್ಘಾತ್ಸುತಿಸ್ಯಪೃಕ್ತಂ ಹಲ್" ಸೂತ್ರದಿಂದ ಕೊನೆಯಲ್ಲಿರುವ 'ಸ್' ಕಾರಕ್ಕೆ ಲೋಪ ಬರುತ್ತದೆ. "ಸಂಯೋಗಾನ್ತಸ್ಯ ಲೋಪಃ" ಎಂಬ ಸೂತ್ರದಿಂದ 'ತ್' ಕಾರಕ್ಕೆ ಲೋಪ ಬಂದು ಗೋಮಾನ್ ಎಂಬ ರೂಪವು

ಸಿದ್ಧವಾಗುತ್ತದೆ.

**(ಭ ಸಂಜ್ಞೆಯನ್ನು ವಿಧಿಸುವ ಸೂತ್ರ)**

**ಸೂತ್ರ-1188. -ತಸೌ ಮತ್ವರ್ಥೇ।(1.4.19)**

ವೃತ್ತಿ –ತಾನ್ತ-ಸಾನ್ತೌ ಭಸಂಜ್ಞೌ ಸ್ತೋ ಮತ್ವರ್ಥೇ ಪ್ರತ್ಯಯೇ ಪರೇ। ಗರುತ್ಮಾನ್(353) ವಸೋಃ ಸಂಪ್ರಸಾರಣಮ್। ವಿದುಷ್ಮಾನ್।

ವಾ॥ ಗುಣವಚನೇಭ್ಯೋ ಮತುಪೊ ಲುಗಿಷ್ಟಃ।

ಶುಕ್ಲೋ ಗುಣೋಽಸ್ಯಾಸ್ತೀತಿ-ಶುಕ್ಲಃ ಪಟಃ। ಕೃಷ್ಣಃ।

ಅ.ವೃ.-ಯಚಿ ಭಮ್ ಎಂಬ ಸೂತ್ರದಿಂದ ಭಮ್ ಎಂಬ ಪದವು ಅನುವೃತ್ತ ವಾಗುತ್ತದೆ.

ಅರ್ಥ –ಮತ್ವರ್ಥ ಪ್ರತ್ಯಯವು ಪರದಲ್ಲಿದ್ದಾಗ, ತಕಾರಾನ್ತ ಮತ್ತು ಸಕಾರಾನ್ತ ಪ್ರಾತಿಪದಿಕ ಶಬ್ದಗಳಿಗೆ 'ಭ' ಸಂಜ್ಞೆಯು ಬರುತ್ತದೆ.

ಇದೇ 'ಭ' ಸಂಜ್ಞೆಯು ಬೇರೆ ಕಡೆ "ಯಚಿ ಭಮ್" ಸೂತ್ರದಿಂದ ಪ್ರವೃತ್ತವಾಗುತ್ತದೆ. "ಆ ಕಡಾರಾದೇಕಾ ಸಂಜ್ಞಾ" ಎಂಬ ಸೂತ್ರದಿಂದ ಎರಡು ಸಂಜ್ಞೆಗಳಿಗೆ 'ಒಂದೇ ಲಕ್ಷ್ಯದಲ್ಲಿ ಪ್ರವೃತ್ತಿಯಿದ್ದಾಗ, ಒಂದು ಸಂಜ್ಞೆಯನ್ನು ಸ್ವೀಕರಿಸಬೇಕು ಎಂಬ ನಿಯಮದಿಂದ' 'ಭ' ಸಂಜ್ಞೆಯಿಂದ ಪದ ಸಂಜ್ಞೆಯು ಬಾಧಿತವಾಗುತ್ತದೆ.

ಉದಾ-ಗರುತ್ಮಾನ್-'ಗರುತಃ ಅಸ್ಯ ಸನ್ತಿ ಇತಿ ಗರುತ್ಮಾನ್' ಎಂಬ ಅರ್ಥದಲ್ಲಿ ಗರು ಶಬ್ದದ ನಂತರ ಮತುಪ್ ಪ್ರತ್ಯಯವು ಬಂದಾಗ, ಗರುತ್ ಶಬ್ದವು 'ತ್' ಕಾರನ್ತವಾಗಿರುವದರಿಂದ ಪ್ರಕೃತ ಸೂತ್ರದಿಂದ 'ಭ' ಸಂಜ್ಞೆಯು ಬರುತ್ತದೆ. "ಝಲಾಂ ಜಶೋಽನ್ತೇ" ಸೂತ್ರದಿಂದ 'ತ್' ಕಾರಕ್ಕೆ ಜಶ್ತ್ವ ಬಂದು "ಪ್ರತ್ಯಯೇ ಭಾಷಾಯಾಂ ನಿತ್ಯಮ್" ಎಂಬ ವಾರ್ತಿಕದಿಂದ ಅನುನಾಸಿಕವು ಬಾರದೆ ಗರುತ್ಮಾನ್ ರೂಪವು ಸಿದ್ಧವಾಗುತ್ತದೆ.

ಉದಾ-ವಿದುಷ್ಮಾನ್ (ವಿದ್ವಾಂಸರು ಇವರಲ್ಲಿ ಇದ್ದಾರೆ)-'ವಿದ್ವಾಂಸಃ ಅಸ್ಮಿನ್ ಸನ್ತಿ' ಎಂಬುದು ಲೌಕಿಕ ವಿಗ್ರಹ ವಾಕ್ಯ. ವಿದ್ವತ್ ಶಬ್ದದ ನಂತರ ಮತುಪ್ ಪ್ರತ್ಯಯವು ಸೇರಿಸಲಾಗಿದೆ. ಈ ವಿದ್ವತ್ ಶಬ್ದವು 'ಸ್' ಕಾರಾನ್ತವಾಗಿರುವುದರಿಂದ ಪ್ರಕೃತ ಸೂತ್ರದಿಂದ 'ಭ' ಸಂಜ್ಞೆ ಬಂದು' "ವಸೋಃ ಸಮ್ಪ್ರಸಾರಣಮ್" ಸೂತ್ರದಿಂದ, ವಿದ್+ಉ+ಅಸ್ ಎಂದಿದ್ದಾಗ, "ಸಮ್ಪ್ರಸಾರಣಾಚ್ಚ" ಎಂಬ ಸೂತ್ರದಿಂದ 'ಅ' ಕಾರಕ್ಕೆ ಪೂರ್ವ ರೂಪವು ಬಂದು, ವಿದುಸ್+ಮತ್ ಎಂದಿರುತ್ತದೆ. "ಆದೇಶ ಪ್ರತ್ಯಯಯೋಃ" ಎಂಬ ಸೂತ್ರದಿಂದ 'ಷ್' ಕಾರಕ್ಕೆ 'ಷತ್ವ' ಬಂದು ವಿದುಷ್ಮಾನ್ ಎಂಬ ಸುಬನ್ತ ಶಬ್ದವು ಸಿದ್ಧವಾಗುತ್ತದೆ.

ವಾರ್ತಿಕ-ಗುಣ ವಚನೇಭ್ಯೋ ಮತುಪ್ ಲುಗಿಷ್ಟಃ-ಶುಕ್ಲಃ ಗುಣಃ ಅಸ್ಯ ಅಸ್ತೀತಿ ಶುಕ್ಲಃ ಪಟಃ। ಕೃಷ್ಣಃ.

ಅರ್ಥ-ಗುಣವಾಚಕ ಶಬ್ದದ ನಂತರ ಬರುವ ಮತುಪ್ ಪ್ರತ್ಯಯಕ್ಕೆ ಲೋಪವು

ಅಂಗೀಕರಿಸಲಾಗಿದೆ. ಇಲ್ಲಿ "ಗುಣವಚನೇಭ್ಯಃ" ಎಂಬ ಪದದಿಂದ ಗುಣ ಗುಣವದ್ವಾಚಕಗಳಾಗಿ ಪ್ರಸಿದ್ಧವಾದ ಶುಕ್ಲಾದಿ ಶಬ್ದಗಳು ಮಾತ್ರ ಗ್ರಹಿಸಲಾಗುತ್ತದೆ. ರೂಪ ಮೊದಲಾದ ಶಬ್ದಗಳು ಗ್ರಹಿಸಲಾಗುವುದಿಲ್ಲ. ಆದ್ದರಿಂದ 'ರೂಪವುಳ್ಳ ವಸ್ತ್ರ' ಎಂಬ ಅರ್ಥದಲ್ಲಿ 'ರೂಪಮ್ ವಸ್ತ್ರಮ್' ಎಂದು ಪ್ರಯೋಗ ಮಾಡಬಾರದು.

ಉದಾ-'ಶುಕ್ಲಃ ಅಸ್ಯ ಅಸ್ತಿ ಇತಿ' ಎಂಬರ್ಥದಲ್ಲಿ ಶುಕ್ಲ ಶಬ್ದದ ನಂತರ ಮತುಪ್ ಪ್ರತ್ಯಯವು ಬರುತ್ತದೆ. ಈ ವಾರ್ತಿಕದಿಂದ ಲೋಪವು ಬಂದು ಶುಕ್ಲಃ ಎಂದುಳಿಯುತ್ತದೆ. "ಯಃ ಶಿಷ್ಯತೇ ಸ ಲುಪ್ಯಮಾನಾಭಿಧಾಯೀ" ಎಂಬ ನ್ಯಾಯದಿಂದ ಉಳಿದಿರುವ ಶುಕ್ಲ ಎಂಬ ಶಬ್ದಕ್ಕೆ 'ಶುಕ್ಲ ಗುಣವಾನ್' ಎಂದರ್ಥ ಮಾಡಬೇಕು. ಇದೇ ರೀತಿಯಲ್ಲಿ ಕೃಷ್ಣಃ ಎಂಬ ರೂಪವು ಸಹ 'ಕೃಷ್ಣ ಗುಣವಾನ್' ಎಂಬರ್ಥದಲ್ಲಿ ಪ್ರಯೋಗಿಸಲಾಗುತ್ತದೆ. ಈ ರೀತಿಯಾಗಿ ಶುಕ್ಲ ಮೊದಲಾದ ಶಬ್ದಗಳನ್ನು ಸಂದರ್ಭೋಚಿತವಾಗಿ ಬಿಳಿ ಮತ್ತು ಬಿಳಿ ಬಣ್ಣವನ್ನುಳ್ಳ ಎಂಬರ್ಥದಲ್ಲಿ ಉಪಯೋಗಿಸಬಹುದು.

### (ಲಚ್ ಪ್ರತ್ಯಯವನ್ನು ವಿಧಿಸುವ ಸೂತ್ರ)

**ಸೂತ್ರ-1189.-ಪ್ರಾಣಿಸ್ಥಾದಾತೋ ಲಜನ್ಯತರಸ್ಯಾಮ್।(5.2.96)**

ವೃತ್ತಿ-ಚೂಡಾಲಃ।ಚೂಡಾವಾನ್। ಪ್ರಾಣಿಸ್ಥಾತ್ ಕಿಮ್? ಶಿಖಾವಾನ್=ದೀಪಃ। ಪ್ರಾಣ್ಯಾಙ್ಗಾದೇವ, ನ ಇಹ-ಮೇಧಾವಾನ್।

ಪ. ಛೇ -ಪ್ರಾಣಿಸ್ಥಾದ್-ಅತೋ, ಲಚ್, ಅನ್ಯತರಸ್ಯಾಮ್।

ಅ. ವೃ.-"ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್" ಎಂಬ ಸೂತ್ರದಿಂದ 'ತದ್ ಅಸ್ಯ ಅಸ್ತಿ', ಮತ್ತು 'ಅಸ್ಮಿನ್ ಇತಿ' ಎಂಬ ಪದಗಳು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ

ಅರ್ಥ -ಪ್ರಾಣಿಯಲ್ಲಿರುವ ವಸ್ತುವನ್ನು ಬೋಧಿಸುವ ಆ ಕಾರಾನ್ತ ಶಬ್ದದ ನಂತರ ಮತ್ವರ್ಥದಲ್ಲಿ ಲಚ್ ಪ್ರತ್ಯಯವು ವೈಕಲ್ಪಿಕವಾಗಿ ಬರುತ್ತದೆ.

ಉದಾ-ಚೂಡಾಲಃ -'ಚೂಡಾ ಅಸ್ಯ ಅಸ್ತಿ' ಎಂಬರ್ಥದಲ್ಲಿ 'ಆ' ಕಾರಾನ್ತವಾದ ಚೂಡಾ ಶಬ್ದದ ನಂತರ ಪ್ರಕೃತ ಸೂತ್ರದಿಂದ ಲಚ್ ಪ್ರತ್ಯಯವು ಬರುತ್ತದೆ. ಚೂಡಾ+ಲ=ಚೂಡಾಲ ಎಂಬ ಪ್ರಾತಿಪದಿಕವು ಸಿದ್ಧವಾಗುತ್ತದೆ. ಅದನ್ನು ಸುಬನ್ತ ಮಾಡಿದಾಗ ಚೂಡಾಲಃ ಎಂಬ ರೂಪವು ಸಿದ್ಧವಾಗುತ್ತದೆ.

ಲಚ್ ಬಾರದ ಪಕ್ಷದಲ್ಲಿ ಮತುಪ್ ಪ್ರತ್ಯಯವು ಬಂದು ಚೂಡಾಮತ್ ಎಂದಾಗುತ್ತದೆ. "ಮಾದುಪಧಾಯಾಶ್ಚ ಮತೋರ್ವಾಽಯವಾದಿಭ್ಯಃ" ಎಂಬ ಸೂತ್ರದಿಂದ 'ಮ್' ಕಾರಕ್ಕೆ 'ವ್' ಕಾರವು ಬಂದು ಚೂಡಾವಾನ್ ಎಂದು ರೂಪವು ಸಿದ್ಧವಾಗುತ್ತದೆ. (ಚೂಡಾ ಎಂದರೆ ಕೇಶದ ಅಗ್ರ ಭಾಗ ಮತ್ತು ಕೋಳಿ ಮೊದಲಾದವುಗಳ ತಲೆಯ ಮೇಲಿರುವ ಶಿಖಾ).

ಪ್ರಾಣಿಸ್ಥಾತ್ ಕಿಮ್-ಪ್ರಾಣಿಸ್ಥ ವಾಚಕವಾದ 'ಆ'ಕಾರಾನ್ತ ಶಬ್ದಗಳಿಗೆ 'ಲಚ್'

ಪ್ರತ್ಯಯವು ಬರುತ್ತದೆ. ಆದ್ದರಿಂದ 'ಶಿಖಾವಾನ್ ದೀಪಃ' ಎಂದಿದ್ದಾಗ, ಶಿಖಾ ಶಬ್ದವು 'ಆ' ಕಾರಾನ್ತವಾದರೂ ಪ್ರಾಣಿಸ್ಥ ವಾಚಕವಲ್ಲ. ಆದ್ದರಿಂದ ಈ (ಲಚ್) ಪ್ರತ್ಯಯವು ಬರುವುದಿಲ್ಲ. ಸಾಮಾನ್ಯವಾದ ಮತುಪ್ ಪ್ರತ್ಯಯವು ಬಂದು ಶಿಖಾವಾನ್ ಎಂದಾಗಿದೆ.

ಆ ಪ್ರಾಣಿಸ್ಥವಾದ ವಸ್ತುವು ಸಹ ಪ್ರಾಣಿಯ ಅಂಗವಾಗಿರಬೇಕು. ಕೇವಲ ಪ್ರಾಣಿಸ್ಥವಾಗಿದ್ದರೆ ಮಾತ್ರ ಸಾಲದು. ಆದ್ದರಿಂದ ಮೇಧಾವಾನ್ ಹೇಳುವಾಗ ಮೇಧ ಎಂಬುದು ಪ್ರಾಣಿಸ್ಥವಾಗಿದ್ದರೂ ಪ್ರಾಣಿಯ ಅವಯವವಾಗುವುದಿಲ್ಲ ಆದ್ದರಿಂದ 'ಲಚ್' ಪ್ರತ್ಯಯವು ಬಾರದೇ ಮತುಪ್ ಪ್ರತ್ಯಯವು ಮಾತ್ರ ಬರುತ್ತದೆ.

**(ಶ-ನ-ಇಲಚ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ -1190.-ಲೋಮಾದಿ-ಪಾಮಾದಿ-ಪಿಚ್ಛಾದಿಭ್ಯಃ ಶನೇ ಲಚಃ।(4.2.100)**

ವೃತ್ತಿ -ಲೋಮಾದಿಭ್ಯಃ ಶಃ ಲೋಮಶಃ=ಲೋಮವಾನ್। "ಪಾಮಾದಿಭ್ಯಃ ನಃ"। ಪಾಮನಃ। (ಗಣ ಸೂತ್ರ। ಅಙ್ಗಾತ್ ಕಲ್ಯಾಣೇ)। ಅಙ್ಗನಾ (ಗಣ ಸೂತ್ರ। ಲಕ್ಷ್ಮ್ಯಾ ಅಚ್ಚ। ಲಕ್ಷ್ಮಣಃ ಪಿಚ್ಛಾದಿಭ್ಯ ಇಲಚ್। ಪಿಚ್ಛಿಲಃ=ಪಿಚ್ಛವಾನ್।

ಅ. ವೃ.-"ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್" ಎಂಬ ಸೂತ್ರದಿಂದ 'ತದ್ ಅಸ್ಯ ಅಸ್ತಿ, ಅಸ್ಮಿನ್ ಇತಿ' ಎಂಬ ಪದಗಳು ಅನುವೃತ್ತವಾಗುತ್ತದೆ. "ಪ್ರಾಣಿಸ್ಥಾದಾತೋ ಲಜನ್ಯತರಸ್ಯಾಮ್।(5.2.96)" ಎಂಬ ಸೂತ್ರದಿಂದ ಅನ್ಯತರಸ್ಯಾಮ್ ಎಂಬ ಪದವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ತದ್ಧಿತಾಃ", "ಙ್ಯಾಪ್ ಪ್ರಾತಿಪದಿಕಾತ್", "ಸಮರ್ಥಾನಾಂ ಪ್ರಥಮಾದ್ವಾ" ಎಂಬವು ಅಧಿಕಾರ ಸೂತ್ರಗಳಾಗಿವೆ

ಅರ್ಥ -ಮತ್ವರ್ಥದಲ್ಲಿ ಲೋಮಾದಿ ಗಣ ಪಠಿತ ಶಬ್ದಗಳ ನಂತರ 'ಶ' ಪ್ರತ್ಯಯವು, ಪಾಮಾದಿ ಗಣ ಪಠಿತ ಶಬ್ದಗಳ ನಂತರ 'ನ' ಪ್ರತ್ಯಯವು ಮತ್ತು ಪಿಛ್ಛಾದಿ ಗಣ ಪಠಿತ ಶಬ್ದಗಳ ನಂತರ ಇಲಚ್(ಇಲ) ಪ್ರತ್ಯಯವು ವೈಕಲ್ಪಿಕವಾಗಿ ಬರುತ್ತವೆ. ಇಲ್ಲಿ ಮೂರು ಪ್ರತ್ಯಯಗಳನ್ನು ಹೇಳಿರುವುದರಿಂದ "ಯಥಾ ಸಂಖ್ಯಮನುದೇಶಃ ಸಮಾನಾಮ್" ಸೂತ್ರದಿಂದ ಯಥಾ ಕ್ರಮವಾಗಿ ಹೇಳಲಾಗಿದೆ ಎಂದು ತಿಳಿಯಬೇಕು. ಈ ಮೂರು ಪ್ರತ್ಯಯಗಳು ವೈಕಲ್ಪಿಕವಾಗಿ ವಿಧಿಸಲಾಗಿದೆ. ಈ ಪ್ರತ್ಯಯಗಳು ಬಾರದ ಪಕ್ಷದಲ್ಲಿ, ವೈಕಲ್ಪಿಕವಾಗಿ ಮತುಪ್ ಪ್ರತ್ಯಯವೇ ಬರುತ್ತದೆ ಎಂದು ತಿಳಿಯಬೇಕು.

ಲೋಮಾದಿ ಗಣ ಪಠಿತ ಶಬ್ದಗಳಿಗೆ ಶ ಪ್ರತ್ಯಯ ಬರುವುದಕ್ಕೆ ಉದಾ-1. ಲೋಮಶಃ-(ರೋಮಗಳುಳ್ಳ ಮನುಷ್ಯನು) 'ಲೋಮಾನಿ ಅಸ್ಯ ಸನ್ತಿ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಲೋಮನ್+ಜಸ್ ಎಂಬ ಅಲೌಕಿಕ ವಿಗ್ರಹ ವಾಕ್ಯ. ಇಲ್ಲಿ "ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್" ಸೂತ್ರದಿಂದ ಮತುಪ್ ಬರಬೇಕಾಗಿತ್ತು, ಆದರೆ ಅದನ್ನು ಬಾಧಿಸಿ ಪ್ರಕೃತ ಸೂತ್ರದಿಂದ 'ಶ' ಪ್ರತ್ಯಯವು ಬರುತ್ತದೆ. ಇದಕ್ಕೆ ಪ್ರಾತಿಪದಿಕ ಸಂಜ್ಞೆ ಬಂದ ಮೇಲೆ "ಸುಪೋ ಧಾತು ಪ್ರಾತಿಪದಿಕಯೋಃ" ಸೂತ್ರದಿಂದ ಸುಪ್ ಗೆ ಲುಕ್ ಬಂದು ಲೋಮನ್ +ಶ ಎಂದಿರುತ್ತದೆ. "ಸ್ವಾದಿಷ್ವಸರ್ವನಾಮಸ್ಥಾನೇ" ಸೂತ್ರದಿಂದ ಪದ ಸಂಜ್ಞೆ ಬರುವುದರಿಂದ ಪದಾನ್ತದ 'ನ್' ಕಾರಕ್ಕೆ "ನ ಲೋಪಃ ಪ್ರಾತಿಪದಿಕಾನ್ತಸ್ಯ" ಸೂತ್ರದಿಂದ ಲೋಮಶ ಎಂದಿರುತ್ತದೆ. ಸುಬನ್ತ ಮಾಡಿದಾಗ ಲೋಮಶಃ ಎಂಬ

ರೂಪವು ಸಿದ್ಧವಾಗುತ್ತದೆ. 'ಶ' ಪ್ರತ್ಯಯವು ಬಾರದ ಪ್ರಕ್ಷದಲ್ಲಿ ಮತುಪ್ ಪ್ರತ್ಯಯವು ಬಂದು ಲೋಮವಾನ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ-2. ರೋಮಶಃ-(ರೋಮಗಳುಳ್ಳ ಮನುಷ್ಯನು) 'ರೋಮಾಣಿ ಅಸ್ಯ ಸನ್ತಿ' ಎಂಬುದು ಲೌಕಿಕ ವಿಗ್ರಹ ವಾಕ್ಯ. ರೋಮನ್+ಜಸ್ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಇದರಲ್ಲಿ "ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್" ಸೂತ್ರದಿಂದ ಮತುಪ್ ಬರಬೇಕಾಗಿತ್ತು, ಆದರೆ ಅದನ್ನು ಬಾಧಿಸಿ ಪ್ರಕೃತ ಸೂತ್ರದಿಂದ 'ಶ' ಪ್ರತ್ಯಯವು ಬರುತ್ತದೆ. ಇದಕ್ಕೆ ಪ್ರಾತಿಪದಿಕ ಸಂಜ್ಞೆ ಬಂದ ಮೇಲೆ, "ಸುಪೋಧಾತುಪ್ರಾತಿಪದಿಕಯೋಃ" ಸೂತ್ರದಿಂದ ಸುಪ್ ಗೆ ಲುಕ್ ಬಂದು, ಲೋಮನ್+ಶ ಎಂದಿರುತ್ತದೆ. "ಸ್ವಾದಿಷ್ವಸರ್ವನಾಮಸ್ಥಾನೇ" ಸೂತ್ರದಿಂದ ಪದ ಸಂಜ್ಞೆ ಬರುವುದರಿಂದ ಪದಾನ್ತ 'ನ್' ಕಾರಕ್ಕೆ "ನ ಲೋಪಃ ಪ್ರಾತಿಪದಿಕಾನ್ತಸ್ಯ" ಸೂತ್ರದಿಂದ ರೋಮಶ ಎಂದಿರುತ್ತದೆ. ಸುಬನ್ತ ಮಾಡಿದಾಗ ರೋಮಶಃ ಎಂಬ ರೂಪವು ಸಿದ್ಧವಾಗುತ್ತದೆ. 'ಶ' ಪ್ರತ್ಯಯವು ಬಾರದ ಪ್ರಕ್ಷದಲ್ಲಿ, ಮತುಪ್ ಪ್ರತ್ಯಯವು ಬಂದು ರೋಮವಾನ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ-3. ಪಾಮಾದಿ ಗಣ ಪಠಿತ ಶಬ್ದಗಳಿಗೆ 'ನ' ಪ್ರತ್ಯಯ ಬರುವುದಕ್ಕೆ ಉದಾ-ಪಾಮನಃ-(ಒದ್ದೆ ಆದ ಖಜ್ಜಿ ಉಳ್ಳ ಮನುಷ್ಯನು). 'ಪಾಮ ಅಸ್ಯ ಅಸ್ತಿ ಇತಿ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಪಾಮನ್ +ಸು ಎಂಬ ಅಲೌಕಿಕ ವಿಗ್ರಹ ವಾಕ್ಯದಲ್ಲಿ ಪ್ರಕೃತ ಸೂತ್ರದಿಂದ 'ನ' ಪ್ರತ್ಯಯವು ಬಂದು, ಪ್ರಾತಿಪದಿಕವಾದ ಮೇಲೆ, "ಸುಪೋ ಧಾತು ಪ್ರಾತಿಪದಿಕಯೋಃ" ಸೂತ್ರದಿಂದ 'ಸು' ಗೆ ಲುಕ್ ಬಂದು "ನ ಲೋಪಃ ಪ್ರಾತಿಪದಿಕಾನ್ತಸ್ಯ" ಸೂತ್ರದಿಂದ 'ನ' ಕಾರಕ್ಕೆ ಲೋಪ ಬಂದ ಮೇಲೆ ಪಾಮ+ನ=

ಪಾಮನ ಎಂದಿರುತ್ತದೆ. ಇದನ್ನು ಸುಬನ್ತ ಮಾಡಿದಾಗ ಪಾಮನಃ ಎಂಬ ರೂಪವು ಸಿದ್ಧವಾಗುತ್ತದೆ.

1. ಗಣ ಸೂತ್ರ- ಅಜ್ಞಾಗ್ರಾತ್ ಕಲ್ಯಾಣೇ। ಅಜ್ಗನಾ.

ಅರ್ಥ-'ಕಲ್ಯಾಣ' ಅರ್ಥದಲ್ಲಿ ಮಾತ್ರ ಅಜ್ಗ ಶಬ್ದದ ನಂತರ 'ನ' ಪ್ರತ್ಯಯವು ಬರುತ್ತದೆ.

'ಅಜ್ಗ' ಶಬ್ದವು ಪಾಮಾದಿ ಗಣ ಪಠಿತವಾಗಿದೆ. ಆದ್ದರಿಂದ ಪ್ರಕೃತ ಸೂತ್ರದಿಂದ 'ನ' ಪ್ರತ್ಯಯವು ಬರಬೇಕಾಗಿತ್ತು. ಆದರೆ ಈ ಗಣ ಸೂತ್ರದಿಂದ ಪರಿಮಿತಗೊಳಿಸಲ್ಪಟಿದೆ. ಯಾಕೆಂದರೆ ಎಲ್ಲಡೆಯಲ್ಲೂ 'ಅಜ್ಗ' ಶಬ್ದದ ನಂತರ 'ನ' ಪ್ರತ್ಯಯವು ಬರುವುದಿಲ್ಲ 'ಕಲ್ಯಾಣ' ಅರ್ಥದಲ್ಲಿ ಮಾತ್ರ ಬರುತ್ತದೆ ಎಂಬುದು ಈ ಗಣ ಸೂತ್ರದ ಉದ್ದೇಶ.

ಉದಾ-ಅಜ್ಗನಾ (ಸುಂದರವಾದ ಅಜವುಳ್ಳ ಸ್ತ್ರೀ). 'ಕಲ್ಯಾಣಾನಿ ಅಜ್ಗಾನಿ ಸನ್ತಿ ಅಸ್ಯಾಃ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಅಜ್ಗ+ಜಸ್ ಎಂಬ ಅಲೌಕಿಕ ವಿಗ್ರಹ ವಾಕ್ಯದಲ್ಲಿ "ಅಜ್ಞಾಗ್ರಾತ್ ಕಲ್ಯಾಣೇ" ಎಂಬ ಗಣ ಸೂತ್ರಾನುಸಾರ ಪ್ರಕೃತ ಸೂತ್ರದಿಂದ ವೈಕಲ್ಪಿಕವಾಗಿ 'ನ' ಪ್ರತ್ಯಯವು ಬಂದು, ಸ್ತ್ರೀತ್ವ ವಿವಕ್ಷೆಯಲ್ಲಿ ಅಜ್ಗನಾ ಎಂಬ ರೂಪವು ಸಿದ್ಧವಾಗುತ್ತದೆ. 'ನ' ಪ್ರತ್ಯಯವು ಬಾರದ ಪಕ್ಷದಲ್ಲಿ ಮತುಪ್ ಪ್ರತ್ಯಯವು ಬಂದು

ಅಙ್ಗವತೀ ಎಂದು ರೂಪವು ಸಿದ್ಧವಾಗುತ್ತದೆ.

2. ಗಣ ಸೂತ್ರ-(ಗಣ ಸೂತ್ರ॥ಲಕ್ಷ್ಮ್ಯಾ ಅಚ್ಚ).

ಅರ್ಥ-ಮತ್ವರ್ಥದಲ್ಲಿ ಪ್ರಥಮಾನ್ತ 'ಲಕ್ಷ್ಮೀ' ಶಬ್ದದ ನಂತರ 'ನ' ಪ್ರತ್ಯಯವು ಬರುತ್ತದೆ ಮತ್ತು ಲಕ್ಷ್ಮೀ ಶಬ್ದದ 'ಅ' ಕಾರಕ್ಕೆ ಅನ್ತಾದೇಶವು ಬರುತ್ತದೆ.

ಉದಾ-'ಲಕ್ಷ್ಮೀಃ ಅಸ್ಯ ಅಸ್ತಿ'(ಲಕ್ಷ್ಮೀ ಇವನಿಗೆ ಇರುವುಳು) ಎಂಬರ್ಥದಲ್ಲಿ ಪ್ರಥಮಾನ್ತ ಲಕ್ಷ್ಮೀ ಶಬ್ದದ ನಂತರ 'ನ' ಪ್ರತ್ಯಯವು ಬಂದು, "ಸುಪೋ ಧಾತು ಪ್ರಾತಿಪದಿಕಯೋಃ" ಸೂತ್ರದಿಂದ ಸುಪ್ ಲೋಪ ಬಂದು ಲಕ್ಷ್ಮೀ+ನಎಂಬ ರೂಪವಾದ ಮೇಲೆ ಮತ್ತೆ ಪ್ರಕೃತ ಸೂತ್ರದಿಂದ ಲಕ್ಷ್ಮೀ ಶಬ್ದಕ್ಕೆ'ಅ'ಕಾರವು ಅನ್ತಾದೇಶವಾಗಿ ಬಂದು(ಈ ಕಾರಕ್ಕೆ ಅ ಕಾರವು ಆದೇಶವಾಗಿ) ಬಂದು ಲಕ್ಷ್ಮನ ಎಂದಿರುತ್ತದೆ. "ರಷಾಭ್ಯಾಮ್ ನೋ ಣಃ ಸಮಾನ ಪದೇ " ಸೂತ್ರದಿಂದ ಣತ್ವ ಬಂದು ಲಕ್ಷ್ಮಣ ಎಂದಿದ್ದಾಗ ಅದಕ್ಕೆ ಸುಪ್ ಪ್ರತ್ಯಯವನ್ನು ಸೇರಿಸಿದ ಮೇಲೆ ಲಕ್ಷ್ಮಣಃ ಎಂದು ರೂಪವು ಸಿದ್ಧವಾಗುತ್ತದೆ. ಪಿಛ್ಛಾದಿಭ್ಯಃ ಇಲಚ್-ಪಿಛ್ಛಾದಿ ಗಣ ಪಠಿತ ಶಬ್ದಳಿಗೆ ಇಲಚ್ ಪ್ರತ್ಯಯವು ಬರುತ್ತದೆ.

ಉದಾ-ಪಿಚ್ಛಿಲಃ-ಪಿಚ್ಛವಾನ್(ನವಿಲಿನ ಗರಿ ಉಳ್ಳವನು) 'ಪಿಚ್ಛಾ ಅಸ್ಯ ಅಸ್ತಿ ಇತಿ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಪಿಚ್ಛಾ+ಸು ಎಂದಿದ್ದಾಗ, "ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್ " ಸೂತ್ರದಿಂದ ಮತುಪ್ ಬರಬೇಕಾಗಿತ್ತು, ಅದನ್ನು ಬಾಧಿಸಿ ಪ್ರಕೃತ ಸೂತ್ರದಿಂದ ಇಲಚ್ ಪ್ರತ್ಯಯವು ಬರುತ್ತದೆ. ಇದು ಪ್ರಾತಿಪದಿಕವಾದ ಮೇಲೆ "ಸುಪೋ ಧಾತುಪ್ರಾತಿಪದಿಕಯೋಃ " ಸೂತ್ರದಿಂದ ಸುಪ್ ಗೆ ಲುಕ್ ಬಂದು ಪಿಛ್ಛಾ+ಇಲ ಎಂದಿರುತ್ತದೆ. ಪಿಛ್ಛಾ ಎಂಬಲ್ಲಿರುವ 'ಆ' ಕಾರಕ್ಕೆ 'ಭ' ಸಂಜ್ಞೆ ಬಂದು "ಯಸ್ಯೇತಿ ಚ" ಸೂತ್ರದಿಂದ ಲೋಪ ಬಂದು ಪಿಚ್ಛಿಲ ಎಂಬ ರೂಪವು ಬರುತ್ತದೆ. ಇದನ್ನು ಸುಬನ್ತ ಮಾಡಿದಾಗ ಪಿಚ್ಛಿಲಃ ಎಂಬ ರೂಪವು ಸಿದ್ಧವಾಗುತ್ತದೆ. ಇಲಚ್ ಬಾರದ ಪಕ್ಷದಲ್ಲಿ, ಮತುಪ್ ಪ್ರತ್ಯಯವು ಬಂದು ಪಿಛ್ಛಾವಾನ್ ಎಂಬ ರೂಪವು ಸಿದ್ಧವಾಗುತ್ತದೆ.

**(ಉರಚ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1191.-ದನ್ತ ಉನ್ನತ ಉರಚ್।(5.2.106)**

ವೃತ್ತಿ -ಉನ್ನತಾ ದನ್ತಾಃ ಸನ್ತಿ ಅಸ್ಯ-ದನ್ತುರಃ॥

ಪ. ಛೇ -ದನ್ತೇ, ಉನ್ನತೇ, ಉರಚ್।

ಅ. ವೃ.-"ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್" ಸೂತ್ರದಿಂದ ಮತುಪ್ ಶಬ್ದವನ್ನು ಬಿಟ್ಟು ಉಳಿದ ಪದಗಳು ಅನುವೃತ್ತವಾಗುತ್ತವೆ. ಹಾಗೆಯೇ "ಪ್ರತ್ಯಯಃ", "ಪರಶ್ಚ", "ಙ್ಯಾಪ್ ಪ್ರಾತಿಪದಿಕಾತ್", ಸಮರ್ಥಾನಾಮ್ ಪ್ರಥಮಾದ್ವಾ" ಮತ್ತು ತದ್ಧಿತಾಃ ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ -'ಉನ್ನತ' ಶಬ್ದವನ್ನು ವಿಶೇಷಣವಾಗಿ ಉಳ್ಳ 'ದನ್ತ' ಶಬ್ದದ ನಂತರ ಮತ್ವರ್ಥದಲ್ಲಿ ಉರಚ್ ಪ್ರತ್ಯಯವು ಬರುತ್ತದೆ.

ಉದಾ-ದನ್ತುರಃ(ಎತ್ತರವಾದ ದಂತಗಳುಳ್ಳವನು)-'ಉನ್ನತಾಃ ದನ್ತಾಃ ಸನ್ತಿ ಅಸ್ಯ' ಎಂಬುದು ಲೌಕಿಕ ವಿಗ್ರಹ ವಾಕ್ಯ. ದನ್ತ+ಜಸ್ ಎಂಬ ಅಲೌಕಿಕ ವಿಗ್ರಹ ವಾಕ್ಯದಲ್ಲಿ, ಪ್ರಕೃತ ಸೂತ್ರದಿಂದ ಉರಚ್ ಪ್ರತ್ಯಯವು ಬಂದು ಪ್ರಾತಿಪದಿಕವಾದ ಮೇಲೆ "ಸುಪೋ ಧಾತು ಪ್ರಾತಿಪದಿಕಯೋಃ" ಸೂತ್ರದಿಂದ ಸುಪ್ ಗೆ ಲುಕ್ ಬಂದು, ದನ್ತ+ ಉರ ಎಂದಿರುತ್ತದೆ. ದನ್ತ ಶಬ್ದದ ಅನ್ತ್ಯ 'ಅ' ಕಾರವು 'ಭ' ಸಂಜ್ಞಕ 'ಅ' ಕಾರವಾಗಿರು ವುದರಿಂದ "ಯಸ್ಯೇತಿಚ" ಸೂತ್ರದಿಂದ ಲೋಪವಾಗಿ ದನ್ತುರ ಎಂದಾಗುತ್ತದೆ. ಅದನ್ನು ಸುಬನ್ತ ಮಾಡಿದಾಗ ದನ್ತುರಃ ಎಂಬ ರೂಪವು ಸಿದ್ಧವಾಗುತ್ತದೆ. ವಿಶೇಷಾರ್ಥ ಇಲ್ಲದಿರುವಾಗ ಉರಚ್ ಬಾರದ ಪಕ್ಷದಲ್ಲಿ ಮತುಪ್ ಬಂದು ದನ್ತವಾನ್ ಎಂಬ ರೂಪವು ಸಿದ್ಧವಾಗುತ್ತದೆ.

### (ವ ಪ್ರತ್ಯಯವನ್ನು ವಿಧಿಸುವ ಸೂತ್ರ)

**ಸೂತ್ರ -1192. ಕೇಶಾದ್ವೋಽನ್ಯತರಸ್ಯಾಮ್।(5.2.209)**

ವೃತ್ತಿ -ಕೇಶವಃ, ಕೇಶೀ, ಕೇಶಿಕಃ ಕೇಷವಾನ್।

ವಾ॥ ಅನ್ಯೇಭ್ಯೋಽಪಿ ದೃಶ್ಯತೇ ಮಣಿವಃ

ವಾ॥ ಅರ್ಣಸೋ ಲೋಪಶ್ಚ ಅರ್ಣವಃ।

ಪ. ಛೇ -ಕೇಶಾತ್, ವಃ ಅನ್ಯತರಸ್ಯಾಮ್।

ಅ. ವ್ಯ. -"ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್" ಸೂತ್ರದಿಂದ ಮತುಪ್ ಶಬ್ದವನ್ನು ಬಿಟ್ಟು ಉಳಿದ ಪದಗಳು ಅನುವೃತ್ತವಾಗುತ್ತವೆ. ಹಾಗೆಯೇ "ಪ್ರತ್ಯಯಃ", "ಪರಶ್ಚ", "ಙ್ಯಾಪ್ ಪ್ರಾತಿಪದಿಕಾತ್", ಸಮರ್ಥಾನಾಮ್ ಪ್ರಥಮಾದ್ವಾ" ಮತ್ತು ತದ್ಧಿತಾಃ ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ -ಪ್ರಥಮಾನ್ತ ಕೇಶ ಶಬ್ದದ ನಂತರ ಮತ್ವರ್ಥದಲ್ಲಿ ವಿಕಲ್ಪದಿಂದ 'ವ' ಪ್ರತ್ಯಯವು ಬರುತ್ತದೆ. ಈ ಪ್ರತ್ಯಯವು ಮತ್ವರ್ಥದ ಕಾರ್ಯವನ್ನು ಮಾಡಲು ಕೇಶ ಶಬ್ದದ ನಂತರ ಪ್ರವೃತ್ತವಾಗುತ್ತದೆ.

ಉದಾ-ಕೇಶವಃ-'ಕೇಶಾಃ ಅಸ್ಯ ಸನ್ತಿ' ಇತಿ ಎಂಬುದು ಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ 'ವ' ಪ್ರತ್ಯಯುವು ಬರುತ್ತದೆ. "ಪ್ರಾಣಿಸ್ಥಾದಾತೋ ಲಜನ್ಯತರಸ್ಯಾಮ್।(5.2.96)" ಸೂತ್ರದಿಂದ 'ಅನ್ಯತರಸ್ಯಾಮ್' ಎಂಬ ಪದವು ಈ ಸೂತ್ರದಲ್ಲಿ ಅನುವೃತ್ತವಾಗುವುದರಿಂದ 'ವ' ಪ್ರತ್ಯಯವು ಬಾರದ ಪಕ್ಷದಲ್ಲಿ ಮತುಪ್ ಪ್ರತ್ಯಯವು ಬರುವುದಕ್ಕೆ ಅವಕಾಶವಿದ್ದರೂ ಮತ್ತೇ ಪ್ರಕೃತ ಸೂತ್ರದಲ್ಲಿ ಅನ್ಯತರಸ್ಯಾಮ್ ಎಂದು ಪ್ರಯೋಗವಾಗಿರುವುದರಿಂದ, "ಅತ ಇನಿ-ಠನೌ।(5.2.115)" ಎಂಬ ಮುಂಬರುವ ಸೂತ್ರದಿಂದ ವಿಧಿಸಲಾಗಿರುವ 'ಇನಿ' ಮತ್ತು 'ಠನ್' ಪ್ರತ್ಯಯಗಳೂ ಕೂಡ ಬರಬಹುದು ಎಂದು ಸೂಚಿಸಲಾಗಿದೆ. ಆದ್ದರಿಂದ 'ವ' ಪ್ರತ್ಯಯವು ಬಾರದ ಪಕ್ಷದಲ್ಲಿ ಕೇಶೀ(ಇನಿ ಪ್ರತ್ಯಯ), ಕೇಶಿಕಃ(ಠನ್ ಪ್ರತ್ಯಯ), ಕೇಶವಾನ್(ಮತುಪ್ ಪ್ರತ್ಯಯ) ಎಂಬ ರೂಪಗಳು ಕೂಡ ಸಿದ್ಧಿಸುತ್ತವೆ.

1.ವಾ॥ ಅನ್ಯೇಭ್ಯೋಽಪಿ ದೃಷ್ಯತೇ) ಮಣಿವಃ॥

ಉದಾ–ಮಣಿವಃ(ಒಂದು ಜಾತಿಗೆ ಸೇರಿದ ಸರ್ಪದ ಹೆಸರು). 'ಮಣಿಃ ಅಸ್ಯ ಅಸ್ತಿ' ಇತಿ ಎಂಬುದು ಲೌಕಿಕ ವಿಗ್ರಹ ವಾಕ್ಯ. ಪ್ರಕೃತ ವಾರ್ತಿಕದಿಂದ ಮಣಿ ಶಬ್ದದ ನಂತರ 'ವ' ಶಬ್ದವು ಬರುತ್ತದೆ.

2. (ವಾ॥ ಅರ್ಣಸೋ ಲೋಪಶ್ಚ) ಅರ್ಣವಃ।

ಪ್ರಥಮಾನ್ತವಾದ ಅರ್ಣಸ್ ಶಬ್ದದ ನಂತರ ಮತ್ವರ್ಥದಲ್ಲಿ 'ವ' ಪ್ರತ್ಯಯವು ಬರುತ್ತದೆ ಮತ್ತು ಅರ್ಣಸ್ ಎಂಬ ಪ್ರಾತಿಪದಿಕದಲ್ಲಿರುವ 'ಸ್' ಕಾರವು ಲೋಪವಾಗುತ್ತದೆ.

ಉದಾ–ಅರ್ಣವಃ–ಸಮುದ್ರ–'ಅರ್ಣಃ ಅಸ್ಯ ಅಸ್ತಿ' ಇತಿ ಎಂಬುದು ಲೌಕಿಕ ವಿಗ್ರಹ ವಾಕ್ಯ. ಪ್ರಕೃತ ವಾರ್ತಿಕದಿಂದ ಪ್ರಾತಿಪದಿಕದ 'ಸ್' ಕಾರಕ್ಕೆ ಲೋಪ ಬರುತ್ತದೆ ಮತ್ತು 'ವ' ಎಂಬ ತದ್ಧಿತ ಪ್ರತ್ಯಯವು ಸೇರಿಸಲಾಗುತ್ತದೆ. ಇದನ್ನು ಸುಬನ್ತ ಮಾಡಿದಾಗ ಅರ್ಣವಃ ಎಂಬ ರೂಪವು ಸಿದ್ಧವಾಗುತ್ತದೆ.

**(ಇನಿ ಮತ್ತು ಠನ್ ಪ್ರತ್ಯಯಗಳನ್ನು ವಿಧಿಸುವ ಸೂತ್ರ)**

**ಸೂತ್ರ–1193.–ಅತ ಇನಿ–ಠನೌ।(5.2.115)**

ವೃತ್ತಿ –ದಣ್ಡೀ, ದಣ್ಡಿಕಃ॥

ಪ. ಛೇ –ಅತಃ, ಇನಿ–ಠನೌ।

ಅ. ವೃ. –"ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್" ಸೂತ್ರದಿಂದ ಮತುಪ್ ಶಬ್ದವನ್ನು ಬಿಟ್ಟು ಉಳಿದ ಪದಗಳು ಅನುವೃತ್ತವಾಗುತ್ತವೆ. ಹಾಗೆಯೇ "ಪ್ರತ್ಯಯಃ", "ಪರಶ್ಚ", "ಙ್ಯಾಪ್ ಪ್ರಾತಿಪದಿಕಾತ್", ಸಮರ್ಥಾನಾಮ್ ಪ್ರಥಮಾದ್ವಾ" ಮತ್ತು ತದ್ಧಿತಾಃ ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ –ಹ್ರಸ್ವ 'ಅ' ಕಾರಾಂತ ಪ್ರಥಮಾವಿಭಕ್ತಿಯ ಸಮರ್ಥ ಶಬ್ದದ ನಂತರ ಇನಿ ಮತ್ತು ಠನ್ ಪ್ರತ್ಯಯಗಳು ಬರುತ್ತವೆ. 'ಇನಿ'ಯಲ್ಲಿ 'ಇನ್' ಮಾತ್ರ ಉಳಿಯುತ್ತದೆ. 'ಠನ್'ನಲ್ಲಿ 'ಠ' ಮಾತ್ರ ಉಳಿಯುತ್ತದೆ. ಅದಕ್ಕೆ "ಠಸ್ಯೇಕಃ" ಎಂಬ ಸೂತ್ರದಿಂದ ಇಕ ಎಂಬ ಆದೇಶವು ಬರುತ್ತದೆ.

ಉದಾ–ದಣ್ಡೀ, (ದಣ್ಡ ಉಳ್ಳವನು)–'ದಣ್ಡಃ ಅಸ್ಯ ಅಸ್ತಿ ಇತಿ ದಣ್ಡೀ' ಪ್ರಕೃತ ಸೂತ್ರದಿಂದ ಇನಿ(ಇನ್) ಪ್ರತ್ಯಯ ಬಂದು ದಣ್ಡ+ಜಸ್+ಇನ್ ಎಂದಿದ್ದಾಗ ಸುಪ್ ಲೋಪವಾಗಿ ದಣ್ಡ ಎಂಬಲ್ಲಿರುವ ಅಂತ್ಯ 'ಅ'ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು ದಣ್ಡ್+ಇನ್ ಎಂದಾಗಿ ಸುಬಂತ ಮಾಡಿದ ಮೇಲೆ ದಣ್ಡೀ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ–ದಣ್ಡಿಕಃ (ದಣ್ಡ ಉಳ್ಳವನು)–ಇದೇ ಅರ್ಥದಲ್ಲಿ ಠನ್ 'ಠ' ಪ್ರತ್ಯಯ ಬಂದು ಅದಕ್ಕೆ ಇಕ ಆದೇಶ ಬಂದು ದಣ್ಡ+ಇಕ ಎಂದಿದ್ದಾಗ ದಣ್ಡ ಶಬ್ದದ ಅಂತ್ಯ

'ಅ'ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪಬಂದು ದಣ್ಡ್+ಇಕ ಎಂದಿದ್ದಾಗ ಸುಬಂತ ಮಾಡಿದ ಮೇಲೆ ದಣ್ಡಿಕಃ ಎಂಬ ರೂಪವು ಸಿದ್ಧವಾಗುತ್ತದೆ.

**(ಇನಿ ಮತ್ತು ಠನ್ ಪ್ರತ್ಯಯಗಳನ್ನು ವಿಧಿಸುವ ಮತ್ತೊಂದು ಸೂತ್ರ)**

**ಸೂತ್ರ-1194.-ವ್ರೀಹ್ಯಾದಿಭ್ಯಶ್ಚ।(5.2.116)**

ವೃತ್ತಿ -ವ್ರೀಹೀ। ವ್ರೀಹಿಕಃ।

ಪ. ಛೇ -ವ್ರೀಹ್ಯಾದಿಭ್ಯಃ, ಚ।

ಅ. ವೃ. -"ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್" ಸೂತ್ರದಿಂದ ಮತುಪ್ ಶಬ್ದವನ್ನು ಬಿಟ್ಟು ಉಳಿದ ಪದಗಳು ಅನುವೃತ್ತವಾಗುತ್ತವೆ. "ಅತ ಇನಿ-ಠನೌ" ಎಂಬ ಸೂತ್ರದಿಂದ ಇನಿ-ಠನೌ ಎಂಬ ಪದವು ಅನುವೃತ್ತವಾಗುತ್ತದೆ. ಹಾಗೆಯೇ ಹಾಗೆಯೇ "ಪ್ರತ್ಯಯಃ", "ಪರಶ್ಚ", "ಙ್ಯಾಪ್ ಪ್ರಾತಿಪದಿಕಾತ್", ಸಮರ್ಥಾನಾಮ್ ಪ್ರಥಮಾದ್ವಾ" ಮತ್ತು ತದ್ಧಿತಾಃ ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ ವ್ರೀಹ್ಯಾದಿ ಗಣದಲ್ಲಿ ಹೇಳಿರುವ ಶಬ್ದಗಳ ನಂತರವೂ ಕೂಡಾ ಮತ್ವರ್ಥದಲ್ಲಿ ಇನಿ ಮತ್ತು ಠನ್ ಪ್ರತ್ಯಯಗಳು ಬರುತ್ತವೆ.

ಉದಾ-ವ್ರೀಹೀ (ಧಾನ್ಯಗಳನ್ನು ಉಳ್ಳವನು)-'ವ್ರೀಹಯಃ ಅಸ್ಯ ಸನ್ತಿ' ಎಂಬುದು ಲೌಕಿಕ ವಿಗ್ರಹ ವಾಕ್ಯ. ವ್ರೀಹಿ+ಜಸ್ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ಇನಿ ಪ್ರತ್ಯಯವು ಬಂದು ಹಿಂದಿನಂತೆ "ಯಸ್ಯೇತಿಚ" ಎಂಬುದರಿಂದ 'ಇ'ಕಾರ ಲೋಪವಾಗಿ ವ್ರೀಹ್+ಇನ್ ಎಂದಿದ್ದಾಗ, ಸುಬಂತ ಮಾಡಿದಾಗ ವ್ರೀಹೀ ಎಂದು ರೂಪವು ಸಿದ್ಧವಾಗುತ್ತದೆ.

ಉದಾ-ವ್ರೀಹಿಕಃ (ಧಾನ್ಯಗಳನ್ನು ಉಳ್ಳವನು)-ಹಿಂದಿನಂತೆ ವ್ರೀಹಯಃ +ಜಸ್ ಎಂದಿದ್ದಾಗ ಠನ್(ಠ) ಪ್ರತ್ಯಯ ಬಂದು ಆ 'ಠ' ಪ್ರತ್ಯಯಕ್ಕೆ ಇಕ ಎಂಬ ಆದೇಶ ಬಂದು ವ್ರೀಹಿ+ಇಕ ಎಂದಿರುವಾಗ ವ್ರೀಹಿ ಯಲ್ಲಿಯ ಅಂತ್ಯ 'ಇ'ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು ವ್ರೀಹ್+ಇಕ=ವ್ರೀಹಿಕ ಎಂದಾಗಿ ಸುಬಂತ ಮಾಡಿದಾಗ ವ್ರೀಹಿಕಃ ಎಂದು ರೂಪವು ಸಿದ್ಧವಾಗುತ್ತದೆ.

**(ವಿನಿ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ -1195. ಅಸ್-ಮಾಯಾ-ಮೇಧಾ-ಸ್ರಜೋ-ವಿನಿಃ।(5.2.121)**

ವೃತ್ತಿ -ಯಶಸ್ವೀ, ಯಶಸ್ವಾನ್। ಮಾಯಾವೀ। ಮೇಧಾವೀ। ಸ್ರಗ್ವೀ।

ಪ. ಛೇ -ಅಸ್-ಮಾಯಾ-ಮೇಧಾ-ಸ್ರಜಃ,ವಿನಿಃ।

ಅ. ವೃ. -"ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್" ಸೂತ್ರದಿಂದ ಮತುಪ್ ಶಬ್ದವನ್ನು ಬಿಟ್ಟು ಉಳಿದ ಪದಗಳು ಅನುವೃತ್ತವಾಗುತ್ತವೆ. ಹಾಗೆಯೇ "ಪ್ರತ್ಯಯಃ", "ಪರಶ್ಚ", "ಙ್ಯಾಪ್ ಪ್ರಾತಿಪದಿಕಾತ್", ಸಮರ್ಥಾನಾಮ್ ಪ್ರಥಮಾದ್ವಾ" ಮತ್ತು "ತದ್ಧಿತಾಃ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ –ಪ್ರಥಮಾವಿಭಕ್ತಿತ್ಯಂತ ಅಸನ್ತ(ಅಸ್ ಶಬ್ದವನ್ನು ಅಂತ್ಯವಾಗಿ ಉಳ್ಳದು ಎಂದರ್ಥ) ಶಬ್ದಗಳು ಮತ್ತು ಮಾಯಾ, ಮೇಧಾ ಮತ್ತು ಸ್ರಜ್ ಶಬ್ದಗಳ ನಂತರ ಮತ್ವರ್ಥದಲ್ಲಿ ವಿನಿ ಪ್ರತ್ಯಯವು ಬರುತ್ತದೆ. ವಿನಿ ಯಲ್ಲಿ ವಿನ್ ಮಾತ್ರ ಉಳಿಯುತ್ತದೆ.

ಉದಾ–ಯಶಸ್ವೀ (ಯಶಸ್ಸು ಉಳ್ಳವನು)–'ಯಶಃ ಅಸ್ಯ ಅಸ್ತಿ ಇತಿ' ಅಥವಾ 'ಯಶಃ ಅಸ್ಮಿನ್ ಅಸ್ತಿ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಯಶಸ್+ಸು ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ವಿನಿ ಪ್ರತ್ಯಯವು ಬಂದು ಯಶಸ್+ಸು+ವಿನ್= ಯಶಸ್ವಿನ್ ಎಂದು ರೂಪವು ಸಿದ್ಧವಾಗುತ್ತದೆ. ಇದನ್ನು ಸುಬಂತ ಮಾಡಿದಾಗ ಯಶಸ್ವೀ ಎಂದು ರೂಪವು ಸಿದ್ಧವಾಗುತ್ತದೆ.

ಉದಾ–ಯಶಸ್ವಾನ್ (ಯಶಸ್ಸು ಉಳ್ಳವನು)–ಯಶ ಶಬ್ದಕ್ಕೆ ಮತುಪ್ ಪ್ರತ್ಯಯ ಬಂದಾಗ 'ಅ'ಕಾರವನ್ನು ಉಪಧೆಯಾಗಿ ಆಗುವುದರಿಂದ ಯಶಸ್ಸಿನ ಪರದಲ್ಲಿರುವಾಗ, "ಮಾದುಪಧಾಯಾಶ್ಚ ಮತೋರ್ವೋಽಯವಾದಿಭ್ಯಃ" ಎಂಬ ಸೂತ್ರದಿಂದ 'ಮತುಪ್'ನಲ್ಲಿರುವ ಮ–ಕಾರಕ್ಕೆ ವ–ಕಾರಾದೇಶವು ಬಂದು 'ಯಶಸ್ವತ್' ಎಂದಿರುತ್ತದೆ. ಇದಕ್ಕೆ ಸು ಪ್ರತ್ಯಯವನ್ನು ಸೇರಿಸಿದಾಗ "ಅತ್ವಸನ್ತಸ್ಯ ಚಾಽಧಾತೋಃ" ಎಂಬ ಸೂತ್ರದಿಂದ ಉಪಧೆಗೆ ದೀರ್ಘ ಬಂದು "ಉಗಿದಚಾಮ್ ಸರ್ವನಾಮಸ್ಥಾನೇಽಧಾತೋಃ" ಎಂಬ ಸೂತ್ರದಿಂದ ನುಮ್ ಆಗಮ ಬಂದು "ಹಲ್ಙ್ಯಾದಿ ಲೋಪ" ಮತ್ತು "ಸಂಯೋಗಾಂತಸ್ಯ ಲೋಪಃ" ಎಂಬ ಸೂತ್ರದಿಂದ ಸಂಯೋಗಾಂತ ಲೋಪವಾಗಿ ಯಶಸ್ವಾನ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ–ಮಾಯಾವೀ–(ಮಾಯೆಯುಳ್ಳವನು ಅಥವಾ ವಂಚಕನು)–'ಮಾಯಾ ಅಸ್ಯ(ಅಸ್ಮಿನ್) ಅಸ್ತಿ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಮಾಯಾ+ಸು ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ವಿನಿ(ವಿನ್) ಪ್ರತ್ಯಯ ಬಂದು ಪ್ರಾತಿಪದಿಕವಾದ ಮೇಲೆ ಸುಪ್ ಲೋಪವಾದ ಮೇಲೆ; ಮಾಯಾ+ವಿನ್= ಮಾಯಾವಿನ್ ಎಂದಾದ ಮೇಲೆ ಸುಬಂತ ಮಾಡಿದಾಗ ಮಾಯಾವೀ ಎಂದಾಗುತ್ತದೆ.

ಉದಾ–ಮೇಧಾವೀ–(ಧಾರಣಾ ಶಕ್ತಿಉಳ್ಳ ಬುದ್ಧಿವಂತ) ಹಿಂದಿನ ಉದಾಹರಣೆ ಯಲ್ಲಿಯಂತೆಯೇ ಪ್ರಕ್ರಿಯೆ ನಡೆದು ಮೇಧಾ+ವಿನ್ ಎಂದಿದ್ದಾಗ ಸುಬಂತ ಮಾಡಿದ ಮೇಲೆ ಮೇಧಾವೀ ಎಂದು ರೂಪವು ಸಿದ್ಧವಾಗುತ್ತದೆ.

ಉದಾ–ಸ್ರಗ್ವೀ–(ಮಾಲೆಉಳ್ಳವನು)–ಇಲ್ಲಿಯೂ ಕೂಡ ಹಿಂದಿನಂತೆ ಪ್ರಕ್ರಿಯೆ ನಡೆದು ಸ್ರಜ್+ವಿನ್ ಎಂದಿದ್ದಾಗ, "ಸ್ವಾದಿಷ್ವಸರ್ವನಾಮಸ್ಥಾನೇ" ಎಂಬ ಸೂತ್ರದಿಂದ ಪದವಾಗಿರುವುದರಿಂದ "ಚೋಃಕುಃ" ಎಂಬ ಸೂತ್ರದಿಂದ 'ಜ್' ಕಾರಕ್ಕೆ ಕುತ್ವ(ಗ್) ಬಂದು ಸ್ರಗ್ವಿವಿನ್ ಎಂದಾಗುತ್ತದೆ. ಸುಬಂತ ಮಾಡಿದಾಗ ಸ್ರಗ್ವೀ ಎಂದಾಗುತ್ತದೆ.

**(ಗ್ಮಿನಿ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ –1196. ವಾಚೋ ಗ್ಮಿನಿಃ।(5.2.124)**

ವೃತ್ತಿ –ವಾಗ್ಮೀ।

ಪ. ಛೇ –ವಾಚಃ, ಗ್ಮಿನಿಃ।

ಅ.ವೃ. –"ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್" ಸೂತ್ರದಿಂದ ಮತುಪ್ ಶಬ್ದವನ್ನು ಬಿಟ್ಟು ಉಳಿದ ಪದಗಳು ಅನುವೃತ್ತವಾಗುತ್ತವೆ. ಹಾಗೆಯೇ "ಪ್ರತ್ಯಯಃ", "ಪರಶ್ಚ", "ಙ್ಯಾಪ್ ಪ್ರಾತಿಪದಿಕಾತ್", ಸಮರ್ಥಾನಾಮ್ ಪ್ರಥಮಾದ್ವಾ" ಮತ್ತು "ತದ್ಧಿತಾಃ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ–ವಾಚ ಎಂಬ ಸಮರ್ಥ ಪ್ರಥಮಾನ್ತ ಶಬ್ದದ ನಂತರ ಮತ್ವರ್ಥದಲ್ಲಿ ಗ್ಮಿನಿ ಪ್ರತ್ಯಯವು ಬರುತ್ತದೆ. (ಗ್ಮಿನಿಯಲ್ಲಿ ಗ್ಮಿನ್ ಮಾತ್ರ ಉಳಿಯುತ್ತದೆ).

ಉದಾ–ವಾಗ್ಮೀ–(ಒಳ್ಳೆಯ ಮಾತುವುಳ್ಳವನು)–'ಪ್ರಶಸ್ತಾ ವಾಕ್ ಅಸ್ಯ ಅಸ್ತಿ' ಎಂಬುದು ಲೌಕಿಕ ವಿಗ್ರಹವಾಕ್ಯ. ವಾಚ್+ಸು ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಥಮಾನ್ತ ವಾಚ್ ಪ್ರಾತಿಪದಿಕದ ನಂತರ ಮತುಪ್ ಅರ್ಥದಲ್ಲಿ ಗ್ಮಿನ್ ಪ್ರತ್ಯಯ ಬಂದು ಸುಪ್ ಲೋಪವಾದ ಮೇಲೆ, ವಾಚ್+ಗ್ಮಿನ್ ಎಂದಿರುತ್ತದೆ. "ಲಶಕ್ವತದ್ಧಿತೇ" ಎಂಬ ಸೂತ್ರದಿಂದ ಇದು ತದ್ದಿತ ಪ್ರತ್ಯಯವಲ್ಲವಾದ್ದರಿಂದ ಗ್ ಕಾರಕ್ಕೆ ಲೋಪವು ಬರುವುದಿಲ್ಲ. ಹಿಂದಿನಂತೆ ಇದಕ್ಕೆ ಪದತ್ವ ಬಂದಿರುವುದರಿಂದ "ಚೋಃ ಕುಃ" ಎಂಬುದರಿಂದ ಕುತ್ವ ಬಂದು, ಅಂದರೆ 'ಚ್' ಕಾರಕ್ಕೆ 'ಕ್' ಕಾರವು ಬಂದು "ಝಲಾಂ ಜಶೋಽನ್ತೇ" ಎಂಬ ಸೂತ್ರದಿಂದ 'ಕ್' ಕಾರಕ್ಕೆ 'ಗ್' ಕಾರವು ಬಂದು ವಾಗ್+ಗ್ಮಿನ್ ಎಂದಿರುತ್ತದೆ. "ಝರೋಝರಿಸವರ್ಣೇ" ಎಂಬ ಸೂತ್ರದಿಂದ ಗ್–ಕಾರಕ್ಕೆ ಲೋಪವು ಬರುವುದಿಲ್ಲ. ಇದೇ ರೀತಿಯಲ್ಲಿ ಎರಡನೇ ಗ್–ಕಾರಕ್ಕೂ 'ಹಲ್' ಪರದಲ್ಲಿ ಇಲ್ಲದೇ ಇರುವುದರಿಂದ ಅದೂ ಲೋಪವಾಗುವುದಿಲ್ಲ. ವಾಗ್ಗ್ಮೀ ಎಂದೇ ಹೇಳಬೇಕು. ಆದರೂ ಕೆಲವು ವೈಯಾಕರಣಿಗಳು ಒಂದು ಗ್–ಕಾರದ ರೂಪವನ್ನು ಮಾನ್ಯ ಮಾಡುತ್ತಾರೆ. ಆದ್ದರಿಂದ ವಾಗ್ಮೀ ಎಂದು ರೂಪವು ಸಿದ್ಧವಾಗಿದೆ.

**(ಅಚ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ–1197.–ಅರ್ಶ ಆದಿಭ್ಯೋಽಚ್।(5.2.127)**

ವೃತ್ತಿ –ಅರ್ಶಃ ಅಸ್ಯ ವಿದ್ಯತೇ–ಅರ್ಶಸಃ। ಆಕೃತಿಗಣೋಽಯಮ್।

ಪ. ಛೇ –ಅರ್ಶ ಆದಿಭ್ಯಃ, ಅಚ್।

ಅ. ವೃ.–"ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್" ಸೂತ್ರದಿಂದ ಮತುಪ್ ಶಬ್ದವನ್ನು ಬಿಟ್ಟು ಉಳಿದ ಪದಗಳು ಅನುವೃತ್ತವಾಗುತ್ತವೆ. ಹಾಗೆಯೇ "ಪ್ರತ್ಯಯಃ", "ಪರಶ್ಚ", "ಙ್ಯಾಪ್ ಪ್ರಾತಿಪದಿಕಾತ್", ಸಮರ್ಥಾನಾಮ್ ಪ್ರಥಮಾದ್ವಾ" ಮತ್ತು "ತದ್ಧಿತಾಃ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ :–ಅರ್ಶಸ್ ಆದಿ ಆಕೃತಿ ಗಣದಲ್ಲಿ ಪಠಿತ ಶಬ್ದಗಳ ನಂತರ ಮತ್ವರ್ಥದಲ್ಲಿ ಅಚ್ ಪ್ರತ್ಯಯವು ಬರುತ್ತದೆ. ಅಚ್‌ನಲ್ಲಿ 'ಅ' ಮಾತ್ರ ಉಳಿಯುತ್ತದೆ. (ಅಸ್–ಮಾಯಾ–ಮೇಧಾ–ಸ್ರಜೋ–ವಿನಿಃ ಎಂಬ ಸೂತ್ರಕ್ಕೆ ಇದು ಅಪವಾದ ಸೂತ್ರವಾಗಿದೆ.)

ಉದಾ–ಅರ್ಶಸಃ–(ಮೂಲ ಶಂಕ ರೋಗವುಳ್ಳವನು)–'ಅರ್ಶಃ ಅಸ್ಯ ಅಸ್ತಿ ಇತಿ'

ಎಂಬುದು ಲೌಕಿಕ ವಿಗ್ರಹ ವಾಕ್ಯ. ಅರ್ಶಸ್ +ಸು ಎಂದಿರುವಾಗ, ಪ್ರಕೃತ ಸೂತ್ರದಿಂದ ಅಚ್(ಅ) ಪ್ರತ್ಯಯವು ಬಂದು ಪ್ರಾತಿಪದಿಕವಾದ ಮೇಲೆ ಸುಪ್ ಲೋಪವಾಗಿ ಅರ್ಶಸ್+ಅ ಎಂದಿರುತ್ತದೆ. ಇದನ್ನು ಸುಬಂತ ಮಾಡಿದಾಗ ಅರ್ಶಸಃ ಅಕಾರಂತ ರೂಪವಾಗುತ್ತದೆ.

ಉದಾ–'ಆಕೃತಿಗಣೋಽಯಮ್' ಈ ಗಣವು ಆಕೃತಿಗಣವಾಗಿರುವುದರಿಂದ ಈ ಗಣದಲ್ಲಿ ಪಠಿತವಾಗದ ಶಬ್ದಗಳು ಸಹ ಈ ಗಣದಲ್ಲಿ ಪಠಿತ ಶಬ್ದಗಳನ್ನು ಅನುಸರಿಸುತ್ತವೆ. ಉದಾಹರಣೆ–'ಪಾಪಂ ಅಸ್ಯ ಅಸ್ತಿ ಇತಿ ಪಾಪಃ'.

**(ಯುಸ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ–1198.–ಅಹಂ–ಶುಭಮೋರ್ಯುಸ್। (5–2–140)**

ವೃತ್ತಿ –ಅಹಂಯುಃ–ಅಹಂಕಾರವಾನ್। ಶುಭಂಯುಃ–ಶುಭಾನ್ವಿತಃ॥

**॥ ಇತಿ ಮತ್ವರ್ಥೀಯ (56) ಪ್ರಕರಣಮ್॥**

ಪ. ಛೇ –ಅಹಂ–ಶುಭಮೋಃ, ಯುಸ್।

ಅ. ವೃ. –"ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್" ಸೂತ್ರದಿಂದ ಮತುಪ್ ಶಬ್ದವನ್ನು ಬಿಟ್ಟು ಉಳಿದ ಪದಗಳು ಅನುವೃತ್ತವಾಗುತ್ತವೆ. ಹಾಗೆಯೇ "ಪ್ರತ್ಯಯಃ", "ಪರಶ್ಚ", "ಙ್ಯಾಪ್ ಪ್ರಾತಿಪದಿಕಾತ್", ಸಮರ್ಥಾನಾಮ್ ಪ್ರಥಮಾದ್ವಾ" ಮತ್ತು "ತದ್ಧಿತಾಃ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ –ಅಹಂ ಮತ್ತು ಶುಭಂ ಈ ಎರಡು ಅವ್ಯಯಗಳ ನಂತರ ಮತ್ವರ್ಥದಲ್ಲಿ ಯುಸ್ ಪ್ರತ್ಯಯವು ಬರುತ್ತದೆ. ಯುಸ್–ನಲ್ಲಿ 'ಯು' ಮಾತ್ರ ಉಳಿಯುತ್ತದೆ. ಇದು 'ಸಿತ್' ಆಗಿರುವುದರಿಂದ "ಸಿತಿಚ" ಸೂತ್ರದಿಂದ ಪದ ಸಂಜ್ಞೆಯನ್ನು ಪಡೆಯುತ್ತದೆ.

ಉದಾ–ಅಹಂಯುಃ (ಅಹಂಕಾರ ಉಳ್ಳವನು) 'ಅಹಂ ಅಸ್ಯ ಅಸ್ತಿ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಅಹಂ ಎಂಬುದು 'ಮ'ಕಾರಾನ್ತ ಅವ್ಯಯ. ಇದರ ಪರದಲ್ಲಿ ಪ್ರಕೃತ ಸೂತ್ರದಿಂದ ಯುಸ್ (ಯು) ಪ್ರತ್ಯಯವು ಬರುತ್ತದೆ. ಅಹಮ್+ಯು ಎಂದಿದ್ದಾಗ, ಇದಕ್ಕೆ ಪದಸಂಜ್ಞೆ ಇರುವುದರಿಂದ 'ಮ'ಕಾರಕ್ಕೆ "ಮೋನುಸ್ವಾರಃ" ಎಂಬ ಸೂತ್ರದಿಂದ ಅನುಸ್ವಾರ ಬಂದು, ಅದಕ್ಕೆ "ವಾ ಪದಾನ್ತಸ್ಯ" ಎಂಬುದರಿಂದ ವಿಕಲ್ಪದಿಂದ ಪರಸವರ್ಣ ಬಂದು ಅಹಂಯುಃ ಎಂದು ಉಕಾರನ್ತ ಶಬ್ದವಾಗುತ್ತದೆ. ಪರಸವರ್ಣ ಬಾರದ ಪಕ್ಷದಲ್ಲಿ ಅನುಸ್ವಾರವೇ ಉಳಿಯುತ್ತದೆ. ಆಗ ಅಹಂಯುಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ–ಶುಭಂಯುಃ–(ಮಂಗಳ ಸ್ವಭಾವಳ್ಳವನು)–ಇದರ ಪ್ರಕ್ರಿಯೆಯು ಹಿಂದಿನಂತೆ ಇರುತ್ತದೆ. ಆದ್ದರಿಂದ ಪರಸವರ್ಣ ಬಂದಾಗ ಶುಭಂಯುಃ ಎಂಬ ಉಕಾರನ್ತ ಶಬ್ದವಾಗುತ್ತದೆ. ಪರಸವರ್ಣ ಬಾರದಿದ್ದಾಗ ಶುಭಂಯುಃ ಎಂದು ರೂಪವು ಸಿದ್ಧವಾಗುತ್ತದೆ.

**(ಮತ್ವರ್ಥೀಯ (56) ಪ್ರಕರಣವು ಮುಗಿಯಿತು)**

# ಪ್ರಕರಣ-57: ಪ್ರಾಗ್ದಿಶೀಯಾಃ

(ಸೂ. ಸಂ. 1198-1218)

(ವಿಭಕ್ತಿ ಸಂಜ್ಞೆಯನ್ನು ವಿಧಿಸುವ ಸೂತ್ರ)

**ಸೂತ್ರ-1199-ಪ್ರಾಗ್ದಿಶೋ ವಿಭಕ್ತಿಃ।(5.3.1)**

ವೃತ್ತಿ-ದಿಕ್ಶಬ್ದೇಭ್ಯಃ ಇತ್ಯತಃ ಪ್ರಾಕ್ ವಕ್ಷ್ಯಮಾಣಾಃ ಪ್ರತ್ಯಯಾಃ ವಿಭಕ್ತಿಸಂಜ್ಞಾಃ ಸ್ಯುಃ।

ಪ. ಛೇ-ಪ್ರಾಕ್, ದಿಶಃ, ವಿಭಕ್ತಿಃ।

ಅರ್ಥ -"ದಿಕ್ಛಬ್ಧ್ಯಃ ಸಪ್ತಮೀಪಞ್ಚಮೀಪ್ರಥಮಾಭ್ಯೋ ದಿಕ್‌ದೇಶಕಾಲೇಷ್ವಸ್ತಾತಿಃ" ಎಂಬ ಸೂತ್ರಕ್ಕಿಂತ ಪೂರ್ವದಲ್ಲಿ ಹೇಳಲಾಗಿರುವ ಪ್ರತ್ಯಯಗಳಿಗೆ ವಿಭಕ್ತಿಸಂಜ್ಞೆಯು ಬರುತ್ತದೆ. ಇದರಿಂದ "ನ ವಿಭಕ್ತೌ ತುಸ್ಮಾಃ" ಎಂಬ ಸೂತ್ರದಿಂದ ಆಗುವ ಇತ್ವ ನಿಷೇಧ ಮತ್ತು "ತ್ಯದಾದೀನಾಮಃ" ಸೂತ್ರದಿಂದ ಬರುವ ಅತ್ವ ಮೊದಲಾದವುಗಳೇ ಈ ಸೂತ್ರದ ಪ್ರಯೋಜನವಾಗಿದೆ.

(ಪ್ರಾಗ್ದಿಶೀಯ-ಅಧಿಕಾರ ಸೂತ್ರ)

**ಸೂತ್ರ-1200.-ಕಿಂ-ಸರ್ವನಾಮ-ಬಹುಭ್ಯೋಽದ್ವ್ಯಾದಿಭ್ಯಃ।(5.3.2)**

ವೃತ್ತಿ -ಕಿಮಃ ಸರ್ವನಾಮ್ನಃ ಬಹುಶಬ್ದಾಚ್ಚೇತಿ ಪ್ರಾಗ್ದಿಶಃ ಅಧಿಕ್ರಿಯತೇ।

ಪ.ಛೇ -ಕಿಂ-ಸರ್ವನಾಮ-ಬಹುಭ್ಯಃ, ಅದ್ವ್ಯಾದಿಭ್ಯಃ।

ಅ.ವೃ.-"ಪ್ರಾಗ್ದಿಶೋ ವಿಭಕ್ತಿಃ" ಎಂಬ ಸೂತ್ರದಿಂದ ಪ್ರಾಕ್ ಮತ್ತು ದಿಶಃ ಎಂಬ ಪದಗಳು ಅನುವೃತ್ತವಾಗುತ್ತವೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್ ಪ್ರಾತಿಪದಿಕಾತ್", ಸಮರ್ಥಾನಾಮ್ ಪ್ರಥಮಾದ್ವಾ" ಮತ್ತು "ತದ್ಧಿತಾಃ" ಎಂಬುವು ಅಧಿಕಾರ ಸೂತ್ರಗಳಾಗಿವೆ. "ದಿಕ್ಛಬ್ದೇಭ್ಯಃ..." ಸೂತ್ರದವರೆಗೆ ಕಿಮಃ, ಸರ್ವನಾಮ್ನಃ, ಬಹು ಶಬ್ದಾತ್, ಈ ಮೂರು ಪಂಚಮ್ಯನ್ತ ಶಬ್ದಗಳು ಅನುವೃತ್ತವಾಗುತ್ತವೆ.

ಅರ್ಥ -'ದ್ವಿ'ಮೊದಲಾದವುಗಳಿಂಗಿತ ಭಿನ್ನವಾದ ಸರ್ವನಾಮ ಸಂಜ್ಞೆಯನ್ನು ಹೊಂದಿದ ಶಬ್ದಗಳು, ಕಿಮ್ ಶಬ್ದ ಮತ್ತು ಬಹು ಶಬ್ದ ಇವುಗಳಿಗಿಂತ ಪರದಲ್ಲೇ ಪ್ರಾಗ್ದಿಶೀಯ ಪ್ರತ್ಯಯಗಳು ಬರುತ್ತವೆ ಎಂದು ಅಧಿಕಾರಮಾಡಲಾಗಿದೆ.

(ತಸಿಲ್-ಆದೇಶವನ್ನು ವಿಧಿಸುವ ಸೂತ್ರ)

**ಸೂತ್ರ-1201.-ಪಞ್ಚಮ್ಯಾಸ್ತಸಿಲ್।(5.3.7)**

ವೃತ್ತಿ -ಪಞ್ಚಮ್ಯನ್ತೇಭ್ಯಃ ಕಿಮಾದಿಭ್ಯಃ ತಸಿಲ್ ವಾ ಸ್ಯಾತ್।

ಪ. ಛೇ -ಪಞ್ಚಮ್ಯಾಃ, ತಸಿಲ್।

ಅ.ವೃ.-"ಕಿಂ-ಸರ್ವನಾಮ-ಬಹುಭ್ಯೋಽದ್ವ್ಯಾದಿಭ್ಯಃ" ಎಂಬ ಸೂತ್ರವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್ ಪ್ರಾತಿಪದಿಕಾತ್",

ಸಮರ್ಥಾನಾಮ್ ಪ್ರಥಮಾದ್ವಾ" ಮತ್ತು "ತದ್ಧಿತಾಃ" ಎಂಬುವು ಅಧಿಕಾರ ಸೂತ್ರಗಳಾಗಿವೆ.

ಅರ್ಥ–'ದ್ವಿ' ಮೊದಲಾದ ಶಬ್ದಗಳಿಗಿಂತ ಭಿನ್ನವಾದ ಪಞ್ಚಮ್ಯನ್ತ, ಕಿಮ್ , ಸರ್ವನಾಮ ಮತ್ತು ಬಹು ಮೊದಲಾದ ಪ್ರಾತಿಪದಿಕಗಳ ನಂತರ ವೈಕಲ್ಪಿಕವಾಗಿ ತಸಿಲ್ ಪ್ರತ್ಯಯವು ಬರುತ್ತದೆ. ತಸಿಲ್–ನಲ್ಲಿ ತಸ್ ಮಾತ್ರ ಉಳಿಯುತ್ತದೆ. "ನವಿಭಕ್ತೌತುಸ್ಮಾಃ" ಎಂಬ ಸೂತ್ರದಿಂದ ತಸ್–ನಲ್ಲಿರುವ 'ಸ್' ಕಾರಕ್ಕೆ ಇತ್ವ ಸಂಜ್ಞೆಯು ನಿಷೇಧಿಸಲಾಗಿದೆ.

**(ಕು ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ–1202.–ಕು ತಿಹೋಃ।(7.2.104)**

ವೃತ್ತಿ –ಕಿಮಃ ಕುಃ ಸ್ಯಾತ್ ತಾದೌ ಹಾದೌ ಚ ವಿಭಕ್ತೌ ಪರತಃ ಕುತಃ,ಕಸ್ಮಾತ್।

ಅ. ವೃ.–"ಅಷ್ಟನ ಆವಿಭಕ್ತೌ" ಎಂಬ ಸೂತ್ರದಿಂದ ವಿಭಕ್ತೌ ಎಂಬ ಪ್ರತ್ಯಯವು ಮತ್ತು "ಕಿಮಃಕಃ" ಎಂಬ ಸೂತ್ರದಿಂದ ಕಿಮಃ ಎಂಬ ಪದವು ಅನುವೃತ್ತವಾಗುತ್ತದೆ. "ಯಸ್ಮಿನ್ ವಿಧಿಃ ತದಾದಾವಲ್ಗ್ರಹಣೇ" ಎಂಬ ಸೂತ್ರದಿಂದ ತದಾದಿವಿಧಿಯಿಂದ ತ–ಕಾರಾದಿ ಮತ್ತು ಥ–ಕಾರಾದಿ ಎಂದು ಅರ್ಥಮಾಡಲಾಗುತ್ತದೆ.

ಅರ್ಥ –ತ್–ಕಾರಾದಿ ಮತ್ತು ಹ್–ಕಾರಾದಿ ಪ್ರತ್ಯಯಗಳ ಪರದಲ್ಲಿದ್ದಾಗ ಕಿಮ್ ಶಬ್ದದ ಸ್ಥಾನದಲ್ಲಿ 'ಕು' ಎಂಬ ಆದೇಶವು ಸರ್ವಾದೇಶವಾಗಿ ಬರುತ್ತದೆ. (ಇದು ಕಿಮಃಕಃ ಎಂಬ ಸೂತ್ರಕ್ಕೆ ಅಪವಾದವಾಗಿದೆ.)

ಉದಾ–ಕುತಃ ಮತ್ತು ವೈಕಲ್ಪಿಕ ರೂಪ ಕಸ್ಮಾತ್ (ಎಲ್ಲಿಂದ)–ಕಿಮ್ ಶಬ್ದಕ್ಕೆ ತಸ್ ಪ್ರತ್ಯಯ ಪರದಲ್ಲಿದ್ದಾಗ ತ–ಕಾರಾದಿ ಪ್ರತ್ಯಯವು ಪರದಲ್ಲಿದ್ದು ವಿಭಕ್ತಿ ಸಂಜ್ಞೆಯನ್ನು ಹೊಂದಿದೆ. ಆದ್ದರಿಂದ ಕಿಮ್ ಗೆ 'ಕು' ಆದೇಶವು ಬಂದು ಕುತಃ ಎಂದು ರೂಪವು ಸಿದ್ಧವಾಗಿದೆ. ಕುತಃ ಎಂಬುದು ಸ್ವರಾದಿ ಗಣದಲ್ಲಿ ಪಠಿತವಾಗಿದ್ದು ಅವ್ಯಯ ಸಂಜ್ಞೆಯನ್ನು ಪಡೆದಿದೆ. ಈ ಪ್ರತ್ಯಯವು (ತಸಿಲ್) ವೈಕಲ್ಪಿಕವಾಗಿರುವುದರಿಂದ, ತದಭಾವ ಪಕ್ಷದಲ್ಲಿ ಕಸ್ಮಾತ್ ಎಂದು ರೂಪವು ಸಿದ್ಧವಾಗುತ್ತದೆ.

**(ಇಶ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ–1203.–ಇದಮ ಇಶ್।(5.3.3)**

ವೃತ್ತಿ –ಪ್ರಾಗ್ದಿಶೀಯೇ ಪರೇ। ಇತಃ, ಅಸ್ಮಾತ್।

ಪ. ಛೇ –ಇದಮಃ, ಇಶ್।

ಅ. ವೃ. –"ಪ್ರಾಗ್ದಿಶೋ ವಿಭಕ್ತಿಃ" ಎಂಬ ಸೂತ್ರದಿಂದ ಪ್ರಾಕ್ ಮತ್ತು ದಿಶಃ ಎಂಬ ಪದಗಳು ಅನುವೃತ್ತವಾಗುತ್ತವೆ.

ಅರ್ಥ –ಪ್ರಾಗ್ದಿಶೀಯ ಪ್ರತ್ಯಯವು ಪರದಲ್ಲಿದ್ದಾಗ ಇದಮ್ ಶಬ್ದಕ್ಕೆ ಇಶ್ ಎಂಬುದು ಸರ್ವಾದೇಶವಾಗಿ ಬರುತ್ತದೆ.

ಉದಾ-ಇತಃ ಮತ್ತು ವೈಕಲ್ಪಿಕ ರೂಪ ಅಸ್ಮಾತ್-(ಇಲ್ಲಿಂದ) ಅಸ್ಮಾತ್ ಎಂಬುದು ಲೌಕಿಕವಿಗ್ರಹ. ಇದಮ್+ಙಸಿ ಎಂಬುದು ಅಲೌಕಿಕವಿಗ್ರಹ ವಾಕ್ಯ. "ಪಞ್ಚಮ್ಯಾಸ್ತಸಿಲ್" ಎಂಬ ಸೂತ್ರದಿಂದ ತಸಿಲ್(ತಸ್) ಪ್ರತ್ಯಯವು ಬಂದು, ಇದಮ್+ಙಸಿ+ತಸ್ ಎಂದಿದ್ದಾಗ, ಪ್ರಾತಿಪದಿಕವಾದ ಮೇಲೆ "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ ಸುಪ್ ಲೋಪವಾಗಿ ಇದಮ್+ತಸ್ ಎಂದಿರುತ್ತದೆ. ಪ್ರಕೃತ ಸೂತ್ರದಿಂದ ಇಶ್(ಇ) ಸರ್ವಾದೇಶವಾಗಿ ಬಂದು ಇ+ತಸ್=ಇತಸ್ ಎಂದಾಗುತ್ತದೆ. ಇದನ್ನು ಸುಬಂತ ಮಾಡಿ ಮತ್ತು ಅವ್ಯಯ ಮಾಡಿದಾಗ "ಅವ್ಯಯಾದಾಪ್‌ಸುಪಃ" ಎಂಬ ಸೂತ್ರದಿಂದ ಸುಪ್-ಲೋಪವಾಗುತ್ತದೆ. ಸ್-ಕಾರಕ್ಕೆ ರುತ್ವ ವಿಸರ್ಗಗಳು ಬಂದು ಇತಃ ಎಂದು ರೂಪ ಸಿದ್ಧವಾಗುತ್ತದೆ. ತಸಿಲ್ ಪ್ರತ್ಯಯವು ವೈಕಲ್ಪಿಕವಾಗಿರುವುದರಿಂದ ತದಭಾವ ಪಕ್ಷದಲ್ಲಿ ಅಸ್ಮಾತ್ ಎಂದು ರೂಪವು ಸಿದ್ಧವಾಗುತ್ತದೆ.

**(ಅನ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ 1204.-ಅನ್।(೫.೩.೫)**

ವೃತ್ತಿ -ಏತದಃ ಪ್ರಾಗ್ದಿಶೀಯೇ। ಅನೇಕಾಲ್ತ್ವಾತ್ ಸರ್ವಾದೇಶಃ। ಅತಃ,। ಅಮುತಃ। ಯತಃ। ತತಃ। ಬಹುತಃ। ದ್ವ್ಯಾದೇಸ್ತು ದ್ವಾಭ್ಯಾಮ್।

ಅ. ವ್ಯ.-"ಏತದಃ" ಎಂಬ ಸೂತ್ರ ಮತ್ತು "ಪ್ರಾಗ್ದಿಶೋ ವಿಭಕ್ತಿಃ" ಎಂಬ ಸೂತ್ರದಿಂದ ಪ್ರಾಗ್ದಿಶಃ ಎಂಬ ಪದಗಳು ಅನುವೃತ್ತವಾಗುತ್ತವೆ. "ಪ್ರತ್ಯಯಃ" ಮತ್ತು "ಪರಶ್ಚ" ಎಂಬ ಪದಗಳು ಅಧಿಕಾರ ಸೂತ್ರಗಳಾಗಿವೆ.

ಅರ್ಥ -ಪ್ರಾಗ್ದಿಶೀಯ ಪ್ರತ್ಯಯಗಳು ಪರದಲ್ಲಿದ್ದಾಗ, ಏತದ್ ಶಬ್ದಕ್ಕೆ ಅನ್ ಆದೇಶವು ಬರುತ್ತದೆ. ಅನ್ ವರ್ಣದಲ್ಲಿ ಯಾವ ವರ್ಣವು ಲೋಪವಾಗುವುದಿಲ್ಲ.

ಉದಾ-ಅತಃ ಮತ್ತು ವೈಕಲ್ಪಿಕ ರೂಪ ಏತಸ್ಮಾತ್-(ಇದರಿಂದ)-ಏತತ್+ಙಸಿ ಎಂಬಲ್ಲಿ "ಪಞ್ಚಮ್ಯಾಸ್ತಸಿಲ್" ಎಂಬ ಸೂತ್ರದಿಂದ ತಸಿಲ್(ತಸ್) ಪ್ರತ್ಯಯವು ಬಂದು, ಏತದ್+ಙಸಿ+ತಸ್ ಎಂದಿದ್ದಾಗ, ಪ್ರಾತಿಪದಿಕವಾದ ಮೇಲೆ, "ಸುಪೋಧಾತು ಪ್ರಾತಿಪದಿಕಯೋಃ" ಎಂಬುದರಿಂದ ಸುಪ್-ಗೆ ಲೋಪ ಬಂದು, ಪ್ರಕೃತ ಸೂತ್ರದಿಂದ ಏತದ್ ಶಬ್ದಕ್ಕೆ ಅನ್ ಸರ್ವಾದೇಶವಾಗಿ ಬಂದು, ಅನ್+ತಸ್ ಎಂದಿರುತ್ತದೆ. "ನಲೋಪಃ ಪ್ರಾತಿಪದಿಕಾನ್ತಸ್ಯ" ಎಂಬ ಸೂತ್ರದಿಂದ ನ-ಕಾರಕ್ಕೆ ಲೋಪ ಬಂದು, ಅತಸ್ ಎಂದಿರುತ್ತದೆ. "ಅವ್ಯಯಾದಾಪ್ ಸುಪಃ" ಎಂಬ ಸೂತ್ರದಿಂದ ಸುಪ್ ಲೋಪವಾಗಿ 'ಸ್'ಕಾರಕ್ಕೆ ರುತ್ವ ವಿಸರ್ಗಗಳು ಬಂದು, ಅತಃ ಎಂದು ರೂಪವು ಸಿದ್ಧವಾಗುತ್ತದೆ. ತಸಿಲ್(ತಸ್) ಪ್ರತ್ಯಯ ಬಾರದ ಪಕ್ಷದಲ್ಲಿ ಏತಸ್ಮಾತ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ-ಅಮುತಃ ಮತ್ತು ವೈಕಲ್ಪಿಕ ರೂಪ ಅಮುಷ್ಮಾತ್-(ಇದರಿಂದ)-ಅದಸ್+ಙಸಿ ಎಂದಿದ್ದಾಗ, ಹಿಂದಿನಂತೆ ಪ್ರಕ್ರಿಯೆ ನಡೆದು ತದಸ್+ಙಸಿ+ತಸ್ ಎಂದಿದ್ದಾಗ, ಹಿಂದಿನಂತೆ ಸುಪ್ ಲೋಪವಾಗಿ, ಅದಸ್+ತಸ್ ಎಂದಿದ್ದಾಗ, ತಸ್-ಗೆ ವಿಭಕ್ತಿಸಂಜ್ಞೆ ಇರುವುದರಿಂದ "ತ್ಯದಾದೀನಾಮಃ" ಎಂಬ ಸೂತ್ರದಿಂದ ಸ್-ಕಾರಕ್ಕೆ 'ಅ' ಕಾರವು

ಆದೇಶವಾಗಿ ಬಂದು, ಅದ+ಅ+ತಸ್ ಎಂದಿರುತ್ತದೆ. ಅದ+ಅ ಎಂಬಲ್ಲಿ "ಅತೋಗುಣೇ" ಎಂಬುದರಿಂದ ಪರರೂಪವು ಬಂದು ಅದ+ತಸ್ ಎಂದಿರುತ್ತದೆ. "ಅದಸೋಽಸೇರ್ದಾದು ದೋ ಮಃ" ಎಂಬ ಸೂತ್ರದಿಂದ ಉ-ಕಾರ ಮ-ಕಾರಗಳು ಬಂದು, ಅಮುತಸ್ ಎಂದಿರುತ್ತದೆ. "ಅವ್ಯಯಾದಾಪ್ ಸುಪಃ" ಎಂಬುದರಿಂದ ಸುಪ್ ಗೆ ಲೋಪ ಬಂದು ಸ್-ಕಾರಕ್ಕೆ ರುತ್ವ ವಿಸರ್ಗಗಳು ಬಂದು ಅಮುತಃ ಎಂದು ರೂಪವು ಸಿದ್ಧವಾಗುತ್ತದೆ. ವೈಕಲ್ಪಿಕವಾಗಿ ತಸಿಲ್(ತಸ್)ಪ್ರತ್ಯಯ ಬಾರದ ಪಕ್ಷದಲ್ಲಿ ಅಮುಷ್ಮಾತ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ-ಯತಃ, ತತಃ, ಬಹುತಃ,-(ಯಾವದರ ದೆಸೆಯಿಂದ)-ಯದ್ ಶಬ್ದದ ಮೇಲೆ ತಸಿಲ್ ಬಂದು ಯದ್+ತಸ್ ಎಂದಿರುತ್ತದೆ. "ತ್ಯದಾದೀನಾಮಃ" ಎಂಬುದರಿಂದ ಅತ್ವ ಮತ್ತು ಪರರೂಪಗಳು ಬಂದ ಮೇಲೆ ಯತಃ ಎಂದಾಗುತ್ತದೆ. ವೈಕಲ್ಪಿಕವಾದ ರೂಪ ಯಸ್ಮಾತ್ ಎಂದಿರುತ್ತದೆ. ತತ್ ಶಬ್ದದ ಮೇಲೆ ತಸಿಲ್ ಬಂದು, ಹಿಂದಿನಂತೆಯೇ ಪ್ರಕ್ರಿಯೆ ನಡೆದು, ತತಃ ಎಂದಾಗಿದೆ. ತಸ್ಮಾತ್ ಎಂಬುದು ವೈಕಲ್ಪಿಕ ರೂಪ. ಬಹು ಶಬ್ದದ ಮೇಲೆ ತಸಿಲ್ ಬಂದು ಹಿಂದಿನಂತೆಯೇ ಪ್ರಕ್ರಿಯೆ ನಡೆದು, ಬಹುತಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ-ದ್ವ್ಯಾದೇಸ್ತು ದ್ವಾಭ್ಯಾಮ್-(ಎರಡು ಪದಾರ್ಥಗಳ ದೆಸೆಯಿಂದ-ಪಞ್ಚಮ್ಯಂತಾರ್ಥ)-'ದ್ವಿ' ಮೊದಲಾದ ಶಬ್ದಗಳು ಸರ್ವನಾಮಗಳಾದರೂ "ಕಿಂಸರ್ವನಾಮ...ಅದ್ವ್ಯಾದಿಭ್ಯಃ" ಎಂಬ ಸೂತ್ರದಿಂದ ನಿಷೇಧವಾಗಿರುವುದರಿಂದ ತಸಿಲ್ ಮೊದಲಾದ ಪ್ರತ್ಯಯಗಳು ಬರುವುದಿಲ್ಲ. ದ್ವಾಭ್ಯಾಮ್ ಮೊದಲಾದ ಪಞ್ಚಮ್ಯಂತ ರೂಪಗಳು ಮಾತ್ರ ಇರುವವು.

**(ತಸಿಲ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1205.-ಪರ್ಯಭಿಭ್ಯಾಂ ಚ ।(5.3.9)**

ವೃತ್ತಿ -ಆಭ್ಯಾಂ ತಸಿಲ್ ಸ್ಯಾತ್। ಪರಿತಃ ಸರ್ವತಃ ಇತ್ಯರ್ಥಃ। ಅಭಿತಃ। ಉಭಯತಃ ಇತ್ಯರ್ಥಃ।

ಪ. ಛೇ -ಪರಿ-ಅಭಿಭ್ಯಾಂ, ಚ।

ಅ.ವೃ.-"ಪಞ್ಚಮ್ಯಾಸ್ತಸಿಲ್" ಎಂಬ ಸೂತ್ರದಿಂದ ತಸಿಲ್ ಎಂಬ ಪದವು ಅನುವೃತ್ತವಾಗುತ್ತದೆ. "ಪ್ರತ್ಯಯಃ", "ಪರಶ್ಚ", "ಙ್ಯಾಪ್ಪ್ರಾತಿಪದಿಕಾತ್" ಮತ್ತು "ತದ್ಧಿತಾಃ" ಎಂಬುವು ಅಧಿಕಾರ ಸೂತ್ರಗಳು.

ಅರ್ಥ -ಪರಿ ಮತ್ತು ಅಭಿ ಎಂಬ ಈ ಅವ್ಯಯಗಳ ನಂತರ ತಸಿಲ್ ಪ್ರತ್ಯಯವು ಬರುವುದು.

ಉದಾ-ಪರಿತಃ-(ಸುತ್ತಲೂ(ಎಲ್ಲಕಡೆಯಿಂದ))-ಪ್ರಕೃತ ಸೂತ್ರದಿಂದ ಪರಿ ಎಂಬ ಅವ್ಯಯದ ನಂತರ ತಸಿಲ್ ಪ್ರತ್ಯಯವು ಬಂದು, ಪರಿ+ತಸ್+ ಸು ಎಂದಿದ್ದಾಗ, ಅವ್ಯಯದ ಕಾರಣದಿಂದ ಸು ಗೆ ಲೋಪಬಂದು, ಸ್-ಕಾರಕ್ಕೆ ರುತ್ವ ವಿಸರ್ಗಗಳು

ಬಂದು ಪರಿತಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ-ಅಭಿತಃ-(ಎರಡು. ಕಡೆಯಲ್ಲೂ)-ಪ್ರಕೃತ ಸೂತ್ರದಿಂದ ಅಭಿ ಎಂಬ ಅವ್ಯಯದ ನಂತರ ತಸಿಲ್ ಪ್ರತ್ಯಯ ಬಂದು ಅಭಿತಸ್+ಸು ಎಂದಿದ್ದಾಗ, ಅವ್ಯಯದ ಕಾರಣದಿಂದ 'ಸು' ಲೋಪವಾಗಿ ಅಂತ್ಯ 'ಸ್' ಕಾರಕ್ಕೆ ರುತ್ವ ವಿಸರ್ಗಗಳು ಬಂದು, ಅಭಿತಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ-ಉಭಯತಃ (ಎರಡು ಕಡೆಯಲ್ಲೂ)-ಈ ರೂಪವು ಕೂಡ ಹಿಂದಿನಂತೆ ಸಿದ್ಧವಾಗುತ್ತದೆ.

**(ತ್ರಲ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1206:-ಸಪ್ತಮ್ಯಾಸ್ತ್ರಲ್।(5.3.10)**

ವೃತ್ತಿ -ಕುತ್ರ । ಯತ್ರ । ತತ್ರ । ಬಹುತ್ರ ।

ಪ. ಛೇ -ಸಪ್ತಮ್ಯಾಃ ತ್ರಲ್ ।

ಅ. ವೃ.-"ಕಿಮ್ ಸರ್ವನಾಮಬಹುಭ್ಯೋದ್ವ್ಯಾದಿಭ್ಯಃ" ಎಂಬ ಸೂತ್ರವು ಅನುವೃತ್ತವಾಗುತ್ತದೆ"ಪ್ರತ್ಯಯಃ", "ಪರಶ್ಚ", "ಜ್ಯಾಪ್‌ಪ್ರಾತಿಪದಿಕಾತ್" ಮತ್ತು "ತದ್ಧಿತಾಃ" ಎಂಬುವು ಅಧಿಕಾರ ಸೂತ್ರಗಳು.

ಅರ್ಥ -ಸಪ್ತಮ್ಯಂತಗಳಾದ ಕಿಮ್ ಮೊದಲಾದ ಶಬ್ದಗಳ ನಂತರ ಪ್ರಕೃತ ಸೂತ್ರದಿಂದ ತ್ರಲ್(ತ್ರ) ಪ್ರತ್ಯಯವು ಬರುತ್ತದೆ.

ಉದಾ-ಕುತ್ರ (ಎಲ್ಲಿ) -ಸಪ್ತಮ್ಯಂತ ಕಿಮ್ ಶಬ್ದದ ನಂತರ ಪ್ರಕೃತ ಸೂತ್ರದಿಂದ ತ್ರಲ್(ತ್ರ) ಪ್ರತ್ಯಯವು ಬಂದು, ಪ್ರಾತಿಪದಿಕತ್ವ ಬಂದ ಮೇಲೆ ಸುಪ್ ಲೊಪವಾಗಿ "ಕುತಿಹೋಃ" ಎಂಬ ಸೂತ್ರದಿಂದ ಕಿಮ್ ಶಬ್ದಕ್ಕೆ 'ಕು' ಆದೇಶ ಬಂದು ಕುತ್ರ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ-ಯತ್ರ, ತತ್ರ, ಬಹುತ್ರ ಇದೇ ರೀತಿಯಲ್ಲಿ ಈ ಶಬ್ದಗಳ ಮೇಲೆ ತ್ರಲ್ ಪ್ರತ್ಯಯವು ಬಂದು ಯತ್ರ, ತತ್ರ ಮತ್ತು ಬಹುತ್ರ ಎಂಬ ರೂಪಗಳು ಬರುತ್ತವೆ.

ಸೂಚನೆ-ಯದ್-ತದ್ ಶಬ್ದಗಳಿಗೆ "ತ್ಯದಾದಿನಾಮಃ" ಸೂತ್ರದಿಂದ ಅತ್ವ ಮತ್ತು ಪರರೂಪಗಳು ಬಂದಿರುತ್ತವೆ.

**(ಹ-ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1207.-ಇದಮೋ ಹಃ।(5.3.11)**

ವೃತ್ತಿ -ತ್ರಲೋಽಪವಾದಃ। ಇಹ।

ಪ. ಛೇ -ಇದಮಃ ಹಃ।

ಅ. ವೃ.-"ಸಪ್ತಮ್ಯಾಸ್ತ್ರಲ್" ಎಂಬ ಸೂತ್ರದಿಂದ ಸಪ್ತಮ್ಯಾಃ ಎಂಬ ಪದವು ಅನುವೃತ್ತವಾಗುತ್ತದೆ. ಪ್ರತ್ಯಯಃ, ಪರಶ್ಚ, ಜ್ಯಾಪ್‌ಪ್ರಾತಿಪದಿಕಾತ್ ಮತ್ತು ತದ್ಧಿತಾಃ

ಎಂಬುವು ಅಧಿಕಾರ ಸೂತ್ರಗಳು.

ಅರ್ಥ –ಸಪ್ತಮ್ಯಂತ ಇದಮ್ ಶಬ್ದದ ನಂತರ 'ಹ' ಪ್ರತ್ಯಯವು ಬರುತ್ತದೆ.

ವಿಶೇಷ–ಈ ಸೂತ್ರವು "ಸಪ್ತಮ್ಯಾಸ್ತ್ರಲ್" ಎಂಬ ಸೂತ್ರಕ್ಕೆ ಅಪವಾದವಾಗಿದೆ.

ಉದಾ–ಇಹ (ಇಲ್ಲಿ) ಇದಮ್+ಙಿ ಎಂಬುದು ಅಲೌಕಿಕ ವಿಗ್ರಹ ಪ್ರಕೃತ ಸೂತ್ರದಿಂದ 'ಹ' ಪ್ರತ್ಯಯವು ಬಂದುಇದಮ್+ಹ ಎಂದಿದ್ದಾಗ, ಪ್ರಾತಿಪದಿಕ ಸಂಜ್ಞೆ ಬಂದ ಮೇಲೆ "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ ಸುಪ್ ಲೋಪವಾಗಿ "ಇದಮ ಇಶಃ" ಎಂಬ ಸೂತ್ರದಿಂದ ಇಶ್(ಇ) ಆದೇಶ ಬಂದು ಇಹ ಎಂಬ ರೂಪವು ಸಿದ್ಧವಾಗುತ್ತದೆ.

**(ಅತ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ–1208.–ಕಿಮೋಽತ್।(5.3.12)**

ವೃತ್ತಿ:–ವಾ–ಗ್ರಹಣಂ ಅಪಕೃಷ್ಯತೇ । ಸಪ್ತಮ್ಯನ್ತಾತ್ ಕಿಮಃ ಅದ್ವಾ ಸ್ಯಾತ್ । ಪಕ್ಷೇ ತ್ರಲ್।

ಪ. ಛೇ –ಕಿಮಃ ಅತ್ ।

ಅ.ವೃ:–"ವಾಹಚಛದಿಸಿ" ಎಂಬ ಸೂತ್ರದಿಂದ 'ವಾ' ಎಂಬ ಪದವು ಅಪಕರ್ಷ ಮಾಡಲಾಗಿದೆ. ಪ್ರತ್ಯಯಃ, ಪರಶ್ಚ, ಙ್ಯಾಪ್‌ಪ್ರಾತಿಪದಿಕಾತ್ ಮತ್ತು ತದ್ಧಿತಾಃ ಎಂಬುವು ಅಧಿಕಾರ ಸೂತ್ರಗಳು.

ಅರ್ಥ :–ಸಪ್ತಮ್ಯನ್ತವಾದ ಕಿಮ್ ಶಬ್ದದ ನಂತರ ಅತ್(ಅ) ಪ್ರತ್ಯಯವು ವೈಕಲ್ಪಿಕವಾಗಿ ಬರುತ್ತದೆ. ಈ ಪ್ರತ್ಯಯವನ್ನು ಸೇರಿಸಿದ ಮೇಲೆ ಪ್ರಾತಿಪದಿಕತ್ವ ಬಂದು, ಸುಪ್ ಲೋಪವಾದ ಮೇಲೆ ಕಿಮ್+ಅ ಎಂದಿದ್ದಾಗ–

**(ಕ್ವ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ–1209. ಕ್ವಾತಿ।(7.2.105)**

ವೃತ್ತಿ –ಕಿಮಃ ಕ್ವಾದೇಶಃ ಸ್ಯಾದತಿ। ಕ್ವ, ಕುತ್ರ ।

ಪ. ಛೇ –ಕ್ವಃ ಅತಿ ।

ಅ. ವೃ.–"ಕಿಮಃ ಕಃ" ಎಂಬ ಸೂತ್ರದಿಂದ ಕಃ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ –ಅತ್ ಪ್ರತ್ಯಯವು ಪರದಲ್ಲಿದ್ದಾಗ ಕಿಮ್ ಶಬ್ದಕ್ಕೆ ಕ್ವ ಆದೇಶವು ಬರುತ್ತದೆ.

ಉದಾ–ಕ್ವ, ಕುತ್ರ (ಎಲ್ಲಿ)–ಕಿಮ್ +ಙಸಿ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಇಲ್ಲಿ ಬರಬೇಕಾದ ತ್ರಲ್ ಪ್ರತ್ಯಯವನ್ನು ಬಾಧಿಸಿ "ಕಿಮೋಽತ್" ಎಂಬ ಸೂತ್ರದಿಂದ ಅತ್(ಅ) ಬಂದು, ಪ್ರಕೃತ ಸೂತ್ರದಿಂದ ಕಿಮ್ ಗೆ ಕ್ವ ಆದೇಶ ಬಂದು ಕ್ವ+ಅ ಎಂದಿರುತ್ತದೆ. ಕ್ವ ಎಂಬಲ್ಲಿರುವ 'ಭ' ಸಂಜ್ಞೆಯನ್ನು ಪಡೆದಿರುವ 'ಅ' ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು, ಕ್ವ್+ಅ=ಕ್ವ ಎಂದಾಗುತ್ತದೆ. 'ಸು'

ಮೊದಲಾದವುಗಳನ್ನು ಸೇರಿಸಿದ ಮೇಲೆ "ಸುಪೋಧಾತುಪ್ರಾತಿಪದಿಕಯೋಃ" ಎಂಬ ಸೂತ್ರದಿಂದ ಸುಪ್ ಲೋಪವಾಗಿ ಕ್ವ ಎಂದು ರೂಪವು ಸಿದ್ಧವಾಗುತ್ತದೆ. ಅತ್ (ಅ) ಪ್ರತ್ಯಯವು ಬಾರದ ಪಕ್ಷದಲ್ಲಿ 'ತ್ರ' ಪ್ರತ್ಯಯವೇ ಬಂದು ಕಿಮ್ ಗೆ ಕು ಆದೇಶ ಬಂದಾಗ ಕುತ್ರ ಎಂಬ ರೂಪವು ಸಿದ್ಧವಾಗುತ್ತದೆ.

**(ತಸಿಲ್ ಮೊದಲಾದವುಗಳನ್ನು ವಿಧಿಸುವ ಸೂತ್ರ)**

**ಸೂತ್ರ-1210.-ಇತರಾಭ್ಯೋऽಪಿ ದೃಶ್ಯನ್ತೇ।(5.3.14)**

ವೃತ್ತಿ -ಪಞ್ಚಮೀ-ಸಪ್ತಮೀತರ ವಿಭಕ್ತ್ಯನ್ತಾ ಅಪಿ ತಸಿಲಾದಯಃ ದೃಶ್ಯನ್ತೇ । ದೃಶಿ ಗ್ರಹಣಾತ್ ಭವದಾದಿಯೋಗ ಏವ । ಸ ಭವಾನ್ । ತತೋ ಭವಾನ್ । ತತ್ರ ಭವಾನ್ । ತಂ ಭವನ್ತಮ್। ತತೋ ಭವನ್ತಮ್ । ತತ್ರ ಭವನ್ತಮ್। ಏವಂ ದೀರ್ಘಾಯುಃ, ದೇವಾನಾಂ ಪ್ರಿಯಃ। ಆಯುಷ್ಮಾನ್।

ಪ. ಛೇ -ಇತರಾಭ್ಯಃ, ಅಪಿ ।

ಅ. ವೃ.-"ಪಞ್ಚಮ್ಯಾಸ್ತಸಿಲ್" ನತ್ತು "ಸಪ್ತಮ್ಯಾಸ್ತ್ರಲ್" ಮೊದಲಾದ ಸೂತ್ರಗಳಿಂದ ಕ್ರಮವಾಗಿ ತಸಿಲ್ ಮತ್ತು ತ್ರಲ್ ಶಬ್ದಗಳು ಅನುವೃತ್ತವಾಗುತ್ತವೆ. ಪ್ರತ್ಯಯಃ, ಪರಶ್ಚ, ಙ್ಯಾಪ್ಪ್ರಾತಿಪದಿಕಾತ್ ಮತ್ತು ತದ್ಧಿತಾಃ ಎಂಬುವು ಅಧಿಕಾರ ಸೂತ್ರಗಳು.

ಅರ್ಥ-ಪಞ್ಚಮೀ ಮತ್ತು ಸಪ್ತಮೀಗಳಿಗಿಂತ ಭಿನ್ನವಾದ ಕಿಮ್ ಮೊದಲಾದ ಶಬ್ದಗಳ ನಂತರವೂ ಕೂಡಾ ತಸಿಲ್ ಮೊದಲಾದ ಪ್ರತ್ಯಯಗಳು ಕಾಣಿಸಿಕೊಳ್ಳುತ್ತವೆ.

ದೃಶ್ಯನ್ತೇ ಎಂದು ಹೇಳಿರೋಣದರಿಂದ ಭವತ್-ಶಬ್ದಾದಿಗಳ ಜೊತೆಗೆ ಸಂಬಂಧವಿದ್ದಾಗ ಮಾತ್ರ, ಪ್ರಕೃತ ಸೂತ್ರವು ಪ್ರವರ್ತಿಸುತ್ತದೆ ಎಂದು ವಾರ್ತಿಕಕಾರರ ಅಭಿಪ್ರಾಯ ಅಂದರೆ ಭವದಾದಿ ಶಬ್ದಗಳ ಅನುಪ್ರಯೋಗವಾದಾಗ ಮಾತ್ರ ಕಿಮ್ ಮೊದಲಾದ ಶಬ್ದಗಳ ಜೊತೆಗೆ ತಸಿಲ್ ಮೊದಲಾದ ಪ್ರಯೋಗವು ಆಗುವುದು ಕಂಡು ಬರುತ್ತದೆ ಎಂದು ಅರ್ಥ.

ಉದಾ-'ಸ ಭವಾನ್' ಎಂದು ಹೇಳುವಾಗ ಭವತ್ ಶಬ್ದದ ಜೊತೆಗೆ ಸಂಬಂಧವಿರುವಾಗ ತತ್ ಶಬ್ದದ ಪ್ರಥಮಾನ್ತವು ಪ್ರಯೋಗಿಸಲಾಗಿದೆ. ಅಂತಹ ತದ್ ಶಬ್ದಗಳಿಗೆ ತಸಿಲ್, ತ್ರಲ್ ಪ್ರತ್ಯಯಗಳನ್ನು ಸೇರಿಸಿ 'ತತೋ ಭವಾನ್' , 'ತತ್ರ ಭವಾನ್' ಎಂದು ಕೂಡ ಪ್ರಯೋಗಿಸಬಹುದು. ಈ ಪ್ರಯೋಗಗಳಿಗೂ ಕೂಡಾ 'ಸ ಭವಾನ್' ಎಂದೇ ಅರ್ಥ. ಇದೇ ರಿತೀಯಲ್ಲಿ 'ತಂ ಭವನ್ತಮ್' ಇತ್ಯಾದಿಗಳಲ್ಲಿ ದ್ವಿತಿಯಾಂತವಾದ ತತ್ ಶಬ್ದಕ್ಕೆ ತಸಿಲ್ ಮತ್ತು ತ್ರಲ್ ಪ್ರತ್ಯಯಗಳನ್ನು ಸೇರಿಸಿ 'ತಂ ಭವನ್ತಮ್', 'ತತ್ರ ಭವನ್ತಮ್' ಇತ್ಯಾದಿ ಪ್ರಯೋಗಗಳನ್ನು ಮಾಡಬಹುದು. ಆದರೆ 'ತಂ ಭವನ್ತಮ್' ಎಂಬ ಅರ್ಥವೇ ಅಲ್ಲಿಯೂ ಇರುತ್ತದೆ.

ಇದೇ ರಿತಿಯಲ್ಲಿ 'ಸ ದೀರ್ಘಾಯುಃ' ಎಂಬುದಕ್ಕೆ ಬದಲಾಗಿ 'ತತೋ ದೀರ್ಘಾಯುಃ', 'ತತ್ರ ದೀರ್ಘಾಯುಃ' ಎಂದೂ, ಮತ್ತು 'ಸ ದೇವಾನಾಂ ಪ್ರಿಯಃ' ಎಂಬುದಕ್ಕೆ ಬದಲಾಗಿ 'ತತೋ ದೇವಾನಾಂ ಪ್ರಿಯಃ' 'ತತ್ರ ದೇವಾನಾಂ ಪ್ರಿಯಃ'

ಎಂದೂ ಹಾಗೇಯೇ 'ಸ ಆಯುಷ್ಮಾನ್' ಎಂಬುದಕ್ಕೆ ಬದಲಾಗಿ 'ತತ ಆಯುಷ್ಮಾನ್', 'ತತ್ರ ಆಯುಷ್ಮಾನ್' ಎಂದೂ ಹೇಳಬಹುದು.

**(ದಾ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1211.-ಸರ್ವೈಕಾನ್ಯ-ಕಿಂ-ಯತ್ತದಃ ಕಾಲೇ ದಾ।(5.3.15)**

ವೃತ್ತಿ -ಸಪ್ತಮ್ಯನ್ತೇಭ್ಯಃ ಕಾಲಾರ್ಥೇಭ್ಯಃ ಸ್ವಾರ್ಥೇ ದಾ ಸ್ಯಾತ್।

ಅ. ವ್ಯ. -"ಸಪ್ತಮ್ಯಾಸ್ತ್ರಲ್" ಎಂಬ ಸೂತ್ರದಿಂದ ತ್ರಲ್ ಎಂಬ ಪದವು ಅನುವೃತ್ತವಾಗುತ್ತದೆ. ಪ್ರತ್ಯಯಃ, ಪರಶ್ಚ, ಙ್ಯಾಪ್ಪ್ರಾತಿಪದಿಕಾತ್ ಮತ್ತು ತದ್ಧಿತಾಃ ಎಂಬುವು ಅಧಿಕಾರ ಸೂತ್ರಗಳು.

ಅರ್ಥ -ಸಮ್ತನ್ಯವಾದ ಕಾಲಾರ್ಥಕ ಸರ್ವ ಏಕ, ಅನ್ಯ, ಕಿಮ್ ಯತ್, ಮತ್ತು ತದ್ ಶಬ್ದಗಳ ನಂತರ ಸ್ವಾರ್ಥದಲ್ಲಿ 'ದಾ' ಪ್ರತ್ಯಯವು ಬರುತ್ತದೆ.-ಕಾಲಾರ್ಥವನ್ನು ಹೇಳುವಾಗ.

**(ಸ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ-1212.-ಸರ್ವಸ್ಯ ಸೋಽನ್ಯತರಸ್ಯಾಂ ದಿ ।(5.3.6)**

ವೃತ್ತಿ -ದಾದೌ ಪ್ರಾಗ್ದಿಶೀಯೇ ಸರ್ವಸ್ಯ ಸಃ ವಾ ಸ್ಯಾತ್। ಸರ್ವಸ್ಮಿನ್ ಕಾಲೇ-ಸದಾ। ಸರ್ವದಾ। ಅನ್ಯಧಾ। ಕದಾ। ಯದಾ। ತದಾ। ಕಾಲೇ ಕಿಮ್-ಸವತ್ರ ದೇಶೇ ।

ಪ. ಛೇ -ಸರ್ವಸ್ಯ, ಸಹ, ಅನ್ಯತರಸ್ಯಾಂ, ದಿ ।

ಅರ್ಥ -ದಕಾರಾದಿ ಪ್ರತ್ಯಯಗಳು ಪರದಲ್ಲಿದ್ದಾಗ ಸರ್ವ ಶಬ್ದಕ್ಕೆ 'ಸ' ಆದೇಶವು ಬರುತ್ತದೆ.

ಉದಾ:-ಸದಾ । ಸರ್ವದಾ-(ಯಾವಾಗಲೂ)-'ಸರ್ವಸ್ಮಿನ್' ಎಂಬುದು ಲೌಕಿಕ ವಿಗ್ರಹ ವಾಕ್ಯ. ಸರ್ವ+ಙಿ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಇಲ್ಲಿ "ಸರ್ವೈಕಾನ್ಯ-ಕಿಂ-ಯತ್ತದಃ ಕಾಲೇ ದಾ" ಎಂಬ ಸೂತ್ರದಿಂದ 'ದಾ' ಪ್ರತ್ಯಯವು ಬಂದು, ಪ್ರಾತಿಪದಿಕ ಸಂಜ್ಞೆ ಬಂದ ಮೇಲೆ "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ, 'ಸುಪ್' ಗೆ 'ಲುಕ್' ಬಂದು, 'ದಾ' ಪರದಲ್ಲಿದ್ದಾಗ ಪ್ರಕೃತ ಸೂತ್ರದಿಂದ 'ಸರ್ವ' ಶಬ್ದಕ್ಕೆ 'ಸ' ಆದೇಶ ಬಂದು ಸ+ದಾ= ಸದಾ ಎಂದಾಗುತ್ತದೆ. ಇದಕ್ಕೆ 'ಸು' ಸೇರಿಸಿದಾಗ ಅದಕ್ಕೆ ಲುಕ್ ಬಂದು, ಸದಾ ಎಂಬ ರೂಪವೇ ಉಳಿಯುತ್ತದೆ. 'ದಾ' ಆದೇಶವು ಬಾರದ ಪಕ್ಷದಲ್ಲಿ ಸರ್ವದಾ ಎಂದು ರೂಪವು ಸಿದ್ಧವಾಗುತ್ತದೆ.

ಇದೇ ತರಹ ಏಕದಿಂದ ಏಕದಾ, ಅನ್ಯದಿಂದ ಅನ್ಯದಾ ಎಂದು 'ಕಿಮ್' ಗೆ 'ಕ' ಆದೇಶ ಬಂದಾಗ ಕದಾ ಎಂದು ರೂಪವಾಗುತ್ತವೆ.

ಯತ್ ಮತ್ತು ತದ್ ಶಬ್ದಗಳಿಗೆ ಅತ್ವ ಮೊದಲಾದವುಗಳನ್ನು ಮಾಡಿದ ಮೇಲೆ ಯದಾ ತದಾ ಎಂದು ರೂಪಗಳು ಸಿದ್ಧವಾಗುತ್ತವೆ.

"ಸರ್ವೈಕಾನ್ಯ-ಕಿಂ-ಯತ್ತದಃ ಕಾಲೇ ದಾ" ಎಂಬ ಸೂತ್ರದಲ್ಲಿ ಕಾಲೇ ಎಂಬ

ಮೊದಲಾದವುಗಳನ್ನು ಸೇರಿಸಿದ ಮೇಲೆ "ಸುಪೋಧಾತುಪ್ರಾತಿಪದಿಕಯೋಃ" ಎಂಬ ಸೂತ್ರದಿಂದ ಸುಪ್ ಲೋಪವಾಗಿ ಕ್ವ ಎಂದು ರೂಪವು ಸಿದ್ಧವಾಗುತ್ತದೆ. ಅತ್ (ಅ) ಪ್ರತ್ಯಯವು ಬಾರದ ಪಕ್ಷದಲ್ಲಿ 'ತ್ರ' ಪ್ರತ್ಯಯವೇ ಬಂದು ಕಿಮ್ ಗೆ ಕು ಆದೇಶ ಬಂದಾಗ ಕುತ್ರ ಎಂಬ ರೂಪವು ಸಿದ್ಧವಾಗುತ್ತದೆ.

**(ತಸಿಲ್ ಮೊದಲಾದವುಗಳನ್ನು ವಿಧಿಸುವ ಸೂತ್ರ)**

**ಸೂತ್ರ-1210.-ಇತರಾಭ್ಯೋऽಪಿ ದೃಶ್ಯನ್ತೇ।(5.3.14)**

ವೃತ್ತಿ -ಪಞ್ಚಮೀ-ಸಪ್ತಮೀತರ ವಿಭಕ್ತ್ಯನ್ತಾ ಅಪಿ ತಸಿಲಾದಯಃ ದೃಶ್ಯನ್ತೇ । ದೃಶಿ ಗ್ರಹಣಾತ್ ಭವದಾದಿಯೋಗ ಏವ । ಸ ಭವಾನ್ । ತತೋ ಭವಾನ್ । ತತ್ರ ಭವಾನ್ । ತಂ ಭವನ್ತಮ್। ತತೋ ಭವನ್ತಮ್ । ತತ್ರ ಭವನ್ತಮ್। ಏವಂ ದೀರ್ಘಾಯುಃ, ದೇವಾನಾಂ ಪ್ರಿಯಃ। ಆಯುಷ್ಮಾನ್।

ಪ. ಛೇ -ಇತರಾಭ್ಯಃ, ಅಪಿ ।

ಅ. ವೃ.-"ಪಞ್ಚಮ್ಯಾಸ್ತಸಿಲ್" ನತ್ತು "ಸಪ್ತಮ್ಯಾಸ್ತ್ರಲ್" ಮೊದಲಾದ ಸೂತ್ರಗಳಿಂದ ಕ್ರಮವಾಗಿ ತಸಿಲ್ ಮತ್ತು ತ್ರಲ್ ಶಬ್ದಗಳು ಅನುವೃತ್ತವಾಗುತ್ತವೆ. ಪ್ರತ್ಯಯಃ, ಪರಶ್ಚ, ಙ್ಯಾಪ್ಪ್ರಾತಿಪದಿಕಾತ್ ಮತ್ತು ತದ್ಧಿತಾಃ ಎಂಬುವು ಅಧಿಕಾರ ಸೂತ್ರಗಳು.

ಅರ್ಥ-ಪಞ್ಚಮೀ ಮತ್ತು ಸಪ್ತಮೀಗಳಿಗಿಂತ ಭಿನ್ನವಾದ ಕಿಮ್ ಮೊದಲಾದ ಶಬ್ದಗಳ ನಂತರವೂ ಕೂಡಾ ತಸಿಲ್ ಮೊದಲಾದ ಪ್ರತ್ಯಯಗಳು ಕಾಣಿಸಿಕೊಳ್ಳುತ್ತವೆ.

ದೃಶ್ಯನ್ತೇ ಎಂದು ಹೇಳಿರೋಣದರಿಂದ ಭವತ್-ಶಬ್ದಾದಿಗಳ ಜೊತೆಗೆ ಸಂಬಂಧವಿದ್ದಾಗ ಮಾತ್ರ, ಪ್ರಕೃತ ಸೂತ್ರವು ಪ್ರವತ್ತಿಸುತ್ತದೆ ಎಂದು ವಾರ್ತಿಕಕಾರರ ಅಭಿಪ್ರಾಯ ಅಂದರೆ ಭವದಾದಿ ಶಬ್ದಗಳ ಅನುಪ್ರಯೋಗವಾದಾಗ ಮಾತ್ರ ಕಿಮ್ ಮೊದಲಾದ ಶಬ್ದಗಳ ಜೊತೆಗೆ ತಸಿಲ್ ಮೊದಲಾದ ಪ್ರಯೋಗವು ಆಗುವುದು ಕಂಡು ಬರುತ್ತದೆ ಎಂದು ಅರ್ಥ.

ಉದಾ-'ಸ ಭವಾನ್' ಎಂದು ಹೇಳುವಾಗ ಭವತ್ ಶಬ್ದದ ಜೊತೆಗೆ ಸಂಬಂಧವಿರುವಾಗ ತತ್ ಶಬ್ದದ ಪ್ರಥಮಾನ್ತವು ಪ್ರಯೋಗಿಸಲಾಗಿದೆ. ಅಂತಹ ತದ್ ಶಬ್ದಗಳಿಗೆ ತಸಿಲ್, ತ್ರಲ್ ಪ್ರತ್ಯಯಗಳನ್ನು ಸೇರಿಸಿ 'ತತೋ ಭವಾನ್' , 'ತತ್ರ ಭವಾನ್' ಎಂದು ಕೂಡ ಪ್ರಯೋಗಿಸಬಹುದು. ಈ ಪ್ರಯೋಗಳಿಗೂ ಕೂಡಾ 'ಸ ಭವಾನ್' ಎಂದೇ ಅರ್ಥ. ಇದೇ ರಿತೀಯಲ್ಲಿ 'ತಂ ಭವನ್ತಮ್' ಇತ್ಯಾದಿಗಳಲ್ಲಿ ದ್ವಿತಿಯಾಂತವಾದ ತತ್ ಶಬ್ದಕ್ಕೆ ತಸಿಲ್ ಮತ್ತು ತ್ರಲ್ ಪ್ರತ್ಯಯಗಳನ್ನು ಸೇರಿಸಿ 'ತಂ ಭವನ್ತಮ್', 'ತತ್ರ ಭವನ್ತಮ್' ಇತ್ಯಾದಿ ಪ್ರಯೋಗಗಳನ್ನು ಮಾಡಬಹುದು. ಆದರೆ 'ತಂ ಭವನ್ತಮ್' ಎಂಬ ಅರ್ಥವೇ ಅಲ್ಲಿಯೂ ಇರುತ್ತದೆ.

ಇದೇ ರಿತಿಯಲ್ಲಿ 'ಸ ದೀರ್ಘಾಯುಃ' ಎಂಬುದಕ್ಕೆ ಬದಲಾಗಿ 'ತತೋ ದೀರ್ಘಾಯುಃ', 'ತತ್ರ ದೀರ್ಘಾಯುಃ' ಎಂದೂ, ಮತ್ತು 'ಸ ದೇವಾನಾಂ ಪ್ರಿಯಃ' ಎಂಬುದಕ್ಕೆ ಬದಲಾಗಿ 'ತತೋ ದೇವಾನಾಂ ಪ್ರಿಯಃ' 'ತತ್ರ ದೇವಾನಾಂ ಪ್ರಿಯಃ'

ಎಂದೂ ಹಾಗೇಯೇ 'ಸ ಆಯುಷ್ಮಾನ್' ಎಂಬುದಕ್ಕೆ ಬದಲಾಗಿ 'ತತ ಆಯುಷ್ಮಾನ್', 'ತತ್ರ ಆಯುಷ್ಮಾನ್' ಎಂದೂ ಹೇಳಬಹುದು.

**(ದಾ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1211.-ಸರ್ವೈಕಾನ್ಯ-ಕಿಂ-ಯತ್ತದಃ ಕಾಲೇ ದಾ।(5.3.15)**

ವೃತ್ತಿ -ಸಪ್ತಮ್ಯನ್ತೇಭ್ಯಃ ಕಾಲಾರ್ಥೇಭ್ಯಃ ಸ್ವಾರ್ಥೇ ದಾ ಸ್ಯಾತ್।

ಅ. ವ್ಯ. -"ಸಪ್ತಮ್ಯಾಸ್ತ್ರಲ್" ಎಂಬ ಸೂತ್ರದಿಂದ ತ್ರಲ್ ಎಂಬ ಪದವು ಅನುವೃತ್ತವಾಗುತ್ತದೆ. ಪ್ರತ್ಯಯಃ, ಪರಶ್ಚ, ಙ್ಯಾಪ್‌ಪ್ರಾತಿಪದಿಕಾತ್ ಮತ್ತು ತದ್ಧಿತಾಃ ಎಂಬುವು ಅಧಿಕಾರ ಸೂತ್ರಗಳು.

ಅರ್ಥ -ಸಮ್ತನ್ಯವಾದ ಕಾಲಾರ್ಥಕ ಸರ್ವ ಏಕ, ಅನ್ಯ, ಕಿಮ್ ಯತ್, ಮತ್ತು ತದ್ ಶಬ್ದಗಳ ನಂತರ ಸ್ವಾರ್ಥದಲ್ಲಿ 'ದಾ' ಪ್ರತ್ಯಯವು ಬರುತ್ತದೆ.-ಕಾಲಾರ್ಥವನ್ನು ಹೇಳುವಾಗ.

**(ಸ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ-1212.-ಸರ್ವಸ್ಯ ಸೋಽನ್ಯತರಸ್ಯಾಂ ದಿ ।(5.3.6)**

ವೃತ್ತಿ -ದಾದೌ ಪ್ರಾಗ್ದಿಶೀಯೇ ಸರ್ವಸ್ಯ ಸಃ ವಾ ಸ್ಯಾತ್। ಸರ್ವಸ್ಮಿನ್ ಕಾಲೇ-ಸದಾ। ಸರ್ವದಾ। ಅನ್ಯದಾ। ಕದಾ। ಯದಾ। ತದಾ। ಕಾಲೇ ಕಿಮ್-ಸವತ್ರ ದೇಶೇ ।

ಪ. ಛೇ -ಸರ್ವಸ್ಯ, ಸಹ, ಅನ್ಯತರಸ್ಯಾಂ, ದಿ ।

ಅರ್ಥ -ದಕಾರಾದಿ ಪ್ರತ್ಯಯಗಳು ಪರದಲ್ಲಿದ್ದಾಗ ಸರ್ವ ಶಬ್ದಕ್ಕೆ 'ಸ' ಆದೇಶವು ಬರುತ್ತದೆ.

ಉದಾ:-ಸದಾ । ಸರ್ವದಾ-(ಯಾವಾಗಲೂ)-'ಸರ್ವಸ್ಮಿನ್' ಎಂಬುದು ಲೌಕಿಕ ವಿಗ್ರಹ ವಾಕ್ಯ. ಸರ್ವ+ಙಿ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಇಲ್ಲಿ "ಸರ್ವೈಕಾನ್ಯ-ಕಿಂ-ಯತ್ತದಃ ಕಾಲೇ ದಾ" ಎಂಬ ಸೂತ್ರದಿಂದ 'ದಾ' ಪ್ರತ್ಯಯವು ಬಂದು, ಪ್ರಾತಿಪದಿಕ ಸಂಜ್ಞೆ ಬಂದ ಮೇಲೆ "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ, 'ಸುಪ್' ಗೆ 'ಲುಕ್' ಬಂದು, 'ದಾ' ಪರದಲ್ಲಿದ್ದಾಗ ಪ್ರಕೃತ ಸೂತ್ರದಿಂದ 'ಸರ್ವ' ಶಬ್ದಕ್ಕೆ 'ಸ' ಆದೇಶ ಬಂದು ಸ+ದಾ= ಸದಾ ಎಂದಾಗುತ್ತದೆ. ಇದಕ್ಕೆ 'ಸು' ಸೇರಿಸಿದಾಗ ಅದಕ್ಕೆ ಲುಕ್ ಬಂದು, ಸದಾ ಎಂಬ ರೂಪವೇ ಉಳಿಯುತ್ತದೆ. 'ದಾ' ಆದೇಶವು ಬಾರದ ಪಕ್ಷದಲ್ಲಿ ಸರ್ವದಾ ಎಂದು ರೂಪವು ಸಿದ್ಧವಾಗುತ್ತದೆ.

ಇದೇ ತರಹ ಏಕದಿಂದ ಏಕದಾ, ಅನ್ಯದಿಂದ ಅನ್ಯದಾ ಎಂದು 'ಕಿಮ್' ಗೆ 'ಕ' ಆದೇಶ ಬಂದಾಗ ಕದಾ ಎಂದು ರೂಪವಾಗುತ್ತವೆ.

ಯತ್ ಮತ್ತು ತದ್ ಶಬ್ದಗಳಿಗೆ ಅತ್ವ ಮೊದಲಾದವುಗಳನ್ನು ಮಾಡಿದ ಮೇಲೆ ಯದಾ ತದಾ ಎಂದು ರೂಪಗಳು ಸಿದ್ಧವಾಗುತ್ತವೆ.

"ಸರ್ವೈಕಾನ್ಯ-ಕಿಂ-ಯತ್ತದಃ ಕಾಲೇ ದಾ" ಎಂಬ ಸೂತ್ರದಲ್ಲಿ ಕಾಲೇ ಎಂಬ

ಶಬ್ದವು ಪಠಿತವಾಗಿರುವುದರಿಂದ ದೇಶಾರ್ಥವು ಪ್ರತಿಯಮಾನವಾದಾಗ 'ದಾ' ಪ್ರತ್ಯಯವು ಬರುವದಿಲ್ಲಾ. ಉದಾ-ಸವತ್ರ ದೇಶೇ.

**(ರ್ಹಿಲ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1213.-ಇದಮೋ ರ್ಹಿಲ್।** (5.3.16)

ವೃತ್ತಿ -ಸಪ್ತಮ್ಯಾನ್ತಾತ್ ಕಾಲೇ ಇತ್ಯೇವ ।

ಪ. ಛೇ -ಇದಮಃ, ರ್ಹಿಲ್ ।

ಅ. ವ್ಯ.-"ಸರ್ವೈಕಾನ್ಯ-ಕಿಂ-ಯತ್ತದಃ ಕಾಲೇ ದಾ" ಎಂಬ ಸೂತ್ರದಿಂದ ಕಾಲೇ ಎಂಬ ಶಬ್ದವು ಅನುವೃತ್ತವಾಗುತ್ತದೆ. "ಸಪ್ತಮ್ಯಾಸ್ತ್ರಲ್" ಎಂಬ ಸೂತ್ರದಿಂದ ಸಪ್ತಮ್ಯಾಃ ಎಂಬ ಪದವು ಅನುವೃತ್ತವಾಗುತ್ತದೆ. ಮತ್ತು ಪ್ರತ್ಯಯಃ, ಪರಶ್ಚ, ಙ್ಯಾಪ್ಪ್ರಾತಿಪದಿಕಾತ್ ಮತ್ತು ತದ್ಧಿತಾಃ ಎಂಬುವು ಅಧಿಕಾರ ಸೂತ್ರಗಳು.

ಅರ್ಥ -ಕಾಲಾರ್ಥದಲ್ಲಿ ಉಪಯುಕ್ತವಾದ ಸಪ್ತಮ್ಯನ್ತ ಇದಮ್ ಶಬ್ದದ ನಂತರ ರ್ಹಿಲ್ ಪ್ರತ್ಯಯವು ಬರುತ್ತದೆ.

**(ಏತ ಮತ್ತು ಇತ್ ಆದೇಶಗಳನ್ನು ವಿಧಿಸುವ ಸೂತ್ರ)**

**ಸೂತ್ರ-1214.-ಏತೇತೌ ರಥೋಃ।**(5.3.4)

ವೃತ್ತಿ -ಇದಮ್ ಶಬ್ದಸ್ಯ ಏತ-ಇತ್ ಇತ್ಯಾದೇಶೌ ಸ್ತೌ ರೇಫಾದೌ ಥಕಾರಾದೌ ಚ ಪ್ರಾಗ್ದಿಶೀಯೇ ಪರೇ। ಅಸ್ಮಿನ್ ಕಾಲೇ-ಏತರ್ಹಿ। ಕಾಲೇ ಕಿಮ್-ಇಹ ದೇಶೇ।

ಅ. ವ್ಯ. -"ಇದಮ ಇಷಃ" ಎಂಬ ಸೂತ್ರದಿಂದ ಇದಮಃ ಎಂಬ ಪದವು ಅನುವೃತ್ತವಾಗುತ್ತದೆ. "ಪ್ರಾಗ್ದಿಶೋ ವಿಭಕ್ತಿಃ" ಎಂಬ ಸೂತ್ರದಿಂದ ಪ್ರಾಗ್ದಿಶಃ ಎಂಬ ಪದವು ಅನುವೃತ್ತವಾಗುತ್ತದೆ. ಪ್ರತ್ಯಯಃ ಎಂಬುದರ ವಚನ ವಿಪರಿಣಾಮ ಮಾಡಿ ಮತ್ತು ವಿಭಕ್ತಿ ವಿಪರಿಣಾಮ ಮಾಡಿದ ಮೇಲೆ ಪ್ರತ್ಯಯಯೋಃ ಎಂದಾಗುತ್ತದೆ.

ಅರ್ಥ -ರೇಫಾದಿ ಮತ್ತು ಥಕಾರಾದಿ ಪ್ರಾಗ್ದಿಶಿಯ ಪ್ರತ್ಯಯವು ಪರದಲ್ಲಿದ್ದಾಗ ಇದಮ್ ಶಬ್ದಕ್ಕೆ ಏತ್ ಮತ್ತು ಇತ್ ಆದೇಶಗಳು ಬರುತ್ತವೆ. "ಇದಮ ಇಷಃ" ಎಂಬ ಸೂತ್ರಕ್ಕೆ ಇದು ಅಪವಾದವಾಗಿದೆ. ಯಥಾಸಂಖ್ಯ ನಿಯಮದಿಂದ ರೇಫವು ಪರದಲ್ಲಿದ್ದಾಗ ಏತ್ ಆದೇಶ ಮತ್ತು ಥಕಾರಾದಿ ಪ್ರತ್ಯಯವು ಪರದಲ್ಲಿದ್ದಾಗ, ಇತ್ ಆದೇಶವು ಬರುತ್ತದೆ. ಅನೇಕಾಲ್ ಆಗಿರುವುದರಿಂದ ಎರಡರಲ್ಲೂ ಸರ್ವಾದೇಶವಾಗಿ ಬರುತ್ತದೆ.

ಉದಾ-ಏತರ್ಹಿ-'ಅಸ್ಮಿನ್ ಕಾಲೇ' ಎಂಬ ಅರ್ಥದಲ್ಲಿ ಸಪ್ತಮ್ಯನ್ತವಾದ ಇದಮ್ ಶಬ್ದದ ನಂತರ ರ್ಹಿಲ್ ಪ್ರತ್ಯಯವು ಬರುತ್ತದೆ. ರ್ಹಿ ಎಂಬುದು ರೇಫಾದಿ ಪ್ರತ್ಯಯವಾಗಿರುವುದರಿಂದ ಇದಮ್ ಶಬ್ದಕ್ಕೆ ಪ್ರಕೃತ ಸೂತ್ರದಿಂದ ಏತ ಆದೇಶವು ಬಂದು ಏತರ್ಹಿ ಎಂಬ ರೂಪವು ಸಿದ್ಧವಾಗುತ್ತದೆ.

ಕಾಲಾರ್ಥ ಉಪಯುಕ್ತವಾಗುವ ಇದಮ್ ಶಬ್ದದ ನಂತರ ರ್ಹಿಲ್ ಪ್ರತ್ಯಯವು

ಬರುತ್ತದೆ ಎಂದು ಹೇಳಿರುವುದರಿಂದ ಅಸ್ಮಿನ್ ದೇಶೆ ಎಂಬರ್ಥದಲ್ಲಿ ಪ್ರಯುಕ್ತವಾಗುವ ಸಪ್ತಮ್ಯನ್ತವಾದ ಇದಮ್ ಶಬ್ದಕ್ಕಿಂತ "ಇದಮೋಮಃ" ಎಂಬ ಸೂತ್ರದಿಂದ ಹ ಪ್ರತ್ಯಯ ಬಂದ ಮೇಲೆ "ಇದಮ ಇಷಃ" ಎಂಬ ಸೂತ್ರದಿಂದ ಈ ಆದೇಶವು ಸಿದ್ಧಿಸುತ್ತದೆ.

ರಥೋಃ ಎಂಬಲ್ಲಿ "ಯಸ್ಮಿನ್‌ವಿಧಿಃ ತದಾದಾವಲ್ಗ್ರಹಣೇ" ಎಂಬ ಸೂತ್ರದಿಂದ ತದಾದಿ ವಿಧಿಯನ್ನು ಮಾಡಿ ರಾದೋ ಮತ್ತು ಥಾದೋ ಎಂಬ ರೂಪಗಳಾಗುತ್ತವೆ.

**(ಹಿಲ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1215.-ಅನದ್ಯತನೇ ರ್ಹಿಲನ್ಯತರಸ್ಯಾಮ್।(5.3.21)**

ವೃತ್ತಿ -ಕರ್ಹಿ ಕದಾ। ಯರ್ಹಿ ಯದಾ। ತರ್ಹಿ ತದಾ।

ಪ. ಛೇ -ಅನದ್ಯತನೇ, ರ್ಹಿಲ್, ಅನ್ಯತರಸ್ಯಾಮ್ ।

ಅ. ವೃ.-"ಸಪ್ತಮ್ಯಾಸ್ತ್ರಲ್" ಎಂಬ ಸೂತ್ರದಿಂದ ಸಪ್ತಮ್ಯಾಃ ಎಂಬ ಪದವು ಅನುವೃತ್ತವಾಗುತ್ತದೆ. ಪ್ರತ್ಯಯಃ, ಪರಶ್ಚ, ಙ್ಯಾಪ್‌ಪ್ರಾತಿಪದಿಕಾತ್ ಮತ್ತು ತದ್ಧಿತಾಃ ಎಂಬುವು ಅಧಿಕಾರ ಸೂತ್ರಗಳು. ಮತ್ತು "ಕಿಮ್ ಸರ್ವನಾಮಬಹುಭ್ಯೋದ್ವ್ಯಾದಿಭ್ಯಃ" ಎಂಬ ಸೂತ್ರವು ಅಧಿಕಾರ ಸೂತ್ರವಾಗಿವೆ.

ಅರ್ಥ-ಅನದ್ಯತನ ಕಾಲದಲ್ಲಿ ಪ್ರಯುಕ್ತವಾಗುವ ಸಪ್ತಮ್ಯಂತ 'ಕಿಮ್' ಮೊದಲಾದ ಶಬ್ದಗಳ ನಂತರ ವೈಕಲ್ಪಿಕವಾಗಿ ರ್ಹಿಲ್ ಪ್ರತ್ಯಯವು ಬರುತ್ತದೆ.

ಉದಾ-1. ಕರ್ಹಿ 2. ಕದಾ (1.ಯಾವ ಅನದ್ಯತನ ಕಾಲದಲ್ಲಿ, 2.ಯಾವಾಗ) - 'ಕಸ್ಮಿನ್ ಅನದ್ಯತನ ಕಾಲೇ' ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಕಿಮ್+ಙಿ ಎಂದಿದ್ದಾಗ, ಪ್ರಕೃತ ಸೂತ್ರದಿಂದ ರ್ಹಿಲ್(ರ್ಹಿ) ಪ್ರತ್ಯಯವು ಬಂದು ಕಿಮ್+ರ್ಹಿ ಎಂದಾಗುತ್ತದೆ. ಪ್ರಾಗ್ದಿಶೀಯ ಪ್ರತ್ಯಯವು ವಿಭಕ್ತಿ ಸಂಜ್ಞೆಯನ್ನು ಹೊಂದಿರುವುದರಿಂದ "ಕಿಮಃ ಕಃ" ಎಂಬ ಸೂತ್ರದಿಂದ ಕಿಮ್ ಶಬ್ದಕ್ಕೆ 'ಕ' ಆದೇಶ ಬಂದು ಕರ್ಹಿ ಎಂದು ರೂಪವು ಸಿದ್ಧವಾಗುತ್ತದೆ. ರ್ಹಿಲ್ ಪ್ರತ್ಯಯವು ಬಾರದ ಪಕ್ಷದಲ್ಲಿ 'ದಾ' ಪ್ರತ್ಯಯವು ಬಂದು, ಕದಾ ಎಂದಾಗುತ್ತದೆ.

ಇದೇ ರೀತಿಯಲ್ಲಿ ಸಪ್ತಮ್ಯಂತಗಳಾದ ಯದ್ ಮತ್ತು ತದ್ ಶಬ್ದಗಳ ನಂತರ ರ್ಹಿಲ್ ಪ್ರತ್ಯಯವು ಬಂದು "ತ್ಯದಾದೀನಾಮಃ" ಎಂಬ ಸೂತ್ರದಿಂದ ಅತ್ವವು ಬಂದು ಯರ್ಹಿ ಮತ್ತು ತರ್ಹಿ ಎಂಬ ರೂಪಗಳು ಸಿದ್ಧವಾಗುತ್ತವೆ. ರ್ಹಿಲ್ ಬಾರದ ಪಕ್ಷದಲ್ಲಿ ದಾಪ್ರತ್ಯಯವು ಬಂದು ಯದಾ ಮತ್ತು ತದಾ ಎಂಬ ರೂಪಗಳು ಸಿದ್ಧವಾಗುತ್ತವೆ.

**(ಏತ ಮತ್ತು ಇತ ಆದೇಶಗಳನ್ನು ವಿಧಿಸುವ ಸೂತ್ರ)**

**ಸೂತ್ರ-1216.-ಏತದಃ।(5.3.5)**

ವೃತ್ತಿ -ಏತ, ಇತ, ಏತೌ ಸ್ತೋ ರೇಫಾದೌ ಥಾದೌ ಚ ಪ್ರಾಗ್ದಿಶೀಯೇ। ಏತಸ್ಮಿನ್ ಕಾಲೇ ಏತರ್ಹಿ।

ಅ.ವ್ಯ.-ಏತೇತೌ ರಥೋಃ ಎಂಬ ಸೂತ್ರವು ಅನುವೃತ್ತವಾಗುತ್ತದೆ.

ಅರ್ಥ-ರೇಫಾದಿಯಾದ ಮತ್ತು ಥಕಾರಾದಿಯಾದ ಪ್ರಾಗ್ದಿಶೀಯ ಪ್ರತ್ಯಯವು ಪರದಲ್ಲಿದ್ದಾಗ ಏತದ್ ಶಬ್ದಕ್ಕೆ ಏತ ಮತ್ತು ಇತ ಆದೇಶಗಳು ಬರುತ್ತವೆ.

ಉದಾ:-ಏತರ್ಹಿ-ಏತಸ್ಮಿನ್ ಕಾಲೇ ಎಂಬರ್ಥದಲ್ಲಿ ಪೂರ್ವ ಸೂತ್ರದಿಂದ ರ್ಹಿಲ್ ಪ್ರತ್ಯಯವು ಬರುತ್ತದೆ. ಪ್ರಕೃತ ಸೂತ್ರದಿಂದ ಏತದ್ ಶಬ್ದಕ್ಕೆ ಏತ್ ಎಂಬ ಆದೇಶವು ಬಂದು ಏತರ್ಹಿ ಎಂಬ ರೂಪವು ಸಿದ್ಧಿಸುತ್ತದೆ. ಈ ರೀತಿಯಲ್ಲಿ ಏತರ್ಹಿ ಎಂಬುದು ಇದಮ್ ಶಬ್ದದಿಂದಲೂ ಮತ್ತು ಏತತ್ ಶಬ್ದದಿಂದಲೂ ಕೂಡಾ ರೂಪಗಳು ನಿಷ್ಪನ್ನವಾಗುವವು. ಅರ್ಥದಲ್ಲಿ ಯಾವ ವ್ಯತ್ಯಾಸವು ಇರುವುದಿಲ್ಲ.

**(ಥಾಲ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1217. ಪ್ರಕಾರವಚನೇ ಥಾಲ್ ।(5.3.23)**

ವೃತ್ತಿ -ಪ್ರಕಾರವೃತ್ತಿಭ್ಯಃ ಕಿಮಾದಿಭ್ಯಃ ಥಾಲ್ ಸ್ಯಾತ್ ಸ್ವಾರ್ಥೇ । ತೇನ ಪ್ರಕಾರೇಣ-ತಥಾ ಯಥಾ।

ಅ. ವ್ಯ. -ಪ್ರತ್ಯಯಃ, ಪರಶ್ಚ, ಙ್ಯಾಪ್ಪ್ರಾತಿಪದಿಕಾತ್ ಮತ್ತು ತದ್ಧಿತಾಃ ಎಂಬುವು ಅಧಿಕಾರ ಸೂತ್ರಗಳು. ಮತ್ತು "ಕಿಮ್ ಸರ್ವನಾಮಬಹುಭ್ಯೋದ್ವ್ಯಾದಿಭ್ಯಃ" ಎಂಬ ಸೂತ್ರವು ಅಧಿಕಾರ ಸೂತ್ರವಾಗಿದೆ.

ಅರ್ಥ -'ಈ ಪ್ರಕಾರದಿಂದ' ಅಥವಾ 'ಆ ಪ್ರಕಾರದಿಂದ' ಎಂಬ ರೀತಿಯನ್ನು ಬೋಧಿಸುವ 'ಕಿಮಾದಿ' ಶಬ್ದಗಳ ನಂತರ ಸ್ವಾರ್ಥದಲ್ಲಿ ಥಾಲ್(ಥಾ) ಪ್ರತ್ಯಯವು ಬರುತ್ತದೆ.

ಉದಾ-ತಥಾ-'ತೇನ ಪ್ರಕಾರೇಣ' ಎಂಬರ್ಥದಲ್ಲಿ ತದ್ ಶಬ್ದದ ನಂತರ ಥಾಲ್(ಥಾ) ಪ್ರತ್ಯಯವು ಬರುತ್ತದೆ. "ತ್ಯದಾದಿನಾಮಃ" ಎಂಬ ಸೂತ್ರದಿಂದ ಅತ್ವವು ಬಂದು ತಥಾ ಎಂದು ರೂಪವು ಸಿದ್ಧವಾಗುತ್ತದೆ. ಇದೇ ರೀತಿಯಲ್ಲಿ ಯದ್ ಶಬ್ದದ ನಂತರ ಥಾಲ್(ಥಾ) ಪ್ರತ್ಯಯವು ಬಂದು ಯಥಾ ಎಂಬ ರೂಪವು ಸಿದ್ಧವಾಗುತ್ತದೆ.

**(ಥಮು (ಥಮ್) ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ 1218.-ಇದಮಸ್ಥಮುಃ।(5.3.24)**

ವೃತ್ತಿ -ಥಾಲೋಽಪವಾದಃ।

ವಾ॥ ಏತದೋಽಪಿ ವಾಚ್ಯಃ।

ಅನೇನ ಏತೇನ ವಾ ಪ್ರಕಾರೇಣ-ಇತ್ಥಮ್।

ಪ. ಛೇ -ಇದಮಃ, ಥಮುಃ ।

ಅ. ವ್ಯ. -ಪ್ರತ್ಯಯಃ, ಪರಶ್ಚ, ಙ್ಯಾಪ್ಪ್ರಾತಿಪದಿಕಾತ್ ಮತ್ತು ತದ್ಧಿತಾಃ ಎಂಬುವು ಅಧಿಕಾರ ಸೂತ್ರಗಳು.

ಅರ್ಥ -ಪ್ರಕಾರವಚನದಲ್ಲಿ ಇದಮ್ ಶಬ್ದದ ನಂತರ ಥಮು (ಥಮ್) ಪ್ರತ್ಯಯವು

ಬರುತ್ತದೆ. ಸೂಚನೆ–ಈ ಸೂತ್ರವು "ಪ್ರಕಾರವಚನೇ ಥಾಲ್" ಸೂತ್ರಕ್ಕೆ ಅಪವಾದವಾಗಿದೆ.

ವಾ॥ ಏತದೋಽಪಿ ವಾಚ್ಯಃ –

ಏತದ್ ಶಬ್ದದ ನಂತರವೂ ಪ್ರಕಾರವಚನಾರ್ಥದಲ್ಲಿ ಥಮು (ಥಮ್) ಪ್ರತ್ಯಯವು ಬರುತ್ತದೆ.

ಉದಾ–ಇತ್ಥಮ್ (ಈ ಪ್ರಕಾರದಿಂದ)–'ಅನೇನ, ಏತೇನ ವಾ ಪ್ರಕಾರೇಣ' ಎಂಬುದು ಲೌಕಿಕ ವಿಗ್ರಹ. ಇದಮ್+ಟಾ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ಥಮು (ಥಮ್) ಪ್ರತ್ಯಯ ಬಂದು, "ಏತೇತೌ ರಥೋಃ" ಎಂಬ ಸೂತ್ರದಿಂದ ಇತ್ ಆದೇಶಬಂದು ಇತ್ಥಮ್ ಎಂಬ ರೂಪವು ಸಿದ್ಧವಾಗುತ್ತದೆ. ಇದೇ ರೀತಿಯಲ್ಲಿ ಏತದ್ ಶಬ್ದ ನಂತರ ಪ್ರಕೃತ ವಾರ್ತಿಕದಿಂದ ಥಮು(ಥಮ್) ಪ್ರತ್ಯಯವು ಬಂದು ಏತದ್ ಶಬ್ದಕ್ಕೆ "ಏತದಃ ಇತ್" ಎಂಬ ಸೂತ್ರದಿಂದ 'ಇತ್' ಆದೇಶ ಬರುವುದರಿಂದಲೂ ಇತ್ಥಮ್ ಎಂದು ರೂಪವು ಸಿದ್ಧವಾಗುತ್ತದೆ. ಅವ್ಯಯ ಸಂಜ್ಞೆ ಬಂದು ಸುಪ್ ಲೋಪವಾಗುತ್ತದೆ.

**(ಥಮು (ಥಮ್) ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ–1219.–ಕಿಮಶ್ಚ॥(5.3.25)**

ವೃತ್ತಿ –ಕೇನ ಪ್ರಕಾರೇಣ–ಕಥಮ್।

**॥ ಇತಿ ಪ್ರಾಗ್ದಿಶೀಯಾಃ (57) ಪ್ರಕರಣಮ್॥**

ಪ. ಛೇ –ಕಿಮಃ ಚ ।

ಅ. ವ್ಯ.–"ಪ್ರಕಾರವಚನೇ ಥಾಲ್" ಎಂಬ ಸೂತ್ರದಿಂದ ಪಞ್ಚಮಿ ವಿಭಕ್ತಿಗೆ ವಿಪರಿಣಾಮ ಮಾಡಿ 'ಪ್ರಕಾರವಚನಾತ್' ಎಂಬ ಪದವು ಹಾಗೂ "ಇದಮಸ್ಥಮುಃ" ಎಂಬ ಸೂತ್ರದಿಂದ ಥಮು(ಥಮ್) ಎಂಬ ಪದವು ಅನುವೃತ್ತವಾಗುತ್ತದೆ. ಪ್ರತ್ಯಯಃ, ಪರಶ್ಚ, ಪ್ರಾಗ್ದಿಶೋವಿಭಕ್ತಿಃ, ಙ್ಯಾಪ್ಪ್ರಾತಿಪದಿಕಾತ್ ಮತ್ತು ತದ್ಧಿತಾಃ ಎಂಬುವು ಅಧಿಕಾರ ಸೂತ್ರಗಳು.

ಅರ್ಥ–ಪ್ರಕಾರವಚನಾರ್ಥದಲ್ಲಿ ಕಿಮ್ ಶಬ್ದದ ನಂತರ ಥಮು (ಥಮ್) ಪ್ರತ್ಯಯವು ಬರುತ್ತದೆ.

ಉದಾ–ಕಥಮ್ (ಯಾವ ಪ್ರಕಾರದಿಂದ) 'ಕೇನ ಪ್ರಕಾರೇಣ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಕಿಮ್+ಟಾ ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಪ್ರಕೃತ ಸೂತ್ರದಿಂದ ಥಮು(ಥಮ್) ಪ್ರತ್ಯಯ ಬಂದು "ಕಿಮಃ ಕಃ" ಎಂಬುದರಿಂದ ಕಿಮ್ ಶಬ್ದಕ್ಕೆ 'ಕ' ಆದೇಶ ಬಂದು ಕಥಮ್ ಎಂಬ ರೂಪವು ಸಿದ್ಧವಾಗಿದೆ.

**॥ ಇತಿ ಪ್ರಾಗ್ದಿಶೀಯ ಪ್ರಕರಣಮ್ ॥**

**ಇಲ್ಲಿಗೆ ಪ್ರಾಗ್ದಿಶೀಯ ಪ್ರಕರಣವು (57) ಮುಗಿಯಿತು**

# ಪ್ರಕರಣ-58: ಪ್ರಾಗಿವೀಯಾಃ

**(ಸೂ. ಸಂ. 1220-1238)**

ಸ್ವಾರ್ಥಿಕ ಪ್ರಕರಣವು ತದ್ಧಿತ ವಿಭಾಗದಲ್ಲಿ ಕೊನೆಯ ಪ್ರಕರಣವಾಗಿದೆ ಈ ಪ್ರಕರಣವು ಇವಾರ್ಥವನ್ನು ಹೇಳುವಂತಹದ್ದಾಗಿದೆ. ಇವಾರ್ಥವನ್ನು ಹೇಳುವ ಪ್ರಕರಣಕ್ಕಿಂತ ಪೂರ್ವ ಪ್ರಕರಣವಾಗಿ ಇರುವುದರಿಂದ, ಈ ಪ್ರಕರಣಕ್ಕೆ ಪ್ರಾಗಿವೀಯ ಪ್ರಕರಣವೆಂದು ಹೆಸರಿಸಲಾಗಿದೆ. ಈ ಪ್ರಕರಣದಲ್ಲಿ ತಮಪ್, ಇಷ್ಠನ್, ತರಪ್, ಈಯಸುನ್, ಡತರಚ್, ಡತಮಚ್, ಧಾ ಮತ್ತು ಚರಟ್ ಪ್ರತ್ಯಯಗಳನ್ನು ವಿಧಿಸಲಾಗಿದೆ.

**(ತಮಪ್ ಮತ್ತು ಇಷ್ಠನ್ ಪ್ರತ್ಯಯಗಳನ್ನು ವಿಧಿಸುವ ಸೂತ್ರ)**

**ಸೂತ್ರ-1220.-ಅತಿಶಾಯನೇ ತಮಬಿಷ್ಠನೌ।(5.3.55)**

ವೃತ್ತಿ -ಅತಿಶಯವಿಶಿಷ್ಟಾರ್ಥವೃತ್ತೇಃ ಸ್ವಾರ್ಥೇ ಏತೌ ಸ್ತಃ। ಅಯಂ ಏಷಾಂ ಅತಿಶಯೇನ ಆಢ್ಯಃ-ಆಢ್ಯತಮಃ। ಲಘುತಮಃ -ಲಘಿಷ್ಠಃ।

ಅ. ವೃ.-ಪ್ರತ್ಯಯಃ, ಪರಶ್ಚ, ಙ್ಯಾಪ್ಪ್ರಾತಿಪದಿಕಾತ್ ಮತ್ತು ತದ್ಧಿತಾಃ ಎಂಬುವು ಅಧಿಕಾರ ಸೂತ್ರಗಳು.

ಅರ್ಥ -ಅತಿಶಯವಾದ ವಿಶಿಷ್ಟಾರ್ಥವನ್ನು ಹೇಳುವ ಪ್ರಾತಿಪದಿಕದ ನಂತರ ಸ್ವಾರ್ಥದಲ್ಲಿ ತಮಪ್(ತಮ) ಮತ್ತು ಇಷ್ಠನ್ (ಇಷ್ಠ) ಪ್ರತ್ಯಯಗಳು ಬರುತ್ತವೆ.

ಉದಾ-ಆಢ್ಯತಮಃ (ಇವನು ಇವರಲ್ಲಿ ಹೆಚ್ಚು ಧನವಂತ)-'ಅಯಂ ಏಷಾಂ ಅತಿಶಯನೇ ಆಢ್ಯಃ' ಎಂಬ ಅರ್ಥದಲ್ಲಿ ಆಢ್ಯತ್ವ ಎಂಬ ಗುಣದಿಂದ ಉಳಿದವರಿಗಿಂತ ಹೆಚ್ಚಿನವನು ಎಂಬ ಅರ್ಥವನ್ನು ಸೂಚಿಸುವ ಆಢ್ಯ ಶಬ್ದದ ನಂತರ ಸ್ವಾರ್ಥದಲ್ಲಿ ಪ್ರಕೃತ ಸೂತ್ರದಿಂದ ತಮಪ್(ತಮ) ಪ್ರತ್ಯಯವು ಬಂದು ಆಢ್ಯತಮಃ ಎಂದು ರೂಪವು ಸಿದ್ಧವಾಗಿದೆ.

ಉದಾ-ಲಘುತಮಃ (ಇವನು ಇವರಲ್ಲಿ ಬಹಳ ಲಘುವಾದವನು (ಕಡಿಮೆ ಯಾದವನು)-'ಅಯಂ ಏಷಾಂ ಅತಿಶಯೇನ ಲಘುಃ' ಎಂಬ ಅರ್ಥದಲ್ಲಿ ಲಘುತ್ವ ಗುಣದಿಂದ ಪ್ರಥಮಾಂತ ಶಬ್ದದ ನಂತರ ತಮಪ್ (ತಮ) ಪ್ರತ್ಯಯವು ಬಂದು ಲಘುತಮಃ ಎಂಬ ರೂಪವು ಸಿದ್ಧವಾಗಿದೆ.

ಉದಾ-ಲಘಿಷ್ಠಃ -(ಇವನು ಇವರಲ್ಲಿ ಬಹಳ ಲಘುವಾದವನು (ಕಡಿಮೆಯಾದವನು)-'ಅತಿಶಯೇನ ಲಘುಃ' ಎಂಬ ಅರ್ಥದಲ್ಲಿ ಇಷ್ಠನ್ (ಇಷ್ಠ) ಪ್ರತ್ಯಯವು ಬಂದು ಲಘು+ಇಷ್ಠ ಎಂದಿದ್ದಾಗ 'ಟೇಃ' ಎಂಬ ಸೂತ್ರದಿಂದ 'ಟಿ(ಉ)' ಲೋಪವಾದ ಮೇಲೆ ಲಘ್+ಇಷ್ಠ=ಲಘಿಷ್ಠ+ಸು=ಲಘಿಷ್ಠಃ ರೂಪವು ಸಿದ್ಧವಾಗುತ್ತದೆ.

**(ತಮಪ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1221.-ತಿಙಶ್ಚ।(5.3.56)**

ವೃತ್ತಿ -ತಿಙನ್ತಾತ್ ಅತಿಶಯೇ ದ್ಯೋತ್ಯೇ ತಮಪ್ ಸ್ಯಾತ್।

ಪ. ಛೇ –ತಿಙಃ, ಚ ।

ಅ. ವ್ಯ.–"ಅತಿಶಾಯನೇ ತಮಬಿಷ್ಠನೌ" ಎಂಬ ಸೂತ್ರವು ಅನುವೃತ್ತವಾಗುತ್ತದೆ. ಪ್ರತ್ಯಯಃ, ಪರಶ್ಚ, ಎಂಬುವು ಅಧಿಕಾರ ಸೂತ್ರಗಳು.

ಅರ್ಥ –ಅತಿಶಯಾರ್ಥದಲ್ಲಿ ತಿಙನ್ತದ ನಂತರ ತಮಪ್ ಪ್ರತ್ಯಯವು ಬರುತ್ತದೆ.

ಸೂಚನೆ–ತಮಪ್ ಮತ್ತು ಇಷ್ಠನ್ ಪ್ರತ್ಯಯಗಳು ವಿಧಿಸಲ್ಪಟ್ಟರೂ, ಇಲ್ಲಿ ತಿಙನ್ತದ ನಂತರ ಇಷ್ಠನ್ ಪ್ರತ್ಯಯದ ಪ್ರಯೋಗವು ಕಂಡು ಬರುವುದಿಲ್ಲ. ಆದುದ್ದರಿಂದಲೇ ಪಾಣಿನಿಯವರು ತಮಪ್ ಪ್ರತ್ಯಯವನ್ನೇ ವಿಧಿಸಿದ್ದಾರೆ.

**(ಘ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ–1222.–ತರಪ್ ತಮಪೌ ಘಃ** ।(1.1.22)

ವೃತ್ತಿ –ಏತೌ ಘಸಂಜ್ಞೌ ಸ್ತಃ।

ಪ. ಛೇ –ತರಪ್–ತಮಪೌ, ಘಃ।

ಅರ್ಥ –'ತರಪ್' 'ತಮಪ್' ಪ್ರತ್ಯಯಗಳಿಗೆ ಸೇರಿ 'ಘ' ಎಂಬ ಸಂಜ್ಞೆಯು ವಿಧಿಸಲಾಗಿದೆ.

ಈ 'ಘ' ಸಂಜ್ಞಕ ಪ್ರತ್ಯಯವನ್ನು ಮಾಡಿರುವ ಉದ್ದೇಶವೇನೆಂದರೆ ಆಮು (ಆಮ್) ಮೊದಲಾದ ಪ್ರತ್ಯಯಗಳನ್ನು ವಿಧಿಸುವದ್ದಕ್ಕಾಗಿಯೇ ಇರುತ್ತದೆ.

(ಆಮು (ಆಮ್)ಪ್ರತ್ಯಯವನ್ನು ವಿಧಿಸುವ ಸೂತ್ರ)

ಸೂತ್ರ–1223.–ಕಿಮೇತ್ತಿಙವ್ಯಯಘಾದಾಮ್ವದ್ರವ್ಯಪ್ರಕರ್ಷೇ।(1.4.11)

ವೃತ್ತಿ –ಕಿಮ ಏದನ್ತಾತ್ ತಿಙಃ ಅವ್ಯಯಾಚ್ಚ ಯಃ ಘಃ ತದನ್ತಾತ್ ಆಮುಃ ಸ್ಯಾತ್ ನ ತು ದ್ರವ್ಯಪ್ರಕರ್ಷೇ। ಕಿನ್ತಮಾಮ್। ಪ್ರಾಹ್ಣೇತಮಾಮ್। ಪಚತಿತಮಾಮ್। ಉಚ್ಚೈಸ್ತಮಾಮ್। ದ್ರವ್ಯಪ್ರಕರ್ಷೇ ತು ಉಚ್ಚೈಸ್ತಮಃ ತರುಃ।

ಪ. ಛೇ –ಕಿಮೇತ್ತಿಙವ್ಯಯಘಾತ್, ಆಮು, ಅದ್ರವ್ಯಪ್ರಕರ್ಷೇ।

ಅ. ವ್ಯ. –ಪ್ರತ್ಯಯಃ, ಪರಶ್ಚ ಮತ್ತು ತದ್ಧಿತಾಃ ಎಂಬುವು ಅಧಿಕಾರ ಸೂತ್ರಗಳು.

ಅರ್ಥ –ಕಿಮ್, ಏದನ್ತ, ತಿಙನ್ತ ಮತ್ತು ಅವ್ಯಯ ಈ ನಾಲ್ಕು ತರಹದ ಶಬ್ದಗಳ ನಂತರ ವಿಹಿತವಾದ 'ಘ' ಸಂಜ್ಞಕ ಪ್ರತ್ಯಯ ಮತ್ತು ತದನ್ತ ಪ್ರಾತಿಪದಿಕಗಳ ನಂತರ ಸ್ವಾರ್ಥದಲ್ಲಿ ಆಮು(ಆಮ್) ಪ್ರತ್ಯಯವು ಬರುತ್ತದೆ. ಅದ್ರವ್ಯ ಪ್ರಕರ್ಷವಿದ್ದಾಗ ಈ ಪ್ರತ್ಯಯವನ್ನು ಸೇರಿಸಿದ ನಂತರ ಆ ಶಬ್ದವು "ತದ್ಧಿತಶ್ಚಾಸರ್ವವಿಭಕ್ತಿಃ" ಎಂಬ ಸೂತ್ರದಿಂದ ಅದ್ರವ್ಯ ಸಂಜ್ಞೆಯನ್ನು ಪಡೆಯುತ್ತದೆ.

ಉದಾ–ಕಿನ್ತಮಾಮ್ (ಅತ್ಯಂತ ತುಚ್ಚವಾದ ವಸ್ತು)–ಇಲ್ಲಿ ಕಿಮ್ ಶಬ್ದದ ನಂತರ ಕೇವಲ ಸ್ವಾರ್ಥದಲ್ಲಿ ತಮಪ್ ಪ್ರತ್ಯಯವು ಬಂದಿರುವುದು. ಆದರೆ 'ಏತೇಷಾಮ್ ಅತಿಶಯೆನ ಆಢ್ಯಃ' ಎಂದು ಹೇಳುವಾಗ 'ಏತೇಷಾಮ್ ಅತಿಶಯೇನ ಕಃ' ಎಂದು ಅರ್ಥ ಹೇಳಲು ಅವಕಾಶವಿರುವುದಿಲ್ಲ. ಆದುದ್ದರಿಂದ ಕಿಮ್ ಶಬ್ದಕ್ಕೆ

ಅತಿಶಾಯನಾರ್ಥದಲ್ಲಿ ತಮಪ್ ಬರುವದಕ್ಕೆ ಅವಕಾಶವಿರುವುದಿಲ್ಲ. ಈಗ 'ಕಿಮ್-ಪ್ರಕೃತಿಕ' 'ತಮಪ್' ಪ್ರತ್ಯಯದ ನಂತರ ಪ್ರಕೃತ ಸೂತ್ರದಿಂದ ಆಮು(ಆಮ್)ಪ್ರತ್ಯಯವನ್ನು ಸೇರಿಸಿದಾಗ 'ಅ'ಕಾರ ಲೋಪವಾಗಿ ಕಿನ್ತಮಾಮ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ-ಪ್ರಾಹ್ಣೇತಮಾಮ್ (ಪೂರ್ವಾಹ್ನ) 'ಅತಿಶಯತೇಪ್ರಾಹ್ಣೇ' ಎಂಬ ಅರ್ಥದಲ್ಲಿ 'ಪ್ರಾಹ್ಣ' ಶಬ್ದದ ನಂತರ ತಮಪ್ ಪ್ರತ್ಯಯವು ಬರುತ್ತದೆ. "ಘಕಾಲತನೇಷುಕಾಲಮ್ನಃ" ಎಂಬ ಸೂತ್ರದಿಂದ ಸಪ್ತಮಿಗೆ 'ಅಲುಕ್' ಬಂದಿದೆ. ಈಗ ಏದನ್ತ ಶಬ್ದದ ನಂತರ ತಮಪ್ ಪ್ರತ್ಯಯವು ಇರುವುದರಿಂದ, ಅದರ ನಂತರ ಪ್ರಕೃತ ಸೂತ್ರದಿಂದ ಆಮು(ಆಮ್) ಪ್ರತ್ಯಯವು ಬಂದು ಪ್ರಾಹ್ಣೇತಮಾಮ್ ಎಂದು ರೂಪವು ಸಿದ್ಧವಾಗುತ್ತದೆ.

ಉದಾ-ಪಚತಿತಮಾಮ್-'ಅತಿಶಯೇನ ಪಚತಿ' ಎಂಬ ಅರ್ಥದಲ್ಲಿ ತಿಙನ್ತವಾದ ಪಚತಿ ಶಬ್ದದ ನಂತರ "ತಿಙಶ್ಚ" ಎಂಬ ಸೂತ್ರದಿಂದ ತಮಪ್ ಪ್ರತ್ಯಯವು ಬಂದಿದೆ. ಈ ತಮಪ್ ಪ್ರತ್ಯಯದ ನಂತರ ಪ್ರಕೃತ ಸೂತ್ರದಿಂದ ಆಮ್ ಪ್ರತ್ಯಯವು ಬಂದು ಪಚತಿತಮಾಮ್ ಎಂದು ರೂಪವು ಸಿದ್ಧವಾಗಿದೆ.

ಉದಾ ಉಚ್ಚೈಸ್ತಮಾಮ್-ಇಲ್ಲಿ 'ಆಶಂಸತಿ' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. 'ಆಶಂಸನ ಕ್ರಿಯೆಯಲ್ಲಿ' ಶ್ರೇಷ್ಠತೆಯನ್ನು ಹೇಳುವದಕ್ಕಾಗಿ 'ಉಚ್ಚೈಸ್' ಎಂಬ ಅವ್ಯಯದ ನಂತರ ತಮಪ್ ಪ್ರತ್ಯಯವು ಬಂದಿದೆ. ಆ ತಮಪ್ ಪ್ರತ್ಯಯದ ನಂತರ ಪ್ರಕೃತ ಸೂತ್ರದಿಂದ ಆಮ್ ಪ್ರತ್ಯಯವು ಬಂದು ಉಚ್ಚೈಸ್ತಮಾಮ್ ಎಂದು ರೂಪವು ಸಿದ್ದವಾಗಿದೆ.

'ಅದ್ರವ್ಯಪ್ರಕರ್ಷೇ' ಎಂದು ಹೇಳಿರುವುದರಿಂದ "ಉಚ್ಚೈಸ್ತರಃತರುಃ ಉಚ್ಚೈಸ್ತಮಃ ತರುಃ" ಮೊದಲಾದವುಗಳಲ್ಲಿ 'ಘ' ಪ್ರತ್ಯಯಗಳು ತರುರೂಪ ಪದಾರ್ಥದಲ್ಲಿ ಉಚ್ಚೈಸ್ತ್ವ-ಅತಿಶಯವನ್ನು ಸೂಚಿಸುತ್ತವೆ. ಆದ್ದರಿಂದ ಅವುಗಳ ನಂತರ ಆಮು(ಆಮ್) ಪ್ರತ್ಯಯವು ಬರುವುದಿಲ್ಲ. ಕೇವಲ ಉಚ್ಚೈಸ್ತರಃ, ಉಚ್ಚೈಸ್ತಮಃ ಎಂದೇ ಇರುತ್ತವೆ.

**(ತರಪ್ ಮತ್ತು ಈಯಸುನ್ ಪ್ರತ್ಯಯಗಳನ್ನು ವಿಧಿಸುವ ಸೂತ್ರ)**

**ಸೂತ್ರ-1224-ದ್ವಿವಚನವಿಭಜ್ಯೋಪಪದೇ ತರಬೀಯಸುನೌ।(5.3.57)**

ವೃತ್ತಿ-ದ್ವಯೋಃ ಏಕಸ್ಯ ಅತಿಶಯೇ ವಿಭಕ್ತವ್ಯೇ ಚ ಉಪಪದೇ ಸುಪ್-ತಿಙನ್ತಾತ್ ಏತೌ ಸ್ತಃ। ಪೂರ್ವಯೋಃ ಅಪವಾದಃ। ಅಯಂ ಅನಯೋಃ ಅತಿಶಯೇನ ಲಘುರ್ಲಘುತರಃ। ಲಘೀಯಾನ್। ಉದೀಚ್ಯಾಃ ಪ್ರಾಚ್ಯೇಭ್ಯಃ ಪಟುತರಾಃ। ಪಟೀಯಾಂಸಃ।

ಅ. ವೃ.-"ಅತಿಶಾಯನೇ ತಮಬಿಷ್ಠನೌ" ಎಂಬ ಸೂತ್ರದಿಂದ ಅತಿಶಾಯನೇ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ -ಎರಡು ವಸ್ತುಗಳನ್ನು ಹೇಳುವ ಪದವು ಉಪಪದವಾಗಿದ್ದಾಗ ಅಂದರೆ-ಎರಡರಲ್ಲಿ ಒಂದರ ಅತಿಶಯವನ್ನು ಹೇಳಬೇಕಾಗಿರುವಾಗ, ಅಂತಹ ವಸ್ತು ದ್ವಯವಾಚಕವಾದ ಉಪಪದವಿದ್ದಾಗ ವಿಭಕ್ತ್ಯವ್ಯಯವನ್ನು ಬೋಧಿಸುವ ಪದವು ಉಪಪದವಾಗಿರುವ ಸುಬಂತ ತಿಙ್ಗತ್‌ಗಳಿಗಿಂತ ಪರದಲ್ಲಿ ತರಪ್ ಮತ್ತು ಈಯಸುನ್

ಪ್ರತ್ಯಯಗಳು ಬರುವವು. ಇವು ತಮಪ್, ಇಷ್ಠನ್ ಪ್ರತ್ಯಯಗಳಿಗೆ ಅಪವಾದವಾಗಿದೆ.

ದ್ವಿವಚನವಿಭಜ್ಯೋಪಪದೇ ಅಂದರೆ 'ಉಚ್ಯತೇ ಅನೇನ' ... 'ವಚನಂ'-'ದ್ವಯೋಃ ಅರ್ಥಯೋಃ ವಚನಮ್ ದ್ವಿವಚನಮ್ ವಿಭಕ್ತ್ಯುಮ್ ...' (ಬೇರೆಯಾಗಿ ಮಾಡಲ್ಪಡಲು ಯೋಗ್ಯವಾದದ್ದು) 'ದ್ವಿವಚನಮ್ ಚ ವಿಭಜಂ ಚ ತಯೋಃ ಸಮಾಹಾರಃ-ದ್ವಿವಚನಂ ವಿಭಾಜಂ'. -'ದ್ವಿವಚನಂ ವಿಭಾಜಂ ಚ ತದ್ ಉಪಪದಂ ಚ ದ್ವಿವಚನವಿಭಜ್ಯೋಪಪದಂ' ಎಂದು ವಿಗ್ರಹ ಮಾಡಿದಾಗ ಈ ಅರ್ಥವು ಸಿಗುತ್ತದೆ.

ಉದಾ-ಲಘುರ್ಲಘುತರಃ ಲಘೀಯಾನ್-ಇದು 'ದ್ವಿವಚನ ಉಪಪದಕ್ಕೆ' ಉದಾಹರಣೆ. ಅಯಂ ಅನಯೋಃ ಅತಿಶಯೇನ ಲಘುಃ-ಈ ಎರಡರಲ್ಲಿ (ಇದು ಬಹಳಷ್ಟು ಹಗುರವಾದದ್ದು) ಎಂಬುದು ವಿಗ್ರಹ ವಾಕ್ಯ. ಇಲ್ಲಿ ವಸ್ತು ವಾಚಕವಾದ ಅನಯೋಃ ಎಂಬುದು ಉಪಪದವಾಗಿರುವುದರಿಂದ ಅತಿಶಯ ವಿಶಿಷ್ಟ ಸ್ವಾರ್ಥವೃತ್ತಿಯಾದ ಲಘುಪದಕ್ಕಿಂತ ಪರದಲ್ಲಿ ತರ-ಪ್ರತ್ಯಯವು ಬಂದ ಪಕ್ಷದಲ್ಲಿ ಲಘುತರಃ ಎಂದು ರೂಪವಾಗುತ್ತದೆ.

ಈಯಸುನ್ (ಈಯಸ್) ಪ್ರತ್ಯಯವು ಬಂದ ಪಕ್ಷದಲ್ಲಿ ಟೇಃ ಎಂಬ ಸೂತ್ರದಿಂದ ಟಿ ಲೋಪವು ಬಂದು, 'ಲಘೀಯಾನ್' ಎಂದು ರೂಪವು ಸಿದ್ಧವಾಗುತ್ತದೆ.

ಉದಾ-ಉದೀಚ್ಯಾಃ ಪ್ರಾಚ್ಯೇಭ್ಯಃ ಪಟುತರಾಃ। ಪಟೀಯಾಂಸಃ-ಇವು ವಿಭಜ್ಯೋಪಪದಕ್ಕೆ ಉದಾಹರಣೆಯಾಗಿವೆ. ಇಲ್ಲಿ ವಿಭಜ್ಯವಾಚಕವಾದ ಪ್ರಾಚ್ಯೇಭ್ಯಃ ಎಂಬುದು ಉಪಪದವಾಗಿರುವುದರಿಂದ, ವಿಭಾಗಪ್ರಯೋಜಕೀಭೂತ ಧರ್ಮವಾಚಕವಾದ ಪಟು ಶಬ್ದದ ನಂತರ ತರಪ್ ಮತ್ತು ಈಯಸುನ್ (ಈಯಸ್) ಪ್ರತ್ಯಯಗಳು ಬಂದು ಪಟುತರಾಃ, ಪಟೀಯಾಂಸಃ ಎಂಬ ರೂಪಗಳು ಸಿದ್ಧವಾಗುತ್ತವೆ.

**(ಶ್ರ-ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ-1225.-ಪ್ರಶಸ್ಯಸ್ಯ ಶ್ರಃ।(5.3.60)**

ವೃತ್ತಿ -ಅಸ್ಯ ಶ್ರಃ ಆದೇಶಃ ಸ್ಯಾತ್ ಅಜಾದ್ಯೋಃ ಪರತಃ ।

ಅ. ವೃ.-"ಅಜಾದಿ ಗುಣವಚನಾದೇವ" ಎಂಬ ಸೂತ್ರದಿಂದ ಅಜಾದಿ ಎಂಬ ಪದವನ್ನು ಸಪ್ತಮ್ಯಂತವಾಗಿ ವಿಪರಿಣಾಮಗೊಳಿಸಿ ಅನುವೃತ್ತಿಮಾಡಲಾಗಿದೆ. "ಪ್ರತ್ಯಯಃ" ಎಂಬುದು ಅಧಿಕಾರ ಸೂತ್ರವಾಗಿದೆ.

ಅರ್ಥ -ಅಜಾದಿ ಪ್ರತ್ಯಯಗಳು (ಇಷ್ಠನ್ ಮತ್ತು ಈಯಸುನ್) ಪರವಾದಾಗ, ಪ್ರಶಸ್ಯ ಶಬ್ದಕ್ಕೆ 'ಶ್ರ' ಆದೇಶವು ಬರುವುದು. 'ಅಯಮೇಷಾಮ್ ಅತಿಶಯೇನ ಪ್ರಶಸ್ಯಃ' ಮತ್ತು 'ಅಯಂ ಅನಯೋಃ ಅತಿಶಯೇನ ಪ್ರಶಸ್ಯಃ' ಎಂಬ ವಿಗ್ರಹಗಳಲ್ಲಿ ಕ್ರಮವಾಗಿ ಪ್ರಶಸ್ಯ ಶಬ್ದದ ನಂತರ ಇಷ್ಠನ್ ಮತ್ತು ಈಯಸ್ ಪ್ರತ್ಯಯಗಳನ್ನು ಸೇರಿಸಿದ ನಂತರ

ಪ್ರಕೃತ ಸೂತ್ರದಿಂದ ಪ್ರಕೃತಿಗೆ (ಪ್ರಶಸ್ಯ ಶಬ್ದಕ್ಕೆ) 'ಶ್ರ' ಆದೇಶ ಬಂದು, ಶ್ರ+ಇಷ್ಠ ಮತ್ತು ಶ್ರ+ಈಯಸ್ ಎಂದಿದ್ದಾಗ, 'ಟೇಃ' ಎಂಬ ಸೂತ್ರದಿಂದ ಬರಬೇಕಾದ 'ಟಿ' ಲೋಪಕ್ಕೆ ನಿಷೇಧವನ್ನು ಮುಂದೆ ಹೇಳಲಾಗುತ್ತದೆ.

(ಪ್ರಕೃತಿಭಾವವನ್ನು ವಿಧಿಸುವ ಸೂತ್ರ)

**ಸೂತ್ರ-1226.-ಪ್ರಕೃತ್ಯೈಕಾಚ್।(6.4.163)**

ವೃತ್ತಿ -ಇಷ್ಠಾದಿಷು ಏಕಾಚ್ ಪ್ರಕೃತ್ಯಾ ಸ್ಯಾತ್। ಶ್ರೇಷ್ಠಃ; ಶ್ರೇಯಾನ್।

ಪ. ಛೇ -ಪ್ರಕೃತ್ಯಾ, ಏಕಾಚ್ ।

ಅ. ವೃ.-"ತುರಿಷ್ಠೇಮೆಯಸ್ಸು" ಎಂಬ ಸೂತ್ರದಿಂದ 'ಇಷ್ಠೇಮಯಸ್ಸು' ಎಂಬ ಪದವು ಅನುವೃತ್ತವಾಗುತ್ತದೆ. "ಅಂಗಸ್ಯ" ಮತ್ತು "ಭಸ್ಯ" ಎಂಬುವು ಅಧಿಕಾರ ಸೂತ್ರಗಳು.

ಅರ್ಥ -ಇಷ್ಠನ್, ಈಯಸುನ್ ಮತ್ತು ಇಮನಿಚ್ ಪ್ರತ್ಯಯಗಳು ಪರವಾದಾಗ ಏಕಾಚ್ಕವಾದ ಶಬ್ದವು ಪ್ರಕೃತಿಭಾವವನ್ನು ಹೊಂದುತ್ತದೆ. ಪ್ರಕೃತ ಸೂತ್ರದಿಂದ 'ಟಿ' ಲೋಪವು ನಿಷೇಧಿಸಲಾಗಿರುವುದರಿಂದ ಶ್ರೇಷ್ಠಃ, ಶ್ರೇಯಾನ್ ರೂಪಗಳು ಸಿದ್ಧಿಸುತ್ತವೆ.

(ಜ್ಯ ಆದೇಶವನ್ನು ವಿಧಿಸುವ ಸೂತ್ರ)

**ಸೂತ್ರ-1227.-ಜ್ಯ ಚ।(5.3.61)**

ವೃತ್ತಿ -ಪ್ರಶಸ್ಯಸ್ಯ ಜ್ಯ-ಆದೇಶಃ ಸ್ಯಾತ್ ಇಷ್ಠೇಯಸೋಃ। ಜ್ಯೇಷ್ಠಃ।

ಅ. ವೃ.-"ಪ್ರಶಸ್ಯಸ್ಯ ಶ್ರಃ" ಎಂಬ ಸೂತ್ರದಿಂದ ಪ್ರಶಸ್ಯ ಎಂಬ ಪದವು ಮತ್ತು "ಅಜಾದೀ ಗುಣವಚನಾದೇವ" ಎಂಬ ಸೂತ್ರದಿಂದ ಅಜಾದಿ ಎಂಬ ಪದವು ಸಪ್ತಮ್ಯಂತವಾಗಿ ವಿಪರಿಣಾಮಗೊಳಿಸಿ ಅನುವೃತ್ತಿಮಾಡಲಾಗಿದೆ.

ಅರ್ಥ -ಅಜಾದಿಯಾದ (ಇಷ್ಠನ್, ಈಯಸುನ್ ಮತ್ತು ಇಮನಿಚ್) ಪ್ರತ್ಯಯಗಳು ಪರದಲ್ಲಿದ್ದಾಗ, ಒಂದೇ 'ಅಚ್' ವುಳ್ಳ 'ಭ' ಸಂಜ್ಞಕ ಅಂಗಕ್ಕೆ ಪ್ರಕೃತಿಭಾವವು ಬರುತ್ತದೆ.

ಉದಾ-ಜ್ಯೇಷ್ಠಃ (ಅಯಂ ಏಷಾಂ ಅತಿಶಯೇನ ಪ್ರಶಸ್ಯಃ)-ಎಂಬ ವಿಗ್ರಹದಲ್ಲಿ ಪ್ರಶಸ್ಯ ಶಬ್ದದ ನಂತರ ಇಷ್ಠನ್ ಪ್ರತ್ಯಯವು ಬರುತ್ತದೆ. ಪ್ರಕೃತ ಸೂತ್ರದಿಂದ ಪ್ರಾತಿಪದಿಕಕ್ಕೆ 'ಜ್ಯ' ಆದೇಶವು ಬರುತ್ತದೆ. ಪೂರ್ವ ಸೂತ್ರದಿಂದ ಪ್ರಕೃತಿಭಾವ ಬಂದು ನಂತರ ಗುಣವು ಬಂದು ಜ್ಯೇಷ್ಠಃ ಎಂಬ ರೂಪವು ಸಿದ್ಧವಾಗುತ್ತದೆ. 'ಅಯಮ್ ಅನಯೋಃ ಅತಿಶಯೇನ ಪ್ರಶಸ್ಯಃ'ಎಂಬ ವಿಗ್ರಹದಲ್ಲಿ ಪ್ರಶಸ್ಯ ಶಬ್ದದ ನಂತರ ಈಯಸುನ್ (ಈಯಸ್) ಬಂದ ಮೇಲೆ ಪ್ರಾತಿಪದಿಕಕ್ಕೆ ಪ್ರಕೃತ ಸೂತ್ರದಿಂದ 'ಜ್ಯ' ಆದೇಶವು ಬಂದು ಜ್ಯ+ಈಯಸ್ ಎಂದಿದ್ದಾಗ-

(ಆತ್ ಆದೇಶವನ್ನು ವಿಧಿಸುವ ಸೂತ್ರ)

**ಸೂತ್ರ-1228.-ಜ್ಯಾದಾದೀಯಸಃ।(6.4.160)**

ವೃತ್ತಿ -ಆದೇಃ ಪರಸ್ಯ । ಜ್ಯಾಯಾನ್।

ಪ. ಛೇ -ಜ್ಯಾತ್, ಆತ್, ಈಯಸಃ।

ಅರ್ಥ -'ಜ್ಯ' ಶಬ್ದದ ನಂತರ ಬರುವ ಈಯಸ್ ಪ್ರತ್ಯಯದ 'ಈ' ಕಾರಕ್ಕೆ 'ಆ' ಕಾರವು ಆದೇಶವಾಗಿ ಬರುತ್ತದೆ.

ಉದಾ–ಜ್ಯಾಯಾನ್–(ಹೆಚ್ಚಾಗಿ ಪ್ರಶಂಸನೀಯನು)–"ಆದೇಃಪರಸ್ಯ" ಎಂಬ ಸೂತ್ರದಿಂದ ಈ ಆದೇಶವು ಪರದಲ್ಲಿರುವ ಈಯಸ್ ಪ್ರತ್ಯಯದ ಆದ್ಯವಯವಾಗಿ ಬರುತ್ತದೆ. ಜ್ಯ+ಆಯಸ್ ಎಂದಿದ್ದಾಗ ಸವರ್ಣ ದೀರ್ಘ ಸಂಧಿಯಿಂದ ಜ್ಯಾಯಾನ್ ಎಂಬ ರೂಪವು ಸಿದ್ಧವಾಗುತ್ತದೆ.

**(ಅನೇಕ ಕಾರ್ಯಗಳನ್ನು ವಿಧಿಸುವ ಸೂತ್ರ)**

**ಸೂತ್ರ–1229.–ಬಹೋರ್ಲೋಪೋ ಭೂ ಚ ಬಹೋಃ।(6.4.158)**

ವೃತ್ತಿ –ಬಹೋಃ ಪರಯೋಃ ಇಮೇಯಸಃಲೋಪಃ ಸ್ಯಾತ್। ಬಹೋಶ್ಚ ಭೂಃ ಆದೇಶಃ। ಭೂಮಾ। ಭೂಯಾನ್।

ಪ. ಛೇ –ಬಹೋಃ, ಲೋಪಃ, ಭೂ, ಚ, ಬಹೋಃ।

ಅ. ವ್ಯ.–"ತುರಿಷ್ಠೇಮೇಯಸ್ಸು" ಎಂಬ ಸೂತ್ರದಿಂದ ಇಮೇಯಸೋಃ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ –'ಬಹು' ಶಬ್ದದ ನಂತರ ಪರದಲ್ಲಿರುವ ಇಮನಿಚ್ ಮತ್ತು ಈಯಸುನ್ (ಈಯಸ್) ಪ್ರತ್ಯಯಗಳಿಗೆ ಲೋಪವು ಬರುವುದು. 'ಬಹು' ಗೆ 'ಭೂ' ಎಂಬ ಆದೇಶವು ಬರುವುದು.

ಉದಾ–ಭೂಮಾ, ಭೂಯಾನ್–(ಎಲ್ಲರಿಗಿಂತ ದೊಡ್ಡವನು) 'ಬಹೋಃ ಭಾವಃ' ಎಂಬ ವಿಗ್ರಹದಲ್ಲಿ ಷಷ್ಠ್ಯಂತ 'ಬಹು' ಶಬ್ದದ ನಂತರ "ಪೃಥ್ವಾದಿಭ್ಯ ಇಮನಿಚ್" ಎಂಬ ಸೂತ್ರದಿಂದ 'ಇಮನಿಚ್' ಪ್ರತ್ಯಯವು ಬರುತ್ತದೆ. ಪ್ರಕೃತ ಸೂತ್ರದಿಂದ ಇಮನಿಚ್–ಗೆ ಲೋಪವು ಬರುತ್ತದೆ. ಈ ಲೋಪವು "ಆದೇಃ ಪರಸ್ಯ" ಎಂಬ ಪರಿಭಾಷೆಯಿಂದ ಆದ್ಯ ವರ್ಣವಾದ 'ಇ' ಕಾರಕ್ಕೆ ಬರುತ್ತದೆ. ಬಹುಮನ್ ಎಂದಿದ್ದಾಗ 'ಬಹು'ಗೆ 'ಭೂ' ಆದೇಶವು ಬಂದು ಭೂಮನ್ ಎಂದು ರೂಪವಾಗುತ್ತದೆ. ನಂತರ ಇದನ್ನು ಸುಬಂತ ಮಾಡಿದಾಗ ಭೂಮಾ ಎಂದು ರೂಪವು ಸಿದ್ಧವಾಗುತ್ತದೆ.

ಭೂಯಾನ್–ಬಹು ಶಬ್ದದ ನಂತರ 'ಅಯಂ ಅನಯೋಃ ಅತಿಶಯೇನ ಬಹುಃ' ಎಂಬ ಅರ್ಥದಲ್ಲಿ ಈಯಸುನ್ (ಈಯಸ್)ಪ್ರತ್ಯಯವು ಬರುತ್ತದೆ. 'ಈ' ಕಾರ ಲೋಪವಾಗಿ, ಹಿಂದಿನಂತೆ 'ಬಹು' ಗೆ 'ಭೂ' ಆದೇಶವು ಬಂದು ಭೂಯಾನ್ ಎಂದು ರೂಪವು ಸಿದ್ಧವಾಗುತ್ತದೆ.

**(ಅನೇಕ ಕಾರ್ಯಗಳನ್ನು ವಿಧಿಸುವ ಸೂತ್ರ)**

**ಸೂತ್ರ–1230.–ಇಷ್ಠಸ್ಯ ಯಿಟ್ ಚ।(6.4.159)**

ವೃತ್ತಿ –ಬಹೋಃ ಪರಸ್ಯ ಇಷ್ಠಸ್ಯ ಲೋಪಃ ಸ್ಯಾದ್ ಯಿಡಾಗಮಶ್ಚ। ಭೂಯಿಷ್ಠಃ।

ಅ. ವ್ಯ. –"ಬಹೋರ್ಲೋಪೋ ಭೂ ಚ ಬಹೋಃ" ಎಂಬ ಸೂತ್ರವು ಅನುವೃತ್ತವಾಗುತ್ತದೆ.

ಅರ್ಥ –'ಬಹು' ಶಬ್ದದ ಪರದಲ್ಲಿರುವ ಇಷ್ಠನ್ ಶಬ್ದಕ್ಕೆ ಲೋಪವು ಬರುತ್ತದೆ.

ಹಾಗೇಯೇ ಇಷ್ಠನ್ ಶಬ್ದಕ್ಕೆ ಯಿಟ್ ಆಗಮವು ಬರುತ್ತದೆ, ಅದರ ಜೊತೆಗೆ 'ಬಹು' ಶಬ್ದಕ್ಕೆ 'ಭೂ' ಆದೇಶವು ಬಂದೇ ಬರುತ್ತದೆ.

ಉದಾ-ಭೂಯಿಷ್ಠಃ (ಅಯಂ ಏಷಾಂ ಅತಿಶಯೇನ ಬಹುಃ) ಎಂಬ ವಿಗ್ರಹದಲ್ಲಿ 'ಬಹು' ಶಬ್ದದ ನಂತರ 'ಇಷ್ಠನ್' ಪ್ರತ್ಯಯವು ಬರುತ್ತದೆ. ಪ್ರಕೃತ ಸೂತ್ರದಿಂದ ವಿಧಿಸಲಾದ ಲೋಪವು "ಆದೇಃ ಪರಸ್ಯ" ಎಂಬ ಪರಿಭಾಷಾ ಸೂತ್ರದಿಂದ ಆದ್ಯಕ್ಷರವಾದ 'ಇ' ಕಾರಕ್ಕೆ ಬರುತ್ತದೆ. 'ಬಹು' ಶಬ್ದಕ್ಕೆ 'ಭೂ' ಆದೇಶ ಬಂದು ಭೂ+ಷ್ಠ ಎಂದಿದ್ದಾಗ 'ಯಿಟ್' ಆಗಮವು 'ಷ್ಠ' ಗೆ ಆದ್ಯವಯವಾಗಿ ಬಂದು, ಭೂಯಿಷ್ಠಃ ಎಂದು ರೂಪವು ಸಿದ್ಧವಾಗುತ್ತದೆ.

**("ಲುಕ್"(ಲೋಪವನ್ನು) ವಿಧಿಸುವ ಸೂತ್ರ)**

**ಸೂತ್ರ-1231.-ವಿನ್ಮತೋರ್ಲುಕ್।(5.3.65)**

ವೃತ್ತಿ-ವಿನಃ ಮತುಪಶ್ಚ ಲುಕ್ ಸ್ಯಾತ್ ಇಷ್ಠ-ಈಯಸೋಃ। ಅತಿಶಯೇನ ಸ್ರಗ್ವೀ-ಸ್ರಜಿಷ್ಠಃ। ಸ್ರಜೀಯಾನ್।ಅತಿಶಯೇನ ತ್ವಗ್ವಾನ್-ತ್ವಚಿಷ್ಠಃ। ತ್ವಚೀಯಾನ್।

ಪ. ಛೇ -ವಿನ್ಮತೋಃ, ಲುಕ್।

ಅ. ವೃ.-"ಅಜಾದೀ ಗುಣವಚನಾದೇವ" ಎಂಬ ಸೂತ್ರದಿಂದ ಅಜಾದಿ ಎಂಬ ಪದವು ಸಪ್ತಮ್ಯಂತವಾಗಿ ವಿಪರಿಣಾಮಗೊಳಿಸಿ ಅನುವೃತ್ತಿ ಮಾಡಲಾಗಿದೆ.

ಅರ್ಥ -ಅಜಾದಿ (ಇಷ್ಠನ್ ಮತ್ತು ಈಯಸುನ್) ಪ್ರತ್ಯಯಗಳು ಪರವಾದಾಗ 'ವಿನ್' ಮತ್ತು 'ಮತುಪ್' ಪ್ರತ್ಯಯಗಳಿಗೆ ಲುಕ್ ಬರುತ್ತದೆ.

ಉದಾ-ಸ್ರಜಿಷ್ಠ-(ಅಯಂ ಏಷಾಂ ಅತಿಶಯೇನ ಸ್ರಗ್ವೀ) ಎಂಬ ಅರ್ಥದಲ್ಲಿ 'ಸ್ರಜ್' ಶಬ್ದದ ನಂತರ ಮತ್ವರ್ಥದಲ್ಲಿ "ಅಸ್-ಮಾಯಾ-ಮೇಧಾ-ಸ್ರಜೋವಿನಿಃ" ಎಂಬ ಸೂತ್ರದಿಂದ 'ವಿನಿ' ಪ್ರತ್ಯಯವು ಬಂದ ಮೇಲೆ "ಚೋಃ ಕುಃ" ಎಂಬ ಸೂತ್ರದಿಂದ ಕುತ್ವವು ಬಂದು ಸ್ರಗ್ವಿನ್ ಎಂಬ ರೂಪವು ಸಿದ್ಧವಾಗುತ್ತದೆ. ನಂತರ ಇಷ್ಠನ್ ಪ್ರತ್ಯಯವು ಪರದಲ್ಲಿದ್ದಾಗ ಪ್ರಕೃತ ಸೂತ್ರದಿಂದ ವಿನಿ ಪ್ರತ್ಯಯಕ್ಕೆ ಲೋಪವು ಬರುತ್ತದೆ, ವಿನಿ ಪ್ರತ್ಯಯಕ್ಕೆ ಲೋಪವು ಬಂದಾಗ, ಅದನ್ನು ನಿಮಿತ್ತವಾಗಿ ಮಾಡಿಕೊಂಡು "ಸ್ವಾದಿಷ್ವಸರ್ವನಾಮಸ್ಥಾನೇ" ಎಂಬ ಸೂತ್ರದಿಂದ ಬಂದ ಪದತ್ವವು ಲೋಪವಾಗೋಣದರಿಂದ 'ನಿಮಿತ್ತಾಪಾಯೇ ನೈಮಿತ್ತಕಸ್ಯಾಪಿ ಅಪ್ಪಾಯಃ' ಎಂಬ ನಿಯಮದಿಂದ ಕುತ್ವವು ಹೋಗಿ ಸ್ರಜ್ ಎಂದು ಉಳಿಯುತ್ತದೆ. ಆಗ ಸ್ರಜ್+ಇಷ್ಠ= ಸ್ರಜಿಷ್ಠ ಎಂದಾಗಿ ಸ್ರಜಿಷ್ಠಃ ಎಂದು ಸುಬಂತವಾಗುತ್ತದೆ. ಇದೇ ರೀತಿಯಲ್ಲಿ ಈಯಸುನ್ ಪ್ರತ್ಯಯವು ಪರದಲ್ಲಿದ್ದಾಗ ವಿನಿ ಪ್ರತ್ಯಯವು ಲೋಪವಾಗಿ ಸ್ರಜೀಯಾನ್ ಎಂದು ರೂಪವು ಸಿದ್ಧವಾಗುತ್ತದೆ. 'ಅಯಂ ಅನಯೋಃ ಅತಿಶಯೇನ ಸ್ರಗ್ವೀ' ಎಂದು ವಿಗ್ರಹ ವಾಕ್ಯ.

ಉದಾ-ತ್ವಚಿಷ್ಠಃ। ತ್ವಚೀಯಾನ್ (ಅಯಂ ಏಷಾಂ ಅತಿಶಯೇನ ತ್ವಗ್ವಾನ್) ಎಂಬ ಅರ್ಥದಲ್ಲಿ ಮತುಪ್ ಪ್ರತ್ಯಯಾಂತವಾದ ತ್ವಗ್ವತ್-ಶಬ್ದದ ನಂತರ 'ಇಷ್ಠನ್' ಪ್ರತ್ಯಯವು

ಪರದಲ್ಲಿದ್ದಾಗ, ಮತುಪ್ ಗೆ ಲೋಪವು ಬರುತ್ತದೆ. ಅದರ ಲೋಪವಾದ ಮೇಲೆ ತನ್ನಿಮಿತ್ತಕವಾದ ಕುತ್ವವು ಹೋಗಿ ತ್ವಚಿಷ್ಠಃ ಎಂದು ರೂಪವು ಸಿದ್ಧವಾಗುತ್ತದೆ. ತ್ವಚೀಯಾನ್–(ಅಯಂ ಅನಯೋಃ ಅತಿಶಯೇನ ತ್ವಗ್ವಾನ್) ಎಂಬ ಅರ್ಥದಲ್ಲಿ ತ್ವಗ್ವತ್–ಶಬ್ದದ ನಂತರ ಈಯಸುನ್ ಪ್ರತ್ಯಯವು ಪರದಲ್ಲಿ ಬಂದಾಗ, ಮತುಪ್ ಪ್ರತ್ಯಯಕ್ಕೆ ಲೋಪ ಬಂದು, ತ್ವಚೀಯಾನ್ ಎಂದು ರೂಪವು ಸಿದ್ಧವಾಗುತ್ತದೆ.

**(ಕಲ್ಪಪ್–ದೇಶ್ಯ–ದೇಶೀಯರ್ ಪ್ರತ್ಯಯಗಳನ್ನು ವಿಧಿಸುವ ಸೂತ್ರ)**

**ಸೂತ್ರ–1232.–ಈಷದಸಮಾಪ್ತೌ ಕಲ್ಪಬ್ದೇಶ್ಯದೇಶೀಯರಃ।(5.3.67)**

ವೃತ್ತಿ–ಈಷದೂನೋ ವಿದ್ವಾನ್–ವಿದ್ವತ್ಕಲ್ಪಃ। ವಿದ್ವದ್ದೇಶ್ಯಃ। ವಿದ್ವದ್ದೇಶೀಯಃ। ಪಚತಿಕಲ್ಪಮ್।

ಅ. ವೃ. –ತಿಙ್ಗಶ್ಚ ಎಂಬ ಸೂತ್ರವು ಇಲ್ಲಿ ಅನುವೃತ್ತವಾಗುತ್ತದೆ. ಪ್ರತ್ಯಯಃ, ಪರಶ್ಚ ಮತ್ತು ಙ್ಯಾಪ್ಪ್ರಾತಿಪದಿಕಾತ್ ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ –ಈಷದಸಮಾಪ್ತಿಯಿಂದ ಕೂಡಿದ ಅರ್ಥವನ್ನು ಬೋಧಿಸುವ ಸುಬಂತ ತಿಙನ್ತಗಳ ನಂತರ ಸ್ವಾರ್ಥದಲ್ಲಿ ಕಲ್ಪಪ್, ದೇಶ್ಯ, ಮತ್ತು ದೇಶೀಯರ್ ಪ್ರತ್ಯಯಗಳು ಬರುತ್ತವೆ. (ಈಷದಸಮಾಪ್ತಿ ಎಂದರೆ ಸಲ್ಪ ಕಡಿಮೆಯಾದ ಎಂದರ್ಥ.)

ಉದಾ–ವಿದ್ವತ್ಕಲ್ಪಃ (ಈಷದೂನಃ ವಿದ್ವಾನ್)–ಎಂಬ ವಿಗ್ರಹಾರ್ಥದಲ್ಲಿ ವಿದ್ವತ್ ಶಬ್ದದ ನಂತರ ಕಲ್ಪಪ್(ಕಲ್ಪ) ಪ್ರತ್ಯಯವು ಬಂದು ವಿದ್ವತ್ಕಲ್ಪಃ ಎಂದು ರೂಪವು ಸಿದ್ಧವಾಗುತ್ತದೆ. ವಿದ್ವದ್ದೇಶ್ಯಃ, ವಿದ್ವದ್ದೇಶೀಯಃ–(ಸ್ವಲ್ಪ ಕಡಿಮೆಯಾದ ಪಂಡಿತನು) ಇದೇ ರೀತಿಯಲ್ಲಿ ದೇಶ್ಯ ಮತ್ತು ದೇಶೀಯರ್ (ದೇಶೀಯ) ಪ್ರತ್ಯಯಗಳನ್ನು ಸೇರಿಸಿದಾಗ ವಿದ್ವದ್ದೇಶ್ಯಃ ಮತ್ತು ವಿದ್ವದ್ದೇಶೀಯಃ ಎಂಬ ರೂಪಗಳು ಸಿದ್ಧವಾಗುತ್ತವೆ.

ಉದಾ–ಪಚತಿಕಲ್ಪಮ್–"ತಿಙಶ್ಚ" ಎಂಬ ಅನುವೃತ್ತವಾದ ಸೂತ್ರದಿಂದಲೂ ಕೂಡಾ ಈ ಪ್ರತ್ಯಯಗಳು ಬರುತ್ತವೆ ಎಂದು ಹೇಳಿರುವುದರಿಂದ 'ಈಷದಸಮಾಪ್ತಾತ್ ಪಚತಿ' ಎಂಬ ಅರ್ಥದಲ್ಲಿ ಕಲ್ಪಪ್ ಪ್ರತ್ಯಯವು ಬಂದು ಪಚತಿಕಲ್ಪಮ್ ಎಂಬ ರೂಪವು ಸಿದ್ಧವಾಗುತ್ತದೆ.

**(ಬಹುಚ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ–1233.–ವಿಭಾಷಾ ಸುಪೋ ಬಹುಚ್ ಪುರಸ್ತಾತ್ತು।(5.3.68)**

ವೃತ್ತಿ –ಈಷದಸಮಾಪ್ತಿವಿಶಿಷ್ಟೇ ಅರ್ಥೇ ಸುಬನ್ತಾತ್ ಬಹುಚ್–ವಾ ಸ್ಯಾತ್ ಸ ಚ ಪ್ರಾಗೇವ ನ ತು ಪರತಃ। ಈಷದೂನಃ ಪಟುರ್ಬಹುಪಟುಃ। ಪಟುಕಲ್ಪಃ। ಸುಪಃ ಕಿಮ್?–ಜಯತಿಕಲ್ಪಮ್।

ಪ. ಛೇ –ವಿಭಾಷಾ, ಸುಪಃ,ಬಹುಚ್,ಪುರಸ್ತಾತ್, ತು ।

ಅ. ವೃ.–"ಈಷದಸಮಾಪ್ತೌ ಕಲ್ಪಬ್ದೇಶ್ಯದೇಶೀಯರಃ" ಎಂಬ ಸೂತ್ರದಿಂದ ಈಷದಸಮಾಪ್ತೌ ಎಂಬ ಪದವು ಅನುವೃತ್ತವಾಗುತ್ತದೆ. "ಪ್ರತ್ಯಯಃ" ಎಂಬುದು

ಅಧಿಕಾರ ಸೂತ್ರವಾಗಿದೆ.

ಅರ್ಥ –ಸಮಾಪ್ತಿಯಾಗಲು ಸಲ್ಪವೇ ಕಡಿಮೆಯಾಗಿರುವ ಅರ್ಥವನ್ನು ಬೋಧಿಸುವ ಸುಬಂತಕ್ಕಿಂತ ಪೂರ್ವದಲ್ಲಿ ಬಹುಚ್ ಪ್ರತ್ಯಯವು ಬರುವುದು. ಇದು ಪರದಲ್ಲಿ ಬರುವುದಿಲ್ಲ ಪೂರ್ವದಲ್ಲೇ ಬರುತ್ತದೆ.

ಉದಾ–ಬಹುಪಟುಃ (ಈಷದೂನಃ ಪಟುಃ) ಎಂಬ ಅರ್ಥದಲ್ಲಿರುವ ವಿಗ್ರಹದಲ್ಲಿ ಪ್ರಥಮೈಕ ವಚನಾಂತವಾದ ಪಟು ಶಬ್ದಕ್ಕಿಂತ ಪೂರ್ವದಲ್ಲಿ ಪ್ರಕೃತ ಸೂತ್ರದಿಂದ ಬಹುಚ್(ಬಹು) ಪ್ರತ್ಯಯವು ಬರುವುದು. ಬಹುಪಟು+ಸು ಎಂದಿದ್ದಾಗ, ಇದು ತದ್ಧಿತವಾಗಿ ಇಲ್ಲದೇ ಇರುವುದರಿಂದ "ಕೃತ್ತದ್ಧಿತಸಮಾಸಾಶ್ಚ" ಎಂಬ ಸೂತ್ರದಿಂದ ಪ್ರಾತಿಪದಿಕತ್ವವನ್ನು ಹೊಂದದಿದ್ದರೂ "ಅರ್ಥವದಧಾತುರಪ್ರತ್ಯಯಃ ಪ್ರಾತಿಪದಿಕಮ್" ಎಂಬ ಸೂತ್ರದಿಂದ ಪ್ರಾತಿಪದಿಕತ್ವವು ಸಿಗುತ್ತದೆ. ಪಟು+ಸು ಪ್ರತ್ಯಯಾಂತವಾಗಿದ್ದರೂ, ಬಹುಪಟು+ಸು ಎಂಬುದು ಸಮುದಾಯವಾಗಿದೆ. ಪ್ರತ್ಯಯಾಂತವಾಗಿಲ್ಲ ಎಂಬುದರಿಂದ ಅಪ್ರತ್ಯಯಃ ಎಂಬ ನಿಷೇಧವು ಪ್ರವೃತ್ತಿಸುತ್ತದೆ. 'ಪ್ರತ್ಯಯಗ್ರಹಣೇ ಯಸ್ಮಾತ್ ಸ ವಿಹಿತಃ ತದಾದೇರೇವ ಗ್ರಹಣಮ್' ಅಂದರೆ ಪ್ರತ್ಯಯವನ್ನು ಗ್ರಹಿಸುವಾಗ ಅದು ಯಾವದರ ಮೇಲೆ ವಿಹಿತವಾಗಿದೇಯೋ ಅದರಿಂದ ಪ್ರಾರಂಭವಾಗುವುದನ್ನೇ ಪ್ರತ್ಯಯಾಂತವೆಂದು ಹೇಳುವಾಗ ಗ್ರಹಿಸಬೇಕು ಎಂಬ ಪರಿಭಾಷೆಯನ್ನು ಅನುಸರಿಸಿ ಪಟು ಶಬ್ದದ ನಂತರವೇ 'ಸು' ಪ್ರತ್ಯಯವು ಬಂದಿರುವುದರಿಂದ, ಪ್ರತ್ಯಯಾಂತವೆಂದರೆ ಪಟು+ಸು ಎಂಬುದೇ ಆಗುವುದು. ತದ್ಧಿತ ಪ್ರತ್ಯಯವನ್ನು ಸೇರಿಸಿದ ನಂತರ ಬಹುಪಟು+ಸು ಎಂಬುದು ಅಲ್ಲ, ಈ ರೀತಿಯಾಗಿ ಬಹುಪಟು+ಸು ಎಂಬುದು ಪ್ರಾತಿಪದಿಕವಾಗಿರುವುದರಿಂದ ಸುಪ್–ಲೋಪವು ಬಂದಿದೆ. ಆಗ ಬಹುಪಟು ಎಂಬ ಪ್ರಾತಿಪದಿಕದ ನಂತರ ಪ್ರಥಮಾ ವಿಭಕ್ತಿಯ ಏಕವಚನದಲ್ಲಿ 'ಸು' ಪ್ರತ್ಯಯವನ್ನು ಸೇರಿಸಿದಾಗ ಬಹುಪಟುಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ–ಪಟುಕಲ್ಪಃ ಬಹುಚ್ ಪ್ರತ್ಯಯವು ವೈಕಲ್ಪಿಕವಾಗಿರುವುದರಿಂದ ಇದು ಬಾರದ ಪಕ್ಷದಲ್ಲಿ ಕಲ್ಪಪ್ ಮೊದಲಾದ ಪ್ರತ್ಯಯಗಳು ಬಂದು, ಪಟುಕಲ್ಪಃ ಮೊದಲಾದ ರೂಪಗಳು ಸಿದ್ಧವಾಗುತ್ತವೆ.

ಉದಾ–ಜಯತಿಕಲ್ಪಮ್–ಸುಬಂತದ ನಂತರವೇ ಬಹುಚ್ ಪ್ರತ್ಯಯವು ಬರುತ್ತದೆ ಎಂದು ಹೇಳಿರುವುದರಿಂದ ಯಜತಿ ಎಂಬ ತಿಙಂತದ ನಂತರ ಪೂರ್ವ ಸೂತ್ರದಿಂದ ಕಲ್ಪಪ್ ಪ್ರತ್ಯಯವು ಬಂದು ಜಯತಿಕಲ್ಪಮ್ ಎಂಬ ರೂಪವು ಸಿದ್ಧಿಸುತ್ತದೆ ಆಗ ಬಹುಚ್ ಪ್ರತ್ಯಯವು ಬರುವುದಿಲ್ಲ.

**(ಕಃ ಎಂಬುದನ್ನು ಅಧಿಕಾರವಾಗಿ ವಿಧಿಸುವ ಸೂತ್ರ)**

**ಸೂತ್ರ–1234.–ಪ್ರಾಗಿವಾತ್ ಕಃ॥(5.3.70)**

ವೃತ್ತಿ –ಇವೇ ಪ್ರತಿಕೃತೌ ಇತ್ಯತಃ ಪ್ರಾಕ್‌ಕಾಧಿಕಾರಃ।

ಪ. ಛೇ –ಪ್ರಾಕ್, ಇವಾತ್, ಕಃ ।

ಅ. ವ್ಯ. –ಪ್ರತ್ಯಯಃ, ಪರಶ್ಚ ಎಂಬುದು ಅಧಿಕಾರ ಸೂತ್ರವಾಗಿದೆ.

ಅರ್ಥ –"ಇವೇ ಪ್ರತಿಕೃತೌ" ಎಂಬ ಸೂತ್ರಕ್ಕಿಂತ ಪೂರ್ವ ಸೂತ್ರದವರೆಗ 'ಕ' ಪ್ರತ್ಯಯವು ಅಧಿಕಾರವನ್ನು ಹೊಂದಿದೆ.

**(ಅಕಚ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ–1235.–ಅವ್ಯಯಸರ್ವನಾಮ್ನಾಮಕಚ್ ಪ್ರಾಕ್ ಟೇः।(5.3.71)**

ವೃತ್ತಿ –ಕಾಪವಾದಃ। ತಿಙಶ್ಚ ಇತ್ಯನುವರ್ತತೇ।

ವಾ॥ ಓಕಾರ–ಸಕಾರ–ಭಕಾರಾದೌ ಸುಪಿ ಸರ್ವನಾಮ್ನಷ್ಟೇಃ ಪ್ರಾಗ್ ಅಕಚ್। ಅನ್ಯತ್ರ ಸುಬನ್ತಸ್ಯ ಟೇಃ ಪ್ರಾಗ್ ಅಕಚ್।

ಪ. ಛೇ –ಅವ್ಯಯಸರ್ವನಾಮ್ನಾಮ್, ಅಕಚ್, ಪ್ರಾಕ್, ಟೇಃ ।

ಅ. ವ್ಯ. –"ಪ್ರಾಗಿವಾತ್ ಕಃ" ಎಂಬ ಸೂತ್ರದಿಂದ ಪ್ರಾಗಿವಾತ್ ಪದವು, "ತಿಙಶ್ಚ" ಎಂಬ ಸೂತ್ರವು ಅನುವೃತ್ತವಾಗುತ್ತವೆ. ಪ್ರತ್ಯಯಃ, ತದ್ಧಿತಾಃ ಎಂಬುವು ಅಧಿಕಾರ ಸೂತ್ರವಾಗಿವೆ.

ಅರ್ಥ –ಅವ್ಯಯಗಳ ಮತ್ತು ಸರ್ವನಾಮ ಶಬ್ದಗಳ ಟಿ–ಗೆ ಪೂರ್ವದಲ್ಲಿ ಅಕಚ್ (ಅಕ್) ಪ್ರತ್ಯಯವು ಬರುತ್ತದೆ.ಈ ಅಕಚ್(ಅಕ್) ಪ್ರತ್ಯಯವು ಕ–ಪ್ರತ್ಯಯಕ್ಕೆ ಅಪವಾದವಾಗಿದೆ. ತಿಙಶ್ಚ ಎಂಬುದು ಅನುವೃತ್ತವಾಗೋಣದರಿಂದ ತಿಙಂತಗಳ ಟಿ–ಗೆ ಪೂರ್ವದಲ್ಲಿ ಕೂಡಾ ಅಕಚ್ (ಅಕ್) ಪ್ರತ್ಯಯವು ಬರುವುದು ಎಂದರ್ಥ.ಪ್ರಕೃತ ಸೂತ್ರದಲ್ಲಿ ಅವ್ಯಯ ಮತ್ತು ಸರ್ವನಾಮಾದಿಗಳ ಟಿ–ಗೆ ಪೂರ್ವದಲ್ಲಿ ಅಕಚ್(ಅಕ್) ಪ್ರತ್ಯಯವು ಬರುವುದೆಂದು ಸಾಮಾನ್ಯವಾಗಿ ಹೇಳಿರುವಾಗ, ವರರುಚಿಯವರು ವಾರ್ತಿಕದಿಂದ ನಿಯಮವನ್ನು ವಿಧಿಸುತ್ತಾರೆ.

ವಾ॥ ಓಕಾರ–ಸಕಾರ–ಭಕಾರಾದೌ ಸುಪಿ ಸರ್ವನಾಮಷ್ಟೇಃ ಪ್ರಾಗ್ ಅಕಚ್। ಅನ್ಯತ್ರ ಸುಬನ್ತಸ್ಯ ಟೇಃ ಪ್ರಾಗ್ ಅಕಚ್ ।

ಅರ್ಥ–'ಓ' ಕಾರ 'ಸ' ಕಾರ ಮತ್ತು 'ಭ' ಕಾರಾದಿಯಾದ ಸುಪ್ ಪ್ರತ್ಯಯವು ಪರದಲ್ಲಿದ್ದಾಗ, ಸರ್ವನಾಮ ಶಬ್ದದ ಟಿ–ಗೆ ಪೂರ್ವದಲ್ಲಿ ಅಕಚ್(ಅಕ್) ಪ್ರತ್ಯಯವು ಬರುವುದು. ತದ್ ಭಿನ್ನವಾದ ಸುಪ್ ಪ್ರತ್ಯಯಗಳು ಪರದಲ್ಲಿದ್ದಾಗ ಮಾತ್ರ ಸುಬಂತವಾದ ಸರ್ವನಾಮದ ಟಿ–ಗೆ ಪೂರ್ವದಲ್ಲಿ ಅಕಚ್ (ಅಕ್) ಪ್ರತ್ಯಯವು ಬರುವುದು.

ಈ ವಾರ್ತಿಕವು ಯುಷ್ಮದ್–ಅಸ್ಮದ್ ಶಬ್ದಗಳ ವಿಷಯದಲ್ಲಿ ಮಾತ್ರ ಪ್ರವೃತ್ತಿಸುವುದು ಎಂದು ಇತರ ಸರ್ವನಾಮಗಳಲ್ಲಿ ಪ್ರಾತಿಪದಿಕದ ಟಿ–ಗೆ ಪೂರ್ವದಲ್ಲೇ ಅಕಚ್ ಬರುವುದೆಂದು ಭಾಷ್ಯಕಾರರು ಹೇಳಿರುವರು.

**(ಕ ಮತ್ತು ಅಕಚ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ–1236.–ಅಜ್ಞಾತೇ।(5.3.73)**

ವೃತ್ತಿ –ಕಸ್ಯ ಅಯಂ ಅಶ್ವಃ ಅಶ್ವಕಃ। ಉಚ್ಚಕೈಃ। ನೀಚಕೈಃ। ಸರ್ವಕೇ। ಯುವಕಯೋಃ।

ಅವಕಯೋಃ। ಯುಷ್ಮಕಾಸು। ಅಸ್ಮಕಾಸು। ಯುಷ್ಮಕಾಭಿಃ। ಅಸ್ಮಕಾಭಿಃ।ತ್ವಯಕಾ।ಮಯಕಾ।

ಅ.ವೃ.-"ಪ್ರಾಗಿವಾತ್ ಕಃ" ಮತ್ತು "ಅವ್ಯಯಸರ್ವನಾಮ್ನಾಮಕಚ್ ಪ್ರಾಕ್ ಟೇಃ" ಎಂಬ ಸೂತ್ರವು ಅನುವೃತ್ತವಾಗುತ್ತವೆ. "ತಿಜಶ್ಚ" ಎಂಬ ಸೂತ್ರವು ಅನುವೃತ್ತವಾಗುತ್ತದೆ.

ಅರ್ಥ -ಅಜ್ಞಾತ ವಿಶಿಷ್ಟಾರ್ಥದಲ್ಲಿ ವರ್ತಮಾನ ಪ್ರಾತಿಪದಿಕ ನಂತರ ಅಥವಾ ತಿಙ್ಗತದ ನಂತರ ಸ್ವಾರ್ಥದಲ್ಲಿ 'ಕ' ಮತ್ತು ಅಕಚ್ ಪ್ರತ್ಯಯಗಳು ಬರುವದು. ಅವ್ಯಯ, ಸರ್ವನಾಮ, ತಿಙಂತಗಳ ಟಿ-ಗೆ ಪೂರ್ವದಲ್ಲಿ ಅಕಚ್ ಪ್ರತ್ಯಯವು ಬರುವುದು.

ಉದಾ-ಅಶ್ವಕಃ (ಅಜ್ಞಾತಃ ಆಶ್ವಃ) ಎಂಬ ವಿಗ್ರಹದಲ್ಲಿ ಅಂದರೆ 'ಯಾರ ಕುದುರೆ ಇದು' ಎಂದು ತಿಳಿಯದಿದ್ದಾಗ (ಕಸ್ಯ ಅಯಂ ಅಶ್ವಃ) ಎಂಬರ್ಥದಲ್ಲಿ ಅಶ್ವ ಶಬ್ದದ ನಂತರ 'ಕ' ಪ್ರತ್ಯಯವು ಬಂದು ಅಶ್ವಕಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ-ಉಚ್ಚಕೈಃ, ನೀಚ್ಚಕೈಃ, ಈ ಅವ್ಯಯಗಳಿಗೆ ಹಿಂದಿನ ಸೂತ್ರದಿಂದ ಟಿ-ಗೆ ಪೂರ್ವದಲ್ಲಿ ಅಕಚ್ ಪ್ರತ್ಯಯವು ಬರುತ್ತದೆ.

ಉದಾ-ಸರ್ವಕೇ-ಪ್ರಥಮಾ ಬಹುವಚನದಲ್ಲಿ ಸರ್ವ+ಜಸ್ ಎಂದಿದ್ದಾಗ, ಸರ್ವ ಶಬ್ದದ ಟಿ-ಗೆ ಅಕಚ್ ಪ್ರತ್ಯಯವು ಬಂದು, ಸರ್ವ್+ಅಕ+ಜಸ್=ಸರ್ವಕಜಸ್ ಎಂದಿದ್ದಾಗ, ಪೂರ್ವರೂಪ ಬಂದ ಮೇಲೆ, 'ಜಸ್'ಗೆ 'ಶೀ' ಆದೇಶವು ಬಂದು ಸರ್ವಕೇ ಎಂದು ರೂಪವು ಸಿದ್ಧಿಸುತ್ತದೆ.

ವಾರ್ತಿಕಗಳ ಉದಾಹರಣೆಗಳು-ಯುವಕಯೋಃ, ಅವಕಯೋಃ-ಯುಷ್ಮದ್ ಮತ್ತು ಅಸ್ಮದ್ ಶಬ್ದಗಳಿಗೆ ಓಸ್ ಪ್ರತ್ಯಯವನ್ನು ಸೇರಿಸಿದಾಗ, ಹಿಂದಿನ ವಾರ್ತಿಕದಿಂದ ಟಿ-ಯಾಗಿರುವ 'ಅದ್' ಶಬ್ದದ ಪೂರ್ವದಲ್ಲಿ ಅಕಚ್ ಪ್ರತ್ಯಯವು ಬಂದು, ಯುಷ್ಮ+ಅಕ+ಅದ್+ಓಸ್ ಎಂದು ಮತ್ತು ಅಸ್ಮ+ಅಕ+ಅದ್+ಓಸ್ ಎಂದಿದ್ದಾಗ,ಮ್-ವರೆಗಿನ ಭಾಗಕ್ಕೆ "ಯುವಾವೌದ್ವಿವಚನೇ" ಎಂಬ ಸೂತ್ರದಿಂದ 'ಯುವ' ಮತ್ತು 'ಅವ' ಆದೇಶಗಳು ಬಂದು ಯುವ+ಅಕದ್+ಓಸ್ ಎಂದು ಅವ+ಅಕದ್+ಓಸ್ ಎಂದು "ಅತೋಗುಣೇ" ಎಂಬ ಸೂತ್ರದಿಂದ ಪರರೂಪವು ಬಂದು "ಯೋಽಚಿ" ಎಂಬ ಸೂತ್ರದಿಂದ 'ದ' ಕಾರಕ್ಕೆ 'ಯ' ಕಾರಾದೇಶವು ಬಂದು, ಯುವಕಯೋಃ, ಅವಕಯೋಃ ಎಂದು ರೂಪವಾಗುತ್ತವೆ.

ಉದಾ-ಯುಷ್ಮಕಾಸು, ಅಸ್ಮಕಾಸು-'ಸ' ಕಾರಾದಿ ಪ್ರತ್ಯಯವಾದ 'ಸು' ಪರದಲ್ಲಿ ಇರುವುದರಿಂದ ಯುಷ್ಮದ್ ಮತ್ತು ಅಸ್ಮದ್ ಶಬ್ದಗಳ ಟಿ-ಗೆ ಪೂರ್ವದಲ್ಲಿ ಹಿಂದಿನ ವಾರ್ತಿಕದಿಂದ ಅಕಚ್ ಪ್ರತ್ಯಯವು ಬಂದು 'ಯುಷ್ಮಕದಸು' ಮತ್ತು 'ಅಸ್ಮದಕದಸು' ಎಂದಿದ್ದಾಗ "ಯುಷ್ಮದಸ್ಮದೋರನಾದೇಶೇ" ಎಂಬ ಸೂತ್ರದಿಂದ ದ್-ಕಾರಕ್ಕೆ 'ಅ' ಕಾರವು ಬಂದು ಯುಷ್ಮಕಾಸು, ಅಸ್ಮಕಾಸು ಎಂದು ರೂಪಗಳು ಸಿದ್ಧವಾಗುತ್ತವೆ.

ಉದಾ-ಯುಷ್ಮಕಾಭಿಃ-ಅಸ್ಮಕಾಭಿಃ-'ಭ' ಕಾರಾದಿ ಪ್ರತ್ಯಯವಾದ ಭಿಸ್ ಪರದಲಿದ್ದಾಗ, ಯುಷ್ಮದ್, ಅಸ್ಮದ್ ಶಬ್ದಗಳ ಟಿ-ಗೆ ಮುಂದೆ ಅಕಚ್ ಪ್ರತ್ಯಯವು ಬರುತ್ತದೆ. ಅಲ್ಲಿ 'ದ' ಕಾರಕ್ಕೆ 'ಅ' ಕಾರಾದೇಶವು ಬಂದು ಯುಷ್ಮಕಾಭಿಃ ಅಸ್ಮಕಾಭಿಃ

ಎಂಬ ರೂಪವು ಸಿದ್ಧವಾಗುತ್ತದೆ.

ಉದಾ–ತ್ವಯಕಾ, ಮಯಕಾ–ಯುಷ್ಮದ್ ಅಸ್ಮದ್ ಶಬ್ದಗಳ ತೃತೀಯಾವಿಭಕ್ತಿ ಏಕವಚನದಲ್ಲಿ ತ್ವಯಾ ಮತ್ತು ಮಯಾ ಎಂಬ ರೂಪಗಳು ಆದ ಮೇಲೆ, ಅವುಗಳ ಟಿ–ಗೆ ಪೂರ್ವದಲ್ಲಿ ಅಕಚ್ ಪ್ರತ್ಯಯವು ಬಂದು, ತ್ವಯಕಾ, ಮಯಕಾ ಎಂಬ ರೂಪಗಳು ಸಿದ್ಧವಾಗುತ್ತವೆ.

ಸೂಚನೆ–ಟಾ(ಆ) ಎಂಬ ತೃತೀಯಾವಿಭಕ್ತಿಯ ಏಕವಚನದ ಸುಪ್ ಪ್ರತ್ಯಯವು 'ಓ' ಕಾರ, 'ಸ' ಕಾರ ಮತ್ತು 'ಭ' ಕಾರಗಳಾಗಿ ಇಲ್ಲದೇ ಇರುವುದರಿಂದ, ಅಕಚ್ ಪ್ರತ್ಯಯವು ಪ್ರಾತಿಪದಿಕದ ಟಿ–ಗಿಂತ ಪೂರ್ವದಲ್ಲಿ ಬಾರದೆ ಸುಬಂತವಾದ ತ್ವಯಾ ಮತ್ತು ಮಯಾ ಎಂಬ ಶಬ್ದಗಳ ಪೂರ್ವದಲ್ಲಿ ಟಿ–ಗೆ ಬಂದಿದೆ. ಪ್ರಾತಿಪದಿಕದ 'ಟಿ' ಗೆ ಪೂರ್ವದಲ್ಲಿ ಬಂದಿದ್ದರೆ ಅನಿಷ್ಠ ರೂಪಗಳು ಸಿದ್ಧವಾಗುತ್ತಿದ್ದವು.

**(ಕ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ–1237.–ಕುತ್ಸಿತೇ।(5.3.74)**

ವೃತ್ತಿ –ಕುತ್ಸಿತಃ ಅಶ್ವಃ–ಅಶ್ವಕಃ।

ಅ. ವ್ಯ. –'ಕಃ' ಮತ್ತು 'ಅಕಚ್' ಈ ಎರಡು ಪ್ರತ್ಯಯಗಳು ಅಧಿಕೃತವಾಗಿವೆ. "ತಿಙಶ್ಚ" ಎಂಬ ಸೂತ್ರವು ಅನುವೃತ್ತವಾಗುತ್ತದೆ. ಪ್ರತ್ಯಯಃ, ಪರಶ್ಚ , ಙ್ಯಾಪ್ಪ್ರಾತಿಪದಿಕಾತ್ ಮತ್ತು ತದ್ಧಿತಾಃ ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ –ನಿಂದಾರ್ಥದಲ್ಲಿರುವ ಪ್ರಾತಿಪದಿಕ ಅಥವಾ ತಿಙಂತದ ನಂತರ ಸ್ವಾರ್ಥದಲ್ಲಿ 'ಕ' ಮತ್ತು 'ಅಕಚ್' ಪ್ರತ್ಯಯಗಳು ಬರುತ್ತವೆ.

ಉದಾ–ಅಶ್ವಕಃ–'ನಿಂದ್ಯವಾದ ಕುದುರೆ'–'ಕುತ್ಸಿತಃ ಅಶ್ವಃ' ಎಂಬುದು ವಿಗ್ರಹವಾಕ್ಯ. ಅಶ್ವ+ಸು ದ ನಂತರ ಕುತ್ಸಿತಾರ್ಥದಲ್ಲಿ 'ಕ' ಪ್ರತ್ಯಯವು ಬಂದ ಮೇಲೆ ಪ್ರಾತಿಪದಿಕ ಸಂಜ್ಞೆ ಬಂದು 'ಸು' ಲೋಪವಾದ ಮೇಲೆ, ಪ್ರಾತಿಪದಿಕತ್ವವನ್ನು ಕಳೆದುಕೊಳ್ಳದಿರುವ ಆ ಶಬ್ದಕ್ಕೆ ಸು(ಸ್) ಸೇರಿಸಿದ ಮೇಲೆ, ರುತ್ವ ವಿಸರ್ಗಗಳಿಂದ ಅಶ್ವಕಃ ಎಂಬ ರೂಪವು ಸಿದ್ಧಿಸುತ್ತದೆ.

**(ಡತರಚ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ–1238.–ಕಿಂಯತ್ತದೋರ್ನಿರ್ಧಾರಣೇ ದ್ವಯೋರೇಕಸ್ಯ ಡತರಚ್।(5.3.92)**

ವೃತ್ತಿ –ಅನಯೋಃ ಕತರಃ ವೈಷ್ಣವಃ। ಯತರಃ। ತತರಃ।

ಪ. ಛೇ –ಕಿಂಯತ್ತದಃ,ನಿರ್ಧಾರಣೇ, ದ್ವಯೋಃ,ಏಕಸ್ಯ, ಡತರಚ್।

ಅರ್ಥ –'ಎರಡರಲ್ಲಿ ಒಂದನ್ನು ನಿಶ್ಚಯಿಸಿದಾಗ' ಕಿಮ್, ಯತ್, ತತ್ ಶಬ್ದಗಳ ನಂತರ ಡತರಚ್ (ಅತರ) ಪ್ರತ್ಯಯವು ಬರುತ್ತದೆ.

ಉದಾ–ಅನಯೋಃ ಕತರಃ ವೈಷ್ಣವಃ–'ಇವರಿಬ್ಬರಲ್ಲಿ ಯಾರು ವೈಷ್ಣವನು' ಎಂಬ ಅರ್ಥದಲ್ಲಿ ಕಿಮ್+ಸುವಿ ನ ನಂತರ ಪ್ರಕೃತ ಸೂತ್ರದಿಂದ ಡತರಚ್ (ಅತರ) ಪ್ರತ್ಯಯವು

ಬಂದು, ಪ್ರಾತಿಪದಿಕ ಸಂಜ್ಞೆ ಬಂದಮೇಲೆ ಸುಪ್ ಗೆ ಲುಕ್ ಬಂದು ಕಿಮ್ ನಲ್ಲಿರುವ ಇಮ್-ಗೆ ಟಿ ಲೋಪ ಬಂದು ಕ್+ಅತರ=ಕತರ ಎಂದಾದ ಮೇಲೆ ಇದಕ್ಕೆ 'ಸು' ಸೇರಿಸಿದಾಗ ರುತ್ವ ವಿಸರ್ಗಗಳಿಂದ ಕತರಃ ಎಂಬ ರೂಪವು ಸಿದ್ಧವಾಗುತ್ತದೆ.

ಉದಾ-ಯತರಃ, ತತರಃ-ಹಿಂದಿನಂತಯೇ 'ಅನಯೋಃ ಯಃ ' ಮತ್ತು 'ಅನಯೋಃ ಸಃ' ಎಂಬ ಅರ್ಥದಲ್ಲಿ 'ಯತ್' ಮತ್ತು 'ತತ್' ಶಬ್ದಗಳ ನಂತರ ಡತರಚ್ ಪ್ರತ್ಯಯವು ಬಂದು, ನಂತರ ಟಿ ಲೋಪವಾದ ಮೇಲೆ ಯತರಃ ಮತ್ತು ತತರಃ ಎಂಬ ರೂಪಗಳು ಸಿದ್ಧವಾಗುತ್ತವೆ.

ಮಹಾವಿಭಾಷೆಯಿಂದ ಡತರಚ್ ಪ್ರತ್ಯಯವು ಬಾರದ ಪಕ್ಷದಲ್ಲಿ ಯಃ ಮತ್ತು ಸಃ ಎಂಬ ರೂಪಗಳು ಸಿದ್ಧವಾಗುತ್ತವೆ.

**ಸೂತ್ರ-1239.-ವಾ ಬಹೂನಾಂ ಜಾತಿಪರಿಪ್ರಶ್ನೇ ಡತಮಚ್। (5.3.93)**

ವೃತ್ತಿ -ಬಹೂನಾಂ ಮಧ್ಯೇ ಏಕಸ್ಯ ನಿರ್ಧಾರಣೇ ಡತಮಜ್ವಾ ಸ್ಯಾತ್। 'ಜಾತಿಪರಿಪ್ರಶ್ನೇ'

ಇತಿ ಪ್ರತ್ಯಾಖ್ಯಾತಮ್ ಆಕರೇ।ಕತಮಃ ಭವತಾಂ ಕಠಃ। ಯತಮಃ। ತತಮಃ। ವಾ ಗ್ರಹಣಂ ಅಕಜರ್ಥಮ್। ಯಕಃ। ಸಕಃ।

**॥ ಇತಿ ಪ್ರಾಗಿವೀಯ (58)ಪ್ರಕರಣಮ್॥**

ಅರ್ಥ -ಜ್ಯಾತಿಯನ್ನು ಕುರಿತು ಮಾಡಿದ ಪ್ರಶ್ನೆಗೆ ಹಲವುಗಳಲ್ಲಿ ಒಂದು ಎಂಬುದನ್ನು ನಿರ್ಧಾರಮಾಡುವಾಗ ಕಿಮ್, ಯದ್ ಮತ್ತು ತದ್ ಶಬ್ದಗಳ ನಂತರ ಡತಮಚ್ (ಅತಮ)ಪ್ರತ್ಯಯವು ಬರುತ್ತದೆ.

ಸೂಚನೆ-ಭಾಷ್ಯಕಾರರು 'ಜಾತಿಪರಿಪ್ರಶ್ನೇ' ಎಂಬ ಪದವು ಬೇಕಾಗಿಲ್ಲವೆಂದು ನೀಷೇಧಮಾಡಿರುವರು. ಆದ್ದರಿಂದ 'ಜಾತಿ ಪರಿಪ್ರಶ್ನೇ' ಇಲ್ಲದ ಸಂದರ್ಭದಲ್ಲೂ ಡತಮಚ್ (ಅತಮ) ಪ್ರತ್ಯಯವು ಬರುತ್ತದೆ ಎಂದು ಗೊತ್ತಾಗುತ್ತದೆ.

ಉದಾ-ಕತಮಃ ಭವತಾಂ ಕಠಃ-(ನಿಮ್ಮಲ್ಲಿ ಯಾರು ಕಠ ಶಾಖೆಗೆ ಸೇರಿದವನು)-ಕಠ ಶಾಖೆಗೆ ಸೇರಿದ ಎಲ್ಲರನ್ನು ಒಂದು ಜಾತಿಗೆ ಸೇರಿದವರಾಗಿ ಇರುವುದರಿಂದ, ಇಲ್ಲಿ ಜಾತಿಗೆ ಸಂಬಂಧಿಸಿದ ಪ್ರಶ್ನೆ ಬರುತ್ತದೆ. ಆದ್ದರಿಂದ ಕಿಮ್ ಶಬ್ದದ ನಂತರ ಡತಮಚ್ (ಅತಮ್) ಪ್ರತ್ಯಯವು ಬಂದು ಕತಮಃ ಎಂದು ರೂಪವು ಸಿದ್ಧವಾಗಿದೆ. ಇದೇ ರೀತಿಯಲ್ಲಿ ತದ್ ಶಬ್ದದ ನಂತರ ಡತಮಚ್ (ಅತಮ್) ಪ್ರತ್ಯಯವು ಬಂದು ತತಮಃ ಎಂದು ರೂಪವು ಸಿದ್ಧವಾಗಿದೆ. ಇಲ್ಲಿ 'ವಾ' ಶಬ್ದದಿಂದ ವೈಕಲ್ಪಿಕ ರೂಪವು ಬರುತ್ತದೆ ಎಂದು ಗೊತ್ತಾಗುತ್ತದೆ. ಡತಮಚ್(ಅತಮ್) ಪ್ರತ್ಯಯವು ಬಾರದ ಪಕ್ಷದಲ್ಲಿ ಅಕಚ್ ಪ್ರತ್ಯಯವು ಬಂದು ಯಕಃ, ಸಕಃ ಎಂದು ರೂಪಗಳು ಸಿದ್ಧವಾಗುತ್ತವೆ.

**॥ ಇತಿ ಪ್ರಾಗಿವೀಯ ಪ್ರಕರಣಮ್॥**

**ಪ್ರಾಗಿವೀಯ (58) ಪ್ರಕರಣವು ಮುಗಿಯಿತು.**

# ಪ್ರಕರಣ-59: ಸ್ವಾರ್ಥಿಕಾಃ

(ಸೂ. ಸಂ 1240-1249)

(ಕನ್ ಪ್ರತ್ಯಯವನ್ನು ವಿಧಿಸುವ ಸೂತ್ರ)

**ಸೂತ್ರ-1240.-ಇವೇ ಪ್ರತಿಕೃತೌ।(5.3.96)**

ವೃತ್ತಿ -ಕನ್ ಸ್ಯಾತ್ ಅಶ್ವ ಇವ ಪ್ರತಿಕೃತಿಃ ಅಶ್ವಕಃ।

ವಾ॥ ಸರ್ವಪ್ರಾತಿಪದಿಕೇಭ್ಯಃ ಸ್ವಾರ್ಥೇ ಕನ್ ಅಶ್ವಕಃ।

ಅ. ವ್ಯ.-"ಅವಕ್ಷೇಪಣೇ ಕನ್" ಎಂಬ ಸೂತ್ರದಿಂದ ಕನ್ ಎಂಬ ಪದವು ಅನುವೃತ್ತವಾಗುತ್ತದೆ. ಪ್ರತ್ಯಯಃ, ಪರಶ್ಚ, "ಙ್ಯಾಪ್‌ಪ್ರಾತಿಪದಿಕಾತ್, ತದ್ಧಿತಾಃ ಎಂಬುವು ಅಧಿಕಾರ ಸೂತ್ರಗಳು.

ಅರ್ಥ -ಪ್ರತಿಕೃತಿ ಮತ್ತು ಸಾದೃಶ್ಯ ಅರ್ಥಗಳಲ್ಲಿ ಸಮರ್ಥ ಪ್ರಾತಿಪದಿಕದ ನಂತರ ಕನ್ ಪ್ರತ್ಯಯವು ಬರುತ್ತದೆ.-ಯಾವಾಗ ಆಪ್ರಕೃತಿ ಅಥವಾ ಚಿತ್ರ ಉಪಮೇಯವಾಗಿರುತ್ತದೋ ಆಗ ಮಾತ್ರ ಈ ಕನ್ ಪ್ರತ್ಯಯವು ಬರುತ್ತದೆ.(ಕನ್-ನಲ್ಲಿ 'ಕ' ಮಾತ್ರ ಉಳಿಯುತ್ತದೆ.)

ಉದಾ-ಅಶ್ವಕಃ-(ಕುದುರೆಯ ಪ್ರತಿಮೆ) 'ಅಶ್ವ ಇವ ಅಶ್ವಕಃ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಅಶ್ವ ಶಬ್ದದ ನಂತರ ಸ್ವಾರ್ಥದಲ್ಲಿ ಕನ್ ಪ್ರತ್ಯಯವು ಬಂದಿದೆ. ಈ ಪ್ರತ್ಯಯವು 'ಕುದುರೆಯಂತೆ ಉಳ್ಳ ಪ್ರತಿಮೆ' ಎಂಬ ಅರ್ಥದಲ್ಲಿ ಬಂದಿದೆ. ಆದ್ದರಿಂದ ಉಪಮೇಯ ವಾಚಕವಾಗಿದೆ.

ವಾ॥ ಸರ್ವಪ್ರಾತಿಪದಿಕೇಭ್ಯಃ ಸ್ವಾರ್ಥೇ ಕನ್ ।

ಎಲ್ಲ ಪ್ರಾತಿಪದಿಕಗಳ ನಂತರ ಸ್ವಾರ್ಥದಲ್ಲಿ ಕನ್ ಪ್ರತ್ಯಯ ಬರುವುದಾದರೆ ಸ್ವಾರ್ಥಿಕ ಅರ್ಥದಲ್ಲಿ ಮಾತ್ರ ಈ ಪ್ರತ್ಯಯವು ಬರುತ್ತದೆ ಎಂದು ಹೇಳಬೇಕಾಗಿಲ್ಲ. ಆದ್ದರಿಂದ ಇದರಲ್ಲಿ ಒಂದು ವೈಶಿಷ್ಟ್ಯವಿದೆ. ಯಾವ ವಿಶೇಷಾರ್ಥ ವಿವಕ್ಷೆ ಇಲ್ಲದಿದ್ದಾಗ, ಬರುವ ಪ್ರತ್ಯಯಕ್ಕೆ ಸ್ವಾರ್ಥಿಕ ಪ್ರತ್ಯಯವೆಂದು ಹೇಳುತ್ತಾರೆ. ಕೆಲವೊಮ್ಮೆ ಮನುಷ್ಯನು ಪ್ರಕೃತಿ ಪ್ರತ್ಯಯಗಳ ವಿಶೇಷ ಜ್ಞಾನವನ್ನು ಪಡೆದು ಶಬ್ದ ಉಚ್ಚಾರಣೆ ಮಾಡುತ್ತಾನೆ. ಕೆಲವೊಮ್ಮೆ ಉಚ್ಚಾರಣ-ಸೌಕರ್ಯಕ್ಕಾಗಿ ಸ್ವಾರ್ಥದಲ್ಲಿ ಕನ್ ಪ್ರತ್ಯಯವನ್ನು ಉಪಯೋಗಿಸುತ್ತಾನೆ. ವಿಶೇಷಾರ್ಥವಿದ್ದಾಗಲೂ ಕನ್ ಪ್ರತ್ಯಯವನ್ನು ಉಪಯೋಗಿಸುತ್ತಾನೆ.

(ಮಯಟ್ ಪ್ರತ್ಯಯವನ್ನು ವಿಧಿಸುವ ಸೂತ್ರ)

**ಸೂತ್ರ-1241-ತತ್ಪ್ರಕೃತವಚನೇ ಮಯಟ್। (5.4.21)**

ವೃತ್ತಿ-ಪ್ರಾಚುರ್ಯೇಣ ಪ್ರಸ್ತುತಂ-ಪ್ರಕೃತಂ, ತಸ್ಯ ವಚನಂ ಪ್ರತಿಪಾದನಮ್। ಭಾವೇ ಅಧಿಕರಣೇ ವಾ ಲ್ಯುಟ್। ಆದ್ಯೇ ಪ್ರಕೃತಮನ್ನಮ್-ಅನ್ನಮಯಮ್

।ಅಪೂಪಮಯಮ್। ದ್ವಿತೀಯೇ ತು ಅನ್ನಮಯೋ ಯಜ್ಞಃ । ಅಪೂಪಮಯಂ-ಪರ್ವ।

ಅ.ವ್ಯ. -ಪ್ರತ್ಯಯಃ, ಪರಶ್ಚ, ಙ್ಯಾಪ್ ಪ್ರಾತಿಪದಿಕಾತ್, ತದ್ಧಿತಾಃ ಎಂಬುವು ಅಧಿಕಾರ ಸೂತ್ರಗಳು.

ಅರ್ಥ -ತತ್ ಶಬ್ದವು ಪ್ರಥಮಾ ವಿಭಕ್ತ್ಯನ್ತವಾಗಿದೆ. 'ವಚನಂ' ಎಂದರೆ ಹೇಳುವುದು ಎಂದರ್ಥ. 'ಪ್ರಕೃತ' ಎಂದರೆ ಹೆಚ್ಚಾಗಿ ಪ್ರಸುತ್ತವಾದದ್ದು ಎಂದರ್ಥ. ಪ್ರಾಚುರ್ಯದಿಂದ ಕೂಡಿದ ಪದಾರ್ಥವನ್ನು ಹೇಳುವ ಸಮರ್ಥ ಶಬ್ದದ ನಂತರ ಸ್ವಾರ್ಥದಲ್ಲಿ ಅಥವಾ ಅಧಿಕರಣಾರ್ಥದಲ್ಲಿ ಮಯಟ್ ಪ್ರತ್ಯಯವು ಬರುತ್ತದೆ.

ಉದಾ-ಅನ್ನಮಯಮ್ -(ಬಹಳ ಹೆಚ್ಚಾದ) 'ಪ್ರಚುರವಾದ ಅನ್ನ' ಎಂಬ ಅರ್ಥದಲ್ಲಿ ಪ್ರಥಮಾಂತ 'ಅನ್ನ' ಶಬ್ದದ ನಂತರ ಮಯಟ್ ಪ್ರತ್ಯಯವು ಬಂದು ಅನ್ನಮಯಮ್ ರೂಪವು ಸಿದ್ಧವಾಗಿದೆ. ಇದು ಸ್ವಾರ್ಥಿಕ ಪ್ರತ್ಯಯವಾಗಿರುವುದರಿಂದ ನಪುಂಸಕ ಲಿಂಗದಲ್ಲಿ ಅನ್ನ ಶಬ್ದವು ಸ್ವಾಭಾವಿಕವಾಗಿದೆ. ಇದೇ ರೀತಿಯಲ್ಲಿ 'ಪ್ರಚುರಮ್ ಅಪೂಪಂ' ಎಂಬ ಅರ್ಥದಲ್ಲಿ ಅಪೂಪಮಯಮ್ ಎಂಬ ರೂಪವು ಸಿದ್ಧವಾಗಿದೆ.

ಉದಾ-ಅನ್ನಮಯೋ ಯಜ್ಞಃ-'ಪ್ರಚುರವಾದ ಅನ್ನದಿಂದ ಕೂಡಿದ್ದು' ಎಂಬ ಅಧಿಕರಣಾರ್ಥದಲ್ಲಿ 'ಅನ್ನ' ಶಬ್ದದ ನಂತರ ಮಯಟ್ (ಮಯ) ಬಂದು ಅನ್ನಮಯಃ ಎಂದು ರೂಪವು ಸಿದ್ಧವಾಗಿದೆ. ಇದು ಅಧಿಕರಣಾರ್ಥದಲ್ಲಿ ಇರುವುದರಿಂದ ವಿಶೇಷ್ಯದ ಲಿಂಗವೇ ಬಂದು 'ಅನ್ನಮಯೋ ಯಜ್ಞಃ' ಎಂದು ರೂಪವು ಸಿದ್ಧವಾಗಿದೆ.

**(ಅನ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1242.-ಪ್ರಜ್ಞಾದಿಭ್ಯಶ್ಚ।(5.4.38)**

ವೃತ್ತಿ -ಅಣ್ ಸ್ಯಾತ್। ಪ್ರಜ್ಞ ಏವ ಪ್ರಾಜ್ಞಃ। ಪ್ರಾಜ್ಞೀ ಸ್ತ್ರೀ। ದೈವತಃ। ಬಾನ್ಧವಃ।

ಪ. ಛೇ -ಪ್ರಜ್ಞಾದಿಭ್ಯಃ, ಚ।

ಅ. ವ್ಯ. -"ತದ್ಯುಕ್ತಾತ್ ಕರ್ಮಣೋಽಣ್" ಎಂಬ ಸೂತ್ರದಿಂದ ಅಣ್ ಎಂಬ ಪದವು ಅನುವೃತ್ತವಾಗುತ್ತದೆ. ಪ್ರತ್ಯಯಃ, ಪರಶ್ಚ, ಙ್ಯಾಪ್ ಪ್ರಾತಿಪದಿಕಾತ್, ತದ್ಧಿತಾಃ ಎಂಬುವು ಅಧಿಕಾರ ಸೂತ್ರಗಳು.

ಅರ್ಥ-'ಪ್ರಜ್ಞಾ' ಮೊದಲಾದ ಶಬ್ದಗಳ ನಂತರ ಸ್ವಾರ್ಥದಲ್ಲಿ ಅಣ್(ಅ) ಪ್ರತ್ಯಯವು ಬರುತ್ತದೆ.

ಉದಾ-ಪ್ರಾಜ್ಞಃ-(ಬುದ್ಧಿವಂತ) 'ಪ್ರಜ್ಞ ಏವ ಪ್ರಾಜ್ಞಃ' ಎಂದು ಸ್ವಾರ್ಥದಲ್ಲಿ ಪ್ರಕೃತ ಸೂತ್ರದಿಂದ 'ಪ್ರಜ್ಞ' ಶಬ್ದದ ನಂತರ ಅಣ್(ಅ) ಬಂದು, ಪ್ರಜ್ಞ+ಅ ಎಂದಿದ್ದಾಗ, ಆದಿವೃದ್ಧಿ ಬಂದು 'ಜ್ಞ' ದಲ್ಲಿರುವ ಅಂತ್ಯ 'ಅ' ಕಾರಕ್ಕೆ "ಯಸ್ಯೇತಿಚ" ಎಂಬುದರಿಂದ ಲೋಪ ಬಂದು ಪ್ರಾಜ್ಞ ಎಂದಾಗಿ ಸುಬಂತ ಮಾಡಿದ ಮೇಲೆ ಪ್ರಾಜ್ಞಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ–ಪ್ರಾಜ್ಞೀ ಸ್ತ್ರೀ–"ಟಿಡ್‌ಢಾಣಞ್..." ಎಂಬ ಸೂತ್ರದಿಂದ ಸ್ತ್ರೀತ್ವ ವಿವಕ್ಷೆಯಲ್ಲಿ ಪ್ರಾಜ್ಞೀ ಎಂದು ರೂಪವು ಸಿದ್ಧವಾಗುತ್ತದೆ.

ಉದಾ–ದೈವತಃ–'ದೇವತಾ ಏವ ದೈವತಃ' ಎಂದು ಸ್ವಾರ್ಥದಲ್ಲಿ 'ದೇವತಾ' ಶಬ್ದದ ಮೇಲೆ ಅಣ್(ಅ) ಪ್ರತ್ಯಯವು ಬಂದು ಆದಿವೃದ್ಧಿಯಾಗಿ ದೈವತಾ+ಅ ಎಂದಿದ್ದಾಗ, "ಯಸ್ಯೇತಿಚ" ಎಂಬುದರಿಂದ 'ಆ' ಕಾರಕ್ಕೆ ಲೋಪ ಬಂದು, ದೈವತ್+ಅ ಎಂದಿದ್ದಾಗ, ಸುಬಂತ ಮಾಡಿದ ಮೇಲೆ ದೈವತಃ ಎಂದು ರೂಪವು ಸಿದ್ಧವಾಗುತ್ತದೆ.

ಉದಾ–ಬಾನ್ಧವಃ–(ಬಂಧು)–'ಬನ್ಧುರೇವ ಬಾನ್ಧವಃ' –'ಬನ್ಧು' ಶಬ್ದದ ಮೇಲೆ ಸ್ವಾರ್ಥದಲ್ಲಿ ಅಣ್(ಅ) ಪ್ರತ್ಯಯ ಬಂದು, ಆದಿವೃದ್ಧಿಯಾಗಿ ಬಾನ್ಧು+ಅ ಎಂದಿದ್ದಾಗ, "ಓರ್ಗುಣಃ" ಎಂಬುದರಿಂದ ಅಂತ್ಯ 'ಉ' ಕಾರಕ್ಕೆ ಗುಣ ಬಂದು ಬಾನ್ಧೋ+ಅ ಎಂದಿದ್ದಾಗ ಅವಾದೇಶ ಬಂದು ಬಾನ್ಧವ ಎಂದಾಗಿ, ಸುಬಂತ ಮಾಡಿದ ಮೇಲೆ ಬಾನ್ಧವಃ ಎಂದು ರೂಪವು ಸಿದ್ಧವಾಗುತ್ತದೆ.

**(ಶಸ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ–1243.–ಬಹ್ವಲ್ಪಾರ್ಥಾಚ್ಛಸ್ ಕಾರಕಾದನ್ಯತರಸ್ಯಾಮ್।(5.4.42)**

ವೃತ್ತಿ–ಬಹೂನಿ ದದಾತಿ–ಬಹುಶಃ। ಅಲ್ಪಶಃ।

ವಾ॥ ಆದ್ಯಾದಿಭ್ಯಃ ತಸೇಃ ಉಪಸಂಖ್ಯಾನಮ್

ಆದೌ ಆದಿತಃ। ಮಧ್ಯತಃ। ಅನ್ತತಃ। ಪೃಷ್ಠತಃ। ಪಾರ್ಶ್ವತಃ। ಆಕೃತಿಗಣೋಽಯಮ್। ಸ್ವರೇಣ–ಸ್ವರತಃ। ವರ್ಣತಃ।

ಪ. ಛೇ –ಬಹ್ವಲ್ಪಾರ್ಥಾತ್, ಶಸ್, ಕಾರಕಾತ್, ಅನ್ಯತರಸ್ಯಾಮ್।

ಅ. ವ್ಯ. –ಪ್ರತ್ಯಯಃ, ಪರಶ್ಚ, ಙ್ಯಾಪ್ ಪ್ರಾತಿಪದಿಕಾತ್, ತದ್ಧಿತಾಃ ಎಂಬುವು ಅಧಿಕಾರ ಸೂತ್ರಗಳು.

ಅರ್ಥ–ಬಹು ಅರ್ಥ ಮತ್ತು ಅಲ್ಪಾರ್ಥ ಕಾರಕವಾಚಿ ಸಮರ್ಥ ಶಬ್ದಗಳ ನಂತರ ಸ್ವಾರ್ಥದಲ್ಲಿ ವೈಕಲ್ಪಿಕವಾಗಿ 'ಶಸ್' ಪ್ರತ್ಯಯವು ಬರುತ್ತದೆ.

ಉದಾ–ಬಹುಶಃ–(ಹೆಚ್ಚು ಕೊಡುವವನು ಎಂದರ್ಥ)–'ಬಹೂನಿ ದದಾತಿ' ಅಥವಾ 'ಬಹುಶಃ ದದಾತಿ' ಎಂಬ ಅರ್ಥದಲ್ಲಿ ಪ್ರಕೃತ ಸೂತ್ರದಿಂದ ಬಹು+ಜಸ್ ಎಂಬುದಕ್ಕೆ 'ಶಸ್' ಪ್ರತ್ಯಯವು ಬರುತ್ತದೆ. ಪ್ರಾತಿಪದಿಕದ ನಂತರ ಸುಪ್ ಲೋಪವಾಗಿ ಬಹು+ಶಸ್ ಎಂದಿರುತ್ತದೆ. "ತದ್ಧಿತಶ್ಚಾಸರ್ವವಿಭಕ್ತಿಃ" ಎಂಬ ಸೂತ್ರದಿಂದ ಅವ್ಯಯ–ಸಂಜ್ಞೆ ಬಂದು, ಸುಪ್–ಗೆ "ಅವ್ಯಯಾದಾಪ್‌ಸುಪಃ" ಎಂಬ ಸೂತ್ರದಿಂದ ಲೋಪ ಬಂದು ಬಹುಶಸ್ ಎಂದಾಗಿ ರುತ್ವ ವಿಸರ್ಗಗಳಿಂದ ಬಹುಶಃ ಎಂದು ರೂಪವು ಸಿದ್ಧವಾಗುತ್ತದೆ. ಇದೇ ರೀತಿಯಲ್ಲಿ ಅಲ್ಪಶಃ ಎಂದು ರೂಪವು ಸಿದ್ಧವಾಗುತ್ತದೆ. 'ಅಲ್ಪಶಃ ದದಾತಿ' ಅಥವಾ 'ಅಲ್ಪಾನಿ ದದಾತಿ' ಎಂದು ಹೇಳಬಹುದು.

ವಾ॥ ಆದ್ಯಾದಿಭ್ಯಃ ತಸೇಃ ಉಪಸಂಖ್ಯಾನಮ್ ।

ಆದ್ಯಾದಿ ಶಬ್ದಗಳ ನಂತರ ಎಲ್ಲ ವಿಭಕ್ತಿಗಳ ಅರ್ಥದಲ್ಲೂ 'ತಸಿಃ' ಪ್ರತ್ಯಯವನ್ನು ಸೇರಿಸಬೇಕು. ಇದನ್ನೇ 'ಸಾರ್ವವಿಭಕ್ತಿಕ ತಸಿಃ(ತಸ್)' ಎಂದು ಹೇಳುತ್ತಾರೆ. ಆದಿತಃ। ಮಧ್ಯತಃ। ಅನ್ತತಃ। ಪೃಷ್ಠತಃ। ಪಾರ್ಶ್ವತಃ ಆದಿ ಮೊದಲಾದ ಶಬ್ದಗಳ ನಂತರ ಸಪ್ತಮ್ಯರ್ಥದಲ್ಲಿ ಆದೌ ಮೊದಲಾದ ಶಬ್ದಗಳ ನಂತರ ತಸಿಃ(ತಸ್) ಪ್ರತ್ಯಯವು ಬರುತ್ತದೆ. ಇದು ಆಕೃತಿ ಗಣವಾಗಿರುವುದರಿಂದ ಸ್ವರತಃ। ವರ್ಣತಃ ಎಂಬ ರೂಪಗಳು ಸಿದ್ಧವಾಗಿವೆ.

**(ಚ್ವಿ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1244.-ಕೃಭ್ವಸ್ತಿಯೋಗೇ ಸಮ್ಪದ್ಯಕರ್ತರಿ ಚ್ವಿಃ।(5.4.50)**

ವೃತ್ತಿ :-

ವಾ॥ ಅಭೂತ ತದ್ಭಾವ ಇತಿ ವಕ್ತವ್ಯಮ್ ।

ವಿಕಾರಾತ್ಮತಾಂ ಪ್ರಾಪ್ನುವನ್ತ್ಯಾಂ ಪ್ರಕೃತೌ ವರ್ತಮಾನಾತ್ ವಿಕಾರಶಬ್ದಾತ್ ಸ್ವಾರ್ಥೇ ಚ್ವಿಃ ವಾ ಸ್ಯಾತ್ ಕರೋತ್ಯಾದಿಭಿರ್ಯೋಗೇ।

ಅ. ವ್ಯ. -ಪ್ರತ್ಯಯಃ, ಪರಶ್ಚ, ಙ್ಯಾಪ್ಪ್ರಾತಿಪದಿಕಾತ್, ತದ್ಧಿತಾಃ ಎಂಬುವು ಅಧಿಕಾರ ಸೂತ್ರಗಳು.

ಅರ್ಥ:- (ಅಭೂತತದ್ಭಾವ ಅಂದರೆ ಮೊದಲು ಹೊಂದದೆ ಇರುವ ಬೇರೆ ರೂಪವನ್ನು ಅಥವಾ ವಿಕಾರವನ್ನು ತಾಳಿರುವ ಸ್ಥಿತಿ ಎಂದರ್ಥ). ಅಭೂತತದ್ಭಾವವು ತೋರುವಾಗ ವಿಕಾರದ ಸ್ಥಿತಿಯನ್ನು ಹೇಳುವಾಗ ವರ್ತಮಾನ ವಿಕಾರವಾಚಕ ಶಬ್ದದ ನಂತರ ಸ್ವಾರ್ಥದಲ್ಲಿ ವೈಕಲ್ಪಿಕವಾಗಿ 'ಚ್ವಿ' ಪ್ರತ್ಯಯವು ಬರುತ್ತದೆ-ಕೃ, ಭೂ ಮತ್ತು ಅಸ್ ಧಾತುಗಳ ಸಂಬಂಧವಿದ್ದಾಗ ಮಾತ್ರ ಈ ಪ್ರತ್ಯಯವು ಬರುತ್ತದೆ ಎಂದು ತಿಳಿಯಬೇಕು.

ವಾರ್ತಿಕ॥ ಅಭೂತ ತದ್ಭಾವ ಇತಿ ವಕ್ತವ್ಯಮ್।

ಈ ವಾರ್ತಿಕದ ಅರ್ಥವನ್ನು ಸೇರಿಸಿ ಸೂತ್ರಾರ್ಥವು ಬರೆಯಲಾಗಿದೆ.

'ಚ್ವಿ' ಪ್ರತ್ಯಯದಲ್ಲಿ ಎಲ್ಲ ಅಕ್ಷರಗಳೂ ಲೋಪವಾಗುತ್ತವೆ. ಅದಕ್ಕೆ ಸರ್ವಾಪಹಾರ ಲೋಪವೆಂದು ಹೇಳುತ್ತಾರೆ. 'ಚ್ವಿ' ಪ್ರತ್ಯಯವು "ತದ್ಧಿತಶ್ಚಾಸರ್ವವಿಭಕ್ತಿಃ" ಎಂಬ ಸೂತ್ರದಿಂದ 'ಅವ್ಯಯಸಂಜ್ಞೆ'ಯನ್ನು ಹೊಂದುತ್ತದೆ.

**(ಈತ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ-1245.-ಅಸ್ಯ ಚ್ವೌ ।(7.4.32)**

ವೃತ್ತಿ -ಅವರ್ಣಸ್ಯ ಈತ್ ಸ್ಯಾತ್ ಚ್ವೌ ವೇರ್ಲೋಪೇ। ಚ್ವ್ಯನ್ತತ್ವಾತ್ ಅವ್ಯಯತ್ವಮ್। ಅಕೃಷ್ಣ ಕೃಷ್ಣಃ ಸಮ್ಪದ್ಯತೇ, ತಂ ಕರೋತಿ-ಕೃಷ್ಣೀಕರೋತಿ।ಬ್ರಹ್ಮೀಭವತಿ। ಗಙ್ಗೀಸ್ಯಾತ್

ವಾ॥ ಅವ್ಯಯಸ್ಯ ಚ್ವಾವೀತ್ವಂ ನೇತಿ ವಾಚ್ಯಮ್।

ದೋಷಾಭೂತಮಹಃ। ದಿವಾಭೂತಾ ರಾತ್ರಿಃ।

ಅ. ವೃ.-"ಈಘ್ರಾಧ್ಮೋಃ" ಎಂಬ ಸೂತ್ರದಿಂದ 'ಈ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ –'ಚ್ವಿ' ಪ್ರತ್ಯಯವು ಪರದಲ್ಲಿದ್ದಾಗ 'ಅ' ಕಾರಕ್ಕೆ 'ಈ' ಕಾರವು ಆದೇಶವಾಗಿ ಬರುತ್ತದೆ.

ಚ್ವಿ–ಗೆ ಸಂಪೂರ್ಣ ಲೋಪವಾಗುತ್ತದೆ ಎಂದು ಹಿಂದೆಯೇ ಹೇಳಿದ್ದೇವೆ. ಆದರೂ ಸಹ 'ಪ್ರತ್ಯಯಲೋಪೇ ಪ್ರತ್ಯಯ ಲಕ್ಷಣಮ್' ಎಂಬ ನಿಯಮದಿಂದ ಪ್ರತ್ಯಯವು ಪರದಲ್ಲಿದೆ ಎಂದು ಭಾವಿಸಿದಾಗ 'ಈ' ಕಾರವು ಆದೇಶವಾಗಿ ಬರುತ್ತದೆ.

ಉದಾ–ಕೃಷ್ಣೀಕರೋತಿ–(ಕಪ್ಪಾಗಿ ಇಲ್ಲದೇ ಇದ್ದದನ್ನು ಕಪ್ಪಾಗಿ ಮಾಡುತ್ತದೆ)– 'ಅಕೃಷ್ಣ ಕೃಷ್ಣಃ ಸಮ್ಪದ್ಯತೇ', 'ತಂ ಕರೋತಿ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಕೃಷ್ಣ+ಸು ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಇದರ ಜೊತೆಗೆ 'ಚ್ವಿ' ಪ್ರತ್ಯಯವನ್ನು ಸೇರಿಸಿದರೆ ಸರ್ವಾಪಹಾರ ಲೋಪವಾದರೂ ಪ್ರಾತಿಪದಿಕ ಸಂಜ್ಞೆ ಬಂದಿದ್ದರಿಂದ' "ಸುಪೋಧಾತು ಪ್ರಾತಿಪದಿಕಯೋಃ" ಎಂಬುದರಿಂದ ಸುಪ್ ಲೋಪವಾಗಿ ಕೃಷ್ಣ+ಕರೋತಿ ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ಕೃಷ್ಣ' ದಲ್ಲಿರುವ ಅಂತ್ಯ 'ಅ' ಕಾರಕ್ಕೆ 'ಈ' ಕಾರವು ಆದೇಶವಾಗಿ ಬಂದು ಕೃಷ್ಣೀ+ಕರೋತಿ=ಕೃಷ್ಣೀಕರೋತಿ ಎಂದು ರೂಪವು ಸಿದ್ಧವಾಗುತ್ತದೆ.

ಉದಾ–ಬ್ರಹ್ಮೀಭವತಿ–(ಬ್ರಹ್ಮನಾಗಿಲ್ಲದವನು ಬ್ರಹ್ಮನಾದನು)–'ಅಬ್ರಹ್ಮ ಬ್ರಹ್ಮಭವತಿ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಬ್ರಹ್ಮ+ಸು ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಇದಕ್ಕೆ ಹಿಂದಿನಂತೆ 'ಚ್ವಿ' ಪ್ರತ್ಯಯವನ್ನು ಸೇರಿಸಿದಾಗ ಹಿಂದಿನ ಪ್ರಕ್ರಿಯೆಯನ್ನು ಅನುಸರಿಸಿ ಬ್ರಹ್ಮೀಭವತಿ ಎಂದು ರೂಪವು ಸಿದ್ಧವಾಗುತ್ತದೆ.

ವಾ॥ ಅವ್ಯಯಸ್ಯ ಚ್ವಾವೀತ್ವಂ ನೇತಿ ವಾಚ್ಯಮ್–

'ಚ್ವಿ' ಪ್ರತ್ಯಯವು ಪರದಲ್ಲಿದ್ದಾಗ ಅವ್ಯಯದ ಅವರ್ಣಕ್ಕೆ 'ಈ' ಕಾರಾದೇಶವು ಬರುವುದಿಲ್ಲವೆಂದು ಹೇಳಬೇಕು.

ಉದಾ–ದೋಷಾಭೂತಮಹಃ, (ರಾತ್ರಿಯಲ್ಲದ್ದೂ ರಾತ್ರಿಯಂತೆ ಆಗಿದೆ ಅಂದರೆ ಹಗಲೇ ಮೋಡ ಮುಚ್ಚಿದ್ದರಿಂದ ರಾತ್ರಿಯಂತೆ ಕಾಣಿಸುತ್ತಿದೆ.) ಮತ್ತು ದಿವಾಭೂತಾ ರಾತ್ರಿಃ–(ದೀಪಗಳ ಹೆಚ್ಚಿನ ಪ್ರಕಾಶದಿಂದ ಹಗಲಿನಂತೆ ರಾತ್ರಿಯು ಕಾಣುತ್ತಿದೆ.) ಈ ಎರಡು ಉದಾಹರಣೆಗಳಲ್ಲಿ ದೋಷಾ ಮತ್ತು ದಿವಾ ಎಂಬ ಪದಗಳ 'ಆ' ಕಾರಕ್ಕೆ 'ಈ' ಕಾರವು ವಾರ್ತಿಕದ ಬಲದಿಂದ ಆದೇಶವಾಗಿ ಬಂದಿಲ್ಲ. ಇಲ್ಲಿ 'ಚ್ವಿ' ಪ್ರತ್ಯಯ ಬಂದು ಲೋಪವಾಗಿದೆ.

**(ವೈಕಲ್ಪಿಕವಾಗಿ ಸಾತಿ (ಸಾತ್) ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ–1246.–ವಿಭಾಷಾ ಸಾತಿ ಕಾರ್ತ್ಸ್ನ್ಯೇ।(5.4.52)**

ವೃತ್ತಿ –ಚ್ವಿವಿಷಯೇ ಸಾತಿರ್ವಾ ಸ್ಯಾತ್ ಸಾಕಲ್ಯೇ।

ಅ. ವ್ಯ. -"(ಅಭೂತ ತದ್ಭಾವೆ) ಕೃಭ್ವಸ್ತಿಯೋಗೇ ಸಮ್ಪದ್ಯಕರ್ತರಿ ಚ್ವಿಃ" ಎಂಬ ವಾರ್ತಿಕ ಸಮೇತವಾದ ಸೂತ್ರವು ಅನುವೃತ್ತವಾಗುತ್ತದೆ. ಪ್ರತ್ಯಯಃ,ಪರಶ್ಚ, ಙ್ಯಾಪ್ ಪ್ರಾತಿಪದಿಕಾತ್ ತದ್ಧಿತಾಃ ಎಂಬುವು ಅಧಿಕಾರ ಸೂತ್ರಗಳು.

ಅರ್ಥ -'ಚ್ವಿ' ವಿಷಯದಲ್ಲಿ (ಅಭೂತ ತದ್ಭಾವಾರ್ಥದಲ್ಲಿ) ಸಾಕಲ್ಯ (ಪೂರ್ಣ)- ಎಂಬ ಅರ್ಥದಲ್ಲಿ ವೈಕಲ್ಪಿಕವಾಗಿ ಸಾತಿ (ಸಾತ್) ಪ್ರತ್ಯಯವು ಬರುತ್ತದೆ.

**(ಷತ್ವವನ್ನು ನಿಷೇಧಿಸುವ ಸೂತ್ರ)**

**ಸೂತ್ರ-1247.-ಸಾತ್ ಪದಾದ್ಯೋಃ।(8.3.111)**

ವೃತ್ತಿ -ಸಸ್ಯ ಷತ್ವಂ ನ ಸ್ಯಾತ್। ಕೃತ್ಸ್ನಂ ಶಸ್ತ್ರಮಗ್ನಿಃ ಸಮ್ಪದ್ಯತೇ-ಅಗ್ನಿಸಾದ್ಭವತಿ। ದಧಿ ಸಿಞ್ಚತಿ।

ಅ. ವ್ಯ.-"ಸಹೇಃ-ಸಾಡಃ-ಸಃ" ಎಂಬ ಸೂತ್ರದಿಂದ 'ಸಃ' ಎಂಬ ಪದವೂ "ಅಪದಾನ್ತಸ್ಯ ಮೂರ್ಧನ್ಯಃ" ಎಂಬ ಸೂತ್ರದಿಂದ ಮೂರ್ಧನ್ಯ ಎಂಬ ಪದವು ಅನುವೃತ್ತವಾಗುತ್ತದೆ. ಮತ್ತು "ನ ರಪರ-ಸೃಪಿ-ಸೃಜಿ-ಸೃಷಿ-ಸ್ಪೃಹಿ-ಸವನಾದೀನಾಂ" ಎಂಬ ಸೂತ್ರದಿಂದ 'ನ' ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ -ಸಾತಿ (ಸಾತ್) ಪ್ರತ್ಯಯದ ಅವಯವದ 'ಸ್'-ಕಾರಕ್ಕೆ ಮತ್ತು ಪದಾದಿ ಸ್-ಕಾರಕ್ಕೆ ಷತ್ವವು ಬರುವುದಿಲ್ಲ.

ಉದಾ-ಅಗ್ನಿಸಾದ್ಭವತಿ-(ಆಯುಧವೆಲ್ಲ ಅಗ್ನಿಯಾಗುತ್ತದೆ)-ಕೃತ್ಸ್ನಂ ಶಸ್ತ್ರಮಗ್ನಿಃ ಸಮ್ಪದ್ಯತೇ ಎಂಬುದು ಲೌಕಿಕ ವಿಗ್ರಹವಾಕ್ಯ. ಅಭೂತ ತದ್ಭಾವಾರ್ಥದಲ್ಲಿ ಈ ಪ್ರಯೋಗ ಮಾಡಲಾಗಿದೆ. ಅಗ್ನಿ ಶಬ್ದದ ನಂತರ ಸಾತ್ ಪ್ರತ್ಯಯವು ಬಂದಿದೆ. ಸಾತಿ(ಸಾತ್) ಪ್ರತ್ಯಯ ಬಾರದ ಪಕ್ಷದಲ್ಲಿ 'ಚ್ವಿ' ಪ್ರತ್ಯಯವು ಬಂದಿದೆ. ಅದಕ್ಕೆ ಸರ್ವಾಪಹಾರ ಲೋಪವಾಗಿದೆ. ಇಲ್ಲಿ ಷತ್ವ ನಿಷೇಧ ಮಾಡಲಾಗಿದೆ.

ಉದಾ-ದಧಿ ಸಿಞ್ಚತಿ-(ಮೊಸರನ್ನು ಸಿಂಪಡಿಸುತ್ತಾನೆ.)-ಇದು ಪದಾದಿ ಸ್‌ಕಾರಕ್ಕೆ ಉದಾಹರಣೆಯಾಗಿ ಕೊಡಲಾಗಿದೆ. "ಧಾತ್ವಾದೇಃ ಷಸ್ಸಃ" ಎಂಬ ಸೂತ್ರದಿಂದ ಷಿಚಿ ಧಾತುವಿನ ಷ್-ಕಾರಕ್ಕೆ ಸ್-ಕಾರವು ಬಂದಿದೆ. ಆ 'ಸ್' ಕಾರಕ್ಕೆ ಷತ್ವವು "ಆದೇಶ ಪ್ರತ್ಯಯಯೋಃ" ಎಂಬುದರಿಂದ ಬರಬೇಕಾಗಿತ್ತು ಪ್ರಕೃತ ಸೂತ್ರವು ಅದನ್ನು ನಿಷೇಧಿಸಿದೆ.

**(ದೀರ್ಘವನ್ನು ವಿಧಿಸುವ ಸೂತ್ರ)**

**ಸೂತ್ರ-1248-ಚ್ವೌ ಚ।(7.4.26)**

ವೃತ್ತಿ -ಚ್ವೌ ಚ ಪರೇ ಪೂರ್ವಸ್ಯ ದೀರ್ಘಃ ಸ್ಯಾತ್। ಅಗ್ನೀಭವತಿ।

ಅ. ವ್ಯ.-"ಅಕೃತ್‌ಸಾರ್ವಧಾತುಕಯೋರ್ದೀರ್ಘಃ" ಎಂಬ ಸೂತ್ರದಿಂದ ದೀರ್ಘ ಎಂಬ ಪದವು ಅನುವೃತ್ತವಾಗುತ್ತದೆ. "ಅಂಗಸ್ಯ" ಎಂಬುದು ಅಧಿಕಾರ ಸೂತ್ರ.

ಅರ್ಥ -'ಚ್ವಿ' ಪ್ರತ್ಯಯವು ಪರದಲ್ಲಿದ್ದಾಗ ಅದರ ಪೂರ್ವದಲ್ಲಿರುವ ಅಂಗಕ್ಕೆ ದೀರ್ಘವು ಬರುತ್ತದೆ.

ಉದಾ–ಅಗ್ನೀಭವತಿ–(ಯಾವುದು ಅಗ್ನಿಯಾಗಿರುವುದಿಲ್ಲವೊ ಅದು ಅಗ್ನಿಯಾಗಿರುತ್ತದೆ.)–'ಅನಗ್ನಿಃ ಅಗ್ನಿಃ ಭವತಿ' ಎಂಬುದು ಲೌಕಿಕ ವಿಗ್ರಹ ವಾಕ್ಯ. ಅಗ್ನಿ+ಸು ಎಂಬುದು ಅಲೌಕಿಕ ವಿಗ್ರಹ ವಾಕ್ಯ. ಇದರ ಮೇಲೆ "ಕೃಭ್ವಸ್ತಿಯೋಗೇ ಸಮ್ಪದ್ಯಕರ್ತರಿ ಚ್ವಿಃ" ಸೂತ್ರದಿಂದ 'ಚ್ವಿಃ' ಪ್ರತ್ಯಯವು ಬಂದು ಅದರ ಸರ್ವಾಪಹಾರ ಲೋಪವಾದ ಮೇಲೆ ಪ್ರಾತಿಪದಿಕ ಸಂಜ್ಞೆ ಬಂದು, "ಸುಪೋಧಾತುಪ್ರಾತಿಪದಿಕಯೋಃ" ಎಂಬುದರಿಂದ ಸುಪ್–ಗೆ ಲೋಪ ಬಂದು ಅಗ್ನಿಭವತಿ' ಎಂದಿದ್ದಾಗ, ಪ್ರಕೃತ ಸೂತ್ರದಿಂದ ಪೂರ್ವ ಪದದ ಅಂತ್ಯ ವರ್ಣವಾದ ಇ–ಕಾರಕ್ಕೆ ದೀರ್ಘ ಬಂದು 'ಅಗ್ನೀಭವತಿ' ಎಂದು ರೂಪವು ಸಿದ್ಧವಾಗುತ್ತದೆ.

**(ಡಾಚ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ–1249–ಅವ್ಯಕ್ತಾನುಕರಣಾದ್ ದ್ವ್ಯಜವರಾರ್ಧಾದನಿತೌ ಡಾಚ್।(5.4.57)**

ವೃತ್ತಿ –ದ್ವಯಜೇವಾವರಂ ನ್ಯೂನಂ ನ ತು ತತೋ ನ್ಯೂನಂ ಅನೇಕಾಚ್ ಇತಿ ಯಾವತ್ತಾದೃಶಮರ್ಧಂ ಯಸ್ಯ ತಸ್ಮಾತ್ ಡಾಚ್ ಸ್ಯಾತ್ ಕೃಭ್ವಸ್ತಿಭಿರ್ಯೋಗೇ

ವಾ॥1. ಡಾಚಿ ವಿವಕ್ಷಿತೇ ದ್ವೇ ಬಹುಲಮ್।

ಇತಿ ಡಾಚಿ ವಿವಕ್ಷಿತೇ ದ್ವಿತ್ವಮ್।

ವಾ॥2. ನಿತ್ಯಮಾಮ್ರೇಡಿತೇ ಡಾಚೀತಿ ವಕ್ತವ್ಯಮ್ ।

ಡಾತ್ಪರಂ ಯದಾಮ್ರೇಡಿತಂ ತಸ್ಮಿನ್ ಪರೇ ಪೂರ್ವ–ಪರಯೋಃ ವರ್ಣಯೋಃ ಪರರೂಪಂ ಸ್ಯಾತ್, ಇತಿ ಟಕಾರ–ಪಕಾರಯೋಃ ಪಕಾರಃ। ಪಟಪಟಾಕರೋತಿ। ಅವ್ಯಕ್ತಾನುಕರಣಾತ್ಕಿಮ್? ಈಷತ್ಕರೋತಿ। ದ್ವಯಜವರಾರ್ಧಾತ್ ಕಿಮ್? ಶ್ರತ್ಕರೋತಿ। ಅವರೇತಿ ಕಿಮ್? ಖರಟಖರಟಾಕರೋತಿ। ಅನಿತೌ ಕಿಮ್? ಪಟಿತಿ ಕರೋತಿ।

**॥ ಇತಿ ಸ್ವಾರ್ಥಿಕ (59) ಪ್ರಕರಣಮ್॥**

**॥ ಇತಿ ತದ್ಧಿತಾಃ॥**

ಪ. ಛೇ –ಅವ್ಯಕ್ತಾನುಕರಣಾತ್, ದ್ವಯಜವರಾರ್ಧಾತ್, ಅನಿತೌ, ಡಾಚ್।

ಅ. ವೃ.–ಮಂಡೂಕ ಪ್ಲುತಿಯಿಂದ "ಕೃಭ್ವಸ್ತಿಯೋಗೇ ಸಮ್ಪದ್ಯಕರ್ತರಿ ಚ್ವಿಃ" ಎಂಬ ಸೂತ್ರದಿಂದ ಕೃಭ್ವಸ್ತಿಯೋಗೇ ಎಂಬ ಪದವು ಅನುವೃತ್ತವಾಗುತ್ತದೆ.

ಅರ್ಥ –ದ್ವಯಜವರವ್ ಅಂದರೆ ಎರಡು ಅಚ್ ವರ್ಣಗಳನ್ನು ಕಡಿಮೆಯಾಗಿಉಳ್ಳದ್ದು (ಅಂದರೆ ಎರಡಕ್ಕಿಂತ ಕಡಿಮೆಯಾಗದ ಅಚ್‌ಗಳುಳ್ಳದ್ದು ಅಂದರೆ ಕನಿಷ್ಠ ಎರಡು ಅಚ್‌ಗಳಿಂದ ಕೂಡಿದ್ದು)–ಅಂತಹ ಅರ್ಧ ಭಾಗವುಳ್ಳ ಅಸ್ಪಷ್ಟಾನುಕರಣ ಮಾಡುವ ಶಬ್ದಕ್ಕಿಂತ ಪರದಲ್ಲಿ ಕೃ,ಭೂ ಮತ್ತು ಅಸ್ ಧಾತುಗಳ ಜೊತೆಗೆ ಸೇರಿಕೊಂಡಾಗ 'ಇತಿ' ಶಬ್ದವು ಪರದಲ್ಲಿ ಇಲ್ಲದೇ ಇದ್ದಾಗ ಡಾಚ್ ಪ್ರತ್ಯಯವು ಬರುವುದು. (ಡಾಚ್–ನಲ್ಲಿ 'ಆ' ಮಾತ್ರ ಉಳಿಯುತ್ತದೆ.)

ವಾ॥ 1. ಡಾಚಿ ದ್ವೇ ಬಹುಲಮ್।

ಇತಿ ಡಾಚಿ ವಿವಕ್ಷಿತೇ ದ್ವಿತ್ವಮ್।-ಡಾಚ್ ಪ್ರತ್ಯಯವನ್ನು ಒಂದು ಶಬ್ದಕ್ಕೆ ಸೇರಿಸುವ ಉದ್ದೇಶವಿರುವಾಗ ಆ ಶಬ್ದ ಸ್ವರೂಪಕ್ಕೆ ದ್ವಿತ್ವವು ಬರುತ್ತದೆ.

ಪಟತ್ ಎಂಬುದು ಅಕಾರಾದಿ ಅರ್ಥವತ್ತಾದ ವರ್ಣಗಳಲ್ಲದ ಅವ್ಯಕ್ತ ಶಬ್ದಾನುಕರಣ ವಾಗಿದೆ. ಯಾವುದಾದರು ಒಂದು ಪದಾರ್ಥವು ಕೆಳಗೆ ಬಿಳುವಾಗ 'ಆ' ಧ್ವನಿಯನ್ನು ಇದು ಅನುಕರಿಸುತ್ತದೆ. ಇದಕ್ಕೆ ಡಾಚ್ ಪ್ರತ್ಯಯವನ್ನು ಸೇರಿಸಬೇಕಾಗಿರುವದರಿಂದ ಈ ಶಬ್ದಕ್ಕೆ ದಿತ್ವವನ್ನು ಮಾಡಬೇಕು. ಆಗ ಅದು ಪಟತ್‌ಪಟತ್ ಎಂದಾಗುತ್ತದೆ. ಇದರಲ್ಲಿ ಅರ್ಧಭಾಗವೆಂದರೆ ಪಟತ್ ಎಂಬುದು ಈ ಅರ್ಧಭಾಗದಲ್ಲಿ ಎರಡು ಅಚ್ ವರ್ಣಗಳಿವೆ. ಇದು (ಎರಡಕ್ಕಿಂತ ಕಡಿಮೆಯಾಗಿಲ್ಲ) ಎಂದರ್ಥ. ಪಟತ್ ಪಟತ್ ಎಂಬುದು ಪಟತ್ ಶಬ್ದವನ್ನು ಅರ್ಧವಾಗಿವುಳ್ಳದ್ದು, ಇದರ ನಂತರ ಡಾಚ್ (ಆ) ಪ್ರತ್ಯಯವನ್ನು ಸೇರಿಸಿದಾಗ, ಪಟತ್ ಪಟತ್ +ಡಾಚ್(ಆ)+ಕರೋತಿ ಎಂದಿದ್ದಾಗ, ಎರಡನೇ ರೂಪಕ್ಕೆ ಆಮ್ರೇಡಿತ ಸಂಜ್ಞೆ ಬರುತ್ತದೆ. ಈಗ ಇದಕ್ಕೆ ಪರರೂಪವು ಹೇಳಲಾಗುತ್ತದೆ. ಪಟಪಟಾಕರೋತಿ ಎಂಬುದು ಇದಕ್ಕೆ ಉದಾಹರಣೆಯಾಗಿದೆ.

ವಾ॥ 2. ನಿತ್ಯಮಾಮ್ರೇಡಿತೇ ಡಾಚೀತಿ ವಕ್ತವ್ಯಮ್-ಡಾಚ್(ಆ) ಪ್ರತ್ಯಯವು ಪರದಲ್ಲಿರುವ ಆಮ್ರೇಡಿತವು ಪರದಲ್ಲಿದ್ದಾಗ, ಪೂರ್ವಪರವರ್ಣಗಳಿಗೆ ಪರರೂಪವು ಏಕಾದೇಶವಾಗಿ ಬರುತ್ತದೆ. ಆಗ ಪಟತ್ ಪಟತ್+ಆ+ಕರೋತಿ ಎಂದಿದ್ದಾಗ, ತ್-ಕಾರ ಮತ್ತು ಪ್-ಕಾರಗಳಿಗೆ ಪರದಲ್ಲಿರುವ ಪ್-ಕಾರವು ಏಕಾದೇಶವಾಗಿ ಬಂದು ಪಟಪಟತ್+ಆ+ಕರೋತಿ ಎಂದಿರುವಾಗ 'ಡಿತ್ವ' ಆದ ಪ್ರತ್ಯಯವು ಪರದಲ್ಲಿದ್ದಾಗ 'ಟಿ' ಗೆ ಅಂದರೆ ಆತ್-ಗೆ ಲೋಪ ಬಂದು ಪಟಪಟಾಕರೋತಿ ಎಂದಾಗುತ್ತದೆ.

'ಅವ್ಯಕ್ತಾನುಕರಣಾತ್ಕಿಮ್' ಎಂಬ ಪ್ರಶ್ನೆಗೆ 'ಈಷತ್ಕರೋತಿ' ಎಂದು ಉತ್ತರಿಸುತ್ತಾನೆ. ಈಷತ್ ಎಂಬುದು ಅವ್ಯಕ್ತಾನುಕರಣವಾದ ಧ್ವನಿಯಲ್ಲ ಇದಕ್ಕೆ ಕಡಿಮೆಯಾದ ಎಂದರ್ಥ. ಆದ್ದರಿಂದ ಇಲ್ಲಿ ಡಾಚ್(ಆ) ಪ್ರತ್ಯಯವನ್ನು ಸೇರಿಸಲಾಗಿಲ್ಲ. ಇದು ಎರಡು ಅಚ್-ಗಳಿಗಿಂತ ಕಡಿಮೆಯಾಗಿಲ್ಲ.

'ದ್ವಯಜವರಾರ್ಧಾತ್ ಕಿಮ್' ಎಂಬ ಪ್ರಶ್ನೆಗೆ 'ಶ್ರತ್ಕರೋತಿ' ಎಂದು ಉತ್ತರಿಸುತ್ತಾನೆ 'ಶ್ರತ್' ಎಂಬುದು ಧ್ವನಿ ರೂಪವಾದ 'ಅವ್ಯಕ್ತಾನುಕರಣ' ಇದರ ಅರ್ಧಭಾಗವು ಒಂದೇ ಅಚ್-ನ್ನು ಉಳ್ಳತಂಹದಾಗಿದೆ. ಎರಡಕ್ಕಿಂತ ಕಡಿಮೆಯಾಗಿ ಇಲ್ಲದ್ದಾಗಿಯಿಲ್ಲ. ದ್ವಯಜವರಾವಾಗಿದ್ದರೆ ಅಂದರೆ ಎರಡಕ್ಕಿಂತ ಹೆಚ್ಚಾದ ಅಚ್ ವರ್ಣಗಳಿಂದ ಕೂಡಿದ್ದರೆ ಡಾಚ್ (ಆ) ಪ್ರತ್ಯಯವು ಬರುತ್ತಿತ್ತು. ಹಾಗೇ ಇಲ್ಲಿ ಇಲ್ಲ. ಎರಡು ಅಚ್-ಗಳಿಂದ ಕೂಡಿದ ಅರ್ಧಭಾಗವೆಂದು ಹೇಳಿದ್ದರೆ, ಎರಡಕ್ಕಿಂತ ಹೆಚ್ಚಾಗಿರುವ ಸಂದರ್ಭದಲ್ಲಿ ಆಪ್ರತ್ಯಯವು ಬರುವ ಅವಕಾಶವಿರುವುದಿಲ್ಲ.

ಉದಾ-ಖರಟಖರಟಾಕರೋತಿ ಖರಟತ್ ಎಂಬುದು ಧ್ವನಿರೂಪವಾಗಿದೆ. ಇಲ್ಲಿ ಅರ್ಧಭಾಗ ಮೂರು ಅಚ್ ವರ್ಣಗಳಿಂದ ಕೂಡಿದತಂಹದಾಗಿದೆ. ಡಾಚ್ (ಆ) ಪ್ರತ್ಯಯವು ಬರಬೇಕಾದರೆ ದ್ವಯಜವರವಾಗಿರಬೇಕು ಅಂದರೆ ಎರಡು ಅಚ್-ಗಳಿಂದ ಕೂಡಿರಬೇಕು. ಇಲ್ಲಿ ಇತಿ ಶಬ್ದವು ಪರದಲ್ಲಿ ಇಲ್ಲ.

'ಅನಿತೌ ಕಿಮ್ ಇತಿ' ಶಬ್ದವು ಪರದಲ್ಲಿ ಏಕೆ ಇರಬಾರದು ಎಂಬುದಕ್ಕೆ ಪಟಿತಿ ಕರೋತಿ ಎಂದು ಉತ್ತರಿಸುತ್ತಾನೆ. ಇಲ್ಲಿ ಇತಿ ಶಬ್ದವು ಪರದಲ್ಲಿ ಇರುವುದರಿಂದ ಪ್ರಕೃತ ಸೂತ್ರದಲ್ಲಿ ಹೇಳಿರುವ ಡಾಚ್(ಆ) ಪ್ರತ್ಯಯವು ಬರುವದಕ್ಕೆ ಅವಕಾಶವಿರುವುದಿಲ್ಲ.

**ಸ್ವಾರ್ಥಿಕ (59) ಪ್ರಕರಣವು ಮುಗಿಯಿತು.**

**॥ ಇತಿ ತದ್ಧಿತಾಃ ॥**

**ಇಲ್ಲಿಗೆ ತದ್ಧಿತ ಪ್ರಕರಣವು ಮುಗಿಯಿತು.**

# ಪ್ರಕರಣ-60: ಸ್ತ್ರೀ ಪ್ರತ್ಯಯಾಃ

(ಸೂ. ಸಂ 1250-1278)

(ಅಧಿಕಾರ ಸೂತ್ರ)

**ಸೂತ್ರ-1250. ಸ್ತ್ರಿಯಾಂ। (4.1.3)**

ವೃತ್ತಿ-ಅಧಿಕಾರೋಽಯಮ್, ಸಮರ್ಥಾನಾಂ ಇತಿ ಯಾವತ್।

ಅ.ವೃ-ಇದು ಅಧಿಕಾರ ಸೂತ್ರವಾಗಿದೆ. "ತದ್ಧಿತಾಃ (4.1.76)" ಎಂಬ ಸೂತ್ರದವರೆಗೆ ಪ್ರಕೃತ ಸೂತ್ರವು ಅನುವೃತ್ತವಾಗುತ್ತದೆ.

ಅರ್ಥ-ಸ್ತ್ರೀತ್ವ ವಿವಕ್ಷೆ ಇದ್ದಾಗ 'ಟಾಪ್' 'ಡಾಪ್' 'ಚಾಪ್', 'ಜೀಪ್''ಜೀಷ್' 'ಜೀನ್' ಪ್ರತ್ಯಯಗಳನ್ನು ಪ್ರಾತಿಪದಿಕದನಂತರ ಸೇರಿಸಲಾಗುತ್ತದೆ. ಇದರಮೇಲೆ ಸುಪ್ ಪ್ರತ್ಯಯಗಳನ್ನು ಸೇರಿಸಲಾಗಿ ಸುಬಂತ ಸ್ತ್ರೀಲಿಂಗ ಶಬ್ದಗಳಾಗುತ್ತವೆ.

(ಟಾಪ್-ಪ್ರತ್ಯಯವನ್ನು ವಿಧಿಸುವ ಸೂತ್ರ)

**ಸೂತ್ರ-1251. ಅಜಾದ್ಯತಷ್ಟಾಪ್।(4.1.4)**

ವೃತ್ತಿ-ಅಜಾದೀನಾಂ ಅ-ಕಾರಾನ್ತಸ್ಯ ಚ ವಾಚ್ಯಂ ಯತ್ ಸ್ತ್ರೀತ್ವಂ ತತ್ರ ದ್ಯೋತ್ಯೇ ಟಾಪ್ ಸ್ಯಾತ್। ಅಜಾ। ಏಡಕಾ। ಅಶ್ವಾ ಚಟಕಾ। ಮೂಷಿಕಾ। ಬಾಲಾ। ವತ್ಸಾ। ಹೋಡಾ। ಮನ್ದಾ। ವಿಲಾತಾ। ಇತ್ಯಾದಿ। ಮೇಧಾ। ಗಜ್ಗಾ। ಸರ್ವಾ।

ಪ. ಛೇ-ಅಜಾದ್ಯತಃ, ಟಾಪ್।

ಅ.ವೃ.-"ಙ್ಯಾಪ್ ಪ್ರಾತಿಪದಿಕಾತ್। ಎಂಬ ಸೂತ್ರದಿಂದ 'ಪ್ರಾತಿಪದಿಕಾತ್' ಎಂಬ ಪದವು ಅನುವೃತ್ತವಾಗುತ್ತದೆ. 'ಪ್ರತ್ಯಯಃ' ಮತ್ತು "ಪರಶ್ಚ" ಎಂಬವು ಅಧಿಕಾರ ಸೂತ್ರಗಳಾಗಿವೆ. "ಸ್ರಿಯಾಮ್" ಎಂಬ ಅಧಿಕಾರ ಸೂತ್ರವು ಇದ್ದೇ ಇದೆ.

ಅರ್ಥ-'ಅಜಾದಿ' ಗಣದಲ್ಲಿ ಪಠಿತವಾದ ಮತ್ತು ಹ್ರಸ್ವ ಅ-ಕಾರಾನ್ತ ಶಬ್ದಗಳಮೇಲೆ ಸ್ತ್ರೀತ್ವ ವಿವಕ್ಷೆ ಇದ್ದಾಗ, 'ಟಾಪ್' ಪ್ರತ್ಯಯವು ಬರುತ್ತದೆ. 'ಟಾಪ್' ನಲ್ಲಿ 'ಆ' ಕಾರ ಮಾತ್ರ ಉಳಿಯುತ್ತದೆ ಉಳಿದವುಗಳು 'ಇತ್' ಸಂಜ್ಞಕಗಳು. ನಂತರ ಸವರ್ಣದೀರ್ಘ ಸಂಧಿಯಾಗಿ ರೂಪವು ಸಿದ್ಧವಾಗುತ್ತದೆ.

ಉದಾ -1. ಅಜಾ=ಹೆಣ್ಣುಆಡು ಇದು ಅಜಾದಿ ಗಣ ಪಠಿತವಾಗಿರುವುದರಿಂದ "ಅಜಾದ್ಯದಷ್ಟಾಪ್" ಎಂಬ ಸೂತ್ರದಿಂದ 'ಟಾಪ್(ಆ)' ಎಂಬ ಸ್ತ್ರೀ ಪ್ರತ್ಯಯ ಬಂದು ಅಜ+ಆ ಎಂದಾಗಿ 'ಸರ್ಣದೀರ್ಘ' ಸಂಧಿಯಿಂದ 'ಅಜಾ' ಎಂದು ರೂಪವಾಗುತ್ತದೆ.

ಉದಾ-2. ಏಡಕಾ=ಹೆಣ್ಣುಕುರಿ. ಇದು ಅಜಾದಿಗಣ ಪಠಿತವಾಗಿ ಇರುವುದರಿಂದ"ಅಜಾದ್ಯದಷ್ಟಾಪ್" ಎಂಬ ಸೂತ್ರದಿಂದ 'ಟಾಪ್(ಆ)' ಸ್ತ್ರೀ ಪ್ರತ್ಯಯ ಬಂದು, ಏಡಕ+ಆ ಎಂದಾಗಿ 'ಸವರ್ಣದೀರ್ಘ' ಸಂಧಿಯಿಂದ 'ಏಡಕಾ' ಎಂದು ರೂಪವಾಗುತ್ತದೆ.

ಉದಾ–3. ಅಶ್ವಾ(ಕುದುರೆ) ಸ್ತ್ರೀತ್ವ ವಿವಕ್ಷೆಯಲ್ಲಿ ಹಿಂದಿನಂತೆಯೇ ಅಶ್ವ+ಆ (ಟಾಪ್) ಎಂದಾಗಿ 'ಅಶ್ವಾ' ಎಂದು ರೂಪವಾಗಿದೆ.

ಉದಾ–4. ಚಟಕಾ (ಗುಬ್ಬಚ್ಚಿ) ಶಬ್ದವು ಸ್ತ್ರೀತ್ವ ವಿವಕ್ಷೆಯಲ್ಲಿ ಮೇಲಿನಂತೆಯೇ 'ಚಟಕಾ'ಎಂದಾಗಿದೆ.

ಉದಾ–5. ಮೂಷಿಕಾ (ಇಲಿ) ಶಬ್ದವು ಸ್ತ್ರೀತ್ವ ವಿವಕ್ಷೆಯಲ್ಲಿ, ಇನ್ನು ಮುಂದೆ ಬರುವ ಸೂತ್ರ() ದ ನಿಯಮದಿಂದ ಮೂಷಿಕ+ಆ=ಮೂಷಿಕಾ ಎಂದಾಗಿದೆ.

ಸೂಚನೆ: ಬಾಲಾದಿ ಶಬ್ದಗಳು ಮೊದಲನೇ ವಯಸ್ಸನ್ನು ತಿಳಿಸುತ್ತದೆ. "ವಯಸಿ ಪ್ರಥಮೇ" ಎಂಬ ಸೂತ್ರದಿಂದ 'ಜೀಷ್' (ಈ) ಬರಬೇಕಾಗಿತ್ತು, ಅಪವಾದವಾಗಿ ಟಾಪ್(ಆ) ಬರುತ್ತದೆ.

ಉದಾ–6. ಬಾಲ (ಹುಡುಗ) ಶಬ್ದವು ಸ್ತ್ರೀತ್ವ ವಿವಕ್ಷೆಯಲ್ಲಿ ಬಾಲ+ಟಾಪ್(ಆ) ಎಂದಿದ್ದಾಗ, ಸವರ್ಣದೀರ್ಘಸಂಧಿಯಿಂದ ಬಾಲಾ ಎಂದಾಗಿದೆ.

ಉದಾ–7. ವತ್ಸ (ಕರು) ಶಬ್ದವು ಸ್ತ್ರೀತ್ವ ವಿವಕ್ಷೆಯಲ್ಲಿ ವತ್ಸ+ಟಾಪ್(ಆ) ಎಂದಿದ್ದಾಗ ಸವರ್ಣದೀರ್ಘ ಸಂಧಿಯಿಂದ ವತ್ಸಾ ಎಂದಾಗಿದೆ.

ಉದಾ–8. ಹೋಡಾ (ಕನ್ಯಾ)। 'ಹೋಡ' ಶಬ್ದವು ಸ್ತ್ರೀತ್ವ ವಿವಕ್ಷೆಯಲ್ಲಿ ಹೋಡ+ಟಾಪ್(ಆ) ಎಂದಾಗಿ ಸವರ್ಣದೀರ್ಘಸಂಧಿಯಿಂದ ಹೋಡಾ ಎಂದಾಗಿದೆ. ಹೀಗೆಯೇ 'ಮಂದ' ಶಬ್ದದಿಂದ 'ಮಂದಾ (ಕನ್ಯಾ)', 'ವಿಲಾತ' ಶಬ್ದದಿಂದ 'ವಿಲಾತಾ' (ಕನ್ಯಾ), 'ಮೇಧ' ಶಬ್ದದಿಂದ 'ಮೇಧಾ', 'ಗಙ್ಗ' ಶಬ್ದದಿಂದ 'ಗಙ್ಗಾ' (ನದಿಯ ಹೆಸರು),'ಸರ್ವ' ಶಬ್ದದಿಂದ 'ಸರ್ವಾ' (ಎಲ್ಲ ಹೆಣ್ಣುಮಕ್ಕಳು)ಎಂದಾಗಿವೆ.

**(ಙೀಪ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ–1252. ಉಗಿತಶ್ಚ (4.1.6)**

ವೃತ್ತಿ–ಉಗಿದನ್ತಾತ್ ಪ್ರಾತಿಪದಿಕಾತ್ ಸ್ತ್ರಿಯಾಂ ಙೀಪ್ ಸ್ಯಾತ್। ಭವತೀ। ಭವನ್ತೀ। ಪಚನ್ತೀ। ದೀವ್ಯನ್ತೀ।

ಪ. ಛೇ–ಉಗಿತಃ, ಚ।

ಅ.ವ್ಯ.–"ಋನ್ನೇಭ್ಯೋ ಙೀಪ್" ಎಂಬ ಸೂತ್ರದಿಂದ 'ಙೀಪ್' ಎಂಬ ಪದವು ಅನುವೃತ್ತವಾಗುತ್ತದೆ.. "ಸ್ತ್ರಿಯಾಮ್", "ಪ್ರಾತಿಪದಿಕಾತ್", "ಪ್ರತ್ಯಯಃ" ಮತ್ತು "ಪರಶ್ಚ" ಎಂಬುವು ಅಧಿಕಾರ ಸೂತ್ರಗಳು.

ಅರ್ಥ–ಯಾವ ಪ್ರಾತಿಪದಿಕಗಳಿಗೆ ಉಕ್ (ಉ,ಋ,ಲೃ)ಗಳನ್ನು 'ಇತ್' ಆಗಿಯುಳ್ಳ) ಪ್ರತ್ಯಯಾನ್ತರ್ಗತವಾದ ಅಕ್ಷರಗಳನ್ನು ಕೊನೆಯಲ್ಲಿ ಉಳ್ಳ ಪ್ರಾತಿಪದಿಕಗಳ ಮೇಲೆ ಸ್ತ್ರೀತ್ವ ವಿವಕ್ಷೆಯಲ್ಲಿ 'ಙೀಪ್' ಪ್ರತ್ಯಯವು ಬರುತ್ತದೆ.

ವಿವರಣೆ –"ಲಶಕ್ವತದ್ಧಿತೇ" ಎಂಬ ಸೂತ್ರದಿಂದ 'ಙ್' ಕಾರ ಮತ್ತು "ಹಲನ್ತ್ಯಮ್" ಎಂಬ ಸೂತ್ರದಿಂದ 'ಪ್' ಕಾರವೂ 'ಇತ್' ಸಂಜ್ಞೆಗಳಾಗುತ್ತವೆ. ಶತೃ, ವಸು, ಡವತು

ಮೊದಲಾದ ಪ್ರತ್ಯಯಗಳಲ್ಲಿ 'ಋ' ಕಾರ 'ಉ' ಕಾರ ಮೊದಲಾದವು 'ಇತ್' ಸಂಜ್ಞೆಗಳಾಗಿರೋಣದ್ದರಿಂದ. 'ಉಗಿತ್' ಗಳಾಗುತ್ತವೆ. ಇವುಗಳಿಗೆ 'ಜೀಪ್' ಪ್ರತ್ಯಯ ಸೇರಿಸೋಣದ್ದರಿಂದ 'ಙ್ಯನ್ತ' ಗಳಾಗುತ್ತವೆ. ಇದರಿಂದ 'ಸು' ಲೋಪ ಮೊದಲಾದ ಕಾರ್ಯಗಳಾಗುತ್ತವೆ.

ಉದಾ-1. ಭವತೀ (ಮಹಿಳೆಯಾದ ತಾವು) ಭವತಿ ಶಬ್ದಕ್ಕೆ ಪುಲ್ಲಿಂಗದಲ್ಲಿ 'ಭವಾನ್' ಎಂದು ರೂಪವಾಗುತ್ತದೆ. 'ಭಾ' ಧಾತುವಿನಮೇಲೆ 'ಕೃತ್' ಪ್ರಕರಣದಲ್ಲಿ 'ಡವತು' ಪ್ರತ್ಯಯ ಬಂದು 'ಭವತ್' ಎಂದು ರೂಪವಾಗುತ್ತದೆ. 'ಉ' ಕಾರಕ್ಕೆ 'ಇತ್' ಸಂಜ್ಞೆ ಬರೋಣದ್ದರಿಂದ ಇದು 'ಉಗಿತ್' ಆಗುತ್ತದೆ. "ಉಗಿತಶ್ಚ" ಎಂಬ ಸೂತ್ರದಿಂದ ಜೀಪ್(ಈ) ಬಂದು ಭವತ್+ಈ=ಭವತೀ ಎಂದು ರೂಪವಾಗುತ್ತದೆ. 'ಙ್ಯನ್ತ' ವಾದ 'ಭವತೀ' ಶಬ್ದದಮೇಲೆ 'ಸು' ಮೊದಲಾದ ಪ್ರತ್ಯಯಗಳನ್ನು ಸೇರಿಸಿದಾಗ 'ಈ-ಕಾರಾನ್ತ' ಸ್ತ್ರೀಲಿಂಗ ಶಬ್ದದಂತೆ ರೂಪಗಳಾಗುತ್ತವೆ.

ಉದಾ-2. ಭವನ್ತೀ=ಆಗುತ್ತಿರುವವಳು. 'ಭೂ' ಧಾತುವಿನ ನಂತರ 'ಶತೃ' (ಅತ್)ಪ್ರತ್ಯಯವನ್ನು ಸೇರಿಸಿದನಂತರ ಭೂ+ಅತ್ ಎಂದಾಗಿ 'ಶಪ್ (ಅ) ' ವಿಕರಣಪ್ರತ್ಯಯವನ್ನು ಸೇರಿಸಿದಾಗ ಭೂ+ಅ+ಅತ್ ಎಂದಾದಾಗ, 'ಅ' ಮತ್ತು 'ಅತ್' ಗಳು ಸೇರಿ, "ಅತೋಗುಣೇ" ಎಂಬ ಸೂತ್ರದಿಂದ ಪರರೂಪ ಬಂದುಭೂ+ಅತ್ ಎಂದಾಗುತ್ತದೆ. ಸಾರ್ವಧಾತುಕ ಗುಣದಿಂದ ಭೋ+ಅತ್ ಎಂದಿದ್ದಾಗ, ಅವಾದೇಶ ಬಂದು ಭವತ್ ಎಂದಾಗುತ್ತದೆ. 'ಶತೃ' ಪ್ರತ್ಯಯವು ಉಗಿತ್ತಾಗಿರುವುದರಿಂದ ಸ್ತ್ರೀತ್ವ ವಿವಕ್ಷೆಯಲ್ಲಿ 'ಉಗಿತಶ್ಚ" ಎಂಬ ಸೂತ್ರದಿಂದ ಜೀಪ್ (ಈ) ಬಂದು ಭವತೀ ಎಂದು ರೂಪವಾಗುತ್ತದೆ. ನಂತರ "ಶಪ್ಶ್ಯನೋರ್ನಿತ್ಯಮ್" ಎಂಬ ಸೂತ್ರದಿಂದ ನುಮಾಗಮ(ನ್) ಬಂದು ಭವನ್ತೀ ಎಂದು ಈ ಕಾರಾಂತ ಸ್ತ್ರೀಲಿಂಗ ರೂಪವಾಗುತ್ತದೆ. ಇದೇ ರೀತಿಯಲ್ಲಿ 'ಪಚ್' ಧಾತುವಿನಮೇಲೆ ಪ್ರತ್ಯಯಗಳನ್ನು ಸೇರಿಸಿದಾಗ, ಪಚನ್ತೀ ಎಂದು ರೂಪವಾಗುತ್ತದೆ (ಬೇಯಿಸುತ್ತಿರುವವಳು ಎಂದರ್ಥ). ಇನ್ನು 'ದಿವ್' ಧಾತುವಿನಮೇಲೆ 'ಯ' ವಿಕರಣ ಪ್ರತ್ಯಯ ಮತ್ತು 'ಅತ್' ಪ್ರತ್ಯಯಗಳು ಸೇರಿದಾಗ ಹಿಂದಿನಂತೆ ದೀವ್ಯನ್ತೀ ಎಂದು ರೂಪವಾಗುತ್ತದೆ.

**(ಙೀಪ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1253. ಟಿಡ್ಢಾಣಞ್-ದ್ವಯಸಚ್-ದಘ್ನಞ್-ಮಾತ್ರಚ್-ತಯಪ್ ಠಕ್-ಠಞ್-ಕಞ್ಕ್ವರಪಃ (4.1.15)**

ವೃತ್ತಿ-ಅನುಪಸರ್ಜನಂ ಯತ್ ಟಿದಾದಿ ತದನ್ತಂ ಯತ್ ಅದನ್ತಂ ಪ್ರಾತಿಪದಿಕಂ ತತಃ ಸ್ತ್ರಿಯಾಂ ಙೀಪ್ ಸ್ಯಾತ್। ಕುರುಚರೀ। ನದಟ್-ನದೀ। ದೇವಟ್-ದೇವೀ। ಸೌಪರ್ಣೇಯೀ। ಐನ್ದ್ರೀ। ಔತ್ಸೀ। ಊರುದ್ವಯಸೀ। ಊರುದಘ್ನೀ। ಊರುಮಾತ್ರೀ। ಪಞ್ಚತಯೀ। ಆಕ್ಷಿಕೀ। ಪ್ರಾಸ್ಥಿಕೀ। ಲಾವಣಿಕೀ। ಯಾದೃಶೀ। ಇತ್ವರೀ।

ಪ.ಛೇ-ಟಿತ್-ಢ-ಅಣ್-ದ್ವಯಸಚ್-ದಘ್ನಞ್-ಮಾತ್ರಚ್-ತಯಪ್-ಠಕ್-ಠಞ್-ಕಞ್-ಕ್ವರಪ್।

ವಾರ್ತಿಕ–ನಞ್–ಸ್ನಞ್–ಈಕಕ್–ಖ್ಯುನ್–ತರುಣ–ತಲುನಾನಾಂ ಉಪ ಸಂಖ್ಯಾನಮ್। ಸ್ತ್ರೈಣೀ। ಪೌಂಸ್ನೀ। ಶಾಕ್ತಿಕೀ। ಯಾಷ್ಟಿಕೀ। ಆಢ್ಯಙ್ಕರಣೀ। ತರುಣೀ। ತಲುನೀ ।

ಅ.ವೃ.–"ಋನ್ನೇಭ್ಯೋ ಙೀಪ್" ಎಂಬ ಸೂತ್ರದಿಂದ 'ಙೀಪ್' ಎಂಬ ಪದವೂ ಮತ್ತು "ಅಜಾದ್ಯತಷ್ಟಾಪ್" ಎಂಬ ಸೂತ್ರದಿಂದ ಏಕದೇಶವಾದ 'ಅತಃ' ಎಂಬ ಪದದ ಅನುವೃತ್ತಿಯು ಆಗುತ್ತದೆ. "ಪ್ರಾತಿಪದಿಕಾತ್", "ಪ್ರತ್ಯಯಃ" ಮತ್ತು "ಪರಶ್ಚ" ಎಂಬ ಶಬ್ದಗಳು ಅಧಿಕೃತವಾಗಿವೆ.

ಅರ್ಥ–'ಅನುಪಸರ್ಜನ'ವಾದ ಯಾವ ಟಿತ್–ಆದಿಯುಳ್ಳದ್ದಾಗಿದೆಯೋ ತದನ್ತವಾದ ಯಾವ ಒಂದು ಅದನ್ತ(ಹ್ರಸ್ವ ಅ–ಕಾರಾನ್ತ) ವಿದೆಯೋ, ಅಂಥ ಪ್ರಾತಿಪದಿಕದನಂತರ ಸ್ತ್ರೀತ್ವ ವಿವಕ್ಷೆಯಲ್ಲಿ 'ಙೀಪ್' (ಈ) ಬರುತ್ತದೆ.

ಉದಾ–1. ಕುರುಚರೀ='ಕುರುಷು ಚರತಿ ಇತಿ ಕುರುಚರೀ' ಎಂಬುದು ವಿಗ್ರಹ ಕುರು ಪೂರ್ವಕ ಚರ್ ಧಾತುವಿನನಂತರ 'ಟ(ಅ)' ಪ್ರತ್ಯಯವು ಬಂದು ಕುರುಚರ ಎಂಬ ಕೃದನ್ತ ಶಬ್ದವು ಆಗುತ್ತದೆ. ಇದು ಕೃದನ್ತವಾಗಿರುವುದರಿಂದ "ಕೃತ್ತದ್ಧಿತಸಮಾಸಾಶ್ಚ" ಎಂಬ ಸೂತ್ರದಿಂದ ಪ್ರಾತಿಪದಿಕವು ಆಗುತ್ತದೆ. ಇದು 'ಟಿತ್' ಆಗಿರೋಣದ್ದರಿಂದ ಸ್ತ್ರೀತ್ವ ವಿವಕ್ಷೆಯಲ್ಲಿ ಪ್ರಕೃತ ಸೂತ್ರದಿಂದ 'ಙೀಪ್' (ಈ) ಪ್ರತ್ಯಯವು ಬರುತ್ತದೆ. ಕುರುಚರ+ಈ ಎಂದಿದ್ದಾಗ, ಕುರುಚರ ಶಬ್ದಕ್ಕೆ 'ಭ' ಸಂಜ್ಞೆ ಇರೋಣದ್ದರಿಂದ ರೇಫೋತ್ತರ ಅ–ಕಾರಕ್ಕೆ "ಯಸ್ಯೇತಿ ಚ" ಎಂಬ ಸೂತ್ರದಿಂದ ಲೋಪ ಬಂದು ಕುರುಚರ್+ಈ=ಕುರುಚರೀ ಎಂದು ಪ್ರಾತಿಪದಿಕವಾಗುತ್ತದೆ. ಇದಕ್ಕೆ 'ಸು' ಪ್ರತ್ಯಯ ಸೇರಿ (ಸು ನಲ್ಲಿ ಉ–ಕಾರ ಇತ್ ಸ್ ಮಾತ್ರ ಉಳಿಯುತ್ತದೆ). ಕುರುಚರೀ+ಸ್ ಎಂದಿದ್ದಾಗ, 'ಸ್' ವರ್ಣವು "ಹಲ್ಙ್ಯಾಭ್ಯೋ ದೀರ್ಘಾತ್ ಸುತಿಸ್ಯಪೃಕ್ತಂ ಹಲ್" ಎಂಬ ಸೂತ್ರದಿಂದ ಲೋಪವಾಗಿ ಕುರುಚರೀ ಎಂಬ ಸುಬನ್ತವು ಸಿದ್ಧವಾಗುತ್ತದೆ.

ಉದಾ–2. ನದಟ್–ನದೀ।=ನದೀ. ಈ ಉದಾಹರಣೆಯಲ್ಲಿಯೂ ನದಟ್ ಎಂಬುದು 'ಟಿತ್'ಇದು 'ಪಚಾದಿ' ಗಣದಲ್ಲಿ ಪಠಿತವಾಗಿದೆ. ಆದುದರಿಂದ 'ನಂದಿಗ್ರಹಿ ಪಚಾದಿಭ್ಯೋ ಲ್ಯುಣಿನ್ಯಚಃ' ಎಂಬ ಸೂತ್ರದಿಂದ 'ಅಚ್(ಅ)' ಪ್ರತ್ಯಯ ಬಂದು 'ನದ' ಎಂದಾಗುತ್ತದೆ ಇದು ಕೃದಂತವಾಗಿರುವುದರಿಂದ 'ಕೃತ್ತದ್ಧಿತ ಸಮಾಸಾಶ್ಚ' ಎಂಬ ಸೂತ್ರದಿಂದ ಪ್ರಾತಿಪದಿಕವೂ ಆಗಿದೆ. ಇದು 'ಟಿತ್' ಆಗಿರೋಣದ್ದರಿಂದ ಸ್ತ್ರೀತ್ವ ವಿವಕ್ಷೆಯಲ್ಲಿ ನದ ಶಬ್ದದಮೇಲೆ 'ಙೀಪ್ (ಈ) ' ಪ್ರತ್ಯಯವು ಪ್ರಕೃತ ಸೂತ್ರದಿಂದ ಬರುತ್ತದೆ. ನದ ಶಬ್ದಕ್ಕೆ ಭ ಸಂಜ್ಞೆ ಬಂದಾಗ ಅಂತ್ಯ ಅ ಕಾರಕ್ಕೆ 'ಯಸ್ಯೇತಿ ಚ' ಎಂಬ ಸೂತ್ರದಿಂದ ಲೋಪ ಬಂದು ನದ್+ಈ=ನದೀ ಎಂದಾಗುತ್ತದೆ. ಅನಂತರ ಸುಪ್ ಪ್ರತ್ಯಯವನ್ನು ಸೇರಿಸಿದಮೇಲೆ ನದೀ+ಸು(ಸ್) ಎಂದಿದ್ದಾಗ, 'ಹಲ್ಙ್ಯಾಭ್ಯೋ ದೀರ್ಘಾತ್ ಸುತಿಸ್ಯಪ್ರಕ್ತಮ್ ಹಲ್' ಎಂಬ ಸೂತ್ರದಿಂದ 'ಸ್' ಕಾರವು ಲೋಪವಾಗಿ ನದೀ ಎಂದೇ ಉಳಿಯುತ್ತದೆ.

ಉದಾ–3. ದೇವಟ್–ದೇವೀ। ಇದೂ ಕೂಡ ಟಿದನ್ತವಾಗಿರುವುದರಿಂದ ಸ್ತ್ರೀತ್ವ

ವಿವಕ್ಷೆಯಲ್ಲಿ ಜೀಪ್ ಬಂದು ಹಿಂದಿನಂತೆ ದೇವೀ ಎಂದು ರೂಪವಾಗುತ್ತದೆ.

ಉದಾ-4. ಸೌಪರ್ಣೇಯೀ। (ಸುಪರ್ಣೀಯ ಕನ್ಯೆ (ಗರುಡನ ಸಹೋದರಿ))- ಇದು 'ಢ' ಪ್ರತ್ಯಯಾಂತ ಉದಾಹರಣೆ. ಸುಪರ್ಣ್ಯಾಃ ಅಪತ್ಯಂ ಸ್ತ್ರೀ ಎಂದಿದ್ದಾಗ, 'ಸ್ತ್ರೀಭ್ಯೋ ಢಕ್' ಎಂಬ ಸೂತ್ರದಿಂದ ಢಕ್(ಢ್) ಪ್ರತ್ಯಯ ಬಂದು ಸುಪರ್ಣೀ+ಢಕ್(ಢ್) ಎಂದಿದ್ದಾಗ, ಅದಕ್ಕೆ 'ಏಯ್' ಆದೇಶ ಬಂದು ನಂತರ ಆದಿವೃದ್ಧಿ ಬಂದು 'ಸು' ಎಂಬಲ್ಲಿರುವ 'ಉ' ಕಾರಕ್ಕೆ 'ಔ' ಕರವು ಬಂದು ಸೌಪರ್ಣೇಯ ಎಂದಾಗುತ್ತದೆ ಇದು ತದ್ಧಿತಾಂತವಾಗಿರುವುದರಿಂದ ಪ್ರಾತಿಪದಿಕವೂ ಆಗುತ್ತದೆ. ಇದು 'ಢಕ್' ಪ್ರತ್ಯಯಾಂತವೆಂದು ಭಾವಿಸಿದಾಗ ಸ್ತ್ರೀತ್ವ ವಿವಕ್ಷೆಯಲ್ಲಿ ಟಿಡ್ಢಾಣಞ್-ದ್ವಯಸಜ್-ದಧ್ನಞ್-ಮಾತ್ರಚ್-ತಯಪ್-ಠಕ್-ಠಞ್-ಕಞ್ಕ್ವರಪಃ (4.1.15) ಎಂಬ ಸೂತ್ರದಿಂದ ಜೀಪ್ (ಈ) ಬಂದು, ಸೌಪರ್ಣೇಯ ಎಂಬುದು 'ಭ' ಸಂಜ್ಞೆಯುಳ್ಳದ್ದಾಗಿರುವುದರಿಂದ 'ಯಸ್ಯೇತಿ ಚ' ಎಂಬ ಸೂತ್ರದಿಂದ ಅ ಕಾರಕ್ಕೆ ಲೋಪ ಬಂದು ಸೌಪರ್ಣೇಯ್+ಈ=ಸೌಪರ್ಣೇಯೀ ಎಂದು ರೂಪವಾಗುತ್ತದೆ.

ಉದಾ-5. ಐನ್ದ್ರೀ। (ಇಂದ್ರನನ್ನು ದೇವತೆಯಾಗಿಯುಳ್ಳ ದಿಕ್ಕು (ಪೂರ್ವದಿಕ್ಕು)- ಇದು 'ಅಣ್' ಪ್ರತ್ಯಯಾಂತಕ್ಕೆ ಉದಾಹರಣೆಯಾಗಿದೆ. 'ಇನ್ದ್ರೋ ದೇವತಾ ಅಸ್ಯಾ' ಎಂಬ ವಿಗ್ರಹದಲ್ಲಿ 'ಸಾಸ್ಯ ದೇವತಾ' ಎಂಬ ಸೂತ್ರದಿಂದ 'ಅಣ್' ಪ್ರತ್ಯಯ ಬಂದಿದೆ. ಅಥವಾ 'ಇನ್ದ್ರಸ್ಯ ಇಯಂ' ಎಂಬ ವಿಗ್ರಹದಿಂದಲೂ 'ತಸ್ಯೇದಂ' ಎಂಬ ಸೂತ್ರದಿಂದ 'ಅಣ್' ಪ್ರತ್ಯಯ ಬಂದು 'ಐನ್ದ್ರ' ಎಂದಿದ್ದಾಗ, ಹಿಂದಿನಂತೆ 'ಅ' ಕಾರಕ್ಕೆ ಲೋಪ ಮತ್ತು 'ಇ' ಕಾರಕ್ಕೆ ಆದಿವೃದ್ಧಿ ಬಂದು, ಐನ್ದ್ರ್+ಈ=ಐನ್ದ್ರೀ ಎಂದಾಗುತ್ತದೆ.

ಉದಾ-6. ಔತ್ಸೀ। (ಸೆಲೆ(ಝರಿ)ಯಲ್ಲಿ ಹುಟ್ಟುವ ಮೀನು)-ಇದು 'ಅಞ್' ಪ್ರತ್ಯಯಾಂತವಾಗಿದೆ. 'ತತ್ರ ಭವಃ' ಎಂಬ ಅರ್ಥದಲ್ಲಿ 'ಉತ್ಸಾದಿಭ್ಯೋऽಞ್' ಎಂಬ ಸೂತ್ರದಿಂದ ಔತ್ಸ ಎಂದಾಗುತ್ತದೆ. ಇದು ಪ್ರಾತಿಪದಿಕವಾಗಿರುವುದರಿಂದ ಹಿಂದಿನಂತೆ ಸ್ತ್ರೀತ್ವ ವಿವಕ್ಷೆಯಲ್ಲಿ 'ಜೀಪ್(ಈ)' ಬಂದು, ಔತ್ಸ+ಈ ಎಂದಿದ್ದಾಗ, ಹಿಂದಿನಂತೆಯೇ ಅ ಕಾರ ಲೋಪವಾಗಿ ಔತ್ಸ್+ಈ=ಔತ್ಸೀ ಎಂದಾಗುತ್ತದೆ. ಇದಕ್ಕೆ 'ಸುಪ್(ಸ್)' ಪ್ರತ್ಯಯ ಸೇರಿಸಿದಮೇಲೆ 'ಹಲ್ಙ್ಯಾಭ್ಯೋ ದೀರ್ಘಾತ್ ಸುತಿಸ್ಯಪ್ರಕ್ತಮ್ ಹಲ್' ಎಂಬ ಸೂತ್ರದಿಂದ 'ಸ್' ಕಾರವು ಲೋಪವಾಗಿ ಔತ್ಸೀ ಎಂದೇ ಉಳಿಯುತ್ತದೆ.

ಉದಾ-7. ಊರುದ್ವಯಸೀ। (ತೊಡೆಯಪ್ರಮಾಣದಷ್ಟು ನೀರುಳ್ಳ ನದಿ)-ಈ ಶಬ್ದವು 'ದ್ವಯಸಚ್' ಪ್ರತ್ಯಯಾಂತವಾಗಿದೆ. ಪ್ರಮಾಣ ಎಂಬ ಅರ್ಥದಲ್ಲಿ "ಪ್ರಮಾಣೇ ದ್ವಯಸಚ್ ದಧ್ನಞ್ ಮಾತ್ರಚಃ" ಎಂಬ ಸೂತ್ರದಿಂದ 'ದ್ವಯಸಚ್' ಪ್ರತ್ಯಯವು ಬಂದು ಊರುದ್ವಯಸ ಎಂದಾಗಿದೆ. ತದ್ಧಿತಾಂತವಾದ್ದರಿಂದ ಪ್ರಾತಿಪದಿಕತ್ವವು ಬರುತ್ತದೆ. ಅದುದರಿಂದ ಸ್ತ್ರೀತ್ವ ವಿವಕ್ಷೆಯಲ್ಲಿ, ಟಿಡ್ಢಾಣಞ್-ದ್ವಯಸಜ್-ದಧ್ನಞ್-ಮಾತ್ರಚ್-ತಯಪ್-ಠಕ್-ಠಞ್-ಕಞ್ಕ್ವರಪಃ (4.1.15) ಎಂಬ ಸೂತ್ರದಿಂದ ಜೀಪ್ (ಈ) ಬಂದು, ಊರುದ್ವಯಸ+ಈ ಎಂದಿದ್ದಾಗ, 'ಯಸ್ಯೇತಿ ಚ' ಎಂಬ ಸೂತ್ರದಿಂದ ಅ ಕಾರಕ್ಕೆ ಲೋಪ ಬಂದು, ಊರುದ್ವಯಸ್+ಈ=ಊರುದ್ವಯಸೀ ಎಂದಾಗುತ್ತದೆ.

ಇದೇ ಅರ್ಥವುಳ್ಳ

ಉದಾ-8. ಊರುದಘ್ನೀ(ದಘ್ನಚ್),

ಉದಾ-9. ಊರುಮಾತ್ರೀ (ಮಾತ್ರಚ್) ಎಂಬ ಶಬ್ದಗಳು ಜೀಬಂತವಾಗಿವೆ.

ಉದಾ-10. ಪಞ್ಚತಯೀ(ತಯಪ್)।(ಐದು ಅವಯವಗಳುಳ್ಳವಳು)-"ಸಂಖ್ಯಾಯಾಃ ಅವಯವೇ ತಯಪ್" ಎಂಬ ಸೂತ್ರದಿಂದ 'ತಯಪ್' ಪ್ರತ್ಯಯವು ಬಂದು, ಪ್ರಕೃತ ಸೂತ್ರದಿಂದ 'ಜೀಪ್(ಈ) ಪ್ರತ್ಯಯಾಂತವಾಗಿದೆ. ಪಞ್ಚತಯ+ಈ ಎಂದಿದ್ದಾಗ, 'ಯಸ್ಯೇತಿ ಚ'ಎಂಬ ಸೂತ್ರದಿಂದ ಅ ಕಾರಕ್ಕೆ ಲೋಪ ಬಂದು,ಪಞ್ಚತಯ್+ಈ=ಪಞ್ಚತಯೀ ಎಂದಾಗಿದೆ.

ಉದಾ-11. ಆಕ್ಷಿಕೀ। (ದಾಳದಿಂದ ಜೂಜಾಡುವ ಸ್ತ್ರೀ) ಇದು 'ಠಕ್' ಪ್ರತ್ಯಯಾಂತಕ್ಕೆ ಉದಾಹರಣೆಯಾಗಿದೆ. ಅಕ್ಷೈಃದೀವ್ಯತಿ ಎಂಬ ವಿಗ್ರಹದಲ್ಲಿ "ತೇನ ದೀವ್ಯತಿಖನತಿಜಯತಿಜಿತಮ್" ಎಂಬ ಸೂತ್ರದಿಂದ 'ಠಕ್' (ಠ) ಪ್ರತ್ಯಯ ಬಂದು, ನಂತರ "ಠಸ್ಯ ಇಕಃ" ಎಂಬುದರಿಂದ ಇದಕ್ಕೆ 'ಇಕ' ಆದೇಶ ಬಂದು ಆಕ್ಷಿಕ ಎಂದಾಗುತ್ತದೆ. ಟಿಡ್ಢಾಣಞ್-ದ್ವಯಸಜ್-ದಘ್ನಞ್-ಮಾತ್ರಚ್-ತಯಪ್-ಠಕ್-ಠಞ್-ಕಞ್-ಕ್ವರಪಃ (4.1.15) ಎಂಬ ಸೂತ್ರದಿಂದ ಜೀಪ್ (ಈ) ಬಂದು, ಹಿಂದಿನಂತೆ ಆಕ್ಷಿಕ್+ಈ=ಆಕ್ಷಿಕೀ ಎಂದಾಗುತ್ತದೆ.

ಉದಾ-12. ಪ್ರಾಸ್ಥಿಕೀ।(ಪ್ರಸ್ಥವೆಂಬ ಅಳತೆಯಿಂದ ಅಳೆಯಲ್ಪಟ್ಟ ಪದಾರ್ಥದಿಂದ ಕೊಂಡುಕೊಳ್ಳಲ್ಪಟ್ಟದ್ದು) ಇದು ಠಞ್(ಠ) ಪ್ರತ್ಯಯಾಂತ ಶಬ್ದ. ಇದಕ್ಕೆ "ಠಸ್ಯ ಇಕಃ" ಎಂಬ ಸೂತ್ರದಿಂದ 'ಇಕ' ಎಂಬ ಆದೇಶವು ಬರುತ್ತದೆ. ಪ್ರಸ್ಥೇನ ಕ್ರೀತಾ ಎಂಬ ವಿಗ್ರಹದಲ್ಲಿ ಆದಿವೃದ್ಧಿ ಬಂದು 'ಇಕ' ಎಂಬ ಆದೇಶ ಬಂದು ಪ್ರಾಸ್ಥಿಕ ಎಂದಾಗುತ್ತದೆ. ಹಿಂದಿನಂತೆ 'ಅ' ಕಾರಕ್ಕೆ ಲೋಪವಾಗಿ 'ಜೀಪ್(ಈ)' 'ಈ' ಕಾರವು ಸೇರಿ (ಪ್ರಾಸ್ಥಿಕ್+ಈ=ಪ್ರಾಸ್ಥಿಕೀ ಎಂದಾಗುತ್ತದೆ.

ಉದಾ-13. ಲಾವಣಿಕೀ।(ಉಪ್ಪನ್ನು ಕೊಟ್ಟು ಕೊಂಡುಕೊಳ್ಳುವ ಪದಾರ್ಥ) 'ಲವಣಂ ಪಣ್ಯಂ ಅಸ್ಯಾಃ' ಎಂದು ವಿಗ್ರಹ "ಲವಣಾತ್ ಠಞ್" ಎಂಬ ಸೂತ್ರದಿಂದ 'ಠಞ್(ಠ) ಬಂದು, ಇದಕ್ಕೆ "ಠಸ್ಯ ಇಕಃ" ಎಂಬ ಸೂತ್ರದಿಂದ 'ಇಕ' ಎಂಬ ಆದೇಶವು ಬರುತ್ತದೆ. ಹೀಗೆ ಲವಣ+ಇಕ ಎಂದಿರುತ್ತದೆ ನಂತರ ಆದಿವೃದ್ಧಿ ಹಾಗೂ ಲವಣ ಎಂಬಲ್ಲಿರುವ ಅಂತ್ಯ 'ಅ' ಕಾರವು 'ಯಸ್ಯೇತಿ ಚ' ಎಂಬ ಸೂತ್ರದಿಂದ ಲೋಪ ಹೊಂದಿ, ಲಾವಣ್+ಇಕ=ಲಾವಣಿಕ ಎಂದಾಗುತ್ತದೆ. ಇದಕ್ಕೆ 'ಜೀಪ್(ಈ)' ಸೇರಿಸಿದಮೇಲೆ ಅಂತ್ಯ 'ಅ' ಕಾರಕ್ಕೆ 'ಯಸ್ಯೇತಿ ಚ' ಎಂಬ ಸೂತ್ರದಿಂದ ಲೋಪ ಬಂದು ಲಾವಣಿಕ್+ಈ=ಲಾವಣಿಕೀ ಎಂದಾಗುತ್ತದೆ.

ಉದಾ-14. ಯಾದೃಶೀ। (ಯಾವರೀತಿಯ)-ಇದು 'ಕಞ್' ಪ್ರತ್ಯಯಾಂತ ಶಬ್ದ. 'ಯತ್ ಪ್ರಮಾಣಂ ಅಸ್ಯ' ಎಂಬುದು ವಿಗ್ರಹ. "ತ್ಯದಾದಿಷು ದೃಶೋಽನಾಲೋಚನೇ ಕಞ್ಚ" ಎಂಬ ಸೂತ್ರದಿಂದ 'ಕಞ್' ಪ್ರತ್ಯಯ ಬಂದು "ಆ ಸರ್ವನಾಮ್ನಃ" ಎಂಬ

ಸೂತ್ರದಿಂದ 'ಯತ್' ಶಬ್ದಕ್ಕೆ 'ಆ' ಕಾರಾನ್ತಾದೇಶ ಬಂದು ಯಾದೃಶ ಎಂದಾಗುತ್ತದೆ. ಸ್ತ್ರೀತ್ವ ವಿವಕ್ಷೆಯಲ್ಲಿ ಟಿಡ್ಢಾಣಞ್–ದ್ವಯಸಜ್.... ಕಞ್‌ಕ್ವರಪಃ (4.1.15) ಎಂಬ ಸೂತ್ರದಿಂದ 'ಙೀಪ್(ಈ)' ಬಂದು ಯಾದೃಶ+ಈ ಎಂದಿದ್ದಾಗ, ಹಿಂದಿನಂತೆ ಪ್ರಕ್ರಿಯೆ ನಡೆದು ಯಾದೃಶೀ ಎಂದಾಗುತ್ತದೆ

ಉದಾ–15. ಇತ್ವರೀ (ಪಾತಿವ್ರತ್ಯ ಕಳೆದುಕೊಂಡ ಸ್ತ್ರೀ)–ಇದು 'ಕ್ವರಪ್' ಪ್ರತ್ಯಾಯಾಂತ ಶಬ್ದ. 'ಇಣ್' ಧಾತುವಿನ ಮೇಲೆ "ಇಣ್‌ನಶಿಜಿಸರ್ತಿಭ್ಯಃ ಕ್ವರಪ್" ಎಂಬ ಸೂತ್ರದಿಂದ 'ಕ್ವರಪ್' ಪ್ರತ್ಯಯ ಬರುತ್ತದೆ. 'ಇಣ್' ನಲ್ಲಿಯ 'ಣ್' ಕಾರ (ಇತ್) ಲೋಪವಾಗಿ ಇ+ಕ್ವರಪ್ ಎಂದಿರುತ್ತದೆ. ಕ್ವರಪ್ ನಲ್ಲಿ 'ಪ್' ಕಾರ ಇತ್ ಆಗಿಇ+ಕ್ವರ ಎಂದಿರುತ್ತದೆ ಈಗ "ಹ್ರಸ್ವಸ್ಯ ಪಿತಿ ಕೃತಿ ತುಕ್" ಎಂಬ ಸೂತ್ರದಿಂದ 'ಕ್' ಕಾರಕ್ಕೆ ತುಗಾ(ತ್)ಗಮ ಬಂದು ಇ+ತ್+ವರ=ಇತ್ವರ ಎಂದಾಗುತ್ತದೆ. ಇದಕ್ಕೆ ಸ್ತ್ರೀತ್ವ ವಿವಕ್ಷೆಯಲ್ಲಿ 'ಙೀಪ್(ಈ)' ಸೇರಿಸಿದಾಗ ಹಿಂದಿನಂತೆ ಅಂತ್ಯ 'ಅ' ಕಾರಕ್ಕೆ ಲೋಪ ಬಂದು ಇತ್ವರ್+ಈ=ಇತ್ವರೀ ಎಂದಾಗುತ್ತದೆ.

ವಾರ್ತಿಕ–ನಞ್–ಸ್ನಞ್–ಈಕಕ್–ಖ್ಯುನ್–ತರುಣ–ತಲುನಾನಾಂ ಉಪಸಂಖ್ಯಾನಮ್। ಸ್ತ್ರೈಣೀ। ಪೌಂಸ್ನೀ। ಶ್ಯಾಕ್ತೀಕೀ(ಯಾಷ್ಟೀಕೀ)। ಆಢ್ಯಙ್ಕರಣೀ। ತರುಣೀ। ತಲುನೀ

ಪ.ಛೇ–ನಞ್–ಸ್ನಞ್–ಈಕಕ್–ಖ್ಯುನ್–ತರುಣ–ತಲುನಾನಾಮ್ ಉಪಸಂಖ್ಯಾನಮ್।

ಅರ್ಥ–ನಞ್,ಸ್ನಞ್,ಈಕಕ್, ಖ್ಯುನ್, ಈ ಪ್ರತ್ಯಯಾಂತ ಪ್ರಾತಿಪದಿಕಗಳನಂತರ ಮತ್ತು ತರುಣ, ತಲುನ ಶಬ್ದಗಳನ್ನು ಅಂತವಾಗಿಯುಳ್ಳ ಪ್ರಾತಿಪದಿಕಗಳನಂತರ ಸ್ತ್ರೀತ್ವ ವಿವಕ್ಷೆಯಲ್ಲಿ 'ಙೀಪ್(ಈ) ಬರುತ್ತದೆ.

ಉದಾ –1.ಸ್ತ್ರೈಣೀ।(ಸ್ತ್ರೀಗೆ ಯೋಗ್ಯವಾದ) ಸ್ತ್ರೀ+ನಞ್(ನ) ಎಂದಿದ್ದಾಗ, ಆದಿವೃದ್ಧಿ ಬಂದು ಸ್ತ್ರೈ+ನ ಎಂದಿರುತ್ತದೆ "ರಷಾಭ್ಯಾಮ್ ನೋಣಸ್ಸಮಾನಪದೇ" ಎಂಬ ಸೂತ್ರದಿಂದ 'ಣತ್ವ(ಣ)' ಬಂದು ಸ್ತ್ರೈಣ ಎಂದಾಗಿದೆ. ಸ್ತ್ರೀತ್ವ ವಿವಕ್ಷೆಯಲ್ಲಿ ಇದಕ್ಕೆ 'ಙೀಪ್(ಈ) ಸೇರಿಸಿದಾಗ ಸ್ತ್ರೈಣ+ಈ ಎಂದಿದ್ದಾಗ ಹಿಂದಿನಂತೆ ಪ್ರಕ್ರಿಯೆ ನಡೆದು ಸ್ತ್ರೈಣೀ ಎಂದು ರೂಪವಾಗುತ್ತದೆ.

2. ಪೌಂಸ್ನೀ।(ಪುರುಷನಿಗೆ ಯೋಗ್ಯವಾದ) ಪೌನ್ಸ್ನ ಎಂಬುದು 'ಸ್ನೈಞ್' ಪ್ರತ್ಯಯಾಂತ ಶಬ್ದ. ಇದೂ ಕೂಡ ಮೇಲಿನಂತೆಯೇ ಪ್ರಕ್ರಿಯೆ ನಡೆದು ಪೌಂಸ್ನೀ ಎಂದು ರೂಪವಾಗುತ್ತದೆ.

3.ಶ್ಯಾಕ್ತಿಕೀ (ಶಕ್ತಿಯನ್ನು ಆಯುಧವಾಗಿಯುಳ್ಳ ಸ್ತ್ರೀ) ಯಾಷ್ಟಿಕೀ(ಕೋಲನ್ನು ಆಯುಧವಾಗಿಯುಳ್ಳ ಸ್ತ್ರೀ)–ಇವೆರಡೂ 'ಈಕಕ್(ಈಕ)' ಪ್ರತ್ಯಯಾಂತ ಶಬ್ದಗಳು. ಇವೂ ಸಹ ಸ್ತ್ರೀತ್ವವಿವಕ್ಷೆಯಲ್ಲಿ ಹಿದಿನಂತೆಯೇ ರೂಪಗಳನ್ನು ತಾಳಿವೆ.

4.ಆಢ್ಯಙ್ಕರಣೀ।(ಧನವಂತನನ್ನಾಗಿ ಮಾಡುವಂಥಹ)–ಇದು 'ಖ್ಯುನ್(ಯು)'

ಪ್ರತ್ಯಯಾಂತ ಶಬ್ದ. "ಆಢ್ಯ-ಸುಭಗ-ಸ್ಥೂಲ-ಪಲಿತ-ನಗ್ನ-ಅಂಧ-ಪ್ರಿಯೇಷು ಚ್ವ್ಯರ್ತೇಷು ಅಚ್ವೌ ಕೃಞಃ ಕರಣೇ ಖ್ಯುನ್" ಎಂಬ ಸೂತ್ರದಿಂದ ಖ್ಯುನ್(ಯು) ಪ್ರತ್ಯಯ ಬರುತ್ತದೆ. ಆಢ್ಯ+ಅಮ್+ಕೃ+ಖ್ಯುನ್(ಯು)=ಆಢ್ಯ+ಅಮ್+ಕೃ+ಯು ಎಂದಿರುತ್ತದೆ. ["ಯುವೋರನಾಕೌ" ಎಂಬ ಸೂತ್ರದಿಂದ 'ಯು' ಗೆ 'ಅನ' ಆದೇಶ ಬರುತ್ತದೆ. ಧಾತುವಿನ 'ಕೃ' ನಲ್ಲಿರುವ 'ಋ' ಕಾಕ್ಕೆ 'ಅರ್' ಆದೇಶ ಬರುತ್ತದೆ. ("ಸಾರ್ವಧಾತುಕಾರ್ಧಧಾತುಕಯೋಃ" ಮತ್ತು "ಉರಣ್-ರಪರಃ " ಈ ಪ್ರತ್ಯಯವು ಆಗಿರುವುದರಿಂದ "ಅರುರ್ದ್ವಿಷದಜನ್ತಸ್ಯ ಮುಮ್" ಎಂಬ ಸೂತ್ರದಿಂದ 'ಮುಮ್' ಆಗಮವು ಬರುತ್ತದೆ. ಇದರಲ್ಲಿರುವ 'ಮ್' ಕಾರಕ್ಕೆ "ನಸ್ಯಾಪದಾನ್ತಸ್ಯ ಝಲಿ" ಎಂಬ ಸೂತ್ರದಿಂದ ಅನುಸ್ವಾರವು ಬರುತ್ತದೆ. ನಂತರ "ಅನುಸ್ವಾರಸ್ಯ ಯಯಿ ಪರಸವರ್ಣಃ" ಎಂಬ ಸೂತ್ರದಿಂದ ವೈಕಲ್ಪಿಕವಾಗಿ ವರ್ಗೀಯ ಅಂತ್ಯ ಅನುನಾಸಿಕವು ಆದೇಶವಾಗಿ ಬರುತ್ತದೆ. ಆಮೇಲೆ 'ತ' ವರ್ಗದ 'ನ' ಕಾರಕ್ಕೆ ಣತ್ವವು "ಅಟ್ಕುಪ್ವಾಙ್ನುಮ್ ವ್ಯವಾಯೇಪಿ" ಎಂಬ ಸೂತ್ರದಿಂದ ಬರುತ್ತದೆ]. ಹೀಗಾಗಿ ಆಢ್ಯ+ಅಮ್+ಕರ್+ಅನ=ಆಢ್ಯಙ್ಕರಣ ಎಂದಾಗುತ್ತದೆ. ಇದಕ್ಕೆ ಸ್ತ್ರೀತ್ವ ವಿವಕ್ಷೆಯಲ್ಲಿ 'ಙೀಪ್(ಈ)' ಬಂದು ಆಢ್ಯಙ್ಕರಣ+ಈ ಎಂದಿದ್ದಾಗ, ಹಿಂದಿನಂತೆ ಪ್ರಕ್ರಿಯೆ ನಡೆದು ಆಢ್ಯಙ್ಕರಣೀ ಎಂದು ರೂಪವಾಗುತ್ತದೆ.

5.ತರುಣೀ/6.ತಲುನೀ(ತರುಣಿ)-ತರುಣ ಮತ್ತು ತಲುನ ಶಬ್ದಗಳಮೇಲೆಯೂ ಸ್ತ್ರೀತ್ವವಿವಕ್ಷೆಯಲ್ಲಿ ಹಿಂದಿನಂತೆ 'ಙೀಪ್(ಈ)' ಪ್ರತ್ಯಯ ಬಂದು ತರುಣೀ ಮತ್ತು ತಲುನೀ ಎಂದು ರೂಪಗಳಾಗುತ್ತವೆ.

**(ಙೀಪ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1254. ಯಞಶ್ಚ।(4.1.16)**

ವೃತ್ತಿ-ಯಞಂತಾತ್ ಸ್ತ್ರಿಯಾಂ ಙೀಪ್ ಸ್ಯಾತ್। ಅಕಾರಲೋಪೇ ಕೃತೇ-

ಪ. ಛೇ-ಯಞಃ ಚ।

ಅ.ವೃ. -"ಋನ್ನೇಭ್ಯೋ ಙೀಪ್" ಎಂಬ ಸೂತ್ರದೀಂದ 'ಙೀಪ್' ಎಂಬ ಪದವು ಅನುವೃತ್ತವಾಗುತ್ತದೆ. "ಪ್ರಾತಿಪದಿಕಾತ್", "ಪ್ರತ್ಯಯಃ" "ಪರಶ್ಚ" ಮತ್ತು "ಸ್ತ್ರಿಯಾಮ್" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ಸ್ತ್ರೀತ್ವ ವಿವಕ್ಷೆ ಇರುವಾಗ 'ಯಞ್' ಪ್ರತ್ಯಯಾನ್ತ ಪ್ರಾತಿಪದಿಕದ ನಂತರ 'ಙೀಪ್' ಪ್ರತ್ಯಯವು ಬರುತ್ತದೆ.

**(ಯ್-ಕಾರ ಲೋಪವನ್ನು ವಿಧಿಸುವ ಸೂತ್ರ)**

**ಸೂತ್ರ-1255. ಹಲಸ್ತದ್ಧಿತಸ್ಯ । 6.4.150)**

ವೃತ್ತಿ-ಹಲಃ ಪರಸ್ಯ ತದ್ಧಿತ 'ಯ್' ಕಾರಸ್ಯ ಉಪಧಾಭೂತಸ್ಯ ಲೋಪಃ ಈತಿ ಪರೇ। ಗಾರ್ಗೀ।

ಪ. ಛೇ-ಹಲಃ ತದ್ಧಿತಸ್ಯ।

ಅ.ವೃ.-"ಸೂರ್ಯ-ತಿಷ್ಯ-ಅಗಸ್ತ್ಯ-ಮತ್ಸ್ಯಾನಾಂ ಯ ಉಪಧಾಯಾಃ" ಎಂಬ ಸೂತ್ರದಿಂದ 'ಉಪಧಾಯಾಃ' ಎಂಬ ಪದವೂ ಮತ್ತು "ಢೇ ಲೋಪೋಽಕದ್ರವಾಃ" ಎಂಬ ಸೂತ್ರದಿಂದ 'ಲೋಪಃ' ಎಂಬ ಪದವೂ ಹಾಗೆಯೇ "ಯಸ್ಯೇತಿ ಚ" ಎಂಬ ಸೂತ್ರದಿಂದ 'ಈತಿ' ಎಂಬ ಪದವೂ ಅನುವೃತ್ತವಾಗುತ್ತವೆ.

ಅರ್ಥ-'ಹಲ್' ವರ್ಣಕ್ಕಿಂತ ಪರದಲ್ಲಿರುವ ತದ್ಧಿತದ ಉಪಧೆಯ 'ಯ್' ಕಾರಕ್ಕೆ ಲೋಪವು ಬರುತ್ತದೆ, 'ಈ' ಕಾರವು ಪರದಲ್ಲಿದ್ದಾಗ.

ಉದಾ-ಗಾರ್ಗೀ(ಗರ್ಗ ಗೋತ್ರದ ಸಂತತಿಯಲ್ಲಿ ಹುಟ್ಟಿದ ಕನ್ಯೆ) 'ಗರ್ಗಸ್ಯ ಗೋತ್ರಾಪತ್ಯಂ ಸ್ತ್ರೀ' ಎಂದು ವಿಗ್ರಹ. ತದ್ಧಿತಾರ್ಥದಲ್ಲಿ ಗರ್ಗ ಶಬ್ದದಮೇಲೆ "ಗರ್ಗಾದಿಭ್ಯೋ ಯಞ್" ಎಂಬ ಸೂತ್ರದಿಂದ 'ಯಞ್(ಯ)' ಪ್ರತ್ಯಯ ಬಂದು ಗರ್ಗ+ಯ ಎಂದಿದ್ದಾಗ ಆದಿವೃದ್ಧಿ ಬಂದು "ಯಸ್ಯೇತಿ ಚ" ಎಂಬ ಸೂತ್ರದಿಮ್ದ ಅಂತ್ಯ 'ಅ' ಕಾರಕ್ಕೆ ಲೋಪ ಬಂದು ಗಾರ್ಗ್ಯ ಎಂದು ರೂಪವಾಗುತ್ತದೆ. ಸ್ತ್ರೀತ್ವ ವಿವಕ್ಷೇಯಲ್ಲಿ 'ಜೀಪ್(ಈ)' ಬಂದು ಗಾರ್ಗ್ಯ+ಈ ಎಂದಿದ್ದಾಗ "ಯಞಶ್ಚ" ಎಂಬ ಸೂತ್ರದಿಂದ 'ಯ್' ಕಾರ ಲೋಪವಾಗಿ ಮತ್ತು "ಯಸ್ಯೇತಿ ಚ" ಎಂಬುದರಿಂದ ಅಂತ್ಯ 'ಅ' ಕಾರ ಲೋಪವಾಗಿ ಗಾರ್ಗ್+ಈ=ಗಾರ್ಗೀ ಎಂದು ರೂಪವಾಗುತ್ತದೆ.

**(ಷ್ಪ-ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1256. ಪ್ರಾಚಾಂ ಷ್ಫ ತದ್ಧಿತಃ (4.1.17)**

ವೃತ್ತಿ-ಯಞನ್ತಾತ್ ಷ್ಫಃ ವಾ ಸ್ಯಾತ್, ಸ ಚ ತದ್ಧಿತಃ।

ಪ. ಛೇ-ಪ್ರಾಚಾಂ, ಷ್ಫಃ, ತದ್ಧಿತಃ।

ಅ.ವೃ-"ಯಞಶ್ಚ" ಎಂಬ ಸೂತ್ರದಿಂದ 'ಯಞಃ' ಎಂಬ ಪದವು ಅನುವೃತ್ತವಾಗುತ್ತದೆ. "ಪ್ರಾತಿಪದಿಕಾತ್", "ಪ್ರತ್ಯಯಃ" "ಪರಶ್ಚ" ಮತ್ತು "ಸ್ತ್ರಿಯಾಮ್" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ಯಞ್-ಪ್ರತ್ಯಯಾನ್ತ ಪ್ರಾತಿಪದಿಕದ ನಂತರ ಸ್ತ್ರೀತ್ವ ವಿವಕ್ಷೆ ಇದ್ದಾಗ, ವಿಕಲ್ಪದಿಂದ ತದ್ಧಿತ ಸಂಜ್ಞೆಯುಳ್ಳ 'ಷ್ಫ' ಪ್ರತ್ಯಯವು ಬರುತ್ತದೆ.

ಷ್ಫಃ ಎಂಬಲ್ಲಿ "ಷಃ ಪ್ರತ್ಯಯಸ್ಯ" ಎಂಬ ಸೂತ್ರದಿಂದ 'ಷ' ವರ್ಣವು ಇತ್ ಆಗಿ ಲೋಪ ಹೊಂದುತ್ತದೆ, 'ಫ' ಮಾತ್ರ ಉಳಿಯುತ್ತದೆ. (ಫ್) ಜಾಗದಲ್ಲಿ "ಅಯನೇಯೀನೀಯಿಯಃ (ಆಯನ್,ಏಯ್,ಈನ್,ಈಯ್,ಇಯ) ಫಢಖಛಘಾಂ ಪ್ರತ್ಯಯಾದೀನಾಂ" ಎಂಬ ಸೂತ್ರದಿಂದ 'ಆಯನ್' ಆದೇಶ ಬಂದು ಫ್+ಅ ಎಂಬಲ್ಲಿ ಆಯನ್+ಅ=ಆಯನ ಎಂದಾಗುತ್ತದೆ.

**(ಜೀಷ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1257. ಷಿದ್ಗೌರಾದಿಭ್ಯಶ್ಚ। (4.1.41)**

ವೃತ್ತಿ -ಷಿದ್ಭ್ಯಃ ಗೌರಾದಿಭ್ಯಶ್ಚ (ಸ್ತ್ರಿಯಾಮ್) 'ಜೀಷ್'ಸ್ಯಾತ್।

ಗಾರ್ಗ್ಯಾಯಣೀ। ನರ್ತಕೀ। ಗೌರೀ। ಅನಡುಹೀ। ಅನಡ್ವಾಹೀ। ಆಕೃತಿ ಗಣೋಽಯಮ್।

ಪ.ಛೇ–ಷಿದ್ಗೌರಾದಿಭ್ಯಃ, ಚ ।

ಅ.ವೃ.–"ಅನ್ಯತೋ ಙೀಷ್" ಎಂಬ ಸೂತ್ರದಿಂದ 'ಙೀಷ್' ಎಂಬ ಪದವು ಅನುವೃತ್ತವಾಗುತ್ತದೆ. "ಪ್ರಾತಿಪದಿಕಾತ್", "ಪ್ರತ್ಯಯಃ" "ಪರಶ್ಚ" ಮತ್ತು "ಸ್ತ್ರಿಯಾಮ್" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ–ಯಾವ ಶಬ್ದದಲ್ಲಿ 'ಷ್' ಕಾರಕ್ಕೆ 'ಇತ್' ಸಂಜ್ಞೆಯು ಬರುತ್ತದೋ, ಅಂತಹ ಶಬ್ದಗಳ ನಂತರ ಮತ್ತು ಗೌರಾದಿ ಗಣಪಠಿತ ಶಬ್ದಗಳ ಮೇಲೆ ಸ್ತ್ರೀತ್ವ ವಿವಕ್ಷೆ ಇದ್ದಾಗ, 'ಙೀಷ್' ಪ್ರತ್ಯಯವು ಬರುತ್ತದೆ.

'ಙೀಷ್' ನಲ್ಲಿ 'ಙ್' ಕಾರ ಮತ್ತು 'ಷ್' ಕಾರಗಳು 'ಇತ್'ಗಳು ಆಗ 'ಈ ' ಮಾತ್ರ ಉಳಿದಿರುತ್ತದೆ. 'ಗೌರಾದಿ' ಗಣದಲ್ಲಿ ಗೌರ,ಮತ್ಸ್ಯ, ಮನುಷ್ಯ, ಹಯ, ಮೊದಲಾದ ಶಬ್ದಗಳು ಪಠಿತವಾಗಿದ್ದರೂ ಇದು ಆಕೃತಿ ಗಣವಾಗಿದೆ.

ಉದಾ–1. ಗಾರ್ಗ್ಯಾಯಣೀ–ಗರ್ಗ ಶಬ್ದದಮೇಲೆ "ಗರ್ಗಾದಿಭ್ಯೋ ಯಞ್" ಎಂಬ ಸೂತ್ರದಿಂದ 'ಯಞ್(ಯ)' ಪ್ರತ್ಯಯ ಬಂದು, ಗಾರ್ಗ್ಯ ಎಂದಾಗುತ್ತದೆ. ಇದು 'ಯಞಂ'ತವಾಗಿರುವುದರಿಂದ "ಪ್ರಾಚಾಂ ಷ್ಫ ತದ್ಧಿತಃ (4.1.17)" ಎಂಬ ಸೂತ್ರದಿಂದ 'ಷ್ಫ(ಫ)' ಪ್ರತ್ಯಯ ಬಂದು ಅಲ್ಲಿಯ 'ಫ್' ಕಾರಕ್ಕೆ 'ಆಯನ್' ಆದೇಶ ಬಂದು ಫ್+ಅ=ಆಯನ ಎಂದಾಗಿ ಗಾರ್ಗ್ಯ+ಆಯನ ಎಂದಿದ್ದಾಗ, 'ಭ' ಸಂಜ್ಞೆಯಿಂದ ಅಂತ್ಯ 'ಅ' ಕಾರಕ್ಕೆ ಲೋಪ ಬಂದು ಗಾರ್ಗ್ಯ+ಆಯನ=ಗಾರ್ಗ್ಯಾಯನ ಎಂದಾಗುತ್ತದೆ, 'ನ್' ಕಾರಕ್ಕೆ 'ಣತ್ವ(ಣ್)' ಬಂದು ಗಾರ್ಗ್ಯಾಯಣ ಎಂದಾಗುತ್ತದೆ. ಇದು 'ಷಿತ್' ಆಗಿರೋಣದ್ದರಿಂದ "ಷಿದ್ಗೌರಾದಿಭ್ಯಶ್ಚ"ಎಂಬ ಸೂತ್ರದಿಂದ 'ಙೀಷ್(ಈ)' ಬಂದು, ಗಾರ್ಗ್ಯಾಯಣ+ಈ ಎಂದಿದ್ದಾಗ, ಹಿಂದಿನಂತೆ ಅಂತ್ಯ 'ಅ'ಕಾರ ಲೋಪವಾಗಿ ಗಾರ್ಗ್ಯಾಯಣ್+ಈ=ಗಾರ್ಗ್ಯಾಯಣೀ ಎಂದಾಗಿ 'ಸುಪ್(ಸ್)' ಪ್ರತ್ಯಯವನ್ನು ಸೇರಿಸಿದಾಗ, ಗಾರ್ಗ್ಯಾಯಣೀ+ಸ್ ಎಂದಿದ್ದಾಗ "ಹಲ್ಙ್ಯಾದಿಭ್ಯೋ ದೀರ್ಘಾತ್ ಸುತಿಸ್ಯಪೃಕ್ತಂ ಹಲ್" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪವಾಗಿ ಗಾರ್ಗ್ಯಾಯಣೀ ಎಂದೇ ಈ ಕಾರಾಂತ ಸ್ತ್ರೀಲಿಂಗವಾಗಿ ಉಳಿಯುತ್ತದೆ.

ಉದಾ–2. ನರ್ತಕೀ(ನೃತ್ಯಮಾಡುವ ಸ್ತ್ರೀ) 'ನೃತ್' ಧಾತುವಿನಮೇಲೆ "ಶಿಲ್ಪಿನಿ ಷ್ವುನ್" ಎಂಬ ಸೂತ್ರದಿಂದ 'ಷ್ವುನ್' ಪ್ರತ್ಯಯ ಬಂದು, "ಯುವೋರನಾಕೌ" ಎಂಬ ಸೂತ್ರದಿಂದ 'ಅಕ' ಆದೇಶ ಬಂದು ನರ್ತಕ ಎಂದಾಗುತ್ತದೆ. "ಷಿದ್ಗೌರಾದಿಭ್ಯಶ್ಚ (4.1.41)"ಎಂಬ ಸೂತ್ರದಿಂದ 'ಙೀಷ್(ಈ)' ಬಂದು, ನರ್ತಕ+ಈ ಎಂದಿದ್ದಾಗ ಹಿಂದಿನಂತೆ ಅಂತ್ಯ 'ಅ' ಕಾರಕ್ಕೆ ಲೋಪ ಬಂದು ನರ್ತಕ್+ಈ=ನರ್ತಕೀ ಎಂದು ರೂಪವಾಗುತ್ತದೆ. ಙ್ಯನ್ತವಾದ ನರ್ತಕೀ ಶಬ್ದದಮೇಲೆ 'ಸುಪ್(ಸ್)' ಪ್ರತ್ಯಯವನ್ನು ಸೇರಿಸಿದಾಗ ಹಿಂದಿನಂತೆ 'ಸ್' ಕಾರ ಲೋಪವಾಗಿ ನರ್ತಕೀ ಎಂದೇ ಉಳಿಯುತ್ತದೆ.

ಉದಾ–3. ಗೌರೀ(ಪಾರ್ವತೀ)–ಇದು ಗೌರಾದಿ ಗಣಪಠಿತವಾಗಿದೆ "ಷಿದ್ಗೌರಾದಿಭ್ಯಶ್ಚ

(4.1.41)"ಎಂಬ ಸೂತ್ರದಿಂದ 'ಜೀಷ್(ಈ)' ಬಂದು, ಗೌರ+ಈ ಎಂದಿದ್ದಾಗ 'ಭ' ಸಂಜ್ಞೆ ಬಂದು ಹಿಂದಿನಂತೆ ಅಂತ್ಯ 'ಅ' ಕಾರಕ್ಕೆ ಲೋಪ ಬಂದು ಗೌರ್+ಈ=ಗೌರೀ ಎಂದಿದ್ದಾಗ, 'ಸುಪ್(ಸ್)' ಪ್ರತ್ಯಯವನ್ನು ಸೇರಿಸಿದಾಗ ಹಿಂದಿನಂತೆ 'ಸ್' ಕಾರ ಲೋಪವಾಗಿ ಗೌರೀ ಎಂದೇ ಉಳಿಯುತ್ತದೆ.

ಉದಾ-4.ಅನಡುಹೀ 5.ಅನಡ್ವಾಹೀ (ಆಕಳು) 'ಅನಡುಃ' ಶಬ್ದದಮೇಲೆ ಸ್ತ್ರೀತ್ವ ವಿವಕ್ಷೆಯಲ್ಲಿ ಗೌರಾದಿಗಣ ಪಠಿತವಾದ ಈ ಶಬ್ದಕ್ಕೆ "ಷಿದ್ಗೌರಾದಿಭ್ಯಶ್ಚ (4.1.41)"ಎಂಬ ಸೂತ್ರದಿಂದ 'ಜೀಷ್(ಈ)' ಬಂದು, ಅನಡುಹ್+ಈ ಎಂದಿದ್ದಾಗ, "ಆಮನಡುಹಃ ಸ್ತ್ರಿಯಾಂ ವಾ" ಎಂಬ ವಾರ್ತಿಕದಿಂದ ವಿಕಲ್ಪವಾಗಿ 'ಆಹ್' ಆಗಮವು ಬಂದು ಅನಡು+ಆಹ್+ಈ ಎಂದಾಗಿ 'ಯಣ್' ಸಂಧಿಯಿಂದ ಅನಡ್ವಾಹೀ ಎಂದು ರೂಪವಾಗುತ್ತದೆ. ಇದಕ್ಕೂ 'ಸುಪ್(ಸ್) ಪ್ರತ್ಯಯ ಸೇರಿಸಿದಮೇಲೆ ಹಿಂದಿನಂತೆ 'ಸ್' ಕಾರ ಲೋಪವಾಗಿ ಅನಡ್ವಾಹೀ ಎಂದೇ ಉಳಿಯುತ್ತದೆ. 'ಆಹ್' ಬಾರದಿದ್ದಾಗ ಅನಡುಹ್+ಈ=ಅನಡುಹೀ ಎಂದು ರೂಪವಾಗುತ್ತದೆ. ನಂತರ 'ಸುಪ್(ಸ್)' ಪ್ರತ್ಯಯವನ್ನು ಸೇರಿಸಿದಾಗ, ಹಿಂದಿನಂತೆ 'ಸ್' ಕಾರ ಲೋಪವಾಗಿ ಅನಡುಹೀ ಎಂದೇ ಉಳಿಯುತ್ತದೆ.

**(ಜೀಪ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1258. ವಯಸಿ ಪ್ರಥಮೇ।(4.1.20)**

ವೃತ್ತಿ-ಪ್ರಥಮ-ವಯೋ ವಾಚಿನಃ ಅದನ್ತಾತ್ ಸ್ತ್ರಿಯಾಂ ಜೀಪ್ ಸ್ಯಾತ್। ಕುಮಾರೀ।

ಅ.ವ್ಯ.-"ಋನ್ನೇಭ್ಯೋ ಜೀಪ್" ಎಂಬ ಸೂತ್ರದಿಂದ 'ಜೀಪ್' ಎಂಬ ಪದವು ಅನುವೃತ್ತವಾಗುತ್ತದೆ. "ಪ್ರಾತಿಪದಿಕಾತ್", "ಪ್ರತ್ಯಯಃ" "ಪರಶ್ಚ" ಮತ್ತು "ಸ್ತ್ರಿಯಾಮ್" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ವಯಸ್ಸಿನ ಪ್ರಥಮ ಹಂತವನ್ನು ಅಂದರೆ ಕೌಮಾರಾವಸ್ಥೆಯನ್ನು ತಿಳಿಸುವ ಶಬ್ದಗಳನಂತರ ಸ್ತ್ರೀತ್ವ ವಿವಕ್ಷೆ ಇದ್ದಾಗ 'ಜೀಪ್' ಪ್ರತ್ಯಯವು ಬರುತ್ತದೆ. (ಜೀವನದಲ್ಲಿ ಕೌಮಾರ, ಯೌವನ ಮತ್ತು ವಾರ್ಧಕ್ಯವೆಂದು ಮೂರು ಅವಸ್ಥೆಗಳಿರುತ್ತವೆ).

ಉದಾ. 1 -ಕುಮಾರೀ (ಬಾಲ್ಯಾವಸ್ಥೆಯಲ್ಲಿರುವ ಹೆಣ್ಣುಮಗಳು)-ಸ್ತ್ರೀತ್ವ ವಿವಕ್ಷೆ ಇದ್ದಾಗ, ಪ್ರಕೃತ ಸೂತ್ರದಿಂದ 'ಕುಮಾರ ' ಶಬ್ದದ ಮೇಲೆ 'ಜೀಪ್(ಈ)' ಪ್ರತ್ಯಯ ಬಂದು ಕುಮಾರ+ಈ ಎಂದಿದ್ದಾಗ, 'ಭ' ಸಂಜ್ಞಕ ಅಂತ್ಯ 'ಅ' ಕಾರಕ್ಕೆ "ಯಸ್ಯೇತಿ ಚ" ಎಂಬುದರಿಂದ ಲೋಪ ಬಂದು ಕುಮಾರ್+ಈ=ಕುಮಾರೀ ಎಂದು ರೂಪವಾಗುತ್ತದೆ.

**(ಜೀಪ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1259. ದ್ವಿಗೋಃ (4.1.21)**

ವೃತ್ತಿ-ಅದನ್ತಾತ್ ದ್ವಿಗೋಃ ಜೀಪ್ ಸ್ಯಾತ್।

ತ್ರಿಲೋಕೀ। ಅಜಾದಿತ್ವಾತ್ ತ್ರಿಫಲಾ। ತ್ರ್ಯನೀಕಾ ಸೇನಾ।

ಅ.ವೃ–"ಋನ್ನೇಭ್ಯೋ ಜೀಪ್" ಎಂಬ ಸೂತ್ರದಿಂದ 'ಜೀಪ್' ಎಂಬ ಪದವು ಅನುವೃತ್ತವಾಗುತ್ತದೆ. "ಅತಃ","ಪ್ರಾತಿಪದಿಕಾತ್", "ಪ್ರತ್ಯಯಃ" "ಪರಶ್ಚ" ಮತ್ತು "ಸ್ತ್ರಿಯಾಮ್" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ–ಅದನ್ತವಾದ ದ್ವಿಗು ಸಮಾಸದ ನಂತರ ಸ್ತ್ರೀತ್ವ ವಿವಕ್ಷೆ ಇರುವಾಗ, 'ಜೀಪ್' ಪ್ರತ್ಯಯ ಬರುತ್ತದೆ. "ಸಂಖ್ಯಾಪೂರ್ವೋ ದ್ವಿಗುಃ" ಎಂಬಸೂತ್ರದಿಂದ ತ್ರಿಲೋಕ ಎಂಬ ಶಬ್ದವು 'ದ್ವಿಗು' ಸಮಾಸವಾಗಿದೆ. ಆದ್ದರಿಂದ ಸ್ತ್ರೀತ್ವ ವಿವಕ್ಷೆಯಲ್ಲಿ ಪ್ರಕೃತ ಸೂತ್ರದಿಂದ 'ಜೀಪ್(ಈ)' ಬಂದು ತ್ರಿಲೋಕ+ಈ ಎಂದಿರುತ್ತದೆ. ಹಿಂದಿನಂತೆ 'ಭ' ಸಂಜ್ಞಕ ಅಂತ್ಯ 'ಅ' ಕಾರಕ್ಕೆ "ಯಸ್ಯೇತಿ ಚ" ಎಂಬುದರಿಂದ ಲೋಪ ಬಂದು, ತ್ರಿಲೋಕ್+ಈ=ತ್ರಿಲೋಕೀ ಎಂದಾಗುತ್ತದೆ. ಇದಕ್ಕೆ 'ಸುಪ್(ಸ್)' ಪ್ರತ್ಯಯ ಸೇರಿಸಿದಾಗಲೂ "ಹಲ್ಙ್ಯಾಭ್ಯೋ ದೀರ್ಘಾತ್ ಸುತಿಸ್ಯಪೃಕ್ತಂ ಹಲ್" ಎಂಬ ಸೂತ್ರದಿಂದ 'ಸ್' ಕಾರಕ್ಕೆ ಲೋಪ ಬಂದು ತ್ರಿಲೋಕೀ ಎಂದೇ ಉಳಿಯುತ್ತದೆ.

ಉದಾ–2. ತ್ರಿಫಲಾ–ತ್ರಿಫಲ ಶಬ್ದವು ಅಜಾದಿಗಣ ಪಠಿತವಾಗಿರುವದರಿಂದ ಪ್ರಕೃತ ಸೂತ್ರದಿಂದ ಬರಬೇಕಾದ 'ಜೀಪ್(ಈ)' ನ್ನು ಬಾಧಿಸಿ "ಅಜಾದ್ಯತಷ್ಟಾಪ್" ಎಂಬ ಸೂತ್ರದಿಂದ 'ಟಾಪ್(ಆ) ಬಂದು ತ್ರಿಫಲ+ಆ=ತ್ರಿಫಲಾ ಎಂದು ರೂಪವಾಗುತ್ತದೆ.

ಉದಾ–3. ತ್ರ್ಯನೀಕಾ (ಸೇನಾ= ಮೂರು ತರಹದ ಸೇನೆಗಳ ಸಮೂಹ)– 'ತ್ರಯಾಣಾಂ ಅನೀಕಾನಾಂ ಸಮಾಹಾರಃ' ಎಂದು ವಿಗ್ರಹ. ಈ ಶಬ್ದವು ಅಜಾದಿಗಣ ಪಠಿತವಾಗಿರುವದರಿಂದ ಪ್ರಕೃತ ಸೂತ್ರವನ್ನು ಬಾಧಿಸಿ "ಅಜಾದ್ಯತಷ್ಟಾಪ್" ಎಂಬ ಸೂತ್ರದಿಂದ 'ಟಾಪ್(ಆ)' ಬಂದು ತ್ರ್ಯನೀಕ+ಆ (ಸೇನಾ)=ತ್ರ್ಯನೀಕಾ ಸೇನಾ ಎಂದು ರೂಪವಾಗುತ್ತದೆ.

**(ಜೀಪ್ ಮತ್ತು 'ನ್' ಕಾರಾದೇಶಗಳನ್ನು ವಿಧಿಸುವ ಸೂತ್ರ)**

**ಸೂತ್ರ–1260. ವರ್ಣಾದನುದಾತ್ತಾತ್ತೋಪಧಾತ್ತೋ ನಃ। (4.1.39)**

ವೃತ್ತಿ–ವರ್ಣವಾಚೀ ಯಃ ಅನುದಾತ್ತಾನ್ತಃ ತೋಪಧಃ ತದನ್ತಾತ್ ಅನುಪಸರ್ಜನಾತ್ ಪ್ರಾತಿಪದಿಕಾತ್ ವಾ 'ಜೀಪ್', ತಕಾರಸ್ಯ ನಕಾರಾದೇಶಶ್ಚ। ಏನೀ। ಏತಾ। ರೋಹಿಣೀ, ರೋಹಿತಾ।

ಪ.ಛೇ–ವರ್ಣಾತ್, ಅನುದಾತ್ತಾತ್ ತೋಪಧಾತ್, ತಃ, ನಃ।

ಅ.ವೃ–"ಋನ್ನೇಭ್ಯೋ ಜೀಪ್" ಎಂಬ ಸೂತ್ರದಿಂದ 'ಜೀಪ್' ಎಂಬ ಪದವೂ ಮತ್ತು "ಮನೋರೌ ವಾ" ಎಂಬ ಸೂತ್ರದಿಂದ, ವಾ ಎಂಬ ಪದವೂ ಅನುವೃತ್ತವಾಗುತ್ತವೆ. "ಅನುಪಸರ್ಜನಾತ್" "ಪ್ರಾತಿಪದಿಕಾತ್", "ಪ್ರತ್ಯಯಃ" "ಪರಶ್ಚ" ಮತ್ತು "ಸ್ತ್ರಿಯಾಮ್" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ–ವರ್ಣವಾಚಿಯಾದ ಯಾವ ಅನುದಾತ್ತ ತಕಾರೋಪಧೆ(ತ–ಕಾರವನ್ನು ಉಪಧೆಯಾಗಿ)ಯುಳ್ಳ, ತದನ್ತವಾದ ಅನುಪಸರ್ಜನ ಪ್ರಾತಿಪದಿಕದನಂತರ ಸ್ತ್ರೀತ್ವ ವಿವಕ್ಷೆಯಲ್ಲಿ, ವಿಕಲ್ಪವಾಗಿ 'ಜೀಪ್' ಪ್ರತ್ಯಯವು, ಹಾಗೆಯೇ ಶಬ್ದದಲ್ಲಿರುವ 'ತ್'

ಕಾರದ ಸ್ಥಾನದಲ್ಲಿ 'ನ್' ಕಾರಾದೇಶವು ಬರುತ್ತದೆ.

'ಙೀಪ್(ಈ)' ಬರುವಪಕ್ಷದಲ್ಲಿ ಮಾತ್ರ 'ನ್' ಕಾರಾದೇಶವು ಬರುತ್ತದೆ.

ಸೂತ್ರದಲ್ಲಿರುವ 'ವರ್ಣ' ಎಂಬುದರಿಂದ ಬಿಳಿ, ಕೆಂಪು ಮೊದಲಾದ ಬಣ್ಣಗಳನ್ನು ಗ್ರಹಿಸಬೇಕು.

ಉದಾ-1. ಏನೀ (ಬೇರೆಬೇರೆ ಬಣ್ಣಗಳುಳ್ಳ)-ಏತ+ಙೀಪ್(ಈ) ಎಂದಿದ್ದಾಗ, ಪ್ರಕೃತ ಸೂತ್ರದಿಂದ 'ತ್' ಕಾರಕ್ಕೆ 'ನ್' ಕಾರ ಬಂದು ಏನ (ಏನ್+ಅ)=ಏನ+ ಈ ಎಂದಿದ್ದಾಗ, ಹಿಂದಿನಂತೆ 'ಭ' ಸಂಜ್ಞಕ ಅಂತ್ಯ 'ಅ' ಕಾರಕ್ಕೆ "ಯಸ್ಯೇತಿ ಚ" ಎಂಬುದರಿಂದ ಲೋಪ ಬಂದು, ಏನ್+ಈ=ಏನೀ ಎಂದು ರೂಪವಾಗುತ್ತದೆ.

ಉದಾ-2.ಏತಾ(ಬೇರೆಬೇರೆ ಬಣ್ಣಗಳುಳ್ಳ) -'ಙೀಪ್(ಈ)' ಬಾರದ ಪಕ್ಷದಲ್ಲಿ ಏತ ಶಬ್ದದಮೇಲೆ "ಅಜಾದ್ಯತಷ್ಟಾಪ್" ಎಂಬ ಸೂತ್ರದಿಂದ 'ಟಾಪ್(ಆ)' ಬಂದು ಏತ+ಆ ಎಂದಿದ್ದಾಗ ಸವರ್ಣದೀರ್ಘ ಸಂಧಿಯಿಂದ ಏತಾ ಎಂದಾಗುತ್ತದೆ.

ಉದಾ-3. ರೋಹಿಣೀ 4. ರೋಹಿತಾ (ಕೆಂಪುಬಣ್ಣವುಳ್ಳವಳು)-ಉದಾಹರಣೆ 3 ರಲ್ಲಿ ರೋಹಿತ ಶಬ್ದಕ್ಕೆ 'ಙೀಪ್(ಈ)' ರೋಹಿತ ಶಬ್ದದ 'ತ್' ಕಾರಕ್ಕೆ 'ನ್' ಕಾರ ಬಂದಿದೆ. ಹಿಂದಿನ ಪ್ರಕ್ರಿಯೆಯಂತೆ 'ಙೀಪ್(ಈ)' ಸೇರಿಸಿದಾಗ, ರೋಹಿನ್+ಈ ಎಂದಾಗಿ ಣತ್ವ ಬಂದು ರೋಹಿಣೀ ಎಂದು ರೂಪವಾಗಿದೆ.

ಇನ್ನು ಣತ್ವ ಬಾರದ ಪಕ್ಷದಲ್ಲಿ ಉದಾ-4. ರಲ್ಲಿ ಹಿಂದಿನಂತೆ ಟಾಪ್(ಆ) ಬಂದು ರೋಹಿತ+ಆ=ರೋಹಿತಾ ಎಂದು ರೂಪವಾಗುತ್ತದೆ.

**(ವೈಕಲ್ಪಿಕವಾಗಿ 'ಙೀಷ್' ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1261. ವೋತೋ ಗುಣವಚನಾತ್।(4.1.44)**

ವೃತ್ತಿ-ಉದನ್ತಾತ್ ಗುಣವಾಚಿನಃ ವಾ ಙೀಷ್ ಸ್ಯಾತ್। ಮೃದ್ವೀ, ಮೃದುಃ।

ಪ.ಛೇ-ವಾ, ಉತಃ, ಗುಣವಚನಾತ್।

ಅ.ವೃ.-"ಅನ್ಯತೋ ಙೀಷ್" ಎಂಬ ಸೂತ್ರದಿಂದ 'ಙೀಷ್' ಎಂಬ ಪದವೂ, "ಋನ್ನೇಭ್ಯೋ ಙೀಪ್" ಎಂಬ ಸೂತ್ರದಿಂದ 'ಙೀಪ್' ಎಂಬ ಪದವೂ ಮತ್ತು "ಮನೋರೌ ವಾ" ಎಂಬ ಸೂತ್ರದಿಂದ, ವಾ ಎಂಬ ಪದವೂ ಅನುವೃತ್ತವಾಗುತ್ತವೆ. "ಪ್ರಾತಿಪದಿಕಾತ್", "ಪ್ರತ್ಯಯಃ" "ಪರಶ್ಚ" ಮತ್ತು "ಸ್ತ್ರಿಯಾಮ್" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ಹ್ರಸ್ವ ಉ-ಕಾರಾನ್ತ ಶಬ್ದದ ನಂತರ ಸ್ತ್ರೀತ್ವ ವಿವಕ್ಷೆ ಇದ್ದಾಗ, ವೈಕಲ್ಪಿಕವಾಗಿ 'ಙೀಷ್(ಈ)' ಪ್ರತ್ಯಯವು ಬರುತ್ತದೆ.

ಉದಾ-1.ಮೃದ್ವೀ-ಉದಾ-2. ಮೃದುಃ।(ಮೃದುವಾದ)-"ವೋತೋ ಗುಣವಚನಾತ್" ಎಂಬ ಸೂತ್ರದಿಂದ ಹ್ರಸ್ವ 'ಉ'ಕಾರಾಂತ ಮೃದು ಶಬ್ದದಮೇಲೆ "ಙೀಷ್(ಈ)" ಬಂದು, ಮೃದು+ಈ ಎಂದಿದ್ದಾಗ, 'ಯಣ್' ಸಂಧಿಯಾಗಿ ಮೃದ್ವೀ

ಎಂದು ರೂಪವಾಗುತ್ತದೆ. ಇದಕ್ಕೆ ಸುಪ್ ಪ್ರತ್ಯಯ ಸೇರಿಸಿದಮೇಲೆಯೂ ಹಿಂದಿನಂತೆ 'ಸ್' ಕಾರ ಲೋಪವಾಗಿ ಮೃದ್ವೀ ಎಂದೇ ಉಳಿಯುತ್ತದೆ. ಎರಡನೇ ಉದಾಹರಣೆಯಲ್ಲಿ 'ಙೀಷ್(ಈ)'ಬಾರದೇ ಇರುವುದರಿಂದ ಕೇವಲ 'ಸುಪ್(ಸ್)' ಪ್ರತ್ಯಯವನ್ನು ಸೇರಿಸಿದಾಗ ರುತ್ವ–ವಿಸರ್ಗಗಳಿಂದ ಮೃದುಃ ಎಂದು ವೈಕಲ್ಪಿಕ ರೂಪವು ಬರುತ್ತದೆ. ಇದನ್ನು ಧೇನು ಶಬ್ದದಂತೆ ನಡೆಸಬೇಕು.

**('ಙೀಷ್' ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ–1262. ಬಹ್ವಾದಿಭ್ಯಶ್ಚ (4.1.45)**

ವೃತ್ತಿ–ಏಭ್ಯೋ ವಾ ಙೀಷ್ ಸ್ಯಾತ್। ಬಹ್ವೀ, ಬಹುಃ।

ವಾ॥ 1॥ ಕೃದಿಕಾರಾದಕ್ತಿನಃ। ರಾತ್ರಿಃ, ರಾತ್ರೀ।

ವಾ॥ 2॥ ಸರ್ವತೋಽಕ್ತಿನ್ನರ್ಥಾತ್ ಇತ್ಯೇಕೇ।

ಶಕಟೀ, ಶಕಟಿಃ।

ಪ.ಛೇ–ಬಹ್ವಾದಿಭ್ಯಃ, ಚ।

ಅ.ವೃ–"ವೋತೋ ಗುಣವಚನಾತ್" ಎಂಬ ಸೂತ್ರದಿಂದ 'ವಾ' ಎಂಬ ಪದವೂ ಮತ್ತು "ಅನ್ಯತೋ ಙೀಷ್" ಎಂಬ ಸೂತ್ರದಿಂದ 'ಙೀಷ್' ಎಂಬ ಪದವೂ ಅನುವೃತ್ತವಾಗುತ್ತದೆ. "ಪ್ರಾತಿಪದಿಕಾತ್", "ಪ್ರತ್ಯಯಃ" "ಪರಶ್ಚ" ಮತ್ತು "ಸ್ತ್ರಿಯಾಮ್" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ–'ಬಹು' ಎಂಬುದನ್ನು ಆದಿಯಲ್ಲಿ ಉಳ್ಳ, (ಬಹ್ವಾದಿ)ಗಣಪಠಿತ ಪ್ರಾತಿಪದಿಕಗಳಮೇಲೆ ಸ್ತ್ರೀತ್ವ ವಿವಕ್ಷೆಯಲ್ಲಿ ವಿಕಲ್ಪದಿಂದ 'ಙೀಷ್' ಪ್ರತ್ಯಯವು ಬರುತ್ತದೆ.

ಉದಾ–1.ಬಹ್ವೀ, ಉದಾ–2. ಬಹುಃ (ಬಹಳ ಎಂಬ ಅರ್ಥದಲ್ಲಿ ಸ್ತ್ರೀಲಿಂಗದಲ್ಲಿ ವಿಶೇಷಣವಾಗಿರುವ) –ಮೊದಲನೇ ಉದಾಹರಣೆಯಲ್ಲಿ ಪ್ರಕೃತ ಸೂತ್ರದಿಂದ, ಹ್ರಸ್ವ'ಉ' ಕಾರಾಂತವಾದ ಬಹು ಶಬ್ದದಮೇಲೆ 'ಙೀಷ್(ಈ)' ಬರುತ್ತದೆ. ಬಹು+ಈ ಎಂದಿದ್ದಾಗ "ಯಣ್" ಸಂಧಿಯಿಂದ ಬಹ್ವೀ ಎಂದಾಗಿ 'ಸುಪ್(ಸ್) ಪ್ರತ್ಯಯವನ್ನು ಸೇರಿಸಿದಮೇಲೆಯೂ ಹಿಂದಿನಂತೆ 'ಸ್' ಕಾರ ಲೋಪವಾಗಿ ಬಹ್ವೀ ಎಂದೇ ಉಳಿಯುತ್ತದೆ. ಎರಡನೇ ಉದಾಹರಣೆಯಲ್ಲಿ ಙೀಷ್(ಈ)' ಬಾರದೇ ಇರುವುದರಿಂದ ಬಹು+ಸುಪ್(ಸ್) ಎಂದಿದ್ದಾಗ ರುತ್ವ–ವಿಸರ್ಗಗಳಿಂದ ವೈಕಲ್ಪಿಕವಾಗಿ ಬಹುಃ ಎಂದು ರೂಪವಾಗುತ್ತದೆ. ಇದೂ 'ಉ' ಕಾರಾಂತ ಸ್ತ್ರೀಲಿಂಗ ಶಬ್ದವೆಂದು ತಿಳಿಯಬೇಕು.

ವಾ॥ 1 ॥ ಕೃದಿಕಾರಾದಕ್ತಿನಃ।

ರಾತ್ರಿಃ, ರಾತ್ರೀ।

ಪ.ಛೇ–ಕೃತ್, ಇಕಾರಾತ್, ಅಕ್ತಿನಃ।

ಅರ್ಥ–'ಕ್ತಿನ್'ಗಿಂತ ಭಿನ್ನವಾದ ಕೃತ್ ಪ್ರಯಯಕ್ಕೆ ಸಂಬಂಧಿಸಿದ 'ಇ'ಕಾರಾಂತವಾದ ಪ್ರಾತಿಪದಿಕದ ಮೇಲೆ ವಿಕಲ್ಪವಾಗಿ 'ಙೀಷ್'(ಈ) ಬರುತ್ತದೆ.

ಉದಾ–1 ರಾತ್ರಿಃ, 2. ರಾತ್ರೀ–(ರಾತ್ರಿ)–'ರಾ' ಧಾತುವಿಗಿಂದ "ರಾಶದಿಭ್ಯಾಮ್ ತ್ರಿಪ್" ಎಂಬ ಔಣಾದಿಕ ಸೂತ್ರದಿಂದ 'ತ್ರಿಪ್(ತ್ರಿ)' ವನ್ನು ಸೇರಿಸೋಣದ್ದರಿಂದ ಉದಾ–1 ರಲ್ಲಿ ರಾ+ತ್ರಿ ಎಂದಿದ್ದಾಗ, ರಾತ್ರಿ ಎಂದಾಗುತ್ತದೆ ಇದು 'ಕೃತ್' ಆಗಿರುವ 'ಇ' ಕಾರಾಂತ ಶಬ್ದವಾಗಿದೆ. ಇಲ್ಲಿ ವೈಕಲ್ಪಿಕವಾಗಿ 'ಜೀಷ್(ಈ)' ಬಾರದೇ ಇದ್ದದ್ದರಿಂದ ರಾತ್ರಿ ಎಂದೇ ಇದ್ದು, ಸುಪ್(ಸ್) ಪ್ರತ್ಯಯಸೇರಿಸಿದಮೇಲೆ ರುತ್ವ–ವಿಸರ್ಗಗಳಿಂದ ರಾತ್ರಿಃ ಎಂದು ರೂಪವಾಗುತ್ತದೆ.

ಉದಾ–2ರಲ್ಲಿ ಜೀಷ್(ಈ) ಬಂದ ಪಕ್ಷದಲ್ಲಿ ರಾತ್ರಿ+ಜೀಷ್(ಈ) ಎಂದಿದ್ದಾಗ, ರಾತ್ರೀ ಎಂದಾಗಿ ಸುಪ್ ಪ್ರತ್ಯಯ ಸೇರಿಸಿದಮೇಲೂ ಹಿಂದಿನಂತೆ ರಾತ್ರೀ ಎಂದೇ ಉಳಿಯುತ್ತದೆ.

ಅಕ್ತಿನಃ ಎಂದು ಹೇಳಿರುವುದರಿಂದ ಕ್ತಿನ್ ಪ್ರತ್ಯಯ ಬಂದಾಗ ಅದು 'ಇ'ಕಾರಾಂತ ಕೃದಂತವಾಗಿದ್ದರೂ ವೈಕಲ್ಪಿಕವಾಗಿ ಜೀಷ್(ಈ) ಬರುವುದಿಲ್ಲವೆಂದು ತಿಳಿಯಬೇಕು.

ವಾ॥ 2॥ ಸರ್ವತೋಽಕ್ತಿನ್ನರ್ಥಾತ್ ಇತ್ಯೇಕೇ। ಶಕಟೀ, ಶಕಟಿಃ॥

ಪ. ಛೇ–ಸರ್ವತಃ ಅಕ್ತಿನ್ನರ್ಥಾತ್ ಇತಿ ಏಕೆ।

ಅರ್ಥ–ಎಲ್ಲಕಡೆಗೂ 'ಇ'ಕಾರಾಂತ ಕೃತ್ ಪ್ರತ್ಯಯವಾಗಿದ್ದರೂ ಅದರ ಮೇಲೆ ಸ್ತ್ರೀತ್ವ ವಿವಕ್ಷೆಯಲ್ಲಿ 'ಜೀಷ್(ಈ)' ಪ್ರತ್ಯಯವು ವೈಕಲ್ಪಿಕವಾಗಿ ಬರುತ್ತದೆ.

ಉದಾ–1.ಶಕಟೀ,2. ಶಕಟಿಃ–ಶಕಟಿ ಶಬ್ದವು ಅವ್ಯುತ್ಪನ್ನ ಪ್ರಾತಿಪದಿಕವಾಗಿರು ವುದರಿಂದ ಮೊದಲನೇ ವಾರ್ತಿಕದಿಂದ 'ಜೀಷ್ಈ' ಬಾರದೇ ಇರುವುದರಿಂದ ಈ ಎರಡನೇ ವಾರ್ತಿಕವು ರಚಿಸಲಾಗಿದೆ. ಇದು ಈ ಎರಡು ಉದಾಹರಣೆಗಳಲ್ಲೂ ಶಕಟಿ ಶಬ್ದವು 'ಇ' ಕಾರಾಂತವಾಗಿರುವುದರಿಂದ ಪ್ರಕೃತ ವಾರ್ತಿಕದಿಂದ ಮೊದಲನೇ ಉದಾಹರಣೆಯಲ್ಲಿ ಜೀಷ್(ಈ) ಬಂದ ಪಕ್ಷದಲ್ಲಿ ಶಕಟೀ ಎಂದೂ, ಎರಡನೇ ಉದಾಹರಣೆಯಲ್ಲಿ ಅಂದರೆ ಜೀಷ್(ಈ) ಬಾರದ ಪಕ್ಷದಲ್ಲಿ ಶಕಟಿಃ ಎಂದು ರೂಪವಾಗುತ್ತದೆ.

**(ಜೀಷ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ –1263. ಪುಂಯೋಗಾದಾಖ್ಯಾಯಾಮ್।(4.1.48)**

ವೃತ್ತಿ–ಯಾ ಪುಮಾಖ್ಯಾ ಪುಂಯೋಗಾತ್ ಸ್ತ್ರಿಯಾಂ ವರ್ತತೇ ತತೋ ಜೀಷ್। ಗೋಪಸ್ಯ ಸ್ತ್ರೀ ಗೋಪೀ।

ವಾ॥ ಪಾಲಕಾನ್ತಾನ್ನ। ಗೋಪಾಲಿಕಾ। ಅಶ್ವಪಾಲಿಕಾ।

ಪ. ಛೇ–ಪುಂಯೋಗಾತ್, ಆಖ್ಯಾಯಾಮ್।

ಅ.ವೃ–"ಪ್ರಾತಿಪದಿಕಾತ್", "ಪ್ರತ್ಯಯಃ" "ಪರಶ್ಚ" ಮತ್ತು "ಸ್ತ್ರಿಯಾಮ್" ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ–ಪುರುಷವಾಚಕವಾಗಿದ್ದು ಪುರುಷನ ಸಂಬಂಧದ್ವಾರಾ ಸ್ತ್ರೀ ವಾಚಕ

ಶಬ್ದದಮೇಲೆ ಜೀಷ್(ಈ) ಪ್ರತ್ಯಯವು ಬರುತ್ತದೆ.

ಉದಾ–ಗೋಪೀ–(ಗೋಪನ ಹೆಂಡತಿ)–'ಗೋಪ' ಶಬ್ದಕ್ಕೆ ಗೋಗಳನ್ನು ರಕ್ಷಿಸುವವನು ಎಂದರ್ಥ. ಗೋಪನ ಸ್ತ್ರೀ ಆಗುವುದರಿಂದ (ಪುರುಷಸಂಬಂಧ ಇರುವುದರಿಂದ) ಅವನ ಹೆಂಡತಿಯೂ ಗೋಪ ಶಬ್ದದಿಂದಲೇ ಹೇಳಲ್ಪಡುತ್ತಾಳೆ. ಆದ್ದರಿಂದ ಗೋಪ ಶಬ್ದದಮೇಲೆ ಜೀಷ್(ಈ) ಬಂದು ಗೋಪ+ಈ ಎಂದಿದ್ದಾಗ, "ಯಸ್ಯೇತಿಚ" ಎಂಬ ಸೂತ್ರದಿಂದ ಗೋಪದಲ್ಲಿನ ಅಂತ್ಯ 'ಅ'ಕಾರ ಲೋಪವಾಗಿ ಗೋಪ್+ಈ=ಗೋಪೀ ಎಂದು ರೂಪವಾಗುತ್ತದೆ ಇದಕ್ಕೆ ಸುಪ್(ಸ್) ಪ್ರತ್ಯಯ ಸೇರಿಸಿದಮೇಲೆ ಹಿಂದಿನಂತೆ 'ಸ್' ಕಾರ ಲೋಪವಾಗಿ ಗೋಪೀ ಎಂದೇ ಉಳಿಯುತ್ತದೆ.

ವಿಶೇಷ: ಇಲ್ಲಿ ಗೋಪೀ ಶಬ್ದವಾಚ್ಯ ಸ್ತ್ರೀಯು ಗೋಗಳನ್ನು ಕಾಯದಿದ್ದರೂ ಗೋಪನ ಹೆಂಡತಿಯಾಗಿರೋಣದ್ದರಿಂದ ಗೋಪ ಶಬ್ದದಿಂದಲೇ ಸ್ತ್ರೀ ಲಿಂಗದಲ್ಲಿ ಕರೆಯಲ್ಪಡುತ್ತಾಳೆ.

ವಾ॥ ಪಾಲಕಾನ್ತಾನ್ನ। ಗೋಪಾಲಿಕಾ। ಅಶ್ವಪಾಲಿಕಾ।

ಪ.ಛೇ–ಪಾಲಕಾನ್ತಾತ್ ನ।

ಅರ್ಥ–ಪಾಲಕ ಶಬ್ದವನ್ನು ಕೊನೆಯಲ್ಲಿ ಉಳ್ಳಂಥ ಶಬ್ದದಮೇಲೆ ಸ್ತ್ರೀತ್ವ ವಿವಕ್ಷೆಯಲ್ಲಿ ಪುರುಷ ಸಂಬಂಧದಿಂದ ಸ್ತ್ರೀ ವಾಚಕವಾಗಿ ಪ್ರಯೋಗಿಸಲ್ಪಟ್ಟಿದ್ದರೂ ಜೀಷ್(ಈ) ಬರುವುದಿಲ್ಲ.

ಉದಾ–1. ಗೋಪಾಲಿಕಾ 2. ಅಶ್ವಪಾಲಿಕಾ–ಈ ಎರಡು ಉದಾಹರಣೆಗಳಲ್ಲಿಯೂ ಪುರುಷ ಸಂಬಂಧದಿಂದ ಸ್ತ್ರೀ ವಾಚಕ ಶಬ್ದದವಾಗಿದ್ದರೂ ಜೀಷ್(ಈ) ಬಾರದೇ ಟಾಪ್(ಆ) ಪ್ರತ್ಯವೇ ಬಂದಿದೆ. "ಗೋಪಾಲಕಸ್ಯ ಸ್ತ್ರೀ, ಅಶ್ವಪಾಲಕಸ್ಯ ಸ್ತ್ರೀ" ಎಂದು ವಿಗ್ರಹ. ಗೋಪಾಲಕ+ಟಾ(ಆ), ಮತ್ತು ಅಶ್ವಪಾಲಕ+ಟಾಪ್(ಆ) ಎಂದಿದ್ದಾಗ, ಮುಂಬರುವ ಸೂತ್ರದಿಂದ 'ಕ' ಕಾರ ಪೂರ್ವದಲ್ಲಿರುವ 'ಅ' ಕಾರಕ್ಕೆ 'ಇ' ಕಾರ ಬಂದು ಗೋಪಾಲಿಕಾ , ಅಶ್ವಪಾಲಿಕಾ ಎಂದು ರೂಪಗಳಾಗುತ್ತವೆ.

**(ಇತ್ ಆದೇಶವನ್ನು ವಿಧಿಸುವ ಸೂತ್ರ)**

**ಸೂತ್ರ–1264. ಪ್ರತ್ಯಯಸ್ಥಾತ್ ಕಾತ್ಪೂರ್ವಸ್ಯಾತ ಇದಾಪ್ಯಸುಪಃ॥ (7.3.44)**

ವೃತ್ತಿ–ಪ್ರತ್ಯಯಸ್ಥಾತ್ ಕಾತ್ಪೂರ್ವಸ್ಯ ಅಕಾರಸ್ಯ ಇಕಾರಃ ಸ್ಯಾತ್ ಆಪಿ, ಸ ಆಪ್ ಸುಪಃ ಪರೋ ನ ಚೇತ್।

ಉದಾ: (1) ಗೋಪಾಲಿಕಾ। (2) ಅಶ್ವಪಾಲಿಕಾ। (3) ಸರ್ವಿಕಾ। (4) ಕಾರಿಕಾ। ಅತಃ ಕಿಮ್? ನೌಕಾ। ಪ್ರತ್ಯಯಸ್ಥಾತ್ ಕಿಂ? ಶಕ್ನೋತಿ ಇತಿ ಶಕಾ। ಅಸುಪಃ ಕಿಂ? ಬಹುಪರಿವ್ರಾಜಕಾ ನಗರೀ।

ವಾ॥ ಸೂರ್ಯಾತ್ ದೇವತಾಯಾಂ ಚಾಬ್ವಾಚ್ಯಃ॥ ಸೂರ್ಯಸ್ಯ ಸ್ತ್ರೀ ದೇವತಾ ಸೂರ್ಯಾ। ದೇವತಾಯಾಂ ಕಿಮ್? ಇಯಮ್ ।

ವಾ॥ ಸೂರ್ಯಾಗಸ್ತ್ಯಯೋಶ್ಛೇ ಚ ಙ್ಯಾಂ ಚ। ಯಲೋಪಃ। ಸೂರೀ= ಕುನ್ತೀ। ಮಾನುಷೀ ಇಯಮ್।

ಪ. ಛೇ-ಪ್ರತ್ಯಯಸ್ಥಾತ್, ಕಾತ್, ಪೂರ್ವಸ್ಯ, ಅತಃ, ಇತ್, ಆಪಿ, ಅಸುಪಃ।

ಅರ್ಥ-ಪ್ರತ್ಯಯದಲ್ಲಿರುವ ಕ-ಕಾರಕ್ಕಿಂತ ಪೂರ್ವದಲ್ಲಿರುವ 'ಅ'ಕಾರದ ಸ್ಥಾನದಲ್ಲಿ 'ಇ'ಕಾರವು ಆದೇಶವಾಗಿ ಬರುತ್ತದೆ, 'ಆಪ್' ಗಿಂತ ಪರದಲ್ಲಿ ಇದ್ದಾಗ. ಆದರೆ ಆ 'ಆಪ್' ಸುಪ್ ಗಿಂತ ಪರದಲ್ಲಿದ್ದರೆ 'ಇ'ಕಾರವು ಆದೇಶವಾಗಿ ಬರುವುದಿಲ್ಲ.

ಉದಾ-1. ಗೋಪಾಲಿಕಾ, 2. ಅಶ್ವಪಾಲಿಕಾ-ಹಿಂದಿನ ಸೂತ್ರದಿಂದ ಬಂದ ಈ ಎರಡು ಉದಾಹರಣೆಗಳ ಪ್ರಕ್ರಿಯೆಯನ್ನು ಈ ಸೂತ್ರದ ಮುಖಾಂತರ ಮತ್ತಷ್ಟು ಸ್ಪಷ್ಟಪಡಿಸಲಾಗಿದೆ. "ಪಾಲಕಾಂತಾನ್ನ" ಎಂಬ ವಾರ್ತಿಕದಿಂದ 'ಜೀಷ್(ಈ)' ನಿಷೇಧಿಸಲಾಗಿರುವದರಿಂದ"ಪುಂಯೋಗಾದಾಖ್ಯಾಯಾಮ್।" ಎಂಬ ಸೂತ್ರದಿಂದ 'ಜೀಷ್(ಈ)' ಬರಲಿಲ್ಲ. "ಅಜಾದ್ಯತಷ್ಟಾಪ್" ಎಂಬ ಸೂತ್ರದಿಂದ 'ಟಾಪ್(ಆ) ಬಂದು ಗೋಪಾಲಕ+ಆ ಎಂದಿದ್ದಾಗ, ಗೋಪಾಲಕ ಶಬ್ದದಲ್ಲಿ 'ಕ್' ಕಾರ ಪ್ರತ್ಯಯವುಳ್ಳ 'ಕ' ಕಾರವು ಇದೆ. ಅದಕ್ಕೆ ಪೂರ್ವದಲ್ಲಿ 'ಲ್' ಕಾರದ ನಂತರ 'ಅ' ಕಾರವು ಇದೆ. 'ಆಪ್' ಪ್ರತ್ಯಯವೂ ಪರದಲ್ಲಿದೆ. ಅದು 'ಸುಪ್(ಸ್) ಪ್ರತ್ಯಯಕ್ಕಿಂತ ಪರದಲ್ಲಿ ಇಲ್ಲ. ಈ ಸ್ಥಿತಿಯಲ್ಲಿ, ಪ್ರಕೃತ ಸೂತ್ರದಿಂದ 'ಲ್' ಕಾರದ ನಂತರ ಇರುವ 'ಅ' ಕಾರಕ್ಕೆ 'ಇ' ಕಾರವು ಆದೇಶವಾಗಿ ಬಂದು, ಗೋಪಾಲಿಕ+ಆ ಎಂದಿದ್ದಾಗ, ಸವರ್ಣದೀರ್ಘ ಸಂಧಿಯಿಂದ ಗೋಪಾಲಿಕಾ ಎಂದಾಗಿದೆ. ಅನಂತರ 'ಸುಪ್' ಪ್ರತ್ಯಯವನ್ನು ಸೇರಿಸೋಣದರಿಂದ 'ಸ್' ಕಾರ ಲೋಪದಿಂದ 'ಆ' ಕಾರಾಂತ ಸ್ತ್ರೀಲಿಂಗ ಶಬ್ದವಾಗಿ ಉಳಿದಿದೆ. ಇದೇರೀತಿಯಲ್ಲಿ ಅಶ್ವಪಾಲಕ ಶಬ್ದದಿಂದ 'ಅಶ್ವಪಾಲಿಕಾ ಎಂದೂ, 'ಸರ್ವಕ' ಶಬ್ದದಿಂದ 'ಸರ್ವಿಕಾ' ಎಂದೂ 'ಕಾರಕ' ಶಬ್ದದಿಂದ 'ಕಾರಿಕಾ' ಎಂದೂ ಆಬಂತವಾದ ರೂಪಗಳು ಬಂದಿವೆ. ಈ ಪರಿಣಾಮವಾಗುವ ಸಂದರ್ಭದಲ್ಲಿ 'ಸುಪ್' ಪ್ರತ್ಯವು ಪರದಲ್ಲಿ ಇಲ್ಲ. ಅನಂತರ 'ಸುಪ್' ಪ್ರತ್ಯಯವನ್ನು ಸೇರಿಸಿದಮೇಲೆಯೇ 'ಸ್' ಕಾರಲೋಪದಿಂದ ಆಕಾರಾಂತ ಸ್ತ್ರೀಲಿಂಗ ಶಬ್ದವಾಗಿ ಉಳಿದಿವೆ.

ಅತಃ ಕಿಮ್?-'ಅ' ಕಾರಕ್ಕೆ ಎಂದು ಯಾಕೆ ಹೇಳಬೇಕು? ಉದಾ-ನೌಕಾ-"ಪ್ರತ್ಯಯಸ್ಥಾತ್ ಕಾತ್ಪೂರ್ವಸ್ಯಾತ ಇದಾಪ್ಯಸುಪಃ। (7.3.44)" ಎಂಬ ಸೂತ್ರದಲ್ಲಿ ಅತಃ ಎಂಬ ಶಬ್ದವನ್ನು ಸೇರಿಸದೇ ಇದ್ದರೆ, ಅದಂತ ಶಬ್ದದಲ್ಲಿ ಆ ಇತ್ವವು ಆಗುತ್ತಲೇ ಇತ್ತು. ಆದರೆ ಅದು ಅದಂತವಾಗಿಲ್ಲದೇ ಇದ್ದರೆ ಅಲ್ಲಿಯೂ 'ಇ' ಕಾರವು ಬರುತ್ತಿತ್ತು. ಹೇಗೆಂದರೆ ನೌ+ಕಾ ಎಂದಿದ್ದಾಗ 'ಔ' ಕಾರದ ಸ್ಥಾನದಲ್ಲಿಯೂ 'ಇ' ಕಾರ ಬಂದು 'ನಿಕಾ' ಎಂಬ ಅನಿಷ್ಟರೂಪ ಬರುತ್ತಿತ್ತು. "ಪ್ರತ್ಯಯಸ್ಥಾತ್ ಕಿಂ?"-ಶಕ್ನೋತಿ ಇತಿ ಶಕಾ "ಪ್ರತ್ಯಯಸ್ಥಾತ್ ಕಾತ್ಪೂರ್ವಸ್ಯಾತ ಇದಾಪ್ಯಸುಪಃ। (7.3.44)" ಎಂಬ ಸೂತ್ರದಲ್ಲಿ ಪ್ರತ್ಯಯಸ್ಥಾತ್ ಎಂಬ ಶಬ್ದವು ಇರದಿದ್ದರೆ, ಪ್ರತ್ಯಯದ 'ಅ' ಕಾರಕ್ಕೆ ಇತ್ವವು ಆಗಿಯೇ ಆಗುತ್ತಿತ್ತು. ಜೊತೆಗೆ ಆ ಪ್ರತ್ಯಯಕ್ಕೆ 'ಸ್' ಕಾರವು ಇಲ್ಲದಿದ್ದರೆ ಅಲ್ಲಿಯೂ ಇತ್ವ ಬರುತ್ತಿತ್ತು.ಶ+ಕಾ ಎಂಬಲ್ಲಿ 'ಶ' ಕಾರೋತ್ತರ 'ಅ'ಕಾರಕ್ಕೂ 'ಇ' ಕಾರ ಬಂದು 'ಶಿಕಾ'

ಎಂಬ ಅನಿಷ್ಟರೂಪವು ಬರುತ್ತಿತ್ತು.

ಅಸುಪಃ ಕಿಮ್? ಬಹುಪರಿವ್ರಾಜಕಾ ನಗರೀ–"ಪ್ರತ್ಯಯಸ್ಥಾತ್ ಕಾತ್ಪೂರ್ವಸ್ಯಾತ ಇದಾಪ್ಯಸುಪಃ। (7.3.44)" ಎಂಬ ಸೂತ್ರದಲ್ಲಿ 'ಅಸುಪಃ' ಎಂಬ ಪದವು ಇರದಿದ್ದರೆ, 'ಸುಪ್' ನ ಪರದಲ್ಲಿರುವ 'ಅ' ಕಾರಕ್ಕೂ 'ಇ' ಕಾರವು ಬರುತ್ತಿತ್ತು. ಹೇಗೆಂದರೆ, ಬಹುಪರಿವ್ರಾಜ+ಕಾ ಎಂಬಲ್ಲಿ, 'ಅ' ಕಾರದ ಸ್ಥಾನದಲ್ಲೂ 'ಇ' ಕಾರ ಬಂದು ಬಹು ಪರಿವ್ರಾಜಿಕಾ ಎಂಬ ಅನಿಷ್ಟರೂಪವು ಬರುತ್ತಿತ್ತು.

'ಬಹವಃ ಪರಿವ್ರಾಜಕಾಃ ಸಂತಿ ಯಸ್ಯಾಂ ನಗರ್ಯಾಂ ಸಾ ಬಹುಪರಿವ್ರಾಜಕಾ ನಗರೀ" ಎಂಬಲ್ಲಿ ಬಹು+ಜಸ್(ಅಸ್)+ಪರಿವ್ರಾಜಕ+ಜಸ್(ಅಸ್) ಎಂಬ ಅಲೌಕಿಕ ವಿಗ್ರಹದಲ್ಲಿ "ಅನೇಕಮನ್ಯಪದಾರ್ಥೇ" ಎಂಬ ಸೂತ್ರದಿಂದ ಸಮಾಸ ಸಂಜ್ಞೆ ಬಂದು ಪ್ರಾತಿಪದಿಕ ಸಂಜ್ಞೆ ಬಂದಮೇಲೆ ವಿಭಕ್ತಿಯ ಲೋಪವು ಆಗುತ್ತದೆ. ಅನಂತರ ಸ್ತ್ರೀತ್ವ ವಿವಕ್ಷೆಯಲ್ಲಿ 'ಟಾಪ್(ಆ)' ಪ್ರತ್ಯಯವು ಬರುತ್ತದೆ. ಬಹುಪರಿವ್ರಾಜಕ+ಆ ಎಂದಿದ್ದಾಗ, 'ಜ' ಕಾರದ ನಂತರ ಇರುವ 'ಅ' ಕಾರಕ್ಕೆ 'ಇ' ಕಾರವು ಬರುವುದಿಲ್ಲ ಯಾಕೆಂದರೆ ಆ 'ಟಾಪ್ (ಆಪ್)' ಪ್ರತ್ಯಯ ಪರದಲ್ಲಿದ್ದಾಗ ಅದು 'ಸುಪ್' ವಿಭಕ್ತಿಗಿಂತ ಪರದಲ್ಲಿದೆ. ಸಮಾಸ ಮಾಡುವಾಗ ಲೋಪವಾಗುವ ಪ್ರತ್ಯಯ ಪ್ರತ್ಯಯಲಕ್ಷಣದಿಂದ ಕೂಡಿದ್ದಾಗಿರುತ್ತದೆ.

ವಾ॥1–ಸೂರ್ಯಾತ್ ದೇವತಾಯಾಂ ಚಾಬ್ವಾಚ್ಯಃ।

ಸೂರ್ಯಸ್ಯ ಸ್ತ್ರೀ ದೇವತಾ ಸೂರ್ಯಾ। ದೇವತಾಯಾಂ ಕಿಮ್? ಇಯಮ್

ಪ. ಛೇ–ಸೂರ್ಯಾತ್ ದೇವತಾಯಾಂ ಚ ಆಪ್ ವಾಚ್ಯಃ।

ಅರ್ಥ–ಸೂರ್ಯ ಎಂಬ ಪ್ರಾತಿಪದಿಕದಮೇಲೆ ಪುಂಯೋಗದಲ್ಲಿ ದೇವತಾಸ್ತ್ರೀತ್ವ ವಿವಕ್ಷೆಯಲ್ಲಿ ಚಾಪ್ (ಆ) ಪ್ರತ್ಯಯವು ಬರುತ್ತದೆ. "ಪುಂಯೋಗಾದಾಖ್ಯಾಯಾಂ" ಎಂಬ ಸೂತ್ರಕ್ಕೆ ಇದು ಅಪವಾದವಾಗಿದೆ.

ಉದಾ–ಸೂರ್ಯಾ (ಛಾಯಾದೇವಿ ಮತ್ತು ಸಂಧ್ಯಾ)–'ಸೂರ್ಯಸ್ಯ ಸ್ತ್ರೀ ದೇವತಾ'ಎಂಬುದು ವಿಗ್ರಹ. 'ಸೂರ್ಯ' ಶಬ್ದದ ಮೇಲೆ "ಪುಂಯೋಗಾದಾಖ್ಯಾಯಾಂ" ಎಂಬ ಸೂತ್ರದಿಂದ ಬರಬೇಕಾದ 'ಜೀಷ್(ಈ)' ಪ್ರತ್ಯಯವನ್ನು ಬಾಧಿಸಿ ಪ್ರಕೃತ ವಾರ್ತಿಕದಿಂದ 'ಚಾಪ್(ಆ)' ಬಂದಿದೆ. ಸೂರ್ಯ+ಆ ಎಂಬಲ್ಲಿ ಸವರ್ಣದೀರ್ಘವಾಗಿ 'ಸುಪ್' ಪ್ರತ್ಯಯವನ್ನು ಸೇರಿಸಿದಮೇಲೆ, 'ಸ್' ಕಾರ ಲೋಪವಾಗಿ ಸೂರ್ಯಾ ಎಂದು ಸ್ತ್ರೀಲಿಂಗ ರೂಪವು ಸಿದ್ಧವಾಗುತ್ತದೆ.

ಇಲ್ಲಿ ಸೂರ್ಯನಿಗೆ ಇಬ್ಬರು ಸ್ತ್ರೀಯರು. ಒಬ್ಬಳು ದೇವತೆಯಾದ ಛಾಯಾದೇವಿ ಎರಡನೆಯವಳು ಮನುಷ್ಯ ಸ್ತ್ರೀಯಾದ ಕುಂತಿ. ಕುಂತಿಯು ದೇವತೆಯಾಗಿಲ್ಲದೇ ಇರೋಣದ್ದರಿಂದ 'ಟಾಪ್(ಆ)' ಬರುವುದಿಲ್ಲ. ಅದು ಮಾತ್ರವಲ್ಲ 'ಯ್' ಕಾರವೂ ಲೋಪವಾಗಬೇಕಾಗಿದೆ. ಆದುದರಿಂದ ಎರಡನೆಯ ವಾರ್ತಿಕವು ಹೊರಟಿದೆ.

ವಾ॥ 2. –ಸೂರ್ಯಾಗಸ್ತ್ಯಯೋಶ್ಛೇ ಚ ಙ್ಯಾಂ ಚ। ಯಲೋಪಃ। ಸೂರೀ=

ಕುನ್ತೀ। ಮಾನುಷೀ ಇಯಮ್।

ಪ.ಭೇ-ಸೂರ್ಯಾಗಸ್ತ್ಯಯೋಃ ಛೇ ಚ ಜ್ಯಾಂ ಚ।

ಅರ್ಥ-'ಛ' ಎಂಬುದು 'ಜೀ' ಗೆ ಪರದಲ್ಲಿರುವುದರಿಂದ ಸೂರ್ಯ ಅಥವಾ ಅಗಸ್ತ್ಯ ಶಬ್ದದಗಳ ಉಪಧೆಯ 'ಯ್' ಕಾರದ ಲೋಪವು ಆಗುತ್ತದೆ. ಈ 'ಯ್' ಕಾರ ಲೋಪವಾಗುವದನ್ನು "ಸೂರ್ಯತಿಷ್ಯಾಗಸ್ತ್ಯ ಮತ್ಸ್ಯಾನಾಂ ಯ ಉಪಧಾಯಾಃ" ಎಂಬ ವಾರ್ತಿಕದಿಂದ ಹೇಳಲಾಗಿದೆ.

ದೇವತಾಯಾಂ ಕಿಂ? -ಸೂರೀ-ಎಂಬಲ್ಲಿ "ಸೂರ್ಯಾತ್ ದೇವತಾಯಾಂ ಚ ಆಪ್ ವಾಚ್ಯಃ" ಎಂಬ ವಾರ್ತಿಕದಲ್ಲಿ ಮನುಷ್ಯ ಸ್ತ್ರೀ ಎಂಬ ಅರ್ಥದಲ್ಲಿ 'ಚಾಪ್(ಆ) ಬರುವುದಿಲ್ಲ. 'ದೇವತಾಯಾಂ' ಎಂಬ ಪದವಿರುವ ಕಾರಣದಿಂದ ಮನುಷ್ಯ ಸ್ತ್ರೀ ಗೆ ಇದು ಅನ್ವಯಿಸುವುದಿಲ್ಲ. ಅದುದರಿಂದ 'ಸೂರ್ಯಸ್ಯ ಸ್ತ್ರೀ ಮಾನುಷೀ' ಎಂಬ ಅರ್ಥದಲ್ಲಿ ಸೂರ್ಯ ಶಬ್ದದಮೇಲೆ "ಪುಂಯೋಗಾದಾಖ್ಯಾಯಾಂ" ಎಂಬ ಸೂತ್ರದಿಂದ ಬರಬೇಕಾದ 'ಜೀಷ್(ಈ)' ಬಂದು, ಸೂರ್ಯ+ಈ ಎಂದಾಗುತ್ತದೆ. ಸೂರ್ಯ ಶಬ್ದದ 'ಅ' ಕಾರವು "ಯಸ್ಯೇತಿ ಚ" ಎಂಬ ಸೂತ್ರದಿಂದ ಲೋಪವಾಗುತ್ತದೆ. ಪರದಲ್ಲಿ ಈ(ಜೀಷ್) ಇರೋಣದ್ದರಿಂದ -"ಸೂರ್ಯಾಗಸ್ತ್ಯಯೋಶ್ಛೇ ಚ ಜ್ಯಾಂ ಚ" ಎಂಬ ವಾರ್ತಿಕದಿಂದ 'ಯ್' ಕಾರ ಲೋಪವಾಗಿ, ಸೂರ್+ಈ=ಸೂರೀ ಎಂದು ರೂಪವಾಗುತ್ತದೆ. 'ಸುಪ್' ಪ್ರತ್ಯಯವನ್ನು ಸೇರಿಸಿ 'ಸ್' ಕಾರ ಲೋಪವಾದಮೇಲೂ ಸೂರೀ ಎಂದೇ ಉಳಿಯುತ್ತದೆ. ಇಲ್ಲಿ ಸೂರ್ಯನ ಪತ್ನಿ ಮನುಷ್ಯಳಾಗಿರುವುದರಿಂದ (ಮಾನುಷೀಯಂ-ಕುಂತೀ) ಸೂರೀ ಎಂದು ರೂಪವಾಗಿದೆ.

**(ಆನುಕ್ ಆಗಮವನ್ನೂ ಮತ್ತು 'ಜೀಷ್' ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1265. ಇನ್ದ್ರ-ವರುಣ-ಭವ-ಶರ್ವ-ರುದ್ರ-ಮೃಡ-ಹಿಮಾರಣ್ಯ-ಯವ ಯವನ-ಮಾತುಲಾ-ಚಾರ್ಯಾಣಾಮಾನುಕ್। (4.1.49)**

ವೃತ್ತಿ-ಏಷಾಂ ಆನುಕ್-ಆಗಮಃ ಸ್ಯಾತ್ ಜೀಷ್ ಚ। ಇನ್ದ್ರಸ್ಯ ಸ್ತ್ರೀ ಇನ್ದ್ರಾಣೀ। ವರುಣಾನೀ। ಭವಾನೀ। ಶರ್ವಾಣೀ। ರುದ್ರಾಣೀ। ಮೃಡಾನೀ।

ವಾರ್ತಿಕ-1. ಹಿಮಾರಣ್ಯಯೋರ್ಮಹತ್ವೇ।

ಮಹತ್ ಹಿಮಮ್ ಹಿಮಾನೀ। ಮಹತ್ ಅರಣ್ಯಮ್ ಅರಣ್ಯಾನೀ।

ವಾರ್ತಿಕ-2. ಯವಾದ್ ದೋಷೇ। ದುಷ್ಟೋ ಯವಃ ಯವಾನೀ।

ವಾರ್ತಿಕ-3. ಯವನಾಲ್ಲಿಪ್ಯಾಮ್। ಯವನಾನಾಂ ಲಿಪಿಃ ಯವನಾನೀ।

ವಾರ್ತಿಕ-4. ಮಾತುಲೋಪಾಧ್ಯಯೋರಾನುಗ್ವಾ ಮಾತುಲಾನೀ, ಮಾತುಲೀ । ಉಪಾಧ್ಯಾಯಾನೀ, ಉಪಾಧ್ಯಾಯೀ।

ವಾರ್ತಿಕ-5. ಆಚಾರ್ಯಾದಣತ್ವಂ ಚ।

ಅಚಾರ್ಯಸ್ಯ ಸ್ತ್ರೀ ಆಚಾರ್ಯಾನೀ।

ವಾರ್ತಿಕ-6. ಅರ್ಯ-ಕ್ಷತ್ರಿಯಾಭ್ಯಾಂ ವಾ ಸ್ವಾರ್ಥೇ। ಅರ್ಯಾಣೀ, ಅರ್ಯಾ। ಕ್ಷತ್ರಿಯಾಣೀ, ಕ್ಷತ್ರಿಯಾ।

ಪ.ಛೇ-ಇನ್ದ್ರ-ವರುಣ-ಭವ-ಶರ್ವ-ರುದ್ರ-ಮೃಡ-ಹಿಮ-ಅರಣ್ಯ-ಯವ-ಯವನ-ಮಾತುಲ-ಆಚಾರ್ಯಾಣಾಂ ಆನುಕ್।

ಅ.ವೃ-"ಅನ್ಯತೋ ಙೀಷ್" ಎಂಬ ಸೂತ್ರದಿಂದ 'ಙೀಷ್' ಎಂಬ ಪದವು ಅನುವೃತ್ತವಾಗುತ್ತದೆ. "ಪ್ರತ್ಯಯಃ" "ಪರಶ್ಚ" ಮತ್ತು "ಸ್ತ್ರಿಯಾಮ್" ಮೊದಲಾದವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-ಈ ಸೂತ್ರದಲ್ಲಿ 12 ಪದಗಳು ಇವೆ. ಇನ್ದ್ರ-ವರುಣ-ಭವ-ಶರ್ವ-ರುದ್ರ-ಮೃಡ-ಹಿಮ-ಅರಣ್ಯ-ಯವ-ಯವನ-ಮಾತುಲ ಮತ್ತು ಆಚಾರ್ಯ ಈ 12 ಶಬ್ದಗಳ ಮೇಲೆ ಸ್ತ್ರೀತ್ವ ವಿವಕ್ಷೆ ಇದ್ದಾಗ, 'ಙೀಷ್(ಈ)' ಪ್ರತ್ಯಯವು ಬರುತ್ತದೆ. ಮತ್ತು ಇವುಗಳಿಗೇನೇ 'ಆನುಕ್' ಆಗಮವೂ ಬರುತ್ತದೆ.

ಉದಾ-ಇನ್ದ್ರಾಣೀ (ಇನ್ದ್ರನ ಹೆಂಡತಿ) 'ಇನ್ದ್ರಸ್ಯ ಸ್ತ್ರೀ' ಎಂದು ವಿಗ್ರಹ. 'ಇನ್ದ್ರ' ಶಬ್ದದಮೇಲೆ ಪ್ರಕೃತ ಸೂತ್ರದಿಂದ 'ಆನುಕ್ ಆಗಮ ಮತ್ತು ಙೀಷ್(ಈ)' ಪ್ರತ್ಯಯಗಳು ಬರುತ್ತವೆ. 'ಆನುಕ್' ನಲ್ಲಿ 'ಆನ್' ಮಾತ್ರ ಉಳಿಯುತ್ತದೆ. ಇನ್ದ್ರ+ಆನ್+ಈ ಎಂದಿರುವಾಗ, ಸವರ್ಣದೀರ್ಘದಿಂದ ಇನ್ದ್ರಾನ್+ಈ ಎಂದಾಗಿ, ಣತ್ವ ಬಂದು ಇನ್ದ್ರಾಣೀ ಎಂದು ರೂಪವಾದಮೇಲೆ 'ಸುಪ್' ಪ್ರತ್ಯಯವನ್ನು ಸೇರಿಸಿದಮೇಲೆ 'ಸ್' ಕಾರಲೋಪವಾದಮೇಲೂ 'ಇನ್ದ್ರಾಣೀ' ಎಂದೇ ಉಳೀಯುತ್ತದೆ.

ಇದೇ ರೀತಿಯಲ್ಲಿ ವರುಣಾನೀ, ಭವಾನೀ, ಶರ್ವಾಣೀ, ರುದ್ರಾಣೀ ಮತ್ತು ಮೃಡಾನೀ ಶಬ್ದಗಳಾಗುತ್ತವೆ. ಇಲ್ಲಿ ಣತ್ವಕ್ಕೆ ಅವಕಾಶವಿದ್ದಾಗ ಮಾತ್ರ ಣತ್ವ ಬರುತ್ತದೆ.

ವಾ॥ 1. ಹಿಮಾರಣ್ಯಯೋರ್ಮಹತ್ವೇ।

ಮಹತ್ ಹಿಮಮ್ ಹಿಮಾನೀ। ಮಹತ್ ಅರಣ್ಯಮ್ ಅರಣ್ಯಾನೀ।

ಅರ್ಥ-ಹಿಮ ಮತ್ತು ಅರಣ್ಯ ಈ ಎರಡು ಪ್ರಾತಿಪದಿಕಗಳನಂತರ ಮಹತ್ವದ ಅರ್ಥ ಇರುವಾಗ ಮಾತ್ರ 'ಙೀಷ್(ಈ)' ಪ್ರತ್ಯಯ ಮತ್ತು 'ಆನುಕ್(ಆನ್)' ಆಗಮ ಬರುತ್ತವೆ. ಮಹತ್ ಹಿಮಂ ಹಿಮಾನೀ=ದೊಡ್ಡದಾದ ಹಿಮದ ಗಡ್ಡೆ. ಇಲ್ಲಿ ಪ್ರಕೃತ ಸೂತ್ರದಿಂದ ದೊಡ್ಡದು ಎಂಬ ಅರ್ಥದಲ್ಲಿ 'ಆನುಕ್(ಆನ್)'ಆಗಮ ಮತ್ತು 'ಙೀಷ್(ಈ)'ಪ್ರತ್ಯಯ ಬರುತ್ತವೆ. ಹಿಮ+ಆನ್+ಈ=ಹಿಮಾನೀ, ಇದಕ್ಕೂ ವಿಭಕ್ತಿ ಕಾರ್ಯ ಮಾಡಿದಮೇಲೆ 'ಸ್' ಕಾರಲೋಪವಾಗಿ ಹಿಮಾನೀ ಎಂದೇ ಉಳಿಯುತ್ತದೆ. ಇದರಂತೆಯೇ ಅರಣ್ಯಾನೀ ಶಬ್ದವೂ ಕೂಡ ಸಿದ್ಧವಾಗುತ್ತದೆ. (ದೊಡ್ಡ ಅರಣ್ಯ ಎಂದು ಅರ್ಥ).

ವಾರ್ತಿಕ-2. ಯವಾದ್ ದೋಷೇ। ದುಷ್ಟೋ ಯವಃ ಯವಾನೀ।

ಅರ್ಥ-ದೋಷವುಳ್ಳದ್ದು ಎಂಬ ಅರ್ಥವನ್ನು ಸೂಚಿಸುವಾಗ, 'ಯವ' ಎಂಬ ಪ್ರಾತಿಪದಿಕದ ಮೇಲೆ 'ಆನುಕ್(ಆನ್)'ಆಗಮ ಮತ್ತು 'ಙೀಷ್(ಈ)' ಪ್ರತ್ಯಯ ಬಂದು

ಯವಾನೀ ಎಂದು ರೂಪವಾಗುತ್ತದೆ. ದುಷ್ಟೋ ಯವೋ ಯವಾನೀ ಎಂದು ವಿಗ್ರಹ. ದೋಷಯುಕ್ತವಾದ ಯವ ಎಂಬ ಧಾನ್ಯ ಎಂದು ಇದರ ಅರ್ಥ.

ವಾರ್ತಿಕ-3. ಯವನಾಲ್ಲಿಪ್ಯಾಮ್। ಯವನಾನಾಂ ಲಿಪಿಃ ಯವನಾನೀ।

ಅರ್ಥ-ಯವನ ಎಂಬ ಪ್ರಾತಿಪದಿಕದಮೇಲೆ ನಿರ್ದಿಷ್ಟವಾದ ಭಾಷಾ ವಿಶೇಷದ ಲಿಪಿ ಎಂಬ ಅರ್ಥವನ್ನು ಹೇಳುವಾಗ ಜೀಷ್(ಈ)' ಪ್ರತ್ಯಯ ಮತ್ತು ಪ್ರಕೃತಿಗೆ 'ಆನುಕ್' ಆಗಮವು ಬರುತ್ತದೆ. ಯವನ+ಆನ್+ಈ=ಯವನಾನೀ ಎಂದು ರೂಪವಾಗುತ್ತದೆ. ಯವನರ ಲಿಪಿ (ಉರ್ದು, ಪಾರ್ಸೀ ಮೊದಲಾದವುಗಳು) ಎಂದು ಇದರ ಅರ್ಥ.

ವಾರ್ತಿಕ-4. ಮಾತುಲೋಪಾಧ್ಯಯೋರಾನುಗ್ವಾ ಮಾತುಲಾನೀ, ಮಾತುಲೀಸ್। ಉಪಾಧ್ಯಾಯಾನೀ, ಉಪಾಧ್ಯಾಯೀ।

ಪ. ಛೇ-ಮಾತುಲೋಪಾಧ್ಯಯಯೋಃ ಆನುಕ್ ವಾ।

ಅರ್ಥ-ಮಾತುಲ ಮತ್ತು ಉಪಾಧ್ಯಾಯ ಶಬ್ದಗಲಮೇಲೆ ಸ್ತ್ರೀತ್ವ ವಿವಕ್ಷೆಯಲ್ಲಿ ಪುಂಯೋಗವಿದ್ದಾಗ, 'ಆನುಕ್' ಆಗಮವು ವಿಕಲ್ಪವಾಗಿ ಬರುತ್ತದೆ. ಮಾತುಲ ಶಬ್ದದ ಮೇಲೆ ಜೀಷ್(ಈ)' ಪ್ರತ್ಯಯವು "ಇನ್ದ್ರ-ವರುಣ-ಭವ-ಶರ್ವ......ಮಾತುಲಾ-ಚಾರ್ಯಾಣಾಮಾನುಕ್।(4.1.49) ಎಂಬ ಸೂತ್ರದಿಂದಲೇ ಆಗುತ್ತದೆ.

ಉದಾ-1. ಮಾತುಲಾನೀ(ಸೋದರಮಾವನ ಹೆಂಡತಿ)2. ಉಪಾಧ್ಯಾಯಾನೀ (ಉಪಾಧ್ಯಾಯನ ಹೆಂಡತಿ)-ಈ ಎರಡು ಉದಾಹರಣೆಗಲಲ್ಲಿಯೂ, 'ಜೀಷ್(ಈ)' ಪ್ರತ್ಯಯ ಮತ್ತು ಪ್ರಕೃತಿಗೆ 'ಆನುಕ್' ಆಗಮ ಬಂದು ಸುಪ್ ಪ್ರತ್ಯಯವನ್ನು ಸೇರಿಸಿ 'ಸ್' ಕಾರಲೋಪವಾದಮೇಲೂ ಮಾತುಲಾನೀ, ಉಪಾಧ್ಯಾಯಾನೀ ಎಂದೇ ಉಳಿಯುತ್ತದೆ.

'ಆನುಕ್' ಆಗಮ ಬಾರದ ಪಕ್ಷದಲ್ಲಿ ಮಾತುಲೀ, ಉಪಾಧ್ಯಾಯೀ ಎಂದು ರೂಪಗಳಾಗುತ್ತವೆ.

ವಾರ್ತಿಕ-5. ಆಚಾರ್ಯಾದಣತ್ವಂ ಚ। ಅಚಾರ್ಯಸ್ಯ ಸ್ತ್ರೀ ಆಚಾರ್ಯಾನೀ।

ಪ. ಛೇ-ಆಚಾರ್ಯಾತ್ ಅಣತ್ವಂ ಚ।

ಅರ್ಥ-ಅಚಾರ್ಯ ಎಂಬ ಪ್ರಾತಿಪದಿಕಕ್ಕೆ ಬರುವ 'ಅನುಕ್' ಆಗಮದ 'ನ್' ಕಾರಕ್ಕೆ ಣತ್ವ ಬರುವುದಿಲ್ಲ.

ಉದಾ-ಆಚಾರ್ಯಾನೀ(ಆಚಾರ್ಯರ ಪತ್ನಿ)-ಆಚಾರ್ಯ ಶಬ್ದದಮೇಲೆ ಸ್ತ್ರೀತ್ವ ವಿವಕ್ಷೆ ಇದ್ದಾಗ ಪ್ರಕೃತ ಸೂತ್ರದಿಂದ 'ಆನುಕ್' ಆಗಮ ಮತ್ತು 'ಜೀಷ್(ಈ)' ಬಂದು, ಆಚಾರ್ಯ+ಆನ್+ಈ ಎಂದಿರುತ್ತದೆ. ಆಮೇಲೆ ಸವರ್ಣದೀರ್ಘ ಮಾಡಿದಮೇಲೆ ಆಚಾರ್ಯಾನೀ ಎಂದು ರೂಪವಾಗುತ್ತದೆ. ಇಲ್ಲಿ "ಅಟ್ಕುಪ್ವಾಙ್ನುಮ್-ವ್ಯವಾಯೇಽಪಿ" ಎಬುದರಿಂದ ಣತ್ವ ಬರಬೇಕಾಗಿತ್ತು ಆದರೆ ಪ್ರಕೃತ ವಾರ್ತಿಕದಿಂದ ಣತ್ವ ಬರುವುದಿಲ್ಲ. ಇದರಮೇಲೆ 'ಸುಪ್' ಪ್ರತ್ಯಯವನ್ನು ಸೇರಿಸಿದಮೇಲೆ 'ಸ್' ಕಾರ ಲೋಪವಾದಾಗ

ಆಚಾರ್ಯಾನೀ ಎಂದೇ ಉಳಿಯುತ್ತದೆ.

ವಾರ್ತಿಕ-6. ಅರ್ಯ-ಕ್ಷತ್ರಿಯಾಭ್ಯಾಂ ವಾ ಸ್ವಾರ್ಥೇ। ಅರ್ಯಾಣೀ, ಅರ್ಯಾ। ಕ್ಷತ್ರಿಯಾಣೀ, ಕ್ಷತ್ರಿಯಾ।

ಅರ್ಥ-ಅರ್ಯ ಮತ್ತು ಕ್ಷತ್ರಿಯ ಎಂಬ ಈ ಎರಡು ಪ್ರಾತಿಪದಿಕಗಳಮೇಲೆ ಸ್ವಾರ್ಥದಲ್ಲಿ ಅಂದರೆ ಪುಂಯೋಗವಿಲ್ಲದಿದ್ದಾಗ, 'ಙೀಷ್(ಈ)' ಪ್ರತ್ಯಯವು ಮತ್ತು 'ಆನುಕ್' ಆಗಮವು ವಿಕಲ್ಪದಿಂದ ಬರುತ್ತದೆ.

ಉದಾ-1. ಅರ್ಯಾಣಿ, ಅರ್ಯಾ-(ವೈಶ್ಯ ಜಾತಿಯ ಸ್ತ್ರೀ) 'ಅರ್ಯ' ಶಬ್ದದಮೇಲೆ ಸ್ತ್ರೀತ್ವ ವಿವಕ್ಷೆಯಲ್ಲಿ, ಪ್ರಕೃತ ವಾರ್ತಿಕದಿಂದ, ಮತ್ತು "ಇನ್ದ್ರ-ವರುಣ......ಮಾತುಲಾ-ಚಾರ್ಯಾಣಾಮಾನುಕ್। (4.1.49)" ಎಂಬ ಸೂತ್ರದಿಂದಲೂ, 'ಆನುಕ್' ಆಗಮ ಮತ್ತು 'ಙೀಷ್(ಈ)' ಬಂದು ಅರ್ಯ+ಆನ್+ಈ ಎಂದಾಗಿ, ಸವರ್ಣದೀರ್ಘದಿಂದ ಅರ್ಯಾನೀ ಎಂದಾಗಿ, "ಅಟ್ಕುಪ್ವಾಙ್ನುಮ್-ವ್ಯವಾಯೇಽಪಿ" ಎಬುದರಿಂದ ಣತ್ವ ಬಂದು ಅರ್ಯಾಣೀ ಎಂದು ರೂಪವಾಗುತ್ತದೆ. ಇದರಮೇಲೆ 'ಸುಪ್' ಪ್ರತ್ಯಯವನ್ನು ಸ್ರೇರಿಸಿದಮೇಲೆ 'ಸ್' ಕಾರ ಲೋಪವಾದಾಗ ಅರ್ಯಾಣೀ ಎಂದೇ ಉಳಿಯುತ್ತದೆ. ಪ್ರಕೃತ ವಾರ್ತಿಕದಿಂದ ಪ್ರತ್ಯಯ ಮತ್ತು ಆಗಮ ಎರಡೂ ವೈಕಲ್ಪಿಕವಾಗಿದೆ. ಆದ್ದರಿಂದ 'ಆನುಕ್, ಮತ್ತು 'ಙೀಷ್(ಈ)' ಬಾರದ ಪಕ್ಷದಲ್ಲಿ "ಅಜಾದ್ಯದಷ್ಟಾಪ್" ಎಂಬ ಸೂತ್ರದಿಂದ 'ಟಾಪ್(ಆ)' ಬಂದು ಅರ್ಯಾ ಎಂದು ರೂಪವಾಗುತ್ತದೆ

ಉದಾ-3. ಕ್ಷತ್ರಿಯಾಣೀ, 4. ಕ್ಷತ್ರಿಯಾ। (ಕ್ಷತ್ರಿಯ ಜಾತಿಗೆ ಸೇರಿದ ಸ್ತ್ರೀ) ಈ ಎರಡು ಶಬ್ದಗಳ ರೂಪಗಳೂ ಮೇಲಿನ ಪ್ರಕ್ರಿಯೆಯನ್ನೇ ಅವಲಂಬಿಸಿ . ಕ್ಷತ್ರಿಯಾಣೀ, ಕ್ಷತ್ರಿಯಾ ಎಂದು ರೂಪಗಳಾಗುತ್ತವೆ.

**(ಙೀಷ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1266. ಕ್ರೀತಾತ್ ಕರಣಪೂರ್ವಾತ್(4.1.50)**

ವೃತ್ತಿ-ಕ್ರೀತಾನ್ತಾತ್ ಅದನ್ತಾತ್ ಕರಣಾದೇಃ ಸ್ತ್ರಿಯಾಂ ಙೀಷ ಸ್ಯಾತ್।ವಸ್ತ್ರಕ್ರೀತೀ। ಕ್ವಚಿನ್ನ। ಧನಕ್ರೀತಾ।

ಅ.ವೃ -"ಅನ್ಯತೋ ಙೀಷ್"ಎಂಬ ಸೂತ್ರದಿಂದ 'ಙೀಷ್, ಎಂಬ ಪದವು ಅನುವೃತ್ತವಾಗುತ್ತದೆ. ಅತಃ, ಪ್ರಾತಿಪದಿಕಾತ್, ಸ್ತ್ರಿಯಾಮ್, ಪ್ರತ್ಯಯಃ ಮತ್ತು ಪರಶ್ಚ ಎಂಬವು ಅಧಿಕಾರ ಸೂತ್ರಗಳಾಗಿವೆ.

ಅರ್ಥ-'ಕ್ರೀತ' ಶಬ್ದವು ಯಾವ ಶಬ್ದಸ್ವರೂಪಕ್ಕೆ ಅಂತವಾಗಿದೆಯೋ, ಹಾಗೆಯೇ ಕರಣವಾಚಕ ಶಬ್ದವು ಯಾವ ಶಬ್ದ ಸ್ವರೂಪಕ್ಕೆ ಪೂರ್ವ ಅವಯವವಾಗಿದೆಯೋ ಅಂತಹ ಅದನ್ತ ಪ್ರಾತಿಪದಿಕದಮೇಲೆ ಸ್ತ್ರೀತ್ವ ವಿವಕ್ಷೆಯಲ್ಲಿ 'ಙೀಷ್(ಈ)' ಪ್ರತ್ಯಯವು ಬರುತ್ತದೆ.

ಉದಾ-1 ವಸ್ತ್ರಕ್ರೀತೀ (ವಸ್ತ್ರದಿಂದ ಕೊಂಡುಕೊಳ್ಳಲ್ಪಟ್ಟ ಸ್ತ್ರೀಲಿಂಗ ವಾಚಕ ಸಂಸ್ಕೃತ ಶಬ್ದಗಳು.

ಉದಾ-ಸ್ತ್ರೀ ಮತ್ತು ಭೂಮಿ)-'ವಸ್ತ್ರೈಃ ಕ್ರೀತಾ' ಎಂಬ ವಿಗ್ರಹದಲ್ಲಿ, "ಕರ್ತೃಕರಣೇ ಕೃತಾ ಬಹುಳಂ" ಎಂಬ ಸೂತ್ರದಿಂದ ಸಮಾಸವಾಗಿದೆ. ಇದು ಕರಣ(ವಸ್ತ್ರ) ಪೂರ್ವಕವಾಗಿಯೂ ಇದೆ, ಮತ್ತು ಅ-ಕಾರಾಂತ 'ಕ್ರೀತ' ಶಬ್ದವಾಗಿಯೂ ಇದೆ. ಪಕೃತ ಸೂತ್ರದಿಂದ 'ಙೀಷ್(ಈ)' ಬಂದು, ವಸ್ತ್ರಕ್ರೀತ+ಙೀಷ್(ಈ) ಎಂದಿದ್ದಾಗ, "ಯಸ್ಯೇತಿ ಚ" ಎಂಬುದರಿಂದ 'ಅ' ಕಾರ ಲೋಪವಾಗಿ ವಸ್ತ್ರಕ್ರೀತ್+ಈ=ವಸ್ತ್ರಕ್ರೀತೀ ಎಂದಾಗಿದೆ. ಇದರಮೇಲೆ 'ಸುಪ್' ಪ್ರತ್ಯಯವನ್ನು ಸ್ರೆರಿಸಿದಮೇಲೆ 'ಸ್' ಕಾರ ಲೋಪವಾದಾಗ ವಸ್ತ್ರಕ್ರೀತೀ ಎಂದೇ ಉಳಿಯುತ್ತದೆ. ಕೆಲವೆಡೆಯಲ್ಲಿ ಈ ಸೂತ್ರ ಅನ್ವಯಿಸುವುದಿಲ್ಲ.

ಉದಾ-2, ಧನಕ್ರೀತಾ-(ಧನದಿಂದ ಕೊಂಡುಕೊಳ್ಳಲ್ಪಟ್ಟ)-ಈ ಉದಾಹರಣೆಯಲ್ಲಿ, 'ಙೀಷ್(ಈ)' ಬಾರದೇ 'ಟಾಪ್(ಆ)' ಪ್ರತ್ಯಯಬಂದು ಧನ+ಕ್ರೀತ+ಟಾಪ್(ಆ) ಬಂದು, ಸವರ್ಣದೀರ್ಘ ಸಂಧಿಯಿಂದ ಧನಕ್ರೀತಾ ಎಂದಾಗಿದೆ.

**(ಙೀಷ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1267. ಸ್ವಾಙ್ಗಾಚ್ಚೋಪಸರ್ಜನಾದಸಂಯೋಗೋಪಧಾತ್। (4.1.54)**

ವೃತ್ತಿ-ಅಸಂಯೋಗೋಪಧಂ ಉಪಸರ್ಜನಂ ಯತ್ ಸ್ವಾಙ್ಗಂ ತದನ್ತಾತ್ ಅದನ್ತಾತ್ ಙೀಷ್ ವಾ ಸ್ಯಾತ್। ಕೇಶಾನ್ ಅತಿಕ್ರಾನ್ತಾ ಅತಿಕೇಶೀ, ಅತಿಕೇಶಾ। ಚನ್ದ್ರಮುಖೀ, ಚನ್ದ್ರಮುಖಾ। ಅಸಂಯೋಗೋಪಧಾತ್ ಕಿಮ್? ಸುಗುಲ್ಫಾ। ಉಪಸರ್ಜನಾತ್ ಕಿಂ? ಶಿಖಾ।

ಪ. ಛೇ-ಸ್ವಾಙ್ಗಾತ್, ಚ, ಉಪಸರ್ಜನಾತ್, ಅಸಂಯೋಗೋಪಧಾತ್।

ಅ.ವೃ-"ಅನ್ಯತೋ ಙೀಷ್" ಎಂಬ ಸೂತ್ರದಿಂದ 'ಙೀಷ್' ಎಂಬ ಪದವು ಅನುವೃತ್ತವಾಗಿದೆ. ಅತಃ, ಪ್ರಾತಿಪದಿಕಾತ್,ಸ್ತ್ರಿಯಾಮ್, ಪ್ರತ್ಯಯಃ ಮತ್ತು ಪರಶ್ಚ ಎಂಬವು ಅಧಿಕಾರಸೂತ್ರಗಳಾಗಿವೆ.

ಅರ್ಥ-ಉಪಧೆಯಲ್ಲಿ ಸಂಯೋಗವಿಲ್ಲದೇ ಇರುವ ಉಪಸರ್ಜನ ಸಂಜ್ಞೆಯುಳ್ಳ ಸ್ವಾಙ್ಗ ವಾಚಕ ಶಬ್ದವು ಅಂತದಲ್ಲಿರುವ ಅದನ್ತ (ಹ್ರಸ್ವ-ಅಕಾರಾಂತ) ಪ್ರಾತಿಪದಿಕದಮೇಲೆ ಸ್ತ್ರೀತ್ವ ವಿವಕ್ಷೆಯಲ್ಲಿ ವಿಕಲ್ಪದಿಂದ 'ಙೀಷ್(ಈ)' ಪ್ರತ್ಯಯವು ಬರುತ್ತದೆ.

'ಸ್ವಾಙ್ಗ' ಎಂಬ ಶಬ್ದಕ್ಕೆ ಪಾರಿಭಾಷಿಕ ಅರ್ಥ ಇದೆ. ಮಹಾಭಾಷ್ಯಕಾರರು ಇದಕ್ಕೆ 3 ಅರ್ಥಗಳನ್ನು ಹೇಳಿರುವರು-

ಅದ್ರವಂ ಮೂರ್ತಿಮತ್ ಸ್ವಾಙ್ಗಮ್, ಪ್ರಾಣಿಸ್ಥಮವಿಕಾರಜಂ।
ಅತಸ್ಥಂ ತ್ರತ್ರ ದೃಷ್ಟಂ ಚ ತೇನ ಚೇತ್ ತತ್ತಥಾಯುತಮ್॥

ಸ್ವಾಙ್ಗದ ಮೊದಲನೇ ಲಕ್ಷಣ -(ಇದಕ್ಕೆ ತನ್ನ ಅಙ್ಗವೆಂದು ಅರ್ಥವಲ್ಲ, ಆದರೆ ಇದಕ್ಕೆ ಪಾರಿಭಾಷಿಕ ಅರ್ಥವಿದೆ)ಅದ್ರವಂ-ದ್ರವವಲ್ಲದ್ದು, ಮೂರ್ತಿಮತ್-ಆಕಾರವುಳ್ಳದ್ದು, ಪ್ರಾಣಿಸ್ಥಂ-ಪ್ರಾಣಿಗಳಲ್ಲಿ ಇರುವಂಥಾದ್ದು. ಅವಿಕಾರಜ-ಪಿತ್ತಾದಿ ವಿಕಾರಜನ್ಯವಾದದ್ದಲ್ಲದ. ಇವು ಮೂರು ಸ್ವಾಙ್ಗದ ಲಕ್ಷಣಗಳು ಪ್ರಾಣಿಯಲ್ಲೇ ಇದ್ದರೆ ಮಾತ್ರ ಸ್ವಾಙ್ಗವೆನಿಸುತ್ತದೆ.

ಸ್ವಾಙ್ಗದ ಎರಡನೇ ಲಕ್ಷಣ–ಅತಸ್ಥಂ ಎಂದರೆ ಪ್ರಾಣಿಭಿನ್ನವಾದವುಗಳಲ್ಲಿ (ಪ್ರಾಣಿಯಂತಿರುವ ಗೊಂಬೆಗಳಲ್ಲಿ) ಇರುವಂಥಾದ್ದು. ತತ್ರ–ಅಲ್ಲಿ (ಪ್ರಾಣಿಗಳಲ್ಲಿ) ದೃಷ್ಟಂ ಚ–ಪ್ರಾಣಿಗಳಲ್ಲಿಯೂ ನೋಡುವಂಥಾದ್ದಾಗಿರುವ. ಸ್ವಾಙ್ಗದ ಮೂರನೇ ಲಕ್ಷಣ–ತತ್–ಅಚೇತನವಾದ ಪ್ರತಿಮಾದಿಗಳು. ತಥಾ–ಪ್ರಾಣಿಗಳಂತೆ ತೇನ–ಸ್ತನ ಮೊದಲಾದ ಆಕೃತಿಗಳಿಂದ (ಹೆಣ್ಣಿನ ಗೊಂಬೆಗಳಲ್ಲಿ ಇರುವ ಸ್ತನಗಳು ಪ್ರಾಣಿಗಳಲ್ಲಿಯೂ ಕಾಣಿಸಿಕೊಳ್ಳುತ್ತವೆ ಅಂತಹ ಎಂದು ಅರ್ಥ). ಯುತಂ ಚೇತ್–ಕೂಡಿ ಇದ್ದರೆ, ತತ್–ಅದು, ಅಪ್ರಾಣಿನೋಽಪಿ–ಪ್ರಾಣಿಯಲ್ಲದ್ದಕ್ಕೂ ಕೂಡ ಸ್ವಾಙ್ಗವೆಂದು ಹೇಳಲಾಗುತ್ತದೆ. ಇಲ್ಲಿ 'ಸ್ವಾಙ್ಗಂ ಅಪ್ರಾಣಿನೋಽಪಿ' ಎಂಬುದು ಭಾಷ್ಯಕಾರರ ವಚನ.

ಉದಾ–1. ಕೇಶಾನ್ ಅತಿಕ್ರಾನ್ತಾ ಅತಿಕೇಶೀ, ಅತಿಕೇಶಾ।(ಕೇಶಗಳನ್ನು ಮೀರಿದ ಉದ್ದವಾದ ಮಾಲೆ)–'ಅತಿಕೇಶ ಶಬ್ದದಲ್ಲಿರುವ ಉಪಧೆಯಲ್ಲಿ ಸಂಯುಕ್ತಾಕ್ಷರವಿಲ್ಲ. ಮೊದಲನೇ ಲಕ್ಷಣದ ಪ್ರಕಾರ 'ಕೇಶ' ವೆಂಬುದು 'ಸ್ವಾಙ್ಗವಾಗಿದೆ' ಮತ್ತು ಆ 'ಕೇಶ' ಶಬ್ದವು ಅಂತ್ಯದಲ್ಲಿಯೂ ಇದೆ. ಅಂತಹ ಶಬ್ದಕ್ಕೆ ಪ್ರಕೃತ ಸೂತ್ರದಿಂದ 'ಜೀಷ್(ಈ)' ಬಂದು ವಿಭಕ್ತಿ ಕಾರ್ಯ ಮಾಡಿದಮೇಲೆ, 'ಸ್' ಕಾರಕ್ಕೆ ಲೋಪ ಬಂದು 'ಅತಿಕೇಶೀ' ಎಂದು ರೂಪವಾಗಿದೆ. 'ಜೀಷ್(ಈ)' ಬಾರದ ಪಕ್ಷದಲ್ಲಿ 'ಟಾಪ್(ಆ)' ಬಂದು, 'ಅತಿಕೇಶಾ' ಎಂದಾಗಿದೆ.

ಉದಾ–2 –ಚನ್ದ್ರಮುಖೀ, ಚನ್ದ್ರಮುಖಾ। (ಚಂದ್ರನಂತೆ ಮುಖವುಳ್ಳವಳು) ಮೇಲಿನ ಉದಾಹರಣೆಯಲ್ಲಿ ಹೇಗೋ ಹಾಗೆಯೇ ಉಪಧೆಯಲ್ಲಿ ಸಂಯುಕ್ತಾಕ್ಷರವಿಲ್ಲ. ಮೊದಲನೇ ಲಕ್ಷಣದ ಪ್ರಕಾರ 'ಮುಖ' ವೆಂಬುದು 'ಸ್ವಾಙ್ಗ'ವಾಗಿದೆ ಮತ್ತು ಆ 'ಮುಖ' ಶಬ್ದವು ಅಂತ್ಯದಲ್ಲಿಯೂ ಇದೆ. ಅಂತಹ ಶಬ್ದಕ್ಕೆ ಪ್ರಕೃತ ಸೂತ್ರದಿಂದ 'ಜೀಷ್(ಈ)' ಬಂದು ವಿಭಕ್ತಿ ಕಾರ್ಯ ಮಾಡಿದಮೇಲೆ, 'ಸ್' ಕಾರಕ್ಕೆ ಲೋಪ ಬಂದು 'ಚಂದ್ರಮುಖೀ' ಎಂದು ರೂಪವಾಗಿದೆ. 'ಜೀಷ್(ಈ)' ಬಾರದ ಪಕ್ಷದಲ್ಲಿ 'ಟಾಪ್(ಆ)' ಬಂದು, 'ಚಂದ್ರಮುಖಾ' ಎಂದಾಗಿದೆ.

ಅಸಂಯೋಗೋಪಧಾತ್ ಕಿಮ್? ಸುಗುಲ್ಫಾ। (ಸುಂದರವಾದ ಮುಂಗಾಲುಮಣಿ ಕಟ್ಟುಳ್ಳವಳು) –ಪ್ರಕೃತ ಸೂತ್ರದಲ್ಲಿ ಅಸಂಯೋಗೋಪಧಾತ್ ಎಂದು ಹೇಳದಿದ್ದರೆ–'ಸುಗುಲ್ಫ' ಶಬ್ದವು ಸಂಯೋಗೋಪಧವಾಗಿರುವುದರಿಂದ, ಅದಕ್ಕೂ 'ಜೀಷ್(ಈ)' ಬಂದು ಅನಿಷ್ಟ ರೂಪ ಬರುತ್ತಿತ್ತು. ಅದನ್ನು ಬಾಧಿಸಿ 'ಟಾಪ್(ಆ)' ಬಂದು 'ಸುಗುಲ್ಫಾ' ಎಂದು ರೂಪವಾಗಿದೆ.

ಉಪಸರ್ಜನಾತ್ ಕಿಂ? ಶಿಖಾ। (ಶಿಖೆ)–ಪ್ರಕೃತ ಸೂತ್ರದಲ್ಲಿ ಉಪಸರ್ಜನಾತ್ ಎಂದು ಹೇಳದಿದ್ದರೆ ಉಪಸರ್ಜನವಲ್ಲದ 'ಶಿಖಾ' ಮೊದಲಾದ ಶಬ್ದಗಳಿಗೂ 'ಜೀಷ್(ಈ)' ಬಂದು ಅನಿಷ್ಟ ರೂಪ ಬರುತ್ತಿತ್ತು. ಅದನ್ನು ಬಾಧಿಸಿ 'ಟಾಪ್(ಆ)' ಬಂದು 'ಶಿಖಾ' ಎಂದು ರೂಪವಾಗಿದೆ.

**(ಜೀಷ್ ಪ್ರತ್ಯಯವನ್ನು ನಿಷೇಧಿಸುವ ಸೂತ್ರ)**

**ಸೂತ್ರ-1268. ನ ಕ್ರೋಡಾದಿ ಬಹ್ವಚಃ। (4.1.56)**

ವೃತ್ತಿ-ಕ್ರೋಡಾದೇಃ ಬಹ್ವಚಶ್ಚ ಸ್ವಾಙ್ಗಾತ್ ನ ಜೀಷ್। ಕಲ್ಯಾಣಕ್ರೋಡಾ। ಆಕೃತಿಗಣೋऽಯಮ್। ಸುಜಘನಾ।

ಅ.ವೃ-"ಅನ್ಯತೋ ಜೀಷ್" ಎಂಬ ಸೂತ್ರದಿಂದ 'ಜೀಷ್' ಎಂಬ ಪದವು ಅನುವೃತ್ತವಾಗಿದೆ. "ಸ್ವಾಙ್ಗಾಚ್ಚೋಪಸರ್ಜನಾದಸಂಯೋಗೋಪಧಾತ್। (4.1.54)"ಎಂಬ ಸೂತ್ರದಿಂದ 'ಸ್ವಾಙ್ಗಾತ್' ಮತ್ತು 'ಉಪಸರ್ಜನಾತ್' ಎಂಬ ಪದಗಳು ಅನುವೃತ್ತವಾಗುತ್ತವೆ. ಪ್ರಾತಿಪದಿಕಾತ್,ಸ್ತ್ರಿಯಾಮ್, ಪ್ರತ್ಯಯಃ ಮತ್ತು ಪರಶ್ಚ ಮೊದಲಾದವುಗಳು ಅಧಿಕಾರಸೂತ್ರಗಳಾಗಿವೆ.

ಅರ್ಥ-'ಕ್ರೋಡಾದಿ'ಗಣದಲ್ಲಿ ಪಠಿತವಾದ 'ಸ್ವಾಙ್ಗ' ವಾಚಕ(ಶಬ್ದ)ಗಳ ಮತ್ತು ಬಹ್ವಚ್(ಅನೇಕ ಅಚ್)ಗಳುಳ್ಳ ಸ್ವಾಙ್ಗವಾಚಕ ಪ್ರಾತಿಪದಿಕಗಳಮೇಲೆ ಸ್ತ್ರೀತ್ವ ವಿವಕ್ಷೆಯಲ್ಲಿ 'ಜೀಷ್' ಪ್ರತ್ಯಯವು ಬರುವುದಿಲ್ಲ. ಇದು ಹಿಂದಿನ ಸೂತ್ರವನ್ನು ನಿಷೇಧಿಸುತ್ತದೆ. 'ಕ್ರೋಡಾದಿ'ಯು 'ಆಕೃತಿ' ಗಣವಾಗಿದೆ. ಈ ಗಣದಲ್ಲಿ ಬಹಳ ಅಚ್-ಶಬ್ದಗಳಿವೆ.

ಉದಾ-1. ಕಲ್ಯಾಣ ಕ್ರೋಡಾ (ಸುಂದರವಾದ ಎದೆಯುಳ್ಳವಳು, ಮತ್ತು ಹೆಣ್ಣುಕುದುರೆ) 'ಕಲ್ಯಾಣಕ್ರೋಡ' ಶಬ್ದದಮೇಲೆ ಹಿಂದಿನ ಸೂತ್ರದಿಂದ 'ಜೀಷ್' ಪ್ರತ್ಯಯವು ಬರಬೇಕಾಗಿತ್ತು. ಅದನ್ನು ಬಾಧಿಸಿ ಪ್ರಕೃತ ಸೂತ್ರದಿಂದ 'ಟಾಪ್(ಆ) ಬಂದು ವಿಭಕ್ತಿ ಕಾರ್ಯ ಮಾಡಿದಮೇಲೆ 'ಸ್' ಕಾರಕ್ಕೆ ಲೋಪ ಬಂದು 'ಕಲ್ಯಾಣಕ್ರೋಡಾ' ಎಂದೇ ರೂಪ ಉಳಿಯುತ್ತದೆ.ಕ್ರೋಡಾದಿ ಗಣದಲ್ಲಿ ಪಠಿತವಾಗಿಲ್ಲದೇ ಇರುವ ಶಬ್ದಗಳು ಕ್ರೋಡಾದಿ ಗಣವನ್ನು ಅನುಕರಣೆ ಮಾಡುವದರಿಂದ ಈ ಕ್ರೋಡಾದಿ ಗಣವು ಆಕೃತಿ ಗಣವಾಗಿದೆ.

ಉದಾ-2. ಸುಜಘನಾ (ಶೋಭನವಾದ ಜಘನವುಳ್ಳವಳು)-'ಜಘನ' ಶಬ್ದವು 'ಆಕೃತಿಗಣ' ಪಠಿತವಾಗಿಲ್ಲದಿದ್ದರೂ ಅದಕ್ಕೆ 'ಟಾಪ್(ಆ)' ಬಂದು 'ಸುಜಘನಾ' ಎಂದು ರೂಪವಾಗಿದೆ.

**(ಜೀಷ್ ಪ್ರತ್ಯಯವನ್ನು ನಿಷೇಧಿಸುವ ಸೂತ್ರ)**

**ಸೂತ್ರ-1269.-ನಖಮುಖಾತ್ ಸಂಜ್ಞಾಯಾಮ್। (4.1.58)**

ವೃತ್ತಿ-ನ ಜೀಷ್।

ಅ.ವೃ -"ಅನ್ಯತೋ ಜೀಷ್" ಎಂಬ ಸೂತ್ರದಿಂದ 'ಜೀಷ್' ಎಂಬ ಪದವು ಅನುವೃತ್ತವಾಗಿದೆ."ಸ್ವಾಙ್ಗಾಚ್ಚೋಪಸರ್ಜನಾದಸಂಯೋಗೋಪಧಾತ್। (4.1.54)"ಎಂಬ ಸೂತ್ರದಿಂದ 'ಸ್ವಾಙ್ಗಾತ್' ಎಂಬ ಪದವು ಮತ್ತು "ನ ಕ್ರೋಡಾದಿ ಬಹ್ವಚಃ" (4.1.56) ಎಂಬ ಸೂತ್ರದಿಂದ 'ನ' ಎಂಬ ಪದವು ಅನುವೃತ್ತವಾಗುತ್ತದೆ. ಪ್ರಾತಿಪದಿಕಾತ್, ಸ್ತ್ರಿಯಾಮ್, ಪ್ರತ್ಯಯಃ ಮತ್ತು ಪರಶ್ಚ ಮೊದಲಾದವುಗಳು ಅಧಿಕಾರಸೂತ್ರಗಳಾಗಿವೆ.

ಅರ್ಥ-ಸ್ವಾಙ್ಗವಾಚಕಗಳಾದ 'ನಖ' ಮತ್ತು 'ಮುಖ' ಶಬ್ದಗಳನ್ನು ಕೊನೆಯಲ್ಲಿ

ಉಳ್ಳ ಪ್ರಾತಿಪದಿಕದ ನಂತರ ಸ್ತ್ರೀತ್ವ ವಿವಕ್ಷೆಯಲ್ಲಿ 'ಙೀಷ್' ಪ್ರತ್ಯಯವು ಬರುವುದಿಲ್ಲ.

"ಸ್ವಾಙ್ಗಾಚ್ಚೋಪಸರ್ಜನಾದಸಂಯೋಗೋಪಧಾತ್। (4.1.54)"ಎಂಬ ಸೂತ್ರವನ್ನು ಈ ಪ್ರಕೃತ ಸೂತ್ರವು ನಿಷೇಧಿಸುತ್ತದೆ.

**(ಣತ್ವ ವಿಧಾಯಕ ಸೂತ್ರ)**

ಸೂತ್ರ–1270.–ಪೂರ್ವಪದಾತ್ ಸಂಜ್ಞಾಯಾಮಗಃ (8.4.3)

ವೃತ್ತಿ–ಪೂರ್ವಪದಸ್ಥಾತ್ ನಿಮಿತ್ತಾತ್ ಪರಸ್ಯ ನಸ್ಯ ಣಃ ಸ್ಯಾತ್ ಸಂಜ್ಞಾಯಾಂ, ನ ತು ಗ–ಕಾರ ವ್ಯವಧಾನೇ। ಶೂರ್ಪಣಖಾ। ಗೌರಮುಖಾ। ಸಂಜ್ಞಾಯಾಂ ಕಿಮ್? ತಾಮ್ರಮುಖೀ ಕನ್ಯಾ।

ಪ. ಛೇ–ಪೂರ್ವಪದಾತ್, ಸಂಜ್ಞಾಯಾಂ, ಅಗಃ।

ಅ.ವೃ–"ರಷಾಭ್ಯಾಂ ನೋ ಣಃ ಸಮಾನಪದೇ" ಎಂಬ ಸೂತ್ರವು ಅನುವೃತ್ತವಾಗುತ್ತದೆ.

ಅರ್ಥ–ಪೂರ್ವಪದಸ್ಥ ನಿಮಿತ್ತಕ್ಕಿಂತ ಪರದಲ್ಲಿರುವ 'ನ್' ಕಾರಕ್ಕೆ 'ಣ್' ಕಾರವು ಆದೇಶವಾಗಿ ಬರುತ್ತದೆ. ಆದರೆ 'ಗ್' ಕಾರವು ವ್ಯವಹಿತವಾಗಿದ್ದರೆ (ಣತ್ವವು) ಆದೇಶವಾಗಿ ಬರುವುದಿಲ್ಲ. 'ನ್' ಕಾರದ ಪೂರ್ವದಲ್ಲಿ ರೇಫ, ಷಕಾರ ಮತ್ತು ಋಕಾರಗಳಲ್ಲಿ ಯಾವದಾದರೊಂದು ಇದ್ದಲ್ಲಿ ಣತ್ವಾದೇಶ ಬರುತ್ತದೆ. ಈ ಣತ್ವದ ನಿಮಿತ್ತವು ಪೂರ್ವಪದದಲ್ಲಿ ಇರಬೇಕು.

ಉದಾ1.–ಶೂರ್ಪಣಖಾ (ಈ ಹೆಸರುಳುಳ್ಳವಳು ರಾವಣನ ಸಹೋದರಿ). ಇವಳ ನಖವು ಮರದಂತೆ ಇದ್ದವು. ಮರದಂತೆ ನಖಗಳುಳ್ಳವಳು ಯಾವಳೋ ಅವಳು. ಶೂರ್ಪ+ನಖ ಎಂದಿದ್ದಾಗ, "ಸ್ವಾಙ್ಗಾಚ್ಚೋಪಸರ್ಜನಾದಸಂಯೋಗೋಪಧಾತ್। (4.1.54)"ಎಂಬ ಸೂತ್ರದಿಂದ ಙೀಷ್(ಈ) ಬರಬೇಕಾಗಿತ್ತು, ಆದರೆ ನಖಮುಖಾತ್ ಸಂಜ್ಞಾಯಾಮ್। (4.1.58) ಎಂಬ ಸೂತ್ರದಿಂದ, ಙೀಷ್(ಈ) ನಿಷೇಧಿಸಲ್ಪಟ್ಟು ಶೂರ್ಪನಖಾ ಎಂದು ರೂಪವಾಯಿತು. ಇದು ಸಮಾನಪದ ಅಲ್ಲದ್ದರಿಂದ ಇಲ್ಲಿ ರಷಾಭ್ಯಾಂ ನೋ ಣಸ್ಸಮಾನಪದೇ ಎಂಬ ಸೂತ್ರಕ್ಕೆ ಅವಕಾಶವಿಲ್ಲ. ಇದು ಸಂಜ್ಞೆಯಾಗಿಲ್ಲದಿದ್ದರೆ ಶೂರ್ಪನಖಾ ಎಂದೇ ರೂಪವಿರುತ್ತಿತು ಆದರೆ ಇದು ಹೆಸರಾ(ಸಂಜ್ಞೆ)ಗಿರೋಣದ್ದರಿಂದ ಪ್ರಕೃತ ಸೂತ್ರದಿಂದ ಣತ್ವ ಹಾಗೂ ಅಜಾದ್ಯದಷ್ಟಾಪ್ ಸೂತ್ರದಿಂದ ಟಾಪ್(ಆ) ಬಂದು ಬಂದು ಶೂರ್ಪಣಖಾ ಎಂದು ರೂಪವಾಗಿದೆ.

ಉದಾ. 2–ಗೌರಮುಖಾ (ಈ ಹೆಸರುಳ್ಳ ಸ್ತ್ರೀ)–ಗೌರಮುಖ ಶಬ್ದದಮೇಲೆ ಹಿಂದಿನಂತೆ ಙೀಷ್(ಈ) ಬರಬೇಕಾಗಿತ್ತು. ಆದರೆ ನಖಮುಖಾತ್ ಸಂಜ್ಞಾಯಾಮ್। (1263/4.1.58) ಎಂಬ ಸೂತ್ರದಿಂದ, ಙೀಷ್(ಈ) ನಿಷೇಧಿಸಲ್ಪಟ್ಟು, ಣತ್ವಕ್ಕೆ ಅವಕಾಶವಿಲ್ಲದೆ ಅಜಾದ್ಯದಷ್ಟಾಪ್ ಸೂತ್ರದಿಂದ ಟಾಪ್(ಆ) ಬಂದು ಗೌರಮುಖಾ ಎಂದಾಗಿದೆ.

**(ಙೀಷ್ ಪ್ರತ್ಯಯವನ್ನು ನಿಷೇಧಿಸುವ ಸೂತ್ರ)**

**ಸೂತ್ರ-1268. ನ ಕ್ರೋಡಾದಿ ಬಹ್ವಚಃ। (4.1.56)**

ವೃತ್ತಿ-ಕ್ರೋಡಾದೇಃ ಬಹ್ವಚಶ್ಚ ಸ್ವಾಙ್ಗಾತ್ ನ ಙೀಷ್। ಕಲ್ಯಾಣಕ್ರೋಡಾ। ಆಕೃತಿಗಣೋऽಯಮ್। ಸುಜಘನಾ।

ಅ.ವೃ-"ಅನ್ಯತೋ ಙೀಷ್" ಎಂಬ ಸೂತ್ರದಿಂದ 'ಙೀಷ್' ಎಂಬ ಪದವು ಅನುವೃತ್ತವಾಗಿದೆ. "ಸ್ವಾಙ್ಗಾಚ್ಚೋಪಸರ್ಜನಾದಸಂಯೋಗೋಪಧಾತ್। (4.1.54)"ಎಂಬ ಸೂತ್ರದಿಂದ 'ಸ್ವಾಙ್ಗಾತ್' ಮತ್ತು 'ಉಪಸರ್ಜನಾತ್' ಎಂಬ ಪದಗಳು ಅನುವೃತ್ತವಾಗುತ್ತವೆ. ಪ್ರಾತಿಪದಿಕಾತ್,ಸ್ತ್ರಿಯಾಮ್, ಪ್ರತ್ಯಯಃ ಮತ್ತು ಪರಶ್ಚ ಮೊದಲಾದವುಗಳು ಅಧಿಕಾರಸೂತ್ರಗಳಾಗಿವೆ.

ಅರ್ಥ-'ಕ್ರೋಡಾದಿ'ಗಣದಲ್ಲಿ ಪಠಿತವಾದ 'ಸ್ವಾಙ್ಗ' ವಾಚಕ(ಶಬ್ದ)ಗಳ ಮತ್ತು ಬಹ್ವಚ್(ಅನೇಕ ಅಚ್)ಗಳುಳ್ಳ ಸ್ವಾಙ್ಗವಾಚಕ ಪ್ರಾತಿಪದಿಕಗಳಮೇಲೆ ಸ್ತ್ರೀತ್ವ ವಿವಕ್ಷೆಯಲ್ಲಿ 'ಙೀಷ್' ಪ್ರತ್ಯಯವು ಬರುವುದಿಲ್ಲ. ಇದು ಹಿಂದಿನ ಸೂತ್ರವನ್ನು ನಿಷೇಧಿಸುತ್ತದೆ. 'ಕ್ರೋಡಾದಿ'ಯು 'ಆಕೃತಿ' ಗಣವಾಗಿದೆ. ಈ ಗಣದಲ್ಲಿ ಬಹಳ ಅಚ್-ಶಬ್ದಗಳಿವೆ.

ಉದಾ-1. ಕಲ್ಯಾಣ ಕ್ರೋಡಾ (ಸುಂದರವಾದ ಎದೆಯುಳ್ಳವಳು, ಮತ್ತು ಹೆಣ್ಣುಕುದುರೆ) 'ಕಲ್ಯಾಣಕ್ರೋಡ' ಶಬ್ದದಮೇಲೆ ಹಿಂದಿನ ಸೂತ್ರದಿಂದ 'ಙೀಷ್' ಪ್ರತ್ಯಯವು ಬರಬೇಕಾಗಿತ್ತು. ಅದನ್ನು ಬಾಧಿಸಿ ಪ್ರಕೃತ ಸೂತ್ರದಿಂದ 'ಟಾಪ್(ಆ) ಬಂದು ವಿಭಕ್ತಿ ಕಾರ್ಯ ಮಾಡಿದಮೇಲೆ 'ಸ್' ಕಾರಕ್ಕೆ ಲೋಪ ಬಂದು 'ಕಲ್ಯಾಣಕ್ರೋಡಾ' ಎಂದೇ ರೂಪ ಉಳಿಯುತ್ತದೆ.ಕ್ರೋಡಾದಿ ಗಣದಲ್ಲಿ ಪಠಿತವಾಗಿಲ್ಲದೇ ಇರುವ ಶಬ್ದಗಳು ಕ್ರೋಡಾದಿ ಗಣವನ್ನು ಅನುಕರಣೆ ಮಾಡುವದರಿಂದ ಈ ಕ್ರೋಡಾದಿ ಗಣವು ಆಕೃತಿ ಗಣವಾಗಿದೆ.

ಉದಾ-2. ಸುಜಘನಾ (ಶೋಭನವಾದ ಜಘನವುಳ್ಳವಳು)-'ಜಘನ' ಶಬ್ದವು 'ಆಕೃತಿಗಣ' ಪಠಿತವಾಗಿಲ್ಲದಿದ್ದರೂ ಅದಕ್ಕೆ 'ಟಾಪ್(ಆ)' ಬಂದು 'ಸುಜಘನಾ' ಎಂದು ರೂಪವಾಗಿದೆ.

**(ಙೀಷ್ ಪ್ರತ್ಯಯವನ್ನು ನಿಷೇಧಿಸುವ ಸೂತ್ರ)**

**ಸೂತ್ರ-1269.-ನಖಮುಖಾತ್ ಸಂಜ್ಞಾಯಾಮ್। (4.1.58)**

ವೃತ್ತಿ-ನ ಙೀಷ್।

ಅ.ವೃ -"ಅನ್ಯತೋ ಙೀಷ್" ಎಂಬ ಸೂತ್ರದಿಂದ 'ಙೀಷ್' ಎಂಬ ಪದವು ಅನುವೃತ್ತವಾಗಿದೆ."ಸ್ವಾಙ್ಗಾಚ್ಚೋಪಸರ್ಜನಾದಸಂಯೋಗೋಪಧಾತ್। (4.1.54)"ಎಂಬ ಸೂತ್ರದಿಂದ 'ಸ್ವಾಙ್ಗಾತ್' ಎಂಬ ಪದವು ಮತ್ತು "ನ ಕ್ರೋಡಾದಿ ಬಹ್ವಚಃ" (4.1.56) ಎಂಬ ಸೂತ್ರದಿಂದ 'ನ' ಎಂಬ ಪದವು ಅನುವೃತ್ತವಾಗುತ್ತದೆ. ಪ್ರಾತಿಪದಿಕಾತ್, ಸ್ತ್ರಿಯಾಮ್, ಪ್ರತ್ಯಯಃ ಮತ್ತು ಪರಶ್ಚ ಮೊದಲಾದವುಗಳು ಅಧಿಕಾರಸೂತ್ರಗಳಾಗಿವೆ.

ಅರ್ಥ-ಸ್ವಾಙ್ಗವಾಚಕಗಳಾದ 'ನಖ' ಮತ್ತು 'ಮುಖ' ಶಬ್ದಗಳನ್ನು ಕೊನೆಯಲ್ಲಿ

ಉಳ್ಳ ಪ್ರಾತಿಪದಿಕದ ನಂತರ ಸ್ತ್ರೀತ್ವ ವಿವಕ್ಷೆಯಲ್ಲಿ 'ಙೀಷ್' ಪ್ರತ್ಯಯವು ಬರುವುದಿಲ್ಲ. "ಸ್ವಾಙ್ಗಾಚ್ಚೋಪಸರ್ಜನಾದಸಂಯೋಗೋಪಧಾತ್। (4.1.54)"ಎಂಬ ಸೂತ್ರವನ್ನು ಈ ಪ್ರಕೃತ ಸೂತ್ರವು ನಿಷೇಧಿಸುತ್ತದೆ.

**(ಣತ್ವ ವಿಧಾಯಕ ಸೂತ್ರ)**

ಸೂತ್ರ–1270.–ಪೂರ್ವಪದಾತ್ ಸಂಜ್ಞಾಯಾಮಗಃ (8.4.3)

ವೃತ್ತಿ–ಪೂರ್ವಪದಸ್ಥಾತ್ ನಿಮಿತ್ತಾತ್ ಪರಸ್ಯ ನಸ್ಯ ಣಃ ಸ್ಯಾತ್ ಸಂಜ್ಞಾಯಾಂ, ನ ತು ಗ–ಕಾರ ವ್ಯವಧಾನೇ। ಶೂರ್ಪಣಖಾ। ಗೌರಮುಖಾ। ಸಂಜ್ಞಾಯಾಂ ಕಿಮ್? ತಾಮ್ರಮುಖೀ ಕನ್ಯಾ।

ಪ. ಛೇ–ಪೂರ್ವಪದಾತ್, ಸಂಜ್ಞಾಯಾಂ, ಅಗಃ।

ಅ.ವೃ–"ರಷಾಭ್ಯಾಂ ನೋ ಣಃ ಸಮಾನಪದೇ" ಎಂಬ ಸೂತ್ರವು ಅನುವೃತ್ತವಾಗುತ್ತದೆ.

ಅರ್ಥ–ಪೂರ್ವಪದಸ್ಥ ನಿಮಿತ್ತಕ್ಕಿಂತ ಪರದಲ್ಲಿರುವ 'ನ್' ಕಾರಕ್ಕೆ 'ಣ್' ಕಾರವು ಆದೇಶವಾಗಿ ಬರುತ್ತದೆ. ಆದರೆ 'ಗ್' ಕಾರವು ವ್ಯವಹಿತವಾಗಿದ್ದರೆ (ಣತ್ವವು) ಆದೇಶವಾಗಿ ಬರುವುದಿಲ್ಲ. 'ನ್' ಕಾರದ ಪೂರ್ವದಲ್ಲಿ ರೇಫ, ಷಕಾರ ಮತ್ತು ಋಕಾರಗಳಲ್ಲಿ ಯಾವದಾದರೊಂದು ಇದ್ದಲ್ಲಿ ಣತ್ವಾದೇಶ ಬರುತ್ತದೆ. ಈ ಣತ್ವದ ನಿಮಿತ್ತವು ಪೂರ್ವಪದದಲ್ಲಿ ಇರಬೇಕು.

ಉದಾ1.–ಶೂರ್ಪಣಖಾ (ಈ ಹೆಸರುಳುಳ್ಳವಳು ರಾವಣನ ಸಹೋದರಿ). ಇವಳ ನಖವು ಮರದಂತೆ ಇದ್ದವು. ಮರದಂತೆ ನಖಗಳುಳ್ಳವಳು ಯಾವಳೋ ಅವಳು. ಶೂರ್ಪ+ನಖ ಎಂದಿದ್ದಾಗ, "ಸ್ವಾಙ್ಗಾಚ್ಚೋಪಸರ್ಜನಾದಸಂಯೋಗೋಪಧಾತ್। (4.1.54)"ಎಂಬ ಸೂತ್ರದಿಂದ ಙೀಷ್(ಈ) ಬರಬೇಕಾಗಿತ್ತು, ಆದರೆ ನಖಮುಖಾತ್ ಸಂಜ್ಞಾಯಾಮ್। (4.1.58) ಎಂಬ ಸೂತ್ರದಿಂದ, ಙೀಷ್(ಈ) ನಿಷೇಧಿಸಲ್ಪಟ್ಟು ಶೂರ್ಪನಖಾ ಎಂದು ರೂಪವಾಯಿತು. ಇದು ಸಮಾನಪದ ಅಲ್ಲದ್ದರಿಂದ ಇಲ್ಲಿ ರಷಾಭ್ಯಾಂ ನೋ ಣಸ್ಸಮಾನಪದೇ ಎಂಬ ಸೂತ್ರಕ್ಕೆ ಅವಕಾಶವಿಲ್ಲ. ಇದು ಸಂಜ್ಞೆಯಾಗಿಲ್ಲದಿದ್ದರೆ ಶೂರ್ಪನಖಾ ಎಂದೇ ರೂಪವಿರುತ್ತಿತು ಆದರೆ ಇದು ಹೆಸರಾ(ಸಂಜ್ಞೆ)ಗಿರೋಣದ್ದರಿಂದ ಪ್ರಕೃತ ಸೂತ್ರದಿಂದ ಣತ್ವ ಹಾಗೂ ಅಜಾದ್ಯದಷ್ಟಾಪ್ ಸೂತ್ರದಿಂದ ಟಾಪ್(ಆ) ಬಂದು ಬಂದು ಶೂರ್ಪಣಖಾ ಎಂದು ರೂಪವಾಗಿದೆ.

ಉದಾ. 2–ಗೌರಮುಖಾ (ಈ ಹೆಸರುಳ್ಳ ಸ್ತ್ರೀ)–ಗೌರಮುಖ ಶಬ್ದದಮೇಲೆ ಹಿಂದಿನಂತೆ ಙೀಷ್(ಈ) ಬರಬೇಕಾಗಿತ್ತು. ಆದರೆ ನಖಮುಖಾತ್ ಸಂಜ್ಞಾಯಾಮ್। (1263/4.1.58) ಎಂಬ ಸೂತ್ರದಿಂದ, ಙೀಷ್(ಈ) ನಿಷೇಧಿಸಲ್ಪಟ್ಟು, ಣತ್ವಕ್ಕೆ ಅವಕಾಶವಿಲ್ಲದೆ ಅಜಾದ್ಯದಷ್ಟಾಪ್ ಸೂತ್ರದಿಂದ ಟಾಪ್(ಆ) ಬಂದು ಗೌರಮುಖಾ ಎಂದಾಗಿದೆ.

ಸಂಜ್ಞಾಯಾಂ ಕಿಮ್?-ಸಂಜ್ಞಾಯಾಮ್ ಎಂದು ಯಾಕೆ ಹೇಳಬೇಕು? ಎಂದರೆ ಸಂಜ್ಞಾಯಾಮ್ ಎಂಬ ಪದವನ್ನು ಉಪಯೋಗಿಸದಿದ್ದರೆ, ಸಂಜ್ಞಾ ಇದ್ದರೂ ಅಥವಾ ಇಲ್ಲದಿದ್ದರೂ ಎರಡೂ ಸ್ಥಳಗಳಲ್ಲಿಯೂ, ಙೀಷ್(ಈ) ಮಾತ್ರ ಬಾಧಿತವಾಗಿ ಟಾಪ್(ಆ) ಬಂದು ತಾಮ್ರಮುಖಾ ಎಂದು ರೂಪವಾಗುತ್ತಿತ್ತು. ಸಂಜ್ಞಾಯಾಮ್ ಎಂದು ಹೇಳಿದ್ದರಿಂದ, ಇಲ್ಲಿ ಙೀಷ್(ಈ) ನಿಷೇಧಿಸಲ್ಪಡದೇ ತಾಮ್ರಮುಖೀ(ಕನ್ಯಾ) ಎಂದು ರೂಪವಾಗಿದೆ. "ಸ್ವಾಙ್ಗಾಚ್ಚೋಪಸರ್ಜನಾದಸಂಯೋಗೋಪಧಾತ್। (4.1.54)"ಎಂಬ ಸೂತ್ರದಿಂದ ಙೀಷ್(ಈ) ಬಂದಪಕ್ಷದಲ್ಲಿ ವೈಕಲ್ಪಿಕವಾಗಿ ತಾಮ್ರಮುಖೀ ಎಂದೂ ಬಾರದಪಕ್ಷದಲ್ಲಿ ಟಾಪ್ ಬಂದು ತಾಮ್ರಮುಖಾ ಎಂದು ರೂಪವಾಗುತ್ತದೆ.

**(ಙೀಷ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1271.-ಜಾತೇರಸ್ತ್ರೀವಿಷಯಾದಯೋಪಧಾತ್**(4.1.63)

ವೃತ್ತಿ-ಜಾತಿವಾಚೀ ಯನ್ನ ಚ ಸ್ತ್ರಿಯಾಂ ನಿಯತಂ ಅಯೋಪಧಂ ತತಃ ಸ್ತ್ರಿಯಾಂ ಙೀಷ್ ಸ್ಯಾತ್। ತಟೀ। ವೃಷಲೀ। ಕಠೀ। ಬಹ್ವೃಚೀ। ಜಾತೇಃ ಕಿಮ್? ಮುಂಡಾ। ಅಸ್ತ್ರೀ ವಿಷಯಾತ್ ಕಿಂ? ಬಲಾಕಾ। ಅಯೋಪಧಾತ್ ಕಿಮ್? ಕ್ಷತ್ರಿಯಾ।

ವಾ॥1. ಯೋಪಧ ಪ್ರತಿಷೇಧೇ ಹಯ-ಗವಯ-ಮುಕಯ-ಮನುಷ್ಯ-ಮತ್ಸ್ಯಾನಾಂ ಅಪ್ರತಿಷೇಧಃ। ಹಯೀ। ಗವಯೀ। ಮುಕಯೀ। "ಹಲಸ್ತದ್ಧಿತಸ್ಯ" ಇತಿ ಯಲೋಪಃ। ಮನುಷೀ।

ವಾ॥2. ಮತ್ಸ್ಯಸ್ಯ ಙ್ಯಾಮ್।

ಯಲೋಪಃ। ಮತ್ಸೀ।

ಪ. ಛೇ-ಜಾತೇಃ ಅಸ್ತ್ರೀವಿಷಯಾತ್, ಅಯೋಪಧಾತ್।

ಅ.ವೃ -"ಅನ್ಯತೋ ಙೀಷ್" ಎಂಬ ಸೂತ್ರದಿಂದ 'ಙೀಷ್' ಎಂಬ ಪದವು ಅನುವೃತ್ತವಾಗಿದೆ. ಪ್ರಾತಿಪದಿಕಾತ್, ಸ್ತ್ರಿಯಾಮ್, ಪ್ರತ್ಯಯಃ ಮತ್ತು ಪರಶ್ಚ ಮತ್ತು ಅತಃ ಮೊದಲಾದವುಗಳು ಅಧಿಕಾರಸೂತ್ರಗಳಾಗಿವೆ.

ಅರ್ಥ-ಯಾವ ಶಬ್ದವು ನಿತ್ಯ ಸ್ತ್ರೀಲಿಙ್ಗವಾಗಿ ಇಲ್ಲದಿದ್ದು, ಮತ್ತು 'ಯ್' ಕಾರವನ್ನು ಉಪಧೆಯಾಗಿ ಉಳ್ಳದ್ದಾಗಿರುವುದಿಲ್ಲವೋ ಅಂತಹ ಜಾತಿವಾಚಕ ಪ್ರಾತಿಪದಿಕದ ನಂತರ, ಸ್ತ್ರೀತ್ವ ವಿವಕ್ಷೆಯಲ್ಲಿ 'ಙೀಷ್' ಬರುತ್ತದೆ.

(ಇದಕ್ಕೂ ಮೊದಲು ಹೇಳಿದ ಸ್ವಾಙ್ಗ ಶಬ್ದದಂತೆ) ಜಾತಿ ಶಬ್ದವೂ ಪಾರಿಭಾಷಿಕ ವಾಗಿದೆ. ಇದನ್ನು ಕುರಿತು ಕೆಳಗೆ ಒಂದು ಕಾರಿಕೆಯು ಹೀಗೆ ಇದೆ. ಇದಕ್ಕೆ ನಾಲ್ಕು ಲಕ್ಷಣಗಳನ್ನು ಹೇಳಲಾಗಿದೆ.

**ಆಕೃತಿಗ್ರಹಣಾಜಾತಿಃ, ಲಿಙ್ಗಾನಾಂ ನ ಚ ಸರ್ವಭಾಕ್।**
**ಸಕೃತ್-ಆಖ್ಯಾತ ನಿರ್ಗ್ರಾಹ್ಯಾ ಗೋತ್ರಂ ಚ ಚರಣೈಸ್ಸಹ॥**

1. ಆಕೃತಿ ಗ್ರಹಣಾಜಾತಿಃ-ಆಕೃತಿಯಿಂದ ಗುರುತಿಸಲ್ಪಡುವಂಥಾದ್ದು

ಜಾತಿಯಾಗಿರುತ್ತದೆ.

2.ಲಿಙ್ಗಾನಾಂ ನ ಚ ಸರ್ವಭಾಕ್, ಸಕೃತ್-ಆಖ್ಯಾತನಿಗ್ರಾಹ್ಯಾ। ಒಮ್ಮೆ ಹೇಳಿದ್ದರಿಂದಲೇ ವ್ಯಕ್ತ್ಯಂತರವನ್ನು ಗ್ರಹಿಸದೇ ಆ ವ್ಯಕ್ತಿಯು ಗ್ರಹಿಸಲ್ಪಡುತ್ತದೋ, ಅದಕ್ಕೂ ಜಾತಿ ಎಂದು ಹೆಸರು. ಮತ್ತು ಒಂದು ವ್ಯಕ್ತಿಯನ್ನು ಹೇಳುವಾಗ ಬೇರೆ ವ್ಯಕ್ತಿಗಳನ್ನು ಗ್ರಹಿಸಿದರೆ ಅದಕ್ಕೂ ಜಾತಿ ಎಂದು ಹೆಸರು. ಆದರೆ ಅದು ಮೂರು ಲಿಂಗಗಳಲ್ಲಿಯೂ ಹೇಳಲ್ಪಡಬಾರದು.

3.ಗೋತ್ರಂ-ಗೋತ್ರ ಅಥವಾ ಅಪತ್ಯ ಪ್ರತ್ಯಯಾಂತ ಪ್ರಾತಿಪದಿಕವೂ ಒಂದು ಜಾತಿ ಯಾಗಿದೆ. ಹಾಗೆಯೇ-

4.ಚರಣೈಃ ಸಃ-ಚರಣವಾಚೀ (ವೇದಶಾಖೆಯನ್ನು ಅಧ್ಯಯನ ಮಾಡುವವನ ಹೆಸರು) ಪ್ರಾತಿಪದಿಕವೂ ಒಂದು ಜಾತಿಯೇ ಆಗಿದೆ.

ಈ ನಾಲ್ಕು ಲಕ್ಷಣಗಳಿಗೆ ಉದಾಹರಣೆಗಳು ಕ್ರಮವಾಗಿ (ಅ) ತಟೀ, ಸೂಕರೀ, (ಆ) ವೃಷಲೀ (ಇ) ಔಪಗವೀ (ಈ) ಕಠೀ, ಬಹ್ವೃಚೀ।

ಉದಾ-1. ತಟೀ -(ನದಿಯ ದಡ)-ತಟವೂ ಒಂದು ಜಾತಿಯಾಗಿದೆ. (ಆಕೃತಿಗ್ರಹಣಾ ಜಾತಿಃ)। ತಟ ಶಬ್ದದಮೇಲೆ ಸ್ತ್ರೀತ್ವ ವಿವಕ್ಷೆಯಲ್ಲಿ, ಪ್ರಕೃತ ಸೂತ್ರದಿಂದ ಙೀಷ್(ಈ) ಬಂದು ತಟೀ ಎಂದು ರೂಪವಾಗಿದೆ.

ಉದಾ-2. ವೃಷಲೀ (ಶೂದ್ರಜಾತಿಯ ಸ್ತ್ರೀ)-ಇದೂ ಸಹ ಜಾತಿವಾಚಕವಾಗಿದೆ. ಹಿಂದಿನಂತೆ ವೃಷಲ ಶಬ್ದದ ಮೇಲೆ ಸ್ತ್ರೀತ್ವ ವಿವಕ್ಷೆಯಲ್ಲಿ ಪ್ರಕೃತ ಸೂತ್ರದಿಂದ ಙೀಷ್(ಈ) ಬಂದು ವೃಷಲೀ ಎಂದು ರೂಪವಾಗಿದೆ.

ಉದಾ-3. ಔಪಗವೀ(ಉಪಗೂವಿನ ಸ್ತ್ರೀ ಸಂತಾನ)-ಅಪತ್ಯ ಪ್ರತ್ಯಯಾಂತ ಔಪಗವದ ನಂತರ ಸ್ತ್ರೀತ್ವ ವಿವಕ್ಷೆಯಲ್ಲಿ ಪ್ರಕೃತ ಸೂತ್ರದಿಂದ ಙೀಷ್(ಈ) ಬಂದು, ಔಪಗವೀ ಎಂದು ರೂಪವಾಗಿದೆ.

ಉದಾ-4ಅ. ಕಠೀ (ಕಠ ಎಂಬ ಋಷಿಯಿಂದ ಹೇಳಲ್ಪಟ್ಟ ವೇದ ಶಾಖೆಯನ್ನು ಅಧ್ಯಯನ ಮಾಡುವ ಬ್ರಾಹ್ಮಣ ಜಾತಿಯ ಸ್ತ್ರೀ) ಕಠ ಶಬ್ದದಮೇಲೆ ಸ್ತ್ರೀತ್ವ ವಿವಕ್ಷೆಯಲ್ಲಿ ಪ್ರಕೃತ ಸೂತ್ರದಿಂದ ಙೀಷ್(ಈ) ಬಂದು, ಕಠೀ ಎಂದು ರೂಪವಾಗಿದೆ.

ಉದಾ-4ಬ. ಬಹ್ವೃಚೀ(ಹಲವು ಋಕ್ ಗಳನ್ನು ಅಧ್ಯಯನ ಮಾಡುವ ಬ್ರಾಹ್ಮಣ ಜಾತಿಯ ಸ್ತ್ರೀ)-ಬಹ್ವೃಚ ಶಬ್ದದಮೇಲೆ ಸ್ತ್ರೀತ್ವ ವಿವಕ್ಷೆಯಲ್ಲಿ ಪ್ರಕೃತ ಸೂತ್ರದಿಂದ ಙೀಷ್(ಈ) ಬಂದು ಬಹ್ವೃಚೀ ಎಂದು ರೂಪವಾಗಿದೆ.

ವೇದಕಾಲದಲ್ಲಿ ಸ್ತ್ರೀಯರಿಗೆ ವೇದಾಧ್ಯಯನ ಹಾಗೂ ಮೌಂಜೀ ಬಂಧನದ ಪದ್ಧತಿ ಇತ್ತು.

ಪುರಾಕಲ್ಪೇ ತು ನಾರೀಣಾಂ ಮೌಂಜೀಬಂಧನಮಿಷ್ಯತೇ।
ಅಧ್ಯಾಪನಂಚ ವೇದಾನಾಂ ಸಾವಿತ್ರೀ ವಚನಂ ತಥಾ॥ ಇತಿ 'ಯಮಃ'

ಜಾತೇಃ ಕಿಮ್? ಮುಂಡಾ -(ಕೇಶಮುಂಡನ ಮಾಡಿಕೊಂಡ ಸ್ತ್ರೀ) ಇದು ಜಾತಿವಾಚಕ ಶಬ್ದವಲ್ಲ. ಪ್ರಕೃತ ಸೂತ್ರದಲ್ಲಿ ಜಾತಿ ಎಂದು ಹೇಳದಿದ್ದರೆ, ಜಾತಿವಾಚಕವಲ್ಲದ ಮುಂಡ ಶಬ್ದದಮೇಲೂ ಙೀಷ್(ಈ) ಬಂದು ಮುಂಡೀ ಎಂದು ಅನಿಷ್ಟ ರೂಪವಾಗಬೇಕಾಗಿತ್ತು. ಜಾತಿವಾಚಕವಲ್ಲದ್ದರಿಂದ ಟಾಪ್(ಆ) ಬಂದು ಮುಂಡಾ ಎಂದು ರೂಪವಾಗಿದೆ.

ಅಸ್ತ್ರೀ ವಿಷಯಾತ್ ಕಿಮ್?-ಬಲಾಕಾ(ಬೆಳ್ಳಕ್ಕಿ)-ನಿತ್ಯ ಸ್ತ್ರೀಲಿಙ್ಗ ಶಬ್ದವಾದ ಬಲಾಕಾ ಶಬ್ದದ ಮೇಲೂ ಙೀಷ್(ಈ) ಬಂದು ಬಲಾಕೀ ಎಂದು ರೂಪವಾಗಬೇಕಾಗಿತ್ತು. 'ಅಸ್ತ್ರೀ ವಿಷಯಾತ್' ಎಂದು ಹೇಳಿದ್ದರಿಂದ ಙೀಷ್(ಈ) ಬಾರದೇ ಬಲಾಕಾ ಎಂದು ರೂಪವಾಗಿದೆ.

ಅಯೋಪಧಾತ್ ಕಿಮ್? ಕ್ಷತ್ರಿಯಾ-(ಕ್ಷತ್ರಿಯ ಸ್ತ್ರೀ)-'ಯ್' ಉಪಧೆಯಾಗಿಲ್ಲದ ಎಂದು ಹೇಳಿರುವುದರಿಂದ 'ಯ್' ಕಾರವನ್ನು ಉಪಧೆಯಾಗಿಯುಳ್ಳ ಕ್ಷತ್ರಿಯ ಶಬ್ದದಮೇಲೆ ಙೀಷ್(ಈ) ಬಾರದೇ ಕ್ಷತ್ರಿಯಾ ಎಂದು ರೂಪವಾಗಿದೆ.

ವಾ॥1. ಯೋಪಧ ಪ್ರತಿಷೇಧೇ ಹಯ-ಗವಯ-ಮುಕಯ-ಮನುಷ್ಯ-ಮತ್ಸ್ಯಾನಾಂ ಅಪ್ರತಿಷೇಧಃ। ಹಯೀ। ಗವಯೀ। ಮುಕಯೀ। "ಹಲಸ್ತದ್ಧಿತಸ್ಯ (1249)" ಇತಿ ಯ-ಲೋಪಃ। ಮನುಷೀ।

'ಯ್' ಕಾರವನ್ನು ಉಪಧೆಯಾಗಿಯುಳ್ಳ ಶಬಕ್ಕೆ ಙೀಷ್(ಈ) ಪ್ರತಿಷೇಧಿಸುವಾಗ, ಈ ವಾರ್ತಿಕದಲ್ಲಿನ ಶಬ್ದಗಳಿಗೆ 'ಯ್'ಕಾರ ಉಪಧೆಯಾಗಿದ್ದರೂ, ಙೀಷ್(ಈ) ಬರುವದನ್ನು ಪ್ರತಿಷೇಧಿಸಬಾರದು. ಅಂದರೆ ಙೀಷ್(ಈ) ಬಂದೇ ಬರುತ್ತದೆ ಎಂದು ಅರ್ಥ.

ಉದಾ-1 ಹಯೀ (ಹೆಣ್ಣು ಕುದುರೆ)-2. ಗವಯೀ (ಕಪ್ಪು ಹಸು). 3. ಮುಕಯೀ (ಗಂಡು ಕತ್ತೆ ಮತ್ತು ಹೆಣ್ಣುಕುದುರೆ ಸಂಬಂಧದಿಂದ ಹುಟ್ಟಿದ ಪ್ರಾಣಿ). ಈ ಮೂರು ಶಬ್ದಗಳು ಕ್ರಮವಾಗಿ ಹಯ, ಗವಯ, ಮುಕಯ ಎಂದಿರುತ್ತವೆ. ಸ್ತ್ರೀತ್ವ ವಿವಕ್ಷೆಯಲ್ಲಿ, "ಯೋಪಧ ಪ್ರತಿಷೇಧೇ ಹಯ-ಗವಯ-ಮುಕಯ-ಮನುಷ್ಯ-ಮತ್ಸ್ಯಾನಾಂ ಅಪ್ರತಿಷೇಧಃ" ಎಂಬ ವಾರ್ತಿಕದಿಂದ ಙೀಷ್(ಈ) ಬಂದು ಹಯೀ, ಗವಯೀ, ಮುಕಯೀ ಎಂದಾಗುತ್ತವೆ. ವಿಭಕ್ತಿಕಾರ್ಯ ಮಾಡಿದಮೇಲೆ 'ಸ್' ಕಾರ ಲೋಪವಾಗಿ ಹಯೀ, ಗವಯೀ, ಮುಕಯೀ ಎಂದೇ ರೂಪಗಳು ಉಳಿಯುತ್ತವೆ.

ಉದಾ-2.-ಮನುಷೀ(ಮನುಷ್ಯ ಜಾತಿಯ ಸ್ತ್ರೀ)-ಮನುಷ್ಯ ಶಬ್ದದಲ್ಲಿ 'ಯ್' ಕಾರ ಉಪಧೆಯಾಗಿರೋಣದ್ದರಿಂದ ಪ್ರಕೃತ ಸೂತ್ರದಲ್ಲಿ 'ಅಯೋಪಧಾತ್' ಎಂದು ನಿಷೇಧಮಾಡಲಾಗಿತ್ತು. ಆದರೆ ಪ್ರಕೃತ ವಾರ್ತಿಕದಿಂದ ಙೀಷ್(ಈ) ಬಂದು ಮನುಷ್ಯ+ಈ ಎಂದಿರುತ್ತದೆ. "ಯಸ್ಯೇತಿ ಚ" ಎಂಬುದರಿಂದ 'ಅ' ಕಾರಕ್ಕೆ ಲೋಪ ಬಂದು ಮನುಷ್ಯ್+ಈ ಎಂದಿರುತ್ತದೆ. "ಹಲಸ್ತದ್ಧಿತಸ್ಯ" ಎಂಬುದರಿಂದ 'ಯ್' ಕಾರಕ್ಕೆ ಲೋಪ ಬಂದು ಮನುಷೀ ಎಂದು ರೂಪವಾಗುತ್ತದೆ. ವಿಭಕ್ತಿಕಾರ್ಯ ಮಾಡಿದಮೇಲೆ 'ಸ್' ಕಾರ ಲೋಪವಾಗಿ ಮನುಷೀ ಎಂದೇ ರೂಪ ಉಳಿಯುತ್ತದೆ.

ವಾ॥2. ಮತ್ಸಸ್ಯ ಙ್ಯಾಮ್। ಯಲೋಪಃ। ಮತ್ಸೀ।

ಈ ವಾರ್ತಿಕವು ಲೋಪ ಪ್ರಕರಣದ "ಸೂರ್ಯತಿಷ್ಯಾಗಸ್ತ್ಯಮತ್ಸ್ಯಾನಾಂ ಯ ಉಪಧಾಯಾಃ" ಎಂಬ ಸೂತ್ರದಲ್ಲಿ ಪಠಿಸಲಾಗಿದೆ. ಙೀಷ್(ಈ) ಪ್ರತ್ಯಯದ ಪರದಲ್ಲಿ ಇದ್ದಾಗಲೇ ಮತ್ಸ್ಯ ಶಬ್ದದ ಉಪಧೆಯಾಗಿರುವ 'ಯ್' ಕಾರಕ್ಕೆ ಲೋಪ ಬರುತ್ತದೆ. ಈ ವಾರ್ತಿಕವು ನಿಯಮವಾಗಿ ಈ ರೂಪವು ಸಿದ್ಧಿಸುತ್ತದೆ ಎಂದು ಹೇಳುವದಕ್ಕಾಗಿ ಬಂದಿದೆ. ಯಾಕೆಂದರೆ "ಯೋಪಧ ಪ್ರತಿಷೇಧೇ ಹಯ-ಗವಯ-ಮುಕಯ-ಮನುಷ್ಯ-ಮತ್ಸ್ಯಾನಾಂ ಅಪ್ರತಿಷೇಧಃ" ಎಂಬ ವಾರ್ತಿಕದಿಂದ ಙೀಷ್(ಈ) ಬಂದೇ ಬರುತ್ತದೆ. ಹಾಗಾದರೆ ಈ ಎರಡನೇ ವಾರ್ತಿಕವನ್ನು ಏಕೆ ಹೇಳಬೇಕು? ಎಂದರೆ 'ಸಿದ್ಧೇ ಸತಿ ಆರಭ್ಯಮಾಣೋ ವಿಧಿಃ ನಿಯಮಾಯ ಭವತಿ'. ಮತ್ಸ್ಯ ಶಬ್ದದಮೇಲೆ 'ಯ್' ಕಾರಲೋಪವಾಗಬೇಕಾದರೆ, ಅದು ಕೇವಲ ಙೀ ಗೆ ಪರದಲ್ಲಿದ್ದಾಗ ಮಾತ್ರ. ಬೇರೆಯವುಗಳಿಗೆ ಪರದಲ್ಲಿದ್ದಾಗ ಅಲ್ಲ. ಇದರಿಂದ ಮತ್ಸ್ಯಸ್ಯ ಇದಂ ಮಾತ್ಸ್ಯಂ ಎಂದಾಗಿ, "ಹಲಸ್ತದ್ಧಿತಸ್ಯ" ಎಂಬುದರಿಂದ 'ಯ್' ಕಾರದ ಲೋಪವಾಗದೇ ಮಾತ್ಸ್ಯಂ ಎಂದೇ ಉಳಿದಿರುತ್ತದೆ.

ಉದಾ-ಮತ್ಸೀ(ಹೆಣ್ಣು ಮೀನು)-ಮತ್ಸ್ಯ ಶಬ್ದದಮೇಲೆ 'ಯ್' ಕಾರವು ಉಪಧೆಯಾಗಿ ಇರುವುದರಿಂದ ಮತ್ತು ಪ್ರಕೃತ ಸೂತ್ರದಲ್ಲಿ 'ಅಯೋಪಧಾತ್' ಎಂದು ಇರುವುದರಿಂದ ನಿಷೇಧವು ಬರುತ್ತಿತ್ತು. ಆದರೆ ಪ್ರಕೃತ ವಾರ್ತಿಕದಿಂದಲೂ ಮತ್ತು "ಮತ್ಸಸ್ಯ ಙ್ಯಾಮ್" ಎಂಬ ವಾರ್ತಿಕದಿಂದಲೂ ಮತ್ಸ್ಯ+ಈ ಎಂದಿರುವಾಗ "ಯಸ್ಯೇತಿ ಚ" ಎಂಬ ಸೂತ್ರದಿಂದ 'ಅ' ಕಾರಕ್ಕೆ ಲೋಪವಾಗಿ "ಹಲಸ್ತದ್ಧಿತಸ್ಯ" ಎಂಬುದರಿಂದ 'ಯ್' ಕಾರಕ್ಕೆ ಲೋಪ ಬಂದು ಮತ್ಸ್+ಈ=ಮತ್ಸೀ ಎಂದು ರೂಪವಾಗುತ್ತದೆ. ವಿಭಕ್ತಿಕಾರ್ಯ ಮಾಡಿದಮೇಲೆ 'ಸ್' ಕಾರ ಲೋಪವಾಗಿ ಮತ್ಸೀ ಎಂದೇ ರೂಪ ಉಳಿಯುತ್ತದೆ.

**(ಙೀಷ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1272.-ಇತೋ ಮನುಷ್ಯಜಾತೇಃ।(4.1.65)**

ವೃತ್ತಿ-ಙೀಷ್। ದಾಕ್ಷೀ।

ಪ. ಛೇ-ಇತಃ, ಮನುಷ್ಯಜಾತೇಃ।

ಅ.ವೃ:-"ಅನ್ಯತೋ ಙೀಷ್" ಎಂಬ ಸೂತ್ರದಿಂದ 'ಙೀಷ್' ಎಂಬ ಪದವು ಅನುವೃತ್ತವಾಗಿದೆ. ಪ್ರಾತಿಪದಿಕಾತ್, ಸ್ತ್ರಿಯಾಮ್, ಪ್ರತ್ಯಯಃ ಮತ್ತು ಪರಶ್ಚ ಮೊದಲಾದವುಗಳು ಅಧಿಕಾರಸೂತ್ರಗಳಾಗಿವೆ.

ಅರ್ಥ-ಮನುಷ್ಯ ಜಾತಿವಾಚಕವಾದ ಹ್ರಸ್ವ 'ಇ'ಕಾರಾನ್ತ ಪ್ರಾತಿಪದಿಕದ ನಂತರ ಸ್ತ್ರೀತ್ವ ವಿವಕ್ಷೆಯಲ್ಲಿ 'ಙೀಷ್' ಪ್ರತ್ಯಯವು ಬರುತ್ತದೆ.

ಉದಾ-ದಾಕ್ಷೀ (ದಕ್ಷನ ಮಗಳು)-ದಕ್ಷಸ್ಯ ಅಪತ್ಯಂ ಸ್ತ್ರೀ ಎಂದು ವಿಗ್ರಹ. ದಕ್ಷ ಶಬ್ದದಮೇಲೆ ತದ್ಧಿತಾರ್ಥದಲ್ಲಿ "ಅತ ಇಞ್" ಎಂಬ ಸೂತ್ರದಿಂದ 'ಇಞ್(ಇ)

ಪ್ರತ್ಯಯ ಬಂದು ದಾಕ್ಷಿ ಎಂದು ರೂಪವಾಗುತ್ತದೆ. ಇದರಮೇಲೆ ಸ್ತ್ರೀತ್ವ ವಿವಕ್ಷೆಯಲ್ಲಿ ಪ್ರಕೃತ ಸೂತ್ರದಿಂದ ಙೀಷ್(ಈ) ಬಂದು "ಯಸ್ಯೇತಿಚ" ಎಂಬುದರಿಂದ 'ಯ್' ಕಾರಕ್ಕೆ ಲೋಪಬಂದು ದಾಕ್ಷ್+ಈ=ದಾಕ್ಷೀ ಎಂದು ರೂಪವಾಗುತ್ತದೆ. ವಿಭಕ್ತಿಕಾರ್ಯ ಮಾಡಿದಮೇಲೆ 'ಸ್' ಕಾರ ಲೋಪವಾಗಿ ದಾಕ್ಷೀ ಎಂದೇ ರೂಪ ಉಳಿಯುತ್ತದೆ.

**(ಊಙ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ-1273. -ಊಙುತಃ (4.1.66)**

ವೃತ್ತಿ -ಉದನ್ತಾತ್ ಅಯೋಪಧಾತ್ ಮನುಷ್ಯಜಾತಿವಾಚಿನಃ ಸ್ತ್ರಿಯಾಂ ಊಙ್ ಸ್ಯಾತ್। ಕುರೂಃ। ಅಯೋಪಧಾತ್ ಕಿಮ್? ಅಧ್ವರ್ಯುಃ (ಬ್ರಾಹ್ಮಣೀ)।

ಪ. ಛೇ-ಊಙ್, ಉತಃ।

ಅ.ವೃ -"ಇತೋ ಮನುಷ್ಯಜಾತೇಃ" ಎಂಬ ಸೂತ್ರದಿಂದ 'ಮನುಷ್ಯಜಾತೇಃ' ಎಂಬ ಪದವೂ ಹಾಗೆಯೇ "ಜಾತೇರಸ್ತ್ರೀವಿಷಯಾದಯೋಪಧಾತ್(4.1.63)"ಎಂಬ ಸೂತ್ರದಿಂದ 'ಅಯೋಪಧಾತ್' ಎಂಬ ಪದವೂ ಅನುವೃತ್ತವಾಗುತ್ತವೆ. ಪ್ರಾತಿಪದಿಕಾತ್, ಸ್ತ್ರಿಯಾಮ್, ಪ್ರತ್ಯಯಃ ಮತ್ತು ಪರಶ್ಚ ಮೊದಲಾದವುಗಳು ಅಧಿಕಾರಸೂತ್ರಗಳಾಗಿವೆ.

ಅರ್ಥ-ಯಾವ ಶಬ್ದದ ಉಪಧೆಯಲ್ಲಿ 'ಅ'ಕಾರವಿರುವುದಿಲ್ಲವೋ, ಅಂತಹ ಮನುಷ್ಯವಾಚೀ ಉದನ್ತ ಪ್ರಾತಿಪದಿಕದಮೇಲೆ ಸ್ತ್ರೀತ್ವ ವಿವಕ್ಷೆಯಲ್ಲಿ 'ಊಙ್'(ಊ) ಪ್ರತ್ಯಯವು ಬರುತ್ತದೆ.

'ಪ್ರಾತಿಪದಿಕಗ್ರಹಣೇ ಲಿಙ್ಗವಿಶಿಷ್ಟಸ್ಯಾಪಿ ಗ್ರಹಣಮ್' ಎಂಬುದು ಪರಿಭಾಷೆ. ಪ್ರಾತಿಪದಿಕವನ್ನು ಗ್ರಹಿಸುವಾಗ, ಲಿಙ್ಗವಿಶಿಷ್ಟ ಪ್ರಾತಿಪದಿಕವೂ ಗೃಹೀವಾಗುತ್ತದೆ. 'ಪ್ರಾತಿಪದಿಕತ್ವಾತ್ ಸ್ವಾದ್ಯುತ್ಪತ್ತಿಃ' ಅದುದರಿಂದ ಸ್ತ್ರೀಲಿಙ್ಗದಿಂದ ಕೂಡಿದ್ದಾಗಿದ್ದಮೇಲೂ, ಪ್ರಾತಿಪದಿಕತ್ವಕ್ಕೆ ಯಾವ ಚ್ಯುತಿಯೂ ಉಂಟಾಗುವುದಿಲ್ಲ. ಅಂದರೆ ವಿಭಕ್ತಿಕಾರ್ಯವು ಆಗುತ್ತದೆ. ಇದರಿಂದ ಕುರೂ ಮೊದಲಾದ ಪ್ರಯೋಗದಲ್ಲಿ ಙ್ಯನ್ತ ವಾಗದಿದ್ದರೂ ಈ ಪರಿಭಾಷೆಯ ಸಹಾಯದಿಂದ, ಸ್ವಾದಿ ಪ್ರತ್ಯಯಗಳು ಸೇರಿಸಲ್ಪಡುತ್ತವೆ.

ಉದಾ-1. ಕುರೂಃ (ಕುರುವಿನ ಹೆಣ್ಣು ಸಂತಾನ)-ಕುರು ಶಬ್ದದಮೇಲೆ ಅಪತ್ಯಾರ್ಥದಲ್ಲಿ, "ಕುರುನಾದಿಭ್ಯೋ ಣ್ಯಃ" ಎಂಬ ಸೂತ್ರದಿಂದ ಣ್ಯ-ಪ್ರತ್ಯಯ ಬಂದು "ಸ್ತ್ರಿಯಾಮವನ್ತಿ ಕುನ್ತಿ ಕುರುಭ್ಯಶ್ಚ" ಎಂಬ ಸೂತ್ರದಿಂದ ಅದಕ್ಕೆ ಲೋಪ ಬಂದು, ಕುರು ಎಂದೇ ಉಳಿಯುತ್ತದೆ. ಸ್ತ್ರೀತ್ವ ವಿವಕ್ಷೆಯಲ್ಲಿ 'ಉ' ವರ್ಣಾನ್ತವಾಗಿರುವುದರಿಂದ ಪ್ರಕೃತ ಸೂತ್ರದಿಂದ 'ಊಙ್'(ಊ) ಬಂದು ಕುರು+ಊ ಎಂದಾಗುತ್ತದೆ. ಆಮೇಲೆ ಸವರ್ಣದೀರ್ಘ ಸಂಧಿಯಿಂದ ಕುರೂ ಎಂದಾಗುತ್ತದೆ. ಇದಕ್ಕೆ ವಿಭಕ್ತಿಕಾರ್ಯವಾದ ಮೇಲೆ ರುತ್ವ-ವಿಸರ್ಗಗಳಿಂದ ಕುರೂಃ ಎಂದು ರೂಪವಾಗುತ್ತದೆ.

ಅಯೋಪಧಾತ್ ಕಿಮ್? ಅಧ್ವರ್ಯುಃ ಬ್ರಾಹ್ಮಣೀ(ಅಧ್ವರ್ಯುವಾದ ಬ್ರಾಹ್ಮಣ ಸ್ತ್ರೀ)-ಈ ಸೂತ್ರದಲ್ಲಿ 'ಅಯೋಪಧಾತ್' ಎಂದು ಹೇಳದಿದ್ದರೆ, 'ಯೋಪಧ' ಮತ್ತು ಅಯೋಪಧಗಳಾಗಿರುವ ಎರಡುತರಹದ ಶಬ್ದಗಳಮೇಲೂ 'ಊಙ್(ಊ) ಬರುವ

ಪ್ರಸಂಗವಿರುತ್ತಿತ್ತು. ಇದರಿಂದ 'ಯ್' ಕಾರ ಉಪಧೆಯಾಗಿರುವ ಅಧ್ವರ್ಯು ಶಬ್ದದಮೇಲೂ 'ಊಙ್(ಊ) ಬಂದು, ಅಧ್ವರ್ಯೂಃ ಎಂಬ ಅನಿಷ್ಟರೂಪವು ಬರುತ್ತಿತ್ತು. 'ಅಯೋಪಧಾತ್' ಎಂದು ಹೇಳಿದ್ದರಿಂದ ಅಧ್ವರ್ಯು ಶಬ್ದಕ್ಕೆ ಙೀಷ್(ಈ) ಬರುವುದಿಲ್ಲ. ಹಾಗೆಯೇ ಪ್ರಕೃತ ಸೂತ್ರದಿಂದ ಊಙ್(ಊ) ಪ್ರತ್ಯಯವೂ ಬರುವುದಿಲ್ಲ. ಹೀಗಾಗಿ ಅಧ್ವರ್ಯುಃ ಎಂದು 'ಉ' ಕಾರಾನ್ತ ಸ್ತ್ರೀಲಿಙ್ಗ ಶಬ್ದವಾಗಿಯೇ ಉಳಿಯುತ್ತದೆ.

**(ಊಙ್ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ –1274. –ಪಙ್ಗೋಶ್ಚ। (4.1.68)**

ವೃತ್ತಿ–ಪಙ್ಗೂಃ।

ವಾರ್ತಿಕ–ಶ್ವಶುರಸ್ಯ–ಉಕಾರ–ಅಕಾರ ಲೋಪಶ್ಚ। ಶ್ವಶ್ರೂಃ।

ಪ. ಛೇ–ಪಙ್ಗೋಃ, ಚ।

ಅ.ವೃ–"ಊಙುತಃ (4.1.66)" ಎಂಬ ಸೂತ್ರದಿಂದ 'ಊಙ್' ಎಂಬ ಶಬ್ದವು ಅನುವೃತ್ತವಾಗುತ್ತದೆ. ಪ್ರಾತಿಪದಿಕಾತ್, ಸ್ತ್ರಿಯಾಮ್, ಪ್ರತ್ಯಯಃ ಮತ್ತು ಪರಶ್ಚ ಮೊದಲಾದವುಗಳು ಅಧಿಕಾರಸೂತ್ರಗಳಾಗಿವೆ.

ಅರ್ಥ–'ಪಙ್ಗು' ಎಂಬ ಪ್ರಾತಿಪದಿಕದನಂತರ ಸ್ತ್ರೀತ್ವ ವಿವಕ್ಷೆಯಲ್ಲಿ 'ಊಙ್' ಪ್ರತ್ಯಯವು ಬರುತ್ತದೆ. ಈ ಪಙ್ಗು ಶಬ್ದವು ಗುಣವಾಚಕವಾಗಿದೆ ಹೊರತು ಜಾತಿವಾಚಕವಾಗಿಲ್ಲ. ಅದುದರಿಂದ "ಊಙುತಃ (4.1.66)" ಎಂಬ ಸೂತ್ರದಿಂದ 'ಊಙ್(ಊ)' ಬರುವುದಿಲ್ಲ.

ಉದಾ–ಪಙ್ಗೂಃ (ಕುಂಟ ಸ್ತ್ರೀ)–ಪಙ್ಗು ಎಂಬ 'ಉ' ಕಾರಾಂತ ಪ್ರಾತಿಪದಿಕದಮೇಲೆ ಸ್ತ್ರೀತ್ವ ವಿವಕ್ಷೆಯಲ್ಲಿ ಪ್ರಕೃತ ಸೂತ್ರದಿಂದ 'ಊಙ್(ಊ)'

ಪ್ರತ್ಯಯವು ಬಂದು, ಪಙ್ಗು+ಊ=ಪಙ್ಗೂ ಎಂದು ರೂಪವಾಗುತ್ತದೆ. ವಿಭಕ್ತಿ ಕಾರ್ಯ ಮಾಡಿದಮೇಲೆ ರುತ್ವ–ವಿಸರ್ಗಗಳಿಂದ ಪಙ್ಗೂಃ ಎಂದು ರೂಪವಾಗುತ್ತದೆ.

ವಾರ್ತಿಕ–ಶ್ವಶುರಸ್ಯ–ಉಕಾರ–ಅಕಾರ ಲೋಪಶ್ಚ।–ಇದು ವಾರ್ತಿಕ, ಶ್ವಶುರ ಶಬ್ದದಮೇಲೆ ಸ್ತ್ರೀತ್ವ ವಿವಕ್ಷೆಯಲ್ಲಿ, 'ಊಙ್(ಊ) ಪ್ರತ್ಯಯ ಬರುತ್ತದೆ. ಆದರೆ ಆ ಶಬ್ದದಲ್ಲಿರುವ 'ಶು' ನಲ್ಲಿರುವ 'ಉ' ಕಾರ ಮತ್ತು ರೇಫದಲ್ಲಿರುವ 'ಅ' ಕಾರಗಳು ಲೋಪವಾಗುತ್ತವೆ.

ಉದಾ–ಶ್ವಶ್ರೂಃ (ಅತ್ತೆ–ಹೆಣ್ಣು ಕೊಟ್ಟ ಮಾವನ ಹೆಂಡತಿ)–ಶ್ವಶುರಸ್ಯ ಸ್ತ್ರೀ ಎಂದು ವಿಗ್ರಹ ಶ್ವಶುರ ಶಬ್ದದಮೇಲೆ ಸ್ತ್ರೀತ್ವ ವಿವಕ್ಷೆಯಲ್ಲಿ ಪ್ರಕೃತ ವಾರ್ತಿಕದಿಂದ, 'ಊಙ್(ಊ) ಪ್ರತ್ಯಯ ಬರುತ್ತದೆ. ಆದರೆ ಆ ಶಬ್ದದಲ್ಲಿರುವ 'ಶು' ನಲ್ಲಿರುವ 'ಉ' ಕಾರ ಮತ್ತು ರೇಫದಲ್ಲಿರುವ 'ಅ' ಕಾರಗಳು ಲೋಪವಾಗಿ ಶ್ವಶ್+ರ್+ಊ=ಶ್ವಶ್ರೂ ಎಂದು ಪ್ರಾತಿಪದಿಕ ವಾಗುತ್ತದೆ. 'ಪ್ರಾತಿಪದಿಕಗ್ರಹಣೇ ಲಿಙ್ಗವಿಶಿಷ್ಟಸ್ಯಾಪಿ ಗ್ರಹಣಮ್' ಎಂಬ ಪರಿಭಾಷೆಯಿಂದ ವಿಭಕ್ತಿ ಕಾರ್ಯ ಮಾಡಿದಮೇಲೆ ರುತ್ವ–ವಿಸರ್ಗಗಳಿಂದ ಶ್ವಶ್ರೂಃ ರೂಪವಾಗುತ್ತದೆ.

(ಊಙ್ ಪ್ರತ್ಯಯವನ್ನು ವಿಧಿಸುವ ಸೂತ್ರ)

**ಸೂತ್ರ-1275.-ಊರೂತ್ತರಪದಾದೌಪಮ್ಯೇ (4.1.69)**

ವೃತ್ತಿ-ಉಪಮಾನವಾಚಿ ಪೂರ್ವಪದಂ ಊರೂತ್ತರಪದಂ ಯತ್ ಪ್ರಾತಿಪದಿಕಂ ತಸ್ಮಾತ್ 'ಊಙ್' ಸ್ಯಾತ್। ಕರಭೋರೂಃ।

ಪ. ಛೇ-ಊರೂತ್ತರಪದಾತ್, ಔಪಮ್ಯೇ।

ಅ.ವೃ -"ಊಙುತಃ (4.1.66)" ಎಂಬ ಸೂತ್ರದಿಂದ 'ಊಙ್' ಎಂಬ ಶಬ್ದವು ಅನುವೃತ್ತವಾಗುತ್ತದೆ. ಪ್ರಾತಿಪದಿಕಾತ್, ಸ್ತ್ರಿಯಾಮ್, ಪ್ರತ್ಯಯಃ ಮತ್ತು ಪರಶ್ಚ ಮೊದಲಾದವುಗಳು ಅಧಿಕಾರಸೂತ್ರಗಳಾಗಿವೆ.

ಅರ್ಥ-ಯಾವ ಒಂದು ಶಬ್ದದ ಪೂರ್ವಪದವು ಉಪಮಾನವಾಚಿಯಾಗಿದ್ದು, ಹಾಗೆಯೇ 'ಊರೂ'ಎಂಬ ಪದವು ಉತ್ತರಪದವಾಗಿರುತ್ತದೆಯೋ ಆ ಪದದನಂತರ ಸ್ತ್ರೀತ್ವ ವಿವಕ್ಷೆಯಲ್ಲಿ 'ಊಙ್' ಪ್ರತ್ಯಯವು ಬರುತ್ತದೆ.

ಉದಾ-ಕರಭೋರೂಃ-(ಕರಭ ಎಂದರೆ ಮಣಿಕಟ್ಟಿನಿಂದಾರಂಭಿಸಿ ಕಿರುಬೆರಳಿನ ತುದಿಯವರೆಗೆ ಇರುವ ಭಾಗ-ಎರಡು ಕರಭಗಳಂತೆ ಎರಡು ತೊಡೆಗಳುಳ್ಳ ಸ್ತ್ರೀ) 'ಕರಭೌ ಇವ ಊರೂ ಯಸ್ಯಾ ಸಾ' ಎಂದು ವಿಗ್ರಹ. ಕರಭೋರು ರೂಪವಿದ್ದಾಗ, ಪ್ರಕೃತ ಸೂತ್ರದಿಂದ 'ಊಙ್(ಊ)' ಬಂದು, ಕರಭೋರು+ಊ ಎಂದಿದ್ದಾಗ, ಸವರ್ಣದೀರ್ಘವಾಗಿ ಕರಭೋರೂ ಎಂದಾಗುತ್ತದೆ. ಆಮೇಲೆ ವಿಭಕ್ತಿ ಕಾರ್ಯ ಮಾಡಿದಮೇಲೆ ರುತ್ವ-ವಿಸರ್ಗಗಳಿಂದ ಕರಭೋರೂಃ ಎಂದು ರೂಪವಾಗುತ್ತದೆ.

(ಊಙ್ ಪ್ರತ್ಯಯವನ್ನು ವಿಧಿಸುವ ಸೂತ್ರ)

**ಸೂತ್ರ -1276.-ಸಂಹಿತ-ಶಫ-ಲಕ್ಷಣ-ವಾಮಾದೇಶ್ಚ। (4.1.60)**

ವೃತ್ತಿ-ಅನೌಪಮ್ಯಾರ್ಥಂ ಸೂತ್ರಂ। ಸಂಹಿತೋರೂಃ। ಶಫೋರೂಃ। ಲಕ್ಷಣೋರೂಃ। ವಾಮೋರೂಃ।

ಪ. ಛೇ-ಸಂಹಿತ-ಶಫ-ಲಕ್ಷಣ-ವಾಮಾದೇಃ, ಚ।

ಅ.ವೃ-"ಊರೂತ್ತರಪದಾದೌಪಮ್ಯೇ (4.1.69)" ಎಂಬ ಸೂತ್ರದಿಂದ 'ಊರೂತ್ತರಪದಾತ್' ಮತ್ತು "ಊಙುತಃ (4.1.66)" ಎಂಬ ಸೂತ್ರದಿಂದ 'ಊಙ್' ಎಂಬ ಶಬ್ದವು ಅನುವೃತ್ತವಾಗುತ್ತವೆ. ಪ್ರಾತಿಪದಿಕಾತ್, ಸ್ತ್ರಿಯಾಮ್, ಪ್ರತ್ಯಯಃ ಮತ್ತು ಪರಶ್ಚ ಇವು ಅಧಿಕಾರಸೂತ್ರಗಳಾಗಿವೆ.

ಅರ್ಥ-ಸಂಹಿತ, ಶಫ, ಲಕ್ಷಣ, ವಾಮ ಮೊದಲಾದ ಶಬ್ದಗಳನ್ನು ಆದಿಯಲ್ಲಿ ಉಳ್ಳ, ಮತ್ತು 'ಊರು' ಪದವನ್ನು ಉತ್ತರಪದವಾಗಿಯುಳ್ಳ ಶಬ್ದಗಳಿಗೆ ಸ್ತ್ರೀತ್ವ ವಿವಕ್ಷೆಯಲ್ಲಿ 'ಊಙ್' ಪ್ರತ್ಯಯುವು ಬರುತ್ತದೆ. ಸಂಹಿತ ಮೊದಲಾದ ಈ ಶಬ್ದಗಳು ಉಪಮಾನವಾಚಕವಾಗಿ ಇಲ್ಲದಿದ್ದಾಗ, ಪೂರ್ವ ಸೂತ್ರವು ಪ್ರವರ್ತಿಸದೇ ಇರುವುದರಿಂದ, ಪ್ರಕೃತ ಸೂತ್ರದಿಂದ 'ಊಙ್' ಪ್ರತ್ಯಯವು ವಿಧಿಸಲಾಗಿದೆ.

ಉದಾ– 1. ಸಂಹಿತೋರೂಃ (ಜೋಡಿಸಿದ ತೊಡೆಗಳುಳ್ಳವಳು)–ಇಲ್ಲಿ ಉಪಮಾನವಿಲ್ಲ. ಸಂಹಿತೋರು ಶಬ್ದದಮೇಲೆ ಸ್ತ್ರೀತ್ವ ವಿವಕ್ಷೆಯಲ್ಲಿ ಪ್ರಕೃತ ಸೂತ್ರದಿಂದ 'ಊಙ್(ಊ)' ಪ್ರತ್ಯಯವು ಬರುತ್ತದೆ. ಸಂಹಿತೋರು+ಊ=ಸಂಹಿತೋರೂ ಎಂದಿರುತ್ತದೆ. ಸವರ್ಣ ದೀರ್ಘವಾಗಿ ವಿಭಕ್ತಿಕಾರ್ಯ ಮಾಡಿದಮೇಲೆ ರುತ್ವ–ವಿಸರ್ಗಗಳಿಂದ ಸಂಹಿತೋರೂಃ ಎಂದು ರೂಪವಾಗುತ್ತದೆ.

ಉದಾ–2. ಶಫೋರೂಃ (ಗೊರಸುಗಳಂತೆ ಕೂಡಿಕೊಂಡಿರುವ ತೊಡೆಗಳುಳ್ಳವಳು)–ಶಫೌ ಇವ ಸಂಶ್ಲಿಷ್ಟೌ ಊರೂ ಯಸ್ಯಾಃ ಸಾ' ಎಂದು ವಿಗ್ರಹ ಇಲ್ಲಿ ಶಫ ಶಬ್ದವು ಉಪಮಾನವಾಚಕವಲ್ಲ, ಆದರೆ ಸಂಶ್ಲಿಷ್ಟೌ ಎಂಬುದು ಉಪಮಾನವಾಚಕವಾಗಿದೆ. ಆದ್ದರಿಂದ ಪ್ರಕೃತ ಸೂತ್ರದಿಂದ 'ಊಙ್(ಊ)' ಪ್ರತ್ಯವು ಬಂದು ಶಫೋರು+ಊಙ್(ಊ)'=ಶಫೋರೂ ಎಂದಾಗಿ, ವಿಭಕ್ತಿಕಾರ್ಯ ಮಾಡಿದಮೇಲೆ ರುತ್ವ–ವಿಸರ್ಗಗಳಿಂದ ಶಫೋರೂಃ ಎಂದು ರೂಪವಾಗುತ್ತದೆ.

3. ಲಕ್ಷಣೋರೂಃ (ಶುಭಲಕ್ಷಣಗಳುಳ್ಳ ತೊಡೆಯುಳ್ಳವಳು)–'ಲಕ್ಷಣೌ ಊರೂ ಯಸ್ಯಾಃ ಸಾ' ಎಂದು ವಿಗ್ರಹ. ಲಕ್ಷಣ ಶಬ್ದದಮೇಲೆ "ಅರ್ಶ ಆದಿಭ್ಯೋಽಚ್" ಎಂಬ ಸೂತ್ರದಿಂದ 'ಅಚ್' ಪ್ರತ್ಯಯವನ್ನು ಮಾಡೋಣದ್ದರಿಂದ ಒಳ್ಳೇ ಲಕ್ಷಣವುಳ್ಳ ಎಂಬ ಅರ್ಥವು ಸಿಕ್ಕಿದೆ. ಹಿಂದಿನಂತೆಯೇ ಪ್ರಕ್ರಿಯೆ ನಡೆದು ಲಕ್ಷಣೋರು+ಊಙ್(ಊ)=ಲಕ್ಷಣೋರೂ ಎಂದಾಗಿ ವಿಭಕ್ತಿಕಾರ್ಯ ಮಾಡಿದಮೇಲೆ ರುತ್ವ–ವಿಸರ್ಗಗಳಿಂದ ಲಕ್ಷಣೋರೂಃ ಎಂದು ರೂಪವಾಗುತ್ತದೆ.

4. ವಾಮೋರೂಃ (ಸುಂದರವಾದ ತೊಡೆಗಳುಳ್ಳವಳು)–ವಾಮೌ 'ಸುಂದರೌ ಊರೂ ಯಸ್ಯಾಃ ಸಾ' ಎಂದು ವಿಗ್ರಹ. ಹಿಂದಿನಂತೆಯೇ ಪ್ರಕ್ರಿಯೆ ನಡೆದು ವಾಮೋರೂಃ ಎಂದು ರೂಪವಾಗಿದೆ.

### (ಙೀನ್ ಪ್ರತ್ಯಯವನ್ನು ವಿಧಿಸುವ ಸೂತ್ರ)

**ಸೂತ್ರ –1277. –ಶಾರ್ಙ್ಗರವಾದ್ಯಞೋ ಙೀನ್। (4.1.73)**

ವೃತ್ತಿ–ಶಾರ್ಙ್ಗರವಾದೇಃ ಅಞಃ ಯಃ ಅ–ಕಾರಃ ತದನ್ತಾಚ್ಚ ಜಾತಿವಾಚಿನಃ 'ಙೀನ್' ಸ್ಯಾತ್। ಶಾರ್ಙ್ಗರವೀ। ಬೈದೀ। ಬ್ರಾಹ್ಮಣೀ।

ವಾರ್ತಿಕ–'ನೃನರಯೋರ್ವೃದ್ಧಿಶ್ಚ'। ನಾರೀ।

ಪ. ಛೇ–ಶಾರ್ಙ್ಗರವಾದ್ಯಞಃ, ಙೀನ್।

ಅ.ವೃ–"ಜಾತೇರಸ್ತ್ರೀವಿಷಯಾದಯೋಪಧಾತ್"(4.1.63)ಎಂಬ ಸೂತ್ರದಿಂದ, 'ಜಾತೇಃ' ಎಂಬ ಪದವು ಅನುವೃತ್ತವಾಗುತ್ತದೆ. ಹಾಗೆಯೇ ಅತಃ, ಪ್ರಾತಿಪದಿಕಾತ್, ಸ್ತ್ರಿಯಾಮ್, ಪ್ರತ್ಯಯಃ ಮತ್ತು ಪರಶ್ಚ ಇವು ಅಧಿಕಾರಸೂತ್ರಗಳಾಗಿವೆ.

ಅರ್ಥ–ಶಾರ್ಙ್ಗರವಾದಿ ಗಣಪಠಿತ ಶಬ್ದಗಳ ಹಾಗೂ 'ಅಞ್' ಪ್ರತ್ಯಯಾನ್ತವಾದ ಜಾತಿವಾಚಕ ಪ್ರಾತಿಪದಿಕಗಳನಂತರ ಸ್ತ್ರೀತ್ವ ವಿವಕ್ಷೆಯಲ್ಲಿ 'ಙೀನ್(ಈ)' ಪ್ರತ್ಯಯವು ಬರುತ್ತದೆ. ಇದು 'ನಿತ್' ಆಗಿರುವುದರಿಂದ "ಞ್ನಿತ್ಯಾದಿರ್ನಿತ್ಯಂ" ಎಂಬ ಸೂತ್ರದಿಂದ

ಆದ್ಯುದಾತ್ತವಾಗಿರುತ್ತದೆ. ಆದರೆ, 'ಜೀಷ್(ಈ)' 'ಜೀನ್(ಈ)' ಬಂದರೆ ಅಂತೋದಾತ್ತವಾಗುತ್ತದೆ.

ಉದಾ-1.ಶಾರ್ಙ್ಗರವೀ (ಶೃಙ್ಗರುವಿನ ಕನ್ಯೆ)-ಶೃಙ್ಗರೋಃ ಅಪತ್ಯಂ ಸ್ತ್ರೀ-ಎಂದು ವಿಗ್ರಹ. ತಸ್ಯಾಪತ್ಯಂ ಎಂಬುದರಿಂದ 'ಅಣ್' ಪ್ರತ್ಯಯ ಬಂದು, ಗುಣ ಮತ್ತು 'ಅವ್' ಆದೇಶಗಳಾಗಿ ಶಾರ್ಙ್ಗರವ ಎಂದು ರೂಪವಾಗಿದೆ. ಈ ಶಬ್ದದಮೇಲೆ ಸ್ತ್ರೀತ್ವ ವಿವಕ್ಷೆಯಲ್ಲಿ, "ಜಾತೇರಸ್ತ್ರೀವಿಷಯಾದಯೋಪಧಾತ್(4.1.63)"ಎಂಬ ಸೂತ್ರದಿಂದ ಪ್ರಾಪ್ತವಾದ 'ಜೀಷ್(ಈ) ಪ್ರತ್ಯಯವನ್ನು ಬಾಧಿಸಿ, ಪ್ರಕೃತ ಸೂತ್ರದಿಂದ 'ಜೀನ್(ಈ)' ಪ್ರತ್ಯಯವು ಬಂದು ಶಾರ್ಙ್ಗರವ+ಈ (ಜೀನ್) ಎಂದಿದ್ದಾಗ, 'ಭ' ಸಂಜ್ಞದ ಅಂತ್ಯ 'ಅ' ಕಾರಕ್ಕೆ "ಯಸ್ಯೇ ತಿ ಚ" ಎಂಬ ಸೂತ್ರದಿಂದ ಲೋಪ ಬಂದು ಶಾರ್ಙ್ಗರವ್+ಈ =ಶಾರ್ಙ್ಗರವೀ ಎಂದಾಗಿ, ವಿಭಕ್ತಿಕಾರ್ಯ ಮಾಡಿದಮೇಲೆ "ಹಲ್ಙ್ಯಾದಿಭ್ಯೋ ದೀರ್ಘಾತ್ ಸುತಿಸ್ಯಪೃಕ್ತಂ ಹಲ್" ಎಂಬ ಸೂತ್ರದಿಂದ 'ಸ್' ಕಾರಲೋಪವಾಗಿ ಶಾರ್ಙ್ಗರವೀ ಎಂದೇ ಉಳಿಯುತ್ತದೆ.

2. ಬೈದೀ (ಬೈದ-ಋಷಿಯ ಕನ್ಯೆ)-'ಬಿದಸ್ಯಾಪತ್ಯಂ ಸ್ತ್ರೀ' ಎಂದು ವಿಗ್ರಹ. ಬಿದ ಶಬ್ದದ ನಂತರ ತದ್ಧಿತಾರ್ಥದಲ್ಲಿ 'ತಸ್ಯಾಪತ್ಯಂ' ಎಂಬ ಅಧಿಕಾರದ ಕೆಳಗೆ "ಅನೃಷ್ಯಾನಂತರ್ಯೇ ಬಿದಾದಿಭ್ಯೋಽಞ್" ಎಂಬ ಸೂತ್ರದಿಂದ 'ಅಞ್(ಅ)'

ಪ್ರತ್ಯವು ಬಂದಮೇಲೆ, ಆದಿವೃದ್ಧಿ ಬಂದು ಬೈದ ಎಂದಾಗುತ್ತದೆ. ಸ್ತ್ರೀತ್ವ ವಿವಕ್ಷೆಯಲ್ಲಿ "ಜಾತೇರಸ್ತ್ರೀವಿಷಯಾದಯೋಪಧಾತ್(4.1.63)"ಎಂಬ ಸೂತ್ರದಿಂದ ಜೀಷ್(ಈ) ಪ್ರಾಪ್ತವಾದರೆ, ಅದನ್ನು ಬಾಧಿಸಿ ಪ್ರಕೃತ ಸೂತ್ರದಿಂದ 'ಜೀನ್(ಈ)' ಪ್ರತ್ಯಯವು ಬಂದು ಬೈದ+ಈ ಎಂದಿದ್ದಾಗ 'ಯಸ್ಯೇತಿ ಚ" ಎಂಬ ಸೂತ್ರದಿಂದ ಅಂತ್ಯ 'ಅ' ಕಾರಕ್ಕೆ ಲೋಪ ಬಂದು ಬೈದ್+ಈ=ಬೈದೀ ಎಂದಾಗುತ್ತದೆ. ವಿಭಕ್ತಿಕಾರ್ಯ ಮಾಡಿದಮೇಲೆ "ಹಲ್ಙ್ಯಾದಿಭ್ಯೋ ದೀರ್ಘಾತ್ ಸುತಿಸ್ಯಪೃಕ್ತಂ ಹಲ್" ಎಂಬ ಸೂತ್ರದಿಂದ 'ಸ್' ಕಾರಲೋಪವಾಗಿ ಬೈದೀ ಎಂದೇ ಉಳಿಯುತ್ತದೆ.

3. ಬ್ರಾಹ್ಮಣೀ (ಬ್ರಾಹ್ಮಣನ ಪತ್ನಿ ಅಥವಾ ಕನ್ಯೆ)-ಬ್ರಾಹ್ಮಣಸ್ಯ ಸ್ತ್ರೀ' ಎಂದು ವಿಗ್ರಹ. ಬ್ರಾಹ್ಮಣ ಶಬ್ದದ ಮೇಲೆ ಸ್ತ್ರೀತ್ವ ವಿವಕ್ಷೆಯಲ್ಲಿ "ಜಾತೇರಸ್ತ್ರೀವಿಷಯಾದಯೋಪಧಾತ್(4.1.63)"ಎಂಬ ಸೂತ್ರದಿಂದ ಜೀಷ್(ಈ) ಪ್ರಾಪ್ತವಾದರೆ, ಅದನ್ನು ಬಾಧಿಸಿ ಪ್ರಕೃತ ಸೂತ್ರದಿಂದ 'ಜೀನ್(ಈ)' ಪ್ರತ್ಯಯವು ಬಂದು ಬ್ರಾಹ್ಮಣ+ಈ ಎಂದಿದ್ದಾಗ, 'ಯಸ್ಯೇತಿ ಚ" ಎಂಬ ಸೂತ್ರದಿಂದ ಅಂತ್ಯ 'ಅ' ಕಾರಕ್ಕೆ ಲೋಪ ಬಂದು ಬ್ರಾಹ್ಮಣ್+ಈ=ಬ್ರಾಹ್ಮಣೀ ಎಂದಾಗುತ್ತದೆ. ವಿಭಕ್ತಿಕಾರ್ಯ ಮಾಡಿದಮೇಲೆ "ಹಲ್ಙ್ಯಾದಿಭ್ಯೋ ದೀರ್ಘಾತ್ ಸುತಿಸ್ಯಪೃಕ್ತಂ ಹಲ್" ಎಂಬ ಸೂತ್ರದಿಂದ 'ಸ್' ಕಾರಲೋಪವಾಗಿ ಬ್ರಾಹ್ಮಣೀ ಎಂದೇ ಉಳಿಯುತ್ತದೆ.

ವಾರ್ತಿಕ-'ನೃನರಯೋರ್ವೃದ್ಧಿಶ್ಚ'। ನಾರೀ।

'ನೃ' ಮತ್ತು ನರ ಈ ಎರಡು ಜಾತಿವಾಚಕ ಶಬ್ದಗಳಮೇಲೂ ಸ್ತ್ರೀತ್ವ ವಿವಕ್ಷೆಯಲ್ಲಿ ಪ್ರಕೃತ ವಾರ್ತಿಕದಿಂದ 'ಜೀನ್(ಈ)' ಪ್ರತ್ಯಯವೂ ಮತ್ತು ವೃದ್ಧಿಯು ಬರುತ್ತದೆ. 'ನೃ'

ಶಬ್ದವು 'ಋ' ಕಾರಾಂತವಾಗಿರುವುದರಿಂದ "ಋನ್ನೇಭ್ಯೋ ಙೀಪ್" ಎಂಬ ಸೂತ್ರದಿಂದ 'ಙೀಪ್(ಈ)' ಬರಬೇಕಾಗಿತ್ತು. ಮತ್ತು 'ನರ' ಶಬ್ದದಮೇಲೆ ಜಾತಿ ಲಕ್ಷಣವಾದ ಙೀಷ್(ಈ) ಬರಬೇಕಾಗಿತ್ತು. ಇವುಗಳನ್ನು ಬಾಧಿಸಿ ಪ್ರಕೃತ ವಾರ್ತಿಕದಿಂದ 'ಙೀನ್(ಈ)' ಬರುತ್ತದೆ.

ಉದಾ–ಅ. ನಾರೀ(ನಾರಿ)–'ನೃ' ಶಬ್ದದನಂತರ ಸ್ತ್ರೀತ್ವ ವಿವಕ್ಷೆಯಲ್ಲಿ, 'ಙೀನ್(ಈ)' ಪ್ರತ್ಯಯ ಬಂದು, ನೃ+ಈ ಎಂದಿದ್ದಾಗ, 'ಋ' ಕಾರಕ್ಕೆ ವೃದ್ಧಿ(ಆರ್) ಬಂದು ನಾರ್+ಈ =ನಾರೀ ಎಂದು ರೂಪವಾಗುತ್ತದೆ. ವಿಭಕ್ತಿಕಾರ್ಯ ಮಾಡಿದಮೇಲೆ "ಹಲ್ಙ್ಯಾದಿಭ್ಯೋ ದೀರ್ಘಾತ್ ಸುತಿಸ್ಯಪೃಕ್ತಂ ಹಲ್" ಸೂತ್ರದಿಂದ 'ಸ್' ಕಾರ ಲೋಪವಾಗಿ ನಾರೀ ಎಂದೇ ಉಳಿಯುತ್ತದೆ. ಉದಾ–ಆ. ನಾರೀ (ನಾರೀ)–ನರ ಶಬ್ದದನಂತರ ಸ್ತ್ರೀತ್ವ ವಿವಕ್ಷೆಯಲ್ಲಿ 'ಙೀನ್(ಈ)' ಪ್ರತ್ಯಯವು ಬರುತ್ತದೆ. ನರ+ಈ ಎಂದಿದ್ದಾಗ, 'ಯಸ್ಯೇತಿ ಚ" ಎಂಬ ಸೂತ್ರದಿಂದ ಅಂತ್ಯ 'ಅ' ಕಾರಕ್ಕೆ ಲೋಪ ಬಂದು, ನರ್+ಈ ಎಂದಿದ್ದಾಗ, ಆದಿವೃದ್ಧಿ ಬಂದು ನಾರ್+ಈ=ನಾರೀ ಎಂದು ರೂಪವಾಗುತ್ತದೆ. ವಿಭಕ್ತಿಕಾರ್ಯ ಮಾಡಿದಮೇಲೆ "ಹಲ್ಙ್ಯಾದಿಭ್ಯೋ ದೀರ್ಘಾತ್ ಸುತಿಸ್ಯಪೃಕ್ತಂ ಹಲ್" ಎಂಬ ಸೂತ್ರದಿಂದ 'ಸ್' ಕಾರಲೋಪವಾಗಿ, ನಾರೀ ಎಂದೇ ಉಳಿಯುತ್ತದೆ.

**(ತಿ ಪ್ರತ್ಯಯವನ್ನು ವಿಧಿಸುವ ಸೂತ್ರ)**

**ಸೂತ್ರ–1278.–ಯೂನಸ್ತಿಃ (4.1.77)**

ವೃತ್ತಿ–ಯುವನ್–ಶಬ್ದಾತ್ ಸ್ತ್ರಿಯಾಂ ತಿಃ ಪ್ರತ್ಯಯಃ ಸ್ಯಾತ್। ಯುವತಿಃ॥

**॥ಇತಿ ಸ್ತ್ರೀ ಪ್ರತ್ಯಯ (60.)ಪ್ರಕರಣಮ್॥**

ಶಾಸ್ತ್ರಾನ್ತರೇ ಪ್ರವಿಷ್ಟಾನಾಮ್ ಬಾಲಾನಾಂ ಚೋಪಕಾರಿಕಾ।
ಕೃತಾ ವರದರಾಜೇನ ಲಘುಸಿದ್ಧಾನ್ತಕೌಮುದೀ॥

**॥ಇತಿ ಶ್ರೀ ವರದರಾಜ ಕೃತಾ ಲಘುಸಿದ್ಧಾನ್ತಕೌಮುದೀ ಸಮಾಪ್ತಾ॥**

ಪ. ಛೇ–ಯೂನಃ, ತಿಃ।

ಅ.ವೃ–ಸ್ತ್ರಿಯಾಮ್,ತದ್ಧಿತಾಃ, ಪ್ರತ್ಯಯಃ ಮತ್ತು ಪರಶ್ಚ ಇವು ಅಧಿಕಾರಸೂತ್ರಗಳಾಗಿವೆ.

ಅರ್ಥ–'ಯುವನ್' ಶಬ್ದದ ನಂತರ ಸ್ತ್ರೀತ್ವ ವಿವಕ್ಷೆಯಲ್ಲಿ 'ತಿ' ಪ್ರತ್ಯಯವು ಬರುತ್ತದೆ.

ಉದಾ–ಯುವತಿಃ (ಯುವತಿ)–'ಯುವನ್' ಶಬ್ದದಮೇಲೆ ಸ್ತ್ರೀತ್ವ ವಿವಕ್ಷೆಯಲ್ಲಿ 'ತಿ' ಪ್ರತ್ಯಯ ಸೇರಿ ಯುವನ್+ತಿ ಎಂದಾಗುತ್ತದೆ. "ಸ್ವಾದಿಷ್ವಸರ್ವನಾಮಸ್ಥಾನೇ" ಎಂಬ ಸೂತ್ರದಿಂದ 'ತಿ' ಪ್ರತ್ಯಯವು ಪರದಲ್ಲಿದ್ದಾಗ, 'ಯುವನ್' ಶಬ್ದಕ್ಕೆ ಪದ ಸಂಜ್ಞೆ ಬಂದು "ನ ಲೋಪ ಪ್ರಾತಿಪದಾನ್ತಸ್ಯ" ಸೂತ್ರದಿಂದ 'ನ್' ಕಾರಾಕ್ಕೆ ಲೋಪ ಬಂದು ಯುವತಿ ಎಂದಾಗುತ್ತದೆ. ವಿಭಕ್ತಿ ಕಾರ್ಯ ಮಾಡಿದಮೇಲೆ ರುತ್ವ–ವಿಸರ್ಗಗಳಿಂದ ಯುವತಿಃ ಎಂದು ರೂಪವಾಗುತ್ತದೆ.

**॥ ಸ್ತ್ರೀ ಪ್ರತ್ಯಯ ಪ್ರಕರಣವು (60) ಮುಗಿಯಿತು॥**

ಬೇರೆ ಶಾಸ್ತ್ರಗಳಲ್ಲಿ ಪ್ರವೇಶ ಹೊಂದಿದ ಬಾಲಕರಿಗೆ ಉಪಕಾರಕವಾದ ಲಘುಸಿದ್ಧಾನ್ತಕೌಮುದೀ ಎಂಬ ಈ ಗ್ರಂಥವು ವರದರಾಜರಿಂದ ರಚಿತವಾಗಿದೆ.

**॥ ಶ್ರೀ ವರದರಾಜ ರಚಿತ ಲಘುಸಿದ್ಧಾನ್ತಕೌಮುದೀ ಗ್ರಂಥವು ಮತ್ತು ಅದರ "ತುಲಸೀ" ಕನ್ನಡಾನುವಾದ ಸಮಾಪ್ತವಾಯಿತು ॥**

# ಪರಿಶಿಷ್ಟಮ್

I. ಸಮರ್ಥಃ ಪದವಿದಿಃ ಎಂಬ ಸೂತ್ರದಲ್ಲಿ ಪದಸಂಬಂಧೀ ಯೋ ವಿದಿಃ ಸಃ ಸಮರ್ಥಾಶ್ರಿತೋ ಭ್ಯೋಧ್ಯಃ

ಅರ್ಥ:- ಪದಗಳಿಗೆ ಸಂಬಂಧಿಸಿದ ಸಮಾಸಾದಿ ಕಾರ್ಯಗಳು ಸಾಮರ್ಥ್ಯವುಳ್ಳ ಪದಗಳಿಗೆ ಬರುತ್ತದೆ ಎಂದು ಹೇಳಲಾಗಿದೆ. ಇಲ್ಲಿ ಸೂತ್ರದಲ್ಲಿರುವ ಸಮರ್ಥಃ ಎನ್ನುವ ಪದಕ್ಕೆ ಲಕ್ಷಣಾವ್ಯಾಪಾರದಿಂದ ಸಮರ್ಥಾಶ್ರಿತೋ ಎಂದು ಅರ್ಥವನ್ನು ಮಾಡಬೇಕು. (ಇದರ ಅರ್ಥವು ಸಾಮರ್ಥ್ಯವುಳ್ಳ ಎಂದು.) ಬೇರೆ ಬೇರೆ ಅರ್ಥಗಳನ್ನು ಕೊಡುವ ಬೇರೆ ಬೇರೆ ಪದಗಳಿಂದ ವಿವಕ್ಷಿತವಾದ ಒಂದು ಅರ್ಥವನ್ನು ಪಡೆಯುವದಕ್ಕಾಗಿ ಒಂದು ಪದವನ್ನಾಗಿ ಮಾಡಿ ಒಂದು ಅರ್ಥವನ್ನು ಕೊಡುವಂತೆ ಒಟ್ಟುಗೂಡಿಸುವುದಕ್ಕೆ ಸಮಾಸವೆಂದು ಕರೆಯುತ್ತಾರೆ.

ಹೀಗೆ ಪದಗಳು ಪರಸ್ಪರ ಒಟ್ಟುಗೂಡಬೇಕಾದರೆ ಪ್ರತಿಯೊಂದೂ ಪದಗಳೂ ಒಂದಾಗುವ ಸಾಮರ್ಥ್ಯವನ್ನು ಹೊಂದಿರಬೇಕು. ಹಾಗಿದ್ದಾಗ ಮಾತ್ರ ಸಮಾಸವೆಂಬ ಕಾರ್ಯವಾಗುತ್ತದೆ. "ಸಾಮರ್ಥ್ಯ" ಎಂಬ ಪದಕ್ಕೆ ಕಾಶಿಕಾದಲ್ಲಿ ಶಕ್ತಃ ಎಂದು ಅರ್ಥವನ್ನು ಹೇಳಿದ್ದಾರೆ ಇದರ ವ್ಯಾಖ್ಯಾನವಾದ ನ್ಯಾಸದಲ್ಲಿ ಶಕ್ತಃ ಎನ್ನುವುದಕ್ಕೆ ಸ್ವಕಾರ್ಯನೀವರ್ತನಕ್ಷಮಃ ಎಂದು ಹೇಳಿದ್ದಾರೆ. ಸ್ವ ಶಬ್ದ ಅರ್ಥವು ಶಬ್ದವೆಂದು ಪರಿಗ್ರಹಿಸಬೇಕು. ಅದರ ಕಾರ್ಯವೆಂದರೆ ಸ್ವಾರ್ಥವನ್ನು (ತನ್ನವನ್ನು )ಪ್ರತಿಪಾದನೆ ಮಾಡುವುದೇ ಆಗಿದೆ. ಇದೇ ಸ್ವ ಕಾರ್ಯ. ಇದನ್ನು ನಿರ್ವಹಿಸಲು ಸಮರ್ಥವಾಗಿ ಇರುವುದು ಎಂದರ್ಥ. ಈ ಸಾಮರ್ಥ್ಯವು ಎರಡು ವಿಧವಾಗಿದೆ. ವ್ಯಪೇಕ್ಷಾಭಾವ ಸಾಮರ್ಥ್ಯ, ಹಾಗೂ ಏಕಾರ್ಥೀಭಾವ ಸಾಮರ್ಥ್ಯವೆಂದು.

1. ವ್ಯಪೇಕ್ಷಾಭಾವ ಸಾಮರ್ಥ್ಯಮ್ ವಿಶಿಷ್ಟಾ ಅಪೇಕ್ಷಾವ್ಯಪೇಕ್ಷಾ:-ಪದಗಳು ಅರ್ಥಾನುಸಾರ ವಾಕ್ಯದಲ್ಲಿ ಅನ್ವಯವನ್ನು ಹೊಂದಿ ನಮಗೆ ಬೇಕಾದ ಅರ್ಥವನ್ನು ಕೊಡುವ ಸಾಮರ್ಥ್ಯವೇ ವ್ಯಪೇಕ್ಷಾಭಾವ ಸಾಮರ್ಥ್ಯ.
2. ಏಕಾರ್ಥೀಭಾವ ಸಾಮರ್ಥ್ಯಮ್ :- ಅನೇಕ ಪದಗಳು ತಮ್ಮ ತಮ್ಮ ಪ್ರತ್ಯೇಕ ಅರ್ಥಗಳನ್ನು ಬಿಟ್ಟು ಒಂದು ಪದವಾಗಿ ಒಂದು ಅರ್ಥವನ್ನು ಕೊಡುವಂತೆ ಮಾಡುವುದೇ ಏಕಾರ್ಥೀಭಾವ ಸಾಮರ್ಥ್ಯ.

II. ಪ್ರಸಜ್ಯ ಪ್ರತಷೇಧ:- ಪ್ರಸಜ್ಯ ಪ್ರತಷೇಧೋಽಯಮ್ ಕ್ರಿಯಯಾ ಸಹ ಯತ್ರ ನಞ್. ನಞ್‌ಗೆ ಕ್ರಿಯಾಪದದ ಜೊತೆಗೆ ಅನ್ವಯ ಮಾಡಿದರೆ ಅದನ್ನು 'ಪ್ರಸಜ್ಯಪ್ರತ್ರಿಷೇಧ' ಎಂದು ಕರೆಯುತ್ತಾರೆ.

ಉದಾ:- ಶ್ರಾದ್ಧಂನ ಭುಙ್ಕ್ತೇ ಇತಿ ಅಶ್ರಾದ್ಧಭೋಜೀ (ಶ್ರಾದ್ಧದ ಭೋಜನವನ್ನು ಮಾಡುವುದಿಲ್ಲ ಎಂದರ್ಥ)

ಇಲ್ಲಿ ನ (ನಞ್)ಗೆ ಭುಙ್ಕ್ತೇ ಎಂಬ ಕ್ರಿಯಾಪದದ ಜೊತೆಗೆ ಅನ್ವಯವಿರುವುದರಿಂದ

ಇದು ಪ್ರಸಜ್ಯ ಪ್ರತಿಷೇಧಕ್ಕೆ ಉದಾಹರಣೆ.

ಪರ್ಯುದಾಸ:– ನಞ್‌ಗೆ ಸಮಾಸದಲ್ಲಿ ಉತ್ತರ ಪದದ ಜೊತೆಗೆ ಅನ್ವಯ ಮಾಡಿದರೆ ಅದನ್ನು ಪರ್ಯುದಾಸವೆಂದು ಕರೆಯುತ್ತಾರೆ.

ಉದಾ:– ಘಟಾದನ್ಯೋ ಅಘಟಃ (ಘಟಕ್ಕಿಂತ ಭಿನ್ನವಾದುದು ಎಂದರ್ಥ)–ಇಲ್ಲಿ ನಞ್‌ಗೆ ಉತ್ತರ ಪದವಾದ ಘಟದೊಂದಿಗೆ ಅನ್ವಯವಿರುವುದರಿಂದ ಇದು ಪರ್ಯುದಾಸ.

ಮೊದಲನೆಯ ಅರ್ಥದಲ್ಲಿ ನಞ್‌ಗೆ ಕ್ರಿಯೆಯ ಸಾಪೇಕ್ಷ ಇರುವದರಿಂದ "ಅತಚ್ಛಬ್ದಾತ್" ಎಂದರೆ ತಚ್ಛಬ್ದೋ ನಾಸ್ತೀತಿ ಅತಚ್ಛಬ್ದಃ ತಸ್ಮಾತ್ ಅತಚ್ಛಬ್ದಾತ್ ಎಂದು ಹೇಳಬೇಕು. ಹೀಗೆ ಹೇಳಿದಾಗ ಇದು ವಾಕ್ಯವೇ ಆಗುತ್ತದೆಯೇ ಹೊರತು ಸಮಾಸವಾಗುವುದಿಲ್ಲ. ಇಲ್ಲಿ ನಞ್‌ಗೆ ಕ್ರಿಯೆಯೊಂದಿಗೆ ಅನ್ವಯವಾಗಿದೆಯೇ ಹೊರತು ತಚ್ಛಶ್ದದೊಂದಿಗೆ ಆಗಿಲ್ಲ. ಯಾಕೆಂದರೆ ಸಾಕಾಂಕ್ಷತ್ವರೂಪ ಸಾಮರ್ಥ್ಯಗಳಿರುವ ಪದಗಳಿಗೇನೆ ಸಮಾಸವು ವಿಹಿತವಾಗಿದೆ. ಕ್ರಿಯಾನ್ವಿತವಾದ ನಞ್‌ಗೆ ಉತ್ತರ ಪದವಾದ ತಚ್ಛಶ್ದದ ಆಕಾಂಕ್ಷಾವಿಲ್ಲದಿರುವುದರಿಂದ ಸಾಕಾಂಕ್ಷತ್ವರೂಪ ಸಾಮರ್ಥ್ಯವಿಲ್ಲ. ಆದ್ದರಿಂದ ಅನ್ವಯವಾಗಿಲ್ಲ. (ನಞ್ ಎಂಬುದು ಅವ್ಯಯ. ಇದು ನಿಷೇಧಾರ್ಥಕವಾಗಿ ನಞ್ ಎಂಬ ಸೂತ್ರದಲ್ಲಿಯೂ ಸಹ ಸಮಥವಾದ ನಞ್ ಪದವು ಸಾಮರ್ಥ್ಯವುಳ್ಳ ಉತ್ತರದಲ್ಲಿರುವ ಸುಬಂತ ಪದದೊಡನೆ ಸಮಾಸವನ್ನು ಹೊಂದುತ್ತದೆ.)

## ಅಥ ಲಿಂಗಪರಿಚಯಃ

# ತತ್ರಾದೌ ಸ್ತ್ರೀಲಿಂಗಾಧಿಕಾರಃ

(1) ಋಕಾರಾಂತಾ ಮಾತೃ–ದುಹಿತೃ–ಸ್ವಸೃ–ಯಾತೃ–ನನಾಂದಾರಃ ।
ಋಕಾರಾಂತಾ ಏತೇ ಪಂಚೈವ ಸ್ತ್ರೀಲಿಂಗಾಃ । ಸ್ವಸ್ರಾದಿಪಂಚಕಸ್ಯೈವ ಜೀಬ್‌ನಿಷೇಧೇನ ಕರ್ತ್ರೀತ್ಯಾದೇರ್ಜೀಪಾ ಈ–ಕಾರಾಂತತ್ವಾತ್, ತಿಸೃಚತಸ್ರೋಸ್ತು ಸ್ತ್ರಿಯಾಮಾದೇಶತಯಾ ವಿಧಾನೇಽಪಿ ಪ್ರಕೃತ್ಯೋಃಸ್ತ್ರಿಚತುರೋರ್ಋದಂತತ್ವಾಭಾವಾತ್ ॥

(2) ಅನ್ಯೇಕ್ತಿನ್ ಪ್ರತ್ಯಯಾನ್ತಾಃ ತಲ್‌ಪ್ರತ್ಯಯಾಂತಾಶ್ಚ ಶಬ್ದಾಃ ತಥಾ ಆಬಂತಾ ಜೀಪ್‌ಜೀಷನ್ತಾ ಊಜನ್ತಾಶ್ಚ ಶಬ್ದಾಃ ಸ್ತ್ರಿಯಾಮೇವ ಬೋಧ್ಯಾಃ। ಯಥಾ– ಅವನಿಃ, ಚಮೂಃ, ಕೃತಿಃ, ಭೂತಿಃ, ಬ್ರಾಹ್ಮಣತಾ, ದೇವತಾ, ರಮಾ, ಕುಮಾರೀ, ಕುಂಡೋಧ್ನೀ, ಕುರೂಃ ಇತ್ಯಾದಯಃ॥

(3) ಗೋ, ಮಣಿ, ಯಷ್ಟಿ, ಮುಷ್ಟಿ, ಪಾಟಲಿ, ವಸ್ತಿ, ಶಾಲ್ಮಲಿ, ತ್ರುಟ,ಮಸಿ, ಮರೀಚಿ, ಮೃತ್ಯು, ಶೀಧು, ಕರ್ಕಂಧು, ಕಿಷ್ಕು, ಕಂಡು, ರೇಣು, ಅಶನಿ, ಭರಣಿ, ಅರಣಿ, ಶ್ರೋಣಿ,ಯೋನಿ, ಊರ್ಮಿ, ತಿಥಿ, ಇಷು, ಇಷುಧಿ, ಬಾಹು, ಇತ್ಯಾದಯಃ ಶಬ್ದಾಃಪುಂಸಿ ಸ್ತ್ರಿಯಾಂ ಚ ಪ್ರಯುಜ್ಯಂತೇ । ಸುಮನಸ್ ಶಬ್ದೋ ದೇವಾರ್ಥವಾಚಕಶ್ಚೇನ್ನಿತ್ಯ ಪುಲ್ಲಿಂಗಃ, ಪುಷ್ಪಾರ್ಥವಾಚಕಶ್ಚೇತ್ತದಾ ನಪುಂಸಕೇ ಸ್ತ್ರೀಲಿಂಗೇ ಚೋಭಯತ್ರ ಪ್ರಯುಜ್ಯತೇ। ದುಂದುಭಿಶಬ್ದೋಽಕ್ಷಾರ್ಥೇ ಸ್ತ್ರೀಲಿಂಗೋಽನ್ಯತ್ರ ಪುಲ್ಲಿಂಗಃ। ಭೂಮಿವಿದ್ಯುತ್ ಸರಿತ್ ಲತಾ–ವನಿತಾ–ವನಿತಾಪರ್ಯಾಯಾಃ ಶಬ್ದಾಃ ಅಪಿ ಸ್ತ್ರಿಯಾಮೇವ ಭವಂತಿ । ಅತ್ರಾಪವಾದಾಃ ಯಾದೋ ನಪುಂಸಕೇ ದಾರಶಬ್ದಃಪುಮಾನ್ ॥

(4) ಶ್ರೀ, ವಿಂಶತಿ, ತ್ರಿಂಶತ್, ಚತ್ವಾರಿಂಶತ್, ಪಂಚಾಶತ್, ಷಷ್ಠೀ,ಸಪ್ತತಿ, ಆಶೀತಿ, ನವತಿ, ಭಾಸ್, ಸ್ರುಚ್, ಸ್ರಜ್, ದಿಶ್, ಉಷ್ಣಿಹ್, ಉಪಾನಹ್, ಪ್ರಾವೃಷ್, ವಿಪ್ರುಷ್, ರುಷ್, ತೃಷ್, ವಿಶ್, ತ್ವಿಷ, ದರ್ವಿ, ವಿದಿ, ವೇದಿ, ಖನಿ,ಶನಿ, ಆಶ್ರಿ, ವೇಶಿ, ಕೃಷಿ, ಓಷದಿ, ಕಟಿ, ಅಂಗುಲಿ, ನಾಡಿ, ರುಚಿ,ವೀಚಿ, ನಾಲಿ,ಧೂಲಿ, ಕಿಕಿ, ಕೇಲಿ, ಛವಿ, ರಾತ್ರಿ, ಶಷ್ಕುಲಿ, ರಾಜಿ, ಕುಟಿ, ವರ್ತಿ, ಭ್ರುಕುಟ, ತ್ರುಟಿ,ವಲಿ, ಪಂಕ್ತಿ, ಪ್ರತಿಪದ್, ಆಪದ್, ವಿಪದ್, ಸಂಪದ್, ಶರದ್, ಸಂಸದ್, ಪರಿಷದ್, ಉಷಸ್, ಸಂವಿದ್, ಕ್ಷುಧ್, ಮುದ್, ಸಮಿಧ್, ಆಶಿಷ್, ಧುರ್, ಪುರ್,ಗಿರ್, ದ್ವಾರ್,ಅಪ್, ತ್ವಚ್, ವಾಚ್, ಯವಾಗೂ, ನೌ, ಸ್ಫಿಚ್, ಸಿಮನ್, ಯಾಚ್ಞಾ– ಏತೇ ಶಬ್ದಾಃ, ಲಕ್ಷ್ಮೀಭೂಮಿಗ್ಲಾನಿಪ್ರಭೃತಯಃ ಈ–ಮಿ–ನಿ ಪ್ರತ್ಯಯಾಂತಾಶ್ಚ ಸ್ತ್ರೀಲಿಂಗಾ ಭೋಧ್ಯಾಃ॥

**ಇತಿ ಸ್ತ್ರೀಲಿಂಗಾಧಿಕಾರಃ**

